# ಶತಮಾನದ ಸಂಕಲನಗಳು

ಪ್ರಧಾನ ಸಂಪಾದಕರು
**ಗಿರಡ್ಡಿ ಗೋವಿಂದರಾಜ**

ಯೋಜನಾ ಸಂಪಾದಕರು
**ಜಿ. ಎಸ್. ಶಿವರುದ್ರಪ್ಪ**

# ಶತಮಾನದ ಸಂಶೋಧನೆ





ಸಂಪಾದಕರು

ಎಸ್. ಎಸ್. ತಾರಾನಾಥ





ಕರ್ನಾಟಕ ಸಾಹಿತ್ಯ ಅಕಾಡೆಮಿ

ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು-೫೬೦ ೦೦೨

*SHATAMANADA SAMSHODHANE* (An Anthology of 20th Century Research in Kannada) Edited by Dr. N. S. Tharanatha, Published by Karnataka Sahitya Academy, Kannada Bhavana, J.C.Road, Bangalore -560 002.

Pages : xxxii + 1016

**Price : Rs. 325/-**

ಪ್ರಥಮ ಮುದ್ರಣ : ೨೦೦೧


ಪ್ರಧಾನ ಸಂಪಾದಕರು
**ಗಿರಡ್ಡಿ ಗೋವಿಂದರಾಜ**
ಅಧ್ಯಕ್ಷರು, ಕರ್ನಾಟಕ ಸಾಹಿತ್ಯ ಅಕಾಡೆಮಿ
ಬೆಂಗಳೂರು-೫೬೦ ೦೦೨

ಪ್ರಕಾಶಕರು
**ಟಿ. ಎಸ್. ದಕ್ಷಿಣಾಮೂರ್ತಿ**
ರಿಜಿಸ್ಟ್ರಾರ್, ಕರ್ನಾಟಕ ಸಾಹಿತ್ಯ ಅಕಾಡೆಮಿ
ಬೆಂಗಳೂರು-೫೬೦ ೦೦೨

ಬೆಲೆ : ರೂ. ೩೨೫/-

ರಕ್ಷಾಪುಟ : ಮಯೂರ ಶ್ರೀನಿವಾಸ್

ಮುದ್ರಕರು
**ಅನುಭವ ಪ್ರಿಂಟರ್ಸ್**
ನಂ. ೧೨೧೩, ೫ನೇ ಬ್ಲಾಕ್
ರಾಜಾಜಿನಗರ, ಬೆಂಗಳೂರು-೫೬೦ ೦೧೦
ದೂರವಾಣಿ: ೩೪೦೧೫೭೭, ೩೪೦೧೯೫೫

## ಪರಿವಿಡಿ : ಒಂದು
(ವಿಷಯಾನುಕ್ರಮ ವರ್ಗೀಕರಣದಲ್ಲಿ)

## ೨ ಕರ್ನಾಟಕ ಸಂಸ್ಕೃತಿ ಶೋಧ



## ೩. ಭಾಷಾ ಶೋಧ

## ೪ ಛಂದಃಶೋಧ

## ೭ ಸಾಹಿತ್ಯ ಸಂಸ್ಕೃತಿ ಶೋಧ

## ೮ ಹೊಸಗನ್ನಡ ಸಾಹಿತ್ಯೋದಯ ಶೋಧ

# ಪರಿವಿಡಿ : ಎರಡು

(ಬರಹಗಳ ಪ್ರಕಟಣೆಯ ವರ್ಷಾನುಕ್ರಮಣಿಕೆಯಲ್ಲಿ)

# ಪ್ರಧಾನ ಸಂಪಾದಕರ ಮಾತು

ಆಧುನಿಕ ಕನ್ನಡ ಸಾಹಿತ್ಯ ಇದೀಗ ಒಂದು ಶತಮಾನದ ಕಾಲಾವಧಿಯನ್ನು ಮುಗಿಸಿ ಹೊಸ ಶತಮಾನವನ್ನು ಪ್ರವೇಶಿಸಲು ಅಣಿಯಾಗಿದೆ. ಸಾಹಿತ್ಯದಲ್ಲಿ ನಡೆಯುವ ಬದಲಾವಣೆ-ಬೆಳವಣಿಗೆಗಳು ದಶಕಗಳ ಇಲ್ಲವೆ ಶತಮಾನಗಳ ಲೆಕ್ಕಾಚಾರದ ಚೌಕಟ್ಟಿಗೆ ಹೊಂದಿಕೊಂಡು ಹೋಗುವುದಿಲ್ಲವಾದರೂ, ಆಧುನಿಕ ಕನ್ನಡ ಸಾಹಿತ್ಯದ ಆರಂಭ ಬೆಳವಣಿಗೆಗಳು ಇಪ್ಪತ್ತನೆಯ ಶತಮಾನದ ಕಾಲಾವಧಿಗೆ ಅದು ಹೇಗೋ ಹೊಂದಿಕೊಂಡಿವೆ. ಕಳೆದ ಶತಮಾನದ ಆರಂಭದ ವರ್ಷಗಳೊಂದಿಗೆ ಆರಂಭವಾದ ಕನ್ನಡ ಸಾಹಿತ್ಯದ ಆಧುನಿಕ ಯುಗ ನವೋದಯ, ಪ್ರಗತಿಶೀಲ, ನವ್ಯ, ದಲಿತ-ಬಂಡಾಯಗಳಂಥ ನಾಲ್ಕು ಪ್ರಮುಖ ಹಂತಗಳನ್ನು ಹಾಯ್ದು ಬಂದು, ಶತಮಾನದ ಕೊನೆಯ ಹೊತ್ತಿಗೆ ಹೊಸದೊಂದು ತಿರುವಿಗಾಗಿ ಕಾಯುತ್ತಿರುವಂತಿದೆ.

ಇಡಿಯ ಕನ್ನಡ ಸಾಹಿತ್ಯದ ಇತಿಹಾಸದಲ್ಲಿಯೇ ಇಪ್ಪತ್ತನೆಯ ಶತಮಾನ ಅತ್ಯಂತ ವಿಶಿಷ್ಟವಾದದ್ದು. ಸಾಹಿತ್ಯದ ಅನೇಕ ಪ್ರಕಾರಗಳು ಹೊಸದಾಗಿ ರೂಪಗೊಂಡು, ಬಹುಬೇಗ ಪ್ರಬುದ್ಧತೆ ಗಳಿಸಿದ ಕಾಲ ಇದು. ಇಂಗ್ಲಿಷ್ ಸಾಹಿತ್ಯ-ಸಂಸ್ಕೃತಿಗಳ ಪ್ರಭಾವಗಳನ್ನು ಅರಗಿಸಿ ಕೊಂಡು, ತನ್ನ ದೇಶೀ ಮೂಲಗಳನ್ನು ಮತ್ತೆ ಮತ್ತೆ ಹುಡುಕಿಕೊಳ್ಳುತ್ತ ಹೊಸದೊಂದು ಅನುಸಂಧಾನ ವನ್ನು ನಡೆಸಿದ ಕಾಲ ಇದು. ಈ ಸಂಸ್ಕೃತಿಗಳ ಸಂಘರ್ಷವನ್ನು ಒಂದು ಸವಾಲಾಗಿ ಸ್ವೀಕರಿಸಿ, ಕನ್ನಡ ಸಾಹಿತ್ಯ ಸಮೃದ್ಧವಾಗಿ ಬೆಳೆದಿದೆ. ವೈವಿಧ್ಯಪೂರ್ಣವಾದ ಪ್ರಯೋಗಗಳಿಗೆ ತನ್ನನ್ನು ಒಡ್ಡಿಕೊಂಡಿದೆ. ಪ್ರಭಾವಗಳನ್ನು ಸ್ವೀಕರಿಸಿಯೂ ತನ್ನ ಅಸ್ಮಿತೆಯನ್ನು ಉಳಿಸಿಕೊಳ್ಳಲು ಹೋರಾಟ ನಡೆಸಿದೆ. ಈ ದೃಷ್ಟಿಯಿಂದ ಕಳೆದ ಶತಮಾನ ಕನ್ನಡ ಸಾಹಿತ್ಯಕ್ಕೆ ಅತ್ಯಂತ ಕಠಿಣ ಕಾಲವಾಗಿತ್ತು. ಆದರೂ ಅದರ ಸಾಧನೆಗಳು ಅತ್ಯಂತ ಮಹತ್ವದವಾಗಿದ್ದವು. ಅಖಿಲ ಭಾರತ ಮಟ್ಟದಲ್ಲಿ, ಉಳಿದ ಭಾರತೀಯ ಭಾಷೆಗಳೊಂದಿಗೆ ಸ್ಪರ್ಧಿಸಿ, ಅದು ಏಳು ಪ್ರತಿಷ್ಠಿತ ಜ್ಞಾನಪೀಠ ಪ್ರಶಸ್ತಿಗಳನ್ನೂ ಒಂದು ಕಬೀರ ಸಮ್ಮಾನ ಪ್ರಶಸ್ತಿಯನ್ನೂ ಗಳಿಸಿತು. ಈ ಪ್ರಶಸ್ತಿಗಳು ಮಹಾಕಾವ್ಯ, ಕಾವ್ಯ, ಕಾದಂಬರಿ, ಸಣ್ಣ ಕತೆ, ನಾಟಕಗಳಂಥ ವಿವಿಧ ಸಾಹಿತ್ಯ ಪ್ರಕಾರಗಳಿಗೆ ಬಂದಿರುವುದನ್ನು ನೋಡಿದರೆ ಕನ್ನಡ ಸಾಹಿತ್ಯದ ಬಹುಮುಖ ಸಾಧನೆಗಳ ಕಲ್ಪನೆ ಬರುತ್ತದೆ.

ಶತಮಾನಗಳ ಈ ಸಂಧಿಕಾಲದಲ್ಲಿ - ೧೯೯೮ರಲ್ಲಿ - ಪುನರ್ರಚಿತವಾದ ಕರ್ನಾಟಕ ಸಾಹಿತ್ಯ ಅಕಾಡೆಮಿ ಕನ್ನಡ ಸಾಹಿತ್ಯದ ಈ ಸಂದರ್ಭವನ್ನು ಗಮನದಲ್ಲಿರಿಸಿಕೊಂಡು ಎರಡು ಮಹಾತ್ವಾಕಾಂಕ್ಷಿ ಯೋಜನೆಗಳನ್ನು ಹಾಕಿಕೊಂಡಿತು. ಮೊದಲನೆಯ ಯೋಜನೆ, ಎಂಟು ಸಂಪುಟಗಳಲ್ಲಿ ಆಧುನಿಕ ಕನ್ನಡ ಸಾಹಿತ್ಯದ ಇತಿಹಾಸವನ್ನು ಬರೆಸಬೇಕೆಂಬುದು. ಹಿರಿಯ ವಿಮರ್ಶಕರಾದ ಪ್ರೊ. ಎಲ್.ಎಸ್. ಶೇಷಗಿರಿರಾವ್ ಅವರು ಸಂಪಾದಕರಾಗಿ ನೋಡಿಕೊಳ್ಳುತ್ತಿರುವ ಈ ಯೋಜನೆ ಪ್ರಗತಿಯಲ್ಲಿದೆ. ಮೊದಲನೆಯ ಯೋಜನೆಗೆ ಪೂರಕವಾದ ಎರಡನೆಯ ಯೋಜನೆ, ಕಳೆದ ಶತಮಾನದ ಕನ್ನಡ ಸಾಹಿತ್ಯದ ಮಹತ್ವದ ಸಾಧನೆಗಳನ್ನು ಪ್ರತಿನಿಧಿಸುವ ಆರು ಸಂಕಲನ ಸಂಪುಟಗಳ ಪ್ರಕಟಣೆ. ಹಿರಿಯ ಕವಿ-ವಿಮರ್ಶಕ ಡಾ|| ಜಿ.ಎಸ್. ಶಿವರುದ್ರಪ್ಪನವರ ಸಂಪಾದಕೀಯ ಮೇಲ್ವಿಚಾರಣೆಯಲ್ಲಿ ಈ ಯೋಜನೆ ಇದೀಗ ಕಾರ್ಯಗತವಾಗುತ್ತಿರುವುದು ಸಂತೋಷದ ವಿಷಯ.

ಈ ಯೋಜನೆಗಳನ್ನು ರೂಪಿಸುವಾಗ, ಸಾಹಿತ್ಯದ ವಿವಿಧ ಕ್ಷೇತ್ರಗಳಲ್ಲಿ ಹೆಸರು ಮಾಡಿರುವ

ಅನೇಕ ಜನ ವಿದ್ವಾಂಸರೊಂದಿಗೆ ಸಮಾಲೋಚನೆ ನಡೆಸಲಾಯಿತು. ಅವರ ಅಮೂಲ್ಯ ಸಲಹೆಗಳನ್ನು ಗಮನದಲ್ಲಿಟ್ಟುಕೊಂಡು ಸಂಪಾದಕ ಮಂಡಳಿ ಕೆಲವು ಮಾರ್ಗದರ್ಶಕ ಸೂಚನೆಗಳನ್ನು ರೂಪಿಸಿತು. ಜೊತೆಗೆ, ಈ ಯೋಜನೆಗಳು ಕಳೆದ ಶತಮಾನದ ಉದ್ದಕ್ಕೂ ಕನ್ನಡ ಸಾಹಿತ್ಯಕ್ಕೆ ಹಿನ್ನೆಲೆಯನ್ನು ಒದಗಿಸಿದ ಪೂರ್ವ-ಪಶ್ಚಿಮಗಳ ಮುಖಾಮುಖಿ, ರಾಷ್ಟ್ರೀಯತೆಯ ಆವಿಷ್ಕಾರ, ವೈಜ್ಞಾನಿಕ ದೃಷ್ಟಿಕೋನ, ಕೌಟುಂಬಿಕ ಸಂಬಂಧಗಳು, ವ್ಯಕ್ತಿ ಸ್ವಾತಂತ್ರ್ಯ, ಸಾಮಾಜಿಕ ನ್ಯಾಯ, ಧರ್ಮದ ಕುರಿತ ದೃಷ್ಟಿ, ದೇಶೀವಾದ, ಔದ್ಯೋಗಿಕ ಕ್ರಾಂತಿ, ಆಧುನೀಕರಣ, ವಸಾಹತೀಕರಣದ ಸವಾಲುಗಳು - ಮೊದಲಾದ ಪ್ರಮುಖ ವಿಷಯಗಳನ್ನು ಪಟ್ಟಿ ಮಾಡಿ ಈ ಎರಡೂ ಯೋಜನೆಗಳು ಅವುಗಳನ್ನು ಪ್ರತಿಫಲಿಸಬೇಕೆಂದು ನಿರ್ಣಯಿಸಿತು.

ಈ ಹಿನ್ನೆಲೆಯಲ್ಲಿಯೇ ಈ ಶತಮಾನದ ಸಂಕಲನಗಳನ್ನು ರೂಪಿಸಲಾಗಿದೆ. ಮಹಾಕಾವ್ಯ, ಕಾದಂಬರಿ, ನಾಟಕಗಳಂಥ ಸಾಹಿತ್ಯ ಪ್ರಕಾರಗಳನ್ನು ಇಂಥ ಸಂಕಲನಗಳಲ್ಲಿ ಅಳವಡಿಸುವುದು ಅಸಾಧ್ಯವಾದ್ದರಿಂದ ಅವುಗಳನ್ನು ಹೊರತುಪಡಿಸಿ, ಕವಿತೆ, ಸಣ್ಣ ಕತೆ, ವಿಮರ್ಶೆ, ಲಲಿತ ಪ್ರಬಂಧ, ಸಂಶೋಧನೆ, ಮಕ್ಕಳ ಸಾಹಿತ್ಯ - ಹೀಗೆ ಆರು ಪ್ರಕಾರಗಳ ಸಂಕಲನಗಳನ್ನು ಇಲ್ಲಿ ಸಿದ್ಧಪಡಿಸಲಾಗಿದೆ. ಈ ಸಂಕಲನಗಳು ಕಳೆದ ಶತಮಾನದ ಆಧುನಿಕ ಕನ್ನಡ ಸಾಹಿತ್ಯದ ಸಾಧನೆಯ ಶಿಖರಗಳನ್ನು ಎತ್ತಿ ತೋರಿಸುವುದರ ಜೊತೆಗೆ, ಕನ್ನಡ ಜನಕ್ಕೆ ತಮ್ಮ ಸಾಹಿತ್ಯ-ಸಂಸ್ಕೃತಿಗಳ ಜೀವಸತ್ವದ ಬಗ್ಗೆ ಅಭಿಮಾನ ಹುಟ್ಟಿಸುವಷ್ಟು ಸಮಗ್ರವಾಗಿವೆ.

ಆದರೂ, ಯಾವುದೇ ಸಂಕಲನಕ್ಕೂ ಅದರ ಮಿತಿಗಳು ಇದ್ದೇ ಇರುತ್ತವೆಂದು ಬೇರೆ ಹೇಳಬೇಕಾಗಿಲ್ಲ. ತಮ್ಮ ಮೆಚ್ಚಿನ ಕೆಲವು ಬರಹಗಳು ಇವುಗಳಲ್ಲಿ ಸೇರಿಲ್ಲ ಎಂದು ಕೆಲವು ಓದುಗರಿಗೆ ಅನಿಸಬಹುದು; ತಮ್ಮ ಬರೆಹಗಳು ಈ ಸಂಕಲನಗಳಲ್ಲಿ ಸ್ಥಾನ ಪಡೆದಿಲ್ಲವೆಂದು ಕೆಲವು ಲೇಖಕರಿಗೂ ಬೇಸರವಾಗಬಹುದು; ಆಯ್ಕೆ ಮಾಡಿದ ಬರೆಹದ ಬದಲು ಬೇರೊಂದನ್ನು ತೆಗೆದುಕೊಳ್ಳ ಬೇಕಾಗಿತ್ತೆಂದೂ ಅಸಮಾಧಾನವಾಗಬಹುದು. ಆದರೆ ಕೆಲವು ನಿರ್ಬಂಧಗಳನ್ನಿಟ್ಟುಕೊಂಡು ಕೆಲಸ ಮಾಡಬೇಕಾದ ಸಂದರ್ಭದಲ್ಲಿ ಇದೆಲ್ಲ ಅನಿವಾರ್ಯ. ಸಾಧ್ಯವಿದ್ದಷ್ಟೂ ಎಲ್ಲ ಒಳ್ಳೆಯ ಬರೆಹಗಾರರಿಗೆ ಇಲ್ಲಿ ಪ್ರಾತಿನಿಧ್ಯ ಸಿಗಬೇಕೆಂದು ಸಂಪಾದಕ ಮಂಡಳಿಯ ಉದ್ದೇಶವಾಗಿದ್ದರೂ, ಅದರಲ್ಲಿ ಲೋಪಗಳು ಉಳಿದುಕೊಂಡಿವೆ ಎಂಬ ಅರಿವು ಸಂಪಾದಕರಿಗೆ ಇದೆ.

ಪ್ರತಿಯೊಂದು ಸಂಕಲನದ ಸಂಪಾದಕರೂ ಅತ್ಯಂತ ಶ್ರಮವಹಿಸಿ, ಪ್ರಾಮಾಣಿಕ ವಾಗಿ ತೂಗಿ ನೋಡಿ, ವಿವಿಧ ಮೂಲಗಳಿಂದ ಸಂಗ್ರಹಿಸಿ ಈ ಸಂಕಲನಗಳನ್ನು ಸಿದ್ಧಪಡಿಸಿದ್ದಾರೆ. ಯೋಜನೆಯ ಸಂಪಾದಕರಾದ ಡಾ|| ಜಿ.ಎಸ್. ಶಿವರುದ್ರಪ್ಪನವರು ಕಳೆದ ಎರಡೂವರೆ ವರ್ಷಗಳಿಂದಲೂ ಸಂಪಾದಕರೊಂದಿಗೆ ನಿಕಟ ಸಂಪರ್ಕವನ್ನಿಟ್ಟುಕೊಂಡು, ಚರ್ಚಿಸಿ, ಲೇಖನ ಗಳನ್ನು ಮತ್ತೆ ಮತ್ತೆ ಓದಿ, ಸೂಕ್ತ ಸಲಹೆಗಳನ್ನು ನೀಡಿ ಈ ಸಂಕಲನಗಳು ಸಾಧ್ಯವಾದಷ್ಟೂ ಅರ್ಥಪೂರ್ಣವೂ, ಸಮಗ್ರವೂ ಆಗುವಂತೆ ನೋಡಿಕೊಂಡಿದ್ದಾರೆ. ಅವರ ನಿಷ್ಠೆ, ಕರ್ತವ್ಯದಕ್ಷತೆ ಗಳಿಂದಾಗಿಯೇ ಈ ಸಂಕಲನಗಳು ಇಷ್ಟು ಬೇಗ ಹೊರ ಬರಲು ಸಾಧ್ಯವಾಗಿದೆ. ಅವರಿಗೆ ಅಕಾಡೆಮಿ ತನ್ನ ಹೃತ್ಪೂರ್ವಕ ಕೃತಜ್ಞತೆ ಸಲ್ಲಿಸುತ್ತದೆ.

ಈ ಯೋಜನೆಗಳನ್ನು ರೂಪಿಸಿ ಪ್ರಕಟಿಸಿದ ಸಂದರ್ಭದಲ್ಲಿ ಕರ್ನಾಟಕದ ಎಲ್ಲ ಪತ್ರಿಕೆಗಳೂ ಇವುಗಳಿಗೆ ವ್ಯಾಪಕ ಪ್ರಚಾರ ನೀಡಿವೆ. ಕೆಲವು ಪತ್ರಿಕೆಗಳಂತೂ ('ಸುಧಾ') ಸಂಪಾದಕೀಯಗಳನ್ನು ಬರೆದು ಸ್ವಾಗತಿಸಿವೆ. ಸಾಹಿತಿಗಳೂ, ಸಾಹಿತ್ಯಾಸಕ್ತರೂ ವ್ಯಾಪಕ ಬೆಂಬಲ ಸೂಚಿಸಿ, ಈ ಸಂಪುಟಗಳ ಪ್ರಕಟಣೆಗಾಗಿ ಆತುರದಿಂದ ಕಾಯುತ್ತಿದ್ದು, ಅವರೆಲ್ಲರಿಗೂ ಅಕಾಡೆಮಿ ಋಣಿಯಾಗಿದೆ.

ಇಂಥ ಸಂಕಲನಗಳಿಗೆ ಅತ್ಯಂತ ಮುಖ್ಯವಾದದ್ದು ಲೇಖಕರ ಸಹಕಾರ. ಅದಿಲ್ಲದೆ ಇವುಗಳನ್ನು

ಪ್ರಕಟಿಸಲು ಸಾಧ್ಯವಾಗುವುದಿಲ್ಲ. ಕಳೆದ ಒಂದೂವರೆ ವರ್ಷದಿಂದ ಅಕಾಡೆಮಿ ಈ ಸಂಕಲನಗಳಲ್ಲಿ ಸೇರಿರುವ ಲೇಖಕರನ್ನು ಮತ್ತು ಅವರ ವಾರಸುದಾರರನ್ನು ಸಂಪರ್ಕಿಸಲು ಎಲ್ಲ ರೀತಿಯ ಪ್ರಯತ್ನ ಮಾಡಿದೆ. ಬಹಳಷ್ಟು ಜನ ಲೇಖಕರು ಸಂತೋಷದಿಂದ ತಮ್ಮ ಒಪ್ಪಿಗೆ ತಿಳಿಸಿ ಸಹಕರಿಸಿದ್ದಾರೆ. ಅವರಿಗೆ ಅಕಾಡೆಮಿ ಕೃತಜ್ಞವಾಗಿದೆ. ಆದರೆ ಕೆಲವು ಜನ ವಾರಸುದಾರರ ಹೆಸರು, ವಿಳಾಸಗಳನ್ನು ದೊರಕಿಸಲು ಎಷ್ಟು ಪ್ರಯತ್ನಿಸಿದರೂ ಸಾಧ್ಯವಾಗಲಿಲ್ಲ. ಅಂಥವರಿಗೆ ಈ ಸಂಕಲನಗಳು ಗಮನಕ್ಕೆ ಬಂದಲ್ಲಿ ಅಕಾಡೆಮಿಯನ್ನು ಸಂಪರ್ಕಿಸಬೇಕೆಂದು ವಿನಂತಿಸುತ್ತೇನೆ.

ಈ ಯೋಜನೆಗಳಿಗೆ ಬೆಂಬಲವಾಗಿ ನಿಂತು ಸಹಕರಿಸಿದವರು ಸಾಹಿತ್ಯ ಅಕಾಡೆಮಿಯ ಈ ಅವಧಿಯ ಸದಸ್ಯರು. ಅವರ ಸಹಕಾರವನ್ನು ಇಲ್ಲಿ ಸ್ಮರಿಸಲೇಬೇಕು. ಅಕಾಡೆಮಿಯ ರಿಜಿಸ್ಟ್ರಾರ್ ಟಿ. ಎಸ್. ದಕ್ಷಿಣಾಮೂರ್ತಿಯವರು ಈ ಸಂಕಲನಗಳ ಸಿದ್ಧತೆಯ ಬಗ್ಗೆ ತೋರಿಸಿದ ಮುತುವರ್ಜಿಯೂ ಅಭಿನಂದನಾರ್ಹ.

**ಗಿರಡ್ಡಿ ಗೋವಿಂದರಾಜ**
ಪ್ರಧಾನ ಸಂಪಾದಕ

# ಯೋಜನಾ ಸಂಪಾದಕರ ಮಾತು

ಇಪ್ಪತ್ತನೆಯ ಶತಮಾನವು ಮನುಕುಲದ ಚರಿತ್ರೆಯಲ್ಲಿ ಅತ್ಯಂತ ಉಜ್ವಲವಾದ ಕಾಲಮಾನವಾಗಿದೆ. ವೈಜ್ಞಾನಿಕವಾಗಿ, ವೈಚಾರಿಕವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ, ಸಾಂಸ್ಕೃತಿಕವಾಗಿ ಅನೇಕ ಮಹತ್ವದ ಬದಲಾವಣೆಗಳು ಸಂಭವಿಸಿದ ಕಾಲ ಇದು.

ಕನ್ನಡ ಸಾಹಿತ್ಯದ ದೃಷ್ಟಿಯಿಂದ ನೋಡುವುದಾದರೆ, ಇದು ಅತ್ಯಂತ ಚಲನ ಶೀಲವಾದ, ವೈವಿಧ್ಯವಾದ, ಹಾಗೂ ಮಹತ್ವಾಕಾಂಕ್ಷೆಯ ಸೃಜನಶೀಲತೆ ಮತ್ತು ವೈಚಾರಿಕತೆಗಳ ವಿಸ್ತರಣದ ಕಾಲವಾಗಿದೆ. ಭಾರತದ ಇತರ ಪ್ರಾದೇಶಿಕ ಭಾಷಾಸಾಹಿತ್ಯಗಳಂತೆ, ಕನ್ನಡ ಸಾಹಿತ್ಯವೂ ವಸಾಹತುಶಾಹೀ ಸಂದರ್ಭದ ಸಾಂಸ್ಕೃತಿಕ ಮುಖಾಮುಖಿಯ ಕಾರಣದಿಂದ ಪಶ್ಚಿಮದ ವಿವಿಧ ಪ್ರೇರಣೆ ಪ್ರಭಾವಗಳಿಗೆ ಒಳಗಾದರೂ, ಅವುಗಳನ್ನು ತನ್ನ ಪ್ರಾದೇಶಿಕ ಪ್ರತಿಭೆಯೊಳಕ್ಕೆ ಅಗತ್ಯಕ್ಕೆ ತಕ್ಕಂತೆ ಬರಮಾಡಿಕೊಳ್ಳುತ್ತ, ಕರಗಿಸಿಕೊಳ್ಳುತ್ತ, ಅರಗಿಸಿಕೊಳ್ಳುತ್ತ, ಅನೇಕ ಪ್ರಕಾರಗಳಲ್ಲಿ ಪುನರ್ಭವಗಳನ್ನು ಪಡೆದುಕೊಳ್ಳುತ್ತ ಜಾಗತಿಕ ಪರಂಪರೆಯೊಂದಿಗೆ ಸಂವಾದವನ್ನು ಸ್ಥಾಪಿಸಿಕೊಂಡ ಕಾಲ. ಅನೇಕ ನಿರ್ಲಕ್ಷಿತ ಮೂಕಸ್ತರಗಳು ಮೊಟ್ಟಮೊದಲ ಬಾರಿಗೆ, ಜಗತ್ತಿನ ಹಲವು ವಿಮೋಚನಾ ಚಳುವಳಿಗಳ ಪ್ರೇರಣೆಯಿಂದ ಮತ್ತು ಭಾರತದ ಬದಲಾದ ರಾಜಕೀಯ, ಸಾಮಾಜಿಕ ಹಾಗೂ ಸಾಂಸ್ಕೃತಿಕ ವಾತಾವರಣದ ಕಾರಣದಿಂದ ಎಚ್ಚರಗೊಂಡು ದಿಟ್ಟ ದನಿಯಿಂದ ಮಾತನಾಡಲು ತೊಡಗಿದ ಕಾಲ. ಅದುವರೆಗೂ ಅಪರಿಚಿತವಾದ ಅನೇಕ ಅನುಭವ ಪ್ರಪಂಚಗಳು ಅನಾವರಣ ಗೊಂಡ ಕಾಲ. ಒಂದೂವರೆ ಸಾವಿರ ವರ್ಷಗಳಷ್ಟು ಸುದೀರ್ಘವಾದ ಪರಂಪರೆಯನ್ನುಳ್ಳ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿಯೆ ಇದೊಂದು ಅನನ್ಯವಾದ ಕಾಲ.

ಇಂಥ ಕಾಲಮಾನದ ಸಾಹಿತ್ಯದ ಸಾಧನೆಗಳನ್ನು ಅನುಕೂಲಕರವಾದ ನೆಲೆಯೊಂದರಲ್ಲಿ ನಿಂತು ಅವಲೋಕಿಸುವುದು ಈ ಹೊತ್ತಿನ ಸಾಹಿತ್ಯ ವಿಮರ್ಶೆಯ ಜವಾಬ್ದಾರಿಗಳಲ್ಲಿ ಒಂದು. ಹಾಗೆ ನೋಡಿದರೆ, ಈ ಶತಮಾನಕ್ಕೇ ವಿಶಿಷ್ಟವಾದ ವಿವಿಧ ಸಾಹಿತ್ಯ ಚಳುವಳಿಗಳ ಸಂದರ್ಭದಲ್ಲಿ ಅಂದಂದಿನ ಸಾಹಿತ್ಯವನ್ನು ವಿಮರ್ಶೆಗೆ ಗುರಿಪಡಿಸಿದ ಪ್ರಯತ್ನಗಳೂ ಸಾಕಷ್ಟಿವೆ. ಅಂದರೆ ಆಧುನಿಕ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಸಾಹಿತ್ಯ ನಿರ್ಮಿತಿಯ ಜತೆಗೆ ಸಮಾನಾಂತರವಾದ ಸಾಹಿತ್ಯ ವಿಮರ್ಶೆಯ ಚರಿತ್ರೆಯೂ ಒಂದಿದೆ. ಆದರೆ, ಈ ಒಂದು ಶತಮಾನದ ಕೊನೆಯಲ್ಲಿ, ಈ ಶತಮಾನದ ಸಾಹಿತ್ಯದ ಸಮಗ್ರ ಸಾಧನೆಯತ್ತ ಹೊರಳಿ ನೋಡುವ ಪ್ರಯತ್ನದಲ್ಲಿ, ಇದುವರೆಗೂ ನಿರ್ಮಿತಿಯಾದ ಸಾಹಿತ್ಯವಷ್ಟನ್ನೆ ಅಲ್ಲ, ಅದನ್ನು ಕುರಿತು ನಡೆದ ಸಾಹಿತ್ಯ ವಿಮರ್ಶೆಯನ್ನೂ ಪುನರವಲೋಕನಕ್ಕೆ ಗುರಿಪಡಿಸುವುದರ ಮೂಲಕ ಈ ಶತಮಾನದ ಸಾಹಿತ್ಯವನ್ನು ನಾವು ಹೊಸದಾಗಿ ಅರ್ಥಮಾಡಿಕೊಳ್ಳುವುದು ಅಗತ್ಯವಾಗಿದೆ. ಹೀಗೆ ಈ ಶತಮಾನದ ಸಾಹಿತ್ಯವನ್ನು ಪುನರವಲೋಕನ ಮಾಡುವ ಮಹತ್ವಾಕಾಂಕ್ಷೆಯ ಯೋಜನೆಯೊಂದನ್ನು ಕರ್ನಾಟಕ ಸಾಹಿತ್ಯ ಅಕಾಡೆಮಿಯು ಹಮ್ಮಿಕೊಂಡಿದೆ.

ಈ ಯೋಜನೆಯ ಅಂಗವಾಗಿ ಹಲವು ನಿರ್ದಿಷ್ಟವಾದ ಸಾಹಿತ್ಯ ಪ್ರಕಾರಗಳಿಗೆ ಸೇರುವ ಅತ್ಯುತ್ತಮವಾದ ಹಾಗೂ ಪ್ರಾತಿನಿಧಿಕವಾದ ಬರಹಗಳನ್ನು ಒಳಗೊಳ್ಳುವ ಸಂಕಲನಗಳನ್ನು ಪ್ರಕಟಿಸಬೇಕೆಂಬುದೂ ಅಕಾಡೆಮಿಯ ಉದ್ದೇಶಗಳಲ್ಲಿ ಒಂದು. ಈ ಸಂಕಲನಗಳ ಸಿದ್ಧತೆಯ ಜವಾಬ್ದಾರಿಯನ್ನು ವಿವಿಧ ಪರಿಣತರಿಗೆ ಒಪ್ಪಿಸುವುದರ ಜೊತೆಗೆ, ಇದರ ಯೋಜನಾ ಸಂಪಾದಕನಾಗಿ, ನಾನು ಇದರ ಉಸ್ತುವಾರಿಯನ್ನು ನೋಡಿಕೊಳ್ಳಬೇಕೆಂದು ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರೂ, ನನ್ನ ಮಾನ್ಯ ಮಿತ್ರರೂ ಆದ ಡಾ. ಗಿರಡ್ಡಿ ಗೋವಿಂದರಾಜ ಅವರು

ನನ್ನನ್ನು ನಿಯೋಜಿಸಿದ್ದರ ಪರಿಣಾಮವಾಗಿ ಈ ಕೆಳಗೆ ಕಾಣಿಸಿದ ಆರು ಸಂಕಲನಗಳು ಸಿದ್ಧವಾಗಿವೆ:

೧ ಶತಮಾನದ ಕಾವ್ಯ: ಡಾ. ಎಚ್. ಎಸ್. ವೆಂಕಟೇಶಮೂರ್ತಿ
೨ ಶತಮಾನದ ಸಣ್ಣಕತೆ: ಬೊಳುವಾರು ಮಹಮದ್ ಕುಂಞ್
೩ ಶತಮಾನದ ಸಾಹಿತ್ಯ ವಿಮರ್ಶೆ: ಡಾ. ಎಚ್. ಎಸ್. ರಾಘವೇಂದ್ರರಾವ್
೪ ಶತಮಾನದ ಸಂಶೋಧನೆ: ಡಾ. ಎನ್. ಎಸ್. ತಾರಾನಾಥ
೫ ಶತಮಾನದ ಲಲಿತಪ್ರಬಂಧ: ಡಾ. ಗುರುಲಿಂಗ ಕಾಪಸೆ
೬ ಶತಮಾನದ ಮಕ್ಕಳ ಸಾಹಿತ್ಯ: ಪ್ರೊ. ಎನ್. ಎಸ್. ರಘುನಾಥ್

ಈ ಸಂಕಲನಗಳಿಗೆ ಬರಹಗಳನ್ನು ಆಯ್ಕೆ ಮಾಡುವಾಗ ಅನುಸರಿಸಬೇಕಾದ ಮೂಲಮಾನ ಯಾವುದು ಎಂಬುದನ್ನು ನಿರ್ಧರಿಸುವುದು ಸುಲಭವಾದ ಸಂಗತಿಯಲ್ಲ. ಆದರೆ ಇದರೊಳಗೆ ಸೇರ್ಪಡೆಯಾಗುವ ಬರೆಹಗಳು ಮುಖ್ಯವಾಗಿ ಇಪ್ಪತ್ತನೆ ಶತಮಾನದ ಪ್ರಮುಖ ಆಶಯಗಳನ್ನೂ ಚಹರೆಗಳನ್ನೂ, ಸ್ಪಂದನಗಳನ್ನೂ ಪ್ರತಿನಿಧಿಸಬೇಕು-ಎಂಬುದು ಈ ಎಲ್ಲ ಸಂಪಾದಕರ ಗಮನದಲ್ಲಿದೆ ಎಂಬುದಂತೂ ನಿಜ. ಯಾಕೆಂದರೆ ಇಪ್ಪತ್ತನೆಯ ಶತಮಾನ ಅನೇಕ ಮಹತ್ವದ ಪಲ್ಲಟಗಳ ಹಾಗೂ ತಲ್ಲಣಗಳ ಕಾಲ. ವಸಾಹತುಷಾಹೀಸಂದರ್ಭಕ್ಕೆ, ರಾಷ್ಟ್ರೀಯತೆಯ ತುಡಿತಗಳಿಗೆ, ದೇಶೀಯತೆಯ ಕಾಳಜಿಗಳಿಗೆ, ಕಾಲದಿಂದ ಕಾಲಕ್ಕೆ ಆದ ಸಾಮಾಜಿಕ ಪರಿವರ್ತನೆಗಳಿಗೆ, ಧಾರ್ಮಿಕ ನಿಲುವುಗಳಿಗೆ, ಅನ್ಯದೇಶೀಯವಾದ ಚಿಂತನೆ ಹಾಗೂ ಮಾದರಿಗಳಿಗೆ, ಈ ಶತಮಾನದ ಪ್ರಮುಖ ಸಾಹಿತ್ಯಕ ಹಾಗೂ ಸಾಂಸ್ಕೃತಿಕ ವಾಗ್ವಾದಗಳಿಗೆ, ಔದ್ಯೋಗೀಕರಣ, ನಗರೀಕರಣ ಹಾಗೂ ಆಧುನೀಕರಣದ ಪ್ರಕ್ರಿಯೆಗಳಿಗೆ, ಈ ಶತಮಾನದ ಬದುಕನ್ನು ಪ್ರಭಾವಿಸಿದ ವಿವಿಧ ವೈಜ್ಞಾನಿಕ, ರಾಜಕೀಯ ಮತ್ತು ಸಾಮಾಜಿಕ ಚಿಂತನೆಗಳಿಗೆ, ಮತ್ತು ವ್ಯಕ್ತಿಪ್ರತಿಭೆಗಳಿಗೆ, ತನ್ನ ಪರಂಪರೆಗೆ ಹಾಗೂ ವರ್ತಮಾನಕ್ಕೆ ಕನ್ನಡದ ಸೃಜನಶೀಲತೆ ಹಾಗೂ ವೈಚಾರಿಕತೆಗಳು ಹೇಗೆ ಸ್ಪಂದಿಸಿವೆ ಎಂಬುದನ್ನು ಈ ಸಂಕಲನದ ಬರೆಹಗಳು ಪ್ರತಿನಿಧಿಸುವಂತಿರಬೇಕು ಎನ್ನುವುದು ಇಲ್ಲಿನ ಆಯ್ಕೆಯ ಮೂಲಮಾನವಾಗಿದೆ. ಒಟ್ಟಾರೆಯಾಗಿ ಈ ಶತಮಾನದ ಕನ್ನಡ ಸಾಹಿತ್ಯ ಏನನ್ನು ಗ್ರಹಿಸಿದೆ, ಏನನ್ನು ಹೇಳಿದೆ, ಏನನ್ನು ಸಾಧಿಸಿದೆ ಎನ್ನುವುದನ್ನು ಈ ಸಂಕಲನಗಳು ದಾಖಲಿಸಿವೆ. ಇಂಥ ಸಂಕಲನದ ಒಬ್ಬೊಬ್ಬ ಸಂಪಾದಕರೂ ಅತ್ಯಂತ ಶ್ರದ್ಧೆಯಿಂದ, ಶ್ರಮದಿಂದ, ತಕ್ಕ ಅಭಿರುಚಿ ಮತ್ತು ಜವಾಬ್ದಾರಿಯಿಂದ ಈ ಸಂಕಲನಗಳನ್ನು ಸಿದ್ಧಪಡಿಸಿರುತ್ತಾರೆ. ಈ ಕಾರ್ಯದಲ್ಲಿ ಯೋಜನಾ ಸಂಪಾದಕನಾದ ನನ್ನ ಜತೆ ಚರ್ಚಿಸಿ, ಅಗತ್ಯವಾದ ಸಲಹೆ ಸೂಚನೆಗಳನ್ನು ಪಡೆದುಕೊಳ್ಳುತ್ತ, ಪ್ರತಿಯೊಂದು ಸಂಕಲನದೊಳಗಿನ ಬರೆಹಗಳ ಆಯ್ಕೆಯ ಸ್ವಾತಂತ್ರ್ಯವನ್ನು ತಾವೇ ಕಾಯ್ದುಕೊಂಡಿದ್ದಾರೆ.

ಈ ಆರು ಸಂಕಲನಗಳಲ್ಲಿ 'ಶತಮಾನದ ಸಂಶೋಧನೆ' ಎಂಬ ಸಂಕಲನವೊಂದನ್ನು ಹೊರತುಪಡಿಸಿದರೆ, ಇನ್ನುಳಿದ ಸಾಹಿತ್ಯ ಪ್ರಕಾರಗಳನ್ನು ಕುರಿತ ಸಂಕಲನಗಳು ಈ ಶತಮಾನದ ಉದ್ದಕ್ಕೂ ಕೆಲವು ಸಾಂಸ್ಥಿಕ ಮತ್ತು ವ್ಯಕ್ತಿ ಪ್ರಯತ್ನದ ಪರಿಣಾಮವಾಗಿ ಆಗಾಗ ಪ್ರಕಟಗೊಂಡಿವೆ. ಆ ಸಂಕಲನಗಳು ಅಂದಂದಿನ ಕೆಲವು ಕಾಲಘಟ್ಟಗಳ ಸಾಹಿತ್ಯಕ ಸಾಧನೆಯನ್ನು ಪ್ರತಿನಿಧಿಸುವಂಥವುಗಳಾಗಿದ್ದವೇ ಹೊರತು, ಈಗ ಪ್ರಕಟವಾಗುತ್ತಿರುವ ಸಂಪುಟಗಳಂತೆ ಇಡೀ ಶತಮಾನದ ವಿವಿಧ ಸಾಹಿತ್ಯಪ್ರಕಾರಗಳನ್ನು ಪ್ರತಿನಿಧಿಸುವಂಥ ಬೃಹತ್ ಸಂಪುಟಗಳಾಗಿರಲಿಲ್ಲ, ಈ ದೃಷ್ಟಿಯಿಂದ ಈ ಸಂಪುಟಗಳಿಗೆ ಚಾರಿತ್ರಿಕ ಮಹತ್ವವಿದೆ.

ಕನ್ನಡದ ಈ ಹೊತ್ತಿನ ಮುಖ್ಯ ಸಂಶೋಧಕರಲ್ಲಿ ಒಬ್ಬರೆಂದು ಹೆಸರು ಮಾಡಿರುವ ಡಾ. ಎನ್.ಎಸ್. ತಾರಾನಾಥ ಅವರು ಸಿದ್ಧಪಡಿಸಿಕೊಟ್ಟಿರುವ 'ಶತಮಾನದ ಸಂಶೋಧನೆ' ಎಂಬ ಈ ಬೃಹತ್ ಸಂಪುಟವು, ನಮ್ಮ ಸಮಕಾಲೀನ ಸಂದರ್ಭದಲ್ಲಿಯೆ, ಬಹುಶಃ ಮೊದಲನೆಯದು.

ಸಂಶೋಧನೆಯು ಈ ಶತಮಾನದ ಅಧ್ಯಯನದ ಒಂದು ಶಿಸ್ತಾಗಿ ಬೆಳೆದು ಬಂದ ಪರಿಯನ್ನೂ, ಸಾಧನೆಗಳನ್ನೂ ಅದರ ಸ್ವರೂಪ ಹಾಗೂ ವೈವಿಧ್ಯಗಳೊಂದಿಗೆ ವಿನೂತನವಾಗಿ ಕಟ್ಟಿಕೊಡುವ ಪ್ರಯತ್ನವನ್ನು ಈ ಸಂಪುಟವು ಪ್ರತಿನಿಧಿಸುತ್ತದೆ. ವಾಸ್ತವವಾಗಿ ಸಂಶೋಧನೆ ಎನ್ನುವುದು ಪಾಶ್ಚಾತ್ಯ ವಿದ್ವಾಂಸರು ತೋರಿಸಿಕೊಟ್ಟ ಮಾರ್ಗದಲ್ಲಿ ರೂಪುಗೊಂಡ ಒಂದು ಶೈಕ್ಷಣಿಕ ಶಿಸ್ತು. ಸಾಹಿತ್ಯ ಎನ್ನುವುದು ಈ ದೇಶದ ಚರಿತ್ರೆಯ ಉದ್ದಕ್ಕೂ, ಅಂದಂದಿನ ಇತಿಹಾಸದೊಂದಿಗೆ, ಪುರಾಣದೊಂದಿಗೆ, ಐತಿಹ್ಯದೊಂದಿಗೆ, ಭಾಷೆಯೊಂದಿಗೆ, ಕಲ್ಪನೆಗಳೊಂದಿಗೆ, ಸಂಸ್ಕೃತಿಯೊಂದಿಗೆ, ಧರ್ಮದೊಂದಿಗೆ, ವೈಚಾರಿಕತೆಯೊಂದಿಗೆ, ಲಿಖಿತ ಹಾಗೂ ಅಲಿಖಿತ ಪರಂಪರೆ ಗಳೊಂದಿಗೆ, ಜ್ಞಾತ ಹಾಗೂ ಅಜ್ಞಾತ ಆಕರ ಮತ್ತು ತಿಳಿವುಗಳೊಂದಿಗೆ, ಸ್ಥಾವರ-ಜಂಗಮ ಮಾಹಿತಿಗಳೊಂದಿಗೆ ತಳುಕು ಹಾಕಿಕೊಂಡ ಜೀವನಾನುಭವದ ಅಭಿವ್ಯಕ್ತಿಯಾಗಿದೆ. ಸಂಶೋಧನೆಯು ಇಂಥದೊಂದು ಸಾಹಿತ್ಯಕ ಹಾಗೂ ಸಾಂಸ್ಕೃತಿಕ ಪರಂಪರೆಯ ಬೇರುಗಳನ್ನು ಹುಡುಕುತ್ತ, ಗೂಢಗಳನ್ನು ಶೋಧಿಸುತ್ತ, ಅಂದಂದಿಗೆ ಲಭ್ಯವಾಗುವ ಹೊಸ ಬೆಳಕಿನಲ್ಲಿ ಸಾಹಿತ್ಯವನ್ನು ಸರಿಯಾಗಿ ಗ್ರಹಿಸುವ ಹಾಗೂ ಪುನರ್ ವ್ಯಾಖ್ಯಾನಿಸಲು ನೆರವಾಗುವ ಹಲವಾರು ಸಂಗತಿಗಳನ್ನು ಆವಿಷ್ಕಾರ ಮಾಡುವ ಒಂದು ವಿದ್ವತ್ ಸಾಹಸವಾಗಿದೆ. ಒಂದು ರೀತಿಯಲ್ಲಿ ಸಾಹಿತ್ಯ ಚರಿತ್ರೆ ಮತ್ತು ಸಾಹಿತ್ಯ ವಿಮರ್ಶೆಗಳೊಂದಿಗೆ ಸೋದರ ಸಂಬಂಧಿಯಾದ ಸಂಶೋಧನೆಯು ಅಪಾರವಾದ ಶ್ರದ್ಧೆ, ಶ್ರಮ, ಅಧ್ಯಯನ ಹಾಗೂ ಚಿಂತನೆಗಳನ್ನು ನಿರೀಕ್ಷಿಸುವ ಕಾರಣದಿಂದ ಇದು ಕೆಲವೇ ಸಾಹಸ-ರಸಿಕರ 'ಆಡುಂಬೊಲ'ವಾಗಿರುವುದು ಆಶ್ಚರ್ಯವೇನಲ್ಲ.

ಆದರೂ ಆಧುನಿಕ ಕನ್ನಡ ಸಾಹಿತ್ಯದಲ್ಲಿ, ಸಂಶೋಧನೆಯ ಕ್ಷೇತ್ರದಲ್ಲಿ ಆಗಿರುವ ಸಾಧನೆ ಕಡಮೆಯೇನಿಲ್ಲ. ಈ ಹೊತ್ತು ಪಾರಂಪರಿಕವಾದ ಆ ವಿದ್ವತ್ತು ಕಡಮೆಯಾಗುತ್ತಿದೆಯೆಂಬ ಕೊರಗನ್ನು ಒಂದು ವಾಸ್ತವವೆಂದು ವಿಷಾದದಿಂದ ಒಪ್ಪಿಕೊಂಡರೂ, ಈ ಸಂಪುಟದಲ್ಲಿ ಡಾ. ತಾರಾನಾಥರು, ಕೂಡಿಸಿರುವ ಮತ್ತು ವಿಶಿಷ್ಟವಾದ ರೀತಿಯಲ್ಲಿ ವರ್ಗೀಕರಿಸಿರುವ ಸಂಶೋಧನಾ ಸಾಮಗ್ರಿಯು ಬೆರಗುಗೊಳಿಸುವಷ್ಟಿದೆ. ಕನ್ನಡದ ಸಂಶೋಧನೆಯು ವಿವಿಧ ವಿಷಯಗಳನ್ನು ಕುರಿತು ಬಹುಮುಖವಾಗಿ ಬೆಳೆದಿದ್ದರೂ ಈ ಸಂಪುಟದ ಮುಖ್ಯ ಗುರಿ ಒಂದಲ್ಲ ಒಂದು ರೀತಿಯಲ್ಲಿ ಸಾಹಿತ್ಯಕ್ಕೆ ಸಂಬಂಧಪಟ್ಟ ಸಂಶೋಧನೆಯನ್ನು ಒಂದೆಡೆ ಕೂಡಿಸಿಕೊಡಬೇಕು ಎಂಬುದೇ ಆಗಿದೆ.

ಇಂಥ ಒಂದು ಯೋಜನೆಯೊಂದಿಗೆ ನನ್ನನ್ನು ಪ್ರೀತಿಯಿಂದ ತೊಡಗಿಸಿಕೊಂಡ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರೂ ಮಾನ್ಯ ಮಿತ್ರರೂ ಆದ ಡಾ. ಗಿರಡ್ಡಿ ಗೋವಿಂದರಾಜ ಅವರಿಗೆ, ಸಂಶೋಧನೆಯ ಈ ಸಂಪುಟವನ್ನು ಅತ್ಯಂತ ಶ್ರದ್ಧೆ ಹಾಗೂ ಶ್ರಮದಿಂದ ವಿನೂತನ ವಿನ್ಯಾಸದಲ್ಲಿ ಸಿದ್ಧಪಡಿಸಿಕೊಟ್ಟ ಡಾ. ಎನ್. ಎಸ್. ತಾರಾನಾಥ ಅವರಿಗೆ, ಉದ್ದಕ್ಕೂ ಅನೇಕ ವಿಧಗಳಲ್ಲಿ ಸಹಕರಿಸಿದ ಸಾಹಿತ್ಯ ಅಕಾಡೆಮಿಯ ರಿಜಿಸ್ಟ್ರಾರ್ ಶ್ರೀ ಟಿ ಎಸ್. ದಕ್ಷಿಣಾಮೂರ್ತಿ ಯವರಿಗೂ ನಾನು ಕೃತಜ್ಞನಾಗಿದ್ದೇನೆ.

**ಜಿ. ಎಸ್. ಶಿವರುದ್ರಪ್ಪ**
ಯೋಜನಾ ಸಂಪಾದಕರು

*ಸಂಶೋಧನೆಯು ಭೂಮಿ ಅಗೆದು ಚಿನ್ನ ತೆಗೆಯುವ ಹಾಗೆ;*
*ಅದಕ್ಕೆ ಬುದ್ಧಿಬೇಕು, ಆಯುಧ ಬೇಕು, ಯಂತ್ರಸಾಮಗ್ರಿ ಬೇಕು;*
*ಹಲವು ಕೆಲಸಗಾರರ, ಶಾಸ್ತ್ರಜ್ಞರ ಸಹಕಾರ ಬೇಕು*

*- ಎ. ಆರ್. ಕೃಷ್ಣಶಾಸ್ತ್ರಿ*

# ಪ್ರಸ್ತಾವನೆ

ಸುದೀರ್ಘವೂ ಸಂಪದ್ಯುಕ್ತವೂ ಆದ ಕನ್ನಡ ಭಾಷೆ-ಸಾಹಿತ್ಯಗಳಲ್ಲಿ ಆಧುನಿಕಾರ್ಥದ ಸಂಶೋಧನೆ ಎಂದಿನಿಂದ ಆರಂಭವಾಯಿತು ಎಂಬುದು ಇನ್ನೂ ನಿಖರವಾಗಿ ತಿಳಿದಿಲ್ಲ. ೧೭೮೪ರಲ್ಲಿ ಸ್ಥಾಪಿತವಾದ ರಾಯಲ್ ಏಷ್ಯಾಟಿಕ್ ಸೊಸೈಟಿಯ ಚಟುವಟಿಕೆಗಳೇ, ಆ ಸಂಸ್ಥೆಯ ಏಷ್ಯಾಟಿಕ್ ರಿಸರ್ಚಸ್ ಹಾಗೂ ಜರ್ನಲ್ ಆಫ್ ರಾಯಲ್ ಏಷ್ಯಾಟಿಕ್ ಸೊಸೈಟಿಯ ಪತ್ರಿಕೆಗಳೇ ಕರ್ನಾಟಕದ ಸಂಶೋಧನೆಗೆ, ಕನ್ನಡ ಭಾಷೆ-ಸಾಹಿತ್ಯಗಳ ಶೋಧಗಳಿಗೆ ವೇದಿಕೆಯಾದುವು. ಟಿಪ್ಪೂಸುಲ್ತಾನನ ಮರಣದ ನಂತರ ಕರ್ನಲ್ ಮೆಕೆಂಜಿ ಈ ಪ್ರದೇಶದ ಪರಿವೀಕ್ಷಣಾಧಿಕಾರಿಯಾಗಿ ನೇಮಕಗೊಂಡ. ಹಸ್ತಪ್ರತಿ, ಶಾಸನ, ಕಡತ, ನಾಣ್ಯ, ಐತಿಹ್ಯ, ಕೈಫಿಯತ್ತು, ಸ್ಥಳಪುರಾಣ ಮುಂತಾದವುಗಳನ್ನು ಸಂಗ್ರಹಿಸುವೆಡೆ ಆತ ತನ್ನ ಆಸಕ್ತಿ ತೋರಿದ. ಸುಮಾರು ೧೫೬೮ ಹಸ್ತಪ್ರತಿ, ೨೦೭೦ ಕೈಫಿಯತ್ತು, ೮೦೭೦ ಶಾಸನ ನಕಲುಗಳನ್ನು ಸಂಗ್ರಹಿಸಿದ. ಒಂದರ್ಥದಲ್ಲಿ ಇವನೇ ಕನ್ನಡ ಸಂಶೋಧನಲೋಕದ ಆದ್ಯಪುರುಷ. ಅನಂತರ ಬಂದ ಬುಕನನ್ ಕೂಡ ಇಂಥದೇ ಸಂಗ್ರಹಕ್ಕೆ ತೊಡಗಿಕೊಂಡ. ಕರ್ನಾಟಕ ಚರಿತ್ರೆಯ ರಚನೆಗೆ, ಕನ್ನಡ ಭಾಷೆ-ಸಾಹಿತ್ಯ-ಲಿಪಿಗಳ ಇತಿಹಾಸ ನಿರೂಪಣೆಗೆ ಈ ಇಬ್ಬರೂ ಸಾಮಗ್ರಿ ಸಂಗ್ರಹಿಸುತ್ತಿದ್ದರು. ಪ್ರಾಯಃ ಇವರಿಬ್ಬರ ಸಂಗ್ರಹಕಾರ್ಯದಿಂದಲೇ ಕನ್ನಡದಲ್ಲಿ ಸಂಶೋಧನೆ ಸ್ಥೂಲವಾಗಿ ಆರಂಭಗೊಂಡಿತು. ಇವರಿಬ್ಬರ ಕೆಲಸವನ್ನು ವಾಲ್ಟರ್ ಎಲಿಯಟ್, ಹೆನ್ರಿವಥೆನ್ ಮುಂತಾದವರು ಮುಂದುವರಿಸಿದರು. ಹೀಗೆ ಹತ್ತೊಂಬತ್ತನೆಯ ಶತಮಾನದ ಕೊನೆಯ ಪಾದದಲ್ಲಿ ಈ ಕ್ಷೇತ್ರದಲ್ಲಿ ಕೆಲಸ ಮಾಡಿದವರೆಲ್ಲ ವಿದೇಶೀ ವಿದ್ವಾಂಸರೇ.

ಇದು ಏನಿದ್ದರೂ ಮೇಲೆ ಹೇಳಿದವರಾರೂ ತಮ್ಮನ್ನು ಕನ್ನಡ ಭಾಷೆ-ಸಾಹಿತ್ಯಗಳ ಸಂಶೋಧನ ಕಾರ್ಯಕ್ಕೆ ಸಂಪೂರ್ಣವಾಗಿ ಸಮರ್ಪಿಸಿಕೊಳ್ಳಲಿಲ್ಲ; ಅದಕ್ಕೆಂದೇ ದುಡಿಯಲಿಲ್ಲ. ಹಾಗೆ ತಮ್ಮನ್ನು ತನ್ಮಯವಾಗಿ ತೊಡಗಿಸಿಕೊಂಡ ಇಬ್ಬರು ಮಹಾವಿದ್ವಾಂಸರು ಫರ್ಡಿನಾಂಡ್ ಕಿಟ್ಟೆಲ್ ಮತ್ತು ಬೆಂಜಮಿನ್ ಲೂಯಿರೈಸ್. ಇವರಿಬ್ಬರೂ ಕನ್ನಡ ಭಾಷೆ ಸಾಹಿತ್ಯಗಳ ಅಧ್ಯಯನಕ್ಕೆ, ಕರ್ನಾಟಕದ ಚರಿತ್ರೆಯ ತಿಳಿವಳಿಕೆಗೆ ಬೇಕಾದ ಆಕರ ಸಂಪತ್ತನ್ನು ಸಂಗ್ರಹಿಸಿದರು. ಶಾಸನ, ಚರಿತ್ರೆ, ವ್ಯಾಕರಣ, ಗ್ರಂಥಸಂಪಾದನೆ, ಛಂದಸ್ಸು, ನಿಘಂಟುರಚನೆಗಳಂಥ ಬೇರೆ ಕ್ಷೇತ್ರಗಳೊಂದಿಗೆ ಪ್ರಾಚೀನ ಕನ್ನಡ ಸಾಹಿತ್ಯ ಕ್ಷೇತ್ರದಲ್ಲೂ ಇವರು ಕೆಲಸ ಮಾಡಿದರು. ೧೮೭೩ರಲ್ಲಿ ಕಿಟ್ಟೆಲ್ಲರು 'ದಿ ಇಂಡಿಯನ್ ಇವ್ಯಾಂಜೆಲಿಕಲ್ ರೆವ್ಯೂ'ನಲ್ಲಿ ಪ್ರಕಟಿಸಿದ 'ದ ಓಲ್ಡ್ ಕ್ಯಾನರೀಸ್ ಲಿಟರೇಚರ್' ಈ ಸಂಬಂಧದ ಅವರ ಮೊದಮೊದಲ ಪ್ರಧಾನ ಲೇಖನಗಳಲ್ಲಿ ಒಂದು. ಅನಂತರ ಅವರೇ ಬರೆದ 'ಛಂದೋಂಬುಧಿ'ಯ ಕನ್ನಡ ಸಾಹಿತ್ಯ ಚರಿತ್ರೆಯ ಪ್ರಸ್ತಾವನಾ ರೂಪದ ಲೇಖನವಾಗಲಿ, ಮಂಗರಾಜ ನಿಜಗುಣಶಿವಯೋಗಿ ಕರ್ನಾಟಕದ ಹರಿದಾಸರನ್ನು ಕುರಿತ ಲೇಖನಗಳಾಗಲಿ ಕನ್ನಡ ಸಾಹಿತ್ಯದ ಬೇರೆ ಬೇರೆ ಮುಖಗಳನ್ನು ಪರಿಚಯಿಸುತ್ತವೆ. 'ಕರ್ಣಾಟಕ ಭಾಷಾ ಭೂಷಣ' (೧೮೮೪) 'ಕರ್ಣಾಟಕ ಶಬ್ದಾನುಶಾಸನ' (೧೮೯೦)ಗಳಿಗೆ ಬರೆದ ರೈಸರ ಕನ್ನಡ ಸಾಹಿತ್ಯಚರಿತ್ರೆಯ ಪೀಠಿಕಾಲೇಖನಗಳಾಗಲಿ, ಪಂಪ ಮುಂತಾದವರ ಬಗ್ಗೆ ಬರೆದ ಅವರ ಇತರ ಲೇಖನಗಳಾಗಲಿ ಹೀಗೆಯೇ ಮಾಹಿತಿ ನೀಡುವ ಪರಿಚಯಾತ್ಮಕ ಲೇಖನಗಳು. ಬಗೆಬಗೆಯ ಆಕರಗಳನ್ನು ಸಂಗ್ರಹಿಸಿ, ಶೋಧಿಸಿ ಅವರು ಈ ಬರೆಹಗಳನ್ನು ರಚಿಸಿದ್ದಾರೆ. ಕನ್ನಡ ಸಾಹಿತ್ಯದ ಸ್ವರೂಪ, ವೈವಿಧ್ಯಗಳು ಇದರಿಂದ ತಕ್ಕಮಟ್ಟಿಗೆ ತಿಳಿಯುತ್ತದೆ. 'ಶಬ್ದಮಣಿದರ್ಪಣ', 'ಛಂದೋಂಬುಧಿ'ಗಳನ್ನು (೧೮೭೨, ೧೮೭೫) ಸಂಪಾದಿಸಿ

ಪ್ರಕಟಿಸಿದ್ದಲ್ಲದೆ ಕಿಟ್ಟೆಲ್ 'ಕನ್ನಡ-ಇಂಗ್ಲಿಷ್, ನಿಘಂಟು' (೧೮೯೪) ತಯಾರಿಸಿದರು. 'ಪಂಪರಾಮಾಯಣ', 'ಕರ್ಣಾಟಕ ಭಾಷಾಭೂಷಣ', 'ಕರ್ಣಾಟಕ ಶಬ್ದಾನುಶಾಸನ', 'ಪಂಪಭಾರತ'ಗಳನ್ನು (೧೮೮೨, ೧೮೮೪, ೧೮೯೦, ೧೮೯೮) ಗ್ರಂಥಗಳನ್ನು ರೈಸರು ಸಂಪಾದಿಸಿದರು. ಇದಲ್ಲದೆ ೮೮೬೯ ಶಾಸನಗಳನ್ನು ಸಂಗ್ರಹಿಸಿ 'ಎಪಿಗ್ರಾಫಿಯಾ ಕರ್ಣಾಟಿಕಾ' ಎಂಬ ಮಾಲೆಯಲ್ಲಿ ಹನ್ನೆರಡು ಸಂಪುಟಗಳಾಗಿ ಪ್ರಕಟಿಸಿದರು. ಮೈಸೂರು ಮತ್ತು ಕೊಡಗಿನ ಚರಿತ್ರೆ ಬರೆದುದಲ್ಲದೆ ಗೆಜ಼ೆಟಿಯರ್ ಸಂಪುಟಗಳನ್ನು ಹೊರತಂದರು. ಮೋಗ್ಲಿಂಗ್ ಪ್ರಕಟಿಸಿದ 'ಜೈಮಿನೀಭಾರತ' (೧೮೪೮), 'ದಾಸರ ಪದಗಳು' (೧೮೫೦), 'ಚೆನ್ನಬಸವಪುರಾಣ' (೧೮೫೮)ಗಳನ್ನು ಕೂಡ ಇಲ್ಲಿಯೇ ಉಲ್ಲೇಖಿಸಬೇಕು. ಈ ಎಲ್ಲವೂ ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧದಲ್ಲಿ ನಡೆದ ತುಂಬ ಗಮನಾರ್ಹ ಕೆಲಸಗಳು. ಇವು ಕನ್ನಡ ಭಾಷೆ-ಸಾಹಿತ್ಯಗಳ ಸಂಶೋಧನೆಗೆ, ಕರ್ನಾಟಕದ ಚರಿತ್ರೆಯ ನಿರೂಪಣೆಗೆ ಗಟ್ಟಿಯಾದ ನೆಲಗಟ್ಟಾದುವು. ಈ ಎಲ್ಲ ಬರೆಹಗಳೂ ಪ್ರಕಟವಾದುದು ಇಂಗ್ಲಿಷ್ ಭಾಷೆಯಲ್ಲಿ ಮತ್ತು ಆ ಭಾಷೆಯ ಸಂಶೋಧನ ಪತ್ರಿಕೆಗಳಲ್ಲಿ.

ಈ ವಿದೇಶೀಯ ವಿದ್ವಾಂಸರು ಸಾಮಗ್ರಿಯನ್ನು ಸಂಗ್ರಹಿಸಲು, ಮೂಲಭೂತ ಸಂಶೋಧನೆ ಕೈಗೊಳ್ಳಲು ದೇಶೀಯ ವಿದ್ವಾಂಸರ ಪಡೆಯೊಂದನ್ನು ನೇಮಿಸಿಕೊಂಡಿದ್ದರು. ಅನಂತರದ ಕಾಲದಲ್ಲಿ ದೊಡ್ಡ ವಿದ್ವಾಂಸರಾಗಿ ಖ್ಯಾತರಾದ ಆರ್. ನರಸಿಂಹಾಚಾರ್, ಚಿಂಚೋಳಿ ವೆಂಕಣ್ಣಾಚಾರ್, ಬುರುಡುಗುಂಟೆ ಶ್ರೀನಿವಾಸ ಅಯ್ಯಂಗಾರ್, ಬೇಗೂರು ಮಲ್ಲಪ್ಪ, ಕೆ. ಬಿ. ಪಾಠಕ್, ಕವೆಲ್ಲಿ ವೆಂಕಟಬೋರಯ್ಯ ಇವರನ್ನು ಇಲ್ಲಿ ನಿದರ್ಶನಾರ್ಥವಾಗಿ ಹೆಸರಿಸಬಹುದು. ತನ್ನ ನಿಘಂಟಿನ ಪದ ನಿರ್ಣಯಕ್ಕೆ ನೆರವಾದ ವಿದ್ವಾಂಸ ಸಿ. ಎಂ. ಶ್ರೀನಿವಾಸಚಾರಿಯರ್ ಎಂದು ಕಿಟ್ಟೆಲ್ ಹೇಳುತ್ತಾನೆ. ವಿದೇಶಿ ವಿದ್ವಾಂಸರ ಈ ಸಂಗ್ರಹಕಾರ್ಯಕ್ಕೆ, ಮಾಹಿತಿ ಪರಿಚಯ ಪ್ರಯತ್ನಕ್ಕೆ ಈ ದೇಶೀಯ ವಿದ್ವಾಂಸರೇ ಹೆಚ್ಚಾಗಿ ನೆರವಾದದ್ದು. ಹಸ್ತಪ್ರತಿ ಶಾಸನಗಳನ್ನಲ್ಲದೆ, ಗಾದೆ-ಗೀತೆಗಳನ್ನು ಮೂಲೆಮೂಲೆಗಳಲ್ಲಿ ಸಂಗ್ರಹಿಸಿದ ಈ ಅವಧಿ ವಿಶೇಷವಾಗಿ **ಸಾಮಗ್ರಿ ಸಂಗ್ರಹಕಾಲ; ಸಾಮಗ್ರಿ ಪರಿಚಯಕಾಲ**

* * * * *

ಹತ್ತೊಂಬತ್ತನೆಯ ಶತಮಾನದ ಅನಂತರ ಇಪ್ಪತ್ತನೆಯ ಶತಮಾನದ ಮೊದಲ ದಶಕದಲ್ಲೇ ಕನ್ನಡ ಸಂಶೋಧನರಂಗದಲ್ಲಿ ಗಮನಾರ್ಹವಾದ ಬದಲಾವಣೆಯಾಯಿತು. ಆ ವರೆಗೆ ನಮ್ಮ ಸಂಶೋಧನರಂಗವನ್ನು ಆಕ್ರಮಿಸಿಕೊಂಡಿದ್ದ ವಿದೇಶೀಯ ವಿದ್ವಾಂಸರ ಸ್ಥಾನಗಳಲ್ಲಿ ದೇಶೀಯ ವಿದ್ವಾಂಸರು ಪ್ರಧಾನವಾಗಿ ಕಾಣಿಸಿಕೊಂಡರು; ರಾರಾಜಿಸತೊಡಗಿದರು. ೧೮೯೨ರ ಹೊತ್ತಿಗೆ ಕಿಟ್ಟೆಲ್ಲರು ಜರ್ಮನಿಗೆ ಹಿಂದಿರುಗಿದರು; ೧೯೦೬ರಲ್ಲಿ ರೈಸರು ನಿವೃತ್ತರಾಗಿ ಇಂಗ್ಲೆಂಡಿಗೆ ವಾಪಸ್ಸು ಹೋದರು. ಆರ್. ನರಸಿಂಹಾಚಾರ್ಯರು ೧೯೦೬ರಲ್ಲಿ ಪುರಾತತ್ತ್ವ ಇಲಾಖೆಯ ನಿರ್ದೇಶಕರಾದರು. ರೈಸರೊಂದಿಗೆ ಕೆಲಸ ಮಾಡಿದ್ದ, ಅವರಿಗೆ ವಿಶೇಷವಾಗಿ ನೆರವಾಗಿದ್ದ, ಆಚಾರ್ಯರು ಪ್ರಾಚೀನ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಸ್ವತಂತ್ರವಾಗಿ ಕೆಲಸ ಮಾಡತೊಡಗಿದರು. ಇವರೊಂದಿಗೆ ಎಸ್. ಜಿ. ನರಸಿಂಹಾಚಾರ್, ಎಂ. ಎ. ರಾಮಾನುಜೈಂಗಾರ್, ಪಿ. ಆರ್. ಕರಿಬಸವಶಾಸ್ತ್ರಿ ಮೊದಲಾದ ದಕ್ಷಿಣ ಕರ್ಣಾಟಕದ ಗ್ರಂಥ ಪರಿಶೋಧಕರು, ಉತ್ತಂಗಿ ಚೆನ್ನಪ್ಪ, ಫ.ಗು. ಹಳಕಟ್ಟಿ ಮುಂತಾದ ಉತ್ತರ ಕರ್ಣಾಟಕದ ಕೃತಿ ಪರಿಷ್ಕರಣಕಾರರು ಸೇರಿಕೊಂಡರು. ಕನ್ನಡ ಸಂಶೋಧನರಂಗ ದೇಶೀಯ ವಿದ್ವಾಂಸರ ಚಿಂತನೆ, ಚಟುವಟಿಕೆಗಳಿಂದ ತುಂಬಿಕೊಂಡಿತು.

ಈ ಎಲ್ಲರೂ ಪ್ರಧಾನವಾಗಿ ತಮ್ಮ ದೃಷ್ಟಿಯನ್ನು ಕೇಂದ್ರೀಕರಿಸಿದ್ದು ಪ್ರಾಚೀನ ಕನ್ನಡ ಕೃತಿಗಳ ಪ್ರಕಟಣೆಯೆಡೆಗೆ. ತಾಳೆಯೋಲೆಗಳಲ್ಲಿ ನಿಕ್ಷಿಪ್ತವಾಗಿದ್ದ ಕನ್ನಡ ಸಾಹಿತ್ಯ ಕೃತಿ ಭಂಡಾರವನ್ನು ಕನ್ನಡಿಗರಿಗೆ ಶ್ರಮ-ಛಲಗಳಿಂದ ಅವರು ತೆರೆದು ತೋರಿಸಿದರು. ಜೈನ ಮತ್ತು ಬ್ರಾಹ್ಮಣ ಕಾವ್ಯಗಳನ್ನು ಆರ್. ನರಸಿಂಹಾಚಾರ್ಯರು ಮತ್ತು ರಾಮಾನುಜೈಂಗಾರ್ಯರು, ವೀರಶೈವ ವಚನ ಹಾಗೂ ಸಾಹಿತ್ಯವನ್ನು ಫ.ಗು. ಹಳಕಟ್ಟಿ ಮತ್ತು ಎಸ್. ಆರ್. ಕರಿಬಸವಶಾಸ್ತ್ರಿಗಳು ಪ್ರಕಾಶಿಸತೊಡಗಿದರು. ಬಿಬ್ಲಿಯೋಥಿಕ ಕರ್ಣಾಟಕಾದ ಜಾಗದಲ್ಲಿ ಕರ್ಣಾಟಕ ಕಾವ್ಯಮಂಜರಿ, ಕರ್ಣಾಟಕ ಕಾವ್ಯಕಲಾನಿಧಿ, ಗ್ರಂಥಪ್ರಕಾಶಿಕೆ,

ಶಿವಾನುಭವ ಗ್ರಂಥಮಾಲಾ ಎಂಬ ದೇಶೀಯ ಗ್ರಂಥಮಾಲೆಗಳು ಸ್ಥಾಪಿತವಾದವು. ಕಾವ್ಯಮಂಜರಿ, ಕಾವ್ಯಕಲಾನಿಧಿಗಳ ಸಂಪಾದಕರು ಸುಮಾರು ಇಪ್ಪತ್ತೈದು ವರ್ಷಗಳ ಕಾಲ (೧೮೯೨-೧೯೧೬) ೭೫ಕ್ಕೂ ಹೆಚ್ಚು ಕೃತಿಗಳನ್ನು ಪ್ರಕಟಿಸಿ ನಮ್ಮ ಹಳಗನ್ನಡ ಸಾಹಿತ್ಯದ ಗುಣ-ಗಾತ್ರ, ವೈವಿಧ್ಯ-ಸಮೃದ್ಧಿಗಳನ್ನು ಮೊದಲಬಾರಿಗೆ ತೋರಿಸಿಕೊಟ್ಟರು. ವಚನಶಾಸ್ತ್ರಸಾರ (೧, ೨, ೩), ಬಸವಣ್ಣ ಅಲ್ಲಮ ಸಿದ್ಧರಾಮ ಚೆನ್ನಬಸವಣ್ಣನವರ ವಚನ ಸಂಪುಟಗಳು ಹಾಗೂ ಶಿವಶರಣರ ಚರಿತ್ರೆಗಳ ಪ್ರಕಟಣೆಯ ಮೂಲಕ ಹಳಕಟ್ಟಿಯವರು ನಡುಗನ್ನಡ ಕಾಲದ-ವಿಶೇಷವಾಗಿ ವೀರಶೈವ ಸಾಹಿತ್ಯದ-ಆಳ ಅಗಲಗಳನ್ನು ಪರಿಚಯಿಸಿಕೊಟ್ಟರು. ಆದಿಪುರಾಣದಿಂದ ರಾಮಾಶ್ವಮೇಧದ ವರೆಗಣ ಪ್ರಕಟಣೆಗಳು, ದೇವರ ದಾಸಿಮಯ್ಯನಿಂದ ಸೋಮೆಕಟ್ಟೆಕರಿವೃಷಭೇಂದ್ರರ ವಚನ ಹಾಡುಗಳ ಪ್ರಕಟಣೆಗಳು ನಮ್ಮ ಸಾಹಿತ್ಯಾಧ್ಯಯನಕ್ಕೆ ಅಗತ್ಯವಾಗಿದ್ದ ಮೂಲ ಆಕರಗಳನ್ನು ಒದಗಿಸಿದವು.

ಈ ಅವಧಿಯ ಚಟುವಟಿಕೆಗಳಿಗೆ ರೈಸ್ ಮತ್ತು ಕಿಟ್ಟೆಲ್ಲರೇ ಮಾದರಿ. ಅವರಂತೆಯೇ ದೇಶೀಯ ವಿದ್ವಾಂಸರೂ ಹಸ್ತಪ್ರತಿಗಳಿಗಾಗಿ, ಶಾಸನಗಳಿಗಾಗಿ ಹುಡುಕಾಡಿದರು. ಆರ್. ನರಸಿಂಹಾಚಾರ್ಯರು ತಮ್ಮ ನಿರ್ದೇಶಕತ್ವದ ಅವಧಿಯಲ್ಲಿ ೫೦೦ ಶಾಸನ, ೧೮೦೦ ಓಲೆಪ್ರತಿಗಳನ್ನು ಸಂಗ್ರಹಿಸಿದರು. ವಚನ ಸಂಗ್ರಹ-ಸಂಪಾದನೆಗಳಿಗೆಂದೇ ಹಳಕಟ್ಟಿಯವರೂ ಹರಿದಾಸರ ಕೀರ್ತನೆಗಳನ್ನು ಸಂಗ್ರಹಿಸಲೆಂದೇ ಲಿಂಗ ಸುಗೂರಿನ ಗೂರಬಾಳ ಹನುಮಂತರಾಯರೂ ತಮ್ಮ ವಕೀಲ ವೃತ್ತಿಯನ್ನೇ ತೊರೆದರು! ಒಂದುನೂರು ಸಂಪುಟಗಳ ಕವಿಕೃತಿಗಳ ನಕಲುಕಾರ್ಯ ಪುರಾತತ್ತ್ವ ಇಲಾಖೆಯಲ್ಲಿ ಭರದಿಂದ ಜರುಗಿತು. ಈ ಎಲ್ಲವೂ ಸಾಮಗ್ರಿಸಂಗ್ರಹಕ್ಕೆ ಮತ್ತು ಅದರ ಪ್ರಕಟಣೆಗೆ ಮೊದಲ ಜಾವದ ಕನ್ನಡ ವಿದ್ವಾಂಸರು ತುಡಿದದ್ದನ್ನು , ದುಡಿದದ್ದನ್ನು ಇಂಗಿತಗೊಳಿಸುತ್ತದೆ.

ವಿದೇಶೀ ವಿದ್ವಾಂಸರ ಕೆಲಸಗಳನ್ನು ಬಹಳ ಸಮೀಪದಿಂದ ನೋಡಿ ಅವುಗಳ ಅರೆ-ಕೊರೆಗಳನ್ನು ಗಮನಿಸಿಯೋ ಏನೋ ದೇಶೀಯ ವಿದ್ವಾಂಸರು ಅವರಿಂದ ಸಂಪಾದಿತವಾದ ಕೃತಿಗಳನ್ನು, ಅವರು ಮಾಡಿದ ಕೆಲಸಗಳನ್ನು ಮೌನವಾಗಿ ಪರಿಷ್ಕರಿಸಿ ಪ್ರಕಟಿಸಿದ್ದಾರೆ. ರೈಸರು ಸಂಪಾದಿಸಿದ್ದ ಶಬ್ದಾನುಶಾಸನವನ್ನು ಆರ್. ನರಸಿಂಹಾಚಾರ್ಯರೂ (೧೯೨೪), ಗ್ಯಾರೆಟ್ ಕಿಟ್ಟೆಲ್ಲರ ಶಬ್ದಮಣಿದರ್ಪಣವನ್ನು ಕನ್ನಡ ಸಾಹಿತ್ಯ ಪರಿಷತ್ತು (೧೯೨೦) ಮತ್ತೆ ಪರಿಷ್ಕರಿಸಿದ್ದು ಇದಕ್ಕೆ ಉದಾಹರಣೆ. ರೈಸರು ಸಂಪಾದಿಸಿದ್ದ ಶ್ರವಣ ಬೆಳುಗೊಳದ ಶಾಸನಗಳ ಸಂಪುಟಕ್ಕೆ ಮತ್ತೆ ೩೫೭ ಶಾಸನ ಸೇರಿಸಿ ನರಸಿಂಹಾಚಾರ್ಯರು ಪುನರ್‌ಪರಿಷ್ಕರಿಸಿ ಪ್ರಕಟಿಸಿದ್ದನ್ನೂ ಇಲ್ಲಿಯೇ ನೆನೆಯಬಹುದು. ರೈಸರಿಂದ ಸಂಪಾದಿತವಾಗಿದ್ದರೂ 'ಪಂಪಭಾರತ'ವನ್ನು ಪರಿಷತ್ತು ಒಂದು ವಿದ್ವನ್ಮಂಡಲಿ ಮೂಲಕ ಮತ್ತೆ ಪರಿಷ್ಕರಿಸಿತು. ಕಿಟ್ಟೆಲ್ ಮತ್ತು ರೈಸರು ತಾವು ಬರೆದ ಕೃತಿಗಳ ಉಪೋದ್ಘಾತಗಳಾಗಿ ಕನ್ನಡ ಸಾಹಿತ್ಯ ಚರಿತ್ರೆ ಕುರಿತ ಲೇಖನ ಸೇರ್ಪಡೆಗೊಳಿಸಿದ್ದರು. ಅದರ ಇತಿಮಿತಿಗಳು ಎಲ್ಲರಿಗಿಂತ ಚೆನ್ನಾಗಿ ಆರ್. ನರಸಿಂಹಾಚಾರ್ಯರಿಗೆ ತಿಳಿದಿತ್ತು. ನಮ್ಮ ಕವಿಕಾವ್ಯ ಚರಿತ್ರೆಯನ್ನು ವ್ಯಾಪಕವಾಗಿ ಸಾಧಾರಪೂರ್ವಕವಾಗಿ ಸಿದ್ಧಗೊಳಿಸಲು ಅವರು ಸಂಕಲ್ಪಿಸಿದರು. ಮೂರು ದಶಕಗಳ ಕಾಲ ಅವಿರತವಾಗಿ ದುಡಿದು (೧೮೯೪-೧೯೨೩) ಕರ್ನಾಟಕ ಕವಿಚರಿತೆಯ ಮೂರು ಸಂಪುಟಗಳನ್ನು ಪ್ರಕಟಿಸಿದರು (೧೯೦೭, ೧೯೧೯, ೧೯೨೩). ಇವು ಪ್ರಾಚೀನ ಕನ್ನಡ ಸಾಹಿತ್ಯದ ಅಧ್ಯಯನಕ್ಕೆ ಒದಗುವ ಪ್ರಮಾಣಗ್ರಂಥಗಳು; ನಮ್ಮ ಸಾಹಿತ್ಯದ ಅಧ್ಯಯನಕ್ಕೆ ಅಡಿಗಲ್ಲುಗಳು; ಒಟ್ಟಿನಲ್ಲಿ ಸರ್ವದಾ ಸ್ಮರಿಸಬೇಕಾದ ಅಮೋಘಕಾರ್ಯ. ೧೧೪೮ ಕವಿಗಳು, ೨೦೦೦ಕ್ಕೂ ಹೆಚ್ಚು ಸಾಹಿತ್ಯಕೃತಿಗಳು ಇಲ್ಲಿ ಪಟ್ಟಿಗೊಂಡಿವೆ. ಇದೇ ಮಾದರಿಯಲ್ಲಿ, ಆದರೆ ಇನ್ನಷ್ಟು ವಿವರವಾಗಿ ಆದಷ್ಟು ಸಮಗ್ರವಾಗಿ ಶಿವಶರಣರ ಚರಿತ್ರ ಸಂಪುಟಗಳನ್ನು ಹಳಕಟ್ಟಿ ಬಳಿಕ ಸಿದ್ಧಪಡಿಸಿದರು. ಮುಂದಿನ ಕನ್ನಡ ಸಾಹಿತ್ಯ ಸಂಶೋಧನೆಗೆ ಇವು ಪ್ರಮಾಣಭೂತ ಆಕರಗಳೆನಿಸಿದುವು.

ಕಿಟ್ಟೆಲ್ ಮತ್ತು ರೈಸರಂತೆಯೇ ಸಾಹಿತ್ಯಚರಿತ್ರೆ, ಗ್ರಂಥಸಂಪಾದನೆ, ಭಾಷೆ-ಛಂದಸ್ಸುಗಳನ್ನು ಈ ಅವಧಿಯ ನಮ್ಮ ದೇಶೀಯ ವಿದ್ವಾಂಸರು ಮುಖ್ಯವೆಂದು ಭಾವಿಸಿದರು; ಆ ಕ್ಷೇತ್ರಗಳಲ್ಲೇ ದುಡಿಮೆ ಮಾಡಿದರು. ನಮ್ಮ ಭಾಷೆ-ಸಾಹಿತ್ಯಗಳ ಕ್ರಮಾಗತ ಚರಿತ್ರೆ ಬರೆಯುವುದರ ಮೂಲಕ, ಆ ಸಂಬಂಧವಾದ ಕೃತಿಗಳನ್ನು ಪ್ರಕಟಿಸುವುದರ ಮೂಲಕ ಅಧಿಕೃತ ಆಕರಗಳನ್ನು ನಿರ್ಮಿಸಿದರು.

ಪರಂಪರೆಯಿಂದ ಬಂದ ಪಾಂಡಿತ್ಯ, ವಿದೇಶೀ ವಿದ್ವಾಂಸರು ರೂಢಿಸಿದ ನವೀನ ಸಂಶೋಧನ ದೃಷ್ಟಿಗಳು ಇವರಲ್ಲಿ ಮೇಳವಿಸಿದ್ದವು. ಕಾವ್ಯಾವಲೋಕನ, ಶಬ್ದಾನುಶಾಸನಗಳಿಗೆ ನರಸಿಂಹಾಚಾರ್ಯರು ಬರೆದಿರುವ ವ್ಯಾಪಕವೂ ತಲಸ್ಪರ್ಶಿಯೂ ಆದ ಉಪೋದ್ಘಾತ ಯಾರನ್ನೂ ದಂಗು ಬಡಿಸುವಂತಿದೆ. ಕಿಟ್ಟೆಲ್, ರೈಸರ ಉಪೋದ್ಘಾತಗಳನ್ನು ಇವು ಮೀರಿಸಿವೆ. ಈ ಅವಧಿಯ ಸಂಶೋಧನ ಚಟುವಟಿಕೆ ಮೂಲಭೂತ ಆಕರ ಹಾಗೂ ಅಧಿಕೃತ ಗ್ರಂಥಗಳನ್ನು ನಿರ್ಮಿಸುವುದನ್ನು ಗಮನದಲ್ಲಿರಿಸಿ ಕೊಂಡುದರಿಂದ ಇದು **ಆಕರ ನಿರ್ಮಾಣಕಾಲವಾಯಿತು.**

* * * * *

೧೯೨೭ನೆಯ ಇಸವಿ ಕನ್ನಡ ಭಾಷೆ-ಸಾಹಿತ್ಯಗಳ ದೃಷ್ಟಿಯಿಂದ ಚರಿತ್ರಾರ್ಹ ವರ್ಷ. ಮೈಸೂರು ವಿಶ್ವವಿದ್ಯಾನಿಲಯ ಆ ವರ್ಷ ಕನ್ನಡ ಎಂ. ಎ., ತರಗತಿಗಳನ್ನು ಆರಂಭಿಸಿತು. ಕನ್ನಡ ಸಾಹಿತ್ಯ ಸಂಬಂಧವಾದ ಸಂಶೋಧನೆ ಹೊಸಹಾದಿ ಹಿಡಿಯಲು, ಹೊಸಬಗೆಯಲ್ಲಿ ನಡೆಯಲು ಈ ಘಟನೆ ನೆರವಾಯಿತು. ಮೊದಲ ಎರಡು ತಂಡಗಳಲ್ಲಿ ಡಿ. ಎಲ್. ನರಸಿಂಹಾಚಾರ್, ತೀ.ನಂ. ಶ್ರೀಕಂಠಯ್ಯ ಅವರಂಥ ಧೀಮಂತ ವಿದ್ಯಾರ್ಥಿಗಳಿದ್ದರು. ಇವರಿಗೆ ಬಿ. ಎಂ. ಶ್ರೀಕಂಠಯ್ಯ, ಎ. ಆರ್. ಕೃಷ್ಣಶಾಸ್ತ್ರೀ, ಟಿ. ಎಸ್. ವೆಂಕಣ್ಣಯ್ಯನವರಂಥ ಘನ ವಿದ್ವಾಂಸರು ಗುರುಗಳಾಗಿದ್ದರು. ಬಿ. ಎಂ. ಶ್ರೀಕಂಠಯ್ಯ ಅವರಿಗಿದ್ದ ಗ್ರೀಕ್-ಇಂಗ್ಲಿಷ್ ವಿದ್ವತ್ತು, ಎ. ಆರ್. ಕೃಷ್ಣಶಾಸ್ತ್ರಿಗಳಿಗಿದ್ದ ಸಂಸ್ಕೃತದ ವಿದ್ವತ್ತು, ವೆಂಕಣ್ಣಯ್ಯನವರಿಗಿದ್ದ ತೆಲುಗು-ಬಂಗಾಲಿ ವಿದ್ವತ್ತು ನಮ್ಮ ಸಂಶೋಧನರಂಗಕ್ಕೆ ಹೊಸ ಆಯಾಮಗಳನ್ನು ಜೋಡಿಸಿತು. ಹೆಚ್ಚುಕಡಿಮೆ ಈ ಹೊತ್ತಿಗೇ ಆರಂಭವಾಗಿದ್ದ, ಪ್ರಬುದ್ಧ ಕರ್ಣಾಟಕ, ಹೊಸಗನ್ನಡ ಸಾಹಿತ್ಯಕ್ಕೆ ಪ್ರೇರಕವಾದುದಲ್ಲದೆ, ಕನ್ನಡ ವಿದ್ವತ್ತನ್ನು ಬೆಳೆಸುವ, ಪ್ರಬಲಿಸುವ ವೇದಿಕೆಯಾಯಿತು. ವಿದ್ಯಾರ್ಥಿಗಳಿಗೆಂದು ಸಿದ್ಧಗೊಳಿಸಿದ 'ಕನ್ನಡ ಕೈಪಿಡಿ' (೧೯೨೯) ಒಂದು ಅಧಿಕೃತ ಗ್ರಂಥವೆನಿಸಿಕೊಂಡಿತು; ಸಂಶೋಧನ ವಿವರಗಳುಳ್ಳ ಕೃತಿಯಾಗಿ ಪರಿಗಣಿತವಾಯಿತು. ಇದರ ಛಂದಸ್ಸಿನ ಬರೆವಣಿಗೆಯಲ್ಲಿ ಬಿ.ಎಂ. ಶ್ರೀಕಂಠಯ್ಯ, ಅಲಂಕಾರಶಾಸ್ತ್ರ ನಿರೂಪಣೆಯಲ್ಲಿ ಎ.ಆರ್. ಕೃಷ್ಣಶಾಸ್ತ್ರೀ, ಭಾಷಾಚರಿತ್ರೆಯ ರಚನೆಯಲ್ಲಿ ಟಿ. ಎಸ್. ವೆಂಕಣ್ಣಯ್ಯ ತೊಡಗಿಕೊಂಡರು. ಶ್ರೀಕಂಠಯ್ಯನವರು ಅಂಶಛಂದಸ್ಸಿನ ರಹಸ್ಯ ಭೇದಿಸಿ, ತಮಿಳಿನೊಡನೆ ಅದಕ್ಕಿದ್ದ ಸಂಪರ್ಕ ವಿಶದೀಕರಿಸಿ ಅಧ್ಯಯನದ ಹೊಸ್ಹಾದಿ ತೋರಿದರು. ಕನ್ನಡ ಭಾಷೆಯ ವಿವಿಧ ಮುಖಗಳ ಚರಿತ್ರೆಯನ್ನು ವೆಂಕಣ್ಣಯ್ಯ ತುಂಬ ಸೊಗಸಾಗಿ ಮೊದಲಬಾರಿಗೆ ಕನ್ನಡದಲ್ಲಿ ನಿರೂಪಿಸಿದರು. ಸಡಿಲವಾದ ಬರೆವಣಿಗೆಯ ಮೂಲಕವೇ ಆದರೂ ಕವಿಚರಿತೆಗಿಂತ ಸಾಹಿತ್ಯಚರಿತ್ರೆ ಭಿನ್ನವಾದದ್ದು ಎಂಬುದನ್ನು 'ಶ್ರೀ'ಯವರು ಕನ್ನಡ ಕೈಪಿಡಿಯ ಎರಡನೆಯ ಸಂಪುಟದಲ್ಲಿ ತೋರಿಸಿಕೊಟ್ಟರು. ಕೃತಿಶೋಧನೆಯಿಂದ ಗ್ರಂಥಸಂಪಾದನೆಗೆ, ಕವಿಚರಿತೆಯಿಂದ ಸಾಹಿತ್ಯಚರಿತ್ರೆಗೆ, ಛಂದಃಸೂತ್ರಗಳಿಂದ ಛಂದಃಶಾಸ್ತ್ರಸ್ವರೂಪ ಭೇದನಕ್ಕೆ, ವ್ಯಾಕರಣದಿಂದ ಭಾಷಾಚರಿತ್ರೆಗೆ, ಅಲಂಕಾರಶಾಸ್ತ್ರದಿಂದ ಕಾವ್ಯಮೀಮಾಂಸೆಗೆ ಕನ್ನಡ ಸಂಶೋಧನೆ ಹೊರಳಿಕೊಂಡದ್ದು ಈ ಕಾಲದಲ್ಲೇ. ಸಾಮಗ್ರಿ ಸಂಗ್ರಹ, ಪ್ರಕಟಣೆಗಳೆಡೆ ಕೇಂದ್ರೀಕೃತವಾಗಿದ್ದ ಕನ್ನಡ ಸಂಶೋಧನೆ ತೀವ್ರವಾದ ಸಾಮಗ್ರಿ ವಿಶ್ಲೇಷಣೆಯೆಡೆ ಮೊಗಮಾಡಿತು.

ಕನ್ನಡದ ಸಾಹಿತ್ಯಚರಿತ್ರೆ, ಭಾಷಾಚರಿತ್ರೆ, ಛಂದಸ್ಸಿನ ಚರಿತ್ರೆಗಳನ್ನು ವಿವಿಧ ರೀತಿಗಳಲ್ಲಿ ಬರೆಯುವ, ಸಮೀಕ್ಷಿಸುವ, ಶೋಧಿಸುವ ಬಹುಬಗೆಯ ಪ್ರಯತ್ನಗಳು ನಡೆದದ್ದು ಈ ಅವಧಿಯಲ್ಲೇ. ಕರ್ಣಾಟಕದ ರಾಜವಂಶಗಳ, ರಾಜರ, ಸಾಮಂತರ ಕಾಲವನ್ನೂ ಚರಿತ್ರೆಯನ್ನೂ ಇತಿಹಾಸರಂಗ ಚರ್ಚೆಗಳ ಮೂಲಕ ಖಚಿತಗೊಳಿಸುತ್ತಿತ್ತು. ಈ ವಾತಾವರಣದಲ್ಲಿದ್ದ ನಮ್ಮ ಸಾಹಿತ್ಯದ ವಿದ್ವಾಂಸರು ಸಾಹಿತ್ಯಚರಿತ್ರೆಯಲ್ಲಿ ಕೂಡ ಕವಿ-ಕಾವ್ಯಗಳ ಕಾಲ ನಿರ್ದಿಷ್ಟತೆ ಅಗತ್ಯವೆಂದು ಸಹಜವಾಗಿಯೇ ಭಾವಿಸಿದರು. ಹೀಗಾಗಿ ಕವಿಗಳ ಕಾಲ ದೇಶ ಮತಗಳ ಚರ್ಚೆ ಕನ್ನಡ ಸಂಶೋಧನೆಯ ಒಂದು ಪ್ರಮುಖ ಭಾಗವಾಯಿತು. ಮಂಗಳೂರಿನಲ್ಲಿ ಗೋವಿಂದ ಪೈ, ಮೈಸೂರಿನಲ್ಲಿ ಎ. ವೆಂಕಟಸುಬ್ಬಯ್ಯ, ಧಾರವಾಡದಲ್ಲಿ ನಾ. ಶ್ರೀ, ರಾಜಪುರೋಹಿತ ಇದರಲ್ಲಿ ತೊಡಗಿಕೊಳ್ಳುವುದರ ಮೂಲಕ ಪ್ರಾಚೀನ ಸಾಹಿತ್ಯಕ್ಕೆ ಅಗತ್ಯವಾಗಿದ್ದ ಚಾರಿತ್ರಿಕ ಬುನಾದಿಯನ್ನು ಹಾಕಿಕೊಟ್ಟರು. ಈ ಅವಧಿಯ ಸಂಶೋಧನ

ಪತ್ರಿಕೆಗಳಲ್ಲಿ ಕಾಣುವುದು ಕವಿ-ಕಾಲ-ಮತ-ಕರ್ತೃತ್ವ ಶೋಧದ ಬರೆಹಗಳೇ. ಪೈಯವರ ಬಹುಪಾಲು ಬರೆಹಗಳು ಈ ಬಗೆಯವು. ''ಗೋವಿಂದ ಪೈ ಎಂದರೆ ಕಾಲ ನಿರ್ಣಯ, ಕಾಲನಿರ್ಣಯವೆಂದರೆ ಗೋವಿಂದ ಪೈ'' ಎಂಬ ಮಟ್ಟಿಗೆ ಅವರು ಇದರಲ್ಲಿ ತೊಡಗಿಕೊಂಡರು. ಆದಿಪುರಾಣ ಗದಾಯುದ್ಧ ಪಂಚತಂತ್ರದಂಥ ಕೃತಿಗಳ, ಬ್ರಹ್ಮಶಿವ ಹರಿಹರ ರಾಘವಾಂಕ ಕುಮಾರವ್ಯಾಸ ಲಕ್ಷ್ಮೀಶರಂಥ ಕವಿಗಳ ಕಾಲ ನಿರ್ಣಯದ ಬಗ್ಗೆ ಸಂಶೋಧನೆಗಳೇ ನಡೆದವು. ಎ. ವೆಂಕಟಸುಬ್ಬಯ್ಯನವರು ಇಂದಿಗೂ ಹೆಸರಾಗಿ ಉಳಿದಿರುವುದು ತಮ್ಮ ಇಂಥ ಕೃತಿಯಾದ ''ಕೆಲವು ಕನ್ನಡ ಕವಿಗಳ ಜೀವನ ಕಾಲ ವಿಚಾರ'' ಎಂಬುದರಿಂದಲೇ.

ಕನ್ನಡ ಸಾಹಿತ್ಯವನ್ನು ಬೇರೆ ರೀತಿಯಲ್ಲಿ ವಿಶ್ಲೇಷಿಸುವ ಸಮೀಕ್ಷಿಸುವ ಪ್ರಯತ್ನಗಳೂ ಈ ಅವಧಿಯಲ್ಲಿ ಇನ್ನೊಂದು ಮುಖವಾಗಿ ನಡೆಯಿತು. ಕನ್ನಡದಲ್ಲಿ ಬೌದ್ಧರು ಗ್ರಂಥಗಳನ್ನು ಬರೆದಿದ್ದರೆ ಎಂಬ ಚರ್ಚೆ ಮಾಡಿದ ಟಿ. ಎಸ್. ವೆಂಕಣ್ಣಯ್ಯನವರೇ ಕರ್ತೃವಿನ ಉಲ್ಲೇಖ ಕೃತಿಯಲ್ಲಿ ಇಲ್ಲದಿದ್ದರೂ ಹರಿಹರನೇ ಬಸವರಾಜದೇವರ ರಗಳೆಯ ಕರ್ತೃ ಎಂಬುದನ್ನು ಸ್ಥಾಪಿಸಿದರು. ಕನ್ನಡ ಸಾಹಿತ್ಯವನ್ನು ಹತ್ತು, ಹನ್ನೊಂದು, ಹನ್ನೆರಡು, ಹದಿಮೂರು ಎಂಬ ಶತಮಾನಗಳಾಗಿ ಸೀಳಿಕೊಂಡು ಆಯಾ ಶತಮಾನದ ಸಾಹಿತ್ಯಕ ಸ್ಥಿತಿಗತಿಗಳನ್ನು ಚರ್ಚಿಸುವ ಬಿಂಬಿಸುವ ಪ್ರಯತ್ನಗಳನ್ನು ವೆಂಕಣ್ಣಯ್ಯ, ಎಂ ಆರ್ ಶ್ರೀ, ಡಿ ಎಲ್ ನರಸಿಂಹಾಚಾರ್ಯರೇ ಮುಂತಾದವರು ಮಾಡಿದರು. ಅರ್ಧಪುಟ, ಒಂದು ಪುಟದ ಪ್ರಸ್ತಾಪಕ್ಕೇ ತೃಪ್ತಿ ಪಟ್ಟುಕೊಳ್ಳಬೇಕಾಗಿದ್ದ ಕವಿಗಳ ಬಗ್ಗೆ ಪ್ರಶಸ್ತಿ ಗ್ರಂಥಗಳನ್ನು ಸ್ವತಂತ್ರ ವಿಶ್ಲೇಷಣೆಗಳನ್ನು ಮಾಡಿ ಪೂರ್ಣಪ್ರಮಾಣದ ಗ್ರಂಥಗಳನ್ನು ಪ್ರಕಟಿಸಿದ್ದು ಈ ಅವಧಿಯಲ್ಲೇ. ರನ್ನ(೧೯೨೮), ಲಕ್ಷ್ಮೀಶ (೧೯೩೩), ಹರಿಹರದೇವ (೧೯೩೭), ನಾಡೋಜಪಂಪ (೧೯೩೮), ಕುಮಾರವ್ಯಾಸ (೧೯೪೦), ಕವಿರಾಜಮಾರ್ಗವಿವೇಕ (೧೯೪೮) ಕೃತಿಗಳು ಹಲವರಿಂದ, ಏಕವ್ಯಕ್ತಿಗಳಿಂದ ಪ್ರಕಟಗೊಂಡವು. ಅದರಲ್ಲೂ ಮುಳಿಯ ತಿಮ್ಮಪ್ಪಯ್ಯನವರಂಥವರು ಕೃತಿಯ ಸರ್ವತೋಮುಖ ಪರಿಶೀಲನೆಗೇ ತೊಡಗಿದರು.

ಭಾಷೆ-ಛಂದಸ್ಸು-ಸಂಸ್ಕೃತಿಗಳ ವಿಶ್ಲೇಷಣೆ ಕೂಡ ಬಹುಮುಖವಾಗಿಯೇ ಈ ಅವಧಿಯಲ್ಲಿ ನಡೆಯಿತು. ಕನ್ನಡ ಭಾಷೆಯ ಪ್ರಾಚೀನತೆಯನ್ನು ಶಾಸನ ಗ್ರೀಕ್ ಪ್ರಹಸನ ಪ್ರಾಕೃತ ಗ್ರಂಥಗಳ ಮೂಲಕ ಗೋವಿಂದ ಪೈ ಚರ್ಚಿಸಿದರೆ, ಕನ್ನಡದೊಂದಿಗೆ ಕರ್ಣಾಟಕದ ಪ್ರಾಚೀನತೆಯನ್ನು ಸಾಂಸ್ಕೃತಿಕ ನೆಲೆಗಳಲ್ಲಿ ಶಂಬಾಜೋಶಿ ವಿಶ್ಲೇಷಿಸಿದರು. ಗೋದಾವರಿ ತೀರ, ಮಹಾರಾಷ್ಟ್ರಪ್ರದೇಶ, ವಿವಿಧ ಜನಾಂಗಗಳ ಹಿನ್ನೆಲೆಯಲ್ಲಿ ಅವರು ಈ ವಿಷಯವನ್ನು ತಮ್ಮ ಜೀವನಧ್ಯೇಯವೆಂಬಂತೆ ಸಂಶೋಧಿಸಿದರು. ರೈಸ್ ಕಿಟ್ಟೆಲ್ಲರ ಕಾಲದಲ್ಲಿ ಲಭ್ಯವಾಗದಿದ್ದ ಹಲ್ಮಿಡಿಶಾಸನ ಎಂ ಎಚ್ ಕೃಷ್ಣ ಅವರಿಗೆ ಲಭ್ಯವಾಗಿ ಕನ್ನಡ ಭಾಷೆಯ ಪ್ರಾಚೀನತೆಗೆ ಒಂದು ಗಟ್ಟಿ ಆಧಾರ ದೊರೆತಂತಾಯಿತು. ಷಟ್ಪದಿ ರಗಳೆ ಏಳೆ ಸಾಂಗತ್ಯ ಬಂಧಗಳ ಉಗಮ ಲಕ್ಷಣಗಳ ಚರ್ಚೆ, ಕನ್ನಡ ಭಾಷೆಯ ಬೆಳವಣಿಗೆಯ ವಿವಿಧ ಘಟ್ಟಗಳು, ಪ್ರಥಮಾ ವಿಭಕ್ತಿ, ಪಂಚಮೀ ವಿಭಕ್ತಿಗಳ ಚರ್ಚೆ, ಭಾಷೆಯ ವಿವಿಧ ಅಂಗಗಳ ಅಸ್ತಿತ್ವ ಕುರಿತ ಚರ್ಚೆಗಳೂ ಕಾಣಿಸಿಕೊಂಡವು.

ಇಲ್ಲಿಯೇ ಡಿ. ಎಲ್. ನರಸಿಂಹಾಚಾರ್ ಮತ್ತು ತೀ. ನಂ. ಶ್ರೀಕಂಠಯ್ಯ ಅವರ ಶೋಧಗಳನ್ನು ಪ್ರತ್ಯೇಕವಾಗಿ ಉಲ್ಲೇಖಿಸಬೇಕು. ಕನ್ನಡ ಭಾಷೆ, ಸಾಹಿತ್ಯ, ಛಂದಸ್ಸುಗಳ ಬಗ್ಗೆ ಈ ಇಬ್ಬರದೂ ಆಳವಾದ ಪಾಂಡಿತ್ಯ. ಜೊತೆಗೆ ಸಂಸ್ಕೃತ ಮತ್ತು ಇತರ ದ್ರಾವಿಡ ಭಾಷೆಗಳ ಹಿನ್ನೆಲೆ. ಇಬ್ಬರದೂ ಬಹುಮುಖವಾದ ಸಂಶೋಧನೆ. ಹೀಗಿದ್ದೂ ನಿರ್ದಿಷ್ಟ ಸಂಶೋಧನ ಕ್ಷೇತ್ರಗಳ ಬಗ್ಗೆ ತಾತ್ವಿಕ ರೂಪದ ಕೃತಿಗಳನ್ನು ರಚಿಸಿದ್ದು ಈ ಇಬ್ಬರ ಹೆಗ್ಗಳಿಕೆ. ನರಸಿಂಹಾಚಾರ್ಯರು ಗ್ರಂಥಸಂಪಾದನೆಯ ಕೃತಿ ರಚಿಸಿ ತಮ್ಮ ವಿದ್ವತ್ತು ತೋರಿದರು; ತೀ ನಂ ಶ್ರೀಕಂಠಯ್ಯನವರು ಕಾವ್ಯಮೀಮಾಂಸೆಯ ಬಗ್ಗೆ ಅಪೂರ್ವ ಕೃತಿ ರಚಿಸಿದರು. ಕೃತಿಯ ಪರಿಶೋಧನೆ, ಪರಿಷ್ಕರಣಗಳಿಗೆ ಸಂಬಂಧಿಸಿದ ವ್ಯವಸ್ಥಿತ ಗ್ರಂಥಸಂಪಾದನ ಕ್ರಮ, ತತ್ತ್ವಗಳನ್ನು ಡಿ. ಎಲ್. ಎನ್ ಪರಿಚಯಿಸಿದರು. ಜತೆಗೆ ಹಳಗನ್ನಡ ಕಾವ್ಯಗಳ ಕಠಿಣಶಬ್ದಗಳ ನಿಷ್ಪತ್ತಿ, ಅರ್ಥಗಳ ಬಗ್ಗೆ ಹಲವಾರು ಲೇಖನ ಬರೆದರು. (ಮುಂದೆ 'ಪಂಪಭಾರತ'ಕ್ಕೆ ಅರ್ಥ, ವಿವರಣೆಗಳ ವ್ಯಾಖ್ಯಾನರೂಪದ ದೀಪಿಕೆ ರಚಿಸಿದ್ದು ಅವರ ಒಂದು ದೊಡ್ಡ ಕೊಡುಗೆ.) ಅಶೋಕನ

ಬ್ರಹ್ಮಗಿರಿಶಾಸನದ ಇಸಿಲ ಶಬ್ದದ ಮೂಲಕ ಕನ್ನಡ ಭಾಷೆಯ ಪ್ರಾಚೀನತೆಗೆ ಹೊಸ ಆಧಾರ ಒದಗಿಸಿದ್ದಂತೂ ನರಸಿಂಹಾಚಾರ್ಯರ ಸ್ಮರಣೀಯ ಶೋಧ. ತೀ. ನಂ. ಶ್ರೀಯವರಾದರೋ ಹೊಸಗನ್ನಡ ಕವಿತೆಗಳ ಲಯ, ಬಂಧ, ಛಂದೋವಿನ್ಯಾಸಗಳ ರಹಸ್ಯ ಭೇದಿಸಿದರು. ಮುಡಿ, ಪದ್ಮಗಣ, ಅನಾಗತ ಎಂಬ ಪರಿಭಾಷೆಯನ್ನೇ ಸೃಷ್ಟಿಸಿದರು. ಸ್ವರವ್ಯತ್ಯಯ ಹಾಗೂ ಅನುಘರ್ಷ ಕುರಿತ ತೀ. ನಂ. ಶ್ರೀ ಬರೆಹಗಳು, ಕನ್ನಡದಲ್ಲಿ ಶಬ್ದರಚನೆ ಎಂಬ ಡಿಎಲ್‌ಎನ್ ಬರೆಹ ಕನ್ನಡ ಭಾಷಾವಿಜ್ಞಾನ ಅಧ್ಯಯನದ ಪಕ್ವಸ್ಥಿತಿಯ ನಿದರ್ಶನಗಳಾದುವು. ಈ ಇಬ್ಬರೂ ಸಂಪಾದಿಸಿರುವ ಪ್ರಾಚೀನ ಕೃತಿಗಳು ಇಂದಿಗೂ ಆ ಕ್ಷೇತ್ರದ ಮಾದರಿಗಳೇ ಆಗಿವೆ.

ಈ ಹಿಂದಿನ ಮೂರು ದಶಕಗಳಲ್ಲಿ ಆಕರಗಳು ರೂಪುಗೊಂಡಿದ್ದವು; ನಾನಾ ದಿಕ್ಕುಗಳಲ್ಲಿ ಸಂಶೋಧನ ಸಾಮಗ್ರಿ ಚೆದುರಿ ಚೆಲ್ಲಾಡಿದ್ದುವು. ಅವನ್ನು ಆಯ್ದು, ಓರಣಗೊಳಿಸಿ ನಮ್ಮ ವಿದ್ವತ್ತು ಪಾಂಡಿತ್ಯಗಳನ್ನು ನಿರ್ದಿಷ್ಟವಾದ ಅಧ್ಯಯನದ ಚೌಕಟ್ಟಿಗೆ ಒಳಪಡಿಸಿದ್ದು ಈ ಕಾಲದ ಮುಖ್ಯ ಪ್ರಯತ್ನ. ಹೊಸ ಹೊಸ ಅಧ್ಯಯನ ಕ್ಷೇತ್ರಗಳನ್ನು ಬಳಸಿಕೊಳ್ಳುವ, ಇದ್ದ ಅಧ್ಯಯನ ಕ್ಷೇತ್ರವನ್ನೇ ವೈಜ್ಞಾನಿಕ ಶಿಸ್ತಿಗೆ ಒಳಪಡಿಸುವ ಪ್ರಯತ್ನಗಳೂ ನಡೆದದ್ದು ಈ ಕಾಲದ ವೈಶಿಷ್ಟ್ಯ. ಸಾಮಗ್ರಿಯನ್ನು ಶೋಧನೆಯ ದೃಷ್ಟಿಯಿಂದ, ವಿಮರ್ಶೆಯ ದೃಷ್ಟಿಯಿಂದ, ಸ್ಥಾನಮೌಲ್ಯದ ದೃಷ್ಟಿಯಿಂದ ವಿಶ್ಲೇಷಿಸುವ ಪ್ರಯತ್ನ ಬಿರುಸಾಗಿ ನಡೆದುದರಿಂದಲೇ ಇದು **ಸಾಮಗ್ರಿ ವಿಶ್ಲೇಷಣಕಾಲ**.

*   *   *   *   *

೧೯೬೦ರ ದಶಕಗಳಲ್ಲಿ ಕನ್ನಡ ಸಾಹಿತ್ಯ ಸಂಶೋಧನ ರಂಗದಲ್ಲಿ ಹೊಸ ಅಲೆಗಳು ಆರಂಭವಾದುವು. ಕನ್ನಡ ಸಾಹಿತ್ಯವನ್ನು ಬೇರೆಬೇರೆ ಶಾಸ್ತ್ರಮುಖಗಳಿಂದ ಪರಿಶೀಲಿಸುವ ಪ್ರಯತ್ನ, ದೃಷ್ಟಿಕೋನಗಳು ಪ್ರಬಲವಾಗತೊಡಗಿದುವು. ಮೈಸೂರು ವಿಶ್ವವಿದ್ಯಾನಿಲಯದ ಸುವರ್ಣ ಮಹೋತ್ಸವದ ಅಂಗವಾಗಿ ಕನ್ನಡ ಅಧ್ಯಯನ ಸಂಸ್ಥೆ ಜಾನಪದ ಮತ್ತು ಉಪಭಾಷಾವಿಜ್ಞಾನ ಕುರಿತಂತೆ ೧೯೬೬ರಲ್ಲಿ ಎರಡು ಗೋಷ್ಠಿಗಳನ್ನು ಆಯೋಜಿಸಿತು. ಈ ಗೋಷ್ಠಿಗಳಲ್ಲಿ ವ್ಯಕ್ತವಾದ ಜಾನಪದ ಕಲ್ಪನೆಯ ವ್ಯಾಪ್ತಿ ತುಂಬ ವಿಶಿಷ್ಟವಾಗಿತ್ತು. ಇದರೊಂದಿಗೆ ಆರ್. ಸಿ. ಹಿರೇಮಠರ ಭಾಷಾಕಲ್ಪನೆಯ ವ್ಯಾಪ್ತಿ, ಚಿದಾನಂದಮೂರ್ತಿಗಳ ಸಂಸ್ಕೃತಿಕಲ್ಪನೆಯ ವ್ಯಾಪ್ತಿ ಪ್ರಾಚೀನ ಸಾಹಿತ್ಯ ಸಂಶೋಧನೆಯಲ್ಲಿ ಹೊಸ ಕ್ರಮಗಳನ್ನು ಆವಿಷ್ಕರಿಸಿದುವು; ಹೆದ್ದಾರಿಗಳನ್ನು ತೆಗೆದುವು. ಹಿರೇಮಠರ 'ದಿ ಸ್ಟ್ರಕ್ಚರ್ ಆಫ್ ಕನ್ನಡ' (೧೯೬೧), ಚಿದಾನಂದಮೂರ್ತಿಗಳ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' ಪ್ರಕಟಗೊಂಡದ್ದು ಈ ವೇಳೆಯಲ್ಲೇ (೧೯೬೬).

ಅರುವತ್ತರ ದಶಕದಲ್ಲಿ ಅಮೆರಿಕೆಯ ವಿಶ್ವವಿದ್ಯಾನಿಲಯಗಳಲ್ಲಿ ಪ್ರಚಲಿತವಿದ್ದುದು "ಸಂಶೋಧನಕ್ಷೇತ್ರ ಯಾವುದಾದರೂ ಸತ್ಯವೊಂದೇ" (Truth is one whatever be the research discipline) "ಒಂದು ಶಿಸ್ತು ಉಳಿದ ಶಿಸ್ತುಗಳ ಜೇಬಿನಲ್ಲಿ ಕೈಯಿಟ್ಟಿರುತ್ತದೆ" ಎಂಬ ಕಲ್ಪನೆಯ ಅಲೆ. ಅಂತರ್‌ಶಿಸ್ತೀಯ ಅಧ್ಯಯನ ಸಂಶೋಧಕರ ಅಂದಿನ ಪ್ರಮುಖ ಆಕರ್ಷಣೆಯಾಗಿತ್ತು. ಆ ವೇಳೆಗಾಗಲೇ ಶಾಸನಗಳನ್ನು ಆಧರಿಸಿ ಕರ್ನಾಟಕದ ಸಂಸ್ಕೃತಿ ಅರಿಯುವ ಪ್ರಯತ್ನವನ್ನು ಚಿದಾನಂದಮೂರ್ತಿಗಳು ಮಾಡಿದ್ದರು. ಅಗ್ರಹಾರ, ಮೂವಿಟ್ಟಿ, ಬಾದುಬ್ಬೆ ಮುಂತಾದ ಸಾಂಸ್ಕೃತಿಕ ಶಬ್ದಗಳ ಅರ್ಥವ್ಯಾಖ್ಯಾನ ನರಸಿಂಹಾಚಾರ್ಯರಿಂದ ನಡೆದಿತ್ತು. ಕರ್ನಾಟಕದ ಏಕೀಕರಣ ಚಳುವಳಿಯ ಫಲ ದೊರೆತಿತ್ತಾದರೂ ಅದಕ್ಕಾಗಿ ನಡೆದ ಪ್ರಯತ್ನ, ಹೋರಾಟಗಳ ಚಿತ್ರ ಇನ್ನೂ ಮಾಸಿರಲಿಲ್ಲ. ಕರ್ನಾಟಕದ ಚರಿತ್ರೆ ಕುರಿತ ಪರಿಷತ್ತಿನ ಪುಸ್ತಕಗಳು, ಆಲೂರ ವೆಂಕಟರಾಯರ ಕರ್ನಾಟಕ ಕುರಿತ ಹೊತ್ತಗೆಗಳು, ಕುವೆಂಪು ಮುಂತಾದವರ ಕನ್ನಡಾಭಿಮಾನದ-ಕರ್ನಾಟಕದ ಗೀತೆಗಳು ಕರ್ನಾಟಕ ಸಂಸ್ಕೃತಿ ಅರಿಯುವ ಉತ್ಸುಕತೆ ಮೂಡಿಸಿತ್ತು. ಇತಿಹಾಸ, ಜಾನಪದ, ಸಮಾಜಶಾಸ್ತ್ರಗಳನ್ನು ಬಳಸಿಕೊಂಡು ಸಾಹಿತ್ಯವನ್ನು ಅಧ್ಯಯನ ಮಾಡುವ ಆ ಮೂಲಕ ಕರ್ನಾಟಕ ಸಂಸ್ಕೃತಿಯ ಮುಖಗಳನ್ನು ತಿಳಿಯುವ ಅಧ್ಯಯನ ಕ್ರಮಗಳು ಹೆಚ್ಚಾದುವು. ಸಾಹಿತ್ಯವನ್ನು ವಿವಿಕ್ತವಾಗಿ ಶೋಧಿಸುವ ಕ್ರಮ ತಗ್ಗಿತು. ಗೋದಾವರಿ ತೀರದ ಕನ್ನಡ ಪ್ರದೇಶ, ಅಮ್ಮ ಶಬ್ದದ ನಿಷ್ಪತ್ತಿ, ಮೈಲಾರ ಮಾಳಚಿ ಜೋಕುಮಾರ ಬಳರಿ ಭಗವ ಮಾಸಕಬ್ಬೆ ಕುರಿತ ಭಾಷೀಯ ಹಾಗೂ ಜಾನಪದೀಯ

ಪರಿಶೀಲನೆಗಳು ನಡೆದುವು. ಪಂಪಭಾರತದ ವರ್ಣನಾತ್ಮಕ ವ್ಯಾಕರಣ ನಿರೂಪಿತವಾದಂತೆ, ಪಂಪಕವಿಯ ಕಾಲದಲ್ಲಿದ್ದ ಮೌಲ್ಯಗಳಿಗಾಗಿ ಹುಡುಕಾಡಲಾಯಿತು. ಸಾಹಿತ್ಯ ಕೃತಿಯನ್ನು ವಸ್ತು, ಭಾಷೆ, ಛಂದಸ್ಸುಗಳಿಗಿಂತ ಇತಿಹಾಸ ಜಾನಪದ ಸಮಾಜಶಾಸ್ತ್ರದ ಮೂಸೆಗಳಲ್ಲಿಟ್ಟು ನೋಡಲಾಯಿತು. ಕ್ರಮೇಣ ಮಾನವಶಾಸ್ತ್ರ ಕೂಡ ಇದಕ್ಕೆ ಸೇರಿಕೊಂಡಿತು.

ಸಮಾಧಿ-ಬಲಿದಾನ-ವೀರಮರಣ, ಶಿಲ್ಪಗಳಲ್ಲಿ ಶಿವಶರಣರು, ಶಾಸನಗಳಲ್ಲಿ ಶಿವಶರಣರು ವಿಶ್ಲೇಷಣೆಗಳು ನಡೆದುವು. ಚಿದಾನಂದಮೂರ್ತಿ ಮತ್ತು ಕಲಬುರ್ಗಿ ಈ ದಿಕ್ಕಿನಲ್ಲಿ ಕೆಲಸ ಮಾಡಿದ ಪ್ರಮುಖ ವಿದ್ವಾಂಸರು. ಗ್ರಾಮೀಣ(೧೯೭೭), ಪಗರಣ(೧೯೮೪), ವಾಗರ್ಥ(೧೯೮೧) ಎಂಬ ಮೂರ್ತಿಗಳ ಕೃತಿಗಳಾಗಲಿ, ಶಾಸನಗಳಲ್ಲಿ ಶಿವಶರಣರು (೧೯೭೦), ಸಮಾಧಿ-ಬಲಿದಾನ-ವೀರಮರಣ ಸ್ಮಾರಕಗಳು (೧೯೮೦) ಎಂಬ ಕಲಬುರ್ಗಿಯವರ ಕೃತಿಗಳಾಗಲಿ ಇದಕ್ಕೆ ಸೂಕ್ತ ನಿದರ್ಶನಗಳು. ಇಂಥ ಬಿರುಸಾದ ಬೀಸಿಗೆ ಒಂದು ಸ್ವಲ್ಪವೂ ವಿಚಲಿತರಾಗದೆ ಕೃತಿನಿಷ್ಠ ಸಂಶೋಧನೆಯನ್ನು ಟಿ.ವಿ. ವೆಂಕಟಾಚಲಶಾಸ್ತ್ರಿ ಮತ್ತಿತರರು ಮುಂದುವರಿಸಿಕೊಂಡು ಹೋದುದು ವಿಸ್ಮಯ ಉಂಟುಮಾಡುತ್ತದೆ. ಹಂಪ. ನಾಗರಾಜಯ್ಯ ಸೀತಾರಾಮ ಜಾಗೀರ್‌ದಾರ್ ಇತಿಹಾಸದ ನೆಲೆಯಲ್ಲಿಯೇ ಉದ್ದಕ್ಕೂ ನಮ್ಮ ಸಾಹಿತ್ಯ ಪರಿಶೀಲಿಸಿಕೊಂಡು ಬಂದರು. ಹೀಗೆ ವಿವಿಧ ಶಾಸ್ತ್ರಗಳ ಬಳಕೆಯಿಂದ, ಆ ಕ್ರಮವೇ ಪ್ರಧಾನವಾಗಿದ್ದುದರಿಂದ ಇಂದು **ಅಂತರ್ ಶಾಸ್ತ್ರೀಯ ಸಂಶೋಧನ ಕಾಲ** ಎನಿಸಿಕೊಂಡಿತು. ಈ ಅಧ್ಯಯನದ ಫಲವಾಗಿ ಸ್ಥಳನಾಮ ವಿಜ್ಞಾನ, ವ್ಯಕ್ತಿನಾಮ ವಿಜ್ಞಾನ, ಪುರಾವಸ್ತುಶಾಸ್ತ್ರ, ಮಾನವಶಾಸ್ತ್ರವೇ ಮುಂತಾದುವು ಕನ್ನಡ ಸಂಶೋಧನೆಯಲ್ಲಿ ಪೂರಕ ಅಧ್ಯಯನ ಶಾಸ್ತ್ರಗಳಾಗಿ ಬಂದು ಸೇರಿಕೊಂಡುವು.

*　　*　　*　　*　　*

೧೯೭೯ರಲ್ಲಿ ಧರ್ಮಸ್ಥಳದಲ್ಲಿ ಅಖಿಲಭಾರತ ಸಾಹಿತ್ಯ ಸಮ್ಮೇಳನ ನಡೆಯಿತು. ಇದೊಂದು ಐತಿಹಾಸಿಕ ಘಟನೆ. ಅದಕ್ಕೆ ಪ್ರತಿಯಾಗಿ ಬಂಡಾಯ ಸಾಹಿತ್ಯ ಸಮ್ಮೇಳನ ಜರುಗಿತು. ಸಾಹಿತ್ಯದಲ್ಲಿ ಕ್ಷೀಣವಾಗಿದ್ದ ಬಂಡಾಯದ ದನಿ ಪ್ರಬಲಿಸಿತು. ಬಂಡಾಯ ಹಾಗೂ ದಲಿತ ಪಂಥಗಳು ರೂಪುಗೊಂಡವು. ಈ ಸಂಬಂಧದ ಸೃಜನಶೀಲ ಸಾಹಿತ್ಯದಲ್ಲಿ ಹಕ್ಕುಗಳಿಗೆ, ತಾರತಮ್ಯ ನಿವಾರಣೆಗೆ ದನಿ ಎದ್ದಿತು. ಸಾಹಿತ್ಯಿಕ ಪಠ್ಯವನ್ನು ಶುದ್ಧ ಸಾಹಿತ್ಯಿಕ ಪಠ್ಯವಾಗಿ ನೋಡದೆ, ಸಾಂಸ್ಕೃತಿಕ ಪಠ್ಯವಾಗಿ ಪರಿಭಾವಿಸುವ ಪರಿಶೀಲಿಸುವ ಅಧ್ಯಯನ ಹಾಗೂ ವಿಮರ್ಶನ ಕ್ರಮಗಳು ಬಳಿಕ ರೂಪುಗೊಂಡವು. ಸಾಹಿತ್ಯದ ಮೂಲಕ ಸಂಸ್ಕೃತಿಯನ್ನು ಪುನರ್‌ರಚಿಸುವ ಪ್ರಯತ್ನದಲ್ಲಿ ವಿಮರ್ಶಕರು ತೊಡಗಿಕೊಂಡರು. ಸೃಜನಶೀಲ ಮತ್ತು ವಿಮರ್ಶನರಂಗಗಳಲ್ಲಷ್ಟೇ ಅಲ್ಲದೆ ಸಂಶೋಧನ ರಂಗದಲ್ಲಿ ಕೂಡ ಇದರ ದನಿಗಳು ಪ್ರತಿಧ್ವನಿಸಿದುವು. ದಲಿತ-ಬಂಡಾಯ ಧ್ವನಿಗಳಿಗೋಸುಗ ಪ್ರಾಚೀನ ಸಾಹಿತ್ಯವನ್ನು ಅರಸುವ ಅದನ್ನು ಮರು ವ್ಯಾಖ್ಯಾನಿಸುವ ಪ್ರಯತ್ನಗಳು ಗಮನಾರ್ಹವಾಗಿಯೇ ನಡೆದುವು.

ಈ ಹಿನ್ನೆಲೆಯಲ್ಲಿಯೇ ಸಂಶೋಧನೆಯ ಪ್ರಕ್ರಿಯೆಯನ್ನು ತುಂಬ ಭಿನ್ನವಾಗಿ ವ್ಯಾಖ್ಯಾನಿಸಲಾಯಿತು. ಆ ಸಂಬಂಧದ ಒಂದು ಹೇಳಿಕೆಯನ್ನು ಇಲ್ಲಿ ಉದ್ಧರಿಸಬಹುದು. ''ಸಂಶೋಧನೆಯೆಂದರೆ ಹಳೆಯದನ್ನು ಹುಡುಕುವ ಹಳೆ ಮನಸ್ಥಿತಿಯ ಕೆಲಸವೆಂಬ ತಪ್ಪು ಕಲ್ಪನೆಯೂ ಇದೆ. ಭೂತದಲ್ಲಿ ಅಡಗಿಹೋಗಿರುವ ಸಂಗತಿಗಳನ್ನು ಶೋಧಿಸಿ ಹೊರತರುವುದು ಸಂಶೋಧನೆಯ ಒಂದು ಕೆಲಸವಾದರೂ ವರ್ತಮಾನದ ವಿವೇಕದಿಂದ ವಂಚಿತವಾಗಬೇಕಿಲ್ಲ.'' ''ಸಂಶೋಧನೆಯು ಪ್ರಧಾನವಾಗಿ ಕಟ್ಟುವ ಕೆಲಸ; ಕಾಲವನ್ನು ಕ್ರಮಬದ್ಧವಾಗಿ ಕಟ್ಟುವ ಕೆಲಸ; ವರ್ತಮಾನದಲ್ಲಿ ನಿಂತು ಭೂತವನ್ನು ಕಟ್ಟಿಕೊಡುವಾಗ ಉಂಟಾಗುವ ವೈರುಧ್ಯಗಳನ್ನು ಮೀರುತ್ತ ಸಮಚಿತ್ತವನ್ನು ಕಾಯ್ದುಕೊಳ್ಳಬೇಕಾದ ಸಾಂಸ್ಕೃತಿಕ ಜವಾಬ್ದಾರಿಯ ಕ್ರಿಯೆ. ಆದ್ದರಿಂದ ಸಂಸ್ಕೃತಿಯ ಪುನಾರಚನೆಯಲ್ಲಿ ಸಂಶೋಧನೆಯ ಪಾತ್ರ ಮಹತ್ವದ್ದು. ರಚನೆಯ ಸಂದರ್ಭದಲ್ಲಿ ಉಂಟಾಗಿರಬಹುದಾದ ತಪ್ಪುಗ್ರಹಿಕೆಗಳ ಕಾರಣದಿಂದಾಗಿ ಪುನಾರಚನೆಯ ಅಗತ್ಯ ಬೀಳುತ್ತದೆ. ಉಪಸಂಸ್ಕೃತಿ ವಲಯಗಳು ಸಾಂಸ್ಕೃತಿಕ ಲೋಕವನ್ನು ಹಿಂದೆಂದಿಗಿಂತ ದೊಡ್ಡ ಪ್ರಮಾಣದಲ್ಲಿ ಪ್ರವೇಶ ಮಾಡಿರುವ ಈ ಸಂದರ್ಭವು ಸಂಸ್ಕೃತಿಯ ಪುನಾರಚನೆಯನ್ನು ತಾನಾಗಿಯೇ ಒತ್ತಾಯಿಸುತ್ತಿದೆ. ಆದ್ದರಿಂದ ಸಂಶೋಧನೆಯು

ಪುನರ್‌ಮೌಲ್ಯೀಕರಣಕ್ಕೆ ಒಳಗಾಗುತ್ತಲೇ ಪುನರ್‌ಮೌಲ್ಯೀಕರಣದ ಸಾಧನವೂ ಆಗುತ್ತದೆ. ಆಗ ಪರಂಪರೆಯಲ್ಲಿ ಕಳಚಿಕೊಂಡ ಕೊಂಡಿಗಳು ಕಾಣಿಸತೊಡಗುತ್ತವೆ; ಹಿನ್ನೆಲೆಗೆ ಸರಿಸಲ್ಪಟ್ಟ ಸಂಗತಿಗಳು ಮುನ್ನೆಲೆಗೆ ಬಂದು ಮಾತುಕತೆಗೆ ಆರಂಭಿಸುತ್ತವೆ; ಹೊಸ ಸಂವಾದಕ್ಕೆ ಸಜ್ಜಾಗುತ್ತವೆ.'' (ಬರಗೂರು ರಾಮಚಂದ್ರಪ್ಪ, ಕನ್ನಡ ಸಾಹಿತ್ಯ ಪುನರ್‌ಮೌಲ್ಯೀಕರಣಮಾಲೆ, ಪ್ರಸ್ತಾವನೆ)

ಇಂಥ ದೃಷ್ಟಿ-ಧೋರಣೆಗಳು, ಆಶಯಗಳು ಸಂಶೋಧನರಂಗದ ಚಟುವಟಿಕೆಗಳ ಮೇಲೂ ಪ್ರಭಾವ ಬೀರಿದುವು. ಚಿದಾನಂದಮೂರ್ತಿಯವರು ಶ್ವಪಚಯ್ಯನ ಕತೆಯ ಆಶಯವನ್ನು, ಹರಿಜನರಿಗಿದ್ದ ಹಿರಿಯ ಮಾಹೇಶ್ವರ ಹೆಸರನ್ನು ಕುರಿತು ಚಿಂತಿಸಿದರು, ಶೋಧಿಸಿದರು. ಅಸ್ಪೃಶ್ಯತೆಯ ಪರಿಕಲ್ಪನೆಯ ಬಗ್ಗೆ ಸ್ವತಂತ್ರ ಗ್ರಂಥವನ್ನೇ ರಚಿಸಿದರು. ಶರಣರ ಅಸ್ಪೃಶ್ಯತೆಯ ನಿರ್ಮೂಲನದ ಕಾರ್ಯವಿಧಾನ, ಶರಣರ ಸ್ತ್ರೀಸಮಾಜ, ಹರಿಹರನ ಸಾಹಿತ್ಯದಲ್ಲಿ ಹೋರಾಟದ ಧ್ವನಿಗಳನ್ನು ಕಲಬುರ್ಗಿ ತೋರಿಸಿಕೊಟ್ಟರು. ಹಂಪನಾ ಜೈನ ಪ್ರತಿಸಂಸ್ಕೃತಿಯ ನಿರ್ಮಾಣ ಮತ್ತು ಅಸ್ಪೃಶ್ಯತೆ, ಸ್ತ್ರೀವಾದದ ನೆಲೆಯಲ್ಲಿ ಅತ್ತಿಮಬ್ಬೆಯ ಕೊಡುಗೆ ಕುರಿತು ಶೋಧಿಸಿದರು. ಸಬಾಲ್ಟ್ರನ್ ಚರಿತ್ರೆಯ ಪ್ರೇರಣೆಯ ಹಿನ್ನೆಲೆಯಲ್ಲಿ ಕರ್ನಾಟಕದ ವಾಜಿವಂಶ, ಸಗರವಂಶ, ಸಾಂತರ ವಂಶಗಳ ಬಗ್ಗೆ ಕೂಡ ಅವರು ಶೋಧನೆ ಕೈಗೊಂಡರು. ಬರಗೂರು ರಾಮಚಂದ್ರಪ್ಪನವರು ಕರ್ನಾಟಕ ಸಾಹಿತ್ಯ ಅಕಾಡೆಮಿ ಅಧ್ಯಕ್ಷರಾಗಿದ್ದಾಗ ಪ್ರಭುತ್ವ, ಅಸ್ಪೃಶ್ಯತೆ, ಸ್ತ್ರೀಸಂವೇದನೆ, ಗ್ರಾಮೀಣ ಅಭಿವ್ಯಕ್ತಿಯೇ ಮುಂತಾದ ವಿವಿಧ ಮುಖಗಳಲ್ಲಿ ಕನ್ನಡ ಸಾಹಿತ್ಯದ ಪುನರ್‌ಮೌಲ್ಯೀಕರಣವನ್ನು ಮಾಡಿದರು. ಪ್ರಾಚೀನ ಕೃತಿಗಳಲ್ಲಿ ಪರಿಸರ ಪ್ರಜ್ಞೆ, ಸರ್ವಾಧಿಕಾರ ಧೋರಣೆ, ಕುಟುಂಬ ವ್ಯವಸ್ಥೆಯ-ವಿರೋಧ ಮುಂತಾದವುಗಳಿಗೆ ಶೋಧನೆ ನಡೆದಿದ್ದು ಈ ಸಂಸ್ಕೃತಿ ಸಂಶೋಧನೆಯ ಪ್ರೇರಣೆಯಿಂದಲೇ. ಇದರಿಂದ ಸಂಶೋಧನೆಯ ಸ್ವರೂಪ ಕೂಡ ಸ್ವಲ್ಪ ಬದಲಿಸಿತು. ಅಡಿ ಟಿಪ್ಪಣಿಗಳ ಭಾರದಿಂದ ಜಗ್ಗುತ್ತಿದ್ದ ಲೇಖನಗಳು ವ್ಯಾಖ್ಯಾನಾತ್ಮಕ ಸಂಶೋಧನೆಯ ಮಾದರಿ ಹಿಡಿದು ಸರಳವಾದುವು. ಕೃತಿಯನ್ನೊ, ಕೃತಿಭಾಗವನ್ನೊ, ಪಾತ್ರವನ್ನೊ, ಪದ್ಯವನ್ನೊ ಒಂದೊಂದು ನೆಲೆಯಿಂದ ವ್ಯಾಖ್ಯಾನಿಸುವ ದೃಷ್ಟಿ ಪ್ರಬಲವಾಗಿ ಈ ಬಗೆಯ ಸಂಶೋಧನೆ ತುಂಬ ಪ್ರಚುರಗೊಂಡಿತು. ಹಲವರು ಕಿರಿಯರು, ವಿಮರ್ಶಕರು ಪ್ರಾಚೀನ ಸಾಹಿತ್ಯದ ಅಧ್ಯಯನಕ್ಕೆ, ಈ ಬಗೆಯ ಸಂಶೋಧನೆಗೆ ತೊಡಗಿಕೊಂಡರು. ದೊರೆತ ಸಾಹಿತ್ಯಿಕ ದಾಖಲೆ ಅಥವಾ ದಾಖಲೆಯ ಭಾಗಗಳನ್ನು ಬೇರೆಬೇರೆ ಸಿದ್ಧಾಂತಗಳ ಅಥವಾ ದೃಷ್ಟಿಕೋನಗಳಿಂದ ನೋಡುವುದಷ್ಟೇ ಇಲ್ಲಿ ಮುಖ್ಯವಾಯಿತು. ''ಸಂಶೋಧನೆಯೆನ್ನುವುದು ವಿಶ್ಲೇಷಣಾತ್ಮಕ ವಿಮರ್ಶೆ, ವಿಮರ್ಶೆಯೆನ್ನುವುದು ವ್ಯಾಖ್ಯಾನಾತ್ಮಕ ಸಂಶೋಧನೆ'' ಎಂಬುದಕ್ಕೆ ಈ ಬಗೆಯ ಸಂಶೋಧನ ಬರಹಗಳು ಸೂಕ್ತ ನಿದರ್ಶನಗಳಾದುವು. ಸಂಶೋಧನೆಯ ದೈಹಿಕ ಶ್ರಮಕ್ಕಿಂತ, ಮಾನಸಿಕ ಶ್ರಮವೇ ಇಲ್ಲಿ ಪ್ರಧಾನವಾಯಿತು. ಚಿದಾನಂದಮೂರ್ತಿಗಳ ಪಂಪನ ಪಾತ್ರಸೃಷ್ಟಿಯ ಬಗೆಗಿನ ಚಿಂತನೆಗಳು, ಕಲಬುರ್ಗಿಯವರ ಮಾರ್ಗಸಾಹಿತ್ಯದಲ್ಲಿ ಪ್ರತಿಭಟನೆಯ ಅಂಶಗಳು ಈ ಬಗೆಯವು. ಇಂಥ ಚಟುವಟಿಕೆಗಳೇ ಪ್ರಧಾನವಾಗಿರುವ ಇಪ್ಪತ್ತನೆಯ ಶತಮಾನದ ಕೊನೆಯ ಎರಡು ದಶಕಗಳನ್ನು **ಸಂಸ್ಕೃತಿಸಂಶೋಧನಕಾಲ** ಎನ್ನಬಹುದು.

ಹೀಗೆ ಇಪ್ಪತ್ತನೆಯ ಶತಮಾನದ ಸಂಶೋಧನೆಯನ್ನು ಬೇರೆಬೇರೆ ದಶಕಗಳಲ್ಲಿ ಕಾಣುವ ಪ್ರಧಾನ ಪ್ರವೃತ್ತಿಗಳಿಗನುಗುಣವಾಗಿ ನಾಲ್ಕು ಘಟ್ಟಗಳಾಗಿ ಗುರುತಿಸಬಹುದು. ಇದೊಂದು ಸ್ಥೂಲವಾದ ವಿಶ್ಲೇಷಣೆ. ಒಂದು ಅವಧಿಯಲ್ಲಿ ಕಾಣಿಸಿಕೊಂಡ ಸಂಶೋಧನ ಪ್ರವೃತ್ತಿ, ವಿಧಾನ ಅಲ್ಲಿಗೇ ಕೊನೆಯಾಯಿತೆಂದೇನೂ ಅಲ್ಲ; ಮುಂದೆ ಕಾಣಿಸಿಕೊಳ್ಳಲಿಲ್ಲವೆಂದೇನೂ ಅಲ್ಲ. ಆಕರಗಳ ಸಂಗ್ರಹ-ಪ್ರಕಟಣೆ, ಕವಿ-ಕಾವ್ಯ ಚರ್ಚೆ, ಭಾಷೆ-ಛಂದಸ್ಸುಗಳ ವಿಶ್ಲೇಷಣೆ ಜರುಗುತ್ತಿವೆ. ಆದರೆ ಆಯಾ ಅವಧಿಯಲ್ಲಿ ಕಂಡುಬಂದ ಉಬ್ಬರ ಅಬ್ಬರ ಅನಂತರ ಇಳಿದಿರುವುದಂತೂ ಸ್ಪಷ್ಟವೇ.

* * * * *

ಇನ್ನು ಈ ಸಂಪುಟದ ಸ್ವರೂಪ, ಸಿದ್ಧತೆಗಳ ಬಗ್ಗೆ ಕೆಲವು ಮಾತುಗಳು.

- ಶತಮಾನದ ಸಂಶೋಧನೆ ಎಂಬುದು ಸಂಕಲನದ ಹೆಸರು. ಇದನ್ನು ಪ್ರಕಟಿಸುತ್ತಿರುವುದು

ಕರ್ನಾಟಕ ಸಾಹಿತ್ಯ ಅಕಾಡೆಮಿ. ಇದರೊಂದಿಗೆ ಹೊರಬರುತ್ತಿರುವ ಇತರ ಸಂಕಲನಗಳು ಸಾಹಿತ್ಯಕ ಬರೆಹಗಳನ್ನೇ ಕೇಂದ್ರೀಕರಿಸಿವೆ. ಆದ್ದರಿಂದ ಇಲ್ಲಿಯೂ ಸಾಹಿತ್ಯಕ್ಕೆ ಸಂಬಂಧಿಸಿದ ಸಂಶೋಧನೆಯನ್ನೇ ಪ್ರಧಾನವಾಗಿ ಲಕ್ಷಿಸಿದೆ. ಕನ್ನಡ ಸಾಹಿತ್ಯಕ್ಕೆ ಪೂರಕ ವಿಷಯಗಳಾಗಿರುವ ಶಾಸನ, ಕರ್ನಾಟಕ ಸಂಸ್ಕೃತಿ, ಭಾಷೆ, ಛಂದಸ್ಸುಗಳನ್ನೂ ಇಲ್ಲಿ ಲೆಕ್ಕಿಸಿದೆ. ಚರಿತ್ರೆ, ಪುರಾತತ್ವಶಾಸ್ತ್ರ ಜಾನಪದ, ತಾತ್ವಿಕ ಭಾಷಾವಿಜ್ಞಾನ, ಕಾವ್ಯ ಮೀಮಾಂಸೆಗಳಂಥ ಇತರ ಕ್ಷೇತ್ರಗಳನ್ನು ಇಲ್ಲಿ ಕೈಬಿಟ್ಟಿದೆ.

- ಕನ್ನಡ ಸಾಹಿತ್ಯದ ಆರಂಭಕಾಲದಿಂದ ಹೊಸಗನ್ನಡ ಸಾಹಿತ್ಯದ ಉದಯಕಾಲವನ್ನು ಲೇಖನಗಳ ವಸ್ತುಕಾಲ ವ್ಯಾಪ್ತಿಯಾಗಿ ಗ್ರಹಿಸಿದೆ.
- ಸಾಹಿತ್ಯ ಹಾಗೂ ಅದಕ್ಕೆ ಪೂರಕವಾದ ಶಾಸ್ತ್ರಗಳನ್ನು ಪರಿಗಣಿಸಿ ಶಾಸನ, ಕರ್ನಾಟಕ ಸಂಸ್ಕೃತಿ, ಭಾಷೆ, ಛಂದಸ್ಸು, ಕವಿ-ಕಾಲ-ಮತ-ಕರ್ತೃತ್ವ, ಸಾಹಿತ್ಯ, ಸಾಹಿತ್ಯಸಂಸ್ಕೃತಿ ಹಾಗೂ ಹೊಸಗನ್ನಡ ಸಾಹಿತ್ಯೋದಯ ಎಂದು ಸ್ಥೂಲವಾಗಿ ವಿಷಯಾನುಗುಣವಾದ ಎಂಟು ವಿಭಾಗ ಮಾಡಿಕೊಂಡಿದೆ. ಲೇಖನ/ಬರೆಹಗಳನ್ನು ಇದಕ್ಕನುಗುಣವಾಗಿ ಜೋಡಿಸಿದೆ. ಪ್ರತಿ ವಿಭಾಗದಲ್ಲಿಯೂ ಸ್ಥೂಲವಾದ ಕನ್ನಡ ಸಾಹಿತ್ಯದ ಕಾಲಘಟ್ಟಗಳಿಗನುಗುಣವಾದ ಆನುಪೂರ್ವಿಯಲ್ಲಿ ಲೇಖನಗಳನ್ನು ನೀಡಿದೆ.
- ಗ್ರಂಥವ್ಯಾಪ್ತಿ ಹಾಗೂ ಪುಟ ಸಂಖ್ಯೆಯನ್ನು ಗಮನದಲ್ಲಿರಿಸಿಕೊಂಡು ಪ್ರತಿವಿಭಾಗದಲ್ಲಿ ಹತ್ತು ಲೇಖನಗಳನ್ನು ಆರಿಸಿದೆ. ಹೀಗೆ ಆರಿಸುವಾಗ ಆಯಾ ವಿಭಾಗದಲ್ಲಿ ತುಂಬ ಮಹತ್ವ ಪೂರ್ಣವಾದ ಬರೆಹಗಳನ್ನೂ, ಅದರೊಂದಿಗೆ ವಿವಿಧ ಬಗೆಯ ಸಂಶೋಧನ ಕ್ರಮಗಳನ್ನು ದೃಷ್ಟಿಗಳನ್ನು ಫಲಿತಗಳನ್ನು ಹೊಂದಿರುವ ಲೇಖನಗಳನ್ನೂ , ಆಯಾರಂಗದ ಚಟುವಟಿಕೆಗಳನ್ನು ವ್ಯಾಖ್ಯಾನಿಸುವ ಬರೆಹಗಳನ್ನೂ ಗಮನಿಸಿದೆ. ಇಂದು ಹೆಚ್ಚಾಗಿ ಪ್ರಚಲಿತವಾಗಿರುವ ಪ್ರಾಚೀನ ಕೃತಿಗಳ ಸಾಂಸ್ಕೃತಿಕ ವ್ಯಾಖ್ಯಾನ-ವಿಶ್ಲೇಷಣೆಗಳ ಬರೆಹಗಳನ್ನು ಸಾಹಿತ್ಯ ಸಂಸ್ಕೃತಿಶೋಧ ಎಂದು ಪ್ರತ್ಯೇಕವಾಗಿ ಗುರುತಿಸಿವೆ. ವಿಮರ್ಶಕರೆಂದೇ ಪ್ರಸಿದ್ಧರಾಗಿರುವವರ ಕೆಲವು ಬರೆಹಗಳಲ್ಲಿ ವ್ಯಾಖ್ಯಾನಾತ್ಮಕ ಸಂಶೋಧನೆಯ ಗುಣವಿರುವುದನ್ನು ಇಲ್ಲಿಯೂ, ಇತರ ವಿಭಾಗದ ಒಂದೆರಡು ಬರೆಹಗಳಲ್ಲಿಯೂ ಗಮನಿಸಬಹುದಾಗಿದೆ. ಒಂದು ಶತಮಾನದ ಸಂಶೋಧನೆಯಲ್ಲಿ ಪಾಲ್ಗೊಂಡಿರುವ ನಾಲ್ಕೈದು ತಲೆಮಾರಿನ ವಿದ್ವಾಂಸರ ಪ್ರಾತಿನಿಧಿಕತೆಯನ್ನು ಒಟ್ಟಿನಲ್ಲಿ ಗಮನಿಸಿದೆ.
- ಆರ್ ನರಸಿಂಹಾಚಾರ್, ಗೋವಿಂದಪೈ, ಡಿ ಎಲ್ ನರಸಿಂಹಾಚಾರ್, ಚಿದಾನಂದ ಮೂರ್ತಿ, ವೆಂಕಟಾಚಲಶಾಸ್ತ್ರೀ, ಕಲಬುರ್ಗಿ, ಹಂಪ ನಾಗರಾಜಯ್ಯ- ಅವರಂಥವರ ಸಂಶೋಧನ ಸಂಪತ್ತು, ಬರೆಹ ಸಮೃದ್ಧಿ ಗಮನಿಸಿ ಅವರ ಒಂದಕ್ಕಿಂತ ಹೆಚ್ಚು ಲೇಖನಗಳ್ನು ಆರಿಸಿದೆ. ಒಬ್ಬ ಲೇಖಕ-ಒಂದು ಲೇಖನ ಎಂಬ ಸಾಮಾನ್ಯ ತತ್ವವನ್ನು ಇಂಥ ಕಡೆ ಮೀರಿದೆ. ಕಾವ್ಯ ಸಂಕಲನಗಳಲ್ಲಿ ಕುವೆಂಪು, ಬೇಂದ್ರೆ, ಪುತಿನರ ಪದ್ಯಗಳು ಒಂದಕ್ಕಿಂತ ಹೆಚ್ಚಿರುತ್ತವೆ ಎಂಬುದನ್ನು ನಾವು ನೆನೆಯಬೇಕು.
- ಸಾಮಾನ್ಯವಾಗಿ ಸ್ವತಂತ್ರವಾದ ಲೇಖನಗಳನ್ನೇ ಆರಿಸಿದೆ. ತೀರ ಪ್ರಮುಖ ಸಂಶೋಧಕ ನಾಗಿದ್ದು ಆತನ ಲೇಖನಗಳಿಗಿಂತ ಪುಸ್ತಕವೇ ಮಹತ್ವಪೂರ್ಣ ಎನಿಸಿದಲ್ಲಿ ಅವುಗಳಿಂದಲೇ ಆಯ್ಕೆ ಮಾಡಿದೆ.
- ಪುಟಸಂಖ್ಯೆಯ ಮಿತಿಯಿಂದ ಕೆಲವು ಲೇಖನಗಳನ್ನು ಸಮಗ್ರವಾಗಿ ಹಾಕದೆ, ಭಾಗಗಳಾಗಿ ಹಾಕಿದೆ. ಬಿಟ್ಟಿರುವ ಭಾಗಗಳನ್ನು ಚುಕ್ಕಿಗಳನ್ನು ಹಾಕುವುದರ ಮೂಲಕ ತೋರಿಸಿದೆ. ಇಂಥ ಕಡೆ ಆದಷ್ಟೂ ವಸ್ತುವಿನ ಹರಿವಿಗೆ ಭಂಗ ಬಾರದಂತೆ ಎಚ್ಚರ ವಹಿಸಲಾಗಿದೆ. ಸಹಜವಾಗಿಯೇ ಇಂಥ ಬರೆಹಗಳಲ್ಲಿ ಮೂಲದ ಅಡಿಟಿಪ್ಪಣಿಗಳ ಸಂಖ್ಯೆಯನ್ನು ಬದಲಾಯಿಸಿದೆ.
- ಮೂಲ ಲೇಖನಗಳು ತುಂಬ ದೀರ್ಘವಾಗಿದ್ದು ಅದರ ಒಂದು ಭಾಗವನ್ನು ಆರಿಸಿಕೊಂಡಿದ್ದಲ್ಲಿ ಅಥವಾ ಪುಸ್ತಕದಿಂದ ಕೆಲವು ಭಾಗಗಳನ್ನು ಆರಿಸಿಕೊಂಡಿದ್ದಲ್ಲಿ ಮೂಲ ಲೇಖನದಲ್ಲೇ ಅಥವಾ ಪುಸ್ತಕದಲ್ಲೇ ಉಪಶೀರ್ಷಿಕೆ ಇದ್ದರೆ ಪ್ರಸ್ತುತ ಸಂಕಲನದಲ್ಲಿ ಅದನ್ನೇ ಇಲ್ಲಿಯ ಲೇಖನದ ಶಿರೋನಾಮೆಯಾಗಿ ಕೊಟ್ಟಿದೆ. ಸಂಬಂಧಿಸಿದ ಬರೆಹಕ್ಕೆ ಮೂಲದಲ್ಲಿ ಏನೂ ಇಲ್ಲದಾಗ ಸೂಕ್ತ ಶಿರೋನಾಮೆ ನೀಡಿದೆ.

• ಒಬ್ಬನೇ ಲೇಖಕನ ಮೂಲ ಲೇಖನಗಳು ಚಿಕ್ಕ ಟಿಪ್ಪಣಿಗಳ ರೂಪದಲ್ಲಿದ್ದಾಗ, ಮೂಲ ಲೇಖನಗಳೇ ತೀರ ಹ್ರಸ್ವವೆನಿಸಿದಾಗ ಅಂಥ ಟಿಪ್ಪಣಿಗಳನ್ನು ಲೇಖನಗಳನ್ನು ಇಲ್ಲಿ ಒಗ್ಗೂಡಿಸಿ ಒಂದೇ ಲೇಖನವಾಗಿ ಆದರೆ ಅದರ ಬೇರೆಬೇರೆ ಭಾಗಗಳಾಗಿ ಕೊಟ್ಟಿದೆ.

• ಲೇಖನ/ಬರಹಗಳು ಮೊದಲು ಪ್ರಕಟವಾದ ಆಕರ, ವರ್ಷಗಳನ್ನು ಆದಷ್ಟುಮಟ್ಟಿಗೆ ಹುಡುಕಿ ಲೇಖನದ ಕೊನೆಯಲ್ಲಿ ಸೂಚಿಸಿದೆ. ದೊರೆಯದಿದ್ದಾಗ ಇಲ್ಲಿ ಬಳಸಿಕೊಂಡಿರುವ ಆಕರ, ವರ್ಷಗಳನ್ನೇ ನಮೂದಿಸಿದೆ. ಓದುಗರ ಅನುಕೂಲಕ್ಕೆಂದು ವರ್ಷಾನುಕ್ರಮಣಿಕೆಯ ಪರಿವಿಡಿಯೊಂದನ್ನೂ ಕೊಟ್ಟಿದೆ.

ಇಂಥ ಸಂಕಲನಗಳನ್ನು ಸಿದ್ಧಪಡಿಸುವುದು ತುಂಬ ಶ್ರಮದಾಯಕ. ಹಾಗೆ ಸಿದ್ಧಪಡಿಸಿದ ಮೇಲೂ ಲೇಖನಗಳ ಆಯ್ಕೆಯಿಂದ ಎಲ್ಲರನ್ನೂ ತೃಪ್ತಿಪಡಿಸುವುದು ಅಸಾಧ್ಯವೇ. ಹಲವಾರು ಇತಿಮಿತಿಗಳ ನಡುವೆ ಕೆಲಸ ಮಾಡಬೇಕಾಗಿ ಬಂದಾಗ ಇವು ಸಹಜ, ಅನಿವಾರ್ಯ. ಸಂಪಾದಕನಿಗೆ ಮಾತ್ರ ಸಂಕಲನ ಸಮಾಧಾನ ಕೊಡುತ್ತದೆ ಎಂಬರ್ಥದ ಮಾತಿದೆ. ಅನೇಕ ಸೀಮಿತಗಳ ನಡುವೆ, ಪೇಚು ಪರಿಸ್ಥಿತಿಗಳ ಮಧ್ಯೆ ಕೆಲಸ ಮಾಡುವಾಗ ಎಷ್ಟೋಬಾರಿ ಇತರರಿಗಿರಲಿ, ಸಂಪಾದಕರಿಗೇ ಸಂಕಲನ ಸಮಾಧಾನ ಕೊಡುವುದಿಲ್ಲ. ಸಂಕಲನಗಳನ್ನು ಸಂಪಾದಿಸಿದವರಿಗೆ, ಬಳಸಿದವರಿಗೆ ಇದು ಗೊತ್ತಿರುವ ವಿಷಯವೇ.

* * * * *

ಕಡೆಯದಾಗಿ ಈ ಸಂಕಲನವನ್ನು ಸಿದ್ಧಪಡಿಸುವಲ್ಲಿ ನೆರವಾದವರನ್ನು ತುಂಬ ಪ್ರೀತಿ, ಕೃತಜ್ಞತೆಗಳಿಂದ ನಾನು ಸ್ಮರಿಸುತ್ತೇನೆ. ಇಂಥದೊಂದು ಗುರುತರವಾದ ಹೊಣೆಗಾರಿಕೆಯನ್ನು ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾದ ಡಾ. ಗಿರಡ್ಡಿ ಗೋವಿಂದರಾಜ ಅವರು ನನಗೆ ವಹಿಸಿಕೊಟ್ಟು ನನ್ನಲ್ಲಿ ವಿಶೇಷವಾದ ವಿಶ್ವಾಸ ವ್ಯಕ್ತಪಡಿಸಿದ್ದಾರೆ; ಆದರ ತೋರಿದ್ದಾರೆ. ಯೋಜನಾ ಸಂಪಾದಕರಾದ ಡಾ. ಜಿ. ಎಸ್. ಶಿವರುದ್ರಪ್ಪ ಅವರು ನನಗೆ ಗುರುಸ್ಥಾನೀಯರು; ಮೊದಲಿನಿಂದಲೂ ನನ್ನ ಬಗ್ಗೆ ಅವರಿಗೆ ವಿಶೇಷವಾದ ಪ್ರೀತಿ, ಅಭಿಮಾನ, ನಂಬಿಕೆ. ಉದ್ದಕ್ಕೂ ಅವರು ಸೂಕ್ತ ಹಾಗೂ ಸಮಯೋಚಿತ ಸಲಹೆಗಳನ್ನು ನೀಡಿದ್ದಾರೆ; ನನ್ನ ಆಯ್ಕೆ, ವರ್ಗೀಕರಣಗಳನ್ನು ಕೂಲಂಕಷವಾಗಿ ಪರಿಶೀಲಿಸಿದ್ದಾರೆ, ಒಪ್ಪಿದ್ದಾರೆ. ಆಯ್ಕೆಯ ಸ್ವಾತಂತ್ರ್ಯವನ್ನು ನನಗೇ ನೀಡಿದ್ದಾರೆ. ಅವರ ಬೆಂಬಲ, ಕಾಳಜಿಗಳಿಂದ ಈ ಕೆಲಸವನ್ನು ಮಾಡಲು ನನಗೆ ಸಾಧ್ಯವಾಗಿದೆ. ಈ ಇಬ್ಬರು ಹಿರಿಯರಿಗೂ ನನ್ನ ಗೌರವಪೂರ್ವಕ ನಮಸ್ಕಾರಗಳು. ಪ್ರತ್ಯೇಕವಾಗಿ ನಾನು ಉಲ್ಲೇಖಿಸಬೇಕಾದದ್ದು ರಿಜಿಸ್ಟ್ರಾರ್ ಆದ ಟಿ. ಎಸ್. ದಕ್ಷಿಣಾಮೂರ್ತಿ ಅವರನ್ನು. ಉದ್ದಕ್ಕೂ ಅವರು ನನ್ನೊಂದಿಗೆ ವಿಶೇಷವಾಗಿ ಸಹಕರಿಸಿದ್ದಾರೆ, ನನ್ನ ಸಮಸ್ಯೆಗಳನ್ನು ಬಗೆಹರಿಸಿದ್ದಾರೆ, ಅಭಿಮಾನ ತೋರಿದ್ದಾರೆ. ಅವರದ್ದು ವಿಶಿಷ್ಟವಾದ ಕಾರ್ಯದಕ್ಷತೆ. ಮಿಂಚಿನವೇಗದಲ್ಲಿ ಇದನ್ನು ಮುದ್ರಿಸಿದ್ದು ಅನುಭವ ಪ್ರಿಂಟರ್‍ಸ್‌ನ ಬಸವರಾಜ ಸಿ. ಜಿಗಳೂರ್. ಹಳಗನ್ನಡದಿಂದ, ಛಂದಸ್ಸುಗಳಿಂದ, ಪದ್ಯಗಳಿಂದ ಕೂಡಿರುವ ಇಂಥ ಸಂಕಲನದ ಸಮಗ್ರ ಅಕ್ಷರ ಜೋಡಣೆ ವಿಶೇಷ ಪರಿಣತಿ ಮತ್ತು ತಾಳ್ಮೆಗಳನ್ನು ಕೋರುತ್ತದೆ. ಆ ಎರಡನ್ನೂ ಹೊಂದಿದ್ದು ನಾನು ಸೂಚಿಸಿದ, ಕೋರಿದ ಎಲ್ಲ ತಿದ್ದುಪಾಟುಗಳನ್ನೂ ಹಾಕಿ ನೆರವಾದ ಸುಪ್ರೀಂ ಪಾಯಿಂಟ್‌ನ ಸಿ. ಶ್ರೀನಿವಾಸ್ ಅವರನ್ನೂ ನಾನು ಸ್ಮರಿಸುತ್ತೇನೆ. ಇಲ್ಲಿಯ ಲೇಖನಗಳನ್ನು ಆಯ್ಕೆ ಮಾಡಲು ಪುಸ್ತಕ ಒದಗಿಸಿಕೊಟ್ಟ ಮಿತ್ರರಿಗೆ, ಕರಡು ನೋಡುವಲ್ಲಿ ವಿಶೇಷವಾಗಿ ನೆರವಾದ ಬಸವಣ್ಣನವರಿಗೆ, ನನ್ನನ್ನು ಆದರದಿಂದ ಕಂಡ ಸಾಹಿತ್ಯ ಅಕಾಡೆಮಿಯ ಸಿಬ್ಬಂದಿವರ್ಗದವರಿಗೆ ನನ್ನ ವಂದನೆಗಳು. ತುಂಬ ಮುಖ್ಯವಾಗಿ ಈ ಸಂಕಲನಕ್ಕೆ ತಮ್ಮ ಲೇಖನಗಳನ್ನು, ಬರಹಭಾಗಗಳನ್ನು ಸಂಪಾದಿಸಿ ಬಳಸಿಕೊಳ್ಳಲು ತಮ್ಮ ಅನುಮತಿ ನೀಡಿದ ನಾಡಿನ ಹಿರಿಯ ವಿದ್ವಾಂಸರಿಗೆ, ಸ್ನೇಹಿತರಿಗೆ ಕೃತಜ್ಞತೆಗಳು.

ಮತ್ತೊಮ್ಮೆ ಈ ಎಲ್ಲರಿಗೂ ನನ್ನ ನೆನಕೆಗಳು, ನಮಸ್ಕಾರಗಳು.

**ಎನ್. ಎಸ್. ತಾರಾನಾಥ**
ಸಂಪಾದಕ

# ೧. ಅತ್ಯಂತ ಪ್ರಾಚೀನ ಕನ್ನಡ ಶಾಸನ

● ಎಂ. ಎಚ್. ಕೃಷ್ಣ

ಕನ್ನಡ ಭಾಷೆಯು ಬಹಳ ಪ್ರಾಚೀನವಾದುದೆಂದೂ ಈಗ್ಗೆ ಒಂದೂವರೆ ಅಥವಾ ಎರಡು ಸಾವಿರ ವರ್ಷಗಳ ಕೆಳಗೆ ದ್ರಾವಿಡ ತಾಯ್ನುಡಿಯಿಂದ ಕವಲೊಡೆದು ರೂಪಾಂತರವನ್ನು ಹೊಂದಿತೆಂದೂ ವಿದ್ವಾಂಸರು ಸಾಮಾನ್ಯವಾಗಿ ಒಪ್ಪುತ್ತಾರೆ. ಶಾತವಾಹನರಾಜರ ಹೆಸರುಗಳಲ್ಲೂ ಬಿರುದಾವಳಿಗಳಲ್ಲೂ ಇರುವ 'ಪುಲಿಮಾಯಿ,' ವಿಳಿವಾಯಕುರ ಮೊದಲಾದ ಪದಗಳು ದ್ರಾವಿಡ ಪದಗಳೆಂದೇ ನಿರ್ಧರಿಸಲ್ಪಟ್ಟರೂ ಕನ್ನಡ ಪದಗಳೆಂದು ಖಂಡಿತವಾಗಿ ಹೇಳುವುದು ಸಾಧ್ಯವಾಗಿಲ್ಲ. ಕ್ರಿಸ್ತಶಕ ಎರಡನೆಯ ಶತಮಾನದಲ್ಲಿ ಗ್ರೀಕ್ ಭಾಷೆಯಲ್ಲಿ ಬರೆಯಲ್ಪಟ್ಟ ಪ್ರಹಸನವೊಂದು ಈಜಿಪ್ಟ್ ದೇಶದಲ್ಲಿ ಆಕ್ಸಿರಿಂಖಸ್ ಎಂಬಲ್ಲಿ ದೊರೆತ ಹಸ್ತಲಿಖಿತ 'ಪೆಪೈರಸ್' ಪುಸ್ತಕದಲ್ಲಿ ಕಾಣಬಂದಿದೆ. ಈ ಪ್ರಹಸನದ ಭಾರತೀಯ ಪಾತ್ರಗಳು ಇಲ್ಲಿಯ ಭಾಷೆಯೊಂದನ್ನು ಆಡುತ್ತಾರೆ. ಈ ಮಾತು ಕನ್ನಡವಿರಬಹುದೆಂದು ಡಾ|| ಹುಲ್ಟ್ಜ್‌ರವರು ಈಗ್ಗೆ ಮೂವತ್ತು ವರ್ಷಗಳ ಹಿಂದೆಯೇ ಸೂಚಿಸಿದರು. ಡಾ|| ಶಾಮಶಾಸ್ತ್ರಿಗಳು ಈ ಭಾರತೀಯ ವಾಕ್ಯಗಳನ್ನು ಕನ್ನಡದಲ್ಲಿ ರೂಪಗೊಳಿಸಿ ೧೯೨೬ರ 'ಮೈಸೂರು ಶಾಸನ ಶಾಖೆಯ ವರದಿ'ಯಲ್ಲಿ ಪ್ರಕಟಿಸಿದರು. ಎರಡನೆಯ ಶತಮಾನದ ಕನ್ನಡವು ನಮಗೆ ದೊರೆತುದಲ್ಲಾ ಎಂದು ಕನ್ನಡಿಗರು ಬಹುವಾಗಿ ಸಂತೋಷಪಟ್ಟರೂ ಈ ವಿಚಾರದಲ್ಲಿ ವಿದ್ವಾಂಸರ ಮನಸ್ಸಿನಲ್ಲಿ ಸಂದೇಹಗಳು ಇನ್ನೂ ನಿವೃತ್ತಿಯಾಗಿಲ್ಲ.

ನಿಸ್ಸಂದೇಹವಾಗಿ ಅತ್ಯಂತ ಪ್ರಾಚೀನ ಕನ್ನಡ ಲೇಖಗಳು ಯಾವುವೆಂದು ವಿಚಾರಮಾಡಿದರೆ ಇದುವರೆಗೂ ಚಾಲುಕ್ಯ ರಾಜನಾದ ಕೀರ್ತಿವರ್ಮನ ಶಾಸನ ಮತ್ತು ಮಂಗಳೇಶನ ಮೇಗುತಿ ದೇವಾಲಯದ ಶಾಸನ ಇವುಗಳೇ ಆಗಿದ್ದುವು. ಇವು ಕ್ರಿ.ಶ. ೫೭೦, ೫೮೦ಕ್ಕೆ ಸುಮಾರಾಗಿ ಅನ್ವಯಿಸುವುವು. ಈಗ ಅದೃಷ್ಟವಶಾತ್ ಕ್ರಿಸ್ತಾಬ್ದ ಸುಮಾರು ೪೫೦ರಲ್ಲಿ ಹುಟ್ಟಿದ ಕನ್ನಡ ಶಾಸನವೊಂದು ದೊರೆತಿದೆ. ಇದರಿಂದ ಅಷ್ಟು ಪ್ರಾಚೀನ ಕಾಲದಲ್ಲಿದ್ದ ಕನ್ನಡ ಭಾಷೆಯ ಸ್ಥಿತಿಯು ನಮಗೆ ತಿಳಿಯಬರುತ್ತದೆ.

ಮೈಸೂರು ಸಂಸ್ಥಾನದ ಹಾಸನ ಜಿಲ್ಲೆಯ ಅತ್ಯಂತ ಉತ್ತರ ಭಾಗದಲ್ಲಿ ಬೇಲೂರಿನಿಂದ ಚಿಕ್ಕಮಗಳೂರಿಗೆ ಹೋಗುವ ರಾಜಮಾರ್ಗದ ಪಶ್ಚಿಮಕ್ಕೆ ಎರಡು ಮೈಲಿಯ ದೂರದಲ್ಲಿ ಯಗಚಿ ನದಿಗೆ ಸೇರುವ ಹಳ್ಳವೊಂದರ ಬಲದಡದ ಮೇಲೆ ಹಲ್ಮಿಡಿ ಎಂಬ ಸಣ್ಣ ಗ್ರಾಮವೊಂದು ಬಹಳ ಪ್ರಾಚೀನ ಕಾಲದಿಂದಲೂ ಇದೆ. ಆ ಗ್ರಾಮದ ಮಧ್ಯದಲ್ಲಿ ಬಹಳ ಪ್ರಾಚೀನವಲ್ಲದ ಮತ್ತು ಶಿಲ್ಪದೃಷ್ಟಿಯಿಂದ ಅಮುಖ್ಯವಾದ ದೇವಾಲಯವೊಂದು ವೀರಭದ್ರಮೂರ್ತಿಗೆ ನೆಲೆಯಾಗಿದೆ. ಪೂರ್ವದಲ್ಲಿ ಆ ಊರನ್ನು ಸುತ್ತುಗಟ್ಟಿದ್ದ ಮಣ್ಣಿನ ಕೋಟೆಯು ಈಗ ಕಾಣಬರುವುದಿಲ್ಲ. ಆ ಕೋಟೆಯ ಪಶ್ಚಿಮ ಬಾಗಿಲು ನಿಂತಿದ್ದ ಸ್ಥಳದ ಬಳಿ ಸುಮಾರು ೧೯೩೦ರಲ್ಲಿ ಕಲ್ಲಿನ ಮೋಟುಕಂಬವೊಂದು ನೆಲದಲ್ಲಿ ದೊರೆಯಿತು. ಅದರ ಮೇಲೆ ಅಕ್ಷರಗಳಿದ್ದುದರಿಂದ ಗ್ರಾಮಸ್ಥರು ಅದನ್ನು ಒಯ್ದು ವೀರಭದ್ರ ದೇವಾಲಯದ ಮುಂದುಗಡೆ ಬಯಲಿನಲ್ಲಿ ನಿಲ್ಲಿಸಿದರು. ಕೆಲವು ವೇಳೆ ಆ ಕಂಬಕ್ಕೆ ದನಕರುಗಳನ್ನು

ಕಟ್ಟುವುದೂ, ಗ್ರಾಮದ ಮಕ್ಕಳು ಕಲ್ಲುಗಳನ್ನು ಗುರಿಯಿಟ್ಟು ಅದಕ್ಕೆ ಹೊಡೆದು ಅಭ್ಯಾಸಮಾಡುವುದೂ ಸಾಮಾನ್ಯವಾಗಿತ್ತು. ಈ ಸ್ಥಿತಿಯಲ್ಲಿರುವಾಗ ಈ ಕಂಬವು ಮೈಸೂರು ಶಾಸನ ಶಾಖೆಯವರ ದೃಷ್ಟಿಗೆ ಬಿದ್ದಿತು. ಇದು ಮುಖ್ಯವಾದ ಶಾಸನವೆಂದು ತಿಳಿದು ಅವರು ಈ ಕಂಬವನ್ನು ಮೈಸೂರಿಗೆ ಕೊಂಡೊಯ್ದು ಶಾಸನಶಾಖೆಯ ಪ್ರದರ್ಶನ ಶಾಲೆಯಲ್ಲಿ ಇಟ್ಟು ಕಾಪಾಡಿರುವರು.

ಹಲ್ಮಿಡಿಯ ಶಾಸನದ ಕಲ್ಲು ನಾಲ್ಕು ಅಡಿ ಎತ್ತರವಾಗಿಯೂ, ಒಂದು ಅಡಿ ಅಗಲವಾಗಿಯೂ, ಒಂಬತ್ತು ಅಂಗುಲ ದಪ್ಪವಾಗಿಯೂ ಇದೆ. ಇದರಲ್ಲಿ ಮೂರು ಭಾಗಗಳು ಕಾಣಬರುತ್ತವೆ. ಕೆಳಗಣ ಹಾಸುಗಲ್ಲಿನ ಗುಳಿಗೆ ಸಿಕ್ಕಿಸಲು ಕೆತ್ತಿರುವ ತೀರು ಅಥವಾ ಪಾದ, ಇದರ ಮೇಲೆ ಸುಮಾರು ಒಂದು ಮೊಳದಷ್ಟು ಎತ್ತರವಾಗಿರುವ ನಯಮಾಡಿದ ಕಂಬ, ಎಲ್ಲಕ್ಕೂ ಮೇಲೆ ಕಮಾನಿನ ಆಕಾರವುಳ್ಳ ಹತ್ತು ಅಂಗುಲ ಎತ್ತರವಿರುವ ತಲೆ. ಈ ತಲೆಯ ಮುಂಭಾಗದಲ್ಲಿ ಸುಮಾರು ಏಳು ಅಂಗುಲ ಅಗಲವಿರುವ ಚಕ್ರವೊಂದನ್ನು ಕೆತ್ತಿದೆ. ಇದು ವಿಷ್ಣುವಿನ ಸುದರ್ಶನಚಕ್ರವೆಂಬುದು ಪಕ್ಕದಲ್ಲಿರುವ ಶ್ಲೋಕದಿಂದ ವ್ಯಕ್ತವಾಗುತ್ತದೆ: ಈ ಚಕ್ರದ ಸುತ್ತಲೂ ಕುದುರೆಯ ಲಾಳದ ಆಕಾರದಲ್ಲಿ ಶಾಸನದ ಮೊದಲನೆಯ ಪಂಕ್ತಿಯು ಬರೆದಿದೆ. ಕಂಬದ ಮೇಲೆ ಎರಡನೆಯ ಪಂಕ್ತಿಯಿಂದ ಹದಿನೈದರವರೆಗೂ, ಕಂಬದ ಬಲಮಗ್ಗುಲಲ್ಲಿ ಮೇಲಿನಿಂದ ಕೆಳಕ್ಕೆ ಅಡ್ಡಲಾಗಿ ಹದಿನಾರನೆಯ ಪಂಕ್ತಿಯೂ ಕೆತ್ತಿದೆ. ಕಲ್ಲು ಒಂದು ವಿಧವಾದ ಬಳಪದಕಲ್ಲು. ಶಾಸನವು ಚೆನ್ನಾಗಿ ಕಾಣಿಸುತ್ತದೆ. ಆದರೆ ಹಳ್ಳಿಯ ಮಕ್ಕಳ ಕಲ್ಲಿನೇಟಿನಿಂದ ಶಾಸನದ ಕೆಲವೆಡೆಗಳಲ್ಲಿ ಹಳ್ಳಗಳು ಬಿದ್ದು ಸುಮಾರು ಇಪ್ಪತ್ತು ಕಡೆಗಳಲ್ಲಿ ಅಕ್ಷರಗಳನ್ನು ನಿರ್ಧರಿಸುವುದಕ್ಕೆ ಕಷ್ಟವಾಗಿದೆ. ಹೀಗಿರುವ ಹದಿನಾರು ಪಂಕ್ತಿಗಳ ಅಕ್ಷರಗಳು ಸುಮಾರು ೨/೩ ಅಂಗುಲ ಉದ್ದವೂ, ೧/೨ ಅಂಗುಲ ಅಗಲವೂ ಇವೆ.

ಈ ಹಲ್ಮಿಡಿ ಶಾಸನದ ಮೊದಲ ಹದಿನೈದು ಪಂಕ್ತಿಗಳ ಅಕ್ಷರಗಳು ಸ್ವಲ್ಪಮಟ್ಟಿಗೆ ಪಶ್ಚಿಮ ಘಟ್ಟಗಳ ಗವಿಗಳಲ್ಲಿ ದೊರೆತಿರುವ ಶಾತವಾಹನ ಚಕ್ರವರ್ತಿಗಳ ಶಾಸನಗಳಲ್ಲಿ ಉಪಯೋಗಿಸಲ್ಪಟ್ಟಿರುವ ಗವಿಯ ಲಿಪಿಯನ್ನೂ, ಕೆಲವು ಲಕ್ಷಣಗಳಲ್ಲಿ ಕದಂಬರ ಕಾಕುಸ್ಥವರ್ಮನ ತಾಳಗುಂದದ ಶಾಸನವನ್ನೂ ಹೋಲುತ್ತವೆ. ನಣಕ್ಕಸಪಲ್ಲವನ ಅಣಜಿಯ ಶಾಸನ, ವಸ್ತಾರೆಯ ಪ್ರಾಚೀನ ಶಿಲಾಶಾಸನ, ಕಾಕುಸ್ಥವರ್ಮನ ಹಲಸಿಯ ತಾಮ್ರಶಾಸನ - ಇವುಗಳಲ್ಲಿರುವ ಅತ್ಯಂತ ಪ್ರಾಚೀನ ಕನ್ನಡ ಅಕ್ಷರಗಳಿಗೆ ಹಲ್ಮಿಡಿ ಶಾಸನದ ಅಕ್ಷರಗಳು ಬಹಳವಾಗಿ ಹೋಲುತ್ತವೆ.

ಈ ಶಾಸನದ ವರ್ಣೋಪಯೋಗದಲ್ಲಿ ಹೆಚ್ಚಿನ ತಪ್ಪುಗಳು ಯಾವುವೂ ಕಾಣಬರುವುದಿಲ್ಲ. ಮೊದಲನೆಯ ಪಂಕ್ತಿಯಲ್ಲಿ 'ವ್ಯಾನತಿ' ಎಂಬುದಕ್ಕೆ ಬದಲಾಗಿ 'ಮ್ಯಾನತಿ' ಎಂದೂ, ಮೂರನೆಯ ಪಂಕ್ತಿಯಲ್ಲಿ 'ಭಟ್ಟಾರನ್' ಎಂಬುದಕ್ಕೆ ಬದಲಾಗಿ 'ಭಟ್ಟೋರನ್' ಎಂದೂ, ಐದನೆಯ ಪಂಕ್ತಿಯಲ್ಲಿ 'ಭಟಾರಿ' ಎಂಬುದಕ್ಕೆ ಬದಲಾಗಿ 'ಬಟರಿ' ಎಂದೂ ಬರೆದಿರುವುದು. ಇವು ಸಣ್ಣ ತಪ್ಪುಗಳಾಗಿ ಕಾಣಬರುತ್ತವೆ. ಕೆಲವೆಡೆಗಳಲ್ಲಿ ವ್ಯಂಜನಗಳು ದ್ವಿರುಕ್ತವಾಗಿ ಬರೆದಿವೆ; ಉದಾ: ನಾಲ್ಕನೆಯ ಪಂಕ್ತಿಯಲ್ಲಿ 'ಬ್ಬಟಃ' ಎಂದು ಬರೆದಿದೆ; ಹದಿನಾಲ್ಕನೆಯ ಪಂಕ್ತಿಯಲ್ಲಿ 'ವಿಜಯ ಅರಸ' ಎಂಬುದಕ್ಕೆ ಬದಲಾಗಿ 'ವಿಜಾರಸ' ಎಂದು ಪ್ರಯೋಗಿಸಿದೆ - ಹೆಚ್ಚಿನ ವೈಶಿಷ್ಟ್ಯಗಳಾವುವೂ ಕಾಣಬರುವುದಿಲ್ಲ.

ಶಾಸನದ ಹದಿಮೂರನೆಯ ಪಂಕ್ತಿಯಲ್ಲಿ ದಾನಕ್ಕೆ ರುಜು ಮಾಡಿದವನು ತಾನು ಭಟಾರಿ ಕುಲದ 'ಆಳಕದಂಬ 'ನೆಂದು ಹೇಳಿಕೊಂಡಿದ್ದಾನೆ. 'ಆಳಕದಂಬ 'ನೆಂಬ ಮಾತಿಗೆ ಆಳಪ ಮತ್ತು ಕದಂಬ ಈ ಎರಡು ರಾಜವಂಶಗಳಿಂದ ಉದ್ಭವಿಸಿದವನೆಂಬ ಅರ್ಥವೆಂದು ಊಹಿಸಬಹುದಾಗಿದೆ. ಇವನು ಭಟಾರಿ ವಂಶಕ್ಕೆ ಸೇರಿದವನಾಗಿರಬೇಕು, ಇಂಥ ವ್ಯಕ್ತಿಯು ಆಳಪರಿಗೆ ದೊರೆಯಾದ ಪಶುಪತಿಗೆ ಸಂಬಂಧಪಟ್ಟಿರಬೇಕು ಎಂಬ ವಿಷಯವು ಐದನೆಯ ಮತ್ತು ಆರನೆಯ ಪಂಕ್ತಿಗಳಿಂದ ತಿಳಿಯಬರುತ್ತದೆ. ಪಶುಪತಿಯ ವಿಚಾರವಾಗಿ ಶಿಕಾರಿಪುರದ ತಾಲ್ಲೂಕು ತಾಳಗುಂದದಲ್ಲಿ ಪ್ರಣವೇಶ್ವರನ ಗುಡಿಯ ಬಾಗಿಲುವಾಡದ ಮೇಲಿರುವ ಶಾಸನದಿಂದ ಕೆಲವು ಅಂಶಗಳು ತಿಳಿದುಬರುತ್ತವೆ. ಅಲ್ಲಿಯೂ ಇವನು 'ದಕ್ಷಿಣ'ದಲ್ಲಿ ಅನೇಕ ಯುದ್ಧಗಳನ್ನು ಮಾಡಿ ಹೆಸರೆತ್ತಿದ್ದನೆಂದು ಹೇಳಿದೆ. ಇವನು ಕದಂಬರಾಜನಾದ ಕಾಕುಸ್ಥವರ್ಮನ ಮಗಳು ಲಕ್ಷ್ಮಿಯ ಪತಿಯಾಗಿರಬೇಕೆಂದೂ, ಕದಂಬರ ಸೈನ್ಯಗಳಿಗೆ ಮುಖ್ಯಾಧಿಪತಿಯಾಗಿ ಅವರ ಶತ್ರುಗಳಾದ ಪಲ್ಲವರ ಮೇಲೆ ಯುದ್ಧ ಮಾಡಿದನೆಂದೂ ಕಾಣಬರುತ್ತದೆ. ಈ ಪಶುಪತಿಯ ಅಪ್ಪಣೆಯ ಪ್ರಕಾರ ಪ್ರಕೃತ ಶಾಸನದಲ್ಲಿ ಕಾಣುವ ದಾನವು ನಡೆದಿರಬೇಕು. ದಾನಶಾಸನವನ್ನು ಬರೆಸಿರುವ 'ಆಳಕದಂಬ'ನು ಪ್ರಾಯಶಃ ಪಶುಪತಿ ಮತ್ತು ಲಕ್ಷ್ಮಿ ಇವರ ಪುತ್ರನಾಗಿರಬಹುದು. ತಂದೆಯ ಅಪ್ಪಣೆಯಂತೆ ಅವನು ಈ ದಾನವನ್ನು ಮಾಡಿದಂತೆ ತೋರುತ್ತದೆ.

ದಾನವನ್ನು ತೆಗೆದುಕೊಂಡವನು ವಿಜ-ಅರಸ; ಇವನ ತಂದೆಯು ಎಲ್ಲಭಟಾರಿ. ವಿಜ-ಅರಸನು ಪಶುಪತಿಯ ಅಪ್ಪಣೆಯ ಪ್ರಕಾರ ಕದನದಲ್ಲಿ ಹೋರಾಡಿ ಜಯವನ್ನು ಪಡೆದನು. ಈ ಕಾರಣದಿಂದ ಅವನಿಗೆ ಪಲ್ಮಡಿ ಅಥವಾ ಈಗಿನ ಹಲ್ಮಿಡಿ ಎಂಬ ಗ್ರಾಮವೂ ಮೂಳಿವಳ್ಳಿ ಅಥವಾ ಹಲ್ಮಿಡಿಗೆ ಮೂರು ಮೈಲಿ ಪಶ್ಚಿಮಕ್ಕಿರುವ ಈಗಿನ ಮುಳವಳ್ಳಿ ಗ್ರಾಮವೂ ದಾನವಾಗಿ ಕೊಡಲ್ಪಟ್ಟುವು. ಕದನದಲ್ಲಿ ಹೋರಾಡಿದ ಕತ್ತಿಯ ಮರ್ಯಾದೆಗಾಗಿ ಕೊಟ್ಟ ದಾನವಾದುದರಿಂದ ಇದಕ್ಕೆ 'ಬಾಳ್ಗಚ್ಚು' ಎಂದು ಹೆಸರು.

ವಿಜ-ಅರಸನು ಭಟಾರಿ ಕುಲಕ್ಕೆ ಸೇರಿದವನೆಂದೂ ಆದ್ದರಿಂದ ಪಶುಪತಿಗೆ ದಾಯಾದಿಯಾಗಿರಬೇಕೆಂದೂ ತೋರುತ್ತದೆ.

ಈ ಶಾಸನದಲ್ಲಿ ಅದರ ಕಾಲವನ್ನು ಕೊಟ್ಟಿಲ್ಲ. ಅದರಲ್ಲಿ ಹೇಳಿರುವ ವಿಷಯಗಳಿಂದ ಕಾಲವನ್ನು ನಿರ್ಣಯಿಸಬೇಕಾಗಿದೆ. ಅದರಲ್ಲಿ ಹೇಳಿರುವ ಕದಂಬರ ದೊರೆಯು ಕಾಕುಸ್ಥವರ್ಮನು. ಇವನು ಕದಂಬರ ಮೂಲಪುರುಷನಾದ ಮಯೂರಶರ್ಮನ ಮೊಮ್ಮಗನಾದ ಭಗೀರಥನ ಮೊಮ್ಮಗನೆಂದೂ, ಮಯೂರಶರ್ಮನ ವಿಜಯದಿಂದ ೮೦ನೆಯ ವರ್ಷದಲ್ಲಿ ಯುವರಾಜನಾಗಿದ್ದನೆಂದೂ, ತರುವಾಯ ಕೆಲವು ವರ್ಷಗಳಲ್ಲಿ ದೊರೆಯಾಗಿ ವಿಜೃಂಭಣೆಯಿಂದ ಬಹುಕಾಲ ಆಳಿದನೆಂದೂ ಹಲಸಿಯ ತಾಮ್ರಶಾಸನ ಮತ್ತು ತಾಳಗುಂದದ ಕಂಬದ ಶಾಸನ ಇವುಗಳಿಂದ ತಿಳಿಯಬರುತ್ತದೆ. ಇವನ ತರುವಾಯ ಇವನ ಮಗ ಶಾಂತಿವರ್ಮನೂ ಅವನ ತರುವಾಯ ಮೊಮ್ಮಗ ಮೃಗೇಶನೂ ಆಳಿದರು. ಮೃಗೇಶನೆಂಬ ಹೆಸರು ನಾಲ್ಕನೆಯ ಪಂಕ್ತಿಯಲ್ಲಿ ಕಾಣಬರುವುದರಿಂದ ಪ್ರಕೃತ ಶಾಸನವು ಕಾಕುಸ್ಥವರ್ಮನ ವೃದ್ಧಾಪ್ಯದಲ್ಲಿ ಹುಟ್ಟಿತೆಂದು ಊಹಿಸಬೇಕಾಗಿದೆ. ಅಂದರೆ ಈ ಶಾಸನವು ಸುಮಾರು ಕ್ರಿ.ಶ. ೪೫೦ರಲ್ಲಿ ಬರೆದುದಾಗಿ ನಿರ್ಣಯಿಸಬಹುದು.

ಪ್ರಕೃತ ಶಾಸನದಿಂದ ಚರಿತ್ರೆಗೆ ಸಂಬಂಧಪಟ್ಟ ಒಂದು ಅಂಶವು ಹೊರಬೀಳುತ್ತದೆ. ಕಾಕುಸ್ಥವರ್ಮನ ಕಾಲದಲ್ಲಿ ಕನ್ನಡ ದೇಶದ ಒಡೆಯರಾದ ಕದಂಬರಿಗೂ ದ್ರಾವಿಡರ ಅಧಿಪತಿಗಳಾದ ಪಲ್ಲವರಿಗೂ ದೊಡ್ಡ ಯುದ್ಧಗಳು ನಡೆಯುತ್ತಿದ್ದಿರಬೇಕು. ಇಂತಹ ಯುದ್ಧವೊಂದರಲ್ಲಿ ಕದಂಬರ ಕಡೆಗೆ ಸೇಂದ್ರಕರು, ಬಾಣರು ಮತ್ತು ಆಳಪರೂ, ಪಲ್ಲವರ ಕಡೆಗೆ ಕೇಕಯರೂ ಸೇರಿ ಯುದ್ಧ ಮಾಡಿದರು. ಈ ಕಾಲದಲ್ಲಿ ಪಲ್ಲವರಿಗೆ ರಾಜನಾಗಿದ್ದವನು ಕ್ರಿ.ಶ. ೪೩೬ರಿಂದ ೨೨ ವರ್ಷಗಳು ರಾಜ್ಯವಾಳಿದ ಎರಡನೆಯ ಸಿಂಹವರ್ಮನಾಗಿರಬೇಕು. ಎರಡು ಪಕ್ಷದವರಿಗೂ ಈಗಿನ ಬೇಲೂರಿನ ಬಳಿ ದೇವಳಿಗೆನಾಡಿನಲ್ಲಿ ಕದನವು ನಡೆದಂತೆ ತೋರುತ್ತದೆ. ಇಂತಹ ಇನ್ನೊಂದು ಕದನದಲ್ಲಿ ಕದಂಬರ ಕೃಷ್ಣವರ್ಮನನ್ನು ಪಲ್ಲವರ ನಣಕ್ಕಸನು ಜಯಿಸಿದನೆಂಬುದು ಅಣಜಿಯ ಶಾಸನದಿಂದ ತಿಳಿಯಬರುತ್ತದೆ. ಆದರೆ ಪ್ರಕೃತ ಶಾಸನದಲ್ಲಿ ಹೇಳಿರುವ ಯುದ್ಧದಲ್ಲಿ ವಿಜ-ಅರಸನ ಪರಾಕ್ರಮದಿಂದ ಕದಂಬರ ಪಕ್ಷಕ್ಕೆ ಜಯವಾಯಿತೆಂದು ತಿಳಿಯಬರುತ್ತದೆ.

ಮೇಲೆ ಹೇಳಿದಂತೆ ಈ ಮೊದಲನೆಯ ದಾನಕ್ಕೆ ೧೩ನೆಯ ಪಂಕ್ತಿಯಲ್ಲಿ ಭಟಾರಿಕುಲದ ಅಳಕದಂಬನು ತನ್ನ ರುಜುಮಾಡಿರುತ್ತಾನೆ.

೧೪, ೧೫ನೆಯ ಪಂಕ್ತಿಗಳಲ್ಲಿ ವಿಜ-ಅರಸನೂ ಇನ್ನಿಬ್ಬರೂ ಸೇರಿ ಹಲ್ಮಿಡಿಗೆ 'ಕುಱುಂಬಿಡಿ'ಯನ್ನು ಬಿಟ್ಟರೆಂದು ಹೇಳಿದೆ. ಅಡ್ಡಲಾಗಿ ಬರೆದಿರುವ ೧೬ನೆಯ ಪಂಕ್ತಿಯಲ್ಲಿ ಆ ಗ್ರಾಮದ ಭಟ್ಟರಿಗೆ ಗದ್ದೆಯ ಉತ್ಪತ್ತಿಯಲ್ಲಿ ಹತ್ತರಲ್ಲಿ ಒಂದು ಭಾಗವನ್ನು ಬಿಟ್ಟ ಸಂಗತಿಯು ಕಾಣಿಸಿದೆ.

ಕನ್ನಡ ಭಾಷೆಯ ಚರಿತ್ರೆಗೆ ಹಲ್ಮಿಡಿಯ ಶಾಸನವು ಬಹಳ ಉಪಯುಕ್ತವಾದುದೆಂದು ಹಿಂದೆಯೇ ಹೇಳಿದೆ. ಭಾಷಾದೃಷ್ಟಿಯಿಂದ ಸ್ಥೂಲವಾಗಿ ಕಾಣಬರುವ ಕೆಲವು ಅಂಶಗಳನ್ನು ಇಲ್ಲಿ ಸಂಗ್ರಹಿಸಿದೆ. ಹೆಚ್ಚಿನ ವಿಮರ್ಶೆಯನ್ನು ಮಾಡಿ ಭಾಷಾಶಾಸ್ತ್ರಜ್ಞರು ತಮ್ಮ ಅಭಿಪ್ರಾಯಗಳನ್ನು ಪ್ರಕಟಿಸಲೆಂದು ಈ ಮೂಲಕ ಕೋರಿದೆ.

ಹಲ್ಮಿಡಿಯ ಶಾಸನದ ಮೊದಲನೆಯ ಪಂಕ್ತಿಯು ಸಂಸ್ಕೃತದ ಶ್ಲೋಕರೂಪವಾಗಿದೆ. ಕಾಳಿದಾಸನೇ ಮೊದಲಾದ ಸಂಸ್ಕೃತ ಮಹಾಕವಿಗಳ ಪದ್ಯಗಳಲ್ಲಿ ಕಂಡುಬರುವ ರೂಪಕದಿಂದಲೂ, ಮನೋಹರವಾದ ಭಾವದಿಂದಲೂ, ಉತ್ಕೃಷ್ಟವಾದ ಪದಸಂಯೋಗದಿಂದಲೂ ಈ ಶ್ಲೋಕವು ಕೂಡಿದೆ. ಇದನ್ನು ಬರೆದವನು ಸಂಸ್ಕೃತ ಕವಿತೆಯ ರೀತಿಯನ್ನು ಚೆನ್ನಾಗಿ ತಿಳಿದ ರಸಜ್ಞನಾದ ಕವಿಯೇ ಆಗಿರಬೇಕು.

ಗದ್ಯವನ್ನು ಬರೆಯುವಾಗ ಸಂಸ್ಕೃತ ಸಮಸ್ತ ಪದಗಳಲ್ಲಿ ಈತನಿಗಿರುವ ಪಕ್ಷಪಾತವು ಐದನೆಯ, ಆರನೆಯ ಮತ್ತು ಏಳನೆಯ ಪಂಕ್ತಿಗಳಲ್ಲಿರುವ ಸಮಾಸಗಳಿಂದ ಚೆನ್ನಾಗಿ ಕಾಣಬರುತ್ತದೆ. ಸಂಸ್ಕೃತ ಕವಿತೆಯಲ್ಲಿ ಪರಿಶ್ರಮವುಳ್ಳ ಮನುಷ್ಯನೊಬ್ಬನು ಪ್ರಕೃತ ಮೊದಲನೆಯ ದಾನಶಾಸನದ ಮಾತುಗಳನ್ನು ಜೋಡಿಸಿದನೆಂದು ವ್ಯಕ್ತವಾಗುತ್ತದೆ.

೧ರಿಂದ ೧೩ನೆಯ ಪಂಕ್ತಿಯುವರೆಗೂ ಇರುವ ಮೊದಲನೆಯ ಶಾಸನದಲ್ಲಿ ಕನ್ನಡದ ಪದಗಳು ೧೩ ಮಾತ್ರ ಉಪಯೋಗಿಸಲ್ಪಟ್ಟಿವೆ. ೧೪ರಿಂದ ೧೬ನೆಯ ಪಂಕ್ತಿಯುವರೆಗೆ ಇರುವ ೨ನೆಯ ಮತ್ತು ೩ನೆಯ ದಾನಶಾಸನಗಳಲ್ಲಿ ಕನ್ನಡ ಪದಗಳ ಪ್ರಯೋಗವು ಬಹಳ ಹೆಚ್ಚಾಗಿದೆ. ಸಾಮಾನ್ಯ ಜನರ ಭಾಷೆಯಲ್ಲಿ ಈಗಿನಂತೆಯೇ ಶುದ್ಧಕನ್ನಡ ಪದಗಳು ಹೆಚ್ಚಾಗಿಯೂ

ಪ್ರೌಢವಾದ ಕವಿತೆಯಲ್ಲಿ ಸಂಸ್ಕೃತ ಪದಗಳು ಹೆಚ್ಚಾಗಿಯೂ ಉಪಯೋಗದಲ್ಲಿ ಇದ್ದಂತೆ ತೋರಿಬರುತ್ತದೆ.

ಒಟ್ಟಿನಲ್ಲಿ ಈ ಶಿಲೆಯ ಮೇಲೆ ಕಾಣಬರುವ ಮೂರು ದಾನ ಶಾಸನಗಳಲ್ಲೂ ಕೂಡಿ ಸುಮಾರು ಇಪ್ಪತ್ತೈದು ಕನ್ನಡ ಪದಗಳು ದೊರೆಯುತ್ತವೆ. ಇವುಗಳ ರೂಪಗಳನ್ನು ಪರೀಕ್ಷಿಸಿ ನೋಡಿದಲ್ಲಿ ದಿವಂಗತರಾದ ಮಿ|| ಬಿ. ಎಲ್. ರೈಸ್ ಮತ್ತು ಶ್ರೀಮಾನ್ ರಾ. ನರಸಿಂಹಾಚಾರ್ ಇವರುಗಳು ಪೂರ್ವದ ಹಳಗನ್ನಡ (Primitive Old Kannada) ಎಂಬ ಹೆಸರಿನಿಂದ ವರ್ಣಿಸಿರುವ ಭಾಷಾರೂಪಗಳಿಗೆ ಅನುಗುಣವಾಗಿ ಕಾಣಬರುತ್ತದೆ. ಈ ಶಾಸನದಲ್ಲಿರುವ ಭಾಷೆಯು ಪ್ರೌಢವಾಗಿಯೂ ಗಂಭೀರವಾಗಿಯೂ ಲಕ್ಷಣ ಯುಕ್ತವಾಗಿಯೂ ಇರುವುದರಿಂದ ಇದನ್ನು 'ಪ್ರಿಮಿಟಿವ್' ಅಥವಾ ಅನಾಗರಿಕವೆಂದು ಕರೆಯುಲು ಸಾಧ್ಯವಿಲ್ಲ. ಪಂಪಾದಿಗಳ ಗ್ರಂಥಗಳಲ್ಲಿ ಉಪಯೋಗಿಸಿರುವ ಭಾಷೆಗೂ ಈ ಹಳೆಯ ಭಾಷೆಗೂ ಕೆಲವು ವ್ಯಾಕರಣ ಲಕ್ಷಣಗಳು ಭಿನ್ನವಾಗಿರುವುದರಿಂದ ಇದನ್ನು ಹಳಗನ್ನಡವೆಂದು ಕರೆದರೆ ಸಂದೇಹವುಂಟಾಗಬಹುದು. ಇದನ್ನು 'ಪೂರ್ವದ ಕನ್ನಡ' (Early Kannada)ವೆಂದು ಕರೆಯಬಹುದಾಗಿದೆ.

ಈ ಶಾಸನದಲ್ಲಿ ಕಾಣಬರುವ ಪೂರ್ವದ ಕನ್ನಡವು ಸಾಮಾನ್ಯವಾಗಿ ಶ್ರೀಮಾನ್ ರಾ. ನರಸಿಂಹಾಚಾರ್ಯರು ತಮ್ಮ 'ಕನ್ನಡ ಭಾಷೆಯ ಚರಿತ್ರೆ'ಯ *(History of the Kannada Language)* ೧೨ಲನೆಯ ಪುಟದಲ್ಲಿ ಹೇಳಿರುವ ಲಕ್ಷಣಗಳಿಂದ ಕೂಡಿದೆ. ಆ ಲಕ್ಷಣಗಳನ್ನೂ, ಈ ಶಾಸನದಲ್ಲಿ ಸಿಕ್ಕುವ ಕೆಲವು ಉದಾಹರಣೆಗಳನ್ನೂ ಈ ಕೆಳಗೆ ಕಾಣಿಸಿದೆ :

೧. ಕ್ರಿಯಾಪದಗಳ ಪ್ರಥಮ ಪುರುಷದಲ್ಲಿ ಪ್ರತ್ಯಯಗಳ ಸ್ವರಗಳು ದೀರ್ಘವಾಗಿರುತ್ತವೆ.

| | | |
|---|---|---|
| ಪಂಕ್ತಿ | ೧೩ | ಕಲ್ದೋನ್ |
| ಪ. | ೧೫ | ಅಟಿವೋನ್ |
| ಪ. | ೧೨ | ಕೊಟ್ಟಾರ್ |
| ಪ. | ೧೫ | ವಿಟ್ಟಾರ್ |

೨. ಪದಾಂತ್ಯದಲ್ಲಿರುವ 'ಆ' ಕಾರಕ್ಕೆ ಬದಲಾಗಿ 'ಓ' ಕಾರವು ಇರುತ್ತದೆ :

| | | |
|---|---|---|
| ಪ. | ೪ | ಅಪ್ಪೋರ್ |
| ಪ. | ೭ | ಭರಿತೋನ್ |

೩. ಸಪ್ತಮೀ ವಿಭಕ್ತಿಯ ಪ್ರತ್ಯಯವು 'ಉಳ್' ಎಂದು ಇರುತ್ತದೆ :

| | | |
|---|---|---|
| ಪ. | ೩ | ನಾಡುಳ್ |
| ಪ. | ೭ | ಆಹವದುಳ್ |

೪. ಪ್ರತಿಷೇಧಾರ್ಥ(Negative)ದ ಪ್ರತ್ಯಯಗಳಲ್ಲಿಯ ಸ್ವರಗಳು ದೀರ್ಘವಾಗುತ್ತವೆ :

ಈ ಶಾಸನದಲ್ಲಿ ಪ್ರಯೋಗವಿಲ್ಲ.

೫. ನಪುಂಸಕ ಪ್ರತ್ಯಯಗಳು 'ಒದು', 'ಅದು' ಎಂದು ಇರುತ್ತವೆ :

ಈ ಶಾಸನದಲ್ಲಿ ಪ್ರಯೋಗವಿಲ್ಲ.

೬. ಅನುಸ್ವಾರ ಅಥವಾ ಬಿಂದುವಿಗೆ 'ನ್' ಪ್ರಯೋಗ :

ಪ. ೧೦ ಸುತನ್ಗೆ

ಪ. ೧೨ ಅರಸನ್ಗೆ

೭. ದ್ವಿತೀಯಾ ವಿಭಕ್ತಿಯ ಪ್ರತ್ಯಯದಲ್ಲಿಯ ಸ್ವರವು ದೀರ್ಘವಾಗುತ್ತದೆ :

ಪ. ೧೫ ಅದಾನ್

೮. ಷಷ್ಠಿಯ ಪ್ರತ್ಯಯದಲ್ಲಿಯ 'ಅ' ಕಾರವು ದೀರ್ಘವಾಗುತ್ತದೆ :

ಪ. ೯ ಭಟರಿಯಾ

ಪ. ೨ ಕಲಭೋರನಾ

೯. ವಿಧಿವಾಚಕ ಕ್ರಿಯೆಯಲ್ಲಿ ಪ್ರಥಮಪುರುಷೈಕವಚನದ ಪ್ರತ್ಯಯವು 'ಗ' ಅಥವಾ 'ಕ' ಎಂದು ಇರುತ್ತದೆ :

ಈ ಶಾಸನದಲ್ಲಿ ಪ್ರಯೋಗವಿಲ್ಲ.

೧೦. 'ಬ' ಕಾರಕ್ಕೆ ಬದಲಾಗಿ 'ವ' ಕಾರವು ಇರುತ್ತದೆ :

ಪ. ೧೫ ವಿಟ್ಟಾರ್

ಪ. ೧೬ ವಿಟ್ಟಾರ್

೧೧. ಪದಾರಂಭದಲ್ಲಿ 'ಇ' ಕಾರಕ್ಕೆ ಬದಲು 'ಎ' ಕಾರವು ಇರುತ್ತದೆ :

ಪ. ೧೧ ಎಱಿದು

೧೨. ವ್ಯಂಜನಗಳಿಗೆ ಅನೇಕ ವೇಳೆ ದ್ವಿತ್ವ ರೂಪಗಳು ಬರುತ್ತವೆ :

ಪ. ೪ ಬ್ಬಟಹ

ಪ. ೫ ಇವ್ರ್ವರ್

ಪ. ೮ ಪ್ಪೊಟ್ಟಣ

ಪ. ೧೪ ಇವ್ರ್ವರುಂ

ಒಟ್ಟಿನಲ್ಲಿ ಈ ಶಾಸನದ ಭಾಷೆಯಿಂದ ಈ ಕೆಲವು ವಿಷಯಗಳು ಕಾಣಬರುತ್ತವೆ[1] :

(೧) ಕನ್ನಡಕ್ಕೂ ಸಂಸ್ಕೃತಕ್ಕೂ ಉಭಯಸಂಬಂಧವು ಕ್ರಿ.ಶ. ೪೫೦ಕ್ಕೆ ಬಹಳ ಹಿಂದೆಯೇ ಆರಂಭವಾಗಿ ಸಂಸ್ಕೃತ ಸಮಸ್ತಪದಗಳಿಂದ ಕೂಡಿದ ಪ್ರೌಢವಾದ ಕನ್ನಡವು ೫ನೆಯ ಶತಮಾನದ ವೇಳೆಗೆ ಚೆನ್ನಾಗಿ ಬಳಕೆಗೆ ಬಂದಿತ್ತು.

(೨) ಜನಸಾಮಾನ್ಯದ ನಡೆವಳಿಕೆಯಲ್ಲೂ ಬರವಣಿಗೆಯಲ್ಲೂ ಹೆಚ್ಚಾಗಿ ಶುದ್ಧ ಕನ್ನಡ

---

೧. ಹೆಚ್ಚಿನ ವಿಷಯಗಳಿಗೆ ಮೈಸೂರು ಶಾಸನದ ಇಲಾಖೆಯ ೧೯೩೬ನೆಯ ವರ್ಷದ ವರದಿಯನ್ನು ನೋಡುವುದು.

ಪದಗಳೇ ಉಪಯೋಗದಲ್ಲಿದ್ದುವು. ರಾಜರ ಆಸ್ಥಾನಗಳಲ್ಲಿಯೂ ಪಂಡಿತರ ಬರವಣಿಗೆಗಳಲ್ಲಿಯೂ ಸಂಸ್ಕೃತಪದಗಳಿಂದ ಹೆಚ್ಚಾಗಿ ಕೂಡಿದ ಭಾಷೆಯು ಪ್ರಚಾರದಲ್ಲಿತ್ತು. 'ಪೆತ್ತಜಯನ್' ಮೊದಲಾದ ಪದರೂಪಗಳು ಸಂಸ್ಕೃತ ಮಾರ್ಗವನ್ನು ಅನುಸರಿಸಿದ್ದವು.

(೩) ಪೂರ್ವದ ಕನ್ನಡದ ಪದರೂಪಗಳು ಸುಪ್ರಸಿದ್ಧವಾದ ವ್ಯಾಕರಣ ನಿಯಮಗಳಿಗೆ ಕಟ್ಟುಬಿದ್ದಿದ್ದುವು. ಕನ್ನಡವು ಚೆನ್ನಾಗಿ ಬೆಳೆದು ಬಲಿತ ಭಾಷೆಯಾಗಿತ್ತು.

(೪) ಇದಕ್ಕೆ ಈ ಭಾಷೆಯೂ ಇದರ ವಾಙ್ಮಯವೂ ಕೆಲವು ಶತಮಾನಗಳ ಹಿಂದೆಯೇ ಬೆಳೆದು ಬದುಕಿ ಬಾಳಿರಬೇಕು.

### ಬೇಲೂರು ಹೋಬಳಿ ಹಲ್ಮಿಡಿ ಗ್ರಾಮದಲ್ಲಿ ವೀರಭದ್ರ ದೇವಸ್ಥಾನದ ಮುಂದೆ ನೆಟ್ಟಿದ ಕಲ್ಲು

ಪ್ರಮಾಣ – ೨ $\frac{೧}{೨}$' x ೧'.

೧. ಜಯತಿ ಶ್ರೀ ಪರಿಷ್ವಙ್ಗ ಶ್ಯಾರ್ಙ್ಗ [ವ್ಯಾನತಿ] ರಚ್ಯುತಃ ದಾನವಾಕ್ಷ್ಣೋರ್ಯುಗಾನ್ತಾಗ್ನಿಃ [ಶಿಷ್ಟಾನಾನ್ತು] ಸುದರ್ಶನಃ

೨. ನಮಃ ಶ್ರೀಮತ್ಕದಂಬಪನ್ತ್ಯಾಗಸಂಪನ್ನಕ್ಕಲಭೋರ[ನಾ] ಅರಿಕ

೩. ಕುಸ್ಥಭಟ್ಟೋರ ನಾಳೆ ನರಿದಾವಿ[ಳೆ] ನಾಡುಳ್ ಮೃಗೇಶನಾ

೪. ಗೇನ್ದ್ರಾಭೀಳಭ್ಭಟಹರಪ್ಪೋರ್ ಶ್ರೀ ಮೃಗೇಶ ನಾಗಾಹ್ವಯ

೫. ರಿರ್ವ್ವರ್ಗ್ಗಾ ಬಟರಿಕುಲಾಮಲವ್ಯೋಮ ತಾರಾಧಿನಾಥನ್ನಳಪ

೬. ಗಣಪಶುಪತಿಯಾ ದಕ್ಷಿಣಾಪಥ ಬಹು ಶತಹವನಾ

೭. ಹವದು[ಳ್] ಪಶುಪ್ರದಾನ ಶೌರ್ಯ್ಯೋದ್ಯಮಭರಿತೋ[ನ್ದಾನ]ಪ

೮. ಶುಪತಿಯೆನ್ದು ಪೊಗಟೆ ಪ್ಪೊಟ್ಟಣ ಪಶುಪತಿ

೯. ನಾಮಧೇಯನಾ ಸರಕ್ಕೆಲ್ಲ ಭಟರಿಯಾ ಪ್ರೇಮಾಲಯ

೧೦. ಸುತನ್ಗೆ ಸೇನ್ದ್ರಕಬಣೋಭಯ ದೇಶದಾವೀರಾಪುರುಷಸಮಕ್ಷ

೧೧. ದೆ ಕೇಕಯ ಪಲ್ಲವರಂ ಕಾದೆಱಿದು ಪೆತ್ತ ಜಯನಾವಿಜ

೧೨. ಅರಸನ್ಗೆ ಬಾಳ್ಗಟ್ಟು ಪಲ್ಮಡಿಉಂ ಮೂಱುವಳ್ಳಿಉಂ ಕೊ

೧೩. ಟ್ಟಾರ್ ಬಟಾರಿ ಕುಲದೊನಳಕದಮ್ಬನ್ಕಳ್ದೋನ್ ಮಹಾಪಾತಕನ್

೧೪. ಇರ್ವ್ವರುಂ ಸಲ್ಬಙ್ಗದರ್ ವಿಜಾರಸರುಂ ಪಲ್ಮಡಿಗೆ ಕುಱು

೧೫. ಮ್ಬಿಡಿವಿಟ್ಟಾರ್ ಅದಾನಳಿವೊನ್ಗೆ ಮಹಾಪಾತಕಮ್ ಸ್ವಸ್ತಿ

ಎಡಪಕ್ಕದಲ್ಲಿ

೧೬. ಭಟ್ಟರ್ಗ್ಗೀ ಗಲ್ದೆ ಒಡ್ಡಲಿ ಆಪತ್ತೊನ್ದಿ ವಿಟ್ಟಾರಕರ

### ಅನುವಾದ

ದಾನವರ ಕಣ್ಣುಗಳಿಗೆ ಪ್ರಳಯಕಾಲದ ಅಗ್ನಿಯಂತೆಯೂ ಸತ್ಪುರುಷರಿಗೆ ಸುದರ್ಶನನಾಗಿ (ಸುದರ್ಶನಚಕ್ರವಾಗಿ)ಯೂ ಲಕ್ಷ್ಮಿಯಿಂದ ಆಲಿಂಗಿತನಾಗಿಯೂ

ಶಾರ್ಙ್ಗವೆಂಬ ಧನುಸ್ಸನ್ನು ಬಗ್ಗಿಸಿ ಹಿಡಿದಿರುವ ಅಚ್ಯುತನು ಜಯಿಸುತ್ತಾನೆ.

ಕದಂಬರಾಜನೂ ತ್ಯಾಗಸಂಪನ್ನನೂ ಕಲಭೋರನ ಶತ್ರುವೂ ಆದ ಕಕುಸ್ಥಭಟ್ಟಾರಕನು ಆಳುತ್ತಿರಲು ಸರಿದಾವಿಳ್ಗೆ ನಾಡಿನಲ್ಲಿ ಮೃಗೇಶನಾಗೇಂದ್ರರಂತೆ (ಸಿಂಹ ಅಥವಾ ಶಿವ, ಆನೆ ಅಥವಾ ಸರ್ಪ) ಭಯಂಕರರಾದ ಮೃಗೇಶ ನಾಗ ಎಂಬ ಹೆಸರುಳ್ಳವರು ಅಧಿಕಾರಿಗಳಾಗಿದ್ದರು. ಇವರಿಬ್ಬರು, ಪ್ರಸಿದ್ಧವಾದ ಭಟರಿ ವಂಶವೆಂಬ ಆಕಾಶಕ್ಕೆ ಚಂದ್ರನಂತಿರುವ, ಆಳಪರೆಂಬ ಗಣಕ್ಕೆ ಪಶುಪತಿಯಾಗಿರುವ, ಆ ದಕ್ಷಿಣಾಪಥದಲ್ಲಿ ಅನೇಕ ಯಜ್ಞಗಳೆಂಬ ಯುದ್ಧಗಳಲ್ಲಿ ಪಶುಪ್ರದಾನ (ದಾನ ಮಾಡುವುದು, ಕೊಲ್ಲುವುದು) ಶೌರ್ಯೋದ್ಯಮದಿಂದ ಕೂಡಿದ, ದಾನಪಶುಪತಿಯೆನ್ದು ಹೊಗಳಲ್ಪಟ್ಟ, ಪ್ರಸಿದ್ಧನಾದ ಪಶುಪತಿಯೆಂಬ ಹೆಸರುಳ್ಳವನ ಆಹ್ವಾನಕ್ಕೆ ಎಲ್ಲಭಟರಿಯ ಪ್ರೀತಿಪಾತ್ರಸುತನಾದ ಸೇನ್ದ್ರಕ ಮತ್ತು ಬಾಣ ಎಂಬ ದೇಶಗಳ ವೀರಪುರುಷರ ಎದುರಿಗೆ ಪಲ್ಲವರನ್ನೂ ಕೇಕಯರನ್ನೂ ಯುದ್ಧದಲ್ಲಿ ಕೊಂದು ಜಯವನ್ನು ಪಡೆದ ವಿಜ-ಅರಸನಿಗೆ ಕತ್ತಿಯ ಕೊಡಗೆಯಾಗಿ ಪಲ್ಮಡಿಯನ್ನೂ ಮೂಳಿವಳ್ಳಿಯನ್ನೂ ಕೊಟ್ಟರು. ಭಟರಿವಂಶದ ಅಳಕದಂಬನು. ಇದನ್ನು ಅಪಹರಿಸುವವನು ಮಹಾ ಪಾತಕನು.

ಇಬ್ಬರು ಸಬ್ಬಜ್ಗದವರೂ ವಿಜ-ಅರಸರೂ ಹಲ್ಮಡಿಗೆ ಕುಱುದರೆಯನ್ನು ಬಿಟ್ಟರು. ಅದನ್ನು ನಾಶಮಾಡಿದವನಿಗೆ ಮಹಾಪಾತಕವು. ಸ್ವಸ್ತಿ.

ಈ ಗದ್ದೆಯ ಒಡ್ಡಿನಲ್ಲಿ ಹತ್ತನೆಯ ಒಂದು ಭಾಗ ಆದಾಯವು ಬ್ರಾಹ್ಮಣರಿಗೆ ತೆರಿಗೆ ಇಲ್ಲದೆ ಕೊಡಲ್ಪಟ್ಟಿದೆ.

*ಮೈಸೂರು ಆರ್ಕಿಯೋಲಾಜಿಕಲ್ ರಿಪೋರ್ಟ್, ೧೯೩೬*

*ಪ್ರಬುದ್ಧ ಕರ್ಣಾಟಕ, ೨೦-೩, ೧೯೩೯, ಪು. ೩೧-೪೦*

# ೨. ಬಾದಾಮಿ ಶಾಸನದ ಅರ್ಥ

● ಟಿ. ವಿ. ವೆಂಕಟಾಚಲ ಶಾಸ್ತ್ರೀ

## ೧

ಇಂಡಿಯನ್ ಆಂಟಿಕ್ವೆರಿಯಲ್ಲಿ (ಸಂ, ೧೦, ಮಾರ್ಚ್ ೧೮೮೧, ಪು. ೬೧) ಫ್ಲೀಟ್ ಸಂಪಾದಿಸಿ ಪ್ರಕಟಿಸಿರುವ ತಟ್ಟುಕೋಟೆ ಗ್ರಾಮದ, ಕಪ್ಪೆ ಅರಭಟ್ಟನೆಂಬ ವೀರನೊಬ್ಬನ ಶೌರ್ಯದ ಹಿರಿಮೆಯನ್ನು ಕೀರ್ತಿಸುವ, ಒಂದು ಶಾಸನ ಕನ್ನಡ ನಾಡಿನಲ್ಲಿ ಬಾದಾಮಿ ಶಾಸನವೆಂಬುದಾಗಿ ಕರೆಯಲ್ಪಡುತ್ತ ಕೆಲವು ವಿಶಿಷ್ಟ ಕಾರಣಗಳಿಗಾಗಿ ಜನಪ್ರಿಯತೆಯನ್ನು ಸಂಪಾದಿಸಿಕೊಂಡಿದೆ. ಆ ಕಾರಣಗಳಲ್ಲಿ ಮುಖ್ಯವಾದವು ಇವು: ೧. ದೊರೆತ ಕನ್ನಡ ಶಾಸನಗಳಲ್ಲಿ ಆ ಭಾಷೆಯ ತ್ರಿಪದಿಯೆಂಬ ಗಣ್ಯವಾದ ದೇಶ್ಯಛಂದಸ್ಸು ಬಳಕೆಯಾಗಿರುವುದು ಮೊತ್ತಮೊದಲು ಇಲ್ಲಿಯೇ. ೨. ಪ್ರಾಚೀನ ಕನ್ನಡ ಸಂಸ್ಕೃತಿಯ ಒಂದಂಶವನ್ನು ಕಾವ್ಯರೂಪದಲ್ಲಿ ಸಾಮಾನ್ಯ ಜನತೆಗೆ ಮನವರಿಕೆ ಮಾಡಿಕೊಡುವ ಸಾಹಿತ್ಯಾರಂಭಕಾಲದ ಆಕರ್ಷಕ ಪ್ರಯತ್ನಗಳಲ್ಲಿ ಇದು ಗಣ್ಯವಾಗಿರುವುದು. ೩. ಕನ್ನಡ ಭಾಷೆಯ ಹಳಗಾಲದ ಒಂದು ಅವಸ್ಥೆಯನ್ನು ತಿಳಿಯಲು ತಕ್ಕ ಸಾಮಗ್ರಿಯಿಂದ ಇದು ಕೂಡಿರುವುದು. ಇಂಥ ಕೆಲವು ಕಾರಣಗಳಿಂದ, ಕನ್ನಡ ನಾಡಿನ ಸಂಸ್ಕೃತಿ ಮತ್ತು ಸಾಹಿತ್ಯಗಳ ಅಭ್ಯಾಸಿಗಳು ಪ್ರಸ್ತುತ ಶಾಸನಪಾಠವನ್ನು ಆಗಾಗ ಉದ್ಧರಿಸುತ್ತ, ಅದರ ಆಶಯವನ್ನು ಆಗಾಗ ವಿವರಿಸುತ್ತ ಇರುವುದು ಕಂಡುಬರುತ್ತದೆ.[೧] ಪಾಠದ ವಿಷಯದಲ್ಲಿ ಎಲ್ಲರೂ ಸಾಧಾರಣವಾಗಿ ಫ್ಲೀಟ್ ಅವರನ್ನೇ ಅನುಸರಿಸುತ್ತಾರೆ. ಶಾಸನದ ಲಿಪಿಯಲ್ಲಿ ಅಂತಹ ಸಮಸ್ಯೆಗಳೇನೂ ಇಲ್ಲದೆ ಪಾಠವನ್ನು ಸರಿಯಾಗಿ ಓದಿರುವ ಸಾಧ್ಯತೆಯನ್ನಿದು ಸೂಚಿಸುತ್ತದೆ. ಆದರೆ ಆಶಯದ ನಿರೂಪಣೆಯಲ್ಲಿ ಅಲ್ಲಲ್ಲಿ ಬೇರೆಬೇರೆಯಾದ ಅರ್ಥ ತಾತ್ಪರ್ಯಗಳನ್ನು ಬರೆದಿರುವುದೂ ಕ್ಲಿಷ್ಟವೆಂದು ತೋರಿದ ಕಡೆ ಸಂಗ್ರಹವಾಗಿ ಭಾವಾನುವಾದ ಮಾಡಿರುವುದೂ ವಿಚಾರಣೀಯವಾಗಿದೆ. ಶಾಸನಪಾಠಕ್ಕೆ ಸಮರ್ಪಕವಾದ ಒಂದು ಅರ್ಥವನ್ನು ಹೇಳುವ ಪ್ರಯತ್ನ, ಈ ಲೇಖನದ ವಿಷಯ.

---

೧. ಕೆಲವು ಆಕರಗಳು: (i) ರಾ. ನರಸಿಂಹಾಚಾರ್ (ಸಂ.), 'ಶಾಸನಪದ್ಯಮಂಜರಿ', ೧೯೨೩, ಪು. ೨; (ii) 'ಕನ್ನಡ ಕೈಪಿಡಿ', ಮೈಸೂರು ವಿಶ್ವವಿದ್ಯಾನಿಲಯ (ಪ್ರ.), ೧೯೩೬ (೧೯೯೫), ಪು. ೧೨೩-೨೪. (iii) ಕೆ. ವೆಂಕಟರಾಮಪ್ಪ, 'ಕನ್ನಡ ಸಾಹಿತ್ಯ,' ೧೯೩೯ (೧೯೭೨), ಪು. ೨. (iv) A. N. Narasimhia, *A Grammar of the Oldest Kanarese Inscriptions*, 1941, p. 267. (v) R.S. Panchamukhi (ed.) *Karnatak Inscriptions*, Vol. I, 1941, p. 11. (vi) ದೇಸಾಯಿ ಪಾಂಡುರಂಗರಾಯ, ಶಾಸನ ಮತ್ತು ಸಾಹಿತ್ಯ, ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ೩೧-೨, ಜೂನ್ ೧೯೪೬, ಪು. ೩೨-೩೯. (vii) ರಂ. ಶ್ರೀ. ಮುಗಳಿ, 'ಕನ್ನಡ ಸಾಹಿತ್ಯ ಚರಿತ್ರೆ,' ೧೯೫೩ (೧೯೭೧), ಪು. ೧೦-೧೧ (viii) *Karnataka through the Ages*, Pb. Government of Mysore, 1968, p. coverpage. (ix) ಎಂ. ಚಿದಾನಂದಮೂರ್ತಿ, 'ಸಂಶೋಧನ ತರಂಗ', ೧೯೬೬, ಪು. ೨೦೬, ೨೧೦ ಅ. ಟಿ. (x) ಎಂ. ಚಿದಾನಂದಮೂರ್ತಿ, 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' ೧೯೬೬, ಪು. ೨೪೯. (xi) ತ.ಸು. ಶಾಮರಾಯ, 'ಕನ್ನಡ ಸಾಹಿತ್ಯ ಚರಿತ್ರೆ: ಒಂದು ಸಮೀಕ್ಷೆ', ಪು. ೩-೪.

೨

ಇಂಡಿಯನ್ ಆಂಟಿಕ್ವೆರಿಯಲ್ಲಿ ಬಂದಿರುವಂತೆ ಶಾಸನಪಾಠ:

ಕಪ್ಪೆ ಅರಭಟ್ಟನ್ ಶಿಷ್ಟಜನಪ್ರಿಯನ್
ಕಷ್ಟಜನವರ್ಜಿತನ್ ಕಲಿಯುಗವಿಪರೀತನ್ (।।*)

ವರನ್ತೇಜಸ್ವಿನೋ ಮೃತ್ಯುರ್ನ್ನ ತು ಮಾನಾವಖಣ್ಡನಮ್
ಮೃತ್ಯುಸ್ತತ್ಕ್ಷಣಿಕೋ ದುಃಖಮ್ಮಾನಭಂಗನ್ದಿನೇ ದಿನೇ (।।*)

ಸಾಧುಗೆ ಸಾಧು ಮಾಧೂರ್ಯ್ಯರ್ನ್ಗೆ ಮಾಧೂರ್ಯ್ಯಂ ಬಾಧಿಪ್ಪ
ಕಲಿಗೆ ಕಲಿಯುಗವಿಪರೀತನ್ಮಾಧವನೀತನ್ಪೆಱಸಲ್ಲ (।।*)

ಒಳ್ಳಿತ್ತ ಕೆಯ್ವೊರಾರ್ಪ್ಪೊಲ್ಲದುಮದಱನ್ತೆ ಬಲ್ಲಿತ್ತು ಕಲಿಗೆ
(ವ್) ಇಪರೀತಾ ಪುರಾಕೃತಮಿಲ್ಲಿ ಸನ್ಧಿಕ್ಕುಮದು ಬನ್ದು (।।*)

ಕಟ್ಟಿದ ಸಿಂಘಮನ್ಕೆಟ್ಟೊಡೇನೆಮಗೆನ್ದು ಬಿಟ್ಟವೊಲ್ಕಲಿಗೆ ವಿ
(ಪ)ರೀತಂಗಹಿತರ್ಕ್ಕಳ್ಕೆಟ್ಟಮ್ರ್ಗಣ್ಣತ್ತರವಿಚಾರಮ್ (।।*)

ಫ್ಲೀಟ್ ಅವರು ಮಾಡಿರುವ ಅರ್ಥ:

Kappe Arabhatta was beloved by excellent people and avoided by evil people, and was an exceptional man in the Kaliyuga.

Better is a glorious death than the destruction of reputation: death is a pain that lasts only for an instant; but the destruction of reputation abides from day to-day.

That which is good (is appropriate) to that which is good, and sweetness to sweetness, and he who is an exceptional man in the Kaliyuga to the distressful Kali (age): he is (a very) Madhava and nothing less.

Who are they that do what is good?; they cannot be likened (to him). Having recognised this,......, let there be here effected a reconciliation with Kali (age), saying 'what is this to us?' came to injure and destroy the eminence that he had achieved, they were worsted and then they died, as to this there can be no doubt.

ಇದು ಶಾಬ್ದಿಕ ಅನುವಾದದ ಯತ್ನ. ಆದರೆ ಅಭಿಪ್ರಾಯ ವಿಶದತೆಗಾಗಿ ಅಲ್ಲಲ್ಲಿ ಅಧ್ಯಾಹಾರಮಾಡಿ ಸಂಗತಿಯನ್ನು ಸ್ಪಷ್ಟಪಡಿಸಿದೆ. ಒಂದು ಕಡೆ ಅರ್ಥವಾಗದ ಭಾಗವನ್ನು ಅನುವಾದ ಮಾಡದೆ ಹಾಗೆಯೇ ಬಿಟ್ಟಿದೆ. ಈಚೆಗೆ ಈ ಶಾಸನದ ಅರ್ಥವನ್ನು ಉಲ್ಲೇಖಿಸುವ ಸಂದರ್ಭಗಳು ಬಂದಾಗ್ಗೆ, ವಿದ್ವಾಂಸರು ಬೇರೆಬೇರೆಯಾಗಿ ಅರ್ಥನಿರೂಪಣೆ

ಮಾಡಿರುವುದನ್ನು ಗಮನಿಸಿದರೆ, ಅವರಿಗೆ ಫ್ಲೀಟ್ ಅವರ ಅರ್ಥನಿರೂಪಣೆ ಪೂರ್ತಿಯಾಗಿ ಒಪ್ಪಿಗೆಯಾಗಿಲ್ಲ ಎನ್ನುವುದು ಸ್ವಯಂವಿದಿತವಾಗುತ್ತದೆ.

೩

೧. ಶಾಸನದ ಮೊದಲೆರಡು ಸಾಲುಗಳು ಒಂದು ಅರ್ಥವತ್ತಾದ ಘಟಕ. ಕನ್ನಡ ಭಾಷೆಯಲ್ಲಿರುವ ಈ ಶಾಸನಭಾಗದಲ್ಲಿ[೨] ಸಮಗ್ರ ಶಾಸನದ ಕೇಂದ್ರವ್ಯಕ್ತಿ ಕಪ್ಪೆ ಅರಭಟ್ಟನೆಂಬವನ ಗುಣಗಳನ್ನು ಹೇಳಿದೆ. ಇಲ್ಲಿ ಶಬ್ದಾನ್ವಯ ಇರುವಂತೆಯೇ ಗ್ರಾಹ್ಯವಾಗಬಹುದು; ಇಲ್ಲವೆ 'ಕಲಿಯುಗ ವಿಪರೀತನ್' ಎಂಬುದು ಮುಂದಿನ ಸಾಲುಗಳಲ್ಲಿ ಶಾಸನ ವ್ಯಕ್ತಿಯ ಹೆಸರಿಗೆ ಪರ್ಯಾಯವಾಗಿ ಬರುವ ಒಂದು ಅನ್ವರ್ಥನಾಮವೋ ಬಿರುದಿನಂತಹ ಹೆಸರೋ ಆಗಿ ಕಾಣಿಸಿಕೊಂಡಿರುವುದರಿಂದ 'ಕಲಿಯುಗ ವಿಪರೀತನ್ ಕಪ್ಪೆ ಅರೆಭಟ್ಟನ್....' ಎಂದು ಮುಂತಾಗಿ ಆಗಬಹುದು.

ಈ ಭಾಗದ ಅರ್ಥ: ಫ್ಲೀಟರ ಅರ್ಥ ಒಟ್ಟಿನಲ್ಲಿ ಸರಿಯಾಗಿಯೇ ಇದೆ. ಆದರೆ ಇಲ್ಲಿ ನಮ್ಮ ಕುತೂಹಲವನ್ನು ಕೆರಳಿಸುವುದು ಎಂದರೆ, ವಿಲಕ್ಷಣವಾಗಿ ತೋರುವ ನಾಯಕವ್ಯಕ್ತಿಯ ಹೆಸರು. ಕಪ್ಪೆ ಅರಭಟ್ಟ ಎಂಬ ಹೆಸರಿಗೆ ಏನು ಅರ್ಥ? ಪದವಿಭಾಗ ಕಪ್ಪೆ+ಅರಭಟ್ಟನ್ ಎಂದೋ, ಕಪ್ಪೆಅರ+ಭಟ್ಟನ್ ಎಂದೋ? ಫ್ಲೀಟ್ ಮೊದಲುಗೊಂಡು ಎಲ್ಲರೂ ಈವರೆಗೆ ಮೊದಲಿನ ವಿಭಜನೆಯನ್ನೇ ಮಾನ್ಯಮಾಡಿದ್ದಾರೆ. ಶಾಸನದ ಪಡಿಯಚ್ಚಿನಲ್ಲಿ ಈ ಹೆಸರಿನ ಅಕ್ಷರಗಳನ್ನೆಲ್ಲ ಕೂಡಿಸಿ ಬರೆದಿದೆಯಾದ್ದರಿಂದ, ಮೂಲದ ಆಶಯ ಸಂದಿಗ್ಧ ; ವಿಭಜನೆ ಎರಡು ರೀತಿಯಲ್ಲಿಯೂ ಆಗಬಹುದು. ಇರಲಿ ; ಮೊದಲನೆಯ ರೀತಿಯನ್ನು ಒಪ್ಪಿದರೆ ಹೇಗೆ? ಕಪ್ಪೆ ಎಂದರೆ ಪ್ರಸಿದ್ಧವಾದ ಅರ್ಥ ಕಪ್ಪೆ(frog) ಎಂದೇ. ಇನ್ನು ಅರಭಟ್ಟನ್ ಎಂಬ ಹೆಸರು ಈವರೆಗೆ ತಿಳಿದಂತೆ ಯಾವ ಕನ್ನಡ ಶಾಸನದಲ್ಲಾಗಲಿ, ಸಾಹಿತ್ಯ ಗ್ರಂಥದಲ್ಲಾಗಲಿ ಕಂಡುಬಂದಿಲ್ಲ. ಇದು ವಿಚಾರಣೀಯ. ಈ ಪದದಲ್ಲಿ ಎರಡು ಅರ್ಥಘಟಕಗಳಿರುವುದು ಸ್ಪಷ್ಟ: ಅರ+ಭಟ್ಟನ್. ಈಗ ಅರ್ಥವೇನು?

'ಭಟ್ಟ' ಎಂಬುದು ಪರಿಚಿತ ಸಂಸ್ಕೃತ ಶಬ್ದ. ಇದರ ಅರ್ಥ: (i) ರಾಜಕುಮಾರರ ಅಥವಾ ರಾಜಮನೆತನದವರ ಗೌರವಾರ್ಥವಾಗಿ ಸೇರುವ ಒಡೆಯ ಅಥವಾ ಸ್ವಾಮಿ. (ii) ಬಹುಶ್ರುತನಾದ ಬ್ರಾಹ್ಮಣನ ಹೆಸರಿನ ಕೊನೆಗೆ ಸಾಮಾನ್ಯವಾಗಿ ಸೇರುವ ಬಿರುದಿನಂತಹ ಮಾತು. (iii) ಮಿಶ್ರವರ್ಣದಲ್ಲಿ (ಎಂದರೆ ಕ್ಷತ್ರಿಯನಿಗೆ ವಿಪ್ರಕನ್ಯೆಯಲ್ಲಿ) ಹುಟ್ಟಿದ ಹೊಗಳುಭಟ್ಟ. ಇನ್ನು 'ಅರ' ಶಬ್ದ ಸಂಸ್ಕೃತದಲ್ಲಿ ಇದ್ದರೂ ಅದರ ಅರ್ಥಗಳಾವುವೂ ಪ್ರಸ್ತುತಕ್ಕೆ ಹೊಂದುವಂತೆ ತೋರುವುದಿಲ್ಲ. ಜೈನರ ೧೮ನೆಯ ತೀರ್ಥಂಕರನ ಹೆಸರು 'ಅರ' ಎಂದು. ಆದರೆ ಇದು 'ಭಟ್ಟ' ಶಬ್ದದ ಜತೆಗೂಡಿ ಬರುವುದು ಪ್ರಾಯಃ ಅಸಂಭವ. ಜೈನ ಅಂಕಿತನಾಮಗಳು 'ಭಟ್ಟಾರ' ಅಥವಾ 'ಭಟ್ಟಾರಕ' ಶಬ್ದದ ಜೊತೆಯಲ್ಲಿ ಬರುವುದೇ ಸಾಮಾನ್ಯ. ಕನ್ನಡ 'ಅರ' ಶಬ್ದದ ಅರ್ಥವೂ ಇಲ್ಲಿಗೆ ಹೊಂದುವುದಿಲ್ಲ. ಮುಂದೇನು?

೨. ಇದು ಗದ್ಯವೇ ಪದ್ಯವೇ ಎಂಬ ಚರ್ಚೆಯಿದೆ. ಎ. ಎಸ್. ನರಸಿಂಹಯ್ಯನವರು (*GOKI p. 363*) ಮತ್ತು ಆರ್. ಎಸ್. ಪಂಚಮುಖಿಯವರು ('ಕರ್ನಾಟಕದ ಇತಿಹಾಸ,' ಸಂ. ೧, ಪು. ೧೨೩) ಪದ್ಯವೆಂದಿದ್ದಾರೆ. ಪ್ರಾಚೀನ ಕನ್ನಡ ಪದ್ಯದ ಅವಶ್ಯ ಲಕ್ಷಣವಾದ ಪ್ರಾಸ ಇಲ್ಲಿ ಕಾಣದಿರುವುದರಿಂದ ಇದೊಂದು ಗದ್ಯಭಾಗವಾಗಿರುವುದೇ ಸಂಭವನೀಯ.

ಅರಸು ಎಂಬುದು ಸಮಾಸದಲ್ಲಿ ಪೂರ್ವ ಅಥವಾ ಉತ್ತರಪದವಾಗಿದ್ದಾಗ, ಅದಕ್ಕೆ ಬರುವ ಆದೇಶರೂಪ ಕೂಡ 'ಅರ ' ಎಂದಾಗುತ್ತದೆ. ಉದಾ: ಅರಸು+ಕುವರ = ಅರಗುವರ, ಅರಸು+ ನೇಱಿಲ್ = ಅರನೇಱಿಲ್; ಕನ್ನ+ಅರಸು = ಕನ್ನರ, ಗೋವಿಂದ+ ಅರಸು = ಗೋವಿಂದರ. ಮೊದಲನೆಯದರ ಪ್ರಕಾರ ಕಪ್ಪೆಅರ+ಭಟ್ಟ ಎಂದರೆ ಕಪ್ಪೆ ಅರಸನ ಭಟ್ಟ (=ಬ್ರಾಹ್ಮಣ/ಹೊಗಳುಭಟ್ಟ) ಎಂದೋ ಕಪ್ಪೆ ಎಂಬ ವಿಶೇಷಣವನ್ನುಳ್ಳ ಶ್ರೇಷ್ಠನಾದ ಭಟ್ಟ ಅಥವಾ ಭಟ್ಟಾಗ್ರಣಿ (=ಬ್ರಾಹ್ಮಣ/ಹೊಗಳುಭಟ್ಟ) ಎಂದೋ ಆಗಬಹುದು. ಎರಡನೆಯದರ ಪ್ರಕಾರ, ಕಪ್ಪೆಅರ ಎಂಬ ಭಟ್ಟ (=ಒಡೆಯ, ಬ್ರಾಹ್ಮಣ, ಹೊಗಳುಭಟ್ಟ) ಎಂದೋ ಕಪ್ಪೆ ಎಂಬ ವಿಶೇಷಣವನ್ನುಳ್ಳ ಅರ ಎಂಬ ಭಟ್ಟ ಎಂದೋ ಅರ್ಥಮಾಡಬಹುದು.

ಇವುಗಳಲ್ಲಿ ಯಾವುದು ಸರಿ? ಎರಡನೆಯದು ಹೆಚ್ಚು ಸಂಭವನೀಯ. ಕನ್ನ ಎಂಬ ಅರಸು ಕನ್ನರ, ಗೋವಿಂದ ಎಂಬ ಅರಸು ಗೋವಿಂದರ ಆದ ಹಾಗೆ ಕಪ್ಪೆಅರಸು ಕಪ್ಪೆಅರನೆಂದಾಗಿ ಅದಕ್ಕೆ ಭಟ್ಟನ್ ಸೇರಿರಬಹುದು. ಆಗ ಕಪ್ಪೆಅರ ಎಂಬ ಭಟ್ಟ (=ಒಡೆಯ/ಹೊಗಳುಭಟ್ಟ) ಎಂದು ಅರ್ಥವಾಗುತ್ತದೆ. ಇಲ್ಲವೆ, ಕಪ್ಪೆ ಎಂಬುದನ್ನು ವಿಶೇಷಣವನ್ನಾಗಿಟ್ಟು, ಅರಸನೆಂಬ ಭಟ್ಟ ಎಂಬರ್ಥದಲ್ಲಿ ಅರಸು+ಭಟ್ಟ=ಅರಭಟ್ಟ ಎಂದು ಮಾಡಬಹುದು (ಹೋಲಿಸಿ: ರಾಜ ಒಡೆಯ, ರಾಜೇಂದ್ರ); ಈ ಎರಡರಲ್ಲಿ ಪ್ರಾಯಃ ಮೊದಲನೆಯದೇ ಸಂಭವನೀಯ.

ಕಪ್ಪೆಅರ+ಭಟ್ಟನ್ ಎಂಬ ಅನ್ವಯವನ್ನು ಇಲ್ಲಿ ನಾವು ಒಪ್ಪಿಕೊಂಡಂತಾಯಿತು. ಆದರೆ ಕಪ್ಪೆ ಅರ ಎಂದರೇನು? ಇದಕ್ಕೆ ಉತ್ತರ ಕಷ್ಟ. ಕ್ರಿ. ಶ. ೧೦೩೩ರ ಒಂದು ಶಾಸನದಲ್ಲಿ ಕಪ್ಪಣಭಟ್ಟ[3] ಎಂಬ ಒಬ್ಬನ ಹೆಸರುಂಟು. ಕಪ್ಪಣ+ಭಟ್ಟ ಎಂಬ ಪದವಿಭಾಗವೇನೋ ಖಚಿತ. ಈಗಲೂ ಈ ಹೆಸರಿನವರು ಇರುತ್ತಾರೆ. ಆದರೆ ಪದವನ್ನು ಕಪ್ಪೆ+ಅಣ್ಣ (ಕಪ್ಪೆಯಣ್ಣ > ಕಪ್ಪಣ್ಣ ) + ಭಟ್ಟ ಎಂದು ಒಡೆಯಬೇಕೋ ಕಪ್ಪ (>ಕಂಪ) + ಅಣ್ಣ + ಭಟ್ಟ ಎಂದು ಒಡೆಯಬೇಕೋ ಸ್ಪಷ್ಟವಿಲ್ಲ. ಕಪ್ಪೆ ಎಂದೇ ಆಗಿದ್ದರೆ, ಅದು ಏನನ್ನು ಹೇಳುವುದೋ ತಿಳಿಯದು.[4]

ಇದೇ ಭಾಗದ 'ಕಲಿಯುಗ ವಿಪರೀತನ್' ಎಂಬುದರ ಅರ್ಥವನ್ನು ಫ್ಲೀಟ್ 'an exceptional man in the Kaliyuga' ಎಂದು ಅನುವಾದಿಸಿದ್ದಾರೆ. ಇಲ್ಲಿ 'ಕಲಿಯುಗದೊಳ್ ವಿಪರೀತನ್ ' ಎಂಬ ಸಪ್ತಮ್ಯರ್ಥಕ್ಕಿಂತ 'ಕಲಿಯುಗಕ್ಕೆ ವಿಪರೀತನ್ ' ಎಂಬ ಚತುರ್ಥಿಯ ಅರ್ಥ ಸೂಕ್ತವೆಂದು ತೋರುತ್ತದೆ. ಕನ್ನಡದ ಅಧಿಕೃತ ನಿಘಂಟು ಕೂಡ ಹೀಗೆಯೇ ಅರ್ಥಮಾಡಿದೆ. ಈಚಿನ ಉಲ್ಲೇಖನಕಾರರು ಈ ಮಾತಿನ ಅರ್ಥವನ್ನು ಅಷ್ಟು ಸರಿಯಾಗಿ ಹೇಳಿದಂತೆ ತೋರದು. ಆದ್ದರಿಂದ ಈ ಬಗ್ಗೆ ಸ್ವಲ್ಪ ವಿಚಾರ ಅವಶ್ಯ.

'ಕಲಿಯುಗ ವಿಪರೀತನ್' ಎಂದರೆ 'ಕಲಿಯುಗಕ್ಕೆ ವಿರುದ್ಧನಾದವನು' ಎಂದು ವಾಚ್ಯಾರ್ಥ. ಹಾಗೆ ವಿರುದ್ಧನಾಗಿರುವುದು ಗುಣವೋ ದೋಷವೋ? ಗುಣವೇ;

---

3. *E.C.*, VIII, ಸೊರಬ, 184-30.

4. ಶಾಸನಗಳಲ್ಲಿ ಕರ್ಪ, ಕರ್ಪರಸ ಎಂಬ ಹೆಸರುಗಳುಂಟು (ಸೌಇಇ., XX, ೫೭-೪೦; ೫೦-೩೨); ಮಾಂಡೂಕ್ಯ ಎಂಬ ಉಪನಿಷತ್ತು ಒಂದುಂಟು; ಮಂಡೂಕ ಎಂಬ ಅಶ್ವಜಾತಿಯುಂಟು (ಮಹಾಭಾ. ಸಭಾ. ೨೮.೬); ಮಾಂಡೂಕಿ ಎಂಬೊಬ್ಬ ಋಷಿಯಿದ್ದಾನೆ (ಪುನಾಚೂ.). ಆದರೆ ಇವುಗಳಿಗೂ ಇಲ್ಲಿಯ ಕಪ್ಪೆಗೂ ಏನಾದರೂ ಸಂಬಂಧವಿರುವಂತೆ ತೋರದು.

ದೋಷವಲ್ಲ. ಇದಕ್ಕೆ ಸಂಸ್ಕೃತ ಕನ್ನಡ ಶಾಸನಗಳಲ್ಲೂ ಗ್ರಂಥಗಳಲ್ಲೂ ಸಾಕ್ಷ್ಯಗಳುಂಟು. ಉದಾ: (i) "ದೋಷಾಕರ ಕಲಿಯುಗಮಂ ನಿರ್ಮಳಂ ಮಾಡಿದಂ"[೫] (ii)"ಕಲಿಕಾಲೋತ್ಥಕಳಂಕಮಂ ತೆರಳೆ ನೂಂಕುತ್ತಿರ್ಪುದು"[೬] (iii) "ಸದ್ಧರ್ಮಶತ್ರುಂ ಕಲಿಕಾಲರಾಜಂ ಜಿತ್ವಾ ವ್ಯವಸ್ಥಾಪಿತ ಧರ್ಮವೃತ್ತ್ಯಾ"[೭] (iv)"ವೇದದೊಳೋದಿದಾಯು ನಿನಗಕ್ಕೆ ಚಿರಂ ಕಲಿಕಾಲಸೂದನಾ"[೮] (v) "ಕಲಿಕಾಲಕರ್ದಮ ಬೃಹಜ್ಜಂಘಾಳನ್."[೯]

ಕಲಿಯುಗ ದೂಷ್ಯವಾದ್ದು, ಅದನ್ನು ಶುದ್ಧ ಮಾಡಬೇಕು ಅಥವಾ ನಿಗ್ರಹಿಸಬೇಕು ಎಂಬುದೇ ಸಜ್ಜನರ ಕಾಂಕ್ಷೆ. ಆ ಕಾಂಕ್ಷೆ ಈಡೇರುವುದು ಹೇಗೆ? ಕಲಿಯುಗದ ದೋಷಯುಕ್ತ ನಡೆವಳಿಕೆಗೆ ವಿರುದ್ಧವಾಗಿ ನಡೆಯುವುದರಿಂದ. ಹಾಗೆ ನಡೆಯುವವನನ್ನು ಪ್ರಸ್ತುತ ಶಾಸನದಲ್ಲಿ 'ಕಲಿಯುಗ ವಿಪರೀತನ್' ಎಂದಿದೆ. ಬೇರೆ ಶಾಸನಗಳಲ್ಲಿ ಅಂಥವನನ್ನು 'ಕಲಿಕಾಲಪ್ರತಿಪಕ್ಷ ಚಾರುಚರಿತಂ' ಎಂದೋ[೧೦] 'ಕೃತಯುಗ ಚರಿತಂ' ಎಂದೋ ಕರೆದಿರುವುದುಂಟು.[೧೧] ಆದ್ದರಿಂದ 'ಕಲಿಯುಗ ವಿಪರೀತನ್' ಎಂಬುದು ಒಟ್ಟಿನಲ್ಲಿ ಸತ್ಪುರುಷ ಅಥವಾ ಧರ್ಮಿಷ್ಠ ಎಂಬ ಅರ್ಥವನ್ನು ಕೊಡುವ ಮಾತು. ಪ್ರಸ್ತುತ ಶಾಸನಕ್ಕೆ ಅನ್ವಯಿಸಿದರೆ, ಇದು ಕಪ್ಪೆ ಅರ ಭಟ್ಟನಿಗೆ ವಿಶೇಷಿಸಿ ಹೇಳಿರುವ ಆ ಅರ್ಥದ ಒಂದು ಬಿರುದು. 'ಕೃತಯುಗಚರಿತಂ ತ್ರ್ಯಂಬಕಂ' ಎಂಬಂತೆ 'ಕಲಿಯುಗ ವಿಪರೀತನ್ ಕಪ್ಪೆಅರ ಭಟ್ಟನ್' ಎಂದು ಅನ್ವಯ.

೨. ಎರಡನೆಯ ಅರ್ಥಘಟಕ ಒಂದು ಸಂಸ್ಕೃತ ಪದ್ಯ:

ವರನ್ತೇಜಸ್ವಿನೋ ಮೃತ್ಯುರ್ನ ತು ಮಾನಾವಖಣ್ಡನಮ್
ಮೃತ್ಯುಸ್ತತ್ಕ್ಷಣಿಕೋ ದುಃಖಮ್ಮಾನಭಂಗನ್ದಿನೇ ದಿನೇ ॥

ಫ್ಲೀಟ್ ಅರ್ಥ ಸರಿ. ತೇಜಸ್ವಿಯಾದವನಿಗೆ ಸಾವು ಲೇಸು, ಆದರೆ ಮಾನಭಂಗವಲ್ಲ; ಸಾವಿನದು ಆ ಕ್ಷಣದ್ದು, ಮಾನಭಂಗದ ದುಃಖ ಪ್ರತಿದಿನದ್ದು.

ಈ ಪದ್ಯ ಸಲಕ್ಷಣವಾದೊಂದು ಅನುಷ್ಟುಪ್ ಶ್ಲೋಕ. ಇದನ್ನು ಪ್ರತ್ಯೇಕವಾಗಿಯೇ ಒಂದು ಬಂಡೆಯ ಮೇಲೆ ಕೆತ್ತಿರುವುದುಂಟು. ಬಾದಾಮಿಯಿಂದ ಮಹಾಕೂಟಕ್ಕೆ ಹೋಗುವ ದಾರಿಯಲ್ಲಿ, ಸಿಬಾರಡೋಣಿಯ ಹತ್ತಿರದ ಬಂಡೆಯೊಂದರ ಮೇಲೆ ಇದನ್ನು ಕಾಣಬಹುದು.[೧೨] ಈ ಬಗ್ಗೆ ವಿವರಣೆನೀಡುತ್ತ, ಶಾಸನಸಂಪಾದಕರು ಪ್ರಸ್ತುತ ಶಾಸನವನ್ನೂ

---

೫. I.A.,X, 127, c. 1080.

೬. E.I., XIII, 41, 1112.

೭. E.I., II (ed. 1973), 158 (129), 1120.

೮. ನಾಗವರ್ಮ, 'ಕಾವ್ಯಾವಲೋಕನ,' ಪ. ೪೦೧.

೯. K. G. Kundanagar, (ed.), *Inscriptions in Northern Karnataka and the Kolhapur State*, 1939, Kolhapur.

೧೦. E.I., XIII, 41, 1112.

೧೧. I.A., X, 127,C.1080.

೧೨. R. S. Panchamukhi (ed.), *Karnatak Inscriptions*, Vol. I, 1941, p. 11.

ಪ್ರಾಸಂಗಿಕವಾಗಿ ಉಲ್ಲೇಖಿಸಿದ್ದಾರೆ. "ಕಪ್ಪೆಅರ ಭಟ್ಟ ಅಸಹನೀಯವಾದ ಯಾವುದೋ ಒಂದು ಪೀಡನೆಗೆ ಒಳಗಾಗಿ, ಅಪಮಾನವನ್ನು ತಾಳಿಕೊಳ್ಳುವುದಕ್ಕಿಂತ ಸಾಯುವುದು ಮೇಲೆಂದು ಬಗೆದು, ಕೊನೆಗೆ ಆತ್ಮಹತ್ಯೆಯನ್ನು ಮಾಡಿಕೊಂಡಂತೆ ತೋರುತ್ತದೆ" ಎಂಬುದಾಗಿ ಬರೆದಿದ್ದಾರೆ. ಕಪ್ಪೆಅರ ಭಟ್ಟನು ಸತ್ತನೇ, ಹೇಗೆ ಸತ್ತ ಎನ್ನುವುದು ಶಾಸನದಿಂದ ಸ್ಪಷ್ಟವಿಲ್ಲ. ಸಂಪಾದಕರು ಪೂರ್ವೋಕ್ತಶ್ಲೋಕವನ್ನು ಅವಲಂಬಿಸಿ ಮಾಡಿರುವುದು ಕೇವಲ ಒಂದು ಊಹೆ. ಸತ್ತನು ಎಂಬಷ್ಟರಮಟ್ಟಿಗೆ ಪ್ರಾಯಃ ಅವರ ಊಹೆ ಸರಿಯಿರಬಹುದು.

೩. ಮುಂದಿನ ೬ ಸಾಲುಗಳಲ್ಲಿ ಪ್ರಾಚೀನವೂ ಪ್ರಸಿದ್ಧವೂ ಆದ, ದೇಶ್ಯ ಛಂದಸ್ಸಿನ ತ್ರಿಪದಿಯೆಂಬ ಜಾತಿಯ ೩ ಪದ್ಯಗಳು ಅಡಗಿವೆಯೆಂಬುದು ಅಲ್ಲಿಯ ಲಯ ಮತ್ತು ಪ್ರಾಸಗಳ ಪರಿಶೀಲನೆಯಿಂದ ತಿಳಿದುಬರುವ ಅಂಶ. ೫-೬ನೆಯ ಸಾಲುಗಳ ಛಂದೋರೂಪ ಹೀಗೆ:

ಸಾಧುಗೆ ಸಾಧು ಮಾಧೂರ್ಯ್ಯನ್ಗೆ ಮಾಧೂರ್ಯ್ಯಂ
ಬಾಧಿಪ್ಪ ಕಲಿಗೆ ಕಲಿಯುಗವಿಪರೀತ
ನ್ಮಾಧವನೀತನ್ಪೆಱನಲ್ಲ॥

ಫ್ಲೀಟ್ ಮತ್ತು ಈಚಿನ ವಿದ್ವಾಂಸರು ಎಲ್ಲರೂ ಈ ಪದ್ಯಕ್ಕೆ ಒಂದೇ ಬಗೆಯಾಗಿ ಅರ್ಥಮಾಡಿಲ್ಲ. ಇದು ವಿಚಾರಣೀಯ. ನನಗೆ ತೋರಿದ ಅರ್ಥವನ್ನಿಲ್ಲಿ ಮಂಡಿಸುತ್ತೇನೆ : ಸಾಧುಗೆ ಸಾಧು, ಮಾಧೂ(ಧು)ರ್ಯ್ಯನ್ಗೆ ಮಾಧೂ(ಧು)ರ್ಯ್ಯಂ, ಬಾಧಿಪ್ಪ ಕಲಿಗೆ ಕಲಿಯುಗ ವಿಪರೀತನ್ ಈತನ್ ಮಾಧವನ್, ಪೆಱನಲ್ಲ- ಇದು ಅನ್ವಯ. (i) "ಸಾಧುವಾದವನ ವಿಷಯದಲ್ಲಿ ಈತ ಸಾಧುವಾಗಿ ನಡೆದುಕೊಳ್ಳುತ್ತಾನೆ." 'ಸಾಧು'ವಿಗೆ ಒಳ್ಳೆಯ, ಯೋಗ್ಯ, ತಕ್ಕ, ಉತ್ತಮ, ನಿರುಪದ್ರವಿ ಮುಂತಾದ ಅರ್ಥಚ್ಛಾಯೆಗಳಿವೆ. ಯಾವುದೊಂದನ್ನು ಬೇಕಾದರೂ ಪ್ರಸ್ತುತಕ್ಕೆ ಗ್ರಹಿಸಬಹುದು. ಇಲ್ಲಿ ವಿದ್ವಾಂಸರಲ್ಲಿ ಏಕಾಭಿಪ್ರಾಯವಿದೆ. (ii) "ಮಧುರಗುಣವುಳ್ಳವನ ವಿಷಯದಲ್ಲಿ ಮಧುರಗುಣವುಳ್ಳವನು." ಎರಡನೆಯಂಶದ ಅಂಗೀಕೃತವಾದ ಆಶಯ ಇದು. ಆದರೆ ಇಲ್ಲಿ ವಿಚಾರಕ್ಕೆ ಕೊಂಚ ಅವಕಾಶವುಂಟು. 'ಮಾಧುರ್ಯನ್' ಶಬ್ದದ ಅರ್ಥವನ್ನು 'ಮಧುರತೆಯನ್ನು ಗುಣವಾಗಿ ಉಳ್ಳವನು' ಎಂದು ತೆಗೆದುಕೊಳ್ಳುವುದು ಎಷ್ಟರಮಟ್ಟಿಗೆ ಸರಿ? ಮಧುರವೆಂಬ ಗುಣವಾಚಕದ ಭಾವನಾಮ ರೂಪ 'ಮಾಧುರ್ಯಮ್' ಆಗುವುದು ಸಹಜ, ವತ್ಸಲ >ವಾತ್ಸಲ್ಯಮ್, ಪವಿತ್ರ >ಪಾವಿತ್ರ್ಯಮ್ ಎಂದು ಮುಂತಾಗಿ ಆಗುವ ಹಾಗೆ. ಆದ್ದರಿಂದ ಮಧುರಗುಣವಿರುವವನು ಮಾಧುರ್ಯನ್ ಅಲ್ಲ, ಮಧುರನ್ ಆಗುತ್ತಾನೆ ; ವತ್ಸಲಗುಣವುಳ್ಳವನು ವತ್ಸಲನ್, ಪವಿತ್ರಗುಣವುಳ್ಳವನು ಪವಿತ್ರನ್ ಆಗುವ ಹಾಗೆ. ಆದ ಕಾರಣ, 'ಮಾಧುರ್ಯನ್' ಶಬ್ದಕ್ಕೆ ಬೇರೆಯೇ ಅರ್ಥವಿರಬೇಕೆಂದು ಸಂಶಯ ಹುಟ್ಟುವುದು. ಈ ಶಬ್ದ ಮಹಾ + ಧುರ್ಯನ್ >ಮಾಧುರ್ಯನ್ ಎಂದು ಆಗಿರುವಂತೆ ತೋರುತ್ತದೆ. ಮಹಾ ಮತ್ತು ಧುರ್ಯ ಎಂಬವು ಪರಿಚಿತ ಸಂಸ್ಕೃತ ಶಬ್ದಗಳು. ಇವು ಕನ್ನಡದ ಜಾಯಮಾನವನ್ನನುಸರಿಸಿ ಒಂದು ಸಮಾಸಪದವೂ ಸಮಸಂಸ್ಕೃತ ಪದವೂ ಆಗಿ 'ಮಾಧುರ್ಯನ್' ಎಂಬ ರೂಪದಲ್ಲಿ ಈ ಶಾಸನದಲ್ಲಿ ಬಳಕೆಯಾಗಿದೆ. ಉದಾಹರಣೆಗೆ, ಮಹಾ + ದೇವಂ > ಮಾದೇವಂ, ಮಹಾ + ಕಾಳಿ >ಮಾಕಾಳಿ, ಮಹಾ +ದಾನಿ >ಮಾದಾನಿ, ಮಹಾ+ ಶೌರ್ಯಂ > ಮಾಶೌರ್ಯಂ, ಮಹಾ +ಜನಂ > ಮಾಜನಂ, ಮಹಾ + ಪಾತಕಂ >ಮಾಪಾತಕಂ, ಮಹಾ + ಪುರುಷಂ > ಮಾಪುರುಷಂ ಇತ್ಯಾದಿ. ಈ

ಉದಾಹರಣೆಗಳು ಕೇಶಿರಾಜನ (ಸು. ೧೨೬೦) 'ಶಬ್ದಮಣಿದರ್ಪಣ'ವೆಂಬ ಹಳಗನ್ನಡ ವ್ಯಾಕರಣದೊಳಗಿನವು. ಇಲ್ಲಿ 'ಮಹತ್' ಶಬ್ದ 'ಮಾ' ಎಂದು ಆದೇಶಗೊಂಡು ಪೂರ್ವಪದವಾಗಿರಲು, ಪರದಲ್ಲಿ ಸಂಸ್ಕೃತ ಪದ ಬಂದರೂ ದೋಷವಿಲ್ಲ ಎಂಬುದಾಗಿ ಹೇಳಿ ಪೂರ್ವೋಕ್ತ ಉದಾಹರಣೆಗಳನ್ನು ಕೊಟ್ಟಿದೆ.[೧೩] ಆದ್ದರಿಂದ ಈ ನಿಯಮಕ್ಕೆ ಅನುಗುಣವಾಗಿ ಮಹಾ + ಧುರ್ಯನ್ > ಮಾಧುರ್ಯನ್ ಕೂಡ ಸಾಧುರೂಪವೇ; ಮಾದೇವನ್, ಮಾಪಾತಕನ್, ಮಾಪುರುಷನ್ ಇದ್ದ ಹಾಗೆ.

ಧುರ್ಯ ಶಬ್ದಕ್ಕೆ ಮುಖ್ಯವಾದ ಕಾರ್ಯಗಳನ್ನು ವಹಿಸಿಕೊಳ್ಳಲು ಸಮರ್ಥನಾದವನು, ಮುಂಚೂಣಿಯಲ್ಲಿರತಕ್ಕವನು, ಅಗ್ರಗಣ್ಯ, ಜವಾಬ್ದಾರಿಯ ಹೊರೆ ಹೊರತಕ್ಕವನು, ನಾಯಕ, ಪ್ರಮುಖ, ಹಿರಿಯ ಮುಂತಾದ ಅರ್ಥಗಳಿವೆ.[೧೪] ಇವುಗಳಲ್ಲಿ ಯಾವುದಾದರೊಂದು ಅರ್ಥ ಇಲ್ಲಿ, ಕಪ್ಪೆಅರ ಭಟ್ಟನಿಗೆ, ಮಹತ್ ಶಬ್ದದಿಂದ ವಿಶೇಷಿತವಾಗಿ ಹೇಳಲ್ಪಟ್ಟಿರಬಹುದು. ಇದು ಸರಿಯಾದರೆ, ಶಾಸನದ ವಾಕ್ಯಾಂಶದ ಅರ್ಥ ಹೀಗೆ: (ಕಪ್ಪೆಅರ ಭಟ್ಟನು) ಕಾರ್ಯನಿರ್ವಹಣೆಯ ಸಾಮರ್ಥ್ಯವನ್ನುಳ್ಳ ಅಧಿಕನ ವಿಷಯದಲ್ಲಿ ತಾನೂ ಕಾರ್ಯನಿರ್ವಹಣೆಯ ಸಾಮರ್ಥ್ಯವನ್ನುಳ್ಳ ಅಧಿಕನು ; ಅಥವಾ ಪ್ರಮುಖರ ನಡುವೆ ತಾನೂ ಪ್ರಮುಖ.[೧೫]

(iii) ಮುಂದಿನ ಅಂಶವನ್ನು ಮೂರು ಬಗೆಯಾಗಿ ಅರ್ಥಯಿಸುವ ಸಾಧ್ಯತೆಯಿದೆ: (ಅ) ಬಾಧಿಪ್ಪ ಕಲಿಗೆ ಕಲಿಯುಗವಿಪರೀತನ್; ಈತನ್ ಮಾಧವನ್ ಪೆಱನಲ್ಲ. ಎಂದರೆ: ಬಾಧಿಸುವ ಕಲಿಪುರುಷನಿಗೆ ಕಲಿಯುಗದ ನಡೆವಳಿಕೆಗೆ ವಿರುದ್ಧವಾಗಿ ನಡೆಯುವುದರ ಮೂಲಕ ವಿರೋಧಿಯಾದವನು; ಈತ (ಸಾಕ್ಷಾತ್) ವಿಷ್ಣು, ಬೇರೆಯಲ್ಲ. (ಆ) ಶಬ್ದಾನ್ವಯ ಮೇಲಿನ ಹಾಗೆಯೇ. ಆದರೆ ಅರ್ಥ ಹೀಗೆ: ಬಾಧಿಸುವ ಶೂರನಿಗೆ ಈತ ಕಲಿಯುಗವಿಪರೀತನು (ಹಾಗೆಂದು ಬಿರುದಾಂಕಿತನಾದ ಅಧಿಕ ಶೂರ) ; ಈತ (ಸಾಕ್ಷಾತ್) ವಿಷ್ಣು, ಬೇರೆಯಲ್ಲ. (ಇ) ಕಲಿಯುಗವಿಪರೀತನ್, ಈತನ್, ಬಾಧಿಪ್ಪ ಕಲಿಗೆ ಮಾಧವನ್ ; ಪೆಱನಲ್ಲ. ಎಂದರೆ : ಕಲಿಯುಗವಿಪರೀತನು (ಹಾಗೆಂದು ಬಿರುದಾಂಕಿತನಾದ ಕಪ್ಪೆಅರ ಭಟ್ಟನು) ಈತನು, ಬಾಧಿಸುವ ಕಲಿಗೆ (ಕಲಿ ಪುರುಷನಿಗೆ ಅಥವಾ ಶೂರನಿಗೆ) ವಿಷ್ಣುವಾದವನು; ಬೇರೆಯಲ್ಲ.

ಸಾಧಾರಣವಾಗಿ ೧ ಮತ್ತು ೨ನೆಯ ಅರ್ಥಗಳನ್ನು ಪುರಸ್ಕರಿಸಿರುವುದು ಕಾಣುತ್ತದೆ. ಆದರೆ ಇವುಗಳಲ್ಲಿ ಕೆಲವು ದೌರ್ಬಲ್ಯಗಳಿವೆ. ೩ನೆಯ ಅರ್ಥ ಸಮರ್ಥನೀಯ. 'ಕಲಿಗೆ ಕಲಿಯುಗವಿಪರೀತನ್; ಎನ್ನುವಲ್ಲಿ (ಅ) ಪುನರುಕ್ತಿದೋಷವಿದೆ. ಅಲ್ಲದೆ ಶಾಸನಸಂದರ್ಭದ ದೃಷ್ಟಿಯಿಂದ ಅಂಥ ನಿರೂಪಣೆ ಅನಾವಶ್ಯಕ. ಇನ್ನು 'ಕಲಿಯುಗವಿಪರೀತನ್' ಎಂಬ ಶಬ್ದದ ಧ್ವನ್ಯರ್ಥವನ್ನು ಗಮನಿಸಿದರೆ, 'ಶೂರನಿಗೆ ಈತ ಕಲಿಯುಗವಿಪರೀತನು' ಎನ್ನುವುದರಲ್ಲಿ (ಆ)

---

೧೩. ಡಿ. ಎಲ್. ನರಸಿಂಹಾಚಾರ್ (ಸಂ.). 'ಶಬ್ದಮಣಿದರ್ಪಣಂ', ಸೂ. ೧೫೬, ೩೦೬.

೧೪. V.S.Apte, *The Practical Sanskrit-English Dictionary,* part II, p. 864.

೧೫. ಮಹಾ + ಧುರ್ಯನ್ >ಮಾಧುರ್ಯನ್ ಎಂಬ ಪದವಿಭಾಗದ ಸಾಧ್ಯತೆಯನ್ನು ಮೊದಲು ಮನಗಂಡವರು ವಿದ್ವಾನ್ ಸೇಡಿಯಾಪು ಕೃಷ್ಣಭಟ್ಟರೆಂದು ಕೇಳಿದ್ದೇನೆ. ಈಚೆಗೆ ಪ್ರಕಟವಾದ 'ಕರ್ನಾಟಕ ಇತಿಹಾಸ ದರ್ಶನ' ಎಂಬ ಗ್ರಂಥದಲ್ಲಿಯೂ ಈ ವಿಭಾಗವನ್ನು ತೋರಿಸಿದೆ (ಪು. ೧೧೩೦).

ಅರ್ಥದ ಸಾರ್ಥಕತೆಯಿಲ್ಲ ಎನ್ನುವುದು ಸ್ಪಷ್ಟ. ಈಗ ೩ನೆಯ ಅರ್ಥ: ಕಪ್ಪೆಅರ ಭಟ್ಟನ ಶೌರ್ಯಗುಣವನ್ನು ಕೀರ್ತಿಸುವುದು ಶಾಸನದ ಮುಖ್ಯೋದ್ದೇಶ. ಆದ್ದರಿಂದ ಕಲಿ = ಶೂರ ಎಂದಿಟ್ಟುಕೊಂಡು, ತೊಂದರೆ ಕೊಡುವ ಶೂರನಿಗೆ, ಕಲಿಯುಗವಿಪರೀತನು (= ಕಪ್ಪೆಅರ ಭಟ್ಟನು) ಈತನು, ಸಾಕ್ಷಾತ್ ವಿಷ್ಣು (= ಮಾಧವನ್ : ಮಧುಧ್ವಂಸಕನಾದ ಎಂದರೆ ಅಸುರಾರಿಯಾದ ವಿಷ್ಣುವಿನ ಹಾಗೆ ತನ್ನ ಶೌರ್ಯವನ್ನು ಪ್ರತಿಯಾಗಿ ತೋರಿಸಿ ಅವನನ್ನು ನಿಗ್ರಹಿಸುವವನು); ಬೇರೆಯಲ್ಲ (= ಬೇರೆ ಯಾರೂ ಅಲ್ಲ.).

ಹೀಗೆ ಭಾವಿಸುವುದು ಅಸಹಜವೇನಲ್ಲ. 'ಕಲಿಗಳಂಕುಸಂ' (= ವೀರರಿಗೆ ಅಂಕುಶದಂತಿರುವವನು ; ವೀರರ ವೀರ), 'ಕಲಿಗಳ ಮೊಗದ ಕೈ' (= ಶೂರರ ಮುಖದ ಮೇಲೆ ಕೈಯಿಂದ ಹೊಡೆಯುವವನು), 'ಕಲಿಗಂಡ ತೊಂಡಂ' (= ವೀರಾಧಿವೀರರಿಗೆ ತೊಂಡನಂತಿರುವವನು, ಮಹಾಶೂರ) ಮುಂತಾದ ಬಿರುದುಗಳಂತಹ ಮಾತುಗಳಲ್ಲಿ[೧೬] ಶೂರನಿಗೆ ಪ್ರತಿಶೂರನು ಮಲೆತು ನಿಲ್ಲುವ ಸಂದರ್ಭಗಳ ಸೂಚನೆಯಿರುವುದು ಸ್ಪಷ್ಟ. ಆದ್ದರಿಂದ ಪ್ರಸ್ತುತ ಶಾಸನದಲ್ಲಿ 'ಬಾಧಿಪ್ಪ ಕಲಿ,' ಕಲಿಪುರುಷನಲ್ಲ;[೧೭] ಹುರುಡಿಸಿ ತೊಂದರೆ ಕೊಡುವ ಶೂರ ಎಂದು ತಿಳಿಯಬಹುದು.

೪. ಶಾಸನದ ೭-೮ನೆಯ ಸಾಲುಗಳ ಪದ್ಯರೂಪ ಹೀಗೆ :

ಒಳ್ಳಿತ್ತ ಕೆಯ್ವೊರಾರ್ಪ್ಪೊಲ್ಲದುಮದಱಿನ್ತೆ
ಬಲ್ಲಿತ್ತು ಕಲಿಗೆ ವಿಪರೀತಾ ಪುರಾಕೃತ
ಮಿಲ್ಲಿ ಸನ್ದಿಕ್ಕುಮದು ಬನ್ದು ॥

ಪಾಠ ಮತ್ತು ಅರ್ಥಗಳ ದೃಷ್ಟಿಯಿಂದ ಕ್ಲಿಷ್ಟವಾದ ಭಾಗ ಇದು. ಇಲ್ಲಿ ಅರ್ಥ ಕ್ಲೇಶವಿದೆಯೆಂದು ಫ್ಲೀಟ್ ಒಪ್ಪಿದ್ದಾರೆ. ಅರ್ಥ ಮಾಡಿರುವಷ್ಟು ಭಾಗ ಸಮರ್ಪಕವಾಗಿಲ್ಲ. ಈಚೆಗೆ ಪಂಡಿತರು ಈ ಪದ್ಯದ ಗೊಡವೆಗೆ ಅಷ್ಟಾಗಿ ಹೋಗಿಲ್ಲ. ಶಬ್ದಾನ್ವಯ ಹೀಗೆ: ಒಳ್ಳಿತ್ತ ಕೆಯ್ವೊರಾರ್, ಅದಱಿಂತೆ ಪೊಲ್ಲದುಂ; ಕಲಿಗೆ ವಿಪರೀ(ತಂ/ತಂಗೆ) ಬಲ್ಲಿತ್ತು ; ಪುರಾಕೃತಮ್ ಅದು ಬನ್ದು ಇಲ್ಲಿ ಸನ್ಧಿಕ್ಕುಮ್. ಶಾಸನದ ಎಲ್ಲ ಮುಖ್ಯ ವಿಚ್ಛೇದಕ ಭಾಗಗಳಲ್ಲಿಯೂ 'ಕಲಿಯುಗ ವಿಪರೀತನ್' ಎಂಬ ಪದ ಬಿಡದೆ ಆವೃತ್ತಿಗೊಳ್ಳುವುದನ್ನು ಲಕ್ಷಿಸಿದರೆ, ಇಲ್ಲಿಯೂ ಅದರ ಅಸ್ತಿತ್ವ ಸಂಭಾವ್ಯ ; ಆದರೆ ಅದರ ರೂಪ ಸಮಸ್ಯಾತ್ಮಕ. 'ಕಲಿಗೆ ವಿಪರೀತಾ' ಸುಪ್ತುಪದವಲ್ಲ. 'ಕಲಿಗೆ ವಿಪರೀತನ್ಗೆ' ಎಂದಿಟ್ಟುಕೊಂಡರೆ ಮಾತ್ರ ವಾಕ್ಯರಚನೆ ಸಾರ್ಥಕವಾಗುತ್ತದೆ. ಮುಂದಿನ ಹಾಗೂ ಕೊನೆಯ ಎರಡು ಸಾಲುಗಳಲ್ಲಿ 'ಕಲಿಗೆ ವಿಪರೀತಂಗೆ' ಎಂಬ ರೂಪವೇ ಇದೆ. ಅದರ ಬಲದ ಮೇಲೆ ಇಲ್ಲಿಯೂ ಸದೃಶರೂಪವನ್ನು ಒಪ್ಪಬಹುದೆಂದು ತೋರುತ್ತದೆ. ಬಂಡೆಯ ಮೇಲೆ ಶಾಸನವನ್ನು ಬರೆದ ಲಿಪಿಕಾರನ ಕೈತಪ್ಪು ಈಯೆಡೆ ಆಗಿರಬಹುದು.

ಇದು ಸರಿಯೆ. ಆದರೆ ಈ ತರ್ಕ ಛಂದಸ್ಸು ಒಡ್ಡುವ ಅಡ್ಡಿಯ ಎದುರಿನಲ್ಲಿ ನಿಲ್ಲುವ ಹಾಗಿಲ್ಲ. ಪದಪಾಠ ಇಷ್ಟು ಮಾರ್ಪಾಟಗೆ ಅವಕಾಶ ಕೊಡುವುದಿಲ್ಲ. 'ಕಲಿಗೆ ವಿಪರೀತನ್' ಎಂಬುದಾಗಿ ಪ್ರಥಮೆಯನ್ನಿಟ್ಟುಕೊಂಡರೆ, ಉದ್ಗಾರದಲ್ಲಿ 'ವಿಪರೀತಾ' ಎಂದಾಗಿರಬಹುದೆಂದು ಊಹಿಸಲು ಅವಕಾಶವಾಗುತ್ತದೆ. ಹೀಗಾದರೆ ಪದ್ಯದ ಅರ್ಥ

೧೬. ಪ್ರಯೋಗಗಳಿಗೆ ನೋಡಿ: 'ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು,' ಪು. ೧೫೯೪-೯೫.

೧೭. ಅದೇ, ಕಲಿ= ಕಲಿಪುರುಷ ಎಂದು ಅರ್ಥ ಹೇಳಿದೆ.

ಬಹುಮಟ್ಟಿಗೆ ಈ ರೀತಿಯಾಗಿರಬಹುದು: (ಕಪ್ಪೆಅರ ಭಟ್ಟನ ಹಾಗೆ) ಒಳ್ಳೆಯದನ್ನು ಮಾಡುವವರು ಯಾರು?; ಅದರ ಹಾಗೆಯೇ ಕೆಡುಕು ಕೂಡ (ಮಾಡುವುದು) ಬಲವಾಗಿದೆ (= ಎಂದರೆ ಈತನಿಗೆ ಚೆನ್ನಾಗಿ ತಿಳಿದಿದೆ). (ಈತ) ಕಲಿಯುಗ ವಿಪರೀತ (ಕಲಿಯುಗ ವಿಪರೀತನಲ್ಲವೇ?. (ಅವರವರು) ಹಿಂದೆ ಮಾಡಿದ್ದು (=ಹಿಂದೆ ಮಾಡಿದ ಒಳ್ಳೆಯದು, ಕೆಟ್ಟದ್ದು ಏನುಂಟು) ಅದು ಇಲ್ಲಿ (= ಈತನ ಕೈಯಲ್ಲಿ, ಈತನ ಮೂಲಕವಾಗಿ) ಅವರಿಗೆ ಸಂಧಿಸುತ್ತದೆ (= ಆ ಒಳ್ಳೆಯದರ ಫಲ, ಕೆಟ್ಟದ್ದರ ಫಲ ಪ್ರಾಪ್ತವಾಗುತ್ತದೆ.).

೫. ೯-೧೦ನೆಯ ಸಾಲುಗಳ ಪದ್ಯರೂಪ ಹೀ...

ಕಟ್ಟಿದ ಸಿಂಘಮನ್ಕೆಟ್ಟೊಡೇನೆಮಗೆನ್ದು
ಬಿಟ್ಟವ್ವೊಲ್ಕಲಿಗೆ ವಿಪರೀತಂಗಹಿತರ್ಕ್ಕ
ಳ್ಕೆಟ್ಟರ್ಮ್ಮೇಣ್ಸತ್ತರವಿಚಾರಮ್॥

ಫ್ಲೀಟ್ ಸಿಂಘ (<ಸಿಂಗ) ಶಬ್ದವನ್ನು ಶೃಂಗದ ತದ್ಭವವಾಗಿ ತೆಗೆದುಕೊಂಡು ಮಾಡಿರುವ ಅರ್ಥ ಒಪ್ಪತಕ್ಕದ್ದಲ್ಲ. ಈ ತದ್ಭವ ಅಪ್ರಸಿದ್ಧ, ಅಪ್ರಚುರ. ಪ್ರಸ್ತುತ, ಸಿಂಹ >ಸಿಂಗ>ಸಿಂಘ ಎಂಬುದೇ ಸೂಕ್ತ. ಇದು ಈಚಿನ ವಿದ್ವಾಂಸರಿಗೂ ಸಮ್ಮತ. ಈಗ ಶಬ್ದಾನ್ವಯ ಹೀಗೆ: ಎಮಗೆ ಕೆಟ್ಟೊ(ದೇ)ನ್ ಎಂದು ಕಟ್ಟಿದ ಸಿಂಘಮನ್ ಬಿಟ್ಟವ್ವೊಲ್, ಕಲಿಗೆ ವಿಪರೀತಂಗೆ ಅಹಿತರ್ಕ್ಕಳ್ ಅವಿಚಾರಮ್ ಕೆಟ್ಟರ್ ಮೇಣ್ ಸತ್ತರ್. ಅರ್ಥ: ನಮಗೆ (ಇದರಿಂದ) ಕೆಟ್ಟದ್ದು ಏನು?(=ಕೆಡುಕೇನು?) ಎಂದು , ಕಟ್ಟಿ ಹಾಕಿದ ಸಿಂಹವನ್ನು (ಕಟ್ಟುಕಳಚಿ) ಬಿಟ್ಟ ಹಾಗೆ ಕಲಿಯುಗ ವಿಪರೀತನಿಗೆ (ಪ್ರತಿಭಟನೆ ತೋರಿ) (ಆತನ) ಶತ್ರುಗಳು (ತಮ್ಮ) ಅವಿವೇಕದಿಂದ ಹಾಳಾದರು ಇಲ್ಲವೆ ಸತ್ತರು.

ಈಗ ಈ ಪರಿಶೀಲನೆಯ ಬೆಳಕಿನಲ್ಲಿ ಶಾಸನದ ಅರ್ಥವನ್ನಿಲ್ಲಿ ಒಗ್ಗೂಡಿಸಬಹುದು: ಕಲಿಯುಗವಿಪರೀತನು ಎಂದು ಖ್ಯಾತನಾದ ಕಪ್ಪೆಅರ ಭಟ್ಟನು ಒಳ್ಳೆಯ ಜನರಿಗೆ ಬೇಕಾದವನು, ಕೆಟ್ಟ ಜನರಿಗೆ ಬೇಡವಾದವನು (೧). ತೇಜಸ್ವಿಯಾದವನಿಗೆ (ತನಗೆ) ಸಾಯುವುದು ಲೇಸು, ಆದರೆ ಮಾನಭಂಗವಲ್ಲ; ಸಾವಿನ ದುಃಖ ಆ ಕ್ಷಣದ್ದು, ಮಾನಭಂಗದ ದುಃಖ ಪ್ರತಿದಿನದ್ದು (ಎಂದು ಆತ ತಿಳಿದಿದ್ದ) (೨). ಸಾಧುವಾದವನ ವಿಷಯದಲ್ಲಿ ತಾನೂ ಸಾಧುವಾದವನು; ಕಾರ್ಯನಿರ್ವಹಣೆಯ ಸಾಮರ್ಥ್ಯವನ್ನುಳ್ಳ ಅಧಿಕನ ವಿಷಯದಲ್ಲಿ ತಾನೂ ಕಾರ್ಯನಿರ್ವಹಣೆಯ ಸಾಮರ್ಥ್ಯವನ್ನುಳ್ಳ ಅಧಿಕನು ಅಥವಾ ಪ್ರಮುಖರ ನಡುವೆ ತಾನೂ ಪ್ರಮುಖ. ತೊಂದರೆ ಕೊಡುವ ಶೂರನಿಗೆ, ಕಲಿಯುಗವಿಪರೀತನೆನ್ನಿಸಿದ ಕಪ್ಪೆಅರ ಭಟ್ಟನು ಸಾಕ್ಷಾತ್ ವಿಷ್ಣು, ಬೇರೆಯಲ್ಲ (೩). ಈತನ ಹಾಗೆ ಒಳ್ಳೆಯದನ್ನು ಮಾಡುವವರು ಯಾರು? ಹಾಗೆಯೇ ಕೆಟ್ಟದ್ದು ಮಾಡುವುದರಲ್ಲಿ ಕೂಡ ಈತ ಗಟ್ಟಿಗ. ಈತ ಕಲಿಯುಗ ವಿಪರೀತ! ಅವರವರು ಹಿಂದೆ ಮಾಡಿದ ಒಳ್ಳೆಯದು ಕೆಟ್ಟದ್ದು ಏನುಂಟು, ಅದಕ್ಕೆ ತಕ್ಕ ಫಲ ಈತನ ಕೈಯಲ್ಲಿ ಅವರಿಗೆ ಸಿಕ್ಕುತ್ತದೆ (೪). ನಮಗೆ ಇದರಿಂದ ಕೆಡುಕೇನು? - ಎಂದು ಕಟ್ಟಿಹಾಕಿದ ಸಿಂಹವನ್ನು ಕಟ್ಟುಕಳಚಿ ಬಿಟ್ಟ ಹಾಗೆ ಕಲಿಯುಗ ವಿಪರೀತನಿಗೆ ಎದುರುಬಿದ್ದು ಆತನ ಶತ್ರುಗಳು ತಮ್ಮ ಅವಿವೇಕದಿಂದ ಹಾಳಾದರು, ಸತ್ತರು (೫).

ಈ ನಿರೂಪಣೆಯಿಂದ ಹೊರಪಡುವ ಕಪ್ಪೆಅರ ಭಟ್ಟನ ವ್ಯಕ್ತಿತ್ವವನ್ನು ಹೀಗೆ ಊಹಿಸಬಹುದು : ಕಪ್ಪೆಅರ ಭಟ್ಟ ಪ್ರಾಯಶಃ ಹುಟ್ಟಿನಿಂದ ಬ್ರಾಹ್ಮಣನಾಗಿದ್ದ ಒಬ್ಬ

ಸಮರ್ಥಯೋಧ. ತನ್ನ ಒಳ್ಳೆಯ ನಡೆವಳಿಕೆಯಿಂದ ಆತ 'ಕಲಿಯುಗ ವಿಪರೀತನ್' ಎಂದು ಹೆಸರಾಗಿದ್ದ. ಹೀಗಿದ್ದುದರಿಂದ ಸಹಜವಾಗಿ ಒಳ್ಳೆಯ ಜನ ಅವನನ್ನು ತಮ್ಮವನೆಂದು ಆದರಿಸುತ್ತಿದ್ದರು. ದುಷ್ಟರು ಆತನ ಹತ್ತಿರ ಸೇರುತ್ತಿರಲಿಲ್ಲ. ಮಾನವಂತನಾಗಿ ಬಾಳಬೇಕು, ಮಾನಭಂಗವನ್ನು ಸಹಿಸುವುದಕ್ಕಿಂತ ಸಾಯುವುದೇ ಲೇಸು ಎಂಬುದು ಆತನ ನಂಬುಗೆಯಾಗಿತ್ತು. ಒಳ್ಳೆಯವರ ವಿಷಯದಲ್ಲಿ ಆತ ಎಂದೂ ಒಳ್ಳೆಯವನೇ. ರಾಜನೈತಿಕವಿರಬಹುದು, ಸೈನ್ಯಕೀಯವಿರಬಹುದು - ಯಾವುದೇ ದೊಡ್ಡ ಜವಾಬ್ದಾರಿಯನ್ನು ದಕ್ಷತೆಯಿಂದ ನಿರ್ವಹಿಸಬಲ್ಲ ಧುರೀಣ ಆತ. ತನಗೆ ಎದುರುಬಿದ್ದ ಶೂರರನ್ನು, ರಾಕ್ಷಸರನ್ನು ಅಡಗಿಸುವ ಮಹಾವಿಷ್ಣುವಿನಂತೆ ಆತ ನಿಗ್ರಹಿಸಬಲ್ಲವನಾಗಿದ್ದ. ಮನಸ್ಸು ಮಾಡಿದರೆ ಒಳ್ಳೆಯದನ್ನೂ ಮಾಡಬಲ್ಲ, ಕೆಟ್ಟದ್ದನ್ನೂ ಮಾಡಬಲ್ಲ; ಎಂದರೆ ಒಳ್ಳೆಯವರಿಗೆ ಒಳ್ಳೆಯವನು, ಕೆಟ್ಟವರಿಗೆ ಕೆಟ್ಟವನು. ಶಿಷ್ಟರ ರಕ್ಷಣೆ ದುಷ್ಟರ ವಿನಾಶ ಎಂಬುದು ಆತನ ಸಂಕಲ್ಪ. ಅದರಲ್ಲಿ ಆತ ಸಮರ್ಥ. ಆತನನ್ನು ಎದುರುಹಾಕಿಕೊಂಡವರು ಹಾಳಾಗುವುದು ಖಂಡಿತ.

ಸಜ್ಜನಿಕೆ, ಗಾಂಭೀರ್ಯ, ಶೌರ್ಯ ಇವು ಮುಪ್ಪುರಿಗೊಂಡಿದ್ದು ಕನ್ನಡಿಗ ವೀರನೊಬ್ಬನ ವ್ಯಕ್ತಿಚಿತ್ರವನ್ನು ಪ್ರಸ್ತುತ ಶಾಸನ ನಮ್ಮ ಕಣ್ಣೆದುರು ಕಟ್ಟಿ ನಿಲ್ಲಿಸಲು ಸಮರ್ಥವಾಗಿದೆ; ಕರ್ತೃ ಮಾತ್ರ ಅಜ್ಞಾತದಲ್ಲಿ ಸೇರಿದ್ದಾನೆ.

*ಶ್ರೀಕಂಠತೀರ್ಥ, ೧೯೭೬*
*ಶಬ್ದಾರ್ಥ ವಿಹಾರ, ೧೯೭೯, ಪು. ೧೨-೨೨*



# ೩. ಕನ್ನಡ ನಾಡು-ನುಡಿಗಳು ಎಷ್ಟು ಪ್ರಾಚೀನ?

● ಎಂ. ಬಿ. ನೇಗಿನಹಾಳ

ಕರ್ನಾಟಕದಲ್ಲಿ ದೊರೆಯುವ ನಿರ್ದಿಷ್ಟವಾದ ಐತಿಹಾಸಿಕ ದಾಖಲೆಗಳಲ್ಲಿ ಮೌರ್ಯ ಅಶೋಕನ ಪ್ರಾಕೃತ ಲಿಪಿಗಳೇ ಮೊದಲಿನವು. ಅವುಗಳ ತರುವಾಯ ಶಾತವಾಹನ, ಪಲ್ಲವ ಮತ್ತು ಕದಂಬ ರಾಜಮನೆತನಗಳಿಗೆ ಸೇರಿದ ಪ್ರಾಕೃತ ಶಾಸನಗಳು ಅಲ್ಲಲ್ಲಿ ತೋರಿಬಂದಿವೆ. ಕ್ರಿ.ಶ. ಪೂರ್ವ ಮೂರನೆಯ ಶತಮಾನದಿಂದ ಕ್ರಿ.ಶ. ನಾಲ್ಕನೆಯ ಶತಮಾನದವರೆಗಿನ ಸುಮಾರು ಏಳುನೂರು ವರ್ಷಗಳ ಕಾಲಾವಧಿಯಲ್ಲಿ ಇವು ಹುಟ್ಟಿವೆ. ಪ್ರದೇಶವ್ಯಾಪ್ತಿಯ ದೃಷ್ಟಿಯಿಂದ ಇವು ಉತ್ತರದಲ್ಲಿ ಕಲಬುರ್ಗಿ ಜಿಲ್ಲೆಯ ಸನ್ನತಿಯಿಂದ ಪ್ರಾರಂಭಿಸಿ (ಬೆಳಗಾವಿ ಸಮೀಪದ) ವಡಗಾವಿ, ಬನವಾಸಿ, ಮಳವಳ್ಳಿಗಳಲ್ಲೂ ತುಂಗಭದ್ರೆಯ ಎಡಬಲದ ಮಸ್ಕಿ, ಕೊಪ್ಪಳ, ನಿಟ್ಟೂರು ವೊದಲಾದೆಡೆಗಳಲ್ಲಿಯೂ ದಕ್ಷಿಣ ಕರ್ನಾಟಕದ ಹಿರೇಮಗಳೂರಿನಲ್ಲಿಯೂ ದೊರೆತಿವೆ. ತುಂಗಭದ್ರೆಯ ಎಡಬಲದ ಪ್ರದೇಶದಲ್ಲಿಯೇ ಪ್ರಾಕೃತ ಶಾಸನಗಳ ಸಂಖ್ಯೆ ವಿಶೇಷವಾಗಿದ್ದು ದಕ್ಷಿಣ ಕರ್ನಾಟಕದಲ್ಲಿ ತೀರ ಕಡಿಮೆಯಾಗಿದೆ. ಕರ್ನಾಟಕದ ಮೇಲೆ ಆದ ಆರ್ಯಮೂಲ ಸಂಸ್ಕೃತಿಯ ಪ್ರಭಾವದ ದೃಷ್ಟಿಯಿಂದ ಈ ಸಂಗತಿ ಗಮನಾರ್ಹವಾಗಿದೆ. ಕರ್ನಾಟಕ ಸಂಸ್ಕೃತಿಯ ವಿಕಾಸದ ಈ ಹಂತದಲ್ಲಿ ತುಂಗಭದ್ರಾನದಿಯೂ ವಿಶಿಷ್ಟ ಪಾತ್ರವಹಿಸಿದೆಯೆಂದು ಇದರಿಂದ ಶ್ರುತಪಡುತ್ತದೆ.

ಈವರೆಗೆ ಒಟ್ಟು ಇಪ್ಪತ್ತೊಂದು ಕಡೆ ಪ್ರಾಕೃತ ಶಾಸನಗಳು ಕರ್ನಾಟಕದಲ್ಲಿ ಕಂಡುಬಂದಿವೆ. ಇತ್ತೀಚೆಗೆ ಅಶೋಕನ ಮತ್ತೆರಡು ಶಾಸನಗಳು ದೊರೆತಿದ್ದು, ಕರ್ನಾಟಕದಲ್ಲಿ ಅವನ ಶಾಸನಗಳ ಸಂಖ್ಯೆ ಹತ್ತಕ್ಕೇರಿದೆ. ಧರ್ಮದ ದೃಷ್ಟಿಯಿಂದ ಇವುಗಳಲ್ಲಿ ಸನ್ನತಿಯ ಬಿಡಿ ಬರಹಗಳು ಬೌದ್ಧಧರ್ಮಕ್ಕೆ ಸಂಬಂಧಿಸಿದ್ದರೆ, ಮಳವಳ್ಳಿಯ ಶಾಸನಗಳು ಶೈವಪರವಾಗಿವೆ. ಮಾಧವಪೂರ-ವಡಗಾವಿ, ಹಿರೇಮಗಳೂರು ಮತ್ತು ಹಿರೇಹಡಗಲಿಯ ಪಲ್ಲವ ಶಾಸನಗಳು ವೈದಿಕಮತಕ್ಕೆ ಸಂಬಂಧಿಸಿವೆ. ಇದರಿಂದ ಕನ್ನಡ ಜನಪದವು ವೈದಿಕ-ಅವೈದಿಕವಾದ ಎರಡೂ ಸಂಪ್ರದಾಯಗಳ ಪ್ರಭಾವವಲಯದಲ್ಲಿ ಅಂದು ಬಾಳುತ್ತಿದ್ದುದು ಸ್ಪಷ್ಟವಿದೆ. ಉತ್ತರದವರಾದ ಮೌರ್ಯರು ತಮ್ಮ ಆಡಳಿತವನ್ನು ನೇರವಾಗಿ ಕರ್ನಾಟಕದ ಮೇಲೆ ಹೇರಿದ್ದರಿಂದ ಅವರ ಕಾಲದಲ್ಲಿ ಕನ್ನಡ ಜನಪದರ ಮೇಲೆ ಆರ್ಯಸಂಸ್ಕೃತಿಯ ಪ್ರಭಾವ ಮುದ್ರೆ ದಟ್ಟವಾಗಿ ಮೂಡಿರಬೇಕೆಂದು ತೋರುತ್ತದೆ.

ಹೀಗೆ ಆರ್ಯಸಂಸ್ಕೃತಿಯ ಪ್ರಭಾವದ ನೇರ ಪ್ರಮಾಣಗಳಾದ ಈ ಪ್ರಾಕೃತ ಶಾಸನಗಳಲ್ಲಿ ಸ್ಥೂಲವಾಗಿ ಎರಡು ಭಾಗ ಮಾಡಬಹುದು. ಒಂದು, ಕ್ರಿಸ್ತಪೂರ್ವದ ಹಂತ ; ಎರಡನೆಯದು, ಕ್ರಿಸ್ತಶಕದ ಆರಂಭದ ಹಂತ. ಮೊದಲನೆಯ ಹಂತದಲ್ಲಿ ಅಶೋಕನ ಹತ್ತು ಧರ್ಮಲಿಪಿಗಳೂ ಮಾಧವಪೂರ-ವಡಗಾವಿ ಶಾಸನವೂ ಸಮಾವೇಶಗೊಳ್ಳುತ್ತವೆ. ಎರಡನೆಯ ಹಂತದಲ್ಲಿ ಸನ್ನತಿ, ಮಳವಳ್ಳಿ, ಬನವಾಸಿ, ಹೀರೆಹಡಗಲಿ ಮುಂತಾದ ಶಾಸನಗಳು ಸಮಾವೇಶಗೊಳ್ಳುತ್ತವೆ. ಮೊದಲನೆಯ ಹಂತದ ಶಾಸನಗಳಲ್ಲಿ ಕನ್ನಡ ಭಾಷೆಯ ಅಂಶಗಳು ಇಲ್ಲವೆಂದೇ ಹೇಳಬಹುದಾದ ಸ್ಥಿತಿಯಿದ್ದರೆ, ಎರಡನೆಯ ಹಂತದಲ್ಲಿ ಖಚಿತವಾಗಿಯೂ ಕನ್ನಡ

ಭಾಷೆಯ ಅಸ್ತಿತ್ವವನ್ನು ಸಿದ್ಧಪಡಿಸುವ ಅಂಶಗಳು ಕಂಡುಬರುತ್ತವೆ. ಇದರಿಂದ ವ್ಯಕ್ತವಾಗುವ ಒಂದು ಅಂಶವೆಂದರೆ, ಕ್ರಿ.ಶ. ಎರಡನೆಯ ಶತಮಾನದ ಹೊತ್ತಿಗಾಗಲೇ ಕರ್ನಾಟಕದ ದ್ರಾವಿಡಮೂಲದ ಜನಾಂಗ ಮತ್ತು ಉತ್ತರದಿಂದ ಬಂದ ಆರ್ಯಮೂಲದ ವಲಸೆಗಾರರಲ್ಲಿ ಸಾಂಸ್ಕೃತಿಕ ಸಾಮರಸ್ಯ ಏರ್ಪಟ್ಟಿತ್ತೆಂಬುದು.

ಒಂದು ಜನಪದ ಸ್ವರೂಪ ನಿರ್ಮಾಣಕ್ಕೆ ಅದರ ಭೌಗೋಲಿಕ ವ್ಯಾಪ್ತಿ ಮತ್ತು ಅದಕ್ಕಿಂತ ಹೆಚ್ಚಾಗಿ ಅದರ ಭಾಷೆ ಮುಖ್ಯ ಪಾತ್ರ ವಹಿಸುತ್ತವೆ. ಈ ನಿಟ್ಟಿನಿಂದ ನೋಡಿದಾಗ, ತಮಿಳಿನಿಂದ ಕನ್ನಡವು ಬೇರೆಯಾಗಿ ಸ್ವತಂತ್ರ ಅಸ್ತಿತ್ವ ಸಂಪಾದನೆ ಮಾಡಿದ ಕಾಲಾವಧಿಯು, ಬಹುಮುಖ್ಯವಾದದ್ದೆನಿಸುತ್ತದೆ.

ಭಾಷೆಯೊಂದನ್ನು ಒಡೆದು ಉಪಭಾಷೆಗಳನ್ನು ನಿರ್ಮಿಸುವಲ್ಲಿ ರಾಜಕೀಯ ಆಡಳಿತವೂ ಒಂದು ಶಕ್ತಿಯಾಗಿ ಕಾರ್ಯನಿರ್ವಹಿಸುತ್ತದೆ. ಅದೂ ಬೇರೊಂದು ಮೂಲದ ಜನಾಂಗದ ಆಡಳಿತವು ಬಹುಮುಖ್ಯವಾದ ಪಾತ್ರವಹಿಸಬಲ್ಲದು. ಆ ಪೂರ್ವದಲ್ಲಿಯೆ ನಿರ್ಮಾಣಗೊಂಡಿದ್ದ ಉಪಭಾಷಾ ವೈಶಿಷ್ಟ್ಯಗಳು ಮತ್ತೂ ಹೆಚ್ಚುವಂತೆ ಮಾಡಿ ಪ್ರತ್ಯೇಕ ಭಾಷೆಯ ಅಸ್ತಿತ್ವಕ್ಕೆ ಅದು ಕಾರಣವಾಗಲೂಬಹುದು. ಮೌರ್ಯ ಆಡಳಿತಕ್ಕೆ ಅಂದು ಕರ್ನಾಟಕದ ಬಹು ಭಾಗಗಳು ಒಳಪಟ್ಟಿದ್ದು ತಮಿಳುದೇಶವು ಅದರಿಂದ ಮುಕ್ತವಾಗಿದ್ದ ಬಗೆಗೆ ಅಶೋಕನ ಶಾಸನಗಳಲ್ಲಿಯೇ ಸ್ಪಷ್ಟ ಆಧಾರಗಳಿವೆ.[೧] ಜತೆಗೆ ಅಶೋಕನ ಪ್ರೋತ್ಸಾಹದಿಂದಾಗಿ ಬೌದ್ಧಮತದ ಪ್ರಸಾರವೂ ಕರ್ನಾಟಕದಲ್ಲಿ ನಡೆದಿರಬೇಕೆಂದು ತಿಳಿಯಬಹುದಾಗಿದೆ. ಕನ್ನಡವು ಸ್ವತಂತ್ರ ಭಾಷೆಯಾಗಿ ಮಾರ್ಪಡುವಲ್ಲಿ ಮೌರ್ಯರ ಆಡಳಿತವು ಅಪಾರ ಪ್ರಭಾವ ಬೀರಿರಬೇಕೆಂದು ಊಹಿಸಬಹುದಾಗಿದೆ.

ಹೀಗೆ ಕನ್ನಡವು ಶಾತವಾಹನರ ಕಾಲಾವಧಿಗಿಂತ ಪೂರ್ವದಲ್ಲಿಯೇ ಸ್ವತಂತ್ರಗೊಂಡಿರುವ ಸಾಧ್ಯತೆ ಇದೆ. ಪ್ರೊ. ತೀ. ನಂ. ಶ್ರೀ. ಅವರು ಕ್ರಿ.ಶ.ಪೂ. ಅಯ್ದನೆಯ ಶತಮಾನದಲ್ಲಿ ಅದು ಸ್ವತಂತ್ರಗೊಂಡಿರಬೇಕೆಂದು ಊಹೆಯನ್ನು ಮುಂದೆ ಮಾಡಿದ್ದಾರೆ.[೨] ಆದರೆ ಸಂಬಲರ್ಹವಾದ ಆಧಾರಗಳು ದೊರೆಯುತ್ತಿರುವುದು ಶಾತವಾಹನರ ಕಾಲದಲ್ಲಿಯೆ ಎಂಬುದನ್ನು ನೆನಪಿಡಬೇಕು. ಅಂಥ ಆಧಾರಗಳನ್ನು ಕುರಿತು ಈಗ ನೋಡಬಹುದು.

ಕರ್ನಾಟಕದಲ್ಲಿ ಈವರೆಗೆ ದೊರೆತಿರುವ ಪ್ರಾಕೃತ ಶಾಸನಗಳು ಮುಂದಿನಂತೆ ಇವೆ:

| | | | |
|---|---|---|---|
| ೧. | ಗವೀಮಠ[೩] | ಮೌರ್ಯ ಅಶೋಕ | ಕ್ರಿ.ಶ. ಪೂ. ೩ನೇ ಶ. |
| ೨. | ಪಾಲ್ಕಿಗುಂಡು[೩] | " | " |
| ೩. | ಮಸ್ಕಿ[೪] | " | " |
| ೪. | ಬ್ರಹ್ಮಗಿರಿ[೪] | " | " |
| ೫. | ಸಿದ್ಧಾಪುರ[೪] | " | " |

---

೧. *Corpus Inscriptionum Indicarum* : Vol. I. II Rock Edict.

೨. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಸಂ. ೧, ಬೆಂಗಳೂರು ವಿ. ವಿ. ಪ್ರಕಟಣೆ, ಪು. ೧೮: ಡಾ|| ಸೂರ್ಯನಾಥ ಕಾಮತರ ಉಲ್ಲೇಖ.

೩. *Hyderabad Archaeological Series,* x.

೪. CII, Vol, I. *Ashokan Inscriptions.*

| | | | |
|---|---|---|---|
| ೬. | ಜಟಿಂಗರಾಮೇಶ್ವರ[೪] | " | " |
| ೭. | ನಿಟ್ಟೂರು-೧[೫] | " | " |
| ೮. | ನಿಟ್ಟೂರು-೨[೫] | " | " |
| ೯. | ಮಾಧವಪೂರ ವಡಗಾವಿ[೬] | - | ಕ್ರಿ.ಶ. ಪೂ. ೧ನೇ ಶ. |
| ೧೦. | ಬನವಾಸಿ[೭] | ಶಾತವಾಹನ | ಕ್ರಿ.ಶ. ೨ನೇ ಶ. |
| ೧೧. | ಬನವಾಸಿ[೮] | (ಚುಟು) | ಕ್ರಿ. ಶ ೨ನೇ ಶ. |
| ೧೨. | ಮಳವಳ್ಳಿ[೯] | " | " |
| ೧೩. | ಸನ್ನತಿ[೧೦] | " | " |
| ೧೪. | ಹಂಪಿ[೧೧] | - | " |
| ೧೫. | ಹಿರೇಮಗಳೂರು[೧೨] | | ಕ್ರಿ.ಶ. ૩ನೇ ಶ. |
| ೧೬. | ಬೆಳ್ವಾಡಗಿ[೧೩] | - | " |
| ೧೭. | ಹಿರೇಹಡಗಲಿ[೧೪] | ಪಲ್ಲವ (ಶಿವಸ್ಕಂದವರ್ಮ) | ಕ್ರಿ.ಶ. ೪ನೇ ಶ. |
| ೧೮. | ಚಂದ್ರವಳ್ಳಿ[೧೫] | ಕದಂಬ (ಮಯೂರವರ್ಮ) | ಕ್ರಿ.ಶ. ೪ನೇ ಶ. |
| ೧೯. | ಮಳವಳ್ಳಿ[೧೬] | - | " |
| ೨೦. | ಹುರುಸುಗುಂದಿ[೧೭] | - | " |
| ೨೧. | ಕುರಗೋಡ[೧೮] | - | ಕ್ರಿ.ಶ. ಪೂ. ೪ನೇ ಶ.? |

೫. ಕರ್ನಾಟಕ ಭಾರತಿ, ೧೦-೧.

೬. *Twelve Years of Kannada Research in Bombay State,* 1939-51, pp. vi-vii.

೭. ಇದು ಶಾತವಾಹನ ಶಾಸನವೆಂದು ತಿಳಿದುಬರುತ್ತದೆ. ನೋಡಿ: ಎಚ್. ಆರ್. ರಘುನಾಥ ಭಟ್, ಕರ್ನಾಟಕ ಶಾಸನ ಕಲೆ, ೧೯೭೭, ಪು. ೮.

೮. *SII.* XX, No. 1.

೯. ಎಕ., vii, ಶಿಕಾರಿಪುರ ೨೬೩ (ರೈಸ ಆವೃತ್ತಿ)

೧೦. i. *ARISE.* 1966-67, Appendix 'B', No. 203-225, 228-233; ii. ಕ. ಭಾ. ೧-೧, ಪು. ೬-೭; iii ಡಾ|| ಕೆ. ವಿ. ರಮೇಶ್, ಕರ್ನಾಟಕ ಶಾಸನ ಸಮೀಕ್ಷೆ, ಪು. ೨೯.

೧೧. *Indian Archaeology - A Survey,* 1975-76. p. 62 and Plate LXII.

೧೨. *MAR,* 1945, No. 7, p. 110.

೧೩. *EI,* xxxvii, pp. 131-38.

೧೪. *Lueders' List of Brahmi Inscriptions,* No. 1200.

೧೫. *MAR,* 1929, p. 50.

೧೬. ಎಕ., vii ಶಿಕಾರಿಪುರ ೨೬೪.

೧೭. 'ಸಂಯುಕ್ತ ಕರ್ನಾಟಕ' (ಹುಬ್ಬಳ್ಳಿ), ૩೦-೧೧-೧೯೭೫, ಪು. ೧-૩.

೧೮. *All India Oriental Conference,* 28th Session, 1976, Dharwad. p. 222.

ಇವಲ್ಲದೆ, ಇತ್ತೀಚೆಗೆ ಪತ್ರಿಕೆಗಳಲ್ಲಿ ಚಿತ್ರದುರ್ಗದ ಸಮೀಪದ ಗುಹೆಗಳಲ್ಲಿ ಬ್ರಾಹ್ಮೀಲಿಪಿಯ ಶಾಸನಗಳಿರುವುದರ ಬಗೆಗೆ ವರದಿಗಳು ಪ್ರಕಟವಾಗಿವೆ. ಅವು ಬ್ರಾಹ್ಮಿಶಾಸನಗಳೆಂದು ಖಚಿತವಾದರೆ ಕರ್ನಾಟಕದ ಪ್ರಾಕೃತ ಶಾಸನಗಳ ಸಂಖ್ಯೆ ಸುಮಾರು ೨೫೦ರಷ್ಟು ಆಗುತ್ತದೆ.

ಅಶೋಕನ ಶಾಸನಗಳ ಭಾಷೆಯನ್ನು ವಿದ್ವಾಂಸರು 'ಮಗಧನ್' (Magadhan)ಎಂದು ಕರೆದಿದ್ದಾರೆ.[೧೯] ಈ ಮಾಗಧ ಎಂಬುದು ಮುಂದಿನ ಕಾಲಾವಧಿಯ ಪ್ರಾಕೃತಗಳಾದ 'ಮಾಗಧಿ' ಅಥವಾ 'ಅರ್ಧಮಾಗಧಿ' ಭಾಷೆಗಳಲ್ಲ. ಅವೇ ಬೇರೆ; ಇದೇ ಬೇರೆ. ಜನತೆಗೆ ಇದರಲ್ಲಿ ಪ್ರಾಂತಿಕ ವ್ಯತ್ಯಾಸಗಳೂ ಇವೆ.

ಕೊಪ್ಪಳದ ಗವೀಮಠ ಮತ್ತು ಪಾಲ್ಕಿಗುಂಡು ಶಾಸನಗಳಲ್ಲಿ ನಕಾರ ಮೂರ್ಧನ್ಯೀಕರಣ ವಿಶೇಷವಾಗಿದೆ. ದೇವಾಣಂಪಿಯೇ, ಮಾಣುಸೇಹಿ, ಣೋ ಮುಂತಾದ ಉದಾಹರಣೆಗಳನ್ನು ನೋಡಬಹುದು. ಈ ಮೂರ್ಧನ್ಯೀಕರಣವು ಮುಂದಿನ ಕಾಲದ ಮಹಾರಾಷ್ಟ್ರೀ ಪ್ರಾಕೃತದ ವೈಶಿಷ್ಟ್ಯತೆಗಳಲ್ಲಿ ಒಂದೆನಿಸಿತು. ಮೊದಮೊದಲಿನ ಪ್ರಾಕೃತ ಶಾಸನಗಳಲ್ಲಿ ಪದ ಮಧ್ಯ ಸ್ಪರ್ಶಗಳು ಶೂನ್ಯಗೊಳ್ಳುವುದು ಕಡಿಮೆ. ಕ್ರಿ.ಶ.ದ ಪ್ರಾರಂಭದಲ್ಲಿ ಈ ಪ್ರಕ್ರಿಯೆ ಪಶ್ಚಿಮ ಭಾರತದ (ಈಗಿನ ಮಹಾರಾಷ್ಟ್ರ, ಗುಜರಾತ) ಪ್ರಾಕೃತ ಶಾಸನಗಳಲ್ಲಿ ಕಾಣಿಸಿಕೊಳ್ಳತೊಡಗುತ್ತದೆ.[೨೦] ಕ್ರಿ.ಶ. ನಾಲ್ಕನೆಯ ಶತಮಾನಕ್ಕೆ ಸೇರಿದ ಚಂದ್ರವಳ್ಳಿಯ ಶಾಸನದಲ್ಲಿ 'ವಿನಿಮ್ಮಿಅಂ' ಎಂಬ ಪ್ರಯೋಗವಿದೆ. ಇಲ್ಲಿ ಪದ ಮಧ್ಯ ಸ್ಪರ್ಶತಕಾರವು ಶೂನ್ಯಗೊಂಡಿರುವುದನ್ನು ಕಾಣಬಹುದು. ಬಿ. ಎಲ್. ರೈಸರು ಮಳವಳ್ಳಿಯ ಶಾಸನಗಳಲ್ಲಿ ಮಹಾರಾಷ್ಟ್ರೀ ಪ್ರಾಕೃತದ ಛಾಯೆ ಇದೆಯೆಂದು ಹೇಳಿದ್ದಾರೆ. ಸನ್ನತಿಯ ಶಾಸನಗಳಲ್ಲಿ 'ಸೀಹ'(<ಸಂ. ಸಿಂಹ) ಎಂಬ ಪ್ರಯೋಗ ಕಂಡುಬರುತ್ತಿದ್ದು ಅದು ಪಾಲೀ ರೂಪಕ್ಕೆ ಸಮಾನವಾಗಿದೆ. ಈ ರೀತಿ ಮಹಾರಾಷ್ಟ್ರೀ ಪ್ರಾಕೃತದ ಅಂಶಗಳ ಜತೆಯಲ್ಲಿ ಪಾಲಿರೂಪವೂ ಕಂಡುಬರುತ್ತಿರುವುದು, ಕರ್ನಾಟಕದಲ್ಲಿದ್ದ ಆರ್ಯಮೂಲ ಜನಾಂಗಗಳ ವೈವಿಧ್ಯಕ್ಕೆ ಸಂಕೇತವೆಂದು ಭಾವಿಸಬಹುದು.

ಕ್ರಿ.ಶ ಮೂರು-ನಾಲ್ಕನೆಯ ಶತಮಾನಕ್ಕೆ ಸೇರುವ ಹಿರೇಹಡಗಲಿಯ ಪಲ್ಲವ ಶಾಸನದ ಪ್ರಾಕೃತವು ಬಹುಪಾಲು ಕೃತ್ರಿಮವಾಗಿದೆಯೆಂದು ವಿದ್ವಾಂಸರು ಹೇಳಿದ್ದಾರೆ.[೨೧] ಈ ಶಾಸನ ಹಾಗೂ ಮಳವಳ್ಳಿಯ ಕದಂಬ ಶಾಸನಗಳ ಅಂತ್ಯದಲ್ಲಿ ಸಂಸ್ಕೃತವಾಕ್ಯಗಳಿವೆ. ಇದು ಪ್ರಾಕೃತವು ಹಿಂದೆ ಬೀಳುತ್ತಿದ್ದುದರ ಸ್ಪಷ್ಟ ಸೂಚನೆಯಾಗಿವೆ.

ಅಶೋಕನ ಶಾಸನಗಳಲ್ಲಿ ಚೋಳ, ಪಾಂಡ್ಯ ಮತ್ತು ಕೇರಳಗಳ ಸ್ಪಷ್ಟ ನಿರ್ದೇಶನವಿದೆ. ಆದರೆ ಅವುಗಳಲ್ಲಿ ಕರ್ನಾಟಕದ ಭಾಗಗಳನ್ನು ಸ್ಪಷ್ಟವಾಗಿ ನಿರ್ದೇಶಿಸಿಲ್ಲ. 'ಸತಿಯಪುತ್ರ'ವೊಂದನ್ನು ಮಾತ್ರ ನಿರ್ದೇಶಿಸಲಾಗಿದೆ.[೨೨] ಈ 'ಸತಿಯಪುತ್ರ'ವೆಂದರೆ ಇಂದಿನ ದಕ್ಷಿಣ ಕನ್ನಡದ ಪ್ರದೇಶವೆಂದು ಊಹಿಸಲಾಗಿದೆ. ಇದು ಕೂಡ ದ್ರಾವಿಡಮೂಲದ ಪದವಲ್ಲ.

---

೧೯. CII, I, Introduction, p. 56.

೨೦. M.A. Mehendale, *Historical Grammar of Inscriptional Prakrits*, Introduction, pp. xxix and 61.

೨೧. R. Pischel, *Comparative Grammar of Prakrit Languages*, para 10.

೨೨. ಅಡಿ ಟಿಪ್ಪಣಿ ೧ ನೋಡಿ.

ಅಶೋಕನ ಬ್ರಹ್ಮಗಿರಿ ಶಾಸನದಲ್ಲಿ ಬಂದಿರುವ ' ಇಸಿಲ ' ಎಂಬ ಪಟ್ಟಣದ ಹೆಸರು ಮಾತ್ರ ಕನ್ನಡ ಮೂಲದ್ದೆಂದು ಡಾ।। ಡಿ.ಎಲ್.ಎನ್. ಅಭಿಪ್ರಾಯಪಟ್ಟಿದ್ದಾರೆ. 'ಇಸಿಲ' ಎಂಬುದು'ಎಸಿಲ್' ಎಂಬ ಕನ್ನಡ ಶಬ್ದದ ಪ್ರಾಕೃತರೂಪವೆಂದೂ ಅದರ ತಮಿಳು ಜ್ಞಾತಿಪದ 'ಎಯಿಲ್' ಎಂದೂ ಅವರು ತಿಳಿಸುತ್ತಾರೆ.[೨೩] ಆದರೆ ಇದು ಕನ್ನಡ ಭಾಷೆಯ ಯಾವ ಹಂತದಲ್ಲೂ ಪ್ರಯೋಗದಲ್ಲಿದ್ದುದು ಕಂಡುಬಂದಿಲ್ಲ.

ಅಶೋಕ ಲಿಪಿಗಳ ತರುವಾಯ ಕ್ರಿ.ಶ.ಪೂ. ಒಂದನೆಯ ಶತಮಾನದ ಮಾಧವಪೂರ -ವಡಗಾವಿ ಶಾಸನದಲ್ಲಿ (ಸ-)ಣಾಟಪತಿಸ ಎಂಬ ಪ್ರಯೋಗ ಕಂಡುಬರುತ್ತದೆ. ಇಲ್ಲಿ 'ಣಾಟಪತಿ' ಎಂಬ ಪ್ರಾತಿಪದಿಕಕ್ಕೆ-ಸ ಎಂಬ ಷಷ್ಠೀವಿಭಕ್ತಿ ಪ್ರತ್ಯಯ ಸೇರಿದೆ. ಪಾಕೃತ ಶಾಸನಗಳಲ್ಲಿ ನಕಾರಕ್ಕೆ ಬದಲು ಣಕಾರವಿರುವುದು ಅಪರೂಪವೇನಲ್ಲ. ಆದುದರಿಂದ ಇದು 'ನಾಟಪತಿ' ಎಂಬ ಅರಿಸಮಾಸವೆಂದು ಹೇಳಬಹುದು. ಇಲ್ಲಿ 'ನಾಟ' ಎಂಬ ಪೂರ್ವಪದವು ಇಂದು ಕನ್ನಡದಲ್ಲಿ ಪ್ರಚುರವಾಗಿರುವ 'ನಾಡು' ಎಂಬುದರ ಪ್ರಾಚೀನರೂಪ. ಪುನ್ನಾಟ, ಕರ್ನಾಟ (ಅಥವಾ ಪುಣ್ಣಾಟ, ಕರ್ಣಾಟ) ಎಂಬ ಸಮಾಸಗಳಲ್ಲಿಯೂ ಈ ರೂಪವಿರುವುದನ್ನು ಕಾಣಬಹುದು. ತಮಿಳಿನಲ್ಲಿಯೂ 'ನಾಟ್ಟು' 'ನಾಟ್ಟಾನ್' ಮುಂತಾದ ಪ್ರಯೋಗಗಳಿವೆ. ಆದುದರಿಂದ ವಡಗಾವಿ ಶಾಸನದ ಈ ಪದವನ್ನು ಈವರೆಗೆ ತಿಳಿದುಬಂದಿರುವಂತೆ ಕನ್ನಡ ಭಾಷೆಯ ಅಸ್ತಿತ್ವವನ್ನು ಸಿದ್ಧಪಡಿಸುವ ಸ್ಪಷ್ಟವಾದ ಪ್ರಥಮಾಧಾರವೆನ್ನಬಹುದು.

ಕ್ರಿ.ಶ. ಎರಡನೆಯ ಶತಮಾನದ ಮಳವಳ್ಳಿಯ ಶಾಸನದಲ್ಲಿ ಅದೇ ಮಳವಳ್ಳಿಯನ್ನು 'ಮಟ್ಟಪಟ್ಟ' ಎಂದು ಕರೆದಿದೆ. ಇಲ್ಲಿಯ ಉತ್ತರ ಪದ 'ಪಟ್ಟ'[೨೪] ಎಂಬುದು 'ಗ್ರಾಮ' ಎಂಬ ಅರ್ಥದ್ದು. ಇದಕ್ಕೆ ತಮಿಳು, ತೆಲಗು, ಮಲೆಯಾಳಗಳಲ್ಲಿ ಮತ್ತು ಅನಂತರದ ಕನ್ನಡದಲ್ಲಿ ಇದೇ ಅರ್ಥವಿದೆ. ಸರಿಸುಮಾರು ಇದೇ ಅವಧಿಗೆ ಸೇರಿದ ಸನ್ನತಿಯ ಶಾಸನಗಳಲ್ಲಿ ಒಂದು 'ಸಂಬಲೀವಊರ ವಾಸಿನೋ ಆಪಕುಟಿಸ '[೨೫] ಎಂಬ ಪಾಠವನ್ನೀಯುತ್ತದೆ. ಇಲ್ಲಿ 'ಸಂಬಲೀವೂರ ' ಎಂಬುದರ ಅಂತ್ಯದಲ್ಲಿ 'ಊರ್'ಎಂಬ ಕನ್ನಡ ಆಕೃತಿಮಾ ಇದ್ದುದು ಸ್ಪಷ್ಟ. 'ಸಂಬಲೀವಊರ ಎಂಬುದನ್ನು 'ಸಂಬಲ+ಈವ+ಊರ ' ಎಂದು ವಿಭಾಗಿಸಬಹುದೇನೋ? ಸನ್ನತಿಯ ಇನ್ನೊಂದು ಶಾಸನದಲ್ಲಿ 'ಮೂಡಾಣ ಮಹಾಗಾಮಿ' ಎಂಬ ಪ್ರಯೋಗ ಕಂಡುಬರುತ್ತದೆ.[೨೬] ಇಲ್ಲಿಯ 'ಮೂಡಾಣ' ಎಂಬುದು 'ಮೂಡಣ' ಎಂಬ ದಿಗ್ವಾಚಿಯ ಪುರಾತನ ರೂಪವಾಗಿರುವಂತೆ ಕಾಣುತ್ತದೆ.

ಇದಾದ ಮೇಲೆ ಕ್ರಿ.ಶ. ಸುಮಾರು ಮೂರನೆಯ ಶತಮಾನದ ಹಿರೇಹಡಗಲಿಯ ಶಾಸನದಲ್ಲಿ 'ಕೋಟ್ಟಸಮ' (=ಕೋಟ್ಟಶರ್ಮ) ಎಂಬ ವ್ಯಕ್ತಿಯ ಹೆಸರಿದೆ. ಜತೆಗೆ ಆಪಿಟ್ಟಿ

---

೨೩. *Karnataka Through the ages.* pp. 109-110.

೨೪. ಲೂಡರ್ಸ ಇದನ್ನು 'ಮಳಪಳಿ' ಎಂದು ಓದಿದ್ದಾರೆ – ನೋಡಿ: *LLBI.* No. 1195 & 1196. ಆದರೆ 'ಸೋಮಪಟ್ಟ' ಎಂಬಲ್ಲಿ ಮಾತ್ರ 'ಪಟ್ಟ' ಎಂದೇ ಓದಿದ್ದಾರೆ. ಪಳಿ(ಳ್ಳಿ) ಎಂಬುದೂ ಗ್ರಾಮವಾಚಕವೇ.

೨೫. ಅ.ಟಿ. ೧೦-Iರಲ್ಲಿ ೨೧೦ರ ಶಾಸನ.

೨೬. ಅದೇ, ಸಂ. ೨೨೩ರ ಶಾಸನ.

ಎಂಬ ಗ್ರಾಮವಾಯಕವೂ ಇದೆ. 'ಕೋಟ್ಟಸವು'ದಲ್ಲಿಯ 'ಕೋಟ್ಟ' ಎಂಬುದು ದ್ರಾವಿಡಮೂಲದ್ದಿರುವಂತೆ ಕಾಣುತ್ತದೆ. ತಮಿಳಿನ ಕೋಟ್ಟೈ, ಕನ್ನಡದ ಕೋಟ್ಟೆ (>ಕೋಂಟೆ >ಕೋಟೆ) ಮಲೆಯಾಳಿಯ 'ಕೋಟ್ಟ' ಇವು ಇದರ ಜ್ಞಾತಿ ರೂಪಗಳು. ಆದುದರಿಂದ ಇಲ್ಲಿಯ ಪ್ರಯೋಗವು ಕನ್ನಡದಿಂದ ಸ್ವೀಕರಿಸಿದ್ದೆಂದು ಹೇಳಬಹುದು. ಆದರೆ ಹೀಗೆ ಹೇಳುವುದಕ್ಕೆ ಒಂದು ಆತಂಕವಿದೆ. ಕ್ರಿ.ಶ. ಪೂ. ೩ನೆಯ ಶತಕದ ಅಶೋಕನ ಸಾರನಾಥ ಶಾಸನದಲ್ಲಿ 'ಕೋಟ' ಎಂದು ಈ ಪದ ಪ್ರಯೋಗ ಕಂಡುಬರುತ್ತದೆ.[೨೭] ಎಂದರೆ ದ್ರಾವಿಡಮೂಲದ ಈ ಪದ ಅಷ್ಟು ಹಿಂದೆಯೇ ಪ್ರಾಕೃತದಲ್ಲಿ ಸೇರಿಹೋಗಿತ್ತೆಂದು ಭಾವಿಸಬೇಕಾಗುತ್ತದೆ. ಈ ಕಾರಣಕ್ಕಾಗಿ ಹಿರೇಪಡಗಲಿಯ ಶಾಸನದ 'ಕೋಟ್ಟ' - ಎಂಬ ಪ್ರಯೋಗವು ಅಂದಿನ ಕನ್ನಡದಿಂದ ಪ್ರಾಕೃತಕ್ಕೆ ಸೇರಿದ್ದೆಂದು ಹೇಳಲು ಅನುಮಾನಪಡಬೇಕಾಗುತ್ತದೆ. ಆದರೂ ಇಲ್ಲಿಯ 'ಟ್ಟ'ಕಾರದ್ವಿತ್ವವು ಕನ್ನಡದ ಪ್ರಭಾವವಾಗಿರುವ ಸಾಧ್ಯತೆ ಇದೆ.

ಕ್ರಿ.ಶ. ನಾಲ್ಕನೆಯ ಶತಮಾನಕ್ಕೆ ಸೇರಿದ ಚಂದ್ರವಳ್ಳಿ ಶಾಸನದಲ್ಲಿ 'ಪುನಾಟ' ಅಥವಾ ಪುಣಡ ಎಂಬ ಉಲ್ಲೇಖವಿದೆ. ಇದು 'ಪುನ್ನಾಟ' ಎಂಬುದರ ಪ್ರಾಕೃತರೂಪ. ಡಾ|| ಡಿ.ಎಲ್.ಎನ್. ಇದನ್ನು 'ಪುನಲ್+ನಾಟ' ಎಂದು ಬಿಡಿಸಿದ್ದಾರೆ.[೨೮] ಇದರ ಉತ್ತರಪದವಾದ 'ನಾಟ' ಎಂಬ ರೂಪವು ಕನ್ನಡ ಮೂಲದ್ದೆಂಬ ಬಗೆಗೆ ಭಿನ್ನಾಭಿಪ್ರಾಯವಿರಲಾರದು. ಕ್ರಿ.ಶ. ೬ನೆಯ ಶತಮಾನದ ಸಂಸ್ಕೃತ ಶಾಸನವೊಂದು 'ಪುಂರಾಷ್ಟ್ರ' ಎಂದು ಪುನ್ನಾಟವನ್ನು ಹೆಸರಿಸಿದೆ.[೨೯] ಇಂದಿನ ಮೈಸೂರು ಜಿಲ್ಲೆಯಲ್ಲಿ ಪ್ರಾಚೀನ ಕಾಲದಲ್ಲಿದ್ದ ಚಿಕ್ಕರಾಜ್ಯವೇ ಈ 'ಪುನ್ನಾಟ'. ಕ್ರಿ.ಶ. ಎರಡನೆಯ ಶತಮಾನದ ಗ್ರೀಕ್ ಭೂಗೋಲಜ್ಞ ಟಾಲೆಮಿ ಕೂಡ ಇದನ್ನು ಹೆಸರಿಸಿದ್ದಾನೆ.[೩೦]

ಇದೇ ಶತಮಾನದ ಮಳವಳ್ಳಿಯ ಕದಂಬ ಶಾಸನದಲ್ಲಿ ವೆಟ್ಟಕ್ಕಿ, ವೇಗೂರಂ, ಮರಿಯಸಾ, ಕೊಂಗಿನಗರಂ, ಮಟ್ಟಪಟ್ಟಿ, ಸೋಮಪಟ್ಟಿ, ಎಕ್ಕಟ್ಟಾ(ದ್ವಾ)ಹಾರ, ಕುಸ್ತದಪುಕ, ಕೋಣತಪುಕ, ಕುಸ್ದಮುಚ್ಚುಂಡಿ, ಅಪರಮುಚ್ಚುಂಡಿ, ಕಪ್ಪೆನ್ನಲಾ, ಕರಿಪೆನ್ನೂಲ ಎಂಬ ಊರ ಹೆಸರುಗಳಿವೆ. ಈ ಊರ ಹೆಸರುಗಳಲ್ಲಿ ಬಹಳಷ್ಟು ಕನ್ನಡ ಭಾಷೆಯ ಅಂಶಗಳಿವೆ. ನೆಟ್ಟಕ್ಕಿ, ವೇಗೂರಂ, ಮಟ್ಟಪಟ್ಟಿ ಮುಂತಾದವು ಕನ್ನಡ ಮೂಲದವೆಂಬ ಸಂಗತಿ ಎದ್ದು ಕಾಣುತ್ತದೆ. 'ವೇಗೂರಂ' ಎಂಬುದರ ಕೊನೆಯಲ್ಲಿಯೂ 'ಊರ್' ಆಕೃತಿಮಾ ಇರುವುದನ್ನು ಕಾಣಬಹುದು. ವೆಟ್ಟಕ್ಕಿ ಮತ್ತು ವೇಗೂರಗಳ ಆದಿಯಲ್ಲಿ ವಕಾರವಿರುವುದನ್ನು ಕಾಣಬಹುದು. ಅಂದು ಕನ್ನಡ ಶಬ್ದಗಳ ಆದಿಯಲ್ಲಿ ವಕಾರವು ಪ್ರಬಲವಾಗಿದ್ದುದರ ಸಂಕೇತ ಇವು. ಕುಸ್ದ ಮುಚ್ಚುಂಡಿ, ಅಪರಮುಚ್ಚುಂಡಿ ಎಂಬ ಗ್ರಾಮವಾಚಕಗಳಲ್ಲಿ 'ಮುಚ್ಚುಂಡಿ' ಎಂಬುದು ಉಭಯ ಸಾಮಾನ್ಯ ರೂಪವಿರುವುದನ್ನು ಗಮನಿಸಿದರೆ[೩೧] ಇಲ್ಲಿ 'ಕುಸ್ದ', ಎಂಬುದು ವಿಶೇಷಣ

೨೭. CII, I. p. 162-10th line of the Edict.

೨೮. ಅ. ಟಿ. ೨೩. ಈ ಶಾಸನ ಪಾಠ ಸಂಶಯಾಸ್ಪದವಾಗಿದೆ.

೨೯. *MAR*, 1917 p. 33–ಮಾಂಬಳ್ಳಿ ತಾಮ್ರಶಾಸನ.

೩೦. *Sources of Karnatak History*-I, p. 4.

೩೧. ಶಿಕಾರಿಪೂರ ತಾಲ್ಲೂಕಿನ ತಾಳಗುಂದ ಹೋಬಳಿಯಲ್ಲಿ ಈಗ ಇರುವ 'ಮಾಯಿ ತಮ್ಮನ ಮುಚಡಿ' ಮತ್ತು 'ಅಗ್ರಹಾರ ಮುಚಡಿ' ಎಂಬ ಊರುಗಳೇ ಪ್ರಸ್ತುತ ಶಾಸನದ 'ಮುಚ್ಚುಂಡಿ'ಗಳಾಗಿರುವ ಸಾಧ್ಯತೆ ಇದೆ.

ರೂಪದಲ್ಲಿ ಪ್ರಯೋಗವಾಗಿರುವುದನ್ನು ಕಾಣಬಹುದು. ' ಕುನ್ದತಪುಕಂ ' ಎಂಬುದರಲ್ಲಿಯೂ ಇದು ಕಂಡುಬರುತ್ತದೆ. ಆದುದರಿಂದ ಇಲ್ಲಿಯ 'ಕುನ್ದ' ಎಂಬುದು ಸ್ವತಂತ್ರವಾದ ಆಕೃತಿಮಾ ಎಂದು ಹೇಳಬಹುದು. ತಮಿಳಿನ 'ಕುನ್ರು' (ಗುಡ್ಡ, ಬೆಟ್ಟ ಎಂಬ ಅರ್ಥದಲ್ಲಿ) ಎಂಬುದು ಇದರ ಸಮಾನಾರ್ಥಕ ಶಬ್ದ. ಇಲ್ಲಿ ತಮಿಳಿನಲ್ಲಿಯ ವರ್ತ್ಸ್ಯ ತಕಾರಕ್ಕೆ ಬದಲಾಗಿ ಕನ್ನಡದಲ್ಲಿ 'ದಂತ್ಯ'ವಿರುವುದು ಸ್ಪಷ್ಟ . ಇದೇ ರೀತಿ ಹಲ್ಮಿಡಿ ಶಾಸನದ 'ಪೆತ್ತ'-'ಪತ್ತೊನ್ದಿ' ಎಂಬ ಪ್ರಯೋಗಗಳಲ್ಲಿಯೂ ವರ್ತ್ಸ್ಯ ತಕಾರವು ದಂತ್ಯವಾಗಿ ಪರಿವರ್ತಿಸಿರುವುದನ್ನು ಕಾಣಬಹುದು. ಇದರಿಂದ ಮೂಲದ್ರಾವಿಡದ ಈ ಧ್ವನಿಯು ಕ್ರಿ.ಶ. ನಾಲ್ಕನೆಯ ಶತಮಾನಕ್ಕಾಗಲೇ ಕನ್ನಡದಲ್ಲಿ ದಂತ್ಯವಾಗಿ ಪರಿವರ್ತಿಸಿತ್ತೆಂದು ಸಿದ್ಧವಾಗುತ್ತದೆ. ಇದೇ ಕಾರಣಕ್ಕಾಗಿ, ವರ್ತ್ಸ್ಯ ತಕಾರವು ಬದಲಾವಣೆಗೊಳ್ಳತೊಡಗಿದ್ದು ಕ್ರಿ.ಶ. ೭-೮ನೆಯ ಶತಮಾನಗಳ ತರುವಾಯದಲ್ಲಿ ಎಂದು ಹೇಳುವ ಡಾ॥ ಭ. ಕೃಷ್ಣಮೂರ್ತಿಯವರ ಅಭಿಪ್ರಾಯವು[೩೨] ಅಸಮರ್ಥನೀಯವೆನಿಸುತ್ತದೆ.

ಕುನ್ದತಪುಕಂ, ಕೋಣತಪುಕಂ ಎಂಬೆರಡು ಸ್ಥಳವಾಚಕಗಳಲ್ಲಿ 'ಪುಕಂ' ಎಂಬ ಸಾಧಾರಣ ಅಂಶ ಕಂಡುಬರುತ್ತದೆ. ಮೇಲೆ ತೋರಿಸಿರುವಂತೆ 'ಕುನ್ದ' ಎಂಬುದು ಸ್ವತಂತ್ರವಾಗಿ ಪ್ರಯೋಗಗೊಳ್ಳುವ ಆಕೃತಿಮಾ ಆಗಿದೆ. ಇದರಿಂದ 'ಕುನ್ದತ' 'ಕೋಣತ' ಎಂಬುವುಗಳಲ್ಲಿಯ 'ತ' ಎಂಬುದು ಒಂದು ಪ್ರತ್ಯಯವೆಂಬುದು ಸ್ಪಷ್ಟಪಡುತ್ತದೆ. ಈ 'ತ' ಷಷ್ಠೀ ವಿಭಕ್ತಿಯ ಪ್ರತ್ಯಯವಾಗಿರುವ ಸಾಧ್ಯತೆ ಇದೆ. ತುಳುವಿನಲ್ಲಿ ಈಗ ತ ಷಷ್ಠೀ ವಿಭಕ್ತಿ ಪ್ರತ್ಯಯವಾಗಿದೆ.[೩೩]

ವೇಗೂರಂ ಮತ್ತು ಕೊಂಗಿನಗರಂ ಎಂಬೆರಡು ಊರುಗಳಲ್ಲಿ (ಎರಡು ಸ್ವರಗಳ ಮಧ್ಯದಲ್ಲಿ ಮತ್ತು ಅನುನಾಸಿಕದ ಪರದಲ್ಲಿ) ಘೋಷಸ್ಪರ್ಶಧ್ವನಿ ಇರುವುದನ್ನು ಕಾಣಬಹುದು. ತಮಿಳಿನ ಪ್ರಾಚೀನ ಲೇಖನಗಳಲ್ಲಿ ಘೋಷಧ್ವನಿಗಳಿಗೆ ಪ್ರತ್ಯೇಕ ಸಂಜ್ಞೆಗಳಿರಲಿಲ್ಲವೆಂಬುದನ್ನು ಸ್ಮರಿಸಿದರೆ ಕನ್ನಡವು ಎರಡನೆಯ ಶತಮಾನಕ್ಕಾಗಲೇ ಸ್ವತಂತ್ರ ಅಸ್ತಿತ್ವ ಹೊಂದಿದ್ದುದು ಸ್ಪಷ್ಟವಾಗುತ್ತದೆ.

ಇನ್ನು 'ಕರಿಪೆನ್ನೂಲ' ಎಂಬುದರ ಅಂತ್ಯ ಲಕಾರ ರಕಾರದ ಪರಿವರ್ತನೆ ಆಗಿರುವ ಸಾಧ್ಯತೆ ಇದೆ. ಪ್ರಾಕೃತದಲ್ಲಿ ಇದು ಅಸಂಭವವೇನೂ ಇಲ್ಲ. 'ಪುಳುಮಾಯಿ' ಎಂಬ ಶಾತವಾಹನ ರಾಜನ ಹೆಸರು ದ್ರಾವಿಡಮೂಲದ್ದೆಂದು ವಿದ್ವಾಂಸರು ಸೂಚಿಸಿದ್ದಾರೆ.[೩೪] ಕೆಲವು ನಾಣ್ಯಗಳ ಮೇಲೆ ತೋರುವ 'ವಿಳಿವಾಯಕುರ'[೩೫] ಎಂಬುದೂ ಅಂಥದೇ ಒಂದು ಹೆಸರು.

ಈ ಸಂದರ್ಭದಲ್ಲಿ ಗ್ರಾಂಥಿಕವಾದ ಕೆಲವು ಪ್ರಾಚೀನ ಉಲ್ಲೇಖಗಳನ್ನು ಗಮನಿಸಬಹುದು. ಕ್ರಿಸ್ತಪೂರ್ವ ಯುಗದ ಎರಡು ಅಥವಾ ಮೂರನೆಯ ಶತಮಾನದಲ್ಲಿ ರಚಿಸಲ್ಪಟ್ಟದೆಂದು ತಿಳಿಯಲಾಗುವ ಪಾಣಿನಿಯ ಅಷ್ಟಾಧ್ಯಾಯಿಯಲ್ಲಿ ಗೋತ್ರ ನಾಮಗಳ ಪೈಕಿ 'ಕರ್ನಾಥಕ' ಎಂಬುದೂ ಒಂದು.[೩೬] ರಾಮಾಯಾಣದ 'ಕಿಷ್ಕಿಂಧೆ' ಮಹಾಭಾರತದ

೩೨. *Telugu Verbal Bases,* p. 71.

೩೩.. M. Mariappa Bhat. *Tulu-English Dictionary,* p. 116.

೩೪. R. S. Mugali, *Heritage of Karnataka,* pp. 40-50.

೩೫. Walter Elliot. *Coins of Southern India,* B-No 39. p. 152.

೩೬. ಪಾಣಿನಿಯ ಅಷ್ಟಾಧ್ಯಾಯಿ-II, IV ಸೂತ್ರ ೬೩.

'ವನವಾಸಿ'ಗಳು ಕರ್ನಾಟಕದ ಭಾಗಗಳೆಂಬುದನ್ನು ನಿರ್ವಿವಾದವಾಗಿ ಒಪ್ಪಲಾಗಿದೆ. ಆದರೆ ಮಹಾಭಾರತದಲ್ಲಿಯ 'ಕರ್ಣಾಟಕ' ಎಂಬ ಉಲ್ಲೇಖಗಳಿಗೆ ಪ್ರತಿಯಾಗಿ 'ಕುಂತಲ' ಎಂಬ ಪಾಠವನ್ನು ಪುಣೆಯ ಭಂಡಾರಕರ ಸಂಸ್ಥೆಯವರು ಅಂಗೀಕರಿಸಿರುವುದನ್ನು ಡಾ॥ ಮುಗಳಿ ಎತ್ತಿತೋರಿದ್ದಾರೆ. ರಾಮಾಯಣ-ಮಹಾಭಾರತಗಳ ರಚನಾ ಕಾಲವು ತೀರ ಅನಿರ್ದಿಷ್ಟವಾಗಿದೆ. ಈ ಮಾತು ಪ್ರಾಚೀನ ತಮಿಳು ಕೃತಿಗಳಾದ 'ಶಿಲಪ್ಪದಿಗಾರಂ'ದಂಥ ಕಾವ್ಯಗಳಿಗೂ ಅನ್ವಯಿಸುತ್ತದೆ. ರಾಮಾಯಣ-ಮಹಾಭಾರತದ ದೊಡ್ಡಗಾತ್ರ ಕ್ರಿ.ಶ ೪ನೆಯ ಶತಮಾನದಷ್ಟೊತ್ತಿಗೆ ಸಿದ್ಧವಾಗಿತ್ತೆಂದು ಭಾವಿಸಲಾಗುತ್ತಿದೆ.

ಕ್ರಿ.ಶ. ಎರಡನೆಯ ಶತಮಾನದ ಬೌದ್ಧಗ್ರಂಥ ಲಲಿತ ವಿಸ್ತರದ 'ಕನಾರಿ' ಎಂಬ ಲಿಪಿಯ ಹೆಸರು, ಶೂದ್ರಕ ಕವಿಯ ಮೃಚ್ಛಕಟಿಕದಲ್ಲಿ ಬಂದಿರುವ 'ಕಣ್ಣಾಡಕಲಹ ಪ್ರಯೋಗ', ಹಾಲರಾಜನ ಗಾಥಾಸಪ್ತಶತಿಯಲ್ಲಿ ಬಂದಿರುವ 'ತೀರ್' ಮುಂತಾದ ಶಬ್ದಗಳು - ಇವೇ ಮೊದಲಾದುವನ್ನು ಗಮನಕ್ಕೆ ತೆಗೆದುಕೊಂಡರೆ 'ಕರ್ನಾಟಕ' ಎಂಬ ಜನಪದವು ಕ್ರಿ.ಶ. ಪೂರ್ವ ಮೂರು ಅಥವಾ ಎರಡನೆಯ ಶತಮಾನದ ಅವಧಿಯಲ್ಲಿ ಅಸ್ತಿತ್ವದಲ್ಲಿತ್ತು ಎಂದು ತಿಳಿಯುತ್ತದೆ. ಅದರ ಸ್ವತಂತ್ರ ಅಸ್ತಿತ್ವ ನಿರ್ಮಾಣದಲ್ಲಿ ಪ್ರಾಕೃತವು ಸಾಕಷ್ಟು ಪ್ರಭಾವ ಬೀರಿದೆ. ಅನೇಕರಿಗೆ ಅದೂ ಒಂದು ಪ್ರಾಕೃತವೇ ಎಂಬ ಭ್ರಮ ಉಂಟಾಗುವಂತಾಗಿದೆ. ಕನಿಷ್ಠಪಕ್ಷ ಕೆಲವರಾದರೂ ಆ ರೀತಿ ಭಾವಿಸುತ್ತಿದ್ದರೆಂಬುದಕ್ಕೆ ಶಾಸನಾಧಾರ ಕೂಡ ಇದೆ.[೨೨] ಆದ್ದರಿಂದ ಕನ್ನಡವು ತಮಿಳಿನಿಂದ ಪ್ರತ್ಯೇಕಗೊಂಡದ್ದು ಪ್ರಾಕೃತ ಶಾಸನಗಳ ಅವಧಿಯಲ್ಲಿಯೇ - ಎಂದರೆ ಮೊದಲ ಹಂತದಲ್ಲಿಯೇ ಎಂದು ಹೇಳಬಹುದು.

*ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ೬೮-೧, ೧೯೮೩*
*ನೇಗಿನಹಾಳ ಪ್ರಬಂಧಗಳು, ೧೯೯೯, ಪು. ೨೩-೩೧*

---

೨೨. *Karnatak Inscriptions.* Vol. I, No. 2 699 A.D.

# ೪. ಪಂಪನ ತಮ್ಮ ಜಿನವಲ್ಲಭನ ಶಿಲಾಶಾಸನ

● ಜಿ. ಎಸ್. ಗಾಯಿ

ಈ ಶಾಸನವು ಆಂಧ್ರಪ್ರದೇಶದ ಕರೀಂನಗರ ಜಿಲ್ಲೆಯ ಅದೇ ತಾಲೂಕಿನ ಕುರಿಕ್ಯಾಲ ಎಂಬ ಗ್ರಾಮದ ಉತ್ತರಕ್ಕೆ ಸುಮಾರು ೫ ಫರ್ಲಾಂಗು ದೂರದಲ್ಲಿರುವ 'ಬೊಮ್ಮಲಮ್ಮ ಗುಟ್ಟ' ಎಂದು ಕರೆಯಲ್ಪಡುವ ಬೆಟ್ಟದ ಮೇಲಿನ ಒಂದು ದೊಡ್ಡದಾದ ಬಂಡೆಗಲ್ಲಿನ ಕೆಳಭಾಗದಲ್ಲಿ ಕೊರೆಯಲ್ಪಟ್ಟಿದೆ. ಇದನ್ನು ಮೊಟ್ಟಮೊದಲು ಕಂಡುಹಿಡಿದು ವಿದ್ವಾಂಸರ ಗಮನಕ್ಕೆ ತಂದುಕೊಟ್ಟವರು ಆಂಧ್ರಪ್ರದೇಶ ಸರಕಾರದ ಪುರಾತತ್ವಶಾಖೆಯ ಅಧಿಕಾರಿಗಳು. ಆ ಶಾಖೆಯಲ್ಲಿ ಉಪನಿರ್ದೇಶಕರಾಗಿದ್ದ ಡಾ. ಎನ್. ವೆಂಕಟರಮಣಯ್ಯನವರು ೧೯೬೬ನೆಯ ದಿಶೆಂಬರ ತಿಂಗಳಲ್ಲಿ ಮೈಸೂರಿನಲ್ಲಿ ನಡೆದ ಇತಿಹಾಸ ಸಮ್ಮೇಳನಕ್ಕೆಂದು ಬಂದಾಗ ಈ ಶಾಸನದ ಬಗ್ಗೆ ನನಗೆ ತಿಳಿಸಿದರು. ಮತ್ತು ಅದರ ಬಗ್ಗೆ ಒಂದು ಲೇಖನವನ್ನು ಆ ಸಮ್ಮೇಳನದಲ್ಲಿ ಓದಿದರು. ಹಾಗೂ "ಭಾರತಿ" ಎಂಬ ತೆಲುಗು ಮಾಸಪತ್ರಿಕೆಯ ೧೯೬೭ನೆಯ ಮಾರ್ಚಿ ತಿಂಗಳ ಸಂಚಿಕೆಯಲ್ಲಿ 'ಜಿನವಲ್ಲಭುನಿ ಗಂಗಾಧರಂ ಶಿಲಾಶಾಸನಮು' ಎಂಬ ಶೀರ್ಷಿಕೆಯಲ್ಲಿ ಈ ಶಾಸನವನ್ನು ಅವರು ಪ್ರಸಿಟದ್ಧಿಪಡಿಸಿದರು[1]. ಆಮೇಲೆ ಅದೇ ಶಾಖೆಯ ನಿರ್ದೇಶಕರಾದ ಶ್ರೀ ವಹೀದಖಾನರು ನನ್ನ ಕೋರಿಕೆಯ ಮೇರೆಗೆ ಈ ಶಾಸನದ ಪಡಿಯಚ್ಚನ್ನು ನನಗೆ ಕಳುಹಿಸಿಕೊಟ್ಟರು[2]. ಈ ಪಡಿಯಚ್ಚು ಅಷ್ಟು ಸಮಾಧಾನಕರವಿಲ್ಲದ್ದರಿಂದ ಮೈಸೂರಿನಲ್ಲಿರುವ ಭಾರತ ಸರಕಾರದ ಶಾಸನಶಾಖೆಯ ವತಿಯಿಂದ ೧೯೬೮ನೆಯ ದಿಶೆಂಬರ ೨೬ ಹಾಗೂ ೨೭ರಂದು ಶಾಸನವಿದ್ದ ಸ್ಥಳಕ್ಕೆ ಹೋಗಿ ಅಲ್ಲಿಯ ಪರಿಸರವನ್ನವಲೋಕಿಸಿ ಶಾಸನದ ಮೂಲಪಾಠವನ್ನು ಸ್ಥಳದಲ್ಲಿಯೇ ಪರೀಕ್ಷಿಸಿ ಅಭ್ಯಸಿಸಿ ಅದರ ಶುದ್ಧವಾದ ಪಡಿಯಚ್ಚನ್ನೂ ಶಾಸನದ ಮೇಲ್ಭಾಗದಲ್ಲಿರುವ ಪ್ರತಿಮೆಗಳ ಛಾಯಾಚಿತ್ರಗಳನ್ನೂ ದೊರಕಿಸಿಕೊಂಡು ಬಂದೆನು. ಅವುಗಳ ಸಹಾಯದಿಂದಲೇ ಶಾಸನದ ಮೂಲಪಾಠವನ್ನೂ ಛಾಯಾಚಿತ್ರಗಳನ್ನೂ ಇಲ್ಲಿ ಪ್ರಕಟಿಸಲಾಗಿದೆ.

ಮೇಲೆ ನಮೂದಿಸಿದ ಕುರಿಕ್ಯಾಲ ಗ್ರಾಮವು ಕರೀಂನಗರದಿಂದ ಸುಮಾರು ೧೦ ಮೈಲು ದೂರದಲ್ಲಿದೆ. ಈ ಗ್ರಾಮಕ್ಕೆ ಸೇರಿದಂತೆ ನೇಲಕೊಂಡಪಲ್ಲಿ ಮತ್ತು ಕೊಂಡನಪಲ್ಲಿ ಎಂಬ ಎರಡು ಉಪಗ್ರಾಮಗಳಿವೆ. ಈ ಮೂರೂ ಗ್ರಾಮಗಳ ಉತ್ತರ ದಿಶೆಯಲ್ಲಿ 'ಬೊಮ್ಮಲಮ್ಮಗುಟ್ಟ' ಎಂಬ ಬೆಟ್ಟ ಮತ್ತು ಅದರ ಉತ್ತರಕ್ಕೆ ಹೊಂದಿಕೊಂಡು ಬೇರೆ ಎರಡು ಬೆಟ್ಟಗಳಿವೆ. ಹೀಗೆ ಈ ಸ್ಥಳದಲ್ಲಿ ಮೂರು ಬೆಟ್ಟಗಳ ಸಾಲುಗಳಿದ್ದು ಅವುಗಳ ದಕ್ಷಿಣ ಭಾಗಕ್ಕಿದ್ದ 'ಬೊಮ್ಮಲಮ್ಮಗುಟ್ಟ'ವೆಂಬ ಬೆಟ್ಟದ ದಕ್ಷಿಣ ತುದಿಯ ಶಿಖರದಲ್ಲಿರುವ ದೊಡ್ಡ ಬಂಡೆಗಲ್ಲಿನ ಮೇಲೆ ಪ್ರಸ್ತುತ ಶಾಸನವನ್ನು ಕೊರೆಯಲಾಗಿದೆ. ಈ ಬೆಟ್ಟಗಳು ಕುರಿಕ್ಯಾಲಹಳ್ಳಿಯ ಸೀಮೆಗೆ ಸೇರಿದ್ದು ಡಾ. ವೆಂಕಟರಮಣಯ್ಯನವರು ಹೇಳಿದಂತೆ ಗಂಗಾಧರಂ ಹಳ್ಳಿಯ ಸೀಮೆಯಲ್ಲಿಲ್ಲ.

---

೧. ಈ ತೆಲುಗು ಲೇಖನದ ಕನ್ನಡ ಅನುವಾದವು 'ಪ್ರಬುದ್ಧ ಕರ್ಣಾಟಕ', ಸಂಪುಟ ೫೦, ಸಂಚಿಕೆ ೩(೧೯೬೮), ಪುಟ ೨೩-೪೧ರಲ್ಲಿ ಪ್ರಸಿದ್ಧವಾಗಿದೆ. ಈ ಅನುವಾದವನ್ನು ಶ್ರೀ ಸೀತಾರಾಮ ಜಹಾಗೀರದಾರ ಅವರು ಮಾಡಿದ್ದಾರೆ.

೨. ಅದಕ್ಕಾಗಿ ಅವರಿಗೆ ನನ್ನ ಕೃತಜ್ಞತೆಗಳು.

ಗಂಗಾಧರಂ ಹಳ್ಳಿಯು ಈ ಬೆಟ್ಟಗಳಿಂದ ಉತ್ತರಕ್ಕೆ ಸುಮಾರು ಎರಡು ಮೈಲಿನಷ್ಟು ದೂರದಲ್ಲಿದೆ. ಆದುದರಿಂದ ಈ ಶಾಸನವನ್ನು 'ಕುರಿಕ್ಯಾಲ ಶಾಸನ'ವೆಂದು ಕರೆಯುವುದು ಹೆಚ್ಚು ಸೂಕ್ತ. ಶಾಸನದ ಮೇಲ್ಗಡೆ ಒಂದು ದೇವಿಯ ಪ್ರತಿಮೆಯನ್ನು ಕೆತ್ತಿರುವುದರಿಂದ ಈ ಬೆಟ್ಟಕ್ಕೆ 'ಬೊಮ್ಮಲಮ್ಮಗುಟ್ಟ' ಅಂದರೆ ದೇವಿಯ ಬೊಂಬೆ ಇರುವ ಬೆಟ್ಟ ಎಂಬ ತೆಲುಗು ಹೆಸರು ರೂಢಿಯಿದೆ. ಈ ದೇವಿಯ ಮೂರ್ತಿಯೇ ಶಾಸನದಲ್ಲಿ ಉಲ್ಲೇಖಿಸಿರುವ ಚಕ್ರೇಶ್ವರಿಯ ಮೂರ್ತಿ. ಜನರು ಈ ಮೂರ್ತಿಗೆ ಕೆಂಪು ಬಣ್ಣವನ್ನು ಬಳಿದಿರುವುದರಿಂದ ಕುರಿಕ್ಯಾಲ ಗ್ರಾಮದಿಂದಲೇ ಅದು ಕಣ್ಣಿಗೆ ಎದ್ದು ಕಾಣುವುದು. ಶಾಸನವಿದ್ದ ಬಂಡೆಗಲ್ಲು ಭೂಮಿಯಿಂದ ಸುಮಾರು ೨೦೦ ಅಡಿಯಷ್ಟು ಎತ್ತರದಲ್ಲಿದೆ. ಅದನ್ನು ತಲುಪುವುದಕ್ಕೆ ಸರಿಯಾದ ಮೆಟ್ಟಲುಗಳಾಗಲೀ ಮಾರ್ಗವಾಗಲೀ ಇರುವುದಿಲ್ಲ. ಬಂಡೆಗಳ ಮೇಲಿಂದಲೇ ಹಾಯ್ದು ಆ ಸ್ಥಳವನ್ನು ಮುಟ್ಟುವುದು ದುಸ್ತರವಾಗುತ್ತದೆ. ಶಾಸನವಿದ್ದ ದೊಡ್ಡ ಬಂಡೆಗಲ್ಲು ಸುಮಾರು ೩೦ ಅಡಿಯಷ್ಟು ಎತ್ತರ ಹಾಗೂ ೨೫ ಅಡಿಯಷ್ಟು ಅಗಲವಾಗಿದೆ. ಅದರ ಕೆಳಗಡೆಯ ಮಧ್ಯಭಾಗದಿಂದ ಸುಮಾರು ೭ ಅಡಿ ಎತ್ತರದಲ್ಲಿ ಶಾಸನವನ್ನು ಕೊರೆಯಲಾಗಿದೆ. ಶಾಸನವು ಸುಮಾರು ೧೫ ಅಡಿ ಉದ್ದ ಹಾಗೂ ೨ ೧/೨ ಅಡಿ ಅಗಲದಷ್ಟು ಸ್ಥಳವನ್ನು ಆಕ್ರಮಿಸಿದೆ. ಅಕ್ಷರಗಳನ್ನು ಕೊರೆಯಲಿಕ್ಕೆ ಯೋಗ್ಯವಾಗುವಂತೆ ಕಲ್ಲುಕುಟಿಗನು ಈ ಸ್ಥಳವನ್ನು ಸಮಪಾತಳಿಯಾಗಿ ಸಿದ್ಧಪಡಿಸಿದ್ದಾನೆ.

ಶಾಸನದ ಮೇಲ್ಭಾಗದಲ್ಲಿ ಸುಮಾರು ೪ ೧/೨ ಅಡಿಯಷ್ಟು ಎತ್ತರವಾದ ಜೈನರ ಶಾಸನದೇವತೆ ಚಕ್ರೇಶ್ವರಿಯ ಸುಂದರವಾದ ಪ್ರತಿಮೆಯನ್ನೂ ಅದರ ಕೆಳಗಡೆ ಚಕ್ರೇಶ್ವರಿಯ ವಾಹನವಾದ ಗರುಡಮೂರ್ತಿಯನ್ನೂ ಕೊರೆಯಲಾಗಿದೆ. ಗರುಡಮೂರ್ತಿಯ ಎತ್ತರ ೧ ಅಡಿ. ಚಕ್ರೇಶ್ವರಿಯ ಎಡಭಾಗದಲ್ಲಿ ಮೂರು ಮತ್ತು ಬಲಭಾಗದಲ್ಲಿ ಮೂರು ಹೀಗೆ ಆರು ಜಿನಪ್ರತಿಮೆಗಳನ್ನು ಎರಡು ಮಾಡಗಳಲ್ಲಿ ಕೊರೆಯಲಾಗಿದೆ. ಪ್ರತಿಯೊಂದು ಪ್ರತಿಮೆಯು ಸುಮಾರು ೨ ೧/೪ ಅಡಿಯಷ್ಟು ಎತ್ತರವಿದೆ. ಒಂದೊಂದು ಮಾಡಿನ ಮೇಲ್ಗಡೆ ಸುಮಾರು ೨ ೧/೪ ಅಡಿಯಷ್ಟು ಎತ್ತರದ ಚಾಮರಧಾರಿಯಾದ ದೇವಿಯ ವಿಗ್ರಹವಿದೆ. ಮತ್ತು ಚಕ್ರೇಶ್ವರಿಯ ಮೇಲ್ಭಾಗದಲ್ಲಿ ಸುಮಾರು ೭ ಅಡಿಯಷ್ಟು ಎತ್ತರದ ಎರಡು ಜೈನ ವಿಗ್ರಹಗಳಿವೆ. ಹೀಗೆ ಬಂಡೆಗಲ್ಲಿನ ಮೇಲೆ ಎಲ್ಲಕ್ಕೂ ಮೇಲ್ಭಾಗದಲ್ಲಿ ಎರಡು ಜೈನ ವಿಗ್ರಹಗಳು, ಅವುಗಳ ಕೆಳಗಡೆ ಚಕ್ರೇಶ್ವರಿಯ ಮೂರ್ತಿ, ಮೂರ್ತಿಯ ಎಡಗಡೆ ಮತ್ತು ಬಲಗಡೆ ಮೇಲ್ಭಾಗಕ್ಕೆ ಚಾಮರಧಾರಿ ದೇವಿಯರ ವಿಗ್ರಹಗಳು, ಅದೇ ಮೂರ್ತಿಯ ಎಡಭಾಗದಲ್ಲಿ ಮೂರು ಹಾಗೂ ಬಲಭಾಗದಲ್ಲಿ ಮೂರು ಹೀಗೆ ಆರು ಜಿನಪ್ರತಿಮೆಗಳು, ಚಕ್ರೇಶ್ವರಿಯ ಕೆಳಗಡೆ ಗರುಡಮೂರ್ತಿ ಮತ್ತು ಈ ಮೂರ್ತಿಯ ಕೆಳಭಾಗದಲ್ಲಿ ಶಾಸನವನ್ನು ಕೆತ್ತಲಾಗಿದೆ. ಇವೇ ಪ್ರತಿಮೆಗಳು ಶಾಸನದಲ್ಲಿ ಉಕ್ತವಾದ ಚಕ್ರೇಶ್ವರಿಯನ್ನೂ ಜಿನಪ್ರತಿಮೆಗಳನ್ನೂ ಜಿನಬಿಂಬಗಳನ್ನೂ ಪ್ರತಿನಿಧಿಸುತ್ತವೆ.

ಶಾಸನದಲ್ಲಿ ಒಟ್ಟು ಹನ್ನೊಂದು ಪಂಕ್ತಿಗಳಿದ್ದು ಹತ್ತು ಪಂಕ್ತಿಗಳು ೧೪ ೧/೨ ಅಡಿಯಷ್ಟು ಉದ್ದವಾಗಿಯೂ ಕೊನೆಯ ಪಂಕ್ತಿಯು ಸುಮಾರು ೪ ೧/೨ ಅಡಿಯಷ್ಟು ಉದ್ದವಾಗಿಯೂ ಇರುತ್ತವೆ. ಶಾಸನವನ್ನು ಕನ್ನಡ ಲಿಪಿಯಲ್ಲಿ ಬರೆಯಲಾಗಿದ್ದು ಅಕ್ಷರಗಳು ಎರಡನೆಯ

ಅರಿಕೇಸರಿಯ ವೇಮುಲವಾಡ ಶಾಸನದ[1] ಅಕ್ಷರಗಳನ್ನೂ ಮೂರನೆಯ ಅರಿಕೇಸರಿಯ ಪರಭಣಿ ತಾಮ್ರಶಾಸನದ[2] ಅಕ್ಷರಗಳನ್ನೂ ಹೋಲುತ್ತವೆ. ಪ್ರತಿಯೊಂದು ಅಕ್ಷರದ ಪ್ರಮಾಣ ಸುಮಾರು ೧ $\frac{೧}{೨}$ ಅಂಗುಲವಾಗಿದ್ದು ಅವುಗಳ ಕೆತ್ತನೆಯ ಕೆಲಸವು ಸುಂದರವಾಗಿಯೂ, ಸ್ಪಷ್ಟವಾಗಿಯೂ ಶುದ್ಧವಾಗಿಯೂ ಇರುತ್ತದೆ. ಅಲ್ಲಲ್ಲಿ ಕಲ್ಲಿನ ಚೂರುಗಳು ಉದುರಿಹೋದದ್ದರಿಂದ ಕೆಲವು ಅಕ್ಷರಗಳು ನಶಿಸಿಹೋಗಿವೆಯಾದರೂ ಅವುಗಳನ್ನು ಸುಲಭವಾಗಿ ಗುರುತಿಸಬಹುದು.

ಪದಾದಿಯ ಸ್ವರಗಳಲ್ಲಿ ಅ-ಕಾರ (ಪಂಕ್ತಿ ೪-೫), ಇ-ಕಾರ (ಪಂಕ್ತಿ ೬), ಎ-ಕಾರ (ಪಂಕ್ತಿ ೫,೮,೧೦) ಮತ್ತು ಒ-ಕಾರ (ಪಂಕ್ತಿ ೧೦)ಗಳನ್ನು ಉಪಯೋಗಿಸಲಾಗಿದೆ. ಪದಾದಿ ಮತ್ತು ಪದಮಧ್ಯದಲ್ಲಿ ಬರುವ ಹ್ರಸ್ವ ಹಾಗೂ ದೀರ್ಘ ಎ-ಏ ಮತ್ತು ಒ-ಓ ಕಾರಗಳ ರೂಪದಲ್ಲಿ ವ್ಯತ್ಯಾಸವಿಲ್ಲ. ಅವುಗಳನ್ನು ಸಂದರ್ಭಾನುಸಾರವಾಗಿ ತಿಳಿದುಕೊಳ್ಳಬೇಕಾಗುವುದು. ಅನುಸ್ವಾರವನ್ನು ಅಕ್ಷರಗಳ ಮೇಲ್ಭಾಗದಲ್ಲಿ ಸ್ವಲ್ಪ ಬಲಗಡೆಗೆ ಚಿಕ್ಕ ಬಿಂದುವಿನಿಂದ ನಿರ್ದೇಶಿಸಲಾಗಿದೆ. ಅದು ತ-ವರ್ಗ ಮತ್ತು ಡ-ವರ್ಗದೊಡನೆ ಕೂಡಿದಾಗ ವರ್ಗೀಯ ಅನುನಾಸಿಕ ಸಂಜ್ಞೆಯೊಡನೆ ಬರೆಯಲ್ಪಟ್ಟಿದೆ. (ಉದಾ: ಕೊಣ್ಡಕುನ್ದೆ, ಪಂಕ್ತಿ ೨). ಣ-ಕಾರ ಮತ್ತು ನ-ಕಾರದ ದ್ವಿತ್ವಾಕ್ಷರಗಳನ್ನು ಒಂದೇ ಸಂಜ್ಞೆಯಿಂದ ಸೂಚಿಸಲಾಗಿದೆ. (ಉದಾ: ಗುಣಾರ್ಣ್ಣವ, ಪಂಕ್ತಿ ೩; ಬಗೆವನ್ನೆವರಂ, ಪಂಕ್ತಿ ೫). ರೇಫದಿಂದೊಡಗೂಡಿದ ವ್ಯಂಜನಾಕ್ಷರವು ಪ್ರಾಯಶಃ ದ್ವಿತ್ವವಾಗಿದೆ. (ಉದಾ: ಮರ್ಮ್ಮಂ, ಪಂಕ್ತಿ ೧; ಧರ್ಮ್ಮಪುರಂ, ಪಂಕ್ತಿ ೨ ; ಕೀರ್ತ್ತಿ, ಮೂರ್ತ್ತಿ, ಪಂಕ್ತಿ ೬ ಇತ್ಯಾದಿ). ಆದರೆ ವಿಕ್ರಮಾರ್ಜುನ (ಪಂಕ್ತಿ ೭) ಎಂಬ ಶಬ್ದದಲ್ಲಿ ದ್ವಿತ್ವವಿಲ್ಲ. ಮತ್ತು ಪಂಚಾರ್ಷೇಯ (ಪಂಕ್ತಿ ೧) ಎಂಬ ಶಬ್ದದಲ್ಲಿ ಪಾಣಿನಿಯ ಅಷ್ಟಾಧ್ಯಾಯಿಯ 'ಶರೋಽಚಿ' (೮.೪.೪೯) ಸೂತ್ರದ ಪ್ರಕಾರ ದ್ವಿತ್ವವಾಗುವುದಿಲ್ಲ. ಧರ್ಮ್ಮಪುರಂ ಮೆನ್ದು (ಪಂಕ್ತಿ ೭) ಎಂಬ ಶಬ್ದದಲ್ಲಿಯ ಅನುಸ್ವಾರವು ಅನಾವಶ್ಯಕ.

ಶಾಸನವು ಕನ್ನಡ, ಸಂಸ್ಕೃತ ಮತ್ತು ತೆಲುಗು ಹೀಗೆ ಮೂರು ಭಾಷೆಗಳಲ್ಲಿ ಬರೆಯಲ್ಪಟ್ಟಿದೆ. ಪ್ರಾರಂಭದಲ್ಲಿ 'ಓಂ ನಮಃ ಸಿದ್ದೇಭ್ಯಃ' ಎಂಬ ಸಂಸ್ಕೃತ ವಾಕ್ಯದ ನಂತರ ದೀರ್ಘವಾದ ಒಂದು ಕನ್ನಡ ವಾಕ್ಯವು ಗದ್ಯದಲ್ಲಿದೆ. ತರುವಾಯ ಮೂರು ಸಂಸ್ಕೃತ ಪದ್ಯಗಳೂ ಆರು ಕನ್ನಡ ಪದ್ಯಗಳೂ ಹಾಗೂ ಮೂರು ತೆಲುಗು ಪದ್ಯಗಳೂ ಬರುತ್ತವೆ. ಅದಾದನಂತರ ಕೊನೆಗೆ ಮತ್ತೊಂದು ಕನ್ನಡ ವಾಕ್ಯವು ಗದ್ಯದಲ್ಲಿದೆ. ಸಂಸ್ಕೃತ ಮತ್ತು ಕನ್ನಡ ಪದ್ಯಗಳನ್ನು ವೃತ್ತ ಎಂದೂ ತೆಲುಗು ಪದ್ಯಗಳನ್ನು ಕಂದ ಎಂದೂ ಶಾಸನದಲ್ಲಿ ಬರೆದಿದೆ. ಸಂಸ್ಕೃತ ವೃತ್ತಗಳಲ್ಲಿ ೨ ಶಾರ್ದೂಲವಿಕ್ರೀಡಿತ ಮತ್ತು ೧ ಪೃಥ್ವೀ ಹಾಗೂ ಕನ್ನಡ ವೃತ್ತಗಳಲ್ಲಿ ೪ ಚಂಪಕಮಾಲೆ, ೧ ಮತ್ತೇಭವಿಕ್ರೀಡಿತ ಹಾಗೂ ೧ ತರಳ ಇರುತ್ತವೆ. ಸಂಸ್ಕೃತ ಹಾಗೂ ಕನ್ನಡ ಭಾಷೆಗಳು ಶುದ್ಧವಾಗಿ ಬರೆಯಲ್ಪಟ್ಟವೆ. ತೆಲುಗು ಕಂದ ಪದ್ಯಗಳು ಆ ಭಾಷೆಯಲ್ಲಿ ಇದುವರೆಗೆ ದೊರೆತ ಅತ್ಯಂತ ಪ್ರಾಚೀನವಾದ ಕಂದಪದ್ಯಗಳೆಂದೂ ಈ ಪದ್ಯಗಳ ಭಾಷೆಯಲ್ಲಿ ಕೆಲವು ದೋಷಗಳಿದ್ದು ಲಿಪಿಕಾರನಿಗೆ ತೆಲುಗು ಭಾಷೆಯಲ್ಲಿ ಅಷ್ಟೊಂದು ಪರಿಣತಿ ತೋರುವುದಿಲ್ಲವೆಂದೂ ಡಾ.

1. N. Venkataramanayya, *The Chalukyas of Vemulavada*, pp. 82-92 and plates.
2. G. H. Kkhre, *Sources of the Medieval History of the Deccan* Vol. II, pp. 3 3ff.

ವೆಂಕಟರಮಣಯ್ಯನವರು ಹೇಳುತ್ತಾರೆ.

ಮೇಲೆ ಹೇಳಿದಂತೆ ಶಾಸನವು 'ಓಂ ನಮಃ ಸಿದ್ಧೇಭ್ಯಃ' ಎಂಬ ಸಂಸ್ಕೃತ ವಾಕ್ಯದಿಂದ ಆರಂಭವಾಗುತ್ತದೆ. ಇದರ ಅರ್ಥ 'ಸಿದ್ಧರಿಗೆ ನಮಸ್ಕಾರಗಳು'. ಮುಂದೆ ಶಾಸನದಲ್ಲಿ ಜಿನವಲ್ಲಭನು ಜೈನಧರ್ಮದ ಅಭ್ಯುದಯಕ್ಕಾಗಿ ಮಾಡಿದ ಕಾರ್ಯಗಳನ್ನು ವಿವರಿಸುವುದರಿಂದ ಮತ್ತು ಇದನ್ನು ಜೈನ ಶಾಸನವೆಂದು ಉಲ್ಲೇಖಿಸಿರುವುದರಿಂದ ಇಲ್ಲಿ ಉಕ್ತರಾದ ಸಿದ್ಧರು ಜಿನಮತಕ್ಕೆ ಸಂಬಂಧಿಸಿದ ಸಿದ್ಧರೆಂದು ತಿಳಿಯಬೇಕು. ಮುಂದಿನ ದೀರ್ಘವಾದ ಕನ್ನಡ ವಾಕ್ಯದಲ್ಲಿ ಜಿನವಲ್ಲಭನ ಪೂರ್ವಜರ ಬಗ್ಗೆ ಮತ್ತು ಅವನು ಮಾಡಿದ ಕಾರ್ಯಗಳ ಬಗ್ಗೆ ವಿವರಿಸಲಾಗಿದೆ. ಜಿನವಲ್ಲಭನು ಸಕಲ ಕಲಾಶಾಸ್ತ್ರದಲ್ಲಿ ನಿಪುಣನೂ ಭವ್ಯ ರತ್ನಾಕರನೂ ಗುಣಪಕ್ಷಪಾತಿಯೂ ಆಗಿದ್ದಾನೆಂದು ವರ್ಣಿಸಲಾಗಿದೆ. ಅವನು ವೆಂಗಿನಾಡಿನ ಸಪ್ತಗ್ರಾಮಗಳೊಳಗಿನ ವಂಗಿಪಜ್ಜು ಎಂಬ ಊರಿನ ಕಮ್ಮೆ ಬ್ರಾಹ್ಮಣನೂ ಜಮದಗ್ನಿ ಪಂಚಾರ್ಷೇಯ ಶ್ರೀವತ್ಸ ಗೋತ್ರದವನೂ ಆದ ಗುಣ್ಡಕಜ್ಜದ ನಿಡುಂಗೊಣ್ಡೆಯ ಅಭಿಮಾನಚನ್ದ್ರನ ಮೊಮ್ಮಗ ಭೀಮಪಯ್ಯನ ಮಗನೆಂದೂ ಬೆಳ್ವೊಲದೊಳಗಿನ ಅಣ್ಣಿಗೆಱೆಯ ಜೋಯಿಸ ಸಿಂಘನ ಮೊಮ್ಮಗಳಾದ ಅಬ್ಬಣಬ್ಬೆಯ ಮಗನೆಂದೂ ಹೇಳಿದೆ. ಮುಂದೆ ಜಿನವಲ್ಲಭನು ಪಂಪನ ತಮ್ಮನೆಂದು ಹೇಳಿಕೊಂಡಿರುವುದರಿಂದ ಈ ಕನ್ನಡ ಗದ್ಯಭಾಗವು ಪಂಪನ ಪೂರ್ವಜರ ಬಗ್ಗೆ ತಿಳಿದುಕೊಳ್ಳುವುದಕ್ಕೆ ಬಹಳ ಮಹತ್ವದ್ದಾಗಿದೆ. ಈ ವಿಷಯವನ್ನು ಮುಂದೆ ವಿವೇಚಿಸಲಾಗುವುದು. ಇದೇ ವಾಕ್ಯದಲ್ಲಿ ಜಿನವಲ್ಲಭನು ಕೊಣ್ಡಕುನ್ದಾನ್ವಯದ, ದೇಸಿಯ ಗಣದ, ಪುಸ್ತಕಗಚ್ಛದ ಮತ್ತು ಪಣ್ಡರಂಗವಲ್ಲಿಯ ಜಯಣನ್ದಿಸಿದ್ಧಾನ್ತದೇವರ ಶಿಷ್ಯನೆಂದು ಹೇಳಿದೆ. ಈ ಜಯಣನ್ದಿಯು ಪಂಪನು ತನ್ನ ಗುರುಪರಂಪರೆಯನ್ನು ವಿವರಿಸುವಾಗ ಉಲ್ಲೇಖಿಸಿದ ದೇವೇಂದ್ರಮುನಿಯ ಶಿಷ್ಯನಾದ ಜಯನನ್ದಿಯೇ[1] ಆಗಿರಬೇಕು. ಅಂದರೆ ಜಯನನ್ದಿಯು ಪಂಪ ಹಾಗೂ ಆತನ ತಮ್ಮ ಜಿನವಲ್ಲಭ ಇಬ್ಬರಿಗೂ ಗುರುವಾಗಿದ್ದನೆಂದು ತಿಳಿಯುವುದು. ಜಿನವಲ್ಲಭನು ಸಬ್ಬಿನಾಡಿನ ಮಧ್ಯವರ್ತಿಯಾಗಿದ್ದ ಧರ್ಮಪುರದ ಉತ್ತರಕ್ಕಿರುವ ವೃಷಭಗಿರಿಯೆಂಬ ಅನಾದಿ ಸಂಸಿದ್ಧ ತೀರ್ಥದ ದಕ್ಷಿಣ ಭಾಗದಲ್ಲಿರುವ ಸಿದ್ಧಶಿಲೆಯಲ್ಲಿ ತನ್ನ ಕುಲದೈವವಾದ ಜಿನಬಿಂಬಗಳನ್ನೂ ಚಕ್ರೇಶ್ವರಿಯ ಪ್ರತಿಮೆಯನ್ನೂ ಕೆಲವು ಜಿನಪ್ರತಿಮೆಗಳನ್ನೂ ಕೆತ್ತಿಸಿ ತ್ರಿಭುವನ ತಿಲಕವೆಂಬ ಬಸದಿಯನ್ನೂ ಕವಿತಾಗುಣಾರ್ಣವ ಎಂಬ ಕೆಱೆಯನ್ನೂ ಮದನವಿಳಾಸವೆಂಬ ಬನವನ್ನೂ ಮಾಡಿಸಿದನೆಂದು ಹೇಳಿದೆ. ಶಾಸನದ ಮೇಲ್ಭಾಗದಲ್ಲಿ ಕೆತ್ತಲ್ಪಟ್ಟ ಚಕ್ರೇಶ್ವರಿ ಹಾಗೂ ಜಿನಪ್ರತಿಮೆಗಳೇ ಇಲ್ಲಿ ಉಲ್ಲೇಖಿಸಿದ ಪ್ರತಿಮೆಗಳು. ಆದುದರಿಂದ ಶಾಸನ ಹಾಗೂ ಈ ಪ್ರತಿಮೆಗಳಿದ್ದ ದೊಡ್ಡ ಬಂಡೆಗಲ್ಲನ್ನೇ ಶಾಸನದಲ್ಲಿ ಸಿದ್ಧಶಿಲೆ ಎಂದು ಕರೆಯಲಾಗಿದೆ. ಮತ್ತು ಮೇಲೆ ವಿವರಿಸಿದಂತೆ ಈ ಬಂಡೆಗಲ್ಲು ಬೊಮ್ಮಲಮ್ಮ ಗುಟ್ಟ ಎಂದು ಕರೆಯಲ್ಪಡುವ ಬೆಟ್ಟದ ದಕ್ಷಿಣ ತುದಿಯಲ್ಲಿರುವುದರಿಂದ ಈ ಬೆಟ್ಟಕ್ಕೇ ಅಥವಾ ಈ ಬೆಟ್ಟದ ಜೊತೆಗೆ ಉತ್ತರದಿಕ್ಕಿಗೆ ಸೇರಿಕೊಂಡಂತೆ ಇರುವ ಇನ್ನೆರಡು ಬೆಟ್ಟಗಳು ಸೇರಿ ಈ ಮೂರೂ ಬೆಟ್ಟಗಳ ಸಮೂಹಕ್ಕೆ ಶಾಸನದಲ್ಲಿ ವೃಷಭಗಿರಿ ಹಾಗೂ ವೃಷಭಗಿರಿತೀರ್ಥ ಎಂದು ಕರೆಯಲಾಗಿದೆ ಎಂಬ ವಿಷಯವು ಸ್ಪಷ್ಟವಾಗುವುದು. ತ್ರಿಭುವನ ತಿಲಕವೆಂಬ ಬಸದಿಯ ಅವಶೇಷಗಳು ಇದುವರೆಗೆ ದೊರಕಿಲ್ಲ.

೧. ಆದಿಪುರಾಣ, ೧-೧೩.

ಬೊಮ್ಮಲಮ್ಮ ಗುಟ್ಟದ ಆವರಣದಲ್ಲಿಯೇ ಇದ್ದಿರಬೇಕು. ಈ ಬೆಟ್ಟದ ಕೆಳಗಡೆ ಕುರಿಕ್ಯಾಲ ಗ್ರಾಮದ ದಿಕ್ಕಿನಲ್ಲಿ ಒಂದು ಕೆರೆಯೂ ಅದರ ತೂಬೂ ಈಗಲೂ ಇರುತ್ತವೆ. ಇದೇ ಕೆರೆಯು ಶಾಸನದಲ್ಲಿ ಉಲ್ಲೇಖಿಸಿದ ಕವಿತಾ ಗುಣಾರ್ಣವ ಕೆಱೆ ಆಗಿರಬೇಕು. ಕವಿತಾಗುಣಾರ್ಣವ ಆದಿಕವಿ ಪಂಪನ ಬಿರುದು ಎಂಬುದು ಎಲ್ಲ ಕನ್ನಡ ಸಾಹಿತ್ಯಾಭ್ಯಾಸಿಗಳಿಗೆ ಗೊತ್ತಿದ್ದ ವಿಷಯ. ಜಿನವಲ್ಲಭನು ತನ್ನ ಅಣ್ಣನ ಹೆಸರಿನಲ್ಲಿ ಈ ಕೆರೆಯನ್ನು ಕಟ್ಟಿಸಿದ್ದಾಗಿ ತಿಳಿಯುವುದು. ಮದನ ವಿಳಾಸವೆಂಬ ಬನವು ಎಲ್ಲಿದ್ದಿತು ಎಂಬುದು ಗೊತ್ತಾಗುವುದಿಲ್ಲ. ಕೆರೆಯ ಕೆಳಭಾಗದಲ್ಲಿದ್ದಿರಬಹುದು.

ಕನ್ನಡ ವಾಕ್ಯದ ತರುವಾಯ ಬರುವ ಮೊದಲನೆಯ ಸಂಸ್ಕೃತ ಶ್ಲೋಕವು ಸಂಭಾಷಣೆಯ ರೂಪದಲ್ಲಿದೆ. ಒಬ್ಬ (ಜೈನ) ಯಾತ್ರಿಕನು ಇನ್ನೊಬ್ಬ ಯಾತ್ರಿಕನಿಗೆ "ಅಣ್ಣ, ಧರ್ಮಪುರಕ್ಕೆ ಹೋಗೋಣ ಬಾ" ಎಂದು ಕರೆದಾಗ, ಇನ್ನೊಬ್ಬನು "ಏಕೆ, ಅಲ್ಲಿ ಏನಿದೆ" ಎಂದು ಕೇಳುವನು. ಅದಕ್ಕೆ ಮೊದಲಿನ ಯಾತ್ರಿಕನು "ಜೈನಾಭಿಷೇಕವು ನಡೆದಿದೆ. ಕ್ಷೀರಾಭಿಷೇಕದಿಂದ ಮುಳುಗಿದ ಉತ್ತುಂಗ ಶಿಖರವುಳ್ಳ ವೃಷಭಪರ್ವತವನ್ನೂ ಸಮಸ್ತ ಯಾತ್ರಿಕರ ಸತ್ಕಾರ ಹಾಗೂ ದಾನಗಳಲ್ಲಿ ನಿರತನಾದ ಪಂಪನ ಅನುಜನನ್ನೂ ಭೀಮನ ತನುಜನನ್ನೂ ಅಲ್ಲಿ ನಾವು ಕಾಣುತ್ತೇವೆ. ಬಾ" ಎಂದು ಹೇಳುತ್ತಾನೆ. ಮುಂದಿನ ಸಂಸ್ಕೃತ ಶ್ಲೋಕದಲ್ಲಿ ಜಿನವಲ್ಲಭನ ಗುಣವರ್ಣನೆಯಿದೆ. ಅವನು ಸಂಗೀತದಲ್ಲಿ, ಕಾವ್ಯದಲ್ಲಿ, ಮಾತಿನಲ್ಲಿ, ಸಾಧು-ಸಂತರ ಸೇವೆಯಲ್ಲಿ, ಅಂಗನೆಯರನ್ನು ರಮಿಸುವುದರಲ್ಲಿ ಮತ್ತು ಜಿನಪೂಜೆಯಲ್ಲಿ ನಿಪುಣನಾಗಿದ್ದನೆಂದು ಹೇಳಿದೆ. ಮುಂದಿನ ಪದ್ಯದಲ್ಲಿ ನಿತ್ಯ ಜಿನಪೂಜೆಗಾಗಿ ಅಲ್ಲಿಗೆ ಬರುವಂಥ ಜೈನಮುನಿಗಳ ಹಾಗೂ ಶ್ರಾವಕ ಜನರ ಸ್ತುತಿಗಳನ್ನು ಈ ವೃಷಭಶೈಲವು ಪ್ರತಿಧ್ವನಿಸಿ ಜಿನವಲ್ಲಭನ ಕೀರ್ತಿಯು ಕಲ್ಪಾಂತದವರೆಗೆ ಹರಡುವಂತೆ ಮಾಡುವದೆಂದು ಹೇಳಿದೆ. ಆಮೇಲೆ ಬರುವ ಮೊದಲಿನ ಕನ್ನಡಪದ್ಯದಲ್ಲಿ ಜಿನವಲ್ಲಭನು ಜಿನಪ್ರತಿಮೆಗಳನ್ನು ಸುಂದರವಾಗಿ ಬೇಗನೆ ಹೇಗೆ ಕೊರೆಯಿಸುವನು ಎಂದು ಜನರು ಯೋಚಿಸುತ್ತಿರುವಷ್ಟರಲ್ಲಿ ಆ ಸಿದ್ಧಶಿಲೆಯ ಮೇಲೆ ಜಿನಬಿಂಬಗಳು ಕಾಣಿಸಿಕೊಂಡುದು ಅಚ್ಚರಿಯ ವಿಷಯವೆಂದು ಬರೆದಿದೆ. ಅಂದರೆ ಅಷ್ಟು ಅಲ್ಪಾವಧಿಯಲ್ಲಿ ಜನರು ಆಶ್ಚರ್ಯ ಚಕಿತರಾಗುವಂತೆ ಬಹು ವಿಶಾಲವಾದ ಯೋಚನೆಯಿಂದೊಡಗೂಡಿದ ಈ ರೀತಿಯಾಗಿ ಯೋಚಿಸದ ಹಾಗೂ ಅದಕ್ಕೆ ನಿಲುಕದ ರೀತಿಯಲ್ಲಿ ಈ ದೊಡ್ಡ ಬಂಡೆಗಲ್ಲಿನಲ್ಲಿ ಜಿನಪ್ರತಿಮೆಗಳನ್ನು ಮಾಡಿಸಿದನೆಂದರ್ಥ. ಈ ವೃಷಭಾದ್ರಿಯು ಕವಿತಾ ಗುಣಾರ್ಣವನ ಅಂದರೆ ಪಂಪನ ಕೀರ್ತಿಯ ಮೂರ್ತಿಯಂತಿದೆಯಿಂದೂ (ಭರತಖಂಡದ) ದಕ್ಷಿಣಾರ್ಧದ ವೃಷಭಾದ್ರಿಯೆಂದೂ ಮೊದಲು ದ್ವಿಜರ ವಾಸಸ್ಥಾನವಾದ ಈ ಬೆಟ್ಟವನ್ನು ಜಿನವಲ್ಲಭನು ಜಿನಚೈತ್ಯವನ್ನಾಗಿ ಪರಿವರ್ತಿಸಿದುದರಿಂದ ಅವನು ತನ್ನ ಹೆಸರನ್ನು ಜಿನವಲ್ಲಭನೆಂದು ಹೇಳಿಕೊಳ್ಳುವುದು ಸೋಜಿಗದ ಮಾತಲ್ಲವೆಂದೂ ಎರಡನೆಯ ಶ್ಲೋಕದಲ್ಲಿ ಹೇಳಿದೆ. ಬೆಟ್ಟದ ಮೇಲೆ ಚಕ್ರೇಶ್ವರಿಯ ಪ್ರತಿಮೆಯನ್ನೂ ಜಿನಬಿಂಬಗಳನ್ನೂ ಮಾಡಿಸಿ ಬ್ರಾಹ್ಮಣ ಕೇಂದ್ರವಾಗಿದ್ದ ಆ ಸ್ಥಳವನ್ನು ಜೈನರ ಕೇಂದ್ರ ಸ್ಥಳವಾಗಿ ಪರಿವರ್ತಿಸಿ ಜಿನವಲ್ಲಭ ಎಂಬ ತನ್ನ ಹೆಸರನ್ನು ಸಾರ್ಥಕಗೊಳಿಸಿದನು. ಮೂರನೆಯ ಪದ್ಯದಲ್ಲಿ ಪಂಪನ ತಮ್ಮನಾದ ಜಿನವಲ್ಲಭನು ಅಪೂರ್ವರೀತಿಯಾಗಿ ಕವಿತೆಯನ್ನು ಬರೆಯುವಲ್ಲಿ ಪ್ರಸಿದ್ಧಿಯನ್ನು ಪಡೆದ ತಾನೊಬ್ಬನೇ 'ವಾಗ್ವಧೂವರವಲ್ಲಭ'ನೆಂದು ಹೇಳಿಕೊಂಡಿದ್ದಾನೆ. ಇದರಿಂದ ಪಂಪನ ಹಾಗೆ ಜಿನವಲ್ಲಭನೂ

ಸುಪ್ರಸಿದ್ಧ ಕವಿಯಾಗಿದ್ದನೆಂದು ತಿಳಿಯುವುದು. ಆದರೆ ದುರ್ದೈವದಿಂದ ಅವನ ಯಾವ ಕೃತಿಯೂ ಇದುವರೆಗೆ ನಮಗೆ ದೊರೆತಿಲ್ಲ. ಪ್ರಸ್ತುತ ಶಾಸನವನ್ನು ಮಾತ್ರ ಅವನೇ ರಚಿಸಿರುವಂತೆ ತೋರುತ್ತದೆ. ಮುಂದಿನ ಪದ್ಯದಲ್ಲಿ ಪ್ರಸಿದ್ಧ ಚಾಳುಕ್ಯ ವಂಶದ ಅರಸು ಅರಿಕೇಸರಿಯು ಪಂಪನು ರಚಿಸಿದ 'ವಿಕ್ರಮಾರ್ಜುನ ವಿಜಯ'ಕ್ಕಾಗಿ ಧರ್ಮವುರವೆಂಬ ಗ್ರಾಮವನ್ನು ಅದೇಯವಾಗಿ ಕೀರ್ತಿಶಾಸನವೆಂದು ಕೊಟ್ಟ ದಾನಶಾಸನದ ಬಗ್ಗೆಯೂ ಪಂಪನು ನಂಬಿದ್ದ ಜೈನಧರ್ಮವನ್ನು ಕುರಿತು ಬರೆದ ಶಾಸನದ ಬಗ್ಗೆಯೂ ಈ ವೃಷಭಪರ್ವತವು ಸಾರಿ ಹೇಳುತ್ತದೆಂದು ಬರೆದಿದೆ. ಐದನೆಯ ಕನ್ನಡ ಪದ್ಯದಲ್ಲಿ ಪಂಪನು ಪಡೆದ ಧರ್ಮವುರ ಅಗ್ರಹಾರದ ವರ್ಣನೆಯಿದೆ. ಅಲ್ಲಿ ಗಾಳಿಯಾಗಲೀ, ಸೂರ್ಯನ ಕಿರಣಗಳಾಗಲೀ ಆಗಸದಲ್ಲಿ ಹಕ್ಕಿಗಳಾಗಲೀ ಪ್ರವೇಶಿಸುವುದು ಸಾಧ್ಯವಿಲ್ಲವೆಂದು ಹೇಳಿದೆ. ಅಂದರೆ ಅಲ್ಲಿ ಅಷ್ಟು ಉನ್ನತವಾದ ಭವನಗಳಿದ್ದುವೆಂದು ತಿಳಿಸುವುದು ಶಾಸನಕರ್ತನ ಉದ್ದೇಶವೆಂದು ತೋರುವುದು. ಪಂಪನ ಪೋಷಕನಾದ ಹರಿಗನು ಅಂದರೆ ಎರಡನೆಯ ಅರಿಕೇಸರಿಯು ತನ್ನ ಧರ್ಮ-ಯಶಸ್ಸುಗಳು ಅಭಿವೃದ್ಧಿಯಾಗುವಂತೆ ಪಂಪನಿಗೆ ಕೊಟ್ಟ ಧರ್ಮವುರ ಅಗ್ರಹಾರವು ಸುಪ್ರಸಿದ್ಧವಾದ ಕಳಾಪಗ್ರಾಮವನ್ನು ಹೋಲುತ್ತದೆಂದು ಬರೆದಿದೆ. ಕಳಾಪ ಅಥವಾ ಕಲಾಪ ಎಂಬ ಸ್ಥಳವು ಪುರಾಣಪ್ರಸಿದ್ಧವಾಗಿದ್ದು ಹಿಮಾಲಯ ಪರ್ವತದಲ್ಲಿ ಬದರಿಕಾಶ್ರಮದ ಹತ್ತಿರವಿದೆಯೆಂದು ತಿಳಿಯುವುದು. ಆರನೆಯ ಹಾಗೂ ಕೊನೆಯ ಕನ್ನಡ ಪದ್ಯವನ್ನು ದಾನ ಕೊಟ್ಟ ಬಗ್ಗೆ ಉಂಟಾಗಬಹುದಾದ ಸಂದೇಹವನ್ನು ನಿವಾರಿಸುವುದಕ್ಕಾಗಿ ಬರೆದಂತಿದೆ. ಈ ದತ್ತಿಯ ಬಗ್ಗೆ ತಾಮ್ರಶಾಸನವನ್ನು ಬರೆದುಕೊಡಲಾಗಿದೆಯೇ, ಧರ್ಮವುರವನ್ನು ಅದೇಯವಾಗಿ ಕೊಡಲಾಗಿದೆಯೇ, ಸುಪ್ರಸಿದ್ಧ ಅರಿಕೇಸರಿಯು ಇದನ್ನು ದಾನವಾಗಿ ಕೊಟ್ಟನೇ ಹಾಗೂ ಪ್ರಸಿದ್ಧ ಕವಿ ಪಂಪನು ಅದನ್ನು ಪಡೆದನೇ ಮುಂತಾದ ಪ್ರಶ್ನೆಗಳನ್ನು ಅವರಿವರಿಗೆ ಹುಚ್ಚನಂತೆ ಕೇಳದೆ ನೇರವಾಗಿ ವೃಷಭಾಚಳದ ಎತ್ತರವಾದ ಬಂಡೆಗಲ್ಲಿನ ಮೇಲೆ ಸುಂದರವಾದ ಅಕ್ಷರಗಳಲ್ಲಿ ಬರೆದ ಪ್ರಸ್ತುತ ಶಾಸನವನ್ನು ನೋಡು ಎಂದು ಹೇಳುತ್ತಾನೆ ಜಿನವಲ್ಲಭ. ಅಂದರೆ ಈ ಶಾಸನದಲ್ಲಿ ಪಂಪನು ಅರಿಕೇಸರಿಯಿಂದ ಧರ್ಮವುರ ಅಗ್ರಹಾರವನ್ನು ವಿಕ್ರಮಾರ್ಜುನ ವಿಜಯಕ್ಕಾಗಿ ದಾನಪಡೆದ ವಿಷಯವನ್ನು ವಿವರಿಸಿದ್ದರಿಂದ ಮೇಲಿನ ಸಂದೇಹಗಳು ದೂರವಾಗುತ್ತವೆ. ಆದರೆ ಹೀಗೆ ಸಂದೇಹ ಬರಲು ಕಾರಣವೇನು? ಈ ಶಾಸನದ ಕಾಲಕ್ಕೆ ಪಂಪನು ಗತಿಸಿ ಕೆಲವು ವರ್ಷಗಳಾದುದರಿಂದ ಈ ದತ್ತಿಯ ಬಗ್ಗೆ ಜನರಲ್ಲಿ ಸಂದೇಹವುಂಟಾಗಿರಬಹುದೆಂದು ತೋರುತ್ತದೆ. ಮೇಲೆ ಹೇಳಿದಂತೆ ಜಿನವಲ್ಲಭನು ತಾನೊಬ್ಬನೇ 'ವಾಗ್ವಧೂವರವಲ್ಲಭ'ನೆಂದು ಹೇಳಿಕೊಂಡಿರುವುದರಿಂದ ಆತನ ಅಣ್ಣನಾದ ಪಂಪಕವಿಯು ಈ ಶಾಸನದ ಕಾಲಕ್ಕೆ ಬದುಕಿರಲಿಲ್ಲವೆಂಬ ಊಹೆಗೆ ಪುಷ್ಟಿ ದೊರೆಯುವುದು. ಅರಿಕೇಸರಿಯು ಪಂಪನಿಗೆ ಕಾವ್ಯವನ್ನು ಬರೆದುದಕ್ಕಾಗಿ ಬಿಟ್ಟ ಧರ್ಮವುರ ಅಗ್ರಹಾರದ ಶಾಸನವನ್ನು ಕುರಿತು ತಾಮ್ರಶಾಸನವನ್ನು ಬರೆಯಿಸಿಕೊಟ್ಟನೋ ಇಲ್ಲವೋ ತಿಳಿಯದು. ಒಂದುವೇಳೆ ತಾಮ್ರಶಾಸನವನ್ನು ಪಂಪನಿಗೆ ಕೊಟ್ಟಿದ್ದರೂ ಆ ಕವಿಯು ತೀರಿಕೊಂಡ ಕೆಲವೇ ವರ್ಷಗಳೊಳಗೆ ಅದು ಆತನ ಮನೆತನದಲ್ಲುಳಿಯದೆ ಎಲ್ಲೋ ಕಳೆದು ಹೋಗಿ ಈ ದತ್ತಿಯ ಬಗ್ಗೆಯೇ ಜನರಲ್ಲಿ ಸಂದೇಹವನ್ನುಂಟುಮಾಡುವಂತಾಯಿತೋ ಹೇಗೆ ತಿಳಿಯದು. ಅಂತೂ ಹೆಚ್ಚಿನ ವಿವರಗಳು ತಿಳಿಯುವವರೆಗೆ ಏನನ್ನೂ ಖಚಿತವಾಗಿ ಹೇಳುವಂತಿಲ್ಲ.

ಕನ್ನಡ ಪದ್ಯಗಳಾದ ನಂತರ ಬರೆದ ಮೂರು ತೆಲುಗು ಕಂದಪದ್ಯಗಳಲ್ಲಿ ಜಿನವಲ್ಲಭನನ್ನು

ಜಿನಭಕ್ತಪರಾಯಣನೆಂದೂ ಸೂರ್ಯನಂತೆ ಪ್ರಕಾಶಮಾನವಾಗಿರುವ ಪ್ರಸಿದ್ಧ ಕವಿಯೆಂದೂ ಗುಣಪಕ್ಷಪಾತಿಯೆಂದೂ ವರ್ಣಿಸಲಾಗಿದೆ. ಹೀಗೆ ಇಡೀ ಜನಸ್ತೋಮವು ಜಿನವಲ್ಲಭನನ್ನು ಹೊಗಳುತ್ತಿರಲು ಸುಧರ್ಮ ಸಂತತಿಯಲ್ಲಿ ಅವನು ಹೊಂದಿದ ಗುಣಾತಿಶಯಗಳನ್ನು ಈ ವೃಷಭಗಿರಿಯ ಸಿದ್ಧಶಿಲೆಯ ಮೇಲೆ ಶಾಸನರೂಪದಲ್ಲಿ ಎಱೆಯಮ್ಮನೆಂಬವನು ಕೊರೆದನೆಂದು ಕೊನೆಯ ಕನ್ನಡ ಗದ್ಯಾತ್ಮಕ ವಾಕ್ಯದಲ್ಲಿ ಹೇಳಿದೆ.

ಇದುವರೆಗೆ ಶಾಸನದ ವಿಷಯಸಂಗ್ರಹ ಕುರಿತು ವಿವರಿಸಿದ್ದಾಯಿತು. ಇನ್ನು ಅದರ ಮಹತ್ವದ ಬಗ್ಗೆ ವಿವೇಚಿಸುವ. ಈ ಶಾಸನವನ್ನು ಬರೆದ ಉದ್ದೇಶವು ಎರಡು ವಿಧವಾಗಿದೆ. ಒಂದು - ಪಂಪನ ತಮ್ಮನಾದ ಜಿನವಲ್ಲಭನು ಜೈನಧರ್ಮದ ಅಭ್ಯುದಯಕ್ಕಾಗಿ ಮಾಡಿದ ಕಾರ್ಯಗಳನ್ನು ವಿವರಿಸಿ ಆತನ ವಂಶಾವಳಿಯನ್ನೂ ಗುಣಾತಿಶಯಗಳನ್ನೂ ಕುರಿತು ಬರೆದ ಪ್ರಶಸ್ತಿಯಾದರೆ ಕನ್ನಡದ ಆದಿಕವಿ ಪಂಪನು ರಚಿಸಿದ 'ವಿಕ್ರಮಾರ್ಜುನ ವಿಜಯ' ಅಥವಾ 'ಪಂಪಭಾರತ' ಎಂಬ ಕೃತಿಯನ್ನು ಮೆಚ್ಚಿ ಆತನ ಪೋಷಕನೂ ವೇಮುಲವಾಡ ಚಾಳುಕ್ಯರ ಅರಸನೂ ಆಗಿದ್ದ ಎರಡನೆಯ ಅರಿಕೇಸರಿಯು ಧರ್ಮವುರವೆಂಬ ಅಗ್ರಹಾರವನ್ನು ಕವಿಗೆ ದತ್ತಿಯಾಗಿ ಬಿಟ್ಟ ವಿಷಯವನ್ನು ಜನಸಾಮಾನ್ಯರಿಗೆ ಶಾಸನರೂಪದಲ್ಲಿ ಸಾರಿಹೇಳುವ ಉದ್ದೇಶವೂ ಇಲ್ಲಿ ಅಡಗಿದೆ. ಪಂಪ ಮಹಾಕವಿಯ ಶಾಸನಾತ್ಮಕ ಉಲ್ಲೇಖವು ಪ್ರಸ್ತುತ ಶಾಸನದಲ್ಲಿ ಮಾತ್ರ ಇರುವುದರಿಂದ ಇದಕ್ಕೆ ವಿಶೇಷ ಮಹತ್ವವುಂಟಾಗಿದೆ. ಅಲ್ಲದೆ ಪಂಪನಿಗೆ ಜಿನವಲ್ಲಭನೆಂಬ ತಮ್ಮನಿದ್ದ ಸಂಗತಿಯೂ ಅಬ್ಬಣಬ್ಬೆ ಎಂಬ ತಾಯಿಯ ಹೆಸರೂ ಈ ಶಾಸನದಿಂದಲೇ ತಿಳಿಯುವುದು. ಪಂಪ-ಜಿನವಲ್ಲಭರ ಪೂರ್ವಜರ ಬಗ್ಗೆ ಈ ಶಾಸನದಲ್ಲಿ ಹೇಳಿರುವ ವೃತ್ತಾಂತದಿಂದ ಪಂಪಭಾರತದಲ್ಲಿ ಆ ಬಗ್ಗೆ ದೊರೆಯದ ಕೆಲವು ವಿಷಯಗಳು ಮೊಟ್ಟಮೊದಲಿಗೆ ಬೆಳಕಿಗೆ ಬಂದಿರುವುದಲ್ಲದೆ ಕೆಲವು ಸಂದೇಹಾಸ್ಪದ ಸಂಗತಿಗಳ ಬಗ್ಗೆ ಖಚಿತವಾದ ಉತ್ತರವೂ ಇಲ್ಲಿ ದೊರೆಯುವುದು.

ಪಂಪಭಾರತದ ೧೪ನೆಯ ಆಶ್ವಾಸದಲ್ಲಿ ಕೊಟ್ಟ ಕವಿಯ ವಂಶಾವಳಿ ಹಾಗೂ ಪ್ರಸ್ತುತ ಶಾಸನದಲ್ಲಿ ಹೇಳಿದ ಜಿನವಲ್ಲಭನ ವಂಶಾವಳಿಗಳನ್ನು ತುಲನಾತ್ಮಕವಾಗಿ ಹೀಗೆ ತೋರಿಸಬಹುದು:



ಅಭಿಮಾನಚಂದ್ರನ ತಂದೆಯಾದ ಮಾಧವ ಸೋಮಯಾಜಿಯ ಹೆಸರನ್ನೂ ಮಗನಾದ ಕೊಮರಯ್ಯನ ಹೆಸರನ್ನೂ ಶಾಸನದಲ್ಲಿ ಹೇಳಿಲ್ಲ. ಕರ್ಣಾಟಕ ಸಾಹಿತ್ಯ ಪರಿಷತ್ತಿನ ಪಂಪಭಾರತದ ಪ್ರತಿಯಲ್ಲಿ ಪಂಪನ ತಂದೆಯ ಹೆಸರನ್ನು ಅಭಿರಾಮದೇವರಾಯ ಎಂದು ಪ್ರಕಟಿಸಿ ಪಾಠಾಂತರದಲ್ಲಿ 'ಭೀಮ' ಎಂದು ಕೊಟ್ಟಿದ್ದಾರೆ. ಈ ಪಾಠಾಂತರದಲ್ಲಿದ್ದ ಹೆಸರನ್ನೇ ಪ್ರಸ್ತುತ ಶಾಸನದಲ್ಲಿ ಉಲ್ಲೇಖಿಸಿರುವುದರಿಂದ ಭೀಮ ಅಥವಾ ಭೀಮಪಯ್ಯ ಎಂಬುದೇ ಆತನ ನಿಜವಾದ ಹೆಸರೆಂಬುದು ಖಚಿತವಾಗುತ್ತದೆ. ಪಂಪ-ಜಿನವಲ್ಲಭರ ತಾಯಿಯ ಹೆಸರು ಅಬ್ಬಣಬ್ಬೆಯೆಂದೂ ಆಕೆಯು ಬೆಳ್ವೊಲ ದೇಶದ ಅಣ್ಣಿಗೆಱೆಯ ಜೋಯಿಸಸಿಂಘನ ಮೊಮ್ಮಗಳೆಂದೂ ಶಾಸನದಲ್ಲಿ ಹೇಳಿದೆ. ಶಾಸನದಲ್ಲಿ ೧ನೆಯ ಪಂಕ್ತಿಯಲ್ಲಿದ್ದ ಈ ಭಾಗವನ್ನು ಡಾ. ವೆಂಕಟರಮಣಯ್ಯನವರು "ಅಣ್ಣಿಗೆಱೆಯ ಜೋಯಿಸಸಿಂಘನ ಮರ್ಮ್ಮ[o*] ವಬ್ಬಣಬ್ಬೆಯ ಮಗಂ...ಜಿನವಲ್ಲಭಂ" ಎಂದು ಓದಿ ಜಿನವಲ್ಲಭನು ಜೋಯಿಸಸಿಂಘನ ಮೊಮ್ಮಗನೂ ವಬ್ಬಣಬ್ಬೆಯ ಮಗನೂ ಆಗಿದ್ದನೆಂದು ಬರೆದಿದ್ದಾರೆ. ಅದರಂತೆ ಜಿನವಲ್ಲಭನು ಅಭಿಮಾನಚಂದ್ರನ ಮೊಮ್ಮಗನೂ ಭೀಮಪಯ್ಯನ ಮಗನೂ ಆಗಿದ್ದಾನೆಂದು ಭಾವಿಸಿದ್ದಾರೆ. ಅಂದರೆ ಭೀಮಪಯ್ಯನು ಅಭಿಮಾನಚಂದ್ರನ ಮಗನೆಂದು ಭಾವಿಸಿದ್ದಾರೆ. ಮತ್ತು ಜಿನವಲ್ಲಭನ ತಾಯಿಯು ಜೋಯಿಸಸಿಂಘನ ಮಗಳೆಂದು ತಿಳಿದಿದ್ದಾರೆ. ಇದು ಸರಿಯಲ್ಲ. ಅವರು ಮೇಲಿನ ವಾಕ್ಯದಲ್ಲಿ ಬಿಟ್ಟು ಹೋಗಿದೆಯೆಂದು ಭಾವಿಸಿ ಚೌಕದ ಕಂಸಿನಲ್ಲಿ ಸೇರಿಸಿರುವ ಅನುಸ್ವಾರದ ಆವಶ್ಯಕತೆಯಿಲ್ಲ. ಮತ್ತು ಅವರು ಓದಿದ ವಬ್ಬಣಬ್ಬೆ ಶಬ್ದದ ಮೊದಲಿನ ಅಕ್ಷರವು 'ವ'ಕಾರವಾಗಿರದೆ 'ಳ'ಕಾರವೆಂದು ಸ್ಪಷ್ಟವಿದೆ. ಆದುದರಿಂದ ಈ ವಾಕ್ಯವನ್ನು "ಅಣ್ಣಿಗೆಱೆಯ ಜೋಯಿಸಸಿಂಘನ ಮರ್ಮ್ಮಳಬ್ಬಣಬ್ಬೆಯ ಮಗಂ...ಜಿನವಲ್ಲಭಂ" ಎಂದೇ ಓದಬೇಕು. ಜಿನವಲ್ಲಭನು ಜೋಯಿಸಸಿಂಘನ ಮೊಮ್ಮಗಳಾದ ಅಬ್ಬಣಬ್ಬೆಯ ಮಗನೆಂದು ಈ ವಾಕ್ಯದ ಅರ್ಥವು ಸ್ಪಷ್ಟವಾಗಿದೆ. ಮಾತೃವಂಶದಲ್ಲಿ ಜಿನವಲ್ಲಭನನ್ನು ಜೋಯಿಸಸಿಂಘನ ಮೊಮ್ಮಗಳ ಮಗನೆಂದು ಹೇಗೆ ವರ್ಣಿಸಲ್ಪಟ್ಟಿದೆಯೋ ಅದರಂತೆ ಪಿತೃವಂಶದಲ್ಲಿ ಸಹ ಆತನನ್ನು ಅಭಿಮಾನಚಂದ್ರನ ಮೊಮ್ಮಗನಾದ ಭೀಮಪಯ್ಯನ ಮಗನೆಂದು ವರ್ಣಿಸಲಾಗಿದೆ. ಅಂದರೆ "ಅಭಿಮಾನಚನ್ದ್ರನ ಮರ್ಮ್ಮಂ ಭೀಮಪಯ್ಯನ....ಮಗಂ...ಜಿನವಲ್ಲಭಂ" ಎಂಬ ವಾಕ್ಯದಲ್ಲಿರುವ ಮರ್ಮ್ಮಂ ಶಬ್ದವು ಅದರ ಹಿಂದಿನಿಂದಲೇ ಬರುವ ಭೀಮಪಯ್ಯನಿಗೇ ಅನ್ವಯಿಸುತ್ತಿದ್ದು ದೂರಾನ್ವಯದಿಂದ ಜಿನವಲ್ಲಭನಿಗೆ ಅನ್ವಯಿಸುವುದಿಲ್ಲ. ಮತ್ತು ನಾವು ಅರ್ಥವಿಸಿದ ವರ್ಣನೆಯು ಪಂಪಭಾರತದಲ್ಲಿ ಕೊಟ್ಟಿರುವ ವಂಶಾನುಕ್ರಮಕ್ಕೆ ಸರಿಹೊಂದುತ್ತದೆ[೧].

ಇನ್ನು ಜಿನಲ್ಲಭನು ಅಬ್ಬಣಬ್ಬೆ ಮತ್ತು ಜೋಯಿಸಸಿಂಘನ ಹೆಸರನ್ನು ಹೇಳಿದಂತೆ ಪಂಪಕವಿಯು ತನ್ನ ಕಾವ್ಯಗಳಲ್ಲಿ ಇವರ ಹೆಸರನ್ನು ಹೇಳಿಲ್ಲವಾದುದರಿಂದ ಪಂಪ-ಜಿನವಲ್ಲಭರು ಏಕೋದರರಾಗಿರಲಿಕ್ಕಿಲ್ಲವೆಂದು ಡಾ. ವೆಂಕಟರಮಣಯ್ಯನವರು ಸೂಚಿಸಿದ್ದಾರೆ. ಆದರೆ

---

೧. ಈ ವಿಷಯದಲ್ಲಿ ಕೆಲವು ವಿದ್ವಾಂಸರು ನಡೆಸಿದ ಚರ್ಚೆಯ ಬಗ್ಗೆ- 'ಕನ್ನಡ ನುಡಿ' ಪತ್ರಿಕೆಯ ೧೯೬೮ನೆಯ ವರ್ಷದ ಫೆಬ್ರುವರಿ, ಮಾರ್ಚ, ಏಪ್ರಿಲ್, ಮೇ ಹಾಗೂ ಆಗಸ್ಟ ಮಾಸದ ಸಂಚಿಕೆಗಳನ್ನೂ, ಅದೇ ಪತ್ರಿಕೆಯ ೧೯೬೯ನೆಯ ವರ್ಷದ ಏಪ್ರಿಲ್-ಮೇ ಮತ್ತು ಆಗಸ್ಟ ಮಾಸದ ಸಂಚಿಕೆಗಳನ್ನೂ ಪ್ರಜಾವಾಣಿ ದಿನಪತ್ರಿಕೆಯ ೮-೧೨-೧೯೬೮ರ ಸಂಚಿಕೆಯನ್ನೂ, ಪ್ರಬುದ್ಧ ಕರ್ಣಾಟಕ ಸಂಪುಟ ೫೦, ಸಂಚಿಕೆ ೪, ಪುಟ ೧೧೫-೧೭ ಮತ್ತು *Journal of the Karnatak University (Humanities)* Vol. XI. 1967 ಇವುಗಳನ್ನು ನೋಡಿರಿ.

ಇಂಥ ವಾದಸರಣಿಯು ಸೂಕ್ತವಲ್ಲ. ಇದಕ್ಕೆ ಲ್ಯಾಟಿನ್ ಭಾಷೆಯಲ್ಲಿ *"argumentum ex silentio"* ಎಂದು ಹೇಳುವುದುಂಟು. ಹೇಳದೆ ಇದ್ದ ಯಾವುದೊಂದು ವಿಷಯವನ್ನು ಕುರಿತು ತರ್ಕಿಸಿ ನಿರ್ಣಯಿಸುವುದು ಸುಲಭಸಾಧ್ಯವೂ ಅಲ್ಲ, ಸಾಧುವೂ ಅಲ್ಲ. ಶಾಸನದಲ್ಲಿ ಮಾಧವ ಸೋಮಯಾಜಿಯ ಹೆಸರನ್ನೂ ಕೊಮರಯ್ಯನ ಹೆಸರನ್ನೂ ಹೇಳದೆ ಬಿಟ್ಟಿಲ್ಲವೇ? ಪಂಪನು ತನ್ನ ತಾಯಿಯ ಹೆಸರನ್ನು ಏಕೆ ಹೇಳಿಲ್ಲವೆಂಬುದರ ಕಾರಣವು ನಮಗೆ ಗೊತ್ತಿಲ್ಲವೆಂದಿಷ್ಟೇ ಹೇಳಬಹುದು. ಒಂದು ವೇಳೆ ಅಬ್ಬಣಬ್ಬೆಯು ಮಲತಾಯಿಯಾಗಿದ್ದರೆ ತನ್ನ ನಿಜಮಾತೆಯ ಹೆಸರನ್ನಾದರೂ ಪಂಪನು ಹೇಳಬಹುದಾಗಿತ್ತು. ಯಾಕೆ ಹೇಳದೆ ಬಿಟ್ಟನೋ ತಿಳಿಯದು. ಅವನಿಗೆ ಅವಶ್ಯವೆಂದು ಅನಿಸಿರಲಿಕ್ಕಿಲ್ಲ. ಅಂತೂ ಪಂಪನ ತಾಯಿ ಬೇರೊಬ್ಬಳಿದ್ದಳೆಂದು ಖಚಿತವಾಗಿ ತಿಳಿಯುವವರೆಗೆ ಪ್ರಸ್ತುತ ಶಾಸನದಲ್ಲಿ ಉಲ್ಲೇಖಿಸಿದ ಆ ಪುಣ್ಯಾತ್ಮಳಾದ ಅಬ್ಬಣಬ್ಬೆಯೇ ಕನ್ನಡನಾಡಿನ ಕವಿದ್ವಯರಾದ ಪಂಪ-ಜಿನವಲ್ಲಭರ ಜನನಿಯೆಂದು ತಿಳಿಯುವುದು ಸೂಕ್ತವಾದದ್ದು. ಅಲ್ಲದೆ ಶಾಸನದಲ್ಲಿ ಜಿನವಲ್ಲಭನು ಪಂಪನನ್ನು ಕುರಿತು ವ್ಯಕ್ತಪಡಿಸಿದ ಬಂಧುಪ್ರೇಮ ಅಭಿಮಾನಗಳನ್ನು ಗಮನಿಸಿದರೆ ಅವರಿಬ್ಬರೂ ಒಂದೇ ತಾಯಿಯ ಮಕ್ಕಳೆಂದು ತೋರುವುದು.

ಪ್ರಸ್ತುತ ಶಾಸನದಲ್ಲಿ ಉಲ್ಲೇಖಿಸಿದ ಸ್ಥಳನಾಮಗಳ ಬಗ್ಗೆ ವಿಚಾರಿಸೋಣ. ಅವುಗಳನ್ನು ಕುರಿತು ಡಾ. ವೆಂಕಟರಮಣಯ್ಯನವರು ತಮ್ಮ ತೆಲುಗು ಲೇಖನದಲ್ಲಿ ಚರ್ಚಿಸಿದ್ದಾರೆ. ಬೆಂಗಿನಾಡು ಪಂಪನು ಹೇಳಿದ ವೆಂಗಿಮಂಡಲವಾಗಿದ್ದು ಅದು ಮೊದಲು ಕೃಷ್ಣಾ-ಗೋದಾವರೀ ನದಿಗಳ ನಡುವಿನ ಸಮುದ್ರತೀರದ ಪ್ರದೇಶವಾಗಿದ್ದಿತು. ಈ ಭಾಗವನ್ನು ಬಾದಾಮಿ ಚಾಳುಕ್ಯರು ಗೆದ್ದ ನಂತರ ಕೃಷ್ಣಾನದಿಯ ದಕ್ಷಿಣಭಾಗಕ್ಕೂ ವೆಂಗಿನಾಡು ಅಥವಾ ವೆಂಗಿಮಂಡಲವೆಂದು ಕರೆಯಲಾಯಿತು. ಈ ವೆಂಗಿನಾಡಿನ ಮುಖ್ಯಸ್ಥಳವು ಈಗಿನ ಪಶ್ಚಿಮ ಗೋದಾವರಿ ಜಿಲ್ಲೆಯ ಮುಖ್ಯ ಪಟ್ಟಣವಾದ ಎಲ್ಲೂರಿನ ಹತ್ತಿರವಿದ್ದ ಪೆದವೆಗಿಯಾಗಿದ್ದಿತೆಂದು ವಿದ್ವಾಂಸರ ಅಭಿಪ್ರಾಯ. ಗುಂಡಿಕಜ್ಜಿ ಎಂಬುದು ಈಗಿನ ಗುಂಟೂರು ಭಾಗದಲ್ಲಿ ಹರಿಯುವ ಗುಂಡಿನದೀತೀರದ ಪ್ರದೇಶವೆಂದು ತಿಳಿಯುವುದು[೧]. ಈ ನದಿಯು ಕರ್ನೂಲು ಜಿಲ್ಲೆಯಲ್ಲಿ ಉಗಮವಾಗಿ ಗುಂಟೂರು ಭಾಗದ ಓಂಗೋಲು ತಾಲೂಕಿನಲ್ಲಿ ಪೂರ್ವಮುಖವಾಗಿ ಪ್ರವಹಿಸಿ ಕನುಪರ್ತಿ ಎಂಬ ಗ್ರಾಮದ ಹತ್ತಿರ ಬಂಗಾಲ ಉಪಸಾಗರವನ್ನು ಸೇರಿಕೊಳ್ಳುವುದು. ವಂಗಿಪಜ್ಜಿ ಎಂಬ ಗ್ರಾಮವು ಈಗಿನ ಗುಂಟೂರು ಜಿಲ್ಲೆಯ ಬಾಪಟ್ಲಾ ತಾಲೂಕಿನಲ್ಲಿರುವ ವಂಗೀಪುರ. ಇದೇ ಪಂಪನು ಹೇಳಿದ ವೆಂಗಿಪಟು. ವಂಗಿಪಜ್ಜಿವು ವೆಂಗಿನಾಡಿನ ಸಪ್ತಗ್ರಾಮಗಳಲ್ಲೊಂದಾಗಿದ್ದಿತೆಂದು ಶಾಸನದಲ್ಲಿ ಹೇಳಿದರೆ ಪಂಪನು ವೆಂಗಿಪಟುವು ವಸಂತ, ಕೊಟ್ಟೂರು, ನಿಡುಗುಂದಿಗಳಿಗೆ ಸಮಾನವಾದ ಮುಖ್ಯ ಅಗ್ರಹಾರದ ಸ್ಥಳವಾಗಿದ್ದಿತೆಂದು ಹೇಳಿದ್ದಾನೆ. ಈ ನಿಡುಗುಂದಿಯೇ ಶಾಸನದಲ್ಲಿ ಉಕ್ತವಾದ ಗುಂಡಿಕಜ್ಜಿ ನಿಡುಂಗೊಂಡೆಯಾಗಿದ್ದು ಅದು ಗುಂಟೂರು ಭಾಗದಲ್ಲಿದ್ದಿತೆಂದು ತೋರುವುದು. ಸಬ್ಬಿನಾಡು ಈಗಿನ ಕರೀಂನಗರ ಜಿಲ್ಲೆಯ ಭಾಗವನ್ನೊಳಗೊಂಡಿತ್ತೆಂದು ಡಾ. ರಮಣಯ್ಯನವರು ತೋರಿಸಿಕೊಟ್ಟಿದ್ದಾರೆ. ಕ್ರಿ.ಶ. ೯೬೬ರ ತೇದಿಯ ಪಂಪನ ಪೋಷಕನಾದ, ೨ನೆಯ ಅರಿಕೇಸರಿಯ ಮೊಮ್ಮಗನಾದ ೩ನೆಯ ಅರಿಕೇಸರಿಯ ಪರಭಣಿ

---

೧. ಡಾ. ವೆಂಕಟರಮಣಯ್ಯನವರ ಲೇಖನವನ್ನು ನೋಡಿರಿ.

ತಾಮ್ರಶಾಸನದಲ್ಲಿ ಸಬ್ಬಿದೇಶ ಸಹಸ್ರದ ಉಲ್ಲೇಖವಿದೆ[೧]. ಆದರಲ್ಲಿ ಸಬ್ಬಿದೇಶ ಸಹಸ್ರಾಂತರ್ಗತ ರೇಪಾಕ ದ್ವಾದಶ ಗ್ರಾಮದೊಳಗಣ ವನಿಕಟುಪುಲು ಎಂಬ ಗ್ರಾಮವನ್ನು ಸುಪ್ರಸಿದ್ಧ ಯಶಸ್ತಿಲಕ ಚಂಪುವಿನ ಕರ್ತೃವಾದ ಸೋಮದೇವಸೂರಿಗೆ ದಾನವಾಗಿ ಕೊಟ್ಟ ವಿಷಯವನ್ನು ಹೇಳಿದೆ. ಚಾಳುಕ್ಯ ಅರಸು ಜಗದೇಕಮಲ್ಲ ೨ನೆಯ ಜಯಸಿಂಹನ ಕ್ರಿ.ಶ. ೧೦೧೭ರ ದೌಲತಾಬಾದ ತಾಮ್ರಶಾಸನದಲ್ಲಿ[೨] ಉಲ್ಲೇಖಿಸಿದ ಸವ್ವಿದೇಶವು ಇದೇ ಸಬ್ಬಿದೇಶವಾಗಿರಬೇಕು. ಪಂಪಭಾರತದಲ್ಲಿ ಎರಡನೆಯ ಅರಿಕೇಸರಿಯು ಪಂಪನಿಗೆ 'ಬಚ್ಚೆಸಾಸಿರ'ದಲ್ಲಿದ್ದ ಧರ್ಮಪುರ ಗ್ರಾಮವನ್ನು ಶಾಸನದಗ್ರಹಾರವಾಗಿ ಕೊಟ್ಟನೆಂದು ಹೇಳಿದೆ.[೩] ಇಲ್ಲಿಯ ಬಚ್ಚೆ ಶಬ್ದಕ್ಕೆ ಚಚ್ಚೆ ಎಂಬ ಪಾಠಾಂತರವನ್ನೂ ಸೂಚಿಸಲಾಗಿದೆ. ಹಳಗನ್ನಡ ಶಾಸನಗಳಲ್ಲಿ 'ಬ' ಮತ್ತು 'ಚ' ಅಕ್ಷರಗಳ ವ್ಯತ್ಯಾಸವು ವಿಶೇಷವಿಲ್ಲದ್ದರಿಂದ 'ಬಚ್ಚೆ' ಎಂಬುದನ್ನು 'ಚಬ್ಬೆ' ಎಂದೂ ಓದಬಹುದು. ಅದರಂತೆ ಪಂಪಭಾರತದಲ್ಲಿರುವ 'ಬಚ್ಚೆಸಾಸಿರ'ದ ಮೂಲಪಾಠವು 'ಚಬ್ಬೆಸಾಸಿರ'ವೆಂದಿರಬೇಕು. 'ಚಬ್ಬೆ'ಯು 'ಚಬ್ಬಿ'ಯ-'ಸಬ್ಬಿ'ಯ ರೂಪವಾಗಿದ್ದು ಬಚ್ಚೆಸಾಸಿರವು ಸಬ್ಬಿ-ಸಹಸ್ರದ ರೂಪವೆಂದು ತಿಳಿಯಲು ಅವಕಾಶವುಂಟು. ಮತ್ತು ಪ್ರಸ್ತುತ ಶಾಸನದಲ್ಲಿ ಧರ್ಮಪುರ ಗ್ರಾಮವು ಸಬ್ಬಿನಾಡ ಮಧ್ಯದಲ್ಲಿತ್ತೆಂದು ಹೇಳಿರುವುದರಿಂದ ಈ ಸಬ್ಬಿನಾಡು ಅಥವಾ ಸಬ್ಬಿ ಸಹಸ್ರವೂ ಪಂಪಭಾರತದ ಬಚ್ಚೆಸಾಸಿರವೂ ಒಂದೇ ಎಂದು ವಿಶದವಾಗುವುದು.

ಇನ್ನು ಶಾಸನವುಳ್ಳ ಬಂಡೆಗಲ್ಲೇ ಅದರಲ್ಲಿ ಉಕ್ತವಾದ ಸಿದ್ಧಶಿಲೆಯೆಂದೂ ಅದನ್ನು ಹೊತ್ತಿರುವ ಬೊಮ್ಮಲಮ್ಮಗುಟ್ಟ ಎಂದು ಕರೆಯಲ್ಪಡುವ ಬೆಟ್ಟ ಇಲ್ಲವೆ ಈ ಬೆಟ್ಟದ ಜೊತೆಗೆ ಹಬ್ಬಿಕೊಂಡಿರುವ ಇನ್ನೆರಡು ಬೆಟ್ಟಗಳು ಸೇರಿದಂತೆ ಮೂರೂ ಬೆಟ್ಟಗಳ ಸಮೂಹವೇ ಶಾಸನದಲ್ಲಿ ಉಲ್ಲೇಖಿಸಿದ ವೃಷಭಗಿರಿಯೆಂದೂ ಮೇಲೆ ತೋರಿಸಿದ್ದೇವೆ. ಈ ವೃಷಭಗಿರಿಯನ್ನು ಶಾಸನದಲ್ಲಿ ವೃಷಭಾದ್ರಿ, ವೃಷಭಶೈಲ, ವೃಷಭಕ್ಷೋಣೀಧ್ರ ಹಾಗೂ ವೃಷಭಾಚಳವೆಂದು ಕರೆಯಲಾಗಿದೆ. ಅದು ತೀರ್ಥಸ್ಥಳವಾಗಿತ್ತೆಂದೂ ವರ್ಣಿಸಲಾಗಿದೆ. ಈ ವೃಷಭಗಿರಿಯು ಪಂಪನು ದತ್ತಿಯಾಗಿ ಪಡೆದ ಧರ್ಮಪುರ ಅಥವಾ ಧರ್ಮವುರದ ಉತ್ತರದಿಕ್ಕಿನಲ್ಲಿದೆಯೆಂದು ಶಾಸನದಲ್ಲಿ ಹೇಳಿದುದರಿಂದ ಧರ್ಮಪುರವು ವೃಷಭಾದ್ರಿಯ ದಕ್ಷಿಣ ದಿಕ್ಕಿನಲ್ಲಿದ್ದಿತೆಂಬುದು ಸ್ಪಷ್ಟ. ಮತ್ತು ಈ ಧರ್ಮಪುರಕ್ಕೆ ಹೋದರೆ ಅಲ್ಲಿಂದ ಕ್ಷೀರಾಭಿಷೇಕದಿಂದ ಮುಳುಗಿದ ವೃಷಭಪರ್ವತವನ್ನು ನೋಡಬಹುದೆಂದು ಶಾಸನದ ಸಂಸ್ಕೃತ ಶ್ಲೋಕದಲ್ಲಿ ಹೇಳಿರುವುದರಿಂದ ಧರ್ಮಪುರವು ಆ ಬೆಟ್ಟದ ದಕ್ಷಿಣ ಭಾಗದಲ್ಲಿ ಅತಿ ಸಮೀಪದಲ್ಲಿಯೇ ಇದ್ದಿತ್ತೆಂದು ತಿಳಿಯುವುದು. ಅಂದರೆ ಧರ್ಮವುರದಲ್ಲಿ ನಿಂತರೆ ಬಂಡೆಗಲ್ಲಿನ ಮೇಲಿರುವ ಚಕ್ರೇಶ್ವರಿ ಹಾಗೂ ಜಿನಬಿಂಬಗಳನ್ನು ಪೂಜಿಸುವುದನ್ನು ನೋಡಬಹುದಾಗಿತ್ತು. ವೃಷಭಾದ್ರಿ ಅಥವಾ ಈಗಿನ ಬೊಮ್ಮಲಮ್ಮಗುಟ್ಟ ಎಂಬ ಬೆಟ್ಟದ ದಕ್ಷಿಣಕ್ಕೆ ಇಷ್ಟು ಹತ್ತಿರದಲ್ಲಿ ಈಗ ಧರ್ಮಪುರ ಅಥವಾ ಧರ್ಮವುರ ಎಂಬ ಹೆಸರಿನ ಗ್ರಾಮವಿರುವುದಿಲ್ಲ. ಆದರೆ ಈಗಿನ ಕುರಿಕ್ಯಾಲ ಎಂಬ ಗ್ರಾಮವು ಶಾಸನದಲ್ಲಿರುವ ಧರ್ಮವುರ ಗ್ರಾಮದ ವರ್ಣನೆಗೆ ಸರಿಹೋಗುತ್ತದೆ. ಮೇಲೆ ಹೇಳಿದಂತೆ ಕುರಿಕ್ಯಾಲ ಗ್ರಾಮವು ಬೊಮ್ಮಲಮ್ಮಗುಟ್ಟದ ದಕ್ಷಿಣಕ್ಕೆ

೧. *Sources, Med. Hist. Dec.*, Vol. II p.52.

೨. *Hyd Arch. Ser.*, No. 2.

೩. ವಿಕ್ರಮಾರ್ಜುನ ವಿಜಯಂ ೧೪-೫೬.

೫-೬ ಫರ್ಲಾಂಗಿನಷ್ಟೇ ದೂರದಲ್ಲಿದೆ. ಆದುದರಿಂದ ಈಗಿನ ಕುರಿಕ್ಯಾಲ ಗ್ರಾಮ ಹಾಗೂ ಅದರ ಜೊತೆಗಿರುವ ನೇಲಕೊಂಡಪಲ್ಲಿ ಮತ್ತು ಕೊಂಡನಪಲ್ಲಿ ಎಂಬ ಉಪಗ್ರಾಮಗಳು ಸೇರಿ ಶಾಸನದಲ್ಲಿ ಉಕ್ತವಾದ ಧರ್ಮಪುರ ಅಥವಾ ಧರ್ಮವುರವಾಗಿರಬೇಕೆಂದು ನಮಗನಿಸುವುದು. ಕರೀಂನಗರ ಜಿಲ್ಲೆಯಲ್ಲಿರುವ ಧರ್ಮಪುರ, ಧರ್ಮಾರ ಮುಂತಾದ ಊರುಗಳು ಶಾಸನದಲ್ಲಿ ವರ್ಣಿಸಿದ ಧರ್ಮಪುರಕ್ಕೆ ಸರಿಹೋಗುವುದಿಲ್ಲವಾದುದರಿಂದ ಅವು ಪಂಪನು ಪಡೆದ ಧರ್ಮಪುರವಲ್ಲವೆಂದು ಹೇಳಬಹುದು. ಡಾ. ವೆಂಕಟರಮಣಯ್ಯನವರು ತಮ್ಮ ಲೇಖನದಲ್ಲಿ ಶಾಸನದಲ್ಲಿ ಉಕ್ತವಾದ ವೃಷಭಾದ್ರಿಯನ್ನು ಗುರುತಿಸುವುದು ಸಾಧ್ಯವಿಲ್ಲ ಎಂದು ಹೇಳಿ ಅದನ್ನು ಹಾಗೂ ಧರ್ಮಪುರವನ್ನು ಗುರುತಿಸುವ ಬಗ್ಗೆ ಮಾಡಿದ ವಿವರವಾದ ಚರ್ಚೆಯು ಸರಿಯಲ್ಲವೆಂದು ನಮ್ಮ ಅಭಿಪ್ರಾಯ.

ಶಾಸನದಲ್ಲಿ ಪಂಪನ ತಾಯಿ ಅಬ್ಬಣಬ್ಬೆಯ ತವರೂರು ಬೆಳ್ವೊಲದಣ್ಣಿಗೆಱೆಯೆಂದು ಹೇಳಿದೆ. ಬೆಳ್ವೊಲನಾಡು ಈಗಿನ ಧಾರವಾಡ ಜಿಲ್ಲೆಯ ಗದಗ, ರೋಣ ಮತ್ತು ನವಲಗುಂದ ಭಾಗಗಳನ್ನೊಳಗೊಂಡಿದ್ದು ಬೆಳ್ವೊಲ-೩೦೦ ಎಂದು ಶಾಸನಗಳಲ್ಲಿ ಉಲ್ಲೇಖಿಸಲ್ಪಟ್ಟಿದೆ. ನವಲಗುಂದ ತಾಲೂಕಿನ ಅಣ್ಣಿಗೆರೆಯೇ ಶಾಸನದಲ್ಲಿ ಉಕ್ತವಾದ ಅಣ್ಣಿಗೆಱೆ. ಇಲ್ಲಿಯ ಅಮೃತೇಶ್ವರ ದೇವಾಲಯವು ಪ್ರಸಿದ್ಧವಾಗಿದ್ದು ಈ ಸ್ಥಳವು ಐತಿಹಾಸಿಕ ದೃಷ್ಟಿಯಿಂದ ಮಹತ್ವದ್ದಾಗಿದೆ.

**ಶಾಸನದ ಪಾಠ**

೧. *ಓಂ ನಮಃ ಸಿದ್ಧೇಭ್ಯಃ[।*] ಸ್ವಸ್ತಿ ಸಮಸ್ತ ಸಕಳಕಳಾಳಾಪ್ರವೀಣಂ
ಭವ್ಯರತ್ನಾಕರ[ಂ] ಗುಣಪಕ್ಷಪಾತಿ ಬೆಂಗಿನಾಡ ಸಪ್ತಗ್ರಾಮ
ಗಳೊಳಗಣ ವಂಗಿಪರಱ್ಱಕಮ್ಮೆ ಬ್ರಾಹ್ಮಣಂ ಜಮದಗ್ನಿ ಪಂಚಾರ್ಷೇಯಂ
ಶ್ರೀವತ್ಸಗೋತ್ರಂ ಗುಣ್ಡಕಱ್ಱನಿಡುಂಗೊಣ್ಡೆಯಭಿಮಾನಚನ್ದ್ರನ
ಮರ್ಮ್ಮಂ ಭೀಮಪಯ್ಯನ ಬೆಳ್ವೊಲದಣ್ಣಿಗೆಱೆಯ ಜೋಯಿಸ
ಸಿಂಘನ ಮರ್ಮ್ಮ

೨. ಳಬ್ಬಣಬ್ಬೆಯ[1] ಮಗಂ ಕೊಣ್ಡಕುನ್ದೆಯ ದೇಸಿಗ ಗಣದ ಪೊತ್ತಗೆಯ
ಬಱಿಯ ಪಣ್ಡರಂಗವಲ್ಲಿಯ ಜಯಣನ್ದಿ[2] ಸಿದ್ಧಾನ್ತ ಭಟಾರರ
ಗುಡ್ಡಂ ಜಿನವಲ್ಲಭಂ ಸಬ್ಬಿನಾಡ ನಟ್ಟನಡುವಣ ಧರ್ಮ್ಮವುರದುತ್ತರ
ದಿಗ್ಭಾಗದ ವೃಷಭಗಿರಿಯೆಂಬನಾದಿ ಸಂಸಿದ್ಧ ತೀರ್ತ್ಥ ದಕ್ಷಿಣ ದಿಶಾ
ಭಾಗದೀ ಸಿದ್ಧಶಿಲೆಯೊಳ್ತಮ್ಮ ಕುಲದೈವಮಾದ್ಯನ್ತ ಜಿನಬಿಂಬಂಗಳುಮಂ
ಚಕ್ರೇಶ್ವರಿಯುಮಂ ಪೆಱವುಂ ಜಿನಪ್ರತಿ

೩. ಮೆಗಳುಮಂ ತ್ರಿಭುವನತಿಲಕಮೆಂಬ ಬಸದಿಯುಮಂ ಕವಿತಾಗುಣಾರ್ಣ್ಣವ
ಮೆಂಬ ಕೆಱೆಯುಮಂ ಮದನವಿಳಾಸಮೆಂಬ ಬನಮುಮಂ ಮಾಡಿಸಿದಂ।
ವೃತ್ತಂ॥ ಭ್ರಾತರ್ದ್ಧರ್ಮ್ಮಪುರಂ ಪ್ರಯಾಮ ಕಿಮತೋ ಜೈನಾಭಿಷೇಕೋ
ತ್ಸವ ಕ್ಷೀರಪ್ಲಾವಿತ ತುಂಗ ಶೃಂಗ ವೃಷಭಕ್ಷೋಣೀಧ್ರ (ಧ್ರ)ಮೀಕ್ಷಾಮಹೇ[।*]
ಯಾತ್ರಾಯಾತ ಸಮಸ್ತ ಭವ್ಯ ಜನತಾಸನ್ಮಾನ ದಾನೋದ್ಯತಂ
ಪಂಪಾರ್ಯ್ಯಾ

---

* ಈ ಭಾಗದ ಸಂಜ್ಞೆಯು ಶಾಸನಗಳಲ್ಲಿ 'ಸಿದ್ಧಂ' ಶಬ್ದವನ್ನು ಸೂಚಿಸುವುದೆಂದು ತಿಳಿಯುತ್ತಾರೆ.

೧. ಡಾ. ರಮಣಯ್ಯನವರು 'ಮರ್ಮ[ಂ]ವಬ್ಬಣಬ್ಬೆಯ' ಎಂದು ತಪ್ಪಾಗಿ ಓದಿದ್ದಾರೆ.

೨. ಡಾ. ರಮಣಯ್ಯನವರು 'ಜಯಂ[ಂ]ಗೊಣ್ಡ' ಎಂದು ತಪ್ಪಾಗಿ ಓದಿದ್ದಾರೆ.

೪. ಸುಜಮತ್ರ ಭೀಮತಸುಜಂ ಸಮ್ಯಕ್ತ್ವರತ್ನಾಕರಂ।।।(॥)[।*॥] ಗೀತಂ
ಗಾತುಮನೇಕ ಭೇದ ಸುಭಗಂ ಕಾವ್ಯಾನಿ ಸೋಚ್ಚಾವಚಂ ವಾಚಾ
ವಾಚಯಿತುಂ ಪ್ರಿಯಾಣಿ ವದಿತುಂ ಸಾಧೂಪಕರ್ತ್ತುಂ ಸತಾಂ[೧] [1*]
ಭೋಗಾನ್ಸೇವಿತುಮಂಗನಾರಮಯಿತುಂ ಪೂಜಾಂ ಪಿಧಾತುಂ ಜಿನೇ
ಜಾನೀತೇ ಜಿನವಲ್ಲಭಜ್ಜರಮಿದಂ ಪಂಪಾಭಿಧಾನಾನುಜಃ ।।।(॥)[2॥*]
ಅಜಸ್ರ ಜಿನವನ್ದನಾಗತ ಮುನೀ

೫. ಶ್ವರ ಶ್ರಾವಕ ಪ್ರಜಾಸ್ತವರವಪ್ರತಿಧ್ವನಿತಶಬ್ದಕೋಳಾಹಳ್ಳೈ[೩*]
ಅಧಿಷ್ಠಿತ ದಿಗಂಬರೋ ವೃಷಭಶೈಲ ಏಷ ಸ್ವಯಂ ಪರಾಂ ವದತಿ
ವಾಚಕಾಭರಣಕೀರ್ತ್ತಿಮಾಕಳ್ಪತಃ॥[3॥*] ಬಗೆಯಲಳುಂಬ
ಮೀ ಬಗೆಯನಾರ್ಬ್ಬರ್ಗೆವೊರ್ಬ್ಬರ್ಗೆಗಾಸೆಯಲ್ತು ದಿಟ್ಟಿಗೆ ಪೊಲನಲ್ತು
ನೀಳ್ದಸೞಿಯೊಳ್ಜಿನಬಿಂಬಮನೀತನೀಗಳೆನ್ತಗೞಿಸಿದಪ್ಪೊನೆನ್ದು
ಬಗೆವನ್ನೆವರಂ ಜಿನಬಿಂಬ

೬. ಮಲ್ಲಿ ತೊಟ್ಟಗೆ ಸೆಗೞ್ದಿೞ್ದುವೇಂ[೨] ಚರಿತಮಚ್ಚರಿಯೋ ಜಿನವಲ್ಲಭೇ
ಸ್ವ್ರಸಂ(ನಾ)॥[4॥*]ಇದು ಕವಿತಾಗುಣಾರ್ಣ್ಣವನ ಕೀರ್ತ್ತಿಯ ಮೂರ್ತ್ತಿ
ವೊಲಾಗಿ ದಕ್ಷಿಣಾರ್ದ್ಧದ ವೃಷಭಾದ್ರಿಯ[ಕ್ಕೆ] ವೃಷಭೇಶ್ವರಬಿಂಬ
ಸನಾಥಮಂಬಲಂಪೊದವೆ[೩] ನಿಜದ್ವಿಜಾವಸಥಪರ್ವ್ವತಮಂ ಜಿನಚೈತ್ಯ
ಮಾಗೆ ಮಾಡಿದ ಜಿನವಲ್ಲಭಂಗೆ ಜಿನವಲ್ಲಭನಪ್ಪುದುಮೊನ್ದು
ಛೋ(ಚೋ)ದ್ಯಮೋ॥ [5॥*] ಚದುರ ಮಯ್ಮೆಯ ಸತ್ಕ

೭. ವಿತ್ವದ ಸನ್ದ ಪಂಪನ ತಮ್ಮನೋ[ರ್ವ್ವದೆ] ಪೊಗೞ್ತೆಯೆ ಬಾಜಿಸ
ಲ್ಬರೆಯಲ್ಕವಿತ್ವದ ತತ್ವದೊಳ್ಪುದಿದು ನೇರ್ವ್ವಡೆ ಪೇೞಲುರ್ವ್ವಿಗ
ಪೂರ್ವ್ವಮಾಗಿರೆ ಬಲ್ಲೊನಪ್ಪುದಱಿನೊರ್ವ್ವನೆ ವಾಗ್ವಧೂವರ
ವಲ್ಲಭಂ ಜಿನವಲ್ಲಭಂ॥ [6॥*]ವಿನುತ ಚಳುಕ್ಯ ವಂಶಪತಿ
ಮಿಕ್ಕರಿಕೇಸರಿ ಸನ್ದ ವಿಕ್ರಮಾರ್ಜುನ ವಿಜಯಕ್ಕೆ ಧರ್ಮ್ಮಪುರಂ(ರ)
ಮೆನ್ದುಮದೇಯಮಿದೆನ್ದು[೪] ಕೀರ್ತ್ತಿಶಾಸನಮೆನೆ ಕೊಟ್ಟ ಶಾಸನದ
ಪಂಪ

೮. ನ ಸಂಬಿದುದೊನ್ದು[೫] ಜೈನಶಾಸನದ ನೆಗೞ್ತೆಯುಂ ವೃಷಭಪರ್ವ್ವತ
ಮನ್ತದು ತಾನೆ ಪೇೞದೇ॥ [7॥*] ಎಸಗಲ್ಗಾಳಿ[೬] ಪುಗಲ್ಪತಂಗ
ಕಿರಣಂ ಸಾರಲ್ಕಿಗಂ ಪಾೞಲಾಗಸದೊಳ್ಪಕ್ಕಿಗಳಲ್ಲಿ ಸಲ್ಲವೆನಿಸಿದರ್ಟ್ಟಿ
ನ್ಯೋದಯಂ ಧರ್ಮದೊಳ್ಜಸಮಂ ಪೊಂಪುೞಿ ಮಾಡೆ ಮೆಚ್ಚಿ
ಹರಿಗಂ ಪಂಪಂಗೆಗೊಟ್ಟಾದ್ವಿಜಾವಸಥ ಗ್ರಾಮದೇನ್ನೆಗೞ್ತೆಯ .
ಕಳಾಪಗ್ರಾಮಮಂ ಪೋಲ್ತುದೋ॥ [8॥*] ಬರೆದುದೆ

---

೧ ಡಾ. ರಮಣಯ್ಯನವರು 'ಸಾಧ್ಯಪಕರ್ತ್ತುಂ' ಎಂದು ಓದಿ ಅದಕ್ಕೆ 'ಸಾದ್ಧ್ಯುಪಕರ್ತ್ತುಂ' ಎಂದು ತಿದ್ದುಪಡಿ ಸೂಚಿಸಿದ್ದಾರೆ. ಆದರೆ ಎರಡನೆಯ ಅಕ್ಷರವು 'ಧೂ' ಎಂದು ಸ್ಪಷ್ಟವಾಗಿದೆ.

೨. ಡಾ. ರಮಣಯ್ಯನವರು 'ನೆಗೞ್ದಿೞ್ದುವೇಂ' ಎಂದು ಓದಿದ್ದಾರೆ.

೩. ಡಾ. ರಮಣಯ್ಯನವರು'-ಬಲಂಪೊಡವೆ' ಎಂದು ಓದಿದ್ದಾರೆ.

೪. ಡಾ. ರಮಣಯ್ಯನವರು '-ಮದೀಯಮಿದೆನ್ದು' ಎಂದು ಓದಿದ್ದಾರೆ.

೫. ಡಾ. ರಮಣಯ್ಯನವರು 'ಪಂಪನನಾ ಬಿರುದೊನ್ದು' ಎಂದು ಓದಿದ್ದಾರೆ.

೬. ಡಾ. ರಮಣಯ್ಯನವರು '[ಎಸ]'ಯೆಲ್ಗಾಳಿ' ಎಂದು ಓದಿದ್ದಾರೆ.

೯. ತಾಂಬ್ರಶಾಸನಮದೇಯಮೆ ಧರ್ಮ್ಮವುರಂ ನೆಗೞ್ತೆವೆತ್ತರಿಗನ ಕೊಟ್ಟುದೇ
ನೆಗೞ್ದ ಪಂಪನ ಪೆತ್ತುದೆ ಪೇೞಿಮೆನ್ದು ನೀಮ್ಮರುಳೆ ಪಲರ್ಮ್ಮೆಯುಂ
ಪಲಬರಂ ಬೆಸಗೊಳ್ಳದೆ ಪೋಗಿ ನೋಡ್[1] ಸುನ್ದರ ವೃಷಭಾಚಳೋನ್ನತ
ಶಿಳಾತಳದೊಳ್ಬರೆದಕ್ಕರಂಗಳಂ॥ [9॥*] ಕನ್ದಂ। ಜಿನಭವನಂಬು
ಲೆತ್ತಿಂಚುಟ[2] ಜಿನಪೂಜಲ್ಸೇಯುಚುನ್ನಿ ಜಿನಮುನುಲಕುನತ್ತಿನ
ಯನ್ನದಾನಂಬೀವುಟಂ[3] ಜಿನವಲ್ಲಭುಬೋಲಂಗಲರೆ

೧೦. ಜಿನಧರ್ಮ್ಮಪರುಲ್॥ [10॥*] ದಿನಕರುಸರಿವೆಲ್ಗುದುಮನಿ ಜಿನವಲ್ಲಭನೊಟ್ಟನೆತ್ತು
ಜಿತಕವಿನಸನುಂ[4] ಮನುಜುಲ್ಗಲರೇ ಧಾತ್ರಿಂ ವಿನಿತಿಚ್ಚಿದು[5]ನನಿಯ ವೃತ್ತ
ವಿಬುಧ ಕವೀಸ್ರುಲ್[6]॥[11॥*] ಒಕ್ಕೊಕ್ಕೊ[7]ಗುಣಂ[ಬು]ಕಲ್ಗುದುರೊಕ್ಕೊ(ಕೊ)ಣ್ಡ
ಗಾಕೊಕ್ಕೊಲಕ್ಕಲ್[8]ವೆವ್ವರಿಕಿಂ ಲೆಕ್ಕಿಂಪನೊಕ್ಕೊಲಕ್ಕಕು ಮಿಕ್ಕಿಲಿಗುಣ
ಪಕ್ಷಪಾತಿ ಗುಣಮಣಿಗಣಂಬುಲ್[9] ॥[12॥*]ಎನ್ದು ಲೋಕಮೆಲ್ಲಂ
ಪೊಗೞೆ ನೆಗೞ್ದ ಜಿನವಲ್ಲಭನ ಸುಧರ್ಮ್ಮಸನ್ತತಿಯೊ

೧೧ . ಳ್ದೊಟ್ಟ[10] ಗುಣಾವಳಿಯನೀ ವೃಷಭಗಿರಿಯ ಸಿದ್ಧಶಿಲೆಯೊಳೞಿಯಮ್ಮಂ
ಟಂಕ್ಕೋ (ಕೋ)ತ್ಕೀರ್ಣ್ಣಮ್ಮಾಡಿದಂ॥

*ಪ್ರಬುದ್ಧ ಕರ್ಣಾಟಕ, ೫೩-೪, ೧೯೭೨, ಪು. ೭೩-೮೩*

---

೧. ಡಾ. ರಮಣಯ್ಯನವರು 'ನೋಡು' ಎಂದು ಓದಿದ್ದಾರೆ.
೨. ಇಲ್ಲಿ 'ಜಿನಭವನಮು ಲೆತ್ತಿಂಚುಟ' ಎಂದು ತಿದ್ದಿ ಓದಬೇಕೆಂದು ಡಾ. ರಮಣಯ್ಯನವರು ಸೂಚಿಸಿದ್ದಾರೆ.
೩. ಇಲ್ಲಿ 'ದಾನಮೀವುಟ' ಎಂದು ತಿದ್ದಿ ಓದಬೇಕು ಎಂದು ಡಾ. ರಮಣಯ್ಯನವರು ಸೂಚಿಸಿದ್ದಾರೆ.
೪. 'ನನಸುನ್' ಎಂದು ತಿದ್ದಿ ಓದಬೇಕೆಂದು ಡಾ. ರಮಣಯ್ಯನವರು ಹೇಳಿದ್ದಾರೆ.
೫. 'ವಿನಿತಿಚ್ಚುದು' ಎಂದು ಡಾ. ರಮಣಯ್ಯನವರು ಓದಿದ್ದಾರೆ.
೬. 'ಕವೀಂದ್ರುಲ್' ಎಂದು ಡಾ. ರಮಣಯ್ಯನವರು ಓದಿದ್ದಾರೆ.
೭. 'ಒಕ್ಕೊಕ್ಕ' ಎಂದು ಡಾ. ರಮಣಯ್ಯನವರು ಓದಿದ್ದಾರೆ.
೮. ಡಾ. ರಮಣಯ್ಯನವರು 'ರೊಕ್ಕಣ್ಡಂಗಾ ಕೊಕ್ಕಲಕ್ಕಲೇ' ಎಂದು ಓದಿದ್ದಾರೆ.
೯. 'ಗುಣಂಬುಲ್' ಎಂದು ಡಾ. ರಮಣಯ್ಯನವರು ಓದಿ 'ಗುಣಮುಲ್' ಎಂದು ತಿದ್ದಬೇಕೆಂದು ಸೂಚಿಸಿದ್ದಾರೆ.
೧೦. 'ಸಂತತಿಯೊಳ್ದೊಟ್ಟ' ಎಂದು ಡಾ. ರಮಣಯ್ಯನವರು ಓದಿದ್ದಾರೆ.

# ೫. ಲಕ್ಕುಂಡಿಯ ಶಾಸನ : ಕೆಲವು ಒಳನೋಟಗಳು

● ಹಂಪ. ನಾಗರಾಜಯ್ಯ

ಲಕ್ಕುಂಡಿಯ ಶಾಸನಕ್ಕೆ ಕರ್ನಾಟಕದ ಚಾರಿತ್ರಿಕ ಧಾರ್ಮಿಕ ಸಾಂಸ್ಕೃತಿಕ ಚರಿತ್ರೆಯಲ್ಲಿ ವಿಶಿಷ್ಟಸ್ಥಾನವಿದೆ; ಗಾತ್ರ ಮತ್ತು ವಿಸ್ತಾರದಲ್ಲಿಯೂ ಇದು ದೊಡ್ಡ ಶಾಸನ. ಒಬ್ಬ ಚಾರಿತ್ರಿಕ ಮಹಿಳೆಯನ್ನು ಕುರಿತು ಇಷ್ಟು ದೀರ್ಘವಾಗಿ ಕಾವ್ಯಮಯವಾಗಿ ವರ್ಣಿಸಿದ ಶಾಸನಗಳು ಅಪರೂಪ. ಜತೆಗೆ ಈ ಶಾಸನೋಕ್ತ ಸಂಗತಿಗಳೆಲ್ಲ ಕಾವ್ಯೋಕ್ತವೂ ಆಗಿರುವುದು ಶಾಸನದ ಅಪೂರ್ವತೆಯನ್ನು ಹೆಚ್ಚಿಸಿದೆ. ಇದಕ್ಕಿಂತ ಹಿಂದೆ ಬರೆಸಲಾಗಿದ್ದ ಮೂಲ ಶಾಸನ ಮುರಿದು ಹಾಳಾದ್ದರಿಂದ ಈ ಹೊಸ ಶಾಸನವನ್ನು ಪ್ರತಿ ಎತ್ತಿದಂತೆ ಬರೆಸಲಾಗಿದೆ. ಆ ಮೂಲ ತ್ರುಟಿತ ಶಾಸನವೂ ಉಪಲಬ್ಧವಾಗಿರುವುದು ಇನ್ನೊಂದು ಯೋಗಾಯೋಗ. ಇವೆಲ್ಲದಕ್ಕೂ ಕಳಶಪ್ರಾಯವಾಗಿರುವುದು ಇದು ಮಹಾಕವಿ ರನ್ನನ ಶಾಸನ ರಚನೆಯೆಂಬುದು.

ವಾಸ್ತವವಾಗಿ ಸಾಹಸಭೀಮವಿಜಯ ಕಾವ್ಯರಚಿತವಾದ ಕಾಲಘಟ್ಟದಲ್ಲಿಯೇ ಈ ಶಾಸನ ರಚಿತವಾಗಿದೆ. ಆಹವಮಲ್ಲದೇವ ಇರಿವಬೆಡಂಗ ಸತ್ಯಾಶ್ರಯನು ಇನ್ನೂ ಆಳುತ್ತಿದ್ದಾಗ, ಕ್ರಿ.ಶ. ೧೦೦೭ರಲ್ಲಿ ಇದನ್ನು ಬರೆಯಲಾಗಿದೆ. ಈ ವೇಳೆಗಾಗಲೇ ಅಜಿತಪುರಾಣವನ್ನು (ಕ್ರಿ.ಶ.೯೯೩) ರಚಿಸಿ ೧೪-೧೫ ವರ್ಷಗಳಾಗಿದ್ದುವು. ರನ್ನ ತನ್ನ ಶೈಲಿ-ಸ್ವಭಾವಕ್ಕೆ ಅನುಗುಣವಾಗಿ ಈ ಶಾಸನದಲ್ಲಿ ಅತ್ತಿಮಬ್ಬೆಯ ಜೀವನವನ್ನು ಸಿಂಹಾವಲೋಕನ ಕ್ರಮದಲ್ಲಿ ನಿರೂಪಿಸಿದ್ದಾನೆ.

ಒಟ್ಟು ೮೮ ಸಾಲುಗಳು ಇರುವ ಲಕ್ಕುಂಡಿ ಶಾಸನ ಜಿನಸ್ತುತಿಯಿಂದ ಪ್ರಾರಂಭವಾಗಿದೆ. ವಿಷ್ಣುಪುರಿ ವೈಕುಂಠದಂತಿದ್ದ 'ಲೊಕ್ಕಿಗುಂಡಿ' ಹೆಸರಿನ ಪಟ್ಟಣವು ಜೈನಸ್ಥಾನವಾಗಿದ್ದು, ಅಲ್ಲಿ ಗುಣನಿಧಿ ದಾನಚಿಂತಾಮಣಿಯು ಚಾಳುಕ್ಯ ಚಕ್ರವರ್ತಿಗಳ ಸೇನಾಧಿಪತಿಗಳು ಸಮರ್ಪಿಸಲಾದ ಜೈನಗೇಹವನ್ನು ಮಾಡಿಸಿದಳು.

ಲಕ್ಕುಂಡಿಯ ಶಾಸನ, ಕನ್ನಡ ಶಾಸನ ಪ್ರಪಂಚದಲ್ಲಿ ಗಣ್ಯವಾಗಲು ಕಾರಣ ಅದರ ಕೇಂದ್ರಬಿಂದು ಅತ್ತಿಮಬ್ಬೆಯಾಗಿರುವುದು ಮತ್ತು ಅದರಲ್ಲಿ ಚಾಲುಕ್ಯ ಸಾಮ್ರಾಜ್ಯಕ್ಕೆ ಸಂಬಂಧಿಸಿದ ಮಹತ್ವಗಳು ಅಡಗಿರುವುದು. ಇಮ್ಮಡಿ ತೈಲಪ ಮತ್ತು ಇರಿವ ಬೆಡಂಗ ಸತ್ಯಾಶ್ರಯ ಚಕ್ರವರ್ತಿಗಳ ರಾಜಶಕ್ತಿಗೆ ಆಧಾರಸ್ತಂಭವಾಗಿದ್ದ ಶ್ರೇಷ್ಠ ದಂಡನಾಯಕರ ಪರಿಚಯ ಈ ಶಾಸನದಲ್ಲಿದೆ; ಮತ್ತು ಇವರೆಲ್ಲ ಅತ್ತಿಮಬ್ಬೆಯ ಬಳಗವೆಂಬುದು ಗಮನಾರ್ಹವಾಗಿದೆ.

ಅತ್ತಿಮಬ್ಬೆಯ ಅಜ್ಜಪಜ್ಜರ ಮನೆತನದ ಬಳ್ಳಿ ಹಬ್ಬಿರುವ ರೀತಿಯನ್ನು ನಾಲ್ಕು ಮೂಲಗಳಿಂದ ಸಂಚಯಿಸಬಹುದು: ೧. ರನ್ನನ ಅಜಿತಪುರಾಣಂ ೨. ಪೊನ್ನನ ಶಾಂತಿಪುರಾಣಂ ೩. ಬ್ರಹ್ಮಶಿವನ ಸಮಯ ಪರೀಕ್ಷೆ ೪. ಲಕ್ಕುಂಡಿಯ ಶಾಸನ. ಇವುಗಳಲ್ಲಿ ಅತ್ತಿಮಬ್ಬೆಯ ವಂಶವಲ್ಲರಿ, ಪವಾಡಗಳು, ಸಾಧನೆಗಳು ಮತ್ತು ಪೂರಕ ಸಮಕಾಲೀನ ಇತಿಹಾಸ ಸಮಸ್ತವೂ ಹೆಪ್ಪುಕಟ್ಟಿರುವುದು ಅಜಿತಪುರಾಣಂ ಮತ್ತು ಲಕ್ಕುಂಡಿಯ ಶಾಸನಗಳಲ್ಲಿ.

'ಲೊಕ್ಕಿಗುಂಡಿ'ಯು ಪಶ್ಚಿಮ ಚಾಲುಕ್ಯರ ಕಾಲದ ಪ್ರಸಿದ್ಧ ಪಟ್ಟಣ. ಅಲ್ಲಿ ಒಂದು

ನಾಣ್ಯದ ಕಮ್ಮಟವಿತ್ತೆಂದು ಶಾಸನ ದಾಖಲೆಯಿದೆ; ಇಲ್ಲಿ ತಯಾರಾಗುತ್ತಿದ್ದ ನಾಣ್ಯವನ್ನು 'ಲೊಕ್ಕಿ-ಗದ್ಯಾಣ'ವೆಂದು ಕರೆಯುತ್ತಿದ್ದರು (S11.XI-i. No. 136) ಅದೇ: XVIII 1170 ನಿಡ್ಡೋಣಿ, ಪು ೨೦: ಅದೇ: ೧೮೭. ಲೊಕ್ಕಿಗುಂಡಿ ಎಂಬುದು ಸ್ಥಳವಾಚಿ ಶಬ್ದ. ಲೊಕ್ಕಿ + ಗುಂಡಿ ಎಂಬೆರಡು ಶಬ್ದಗಳು ಇದರಲ್ಲಿ ಸೇರಿವೆ. ಗುಂಡಿಗಲ್ ಎಂಬೊಂದು ಊರಿನ ಹೆಸರು ಶಾಸನೋಕ್ತವಾಗಿದೆ (ಎಕ XVI; ತುಮಕೂರು. ೯೫); ಗುಂಡಾಪುರ ಎಂಬ ಹೆಸರಿನ ಊರಿದೆ. ಲೊಕ್ಕಿ ಎನ್ನುವುದಕ್ಕೆ ಲಕ್ಕಿ, ನೆಕ್ಕಿ, ಲಕ್ಕಿಲಿ, ಲೆಕ್ಕಿಲಿ, ಲೆಕ್ಕಿ ಎಂಬ ರೂಪಾಂತರಗಳಿವೆ. ಇದೊಂದು ಗಿಡದ ಹೆಸರಾಗಿದ್ದು ಈ ವಿವಿಧ ರೂಪಗಳು ಈ ಗಿಡದ ಜನಪ್ರಿಯತೆಗೆ ಸಾಕ್ಷಿ; ಪ್ರಯೋಗಬಹುಳತೆಯಿಂದ ವಿವಿಧರೂಪಗಳು ಹುಟ್ಟಿವೆ. ಈ ಶಬ್ದರೂಪದ ಪ್ರಾಚೀನತೆ, ಅನ್ಯಾನ್ಯ ಪ್ರಯೋಗಗಳ ಚರ್ಚೆ ಇಲ್ಲಿಗೆ ಅಪ್ರಸ್ತುತವಾದರೂ ಈ ಗಿಡದ ಬಗ್ಗೆ ಹೇಳಬೇಕಾಗಿದೆ. ಅಡವಿಯ ಲಕ್ಕಿ, ಕರೇಲಕ್ಕಿ, ಬಿಳೇಲಕ್ಕಿ ಎಂಬ ಹೆಸರುಗಳಿರುವ ಲಕ್ಕಿ (ಲೊಕ್ಕಿ) ಗಿಡವನ್ನು ಇಂದ್ರಸುರಸ, ಇಂದ್ರಾಣಿ, ಇಂದ್ರಾಣಿಕೆ, ನೀರ್ಗುಂಡಿ, ಶೇಫಾಲಿಕೆ, ಸಿಂದುವಾರ ಎಂಬ ಹೆಸರುಗಳಿಂದ ನಿರ್ದೇಶಿಸಲಾಗಿದೆ. ಇಂಗ್ಲಿಷಿನಲ್ಲಿ ಇದಕ್ಕೆ *The shrub or small tree Vitex negundo or trifolia Lin* ಎಂದು ಹೆಸರಿದೆ. ಇಷ್ಟು ಈ ಗಿಡದ ಮಾಹಿತಿಗಳನ್ನು ನೀಡಿದ ಉದ್ದೇಶವೆಂದರೆ ಲಕ್ಕಿಗಿಡವನ್ನು ಜೈನರು ಯಕ್ಷಿ ಪದ್ಮಾವತಿಯ ವಾಸವೃಕ್ಷವೆಂದು ಭಾವಿಸಿರುವುದನ್ನು ಸೂಚಿಸುವುದು. ಈ ಗಿಡಕ್ಕೆ ಪದ್ಮಾವತಿಯ ಸಂಬಂಧ ಕ್ರಿ. ಶ. ೮-೯ನೆಯ ಶತಮಾನದ ವೇಳೆಗೆ ಬಂದಂತೆ ತೋರುತ್ತದೆ. ಲೊಕ್ಕಿಗುಂಡಿ ಎಂಬ ಹೆಸರು ಈ ಲೊಕ್ಕಿಗಿಡದಿಂದ ಬಂದಿದೆಯೆಂಬ ಸ್ಥಳೀಯ ಐತಿಹ್ಯಕ್ಕೆ ವಾಸ್ತವತೆಯ ಸ್ಪರ್ಶ ಬರಬೇಕಾದರೆ ಅಲ್ಲಿ ಪದ್ಮಾವತಿಯ ಗುಡಿಯೊ ವಿಗ್ರಹವೊ ಇರಬೇಕಾಗುತ್ತದೆ. ಈಗಿನ ಲಕ್ಕುಂಡಿಯ ಕೆರೆಯ ಬಳಿ ಪದ್ಮಾವತಿಯ ವಿಗ್ರಹವಿದೆಯೆಂದು ತಿಳಿದುಬಂದಿರುವುದು ಈ ವಾದಕ್ಕೆ ಪುಷ್ಟಿಯಾಗಬಹುದು. ಲಕ್ಷ್ಮಿಗೆ ಸಂಬಂಧಿಸಿದಂತೆಯೂ ಈ ಸ್ಥಳನಾಮದ ನಿಷ್ಪತ್ತಿಯನ್ನು ನಿರ್ವಚನಗೊಳಿಸಿದ್ದಾರೆ; ಪದ್ಮಾವತಿಗೆ ಲೊಕ್ಕಿಯವ್ವೆ ಎಂಬ ಹೆಸರಿರುವುದರಿಂದ ಸ್ಥಳನಾಮ ಜಿಜ್ಞಾಸೆ ಕಡೆಗೆ ವಾಲುತ್ತಿದೆ.

ಲೊಕ್ಕಿಗುಂಡಿಯು ಬ್ರಾಹ್ಮಣ, ಜೈನ ಮತ್ತು ಇತರ ಜಾತಿಗಳವರಿಂದ ಕೂಡಿತ್ತು. ಅತ್ತಿಮಬ್ಬೆಯ ಗಂಡನ ಮನೆಯವರು ಲಕ್ಕುಂಡಿ ಮೂಲದವರಿರಬಹುದು. ಆಕೆಯ ನುಗ 'ಪಡೆವಳ ತೈಲ' ಅಣ್ಣಿಗದೇವನು ಚಾಳುಕ್ಯ ಚಕ್ರವರ್ತಿಗಳಿತ್ತ ಬೀಳವೃತ್ತಿಯಿಂದ ಆಳುತ್ತಿದ್ದ ಮಾಸವಾಡಿ ೧೪೦ ಕಂಪಣದ ಮುಖ್ಯ ಪಟ್ಟಣ ಕೂಡ ಲಕ್ಕುಂಡಿಯೇ. ಲಕ್ಕುಂಡಿಯಲ್ಲಿ ಆದಿ ಬ್ರಹ್ಮಜಿನಾಲಯವನ್ನು ಅತ್ತಿಮಬ್ಬೆ ಕಟ್ಟಿಸಿದಳು. ಇದನ್ನು ಊರಿನ ಅಜೈನ ಸಮಾಜದ ಒಪ್ಪಿಗೆ ಮತ್ತು ಮನ್ನಣೆ ಪಡೆದು ಮಾಡಿಸಿದಳು. ಇದು ಆಕೆಯ ಸಮನ್ವಯ ದೃಷ್ಟಿಗೂ, ಅನ್ಯಧರ್ಮಗಳಿಗೆ ತೋರುತ್ತಿದ್ದ ಗೌರವಕ್ಕೂ ಸಾಕ್ಷಿ. ಊರಿನ ಬ್ರಾಹ್ಮಣರು ಮುಖಂಡರು ಆಕೆಗೆ ಸಮ್ಮತಿ ಸೂಚಿಸಿ ವ್ಯಕ್ತಪಡಿಸಿದ ಅಭಿಪ್ರಾಯ ಕೂಡ ಧಾರ್ಮಿಕ ಸಮನ್ವಯದಿಂದ ಕೂಡಿದೆ. ಜೈನ ದೇವಾಲಯಕ್ಕೆ ಅನ್ಯಧರ್ಮದವರು ನೀಡಿದ ಪುರಸ್ಕಾರ ಮನನೀಯವಾಗಿದೆ. ಇದು ಅಂದಿನ ಊರಿನ ಜನರು ತಳೆದ ಧರ್ಮದೃಷ್ಟಿಯ ಸಹನ ಗುಣವನ್ನು ಪ್ರಕಟಿಸುವಂತೆ ಅತ್ತಿಮಬ್ಬೆಯ ವಿಚಾರವಾಗಿ ರೂಢಿಯಲ್ಲಿದ್ದ ಗೌರವ ಭಾವನೆಯ ಕೆನೆಯೂ ಆಗಿದೆ.

'ಆದಿಬ್ರಹ್ಮಜಿನ' ಎಂಬುದು ಆದಿತೀರ್ಥಂಕರನಾದ ಆದಿನಾಥ (ಪುರುದೇವ -ಋಷಭ)ನಿಗೆ ಇರುವ ಹೆಸರೆಂದು ಜಿನಸೇನಾಚಾರ್ಯರು (ಕ್ರಿ.ಶ. ೯ನೆಯ ಶ.)

ಆದಿಪುರಾಣದಲ್ಲಿ ತಿಳಿಸಿದ್ದಾರೆ. ಇದು ಜೈನ-ವೈದಿಕ ಸಮನ್ವಯದ ಸಂಕೇತ. ಲಕ್ಕುಂಡಿಯಲ್ಲಿ ಅತ್ತಿಮಬ್ಬೆ ಕಟ್ಟಿಸಿದ ಜಿನರಾಜಗೇಹ ಯಾವ ತೀರ್ಥಂಕರನದೆಂದು ಇದುವರೆಗಿನ ಬರೆಹಗಳು ಪ್ರಸ್ತಾಪಿಸಿಲ್ಲ. ಆ ಜೈನಾಧಿವಾಸದ ಗರ್ಭಗುಡಿಯಲ್ಲಿ ಪ್ರತಿಷ್ಠಾಪಿತವಾದ ಪೂಜಾ ಮೂರ್ತಿ ಆದಿತೀರ್ಥಂಕರನದು. ಕ್ರಿ.ಶ. ೧೦೦೭(೮)ರಲ್ಲಿ ಇರಿವ ಬೆಡಂಗ ಸತ್ಯಾಶ್ರಯ ಆಹವಮಲ್ಲನು ಚಕ್ರವರ್ತಿ ದತ್ತಿಯನ್ನು ನೀಡಿದ್ದೂ, ಸುರುಕಿ ಎಂಬ ಗ್ರಾಮವನ್ನು ನೀಡಿದ್ದೂ ಈ ಆದಿ ಬ್ರಹ್ಮಜಿನನಿಳಯಕ್ಕೇನೆ. ಬ್ರಹ್ಮನೆ ದಲ್ ನಮಗೆ + ಆದಿಬ್ರಹ್ಮಜಿನಂ ತಾನ್ + ಎನುತ್ತೆ ಸಾಸಿರ್ವರುಮ್ + ಈ ಬ್ರಹ್ಮಜಿನನಿಳಯಕ್ಕೆ ಇತ್ತರ್ ಬ್ರಹ್ಮ ಜಿನಾಳಯಮೆನಿಪ್ಪ ಪೆಸರಂ ಮುದದಿಂ - ಎಂಬ ಶಾಸನೋಕ್ತ ವಿವರಣೆಯನ್ನು ಪರಿಭಾವಿಸಿ ಅರ್ಥೈಸಬೇಕು. ಈ ಜೈನದೇವಾಲಯದೊಳಗೆ ಸುಖನಾಸಿಯಲ್ಲಿ ಇಂದೂ ಸಹ ಚತುರ್ಮುಖ (ಮೂರು ಮುಖಗಳು ಕಾಣುತ್ತವೆ) ಬ್ರಹ್ಮನ ನಾಲ್ಕಡಿ ಸುಂದರ ಶಿಲಾಮೂರ್ತಿ ಸುರಕ್ಷಿತವಾಗಿದೆ. ಜೈನಗೃಹದಲ್ಲಿ ಈ ಮೂರ್ತಿ ಇರುವುದು ಒಂದು ಅಪೂರ್ವ ಸಮನ್ವಯ ಪ್ರತೀಕವಾಗಿದೆ.

ಇಂದು ಲಕ್ಕುಂಡಿಯಲ್ಲಿ ಸುಸ್ಥಿತಿಯಲ್ಲಿ ಇರುವುದು ಅತ್ತಿಮಬ್ಬೆ ಕಟ್ಟಿಸಿದ ಬ್ರಹ್ಮಜಿನಾಲಯವೆಂಬ ಹೆಸರಿನ ಒಂದೇ ಜಿನಾಲಯವೆಂಬುದು ಸರಿಯೆ: ಆದರೆ ಹಲವು ಸಲ ಆ ಕ್ಷೇತ್ರದ ಸಮೀಕ್ಷೆ ಕೈಗೊಂಡಿರುವ ನನಗೆ ತೋಚುತ್ತಿರುವುದಿಷ್ಟು. ಆ ಬ್ರಹ್ಮಜಿನ ನಿಲಯದ ಸುತ್ತ ಹಲವು ದೊಡ್ಡ ಚಿಕ್ಕ ಬಸದಿಗಳಿದ್ದುವು. ಅದರ ಎಡಗಡೆಗೆ ಈಗ ಪಾರ್ಶ್ವನಾಥನ ವಿಗ್ರಹ ತೆಗೆದು ಅದರ ಜಾಗದಲ್ಲಿ ಶಿವಲಿಂಗವನ್ನಿಟ್ಟಿರುವ ಪಾರ್ಶ್ವನಾಥ ಗುಡಿಯ ಆಚೆಯವರೆಗೂ; ಅದರ ಬಲಗಡೆಗೆ ಈಗ ವಸ್ತು ಸಂಗ್ರಹಾಲಯವಿರುವ ಕಟ್ಟಡದವರೆಗೂ; ಅದರ ಎದುರುಗಡೆಗೆ ಈಗ ಪಾಳು ಬಿದ್ದಿರುವ ಜಿನಾಲಯದ ಆಚೆಯವರೆಗೂ ಸೇರಿಕೊಂಡಂತೆ ಒಟ್ಟು ಸುಮಾರು ೨೫೦-೨೫೦ ಚದುರ ಅಡಿಗಳಷ್ಟು ಒಂದು ದೇವಾಲಯ ಸಮುಚ್ಚಯ, ಮುನಿ ನಿವಾಸ- ಇದಿಷ್ಟೂ, ಪ್ರತ್ಯೇಕ ಪ್ರವೇಶಕ್ಕೆ ಶಿಲಾ ನಿರ್ಮಿತ ಮಹಾದ್ವಾರಗಳೊಂದಿಗೆ ಹಿಂದೆ ಇದ್ದಂತೆ ಕಾಣುತ್ತದೆ; ಸಮಗ್ರ ಉತ್ಖನನ ಆಗಬೇಕು. ಅಲ್ಲದೆ ಲಕ್ಕುಂಡಿಯಲ್ಲಿ ಬಲ್ಲೆಯಜೇಮಯ್ಯನ ಬಸದಿ (SII. XV. 119. A.D. 1133, p. 149-150) ವಸುಧೈಕ ಬಾಂಧವ ಜಿನಾಲಯ (ಅದೇ: ೫೫೩, ೧೨ ಶ. ಪು. ೩೭೮) ಮುಂತಾದ ಬೇರೆ ಇನ್ನಿತರ ಜಿನಾಲಯಗಳೂ ಇದ್ದವು. ಈ ಆದೀಶ್ವರ ಸ್ವಾಮಿಯ ಆದಿಬ್ರಹ್ಮಜಿನಾಲಯಕ್ಕೆ ಪ್ರತಿಬದ್ಧವಾದ (ಅಧೀನವಾದ) ತೋಟದ ಘಟಾಂತಿಕೆಯ ಬಸದಿಯ ಪಾರ್ಶ್ವನಾಥ ಸ್ವಾಮಿಗೆ ಮುನ್ನೂರು ಪುಷ್ಪಗಳ ತೋಟವನ್ನು ಬಿಡಲಾಗಿದೆ. ಇದು ಮರು ಶಾಸನವನ್ನು ಬರೆದ ಕಾಲದ ಕೊಡುಗೆ. ಆದ್ದರಿಂದ ಈ ಪ್ರತಿಶಾಸನವನ್ನು ಮಾಡಿದ ಕಾಲ ಯಾವುದೆಂಬುದೂ ಚಿಂತನೀಯ. ಆಗಲೇ ಸೂಚಿಸಿರುವಂತೆ ಲಕ್ಕುಂಡಿಯ ಶಾಸನದ ಕಾಲ ಕ್ರಿ.ಶ. ೧೦೦೭. ಶಾಸನದ ಶಿಲೆ ಚಪ್ಪಡಿ ಸೀಳಿ ಹೋಳಾದುದರಿಂದ, ಎರಡನೆಯ ಬಾರಿಗೆ ಅದನ್ನು ಯಥಾರೀತಿಯಾಗಿ ಬರೆದವನು ಸಿರಿಪಾಳಸೆಟ್ಟಿಯ ಮಗ (ಆತ್ಮಜ)ನಾದ ಬಾಹುಬಲಿ. ಹೀಗೆ ಎರಡನೆಯ ಸಲ ಬರೆಯುವಾಗ ಏರು ಪೇರುಗಳಾಗಿವೆ ಎಂಬುದು ಸೂಕ್ಷ್ಮವಾಗಿ ಹೋಲಿಸಿ ನೋಡಿದಾಗ ಕಂಡುಬರುತ್ತದೆ. ೭೫%ರಷ್ಟು ಸಾಮ್ಯತೆ, ೨೫% ರಷ್ಟು ವ್ಯತ್ಯಾಸಗಳಿವೆ.

ಮೊದಲನೆಯ ಶಾಸನದಲ್ಲಿ (SII. XI-i. 53) ೫೦ ಸಾಲುಗಳಷ್ಟು ಬರೆಹವಿದೆ; ಒಕ್ಕಣೆ ಸಾದ್ಯಂತವಾಗಿ ತುಂಬ ತ್ರುಟಿತವಾಗಿದೆ. ಅದರ ಪ್ರತಿಮಾಡಿರುವ ಮತ್ತು ಈಗ ಶಾಸನ ಜಗತ್ಪ್ರಸಿದ್ಧವಾಗಿರುವ ಶಾಸನದಲ್ಲಿ (ಅದೇ : ೫೨) ೮೮ ಸಾಲುಗಳಿವೆ; ಇದರಲ್ಲೂ ಅಲ್ಲಲ್ಲಿ

ಕೊಂಚ ಮಾತ್ರ ಅಕ್ಷರಗಳು ಅಳಿಸಿಹೋಗಿವೆ. ಹಳತು-ಹೊಸತು ಶಾಸನಗಳಲ್ಲಿ ಇರುವ ಅಂತರಗಳು ಎರಡು ತೆರನಾಗಿವೆ: ೧. ಮೂಲ ಶಾಸನದ ಮೂಲ ಪಾಠದಲ್ಲಿ ಕೈಬಿಟ್ಟಿರುವುದು ಅಥವಾ ಸೇರಿಸಿರುವುದು (Commissions and Omissions) ೨. ಹೊಸದಾಗಿ ಸೇರಿಸಿರುವುದು. ನನ್ನ ಗಮನಿಕೆಗೆ ಬಂದಿರುವಂತೆ ಮೂಲಪಾಠದಲ್ಲಿ ಎರಡನೆಯ ಶಾಸನಕಾರನು ಕೆಲವನ್ನು ಕೈಬಿಟ್ಟಿದ್ದಾನೆ. ಉದಾ: (೫೩ನೆಯ) ಮೂಲ ಶಾಸನದ ಸಾಲು ೧೩-೧೪ರಲ್ಲಿ ಇರುವ "ಕ್ಷಮೆಯುಂ ಮುಳಿಸುಂ ಮಿತ್ರರೊಳ್ ಸ....ಣ್ಣ ಮಹಾರ್ಣ್ನವಮೆನಿಸಿ ನಾಗದೇವಂ ನೆಗಟ್ದಿಂ॥" ಎಂಬ ಎರಡು ಪಂಕ್ತಿಗಳು (೫೨ನೆಯ ಸಂಖ್ಯೆಯ) ಹೊಸ ಶಾಸನದಲ್ಲಿ ಕೈಬಿಟ್ಟು ಹೋಗಿದೆ. ಇದು ಅತ್ತಿಮಬ್ಬೆಯ ಗಂಡನ ಸಾಹಸದ ಚಿತ್ರವನ್ನು ದಾಖಲಿಸಿರುವ ಒಂದು ಕಂದಪದ್ಯ: ಇದರ ಮೊದಲನೆಯ ಮತ್ತು ಕಡೆಯ ಪಾದಗಳನ್ನು ಈಗ ತ್ರುಟಿತವಾಗಿ ಉಳಿದಿರುವ ಭಾಗದಿಂದ ಬಿಂಗಡಿಸಿ ತೋರಿಸಬಹುದು ;

ಕ್ಷಮೆಯುಂ ಮುಳಿಸುಂ ಮಿತ್ರರೊ
ಳಮಿತ್ರರೊಳ್ ಸ..................................।
................................ (ಪ್ರಚ)
ಣ್ಣಮಹಾರ್ಣ್ನವಮನಿಸಿ ನಾಗದೇವಂ ನೆಗಟ್ದಿಂ॥

ಹೀಗೆಯೇ (೫೩ನೆಯ) ಮೂಲಶಾಸನದಲ್ಲಿ ಆರನೆಯ ಪಾದದಲ್ಲಿ-"ರಾಜ್ಯ ಮುತ್ತುರೋತ್ತರಾಭಿವೃದ್ಧಿಗೆ ಸಲುತ್ತುಮಿರೆ" - ಎಂದಿದ್ದರೆ (೫೨ನೆಯ) ಹೊಸ ಶಾಸನದಲ್ಲಿ ಆರನೆಯ ಪಾದದಲ್ಲಿ ಇದನ್ನು ಸ್ವಲ್ಪ ವಿಸ್ತರಿಸಿ-ವ್ಯತ್ಯಾಸ ಮಾಡಿ 'ರಾಜ್ಯಮುತ್ತರೋತ್ತರಾಭಿವೃದ್ಧಿ ಪ್ರವರ್ದ್ಧಮಾನಮಾಚಂದ್ರಾರ್ಕತಾರಂಬರಂ ಸಲುತ್ತುಮಿರೆ' ಎಂದು ಲಂಬಿಸಲಾಗಿದೆ. ಇಂತಹ ಮೂರು ನಾಲ್ಕು ವ್ಯತ್ಯಾಸಗಳ ಹೊರತು, ಮೂಲಶಾಸನವು ಯಥಾವತ್ತಾಗಿ ಲಿಖಿತವಾಗಿದೆ.

ಇನ್ನು ಎರಡನೆಯ ಶಾಸನದಲ್ಲಿ ಹೊಸದಾಗಿ ಸೇರಿರುವ ಮಾಹಿತಿಯ ವಿಚಾರ. (೫೨ನೆಯ)ಹೊಸ ಶಾಸನದಲ್ಲಿ ಸಾಲು ೬೭ರಿಂದ ೮೮ರವರೆಗೆ ಪೂರ್ತಿ ನೂತನ ರಚನೆ, ಮರು ಸೇರ್ಪಡೆ ಎಂದು ಕಂಡುಬರುತ್ತದೆ. ಇದಿಷ್ಟೂ ಅತ್ತಿಮಬ್ಬೆಯ ನಿಧನಾನಂತರ ನಡೆದಿರುವ ಘಟನೆಗಳ ದಾಖಲೆ. ಲೊಕ್ಕಿಗುಂಡಿ ಊರೊಡೆಯ ಪ್ರಮುಖ ಮಹಾಜನ ಸಾಸಿರ್ವರು, ಅತ್ತಿಮಬ್ಬೆ ಕಟ್ಟಿಸಿದ ಆದಿಜಿನಾಲಯಕ್ಕೆ ಬ್ರಹ್ಮಜಿನಾಳಯ ಎಂದು ಪುನರ್ನಾಮಕರಣ ಮಾಡಿದರು. ಇದು ಅತ್ತಿಮಬ್ಬೆಯ ಮನೆದೇವರು, ಮನೆತನದ ಬಸದಿ ಆಗಿತ್ತು. ಪ್ರಾಯಃ ಆಕೆಯ (ಮಗನ) ಮನೆಯೂ ಆ ಆದಿಜಿನಾಲಯ ದೇಗುಲ (ದೇವಳ) ಸಮುಚ್ಚಯ ವ್ಯಾಪ್ತಿಯೊಳಗೇ ಇದ್ದಿರಬೇಕು. ಅತ್ತಿಮಬ್ಬೆ ಹುಟ್ಟಿದಂದಿನಿಂದ ಸಾಯುವವರೆಗೆ ಎಲ್ಲೆಲ್ಲಿ ಇದ್ದಳೆಂಬುದನ್ನು ಊಹಿಸಬೇಕಾಗಿದೆ. ಆಕೆ ಹುಟ್ಟಿದ್ದು ಪುಂಗನೂರಿನಲ್ಲಿ. ಅನಂತರ ಮಳಖೇಡ, ಪೊಟ್ಟಲಕೆರೆಯಲ್ಲೂ ಇದ್ದಳು. ಅಂತಿಮ ಕಾಲವನ್ನು, ವೈಧವ್ಯದ ಅವಧಿಯನ್ನು ಲಕ್ಕುಂಡಿಯಲ್ಲಿಯೇ ಕಳೆದಳು. ಗಂಡನೂ ಲಕ್ಕುಂಡಿಯಲ್ಲಿ ಇದ್ದಿರಬಹುದು. ಮಗ ಅಣ್ಣಿಗದೇವನಂತೂ ಲಕ್ಕುಂಡಿಯಲ್ಲೆ ಇದ್ದವನು.

ಅತ್ತಿಮಬ್ಬೆ ಮತ್ತು ಮಗ ಇದ್ದ ಲಕ್ಕುಂಡಿಯಲ್ಲಿದ್ದ ಅವರ ಮನೆಯನ್ನು ಶಾಸನ ಕವಿ ಪ್ರಸ್ತಾಪಿಸಿರುವುದನ್ನು (ಸೂಕ್ಷ್ಮವಾಗಿ ಶಾಸನವನ್ನು ಅಭ್ಯಾಸ ಮಾಡಿದರೆ) ಗುರುತಿಸಬಹುದು: ತತ್ + ಪುರವರ+ಅಚಳ ಶೇಖರಂ + ಎಂಬಿನಂ ದಿಶಾದಂತಿಯ ದಂತಕಾಂತಿ ನಿಜಸೌಧ

ವಿಶಾಳ ವಿಲೋಳ ಭಿತ್ತಿಯೊಳ್ +ಸಂತತಂ + ಒಪ್ಪುತ್ತಿರ್ಪ್ಪಿನೆಗಂ (ಪಂಕ್ತಿ ೪೧-೪೨): ಶ್ರೇಷ್ಠ ಲೊಕ್ಕಿಗುಂಡಿಗೆ ಸೂರ್ಯನೋಪಾದಿಯಲ್ಲಿ ಇರುವ, ಮತ್ತು ದಿಗ್ಗಜದ ದಂತಕಾಂತಿಯು ತನ್ನ ಉಪ್ಪರಿಗೆ ಮನೆಯ ವಿಶಾಲ ಗೋಡೆಯಲ್ಲಿ ಯಾವಾಗಲೂ ಕಂಗೊಳಿಸುತ್ತಿರುವ ಆ ದೊಡ್ಡಮನೆ ಇದ್ದಿತು; ಆ ಸೌಧದಲ್ಲಿ ಇದ್ದ ಅತ್ತಿಮಬ್ಬೆಯು ಲೊಕ್ಕಿಗುಂಡಿಯಲ್ಲಿ ಜಿನರಾಜಗೇಹವನ್ನು ಮಾಡಿಸಿದಳು.

೧. ಅತ್ತಿಮಬ್ಬೆ ಮಾಡಿಸಿದ ಜಿನೇಂದ್ರಗೇಹವು (ಧರಣೀ ತಳಕ್ಕೆ ಬೀಳ್ತರೆ) ಕುಸಿದು ಬೀಳಲು ಅದನ್ನು ಮತ್ತೆ ದೆಯ್ವ ಭರತಾರ್ಯನು ಹೊಸದಾಗಿ ಮಾಡಿಸಿದನು. ೨. ಪುನಃ ಅದು (ಅರಲೆ ಬೆಂದಡೆ) ಸುಟ್ಟು ಹೋಗಲು (?) ಆಗ ನಾಕಿ ಎಂಬಾತನು ಸುಂದರವಾಗಿಸಿದನು. ೩. ನಾಕಿಯು ಪ್ರಾರಂಭಿಸಿದ ಜೀರ್ಣೋದ್ಧಾರ ಕೆಲಸ ಪರಮೋಪ ಕಾರಿಯಾದ ಸಿರಿಪಾಳ ಸೆಟ್ಟಿಯಿಂದ ಪರಿಪೂರ್ಣವಾಯಿತು. ೪. ಸಮ್ಯಕ್ತ್ವ ರತ್ನಾಕರ ಸಿರಿಪಾಳ (ಶ್ರೀಪಾಲ) ಸೆಟ್ಟಿಯ ಮಗನಾದ ಬಾಹುಬಲಿ (ಕವಿಯು) ಇದನ್ನು ಸವಿಸ್ತಾರವಾಗಿ ಬರೆದನು - ಎಂಬ ನಾಲ್ಕು ಅಂಶಗಳು ಶಾಸನದ ಕಡೆಯಲ್ಲಿ ಬಂದಿವೆ: ಈ ನಾಲ್ಕೂ ಸಂಗತಿಗಳ ವಿಚಾರವಾಗಿ ಇದುವರೆಗೆ ಏನೊಂದೂ ಚರ್ಚೆಗಳು ನಡೆದಿಲ್ಲ ಮತ್ತು ಇವು ವಿದ್ವಾಂಸರ ಗಮನ ಸೆಳೆದಿಲ್ಲ. ಈ ದಿಕ್ಕಿನಲ್ಲಿ ನನ್ನ ಚಿಂತನೆಗಳನ್ನು ಚರಿತ್ರಕಾರರ ಪರಿಶೀಲನೆಗೆ ಮಂಡಿಸುತ್ತಿದ್ದೇನೆ.

ಅತ್ತಿಮಬ್ಬೆ ಲಕ್ಕುಂಡಿಯಲ್ಲಿ ಕಟ್ಟಿಸಿದ್ದು ೧೫೦೧ನೆಯ ಬಸದಿ; ಅದುವರೆಗೆ ಆಕೆ ೧೫೦೦ ಬಸದಿಗಳನ್ನು ಕಟ್ಟಿಸಿದ್ದು ಅವುಗಳಿಗೆ ಲಕ್ಕುಂಡಿ ಬಸದಿ ಕಳಶಪ್ರಾಯವಾಗಿತ್ತು. ಆ ೧೫೦೦ ಬಸದಿಗಳು ಎಲ್ಲಿ ನಿರ್ಮಿತವಾದುವು, ಏನಾದವು ಎಂಬುದು ಪರಿಶೀಲನಯೋಗ್ಯ ವಿಚಾರ. ಮಾನ್ಯಖೇಟ, ಪೊಟ್ಟಲಕೆರೆ, ತರ್ದವಾಡಿ ಮತ್ತು ಎರಡಱುನೂರರ (ಪುಲಿಗೆರೆ-ಬೆಳ್ವಲ) ಪ್ರದೇಶದಲ್ಲೆಲ್ಲ ಅತ್ತಿಮಬ್ಬೆ ನೀಡಿದ ಕೊಡುಗೆಗಳಿಂದ ೧೫೦೦ ಬಸದಿಗಳು ನಿರ್ಮಾಣ ವಾಗಿದ್ದುವು. ಹನ್ನೆರಡನೆಯ ಶತಮಾನದ ಉತ್ತರಾರ್ಧದಲ್ಲಿ ಮತ್ತು ಅದರ ಸುತ್ತಲಿನ ಕಾಲಾವಧಿಯಲ್ಲಿ ವ್ಯವಸ್ಥಿತವಾಗಿ ನಡೆದ ಜೈನ ಸಮಾಜ ಮತ್ತು ಮಠ ಮಂದಿರಗಳ ಮೇಲೆ ನಡೆದ, ಆಕ್ರಮಣದಲ್ಲಿ ಅತ್ತಿಮಬ್ಬೆ ಕಟ್ಟಿಸಿದ ೧೫೦೦ ಬಸದಿಗಳು ನಾಶವಾದುವು. ಶಾಸನಾಧಾರಗಳಿಂದಲೂ, ಕೆಲವು ವೀರಶೈವ ಪುರಾಣಗಳು ಕೊಡುವ ಮಾಹಿತಿಗಳಿಂದಲೂ ತಿಳಿದು ಬರುವಂತೆ ಸುಮಾರು ೧೮೦೦-೨೦೦೦ ಬಸದಿಗಳನ್ನು ಕೆಡವಿ ಹಾಳುಮಾಡಲಾಗಿದೆ; ಅದರಲ್ಲಿಯೂ ಒಂದು ಕಾವ್ಯದಲ್ಲಿ ೮೦೦ ಮತ್ತು ಇನ್ನೊಂದು ಕಾವ್ಯದಲ್ಲಿ ೭೦೦ ಹೀಗೆ ಒಟ್ಟು ೧೫೦೦ ಜಿನಗೃಹಗಳನ್ನು ಧ್ವಂಸ ಮಾಡಲಾಯಿತೆಂದು ಸ್ಥಳ ಪರಿಸರದೊಂದಿಗೆ ವೀರಶೈವ ಪುರಾಣಗಳು ದಾಖಲಿಸಿರುವ ೧೫೦೦ರ ಸಂಖ್ಯೆಯೂ, ಅತ್ತಿಮಬ್ಬೆ ಕಟ್ಟಿಸಿದ ೧೫೦೦ರ ಸಂಖ್ಯೆಯೂ ಕೇವಲ ಒಂದು ಆಕಸ್ಮಿಕ ಹೊಂದಾಣಿಕೆ ಆಗಿರಲಾರದೆನಿಸುತ್ತದೆ; ಆದರೆ ಈ ವಿಚಾರಗಳಲ್ಲಿ ಇನ್ನೂ ಗಟ್ಟಿಮುಟ್ಟಾದ ಚಾರಿತ್ರಿಕ ಆಧಾರಗಳು ದೊರೆತು ಸಾಹಿತ್ಯಕ ಆಧಾರಗಳನ್ನು ಪುಷ್ಟೀಕರಿಸಬೇಕಾದ ಅಗತ್ಯವಿದೆ. ಅದರಿಂದ ೧೫೦೦ ಬಸದಿಗಳ ವಿಚಾರವನ್ನು ಪಕ್ಕಕ್ಕೆ ಸರಿಸಿ ಈ ೧೫೦೧ನೆಯ ಲಕ್ಕುಂಡಿಯ ಬಸದಿ ಬಗೆಗೆ ಚರ್ಚೆಯನ್ನು ಹರಳುಗೊಳಿಸುವುದು ಸೂಕ್ತ.

ಲಕ್ಕುಂಡಿಯ ಬಸದಿಯನ್ನು ಕಟ್ಟಿಸಿದ್ದು ೧೦೦೭ರಲ್ಲಿ. ಆ ಬಸದಿಯು 'ಧರಣೀ ತಳಕ್ಕೆ ಬೀಳ್ತರೆ', ಅಂದರೆ ನೆಲಕ್ಕೆ ಕುಸಿಯಲು ಎಂದು ಈ ಶಾಸನದಲ್ಲಿ ಹೇಳಿರಬೇಕಾದರೆ, ಈ ಬಸದಿ

ಕುಸಿದದ್ದು ಯಾವಾಗ ಮತ್ತು ಯಾವ ಕಾರಣದಿಂದ ಎಂಬ ಪ್ರಶ್ನೆಯೇಳುತ್ತದೆ: ಇದಕ್ಕೆ ಖಚಿತವಾದ ಉತ್ತರ ಕೊಡುವುದು ಕಷ್ಟ. ಹೀಗೆ ಕುಸಿದುಬಿದ್ದ ಜಿನಾಲಯವನ್ನು ಮತ್ತೆ ಸರಿಯಾಗಿ ನಿಲ್ಲಿಸಿದವನು ದೆಯ್ವ ಭರತಾರ್ಯನು. ಈತ ಯಾರು ಏನು ಎತ್ತ ಎಂಬುದು ತಿಳಿಯದು. 'ದೆಯ್ವ' ಎಂಬ ವಿಶೇಷಣವು ಈತನ ವ್ಯಕ್ತಿತ್ವದ ಮೇಲೆ ಬೆಳಕು ಚೆಲ್ಲುತ್ತದೆ; 'ದೆಯ್ವ' ಎಂದರೆ ದೇವರು ಎಂದಲ್ಲ ಇಲ್ಲಿ ಪ್ರತೀತವಾಗುವ ಅರ್ಥ; 'ಭಾಗ್ಯವಂತ-ಹಿರಿಯ'- ಎಂಬ ಅರ್ಥ ಈ ಶಬ್ದಕ್ಕೆ ಇದೆ, ಆ ಅರ್ಥವೇ ಇಲ್ಲಿಗೆ ಅನ್ವಯವಾಗುವುದು. ಪ್ರಾಯಃ ಲಕ್ಕುಂಡಿ ಮತ್ತು ಆ ಪರಿಸರದ ಜೈನ ಸಮಾಜದಲ್ಲಿ ಪ್ರಧಾನವಾಗಿದ್ದ ದೆಯ್ವ ಭರತಾರ್ಯನ ಔದಾರ್ಯದಿಂದ ಅತ್ತಿಮಬ್ಬೆಯ ಬಸದಿ ಮತ್ತೆ ಖಣ್ಡ ಸ್ಫುಟಿತ ಜೀರ್ಣೋದ್ಧಾರಗೊಂಡಿತು.

ಆದರೆ ಹೀಗೆ ಹೊಸತುಗೊಂಡ ಬಸದಿಯು ಮತ್ತೆ 'ಅರಲೆ ಬೆಂದಡೆ ', ಅಂದರೆ ಕಾಳು ತೆಗೆದ ಹತ್ತಿಯಂತೆ ಬೆಂದುಹೋಗಲು - ಎಂಬ ಶಾಸನೋಕ್ತಿಯು ಪರಿಭಾವಿಸುವಂತಿದೆ. ಬಸದಿಗೆ ಬೆಂಕಿ ಬಿದ್ದದ್ದು ಹೇಗೆ? ಯಾರಾದರೂ ಬೆಂಕಿ ಹಚ್ಚಿದರೂ ಅಥವಾ ಬೆಂಕಿಯ ಆಕಸ್ಮಿಕಕ್ಕೆ ಒಳಗಾಯಿತೊ? ಈ ಬಗ್ಗೆ ಪುರಾವೆಗಳು ಸಾಲವು. ಅದೇನು ಮರದಲ್ಲಿ ಕಟ್ಟಿಸಿದ ಬಸದಿಯಾಗಿತ್ತೆ ಅರಲೆ ಬೆಂದು ಹೋಗಲು - ಎಂದೂ ಸಂದೇಹವಾಗುತ್ತದೆ. ಈ ಹಂತದಲ್ಲಿ ಶಾಸನಗಳ ವ್ಯಾಸಂಗದಿಂದ ನನಗೆ ನೆನಪಾಗುವ ಎರಡು ಮಾಹಿತಿಗಳತ್ತ ಚರಿತ್ರಕಾರರ ಗಮನ ಸೆಳೆಯುತ್ತೇನೆ.

೧. ಧಾರವಾಡ ಜಿಲ್ಲೆ ಗದಗ ತಾಲೂಕ ಗಾವರವಾಡ ಶಾಸನದಲ್ಲಿ (SII. XV. 23 A.D. 1071-72) ಬರುವ ಪ್ರಸ್ತಾಪ ಇಲ್ಲಿಗೆ ಪ್ರಸ್ತುತವಾಗಬಹುದು. ಗಾವರವಾಡದ ಈ ಶಾಸನವು, ಸುಕುಮಾರ ಚರಿತೆ ಕಾವ್ಯ ಮತ್ತು ಷಿಕಾರಿಪುರ ೧೩೬ನೆಯ ಶಾಸನದ ಕವಿ ಶಾಂತಿನಾಥನ ರಚನೆಯೆಂದು ಮೊದಲ ಬಾರಿಗೆ ನಾನು ಅನ್ಯತ್ರ ಸೂಚಿಸಿದ್ದೇನೆ. ಈ ಸಾಸನದಲ್ಲಿ ಉಕ್ತವಾಗಿರುವ ಸಂಗತಿಗಳಲ್ಲಿ ಒಂದು ಹೀಗಿದೆ: 'ಬೆಳ್ವಲ ದೇಶದಲ್ಲಿ ಮತ್ತು ಅಣ್ಣಿಗೆರೆಯಲ್ಲಿ ಭೂತುಗ ನರೇಶನಿಂದಾದ ಪರಮ ಜಿನಾಲಯಗಳನ್ನು ಪೊಲೆಚೋಳ (ಕೋಪರಕೇಸರಿ ರಾಜೇಂದ್ರದೇವ) ರಾಜನು ಸುಟ್ಟುಹಾಕಿದನು. ಅದಕ್ಕೆ ತಕ್ಕ ಪ್ರತೀಕಾರ ವಾಗಿ ಚಾಳುಕ್ಯರ ತ್ರೈಲೋಕ್ಯಮಲ್ಲನು ಆ ಚೋಳರಾಜನನ್ನು ಹಸಿತಲೆ ಕಡಿದು ಸಂಹರಿಸಿದನು.'

ಈ ಚಾರಿತ್ರಿಕ ವಿವರ ಗಮನಾರ್ಹವಾಗಿದೆ. ತ್ರೈಳೋಕ್ಯಮಲ್ಲನ ಆಳ್ವಿಕೆಯ (೧೦೪೨-೧೦೬೮) ಕಾಲು ಶತಕದ ಅವಧಿಯ ಪ್ರಥಮ ದಶಕದಲ್ಲಿ ಈ ಘಟನೆ ನಡೆದಿರಬಹುದು (ಸು. ೧೦೪೮-೯). ಚೋಳರ ಸೈನ್ಯವು ಕಂಪಿಲಿಯಲ್ಲಿದ್ದ ಚಾಳುಕ್ಯರ ಅರಮನೆಯನ್ನು ಕೆಡವಿ ನೆಲಸಮ ಮಾಡಿತು. ಕೃಷ್ಣಾನದೀ ದಡದ ಪೂಂದೂರಲ್ಲಿ ಚಾಳುಕ್ಯ ಸೈನ್ಯವನ್ನು ಸೋಲಿಸಿತು, ನದಿ ದಾಟಿ ಯೇತಗಿರಿಯಲ್ಲಿ (ಯಾದ್ಗಿರ್) ನೆಲಸಿ ಅಲ್ಲೊಂದು ವಿಜಯಸ್ತಂಭ ನೆಟ್ಟಿತು. ಇನ್ನೂ ಮುಂದೆ ನುಗ್ಗಿದ ಚೋಳರ ಪಡೆ ಕಲ್ಯಾಣವನ್ನು ಕೊಳ್ಳೆ ಹೊಡೆಯಿತು.; ಆಗ ಕಲ್ಯಾಣದಿಂದ ಸಾಗಿಸಿದ ಒಂದು ದ್ವಾರಪಾಲಕ ಮೂರ್ತಿ ಇಂದಿಗೂ ತಂಜಾವೂರಿನ ವಸ್ತು ಸಂಗ್ರಹಾಲಯದಲ್ಲಿದೆ. ಈ ಗೆಲುವಿಗಾಗಿ (ವಿಜಯ) ರಾಜೇಂದ್ರದೇವ (ರಾಜಾಧಿರಾಜ)ನಿಗೆ ವೀರಾಭಿಷೇಕವೂ ಆಯಿತು. ಮತ್ತೆ ಮುಂದೆ ೧೦೫೦ರಲ್ಲಿ ತ್ರೈಲೋಕ್ಯಮಲ್ಲನು ಚೋಳರನ್ನು ಓಡಿಸುವುದರಲ್ಲಿ ಸಫಲನಾದನು. ಕಡೆಗೆ ೧೦೫೩-೪ರಲ್ಲಿ ಕೊಪ್ಪಳ (ಕುಪ್ಪಂ)ದಲ್ಲಿ ನಡೆದ ಘನಘೋರ ಸಮರದಲ್ಲಿ ರಾಜಾಧಿರಾಜನನ್ನು ಮರಣಾಂತಿಕವಾಗಿ ಘಾಸಿಗೊಳಿಸಲಾಯಿತು. ಆದರೂ ಯುವರಾಜ ಇಮ್ಮಡಿ ರಾಜೇಂದ್ರನು

ರಾಜಾಧಿರಾಜನ ತಮ್ಮ ಚಾಳುಕ್ಯರನ್ನು ಸೋಲಿಸಿದನು: ರಾಣಿಯರಾದಿಯಾಗಿ ಅನೇಕ ಮಹಿಳೆಯರನ್ನೂ ಆನೆ ಕುದುರೆ ಒಂಟೆ ಸಹಿತ, ದೊಡ್ಡ ಲೂಟಿ ಮಾಲಿನೊಂದಿಗೆ ಹಿಂತಿರುಗಿದನು. ಪುನಃ ೧೦೬೧-೬೨ರಲ್ಲಿ ತುಂಗ-ಭದ್ರೆಯರು ಸೇರುವ ಕೂಡಲ ಸಂಗಮದ ಬಳಿ ಚೋಳರು ಚಾಲುಕ್ಯರನ್ನು ಸೋಲಿಸಿದರು. ೧೦೬೭ರಲ್ಲೂ ಅದೇ ನದಿಯ ದಂಡೆಯಲ್ಲಿ ತ್ರೈಳೋಕ್ಯಮಲ್ಲನು ಸೋತನು. ಈ ಸೋಲಿನ ವೇದನೆ ಮತ್ತು ಅನಾರೋಗ್ಯದಿಂದ ಆತನು ಕುರವತ್ತಿಯೆಂಬಲ್ಲಿ ತುಂಗಭದ್ರೆಯೊಳಗೆ (೨೯-೩-೧೦೬೮) ಮುಳುಗಿದನು.

ಚೋಳರಿಗೂ ಚಾಳುಕ್ಯರಿಗೂ ನಡೆದ ಯುದ್ಧ ಸಂಬಂಧವಾಗಿ ಗಾವರವಾಡ ಶಾಸನ ಕೊಡುವ ಮಾಹಿತಿಯನ್ನು ಚರಿತ್ರಕಾರರು ಸಿರಿಯಾಗಿ ಗಮನಕೊಟ್ಟಂತಿಲ್ಲ. ಏಕೆಂದರೆ ವಿಜಯ ರಾಜೇಂದ್ರದೇವ ರಾಜಾಧಿರಾಜನು ಚಾಲುಕ್ಯ ರಾಜ್ಯಕ್ಕೆ ನುಗ್ಗಿ ಜೈನಮಂದಿರಗಳನ್ನು ಸುಟ್ಟು ನಾಶಮಾಡಿದ್ದನ್ನು ಹೇಳಿದೆ; ಮುಖ್ಯವಾಗಿ ಚೋಳರಾಜನನ್ನು ಚಾಳುಕ್ಯರ ತ್ರೈಳೋಕ್ಯಮಲ್ಲನು ತಲೆ ಕಡಿದ ಮಾಹಿತಿಯನ್ನು ಈ ಶಾಸನ ಒಳಗೊಂಡಿದೆ. ಇದೇ ಚೋಳರಾಜರ ವಿಜಯಗಳನ್ನೂ ಚಾಳುಕ್ಯರ ಸೋಲುಗಳನ್ನೂ ವರಸೆಯಾಗಿ ಹೇಳುವ ಇತಿಹಾಸ ಗ್ರಂಥಗಳಲ್ಲಿ ತ್ರೈಳೋಕ್ಯಮಲ್ಲಸೋಮೇಶ್ವರ ಚಕ್ರವರ್ತಿಯ ಈ ಗೆಲುವಿನ ವಿಚಾರ ಪ್ರಸ್ತಾಪವಾಗಿಲ್ಲ.

ಲಕ್ಕುಂಡಿ ಶಾಸನವು ಅತ್ತಿಮಬ್ಬೆಯ ಬಸದಿ ಬೆಂದುದನ್ನು ಕುರಿತು ಹೇಳುವ ಮಾಹಿತಿಯನ್ನು, ಗಾವರವಾಡ ತಿಳಿಸುವ ಚೋಳರ ಪಡೆ ಬೆಳ್ವಲ ನಾಡಿನ ಜಿನಗೃಹಗಳನ್ನು ಸುಟ್ಟ ಮಾಹಿತಿಯೊಂದಿಗೆ ಸಮೀಕರಿಸಬಹುದು; ಆ ಘಟನೆ ೧೦೪೯ರಲ್ಲಿ ನಡೆದಿದೆ.

೨. ಕ್ರಿ.ಶ. ೧೧೮೪ರ ಅಣ್ಣಿಗೆರೆಯ ಶಾಸನದಲ್ಲಿ ಒಂದು ಕಡೆ ಈ ಪದ್ಯಗಳಿವೆ:

ಜಯಿನಮ್ರಿಗ ಬೇಣ್ಪೆಕಾರಂ
ಜಯಿನಾಗಮ ಧೂಮಕೇತು ಜಯಿನಕುಠಾರಂ
ಜಯಿನ ಫಣಿವಯಿನತೇಯಂ
ಜಯಿನಾಂತಕನೆನಿಸಿ ನೆಗಳ್ದನೀ ಗೊಗ್ಗರಸಂ ॥

ಅಗ್ಗದ ಘಟಾಂತಿಕಿಯನದ
ನುರ್ಗ್ಗಾಗಿರೆಯೊಡೆದು ಕಳೆದುಜಿನನಂ ತಾಗಲೆ
ದುರ್ಗ್ಗತಿಯೊಳಿಕ್ಕಿ ಮೆಟ್ಟಿದ
ಗೊಗ್ಗರಸಾಗ್ರಣಿ ಕೊಮಾರ ಆಹವಧೀರಂ ॥

[An Rep on S.I. Epigraphy 1928-9, app. No. E. 207: P.B. Desai, *Jainism in South India and Some Jaina epigraphs*, (1957) p. 397-8: SII. XV 59. 1184. Annigeri. p. 82-85]

ಈ ಶಾಸನದ ಹೇಳಿಕೆ ಗಾವರವಾಡದ ಶಾಸನಕ್ಕಿಂತ ಹೆಚ್ಚು ಚಿಂತನೀಯ. ಗೊಗ್ಗರಸನು ಉಗ್ರ ಶಿವಭಕ್ತ. ಜೈನಧರ್ಮದ ಪ್ರಾಬಲ್ಯವನ್ನು ಸದೆಬಡಿಯುವುದರಿಂದ ತನ್ನ ಶೈವಧರ್ಮದ ಪ್ರಸಾರ ಆಗುತ್ತದೆಂದು ನಂಬಿದವನು. ಅದಕ್ಕಾಗಿ ಜೈನರನ್ನೂ ಜೈನ ಬಸದಿಗಳನ್ನೂ ನಾಶ ಮಾಡತೊಡಗಿದನು. ಈ ವಿನಾಶ ಪ್ರಕ್ರಿಯೆಯಲ್ಲಿ ಅಗ್ಗದ (ಶ್ರೇಷ್ಠವಾದ) ಘಟಾಂತಿಕೆಯನ್ನು (ಯಕ್ಷಿ ಪದ್ಮಾವತಿಯನ್ನು) ನುಚ್ಚುನೂರಾಗುವಂತೆ ಒಡೆದು, ಕಿತ್ತು ತೆಗೆದ ಜಿನನ ಮೂರ್ತಿಯನ್ನು ಇಕ್ಕಿಮೆಟ್ಟಿದನು. ಈ ರೀತಿಯಾಗಿ ಗೊಗ್ಗರಸನು ನೆಲಕ್ಕೆ ಕೆಡವಿ ಪುಡಿಗುಟ್ಟಿದ ಅಗ್ಗದ

ಘಟಾಂತಿಕೆಯು, ಅತ್ತಿಮಬ್ಬೆ ಲಕ್ಕುಂಡಿಯಲ್ಲಿ ಕಟ್ಟಿಸಿದ ಬಸದಿ ಯಕ್ಷಿಯೆಂದು ಹೇಳಬಹುದು. ಲಕ್ಕುಂಡಿಯ ಶಾಸನದ ಕಡೆಯಲ್ಲಿ "ಬಸದಿಯ ಪ್ರತಿಬದ್ಧವಪ್ಪ ತೋಂಟದ ಘಟಾಂತಿಕೆಯ ಬಸದಿಯ ಪಾರ್ಶ್ವದೇವ" ಎಂದು ಸ್ಪಷ್ಟವಾಗಿದೆ: ಅದರಿಂದ ಗೊಗ್ಗರಸನು ಆಕ್ರಮಣವೆಸಗಿದ್ದು ಇದರ ಮೇಲೆಯೇ ಎಂದು ನಿಚ್ಚಳವಾಗುತ್ತದೆ. ಆತನು ಇನ್ನೂ ಅನೇಕ ಕಡೆಗಳಲ್ಲಿ ನಾನಾ ಜಿನಾಲಯಗಳನ್ನು ಕುಟ್ಟಿಕೆಡವಿದ್ದುಂಟು. ಅಂಥವುಗಳಲ್ಲಿ ಇದು ಪ್ರಾಮುಖ್ಯ ಪಡೆಯಲು ಕಾರಣವೆಂದರೆ ಇದನ್ನು ಕಟ್ಟಿಸಿದಾಕೆ ಅತ್ತಿಮಬ್ಬೆ ಎಂಬುದು. ಈಗ ಲಕ್ಕುಂಡಿಯ ಕೆರೆಯ ಬಳಿ ಬಿದ್ದಿರುವ ಯಕ್ಷಿಯ ಮೂರ್ತಿ ಇದೇ ಘಟಾಂತಕಿ ಇರಬೇಕು.

ಮೇಲೆ ಉದಾಹರಿಸಿರುವ ಎರಡು ಶಾಸನಗಳಲ್ಲಿ ನಮೂದಾಗಿರುವ ಜಿನಾಲಯವನ್ನು ಸುಟ್ಟದ್ದು, ಘಟಾಂತಿಕೆಯನ್ನು ನುಗ್ಗಾಗಿಸಿ ಜಿನಬಿಂಬವನ್ನು ನಾಶಪಡಿಸಿದ್ದು- ಇದು ಲಕ್ಕುಂಡಿಯ ಬಸದಿಗೆ ಸಂಬಂಧಿಸಿದ್ದು: ಅದರಲ್ಲಿಯೂ ೧೧೮೪ರ ಅಣ್ಣಿಗೆರೆ ಶಾಸನದಲ್ಲಿ ಉಕ್ತ ಘಟನೆ ಲಕ್ಕುಂಡಿಯಲ್ಲಿ ನಡೆದದ್ದು ಎಂದು ತೀರ್ಮಾನಿಸಬಹುದು. ಸಾರಾಂಶ:

೧. ಲಕ್ಕುಂಡಿಯ ಅತ್ತಿಮಬ್ಬೆಯ ಜಿನೇಂದ್ರಗೃಹವು ಮೊದಲು ಕುಸಿದಾಗ ಅದನ್ನು ನಿಲ್ಲಿಸಿ ಹೊಸದಾಗಿಸಿದವನು ದೆಯ್ವ ಭರತಾರ್ಯ.

೨. ಅನಂತರ (ದೆಯ್ವ ಭರತಾರ್ಯನಿಂ ಬಳಿಕ್ಕ) ಅದನ್ನು ಚೋಳರ ಪಡೆ ಸುಟ್ಟಾಗ ನಾಕಿಯು ಅದನ್ನು ಸುಂದರವಾಗಿಸಿದನು. ಶಾಸನದಲ್ಲಿ ೮೬ನೆಯ ಸಾಲಿನಲ್ಲಿ 'ಬಳಿಕ್ಕಿರದದು....ನ್ದರಲೆ ಬೆಂದಡೆ' ಎಂಬಲ್ಲಿ ನಡುವೆ ಮೂರು ಅಕ್ಷರಗಳು –ᴗᴗವಿನ್ಯಾಸದಲ್ಲಿ ನಷ್ಟವಾಗಿದೆ: 'ಚೋಳರ' ಎಂಬ ಮೂರು ಅಕ್ಷರಗಳನ್ನು ಇಲ್ಲಿ ಸೇರಿಸಬಹುದು.

೩. ನಾಕಿಯು ಪ್ರಾರಂಭಿಸಿದ ಈ ಬಸದಿಯನ್ನು ಸುಂದರವಾಗಿಸುವ ಕೆಲಸವನ್ನು, ಧರ್ಮಕಾರ್ಯವನ್ನು ಪರಿಪೂರ್ಣಗೊಳಿಸಿದವನು ಸಿರಿಪಾಳಸೆಟ್ಟಿ. ಈತನನ್ನು ಜಿನಧರ್ಮ ನಿರ್ಮಳನೆಂದೂ, ಜಿನತೀರ್ಥಯೋಗಿ, ಜಿನಧರ್ಮಾಂಬರ ರವಿ, ಸಮ್ಯಕ್ತ್ವ ರತ್ನಾಕರ, ಪರಮೋಪಕಾರಿ - ಇತ್ಯಾದಿಯಾಗಿ ಮೂರು (೨ ವೃತ್ತ ೧ ಕಂದ) ಪದ್ಯಗಳಲ್ಲಿ ವರ್ಣಿಸಲಾಗಿದೆ (ಸಾಲು ೮೨ರಿಂದ ೮೭) :

ಪರಮಾರ್ತ್ಥಂ ಜಿನತೀರ್ತ್ಥಯೋಗಿ ಜಿನತೀರ್ತ್ಥವ್ಯೋಮ ಶೀತಾಂಶು ದಿ
ಗ್ವಿರದಾಘಾಟ ಸುಕೀರ್ತ್ತಿ ಜೈನವೃಷದಣ್ಣಾಧೀಶನುದ್ಯಜ್ಜಿನೇ
ಶ್ವರ ಪಾದಾಂಬುಜ ಷಟ್ಪದಂ ಬೆಳಗಿದಂ ಸಮ್ಯಕ್ತ್ವರತ್ನಾಕರಂ
ಸಿರಿಪಾಳಂ ಜಿನಧರ್ಮ್ಮ ನಿರ್ಮ್ಮಳನುತ ಪ್ರಖ್ಯಾತಿಯಿಂ ಲೋಕಮಂ ॥

ಪರಮಶ್ರೀ ಜಿನಧರ್ಮ್ಮಾಂ
ಬರರವಿ ಸಿರಿಪಾಳ ಸೆಟ್ಟಿಯಾತ್ಮಜನುದ್ಯ
ಚ್ಚರಿತಂ ಬಾಹುಬಲಿ ಸವಿ
ಸ್ತರದಿನ್ದಂ ಬರೆದನನ್ನೊಡ್ಡಾರ್ಪುಗಳರಿದಂ ॥

ನಿರುಪಮಮತ್ತಿಯಬ್ಬೆಯ ಜಿನೇಂದ್ರಗೃಹಂ ಧರಣೀತಳಕ್ಕೆ ಬೀ
ಳ್ತರೆ ಪೊಸತಾಗಿ ದೆಯ್ವಭರತಾರ್ಯ್ಯನಿನಾ ಭರತಾರ್ಯ್ಯನಿಂ ಬಳಿ
ಕ್ಕಿರದದು (ಚೋಳರ) ನ್ದರಲೆ ಬೆಂದಡೆ ಸುನ್ದರಮಾಗೆ ನಾಕಿಯಿಂ
ಪರಮ ಪರೋಪಕಾರಿ ಸಿರಿಪಾಳನಿನೇಂ ಪರಿಪೂರ್ಣ್ನಮಾದುದೋ ॥



೪. ದೆಯ್ವ ಭರತಾರ್ಯ, ನಾಕಿ, ಸಿರಿಪಾಳಸೆಟ್ಟಿ-ಈ ಮೂರು ತಲೆಮಾರಿನ ಪ್ರಮುಖ ವ್ಯಕ್ತಿಗಳು ಅತ್ತಿಮಬ್ಬೆ ಬಸದಿಗೆ ಜೀವ ತುಂಬಿದ್ದಾರೆಂಬ ವಿವರಗಳನ್ನು ಶಾಸನವಾಗಿಸಿದ ಕವಿ ಸಿರಿಪಾಳ ಸೆಟ್ಟಿಯ ಆತ್ಮಜ (ಮಗ) ಬಾಹುಬಲಿ. ಈಗ ಮುರಿದು, ಅಕ್ಷರ ಅಳಿದು, ಮುಕ್ಕಾಗಿರುವ ೫೩ನೆಯ ಸಂಖ್ಯೆಯ ಹಳೆಯ ಶಾಸನವನ್ನು ರನ್ನಕವಿ ಬರೆದದ್ದು ೧೦೦೭ರಲ್ಲಿ. ಬಾಹುಬಲಿ ಬರೆದ ೫೨ನೆಯ ಸಂಖ್ಯೆಯ ಹೊಸ ಶಾಸನಕ್ಕೂ ಇದೇ ೧೦೦೭ ಎಂಬ ಕಾಲ ಸೂಚನೆಯನ್ನು ಈಗಲೂ ಕೊಡಲಾಗುತ್ತಿರುವುದು ಸರಿಯಲ್ಲ, ಇದರ ಕಾಲ ನಿರ್ದೇಶನವನ್ನು ಅವಶ್ಯ ಬದಲಾಯಿಸಬೇಕು.

ಹಾಗಾದರೆ ಬಾಹುಬಲಿ ಕವಿ ವಿರಚಿತ ಶಾಸನದ ಕಾಲ ಯಾವುದೆಂಬ ಪ್ರಶ್ನೆಗೆ ಉತ್ತರಿಸಬೇಕಾಗುತ್ತದೆ. ಇದು ದೆಯ್ವಭರತಾರ್ಯ, ನಾಕಿ, ಸಿರಿಪಾಳಸೆಟ್ಟಿ, ಬಾಹುಬಲಿ-ಈ ನಾಲ್ಕು ತಲೆಮಾರುಗಳ ಅನಂತರದ ಕಾರ್ಯ. ಅಂದರೆ ೧೦೦೭ರ ತರುವಾಯ ಒಂದು ನೂರು ವರ್ಷಗಳು ಆಗಿವೆ. ಅಲ್ಲದೆ ಈ ನಾಲ್ಕು ವ್ಯಕ್ತಿಗಳಲ್ಲಿ ಕಡೆಯ ಇಬ್ಬರು ತಂದೆ-ಮಗ ಆಗಿರುವುದರಿಂದ ಕಾಲಗಣನೆಯಲ್ಲಿ ನಿರಂತರತೆ ಇದೆ. ಭರತಾರ್ಯ ಮತ್ತು ನಾಕಿಯರ ನಡುವೆ ಮತ್ತು ಅನಂತರ ಎಷ್ಟು ಕಾಲಾವಧಿ ಎಂಬುದು ತಿಳಿಯುತ್ತಿಲ್ಲ.

ಅಣ್ಣಿಗೆರೆ ಶಾಸನದ ಕಾಲ ೧೧೮೪. ಘಟಾಂತಿಕೆಯ ಮೂರ್ತಿಯನ್ನು ಒಡೆದು ಚೂರು ಮಾಡಿದ್ದು ೧೧೮೪ರಲ್ಲಿಯೇ. ಘಟಾಂತಿಕೆ ಎಂದರೆ ಜೈನಯಕ್ಷಿ ಎಂದರ್ಥ. ಸಾಂದರ್ಭಿಕವಾಗಿ ಪದ್ಮಾವತಿ ಅಥವಾ ಕೂಷ್ಮಾಂಡಿನಿ (ಅಂಬಿಕೆ) ಎಂದೂ ಅರ್ಥವಾಗಬಹುದು. ಸೀತಾರಾಮ ಜಾಗೀರದಾರರು 'ಘಟಾಂತಿಕೆಯ ಬಸದಿಗಳು ಹಾಗೂ ಘಟಾಂತಿಕೆ' ಎಂಬ ಲೇಖನದಲ್ಲಿ (ಮಾನವಿಕ ಕರ್ನಾಟಕ ೪-೪: ೧೯೭೪: ೧೩-೨೬) ಘಟಾಂತಿಕೆ ಶಬ್ದಕ್ಕೆ ದೇವತೆ ಎಂದು ವಿವರಿಸುವುದಕ್ಕಿಂತ 'ದಾನ ಚಿಂತಾಮಣಿ ಅತ್ತಿಮಬ್ಬೆ' ಎಂದು ವಿವರಿಸುವುದು ಸಮಂಜಸವೆಂದಿದ್ದಾರೆ (ಅದೇ:೧೬). ಆದರೆ 'ಘಟಾಂತಿಕೆ' ಎಂಬ ಶಬ್ದಕ್ಕೆ 'ಜೈನಯಕ್ಷಿ' ಎಂದಷ್ಟೇ ಅರ್ಥ (ಹಂಪನಾ: ಯಕ್ಷ ಯಕ್ಷಿಯರು: ೧೯೭೬ : ೭೬-೭೯). ಕನ್ನಡ ಸಾಹಿತ್ಯ ಪರಿಷತ್ತಿನ ಬೃಹತ್ ಕನ್ನಡ ನಿಘಂಟಿನಲ್ಲಿ ಘಟಾಂತಿಕೆ ಎಂಬ ಶಬ್ದವೇ ನಾಪತ್ತೆ! ಮುಂದಿನ ಮುದ್ರಣದಲ್ಲಾದರೂ ಮುಖ್ಯ ಉಲ್ಲೇಖವಾಗಿ ಸೇರಿಸಿ 'ಜೈನಯಕ್ಷಿ, ಪದ್ಮಾವತಿ, ಕೂಷ್ಮಾಂಡಿನಿ, ಅಂಬಿಕೆ' ಎಂಬ ಅರ್ಥವನ್ನೂ, ಲಕ್ಕುಂಡಿಯ ಶಾಸನದ ಮತ್ತು ಬ್ರಹ್ಮಶಿವ ಕವಿಯ ಎರಡು ಪ್ರಯೋಗಗಳನ್ನೂ ಕೊಡಬೇಕು.

ಬ್ರಹ್ಮಶಿವ ಕವಿ (ಸಮಯ ಪರೀಕ್ಷೆ ೧-೪೦) ಅತ್ತಿಮಬ್ಬೆಯನ್ನು 'ಘಟಾಂತಿಕೆ' ಬಿರುದಾಂಕಿತಳೆಂದಿದ್ದಾನೆ; ದಿಟ, ಆಕೆ ಪದ್ಮಾವತಿ ಯಕ್ಷಿಯ ಹಾಗೆ ಪ್ರಭಾವಶಾಲಿನಿಯಾಗಿದ್ದಳು. ಆ ಕಾರಣಕ್ಕಾಗಿಯೇ ಆಕೆಗೆ 'ಘಟಾಂತಿಕೆ' ಪ್ರಶಸ್ತಿ. ಲಕ್ಕುಂಡಿಯ ಬಸದಿಗೆ ಪ್ರತಿಬದ್ಧವಾಗಿದ್ದ 'ತೋಂಟದ ಘಟಾಂತಿಕೆಯ ಬಸದಿಯ ಪಾರ್ಶ್ವದೇವ' ಎಂಬ ಮಾತೂ ಗಮನಾರ್ಹ. ಇದು ಇಡೀ ಶಬ್ದದ ನಿರ್ವಚನಕ್ಕೂ, ಗೊಗ್ಗರಸನು ನುಗ್ಗಾಗಿಸಿದ್ದು ಇದೇ ಬಸದಿ ಎಂಬುದಕ್ಕೂ ಹೊನಲು ಬೆಳಕು ಹಾಯಿಸುವ ವಾಕ್ಯ. ಪಾರ್ಶ್ವನಾಥ ತೀರ್ಥಂಕರನ ಯಕ್ಷಿಯೇ ಪದ್ಮಾವತಿ. ಪಾರ್ಶ್ವನಾಥರ ಮೂರ್ತಿಗಳು ಇರುವ ಎಡೆಗಳಲ್ಲಿ, ಬಸದಿಗಳಲ್ಲಿ ಪದ್ಮಾವತಿ ಯಕ್ಷಿಯ ಮೂರ್ತಿಯೂ ಕಡ್ಡಾಯವಾಗಿ ಇರುತ್ತದೆ. ಇದನ್ನು ಇದರ ತದ್ವಿರುದ್ಧವಾಗಿಯೂ ಹೇಳಬಹುದು; ಪದ್ಮಾವತಿ ವಿಗ್ರಹ-ಗುಡಿ ಇರುವಲ್ಲಿ ಪಾರ್ಶ್ವನಾಥರ ವಿಗ್ರಹವೂ ಇದ್ದೇ ಇರುತ್ತದೆ. ಇಲ್ಲಿಯೇ ಉಲ್ಲೇಖಿಸಬೇಕಾದ

ಇನ್ನೊಂದು ಸಂಗತಿಯಿದೆ. ರನ್ನನು ಅತ್ತಿಮಬ್ಬೆಯನ್ನು ಅಜಿತಪುರಾಣದಲ್ಲಿ ಯಕ್ಷಿಯಾದ ರೋಹಿಣಿಗೂ ಹೋಲಿಸಿದ್ದಾನೆ (೧-೧೪).

ಮೇಲಿನ ಚರ್ಚೆಯ ಬೆಳಕಿನಲ್ಲಿ ಇದುವರೆಗಿನ ವಿವರಣೆಗೆ ಇನ್ನಷ್ಟು ಖಚಿತ ನಿರ್ವಚನ ಸಾಧ್ಯ. ಲಕ್ಕುಂಡಿಯಲ್ಲಿ ಮೂಲ ಆದಿನಾಥ (ಆದಿಬ್ರಹ್ಮ) ಜಿನಾಲಯವಿತ್ತು. ಅದರ ಸುತ್ತಲೂ ದೊಡ್ಡ ದೇವಾಲಯ ಸಮುಚ್ಚಯವೂ ಹೂದೋಟವೂ ಇತ್ತು. ಹೂ ತೋಟದ ಭಾಗದಲ್ಲಿ ಪದ್ಮಾವತಿ (ಘಟಾಂತಿಕೆ)ಯ ವಿಗ್ರಹವಿರುವ ಪಾರ್ಶ್ವದೇವರ ಬಸದಿಯಿತ್ತು; ಅದನ್ನು ಯಕ್ಷಿಯ ಹೆಸರಿಂದ (ಪದ್ಮಾವತಿ) ಘಟಾಂತಿಕೆಯ ಬಸದಿ ಎಂದು ಕರೆಯುತ್ತಿದ್ದರು. ಈ ಘಟಾಂತಿಕೆಯ ಬಸದಿಯು ಅತ್ತಿಮಬ್ಬೆ ಕಟ್ಟಿಸಿದ ಮೂಲ ಆದಿನಾಥ ಜಿನಾಲಯಕ್ಕೆ ಅಧೀನ (ಪ್ರತಿಬದ್ಧ)ವಾಗಿತ್ತು. ಗೊಗ್ಗರಸನು ಈ ಘಟಾಂತಿಕೆಯನ್ನು ನುಗ್ಗು ಮಾಡಿ (ಪಾರ್ಶ್ವ) ಜಿನನನ್ನು ದುರ್ಗತಿಯೊಳಿಕ್ಕಿ ಮೆಟ್ಟಿದನು. ಆದರೆ ಆತನು ಪ್ರತಿಬದ್ಧವಪ್ಪ ತೋಂಟದ ಘಟಾಂತಿಕೆಯ ಬಸದಿಯಲ್ಲಿನ ಯಕ್ಷಿ ಮತ್ತು ಜಿನನ ಮೂರ್ತಿಗಳಿಗೆ ಹೀಗೆ ಮಾಡಿದನೇ ಹೊರತು ಮೂಲ ಆದಿನಾಥ ಬ್ರಹ್ಮ ಜಿನಾಲಯದ ತಂಟೆಗೆ ಹೋಗಲಿಲ್ಲ. ಇದು ಈಗ್ಗೆ ಎಂಟು ನೂರು ವರ್ಷಗಳ ಹಿಂದೆ ೧೧೮೪ರಲ್ಲಿ ನಡೆದ ಘಟನೆ.

ಈ ರೀತಿಯಲ್ಲಿ ೧೧೮೪ರಲ್ಲಿ ಕಟ್ಟಕಡೆಯದಾಗಿ ಶಿಥಿಲವಾದ ಘಟಾಂತಿಕೆಯ ಗುಡಿಯನ್ನು ಮತ್ತೆ ಜೀರ್ಣೋದ್ಧಾರಿಸುವುದು ಆಗಲಿಲ್ಲ. ಇಲ್ಲಿಯೇ ವ್ಯಕ್ತಪಡಿಸಬಹುದಾದ ಇನ್ನೊಂದು ವಿಚಾರವಿದೆ. ಮೂಲ ಬಸದಿ ಸುಂದರವಾಗಿ ಸುಸ್ಥಿರವಾಗಿ ನಿಂತಿತು. ಐತಿಹಾಸಿಕವಾಗಿ ಅಂದಿನ ಚಾಲುಕ್ಯ ಸಾಮ್ರಾಜ್ಯದಲ್ಲಿ, ಚಕ್ರವರ್ತಿದತ್ತಿ ಸಹಿತ, ಮಹತ್ವದ ಜೈನ ಪೂಜಾಗೃಹವಾಗಿದ್ದು ಪಾಳು ಬೀಳುವಂತಾಗಿದ್ದ ಆದಿಜಿನಾಲಯವನ್ನು ಸಿರಿಪಾಳಸೆಟ್ಟಿ ಅಂತಿಮವಾಗಿ ಹಿಂದಿನ ಸ್ಥಿತಿಗೆ ನಿಲ್ಲಿಸಿದ್ದು ಸು. ೧೧೧೦ - ೧೧೨೦ರ ಅವಧಿಯಲ್ಲಿ. ಈಗ ಕ್ರಿ.ಶ. ೧೦೦೭ರ ಕಾಲದ ಶಾಸನವೆಂದು ತಿಳಿಯುತ್ತ ಬಂದಿರುವ ೫೨ನೆಯ ಸಂಖ್ಯೆಯ ಶಾಸನದ ಲಿಪಿಯನ್ನು ಲಿಪಿಶಾಸ್ತ್ರದ ಪ್ರಕಾರ, ಅಕ್ಷರ ರೂಪವನ್ನು ಅಧ್ಯಯನ ಮಾಡಿ ನೋಡಬೇಕು. ಇದರ ಲಿಪಿ ೧೨ನೆಯ ಶತಮಾನದ ಲಿಪಿಯಾಗಿ ನನಗೆ ತೋರುತ್ತದೆ: ಈ ಶಾಸನಕ್ಕಿಂತಲೂ ೫೩ನೆಯ ಬಹುತ್ರುಟಿತ ಶಾಸನದ ಲಿಪಿ ಪ್ರಾಚೀನವಿರಬೇಕು - ಇದರ ವಿಚಾರದಲ್ಲಿ ಲಿಪಿತಜ್ಞರು ಬೆಳಕು ಚೆಲ್ಲಬೇಕು.

ಅಂತೂ ೫೨ನೆಯ ಶಾಸನದಲ್ಲಿರುವ ಎರಡು ಭಾಗಗಳೂ ಎರಡು ಚಾರಿತ್ರಿಕ ಘಟ್ಟಗಳ ಪ್ರತಿನಿಧಿಗಳು. ಪಂಕ್ತಿ ೧ರಿಂದ ೬೨ರ ವರೆಗಿನದು ಪ್ರಾಚೀನ ೫೩ನೆಯ ಶಾಸನದ ಯಥಾ ನಕಲು ; ಆದರಿಂದ ೧-೬೨ ಸಾಲುಗಳ ಕಾಲ ೧೦೦೭.೬೨ನೆಯ ಸಾಲಿನಲ್ಲಿ ಬ್ರಹ್ಮನೆದಲ್ ಎಂಬಲ್ಲಿಂದ ೮೮ನೆಯ ಸಾಲಿನವರೆಗೆ ಇರುವ ಒಟ್ಟು ೨೬ ಸಾಲುಗಳು ಹೊಸದು. ಉದ್ಯಚ್ಚರಿತನೂ ಸಿರಿಪಾಳಾತ್ಮಜನೂ ಆದ ಬಾಹುಬಲಿ ಕವಿ ಸವಿಸ್ತರದಿಂದ ಬರೆದಿರುವ ಈ ಭಾಗದ ರಚನೆಯ ಕಾಲ ಸುಮಾರು ಕ್ರಿ.ಶ. ೧೧೨೫ ಎಂದು ತಿಳಿಯಬಹುದು. ಈ ರಚನೆ ಗೊಗ್ಗರಸನ ಆಕ್ರಮಣಕ್ಕಿಂತ ಅರ್ಧ ಶತಮಾನದಷ್ಟು ಹಿಂದಣದು; ಅಂದರೆ ಅಣ್ಣಿಗೆರೆಯ ೧೧೮೪ರ ಶಾಸನಕ್ಕಿಂತ ಪೂರ್ವದ್ದು.

ಇದೇ ಲಕ್ಕುಂಡಿಯ ಇನ್ನೊಂದು ಶಾಸನದಲ್ಲಿ ಆಣಿಕಾಜಿ ನಾಗಿಸೆಟ್ಟಿಯು ಲಕ್ಕುಂಡಿಯಲ್ಲಿದ್ದ ಜೀಮಯ್ಯನ ಬಸದಿಗೆ ಅಷ್ಟವಿಧಾರ್ಚನೆಗಾಗಿ ಹತ್ತು ಗದ್ಯಾಣ ದಾನ ಕೊಟ್ಟುದನ್ನು ಹೇಳಿದೆ ; ಆದರ ಕಾಲ ಸಹ ಕ್ರಿ.ಶ. ೧೧೭೩. [SII. XV. 119. 1173

Lakkundi. p. 149-150]. ಸುವರ್ಣಪರೀಕ್ಷಕ (ಆಣಿಕಾರ) ನಾಗಿಸೆಟ್ಟಿಯೇ ಈ ಅತ್ತಿಮಬ್ಬೆ ಬಸದಿಯನ್ನು ಸುಂದರವಾಗಿಸಿದ ನಾಕಿಯೆಂದು ತಿಳಿಯಬಹುದು: ನಾಕಿ-ನಾಗಿ ರೂಪಗಳಲ್ಲಿರುವ ನಾಮಸಾದೃಶ್ಯ ಸ್ಥಳೈಕ್ಯ, ಕಾಲೈಕ್ಯ - ಇವುಗಳ ಹೊಂದಾಣಿಕೆ ಮತ್ತು ಔಚಿತ್ಯವನ್ನು ಪರಿಭಾವಿಸಬೇಕು.

೫೩ನೆಯ ಶಾಸನವನ್ನು ೧೦೦೭ರಲ್ಲಿ ಬರೆದಾಗ ಮತ್ತು ಅತ್ತಿಮಬ್ಬೆ ಲಕ್ಕುಂಡಿಯಲ್ಲಿ ಬಸದಿಯನ್ನು ಕಟ್ಟಿಸಿದಾಗ ಆ ಬಸದಿಗೆ ಯಾವ ಹೆಸರಿತ್ತು ಅಥವಾ ಅಲ್ಲಿ ಗರ್ಭಗುಡಿಯೊಳಗೆ ಇದ್ದ ಮೂಲ ತೀರ್ಥಂಕರ ವಿಗ್ರಹ ಯಾರದೆಂಬುದು ಆ ಶಾಸನದಲ್ಲಿ ಎಲ್ಲಿಯೂ ಲಿಖಿತವಾಗಿಲ್ಲ; ಶ್ರೀ ದಾನಚಿಂತಾಮಣಿಃ, ಕಾರಿತ ಜೈನಗೇಹಃ, ಜಿನರಾಜಗೇಹ, ಜೈನಾಧಿವಾಸಂ, ಬಸದಿ - ಎಂಬಿತ್ಯಾದಿ ಮಾತುಗಳಿವೆಯೇ ಹೊರತು ಅದು ಯಾವ ತೀರ್ಥಂಕರರ ಗುಡಿ ಎಂಬುದು ನಮೂದಾಗಿಲ್ಲ. ಸವಿಸ್ತರದಿಂದ ಬರೆದಿರುವ ೫೨ನೆಯ ಹೊಸ ಶಾಸನದ ಆರಂಭದಲ್ಲಿಯೇ 'ಬ್ರಹ್ಮಜಿನಾಳಯ' ಎಂದಿದೆ. ಈ ಹೆಸರು ಅತ್ತಿಮಬ್ಬೆ ಕೊಟ್ಟದ್ದಲ್ಲ. ಲಕ್ಕುಂಡಿಯ 'ಸಾಸಿರ್ವ್ವರುಮೀ ಬ್ರಹ್ಮಜಿನ ನಿಳಯಕ್ಕಿತ್ತರ್ + ಬ್ರಹ್ಮಜಿನಾಳಯಮೆನಿಪ್ಪ ಪೆಸರಂ ಮುದದಿಂ' ಮತ್ತು 'ಸಂದ ಬಾದುಬೆ ದೀಪಾವಳಿ ಕಾರಪುಣ್ಣಮೆಯೆನಿಪ್ಪೀ ಮೂರು ಪರ್ವ್ವಂಗಳೊಳ್' ಗ್ರಾಮಾಧಿಪನು 'ಬ್ರಹ್ಮಜಿನೇಂದ್ರಗೇಹಮೆನುತಂ' ಬಂದು ಪ್ರದಕ್ಷಿಣೆ ಹಾಕಿ ಹೋದನು.

(೫೩ನೆಯ ಹೊಸ ಶಾಸನದಲ್ಲಿ) ಪಂಕ್ತಿ ೬೭ರಿಂದ ೭೯ರ ವರೆಗಿನ ೧೨ ಪಾದಗಳಲ್ಲಿ ಇರುವುದು ಭೂತಕಾಲದ ಘಟನೆಯ ಪುನರ್ ಪ್ರಸ್ತಾಪ. ಅತ್ತಿಮಬ್ಬೆ ೧೦೦೭ರಲ್ಲಿ ತಳವೃತ್ತಿಯಾಗಿ ಕೊಟ್ಟ ಸರುಕಿ ಎಂಬ ಗ್ರಾಮದ ಸೀಮಾ ಮರ್ಯಾದೆ (ಎಲ್ಲೆಕಟ್ಟು) ಮತ್ತು ಅದರೊಳಗಿನ ದತ್ತಿ ವಿವರಗಳು ಜನರಲ್ಲಿ ಆಗಲೇ ಮರೆತುಹೋಗಿತ್ತು. ಅದರಿಂದ ಈ ಹೊಸ ಶಾಸನವನ್ನು ವಿಸ್ತರಿಸಿ ಬರೆಯುವ ಸು. ೧೧೮೦ರ ಕಾಲಘಟ್ಟದಲ್ಲಿ ಮತ್ತೆ ಹಿಂದಿನದನ್ನೆಲ್ಲ ನೆನಪಿಸಲಾಗಿದೆ. ಮಹಾಸತೀ ರತ್ನ ಅತ್ತಿಮಬ್ಬರಸಿಯು ಲೊಕ್ಕಿಗುಂಡಿಯ ಊರೊಡೆಯ ಪ್ರಮುಖ ಮಹಾಜನ ಸಾಸಿರ್ವ್ವರ ಕಯ್ಯೊಳ್ ತನ್ನ ಬಸದಿಗೆ ಬೇಡಿ ಪಡೆದದ್ದು ಯಾವುದನ್ನು ಎಂಬುದನ್ನು ಈಗ ಪುನರ್ ಪ್ರಸ್ತಾಪಿಸಲಾದುದರಿಂದ, ಹಿಂದಿನ ದತ್ತಿಯ ಮೇರೆಗಳನ್ನು ಹೇಳಿ ಅದನ್ನು ಯಾರೂ ಮೀರಬಾರದು - ಎಂದಿದೆ. ಹೀಗೆ ಹೇಳುವಾಗ ಹೊಸದಾಗಿ ಕೊಡಲಾದ, ಹಳೆಯದಕ್ಕೆ ಸೇರಿಸಲಾದ ಸಿರಿಪಾಳಸೆಟ್ಟಿಯ ದಾನವೂ ಇದರಲ್ಲಿ ವಿಲೀನವಾಗಿರಬೇಕು.

ಈ ಎಲ್ಲ ಹಿನ್ನಲೆಯ ಐತಿಹಾಸಿಕ ದಾಖಲೆಗಳ ಆಧಾರಗಳನ್ನು ಅವಲಂಬಿಸಿ ಲಕ್ಕುಂಡಿಯ ೫೨ನೆಯ ಶಾಸನವನ್ನು, ಎರಡು ಕಾಲಘಟ್ಟಗಳು ಹೆಣೆದುಕೊಂಡಿರುವ ಶಾಸನವೆಂದು ತೀರ್ಮಾನಿಸಬಹುದು: ೧. ಅತ್ತಿಮಬ್ಬೆಯು ಬಸದಿ ಕಟ್ಟಿಸಿ ಅದಕ್ಕೆ ಸುರುಕಿಯೆಂಬ ಊರನ್ನು ದತ್ತಿಯಿತ್ತವರೆಗಿನ ಶಾಸನ ಭಾಗವನ್ನು ಪೂರ್ವಾರ್ಧವೆನ್ನಬಹುದು. ೨. ಅನಂತರ ಬ್ರಹ್ಮಜಿನಾಲಯವೆಂಬ ಹೊಸ ಹೆಸರನ್ನೂ, ಮೂರುಸಲ ಜೀರ್ಣೋದ್ಧಾರಗೊಂಡಿರುವುದನ್ನೂ ತಿಳಿಸುವ ಎರಡನೆಯ ಭಾಗವನ್ನು ಉತ್ತರಾರ್ಧ ಎನ್ನಬಹುದು. ಉತ್ತರಾರ್ಧದ (ಪಡಿಸಲಿಸಿದ) ಹಂತದಲ್ಲಿ ಜೈನೇತರರಿಗೂ ಇದು ಪೂಜಾರ್ಹವಾಗಲೂ ಸ್ವೀಕಾರಾರ್ಹವಾಗಲೂ ಧಾರ್ಮಿಕ ಸಮನ್ವಯತೆಯ ಮಾನ್ಯತೆಗಾಗಿ ಬ್ರಹ್ಮನಶಿಲಾಮೂರ್ತಿ ಹೊಸದಾಗಿ ಮಾಡಿಸಿ ಸೇರಿಸಲಾಗಿದೆಯೆಂದು ತೋರುತ್ತದೆ. ಮೊದಲು ಇದ್ದದ್ದು ಜಿನಾಲಯ ಮಾತ್ರ. ಅನಂತರ, ಪ್ರಾಯಃ ಸಿರಿಪಾಳ ಸೆಟ್ಟಿ ಕಾಲದಲ್ಲಿ

ಆಗಿರುವ ಸೇರ್ಪಡೆ ಬ್ರಹ್ಮನ ಮೂರ್ತಿ. ಬ್ರಹ್ಮನ ವಿಗ್ರಹವೂ ಜಿನಾಲಯದಲ್ಲಿ ಸೇರಿದ್ದರಿಂದ ಬ್ರಹ್ಮ ಜಿನಾಲಯವಾಯಿತು. ಶಾಸನದಲ್ಲಿರುವ ಈ ಉತ್ತರಾರ್ಧದ ಮಾಹಿತಿಗಳು ಬಾಹುಬಲಿ ಕವಿಯ ಕೃಪೆ.

ರನ್ನ ಕವಿ ವಿರಚಿತವೆಂದು ಗ್ರಹಿಸಲಾಗಿರುವ ಪೂರ್ವಾರ್ಧದ ಶಾಸನದಲ್ಲಿಯೂ ಇದುವರೆಗೆ ಗಮನಿಸದಿರುವ ಕೆಲವು ಪ್ರಮುಖ ಸಂಗತಿಗಳತ್ತ ಒಳನೋಟ ಹರಿಸಬಹುದು; ಇದು ಅನೇಕ ಹೊಸ ವಿಚಾರಗಳಿಗೆ ನಿಧಿಗ್ರಾಸವಾದ ಮಹತ್ವದ ಶಾಸನ. ಶಾಸನದಲ್ಲಿ ಉಲ್ಲೇಖವಾಗಿರುವ ಪವಾಡಗಳನ್ನು ಪರಿಶೀಲಿಸಬಹುದು. ಅತ್ತಿಮಬ್ಬೆಯು ಒಟ್ಟು ಏಳು ಪವಾಡಗಳನ್ನು ಮಾಡಿದಳೆನ್ನಲಾಗಿದೆ:

೧. ಉನ್ನತಕುಕ್ಕುಟೇಶ್ವರನನ್ನು ಹೋಗಿ ಕಾಣುವವರೆಗೂ ಅನ್ನ ತೊರೆದಳು. ನಿರಾಹಾರಿಯಾಗಿದ್ದು (ದೊಡ್ಡ) ಬೆಟ್ಟವನ್ನು ಹತ್ತುವಾಗ ಆಕೆಗೆ ಅದುವರೆಗೂ ಹಾದಿಯಲ್ಲಾದ ಬಳಲಿಕೆಯನ್ನು (ಪಥಶ್ರಮವಮಂ) ಹೋಗಲಾಡಿಸಲು ಅಕಾಲವೃಷ್ಟಿಯಾಯಿತು. ಮಳೆಗಾಲವಲ್ಲದಿದ್ದರೂ ಹೀಗೆ ಮಳೆ ಬಿದ್ದುದಕ್ಕೆ ಶಾಸನ ಕವಿ ಉದ್ಗಾರವೆತ್ತಿದ್ದಾನೆ - ''ದೇವ ಭಕ್ತಿಗದು ಚೋದ್ಯಮೆ, ಕೊಳ್ಳವೆ ಪುಷ್ಪವೃಷ್ಟಿಗಳ್'' ಎಂದು.

೨. ಚಕ್ರವರ್ತಿಯ ಆದೇಶದಂತೆ ಜಿನಬಿಂಬವನ್ನು ತಲೆಯಲ್ಲಿ ಹೊತ್ತು ತುಂಬಿ ಹರಿಯುತ್ತಿದ್ದ ಗೋದಾವರಿ ನದಿಯನ್ನು ಪ್ರವೇಶಿಸಿದಳು; ಒಡನೆಯೇ ಆ ತೊರೆ ಹರಿಯುವುದು ನಿಂತುಹೋಯಿತು.

೩. ತನ್ನನ್ನು ಕಟ್ಟಿ ಹಾಕಿದ್ದ ಹಗ್ಗಗಳನ್ನು ಹರಿದು, ಉಂಟಾಗಿದ್ದ ಮುಳಿಸಿನಿಂದ, ಭರದಿಂದ ಬಂದ ಮದಿಸಿದ ಆನೆಯ ಸೊಕ್ಕನ್ನು ಅಧೀರಳಾಗದೆ ಇಳಿಸಿ ಅದು ತನ್ನ ಕಾಲಿಗೆ ಭಕ್ತಿಯಿಂದ ನಮಸ್ಕರಿಸುವಂತೆ ಮಾಡಿದಳು.

೪. ಆನಂದದಿಂದ ಪೂಜಿಸುತ್ತಿದ್ದ ಜಿನಬಿಂಬವು ನದಿಯೊಳಗೆ ಕೈಜಾರಿ ಬಿದ್ದು ಹೋಯಿತು. ಆ ಜಿನಬಿಂಬ ಮತ್ತೆ ಕೈಗೆ ಬರುವವರೆಗೆ ಉಣ್ಣುವುದನ್ನೂ ಬಿಟ್ಟಳು; ಎಂಟು ದಿನಕ್ಕೆ ಆ ಜಿನಮೂರ್ತಿ ಮತ್ತೆ ಕೈಗೆ ಬಂದಿತು.

೫. ಪ್ರಳಯಾಗ್ನಿಯಂತೆ ಸೈನ್ಯವನ್ನು ಆವರಿಸಿಕೊಂಡು ವ್ಯಾಪಿಸುತ್ತಿದ್ದ ಅಗ್ನಿಯು, ಈ ದಾನಚಿಂತಾಮಣಿಯು ನಿರ್ಮಲವಾದ ಜಿನಗಂಧೋದಕವನ್ನು ತಳಿದ ಕೂಡಲೇ ಉಪಶಮನಗೊಂಡಿತು.

೬. ಜತೆಯಲ್ಲಿ (ದೋಣಿ) ಹತ್ತಿ ಕುಳಿತಿದ್ದ ಸವತಿಯೊಬ್ಬಳು ಅತ್ತಿಮಬ್ಬೆಯನ್ನು ತೊರೆಯೊಳಗೆ ನೂಕಲು ಪ್ರಯತ್ನಿಸಿದಾಗ ದೋಣಿ ಆ ಕಡೆ ಈ ಕಡೆ ಮಿಡುಕದೆ ಸುತ್ತುವುದಕ್ಕೆ ಆರಂಭಿಸಲು, ಕೂಡಲೆ ಸವತಿಯು ಭಯವಶದಿಂದ ಅತ್ತಿಮಬ್ಬೆಯ ಅಡಿಗೆ ಎರಗಿದಳು.

೭. ಜಿನಧರ್ಮಪತಾಕೆ ಅತ್ತಿಮಬ್ಬೆಯು ವಿಮಳ ನರ್ಮದಾನದಿಯ ಕುರುಳ ಪಾವೆಯ ಸ್ತೋತ್ರಪಾತ್ರನಾದ (ವಿನುತಂ) ಜಿನನನ್ನು ಕಾಣುವವರೆಗೆ ಆಹಾರ ತೊರೆದದ್ದು ಆಕೆಯ ಜೀವಿತದವರೆಗೂ ಪ್ರಸಿದ್ಧವಾಯಿತು.

ಈ ಸಪ್ತ ಮಹಿಮೆಗಳಲ್ಲಿ ೪ ಮತ್ತು ೭ನೆಯ ಪವಾಡಗಳೆರಡೂ ಒಂದೇ ಪವಾಡದ ಆವೃತ್ತಿಗಳಾಗಿರಬಹುದು.

ಈ ಅದ್ಭುತ ಮಹಿಮೆಗಳನ್ನು ಹೇಳುವಾಗ ಶಾಸನ ಕವಿಯೇ 'ಏ ವರ್ಣ್ಣಿಸುವೆಂ, ಏವೇಳ್ವೆಂ'-ಎಂದು ಆಶ್ಚರ್ಯ ಸೂಚಿಸಿದ್ದಾನೆ. ಇದು ಆ ಕಾಲದ ಜನತೆ ಪಟ್ಟ ವಿಸ್ಮಯಭಾವದ ಅನುರಣನ ಧ್ವನಿ. ಸಮಕಾಲೀನ ಚಾಲುಕ್ಯ ಸಾಮ್ರಾಜ್ಯದ ಪ್ರಜಾಕೋಟಿ ಅತ್ತಿಮಬ್ಬೆಯ ವಿಚಾರದಲ್ಲಿ ಅತ್ಯಂತ ಪೂಜ್ಯ ಭಾವವನ್ನು ತಳೆಯಲು, ಇಂತಹ ಸಂಗತಿಗಳು ಬಾಯ್ದೆರೆಯಲ್ಲಿ ಪಡೆದ ಉತ್ಪ್ರೇಕ್ಷೆಯೂ ಕಾರಣವಾಗಿದೆ. ಇದರ ಫಲವಾಗಿ ಆಕೆ ಜೀವಂತವಾಗಿರುವಾಗಲೇ ದೈವತ್ವದ ನೆಲೆಗೇರಿದ್ದಳು. ಚಕ್ರವರ್ತಿಗಳಿಂದ ಹಿಡಿದು ಸಾಮಾನ್ಯ ಪ್ರಜೆಗಳವರೆಗೆ ಜಾತಿಮತ ವರ್ಣಲಿಂಗ ವಯೋಭೇದಗಳಿಲ್ಲದೆ ಎಲ್ಲರ ಕೈಗಳೂ ಮುಗಿದುವು, ತಲೆಗಳು ಬಾಗಿದುವು. ಮೇಲಿನ ಪವಾಡಗಳಲ್ಲಿ ಕೆಲವು ಕರ್ನಾಟಕದ ಚರಿತ್ರೆ ಮತ್ತು ಸಂಸ್ಕೃತಿಯ ಅಧ್ಯಯನಕಾರರಿಗೆ ಮುಖ್ಯವಾಗಿವೆ. ಅಲ್ಲದೆ ಈ ಮಹಿಮೆಗಳ ವಿಚಾರವಾಗಿ ಕೇಳಬೇಕಾದ ಪ್ರಶ್ನೆಗಳಿವೆ. ಕೆಲವು ಪವಾಡಗಳಂತೂ ಕೇವಲ ಕಾಲ್ಪನಿಕವಾಗಿರದೆ ಸತ್ಯಾಂಶದ ಛಾಯೆಯನ್ನೂ ಒಳಗೊಂಡಿವೆ.

೧. ಉನ್ನತ ಕುಕ್ಕುಟೇಶ್ವರ ಜಿನೇಶ್ವರನೆಂದರೆ ಈಗಿನ ಶ್ರವಣ ಬೆಳ್ಗೊಳದ ಗೊಮ್ಮಟೇಶ್ವರನೆಂಬುದರಲ್ಲಿ ಸಂಶಯಗಳಿಲ್ಲ. ಸುಜನೋತ್ತಂಸ ಬೊಪ್ಪಣ ಕವಿಯ ಶಾಸನದಲ್ಲೇ ಅಲ್ಲದೆ (ಎಕ. ೧೧.೩೩೬ (೨೩೪) ೧೨ನೆಯ ಶತಮಾನ ಪು. ೧೮೭) ಇನ್ನೂ ಹಲವು ಕಡೆಗಳಲ್ಲಿ (ಅದೇ: ಪುಟಗಳು ೨೬೩, ೨೯೭, ೨೯೮, ೩೩೬) ಈ ಗೊಮ್ಮಟೇಶ ಬಾಹುಬಲಿ ಮೂರ್ತಿಯನ್ನು ಕುಕ್ಕುಟೇಶ್ವರ ಜಿನನೆಂದು ಕರೆದಿದೆ. ಅಲ್ಲದೆ ಇದೇ ಶ್ರವಣಬೆಳುಗೊಳ ಶಾಸನ ಸಂಪುಟದಲ್ಲಿಯೇ (೪೪೪ (೩೨೭) ಕ್ರಿ.ಶ. ೧೧೮೧, ಪುಟ ೨೭೧: ೫೨ (೩೮೪) ಸು. ೧೧೦೦, ಪುಟ ೩೨೮: ೮೨ (೭೩) ಕ್ರಿ.ಶ. ೧೧೧೮ ಪುಟ ೬೫) ಮೂರು ಶಾಸನಗಳಲ್ಲಿ ಅತ್ತಿಮಬ್ಬೆಯ ಪ್ರಸ್ತಾಪ ಸಹ ಬಂದಿದೆ. ಬೊಪ್ಪಣ ಕವಿಯು ಬೆಳ್ಗೊಳದ ಗೊಮ್ಮಟ ಜಿನನನ್ನು 'ದಕ್ಷಿಣ ಕುಕ್ಕುಟೇಶ್ವರ'ನೆಂದಿದ್ದಾನೆ (ಅದೇ : ೩೩೬ (೨೩೪) ಪು. ೧೮೭, ಸಾಲು ೨೧). ಹಾಗಾದರೆ ಉತ್ತರ ಕುಕ್ಕುಟೇಶ್ವರನಾರು ಎಂಬ ಪ್ರಶ್ನೆ ಉದ್ಭವಿಸುತ್ತದೆ. ಐಹೊಳೆ, ಬಾದಾಮಿ, ಅಜಂತ-ಎಲ್ಲೋರಗಳಲ್ಲಿ ಪ್ರಾಚೀನ ಗೊಮ್ಮಟ ಮೂರ್ತಿಗಳಿವೆ: ಅವುಗಳು ಉತ್ತರದ ಕುಕ್ಕುಟೇಶ್ವರ ಮೂರ್ತಿಗಳೆ? ಆಂಧ್ರದ ಬೋಧನ್ ಪಟ್ಟಣಕ್ಕೆ ಪೌದನವೆಂಬ ಹೆಸರೂ ಇದ್ದಿತು: ಅದರ ಪರಿಸರದಲ್ಲಿ ಕುಕ್ಕುಟೇಶ್ವರ ಜಿನ ಬಾಹುಬಲಿಯ ಮೂರ್ತಿಯಿದ್ದು ಅದನ್ನು ನಾಶಪಡಿಸಲಾಯಿತೊ? ಈ ವಿಚಾರಗಳ ಚರ್ಚೆ ಇಲ್ಲಿಗೆ ಪ್ರಸ್ತುತ. ಕರ್ನಾಟಕದಲ್ಲಿ ಬಾಹುಬಲಿ ಮೂರ್ತಿಗಳ ದೊಡ್ಡ ಪರಂಪರೆಯೆ ಇದೆ (ಹಂಪ. ನಾಗರಾಜಯ್ಯ: 'ಗೊಮ್ಮಟ ಬಾಹುಬಲಿ' ೧೯೮೧).

೧. ಅಮೆರಿಕದ ನ್ಯೂಯಾರ್ಕ್ ನಗರದ ವಸ್ತುಸಂಗ್ರಹಾಲಯದಲ್ಲಿ, ಇದುವರೆಗೆ ಉಳಿದು ಬಂದಿರುವ ಬಾಹುಬಲಿ ಮೂರ್ತಿಗಳಲ್ಲಿಯೇ ಅತ್ಯಂತ ಪ್ರಾಚೀನತಮಮೂರ್ತಿ ಸಂರಕ್ಷಿತವಾಗಿದೆ. ಇದು ಕ್ರಿ.ಶ. ಆರನೆಯ ಶತಮಾನದ ಪಂಚಲೋಹ ಮೂರ್ತಿಯಾಗಿದ್ದು ಸುವರ್ಣಲೇಪ ಪಡೆದಿದೆ.

೨. ಕದಂಬ ದೊರೆ ರವಿವರ್ಮನ (ಕ್ರಿ.ಶ. ೪೮೫-೫೧೯) ಗುಡ್ನಾಪುರದ ಶಾಸನದಿಂದ ಆತನು ಕಾಮಜಿನಾಲಯವನ್ನು ಕಟ್ಟಿಸಿದ್ದು ತಿಳಿಯುತ್ತದೆ. ಕರ್ನಾಟಕದಲ್ಲಿ ಅದೇ ಮೊಟ್ಟಮೊದಲನೆಯ ಬಾಹುಬಲಿ (ಗೊಮ್ಮಟ) ಜಿನಾಲಯ.

೩. ಆಂಧ್ರದ ನಿಜಾಮಾಬಾದು ಜಿಲ್ಲೆಯ ಬೋಧನ (ಪೌದನ ಪುರ)ದಲ್ಲಿ ಕುಕ್ಕುಟೇಶ್ವರ ಮೂರ್ತಿ ಇದುದಕ್ಕೆ ಆಧಾರವಿದೆ: ರಾಷ್ಟ್ರಕೂಟರ ನಿತ್ಯವರ್ಷ ಇಂದ್ರನು

(೯೧೫-೯೨೭) ಚಕ್ರವರ್ತಿಯಾಗಿದ್ದಾಗ ಪೌದನಪುರವೂ ರಾಜಧಾನಿಯಾಗಿತ್ತು. ಬೋಧನದ ಸಮೀಪದಲ್ಲಿರುವ ಪೀಠಪುರಂ ಎಂಬಲ್ಲಿ ಕುಕ್ಕುಟೇಶ್ವರ ಮೂರ್ತಿಯೊಂದು ದೊರೆತಿದೆ. ಇವು ಯಾವುವೂ ಉನ್ನತವಾಗಿರಲಿಲ್ಲ ; ಉತ್ತರದ ಕುಕ್ಕುಟೇಶ್ವರ ಮೂರ್ತಿಗಳಾಗಿದ್ದುವು.

೪. ಶ್ರವಣಬೆಳ್ಗೊಳದ ಜೈನ ಮಠದ ಬಸದಿಯೊಳಗೆ ಇರುವ ಪಂಚಲೋಹ ಮೂರ್ತಿಯು ಒಂಬತ್ತನೆಯ ಶತಮಾನದ್ದು, ಗಂಗರಕಾಲದ್ದು ; ಚಾವುಂಡರಾಯನಿಗಿಂತ ನೂರು ವರ್ಷ ಹಳೆಯದು.

೨. ಅತ್ತಿಮಬ್ಬೆ ಉನ್ನತ (ಎತ್ತರದ) ಕುಕ್ಕುಟೇಶ್ವರ ಜಿನ (ಗೊಮ್ಮಟ)ನನ್ನು ನೋಡಲು ಬಂದದ್ದು ಈಗಿನ ಬೆಳಗೊಳಕ್ಕೆ ಎಂಬುದು ಖಚಿತ. ''ಪರ್ವತಾಗ್ರಮಂ ಪರಿದೇರೆ'' ಎಂದರೆ ದೊಡ್ಡ ಬೆಟ್ಟದ (ವಿಂಧ್ಯಗಿರಿಯ) ತುದಿಯನ್ನು ಹತ್ತಲು ಎಂದೇ ಅರ್ಥ. ಆಕೆ ಶ್ರವಣ ಬೆಳಗೊಳಕ್ಕೆ ಬಂದದ್ದು ಯಾವ ತೇದಿಯಲ್ಲಿ, ಎಲ್ಲಿಂದ ಬಂದಳು, ಯಾವ ಮಾರ್ಗವಾಗಿ ಬಂದಳು, ಆಕೆಯೊಂದಿಗೆ ಆಗ ಪತಿ ನಾಗದೇವ, ತಂಗಿ (ಮತ್ತು ಸವತಿ) ಗುಂಡಮಬ್ಬೆ, ಮಗ ಅಣ್ಣಿಗದೇವ (ಪಡೆವಳ ತೈಲ), ಕವಿರನ್ನ ಇವರೆಲ್ಲ ಅಥವಾ ಇವರಲ್ಲಿ ಯಾರು ಬಂದಿದ್ದರು? ಇವು ಪರಾಮರ್ಶೆಗೆ ತಕ್ಕ ಪ್ರಶ್ನೆಗಳು. ಈ ಸಂಪ್ರಬಂಧದ ಮುಂದಿನ ಘಟ್ಟದಲ್ಲಿ ಇದಕ್ಕೆ ಉತ್ತರಗಳನ್ನು ಕಂಡುಕೊಳ್ಳುವ ಪ್ರಯತ್ನವಿದೆ.

೩. ತನ್ನ ತಲೆಯಲ್ಲಿ ಜಿನನನ್ನು ಹೊತ್ತು ಗೋದಾವರಿ ನದಿಯನ್ನು ದಾಟಲು ಬೆಸಸಿದ ನರಪನು ಯಾರು? ಇಮ್ಮಡಿ ತೈಲಪನೊ (೯೭೩-೯೯೭), ಇರಿವಬೆಡಂಗ ಸತ್ಯಾಶ್ರಯನೊ (೯೯೭-೧೦೦೮)? ಶಿರದಲ್ಲಿ ಧರಿಸಿದ ಜಿನಬಿಂಬ ಯಾವ ತೀರ್ಥಂಕರನದು? ಗೋದಾವರಿಯನ್ನು ದಾಟಿದ್ದು ಯಾವಾಗ, ಎಲ್ಲಿ ಮತ್ತು ಯಾತಕ್ಕಾಗಿ ಆ ಪ್ರಮೇಯ ಒದಗಿ ಬಂದಿತು? ಚಾಲುಕ್ಯ ಸಾಮ್ರಾಜ್ಯದ ಮೇರೆಗಳು ಗೋದಾವರಿಯ ತೀರದವರೆಗೂ ಇದ್ದುವೇ? ಈ ಪ್ರಶ್ನೆಗೆ ಚಾರಿತ್ರಿಕ ಮಹತ್ವದ ಉತ್ತರವನ್ನು ಬ್ರಹ್ಮಶಿವ ಕವಿ ತನ್ನ ಸಮಯ ಪರೀಕ್ಷೆ ಕಾವ್ಯದಲ್ಲಿ ಕೊಟ್ಟು ಉಪಕರಿಸಿದ್ದಾನೆ (೧-೩೯) :

ಭರದಿಂ ಬಂದೊತ್ತೆ ಮುಂದೆಮ್ಮಸಕದಿಂದ ತೀವಿ ಮುಂದೊತ್ತೆ ಗೋದಾ
ವರಿ ಭೂಪಂ ತೈಲಪಂ ನಿಸ್ತರಿಸು ಕಟಕಮಂ ಬೇಗಮಿನ್ನಬ್ಬ ನೀನೆಂ
ದೆರೆಯಲ್+ ಸರ್ವಜ್ಞಂ ಪೊತ್ತಗಿಯದೆ ಪೊಕ್ಕೊಡಾ ವಾರಿಪೂರಂ
ಬಿರಿದತ್ತಾ ಚಕ್ರಿಪಾಯ್ದಂ ತೊರೆಯನಮಳ ಸಮ್ಯಕ್ತ್ವ ವಿಖ್ಯಾತಿಯಿಂದಂ ॥

(ಎರೆ ಯಾಚಾಯಾಂ (ಕೇಶಿರಾಜ-ಶಬ್ದಮಣಿದರ್ಪಣ) : ಚಕ್ರವರ್ತಿಯೇ ಅತ್ತಿಮಬ್ಬೆಯನ್ನು ಬೇಡಿದನೆಂಬುದು ಗಮನಾರ್ಹ)

ಶ್ರವಣಬೆಳಗೊಳದ ಶಾಸನವೊಂದು ಮೇಲಿನ ಹೇಳಿಕೆಯನ್ನು ಅನುರಣನ ಮಾಡಿದೆ:

ಜಿನಧರ್ಮಾಗ್ರಣಿಯತ್ತಿಮಬ್ಬರಸಿಯಂ ಲೋಕಂ ಗುಣಂಗೊಳ್ವುದೇ
ಕೆನೆ ಗೋದಾವರಿ ನಿಂದ ಕಾರಣದಿನೀಗಳು ಗಂಗದಂಡಾಧಿನಾ
ಥನುಮಂ ಕಾವೇರಿ ಪೆರ್ಚಿಸುತ್ತಿ ಪಿರಿದುಂ ನೀರೊತ್ತಿಯುಂ ಮುಟ್ಟತಿ
ಲ್ಲೆನೆ ಸಂಮ್ಯಕ್ತ್ವದ ಪೆಂಪನೇ ಸೆಜಿಯೆ ಬಂಣಿಪ್ಪಂಣನೇವಂಣಿಪಂ ॥

(EC.II (1973) 82 (73) 118 p. 65)

೪. ಅತ್ತಿಮಬ್ಬೆಯ ಕೈಜಾರಿ ನದಿಯಲ್ಲಿ ಬಿದ್ದ ಜಿನಬಿಂಬ ಯಾವ ತೀರ್ಥಂಕರನದು ಮತ್ತು ಆ ಬಿಂಬ ಬಿದ್ದದ್ದು ಯಾವ ನದಿಯಲ್ಲಿ? ಆಗ ಆಕೆ ದೋಣಿಯಲ್ಲಿ ವಿಹಾರ ಹೋಗುತ್ತಿದ್ದಳೆ? ಎಲ್ಲಿಂದ ಎಲ್ಲಿಗೆ, ಯಾವ ಇಸವಿಯಲ್ಲಿ ಹೋಗುತ್ತಿದ್ದಳು? ನಾಗದೇವನೂ ಜತೆಯಲ್ಲಿ ಇದ್ದನೆ?

೫. ನರ್ಮದಾನದಿಯ ಕುರುಳ ಪಾವೆಯ ಜಿನನಂ ವಿನುತಂ ಕಾಣ್ಬೆನೆಗಂ - ಎಂಬಲ್ಲಿ ಪ್ರಸ್ತಾಪಿತವಾಗಿರುವ 'ಕುರುಳ ಪಾವೆಯ ಜಿನನು' ಯಾರು? ಈ ಬಗ್ಗೆ ಚರ್ಚೆಯಾಗಿಲ್ಲ. ಇಲ್ಲಿಗೆ ಅನ್ವಯವಾಗುವ ಅರ್ಥ ಹೀಗಿದೆ: (ಗುಂಗುರು) ಕೂದಲುಳ್ಳ ಪಾವಾಪುರಿಯ (ಪಾವೆಯ) ಜಿನ ಸ್ವಾಮಿಯೆಂದರೆ 'ಮಹಾವೀರ ಸ್ವಾಮಿ' ಎಂದರ್ಥ. ಈ ದಿಕ್ಕಿನಲ್ಲಿ ವಿಚಾರ ಮಾಡಬೇಕಾದ ಅಂಶ ಇನ್ನೊಂದಿದೆ. ನರ್ಮದಾನದಿಯ ಕುರುಳ ಪಾವೆಯ ಜಿನ - ಎಂಬುದರ ಒಟ್ಟು ಅನ್ವಯಕ್ಕೆ ಇನ್ನೊಂದು ಮಗ್ಗಲಿನ ಉತ್ತರವೂ ಇದೆ. ನರ್ಮದಾ ನದಿಯ ದಡದಲ್ಲಿ, ಎಲ್ಲೊ ಒಂದು ನಿರ್ದಿಷ್ಟ ಸ್ಥಳದಲ್ಲಿ, ವರ್ಧಮಾನ ಮಹಾವೀರರ ಜಿನಾಲಯವಿದ್ದಿರಬೇಕು; ಅತ್ತಿಮಬ್ಬೆ ಆ ಜಿನಮಂದಿರ ದರ್ಶನ ಆಗುವ ತನಕ ಆಹಾರವನ್ನು ತೆಗೆದುಕೊಳ್ಳುವುದಿಲ್ಲ ಎಂದು ನಿರ್ಧರಿಸಿದ್ದಳು. ಆ ಬಸದಿಗಳ ನಿರ್ಮಾಣವು ಕ್ರಿ.ಶ. ಒಂಬತ್ತನೆಯ ಶತಮಾನದ ವೇಳೆಗೆ ಪ್ರಸಿದ್ಧಗೊಂಡಿತ್ತೆಂಬುದಕ್ಕೆ ಪೂರಕ ಆಧಾರಗಳಿವೆ. ಜಿನಸೇನಾಚಾರ್ಯರು (ಕ್ರಿ.ಶ. ೮೫೦) ಸಂಸ್ಕೃತ ಆದಿಪುರಾಣ (ಪೂರ್ವಪುರಾಣ)ದಲ್ಲಿ ನರ್ಮದಾನದಿಯನ್ನು ಹತ್ತಾರು ಕಡೆ ವರ್ಣಿಸಿದ್ದಾರೆ: ಭರತಚಕ್ರಿಯ ಸೈನ್ಯ ಬೀಡು ಬಿಟ್ಟುದನ್ನೂ ಸಹ ನಿರೂಪಿಸಿದ್ದಾರೆ. ನರ್ಮದಾ ಮತ್ತು ಗೋದಾವರೀ ನದಿಗಳು ಈಗ ಕರ್ನಾಟಕದಲ್ಲಿ ಇಲ್ಲ. ನರ್ಮದಾನದಿಯು ತಪತೀ ನದಿಯ ಮೇಲಕ್ಕಿದೆ ಮತ್ತು ವಿಂಧ್ಯಪರ್ವತ ಶ್ರೇಣಿಯ ಕೆಳಕ್ಕಿದೆ. ದಕ್ಷಿಣದ ಕಾವೇರಿಯಿಂದ ಉತ್ತರದ ನರ್ಮದೆಗೆ ಸು. ೧೫೦೦ ಕಿ.ಮೀ. ಅಂತರವಿದೆ. ಗೋದಾವರಿಯು ಪಶ್ಚಿಮ ಘಟ್ಟಗಳಲ್ಲಿ ಹುಟ್ಟಿ, ಉಪನದಿಗಳನ್ನು ಸೇರಿಸಿಕೊಂಡು, ಪೂರ್ವಘಟ್ಟಗಳವರೆಗೆ ಹರಿದು ಬಂಗಾಳಕೊಲ್ಲಿಯಲ್ಲಿ ವಿಲೀನಗೊಳ್ಳುತ್ತದೆ.

೬. ಈ ನೆಲೆಯಲ್ಲಿ ಚಿಂತನೀಯವಾದ ಚಾರಿತ್ರಿಕ ಪೋಷಕ ದಾಖಲೆಗಳಿವೆ. ರಾಷ್ಟ್ರಕೂಟರ ಕಾಲದಲ್ಲಿ, ಕವಿರಾಜಮಾರ್ಗದ ಪ್ರಸಿದ್ಧ ಪದ್ಯದ ಉಲ್ಲೇಖ ಹೇಳುವಂತೆ, ಕನ್ನಡ ನಾಡು ದಕ್ಷಿಣದ ಕಾವೇರಿಯಿಂದ ಉತ್ತರದ ಗೋದಾವರಿಯವರೆಗೆ ಹಬ್ಬಿತ್ತು. ರಾಷ್ಟ್ರಕೂಟರನ್ನು ಸೋಲಿಸಿ ಸಿಂಹಾಸನವನ್ನೇರಿದ ಚಾಲುಕ್ಯರೂ ಈ ವಿಸ್ತಾರದ ಸಮಸ್ತ ನೆಲಕ್ಕೂ ವಾರಸುದಾರರಾದರು ಎಂಬುದನ್ನು ಗಮನಿಸಬೇಕು. ಅತ್ತಿಮಬ್ಬೆಯ ಚಿಕ್ಕಪ್ಪನಾದ ಪೊನ್ನಮಯ್ಯನು ಕಾವೇರೀ ಸರಿತ್ ತೀರದೊಳ್ ಸುರಲೋಕ ಅತಿಥಿಯಾದನು (ರನ್ನ: ಅಜಿತಪುರಾಣಂ: ೧-೩೬). ಗೋದಾವರಿಯು ವೆಂಗಿಮಂಡಲಕ್ಕೆ ಹೊಂದಿಕೊಂಡ ನದಿ' ಅತ್ತಿಮಬ್ಬೆಗೆ ವೆಂಗಿಮಂಡಲ ಪರಿಚಯವಿತ್ತು, ಹೀಗಾಗಿ ಅತ್ತಿಮಬ್ಬೆಯ ಮನೆತನಕ್ಕೆ ಗೋದಾವರಿಯೂ ಪರಿಚಯದ ಪ್ರದೇಶವಾಗಿತ್ತು. ಜತೆಗೆ ಚಾಲುಕ್ಯರಿಗೆ ನರ್ಮದಾ ಮತ್ತು ಗೋದಾವರಿ ನದಿಯ ಸಂಪರ್ಕವೂ ನಿಕಟವಾಗಿತ್ತು. ಪೆರ್ಮಾಡಿಗಂಗ ವಿಕ್ರಮಾದಿತ್ಯ ರಾಜನು ನರ್ಮ್ಮದಾನದಿಯ ದಂಡೆಯ ಮೇಲಿದ್ದ ಕೋಟಿತೀರ್ಥದಲ್ಲಿ ತುಲಾಪುರುಷ ಕಾರ್ಯವನ್ನು ನೆರವೇರಿಸಿದ್ದನು (SII. XV. Intro. p. iv : ದೇಸಾಯಿ ಪಿ.ಬಿ ; ಜೈನಿಸಮ್ ಇನ್ ಸೌತ್ ಇಂಡಿಯ, ಪುಟ ೨೪೧ ff). ಧಾರಾನಗರದ ಮೇಲಿನ ಆಕ್ರಮಣ ಮುಗಿಸಿ ಹಿಂತಿರುಗಿ ಬರುವಾಗ ಈ ತುಲಾಭಾರ ನಡೆಯಿತು (ಹುಣಸಿಹಡಗಲಿ ಶಾಸನ. ೧೦೯).

ಅದರಂತೆ ಚಾಲುಕ್ಯರ ದೊರೆ ಇಮ್ಮಡಿ ಜಗದೇಕಮಲ್ಲನೂ ಸಹ ಇದೇ ಕೋಟಿತೀರ್ಥದಲ್ಲಿ ತುಲಾಪುರುಷವನ್ನು ನೆರವೇರಿಸಿದನು (SII. XV. 31 A.D 1146 ಅಮ್ಮಿನಭಾವಿ). ಈ ಶಾಸನಗಳಲ್ಲಿ ಕೋಟಿತೀರ್ಥವು ಗೋದಾವರಿಯ ತೀರದ ಕ್ಷೇತ್ರವೆಂದು ತಪ್ಪಾಗಿ ನಮೂದಿಸಿದ್ದರೂ, ಚಾಲುಕ್ಯ ರಾಜಮನೆತನದಲ್ಲಿ ನರ್ಮದೆ - ಗೋದಾವರೀ ತೊರೆಗಳ ಬಗೆಗೆ ಭಾವುಕವೆನಿಸುವ ಗೌರವ ಭಾವನೆಯಿತ್ತು. ಈ ಚಾರಿತ್ರಿಕ ಹಿನ್ನೆಲೆಯಿಂದ ಅತ್ತಿಮಬ್ಬೆಯ ಗೋದಾವರೀ - ನರ್ಮದಾ ನದಿಗಳ ಸಂಬಂಧವಾಗಿ ನಡೆಸಿದ ಪವಾಡಗಳನ್ನು ಪರಿಶೀಲಿಸಬೇಕೆನಿಸುತ್ತದೆ.

೭. ಪ್ರಳಯಕಾಲದ ಹಾಗೆ ರಾಜಧಾನಿಯಲ್ಲಿ ಸೈನ್ಯದ ಬೀಡುಗಳ ಸುತ್ತ ಹಬ್ಬಿದ ಬೆಂಕಿಯ ಉರಿಯನ್ನು ತೀರ್ಥ ಚಿಮುಕಿಸಿ ಆರಿಸಿದಳೆಂಬ ಪವಾಡ ಕುರಿತು ಕೇಳಬೇಕಾದ ಪ್ರಶ್ನೆ ಇದೆ: ಯಾವ ರಾಜಧಾನಿಯಲ್ಲಿ, ಮಳಖೇಡವೆ, ಪೊಟ್ಟಲಕೆರೆಯೆ, ಲಕ್ಕುಂಡಿಯೆ? ಯಾವ ಇಸವಿಯಲ್ಲಿ ಇಂಥ ಘಟನೆ ನಡೆಯಿತು, ಆಗ ಇದ್ದ ಚಕ್ರವರ್ತಿ ಯಾರು, ನಾಗದೇವ ಇನ್ನೂ ದಂಡನಾಯಕನಾಗಿದ್ದನೆ ?

೮. ಮದ್ದಾನೆಯ ಸೊಕ್ಕನ್ನು ಅತ್ತಿಮಬ್ಬೆ ಇಳಿಸಿದ್ದು ಯಾವ ಸ್ಥಳದಲ್ಲಿ, ಯಾವ ಇಸವಿಯಲ್ಲಿ ?

೯. ದೋಣಿಯಲ್ಲಿ ಇರುವಾಗ ಜತೆಯಲ್ಲಿ ಇದ್ದ ಸವತಿಯು ಅತ್ತಿಮಬ್ಬೆಯನ್ನು ಕೆಳಗೆ ತಳ್ಳಲು ಪ್ರಯತ್ನಿಸಿ ವಿಫಲಳಾದ ವಿಚಾರವಾಗಿಯೂ ಸವಾಲುಗಳಿವೆ. ಸವತಿ ಎಂದರೆ ಯಾರು, ಗುಂಡಮಬ್ಬೆಯೆ? ಹಾಗಿದ್ದರಿದು ಅಕ್ಕತಂಗಿಯರ ವಿರಸದ ದಾಖಲೆಯೆ? ಅಥವಾ ನಾಗದೇವನಿಗೆ, ಇವರಿಬ್ಬರಲ್ಲದೆ, ಬೇರೆ ಪತ್ನಿಯರೂ ಇದ್ದರೆ - ಇದು ಚರ್ಚಿಸಬೇಕಾದ ಮುಖ್ಯ ವಿಷಯ. ಗುಂಡಮಬ್ಬೆ ಗಂಡನೊಡನೆ ಚಿತೆಯೇರಿ ಸಹಗಮನ ಮಾಡಿದ ಅನಂತರದಲ್ಲಿ ಸಂಭವಿಸಿದ ಘಟನೆಯೆ? ಇದೇ ಲಕ್ಕುಂಡಿಯ ಶಾಸನದಲ್ಲಿ ಅತ್ತಿಮಬ್ಬೆಗೆ ಪಡೆವಳ ತೈಲನು 'ಪಿರಿಯ ಮಗಂ' ಎಂದು ಸ್ಪಷ್ಟವಾಗಿ ಹೇಳಿದೆ. ಅಂದರೆ ಕಿರಿಯ ಮಗನೊ - ಮಕ್ಕಳೊ ಬೇರೆಯವರು ಇದ್ದರೆಂದು ಇದರಿಂದ ಪ್ರತೀತವಾಗುತ್ತದೆ. ಏಕೆಂದರೆ ಇದಕ್ಕೆ ಸಂವಾದಿಯಾಗಿ ರನ್ನನ ಅಜಿತಪುರಾಣ ಕಾವ್ಯದಲ್ಲಿ ಅಣ್ಣಿಗದೇವನು ''ನಾಗದೇವನ ಅಗ್ರಸುತನ್'' ಎಂದಿದೆ (೧೨-೨೪). ತಾನು ಪತಿಯೊಂದಿಗೆ ಚಿತೆಯೇರುವ ಮೊದಲು ಗುಂಡಮಬ್ಬೆಯು ಅಕ್ಕ ಅತ್ತಿಮಬ್ಬೆಗೆ ''ನಿನಗೆ ಮಗಂ ಜಗತ್ + ತಿಲಕನ್ + ಇರ್ದಪನಕ್ಕ ಮಗಂ ಸಮರ್ಥನ್ + ಅಪ್ಪಿನಂ+ ಇರು'', ಎಂದಳು (೧-೪೭). ಇದು ಅತ್ತಿಮಬ್ಬೆಗೆ ಒಬ್ಬನೇ ಮಗನೆಂಬ ಸೂಚನೆಯಂತಿದೆ: ಆದರೆ ಮೇಲೆ ಉದಾಹರಿಸಿದ ಎರಡು ಪ್ರಯೋಗಗಳು ಬೇರೆ ಅರ್ಥವನ್ನು ಸೂಚಿಸುತ್ತವೆ.

ಜೈನಧರ್ಮದಲ್ಲಿ ಸತಿಪದ್ಧತಿ ನಿಷಿದ್ಧ . ಇದು ಬಾಲಮರಣದ ವರ್ಗೀಕರಣಕ್ಕೆ ಸೇರುತ್ತದೆ. ಅಂದಿನ ಜೈನ ಸಮಾಜ ಮತ್ತು ಜೈನ ಆಚಾರ್ಯರು ಗುಂಡಮಬ್ಬೆಯ ಸಹಗಮನಕ್ಕೆ ಹೇಗೆ ಪ್ರತಿಕ್ರಿಯಿಸಿದರೆಂಬುದಕ್ಕೆ ಆಧಾರಗಳಿಲ್ಲ. ಜಿನಾಗಮ ನಿಪುಣನಾದ ರನ್ನಮಹಾಕವಿ ಈ ಘಟನೆಯನ್ನು ವೈಭವೀಕರಿಸಿ 'ಮಹಾಸತೀ ಸಮುಚಿತಾಚಾರ'ವೆಂದು (೧-೪೭ವ) ಶ್ಲಾಘಿಸಿದ್ದು ಸೋಜಿಗ. ಅಷ್ಟೇ ಅಲ್ಲದೆ ರನ್ನನು ಸಹಗಮನವನ್ನು 'ಶುಭಚರಿತದೆ ಮರಣಂ' (೧-೪೬) ಎಂದು ಪ್ರಶಸ್ತವಾಗಿಸಿ ಪರಿಗಣಿಸಿರುವುದು ಪರಿಭಾವನೀಯ. ತಂಗಿ ಗುಂಡಮಬ್ಬೆಯನ್ನು ಇಲ್ಲಿ ಮಹಾಸತಿಯೆಂದು ಕರೆದಿರುವುದರಿಂದ ರನ್ನನು ಕಾವ್ಯದಲ್ಲೂ ಶಾಸನದಲ್ಲೂ ಅಕ್ಕ

ಅತ್ತಿಮಬ್ಬೆಯನ್ನು 'ಮಹಾಸತೀ ತಿಲಕೆ,' 'ಮಹಾಸತೀ ರತ್ನಂ' (ಸಾಲು ೧೭) ಎಂದಿದ್ದಾನೆ. ''ಅಶೇಷ ಗುಣಗಣ ವಿಭಾಸುರತೆಯಿಂದ ಆಕೆ ಗುಣದಂಕಕಾರ್ತಿ'' ಎನಿಸಿದಳು (ಸಾಲು: ೪೮).

೧೦. ರನ್ನನು ಅಜಿತಪುರಾಣಕಾವ್ಯದಲ್ಲಿ ಹೇಳಲಾಗದೆ ಬಿಟ್ಟ ಸೂಕ್ಷ್ಮ ಸಂಗತಿಗಳನ್ನು ಈ ಶಾಸನದಲ್ಲಿ ಮೊಗುಂ ಆಗಿ, ಆದರೆ ಗಂಭೀರವಾಗಿ ಧ್ವನಿಸಿದ್ದಾನೆಂಬುದು ಸ್ಪಷ್ಟವಾಗುತ್ತದೆ; ಅಜಿತಪುರಾಣ ಕಾವ್ಯದ ಪ್ರಾರಂಭದ ಅಂತ್ಯದ ಆಶ್ವಾಸಗಳಲ್ಲಿ ಹೇಳಿರುವ ಅತ್ತಿಮಬ್ಬೆಯ ಜೀವನ ಚರಿತ್ರೆಯನ್ನು ಇನ್ನೂ ಮೊನಚುಗೊಳಿಸಿ ಮುಂದುವರಿಸಿದ್ದರ ಪ್ರಯತ್ನದ ಫಲ-ಫಲಿತಗಳು ಲಕ್ಕುಂಡಿ ಶಾಸನದಲ್ಲಿವೆ. ಸವತಿ ಮಾತ್ಸರ್ಯದ ಮಾತು ಶಾಸನದಲ್ಲಿ ಬಂದಿರುವುದು ಗುಂಡಮಬ್ಬೆಗೇ ಅನ್ವಯಿಸುತ್ತದೆಂಬುದು ನನ್ನ ಖಚಿತ ಪ್ರತಿಪಾದನೆ. ಏಕೆಂದರೆ ನಾಗದೇವನಿಗೆ ಇದ್ದದ್ದು ಇಬ್ಬರೇ ಹೆಂಡಿರು, ಈ ಅಕ್ಕತಂಗಿಯರು. ಈ ಮಾತಿಗೆ ಮುಖ್ಯ ಆಧಾರ ಅಜಿತಪುರಾಣದಲ್ಲಿರುವ 'ಕಾಂತಾದ್ವಯ ಸಮಾಗಮ' ಎಂಬ ಹೇಳಿಕೆ (೧-೪೫ವ). ಗುಂಡಮಬ್ಬೆಯ ಹೊರತು ಬೇರೆ ಸವತಿಯರು ಇದ್ದುದಕ್ಕೆ ಆಂತರ - ಬಾಹ್ಯ ಪ್ರಾಮಾಣ್ಯಗಳಿಲ್ಲ.

ಗುಂಡಮಬ್ಬೆಗೆ ಮಕ್ಕಳಿಲ್ಲದ ಕೊರಗು. ಅಕ್ಕ ಅತ್ತಿಮಬ್ಬೆಗೆ ಮಕ್ಕಳಿದ್ದಾರೆ. ಸಾಮಾಜಿಕ ಮನ್ನಣೆಯೂ ದೊರೆಯುತ್ತಿದೆ. ಪುತ್ರಭಾಗ್ಯವಂತೆಯೆಂಬ ಕಾರಣಕ್ಕೆ ಕುಟುಂಬದೊಳಗೇ ದೊರೆತ ಮರ್ಯಾದೆ. ಇವುಗಳಿಂದ ತಂಗಿ ಮತ್ತು ಸವತಿ ಗುಂಡಮಬ್ಬೆ ತನ್ನ ಸ್ಥಿಮಿತ ತಪ್ಪಿ ಅಕ್ಕ ಅತ್ತಿಮಬ್ಬೆಯನ್ನು ನದಿಯೊಳಕ್ಕೆ ನೂಕಲು ಪ್ರಯತ್ನಿಸಿದ್ದು ಅಸಂಭಾವ್ಯವೇನಲ್ಲ. ಅಜಿತಪುರಾಣಕಾವ್ಯದಲ್ಲಿ ಇದನ್ನು ಹೇಳದೆ ಶಾಸನದಲ್ಲಿ ಹೇಳಿದ್ದು ಏಕೆ ಎಂಬ ಪ್ರಶ್ನೆಗೂ ಉತ್ತರಗಳನ್ನು ಕಂಡುಕೊಳ್ಳಬೇಕಾಗುತ್ತದೆ. ಅಜಿತ ಪುರಾಣ ರಚನೆಯಾದದ್ದು ಕ್ರಿ.ಶ. ೯೯೩; ಲಕ್ಕುಂಡಿಶಾಸನದ ಕಾಲ ಕ್ರಿ.ಶ. ೧೦೦೭(೮). ಸಹಗಮನದ ನೋವು ಇನ್ನೂ ಆವಿಯಾಗಿರದೆ ಹಸಿಹಸಿಯಾಗಿದ್ದ ಕಾಲದಲ್ಲಿ ಕಾವ್ಯರಚನೆಯಾಗಿತ್ತು; ಅದಾದ ೧೫ ವರ್ಷಗಳ ತರುವಾಯ ಈ ಶಾಸನವು ರಚಿತವಾಗಿದೆ. ಗಾಯಗಳು ಮಾಗಿ ಮಾಯವಾಗಿದ್ದುವು. ಅಜಿತಪುರಾಣಕಾವ್ಯ ವಹಿಸಿದ ಮೌನವನ್ನು ಸ್ಫೋಟಿಸಿ ಸತ್ಯಸಂಗತಿಯನ್ನು, ವ್ಯಕ್ತಿಯ ಹೆಸರು ಹೇಳದೆಯೇ, ಸ್ಪಷ್ಟವಾಗಿ ದಾಖಲಿಸಿ ವಾಸ್ತವಕ್ಕೆ ಹತ್ತಿರ ನಿಲ್ಲುವ ಕೆಲಸವನ್ನು ಲಕ್ಕುಂಡಿ ಶಾಸನ ಮಾಡಿದೆ. ಈ ಶಾಸನ ರನ್ನನ ರಚನೆಯೇ ಎಂದು ಸಾಬೀತುಪಡಿಸಲು ಈ ಅಂಶವೂ ಪೂರಕವಾಗಿ ಒದಗಿಬರುತ್ತದೆ.

೧೧. ಉನ್ನತ ಕುಕ್ಕುಟೇಶ್ವರನನ್ನು ಪೋಗಿ ಕಾಣ್ಬನ್ನೆಗಂ ಅನ್ನಮಂ ತೊರೆದು, ಮತ್ತು ವಿಮಳ ನರ್ಮದಾನದಿಯ ಕುರುಳ ಪಾವೆಯ ಜಿನನಂ ಕಾಣ್ಬೆನೆಗಂ ಕೂಳನೆ ತೊರೆದು - ಎಂಬ ಮಾತುಗಳನ್ನು ಗಮನಿಸಿದಾಗ ಅತ್ತಿಮಬ್ಬೆಯು ಉಪವಾಸಕ್ಕೆ ಪ್ರಾಧಾನ್ಯ ಕೊಟ್ಟುದು ನಿಚ್ಚಳವಾಗುತ್ತದೆ. ಶ್ರಾವಕರ ಈ ಉಪವಾಸ ವ್ರತ ಪಾಲನೆಯು ಜೈನ ಸಮಾಜದಲ್ಲಿ ಇಂದಿಗೂ ವ್ಯಾಪಕವಾಗಿ ರೂಢಿಯಲ್ಲಿದೆ. ಶಾಸನದಲ್ಲಿಯೇ ಅತ್ತಿಮಬ್ಬೆಯ ಉಪವಾಸ ವಿಶೇಷವನ್ನೂ ಚೆನ್ನಾಗಿ ಗುರುತಿಸಲಾಗಿದೆ (ಸಾಲು: ೪೮).

೧೨. ಅತ್ತಿಮಬ್ಬೆಯು ಹುಟ್ಟಿದ, ಮದುವೆಯಾದ, ಮಗ ಹುಟ್ಟಿದ, ಗಂಡ ಸತ್ತ ಮತ್ತು ತಂಗಿ ಗುಂಡಮಬ್ಬೆಯು ಗಂಡನೊಂದಿಗೆ ಚಿತೆಯೇರಿದ; ಚಿಕ್ಕಪ್ಪ ಪುನ್ನಮಯ್ಯ ಮತ್ತು ಅಣ್ಣ ಗುಂಡಮಯ್ಯ - ಇವರು ಚಾಲುಕ್ಯ ಸಾಮ್ರಾಜ್ಯಕ್ಕಾಗಿ ಯುದ್ಧಭೂಮಿಯಲ್ಲಿ ಹೋರಾಡಿ ಪ್ರಾಣಬಿಟ್ಟ ಯಾವ ತೇದಿಯೂ, ಸ್ಥಳವೂ ನಿರ್ದಿಷ್ಟವಾಗಿ ತಿಳಿದುಬಂದಿಲ್ಲ. ಈ ಘಟನೆಗಳ

ಇಸವಿಗಳೂ, ಆಕೆ ಪವಾಡವೆಸಗಿದ ತೇದಿಗಳೂ ನಮೂದಾಗಿಲ್ಲ; ಗಂಡ ಸತ್ತಾಗ ಆಕೆಯ ಅಥವಾ ಮಗನ ವಯಸ್ಸು ಎಷ್ಟಾಗಿತ್ತೆಂಬುದೂ ಗೊತ್ತಿಲ್ಲ.

೧೩. ಲೊಕ್ಕಿಗೊಂಡಿಯ ಶಾಸನದೊಳಗೆ ನಿರೂಪಿತವಾಗಿರುವ ಅತ್ತಿಮಬ್ಬೆಯ ಮಹಿಮೆಯ ಘಟನೆಗಳಲ್ಲಿರುವ ವಾಸ್ತವತೆಯ ಸ್ಪರ್ಶವನ್ನು ಒಪ್ಪಿಕೊಂಡು ಎತ್ತಿದ ಕೆಲವು ಪ್ರಶ್ನೆಗಳಿಗೆ ಒಂದು ಸಮಾಧಾನಕರವಾದ ಉತ್ತರವಂತೂ ಇದೆ. ಲೊಕ್ಕಿಗುಂಡಿಗೆ ಬರುವ ವೇಳೆಗೆ ಆಕೆಯ ಬಾಳಿನ ಉತ್ತರಾರ್ಧ ಪ್ರಾರಂಭವಾಗಿತ್ತು. ಸಾಂಸಾರಿಕ ಸುಖದ ದಿನಗಳು ಮುಗಿದಿದ್ದುವು. ಈ ಶಾಸನಕ್ಕಿಂತ (೧೦೦೭) ೧೪ ವರ್ಷ ಹಿಂದೆ ರಚಿತವಾದ ಅಜಿತ ಪುರಾಣದಲ್ಲಿಯೇ (೯೯೩) ನಾಗದೇವನ ಮರಣ, ಗುಂಡಮಬ್ಬೆಯ ಸಹಗಮನ, ಅಣ್ಣಿಗದೇವ ಬೆಳೆದು ಅಧಿಕಾರಿಯಾಗಿ ಪಡೆವಳತೈಲ - ನನ್ನಿನಾರಾಯಣನಾಗಿರುವುದು - ಇದಿಷ್ಟೂ ದಾಖಲಾಗಿವೆ. ಹೀಗಾಗಿ ಲಕ್ಕುಂಡಿಯ ಶಾಸನ ಅತ್ತಿಮಬ್ಬೆಯ ವೃದ್ಧಾಪ್ಯದಲ್ಲಿ ಲಿಖಿತವಾಗಿದೆ; ಶಾಸನದ ಧಾಟಿಯಲ್ಲಿ ಅದುವರೆಗೆ ಸಂದುಹೋದ ಘಟನೆಗಳೆಲ್ಲದರ ನೆನಪು ಮರುಕಳಿಸುವ ಸ್ಮರಣೆಯ ಭಾವವಿದೆ. ಚಿಕ್ಕ ವಯಸ್ಸಿನಲ್ಲಿ ಎಂಬುದಕ್ಕಿಂತ, ಪ್ರೌಢವಯಸ್ಸಿನಲ್ಲಿ ಗಂಡ ನಾಗದೇವ ನಿಧನನಾದನೆಂಬುದು ಸಮಂಜಸ; ಅನಂತರ ಆಕೆ ಉಳಿದ ಜೀವನಾವಧಿಯಲ್ಲಿ ಧಾರ್ಮಿಕ ಆಚರಣೆಗಳಿಗೆ ಬದ್ಧಳಾದಳು.

೧೪. ಅತ್ತಿಮಬ್ಬೆಯ ತಾಯಿ-ತಂದೆ ವೆಂಗಿಮಂಡಲದ ಕಮ್ಮೆದೇಶದ ಪುಂಗನೂರಿನವರು. ತಂದೆ (ಮಲ್ಲಪ), ಚಿಕ್ಕಪ್ಪ (ಪುನ್ನಮಯ್ಯ), ಇವರು ತೈಲಪನು ಮಹಾಸಾಮಂತನಾಗುವ ವೇಳೆಗೆ (೯೭೩) ಅವನ ದಂಡನಾಯಕರಾಗಿದ್ದರು. ಮುಂದೆ ಅವರಿಗೆ ಸಕಲ ಚಕ್ರವರ್ತಿ ಸಭಾಸಂವಾಸ ಚತುರನೂ, ಚಾಳುಕ್ಯ ಚಕ್ರವರ್ತಿಗೆ ಮಹಾಮಂತ್ರಿಯೂ ಆದ (ಅಜಿತ ಪುರಾಣ ೧-೩೮ವ, ೧-೬೮) ಧಲ್ಲಪನೂ ನಂಟನಾದನು. ಧಲ್ಲಪನ ಮಗನಿಗೆ ಮಲ್ಲಪನ ಮಗಳು ವಧುವಾದಳು. ಅತ್ತಿಮಬ್ಬೆ ಹುಟ್ಟಿದ್ದು ಪುಂಗನೂರಿನಲ್ಲಿ. ಆಂತರ ಬಾಹ್ಯ ಪ್ರಾಮಾಣ್ಯಗಳಿಂದ ಸ್ಥೂಲವಾಗಿ ಅತ್ತಿಮಬ್ಬೆ ೯೫೦ರಲ್ಲಿ ಹುಟ್ಟಿ, ೯೬೫ರಲ್ಲಿ ಮದುವೆಯಾಗಿ, ೯೭೦ರಲ್ಲಿ ಮಗನನ್ನು ಹೆತ್ತಿರಬೇಕೆಂದು ತಿಳಿಯಬಹುದು; ೯೭೮ರ ಸುಮಾರಿಗೆ ಪತಿವಿಯೋಗವಾಗಿದೆ. ವೇಂಗಿ (ವೆಂಗಿ) ವಿಷಯವಾಗಿ ವಿವರಿಸಬೇಕಾದ ಮಾತುಗಳಿವೆ: ವೇಂಗಿಯು ಜೈನಧರ್ಮದ ಕೇಂದ್ರಗಳಲ್ಲೊಂದು. ಜೈನ ಸಂಸ್ಕೃತಿ ಸಾಹಿತ್ಯ ಕಲೆ ಇತಿಹಾಸಗಳ ಪ್ರಸರಣಕ್ಕೆ ವೇಂಗಿಯ ಭಾಗದ ಜೈನರಾಜರು, ರಾಜಪೂಜಿತರು, ರಾಜಪೋಷಿತರು ನೆರವಾಗಿದ್ದಾರೆ. ಪಂಪ, ಪೊನ್ನ, ನಾಗವರ್ಮರು ವೇಂಗಿಯವರು. ಮಲ್ಲಪಯ್ಯ, ಪುನ್ನಮಯ್ಯ, ಗುಂಡಮಯ್ಯ, ಅತ್ತಿಮಬ್ಬೆ ಇದೇ ವೇಂಗಿಯಿಂದ ಬಂದವರು. ಕಮ್ಮನಾಡನ್ನೂ, ಅಲ್ಲಿಂದ ಬಂದವರು ಕಮ್ಮೆ ಕುಲವನ್ನೂ ಕವಿಗಳು ಕೊಂಡಾಡಿಹರು:

ಆ ಧರಣೀಪ್ರಿಯಾ ಕಟಾ
ಕ್ಷಾಧರ ವಿಭ್ರಮ ಭ್ರಮಣಮಗ್ಗಳದಗ್ಗದ ಕಮ್ಮನಾಡು

(ಪೊನ್ನಕವಿ: ಶಾಂತಿಪುರಾಣಂ, ೧-೪೯)

ಅಗ್ಗಳಿಕೆಯ ಕಮ್ಮೆದೇಶವನಲಂಕರಿಸಿರ್ದ್ದುದು ಪುಂಗನೂರ್

(ರನ್ನ : ಅಜಿತಪುರಾಣಂ : ೧-೨೪)

ಜನಕಂ ಕಮ್ಮೆಕುಲ ಪ್ರದೀಪಂ

(ದುರ್ಗಸಿಂಹ: ಪಂಚತಂತ್ರ ೧೦-೭)

ಜನ್ನಂ ಕಮ್ಮೆಗುಲದ ತೊಡವಿನ ರನ್ನಂ

(ಯಶೋಧರ ಚರಿತಂ, ೧-೨೦)

೧೫. ರನ್ನನು ಅತ್ತಿಮಬ್ಬೆಯ ಆಶ್ರಯಕ್ಕೆ ಬಂದದ್ದು ಯಾವ ಇಸವಿಯಲ್ಲಿ ಎಂಬುದು ಖಚಿತವಾಗಿಲ್ಲವಾದರೂ ೯೮೨ರ ವೇಳೆಗೆ ಅತ್ತಿಮಬ್ಬೆಯ ಪರಿಚಯ ವಲಯಕ್ಕೆ ಪ್ರವೇಶಿಸಿರಬಹುದು. ೯೭೩ರಲ್ಲಿ ರಟ್ಟರ ರಾಜ್ಯಶ್ರೀ ಅದೃಶ್ಯಗೊಂಡು ಚಾಳುಕ್ಯಲಕ್ಷ್ಮಿ ಬೆಳಗಿದಳು. ೯೭೪ರಲ್ಲಿ ಗಂಗರ ಮಾರಸಿಂಹನೂ, ೯೮೨ರಲ್ಲಿ ಪಟ್ಟವಿಲ್ಲದ ರಟ್ಟರ ಇಂದ್ರನೂ ಸಲ್ಲೇಖನೆಯಿಂದ ಮುಡಿಪಿದರು. ಚಾವುಂಡರಾಯನು ೯೭೭ರಲ್ಲಿ ಸಕುಟುಂಬ ತಲಕಾಡು ತೊರೆದು ಬೆಳ್ಗೊಳದಲ್ಲಿ ನೆಲೆಸಿದನು, ೯೭೮ರಲ್ಲಿ ಚಾವುಂಡರಾಯ ಪುರಾಣವನ್ನು ಬರೆದನು, ೯೮೧ರಲ್ಲಿ ಗೊಮ್ಮಟ ಮೂರ್ತಿಯನ್ನು ಮಾಡಿಸಿದನು. ರನ್ನನು ಸೌಂದತ್ತಿಯ ರಟ್ಟರ ಕಾರ್ತವೀರ್ಯ (ಕತ್ತ - ಕತ್ತೆಗ) ರಾಜನ ಸೇನೆಯಲ್ಲಿ ೯೬೯ರಲ್ಲಿ ಸೇರಿದ್ದು, ಉಜ್ವಲ ಭವಿಷ್ಯಕ್ಕಾಗಿ ಗಂಗರ ಪಡೆಗೆ ೯೭೧ರಲ್ಲಿ ಸೇರ್ಪಡೆಯಾದನು. ರನ್ನನು ಗಂಗರ ಕಡೆಗೆ ಬಂದು ಸೇರಿದ ಕಾಲ, ಗಂಗರ ಪಾಲಿಗೆ ಅವಸರ್ಪಿಣಿಯಾಗಿತ್ತು. ರನ್ನನಿಗೆ ಆದ ಒಂದೇ ದೊಡ್ಡ ಭಾಗ್ಯವೆಂದರೆ ಚಾವುಂಡರಾಯನ ಸ್ನೇಹಲಾಭ; ಅವರಿಬ್ಬರೂ ಬೆಳಗೊಳದಲ್ಲಿ ಹತ್ತಿರವಾದರು, ಜೈನಾಗಮ ಅಭ್ಯಾಸ ಮಾಡಿದರು. ರನ್ನನ ಸಾಹಸ ಪ್ರವೃತ್ತಿಗೆ ಚಾವುಂಡರಾಯನೂ, ರಾಯನ ಸಾಹಿತ್ಯ-ಧಾರ್ಮಿಕ ಪ್ರವೃತ್ತಿಗೆ ರನ್ನನೂ ಪರಸ್ಪರ ಪ್ರಭಾವಿಗಳಾದರು. ಸುಮಾರು ೯೮೧ರಲ್ಲಿ ಅತ್ತಿಮಬ್ಬೆಯು ಗೊಮ್ಮಟನನ್ನು ಕಾಣಲು ಬೆಳುಗೊಳಕ್ಕೆ ಬಂದಾಗ ರನ್ನ-ರಾಯ ಇಬ್ಬರೂ ಆಕೆಯನ್ನು ಗೌರವದಿಂದ ಬರಮಾಡಿಕೊಂಡರು. ಚಾವುಂಡರಾಯನು ರನ್ನನನ್ನು ಅತ್ತಿಮಬ್ಬೆಯ ಮಡಿಲಿಗೆ ಹಾಕಿದನು. ಅತ್ತಿಮಬ್ಬೆ ರನ್ನನಿಗೆ ಆಶ್ರಯ ಕೊಟ್ಟು ಅಜಿತಪುರಾಣವನ್ನು ಬರೆಸಿದಳು, ರನ್ನನನ್ನು ಚಾಳುಕ್ಯ ಸಾಮ್ರಾಜ್ಯದ ಸೈನ್ಯಕ್ಕೂ-ಆಸ್ಥಾನಕ್ಕೂ ಸೇರಿಸಿದಳು. ರನ್ನನು ಕಲಿಯಾಗಿ - ಕವಿಯಾಗಿ, ಕವಿಚಕ್ರವರ್ತಿಯಾಗಿ ಉದಿತೋದಿತನಾದನು; ಸಾಹಿತ್ಯ ಚರಿತ್ರೆಯ ಅವಿಭಾಜ್ಯ ಅಂಗವಾದನು.

೧೬. ಎಣೆ ಮರುದೇವಿ ಪಾಸಟಿ ಸುಷೇಣೆ ಸಮಂ ಶಿವದೇವಿ ಪಾಟಿ ಲ
ಕ್ಷ್ಮಣೆ ಸದೃಶಂ ಮಹಾವಿಜಯಸೇನೆ ಸಮಾನೆ ಸುಸೀಳೆ ಪೋಲ್ವೆ ರು
ಗ್ಮಿಣಿ ಸರಿ ಸತ್ಯಭಾಮೆ ತೊಣೆ ಮಿಕ್ಕ ಸುಳೋಚನೆ ತತ್ಸ್ವರೂಪೆ ರೋ
ಹಿಣಿ ದೊರೆ ಸಂದರುಂಧತಿ ಪೆರರ್ದೊರೆಯೇ ಗುಣದಂಕಕಾರ್ತಿಯೊಳ್ ॥

ಲಕ್ಕುಂಡಿಯ ಶಾಸನದ (ಸಾಲುಗಳು ೨೮ರಿಂದ ೩೦) ಈ ಪದ್ಯದ ಸ್ವಾರಸ್ಯವನ್ನು ಯಾರೂ ಪರಾಮರ್ಶಿಸಿಲ್ಲ. ಜೈನಪುರಾಣ ಮತ್ತು ಮಹಾಪುರಾಣದ ಹಿನ್ನೆಲೆ ಇದ್ದರೇನೆ ಈ ವೃತ್ತ ಪದ್ಯದ ಅರ್ಥವಂತಿಕೆ ಮತ್ತು ರಹಸ್ಯ ಬಿಚ್ಚಿಕೊಳ್ಳುವುದು. ಎಣೆ, ಪಾಸಟಿ, ಸಮಂ, ಪಾಟಿ, ಸದೃಶಂ, ಸಮಾನೆ, ಪೋಲ್ವೆ, ಸರಿ, ತೊಣೆ, ದೊರೆ ಇವೆಲ್ಲ ಸಮಾನಾರ್ಥಕ ಶಬ್ದಜೋಡಣೆಯಿಂದ ಅತ್ತಿಮಬ್ಬೆಯನ್ನು ಜೈನಪುರಾಣಾಂತರ್ಗತರಾದ ಪ್ರಸಿದ್ಧ ಸ್ತ್ರೀಯರಿಗೆ ಹೋಲಿಸಲಾಗಿದೆ; (ಕರ್ಣಾಟಕ ಶಬ್ದಸಾರ - ಸರಿ ದೊರೆ ಎಣೆತೊಣೆ .... ಈ ೧೮ ಸಮಾನಕೆ ಪೆಸರ್ ೧೫ - ೨೯೧). ಮರುದೇವಿ, ಸುಷೇಣೆ, ಶಿವದೇವಿ, ಲಕ್ಷ್ಮಣೆ, ವಿಜಯಸೇನೆ - ಇವರು ಕ್ರಮವಾಗಿ ಆದಿನಾಥ, ಶಂಭವನಾಥ, ನೇಮಿನಾಥ, ಚಂದ್ರನಾಥ ಮತ್ತು ಅಜಿತನಾಥ

ತೀರ್ಥಂಕರರ ತಾಯಂದಿರ ಹೆಸರು. ರನ್ನನು ಅಜಿತಪುರಾಣದಲ್ಲಿ ಅತ್ತಿಮಬ್ಬೆಯನ್ನು ತೀರ್ಥಂಕರನ ತಾಯಿಗೆ ಹೋಲಿಸಿರುವುದನ್ನು ಸ್ಮರಿಸಬೇಕು (೧-೫೬ ಮತ್ತು ೭೩). ರುಕ್ಮಿಣಿ-ಸತ್ಯಭಾಮೆಯರು ಕೃಷ್ಣನ ಅಷ್ಟ ಮಹಿಷಿಯರಲ್ಲಿ ಬರುತ್ತಾರೆ. ರೋಹಿಣಿಯು ವಸುದೇವನ ಪತ್ನಿ, ಸುಳೋಚನೆಯು ವಾರಾಣಸಿಯ ಅಕಂಪನ-ಪ್ರಭಾದೇವಿಯರ ಮಗಳು; ಈಕೆ ಭರತಚಕ್ರವರ್ತಿಯ ಸೇನಾಪತಿ ಜಯಕುಮಾರ (ಮೇಘೇಶ್ವರ)ನ ಪತ್ನಿ. ಸುಳೋಚನೆಯು ತನ್ನ ಪತಿ ಜಯಕುಮಾರನು ಯುದ್ಧ ಭೂಮಿಗೆ ಹೊರಟಾಗ, ಆ ಯುದ್ಧ ಮುಗಿಯುವ ವರೆಗೂ ಆಕೆ ಆಹಾರ ಪರಿತ್ಯಾಗ ಮಾಡಿ, ಜಿನೇಂದ್ರನಿಗೆ ಅಭಿಮುಖಿಯಾಗಿ ನಿಂತು ಧ್ಯಾನನಿರತಳಾದಳು, ಪಂಚನಮಸ್ಕಾರದೊಂದಿಗೆ ಗಂಗಾನದಿಯನ್ನು ಹೊಕ್ಕಳು. ಪತಿವಿಯೋಗದಿಂದ ದುಃಖಿತಳಾದ ಸುಳೋಚನೆಯನ್ನು ಭರತಚಕ್ರಿಯ ಮಡದಿ ಸುಭದ್ರಾದೇವಿ ಸಮಾಧಾನಿಸಿದಳು; ಕಡೆಗೆ ಈಕೆ ಆರ್ಯಿಕೆ ಬ್ರಾಹ್ಮಿಯಲ್ಲಿ ದೀಕ್ಷೆ ಹೊಂದಿದಳು.

ಹೀಗೆ ಜೈನಪುರಾಣ ಪ್ರಪಂಚದ ಪ್ರಸಿದ್ಧ ಮಹಿಳೆಯರೊಂದಿಗೆ ಹೋಲಿಸುವಾಗಲೂ ಅದರ ಹಿಂದೆ ಔಚಿತ್ಯಸ್ಫುರಣೆಯಿದೆ. ರುಕ್ಮಿಣಿ-ಸತ್ಯಭಾಮೆಯರ ಹೋಲಿಕೆಯಲ್ಲಿ ಅಕ್ಕ-ತಂಗಿಯರು ನಾಗದೇವನ ಪತ್ನಿಯರಾಗಿದ್ದ ಧ್ವನಿಯಿದೆ. ಸುಳೋಚನೆಯಂತೆಯೇ ಅತ್ತಿಮಬ್ಬೆ, ಯುದ್ಧ ಭೂಮಿಯಲ್ಲಿ ಗಂಡನ ವಿಯೋಗವನ್ನು ಅನುಭವಿಸಿ ಧಾರ್ಮಿಕಕ್ಕೆ ತನ್ನನ್ನು ತೆತ್ತುಕೊಂಡಳು. ಸುಳೋಚನೆಯ ಪತಿಯಂತೆ ಅತ್ತಿಮಬ್ಬೆಯ ಯಜಮಾನನೂ ಚಕ್ರವರ್ತಿಯ ಸೈನ್ಯದಲ್ಲಿ ಹೋರಾಡಿ ಹತನಾದನು. ಅತ್ತಿಮಬ್ಬೆಯನ್ನು ಚಕ್ರವರ್ತಿಯೂ ಆತನ ಪತ್ನಿಯೂ ಮನೆಗೆ ಬಂದು ಸಮಾಧಾನಿಸಿದರು. ಹೀಗೆ ಅತ್ತಿಮಬ್ಬೆಯ ಇಡೀ ನಿಡುಬಾಳಿನ ಸಿದ್ಧಿ ಸಾಧನೆಗಳ ಎತ್ತರ ಬಿತ್ತರ ಸಮಸ್ತವನ್ನೂ ಈ ಒಂದೇ ಒಂದು ಪದ್ಯ ಅದ್ಭುತವಾಗಿ ಹಿಡಿದಿಟ್ಟಿದೆ; ಇದಕ್ಕೆ ಎಡ-ಬಲದಲ್ಲಿ ಪೂರಕವಾಗಿ ನಿಲ್ಲಬಲ್ಲ ಸಂವಾದಿ ಪದ್ಯಗಳು ಅಜಿತಪುರಾಣದಲ್ಲಿ ಇವೆ.

೧೭. ಶಾಸನವು ಅತ್ತಿಮಬ್ಬೆಯನ್ನು ಚೇಳಿನಿ ಚರಿತೆಯಂತೆ ಇರುವಾಕೆ ಎಂದಿರುವುದು ಐತಿಹಾಸಿಕ ಹೋಲಿಕೆ (ಸಾಲು. ೪೨). ಮೌರ್ಯರ ಮತ್ತು ರಾಜಗೃಹದ ಶ್ರೇಣಿಕ ಬಿಂಬಸಾರನ ಹೆಂಡತಿ ಚೇಲನಾದೇವಿಯು ಚೇಟಕ ರಾಜನ ಮಗಳು. ಆಕೆಯು ಜೈನಧರ್ಮ ಪ್ರಸಾರಕ್ಕೆ ಶ್ರಮಿಸಿದ ರಾಜಕನ್ಯೆ; ಕ್ರಿ.ಪೂ. ಆರನೆಯ ಶತಮಾನದ ಪ್ರಸಿದ್ಧ ಶ್ರಾವಕಿ (ಡಾ. ಕಮಲಾ ಹಂಪನಾ: ಜೈನಧರ್ಮ ಪ್ರಚಾರಕ ಶ್ರೇಣಿಕ-ಚೇಟಕ, 'ಅನೇಕಾಂತವಾದ', ೧೯೮೨, ಪು. ೧೩-೧೮). ಪ್ರೊ. ಜಿ. ಬ್ರಹ್ಮಪ್ಪನವರು ಅತ್ತಿಮಬ್ಬೆಯನ್ನು ಮತ್ತು ಚೇಲನಾದೇವಿ ಚೇಳಿನಿಯನ್ನು ಕುರಿತು ಐತಿಹಾಸಿಕ ಕಾದಂಬರಿಗಳನ್ನು ಬರೆದಿದ್ದಾರೆ.

೧೮. ಕ್ರಿ.ಶ. ೧೦-೧೧ನೆಯ ಶತಮಾನಗಳಲ್ಲಿ ಇದ್ದ ಅತ್ತಿಮಬ್ಬೆಯು ಕೈಗೊಂಡ ಪ್ರಯಾಣಗಳನ್ನು ನೆನೆದರೆ ಇಂದಿಗೂ ಅಚ್ಚರಿಯಾಗುತ್ತದೆ. ಪುಂಗನೂರು, ಶ್ರವಣಬೆಳುಗೊಳ, ನರ್ಮದಾನದಿ, ಗೋದಾವರಿ ನದಿ, ಕೊಪ್ಪಳ, ಮಳಖೇಡ, ಪೊಟ್ಟಲಕೆರೆ, ಲಕ್ಕುಂಡಿ - ಮುಂತಾದ ಸ್ಥಳ ಮತ್ತು ಪ್ರದೇಶ ಪರಿಸರಗಳು ಆಕೆಯ ಸಂಚಾರ ಮತ್ತು ಸಂಪರ್ಕವನ್ನು ಪಡೆದದ್ದು ತಿಳಿದು ಬರುತ್ತದೆ. ಅವರ ಮನೆತನದ ಸಂಪರ್ಕ ಕಾವೇರಿಯಿಂದ ಗೋದಾವರಿಯವರೆಗೂ ಚಾಚಿತ್ತು. ತೈಲಪನು ಮೊದಲು ತರ್ದವಾಡಿಯಿಂದ ಆಳುತ್ತಿದ್ದವನು ಚಕ್ರವರ್ತಿಯಾದ ಮೇಲೆ ಮಳಖೇಡವನ್ನೂ, ಪೊಟ್ಟಲಕೆರೆಯನ್ನೂ ತನ್ನ ರಾಜಧಾನಿಯಾಗಿ ಮಾಡಿಕೊಂಡನು. ಅತ್ತಿಮಬ್ಬೆ ಬದುಕಿದ್ದ ಅವಧಿಯಲ್ಲಿ ಚಾಲುಕ್ಯರು ಇನ್ನೂ ಕಲ್ಯಾಣಕ್ಕೆ ತಮ್ಮ

ನೆಲೆವೀಡನ್ನು ವರ್ಗಾಯಿಸಿರಲಿಲ್ಲ.

೧೯. ಅತ್ತಿಮಬ್ಬೆಯು ಕಟಕ ಪವಿತ್ರೆಯಾಗಿದ್ದಳೆಂದು ಶಾಸನದಲ್ಲಿದೆ. 'ಕಟಕ' ಶಬ್ದಕ್ಕೆ 'ರಾಜಧಾನಿ, ಮುಖ್ಯ ಪಟ್ಟಣ' ಎಂಬರ್ಥವೂ ಇದೆ. ಆದರೆ ಇಲ್ಲಿ ಪ್ರತೀತಾರ್ಥ 'ರಾಜಧಾನಿಯ ಪವಿತ್ರ ಸ್ತ್ರೀ' ಎಂದಲ್ಲ. ಏಕೆಂದರೆ ''ಸಮಸ್ತ ಕಟಕ ಭಯಂಕರ ನದೀ ಸ್ರೋತೋವೇಗ ವಿಳಸನದಿಂ ಕಟಕ ಪವಿತ್ರೆಯುಂ'' ಎಂದು ಸ್ಪಷ್ಟ ವಿವರಣೆಯಿದೆ. ಆದುದರಿಂದ ಕಟಕ ಪವಿತ್ರೆಯೆಂದರೆ ಚಾಲುಕ್ಯರ ಸೈನ್ಯದಲ್ಲಿ ಆಕೆ ಪೂಜ್ಯಳಾಗಿದ್ದಳೆಂದೇ ಅರ್ಥ. ಅವಳ ತಂದೆ, ಚಿಕ್ಕಪ್ಪ, ಅಣ್ಣ , ಗಂಡ, ಮಗ, ಎಲ್ಲಾ ಕಟಕದಲ್ಲೇ ಇದ್ದವರು, ಇದು ಕಟಕ ಪರಿಸರದಲ್ಲಿ ಒಂದು ಆತ್ಮೀಯತೆಗೆ ದಾರಿಯಾಯಿತು. ಕಟಕ ಪವಿತ್ರೆ ಎಂಬುದು ಅತ್ತಿಮಬ್ಬೆಗೆ ಸಂದ ರಾಜಪ್ರಶಸ್ತಿ. ಏಕೆಂದರೆ ಅನ್ಯತ್ರ ಶಾಸನಗಳಲ್ಲಿ 'ಕಟಕಗೋವ' ಎಂಬೊಂದು ಬಿರುದೂ ಬಳಕೆಯಾಗಿದೆ (IA Vol. V, 16 A.D. 1019: EI.XVI. 357 C. II: Cent. EC VII, Shimoga 4, 1177 A.D.). ಇದರಿಂದ ಅತ್ತಿಮಬ್ಬೆಗೆ ಇದ್ದ ರಾಜಕೀಯ ಪ್ರಭಾವವು ಸ್ಪಷ್ಟವಾಗುತ್ತದೆ. ರನ್ನಕವಿಯೂ ''ಚಕ್ರವರ್ತಿ ಕಟಕಕ್ಕಾರಾಧ್ಯೆ''ಯೆಂದಿದ್ದಾನೆ (೧೨-೮).

೨೦. ಅತ್ತಿಮಬ್ಬೆಯು ಕವಿವರ ಕಾಮಧೇನುವಾಗಿದ್ದಳು. ಇದು ಆಕೆಯ ಮನೆತನದಲ್ಲೇ ಮೊದಲಿಂದ ಇದ್ದ ಸಾಹಿತ್ಯ ಪರಿಸರದ ಮುಂದುವರಿಕೆ. ಅವರ ಮನೆ 'ಪಂಡಿತ ಮಂಡಳಿಗೆ ತವರ್ಮನೆ.' (ರನ್ನ , ಅಜಿಪು. ೧-೨೮) ಆಕೆಯ ತಂದೆ ಚಿಕ್ಕಪ್ಪಂದಿರು ಪೊನ್ನಕವಿಯಿಂದ ಶಾಂತಿಪುರಾಣವನ್ನು ಬರೆಸಿದ್ದರು; ಈಕೆ ಅದರ ಸಾವಿರ ಪ್ರತಿಗಳನ್ನು ಬರೆಸಿ ಹಂಚಿದಳು. ಈಕೆ ರನ್ನನಿಂದ ಅಜಿತಪುರಾಣವನ್ನು ಬರೆಸಿದಳು, ಇದರ ಸಾವಿರಾರು ಪ್ರತಿಗಳನ್ನು ಓಲೆಗಳಲ್ಲಿ ಬರೆಸಿ ದಾನ ಮಾಡಿರಬೇಕು. ಆಹಾರ, ಅಭಯ, ಭೈಷಜ್ಯ (ಔಷಧಿ), ಶಾಸ್ತ್ರ - ಈ ನಾಲ್ಕೂ ಬಗೆಯ (ಚತುರ್ವಿಧ) ದಾನಗಳಲ್ಲಿ ಅತ್ತಿಮಬ್ಬೆಗೇ ಅಗ್ರ ತಾಂಬೂಲ. (ಸಾಲು : ೪೭-೪೮).

೨೧. ಲಕ್ಕುಂಡಿಯ ಶಾಸನದಿಂದ ತಿಳಿದುಬರುವ ಇನ್ನೊಂದು ಚಾರಿತ್ರಿಕ ಅಂಶದತ್ತ ಇದುವರೆಗಿನ ವಿದ್ವಾಂಸರು ಗಮನ ಹರಿಸಿಲ್ಲ. ಅತ್ತಿಮಬ್ಬೆಯ ಗುರುಗಳು ಸೂರಸ್ತಗಣದ ಕಾಣೂರ್ಗಣ ಕೌರೂರು ಗಚ್ಛದ ಅರ್ಹನಂದಿ ಪಂಡಿತದೇವ ಎಂಬುವರು: ''ಕಾನೂರು ಕಾಣೂರು ಕಂಡೂರು ಕಾಡೂರು ಕಾಣೂರೂ ಇವೆಲ್ಲ ಒಂದೇ. ಇದರ ಸಂಸ್ಕೃತ ರೂಪ ಕಾಲೋಗ್ರಗಣ : ಇದು ಯಾಪನೀಯ ಶಾಖೆಗೆ ಸೇರಿದ್ದ ಒಂದು ಪ್ರಬಲ ಗಣವಾಗಿತ್ತು'' (ಹಂಪ. ನಾಗರಾಜಯ್ಯ ; 'ಹರತಿಸಿರಿ', ಸಂ ಲಕ್ಷ್ಮಣ ತೆಲಗಾವಿ, ೧೯೭೮, ಪುಟ ೩೪೯). ಅತ್ತಿಮಬ್ಬೆಯು ಯಾಪನೀಯ ಗುರುಗಳ ಶಿಷ್ಯಳಾಗಿದ್ದಳು. ಆಕೆಗೆ ಬಾಲ್ಯದಲ್ಲಿ ಜಿನಚಂದ್ರಾಚಾರ್ಯರು ಗುರುಗಳಾಗಿದ್ದರು, ಇವರ ವಿಚಾರವಾಗಿ ಪೊನ್ನನ ಶಾಂತಿಪುರಾಣದಲ್ಲಿ ೨೦ ಪದ್ಯಗಳಲ್ಲಿ ಸ್ತುತಿಮಾಲಿಕೆಯಿದೆ (ಶಾಂತಿ ಪುರಾಣಂ, ಸಂ. ಹಂಪ. ನಾಗರಾಜಯ್ಯ ೧೯೮೨, ಪ್ರಸ್ತಾವನೆ). ಅತ್ತಿಮಬ್ಬೆಗೆ ಯೌವನದಲ್ಲಿ ಅಜಿತಸೇನಾಚಾರ್ಯರೂ, ಮುಪ್ಪಿನಲ್ಲಿ ಅರ್ಹನಂದಿ ಆಚಾರ್ಯರೂ ಅನುಗ್ರಹಿಸಿದ್ದರು (ಸಾಲು : ೫೫). ಹೀಗೆ ಆಕೆಗೆ ಮೂವರು ಮಹಾನ್ ಜೈನಾಚಾರ್ಯತ್ರಯರ ಮಾರ್ಗದರ್ಶನ ದೊರೆಯಿತು. (SII. XX. 18.980 Saudatti, EI. IX. pp. 47-56. 970 Kaluchumburru; SII. XX. 50.? Saudatti: SII. XI-i 113. 1074, Hunagunda) - ಈ ಶಾಸನಗಳಲ್ಲಿ ಅರ್ಹನಂದಿ ಮುನೀಂದ್ರರ ಪ್ರಸ್ತಾಪ ಮತ್ತು ಗುರುಶಿಷ್ಯಪರಂಪರೆ ವಿವರಗಳಿವೆ.

ಅತ್ತಿಮಬ್ಬೆ ಶ್ರವಣಬೆಳ್ಗೊಳಕ್ಕೆ ೯೮೧ರ ಸುಮಾರಿನಲ್ಲಿ ಗೊಮ್ಮಟದರ್ಶನ ನಿಮಿತ್ತವಾಗಿ ಹೋದಾಗ ಅಲ್ಲಿ ಕಾಣೂರ್ಗಣತಿಲಕರಾದ ಮತ್ತು ಚಾವುಂಡರಾಯನ ಗುರುದ್ವಯರಲ್ಲಿ ಒಬ್ಬರಾದ ನೇಮಿಚಂದ್ರಾಚಾರ್ಯರ ಕೃಪೆಗೂ ಪಾತ್ರಳಾದಳು. ಫಲವಾಗಿ ಮುಂದೆ ಆಕೆಯ ಮಗ ಅಣ್ಣಿಗದೇವ ಪಡೆವಳ ತೈಲನಿಗೆ ನೇಮಿಚಂದ್ರಾಚಾರ್ಯರ ಶಿಷ್ಯನಾದ ಅಯ್ಯಣಯ್ಯನು ಗುರುವಾದನು (ರನ್ನ, ಅಜಿತಪುರಾಣ, ೧೨-೨೧). ಈ ರೀತಿಯಿಂದ ಕಾಣೂರ್ಗಣ ಪರಂಪರೆಯ ಗುರುಗಳು ಆಕೆಯ ಮನೆತನದ ಕುಲಗುರುಗಳಾಗಿದ್ದರು. ಅತ್ತಿಮಬ್ಬೆಯ ತಂದೆ -ಚಿಕ್ಕಪ್ಪಂದಿರಿಗೆ ಗುರುಗಳಾದ ಜಿನಚಂದ್ರರೂ ಕಾಣೂರ್ಗಣದವರು. ಪಶ್ಚಿಮ ಚಾಳುಕ್ಯರ ಆಳ್ವಿಕೆಯಲ್ಲಿ ಯಾಪನೀಯ ಸಂಘ ಕಾನೂರ್ಗಣ, ಸೂರಸ್ಥಗಣ, ತಿಂತ್ರಿಣಿಗಚ್ಛ, ಚಿತ್ರಕೂಟಾನ್ವಯ ಪ್ರಬಲವಾಗಿದ್ದುದಕ್ಕೆ ಅನೇಕ ಶಾಸನಗಳ ಅಧಾರವೂ, ಕಂಡುಬರುತ್ತದೆ (SII. XX. 18. A.D. 980; ಅದೇ 224, 1295; SII. IX-i. 288; SII. XV. 568. 12ಶ: EI. XVI 9. A.D. 1053; SII. XI-i. 113. 1074; SII. XVIII. 71. A.D. 1066 ಇತ್ಯಾದಿ ಇನ್ನೂ ಹತ್ತಾರು ಶಾಸನಗಳಿವೆ).

೨೨. ಲಕ್ಕುಂಡಿಯ ಶಾಸನದಲ್ಲಿ ಅತ್ತಿಮಬ್ಬೆಯನ್ನು ಆರು ಕಡೆ 'ದಾನಚಿಂತಾಮಣಿ' ಎಂದು ಪರಿಚಯಿಸಿದೆ, ಒಂದೆರಡು ಕಡೆ 'ಅಭಿಲಷಿತಾರ್ಥದಾನವಿನೋದೆ' ಎಂದೂ ಕರೆಯಲಾಗಿದೆ. ಪುರುಷಪ್ರಧಾನ ಕುಟುಂಬ ವ್ಯವಸ್ಥೆಯಲ್ಲೂ ಸಹ ಒಬ್ಬ ಮಹಿಳೆ ಪಡೆದ ಈ ಅದ್ಭುತ ಪ್ರಮಾಣದ ಪ್ರಾಧಾನ್ಯ ಶ್ಲಾಘನೀಯ. ದಾನಕ್ಕೆ ಜೈನಧರ್ಮದಲ್ಲಿ ವಿಶಿಷ್ಟ ಸ್ಥಾನವಿದೆ. ಗಂಡಸೇ ಸಂಸಾರದ ನೇತಾರನಾಗಿರುವುದರಿಂದ ದಾನಗಳನ್ನೂ ಪುರುಷನೇ ಪ್ರದಾನ ಮಾಡಿದ್ದು ವಿಪುಲವಾಗಿ ಕಂಡುಬರುತ್ತದೆ. ಆದರೆ ಸಾವಿರಾರು ವರ್ಷಗಳ ಚರಿತ್ರೆಯಲ್ಲಿ ಯುವರಾಜ ರಾಣಿ ಪ್ರಧಾನಿ ಶ್ರೀಮಂತನೂ ದಾನ ಮಾಡಿರದಷ್ಟು ಬೃಹತ್ ಪ್ರಮಾಣದಲ್ಲಿ ದಾನವಿತ್ತವಳು ಅತ್ತಿಮಬ್ಬೆ. ಅದರಿಂದ ಬೇರೆಯಾರಿಗೂ ವ್ಯಾಪಕವಾಗಿ ಸಲ್ಲದಿದ್ದ 'ದಾನಚಿಂತಾಮಣಿ' ಪ್ರಶಸ್ತಿ ಅತ್ತಿಮಬ್ಬೆಗೆ ಸಂದಿತು. ಆಕೆ ೧೫೦೦ ಜಿನಗೃಹಗಳನ್ನು ಕಟ್ಟಿಸಿದ್ದು ಊಹೆಗೂ ನಿಲುಕದ ಬೃಹತ್ ಸಾಧನೆ:

ಆ ಸತಿ ಮುಮ್ಮಾಡಿಸಿದಾ
ಸಾಸಿರದಯ್ನೂರು ಬಸದಿಗಿದು ಕಳಶಮನ
ಲ್ಪಾಸುರಮಾಯ್ತು ಜಿನೇಂದ್ರಾ
ವಾಸಂ ತೊಳಗುವ ಸುವರ್ಣ್ನ ಕಳಶೋನ್ನತಿಯಿಂ ॥

ಇದಲ್ಲದೆ ಒಂದು ಸಾವಿರದ ಐನೂರು ಜಿನಬಿಂಬಗಳನ್ನೂ, ಮಂದಾಸನ, ಜಯಘಂಟೆ, ಶಾಂತಿಪುರಾಣದ ಸಾವಿರ ಓಲೆ ಪ್ರತಿ, ಅಜಿತಪುರಾಣದ ಪ್ರತಿ ಎಲ್ಲವೂ ಆ ದಾನವಿನೋದೆಯ ದಾನ ಪರಂಪರೆಯನ್ನು ಸಾರುತ್ತವೆ. ಅತ್ತಿಮಬ್ಬೆ ತಮ್ಮ ಕುಟುಂಬದಲ್ಲಿಯೇ ಇದ್ದ ಶಾಂತಿಪುರಾಣದ ಸಂರಕ್ಷಿತ ಹಸ್ತಪ್ರತಿಯ ಆಧಾರದಿಂದ ನಿಯುಕ್ತ ಲಿಪಿಕಾರರ ಮೂಲಕ ಸಾವಿರ ಪ್ರತಿ ಮಾಡಿಸಿದ್ದು ಅಸಾಮಾನ್ಯವಾದುದು. ಹವ್ಯಾಸಿ ಲಿಪಿಕಾರರೊಂದಿಗೆ ವೃತ್ತಿಪರ ಲಿಪಿಕಾರರನ್ನೂ ಈ ಕೆಲಸಕ್ಕೆ ಆಕೆ ನಿಯೋಜಿಸಿದ್ದರಿಂದ ಹಸ್ತ ಪ್ರತಿಶಾಸ್ತ್ರ ಸಂವರ್ಧನೆಯೂ ಸಾಧ್ಯವಾಯಿತು. ೧೫೦೧ ಗುಡಿಗಳನ್ನು ಕಟ್ಟಬೇಕಾದರೆ, ೧೫೦೦ ಜಿನಬಿಂಬಗಳನ್ನು ತಯಾರಿಸಬೇಕಾದರೆ ಆ ಬೃಹತ್ ಕಾರ್ಯದಲ್ಲಿ ತೊಡಗಿದ್ದ ಶಿಲ್ಪಿ ಬಡಗಿ ಕಮ್ಮಾರರ ತಂಡಗಳು

ಎಷ್ಟಿದ್ದಿರಬೇಕೆಂಬುದನ್ನು ಕಲ್ಪಿಸಿಯೇ ಅನುಭವಿಸಬೇಕು. ವಾಸ್ತುಶಾಸ್ತ್ರ ಮತ್ತು ಶಿಲ್ಪಶಾಸ್ತ್ರದ ಕಾಯಕಲ್ಪಕ್ಕೂ ನೆರವಾಯಿತು. ಲೆಕ್ಕವೇ ಇಲ್ಲದಂತೆ ಹಣದ ಹೊಳೆ ಹರಿಸಿದ್ದು ಧರ್ಮದ ಪ್ರಣಾಲಿಯಲ್ಲಿ ಎಂಬುದನ್ನು ವಿಶೇಷವಾಗಿ ಅನುಲಕ್ಷಿಸಬೇಕು. ಆಸನ್ನಭವ್ಯೆಯಾದ ಅತ್ತಿಮಬ್ಬೆಯ ಧರ್ಮಪ್ರಭಾವನೆ ಅನನ್ಯವೆನಿಸಿದ್ದು ಈ ಕಾರಣಕ್ಕಾಗಿ. ಈ ಜಿನಧರ್ಮ ಪ್ರಭಾವನೆಯಿಂದ ಆಕೆ ಆ ಕಾಲದ ಎಲ್ಲ ಉನ್ನತೋನ್ನತರಿಗಿಂತ ಎತ್ತರದಲ್ಲಿದ್ದಳೆಂದು ರನ್ನಕವಿ ಚಾರಿತ್ರಿಕ ಮಹತ್ವದ ಈ ವೃತ್ತ ಪದ್ಯವನ್ನು ಕೆತ್ತಿದ್ದಾನೆ:

ಪಿರಿಯಂ ಬೂತುಗನಾತನಿಂ ಮರುಳನಾತಂಗಂ ನೊಳಂಬಾಂತಕಂ
ಪಿರಿಯಂ ನೆಟ್ಟನೆ ದಾನಧರ್ಮದೆಡೆಯೊಳ್ ಚಾವುಂಡರಾಯಂ ಕರಂ
ಪಿರಿಯಂ ಶಂಕರಗಂಡನಲ್ತೆ ಪಿರಿಯಂ ತದ್ವಾರಮಂ ಪೊತ್ತು ನಿ
ತ್ತರಿಸುತ್ತಿರ್ಪುದರಿಂದೆ ನೀನೆ ಪಿರಿಯೈ ಶ್ರೀದಾನಚಿಂತಾಮಣೀ ॥ (೧೨-೯)

ಇಲ್ಲಿರುವವರೆಲ್ಲ ಒಂದೇ ಶತಮಾನದಲ್ಲಿ, ೧೦ನೆಯ ಶತಮಾನದಲ್ಲಿ, ಆಗಿಹೋದ ದಾನವೀರರು - ಧರ್ಮವೀರರು, ಜೈನ ಸಮಾಜದ ಆಧಾರಸ್ತಂಭಗಳು. ಇಮ್ಮಡಿ ಬೂತುಗ, ಪುಣಸೆಯ ಮರುಳದೇವ (ಮಮಳ), ನೊಳಂಬಾಂತಕ ಮಾರಸಿಂಹ, ಶಂಕರಗಂಡ, ಚಾವುಂಡರಾಯ - ಇವರುಗಳು ಜೈನಧರ್ಮದ ಪ್ರಚಾರ - ಪ್ರಸಾರ ಮತ್ತು ಪ್ರಭಾವನೆ ಮಾಡಿದ ಅತಿರಥ ಮಹಾರಥರು; ಧರ್ಮಗಳನ್ನಿತ್ತು, ಬಸದಿಗಳನ್ನು ಕಟ್ಟಿಸಿ, ಗಂಗ ಮತ್ತು ರಾಷ್ಟ್ರಕೂಟ ರಾಜ್ಯಗಳಲ್ಲಿ ವಿಖ್ಯಾತನಾಮರು. ಆದರೆ ಅತ್ತಿಮಬ್ಬೆ ಇವರೆಲ್ಲರಿಗೂ ಮಿಗಿಲೆನಿಸಿದಳು. ಅಂದಮೇಲೆ ದಾನಚಿಂತಾಮಣಿ ಅತ್ತಿಮಬ್ಬೆ ತನ್ನವರೆಗಿನ ಚಾರಿತ್ರಿಕ ಮಹಾಪುರುಷರ ಮಹಾಸಾಧನೆಗಳನ್ನು ಮೀರಿನಿಂತ ಉನ್ನತೋನ್ನತ ವ್ಯಕ್ತಿತ್ವವನ್ನು ಹೇಗೆ ಗಳಿಸಿದಳೆಂಬುದನ್ನು ರನ್ನ ಮಹಾಕವಿ ತನ್ನ ಕಾವ್ಯದಂತದಲ್ಲಿ ಬಿಡಿಸಿ ಮೂಡಿಸಿದ್ದಾನೆ. ಇಡೀ ಕನ್ನಡ ಸಾಹಿತ್ಯದಲ್ಲಿ ಹೀಗೆ ಒಬ್ಬ ವ್ಯಕ್ತಿಯ ಜೀವನ ಚರಿತ್ರೆ ಇಷ್ಟು ವಿಸ್ತಾರ ವೈಭವ ತನ್ಮಯತೆಯಿಂದ ಚಿತ್ರಿತವಾಗಿರುವ ಇನ್ನೊಂದು ನಿದರ್ಶನವಿಲ್ಲ ಎಂಬುದು ಅತಿಶಯೋಕ್ತಿಯಲ್ಲ. ಕನ್ನಡ ಕಾವ್ಯಪ್ರಪಂಚದ ವ್ಯಕ್ತಿ ಚಿತ್ರಣದಲ್ಲಿ ಅತ್ತಿಮಬ್ಬೆಯ ಆತ್ಮೀಯ ಚಿತ್ರಣಕ್ಕೆ ಸರಿಸಾಟಿ ಕಾಣೆವು ಎಂದಾಗ ಅಂಥ ಹೇಳಿಕೆಯ ಹಿಂದೆ ಇರುವ ವಾಸ್ತವ ಮಹತ್ವವನ್ನು ಅರಿಯಬೇಕು. ರನ್ನನ ಇದೊಂದೇ ವೃತ್ತ ಪದ್ಯವನ್ನು ವಿಶ್ಲೇಷಿಸಿ, ಪೂರಕ ಚಾರಿತ್ರಿಕ ಸಾಮಗ್ರಿಗಳನ್ನು ಶಾಸನಾಧಾರಗಳಿಂದ ಸಂಚಯಿಸಿದರೆ ಅದೇ ಒಂದು ಪ್ರೌಢಪ್ರಬಂಧ (ಎಂ. ಫಿಲ್. ಡಿಸರ್ಟೇಷನ್) ಆಗಬಲ್ಲುದು.

೨೩. ಲಕ್ಕುಂಡಿಯ ಶಾಸನದಲ್ಲಿ ಅತ್ತಿಮಬ್ಬೆಯ ಬಂಧು ಬಾಂಧವ ಬಳಗವನ್ನು, ಕುಟುಂಬದ ಪ್ರಧಾನರನ್ನು ಒಂದು ವೃತ್ತ ಪದ್ಯದಲ್ಲಿ, ಛಾಯಾಚಿತ್ರ ತೆಗೆದಂತೆ, ಹಿಡಿದಿಡಲಾಗಿದೆ:

ಜಿನಪದ ಪಂಕಜಭ್ರಮರನೆಂಬ ನೆಗರ್ತ್ತೆಯನಾಳ್ದ ಮಲ್ಲಪ
ಯ್ಯನ ನೆಗೞ್ದಪ್ಪಕಬ್ಬೆಯ ಮಗಳ್ ಸಚಿವೋತ್ತಮನಪ್ಪ ಧಲ್ಲಪ
ಯನ ಸೊಸೆ ನಾಗದೇವನ ಕುಳಾಂಗನೆ ತೈಲನ ತಾಯ್ ಜಸಕ್ಕೆ ಭಾ
ಜನಮೆನಿಪತ್ತಿಮಬ್ಬೆ ಜಿನಶಾಸನಮಂ ಬೆಳಗುತಮಿರ್ಪ್ಪವಳ್ ॥ (ಸಾಲು: ೨೬-೨೮)

ಅತ್ತಿಮಬ್ಬೆಯ ಮಾವನಾದ, ವಾಜಿಕುಲಕ್ಕೆ ಸೇರಿದ, ಧಲ್ಲಪಯ್ಯನು ತೈಲಪಚಕ್ರಿಯ ಭುಜಾದಂಡನೆನಿಸಿದವನು. ಧಲ್ಲನಿಗೂ - ಆಹವಮಲ್ಲ (ತೈಲಪ)ನಿಗೂ ಸಿಂಹಾಸನವೊಂದು ಭೇದವೇ ಹೊರತು ಉಳಿದುದೆಲ್ಲ ಸಮಾನವೆಂಬಂಥ ಸಖ್ಯ. ಈ ನೆಗಳ್ದ ಧಲ್ಲನನ್ನು ಶಾಸನದಲ್ಲಿ 'ಮಣ್ಡಳಸಿದ್ಧಿ','ವಿವೇಕ ಬೃಹಸ್ಪತಿ' ಎಂಬ ಎರಡು ವಿಶೇಷಣಗಳಿಂದ ನಿರ್ದೇಶಿಸಲಾಗಿದೆ; ಆ ಜೈನಬ್ರಾಹ್ಮಣವಂಶವೆಂಬ ಆಕಾಶಕ್ಕೆ ಸೂರ್ಯನಂತೆ ಇದ್ದವನು (ಮಹೀದೇವಕುಳಗಗನ ಗಭಸ್ತಿಮಾಳಿ: ಸಾಲು ೧೬-೧೭: ಗಭಸ್ತಿ ಮಾಲಿನ್ - ಭಾನು. ಹೋಲಿಸಿ: ಪೊಯ್ಸಳ ಭಾನು E.C. II, 176 (143) 1131, p. 129 ; ಯಾದವಕುಳಾಂಬರದ್ಯುಮಣಿ, ಅದೇ, ಸಾಲು ೨೦). ಇದು ಆಲೋಚನೀಯ. ಕ್ರಿ.ಶ. ೯೭೩ರಲ್ಲಿ ತೈಲಪನು ಸ್ವತಂತ್ರನಾಗುವ ಪೂರ್ವದಲ್ಲಿ ರಾಷ್ಟ್ರಕೂಟರ ಮಹಾಸಾಮಂತನಾಗಿದ್ದನು. (B.K. No.178 of 1933 - 34 A.D. 956 ಕಾರ್ಜೋಳ್) ರಾಷ್ಟ್ರಕೂಟ ದೊರೆ ಮುಮ್ಮಡಿ ಕೃಷ್ಣನು ತೈಲಪನನ್ನು ತರ್ದವಾಡಿಗೆ ಮಹಾ ಸಾಮಂತನನ್ನಾಗಿ ನೇಮಿಸಿದನು. (SII. XI-i. 40 A.D. 965. ನರಸಲಗಿ). ಧಲ್ಲಪಯ್ಯನು ತೈಲಪನಿಗೆ ಮಂಡಳೇಶ್ವರನಾಗಿ ಯಶಸ್ವಿಯಾಗಲು ಯುದ್ಧಗಳಲ್ಲೂ ಜತೆ ನಿಂತು ಹೋರಾಡಿ ನೆರವಾಗಿದ್ದನು. ಆ ಕಾರಣದಿಂದ ತೈಲಪನು ಧಲ್ಲಪನಿಗೆ 'ಮಂಡಳಸಿದ್ಧಿ' ಎಂಬ ಪ್ರಶಸ್ತಿಯಿತ್ತಿದ್ದಾನೆ. ಅದರಂತೆ ತೈಲಪನಿಗೆ ಆಡಳಿತ ನಿರ್ವಹಣೆಯಲ್ಲಿ, ಸಭಾಸಂವಾಸನಾಗಿ, ಸೂಕ್ತ, ಸಕಾಲಿಕ, ವಿವೇಕಪೂರ್ಣ ಮಾರ್ಗದರ್ಶನ ಮಾಡಿದ್ದಕ್ಕಾಗಿ ಧಲ್ಲನಿಗೆ 'ವಿವೇಕ ಬೃಹಸ್ಪತಿ' ಬಿರುದಿತ್ತು ಸಂಮಾನಿಸಲಾಗಿದೆ. ಧಲ್ಲಪನು ತೈಲಪ ಚಕ್ರವರ್ತಿಯ ಅಖಿಳ ರಾಜ್ಯಭರ ನಿರೂಪಿತ ಮಹಾಮಂತ್ರಾಕ್ಷಪಟಳಕ್ಕೆ ಅಧಿಪತಿಯೆನಿಸಿದ್ದನು; ಸಮಸ್ತ ರಾಜ್ಯ ನಿರ್ವಹಣೆಗೆ ಸಂಬಂಧಿಸಿದಂತೆ ನಿರೂಪಣೆಯಾಗುತ್ತಿದ್ದ ಪ್ರಮುಖ ತೀರ್ಪು - ಆಜ್ಞೆಗಳ ಮೂಲ ದಾಖಲೆ ಪ್ರತಿಗಳ ರಾಜಪತ್ರಾಗಾರಕ್ಕೆ ಆತನು ಮುಖ್ಯಸ್ಥನಾಗಿದ್ದನು (ಸಾಲು: ೭ ಪ್ರಥಮಾರ್ಧ). ರಾಜ್ಯಾಡಳಿತದಲ್ಲಿ ನ್ಯಾಯಸಂಬಂಧದ (ತಾಮ್ರ ಇತ್ಯಾದಿ) ಪತ್ರಗಳ ಭಂಡಾರಕ್ಕೆ. ಅಕ್ಷಪಟಲವೆಂದು ಹೆಸರು (ಈ ಲಕ್ಕುಂಡಿ ಶಾಸನ ಅಕ್ಷಪಟಲ ಎಂಬ ಶಬ್ದ ಪ್ರಯೋಗದಿಂದ ಈ ಅಪರೂಪ ಪ್ರಯೋಗಗಳನ್ನು ಉಳಿಸಿಕೊಟ್ಟಿದೆ. ಕನ್ನಡ ಸಾಹಿತ್ಯ ಪರಿಷತ್ತಿನ ಬೃಹತ್ ಕನ್ನಡ ನಿಘಂಟಿನಲ್ಲಿ ಈ ಏಕೈಕ ಪ್ರಯೋಗ ದಾಖಲಾಗಿಲ್ಲ: ಅಕ್ಷಪಟಲ ಎಂಬ ಶಬ್ದಕ್ಕೆ ಪ್ರಯೋಗ ದೊರೆತಿಲ್ಲವೆಂದು ಹಾಗೇ ಬಿಟ್ಟಿದೆ). ಧಲ್ಲಪನ ವಿಚಾರವಾಗಿ ಶಾಸನದಲ್ಲಿ ಮಾಹಿತಿ ಇನ್ನೂ ಇದೆ:

ಮಲ್ಲಾಮಲ್ಲಿಯೊಳಾನ್ತರಿ
ಮಲ್ಲರನಾಹವದೊಳೊತ್ತಿ ಗೋಳ್ಮುರಿಗೊಳ್ವೀ
ಬಲ್ಲಾಳನದಿನ್ದಾಹವ
ಮಲ್ಲನ ಭುಜಾದಣ್ಡಮೆನಿಸಿ ಧಲ್ಲಂ ನೆಗಳ್ದಂ ॥ (ಸಾಲು: ೭ ಮತ್ತು ೮)

ಪೊಣರ್ದ್ದಿದಿರಾಗಿ ತಾಗಿದೊರನಾನೆಯೊಳೊಕ್ಕುವನೆಂದು ಬೆರ್ಚ್ಚಿ ಕೊಂ
ಕಣಮೆಟ್ಟೆಯಿಕ್ಕೆ ಚೆಂಗಿ ಬೆಱಗಾಗಿ ತಿವುಳ್ದೆನಿಳ್ಕೆ ಮಾಳವ
ಮಣಿಯಂ ಪೊದಳ್ದುದಿರ್ಕ್ಕೆಲದ ಮುಂದ್ದಣ ಪಿಂದಣ ಮಣ್ಡಲಕ್ಕೆ ಭೀ
ಷಣಮತಿರೌದ್ರಮದ್ಭುತಮಗುರ್ವ್ವಿನ ತೇಜದಳುರ್ಕ್ಕೆ ಧಲ್ಲನ ॥ (ಸಾಲು: ೮-೧೦)

ಧಲ್ಲಂಗಂ ನೆಗಳ್ದಾಹವ
ಮಲ್ಲಂಗಂ ಭೇದಮುಂಟೆ ವಿಭವದೊಳದನೇ

ನೆಲ್ಲರುಮರಿಯರೆ ಧರಣೀ
ವಲ್ಲಭ ಸಿಂಹಾಸನೈಕ ಭೇದಮ ಭೇದಂ ॥

ಅನ್ತು ಮಣ್ಡಳ ಸಿದ್ಧಿಯುಂ ವಿವೇಕ ಬೃಹಸ್ಪತಿಯುಮೆನಿಸಿ ನೆಗಟ್ದಂ ಧಲ್ಲಂ. (ಸಾಲು: ೧೦-೧೧). ಇದು ತೈಲಪನನ್ನು ಕುರಿತು ಬರೆಯುವಾಗ ಚರಿತ್ರಕಾರರು ಅವಶ್ಯ ಗಮನಿಸಬೇಕಾದ ಸಾಮಗ್ರಿಯಾಗಿದೆ. ಚಾವುಂಡರಾಯನು ಅಲ್ಲ ಎಂಬುವನ ವಿರುದ್ಧವೂ ಯುದ್ಧ ಹೂಡಿದ್ದನು. ಈ ಅಲ್ಲನನ್ನು ಜೆ. ಎಫ್. ಫ್ಲೀಟರು ಗುರುತಿಸಲಾಗಲಿಲ್ಲ; ರೈಸ್‌ರವರು ಈ ಹೆಸರಿನ ರೂಪ 'ದಲ್ಲ' ಎಂದಿದ್ದಾರೆ. ಹೀಗಾಗಿ ಧಲ್ಲನು ತೈಲಪನ ಪರವಾಗಿ ಹೋರಾಡಿದ್ದಕ್ಕೆ ಅನ್ಯಾನ್ಯ ಆಧಾರಗಳು ಇವೆ (EI. V, p. 170 note 2: 2: EC.II, (1973) Intro. p. iii).

೨೪. ಲಕ್ಕುಂಡಿಯ ಶಾಸನದಲ್ಲಿ ಅತ್ತಿಮಬ್ಬೆಯ ಗಂಡನೂ, ಧಲ್ಲನ ಮಗನೂ ಆದ ನಾಗದೇವನ ಚಿತ್ರಣ ಸೇಂದ್ರಿಯಗ್ರಾಹ್ಯವಾಗಿದೆ. ಅಜಿತಪುರಾಣದಲ್ಲೂ ನಾಗದೇವನ ಸಾಹಸಮಯ ರೂಪ ಚಿತ್ರಣವಿದೆ; ಅಜಿತಪುರಾಣದಲ್ಲಿ ಸಿಗದಿರುವ ಎರಡು ವೃತ್ತ ಪದ್ಯಗಳು ಮತ್ತಿತರ ಉಪಷ್ಟಂಬಕ ಮಾಹಿತಿಗಳು ಶಾಸನದಲ್ಲಿವೆ: ವಾಜಿಕುಳತಿಳಕನೂ, ತೇಜೋಭಾಸ್ಕರನೂ, ವೀರ ತ್ರಿಣೇತ್ರನೂ, ಸನ್ನಿ ಮಹಾರ್ಣವನೂ, ಕಂದುಕ ಪುರಂದರನೂ ಎನಿಸುವ ವೀರಾಗ್ರಣಿ ನಾಗದೇವನ ಪರಾಕ್ರಮದ ನಗಾರಿಯನ್ನು ನುಡಿಸಲಾಗಿದೆ (ಸಾಲು ೧೧ರಿಂದ ೧೬).

ವಾಜಿಕುಲದ ದಲ್ಲಪಯ್ಯನ ಹಿರಿಯ ಮಗ ನಾಗದೇವನು -

ಭರದಿಂ ರಾವಣ ಸೇನೆಯಂ ತವಿಸಿ ಗೆಲ್ದಾ ಗಣ್ಡರುಂ ಭಣ್ಡಣಾ
ಜಿರದೊಳ್ ಕೌರವ ಸೇನೆಯಂ ತುಳಿದು ಗೆಲ್ದಾ ಗಣ್ಡರುಂ ಗಣ್ಡಮ
ಚ್ಚರದಿಂ ಶಕ್ತಿಯ ಬೀರರಂ ಪೊಣಱ್ದು ಗೆಲ್ದಗಣ್ಡರುಂ ವೀತಮ
ತ್ಸರದಿಂ ಭಾವಿಸುವಾಗಳೀ ಸಮರಕೊಳ್ಗಣ್ಡಂ ಬರಂ ಗಣ್ಡರೇ ॥

ಧಾಳಿಯೊಳಂಧ್ರನಂ ಪಿಡಿದಪೆಂ ಮಗಧೇಶನನಿಕ್ಕಿಮೆಟ್ಟಿಪೆಂ
ಲಾಳನ ಗಂಟಲಂ ಮುರಿದಪೆಂ ಖಸನಂ ಪುಡಿಯೊಳ್ಪೊರಳ್ಚಿಪೆಂ
ಕೋಳದೊಳಿಕ್ಕಿಪೆಂ ಮಲೆವ ಪಾಣ್ಡ್ಯನನಾಹವಮಲ್ಲದೇವನಿಂ
ಪೇಳೆನುತಿರ್ಪ್ಪನೀ ದೊರೆತು ಶೌರ್ಯ್ಯಗುಣೋನ್ನತಿ ನಾಗದೇವನಾ ॥

ಆ ಮಹೀದೇವ ಕುಳಗಗನ ಗಭಸ್ತಿಮಾಳಿಗೆ ಮಹಾಸತೀರತ್ನಂ ಕುಳಪತ್ನಿಯಾಗಿ ಗುಣದಂಕಕಾರ್ತಿಯುಂ ಕವಿವರಕಾಮಧೇನುವುಂ ಕಟಕಪವಿತ್ರೆಯುಂ ಜಿನಧರ್ಮ್ಮ ಪತಾಕೆಯುಮೆನಿಸಿದ ದಾನಚಿನ್ತಾಮಣಿಯ ಮಹಾಪ್ರಭಾವಮೇದೋರೆಂತೆನೆ - (ಸಾಲು ೧೧ರಿಂದ ೧೮) ನಾಗದೇವ-ಅತ್ತಿಮಬ್ಬೆ ದಂಪತಿಗಳ ಮಗನ ಚಿತ್ರ ಕೂಡ ಉಜ್ವಲವಾಗಿ ಕಣ್ಣಿಗೆ ಕಟ್ಟುತ್ತದೆ :

ಆ ಪರಮೇಶ್ವರಿಗೆ ಜಗ
ದ್ವ್ಯಾಪಕ ಶುದ್ಧೇಂದುಕೀರ್ತ್ತಿ ಪರಿಯಮಗಂ
ಲಕ್ಷ್ಮೀಪತಿ ಸಮಗ್ರವಿಜಯ
ಶ್ರೀಪತಿಯೆನೆ ಧರೆಗೆ ನೆಗಱ್ದ ಪಡೆವಳ ತೈಲಂ ॥

ಉದಾರ ಚಾರು ಚರಿತ ಪ್ರಭೆಯಿಂದ ಪಡೆವಳ ತೈಲನೂ ಸನ್ನಿನಾರಾಯಣನೂ ಸಮ್ಯಕ್ತ್ವ ರತ್ನಾಕರನೂ ಪತಿಮೆಚ್ಚೆ ಗಂಡನೂ ಆಳ್ದನ ಚಕ್ರನೂ ಆಗಿದ್ದನೆಂದು ದೊಡ್ಡ ವಿಶೇಷಣಗಳ ಸರಮಾಲೆಯನ್ನು ತೊಡಿಸಲಾಗಿದೆ. ತಾಯಿ-ತಂದೆಗೆ ತಕ್ಕ ಮಗ. ಹೆತ್ತಬ್ಬೆಯ ದುಃಖ ಉಪಶಮನಕ್ಕಾಗಿ ಈ ಕುಲಮುದ್ದನು ನಿಗಾವಹಿಸಿ ಮಾತೃಋಣಮುಕ್ತನಾದನು.

ಕರ್ಣನ ನನ್ನಿ, ರಾಮನ ಬಾಣ, ಕಲ್ಲಿನಲ್ಲಿ ಕೆತ್ತಿದ ಅಕ್ಷರ - ಇವುಗಳಂತೆ ಅಣ್ಣಿಗದೇವನ 'ನನ್ನಿ' (ಸತ್ಯ) ಗುಣವೂ ನೃಪಶಾಸನವೆನಿಸಿತ್ತು (೧೨-೨೬). ಈ ನನ್ನಿಯಿಂದಾಗಿ ಅಣ್ಣಿಗದೇವನಿಗೆ 'ನನ್ನಿ ನಾರಾಯಣ' ಎಂಬ ಪ್ರಶಸ್ತಿಯಿತ್ತು: ಈ ನನ್ನಿಗುಣ ಸಹ ಮಗ ಅಣ್ಣಿಗನಿಗೆ ಅಪ್ಪ ನಾಗದೇವನಿಂದ ಬಂದ ಬಳುವಳಿ: ಶಾಸನದಲ್ಲಿ ತಂದೆ ನಾಗದೇವನನ್ನು ಒಂದು ಕಡೆ 'ನನ್ನಿ ಮಹಾರ್ಣವ' (ಸಾಲು ೧೪) ಎಂದು ಕರೆದಿದೆ. ಅಣ್ಣಿಗದೇವನಿಗೆ ''ಕರ್ಪೂರವರ್ಷ'' ಎಂಬ ಅಪರೂಪದ ಪ್ರಶಸ್ತಿಯಿದೆ (ಸಾಲು : ೩೫) ಸೌದತ್ತಿಯ ರಟ್ಟರ ಇಮ್ಮಡಿ ಕನ್ನಭೂಪನ ಮಗನಾದ ಎಱೆಗ ಮಹೀಶನಿಗೆ ಮಾತ್ರ ಕಪ್ಪುರ ವರ್ಷ ಎಂಬ ಪ್ರಶಸ್ತಿ ಇದೆ (SII. XX. 50 date? Saudatti, p. 61, L. 15).

ಮಲ್ಲಪನ ಕಡೆಯಿಂದ ಮೂರು ತಲೆಮಾರು (ಮಲ್ಲಪ-ಅತ್ತಿಮಬ್ಬೆ-ಅಣ್ಣಿಗದೇವ), ಧಲ್ಲಪನ ಕಡೆಯಿಂದಲೂ ಮೂರು ತಲೆಮಾರು (ಧಲ್ಲಪ-ನಾಗದೇವ-ಅಣ್ಣಿಗದೇವ) ಚಾಳುಕ್ಯ ಚಕ್ರವರ್ತಿ ತೈಲಪನ ಆಡಳಿತಾಂಗದಲ್ಲಿ ಉನ್ನತ ಅಧಿಕಾರದಲ್ಲಿ ಇದ್ದರು. ಈ ಪೀಳಿಗೆಯವರು ಪ್ರಾಣದ ಹಂಗು ತೊರೆದು ರಾಜನಿಷ್ಠೆಗೆ ಪಾತ್ರರಾಗಿದ್ದುದನ್ನು ಅಜಿತಪುರಾಣದಂತೆ ಲಕ್ಕುಂಡಿ ಶಾಸನವೂ, ಅತಿ ಸಂಕ್ಷೇಪದಲ್ಲಿಯೇ ಆದರೂ ಪರಿಣಾಮಕಾರಿಯಾಗಿ ದಾಖಲಿಸಿದೆ. ಅತ್ತಿಮಬ್ಬೆಯು ಲಕ್ಕುಂಡಿಯಲ್ಲಿ ಕಟ್ಟಿಸಿದ ೧೫೦೧ನೆಯ ಜಿನಾಲಯವೇ ಆಕೆಯ ಕಟ್ಟ ಕಡೆಯ ಬಸದಿ. ಈ ಲಕ್ಕುಂಡಿ ಶಾಸನವನ್ನು ಅಣ್ಣಿಗದೇವನೇ ಬರೆಸಿದ್ದಾನೆಂದು ಭಾವಿಸಬಹುದು.

೨೫. ಅತ್ತಿಮಬ್ಬೆಯ ಕೀರ್ತಿಲತೆ ದಾಂಗುಡಿಯಿಟ್ಟು ಕನ್ನಡ ಶಾಸನ-ಕಾವ್ಯ ವಾಙ್ಮಯವನ್ನು ಬಾಚಿ ತಬ್ಬಿಕೊಂಡಿದೆ. ಆಕೆಯ ಯಶೋಗಾಥೆಯು ಹಲವು ಶತಮಾನಗಳ ಉದ್ದಕ್ಕೂ ಅನುರಣನವಾಗಿದೆ. ರನ್ನಕವಿಯ ಅಜಿತಪುರಾಣ, ಬ್ರಹ್ಮಶಿವನ ಸಮಯ ಪರೀಕ್ಷೆ ಕಾವ್ಯಗಳಲ್ಲಿ ನಿರೂಪಿತವಾದ ಆಕೆಯ ಜೀವನ ಚಿತ್ರ ಈ ಶತಮಾನದ ಉತ್ತರಾರ್ಧದಲ್ಲಿ 'ದಾನಚಿಂತಾಮಣಿ' ಕಾದಂಬರಿಯಲ್ಲಿ (೧೯೬೮) ಮರುಹುಟ್ಟು ಪಡೆದಿದೆ. ಈ ಸಾವಿರ ವರ್ಷದ ಅಂತರದಲ್ಲಿ ಸಾವು ಇರದ ಅತ್ತಿಮಬ್ಬೆಯನ್ನೂ ಆಕೆಯ ದಾನಚಿಂತಾಮಣಿ ಪ್ರಶಸ್ತಿಯನ್ನೂ ಅನೇಕ ಶಾಸನಗಳೂ ಸಹ ಹೆಸರಿಸುತ್ತ ಆಕೆಯನ್ನು ನೆನೆಯುತ್ತ ಬಂದಿವೆ. ಅವುಗಳಲ್ಲಿ ನನ್ನ ಗಮನಕ್ಕೆ ಕಂಡುಬಂದ ಕೆಲವು ಶಾಸನಗಳು ಇಷ್ಟು:

೧. SII. XI-i. 53. 1007(8) ಲಕ್ಕುಂಡಿ; ೨. ಅದೇ : 52 : 1007 (8) ಮತ್ತು ಸು. 1180 (?); ೩. ಅದೇ : 77. ಸು. 1018 ಪೊಟ್ಟಲಕೆರೆ; ೪. KI.I. 17 A.D. 1055 ಶಿಗ್ಗಾವಿ; ೫. SII. XI-i. 121 1057 ಶಿವಪುರ, (ನಂದಿಕೊಟ್ಕೂರೂ ತಾ, ಕರ್ನೂಲು ಜಿಲ್ಲೆ, ಆಂಧ್ರ] ೬. SII. XI-i. 103. 1065; ೭. EI. XV. 1084.; ೮. JSI p. 229) 1094; ೯. EC. II (82) 73.1118 ಶ್ರವಣಬೆಳುಗೊಳ; ೧೦. ಅದೇ: 484 (351) 1119; ೧೧. ಅದೇ: 162 (132). 1123; ೧೨. ಅದೇ : 532 (384). 1135 ; ಅದೇ : 176 (143), 1131; ೧೩ ಅದೇ IV ನಾಗಮಂಗಲ 94. 1142; ೧೪. ಅದೇ. VIII ಸಾಗರ 37. ಹುಂಚ. 1147; ೧೫. SII. XVIII. 151.ನೀರಲ್ಗಿ 1148; ೧೬. EC.V.ಅರಸೀಕೆರೆ 141. 1159. ಕುರುಗುಂದ; ೧೭. ಅದೇ.

VIII. ಸಾಗರ 159 ಹೆರಕೆರೆ ಕ್ರಿ.ಶ. 1159; ೧೮. MAR 1943 No. 15 ಗೊರೂರು ಕ್ರಿ.ಶ. 1170; ೧೯. EC. II. ಶ್ರಬೆ 124. 1182; ೨೦. ಅದೇ. VII, ಶಿಕಾರಿಪುರ 232. 1200; ೨೧. ಅದೇ. VIII ಸೊರಬ 140.ಕಾಲ? ೨೨. ಅದೇ. ಸೊರಬ 345.ಕಾಲ?

ಹೀಗೆ ಇನ್ನೂ ಕೆಲವು ಶಾಸನಗಳಲ್ಲಿ ಅತ್ತಿಮಬ್ಬೆಯ ಗುಣಗಾನ ಕೇಳಿಬರುತ್ತದೆ. ಆಚಂದ್ರಾರ್ಕ ಕೀರ್ತಿಗೆ ಪಾತ್ರಳಾದ ಅತ್ತಿಮಬ್ಬೆಯನ್ನು ಕುರಿತು ದೊರೆತ ಮಾಹಿತಿಗಳಲ್ಲಿ ಆಕೆಯ ಕೊನೆಯ ದಿನಗಳ ಚಿತ್ರಣ ಕಣ್ಮರೆಯಾಗಿದೆ. ಆದರೆ ಇದುವರೆಗೆ ಬೇರೆ ಯಾವ ವಿದ್ವಾಂಸರೂ ಪ್ರಸ್ತಾಪಿಸದಿರುವ ಎರಡು ಹೊಸ ಮಾಹಿತಿಗಳನ್ನಿಲ್ಲಿ ಚರ್ಚಿಸಬೇಕು. ಈ ಎರಡು ಪ್ರಕಟಿತ ಶಾಸನಗಳಲ್ಲಿ ಒಂದು ಬಹು ಮುಕ್ಕಾಗಿ ಹೋಗಿದ್ದು ಏನೊಂದು ಸ್ಪಷ್ಟವಾಗುತ್ತಿಲ್ಲ: (SII. XV. 56 C. 12 A.D., p. 376) ಇದರಲ್ಲಿ ಮೊದಲನೆಯ ಸಾಲು ಹೀಗಿದೆ: ಸ್ವಸ್ತಿ ಸಮಸ್ತ...ಗುಣಸಂಪಂನೆ ದಾನವಿನೋದೆ ಯೀಸ್ವರ ಪಾದಪಂಕಜಭ್ರಮರೆ ಯಪ್ಪಶ್ರೀ... (ತ್ರುಟಿತ). ಲಕ್ಕುಂಡಿಯಲ್ಲೇ ಇದು ದೊರೆತ ಶಾಸನವೆಂಬುದರಿಂದಲೂ, ದಾನವಿನೋದೆ ಎಂಬ ಪ್ರಶಸ್ತಿ ಪ್ರಯೋಗವಾಗಿರುವುದರಿಂದಲೂ, ಅತ್ತಿಮಬ್ಬೆಯ ಪ್ರಸ್ತಾಪ ಬಂದಿದೆಯೆಂದು ತಿಳಿಯಲು ಬಾಧಕವಿಲ್ಲ.

೨೬. ಬಿಜಾಪುರ ಜಿಲ್ಲೆ ಮುದ್ದೇಬಿಹಾಳ ತಾ।। ಕುಂಟೋಜಿಯಲ್ಲಿ ಈಶ್ವರನ ಗುಡಿಯ ಹತ್ತಿರವಿರುವ ಪಾಳು ಬಾವಿಯ ಬಳಿ ಬಿದ್ದಿರುವ ತುಂಡಾದ ಕಲ್ಲಿನ ಮೇಲಿರುವ ಶಾಸನಭಾಗ ಮಾತ್ರ ದೊರೆತಿದೆ; ಇದರ ಇನ್ನೊಂದು ತುಂಡು ಕಳೆದುಹೋಗಿದೆ (*South Indian inscriptions.* Vol. XI-Part-i No.72) (*Bombay Karnataka* No. 37 of 1929) ಕಾಲ?) ಈ ಶಾಸನವು ಕಲ್ಯಾಣ ಚಾಲುಕ್ಯರ ಜಗದೇಕಮಲ್ಲ ಜಯಸಿಂಹದೇವನ (೧೦೧೬-೧೦೪೨) ಆಳ್ವಿಕೆಯಲ್ಲಿ ರಚಿತವಾಗಿದೆ. ಆಂತರ ಬಾಹ್ಯ ಪ್ರಮಾಣಾಧಾರಗಳಿಂದ ಈ ಶಾಸನವು ಸು. ಕ್ರಿ.ಶ. ೧೦೧೮ರಲ್ಲಿ ರಚಿತವಾಗಿದೆಯೆಂದು ಊಹಿಸಬಹುದು. ಚಾಲುಕ್ಯರ ರಾಜಧಾನಿ ಇನ್ನೂ ಪೊಟ್ಟಲಕೆರೆಯೇ ಆಗಿದ್ದಾಗ ಈ ಶಾಸನ ಬರೆಯಲ್ಪಟ್ಟಿದೆ. ಆಗಿನ್ನೂ ಅತ್ತಿಮಬ್ಬೆ ಜೀವಿಸಿದ್ದಿರಬಹುದು ಅಥವಾ ಆಕೆಯ ಮರಣವನ್ನು ಕುರಿತ ಪ್ರಸ್ತಾಪವೇನಾದರೂ ಇದರ ಉಳಿದ ನಷ್ಟಭಾಗದಲ್ಲಿ ಬಂದಿರಲೂಬಹುದು. ಅಂತೂ ಇದು ಅತ್ತಿಮಬ್ಬೆಯ ಜೀವಿತಾವಧಿಗೆ ಸಂಬಂಧಿಸಿದಂತೆ ಉಪಲಬ್ಧವಾಗಿರುವ ಕಟ್ಟಕಡೆಯ ಶಾಸನವೆಂಬ ಐತಿಹಾಸಿಕ ಮಹತ್ವವೂ ಈ ಶಾಸನಕ್ಕಿದೆ. ಏಕೆಂದರೆ ಇದರ ತರುವಾಯ ಸಿಗುವ ಮತ್ತು ಅತ್ತಿಮಬ್ಬೆಯನ್ನು ಪ್ರಸ್ತಾಪಿಸುವ ಶಾಸನಗಳೆಲ್ಲ ಆಕೆಯ ಮರಣೋತ್ತರ ಶಾಸನಗಳು:

೧. ಸ್ವಸ್ತಿ ಸಮಸ್ತ ಭುವನಾಶ್ರಯಂ ಶ್ರೀ ಪ್ರಿಥ್ವೀ
೨. ವಲ್ಲಭಂ ಮಹಾರಾಜಾಧಿರಾಜ ಪರಮೇ
೩. ಶ್ವರಂ ಪರಮಭಟ್ಟಾರಕಂ ಸತ್ಯಾಶ್ರಯಕು
೪. ಳ ತಿಳಕಂ ಚಾಳುಕ್ಯಾಭರಣಂ ಶ್ರೀಮ
೫. ಜ್ಜಗದೇಕಮಲ್ಲದೇವರ ರಾಜ್ಯಮು
೬. ತ್ತರೋತ್ತರಾಭಿವ್ರಿದ್ಧಿ ಪ್ರವರ್ದ್ಧಮಾನಮಾಚ
೭. ನ್ದ್ರಾರ್ಕ್ಕತಾರಂಬರಂ ಸಲುತ್ತಮಿರೆ ಪೊಟ್ಟಳ
೮. ಕೆಱೆಯ ನೆಲೆವೀಡಿನೊಳು ಸ್ವಸ್ಥನವ
೯. ರತ ಪರಮಕಲ್ಯಾಣಾಭ್ಯುದಯ

೧೦. ಸಹಸ್ರ ಫಳ ಬೋಗ ಭಾಗಿನಿ ದಾ
೧೧. ನ ಚಿನ್ತಾಮಣಿ ಯಾಶ್ರಿತಜನ ಕಲ್ಪಲ
೧೨. ತೆ(ಯಂತೆ) ಜಿತರೂಪೆ (ವಿಳಾಸ)
೧೩. ವತಿ ಸಕಳ ಕಳಾವತಿ ಸ್ವಸ್ತಿ.

ಇಷ್ಟು ಭಾಗ ಮಾತ್ರ ಇಬ್ಭಾಗವಾಗಿರುವ ಕಲ್ಲು ಚಪ್ಪಡಿಯ ಶಾಸನದಿಂದ ಸಿಕ್ಕಿದೆ. ಇದು ಆಕೆಯ ಜೀವಿತಾವಧಿಯ ಉತ್ತರಗಡುವನ್ನು ಸೂಚಿಸುವ ಶಾಸನ.

೨೭. ಈ ಕುಂಟೋಜಿ ಶಾಸನದ ಕಾಲವನ್ನು ಸು. ೧೦೧೮ ಎಂದು ಭಾವಿಸಬಹುದೆಂದು ತಿಳಿಸಿದ್ದೇನೆ. ಮತ್ತು ಇದೇ ಸಂಪ್ರಬಂಧದಲ್ಲಿ ಇನ್ನೊಂದು ಕಡೆ ಅತ್ತಿಮಬ್ಬೆ ಸು. ಕ್ರಿ.ಶ. ೯೫೦ರಲ್ಲಿ ಜನಿಸಿರಬಹುದೆಂದು ಸೂಚಿಸಿದ್ದೇನೆ. ಆದ್ದರಿಂದ ಆಕೆ ಕ್ರಿ.ಶ. ೯೫೦ರಿಂದ ೧೦೧೮ರ ವರೆಗೆ ಸುಮಾರು ೬೮ ವರ್ಷಗಳು ಬದುಕಿದ್ದಿರಬಹುದೆಂದು ಕಂಡುಬರುತ್ತದೆ. ಆದ್ದರಿಂದ ಅತ್ತಿಮಬ್ಬೆಯು ತೈಲಪ (೯೭೩-೯೯೭) ಇರಿವಬೆಡಂಗ ಸತ್ಯಾಶ್ರಯ (೯೯೭-೧೦೦೮), ದ (ದಾ) ಶವರ್ಮ ದೇವ, ಐದನೆಯ ವಿಕ್ರಮಾದಿತ್ಯ (೧೦೦೮-೧೦೧೪), ವಸುಧೈಕಮಲ್ಲ ಅಯ್ಯಣದೇವ II (೧೦೧೪-೧೦೧೫) ಮತ್ತು ಜಗದೇಕಮಲ್ಲ ಜಯಸಿಂಹ (೧೦೧೬-೧೦೪೨) ಇಷ್ಟೂ ಜನ ಚಕ್ರವರ್ತಿಗಳ ಗೌರವಕ್ಕೂ ಪಾತ್ರಳಾಗಿದ್ದಳು. ಈ ಅವಧಿಯಲ್ಲಿ ಆಕೆ ಈವಗುಣ-ಕಾವಗುಣಗಳಿಂದ. ವರ್ಚಸ್ವೀ ವ್ಯಕ್ತಿತ್ವದಿಂದ ತನ್ನ ಸಮಕಾಲೀನ ಸಮಾಜದಲ್ಲಿ ಅಗ್ರಗಣ್ಯಳಾಗಿ ಆದರ್ಶದ ಚರಮಸೀಮೆ ತಲಪಿದ್ದಳು. ಜೈನಧರ್ಮದಲ್ಲಿ ಅತುಳವಾದ ನಂಬಿಕೆಯಿಂದ ಅದರ ಏಳಿಗೆಗಾಗಿ ಪಟ್ಟ ಶ್ರಮ ಮತ್ತು ಕೊಟ್ಟ ಕೊಡುಗೆ, ಮಾಡಿದ ತ್ಯಾಗಗಳು ಆಕೆಯನ್ನು ಆದರ್ಶ ಶ್ರಾವಕಿಯನ್ನಾಗಿಸಿವೆ. ಕರ್ನಾಟಕ ಸಂಸ್ಕೃತಿಯ ಸಾರಸ್ವರೂಪಿಣಿಯಾದ ಅತ್ತಿಮಬ್ಬೆಯ ಜೀವನದ ಸುವರ್ಣ ರೇಖೆಗಳನ್ನು ಲಕ್ಕುಂಡಿ ಶಾಸನ ಪ್ರಭಾವಶಾಲಿಯಾಗಿ ದಾಖಲಿಸಿದೆ. ಲಕ್ಕುಂಡಿಯ ಶಾಸನ ರಚಿತವಾಗುವ ವೇಳೆಗೆ ಅತ್ತಿಮಬ್ಬೆಯ ಮಗ ಅಣ್ಣಿಗದೇವನಿಗೂ ಸುಮಾರು ನಲವತ್ತು ನಲವತ್ತೈದು ವರ್ಷ ವಯಸ್ಸಾಗಿತ್ತೆಂದು ತೋರುತ್ತದೆ.

೨೮. ಆವಂ ಬಸದಿಗಳೊಳಕ್ಕೆ
ದೇವರ್ಗ್ಗೆಸವಗ್ರಪೂಜೆ ಪೂಜಾರಿಗಮೆ
ನ್ದೀವರೊಸೆದಿದಂ ಕುಪಿಣದ
ದೇವರ ವಲ್ಲಭನ ತೇಜಮನಿತುಂ ನಡೆಗುಂ । (ಸಾಲು: ೭೮)

ಬೋಧಿಸವೆ ಪೆರವು ಜಿನಗೃಹ
ಕ್ಕಾಧಿಕ್ಯಮದಿಲ್ಲೆನಿಪ್ಪುದಂ ಸನ್ನಸನಾ
ರಾಧನೆಯ ಜವದಿ ಸನ್ದ ನಿ
ಶೀಧಿಗೆಯಡ್ಡಣಿಗೆ ತಳಿಗೆ ಪಟ್ಟಮಿವಿನಿತುಂ । (ಸಾಲು : ೭೯)

ಯಾವುದೇ ಬಸದಿಗಳಲ್ಲಾಗಲಿ ಜಿನನಿಗೆ ಮಾಡುವ ಮುಖ್ಯ ಪೂಜೆ, ಪೂಜಾರಿಗಂದು ಪ್ರೀತಿಯಿಂದ ಕೊಡುವ ಕಾಣಿಕೆ-ಕೂಪಣದ ದೇವರ ಪ್ರಧಾನ ಸ್ವಾಮಿಯ ಕಾಂತಿಯಿಂದಲೇ ಅಷ್ಟೂ ನಡೆಯುತ್ತದೆ (?) ಸನ್ಯಸನ ವಿಧಿಯಿಂದ ಸಮಾಧಿಮರಣ ಪಡೆದವರಿಗೆ ನಿಲ್ಲಿಸಿದ ನಿಷದಿಗೆ (ಸಮಾಧಿ ಶಿಲೆ), ಅಡ್ಡಣಿಗೆ, ತಳಿಗೆ, ಪಟ್ಟ-ಇವಿಷ್ಟೂ ಅಲ್ಲದೆ ಬೇರೆ ಹೆಚ್ಚಿನವು ಯಾವುವೂ ಜಿನಗೃಹಕ್ಕೆ ಇಲ್ಲವೆಂಬುದನ್ನು ಬೋಧಿಸವೆ ?

ಅತ್ತಿಮಬ್ಬೆಯು ನಿಧನಳಾದ ೧೫೦ ವರ್ಷಗಳ ತರುವಾಯ ರಚಿತವಾಗಿರುವ ಶಾಸನ ಭಾಗದ ಈ ಕಂದ ಪದ್ಯದಲ್ಲಿರುವ ಧ್ವನ್ಯರ್ಥ: ಈ ಶಾಸನವನ್ನು ಬಾಹುಬಲಿ ಪುನರ್ ಲಿಖಿಸಿದ ೧೨ನೆಯ ಶ.ದ. ಉತ್ತರಾರ್ಧದಲ್ಲಿ, ಈ ಬಸದಿಯಲ್ಲಿ ನಿಸಿದಿಗೆಯೂ, ತಾಮ್ರಪತ್ರವೂ (ಪಟ್ಟ) ಇದ್ದುವು. ಅಡ್ಡಣಿಗೆಯನ್ನು ಮುಕ್ಕಾಲು ಮಣೆ, ಅಟ್ಟವಣೆಕೋಲ್, ಠ(ಟ) ವಣೆಕೋಲ್-ಎಂದೂ ಕರೆದಿದೆ. ಬಸದಿಗಳಲ್ಲಿ ಜೈನಾಗಮ-ಪುರಾಣ ಗ್ರಂಥವಿಟ್ಟು ಪಠಿಸಲು ಅಡ್ಡಣಿಗೆ ಕಡ್ಡಾಯವಾಗಿ ಇರುತ್ತಿತ್ತು:

ಪ್ರೀಣನಮಾದುದು ಮುನಿಗೀ
ರ್ವಾಣ ಮುಖಾಂಬುಜಮನಡರ್ದಿರಲ್ ಶೈಶವದೊಳ್
ವಾಣೀವಧು ನಿರಿಸಿದ ನಿ
ಶ್ರೇಣಿಯವೊಲ್ ಶ್ರುತದ ಠವಣೆಕೋಲವಿಳಾಸಂ॥

(ಜನ್ನ: ಅನಂತನಾಥಪುರಾಣಂ, ೩-೫೦)

ನಿಸದಿಗೆಯು ಮುನಿ ಅರ್ಹನನ್ದಿಯದೊ ಮತ್ತೊಬ್ಬರದೊ ಅತ್ತಿಮಬ್ಬೆಯದೊ ತಿಳಿಯದು. ಇನ್ನು ತಾಮ್ರಪತ್ರವು ಸತ್ಯಾಶ್ರಯ ಇರಿವಬೆಡಂಗನು ಅತ್ತಿಮಬ್ಬೆಗೆ ಆಕೆ ಕಟ್ಟಿಸಿದ ೧೫೦೧ನೆಯ ಜಿನಾಲಯಕ್ಕೆ ಚಕ್ರವರ್ತಿ ದತ್ತಿಯ ಒಕ್ಕಣೆಯನ್ನು ಒಳಗೊಂಡಿರಬೇಕು.

೨೯. ಅತ್ತಿಮಬ್ಬೆ ಸನ್ಯಾಸವನ್ನು ಸ್ವೀಕರಿಸಲಿಲ್ಲ; ಸನ್ಯಾಸದ ನಿಷ್ಠುರ ನಿಯಮ ಬಿಡಲಿಲ್ಲ. ದೀಕ್ಷೆ ತೆಗೆದುಕೊಳ್ಳಲಿಲ್ಲ; ಉಗ್ರದೀಕ್ಷೆಯ ವ್ರತನಿಯಮಗಳನ್ನು ಪಾಲಿಸಿದಳು. ಯೋಗಗಳಲ್ಲಿ ಸಂಸಾರಯೋಗವೇ ರಾಜಯೋಗವೆಂಬ ಲಕ್ಷಣಕ್ಕೆ ಯೋಗ್ಯ ಲಕ್ಷ್ಯವಾದಳು, ಗೃಹತಪಸ್ವಿನಿಯಾದಳು. ಸಂಸಾರಯೋಗದಲ್ಲಿ ಪದ್ಮಪತ್ರದಂತೆ ನಿರ್ಲಿಪ್ತ ಚಿತ್ತಸ್ಥಿತಿಯಿಂದ ಬಾಳಿ ಪಾರಾದಳು; ಈಸಿದಳು, ಈಜಿ ಜೈಸಿದಳು. ಅತ್ತಿಮಬ್ಬೆ ಪಲಾಯನವಾದಿಯಲ್ಲ, ಬದುಕಿನ ಸವಾಲುಗಳನ್ನು ಎದುರಿಸಿದ ದಿಟ್ಟೆ. ತಂಗಿಯಂತೆ ಸಹಗಮನದಿಂದ ಮಹಾಸತಿಯಾಗ ಬಹುದಿತ್ತು. ಇವು ಯಾವುವೂ ಆಗದೆ, ಇವು ಎಲ್ಲವೂ ನೀಡುವುದಕ್ಕಿಂತ ಎತ್ತರಕ್ಕೇರಿದ ಶೃಂಗಸದೃಶ ವ್ಯಕ್ತಿತ್ವವನ್ನು ಸಂಪಾದಿಸಿದಳು. ಅದು ಒಂದೆರಡು ವರ್ಷಗಳಲ್ಲಿ ಬಂದುದಲ್ಲ. ಸಂಗ್ರಹಿಸಿ ಹೇಳುವುದಾದರೇ ಆಕೆಯ ಜೀವನ ಪಥ ಹೂಚೆಲ್ಲಿದ ಹಾದಿಯಲ್ಲ. ಕಲ್ಲು ಮುಳ್ಳುಗಳ, ಕಷ್ಟದ, ಸವಾಲುಗಳ ಹಾದಿಯಲ್ಲಿ ಧೃತಿಗೆಡದೆ ಹೆಜ್ಜೆಯೂರಿ ಮುನ್ನಡೆದಳು. ತನ್ನ ಹಿಂದೆ ಶತಮಾನಗಳವರೆಗೆ ಅಚ್ಚಳಿಯದ ಹೆಜ್ಜೆಗುರುತುಗಳನ್ನು ಬಿಟ್ಟು ನಡೆದಳು.

೩೦. ಅತ್ತಿಮಬ್ಬೆಯು ಪ್ರದರ್ಶಿಸಿದಳು ಎನ್ನಲಾದ ಏಳು ಮಹಿಮೆಗಳು ಹೇಗೇ ಇರಲಿ, ಸ್ವಯಂ ಅತ್ತಿಮಬ್ಬೆಯೇ ಎಂಟನೆಯ ಪವಾಡ ಎಂಬಂಥ ಬಾಳನ್ನು ಬಾಳಿದಳು. ಜಿನೇಂದ್ರ ಪದ ಪಯೋಜ ಸಂಜಾತ ಭಕ್ತಿ ನಿರ್ಭರತೆಯಿಂದ ವೆಗ್ಗಳಿತವಾದ ಆಕೆಯ ದೈವೀ ವ್ಯಕ್ತಿತ್ವಕ್ಕೆ, ಸಕಳದಿವಿಜೇಂದ್ರವಿಷ್ಟರ (ದೇವೇಂದ್ರನ ಸಿಂಹಾಸನ)ವನ್ನು ಪ್ರಕಂಪಿಸುವ ಅನನ್ಯ ಅಸಾಧಾರಣ ಸಾಮರ್ಥ್ಯ ಇತ್ತೆಂದು ಲಕ್ಕುಂಡಿಯ ಶಾಸನ ಉತ್ಪ್ರೇಕ್ಷಿಸಿ ಹುಬ್ಬೇರಿಸಿದೆ (ಸಾಲು: ೪೯). ಚಾವುಂಡರಾಯನು ಶಿಲೆಯಲ್ಲಿ ಗೊಮ್ಮಟಮೂರ್ತಿಯನ್ನು ಕಡೆದು ನಿಲ್ಲಿಸಿದ್ದಾನೆ; ರನ್ನನು ಅಜಿತಪುರಾಣ ಕಾವ್ಯದಲ್ಲಿ ಅತ್ತಿಮಬ್ಬೆಯ ಅಮೃತಪುತ್ಥಳಿಯನ್ನು ಬಿಡಿಸಿದ್ದಾನೆ. ಈ ಎರಡೂ ಸಮಕಾಲೀನ ಭವ್ಯ ಮೂರ್ತಿಗಳು ಸಹಸ್ರಾಬ್ದಿಯನ್ನು ದಾಟ ಆಚಂದ್ರಾರ್ಕ ತಾರೆಯಂತೆ ಮಿನುಗುತ್ತಿವೆ:

ಪರಮಶ್ರೀ ಜಿನನಾಥಗೇಹ ವಿಳಸಚ್ಛಂದೋಹ ಸಂದೋಹ ಭಾ
ಸುರ ಜೈನ ಪ್ರತಿಮಾವಿಚಿತ್ರ ಮಣಿ ಘಂಟಾಮಾಳಿಕಾಸಂಖೆ ಸಾ
ಯಿರದಯ್ನೂರಿವು ಬೇರೆವೇರೆನಿಪಿನಂ ನಿರ್ಮಾಣಂಗೆಯ್ದು ಭೂ
ಭರದೊಳ್ ಧರ್ಮ್ಮಮನತ್ತಿಮಬ್ಬೆಯವೊಲಿನ್ತಾರುಜ್ವಳಂ ಮಾಡಿದರ್॥

(ಸಾಲು : ೩೦-೩೨)

ಈ ಭೂಲೋಕದಲ್ಲಿ ಅತ್ತಿಮಬ್ಬೆಯ ಹಾಗೆ ಧರ್ಮವನ್ನು ಬೆಳಗಿಸಿದವರು ಬೇರೆ ಯಾರಿದ್ದಾರೆ? ಎಂಬ ವಿಸ್ಮಯದ ನೆಲೆಯಲ್ಲಿ ಉದ್ಗಾರ ಹೊಮ್ಮಿಸುವ ಲಕ್ಕುಂಡಿಯ ಶಾಸನಕಾರ ಓದುಗರ ಭಾವನೆಗಳನ್ನು ಬಿಂಬಿಸಿದ್ದಾನೆ.

ಇಷ್ಟು ಮಹತ್ವದ ಈ ಅಚ್ಚುಕಟ್ಟಾದ ದಾನಶಾಸನವನ್ನು ಬರೆದವನು ರನ್ನನಾದರೂ ಇದನ್ನು ಬರೆಸಿದವನು ಅಣ್ಣಿಗದೇವನೆಂದು ತೋರುತ್ತದೆ; ಹಾಳಾದ ಶಾಸನವನ್ನು ಉಳಿಸಿಕೊಟ್ಟವನು ಬಾಹುಬಲಿ.

ಸಾಹಿತ್ಯದ ದೃಷ್ಟಿಯಿಂದ ಈ ಶಾಸನ ಒಂದು ಪುಟ್ಟ ಚಂಪೂಕಾವ್ಯವೇ ಆಗಿದೆ. ಛಂದಸ್ಸಿನ ಆಧಾರದಿಂದಲೂ ಇದರಲ್ಲಿರುವ ಗದ್ಯ, ಪದ್ಯ, ಕಂದ, ವೃತ್ತ ಗಮನಾರ್ಹವೆನಿಸಿವೆ.

### ಶಾಸನಪಾಠ

೧. [ಶುಭಂ] ಭೂಯಾಜ್ಜಿನೇಂದ್ರಾಣಾ [೦] ಶಾಸನಾಯಾಘನಾಶಿನೇ ಕು [ತೀರ್ತ್ಥ] ಧ್ವಾನ್ತಸಂಘಾತಪ್ರಭಿನ್ನ ಘನಭಾನವೇ ಶ್ರೀಮದ್ರಾಮಮ [ಹೀಂ]

೨. ದ್ರದತ್ತಸಕಳಕ್ಷೋಣೀವಧೂಮಣ್ಡನೇ ಸಾಕ್ಷಾತ್ಕೋಕನದಾಸನೇನ ಸದೃಶಂ ಬ್ರಹ್ಮಾತ್ಮಜೈಸ್ಸೇವಿತೇ ಶುಂಭತ್ತೋಯಜನಾಭಪತ್ತನನಿಭೇ

೩. ಶ್ರೀಲೊಕ್ಕಿಗುಣ್ಡ್ಯಾಹ್ವಯೇ ಜೈನಸ್ಥಾನಮಚೀಕರದ್ಗುಣನಿಧಿಃ ಶ್ರೀ ದಾನಚಿನ್ತಾಮಣಿಃ॥ ಚಾಳುಕ್ಯಚಕ್ರಿಧ್ವಜಿನೀಪಮಾತ್ರಾ ಸಮರ್ಪ್ಪಿತಃ ಕಾ-

೪. ರಿತಜೈನಗೇಹಃ [*] ಶ್ರೀ ಲೊಕ್ಕಿಗುಣ್ಡ್ಯಾ [2*] ಪರಿಪಾಳನಾರ್ತ್ಥಂ ಸಹಸ್ರಸಂಖ್ಯೇಷು ಧರಾಮರೇಷು॥

೫. ಸ್ವಸ್ತಿ ಸಮಸ್ತ ಭುವನಾಶ್ರಯ ಶ್ರೀ ಪೃಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಪರಮಭಟ್ಟಾರಕ ಸತ್ಯಾಶ್ರಯಕುಳತಿಳಕ ಚಾಳುಕ್ಯಾಭ-

೬. ರಣ ಶ್ರೀ ಮದಾಹವಮಲ್ಲದೇವರ ರಾಜ್ಯ ಮುತ್ತರೋತ್ತರಾಭಿವೃದ್ಧಿಪ್ರವರ್ದ್ಧ ಮಾನಮಾಚಂದ್ರಾರ್ಕ್ಕ ತಾರಂಬರಂ ಸಲ್ಲುತ್ತಮಿರೆ ತತ್ಪಾದಪದ್ಮೋಪಜೀವಿಯು

೭. ಮಖಿಳರಾಜ್ಯಭರನಿರೂಪಿತಮಹಾಮನ್ತ್ರಾಕ್ಷಪಟಳಾಧಿಪತಿಯುಮೆನಿಸಿ ॥ ಕನ್ದ॥ ಮಲ್ಲಾಮಲ್ಲಿಯೊಳಾನ್ತರಿ ಮಲ್ಲರನಾಹವದೊಳೊತ್ತಿಗೋ-

೮. ಳ್ಮರಿಗೊಳ್ವೀ ಬಲ್ಲಾಳ್ತನದಿನ್ದಾಹವಮಲ್ಲನ ಭುಜಾದಣ್ಡಮೆನಿಸಿ ಧ(೦)ಲ್ಲಂ ನೆಗಟ್ದಂ ॥ವೃತ್ತ॥ ಪೂಣದ್ದಿದಿರಾಗಿ ತಾಗಿದೂರನಾನಯೊಳೊಕ್ಕುವನೆಂದು ಬೆರ್ಚ್ಚಿ ಕೊಂ

೯. ಕಣಮೆಳ್ದಿಯಿಕ್ಕೆ ಬೆಂಗಿ ಬೆಱಗಾಗೆ ತಿವುಳ್ಕೆಲನಳ್ಕೆ ಮಾಳವಮಣೆಯಿಪೊದಳ್ದುದಿರ್ಕ್ಕಲದೆ ಮುಂದ್ದಣ ಪಿನ್ದಣಮಣ್ಡಳಕ್ಕೆ ಭೀಷಣಮತಿರೌದ್ರ

೧೦. ಮದ್ಭುತಮಗುರ್ವ್ವಿನೆ ತೇಜದಳುರ್ಕ್ಕೆ ಧಲ್ಲನ ॥ಕನ್ದ॥ ಧಲ್ಲಂಗಂ ನೆಗಳ್ದಾಹವಮಲ್ಲಂಗಂ ಭೇದಮುಂಟೆ ವಿಭವದೊಳದನೇನೆಲ್ಲರು ಮಱಿಯರೆ ಧರಣೀವಲ್ಲ-

೧೧. ಭ ಸಿಂಹಾಸನೈಕಭೇದಮೆ ಭೇದ [೦] ॥ವ॥ ಅನ್ತು ಮಣ್ಡಳಿಸಿದ್ಧಿಯುಂ ವಿವೇಕಬೃಹಸ್ಪತಿಯುಮೆನಿಸಿ ನೆಗಳ್ದ ಧಲ್ಲನ ಪಿರಿಯಮಗಂ ॥ವೃ॥ ಭರದಿಂ

೧೨. ರಾವಣಸೇನೆಯಂ ತವಿಸಿ ಗೆಲ್ದಾ ಗಣ್ಡರುಂ ಭಣ್ಡಣಾಜಿರದೊಳ್ ಕೌರವಸೇನೆಯಂ ತುಳಿದು ಗೆಲ್ದಾಗಣ್ಡರುಂ ಗಣ್ಡಮಚ್ಚರದಿಂ ಶಕ್ತಿಯ ಬೀರರಂ

೧೩. ಪೊಣರ್ದು ಗೆಲ್ದಾ ಗಣ್ಡರುಂ ಪೀತಮತ್ಸರದಿಂ ಭಾಪಿಸುವಾಗಳೀ ಸಮರಕೊಳ್ಗಣ್ಡಂ ಬರಂ ಗಣ್ಡರೇ ॥ವ॥ ಆ ವಾಜಿಕುಳತಿಳಕನುಂ ತೇಜೋಭಾಸ್ಕರನುಂ

೧೪. ಪೀರತ್ರಿಣೇತ್ರನುಂ ನನ್ನಿ ಮಹಾರ್ಣ್ಣವನುಂ ಕನ್ದುಕ ಪುರನ್ದರನುಮೆನಿಸುವ ವೀರಾಗ್ರಣಿಯ ಪರಾಕ್ರಮಮೇದೊರೆಂತನೆ ॥ವೃ॥ ಧಾಳಿಯೊ-

೧೫. ಳಂಧ್ರನಂ ಪಿಡಿದಪಂ ಮಗಧೇಶನನಿಕ್ಕಿ ಮೆಟ್ಟಿಪಂ ಲಾಳನ ಗಂಟಲಂ ಮುರಿದಪಂ ಖಸನಂ ಪುಡಿಯೊಳ್ಪೊರಳ್ಚಿಪಂ ಕೋಳದೊಳಿಕ್ಕಿಪಂ ಮಲೆವ ಪಾ-

೧೬. ಣ್ಡ್ಯನನಾಹವಮಲ್ಲದೇವನಿಂ ಪೇಳೆನುತಿರ್ಪ್ಪನೀದೊರೆತು ಶೌರ್ಯ್ಯಗುಣೋನ್ನತಿ ನಾಗದೇವನ ॥ವ॥ ಆ ಮಹೀದೇವಕುಳ ಗಗನಗಭ-

೧೭. ಸ್ತಿಮಾಳಿಗೆ ಮಹಾಸತೀರತ್ನಂ ಕುಳಪತ್ನಿಯಾಗಿ ಗುಣದಂಕಕಾರ್ತ್ತಿಯುಂ ಕವಿವರಕಾಮಧೇನುವುಂ ಕಟಕಪವಿತ್ರೆಯುಂ ಜಿ-

೧೮. ನ ಧರ್ಮ್ಮಪತಾಕೆಯುಮೆನಿಸಿದ ದಾನಚಿನ್ತಾಮಣಿಯ ಮಹಾಪ್ರಭಾವಮೇದೋರೆಂತೆನೆ ॥ ಉನ್ನತ ಕುಕ್ಕುಟೇಶ್ವರ ಜಿನೇಶ್ವರನಂ

೧೯. ಜಿನಭಕ್ತೆ ಪೋಗಿ ಕಾಣ್ಬನ್ನೆಗಮನ್ನಮುಂ ತೊಱೆದು ಪರ್ವ್ವತಮಂ ಮುದದೇಱಿ ತಜ್ಜಿನಾಸನ್ನದೊಳತ್ತಿಯಬ್ಬೆಗೆ ಪಥಶ್ರಮಮಾದೊಡಕಾಳವೃಷ್ಟಿ

೨೦. ಯಾಯ್ತಿನ್ತಿವು ದೇವಭಕ್ತಿಗದು ಚೋದ್ಯಮ ಕೊಳ್ವ ಪುಷ್ಪವೃಷ್ಟಿಗಳ್॥ ನರಪನ ಬೆಸದಿಂ ಜಿನನಂ ಶಿರದೊಳ್ಪಲ್ಲಿ ತಾಳ್ದಿ ದಾನಚಿಂತಾಮಣಿ ನಿಬ್ಬ-

೨೧. ರಗೋದಾವರಿಯಂ ಪುಗೆ ಪರಿಯುಡುಗಿದುದಂದೊಡೊಳ್ಪನದನೇವೇಳ್ವಂ॥ ಮದವತ್ಕರಿ ಸೆಱೆಯಂ ಪಱಿದೊದವಿದ ಮುಳಿಸಿಂದೆ ಘೋರೆನೆಯ್ತಂದೊಡರ್ಕ್ಕದಿ-

೨೨. ರದಿರೆ ಭಕ್ತಿಯಿಂದದು ಪದಯುಗಕೆಱಗಿದುದು ದಾನಚಿಂತಾಮಣಿಯ ಮುದದರ್ಚ್ಚಿಪ ಜಿನಬಿಂಬಂ ನದಿಯೊಳ್ಕಯ್ಯಬ್ದುರ್ದ್ದುಕಿ ಬಿಳ್ದುದು ಬಪ್ಪಿನ ಮು-

೨೩. ಣ್ಬುದನುಳಿದಿರಲೆಂಟುದಿನಕ್ಕದು ಬಂದುದು ಕಯ್ಗೆ ದಾನಚಿನ್ತಾಮಣಿಯ॥ ಪ್ರಳೆಯಾಗ್ನಿಯನ್ತೆ ಕಟಕಮ ನೊಳಕೊಣ್ಡುಳುರ್ವ್ವಗ್ನಿ ದಾನಚಿನ್ತಾಮ

೨೪. ಣಿ ನಿರ್ಮ್ಮಳಜಿನಗನ್ಧೋದಕಮಂ ತಳಿಯಲ್ಕುಪಶಮಿಸಿತೆನ್ದೊಡೇ ವರ್ಣಿಸುವೆ॥ ಒಡನೇಱಿಸವತಿ ನೂಂಕಲ್ಕೊಡರಿಸೆ ತೊಱೆಯೊಳಗೆ ಪಱಿಗಲ

೨೫. ತ್ತಿತ್ತಲಣಂ ಮಿಡುಕದೆ ತಿರಿಯುತ್ತಿರೆ ಕಣ್ಡಿಡಿಗಱಗಿದಳತ್ತಿಯಬ್ಬೆ ಸತಿಭಯವಶದಿಂ॥ ಜಿನಧರ್ಮ್ಮಪತಾಕೆಗೆ ವಿಮಳ ನರ್ಮ್ಮದಾನದಿಯ

೨೬. [ಕು] ಱುಳವಾವೆಯ ಜನನಂ ವಿನುತಂ ಕಾಣ್ಬನೆಗಂ ಕೂಳನ ತೋಱಿದುದು ಸನ್ದು ದನ್ತದಾಜನ್ಮಾನ್ತಂ ॥ವೃ॥ ಜಿನಪದಪಂಕಜಭ್ರಮರನೆಂಬ ನೆಗರ್ತ್ತೆಯ

೨೭. ನಾಳ್ದ ಮಲ್ಲಪಯ್ಯನ ನೆಗೞ್ದಪ್ಪಕಬ್ಬೆಯ ಮಗಳ್ ಶಚಿವೋತ್ತಮನಪ್ಪ ಧಲ್ಲಪಯ್ಯನ ಸೊಸೆ ನಾಗದೇವನ ಕುಳಾಂಗನೆ ತೈಲನ ತಾಯ್ಜಸಕ್ಕೆ ಭಾಜನಮೆ-

೨೮. ನಿಪತ್ತಿಮಬ್ಬೆ ಜಿನಶಾಸನಮಂ ಬೆಳಗುತ್ತ ಮಿೞ್ದಪಳ್॥ ಎಣೆ ಮರುದೇವಿ ಪಾಸಟಿ ಸುಷೇಣೆ ಸಮಂ ಶಿವದೇವಿ ಪಾಸಟಿ ಲಕ್ಷ್ಮಣೆ ಸದೃಶಂ ಮಹಾವಿಜಯ-

೨೯. ಸೇನೆ ಸಮಾನೆ ಸುಸೀಳೆ ಪೋಲ್ವೆ ರುಗ್ಮಿಣಿ ಸರಿ ಸತ್ಯಭಾವೆ ತೊಣೆ ಮಿಕ್ಕ ಸುಳೋಚನೆ ತತ್ಸ್ವರೂಪೆ ರೋಹಿಣಿ ದೊರೆ ಸಂದರುನ್ಧತಿ ಪೆಱಱ್ದೊ-

೩೦. ರಯೇ ಗುಣದಂಕಕಾರ್ತ್ತಿಯೊಳ್॥ ಪರಮ ಶ್ರೀಜಿನನಾಥಗೇಹವಿಳಸಚ್ಛಂದೋಹ ಸಂದೋಹ ಭಾಸುರಜೈನಪ್ರತಿಮಾ ವಿಚಿತ್ರಮಣಿಘಂಟಾ ಚಿತ್ರಮಣಿಘಂಟಾ-

೩೧. ಮಾಳಿಕಾಸಂಕೆ ಸಾಯಿರದಯ್ನೂಱಿವು ಬೇಱವೇಱೆನಿಪಿನ್ನಂ ನಿರ್ಮ್ಮಾಪಣಂಗೆಯ್ದು ಭೂಭರದೊಳ್ ಧರ್ಮ್ಮಮನತ್ತಿಮಬ್ಬೆಯವೊಲಿನ್ತಾರುಜ್ವಳಂ

೩೨. ಮಾಡಿದರ್ ॥ಕಂ॥ ಆ ಪರಮೇಶ್ವರಿಗೆ ಜಗದ್ವ್ಯಾಪಕಶುದ್ಧೇಂದುಕೀರ್ತ್ತಿ ಪಿರಿಯಮಗಂ ಲಕ್ಷ್ಮೀಪತಿ ಸಮಗ್ರ ವಿಜಯಶ್ರೀಪತಿಯೆನೆ ಧರೆಗೆ ನೆಗ

೩೩. ೞ್ದಪಡವಳ ತೈಲಂ॥ ಪಗರಮಣ್ಮಮೆಚ್ಚುಪನಿಘೃಷ್ಟಿಯೆ ಬೂದಿಯಿ(ಂ)ಬೊಟ್ಟು ಗಣ್ಡವಾತುಗಿಬಗಿ ಕೀರ್ತ್ತಿಕುಪ್ಪ ಕುಱಿಮುತ್ತರಮೂದಲೆ ಪೆಂ-

೩೪. ಪು ವಿಕ್ರಮಂ ಭಗವತಿಯೇಱ ಶೌಚಗುಣಮತ್ತಿಯಪಣ್ಣೆನಿಪೇಳಪುಣ್ಡರಂ ತೆಗಳ್ವುದುದಾರ ಚಾರು ಚರಿತಪ್ರಭೆಯಿಂ ಪಡೆವಳ್ಳ ತೈಲನ ॥ವ॥

೩೫. ಇನ್ತು ನನ್ನಿನಾರಾಯಣಂ ಸಮ್ಯಕ್ತ್ವರತ್ನಾಕರಂ ಪತಿಮೆಚ್ಚೆಗಣ್ಡನಾಳ್ದನಚಕ್ರಂ ಕರ್ಪೂರವರ್ಷಂ ಚತುರಚತುರಾನನಂ ಗುಣಮೇರುವಾಯಿ (ಧಾ)-

೩೬. ಚಾರ್ಯ್ಯನೆಂಬ ನಾಮಮಾಳೆ ದಿಗ್ವಧೂ ಧಮ್ಮಿಲ್ಲ ಮಾಳೆಯೆನಿಸಿ ಶ್ರೀಮತ್ಪಡೆವಳ್ಳ ತೈಲಪಯ್ಯಂ ಮಾಸವಾಡಿ ನೂಱನಾಲ್ವತ್ತುಮಂ ಬೀಳವೃ-

೩೭. ತ್ತಿಯಿನಾಳುತ್ತಮಿರೆ ॥ವೃ॥ ವಿಳಸದ್ಭೂದೇವವೇದಧ್ವನಿಸಮುಚಿತಧರ್ಮ್ಮಾರ್ತ್ಥಶಾಸ್ತ್ರಾರ್ತ್ಥವನ್ನಿರ್ಮ್ಮಳ ಧರ್ಮ್ಮಾರ್ತ್ಥೋಕ್ತಿನಾನಾಜನಪದಜ (ನ)

೩೮. ತಾನನ್ದಕೋಳಾಹ.....ಣ್ಯಸಂಪದ್ವಿಳಸನಮಳವಟ್ಟಿರ್ಪ್ಪಸಂ ತನ್ನೊಳುರ್ವ್ವೀಲಲನಾಲಾಲಾಟಲೀಳಾತಿಳಕ ಮೆನಿಸಿ ಸಂ

೩೯. ಹಾರಂ ... ರಣಾಗತವಾರಿಧಿ ತಚ್ಚರರ್ಯ್ಯಶಃಪ್ರಸರವಿಳಾಸರಂಜಿತದಿಶಾವಳಯದ್ವಿಜಮು-

೪೦. ಖ್ಯರಾನ.....ದೇರ್ನ್ನಯಶಾಸ್ತ್ರವಿಶಾರದರ್ವ್ವರಾಜಿಸುತಿರಲಾ ಚತುಸ್ಸಮಯರಕ್ಷಕರುದ್ಧ್ಯಗು-

೪೧. ಣೌಘರಂಜಿತರ್॥ ಇನ್ತೆನಿಸಿಪ್ಪ (ತ) ತ್ಪುರವರಾಚಳಶೇಖರಮೆಂಬಿನಂ ದಿಶಾದನ್ತಿಯ ದನ್ತಕಾನ್ತಿನಿಜ ಸೌಧವಿಶಾಳವಿಲೋಳಭಿತ್ತಿ-

೪೨. ಯೊಳ್ಸಂತತಮೊಪ್ಪುತಿರ್ಪ್ಪನೆಗಮೂರ್ಜ್ಜಿತಮಪ್ಪಿನಮತ್ತಿಯಬ್ಬೆಚೈರನ್ತನಚೇಳಿನೀಚರಿತೆ ಮಾಡಿಸಿದ ಜ್ಜಿನರಾಜಗೇಹಮಂ ॥ ಜಿತದೇ-

೪೩. ವಾಧೀಶ ವಾಸಾಸ್ಪದಮಧರಿತನಾ (ಗೇ)ಂದ್ರ ನೀಡೋನ್ನತಂ ರಂಜಿತನಾನಾಕೂಟಶೋಭಾವಿಭವ ಮುದಿತ ತತ್ಕಾಮಿನೀಚಾರುಕೀರ್ತ್ತಿಪ್ರತತಿ ಪ್ರೋತ್ಕಂ-

೪೪. ದವೆಂಬನ್ನೆಸೆದುದಸದಳಂ ಲೊಕ್ಕಿಗುಣ್ಡೆಪುರೋರ್ಬ್ಬೀಪತಿಚಂಚದ್ರತ್ನ ಕೋಟಿಸ್ಫುರಿತಮಕುಟಸಂಭಾ ಸಜ್ಜೈನಾಧಿವಾಸಂ ।।ಕ।। ಆ ಸತಿ ಮು

೪೫. ಮ್ಮಾಡಿಸಿದಾ ಸಾಸಿರದಯ್ಯೂಱುಬಸದಿಗಿದುಕಳಶಮನಲ್ಪಾಸುರಮಾಯ್ತು ಜಿನೇಂದ್ರಾವಾಸಂ ತೊಳಗುವ ಸುವರ್ಣ್ಣಕಳಶೋನ್ನತಿಯಿಂ।।

೪೬. ।।ವ।। ಇನ್ತನತಿಶಯಸರಳವಿಮಳಕೇವಳಾವಗಮತರುಣ ..... ಕಿರಣ ಕಿರಣಶತ ವಿಭಾಸಮಾನ ಸಕಳವಸ್ತುವಿಸ್ತರ ಜಿನೇಂದ್ರವಚನ-

೪೭. (ರ)ಚನಾವಚಿತ ಸಾ(ಕಾ)ರಮಾರ್ಗ್ಗಪವನಪಥಚಂದ್ರಲೇಖೆಯು। ಅಭ್ಯುದಯನ್ನೈಶ್ರೇಯಸ (ಸು) ಖಾವಾಪ್ತಿಹೇತುಭೂತಾಹಾರಾ

೪೮. ಭಯಭೈಷಜ್ಯಶಾಸ್ತ್ರಾಭಿಧಾನದಾನಪೂಜಾ ಶೀಳೋಪವಾಸಾದ್ಯಶೇಷಗುಣಗಣವಿಭಾಸುರತೆಯಿಂ ಗುಣದಂಕಕಾರ್ತ್ತಿಯುಂ ಸಕಳದಿವಿಜೇಂದ್ರ-

೪೯. ವಿಷ್ಟರ ಪ್ರಕಂಪನಸಮರ್ತ್ಥಾನನ್ಯಸಾಧಾರಣನಿಜಪತಿವ್ರತಾ ಗುಣಜಿನೇಂದ್ರ ಪದಪಯೋಜಸಂಜಾತ ಭಕ್ತಿ ಭರಪ್ರಭಾವಾವಾಪ್ತ ಸಮಸ್ತ

೫೦. ಕಟಕಭಯಂಕರನದೀಶ್ರೋತೋವೇಗವಿಳಸನದಿಂ ಕಟಕಪವಿತ್ರೆಯುಂ। ಕವಿಕಥಕ ಗಾಯಕ ವಾದಕನಗ್ನ ಭಗ್ನ ನಟಭಟ ಮಾಗಧಾನಾಥಶಿ-

೫೧. ಷ್ಟೇಷ್ಟ ಸಮಭಿಲಷಿತಾರ್ತ್ಥದಾನವಿನೋದೆ ಪರಿಬೃಂಹಿತಾಭಿನವಯಶಟ್ಟುಹಬಧಿರೀಕೃತಾಶಾಗಜೇಂದ್ರ ಸುನ್ದರತೆಯಿಂ ದಾನಚಿನ್ತಾಮಣಿ

೫೨. ಯು[ಂ]ಮ್ಮನ್ದರಮಹೀಧರಾಯಮಾನಾಭ್ರಂಕಷ[ಸಮ್ಯಗ್ದ]ರ್ಶನಪ್ರಭಾವೆ ವಿಜಿತರುಗ್ಮಿಣೀಪ್ರಭಾವೆಯು ಮೆನಿಸುವತ್ತಿಮಬ್ಬರಸಿಯರ್ಸ್ವಕಳ ಗೂ-

೫೩. ರ್ಜ್ಜರವಿಜಯಾನನ್ತರಂ ಶ್ರೀಮದಾಹವಮಲ್ಲದೇವಂಗೆ ಬಿನ್ನಪಂಗೆಯ್ದು ಚಕ್ರವರ್ತ್ತಿದತ್ತಿ ಪ್ರಖ್ಯಾತಮಪ್ಪಶಾಸನಮಂ ಪೊನ್ನಕಳಶಂಬೆರಸು ಪಡೆದು ಸ-

೫೪. ಕವರ್ಷ ೯೨೯ನೆಯ ಪ್ಲವಂಗ ಸಂವತ್ಸರದ ಫಾಲ್ಗುಣಮಾಸದ ನನ್ದೀಶ್ವರದಷ್ಟ[ಮಿ]ಯುಂ ಬೃಹಸ್ಪತಿ ವಾರದಂದು ಶುಭಲಗ್ನೋದಯದೊಳ್ಮಹಾಧ್ವಜಮ-

೫೫. ಹಾಭಿಷೇಕ ಮಹಾದಾನ ಧರಣಾನನ್ತರಂ ತಮ್ಮ ಗುರುಗಳು ಸೂರಸ್ತಗಣದ ಕೌಱೂರ್ಗ್ಗಚ್ಛದ ಅರ್ಹನನ್ದಿ ಪಣ್ಡಿತದ್ದೇವರ್ಗ್ಗೆ ಶ್ರೀಲೊಕ್ಕಿಗುಣ್ಡಿಯೊ

೫೬. ಳ್ಬಸದಿಯಂ ಮಾಡಿಸಿಯದಕ್ಕೆ ತಳವೃತ್ತಿಯೆಂದು ಕೊಟ್ಟ ಸುಱಿಕಿಯ ಸೀಮಾಮರ್ಯ್ಯಾದೆಯೆನ್ತೆನ್ದೊಡೆ ತೆಂಕ ಪಾಲ್ವಳ್ಳಂ ನೈರಿತಿಯೊಳ್ಬರವು

೫೭. ಲಿಗೆಱಿಯ ತೆಂಕಣ ಕೋಡಿಯಿಂ ಬಡಗಲ್ಬರೆಯೆರದ ಕೊಳನುಂ ಬೂದಿವಾಳುಂ ವಾಯವ್ಯದ ದೆಸೆಯೊಳು ಗುರಿಯಪಳ್ಳಂ ಬಡಗಲಾಪಳ್ಳಮೆ ನೀರ್ವ್ವ-

೫೮. ರಿಯಾಗ ಮೂಡಲೆರಡುಂ ಪಳ್ಳದ ಕೂಡಲೇ ಮೇರೆಯಾಗ ಬಿಟ್ಟರದಕ್ಕಱುವಣಗದ್ಯಾಣ ಪಿರ್ವತ್ತು ಅಲ್ಲಿಯ ಗಾವುಣ್ಡಂಗೆ ಪನ್ನಿರ್ಮ್ಮತ್ತರ್ಕ್ಕಯ್ಯು

೫೯. ಮೊಂದು ಮನೆಯುಮಲ್ಲದೆ ಬಲ್ಲಾ[ಲ]ಲ್ಲೀ ಮರ್ಯ್ಯಾದೆಯ ಧರ್ಮ್ಮಮಂ ಕಾದು ನಡೆಯಿಸಿದಂಗೆ

ಪ್ರಯಾಗ ಕುರುಕ್ಷೇತ್ರ ಬಾಣರಾಸಿ ಅರ್ಗ್ಘ್ಯತೀರ್ತ್ಥಮೆಂಬ ತೀ-

೬೦. ರ್ತ್ಥಸ್ಥಾನಂಗಳೊಳ್ ಪನ್ನಿರ್ಚ್ಛಾಸಿರ ಕವಿಲೆಯ ಕೋಡುಂ ಕೊಳಗಿಸೊಳಂ ಪೊನ್ನುಂ ಬೆಳ್ಳಿಯೊಳಂ ಕಟ್ಟಿಸಿ ಪನ್ನಿರ್ಚ್ಛಾಸಿರ ಮಹಾಬ್ರಾಹ್ಮಣರ್ಗುಭಯಮುಖಿಗೊಟ್ಟ ಫಳಮನ್ತೀ

೬೧. ಧರ್ಮ್ಮಮನ್ನಡೆಯಿಸದೊಂಗೆ ಮುಂಪೇಲ್ದ ತೀರ್ತ್ಥಂಗಳೊಳನ್ತನಿತುಂ ಕವಿಲೆಗಳ್ಮ (೦) ನನ್ತನಿಬರ್ಮ್ಮಹಾ ಬ್ರಾಹ್ಮಣರುಮನಳಿದ ಪಞ್ಚಮಹಾಪಾತಕನಾ

೬೨. ಗಿ ನರಕಂ ಪುಗುಗು ।।ಐ।। ಬ್ರಹ್ಮನೆ(ದ)ಲ್ಲ ಮಗಾದೀ ಬ್ರಹ್ಮಜಿನಂ ತಾನೆನುತ್ತೆ ಸಾಸಿರ್ವ್ವರು ಮೀಬ್ರಹ್ಮಜಿನನಿಳಯಕಿತ್ತಪ್ಪ್ರ್ರಹ್ಮಜಿನಾಳಯ-

೬೩. ಮೆನಿಪ್ಪ ಪೆಸರಂ ಮುದದಿಂ।।ವೃ।। ಕಳಶದಿನುದ್ಧ್ವಕನ್ನಡಿಯಿನುನ್ನತ ಚಾಮರದಿಂ ಕರಂ ಮನಂಗೊಳಿಸುವ ಶಂಖದಿಂದುಭಯ ಚಲುಕದಿನುಜ್ಜ್ವಳಭ

೬೪. ತ್ರದಿನ್ಸನಾಪಿಳಕುಳಲಂಜಿತೋತ್ಕರದಿನೊಪ್ಪುವ ಪಂಚಮಹಾನಕಂಗಳಿಂ ಬಳಸಿ ಪೊದಳ್ದ ವಾಜಿದಳದಿಂದ ಮಗುಪ್ಪಿಪ ವೀರಕೋಟಿಯಿಂ ।। ಶಬಳಂರ

೬೫. ತ್ನದ ತೇಜಮುನ್ನುಮಧಿದೆಯ್ವಂ ಶಂಕಿಡೀಯೂರ್ಗ್ಗೆ ಚಂದ್ರಬಳಂ ಬ್ರಹ್ಮಜಿನೇಂದ್ರ ಗೇಹಮನುತಂ ಬಂ ದರ್ತ್ತಿಯಿಂ ಸೇಸೆಗೊಣ್ಣು ಬಲಂಗೊಣ್ಡು ಸಮನ್ತು ಪೋದ

೬೬. ನೆಸವೀ ಗ್ರಾಮಾಧಿಪಂ ಸಂದ ಬಾದುಬೆ ದೀಪಾವಳಿ ಕಾರಪುಣ್ಣಮೆಯೆನಿಪ್ಪೀ ಮೂಱು ಪರ್ವ್ವಂಗಳೊಳ್।। ಮಹಾಸತೀರತ್ನ ಮತ್ತಿಮಬ್ಬರಶಿಯರ್।

೬೭. ಸ್ವಸ್ತಿ ಯಮನಿಯಮಸ್ವಾಧ್ಯಾಯಧ್ಯಾನ ಧಾರಣಮೋನಾನುಷ್ಠಾಣ ಪರಾಯಣ ಜಪಸಮಾಧಿಶೀಳಸಮ್ಪನ್ನ ರ್ಸ್ಸಮಸ್ತ ಗುಣಗಣಾಳಂಕೃತರ್ವ್ವಿದಿತವೇ-

೬೮. ದಾರ್ತ್ಥ ವಿದ್ಯಾಪಾರಗಷ್ಷಟ್ಕರ್ಮ್ಮನಿರತರ್ಸ್ಸಪ್ತ ಸೋಮಸಂಸ್ಥಾವಭೃಥಾವಗಾಹನ ಪವಿತ್ರೀಕೃತ ಶರೀರರಷ್ಟಾದಶಧರ್ಮ್ಮಶಾಸ್ತ್ರಕುಶಳರೇಕವಾಕ್ಯರಚಳಿತಧೈರ್ಯ್ಯ

೬೯. ಸ್ಸಿಂಹಪರಾಕ್ರಮರಾಶ್ರಿತಜನಕಳ್ಪವೃಕ್ಷರಹಿತಪಕ್ಷಕ್ಷಯಕರರ್ಕ್ಕಲಿಯುಗ ಗಾಂಗೇಯರ್ಪ್ಪರಮ ಪರೋಪಕಾರಿಗ ಳ್ಸಾಪಾನುಗ್ರಹಸಮರ್ತ್ಥರ್ಕ್ಕಾ

೭೦. ಯ್ಯಬೃಹಸ್ಪತಿಗಳೇಕೈಕಪಣ್ಡಿತವೃಷ್ಟಿವಗೀತಿಮನೋಹರರ್ಪಾಪಭೀರುಗ ಳ್ಪರನಾರೀದೂರರ್ದ್ದುಷ್ಟವಿಧ್ವಂಸಕ ಶ್ಶಿಷ್ಟ ಜನಾಶ್ರಯರ್ಕ್ಕಾಮಕ್ರೋಧಲೋಭಮೋ.

೭೧. ಹಭಯವಿವರ್ಜ್ಜಿತದ್ದ್ವಾತ್ತ್ರಿಂಶಸಹಸ್ರಸಮಯಾಗ್ರ್ಘ್ಯರ್ಹ ದ್ವಿಜಕುಳತಿಳಕರ್ಸ್ಸರಣಾಗತ ವಜ್ರಪಂಜರರ್ ಶ್ರೀದಾಶರಥಿವಿನಿರ್ಮ್ಮಿತಮಹಾಗ್ರಾಮಂಶ್ರೀ

೭೨. ಲೊಕ್ಕಿಗುಣ್ಡಿಯೂರೊಡೆಯಪ್ರಮುಖಮಹಾಜನ ಸಾಸಿರ್ವ್ವರ ಕಯ್ಯೊಳ್ತನ್ನ ಬಸದಿಗೆ ಪುಜಾನಿಮಿತ್ತದಿಂ ಬೇಡಿ ಪಡೆದುವಿವಾವೆನ್ದೊಡೂರಿಂ ಪಡುವ-

೭೩. ಲುಂ ಚರಸತದೊಳಗಿತ್ತ ಮೂಱು ಮತ್ತರ ತೋಂಟಮೊಂದದಂ ಜೈನರ್ಪ್ರತಿಪಾಳಿಸುವರಾ ತೋಂಟಕ್ಕೆ ತೋಂಟಿಗಸಮಯಮಿಲ್ಲದನಾರೋರ್ವ್ವ ರ್ಮ್ಮಾರ್ಪ್ಪರವರ್ಬ್ಬಸ

೭೪. ದಿಗೆ ಸಮಭಾಗಮಿಕ್ಕಿಯುಣ್ಬರ್ ತೋಂಟಕ್ಕೆ ಕರವಂದತಳಭೋಗಮಸತುಮೊದಲಾಗೆ ಸರ್ವ್ವಬಾಧಾಪರಿಹಾರಂ। ಮತ್ತಂ ದೇವರ್ಗ್ಗೆ ನನ್ದಾದೀವಿಗೆಗಿತ್ತ ಗಾಣ ಮೊನ್ದ-

೭೫. ದಕೆ ಕರವಂದತಳಭೋಗಮಸತುಮೊದಲಾಗೆ ಸರ್ವ್ವಬಾಧಾಪರಿಹಾರಂ।। ಮತ್ತಮೀ ಬಸದಿಯಿಂ ಮೂಡಿಮಂಕಯ್ಯಗೇರಿಯಿಂ ಪಡುವ. ಉವರೆ

೭೬. ಪತ್ತಿಸೆಲಸೀಬಸದಿಯೊಡವೆ॥ಬತ್ತಿಯಿ...(ಗು)ದಲ್ಮತ್ತಾರ್ಗ್ಗಂಸಲ್ಲದೀ ಬಸದಿಯೊಡೆಮೆಯನತ್ಯುದ್ವೃತ್ತಂ ಗನ್ತದು ತಾನೆಱ್ದಿಗುತ್ತಂ ಗ್ರಾಮಕ್ಕೆ

೭೭. ಧರ್ಮ್ಮದ್ರೋಹಂ ॥ ಒಸೆದಿತ್ತಮ್ಮಾ೯ಜನಮೀ ಬಸದಿಯ ಸೂಳೆಗೆ ವಿಶೇಷದಿಂ ಪರಿಯರಮ್ಮೆಂದೆ ಸತುದಱಿಮ್ಮೆಂದಿ ಕರವಡವಿಸಿವಾಕೂಳಾಕಿಳ (ಗೈ)

೭೮. ಯ್ದು ತಳಭೋಗವಿವ ಆವಂ ಬಸದಿಗಳೊಳಕ್ಕೆ ದೇವರ್ಗ್ಗಸವಗ್ರಪೂಜೆ ಪೂಜಾರಿಗಮನ್ದೀವರೂಸೆದಿತ್ತಂ ಕುಪಿಣದ ದೇವರ ವಲ್ಲಭನ ತೇಜಮನಿತುಂ ನ

೭೯. ಡೆಗುಂ॥ ಬೋಧಿಸವೆ ಪೆಱವು ಜಿನಗೃಹಕ್ಕಾದಿಕ್ಯಮದಿಲ್ಲೆನಿಪ್ಪದಂ ಸನ್ಯಸನಾರಾಧನೆಯ ಜವದಿ ಸನ್ದನಿಶೀಧಿಗೆ ಯಡ್ಡಣಿಗೆ ತಳಿಗೆ ಪಟ್ಟಮಿವಿ

೮೦. (ನಿ)ತುಂ॥.....ಗಣವಾಗಗಣಮೀಗಣಮಿವೆನ್ನೆವೆನ್ನದೆ ಧರ್ಮ್ಮೋದ್ಯೋಗದಿಂದ ರಕ್ಷಿಸುವ ಸ್ರ್ಮಾಗಾರಸುಮಾರ್ಗ್ಗನಿರತರಿಲ್ಲಿಯ ಭವ್ಯರ್॥ ಶ್ಲೋ ॥

೮೧. ಸ್ವದತ್ತಂ ಪರದತ್ತಂ ವಾ ಯೋ ಹರೇತಿ ವಸುನ್ಧರಾ [೦] ಷಷ್ಟಿವ್ವರ್ಷಸಹಸ್ರಾಣಿ ವಿಷ್ಠಾಯಾಂ ಜಾಯತೇ ಕ್ರಿಮಿಃ॥ ಸಾಮಾನ್ಯೋಯಂ ಧರ್ಮ್ಮಸೇತುರ್ನ್ನಿಪಾಣಾಂ ಕಾಳೇ

೮೨. ಕಾಳೇಪಾಳನೀಯೋ ಭವದ್ಭಿಃ [1] ಸರ್ವ್ವನೇತಾನ್ಭಾವಿನಃಪ್ಪಾರ್ತ್ಥಿವೇಂದ್ರೋ ಭೂಯೋ ಭೂಯೋ ಯಾಚತೇ ರಾಮಭದ್ರಃ॥ ಪರಮಾರ್ತ್ಥಂ ಜಿನತೀರ್ತ್ಥಯೋಗಿ

೮೩. ಜಿನತೀರ್ತ್ಥವ್ಯೋಮಶೀತಾಂಶು ದಿಗ್ವಿಂದ್ಯಾಯಾಘಾಟಸುಕೀರ್ತ್ತಿಜೈನ ವೃಷದಣ್ಣಾಧೀಶನುದ್ಯಜ್ಜಿನೇಶ್ವರ ಪಾದಾಂಬುಜಷಟ್ಪದಂ ಬೆಳಗಿದಂ ಸಮ್ಯಕ್ತ್ವರತ್ನಾ

೮೪. ಕರಂ ಸಿರಿಪಾಳಂ ಜಿನಧರ್ಮ್ಮನಿರ್ಮ್ಮಳನುತಪ್ರಖ್ಯಾತೆಯಿಂ ಲೋಕಮಂ॥ ॥ ಪರಮಶ್ರೀಜಿನಧರ್ಮ್ಮಾಂಬರರವಿ ಸಿರಿಪಾಳಸೆಟ್ಟಿಯಾತ್ಮಜ

೮೫. ನುದ್ವಚ್ಚರಿತಂ ಬಾಹುಬಲಿ ಸವಿಸ್ತರದಿನ್ದಂ ಬರೆದನೆನ್ದೊ ಡಾಪೂರ್ಗಳರಿದಂ॥ ನಿರುಪಮಮತ್ತಿಯಬ್ಬೆಯ ಜಿನೇಂದ್ರಗೃಹಂ ಧರಣೀತಳಕ್ಕೆ

೮೬. ಬೀಳ್ತರೆ ಪೊಸತಾಗಿ ದೆಯ್ಯಭರತಾರ್ಯ್ಯನಿನಾಭರತಾರ್ಯ್ಯನಿಂ ಬಳಿಕ್ಕಿರದದು (ಚೋಳರಿ) ನ್ದರಲೆ ಬೆಂದಡೆ ಸುನ್ದರಮಾಗೆ ನಾಕಿಯಿಂ ಪರಮಪರೋಪ

೮೭. ಕಾರಿ ಸಿರಿಪಾಳನಿನೇ ಪರಿಪೂರ್ಣ್ಣಮಾದುದೊ॥ ಆ ಬಸದಿಯ ಪ್ರತಿಬದ್ಧವಪ್ಪ ತೋಂಟದ ಘಟಾಂತಿಕೆಯ ಬಸದಿಯ ಪಾರ್ಶ್ವ

೮೮. ದೇವರ್ಗ್ಗೆಸೆಡೆವ (ಪುಟ್ಟಿ) ಮೂನೂಱು ॥ ಈ ತೋಂಟಮುನಾರೊರ್ಬ್ಬರು ಮಾಡಿದವರು ಪುಷ್ಪಮಂ ನಡೆಸುವರು ॥

*ಸಾಧನೆ, ೨೨-೩, ೪ (೮೭-೮೮), ೧೯೯೩*
*ಗುಣದಂಕಕಾರ್ತಿ ಅತ್ತಿಮಬ್ಬೆ, ೧೯೯೪, ಪು. ೧೨-೭೬*

# ೬. ಎರಡು ಹೊಸ ಶಾಸನಗಳು ಮತ್ತು ನಾಗಚಂದ್ರನ ಇತಿವೃತ್ತ

● ಸೀತಾರಾಮ ಜಾಗೀರ್‌ದಾರ್

'ಅಭಿನವ ಪಂಪ' ಎಂದು ಪ್ರಸಿದ್ಧನಾದ ನಾಗಚಂದ್ರ ಕವಿ 'ರಾಮಚಂದ್ರಚರಿತ ಪುರಾಣಂ' ಮತ್ತು 'ಮಲ್ಲಿನಾಥ ಪುರಾಣಂ' ಎಂಬ ಎರಡು ಕೃತಿಗಳನ್ನು ಕನ್ನಡದಲ್ಲಿ ರಚಿಸಿದುದು ಸದ್ಯ ವಿಶ್ರುತ ಸಂಗತಿ. ಈ ಎರಡು ಕೃತಿಗಳಲ್ಲೂ ಆತ ತನ್ನ ಬಗ್ಗೆ ವಿಶೇಷ ಹೇಳಿಕೊಂಡಿಲ್ಲ. ಅವನು ಬಾಳಿ ಬದುಕಿದ ಕಾಲ ಹಾಗೂ ಪ್ರದೇಶ ಇವು ಇನ್ನೂ ಅನಿರ್ಣೀತ ಸಂಗತಿಗಳು.[೧]

ನಾಗಚಂದ್ರ ತಾನು ವಿಜಯಪುರದಲ್ಲಿ ಮಲ್ಲಿನಾಥ ತೀರ್ಥಂಕರನ ಬಸದಿಯನ್ನು ಕಟ್ಟಿಸಿದುದಾಗಿ ಹೇಳಿದ್ದಾನೆ:

> ನಿಜವಿಭವೋದಯಂ ಸಫಳಮಾಯ್ತೆನೆ ಮಲ್ಲಿಜಿನೇಂದ್ರಗೇಹಮಂ
> ವಿಜಯಪುರಕ್ಕಳಂಕರಣಮಾಗಿರೆ ಮಾಡಿಸಿ ತತ್ಚರಿತ್ರಮಂ
> ಸುಜನಸಭಾವತಂಸಮೆನೆ ಪೇಟ್ಟುದಿತೋದಿತಮಾಗೆ ಮಾಡಿದಂ
> ನಿಜಕವಿತಾಗುಣೋದಯಮದೆಂಬಿನಮೀ ಕೃತಿ ನಾಗಚಂದ್ರನಾ।[೨]

ಈ 'ವಿಜಯಪುರ' ಯಾವುದು ಎಂಬುದರ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದೆ:

೧. 'ಮಧುರಚೆನ್ನ'[೩] ಮತ್ತು ರಾ. ನರಸಿಂಹಾಚಾರ್ಯರು[೪] ಕವಿ ಈಗಿನ ಉತ್ತರ ಕರ್ನಾಟಕ ಬಿಜಾಪುರ ಜಿಲ್ಲೆಯ ಬಿಜಾಪುರದಲ್ಲಿ (ಇದರ ಕನ್ನಡ ರೂಪ ಮತ್ತು ಜನಬಳಕೆಯಲ್ಲಿ ಇಂದಿಗೂ ಇರುವ ರೂಪ 'ವಿಜಾಪುರ'<ವಿಜಯಪುರ ಎಂದೇ) ಇದ್ದನು ಎಂದು ಅಭಿಪ್ರಾಯ ಪಟ್ಟಿದ್ದಾರೆ.

೨. ಗೋವಿಂದ ಪೈ ಅವರು 'ಬನವಾಸಿ ದೇಶದ ಪಡುಗಡಿಯ ಕಡಲ ದಂಡೆಯಲ್ಲಿ ತಾನೆ ಇರುವ ಯಾವೊಂದು ಊರಿನವನಾಗಿರಬೇಕು,' ಎಂದಿದ್ದಾರೆ.[೫]

೧ ಇತ್ತೀಚೆಗೆ ಹೊರಬಂದ ಈ ಗ್ರಂಥಗಳನ್ನು ನೋಡಿ:
  a) ಮಲ್ಲಿನಾಥ ಪುರಾಣಂ, ಸಂ. ಡಾ. ಬಿ. ಬಿ. ಹೆಂಡಿ, ಪ್ರಸ್ತಾವನೆ, ಪು. iii-xiv (೧೯೭೪)
  b) ಮಲ್ಲಿನಾಥ ಪುರಾಣ ಸಂಗ್ರಹ, ಸಂ. ಡಾ. ಎಂ. ಎಂ. ಕಲ್ಬುರ್ಗಿ, ಪೀಠಿಕೆ, ಪು. xiv (೧೯೭೪)
  c) ರಾಮಚಂದ್ರಚರಿತ ಪುರಾಣಂ, ಸಂ. ಡಾ. ಆರ್. ಸಿ. ಹಿರೇಮಠ (೧೯೭೫), ಪ್ರಸ್ತಾವನೆ, ಪು.೧-೬
  d) ಡಿ. ವಿಜಯ, ನಾಗಚಂದ್ರ-ಇತಿವೃತ್ತ, ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ, ಮೈಸೂರು (೧೯೭೫), ಪು. ೭೭೩-೭೯೧

೨ ಪೂರ್ವೋಕ್ತ 'ಮಲ್ಲಿನಾಥ ಪುರಾಣಂ', ಆ. ೧೪-ಪ. ೨೧೧, ಪು. ३೫೭

೩ ಅದೇ ಗ್ರಂಥ, ಪ್ರಸ್ತಾವನೆ, ಪು. iv

೪ ಕ. ಕ. ಚ., ಭಾಗ ೧ (೧೯೬೧), ಪು. ೧೧೧

೫ ನಾಗಚಂದ್ರನ ಕಾಲ ನಿರ್ಣಯ, 'ಅಭಿನವ ಪಂಪ' ಗ್ರಂಥ, ಪು. ३೬

೩) ಡಿ. ಎಲ್. ನರಸಿಂಹಾಚಾರ್ ಅವರು 'ಪಂಪರಾಮಾಯಣಸಂಗ್ರಹ' ಎಂಬ ಗ್ರಂಥದಲ್ಲಿ ಈ ಎರಡು ಅಭಿಪ್ರಾಯಗಳಿಗೆ ವ್ಯತಿರಿಕ್ತವಾಗಿ, ಮೈಸೂರು ಜಿಲ್ಲೆಯ 'ತಲಕಾಡು ಪ್ರಾಂತದ ವಿಜಯಪುರ' ಎಂದು ತೃತೀಯ ಪಂಥವನ್ನು ಪ್ರತಿಪಾದಿಸಿದ್ದಾರೆ – ಇನಿತು ಶಂಕೆಯುಳ್ಳವರೂ ಆಗಿದ್ದಾರೆ.[೬]

ಈ ಮೂರು ಅಭಿಪ್ರಾಯಗಳಲ್ಲಿ ಒಂದಾದ ಶ್ರೀ ಪೈಯವರ ಅಭಿಪ್ರಾಯವನ್ನು ಕುರಿತು ಡಾ. ರಂ. ಶ್ರೀ. ಮುಗಳಿ, ''ಶ್ರೀ ಗೋವಿಂದ ಪೈಗಳು ಕೊಟ್ಟ ಆಧಾರಗಳು ಬಲಿಷ್ಠವಾಗಿಲ್ಲ'' ಎಂದು ಸೂಚಿಸಿದ್ದಾರೆ.[೭] ನಾಮಸಾದೃಶ್ಯದ ಮೂಲಕ ಎರಡು ವಿಜಯಪುರಗಳಲ್ಲಿ ಯಾವುದು ಎಂಬುದು ಇನ್ನೂ ನಿರ್ಧಾರವಾಗಿಲ್ಲ. ಡಾ. ಮುಗಳಿ, ಡಾ. ಹಿರೇಮಠ, ಡಾ. ಹಂಡಿ, ಡಾ. ಕಲ್ಬುರ್ಗಿ ಇವರುಗಳು ಒಂದನೆಯ ಅಭಿಪ್ರಾಯವನ್ನು ಅನುಮೋದಿಸಿದರೆ[೮] ಕೆಲವರು ಡಿ.ಎಲ್.ಎನ್. ಅವರ ಅಭಿಪ್ರಾಯವನ್ನು ಅನುಮೋದಿಸಿದ್ದಾರೆ.[೯] ಸದ್ಯ ನನಗೆ ತಿಳಿದಂತೆ ಎರಡೂ ವಿಜಯಪುರಗಳಲ್ಲಿ ಮಲ್ಲಿನಾಥನ ಜಿನಬಸದಿಯ ಅವಶೇಷಗಳು ಇಲ್ಲ. ಉತ್ತರ ಭಾಗದ ವಿಜಯಪುರ ಮಹಮ್ಮದೀಯರ ಆಡಳಿತೆಯ ಕಾಲದಲ್ಲಿ ವಿಶೇಷ ಹಾಳಾಗಿದ್ದು ಅಲ್ಲಿಯ ಹಲವು ದೇವಾಯತನಗಳು ನಾಮನಿರ್ದೇಶವಿಲ್ಲದ ಹಾಗೆ ನಿಶ್ಶೇಷವಾಗಿ ಹಾಳಾದಂತೆ ದಕ್ಷಿಣದ ವಿಜಯಪುರ ಹಾಳಾಗಿಲ್ಲ. ತಲಕಾಡಿನ ಈ ವಿಜಯಪುರದಲ್ಲಿ ತಲಕಾಡಿನ ದೇವಸ್ಥಾನಗಳ ಹಾಗೆ ಕಿಂಚಿತ್ತಾದರೂ ಅವಶೇಷ ಉಳಿಯುತ್ತಿತ್ತು. ವಿಜಯಪುರದಲ್ಲಿಯೆ ಇನ್ನೂ ಕೆಲವು ದೇವಾಲಯಗಳು ಉಳಿದು ನಿಂತಿವೆಯೆಂಬುದು ಗಮನಾರ್ಹವಾದ ಸಂಗತಿ. ಉತ್ತರ ಕರ್ನಾಟಕದ ವಿಜಯಪುರದಲ್ಲಿ ನಾಗಚಂದ್ರಕವಿಯ 'ರಾಮಚಂದ್ರಚರಿತ ಪುರಾಣಂ' ಗ್ರಂಥದ ಕೆಲ ಪದ್ಯಗಳ ಪದಗುಂಫನಗಳನ್ನು ಹೊತ್ತುನಿಂತ ಸುಮಾರು ಸಮಕಾಲೀನ ಶಾಸನಾಧಾರವೊಂದು ಇದ್ದ ಕಾರಣದಿಂದ ಒಂದನೆಯ ಅಭಿಪ್ರಾಯ ಡಾ. ಕಲ್ಬುರ್ಗಿ ಅವರು ಹೇಳುವಂತೆ 'ಇನ್ನೂ ಗಟ್ಟಿಯಾಗಿ ಉಳಿದಿದೆ'[೧೦] ಇದೇ ರೀತಿಯಾಗಿ ನಾಗಚಂದ್ರನ ಕಾಲದ ಸಮಸ್ಯೆಯೂ ವಿದ್ವಾಂಸರಲ್ಲಿ ಕ್ರಿ.ಶ. ಸು. ೧೦೦೦ದಿಂದ ೧೨ನೆಯ ಶತಮಾನದ ಪೂರ್ವಾರ್ಧದ ವರೆಗೆ ತೂಗುಮಂಚದಲ್ಲಿ ಜೀಕಿಹಾಕುತ್ತಲಿದೆ. ಇನ್ನು ನಾಗಚಂದ್ರನ ವಂಶ ಚರಿತ್ರೆಯ ನಿರೂಪಣೆಯ ಸಮಸ್ಯೆಯಲ್ಲಿ 'ಸಮಯ ಪರೀಕ್ಷೆ' ಗ್ರಂಥದ ಕರ್ತೃ ಬ್ರಹ್ಮಶಿವನನ್ನು ಅವನ ಮೊಮ್ಮಗನೆಂದು ಕೆಲವರು ನಿರೂಪಿಸಿದ್ದಾರೆ.[೧೧] ಬ್ರಹ್ಮಶಿವನಿಗೂ ನಾಗಚಂದ್ರನಿಗೂ ಹೀಗೆ ತಳುಕುಹಾಕುವುದು ಸರಿಯಲ್ಲವೆಂದು ಈಗಾಗಲೇ ಬರೆದಾಗಿದೆ. ನಾಗಚಂದ್ರನ ವಂಶದ ಬಗ್ಗೆ, ಆತ ಇದ್ದ ಸ್ಥಳದ ಬಗ್ಗೆ ವಿಜಾಪುರ ಜಿಲ್ಲೆಯ ವಿಜಾಪುರದಿಂದ

---

೬ ಪಂಪರಾಮಾಯಣ ಸಂಗ್ರಹ (೧೯೫೧). ಪೀಠಿಕೆ, ಪು. VII, ಅ. ಟಿ.-೨

೭ ಕನ್ನಡ ಸಾಹಿತ್ಯ ಚರಿತ್ರೆ (೧೯೫೩), ಪು. ೧೨೪

೮ ಪೂರ್ವೋಕ್ತ ಬರವಣಿಗೆಗಳು

೯ a) ನಾಗಚಂದ್ರ (ಸಿ.ಪಿ.ಕೆ), ಪು ೬ (೧೯೭೩)
b) ಕನ್ನಡ ಸಾಹಿತ್ಯ ಚರಿತ್ರೆ (ಕ. ಅ. ಸಂಸ್ಥೆ, ಮೈಸೂರು) ಪು. ೭೮೩

೧೦ ಡಾ. ಎಂ. ಎಂ. ಕಲ್ಬುರ್ಗಿ, ಪೂರ್ವೋಕ್ತ ಗ್ರಂಥ, ಪು. xiv

೧೧ a) ಎಚ್. ದೇವೀರಪ್ಪ: ಬ್ರಹ್ಮಶಿವನ ಕಾಲ ವಿಚಾರ ಪ್ರ. ಕ. ೨೪-೪
b) ಡಾ. ಎಂ. ಎಂ. ಕಲ್ಬುರ್ಗಿ, ಪೂರ್ವೋಕ್ತ ಗ್ರಂಥ, ಪ್ರಸ್ತಾವನೆ, ಪು. vi-viii

ಸುಮಾರು ೧೬ ಮೈಲಿಗಳ ವಿಹಗ ಪಥದಂತರದಲ್ಲಿರುವ 'ಬಾಬಾನಗರ' ಎಂಬ ಗ್ರಾಮದಲ್ಲಿ ದೊರೆತ ಶಾಸನವೊಂದು ಹೊಸ ಬೆಳಕನ್ನು ಬೀರುತ್ತದೆ.[೧೨] ದುರ್ದೈವದ ಸಂಗತಿಯೆಂದರೆ, ಈ ದೊಡ್ಡ ಶಾಸನದಲ್ಲಿ (೭೧ ಪಂಕ್ತಿಗಳಿವೆ) ಸ್ಥಳವು ಸಾಲದೆ ಮೇಲೆ ಬರೆದ, ಕವಿಯ ಮೊಮ್ಮಗನಿಗೆ ಸಂಬಂಧಿಸಿದ ಒಂದು ಪದ್ಯಭಾಗವನ್ನು ಬಿಟ್ಟರೆ ಮಧ್ಯಭಾಗದಲ್ಲಿ ಅಲ್ಲಲ್ಲಿ ಬರೆದುದೆಲ್ಲವೂ ಅಳಿಸಿಹೋಗಿದೆ. ನಾಗಚಂದ್ರನಿಗೆ 'ನಾಗಚಂದ್ರ' ಹಾಗೂ 'ನಾಗಾರ್ಯ' ಎಂಬ ಇಬ್ಬರು ಮೊಮ್ಮಕ್ಕಳು ಇದ್ದ ಉಲ್ಲೇಖ ಈ ಶಾಸನದಲ್ಲಿದೆ. ನೋಡಿ:

೭೦. ಪೊಸಮುತ್ತಂ ಚತುರಾಸ್ಯನಾಯ್ದಮೃತದಿಂದ [೦] ತೋಯ್ದು ಕೋದಿಕ್ಕಿದೆಕ್ಕಸರಂ
ವಾಗ್ವಧುವಿಗೆ ತಾನೆನಿಸಿ ಸುವ್ಯಕ್ತಂಗಳಾದಕ್ಕರಂ ಮಿಸುಗಲು
ಶಾಸನಮಂ ಸಮನ್ತು ಬರೆದಂ

೭೧. ಶ್ರೀ ಮಲ್ಲಿನಾಥದೇವಾವಸಥಂ ಸತ್ಕವಿ ನಾಗಚಂದ್ರಸುತಮೊಮ್ಮಂ
ನಾಗಚಂದ್ರಾಗ್ರಜಂ॥ ಮೂಲಿಗ ನಾಗಾರ್ಯ್ಯಂ....॥[೧೩]

– ಇಲ್ಲಿ ಬಂದಿರುವ 'ಮಲ್ಲಿನಾಥ ದೇವಾವಸಥ' ಇದು ನಾಗಚಂದ್ರ (ಅಭಿನವ ಪಂಪ) ಕಟ್ಟಿಸಿದ ವಿಜಯಪುರಕ್ಕೆ ಅಲಂಕರಣವಾದ ಮಲ್ಲಿನಾಥ ತೀರ್ಥಂಕರನ ಬಸದಿ ಎಂದು ನನ್ನ ಅಭಿಪ್ರಾಯ. ಆಗಿನ ಕಾಲಕ್ಕೆ ಕನ್ನಡ ನಾಡಿನ ಈ ಭಾಗದಲ್ಲೂ ಜೈನಧರ್ಮ ಸಾಕಷ್ಟು ಪ್ರಚಾರದಲ್ಲಿದ್ದಿತು. ಚಾವುಂಡರಾಯ, ರನ್ನ ಮೊದಲಾದವರಿಗೆ ಗುರುವಾದ ಅಜಿತಸೇನಾಚಾರ್ಯರ ಪೀಠ ಈ ಭಾಗದಲ್ಲಿದ್ದಿತು. ''ಮೂಲ ಸಂಘ ದೇಸಿಯ ಗಣ ಪುಸ್ತಕ ಗಚ್ಛ ಇಂಗಳೇಶ್ವರದ ಬಳಿ'' ಎಂಬಲ್ಲಿನ ಇಂಗಳೇಶ್ವರ ಈ ಭಾಗದ್ದೆಂಬುದು ಸುವಿಶ್ರುತ ಸಂಗತಿ.[೧೪] ಅದು ಬಿಜಾಪುರ ಜಿಲ್ಲೆಯ ಬಾಗೇವಾಡಿ ತಾಲ್ಲೂಕಿನಲ್ಲಿದೆ. ಈಗ ಉಲ್ಲೇಖಿಸಿದ ಶಾಸನದ ಪ್ರಕಾರ ಬಿಜಾಪುರ ತಾಲ್ಲೂಕಿಗೆ ಹತ್ತಿರವೇ ಇರುವ 'ಮಂಗಳವೇಡೆ' ಒಂದು ಪ್ರಸಿದ್ಧ ಜೈನ ಕೇಂದ್ರವಾಗಿದ್ದಿತು.[೧೫] ಇಲ್ಲಿ ಬರುವ 'ಮಂಗಳವೇಡದ ರಾಯರಾಚಾರ್ಯ....[ಮೂ]ಲ

---

೧೨ 'ಬಾಬಾನಗರ ಇದರ ಮೂಲ ಹೆಸರು 'ಕಸ್ನಡಿಗೆ'. ಇಲ್ಲಿ ಒಂದು ಜಿನಬಸದಿ ಇದ್ದುದಾಗಿ ಈ ಶಾಸನದಿಂದ ಸ್ಪಷ್ಟವಿದೆ. ಈ ಊರು ಬಿಜಾಪುರದಿಂದ ಜತ್ತಕ್ಕೆ ಹೋಗುವ ರಸ್ತೆಯಲ್ಲಿ 'ತಿಕೋಟಾ' ಬಳಿಯಲ್ಲಿದೆ. ಈ ಶಾಸನವನ್ನು ಕ್ರಿ.ಶ. ೧೧೬೭-೧೧೭೬ರ ವರೆಗೆ ಆಳಿದ ಕಳಚುರ್ಯ ಚಕ್ರವರ್ತಿ ರಾಯ ಮುರಾರಿಸೋವಿದೇವನ ಕಾಲಕ್ಕೆ ಬರೆಯಲಾಗಿದೆ; ತೇದಿಯುಳ್ಳ ಭಾಗ ಈಗ ಅಳಿಸಿಹೋಗಿದೆ. ಇದು SII. Vol. XVIII, No. 187, pp. 256-259ರಲ್ಲಿ ಅಚ್ಚಾಗಿದೆ. ಆದರೆ ಅದರಲ್ಲಿ ಇದರ ಮಹತ್ವವನ್ನು ಗುರುತಿಸಲಾಗಿಲ್ಲ.

೧೩. ಇದು ಈಗಿರುವಂತೆ ಒಂದು ಕಿಂಚಿದಶುದ್ಧ ಮತ್ತೇಭವಿಕ್ರೀಡಿತ ವೃತ್ತ. ಮೂರನೆಯ ಪಾದದಲ್ಲಿ ಗಣಸಂಯೋಜನೆಯಲ್ಲಿ ದೋಷವಿದೆ. ನಾಗಾರ್ಯನನ್ನು ನಾಗಚಂದ್ರನ ಅಣ್ಣ ಎಂದು ಸ್ವೀಕರಿಸದಿದ್ದರೆ ಪದ್ಯದಲ್ಲಿ ಕರ್ತೃವೇ ಇಲ್ಲದಂತಾಗುತ್ತದೆ. ಕೆಲವೊಮ್ಮೆ ವೃತ್ತವನ್ನು ಐದು ಪಾದಗಳ ವರೆಗೂ ಬೆಳೆಸಿ ಬರೆಯುವುದು ರೂಢಿಯಲ್ಲಿದ್ದಿತು (ನೋಡಿ. ಡಾ. ಎಂ. ಎಂ ಕಲ್ಬುರ್ಗಿ, ಶಾಸನ ಛಂದಸ್ಸು, ಕರ್ನಾಟಕ ಭಾರತಿ, ಸಂ. ೩, ಸಂ, ೪, ಪು. ೫೦-೫೩).

೧೪ a) Dr. P. B. Desai, *Jainism in South India and some Jaina Epigraphs*, p. 392

b) Ep. Car. Vol. II (1973), No. 364, 456, pp. 228, 277 ಈ ವಿಷಯವನ್ನು ಪ್ರತಿಪಾದಿಸುವ ಅನೇಕ ಶಾಸನಗಳಿವೆ.

೧೫ SII. Vol. XVIII, No. 187, lines 36 to 37

ಸಂಘದ ದೇಶಿಗಣದ ತ್ರಿಭುವನ ಗುರು' ಶ್ರವಣಬೆಳ್ಗೊಳದ ಶಾಸನದಲ್ಲಿ ಬರುವ ''ಶ್ರೀಮತ್ತ್ರಿಭುವನ ರಾಜಗುರು ಶ್ರೀಭಾನುಚಂದ್ರ ಸಿದ್ಧಾಂತ ಚಕ್ರವರ್ತಿ'' ಆಗಿರಬಹುದು.[೧೬] ಬಿಜಾಪುರ, ಗುಲ್ಬರ್ಗ ಮತ್ತು ಬೀದರ ಜಿಲ್ಲೆಯ ಹಾಗೂ ಸುತ್ತಮುತ್ತಲಿನ ಪ್ರದೇಶದಲ್ಲಿ ಜೈನಧರ್ಮ ಇಳಿಮುಖ ಕಂಡದ್ದು ಈ ಭಾಗದಲ್ಲಿಯ ಸಾಮ್ರಾಜ್ಯದ ರಾಜಧಾನಿಗಳು ದೂರಕ್ಕೆ ಸ್ಥಳಾಂತರಗೊಂಡಾಗ ಎಂದು ನಮಗೆ ತೋರುತ್ತದೆ. ರಾಜಮನೆತನಗಳು ಈ ಧರ್ಮವನ್ನು ಹತ್ತಿಕ್ಕುವುದಕ್ಕಿಂತ ಧಾರ್ಮಿಕ ಕ್ರಾಂತಿಯೇ ಆ ಮತವನ್ನು ಹತ್ತಿಕ್ಕಿತು.[೧೭] ವಿಶೇಷವಾಗಿ ರಾಜರುಗಳು ಸರ್ವಧರ್ಮಸಹಿಷ್ಣುಗಳಾಗಿದ್ದರು. ಈ ತ್ರಿಭುವನ ರಾಜಗುರು ಭಾನುಚಂದ್ರನ 'ತ್ರಿಭುವನ' ಎಂಬ ಬಿರುದನ್ನು ವಿಶ್ಲೇಷಿಸಿದರೆ ೬ನೆಯ ವಿಕ್ರಮಾದಿತ್ಯನ 'ತ್ರಿಭುವನಮಲ್ಲ' ಎಂಬ ಬಿರುದನ್ನೇ ಹೊಂದಿದ್ದುದು ಸ್ಪಷ್ಟವಿದೆ. ವಾದಿರಾಜಪಂಡಿತ 'ಜಗದೇಕಮಲ್ಲವಾದಿನ್' ಎಂಬ ಬಿರುದನ್ನು ಹೊಂದಿದ್ದುದನ್ನೂ ಇಲ್ಲಿ ಜ್ಞಾಪಿಸಿಕೊಳ್ಳಬೇಕು.[೧೮] ಈ ಭಾನುಚಂದ್ರ[೧೯] ಕ್ರಿ.ಶ. ೧೧೧೫ರಲ್ಲಿ ಸಮಾಧಿ ಮರಣವನ್ನಪ್ಪಿದ ಮೇಘಚಂದ್ರ[೨೦] ಮೊದಲಾಗಿ ಅನೇಕ ಜೈನಯತಿಗಳು ನಾಗಚಂದ್ರನ ಗುರು ಬಾಳಚಂದ್ರನ ಶಿಷ್ಯರಾಗಿದ್ದರು.[೨೧] 'ಮಲ್ಲಿನಾಥ ಪುರಾಣ'ದ ಪ್ರಕಾರ ಬಾಳಚಂದ್ರನಿಗೆ 'ನಾಗಭಟ್ಟಾರಕ' ಎಂಬ ಅಪರ ನಾಮವಿದ್ದಿತು.[೨೨] ಇದನ್ನು ಇಲ್ಲಿ ನೆನಪಿಸಿಕೊಳ್ಳಬೇಕು. ಪ್ರಾಯಃ ಈ ಅಪರ ನಾಮವನ್ನೇ ನಾಗಚಂದ್ರನ ಹಿರಿಯ ಮೊಮ್ಮಗನಿಗೆ ಇಟ್ಟಿರಬೇಕು. ಮತ್ತೆ ಇನ್ನೊಬ್ಬನಿಗೆ 'ಅಭಿನವ ಪಂಪ'ನ ಹೆಸರನ್ನು ಇಟ್ಟಿದ್ದೂ ಸ್ಪಷ್ಟವಿದೆ. ಸದ್ಯ ನಾಗಚಂದ್ರನ ಪೀಳಿಗೆಯನ್ನು ಹೀಗೆ ರಚಿಸಬಹುದು:




---

೧೬ Ep. Car. Vol II (1973), No. 374, p. 241

೧೭ a) SII. Vol. XX, No. 56, ತಾಳಿಕೋಟೆಯ ಶಾಸನ, (1184 A)

b) ಈ ಶಾಸನ ಭಾಗವನ್ನು ಡಾ. ಎಂ. ಎಂ. ಕಲ್ಬುರ್ಗಿ 'ಶಾಸನಗಳಲ್ಲಿ ಶಿವಶರಣರು' ಪುಸ್ತಿಕೆಯಲ್ಲಿ ಉಲ್ಲೇಖಿಸಿದ್ದಾರೆ. ಪು. ೨೯

c) ಏಕಾಂತದ ರಾಮಯ್ಯನಿಗೆ ಸಂಬಂಧಿಸಿದ ಅಬ್ಬಲೂರ ಶಾಸನ ನೋಡಿ. ಅದೇ ಗ್ರಂಥ, ಪು. ೯೧

೧೮ ಡಾ. ಕೆ. ಕೃಷ್ಣಮೂರ್ತಿ, ಸಂಸ್ಕೃತ ಕಾವ್ಯ, ಪು. ೩೦೫ (೧೯೫೮)

೧೯ Ep. Car. Vol II, No. 81, p. 61 (1973)

೨೦ Ibid., No. 156, pp. 92-98

೨೧ Ibid., No. 360, p. 217

೨೨ ಮಲ್ಲಿನಾಥ ಪುರಾಣಂ, ಆ. ೧೦-೮೨ ವ, ಪು. ೨೨೫.

೨೩ ಮೂಲಿಗ-ಇದಕ್ಕೆ ಮೂರು ಅರ್ಥಗಳು ಸಾಧ್ಯ ೧. ಮೂಲಿಕೆಗಳನ್ನು ವ್ಯವಹರಿಸುವ-ಕೊಡುವ ಪ್ರಾಯಃ ವೈದ್ಯ, ೨. ದೇವಗೃಹಗಳ ಉಸ್ತುವಾರಿಯನ್ನು ನೋಡಿಕೊಳ್ಳುವವ ೩. ಊರನ್ನು ಕಾಯುವ ಅಧಿಕಾರ ಉಳ್ಳ ವ್ಯಕ್ತಿ. ನಾನು ಎರಡನೆಯ ಅರ್ಥವನ್ನು ಪ್ರಕೃತದಲ್ಲಿ ಸ್ವೀಕರಿಸಿರುವೆ. ನಾಗಾರ್ಯನಿಗಿಂತ ನಾಗಚಂದ್ರನು ತುಂಬ ಪ್ರಸಿದ್ಧ ವ್ಯಕ್ತಿಯೆಂದೂ ಶಾಸನದಲ್ಲಿ ವ್ಯಕ್ತವಾಗಿದೆ.

ನಾಗಚಂದ್ರಕವಿಯ ಕಾಲ ಯಾವುದು ಎಂಬ ಸಮಸ್ಯೆಯನ್ನು ಬಿಡಿಸಲು ಸಾಧ್ಯವೇ ಎಂಬುದನ್ನು ನೋಡೋಣ. ಈ ಇಬ್ಬರು ಮೊಮ್ಮಕ್ಕಳು ಸಾಕಷ್ಟು ಪ್ರಬುದ್ಧರೂ ಪ್ರಸಿದ್ಧರೂ ಆಗಿದ್ದರೆಂಬುದು ಬಾಬಾನಗರದ ಈ ಶಾಸನದಿಂದ ಸ್ಪಷ್ಟ. ಈ ಶಾಸನವನ್ನು ರಾಯಮುರಾರಿ ಸೋವಿದೇವನ ಕಾಲಕ್ಕೆ ಬರೆದುದೂ ಸ್ಪಷ್ಟವೇ ಇರುವುದರಿಂದ ಇವರು ಕ್ರಿ.ಶ. ಸು.೧೧೬೭-೧೧೭೬ರ ಮಧ್ಯದಲ್ಲಿ ಸುಮಾರು ವಯಸ್ಕರಾಗಿದ್ದರು ಎಂಬುದು ಗ್ರಹಿಕೆಗೆ ಬರುವ ಸಂಗತಿ. ಇದು ಸರಿಯಾದರೆ ನಾಗಚಂದ್ರನ ಈ ಮೊಮ್ಮಕ್ಕಳು, ಕ್ರಿ.ಶ. ಸು. ೧೧೨೦ರ ಎಡಬಲದಲ್ಲಿ ಹುಟ್ಟಿರಬೇಕು. ಇನ್ನು ನಾಗಚಂದ್ರ 'ರಾಮಚಂದ್ರ ಚರಿತಪುರಾಣಂ' ಗ್ರಂಥವನ್ನು ಕ್ರಿ.ಶ. ೧೧೧೨ಕ್ಕೂ ಮುಂಚಿತವೇ ಬರೆದಿದ್ದನೆಂದು ನನಗೆ ತೋರುತ್ತದೆ. ಏಕೆಂದರೆ ಈ ಕಾವ್ಯದಲ್ಲಿನ ಆತ ಕೊಟ್ಟ ಗುರುಪರಂಪರೆಯ ವರ್ಣನೆಯನ್ನು ಗದ್ಯದ ಕೊಂಡಿಯನ್ನು ಬಿಟ್ಟರೆ ಇದೇ ರೀತಿಯಲ್ಲಿ (ನಾಲ್ಕು ಪದ್ಯಗಳನ್ನು) ಯಥಾವತ್ತಾಗಿ ಒಬ್ಬ ಶಾಸನಕಾರನು ಬಳಸಿಕೊಂಡಿದ್ದಾನೆ. ಶಾಸನದ ಆ ಭಾಗವಿಂತಿದೆ:

**ಸಾಲುಗಳು :**

೨೬ -॥ ಚತುರಂಗುಳ ಚಾರಣ

೨೭ [ಸು][೨೪] ದ್ಧಿತಮಗೆ ಸಮನಿಸಿದುದೆನಿಪ ತಪದುನ್ನತಿಯಿಂ ಶ್ರುತದಿಂ ಭೂಮ

೨೮ ಣ್ಡಳ ವಿಶ್ರುತರೆನಿಸಿದರಲ್ತೆ ಕೊಣ್ಡ ಕೊಣ್ಡಾಚಾರ್ಯರು[೨೫]॥ ವಚನ ॥

೨೯ ಆ ಕೊಣ್ಡಕುನ್ದಾನ್ವಯದ ಶ್ರೀಮೂಲಸಂಘದ ದೇಸಿಗಣದ ಪುಸ್ತಕಗಚ್ಛ

೩೦ ದ ಪಿರಿಯ ಸಮುದಾಯದಾಚಾರ್ಯ್ಯವರ್ಯ್ಯರು ॥ ವಿಮಳ ಶ್ರೌತ್ರಂ ಕೈ

೩೧ ವಲ್ಯಮೆಂಬ ಸಂಕಲ್ಪಮಿನಿತೆ ನೆರ್ಗ್ಗಿ[೨೬]ಱಿಯಂ ವಿಶ್ವಮನಱಿವ ಮಹಿಮೆಯಿಂ

೩೨ ವರ್ದ್ಧಮಾನ ಜಿನಪತಿಗೆ ವರ್ದ್ಧಮಾನ ಮುನೀ[ಂ] ದ್ರಂ॥[೨೭] ಆ ಮುನೀಂದ್ರ ಪಾದಾರಾಧ

೩೩ ಕಂ॥ ಅರವಿನ್ದಸ್ಮೇರಮಾಸ್ಯಂ ತಿಳಿದ[೨೮] ಹೃದಯ ಸಂಶುದ್ಧಿಯಿಂ ಮಾನಸಂ ಶಾನ್ತ

೩೪ ರಸಾಧೀನಂ ಸಮಾಧಾನಮನಱಿಪೆ ತಪಸ್ತಪ್ತ ಮುತ್ತಪ್ತ ಕಾರ್ತ್ತಸ್ವರ ಶಾಖಾ

---

೨೪ ಶಾಸನ ಸಂಪಾದಕರಿಗೆ ಈ ಪದ್ಯ ನಾಗಚಂದ್ರನ ಕಾವ್ಯಗಳದ್ದು ಎಂದು ತಿಳಿದಿದ್ದರೆ ಕಂಸದಲ್ಲಿ 'ಋ' ಎಂದೇ ಬರೆಯುತ್ತಿದ್ದರು. ಇನ್ನೂ ಒಂದೆರಡು ದೋಷಗಳು ಮುಂದೆ ಬಂದಿವೆ. ಸಂಶೋಧಕರು ಬಾಬಾನಗರದ ಹಾಗೂ ಈ ಕಂಸಣ್ಣೂರಿನ ಶಾಸನಗಳನ್ನು ಇನ್ನೊಮ್ಮೆ ನೋಡಬೇಕು.

೨೫ ಶಾಸನದಲ್ಲಿ ಮೂಲತಃ ಇದೇ ರೂಪ ಇದ್ದರೆ ಈ ಶಾಸನ ಕವಿಯ ನೇತೃತ್ವದಲ್ಲಿ ಸಿದ್ಧವಾಗಿಲ್ಲವೆಂದು ನನಗೆ ತೋರುತ್ತದೆ. ಏಕೆಂದರೆ ಎರಡು ಕಾವ್ಯಗಳಲ್ಲೂ 'ರ್' ಎಂದು ರೇಫೆ ವ್ಯಂಜನಾಂತವಾಗಿಯೇ ಇದೆ. ನೋಡಿ: ಮ. ನಾ. ಪು. ಆ. ೧-೧೫; ರಾ. ಚ. ಪು. ಆ. ೧-೧೨

೨೬ ಕಾವ್ಯಗಳಲ್ಲಿ 'ನೇ' ಎಂದು ದೀರ್ಘರೂಪವನ್ನು ಹೊಂದಿದೆ. ಇದು ಸರಿಯಾದುದು. ಶಾಸನ ಓದುವವರು ತಪ್ಪನ್ನು ಮಾಡಿದ್ದಾರೆ. ಏಕೆಂದರೆ, 'ಎ, ಏ' ಕಾರಗಳಿಗೆ ಒಂದೇ ಚಾಕ್ಷು ರೂಪ ಇದ್ದಿತು. ನೋಡಿ: ಕ. ಸಾ. ಪ. ಪತ್ರಿಕೆ, ಸಂ. ೫೭, ಸಂ. ೨, ಕನ್ನಡ ವರ್ಣಗಳು ಒಂದು ವಿವೇಚನೆ.

೨೭ ಈ ಪದ್ಯ ರಾ. ಚ. ಪು. ಆ. ೧-೧೫ರಂತೆಯೆ ಇದೆ. ಮ. ನಾ. ಪು. ದಲ್ಲಿ (ಆ. ೧-೧೮) 'ಶ್ರೋತ್ರಂ' ಎಂದೂ ಶ್ರವಣಬೆಳ್ಗೊಳದ ಶಾಸನದಲ್ಲಿ 'ಶ್ರಿತಂ' ಎಂದೂ ಪಾಠಾಂತರಗಳಿವೆ. (Ep. Car Vol. II. No. 81 (1973) p. 63). ಶ್ರ. ಬೆ. ಪಾಠ ಕೆಟ್ಟಿದೆ.

೨೮ ಕಾವ್ಯಗಳಲ್ಲಿ 'ಪೆ' ಎಂದಿದೆ. ಶಾಸನವನ್ನು ಇನ್ನೊಮ್ಮೆ ಪರೀಕ್ಷಿಸಬೇಕು. (ರಾ. ಚ. ಪು. ಆ-೧-೧೭; ಮ. ನಾ. ಪು. ಆ. ೧೦-೯)

೩೪ ಲೀಳಯಂ[೨೯] ಪಾಳಿಸೆ ತನುನಯನಂ ಕಾಪುರಂ ಮಾಡೆ ಕಾರುಣ್ಯ ರಸಶ್ರೋತಂಗ
೩೫ ಳಂ[೩೦] ಲೋಕಮನೆಸೆಜಿಗಿಸಿದಂ ಬಾಳಚನ್ದ್ರಬ್ರತೀಂದ್ರಂ॥ ಪ್ರಚುರ ಕಳಾನ್ವಿತರಕುಟಿ
೩೬ ಳರಚಂಚಳಸುದ್ಧ[೩೧] ಪಕ್ಷಪ್ರಿತ್ತದ್ದೂರ್ಷಾಪಚಯ ಪ್ರಕಾಶರೆನೆ ಬಾಳಚನ್ದ್ರ
೩೭ ದೇವಪ್ರಭಾವ[೩೨]ಮೇನಚ್ಚರಿಯೋ॥ ಆ ಮುನಿಪನ ಸನ್ನಾನದೊಳಾಮುಖಿಮಂ ಬಳ
೩೮ ಸೆ ನಿಜತಪ್ರೋವಿಭವ ಸಮುದ್ದಾಮಯಶಂ ಪೆಸರ್ವಡೆದಂ ಕಾಮಾಂತಕನರ್ಹ
೩೯ ಣನ್ದಿ ಬಟ್ಟದ ದೇವಂ॥ ಮಾಗಿಯ ದರ್ಪಮಂ ಕಿಡಿಸಿ ಬೇಸಗೆಯಂ ಬೆದಱಟ್ಟಿ ಮೀಱಿ
೪೦ ಮೇಘಾಮಮಂ ತ್ರಿಕಾಳ ನಿಯಮ ಸ್ಥಿತಿಯಿಂ ಪರಮಾತ್ಮಯೋಗದೊಳ್
೪೧ ಯೋಗಿಗಳಿನ್ನಾರಾರೆನಿಸಿ ಬಟ್ಟದ ದೇವರ ಮಾಳ್ಕೆಯಿಂ ತಪಶ್ರೀಗಧಿನಾಥ
೪೨ ನಾಗಿ ಜಿನಶಾಸನ ದೀಪಕನಾದೊಡೊಪ್ಪುಗುಂ॥......ಇತ್ಯಾದಿ[೩೩].

ಈ ಶಾಸನದಲ್ಲಿ ಬಂದಿರುವ ಅರ್ಹಣಂದಿ ಭಟ್ಟಾರಕನನ್ನು ನಾಗಚಂದ್ರ ಎರಡು ಪುರಾಣಗಳಲ್ಲೂ ಸ್ತುತಿಸಿಲ್ಲ. ಇದಕ್ಕೆ ಕಾರಣ ಪ್ರಾಯಃ ಅರ್ಹಣಂದಿ ಆ ಎರಡು ಕೃತಿಗಳು ಸಂಪೂರ್ಣವಾಗುವ ಸಮಯದಲ್ಲಿ ಅಷ್ಟು ಪ್ರಸಿದ್ಧ ವ್ಯಕ್ತಿಯಾಗಿರಲಿಕ್ಕಿಲ್ಲ. ೧೧೧೨ರಲ್ಲಿ ಅರ್ಹಣಂದಿಯು ಬಹು ಪ್ರಸಿದ್ಧ ತಪಸ್ವಿ ಎಂದು ಶಾಸನದಿಂದ ಸ್ಪಷ್ಟವಿರುವುದರಿಂದ ತತ್ಪೂರ್ವದಲ್ಲಿ ಆತ ತಪಸ್ವಿಯಾಗಿ ಪ್ರಸಿದ್ಧಿಗೆ ಬಂದ. ಇದಕ್ಕೆ ಇನಿತು ಸಮಯಬೇಕಷ್ಟೆ. ಇದನ್ನು ಲಕ್ಷಿಸಿದಾಗ ಏನಿಲ್ಲವೆಂದರೂ ನಾಗಚಂದ್ರ ಆ ಎರಡೂ ಕಾವ್ಯಗಳನ್ನೂ ಕ್ರಿ.ಶ. ಸು. ೧೦೮೦ರ ಎಡಬಲದಲ್ಲಿ ರಚಿಸಿರಬೇಕು. ಕಣ್ಣೂರು ಶಾಸನದಲ್ಲಿ ಉಕ್ತನಾದ ಅರ್ಹಣಂದಿ ಯತಿಯ ಉಲ್ಲೇಖ ಕ್ರಿ.ಶ. ೧೦೯೭-೯೮ರ ಹುಣಸಿ ಹಡಗಲಿ ಶಾಸನದಲ್ಲಿಯೂ ಬಂದಿರುವುದರಿಂದ (JISI) ಈತನನ್ನು ಉಲ್ಲೇಖಿಸದ, ಆ ಗುರುಪರಂಪರೆಯನ್ನು ಚೆನ್ನಾಗಿ ಬಲ್ಲ ನಾಗಚಂದ್ರ ಇದಕ್ಕೂ ಹಿಂದೆ ಇದ್ದ.

ಬಿಜಾಪುರ ಜಿಲ್ಲೆಯಲ್ಲಿ ನಾಗಚಂದ್ರನಿಗೆ ಸಂಬಂಧಿಸಿದಂತೆ ಈಗ ಮೂರು ಶಾಸನಗಳು ದೊರಕಿದಂತಾಗಿದೆ. ತಲಕಾಡಿನ ವಿಜಯಪುರದಲ್ಲಿ ಒಂದೂ ಪ್ರಮಾಣ ದೊರಕಿಲ್ಲ. ಕಾರಣ ಉತ್ತರಕರ್ನಾಟಕದ ಬಿಜಾಪುರ ಜಿಲ್ಲೆಯೆಂದು ಪ್ರತಿಪಾದಿಸಿದ ಕವಿಚರಿತೆಕಾರರು ಮಧುರಚೆನ್ನ ಮೊದಲಾದವರ ಹೇಳಿಕೆ ಸಮಂಜಸವಾಗಿದೆಯೆಂದು ನನಗೆ ತೋರುತ್ತದೆ. ಬಿಜಾಪುರ ವಸ್ತು ಸಂಗ್ರಹಾಲಯದ ಶಾಸನ ಸಂಪೂರ್ಣ ದೊರೆತಿಲ್ಲವಾದುದರಿಂದ ಅದರ ಕರ್ತೃತ್ವದ ಬಗ್ಗೆ ಹೀಗೆಯೆ ಎಂದು ಖಚಿತವಾಗಿ ಹೇಳುವಂತಿಲ್ಲ ಎಂಬ ಸಿ. ಪಿ. ಕೆ. ಅವರ ಮಾತು

---

೨೯ 'ಲೀಳೆಯಂ' (ರಾ. ಚ. ಪು) 'ಲೀಲೆಯಂ' (ಮ. ನಾ. ಪು)

೩೦ 'ಸ್ರೋತ್ರಂಗಳಂ' ಎಂದು ಕಾವ್ಯಗಳಲ್ಲಿ ಸರಿಯಾಗಿದೆ.

೩೧ 'ಶುದ್ಧ'-"-(ರಾ. ಚ. ಪು. ಆ. ೧-೧೮; ಮ. ನಾ. ಪು. ಆ. ೧-೨೦)

೩೨ ರಾ. ಚ. ಪು. ಕೆಲ ಪ್ರತಿಗಳಲ್ಲಿ 'ಪ್ರಕಾಶ' ಎಂಬ ಪಾಠವನ್ನು ಯಾರೋ ಪ್ರಕ್ಷೇಪಿಸಿದ್ದಾರೆ 'ಪ್ರಭಾವ' ಎಂಬುದೇ ಕವಿಪಾಠ.

೩೩. ಈ ಶಾಸನದ 'ಚತುರಂಗಳ'ದಿಂದ ಆರಂಭಮಾಡಿ 'ಅಚ್ಚರಿಯೋ' ದವರೆಗೆ (Lines 26-38, ಗದ್ಯದ ಕೊಂಡಿಯನ್ನು ಬಿಟ್ಟರೆ) ಇರುವ ಪದ್ಯಗಳು ನಾಗಚಂದ್ರನ ಕಾವ್ಯಗಳಲ್ಲಿ ಬಂದಿವೆ (ರಾ. ಚ. ಪು. ಆ. ೧-ಪದ್ಯ ೧೨. ೧೫, ೧೭ ಮತ್ತು ೧೮; ಮ. ನಾ. ಪು. ಆ. ೧-೧೫, ೧೮, ಆ. ೧೦-೯೧, ಆ. ೧-೨೦)

ಅರ್ಥಪೂರ್ಣವಾಗಿದೆ.[೩೪] ಈ ಶಾಸನವೂ ಎನ್. ಲಕ್ಷ್ಮೀನಾರಾಯಣರಾಯರು ಸಂಪಾದಿಸಿದ ಶಾಸನ ಸಂಪುಟದಲ್ಲಿ ಬಂದಿದೆ.[೩೫]

ನಾಗಚಂದ್ರನ ಕಾವ್ಯಗಳಿಂದ ಎತ್ತಿ ಬರೆದ ಶ್ರವಣಬೆಳ್ಗೊಳದ ಶಾಸನ ಪದ್ಯಗಳನ್ನು ಮಹಂತಿ ಕವಿಚರಿತೆಕಾರರು[೩೬] ಮತ್ತು ಡಾ. ಹೆಂಡಿ[೩೭] ಗುರುತಿಸಿ ಕೊಟ್ಟಿದ್ದಾರೆ. ಬಿಜಾಪುರದ ಶಾಸನ ಸಂಗತಿಯನ್ನು ಮಧುರಚೆನ್ನರು ಬೆಳಕಿಗೆ ತಂದಿದ್ದಾರೆ.[೩೮] ಕಂತಿಹಂಪನ ಕಿಂವದಂತಿಯನ್ನು,[೩೯] ಬ್ರಹ್ಮಶಿವ ನಾಗಚಂದ್ರನ ಮೊಮ್ಮಗ ಎಂಬ ನಿರಾಧಾರ ಸಮಕಾಲೀನ ಋಜುವಿಲ್ಲದ ಸಂಗತಿಯನ್ನು ನಾವು ಇನ್ನು ಕೈಬಿಡಬಹುದು. ಅಭಿನವ ಪಂಪನನ್ನು ಕುರಿತು ಅಭ್ಯಾಸ ಮಾಡುವವರು ಬಿಜಾಪುರ ಜಿಲ್ಲೆಯ ಭಾಗವನ್ನು ಚೆನ್ನಾಗಿ ಪರಿವೀಕ್ಷಿಸಿದರೆ ಇನ್ನಷ್ಟು ಹೊಸ ಸಂಗತಿಗಳು ಹೊರಬರಬಹುದು. ಅದು ಆಗಬೇಕಾದ ಕೆಲಸ. ಆಗ ನಾಗಚಂದ್ರನಿಗೆ ಇದ್ದ ಮಕ್ಕಳ,[೪೦] ಮೊಮ್ಮಕ್ಕಳ ಬಗೆಗೆ ನಮಗೆ ಇನ್ನಷ್ಟು ಖಚಿತ ಅಂಶಗಳು ದೊರೆಯಬಹುದು; ನಾಗಚಂದ್ರನ ಪರಿಸರದ ಕಲ್ಪನೆಯೂ ಸರಿಯಾಗಿ ಮೂಡುತ್ತದೆ.[೪೧]

*ಮಾನವಿಕ ಕರ್ಣಾಟಕ, ೫-೧, ೧೯೭೪, ಪು. ೧೨೧-೨೮*

---

೩೪ ನಾಗಚಂದ್ರ, ಸಿ. ಪಿ. ಕೆ., ಪು. ೬

೩೫ S.I.I. Vol, III, No. 125

೩೬ ಕವಿಚರಿತೆಕಾರರು ಗುರುತಿಸಿದ ಶಾಸನಗಳು: ೬೪, ೧೨೭, ೧೪೦ ಮತ್ತು ೧೫೮. ಇಲ್ಲಿನ ಅಂಕೆಗಳು ಅವರೇ ಸಂಪಾದಿಸಿದ Ep. Car. Vol. II, ಇದಕ್ಕೆ ಸಂಬಂಧಪಟ್ಟಿವೆ.

೩೭ ಡಾ. ಬಿ. ಬಿ. ಹೆಂಡಿ, ಮಲ್ಲಿನಾಥ ಪುರಾಣಂ, ಪ್ರಸ್ತಾವನೆ, ಪು. xi-xii

೩೮ ಅಭಿನವ ಪಂಪ ಬರೆದ ಶಿಲಾಲಿಪಿ, ಜಯಕರ್ನಾಟಕ, ಸಂ. ೮, ೧೬ನೆಯ ಡಿಸೆಂಬರ್ ೧೯೨೯.

೩೯ ಅನೇಕರು ಈ ಸಂಗತಿಯನ್ನು ಈಗಾಗಲೇ ಪ್ರಸ್ತಾಪಿಸಿದ್ದಾರೆ.

೪೦ ಕ. ಕ. ಚ., ಭಾಗ ೧, ಪು. ೧೧೨

೪೧ ಈ ಲೇಖನವನ್ನು ಬರೆಯುವಲ್ಲಿ ನೆರವಾದ ಡಾ. ಬಾ. ರಾ. ಗೋಪಾಲ್ ಅವರಿಗೆ ನಾನು ವಿಶೇಷ ಋಣಿಯಾಗಿದ್ದೇನೆ.

# ೭. ಶಾಸನಗಳಲ್ಲಿ ಶಿವಶರಣರು

● ಎಂ. ಎಂ. ಕಲಬುರ್ಗಿ

ಸತ್ಯ, ಸಂಭಾವ್ಯ, ಊಹೆ – ಈ ಮೂರನ್ನು ಒಂದಕ್ಕಿಂತ ಹೆಚ್ಚು ಪ್ರಮಾಣದಲ್ಲಿ ಸೇರಿಸಿ ಚರಿತ್ರೆ ಬರೆಯಬೇಕಾಗಿ ಬಂದುದು ನಮ್ಮ ದುರ್ದೈವ. ಈ ದುರ್ದೈವದಿಂದ ತಪ್ಪಿಸಿಕೊಳ್ಳಲು ನಾವು ಆಶ್ರಯಿಸಬೇಕಾದ ಪ್ರಮುಖಸಾಧನಗಳೆಂದರೆ ಶಾಸನಗಳು. ಹೀಗಾಗಿ ಶಿವಶರಣರನ್ನು ಶಾಸನಗಳಲ್ಲಿ ಸಂದರ್ಶಿಸಿ ಅವರ ಚರಿತ್ರೆಯನ್ನು, ಅವರ ಸಂತಾನ ಸಾಗಿಬಂದ ರೀತಿಯನ್ನು ಅರ್ಥಮಾಡಿಕೊಳ್ಳುವುದು ಮಹತ್ವಪೂರ್ಣ ಅಭ್ಯಾಸವೆನಿಸಿದೆ. ಆದರೆ ಶಾಸನನಿರ್ಮಾಣದ ಮೂಲೋದ್ದೇಶಗಳಾದ ಲಿಂಗಪ್ರತಿಷ್ಠಾಪನೆ, ದೇವಾಲಯ ರಚನೆ, ಕೀರ್ತಿಮೂಲ ಪರೋಪಕಾರ, ಪರಾವಲಂಬನ ಪ್ರವೃತ್ತಿಗಳನ್ನು ಮೆಟ್ಟಿನಿಂತ ಶರಣರು ತಮ್ಮನ್ನು ಕುರಿತು ಶಾಸನಗಳನ್ನು ಬರೆದಿರುವುದು, ಬರೆಸಿರುವುದು ಅಸಂಭವ. ಹೀಗಾಗಿ ಶಾಸನಗಳಲ್ಲಿ ಶಿವಶರಣರನ್ನು ಗುರುತಿಸುವವರಿಗೆ ಸಾಮಗ್ರಿಯೆಂದರೆ ಶರಣರು ಪೂರ್ವಾಶ್ರಮದಲ್ಲಿ ಬರೆಯಿಸಿದ ಮತ್ತು ಶರಣರ ಅನುಯಾಯಿಗಳು ಬರೆಯಿಸಿದ ಶಾಸನಗಳು. ಕರ್ನಾಟಕದ ಅಪಾರ ಶಾಸನಸಂಪತ್ತಿನೊಂದಿಗೆ ಹೋಲಿಸಿದರೆ ಇವುಗಳ ಸಂಖ್ಯೆ ತೀರ ವಿರಳ. ಈ ವಿರಳ ಸಂಖ್ಯೆ ಪೂರೈಸುವ ಅತ್ಯಮೂಲ್ಯ ಸತ್ಯವನ್ನು ಹೀಗೆ ಸಂಗ್ರಹಿಸಬಹುದು:

ಕರ್ನಾಟಕದಲ್ಲಿ ಶರಣಪರಂಪರೆಯನ್ನು ನಿಚ್ಚಳವಾಗಿ ಪ್ರಾರಂಭಿಸಿದವರು ಕಲ್ಯಾಣದ ಶಿವಶರಣರು. ಇವರಿಗೆ ವಂದ್ಯರಾದ ಕಾರಣ ೬೩ ಪುರಾತನರನ್ನು, ಭೋಜ ಮೊದಲಾದ ಶಿವೋಪಾಸಕರನ್ನು ಈ ಶರಣವರ್ಗದಲ್ಲಿ ಪರಿಗಣಿಸಬೇಕಾಗುತ್ತದೆ. ಅರುವತ್ತು ಮೂವರು ತಮಿಳುನಾಡಿಗೆ ಸಂಬಂಧಿಸಿದವರು. ರಾಜವಂಶ ಸಂಭೂತರೂ, ರಾಜ್ಯಪೂಜ್ಯರೂ ಆದ ಇವರ ಅನೇಕ ವಿಗ್ರಹ, ದೇವಾಲಯ ಮತ್ತು ಶಾಸನಗಳು ತಮಿಳುನಾಡಿನಲ್ಲಿ ಕಾಣಸಿಗುತ್ತವೆ. ಕರ್ನಾಟಕದಲ್ಲಿ ಮಾತ್ರ ಈ ಸಂಖ್ಯೆ ತೀರ ಕಡಿಮೆ. ನಂಜನಗೂಡು ಶ್ರೀಕಂಠೇಶ್ವರ ದೇವಾಲಯ, ಚಾಮರಾಜನಗರದ ಚಾಮರಾಜೇಶ್ವರ ದೇವಾಲಯ ಮತ್ತು ಬಳ್ಳಾರಿಯ ಮಲ್ಲಿಕಾರ್ಜುನ ದೇವಾಲಯುಗಳಲ್ಲಿ ಇವರ ವಿಗ್ರಹಗಳಿವೆ. 'ಪುರಾತನ' ಎಂಬ ಸ್ತೋಮಸೂಚೀಪದ ತಾಳಿಕೋಟೆ, ಅಬ್ಬಲೂರು, ಅರ್ಜುನವಾಡ ಮತ್ತು ಕೇರಲಾಪುರ ಗ್ರಾಮುಗಳಲ್ಲಿ ಕಂಡುಬರುತ್ತದೆ. ೬೩ರಲ್ಲಿ ಒಬ್ಬನಾದ ಚೋಳನನ್ನು ಹಿರಿಯೂರು ಕಲ್ಲೇದೇವರಪುರ ಶಾಸನಗಳು 'ಚೋಳ' ಎಂದು, ಮರಡಿಪುರ ಶಾಸನ 'ಕರಿಕಾಲಚೋಳ' ಎಂದು ಹೆಸರಿಸಿದಂತೆ ಚೋಳನಿಗೆ ಹೊನ್ನ ಮಳೆಗರೆದ ಪವಾಡವನ್ನು ಹೇಳುತ್ತದೆ, ಶ್ರೀಶೈಲ ಶಾಸನ. ಚೋಳರಂತೆ ೬೩ರಲ್ಲಿ ಪರಿಗಣಿತನಾದವ ಚಕ್ರವರ್ತಿ ಚೇರಮ. ಈತನ ಉಲ್ಲೇಖ ಬರುವುದು ಕಲ್ಲೇದೇವರಪುರ ಶಾಸನದಲ್ಲಿ. ಅಬ್ಬಲೂರು, ಹಿರಿಯೂರು, ಮರಡಿಪುರ ಶಾಸನಗಳಲ್ಲಿ ಹೆಸರಿನ ಮೂಲಕ ಕಾಣಿಸಿಕೊಂಡ ಸಿರಿಯಾಳ ಅಬ್ಬಲೂರ ಸೋಮೇಶ್ವರ ದೇವಾಲಯುದಲ್ಲಿ ಶಿಲ್ಪದ ಮೂಲಕವೂ ಅಭಿವ್ಯಕ್ತಗೊಂಡಿದ್ದಾನೆ. ಅಬ್ಬಲೂರು, ಕಲ್ಲೇದೇವರಪುರ ಶಾಸನಗಳಲ್ಲಿ ಮಾದಾರಚೆನ್ನ ನಾಮಮಾತ್ರ ಉಲ್ಲಿಖಿತನಾಗಿದ್ದಾನೆ. ಕಬ್ಬೂರು ಶಾಸನೋಕ್ತ ಕಾರಿಕಾಲಮ್ಮೆಯನ್ನು ಪುರಾತನ ಸಮೂಹದ ಕಾರಿಕಾಲಮ್ಮೆಯೊಂದಿಗೆ ಸಮೀಕರಿಸುವಲ್ಲಿ ಸಂದೇಹ ಉಳಿದುಕೊಳ್ಳುತ್ತದೆ. ಇದಲ್ಲದೆ ಕುಡತಿನಿ ಶಾಸನದ

ಕರಕಮಳಂಗಳಂ ಮುರಿದುಮಾಪತಿಗೇರಿಸಿ ಮೀಂಟಿ ಕಂಗಳಂ
ಹರನ ಶಿಖಾಗ್ರದೊಳ್ಳಿರಿಸಿ ದಂಡೆಗರುಳ್ಗೊಳೆಡೆಯಂ ಭಯಂ
ಕರಮನೆ ಮಾಡಿ ಶಂಕರನನರ್ಚಿಸಿ ಪಂದಲೆಯಿಂ ನಿವಾಳಿಯಂ
ಪುರಮಥನಂಗೆ ಕೊಟ್ಟು ಮಗುಳ್ದು ಪಡೆವರ್ಪ್ರಮಥರ್ಕಳದ್ಭುತಂ ॥

ಕ್ರೂರವಿಷಂಗಳಂ ಕುಡಿವರಂತಕನಂ ಜರೆವರ್ಮಹೋಗ್ರ ಕಾ
ಳೋರಗನಂ ಕಡಂಗಿ ಪಿಡಿವರ್ಸಿಡಿಲಂ ಪೊಡೆವರ್ಗ(ಜಾ)ರಿಯಂ
(ಯಾ)ರಿಗೆ ತಪ್ಪ(ರಿ)ಳ್ದು ಶಿವದೂಷಕನೆಂಬವನೊಕ್ಕಲಿಕ್ಕುವ
ವೀರಗಣಂಗಳೆಂದೊಡಿದಿರಾರ್ ಪ್ರಮಥರ್ಗ್ಗೆ ಜಗತ್ರಯಂಗಳೊಳ್ ॥

ಎಂಬ ಪದ್ಯಗಳ ಮತ್ತು ಇಂಗಳಿಗಿ ಶಾಸನದ

ಕರಕರನಂ ಸೆಂಡಾಡುವ
ರುರಗಪನಂ ಕೀರಲಿಟ್ಟು ಬಿಟ್ಟಿಕ್ಕುವರಾ
ಗಿರಿಕುಳಮಂ ಕಿತ್ತೆತ್ತುವ
ರುರಿಯೊಳು ಪರಿಮರಿಯಾಡುತಿರ್ಪರು ಶರಣರು ॥

ಎಂಬ ಪದ್ಯದ ಉಗ್ರಭಕ್ತಿ ಈ ಅರುವತ್ತುಮೂವರನ್ನು ನೆನಪಿಸುತ್ತದೆ. ಇವರನ್ನು ಬಿಟ್ಟರೂ ತಮಿಳುನಾಡಿನ ಮಿಕ್ಕ ಶಿವಭಕ್ತರಾದ ಕುಂಬಾರಗುಂಡ, ಆಂಡವಲ (?) ಇವರ ಉಲ್ಲೇಖ ಮರಡಿಪುರ ಶಾಸನದಲ್ಲಿ, ಗುಂಡನ ವಿಗ್ರಹ ಅಬ್ಬಲೂರು ಸೋಮೇಶ್ವರ ದೇವಾಲಯದಲ್ಲಿ ಗೋಚರಿಸುತ್ತವೆ.

ಈ ಅರವತ್ತುಮೂವರನ್ನು ಬಿಟ್ಟರೆ, ಶರಣರಿಗೆ ಪೂಜ್ಯರಾದವರು ಬಾಣ, ಮಯೂರ, ಕಾಳಿದಾಸ, ಹಲಾಯುಧ, ಉದ್ಭಟ, ಮಳಯೇಶ್ವರ ಮತ್ತು ಭೋಜ. ಇವರ ಪ್ರತ್ಯಕ್ಷ ಇಲ್ಲವೆ ಪರೋಕ್ಷ ಉಲ್ಲೇಖ ಹಿಪ್ಪರಗಿ, ಅಬ್ಬಲೂರು, ಹಿರಿಯೂರು, ಮರಡಿಪುರ, ಕುಡತಿನಿ, ಬೆಣಚಮಟ್ಟಿ, ಹುಮ್ಮಚ, ಚಿಕ್ಕಹಂದಿಗೋಳ, ತಂಡಗದ, ಕಲ್ಲೆದೇವರಪುರ ಶಾಸನಗಳಲ್ಲಿ ಎಡೆಪಡೆದಿದೆ.

ಈ ತರುವಾಯ ಬರುವವರು ಷೋಡಶರು, ತೇರಸರು ಮತ್ತು ದಶಗಣರು. ಷೋಡಶರಲ್ಲಿ ಒಬ್ಬಳಾದ ಆಣಂಪುರ ಗುಡ್ಡವ್ವೆಯು ತಾಳಿಕೋಟೆ, ಇಂಗಳಿಗಿ, ವಿಜಾಪುರ ಶಾಸನಗಳಲ್ಲಿ ವರದಾನಿ, ದಾನಚಿಂತಾಮಣಿ ಎಂದೂ ಪರಸಮಯಿಗಳನ್ನು ಪಡಲ್ವಡಿಸಿದ ಶಿವಭಕ್ತೆಯೆಂದೂ ವರ್ಣಿತಳಾಗಿದ್ದಾಳೆ. ತೇರಸವರ್ಗದ ಶರಣರ ಉಲ್ಲೇಖ ಶಾಸನಗಳಲ್ಲಿ ಬಾರದಿದ್ದರೂ ಷೋಡಶ ಮತ್ತು ತೇರಸ ವರ್ಗಗಳ ಮಧ್ಯ ಬಾಳಿದ ಮಾರುಡಿಗೆ ನಾಚಯ್ಯನ ಉಲ್ಲೇಖ ತಾಳಿಕೋಟೆ ಶಾಸನದಲ್ಲಿ ನೆಲೆವಡೆದಿದೆ. ದಶಗಣನಲ್ಲಿ ಒಬ್ಬನಾದ ಸಿಂಗಿದೇವನು ಇಂಗಳಿಗಿಯ ಶಾಸನದಲ್ಲಿ ಕಂಡುಬರುತ್ತಾನೆ. ಇವರಲ್ಲದೆ ಪರಿಯಳಿಗೆಯ ವೈಜಕವ್ವೆ ಮತ್ತು ಅಣಿಲೆವಾಡ, ಉಣಕಲ್ಲ, ಸಂಪಗಾವ, ಕರಹಾಡ, ಬಮ್ಮಕೂರುಗಳಿಗೆ ಸಂಬಂಧಿಸಿದ ಹೆಸರು ಗೊತ್ತಿರದ ಶರಣರನ್ನು ಉಲ್ಲೇಖಿಸುತ್ತದೆ ತಾಳಿಕೋಟೆ ಶಾಸನ.

ಈ ಹೆಸರುಗಳ ಜೊತೆ ಬಸವಪೂರ್ವಯುಗದ ಇನ್ನೂ ಕೆಲವು ಜನ ಶರಣರನ್ನು ಹೀಗೆ ಉಲ್ಲೇಖಿಸುತ್ತವೆ: ಹಿರಿಯೂರು, ಮರಡಿಪುರ ಶಾಸನಗಳು ಕೆಂಬಾವಿಭೋಗಣ್ಣನನ್ನು.

ಗೊಬ್ಬೂರು, ಚಿಕ್ಕಮುದೇನೂರು, ಕಿರಿಯಿಂಡಿ, ಗೀಜಗನಹಳ್ಳಿ, ಬಿದರೆ, ಅಬ್ಬಲೂರು ಶಾಸನಗಳು ಜೇಡರದಾಸಿಮಯ್ಯನನ್ನು ಹೆಸರಿಸುತ್ತವೆ. ಇವುಗಳಲ್ಲಿ ಅಬ್ಬಲೂರು ಶಾಸನದ ಕೆಳಗೆ ಅವನ ವಿಗ್ರಹವನ್ನು ಕೆತ್ತಲಾಗಿದೆ. ಒಂದುನೂರು ವರ್ಷದ ಅವಧಿಯಲ್ಲಿ ಗುಲ್ಬರ್ಗಾ ಜಿಲ್ಲೆಯ ಗೊಬ್ಬೂರಿನಿಂದ ಹಾಸನ ಜಿಲ್ಲೆಯ ಅರಸಿಕೆರೆಯಷ್ಟು ದೂರ ಜೇಡರ ದಾಸಿಮಯ್ಯನ ಶಿಷ್ಯ ಪರಂಪರೆ ಹಬ್ಬಿದ್ದುದನ್ನು ತಿಳಿಸಿಕೊಡುತ್ತವೆ, ಈ ಶಾಸನಗಳು. ದೇವರ ದಾಸಿಮಯ್ಯನ ಶಿಷ್ಯೆಯಾದ ರಾಣಿ ಸುಗ್ಗಲೆಯನ್ನು ದೇವೂರಶಾಸನ ಆರಸಿಯಂತೆ ಉಲ್ಲೇಖಿಸಿದರೆ ಕೆರೆಸಂತೆ ಶಾಸನವು,

> ಪಡೆದಳ್ಸುಗ್ಗಲದೇವಿ ಮುನ್ನೆ ಜಯಸಿಂಹೋರ್ವೀಶನೊಳು ಸೌಖ್ಯಮಂ
> ಪಡೆದಳು ಸಾಂತಲದೇವಿ ಮತ್ತೆ ತೊದಳೇ ಶ್ರೀವಿಷ್ಣುಭೂಪಾಲನೊಳ್
> ಪಡೆದಳ್ಕೇತಲದೇವಿ ವಲ್ಲಭನೊಳೀ ಬಲ್ಲಾಳ ಭೂಪಾಳನೊಳ್
> ಪಡೆದಮ್ಮೂವರು ಮೂವರರಸಿಯರು ಸೌಭಾಗ್ಯ ಭಾಗ್ಯಂಗಳಂ ॥

ಎಂದೂ, ಬೇಲೂರಿನ ಶಾಸನ

> ಜಯಸಿಂಹಕ್ಷಿತಿಪಾಳಕಂಗೆ ಜಗಮಲ್ಲಂ ಬಣ್ಣಿಸಲ್ ಪೂಣ್ದು ಭಾ
> ಷೆಯನಾ ಸುಗ್ಗಲದೇವಿ ಕೊಟ್ಟ ತೆಱದಿಂ ಬಲ್ಲಾಳಭೂಪೋತ್ತಮ
> ಪ್ರಿಯಪುತ್ರಂಗೆ ಕುಮಾರಲಕ್ಷ್ಮರಥಿ ನೀನಾಥಂಗೆ ಕೊಟ್ಟಳ್ ಮನಃ
> ಪ್ರಿಯದಿಂ ಸುಗ್ಗಲದೇವಿ ಭಾಷೆಯನಿಳಾಚಕ್ರಂ ಪೊಗಳ್ವನ್ನೆಗಂ ॥

ಎಂದೂ ಈಕೆಯ ಘನವ್ಯಕ್ತಿತ್ವವನ್ನು ಕೀರ್ತಿಸುತ್ತವೆ. ಇದೇ ಕಾಲದ ಇನ್ನೊಬ್ಬ ಶರಣನಾದ ಕೊಂಡಗುಳಿ ಕೇಶಿರಾಜನನ್ನು ಅಬ್ಬಲೂರು, ಮರಡಿಪುರ ಶಾಸನಗಳು ನಾಮಮಾತ್ರ ಉಲ್ಲೇಖಿಸಿದರೆ ಇತ್ತೀಚೆಗೆ ಬೆಳಕಿಗೆ ಬಂದ ಕೊಂಡಗುಳಿಯ ಎರಡು ಶಾಸನಗಳು ಈತನ ಚರಿತ್ರೆ ಮತ್ತು ವ್ಯಕ್ತಿತ್ವಗಳ ಮೇಲೆ ಬೆಳಕು ಚೆಲ್ಲಿವೆ. ಈತನ ತಂದೆ ನಿಂಬಣದಂಡನಾಥ. ತಮ್ಮ ಗಣಪತಿ ದಂಡನಾಥ (?) ಎಂಬ ನವೀನ ಅಂಶಗಳು ಇದರಿಂದ ತಿಳಿದುಬಂದಿವೆ.

ಬಸವಯುಗದ ಒಳ-ಹೊರಗೆ ಇರಬಹುದಾದ ಪಂಚಾಚಾರ್ಯ ಮತ್ತು ಪಂಡಿತತ್ರಯರನ್ನೂ ಶಾಸನಗಳು ಮರೆತಿಲ್ಲ. ಶ್ರೀಪತಿಪಂಡಿತರು ಬಟ್ಟೆಯಲ್ಲಿ ಬೆಂಕಿಕಟ್ಟಿದ ಪವಾಡವನ್ನು ಬೆರ್ಘುವಾಡ ಶಾಸನ ಹೇಳಿದರೆ, ಗುಬ್ಬಿಶಾಸನ ಅಮರಗುಂಡ ಮಲ್ಲಿಕಾರ್ಜುನನನ್ನೂ, ಬಯಿರತ್ತಿ, ಸಿರಿವಾಳ, ಅವ್ವೆಯರ ಹಳ್ಳಿ, ಚೌಡದಾನಪುರ, ಲಕ್ಷ್ಮೇಶ್ವರ ಶಾಸನಗಳು ರೇವಣಸಿದ್ಧನನ್ನೂ ಹೆಸರಿಸುತ್ತವೆ. ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ರೇವಣಸಿದ್ಧನ ಅನೇಕ ಕುರುಹುಗಳನ್ನು ಜನತೆ ತೋರಿಸುತ್ತಾರೆ. ಇವುಗಳಲ್ಲಿ ಕಾಲ ಮತ್ತು ಚರಿತ್ರೆಗಳ ದೃಷ್ಟಿಯಿಂದ ಮಹತ್ವಪೂರ್ಣವಾದುದು ಸಿರವಾಳ ಶಾಸನ.

ಇವರೆಲ್ಲ ಶಾಸನಗಳಲಿ ಕಂಡುಬರುವ ಬಸವಪೂರ್ವದ ಶಿವಶರಣರು. ಈ ತರುವಾಯ ಕನ್ನಡನಾಡಿನ ಕ್ಷಿತಿಜದ ಮೇಲೆ ಅಗಣಿತ-ಶರಣರು ಮೂಡಿಬಂದು ವೀರಶೈವ ಆಂದೋಲನೆಗೆ ಸುಗ್ಗಿಯ-ತಿರುವು ಕೊಟ್ಟರು. ಈ ಆಂದೋಲನೆಯ ಅಧಿನಾಯಕ ಬಸವಣ್ಣ. ಈವರೆಗೆ ಬಸವಣ್ಣನವರನ್ನು ಕುರಿತು ಹಿರಿಯೂರು, ಅರ್ಜುನವಾಡ, ಚೌಡದಾನಪುರ-೧, ಚೌಡದಾನಪುರ-೨, ಕಲ್ಲೇದೇವರಪುರ, ಮರಡಿಪುರ, ಗುಡಿಹಾಳ ಕುಂಟೋಜಿ, ಆನಂದಪುರ, ಜೋಡಿದಾಸೇನ ಹಳ್ಳಿ, ಕಾನಕಾನಹಳ್ಳಿ-೧, ಕಾನಕಾನಹಳ್ಳಿ-೨, ಹೀಗೆ ೧೧

ಶಾಸನಗಳು ಲಭಿಸಿ "ಬಸವಣ್ಣನವರನ್ನು ಕುರಿತು ಗ್ರಂಥಗಳಲ್ಲಿರುವ ಒಂದು ವಿಷಯಕ್ಕೂ ಶಾಸನಾಧಾರ ಒಂದಾದರೂ ಇಲ್ಲವೆಂಬುದೇ ಆಶ್ಚರ್ಯವು. ಇಂಥ ಮಹಾಪುರುಷನನ್ನು ಕುರಿತು ಶಾಸನಗಳೆಲ್ಲ ಮೌನಮುದ್ರೆ ವಹಿಸಿವೆ.....ಇದೇ ಬಸವಣ್ಣನು ಚಾರಿತ್ರಿಕ ಪುರುಷನೋ ಅಲ್ಲವೋ ಎಂಬ ಸಂದೇಹಕ್ಕೆ ಮೂಲವು" ಎಂಬ ಮಾತುಗಳು ಈಗ ಬೇರುಸಹಿತ ಬಿದ್ದು ಹೋಗಿವೆ.

ಈಗ ಹನ್ನೊಂದು ಶಾಸನಗಳಿಂದ ಬಸವಣ್ಣನವರಿಗೆ ಸಂಬಂಧಿಸಿದ ನಂದಿಯ ಅವತಾರ, ೧,೯೬,೦೦೦ ಜಂಗಮದಾಸೋಹ ಮತ್ತು ನಿತ್ಯ ಪವಾಡಗಳೆಂಬ ಅಲೌಕಿಕ ಹೇಳಿಕೆಗಳ, ತರ್ದವಾಡಿ ಮಧ್ಯಗ್ರಾಮ ಬಾಗವಾಡಿ, ಬಾಗವಾಡಿಯ ಪುರಪ್ರಭು ಮಾದಿರಾಜನ ಮಗ ಬಸವಣ್ಣ, ಬಸವಣ್ಣನ ಅಣ್ಣ ದೇವರಾಜ, ದೇವರಾಜನ ಮಗ ಕಲಿದೇವ, ಕಲಿದೇವನ ಮಗ ಹಾಲಬಸವಿದೇವ ಎಂಬ ಚಾರಿತ್ರಿಕ ಸಂಗತಿಗಳ ಮತ್ತು ಅವರು ಆತ್ಮೀಕರಿಸಿಕೊಂಡ ಲಿಂಗಪೂಜೆ, ಜಂಗಮದಾಸೋಹ, ಪ್ರಸಾದಸಿದ್ಧಿ, ಪುರಾತನಭಕ್ತಿ, ಸಮಯಭಕ್ತಿಗಳೆಂಬ ವ್ಯಕ್ತಿಸಿದ್ಧಿಗಳ ಒಟ್ಟು ಚಿತ್ರ ಕಣ್ಣಿಗೆ ಕಟ್ಟುತ್ತದೆ.

ಹರಿಹರದೇವನು "ಬಸವ ಬಸವಣ್ಣ ಬಸವರಸ ಬಸವಿದೇವ" ಎಂದು ಎದೆಯುಕ್ಕಿ ಕರೆದಂತೆ, ಈ ಶಾಸನಗಳೆಲ್ಲ ಬಸವಯ್ಯ, ಸಂಗನಬಸವಯ್ಯ, ಬಸವೇಶ್ವರ, ಬಸವೇಶ್ವರ ಸ್ವಾಮಿ, ಬಸವರಾಜ, ಬಸವರಾಜದೇವರು, ಸಂಗನಬಸವರಾಜೇಂದ್ರ ಎಂದು ನಾಮಸ್ಮರಣೆ ಮಾಡಿವೆ. ಅರ್ಜುನವಾಡ ಶಾಸನವಂತೂ.

ಮಂಗಳಕೀರ್ತಿ ಪುರಾತನ।
ಜಂಗಮ ಲಿಂಗೈಕ ಭಕ್ತಿನಿರ್ಭರ ಲೀಲಾ
ಸಂಗಂ ಸಂಗನ ಬಸವಂ
ಸಂಗತಿಯಂ ಮಾಳ್ಕೆ ಭಕ್ತಿಯೊಳಗನವರತಂ॥

ಎಂದು ಭಕ್ತಿ ಪ್ರಸಾದವನ್ನು ಯಾಚಿಸುತ್ತ ಅವನ ವ್ಯಕ್ತಿತ್ವದ ಚಿತ್ರವನ್ನು ಬಿಡಿಸಿದೆ.

ಇಲ್ಲಿಯ ಹಿರಿಯೂರ-೧೨೫೫ (ಹಾಸನ ಜಿಲ್ಲೆ), ಕಲ್ಲೇದೇವರಪುರ-೧೨೭೯ (ಚಿತ್ರದುರ್ಗ ಜಿಲ್ಲೆ), ಮರಡಿಪುರ-೧೨೮೦ (ಮೈಸೂರು ಜಿಲ್ಲೆ) ಶಾಸನಗಳಲ್ಲಿ ಬರುವ ಶರಣರ ಮತ್ತು ಬಸವಣ್ಣನವರ ನಾಮಸ್ಮರಣೆಯನ್ನು ಗಮನಿಸಿದರೆ ಕಲ್ಯಾಣದಲ್ಲಿ ತಲೆಯೆತ್ತಿದ ವೀರಶೈವವು ೧೩ನೆಯ ಶತಮಾನದ ಹೊತ್ತಿಗೆ ತುಂಗಭದ್ರೆಯನ್ನು ದಾಟಿ, ದಕ್ಷಿಣ ಕರ್ನಾಟಕವನ್ನು ವ್ಯಾಪಿಸಿತ್ತೆಂದು ಹೇಳಬೇಕಾಗುತ್ತದೆ.

ಬಸವಣ್ಣನವರನ್ನು ಬಿಟ್ಟರೆ ವೀರಶೈವದಲ್ಲಿ ಎದ್ದು ಕಾಣುವ ಪುಣ್ಯಪುರುಷ ಪ್ರಭುದೇವ. ಆನಂದಪುರ, ಜೋಡಿದಾಸೇನಹಳ್ಳಿ, ಚಿಕ್ಕ-ಹೆಜ್ಜಾಜೆ ಶಾಸನದಲ್ಲಿ ಉಲ್ಲೇಖ ಮಾತ್ರ ಕಂಡು ಬರುವ ಈತನ ಬಗ್ಗೆ ವಿಶೇಷ ಸಂಗತಿಗಳಿಲ್ಲ. ಆನಂದಪುರ, ಜೋಡಿದಾಸೇನಹಳ್ಳಿ, ತಿರುಪತಿ ಶಾಸನಗಳಲ್ಲಿ ಚೆನ್ನಬಸವಣ್ಣನವರ ಉಲ್ಲೇಖವಿದೆಯೇ ಹೊರತು ವಿವರಗಳಿಲ್ಲ. ಶರಣ ಸಮುದಾಯದಲ್ಲಿ ಎಲ್ಲರಿಗಿಂತ ಅಧಿಕ ಶಾಸನಗಳಲ್ಲಿ ಗೋಚರಿಸುವವನೆಂದರೆ ಸಿದ್ಧರಾಮ. ಈವರಗೆ ಈತನ ಹೆಸರಿನಲ್ಲಿ ಸುಮಾರು ೨೨ (ಕೋಳಿಸಾಲೆ ಶಾಸನವನ್ನು ಪರಿಗಣಿಸಿದರೆ ೨೩) ಶಾಸನಗಳು ಬೆಳಕಿಗೆ ಬಂದಿವೆ. ಅವು ಉಸ್ಮಾನಾಬಾದ ಜಿಲ್ಲೆಯ ನಿಲೇಗಾವ, ಕೇಶಗಾವ, ಇಟ್ಕಲ್; ಸೋಲಾಪುರ ಜಿಲ್ಲೆಯ ಜಂಬಗಾವ, ಅಕ್ಕಲಕೋಟೆ, ತಡವಳ; ವಿಜಾಪುರ ಜಿಲ್ಲೆಯ

ಚೂರ್ಗಿ, ಸಂಖ, ಕೂಡಗಿ, ಕಪ್ಪನಿಂಬರಗಿ, ಗುಂಡಕರ್ಜಗಿ, ಟಾಕಳಿ, ಫಡಕೇನೂರ, ಜತ್ತಿಗಿ, ಎಡಹಳ್ಳಿ, ಚಡಚಣ; ಧಾರವಾಡ ಜಿಲ್ಲೆಯ ಮಂತ್ರವಾಡಿ, ಬುಡರಸಿಂಗಿ, ಕೊಟ್ಟಬಾಗಿ, ಸಂಗೂರ, ಕಟನೂರ; ಶಿವಮೊಗ್ಗ ಜಿಲ್ಲೆಯ ಸೊರಬ, (ಚಿತ್ರದುರ್ಗ ಜಿಲ್ಲೆಯ ಕೋಳಿಸಾಲೆ) ಶಾಸನಗಳು. ದೇವಗಿರಿ ಯಾದವ, ಗೋವೆಯ ಕದಂಬ, ವಿಜಯನಗರದ ಸಂಗಮ ಅರಸರ ಆಳಿಕೆಯಲ್ಲಿ ಹುಟ್ಟಿದ ಈ ಶಾಸನಗಳು ಕಾಲದೃಷ್ಟಿಯಿಂದ ಕ್ರಿ.ಶ. ೧೧೯೦ರಿಂದ ೧೫೧೮ರ ವರೆಗೆ, ಪ್ರದೇಶ ದೃಷ್ಟಿಯಿಂದ ಉತ್ತರದ ಉಸ್ಮಾನಾಬಾದ ಜಿಲ್ಲೆಯಿಂದ ದಕ್ಷಿಣದ ಚಿತ್ರದುರ್ಗ ಜಿಲ್ಲೆಯ ವರೆಗೆ ಹಬ್ಬಿವೆ. ಬೆಮ್ಮತ್ತನ ಕಲ್ಲು ಸಿದ್ಧನಾಥದೇವರಿಗೆ ಸಂಬಂಧಿಸಿದ ಕೋಳಿಸಾಲೆ ಶಾಸನವನ್ನು ಬಿಟ್ಟರೆ ಮಿಕ್ಕ ೨೨ ಶಾಸನಗಳು ಸಿದ್ಧರಾಮ ಮತ್ತು ಕಪಿಲಸಿದ್ಧಮಲ್ಲಿಕಾರ್ಜುನರಿಗೆ ಸಂಬಂಧಿಸಿದವು. ಇವುಗಳಲ್ಲಿ ಕಟನೂರ, ಬುಡರಸಿಂಗಿ, ಫಡಕೆನೂರ ಮತ್ತು ಗುಂಡಕರ್ಜಗಿ ಶಾಸನಗಳು ಸಿದ್ಧರಾಮನನ್ನು ಮುಕ್ತಕಂಠದಿಂದ ಹೊಗಳಿವೆ. ಇವಲ್ಲದೆ ಇಂಗಳಿಗಿ, ಗುಬ್ಬಿ, ಮರಡಿಪುರ ಶಾಸನಗಳು ಸಿದ್ಧರಾಮನನ್ನು ನಾಮಮಾತ್ರ ಉಲ್ಲೇಖಿಸುತ್ತವೆ.

ಅಭಿಮಾನದಿಂದ ಬರೆಯಿಸಿದ ಕಾನಕಾನಹಳ್ಳಿ ತಾಮ್ರಶಾಸನ, ಮಡಿವಾಳ ಮಾಚಿದೇವನನ್ನು ಕುರಿತುದು. ಕಲ್ಯಾಣದ ತ್ರಿಪುರಾಂತಕಕೆರೆಯ ಮೇಲಿನ ಶಾಸನವೂ ಇವನದೆನ್ನುವ ವಿದ್ವಾಂಸರೊಬ್ಬರ ಮಾತಿಗೆ ಆಧಾರಗಳಿಲ್ಲ.

ನೆಲುವಿಗೆಯ ಶಾಂತಯ್ಯನನ್ನು ಕುರಿತು ಎರಡು ಶಾಸನಗಳು. ''ನೆಲುವಿಗೆಯ ಸಾತ್ಯೆಯ(ಗ)ಳ ಶ್ರೀಪಾದಗಳೇ ಶರಣು'' ಎಂದು ಶರಣು ಸಮರ್ಪಿಸಿ ಭೂಯಾರ ಶಾಸನ ಪ್ರಾರಂಭವಾದರೆ, ಮರಡಿಪುರ ಶಾಸನ ಶರಣಸ್ತೋಮದ ಮಧ್ಯ ಹೆಸರಿಸಿ ಸಾಗುತ್ತದೆ. ಇವುಗಳಲ್ಲಿ ವೀರಶೈವ ಆಂದೋಲನೆಯ ಯೌವನ ಕಾಲವಾದ ೧೧೬೭ರಲ್ಲಿ ಹುಟ್ಟಿದ ಭೂಯಾರ ಶಾಸನ ಕಾಲದೃಷ್ಟಿಯಿಂದ ಗಮನಾರ್ಹವಾದುದು.

ರಾಯಚೂರು ಜಿಲ್ಲೆಯ ದೇವರಗುಡಿ ಗ್ರಾಮದಲ್ಲಿ ಉಳಿಯುಮೇಶ್ವರ ಚಿಕ್ಕಯ್ಯನ ಎರಡು ಶಾಸನಗಳು ಇತ್ತೀಚೆಗೆ ಲಭಿಸಿ, ಇವನ ಹೆಸರು ಹುಳಿಯುಮೇಶ್ವರ ಚಿಕ್ಕಯ್ಯನೆಂದು ಸ್ಪಷ್ಟಪಡಿಸಿವೆ. ಆ ಗ್ರಾಮದ ಹುಳಿಯುಮೇಶ್ವರ ದೇವರ ಸ್ಥಾನಪತಿಯಾಗಿದ್ದ ಈತನನ್ನು ಒಂದು ಶಾಸನ

ಸಕಳ ಸುರ ಸಿದ್ಧ ಕಿನ್ನರ
ನಿಕರ ಕಿರೀಟ ಬಹುರತ್ನ ಕೋಟಿರಂಜಿತ ಚರಣಂ
ಸಕಳಗುರು ಹುಳಿಯಮೇಶಾ
ಕರುಣದ ಭೃತ್ಯ ನಮ್ಮ ಚಿಕ್ಕಯತೀಂದ್ರಂ ॥

ಲಾಳವರಾಳ ಗೂರ್ಜರ ತುರುಷ್ಕ ಹಿಮಾಚಳ ಮೇರೆಯಪ್ಪಿನಂ
ಕೇಳಿರೆ ಬೆಂಗಿಮಂಡಳ ಕಳಿಂಗಕುಳಂ ಜಳರಾಶಿ ಪೂರ್ಬ್ಬಕಂ
ಚೋಳ ದಿಶಾವರಂ ನೆಗಳ್ದ ತೆಂಕಣ ಕೊಂಕಣ ಪಾಡುತ್ತಿಪ್ಪರೀ
ಪಾಳಿತ ಕೀರ್ತಿಯಂ ಹುಳಿಯಮೇಶನ ಗೀತ ಲೋಕ ಲೋಕದೊಳು ॥

ತರ್ಕ ವ್ಯಾಕರಣಂಗಳು
ಅಕ್ಕರಮುಂ ಶಬ್ದಶಾಸ್ತ್ರಮುಂ ವೋದುಗಳಂ

ತಿಕ್ಕೆ ಶಿವಭಕ್ತಿಯೊಳು ಸವೆ
(ದ) ಕೆಯ್ಯಂ ಹಲರು ಮೆಚ್ಚಲೀ ಚಿಕ್ಕಯ್ಯಂ॥

ದಿಕ್ಕರಿಯ ಕಟದ ತಳದೊಳು
ಮಿಕ್ಕ ಸುರದ್ರುಮದ ಮೇರುಗಿರಿ ಮನ್ದಿರದೊಳು
ಚೊಕ್ಕನೆ ಕೀರ್ತಿ ಲತಾವಧು
ಚಿಕ್ಕಯ್ಯನ ಹೆಸರ ಜಸವ ಬರೆಯಿಸುತಿರ್ದಳು ॥

ಎಂದು ವರ್ಣಿಸುತ್ತದೆ. ಇದಲ್ಲದೆ ಕಲ್ಲೇದೇವರಪುರ ಶಾಸನದಲ್ಲಿಯೂ ಇವನ ಹೆಸರಿದೆ. ಇದೇ ಅವಧಿಯ ಕುರುಗೋಡ ಶಾಸನದಲ್ಲಿ ಮಹಾವಿನಹಾಳ ಕಲ್ಲಿಸೆಟ್ಟಿಯ ಹೃದಯಂಗಮ ವರ್ಣನೆ ಬರುತ್ತಿದ್ದು ಈತನು ಶರಣ ಹಾವಿನಹಾಳ ಕಲ್ಲಯ್ಯನೋ ಅಲ್ಲವೋ ಸಂದೇಹ.

ವೀರಶೈವ ಇತಿಹಾಸದಲ್ಲಿ ಸಮಯಾಭಿಮಾನ ನಿಮಿತ್ತ ರಕ್ತರಂಜಿತ ಘಟನೆಯನ್ನು ಮೆರೆದವ ಏಕಾಂತರಾಮಯ್ಯ, ತಾಳಿಕೋಟೆ, ಮರಡಿಪುರ ಶಾಸನಗಳು ಕೇವಲ ಹೆಸರನ್ನೂ, ಬೋಗಾವೆಶಾಸನ ಒಂದಿಷ್ಟು ಚರಿತೆಯನ್ನು ಹೇಳಿದರೆ, ಕುಡುತಿನಿ ಶಾಸನ ''....ಪಂದಲೆಯಿಂ ನಿವಾಳಿಯಂ ಪುರಮಥನಂಗೆ ಕೊಟ್ಟು ಮಗಳ್ದು ಪಡೆವಪ್ರ್ರಮಥರ್ಕಳದ್ಭುತಂ....'' ಎಂದು ಹೇಳಿ ಇವನನ್ನು ನೆನಪಿಗೆ ತರುತ್ತದೆ. ಈತನ ಬಗ್ಗೆ ವಿಶೇಷ ಸಂಗತಿಯನ್ನೊದಗಿಸುವುವು, ಇವನ ಕಾರ್ಯಕ್ಷೇತ್ರವಾದ ಅಬ್ಬಲೂರಿನ ಸೋಮೇಶ್ವರ ದೇವಾಲಯದ ಶಾಸನಗಳು. ಇವುಗಳಲ್ಲಿ ಒಂದು ಶಾಸನವಂತೂ ರಾಮಯ್ಯನ ಚರಿತ್ರೆ, ಧರ್ಮಶ್ರದ್ಧೆ, ಸಿರಸ್ಸುಪವಾಡಗಳನ್ನು ೧೦೫ ಸಾಲುಗಳಷ್ಟು ದೀರ್ಘವಾಗಿ ವರ್ಣಿಸುತ್ತದೆ. ಮಿಕ್ಕವು ಮೂರು ಚಿತ್ರಶಾಸನಗಳು. ಅವು ''ಶ್ರೀಮದ್ ಏಕಾಂತ ರಾಮಯ್ಯಂಗೆ ಸಂಕಗೌಂಡನ ಓಲೆಯ ಕುಡುವ ಠಾವು'' ''ಶ್ರೀ ಬ್ರಹ್ಮೇಶ್ವರ ದೇವರಲ್ಲಿ ಏಕಾಂತದ ರಾಮಯ್ಯ ಬಸದಿಯ ಜಿನನೊಡ್ಡವಾಗಿ ತಲೆಯನರಿದು ಹಡೆದ ಠಾವು'' ''ಸಂಕಗೌವುಂಡ ಬಸದಿಯನೊಡೆಯಲೀಯದೆ ಆಳು ಕುದುರೆಯ ನೊಡ್ಡಿರಲು ಏಕಾಂತದ ರಾಮಯ್ಯ ಕಾದಿ ಗೆಲ್ದು ಜಿನನನೊಡೆದು ಲಿಂಗಮಂ ಪ್ರತಿಷ್ಠೆಯಂ ಮಾಡಿದ ಠಾವು.'' ಈ ವಾಕ್ಯಗಳನ್ನೂ ಬರೆದು ಕೆಳಗೆ ಸುಂದರ ಶಿಲ್ಪಗಳನ್ನು ಬಿಡಿಸಲಾಗಿದೆ. ಇವಲ್ಲದೆ ಈ ಘಟನೆಯನ್ನು ಚಾಕ್ಷುಷಗೊಳಿಸುವ ಇನ್ನೂ ಕೆಲವು ಶಿಲ್ಪಗಳು ಆ ದೇವಾಲಯದಲ್ಲಿ ಕಾಣಸಿಗುತ್ತವೆ. ಮೇಲಾಗಿ ಅಲ್ಲಿ ಈ ಹೆಸರಿನ ಒಂದು ಶಿವಲಿಂಗವೂ ಪ್ರತಿಷ್ಠಾಪನೆಗೊಂಡಿದೆ.

ಈ ಶರಣರಲ್ಲದೆ ಕಲ್ಲೇದೇವರಪುರ ಶಾಸನದಲ್ಲಿ ಕಕ್ಕಯ್ಯ, ಬಂಕಯ್ಯ, ಮರಡಿಪುರ ಶಾಸನದಲ್ಲಿ ಜಗದೇವದಣ್ಣಾಯಕ, ಸುರಿಗೆಯ ಚೌಡಯ್ಯ, ದಶವರ್ಮ ಮತ್ತು ಅನಿಮಿಷ ಕೇಶವರಾಜರು ಗೋಚರಿಸುತ್ತಾರೆ. ಕಲ್ಲೇದೇವರಪುರ ಮತ್ತು ಮರಡಿಪುರ ಶಾಸನಗಳಲ್ಲಿ ತೋರುವ ಹುಲಿಗೆರೆಯ ಪೊನ್ನಯ್ಯ ಹೆಸರಿನ ಶಿವಲಿಂಗವೊಂದು ಅಬ್ಬಲೂರು ಸೋಮೇಶ್ವರ ದೇವಾಲಯದಲ್ಲಿ (ಅಗ್ಗವಣಿ ಹೊನ್ನಯ್ಯ ಎಂಬ ಹೆಸರಿನಿಂದ) ಕಂಡುಬರುತ್ತದೆ. ಬನವಾಸಿಯ ಮಧುಕೇಶ್ವರ ದೇವಾಲಯದ ಶಿಲಾಮಂಟಪದ ಗಗ್ಗರಿ ಕಲ್ಲಿನಲ್ಲಿ ಕೆತ್ತಿದ ಹಲವು ಶರಣರ ವಿಗ್ರಹಗಳ ಸಾಲಿನಲ್ಲಿ ಮೇಲೆ ಉಲ್ಲೇಖಿಸದ ಮೋಳಿಗೆಯ ಮಾರಯ್ಯ, ಸುಲಿಯಚಂದಯ್ಯ, ಆಯ್ದಕ್ಕಿಮಾರಯ್ಯ, ಹಡಪದ ಅಪ್ಪಣ್ಣ ಹೆಸರಿನ ವಿಗ್ರಹಗಳು ಕಂಡರಿಸಲ್ಪಟ್ಟಿವೆ. ಶಾಸನಗಳ ಪ್ರಕಾರ ಬಸವಯುಗದ ಕೊನೆಕೊನೆಗೆ ಗೋಚರಿಸುವವ ಶರಣ ಅಮುಗಿದೇವ. ಕರ್ನಾಟಕದ ಕುರುಬಜನಾಂಗದ ಕುಲದೈವನಾದ ಈತನ ಒಂದು ಶಾಸನ

ಮತ್ತು ದೇವಾಲಯಗಳು ಪುಳಜೆಯಲ್ಲಿವೆ. ಈ ಶಾಸನದಲ್ಲಿ ಬರುವ ''ಶಿವಾಚಾರ್ಯೈಕ ನಿರತಃ'' ''ಮಹೇಶ್ವರಗಣ ಕುಲಾನ್ವಯ ದಿವಾಕರ'' ''ಶರಣ ಸಂತಾನ'' ''ಸಿದ್ಧಕುಲಾರ್ಣವ ಪ್ರವರ್ಧನ ಸುಧಾಕರ'' ಎಂಬ ವಿಶೇಷಣಗಳು ಮನನೀಯವಾಗಿವೆ.

ವೀರಶೈವದ ಸುಗ್ಗಿಯನ್ನು ಸಾರ್ಥಕಗೊಳಿಸಿದ ಬಸವಯುಗದ ಈ ಶರಣರು ಕಲ್ಯಾಣಕ್ರಾಂತಿಯಿಂದಾಗಿ ಆಂಧ್ರಪ್ರದೇಶದ ಓರಂಗಲ್ಲು, ಶ್ರೀಶೈಲ, ಕರ್ನಾಟಕದ ದ್ವಾರಸಮುದ್ರ, ಹಂಪೆಗಳತ್ತ ಮುನ್ನಡೆದರು. ಮುಂದೆ ಕ್ರಮೇಣ ವೀರಶೈವಧರ್ಮ ಎಡೆಯೂರು, ಗುಬ್ಬಿ, ಗೂಳೂರು, ಪುಲಿಗೆರೆ, ಹಂಪೆ, ವೊದಲಾದವುಗಳನ್ನೂ ಕೇಂದ್ರ ನೆಲೆಗಳನ್ನಾಗಿಸಿಕೊಂಡು ಕರ್ನಾಟಕದ ಮೂಲೆ ಮೂಲೆಗಳನ್ನು ತನ್ನ ಚಾಚಿದ ಬಾಹುಗಳಿಂದ ಅಪ್ಪಿಕೊಂಡಿತು. ಶಾಸನಗಳಲ್ಲಿ ಕಾಣುವ ಈ ಅವಧಿಯ ಶರಣರಲ್ಲಿ ಮೂರುಜಾವಿದೇವನನ್ನು ಮೊದಲು ನೆನೆಯಬೇಕಾಗುತ್ತದೆ.

ಏಕಾಂತರಾಮಯ್ಯನ ಶಿರಸ್ಸು ಪವಾಡ ಪ್ರಸಂಗದಲ್ಲಿ ಮುಳುಗುವ ಸೂರ್ಯನನ್ನು ಮೂರು ಜಾವಗಳ ವರೆಗೆ ತಡೆದ ಪವಾಡಪುರುಷನೀತ. ಅಬ್ಬಲೂರು ಚರಿತೆ, ವೀರಶೈವಾಮೃತ ಮಹಾಪುರಾಣಗಳಲ್ಲಿ ಕಂಡುಬರುವ ಈತನ ಹೆಸರಿನಲ್ಲಿ ಹಲವು ಶಾಸನಗಳು ಸಿಗುತ್ತವೆ. ರಟ್ಟೆಹಳ್ಳಿಯ ಒಂದು ಶಾಸನ (೧೨೩೮)ದಲ್ಲಿ ಲಕುಳೀಶನೆಂಬವನ ಗುರು ಮತ್ತು ಶಿಷ್ಯ ಹೀಗೆ ಇಬ್ಬರು ಮೂರುಜಾವಿ ಪಂಡಿತರಿದ್ದಾರೆ. ಅಲ್ಲಿಯ ಲಕುಳೀಶನ ಗುರು ಮೂರುಜಾವಿ ಪಂಡಿತನನ್ನು ರಟ್ಟೆಹಳ್ಳಿಯ ಇನ್ನೊಂದು ಶಾಸನ (೧೧೫೯)ವೂ ಉಲ್ಲೇಖಿಸುತ್ತದೆ. ಇವರಲ್ಲದೆ ಹಿರೇಮೇಗಲಗೇರಿ ಶಾಸನ (೧೦೫೯)ದಲ್ಲಿಯೂ ಒಬ್ಬ ಮೂರುಜಾವಿಪಂಡಿತನ ಹೆಸರಿದೆ. ಲಕ್ಷ್ಮೇಶ್ವರದ ಒಂದು ಶಾಸನದಲ್ಲಿ (೧೨೨೭) ಮೂರುಜಾವಿದೇವಮುನಿ, ಕಲಕೇರಿಯ ಎರಡು ಶಾಸನಗಳಲ್ಲಿ ಭಿಕ್ಷೆಯ ಮೂರು ಜಾವಿದೇವ ಎಂಬ ಹೆಸರುಗಳಿವೆ. ಇವರಲ್ಲಿ ಒಬ್ಬನೋ ಬೇರೊಬ್ಬನೋ ಪ್ರಸ್ತುತ ಮೂರುಜಾವಿದೇವನಾಗಿರಬಹುದು. ಈತನ ಒಂದು ವಿಗ್ರಹ ಧಾರವಾಡ ಜಿಲ್ಲೆಯ ಅಂತರವಳ್ಳಿಯಲ್ಲಿದ್ದು ಅದು ವಿಶ್ವಕರ್ಮ ಸಮಾಜದ ಆರಾಧ್ಯದೈವತವಾಗಿದೆ. ಈ ಅವಧಿಯ ಇನ್ನೊಬ್ಬ ಶರಣ ಕುರುಗೋಡ ಸಿಂದವಂಶದ ರಾಚಮಲ್ಲ ನೃಪ. ಸಾನಂದ ಚರಿತ್ರೆ, ವೀರಶೈವಾಮೃತ ಮಹಾಪುರಾಣಗಳಲ್ಲಿ ಉಲ್ಲೇಖಿಸಲ್ಪಟ್ಟ ಇವನು ''ಶಿವೈಕ ಚೂಡಾಮಣಿ, ಅರ್ಚಿತಶಿವಪಾದಂ.'' ''ಪಾರ್ವತೀಶಾಂಘ್ರಿ ನಿರ್ಭರಭಕ್ತಂ'' ಎಂದು ಪ್ರಖ್ಯಾತನಾದ ಮೊದಲನೆಯ ರಾಚಮಲ್ಲನ ಮೊಮ್ಮಗ. ಈತನನ್ನು ಒಂದು ಶಾಸನ

ಪೊಡವಿಯ ಸಮಸ್ತ ಭಕ್ತರ  
ನಡುವೆ ಮೃಡಂ ಮೆಚ್ಚಿ ನಿಚ್ಚವರಮಂ ಕುಡಲಿ  
ರ್ಮಡಿ ರಾಜಮಲ್ಲದೇವಂ  
ಪಡೆದಂ ನಿತ್ಯಪ್ರಸಾದ ರಾಜ್ಯಶ್ರೀಯಂ ॥

ಭಕ್ತರಂ ಪಿರಿದು ಮನ್ನಿಸಲೀಶ್ವರಂ ವರದನಾಗಲ್ ರಾಜ್ಯಮಂ ತಾಳ್ದಿ ವಿಸ್ತರಿಸುತ್ತೂಪ್ಪಿರೆ, ದೇವರೊಂದು ದಿವಸಂ ಪ್ರತ್ಯಕ್ಷದಿಂ ಬರ್ಪುದುಂ, ರಾಜಮಲ್ಲರಸಂ ಭೋಂಕನೆ ಕಂಡು ''ಪೊಡೆಮಟ್ಟಾನಂದದಿಂ ಶಿವಲಿಂಗಾರ್ಚನಂ ಮಾಡಿ, ಶರೀರಂ ಬೆರಸುತ್ತುಂಗಾಶ್ವಚಿಂಚಚ್ಚ ಮರರುಹ ಸಿತಚ್ಚತ್ರ ಚಿಹ್ನಾನ್ವಿತಂ ಶಂಕರನೊಳ್ ಪೊರ್ದಿದಂ'' ಎಂದು ವರ್ಣಿಸುತ್ತದೆ.

ಗಿರಿಸಿದ್ಧಾಪುರ ಶಾಸನದಲ್ಲಿ ಪುಲಿಗೆರೆಯ ಪುರಾಣದ ಮಾಯಿದೇವಪಂಡಿತ, ಶಿವರಾತ್ರಿ

ಮಾಯಿದೇವ, ಗೊಪೆಯ ಶಿವದೇವ, ಶಿರಶರಣ ಎಂಬ ನಾಲ್ಕು ಜನ ಶರಣರ ಹೆಸರು ಬರುತ್ತವೆ. ಪುಲಿಗೆರೆಯ ಜಕ್ಕಣಾರ್ಯನ ಗುರುಪರಂಪರೆಯಲ್ಲಿ ಬರುವ ಪುರಾಣದ ಮಾಯಿದೇವಪಂಡಿತ, ವಾದದಲ್ಲಿ ಗೆದ್ದ ಕೆರೆಯ ಪದ್ಮರಸರನ್ನೂ ಸ್ತುತಿಸಿದ ಹುಲಿಗೆರೆಯ ಮಾಯಿದೇವ ಪುರಾಣಭಟ್ಟ ಎಂಬ ಹೆಸರುಗಳು ಇವನೆಡೆಗೆ ಬೆರಳು ನೀಡುತ್ತವೆ. ಸಾಲದುದಕ್ಕೆ ಮಹಾಕವಿ ಹರಿಹರನ ಗುರು ''ಪುರಾಣದ ಮಾಯಿದೇವ ಭಟ್ಟ''ನೆಂದು ಶಾಂತಲಿಂಗ ದೇಶಿಕ ಹೇಳುತ್ತಾನೆ. ಈ ಎಲ್ಲ ಸಂಗತಿಗಳ ಪುನರಾಲೋಚನೆ ಕನ್ನಡ ಸಾಹಿತ್ಯ ಚರಿತ್ರೆಯ ದೃಷ್ಟಿಯಿಂದ ಮಹತ್ವಪೂರ್ಣ ಅಭ್ಯಾಸವೆನಿಸಿದೆ. ಇಲ್ಲಿಯ ಗೊಪೆಯ ಶಿವದೇವ, ಸಕಲೇಶ ಮಾದರಸರಿಂದ ಮುಕ್ತಿ ಪಡೆದ ಗೊಪೆಯ ಶಿವದೇವ ಮತ್ತು ಚೌಡದಾನಪುರ ಶಿವದೇವರ ಸಂಬಂಧ ಬಿಡಿಸಲಾರದ ತೊಡಕಾಗಿ ನಿಂತಿದೆ.

ವೀರಶೈವಕವಿಗಳ ಗರುಡದೃಷ್ಟಿಗೆ ಬೀಳದಿದ್ದುದು ಆಶ್ಚರ್ಯವೆಂಬಂತೆ ಬಾಳಿದ ಚೌಡದಾನಪುರ ಶಿವದೇವನೊಬ್ಬ ಈ ಯುಗದ ಪರಂಜ್ಯೋತಿಸ್ವರೂಪದ ವ್ಯಕ್ತಿ. ಚೌಡದಾನಪುರದ ಹಲವು ಶಾಸನಗಳಲ್ಲಿ ಈತನ ವರ್ಣನೆ ದೇದೀಪ್ಯಮಾನವಾಗಿದೆ. ಭಕ್ತಿಮಾರ್ಗವನ್ನು ಮರ್ತ್ಯರಿಗೆ ತೋರಬೇಕೆಂದು ಪಾರ್ವತಿ ಶಿವನಿಗೆ ಬಿನ್ನವಿಸಿಕೊಳ್ಳಲು ''ಶ್ರೀ ಸಂಗಮೇಶನ ಪುತ್ರಂ ಬಸವಯ್ಯ''ನಂತೆ ಈ ಶಿವದೇವ ಅವತರಿಸಿದನೆಂದು ಒಂದು ಶಾಸನ ಹೇಳಿದರೆ, ಇನ್ನೊಂದು ಶಾಸನದ

ಲಿಂಗಕ್ಕೆ ಜಂಗಮಕ್ಕಂ
ಹಿಂಗದೆ ದಾಸತ್ವ ಮಾಳ್ಪುದೇ ಬೆಸನೆಂದಾ
ಸಂಗನಬಸವಂ ಬೆಸಸೆ ಮ
ನಂಗೊಂಡರ್ಚಿಸುವನುಭಯಲಿಂಗವ ಮುದದಿಂ ॥

ಮ್ರನಡಗಣ ವರಪ್ರಸಾದಮ
ಪಡೆದಂ ಜಗವರಿಯಲಂದು ಸಂಗನಬಸವಂ
ಪಡೆದಾ ಪ್ರಸಾದಸಿದ್ಧಿಯ
ಕಡುವೀರಬ್ರತದಿ ಪಡೆದನೀ ಶಿವದೇವಂ ॥

ಎಂಬ ಮಾತುಗಳು ಶಿವದೇವನು ಬಸವಮಾರ್ಗದ ನಿಷ್ಠೆಯ ಅನುಯಾಯಿಯೆಂದು ಸ್ಪಷ್ಟಪಡಿಸುತ್ತವೆ. ಈ ಪದ್ಯಗಳಲ್ಲಿ ಬರುವ ವೀರಶೈವ ತತ್ವರತ್ನಗಳಾದ ಲಿಂಗಜಂಗಮ ಸೇವೆ, ಪ್ರಸಾದಸಿದ್ಧಿಗಳ ಉಲ್ಲೇಖ ಚರಿತ್ರೆಯ ದೃಷ್ಟಿಯಿಂದ ಮಹತ್ವಪೂರ್ಣವಾದುವು. ಇದೇ ಶಾಸನಗಳಲ್ಲಿ ಭಕ್ತಾಚಾರದ ಚೀಲಾಳ (ಈತನ ಉಲ್ಲೇಖ ವೀರಶೈವಾಮೃತ ಮಹಾಪುರಾಣದಲ್ಲಿದೆ) ಮತ್ತು ಶಿಷ್ಯೆ ವೀರಕನ್ಯಾದೇವಿಯರ ವಿಷಯವೂ ಬರುತ್ತದೆ. ಕೆರೆಮಲ್ಲಾಪುರ ಶಾಸನ (ಇದರ ಸತ್ಯದ ಬಗ್ಗೆ ಸಂದೇಹ)ದಲ್ಲಿ ಬರುವ ''ಶ್ರೀ ಶರಣಚೌಡಯ್ಯ''ನೆಂದರೆ ಅಂಬಿಗರ ಚೌಡಯ್ಯನೆಂದೂ ಇನ್ನೊಂದು ಶಾಸನದಲ್ಲಿ ಬರುವ ಮಣಂಬೆನಾಯಕನು ಈತನೇ ಎಂದು ಈ ಹೆಸರು ಕಾರಣವಾಗಿ ಚೌಡದಾನಪುರ ಎಂಬುದು ರೂಪುಗೊಂಡಿದೆಯೆಂದೂ ಕೆಲವರ ಊಹೆ. ಇದಕ್ಕೆ ಆಧಾರಗಳು ಬೇಕು.

ಶಿವದೇವನಂತೆ ವೀರಶೈವ ಕವಿಗಳ ಕಣ್ಣಿಗೆ ಬೀಳದಿದ್ದರೂ ಮಾವನೂರು ಶಾಸನದಲ್ಲಿ ''ತಿಲಮಧ್ಯದೊಳಿರ್ಪ ತೈಲದಂತೆ, ಕಾಷ್ಠಮಧ್ಯದೊಳಿಪ್ಪ ಅಗ್ನಿಯಂತೆ, ಜಲಮಧ್ಯದೊಳಿರ್ಪ

ಕಮಳದಂತೆ ತಾವು ಮಾನುಷಚರಿತರಪ್ಪುದಱಿಂ ಸಂಸಾರಮಂ ಸೋಂಕದೆ ಅಣೋರಣಿಯಂ ಮಹತೋಮಹಿಯಂ ಎಂಬ ಶ್ರುತಿವುಂಟಾಗಿ ಇರುಹೆ ಮೊದಲಾದ ಪರಮಾಣುವಿನ ನೋವಂ ಸೈರಿಸದೆ ಇಚ್ಛಾಶಕ್ತಿ, ಗ್ನಾನಶಕ್ತಿ, ಕ್ರಿಯಾಶಕ್ತಿಯುಳ್ಳ ಶಿವಭಕ್ತ''ರೆಂದು ವರ್ಣಿತರಾಗಿದ್ದಾರೆ. ಅಪ್ಪಯ ಮತ್ತು ದೇವರಸರು ಇಲ್ಲಿಯ ''ಚಂದ್ರಂಗೆ ಬೆಳುದಿಂಗಳಂ, ಬೆಳುದಿಂಗಳಿಂಗೆ ಪರಿಮಳಮಂ, ಪರಿಮಳಕ್ಕೆ ಸವಿಯಂ, ಸವಿಗೆ ರೂಪಂ, ರೂಪಕ್ಕೆ ಸೌಂದರ್ಯಮಂ ಕೊಡುವಂತೆ ಉಪದೇಶಂ ಮಾಡೆ'' ಎಂಬ ಏಕಾವಳಿ ಶೈಲಿ, ''ಪುಟವಿಟ್ಟ ಪುಣ್ಯಂ ಪುರುಷಾಕಾರವಾದಂತೆ, ಶಾಂತಿ ಸಾಕಾರವೆತ್ತಂತೆ, ಪರಮಾರ್ಥಂ ಶರೀರವಡೆದಂತೆ, ಭಕ್ತಿಜ್ಞಾನ ಸಂಸಾರಮಂ ಸವಿವಂತೆ'' ಎಂಬ ಉಪಮಾಶೈಲಿ, ''ಲೋಭವಡಿಯಿಡದ ಕರಪಲ್ಲವಂಗಳ, ಅನೃತವಂಕುರಿಸದ ರಸನಾಪ್ರದೇಶದ, ಸಂಸೃತಿ ಸರಸವಾಡದ ಚರಿತಶುದ್ಧಿಯ, ಕಾಮನ ಡಾಮರಕೊಳಸೋರದ ಮನದ ಜಿನದದ'' ಎಂಬ ವೈವಿಧ್ಯಪೂರ್ಣ ಗದ್ಯಶೈಲಿಯ ತುಂಬ ಮಹಾಕವಿ ಹರಿಹರ ತುಂಬಿ ನಿಂತಿದ್ದಾನೆ.

ಲಕ್ಕಣ್ಣದಂಡೇಶನ ಶಿವತತ್ವಚಿಂತಾಮಣಿಯಲ್ಲಿ ಬರುವ ಆಕಾಶವಾಸಿಯತಿಯನ್ನು ದೊಡ್ಡಕೌಲಂದೆಯ ಎರಡು ಶಾಸನಗಳು, ಲಕ್ಕಣ್ಣದಂಡೇಶನನ್ನು ಕನ್ನಡದ ೧೩, ತಮಿಳಿನ ೪-ಹೀಗೆ ೧೭ ಶಾಸನಗಳು ಉಲ್ಲೇಖಿಸುತ್ತವೆ. ಚಿತ್ರದುರ್ಗ, ಕೋಲಾರ, ಬೆಂಗಳೂರು, ಮಂಡ್ಯ, ಸೇಲಂ, ತಿರುಚನಾಪಳ್ಳಿ, ತಂಜಾವೂರು, ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಕಂಡುಬರುವ ಈ ಶಾಸನಗಳು ಲಕ್ಕಣ್ಣನ ಪ್ರಜಾನುರಾಗ, ಅರಸುಮೈತ್ರಿ, ದಾನಗುಣ ಮೊದಲಾದವುಗಳನ್ನು ಹೇಳುವುದೇ ಹೊರತು ವೀರಶೈವಕ್ಕೆ ಸಂಬಂಧಪಟ್ಟಂತೆ ಈತನು ನಿರ್ವಹಿಸಿದ ಪಾತ್ರವನ್ನು ತಿಳಿಸುವುದಿಲ್ಲ.

ಇಲ್ಲಿಯವರೆಗೆ ಕಲ್ಯಾಣದ ತರುವಾಯ ವೀರಶೈವದ ಕೇಂದ್ರಭೂಮಿ ಹಂಪೆಯಾಗಿದ್ದಿತು. ಹಂಪೆಯ ಬಳಿಕ ಕೇಂದ್ರಭೂಮಿಯಾಗುವ, ಪುಣ್ಯ ಪಡೆಯಿತು ಎಡೆಯೂರು. ಈ ಎಡೆಯೂರ ಗುರುಪರಂಪರೆಯನ್ನು ಪ್ರಭುದೇವ, ಚನ್ನಬಸವ, ಸಿದ್ಧರಾಮ, ಅನಾದಿಗಣೇಶ್ವರ, ನಿರ್ಮಾಯಗಣೇಶ್ವರ (ಮಲೆಯ ಮಾದೇಶ್ವರ), ನಿರಂಜನ ಗಣೇಶ್ವರ, ಆದಿಲಿಂಗಗಣೇಶ್ವರ, ಚನ್ನವೀರೇಶ್ವರದೇವ, ಹರಪನಹಳ್ಳಿಯ ಗೋಸಲಯತೀಶ ಎಂದು ನಿರಂಜನವಂಶ ರತ್ನಾಕರ ಹೇಳುತ್ತದೆ. ಇವರಲ್ಲಿ ನಿರ್ಮಾಯ ಗಣೇಶ್ವರ (ಮಾದೇಶ್ವರ), ಗೋಸಲಯತೀಶರ ಬಗ್ಗೆ ಎರಡು ಶಾಸನಗಳು ಲಭಿಸುತ್ತಿದ್ದು ಗೋಸಲಾರ್ಯನು 'ಅಪ್ಪಣಾರ್ಯ ನಿಜಗರ್ಭ ಸಂಭೂತ'ನೆಂದು ತಿಳಿದುಬರುತ್ತದೆ. ಮುಂದೆ ಶಂಕರಾಚಾರ್ಯ, ದಿವ್ಯಲಿಂಗೇಶ್ವರರ ತರುವಾಯ ಈ ಪೀಠವೇರಿದವರು ಚೆನ್ನಬಸವರಾಜಯತಿ. ಈತನ ಶಿಷ್ಯರಲ್ಲಿ ಸುಪ್ರಸಿದ್ಧರಾದವರು ತೋಂಟದ ಸಿದ್ಧಲಿಂಗ ಮತ್ತು ಗುಬ್ಬಿಯ ಮಲ್ಲಣಾರ್ಯ. ಗುಬ್ಬಿಯ ಒಂದು ಶಾಸನ ಚೆನ್ನಬಸವರಾಜ ಮತ್ತು ಮಲ್ಲಣಾರ್ಯರನ್ನು ಉಲ್ಲೇಖಿಸಿದರೆ, ಹಲವಾರು ಶಾಸನಗಳು ತೋಂಟದ ಸಿದ್ಧಲಿಂಗನನ್ನು ಬಾಯ್ತುಂಬ ಬಣ್ಣಿಸಿವೆ. ಏಳುನೂರು ವಿರಕ್ತರ ನಾಯಕವ್ಯಕ್ತಿಯಾಗಿ ನಿಂತು, ವೀರಶೈವವನ್ನು ತುಂಗಭದ್ರೆಯ ದಕ್ಷಿಣಕ್ಕೆ ಹೆಚ್ಚು ಪ್ರಸಾರಗೊಳಿಸಿದ ಈತ ವೀರಶೈವದ ಇತಿಹಾಸದಲ್ಲಿ ದ್ವಿತೀಯ ಪ್ರಭು. ಬಸವ ಮತ್ತು ಚೆನ್ನಬಸವ, ಎಡೆಯೂರು ಮಠದ ಆವರಣದ ಒಂದು ಶಾಸನ ''ಆ ಸಿದ್ಧಲಿಂಗೇಶ್ವರನ ಮೂರ್ತಿಕ್ರಮವೆಂತೆಂದಡೆ: ಪ್ರಣಮವೆ ಸಿರಸು, ನಮಸಾ(ಸ್ಕಾ)ರವೇ ಭುಜ, ಶಿಕಾರವೇ ದೇಹ, ವಯಸ್ಕಾರವೇ ಪಾದಂ, ಅನಂತಕೋಟಿ ಬ್ರಹ್ಮಾಂಡಗಳೇ ಮಕುಟ,

ಸಮಸ್ತಲೋಕಾದಿಲೋಕಂಗಳೇ ದೇಹದ ಜಳವಳಿಯ, ಆಕಾಶವೇ ಮುಖ, ದಶದಿಕ್ಕುಗಳೇ ತೋಳು, ಚಂದ್ರಸೂರ್ಯಾದಿಗಳೇ ನಯನ, ಪಾತಾಳವೇ ಹೆದ (ಎದೆ?), ಮೇಘಂಗಳೇ ಜಟಾಬಂಧ, ಆ ಜಟಾಬಂಧದಲ್ಲಿ ಶೂನ್ಯಲಿಂಗ, ವೇದಪುರಾಣಂಗಳೇ ಕ್ರೀ ನಕ್ಷತ್ರಂಗಳೇ ಪುಷ್ಪ, ಚಂದ್ರಪ್ರಕಾಶವೇ ವಿಭೂತಿ, ಅಷ್ಟಕುಲ ಪರ್ವತಗಳೇ ರುದ್ರಾಕ್ಷಿ, ಸಪ್ತಸಮುದ್ರಂಗಳೇ ಕಮಂಡಲ, ಭುವನ ಸೃಷ್ಟಿಯೇ ಕಂತೆ, ದಿವಾರಾತ್ರಿಗಳೇ ಮಠ, ಷಡುರುತುಗಳೇ ಷಡಸ್ಥಳ ಮಹಾಶೇಷನೇ ಕಟಸೂತ್ರ, ಪರಿಪೂರ್ಣಜ್ಞಾನವೇ ಪಂಚಮುದ್ರೆ, ತ್ರಿಕಾಲಜ್ಞಾನವೇ ಮಹದೈಶ್ವರ್ಯ, ಮಹಾಮೇರುವೆ ದಂಡ, ಸದ್ಗುಣವೇ ಕರ್ಪರ, ಕುಲವೇ ಶಿವಕುಲ. ಯಿಂತಪ್ಪ ಅನಾದಿ ಜಂಗಮವವೆ ಜಗಹಿತಾರ್ಥವಾಗಿ ಚರಿಸಿದ ಕ್ರಮವೆಂತೆಂದರೆ: ಜ್ಞಾನ ಕ್ರಿಯಾಸ್ವರೂಪನು, ಸರ್ವಾಂಗಲಿಂಗಿ, ಷಟ್‌ಸ್ಥಲಜ್ಞಾನಿ, ಸರ್ವಾಚಾರ ಸಂಪನ್ನ, ಪಾದೋದಕ ಪ್ರಸಾದ ಪ್ರತಿಷ್ಠಾಚಾರ್ಯನು, ಅಷ್ಟಾವರಣಾಲಂಕರಣ, ದ್ವೈತಾದ್ವೈತ ತಿಮಿರ ಮಾರ್ತ್ತಂಡನು ಯಿಂತಪ್ಪ ದಿವ್ಯಶಿವಯೋಗಿ, ಸಿದ್ಧಲಿಂಗೇಶ್ವರರಿಗೆ ಸಂಮ್ಯ ಜ್ಞಾನೋದಯವಾಗಿ, ಸಂಸಾರ ಹೇಯಮಂ ಮಾಡಿ ಶರಣುಹೊಕ್ಕ ಶಿಷ್ಯಜನಗಳ ನಾಮ ಪರಿಕ್ರಮಗಳೆಂತೆಂದಡೆ: ಸಪ್ಪೇದೇವರು, ಉಪ್ಪಿನಹಳ್ಳಿಸ್ವಾಮಿ, ಸಿದ್ದೇದೇವರು, ನಂಜೇದೇವರು, ಬೋಳಬಸವರಾಜದೇವರು, ಗುಮ್ಮಳಾಪುರದ ಸಿದ್ಧಲಿಂಗದೇವರು, ಪಟ್ಟಣದೇವರು, ರೇವಣಸಿದ್ದೇದೇವರು, ಸೀಲವಂತದೇವರು, ಚಿಟ್ಟಿಗದೇವರು, ಯಿಂತಿವರು ಮುಖ್ಯವಾದ ಭಕ್ತ ಮಹೇಶ್ವರರ್ಗೆ ಷಡುಸ್ಥಲಜ್ಞಾನ ಲಿಂಗಾಂಗಸಂಬಂಧ ಸಮರಸ ಏಕಾರ್ತ್ಥಮಂ ಬೋಧಿಸಿ ಮುಕ್ತರಂ ಮಾಡಿ ಷಡುಸ್ಥಲಯೇಕಾರ್ತವಾಗಿ ಮಾಡುವ ಕ್ರೀಗಳೆಲ್ಲ ನಿಷ್ಪತ್ತಿಯಾಗಿ ಯೆಡೆಯೂರಲ್ಲಿ ತಮಗೆ ಕಟ್ಟಿಸಿದ ಮಠದಲ್ಲಿ ಶಿಯೋಗಸಮಾಧಿ ಸಂನದ್ಧರಾದರು....'' ಎಂದು ಮುಂತಾಗಿ ಶ್ರೀಗಳವರ ವ್ಯೋಮ ಮೂರುತಿಯನ್ನು ಬೆರಗಾಗಿ ಬಣ್ಣಿಸುತ್ತ ಅವರ ಶಿಷ್ಯದಿಗ್ಗಜಗಳನ್ನು ಉಲ್ಲೇಖಿಸುತ್ತದೆ. ಕಗ್ಗೆರೆಯ ಒಂದು ಶಾಸನ ಇಕ್ಕೇರಿಯವರೊಂದಿಗೆ ಏರ್ಪಟ್ಟ ಯುದ್ಧದಲ್ಲಿ ತಮಗೆ ಜಯ ಲಭಿಸಬೇಕೆಂದು ಹೊತ್ತ ಹರಕೆ ಕೈಗೂಡಲು ಮೈಸೂರು ಒಡೆಯರ ದಳವಾಯಿ ನಂದಿನಾಥಯ್ಯನು ಸಿದ್ಧಲಿಂಗನ ಸೇವೆಗೆಂದು ಭೂಮಿದಾನ ನೀಡಿದ ವಿಷಯವನ್ನು ತಿಳಿಸುತ್ತದೆ. ಶ್ರೀಗಳಿಗೆ ಭಕ್ತರು ಸಲ್ಲಿಸಿದ ಸೇವೆಯನ್ನು ತಿಳಿಸುತ್ತದೆ. ಕಗ್ಗೆರೆಯ ಇನ್ನೆರಡು ಶಾಸನಗಳು, ಸಿದ್ಧಲಿಂಗೇಶ್ವರ ದೇವಾಲಯದ ಎರಡು ದೊಡ್ಡ ಗಂಟೆಗಳ ಮೇಲೆ ಟೀಪುಸುಲ್ತಾನನ ಅಧಿಕಾರಿ ಜಾಫರಖಾನನು ಅರ್ಪಿಸಿದುವೆಂದು ಬರೆದಿದೆ. ಇದಲ್ಲದೆ ಪೂಜಾಪರಿಕರಗಳ ಮೇಲೆ ಅವುಗಳನ್ನು ಸಲ್ಲಿಸಿದ ಸಾಮಂತರ, ಸಾಮಾನ್ಯರ ಹೆಸರುಗಳಿವೆ. ಇವುಗಳಿಗಿಂತ ಮುಖ್ಯವಾದುದು ಚಿತ್ರದುರ್ಗ ಶಾಸನ. ಇದರ ಮೇಲೆ ತೋಂಟದ ಸಿದ್ಧಲಿಂಗೇಶ್ವರನ ಒಂದು ವಚನವೇ ಕೆತ್ತಲ್ಪಟ್ಟಿದೆ. ಸಮಗ್ರ ವಚನ ವಾಙ್ಮಯದಲ್ಲಿ ಶಿಲಾಸ್ಥಾಯಿಯಾದ ವಚನ ಇದೊಂದೇ.

ಇದೇ ಸುಮಾರಿಗೆ ಹುಟ್ಟಿದ ಗುಮ್ಮಳಾಪುರದ ತಾಮ್ರಶಾಸನವೊಂದು ಗಮನಾರ್ಹವೆನಿಸಿದೆ. ಸಾಮಾನ್ಯವಾಗಿ ಶಾಸನಗಳು ಸೂರ್ಯ ಮತ್ತು ಚಂದ್ರಗ್ರಹಣಕಾಲದಲ್ಲಿ ಬ್ರಾಹ್ಮಣರಿಗೆ ದತ್ತಿಕೊಟ್ಟುದನ್ನು ಉಲ್ಲೇಖಿಸುತ್ತಿದ್ದರೆ, ಇಲ್ಲಿ ಶಿವರಾತ್ರಿಯಂದು ಚಿಕ್ಕದೇವಪ್ಪ, ಶಂಖದ ಸಿದ್ಧಲಿಂಗ, ನಿಜಲಿಂಗ ಚಿಕ್ಕಯ್ಯ, ಬಿಟ್ಟಮಂಡೆಯಪ್ರಭು, ಜಂಗುಳಿದೇವ, ಪ್ರಸಾದಿದೇವರು ಸೇರಿ ಬ್ರಾಹ್ಮಣ ಮತದ ವೆಂಕಟೇಶ್ವರ ಉಪಾಧ್ಯಾಯರಿಗೆ ಒಂದು ಅಗ್ರಹಾರವನ್ನು ದಾನ ನೀಡಿ ಮತ ಮೈತ್ರಿಯನ್ನು ಮೆರೆದಿದ್ದಾರೆ.

ವೀರಶೈವ ಕಾಲಜ್ಞಾನ ಸಾಹಿತ್ಯದಲ್ಲಿ ಶಿಖರಸದೃಶನಾದ ಎಮ್ಮೆ ಬಸವನಿಗೆ ಮಂಡಲೇಶ್ವರ ಸಕಲರಾಜುವಿನ ಪುತ್ರ ತಿರುಮಲರಾಮನು ಕೊಮರಗೆರೆಯೆಂಬ ಗ್ರಾಮವನ್ನು ನೀಡಿದ ವಿಷಯ ನಂಜನಗೂಡು ತಾಮ್ರಶಾಸನದಲ್ಲಿದೆ. ಇಲ್ಲಿ ಬರುವ ''ಪ್ರಾಪ್ತ ಕಾಲತ್ರಯೋದಂತ ಪರಿಜ್ಞಾನಾಯಧೀಮತಾ'' ''ವೀರಶೈವಾಗಮಜ್ಞಾಯ'' ಎಂಬಿವು ಮಹತ್ವಪೂರ್ಣ ಉಲ್ಲೇಖಗಳು. ಇದಲ್ಲದೆ ಹೋಳಿನ ಹಿರಿಯ ಹಂಪಯ್ಯನ ವಿಷಯ ಕವಲೇದುರ್ಗ ಮತ್ತು ಕೊಪ್ಪಳ ಶಾಸನಗಳಲ್ಲಿ ಬರುತ್ತಿದ್ದರೆ, ಕವಲೇದುರ್ಗದ ಇನ್ನೊಂದು ಶಾಸನ ಪುರಾಣದ ರಾಚವಟ್ಟದೇವನಿಗೆ ದತ್ತಿ ನೀಡಿದ ಸಂಗತಿಯನ್ನು ಹೇಳುತ್ತದೆ.

ಹೀಗೆ ಶರಣರನ್ನು ಕುರಿತ ಶಾಸನಗಳು ಕಾಲಕಾಲಕ್ಕೆ ಹುಟ್ಟುತ್ತ ಬಂದಿವೆ. ಇವು ಒಬ್ಬೊಬ್ಬ ಶರಣನನ್ನು ಉಲ್ಲೇಖಿಸುತ್ತಿದ್ದರೂ ಕ್ರಮವಾಗಿ ನೋಡಿದರೆ ಶರಣಪರಂಪರೆ ಸಾಗಿಬಂದ ದಾರಿಯನ್ನೂ ವೀರಶೈವದ ಮುಖ್ಯ ಹೆಜ್ಜೆಗಳನ್ನೂ ಸ್ಪಷ್ಟಪಡಿಸುತ್ತವೆ. ಒಟ್ಟನಲ್ಲಿ ''ವೀರಶೈವ ಮತ ಸ್ಥಾಪಕರೆಂದು ಪ್ರಸಿದ್ಧರಾದ ಬಸವ, ಚೆನ್ನಬಸವಾದಿಗಳು ಕ್ರಿ.ಶ. ೧೧೫೬-೧೧೬೭ರಲ್ಲಿ ಆಳುತ್ತಿದ್ದ ಬಿಜ್ಜಳನ ಕಾಲದಲ್ಲಿ ಇದ್ದರೆಂದು ಸರ್ವತ್ರ ಪ್ರತೀತಿ ಇದ್ದು ಕರ್ನಾಟಕ ದೇಶದ ಶಾಸನಗಳಲ್ಲಿ ಇದಕ್ಕೆ ಯಾವ ವಿಧವಾದ ಆಧಾರವೂ ದೊರೆಯುವುದಿಲ್ಲ. – ಅವರು ಕ್ರಿ.ಶ. ೧೧೫೬-೧೧೬೭ರಲ್ಲಿ ಇರಲಿಲ್ಲವೆಂದಂತೂ ಸುಮಾರಾಗಿ ದೃಢವಾಗಿಯೇ ಹೇಳಬಹುದು'' ಎಂಬಂತಹ ಹೇಳಿಕೆಗಳನ್ನು ತಳ್ಳಿಹಾಕಿದ ಶ್ರೇಯಸ್ಸು ಈ ಶಾಸನಗಳಿಗೆ ಸಲ್ಲುತ್ತದೆ.

ಶಾಸನ ಬರವಣಿಗೆ ಶರಣಧರ್ಮಕ್ಕೆ ವಿರುದ್ಧವಾಗಿದ್ದರೂ ಅವರ ಬಗೆಗಿನ ಉತ್ಕಟ ಅಭಿಮಾನ ಮತ್ತು ಕೃತಜ್ಞತೆಯ ದ್ಯೋತಕವಾಗಿ ಕನ್ನಡಿಗರು ಅವರ ಹೆಸರಿನಲ್ಲಿ ಶಾಸನಗಳನ್ನು ಕೆತ್ತಿಸಿ ಶರಣ ಚರಿತ್ರೆಯ ಮೇಲೆ ಕವಿದ ಕತ್ತಲೆಯನ್ನು ಕಳೆಯಲು ನೆರವಾದರು.

*ಶ್ರೀ ಬಸವೇಶ್ವರರ ಸಮಕಾಲೀನರು*
*ಮಾರ್ಗ ೨, ೧೯೮೮, ಪು. ೧೦೩-೧೪*



# ೮. ''ವಿವಾಹ ಪುರಾಣ''-ಕನ್ನಡದ ಅತ್ಯಂತ ಪ್ರಾಚೀನ ಶಾಸನಸ್ಥ ಜಾನಪದ ಕೃತಿ

● ಎಂ. ಚಿದಾನಂದಮೂರ್ತಿ

ಅರವತ್ತರ ದಶಕದಲ್ಲಿ ಬೆಳಕಿಗೆ ಬಂದ ಜಿನವಲ್ಲಭನ ಕುರಿಕ್ಯಾಲ ಶಾಸನದ ಶೋಧದ (೧೯೬೭) ಬಳಿಕ ಕನ್ನಡ ಸಾಹಿತ್ಯ ಚರಿತ್ರೆಯ ದೃಷ್ಟಿಯಿಂದ ಸೊಲ್ಲಾಪುರದ ಶಾಸನವೇ[೧] (೧೯೮೮) ಅತ್ಯಂತ ಮಹತ್ವದ ಶೋಧವೆಂಬುದನ್ನು ನಾನು ಈಗಾಗಲೇ ಪ್ರತಿಪಾದಿಸಿದ್ದೇನೆ.[೨] ಸೊಲ್ಲಾಪುರದ ಶಾಸನವು ''ವಿವಾಹ ಪುರಾಣ''ವೆನ್ನುವ ಹೆಸರಿನ ಕಾವ್ಯವೊಂದನ್ನು ಒಳಗೊಂಡಿದ್ದು ಆ ಕಾವ್ಯದಲ್ಲಿ ಗದ್ಯದ ಜೊತೆ ''ಷಟ್ಪದ'' (ಅಂಶ ಷಟ್ಪದಿ) ಪದ್ಯಗಳೂ ಸೇರಿರುವುದರಿಂದ ಕನ್ನಡದ ಮೊತ್ತಮೊದಲು (ಸು. ಕ್ರಿ.ಶ. ೧೨೦೦) ಷಟ್ಪದಿ ಕಾವ್ಯವಾಗಿರುವುದಲ್ಲದೆ, ಅಂಶಷಟ್ಪದಿ ಅಥವಾ 'ಷಟ್ಪದ'ದಲ್ಲಿ ರಚಿತವಾಗಿರುವ ಏಕೈಕ ಕಥನ ಕಾವ್ಯವೂ ಆಗಿದೆ. ಈ ಅಭಿಜ್ಞೆಯು (identification) ಷಟ್ಪದಿ ಕಾವ್ಯಗಳ ಚರಿತ್ರೆಯನ್ನು ಕೇವಲ ಪ್ರಮಾಣಾತ್ಮಕವಾಗಿ ಅಲ್ಲ, ಗುಣಾತ್ಮಕವಾಗಿಯೂ ಮಾರ್ಪಡಿಸುತ್ತದೆ.

ಸೊಲ್ಲಾಪುರದ ಶಾಸನದ ಕಲ್ಲಿನ ಉತ್ತರಾರ್ಧವು ಒಡೆದು ಹಾಳಾಗಿರುವುದರಿಂದ ಅಲ್ಲಿಯ ಪಾಠಭಾಗ ಸಂಪೂರ್ಣವಾಗಿ ನಾಶವಾಗಿದೆ. ಆದರೆ ಆ ಶಾಸನದ ಕತೆಯು ಹಂಪಿ ಪಕ್ಕದ ಆನೆಗುಂದಿಯಲ್ಲಿ ಹೊಲವೊಂದರಲ್ಲಿ ಸಿಕ್ಕ ತಾಮ್ರಪಟಗಳ ಮೇಲೆ ಸಂಪೂರ್ಣವಾಗಿ ದೊರಕಿರುವುದು[೩] ಅತ್ಯಂತ ಸ್ವಾರಸ್ಯವಾಗಿದೆ. ಶಿಲಾಶಾಸನದ ಮತ್ತು ತಾಮ್ರಶಾಸನದ ಆರಂಭದ ಭಾಗಗಳು ಒಂದೇ ಆಗಿದ್ದು ಎರಡರಲ್ಲೂ ನಿರೂಪಿತವಾಗಿರುವುದು ಶಿವ ಗಿರಿಜೆಯರ ಮದುವೆ ವಿಷಯವಿರುವ ''ವಿವಾಹ ಪುರಾಣ''ವೇ ಆಗಿದೆ. ಲಿಪಿಯ ಆಧಾರದ ಮೇಲೆ ಶಿಲಾಶಾಸನದ ಕಾಲ ಸುಮಾರು ಹನ್ನೆರಡನೆಯ ಶತಮಾನವಾದರೆ ತಾಮ್ರಶಾಸನದ ಕಾಲ ಸುಮಾರು ಹದಿಮೂರನೆಯ ಶತಮಾನವೆಂದು ಸಂಪಾದಕರು ಊಹಿಸಿದ್ದಾರೆ. ಶಿಲಾಶಾಸನದಲ್ಲಿ ಗದ್ಯ ಮತ್ತು ಷಟ್ಪದ ಪದ್ಯಗಳಿದ್ದರೆ ತಾಮ್ರಶಾಸನದಲ್ಲಿ ಗದ್ಯ ಮಾತ್ರವಿದೆ. ಆದರೆ ಎರಡನ್ನೂ ಎಚ್ಚರಿಕೆಯಿಂದ ಹೋಲಿಸಿದರೆ ಎರಡಕ್ಕೂ ಮೂಲವಾಗಿ ಸಮಾನ ಪಾಠವೊಂದಿರಬೇಕೆನ್ನಿಸುತ್ತದೆ. ಏಕೆಂದರೆ, ಕತೆ ಎರಡರಲ್ಲೂ ಒಂದೇ ಆಗಿರುವುದು ಮಾತ್ರವಲ್ಲ, ಅಲ್ಲಲ್ಲಿ ಭಾಷೆಯಲ್ಲೂ ಎರಡಕ್ಕೂ ಹೋಲಿಕೆ ಇದೆ, ಜೊತೆಗೆ, ಎರಡರ ಆರಂಭದ ಆರೆಂಟು ವಾಕ್ಯಗಳು ಒಂದೇ ಆಗಿವೆ. ಶಿಲಾಶಾಸನದಲ್ಲಿನ ಪದ್ಯಭಾಗಗಳು ಆ ಶಾಸನಕರ್ತೃ ಬರೆದು ಸೇರಿಸಿರಬೇಕೆನ್ನಿಸುತ್ತದೆ. ಎರಡರ, ಎಂದರೆ ಶಿಲಾಶಾಸನ ಮತ್ತು ತಾಮ್ರಶಾಸನಗಳ

---

೧ ಸಂ. ಶ್ರೀನಿವಾಸ ರಿತ್ತಿ ಮತ್ತು ಆನಂದ ಕುಂಬಾರ್: *Inscriptions from Sholapur District,* (Dharwar. 1988). ಶಾಸನ ಸಂಖ್ಯೆ 40.

೨ ಎಂ. ಚಿದಾನಂದ ಮೂರ್ತಿ: 'ಕನ್ನಡದ ಮೊತ್ತ ಮೊದಲ ''ಷಟ್ಪದ'' (''ಅಂಶಷಟ್ಪದಿ'') ಕಾವ್ಯ.' ಸಾಧನೆ, ೧೮:೧, ೨, ೧೯೮೯

೩. ಸಂ. ಚನ್ನಬಸಪ್ಪ ಎಸ್. ಪಾಟೀಲ್: 'Anegondi Copper plates'. *Vijayanagara Progress of Research,* 1987-88, Ed. D. V. Devaraju and Channabasappa S. Patil. Directorate of Archaeology and Museums, Mysore. 1991.

ತೌಲನಿಕ ಅಧ್ಯಯನವು ಬಹು ಕುತೂಹಲಕಾರಿಯಾಗಬಲ್ಲುದು. ಶಿಲಾಶಾಸನ ಮತ್ತು ತಾಮ್ರಶಾಸನಗಳ ಎಷ್ಟೋ ಪಾಠಗಳನ್ನು ಪರಸ್ಪರ ಹೋಲಿಕೆಯಿಂದ ಸರಿಪಡಿಸಿಕೊಳ್ಳಬಹುದು. ಈ ಕೆಳಗಿನ ಉದಾಹರಣೆಗಳು ಅದನ್ನು ಸ್ಪಷ್ಟಪಡಿಸುತ್ತವೆ. (ಶಿ=ಶಿಲಾಶಾಸನ ಪಾಠ ತಾ=ತಾಮ್ರಶಾಸನ ಪಾಠ).

| **ಅಪಪಾಠ** | **ಸಾಧುಪಾಠ** |
|---|---|
| ಗಿರಿದೇವಿಗಂ (ತಾ) | ಗೌರಿದೇವಿಗಂ (ಶಿ) |
| ಪ್ರಕ್ಯಾತಿ (ತಾ) | ಪ್ರಕೃತಿ (ಶಿ) |
| ಚಿಂಗಾರಿ(ಶಿ) | ಭಿಂಗಾರಿ(ತಾ) |
| ಬಲುಹದ(ಶಿ) | ಬಲುಹುಂ (ತಾ) |
| ನಿಮಿತ್ತವಾಗಿ(ಶಿ) | ಮದುವೆ ನಿಮಿತ್ತವಾಗಿ(ತಾ) |
| [ದೆ]...ರೂಪಾಗಿ (ಶಿ)[೯] | ಬೇಡನಾಗಿ(ತಾ) |
| [ಹಿ]ಬ ಕಂಬಿಯಂ ಮಾಡಿ (ಶಿ) | ಬಾಂಬಕಂಬಿಯಂ ಮಾಡಿ (ತಾ) |
| ಪುಣ್ಯವಹ(ತಾ) | ಪುಣ್ಯಾಹ(ಶಿ) |
| ನಾರಾಯಣದೇವರ ಕಯ್ಯ ಚಕ್ರಮಂ ಗ...(ಶಿ) | ನಾರಾಯಣದೇವರ ಕಯ್ಯ ಚಕ್ರಮಂ ತಿಗುರಿಯಂ ಮಾಡಿ(ತಾ) |

ಹೀಗೆ ಪಟ್ಟಿಯನ್ನು ಬೆಳಸಬಹುದು.

ಶಿಲಾಶಾಸನವು ಅಪೂರ್ಣವಾದುದರಿಂದ, ಅಥವಾ ಸರಿಯಾಗಿ ಹೇಳಬೇಕಾದರೆ ಉತ್ತರಾರ್ಧವು ಸಂಪೂರ್ಣವಾಗಿ ಹಾಳಾಗಿ ಹೋಗಿರುವುದರಿಂದ ಕತೆ ಪೂರ್ತಿ ತಿಳಿಯದೆ ಅದು ವರ್ತಕ ವರ್ಗದ ಕುಲೋತ್ಪತ್ತಿಗೆ ಸಂಬಂಧಿಸಿದ ಪುರಾಣವೆಂದು ನಾನು ಭಾವಿಸಿದ್ದೆ. ಹಾಗೆ ಭಾವಿಸಲು, ಶಾಸನಾರಂಭದಲ್ಲಿ 'ಸ್ವಯಂಭುಸೆಟ್ಟಿ', 'ಪಸುಂಬೆಸೆಟ್ಟಿ', 'ಪಟ್ಟಣಾಧಿಪ' (ಪಟ್ಟಣ ಶೆಟ್ಟಿ) ಇಂತಹವರನ್ನು ಸಂಬೋಧಿಸಿದ ಮಾತುಗಳು ಬರುವುದು ಕಾರಣವಾಗಿದ್ದಿತು. ಈ ಉಕ್ತಿಗಳು ವರ್ತಕರನ್ನು ಕುರಿತಂತೆ ಶಾಸನಗಳಲ್ಲಿ ಬರುವುದನ್ನು ಶಾಸನವಿದ್ಯಾರ್ಥಿಗಳೆಲ್ಲರೂ ಬಲ್ಲರು. ಅವರನ್ನು ಕುರಿತು ''ನಮ್ಮದೊಂದು ಕುಲ ಹುಟ್ಟಿದ ವಿವಾಹ ಪುರಾಣಮನವಧಾರಿಸಿ ಸ್ವಾಮಿಗಳ'' ಎಂದು ಶಿಲಾಶಾಸನದಲ್ಲಿ ಕೇಳಿಕೊಂಡಿದ್ದರೆ ತಾಮ್ರಶಾಸನದಲ್ಲಿ ''ನಿಮ್ಮವೊಂದು ಕುಲಂ ಪುಟ್ಟಿದ ವಿವಾಹ ಪುರಾಣಮಂ ಸವಿಸ್ತರ ಕೇಳಿ ಸ್ವಾಮಿಗಳಿರ'' ಎಂದು ಕೇಳಿಕೊಳ್ಳಲಾಗಿದೆ. ತಾಮ್ರಶಾಸನ ಪಾಠವು ''ವಿವಾಹ ಪುರಾಣ''ವು ಕುಂಬಾರರ ಕುಲೋತ್ಪತ್ತಿಗೆ ಸಂಬಂಧಿಸಿದ ಕತೆಯೆಂಬುದನ್ನು ಸ್ಪಷ್ಟಪಡಿಸುತ್ತದೆ—ಇದು ಶಿಲಾಶಾಸನ ಪಾಠವನ್ನು ಮತ್ತೆ ಎಚ್ಚರಿಕೆಯಿಂದ ಪರಿಶೀಲಿಸಿದರೆ ದೃಢಗೊಳ್ಳುತ್ತದೆ. ಮೇಲಿನ ಸಂಬೋಧನೆಗಳಲ್ಲಿ ''ನಮ್ಮ'' ಎಂಬ (ಶಿ) ಪಾಠವನ್ನಿಟ್ಟುಕೊಂಡರೆ ತಮ್ಮ ಕುಲವು ಹುಟ್ಟಿದ ರೀತಿಯನ್ನು ಕುಂಬಾರರು ವರ್ತಕರಿಗೆ ಹೇಳುತ್ತಿದ್ದಾರೆ ಎಂದು ಭಾವಿಸಬೇಕು. ''ನಿಮ್ಮ'' ಎಂಬ (ತಾ) ಪಾಠವನ್ನಿಟ್ಟುಕೊಂಡರೆ ಪುರಾಣವು ವರ್ತಕರ ಕುಲೋತ್ಪತ್ತಿಯನ್ನು ಅವರಿಗೆ ಶಾಸನ ನಿರೂಪಕ ಹೇಳುತ್ತಿದ್ದಾನೆ ಎಂದು ಭಾವಿಸಬೇಕು. ಕತೆ ಸ್ಪಷ್ಟವಾಗಿ ಕುಂಭಕಾರರ ಅಥವಾ

೯ ಇವನ್ನು ತಾಮ್ರಪಟದ ಸಹಾಯದಿಂದ ''ಬೇಡನ ರೂಪಾಗಿ'' ಎಂದು ತಿದ್ದಬಹುದು.

ಕುಂಬಾರರ ಕುಲೋತ್ಪತ್ತಿಗೆ ಸಂಬಂಧಿಸಿರುವುದರಿಂದ (ಶಿ) ಪಾಠವಾದ ''ನಮ್ಮ'' ಎಂಬುದೇ ಗ್ರಾಹ್ಯಪಾಠವಾಗುತ್ತದೆ.

ವರ್ತಕರು ಹಿಂದಿನ ಕರ್ನಾಟಕದಲ್ಲಿ ಸಮಾಜದ ಅತ್ಯಂತ ಪ್ರಮುಖ ಭಾಗವಾಗಿದ್ದರು. ಈಗಲೂ ಕುಂಬಾರರೂ ಗಾಣಿಗರೂ ಇವರೇ ಮೊದಲಾದವರು ತಮ್ಮನ್ನು ತಾವು ''ಶೆಟ್ಟಿಗಳು'' ಎಂದು ಕರೆದುಕೊಳ್ಳುವುದರ ಮೂಲಕ (ಕುಂಬಾರ ಶೆಟ್ಟರು, ಗಾಣಿಗ ಶೆಟ್ಟರು) ತಾವೂ ವರ್ತಕರೆಂದು ಭಾವಿಸುವುದರಿಂದ, (ವಾಸ್ತವವಾಗಿ ಅವರು ಮಡಕೆ, ಎಣ್ಣೆ ಮಾರುವ ವರ್ತಕರೆ ತಾನೆ!), ಶಾಸನ ಪಾಠದ ಆರಂಭದ 'ಸ್ವಯಂಭು ಸೆಟ್ಟಿ', 'ಪಸುಂಬೆ ಸೆಟ್ಟಿ' ಮಾತುಗಳು ಕುಂಬಾರರು ತಮ್ಮ ಕುಲದ (ಕುಂಬಾರ ಜಾತಿಯ) ನಾಯಕರನ್ನೇ ಉದ್ದೇಶಿಸಿ ಹೇಳಿರುವಂತಿದೆ ಎಂಬ ಊಹೆಗೂ ಅವಕಾಶವಿದೆ. ಉಳಿದ ವರ್ತಕ ಸಮೂಹದ ವಿಷಯದಲ್ಲಿ ಬಳಸುವ ಮಾತುಗಳನ್ನೇ ತಮ್ಮ ಕುಲದ ಮುಖ್ಯರಿಗೂ, ಬಳಸಿರಬಹುದೆಂದೂ ಹೇಳಬಹುದು. ಆದರೆ ''ಐಸಾವಂತರ ಪ್ರಶಸ್ತಿಯೆಂತೆಂದಡೆ...ಉತ್ತಮ ಸಮಯಕ್ಕೆ ನಮಸ್ಕಾರವಂ ಮಾಡಿದೆವು. ಅವಧಾರಿಸಿ ಸ್ವಾಮಿಗಳಿರಾ'' ಎಂಬ ಮಾತಿನ ಹಿನ್ನೆಲೆಯಲ್ಲಿ, ಮತ್ತು ''ಪಸುಂಬೆ''ಯು ಅಕ್ಕಿ ಬೇಳೆ ಬೆಲ್ಲದಂತಹ ಮಾರಾಟದ ವಸ್ತುಗಳನ್ನು ಕೊಂಡೊಯ್ಯುವ ಹಸುಬೆ ಚೀಲವನ್ನು ಸೂಚಿಸುವುದರ ಹಿನ್ನೆಲೆಯಲ್ಲಿ (ಹಸುಬೆ ಚೀಲದಲ್ಲಿ ಮಡಕೆಗಳನ್ನು ಕೊಂಡೊಯ್ಯಲು ಸಾಧ್ಯವಿಲ್ಲ ತಾನೆ!), ''ಪಟ್ಟಣಾಧೀಶ್ವರ'' (ಪಟ್ಟಣಸ್ವಾಮಿ, ಪಟ್ಟಣಶೆಟ್ಟಿ) ಒಂದು ನಗರದ ವರ್ತಕ ಸಮೂಹದ ಮುಖ್ಯಸ್ಥನನ್ನು ಸೂಚಿಸುವ ಪಾರಿಭಾಷಿಕ ಪದವಾಗಿರುವುದರಿಂದ, ''ನಮ್ಮ'' ಎಂಬ ಪಾಠವೇ ಸ್ವೀಕಾರಾರ್ಹ. ಒಂದು ರೀತಿಯ ಮಾರಾಟಗಾರರೂ ಆಗಿರುವ ಅಯ್ಯಾವಂತ ಅಥವಾ ಕುಂಬಾರರು ತಮಗಿಂತ ಮೇಲೆ ಜಾತಿಗೆ ಸೇರಿದ ಬಣಜಿಗ ವರ್ತಕರ (ಚಿನ್ನ, ಬೆಳ್ಳಿ, ಧಾನ್ಯ, ಬಟ್ಟೆ ವ್ಯಾಪಾರಿಗಳ) ಮುಖ್ಯರಿಗೆ ಗೌರವವನ್ನು ತೋರಿ (''ಉತ್ತಮ ಸಮಯಕ್ಕೆ ನಮಸ್ಕಾರವಂ ಮಾಡಿದೆವು'') ತಮ್ಮ ಕುಲೋತ್ಪತ್ತಿಯ ಕತೆಯನ್ನು ಅವರಿಗೆ ನಿವೇದಿಸಿಕೊಂಡ ಧಾಟಿಯಲ್ಲಿ ಶಾಸನವು ರಚಿತವಾಗಿದೆ.

ಸಮಗ್ರವಾಗಿರುವ ತಾಮ್ರಶಾಸನ ಪಾಠವು ಒಟ್ಟು ಮೂರು ಭಾಗಗಳನ್ನು ಹೊಂದಿದೆ: ೧. ''ವಿವಾಹ ಪುರಾಣ'', ೨. ''ಸಮಯ ಶಾಸನ ಪುರಾಣ'', ೩. ''ಅಮೃತ ಮಥನ ಪುರಾಣ.'' ಇವು ಮೂರೂ ಕುಂಬಾರರ ಜಾತಿಯ ಉತ್ಪತ್ತಿಗೆ ಮತ್ತು ಅವರಿಗೆ ದೊರಕಿದ ಬೇರೆ ಬೇರೆ ಗೌರವ ಅಥವಾ ಸವಲತ್ತು ಅಥವಾ ಪ್ರಶಸ್ತಿಗಳಿಗೆ ಸಂಬಂಧಿಸಿದವೇ ಆಗಿರುವುದರಿಂದ ಮೇಲಿನ ಮೂರೂ ಒಂದು ಅಖಂಡ ಪುರಾಣಕತೆಯ ಮೂರು ಭಾಗಗಳೆಂದೇ ಭಾವಿಸಬೇಕಾಗುತ್ತದೆ. ಇಡೀ ಕೃತಿಗೆ ಮೇಲಿನ ಮೂರು ಹೆಸರುಗಳಲ್ಲಿ ಒಂದು ಹೆಸರಿಟ್ಟು ಕರೆಯಬೇಕಾದರೆ ''ಸಮಯ ಶಾಸನ ಪುರಾಣ''ವೆಂಬ ಹೆಸರೇ ಎಲ್ಲ ರೀತಿಯಿಂದಲೂ ಉಚಿತವಾದುದು. ''ವಿವಾಹ ಪುರಾಣ'' ಹೆಸರು ಶಿವ, ಗಿರಿಜೆಯರ ಮದುವೆಯನ್ನು ಸೂಚಿಸುತ್ತದೆ. ''ಅಮೃತ ಮಥನ ಪುರಾಣ'' ಹೆಸರು ದೇವತೆಗಳೂ ರಾಕ್ಷಸರೂ ಅಮೃತವನ್ನು ಕಡೆದುದನ್ನು ಹೇಳುತ್ತದೆ. ''ಸಮಯ ಶಾಸನ ಪುರಾಣ''ವು ಕುಂಬಾರರ ''ಸಮಯ''ಕ್ಕೆ ಕೊಡಲಾದ ಶಾಸನವನ್ನು ಸೂಚಿಸುತ್ತದೆ. ಸಮಯವೆಂದರೆ ಮತ, ಒಪ್ಪಿತ ವ್ಯವಸ್ಥೆ, ಹಿಂದಿನಿಂದ ಬಂದಿರುವ ರೂಢಿ ಪದ್ಧತಿ, ಜಾತಿ, ಕುಲ ಎಂದೂ ಆಗುತ್ತದೆ, ಕುಂಬಾರರ ವಂಶಕ್ಕೆ ಕೊಡಲಾದ ಸವಲತ್ತು ಅಥವಾ ಗೌರವಗಳಿಗೆ ಸಂಬಂಧಿಸಿದ ಶಾಸನವಿದಾದ್ದರಿಂದ ''ಸಮಯ ಶಾಸನ ಪುರಾಣ''ವೆಂದೇ ಇಡೀ ಶಾಸನ ಕೃತಿಯನ್ನು ಕರೆದರೆ

ತಪ್ಪಿಲ್ಲ. ಶಾಸನದ ಆರಂಭದಲ್ಲಿ ''ಅಯ್‌ಸಾವಂತರ ಪ್ರಶಸ್ತಿ ಶಾಸನ''ವೆಂಬ ಮಾತು ಬರುವುದು ಇದಕ್ಕೆ ಉಪಷ್ಟಂಭಕವಾಗಿದೆ. ಕುಂಬಾರರಿಗೆ ದೊರಕಿದ ಸವಲತ್ತುಗಳೇ ಈ ಶಾಸನದ ಕೇಂದ್ರವಸ್ತು; ಅದನ್ನು ನಿರೂಪಿಸಿ ಅದಕ್ಕೊಂದು ಮಹತ್ವವನ್ನೂ ಶಾಶ್ವತತೆಯನ್ನೂ ತಂದುಕೊಡುವುದು ಶಾಸನದ ಉದ್ದೇಶ; ಶಿವ ಗಿರಿಜೆಯರ ಮದುವೆ, ಅಮೃತ ಮಥನ ಕತೆಗಳು ಉದ್ದೇಶಕ್ಕೆ ಪೋಷಕಗಳು.

ಈಗ ಶಾಸನ ಪಾಠವನ್ನು ಕ್ರಮವಾಗಿ ವಿಶ್ಲೇಷಿಸೋಣ.

### ೧. ''ವಿವಾಹ ಪುರಾಣ''

ಅದು ಸೃಷ್ಟಿಪೂರ್ವದ ಕಾಲ. ದೇವಾಧಿದೇವತೆಯಾದ ಶಿವನು ಕೈಲಾಸದಲ್ಲಿದ್ದಾನೆ. ನವಗ್ರಹಗಳು ತಮ್ಮ ತಮ್ಮ ಕರ್ತವ್ಯಗಳನ್ನು ನಿರ್ವಹಿಸುತ್ತಿವೆ. ಬ್ರಹ್ಮ, ವಿಷ್ಣು, ಸಪ್ತರ್ಷಿಯರು ಆದಿಯಾಗಿ ಎಲ್ಲರೂ ಶಿವನನ್ನು ಧ್ಯಾನಿಸುತ್ತಿದ್ದಾರೆ. ಆಗ ಕೃತಯುಗವು ಗೊನೆಗೊಂಡಿತು. ಆ ಕೃತಯುಗದಲ್ಲಿ ಮದುವೆಯೂ ಇಲ್ಲ, ಮದುಮಕ್ಕಳೂ ಇಲ್ಲ; ಮದುವಯ ವಾದ್ಯಗಳಾಗಲಿ ಇಲ್ಲ.[೫] ಜನಗಳಿಗೆ ಶಿಕ್ಷೆ ದೀಕ್ಷೆಯಂತಹ ಸಂಸ್ಕಾರಗಳೇ ಇಲ್ಲ. ರಾಜರಿಗೆ ಪಟ್ಟಾಭಿಷೇಕವಿಲ್ಲ. ತಲೆ ಮೇಲೆ ಹೊರುವ ಕಳಶ ಇಲ್ಲ. ಸತ್ತವರಿಗೆ ಶವಸಂಸ್ಕಾರವಿಲ್ಲ. ಧರ್ಮ ನೋಂಪಿ ವ್ರತಗಳೂ ಇಲ್ಲ. ದೇವತೆಗಳಿಗಾಗಲಿ ಮನುಷ್ಯರಿಗಾಗಲಿ ಸ್ನಾನವೂ ಇಲ್ಲ[೬]. ಇಂತಹ ಸಮಯದಲ್ಲಿ ಈಶ್ವರನಿಂದ ಪ್ರಕೃತಿಯನ್ನು ಸೃಷ್ಟಿಸಬೇಕೆಂದು ಆದಿಶಕ್ತಿ ಗೌರಿಯು ಗಿರಿರಾಜಮೇನಕೆಯರಿಗೆ[೭] ಹುಟ್ಟಿ ತನಗೆ 'ಶಾಶ್ವತ'ನಾದ ಪತಿ ಬೇಕು ಎಂದು ಪರ್ವತಕ್ಕೆ ಬಂದು ಉಗ್ರತಪಸ್ಸು ಮಾಡುತ್ತಾಳೆ. ಏಕಪಾದೋರ್ಧ್ವಬಾಹುವಾಗಿ ಪಂಚಾಗ್ನಿಯ ಮಧ್ಯೆ ಆರಂಭಿಸಿದ ಅವಳ ತಪಸ್ಸಿನ ಪ್ರಭಾವಕ್ಕೆ ಸಿಲುಕಿ ಕಾಡಿನಲ್ಲಿದ್ದ ಹುಲಿ-ನರಿ, ಸಿಂಹ-ಆನೆ, ಹಾವು-ಮುಂಗುಸಿ, ಕಾಗೆ-ಗೂಗೆಗಳು ತಮ್ಮ ವೈರತ್ವವನ್ನು ಮರೆತು ಸ್ನೇಹದಿಂದ ಆಡಿದುವು. ಅವಳ ತಪಸ್ಸು ನಿರ್ವಿಘ್ನವಾಗಿ ನಡೆಯಿತು. ಕೈಲಾಸದಲ್ಲಿದ್ದ ಶಿವನು ಬೇಟೆಯಾಡಲು ತಾನೂ ಸೇರಿದಂತೆ ಎಲ್ಲ ದೇವತೆಗಳನ್ನು ಕೂಡಿಕೊಂಡು ಬೇಡನ ವೇಷದಲ್ಲಿ ಕಾಡಿಗೆ ಬರುತ್ತಾನೆ. ಅಲ್ಲಿ ಮೃಗಗಳು ತಮ್ಮ ಜಾತಿವೈರವನ್ನು ಮರೆತಿರುವುದನ್ನು ಕಂಡು ವಿಸ್ಮಿತನಾದ ಮಹಾದೇವನು ತಪಸ್ಸಿನ ಮೌನದಲ್ಲಿ ಮಗ್ನಳಾಗಿದ್ದ ಕನ್ಯೆಯನ್ನು ಕಂಡು ಮಾತನಾಡಿಸಿದಾಗ ಅವಳು ಪರ ಪುರುಷರೊಡನೆ ಮಾತನಾಡಿದರೆ ತನ್ನ ವ್ರತವು ಭಂಗವಾಗುವುದೆಂದು ಮಾತನಾಡಲಿಲ್ಲ. ಆಗ ಮಹಾದೇವನು ತನ್ನ ನಿಜಸ್ವರೂಪವನ್ನು ತೋರಿ ಮತ್ತೆ ಮಾತನಾಡಿದಾಗ ತಾನು ಗಿರಿರಾಜನ ಮಗಳೆಂದು ಹೇಳುತ್ತಾಳೆ. ಶಿವನ ಜೊತೆ ಬಂದಿದ್ದ ಋಷಿಗಳೂ ದೇವತೆಗಳೂ ಮಹಾದೇವನ ಜೊತೆ ಮದುವೆಯಾಗಲು ಈ ಋಷಿ ಕನ್ಯೆ ಅರ್ಹಳೆಂದು ತಿಳಿದು ಅವಳನ್ನು ತನಗೆ ಕೊಡಲು ಗಿರಿರಾಜನಿಗೆ ಹೇಳಿ ಕಳುಹಿಸು ಎಂದು ಶಿವನಿಗೆ ಸೂಚಿಸುತ್ತಾರೆ. ಮನ್ಮಥನ ಮದನ, ಮೋಹನ, ಸಂತಾಪನ, ವಶೀಕರಣವೇ ಮೊದಲಾದ ಐದು ಪೀಡೆಗಳಿಗೂ ಒಳಗಾಗದೆ ಗಿರಿಜೆಯು ತನಗೆ ಒಲಿದುದನ್ನು ಕೇಳಿ ಶಿವನಿಗೆ ಹರ್ಷವಾಯ್ತು. ಉಪಾಯದಲ್ಲಿ ಹಿರಿಯನಾದ

---

೫ ''ಹಱೆ ಹಂದರಿಲ್ಲ'' (ಶಿ); ''ಹರ್ಯ ಹಿಂದರಿಲ್ಲ'' (ತಾ). ಹಂದರು ಎಂದರೆ ಚಪ್ಪರ, ಹರೆ ಎಂದರೆ ವಾದ್ಯ.

೬ ಹೂಜೆ ಸೊನ್ನಲಿಗೆಗಳು ಬೇರೆ ಬೇರೆ ಆಕಾರದ ಮಣ್ಣಿನ ಪಾತ್ರೆಗಳು. ಬಾಸಿಂಗ, ಹೂಜೆ, 'ಸೊನ್ನಲಿಗೆ' ಇದ್ದರೆ ತಾನೇ ಸ್ನಾನ, ಊಟ, ಮದುವೆ, ಪಟ್ಟಾಭಿಷೇಕ, ಶವ ಸಂಸ್ಕಾರ, ವ್ರತಾಚರಣೆ!

೭ ಮೇನಕೆ ಹೆಸರು (ಶಿ) ಪಾಠದಲ್ಲಿ ಸೂಚಿತವಾಗಿದೆ. (ತಾ) ಪಾಠದಲ್ಲೂ ದೊರಕುತ್ತದೆ.

ವಿಷ್ಣು, ಪುರಾಣಪುರುಷನಾದ ಬ್ರಹ್ಮ, ಬುದ್ಧಿಯಲ್ಲಿ ಹಿರಿಯನಾದ ಬೃಹಸ್ಪತಿ, ಇವರ ಜೊತೆ ದೇವೇಂದ್ರ, ಇವರನ್ನೆಲ್ಲ ಕರೆದು ಕನ್ಯೆಯ ತಂದೆಯ ಬಳಿ ಹೋಗಿ ಹೆಣ್ಣನ್ನು ಬೇಡಲು ಕಳುಹಿಸಿದನು. ತನ್ನ ಮಗಳೂ ಈಶ್ವರನೇ ಬೇಕೆಂದು ತಪಸ್ಸುಮಾಡುತ್ತಿದ್ದಾಳೆ ಎಂದು ಕೇಳಿ ಹರ್ಷಿಸಿದ ಗಿರಿರಾಜನು ಮಗಳನ್ನು ಕೊಡಲು ಒಪ್ಪುತ್ತಾನೆ. ಆ ನಾಲ್ವರೂ ಶಿವನಲ್ಲಿಗೆ ಬಂದು ಅದನ್ನು ತಿಳಿಸಿದಾಗ ಮದುವೆಗೆ ಶಿವ ಸಿದ್ಧನಾಗುತ್ತಾನೆ. ಗಿರಿಜೆಯೂ ಕಾಡಿನಿಂದ ತಂದೆಯ ಬಳಿಗೆ ಬಂದು ತಾನು ಬಯಸಿದ ಗಂಡನೇ ಸಿಕ್ಕಿದ್ದಾನೆಂದು ಹೇಳಿ ಶಿವನಿಗೇ ತನ್ನನ್ನು ಕೊಡಿ ಎಂದು ಕೇಳಿಕೊಳ್ಳುತ್ತಾಳೆ.

ಇತ್ತ ತನಗೆ ತಾನೆ ಶಿವನ ರೂಪವು ಶೃಂಗಾರಗೊಂಡಿತು. ದೇವಾನುದೇವತೆಗಳೂ ತಮಗೊಪ್ಪುವ ಶೃಂಗಾರ ಮಾಡಿಕೊಂಡು ನವರತ್ನಗಳನ್ನೂ ರೇಷ್ಮೆವಸ್ತ್ರಗಳನ್ನೂ ಚಿನ್ನದ ಹರಿವಾಣದಲ್ಲಿಟ್ಟು ಶಿವನನ್ನು ನಂದಿಯ ಮೇಲೆ ಕುಳ್ಳಿರಿಸಿ ದೇವದುಂದುಭಿಯನ್ನು ಮೊಳಗಿಸುತ್ತ ಗಿರಿಪುರಕ್ಕೆ ಬರುತ್ತಾರೆ. ವಿವಾಹ ಮಂಟಪದ ಚೆಲುವನ್ನು ಎಲ್ಲ ದೇವತೆಗಳೂ ಮೆಚ್ಚುವರು. ಗಿರಿರಾಜನು ಶಿವನಿಗೆ ಸಾಷ್ಟಾಂಗವೆರಗಿ ಸಿಂಹಾಸನದ ಮೇಲೆ ಹಸೆಯನ್ನು ಹಾಕಿ ಕುಳ್ಳಿರಿಸಿದಾಗ ಶಿವನು ''ಕೈಧಾರೆ'' ಎರೆಯಲು ಕಳಶ, ಜಗಲಿಗೆ (=ವೇದಿಕೆ), ಹೂಜೆ, ಭೃಂಗಾರಿ (ಪಾತ್ರೆ) ಎಲ್ಲಿವೆ ಎಂದು ಕೇಳುತ್ತಾನೆ. ಆಗ ಗಿರಿರಾಜನು ತನ್ನ ದಿವ್ಯ ಧ್ಯಾನದಿಂದ ವಿಷ್ಣುವಿನ ಚಕ್ರವನ್ನೇ ಕುಂಬಾರರ ತಿಗುರಿ ಮಾಡಿದ; ಬ್ರಹ್ಮನ ಕೈಯ ವೇದಪುಸ್ತಕದ ಕಂಬಿಯನ್ನೇ[೮] ಬಾಂಬನ ಕಂಬಿ (ತಿಗುರಿಯ ಮೊಳೆ) ಮಾಡಿದ. ಶಿವನ ಕೈಯ ಯೋಗದಂಡವನ್ನೇ ತಿರುಗಿಸುವ ಕೋಲನ್ನಾಗಿ ಮಾಡಿದ. ಶಿವನು ಉಟ್ಟ ವಸ್ತ್ರವೇ 'ಬಂನಸಿಲೆ'ಯಾಯ್ತು. ಬ್ರಹ್ಮನ ಕೃಷ್ಣಾಜಿನವನ್ನು 'ಮರ್ಮಾ' ಆಗಿ, ತನ್ನ ಜನಿವಾರವನ್ನೇ ಕೊರೆದಾರವಾಗಿ, ಶಿವನ ಜಡೆಯ ಮೇಲು ಹೊದಿಕೆಯನ್ನೇ 'ಸುತ್ತು' ಆಗಿ, ಶಿವನು ತ್ರಿಪುರವನ್ನು ಸುಟ್ಟು ಧರಿಸಿದ್ದ ತಲೆ ಬುರುಡೆಗಳನ್ನೇ 'ಕರೋಟಿ' (ಪಾತ್ರೆ)ಯಾಗಿ, ರಾಕ್ಷಸರ ಕಣ್ಣಡಿಯ ಎಲುಬುಗಳನ್ನೇ 'ಸಣುಹ'ವಾಗಿ ಅವರ ಹರಡಿನ (ಮೊಣಕಾಲ ಚಿಪ್ಪಿನ) ಎಲುಬಿನ ಗುಂಡನ್ನೇ 'ಗುಂಡ'ನ್ನಾಗಿ, ಭೂಮಿಯನ್ನೇ 'ಆಧಾರ'ವಾಗಿ, ''ಜಪದ ಮಣಿ''ಯನ್ನೇ ''ಮಣಿ''ಯಾಗಿ ಮಾಡಿದ. ಸೂರ್ಯನ ರಥದ ಎರಡು ಗಾಲಿಗಳಲ್ಲಿ ಒಂದು ಗಾಲಿಯನ್ನು 'ಹೊಳೆ'ಯನ್ನಾಗಿ ಮಾಡಿದ (ಅಂದಿನಿಂದ ಸೂರ್ಯನ ರಥಕ್ಕೆ ಒಂದೇ ಒಂದು ಗಾಲಿ ಉಳಿಯಿತು).[೯] ಯಮನ ಕೋಣನ ಮೇಲೆ ಮಣ್ಣನ್ನು ಹೇರಿ ತರಿಸಲಾಯ್ತು. (ಗಿರಿರಾಜನು ಕುಂಬಾರರನ್ನು ಸೃಷ್ಟಿಸಿದನು. ಅವರು) ಹೂಜೆ, ಸೊನ್ನಲಿಗೆ, ಕುಂಭ ಇವೇ ಮೊದಲಾದ ಪಾತ್ರೆಗಳನ್ನು ಮಾಡಿ ಹದವಾಗಿ ಸುಟ್ಟು ಹೂಜೆಗೆ ಅನೇಕ ರೀತಿಯ ಬಣ್ಣ ಹಾಕಿ

---

೮ ಕಂಬಿ-ಓಲೆಪುಸ್ತಕದ ಬಿಡಿ ಗರಿಗಳನ್ನು ರಂಧ್ರಗಳ ಮೂಲಕ ಜೋಡಿಸಿ ಹಿಡಿದಿಟ್ಟಿರುವ ಲೋಹದ ಕಡ್ಡಿ. ಬಾಂಬ-ಕುಂಬಾರ.

೯ ಮೇಲೆ ಬಂದಿರುವ ಕುಂಬಾರಿಕೆ ವೃತ್ತಿಯ ಕೆಲವು ಪಾರಿಭಾಷಿಕ ಪದಗಳ ಅರ್ಥ ಪ್ರಸಿದ್ಧವಾಗಿದೆ. ''ತಿಗುರಿ'' (ಮಡಕೆ ಮಾಡುವ ಚಕ್ರ)' 'ಬಾಂಬ ಕಂಬಿ' (ಕುಂಬಾರ ಮೊಳೆ, ಅರ್ಥಾತ್ ಚಕ್ರ ತಿರುಗುವ ಮೊಳೆ), 'ಬಾಂಬ ಕೋಲು' (ಚಕ್ರ ತಿರುಗಿಸುವ ಕೋಲು), 'ಕೊರೆದಾರ' (ಇದು ಹರಿಹರನ 'ಕುಂಬಾರ ಗುಂಡಯ್ಯನ ರಗಳೆ'ಯಲ್ಲಿ ಬರುವ ಚಟಿದಾರ, ಎಂದರೆ ಮಣ್ಣಿನಿಂದ ರೂಪುಗೊಂಡ ಹಸಿಮಡಕೆಯನ್ನು ಪ್ರತ್ಯೇಕಿಸಿ ತೆಗೆಯುವ ದಾರ), 'ಗುಂಡು' (ಹರಿಹರನಲ್ಲಿ ಬರುವ 'ಪಿಡಿಗುಂಡು' ಇದೇ. ಮೃದುವಾದ ಕಲ್ಲಿನ ಗುಂಡನ್ನು ಎಡಗೈಯಲ್ಲಿ ಹಿಡಿದು ಪಾತ್ರೆ ಒಳಗೆ ಹಿಡಿದು ಹೊರಗೆ ಬಡಿಯುತ್ತಾರೆ) ಇವು ಅರ್ಥವಾಗುತ್ತವೆ. ಇನ್ನು ಕೆಲವು ಅಪರೂಪದ ಪಾರಿಭಾಷಿಕ ವೃತ್ತಿ ಪದಗಳಿಗೆ ಹಂಪಿ ಪಕ್ಕದ ಕಾಮಲಾಪುರದ ಕುಂಬಾರರ ಮನೆಯಲ್ಲಿ ಅರ್ಥಗಳು

ಸಿದ್ಧಪಡಿಸಿದರು. ಋಷಿಕನ್ಯೆಯರು ವಾದ್ಯಸಮೇತ ಬಂದು ಮಣ್ಣಿನ ಮಂಗಳ ಪಾತ್ರೆಗಳನ್ನು ಮಾಡಿದ ಕುಂಬಾರರಿಗೆ ಪಂಚಬಾಗನಗಳನ್ನೂ, ಹೊನ್ನ ತಟ್ಟೆಯಲ್ಲಿ ತುಂಬಿದ ದೊಡ್ಡ ಮುತ್ತಿನ ವಸ್ತುಗಳನ್ನೂ ರೇಷ್ಮೆ ವಸ್ತ್ರ ಒಡವೆಗಳನ್ನೂ ಕೊಟ್ಟು ಅವರಿಂದ (ಕುಂಬಾರರಿಂದ) ಹೂಜೆ ಭೃಂಗಾರಗಳನ್ನು ಪಡೆದು ಅರಮನೆಗೆ ತಂದು ಮಂಟಪದಲ್ಲಿಟ್ಟು ಹೂಜೆ ಭೃಂಗಾರಗಳಿಗೆ (ಮಣ್ಣಿನ ಪಾತ್ರೆಗಳಿಗೆ) ಎಲೆಗಳನ್ನು ಕಟ್ಟಿದರು.[೧೦] ಮಣ್ಣ ಭಾಂಡಗಳು ಬಂದ ಮೇಲೆ ವಿವಾಹ ಮಂಟಪವು ಮದುವೆಗೆ ಪೂರ್ಣ ಸಿದ್ಧಗೊಂಡಂತಾಯಿತು. ಗಿರಿರಾಜನು ಶಿವನ ಕಾಲು ತೊಳೆದು ಜನಿವಾರವನ್ನು ದೂರ್ವೆಯನ್ನು (ಗರುಕೆ ಹುಲ್ಲು) ಮಂತ್ರಸಮೇತ ಮಧುಪರ್ಕವನ್ನು ಕೊಟ್ಟು ಒಳಕ್ಕೆ ಕರೆದುಕೊಂಡು ಹೋಗಿ ಮೆಟ್ಟಕ್ಕಿಯ ಮೇಲೆ ಶಿವನನ್ನು ನಿಲ್ಲಿಸಿ ಪಾರ್ವತಿಯ ಕೈಗೆ ನವರತ್ನಗಳನ್ನು ಕೊಟ್ಟನು. ವಧೂವರರ ಮಧ್ಯೆ ತೆರೆ ಹಿಡಿಯಲಾಯ್ತು. ಬ್ರಹ್ಮನು ''ಪುಣ್ಯಾಹ'' ಮಾಡಿದನು (ಒಳ್ಳೆಯದಾಗಲಿ ಎಂದು ಹರಸುವುದೇ 'ಪುಣ್ಯಾಹ'). ಮಧ್ಯೆ ಹಿಡಿದಿದ್ದ ತೆರೆಯನ್ನು ತೆರೆದಾಕ್ಷಣ[೧೧] ಶಿವ ಗಿರಿಜೆಯರಿಬ್ಬರೂ ಪರಸ್ಪರ ಆಕರ್ಷಿತರಾದರು. ಗಿರಿರಾಜ ಕೈಧಾರೆ ಎರೆದನು. ಹಸೆಯ ಮೇಲೆ ಶಿವನ ಬಲಗಡೆ ಗಿರಿಜೆ ಕುಳಿತಳು. ಹೋಮ ಕಾರ್ಯ ನಡೆಯಿತು. ಬಳಿಕ ಗಿರಿಜೆಯನ್ನು ಶಿವನ ಎಡಕ್ಕೆ ತರಲಾಯ್ತು. ಅಗ್ನಿ ಪೂಜೆ ನವಗ್ರಹ ಪೂಜೆಗಳು ನಡೆದು ನಾಗವಲಿ (ನಾಗೋಲಿ) ಕೂಡ ಮುಗಿಯಿತು.[೧೨] ಶಿವನು ನಂದಿಯೇರಿ ಋಷಿ ಸಮೇತ ಕೈಲಾಸಕ್ಕೆ ಹೊರಟು ನಿಂತು ಗಿರಿರಾಜನಿಗೆ ಹೀಗೆ ಹೇಳುತ್ತಾನೆ :

---

ದೊರೆತವು. 'ಬಂನಸಿಲೆ'ಯು ಬಹುಶಃ ''ಬಾಂಬ ಸೇಲೆ'' ಇರಬೇಕು. ಈ ಊಹೆ ನಿಜವಾಗಿದ್ದರೆ ಇದು ಕುಂಬಾರರು ಮಣ್ಣ ಪಾತ್ರೆ ಮಾಡುವಾಗ ಬಳಸುವ ಬಟ್ಟೆ: ಇದನ್ನು ಈಗ ''ಸಂಸಾರದ ಬಟ್ಟೆ'' ಎಂದು ಕರೆಯುತ್ತಾರೆ. ''ಮರ್ಮಾ'' ಪದ ಈಗ ಬಳಕೆಯಲ್ಲಿಲ್ಲದಿದ್ದರೂ ಅದು ಕುಂಬಾರರು ಹಸಿ ಪಾತ್ರೆ ಇಡುವ ಚರ್ಮದ ಹಾಳೆಯನ್ನು ಸೂಚಿಸುತ್ತದೆ. ಚರ್ಮವಾದರೆ ಹಸಿಮಣ್ಣು ಅಂಟುವುದಿಲ್ಲವಂತೆ. ''ಮರ್ಮಾ'' ಎಂದರೆ ಬಹುಶಃ ಚರ್ಮದ ಹಾಸುಗೆ. ''ಆಧಾರ''ವು ಚಕ್ರವನ್ನು ತಿರುಗಿಸಲು ಇರುವ ಮೊಳೆಯನ್ನು ನಟ್ಟ ಗಟ್ಟಿ ನೆಲ (ನೋಡಿ-ಹರಿಹರನ ರಗಳೆ-''ಆಧಾರಮೆಯಾಧಾಮದಾಗಿರೆ ವೇಧೆಯೆ ಚಕ್ರದ ಮೊಳೆ ತಾನಾಗಿರೆ)''. ಕಾಮಲಾಪುರ ಪ್ರದೇಶದಲ್ಲಿ ''ಆಧಾರ'' ಮಾತಿಗೆ ಬೂದಿ, ಭಸ್ಮ ಎಂಬರ್ಥವೂ ಇದೆ. ಕುಂಬಾರರು ಮಡಕೆ ಮಾಡುವಲ್ಲಿ ಬೂದಿ ಬಳಕೆ ಮಾಡಿದರೂ, ಇಲ್ಲಿ ಆ ಅರ್ಥ ಉಪಯೋಗಕ್ಕೆ ಬರುವುದಿಲ್ಲ. ''ಸಣುಹ'' ಎಂಬುದು ''ಸಳುವು'' ಎಂಬ ರೂಪದಲ್ಲಿ ಜೀವಂತವಾಗಿವೆ. ಇದು ಹಿಡಿಯಿರುವ ತಟ್ಟು ಹಲಗೆ, ಮಡಕೆಗೆ ಹೊರಭಾಗದಿಂದ ತಟ್ಟಿ ರೂಪುಗೊಡಲು ಬಳಸುವ ಸಾಧನ. ''ಸುತ್ತು'' ಎಂಬುದು ಒಣ ಮಡಕೆಯನ್ನು ನೆಲದ ಮೇಲೆ ಇಡಲು ಬಳಸುವ ಸಿಂಬಿ ಇರಬೇಕು. ''ಮಣಿ''ಯಾಗಲಿ ''ಹೊಳೆ''ಯಾಗಲಿ ಏನು ಸೂಚಿಸುವುದೋ ತಿಳಿಯದು. (ಕುಂಬಾರರ ಮನೆಯಲ್ಲಿ ಸಂದರ್ಶನ ನಡೆದುದು ೨೨-೮-೯೨ರಂದು).

೧೦ ಧಾರಾಮುಹೂರ್ತಕ್ಕೆ ಮುನ್ನ ಕುಂಬಾರರ ಮನೆಗೆ ವಾದ್ಯ ಸಮೇತ ಸುಮಂಗಲೆಯರು ಹೋಗಿ ಅವರಿಂದ ಮಡಕೆ, ಕುಡಿಕೆ, ಕುಂಬ ತರುವ ಪದ್ಧತಿ ಈಗಲೂ ಉಂಟು. ಮದುಮಕ್ಕಳಿಗೆ ಕಟ್ಟುವ ಬಾಸಿಂಗಗಳನ್ನು ಮಾಡುತ್ತಿದ್ದವರೂ ಕುಂಬಾರರೇ.

೧೧ ಶಾಸನದ ''ಅಡ್ಡಿ ಸೋಸಿವೆಯಂ ಕಳೆಯಲೋಡಂ'' ಎಂಬುದು ಬಹುಶಃ ''ಅಡ್ಡ ಸೀರೆಯುಮಂ ಕಳೆಯಲೊಡಂ'' ಎಂದಿರಬಹುದು. (ಅಥವಾ, ''ಪಿಡಿ ಸಾಸಿವೆಯಂ ತಳೆಯಲುಡಂ?'' ಪರಸ್ಪರ ಸಾಸಿವೆ ಎರಚುವುದನ್ನು ಹೇಳುತ್ತದೆಯೇ?)

೧೨ ''ನಾಗವಲ್ಲಿ''. ಮದುಮಕ್ಕಳು ವೀಳ್ಯವನ್ನು ಮೊತ್ತಮೊದಲು ಮೆಲ್ಲುವುದೇ ನಾಗೋಲಿ. ಅಲ್ಲಿಗೆ ಮದುವೆ ಮುಗಿದಂತೆ: ಆ ಬಳಿಕ ನಂಟರಿಷ್ಟರು ತಮ್ಮ ಊರುಗಳಿಗೆ ಹೋಗಬಹುದು. (ನಾಗವಲ್ಲಿ-ವೀಳ್ಯದೆಲೆ)

''ಈ ಹೂಜೆ, ಸೊನ್ನಲಿಗೆ, ಭೃಂಗಾರಿಗಳನ್ನು ರೂಢಿಗೆ ತಂದುದು ವ್ಯರ್ಥವಾಗಬಾರದು. ನೀನು ಅವನ್ನು ಮಾಡಿದವರ 'ಸಮಯ'ಕ್ಕೆ (ಕುಲಕ್ಕೆ, ಜಾತಿಗೆ) 'ಸಾಲೆ ಸಾಸಿರ್ವರು' ಎಂಬ ಹೆಸರನ್ನು ಕೊಡು.[೧೩] ಚಕ್ರದ ತಿಗುರಿಯ ಕೋಲನ್ನೂ ಕೊಡು. ಅವರಿಗೆ ''(ಅಯಿಸಾವಂತ) ಅಯ್ ಸಾವಂತ'' ಎಂಬ ಬಿರುದನ್ನೂ ಕೊಡು.[೧೪] ಅವರ ಚಲ ಶಕ್ತಿ ಸಾಮರ್ಥ್ಯಗಳನ್ನು ಕೊಂಡಾಡು. ಗ್ರಾಮ, ನಾಡು, ಖೇಡ, ಖರ್ವಡ, ಮದಂಬ, ಪಟ್ಟಣ, ದ್ರೋಣಾಮುಖ, ಸಂದೋಹನಗಳೆಂಬ ಎಂಟು ವಿಧದ ಗ್ರಾಮಗಳಲ್ಲಿಯೂ[೧೫] ಅವರು (ಕುಂಬಾರರು) ಗೌರವಾರ್ಹರಾಗುವಂತೆ ನೀನು ನಿಯಮಿಸು. ಕುಂಭವೇ ಮೊದಲಾದ ಮೂವತ್ತಾರು ಬಗೆಯ ಪಾತ್ರೆಗಳನ್ನು ಮಾಡುತ್ತ ಅವರು ಲೋಕಕ್ಕೆ ಉಪಕಾರವನ್ನು ಮಾಡಲಿ. ಇನ್ನು ಮುಂದೆ ಅವರು ಹಿಡಿದುದೇ ಚಲ. ನುಡಿದುದೇ ನನ್ನಿ. (ಹದಿನೆಂಟು) ಪಟ್ಟಣ, ಹದಿನೆಂಟು ಯೋಗ ಪೀಠಗಳಿಗೆ ಕುಂಬಾರರ ಹದಿನೆಂಟು 'ಕೇಣಿ'ಗಳಾಗಲಿ[೧೬].''

ಈಶ್ವರನು ಗಿರಿರಾಜನಿಗೆ ಮೇಲಿನ ರೀತಿಯ ಜಾತಿಯ ಕಟ್ಟಳೆಯನ್ನು ('ಸಮಯ ಬಲುಹು') ಕೊಟ್ಟು ಕೈಲಾಸಕ್ಕೆ ಹೋದನು.

ಎಲ್ಲ ಋಷಿಗಳೂ 'ಕುಂಭಕಾರರ' ಸಮಯವನ್ನು (ಕುಲವನ್ನು) ಕೊಂಡಾಡಿದರು.

## ೨. ''ಸಮಯ ಶಾಸನ ಪುರಾಣ''

ಗಿರಿರಾಜನ ಮೂಲಕ ಈಶ್ವರನಿಂದ ಪ್ರಶಸ್ತಿಯನ್ನು ಪಡೆದ ಕುಂಭಕಾರರು ಕಲಹ ಕಂಠೀರವರೆನ್ನಿಸಿಕೊಂಡು ಚಲವನ್ನು ಮೆರೆದರು. ಆ ಶೂರರು ಕಟ್ಟಿದ ಪ್ರಶಸ್ತಿಯ ತೋರಣಕ್ಕೆ ಅಪಮಾನ ಒದಗಿತೆಂಬ (ಅವರ ಪ್ರಶಸ್ತಿಯನ್ನು ಜನರು ಮನ್ನಿಸದೆ ಅಗೌರವಿಸಿದರೆಂಬ) ಹುಯ್ಯಲನ್ನು ಕೇಳಿದ ಗಿರಿರಾಜನು ಆಸ್ಥಾನವನ್ನು ಸೇರಿಸಿ ಸಾಮಂತ ದೊರೆಗಳಿಗೂ ಎಲ್ಲ ಜಾತಿಯವರಿಗೂ ಸತ್ಕಾರವನ್ನು ಮಾಡಿ ಶಿವನು ಕೊಟ್ಟಿದ್ದ ಕುಂಬಾರರ ಪ್ರಶಸ್ತಿಯನ್ನು ಡಂಗುರ ಹೊಯ್ಸುವುದರ ಮೂಲಕ ಎಲ್ಲರಿಗೂ ಘೋಷಿಸಿದನು.

ಗಿರಿರಾಜನ ಆಜ್ಞೆ ಸೂರ್ಯ ಚಂದ್ರರಿರುವವರೆಗೂ ನಿಲ್ಲುವಂತಾಯಿತು. ಕುಂಬಾರರ ಹದಿನೆಂಟು ಕಣಿಯ (ಕೇಣಿಯ) ಕುಲದ ಜನಗಳೂ ಸಂತೋಷದಿಂದ ಇದ್ದರು. ಗಿರಿರಾಜನ ಆಸ್ಥಾನದಲ್ಲಿ ಬೃಹಸ್ಪತಿ ಇವರಾದಿಯಾಗಿ ಹಲವು ದೇವತೆಗಳ ಸಮಕ್ಷದಲ್ಲಿ ಹೊರಟ ಶಾಸನದ (ಆಜ್ಞೆಯ) ಘೋಷಣೆಯನ್ನು ಮೀರಿ ಅಹಂಕಾರದಿಂದ ನಡೆದುಕೊಳ್ಳುವ ಶತ್ರುಗಳನ್ನು ಮೆಟ್ಟಿಕ್ಕಬಲ್ಲ ಕುಂಬಾರರ ಹದಿನೆಂಟು 'ಕೇಣಿ'ಗಳು (ಕಣಿಗಳು) ಹೀಗಿವೆ :

---

೧೩. ಸಾಲೆ = ಶಾಲೆ (?) ಕುಂಬಾರರ ಮನೆಯನ್ನು 'ಕುಂಬಾರ ಸಾಲೆ' ಎಂದು ಕರೆಯುವುದುಂಟು. 'ಸಾಲೆ' ಎಂದರೆ ಇಲ್ಲಿ ಬಹುಶಃ ಕಾರ್ಯಾಗಾರ.

೧೪. ಶಾಸನಗಳಲ್ಲಿ ಬರುವ ''ಅಯ್ ಸಾಮಂತ'' ಮಾತಿಗೆ ಐದು ಜನ ಸಾಮಂತರು ಎಂಬರ್ಥ ಕೊಡಲಾಗಿದೆ. ಪರಿಷತ್ತಿನ ಕನ್ನಡ ನಿಘಂಟು I ನೋಡಿ. ಆ ಅರ್ಥ ಇಲ್ಲಿಗೆ ಹೊಂದದು.

೧೫. ಈ ಉಕ್ತಿ (ಗ್ರಾಮಗಳ ಪ್ರಭೇದ) ಸ್ವಲ್ಪ ಮಾರ್ಪಾಟಿನೊಡನೆ ಕನ್ನಡ ''ವಡ್ಡಾರಾಧನೆ''ಯಲ್ಲಿ ಹಲವೆಡೆ ಬಂದಿದೆ.

೧೬. ಸಂಸ್ಕೃತ. ಕ್ರೇಣಿ-ವ್ಯಾಪಾರ. ಈಗಿನ ಕನ್ನಡದ ಕೇಣಿ ಅಥವಾ ಗೇಣಿಯು ಸಂಸ್ಕೃತದ 'ಕ್ರೇಣಿ'ಯ ತದ್ಭವ. 'ಕೇಣಿ'ಯು ವರ್ತಕರ (ಕುಂಬಾರರ) ಸಂಘವನ್ನೂ ಸೂಚಿಸಬಹುದು.

೧. ದೂಷಕರನ್ನು ನಾಶಮಾಡುವ **ಕಲ್ಯಾಣದ** ಕೇಣಿಯ ಸಮಯ.

೨. ಹಳಿವವರ ಬಾಯನ್ನು ಸೀಳುವ **ಬೋದನದ** ಕೇಣಿಯ ಸಮಯ.

೩. ಕಲಹಕ್ಕೆ ಛಲವಾದಿಗಳೆಂಬ **ಹೊಟ್ಟಳಗೆರೆಯ** ಕೇಣಿಯ ಸಮಯ.

೪. ದುಷ್ಟರನ್ನು ಅಟ್ಟಿ ಬಡಿಯುವ **ಕಂದಾರದ** ಕೇಣಿಯ ಸಮಯ.

೫. ಅಂಜದಿರುವವರಿಗೆ ನಂಜಿನ ಉರುಳಿ ಎನಿಸಿದ **ಕರಹಡದ** ಕಣಿಯ ಸಮಯ.

೬. ನಾರಾಯಣಗೋತ್ರ ಪವಿತ್ರರೆನ್ನಿಸಿದ **ಕೊಲ್ಲಾಪುರದ** ಕಣಿಯ ಸಮಯ.

೭. ಹೋಗುವ ಮಾರ್ಗಕ್ಕೆ ಅಡ್ಡಿಪಡಿಸಿದವರಿಗೆ ಮುರಾರಿಗಳೆನಿಸಿದ **ಕೊಂಕಣದ** ಕಣಿಯ ಸಮಯ.

೮. ಪರರಿಗುಪಕಾರಿಗಳೆನಿಸಿದ **ಹಾನುಗಲ್ಲ** ಕಣಿಯ ನಿಯಮ.

೯. ರಾಜಪುತ್ರರನ್ನು ರಕ್ಷಿಸಿ ಪಟ್ಟ ಕಟ್ಟಿದ **ದೋರಸಮುದ್ರದ** ಕಣಿಯ ಸಮಯ.

೧೦. ಬಿರುದಿರುವ **ಬೇತೂರ** ಕಣಿಯ ಸಮಯ.

೧೧. ಸಮುದ್ರಮಥನ ಕಾಲದಲ್ಲಿ ಕುಂಭವನ್ನು ಕೊಟ್ಟು ಋಷಿವಂಶದವರೆನ್ನಿಸಿಕೊಂಡ **ತುಂಬುಳ** ಕಣಿಯ ಸಮಯ.

೧೨. ಬಿರಿದಿರುವ **ಗಂಗಾಪುರದ** ಕೇಣಿಯ ಸಮಯ.

೧೩. ತಮ್ಮ ಕುಲದವರು ಎತ್ತಿ ಹಿಡಿದ ಧ್ವಜವೆನ್ನಿಸಿದ **ಉಜ್ಜೇನಿ** ಪಟ್ಟಣದ ಕೇಣಿಯ ಸಮಯ.

೧೪. ವೈಭವದ ಗಣಿಯೆನ್ನಿಸಿದ ಅಂಕುಶ ಬಿರುದಿನ **ಅಲ್ಲಿಯಾರದ** ಕೇಣಿಯ ಸಮಯ.

೧೫. ನುಡಿದಂತೆ ಗಂಡರೆನ್ನಿಸುವ **ನಿಡಗುಂದದ** ಕೇಣಿಯ ಸಮಯ.

೧೬. ವೀರಪಟ್ಟದ ಮತ್ತು ಬಡವರಾಧಾರ ಎನ್ನಿಸಿದ **ಬಮ್ಮಕೂರದ** ಕೇಣಿಯ ಸಮಯ.

೧೭. ಶರಣಾಗತ ವಜ್ರಪಂಜರರಾದ **ವಲೂರ** ಕೇಣಿಯ ಸಮಯ.

೧೮. ಚಲದಂಕರಾಮರೆನ್ನಿಸಿದ **ಮಲಿಯಾರದ**[೧೭] ಕೇಣಿಯ ಸಮಯ.

ಈ ಹದಿನೆಂಟು ಕೇಣಿಯ ಕುಲಗಳ ಬಿರುದುಗಳೂ ಮತ್ತು ಇವರ ಜೊತೆಯ ಮೂವತ್ತೆರಡು ಸಾವಿರ ಕೇಣಿಯ ಕುಲಗಳ ಪ್ರಶಸ್ತಿಗಳೂ ಹೀಗಿವೆ. ಇವರು ಈಶ್ವರನ ವಿವಾಹ ಕಾಲದಲ್ಲಿ ಹುಟ್ಟಿದ ಗಿರಿರಾಜನ ವಂಶಸ್ಥರು; ಶಿವನ ಮೈದುನರು; ಗೊರವನ (ಗಣಪತಿಯ) ಸೋದರ ಮಾವಂದಿರು; ಹರಿ ಬ್ರಹ್ಮ ದೇವೇಂದ್ರರಿಗೆ ಮೊಮ್ಮಕ್ಕಳನ್ನು ಕೊಟ್ಟ ಅಜ್ಜನ

---

೧೭ ಈ ಹದಿನೆಂಟು ಊರು-ನಾಡುಗಳಲ್ಲಿ ಕೆಲವನ್ನು ಸುಲಭವಾಗಿ ಗುರುತಿಸಬಹುದು. ಕಲ್ಯಾಣ ಈಗಿನ ಬಸವ ಕಲ್ಯಾಣ; ಬೋಧನ, ಹೊಟ್ಟಳಗೆರೆ ಎರಡೂ ಆಂಧ್ರದಲ್ಲಿವೆ; ಕಂದಾರ, ಕರಹಡ, ಕೊಲ್ಲಾಪುರ, ಕೊಂಕಣ ಇವೆಲ್ಲ ಮಹಾರಾಷ್ಟ್ರದಲ್ಲಿವೆ; ಹಾನುಗಲ್, ಧಾರವಾಡ ಜಿಲ್ಲೆ; ದೋರಸಮುದ್ರ, ಈಗಿನ ಹಳೇಬೀಡು; ಬೇತೂರು ಚಿತ್ರದುರ್ಗ ಜಿಲ್ಲೆ; ಉಜ್ಜೇನಿ ಬಳ್ಳಾರಿ ಜಿಲ್ಲೆಯ ಉಜ್ಜಯನಿ. ತುಂಬುಳ, ಗಂಗಾಪುರ, ಅಲ್ಲಿಯಾರ, ಬಮ್ಮಕೂರು, ವಲೂರು, ಮಲಿಯಾರ, ನಿಡುಗುಂದ ತಿಳಿಯವು. ತುಂಬಳೂರಾಚಾರ್ಯ ಎಂಬ ಜೈನಮುನಿ ತುಂಬಳೂರಿನವನು (?).

ಮಾವಂದಿರನ್ನು ಮಡಕೆಯೊಳಿಟ್ಟು ರಕ್ಷಿಸಿದ ಹಿರಿಯರು[೧೮]. ಇಂತಹ ಕುಂಭಕಾರಕರ ಗುಣ ಸ್ತುತಿ ಏನೆಂದರೆ ಇವರು ಬ್ರಹ್ಮನಂತೆ ಕಾರ್ಯದಕ್ಷರು; ನಾರಾಯಣನಂತೆ ಉಪಾಯಿಗಳು; ಧರ್ಮರಾಜನಂತೆ ಸತ್ಯವಂತರು; ಭೀಮನಂತೆ ಸಾಹಸಿಗಳು; ಅರ್ಜುನನಂತೆ ಬಂಟರು; ಸಹದೇವನತೆ ದಿವ್ಯಜ್ಞಾನಿಗಳು; ಭೀಷ್ಮನಂತೆ ಶುಚಿಗಳು; ಕರ್ಣನಂತೆ ತ್ಯಾಗಿಗಳು; ಜೀಮೂಹವಾಹನನಂತೆ ಪರೋಪಕಾರಿಗಳು; ಭೂಮಿಯಂತೆ ಧೀರರು; ಮೇರುವಿನಂತೆ ಸ್ಥಿರರು; ದುರ್ಯೋಧನನಂತೆ ಚಲವಂತರು; ರಾವಣನಂತೆ ಪ್ರತಾಪಿಗಳು. ಇವರು ಕಠೋರ ತಪಸ್ವಿಗಳು, ಗೋ ಬ್ರಾಹ್ಮಣಾರಾಧಕರು, ಕುಂಭೇಶ್ವರ ದೇವರ ಭಕ್ತರು, ದೋಷಾಪಹಾರಿಗಳು, ಸರ್ವಜೀವ ದಯಾಪರರು, ತಮ್ಮ ತೇಜವನ್ನು ಪಾಲಿಸುವವರು, ಹಣವೆಂದರೆ ಬೇಡ ಎನ್ನುವವರು, (ಶತ್ರುಗಳ) ಹೆಣ ಎಂದರೆ ನಲಿವವರು, ತಮ್ಮದಲ್ಲದಕ್ಕೆ ಕೈಹಾಕರು, ಸೃಷ್ಟಿಸಂಹಾರ ಮೂರ್ತಿಗಳು, ಚಕ್ರವನ್ನು (ತಿಗುರಿ) ತಿರುಗಿಸಿ ಧರೆಗೆ ಉಪಕಾರ ಮಾಡುತ್ತಿರುವವರು, (ದೀನರ) ಆಕ್ರಂದನವನ್ನು ಕೇಳಿ ಪಕ್ಕಕ್ಕೆ ಸರಿಯರು, ಕೊಟ್ಟ ಮಾತನ್ನು ಉಳಿಸಿಕೊಳ್ಳುವವರು, ನೀರಿನಂತೆ ಭೇದಿಸುವವರು, ಗಾಳಿಯಂತೆ ಬೀಸುವವರು, ಯಮನಂತೆ ಬೆನ್ನು ಬಿಡದವರು, ಶತ್ರುಗಳಿಗೆ ಶತ್ರುಗಳು, ಹಿರಿಯರಿಗೆ ಹಿರಿಯರು, ಜೆಟ್ಟಿಗರಿಗೆ ಜೆಟ್ಟಿಗರು, ತಮ್ಮೆದುರು ಸವಾಲು ಹಾಕಿದವರನ್ನು ನೆಲಕ್ಕೆ ಹಾಕಿ ಒರಸುವವರು, ಅಂಗಹೀನನನ್ನು (ನಪುಂಸಕನನ್ನು, ತಮ್ಮ ಗುಂಪಿನಿಂದ) ಓಡಿಸುವವರು, ತಮ್ಮ ಕುಲಗಳನ್ನು ಬಿಟ್ಟು ಉಳಿದ ಕುಲಗಳನ್ನು ಕಂಗೆಡಿಸುವವರು ('ಬಾನಲಿ'=ಕಳೆಗುಂದಿಸು). ಅಯ್ಸಾಮಂತರಿಗೂ ಸಮಸ್ತ ಸಮಯಗಳಿಗೂ ತಾಂಬೂಲವನ್ನು ಇಕ್ಕಿರಿ. ಇಲ್ಲಿಗೆ ಸಮಯ ಶಾಸನ ಪುರಾಣವು ಸಮಾಪ್ತಿಯಾಯಿತು.

## ೩. ''ಅಮೃತಮಥನ ಪುರಾಣ''

ಶ್ರೀ ಪರಮೇಶ್ವರನಾದ ವಿರೂಪಾಕ್ಷನು ಈ 'ಕರಗ ವಿದ್ಯಾಧರ'ರಿಗೆ[೧೯] ಶಾಸನ ಮರ್ಯಾದೆಯನ್ನು ತಿಳಿಸಿದುದನ್ನು, ಕರಗ ವಿದ್ಯಾಧರರೇ, ನೀವೆಲ್ಲ ಪ್ರೀತಿಯಿಂದ ಕೇಳಿ. ಮೊದಲು ಈ ಶಾಸನವನ್ನು ಗಿರಿಜೆಯೊಡನೆ ಮದುವೆ ಮಾಡಿಕೊಂಡು ಕೈಲಾಸಕ್ಕೆ ಹೊರಟು ನಿಂತ ಶಿವನು ಗಿರಿರಾಜನಿಗೆ ಕೊಟ್ಟನು. ಗಿರಿರಾಜ ನಿಮ್ಮ ತಂದೆ, ಮೇನೆ ನಿಮ್ಮ ತಾಯಿ[೨೦] ಗಿರಿಜೆ ನಿಮ್ಮ ಅಕ್ಕ, ಪರಮೇಶ್ವರ ನಿಮ್ಮ ಭಾವ, ಗೊರವ ಗಣೇಶ ನಿಮ್ಮ ಅಳಿಯ ಸೋದರಳಿಯ; ನಿಮ್ಮ ಕುಲ ಇಷ್ಟು ಶ್ರೇಷ್ಠವಾದುದು. ಶಿವ ಗಿರಿಜೆಯರ ಪುತ್ರ ವಿಘ್ನೇಶ್ವರನು ಜಗದ್ವಂದ್ಯನು, ಆರು ದರ್ಶನಗಳನ್ನು ಬಲ್ಲವನು. ಅವನು ವೇದ ಹದಿನಾರು ಶಾಸ್ತ್ರಗಳ ಮೂಲಕ ಕುಂಬಾರರನ್ನು ರಕ್ಷಿಸಲಿ.

ಸುರಾಸುರರು ಅಮೃತವನ್ನು ಕಡೆಯಲು ಆಲೋಚಿಸಿದರು. ಸುರಶೈಲವೇ ಕಡೆಗೋಲು, ಆದಿಶೇಷನೇ ಹಗ್ಗ, ವಿಷ್ಣುವೇ ಅಮೃತವನ್ನು ತರುವವನು. ಸುರಾಸುರರು ತಮ್ಮ ಮಂತ್ರಿಗಳಾದ

---

೧೮ ಲಕ್ಷ್ಮಿ, ಸರಸ್ವತಿ, ರಂಭೆಯರ ಮಾವನಾದ ಅಗಸ್ತ್ಯ ಹುಟ್ಟಿದ್ದು ಕುಂಬಾರರ ಮಡಕೆಯಲ್ಲಿ.

೧೯ ಕರಗ = ಮಡಕೆ, ಕರಗವಿದ್ಯಾಧರರು ಎಂದರೆ ಕುಂಬಾರರು.

೨೦ ''ಗಿರಿರಾಜ ನಿಂಮಯ ವರ ಮನೆ ನಿಂಮವ್ವ'' -- ಇದನ್ನು ''ಗಿರಿರಾಜ ನಿಮ್ಮಯ್ಯ ವರ ಮೇನ ನಿಮ್ಮವ್ವ'' ಎಂದು ತಿದ್ದಲು ಯಾವುದೇ ಅಡ್ಡಿಯೂ ಇಲ್ಲ.

ಬೃಹಸ್ಪತಿ ಶುಕ್ರರನ್ನು ಕರೆದು ವಿಚಾರಿಸಿದಾಗ ಈಶ್ವರನಿಲ್ಲದೆ ಅಮೃತಮಥನವು ಸಾಧ್ಯವಿಲ್ಲವೆಂದು ಗೊತ್ತಾಯಿತು. ಎಲ್ಲರೂ ಹೋಗಿ ಶಿವನಿಗೆ ಅಮೃತಮಥನದ ಸಂಗತಿಯನ್ನು ತಿಳಿಸಿದರು. ಶಿವನು ಗಿರಿರಾಜನನ್ನು ಕರೆದು ವಿಷ್ಣುವು ಅಮೃತವನ್ನು ತಂದರೆ ಅದನ್ನು ಕಡೆಯಲು ಬೇಕಾದ ಕುಂಭವನ್ನು ಕೊಡಲು ತಿಳಿಸಿದನು. ಗಿರಿರಾಜನು ದೊಡ್ಡ ಕುಂಭವನ್ನು (ಕುಂಬಾರರಿಂದ ಮಾಡಿಸಿ) ತಂದಿತ್ತನು. ವಿಷ್ಣುವು ತಂದ ಅಮೃತವನ್ನು ಆ ದೊಡ್ಡ ಕುಂಭದಲ್ಲಿಟ್ಟು ಸುರಾಸುರರು ಕಡೆಯಲು ಉದ್ಯುಕ್ತರಾದರು. ಗಿರಿರಾಜನು ತಾನು ಕುಂಭವನ್ನು ತಂದುಕೊಟ್ಟುದಕ್ಕೆ ಕುಂಭಕಾರರಿಗೆ ಕೊಡಬೇಕಾದ ''ಒಪ್ಪ''ವನ್ನು (ಒಪ್ಪ-ರುಜು. ಇಲ್ಲಿ ಕರಾರು, ಪ್ರತಿಫಲ, ಬೆಲೆ ಎಂದೂ ಆಗುತ್ತದೆ) ನನ್ನ ಕೈಗೆ ಕೊಡಬೇಕೆಂದಾಗ ಶಿವ ಅದಕ್ಕೆ ಸಮ್ಮತಿಸಿದನು.

ವಿಷ್ಣುವಾದಿಯಾಗಿ ಎಲ್ಲ ದೇವತೆಗಳು ಆದಿಶೇಷನ ತಲೆ ಹಿಡಿದು ನಿಂತರು. ಕೇಸರಿ ಮುಖ ಮೊದಲಾದ ಅಸುರರು ತಾವು ತಲೆಯ ಭಾಗವನ್ನು ಹಿಡಿಯಬೇಕೆಂದು ಹಠ ಮಾಡಿ ಅಲ್ಲಿ ತಾವು ನಿಂತು ಸುರರನ್ನು ಬಾಲದ ಕಡೆಗೆ ಕಳಿಸಿದರು. ಇಬ್ಬರೂ ಸೇರಿ ಅಮೃತವನ್ನು ಕಡೆದಾಗ[೨೧] ಲಕ್ಷ್ಮಿ, ಸರಸ್ವತಿ, ರಂಭೆ, ಕಾಮಧೇನು, ಕಲ್ಪವೃಕ್ಷ, ಪಾಂಚಜನ್ಯ, ಐರಾವತ, ಚಕ್ರ, ತಾವರೆ, ಸಾರಂಗ, ಚಂದ್ರಹಾರ, ವಜ್ರಾಯುಧ, ಆನೆ, ಟಗರು, ಕೋಣ, ಕುದುರೆ, ಮಕರ, ಹರಿಣಿ, ಅಸುರ, ನಂದಿನಾಥ, ಪಾಶ, ಅಂಕುಶ, ಪುಸ್ತಕ, ವೀಣೆಯ ಮಹಾದಂಡ, ಕಂಕರಿ(=ವಾದ್ಯ) ಇವು ಹುಟ್ಟಿದುವು. ಅದರ ಜೊತೆಗೆ ಹದಿನೆಂಟು ಪಟ್ಟಣ, ಹದಿನೆಂಟು ಜಾತಿ, ಆ ಜಾತಿಗಳ ರಕ್ಷಣೆಗೆ ಬೇಕಾದ ರೈತನೂ ಧಾನ್ಯವೂ ಹುಟ್ಟಿದುವು. ಅಲ್ಲದೆ ಭಲ್ಲುಂಕೆಗೋಲು, ಮಡಕೆ[೨೨], ಗಾಜು ಸೇರಿಸಿ ಹೊಲಿದ ಕಂಚುಳಿಕೆ (ಅಂಗಿ), ಮೂವತ್ತಾರು ಬಗೆಯ 'ಭಂಡಗಳು' (ಪಾತ್ರೆಗಳು), ಮನೆ, ಹಾರೆಯ ಕೋಲು, ತುಡುಗೆ, ಹೂಬಾಸಿಂಗ, ಪಂಚಲೋಹ ಹುಟ್ಟಿದವು.

ಗಿರಿರಾಜನು ತಾನು ಮಾಡಿಸಿ ತಂದ ಕುಂಭಕ್ಕೆ ಪ್ರತಿಫಲವನ್ನು (''ಒಪ್ಪ'') ಬೇಡಲು, ಶಿವನು ಅವನು ಬೇಡಿದ ಕೋಣವನ್ನು ಅಮೃತ ಕುಂಭದಿಂದಲೇ ಪಡೆದು ಅವನಿಗೆ ಕೊಟ್ಟು ಆ ಕೋಣನ ಮೇಲೆ ಕುಂಬಾರರು ಮಡಕೆಗಳನ್ನು ಹೇರುವ ಸವಲತ್ತನ್ನು ಅನುಗ್ರಹಿಸಿದನು.

ಶಿವನು ಅಮೃತಮಥನದಲ್ಲಿ ಹುಟ್ಟಿದ ವಸ್ತು ವಾಹನ ಧಾನ್ಯ ಆಯುಧಗಳನ್ನು ಈರೀತಿ ಹಂಚಿದನು: ವಿಷ್ಣುವಿಗೆ ಲಕ್ಷ್ಮಿ, ಪಾಂಚಜನ್ಯವೆಂಬ ಶಂಖ, ಸುದರ್ಶನವೆಂಬ ಚಕ್ರ, ಕೌಮೋದಕಿಯೆಂಬ ಗದೆ, ಸಾರಂಗವೆಂಬ ಬಿಲ್ಲು; ಬ್ರಹ್ಮನಿಗೆ ಪಾಶ, ಅಂಕುಶ, ಸರಸ್ವತಿ; ದೇವೇಂದ್ರನಿಗೆ ರಂಭೆ, ಐರಾವತ ಎಂಬ ಆನೆ, ಚೈತ್ರರಥವೆನ್ನುವ ಕುದುರೆ, ವಜ್ರ; ಅಗ್ನಿಗೆ ತಗರು; ಯಮನಿಗೆ ಕಾಲದಂಡ, ಕೋಣ; ನೈರುತ್ಯನಿಗೆ (ಅವನು ರಾಕ್ಷಸರ ಸಮೂಹದಿಂದ ಬಂದವನೆಂದು ದೇವತೆಗಳು ಹೇಳಿದ್ದರಿಂದ)[೨೩] ರಾಕ್ಷಸ; ವರುಣನಿಗೆ-ಮಕರ; ವಾಯು ದೇವನಿಗೆ-ಜಿಂಕೆ; ಕುಬೇರನಿಗೆ-ಕುದುರೆ ಈಶಾನ್ಯನಿಗೆ-ನಂದಿ; ದೇವತೆಗಳಿಗೆ-ಕಾಮಧೇನು,

---

೨೧ ಇಲ್ಲಿ ಸುರಾಸುರರು ಕಡೆಯುವುದು ಅಮೃತವನ್ನೇ ಹೊರತು, ಸಮುದ್ರವನ್ನಲ್ಲ. ಪುರಾಣಗಳ ಪ್ರಕಾರ ಸಮುದ್ರ ಮಥನದಿಂದ ಅಮೃತ ಹುಟ್ಟಿತು.

೨೨ ಶಿವ, ಗಿರಿಜೆಯರ ಮದುವೆ ಸಂದರ್ಭದಲ್ಲಿ ಕುಂಬಾರರು ಮಾಡಿದ್ದು, ಮದುವೆಗೆ ಬೇಕಾದ ಹೂಜಿ ಸೊನ್ನಲಿಗೆ ಎಂಬ ಮಣ್ಣಿನ ಪಾತ್ರೆಗಳನ್ನು. ಅಮೃತ ಮಥನದಲ್ಲಿ ಹುಟ್ಟಿದ ಮಡಕೆಗಳು ಸಾಮಾನ್ಯ ಬಳಕೆಯವೆಂದು ಕಾಣುತ್ತದೆ.

೨೩. 'ನಿರುತಿ' ಎಂದರೆ ನೈರುತ್ಯನೂ ಆಗಬಹುದು, ರಾಕ್ಷಸನೂ ಆಗಬಹುದು.

ಕಲ್ಪವೃಕ್ಷ; ಸೂರ್ಯನಿಗೆ-ತಾವರೆ, ಚಂದ್ರಹಾರ (ಎಂಬ ಖಡ್ಗ). ಹದಿನೆಂಟು ಪಟ್ಟಣದವರನ್ನು ಭೂಮಿಯಲ್ಲಿ ನೆಲೆಗೊಳಿಸಿ ರೈತನಿಗೆ ('ಕುಡಿಯ') ಗುಡಿ (=ಮನೆ) ಹಾರೆಗೋಲು, ಬತ್ತವೇ ಮೊದಲಾದ ಧಾನ್ಯಗಳನ್ನು ಶಿವ ಕೊಟ್ಟನು. ಹದಿನೆಂಟು ಜಾತಿಯ ಜನರ ಉದರಂಭರಣೆಗಾಗಿ ಏನೇನು ಕೊಡಬೇಕೋ ಎಲ್ಲವನ್ನೂ ಕೊಟ್ಟ. ಶಿವನನ್ನು ಗಿರಿರಾಜನು ಕುಂಭವನ್ನು ತಾನು ಕೊಟ್ಟಂದಿನ 'ಒಪ್ಪ'ವನ್ನು ಬೇಡಿದನು. ಶಿವನು ಆ ಬೇಡಿಕೆಯ ಪೂರೈಕೆಗಾಗಿ ಕುಂಬಾರರಿಗೆ ಕಂಚುಳಕಿ, ಬಲ್ಲುಂಕೆ ಗೋಲು[೨೪], ಮೂವತ್ತಾರು ಬಗೆಯ ಪಾತ್ರೆಗಳನ್ನು ಕೋಣನ ಮೇಲೆ ಹೇರುವ ಅಧಿಕಾರವನ್ನು ಕುಂಬಾರರಿಗೆ ಕೊಟ್ಟನು.

ಗಿರಿಜೆಯ ತಮ್ಮನಿಗೆ (ಮೈನಾಕನಿಗೆ?) ಬಾಳು ಬೇಸರವಾಯಿತು. ಆಗ ಎಲ್ಲ ದೇವತೆಗಳೂ ಸೇರಿ ಬಾದುಮೆ ಪ್ರತಿಮೆಯನ್ನು ಮಾಡಿದರು. ಶಿವನು ಬಾದುಮೆ ಪ್ರತಿಮೆಯನ್ನು ಗಿರಿರಾಜನಿಗೆ ನೋಡುವ ಅವಕಾಶವನ್ನು ಕೊಟ್ಟುದಲ್ಲದೆ, ಹಗರಣವನ್ನಾಡುವ, ಗೆಳತಿಗೆ ಪಾತ್ರೆಯನ್ನು (ಕಮಂಡಲು, ಚಿಕ್ಕ ಮೂತಿ ಇರುವ ಪಾತ್ರೆ) ಹಿಡಿಯುವ ಹಕ್ಕನ್ನೂ ಕೊಟ್ಟು[೨೫] ಗಿರಿಜೆಯ ಜೊತೆ ಹೋದನು. ದೇವತೆಗಳೆಲ್ಲರೂ ತಮ್ಮ ತಮ್ಮ ಲೋಕಗಳಿಗೆ ತೆರಳಿದರು.

ಇತ್ತ, ಗಿರಿರಾಜನು ತಾನು ಶಿವನಿಂದ ಪಡೆದ ಸವಲತ್ತುಗಳಿಂದ ಹರ್ಷಚಿತ್ತನಾಗಿ ಗಿರಿಪುರಕ್ಕೆ ಬಂದು, ಧ್ವಜ ತೋರಣಗಳನ್ನು ಕಟ್ಟಿಸಿ ಶಿವನು ಕೊಟ್ಟ ಆ ಸವಲತ್ತುಗಳನ್ನು ಆಯ್‌ಸಾವಂತರಿಗೆ (ಕುಂಬಾರರಿಗೆ) ಕೊಟ್ಟನು.[೨೬] ಅಮೃತ ಮಥನ ಪುರಾಣವು ಇಲ್ಲಿಗೆ ಸಮಾಪ್ತವಾಗುತ್ತದೆ.

ಶಿವ ಗಿರಿಜೆಯರ ಸಮಾಗಮದ ಬಳಿಕ ಗಿರಿರಾಜನು ಶಿವನಿಗೆ ಶಾಸನವನ್ನು ಹೇಳಲು ಕೇಳಿಕೊಂಡ. ವರ ರೂಪದ ಈ ಶಾಸನವನ್ನು ಹೇಳಿದವನು ಶಿವ; ಅದನ್ನು ಬರೆದುಕೊಂಡ ಲಿಪಿಕಾರ ಬ್ರಹ್ಮ; ಶಿವನಿಂದ ಶಾಸನವನ್ನು ತೆಗೆದುಕೊಂಡು ವಿಶ್ವಾಮಿತ್ರನು ಕೋವರರಿಗೆ (ಕುಂಬಾರರಿಗೆ) ಕೊಡುವಂತೆ ಹೇಳಿ ಗಿರಿರಾಜನಿಗೆ ಕೊಟ್ಟನು. ಕ್ಷಾಮ, ಮಾರಿ, ಬರಗಳು ಮಾಯವಾಗಲಿ; ಸಸ್ಯಗಳು ಬೆಳೆಯಲಿ; ಹಸುಗಳು ಹಾಲು ಕರೆಯಲಿ. ಈ ಭೂಮಿಯಲ್ಲಿ

---

೨೪ ಭಲ್ಲೂಕ = ಕರಡಿ. ಬಲ್ಲುಂಕೆಗೋಲು ಬಹುಶಃ ಕರಡಿಯ ಕೂದಲನ್ನು ಕಟ್ಟಿದ ಕೋಲಾಗಿರಬಹುದು. ಅಥವಾ ಕರಡಿಯ ಮೂತಿಯನ್ನು ತುದಿಗೆ ಸಿಕ್ಕಿಸಿದ ಕೋಲಾಗಿರಬಹುದು. ಪ್ರಾಚೀನ ಕರ್ನಾಟಕದಲ್ಲಿ ಹಲವು ವರ್ತಕರು ಬಲ್ಲುಂಕೆಗೋಲನ್ನು ಹಿಡಿಯುವ ಅಧಿಕಾರವನ್ನು ಪಡೆದಿದ್ದರು.

೨೫ ಇದೊಂದು ಅತ್ಯಂತ ಅಪೂರ್ವ ಉಲ್ಲೇಖ. ಬಾದುಮೆ ಹಬ್ಬಕ್ಕೂ ಹಗರಣದ ವಿವಿಧ ವೇಷ ಪ್ರದರ್ಶನಗಳಿಗೂ ಸಂಬಂಧವಿರುವುದನ್ನು ವಡ್ಡಾರಾಧನೆಯು ಸ್ಪಷ್ಟವಾಗಿ ಹೇಳುತ್ತದೆ. ವಿವರಗಳಿಗೆ, ನೋಡಿ - ಎಂ. ಚಿದಾನಂದಮೂರ್ತಿ: 'ಪಗರಣ (ಹಗರಣ)-ಇತಿಹಾಸದಲ್ಲಿ ಮತ್ತು ಸಮಕಾಲೀನದಲ್ಲಿ'. ಪಗರಣ ಮತ್ತು ಇತರ ಸಂಪ್ರಬಂಧಗಳು. ಮೈಸೂರು. ೧೯೮೪, ಪು. ೧-೩೫. ಬಾದುಮೆಯು ಪುರುಷನ ಮೀಸೆ, ಸ್ತ್ರೀಯ ಸ್ತನಗಳಿದ್ದ ಬನಶಂಕರಿಯೇ ಆಗಿತ್ತೆಂದೂ, ಆ ದೇವತೆಯ ಹಬ್ಬದಂದು ಜನರು ಬಗೆಬಗೆಯ ವಿನೋದದ ವೇಷಗಳನ್ನು ಹಾಕಿ ನಗಿಸುತ್ತಿದ್ದರೆಂದೂ, ಆ ವಿನೋದದ ವೇಷಗಳೇ 'ಹಗರಣ'ವೆಂದೂ ಈಗಾಗಲೇ ನಾನು ಬೇರೆ ಬೇರೆ ಸಂಪ್ರಬಂಧಗಳಲ್ಲಿ ಪ್ರತಿಪಾದಿಸಿದ್ದೇನೆ.

೨೬ ಬಾದುಬ್ಬೆ (ಮೆ) ಹಬ್ಬದ ಹಗರಣದ ವೇಷಗಳಲ್ಲಿ ಕುಂಬಾರರ ಪಾತ್ರವು ಮುಖ್ಯವಾದುದಿರಬೇಕು. ಹಿಂದೆ ಬಾದುಬ್ಬೆಯ ಮಣ್ಣಿನ ಪ್ರತಿಮೆ ಮಾಡುವ, ಹಗರಣದ ನಟರ ಮುಖವಾಡ ವೇಷಭೂಷಣ ತಯಾರಿಸುವ ಜವಾಬ್ದಾರಿಯೂ ಕುಂಬಾರರದ್ದೇ ಆಗಿರಬೇಕು.

ಗಿರಿರಾಜನ ಹೆಸರಿನ ಈ ಶಾಸನವು ಚಿರಕಾಲ ಶೋಭಿಸುತ್ತಿರುತ್ತದೆ.

ಈ 'ವಿದ್ಯೆ'ಯು (ಅಕ್ಷರ ಶಾಸನವು) ದೇವರು ಕೊಟ್ಟದ್ದೇ ಹೊರತು ಮನುಷ್ಯರ ಕೈಯಿಂದ ಪಡೆದುದಲ್ಲ. ಕುಂಬಾರರಿಗೆ 'ಗಳೆ' ಉಂಟು ('ಬಲ್ಲುಂಕೆ ಗೋಲು'), 'ಕಂಚುಳಿಕೆ' ಉಂಟು. ಶಾಸನವನ್ನು ಮನ್ನಿಸಿದವನಿಗೆ ಗಂಗಾಸ್ನಾನದ ಫಲವೂ ಅತಿಕ್ರಮಿಸಿದವನಿಗೆ ಶ್ವಾನಗರ್ಭದಿಂದ ಜನನವೂ ಲಭಿಸುತ್ತದೆ.[೨೭]

## II

ಈ ಅತ್ಯಪೂರ್ವ ತಾಮ್ರಪಟವು ಕರ್ನಾಟಕ ಜಾನಪದ ಅಧ್ಯಯನಕ್ಕೆ ಒಂದು ವಿಶಿಷ್ಟ ಕೊಡುಗೆಯಾಗಿದೆಯೆಂಬಲ್ಲಿ ಅನುಮಾನಗಳಿಲ್ಲ. ಭಾರತದ ಎಲ್ಲ ಜಾತಿಗಳ ಜನರೂ ತಮ್ಮ ಜಾತಿಯ ಹುಟ್ಟನ್ನು ಕುರಿತಾದ ಮಿತ್ತುಗಳನ್ನು(Myths) ಹೇಳಿಕೊಳ್ಳುತ್ತಾರೆ. ಮಿತ್ತುಗಳನ್ನು ಅವು ಕೇವಲ ಕಲ್ಪಿತವೆಂದು ಹಗುರವಾಗಿ ಭಾವಿಸಬಾರದೆಂದು ಈಗಾಗಲೇ ವಿದ್ವಾಂಸರು ಎಚ್ಚರಿಸಿದ್ದಾರೆ. ಅವು ಒಂದು ಜನತೆಯ ಬದುಕಿನ ಭಾಗವಾಗಿ ರೂಪುಗೊಂಡಿದ್ದು ಆ ಜನತೆ ಅವನ್ನು ಗಂಭೀರವಾಗಿ ಭಾವಿಸುವುದರಿಂದ ಆ ಜನತೆಯನ್ನು ಅರ್ಥಮಾಡಿಕೊಳ್ಳುವ ದೃಷ್ಟಿಯಿಂದ ಅವನ್ನು ನಾವು ತಿರಸ್ಕರಿಸುವುದು ವಿವೇಕಯುತ ಕಾರ್ಯವಾಗುವುದಿಲ್ಲ. ಮಿತ್ತುಗಳು ಹಿಂದುಳಿದ ಬುಡಕಟ್ಟು ಜನಾಂಗಗಳ ದೃಷ್ಟಿಯಲ್ಲಿ ಚರಿತ್ರೆಯೇ, ಐತಿಹಾಸಿಕ ಸತ್ಯವೇ. ಅವರು ಮಿತ್ತುಗಳ ಮೂಲಕ ತಮ್ಮ ಜಾತಿಗೌರವವನ್ನು ಎತ್ತಿ ಹಿಡಿದುಕೊಳ್ಳುವಂತೆ ತಮ್ಮ ನಂಬಿಕೆಗಳನ್ನೂ ರಿಚುಯಲ್ಲುಗಳನ್ನೂ ದೃಢಗೊಳಿಸಿಕೊಳ್ಳುತ್ತ ಹೋಗುತ್ತಾರೆ. ಆ ಜನರ ಅತ್ಯಂತ ಪವಿತ್ರ ಭಾವನೆಗಳನ್ನು ಅವು ಹಿಡಿದಿಟ್ಟಿರುತ್ತವೆಯಾದ ಕಾರಣ, ಆ ಮಿತ್ತುಗಳು ಅವರ ಬದುಕಿನ ಭಾಗವಾಗುತ್ತವೆ. ಈ ಹಿನ್ನೆಲೆಯಲ್ಲಿ ಮೇಲಿನ ಕುಂಬಾರರ ಕುಲೋತ್ಪತ್ತಿ ಪುರಾಣವನ್ನು ಗಮನಿಸಬೇಕು. ಪ್ರತಿಯೊಂದು ಬುಡಕಟ್ಟು ಜನಾಂಗವು ತಮ್ಮ ಬುಡಕಟ್ಟು ನಿರ್ಮಾಣಗೊಂಡ ಬಗ್ಗೆ ಕತೆಗಳನ್ನು ಕಟ್ಟಿಕೊಂಡಿರುತ್ತದೆ. ಆ ಕತೆಗಳ ಮೂಲಕ ತಮ್ಮ ಬುಡಕಟ್ಟು ಉಳಿದ ಬುಡಕಟ್ಟುಗಳಷ್ಟೇ ಅಥವಾ ಅವಕ್ಕಿಂತಲೂ ಪ್ರಾಚೀನ ಮತ್ತು ಶ್ರೇಷ್ಠ ಎಂದು ಸ್ಥಾಪಿಸಿಕೊಂಡಿರುವುದೂ ಉಂಟು. ತಮ್ಮ ಬುಡಕಟ್ಟಿನ ಸೃಷ್ಟಿಯ ಕಾಲವು ಈ ಪ್ರಪಂಚದ ಸೃಷ್ಟಿಯಷ್ಟೇ ಪ್ರಾಚೀನವಾದುದು ಎಂದೂ, ನೇರವಾಗಿ ದೇವರಿಂದ ತಾವು ಸೃಷ್ಟಿಯಾದವರೆಂದೂ, ದೇವರ ನೇರ ಕೃಪೆಗೆ ಪಾತ್ರರಾದವರೆಂದೂ, ಅಥವಾ ಇತರ ಜನಾಂಗಗಳಿಗೆ ಉಪಕಾರ ಮಾಡಲು ದೇವರಿಂದ ಸೃಷ್ಟಿಯಾದವರೆಂದೂ ಅಂತಹ ಮಿತ್ತುಗಳಲ್ಲಿ ನಿರೂಪಣೆ ಉಂಟು. ಇರುವ ಕೆಲವು ಸಂಗತಿಗಳ ವಿವರಣೆಗೆ, ಸಮರ್ಥನೆಗೆ ಕೆಲವೊಮ್ಮೆ ಉದಾತ್ತೀಕರಣಕ್ಕೆ ಮಿತ್ತುಗಳು ನಿರ್ಮಾಣವಾಗುತ್ತವೆ. ವೈಶ್ಯರಲ್ಲಿ ಕಪ್ಪು ಬಣ್ಣದ ಜನ

---

೨೭ ಎಲ್ಲ ಶಿಲಾಶಾಸನ ಅಥವಾ ತಾಮ್ರಪಟಗಳಂತೆ ಈ ತಾಮ್ರಶಾಸನವೂ ಕೊನೆಯಲ್ಲಿ ಶಾಸನಕರ್ತೃ, ಶಾಸನವನ್ನು ಸ್ವೀಕರಿಸಿದವನು, ಶಾಪಾಶಯ ಇವುಗಳನ್ನು ಒಳಗೊಂಡಿದೆ. ಶಾಸನ ಪಾಠದ ಕರ್ತೃ ಸಾಕ್ಷಾತ್ ಶಿವ; ಅದರ ಲಿಪಿಕಾರ ಬ್ರಹ್ಮ; ಶಿವನಿಂದ ವಿಶ್ವಾಮಿತ್ರನ ಮೂಲಕ ಗಿರಿರಾಜನಿಗೆ, ಗಿರಿರಾಜನಿಂದ ಕುಂಬಾರರಿಗೆ ಶಾಸನವು ಲಭ್ಯವಾಗಿದೆಯೆಂದು ಹೇಳುವುದರ ಮೂಲಕ, ಕುಂಬಾರರು ತಮಗೆ ಅನುವಂಶಿಕವಾಗಿ ಬಂದಿರುವ 'ಗಳೆ' (=ಕೋಲು, ಭಲ್ಲುಂಕೆದಂಡ), ಕಂಚುಳಿಕೆ (=ಮೇಲಂಗಿ, ಉದ್ದನೆಯ ನಿಲುವಂಗಿ) ಇವೇ ಮೊದಲಾದ ವಿಶೇಷ ಚಿಹ್ನೆ, ವೈಶಿಷ್ಟ್ಯಗಳನ್ನು ಸಮರ್ಥಿಸಿಕೊಂಡಿದ್ದಾರೆ.

ಜಾಸ್ತಿ. ತಮ್ಮ ವಂಶದ ಒಬ್ಬ ಸ್ಫುರದ್ರೂಪಿ ರಾಜಕುಮಾರಿಯನ್ನು ಕಾಮುಕನೊಬ್ಬ ಮದುವೆಯಾಗಲು ಬಲವಂತಪಡಿಸಿದನೆಂದೂ ಅವಳು ಅದನ್ನು ಸಹಿಸದೆ ಅಗ್ನಿಪ್ರವೇಶ ಮಾಡಿದಳೆಂದೂ ಅದಕ್ಕೆ ಮುನ್ನ, ತನ್ನ ಸೌಂದರ್ಯವೇ ತನಗೆ ಶತ್ರುವಾಗಿ ಪರಿಣಮಿಸಿದ್ದರಿಂದ ತನ್ನ ವಂಶದವರೆಲ್ಲ ಕಪ್ಪು ಬಣ್ಣದವರಾಗಲಿ ಎಂದು ''ವರ''ವನ್ನು ಅನುಗ್ರಹಿಸಿದಳೆಂದೂ ಒಂದು ಕತೆಯಿದೆ. ಕಪ್ಪು ಬಣ್ಣ ಒಂದು ವಾಸ್ತವ; ಅಪರಿಹಾರ್ಯ. ಅದರ ಬಗ್ಗೆ ಚಿಂತಿಸುವುದರ ಬದಲು ಒಂದು ಮಿತ್ತಿನ ಮೂಲಕ ಅದೊಂದು ವರವೆಂದೂ, ಆ ವರವು ತಮಗೆ ಸ್ಫುರದ್ರೂಪಿಯಾದ ದೇವತಾ ಸಮಾನ ವ್ಯಕ್ತಿಯಿಂದ ಅನುಗೃಹೀತವಾಯಿತೆಂದೂ ವೈಶ್ಯರು ಹೆಮ್ಮೆಪಡಲು ಆ ಮಿತ್ತು ಅವಕಾಶ ಕಲ್ಪಿಸುತ್ತದೆ. ಉತ್ತರ ಅಮೆರಿಕದ ರೆಡ್ ಇಂಡಿಯನ್ ಜನರಲ್ಲಿ ಒಂದು ಮಿತ್ತು ಇದೆ. ಭಗವಂತನು ಮನುಷ್ಯನ ಮಣ್ಣಿನಬೊಂಬೆಗಳನ್ನು ಮಾಡಿ ಆವುಗೆಯಲ್ಲಿಟ್ಟನು: ಸಕಾಲದಲ್ಲಿ ಅವನ್ನು ಹೊರ ತೆರೆಯದಿದ್ದುದರಿಂದ ಅವು ಹೆಚ್ಚಾಗಿ ಸುಟ್ಟು ಕಪ್ಪಾಗಾದವು. ಅವರೇ ನೀಗ್ರೋ ಜನ. ಎರಡನೆಯ ಬಾರಿ ಅಂತಹುದೇ ಬೊಂಬೆಗಳನ್ನು ಮಾಡಿ ಆವುಗೆಯಲ್ಲಿಟ್ಟು, ಸುಟ್ಟು ಕರಕಲಾಗಬಹುದೆಂಬ ಭೀತಿಯಿಂದ ಬೇಗ ತೆಗೆದುಬಿಟ್ಟ. ಆ ಅರೆಬೆಂದ ಬೊಂಬೆಗಳೇ ಯೂರೋಪಿಯನ್ನರು. ಮೂರನೆಯ ಬಾರಿ ಬೊಂಬೆಗಳನ್ನು ಹದವಾಗಿ ಬೇಯಿಸಿದ. ಅವೇ ರೆಡ್ ಇಂಡಿಯನ್ನರು ಎಂದು ಆ ಮಿತ್ತು ಹೇಳುತ್ತದೆ. ನೇಕಾರರು, ಬೆತ್ತಲೆಯಾಗಿದ್ದ ಮನುಷ್ಯರಿಗೆ ವಸ್ತ್ರಗಳನ್ನು ನೇಯ್ದುಕೊಟ್ಟ ದೇವಾಂಗ ಮುನಿಗೆ ಶಿವನು ನೂಲುವ ನೇಯುವ ಸಾಧನಗಳನ್ನು ಕರುಣಿಸಿದನೆಂದೂ ತಾವು ದೇವಾಂಗಮುನಿಯ ವಂಶದವರೆಂದೂ ಹೇಳಿಕೊಳ್ಳುತ್ತಾರೆ.

''ವಿವಾಹ ಪುರಾಣ''ವು ಕುಂಬಾರರ ಕುಲವು ಆರಂಭವಾದುದರ ಕತೆಯನ್ನು ನಿರೂಪಿಸುತ್ತ ಅವರನ್ನು ಗಿರಿರಾಜನ ವಂಶದವರೆಂದೂ, ಅವರ ಅಕ್ಕ ಗೌರಿದೇವಿಯೆಂದೂ ಕಲ್ಪಿಸುತ್ತದೆ. ಆ ಮೂಲಕ ಶಿವ ತಮಗೆ ಭಾವನಾಗಬೇಕೆಂದು ಕುಂಬಾರರೂ ಹೇಳಿಕೊಂಡು ಅನುಭವಿಸುವ ಆತ್ಮವಿಶ್ವಾಸವನ್ನು ಕಲ್ಪಿಸಿಕೊಳ್ಳಬಹುದು. ಜನರಿಗೆ ತಾವು ಇಲ್ಲದೇ ಹೋಗಿದ್ದರೆ ಅವರ ಮದುವೆಗಳಾಗುವ ಮಾತಿರಲಿ, ಅವರಿಗೆ ಸ್ನಾನ ಊಟಗಳೂ ಇರುತ್ತಿರಲಿಲ್ಲವೆಂದು ಹೇಳುವುದರ ಮೂಲಕ ತಾವು ಸಮಾಜದ ಅತ್ಯಂತ ಮುಖ್ಯಭಾಗವೆಂದು ಕುಂಬಾರರು ತಮ್ಮನ್ನು ಪ್ರತಿಷ್ಠಿಸಿಕೊಳ್ಳುವುದರಲ್ಲಿ ಅರ್ಥವಿದೆ. ಮಡಕೆ ಕುಡಿಕೆ ಇದ್ದರೆ ತಾನೇ ಅಡಿಗೆ ಮಾಡಿಕೊಳ್ಳಲು ಸಾಧ್ಯ, ವಸ್ತುಗಳನ್ನು ಸಂಗ್ರಹಿಸಿಡಲು ಸಾಧ್ಯ? ಪ್ರಾಚೀನ ಸಂಸ್ಕೃತಿಯ ಭೂಶೋಧಗಳಲ್ಲಿ ದೊರಕುವ ಅವಶೇಷಗಳಲ್ಲಿ ಮಣ್ಣಿನ ಪಾತ್ರೆಗಳು ಬಹು ಮುಖ್ಯವಾದುವೆಂಬುದನ್ನು ಎಲ್ಲರೂ ಬಲ್ಲರು. ಮನುಷ್ಯನ ಸಂಸ್ಕೃತಿಯ ಆದಿಭಾಗದ ಬೆಳವಣಿಗೆಯಲ್ಲಿ ಕುಂಬಾರಿಕೆ ಬಹು ಪ್ರಮುಖ ಪಾತ್ರವನ್ನು ವಹಿಸಿದೆ.

ಮೇಲಿನ ತಾಮ್ರಪಟವು ಕುಂಬಾರರ ಹದಿನೆಂಟು ಶ್ರೇಣಿಗಳನ್ನು (guilds) ಅಥವಾ ಸಂಘಟನೆಗಳನ್ನು ಹೆಸರಿಸಿದೆ. ಕಲ್ಯಾಣ, ಬೋಧನ, ಹೊಟ್ಟಳಗೆರೆ (ಆಂಧ್ರದ 'ಪೊಟ್ಲಚೆರುವು'), ಕೊಲ್ಲಾಪುರ, ಹಾನುಗಲ್ಲು, ಬೇತೂರು, ದೋರಸಮುದ್ರ, ಉಜ್ಜೇನಿ ಈ ಎಷ್ಟೋ ಊರುಗಳು ವಾಸ್ತವವಾಗಿ ರಾಜಧಾನಿಗಳು ಅಥವಾ ಪ್ರಸಿದ್ಧ ಧಾರ್ಮಿಕ ಕೇಂದ್ರಗಳು. ಅಲ್ಲೆಲ್ಲ ಕುಂಬಾರರು ಹೆಚ್ಚಿನ ಸಂಖ್ಯೆಯಲ್ಲಿದ್ದು ಉಳಿದ ವರ್ತಕರಂತೆ ತಾವೂ ಸಂಘಗಳನ್ನು ಮಾಡಿಕೊಂಡು ತಮ್ಮ ವ್ಯಾಪಾರ, ಸಾಮಾಜಿಕ ಕಾರ್ಯ, ಜಾತಿಯ ಕಟ್ಟುಪಾಡುಗಳ ಹಿತಾಸಕ್ತಿಯನ್ನು ಕಾಪಾಡಿಕೊಂಡಿದ್ದರೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ಪ್ರಾಚೀನ

ಕರ್ನಾಟಕದಲ್ಲಿ ಕುಂಬಾರರು ಸಂಘಟಿತರಾಗಿದ್ದುದಕ್ಕೆ ಶಾಸನಾಧಾರಗಳಿವೆ. (ಎಂ. ಚಿದಾನಂದಮೂರ್ತಿ: ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ೧೯೭೯, ಪು. ೪೫೯).

ಕುಂಬಾರರಿಗೆ ಕೆಲವು ಬಿರುದು-ಪ್ರಶಸ್ತಿಗಳೂ, ವಿಶೇಷ ಸವಲತ್ತುಗಳೂ (privileges) ದೊರಕಿದ್ದ ಸಂಗತಿಯು ಈ ತಾಮ್ರಪಟದಲ್ಲಿ ಸೂಚಿತವಾಗಿದೆ. ಶಿವನು ಅವರಿಗೆ ''ಸಾಲೆ ಸಾಸಿರ್ವರು'' ಎಂಬ ಕುಲದ ಹೆಸರನ್ನೂ ಚಕ್ರದ ಗಳೆಯನ್ನೂ (ತಿಗುರಿಯ ಕೋಲು) ಕೊಟ್ಟು ''ಅಯ್ ಸಾಮಂತ''ರೆಂಬ ಬಿರುದನ್ನು ಕುಂಬಾರರಿಗೆ ನೀಡಿದ್ದು ಇಲ್ಲಿ ನಿರೂಪಿತವಾಗಿದೆ. ಅವರಿಗೆ ಎಂದೋ ಯಾರಿಂದಲೋ ಲಭ್ಯವಾಗಿದ್ದ ಹೆಸರು, ಪ್ರಶಸ್ತಿ, ಸವಲತ್ತುಗಳು ಶಿವನಿಂದಲೇ ದತ್ತವಾದುವು ಎಂದು ಕಲ್ಪಿಸಿ, ಅವುಗಳನ್ನು ದೃಢಗೊಳಿಸಿಕೊಳ್ಳಲು ಜನರಿಂದ ಅವುಗಳಿಗೆ ಮಾನ್ಯತೆ ದೊರಕಿಸಿಕೊಳ್ಳಲು ಯತ್ನ ನಡೆದಿದೆ. ಋಷಿಗಳೇ ಹಿಂದೆ ಕುಂಭಕಾರರ ಕುಲವನ್ನು ಕೊಂಡಾಡಿದ್ದರೂ ಅವರ ಪ್ರಶಸ್ತಿಗಳನ್ನೂ ಸವಲತ್ತುಗಳನ್ನೂ ಯಾರೋ ಮನುಷ್ಯರು ಮನ್ನಿಸದೇ ಅವರನ್ನು ಅಪಮಾನಗೊಳಿಸಿದಾಗ ಈ ತಾಮ್ರಪಟ ಹುಟ್ಟಿರುವಂತೆ ಕಾಣುತ್ತದೆ (ನೋಡಿ-''......ಕಲಹಕಂಠೀರವರ ಛಲಕ್ಕೆ....ಕಟ್ಟಿದ ತೋರಣಕ್ಕೆ ಪರಿಭವ ಪುಯ್ಯಲಂ ಕೇಳ್ದು......'') ''ಬಲ್ಲುಂಕೆ ಗೋಲ''ನ್ನು ಹಿಡಿಯುವ, ''ಕಂಚುಳಿಕೆ'' (ಉದ್ದನೆ ಮೇಲಂಗಿ) ತೊಡುವ ವಿಶೇಷ ಗೌರವಗಳು ಕುಂಬಾರರ ಜಾತಿಗೆ ಸಂದಾಯವಾಗಿದ್ದುವು. ಕೋಣನ ಮೇಲೆ ಮಡಕೆ ಪಾತ್ರೆ ಹೇರಿಕೊಂಡು ಹಲವು ದೇಶಗಳಲ್ಲಿ ಮಾರಾಟ ಮಾಡುವ ಹಕ್ಕು ಅವರದಾಗಿತ್ತು. (ನೋಡಿ-''ದೇವರು ಕೊಟ್ಟ ಪಿದ್ಯ; ಮಾನವರ ಕೆ (ಕೈ)ಯಲು ಹಡೆಯವು; ಗಳೆವುಂಟು ಕಂಚುಳಿಕೆಯುಂಟು''; ''ಕಂಚುಳಿಕೆ ಬಲ್ಲುಂಕೆಗೋಲು ಮೂವತ್ತಾರು ಭಂಡಮಂ ಕೋಣನಲು ಕೊಡುವುದೆಂಬುದಂ ದುಂ ಕೊಟ್ಟು....'') ಈ ಹಕ್ಕುಗಳನ್ನು ಯಾರೋ ಪ್ರಶ್ನಿಸಿದಾಗ ಈ ತಾಮ್ರಪಟ ಹುಟ್ಟಿತು.

ನಮಗೆ ತಿಳಿದಮಟ್ಟಿಗೆ ಇದು ಕನ್ನಡದ ಮೊತ್ತಮೊದಲ ದಾಖಲಿತ ಕುಲೋತ್ಪತ್ತಿ ಪುರಾಣ; ಮೊತ್ತಮೊದಲ ಜಾನಪದ ಕೃತಿ. ತಾಮ್ರಪಟದ ಕಾಲ ಕ್ರಿ.ಶ. ೧೩ನೇ ಶತಮಾನವಾದರೂ ಅದೇ ಪಾಠದ ಇನ್ನೊಂದು ಪಾಠಭೇದ ದೊರಕುವ ಶಿಲಾಶಾಸನ ೧೨ನೇ ಶತಮಾನವಾದ್ದರಿಂದ, ಕುಂಬಾರರ ಕುಲಮೂಲದ ಪುರಾಣ ಕತೆಯ ಕಾಲ ಅದಕ್ಕಿಂತ ಹಿಂದಕ್ಕೆ ಹೋಗುತ್ತದೆ. ಅನೇಕ ಜನರ ನಾಲಿಗೆಯ ಮೇಲಿದ್ದ ಈ ಕತೆಯು ಹನ್ನೆರಡನೆಯ ಶತಮಾನದಲ್ಲಿ ದಾಖಲೆಗೊಂಡಿದೆ ಎನ್ನಬಹುದು. ಈ ದೃಷ್ಟಿಯಿಂದ ಕನ್ನಡ ಜಾನಪದದ ಚರಿತ್ರೆಯಲ್ಲಿ ಇದಕ್ಕೆ ಅತ್ಯಂತ ಮಹತ್ವದ ಸ್ಥಾನವಿದೆ. ಕನ್ನಡದಲ್ಲಿ ಕದಂಬ, ಚಾಲುಕ್ಯ ರಾಜಮನೆತನಗಳ ಉಗಮಕ್ಕೆ ಸಂಬಂಧಿಸಿದ ಪುರಾಣ ಕತೆಗಳು ದೊರಕುತ್ತವೆ. ಉದಾಹರಣೆಗೆ, ಶಿವ ಗಿರಿಜೆಯರು ವನದಲ್ಲಿ ವಿಹರಿಸುತ್ತಿರುವಾಗ ಅವರು ಸಮಾಗಮಗೊಂಡ ಕದಂಬ ವೃಕ್ಷದ ಕೆಳಗೆ ಅವರಿಗೆ ಮಗುವಾಗಿ ಜನಿಸಿದ ಮುಕ್ಕಣ್ಣ ಕದಂಬನೇ ಕದಂಬವಂಶದ ಮೂಲ ಪುರುಷನೆಂಬ ಕತೆ ಕದಂಬ ರಾಜಕುಲಕ್ಕೆ ಸಂಬಂಧಿಸಿದಂತೆ ೯-೧೦ನೇ ಶತಮಾನದ ಶಾಸನಗಳಲ್ಲಿ ಲಭ್ಯವಾಗುತ್ತದೆ. ಬ್ರಹ್ಮನು ತನ್ನ 'ಚುಲುಕ'ವನ್ನು (ಅಂಗೈಯನ್ನು) ನೋಡಿಕೊಂಡಾಗ, ಅಲ್ಲಿಂದ ಧುಮುಕಿ ನೆಲಕ್ಕೆ ಬದ ವೀರಪುರುಷನೇ ಚಾಲುಕ್ಯ ವಂಶದ ಮೂಲ ಪುರುಷನೆಂಬ ಕತೆ ಚಾಲುಕ್ಯ ರಾಜವಂಶಕ್ಕೆ ಸಂಬಂಧಿಸಿದಂತೆ ಅದೇ ಕಾಲದ ಶಾಸನಗಳಲ್ಲಿ ಲಭ್ಯವಾಗುತ್ತದೆ. ರಾಜಕುಲಗಳಿಗೆ ಪ್ರಾಚೀನತೆಯನ್ನೂ ಮಾನ್ಯತೆಯನ್ನು ತಂದುಕೊಟ್ಟು ರಾಜನು ಪ್ರತ್ಯಕ್ಷದೇವತೆಯೇ ಸರಿ ಎಂಬಂತಹ ಸಾಮಾನ್ಯರ ಭಾವನೆಗಳನ್ನು ಆ

ಕತೆಗಳು ದೃಢಪಡಿಸುತ್ತಿದ್ದುವು. ಇಂತಹ ರಾಜಕುಲಗಳ ಸೃಷ್ಟಿಪುರಾಣಗಳು ಆಸ್ಥಾನ ವಿದ್ವಾಂಸರಿಂದ ಕಲ್ಪಿತವಾಗಿದ್ದು ಸೀಮಿತ ಪ್ರಚಾರವನ್ನು ಪಡೆದಿರುತ್ತಿದ್ದುವು. ಆದರೆ ಕುಂಬಾರರ ಕುಲೋತ್ಪತ್ತಿ ಪುರಾಣವು ಅಂತಹ ಸೃಷ್ಟಿಕತೆಗಳಿಂದ ಭಿನ್ನವಾಗಿದೆಯೆಂಬುದನ್ನು ಯಾರು ಬೇಕಾದರೂ ಗಮನಿಸಬಹುದು. 'ವಿವಾಹ ಪುರಾಣ' ಅಥವಾ 'ಸಮಯ ಶಾಸನ ಪುರಾಣ'ವು ಒಂದು ದೀರ್ಘ ಅಪ್ಪಟ ಜಾನಪದ ಪುರಾಣವಾಗಿದೆ. (ರಾಜರ ಸೃಷ್ಟಿಕತೆಯು ಕೆಲವು ಸಾಲುಗಳಲ್ಲಿ ಅಥವಾ ನಾಲ್ಕಾರು ಪದ್ಯಗಳಲ್ಲಿ ಮುಗಿದುಹೋಗುತ್ತದೆ—ಶಿಲಾಶಾಸನಗಳ ಅಥವಾ ತಾಮ್ರಪಟಗಳ ಆರಂಭದಲ್ಲಿ ರಾಜನ ಗುಣಕಥನಕ್ಕೆ ತೊಡಗುವ ಮುನ್ನ ಆ ರಾಜರ ವಂಶದ ಉದಯವನ್ನು ಚಿಕ್ಕದಾಗಿ ಸೂಚಿಸಿರುತ್ತಾರೆ).

''ವಿವಾಹ ಪುರಾಣ''ದ ಶಿಲಾಶಾಸನ ಪಾಠವು ಷಟ್ಪದಿ ಕಾವ್ಯ ಚರಿತ್ರೆಯಲ್ಲಿ ಆದ್ಯ ಕೃತಿಯಾಗಿ ನಿಲ್ಲುವಂತೆ, ಅದೇ ಕತೆಯ ತಾಮ್ರಶಾಸನ ಪಾಠವು ಕನ್ನಡ ಜಾನಪದ ಸಾಹಿತ್ಯದ ಚರಿತ್ರೆಯಲ್ಲಿ ಆದ್ಯ ಕೃತಿಯಾಗಿ ನಿಲ್ಲುತ್ತದೆ.

*ಹೊಸತು ಹೊಸತು, ೧೯೯೩, ಪು. ೩೪೧-೫೯*

# ೯. ತುರುಗಾಳಗ

● ಆರ್. ಶೇಷಶಾಸ್ತ್ರಿ

ಮಾನವನು ತನ್ನ ಜೀವನ ನಿರ್ವಹಣೆಗಾಗಿ ವ್ಯವಸಾಯವನ್ನು ಅವಲಂಬಿಸಿದಾಗ, ಅವನಿಗೆ ಹಲವಾರು ರೀತಿಗಳಲ್ಲಿ ನೆರವಾದ ಪ್ರಾಣಿ ಎಂದರೆ ಗೋವುಗಳು. ಆದ್ದರಿಂದ ಒಂದು ಸಮಾಜದ ಆರ್ಥಿಕವ್ಯವಸ್ಥೆಯು ತನ್ನ ಉತ್ತಮ ಸ್ಥಿತಿಗೆ ಈ ಜೀವಧನಗಳನ್ನು ಅವಲಂಬಿಸಿತ್ತು. ತಮ್ಮಲ್ಲಿನ ಆರ್ಥಿಕ ಮುಗ್ಗಟ್ಟನ್ನು ಸರಿಪಡಿಸಿಕೊಳ್ಳಲು ಸುಲಭವಾದ ಮಾರ್ಗವನ್ನು ಹುಡುಕಿದ ಮಾನವನಲ್ಲಿನ ಸಹಜವಾದ ಅಸೂಯಾಪರ ಬುದ್ಧಿ ಬೇರೆಯವರ ಜೀವಧನಗಳನ್ನು ಅಪಹರಿಸುವ ಪ್ರಯತ್ನ ಮಾಡಿತು. ಈ ರೀತಿ ಆರಂಭವಾದ 'ತುರುಗೋಳ್' ಅಥವಾ 'ಗೋಗ್ರಹಣ' ಕ್ರಮೇಣ ಒಂದು ಖಚಿತವಾದ ರೂಪವನ್ನು ಪಡೆಯುತ್ತಾ ಬಂದಿತು. ಅಂದರೆ ಒಂದು ಗುಂಪಿನ ಜೀವಧನಗಳನ್ನು ಮತ್ತೊಂದು ಗುಂಪಿನ ಜನ ಅಪಹರಿಸಿದಾಗ ಅವರನ್ನು ಎದುರಿಸಿ ದನಗಳನ್ನು ಹಿಂತಿರುಗಿಸುವುದು ವೀರತನದ ಒಂದು ಮೌಲ್ಯವೆಂದು ಈ ಅವಧಿಯಲ್ಲಿಯೇ ಪರಿಗಣಿತವಾಯಿತು. ಭಾರತೀಯ ತುರುಗಾಳಗಗಳನ್ನು ಗಮನಿಸಿದಾಗ ಅವುಗಳನ್ನು ನಡೆಯಿಸುತ್ತಿದ್ದವರ ಉದ್ದೇಶಗಳನ್ನು ಗಮನದಲ್ಲಿಟ್ಟುಕೊಂಡು--ರಾಜಕೀಯ ಕಾರಣಗಳನ್ನು ಉದ್ದೇಶವಾಗಿಟ್ಟುಕೊಂಡು ಅಪಹರಿಸುತ್ತಿದ್ದುದು ಮತ್ತು ಕೇವಲ ಕಳ್ಳತನಕ್ಕಾಗಿಯೇ ಅಪಹರಿಸುತ್ತಿದ್ದುದು ಎಂಬುದಾಗಿ ಎರಡು ಸ್ತರಗಳಲ್ಲಿ ಗುರುತಿಸಬಹುದು. ಆದರೆ, ಉದ್ದೇಶವೇನೇ ಇರಲಿ ತುರುಗಳ ಅಪಹರಣ ಮಾಡಿದವರನ್ನು ಎದುರಿಸುವುದು ವೀರತನವೆಂದೇ ಬಗೆಯಲಾಗಿತ್ತು.

ಅಜ್ಞಾತವಾಸದಲ್ಲಿದ್ದ ಪಾಂಡವರನ್ನು ಹಿಡಿಯುವ ಸಲುವಾಗಿ ದುರ್ಯೋಧನನು ವಿರಾಟನ ಗೋವುಗಳನ್ನು ಹಿಡಿದುದನ್ನು ನಿದರ್ಶನವಾಗಿ ನೀಡಬಹುದು. ಈ ಪ್ರಸಂಗ ಪಂಪನಲ್ಲಿ ಪ್ರಾದೇಶಿಕ ವೈಶಿಷ್ಟ್ಯವನ್ನು ಪಡೆದಿದೆ ಎಂದು ಹೇಳಬಹುದು. ಪಾಂಡವರು ವೀರರು; ಎಂತಹ ಸಂದರ್ಭದಲ್ಲಿಯಾದರೂ 'ಗೋಗ್ರಹಣ'ವನ್ನು ಎದುರಿಸದೆ ಬಿಡುವವರಲ್ಲ; ಆದಕಾರಣ ವಿರಾಟನ ಗೋವುಗಳನ್ನು ಅಪಹರಿಸಿದರೆ ಸಹಿಸಿಯಾರೇ ಎಂಬುದಾಗಿ ದುರ್ಯೋಧನನು ಹೇಳುತ್ತಾನೆ.[೧] ಇದೇ ಪ್ರಸಂಗ ಮೂಲಭಾರತದಲ್ಲಿಯೂ ಇದೆ. ಆದರೆ ತುರುಗೋಳ್‌ನ ಬಗ್ಗೆ ದುರ್ಯೋಧನನು ಆಡುವ ಮಾತುಗಳು ಮೂಲಭಾರತದಿಂದ ಮಾಡಿದ ಅನುವಾದವೆನ್ನುವುದಕ್ಕಿಂತಲೂ, ಪಂಪನ ಸಮಕಾಲೀನ ಸಮಾಜದ ವೀರರಿಗೆ ಇದ್ದ ಆದರ್ಶವನ್ನು ಎತ್ತಿ ಹಿಡಿಯುವಂಥವು ಎಂದು ತೋರುತ್ತದೆ. ಕೌರವನ ಈ ಕುತಂತ್ರವನ್ನು ಪಾಂಡವರು ಗ್ರಹಿಸದೆಯೂ ಇಲ್ಲ.[೨] ಹಾಗೆಂದು ಅವರು ಸ್ವರಕ್ಷಣೆಗಾಗಿ ತಮ್ಮ ವೀರತನವನ್ನು ಮೆರೆಯದ ಷಂಡರೂ ಅಲ್ಲ. ತಮ್ಮ ಅವಧಿಯು ಮುಗಿಯುವವರೆಗೆ ಅಜ್ಞಾತರೂಪದಲ್ಲಿಯೇ ಕೌರವರನ್ನು ಎದುರಿಸುತ್ತಾರೆ. ಈ ರೀತಿ ತಮ್ಮ

೧ ಪಂಪ ; ವಿಕ್ರಮಾರ್ಜುನ ವಿಜಯ, ೯-೮೯ ''ತುಱುಗೊಂಡೊಡೆ ಪಾಂಡವರಿರ್ಪರ್ ಗಂಡರೇ.''

೨ ಅದೇ. ೮-೯೦. ''ನಮ್ಮನಾರೆಯಲೆ ವೈರಿಯು ಮಾಡಿದಗೂಡ್ಪುಲ್ಲಿ ಮಾಣ್ದರಲಣಮಾಗ ಪೂಣ್ದವಧಿಯುಂ ನೆಱೆದಿತ್ತು ಕಡಂಗಿ ಕಾದುವಂ.''

ಕಷ್ಟವನ್ನು ಅರಿತೂ ಕೌರವರನ್ನು ಎದುರಿಸುವುದರಿಂದ ಪಾಂಡವರಿಗೆ ಯಾವುದೇ ರೀತಿಯ ಲಾಭವೂ ಇಲ್ಲ. ಬದಲಾಗಿ ತಮ್ಮ ನಿಜಸ್ವರೂಪಗಳು ಹೊರಬಿದ್ದರೆ ಮತ್ತೆ ಕಷ್ಟಪರಂಪರೆಗಳನ್ನು ಎದುರಿಸಬೇಕಾಗುತ್ತದೆ. ಈ ಎಲ್ಲವನ್ನೂ ಪಾಂಡವರು ಅರಿತವರಾಗಿದ್ದರು. ಇಂತಹ ಒಂದು ವಿಷಮ ಪರಿಸ್ಥಿತಿಯಲ್ಲಿಯೂ ಅವರು ತುರುಗಳ ಸೆರೆಯನ್ನು ಬಿಡಿಸಲು ಹೋರಾಡಿದರೆಂದರೆ, ಅಂದಿನ ವೀರರಿಗೆ ತಮ್ಮ ಮೌಲ್ಯಗಳನ್ನುಳಿಸಿಕೊಳ್ಳುವಲ್ಲಿನ ಶ್ರದ್ಧೆ ಮತ್ತು ಧೀಶಕ್ತಿಯು ಎಂಥದು ಎಂಬುದರ ಪರಿಚಯ ನಮಗಾಗುತ್ತದೆ.

ಕ್ರಿ.ಶ. ೧೧೪೦ರ ಒಂದು ವೀರಗಲ್ಲಿನಿಂದ ವೀರನೊಬ್ಬನು ತನ್ನ ಊರಿನಿಂದ ವೈಯಕ್ತಿಕ ಕೆಲಸದ ಮೇರೆಗೆ ಬೇರೆಯ ಊರಿಗೆ ಹೋಗಿದ್ದಾಗ, ''ಆ ಗ್ರಾಮದ ತುಱುವಂ ತೊಱಹರ ಕಾಳಿಯ ಆ ಪುಯ್ಯಲಿಂಗೆಱಗಿ ಮೇಲಾಳಂ ನಿಱಿದು ಕುದುರೆಯಂ ಪಿಡಿದು ಆ ಮಾರ್ಬಲ''ವನ್ನು ಎದುರಿಸಿ ತುರುಗಳನ್ನು ಹಿಂತಿರುಗಿಸಿ ಆ ಹೋರಾಟದಲ್ಲಿ ಸಾಯುತ್ತಾನೆ.[೩] ಇಲ್ಲಿ ವೀರನಾದವನು ತನ್ನ ಸ್ವಂತ ಗ್ರಾಮದ ಹಸುಗಳಿಗಾಗಿ ಹೋರಾಡಿ ಸತ್ತಿಲ್ಲ. ಹಾಗೆ ಅವನು ಹೋರಾಡುವುದರಿಂದ ತನಗೆ ಪ್ರತಿಫಲವಿದೆಯೆಂದು ಹೋರಾಡಿದವನಲ್ಲ. ಕೇವಲ ಸ್ವಯಂಪ್ರೇರಿತನಾಗಿ ಹೋರಾಡಿ ಸತ್ತವನು. ಈ ಸ್ವಯಂಪ್ರೇರಣೆಗೆ ಯಾವ ಮನೋಧರ್ಮ ಕಾರಣವಾಗಿತ್ತು ಎಂಬ ಪ್ರಶ್ನೆಗೆ ರನ್ನ ಮಹಾಕವಿಯ ಗದಾಯುದ್ಧದಲ್ಲಿ ಸಮರ್ಪಕವಾದ ಉತ್ತರ ದೊರೆಯುತ್ತದೆ.

ತುಱುಗೋಳೊಳ್ ಪೆಣ್ಬುಯ್ಯಲೊ
ಳೆಱೆವೆಸದೊಳ್ನಂಟನೆಡಱೊಳೂರಟಿವಿನೊಳಂ
ತಱಿಸಂದು ಗಂಡುತನಮನೆ
ನೆಱಪದವಂ ಗಂಡನಲ್ಲನೆಂತು ಷಂಡಂ ॥[೪]

ರನ್ನ ಮಹಾಕವಿಯ ಈ ಮಾತು ಅಂದಿನ ವೀರರ ಜೀವನದ ಮುಖ್ಯ ಉದ್ದೇಶವಾಗಿರಬೇಕು. ಕ್ರಿ.ಶ. ೧೨೦೪ರ ಒಂದು ವೀರಗಲ್ಲಿನಿಂದ ಚೀಲಗೌಡನೆಂಬುವನು 'ಕಲ್ಲಕೆಱೆ' ಎಂಬ ಗ್ರಾಮವನ್ನು ''ಬೇಡರಿಱಿದು ಹೋಹಲ್ಲಿ ಹುಯ್ಯಲ ಹರಿದು ಬೇಡರಾನೆ ತಾಗಿ ತುಱುವಂ ಮಗುಟ್ಚಿಯತುಳಬಳ ಪರಾಕ್ರಮನಾಗಿ ತಂನ ಸಾಹಸದಿಂ ಖಗ್ಗಖೇಕದೊಳಟು ಕಿರಾತ ಪಡೆಯಂ ಕೊಂದು ಆ ಗ್ರಾಮ ಸಂತೋಷಂ ಮಾಡಿ ಬಂದು ಜನಪೂಜಿತನುಮಪ್ಪ ಚೀಲಗಲುಡನು ಬೀರಶ್ರೀಯಂ'' ತಾಳಿದ ವಿಷಯ ತಿಳಿದುಬರುತ್ತದೆ.[೫] ಈ ವೀರಗಲ್ಲು ಅವನನ್ನು ಹೊಗಳುತ್ತಾ ಮೇಲೆ ಉದ್ಧೃತಗೊಳಿಸಿದ ರನ್ನನ ಮಾತುಗಳನ್ನು ಪ್ರತಿಧ್ವನಿಸುವಂತೆ ''ತುಱುಗೋಳೊಟು ಪೆಣ್ಬುಯ್ಯಲೊಳೆಱೆವೆಸದೊಳು ನಂಟರೆಡೆಯೊಟಣದಣ್ಮ ತಟ ಚೀಲಗಲುಡಂ ನೆಱೆಗಲಿ ತಱಿಸಂದು ತಾಗಿದಂ'' ಎಂದು ಹೇಳುತ್ತದೆ.

ಕ್ರಿ.ಶ. ೧೦೫೪ರ ಮತ್ತೊಂದು ವೀರಗಲ್ಲಿನಿಂದ ಮುಡಿಗೆರೆಯನ್ನು ಆಕ್ರಮಿಸಿ ತುರುಗಳನ್ನು ಹಿಡಿದು ಹೆಣ್ಣುಮಕ್ಕಳ ಮಾನಾಪಹರಣ ಮಾಡುತ್ತಿದ್ದಾರೆಂದು ಹುಯ್ಯಲಿಡುತ್ತಿದ್ದುದನ್ನು ಕೇಳಿದ ಮಾಚಗಾವುಣ್ಡ ಎಂಬುವನು, ಸ್ವಲ್ಪವೂ ತಡಮಾಡದೆ ಅಲ್ಲಿಗೆ

---

೩ E.C. VII., Sh. 37, 1140

೪ ರನ್ನ; ಸಾಹಸಭೀಮ ವಿಜಯಂ, ೩-೩೫

೫ E.C. VI. Tk. 84, 1204

ಹೋಗಿ ''ಜಿತೇನ ಲಭ್ಯತೇ ಲಕ್ಷ್ಮೀ ಮೃತೇನಾಪಿ ಸುರಾಂಗನಾ ಕ್ಷಣವಿಧ್ವಂಸಿನಿ ಕಾಯೇ ಕಾ ಚಿಂತಾ ಮರಣೇರಣೇ ಯಂಬಾ ಶ್ಲೋಕಮನಾತ್ಮಗತಂ ಬಗೆದು ಸಂಗ್ರಾಮಯಂ ಪರಿಚ್ಛೇದಿಯಾಗಿ ಮಾರ್ಬ್ಬಲದಾಳಂ ಮೂದಲಿಸಿ'' ಶತ್ರುಪಕ್ಷದವರನ್ನು ಸದೆಬಡಿದು ತುರುಗಳನ್ನು ಹಿಂತಿರುಗಿಸಿದ ವಿಷಯ ತಿಳಿಯುತ್ತದೆ.[೬]

ಕ್ರಿ.ಶ. ೧೧೮೭ರ ಒಂದು ವೀರಗಲ್ಲು, ಸೊರಬವನ್ನು ಶತ್ರುಗಳು ಮುತ್ತಿ ಆ ಊರಿನ ಹಸುಗಳನ್ನು ಹೊಡೆದುಕೊಂಡು ಹೋಗುತ್ತಿರುವಾಗ ಕಾಮುಗೌಡ ಎಂಬುವನು ''ಪರೋಪಕಾರಾರ್ತ್ಥಮಿದಂ ಶರೀರಮೆಂಬ ವಾಕ್ಯಾರ್ತ್ಥಮಂ ನೆನೆದು ಮೆಱೆವಾಳಿಯ ನೆಱುವೆನೆಂದು ಹೋಗಿ'' ತುರುಗಳನ್ನು ಹಿಂತಿರುಗಿಸಿ ಸಾಯುತ್ತಾನೆಂಬ ವಿಷಯ ತಿಳಿಸುತ್ತದೆ.[೭]

ತಮ್ಮ ಊರಿನ ತುರುಗಳನ್ನು ಬೇರೆಯವರು ಸವಾಲು ಎಸೆದೋ ಅಥವಾ ಕಳ್ಳತನಕ್ಕಾಗಿಯೋ ಅಪಹರಿಸಿದಾಗ, ತುರುಗಳನ್ನು ಕಾಯುತ್ತಿದ್ದ ಗೋಪಾಲಕರಿಗೆ ಮತ್ತು ಆ ಸ್ಥಳದ ವೀರರಿಗೆ ಮನಸ್ಥಿತಿ ಹೇಗಿರುತ್ತಿತ್ತು, ಸ್ವಾಭಿಮಾನದ ಉತ್ಸಾಹ ಹೇಗೆ ವ್ಯಕ್ತವಾಗುತ್ತಿತ್ತು ಎಂಬುದರ ವಾಸ್ತವ ಚಿತ್ರಣವನ್ನು ಪಂಪನು ಬಹುಸಮರ್ಥವಾಗಿ ನೀಡುತ್ತಾನೆ. ಕೌರವನ ಕಡೆಯವರು ವಿರಾಟನ ತುರುಗಳನ್ನು ಹಿಡಿದಾಗ ಆ ಗೋಪಾಲಕರು

> ತುಱು ಪರಿವಾಗಳೆಮ್ಮ ಪೆಣನಂ ತುೞಿದುಂ ಪರಿಗುಂದಲೆಂದು ಚಿಃ
> ತುಱುಗೊಳೆ ಬಾೞ್ಮೆಂದು ತುಱುಗೋಳೊಳೆ ಸಾವುದು ಸೈಪಿದೆಂದು ಪಾ
> ಯ್ದುಱುಕೆಯ ಗೋವರಣ್ಮಿ ಬರೆ ಪಾಯಿಸಿ ಘೋಟಯಿಲರ್ ತಗುಳ್ದುತ
> ತ್ತೞತೞ್ದಿಕ್ಕಿ ದೇಗುಲಕೆ ಪೆರ್ಮರನಂ ಕಡಿವಂತೆ ಮಾಡಿದರ್ ॥[೮]

ಪಂಪನ ಈ ವರ್ಣನೆ ಅಕ್ಷರಶಃ ನಿಜ. ತುರುಗಾಳಗಗಳಲ್ಲಿ ಹೋರಾಡಿ ಸತ್ತ ವೀರರನ್ನು ತುಳಿದು ತುರುಗಳು ಶತ್ರುಗಳತ್ತ ಹೊರಟಾಗ ಮತ್ತೆ ಇತರ ವೀರರು ಅವುಗಳನ್ನು ಹಿಂತಿರುಗಿಸಿದ ವಾಸ್ತವಿಕ ವರ್ಣನೆ ಕುರುಗೋಡು ಶಾಸನದಲ್ಲಿ ಬರುತ್ತದೆ. ಕಾಳರಸ ಎಂಬುವನು ತನ್ನ ಪ್ರಭುವಿನ ಆಜ್ಞೆಯ ಮೇರೆಗೆ ಕುರುಗೋಡನ್ನು ಆಕ್ರಮಣ ಮಾಡಿ ತುರುಗಳನ್ನು ಅಪಹರಿಸುವಾಗ, ಅದೇ ಊರಿನ ದೇವಗಾವುಂಡ ಮತ್ತು ಮಲ್ಲಗಾವುಂಡ ಎಂಬ ಇಬ್ಬರು ಅಣ್ಣತಮ್ಮಂದಿರು ಹೋರಾಡಿ ಸಾಯುತ್ತಾರೆ. ''ಇವರಿಬ್ಬರ ಪೆಣನಂ ಮೆಟ್ಟಿ ತುಱುಪರಿಯಲವರಿಬ್ಬರಿಂ ಕಿಱಿಯ ಬೊಪ್ಪಗಾವುಂಡ ತಮ್ಮಣ್ಣಂದಿರಿಬ್ಬರ ಕಳೇಬರವಂ ಕಂಡು ಸೈರಿಸಲಾಱದೆ ನಿಮ್ಮಾದುದನಪ್ಪೆನಲ್ಲದೊಡೇಂ ತುಱುವಂ ಮಗುಳ್ಚಿ ಬಪ್ಪೆನ್'' ಎಂಬುದಾಗಿ ಪ್ರತಿಜ್ಞೆ ಮಾಡಿ ತುರುಗಳನ್ನು ಹಿಂತಿರುಗಿಸುತ್ತಾನೆ.[೯] ಬನವಾಸಿಯ ಒಂದು ವೀರಗಲ್ಲಿನ ಶಿಲ್ಪದಲ್ಲಿ ತುರುಗಾಳಗದಲ್ಲಿ ಮಡಿದ ವೀರರ ಹೆಣಗಳನ್ನು ತುರುಗಳು ತುಳಿದುಕೊಂಡು ಹೋಗುತ್ತಿರುವಂತೆ ವಿವರಗಳನ್ನು ಬಿಡಿಸಲಾಗಿದೆ.

ತುರುಗಾಳಗದಲ್ಲಿ ಭಾಗವಹಿಸದೆ ಮೌನವಾಗಿದ್ದ ವೀರರಿಗೆ ಸಮಾಜ ಯಾವ ರೀತಿಯಲ್ಲಿ ತನ್ನ ಪ್ರತಿಕ್ರಿಯೆಯನ್ನು ತೋರಿಸುತ್ತಿತ್ತು ಎಂಬ ಅಂಶ ತೆಲುಗಿನ

---

೬ E.C. VII. Sk. 83, 1058

೭ E.C. VIII. Sb. 47, 1187

೮ ಪಂಪ: ವಿಕ್ರಮಾರ್ಜುನ ವಿಜಯಂ. ೮-೯೫

೯ E.C. VIII., Sb. 175, 1156

ಜಾನಪದಗೀತೆಯೊಂದರಲ್ಲಿ ಸೊಗಸಾಗಿ ಚಿತ್ರಿತವಾಗಿದೆ. ತನ್ನ ರಾಜ್ಯದ ತುರುಗಳನ್ನು ಶತ್ರುಗಳು ಹೊಡೆದುಕೊಂಡು ಹೋದಾಗ ಆ ರಾಜ್ಯದ ಮಂತ್ರಿ ಅದಕ್ಕೆ ಯಾವ ರೀತಿಯ ಪ್ರತಿಭಟನೆಯನ್ನು ತೋರಿಸುವುದಿಲ್ಲ. ಅವನು ಮನೆಗೆ ಬಂದಾಗ ಕೈಕಾಲುಗಳಿಗೆ ನೀರು ಕೊಡುವುದರ ಬದಲು ಅವನ ಹೆಂಡತಿ ಅರಿಶಿನ, ಕುಂಕುಮ, ಬಳೆಗಳನ್ನು ನೀಡುತ್ತಾಳೆ. ಊಟಕ್ಕೆ ಕುಳಿತಾಗ ಅವನ ತಾಯಿ ಒಡೆದ ಹಾಲನ್ನು ಬಡಿಸುತ್ತಾಳೆ. ಈ ರೀತಿಯ ವಿಚಿತ್ರ ವರ್ತನೆಗಳು ತನ್ನ ಷಂಡತನಕ್ಕೆ ಹಾಕಿದ ಪುರಸ್ಕಾರವೆಂದು ಬಗೆದ ಅವನು ತನ್ನ ಗಂಡಸುತನವನ್ನು ಮೆರೆಯಲು ನೇರವಾಗಿ ಹೋಗಿ ಶತ್ರುಗಳೊಡನೆ ಹೋರಾಡಿ ಹಸುಗಳನ್ನು ಹಿಂತಿರುಗಿಸುವ ಪ್ರಯತ್ನ ಮಾಡುತ್ತಾನೆ.[೧೦]

ಹಸುಗಳನ್ನು ಯಾರೇ ಆಗಲಿ, ಯಾವ ಕಾರಣಕ್ಕಾಗಿಯೇ ಆಗಲಿ, ಅಪಹರಿಸಿದಾಗ ಅದನ್ನು ಹಿಂತಿರುಗಿ ಪಡೆಯುವುದರಿಂದ ತಮ್ಮ ಪರಾಕ್ರಮಕ್ಕೆ ಒಂದು ಅರ್ಥವಂತಿಕೆ ಬರುವುದಾಗಿ ಜನ ಭಾವಿಸಿದ್ದರು. ಈ ಅಂಶ ಇತ್ತೀಚಿನ ಕಾಲದಲ್ಲಿಯೂ ಜನರಲ್ಲಿ ಇತ್ತೆಂಬುದನ್ನು ಗಮನಿಸಬಹುದು. ಮುತ್ತೋಡು ಹಾಲಪ್ಪನಾಯಕನೆಂಬುವನು ತನ್ನ ಸೈನ್ಯ ಸಮೇತ ಮುಸುವನಕಣಿವೆಯ ಘಾಟಿಗೆ ಬಂದು ಅಲ್ಲಿ ಚಿತ್ರದುರ್ಗದವರ ದನಗಳನ್ನು ಹಿಡಿಯುತ್ತಾನೆ. ಆ ದನಗಳನ್ನು ಕಾಯುತ್ತಿದ್ದ ಗೊಲ್ಲನು ಈ ವಿಷಯವನ್ನು ಮದಕರಿನಾಯಕನಿಗೆ ತಿಳಿಸುತ್ತಾನೆ. ''ಕೂಡಲೇ ರಾಜಾ ಸಾಹೇಬರು ಕಾಲಭೈರವನಂತೆ ಜಾಜ್ವಲ್ಯವಾಗಿ ದರೋಬಸ್ತು ಪೌಜು ಪಿರ್ಯಾ ಜನಗಳಿಗೆ ಹುಕುಂ ಆದದ್ದು ಸವಾರ್ ಕಛೇರಿ ಜನಗಳಿಗೆ ಹುಕುಂ ಆದದ್ದು; ಸರಕಾರದ ಕಾವಲಲ್ಲಿದ್ದ ದನಗಳು ಮೇಯುತ್ತಾ ಇರುವಲ್ಲಿ ನವಾಬ ಪೌಜು ಬಂದು ತಿರುಗಿಸಿಕೊಂಡು ಹೋಗುತ್ತಾರಂತೆ. ಪೂರ್ವದಿಂದ ಚಿತ್ರದುರ್ಗದ ಹತ್ತಿರ ಸರಕಾರ ದನಗಳಿಗೆ ತಿರುಗಿಸಿದ್ದು ಕೇಳಿಯಿರಲಿಲ್ಲ. ನೀವು ಪೀಡಿತರ ಪೀಡಿ ಸರಕಾರದ ಉಪ್ಪಿನಿಂದ ಸಂಸ್ಥಾನದಿಂದ ಸಂರಕ್ಷಣರಾಗಿದ್ದಲ್ಲಿ ಈ ಕ್ಷಣವೇ ನಾಲ್ಕು ಸಾವಿರ ಕುದುರೆ ನಿಶಿಹೋಗಿ ದಂಡು ಹೊಡೆದು ಬನ್ನಿ. ಹಿಂದಕ್ಕೆ ತೆಗೆದುಕೊಂಡು ಬರುವುದಲ್ಲದೆ ದನಗಳನ್ನು ತಿರುಗಿಸಿಕೊಂಡು ಬರಬೇಕು. ಇಲ್ಲದಿದ್ದರೆ ನಿಮ್ಮ ಜನಗಳಿಗೆ ಶಿಪಾಯಿ ಎಂದು ಯಾರೂ ಕರೆಯಲಿಕ್ಕಿಲ್ಲ'' ಎಂದು ತನ್ನ ಸೈನಿಕರಿಗೆ ಕರೆ ನೀಡುತ್ತಾನೆ.[೧೧] ಈ ಅಂಶವನ್ನು ಗಮನಿಸಿದರೆ ಗೋವುಗಳನ್ನು ಕಳ್ಳರು ಅಥವಾ ಅರಸರು ಹೊಡೆದುಕೊಂಡು ಹೋದಾಗ ತಮಗೆ ಆಗುವ ಆರ್ಥಿಕವಾದ ನಷ್ಟಕ್ಕಿಂತ ಮಿಗಿಲಾಗಿ ಮಾನಭಂಗವಾಗುತ್ತದೆ ಎಂದು ಅವರು ಭಾವಿಸಿದ್ದರು.

ತುರುಗಾಳಗವು ಯಾವುದೇ ಮುನ್ಸೂಚನೆಯೂ ಇಲ್ಲದೆ ಆಕಸ್ಮಿಕವಾಗಿ ನಡೆಯುತ್ತಿದ್ದ ಒಂದು ರೀತಿಯ 'ಗ್ರಹಣವೇ' ಸರಿ. ಇದನ್ನು ಎದುರಿಸುವ ಸಲುವಾಗಿ ಯಾವುದೇ ನಿಶ್ಚಿತವಾದ ಪಡೆಯೂ ಕರ್ನಾಟಕದಲ್ಲಿ ಇದ್ದಂತೆ ತೋರುವುದಿಲ್ಲ. ಈ ರೀತಿಯ ಕಾಳಗಗಳು ನಡೆದಾಗ, ಆ ಪ್ರದೇಶದ ವೀರರಾದವರು ಸ್ವಯಂಪ್ರೇರಿತರಾಗಿ, ಕೆಲವೊಮ್ಮೆ ಯಾರದೋ ಆಜ್ಞೆಯಂತೆ ಹೋರಾಟ ಮಾಡಿದವರೇ ಆಗಿರುತ್ತಾರೆ. ಇಂತಹ ಹೋರಾಟದಲ್ಲಿ ಸ್ವಯಂಪ್ರೇರಿತಳಾಗಿ ಹೋರಾಡಿ ಮಡಿದ ಹೆಣ್ಣುಮಗಳೊಬ್ಬಳ ವಿಷಯ ಕ್ರಿ.ಶ ೧೦೪೧ರ ವೀರಗಲ್ಲೊಂದರಿಂದ ತಿಳಿಯುತ್ತದೆ.[೧೨] 'ಸರಕನೂಙು' ಎಂಬ ಗ್ರಾಮದ ತುರುಗಳನ್ನು

---

೧೦ ಈ ಬಗ್ಗೆ ನನಗೆ ಮಾಹಿತಿ ನೀಡಿದವರು ಡಾ|| ಟಿ. ವಿ. ಸುಬ್ಬರಾವ್ ಅವರು.

೧೧ ಹುಲ್ಲೂರು ಶ್ರೀನಿವಾಸ ಜೋಯಿಸ್: ಚಿತ್ರದುರ್ಗದ ಬಖೈರು, ಪು. ೨೫

೧೨ E.C. IX. Ht. 11, 1041

ಯಾರೋ ಅಪಹರಿಸಿದಾಗ, ಶತ್ರುಗಳನ್ನು ಅಟ್ಟಿಸಿಕೊಂಡು ಹೋದ 'ಮಾಚ ಗಾವುಂಡ' ಎಂಬುವನ ಮಗಳು 'ಲಕ್ಷ್ಮಮ್ಮಗಾವುಣ್ಡಿ' ತುರುಗಳನ್ನು ಹಿಂತಿರುಗಿಸಿ ಆ ಹೋರಾಟದಲ್ಲಿ ಸಾಯುತ್ತಾಳೆ. ಈ ನಿದರ್ಶನ ಸಾರುವಂತೆ, ತನ್ನ ಎದುರಿಗೆ ಆಗುತ್ತಿದ್ದ ಅನ್ಯಾಯವನ್ನು ಸಹಿಸದೆ ಹೆಣ್ಣುಮಗಳೊಬ್ಬಳು ಹೋರಾಡಿರಬೇಕಾದರೆ, ಸ್ವಾಭಿಮಾನಿಗಳಾಗಿದ್ದ ಗಂಡಸರು ಸ್ವಯಂಪ್ರೇರಿತರಾಗಿ, ಇಂಥ ಹೋರಾಟಗಳಲ್ಲಿ ಪಾಲುಗೊಂಡು ಹೊಡೆದಾಡಿ ನ್ಯಾಯವನ್ನು ದೊರಕಿಸುತ್ತಿದ್ದಿರಬೇಕು.

ಚಿತ್ರದುರ್ಗದ ಪಾಳೆಯಗಾರರನ್ನು ಕುರಿತಂತೆ ಇರುವ ಜಾನಪದಗೀತೆಯೊಂದು ಗಮನಾರ್ಹವಾಗಿದೆ. ರಾಜಾ ಮದಕರಿಯು ''ಪಟ್ಟವೇರಿದಾಗ ಇನ್ನೂ ಹನ್ನೆರಡು ವರ್ಷದವನು. ಅವನ ಅಜ್ಜಿ ಗಂಡುಗಲಿ ಓಬವ್ವನು ರಾಜ್ಯಧರಳಾಗಿ ಆಳಲಾರಂಭಿಸಿದಳು. ನೆರೆ ರಾಜ್ಯವಾದ ರಾಯದುರ್ಗದ ದಳಪತಿ ಕೃಷ್ಣಪ್ಪನಾಯಕನು ಚಿನ್ಮೂಲಾದ್ರಿಯು ಹೆಣ್ಣಿನ ಕೈಲಿದೆ, ಸಾಧಿಸಬಹುದು ಎಂದು ದಂಡೆತ್ತಿ ಬಂದು ಉತ್ತರದಿಕ್ಕಿನಲ್ಲಿ ಮೇಯುತಿದ್ದ ಗೋವೃಂದವನ್ನು ಅಪಹರಿಸಿದನು. ಇದನ್ನು ಕೇಳಿದ ಕೂಡಲೇ ಗಂಡುಗಲಿ ಓಬವ್ವನು ರೇಗಿ ಶತ್ರುವಿನ ಮೇಲೆರಗಿದಳು. ಹೆಣ್ಣಿನ ಗಂಡುತನವನ್ನು ಕಂಡು ಬೆಚ್ಚಿ ದನಗಳನ್ನು ಬಿಟ್ಟೋಡಿದನು.'' ಓಬವ್ವನು ಅಷ್ಟಕ್ಕೇ ಬಿಡದೆ ಅವನನ್ನು ಹಿಂಬಾಲಿಸಿಕೊಂಡು ಹೋದಳು.[೧೩]

ಪ್ರಾಚೀನ ಕರ್ನಾಟಕದಲ್ಲಿ ತುರುಗಾಳಗದಲ್ಲಿ ಮಡಿದ ಮತ್ತು ಇತರ ವೀರರ ಬಗ್ಗೆ ತುಂಬಾ ಗೌರವದ ಭಾವನೆ ಇತ್ತೆಂಬ ವಿಷಯ ಬ್ರಹ್ಮಶಿವನ 'ಸಮಯ ಪರೀಕ್ಷೆ'ಯಿಂದ ತಿಳಿಯುತ್ತದೆ. ಬ್ರಹ್ಮಶಿವನು ತುರುಗಾಳಗದಲ್ಲಿ ಮಡಿದ ವೀರರಿಗೆ ನಮಸ್ಕರಿಸುವ, ಅವರ ನೆತ್ತರಿನಿಂದ ಬೊಟ್ಟು ಇಟ್ಟುಕೊಳ್ಳುವ ಜನರ ಆಚರಣೆಯನ್ನು ಈ ರೀತಿ ವಿಡಂಬಿಸುತ್ತಾನೆ.[೧೪]

ತುರುಗಳುಗುಳ್ದ ಪುಯ್ಯಲೊ
ಳೆರೆಯನ ಕಾರ್ಯದೊಳಮಣ್ಣಿ ಸತ್ತವನಂ ಕಂ
ಡೆರಗಿ ಬಳಿಕವನ ನೆತ್ತರೊ
ಳರಿವಿದೆ ಬೊಟ್ಟುನಿಟ್ಟುಕೊಳುವಮೂರ್ಖರ್ ॥

ಬ್ರಹ್ಮಶಿವನ ಪ್ರಕಾರ ಆ ರೀತಿ ವೀರರಿಗೆ ನಮಸ್ಕಾರ ಮಾಡುವುದು, ಅವನ ರಕ್ತದಿಂದ ತಿಲಕವನ್ನಿಟ್ಟುಕೊಳ್ಳುವುದು ಮೂರ್ಖತನದ ಪರಮಾವಧಿ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದುದು ಅಂದಿನ ಜನತೆಗೆ ಈ ರೀತಿಯ ಕಾಳಗಗಳಲ್ಲಿ ಮಡಿದ ವೀರರ ಬಗ್ಗೆ ಇದ್ದ ಗೌರವ. ಸ್ವಯಂಪ್ರೇರಿತರಾಗಿಯೋ ಜೋಳದಋಣ ತೀರಿಸುವ ಸಲುವಾಗಿಯೋ ತಮ್ಮ ಪ್ರಾಣವನ್ನು ಲೆಕ್ಕಿಸದೆ ಹೋರಾಡಿ ಮಡಿದ ವೀರರ ಬಗ್ಗೆ ಜನತೆಗೆ ಗೌರವ ಇರುವುದು ಸಹಜವೇ ಆಗಿದೆ.

ಇನ್ನು ಮುಂದೆ ತುರುಗಾಳಗದಲ್ಲಿ ಮಡಿದ ವೀರರ ನಿದರ್ಶನಗಳನ್ನು ಗಮನಿಸೋಣ. ಈ ತುರುಗಾಳಗಗಳು ಸಾಮಾನ್ಯವಾಗಿ ಕಳ್ಳತನ ಮತ್ತು ರಾಜಕೀಯ ಉದ್ದೇಶಗಳಿಂದ

---

೧೩. ಹುಲ್ಲೂರು ಶ್ರೀನಿವಾಸ ಜೋಯಿಸ್: 'ಪಾಳೆಯಗಾರರ ಜನಪದಗೀತೆಗಳು' (ಶ್ರೀ ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು: ಸಂ. ಲಕ್ಷ್ಮಣ ತೆಲಗಾವಿ, ಡಾ॥ ಎಂ. ವಿ. ಶ್ರೀನಿವಾಸ)

೧೪. ಬ್ರಹ್ಮಶಿವ: ಸಮಯ ಪರೀಕ್ಷೆ, ೧೨-೧೩

ನಡೆದಿರುವುದನ್ನು ಈ ಹಿಂದೆಯೇ ಹೇಳಲಾಗಿದೆ.

ಕಳ್ಳತನವನ್ನು ಉದ್ದೇಶವಾಗಿಟ್ಟುಕೊಂಡು ಬಂದು ತುರುಗಳನ್ನು ಅಪಹರಿಸಿದವರ ವಿರುದ್ಧ ಹೋರಾಡಿ ಮಡಿದ ವೀರರ ಅನೇಕ ನಿದರ್ಶನಗಳು ದೊರೆಯುತ್ತವೆ. ವೊಲ್ಲೆಯೂರಿನ ತುರುಗಳನ್ನು ಕಳ್ಳರು ಅಪಹರಿಸಿಕೊಂಡು ಹೋದಾಗ ಚೋಳಾಚಾರಿ ಎಂಬುವನು ಕಳ್ಳರನ್ನು ಹಿಂಬಾಲಿಸಿ, ಆ ಕಳ್ಳರಲ್ಲಿ ಒಬ್ಬನನ್ನು ಕೊಂದು ತುರುಗಳನ್ನು ಹಿಂದಿರುಗಿಸುವಲ್ಲಿ ತಾನೂ ಸಾಯುತ್ತಾನೆ.[೧೫] ನೊಳಂಬಘಟ್ಟದ ದೇವನ ಆಜ್ಞೆಯಂತೆ ಏಚನಾಯಕ ಎಂಬುವನು "ತುಱುವಂ ಕೊಂಡು ಪೋಪ ಕಳ್ಳರಂ ಪಲರಂ ಕೊಂದು ತುಱುವ ಮಗುೞ್ಚಿ ಸುರಲೋಕ ಪ್ರಾಪ್ತ"ನಾಗುತ್ತಾನೆ.[೧೬] ಕೆಂಕೆರೆಯ ಮಹಾಜನಗಳ ತುರುಗಳನ್ನು ಕಳ್ಳರು ಅಪಹರಿಸಿಕೊಂಡು ಹೋಗುವಾಗ ಆದ ಹುಯ್ಯಲನ್ನು ಕೇಳಿ ಅದೇ ಊರಿನ 'ಮರಿಯ' ಮತ್ತು 'ಮಾದಿಗೌಡ' ಎಂಬ ಇಬ್ಬರು ವೀರರು ಹೋರಾಡಿ ತುರುಗಳನ್ನು ಹಿಂತಿರುಗಿಸಿ ಸಾಯುತ್ತಾರೆ.[೧೭] ತಾಗರ್ತಿಯ ಹಸುಗಳನ್ನು ಕಳ್ಳರು ಕೊಂಡು ಹೋದಾಗ "ಸರಿಯಮೋಜನು ಕಳ್ಳರ ಬೆಂಬೆತ್ತಿಯಿಱಿದು" ಸಾಯುತ್ತಾನೆ.[೧೮] 'ವೀರಯ' ಎಂಬುವನು "ಬಂನಿಕುಪ್ಪೆಯ ದನವ ಕಳೆದು ಹೊಡೆದು ಹೋಹಲ್ಲಿ ಕಳ್ಳರ ಕೂಡಿ" ಹೋರಾಡಿ ಸಾಯುತ್ತಾನೆ.[೧೯] ತನ್ನ ಊರಿನ "ತುಱುವಂ ಕಳ್ಳರು ಕೊಂಡು ಹೋದಲ್ಲಿ ಬೋವಗಉಡನ ಮಗ ಕೂಚಗವುಂಡ ಕಳ್ಳರನಿಱಿದು" ಸಾಯುತ್ತಾನೆ.[೨೦] ಹೀಗೆ ನಿದರ್ಶನಗಳನ್ನು ನೀಡುತ್ತಾ ಹೋಗಬಹುದು.

ಈ ರೀತಿ ತುರುಗಳನ್ನು ಅಪಹರಿಸಿಕೊಂಡು ಹೋದಾಗ ಕಳ್ಳರನ್ನು ಹಿಂಬಾಲಿಸಿ ತುರುಗಳನ್ನು ಹಿಂತಿರುಗಿಸಿದ ವೀರನ ಬಗ್ಗೆ ಇರುವ ವೀರಗೀತೆಯೊಂದು ದೊರೆಯುತ್ತದೆ.[೨೧] ಈ ವೀರಗೀತೆಯನ್ನು ಪರಿಶೀಲಿಸುವುದು ಸೂಕ್ತವೆಂದು ತೋರುತ್ತದೆ. ತಮ್ಮ ದನಗಳು ಕಳೆದುಹೋದ ವಿಚಾರವನ್ನು ತನ್ನ ಮಗನಿಗೆ ತಿಳಿಸಲು ಗ್ವಾಲಣ್ಣನ ತಾಯಿ ಗ್ವಾಲಣ್ಣನನ್ನು ಹುಡುಕಿಕೊಂಡು ಹೋಗಿ ಅವನಿಗೆ

ದನ ಹೋಗಿ ಆರುದಿವಸ ಆರುಹೋಗಿ ಮೂರುದಿವಸ
ಆತಪ್ಪ ಗ್ವಾಲಣ್ಣ ಇಚಾರ ಇಲ್ಲಲ್ಲಕ
ಸ್ವಲ್ಪಾನ ಈಚಾರ ಇಲ್ಲಲ್ಲೊ ಗ್ವಾಲಣ್ಣ

ಎಂಬುದಾಗಿ ತಿಳಿಸುತ್ತಾಳೆ. ಈ ವಿಚಾರವನ್ನು ಕೇಳಿದ ಕೂಡಲೇ ಗ್ವಾಲಣ್ಣ ಮನೆಗೆ ಹೋಗಿ ಬುತ್ತಿಯನ್ನು ಕಟ್ಟಿಕೊಂಡು ತನ್ನ ದನಗಳನ್ನು ಹುಡುಕುತ್ತಾ ಹೋಗುತ್ತಾನೆ. ಆಗ ಅವನಿಗೆ ದಾರಿಹೋಕರು

---

೧೫ E.C. X. Kl, 14, 1035
೧೬ S.I.I. IX. Pt. 1 105, 1047
೧೭ E.C. VI. Cm. 158, 157, 1195
೧೮ E.C. VII. Sk. 57, 1376
೧೯ E.C. IX. Cp. 2, 1667
೨೦ M.A.R. 1927. 31
೨೧ ಬಿ. ಆರ್. ಸುರಪುರ, 'ಗ್ವಾಲಣ್ಣನ ವೀರಗಾಥಾ', ಕರ್ನಾಟಕ ಭಾರತಿ, ಸಂ. ೬, ಸಂ. ೨, ಪು. ೭೪-೮೪

ಅಲ್ಲಿಲ್ಲ ಇಲ್ಲಿಲ್ಲ ಕರಿಗುಡ್ಡದ ಬ್ಯಾಡsರು
ಕರಿಗುಡ್ಡದ ಬ್ಯಾಡರು ಹೇಳ್ಕಿಟ್ಟ ಹಿಡಿಗ್ವಾಡಿ
ಹೇಳ್ಕಿಟ್ಟ ಹಿಡಿಗ್ವಾಡಿ ಹೋಗಿಸ್ಯಾರೋ ಗ್ವಾಲಣ್ಣ

— ಎಂಬುದಾಗಿ ತಿಳಿಸುತ್ತಾರೆ. ಅವರಿಂದ ತಮ್ಮ ದನಗಳ ಸುಳಿವನ್ನು ತಿಳಿದ ಗ್ವಾಲಣ್ಣ ಬೇಡರ ಕೋಟೆಗೆ ಹೋಗುತ್ತಾನೆ.

ಹೋದವನೆ ಗ್ವಾಲಣ್ಣ ಪಕ್ಕsನೆ ಒದ್ದಾನೆ
ಪಕ್ಕsನೆ ಒದ್ದಾನೆ । ಬಾಗಿಲ ಮುರದಾನೆ
ಬಾಗಿsಲು ಮುರದಾನ । ಒಳಿಯಾಕ ಹೋಗ್ಯಾನೆ
ದನಗಳು ನೋಡ್ತಾವ್। ಸುತ್ತಾಲು ಮುತ್ಯಾವ
ಅಲ್ಲಿಂದ ಗ್ವಾಲಣ್ಣ ದನಗಳನು ಹೊಡಕಂಡು
ದನಗಳ್ನ ಹೊಡಕಂಡು ಬರುತಾನೆ ಗ್ವಾಲಣ್ಣ —

— ಹೀಗೆ ತನ್ನ ದನಗಳನ್ನು ಹಿಂತಿರುಗಿಸಿಕೊಂಡು ಬರುತ್ತಿರುವಾಗ ಅವನನ್ನು ಬೇಡರು ಹಿಂಬಾಲಿಸಿ ಬಂದು ಅವನೊಂದಿಗೆ ಹೋರಾಡುತ್ತಾರೆ. ಅವರನ್ನು ಕಂಡಕೂಡಲೇ ಗ್ವಾಲಣ್ಣ

ನಿಂತಾನೆ ಹೋಗ್ಯಾನೆ । ಬ್ಯಾಡರನ್ನ ಹಿಡಿದಾನೆ
ಬ್ಯಾಡರ್ನ ಹಿಡಿದಾನೆ । ಕಾಲ್‌ಮ್ಯಾಲೆ ಕಾಲಿಟ್ಟು
ಕಾಲ್‌ಮ್ಯಾಲೆ ಕಾಲಿಟ್ಟು । ಸೀಳ್ಯಾನೋ ಬ್ಯಾಡರನ್ನ
ಸೀಳಿದ್ದ ಹೆಣಗಳನs । ಬೆನ್ನೀಗೆ ಕಟ್ಯಾನೆ
ಅಲ್ಲಿಂದ ಹೊಲದಾಗ । ಹೋಗ್ಯಾನೆ ಗ್ವಾಲಣ್ಣ
ಹೊಲದಾಗ ಹೋಗ್ಯಾನ । ಕಾಯ್‌ಕುಳ್ಳ ಆಯ್ದಾನೆ
ಕಾಯ್‌ಕುಳ್ಳ ಆಯ್ದಾನೆ । ಕಿಚನ್ನ ಕಾಣಿಸ್ಯಾನೆ

ಹೀಗೆ ಗ್ಯಾಲಣ್ಣ ಬೇಡರನ್ನು ಸದೆ ಬಡಿದು ದನಗಳೊಡನೆ ತನ್ನ ಊರಿಗೆ ಹಿಂದಿರುಗುತ್ತಾನೆ. ಈ ಸಂತೋಷಕ್ಕಾಗಿ ತನ್ನ ಊರಿನವರನ್ನೆಲ್ಲಾ ಕರೆಯಿಸಿ ಅವರಿಗೆ ಔತಣವನ್ನು ಮಾಡುತ್ತಾನೆ. ಎಲ್ಲರದೂ ಊಟ ಆದಮೇಲೆ ಗಾಯಗೊಂಡ ಗ್ವಾಲಣ್ಣ ತಾಯಿಯ ತೊಡೆಯ ಮೇಲೆ ಮಲಗಿ ಅಸುನೀಗುತ್ತಾನೆ.

## ರಾಜಕೀಯ ಉದ್ದೇಶದಿಂದ ನಡೆದ ತುರುಗಾಳಗಗಳಲ್ಲಿ ಮಡಿದ ವೀರರು

ಕರ್ನಾಟಕದ ವೀರಗಲ್ಲುಗಳನ್ನು ಸೂಕ್ಷ್ಮವಾಗಿ ಪರಿಶೀಲನೆ ಮಾಡಿದಾಗ ರಾಜಕೀಯ ಉದ್ದೇಶದಿಂದ ಮಾಡಿದ ತುರುಗಾಳಗಗಳಲ್ಲಿ ಮಡಿದ ವೀರರ ವೀರಗಲ್ಲುಗಳೇ ಹೆಚ್ಚಿನ ಸಂಖ್ಯೆಯಲ್ಲಿರುವುದು ತಿಳಿದುಬರುತ್ತದೆ. ಇದಕ್ಕೆ ಮುಖ್ಯ ಕಾರಣವೆಂದರೆ ಭಾರತೀಯ ಯುದ್ಧತಂತ್ರದಲ್ಲಿ ಈ ಗೋಗ್ರಹಣ, ಯುದ್ಧಾರಂಭದ ಪಾತ್ರವನ್ನು ವಹಿಸಿರುವುದೇ ಆಗಿದೆ. ವೀರಗಲ್ಲುಗಳ ಪಾಠದಿಂದ ತುರುಗಳನ್ನು ಅಪಹರಿಸಲು 'ಧಾಳಿಮಾರ್ಗ'ವನ್ನು ಅನುಸರಿಸುತ್ತಿದ್ದರೆಂದು ತಿಳಿದುಬರುತ್ತದೆ.[೨೨] ಆದ್ದರಿಂದ ಶತ್ರುರಾಜರ ತುರುಗಳನ್ನು

೨೨ (ಅ) E.C. VII., Hl, 26, 27, (ಆ) ಅದೇ. ೨೮, ೧೧೯೭
(ಇ) E.C. VIII., Sa. 140. 1265 (ಈ) E.C. VIII. Sb. 525

ಅಪಹರಿಸುವುದರ ಮೂಲಕ ಅವರಮೇಲೆ ಸವಾಲು ಎಸೆದು ಅವರನ್ನು ಕೆಣಕಿ ಯುದ್ಧಕ್ಕೆ ಆಹ್ವಾನವನ್ನೀಯುವುದಕ್ಕಾಗಿ ಈ ತುರುಗಾಳಗಗಳನ್ನು ಆರಂಭಿಸುತ್ತಿದ್ದರು. ಆಗ ತಮ್ಮ ಗೌರವವನ್ನು ಉಳಿಸಿಕೊಂಡು ಸ್ವರಕ್ಷಣೆ ಮಾಡಿಕೊಳ್ಳುವುದಕ್ಕಾಗಿ ಅವರು ಹೋರಾಡುತ್ತಿದ್ದರು. ಅವರು ಬಹುಪಾಲು ಯೋಧರೆಂದೇ ತೋರುತ್ತದೆ.

ಮೇಲಿನ ಕಾರಣವಲ್ಲದೆ ಒಮ್ಮೊಮ್ಮೆ ರಾಜ್ಯವನ್ನಾಳುವ ವ್ಯಕ್ತಿಯು ಚಾಡಿಯ ಮಾತನ್ನು ಕೇಳಿ ಒಂದು ಊರಿನ ದನಗಳನ್ನು ಹಿಡಿಸುತ್ತಿದ್ದುದುಂಟು. ಚೋಳಮಹಾದೇವಿ ಎಂಬಾಕೆ 'ದುಷ್ಟಕಷ್ಟರ ಮಾತಂ ಕೇಳಿ' ಬೇವೂರನ್ನು ದಾಳಿಮಾಡಲು ಹೇಳಿದಾಗ ಅವಳ ಸೇನೆಯು ಬೇವೂರನ್ನು ಮುತ್ತಿ ಜನರನ್ನು ಸೆರೆಹಿಡಿದು ತುರುಗಳನ್ನು ಕೊಂಡೊಯ್ಯುತ್ತಿರಲು ಕೇತಮಲ್ಲ ಎನ್ನುವವನು ಅದನ್ನು ಪ್ರತಿಭಟಿಸಿ ತುರುಗಳನ್ನು ಹಿಂದಿರುಗಿಸಿ ಮಡಿಯುತ್ತಾನೆ. ವಾಸ್ತವಸ್ಥಿತಿ ತಿಳಿದ ಚೋಳಮಹಾದೇವಿ ''ಎಮ್ಮ ಮಕ್ಕಳ ನೋಯಿಸಿದೆವು'' ಎಂದು ಪಶ್ಚಾತ್ತಾಪಪಟ್ಟು ಜನರಿಗೆ ಅಭಯದಾನವನ್ನು ನೀಡಿ ಸತ್ತವೀರನ ಮಗನಿಗೆ ದತ್ತಿಯನ್ನು ಬಿಡುತ್ತಾಳೆ. ''ಇಂತಹ ಕೆಲವು ಕಡೆಗಳಲ್ಲಾದರೂ ಊರಿನ ಜನರು ತೆರಿಗೆಗಳನ್ನು ತಪ್ಪಿಸಿಕೊಂಡದ್ದೋ ಅಥವಾ ಇನ್ನಾವುದೋ ಅಕೃತ್ಯವೋ ಗೋಗ್ರಹಣಕ್ಕೆ ಕಾರಣವಿರಬಹುದು.[೨೩] ಕ್ರಿ.ಶ. ೧೨೦೫ರ ಮತ್ತೊಂದು ವೀರಗಲ್ಲಿನಲ್ಲಿ ಹೊಯ್ಸಳ ವೀರಬಲ್ಲಾಳನ ಅಧೀನದಲ್ಲಿದ್ದ ಲಕ್ಷ್ಮೀಧರ ದಂಡನಾಯಕನು ಹನ್ನೊಂದು ನಾಡನ್ನು ಆಳುತ್ತಿರುವಾಗ ಅವನು ನೇಮಿಸಿದ್ದ ಲಕ್ಕಯ್ಯ ಎಂಬುವನ ನಾಯಕತ್ವವನ್ನು ಆ ಹನ್ನೊಂದು ನಾಡಿನ ಜನರು ''ಒಲ್ಲದಿದ್ದೊಡೆ'', ಲಕ್ಕಯ್ಯನ ಆ ಹನ್ನೊಂದು ನಾಡಿನ ಅರವಳ್ಳಿಯ ತುರುಗಳನ್ನು ಸೆರೆಹಿಡಿದು ಆ ಊರಿನ ಬಲ್ಲಗವುಡನನ್ನು ಕೊಂದು, ''ದಂಡ ಮೂನ್ನೂಱು ಹೊನ್ನನ್ನು ಕೊಂಡು,'' ಸತ್ತ ಬಲ್ಲಗವುಡನ ಮನೆಯವರಿಗೆ ದತ್ತಿ ಬಿಟ್ಟ ವಿಷಯವಿದೆ.[೨೪] ಕ್ರಿ.ಶ. ೧೨೪೪ರ ಒಂದು ವೀರಗಲ್ಲಿನ ಪ್ರಕಾರ ಬೋಗೆಯದಂಣ್ನಾಯಕ ಮತ್ತು ಸೋವಿದಂಣ್ನಾಯಕರಿಗೆ ವಿವಾದವಾಗುತ್ತದೆ. ಆಗ ಸೋವಿದೇವನು ಚಿಕ್ಕಕೊಲೆ ಎಂಬ ಗ್ರಾಮವನ್ನು ಆಕ್ರಮಣ ಮಾಡಿ ತುರುಗಳನ್ನು ಹಿಡಿಯುತ್ತಾನೆ. ಈ ಸೋವಿದೇವನನ್ನು ಎದುರಿಸಿ ಮಡಿದ ವೀರನ ವೀರಗಲ್ಲೊಂದು ದೊರೆಯುತ್ತದೆ.[೨೫] ಈ ಗ್ರಾಮದವರು ತನ್ನ ವಿರೋಧಿ ಬೋಗೆಯದಂಣ್ನಾಯಕರ ಪರವಾಗಿದ್ದುದರಿಂದ ಸೋವಿದಂಣ್ನಾಯಕ ಅವರಿಗೆ ಈ ರೀತಿಯ ತೊಂದರೆಯನ್ನು ನೀಡಿದ್ದಿರಬಹುದೆಂದು ತೋರುತ್ತದೆ.

## ತುರುಗಳನ್ನು ಅಪಹರಿಸಲು ಹೋಗಿ ಮಡಿದವರ ವೀರಗಲ್ಲುಗಳು

ತುರುಗಾಳಗವು ಮುಖ್ಯವಾಗಿ ಸ್ವರಕ್ಷಣಾ ಯುದ್ಧ. ಆದ್ದರಿಂದ ಇಂತಹ ಹೋರಾಟದಲ್ಲಿ ತುರುಗಳನ್ನು ಹಿಂದಿರುಗಿಸುವಲ್ಲಿ ಹೋರಾಡುವ ವೀರರ ಬಗ್ಗೆ ಗೌರವಭಾವನೆ ಇತ್ತು. ಅಂದ ಮಾತ್ರಕ್ಕೆ ಗೋಗ್ರಹಣವನ್ನು ಮಾಡಿದವರ ಬಗ್ಗೆ ಗೌರವಭಾವನೆ ಇರಲಿಲ್ಲವೆಂದಲ್ಲ. ಯಾವ ಕಾರಣಕ್ಕಾಗಿ ತುರುಗಳನ್ನು ಅಪಹರಿಸಿದರು ಎಂಬುದು ಮುಖ್ಯವಾಗುತ್ತದೆ. ತುರುಗಳನ್ನು

---

೨೩. ಎಂ. ಚಿದಾನಂದಮೂರ್ತಿ; ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೨೮೩-೪

೨೪ M.A.R 1939, 35, 1205

೨೫ E.C. V., Bl. 307, 1244

ಕಳ್ಳತನದಿಂದ ಅಪಹರಿಸಿಕೊಂಡುಹೋದವನನ್ನು ಎಲ್ಲಿಯೂ ಹೊಗಳಿರುವುದು ಕಂಡುಬರುವುದಿಲ್ಲ. ಆದರೆ ಅರಸರ ಆಜ್ಞೆಯಂತೆ ಶತ್ರುಪಕ್ಷದ ರಾಜ್ಯದ ಮೇಲೆ ದಾಳಿ ಮಾಡಿ ಕಚ್ಚಿನಿಂದ ತುರುಗಳನ್ನು ಹಿಡಿದು, ಸವಾಲು ಎಸೆದು ಶತ್ರು ತಮ್ಮ ಮೇಲೆ ಬೀಳುವಂತೆ ಮಾಡಿ, ಆಗ ಅವರೊಡನೆ ಹೋರಾಡಿ ಸತ್ತ ವೀರರನ್ನು ಹೊಗಳಿರುವ ವೀರಗಲ್ಲುಗಳು ಅಪರೂಪವಾಗಿಯಾದರೂ ದೊರೆಯುತ್ತವೆ.

ತಮಿಳಿನ ಸಂಗಮ್ ಸಾಹಿತ್ಯ ಕೃತಿಗಳಿಂದ ತುರುಗಳನ್ನು ವೀರತನದಿಂದ ಅಪಹರಿಸುವ ವೀರರನ್ನು ಗೌರವಿಸುತ್ತಿದ್ದರೆನ್ನುವುದು ವ್ಯಕ್ತವಾಗುತ್ತದೆ. ಒಂದು ಗ್ರಾಮದ ವೀರ ಅಥವಾ ಒಂದು ರಾಜ್ಯದ ಅರಸನು ತನ್ನ ಶತ್ರುಪಕ್ಷದವರ ಮೇಲೆ ಬಿದ್ದು ಅವರ ತುರುಗಳನ್ನು ಅಪಹರಿಸುವಲ್ಲಿ ಜಯ ಪಡೆಯಬೇಕೆಂಬ ಉದ್ದೇಶದಿಂದ ತನ್ನ ಗ್ರಾಮದೇವತೆಯನ್ನು ಆರಾಧಿಸುತ್ತಿದ್ದ. ಅನಂತರ ಶುಭಶಕುನವೆಂದು ಪರಿಗಣಿಸಲಾಗಿದ್ದ ಕಾಡುಕೋಳಿ ಯಾವ ದಿಕ್ಕಿನಲ್ಲಿ ಕೂಗುತ್ತದೆ ಎಂದು ಕಾಯುತ್ತಿದ್ದ. ಕಾಡುಕೋಳಿ ಕೂಗಿದರೆ, ಅದು ಕೂಗುವ ದಿಕ್ಕಿನ ಗ್ರಾಮವನ್ನಾಳುವ ಅರಸನ ಅವನತಿ ಖಂಡಿತ ಎಂಬುದಕ್ಕೆ ಅದು ಶಕುನ. ಈ ಶಕುನವನ್ನು ನಂಬಿ ಕಾಡುಕೋಳಿ ಕೂಗಿದ ದಿಕ್ಕಿನಲ್ಲಿದ್ದ ಊರನ್ನು ಮುತ್ತುತ್ತಿದ್ದರು.[೨೬] ಇಂತಹ ಹೋರಾಟದಲ್ಲಿ ಜಯದ ಸಂಕೇತವಾಗಿ ಪ್ರತಿಯೊಂದು ಘಟ್ಟದಲ್ಲಿಯೂ ವಿಶಿಷ್ಟವಾದ ಹೂಮಾಲೆಯನ್ನು ಹೋರಾಟದ ನಾಯಕನು ಹಾಕಿಕೊಳ್ಳುತ್ತಿದ್ದನು. 'ವೆಚ್ಚ' ಎಂಬ ಹೂಮಾಲೆಯನ್ನು ಧರಿಸಿದರೆ ಗೋಗ್ರಹಣದ ವಿಜಯವನ್ನು ಅದು ಸಂಕೇತಿಸುತ್ತದೆ. 'ಕರನ್ಯೆ' ಎಂಬ ಹೂವಿನಮಾಲೆಯನ್ನು ಧರಿಸಿದರೆ ಗೋಗ್ರಹಣದಲ್ಲಿ ತಮ್ಮ ಊರಿನ ಹಸುಗಳನ್ನು ಹಿಂದಕ್ಕೆ ಪಡೆದ ವಿಜಯದ ಸಂಕೇತವಾಗಿಯೂ; 'ವನ್ಜಿ' ಎಂಬ ಹೂಮಾಲೆಯನ್ನು ಧರಿಸಿದಾಗ ಗೋಗ್ರಹಣ ಮಾಡುವಲ್ಲಿ ಸಮರ್ಥವಾದ ಆಕ್ರಮಣ ನಡೆಸಿರುವುದರ ಸಂಕೇತವಾಗಿಯೂ; 'ನೊಚ್ಚಿ' ಎಂಬ ಹೂಮಾಲೆಯನ್ನು ಧರಿಸಿದರೆ ಅದು ಶತ್ರುಗಳನ್ನು ಸಮರ್ಥವಾಗಿ ಎದುರಿಸಿದ, ಸಂರಕ್ಷಣೆ ಮಾಡಿಕೊಂಡ ಸಂಕೇತವಾಗಿಯೂ; 'ತುಂಬೈ' ಹೂಮಾಲೆಯನ್ನು ಹಾಕಿಕೊಂಡರೆ ಅಲ್ಲಿಗೆ ಶತ್ರುವಿನ ಸಂಪೂರ್ಣ ನಿರ್ನಾಮವಾದುದರ ಸಂಕೇತವಾಗಿಯೂ, ಜನ ಭಾವಿಸುತ್ತಿದ್ದರು. ಪ್ರತಿಯೊಬ್ಬ ವೀರನೂ ಸಹ 'ವೆಚ್ಚ' ಹೂಮಾಲೆಯನ್ನು ಧರಿಸಬೇಕೆಂದು ಅಪೇಕ್ಷೆಪಡುತ್ತಿದ್ದನೆಂಬ ಅಂಶ ಸಂಗಂ ಸಾಹಿತ್ಯ ಕೃತಿಗಳಲ್ಲಿ ವ್ಯಕ್ತವಾಗಿದೆ.[೨೭]

ತುರುಗಳನ್ನು ಶತ್ರುಗಳಿಂದ ಹಿಂದಿರುಗಿಸುವಲ್ಲಿ ಮಡಿದ ವೀರರ ಅಸಂಖ್ಯಾತ ವೀರಗಲ್ಲುಗಳು ದೊರೆಯುತ್ತವೆ. ಆದರೆ ತುರುಗಳನ್ನು ಹಿಡಿಯಲು ಹೋಗಿ ಮಡಿದ ವೀರರ ವೀರಗಲ್ಲುಗಳು ದೊರೆಯುವುದು ತೀರಾ ಅಪರೂಪವೆಂದೇ ಹೇಳಬೇಕು. ಕ್ರಿ.ಶ. ೧೧೫೭ರ ಒಂದು ವೀರಗಲ್ಲು ತುರುಗಳನ್ನು ಅಪಹರಿಸಲು ಹೋಗಿ ಮಡಿದ ವೀರನ ವಿಷಯವನ್ನು ತಿಳಿಸುತ್ತದೆ. ಕನ್ನಡಿಯಕಾವೆಯನಾಯಕನೆಂಬುವನು ತನ್ನ ಅರಸನ ''ಬೆಸದಿ ಧಾಳಿಮಾರ್ಗದಿ ಹರಿದು'' ಹಲವು ತುರುಗಳನ್ನು ಕೊಂಡು ತನ್ನ ಅರಸನ ಬಳಿಗೆ ತುರುಗಳನ್ನು ಕಳುಹಿಸಿ ದಾರಿಯಲ್ಲಿ ತನ್ನನ್ನು ಎದುರಿಸಿದ ವೀರರೊಂದಿಗೆ ಹೋರಾಡಿ ಸಾಯುತ್ತಾನೆ. ಆಗ ಅವನ ತಮ್ಮನಾದ ಕೇತನಾಯಕನು ತನ್ನ ಅಣ್ಣನ ಹೆಸರಿನಲ್ಲಿ ವೀರಗಲ್ಲನ್ನು ನಿಲ್ಲಿಸಿದನೆಂದು ಅಲ್ಲಿ

---

೨೬ V. R. Ramachandra Dikshitar (Tr.), *Silappadikarm*, Intd. p. 186

೨೭ J. M. Somasundaram, *A History of Tamil Literature*, p. 61

ತಿಳಿಯುತ್ತದೆ.[೨೮] ಕ್ರಿ.ಶ. ೧೨೦೫ರ ಮತ್ತೊಂದು ವೀರಗಲ್ಲಿನಿಂದ ಲಕ್ಕಯ್ಯ ಎಂಬುವನು ಅರವಳ್ಳಿಯನ್ನು ಮುತ್ತಿ ತುರುಗಳನ್ನು ಸೆರೆಹಿಡಿದ ವಿಷಯ ತಿಳಿಯುತ್ತದೆ.[೨೯] ಕ್ರಿ.ಶ. ೧೩೦೩ರ ಒಂದು ವೀರಗಲ್ಲಿನಿಂದ ತನ್ನ ಅರಸನ ಆಜ್ಞೆಯ ಮೇರೆಗೆ ಬೀರೆಯನಾಯ್ಕ ಎಂಬುವನು ಒಂದು ಗ್ರಾಮವನ್ನು ಮುತ್ತಿ ತುರುಗಳನ್ನು ಹಿಡಿದುಕೊಂಡು ಬರುತ್ತಿದ್ದ ಸಮಯದಲ್ಲಿ ಆ ಊರಿನವರು "ಅಡ್ಡಹಾಯ್ದುದಲ್ಲಿ" ಅವರೊಡನೆ ವೀರತ್ವದಿಂದ ಹೋರಾಡಿ ಮಡಿದನೆಂದು ತಿಳಿಯುತ್ತದೆ.[೩೦]

ತುರುಗಳನ್ನು ಅಪಹರಿಸಲು ಹೋಗಿ ಮಡಿದ ವೀರರ ಬಗ್ಗೆ ವೀರಗಲ್ಲುಗಳಲ್ಲಿ ಮಾಹಿತಿ ದೊರೆಯುವುದಿಲ್ಲವೆಂಬ ಕಾರಣಕ್ಕಾಗಿ, ತುರುಗಳನ್ನು ಅಪಹರಿಸಲು ಹೋದವರು ಸಾಯುತ್ತಿರಲಿಲ್ಲವೆಂದು ಭಾವಿಸಬಾರದು. ತುರುಗಾಳಗದಲ್ಲಿ (ತುರುಗಳನ್ನು ಹಿಂದಿರುಗಿಸಲು ಹೋದ) ಸತ್ತ ವೀರನನ್ನು ಹೊಗಳುವಲ್ಲಿ ಅವನು ತನ್ನ ಊರಿನ ತುರುಗಳನ್ನು ಅಪಹರಿಸಲು ಬಂದವರನ್ನು ಕೊಂದು ತಾನೂ ಮಡಿದನೆಂದು ವೀರಗಲ್ಲುಗಳ ಪಾಠದಿಂದಲೇ ತಿಳಿಯುತ್ತದೆ. ಇವುಗಳಲ್ಲಿ ಸ್ವಲ್ಪಮಟ್ಟಿಗೆ ಉತ್ಪ್ರೇಕ್ಷೆಯ ಅಂಶವಿದ್ದರೂ, ಶತ್ರುಪಕ್ಷದವರು ಮಡಿದರು ಎಂಬ ವಾಸ್ತವಾಂಶ ಇದ್ದೇ ಇರುತ್ತದೆ. ಈ ಹಿಂದೆ ಗಮನಿಸಿರುವಂತೆ ತುರುಗಾಳಗ ಎಂಬುದು ಅನಿಶ್ಚಿತವೂ ಆಕಸ್ಮಿಕವೂ ಆಗಿದ್ದುದರಿಂದ, ಈ ಯುದ್ಧವನ್ನು ಆರಂಭಿಸುವವರು ಸುಸಜ್ಜಿತರಾಗಿರುತ್ತಾರೆ. ಆದರೆ ಇವರನ್ನು ಎದುರಿಸುವವರು ಅಷ್ಟೇ ಸುಸಜ್ಜಿತರಾಗಿರುವುದಿಲ್ಲ. ಆದ ಕಾರಣ ಸಹಜವಾಗಿ, ಆಕ್ರಮಣವನ್ನು ಎದುರಿಸುವವರ ಕಡೆ ಸಾವುಗಳ ಸಂಖ್ಯೆ ವಿಪರೀತವಲ್ಲದಿದ್ದರೂ ಸಾಕಷ್ಟು ಸಂಖ್ಯೆಯಲ್ಲಿ ಆಗುತ್ತಿತ್ತು. ಆಕ್ರಮಣವನ್ನು ಮೊದಲಿಗೆ ಎದುರಿಸಿದ ವೀರನು ಮಾಡುವ ಹುಯ್ಯಲನ್ನು ಕೇಳಿ ಉಳಿದವರು ಸಹಾಯಕ್ಕಾಗಿ ಮುನ್ನುಗ್ಗುತ್ತಾರೆ; ಶತ್ರುಗಳನ್ನು ಕಂಡು ಕೆಲವೊಮ್ಮೆ ಓಡಿ ಹೋಗುತ್ತಿರಬಹುದು ಅಥವಾ ಹೋರಾಡಿ ಸತ್ತಿರಬಹುದು. ಅರಸರ ಪರವಾಗಿಯೇ ಬಂದು ಆಕ್ರಮಣ ಮಾಡಿ ಹೋರಾಟದಲ್ಲಿ ಮಡಿದಿರಬಹುದಾದ ವೀರರ ಬಗ್ಗೆ ಹೆಚ್ಚು ವೀರಗಲ್ಲುಗಳು ಏಕೆ ದೊರೆಯುವುದಿಲ್ಲವೋ ಹೇಳುವುದು ಕಷ್ಟ.

ತುರುಗಾಳಗದಲ್ಲಿ ಮಡಿದ ವೀರರ ಪ್ರಸ್ತಾಪ ವೀರಗಲ್ಲುಗಳಲ್ಲಿ ಮಾತ್ರವಲ್ಲದೆ ಒಂದು ದಾನಶಾಸನದಲ್ಲಿಯೂ ಬಂದಿರುವುದು ಹಲವಾರು ರೀತಿಯಿಂದ ಕುತೂಹಲಕರವಾದ ಸಂಗತಿಯಾಗಿದೆ. ಮಾಚರಸನೆಂಬುವನ ವಂಶದ ಹಿರಿಯರನ್ನು ವರ್ಣಿಸುತ್ತಾ, ಆ ಶಾಸನ ದೇಕರಸನೆಂಬುವನ ಬಗ್ಗೆ ಈ ರೀತಿ ವರ್ಣನೆಯನ್ನು ನೀಡುತ್ತದೆ :[೩೧]

ತುಱುಪರಿಗವೆಂಬ ಪುಯ್ಯಲ
ನೆಱೆಯಾಲಿಸಿ ಕೇಳ್ದು ದೇಕಭೂಪತಿ ಬೇಗಂ
ಪೊಱಮಟ್ಟು ಬನ್ದು ತಾಗಿದ
ನೆಱೆವಿನದೋರ್ವ್ವಳದಾಕಳರನಾಕ್ಷಣದಿಂದ

೨೮ E.C. VII, Sb. 525, 1152
೨೯ M.A.R. 1939, 35, 1205
೩೦ E.C. VIII, Sa. 101, 1303
೩೧ E.C. XII, Ck. 18

ಕಲಿಯುಗ ಪಾರ್ಥ ದೇಕಂ ಬಿಟ್ಟೊಯ್ದಿರೆ ಕೊಲದೊಗೆಯುಮಂಬಿನ ಕಲಿಯುಂ ಪಟಕಲಿ ಸಿದ್ಧರ್ವಯರಿ ಬಲಾನಿಳ ಪೊಲಗೆಟ್ಟುದು ಪೆಣದ ಬ್ರಣದ ರಣಗತ್ತಲೆಯೊಳು॥ ಅಂತು ಕಾದಿ ತುಱುವಂ ಮುಗುರ್ಚ್ಚಿ ದೇಕರಸನು ಹೊತ್ತಗೆಯಟ್ಟವಣೆ ಕೋಲ್ಗಳೆತ್ತಿದ ಸೆಜದನ್ತೆ ಸರದ ತನ್ದಲು ತನುವಂ ತೆತ್ತಿಲ್ಕಮರ ಕಾಂತಾಜತ್ತಕೆಯ ರುಯ್ಯೆ ದೇಕಂ ನಾಕಕ್ಕೋದ''— ಎಂಬುದಾಗಿ ಈ ಶಾಸನವನ್ನು ಹಾಕಿಸಿದ ಮಾಚರಸನಿಗೆ ತನ್ನ ವಂಶದ ಹಿರಿಯರು ಇಂತಹ ಒಂದು ಉದಾತ್ತಧ್ಯೇಯಕ್ಕಾಗಿ ಮಡಿದುದರ ಬಗ್ಗೆ ಹೆಮ್ಮೆಯಿರಬೇಕು. ಆದಕಾರಣದಿಂದಲೇ ತನ್ನ (ದಾನಶಾಸನದಲ್ಲಿ) ದೇಕರಸನ ಪ್ರಸ್ತಾಪವನ್ನು ತಂದಿದ್ದಾನೆ.

ಒಟ್ಟಿನ ಮೇಲೆ ಹೇಳುವುದಾದರೆ, ತುರುಗಳು ಒಂದು ಸಮಾಜದ 'ಜೀವಧನ'ವೂ ಧರ್ಮದ ಸಂಕೇತವೂ ಆಗಿದ್ದುದರಿಂದ ಆದನ್ನು ಅಪಹರಿಸಿದರೆ ಸುಮ್ಮನಿರುವುದು ಹೇಡಿತನವೆಂದು ಪರಿಗಣಿಸಲಾಗಿತ್ತು. ತುರುಗಳನ್ನು ಅಪಹರಿಸಿದಾಗ ತಮ್ಮ ಪ್ರಾಣವನ್ನು ಲೆಕ್ಕಿಸದೆ ಹೋರಾಡಿ ಮಡಿದ ವೀರರ ಬಗ್ಗೆ, ತುರುಗಳನ್ನು ಅಪಹರಿಸಲು ಹೋಗಿ ಗೆದ್ದ ವೀರರಿಗಿಂತಲೂ ಹೆಚ್ಚಿನದಾದ ಗೌರವಸ್ಥಾನವಿತ್ತು.

**ತುರುಗಾಳಗದ ಸ್ವರೂಪ**

ಕರ್ನಾಟಕದಲ್ಲಿ ನಡೆಯುತ್ತಿದ್ದ ತುರುಗಾಳಗಗಳ ಪರಿಚಯಮಾಡಿಕೊಳ್ಳುವಾಗ ಈ ಹಿಂದೆ ಗಮನಿಸಿರುವ ಹಾಗೆ ತುರುಗಾಳಗಗಳನ್ನು ಆರಂಭಿಸುತ್ತಿದ್ದವನ ಉದ್ದೇಶವನ್ನು ಗಮನದಲ್ಲಿಟ್ಟುಕೊಳ್ಳುವುದು ಉಚಿತವಾದುದು. ಏಕೆಂದರೆ, ಈ ರೀತಿಯ ತುರುಗಾಳಗಗಳನ್ನು ಆರಂಭಿಸುವವರು ತಮ್ಮ ಉದ್ದೇಶಕ್ಕನುಗುಣವಾಗಿ ಆಕ್ರಮಣ ವಿಧಾನಗಳನ್ನು ಅನುಸರಿಸುತ್ತಾರೆ ಎಂಬುದನ್ನು ಗಮನಿಸಬೇಕು. ಕಳ್ಳತನವನ್ನು ಮುಖ್ಯ ಉದ್ದೇಶವಾಗಿಟ್ಟುಕೊಂಡವರ ಆಕ್ರಮಣ ವಿಧಾನ ಬೇರೆ. ರಾಜಕೀಯ ದೃಷ್ಟಿಯಿಂದ ತುರುಗಾಳಗಗಳನ್ನು ಆರಂಭಿಸುವವರ ಆಕ್ರಮಣ ವಿಧಾನವೇ ಬೇರೆ. ಕಳ್ಳತನದಿಂದ ತುರುಗಳನ್ನು ಸೆರೆಹಿಡಿಯುವವರು ಬಹಳ ಎಚ್ಚರಿಕೆಯಿಂದ ತುರುಗಳ ಯಜಮಾನರಿಗೆ ಅಥವಾ ಅವನ್ನು ಕಾಯುವ ಗೋಪಾಲಕರಿಗೆ ಸುಳಿವು ಕೊಡದ ರೀತಿಯಲ್ಲಿ ಅಪಹರಿಸುತ್ತಾರೆ. ಈ ವಿಷಯ ತಿಳಿದು ತಮ್ಮ ಮೇಲೆ ಎರಗಿ ಬಂದ ಒಂದಿಬ್ಬರನ್ನು ಅವರು ಕೊಲ್ಲುವುದೂ ಉಂಟು. ಹಾಗೂ ಬಹಳ ಜನ ತಮ್ಮ ಮೇಲೆರಗಿ ಬಂದಾಗ ಜೀವದಾಸೆಯಿಂದ ಓಡಿಹೋಗುತ್ತಿದ್ದರೆಂಬುದು ಸ್ಪಷ್ಟ. ಆದರೆ ರಾಜಕೀಯ ಉದ್ದೇಶದಿಂದ ತುರುಗಳನ್ನು ಸೆರೆಹಿಡಿಯುವವರು ತಮ್ಮ ವೈರಿಗೆ ತಿಳಿಯುವಂತೆಯೇ ಆ ಕಾರ್ಯವನ್ನು ಮಾಡುತ್ತಾರೆ. ಪೂರ್ವಸಿದ್ಧತೆಯಿಲ್ಲದ ತಮ್ಮ ವೈರಿಯನ್ನು, ಸಂಪೂರ್ಣವಾಗಿ ಪೂರ್ವ ಸಿದ್ಧತೆಯಿಂದ ಬಂದಿರುವ ತಾವು ಸದೆಬಡಿಯಬಹುದೆಂಬ ರಾಜಕೀಯ ಮುತ್ಸದ್ದಿತನ ಅವರಲ್ಲಿರುತ್ತದೆ. ಈ ಕಾರಣಕ್ಕಾಗಿಯೇ ಅವರು ತುರುಗಳನ್ನು ಹಿಡಿದು ಹೋಗದೆ ಹೋರಾಟವನ್ನು ಅಪೇಕ್ಷಿಸಿರುತ್ತಾರೆ. ಆದ್ದರಿಂದ ಆಕ್ರಮಣಕಾರರು ತಮ್ಮ ಆಕ್ರಮಣದ ಉದ್ದೇಶವನ್ನು ಗಮನದಲ್ಲಿಟ್ಟುಕೊಂಡು ಒಂದು ಹೋರಾಟದ ರೂಪವನ್ನು ಮೊದಲೇ ತಯಾರುಮಾಡಿಕೊಂಡು ಬರುತ್ತಾರೆ. ಈ ದೃಷ್ಟಿಯಿಂದ ಮೊದಲಿಗೆ ರಾಜಕೀಯ ಉದ್ದೇಶಗಳಿಂದ ಆಕ್ರಮಣ ಮಾಡಿದವರ ವಿಧಾನಗಳನ್ನೂ ತಂತ್ರಗಳನ್ನೂ ಪರಿಶೀಲಿಸಿ, ಆನಂತರ ಕಳ್ಳತನದ ಉದ್ದೇಶದಿಂದ ಆಕ್ರಮಣ ಮಾಡುವವರ ವಿಧಾನಗಳನ್ನು ಪರಿಚಯ ಮಾಡಿಕೊಂಡು ಇವರ ಆಕ್ರಮಣ ವಿಧಾನಗಳು, ಸಂಚುಗಳು ಹೇಗೆ ಭಿನ್ನವಾಗಿರುತ್ತವೆ ಎಂಬುದನ್ನು ಗಮನಿಸೋಣ.

ತನ್ನ ವೈರಿಯು ಯುದ್ಧಕ್ಕೆ ಸಿದ್ಧನಿಲ್ಲವೆಂಬ ಭರವಸೆ ಆಕ್ರಮಣ ಮಾಡುವ ಅರಸನಿಗೆ ತಿಳಿದಿದ್ದರೆ, ಸುಲಭವಾಗಿ ತನ್ನ ಶತ್ರುವನ್ನು ಸೋಲಿಸಬಹುದು. ಈ ಕಾರಣಕ್ಕಾಗಿ ಅರಸರು ಇದ್ದಕ್ಕಿದ್ದಂತೆ ಶತ್ರುವಿನ ಮೇಲೆ ಬಿದ್ದು ಯುದ್ಧ ಮಾಡುತ್ತಿದ್ದರು. ತಮ್ಮ ಶತ್ರುವು ತಮ್ಮ ಮೇಲೆ ಬೀಳಲಿ ಎಂಬ ಉದ್ದೇಶದಿಂದಲೇ ಗೋಗ್ರಹಣವನ್ನು ಯುದ್ಧಾರಂಭದ ಸೂಚನೆಯೆನ್ನುವಂತೆ ಕರ್ನಾಟಕದ ಅರಸರು ವಿಶೇಷವಾಗಿ ಉಪಯೋಗಿಸುತ್ತಿದ್ದರು. ಕ್ರಿ.ಶ. ೧೧೮೭ರ ಒಂದು ವೀರಗಲ್ಲಿನಿಂದ ''ಚಟ್ಟನೃಪಾಳಕಂ ಬೆರಸು ಪಾಂಡ್ಯನು ವೋವದೆ [ಬೆಳ]ವತ್ತಿಯಂ ತೊಟ್ಟನೆಪಾಯ್ದು ಜೀವಧನಮೆಲ್ಲಮನಾಗಳೆ ಕೊಂಡು ಪೋಗೆ'' ಎಂಬುದಾಗಿ ತಿಳಿದು ಬರುತ್ತದೆ.[೩೨] ಅಂದರೆ ಇಂತಹ ಆಕ್ರಮಣವು ಆಕ್ರಮಣಕಾರನಿಗೆ ಪೂರ್ವನಿಶ್ಚಿತವಾದುದು. ಎದುರಾಳಿಗೆ 'ತೊಟ್ಟನೆ' ಎನ್ನಿಸುವಂತಹುದು. ಈ ರೀತಿಯ ಆಕ್ರಮಣ ವಿಧಾನಗಳನ್ನು 'ಧಾಳಿಮಾರ್ಗ' ಎಂಬುದಾಗಿ ಶಾಸನಗಳ ಪಾಠಗಳಲ್ಲಿ ಕರೆಯಲಾಗಿದೆ.[೩೩] ಹೀಗೆ ಧಾಳಿಮಾರ್ಗದಿಂದ ಬರುತ್ತಿದ್ದವರು ತಮ್ಮ ಪರಿವಾರ ಸಹಿತವಾಗಿ ಬರುತ್ತಿದ್ದರು.[೩೪] ಕೆಲವೊಮ್ಮೆ ಕೆಲವಾರು ನಾಡುಗಳೇ ಒಟ್ಟುಗೂಡಿ ಧಾಳಿ ಮಾಡುತ್ತಿದ್ದುದುಂಟು.[೩೫]

ಹೀಗೆ ಧಾಳಿಮಾರ್ಗದಲ್ಲಿ ಬಂದರೂ ಅವರು ತಮಗೆ ಅನುಕೂಲವಾದ ಸನ್ನಿವೇಶಗಳನ್ನು ಅನುಸರಿಸಿ ತುರುಗಳನ್ನು ಹಿಡಿಯುತ್ತಿದ್ದರೆಂದು ತೋರುತ್ತದೆ. ಶತ್ರುವಿನ ಗೋವುಗಳು ತಮಗೆ ಸುಲಭವಾಗಿ ದೊರೆಯುವ ಹಾಗಿದ್ದರೆ ಅವುಗಳನ್ನು ಹಿಡಿದು, ಆ ಮೂಲಕ ಶತ್ರುವಿಗೆ ಯುದ್ಧಕ್ಕೆ ಸವಾಲುಹಾಕಿ ಅವನನ್ನು ಎದುರಿಸಲು, ಸಿದ್ಧರಿರುತ್ತಿದ್ದರು.[೩೬] ಈ ಸಂದರ್ಭದಲ್ಲಿ ಪಂಪಭಾರತದಲ್ಲಿನ ಗೋಗ್ರಹಣಪ್ರಸಂಗದ ವರ್ಣನೆ ನೆರವಾಗುತ್ತದೆ. ದುರ್ಯೋಧನ ವಿರಾಟನ ಗೋಶಾಲೆಯನ್ನು ಮುತ್ತಿದ ಸಂದರ್ಭವನ್ನು ''ಚಾರು ವೀರಭಟ ಕೋಟಿಗೆ ರಾಗ ರಸಂಪೊದಳ್ದು ತುಳ್ವುತ್ತಿರೆ ಬಂದು ಮುತ್ತಿ ಮೊಗೆದಂ ವಿಭು ಗೋಕುಲಮಂ ವಿರಾಟನಾ''[೩೭] ಎಂದು ಪಂಪ ಕವಿ ಹೇಳುತ್ತಾನೆ.

ಕೆಲವೊಮ್ಮೆ ತಾವು ಇಂಥ ಊರಿನ ತುರುಗಳನ್ನು ಅಪಹರಿಸಬೇಕೆಂದು ನಿಶ್ಚಯಿಸಿ, ಆ ಊರನ್ನು ಮುತ್ತಿ, ಅಲ್ಲಿನ ದನಗಳನ್ನು ಹೊಡೆದುಕೊಂಡು ಹೋಗುತ್ತಿದ್ದರು.

---

೩೨ E.C. VII. Hl. 35, 1187

೩೩ (ಅ) E.C. VIII. Sb. 525, 1522. ''ಕನ್ನಡಿ ಕಾವೆಯನಾಯಕ ಧಾಳಿಮಾರ್ಗದಿ ಹರಿದು.''
(ಆ) E.C. V. Cn. 205, 1200. ''ಚೋಳಮಹಾದೇವಿ ದುಷ್ಟಕಷ್ಟರ ಮಾತಂ ಕೇಳಿ ಧಾಳಿಯಂ ಪೇಳಿದಡಾ ಧಾಳಿ ಬೇವೂರಂ ಮುತ್ತಿ.''
(ಇ) E.C. VII Hl. 28, 1197 ''ವುಂಮಾದೇವಿ ಕವುಡಿವೊಳೆಯಲ್ಲಿ ಬೀಡುಬಿಟ್ಟು ಧಾಳಿಮಾರ್ಗದಿಂ.''

೩೪ (ಅ) E.C. V. Bl. 189, ''ಬಲಕುಪ್ಪೆಡೆ ಮಾದಿವೆಗ್ಗಡೆ ತಂನ ಪರಿವಾರ ಸಹಿತಂ ಬಂದು ಪಡುಬಳಲ ಮುತ್ತಿ ಕಾದಿ ಕೆಡಿಸಿ.''
(ಆ) E. C. VIII. Sa. 37, 1265 ''ತಂನ ಪರಿವಾರಂ ಬೆರಸು'.'

೩೫ E.C. VIII. Sb. 47, 1187. ''ಕೊಲೆ ಕೊಡಕಣಿ ಮುಖ್ಯವಾಗಿ ಸಮಸ್ತ ಜೇಡ್ವಳಿಗೆನಾಡು ಓಡಿ ಬಂದು ಸೊರಬವಂ ಹುಗಲು.''

೩೬ (ಅ) E.C. VII. Hl. 73, 1215
(ಆ) ಅದೇ, ೩೫, ೧೧೮೭

೩೭ ಪಂಪ : ವಿಕ್ರಮಾರ್ಜುನ ವಿಜಯಂ. ೮-೯೨

'ಬಯಲ್ನಾಡಿ'ನವನು ಬಂದು ಕೊತ್ತಮಂಗಲವನ್ನು 'ಇಱಿದು' ತುರುಗಳನ್ನು ಅಪಹರಿಸಿಕೊಂಡು ಹೋದ ವಿಷಯ ವೀರಗಲ್ಲೊಂದರಿಂದ ತಿಳಿದುಬರುತ್ತದೆ.[೩೮] 'ಎಡೆತೊಱೆಯ ಪೆರ್ಮ್ಮಾಡಿ' ಬಂದು ಬನ್ನಾಳಿ ಎಂಬ ಗ್ರಾಮವನ್ನು 'ಇಱಿದು' ತುರುಗಳನ್ನು ಅಪಹರಿಸುತ್ತಾನೆ ಎಂದು ಕ್ರಿ.ಶ. ೧೧೧೬೪ರ ಒಂದು ವೀರಗಲ್ಲಿನಿಂದ ತಿಳಿದು ಬರುತ್ತದೆ.[೩೯] ಈ ರೀತಿಯ ಮುತ್ತಿಗೆಯನ್ನು ಕ್ರಮಬದ್ಧವಾದ ರೀತಿಯಲ್ಲಿ ಹಾಕುತ್ತಿದ್ದರೆಂದು ಕ್ರಿ.ಶ. ೧೧೭೭ರ ಒಂದು ವೀರಗಲ್ಲಿನಿಂದ ತಿಳಿದುಬರುತ್ತದೆ. ''ಧಾಳಿಯಂ ತಂದು ಗ್ರಾಮವಂ ಮೂವಳಸಾಗಿ ಮುತ್ತಿಯಿಱಿದು ಸೂಱೆಯಂಕೊಂಡುಡೆಯುರ್ಚ್ಚಿ ಸೆಱೆಯಂ ಪಿಡಿಯೆ'' ಎಂಬುದಾಗಿ ಧಾಳಿಕಾರರು ಇಡೀ ನಗರವನ್ನು, ಗ್ರಾಮವನ್ನು ಮುತ್ತಿ ತುರುಗಳನ್ನು ಸೆರೆಹಿಡಿಯುತ್ತಿದ್ದ ರೀತಿಯನ್ನು ಈ ವೀರಗಲ್ಲಿನ ಪಾಠ ತಿಳಿಸುತ್ತದೆ.[೪೦]

''ಕಳ್ಳರು ತುರುಗಳನ್ನು ಕದಿಯಲು ಬಂದಾಗ ಆ ಊರಿನ ಸ್ತ್ರೀಯರನ್ನು ಅವಮಾನ ಗೊಳಿಸುತ್ತಿದ್ದರು. ಕೆಲವು ಸಾರಿ ತುರುಗಳ ಜೊತೆಯಲ್ಲೇ ಅವರನ್ನು ಅಪಹರಿಸುತ್ತಿದ್ದರು. ಆಗ ಸ್ತ್ರೀಯರು ತಮ್ಮ ರಕ್ಷಣೆಗಾಗಿ ಪುಯ್ಯಲಿಡುತ್ತಿದ್ದರು ಅಥವಾ ಹುಯ್ಯಲಿಡುತ್ತಿದ್ದರು (ಆದ್ದರಿಂದಲೇ ಅದನ್ನು 'ಪೆಣ್ಬುಯ್ಯಲ್' ಎಂದು ಕರೆದಿರುವುದು) ಸ್ತ್ರೀಯರ ವಸ್ತ್ರಗಳನ್ನು ಅಪಹರಿಸುವುದರ ಮೂಲಕ (ಪೆಣ್ದುರುಡೆಯುರ್ಚ್ಚಿ) ಅವರ ಮಾನಭಂಗ ಮಾಡುತ್ತಿದ್ದರು.''[೪೧]

ತುರುಗಳನ್ನು ಅಪಹರಿಸಲು ಬರುವ ಕಳ್ಳರ ಉದ್ದೇಶ ಮುಖ್ಯವಾಗಿ ಕಳ್ಳತನವಷ್ಟೇ. ಆದ್ದರಿಂದ ಈ ರೀತಿಯ ಅಕೃತ್ಯಗಳಲ್ಲಿ ತೊಡಗಿದಾಗ ತಮ್ಮ ಮುಖ್ಯ ಉದ್ದೇಶಕ್ಕೆ ತೊಂದರೆಯಾಗುತ್ತದೆಂಬ ಸಹಜವಾದ ಹೆದರಿಕೆಯಿಂದ ಅವರು ಈ ರೀತಿಯ ಅಕೃತ್ಯಗಳಿಗೆ ಬಹುಪಾಲು ಕೈ ಹಾಕುತ್ತಿರಲಿಲ್ಲ.[೪೨] ಈ ರೀತಿಯ ಅಕೃತ್ಯಗಳು ನಡೆಯುತ್ತಿದ್ದುದು ರಾಜಕೀಯ ಉದ್ದೇಶಗಳಿಂದ ನಡೆಯುತ್ತಿದ್ದ ತುರುಗಾಳಗಗಳಲ್ಲಿಯೇ ಎಂದು ತೋರುತ್ತದೆ. ಇಂತಹ ಅಕೃತ್ಯಗಳನ್ನು ನಡೆಸುವುದಕ್ಕೆ ಇತರರ ಬೆಂಬಲವೂ ಇರುತ್ತದೆ. ಮತ್ತು ತನ್ನ ಶತ್ರುಗಳಿಗೆ ಒದಗಿದ ಇಂತಹ ದುಃಸ್ಥಿತಿಯನ್ನು ಕಂಡು ಸಂತೋಷಪಡುವ ಪ್ರವೃತ್ತಿ ಆಕ್ರಮಣಕಾರ ನಾಯಕರಲ್ಲಿ ಇರುತ್ತದೆ ಎಂಬುದನ್ನು ಗಮನಿಸಬೇಕು.

ಮಾರಗಯ್ಯನೆಂಬುವನು ಶತ್ರುಗಳು ಬಂದು ಹೆಂಗಸರ ವಸ್ತ್ರಗಳಿಗೆ ಕೈಹಾಕಿ, ದನಗಳನ್ನು ಕದಿಯುವಾಗ ಹೋರಾಡಿ ಸಾಯುತ್ತಾನೆ.[೪೩] ಎಡವಯ್ಯ ಎಂಬುವನು ಶತ್ರುಗಳು ಬಂದು ಮುತ್ತಿ 'ಪೆಣ್ದಿರುಡೆ-ಯುಟ್ಬುವಲ್ಲಿ' ಕಾದಿ ಸಾಯುತ್ತಾನೆ.[೪೪] ಆಗ ಅವನ ಮಗ ಜಕ್ಕ ಎಂಬುವನು ''ಪೆಣ್ದಿರುಡೆಯುರ್ಚುವ ಪುಯ್ಯಲಂ ತಱುಯ್ಯಲು ಕೇಳ್ದು ತಾಗಿ ಕಾದಿ'' ಮಡಿಯುತ್ತಾನೆ. 'ಎಡೆತೊರೆಯ ಪೆರ್ಮ್ಮಾಡಿ' ಎಂಬುವನು ಬನ್ನಾಳಿಯನ್ನಿರಿದು ತುರುಗಳನ್ನು ಅಪಹರಿಸಿ 'ಪೆಣ್ದಿರುಡೆಯುಚ್ಚುರ್'ವಲ್ಲಿ ಮಾಳಯ್ಯ ಎಂಬುವನು ಹೋರಾಢಿ ಸಾಯುತ್ತಾನೆ.[೪೫]

---

೩೮ E.C. V. Hg. 103, 910

೩೯ E.C. VII. HI. 2, 3, 1064

೪೦ E.C. VIII. Sb. 251, 1177

೪೧ ಎಂ. ಚಿದಾನಂದಮೂರ್ತಿ: ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ. ಪು. ೨೮೪

೪೨ ಹರಿಹರ : ಬಸವರಾಜದೇವರ ರಗಳೆ ೯ನೇ ಸ್ಥಲ

೪೩ E.C. X. Mb. 950

೪೪ E.C. XII. Si. 43, C. 1000

೪೫ E.C. VII. Hl. 4, 1064

ಕುಪ್ಪಟೂರಿನ ಸ್ತ್ರೀಯರನ್ನು ಮತ್ತು ಗೋವುಗಳನ್ನು 'ಅನ್ತಗವುಡ' ಎಂಬುವನು ಸೆರೆ ಹಿಡಿಯುತ್ತಾನೆ. ಆಗ ಆ ಊರಿನ ಅಶೇಷ ಮಹಾಜನರಾದ ಕುಪ್ಪಟೂರಿನ ಸಾಸಿರ್ವರ ಆಜ್ಞೆಯಂತೆ ವೀರನೊಬ್ಬನು ಹೋರಾಡಿ ''ಸೆಱೆಯಂ ಜೀವಧನಮುಮಂ ಮಗುಳ್ಚಿ ಸುರಲೋಕಪ್ರಾಪ್ತ''ನಾದ ವಿಷಯ ವೀರಗಲ್ಲೊಂದರಿಂದ ತಿಳಿದುಬರುತ್ತದೆ.[೪೬] ಕ್ರಿ.ಶ. ೧೧೮೦ರ ಒಂದು ವೀರಗಲ್ಲಿನಿಂದ ಪಾಂಡ್ಯದೇವರಸ ಎಂಬುವನು ಗ್ರಾಮವೊಂದನ್ನು ಮುತ್ತಿ ಆ ಊರಿನ 'ಉದಉಬ್ಬೆ' ಎಂಬ ಸೂಳೆಯನ್ನು ಅಪಹರಿಸಿಕೊಂಡು ತುರುಗಳನ್ನೂ ಅಪಹರಿಸುತ್ತಾನೆಂಬ ವಿಷಯ ತಿಳಿದುಬರುತ್ತದೆ.[೪೭]

ಆಕ್ರಮಣಕಾರರು ಸೆರೆಹಿಡಿದ ತುರುಗಳನ್ನು ರಣರಂಗದಿಂದ ದೂರವಿಡುತ್ತಿದ್ದರು. ಅಥವಾ ಅವುಗಳನ್ನು ತಮ್ಮ ಊರುಗಳಿಗೆ ಕಳುಹಿಸಿಬಿಡುತ್ತಿದ್ದರೆಂದು ತೋರುತ್ತದೆ. ಎಕ್ಕಲದೇವನ ಆಜ್ಞೆಯಂತೆ ಒಂದು ಊರನ್ನು ಆಕ್ರಮಣ ಮಾಡಿ ತುರುಗಳನ್ನು ಸೆರೆಹಿಡಿದು ಅವುಗಳನ್ನು ''ಆಳ್ದಂಗೆ ತುಱುವ ಕಳುಹಿ''ದ ವಿಷಯ ವೀರಗಲ್ಲೊಂದರಲ್ಲಿದೆ.[೪೮] ದನಗಳು ಸಂಪತ್ತು ಎಂಬ ಭಾವನೆಗಿಂತ ಮಿಗಿಲಾಗಿ, ಅವುಗಳ ಬಗ್ಗೆ ಜನರಿಗೆ ಇದ್ದ ಧಾರ್ಮಿಕವಾದ ಭಾವನೆಯಿಂದ ಅವನ್ನು ಕದ್ದವರು ಅವಕ್ಕೆ ಯಾವುದೇ ರೀತಿಯ ತೊಂದರೆಯನ್ನಾಗಲೀ ಅಥವಾ ಅವುಗಳನ್ನು ಕೊಲ್ಲುವ ಪ್ರಯತ್ನವನ್ನಾಗಲೀ ಮಾಡುತ್ತಿರಲಿಲ್ಲ. ಕುದುರೆಗಳ ಬಗ್ಗೆ ಇಂಥ ಧಾರ್ಮಿಕ ಭಾವನೆ ಅಡ್ಡ ಬರುವುದಿಲ್ಲ. ಏಕೆಂದರೆ, ಕುದುರೆಗಳನ್ನು ಸೆರೆಹಿಡಿಯುವುದರ ಅಥವಾ ಹತ್ಯೆ ಮಾಡುವುದರ ಮೂಲಕ ಶತ್ರುವನ್ನು ಆದಷ್ಟು ದುರ್ಬಲನನ್ನಾಗಿ ಮಾಡಬಹುದು ಎಂಬ ಯುದ್ಧತಂತ್ರವನ್ನೇ ಅನುಸರಿಸಿ ಜನ ಅವುಗಳನ್ನು ಸೆರೆಹಿಡಿಯುತ್ತಿದ್ದರು (ಗೋವುಗಳ ಬಗ್ಗೆ ಇದ್ದ ಒಂದು ಧಾರ್ಮಿಕ ಭಾವನೆಯು ಕುದುರೆಗಳ ಬಗ್ಗೆ ಇರಲಿಲ್ಲ ಎಂಬ ಅಂಶವು ಗಮನಾರ್ಹ).

ಇವು ಪೂರ್ವನಿಶ್ಚಿತವೂ ಕ್ರಮಬದ್ಧವೂ ಆದ ಆಕ್ರಮಣಗಳಾದುದರಿಂದ ಇಂತಹ ಕಾಳಗಗಳ ನಾಯಕತ್ವವನ್ನು ಕೆಲವೊಮ್ಮೆ ಅರಸರೋ ಅಥವಾ ಅವನ ಪರವಾದ ಹಿರಿಯ ಅಧಿಕಾರಿಗಳೋ ವಹಿಸುತ್ತಿದ್ದರೆಂಬುದಾಗಿ ವೀರಗಲ್ಲುಗಳ ಪಾಠದಿಂದ ತಿಳಿದುಬರುತ್ತದೆ. ಕ್ರಿ.ಶ. ೧೧೯೮ರ ಒಂದು ವೀರಗಲ್ಲಿನ ಪಾಠದಿಂದ ಮಹಾ ಮಂಡಳೇಶ್ವರನಾದ 'ಚಟ್ಟರಸದೇವ'ನೆಂಬುವನು ಮಲ್ಲೆಯನಾಯಕನಹಳ್ಳಿಯನ್ನು ಮುತ್ತಿ ಕುರುಗಳನ್ನು ಹೊಡೆದುಕೊಂಡು ಹೋಗಲು ಪ್ರಯತ್ನಿಸಿದ ವಿಷಯ ತಿಳಿಯುತ್ತದೆ.[೪೯] ಕೆಲವೊಮ್ಮೆ ಅರಸನ ಆಜ್ಞೆಯಂತೆ ಅಧಿಕಾರಿಗಳು ತುರುಗಾಳಗಗಳನ್ನು ಆರಂಭಿಸುತ್ತಿದ್ದರು. ಎಕ್ಕಲದೇವರಸ ನೆಂಬುವನ ''ಬೆಸದಿ ಕನ್ನಡಿಯ ಕಾವೆಯನಾಯಕ'' ಎಂಬುವನು ತುರುಗಾಳಗವನ್ನು ಆರಂಭಿಸುತ್ತಾನೆ.[೫೦] ಚೋಳಮಹಾದೇವಿಯರು ದುಷ್ಟಕಷ್ಟರ ಮಾತುಗಳನ್ನು ಕೇಳಿ ಬೇವೂರನ್ನು

---

೪೬ E.C. VIII. Sb. 251, 1177

೪೭ E.C. VII. Sk. 300, 1180

೪೮ E.C. VIII. Sb. 525, 1152

೪೯ E.C. VIII. Ng. 12.

೫೦ E.C. VIII. Sb. 525, 1152

ಮುತ್ತಲು 'ಧಾಳಿಯನ್ನು ಪೇಳಿದ' ವಿಷಯ ವೀರಗಲ್ಲೊಂದರಿಂದ ತಿಳಿದು ಬರುತ್ತದೆ.[೫೧] ''ಶ್ರೀಮನ್ಮಹಾಮಂಡಳೇಶ್ವರ ಶ್ರೀವಲ್ಲದೇವನನಾಯಕರು'' ಬಂದು ಒಂದು ಗ್ರಾಮವನ್ನು ಮುತ್ತಿದ ವಿಷಯ ವೀರಗಲ್ಲೊಂದರಿಂದ ತಿಳಿಯುತ್ತದೆ.[೫೨]

## ಕಳ್ಳತನವನ್ನು ಮುಖ್ಯ ಉದ್ದೇಶವನ್ನಾಗಿಟ್ಟುಕೊಂಡಿದ್ದ 'ತುರುಗೋಳ್'

ಇಂತಹ 'ತುರುಗೋಳ್'ಅನ್ನು 'ಕಾಳಗ', 'ಯುದ್ಧ' ಎಂಬುದಾಗಿ ಭಾವಿಸುವುದು ಎಷ್ಟರ ಮಟ್ಟಿಗೆ ಉಚಿತ ಎಂಬ ಸಂಶಯ ಬರುವುದರಿಂದ ಇವುಗಳನ್ನು 'ಹುಯ್ಯಲು' ಎಂದಷ್ಟೇ ಕರೆಯಬಹುದೇನೋ. ಇಲ್ಲಿ ಕಳ್ಳರಿಗೂ ಮತ್ತು ಗ್ರಾಮಸ್ಥರಿಗೂ ಜಗಳಗಳಾಗುತ್ತಿತ್ತು. ಸಾವುಗಳು ಸಂಭವಿಸುತ್ತಿದ್ದುದು ನಿಜವಾದರೂ, ಅವುಗಳು ಎಷ್ಟರಮಟ್ಟಿಗೆ 'ಕಾಳಗ'ಗಳಾಗಿರುತ್ತಿತ್ತು ಎಂಬುದು ಪ್ರಶ್ನಾರ್ಹ. ಏಕೆಂದರೆ ತಮ್ಮನ್ನು ಎದುರಿಸಬಂದ ಗ್ರಾಮಸ್ಥರ ಸಂಖ್ಯೆ ತಮಗಿಂತ ಕಡಿಮೆಯಿದ್ದಾಗ ಮಾತ್ರ ಕಳ್ಳರು ತಿರುಗಿಬೀಳುತ್ತಿದ್ದರು. ಇಲ್ಲದಿದ್ದಲ್ಲಿ ತಲೆಮರೆಸಿಕೊಂಡು ಓಡುವ ಪ್ರಯತ್ನವನ್ನು ಮಾಡುತ್ತಿದ್ದರು. ಈ ದೃಷ್ಟಿಯಿಂದ ಬಸವರಾಜದೇವರ ರಗಳೆಯಲ್ಲಿ ಬರುವ ದನಗಳನ್ನು ಕದಿಯುವ ಪ್ರಸಂಗ ಗಮನಾರ್ಹವಾಗಿದೆ. ಬಸವಣ್ಣನ ಮಹಾಮನೆಯ ತುರುಗಳನ್ನು ಶಿವಭಕ್ತರ ವೇಷದಲ್ಲಿ ಬಂದ ಕಳ್ಳರು ಅಪಹರಿಸಿಕೊಂಡು ಹೋಗುತ್ತಾರೆ. ಅವರು ಕಳ್ಳರು ಎಂಬುದನ್ನರಿಯದೆ ಶಿವಭಕ್ತರೆಂದೇ ಭಾವಿಸಿದ ಗೋಪಾಲಕರು ಮೋಸ ಹೋಗುತ್ತಾರೆ. ಆದರೆ ಅವರು ಕಳ್ಳರೆಂಬುದು ತಿಳಿದ ನಂತರ ಹುಯ್ಯಲೆಬ್ಬಿಸಿ ಬಸವಣ್ಣನಲ್ಲಿ ಬಂದು ನಡೆದ ಸಂಗತಿಯನ್ನು ತಿಳಿಸುತ್ತಾರೆ.[೫೩]

ತುರುಗಳನ್ನು ಕಳ್ಳರು ಬಹುಬೇಗ ಓಡಿಸಿಕೊಂಡು ಹೋಗುತ್ತಿದ್ದರು. ಆಗ ಗ್ರಾಮಸ್ಥರು ಕಳ್ಳರ ಬೆನ್ನುಹತ್ತಿಹೋಗಿ ಹೋರಾಡಿ ತುರುಗಳನ್ನು ಹಿಂದಕ್ಕೆ ತರುತ್ತಿದ್ದರು. ಏಚನಾಯಕ ಎಂಬುವನು ತನ್ನ ಊರಿನ ಹಿರಿಯರ ಆಜ್ಞೆಯಂತೆ ''ತುಱುವಂ ಕೊಂಡು ಪೋಪ ಕಳ್ಳರಂ ಪಲರಂ ಕೊಂದು ತುಱುವ ಮಗುೞ್ಚಿ'' ಸಾಯುತ್ತಾನೆ.[೫೪] ಕೆಂಕೆರೆಯ ಮಹಾಜನಗಳ ತುರುಗಳನ್ನು ''ಕಳ್ಳರು ಕೊಂಡು ಹೋಹಲ್ಲಿ ಹುಯ್ಯಲಂ ಕೇಳ್ದು ಎಯ್ದಿಕಾದಿ'' ಹಲವರನ್ನು ಕೊಂದು ತುರುಗಳನ್ನು ಹಿಂತಿರುಗಿಸಿ ಇಬ್ಬರು ವೀರರು ಮಡಿದ ವಿಷಯ ವೀರಗಲ್ಲೊಂದರಿಂದ ತಿಳಿದುಬರುತ್ತದೆ.[೫೫] ಚೋಳಾಚಾರಿ ಎಂಬುವನು ''ವೊಲ್ಲೆಯೂರ ತುಱುವ ಕಳ್ಳರ್ ಕೊಂಡು ಪೋಗೆ ತುಱುವವೊಟ್ಟಿ ಕಳ್ಳನೊಬ್ಬ್ರನಂ ಕೊನ್ದು ತುಱುವ ಮಗುಳ್ಚಿ'' ಸಾಯುತ್ತಾನೆ.[೫೬] ಚೀಲಗವುಡ ಎಂಬುವನು ಒಂದು ಊರಿನ ಹಸುಗಳನ್ನು ಬೇಡರು ಹೊಡೆದುಕೊಂಡು ಹೋಗುವಾಗ ಅವರನ್ನು ಹಿಂಬಾಲಿಸಿ ಸದೆಬಡಿದು ತುರುಗಳನ್ನು ಹಿಂತಿರುಗಿಸಿ ಆ ಗ್ರಾಮವನ್ನು

---

೫೧ E.C. V Cn. 205, 1200

೫೨ E.C. VIII. Sb. 46, 1018

೫೩ ಹರಿಹರ : ಬಸವರಾಜದೇವರ ರಗಳೆ, ಪು. ೪೮

೫೪ S.I.I. IX pt. 1, 105, 1047

೫೫ E.C. VI. Cm. 157 and 47, 1165

೫೬ E.C. X. Kl. 14, 1035

ಸಂತೋಷಪಡಿಸುತ್ತಾನೆ.[೫೭] ಹೀಗೆ ಹಲವಾರು ಉದಾಹರಣೆಗಳನ್ನು ನೀಡುತ್ತಾ ಹೋಗಬಹುದು.[೫೮]

ಮೇಲೆ ಗಮನಿಸಿದ ಯಾವ ವೀರಗಲ್ಲುಗಳ ಪಾಠದಲ್ಲಿಯೂ ಕಳ್ಳರು ಕಳ್ಳತನವಲ್ಲದೆ ಇತರ ಯಾವುದೇ ಅಕೃತ್ಯಗಳಿಗೆ ಕೈಹಾಕಿದರೆಂಬುದಕ್ಕೆ ಸೂಚನೆಗಳೇನೂ ದೊರೆಯುವುದಿಲ್ಲ. ಬದಲಾಗಿ ತುರುಗಳನ್ನು ಹೊಡೆದುಕೊಂಡು ಹೋಗುತ್ತಿರುವಾಗ ಎಂಬ ಅರ್ಥ ಬರುವ ಪ್ರಯೋಗಗಳೇ ಬಹಳವಾಗಿವೆ. ಈ ಪ್ರಯೋಗಗಳು ನಮ್ಮ ಈ ಹಿಂದಿನ ಅಭಿಪ್ರಾಯವನ್ನು ಸಮರ್ಥಿಸುವಂತಿದೆ. ಅವರಿಂದ ನಡೆಯುತ್ತಿದ್ದ ಅಕೃತ್ಯಗಳೆಂದರೆ, ಗೋಪಾಲಕರು ಒಂಟಿಯಾಗಿ ಸಿಕ್ಕಾಗ ಅವರನ್ನು ಸದೆಬಡಿಯುವುದು, ತಮ್ಮ ಮೇಲೆ ತಿರುಗಿಬಿದ್ದ ಹಳ್ಳಿಯವರ ಸಂಖ್ಯೆ ತಮಗಿಂತ ಕಡಿಮೆ ಇದ್ದರೆ ಅವರೊಂದಿಗೆ ಹೋರಾಡುವುದು. ಇಲ್ಲಿಯೇ ಬಹುಮುಖ್ಯವಾದ ಅಂಶವೆಂದರೆ ತುರುಗಳನ್ನು ಹಿಡಿದ ಎಲ್ಲರನ್ನೂ ವೀರಗಲ್ಲುಗಳಲ್ಲಿ ಕಳ್ಳರು ಎಂಬುದಾಗಿ ಕರೆದಿಲ್ಲ—ಎನ್ನುವುದು. ರಾಜಕೀಯ ಉದ್ದೇಶಗಳಿಂದ ಅಥವಾ ಇನ್ನಿತರ ಮತ್ಸರಗಳಿಂದ ತುರುಗಳನ್ನು ಒಂದು ಸವಾಲಾಗಿ ಹಿಡಿದಂಥವರ ಹೆಸರುಗಳನ್ನು ವೀರಗಲ್ಲುಗಳ ಪಾಠ ಹೆಸರಿಸುತ್ತವೆ. ಇವರನ್ನು ಎಲ್ಲಿಯೂ 'ಕಳ್ಳರು' ಎಂಬುದಾಗಿ ಕರೆದಿಲ್ಲ . ತುರುಗೋಳನ್ನು ಕಳ್ಳತನದ ಉದ್ದೇಶದಿಂದ ಮಾಡಿದುದಾದರೆ ವೀರಗಲ್ಲುಗಳ ಪಾಠದಲ್ಲಿ ಹಾಗೆ ಮಾಡಿದವರನ್ನು ಸ್ಪಷ್ಟವಾಗಿ ಕಳ್ಳರು ಎಂಬುದಾಗಿಯೇ ಕರೆಯಲಾಗಿದೆ. ಇದರಿಂದ ಅಂದಿನವರು ಕಳ್ಳತನದ ಉದ್ದೇಶದಿಂದ ತುರುಗಳನ್ನು ಅಪಹರಿಸಿದ ತುರುಗೋಳ್‌ಗೂ ರಾಜಕೀಯ ಉದ್ದೇಶದಿಂದ ತುರುಗಳನ್ನು ಹಿಡಿಯುತ್ತಿದ್ದ ತುರುಗೋಳ್‌ಗೂ ವ್ಯತ್ಯಾಸವನ್ನು ಕಂಡುಕೊಂಡಿದ್ದರೆಂದು ತಿಳಿಯುತ್ತದೆ. ರಾಜಕೀಯ ಉದ್ದೇಶದಿಂದ ತುರುಗಳನ್ನು ಅಪಹರಿಸಿದವರನ್ನು 'ಕಳ್ಳರು' ಎಂಬುದಾಗಿ ಕರೆಯಲು ಸಿದ್ಧರಿರದೆ, ಅದನ್ನು ರಾಜಕೀಯ ಸವಾಲು ಎಂಬುದಾಗಿ ಸ್ವೀಕರಿಸಿ ಎದುರಿಸುವ ಮನಃಪ್ರವೃತ್ತಿಯನ್ನು ಪಡೆದವರಾಗಿದ್ದರು ಎಂಬ ಅಂಶವೂ ಸುಸ್ಪಷ್ಟವಾಗುತ್ತದೆ.

### ತುರುಗಳ ಸಂರಕ್ಷಣೆ

ಆಕ್ರಮಣಕಾರರಂತೆಯೇ ಒಂದು ವ್ಯವಸ್ಥಿತ ರೂಪದಲ್ಲಿ ತುರುಗಳನ್ನು ಹಿಂತಿರುಗಿಸುವವರು ಇರಲಿಲ್ಲವೆಂದು ಹೇಳಲು ಆಗುವುದಿಲ್ಲ. ಮೊದಲು ಹುಯ್ಯಲು ಮಾಡುವವರೇ ಅವರನ್ನು ತಡೆಯುತ್ತಿದ್ದರೂ, ಆ ಹುಯ್ಯಲನ್ನು ಕೇಳಿದ ಊರಿನ ಇತರೇ ಜನರೋ, ಮುಖ್ಯಸ್ಥರೋ, ಬಂಟರೋ ಇವರ ನೆರವಿಗೆ ಬಂದು ತುರುಗಳನ್ನು ಹಿಂತಿರುಗಿಸುತ್ತಿದ್ದರು. ಬಳ್ಳಿಗಾವೆಯ ತುರುಗಳನ್ನು ಶತ್ರುಗಳು ಬಂದು ಹಿಡಿದಾಗ ಬನವಾಸಿ ಹನ್ನೆರಡು ಸಾಸಿರವನ್ನು ಆಳುತ್ತಿದ್ದ ಗೋವಿಂದರಸನ ಆಜ್ಞೆಯಂತೆ ರೇವಯ್ಯನು ಹೋರಾಡಿ ಸಾಯುತ್ತಾನೆ.[೫೯] ತನ್ನ 'ಆಳ್ದರಸಂ ಬೆಸಸಲು' ಬಮ್ಮಣನು ತುರುಗಾಳಗದಲ್ಲಿ ಭಾಗವಹಿಸಿ

---

೫೭ E.C. VI. Tk. 84, 1209

೫೮ (ಅ) E.C. VI. Tk. 48, 49, 1287

(ಆ) M.A.R. 1927, 27, 1288

(ಇ) E.C. VI. Sk. 57, 1376

(ಈ) E.C. IX. Cp. 2, 1667

(ಉ) M.A.R. 1927. 31?

೫೯ E.C. VII. Sk. 149. 1110



ಸಾಯುತ್ತಾನೆ.[೬೦] 'ಮಲ್ಲನ್ರಿಪಾಳಂ ಬೆಸಸೆ' ಚಟ್ಟನಾಯಕನು ತನ್ನ ಊರಿನ ತುರುಗಳನ್ನು ಹಿಂತಿರುಗಿಸುವಲ್ಲಿ ಸಾಯುತ್ತಾನೆ. ಆಗ ಅವನ ವೀರಗಲ್ಲನ್ನು ಇದೇ ಮಲ್ಲರಸದೇವನು ನಿಲ್ಲಿಸುತ್ತಾನೆ.[೬೧] ಇದ್ದಕ್ಕಿದ್ದಂತೆ ಉಮ್ಮಾಬಾಯಿಯು ಬಂದು ತುರುಗಳನ್ನು ಹಿಡಿದಾಗ, ಮಲ್ಲಿದೇವರಸನ ಆಜ್ಞೆಯಂತೆ ಗಟ್ಟಿಯನಾಯಕನು ವೈರಿಗಳೊಡನೆ ಹೋರಾಡಿ ''ತುರುವಂ ಮಗುರ್ಚ್ಚಿ ಸುರಲೋಕಪ್ರಾಪ್ತನಾದ.''[೬೨] ಹೀಗೇ ವೀರರು ತಮ್ಮ ಅರಸರ ಆಜ್ಞೆಯಂತೆ ತುರುಗಳನ್ನು ಹಿಂತಿರುಗಿಸಲು ಸುಸಜ್ಜಿತರಾಗಿಯೇ ಹೋಗುತ್ತಿದ್ದರೆಂದು ತೋರುತ್ತದೆ.

ಒಂದು ಊರಿನ ಹಸುಗಳನ್ನು ಅಪಹರಿಸಿದಾಗ, ಆ ಊರಿನ ಹಿರಿಯ ಅಧಿಕಾರಿಗಳೂ ಮಹಾಜನರೂ ಬಂಟಸಾಸಿರ್ವ್ವರೂ ಅವರ ಕೈಕೆಳಗಿನ ಬಂಟರಿಗೆ ತುರುಗಳನ್ನು ಹಿಂತಿರುಗಿಸಿಕೊಂಡು ಬರುವಂತೆ ಆಜ್ಞಾಪಿಸುತ್ತಿದ್ದರು. ತಿಳ್ಳವಳ್ಳಿಯ ತುರುಗಳನ್ನು ಹಿಡಿದಾಗ 'ಸಾಸಿರ್ವ್ವರ ಬೆಸದಿ', 'ಸಾಸಿರ್ವ್ವರಬಣ್ಟ'ನೂ 'ಮಾರ್ಕ್ಕೊಳವರಗಂಡ'ನೂ ಆದ ಬಂಮ ಎಂಬುವನು ತುರುಗಳನ್ನು ಹಿಂತಿರುಗಿಸಿ ಸಾಯುತ್ತಾನೆ.[೬೩] ಶತ್ರುಗಳು ಬಂದು ಕುಪ್ಪಟೂರಿನ ತುರುಗಳನ್ನು ಸೆರೆಹಿಡಿದಾಗ ಆ ಊರಿನ 'ಸಾಸಿರ್ವ್ವರಾದ ಆಶೇಷಮಹಾಜನಂಗಳು' ಸೆರೆಯಾಗಿದ್ದ 'ಸ್ತ್ರೀ ಗೋವ'ನ್ನು ಬಿಡಿಸು ಎಂದು ಹೇಳಿದಾಗ 'ಹತಗವುಡ' ಎಂಬುವನು ಹೋರಾಡಿ ಸಾಯುತ್ತಾನೆ.[೬೪] ''ಸ್ತ್ರೀ ದ್ರೋಹಘರಟ್ಟ ಚತುರ್ವ್ವೇದಿ ಮಂಗಲದ ಮಹಾಜನಂಗಳ ಬೆಸದಿಂ ಮಡಿವಳ ಚಟ್ಟಕನ ಮಗ ಗಂಗಣಂ ತುಱುವಂ ಮಗುರ್ಚ್ಚಿ'' ಸುರಲೋಕಪ್ರಾಪ್ತನಾದನು.[೬೫]

ಇಂತಹ ತುರುಗಾಳಗಗಳಲ್ಲಿ ಊರಿನ ಹಿರಿಯರು ಭಾಗವಹಿಸುತ್ತಿದ್ದರು. ಸ್ವಪ್ರೇರಣೆಯಿಂದಲೋ ಅಥವಾ ಊರಿನ ಹಿರಿಯರಾಗಿ ತಾವು ಮಾಡಬೇಕಾದ ಕರ್ತವ್ಯವೆಂದೋ ಭಾವಿಸಿ, ಅವರೂ ಸಹ ಭಾಗವಹಿಸುತ್ತಿದ್ದ ವಿಷಯ ವೀರಗಲ್ಲುಗಳಿಂದ ತಿಳಿದುಬರುತ್ತದೆ. ಅಡಿಗಟ್ಟೆಯ ತುರುಗಳನ್ನು ಹಿಡಿದಾಗ ಅದೇ ಊರಿನ 'ಊರ್ಗಾವುಣ್ಡ'ನಾದ ಮಾಚಿಗಾವುಣ್ಡ ಎಂಬುವನು ತುರುಗಳನ್ನು ಹಿಂತಿರುಗಿಸುವಲ್ಲಿ ಸಾಯುತ್ತಾನೆ.[೬೬] ಜಗದೇಕರಸನೆಂಬುವನು ತನ್ನ ಊರಿನ ತುರುಗಳನ್ನು ಹಿಡಿದನೆಂದು ಕೇಳಿದ 'ದೇಕಭೂಪತಿ'ಯು ತಾನೇ ಯುದ್ಧಕ್ಕೆ ಹೊರಟು ತುರುಗಳನ್ನು ಹಿಂತಿರುಗಿಸುವಲ್ಲಿ ಸಾಯುತ್ತಾನೆ.[೬೭] ವಿಷ್ಣುವರ್ಧನನ ಆಳ್ವಿಕೆಯಲ್ಲಿ ಸೆಟ್ಟಿಗಾವುಂಡನು ಅಳುವಖೇಡಆರುಸಾಸಿರದ ಮೇಲೆ ದಂಡೆತ್ತಿಹೋದಾಗ ಜಯಸಿಂಗ ಅಳುವರಸನೊಡನೆ ಸುರಿಗೆಗಾಳಗವನ್ನು ಕಾದಿ ಗೆದ್ದು ಬಂದನಂತರ ಕರವಿಡಿಹಿರೂರು ಎಂಬಲ್ಲಿ ಗೌಡತನ ಮಾಡುತ್ತಿರಬೇಕಾದರೆ, ಸೀರೆನಾಡ ಹುಲಿಕಾಱನಾಯಕರು ಬಂದು ತುರುಗಳನ್ನು ಹಿಡಿಯಲು ಸೆಟ್ಟಿಗಾವುಂಡನು ''ತಾನೇ ಕಾದಿ

---

೬೦ E.C. VII. Sk. 238, 1128

೬೧ E.C. VII. Hl. 35, 1187

೬೨ E.C. VII. Hl. 37, 1215

೬೩ K.I. II. 17, 1126

೬೪ E.C. VIII. Sb,. 251, 1117

೬೫ E.C. V. Bl. 92, 1152

೬೬ E.C. VII. Sk. 83, 1058

೬೭ E.C. XII. Ck. 18.

ಪಲರನಿಱಿದು ತುಱುವ ಮಗುಟ್ಚಿ ಸುರಲೋಕಪ್ರಾಪ್ತ''ನಾದ ವಿಷಯ ವೀರಗಲ್ಲೊಂದರಿಂದ ತಿಳಿಯುತ್ತದೆ.[೧೮] ಇದೇ ರೀತಿಯ ಅನೇಕ ಉದಾಹರಣೆಗಳನ್ನು ನೀಡುತ್ತಾ ಹೋಗಬಹುದು.[೧೯]

ತುರುಗಳನ್ನು ಯಾವುದೇ ಉದ್ದೇಶದಿಂದ ಹಿಡಿಯಲಿ, ಅವುಗಳಿಗೆ ಇವರು ಮಾಡುವ ಹುಯ್ಯಲುಗಳಿಂದ ಗಾಬರಿ, ಹಿಂಸೆಯಾಗುತ್ತಿದ್ದುದರ ಬಗ್ಗೆ ವೀರಗಲ್ಲುಗಳ ಪಾಠದಿಂದ ಯಾವುದೇ ರೀತಿಯ ವಿವರಣೆಯೂ ಸಿಗುವುದಿಲ್ಲ. ಪಂಪ ತನ್ನ ವಿಕ್ರಮಾರ್ಜುನ ವಿಜಯದಲ್ಲಿ, ತಾನು ತನ್ನ ಸಮಕಾಲೀನ ಸಮಾಜದಲ್ಲಿ ಕಂಡಿರಬಹುದಾದ ತುರುಗಾಳಗದಲ್ಲಿನ ತುರುಗಳ ಆ ಸ್ಥಿತಿಯ ವಾಸ್ತವಿಕ ಚಿತ್ರಣವನ್ನು ಈ ರೀತಿ ನೀಡುತ್ತಾನೆ:

ಅದಟರ ಚೆನ್ನ ಪೊಂಗರ ಸಬಂಗಳ ತೊಟ್ಟುಟಿಯೊಳ್ ತೊಡಂಕಿ ನಿ
ಲ್ಲದೆ ಪೊಱಮಟ್ಟ ತಮ್ಮ ಮನದೊಳ್ ಮಿಗೆ ಬೆಚ್ಚಿಸಿದಂತೆ ತೋಱುವ
ಗ್ಗದ ನಿಡುಗೋಡು ಮೇಡುಮಮರತ್ತು ಮಿಱುಂಕಿದ ಕೆಚ್ಚಲೆತ್ತಮೆ
ತ್ತಿದ ಕುಡಿವಾಲಮಂದೆಸೆಯೆ ಕರ್ಬಸುಗಳ್ ಪರಿಗೊಂಡುವಾಜಿಯೊಳ್ ॥[೨೦]

ಯುದ್ಧಭೂಮಿಯಲ್ಲಿ ಮಡಿದ ವೀರರ ಶವಗಳ ತುಳಿದಾಟದಲ್ಲಿ ಸಿಕ್ಕಿಕೊಂಡು ನಿಂತುಕೊಳ್ಳದೆ ತುರುಗಳು ಹೆದರಿ ಓಟಕಿತ್ತವಂತೆ. ಹೆದರಿದ ತುರುಗಳ ಸ್ಥಿತಿಯನ್ನು ಪಂಪ ಸೂಕ್ಷ್ಮವಾಗಿ ನೀಡುತ್ತಾನೆ. ಹೆದರಿಕೆಯಿಂದಾಗಿ ಆ ತುರುಗಳ ಕೆಚ್ಚಲುಗಳು ಬಿಗಿದು ಒಳಗೆ ಸೇರಿಕೊಂಡವಂತೆ. ಬಾಲಗಳು ಮೇಲಕ್ಕೆ ಎತಿಕೊಂಡು ಆ ತುರುಗಳು ದಿಕ್ಕಾಪಾಲಾಗಿ ಓಡಿದುವಂತೆ. ಇಷ್ಟು ವಾಸ್ತವವಾದ ಚಿತ್ರಣ ಇಡೀ ಕನ್ನಡಸಾಹಿತ್ಯ ಪ್ರಪಂಚದಲ್ಲಿಯೇ ಅತಿ ವಿರಳವೆಂದು ಹೇಳಬಹುದು.

ಈ ತುರುಗಾಳಗದ ಮತ್ತೊಂದು ಮುಖ ಬಸವರಾಜದೇವರ ರಗಳೆಯಿಂದ ತಿಳಿದುಬರುತ್ತದೆ. ತುರುಗಾಳಗದಲ್ಲಿ ತುರುಗಳನ್ನು ಅಪಹರಿಸಿದರೆಂದು ಬಸವಣ್ಣನವರಿಗೆ ತಿಳಿಸಿದಾಗ ಅವರ ಮಾನವೀಯ ಹೃದಯದಿಂದ ಈ ರೀತಿಯ ಮಾತುಗಳು ಬರುತ್ತವೆ :

ತಾಯ್ಗಳುಮ್ಮಳಿಸಲಾಗದು ಕಱುಗಳಂ ಬಿಡಿರೆ
ಬೇಗ ಮೊಲೆ ತೊರೆದು ಮರುಗುವುವು ಕರುವಂ ಬಿಡಿರೆ
ಮಕ್ಕಳುಗಳವ್ವೆಗಳು ನೋಯಲಾಗದು ಬಿಡಿರೆ
ಮಿಕ್ಕ ನೆನಹಿಲ ಮಲಮಲಂ ಮಱುಗುವುವು ಬಿಡಿರೆ
ಎಲೆಲೆ ತಾಯಿಕಱುಗೂಡಿರೇ ಬೇಗದೊಳು ಬಿಟ್ಟು
ಎಂದು ಕಱುಗಳನಲ್ಲಿ ಬಿಡಿಸುತೆ ದಯಾಪರಂ[೨೧]

ತಮ್ಮ ಸಂಪತ್ತಾದ ದನಗಳು ಹೋಯಿತಲ್ಲಾ ಎಂಬ ವ್ಯಥೆ ಬಸವಣ್ಣನವರಿಗಿಲ್ಲ. ಆದರೆ

---

೧೮ ಕೆ. ವಿ. ರಮೇಶ್: ಕರ್ನಾಟಕ ಶಾಸನ ಸಮೀಕ್ಷೆ, ಪು. ೪೫

೧೯ (ಅ) E.C. VII. Sk. 137, 1198
(ಆ) E.C. V. Cn. 205, 1200
(ಇ) E.C. VI. Tk. 84, 1205

೨೦ ಪಂಪ: ವಿಕ್ರಮಾರ್ಜುನ ವಿಜಯಂ, ೮-೧೦೪

೨೧ ಹರಿಹರ : ಬಸವರಾಜದೇವರ ರಗಳೆ.

ತಾಯಿಯೊಂದು ಕಡೆ ಮಗುವೊಂದು ಕಡೆ ಆಗಿ ಅವುಗಳು ತಬ್ಬಲಿಗಳಾಗುತ್ತವಲ್ಲಾ ಎಂಬುದೇ ಅವರಿಗೆ ಚಿಂತೆ.

ತುರುಗಳನ್ನು ಕಳ್ಳರೋ ಅರಸರೋ ಕದ್ದುಕೊಂಡು ಹೋದಾಗ, ಅದು ಊರಿನ ಜನರ ಮೇಲೆ ಯಾವ ರೀತಿಯ ಪರಿಣಾಮವನ್ನು ಬೀರುತ್ತಿತ್ತು ಎಂಬುದರ ವರ್ಣನೆ ಜಾನಪದ ವೀರಗೀತೆಯೊಂದರಲ್ಲಿ ಬಂದಿದೆ. ಒಂದು ಊರಿನ ತುರುಗಳನ್ನು ಅಪಹರಿಸಿಕೊಂಡು ಹೋದಾಗ ಊರಿನ ಹೆಂಗಸರು ತಮ್ಮತಮ್ಮಲ್ಲಿಯೇ ಹೀಗೆ ಮಾತನಾಡಿಕೊಳ್ಳುತ್ತಾರೆ:

ಎಂದಮ್ಮ ಆಯಿತವಾರ ಎಂದಮ್ಮ ಸ್ವಾಮಾರ
ಅಂಗಳ ಬಳಿಯಾಕ ಸಗಣಿಲ್ಲ। ಸಂದನೋರ
ಕಂದ ಕೊಂಡೋದಾ ತುರುಗಾಳ
ನಾಳ್ಕಮ್ಮ ಆಯಿತವಾರ ಮುಂದ್ಯಮ್ಮ ಸ್ವಾಮಾರ
ಬಾಗಲು ಬಳಿಯಾಕ ಸಗಣಿಲ್ಲ। ಸಂದನೋರ
ಬಾಲ ಕೊಂಡೋದ ತುರುಗಾಳ।[೨೨]

ಹಸುಗಳಿಲ್ಲದೆ ಅವರಿಗೆ ದಿನಗಳೂ ಗೊತ್ತಾಗುವುದಿಲ್ಲ. ಸೋಮವಾರ ಕರ್ನಾಟಕದ ಬಹುಭಾಗಗಳಲ್ಲಿ ದನಗಳನ್ನು ಪೂಜಿಸುತ್ತಾರೆ. ಆ ದಿನ ಅವುಗಳಿಂದ ಯಾವ ಕೆಲಸವನ್ನೂ ಮಾಡಿಸುವುದಿಲ್ಲ. ಮನೆಯ ಅಂಗಳ ಬಳಿಯುವುದಕ್ಕೂ ಸಹ ಸಗಣಿ ಇಲ್ಲ ಎಂದರೆ, ಇನ್ನು ಹಾಲಿನ ಗತಿ? ಊರಿನ ಮಕ್ಕಳ ಗತಿ? ಮುಂತಾದ ಪರಿಣಾಮಗಳನ್ನು ಜಾನಪದ ಕವಿ ನಮ್ಮ ಊಹೆಗೇ ಬಿಟ್ಟಿದ್ದಾನೆ.

ಇಂತಹ ಹೋರಾಟಗಳ ಮತ್ತೊಂದು ಮುಖ ಎಂದರೆ ಹೋರಾಡುತ್ತಿದ್ದವರ ನಡುವಿನ ಸ್ನೇಹಬಾಂಧವ್ಯಗಳು ಹೇಗೆ ವ್ಯಕ್ತವಾಗುತ್ತವೆ ಎಂಬುದು. ಈ ರೀತಿಯ ಚಿತ್ರಗಳು ಅಪರೂಪವಾದರೂ ಕೆಲವಾರು ವೀರಗಲ್ಲುಗಳಿಂದ ದೊರೆಯುತ್ತದೆ. ಕ್ರಿ.ಶ. ೧೧೦೭ರ ಹೂಲಿಯ ವೀರಗಲ್ಲಿನಿಂದ ಬೋಸಿಗ ಮತ್ತು ಮಲ್ಲಿಗ ಎಂಬ ಇಬ್ಬರು ಗೆಳೆಯರ ಸ್ನೇಹ-ವೀರತನಗಳ ಪರಿಚಯ ನಮಗಾಗುತ್ತದೆ. ತೊರಪರ ಭೂಪಯ್ಯ ಎಂಬುವನು ಹೂಲಿಯ ತುರುಗಳನ್ನು ಹಿಡಿದಾಗ ಆ ಊರಿನ ತಳಾರ ನಾಯಕನಾದ ಬೋಸಿಗನೂ, ಆತನೊಡನುಂಡ ಗೆಳೆಯನಾದ ಮಲ್ಲಿಗ ಎಂಬುವನೂ ತುರುಗಳಿಗೆ ಅಡ್ಡಬಂದು ಮೇಲಾಳನನ್ನು ಇರಿದು ಸಾಯುತ್ತಾರೆ. ಹೋರಾಟದಲ್ಲಿ ಮೊದಲಿಗೆ ಬೋಸಿಗನು ತನ 'ನಿಜವಿಕ್ರಮಪ್ರತಾಪೋನ್ನತಿ'ಯಿಂದ ಸಾಯುತ್ತಾನೆ. ಅವನ ಸಾವನ್ನು ಕಂಡ ಗೆಳೆಯನಾದ ಮಲ್ಲಿಗನು

ಒಡನುಂಡ ಕೆಳೆಯನಂ ಸಂ
ಗಡದಾಳಂ ಮೇಳದಾಳನನುವರದೆಡೆಯೊಳ್
ಬಿಡಲಾಗದೆಂದು ಬೋಸಿಗ
ನೊಡನಟ್ಟಿದಂ ಮಲ್ಲಿಗಂ ಪ್ರತಾಪೋನ್ನತಿಯಿಂ ॥

ಎಂಬುದಾಗಿ ಕವಿ ವರ್ಣಿಸುತ್ತಾನೆ.[೨೩]

---

೨೨ ಚಿತ್ರದುರ್ಗ ಜಿಲ್ಲೆಯ ಹರತಿ ಬಯಲಲ್ಲಿ ಪ್ರಚಲಿತವಿರುವ ಲಾವಣಿ. ಶ್ರೀ ಎ. ಕೃಷ್ಣಮೂರ್ತಿ ಅವರ ಅಪ್ರಕಟಿತ ಸಂಗ್ರಹದಿಂದ.

೨೩ Lionel. D. Barnett: *Inscriptions at Huli.* E.I. XVII, p. 200, 1107

ಕ್ರಿ.ಶ. ೧೧೫೬ರ ಕೆರಗೋಡು ಶಾಸನದಲ್ಲಿ ತಮ್ಮ ಊರಿನ ತುರುಗಳನ್ನು ಕಾಳರಸನು ಕೊಂಡಾಗ, ಆ ಊರಿನ ಬಾವಗಾವುಂಡನೆಂಬುವನ ಮಕ್ಕಳಾದ ದೇವಗಾವುಂಡ ಮತ್ತು ಮಲ್ಲಗಾವುಂಡ ಎಂಬುವರು ''ಬಿಲ್ಲುಮಂಬುವಮಂ ಕೊಂಡೀರ್ವ್ವರು ಹೆಬ್ಬಾಗಿಲೊಳಡ್ಡನಿಂತು'' ತುರುಗಳನ್ನು ಹೊಡೆದುಕೊಂಡು ಹೋಗುವವರಿಗೆ ಹೋರಾಟವನ್ನು ನೀಡುತ್ತಾರೆ. ಈ ಹೋರಾಟದಲ್ಲಿ ಅವರಿಬ್ಬರು ಸಾಯುತ್ತಾರೆ. ಅವರ ಹೆಣಗಳನ್ನು ತುಳಿದುಕೊಂಡೇ ತುರುಗಳನ್ನು ಓಡಿಸಿಕೊಂಡು ಹೋದಾಗ, ಅವರಿಬ್ಬರ ಕಿರಿಯ ತಮ್ಮನಾದ ಬೊಮ್ಮಗಾವುಂಡ ತನ್ನ 'ಅಣ್ಣಂದಿರ ಕಳೇಬರಗಳನ್ನು ಕಂಡು ಸೈರಿಸಲಾಗದೆ,' ನೀವು ಸತ್ತಹಾಗೆ ನಾನು ಸಾಯುತ್ತೇನೆ; ಇಲ್ಲವಾದರೆ ತುರುಗಳನ್ನಾದರೂ ಹಿಂತಿರುಗಿಸಿ ಶತ್ರುಗಳನ್ನು ಸದೆಬಡಿಯುತ್ತೇನೆ ಎಂದು ಪ್ರತಿಜ್ಞೆಮಾಡಿ ವೈರಿಗಳನ್ನು ಬೆನ್ನಟ್ಟಿ ತುರುಗಳನ್ನು ಹಿಂತಿರುಗಿಸಿಕೊಂಡು ಬಂದು ತನ್ನ ಅಣ್ಣಂದಿರನ್ನು ಸಂಸ್ಕರಿಸಿ ಅವರ ಹೆಸರಿನಲ್ಲಿ ವೀರಗಲ್ಲುಗಳನ್ನು ನಿಲ್ಲಿಸುತ್ತಾನೆ.[೨೪]

ಈ ಎಲ್ಲಾ ಅಂಶಗಳನ್ನು ಗಮನಿಸಿದರೆ, ಹೋರಾಟದಲ್ಲಿ, ತಮ್ಮ ಸಹೋದ್ಯೋಗಿಗಳು, ಸೋದರರು ಮಡಿದಾಗ ಅದರಿಂದ ಘಾಸಿಗೊಂಡವರು ಹಿಂತೆಗೆಯುತ್ತಿರಲಿಲ್ಲ. ಬದಲಾಗಿ ಅವರಿಂದ ಮತ್ತಷ್ಟು ಪ್ರಚೋದಿತರಾಗಿ ಯುದ್ಧನಿರತರಾಗುತ್ತಿದ್ದರೆಂಬುದು ತಿಳಿಯುತ್ತದೆ.

ರಾಜಕೀಯ ಉದ್ದೇಶದಿಂದ ಕೂಡಿದ ತುರುಗಾಳಗಗಳೂ ತಮ್ಮ ಸೀಮಿತ ಅರ್ಥದಲ್ಲಿ ಯುದ್ಧಗಳೇ ಆಗಿವೆ. ಈ ಯುದ್ಧದ ಪರಿಣಾಮ ಯಾರು ಈ ಕಾಳಗವನ್ನು ಆರಂಭಿಸುತ್ತಾರೆ ಮತ್ತು ಎದುರಿಸುತ್ತಾರೆ ಎಂಬ ಅಂಶವನ್ನು ಅವಲಂಬಿಸಿದೆ. ಒಂದೇ ತುರುಗಾಳಗದಲ್ಲಿ ಅನೇಕ ಜನ ಸತ್ತಿರುವ ಸಾಧ್ಯತೆ ಇಲ್ಲದಿಲ್ಲ. ಆದರೆ ತುರುಗಾಳಗಗಳಲ್ಲಿ ಸತ್ತವರೆಲ್ಲರ ವೀರಗಲ್ಲುಗಳು ಇಂದು ಉಪಲಬ್ಧವಾಗಿಲ್ಲ ಅಥವಾ ಎಲ್ಲರಿಗೂ ವೀರಗಲ್ಲುಗಳನ್ನು ಹಾಕಿಸದೆಯೂ ಇರಬಹುದು. ಇದುವರೆಗೆ ದೊರೆತಿರುವ ವೀರಗಲ್ಲುಗಳಲ್ಲಿ ಕ್ರಿ.ಶ ೧೨೫೯ರ ವೀರಗಲ್ಲೊಂದರಿಂದ ತುರುಗಾಳಗವೊಂದರಲ್ಲಿ ಆರುಜನ ವೀರರು ಸತ್ತಿರುವ ವಿಷಯ ತಿಳಿಯುತ್ತದೆ.[೨೫] ಉಳಿದವುಗಳಲ್ಲಿ ಸಾಮಾನ್ಯವಾಗಿ ಒಂದೋ ಎರಡೋ ಸಾವುಗಳು ಸಂಭವಿಸಿರುವ ವಿಷಯ ತಿಳಿಯುತ್ತದೆ.

*ಕರ್ನಾಟಕದ ವೀರಗಲ್ಲುಗಳು, ೧೯೮೨, ಪು. ೧೩೮-೫೮*

---

೨೪ E.C. VIII. Sb. 175, 1156

೨೫ E.C. IX, Kn. 71, 1259

# ೧೦. ಶಾಸನಗಳ ಮರುಪರಿಶೀಲನೆ: ಒಂದು ತೀವ್ರ ಅಗತ್ಯ

● ಬಿ. ರಾಜಶೇಖರಪ್ಪ

ಚಿತ್ರದುರ್ಗ ಪ್ರದೇಶದ ಕೆಲವು ಶಾಸನಗಳನ್ನು ಅವುಗಳ ಪ್ರಕಟಿತ ಪಾಠದೊಂದಿಗೆ ತಾಳೆನೋಡುತ್ತ ಹೋದಾಗ, ಅನೇಕ ಕಡೆ ಪ್ರಕಟಿತ ಪಾಠ ವಾಸ್ತವ ಪಾಠದಿಂದ ಬೇರೆಯಾಗಿರುವುದು ಕಂಡುಬಂತು. ಹಾಗೇ ಪುನರ್‌ಪರಿಶೀಲನೆಯನ್ನು ಮುಂದುವರಿಸುತ್ತ ಹೋದಾಗ ಅನೇಕ ಪ್ರಕಟಿತ ಪಾಠ ವಿವರಗಳಲ್ಲಿ ಹಲವು ರೀತಿಯ ಕುಂದುಕೊರತೆಗಳಿರುವುದು ಗೋಚರಿಸಿತು. ಇಂತಹ ಪಾಠವನ್ನು ಆಧರಿಸಿ ಅನೇಕ ಅಸಂಗತ ವಿಚಾರಗಳು ಪ್ರಚಲಿತವಾಗುತ್ತ ಬಂದಿರುವುದು ಕೂಡ ಗಮನಕ್ಕೆ ಬಂದಿತು. ಹೀಗೆ ಇತರೆಡೆಯ ಶಾಸನಗಳ ವಿಷಯದಲ್ಲೂ ಆಗಿರುವುದು ಕಂಡುಬಂತು.

ಶಾಸನ ಸಂಪಾದಕರು ಅಪಾರ ಪರಿಶ್ರಮದಿಂದ ಶಾಸನಗಳನ್ನು ಪ್ರಕಟಿಸಿದ್ದಾರೆ. ಅವರ ಶ್ರಮ, ಸಾಧನೆ ಚಿರಸ್ಮರಣೀಯ. ಅವರು ಅಪಾರ ಶ್ರದ್ಧೆಯಿಂದ ಎಚ್ಚರಿಕೆಯಿಂದ ಇವನ್ನು ಪ್ರಕಟಿಸಿರುವರಾದರೂ ಅನೇಕ ಕಾರಣಗಳಿಂದ, ಮಿತಿಗಳಿಂದ ಹಲವು ರೀತಿಯ ಕುಂದುಕೊರತೆಗಳು ಸಹಜವಾಗಿಯೇ ಘಟಿಸಿರುತ್ತವೆ. ಅವನ್ನು ಗುರುತಿಸಿ ಸರಿಪಡಿಸುವುದು ಅತ್ಯಗತ್ಯ. ಏಕೆಂದರೆ ದೋಷಯುಕ್ತವಾದ ಪಾಠ ವಿವರಗಳು ನಮ್ಮ ಇತಿಹಾಸ, ಸಂಸ್ಕೃತಿ, ಭಾಷೆ ಇವುಗಳಿಗೆ ಸಂಬಂಧಿಸಿದಂತೆ ಅಸಮರ್ಪಕ ಅರ್ಥ, ವ್ಯಾಖ್ಯಾನ, ಅಭಿಪ್ರಾಯ, ತೀರ್ಮಾನಗಳಿಗೆ ಮೂಲವಾಗಿ, ವಸ್ತುಸ್ಥಿತಿ ಮಸಕಾಗಿ ಮರೆಯಾಗಿ, ಅವಾಸ್ತವವೆ ವಾಸ್ತವವೆನಿಸಿ ಪ್ರಚಲಿತವಾಗುವುದು ಸಾಧ್ಯ. ಇದು ಹೇಗೆಂಬುದಕ್ಕೆ ಶಾಸನಗಳ ಪುನರ್‌ಪರಿಶೀಲನೆಯ ಸಂಬಂಧದಲ್ಲಿ ನಾನು ಗಮನಿಸಿದ ಕೆಲವು ಸಂಗತಿಗಳು, ನಿದರ್ಶನಗಳು ಇಲ್ಲಿವೆ. ಇವುಗಳನ್ನು ಇಲ್ಲಿ ವಿವರಿಸುವುದರಿಂದ ಶಾಸನಗಳ ಮರುಪರಿಶೀಲನೆ ಕಾರ್ಯದ ಆವಶ್ಯಕತೆ ಮತ್ತು ಮಹತ್ವ ಮನವರಿಕೆಯಾಗಬಹುದೆಂಬುದು ನನ್ನ ಆಶಯ.

೧. **ಮಯೂರವರ್ಮನ ಚಂದ್ರವಳ್ಳಿ ಶಾಸನ:** ೧೯೨೯ರ ಮೈಸೂರು ಪುರಾತತ್ತ್ವ ಇಲಾಖೆಯ ವಾರ್ಷಿಕ ವರದಿಯಲ್ಲಿ ಪ್ರಕಟವಾಗಿರುವ ಈ ಶಾಸನವು ನಮ್ಮ ದೇಶದ ಅತಿಮುಖ್ಯ ಶಾಸನಗಳಲ್ಲೊಂದು. ಲಿಪಿಯ ಕಣ್‌ಪ್ರತಿ, ಛಾಯಾಚಿತ್ರ, ವಿಸ್ತಾರವಾದ ವಿವರಣೆಗಳೊಂದಿಗೆ ಇದನ್ನು ಪ್ರಕಟಿಸಿದ ಡಾ॥ ಎಂ. ಎಚ್. ಕೃಷ್ಣ ಅವರು, ಇದರ ಭಾಷೆ ಪ್ರಾಕೃತ ಎಂತಲೂ ಇದರ ಕಾಲ ಕ್ರಿ.ಶ. ಸು. ೨೫೮ ಎಂತಲೂ ನಿಶ್ಚಯಿಸಿದರು. ಅದರ ಮೂರು ಸಾಲುಗಳನ್ನು ಅವರು ಓದಿದುದು ಹೀಗೆ:

೧ ಕದಂಬಾಣಂ ಮಯೂರ ಶಮ್ಮಣಾ ವಿಣಮ್ಮಿ ಅಂ
೨ ತಟಾಕಂ ದೂಭ ತ್ರೇಕೂಟ ಅಭೀರ ಪಲ್ಲವ ಪಾರಿ
೩ ಯಾತ್ರಿಕ ಸಕಸ್ಥಾ[ಣ] ಸಯಿನ್ದಕ ಪುಣಾಟ ಮೋಕರಿ[ಣಾ]

''ತ್ರೇಕೂಟ, ಅಭೀರ, ಪಲ್ಲವ, ಪಾರಿಯಾತ್ರಿಕ, ಸಕಸ್ಥಾನ, ಸಯಿನ್ದಕ, ಪುಣಾಟ, ಮೋಕರಿಗಳನ್ನು ಸೋಲಿಸಿದ ಕದಂಬರ ಮಯೂರಶರ್ಮನಿಂದ (ಈ) ಕೆರೆ ನಿರ್ಮಿತ (ವಾಯಿತು)'' ಎಂದು ಅವರು ಇದರ ಅರ್ಥವನ್ನು ವಿವರಿಸಿ, ಮಯೂರನ ರಾಜ್ಯ ವಿಸ್ತಾರದ

ಒಂದು ನಕ್ಷೆಯನ್ನೂ ಕೊಟ್ಟಿದ್ದರು.

ಈ ಶಾಸನದ ಕಾಲ, ಮಯೂರನ ಕೆಲವು ಜಯಗಳು ಮತ್ತು ಲಿಪಿಯ ಪಾಠ ಇವನ್ನು ಕುರಿತು, ತರುವಾಯದಲ್ಲಿ, ಭಿನ್ನ ಅಭಿಪ್ರಾಯಗಳು ಬಂದುವು. ಕೃಷ್ಣ ಅವರ ಕಣ್‌ಪ್ರತಿಯಲ್ಲಿನ ಕೆಲವು ಅಕ್ಷರಗಳಿಗೂ ಅವರ ಓದಿಕೆಗೂ ಹೊಂದಿಕೆ ಕಾಣುವುದಿಲ್ಲ ಎನಿಸಿ, ಖ್ಯಾತ ವಿದ್ವಾಂಸರಾದ ಎಂ. ಗೋವಿಂದ ಪೈ, ಕೆ. ಪಿ. ಜಯಸ್ವಾಲ್, ಡಾ|| ಎಸ್. ಶ್ರೀಕಂಠಶಾಸ್ತ್ರೀ ಮತ್ತು ಡಾ|| ಪಿ. ಬಿ. ದೇಸಾಯಿ ಅವರುಗಳು ಕೃಷ್ಣ ಅವರ ಅದೇ ಕಣ್‌ಪ್ರತಿಯನ್ನೇ ಆಧರಿಸಿ ಊಹೆಯ ಓದಿಕೆಗಳನ್ನು ಕೊಡುತ್ತಾ ಹೋದರು. ಇವರು ಯಾರೂ ಖುದ್ದಾಗಿ ಬಂದು ಶಾಸನವನ್ನು ಪರಿಶೀಲಿಸಲಿಲ್ಲ. ಈ ಶಾಸನದ ಭಾಷೆ ಪ್ರಾಕೃತ; ಇದು ಮಯೂರನ ಜಯಗಳನ್ನು ಹೇಳುತ್ತದೆ ಎಂಬ ಕೃಷ್ಣ ಅವರ ಅಭಿಪ್ರಾಯವನ್ನು ಇವರೆಲ್ಲರೂ ಒಪ್ಪಿದ್ದರು. ಇನ್ನು ಕೆಲವರು ಮಯೂರನು ಇಷ್ಟೆಲ್ಲಾ ರಾಜ್ಯದವರನ್ನು ಗೆದ್ದಿದ್ದನೆ ? ಎಂಬ ಸಂಶಯವನ್ನೂ ವ್ಯಕ್ತಪಡಿಸಿದ್ದರು.

ಈ ಅಭಿಪ್ರಾಯ ವೈವಿಧ್ಯದಿಂದ ಕುತೂಹಲಗೊಂಡು ೧೯೮೩ರಲ್ಲಿ, ಈ ಶಾಸನದ ವಾಸ್ತವ ಅಕ್ಷರಗಳನ್ನು ಗುರುತಿಸುತ್ತ ಕೃಷ್ಣ ಅವರ ಲಿಪಿಚಿತ್ರದ ಅಕ್ಷರಗಳೊಂದಿಗೆ ತಾಳೆ ನೋಡುತ್ತ, ಸಾಕಷ್ಟು ದೀರ್ಘಕಾಲ ಎಚ್ಚರಿಕೆಯಿಂದ ಪರಿಶೀಲಿಸಿದಾಗ ಅಚ್ಚರಿಯ ಸಂಗತಿಗಳು ನನಗೆ ಕಂಡುಬಂದುವು. ಇದರ ಪಾಠ, ಭಾಷೆ, ವಿಷಯ ಸಂಪೂರ್ಣ ಭಿನ್ನವಾಗಿದ್ದುವು. ಇದರ ಭಾಷೆ ಪ್ರಾಕೃತವಾಗಿರಲಿಲ್ಲ ; ಸಂಸ್ಕೃತವಾಗಿದ್ದಿತು. ಮಯೂರನ ಜಯಗಳ ಪ್ರಸ್ತಾಪವೇ ಇದರಲ್ಲಿ ಇರಲಿಲ್ಲ. ಪುನರ್ಪರಿಶೀಲನೆಯ ಪಾಠ ಇದು:

೧. ಕದಂಬಾಣಂ ಮಯೂರವರ್ಮ್ಮಣಾ
೨. ತಟಾಕಂ ದೃಢಂ ಕೃತಂ ಅಭಿರುಪಂ ರ[ಚ]ಯಿತ್ವಾ
೩. ವಾಸ[ವಾ]ಸಕಂ ಸ್ಥಾಪಯಿತ್ವಾ ಕುಪಣಚ[ಮೋ]...

ಇದರ ಅರ್ಥ: ''ಕದಂಬರ ಮಯೂರವರ್ಮನಿಂದ ಈ ಕೆರೆಯು ಬಲಪಡಿಸಲ್ಪಟ್ಟಿತು. ಇದಕ್ಕೆ ಸುಂದರರೂಪವನ್ನು ರಚಿಸಿ, ಕಾಡಿನ ವಾಸದ ನೆಲೆಯನ್ನು ಸ್ಥಾಪಿಸಿ, ಕುಪಣಚಮ...'' ಎಂದಾಗುತ್ತದೆ. ಇಲ್ಲಿಯವರೆಗಿದ್ದ ಮಯೂರನ ಇತಿಹಾಸವೇ ಬದಲಾಗುವಂತಹ ಸಂಗತಿಗಳು ಪುನರ್‌ಪರಿಶೀಲನೆಯಿಂದಾಗಿ ಗೋಚರಿಸಿದುವು. ನೈಸರ್ಗಿಕ ಗುಳಿಗೆರೆ ಕಚ್ಚುಗಳ ಮೇಲ್ಮೈಯ ಲಿಪಿಯ ಪಡಿಯಚ್ಚೇ ಮೂಲಪಾಠದ ದೋಷಕ್ಕೆ ಕಾರಣವೆಂಬ ಅಂಶವೂ ಸ್ಪಷ್ಟವಾಯಿತು.[೧]

೨. **ಪೆರುಮಾಳೆ ದಣ್ಣಾಯಕನ ಶಾಸನ:** ಚಿತ್ರದುರ್ಗದ ಬೆಟ್ಟದಲ್ಲಿ ಗೋಪಾಲಸ್ವಾಮಿ ಹೊಂಡದ ಮೇಲುಭಾಗದ ಬಂಡೆಯೊಂದರಲ್ಲಿ ಒಂದು ಶಾಸನವಿದೆ.[೨] ಕ್ರಿಸ್ತಶಕ ೧೩ನೇ ಶತಮಾನದ ಕೊನೆಯಲ್ಲಿ ಹೊಯ್ಸಳರ ಮಾಂಡಲಿಕನಾಗಿ ಚಿತ್ರದುರ್ಗವನ್ನು ಆಳಿದ ಪೆರುಮಾಳೆದೇವ ದಣ್ಣಾಯಕನು ತನ್ನ ಹೆಸರಿನಲ್ಲಿ ಇಲ್ಲಿ ಸ್ಥಾಪಿಸಿದ ಬ್ರಹ್ಮಪುರಿಯನ್ನು ಈ ಶಾಸನ

---

೧. ಈ ಶಾಸನ ಕುರಿತ ನನ್ನ ಪುನರ್‌ಪರಿಶೀಲನೆ ಹಾಗೂ ಅದರ ಫಲಿತಾಂಶಗಳು ಪ್ರತ್ಯೇಕ ಲೇಖನವಾಗಿ ಆಗಲೇ ಪ್ರಕಟವಾಗಿವೆ ; ನೋಡಿ : 'ಚಂದ್ರವಳ್ಳಿ ಶಾಸನದ ಮೇಲೆ ಹೊಸ ಬೆಳಕು', ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ೬೯-೨, ಡಿಸೆಂಬರ್ ೧೯೮೪, ಪು. ೮೯-೧೦೦; ಕನ್ನಡಪ್ರಭ-ದಿನಪತ್ರಿಕೆ ವಾರದ ವಾಙ್ಮಯ, ೬-೧-೧೯೮೫, ಪು. i ಮತ್ತು iii.

೨. ಬಿ. ಎಲ್. ರೈಸ್ (ಸಂ.): ಎಪಿಗ್ರಾಫಿಯ ಕರ್ನಾಟಿಕ, ಸಂಪುಟ ೧೧, ಚಿತ್ರದುರ್ಗ ಜಿಲ್ಲೆಯ ಶಾಸನಗಳು, ಬೆಂಗಳೂರು, ೧೯೦೩, ಚಿತ್ರದುರ್ಗ ೭

ನಿರ್ದೇಶಿಸುತ್ತದೆ. ಬಿ. ಎಲ್. ರೈಸ್ ಅವರು ಇದನ್ನು ಹೀಗೆ ಓದಿದ್ದಾರೆ:

೧. ಶ್ರೀಮನು ಮಹಾ
೨. ಪ್ರಧಾನ ಪೆರುಮಾಳೆ
೩. ದೇವ ದಂಣ್ಣಾಯಕ
೪. ರು ತಾವು ಪೆರುಮಾ
೫. ಳೆಪುರವಾಗಿ ಮಾಡಿದ
೬. ಬ್ರಹ್ಮಪುರಿಗಿರಿ

ಅವರು ನೀಡಿರುವ ರೋಮನ್ ಲಿಪ್ಯಂತರದಲ್ಲೂ ಇದೇ ಪಾಠವಿದೆ.

ಇಲ್ಲಿ ಕೊನೆಯ ಪಂಕ್ತಿಯಲ್ಲಿ ಬರುವ 'ಬ್ರಹ್ಮಪುರಿಗಿರಿ' ಎಂಬ ಪಾಠ ಪರಿಶೀಲನಾರ್ಹ. ಈ ಪಾಠದಂತೆ, 'ಪೆರುಮಾಳೆಪುರವು ಒಂದು ಬ್ರಹ್ಮಪುರಿಬೆಟ್ಟ' ಅಥವಾ 'ಬ್ರಹ್ಮಪುರಿ ಇರುವ ಬೆಟ್ಟ' ಎಂದು ಅರ್ಥವಾಗುತ್ತದೆ. ಇದನ್ನು ರೈಸರು ತಮ್ಮ ಇಂಗ್ಲಿಷ್ ಅನುವಾದದಲ್ಲಿ 'The Brahmapuri hill' ಎಂದು ಅನುವಾದಿಸಿದ್ದಾರೆ.[೩] ಈ ಪಾಠವನ್ನು ಅನುಸರಿಸಿ ವಿಲಿಯಂ ಕೊಯಿಲೊ,[೪] ಡಾ|| ಎಂ. ವಿ. ಶ್ರೀನಿವಾಸ್, ಲಕ್ಷ್ಮಣ್ ತೆಲಗಾವಿ[೫] ಮೊದಲಾದವರು ಬ್ರಹ್ಮಪುರಿ ಒಂದು ಬೆಟ್ಟ ಎಂದು ಉಲ್ಲೇಖಿಸಿದ್ದಾರೆ. ಇದಲ್ಲದೆ ಲಕ್ಷ್ಮಣ್ ತೆಲಗಾವಿ ಮತ್ತು ಕೆ. ವೆಂಕಣ್ಣಾಚಾರ್ ಅವರು ''ಶಾಸನದಲ್ಲಿನ ಬ್ರಹ್ಮಪುರಿ ಬೆಟ್ಟ ಈಗಿನ ನೆಲ್ಲಿಕಾಯಿ ಸಿದ್ದಪ್ಪನ ಬೆಟ್ಟವಿರಬಹುದು. ಈ ಬಗ್ಗೆ ಶೋಧನೆ ಅಗತ್ಯ'' ಎಂದು ಬರೆದಿರುವುದೂ ಉಂಟು.[೬]

ಆದರೆ ಈ ಶಾಸನವನ್ನು ಖುದ್ದಾಗಿ ಪರಿಶೀಲಿಸಿದಾಗ ಅಲ್ಲಿ ಇರುವುದು 'ಬ್ರಹ್ಮಪುರಿಗಿರಿ' ಅಲ್ಲ, 'ಬ್ರಹ್ಮಪುರಿಗೇರಿ' (<ಬ್ರಹ್ಮಪುರಿ+ಕೇರಿ) ಎಂಬುದು ಗೋಚರಿಸುತ್ತದೆ. ಪಡಿಯಚ್ಚಿನ ನ್ಯೂನತೆಯಿಂದ ಈ ಪಾಠದೋಷ ಸಂಭವಿಸಿರಬಹುದು. ಒಂದೇ ಒಂದು ಅಕ್ಷರದ ಸ್ಖಾಲಿತ್ಯದಿಂದ ಬ್ರಹ್ಮಪುರಿಯು ಒಂದು 'ಕೇರಿ' ಆಗುವ ಬದಲು ಒಂದು 'ಗಿರಿ'ಯೇ ಆಗಿಹೋಯಿತು ! ಓದಿಕೆಯಲ್ಲಿ ಆಗುವ ತಪ್ಪು ಒಂದೇ ಒಂದು ಅಕ್ಷರದ್ದಾದರೂ ಅದು ಎಂತೆಂತಹ ಅರ್ಥ, ಊಹೆಗಳಿಗೆ ಎಡೆಕೊಡುತ್ತದೆ ಎಂಬುದು ಇಲ್ಲಿ ಸುವ್ಯಕ್ತ.

**೩. ಧವಳಪ್ಪನಗುಡ್ಡದ ಬುಡದಲ್ಲಿರುವ ಶಾಸನ:** ಡಾ|| ಎಂ. ಎಚ್. ಕೃಷ್ಣ ಅವರು ಪ್ರಕಟಿಸಿರುವ ಶಾಸನಗಳಲ್ಲಿ ಚಿತ್ರದುರ್ಗದ ಧವಳಪ್ಪನಗುಡ್ಡದ ಬುಡದಲ್ಲಿರುವ ಶಾಸನವೂ ಒಂದು.[೭] ಈ ಶಾಸನ ಇರುವುದು—'ಧವಳಪ್ಪನಗುಡ್ಡದ ನೆತ್ತಿಗೆ ಕೊಂಡೊಯ್ಯುವ ಗುಹಾದ್ವಾರದ ಪೂರ್ವದಿಕ್ಕಿನ ಗೋಡೆಯ ಮೇಲೆ' ಎಂದು ಇಂಗ್ಲಿಷ್ ಸೂಚನೆಯಲ್ಲೂ

---

೩. ಅದೇ, ಇಂಗ್ಲಿಷ್ ಅನುವಾದ ಭಾಗ, ಪು. ೪
೪ The Hoysala Vamsa, Bombay, 1950, p. 206
೫ ಶ್ರೀಲತೆ: 'ಚಿತ್ರದುರ್ಗ ಜಿಲ್ಲೆಯಲ್ಲಿ ಹೊಯ್ಸಳರ ಆಳ್ವಿಕೆ', ಚಂದ್ರವಳ್ಳಿ, ಚಿತ್ರದುರ್ಗ, ೧೯೭೬, ಪು. ೫೧-ಭಾಗ ೧
೬. ಐತಿಹಾಸಿಕ ಚಿತ್ರದುರ್ಗ (ಚಿತ್ರದುರ್ಗ, ೧೯೭೯)-ಗ್ರಂಥದಲ್ಲಿಯ 'ಚಿತ್ರದುರ್ಗದ ಪ್ರಮುಖ ಶಾಸನಗಳು' ಎಂಬ ನನ್ನ ಲೇಖನಕ್ಕೆ ಸಂಪಾದಕರ ಅಡಿ ಟಿಪ್ಪಣಿ, ಪು. ೪೭
೭. The Annual Report of the Mysore Archaeological Department of 1929, (1931), Chitrádurga 5, pp. 62, 212

'ಧವಳಪ್ಪನಗುಡ್ಡಕ್ಕೆ ಹೋಗುವ ದಾರಿಯಲ್ಲಿರುವ ಗುಹೆಯ ಪೂರ್ವದಿಕ್ಕಿನ ಗೋಡೆಯ ಮೇಲೆ' ಎಂದು ಕನ್ನಡದ ಸೂಚನೆಯಲ್ಲೂ ಹೇಳಲಾಗಿದೆ. ಇಲ್ಲಿ 'ಗುಹಾದ್ವಾರ', 'ದಾರಿಯಲ್ಲಿರುವ ಗುಹೆ' ಎಂಬ ಮಾತುಗಳು ಸ್ಥಳವನ್ನು ಕುರಿತಂತೆ ಸ್ವಲ್ಪ ಅಸ್ಪಷ್ಟತೆಯನ್ನು ಉಂಟುಮಾಡಬಹುದು. ಸ್ಥಳದ ವಿವರವನ್ನು ಕೂಡ ಸಂದಿಗ್ಧಕ್ಕೆಡೆಯಾಗದಂತೆ ದಾಖಲಿಸುವುದು ಆವಶ್ಯಕ. ಇಲ್ಲಿ 'ಗುಡ್ಡದ ನೆತ್ತಿಗೆ ಕೊಂಡೊಯ್ಯುವ ಗುಹಾಮಾರ್ಗ ಆರಂಭವಾಗುವಲ್ಲಿ' ಎಂದಿದ್ದಿದ್ದರೆ ಅಸ್ಪಷ್ಟತೆಗೆ ಅವಕಾಶವಿರುತ್ತಿರಲಿಲ್ಲ. ಹಾಗೆಯೇ, ಇಲ್ಲಿ ಗೋಡೆ ಯಾವುದೂ ಇಲ್ಲ; ಶಾಸನ ಇರುವುದು ಪೂರ್ವದಿಕ್ಕಿನ ಬಂಡೆಯ ಪಾರ್ಶ್ವದಲ್ಲಿ ಅಷ್ಟೆ.

ಈ ಶಾಸನವನ್ನು ಶ್ರೀಯುತರು ಹೀಗೆ ಓದಿ ಪ್ರಕಟಿಸಿದ್ದಾರೆ:

೧ ಶ್ರೀ ಸಿವಶಿರಿ
೨ ಕೊಳಾಳ ಸಿ
೩ ದ್ಧ ಭಕ್ತರು ಕಲ್
೪ ....ಪಿಸಿದ
೫ ಬಾರಹ

ಕನ್ನಡ ಲಿಪಿ ಪಾಠದ ೪ನೆಯ ಪಂಕ್ತಿಯಲ್ಲಿ ಆರಂಭದ ಕೆಲವು ಅಕ್ಷರಗಳು ನಷ್ಟಗೊಂಡಿರುವಂತೆ ಚುಕ್ಕಿಗಳಲ್ಲಿ ತೋರಿಸಲಾಗಿದೆ. ಆದರೆ ರೋಮನ್ ಲಿಪಿ ಪಾಠದಲ್ಲಿ ಯಾವ ಚುಕ್ಕಿಗಳೂ ಇಲ್ಲದೆ ಪಾಠ ಪೂರ್ತಿ ಇದೆ ಎಂಬಂತೆ ತೋರಿಸಲಾಗಿದೆ. ಇದರಲ್ಲಿ ಯಾವುದು ಸರಿ? ಈ ಶಾಸನದಲ್ಲಿ ಯಾವ ಅಕ್ಷರವೂ ನಷ್ಟವಾಗಿಲ್ಲವೆಂಬುದು ಮರುಪರಿಶೀಲನೆಯಿಂದ ಖಾತರಿಯಾಗುತ್ತದೆ.

ಈ ಶಾಸನದ ಭಾಷೆ ಮತ್ತು ಲಿಪಿ ಆಧುನಿಕ ಕನ್ನಡ ಎಂದು ಇಂಗ್ಲಿಷ್‌ನಲ್ಲಿ ಕೊಟ್ಟಿರುವ ಟಿಪ್ಪಣಿಯಲ್ಲಿ ಹೇಳಲಾಗಿದೆ. ಆದರೆ ಪ್ರತ್ಯಕ್ಷ ಪರಿಶೀಲನೆಯು, ಈ ಶಾಸನವು ಕ್ರಿ.ಶ. ಸು. ೧೩-೧೪ನೆಯ ಶತಮಾನದ ಕಾಲಕ್ಕೆ ಸೇರಿದುದು ಎಂಬುದನ್ನು ಶ್ರುತಪಡಿಸುತ್ತದೆ. ಇದಕ್ಕೂ ಆಶ್ಚರ್ಯದ ಸಂಗತಿಯೆಂದರೆ, ಅವರು ಈ ಶಾಸನವು ಚಿತ್ರದುರ್ಗ ಮತ್ತು ದಾವಣಗೆರೆಯ ರಸ್ತೆಯಲ್ಲಿ ಬರುವ ಕೊಳಾಳು ಗ್ರಾಮವಾಸಿಗಳಾದ ಸಿದ್ಧೇಶ್ವರದೇವರ ಕೆಲವು ಭಕ್ತರು ಬರೆದ ಬರಹವಿರಬೇಕೆಂದು ತೋರುತ್ತದೆ ಎಂದು ಬರೆದಿದ್ದಾರೆ. ಈ ಶಾಸನವನ್ನು ಪುನರ್ಪರಿಶೀಲಿಸಿದಾಗ, ಮೇಲಿನ ಈ ಅರ್ಥ ಅಥವಾ ಹೇಳಿಕೆಗೆ ಸಂಪೂರ್ಣ ಭಿನ್ನವಾದ ರೀತಿಯಲ್ಲಿ ಅದರ ಪಾಠವಿರುವುದು ಗಮನಕ್ಕೆ ಬರುತ್ತದೆ. ಅದರ ಸರಿಯಾದ ಪಾಠ ಇರುವುದು ಹೀಗೆ :

೧ ಶ್ರೀ ಸಿವಶಿರಿ
೨ ಕವುಳಾಸ ಸಿ
೩ ವಭಕ್ತರಲ್ಲದವ
೪ ರು ಹುಗ
೫ ಬಾರದು

ಇದರ ಅರ್ಥ ತಂತಾನೆ ಸ್ಪಷ್ಟವಿದೆ: ''ಶಿವ ಶ್ರೀ ಕೈಲಾಸ ಈ ಗಿರಿ, ಇದನ್ನು ಶಿವಭಕ್ತರಲ್ಲದವರು ಪ್ರವೇಶಿಸಲಾಗದು.'' ಶಿವಭಕ್ತರಲ್ಲದವರಿಗೆ ಧವಳಪ್ಪನಗುಡ್ಡದ ಮೇಲಕ್ಕೆ ಹೋಗಲು ಪ್ರವೇಶವನ್ನು ನಿಷೇಧಿಸುವಂತಿರುವ ಈ ಶಾಸನ, ಹಿಂದಿನ ಸಾಮಾಜಿಕ ಸಾಂಸ್ಕೃತಿಕ ಧಾರ್ಮಿಕ

ದೃಷ್ಟಿಯಿಂದ ಅತ್ಯಂತ ಅಪರೂಪವಾದದ್ದು. ಇಂತಹ ಕುತೂಹಲಕಾರಿ ಅರ್ಥದ ಪಾಠವನ್ನು ಈ ಶಾಸನ ಹೊಂದಿರುವುದು ಪುನರ್ಪರಿಶೀಲನೆಯಿಲ್ಲದೆ ಗಮನಕ್ಕೆ ಬರುವುದು ಹೇಗೆ? ಈ ಶಾಸನದ ಸಂಬಂಧವಾಗಿ ಪ್ರಕಟವಾಗಿರುವ ವಿಸಂಗತಿಗಳು ಕೂಡ ಅಸಮರ್ಪಕ ಪಡಿಯಚ್ಚಿನಿಂದಲೇ ಘಟಿಸಿರಬಹುದು. ಒರಟು ಮೇಲ್ಮೈ ಇರುವ ಗ್ರನೈಟ್ ಬಂಡೆಯಲ್ಲಿನ ನೈಸರ್ಗಿಕ ಗುಳಿಗಳು ಗೆರೆಗಳು ಸಮರ್ಪಕ ಪಡಿಯಚ್ಚನ್ನು ತೆಗೆಯುವಲ್ಲಿ ಅಡ್ಡಿಯಾಗುತ್ತವೆ. ಹಾಗಾಗಿ ಇಂತಹ ಬಂಡೆಗಳ ವಿಷಯದಲ್ಲಿ ಪಡಿಯಚ್ಚನ್ನೇ ಪೂರ್ಣವಾಗಿ ನೆಚ್ಚುವುದು ಅನೇಕ ವಿಸಂಗತಿಗಳು ಘಟಿಸಲು ಕಾರಣವಾಗಬಹುದು.

೪. **ಶಾಸನಗಳಲ್ಲಿ ಚಿತ್ರದುರ್ಗದ ಪ್ರಾಚೀನ ಹೆಸರಿನ ಪ್ರಾರಂಭಾಕ್ಷರ:** ಚಿತ್ರದುರ್ಗದ ಪ್ರಾಚೀನ ಹೆಸರನ್ನು ಶಾಸನಗಳಲ್ಲಿ ಹೇಗೆ ಓದಲಾಗಿದೆ ಎಂಬುದನ್ನು ಕುರಿತು ಇಲ್ಲಿ ಪ್ರಸ್ತಾಪಿಸುವುದು ಅಗತ್ಯ. ಬಿ. ಎಲ್. ರೈಸ್ ಅವರು ಬಹುತೇಕ ಕಡೆಗಳಲ್ಲಿ ಈ ಹೆಸರನ್ನು 'ಬೆಮ್ಮತ್ತನೂರು', 'ಬೆಮ್ಮತ್ತನಕಲ್ಲು' ಎಂದು ಮುಂತಾಗಿ 'ಬೆ'ಯಿಂದ ಪ್ರಾರಂಭಗೊಂಡಿರುವಂತೆ ಓದಿದ್ದಾರೆ.[೮] ಚಿತ್ರದುರ್ಗ ಇತಿಹಾಸದ ಬಗೆಗೆ ಕೆಲಸ ಮಾಡಿದ ಹುಲ್ಲೂರು ಶ್ರೀನಿವಾಸ ಜೋಯಿಸರು, ರೈಸರ 'ಬೆಮ್ಮತ್ತನಕಲ್ಲು' ಎಂಬ ಓದಿಕೆಯನ್ನು ಆಧರಿಸಿ, ಆದಿಶಂಕರಾಚಾರ್ಯರ ತರುವಾಯದಲ್ಲಿ 'ಬ್ರಹ್ಮರಾಕ್ಷಸ' ಎಂಬ ಪದ 'ಬೌದ್ಧ ಪಂಡಿತ' ಎಂಬುದಕ್ಕೆ ಸಮಾನಾರ್ಥಕವಾಯಿತೆಂದೂ ಬೌದ್ಧರಿದ್ದ ಹಿಂದಿನ ಚಿತ್ರದುರ್ಗ 'ಬ್ರಹ್ಮರಾಕ್ಷಸನಕಲ್ಲು' ಎಂದು ಕರೆಯಲ್ಪಟ್ಟು, ಅಪಭ್ರಂಶವಾಗಿ 'ಬೆಮ್ಮತ್ತನಕಲ್ಲು' ಎಂದಾಗಿರಬೇಕೆಂದೂ ತಿಳಿದರು.[೯]

ಹಿಂದಿನ ಕಾಲದಲ್ಲಿ 'ಬೆ' ಮತ್ತು 'ಚೆ'ಗಳ ಬರಹರೂಪ ಪರಸ್ಪರ ಹೋಲುತ್ತಿದ್ದುದೇ ಕಾರಣವಾಗಿ ರೈಸರು, ''ಚಿತ್ರದುರ್ಗದ ಪ್ರಾಚೀನ ಹೆಸರು ಬಂದಲ್ಲೆಲ್ಲ ಅದನ್ನು 'ಬೆಮ್ಮತ್ತನಕಲ್ಲು' ಎಂದು ಓದಿದ್ದಾರೆ. ಆದರೆ ಇದು 'ಚೆಮ್ಮತ್ತನ ಕಲ್ಲು' ಇದ್ದಿರಬಹುದು'' ಎಂದು ಡಾ|| ಎಂ. ಎಂ. ಕಲಬುರ್ಗಿ ಅವರು ಒಮ್ಮೆ ಊಹೆಯೊಂದನ್ನು ಮುಂದಿಟ್ಟಿದ್ದರು.[೧೦] ರೈಸರು ಬಹುತೇಕ ಕಡೆ 'ಬೆ'ಯಿಂದ ಪ್ರಾರಂಭವಾಗಿರುವಂತೆ ಓದಿದ್ದುದು ನಿಜ. ಆದರೆ ಇದಕ್ಕೆ ಅಪವಾದವೆಂಬಂತೆ ಕೆಲವೇ ಕೆಲವೆಡೆ 'ಬಿ' ಮತ್ತು 'ಭಿ'ಗಳಿಂದ ಪ್ರಾರಂಭವಾಗಿರುವಂತೆಯೂ ಇನ್ನೂ ಆಶ್ಚರ್ಯವೆಂದರೆ, ಎರಡು ಕಡೆ 'ಚಿ'ಯಿಂದಲೇ ಪ್ರಾರಂಭವಾಗಿರುವಂತೆಯೂ ಓದಿದ್ದರು.[೧೧] ಶಾಸನಾಕ್ಷರಗಳನ್ನು ಖುದ್ದು ಅಭ್ಯಸಿಸಿ ನೋಡಿದಾಗ, ಬೆ, ಬಿ, ಭಿ, ಚಿಗಳು ಕೆಲವು ಶತಮಾನಗಳ ಅವಧಿಯಲ್ಲಿ ಪರಸ್ಪರ ರೂಪಸಾದೃಶ್ಯವನ್ನು ಹೊಂದಿದ್ದುದು ಕಂಡುಬರುತ್ತದೆ. ಈ ರೂಪಸಾದೃಶ್ಯವು ಮೇಲೆ ಹೇಳಿದ ನಾಲ್ಕು ರೀತಿಯ ಓದಿಕೆಗೆ ಕಾರಣವಾದುದೂ ಎಲ್ಲ ಕಡೆಯಲ್ಲೂ ಚಿತ್ರದುರ್ಗದ ಪ್ರಾಚೀನ ಹೆಸರಿನ ಪ್ರಾರಂಭಾಕ್ಷರ 'ಚಿ'ಯೇ ಇರುವುದೂ ಖಚಿತವಾಗುತ್ತದೆ. ಇದರಿಂದ

---

೮. ಉದಾಹರಣೆ: ಚಿತ್ರದುರ್ಗ, ಹೊಳಲ್ಕೆರೆ ಮತ್ತು ಜಗಲೂರು ತಾಲ್ಲೂಕುಗಳ ಶಾಸನಗಳು-ಎ.ಕ., ಸಂಪುಟ ೧೧

೯. ಲಕ್ಷ್ಮಣ್ ತೆಲಗಾವಿ, ಡಾ|| ಎಂ. ವಿ. ಶ್ರೀನಿವಾಸ್ (ಸಂ.): ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು, ಚಿತ್ರದುರ್ಗ, ೧೯೭೬. ಪು. ೨೭, ೨೮

೧೦. ಸಾಹಿತ್ಯ ಸಂಪಾದನೆ, ಮದರಾಸು, ೧೯೭೯, ಪು. ೩೦

೧೧. ಎ.ಕ., ಸಂಪುಟ ೧೧, ಚಿತ್ರದುರ್ಗ ೩೩, ಚಳ್ಳಕೆರೆ ೨೭, ಚಿತ್ರದುರ್ಗ ೬. ೭೬ ಮತ್ತು ಹೊಳಲ್ಕೆರೆ ೨೪

'ಬ್ರಹ್ಮರಾಕ್ಷಸನಕಲ್ಲು' ಅಪಭ್ರಂಶವಾಗಿ 'ಬೆಮ್ಮತ್ತನಕಲ್ಲು' ಆಯಿತು ಎಂಬ ಊಹೆ, ಅನುಮಾನ ದೂರವೇ ಉಳಿಯುತ್ತವೆ.[೨]

**೫. ಚಂದ್ರವಳ್ಳಿಯ ಬಳಿಯ ಒಂದು ನಿಸಿದಿ ಶಾಸನ:** ಚಿತ್ರದುರ್ಗ ಜಿಲ್ಲೆಯ ಶಾಸನಗಳ ಸಂಪುಟದಲ್ಲಿ, ಬಿ. ಎಲ್. ರೈಸ್ ಅವರು ಪ್ರಕಟಿಸಿರುವ ೮೩ನೆಯ ಶಾಸನದ ಪಾಠ ಹೀಗಿದೆ:

೧ ಸೆಟಿ ಕಟ್ಟೆ
೨ ಬಾಗವೆ

ಚಿತ್ರದುರ್ಗದ ಬಳಿ ಚಂದ್ರವಳ್ಳಿಗೆ ಹೋಗುವ ದಾರಿಯಲ್ಲಿನ ಹನುಮಂತ ದೇವಸ್ಥಾನಕ್ಕೆ ಪಶ್ಚಿಮದಲ್ಲಿ ಒಂದು ಗುಂಡಿನಲ್ಲಿರುವ ಶಾಸನ ಇದು. ಇದರ ಪ್ರಮಾಣ ಕಾಲಾದಿ ವಿವರಗಳನ್ನು ರೈಸರು ಕೊಟ್ಟಿರುವುದಿಲ್ಲ. ಮೇಲಿನ ಶಾಸನಪಾಠದ ಅರ್ಥ 'ಸೆಟ್ಟಿಕಟ್ಟೆ ಎನ್ನುವ ಸ್ಥಳದ ಇಲ್ಲವೆ ಮನೆತನದ ಬಾಗವ್ವೆ' ಎಂದು ಆಗಬಹುದು. ಅಂದರೆ ಇದು ಬಾಗವ್ವೆ ಎಂಬ ಒಬ್ಬ ಸ್ತ್ರೀಯನ್ನು ಸೂಚಿಸುತ್ತದೆ, ಅಷ್ಟೆ. ಆದರೆ ಈ ಶಾಸನವನ್ನು ಖುದ್ದಾಗಿ ಮರುಪರಿಶೀಲಿಸಿದಾಗ ಈ ಮೇಲಿನ ಓದಿಕೆ ಸರಿಯಾದುದಲ್ಲ ಎಂಬುದು ತಿಳಿಯುತ್ತದೆ. ಇದರ ವಾಸ್ತವ ಪಾಠ:

೧ ಸೆಟಿಕವೆ
೨ ಬಾಗವೆ

ಅಂದರೆ ಈ ಶಾಸನದಲ್ಲಿರುವುದು ಒಬ್ಬಳ ಹೆಸರಲ್ಲ, ಇಬ್ಬರು ಸ್ತ್ರೀಯರ ಹೆಸರು. ಎರಡೂ ಹೆಸರಿನ ಕೊನೆಯಲ್ಲಿರುವ 'ವೆ' ಅಕ್ಷರಗಳು ಒಂದರ ಮೇಲೊಂದು ಅಂಟಿಕೊಂಡಂತಿರುವುದೇ ರೈಸರ ಓದಿಕೆಯಲ್ಲಿ ಸ್ಖಾಲಿತ್ಯ ಉಂಟಾಗಲು ಕಾರಣವಿರಬೇಕು.

ಇದೊಂದು ಚಿಕ್ಕ ಶಾಸನ; ಇಬ್ಬರು ಹೆಂಗಸರ ಹೆಸರಿವೆ; ಇದರಲ್ಲಿ ಇರುವ ಮಹತ್ತ್ವವಾದರೂ ಏನು?—ಎನಿಸಬಹುದು. ಆದರೆ ಈ ಶಾಸನ ಚಿಕ್ಕದೇ ಇದ್ದರೂ ಚಿತ್ರದುರ್ಗದ ಪ್ರಾದೇಶಿಕ ಇತಿಹಾಸದ ದೃಷ್ಟಿಯಿಂದ ಗಮನಾರ್ಹವಾದುದು. ಏಕೆಂದರೆ, ಇಲ್ಲಿ ಜೈನಮತವಿದ್ದುದರ ಕುರುಹಾಗಿ ಎರಡು ಸಾಲಿನ ಸಣ್ಣ ನಿಸಿದಿ ಶಾಸನವೊಂದನ್ನು ಬಿಟ್ಟರೆ,[೩] ಇನ್ನಾವ ಸ್ಪಷ್ಟ ಆಧಾರವೂ ಈತನಕ ದೊರೆತಿರಲಿಲ್ಲ. ಈಚೆಗೆ ಆರು ನಿಸಿದಿ ಶಾಸನಗಳೂ ಮೂರು ನಿಸಿದಿ ಸೂಚಕ ಕೆತ್ತನೆಗಳೂ ದೊರೆತಿವೆ. ಆದರೆ ೧೯೦೩ರಷ್ಟು ಹಿಂದೆಯೇ ಪ್ರಕಟವಾಗಿರುವ ಈ ಪುಟ್ಟ ಶಾಸನವೂ ಒಂದು ನಿಸಿದಿ ಶಾಸನವೇ. ಅದರಲ್ಲೂ ಈ ಪ್ರದೇಶದಲ್ಲಿ ಜೈನ ಸ್ತ್ರೀಯರು ಸಮಾಧಿ ಮರಣ ಪಡೆದುದರ ನಿಸಿದಿಯೆಂದರೆ ಸದ್ಯಕ್ಕೆ ಇದೇ.

ಇದು ನಿಸಿದಿ ಎಂದು ತಿಳಿದುಬಂದುದು ಹೇಗೆ? ಇದು ತಿಳಿದು ಬರುವುದು, ಈ ಶಾಸನದ ಮಗ್ಗುಲಲ್ಲೇ ಇರುವ ರೇಖಾಕೆತ್ತನೆಯನ್ನು ಸರಿಯಾಗಿ ಗಮನಿಸಿದಾಗ ಮಾತ್ರ: ಸೂರ್ಯ ಚಂದ್ರರ ನಡುವೆ ಮುಕ್ಕೊಡೆ; ಅದರ ಕೆಳಗೆ ನಿಂತಿರುವ ತೀರ್ಥಂಕರ; ಅವನ ಎಡಬಲಕ್ಕೆ ಎರಡು ಚಾಮರಗಳು; ಅವನ ಸನ್ನಿಧಿಯಲ್ಲೆ ಎಡಬಲದಲ್ಲಿ ವ್ರತಧಾರಿಗಳಾಗಿ ಕುಳಿತ (ಸಮಾಧಿ ಮರಣ ಪಡೆದ) ಇಬ್ಬರು ಸ್ತ್ರೀಯರು; ಅವರ ಕೆಳಗೆ ಒಂದೆಡೆ ಅಟ್ಟವಣೆಯ ಮೇಲೆ ಇರಿಸಿರುವ (ಜೈನಧರ್ಮ) ಗ್ರಂಥ—ಇವನ್ನು ನೋಡಬಹುದು.

---

೧೨. ವಿವರಗಳಿಗೆ: ಜಿ. ರಾಜಶೇಖರಪ್ಪ: ''ಚಿತ್ರದುರ್ಗದ ಪ್ರಾಚೀನ ಹೆಸರಿನ ಪ್ರಥಮಾಕ್ಷರ 'ಚೆ'...ಅಲ್ಲ 'ಚಿ','' ಸಾಧನೆ, ೧೩-೪, ಅಕ್ಟೋಬರ್-ಡಿಸೆಂಬರ್ ೧೯೮೪, ಪು. ೯೧-೯೮

೧೩. ಎ. ಕ., ಸಂಪುಟ ೧೧, ಚಿತ್ರದುರ್ಗ ೧೮

ರೈಸರು ೧೯೦೩ರಲ್ಲಿ ಈ ಶಾಸನವನ್ನು ಪ್ರಕಟಿಸಿದಾಗ ಇದನ್ನು ನಿಸಿದಿ ಎಂದು ಉಲ್ಲೇಖಿಸಲಿಲ್ಲ. ತರುವಾಯ, ೧೯೨೯ರಲ್ಲಿ ಚಂದ್ರವಳ್ಳಿ ಭೂಶೋಧನೆ ಮಾಡಿದ ಕಾಲದಲ್ಲಿ ಡಾ॥ ಎಂ. ಎಚ್. ಕೃಷ್ಣ ಅವರು ಈ ಶಾಸನ ನೋಡಿದರಾದರೂ ರೈಸರ ಓದಿಕೆಯಲ್ಲಾಗಿದ್ದ ಸ್ಖಾಲಿತ್ಯವನ್ನು ಅವರು ಗುರುತಿಸಲಿಲ್ಲ. ಆದರೆ ಈ ಶಾಸನದ ಬಲಬದಿಯಲ್ಲಿ ರೇಖಾಚಿತ್ರ ಕೊರೆದಿರುವುದನ್ನು ಅವರು ಹೊಸದಾಗಿ ಗುರುತಿಸಿದರು. ಆದರೂ ಅವರು ಈ ಚಿತ್ರದಲ್ಲಿ ಏನೇನಿದೆ ಎಂದು ಪೂರ್ಣವಾಗಿ ಗುರುತಿಸಲಿಲ್ಲ; ಹಾಗೆಯೇ, ಈ ಚಿತ್ರ ಜೈನಸಂಬಂಧವಾದುದು ಅಥವಾ ಇದು ನಿಸಿದಿಸೂಚಕ ಕೆತ್ತನೆ ಎಂಬುದು ಸಹ ಅವರ ಗಮನಕ್ಕೆ ಬರಲಿಲ್ಲ. ಈ ಶಾಸನ ಮತ್ತು ಚಿತ್ರದ ಬಗೆಗೆ ಅವರು ಬರೆಯಲಾದ ಮಾತುಗಳಿವು[೧೪]: "...ಆ ಬಂಡೆಗಳಲ್ಲೊಂದರ ಮೇಲೆ, ಈಗಾಗಲೇ ಪ್ರಕಟಿಸಲಾದ ಒಂದು ಶಾಸನವಿದೆ ನೋಡಿ: ಎ.ಕ.,೧೧ ಚಿತ್ರದುರ್ಗ ೮೩. ಆ ಬಂಡೆಯಲ್ಲೇ ಬಲಬದಿಯಲ್ಲಿ ಸೂರ್ಯಚಂದ್ರರ ನಡುವೆ ಮನುಷ್ಯಾಕೃತಿಯೊಂದನ್ನು ಕೊರೆಯಲಾಗಿದೆ. ಇವನು ಚಾಮರ ಅಥವಾ ಚವರಿಯಂತೆ ಕಾಣುವುದೇನನ್ನೋ ಕೈಗಳಲ್ಲಿ ಹಿಡಿದುಕೊಂಡಿದ್ದಾನೆ." [೧೪]*ಈ ಮಾತುಗಳನ್ನು ನೋಡಿದರೆ, ಅವರು ಈ ಚಿತ್ರವನ್ನು ಸಮರ್ಪಕವಾಗಿ ಸಮಗ್ರವಾಗಿ ನೋಡಿಲ್ಲದಿರುವುದು ಸ್ಪಷ್ಟವಾಗುತ್ತದೆ. ಅವರು ಹೇಳಿದಂತೆ, ಇಲ್ಲಿ ಮನುಷ್ಯಾಕೃತಿಯು ಕೈಗಳಲ್ಲಿ ಏನನ್ನು ಹಿಡಿದುಕೊಂಡಂತೆಯೂ ಚಿತ್ರಿತವಾಗಿಲ್ಲ. ಪುನರ್ಪರಿಶೀಲನೆ ಮಾಡುವುದರಿಂದ ಇಂತಹ ಅಂಶಗಳೆಲ್ಲ ಸ್ಪಷ್ಟವಾಗುವುವಲ್ಲದೆ, ಕ್ರಿ.ಶ. ಸು. ೧೩ನೇ ಶತಮಾನದ ಸುತ್ತಿನಲ್ಲಿ, ಇಲ್ಲಿ ಹೆಂಗಸರು ಸಹ ಸಮಾಧಿ ಮರಣ ಪಡೆಯುತ್ತಿದ್ದರೆಂಬಷ್ಟು ಇಲ್ಲಿ ಜೈನಮತವು ಪ್ರಭಾವಶಾಲಿಯಾಗಿ ಆಚರಣೆಯಲ್ಲಿದ್ದುದು ವ್ಯಕ್ತವಾಗುತ್ತದೆ.

**೬. ಸಂಪಿಗೆಸಿದ್ಧೇಶ್ವರ ದೇವಾಲಯದಲ್ಲಿರುವ ಮಲ್ಲಿನಾಥ ಒಡೆಯನ ಶಾಸನ:** ಚಿತ್ರದುರ್ಗದ ಸಂಪಿಗೆಸಿದ್ಧೇಶ್ವರ ದೇವಾಲಯದ ಬಾಗಿಲ ಬಳಿ ಜಗಲಿಯ ಮೇಲೆ ಎರಡು ಶಾಸನಗಳಿವೆ. ವಿಜಯನಗರದ ದೊರೆ ಒಂದನೇ ಬುಕ್ಕರಾಯನ ಮಾಂಡಲಿಕನಾಗಿ ಚಿತ್ರದುರ್ಗವನ್ನು ಆಳಿದ ಮಲ್ಲಿನಾಥ ಒಡೆಯನು ಕ್ರಿ.ಶ. ೧೩೫೫ ಮತ್ತು ೧೩೫೬ರಲ್ಲಿ ಹಾಕಿಸಲಾದ ದಾನಶಾಸನಗಳು ಇವು.[೧೫] ಈ ಶಾಸನಗಳು, ಯಾವೊಂದು ಅಕ್ಷರವೂ ಮುಕ್ಕಾಗದೆ ಚೆನ್ನಾಗಿಯೇ ಇದ್ದರೂ ಕ್ರಿ.ಶ. ೧೩೫೬ರ ಶಾಸನದಲ್ಲಿ, ಹಲವೆಡೆ ಅಕ್ಷರಗಳು ಮುಕ್ಕಾಗಿರುವಂತೆ ರೈಸರು ತೋರಿಸಿರುವರಲ್ಲದೆ, ಕೆಲವು ಅಕ್ಷರಗಳನ್ನು ತಪ್ಪಾಗಿಯೂ ಓದಿದ್ದಾರೆ.[೧೬] ಒಂದು ಭಾಗದ ನಿದರ್ಶನವನ್ನು ಇಲ್ಲಿ ನೋಡಬಹುದು:

ಈ ಶಾಸನದ ಆರಂಭಭಾಗದಲ್ಲಿ ಒಂದು ಲಿಂಗಸ್ತೋತ್ರ ಬರುತ್ತದೆ. ಈ ಬಗೆಯ ಲಿಂಗಸ್ತೋತ್ರ ಶಾಸನಗಳಲ್ಲಿ ದೊರೆಯುವುದು ವಿರಳ. ರೈಸರು ಇದನ್ನು ಓದಿರುವುದು ಹೀಗೆ:

---

೧೪. ನೋಡಿ: *Excavation at Chandravalli,* A Supplement to M.A.R. of 1929, p.11

೧೪* ಈ ಸಾಲುಗಳ ಕನ್ನಡಾನುವಾದ ನನ್ನದು.

೧೫. ಎ. ಕ., ಸಂಪುಟ ೧೧, ಚಿತ್ರದುರ್ಗ, ೨ ಮತ್ತು ೩

೧೬ ಹೀಗೆ ಯಾವೊಂದು ಅಕ್ಷರವೂ ನಷ್ಟವಾಗಿರದಿದ್ದರೂ ಬಹಳ ಅಕ್ಷರಗಳು ನಷ್ಟವಾಗಿರುವಂತೆ ಚುಕ್ಕಿಗಳ ಮೂಲಕ ತೋರಿಸಿರುವ ಇನ್ನೂ ಅನೇಕ ಶಾಸನಗಳಿವೆ. ಉದಾಹರಣೆಗೆ, ಅದೇ ಎ.ಕ., ಸಂಪುಟ ೧೧ರಲ್ಲಿಯ ಚಿತ್ರದುರ್ಗ ೩೨ರ ಶಾಸನವನ್ನು ನೋಡಬಹುದು.

೨ ॥ ಪರಮನೆ ಪರತರಕ್ರಿತ್ಯನೆ...ಪರನೆ ಪರಾಮೇಶನೆ
೩ ...ನೆಗಾಧಾರನೆ ಪರಲೋಕ ಹಿತಾರ್ತ್ಥನೆ ಪಾಪದಾವನೆ ಪಾಲಿಪನೆ
ಪರಾ...ನೆ ಪರಸುರರ ಪಿತನೆ ಪವಿತ್ರನೆ ಕ
೪ ರುಣಿಸೈ ವರಂದಾನಿ ಪ್ರಸಿದ್ಧಲಿಂಗವೇ ॥

ಈ ಭಾಗ ಆರುಸಾಲಿನ ಒಂದು ಪದ್ಯವಿರಬೇಕೆಂದು ಭಾವಿಸಿ, ರೈಸರು ರೋಮನ್ ಲಿಪ್ಯಂತರ ಪಾಠದಲ್ಲಿ ಅಲ್ಲಲ್ಲಿ ತಿದ್ದಿ ಅಳವಡಿಸಿದ್ದಾರೆ. ಇದನ್ನು ಕನ್ನಡದಲ್ಲಿ ಹೀಗೆ ಇಡಬಹುದು:

ಪರಮನೆ ಪರತರ-ಕೃತ್ಯನೆ...
ಪರನೆ ಪರಮೇಶನೆ ನಗ-ಧರನೆ
ಪರ-ಲೋಕ-ಹಿತಾರ್ಥನೆ ಪಾಪದಾವನೆ ಪಾಲಿಪನೇ
ಪರ......ನ।
ಪರ-ಸುರರ ಪಿತನೆ ಪವಿತ್ರನೆ
ಕರುಣಿಸೈ ವರಂದಾನಿ[ಪ]ರ ಸಿಧ-ಲಿಂಗವೇ ॥

ಇದರ ಆಧಾರದ ಮೇಲೆ ಈ ಭಾಗದ ಛಂದಸ್ಸಿನ ಬಗೆಗೆ ಕೆಲವು ಅಭಿಪ್ರಾಯಗಳು ಬಂದಿವೆ. ಅಲ್ಲಲ್ಲಿ ಅಕ್ಷರಗಳು ತ್ರುಟಿತವಾಗಿ ಅಸಮಗ್ರವಾಗಿರುವ ಪಾಠವನ್ನು ಆಧರಿಸಿ—ಛಂದಸ್ಸಿನಂತಹ ಲೆಕ್ಕಾಚಾರನಿಷ್ಠವಾದ—ತಾಂತ್ರಿಕ ಅಂಶವೊಂದನ್ನು ಕುರಿತು ವರ್ತಿಸುವುದೂ ನಿರ್ಣಯ ಕೊಡುವುದೂ ಶಂಕಾತೀತ ಎನಿಸುವುದಿಲ್ಲ. ಆದರೂ ಇದು 'ಬ್ರಹ್ಮಗಣಾನ್ವಿತವಾದ ಒಂದು ಮೂಲ ಷಟ್ಪದಿ' ಎಂದೂ[17] ಇದು ಅಂಶಷಟ್ಪದಿಯಾಗಿರದೆ ಮಾತ್ರಾಷಟ್ಪದಿ ಇರಬಹುದು ಎಂದೂ[18] ಇದು ಮಾತ್ರಾಗಣಾನ್ವಿತವಾದ ಭೋಗಷಟ್ಪದಿಯ ಒಂದು ಪ್ರಕಾರ ಎಂದೂ[19] ಬೇರೆ ಬೇರೆ ಅಭಿಪ್ರಾಯಗಳು ಬಂದಿವೆ.

ಆದರೆ ಆಶ್ಚರ್ಯವೇನೆಂದರೆ, ಪುನರ್ಪರಿಶೀಲನೆ ಮಾಡಿದಾಗ ಶಾಸನದಲ್ಲಿ ಈ ಭಾಗದ ಪಾಠ ಯಾವೊಂದು ಅಕ್ಷರವೂ ಮುಕ್ಕಾಗಿರದೆ ಸಮಗ್ರವಾಗಿಯೇ ಇರುವುದು ಕಂಡುಬರುತ್ತದೆ. ಕೆಳಗೆ ಕೊಟ್ಟಿರುವ ವಾಸ್ತವ ಪಾಠವನ್ನು ರೈಸರ ಪಾಠದೊಂದಿಗೆ ಹೋಲಿಸಿ ಶಾಸನಕಾರನಿಂದ ಅನೇಕ ಕಾಗುಣಿತದೋಷಗಳಾಗಿರುವುದನ್ನೂ ಗಮನಿಸಿ:

೨ ॥ ಪರಮನೆ ಪರಚವಕ್ರುತನೆ ಪರಾಪರನೆ ಪರಮೇಶನೀಶನೆ
೩ ಪಂನ್ನೆಗಾಧಾರನೆ ಪಲವು ಲೋಕ ಹಿತಾರ್ತ್ಥನೆ ಪಾಪಧಾವನೆ ಪಾಲಿಪನೆ
ಪರಾಭುಜನೆ ಪರಸುಧರ ಪ್ರೀತನೆ ಪವಿತ್ರನೆ ಕ
೪ ರುಣಿಸೈ ವರದಾನಿ ಪ್ರಸಿದ್ಧಲಿಂಗವೆ ॥

---

೧೭ ಡಾ॥ ಜಿ. ವರದರಾಜರಾವ್: 'ಷಟ್ಪದಿಯ ಉಗಮ ಮತ್ತು ಪ್ರಾರಂಭ'', ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಸಂಪುಟ ೩, ಬೆಂಗಳೂರು, ೧೯೭೭, ಅಧ್ಯಾಯ ೩೧, ಪು. ೩೬೮

೧೮ ಡಾ॥ ಟಿ. ವಿ. ವೆಂಕಟಾಚಲ ಶಾಸ್ತ್ರೀ: ಕನ್ನಡ ಛಂದಃಸ್ವರೂಪ, ಮೈಸೂರು, ೧೯೭೮, ಪು. ೫೮೬, ಅಡಿ ಟಿಪ್ಪಣಿ ೧೦೫

೧೯. ಹನುಮಾಕ್ಷಿ ಗೋಗಿ: 'ಶಾಸನದಲ್ಲೊಂದು ಷಟ್ಪದಿ', ಸಾಧನ, ೯-೩, ಜುಲೈ-ಸೆಪ್ಟೆಂಬರ್ ೧೯೮೦, ಪು. ೧೫೦, ೧೫೧

ಛಂದಸ್ಸಿನ ಲೆಕ್ಕಾಚಾರಕ್ಕೆ ಬೇಕಾದ ಎಲ್ಲ ಘಟಕಗಳೂ ಇರುವ ಪಾಠ ಈಗ ನಮಗೆ ದೊರೆತಂತಾಗುತ್ತದೆ. ಈ ಸಮಗ್ರ ಪಾಠವನ್ನು ಇಟ್ಟುಕೊಂಡು ಇದರ ಛಂದಸ್ಸು ಯಾವುದೆಂಬುದರ ವಿವೇಚನೆಗೆ ಇನ್ನು ಮುಂದುವರಿಯಬಹುದು. ಸದ್ಯಕ್ಕೆ ಇದು ಯಾವ ಛಂದಸ್ಸು ಎಂಬುದನ್ನು ನಿರ್ಣಯಿಸುವುದು ಕಷ್ಟವಾಗಿದೆ. ಈ ಭಾಗ ಬಹುಶಃ ಅಂಶಗಣಾನ್ವಿತವಾದ ಎರಡು ತ್ರಿಪದಿಗಳಿದ್ದರೂ ಇರಬಹುದೆಂದು ತೋರುತ್ತದೆ.[೨೦] ಈ ಕುರಿತ ಅಭಿಪ್ರಾಯ ಏನೇ ಇರಲಿ, ಇಲ್ಲಿ ಮರುಪರಿಶೀಲನೆಯು ಛಂದಸ್ಸಿನಂತಹ ಇನ್ನೊಂದು ವಿಷಯದ ಅಧ್ಯಯನಕ್ಕೆ ಕೂಡ ಹೇಗೆ ನೆರವಾಗಬಲ್ಲುದೆಂಬುದನ್ನು ಗಮನಿಸಬೇಕು.

೭. **ಇಮ್ಮಡಿ ಮೆದಕೇರಿನಾಯಕನ ಒಂದು ತಾಮ್ರಶಾಸನ:** ಡಾ|| ಎಂ. ಎಚ್. ಕೃಷ್ಣ ಅವರು ಛಾಯಾಚಿತ್ರ ಸಮೇತ ಪ್ರಕಟಿಸಿರುವ ತಾಮ್ರಶಾಸನವೊಂದು ಚಿತ್ರದುರ್ಗದ ರಾಜ್ಯ ಪುರಾತತ್ತ್ವ ವಸ್ತುಸಂಗ್ರಹಾಲಯದಲ್ಲಿದೆ. ಇದು ಇಮ್ಮಡಿ ಮೆದಕೇರಿನಾಯಕನ ಒಂದು ದಾನಶಾಸನ.[೨೧] ಇದನ್ನು ಮರುಪರಿಶೀಲಿಸುವಾಗ ೩೧ ಪಂಕ್ತಿಗಳ ಈ ಶಾಸನದಲ್ಲಿ ಮೂವತ್ತಕ್ಕೂ ಹೆಚ್ಚುಕಡೆ ಓದಿಕೆಯಲ್ಲಿ ವ್ಯತ್ಯಾಸವಾಗಿರುವುದು ಕಾಣಿಸುತ್ತದೆ. ಅಲ್ಲದೆ, ಕನ್ನಡ ಪಾಠಕ್ಕೂ ರೋಮನ್ ಪಾಠಕ್ಕೂ ಕೆಲವೆಡೆ ವ್ಯತ್ಯಾಸವಿರುವುದು ಸಹ ಕಂಡುಬರುತ್ತದೆ.[೨೨] ಉದಾಹರಣೆಗೆ, ಕನ್ನಡದಲ್ಲಿ 'ಕಾಮಗೆಲೆ' ಪಂಕ್ತಿ ೬ ಎಂದಿದ್ದರೆ, ರೋಮನ್‌ನಲ್ಲಿ 'ಕಾಮಗೇತಿ' ಎಂದಿದೆ. ಇವೆರಡರಲ್ಲಿ ಸರಿ ಯಾವುದು? ಒಪ್ಪೋಲೆ ಇಲ್ಲದಿರುವುದರಿಂದ ಯಾವ ಶಂಕೆಗೂ ಸಮಾಧಾನ ಅಲಭ್ಯ. ಪುನರ್ಪರಿಶೀಲನೆಯಿಂದ 'ಕಾಮಗೇತಿ' ಎಂಬ ರೋಮನ್ ಪಾಠವೇ ಸರಿಯಾದುದು ಎಂದು ತಿಳಿಯುತ್ತದೆ. ಇಲ್ಲಿ ಎಲ್ಲ ವ್ಯತ್ಯಾಸಗಳನ್ನು ಪೂರ್ಣ ಪಾಠದೊಂದಿಗೆ ಕೊಡಲು ಆಗುವಂತಿಲ್ಲ; ತೀರಾ ಮುಖ್ಯವೆನಿಸುವ ಕೆಲವು ನಿದರ್ಶನಗಳನ್ನು ಮಾತ್ರ ನೋಡಬಹುದು:

| ಪಂಕ್ತಿ | | ಕೃಷ್ಣ ಅವರ ಪಾಠ | ನಿಜವಾಗಿ ಇರುವ ಪಾಠ |
|---|---|---|---|
| (i) ೧೪ | ... | ಲೋವಿದಾಸ | ತೋಪದಾಸ |
| (ii) ೨೪ | ... | ಜೌಗಯ್ಯ | ಜೋಗೈಯ್ಯ |
| (iii) ೨೯ | ... | ವಿಪ್ರದತ್ತಾ | ಪಿತ್ರುದತ್ತಾ |

(i) ಇಲ್ಲಿ 'ತೋಪದಾಸ' ಎಂಬುದು ಒಂದು ವಿಶಿಷ್ಟವಾದ ಹೆಸರು. 'ತೋ' ಎಂಬುದು 'ಲೋ' ಎಂಬುದನ್ನು ಹೋಲಬಹುದಾದರೂ ಒತ್ತದ ಬಳಿಯ ಗಂಟಿನಿಂದ ಇದು 'ಲೋ'ದಿಂದ ಪ್ರತ್ಯೇಕವಾಗುತ್ತದೆ ಎಂಬುದು ಗಮನಾರ್ಹ. 'ಪ' ಸ್ಪಷ್ಟವಾಗಿಯೇ ಇದೆ. ಇಲ್ಲಿ ಯಾವ ಹೋಲಿಕೆಯ ಪ್ರಶ್ನೆಯೂ ಬರುವುದಿಲ್ಲ. ಇದೇ ಶಾಸನದಲ್ಲಿನ ತ, ಲ, ಪ, ವ ಕಾರಗಳನ್ನೆಲ್ಲಾ ಗಮನಿಸಿ ಅಂತಸ್ಸಂಭಾವ್ಯತೆಯನ್ನು ಗಮನಕ್ಕೆ ತೆಗೆದುಕೊಂಡು ಇಲ್ಲಿ 'ತೋಪದಾಸ' ಎಂದಿರುವುದನ್ನು ಗಮನಿಸಬೇಕು. (ತೋಪಣ್ಣ, ತೋಪೇಗೌಡ ಮುಂತಾದ ಹೆಸರುಗಳು ಈಗಲೂ ಪ್ರಚಲಿತವಿರುವುದನ್ನು ನೋಡಬಹುದು).

---

೨೦. ಈ ಭಾಗದ ಛಂದಸ್ಸನ್ನು ಕುರಿತು ವಿವೇಚಿಸಿರುವ ನನ್ನ ಲೇಖನವೊಂದು ಪ್ರಕಟವಾಗುವುದರಲ್ಲಿದೆ.

೨೧. M.A.R., 1929, Chitradurga 7, A. D. 1673, pp. 63, 64 & 212

೨೨. ಹೀಗೆಯೇ ಎ.ಕ. ಮತ್ತು ಇತರ ಶಾಸನ ಸಂಪುಟಗಳಲ್ಲೂ ರೋಮನ್ ಪಾಠ ಮತ್ತು ಆಯಾ ಭಾಷೆಯ ಲಿಪಿಪಾಠಕ್ಕೂ ವ್ಯತ್ಯಾಸವಿರುವ ಅನೇಕ ನಿದರ್ಶನಗಳಿವೆ.

(ii) ಜೋಗೈಯ್ಯ (<ಜೋಗಯ್ಯ) ಎಂಬುದು ಸುಪರಿಚಿತವಾದ ಹೆಸರು. ಕೆಲವೆಡೆ ಓತ್ವ ಔತ್ವಗಳು ಪರಸ್ಪರ ಸಾದೃಶ್ಯವನ್ನು ಹೊಂದಿರುತ್ತವೆ ಎಂಬುದೇನೋ ನಿಜ. ಆದರೆ ಇದೇ ಹೆಸರಿನ ಹಿಂದೆ ಗೌಡ ಎಂಬಲ್ಲಿರುವ ಔತ್ವ ಓತ್ವದಿಂದ ಪೂರ್ಣ ಭಿನ್ನವಾಗಿಯೇ ಇರುವುದನ್ನು ಕಾಣಬಹುದು. ಇನ್ನು 'ಗೈ' ಎಂಬುದನ್ನು 'ಗ' ಎಂದು ಓದಲು ಯಾವ ಹೋಲಿಕೆಯ ತೊಡಕೂ ಇಲ್ಲ; ಆದರೆ ಹಾಗೆ ಓದಲಾಗಿದೆ. ಹೀಗಾಗಿ ಸುಪರಿಚಿತವಿರುವ 'ಜೋಗೈಯ್ಯ' ಎಂಬ ಹೆಸರು 'ಜೌಗಯ್ಯ' ಎಂಬ ವಿರೂಪದ ಓದಿಕೆಯನ್ನು ಹೊಂದಿದೆ.

(iii) ಪ್ರಕಟಿತ ಓದಿಕೆಯ ಪ್ರಕಾರ 'ವಿಪ್ರದತ್ತಾ' ಎಂದರೆ 'ಬ್ರಾಹ್ಮಣರಿಗೆ ಕೊಡಲ್ಪಟ್ಟದ್ದು' ಎಂದರ್ಥವಾಗುತ್ತದೆ. ಆದರೆ ಶಾಸನದಲ್ಲಿರುವುದು 'ವಿಪ್ರದತ್ತಾ' ಅಲ್ಲ, 'ಪಿತ್ರುದತ್ತಾ' (<ಪಿತೃದತ್ತಾ) ಎಂದು. ಹೀಗೆಂದರೆ 'ಪಿತೃಗಳಿಂದ (ದಾನಿಯ ಮನೆತನದ ಹಿರಿಯ ತಲೆಯವರಿಂದ) ಕೊಡಲ್ಪಟ್ಟದ್ದು' ಎಂದರ್ಥ. ಈ ಪದದ ಅರ್ಥಪೂರ್ಣತೆ ಗಮನಾರ್ಹವಾದದ್ದು. ಶಾಸನದಲ್ಲಿ ಈ ಪದ ಬರುವ ಶ್ಲೋಕ ಹೀಗಿದೆ:

> ಸ್ವದತ್ತಾ ಪುತ್ರಿಕ ಧಾತ್ರೀ। ಪಿತ್ರುದತ್ತಾ ಸಹೋದರೀ।
> ಅಂನ್ಯದತ್ತಾ ಚ ಮಾತಾ ಚ। ದತ್ತ ಭೂಮಿ ಪರಿತ್ಯಜೇತ್॥

''ದಾನವಾಗಿ ತನ್ನಿಂದ ಕೊಡಲ್ಪಟ್ಟ ಭೂಮಿ (ಸ್ವದತ್ತಾ) ಮಗಳಿಗೆ ಸಮಾನ; ತನ್ನ ಪಿತೃಗಳಿಂದ ಕೊಡಲ್ಪಟ್ಟದ್ದು (ಪಿತೃದತ್ತಾ) ಸಹೋದರರಿಗೆ ಸಮಾನ; ಅನ್ಯರಿಂದ ಕೊಡಲ್ಪಟ್ಟದ್ದು (ಅನ್ಯದತ್ತಾ) ತಾಯಿಯ ಸಮಾನ. ಆದುದರಿಂದ ಒಮ್ಮೆ ದಾನಕೊಟ್ಟ ಭೂಮಿಯನ್ನು ಮತ್ತೆ ಆಶಿಸಬಾರದು.'' ಈ ಸುಂದರ ಅರ್ಥವಿರುವ ಶ್ಲೋಕದಲ್ಲಿ 'ಪಿತ್ರುದತ್ತಾ' ಎಂಬ ಮಾತಿನ ಔಚಿತ್ಯ ಮತ್ತು ಅರ್ಥವಂತಿಕೆಯನ್ನು ಮತ್ತೆ ವಿವರಿಸಬೇಕಾಗಿಲ್ಲ. ತಾವು ಕೊಟ್ಟ ಅಥವಾ ಬೇರೆಯವರು ಕೊಟ್ಟ ದಾನದ ಬಗೆಗೆ ಎಂತಹ ದೃಷ್ಟಿಯಿರಬೇಕೆಂಬುದನ್ನು ಹೇಳುವ ಈ ಶ್ಲೋಕವು ಸಾಂಸ್ಕೃತಿಕ ದೃಷ್ಟಿಯಿಂದ ಮುಖ್ಯವಾದುದು.

**೮. ನೀರ್ತಡಿ ರಂಗನಾಥಸ್ವಾಮಿ ದೇವಾಲಯದ ಭರಮಣ್ಣನಾಯಕನ ಶಾಸನ:** ದಾವಣಗೆರೆ ತಾಲ್ಲೂಕು, ನೀರ್ತಡಿ ಗ್ರಾಮದ ರಂಗನಾಥಸ್ವಾಮಿ ದೇವಾಲಯದಲ್ಲಿರುವ ಒಂದು ಶಾಸನವನ್ನು ರೈಸ್ ಪ್ರಕಟಿಸಿದ್ದಾರೆ.[೨೩] ಹಿಂದೆ ದಿಲ್ಲಿಯ ಬಾದಶಹ (=ಔರಂಗಜೇಬ)ನ ದಂಡು ಬಂದು ಹಾಳುಗೆಡವಿದ ಈ ದೇವಾಲಯವನ್ನು, ಚಿತ್ರದುರ್ಗದ ದೊರೆ ಭರಮಣ್ಣನಾಯಕನು ಹೊಸದಾಗಿ ಕಟ್ಟಿಸಿ ದತ್ತಿ ನೀಡಿದನೆಂಬ ಸಂಗತಿ ಈ ಶಾಸನದಲ್ಲಿದೆ. ಇದರಲ್ಲಿನ ಕೊನೆಯ ಮೂರು ಪಂಕ್ತಿಗಳನ್ನು ಇಲ್ಲಿ ಗಮನಿಸಬೇಕು:

> ೧೯ ಧರ್ಮ। ಬರಮಸಾಗರದ ಸೀಮೆಯ ಯೆಂಮೆಹಟ್ಟಿಗೆ ೨ ಮವಂ
> ೨೦ ಸ್ತ ತೋಟ ಯಿದು ಮತ್ರ ಶಾಸನ ಹಾಕಸಿ ಮಡಿಸ್ತಿ ಧರ್ಮ ಸೇ
> ೨೧ ವೆ।

ಇಲ್ಲಿ 'ಯೆಂಮೆಹಟ್ಟಿಗೆ ೨ ಮವಂ ಸ್ತ' ಎಂಬುದು ಏನೆಂದು ಸ್ಪಷ್ಟವಾಗುವುದಿಲ್ಲ. ಆದರೂ ಈ ದೇವಾಲಯಕ್ಕೆ ನೀಡಲಾದ ದತ್ತಿ ಒಂದು ತೋಟ ಎಂದು (೨೦ನೆಯ ಪಂಕ್ತಿಯಿಂದ) ಸ್ಫುಟವಾಗುತ್ತದೆ. ಆದರೆ ಈ ಶಾಸನವನ್ನು ಪುನರವಲೋಕನ ಮಾಡಿದಾಗ ಅಲ್ಲಿನ ಪಾಠ ಹೀಗಿರುವುದು ಕಂಡುಬರುತ್ತದೆ:

೨೩. ಎ.ಕ., ಸಂಪುಟ ೧೧, ದಾವಣಗೆರೆ ೧೫೬೪, ಕ್ರಿ.ಶ. ೧೬೯೮

೧೯ ಧರ್ಮ ಬರಮಸಾಗರದ ಸೀಮೆಯ ಯೆಂಮೆಹಟ್ಟಿ ಗ್ರಮವಂ
೨೦ ನು ಕೊಟ್ಟುಯೀ ಗ್ರಮ[ಕ್ಕೆ] ಶಾಸನ ಹಾಕಸಿ ಮಡಿಸ್ತಿ ಧರ್ಮ ಸೇ
೨೧ ವೆ।

ಹೀಗಾಗಿ ದತ್ತಿಯಾಗಿ ಕೊಡಲ್ಪಟ್ಟದ್ದು ತೋಟವಲ್ಲ 'ಯೆಂಮೆಹಟ್ಟಿ' ಎಂಬ ಗ್ರಾಮ ಎಂಬುದು ಸ್ಪಷ್ಟವಾಗುತ್ತದೆ. ಇದಲ್ಲದೆ, ಈ ಶಾಸನದ ಅಗ್ರಭಾಗದಲ್ಲಿ ಸೂರ್ಯ ಚಂದ್ರರ ನಡುವೆ ರಿ॥ಸಂ॥ ೪೮ ಎಂದಿದೆ. ಇದು ರೈಸರ ಕಣ್ಣಿನಿಂದ ತಪ್ಪಿಸಿಕೊಂಡಿದೆ. ಇದು ಏನೆಂದು ಸ್ಪಷ್ಟವಾಗುವುದಿಲ್ಲ.

**೯. ಚಂದ್ರವಳ್ಳಿ ದಾರಿಯ ಬದಿಯಲ್ಲಿನ ಶಾಸನ:** ಚಂದ್ರವಳ್ಳಿ ದಾರಿಯ ಆಂಜನೇಯನ ಗುಡಿಗೆ ಪಶ್ಚಿಮದಲ್ಲಿ ಹೊಲದ ಮೇರೆಯಲ್ಲಿ ಬಿದ್ದಿರುವ ಶಿಲಾ ಶಾಸನವೊಂದಿದೆ.[೨೪] ಹಿಂದೆ ಡಾ॥ ಎಂ. ಎಚ್. ಕೃಷ್ಣ ಅವರು ಪ್ರಕಟಿಸಿದ್ದಾಗ ಎಡಬದಿಯಲ್ಲಿ ಹೆಚ್ಚು ಒಡೆದುಹೋಗಿದ್ದ ಈ ಶಾಸನ, ಆಮೇಲೆ ಬಲಬದಿಯಲ್ಲೂ ಇನ್ನಷ್ಟು ಒಡೆದು ಆ ಭಾಗ ಕಳೆದುಹೋಗಿದೆ. ಹಿಂದೆ ತಮಗೆ ದೊರೆತಷ್ಟು ಪಾಠದಿಂದ ಕೃಷ್ಣ ಅವರು ಇದರ ಕಾಲ ಕ್ರಿ.ಶ. ೧೬೭೭ ಇರಬಹುದೆಂದೂ ಬೆಮತೂರಿನ ನಾಗಗೌಡನೆಂಬುವನು ಗರಡಿ ನಡೆಸುವುದಕ್ಕಾಗಿ ತನ್ನ ಒಡೆಯ ಸಾಯರಾವುತನಿಂದ ತೆರಿಗೆರಹಿತ ಮಾಡಿಸಿಕೊಂಡು ಪಡೆದ ಕೊಡುಗೆಯ (ಉಂಬಳಿಯ) ಭೂಮಿಯ ಒಂದು ಭಾಗವನ್ನು ಮುಷ್ಟಿಕಾಳಗದ ಪಟುಗಳಿಗೆ ನೆರವು ನೀಡಲು ದತ್ತಿ ಬಿಟ್ಟಂತೆ ಈ ಶಾಸನ ಹೇಳುತ್ತಿರಬಹುದೆಂದೂ ಬರೆದಿದ್ದರು. ''ಗರಡಿಸಾಧನೆ ಮುಷ್ಟಿಕಾಳಗದಂತಹ ಮಲ್ಲಕಲೆಗಳಿಗೆ ದತ್ತಿ ಬಿಡಲಾಗುತ್ತಿತ್ತೆಂಬ ಮಹತ್ವದ ಅಂಶವನ್ನು ಹೇಳುವುದರ ಜತೆಗೆ, ಮುಷ್ಟಿಕಾಳಗ (Boxing) ಬಹು ಹಿಂದೆಯೇ ನಮ್ಮಲ್ಲಿ ಎಂತಹ ಮನ್ನಣೆಯ ಕಲೆಯಾಗಿತ್ತೆಂಬುದನ್ನೂ ಈ ಶಾಸನ ಸಾರುತ್ತದೆ'' ಎಂಬಂತೆ ತಿಳಿಯಲಾಗಿತ್ತು.[೨೫] ಹೀಗೆ ತಿಳಿದದ್ದು ಸಮಂಜಸವಲ್ಲವೆಂದು ಈಗ ಮರುಪರಿಶೀಲನೆಯಿಂದ ವ್ಯಕ್ತವಾಗುತ್ತದೆ. ಈ ಶಾಸನದ ಪ್ರಕಟಣೆಯಲ್ಲೂ ಕನ್ನಡ ಲಿಪಿಪಾಠಕ್ಕೂ ರೋಮನ್ ಲಿಪಿಪಾಠಕ್ಕೂ ನಷ್ಟಾಕ್ಷರ ಸೂಚಕ ಚುಕ್ಕಿಗಳನ್ನು ಹಾಕುವಲ್ಲಿ ವ್ಯತ್ಯಾಸವಿರುವುದನ್ನು ಕಾಣಬಹುದು.

ಕೃಷ್ಣ ಅವರು ಕೊಟ್ಟಿರುವ ಕನ್ನಡ ಲಿಪಿಪಾಠವನ್ನು ರೋಮನ್ ಪಾಠದಲ್ಲಿನ ಚುಕ್ಕಿಗಳೊಂದಿಗೆ ಹೀಗೆ ಕೊಡಬಹುದು:

೧ ಶ್ರೀ....
೨ ೧೫೯೯ (?)...
೩ ಹಾನಡ ಪ್ರಬು....
೪ ಪ ಶ್ರೀಮನುನಾಡ ಪ್ರ...
೫ ಗಾಉಡ ಸಾಯರಾವುತನ...
೬ ...ನಾಗಗೌಂಡನು ತಂನ ಕೊಡಗಿಯ
೭ [ಗ]ರಡಿಯ ವುಂಬಳಿಯ ಬುಮಿಯಲಿ ಯೆ
೮ ....ಳಗದ ಕೆಯನು ಅಱಿವಟಿಗೆಯ ಬಳಿ

೨೪. M.A.R. 1929, 1931, Chitradurga 2, pp. 60, 61 & 211

೨೫. ಬಿ. ರಾಜಶೇಖರಪ್ಪ: 'ಚಿತ್ರದುರ್ಗದ ಪ್ರಮುಖ ಶಾಸನಗಳು', ಐತಿಹಾಸಿಕ ಚಿತ್ರದುರ್ಗ, ೧೯೭೯, ಪು. ೫೩

೯ ರಾಜ್ಯದ ಬೆಮತುರನಾಡಿಗೆ ಸಲುವ...
೧೦ ಮೆಯಲಿಯ ಮುಟಗಾಳಗವ ಕಾದಿದೊ
೧೧ ಧರ್ಮವನೂ ಆಳಿಪಿದವ ಗಂಗೆಯ ತಡಿಯ
೧೨ ಕವಿಲೆಯ ಕೊಂದ ಪಪದಲಿ ಹೋಹನೂ
೧೩ ಮಹ ಶ್ರೀ ಶ್ರೀ

ಇಲ್ಲಿ ಪುನರ್‌ಪರಿಶೀಲನೆಯಲ್ಲಿ ಕಂಡುಬಂದ ಪಾಠವನ್ನು ಪೂರ್ಣವಾಗಿ ಕೊಡುವುದು ಅಗತ್ಯವಿಲ್ಲ. ಆದರೆ, ಕೆಲವು ಮುಖ್ಯ ಅಂಶಗಳನ್ನು ಕುರಿತಂತೆ ಮರುಪರಿಶೀಲನೆಯ ಫಲಿತಾಂಶವನ್ನು ಇಲ್ಲಿ ಕೊಡಬಹುದು (ಶಾಸನ ಬರಹದಲ್ಲಿ ಕಾಗುಣಿತ ದೋಷಗಳನ್ನೂ ಗಮನಿಸಬಹುದು).

ಮೊದಲನೆಯದಾಗಿ, ಈ ಶಾಸನದ ಕಾಲ ಪರಿಶೀಲನಾರ್ಹ. ಮೇಲಿನ ಪಾಠದಲ್ಲಿನಂತೆ ೨ನೆಯ ಪಂಕ್ತಿಯಲ್ಲಿ ೧೫ರ ನಂತರ ಬರುವ ಗೆರೆಯ ತುಣುಕುಗಳನ್ನು ೯ರ ಅಂಕಿಯ ಗೆರೆಗಳಿರಬಹುದೆಂದು ತಿಳಿದು, ಕೃಷ್ಣ ಅವರು ಇದು ಶಾಲಿವಾಹನ ಶಕ ಸಂಖ್ಯೆ ೧೫೯ ಇರಬಹುದು ಎಂದು ಅನುಮಾನಿಸಿ, ಇದು ಕ್ರಿ.ಶ. ೧೬೭೭ನೆಯ ವರ್ಷವಾಗುತ್ತದೆಂದು ಭಾವಿಸಿದರು. ಆದರೆ ಲಿಪಿ ಲಕ್ಷಣವನ್ನು—ಟ ಡ ದ ಪ ಳ ಕಾರಗಳನ್ನೂ ಎತ್ವ ಚಿಹ್ನೆಯನ್ನೂ-ಪರಿಶೀಲಿಸಿದರೆ, ಈ ಶಾಸನವು ಕ್ರಿ.ಶ. ೧೭ನೆಯ ಶತಮಾನಕ್ಕೆ ಸರ್ವಥಾ ಸೇರಿದುದಲ್ಲ, ಇದು ಅದಕ್ಕೂ ಹಿಂದಿನದು-ಬಹುತೇಕ ಕ್ರಿ.ಶ. ೧೫೦೦ರ ಸುಮಾರಿನದು ಅಥವಾ ೧೫ನೆಯ ಶತಮಾನದ ಆದಿಭಾಗಕ್ಕೆ ಸೇರಿದುದು ಎಂಬುದು ತಿಳಿಯುತ್ತದೆ. ಇದರಿಂದ ೧೫ ಮತ್ತು ನಂತರದ ತುಣುಕು ಗೆರೆಗಳು ಶಕವರ್ಷ ಸಂಖ್ಯೆಯಾಗಿರದೆ ತಿಥಿಸಂಖ್ಯೆ ಮತ್ತು ವಾರದ ಹೆಸರನ್ನು ಕುರಿತವುಗಳಿರಬೇಕು.

ಎರಡನೆಯದಾಗಿ, ಶಾಸನದ ವಿಷಯ ಕುರಿತು ಪರಿಶೀಲಿಸಬೇಕು: (i) ಇಲ್ಲಿ ೭ನೆಯ ಪಂಕ್ತಿಯಲ್ಲಿ '[ಗ]ರಡಿಯ' ಎಂಬ ಪಾಠವಿದೆ. ಸಂಪಾದಕೀಯ ಆವರಣಗಳಲ್ಲಿರುವ 'ಗ' ಅಕ್ಷರ, ಕಲ್ಲು ಒಡೆದು ಹೋಗಿರುವುದರಿಂದ ಈಗ ಅಲಭ್ಯ. ಮುಂದೆ ಇರುವುದು 'ರ' ಅಲ್ಲ, ಕೇವಲ ಬಿಂದು ಮಾತ್ರ. ಅದರ ಮೇಲೆ ಸ್ವಲ್ಪವೇ ಸ್ವಲ್ಪ ಕಚ್ಚು ಬಿದ್ದಿರುವುದಾದರೂ ಉಳಿದ ಕಡೆ 'ರ' ಅಕ್ಷರಕ್ಕಿರುವ ತಲೆಕಟ್ಟಿನಂತಹ ಭಾಗ ಇಲ್ಲಿ ಇಲ್ಲವೇ ಇಲ್ಲ. ಹಾಗಾಗಿ, ಇಲ್ಲಿರುವ ಪಾಠ 'ಂದಿಯ' ಎಂದು. ಇದು (ಈ ಶಾಸನಕ್ಕೆ ಸಮೀಪದಲ್ಲೇ ಇರುವ) ಹುಲಿಯಗೊಂದಿ ಎಂಬ ಸ್ಥಳದ ಹೆಸರನ್ನುಳ್ಳ ಭಾಗವಾಗಿರಬೇಕು.

(ii) ಹಾಗೆಯೇ, ೧೦ನೇ ಪಂಕ್ತಿಯಲ್ಲಿ 'ಮುಟಗಾಳಗವ ಕಾದಿದೊ' ಎಂಬ ಮಾತುಗಳಿವೆ. 'ಮ್ಯೆಟಿಗೊಳಗವ ಕೊಠೆಉ' (ಮೇಟಿಕೊಳಗವ ಕೊಟ್ಟೆವು) ಎಂಬ ಮಾತು ಹಾಗೆ ಓದಲ್ಪಟ್ಟಿದೆ. ಅನೇಕ ಶಾಸನಗಳಲ್ಲಿ ಬರುವಂತೆ ಮೇಟಿಗೊಳಗ ಎಂಬ ಶಬ್ದ ಭೂಮಿಯ ಒಂದು ಅಳತೆಯಾಗಿದ್ದು, ಇಲ್ಲಿ ದಾನಕೊಟ್ಟ ಭೂಮಿಯನ್ನು ಸೂಚಿಸುತ್ತದೆ. ಅಂತಸ್ಸಂಭಾವ್ಯತೆಯನ್ನು ಗಮನಿಸಿ ಇಂತಹ ಕಡೆ ಸರಿಯಾದ ಪಾಠವೇನೆಂಬುದನ್ನು ಗೊತ್ತುಹಚ್ಚಬಹುದು. ಭಾಷೆ ಮತ್ತು ಲಿಪಿ ಸಂಬಂಧವಾಗಿ ಶಾಸನಕಾರರ ಮಿತಿಗಳನ್ನು ಕೂಡ ಗುರ್ತಿಸಿಕೊಳ್ಳುವುದು ಬಹಳ ಮುಖ್ಯ.

ಹೀಗಾಗಿ, ಇದು ಅರವಟ್ಟಿಗೆಯನ್ನು ನಡೆಸಲಿಕ್ಕಾಗಿ ಹುಲಿಯಗೊಂದಿಯ ಬಳಿ

ಮೇಟಕೊಳಗದ ಭೂಮಿಯನ್ನು ದಾನ ನೀಡಿದುದರ ಶಾಸನವೇ ಹೊರತು, ಗರಡಿ ಮುಷ್ಟಿಕಾಳಗಗಳ ದತ್ತಿಯನ್ನು ಕುರಿತ ಶಾಸನವಲ್ಲ ಎಂಬುದು ಮನವರಿಕೆಯಾಗುತ್ತದೆ.

ಕರ್ನಾಟಕದಂತಹ ದೊಡ್ಡ ರಾಜ್ಯದ, ಒಂದು ಜಿಲ್ಲೆಯ, ಸ್ವಲ್ಪವೇ ಸ್ವಲ್ಪ ಭಾಗದ ಶಾಸನಗಳ ನಿದರ್ಶನಗಳಿವು. ಇಂತಹ ನಿದರ್ಶನಗಳು ಇನ್ನೂ ಹಲವಾರಿವೆ. ಇತರ ಜಿಲ್ಲೆಗಳ ಸಂಬಂಧವಾಗಿ ಇನ್ನೂ ಅನೇಕಾನೇಕ ನಿದರ್ಶನಗಳು ಹೀಗೆ ಸಿಕ್ಕಬಹುದೆನ್ನುವುದರಲ್ಲಿ ಅನುಮಾನವಿಲ್ಲ. ಈ ಮೇಲಿನ ಉದಾಹರಣೆಗಳೆಲ್ಲ ಶಾಸನಗಳ ಪುನರ್‌ಪರಿಶೀಲನೆಯ ಆವಶ್ಯಕತೆಯನ್ನೂ ಅದರ ಮಹತ್ತ್ವವನ್ನೂ ಮನಗಾಣಿಸಲು ಸಾಧ್ಯವಾಗಬಹುದು.

ಇತಿಹಾಸ, ಸಂಸ್ಕೃತಿಗಳ ಅಧ್ಯಯನಕ್ಕೆ ಶಾಸನಗಳಂತಹ ಅತಿಮುಖ್ಯ ಆಧಾರಗಳು ನಿರ್ದುಷ್ಟವಾಗಿ, ವಿಶ್ವಾಸಾರ್ಹವಾಗಿ ಪ್ರಕಟವಾಗಬೇಕಾದುದು ಅತ್ಯಂತ ಆವಶ್ಯಕ. ಶಾಸನಗಳ ಪ್ರಕಟಣೆಯ ಜತೆಯಲ್ಲಿ ಪ್ರಕಟಿತ ಶಾಸನಗಳ ಪುನರ್‌ಪರಿಶೀಲನೆ ಸಹ ನಡೆಯುತ್ತ ಬಂದಿದ್ದರೆ, ನಮ್ಮ ಅಧ್ಯಯನ ಇನ್ನಷ್ಟು ಲೋಪರಹಿತವಾಗಿ, ತೃಪ್ತಿಕರವಾಗಿ ಇರುತ್ತಿದ್ದಿತು ಎನಿಸುತ್ತದೆ. ಹಿಂದೆಯೇ ಕೆಲವರು ವಿದ್ವಾಂಸರು ಪ್ರಕಟಿತ ಶಾಸನಗಳಲ್ಲಾಗಿದ್ದ ಓದಿಕೆಯ ದೋಷ ಇತರ ವಿವರಗಳ ಕೊರತೆಯನ್ನು ತಿಳಿಸಿ ಅಲ್ಲಲ್ಲಿ ತಿದ್ದುಪಡಿ ಸೂಚಿಸಿರುವುದುಂಟು. ರಾ. ನರಸಿಂಹಾಚಾರ್ಯರು, ಹಿಂದೆ ಬಿ. ಎಲ್. ರೈಸ್ ಅವರು ಪ್ರಕಟಿಸಿದ್ದ 'ಎಪಿಗ್ರಾಫಿಯಾ ಕರ್ನಾಟಿಕಾ'ದ ಎರಡನೆಯ ಸಂಪುಟವೊಂದನ್ನು ಪೂರ್ತಿಯಾಗಿ ಪುನರ್ಪರಿಶೀಲಿಸಿ, ತಿದ್ದಿ ಪುನರ್ಮುದ್ರಣ ಮಾಡಿಸಿದ್ದುಂಟು. ಇಷ್ಟಾದರೂ ಶಾಸನಗಳ ಖುದ್ದು ಮರುಪರಿಶೀಲನೆ ತಕ್ಕಷ್ಟು ಪ್ರಮಾಣದಲ್ಲಿ ನಡೆದುಬಂದಿಲ್ಲ ಎಂದು ಹೇಳಲೇಬೇಕಾಗಿದೆ.

ಕರ್ನಾಟಕಕ್ಕೆ ಸಂಬಂಧಿಸಿದ ಶಾಸನಗಳನ್ನು ಮೈಸೂರಿನ ಕನ್ನಡ ಅಧ್ಯಯನ ಸಂಸ್ಥೆಯು ಪುನರ್ಮುದ್ರಣ ಮಾಡಿಸುತ್ತಿರುವ ಈ ಪರ್ವಕಾಲದಲ್ಲಿಯಾದರೂ ಸಾಧ್ಯವಾದಷ್ಟೂ ಎಲ್ಲ ಪ್ರಕಟಿತ ಶಾಸನಗಳನ್ನು ಒಮ್ಮೆ ಖುದ್ದು ಮರುಪರಿಶೀಲಿಸಿ ಪ್ರಕಟಿಸಿದಲ್ಲಿ ಈಗಾಗಲೇ ಘಟಿಸಿರುವ ಅನೇಕ ಲೋಪಗಳು ದೂರವಾಗಿ ಅನೇಕ ಹೊಸ ವಿಷಯಗಳು ಬೆಳಕಿಗೆ ಬರಬಹುದು ಎಂಬುದರಲ್ಲಿ ಅನುಮಾನವಿಲ್ಲ. ಕಾಲ ಕಳೆದಂತೆ ಅನೇಕ ಶಾಸನಗಳು ಅನೇಕ ರೀತಿಯಲ್ಲಿ ನಷ್ಟಗೊಳ್ಳುತ್ತಾ ಹೋಗುತ್ತವೆ ಎಂಬ ಆತಂಕಕಾರಿ ಅಂಶವನ್ನು ಮನದಂದು, ರಾಜ್ಯದ ವಿಶ್ವವಿದ್ಯಾನಿಲಯಗಳು, ಕನ್ನಡ ಸಾಹಿತ್ಯ ಪರಿಷತ್ತು, ರಾಜ್ಯ ಹಾಗೂ ಕೇಂದ್ರ ಪುರಾತತ್ತ್ವ ಇಲಾಖೆಗಳು, ಭಾರತೀಯ ಇತಿಹಾಸ ಸಂಶೋಧನ ಸಂಸ್ಥೆ, ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಈ ದಿಕ್ಕಿನತ್ತ ಕಾರ್ಯತತ್ಪರವಾಗಲು ಹೆಜ್ಜೆಯಿಡಬೇಕಾಗಿದೆ. ಸೂಕ್ತ ಯೋಜನೆಯನ್ನು ರೂಪಿಸಿಕೊಂಡು, ಆದಷ್ಟು ಬೇಗ ಈ ಮಹತ್ತ್ವದ ಕಾರ್ಯ ಆರಂಭವಾಗುವುದು ಒಳಿತು.

*ಹರತಿಸಿರಿ, ೧೯೮೭, ಪು. ೬೪೫-೬೧*

# ೧೧. ಕರ್ನಾಟಕ: ಪ್ರಾಚೀನತೆ, ಮಹಿಮೆ, ವ್ಯುತ್ಪತ್ತಿ, ಲಿಪಿ

● ಆರ್. ನರಸಿಂಹಾಚಾರ್

## ಕನ್ನಡ ನಾಡಿನ ಪ್ರಾಚೀನತೆ

ಕನ್ನಡನಾಡು ಮೌರ್ಯರು, ಆಂಧ್ರರು, ಕದಂಬರು, ಗಂಗರು ಮೊದಲಾದ ಪುರಾತನ ರಾಜವಂಶದವರ ಆಳ್ವಿಕೆಗೆ ಒಳಪಟ್ಟಿದ್ದಿತು. ಮೌರ್ಯರಾಜನಾದ ಚಂದ್ರಗುಪ್ತನ ಕಾಲದಲ್ಲಿ ಉತ್ತರದೇಶದೊಳಗೆ ದ್ವಾದಶ ವಾರ್ಷಿಕ ಕ್ಷಾಮವುಂಟಾಗಲು, ಕೊನೆಯ ಶ್ರುತಕೇವಲಿಯಾದ ಭದ್ರಬಾಹುವೆಂಬ ಜೈನಗುರು ಜೈನ ಸಂಘದೊಡನೆ ದಕ್ಷಿಣ ದಿಕ್ಕಿನಲ್ಲಿರುವ ಪುನ್ನಾಟ ರಾಷ್ಟ್ರಕ್ಕೆ ಪ್ರಯಾಣ ಮಾಡಿದಾಗ, ಚಂದ್ರಗುಪ್ತನು ರಾಜ್ಯವನ್ನು ತ್ಯಜಿಸಿ ಭದ್ರಬಾಹುವಿಗೆ ಶಿಷ್ಯನಾಗಿ ಅವನೊಡನೆ ತಾನೂ ಹೊರಟುಬಂದಂತೆಯೂ, ಶ್ರವಣಬೆಳಗೊಳವನ್ನು ಸೇರಿದೊಡನೆ ಭದ್ರಬಾಹುವಿಗೆ ಅವಸಾನಕಾಲವು ಪ್ರಾಪ್ತವಾಗಲು ಅವನ ಆಜ್ಞಾನುಸಾರವಾಗಿ ಸಂಘವನ್ನು ಮುಂದಕ್ಕೆ ಕಳುಹಿಸಿ ಚಂದ್ರಗುಪ್ತನು ಗುರುವಿನ ಪರಿಚರ್ಯೆಗೋಸ್ಕರ ಅಲ್ಲಿಯೇ ನಿಂತಂತೆಯೂ, ಗುರುವಿನ ಮರಣಾನಂತರ ತಾನು ಅಲ್ಲಿಯೇ ತಪಸ್ಸು ಮಾಡುತ್ತಿದ್ದು ಕೆಲವು ವರ್ಷಗಳ ಮೇಲೆ ಗತಿಸಿದಂತೆಯೂ ಜೈನ ಗ್ರಂಥಗಳಲ್ಲಿ ಉಕ್ತವಾಗಿದೆ. ಭದ್ರಬಾಹು ಕ್ರಿಸ್ತಪೂರ್ವ ೨೯೭ರಲ್ಲಿ ಸತ್ತಂತೆ ತಿಳಿಯುತ್ತದೆ. ಭದ್ರಬಾಹುವೂ ಚಂದ್ರಗುಪ್ತನೂ ಶ್ರವಣಬೆಳುಗೊಳದಲ್ಲಿ ಇದ್ದರು ಎಂಬುದಕ್ಕೆ ಕೆಲವು ಆಧಾರಗಳು ದೊರೆಯುತ್ತವೆ. ಶ್ರವಣಬೆಳುಗೊಳದ ಚಿಕ್ಕಬೆಟ್ಟದ ಮೇಲೆ ಚಂದ್ರಗುಪ್ತ ಬಸ್ತಿ ಎಂಬ ಜಿನಾಲಯವೂ, ಭದ್ರಬಾಹುಗವಿ ಎಂಬ ಗುಹೆಯೂ ಈಗಲೂ ಇವೆ. ಸುಮಾರು ೭ನೆಯ ಶತಮಾನದಲ್ಲಿ ಬರೆದು ಶ್ರವಣಬೆಳುಗೊಳದ ೧೭ನೆಯ ಶಾಸನದಲ್ಲಿ "ಭದ್ರಬಾಹುಸಚಂದ್ರಗುಪ್ತ ಮುನೀಂದ್ರಯುಗ್ಮದಿನೊಪ್ಪೆ" ಎಂದೂ, ಸುಮಾರು ೯ನೆಯ ಶತಮಾನದಲ್ಲಿ ಹುಟ್ಟಿದ ಶ್ರೀರಂಗಪಟ್ಟಣದ ೧೪೭, ೧೪೮ನೆಯ ಶಾಸನಗಳಲ್ಲಿ "ಭದ್ರಬಾಹುಚಂದ್ರ ಗುಪ್ತಮುನಿಪತಿಚರಣಮುದ್ರಾಂಕಿತ ಜಗಲ್ಲಲಾಮಾಯಿತ ಶ್ರೀಕಬ್ಬಪ್ಪುತೀರ್ಥಸನಾಥ ಬೆಳ್ಗೊಳ" ಎಂದೂ ಶ್ರವಣಬೆಳುಗೊಳದ ವಿಷಯವಾಗಿ ಹೇಳಿದೆ. ೯೩೧ರಲ್ಲಿ ಹರಿಷೇಣನಿಂದ ರಚಿತವಾದ ಕಥಾಕೋಶದಲ್ಲಿಯೂ ಇತರ ಗ್ರಂಥಗಳಲ್ಲಿಯೂ ಈ ವಿಷಯವು ಉಕ್ತವಾಗಿದೆ. ಮೆ॥ ವಿನ್ಸೆಂಟ್ ಸ್ಮಿತ್ ಬರೆದಿರುವ ಹಿಂದೂದೇಶದ ಪುರಾತನ ಚರಿತ್ರೆಯಲ್ಲಿ ಚಂದ್ರಗುಪ್ತನು ರಾಜ್ಯವನ್ನು ಬಿಟ್ಟು ಜೈನ ಸನ್ಯಾಸಿಯಾಗಿ ಶ್ರವಣಬೆಳಗೊಳಕ್ಕೆ ಬಂದನೆಂದು ಹೇಳುವ ಕಥೆ ನಿಜವಾಗಿರಬಹುದು ಎಂದು ಹೇಳಿದೆ.[೧]

ಚಂದ್ರಗುಪ್ತನ ಮಮ್ಮಗನಾದ ಅಶೋಕನ ಶಾಸನಗಳು ಮೈಸೂರು ಸಂಸ್ಥಾನದ ಮೊಳಕಾಲಮುರು ತಾಲ್ಲೂಕಿಗೆ ಸೇರಿದ ಸಿದ್ಧಾಪುರದ ಬಳಿ ಇರುವ ಬ್ರಹ್ಮಗಿರಿಯ ಅಕ್ಷರಬಂಡೆಯ ಮೇಲೆಯೂ, ಅದೇ ಗ್ರಾಮಕ್ಕೆ ಸಮೀಪದಲ್ಲಿರುವ ಎಮ್ಮೆ ತಮ್ಮನ ಗುಂಡು ಎಂಬ ಗುಡ್ಡದಲ್ಲಿಯೂ ಅದೇ ಗ್ರಾಮಕ್ಕೆ ಸುಮಾರು ೪ ಮೈಲಿ ದೂರದಲ್ಲಿರುವ ಜಟಿಂಗ ರಾಮೇಶ್ವರ ಬೆಟ್ಟದಲ್ಲಿಯೂ ಇವೆ. ಈ ಬೆಟ್ಟದಲ್ಲಿ ಇರುವ ೯೬೨ರಲ್ಲಿ ಬರೆದ ಒಂದು ಶಾಸನದಿಂದ ಜಟಿಂಗರಾಮೇಶ್ವರ ದೇವಸ್ಥಾನವು ಪೂರ್ವದಲ್ಲಿ ಇಟ್ಟಿಗೆಯಿಂದ ಕಟ್ಟಲ್ಪಟ್ಟಿದ್ದು

---

೧ *Early History of India* (3rd edition) p. 146.

ಆ ವರ್ಷದಲ್ಲಿ ಶಿಲೆಯಿಂದ ನಿರ್ಮಿತವಾಯಿತೆಂದು, ಆ ಸ್ಥಳದಲ್ಲಿಯೇ ರಾವಣನು ಜಟಾಯುವನ್ನು ಕೊಂದುದೆಂದೂ ಹೇಳಿದೆ. ಈ ಬೆಟ್ಟದ ಪಕ್ಕದಲ್ಲಿರುವ ಮತ್ತೊಂದು ಬೆಟ್ಟದಲ್ಲಿ ಒಂದು ಜಟಾಯು ದೇವಸ್ಥಾನವೂ ಇದೆ. ಈಚೆಗೆ ಹೈದರಾಬಾದ್ ಸೀಮೆಗೆ ಸೇರಿದ ಮಾಸ್ಕಿ ಎಂಬ ಸ್ಥಳದಲ್ಲಿಯೂ ಒಂದು ಅಶೋಕ ಶಾಸನವು ಕಂಡುಹಿಡಿಯಲ್ಪಟ್ಟಿದೆ. ಇತರ ಶಾಸನಗಳಲ್ಲಿ ದೇವಾನಾಂಪ್ರಿಯ ಎಂಬ ಅಶೋಕನ ಬಿರುದು ಮಾತ್ರ ಹೇಳಿದೆ. ಈ ಶಾಸನದಲ್ಲಿ ಅಶೋಕ ಎಂಬ ಹೆಸರೇ ಉಕ್ತವಾಗಿದೆ. ಅಶೋಕನು ಬನವಸೆಗೆ ಒಬ್ಬ ಬೌದ್ಧ ಮತೋಪದೇಶಕನನ್ನೂ ಮಹಿಷಮಂಡಲಕ್ಕೆ ಮತ್ತೊಬ್ಬನನ್ನು ಕಳುಹಿಸಿದಂತೆ ಮಹಾವಂಶವೆಂಬ ಗ್ರಂಥದಲ್ಲಿ ಬರೆದಿದೆ. ಮಹಿಷಮಂಡಲವು ಮಹಿಶೂರದೇಶವಲ್ಲ, ನರ್ಮದಾ ನದಿಯ ಸಮೀಪದ ಪ್ರಾಂತವು ಎಂದು ಮೆ|| ಫ್ಲೀಟ್ ಬರೆದಿದ್ದರೂ ಮೈಸೂರುಸೀಮೆಗೆ ಮಹಿಷರಾಷ್ಟ್ರ ಅಥವಾ ಮೈಸನಾಡು ಎಂಬ ಹೆಸರು ಶಾಸನಗಳಲ್ಲಿಯೂ, ಪ್ರಾಚೀನ ಗ್ರಂಥಗಳಲ್ಲಿಯೂ ದೊರೆಯುತ್ತದೆ. ಮೈಸ ಎಂಬುದು ಮಹಿಷ ಎಂಬ ಶಬ್ದದ ತದ್ಭವವು. ಮೇಲೆ ಹೇಳಿದ ವಿಷಯಗಳಿಂದ ಮೌರ್ಯರಿಗೂ ಕನ್ನಡ ನಾಡಿಗೂ ಇದ್ದ ಸಂಬಂಧವು ವ್ಯಕ್ತವಾಗುತ್ತದೆ.

ಶಿಕಾರಿಪುರ ತಾಲ್ಲೂಕಿಗೆ ಸೇರಿದ ಮಳವಳ್ಳಿ ಎಂಬ ಗ್ರಾಮದಲ್ಲಿರುವ ಸುಮಾರು ೨ನೆಯ ಶತಮಾನ ಮಧ್ಯಭಾಗದಲ್ಲಿ ಹುಟ್ಟಿದ ಒಂದು ಪ್ರಾಕೃತ ಶಾಸನದಲ್ಲಿ ಆ ಗ್ರಾಮದ ಈಶ್ವರ ದೇವರಿಗೆ ಹಾರಿತೀಪುತ್ರಶಾತಕರ್ಣಿ ಎಂಬ ಆಂಧ್ರರಾಜನು ಭೂಮಿಯನ್ನು ಬಿಟ್ಟಂತೆ ಹೇಳಿದೆ; ಅದೇ ತಾಲ್ಲೂಕಿನಲ್ಲಿರುವ ತಾಳಗುಂದವೆಂಬ ಗ್ರಾಮದ ಪ್ರಣವೇಶ್ವರ ದೇವಸ್ಥಾನಕ್ಕೆ ಇದಿರಿಗಿರುವ ಸುಮಾರು ೫ನೆಯ ಶತಮಾನದ ಆದಿಭಾಗದಲ್ಲಿ ಹುಟ್ಟಿದ ಒಂದು ಶಾಸನದಲ್ಲಿ ಪ್ರಣವೇಶ್ವರನು ಶಾತಕರ್ಣಿ ಮುಂತಾದವರಿಂದ ಪೂಜಿತನಾಗಿದ್ದನು ಎಂದು ಬರೆದಿದೆ. ಇದರಿಂದ ಈ ಎರಡು ಗ್ರಾಮಗಳಲ್ಲಿರುವ ಈಶ್ವರ ದೇವಸ್ಥಾನಗಳು ಬಹಳ ಪುರಾತನವಾದುವು ಎಂದು ತಿಳಿಯುತ್ತದೆ. ಚಿತ್ರದುರ್ಗದಲ್ಲಿ ಆಂಧ್ರ ಭೃತ್ಯರ ಪ್ರತಿನಿಧಿಯೊಬ್ಬನು ನಿಂತು ಆಳುತ್ತಿದ್ದಂತೆ ಅಲ್ಲಿ ದೊರೆತ ನಾಣ್ಯಗಳಿಂದ ತಿಳಿಯುತ್ತದೆ. ಈ ನಾಣ್ಯಗಳು ಸೀಸದವು; ಇವುಗಳೊಳಗೆ ರಾಜರ ನಾಣ್ಯಗಳಲ್ಲಿ ಚೈತ್ಯವೂ ಬೋಧಿವೃಕ್ಷವೂ ಅಂಕಿತವಾಗಿರುವುದಲ್ಲದೆ ಮುಡಾನಂದ ಚುಟುಕಡಾನಂದ ಎಂಬ ರಾಜನಾಮಗಳೂ ದೊರೆಯುತ್ತವೆ. ಪ್ರತಿನಿಧಿಯ ನಾಣ್ಯಗಳಲ್ಲಿ ಅವನ ಹೆಸರೂ ವೃಷಭವೂ ಬೋಧಿವೃಕ್ಷವೂ ಕೆತ್ತಲ್ಪಟ್ಟಿವೆ. ಈ ವಿಷಯಗಳು ಆಂಧ್ರರಾಜರ ಸಂಬಂಧವನ್ನು ತೋರಿಸುತ್ತವೆ.

ಮೇಲೆ ಹೇಳಿದ ಮಳವಳ್ಳಿಯ ಪ್ರಾಕೃತ ಶಾಸನದ ಕೆಳಗೆ ಸುಮಾರು ೩ನೆಯ ಶತಮಾನದ ಮಧ್ಯಭಾಗದಲ್ಲಿ ಲಿಖಿತವಾದ ಮತ್ತೊಂದು ಪ್ರಾಕೃತ ಶಾಸನವಿದೆ. ಇದರಲ್ಲಿ ಒಬ್ಬ ಕದಂಬ ರಾಜನು ಅದೇ ಈಶ್ವರ ದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ. ಅಲ್ಲದೆ ಹಿಂದೆ ಹೇಳಿದ ತಾಳಗುಂದದ ಶಾಸನದಲ್ಲಿ[೧] ಕದಂಬ ರಾಜನಾದ ಕಾಕುತ್ಸವರ್ಮನು ಪ್ರಣವೇಶ್ವರ

---

೧. ಈ ಶಾಸನವು ಸಂಸ್ಕೃತದಲ್ಲಿ ಬರೆದಿದೆ. ಅದನ್ನು ಬರೆದ ಕವಿಗೆ ಕುಬ್ಜ ಎಂದು ಹೆಸರು. ಇದರ ಆರಂಭದಲ್ಲಿ ಅಪೂರ್ವವಾದ ಛಂದಸ್ಸಿನಲ್ಲಿ ಬರೆದಿರುವ ೨೪ ಪದ್ಯಗಳಿವೆ. ಇವುಗಳ ಲಕ್ಷಣವು ಯಾವ ಛಂದೋಗ್ರಂಥದಲ್ಲಿಯೂ ಉಕ್ತವಾಗಿರುವಂತೆ ತೋರುವುದಿಲ್ಲ. ಉದಾಹರಣೆಗಾಗಿ ಒಂದು ಪದ್ಯವನ್ನು ಇಲ್ಲಿ ಬರೆಯುತ್ತೇನೆ :

ಜಯತಿ ವಿಶ್ವವೇದಸಂಘಾತ ನಿಶ್ಚಿತೈಕಮೂರ್ತಿಃ ಸನಾತನಃ
ಸ್ಥಾಣುರಿಂದುರಶ್ಮಿವಚ್ಛುರಿತದ್ಯುತಿಮಜ್ಜಟಾಭಾರಮಂಡನಃ ||

ದೇವರಿಗಾಗಿ ಒಂದು ಕೆರೆಯನ್ನು ಕಟ್ಟಿಸಿದಂತೆ ಹೇಳಿದೆ. ಈ ಕೆರೆ ಪ್ರಣವೇಶ್ವರ ದೇವಸ್ಥಾನದ ಇದಿರಿಗೆ ಇದೆ. ಇದನ್ನು ಈಗಲೂ ಕೆರೆ ಎಂದು ಕರೆಯುತ್ತಾರೆ. ಪಣಮ ಎಂಬುದು ದೇವರ ಹೆಸರಿನ ಆದಿಭಾಗವಾದ ಪಣಮನ ಪ್ರಣವ ಎಂಬುದರ ಅಪಭ್ರಂಶವಾಗಿದೆ. ಈ ಕಾಕುತ್ಸ್ಥವರ್ಮನು ಗುಪ್ತರಾಜರಲ್ಲಿ ಪ್ರಸಿದ್ಧನಾದ ಸಮುದ್ರಗುಪ್ತನ (೩೩೦-೩೭೫) ಸಮಕಾಲದವನಾಗಿ ಅವನೊಡನೆ ವಿವಾಹಸಂಬಂಧವನ್ನು ಪಡೆದಿದ್ದಂತೆ ತಿಳಿಯುತ್ತದೆ. ಈ ವಿಷಯಗಳು ಕದಂಬರ ಸಂಬಂಧವನ್ನು ಸೂಚಿಸುತ್ತವೆ.

ಜೈನ ಸಂಘವು ಪುನ್ನಾಟ ರಾಷ್ಟ್ರಕ್ಕೆ ಪ್ರಯಾಣ ಮಾಡಿದಂತೆ ಹಿಂದೆ ತಿಳಿಸಿದೆ. ಈ ಪುನ್ನಾಟ ರಾಷ್ಟ್ರವು ಮೈಸೂರುಸೀಮೆಯ ದಕ್ಷಿಣ ಭಾಗದಲ್ಲಿ ಇದ್ದಿತು. ಇದನ್ನು ರಾಷ್ಟ್ರವರ್ಮನೇ ಮೊದಲಾದ ರಾಜರು ಕೀರ್ತಿಪುರವೆಂಬ ರಾಜಧಾನಿಯಲ್ಲಿ ನೆಲಸಿ ಆಳಿದರು. ಇದಕ್ಕೆ ಕನ್ನಡದಲ್ಲಿ ಪುನ್ನಾಡು ಎಂದು ಹೆಸರು. ಕೀರ್ತಿಪುರವೆಂಬುದು ಈಗ ಹೆಗ್ಗಡದೇವನಕೋಟೆ ತಾಲ್ಲೂಕಿನಲ್ಲಿರುವ ಕಿತ್ತೂರು. ಎರಡನೆಯ ಶತಮಾನದಲ್ಲಿದ್ದ ಟಾಲಮಿ ಎಂಬುವನು ಪುನ್ನಾಟ ರಾಷ್ಟ್ರದ ಹೆಸರನ್ನು ಪೌನ್ನಾತ ಎಂದು ಹೇಳಿ ಅದು ವೈಡೂರ್ಯ ರತ್ನಕ್ಕೆ (Beryl) ಹೆಸರುವಾಸಿಯನ್ನು ಹೊಂದಿದ್ದಿತು ಎಂದು ಬರೆದಿದ್ದಾನೆ.

ಮೈಸೂರುಸೀಮೆಗೆ ಮಹಿಷರಾಷ್ಟ್ರ ಅಥವಾ ಮೈಸನಾಡು ಎಂಬ ಹೆಸರು ಉಕ್ತವಾಗಿದೆ ಎಂದು ಹಿಂದೆ ಹೇಳಿದೆಯಷ್ಟೆ. ತಮಿಳು ಭಾಷೆಯಲ್ಲಿರುವ ಅಹನಾನೂರು ಎಂಬ ಕವಿಸೂಕ್ತಿ ಕದಂಬದಲ್ಲಿ ಸುಮಾರು ೨ನೆಯ ಶತಮಾನದಲ್ಲಿದ್ದ ಮಾಮೂಲನಾರ್ ಎಂಬ ಕವಿಯ ಉಕ್ತಿಯಾದ ೧೧೫ನೆಯ ಪದ್ಯದಲ್ಲಿ ಎರುಮೈನಾಡು (ಎರುಮೈ-ಮಹಿಷ) ಎಂಬ ಹೆಸರನ್ನು ಹೇಳಿ ಇದು ಪಶ್ಚಿಮ ಪ್ರಾಂತದಲ್ಲಿ (ಕುಡನಾಡು) ಇದೆ ಎಂದೂ ಹೇಳಿದೆ. ನಕ್ಕೀರರ್ ಎಂಬ ಮತ್ತೊಬ್ಬ ಪುರಾತನ ಕವಿಯ ಉಕ್ತಿಯಾದ ೩೬ನೆಯ ಪದ್ಯದಲ್ಲಿ ನೆಡುಂಚೆಳಿಯನ್ ಎಂಬ ಪಾಂಡ್ಯರಾಜನು ತಲೈಯಾಲಂಕಾನಂ ಎಂಬ ಸ್ಥಳದಲ್ಲಿ ಚೇರನ್, ಚೋಳನ್, ತಿತಿಯನ್, ಎಳಿನಿ, ಎರುಮೈಯೂರನ್ (ಮಹಿಷಪುರದವನು) ಇರುಂಕೋವೇಣ್ಮಾನ್, ಪೊರುನನ್ ಎಂಬ ಏಳು ರಾಜರನ್ನೂ ಯುದ್ಧದಲ್ಲಿ ಸೋಲಿಸಿದಂತೆ ಹೇಳಿದೆ. ಅದೇ ಕವಿಯ ಉಕ್ತಿಯಾದ ೨೫೩ನೆಯ ಪದ್ಯದಲ್ಲಿ ಮಹಿಷಪುರದವನು ಬಡಗರ ಕುಲದವನು ಎಂದು ಉಕ್ತವಾಗಿದೆ. ಶಿಲಪ್ಪದಿಕಾರಂ ಎಂಬ ಮತ್ತೊಂದು ತಮಿಳು ಗ್ರಂಥದಲ್ಲಿ ಸುಮಾರು ೨ನೆಯ ಶತಮಾನದಲ್ಲಿ ಶೆಂಗುಟ್ಟುವನ್ ಎಂಬ ಚೇರರಾಜನು ಉತ್ತರ ದಿಕ್ಕಿಗೆ ಹೋಗುವಾಗ ನೀಲಗಿರಿಯಲ್ಲಿ ತಂಗಿ ಕನ್ನಡರು ಆಡಿದ ಕುಣಿತವನ್ನು ನೋಡಿ ಸಂತೋಷಿಸಿದನು ಎಂದು ಹೇಳಿದೆ. ಈಯಂಶಗಳಿಂದ ಮೈಸೂರು ದೇಶದ ಪ್ರಾಚೀನತೆ ವ್ಯಕ್ತವಾಗುತ್ತದೆ.

ಐದನೆಯ ಶತಮಾನದಲ್ಲಿದ್ದ ವರಾಹಮಿಹಿರನು ತನ್ನ ಬೃಹತ್ಸಂಹಿತೆಯಲ್ಲಿ ಕರ್ನಾಟಕ ಎಂಬ ಹೆಸರನ್ನು ಹೇಳಿದ್ದಾನೆ. ಸುಮಾರು ೯೦೦ರಲ್ಲಿದ್ದ ರಾಜಶೇಖರನೆಂಬ ಸಂಸ್ಕೃತ ಕವಿ ತನ್ನ ಕಾವ್ಯಮೀಮಾಂಸೆ ಎಂಬ ಗ್ರಂಥದಲ್ಲಿ ಕರ್ನಾಟರು ಹೆಮ್ಮೆಯಿಂದ ಟಂಕಾರದೊಡನೆ ಓದುತ್ತಾರೆ ಎಂದು ಅವರು ಓದುವ ರೀತಿಯನ್ನು ನಿರೂಪಿಸಿದ್ದಾನೆ.[೧]

---

೧. ರಸಃ ಕೋಪ್ಯಸ್ತು ಕಾಪ್ಯಸ್ತು ರೀತಿಃ ಕೋಪ್ಯಸ್ತು ವಾ ಗುಣಃ
ಸಗರ್ವಂ ಸರ್ವಕರ್ಣಾಟಾಷ್ಟಂಕಾರೋತ್ತರಪಾಠಿನಃ ॥

## ಕನ್ನಡನಾಡಿನ ಮಹಿಮೆ

ಕನ್ನಡನಾಡು ಸಕಲ ಸುಖಗಳಿಗೂ, ಉತ್ತಮ ಗುಣಗಳಿಗೂ ನಿವಾಸ ಭೂಮಿಯಾಗಿದ್ದುದಲ್ಲದೆ, ಧರ್ಮಪರಾಯಣರಾದ ರಾಜರಿಂದಲೂ, ಪ್ರಸಿದ್ಧರಾದ ವಿದ್ವಾಂಸರಿಂದಲೂ, ಸಮರ್ಥರಾದ ರಾಜ್ಯತಂತ್ರಜ್ಞರಿಂದಲೂ, ಪ್ರಖ್ಯಾತರಾದ ತತ್ವದರ್ಶಿಗಳಿಂದಲೂ, ಭಕ್ತಶಿರೋಮಣಿಗಳಿಂದಲೂ, ಮಹಾಶೂರರಿಂದಲೂ, ಪ್ರಬಲರಾದ ವರ್ತಕರಿಂದಲೂ, ಕುಶಲರಾದ ಶಿಲ್ಪಿಗಳಿಂದಲೂ ಸ್ವಾಮಿಭಕ್ತಿ ಶೋಭಿತರಾದ ಸೇವಕರಿಂದಲೂ, ಅಲಂಕೃತವಾಗಿದ್ದಿತು. ಕನ್ನಡ ನಾಡನ್ನೂ ಮೈಸೂರನ್ನೂ ಚಿಕ್ಕುಪಾಧ್ಯಾಯನು (೧೬೭೨) ಹೀಗೆ ವರ್ಣಿಸಿದ್ದಾನೆ:

ಗಾಡಿಯ ಸೀಮೆ ಚೆಲ್ವೊಗೆದ ತಾಣಮಲಂಪಿನ ಸಂತೆ ಪೆಂಪು ಸಾ
ರ್ದಾಡುವ ಭೂಮಿ ಸೌಖ್ಯದಡ ಪುಣ್ಯದ ಗೊತ್ತು ವಿನೋದದಾಗರಂ
ಮೋಡಿಯ ಮಂಟಪಂ ಸಿರಿಯ ಪೆರ್ಚುಗೆಗೊಳ್ಗೆನೆ ಮುಕ್ತಿಕಾಂತೆ ಕೈ
ಗೂಡುವ ಬೀಡು ಕನ್ನಡದ ನಾಡು ವಿರಾಜಿಪುದೆಂತು ಬಣ್ಣಿಪೆಂ ॥

ಬೀರದ ಮಂದಿರಂ ಬಿನಯದಂಗಡಿಯೊಳ್ಪಿನ ಪೇಟೆ ನವ್ಯಶೃಂ
ಗಾರರಸಾಗರಂ ಜಸದ ಚಾವಡಿಯೋಜೆಯ ಬೀಡು ಭಾಗ್ಯದೊಂ
ದಾರವೆ ಸರ್ವಪುಣ್ಯದ ತವರ್ಮನೆಯೈಸಿರಿಯಾಗರಂ ಮಹೀ
ಶೂರಪುರಂ ವಿರಾಜಿಸಿತು ಭೂರಮಣೀಲಸದಂಘ್ರಿನೂಪುರಂ ॥

ವಿಜ್ಞಾನೇಶ್ವರನು ತನ್ನ ಮಿತಾಕ್ಷರಾ ಎಂಬ ವ್ಯಾಖ್ಯಾನದಲ್ಲಿ ಕಲ್ಯಾಣಪುರಕ್ಕೂ ಅದರ ದೊರೆಯಾದ ತ್ರಿಭುವನಮಲ್ಲನೆಂಬ ವಿಕ್ರಮಾರ್ಕನಿಗೂ ಹೋಲಿಸಬಹುದಾದ ಪಟ್ಟಣವೂ ರಾಜನೂ ಭೂತಳದಲ್ಲಿಲ್ಲ ಎಂದು ಬರೆದಿದ್ದಾನೆ.[೧]

ಈ ವರ್ಣನೆಗಳು ಬರಿಯ ಕವಿ ಕಲ್ಪನೆಯೆಂದು ಭಾವಿಸಲಾಗದು. ವಿದೇಶೀಯರು ಇಂಡಿಯಾ ದೇಶದ ರಾಜ್ಯಗಳನ್ನೂ ಪಟ್ಟಣಗಳನ್ನೂ ವರ್ಣಿಸಿ ಬರೆದಿರುವ ಗ್ರಂಥಗಳಿಂದ ಈ ವರ್ಣನೆಗಳು ಬಹಳ ಮಟ್ಟಿಗೆ ದೃಢೀಕೃತವಾಗುತ್ತವೆ.

ರಾಜರು-ಕನ್ನಡನಾಡಿನಲ್ಲಿ ಶ್ರೀಪುರುಷ, ನೃಪತುಂಗ, ತೈಲಪ, ತ್ರಿಭುವನಮಲ್ಲ ವಿಷ್ಣುವರ್ಧನ, ವೀರಬಲ್ಲಾಳ, ಬುಕ್ಕ, ಹರಿಹರ, ಕೃಷ್ಣದೇವರಾಯ, ರಾಜನೃಪ, ಕಂಠೀರವನರಸರಾಜ, ಚಿಕ್ಕದೇವರಾಜ, ಇವರೇ ಮೊದಲಾದ ಪರಾಕ್ರಮಶಾಲಿಗಳೂ, ವಿದ್ಯಾಪಕ್ಷಪಾತಿಗಳೂ, ಧರ್ಮನಿಷ್ಠರೂ ಆದ ದೊರೆಗಳು ರಾಜ್ಯಭಾರ ಮಾಡಿ ದಿಗಂತ ವಿಶ್ರಾಂತವಾದ ಕೀರ್ತಿಯನ್ನು ನೆಲೆಗೊಳಿಸಿದ್ದಾರೆ. ಇವರು ಭಿನ್ನಮತಸ್ಥರಾದರೂ ರಾಗದ್ವೇಷಗಳಿಲ್ಲದೆ ಅನ್ಯಮತಗಳನ್ನು ಸಮದೃಷ್ಟಿಯಿಂದ ಕಾಣುತ್ತ ಅವಕ್ಕೆ ಪ್ರೋತ್ಸಾಹವನ್ನು ಕೊಡುತ್ತಿದ್ದರು. ಬೇರೆ ಬೇರೆ ಮತಸ್ಥರಿಗೆ ಪರಸ್ಪರ ವೈಮನಸ್ಯವು ಹುಟ್ಟಿದಾಗ ಸಮಾಧಾನಪಡಿಸಿ ಸೌಹಾರ್ದವನ್ನುಂಟುಮಾಡುತ್ತಿದ್ದರು. ಗುಣಗ್ರಾಹಿಗಳಾಗಿ ಗುಣವಿಶಿಷ್ಟರಿಗೆ ತಕ್ಕ ಮನ್ನಣೆಯನ್ನು ಮಾಡಿ ಗೌರವಿಸುತ್ತಿದ್ದರು.

---

೧. ನಾಸೀದಸ್ತಿ ಭವಿಷ್ಯತಿ ಕ್ಷಿತಿತಲೇ ಕಲ್ಯಾಣಕಲ್ಪಂ ಪುರಂ
ನೋ ದೃಷ್ಟಃ ಶ್ರುತ ಏವ ವಾ ಕ್ಷಿತಿಪತಿಃ ಶ್ರೀವಿಕ್ರಮಾರ್ಕೋಪಮಃ ॥

ವಿದ್ವಾಂಸರು ಇತ್ಯಾದಿ—ಕನ್ನಡನಾಡು ದ್ವೈತಮತೋದ್ಧಾರಕ ಮಧ್ವ ಗುರುವಿಗೆ ತವರುಮನೆ; ಅದ್ವೈತಮತೋದ್ಧಾರಕ ಶಂಕರ ಗುರುವಿಗೂ ವಿಶಿಷ್ಟಾದ್ವೈತ ಮತೋದ್ಧಾರಕ ರಾಮಾನುಜ ಗುರುವಿಗೂ ಆಶ್ರಯಸ್ಥಾನ; ವೀರಶೈವಮತೋದ್ಧಾರಕ ಬಸವೇಶ್ವರನಿಗೂ ಇದೇ ತವರುಮನೆ. ಇವರುಗಳಿಂದ ಸ್ಥಾಪಿತವಾದ ಮಠಗಳೂ, ಶಾಖಾಮಠಗಳೂ ಇಲ್ಲಿ ಈಗಲೂ ಶೋಭಿಸುತ್ತಿರುವುವು. ಅಲ್ಲದೆ ಈ ನಾಡು ವಿದ್ಯಾತೀರ್ಥ, ವಿದ್ಯಾರಣ್ಯ, ಸಾಯಣಾಚಾರ್ಯ, ಶ್ರೀಪಾದರಾಯ, ವ್ಯಾಸರಾಯ, ರಾಘವೇಂದ್ರಯತಿ, ಅನಂತಾಚಾರ್ಯ, ವೇದಾಂತಾಚಾರ್ಯ, ಪುರಂದರದಾಸ, ಸಿದ್ಧರಾಮ, ತೋಂಟದ ಸಿದ್ಧಲಿಂಗ, ನೇಮಿಚಂದ್ರ, ಶುಭಚಂದ್ರ ಇವರೇ ಮುಂತಾದ ವಿದ್ವದ್ವರ್ಯರಿಂದಲೂ, ತಪೋಧನರಿಂದಲೂ, ತತ್ತ್ವದರ್ಶಿಗಳಿಂದಲೂ, ಭಕ್ತಶಿರೋಮಣಿಗಳಿಂದಲೂ ಹೆಸರುವಾಸಿಯನ್ನು ಹೊಂದಿದ್ದಿತು.

ಶೂರರು–ಎಲಲ ಎಂಬ ಚೋಳನು ಮೈಸೂರು ಸೇನೆಯ ಸಹಾಯದಿಂದ ಲಂಕೆಯನ್ನು ಕ್ರಿ.ಪೂ. ೨೦೫ರಲ್ಲಿ ಜಯಿಸಿದಂತೆ ಸಿಂಹಳದ್ವೀಪದ ಚರಿತ್ರೆಯಲ್ಲಿ ಹೇಳಿದೆ.[೧] ರಾಷ್ಟ್ರಕೂಟ ರಾಜನಾದ ದಂತಿದುರ್ಗನ ಒಂದು ಶಾಸನದಲ್ಲಿ ಕರ್ಣಾಟಕ ಸೇನೆ ಕಾಂಚಿಯ ದೊರೆ, ಕೇರಳರಾಜಚೋಳ, ಪಾಂಡ್ಯ ಮುಂತಾದವರನ್ನು ಸೋಲಿಸುವುದರಲ್ಲಿ ಸಮರ್ಥವಾದುದು ಎಂದು ಹೇಳಿದೆ.[೨]

ವರ್ತಕರು-ಚಿತ್ರದುರ್ಗದಲ್ಲಿ ಆಂಧ್ರಭೃತ್ಯರ ಸೀಸದ ನಾಣ್ಯಗಳು ದೊರೆತುವೆಂದು ಹಿಂದೆ ತಿಳಿಸಿದ್ದೇನೆ. ಅದೇ ಸ್ಥಳದಲ್ಲಿ ಕ್ರಿಸ್ತಪೂರ್ವ ೨ನೆಯ ಶತಮಾನದಲ್ಲಿದ್ದ ಹನ್‌ವುತಿ ಎಂಬ ಚೀನದೇಶದ ಚಕ್ರವರ್ತಿಯ ಹಿತ್ತಾಳೆಯ ನಾಣ್ಯವೂ ಕ್ರಿಸ್ತಶಕ ೧೪ರಲ್ಲಿ ಗತಿಸಿದ ಅಗಸ್ಟಸ್ ಎಂಬ ರೋಮ್ ಚಕ್ರವರ್ತಿಯ ಡಿನೇರಿಯಸ್ ಎಂಬ ಬೆಳ್ಳಿಯ ನಾಣ್ಯವೂ ದೊರೆತಿರುವುದರಿಂದ ಪೂರ್ವಕಾಲದಲ್ಲಿ ಕನ್ನಡನಾಡಿನ ವಾಣಿಜ್ಯಕ್ಕೆ ಎಷ್ಟರಮಟ್ಟಿಗೆ ವ್ಯಾಪ್ತಿಯಿದ್ದಿತು ಎಂಬಂಶವನ್ನು ಸ್ವಲ್ಪಮಟ್ಟಿಗೆ ಊಹಿಸಬಹುದಾಗಿದೆ. ಪ್ರಬಲರಾದ ವರ್ತಕರಿಗೆ ವಡ್ಡವ್ಯವಹಾರಿ, ರಾಜಶ್ರೇಷ್ಠಿ ಎಂಬ ಹೆಸರುಗಳು ಶಾಸನಗಳಲ್ಲಿಯೂ ಗ್ರಂಥಗಳಲ್ಲಿಯೂ ಹೇಳಿವೆ. ಸುಮಾರು ೧೧೨೦ರಲ್ಲಿ ಹೊಯ್ಸಳಸೆಟ್ಟಿ, ನೇಮಿಸೆಟ್ಟಿ ಎಂಬ ವರ್ತಕರು ಹೊಯ್ಸಳ ರಾಜನಾದ ವಿಷ್ಣುವರ್ಧನನ ರಾಜಶ್ರೇಷ್ಠಿಗಳಾಗಿದ್ದಂತೆಯೂ, ೧೧೮೮ರಲ್ಲಿ ಚೆಟ್ಟಿಪಸೆಟ್ಟಿ ಎಂಬವನು ಇಂದ್ರನ ಉಚ್ಚೈಶ್ರವಸ್ಸಿಗೆ ಸಮನಾದ ಕುದುರೆಗಳನ್ನೂ ಐರಾವತಕ್ಕೆ ಸದೃಶವಾದ ಆನೆಗಳನ್ನೂ ಶ್ರೇಷ್ಠವಾದ ಮುತ್ತುಗಳನ್ನೂ ಹಡಗುಗಳಲ್ಲಿ ತಂದು ದೊರೆಗಳಿಗೆ ಮಾರುತ್ತಿದ್ದಂತೆಯೂ ಅದೇ ಕಾಲದಲ್ಲಿ ದಾಸೆಯನೆಂಬ ವರ್ತಕನು ಪೂರ್ವದೇಶದ ವಸ್ತುಗಳನ್ನು ಪಶ್ಚಿಮದೇಶಕ್ಕೂ ಪಶ್ಚಿಮದೇಶದ ವಸ್ತುಗಳನ್ನು ಪೂರ್ವದೇಶಕ್ಕೂ ಉತ್ತರದೇಶದ ಭಂಡಗಳನ್ನು ದಕ್ಷಿಣದೇಶಕ್ಕೂ ದಕ್ಷಿಣದೇಶದ ಭಂಡಗಳನ್ನು ಉತ್ತರದೇಶಕ್ಕೂ ಕಳುಹಿಸುತ್ತಿದ್ದಂತೆಯೂ, ೧೨೫೫ರಲ್ಲಿ ಕುಂಜನಂಬಿಸೆಟ್ಟಿ ಎಂಬುವನು ಮಾಳವ, ಕಳಿಂಗ, ಚೋಳ, ಪಾಂಡ್ಯ ಈ ರಾಜರುಗಳ ಸಮಯಕ್ಕೆ ಬೇಕಾದ ವಸ್ತುಗಳನ್ನು ಒದಗಿಸಿಕೊಡುತ್ತ ಹೊಯ್ಸಳ ರಾಜ್ಯದಲ್ಲಿ ಕೀರ್ತಿಯನ್ನು ಪಡೆದಿದ್ದಂತೆಯೂ ಕೆಳಗಣ ಶಾಸನಪದ್ಯಗಳಿಂದ ತಿಳಿಯುತ್ತದೆ:

---

೧ *The Lost Cities of Ceylon*, p. 26.

೨ ಕಾಂಚೀಶಕೇರಳನರಾಧಿಪಪಾಂಡ್ಯಚೋಳಶ್ರೀಹರ್ಷವಜ್ರಟವಿಭೇದವಿಧಾನದಕ್ಷಂ। ಕರ್ಣಾಟಕಂ ಬಲಂ. *Indian Antiquary*, XI, 114.

ಧರಣೀಪಾಳಕನಪ್ಪ ಪೊಯ್ಸಳನ ರಾಜಶ್ರೇಷ್ಠಿಗಳ್ ತಮ್ಮಿತಿ
ರ್ಬರೆನಲ್ ಪೊಯ್ಸಳಸೆಟ್ಟಿಯುಂ ಗುಣಗಣಾಂಭೋರಾಶಿಯೆಂಬೊಂದು ಸುಂ
ದರಗಂಭೀರದ ನೇಮಿಸೆಟ್ಟಿಯುಮಿವರ್ ಶ್ರೀ ಜೈನಧರ್ಮಕ್ಕೆ ತಾ
ಯ್ಗೆರಗಳ್ ತಾಮೆನೆ ಸಂದ ಪೆಂಪಸದಳಂ ಪರ್ವಿತ್ತು ಭೂಭಾಗದೊಳ್[1] ॥

ಹರಿಯ ಹಯಕ್ಕೆ ತೋಡೆನಿಪ ಹೇಷಚಯಂಗಳನಿಂದ್ರದಂತಿಯೊಳ್
ದೊರೆಯೆನಿಸಿರ್ಪ ದಂತಿಗಳಭ್ರದೊಳಾದ ಸುಪಾಣಿಮುತ್ತಿನೊಳ್
ಸರಿಯೆನಿಸಿರ್ಪ ಮುತ್ತುಗಳನೆಯ್ದೆ ಬಹಿತ್ರದೆ ತಂದು ಮಾಱುವಂ
ಧರಣಿಪರ್ಗೊಲ್ದು ಕಮ್ಮಟದ...ಚಿಟ್ಟಪಸೆಟ್ಟಿ ಸಂತತಂ ॥

ಹರಿದಾಶಾಭಾಂಡಮಂ ವಾರುಣಿಗೆ ನಡಸುವಂ ವಾರುಣೀವಸ್ತುವಂ ವಿ
ಸ್ತರದಿಂದಿಂದ್ರಾಶೆಯೊಳ್ ಪೆರ್ಚಿಸುವನೊಸೆದು ಕೌಬೇರಿಯಿಂದ್ಯುಮ್ನಮುಂಸೋ
ಱರೆ ಯಾಮ್ಯಾಭಾಗದೊಳ್ ಸಂದಿಸುವನೆಸೆವ ಮೌಲ್ಯಂಗಳಂ ಯಾಮ್ಯದಿಂದು
ತ್ತರದಿಕ್ಕಿಂಗಟ್ಟುವಂ ನೋಡನುಪಮವಣಿಜಂ ದಾಸೆಯಂ ದೋಷದೂರಂ[2] ॥

ಬೀರಸ ಮಾಳವೇಂದ್ರನ ಕಳಿಂಗನ ಚೋಳನ ಪಾಂಡ್ಯಭೂತಳಾ
ಧಾರನ ಮುಟ್ಟಿದೊಂದವಸರಂಗಳನಾಗಳೆ ಪೂಣ್ದುಮಾಟ್ಟಿ ವಿ
ಸ್ತಾರದ ಪುಣ್ಯಸಂಪದದಿನೊಪ್ಪುವ ಸೆಟ್ಟಿಗೆ ಕುಂಜನಂಬಿಗಿ
ಸ್ನಾರೆಣೆಯೆಂಬಿನಂ ನೆಗೞ್ದಸಗ್ಗದ ಹೊಯ್ಸಳರಾಯರಾಜ್ಯದೊಳ್[3] ॥

ಶಿಲ್ಪಿಗಳು-ವಾಸ್ತುವಿದ್ಯಾವಿಶಾರದರಾದ ಶಿಲ್ಪಿಗಳು ಎಲ್ಲೋರ, ಇಟ್ಟಗಿ, ಬೇಲೂರು, ಹಳೆಯಬೀಡು, ಸೋಮನಾಥಪುರ, ನಂದಿ, ಶೃಂಗೇರಿ, ಶ್ರವಣಬೆಳುಗೊಳ, ಹಂಪೆ ಮೊದಲಾದ ಸ್ಥಳಗಳಲ್ಲಿ ನಿರ್ಮಿಸಿರುವ ದೇವಾಲಯಗಳೂ ಕೆತ್ತಿರುವ ವಿಗ್ರಹಗಳೂ ವಿದೇಶೀಯರಾದ ಶಿಲ್ಪಶಾಸ್ತ್ರಜ್ಞರನ್ನು ಆಶ್ಚರ್ಯರಸದಲ್ಲಿ ಮುಳುಗಿಸಿವೆ. ಈ ಶಿಲ್ಪಿಗಳಲ್ಲಿ ಹಲವರು ತಾವು ಕೆತ್ತಿದ ವಿಗ್ರಹಗಳ ಬುಡದಲ್ಲಿ ತಮ್ಮ ಹೆಸರುಗಳನ್ನು ಬರೆದುಕೊಂಡಿದ್ದಾರೆ; ಈ ಪದ್ಧತಿ ಮೈಸೂರು ದೇಶದಲ್ಲಿ ಮಾತ್ರ ಇದ್ದಂತೆ ತಿಳಿಯುತ್ತದೆ. ಶೃಂಗೇರಿಯಲ್ಲಿ ಸುಮಾರು ೧೩೫೭ರಲ್ಲಿ ಕಟ್ಟಿದ ವಿದ್ಯಾಶಂಕರ ದೇವಸ್ಥಾನವೆಂಬ ಒಂದು ಕಟ್ಟಡದ ವೈಚಿತ್ರ್ಯವನ್ನು ಮಾತ್ರ ಸ್ವಲ್ಪಮಟ್ಟಿಗೆ ಸೂಚಿಸುತ್ತೇನೆ. ಇದರ ಸಂವಿಧಾನದಂತಹ ಸಂವಿಧಾನವು (plan) ಭರತವರ್ಷದಲ್ಲಿ ಎಲ್ಲಿಯೂ ಇಲ್ಲ. ಈ ಕಟ್ಟಡವು ಸೌತೆಯಕಾಯಂತೆ ಎರಡು ತುದಿಗಳಲ್ಲಿಯೂ ವರ್ತುಲ ವಾಗಿದೆ (apsidal at both ends). ಇಂತಹ ಕಟ್ಟಡಕ್ಕೆ ಬಸಿಲಿಕಾ (Basilica) ಎಂದು ಸಂಜ್ಞೆ; ಇದನ್ನು ನೋಡಬೇಕಾದರೆ ರೋಂ ಪಟ್ಟಣಕ್ಕೆ ಹೋಗಬೇಕು. ಭರತವರ್ಷದಲ್ಲಿ ಎಲ್ಲಿಯೂ ದೃಗ್ಗೋಚರವಾಗದ ಇಂತಹ ಸಂವಿಧಾನವನ್ನು ಏರ್ಪಡಿಸಿ ಈ ಕಟ್ಟಡವನ್ನು ಕಟ್ಟಿದ ಶಿಲ್ಪಿಗಳ ಚಾತುರ್ಯವು ಸ್ತೋತ್ರಾರ್ಹವಾಗಿದೆ. ಅಲ್ಲದೆ ಈ ದೇವಸ್ಥಾನದ ನವರಂಗದಲ್ಲಿ ಮೇಷಾದಿ ದ್ವಾದಶರಾಶಿ ಚಿಹ್ನಗಳಿಂದ ಅಂಕಿತವಾಗಿರುವ ೧೨ ಕಂಭಗಳನ್ನು ಆ ಆ ಚಿಹ್ನಕ್ಕನು

---

೧. ಶ್ರವಣಬೆಳುಗೊಳದ ಶಾಸನ ನಂಬರು ೧೩೭, (ಹೊಸ ಮುದ್ರಣ)
೨. ಅರಸೀಕೆರೆ, ೨೨.
೩. ಅರಸೀಕೆರೆ, ೧೦೮.

ಗುಣವಾಗಿ ಆ ಆ ಕಂಭದ ಮೇಲೆ ಆ ಆ ತಿಂಗಳಲ್ಲಿ ಸೂರ್ಯರಶ್ಮಿ ಬೀಳುವಂತೆ ನಿಲ್ಲಿಸಿರುವ ಶಿಲ್ಪಿಕೌಶಲವು ಯಾರಿಗೆ ತಾನೆ ಆಶ್ಚರ್ಯವನ್ನುಂಟುಮಾಡದು?

ಸ್ವಾಮಿಭಕ್ತರು-ಸ್ವಾಮಿಯೇ ದೇವರೆಂದು ಭಾವಿಸಿ ಅವನಿಗೋಸ್ಕರ ತಮ್ಮ ಪ್ರಾಣವನ್ನು ಕೂಡ ಉತ್ಸಾಹದೊಡನೆ ಒಪ್ಪಿಸಿ ಸ್ವಾಮಿಭಕ್ತಿಯ ಪರಾಕಾಷ್ಠೆಯನ್ನು ತೋರಿಸಿದ ಅನೇಕ ಪುರುಷರೂ ಸ್ತ್ರೀಯರೂ ಈ ನಾಡನ್ನು ಅಲಂಕರಿಸಿದ್ದರು. ಈ ವಿಷಯಕ್ಕೆ ಒಂದೆರಡು ಉದಾಹರಣೆಗಳನ್ನು ಕೊಡುತ್ತೇನೆ. ತನ್ನ ಸ್ವಾಮಿಯಾದ ವೀರಬಲ್ಲಾಳನು ೧೨೨೦ರಲ್ಲಿ ಸಾಯಲು ಸ್ವಾಮಿಯ ಮರಣಾನಂತರ ಬದುಕಿರುವುದು ನಾಚಿಕೆಗೇಡೆಂದು ಭಾವಿಸಿ ತನ್ನ ಸತಿಯೊಡನೆಯೂ ತನ್ನ ಕೈಯಕೆಳಗಿದ್ದ ಸಾವಿರ ಜನ ವೀರರೊಡನೆಯೂ ಮೃತಿಯನ್ನು ಹೊಂದಿದ ಕುವರಲಕ್ಷ್ಮನ ಪ್ರಭಾವವು ಕೆಳಗಣ ಪದ್ಯಗಳಲ್ಲಿ ಹೇಳಿದೆ :

ಗುರುವುಂ ದೈವಮುಮಾಳ್ದನೆ
ಪೆರತ್ರೆಗಂ ತನಗಿಹತ್ರೆಗಂ ಪೆಱನೊರ್ವಂ
ಗುರುವಿಲ್ಲ ದೈವಮಿಲ್ಲೆನೆ
ಧರೆಗೆಸೆವಂ ಕುವರಲಕ್ಷ್ಮದಂಡಾಧೀಶಂ ॥

ಧನಮುಂ ಪ್ರಾಣಮುಮೆಂಬಿವಂ ಕುವರಲಕ್ಷ್ಮಂ ವೀರಬಲ್ಲಾಳದೇ
ವನ ದಾನೋನ್ನತಿಗಂ ಜಯೋನ್ನತಿಗಮೀಯಲ್ ಪೂಣ್ದು ಮುಂದಿಟ್ಟು ರಾ
ಮನ ಬೀಡಿಂಗಣುವಂ ಯಮಾತ್ಮಜನ ಬೀಡಿಂಗರ್ಜುನಂ ಚಂದ್ರಜೂ
ಟನ ಬೀಡಿಂಗೆ ಕುಮಾರನಿರ್ದ ತೆಱದಿಂದಿರ್ದಪ್ಪನೇಂ ಧೀರನೋ ॥

ತನ್ನೊಡನೆ ತೊಱೆದ ಸುಭಟರ
ತನ್ನ ಮನಃಪ್ರಿಯೆಯ ತನ್ನ ಪರಮಾಯುಷ್ಯಂ
ತನ್ನಾಳ್ದಂಗಾಯ್ತೆನಿಸಿದ
ನೇನ್ನೆಟ್ಟನೆ ಕಲಿಯೊ ಕುವರಲಕ್ಷ್ಮಚಮೂಪಂ[1] ॥

ಸುಮಾರು ೧೨೧೫ರಲ್ಲಿ ತನ್ನ ಸ್ವಾಮಿಯಾದ ಹೊನ್ನವ್ವೆನಾಯಕಿತಿ ಸಾಯಲು ಹೊನ್ನಿ ಎಂಬುವಳು ತನ್ನ ತಲೆಯನ್ನು ಕೊಟ್ಟು ಸುರಲೋಕವನ್ನೈದಿದಳು ಎಂದು ಒಂದು ಶಾಸನದಲ್ಲಿ[2] ಉಕ್ತವಾಗಿದೆ. ೧೨೯೧ರಲ್ಲಿ ಬರೆದ ಮತ್ತೊಂದು ಶಾಸನದಲ್ಲಿ[3] ಹೊಯ್ಸಳ ರಾಜಪರಂಪರೆಗೆ ಸೇರಿದ ಒಬ್ಬೊಬ್ಬ ದೊರೆಯೂ ಸತ್ತಾಗ ಕನ್ನಡಿಗಮೊನೆಯಾಳುಗಳು ಎಂದು ಪ್ರಸಿದ್ಧಿಯನ್ನು ಪಡೆದಿದ್ದ ಆ ದೊರೆಗಳ ಸೇನಾಪತಿಗಳ ವಂಶದಲ್ಲಿ ಒಬ್ಬೊಬ್ಬನು ತನ್ನ ಸತಿಯರೊಡನೆಯೂ ಸೇವಕ ಸೇವಕಿಯರೊಡನೆಯೂ ಸತ್ತಂತೆ ಹೇಳಿದೆ.

## ಕನ್ನಡ ನುಡಿಯ ಪ್ರಾಚೀನತೆ

ಕೆಳಗಣ ಈಜಿಪ್ಟಿನಲ್ಲಿ ದೊರೆತ ಕ್ರಿಸ್ತಶಕ ೨ನೆಯ ಶತಮಾನದಲ್ಲೆ ರಚಿತವಾದ ಒಂದು

---

೧. ಬೇಲೂರು, ೧೧೨.
೨. ಮೊಳಕಾಲುಮುರು, ೧೨.
೩. ಕೃಷ್ಣರಾಜಪೇಟೆ, ೧೦.

ಗ್ರೀಕ್ ನಾಟಕದಲ್ಲಿ ಕೆಲವು ಕನ್ನಡ ಶಬ್ದಗಳು ದೊರೆಯುತ್ತವೆ ಎಂಬ ಅಂಶವು ಪ್ರಥಮ ಸಂಪುಟದ ಅವತರಣಿಕೆಯಲ್ಲಿಯೇ ತಿಳಿಸಿದೆ. ನೃಪತುಂಗನು ತನ್ನ ಕವಿರಾಜಮಾರ್ಗದಲ್ಲಿ ತನಗೆ ಹಿಂದೆ ಇದ್ದ ಗದ್ಯಗ್ರಂಥ ಕರ್ತೃಗಳಲ್ಲಿ ದುರ್ವಿನೀತನ ಹೆಸರನ್ನು ಹೇಳಿದ್ದಾನೆ. ಈತನು ಸುಮಾರು ೫೦೦ರಲ್ಲಿದ್ದ ಆ ಹೆಸರಿನ ಗಂಗರಾಜನಾಗಿರಬಹುದು. ಐದನೆಯ ಶತಮಾನದಿಂದ ಕನ್ನಡ ಶಾಸನಗಳು ದೊರೆಯುತ್ತವೆ. ನೃಪತುಂಗನು ಹೇಳುವ ಕವಿಗಳಲ್ಲದೆ ಶ್ರೀವರ್ಧದೇವ, ಶ್ಯಾಮಕುಂದಾಚಾರ್ಯ ಇವರುಗಳು ಸುಮಾರು ೭೦೦ಕ್ಕೆ ಹಿಂದೆ ಗ್ರಂಥರಚನೆಯನ್ನು ಮಾಡಿರುವಂತೆ ತೋರುತ್ತದೆ. ಹನ್ನೊಂದನೆಯ ಶತಮಾನಕ್ಕೆ ಹಿಂದೆ ಇದ್ದ ಅಮೃತಸಾಗರನೆಂಬ ಕವಿಯಿಂದ ರಚಿತವಾದ ಯಾಪ್ಪರುಂಗಲಕ್ಕಾರಿಹೈ ಎಂಬ ತಮಿಳು ಛಂದೋಗ್ರಂಥದಿಂದ ಕನ್ನಡದಲ್ಲಿ ಗುಣಗಾಂಕಿಯಂ ಎಂಬ ಒಂದು ಛಂದೋಗ್ರಂಥವು ಇದ್ದಂತೆಯೂ ಅದರಲ್ಲಿ ಕವಿ ತನ್ನ ವಿನಯವನ್ನು ಸೂಚಿಸಿರುವುದಲ್ಲದೆ ಒಬ್ಬ ಸ್ತ್ರೀಯನ್ನು ಸಂಬೋಧಿಸಿ ಗ್ರಂಥವನ್ನು ಬರೆದಿರುವಂತೆಯೂ ಇದೇ ರೀತಿಯನ್ನು ತಮಿಳು ಗ್ರಂಥಕಾರನೂ ಅನುಸರಿಸಿರುವಂತೆಯೂ ತಿಳಿಯುತ್ತದೆ.[೧] ಕನ್ನಡ ಗ್ರಂಥವನ್ನು ಬರೆದ ಕವಿಯ ಹೆಸರು ಹೇಳಿಲ್ಲ. ಅವನು ತನ್ನ ಗ್ರಂಥವನ್ನು ಗುಣಗ, ಗುಣಗಾಂಕ, ಗುಣಕೆನಲ್ಲ ಎಂಬ ವಿಶೇಷಣಗಳುಳ್ಳ ೩ನೆಯ ವಿಜಯಾದಿತ್ಯನೆಂಬ (೮೪೪-೮೮೮) ಮೂಡಣ ಚಾಲುಕ್ಯರಾಜನಿಗೆ ಅಂಕಿತ ಮಾಡಿರುವಂತೆ ತೋರುತ್ತದೆ. ಈ ಗ್ರಂಥವು ನಮಗೆ ದೊರೆತಿಲ್ಲ.

*　*　*　*　*

## ಕರ್ಣಾಟ ಎಂಬ ಶಬ್ದ ವ್ಯುತ್ಪತ್ತಿ

ಕರ್ಣಾಟ ಎಂಬ ಶಬ್ದದ ವ್ಯುತ್ಪತ್ತಿಯ ವಿಷಯದಲ್ಲಿ ಭಿನ್ನಾಭಿಪ್ರಾಯಗಳಿವೆ. ಕೇಶವವರ್ಣಿ (೧೩೫೯) ಎಂಬ ಜೈನಪಂಡಿತನು ಭೇದನಾರ್ಥಕವಾದ 'ಕರ್ಣ' ಧಾತುವಿನಿಂದ ಹುಟ್ಟಿತೆಂದು ಭಾವಿಸಿ ದಿವ್ಯಭಾಷೆಯಿಂದ ಬೇರೆಯಾಗಿ ವ್ಯವಹಾರದಲ್ಲಿರುವ ಭಾಷೆಯಾದ ಕಾರಣ ಇದಕ್ಕೆ ಕರ್ಣಾಟ ಎಂಬ ಹೆಸರು ಬಂದಿದೆ ಎಂದು ಹೇಳುತ್ತಾನೆ. ವಿಶ್ವಗುಣಾದರ್ಶ ಎಂಬ ಸಂಸ್ಕೃತ ಗ್ರಂಥವನ್ನು ಬರೆದ ವೆಂಕಟಾಧ್ವರಿ (ಸು. ೧೭೦೦) ಕರ್ಣಗಳಲ್ಲಿ ಅಟನ ಮಾಡುವುದರಿಂದ (ಎಂದರೆ ಎಲ್ಲರ ಕಿವಿಗಳಲ್ಲಿಯೂ ಬಿದ್ದು ಪ್ರಸಿದ್ಧವಾದುದರಿಂದ) ಇದಕ್ಕೆ ಕರ್ಣಾಟವೆಂಬ ಹೆಸರುಂಟಾಯಿತೆಂದು ಹೇಳುತ್ತಾನೆ. ಈ ಎರಡು ವ್ಯುತ್ಪತ್ತಿಗಳೂ ಕವಿಕಲ್ಪನೆ ಯೆಂದು ಹೇಳಬಹುದು. ಡಾಕ್ಟರ್ ಗುಂಡರ್ಟ್ ಎಂಬವನು ಈ ಶಬ್ದವು ಕರ್+ನಾಡು (ಕರಿಯ-ಮಣ್ಣುಳ್ಳ ದೇಶ) ಎಂಬ ಪದಗಳಿಂದ ಬಂದಿರಬೇಕೆಂದು ಅಭಿಪ್ರಾಯಪಡುತ್ತಾನೆ. ಇನ್ನು ಕೆಲವರು ಕರು+ನಾಡು (ಎತ್ತರವಾದ ಪ್ರದೇಶ) ಎಂಬ ಪದಗಳಿಂದ ಬಂದಿದೆ ಎನ್ನುತ್ತಾರೆ. ಕೇಶಿರಾಜನೂ ಭಟ್ಟಾಕಳಂಕನೂ ಕನ್ನಡ ಎಂಬುದು ಕರ್ಣಾಟ ಎಂಬುದರ ಅಪಭ್ರಂಶವೆಂದು ಹೇಳಿದ್ದಾರೆ. ಆದರೆ ಕರ್ಣಾಟ ಎಂಬುದು ಕನ್ನಡ ಎಂಬ ಮೂಲಪದದ ಸಂಸ್ಕೃತರೂಪವೆಂದು ಹೇಳಲಿಕ್ಕೂ ಅವಕಾಶವುಂಟು.

---

೧. ಗುಣಗಾಂಕಿಯಮುಸ್ಸುಂ ಕರುನಾಟಕಚ್ಚಂದಮೇ ಪೋಲ್ ಮಹಡೂಮುನ್ನಿಲೈಯುತ್ತಾಯ್ ಅವ್ವೆಯಡಕ್ಕಮುಡೈತ್ತಾಯ್.

## ಕರ್ನಾಟ ಎಂಬ ಶಬ್ದದ ಪೂರ್ವಪ್ರಯೋಗಗಳು

ಆರನೆಯ ಶತಮಾನದ ಆದಿಭಾಗದಲ್ಲಿದ್ದ ವರಾಹಮಿಹಿರನು ತನ್ನ ಬೃಹತ್ಸಂಹಿತೆಯಲ್ಲಿ ಕರ್ನಾಟ ಎಂಬ ಹೆಸರನ್ನು ಹೇಳಿದ್ದಾನೆ. ಸೋಮದೇವನ ಕಥಾಸರಿತ್ಸಾಗರದಲ್ಲಿ ಈ ಶಬ್ದವು ಬರುವುದರಿಂದ ಅವನ ಮೂಲಗ್ರಂಥವಾದ ಗುಣಾಢ್ಯನ ಬೃಹತ್ಕಥೆಯಲ್ಲಿಯೂ ಅದು ಇದ್ದಿರಬೇಕು. ಹಾಗಿದ್ದ ಪಕ್ಷದಲ್ಲಿ ಈ ಶಬ್ದದ ಪ್ರಯೋಗವು ಕ್ರಿಸ್ತಶಕ ಒಂದನೆಯ ಅಥವಾ ಎರಡನೆಯ ಶತಮಾನದಲ್ಲಿ ಸಿಕ್ಕಿದಂತಾಯಿತು. ಸುಮಾರು ಎರಡನೆಯ ಶತಮಾನದಲ್ಲಿ ರಚಿತವಾದ ಶಿಲಪ್ಪದಿಗಾರಂ ಎಂಬ ತಮಿಳು ಕಾವ್ಯದಲ್ಲಿ ಕನ್ನಡರ್ ಎಂಬ ಶಬ್ದವೂ ಶಡೈಯನ್ ಪರಾಂತಕನ್ ಎಂಬ ಪಾಂಡ್ಯರಾಜನು ಸುಮಾರು ೭೭೦ರಲ್ಲಿ ಕೊಟ್ಟ ವೇಳ್ವಿಕುಡಿ ತಾಮ್ರ ಶಾಸನದಲ್ಲಿ ಕರುನಾಡಗನ್ (ಕರ್ನಾಟಕ) ಎಂಬ ಶಬ್ದವೂ ದೊರೆಯುತ್ತವೆ. ಸುಮಾರು ೯೦೦ರಲ್ಲಿದ್ದ ರಾಜಶೇಖರನೆಂಬ ಸಂಸ್ಕೃತ ಕವಿ ತನ್ನ ಕಾವ್ಯಮೀಮಾಂಸೆಯಲ್ಲಿ ಕರ್ನಾಟರು ಓದುವ ರೀತಿಯನ್ನು ನಿರೂಪಿಸಿದ್ದಾನೆ.

## ಕರ್ನಾಟಕ ಎಂಬ ಹೆಸರಿನ ವಿಪರೀತಾರ್ಥ

ಪೂರ್ವದಲ್ಲಿ ಕರ್ನಾಟಕ ಎಂಬುದು ದಕ್ಷಿಣ ಹಿಂದೂದೇಶದ ಎತ್ತರವಾದ ಪ್ರಾಂತ್ಯಕ್ಕೆ ಹೆಸರಾಗಿದ್ದಿತು. ಈಚೆಗೆ ವಿದೇಶಿಗಳ ಕೈಗೆ ಸಿಕ್ಕಿ ವಿಪರೀತಾರ್ಥವನ್ನು ಹೊಂದಿತು. ಮಹಮ್ಮದೀಯರು ಮೊದಲು ಮೊದಲು ದಕ್ಷಿಣ ಹಿಂದೂದೇಶಕ್ಕೆ ಬಂದಾಗ ಮೈಸೂರು, ತೆಲುಗುದೇಶದಲ್ಲಿ ಸ್ವಲ್ಪಭಾಗ ಇವುಗಳನ್ನು ಒಳಕೊಂಡ ಘಟ್ಟದ ಮೇಗಣ ದೇಶಕ್ಕೆ ಕರ್ನಾಟಕ ಎಂಬ ಹೆಸರು ಇದ್ದಿತು. ಕಾಲಕ್ರಮದಲ್ಲಿ ಅವರು ಈ ಹೆಸರನ್ನು ಘಟ್ಟದ ಕೆಳಗಣ ದೇಶಕ್ಕೂ ಕೊಟ್ಟರು. ತರುವಾಯ ಇಂಗ್ಲಿಷರು ಕರ್ನಾಟಿಕ್ ಎಂಬ ಹೆಸರನ್ನು ಆ ಹೆಸರಿಗೆ ಸಂಬಂಧವೇ ಇಲ್ಲದ ಘಟ್ಟದ ಕೆಳಗಣ ದೇಶಕ್ಕೆ ಮಾತ್ರ ಇಟ್ಟರು. ಈಗ ಕರ್ನಾಟಿಕ್ ಎಂಬುದು ಪೂರ್ವದ ಅರ್ಥವನ್ನು ಕಳೆದುಕೊಂಡು ತಮಿಳುದೇಶ ತೆಲುಗುದೇಶದಲ್ಲಿ ನೆಲ್ಲೂರು ಜಿಲ್ಲೆ ಇವುಗಳನ್ನು ಒಳಕೊಂಡು ಪೂರ್ವಸಮುದ್ರತೀರದಲ್ಲಿರುವ ಘಟ್ಟದ ಕೆಳಗಣ ಪ್ರಾಂತಕ್ಕೆ ಮಾತ್ರ ಅನ್ವಯಿಸುತ್ತದೆ.

* * * * *

## ಕನ್ನಡದ ವರ್ಣಮಾಲೆ

ಹಿಂದೆ ಕನ್ನಡಕ್ಕೂ ತೆಲುಗಿಗೂ ಹುದುವಾಗಿ ದಕ್ಷಿಣ ಹಿಂದೂದೇಶದಲ್ಲಿ ಮಾತ್ರವಲ್ಲದೆ ಇಂದೋಚೈನ, ಯವದ್ವೀಪ ಮುಂತಾದ ಪ್ರಾಂತಕ್ಕೂ ವ್ಯಾಪಿಸಿದ ಈ ಲಿಪಿ ಹಿಂದೂದೇಶದಲ್ಲಿಯ ಈಗಿನ ಎಲ್ಲಾ ಲಿಪಿಗಳಂತೆಯೇ ಮಾತೃಕೆಯಾದ ಬ್ರಾಹ್ಮೀಲಿಪಿಯಿಂದ ಹುಟ್ಟಿದೆ. ಬ್ರಾಹ್ಮೀಲಿಪಿಯ ಹಲವು ಅಕ್ಷರಗಳು ಕ್ರಿಸ್ತಪೂರ್ವ ಒಂಬತ್ತನೆಯ ಶತಮಾನದ ಉತ್ತರ ಸೆಮಿಟಿಕ್ ಅಕ್ಷರಗಳೊಡನೆ ಹೋಲುವುದರಿಂದ, ಸುಮಾರು ಕ್ರಿಸ್ತಪೂರ್ವ ಎಂಟನೆಯ ಶತಮಾನದಲ್ಲಿ ಹಿಂದೂ ವರ್ತಕರು ತಮ್ಮ ಭಾಷೆಯನ್ನು ಬರೆವುದಕ್ಕೆ ಆ ಸೆಮಿಟಿಕ್ ಅಕ್ಷರಗಳನ್ನು ತೆಗೆದುಕೊಂಡಿರಬಹುದೆಂದೂ, ತರುವಾಯ ಆ ಅಕ್ಷರಗಳನ್ನು ಹಿಂದೂ ಪಂಡಿತರು ಸಂಸ್ಕೃತಭಾಷೆಯನ್ನು ಬರೆಯಲು ಅನುಕೂಲಿಸುವಂತೆ ತಿದ್ದಿ ಕ್ರಮಪಡಿಸಿ ವರ್ಣಮಾಲೆಗಳನ್ನು ಏರ್ಪಡಿಸಿರಬಹುದೆಂದೂ, ಕೆಲವರು ಪಾಶ್ಚಾತ್ಯಪಂಡಿತರು ಅಭಿಪ್ರಾಯ

ಪಡುತ್ತಾರೆ. ಆದರೆ ಇನ್ನು ಕೆಲವರು ಬ್ರಾಹ್ಮೀಲಿಪಿ ಹಿಂದೂದೇಶದಲ್ಲಿ ಬಹಳಕಾಲಕ್ಕೆ ಹಿಂದೆ ಹಿಂದುಗಳಿಂದಲೇ ನಿರ್ಮಿತವಾದುದು ಎನ್ನುತ್ತಾರೆ.

ದ್ರಾವಿಡ ಲಿಪಿಗಳಲ್ಲಿ ಕನ್ನಡವೂ ತೆಲುಗೂ, ಹಾಗೆಯೇ ತಮಿಳೂ ಮಲೆಯಾಳವೂ ಬಹಳಮಟ್ಟಿಗೆ ಹೋಲುತ್ತವೆ. ಈಗ ಕನ್ನಡ ಲಿಪಿಗೂ ತಮಿಳು ಲಿಪಿಗೂ ಸಂಬಂಧವಿರುವಂತೆ ಕಾಣುವುದಿಲ್ಲ. ಆದರೆ ಈ ಎರಡು ಭಾಷೆಗಳಲ್ಲಿರುವ ಪ್ರಾಚೀನ ಶಾಸನಗಳನ್ನು ಪರೀಕ್ಷಿಸಿ ನೋಡಿದರೆ ಈ ಎರಡು ಲಿಪಿಗಳಿಗೂ ಇರುವ ಸಾದೃಶ್ಯವು ವಿಶದವಾಗುತ್ತದೆ. ಈ ದ್ರಾವಿಡ ಲಿಪಿಗಳು ಒಂದೊಂದೂ ಕಾಲಕ್ರಮದಲ್ಲಿ ನಾನಾ ಕಾರಣಗಳಿಂದ ರೂಪಾಂತರವನ್ನು ಹೊಂದುತ್ತಾ ಬಂದು ಈಗಿನ ಆಕೃತಿಯನ್ನು ಪಡೆದಿವೆ ಎಂದು ಶಾಸನಗಳಿಂದ ನಿರ್ಣಯಿಸ ಬಹುದಾಗಿದೆ.

*ಕರ್ಣಾಟಕ ಕವಿಚರಿತೆ, ಸಂ. ೧, ಸಂ. ೨, (೧೯೧೯, ೧೯೨೪) ೧೯೬೩, ೧೯೭೨,*
*ಅವತರಣಿಕೆ, ಪು. ೨೩-೩೧, ಅವತರಣಿಕೆ, ಪು. ೫-೮*

## ೧೨. ಗೋದಾವರಿಯ ಉತ್ತರದಲ್ಲಿ ಕನ್ನಡದ ಕುರುಹುಗಳು

● ಶಂ.ಬಾ. ಜೋಶಿ

ಹಿಂದಕ್ಕೆ ಗೋದಾವರಿಯ ಮೇಗಡೆಯಲ್ಲಿ ಕರ್ನಾಟಕವು ಇದ್ದಿತೆಂದು ಸಿದ್ಧಮಾಡಿ ತೋರಿಸುವುದಕ್ಕೆ ತರ್ಕಕ್ಕಿಂತಲೂ ಹೆಚ್ಚಿನ ಆಧಾರಗಳು ಇಲ್ಲದಿಲ್ಲ. ಆದರೆ, ಅವುಗಳಲ್ಲಿ ಒಂದೊಂದೇ ಪ್ರಮಾಣವನ್ನು ಬೇರೆ ಬೇರೆಯಾಗಿ ವಿಚಾರಿಸಿದರೆ ಅದು ಅಷ್ಟು ಸಬಲವೆನಿಸಲಾರದು. ಪ್ರಮಾಣಗಳ ದುರ್ಬಲತೆಯು ಇದಕ್ಕೆ ಕಾರಣವಲ್ಲ. ಕರ್ನಾಟಕರು ೧೫೦೦-೨೦೦೦ ವರುಷಗಳಿಂದ ಮೈಮರೆತು, ಮನಮರೆತು ವರ್ತಿಸಿದುದರ ಫಲವಿದು. ಆದುದರಿಂದ, ಅವೆಲ್ಲ ಆಧಾರಗಳನ್ನು ಸಮಾಲೋಚಿಸಿ ಕೇಂದ್ರೀಕರಿಸಿ ನೋಡಿದರೆ 'ಪ್ರಾಚೀನ ಕರ್ನಾಟಕವು ಇದ್ದರೆ ಅದು ಇಲ್ಲಿಯೆ' ಎಂದು ಹೇಳುವ ಗತ್ಯಂತರವಿಲ್ಲ. ಈ ವಿಷಯದಲ್ಲಿ ಪ್ರಾಚೀನ ಅಥವಾ ಅರ್ವಾಚೀನಪಂಡಿತರೊಳಗೆ ಯಾವ ಭಿನ್ನಾಭಿಪ್ರಾಯವೂ ಇಲ್ಲ. ದ್ರವಿಡರು ದಕ್ಷಿಣದಿಂದ ಹಿಂದೂದೇಶವನ್ನು ಹೊಕ್ಕರು ಎಂದು ಹೇಳಲಿ, ಅಥವಾ ಆರ್ಯರಂತೆ ವಾಯವ್ಯ ದಿಕ್ಕಿನಿಂದ ಬಂದರೆಂದು ಹೇಳಲಿ, ಇದಾವುದರಿಂದಲೂ ವಿಂಧ್ಯಗಿರಿಯಿಂದ ತೆಂಕಣಕ್ಕೆ ದ್ರವಿಡರ ಪ್ರಾಬಲ್ಯವಿತ್ತೆಂಬ ಮತಕ್ಕೆ ವಿರೋಧ ಉಂಟಾಗುವುದಿಲ್ಲ. ಆರ್ಯರಿಂದಲೂ ಮೊದಲು ಹಿಂದೂದೇಶದಲ್ಲಿ ನೆಲೆಸಿದವರು ದ್ರವಿಡರೆಂದು ಸಂಶೋಧಕರು ಸಿದ್ಧಮಾಡಿದ್ದಾರೆ. ಆರ್ಯಾವರ್ತದ ಸೀಮಾಪ್ರದೇಶದಲ್ಲಿದ್ದು ಆರ್ಯರನ್ನು ಮೇಲಿಂದ ಮೇಲೆ ಪೀಡಿಸುತ್ತಿದ್ದ ಅನಾರ್ಯರ ತಂಡಗಳ ಉಲ್ಲೇಖಗಳು ವೇದಗಳಲ್ಲಿ ಬೇಕಾದಷ್ಟಿವೆ. ಭಿನ್ನ ಸಂಸ್ಕೃತಿಯ, ಭಿನ್ನ ಅಭಿರುಚಿಯ ತಂಡಗಳು ಒಂದಕ್ಕೊಂದು ಎದುರಾಗಲು ಅವರು ಆರಂಭಕ್ಕೆ ಒಬ್ಬರೊಬ್ಬರಿಗೆ ಹೆಸರಿಡುವ ಬಗೆಯು ವಿಚಾರಣೀಯವಾಗಿದೆ. ಆ ತಂಡಗಳಲ್ಲಿ ಇದ್ದ ಆರಂಭದ ತಿರಸ್ಕಾರವು, ವೈಮನಸ್ಯವು ಆ ಹೆಸರುಗಳಲ್ಲಿ ಚೆನ್ನಾಗಿ ಒಡೆದು ಕಾಣುತ್ತಿರುತ್ತದೆ. ಎಷ್ಟೋ ಸಾರೆ, ಈ ಬಗೆಯ ಹಲವು ಹೆಸರುಗಳಲ್ಲಿ ಎದುರುಬಂದ ತಂಡಗಳ ಒಂದೊಂದು ಗುಣವಿಶೇಷವೂ ಧ್ವನಿತವಾಗುತ್ತಿರುವುದುಂಟು. ವೇದಕಾಲದಿಂದ ಸಂಸ್ಕೃತ ಶಬ್ದಭಂಡಾರದಲ್ಲಿ ಕಣ್ಣಿಗೆ ಬೀಳುವ ದಸ್ಯು, ಅಸುರ, ಶಬರ, ನಿಷಾದ, ಆಂಧ್ರ ಮೊದಲಾದ ನುಡಿಗಳೇ ಇದಕ್ಕೆ ನಿದರ್ಶನ.

ಆರ್ಯರಿಗೆ ತಮ್ಮ ಆರ್ಯಾವರ್ತದ ವಿಷಯದಲ್ಲಿದ್ದ ಅಭಿಮಾನವು ಅನ್ಯಾದೃಶ. ಆರ್ಯಾವರ್ತದಿಂದ ಹೊರಗೆ ಹೋಗುವುದು ಅಧಾರ್ಮಿಕ ಅಧೋಗತಿಗೆ ಕಾರಣವೆಂಬ ವಿಚಾರವು ಒಂದು ಕಾಲಕ್ಕೆ ಬಹಳ ಪ್ರಬಲವಾಗಿದ್ದಿತು. ಸಾಮಾನ್ಯವಾಗಿ ಹಿಮವತ್ಪರ್ವತ ಮತ್ತು ವಿಂಧ್ಯಗಳ ನಡುವಿನ ನಾಡು ಆರ್ಯಾವರ್ತ. ಇದರ ದಕ್ಷಿಣಕ್ಕೆ ಮಲಯ (ಮಾಳವಾ)ದ ಭೀಕರವಾದ ಅರಣ್ಯ ಆರ್ಯರಿಗೆ ಬೇಡರಾದವರ ನಾಡು. ದಕ್ಷಿಣವು ಮೃತ್ಯುಲೋಕ, ಯಮಲೋಕವೆಂದಿರುವಲ್ಲಿ ಈ ಜನಗಳ ವಿಷಯಕ್ಕೆ ಆರ್ಯರಿಗಿದ್ದ ಭಾವನೆಯೆ ಒಡಮೂಡಿಲ್ಲವೆಂದು ಹೇಗೆ ಹೇಳಲಿಕ್ಕಾದೀತು? ಯಮರಾಯನ ಮೈಬಣ್ಣವೆಂತಹುದು? ಅಸುರರ (ಕಪ್ಪು) ಮೈಬಣ್ಣವು ದೇವಗಣ್ಯನಾದ ಯಮನಿಗೂ ಇರಬೇಕೆ! ಆವುದೇ ಶುಭಕಾರ್ಯದಲ್ಲಿ ಮೋರೆ ಸಹ ತಿರುವುಗಳಾದ, ಅಮಂಗಲಕರವಾದ ದಿಕ್ಕು ದಕ್ಷಿಣ! ಪಶ್ಚಿಮ ದಿಕ್ಕಿನ ಬಗ್ಗೆ ಮುಸಲ್ಮಾನರಲ್ಲಿರುವ ಭಕ್ತಿ ಪ್ರೀತಿಗಳು ಆರ್ಯರಿಗೆ ಉತ್ತರ ದಿಕ್ಕಿನ ಸಲುವಾಗಿ;

ಅಭಿವೃದ್ಧಿಯಾಗಲಿ, ಏಳ್ಗೆಯನ್ನು ಹೊಂದಲಿ ಎಂಬ ಹರಕೆಗೆ ಉತ್ತರೋತ್ತರವಾಗಲಿ ಎಂದೂ ನಾಡನುಡಿ! ಆರ್ಯಾವರ್ತವನ್ನು ಬಿಟ್ಟು ಹೊರಗೆ ಹೋದವನು ವ್ರಾತ್ಯನು ಅನಾರ್ಯನಿಗೆ ಸಮಾನನು. ಇವನನ್ನು ಮರಳಿ ಆರ್ಯನನ್ನಾಗಿ ಮಾಡಿಕೊಳ್ಳಲು ವ್ರಾತ್ಯಸ್ತೋಮವೆಂಬ ವೈದಿಕ ವಿಧಿ ವಿಧಾನವಾಗಬೇಕು.

'ಆತ್ಮಘಾತಿಗಳು-ಅನಾಚಾರಿಗಳು. ಅಸುರನಾಡಿಗೆ ಹೋಗುವರು. ಅಸುರರ ನಾಡು ಕಗ್ಗತ್ತಲೆಯಿಂದ ಮುಸುಕಿದೆ.

ಅಸುರ್ಯಾನಾಮ ತೇ ಲೋಕಾಃ ಅಂಧೇನ ತಮಸಾವೃತಾಃ
ತಾನ್ ತೇ ಪ್ರೇತ್ಯಾಭಿಗಚ್ಛಂತಿ ಯೇ ಕೇ ಚಾತ್ಮಹನೋ ಜನಾಃ'

ಎಂದು ಈಶಾವಾಸ್ಯೋಪನಿಷತ್ತಿನಲ್ಲಿ (೩) ಹೇಳಿದ್ದು ಕೇವಲ ಸಾಂಕೇತಿಕ ಅರ್ಥದಿಂದಲ್ಲ. ಮಲಯ (ಮಾಳವಾ), ವಿಂಧ್ಯ, ದಂಡಕಾರಣ್ಯಗಳ ಕಗ್ಗತ್ತಲ ನಾಡಿನಲ್ಲಿ ನೆಲಸಿದ್ದ ಕಪ್ಪುಬಣ್ಣದ ಜನಗಳೆ ಕಣ್ಣೆದುರಿಗೆ ಕಟ್ಟಿ ಆ ಮನೀಷಿಯು (ಜ್ಞಾನಿಯು) ಈ ಬಗೆಯಾಗಿ ಉಸಿರಿರುವುದು ಅಸಂಭವನೀಯವಲ್ಲ. ಈಶಾವಾಸ್ಯದ ಕವಿಯು ಉಲ್ಲೇಖಿಸಿದ ಅಂಧಂತಮಸ್ಸಿನ ಲೋಕದವರಿಗೆ ಮುಂದೆ ಐತರೇಯಬ್ರಾಹ್ಮಣದಲ್ಲಿ (ಅಂಧಸ್-ಅಂಧರ್) ಆಂಧ್ರರೆಂದು ಹೇಳಿರಲಿಕ್ಕೆ ಸಾಕು.

ಈಶಾವಾಸ್ಯವು ಯರ್ವೇದೀಯ ಕಾಣ್ವಶಾಖೆಯ ಉಪನಿಷತ್ತು. ಅನೇಕಾನೇಕ ಯಜುರ್ವೇದಿಗಳು ದಕ್ಷಿಣಕ್ಕೆ ನೆಲೆಯಾಗಲು ಹೊರಡುತ್ತಿದ್ದುದು ಈ ಉಪನಿಷತ್ಕಾರರಿಗೆ ಸಮ್ಮತವಿದ್ದಿಲ್ಲವೆಂದು ತೋರುತ್ತದೆ. ಇದೇ ಶಾಖೆಯ ಯಾಜ್ಞವಲ್ಕ್ಯನು 'ಮುಕ್ತಸ್ಥಿತಿಯಲ್ಲಿ ಮನುಷ್ಯನು ಪರಿವ್ರಾಜಕನಾಗಿ, ಭಿಕ್ಷಾಚರ್ಯೆಯಿಂದ ಜೀವಿಸುತ್ತ' ಎಲ್ಲಿ, ಬೇಕಾದಲ್ಲಿರ ಬಹುದು ಎಂದು ಹೇಳುತ್ತಾನೆ.[೧] ಆ ಕಾಲದಲ್ಲಿ ತಮ್ಮ ಸಂಸ್ಕೃತಿ, ಪರಂಪರೆಗಳನ್ನು ಕಾಯ್ದು ಕೊಳ್ಳಬೇಕೆಂಬ ಆರ್ಯರಿಗೆ ಎರಡು ಬಗೆಯ ಸಂಕಟಗಳು ಉಂಟಾಗಿರಬೇಕು. ಹೆಣ್ಣು, ಹೊನ್ನು, ಮಣ್ಣಿನ ಎಳತದಿಂದ ಆರ್ಯಾವರ್ತವನ್ನು ತೊರೆಯಲು ಸಿದ್ಧರಾದ 'ವ್ರಾತ್ಯರ' ಚಿಂತೆಯೊಂದು, ಬ್ರಹ್ಮಾನಂದವು ದೊರೆತ ಬಳಿಕ ಮನೆಯೇನು, ಮಠವೇನು, ನಾಡೇನು, ಕಾಡೇನು, ಎಲ್ಲವೂ ಅಷ್ಟೇ ಎಂದು ನಿಸ್ಸಂಗರಾಗಿ ಹೊರಟ ಪರಿವ್ರಾಜಕರ ಚಿಂತೆ ಇನ್ನೊಂದು. ಈ ಎರಡೂ ಜಾತಿಯ ಚರಂತಿಗಳು ಆತ್ಮಘಾತುಕರರಾಗಿ ಅಸುರಲೋಕಕ್ಕೆ ಹೋಗದೆ ಆರ್ಯಾವರ್ತದಲ್ಲಿಯೆ ಕಾಲೂರಿ ನಿಲ್ಲಬೇಕೆಂದು ಆರ್ಯಋಷಿಗಳು ಹಲವು ಬಗೆಯ ಯುಕ್ತಿಪ್ರಯುಕ್ತಿಗಳನ್ನು ಮಾಡಿದ್ದುಂಟು. ''ಕರ್ಮಿಯಾಗಿ, ಕಾಮುಕನಾಗಿ ಅವಿದ್ಯೆಯಲ್ಲಿ ಮೈಮರೆವ ವ್ರಾತ್ಯನೂ ಆಗಬೇಡ; ವಿದ್ಯೆವಿದ್ಯೆಯೆಂದು ಅಸಂಭೂತಿಯ ಅಭಿಮಾನಿಯು, ಬರಿ ಶೂನ್ಯಸಂಪಾದಕನೂ ಆಗಬೇಡ. ವಿದ್ಯೆ ಅವಿದ್ಯೆಗಳ ಹದವನರಿತು, ಸಂಭೂತಿ ಅಸಂಭೂತಿಗಳ ಕೀಲವನ್ನು ತಿಳಿದು ಸಮಕಟ್ಟಿನಿಂದ ಸಾಗು, ಎರಡೂ ಬಗೆಯ ಅತಿವಾದಗಳನ್ನು ಅಲ್ಲಗಳೆದು, ಸತ್ಯಸಮನ್ವಯದ ಸುವರ್ಣಮಧ್ಯವನ್ನು ಅನುಸರಿಸಿ ಆನಂದವನ್ನು ಅನುಭವಿಸು. ಇದೇ ಶಾಶ್ವತ ಧರ್ಮ; ಮಧ್ಯಮಾರ್ಗವನ್ನು ಬಿಟ್ಟವನು 'ಅಸುರರ

---

೧. ಬೃಹದಾರಣ್ಯಕೋಪನಿಷತ್ತು, ೪-೪,೨೨.

ಅಂಧಂತಮಸ್ಸಿನ ಲೋಕಕ್ಕೆ ಹೋಗುವನು' ಎಂದು ಈಶಾವಾಸ್ಯವು ಒತ್ತಿ ಒತ್ತಿ ಹೇಳುತ್ತದೆ.[೨]

ಕಾಲಪ್ರವಾಹಕ್ಕೆ ಅಡ್ಡಗಟ್ಟಿ ಸಾಗಬೇಕಾದುದೇನು? ಆತ್ಮರಕ್ಷಣೆಯೆ ಮನುಷ್ಯನ ಮೂಲಸ್ವಭಾವ. ತಾನು ಬದುಕಬೇಕು ಎಂಬುದಕ್ಕಾಗಿಯೆ ತನ್ನತನದ ಅಭಿಮಾನವು 'ಅಹಂ' 'ಆಂ'-'ನಾನು'. ಇದು ಅವನೊಡನೆಯೇ ಹುಟ್ಟಿ ಬಂದಿರುತ್ತದೆ. 'ಅಹಂ'ದ ಸುವ್ಯವಸ್ಥಿತ ಸ್ವರೂಪವೇ ಪರಂಪರಾ ಪ್ರೀತಿ; ಸಂಪ್ರದಾಯಗಳ ಅಭಿಮಾನ; ಸಂಸ್ಕೃತಿ ಸಂರಕ್ಷಣಾಭಿಮಾನ. ಆದರೆ, ಆತ್ಮರಕ್ಷಣೆಯೊಂದೆ ಮನುಷ್ಯನ ಮೂಲ ಸ್ವಭಾವವಲ್ಲ; ಆತ್ಮವಿಸ್ತಾರದ ಇನ್ನೂ ಒಂದು ಮೂಲಭೂತ ಪ್ರವೃತ್ತಿಯು ಅವನಲ್ಲಿದೆ. ಸಿಡಿಲು ಗಾಳಿಗಳನ್ನು ತಡೆಯಬಹುದು. ಆದರೆ, ಮನುಷ್ಯನ ಮೂಲ ಪ್ರವೃತ್ತಿಗಳನ್ನು ವಿರೋಧಿಸುವುದು ಅಸಾಧ್ಯ. ಅನೇಕಾನೇಕ ಧಾರ್ಮಿಕ ಕಟ್ಟಳೆಗಳೂ ರಾಜ್ಯ ಸಾಮ್ರಾಜ್ಯಗಳೂ ಇದರ ಸೆಳೆತದಲ್ಲಿ ಸಿಲುಕಿ ನುಗ್ಗುನುಸಿಯಾಗಿದ್ದುದನ್ನು ಇತಿಹಾಸವು ಸಾರುತ್ತಲಿದೆ. ಅಸುರರೆಂದಾಯಿತು; ಅನಾರ್ಯರೆಂದು ಹೆಸರಿಟ್ಟುದೂ ಆಯಿತು. ಏನೆ ಎಂದರು ಮಲಯ ದಂಡಕಾರಣ್ಯಗಳ 'ಆಂಧ್ರ' (ಅಂಧಸ್ಸಿನ) ನಾಡಿಗೆ ಆರ್ಯರ ಒಂದು ಪಿಳ್ಳೆಯೂ ಹೋಗದಂತೆ ಮಾಡುವುದು ಮಾತ್ರ ಸಾಧ್ಯವಾಗಲಿಲ್ಲ. 'ಕಗ್ಗತ್ತಲೆಯ ಅಂದರೆ ಆಂಧ್ರನಾಡಿಗೆ ಹೋಗದಿರಿ ಎಂದು ಹಿಂದಿನ ಋಷಿಗಳು ಹೇಳುವುದರಲ್ಲಿಯೂ ಹುರುಳಿತ್ತು. ಆರ್ಯ ಪರಂಪರೆಯು ನಷ್ಟವಾದೀತು. ವರ್ಣಸಂಕರವಾಗಿ ಬಣ್ಣ ಕೆಟ್ಟೀತು ಎಂಬುದೆ ಅವರ ಹೆದರಿಕೆ. ಮೊದಲು ಹೋಗಿ ನೆಲೆಸಿದವರ ಹಾಡನ್ನು ಕಣ್ಣಾರೆ ಕಂಡೇ ಉಪನಿಷತ್ಕಾಲದ ಋಷಿಗಳು ಹೀಗೆ ಹೇಳಿದ್ದು— "ಅಂಧಂತಮಸ್ಸಿನ ನಾಡಿಗೆ ಹೋದವರು ಅನಾಚಾರಿಗಳಾಗುತ್ತಾರೆ. (ಅನಾಚಾರಿಗಳು ಅಂಧಂತಮಸ್ಸಿಗೆ ಹೋಗುತ್ತಾರೆ), ಎಂದು ನಮ್ಮ ಹಿರಿಯರಿಂದ ಕೇಳುತ್ತ ಬಂದಿದ್ದೇವೆ. (ಇತಿ ಶುಶ್ರುಮದೀರಣಾಂ ಯೇನ ತದ್ವಿಚಚಕ್ಷಿರೇ)" ಎಂದು ಈಶ, ಬೃಹದಾರಣ್ಯಕಗಳಲ್ಲಿರುವ ಅವರ ಈ ಅನುಭವವು ತೀರ ಸುಳ್ಳಾಗಲಿಲ್ಲ.

ಕ್ಷತ್ರಿಯರಿಗೂ ವೈಶ್ಯರಿಗೂ ಜನಸಾಮಾನ್ಯರಲ್ಲಿ ಬೆರೆತುಕೊಳ್ಳದೆ ಬಾಳುವುದೆ ಸಾಧ್ಯವಿಲ್ಲ. ಆದುದರಿಂದ ನಾಡಿನವರೊಡನೆ ಸಮರಸವಾಗುವುದಕ್ಕೆ ಬಹಳ ಕಾಲವು ಹಿಡಿದಿರಲಿಕ್ಕಿಲ್ಲ. ಆದರೆ, ಬ್ರಾಹ್ಮಣರು ಮಾತ್ರ ಜೀವ ಹೋದರೂ ತಮ್ಮ ನುಡಿ, ತಮ್ಮ ನಡೆವಳಿಯನ್ನು

---

೨. ಅಂಧಂ ತಮಃ ಪ್ರವಿಶಂತಿ ಯೇ ವಿದ್ಯಾಮುಪಾಸತೇ
ತತೋ ಭೂಯ ಇವ ತೇ ತಮೋ ಯ ವಿದ್ಯಾಯಾಂ ರತಾಃ ॥ ೯ ॥
ಅನ್ಯ ದೇವಾಹುರ್ವಿದ್ಯಯಾ ಅನ್ಯದಾಹುರವಿದ್ಯಯಾ
ಇತಿ ಶುಶ್ರುತಾ ಧೀರಾಣಾಂ ಯೇ ನಸ್ತದ್ ವಿಚಚಕ್ಷಿರೇ ॥ ೧೦ ॥
ವಿದ್ಯಾ ಚಾವಿದ್ಯಾಂ ಚ ಯಸ್ತದ್ ವೇದೋಭಯಂ ಸಹ ।
ಅವಿದ್ಯಯಾ ಮೃತ್ಯುಂ ತೀರ್ತ್ವಾ ವಿದ್ಯಯಾಮೃತಮಶ್ನುತೇ ॥ ೧೧ ॥
ಅಂಧಂ ತಮಃ ಪ್ರವಿಶಂತಿ ಯೇ ಸಂಭೂತಿಮುಪಾಸತೇ ।
ತತೋ ಭೂಯ ಇವ ತೇ ತಮೋ ಯ ಉ ಸಂಭೂತ್ಯಾಂ ರತಾಃ ॥ ೧೨ ॥
ಅನ್ಯದೇವಾಹುಃ ಸಂಭವಾತ್ ಅನ್ಯದಾಹುರಸಂಭವಾತ್ ।
ಇತಿ ಶುಶ್ರುಮ ಧೀರಾಣಾಂ ಯೇ ನಸ್ತದ್ ವಿಚಚಕ್ಷಿರೇ ॥ ೧೩ ॥
ಸಂಭೂತಿಂ ಚ ವಿನಾಶಂ ಚ ಯಸ್ತದ್ ವೇದೋಭಯಂ ಸಹ
ವಿನಾಶನೇ ಮೃತ್ಯುಂ ತೀರ್ತ್ವಾ ಸಂಭೂತ್ಯಾಮೃತಮಶ್ನುತೇ ॥ ೧೪ ॥
(ಈಶಾವಾಸ್ಯೋಪನಿಷತ್-೮ರಿಂದ ೧೪)

ಬಿಡಲಿಕ್ಕಿಲ್ಲೆಂದು ಬದ್ಧಪ್ರತಿಜ್ಞರು. ಆ ಕಾಲದಲ್ಲಿ ಇವರಿಗೆ ಬಹುಜನ ಸಮಾಜದಿಂದ ಕೆಲದೂರವಿದ್ದೂ ನಡೆಯುವಂತಿತ್ತು. ಆದುದರಿಂದಲೇ, ಈ ವರ್ಗದವರಿಗೆ ಕೆಲವು ಮಟ್ಟಿಗಾದರೂ ತಮ್ಮ ವೈಶಿಷ್ಟ್ಯವನ್ನು ಕಾಯ್ದುಕೊಳ್ಳಲು ಸಾಧ್ಯವಾಯಿತು. ಆದರೂ ಅಂಧಂತಮಸ್ಸಿನ ಲೋಕದ ಕತ್ತಲೆಯು ಇವರಿಗೆ ಸಹ ಅಂಟಿಕೊಳ್ಳದೆ ಬಿಡಲಿಲ್ಲ. ಕಸ್ತೂರಿಯನ್ನು ಎತ್ತಿಕೊಳ್ಳುವಾಗ ನೆಲಕ್ಕೆ ಬಿದ್ದ ಮೃಗ ಮದದೊಡನೆ ಸ್ವಲ್ಪ ಮಣ್ಣಿನ ಅಂಶವೂ ಬರತಕ್ಕದೆ. ವಸ್ತುವಿನೊಡನೆ ಅದರ ಕತ್ತಲೆಯೂ ಬೆನ್ನಬಿಡದು. ಕರಿಯನು ಬ್ರಾಹ್ಮಣನು! ಧವಳಗಿರಿಯು ದಕ್ಷಿಣಕ್ಕೆ ಬಂದು ನೀಲಗಿರಿಯಾಯಿತು! ಬ್ರಾಹ್ಮಣರ ಮೇಲೆ ಕತ್ತಲೆ (ಆಂಧ್ರ) ನಾಡಿನ ಛಾಯೆ ಬಿದ್ದುದರ ಪರಿಣಾಮವಿದು. ಅವರಲ್ಲಿ ನಿಡುಮೂಗು, ವಿಶಾಲಾಕ್ಷ, ಭವ್ಯದೇಹ, ಗೌರಾಂಗಗಳು ಅಪರೂಪವಾಗುತ್ತಿವೆ. ಅಗಲಮೂಗು, ದಪ್ಪತುಟಿ, ಗುಳ್ಳೆಗಣ್ಣು ಚೌಕುಮೋರೆ, ಸರಳವಲ್ಲದ ಕೇಶ, ಗಿಡ್ಡಆಕಾರ, ತಿಳಿಗಪ್ಪಿನಿಂದ ಇದ್ದಲಿಕಪ್ಪಿನವರೆಗೆ ಎಲ್ಲ ಬಗೆಯ ಕೃಷ್ಣವರ್ಣ, ಇವೆಲ್ಲವುಗಳೂ ಬ್ರಾಹ್ಮಣರಲ್ಲಿ ಸಮುಚ್ಚಯದಿಂದ ಗೋಚರವಾಗುವುದು ಕಡಮೆ. ಆದರೂ ಇವುಗಳಲ್ಲಿ ಒಂದೂ ಇಲ್ಲದಿರುವ ಮನೆ ಮಾತ್ರ ಒಂದೂ ಇಲ್ಲ. ಇದು ಉತ್ತರದವರ ಮೇಲೆ ಬಿದ್ದ ದಕ್ಷಿಣ ದೇಶದ ಮುದ್ರೆ; ಋಷಿಗಳ ಆದೇಶಗಳನ್ನು ಅತಿಕ್ರಮಿಸಿ ದುದಕ್ಕೆ ಪ್ರಾಯಶ್ಚಿತ್ತ. ಅಗಸ್ತ್ಯನು ವಿಂಧ್ಯದ ಬಲಿತ ಪುಚ್ಚಗಳನ್ನು ಕತ್ತರಿಸಿ ದಕ್ಷಿಣಾಪಥಕ್ಕೆ ಹೊರಡುವವರಿಗೆ ದಾರಿಯನ್ನು ಮಾಡಿಕೊಟ್ಟವರಲ್ಲಿ ಮೊದಲಿಗನೆಂದು ಬಲ್ಲವರ ಅಭಿಪ್ರಾಯ 'ಗುಂಪು ಕಟ್ಟಿಕೊಂಡು ಬ್ರಾಹ್ಮಣರಲ್ಲಿ ಮೊದಲು ಹೊರಟವರು ಯಜುರ್ವೇದಿಗಳು' ಎಂದು ಇರುವ ಗ್ರಹಿಕೆಯಲ್ಲಿ ಸತ್ಯಾಂಶವು ಇಲ್ಲದಿಲ್ಲ. ಅಂಧಂತಮಸ್ಸಿನ ಲೋಕದ ಉಲ್ಲೇಖವು ಯಜುರ್ವೇದಿಯ ಉಪನಿಷತ್ತುಗಳಲ್ಲಿರುವುದೂ ಯಜುರ್ವೇದದಲ್ಲಿ ಕೃಷ್ಣ ಮತ್ತು ಶುಕ್ಲವೆಂಬ ಶಾಖೆಗಳಿರುವುದೂ ಈ ಊಹೆಗೆ ಇನ್ನಿಷ್ಟು ಪೋಷಕವಾಗಿದೆ. ಕಣ್ವನು (ಯಜುರ್ವೇದಿ) ಆಂಧ್ರಭಾಷೆಯ ಆದಿವ್ಯಾಕರಣಕಾರನೆಂಬ ದಂತಕಥೆಯು ಸಟೆಯಿರಲಿ ದಿಟವಿರಲಿ ಇದನ್ನೇ ಸೂಚಿಸುವುದು. (ಅಂಧರ್) ಆಂಧ್ರ ನಾಡಿಗೆ ಹೊರಟ ಬ್ರಾಹ್ಮಣರಲ್ಲಿ ಕಣ್ವರೆ ಪ್ರಥಮ ಶಾಖೆಯವರಾಗಿರಬೇಕು. ಕಣ್ವಶಾಖೆಯವರಿಗೆ ಪ್ರಥಮ ಶಾಖೆಯವರೆಂದು ಈಗಲೂ ಹೇಳುವುದುಂಟು. ಬ್ರಾಹ್ಮಣರು ಪ್ರಥಮ, ದ್ವಿತೀಯ ಎಂದು ಮುಂತಾಗಿ ತಮ್ಮ ಶಾಖೆಗಳನ್ನು ಹೇಳುವುದಿಲ್ಲ. ಕಾಣ್ವರು ಸಹ ನಿತ್ಯ ಸಂಧ್ಯಾವಂದನೆಯಲ್ಲಿ ಕೊನೆಗೆ ಕಾಣ್ವಶಾಖೆಯೆಂದು ಉಚ್ಚರಿಸುವರೆ ಹೊರತು ಪ್ರಥಮಶಾಖೆಯೆಂದು ಹೇಳುವ ಪರಿಪಾಠವು ಅವರಲ್ಲಿಲ್ಲ. ಆದರೂ ಇವರಿಗೆ ಪ್ರಥಮಶಾಖೆಯವರೆಂದು ಸಂಜ್ಞೆ!

ದ್ರವಿಡ ಶಬ್ದವು ಆಂಧ್ರದಷ್ಟು ಪ್ರಾಚೀನವಲ್ಲ. ಆಂಧ್ರ ಶಬ್ದವು ಐತರೇಯ ಬ್ರಾಹ್ಮಣದಲ್ಲಿದೆ. ದ್ರವಿಡ ಶಬ್ದವನ್ನು ಆ ತರುವಾಯದ ಲೇಖನಗಳಲ್ಲಿ ಅಂದರೆ ಬೌದ್ಧರ ಗ್ರಂಥಗಳಲ್ಲಿ ಪುರಾಣಗಳಲ್ಲಿ ಮಾತ್ರ ಕಾಣಬಹುದು. ಆಂಧ್ರ ಶಬ್ದವು ಹಿಂದೆ ಬಿದ್ದು ಮುಂದೆ ದ್ರಾವಿಡ ಶಬ್ದಕ್ಕೆ ಪ್ರಾಶಸ್ತ್ಯವು ದೊರೆಯುತ್ತ ನಡೆದುದಕ್ಕೂ ಕಾರಣವಿದೆ. ಕಗ್ಗತ್ತಲೆಯ ಅಸುರರ ನಾಡು ಎಂಬ ಅರ್ಥವು ಅಂಟಿಕೊಂಡಿದ್ದ ಆಂಧ್ರಶಬ್ದವು ಇಲ್ಲಿ ಬೀಡುಮಾಡಿಕೊಂಡಿರುವ ಸ್ವಾಭಿಮಾನಿಗಳಿಗೆ ಹೇಗೆ ರುಚಿಸಬೇಕು? ತಿಳಿವು ತಲೆದೋರಿದವನು ಹೆರವರಿಂದ ಹೆಸರಿಡಿಸಿಕೊಳ್ಳಲು ಎಂದೂ ಒಪ್ಪಲಾರನು. ಇನ್ನೂ ಮಬ್ಬಿನಲ್ಲಿರುವ ತನ್ನರಿವು ತನಗೇ ಇಲ್ಲದ ಸಮಾಜವು ಮಾತ್ರ ಹೆರವರಿಟ್ಟ ಹೆಸರಿನಿಂದಲೇ ಬದುಕಿಕೊಂಡಿರಲು ಒಪ್ಪಿಕೊಳ್ಳಬಹುದು. ಆದರೆ, ಅದಕ್ಕೆ ಸಹ ತಾನು ಯಾರು, ಎಂಬ ಅರಿವು ಉಂಟಾದ ಕೂಡಲೇ ಮೊದಲಿನ

ಅಪಾರ್ಥವುಳ್ಳ ಹೆಸರನ್ನು ಬದಲಿಸಿಕೊಳ್ಳಲು ಹವಣಿಸುವುದು; ಇಲ್ಲವೆ ಬೇರೊಂದು ಹೆಸರನ್ನಾದರೂ ಧರಿಸುವುದು. ಆಂಧ್ರರಿಗೆ ತೆಲುಗರು ಎಂಬ ಇನ್ನೂ ಒಂದು ಹೆಸರಿದ್ದುದಕ್ಕೆ ಬೇರೆ ಕಾರಣವೇನು? ಕನ್ನಡರು ಮತ್ತು ತಮಿಳರು ಮಾತ್ರ ಆಂಧ್ರ ಶಬ್ದಕ್ಕೆ ತಲೆವಾಗಲಿಲ್ಲ. ಆರ್ಯಾವರ್ತದ ದಕ್ಷಿಣದ ಎಲ್ಲ ನಾಡಿಗೆ, ಎಲ್ಲ ದಕ್ಷಿಣಾಪಥಕ್ಕೆ ಕಗ್ಗತ್ತಲೆಯ ನಾಡು, ಅಂಧರ್-ಆಂಧ್ರಲೋಕ ''ಅಸುರ್ಯಾನಾಮ ತೇ ಲೋಕಾಃ ಅಂಧೇನ ತಮಸಾವೃತಾಃ''[೩] ಎಂದು ಸಾಮಾನ್ಯವಾಗಿ ಆರ್ಯರು ಹೇಳುತ್ತಿದ್ದು; ಪೆರಿಪ್ಲಸಿನಲ್ಲಿ ಆಂಧ್ರ ಶಬ್ದವು ದಕ್ಷಿಣಾಪಥವೆಂಬರ್ಥದಲ್ಲಿಯೆ ನಿಸ್ಸಂದಿಗ್ಧವಾಗಿ ಉಪಯೋಗಿಸಲ್ಪಟಿದೆ. ಅಂಧ (ಕಾ) ಅಸುರನನ್ನು ಸಂಪರಿಸಿ ಆರ್ಯರು ದಕ್ಷಿಣಾಪಥಕ್ಕೆ ಅಡಿಯಿಟ್ಟುದರ ಕುರುಹು ನರ್ಮದಾ ತೀರದಲ್ಲಿದೆ. ರೇವಾ (ನರ್ಮದಾ) ಖಂಡದ ಮಹಾತ್ಮ್ಯೆಯಲ್ಲಿ ಇದರ ವರ್ಣನೆ ಇದೆ.[೪] ಆದರೆ, ಬಳಿಕೆ ಹೆಚ್ಚಾಗಿ ಒಳಭೇದಗಳ ಬೇರೆ ಬೇರೆ ಜನಾಂಗಗಳ ಪರಿಚಯವಾದ ಹಾಗೆ ಸಾಮಾನ್ಯಾರ್ಥದ ಆಂಧ್ರ ಶಬ್ದವು ಹಿಂದೆ ಬಿದ್ದು ಕರ್ಣಾಟ, ದ್ರವಿಡ ಎಂಬ ಹೊಸ ಶಬ್ದಗಳು ಆ ಕಾಲದ ಸಾಹಿತ್ಯದಲ್ಲಿ ಮೆಲ್ಲಮೆಲ್ಲನೆ ತಲೆಯೆತ್ತಿದುದು ಸ್ವಾಭಾವಿಕ. ತೆಲುಗು ಎಂಬ ನಾಮಾಭಿಧಾನವನ್ನು ಧರಿಸುವವರೆಗೂ ಆ ಸಮಾಜವು (ಆಂಧ್ರರು) ಇನ್ನೂ ಬಾಲ್ಯಾವಸ್ಥೆಯಲ್ಲಿಯೆ ಇದ್ದಿತೆಂದು ಹೇಳಲು ಅಡ್ಡಿತೋರುವುದಿಲ್ಲ. ಅವರ ಸಾಹಿತ್ಯದ ಇತಿಹಾಸವು ಸಹ ಇದಕ್ಕೂ ಬೇರೆ ಕಥೆಯನ್ನು ಹೇಳುವುದಿಲ್ಲ. ತೆಲುಗಿನ ತವರುಮನೆ ವೆಂಗಿಮಂಡಲ. ಈ ವೆಂಗಿಮಂಡಲವೆ ಹನ್ನೆರಡನೆಯ ಶತಮಾನದವರೆಗೂ ಕನ್ನಡದ ಉದ್ದಾಮ ಕವಿಗಳ ಜನ್ಮಭೂಮಿ. ಪಂಪ, ನಾಗವರ್ಮ, ನಾರಾಯಣಭಟ್ಟ, ಪಾಲ್ಕುರಿಕೆ ಸೋಮನಾಥರೆ ಇದಕ್ಕೆ ಸಾಕ್ಷಿ.[೫] ತೆಲುಗು ನಾಡಿನ ಜನರ ಮನಸ್ಸಿನ ಮೇಲೆ ಕನ್ನಡ ಜೈನಭಾರತಗಳನ್ನು ಓದಿ ಓದಿ ಆದ ಪರಿಣಾಮಗಳನ್ನು ತೊಳೆದುಬಿಡುವುದಕ್ಕಾಗಿ, ಜನರ ಮನಸ್ಸಿನಲ್ಲಿ ಬೇರೂರಿದ ಜೈನಧರ್ಮದ ವಿಚಾರಗಳನ್ನು ಕಿತ್ತೊಗೆಯುವುದಕ್ಕಾಗಿ ನನ್ನಯ್ಯಭಟ್ಟನು ಆಂಧ್ರಭಾಷೆಯಲ್ಲಿ ವೈದಿಕ ಮಾರ್ಗಾನುವರ್ತಿ ಯಾದ ಭಾರತವನ್ನು ಬರೆದನೆಂದು ತೆಲುಗರಲ್ಲಿ ಅಗಾಧ ಧೀಮಂತರಾದ ಶ್ರೀಮಾನ್ ಸಿ. ಆರ್. ರೆಡ್ಡಿಯವರೆ ಒಪ್ಪಿಕೊಳ್ಳುತ್ತಾರೆ.[೬] ಉತ್ಕಟ ಆಂಧ್ರಾಭಿಮಾನಿಗಳಾದ ಶ್ರೀ ಸಿ. ಆರ್. ರೆಡ್ಡಿಯವರು ಹೀಗೆ ಹೇಳುವರೆಂದ ಬಳಿಕ ಅದರಲ್ಲಿ ಇನ್ನಿಷ್ಟು ವಿಶೇಷವಿದೆ. ಪ್ರಾಚೀನಕಾಲದ ವೆಂಗಿಮಂಡಲದಲ್ಲಿದ್ದ ಕನ್ನಡದ ವರ್ಚಸ್ಸಿನ ಬಗ್ಗೆ ಸಂದೇಹವೆ ಉಳಿಯಲಿಲ್ಲ. ಇನ್ನೊಂದು ಬಗೆಯಿಂದ ನೋಡಿದರೆ ಶ್ರೀಮಾನ್ ಸಿ. ಆರ್. ರೆಡ್ಡಿಯಂತವರು ಊಹಿಸಿಹೇಳುವ ಆವಶ್ಯಕತೆಯೂ ಇಲ್ಲ. ಏಕೆಂದರೆ ಈ ನಾಡಿಗೆಲ್ಲ ಏಕಛತ್ರಾಧಿಪತಿಯಾಗಿದ್ದು ೬೧ ವರುಷ ಅರಸುಗೈದ ನೃಪತುಂಗದೇವನು ತನ್ನ ಆಳಿಕೆಯಲ್ಲಿ (೮೧೫-೮೭೬) ಕಣ್ಣಾರೆ ಕಂಡುದನ್ನು ಬರೆಯಿಸಿ ಇಟ್ಟಿದ್ದಾನೆ. 'ಕಾವೇರಿಯಿಂದ ಗೋದಾವರಿವರಂ ಇರ್ದ ನಾಡೆಲ್ಲವೂ ಕನ್ನಡ' ಎಂದು ಅಸಂದಿಗ್ಧ ಶಬ್ದಗಳಲ್ಲಿ ಹೇಳಿದ್ದಾನೆ. ಆ ಕಾಲದಲ್ಲಿ ತೆಲುಗು ಅಸ್ತಿತ್ವದಲ್ಲಿ ಇರಲೇ ಇಲ್ಲವೆಂತಲ್ಲ; ಇಂಗ್ಲಿಷ್ ದ್ವೀಪಗಳ ಭಾಷೆ ಇಂಗ್ಲಿಷು. ಆದರೆ, ಆ ಒಂದು ಗೇಣು ನಾಡಿನಲ್ಲಿಯೆ ಸ್ಕಾಚ್, ವೆಲ್ಸ ಎಂಬ ಅರೆಭಾಷೆಗಳು ಅಲ್ಲಿ ನೆಲಹಿಡಿದುಕೊಂಡು ಇಲ್ಲವೆ?

---

೩. ಈಶಾವಾಸ್ಯೋಪನಿಷತ್ತು, ೩

೪. ಕಲ್ಯಾಣ ಹಿಂದಿ ಮಾಸಪತ್ರಿಕೆಯ ಶಿವಾಂಕ ಸಂಪುಟ, ಗೋರಖಪುರ

೫. ನರಸಿಂಹಾಚಾರ್ಯ ರಾ., ಕವಿಚರಿತ್ರೆ, ಭಾಗ ೧, ಪು. ೩೦, ೫೬, ೭೪, ೨೯೧

೬. Heritage of India series, *Telugu Literature*. p. 44

ಹಾಗೆ, ಆಗ ತೆಲುಗು ಇತ್ತು. ಕ್ರಿಸ್ತಶಕದ ೧೧-೧೩ನೆಯ ಶತಮಾನಗಳ ತನಕ ವಿಂಧ್ಯದ ದಕ್ಷಿಣದಲ್ಲಿ ನೀಲಗಿರಿಯ ವರೆಗೆ ತೆಲುಗು ಆಗಲಿ, ಮರ್ಹಾಟಿಯಾಗಲಿ ಇನ್ನೂ ತಲೆಯೆತ್ತಿ ಮೆರೆಯುತ್ತಿದ್ದಿಲ್ಲ. ಜನಪದ ಸಾಹಿತ್ಯದಿಂದ ಬೆಳೆದು ದೊಡ್ಡದಾಗಿ 'ಪಂಡಿತರೂ ವಿವಿಧ ಕಲಾಮಂಡಿತರೂ' ಆದವರಿಗೆ ರುಚಿಸುವಂತಹ ಸಾಹಿತ್ಯವು ತೆಲುಗಿನಲ್ಲಿ ತಲೆದೋರ ಲಾರಂಭಿಸಿದುದು ೧೧ನೆಯ ಶತಮಾನದಲ್ಲಿ, ಮರ್ಹಾಟಿಯಲ್ಲಿ ೧೨ನೆಯ ಶತಮಾನದಲ್ಲಿ. ತೆಲುಗಿನ ಆದಿಕವಿ ನನ್ನಯ್ಯಭಟ್ಟನು (೧೦೪೦), (ಕನ್ನಡದಲ್ಲಿ ಕವಿತ್ವ ಶಕ್ತಿಯುಳ್ಳ) ಜೀವದ ಗೆಳೆಯ ನಾರಾಯಣಭಟ್ಟನ ನೆರವು ಇಲ್ಲದೆ ತನ್ನಿಂದ ಕಾವ್ಯವನ್ನು ಬರೆಯುವುದೆ ಸಾಧ್ಯವಿದ್ದಿಲ್ಲವೆಂದು ನನ್ನಯ್ಯಭಟ್ಟನು ಹೇಳುತ್ತಾನೆ. ನನ್ನಯ್ಯಭಟ್ಟನಿಗೆ ನಾರಾಯಣಭಟ್ಟನೆ ಕಾವ್ಯವನ್ನು ಬರೆದುಕೊಟ್ಟನೆಂದು ಇದರಿಂದ ತಿಳಿದುಕೊಳ್ಳಲು ಕಾರಣವಿಲ್ಲ. ನಾರಾಯಣಭಟ್ಟನು ಪ್ರೋತ್ಸಾಹಿಸಿ ಬರೆಯಿಸಿದನೆಂದು ಗ್ರಹಿಸುವುದು ಉಚಿತವೆಂಬುದಾಗಿ ತೆಲುಗು ಅಭಿಮಾನಿಗಳು ಹೇಳುವ ಮಾತಿಗೆ ಬೇರೆ ನುಡಿಯುವ ಕಾರಣವಿಲ್ಲ.[೭] ಆದರೆ, ತೆಲುಗು ಸಾಹಿತ್ಯವೃಕ್ಷಕ್ಕೆ ಕಸಿಮಾಡಿ ಕಟ್ಟೆಯನು ಕಟ್ಟಿ ನೀರೆರೆದವರು ಕನ್ನಡಕ್ಕೆ ಸಂಬಂಧಪಟ್ಟಿದ್ದರೆಂಬ ಮಾತನ್ನು ಮಾತ್ರ ಯಾರಿಂದಲೂ ಅಲ್ಲಗಳೆಯುವುದಕ್ಕೆ ಸಾಧ್ಯವಿಲ್ಲ. ''ತೆಲುಗು ಕವಿಗಳಲ್ಲಿ ನನ್ನೆಚೋಡು, ನಾಚನಾ, ಸೋಮ (ಪಾಲ್ಕುರಿಕೆ), ನಾರಾಯಣ ಭಟ್ಟರುಗಳಿಗೆ ಕನ್ನಡದಲ್ಲಿ ಪಾಂಡಿತ್ಯವಿದ್ದುದು ಪ್ರಖ್ಯಾತವಿದೆ'' ಎಂದು *Telugu Literature* ಮುನ್ನುಡಿಯಲ್ಲಿ ಶ್ರೀಮಾನ್ ಸಿ. ಆರ್. ರೆಡ್ಡಿಯವರು ಹೇಳಿದ್ದು ನೆನಪಿಡತಕ್ಕ ಸಂಗತಿಯಾಗಿದೆ. ಬಾದಾಮಿಯ ಚಾಲುಕ್ಯರ ಒಂದು ಶಾಖೆಯವರು ರಾಜಮಹೇಂದ್ರಿಯಲ್ಲಿ ರಾಜ್ಯ ವಾಳುತ್ತಿದ್ದರಷ್ಟೆ. ಆಗಲೇ ರಾಜಮಂದಿರದಲ್ಲಿ ತೆಲುಗು ಸರಸ್ವತಿಯು ಪುತ್ರರತ್ನವನ್ನು ಪಡೆದುದು. ಈ ರತ್ನವೆ, ನನ್ನಯ್ಯಭಟ್ಟನ ಭಾರತ. ತೆಲುಗು ಸಾಹಿತ್ಯವು ಚಾಲುಕ್ಯರ ರಾಜಮಂದಿರದಲ್ಲಿ ಬೆಳೆದು ಮುಂದೆ ವಿಜಯನಗರದ 'ಕರ್ಣಾಟ ರಾಜ್ಯ ರಮಾರಮಣ'ರ ಪೋಷಣೆಯಿಂದ ಅದಕ್ಕೆ ಪ್ರಾಯ ಬಂತು. ಮೈಸೂರಿನಲ್ಲಿ ನಿಯೋಗಿಯಾಗಿದ್ದ ವೀರರಾಜುವು (೧೬೫೦-೧೭೧೦) ಬರೆದ ಭಾರತವು ತೆಲುಗರ ಮೊದಲನೆಯ ಗದ್ಯ ಕಾವ್ಯ! ''ಹಳೆಯ ತೆಲುಗು ಶಾಸನಗಳಲ್ಲಿ ತೆಲುಗು ರಾಜರಿಗೂ ಸಾಮಂತರಿಗೂ ಕನ್ನಡ ಬಿರುದುಗಳು ಇದ್ದವು. ೯ನೆಯ ಶತಮಾನದ ಒಂದು ಶಾಸನಗಳಲ್ಲಿ ಒಬ್ಬ ಸೇನಾಪತಿಗೆ 'ಮನುಜರ ದೇವನೆಂದು' ಇದೆ[೮]! 'ಗುಣಕೆನಲ್ಲ' 'ಜಗದೊಬ್ಬಗಂಡ' 'ಜಗದ ಗೋಪಾಲ' ಎಂಬ ಇನ್ನೂ ಎಷ್ಟೋ ಇಂತಹ ದೃಷ್ಟಾಂತಗಳನ್ನು ಕೊಡಬಹುದು. ನಿಜಸ್ಥಿತಿಯು ಹೀಗಿರುವುದರಿಂದಲೇ, ತೆಲುಗರಲ್ಲಿ ಸತ್ಯನಿಷ್ಠರಾದ ಕೆಲವು ವಿದ್ವಾಂಸರು ಆಂಧ್ರವೆಂದು ಬೇರೆಯಾಗಿ ಹೇಳದೆ 'ಪ್ರಾಚೀನ ಕಾಲದಲ್ಲಿ ಆಂಧ್ರ ಕರ್ಣಾಟಕ ಅಥವಾ ಕರ್ಣಾಟಕಾಂಧ್ರವೆಂಬ ಒಂದು ದೇಶವಿತ್ತು, ಎನ್ನುತ್ತಿದ್ದಾರೆ. ಪ್ರಾಚೀನ ಕಾಲದಲ್ಲಿಯೇ ತೆಲುಗು ನುಡಿಯೂ ಕನ್ನಡದಂತೆ ಪರಿಪಕ್ವದೆಸೆಯನ್ನು ಪಡೆದಿದ್ದರೆ ಆ ಕಾಲಕ್ಕೆ 'ಕರ್ಣಾಟಕ ಸಂಗೀತ ಪದ್ಧತಿ' ಎಂಬ ಒಂದೇ ಪ್ರಖ್ಯಾತನಾಮದಿಂದ ಮುಂದೆ ಬಂದು ಲೋಕದಲ್ಲಿ ಮೆರೆವ ಸಂಭವವೆ ಇದ್ದಿಲ್ಲ. 'ಕರ್ಣಾಟಕ ಸಂಗೀತದಲ್ಲಿ ತೆಲುಗರು ಈಗ ಮಾಡಿರುವ ಪರಿಶ್ರಮಗಳನ್ನು ನೋಡಿದರೆ, ಅದಕ್ಕೆ 'ತೆಲುಗು ಸಂಗೀತ ಪದ್ಧತಿ' ಎಂದು ನವೀನ ನಾಮಕರಣ

---

೭. *Telugu Literature* p. 44

೮. ನರಸಿಂಹಾಚಾರ್ಯ ರಾ., ಕವಿಚರಿತೆ., ೩ನೆಯ ಭಾಗ, ಮುನ್ನುಡಿ, ಪುಟ ೨೧

ಮಾಡಬೇಕೇನೋ ಎಂದೆನಿಸುವುದು. ಈ ನೈಪುಣ್ಯವೇ ಆರಂಭಕ್ಕೆ ಇದ್ದರೆ! ಆ ಹೆಸರೇ ರೂಢವಾಗುವುದು ಸಹಜವಾಗಿತ್ತು. ಇದರಿಂದ ತೆಲುಗಿಗೆ ಆಗ ಇನ್ನೂ ಬಾಲ್ಯಾವಸ್ಥೆ ಎಂದೇ ಧ್ವನಿತವಾಗುವುದಿಲ್ಲವೆ? ದಕ್ಷಿಣದ ಸಂಗೀತ ಪದ್ಧತಿಗೆ ಕರ್ಣಾಟಕದ ಹೆಸರೆ ಪ್ರರೂಢವಾಗಬೇಕಾದರೆ ಅದು ಆ ಸಮಯದಲ್ಲಿ ತೆಲುಗಿಗಿಂತ ಎಷ್ಟೋಂದು ಪ್ರೌಢಾವಸ್ಥೆಯಲ್ಲಿರಬೇಕೆಂಬುದನ್ನು ಸಹಜವಾಗಿ ಕಲ್ಪಿಸಬಹುದು. 'ದಕ್ಷಿಣ ಸಂಗೀತ ಪದ್ಧತಿ' ಎಂದು ಕರ್ಣಾಟ ಸಂಗೀತಕ್ಕೇ ಒಂದು ಪರ್ಯಾಯ ನಾಮವಿದೆ. ಉತ್ತರ ದೇಶವು ಮುಗಿದೊಡನೆ ನರ್ಮದೆಯಿಂದ ದಕ್ಷಿಣ (ಅಂದರೆ ಕರ್ಣಾಟ) ಸಂಗೀತ ಪದ್ಧತಿಯು ಪ್ರಚಾರದಲ್ಲಿತ್ತು. ಈ ಮಾತು ದೂರದಿಂದಲೇ ಆಗಲೊಲ್ಲದೇಕೆ? ಕರ್ಣಾಟವು ಉತ್ತರದೇಶಕ್ಕೆ ಹತ್ತಿಕೊಂಡಿತ್ತು, ಉತ್ತರದೇಶವು ಮುಗಿದ ಕೂಡಲೆ ದಕ್ಷಿಣಕ್ಕೆ ಕರ್ಣಾಟವೆ ಆರಂಭವಾಗುತ್ತಿತ್ತು; ಎಂಬುದನ್ನೇ ಸೂಕ್ಷ್ಮವಾಗಿ ಹೇಳುತ್ತಿಲ್ಲವೇ? ಇದು ಆಂಧ್ರದ ವಿಚಾರವಾಯಿತು. ೧೦ನೆಯ ಶತಮಾನದಿಂದ ತೆಲುಗು ಕನ್ನಡತಾಯಿಯ ತೋಳ ತೊಟ್ಟಿಲಲ್ಲಿಯೇ ಬೆಳೆದು ದೊಡ್ಡದಾದುದು. ಇದು ಸೂರ್ಯಪ್ರಕಾಶದಷ್ಟು ಸ್ಪಷ್ಟವಾದ ಸಂಗತಿ. ಆದುದರಿಂದ ಗೋದಾವರಿಯ ತೆಂಕಣ ನಾಡಿನಲ್ಲಿ ಕರ್ಣಾಟಕವಿತ್ತು ಎಂದು ಕವಿರಾಜಮಾರ್ಗವು ಹೇಳಿದುದರಲ್ಲಿ ಎಳ್ಳಷ್ಟು ಅತಿಶಯೋಕ್ತಿಯಿಲ್ಲ. ಮೊದಲು ಆಂಧ್ರ ಶಬ್ದಕ್ಕೆ ದಕ್ಷಿಣದೇಶ, ದಕ್ಷಿಣದ ಜನರು ಎಂಬ ಸಾಮಾನ್ಯ ಅರ್ಥವೆ ಪ್ರಾಮುಖ್ಯವಾಗಿದ್ದಿತು. ಆಂಧ್ರ ಶಬ್ದಕ್ಕೆ ತೆಲುಗರು ಎಂಬ ವಿಶಿಷ್ಟಾರ್ಥವು ಬಂದುದು ಮುಂದೆ ಕಾಲಕ್ರಮದಿಂದ, ಎಂಬಲ್ಲಿ ಸಂದೇಹವೇ ಉಳಿಯುವುದಿಲ್ಲ.

ಇನ್ನು ದ್ರಾವಿಡ ವಿಚಾರ. ಕನ್ನಡದಂತೆ ಕನ್+ನಡ ದ್ರವಿಡ ಶಬ್ದದ ಮೂಲರೂಪವಾದ 'ತಮಿಳು' ಸಹ ಆರಂಭದಲ್ಲಿ ಕೇವಲ ದೇಶವಾಚಕವೆ ಆಗಿರಬೇಕು. ಕನ್ನಡರೂ ತಮಿಳರೂ ಆರ್ಯರು ಇಟ್ಟ ಆಂಧ್ರರೆಂಬ ಹೆಸರನ್ನು ಮನ್ನಿಸಲಿಲ್ಲ. ಆರ್ಯರು ದಕ್ಷಿಣಾಪಥಕ್ಕೆ ನೆಲೆಯಾಗಲು ಬಂದ ಕಾಲಕ್ಕೆ ಈ ರಾಷ್ಟ್ರಗಳು ಸ್ವಯಂಪ್ರಜ್ಞೆ (Self consciousness) ಯುಳ್ಳವುಗಳಾಗಿದ್ದವು. ಆರ್ಯರು ತಮ್ಮ ಮೂಲಸ್ಥಾನವು ಆರ್ಯಾವರ್ತವೆನ್ನುತ್ತಿದ್ದಂತೆ ಈ ಜನಾಂಗದವರು (ಕನ್+ನಾಡು) ಕನ್ನಡ, ಕರ್ಣಾಟ, (ತಮ್ಮ+ಬೀಡು, ತಮ್ ಬಿಡು, ತಂಬಿಡು, ತಂವಿಡು) ತ(ಂ)ಮಿಳು ಎಂದು ತಮ್ಮ ತಮ್ಮ ದೇಶಗಳನ್ನು ಹೇಳುತ್ತಿರಬೇಕು. ಈ ಶಬ್ದಗಳೆ ಕರ್ಣಾಟ ಮತ್ತು (ದ್ರವಿಡ, ದ್ರವಿಳ ದ್ರವಿಡ) ಎಂಬ ರೂಪಿನಿಂದ ಸಂಸ್ಕೃತ ಸಾಹಿತ್ಯದಲ್ಲಿ ಸೇರಿಕೊಂಡಿವೆಯೆಂದು ಊಹಿಸಲು ಅವಕಾಶವಿದೆ. ತೆಲುಗಿಗೆ, ತೆಲುಗು ಧಾತುವಿನಿಂದಲೇ ಸಿದ್ಧವಾದ ಸ್ವದೇಶದರ್ಶಕ ಶಬ್ದವೇ ಇಲ್ಲ. ತ್ರಿಲಿಂಗ ಅಥವಾ ತ್ರಿಕಲಿಂಗವೆಂದು ಅವರೆ ಹೇಳುವ ತೆಲುಗು ಶಬ್ದದ ಯಾವ ರೂಪಸಿದ್ಧಿಯನ್ನು ಸ್ವೀಕರಿಸಿದರೂ ಅಷ್ಟೆ. ಈ ಸಂಗತಿಯು ಸಹ ತೆಲುಗರು ಕನ್ನಡ ತಮಿಳರಷ್ಟು ಪ್ರಾಚೀನ ಕಾಲದಲ್ಲಿ ಅಂದರೆ ಆರ್ಯರ ಪ್ರವೇಶವು ದಕ್ಷಿಣಕ್ಕೆ ಆಗುವ ಮೊದಲಿನಿಂದಲೆ ನಾಡನ್ನು ಕಟ್ಟಿಕೊಂಡು ನೆಲೆಯಾಗಿ ಬಾಳುತ್ತಿದ್ದ ಜನಾಂಗದವರಲ್ಲವೆಂಬುದನ್ನೇ ಸೂಚಿಸುತ್ತಲಿದೆ.

ಮಲಯ್ (ಮಾಳವಾ)ದಿಂದ ಆರಂಭವಾಗುವ ದಕ್ಷಿಣಾಪಥದಲ್ಲಿ ಪ್ರಾಚೀನ ಕಾಲಕ್ಕೆ

---

೬. 'ಮಲಯ' ಶಬ್ದವು ಕನ್ನಡದ 'ಮಲೆ' (ಪರ್ವತ) ಎಂಬುದರ ಇನ್ನೊಂದು ರೂಪ. ಇದೆ ಮಾಳವಾ ಎಂದು ಹೆಸರಾಗಿದೆ. ಮರಾಠಿಯಲ್ಲಿ ಮಲೆ ಶಬ್ದವನ್ನೆ 'ಮಾಳ' ಎಂಬ ರೂಪವನ್ನು ತಾಳಿದೆ. ಮಲಯವೆನ್ನುತ್ತಲೆ ಮಲೆಬಾರಿನ ಕಲ್ಪನೆಯಾಗುವುದುಂಟು. ಆದರೆ, ಪ್ರಾಚೀನ ಕಾಲದಲ್ಲಿ ಈಗಿನ ಮಾಳವದೇಶಕ್ಕೆ ಮಲಯವೆಂಬ ಹೆಸರಿತ್ತು. ನೋಡಿ *Nasik Gazetteer* p. 631

ಅಂದರೆ ಆರ್ಯರು ಇಲ್ಲಿ ಕಾಲೂರಿ ನಿಲ್ಲಲು ಬರುವ ಮೊದಲು ನಾಡು ಕಟ್ಟಿಕೊಂಡು ಪ್ರಖ್ಯಾತರಾಗಿ ಬಾಳುತ್ತಿದ್ದವರು ಕನ್ನಡರು ಮತ್ತು ತಮಿಳರು ಇವರಿಬ್ಬರೇ. ಕ್ರಿ.ಶ. ಎರಡನೆಯ ಶತಮಾನದಲ್ಲಿ ಶೆಂಗುಟ್ಟುವನ್ ಎಂಬ ಚೇರರಾಜನು ಉತ್ತರ ದಿಕ್ಕಿಗೆ ಹೋಗುವಾಗ ನೀಲಗಿರಿಯಲ್ಲಿ ತಂಗಿ ಕನ್ನಡರು ಆಡಿದ ಕುಣಿತವನ್ನು ನೋಡಿ ಸಂತೋಷಿಸಿದನು—ಎಂದು ಶಿಲಪ್ಪದಿಕಾರಂ ಎಂಬ ತಮಿಳು ಗ್ರಂಥದಲ್ಲಿದೆ.[೧೦] ಇದರಿಂದ ಕ್ರಿ.ಶ. ಎರಡನೆಯ ಶತಮಾನದಲ್ಲಿ ಕನ್ನಡರು ನೀಲಗಿರಿಯವರೆಗೆ ಹಬ್ಬಿದ್ದರು. ಕರ್ಣಾಟ ಮಹಾಮಂಡಳದ ದಕ್ಷಿಣ ತುದಿಯು ನೀಲಗಿರಿಯಾಗಿದ್ದಿತೆಂದು ಅನುಮಾನಿಸಲು ಅಡ್ಡಿ ತೋರುವುದಿಲ್ಲ. ಬನವಸೆಯ ಕದಂಬರೂ ತುಳನಾಡಿನ ಗಂಗರೂ ೫ನೆಯ ಶತಮಾನಗಳವರೆಗೆ ಕರ್ಣಾಟ ಮಹಾಮಂಡಳದ ದಕ್ಷಿಣ ಮರ್ಯಾದೆಯನ್ನು ಕಾಯುವ ದಿಕ್ಪಾಲರಾಗಿದ್ದರು. ಇವರಿಗೆ ಕರ್ಣಾಟದ ಹೊರಗಿನ ವಿರೋಧಿಗಳೆಂದರೆ ತಮಿಳರು. ಈ ಕಾಲದ ಗಂಗ ಮತ್ತು ಕದಂಬರ ಇತಿಹಾಸವೆಂದರೆ ತಮಿಳರೊಡನೆ ಆಗಾಗ್ಗೆ ನಡೆಯುತ್ತಿದ್ದ ಘೋರ ಸಂಗ್ರಾಮಗಳ ಕಥೆಯೇ ಆಗಿದೆ. ಗಂಗ ಮತ್ತು ಕದಂಬರ ಈ ದಕ್ಷಿಣದ ಮರ್ಯಾದೆಯನ್ನು ಸಂರಕ್ಷಿಸುವ ಕಾರ್ಯಭಾರವು ಮುಂದೆ ಚಲುಕ್ಯ ಮತ್ತು ರಾಷ್ಟ್ರಕೂಟರ ಕಡೆಗೆ ಹೋಯಿತು. ಅವರು ಸಹ ಅದನ್ನು ಕನ್ನಡದಲ್ಲಿ ಮೈಮೇಲೆ ಎಚ್ಚರಿರುವ ವರೆಗೂ ಇವರಿಗೆ ಕೃತಜ್ಞತೆಯಿಂದ ತಲೆವಾಗಬೇಕೆನ್ನುವಷ್ಟು ಚೆನ್ನಾಗಿ ನೆರವೇರಿಸಿದರು. ತಮಿಳರು ಬನವಾಸಿ ಬಾದಾಮಿಗಳ ತನಕ ಬಂದು ಅವನ್ನು ಸುಟ್ಟು ಸೂರೆಮಾಡಿ ಹೋದುದು ನಿಜ. ಆದರೆ, ಚಾಲುಕ್ಯ ರಾಷ್ಟ್ರಕೂಟರು ಕಂಚಿ, ಮಧುರೆಗಳನ್ನು ಗೆದ್ದು ಮುಯ್ಯತೀರಿಸದೆ ಬಿಡಲಿಲ್ಲ. ಅಂತು, ತಮಿಳರು (ದ್ರವಿಡರು) ತಮ್ಮ ಬೀಡುಬಿಟ್ಟು ಮೇಲೇರಿ ಬಂದು ಉತ್ತರಕ್ಕೆ ಅತಿದೂರದಲ್ಲಿ ಗೆದ್ದ ನಾಡೆಂದರೆ ಬಾದಾಮಿ. ಆದರೆ, ಅಲ್ಲಿಯೂ ಸಹ ಅವರಿಗೆ ಬಹಳ ದಿನ ಕಾಲೂರಿ ನಿಲ್ಲಲು ದೊರೆಯಲಿಲ್ಲ. ಮಂಗಲೀಶನೂ (ಕ್ರಿ.ಶ. ೫೯೭) ಆತನ ತರುವಾಯ ಪಟ್ಟಕ್ಕೆ ಬಂದ ಗಂಡುಗಲಿಗಳಾದ ತಮಿಳರನ್ನು ಚೆನ್ನಾಗಿ ನುಗ್ಗುನುಸಿ ಮಾಡಿದುದನ್ನು ಇತಿಹಾಸವು ಹೇಳುತ್ತಿದೆ. ಕರ್ಣಾಟದ ಸಾಮ್ರಾಟರು ತಮಿಳರನ್ನು ಯಾವಾಗಲೂ ಕಾವೇರಿಯಿಂದ ಆಚೆಗೆ, ನೀಲಗಿರಿಯಿಂದ ಅತ್ತ ದೂರದಲ್ಲಿ ಅಟ್ಟಿ ತಮ್ಮ ನಾಡನ್ನು ಕಾದುಕೊಂಡಿದ್ದರು. ನಿಜಸ್ಥಿತಿಯು ಹೀಗಿದ್ದರೂ ನರ್ಮದೆಯಿಂದ ದಕ್ಷಿಣಕ್ಕೆ ಆಂಧ್ರ-ದ್ರವಿಡ ದೇಶವೆಂದು ಹೇಳುವುದು ಎಷ್ಟು ವಿಚಿತ್ರ!

ನದಿಗಳ ಮೇರೆಗಳನ್ನಿಟ್ಟುಕೊಂಡೆ ಹೇಳುವುದಾದರೆ ಕರ್ನಾಟಕ ರಾಜರ ಶೌರ್ಯ ಪರಾಕ್ರಮಗಳ ಮುಂದೆ ಕಾವೇರಿಯಿಂದ ಮೇಗಡೆಗೆ ತಮಿಳರು ತಲೆಯೆತ್ತಿ ಮೆರೆವ ಹಾಗಿದ್ದಿಲ್ಲ. ೭-೮ನೆಯ ಶತಮಾನಗಳಿಗೆ ಮೊದಲು ಆಂಧ್ರ, (ತೆಲುಗು) ಅಥವಾ ಮರ್‍ಹಾಟಿಗಳು ಇನ್ನೂ ಹಸುಗೂಸುಗಳು. ಹಾಗಾದರೆ! ನರ್ಮದೆಯಿಂದ ಕಾವೇರಿಯವರೆಗಿನ ನಾಡಿಗೆಲ್ಲ ಕನ್ನಡರೆ ಒಡೆಯರಾಗಿದ್ದರೆಂದು ಹೇಳಿದರೆ ತಪ್ಪೇನು? ಆಗಿನ ರಾಜಾಧಿರಾಜರ ಒಡ್ಡೋಲಗಗಳಲ್ಲಿ ಮನ್ನಣೆಯನ್ನು ಹೊಂದಿ ಮೆರೆಯುತ್ತಿದ್ದ ಭಾಷೆಯೂ ಕನ್ನಡವೇ ಆಗಿದ್ದರೆ ಆಶ್ಚರ್ಯವೇನು?

ಇಲ್ಲಿ ಕನ್ನಡವಿದ್ದಿಲ್ಲವೆಂದು ತಿಳಿದರೆ ಜನಸಾಮಾನ್ಯರು—ಇಲ್ಲಿಯ ಮೂಲನಿವಾಸಿಗಳ ಭಾಷೆಯು ಆವುದಿರಬಹುದು? ಅಥವಾ ಏನು ಈ ಜನರಿಗೆ ಭಾಷೆಯ ಆವಶ್ಯಕತೆಯೇ ಇದ್ದಿಲ್ಲವೋ? ಸಂಸ್ಕೃತ ಇರಬಹುದೆ? ಅದು, ಲೌಕಿಕ ರಾಜ್ಯತಂತ್ರಗಳಲ್ಲಿ ಸೇರಹತ್ತಿದ ಬ್ರಾಹ್ಮಣರ ಮನೆಗಳನ್ನೇ ತೊರೆದು ಮಠ-ದೇಗುಲಗಳ ಆಶ್ರಯವನ್ನು ಅಪೇಕ್ಷಿಸಿದ್ದಿತು.

೧೦. ನರಸಿಂಹಾಚಾರ್ಯ ರಾ., ಕವಿಚರಿತ್ರೆ, ಭಾಗ ೨, ಮುನ್ನುಡಿ ಪು. ೫

ಉಳಿದವರ ಮಾತೇನು! ಪ್ರಾಕೃತವೇ? ಅದರ ಅವತಾರವು ೪-೫ನೆಯ ಶತಮಾನಕ್ಕೆ ಮುಗಿದುಹೋಯಿತು. ಅಲ್ಲದೆ, ಸಂಸ್ಕೃತ ಮತ್ತು ಪ್ರಾಕೃತಗಳು ದಕ್ಷಿಣಾಪಥದ ಜನರ ಮನೆಮಾತು ಅಲ್ಲವೆ ಅಲ್ಲ. ನರ್ಮದೆಯಿಂದ ಕೆಳಗೆ ವಾಸವಾಗಿದ್ದ ಜನರು ಮೂಕರಾಗಿದ್ದಂತೆ ಇತಿಹಾಸವು ಹೇಳುವುದಿಲ್ಲ. ಆದಕಾರಣ, ಕಾವೇರಿ ಕಡೆಗಂತೂ ಸರಿಯೆ. ನರ್ಮದಾ ತಟಾಕದಲ್ಲಿ ಮಲೆಯ (ಮಾಳವಾ) ನಾಡಿನಲ್ಲಿ ನೆಲೆಯಾಗಿದ್ದ ಜನರು ವಿಂಧ್ಯದ ಕಾಡಿನಲ್ಲಿ ಅಡಗಿದವರನ್ನು ಬಿಟ್ಟು ಕನ್ನಡವನ್ನೆ ಆಡುತ್ತಿದ್ದರೆಂದು ಒಪ್ಪಿಕೊಳ್ಳಬೇಕಾಗುತ್ತದೆ.[೧೧] ಇದಕ್ಕೆ ಜಬಲಪುರ ಮೊದಲಾದ ಕಡೆಗಳಲ್ಲಿ ಸಿಗುವ ಕನ್ನಡ ಶಾಸನಗಳೇ ಸಾಕ್ಷಿ. ಸಾಮಾನ್ಯವಾಗಿ ಶಾಸನಗಳನ್ನು ಬರೆಯಿಸುವುದು ಅಲ್ಲಿಯ ಜನಗಳಿಗೆಲ್ಲ ಆ ರಾಜನ ಮೇಲ್ಮೆ ಮಹಿಮೆಗಳು ತಿಳಿಯುವುದಕ್ಕಾಗಿ. ಬಹುಜನ ಸಮಾಜವು ಅದನ್ನು ಅರಿತುಕೊಳ್ಳದಿದ್ದರೂ ಕನಿಷ್ಠ ಮಹಾಜನ ಸಮಾಜಕ್ಕಾದರೂ ಆ ಭಾಷೆಯು ಅಲ್ಲಿ ತಿಳಿಯುತ್ತಿರಬೇಕಷ್ಟೆ!

ಹಾಗಾದರೆ, ಇಲ್ಲಿ ಕನ್ನಡವು ಹೇಳಹೆಸರಿಲ್ಲದಂತಾಗಲು ಕಾರಣವೇನು ಎಂದು ಸಹಜವಾಗಿಯೆ ಪ್ರಶ್ನೆಯುಂಟಾಗುವುದು. ಇದರ ಉತ್ತರವನ್ನು ಹುಡುಕುವುದಕ್ಕೆ ಬಹಳ ದೂರ ಹೋಗಬೇಕಾಗಿಲ್ಲ. ಆರ್ಯರು ದಕ್ಷಿಣಾಪಥಕ್ಕೆ ಅಡಿಯಿಟ್ಟೊಡನೆ ಅವರ ಮೊದಲ ತುತ್ತಿಗೆ ಸಿಕ್ಕವರು ಕನ್ನಡರು. ಆರ್ಯರ ವರ್ಣಾಭಿಮಾನವು ಎಷ್ಟು ಆಳವಾಗಿ ಅವರ ಅಂತರಾಳದಲ್ಲಿ ಬೇರೂರಿರುವುದೆಂಬುದು ಲೋಕವಿಖ್ಯಾತವಾದ ಸಂಗತಿಯು. ಅವರ ಗೀರ್ವಾಣ ಭಾಷೆಯ ಅಭಿಮಾನವು ಅನ್ಯಾದೃಶ. ಅದು ದೇವಭಾಷೆ. ಉಳಿದವೆಲ್ಲ ಹೀನಭಾಷೆಗಳೆಂದು ಅವರ ಶ್ರದ್ಧೆ. ಸಂಸ್ಕೃತದ ಅರ್ಥವು ತಿಳಿಯದಿದ್ದರೂ ಈಗ ಆ ಮಂತ್ರಸಾಮರ್ಥ್ಯವು ಗತಕಥಾ ವಿಷಯವೆ ಆಗಿದ್ದರೂ ಬ್ರಾಹ್ಮಣನು ಮಂತ್ರಗಳನ್ನು ಸಂಸ್ಕೃತದಿಂದಲೆ ಇಂದಿಗೂ ಪಠಿಸುತ್ತಿರುವ ಈ ಬಗೆಯ ಉದಾಹರಣವು ಜಗತ್ತಿನಲ್ಲಿ ಮತ್ತೊಂದು ಯಾವ ದೇಶದಲ್ಲಿಯೂ ಇಷ್ಟು ದೊಡ್ಡ ಪ್ರಮಾಣದಲ್ಲಿ ನೋಡಲಿಕ್ಕೆ ಸಿಗುವುದು ದುರ್ಲಭ. ಆರ್ಯನು ಜೀವದಲ್ಲಿ ಜೀವಿಸಿರುವ ವರೆಗೆ ಸಂಸ್ಕೃತ ಭಾಷೆಯನ್ನೇ ಆಡಬೇಕೆಂದು ಶಾಸ್ತ್ರವಚನಗಳು, ಕುಲಪರಂಪರೆಯು 'ನವದೇತ್ ಯಾವನೀಭಾಷಾಂ ಪ್ರಾಣೈಃ ಕಂಠಗತೈರಪಿ' ಎಂಬುದೂ 'ಪ್ರಾಕೃತಂ ಮ್ಲೇಂಛ ಭಾಷಿತಂ; ನ ಶ್ರೋತವ್ಯಂ ದ್ವಿಜೇನೈತದ್...ಅಘೇ ನಯತಿ ತತ್ ದ್ವಿಜಂ' ಎಂದು ಗರುಡ ಪುರಾಣದೊಳಗಿನ ಕಟ್ಟಪ್ಪಣೆಯೂ ಆರ್ಯರ ಭಾಷಾಭಿಮಾನದ ತೀವ್ರತೆಯನ್ನೆ ಚೆನ್ನಾಗಿ ವ್ಯಕ್ತಪಡಿಸುತ್ತದೆ. ಆರ್ಯಾವರ್ತದಿಂದ ಮೊದಲಿಗೆ ಹಿಂಡುಗಟ್ಟಿಕೊಂಡು ದಕ್ಷಿಣಾಪಥಕ್ಕೆ ಹೊರಟ ತಂಡಗಳ ಸ್ವ-ವರ್ಣಾಭಿಮಾನ, ಸ್ವ-ಭಾಷಾಭಿಮಾನಗಳ ಉಗ್ರತೆಯನ್ನೂ ತೀಕ್ಷ್ಣತೆಯನ್ನೂ ತೀವ್ರತೆಯನ್ನೂ ಕಲ್ಪನೆಯಿಂದಲೇ ಊಹಿಸಿಕೊಳ್ಳಬೇಕು. ಶಬ್ದಗಳಿಂದ ಹೇಳುವುದು ಸಾಧ್ಯವಿಲ್ಲ. ಅದರಲ್ಲಿಯೂ ಮನುಷ್ಯನು ತಾನು ಮೊಟ್ಟ ಮೊದಲು ಕೈಕೊಂಡ ಕೆಲಸದಲ್ಲಿ ತೋರಿಸುವ ಆವೇಶ ಉತ್ಸಾಹಗಳಿಗೆ ಅಳತೆ ಕಟ್ಟೆ ಇರುವುದಿಲ್ಲ. ಆರ್ಯರ ತಂಡಗಳ ಇಂತಹ ಭಯಂಕರ ಆವೇಶದ ಆಘಾತಕ್ಕೆ ಮೊದಲು ಸಿಕ್ಕಿದುದು ಕನ್ನಡ! ಅಂದಬಳಿಕ ಅದರ ಪಾಡು ಏನಾಗಿದ್ದಿರಬಹುದು? ಯೂರೋಪಿಯರು ಕೆಂದುಅಮೇರಿಕನರ ಬೇಟೆಯಾಡಿ ಅವರ ಹುಟ್ಟನ್ನು ಅಡಗಿಸಿ ತಾವು ನೆಲೆಸಿದರು. ಆದರೆ, ಆರ್ಯರು ದಕ್ಷಿಣಾ ಪಥದಲ್ಲಿ ಶಕ್ಯವಿದ್ದಷ್ಟು ಮಟ್ಟಿಗೂ ಹಾಗೆ ಮಾಡಿದಂತಿಲ್ಲ. ಸಾಧ್ಯವಿದ್ದಲ್ಲೆಲ್ಲ ಶಾಂತಿಯಿಂದಲೆ ನಡೆದುಕೊಂಡು ಇಲ್ಲಿಯ ಜನರನ್ನು ತಮ್ಮ ಕಡೆಗೆ ಒಲಿಸಿಕೊಂಡುದು ನಿಜ. ಆದರೂ ತಮ್ಮಿಂದ

೧೧. ಈ ಊಹೆಗೆ ಹೆಚ್ಚಿನ ಆಧಾರಗಳನ್ನು ಮುಂದಿನ ಪರಿಚ್ಛೇದಗಳಲ್ಲಿ ಕಾಣಬಹುದು.

ಭಿನ್ನರಾದವರ ಬಗ್ಗೆ ಮನುಷ್ಯಮಾತ್ರರಲ್ಲಿ ಹುಟ್ಟಾಮನೆಮಾಡಿಕೊಂಡಿರುವ ತಿರಸ್ಕಾರ-ತಾತ್ಸಾರದ ಭಾವನೆಯ ಕೈಗೊಂಬೆಗಳಾಗಿ ಇವರು ನಡೆದುಕೊಂಡುದು ಮಾತ್ರ ಎಳ್ಳಷ್ಟೂ ಸುಳ್ಳಲ್ಲ.

ಆರ್ಯಾವರ್ತದ ತೆಂಕಣಕ್ಕೆ ಮಲಯ (ಮಾಳವಾ) ಪರ್ವತ, ಮಲಯ ಶಬ್ದವೆ (ಮಲೆ) ಸಂಸ್ಕೃತೇತರ. ಆರ್ಯರು, ಮಲಯದ 'ಭಿಲ್ಲ (ಬಿಲ್ಲವ) ಪುರಂಧ್ರಿಯರು. ದಿನಾಲು ತಮ್ಮ ಅಡುಗೆಗೆ ಸುಡುತ್ತಿರುವ ಚಂದನತರು ಕಾಷ್ಠಗಳ ನರುಗಂಪಿಗೆ' ಮನಸೋತು ಮಲೆನಾಡಿನಲ್ಲಿ (ಮಾಳವದಲ್ಲಿ) ಕಾಲೂರಿರಬೇಕು. ಮಲೆನಾಡು ಮಾಳವಾ ಆಯಿತು. ಆರ್ಯಾವರ್ತದ ದಕ್ಷಿಣದ ಮೇರೆಯು ನರ್ಮದೆಯೆಂದು ಒಂದು ಕಾಲದ ಗ್ರಹಿಕೆ. ಆರ್ಯರು ನರ್ಮದೆಯಿಂದ ಕೆಳಗೆ ಮರ್‍ಹಾಟಕ್ಕೆ (ಮರಹಟ್ಟಿಗೆ) ಇಳಿದರು. ಅದು ವಿದರ್ಭವೆಂಬ ರೂಪತಾಳಿತು. ತಾವು ಬಂದಲ್ಲಿ ನಿಂತಲ್ಲಿ ತಮ್ಮ ಮುದ್ರೆಯನ್ನೊತ್ತಿ ತಮ್ಮ ವರ್ಚಸ್ಸನ್ನು ಸ್ಥಾಪಿಸುತ್ತ ನಡೆದರು. ನರ್ಮದಾ ನದಿಯ ದಕ್ಷಿಣದ ಬ್ರಾಹ್ಮಣರು ಪಂಚದ್ರಾವಿಡರೆಂದು ಇಂದಿಗೂ ನಡೆದುಬಂದ ಸಂಪ್ರದಾಯ. ಆದಕಾರಣ ಬ್ರಾಹ್ಮಣರ ನಿತ್ಯಸಂಕಲ್ಪದಲ್ಲಿ ದೇಶ ಮರ್ಯಾದೆಗಳನ್ನು ಹೇಳುವಾಗ "ನರ್ಮದಾಯಾಃ ದಕ್ಷಿಣೇತೀರೆ" ಎಂದು ಪಾಠವಿರ ಬೇಕಾಗಿತ್ತು. ಆದರೆ "ಗೋದಾವರ್ಯಾಃ ದಕ್ಷಿಣೇತೀರೆ" ಎಂದು ಹೇಳುವುದೇ ರೂಢ ವಾಗಿದೆ! ಆರ್ಯಾವರ್ತ ದ್ರವಿಡಾವರ್ತಗಳ ಮಧ್ಯದ ನದಿಯು ನರ್ಮದೆ ಇತ್ತು ಮತ್ತು ಇರಬೇಕು. ದಂಡಕಾರಣ್ಯವು ಗೋದಾವರಿಯ ಮೇಲ್ಗಡೆಗೂ ಇತ್ತು. ದಕ್ಷಿಣಾಪಥದಲ್ಲಿ ಮುಖ್ಯ ವಾಗಿ ನಡೆಯುವ ಶಾಲಿವಾಹನ ಶಕವು ನರ್ಮದಾನದಿಯ ವರೆಗೆ ಮಾತ್ರ ಪ್ರಚಾರದಲ್ಲಿ. ಆದರೆ, ಈಗ ಸಂಕಲ್ಪವು ಮಾತ್ರ 'ಗೋದಾವರಿಯ ದಕ್ಷಿಣ ತಡಿ, ಗೋದಾವರಿಯ ಉತ್ತರ ತಡಿ' ಎಂದು! ಗೋದಾವರಿ ನದಿಯನ್ನೇ ಸೀಮಾರೇಖೆಯಂತೆ ಹೇಳುತ್ತಿರುವುದು ಏಕೆ? ಈ ಅಸಂಬದ್ಧತೆಗೆ ಕಾರಣವೇನು?

ಸ್ವಲ್ಪ ವಿಚಾರಿಸಿದರೆ ಇದರಲ್ಲಿ ಅಸಂಬದ್ಧತೆಯೇನೂ ಇಲ್ಲ. ಮೇಗಡೆಯಿಂದ ಬಂದವರು ನರ್ಮದಾ ಗೋದಾವರಿಗಳ ನಡುವಿನ ಪ್ರದೇಶವನ್ನು ಆರ್ಯಾವರ್ತಕ್ಕೆ ಸೇರಿಸಿಕೊಂಡರು. ಅಲ್ಲಿ ಮೊದಲು ನಾಡು ಕಟ್ಟಿಕೊಂಡು ಇದ್ದವರನ್ನು ಕೆಳಗಟ್ಟಿದರು. ಆರ್ಯಾವರ್ತದ ದಕ್ಷಿಣಮೇರೆಯನ್ನು ಗೋದಾವರಿಗೆ ತಂದು ನಿಲ್ಲಿಸಿದರು. ಗೋದಾವರಿಯ 'ದಕ್ಷಿಣೇತೀರೆ' ಇಲ್ಲವೆ 'ಉತ್ತರೇತೀರೇ' ಎಂದು ಸಂಕಲ್ಪವನ್ನು ಮಾಡಲಾರಂಭಿಸಿದರು. ಇದಕ್ಕೂ ಬೇರೆ ಏನು? ನರ್ಮದಾ-ಗೋದಾವರಿಗಳ ನಡುವೆ ಆರ್ಯರ ಮೊದಲು ನೆಲಸಿದವರು ಯಾರು? ಅದು ಯಾರು ಇರಬಹುದು? ಡಾಕ್ಟರ ಸ್ಟೆನ್ ಕ್ನೋವ್ (Sten Knowe) ಹೀಗೆ ಹೇಳುತ್ತಾರೆ: The substratum over which Gujarati and Marathi have spread was Dravidian, (ಗುಜರಾತಿ ಮತ್ತು ಮರಾಠಿಯು ಕಾಲುಚಾಚಿರುವ ನಾಡು ಮೊದಲು ದ್ರಾವಿಡರದು).

ಇದು ಯುರೋಪಿಯ ಪಂಡಿತರ ಮತವಷ್ಟೆ ಅಲ್ಲ. ಮಹಾರಾಷ್ಟ್ರದ ವಿದ್ವಾಂಸರೂ ಇದನ್ನು ಅಲ್ಲಗಳೆಯುವುದಿಲ್ಲ. ಆಧುನಿಕ ಸರ್ವಜ್ಞ ಮಾಧವ, ಲೋಕಮಾನ್ಯ ತಿಲಕರಿಂದ ಹೊಗಳಿಸಿಕೊಂಡ ಶ್ರೀ ಮಾಧವರಾವ್ ರಾನಡೆಯವರು 'ಮರಾಠರ ಅಭ್ಯುದಯ'ವೆಂಬ ಗ್ರಂಥದಲ್ಲಿ ಅಭಿಪ್ರಾಯಪಡುವುದೇನೆಂದರೆ :

'The mixture of the two elements (Maratha and Dravid) is best il-

lustrated by the peculiarities of the (Marathi) language, whose base is Dravidian, but whose structure have been entirely fashioned by Aryan influence....

ದ್ರವಿಡ ಅಡಿಗಲ್ಲ ಮೇಲೆ ಸಂಸ್ಕೃತ ಪ್ರಾಕೃತಗಳ ಸಹಾಯವನ್ನು ಪಡೆದು ಮರ್‍ಹಾಟ ಭಾಷಾಮಂದಿರವು ಕಟ್ಟಲ್ಪಟ್ಟಿದೆ, ಇದನ್ನೆ ಇನ್ನೊಂದು ಬಗೆಯಿಂದ ಹೇಳುವುದೆಂದರೆ, ಮರ್‍ಹಾಟಿಯ ಮೈಯಲ್ಲಿ ದ್ರವಿಡ ನೆತ್ತರವು ಹರಿದಾಡುತ್ತಿದೆ. ಮರ್‍ಹಾಟೀತರನು ಹೀಗೆ ಹೇಳಿದರೆ ಅವರಿಗೆ ಅದರಿಂದ ತುಂಬಾ ಸಿಟ್ಟು ಬರಬಹುದು. ಆದರೆ ಇದು ನನ್ನ ಅಭಿಪ್ರಾಯವಲ್ಲ. ಮರ್‍ಹಾಟಿಯಲ್ಲಿ ವಿದ್ವಾಂಸರೂ ಅಗ್ರಗಣ್ಯರೂ ಆದ ಶ್ರೀ ಭಾಸ್ಕರರಾವ್ ಜಾಧವ ಇವರೆ ಇದನ್ನು ಚೆನ್ನಾಗಿ ವಿಶದಗೊಳಿಸಿದ್ದಾರೆ. ಮರ್‍ಹಾಟಿಯವರು 'ಆರ್ಯದ್ರಾವಿಡ; ವಂಶದವರೆಂದು ಸಿದ್ಧ ಮಾಡಿದ್ದಾರೆ.[೧೨] ಇಲ್ಲಿ ಒಂದು ಪ್ರಶ್ನೆಯಿದೆ. ಈ ಪಂಡಿತರುಗಳೆಲ್ಲ 'ದ್ರವಿಡ' 'ದ್ರವಿಡ' ಎಂದು ಉಪಯೋಗಿಸುವ ಮಾತಿಗೆ ಏನು ಅರ್ಥ? ನೀಲಗಿರಿಯಿಂದ ಅತ್ತ ಇರುವ ದ್ರವಿಡರೆತ್ತ? ಕ್ರಿಸ್ತಶಕದ ಆರಂಭದಿಂದ ಗರ್ಭಧಾರಣೆಗೆ ಆರಂಭವಾದ ಗುಜರಾತಿ ಮರ್‍ಹಾಟಿ ಭಾಷೆಗಳ ಮೂಲ ಪ್ರದೇಶಗಳೆತ್ತ? ಆದ್ದರಿಂದ ದ್ರವಿಡ ಶಬ್ದಕ್ಕೆ ತಮಿಳರು ಎಂಬರ್ಥವಲ್ಲವೆಂಬುದು ಸಿದ್ಧ. ದ್ರಾವಿಡರು ಎಂದರೆ ಬರಿ ಕೊಂಡರು ಗೊಂಡರೆ? ಇವರ ಭಾಷೆಯು ಆರ್ಯರ ಸಂಸ್ಕೃತ, ಪ್ರಾಕೃತ ಭಾಷೆಗಳಿಗೂ ಸಂಸ್ಕಾರ ಕೊಡುವಷ್ಟು ಅನೇಕಾನೇಕ ಶಬ್ದಗಳನ್ನು ಕೈಗಡ ಕೊಡುವಷ್ಟು ಸಂಪನ್ನಸ್ಥಿತಿಯಲ್ಲಿ ಎಂದಾದರೂ ಇದ್ದಿತೆ? ಅಲ್ಲದೆ ಮಹಾಭಾರತಾದಿಗಳಲ್ಲಿ ರಾಷ್ಟ್ರಗಳನ್ನು ಕಟ್ಟಿಕೊಂಡು ಬಾಳುತ್ತಿದ್ದ ಜನಾಂಗಗಳಂತೆ ಇವರ ಉಲ್ಲೇಖವು ಎಲ್ಲಿಯೂ ಇಲ್ಲ. ಹಾಗಾದರೆ ಗುಜರಾತ ವಿಂಧ್ಯ ಗೋದಾವರಿಗಳ ನಾಡಿನಲ್ಲಿ ನಾಡಿಗರಾಗಿ ಇದ್ದವರು ಯಾರು? ಗೋದಾವರಿಯಿಂದ ಕರ್ನಾಟಕವೆಂದು ಅಲ್ಲಿ ಅರಸನಾಗಿದ್ದ ನೃಪತುಂಗನೆ (ಕ್ರಿ.ಶ. ೮೧೫) ಹೇಳುತ್ತಾನೆ. ಆದಕಾರಣ (ನೃಪತುಂಗನ ಮೊದಲು ಕೆಲವು ಶತಮಾನ) ಆರ್ಯರು ಇಲ್ಲಿ ಪ್ರಬಲವಾಗುವವರೆಗೆ, ಹೊರಗಿನವರು ಬಂದು ತಳ್ಳಿಹಾಕುವ ವರೆಗೆ ಆನಾಡು ಕನ್ನಡರದೆ ಆಗಿರಬೇಕೆಂದು ಊಹಿಸಿದರೆ ಅದರಲ್ಲಿ ಅಸ್ವಾಭಾವಿಕವೇನು? ಗೋದಾವರಿಯಿಂದ ದಕ್ಷಿಣಕ್ಕೆ ಮೆರೆಯುತ್ತಿದ್ದವರು ಅದೇ ನದಿಯ ಮೇಗಡೆಯಲ್ಲಿ ನರ್ಮದೆಯವರೆಗೆ ಆರ್ಯರು ಬರುವ ಮೊದಲೇ ಅಲ್ಲಿಯ ವರೆಗೆ ವ್ಯಾಪಿಸಲು ಆತಂಕವೇನಿತ್ತು? ಆದುದರಿಂದ, ಡಾ. ಸ್ಟೆನ್, ರಾನಡೆ ಪ್ರಭೃತಿಗಳು ಹೇಳುವ (ಗುಜರಾತಿ, ಮರ್‍ಹಾಟಿಗಳ ಆಧಾರಸ್ತಂಭದಂತಿರುವ) ದ್ರವಿಡ ಶಬ್ದಕ್ಕೆ ಕನ್ನಡವೆಂದೇ ಅರ್ಥ ಮಾಡುವುದು ಉಚಿತವಲ್ಲವೆ?

ಆದುದರಿಂದ, ಈ ನಾಡಿನಲ್ಲಿ ದ್ರವಿಡರ (ತಮಿಳರ) ಗಾಳಿ ಸಹಾ ಸುಳಿಯದಾಗ ಆಂಧ್ರರು ಇನ್ನೂ ವೆಂಗಿಮಂಡಲದಲ್ಲಿ ತಮ್ಮ ಪಾಡಿಗೆ ತಾವು ಇದ್ದುಕೊಂಡಾಗ ಮರ್‍ಹಾಟ ಗುಜರಾತಿಗಳು ಇನ್ನೂ ಕಣ್ಣು ಸಹ ತೆರೆಯದೆ ಇದ್ದಾಗ ಅಲ್ಲಿಯ ನಾಡಿಗರ ಪ್ರಮುಖ ಭಾಷೆಯು ಕನ್ನಡವೇ ಆಗಿದ್ದಿತೆಂದು ಹೇಳಿದರೆ ತಪ್ಪೇನು? ಸುಮ್ಮನೆ ನಮ್ಮ ತರ್ಕವಾದರೂ ಏಕೆ? ಮರ್‍ಹಾಟಿಗಳೇ ಏನು ಹೇಳುವರು ನೋಡುವಂತಿದೆ. ''ಆಂಧ್ರಕಾಯ, ಕಿಂವಾ ತ್ಯಾಂಚ್ಯಾ ನಂತರಚೇ ಆಂಧ್ರಭೃತ್ಯ ಶಾತವಾಹನ ಕಾಯ ಹೇ ದೋಘೇಹಿ ಕಾನಡೀಚೇ ಕಟ್ಟೇ ಕೈವಾರೀ

---

೧೨. ವಿವಿಧ ಜ್ಞಾನ ವಿಸ್ತಾರ, ೧೯೩೧ರ ಸಂಪುಟ, ಪು. ೧೨೬

ಹೋತೇ[೧೩] ಶಾತವಾಹನರ ರಾಜಧಾನಿ ಪ್ರತಿಷ್ಠಾನ, ಪೈಠಣ. ಇದು ಗೋದಾವರಿ ಮೇಗಡೆಯ ನಾಡಿನ ಕೇಂದ್ರ. ಅಲ್ಲಿಯ ರಾಜಭಾಷೆಯು ಕನ್ನಡವೆಂದ ಬಳಿಕ ಆ ನಾಡು ಕನ್ನಡವಿದ್ದಿತೆಂದು ಬೇರೆ ಏತಕ್ಕೆ ಹೇಳಬೇಕು? ಆದಕಾರಣ, ಈ ಮೊದಲೆ ವಿಮರ್ಶಿಸಿ ನೋಡಿದಂತೆ ಕಾವೇರಿ--ಗೋದಾವರಿಗಳ ನಡುವೆ ಸಿಕ್ಕದೆ ಇರುವ ಬನವಾಸಿ ಮಹಿಷಮಂಡಳಾದಿಗಳಿಂದ ಭಿನ್ನವಾದ 'ಕರ್ಣಾಟ'ವೆಂಬ ಪ್ರದೇಶವು ಗೋದಾವರಿಯ ಮೇಗಡೆಯ ಈ ನಾಡೆ ಏಕೆ ಆಗಿರಬಾರದು?

ಉತ್ತರದಿಂದ ಬಂದು ಆರ್ಯರೂ, ಆಭೀರರೂ ಮೊದಲಾದವರ ಆಘಾತಗಳಿಂದ ಕ್ರಿ.ಶ. ೪-೫ನೆಯ ಶತಮಾನಗಳೊಳಗಾಗಿ ಇಲ್ಲಿ ಕನ್ನಡಕ್ಕಿದ್ದ ಪ್ರಾಶಸ್ತ್ಯವು ಅಳಿದುಹೋಗಿರಬೇಕು. ದೇವಗಿರಿ ಯಾದವರ ಕಾಲಕ್ಕೆ ೧೨೫೦-೬೦ರವರೆಗೆ ಆ ನಾಡಿನಲ್ಲಿ ಕನ್ನಡವು ಅಂತೂ ಇಂತೂ ಜೀವ ಹಿಡಿದುಕೊಂಡಿತ್ತು. ಆದರೂ ಕನ್ನಡರು ಬಾದಾಮಿ, ಬನವಾಸಿ, ಮಹಿಷಮಂಡಳ, ನೀಲಗಿರಿಗಳ ವರೆಗೂ ತಂಡತಂಡವಾಗಿ ಕಾಲಕಾಲಕ್ಕೆ ಊರಿಕೊಂಡು ನಿಲ್ಲಲು ಹೋಗುತ್ತಲೇ ಇರಬೇಕು. ೧೩-೧೪ನೇ ಶತಮಾನಗಳವರೆಗೆ ಕನ್ನಡವು ಹಾಗೂ ಹೀಗೂ ಜೀವಂತವಾಗಿದ್ದರೂ ಕ್ರಿಸ್ತಶಕದ ಮೊದಲೇ ಕರ್ಣಾಟವೆಂಬ ದೇಶವಾಚಕ ಶಬ್ದವು ಮಾತ್ರ ಈ ನಾಡಿನಿಂದ ಎಂದೋ ಅದೃಶ್ಯವಾಗಿರಲಿಕ್ಕೆ ಬೇಕು. ಆ ಸ್ಥಳದಲ್ಲಿಯೆ ಕ್ರಮವಾಗಿ ತಲೆಯೆತ್ತುತ್ತಲಿದ್ದ 'ಮಹಾರಾಷ್ಟ್ರ ಶಬ್ದವು' ೬ನೆಯ ಶತಮಾನದಲ್ಲಿ ಬಂದು ಸೇರಿಕೊಂಡಿತೆಂದು ಹೇಳಬಹುದು. ಹೀಗೆ 'ಕರ್ಣಾಟ'ವೆಂಬ ಹೆಸರಿನ ನಾಡು (ನರ್ಮದಾ ಗೋದಾವರಿಗಳ ನಡುವಿನದು) ಹೇಳಹೆಸರಿಲ್ಲದಂತಾಗಿದ್ದುದರಿಂದಲೆ ಅಶೋಕನ ಶಾಸನಗಳಲ್ಲಿ, ಮತ್ತು ಬೇರೆ ಎಷ್ಟೋ ಬೌದ್ಧಗ್ರಂಥಗಳಲ್ಲಿ ವನವಾಸಿ, ಮಹಿಷಮಂಡಲಾದಿಗಳ ಉಲ್ಲೇಖಗಳಿದ್ದರೂ 'ಕರ್ಣಾಟ'ವೆಂಬ ಶಬ್ದವು ಮಾತ್ರ ಕಣ್ಣಿಗೆ ಬೀಳುವುದಿಲ್ಲ. 'ಕರ್ಣಾಟ ವೆಂಬ ದೇಶವು ದಕ್ಷಿಣದಲ್ಲಿತ್ತು' ಎಂದು ಪರಂಪರಾಗತವಾಗಿ ಗೊತ್ತಿದ್ದವರು ಮಾತ್ರ ತಮ್ಮ ಗ್ರಂಥಗಳಲ್ಲಿ ಇದರ ಹೆಸರನ್ನು ಹೇಳುತ್ತಿರಬೇಕು.

ನರ್ಮದಾ-ಗೋದಾವರಿ ತೀರದ ನಿಜ ಕರ್ನಾಟ, ಕನ್ನಡವೆ ಕಣ್ಮರೆಯಾದ ಬಳಿಕ ಆ ಕನ್ನಡರಿಗೆ ಸ್ವತಂತ್ರ ಅಸ್ತಿತ್ವವಾದರೂ ಎಲ್ಲಿ? ಮಲೆಯ (ಮಾಳವ)ದಿಂದ ಮರಹಟ್ಟಿನಾಡು (ಮರ್ಹಾಟವು) ಮೊಟ್ಟಮೊದಲು ಮಹಾರಾಷ್ಟ್ರವಾಯಿತು. ಪುಲಿಕೇಶಿಯ ಕಾಲಕ್ಕೆ ಬಾದಾಮಿಯು ಮಹಾರಾಷ್ಟ್ರದ ರಾಜಧಾನಿಯೆನಿಸಿತು! ಹ್ಯೂವೆನತ್ಸಾಂಗನು ಅತ್ಯಂತ ವಿಸ್ತಾರವಾದ 'ಮಹಾರಾಷ್ಟ್ರ'ದ ವೈಭವಶಾಲಿಯಾದ ರಾಜಧಾನಿಯು ಬಾದಾಮಿಯೆಂದೆ ಬರೆದಿದ್ದಾನೆ. ಶ್ರೀ ಚಿಂತಾಮಣಿರಾವ ವೈದ್ಯ ಪ್ರಭೃತಿ; ಮಹಾರಾಷ್ಟ್ರರು ಕಾವೇರಿ (ತಂಜಾವರದ)ವರೆಗೂ ಮಹಾರಾಷ್ಟ್ರದೇಶವೇ ಇದೆಯೆಂದು ಕನಸಿನಲ್ಲಿ ಬಡಬಡಿಸುವವರಂತೆ ಆಗಾಗ್ಗೆ ಕನವರಿಸುತ್ತಿರುವುದರಲ್ಲಿ ಅರ್ಥವಿದೆ. ಮಹಾರಾಷ್ಟ್ರ ಜನಾಂಗದ ಮನಸ್ಸಿನ ಅಂತರಾಳದಲ್ಲಿ (Subconsious mind) ಎಲ್ಲಿಯೊ ಹಾಗೆ ಎನಿಸುತ್ತಲಿದೆ. 'ಕರ್ನಾಟಕವು' ಒಮ್ಮೆ ನಾಮಾವಶೇಷವಾದ ಬಳಿಕ ಇನ್ನೆಲ್ಲಿಯ ಕನ್ನಡ? ಎಲ್ಲಿಯ ಕರ್ಣಾಟ? ಎಲ್ಲವೂ ಮಹಾ ರಾಷ್ಟ್ರವೇ! ಇದು ಬರಿ ಮರ್ಹಾಟಿಗಳ ಭಾವನೆಯಷ್ಟೆ ಅಲ್ಲ. ನಮ್ಮ ನಾಡಿನವರಲ್ಲಿಯೂ ಕೆಲಮಟ್ಟಿಗೆ ಇದೆ. ಏಕೆಂದರೆ? 'ಕರ್ಣಾಟ'ವೆ ಮಹಾರಾಷ್ಟ್ರ

---

೧೩. ಕುಲಕರ್ಣಿ. ಕೃ. ಪ., ಮರಾಠಿ ಭಾಷಾ ಉದ್ಗಮ ವ ವಿಕಾಸ, ಪು. ೧೮೯

ವಾಯ್ತಲ್ಲವೇ? ಆದ್ದರಿಂದ ಕನ್ನಡರೆಲ್ಲರೂ ಮಹಾರಾಷ್ಟ್ರರ. ಜನ್ನ ಮಹಾಕವಿಯು (ಕ್ರಿ.ಶ. ೧೨೦೯) ಹೊಯ್ಸಳರ ರಾಜಾಶ್ರಯದಲ್ಲಿದ್ದವನು, ಕರ್ನಾಟ ಪ್ರದೇಶದವನು. ಅನಂತನಾಥ ಪುರಾಣದಲ್ಲಿ ಜೈನಧರ್ಮವು ಹೇಗೆ ವಿಸ್ತಾರಹೊಂದಿತೆಂಬುದನ್ನು ಹೇಳುವಾಗ ಹೀಗೆ ಬರೆಯುತ್ತಾನೆ:

"(ಜೈನ) ಸದ್ಧರ್ಮಪೀಯೂಷ ಪ್ರವಾಹಂ ವಂಗಮಂಡಳದೊಳ್ ತರಂಗಗೊಂಡು, ಕಳಿಂಗ ಮಂಡಳದೊಳ್ ಮಡುಗಟ್ಟಿನಿಂದು ಮಹಾರಾಷ್ಟ್ರ ಮಂಡಳದೊಳ್ ಅಟ್ಟುಂಬರಿವರಿದು ಮಲಯಮಂಡಳದೊಳ್ ವೇಳೆಗೊಂಡು ನೆಲಸಿ ಗುಜ್ಜರ ಮಂಡಳದೊಳ್ ಜಜ್ಜರಂ ಬರಿದು ಮರುಮಂಡಳದೊಳ್ (ಮಾರವಾಡದೇಶ) ಪರೆಪುವಡೆದು....[೧೫] ಜನ್ನನು ಸ್ವತಃ ಜೈನನು. ಇಲ್ಲಿಯೆ ನೆಲೆಸಿದವನು. ಈ ನಾಡು ಜೈನಧರ್ಮದ ಆಗರ. ಹೀಗಿದ್ದು ಇವನು ಕರ್ನಾಟದ ಹೆಸರನ್ನೆ ಹೇಳದಿರುವುದು ಸೋಜಿಗವಲ್ಲವೆ? 'ಕನ್ನಡಮೆನಿಪ್ಪಾನಾಡು' ಎಂದು ಹೇಳುವ ಆಂಡಯ್ಯನೂ ಇದೇ ಶತಮಾನದವನು. ಮೂಲಕರ್ನಾಟವೆ ಹಾಳಾದ ಬಳಿಕ ಉಳಿದುದೆಲ್ಲವೂ ಕನ್ನಡಮೆನಿಪ್ಪಾ ನಾಡೇ ಸರಿ. ೭ನೆಯ ಶತಮಾನದಲ್ಲಿ ಆಗಿಹೋದ, ವೈದಿಕಧರ್ಮದ ಪುನರುದ್ಧಾರಕ್ಕಾಗಿ ಭರತಖಂಡದಲ್ಲೆಲ್ಲ ಅಲೆದಾಡಿದ ಘನ ವಿದ್ವಾಂಸನಾದ ಕುಮಾರಿಲಭಟ್ಟನೂ 'ಆಂಧ್ರದ್ರಾವಿಡ'ವೆಂಬ ಸಾಮಾಜಿಕ ಪದವನ್ನು ಮಾತ್ರ ಉಪ ಯೋಗಿಸುವನು. ಇವನು ಸಹ ಕರ್ನಾಟ ಹೆಸರನ್ನೆ ಎತ್ತುವುದಿಲ್ಲ! ಈ ಮೊದಲು ಹೇಳಿದ ಚೀನದ ಪ್ರವಾಸಿ ಹ್ಯೂವೆನ್‌ತ್ಸಾಂಗನ ಮಹತ್ವದ ಉದಾಹರಣವಂತೂ ಇದ್ದೇ ಇದೆ.

ಕರ್ನಾಟವು ನಾಮಶೇಷವಾಯಿತೆಂದು ಭಾವಿಸಿ ಹಲವು ಕಾಲದವರೆಗೆ ಕನ್ನಡರನ್ನು ದುರ್ಲಕ್ಷಿಸಿದ್ದುದ್ದೇ ಇದಕ್ಕೆ ಮೂಲಕಾರಣ. ಉತ್ತರದವರು ಗೌರರು—ಗೌಡರು ಅಂದರೆ ಕೆಂಪನ್ನವರು. ದಕ್ಷಿಣದವರು ದ್ರಾವಿಡರು ಅಂದರೆ ಕಪ್ಪನ್ನವರು ಎಂದು ಬ್ರಾಹ್ಮಣರಲ್ಲಿಯೆ ಎರಡು ವರ್ಣಗಳಾದವು. ದಕ್ಷಿಣದ ಜನಗಳ ಯಾವುದೆ ಮಾತಿನ ಅಳತೆ, ಮಾಪು ಮಾಡುವಾಗ ಕನ್ನಡರು ಕಣ್ಮರೆಯಾಗಿ ದ್ರವಿಡರೊಬ್ಬರಿಗೇ ಪ್ರಾಮುಖ್ಯತೆಯು ಬಂದಿತು. ಮಹಾರಾಷ್ಟ್ರದೊಳಗಿನ (ನರ್ಮದೆಯಿಂದ ಕಾವೇರಿಯವರೆಗೆ) ಬ್ರಾಹ್ಮಣರಿಗೆ ದ್ರವಿಡರು ಎಂದುಕೊಳ್ಳುವ ಇಚ್ಛೆಯಿಲ್ಲ. ಗೌಡರಲ್ಲಿ ಸೇರುವ ಹಾಗಿಲ್ಲ! ವಿಚಿತ್ರವು ವಿಚಾರಣೀಯ ವಾಗಿದೆ. ಆದರೆ, ಕರ್ನಾಟಕವು ೪-೫ನೆಯ ಶತಮಾನದಲ್ಲಿ ಇಷ್ಟು ವಿಕಲಾಂಗವಾದರೂ ಅದು ನೆಲಹಿಡಿದು ಬೀಳಲಿಲ್ಲ. ನರ್ಮದಾತೀರದ ಒಂದು ಕರ್ನಾಟವು ಹೋದರೂ ಹಿಂದೆ ಹೇಳಿದಂತೆ ಬನವಾಸಿ, ಬಾದಾಮಿ ನಾಡುಗಳಲ್ಲಿ ಎರಡು ಕನ್ನಡಗಳಾದವು. 'ನಾಲ್ಕು ಸಾವಿರದ ಕನ್ನಡ !' 'ಎರಡು ನೂರರ ಕನ್ನಡ !' ಒಂದು ಕನ್ನಡ ಹೋಗಿ ಚಿಲ್ಲರೆ ಕನ್ನಡಗಳೆ ಕನ್ನಡಗಳು! ಗೋದಾವರಿಯ ಕೆಳಗಡೆಯಲ್ಲಿ ಸ್ವಲ್ಪ ದಿನಗಳಲ್ಲಿಯೇ ಕರ್ನಾಟ ವಿರೋಧಿಗಳಿಗೆ ಎಲ್ಲಿ ನೋಡಿದಲ್ಲಿ ಕರ್ನಾಟವೆ ಕಾಣಲಾರಂಭಿಸಿರಬೇಕು. 'ಕುಂತಲ ಕರ್ನಾಟ, ಮೈಸೂರ ಕರ್ನಾಟ' ಎಂದು ನರ್ಮದಾತೀರದಲ್ಲಿ ಗುಪ್ತವಾದ ಕರ್ನಾಟವು ನೃಪತುಂಗನ ಕಾಲಕ್ಕೆ ಗೋದಾತೀರದ ದಕ್ಷಿಣಕ್ಕೆ ಎಲ್ಲಿ ನೋಡಿದಲ್ಲಿ ಕರ್ನಾಟವೆ ಕರ್ನಾಟವಾಗಿಬಿಟ್ಟಿತು! ಮರ್ಹಾಟಿಯಲ್ಲಿ 'ಕನ್ನಡ' (ಕಾನಡಿ) ಶಬ್ದಕ್ಕೆ 'ಗೂಢ, ಅಗಮ್ಯ! ನೆಲೆನಿಲುಕದ್ದು' ಎಂಬ ಅರ್ಥವೂ ಇದಕ್ಕಾಗಿಯೆ ಬಂದಿತೇನೋ.[೧೬] ವಿಂಧ್ಯ-ಗೋದಾವರಿಗಳ ನಾಡಿನಲ್ಲಿ

೧೫. ಜನ್ನ, ಅನಂತನಾಥ ಪುರಾಣಂ, ೧೪-೪೭ ವಚನ

೧೬. ಆಪ್ಟೆ. ವಾ. ಗೊ., ಮರಾಠೀಕೋಶ

ಒಂದಾನೊಂದು ಕಾಲಕ್ಕೆ ಕರ್ಣಾಟವು ಇದ್ದುದೇ ನಿಜವಾಗಿದ್ದರೆ ಅಲ್ಲಿ ಕೆಲವಾದರೂ ಕನ್ನಡ ಜನಾಂಗಗಳು ಇರಬೇಕಷ್ಟೇ? ಕರ್ನಾಟವು ಹೊರಗಿನವರ ಹೊಡೆತಕ್ಕೆ ಸಿಕ್ಕಿಕೊಳ್ಳಲು ಕನ್ನಡರ ಎಷ್ಟೋ ತಂಡಗಳು ಈ ನಾಡಿನಿಂದ ದಕ್ಷಿಣಕ್ಕೆ ಹೊರಟುಹೋಗಿರಬಹುದು. ಆದರೆ, ಮೊದಲು ನೆಲಸಿದ್ದವರಲ್ಲಿ ತೀರ ಒಬ್ಬನೂ ಉಳಿಯದಂತೆ ಎಲ್ಲರೂ ತಮ್ಮ ಬದುಕು ಬಾಳುವೆಗಳನ್ನೆಲ್ಲ ಕಿತ್ತುಕೊಂಡು ಹೋಗುವುದಂತೂ ಅಸಂಭವ. ಆದುದರಿಂದ, ಇಲ್ಲಿ ಅಲ್ಪ ಸ್ವಲ್ಪ ಪ್ರಮಾಣದಲ್ಲಾದರೂ ಇನ್ನೂ ಕನ್ನಡದ ಅವಶೇಷಗಳು ಉಳಿದಿರಲಿಕ್ಕೆ ಬೇಕಷ್ಟೇ? ಹಾಗೆ ಏನಾದರೂ ಉಂಟೊ ಎಂದು ಕೇಳಬಹುದು. ಉಂಟು. ಈ ಬಗೆಯ ಆಧಾರಗಳ ಆಧಾರವಿಲ್ಲದ ಊಹೆಯೆ? ಅದು ಊಹೆಯಲ್ಲ; ಬರಿ ಉಂ ಹುಂ.

## ಕುರುಬರೂ ಮಲೆಯರೂ

ಡಾ. ಗ್ರಿಯರಸನ್ನನು ಇವರಿಗೆ ಕುರ್ಖ (Kurkh) ಮತ್ತು ಮಾಲೇರ (Maler) ಎನ್ನುತ್ತಾನೆ. ಮಾಲೇರ ಎಂಬುದು ಮಲೆಯರು ಎಂಬುದರ ಸಂಕ್ಷಿಪ್ತ ರೂಪವೆಂದು ಮೇಲೆಯೆ ಕಾಣುತ್ತಿದೆ. ಕುರ್ಖರು ಕುರಿದನಗಳನ್ನು ಸಾಕಿಕೊಂಡು ಬದುಕಿರುವರು. ಗ್ರಿಯರ್‌ಸನ್ನರೆ ಮುಂದೆ ಹೇಳಿದ ಕುರುಬರು ಮೊದಲಾದ ಮಧ್ಯಪ್ರಾಂತದಲ್ಲಿ ಇನ್ನೂ ಗುಂಪುಕಟ್ಟಿಕೊಂಡು ಹೇಗೂ ಜೀವನವನ್ನು ಸಾಗಿಸುತ್ತಿರುವ ಕನ್ನಡತಂಡಗಳ ವರ್ಣನೆಯ ಮೇಲಿಂದಲೂ ಈ ತಂಡದವರ ನಿಜವಾದ ಹೆಸರು ಕುರುಬರೆಂತಲೆ ಇರಬೇಕೆಂದು ತೋರುತ್ತದೆ. ಧಾರವಾಡವು 'ಡಾರ್‌ವಾರ್' (Dharwar) ಆದಂತೆ ಕುರುಬ (Kurkh) ಆಗಿದೆಯೊ ತಿಳಿಯದು. ಜನಗಳ ಇಂದಿನ ಬಳಕೆಯ ಮಾತಿನಲ್ಲಿ ಹಳೆಗನ್ನಡದ ಸರ್ವನಾಮಗಳು ಹಳೆಗನ್ನಡ ವಿಭಕ್ತಿಪ್ರತ್ಯಯಗಳ ಅವಶೇಷಗಳು! ಈ ಜನಗಳೆಷ್ಟು ಗೊತ್ತೆ? ೫ ಲಕ್ಷ ಕುರುಬರು (Kurkh) ೧೨ ಸಾವಿರ ಮಲೆಯರು. ಇವರು ಕರ್ನಾಟದವರೆಂದು ಯಾರೂ ಬಲವಂತಪಡಿಸಿ ತರ್ಕ ಪ್ರಮಾಣಗಳಿಂದ ಸಿದ್ಧಮಾಡಿತೋರಿಸುವ ಕಾರಣವೇ ಇಲ್ಲ. ಏಕೆಂದರೆ, ಜನಾಂಗದವರು 'ತಾವು ಕರ್ಣಾಟದಿಂದ ಬಂದವರು,' ಎಂದು ತಾವಾಗಿಯೇ ಹೇಳುತ್ತಾರೆ. ಹೊರಗಿನವರು ಬಂದು ಕಾಲುಚಾಚಿ ಕರ್ಣಾಟರನ್ನು ಹೇಗೆ ದೇಶಭ್ರಷ್ಟರನ್ನು ಮಾಡಿರಬಹುದೆಂಬ ಕಲ್ಪನೆಯು ಈ ತಂಡದ ಉದಾಹರಣದಿಂದ ಚೆನ್ನಾಗಿ ಗೊತ್ತಾಗುವಂತಿದೆ. ಇವರನ್ನು ಕುರಿತು ಡಾ. ಗ್ರಿಯರಸನ್ನರು ಬರೆದಿರುವುದೇನೆಂದರೆ:

According to their own traditions the Kurkh tribe originally lived in carnatic, whence they went up the Narbada River and settled in Bihar on the banks of Sone. Driven out by mohomedans the tribe split into two divisions one followed the course of Ganges and finally settled in Rajamahal Hills; while the other went up to Sons.[೧೬]

ಮುಂದೆ ಅದೆ ಗ್ರಂಥದಲ್ಲಿಯೆ 'ಕುರುಬರು ಮಲೆಯರೂ ಬೇರೆ ಬೇರೆ ಅಲ್ಲ; ಒಂದೇ ತಂಡದವರೆಂದು' ಹೇಳಿದೆ :

---

೧೬. *Linguistic Survey of India*, Vol. IV, p. 566

The Kurkh and Maler are one and the same tribe, and that they formerly lived together on the banks of Sone.

'ಕುರುಬರು ತಾವು ಮೊದಲು ಕರ್ಣಾಟದಲ್ಲಿ ನೆಲಸಿದವರು' ಎಂದು ಹೇಳುತ್ತಾರಂತೆ. ಕರ್ಣಾಟದ ನಿವಾಸಿಗಳಿಗೆ ಕನ್ನಡರೆಂದು ಹೇಳಲು ಹೆದರಿಕೆಯೇಕೆ? ಆದ್ದರಿಂದ ಕುರುಬರೂ ಮಲೆಯರೂ ಕನ್ನಡರು. ಇವರು ತಮ್ಮ ನಾಡಿಗೆ ಎರವಾಗಿ ಮನೆಮಾರುಗಳ ಅರಿವು ಇಲ್ಲದೆ ದೈವವು ಆಟ್ಟಿದತ್ತ ಅಲೆದಾಡುತ್ತ ನಡೆದು ಇಪ್ಪತ್ತು ಸಾವಿರ ವರುಷಗಳು ಮೀರಿಹೋಗಿರಬೇಕು. ಕರ್ಣಾಟದ ಮಹಾಜನಗಳಿಗೆ, ಕಾಡು ಸೇರಿ ಕಷ್ಟಪಡುತ್ತಿರುವ ತಮ್ಮ ಜನಗಳ ಪರಿವೆ ಇಲ್ಲದ್ದರಿಂದ ಪರದೇಶಿಗಳಾಗಿ ಪರಭಾಷೆಗಳ ಮಧ್ಯದಲ್ಲಿ ಸಿಕ್ಕುಬಿದ್ದಿರುವರಾದರೂ ಆ ಜನರ ಭಾಷೆಯೊಳಗೆ ಇನ್ನೂ ಹಳೆಗನ್ನಡದ ಕುರುಹುಗಳು ಉಳಿದಿರಬೇಕಾದರೆ ಆ ಜನಾಂಗದಲ್ಲಿ ಬೇರೂರಿದ ಪೂರ್ವ ಸಂಸ್ಕಾರಗಳು ಎಷ್ಟು ದೃಢವಾದವುಗಳಿರಬೇಕು!

'ಈ ಜನಗಳು ಕರ್ಣಾಟದಿಂದ ಹೊರಟು ನರ್ಮದೆಯನ್ನು ದಾಟಿ ಶೋಣ ನದಿ ತೀರಕ್ಕೆ' ಹೋದರಂತೆ; ಏಕೆ, ನಡುವೆ ಕೃಷ್ಣಾ, ಭೀಮಾ, ಗೋದಾವರಿ ನದಿಗಳು ಹತ್ತಲೆ ಇಲ್ಲವೆ? ಇವರಿಗೆ ನಡುವೆ ಸಹ್ಯ ಪರ್ವತದ ಶಾಖೆಗಳಾವವೂ ಆಶ್ರಯವನ್ನೀಯಲಿಲ್ಲವೇ? ಇವರು ವಾಸವಾಗಿದ್ದ ಕರ್ಣಾಟವೆ ಗೋದಾವರಿಯ ಮೇಗಡೆಗೆ ಇದ್ದರೆ, ಗೋದಾವರಿಯನ್ನು ದಾಟುವ ಆವಶ್ಯಕತೆಯಾದರೂ ಏನು? ಈ ನಾಡಿನಿಂದ ಮೇಲಕ್ಕೆ ಎಂದರೆ ನರ್ಮದೆಯಿಂದ ಉತ್ತರಕ್ಕೆ ಶೋಣ ಭದ್ರೆಯ ತೀರವೆ ಸಮೀಪದ ಆಶ್ರಯಸ್ಥಾನವೆನಿಸಿ ಅವರು ಅಲ್ಲಿ ನೆಲಸಿಬಿಟ್ಟಿರಬೇಕು. ಈ ಕುರುಬರು, ಮಲೆಯರು ಅಲ್ಲದೆ ಕೋಲ (ಕೋತ?)ರು, ನಾಯಿಕರು ಮೊದಲಾದ ಕೆಲವು ವರ್ಗಗಳೂ ಅಲ್ಲಿವೆ. ಅವರ ಬಳಕೆಯ ಮಾತಿನಲ್ಲಿಯೂ ಹಳೆಗನ್ನಡದ ಅವಶೇಷಗಳಿಗೆ ಕೊರತೆಯಿಲ್ಲ. ಇವರ ಭಾಷೆಗೂ ನೀಲಗಿರಿಯಲ್ಲಿ ನೆಲೆಯಾಗಿರುವ ತೋಡದ ಭಾಷೆಗೂ ಎಷ್ಟೋ ಮಾತುಗಳಲ್ಲಿ ಆಶ್ಚರ್ಯಕರವಾದ ಸಾಮ್ಯವಿದೆಯೆಂದು ಗ್ರಿಯರಸನ್ನ ಸಾಹೇಬರೇ ಹೇಳುತ್ತಾರೆ :

There are also some interesting points of analogy with the Toda dialect of Nilgiries.[೧೭]

ನೀಲಗಿರಿ ಎಲ್ಲಿ ? ಈ ಜನಗಳೆಲ್ಲಿ ? ಇವರಲ್ಲಿ ಅದಾವ ಬಗೆಯ ಸಂಬಂಧವೂ ಇಲ್ಲದೆಯೆ ಭಾಷೆಗಳಲ್ಲಿ ಈ ತೆರನಾದ ಹೋಲಿಕೆಯಿರಬಹುದೇ ? ಆದಕಾರಣ ನೃಪತುಂಗನ ಕಾಲಕ್ಕೆ (ನೀಲಗಿರಿಯಿಂದ) ಗೋದಾವರಿಯವರೆಗೆ ಇದ್ದ ಕನ್ನಡವು (ಅದಕ್ಕೂ ಮೊದಲು) ಒಂದು ಕಾಲಕ್ಕೆ ಆರ್ಯರೂ ಆಭೀರರೂ ಅಲ್ಲಿ ಪ್ರಬಲವಾಗುವ ಮೊದಲು ನರ್ಮದೆ-ವಿಂಧ್ಯಗಳ ವರೆಗೂ ಹಬ್ಬಿಕೊಂಡಿದ್ದಿತೆಂದು ಹೇಳುವುದೆ ಉಚಿತವಲ್ಲವೆ?

## ಗೊಲ್ಲರು ಹೊಲೆಯರು ಮತ್ತು ಕುರುಂಬರು

ಆವುದೊಂದು ಜನಾಂಗದ ಮಾತಿನಲ್ಲಿ ಒಂದು ಎರಡು ಹಳೆಕನ್ನಡದ ಅವಶೇಷಗಳು ದೊರೆತಕೂಡಲೆ ಹಿಗ್ಗಿ ಹಾರಾಡಿ 'ಕನ್ನಡನಾಡು ನರ್ಮದೆಯವರೆಗೆ ಇತ್ತು' ಎಂದು ಹೇಳುವುದು ಹುಚ್ಚುತನವೆ ಸರಿ. ಆದರೆ, ಇದಕ್ಕೂ ಹೆಚ್ಚಿನ ಆಧಾರಗಳು ದೊರೆತ ಮೇಲೂ ತಮ್ಮ ಮೊದಲಿನ

೧೭. Ibid, Vol. IV, p. 396

ಅಭಿಪ್ರಾಯವನ್ನು ಮಾರ್ಪಡಿಸಿಕೊಳ್ಳುವ ಸಿದ್ಧತೆಯನ್ನು ತೋರಿಸದಿರುವುದು ಸಹ ದುರಾಗ್ರಹಕ್ಕಿಂತ ಬೇರೆ ಏನೂ ಅಲ್ಲ. ಹೊರಗಿನವರ ಮೊದಲನೆಯ ತೆರೆಯು ಬಂದು ಅಪ್ಪಳಿಸುತ್ತಲೇ ಚೆದುರಿ ಹೋದವರಲ್ಲಿ ಕುರುಬರೂ (Kurkh), ಮಲೆಯರೂ ಪ್ರಮುಖರಾಗಿರಬೇಕು. ಏಕೆಂದರೆ, ಇವರ ಮಾತಿನಲ್ಲಿ ದೊರೆವ ಕನ್ನಡದ ಅವಶೇಷಗಳು, ನೃಪತುಂಗನು ತನ್ನ ಹಿಂದೆ ಇದ್ದಿತೆಂದು ಹೇಳುವ 'ಪೊಲಗೆಡಿಸಿ ನುಡಿಯುತ್ತಿದ್ದ' ತೀರ ಹಳೆಕನ್ನಡದ ಅಂಶಗಳು. ಆದರೆ, ಗೊಲ್ಲರು (Golari) ಮತ್ತು ಹೊಲೆಯರು (ಮಹಾರರಲ್ಲ, ನಾಗಪುರದ ಕಡೆಗೆ ಇವರಿಗೆ ಇನ್ನೂ ಹೊಲೆಯರೆಂದೇ ಹೇಳುವರಂತೆ) ವರ್ಹಾಡ, ನಾಗಪೂರ, ಚಂದಾ, ಭಂಡಾರಗಳ ನಿವಾಸಿಗಳು. ಇವರ ಭಾಷೆಯು ೧೨ನೆಯ ಶತಮಾನದ ನಯಸೇನನ 'ಧರ್ಮಾಮೃತ'ದಲ್ಲಿ ಕಾಣಬರುವ ಸೊಗಸಾದ ತಿಳಿಗನ್ನಡಕ್ಕೆ ತೀರ ಹತ್ತಿರದಲ್ಲಿದೆ. ಅಷ್ಟೇ ಏಕೆ? ಗ್ರಿಯರಸನ್ ಸಾಹೇಬರು ಇದು ವಿಜಾಪುರ (ಪ್ರಾಚೀನ ಬಾದಾಮಿ) ನಾಡಿನ ಕನ್ನಡಕ್ಕೆ ಬಹಳ ಹೋಲುವುದೆಂದು ಅಸಂದಿಗ್ಧ ಶಬ್ದಗಳಿಂದ ಹೇಳುತ್ತಾರೆ :

The Golari-Holiya is a dialect of Canarese and is especially closely related to the form which that language assumes in Bijapur.[೧೮]

ಇವರ ಮಾತುಗಳಲ್ಲಿ ೧೦೦ಕ್ಕೆ ೯೫ ಶಬ್ದಗಳೂ ಕನ್ನಡ; ಸಂಪೂರ್ಣ ಈಗಿನ ನಮ್ಮ ನಾಡಿನದೆನ್ನಬಹುದು. ಅಂತಹ ಕನ್ನಡ, ಇವರ ಮಾತು, ಇವರ ಮಾತುಗಳ ಸಂಬಂಧವೂ ನೀಲಗಿರಿಗೆ ಇರಬೇಕೆ! ನೀಲಗಿರಿಯ ಬಡಗರ ನುಡಿಗೂ ವರ್ಹಾಟ ನಾಗಪೂರ ಪ್ರಾಂತದಲ್ಲಿ ಹುದುಗಿಕೊಂಡಿರುವ ಗೊಲ್ಲರ ಹೊಲೆಯರ ಮಾತುಗಳಿಗೂ ಸಾಮ್ಯವಿದೆಯೆಂದು ತುಲನಾತ್ಮಕ ಭಾಷಾಭ್ಯಾಸಿಗಳು ಹೇಳುತ್ತಾರೆ.

In other cases it has preserved old forms like the dialict of Badagas.[೧೯] ನೀಲಗಿರಿಯಲ್ಲಿರುವ ಬಡಗರು (ಉತ್ತರದವರು) ಅವರ ಜಾತಿವಾಚಕ ನಾಮವೆ ಹೇಳುತ್ತಿರುವಂತೆ ಉತ್ತರದಿಂದ ಅಲ್ಲಿ ಬಂದರು ಎಂಬುದು ನಿರ್ವಿವಾದ. ಹಾಗಾದರೆ ಉತ್ತರದಿಂದ ಅಂದರೆ ಎಲ್ಲಿಂದ? ಮಧ್ಯಪ್ರಾಂತ ನಾಗಪೂರಗಳ 'ಗೊಲ್ಲರು' ಮೊದಲಾದವರೆ ನೀಲಗಿರಿಯಲ್ಲಿ ನಿಂತಬಳಿಕ (ಉತ್ತರದಿಂದ ಬಂದವರೆಂದು) ಬಡಗರೆನಿಸಿಕೊಂಡಿರುವುದೆ ಹೆಚ್ಚು ಸಂಭವನೀಯವಲ್ಲವೆ? ಇವರ ಭಾಷೆಯ ಮೇಲಿಂದ ಈ ಜನಗಳು ೧೧-೧೨ನೆಯ ಶತಮಾನಗಳ ಸುಮಾರಿಗೆ ಮಧ್ಯಪ್ರಾಂತವನ್ನು ಬಿಟ್ಟು ನೀಲಗಿರಿಯ ಕಡೆಗೆ ಹೋಗಿರಬೇಕೆಂದು ಊಹಿಸಲು ಅವಕಾಶವಿದೆ.

ನಾಗಾಪೂರ ಚಂದಾ ವಿಭಾಗದಲ್ಲಿಯೆ ಕುರುಬರೆಂಬ ಹೆಸರಿನ ಇನ್ನೂ ಒಂದು ತಂಡವಿದೆ. ಇವರಿಗೆ ಅಲ್ಲಿ 'ಕುರುಂವಾರ' (Kurumvar) ಎನ್ನುವರು. 'ಕುರುಂಬ' ಶಬ್ದದ ಬಹುವಚನಾಂತ ರೂಪವಿದು. ಇದಕ್ಕೆ ಇಂಗ್ಲಿಷ್‌ನಲ್ಲಿ ಬಹುವಚನಾಂತ ಪ್ರತ್ಯಯವನ್ನು Kurumvars ಸೇರಿಸಿ ಎಂದು ಹೇಳುವುದುಂಟು! ಇಂದಿಗೂ ಈ ಜನಗಳ ಉಪಜೀವನವು ಕುರಿಗಳಿಂದಲೇ. ಇವರ ಮಾತು ನಿಶ್ಚಿತವಾಗಿಯೂ ಕನ್ನಡವೆಂದು ಗ್ರಿಯರಸನ್ನರ ಅಭಿಪ್ರಾಯ :

---

೧೮.Ibid, Vol. p. 386

೧೯.Ibid, Vol. p. 386

Kurumvars wild pastoral tribe in Chanda who speak a dialect of Kanarese....This dialect is as specimens clearly show a form of Kanarese.[೨೦]

ದಕ್ಷಿಣಕ್ಕೆ 'ಕುರುಂಬ'ರು (ಕುರುಬರಲ್ಲ) ಇರುವುದು ಮುಖ್ಯವಾಗಿ ನೀಲಗಿರಿ ಭಾಗಕ್ಕೆ ಮಾತ್ರ. ಈಗಿನ ಕರ್ನಾಟದ ಉಳಿದ ಕಡೆಯಲ್ಲಿ ಇರುವವರು ಕುರುಬರು. ಒಂದು ಕಾಲಕ್ಕೆ ಕನ್ನಡದಲ್ಲಿ ಅನುನಾಸಿಕಗಳ ಪ್ರಾಬಲ್ಯವು ಬಹಳವಾಗಿತ್ತು. ಬೆಡಂಗು, ತುರುಂಬ, ದಾಂಟು ಇತ್ಯಾದಿ ನೂರಾರು ಶಬ್ದಗಳಿವೆ. ಇವೆಲ್ಲ ಒಂದು ಕಾಲಕ್ಕೆ ನಿತ್ಯಬಿಂದುಗಳು. ೧೩ನೆಯ ಶತಮಾನದ ಕೇಶಿರಾಜನು ಶಬ್ದಮಣಿದರ್ಪಣದಲ್ಲಿ ಕೆಲವು ನಿತ್ಯಬಿಂದುಗಳೆಂದೂ ಇನ್ನು ಕೆಲವು ಅನಿತ್ಯಬಿಂದುಗಳೆಂದೂ ವಿಂಗಡಿಸಿರುವನು. ಆತನು ಹೇಳಿದ ಅನಿತ್ಯಬಿಂದುಗಳಂತೂ ಸರಿಯೇ, ನಿತ್ಯಬಿಂದುಗಳೂ ಈಗ ತಮ್ಮ ಅನುಸ್ವಾರವನ್ನು ಕಳೆದುಕೊಂಡಿವೆ. ಸೆರಂಗು, ತೇಂಕು, ದಾಂಟು ಮೊದಲಾದವುಗಳೊಡನೆ 'ಕುರುಂಬ'ವನ್ನೂ ಅವನು ನಿತ್ಯಬಿಂದುಗಳ ಪಟ್ಟಿಯಲ್ಲಿಯೇ ಸೇರಿಸಿದ್ದಾನೆ.[೨೧] ಹದಿನಾಲ್ಕನೆಯ ಶತಮಾನದ ಮುಂದೆ ಮಧ್ಯಕರ್ನಾಟಕದ ಶಬ್ದೋಚ್ಚಾರದ ರೀತಿಯಲ್ಲಿ ಹಲವು ಬದಲಾವಣೆಗಳಾದುವು. ಆಗ ಕುರುಂಬದ ಅನುಸ್ವಾರನಿತ್ಯತ್ವವು ಹೋಗಿ 'ಕುರುಬ'ವೆಂದು ಬಳಕೆಯಲ್ಲುಳಿಯಿತು. ಆದರೆ, ಮಧ್ಯಪ್ರಾಂತ (ನಾಗಾಪೂರ) ಮತ್ತು ನೀಲಗಿರಿ ಇವೆರಡೂ ತೀರ ತುತ್ತತುದಿಯ ಪ್ರದೇಶಗಳಿಗೆ ನಡುಗನ್ನಡದ ನಾಡಿನಲ್ಲಾದ ಬದಲಾವಣೆಗಳ ಗಾಳಿಯೂ ಸಹ ಸೋಂಕದೆ ಹಳೆಯ ರೂಪಗಳು ಹಾಗೇ ಉಳಿದುವು. ಆದುದರಿಂದಲೇ, ಆ ಎರಡೂ ಕುದಿನಾಡುಗಳಲ್ಲಿ ಕುರುಂಬರು ಕುರುಬರಾಗಿರದೇ ಉಳಿದುದು. ಈ ಶಬ್ದಸಾಮ್ಯವೊಂದೇ ಅಲ್ಲದೆ ಗ್ರಿಯರಸನ್ ಸಾಹೇಬರು ಕಂಡುಹಿಡಿದಿರುವ ಇನ್ನೂ ಹಲವು ಭಾಷಾ ಪ್ರಕ್ರಿಯೆಯ ಸಾಮ್ಯಗಳು ಈಗಲೂ ಉಳಿದಿರುವುವು.

ಮಧ್ಯಹಿಂದುಸ್ಥಾನದ—ಅಂದರೆ ನಿಜ ಕರ್ನಾಟಕದಲ್ಲಿದ್ದ ಕನ್ನಡರು ನಮ್ಮಲ್ಲಿ ಅಖಂಡ ಕರ್ನಾಟದ ತೀವ್ರ ಭಾವನೆ ಇಲ್ಲದ್ದರಿಂದ ಕ್ರಮವಾಗಿ ಹೇಗೆ ಹೇಳ ಹೆಸರಿಲ್ಲದಂತಾಗಿರಬಹುದೆಂಬುದು ಕೆಳಗಿನ ಅಂಕಿಗಳಿಂದ ವ್ಯಕ್ತವಾಗುತ್ತದೆ:

ಕುರುಬರು (ಚಂದಾದಲ್ಲಿ)

| | | |
|---|---|---|
| ಕ್ರಿ.ಶ. | ೧೮೯೧ | ೧೯೦೧ |
| | ೨೩೨೦ | ೨೧೫೧ |

ಹೊಲೆಯರು ಮತ್ತು ಗೊಲ್ಲರು

(ಶಿವುಣಿ, ನಾಗಪುರ, ಭಂಡಾರಾ ಬಾಲಘಟ್ಟಗಳಲ್ಲಿ)

| | |
|---|---|
| ೧೮೯೧ | ೧೯೦೩ |
| ೩೬೧೪ | ೩೪೬೪ |

೨೦. Ibid, Vol. p. 396

೨೧. ಶಬ್ದಮಣಿದರ್ಪಣಂ ಕರ್ನಾಟಕ ಸಾಹಿತ್ಯ ಪರಿಷತ್ತು ಪು. ೨೯

## ಹಳಬರು (ಹಳಪೈಕರು)

ವರ್‍ಹಾಡ-ಮಧ್ಯಪ್ರಾಂತಗಳಲ್ಲಿ ಒಂದು ಲಕ್ಷಕ್ಕೆ ಕಡಮೆ ಇಲ್ಲದಿರುವಷ್ಟು ಹಳಬರಿರಬೇಕಾದರೆ ಜನರು ತಮ್ಮ ಮೂಲಭಾಷೆಯನ್ನು ಕಳೆದುಕೊಂಡಿದ್ದರೂ ಹಳೆಯ ಹೆಸರನ್ನಾದರೂ ಕಾದು ಇಟ್ಟುಕೊಂಡಿರುವುದು, ಕನ್ನಡದ ದುರ್ದೈವದೊಳಗೆ ಸ್ವಲ್ಪ ಸುದೈವ. ಕುರುಬರು, ಕುರುಂಬರು ಪಟ್ಟಣಿಗರಲ್ಲ. ಹೊತ್ತು ಬಂದಂತೆ ಕೊಡೆಹಿಡಿಯುವುದನ್ನೂ ಗೆದ್ದೆತ್ತಿನ ಬಾಲಹಿಡಿದು ತಾವೂ ವಿಜಯಿಗಳೆಂದು ಮೆರೆವುದನ್ನೂ ಇವರು ಅರಿಯರು. ತಮ್ಮ ಕನ್ನಡಮನೆಮಾತನ್ನು ಇಂದಿಗೂ ಬಿಟ್ಟಿಲ್ಲ. ಬ್ರಾಹ್ಮಣರೆ ಮೊದಲಾದ ಸುಧಾರಿಸಿದ ವರ್ಗದವರ ಮಾತೆ ಬೇರೆ. ಕಾಲಕ್ಕನುಸರಿಸಿ ವೇಷ ಮಾಡುವುದರಲ್ಲಿ ಇವರು ಗಟ್ಟಿಗರು. ತಾವು ಮೊದಲು ಹಾಗೆ ಇದ್ದವೆಂದು ಒಪ್ಪಲಿಕ್ಕೂ ಇವರು ಸಿದ್ಧರಿರುವುದಿಲ್ಲ. ಹಳಬರು (ಹಳಪೈಕರು) ಆರ್ಯೇತರ ಜನಾಂಗದ ವರ್ಗಕ್ಕೆ ಸೇರಿದವರು—'ದ್ರಾವಿಡ'[೨೨] ? (ಕನ್ನಡ)ರು ಎಂದು ಸಂಶೋಧಕರು ಅಭಿಪ್ರಾಯಪಟ್ಟರೂ ಅವರಿಗೆ (ಹಳಬರಿಗೆ) ಅದು ಸಮ್ಮತವಿಲ್ಲವಂತೆ! ರಜಪೂತಕುಲಕ್ಕೆ ಸೂರ್ಯಚಂದ್ರವಂಶಕ್ಕೆ ಎಲ್ಲಿಯೊ ಸಂಬಂಧವನ್ನು ಹಚ್ಚಿಕೊಳ್ಳುವ ಪ್ರೀತಿಯಿವರಿಗೆ. ಇಂತಹುದೆ ಇನ್ನೊಂದು ಸಣ್ಣ ದೃಷ್ಟಾಂತ. 'ಹಳಬೇ' 'ಕಾನಡೆ' ಎಂಬ ಮನೆತನದ ಹೆಸರಿನ ಬ್ರಾಹ್ಮಣರುಂಟು ಮಹಾರಾಷ್ಟ್ರದಲ್ಲಿ. ಆದರೆ, ಇವರಿಗೆ ಈ ಅಡ್ಡಹೆಸರಿನಿಂದ ಆನಂದ ಅಭಿಮಾನಗಳುಂಟಾಗದೆ ಅಪಮಾನವೆನಿಸುತ್ತಿದ್ದುದು ಮಾತ್ರ ಎಷ್ಟೋ ಕಡೆಗೆ ಅನುಭವಕ್ಕೆ ಬರುತ್ತಲಿದೆ! ಇಂತಹರ ಮನೆಯಲ್ಲಿ—ನಾಡಿನಲ್ಲಿ ಕನ್ನಡವು ಬಾಳಿ ಬದುಕುವ ಆಸೆಯೆಲ್ಲಿ?

ಮಧ್ಯಪ್ರಾಂತದ ಕಣಕೇರ, ಬಸ್ತರಾ ಸಂಸ್ಥಾನಗಳಲ್ಲಿ ಚೆನ್ನಾಗಿ ಪರಿಶೋಧಿಸಿದರೆ ಪ್ರಾಚೀನ ಕನ್ನಡದ ಕುರುಹುಗಳು ತುಂಬಾ ಸಿಕ್ಕುವಂತಿವೆಯಂತೆ. ಹಳಬರ ನೆಲೆವೀಡು ಇದು; ಚಂದಾ, ರಾಯಪೂರ ಭಂಡಾರಗಳಲ್ಲಿಯೂ ಇವರು ಕಡಿಮೆ ಇಲ್ಲ. ಮೂಲಭಾಷೆಯೆ ಬೇರೆ ಆಗಿದ್ದ ಇವರು ಆಡುವ ಮರ್‍ಹಾಟಿಯಾದರೂ ಹೇಗೆ ಪರಿಶುದ್ಧವಾಗಿರಬೇಕು? ಮರ್‍ಹಾಟಿಯಲ್ಲಿ 'ಹಳಬೀ ಭಾಷಾ' ಎಂಬ ಹಲವು ವೈಚಿತ್ರ್ಯಗಳುಳ್ಳ ಒಂದು ಮಿಶ್ರನುಡಿಯೆ ಇದೆ. ಈ ಜಾತಿಯ ದೈವದವರೆ ಇವರ ಜಗಳತೋಟಿಗಳನ್ನು ತೀರಿಸುವವರು. ಪಂಚಾಯುತಿಯ ಹಿರಿಯನ ಹೆಸರು ಕೂರ್ಸೆ; ಕೋಟವಾರ, (ಕೊಮಾರ ಪೈಕರು?) ನಾಯಿಕ, ಚನ್ನಪ್ಪಾ ಎಂಬ ಒಳಬಣಗಳೊಳಗಿಂದ ಕೂರ್ಸೆಯನ್ನು ಆಯ್ದುಕೊಳ್ಳುವರು;[೨೩] ಕೂರ್ಸೆ ಎಂದರೆ ಅಗ್ರಗಣ್ಯ (ಕೂರ್-ತುದಿ ಗ್ರ).

ಹಳಬರು ಹೊರಗಣಿಂದ ಮಧ್ಯಪ್ರಾಂತಕ್ಕೆ ಹೋಗಿ ನೆಲೆಸಿರಬಹುದೆ? ಇವರು ಗುಳೆ ಕಟ್ಟಿಕೊಂಡು ತಿರುಗುವ ತಂಡದವರಲ್ಲವೇ ಅಲ್ಲ. ಹಾಗಾದರೆ ಹಳಬರು ಅಲ್ಲಿಯ ಹಳೆಯ ನಿವಾಸಿಗಳೆಂದು ಸಮ್ಮತಿಸಿದರೆ, ಅದು ಹಳೆಯ (ಕನ್ನಡ) ನಾಡು-ಪ್ರಾಚೀನ ಕರ್ಣಾಟ-ನಿಜಕರ್ಣಾಟವೆಂದು ಪರ್ಯಾಯದಿಂದ ಒಪ್ಪಿಕೊಂಡಂತೆಯೇ ಹಳಬರು ಮಧ್ಯಪ್ರಾಂತದ ಹಳೆಪೈಕಿ ಜನರು; ಮೂಲ ನಿವಾಸಿಗಳು ಎಂದು ಇನ್ನೂ ಒಂದು ಬಗೆಯಿಂದಲೂ ಹೇಳಬಹುದು. ಬನವಾಸಿ-ತುಳುನಾಡುಗಳಲ್ಲಿ ಹೊರಗಿನಿಂದ ಬಂದು

---

೨೨. *Kanara Gazetteer.* Vol. I, p. 285

೨೩. ಮಹಾರಾಷ್ಟ್ರ ಜ್ಞಾನಕೋಶ 'ಹಳಬ' ಶಬ್ದವನ್ನು ನೋಡಿ

ನೆಲೆಸಿದವರೆಂದು ಖ್ಯಾತಿಯಿರುವ ಬೇರೆ ಬೇರೆ ಗುಂಪುಗಳಲ್ಲಿ ಹಳಬರ ತಂಡವೂ ಒಂದು. ಇವರಿಗೆ ಇಲ್ಲಿ ಸಾಮಾನ್ಯವಾಗಿ ಹಳ ಪೈಕರು ಎಂಬ ಹೆಸರು. ಇವರಲ್ಲಿ ಕೊಮಾರ (ಕೋಟವಾರವೆಂದು ಮಧ್ಯಪ್ರಾಂತದ ಹಳಬರಲ್ಲಿ) ಒಳಬಣವಿದೆ. ಈ ಜನಗಳು 'ತಾವು ಕಲಬುರ್ಗಿಯತ್ತಣಿಂದ ಬಂದುದಾಗಿ' ಹೇಳುವರು.[೨೪] ಮಧ್ಯಪ್ರಾಂತದ ಹಳಬರೆ, ರಾಷ್ಟ್ರಕೂಟರು ಮತ್ತು ಚಾಲುಕ್ಯರ ಕಾಲಕ್ಕೆ ಕಲಬುರ್ಗಿ ನಾಡಿನಲ್ಲಿ ರಾಜಾಶ್ರಯವನ್ನು ಹೊಂದಿರಬೇಕು. ಆ ರಾಜ್ಯಗಳು ಹಾಳಾದ ಬಳಿಕ ಇವರು ಬನವಾಸಿ ತುಳುನಾಡಿಗೆ ಬಂದು ನಿಂತಿರಲಿಕ್ಕೆ ಸಾಕು. ಹಳಬರು ಬಹಳ ಶೂರರು. ಜೀವದ ಹಂಗು ತೊರೆದು ಕಾದುವ ಕಡುಗಲಿಗಳು. ಕರ್ಣಾಟ ಬಲದಲ್ಲಿ ಹಳಬರಿಗೆ ತುಂಬಾ ಮಹತ್ವವಿರಬೇಕೆಂದು ತೋರುತ್ತದೆ. ಇವರಿಗೆ ಈಗ ಕರ್ಣಾಟದ ಹೆಸರಿನಲ್ಲಿ ತಮ್ಮ ತೋಳ್ಬಲವನ್ನು ಮೆರೆಯಿಸುವುದಕ್ಕೆ ಸಹ ಅವಕಾಶವಿಲ್ಲ. ದಂಡಿನಲ್ಲಿ 'ಮರಾಠಾ ಇನ್‌ಫಂಟ್ರಿ' ಎಂಬ ವಿಭಾಗಕ್ಕೆ ಸೇರಿಸಲ್ಪಡುವರು. ಬ್ರಿಟಿಷರಿಗೆ ಹಳಬರು ತಮ್ಮ ಕೈಗುಣ ತೋರಿಸದೆ ಬಿಟ್ಟಿಲ್ಲ. ಬಂಡುಮಾಡಿ ತನ್ನ ಪರಾಕ್ರಮದಿಂದ ವಿಖ್ಯಾತನಾದ ಬೆಳಗಾಂವ ಜಿಲ್ಹೆಯ ಸಂಗೊಳ್ಳಿ ರಾಯಣ್ಣನು ಹಳಬನು. ಕಾರವಾರ ಗ್ಯಾಝಿಟಿಯರನಲ್ಲಿಯೂ ಹಳಬರು (ಕುಮಾರಪೈಕರು) ಬ್ರಿಟಿಷರಿಗೆ ತುಂಬಾ ಪೀಡಿಸಿದುದರ ಉಲ್ಲೇಖವಿದೆ. ಇದೇ ಸ್ವಭಾವವೆ ಮಧ್ಯಪ್ರಾಂತದ ಹಳಬರದು; ಹಳಪೈಕರು. ಈಗ ವಿಚಿತ್ರ (currupt)ವೆನಿಸುವ ಒಂದು ಬಗೆಯ (ಹಳೆ) ಕನ್ನಡವನ್ನೇ ಮಾತಾಡುವುದಾಗಿ ಅದೆ ಗ್ಯಾಝಿಟಿಯರು ಹೇಳುತ್ತದೆ. ಆ 'ಹಲಗೆಡೆಸಿ' ನುಡಿವ ಹಳಮಾತು[೨೫] ನರ್ಮದಾ ತೀರದ್ದೆ ಇರಬೇಕೆಂದು ಈ ಮೊದಲೆ ಬಂದ ಮಲೆಯರು, ಗೊಲ್ಲರು ಮೊದಲಾದವರ ಉದಾಹರಣಗಳಿಂದ ಸಹಜವಾಗಿ ಊಹಿಸಬಹುದಾಗಿದೆ.

## ಕನ್ನಡರು (Kannadas)

ಈವರೆಗೆ ವಿವರಿಸಿದ ತಂಡಗಳ ಹೆಸರು ಮೊದಲು ಹೇಳಿ ಬಳಿಕ ಇವು ಕನ್ನಡಕ್ಕೆ ಸಂಬಂಧಿಸಿದವು ಎಂದು ಇನ್ನೊಂದು ವಾಕ್ಯದಲ್ಲಿ ಸೂಚಿಸಬೇಕಾಗುತ್ತಿತ್ತು. ಆದರೆ, ಈ ತಂಡದ ಹೆಸರೆ ಎಲ್ಲವನ್ನೂ ವ್ಯಕ್ತಗೊಳಿಸುತ್ತಿರುವುದರಿಂದ ಇಲ್ಲಿ ಎರಡು ಮಾತಿನ ಆವಶ್ಯಕತೆಯೆ ಇಲ್ಲ. ಹಳಬರು ವರ್‍ಹಾಟ ಮಧ್ಯಪ್ರಾಂತದವರಾದರೆ ಕನ್ನಡರು ಖಾನದೇಶ-ನಾಸಿಕಗಳ ನಿವಾಸಿಗಳು. ಕನ್ನಡರು ಇಲ್ಲಿ ಎಲ್ಲಿಂದ ಬರಬೇಕು? ಎಂಬ ಸಂಶಯದಿಂದ ಅಲ್ಲಿಯ ಗ್ಯಾಝಿಟೀಯರುಗಳ ಲೇಖಕರು ಇವರಿಗೆ ಹೊರಗಿನಿಂದ ಬಂದವರು (Immigrants) ಎನ್ನುತ್ತಾರೆ. ಆದರೆ, ಇದೇ ಬಗೆಯ 'ಕನ್ನಡ' ಜಾತಿಯ ಮೂಲ ನಿವಾಸಿಗಳೆಲ್ಲಿ ಅಲ್ಲಿಂದ ಇಲ್ಲಿಗೆ ಎಂದು ಮತ್ತು ಏಕೆ ಬಂದರು? ಈ ಸಂಗತಿಗಳ ವಿವೇಚನೆಯನ್ನೆ ಅಲ್ಲಿ ಮಾಡಿಲ್ಲ! ಈಗಿನ ಕರ್ಣಾಟದಲ್ಲಂತೂ ಈ ಹೆಸರಿನ ತಂಡಗಳಿಲ್ಲ. ಆದ್ದರಿಂದ, ಮೂಲಕರ್ಣಾಟದ ಜನಾಂಗಗಳಲ್ಲಿ ಕುರುಬ ಮತ್ತು ಮಲೆಯರಂತೆ ಹಲವು ತಂಡಗಳು ದಿಕ್ಕೆಟ್ಟು ಹೋದುವು. ಹಲವು ಮರ್‍ಹಾಟರಲ್ಲಿ ಐಕ್ಯವಾದುವು. ಇನ್ನು ಕೆಲವು ಹಳಬರೂ ಕನ್ನಡರಂತಹ ತಂಡದವರು ಎಂತೆಂತೊ ತಮ್ಮ ಜಾತಿನಾಮವನ್ನಷ್ಟು ಕಾಯ್ದುಕೊಂಡು ಅಲ್ಲಿ ಇನ್ನೂ ಉಳಿದಿರುವರೆಂದೆ ಹೇಳಬೇಕಾಗುತ್ತದೆ. ಮರ್‍ಹಾಟ ಬಾಯಿಗೆ, ಕನ್ನಡದಲ್ಲಿ ದ್ವಿತೀಯಾಕ್ಷರವು ದ್ವಿತ್ವವಾಗಿರುವ ಶಬ್ದಗಳನ್ನು ಸರಿಯಾಗಿ ಉಚ್ಚರಿಸಲಿಕ್ಕಾಗುವು

೨೪. *Kanara Gazetteer*, I. p. 289

೨೫. "Both men and women talk konkani but their home tongue is corrupt? (or old, Kanarease)" *Kanara Gazetteer*, Vol. I. p. 289

ದಿಲ್ಲ. ಕಕ್ಕ-ಕಾಕಾ; ಅಪ್ಪ (ಅವ್ವೆ)-ಆವಾ ಆಈ; (ಮರ) ಹಟ್ಟ-ಮರ ಹಾಟಿ ಇತ್ಯಾದಿಗಳ ಇದಕ್ಕೆ ಸಾಕ್ಷಿ. ಅದರಂತೆ ಕನ್ನಡವನ್ನು ಕಾನಡ-ಕಾನಡಿ ಎಂದು ಹೇಳುವರು. ಖಾನದೇಶ (ನಾಸೀಕ)ದಲ್ಲಿರುವ ಕಾನಡರು ಕನ್ನಡರೆಂಬುದು ನಿಸ್ಸಂಶಯ.

ಈ ಜನಾಂಗವನ್ನು ಕುರಿತು ಖಾನದೇಶ, ನಾಸೀಕ ಗ್ಯಾಝೀಟಿಯರುಗಳಲ್ಲಿ ಬಂದ ಅಲ್ಪವರ್ಣನೆಯಿಂದ ಸಹ ಕರ್ನಾಟಕ ಇತಿಹಾಸ, ಶಿಲಾಶಾಸನ ಪರಿಚಯವಿದ್ದವರಿಗೆ ಕ್ರಿ.ಶ. ೪-೬ನೆಯ ಶತಮಾನದ ನಮ್ಮ ನಾಡಿನ ಚಿತ್ರವು ಕಣ್ಣೆದುರಿಗೆ ಕಟ್ಟುತ್ತದೆ. ಕರ್ನಾಟದಲ್ಲೆಲ್ಲ ಸಾಮಾನ್ಯವಾಗಿ ಹಳೆಯ ಊರೂರಿಗೂ ದೊರೆವ 'ತುರುಗಾಳಗದೊಳ್ ಸತ್ತು ಸಗ್ಗಮಂ ಏರಿದಾನ್' ಎಂದು ಸಚಿತ್ರವಾಗಿ ನಿಲ್ಲಿಸಿದ ವೀರಗಲ್ಲುಗಳೂ (ಆ ವೀರರ) ಮಹಾಸತಿಯರ ಸ್ಮಾರಕದ ಕಲ್ಲುಗಳೂ ಈ ಕನ್ನಡದ ವರ್ಣನೆಯೊಂದಿಗೆ ನೆನಪಿಗೆ ಬರುತ್ತವೆ. ಇಂದಿಗೂ ಖಾನದೇಶದ ಈ ಕನ್ನಡರ ಉಪಜೀವನದ ಮುಖ್ಯ ಸಾಧನವು ಆಕಳ ಹಿಂಡು! ತುರುಕರುಗಳೆ ಇವರ ಪಂಚಪ್ರಾಣ. ಈ ಜನರು ಉಳಿದ ಅಲೆದಾಡುವ ತಂಡಗಳಿಗಿಂತಲೂ ಸುಧಾರಿಸಿದವರೂ ಮಾನಮರ್ಯಾದೆಯುಳ್ಳವರೂ ಆಗಿರುವರೆಂದು ಗ್ಯಾಝಿಟಿಯರಿನ ಸಾಹೇಬರು ವರ್ಣಿಸಿದ್ದಾರೆ. 'ಕನ್ನಡ'ರು ಒಂದು ಕಾಲಕ್ಕೆ ಸಂಸ್ಕಾರವಂತರಾಗಿದ್ದುದರ, ಸುಸ್ಥಿತಿಯಲ್ಲಿದ್ದುದರ ಕುರುಹಲ್ಲವೆ ಇದು? ಖಾನದೇಶದ ಗ್ಯಾಝೀಟಿಯರಿನಲ್ಲಿ ಇವರನ್ನು ಕುರಿತು ಬರೆದಿರುವುದೇನೆಂದರೆ:

Kannadas are a peculiar race of drovers who some times visit the western forests of Khandesh, though their proper pastures are in the north-west corner of Deccan. They appear to be descended from Dravidian immigrants but (to our misfortune-author) no tradition to the effect and special language. More civilized and respectable than most wandering herd's-men they differ little from Maratha-husbandman, and in parts of Nasik they have taken entirely to agriculture. 'They have a peculiar breed of black and white cattle. hatkar (ಹಟ್ಟಿಕಾರ) which though not large are much prized for their strength and spirit. They worship Krishna, the divine herd'sman and take good care of their cattle. (p. 106)

ಖಾನದೇಶದಲ್ಲಿ 'ಗೌಳಿ-ರಾಜರು' ಆಳಿದರೆಂದು ಊರೂರಿಗೂ ಪರಂಪರಾಗತವಾದ ಕಥೆಗಳುಂಟು! ಅವರು ಈ ತುರುಗಾಹಿಗಳು-ಗೋವಳರು ಆದ ಕನ್ನಡರೆ ಆಗಿರಲಿಕ್ಕಿಲ್ಲವೆಂದು ಹೇಗೆ ಹೇಳುವುದು? ಮರಾಠರು ಮಿಶ್ರದ್ರಾವಿಡರೆಂದು (ಇಲ್ಲಿ ದ್ರಾವಿಡ ಶಬ್ದಕ್ಕೆ ಕನ್ನಡವೆಂದೇ ಅರ್ಥವೆಂದು ಸಿದ್ಧವಾಗಿದೆ) ಶ್ರೀ ಜಾಧವರಾಯರೆ ಹೇಳಿದುದು ಹಿಂದೆ ಬಂದಿದೆ. ಗ್ಯಾಝಿಟೀಯರಿನ ಲೇಖಕ ಮಹಾಶಯರು ಕನ್ನಡರಿಗೂ ಮರಾಠರಿಗೂ ಬಹಳ ಹೋಲಿಕೆಯಿದೆ ಎನ್ನುತ್ತಾರೆ. ಆದುದರಿಂದ, ಗೋದಾವರಿ ಉತ್ತರ ತೀರದಲ್ಲಿ ಒಂದು ಕಾಲಕ್ಕೆ ಪ್ರಬಲರಾಗಿದ್ದ ಕನ್ನಡರ ಮಿಶ್ರಸಂತತಿಯವರೆ ಮರ್ಹಾಟಿಗಳು, ಎಂದು ಹೇಳಲು ಏನು ಆತಂಕ? ಮರ್ಹಾಟಿ ಭಾಷೆಯಲ್ಲಿ ಕನ್ನಡದ 'ತುಪ್ಪ' ಶಬ್ದವು ಹೇಗೆ ಸೇರಿತು ಎಂಬುದನ್ನು ವಿವೇಚಿಸುವಾಗ ಶ್ರೀ ಚಿಂತಾಮಣರಾವ ವೃದ್ಧರು ಒಂದೆಡೆಗೆ ಬರೆದಿರುವುದು ವಿಚಾರಣೀಯವಾಗಿದೆ.

ವರ್‍ಹಾಟದ ಕಡೆಗೆ ಕನ್ನಡ ಗವಳಿಗಳು ಬರುತ್ತಿದ್ದರು. ಅವರಿಂದ ಈ ಶಬ್ದವು ಬಂದಿತು ಎಂದು ಅವರೂ ಒಪ್ಪುತ್ತಾರೆ. ಶ್ರೀ ವೈದ್ಯರಂತಹರು ಸಹ ವರ್‍ಹಾಟದ ಕಡೆಗೆ ಕನ್ನಡಗವಳಿಗಳು ಇದ್ದರೆಂಬುದನ್ನು ಅಲ್ಲಗಳೆಯಲಾರರು.

ನರ್ಮದಾ ತೀರದಲ್ಲಿ ಇದ್ದ ಕನ್ನಡಗವಳಿಗಳ ವರ್ಚಸ್ಸು ಅಷ್ಟು ಇಷ್ಟಲ್ಲ. ಗುಜರಾತ, ಮಾಳವಗಳಲ್ಲಿ ಹಬ್ಬಿ ಉತ್ತರಕ್ಕೆ ಈ ತಂಡಗಳು ಗಂಗಾ-ಯಮುನಾ ತೀರದಲ್ಲಿಯೂ ನೆಲಸಿದ್ದುವೆಂದು ವಿಮರ್ಶಿಸಿ ನೋಡಿದ ಹಾಗೆ ಹೆಚ್ಚು ಹೆಚ್ಚು ಮನವರಿಕೆಯಾಗುತ್ತಿದೆ. ಹಾಲಿನ ಪದಾರ್ಥಗಳನ್ನು ಮಾಡಿ ಮಾರುವ ವರ್ತಕನಿಗೆ ಉತ್ತರ ಹಿಂದುಸ್ಥಾನಖಾನದೇಶ ವರ್‍ಹಾಟಗಳಲ್ಲೆಲ್ಲ ಹಾಲಯ್ಯ (ಹಾಲುವಾಯಿ) ಎಂಬ ಹೆಸರಿದೆ! ಕನ್ನಡ ಗೌಳಿಗಳ ಒಂದು ಕಾಲದ ಕೀರ್ತಿಧ್ವಜದಂತೆ ಇರುವುದು ಗವಳಿಏರಿ-ಗ್ವಾಲೇರಿ ಇಂದಿಗೂ ಅದು ತನ್ನ ಹಳೆಯ ಕಥೆಯನ್ನು, ಕೇಳಬೇಕೆಂದಿಚ್ಛೆಯಿದ್ದವರಿಗೆ, ಹೇಳಲು ಸಿದ್ಧವಿದೆ. ಮರ್‍ಹಾಟರು 'ಗವಳಿಗಿರಿ'-ಗ್ವಾಲೇರಿ ಎಂದು ಅದರ ವ್ಯುತ್ಪತ್ತಿಯನ್ನು ಹೇಳುವರು. ಆದರೆ, ಗುಡ್ಡಕ್ಕೆ 'ಏರಿ' ಎಂದು ಒಂದು ಕಾಲಕ್ಕೆ ಕನ್ನಡದಲ್ಲಿ ಅರ್ಥವಿದ್ದುದು ಮಹಾರಾಷ್ಟ್ರದಲ್ಲಿರುವ ಕಾನ್ಹೇರಿ-ಕೃಷ್ಣಗಿರಿ; ಅಂಜನೇರಿ (ನಾಸಿಕದ ಹತ್ತರ); ಶಿವನೇರಿ (ಇಲ್ಲಿ ಶಿವನ+ಏರಿದನಂದಿರುವುದರಿಂದ ಕನ್ನಡ ಷಷ್ಠೀ ವಿಭಕ್ತಿಯ ಕೈಯೊಳಗಿಂದ ಯಾರಿಗೂ ತಪ್ಪಿಸಿಕೊಳ್ಳುವುದು ಸಾಧ್ಯವಿಲ್ಲ). ಇವುಗಳಲ್ಲೆಲ್ಲ ಗೋಚರವಾಗುವ ಕನ್ನಡ 'ಏರಿ'ಯೆ ಗ್ವಾಲೇರಿಯಲ್ಲಿಯೂ ಉಂಟೆಂದು ಹೇಳುವುದೂ ತಪ್ಪಾದೀತೆ? ಉತ್ತರಕ್ಕೆ ಮಥುರೆಯ ವರೆಗೆ ಪ್ರಖ್ಯಾತರಾದ ಕನ್ನಡಗವಳಿಗಳ ಮೂಲಸ್ಥಾನವು ಖಾನದೇಶ ನಾಸಿಕಗಳಿಂದ ಹೊರಗೆ ದೂರ ಎಲ್ಲಿಯೂ ಇರಲಾರದು. ಗಂಗಾ ಯಮುನೆಗಳ ವರೆಗೆ ತಮ್ಮ ವರ್ಚಸ್ಸನ್ನು ಇಟ್ಟುಕೊಳ್ಳಬೇಕಾದರೆ ಅವರ ಮೂಲಸ್ಥಾನವು ನೀಲಗಿರಿ ಅಥವಾ ಅದರ ನೆರೆಹೊರೆಯ ಅಷ್ಟು ದೂರದ ಯಾವ ಸೀಮೆಯಲ್ಲಿಯೂ ಇರುವುದು ಅಶಕ್ಯ. ಈ ತರ್ಕಪ್ರಮಾಣಕ್ಕಿಂತಲೂ ನಾಸಿಕದ ಹತ್ತಿರ ಇರುವ ಪ್ರಖ್ಯಾತ 'ಗೋವರ್ಧನ ಗಿರಿಗಳು' ಇದನ್ನು ಇನ್ನಿಷ್ಟು ಪುಷ್ಟೀಕರಿಸುತ್ತವೆ. ೧೫೦೦-೧೮೦೦ ವರುಷಗಳ ಹಿಂದೆ ಈ ಗೋವರ್ಧನ ಗಿರಿಗಳಿಗೆ ಇದ್ದ ಮಹತ್ವವು ಅಲ್ಲಿರುವ ಸಾತವಾಹನರ ಕಾಲದ ಗವಿಗಳಿಂದಲೂ ಶಿಲಾಶಾಸನಗಳಿಂದಲೂ ಪ್ರತ್ಯಕ್ಷ ಆ ಪರ್ವತದ 'ಗೋವಧನ-ಗೋವರ್ಧನ' ಎಂಬ ಹೆಸರಿನಿಂದಲೂ ಚೆನ್ನಾಗಿ ವ್ಯಕ್ತವಾಗುತ್ತದೆ. ಈ ಗವಿಗಳಲ್ಲಿ ಕೊರೆದಿರುವ ಚಿತ್ರಗಳಲ್ಲಿ ಅವು, ಎತ್ತುಗಳಿಲ್ಲದ ಸ್ಥಳಗಳೆ ಇಲ್ಲವೆನ್ನಬಹುದು. ಹಿಂದಕ್ಕೆ ಈ ಗುಡ್ಡಗಳು ಕನ್ನಡ ಗೌಳಿಗಳ 'ಗವಾಸ್ಪದಗಳು'- ತುರುಮಂದೆಗಳು ಆಗಿದ್ದುವೆಂದು ಸಹಜವಾಗಿ ಹೇಳಬಹುದು. ಇದೇ ವಿಭಾಗದಲ್ಲಿರುವ ಇಗತಪುರಿ, ದಿಂಡೋರಿ ಮೊದಲಾದ ತಾಲೂಕುಗಳಲ್ಲಿ, ತುಂಬಾ ಕನ್ನಡರು ಹಳ್ಳಿಹಳ್ಳಿಗೂ ನೆಲಸಿದ್ದಾರೆ; ಸುಸ್ಥಿತಿಯಲ್ಲಿಯೂ ಇರುವರಂತೆ. ಇಂದಿಗೂ ಮೂರು-ನಾಲ್ಕು ಮನೆಯ ಕನ್ನಡರೂ ಕೂಡಿ ಐದ್ಯೆದನೂರು ಆಕಳು ಎತ್ತುಗಳನ್ನೂ ಐದ್ಯೆದನೂರು ಆಡುಕುರಿಗಳನ್ನೂ ಸಾಕಿಕೊಂಡಿರುವರು' ಎಂದು ನಾಸಿಕ ಗ್ಯಾಝಿಟಿಯರು ಹೇಳುತ್ತಿದೆ :[೨೬]

The Cattle breeding tribes the Kanadas...who formed a fair proportion of the people......mainly depended on their herds and flock......the Kanadas were remarkbly well off. Some canada hamlets

೨೬. *Nasik Gazetteer*, p. 231

with not more than three or four houses had as many as 500 cattle and 500 goats.

ಕನ್ನಡದಲ್ಲಿರುವ ಗೋವುಗಳು ಎಂಬರ್ಥದ 'ತುರು' ಶಬ್ದವು ಸಮೂಹಾರ್ಥಕ. ಆಕಳು, ಬಹುವಚನಾಂತವಿದ್ದರೂ ಏಕವಚನದಂತೆ ಉಪಯೋಗಿಸಲ್ಪಡುವುದು. ಇವೆರಡೂ ಶಬ್ದಗಳು ಸಹ ಕನ್ನಡಗು ಒಂದು ಅವು ಎಂದೂ ಸಾಕುತ್ತಿದ್ದಿಲ್ಲ. ಇವರಲ್ಲಿರುವುದು ತುರು (ಹಿಂಡು)ಗಳು ಆಕಳು; ಎಂದು ಈ ಶಬ್ದಗಳು ಸಹ ತಮ್ಮ ಪ್ರಾಚೀನ ಕಥೆಯನ್ನು ಹೇಳುತ್ತಲಿವೆ. ಗೌತಮಿನದಿ (ಗೋದಾವರಿಯ ಇನ್ನೊಂದು ಹೆಸರು) ಗೋವರ್ಧನ ಪರ್ವತ ಹತ್ತರದಲ್ಲಿ; 'ಕನ್ನಡರು' ಎಂದು ಈಗಲೂ ದೇಶವಾಚಕ ಹೆಸರನ್ನು ಧರಿಸಿರುವ ಗೌಳಿಗಳು ಅದರ ನೆರೆಹೊರೆಯಲ್ಲಿ! ಅಲ್ಲದೆ, ಈ ನಾಡಿಗೆ ಗೋಪರಾಷ್ಟ್ರವೆಂದೂ ಹೆಸರಿದ್ದಿತ್ತಂತೆ! ಇದೆಲ್ಲವು ಕಾಕತಾಳನ್ಯಾಯವೆ? ಈ ನಾಲ್ಕು ಮಾತುಗಳನ್ನು ಒಮ್ಮೆಲೆ ಸಮಾಲೋಚಿಸಿದರೆ 'ಇದುವೇ ಕನ್ನಡ ನಾಡು' 'ಇದೆ ಇಕೊ ಕನ್ನಡತಾಯ ತವರ್ಮನೆ' ಎಂದು ಹಿಗ್ಗಿ ಹಿಡಿಸಲಾರದೆ ಉದ್ಘೋಷಿಸುವ ಹುಮ್ಮಸು ಉಂಟಾದರೆ ಸೋಜಿಗವೇನು? ನಮ್ಮಲ್ಲಿರುವಂತೆ 'ತುರುವಂ ಕೊಂಡುಯ್ಯೆ ಬಿರುಮಗಾವುಂಡಂ ಹಗೆಯಂತೆ ತೆರಳ್ಚಿ ಸಗ್ಗಮಾನ್ ಏರಿದೋನ್' ಎಂದು ಕನ್ನಡ ಗೋವಳರ ಧೈರ್ಯ ಶೌರ್ಯಗಳನ್ನು ಯುಗಯುಗಕ್ಕೂ ಸಾರಿ ಹೇಳುವುದಕ್ಕೆ (ಕಿವಿಯಿದ್ದು ಕೇಳುವವರಿಗೆ, ಕಣ್ಣಿದ್ದು ನೋಡುವ ಇಚ್ಛೆಯಿದ್ದವರಿಗೆ ಮಾತ್ರ) ಚಳಿಮಳೆಗಳನ್ನು ಲೆಕ್ಕಿಸದೆ ನಿಂತಿರುವ ವೀರಗಲ್ಲುಗಳಿಗೆ ಈ ನಾಡಿನಲ್ಲಿಯೂ ಕೊರತೆಯಿಲ್ಲ. ಆದರೆ, ಮರ್ಹಾಟಗಳಿಗೆ ಅದರ ಬೆಲೆ ಗೊತ್ತಿಲ್ಲದಿದ್ದರಿಂದ ಮೂಲೆಗುಂಪಾಗುತ್ತ ನಡೆದಿವೆ. ಹೀಗಿದ್ದರೂ ಪರಂಪರಾಗತವಾದ ವೀರಪೂಜೆಯ ಸಾಂಪ್ರದಾಯದ ಮೂಲಕ ಆ ನಾಡಿನ ಅಜ್ಞಾನಿಗಳಲ್ಲಿ ಅವಕ್ಕೆ ಇನ್ನೂ ಅಲ್ಪಸ್ವಲ್ಪ ಮಹತ್ವವು ಇಲ್ಲದಿಲ್ಲ.

ನಾಸಿಕ ಜಿಲ್ಹೆಯ ಶಿವರಗ್ರಾಮದ ಹತ್ತರ ಇವುಗಳನ್ನು ಯಾರೂ ದುರ್ಲಕ್ಷಿಸದಷ್ಟು ವಿಶೇಷವಾಗಿಯಂತೆ[೨೭] 'Shivar has a remarkable group of memorial stones' ಇದರ ಮುಂದೆ ಆದೇ ಸಾಹೇಬರು ಬರೆದಿರುವ ಈ ಕಲ್ಲುಗಳ ವರ್ಣನೆಯು ಓದತಕ್ಕುದಾಗಿದೆ. ಆ ಸಾಹೇಬರಿಗೆ ಇದು 'ಕನ್ನಡನಾಡು' ಎಂದು ಗೊತ್ತಿಲ್ಲದ್ದರಿಂದ ಆ ವೀರಗಲ್ಲುಗಳ ಉಪಯೋಗವನ್ನು ಅವರು ಆ ಸ್ಥಳದ ಪೂರ್ವೇತಿಹಾಸವನ್ನು ಇನ್ನಿಷ್ಟು ಅರಿತುಕೊಳ್ಳಲಿಕ್ಕ ಮಾಡಿಕೊಂಡಿಲ್ಲ. ಅವಕ್ಕೆ 'ವೀರಗಲ್ಲು' ಎಂದು ಎಲ್ಲಿಯೂ ಹೇಳದಿದ್ದರೂ ಅವು 'ವೀರಗಲ್ಲು'ಗಳೆ ಎಂಬ ಬಗ್ಗೆ ಆ ವರ್ಣನೆಯಿಂದ ಸಂದೇಹವೇ ಉಳಿಯುವುದಿಲ್ಲ.

Memorial stones are found all over the district and are specially numerous near the Sahyadris.

ಈ ಕಲ್ಲುಗಳು ಈ ನಾಡಿನಲ್ಲೆಲ್ಲ ದೊರೆಯುತ್ತಿದ್ದು ಸಹ್ಯಾದ್ರಿಯ ಹತ್ತಿರದಲ್ಲಿ ವಿಶೇಷವಾಗಿವೆ ಎಂದು ಸಾಹೇಬರು ಹೇಳಿದ್ದು ಸರಿಯಿದೆ. ಏಕೆಂದರೆ ಗೋವಳ (ಕನ್ನಡ)ರು ವಾಸವಾಗಿರುವುದು ಹುಲ್ಲು ಮೇವು ಹೆಚ್ಚಾಗಿರುವಲ್ಲಿ ಅಲ್ಲವೇ? 'ಗೋವುಗಳಂ ಕದ್ದೊಯ್ಯಲು ಬಂದ' ಅಧಮರನ್ನು ಎದುರಿಸುವುದರಲ್ಲಿ ಮಡಿದ ವೀರರ ಕಲ್ಲುಗಳ ಸಂಖ್ಯೆಯು ಸಹ್ಯದ ಸಮೀಪದಲ್ಲಿ ಹೆಚ್ಚಿರುವುದು ಸ್ವಾಭಾವಿಕವಾಗಿದೆ. ''One group of unusually large

೨೭. Ibid, p. 647

stones occur at Choueale!'' ಕನ್ನಡದ ಅಭಿಮಾನಿಗಳು ಚೌಸಾಲೆಗೆ ಹೋಗಿ ಈಗ ಅವು ಉಳಿದಿದ್ದರೆ ಕಣ್ಣಾರೆ ಕಂಡು ಮನವನ್ನು ತಣಿಸಿಕೊಳ್ಳಬಹುದು. ಏಕೆಂದರೆ ಗ್ಯಾಝಿಟಿಯರು ಬರೆದುದು ೧೮೮೩ರಲ್ಲಿ. ಅವನ್ನು ಸುಸ್ಥಿತಿಯಲ್ಲಿ ಕಾಯುವವರಾರು? ಮರಾಟ ಇತಿಹಾಸ ಮಂಡಳದವರು ಅವಕ್ಕೆ ಸಾಕಷ್ಟು ಗಮನ ಕೊಟ್ಟಿಲ್ಲ. ಏಕೆಂದರೆ ಅವು ಮರಾಟ ಇತಿಹಾಸದ ಸಾಧನಗಳಲ್ಲ. ಅಲ್ಲದೆ, ಅವುಗಳ ಬೆನ್ನು ಹತ್ತಿ ಹುಡುಕುತ್ತ ಹೋದರೆ, ಬಾವಿ ತೋಡ ಹೋಗಿ ಬೇತಾಳ ಹೊರಟಂತೆ. ಅವರು ನಿಜ ಮಹಾರಾಷ್ಟ್ರವೆಂದು ಹೇಳುವ ದೇಶವೂ ಕರ್ಣಾಟವಾಗಿತ್ತು, ಎಂದು ಬೆಳಕಿಗೆ ಬಂದು ಅವರ ಮೈಮೇಲೆ ಬರುವ ಆಟ!

The faces are carved with rude figures, some times of one or more men on horse back, some times armed with swords....Some times rude inscriptions are carved under figures.

ಚಿತ್ರಗಳ ಬುಡದಲ್ಲಿ ಬರಹಗಳೂ ಹಲವೆಡೆಗೆ ಉಂಟಂತೆ! ಆದರೆ, ಅವು ಯಾವ ಭಾಷೆಯಲ್ಲಿ ಎಂಬ ಬಗ್ಗೆ ಮಾತ್ರ ಸಾಹೇಬರು ಮೂಕರು. ಹಾಗೆ ನೋಡಿದರೆ ಸಾಹೇಬರು ಹೇಳುವ ಆವಶ್ಯಕತೆಯೇ ಇಲ್ಲ. ಸೂರ್ಯನಿಗೆ ಸೂರ್ಯನೆಂದು ಹೇಳುವ ಆವಶ್ಯಕತೆಯೇನು? ವೀರಗಲ್ಲುಗಳು ಮರ್ಹಾಟಿಗಳಿಗೆ ಗೊತ್ತೇ ಇಲ್ಲ. ಮರ್ಹಾಟಿಯಲ್ಲಿ ಈ ಬಗೆಯ ವೀರಗಲ್ಲುಗಳು ಒಂದೂ ಈವರೆಗೆ ದೊರೆತಿಲ್ಲ. ಆದ್ದರಿಂದ ಅವು ಕನ್ನಡ ವೀರರ ಕಲ್ಲುಗಳೇ ಎಂಬುದು ಅಂಗೈನಲ್ಲಿ. ಇವು ವೀರಗಲ್ಲುಗಳೆಂದು ಅಲ್ಲಿಯ ಜನರೇ ಹೇಳುವರಂತೆ.

The people say that they were raised by villagers, the custom seems to have prevailed among all the cultivating-classes especially among Kunbis, Kolis and Vanjaris.

ಇದನ್ನು ಮುಖ್ಯವಾಗಿ ಪೂಜಿಸುವವರು 'ಕುಣಬಿ' (ಕುರಂಬರ?) 'ಕೋಳಿ' (ಕೋಲ, ಕೋತ?), ವಂಜಾರಿಗಳು(?). ಪೂಜಿಸುವವರಲ್ಲಿ ಮರಾಠಿಗಳು ಹೆಚ್ಚಾಗಿಲ್ಲ. ಆದ್ದರಿಂದ 'ಕುಣಬಿ, ಕೋಳಿ, ವಂಜಾರಿಗಳು' ಕನ್ನಡರ ಹತ್ತುಗೆಯವರು ಪ್ರತ್ಯಕ್ಷ ಕನ್ನಡರು ಎಂದು ಹೇಳಲು ಏನು ಬಾಧಕವು? ಈ ಕಲ್ಲುಗಳೊಂದಿಗೆ ಕಲ್ಲು ಕಂಬಗಳನ್ನು (post) ಹಲವೆಡೆಗಳಲ್ಲಿ ನಿಲಿಸಿದ್ದುಂಟಂತೆ. ಇವು ಮಾಸತಿಯ ಕಲ್ಲುಗಳಾಗಿರಬಹುದು. In no case stones or posts been found which are said to mark an old battle field.

ಪ್ರಾಚೀನ ಕಾಲದಲ್ಲಿ ಆದ ಯುದ್ಧಗಳಲ್ಲಿ ಮಡಿದವರ ಸಂಬಂಧವಿಲ್ಲದ ವೀರಗಲ್ಲುಗಳಾಗಲಿ ಮಾಸತಿ ಕಂಬಗಳಾಗಲಿ ಇಲ್ಲವೇ ಇಲ್ಲ. ಎತ್ತು ರೊಚ್ಚಿಗೆದ್ದರೆ ನೇರವಾಗಿ ರಭಸದಿಂದ ಬಂದು ಇರಿಯುವುದೊಂದೆ ಅದಕ್ಕೆ ಗೊತ್ತು. ಆ ಇರಿತದಲ್ಲಿ ವಿರೋಧಿಯ ತಂತ್ರದ ಮೂಲಕ ತನ್ನ ಜೀವಕ್ಕೆ ಎರವಾಗಬೇಕಾದೀತೆಂಬ ಅರಿವೂ ಸಹ ಅದಕ್ಕೆ ಇರುವದಿಲ್ಲ. ಇದೇ ಬಗೆಯ ಸರಳಸ್ವಭಾವದ, ಕಪಡು ಅರಿಯದ ರಜಪೂತರು ಮುಸಲ್ಮಾನರ ಮಾಟ ಮೋಸಗಳನ್ನು ಅರಿಯದೆ ಆತ್ಮಘಾತವನ್ನು ಮಾಡಿಕೊಂಡರು. ಅದರಂತೆ ಎತ್ತುಗಳೇ ದೇವರಾದ ಕನ್ನಡರೂ ಕೂಡ ಎದುರಾಳಿಗಳ ಕಪಡು ಗಂಟಕತನವನ್ನು ತಿಳಿದುಕೊಳ್ಳದೆ ಹೇಗೆ ಹಾಳಾದರೆಂಬುದನ್ನೇ ಈ ಕಲ್ಲುಗಳು ಸಾರುತ್ತಲಿವೆ. ಇನ್ನೊಂದು ಬಗೆಯಿಂದ, ನರ್ಮದಾ ಗೋದಾವರಿ ನಡುವಿನ ಪ್ರಾಚೀನ ಕರ್ನಾಟದ ಸ್ಮಾರಕ ಸ್ತಂಭಗಳಿವು ಎಂದು ಹೇಳಿದರೂ

ತಪ್ಪಿಲ್ಲ. ತುರುಕಾರರಿಗೆ, ಗೋವಳರಿಗೆ ದೊಡ್ಡ ಹೆದರಿಕೆ ಹುಲಿಯಿಂದ. ಈ ಜನಗಳಿಗೆ ಹುಲಿ ರಾಯನಲ್ಲಿ ಭಯಮೂಲಕ ಭಕ್ತಿಭಾವವು ಎಂದೆಂದಿಗೂ ಇದ್ದುದೇ. ನಾಸಿಕ ಖಾನದೇಶದ ನಾಡಿನಲ್ಲಿ 'ವಾಘದೇವ'– ವ್ಯಾಘ್ರದೇವನ ಮಹಾತ್ಮ್ಯವು ಬಹಳ. ಈ ವ್ಯಾಘ್ರದೇವನು ವಗ್ಗಯ್ಯನಾಗಿ ಮಲ್ಹಾರಿದೇವನ ಅನುಯಾಯಿಯಾಗಿ, ಮಲ್ಹಾರಿ ಮಾರ್ತಾಂಡ, ಕಂಡೆರಾಯನ ಕುಲದೈವತವಿದ್ದವರಿಗೆಲ್ಲ ಚಿರಪರಿಚಿತನಾಗಿದ್ದಾನೆ. ಕನ್ನಡ ಜಿಲ್ಲೆಯಲ್ಲಿ ಹಳಪೈಕರು ಮೊದಲಾದವರಲ್ಲಿ ಹುಲಿದೇವರ ಆರಾಧನೆ ಇನ್ನೂ ಇದೆಯಂತೆ. ಕನ್ನಡ ಗೌಳಿಗಳ ಯುಗದಲ್ಲಿ ಪ್ರತಿಷ್ಠೆಯನ್ನು ಹೊಂದಿದ್ದ ಹುಲಿಯಯ್ಯನ ಆರಾಧನೆಯು, ಆ ಯುಗವು ಲುಪ್ತವಾದ ಬಳಿಕ ಸಹ ಅಲ್ಲಿ ಇಲ್ಲಿ ಹೀಗೆ ಇನ್ನೂ ಕಾಣಿಸಿಕೊಳ್ಳುತ್ತಿದೆ!

## ಇನ್ನೂ ಕೆಲವು

ಗೋದಾವರಿಯ ಮೇಗಡೆಯ ನಾಡಿನಲ್ಲಿರುವ ಕುರುಬರು, ಮಲೆಯರು, ಹೊಲೆಯರು, ಹಳಬರು, ಕನ್ನಡರು (ಗೋವರು) ಇವಿಷ್ಟೆ ಅವಶಿಷ್ಟ ಜನಾಂಗಗಳಲ್ಲ. ಸ್ವಲ್ಪ ಆಳವಾಗಿ ನೋಡಿದರೆ ಕನ್ನಡಕ್ಕೆ ಹತ್ತಿರದವರೆನಿಸುವ ಇನ್ನೂ ಹಲವು ಜಾತಿ ಬಣಗಳು ಅಲ್ಲಿ ನೆಲೆಯಾಗಿವೆ.

ಬಿಲ್ಲವರು ಇವರಲ್ಲಿ ಪ್ರಮುಖರು; ಖಾನದೇಶ ಗುಜರಾತಗಳಲ್ಲಿ ಲಕ್ಷಾವಧಿ ಜನಗಳಿದ್ದಾರೆ. ಭಿಲ್ಲರೆಂದು ಅಲ್ಲಿ ಹೆಸರು. ಆದರೆ, ಇದು 'ಬಿಲ್ಲು' ಶಬ್ದದಿಂದ ಆದ 'ಬಿಲ್ಲವ' ಎಂಬುದರ ಸಂಸ್ಕೃತೀಕರಣವೆಂದು ಸಾಮಾನ್ಯವಾಗಿ ಎಲ್ಲರೂ ಒಪ್ಪುವರು. ಮದ್ದುಗುಂಡುಗಳು ಹುಟ್ಟುವ ಮೊದಲು ದಂಡಿನಲ್ಲಿ ಬಿಲ್ಲಾಳುಗಳಿಗಿದ್ದ ಮಹತ್ವವು ಅಷ್ಟಿಷ್ಟಲ್ಲ. ಬಿಲ್ಲವರ ಎದೆಗಾರಿಕೆಯು ಬ್ರಿಟಿಶ ದಳಪತಿಗಳನ್ನು ಬೆರಗುಗೊಳಿಸಿದೆ. ರಜಪೂತರಿಗೆ ಮುಸಲ್ಮಾನರು ಮೊಗಲರುಗಳ ವಿರುದ್ಧ ಹೋರಾಡುವುದರಲ್ಲಿ ತುಂಬಾ ನೆರವಾದವರು ಈ ಬಿಲ್ಲವರೇ. ರಜಪೂತರ ಶೌರ್ಯ ಪರಾಕ್ರಮಗಳ ಅಜರಾಮರ ಕೀರ್ತಿಗೆ ಈ ಬಿಲ್ಲವರ ಪಡೆಯೆ ಮೂಲಾಧಾರವು. 'ಗಂಗಾವಾರಿಧಿಯೊಳ್ ತುರಂಗಮಮಂ ಮೀಯಿಸಿದ' ಚಳುಕ್ಯ ರಾಷ್ಟ್ರಕೂಟ ಭೂಪತಿಗಳ 'ಕರ್ಣಾಟಬಲ'ದಲ್ಲಿ ಬಿಲ್ಲವರಿಗೆ ಪ್ರಾಧಾನ್ಯವಿರಬೇಕೆಂದು ತೋರುತ್ತದೆ. ಆದರೆ, ತೋಪು ತುಬಾಕಿಗಳ ಅವತಾರವಾದ ಬಳಿಕ ಬಿಲ್ಲವರ ಕಾಲವಾಯಿತು. ಬಿಲ್ಲವರು ತಮ್ಮ ಹೊಟ್ಟೆಯಪಾಡಿಗಾಗಿ ನೆರೆಹೊರೆಯ ಜನಗಳಿಗೆ ಕಾಡಿಸುವ, ಪೀಡಿಸುವ ಹೋರೆಗೆ ಆರಂಭಿಸಿದ್ದರೆ. ಅದರಲ್ಲಿ ಅಸ್ವಾಭಾವಿಕವೇನೂ ಇಲ್ಲ. ಇವರ ಜಾತಿಯು ಜನಗಳಿಗೆ 'ಬೇಡ' ಆಯ್ತು. ಬೇಡ ಪಡೆಯು ತೋರಿದ ಧೈರ್ಯಶೌರ್ಯಗಳನ್ನು ಅರಿತುಕೊಳ್ಳಲಿಚ್ಛಿಸುವವರು 'ಸುರಪುರದ ನಾಯಕನ' ಚರಿತ್ರೆಯನ್ನು ಓದಬೇಕು. ಚಿತ್ರದುರ್ಗದ ಪಾಳೆಯಗಾರರ ಇತಿಹಾಸವನ್ನು ನೋಡಬಹುದು.

ಹಳಬರಂತೆ ಬಿಲ್ಲವರೂ ಕನ್ನಡ ಜಿಲ್ಹೆಗಳಿಗೆ ಬಂದು ನೆಲೆಯಾಗಿದ್ದಾರೆ. ದಕ್ಷಿಣ ಕನ್ನಡದಲ್ಲಿ 'ಬಿಲ್ಲವರು' ಎಂಬ ಹೆಸರಿನ ಸಮಾಜವೇ ಇದೆ. ಪಾಪ! ಇವರ ಕೈಗೆ ಬಿಲ್ಲು ಬಾಣಗಳ ಸ್ಥಳದಲ್ಲಿ ಹೆಂಡದ (ಸರಾಯಿ) ಕೊಡಗಳು ಬಂದಿವೆ! ವಿಪರೀತಕಾಲ! ಖಾನದೇಶದಲ್ಲಿ ಡಾಂಗ (ಗುಡ್ಡ) ನಾಡು, ಮೇವಾಸಿ ಎಂಬ ಎರಡು ಬಿಲ್ಲವರ ಸಂಸ್ಥಾನಗಳಿವೆ. ಕೋಳ (ಕೋತ?) ಜಾತಿಯ ಮನೆತನದವರು ಇತ್ತಕಡೆಗೆ ಇರುವ ಜವ್ಹಾರ ಎಂಬಲ್ಲಿ ಅರಸುಗೈಯುತ್ತಿರುವರು.

ಕುಣಬಿಯು ಕನ್ನಡ ಕುರಂಬನ ಮರ್ಹಾಟ ಅವತಾರ. ಕುರಿಗಾರಿಯನ್ನು ಬಿಟ್ಟು ಕುಳನಾಗಿ

ಒಕ್ಕಲನಾಗಿ ನಿಂತು ಹೊಲಮನೆ ಮಾಡಿಕೊಂಡಿರಹತ್ತಿದ ಮೇಲೆ ಕುರುಂಬನು ಮಹಾರಾಷ್ಟ್ರದಲ್ಲಿ ಕುಣಬಿಯಾದನು! ಕುಣಬಿ ಮಾಜಲಮರ್ಹಾಟಾ ಚಾಹಲಾ-ಕುಣಬಿಯು ಮಲೆತು ಮರ್ಹಾಟನಾದ ಎಂಬ ಗಾದೆಯು, ಇವರು ಮರ್ಹಾಟರಿಂದ ಭಿನ್ನರೆಂಬುದನ್ನು ಸೂಚಿಸುತ್ತದೆ. ಮರ್ಹಾಟರು ಇವರೊಡನೆ ಊಟ ಉಡಿಗೆಯನ್ನಂತೂ ಸರಿಯೆ, ಮದುವೆಗಳನ್ನು ಮಾಡಿಕೊಳ್ಳುವರು. ಮರ್ಹಾಟರು ಆರ್ಯದ್ರಾವಿಡರು-ಮಿಶ್ರದ್ರಾವಿಡರು—ಎಂದು ಆ ಜಾತಿಯವರೂ ವಿದ್ವಾಂಸರು ಸಂಶೋಧಕರೂ ಆದ ಶ್ರೀ ಭಾಸ್ಕರರಾವ ಜಾಧವ ಇವರೆ ಹೇಳುತ್ತಾರೆ.[೨೮] ಮದುವೆ ಕಾಲಕ್ಕೆ ಗಿಡಮರಗಳಿಂದ ಬಣಗಳನ್ನು (Aotem) ಹೇಳುವ-(ಕುರಿಗಾರರೆ ಮೊದಲಾದವರ ಹಾಗೆ)—ಮರ್ಹಾಟರಲ್ಲಿಯೂ ನಡತೆಯಿದೆಯೆಂದು ಜಾಧವರಾಯರು ಹೇಳುತ್ತಾರೆ. ಇದು ದ್ರಾವಿಡರಿಂದ ತಮ್ಮಲ್ಲಿ ಸೇರಿದ ನಡತೆಯೆಂದು ಅವರ ಅಭಿಪ್ರಾಯ. ಮರ್ಹಾಟರು ತಮ್ಮ ವರ್ಗದ ಹೊರತು ಹೊರಗಿನವರೊಡನೆ ಈಗಲೂ ಮದುವೆ ಮಾಡಿಕೊಳ್ಳುತ್ತಿರುವ ಸಂಪ್ರದಾಯವುಳ್ಳ ಜಾತಿಗಳು ಎರಡು. ಕುಣಬಿ ಮತ್ತು ಧನಗರರು. ಆದುದರಿಂದ ಮರ್ಹಾಟರು ದ್ರಾವಿಡರೊಡನೆ ಮಿಶ್ರರಾದರು ಎಂದು ಶ್ರೀ ಜಾಧವರಾಯರು ಕಂಡುಹಿಡಿದಿರುವ ಆ ದ್ರಾವಿಡವರ್ಗದವರು; ಕನ್ನಡ ಕುಣಬಿ ಮತ್ತು ಧನಗರರೆ ಇರಬೇಕೆಂದು ಊಹಿಸಲು ಶ್ರಮಪಡಬೇಕಾದುದಿಲ್ಲ.

ಧನಗರನೆಂಬುದು ಕನ್ನಡ ಕುರುಬನ ಮರ್ಹಾಟಿ ಹೆಸರು. ಕುರಿಗಾರಿಕೆಯನ್ನು ಬಿಟ್ಟು ದನಕರಗಳನ್ನು ಸಾಕಿಕೊಂಡಿರಲಾರಂಭಿಸಿದ ಮೇಲೆ ಆ ಕುರುಬನು 'ತುರುಕಾರ'ನಾದನು; (ಗೋಧನವುಳ್ಳ) 'ಧನಕರ'ನಾದನು. ಕನ್ನಡರಿಗೆ ದನಗಳೇ ಧನ.[೨೯] ನಮ್ಮ ಕುರುಬನೆ ಧನಗಾರನೆಂಬುದಕ್ಕೆ ಮರ್ಹಾಟಿ ಭಾಷೆಯೂ ಸಾಕ್ಷಿ. 'ಧನಗರ' ಶಬ್ದಕ್ಕೆ ಮರ್ಹಾಟಿಯಲ್ಲಿ ಕುರುಬನೆಂದೇ ಅರ್ಥವಿದೆ! ಮರ್ಹಾಟಿಗಳು ತಮ್ಮ ಹೆಣ್ಣು ಕೊಟ್ಟು ಕೊಂಡು 'ಕುಣಬಿ'ಗಳನ್ನೂ 'ಧನಗರ'ರನ್ನೂ ತಮ್ಮಲ್ಲಿ ಬೆರಿಸಿಕೊಂಡುಬಿಟ್ಟರು. ಇವರಲ್ಲಿಯೂ ಕೆಲವು ಸಂಪ್ರದಾಯ ವಂತರು ಮರ್ಹಾಟಗಳೊಡನೆ ಸಮರಸವಾಗದೆ ಇದ್ದುದರಿಂದ 'ಮರ್ಹಾಟಾ ಕುಣಬಿ,' 'ಮರ್ಹಾಟಾ ಧನಗರ'ರೆಂದು ಹೇಳುವ ಆವಶ್ಯಕತೆಯುಂಟಾಗಿದೆ.

ಕೇಶಿರಾಜನು (೧೩ನೆಯ ಶತಕ) ಶಬ್ದ-ಮಣಿ-ದರ್ಪಣದಲ್ಲಿ (ಕನ್ನಡ ನಾಡಿನ) ಉದ್ಯೋಗದಿಂದ ಬಂದ ಹೆಸರುಗಳ ರೂಪಸಿದ್ಧಿಯನ್ನು ಹೇಳುವಾಗ ಗಂದಿಗಂ, ತಂಬುಲಿಗಂ ಎಂಬ ಎರಡು ಶಬ್ದಗಳನ್ನು ಇಗಪ್ರತ್ಯಯಾಂತಗಳಿಗೆ ಉದಾಹರಿಸಿದ್ದಾನೆ. ಈ ತಂಬುಲಿಗರು ಖಾನದೇಶ ಮೊದಲಾದ ಕಡೆಗೆ ಇರುವ ತಾಂಬೋಳಿಗಳು. ಇವರ ಉದ್ಯೋಗ ವೀಳ್ಯದ ಎಲೆಗಳನ್ನು ಮಾರುವುದು. ಮಧುರಕವಿಯು ತನ್ನ ಕಾವ್ಯವು 'ಗೊರವನ ಡುಂಡುಚಿಯೆ?' ಎಂದು ಪರಿಹಾರ ಮಾಡಿದ ಗೊರವನು ಮಹಾರಾಷ್ಟ್ರದಲ್ಲಿ ಗುರುವ. ಕೊಮ್ಮಟಿಗನು. ಕೋಮಟಿ! ಯಾವ ಮರ್ಹಾಟಿ ವ್ಯಾಕರಣವೂ ಕೊಮ್ಮಟಿಗ ಶಬ್ದದ ರೂಪಸಿದ್ಧಿಯನ್ನು ಹೇಳಲಾರದೆ 'ನೇತಿ, ನೇತಿ' ಎನ್ನುತ್ತಲಿದೆ.

*ಕಣ್ಮರೆಯಾದ ಕನ್ನಡ, ೧೯೩೩*

*ಶಂಬಾ ಕೃತಿಸಂಪುಟ, ೧, ೧೯೯೯, ಪು. ೧೦-೩೦*

---

೨೮. ಶ್ರೀ ಭಾಸ್ಕರರಾವ್ ಜಾಧವ 'ಮರಾಠರೂ ಅವರ ನುಡಿಯೂ' ಎಂಬ ಉಪನ್ಯಾಸ, ವಿವಿಧ ಜ್ಞಾನ ವಿಸ್ತಾರ ಆಗಸ್ಟ್ ಸಂಚಿಕೆ, ೧೯೩೧ರ ಸಂಪುಟ

೨೯. ಧನ ತದ್ಭವ ದನ, ಶಬ್ದಮಣಿದರ್ಪಣಂ, ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಕಟನೆ, ಪು. ೨೫೪

# ೧೩. ಔತ್ತರೇಯ ಭಾರತೀಯ ಭಾಷೆ-ಕೃತಿಗಳಲ್ಲಿ ಕರ್ನಾಟಕ ಸಂಸ್ಕೃತಿಯ ಕೆಲವು ಉಲ್ಲೇಖನಗಳು

● ಎ. ಶಿವಾನಂದ

ಕನ್ನಡಕ್ಕೆ ಸಂಬಂಧಿಸಿದಂತೆ 'ದೇಶ-ಭಾಷೆ-ಜನಾಂಗ'ವಾಚಿಯಾದ ಉಲ್ಲೇಖಗಳನ್ನು ಬಿಡಿಬಿಡಿಯಾಗಿ ನಿಷ್ಪನ್ನಗೊಳಿಸುವುದು ವಿದ್ವಾಂಸರಲ್ಲಿ ವಾಡಿಕೆಯಾಗಿದೆ. ಈ ಬಗೆಯ ಪೃಥಃಕರಣ ಧೋರಣೆ ಕೇವಲ ಅಧ್ಯಯನವನ್ನು ಸುಲಭಗ್ರಾಹ್ಯವಾಗಿಸುವುದಕ್ಕಾಗಿಯೇ ಹೊರತು ಒಂದು ನಾಡಿನ ಅಖಂಡವೂ ಅವ್ಯಾಹತವೂ ಆದ, ಅಲ್ಲದೆ ಪರಸ್ಪರ ಸಂಸ್ಕೃತಿಗಳ ಸಂಪರ್ಕ, ಸಂಲಗ್ನೀಕರಣ ಹಾಗೂ ಪ್ರಸರಣಗಳ ದೃಷ್ಟಿಯಿಂದ ತೀರಾ ಸಂಕುಚಿತ ವ್ಯಾಪ್ತಿಯದಾಗುತ್ತದೆ. ಆದುದರಿಂದ ಇವೆಲ್ಲ ವ್ಯಷ್ಟಿಗಳನ್ನೊಳಗೊಂಡು ಕನ್ನಡ ಜನಾಂಗದ ಸಮಷ್ಟಿಜೀವನ ದೃಷ್ಟಿ, ಪರಂಪರೆ-ಪ್ರಸಾರ ಹಾಗೂ ಪ್ರಭಾವಾದಿಗಳ ನೆಲೆಗಟ್ಟಿನಲ್ಲಿ ಕರ್ನಾಟಕ ಸಂಸ್ಕೃತಿಯನ್ನು ಅರ್ಥೈಸಿಕೊಳ್ಳಬೇಕಾದುದು ಇಂದು ಅಗತ್ಯವೆನ್ನಿಸಿದೆ. ಇದರಲ್ಲಿ ಕಾಲಕಾಲಕ್ಕೆ ಬದಲಾಗಿರುವ ಭೌತ ನಾಗರಿಕತೆಯ ಅಂಶಗಳೂ ಸೇರಿದಂತೆ ಸ್ಥಿರೀಕೃತವಾದ ಬಾಳಿನ ಮೌಲ್ಯಪರಂಪರೆ, ಆಚರಣೆಗಳೂ ಸಹ ಸಮಾವೇಶಗೊಳ್ಳಬಹುದಾಗಿದೆ. ಕರ್ನಾಟಕ ಸಂಸ್ಕೃತಿಯ ಈ ರೀತಿಯ ವೈಲಕ್ಷಣ್ಯಗಳನ್ನು, ಅದರ ಸಾಧನೆ, ಸಿದ್ಧಿ, ಪ್ರಭಾವಗಳನ್ನು ಔತ್ತರೇಯ ಭಾರತೀಯ ಭಾಷೆ-ಕೃತಿಗಳ ಸಂದರ್ಭದಲ್ಲಿ ಗುರುತಿಸುವುದು ಇಲ್ಲಿನ ಉದ್ದೇಶವಾಗಿದೆ.

**ವೇದಪೂರ್ವಕಾಲೀನ ಕರ್ನಾಟಕ ಸಂಸ್ಕೃತಿ:** ಆರ್ಯಪೂರ್ವ ಜನಾಂಗವಾದ ದ್ರಾವಿಡದಿಂದ ಕುಡಿಯೊಡೆದ ಕರ್ನಾಟಕ ಸಂಸ್ಕೃತಿಯ ಮೂಲನೆಲೆಗಳನ್ನು ನಾವು ಸಿಂಧೂಕೊಳ್ಳದ ನಾಗರಿಕತೆ-ಸಂಸ್ಕೃತಿಯ ಕಾಲದಿಂದಲೇ ಕಂಡುಕೊಳ್ಳಬಹುದು. ಅದರ ಲಿಖಿತ ಪ್ರಮಾಣಗಳು ವೇದ-ಉಪನಿಷತ್ತುಗಳ ಕಾಲದಿಂದೀಚೆಗೆ ಲಭ್ಯವಾಗುತ್ತವೆಯೆಂಬುದು ನಿಜ. ಸಿಂಧೂಲಿಪಿಯ ಓದು ಚರ್ಚಾಸ್ಪದವಾಗಿ ಉಳಿದಿರುವುದೇ ಇದಕ್ಕೆ ಕಾರಣ. ಏನಿದ್ದರೂ ೨೦೦೦ಕ್ಕೂ ಮಿಕ್ಕಿದ ಸಂಖ್ಯೆಯಲ್ಲಿ ಸಿಕ್ಕಿರುವ ಅಲ್ಲಿನ ಮುದ್ರೆ (seal)ಗಳ ಆಧಾರದ ಮೇಲಿಂದ ದ್ರಾವಿಡ ಬುಡಕಟ್ಟಿನವರು ತಮ್ಮದೇ ಆದ ಲಿಪಿ, ಭಾಷೆ ಹಾಗೂ ಬೌದ್ಧಿಕ ಸಂಸ್ಕೃತಿಯನ್ನು ಹೊಂದಿದ್ದರೆಂಬುದು ಖಚಿತ-ನಿಚಿತ. ದ್ರಾವಿಡ ಸಂಸ್ಕೃತಿಯ ಆರಂಭಿಕ ಅಧ್ಯಯನದಲ್ಲಿ ಸರ್‌ಜಾನ್ ಮಾರ್ಷಲ್, ಡಾ|| ಸೆಯ್ಸ್, ಡಾ|| ಹಾಲ್, ಫಾದರ್ ಹೆರಾಸ್, ಡಾ|| ಕಾಲ್ಡವೆಲ್‌ರು ಮುಖ್ಯರಾಗಿದ್ದಾರೆ. ಇವರಲ್ಲಿ ಫಾದರ್ ಹೆರಾಸ್ ಅಲ್ಲಿ 'ಕಣ್' ಎಂಬ ಜನಾಂಗವಿದ್ದಿತೆಂದೂ ಮಹೆಂಜೊದಾರೊದಲ್ಲಿನ ಈ ಸಂಕೇತವಾದ ಶಾಸನೈಕ ಚಿತ್ರಲಿಪಿಯು 'ಕಣ್ಣನಿರ್' ಜನಾಂಗದ ಪ್ರತೀಕವೆಂದೂ ಅವರೇ 'ಕನ್ನಡಿಗ'ರೆಂದೂ ಇದೇ ರೂಪಾಂತರಗೊಂಡು ಸಂಸ್ಕೃತದಲ್ಲಿ 'ಕರ್ಣಾಟ'ವಾಗಿರುವುದಾಗಿಯೂ ಸಂಭಾವಿಸಿದ್ದಾರೆ. ಇವರ ಊಹೆಗೆ ಮತ್ಸ್ಯಪುರಾಣ ಹಾಗೂ ಮನುಸ್ಮೃತಿಗಳಲ್ಲಿ ಆಧಾರ ದೊರೆಯುವುದರಿಂದ ಇದನ್ನು ಕೇವಲ ಒಂದು 'Myth' ಎನ್ನುವುದಕ್ಕೆ ಸಾಧ್ಯವಾಗುವುದಿಲ್ಲ. ಕನ್ನಡದ ಅನೇಕ ಪಂಡಿತರು ಫಾದರ್ ಹೆರಾಸರ ಈ ನಿಲುವೆಯನ್ನು ಸಮರ್ಥಿಸಿರುವುದೂ ಉಂಟು.

ಪೂರ್ವದ 'ಕಣ್ಣರ್' ಜನಾಂಗ, ದ್ರಾವಿಡವೆಂದು ಸಮ್ಮತಿಸಿದ್ದಾದರೆ ಇವರೂ ಸಹ ಮೆಡಿಟರೇನಿಯನ್‌ದಿಂದ ಹೊರಟು ಭಾರತದ ವಾಯವ್ಯ ಭಾಗದಲ್ಲಿ ಆರ್ಯರಿಗಿಂತ ಪೂರ್ವಭಾವಿಯಾಗಿ ಬಂದು ನೆಲಸಿದಾಗ ಅಲ್ಲಿ ಅದಕ್ಕಿಂತ ಪೂರ್ವದಲ್ಲಿಯೇ ವಾಸವಾಗಿದ್ದ ಪ್ರೊಟೊ-ಆಸ್ಟ್ರಲಾಯ್ಡ್ (Proto-Austroloid) ಜನಾಂಗದ ಸಂಪರ್ಕಕ್ಕೊಳಗಾದರು.[೧] ಅನಂತರ ಪ್ರವೇಶಿಸಿದ ಆರ್ಯರು ದ್ರಾವಿಡರೊಡನೆ ಸಂಪರ್ಕಕ್ಕಿಳಿದರು. ಈ ಸ್ಪರ್ಧೆಗಳು ಕಾಲಕ್ರಮದಲ್ಲಿ ಕ್ಷೀಣವಾಗಿ ಪಾರಸ್ಪರಿಕ, ಸಾಂಸ್ಕೃತಿಕ, ಧಾರ್ಮಿಕ, ಕಲೆ, ವೃತ್ತಿ-ವ್ಯವಸಾಯಗಳ ಕೊಡು-ಕೊಳೆ ಸಾಧ್ಯವಾಯಿತು. ದ್ರಾವಿಡರು ಅಲ್ಲಿಂದ ಉತ್ತರ-ಪೂರ್ವ ಮಧ್ಯ ಹಾಗೂ ದಕ್ಷಿಣ ಭಾರತದ ಕಡೆಗೆ ಸಂಚರಿಸುತ್ತ ಬಂದರಾದರೂ ತಮ್ಮ ಸಾಂಸ್ಕೃತಿಕ ಕುರುಹುಗಳನ್ನು ಮೂಲದ ನೆಲೆಗಳಲ್ಲಿ ಆಗಲೇ ಸ್ಥಾಪಿಸಿದ್ದರು. ಆರ್ಯರು ಸ್ವೀಕರಿಸಿರುವ ದ್ರಾವಿಡ ನಾಗರಿಕತೆ - ಸಾಂಸ್ಕೃತಿಕ ಅಂಶಗಳನ್ನು ಸಾಂಸ್ಕೃತಿಕ ಮಾನವ ವಿಜ್ಞಾನಿಗಳೇ ಈಗ ಎತ್ತಿಹೇಳುತ್ತಾರೆ.[೨] ಹೂಗಳಿಂದರ್ಚಿಸಿ ಪೂಜೆ ಸಲ್ಲಿಸುವುದೇ 'ಪೂಜೆ' (ಪೂ+ಸೆಯ್). ಶಬ್ದಮಣಿದರ್ಪಣದ ಒಂದು ಪ್ರಯೋಗದಲ್ಲಿ 'ಪೂವಿಂದರ್ಚಿಸಿದಂ' ಎಂದಿದೆ. ಈ ಬಗೆಯ ಪೂಜಾಪದ್ಧತಿ ಮೂಲತಃ ದ್ರಾವಿಡರದಾಗಿತ್ತು. ದ್ರಾವಿಡರ ದೇವತಾರ್ಚನ ಪದ್ಧತಿ, ದೇವತಾಪ್ರತಿಮೆ, ಪ್ರತಿಷ್ಠಾಪನ, ಗಂಧಾರ್ಚನ, ಧೂಪ, ದೀಪ, ನರ್ತನಸೇವೆ ಮುಂತಾದ 'ಷೋಡಶೋಪಚಾರ' ಕ್ರಮಗಳೆಲ್ಲವೂ ದ್ರಾವಿಡರಿಂದ ಆರ್ಯರು ಸ್ವೀಕರಿಸಿರುವ ಅಂಶಗಳು. ಆರ್ಯರಲ್ಲಿ ಆರ್ಯೇತರವಾದ ರುದ್ರ (ಶಿವ), ಉಮೆ, ಕಾರ್ತಿಕೇಯ, ಹನುಮಂತ, ಶೀತಲಾದೇವಿ ಹಾಗೂ ಗಣೇಶ ಅಲ್ಲದೆ ಗ್ರಾಮದೇವತೆ, ಕುಲದೇವತೆ ಹೀಗೆ ದೈವರುಗಳ ಸಂಖ್ಯೆ ಹೆಚ್ಚಿರುವುದೂ ಸಹ ದ್ರಾವಿಡರಿಂದಲೇ. ಆರ್ಯರು ಮೂಲತಃ ಯಜ್ಞ-ಯಾಗಗಳನ್ನಷ್ಟೇ ಬಲ್ಲವರಾಗಿದ್ದರು. ಪದ್ಮ, ಸ್ಕಂದ, ಶಿವ, ವಾಮನಾದಿ ಪುರಾಣಗಳಲ್ಲಿ ಆರ್ಯರು ರುದ್ರ-ಶಿವೋಪಾಸನೆಯಿಂದ ದೂರವಿರುತ್ತಿದ್ದಾಗ ಆರ್ಯಋಷಿಗಳೊಡನೆ ವಿವಾಹವಾದ ದ್ರಾವಿಡ ಪತ್ನಿಯರು ಹೇಗೆ ಅವರಲ್ಲಿ ರುದ್ರ-ಶಿವದೇವತಾ ಪ್ರತಿಷ್ಠೆ-ಪ್ರಭಾವಗಳನ್ನು ಬೀರಲು ಕಾರಣರಾದರೆಂಬ ವಿವರಗಳು ನಮಗೆ ದೊರೆಯುತ್ತವೆ. ಇದಲ್ಲದೆಯೆ ನದಿ, ವೃಕ್ಷಗಳ ಪೂಜೆ, ನಿರ್ದಿಷ್ಟ ದೇವತಾಮಂದಿರ ಅಥವಾ ಗುಡಿಗಳ ಪರಿಕಲ್ಪನೆ ದ್ರಾವಿಡರಿಂದಲೇ ಆರ್ಯರಿಗೆ ಬಂದೊದಗಿತು. ಬನ್ನಿ, ತುಳಸೀಪತ್ರ, ಆಲ, ಬೇಲದಳಗಳ ಅರ್ಚನೆ, ಮಾತೃದೇವೋಪಾಸನೆ ಇವೆಲ್ಲವೂ ದ್ರಾವಿಡರ ಬಳುವಳಿ.

ಸಿಂಧೂ ಸಂಸ್ಕೃತಿಯ ಉತ್ಖನನದ ಆಧಾರಗಳ ಮೇಲಿಂದ ಅದೊಂದು ಸುಸಭ್ಯವಾದ ಪೌರಸಂಸ್ಕೃತಿಯಾಗಿ ಬೆಳವಣಿಗೆಗೊಂಡಿತ್ತು. ದ್ರಾವಿಡರು ಕಟ್ಟಿಕೊಂಡಿದ್ದ 'ಪುರ'ಗಳನ್ನು ನಾಶ ಮಾಡಿದ 'ಪುರಂದರ' (=ಇಂದ್ರ) ಆರ್ಯರ ದೇವತೆ. ಆರ್ಯರು ಮೇಲಿಂದ ಮೇಲೆ ಹಲ್ಲೆ ನಡೆಸಿದ್ದರಿಂದ ಅಲ್ಲಿನ ಪುರಗಳು ನಾಶವಾದುವು. ಇದುವರೆಗೆ '೮೦'ಕ್ಕಿಂತ ಹೆಚ್ಚಿನ ಸಿಂಧೂಸಂಸ್ಕೃತಿಯ ಸ್ಥಳನಿವೇಶನಗಳನ್ನು ಪುರಾತಜ್ಞರು ಶೋಧಿಸಿರುವುದು ಅವರ 'ಪುರಸಂಸ್ಕೃತಿ'ಯ ಅಸ್ತಿತ್ವಕ್ಕೆ ನಿದರ್ಶನವಾಗಿದೆ.[೩] ಅಲ್ಲಿನ ಆಭರಣಗಳಿಗೆ ಕರ್ನಾಟಕದ ಕೋಲಾರ ಗಣಿಯಿಂದ ಬಂಗಾರ ಹಾಗೂ ಅಲಂಕರಣ ಶಿಲೆಗಳಿಗೆ ನೀಲಗಿರಿಯ ದೊಡ್ಡ

---

೧ ಸಂತಾಲ, ಮುಂಡ, ಬಿರ್ಹೊರ, ಅಸುರ, ಕೊರಬ, ಕೋಲ, ಜುಯಂಗ ಮುಂತಾದವರು Proto-Austroloid ಸಂತತಿಗೆ ಸೇರಿದವರಾಗಿದ್ದಾರೆ.

೨ Vatsayana: *Comparative Sociology,* 1981

೩ "It credits them (Dravidians) with urban culture entered in its cities of stone

ಬೆಟ್ಟದ ಪಚ್ಚೆಗಲ್ಲುಗಳೇ ಪೂರೈಕೆಯಾಗಿರುವುದಾಗಿಯೂ ಸಹ ರಾಧಾಕುಮುದ ಮುಖರ್ಜಿ ಉಲ್ಲೇಖಿಸುತ್ತಾರೆ. ಕೇವಲ ಭೌತಸಂಸ್ಕೃತಿ (Material Culture) ಮಾತ್ರವಲ್ಲದೆ ಅತ್ಯುನ್ನತವಾದ ಆಧ್ಯಾತ್ಮಿಕ ಸಂಸ್ಕೃತಿ (Spiritual Culture) ಕೂಡ ಅಲ್ಲಿ ವಿಕಾಸಗೊಂಡುದನ್ನು ಕಾಣುತ್ತೇವೆ. ನಿಂತ ಭಂಗಿಯಲ್ಲಿನ 'ಯೋಗಿ', ತ್ರಿಮುಖವಾದ 'ಪಾಶುಪತ ಶಿವ', ಎಲ್ಲಕ್ಕಿಂತ ವಿಲಕ್ಷಣವಾಗಿ ಹಣೆಯಲ್ಲಿ ಕಣ್ಣುಳ್ಳ ಧ್ಯಾನಯೋಗಿಯ ಪ್ರತಿಮೆಗಳು 'ಮುಂಕಣ್', 'ಮೀನ್‌ಕಣ್' ರೂಪಗಳಲ್ಲಿ ದೊರಕಿರುವುದರಿಂದ ಹಿಂದೂ ಯೋಗದರ್ಶನಕ್ಕೆ ದ್ರಾವಿಡರು ಅತ್ಯಪೂರ್ವವಾದ ಕೊಡುಗೆಯನ್ನಿತ್ತಿರುವರೆಂಬುದು ಸ್ಪಷ್ಟವಾಗುತ್ತದೆ.[೮] ರುದ್ರ-ಶಿವೋಪಾಸನೆಯ ಉಗಮ-ವಿಕಾಸಗಳಿಗೆ ಸಿಂಧೂಸಂಸ್ಕೃತಿ ಆಧಾರವಾಗಿರುವುದೆಂಬ ಬಗೆಗೆ ಎರಡು ಮತವಿಲ್ಲ. ಇದನ್ನಿಲ್ಲಿ ಹೇಳುವುದಕ್ಕೆ ಮುಖ್ಯ ಕಾರಣವೆಂದರೆ, ಕರ್ನಾಟಕದಲ್ಲಿ ಈಗಲೂ ಜೀವಂತವಾಗಿರುವ ವೀರಶೈವ ಸಂಸ್ಕೃತಿ-ಆಚರಣೆಗಳು, ಎಲ್ಲ ಶೈವ ಪ್ರಭೇದಗಳಲ್ಲಿ 'ಪಾಶುಪತ ಶೈವ'ವೇ ಪ್ರಾಚೀನ. ಕರ್ನಾಟಕದ ವೀರಶೈವವು ಉಳಿದ ಹಲವಾರು ವಾಮಪಂಥೀಯ ಶೈವಶಾಖೆಗಳಲ್ಲಿನ ಆಚರಣೆಗಳನ್ನು ಬಿಟ್ಟು ಪ್ರಪ್ರಾಚೀನವಾದ ಪಾಶುಪತಕ್ಕೆ ತನ್ನ ನಿಷ್ಠೆ-ಒಲವುಗಳನ್ನು ಸೂಚಿಸುವುದರಿಂದ ಈ ಜನಾಂಗಕ್ಕೂ ಸೈಂಧವ ಶೈವ ಸಂಬಂಧಿತವಾದ ಸಂಸ್ಕೃತಿಗೂ ಇರುವ ನಿಕಟ ಸಂಬಂಧ ವ್ಯಕ್ತಗೊಳ್ಳುತ್ತದೆ.

ದ್ರಾವಿಡರ ಪ್ರಮುಖ ದೈವವಾದ 'ರುದ್ರ'ನನ್ನು 'ಅನಾರ್ಯ' 'ಅಸುರ' ದೈವವೆಂದು ಆರ್ಯರು ಹೀಗಳೆದರಾದರೂ ಅದಮ್ಯ ಶಕ್ತಿ ಹಾಗೂ ರುದ್ರನ ಪ್ರಚಂಡ ಸಾಮರ್ಥ್ಯಗಳಿಗೆ ಶರಣಾಗತರಾಗಿ ಹೇಗೆ ಆ ದೈವವನ್ನು ಮೊರೆ ಕೇಳಿದರೆಂಬುದಕ್ಕೆ ಋಗ್ವೇದ ಸೂಕ್ತಿಯು ನಮಗೆ ಪ್ರಮಾಣವಾಗುತ್ತದೆ:

ಸ್ಥಿರೇಭಿರಂಗೈಃ ಪುರು ರೂಪ ಉಗ್ರೋ
ಬಭ್ರುಃ ಶುಕ್ರೇಭಿಃ ಪಿಪಿಶೇ ಹಿರಣ್ಯೈಃ
ಈಶಾನಾದಸ್ಯ ಭುವನಸ್ಯ ಭುರೇಃ ನವಾ
ಯೋಷದ್ರುದ್ರಾದಸುರ್ಯಮ್ (ಋಗ್-II ೩೩-೯)

ಈ ಮೇಲಿನ ಅಭಿವರ್ಣನೆಯಷ್ಟಲ್ಲದೆ, ರುದ್ರನಿಗೆ ತಾವು ಪ್ರಜೆಗಳಾಗಿ ಬಾಳುವುದಾಗಿಯೂ ಅವರ ಪಶುಗಳನ್ನು ರಕ್ಷಿಸಬೇಕೆಂದೂ ಭಿಷಜನಾಗಿ ಅವರನ್ನು ರೋಗರುಜಿನಾದಿಗಳಿಂದ ಕಾಪಾಡಬೇಕೆಂದೂ ಯಾಗಗಳಲ್ಲಿ ತಮಗೆ ಭಾಗ ದೊರಕುವಂತೆ ಅನುಗ್ರಹಿಸಬೇಕೆಂದೂ ಆರ್ಯ ಋಷಿಗಳು ರುದ್ರನಲ್ಲಿ ಪ್ರಾರ್ಥಿಸಿಕೊಂಡಿದ್ದಾರೆ.[೯] ರುದ್ರದೇವೋತ್ತಮತ್ವ ಹಾಗೂ ರುದ್ರನನ್ನು ಸುತ್ತುವರೆದ ರುದ್ರಗಣವರರು, ವೀರಗಣ, ಮರುದ್ಗಣ ಇವರೆಲ್ಲ ಆರ್ಯರಿಗಿಂತ ಭಿನ್ನವಾದ ಒಂದು ಸಂಸ್ಕೃತಿ ಸಮಾಜ ಸಂಘಟನೆಯನ್ನು

---

and metal which had to be stormed by the Aryan God Indra as Purandara' Radha Kumud Mookerji: *Glimpses of Ancient India*, 1961

೮ 'ತ್ರಿಶೃಂಗಧಾರಿ' ತ್ರಿಣೇತ್ರ ಆರಾಧಕ ಮುನಿಗಳ ವಿಗ್ರಹಗಳನ್ನು ಈ ಚಿಹ್ನೆಗಳಿಂದ ಅಲ್ಲಿನ ಕಲಾವಿದರು ಸೂಚಿಸಿದ್ದಾರೆ. ಇವರನ್ನು 'ಭಾಳಾಕ್ಷ ಸಿದ್ಧಿ ಸಾಧಕ ಮುನೀಶ್ವರ'ರೆಂದು ಶಂಬಾ. ಜೋಶಿ ಊಹಿಸಿದ್ದಾರೆ- ನೋಡಿ: ಋಗ್ವೇದಸಾರ ನಾಗಪ್ರತಿಮಾ.

೯ ಹೆಚ್ಚಿನ ವಿವರಗಳಿಗೆ ನೋಡಿ: ಶಂ.ಬಾ. ಜೋಶಿ: ಶಿವರಹಸ್ಯ; ಡಾ|| ಜ.ಚ.ನಿ. : ಚಿಗುರಿಟ್ಟ ಚಿಂತನ.

ನಿರ್ಮಿಸಿಕೊಂಡಿದ್ದರೆಂಬುದು ಇಲ್ಲಿ ಮನವರಿಕೆಯಾಗುತ್ತದೆ. ಕೇವಲ 'ರುದ್ರ'ಪರವಾದ ಸಾಂಸ್ಕೃತಿಕ ಅಂಶಗಳಲ್ಲದೆ ವೇದಕಾಲದಲ್ಲಿ 'ಸ್ತೇನ'[೬] 'ತಾಯು' 'ತಸ್ಕರ' ಎಂಬಿವು ಆರ್ಯೇತರ ಜನಾಂಗಗಳಾಗಿದ್ದು ಇವರು ಹಟ್ಟಿಗಾರರಾಗಿ, ಇಲ್ಲವೆ ದನಗಳ್ಳರೆಂಬ ಪ್ರತೀತಿಯಲ್ಲಿದ್ದ ದ್ರಾವಿಡರು. ವಿಶೇಷತಃ 'ಕಳವರ್'-ಕಣ್ಣರ್ ಜನಾಂಗವೇ ಇದಾಗಿರ ಬೇಕೆಂದು ಶಂ.ಬಾ. ಜೋಶಿ ತರ್ಕಿಸಿರುವರು.

**ದಕ್ಷಿಣಾಪಥ-ಕರ್ನಾಟಕ ಸಂಸ್ಕೃತಿಯ ಅಪನಿಂದೆ:** ಆರ್ಯ ಪ್ರಭಾವಿತ ವೈದಿಕ ವಲಯದ ಹೊತ್ತಗೆಗಳಲ್ಲಿ ಇಡೀ ದಕ್ಷಿಣಾತ್ಯರ ಅದರಲ್ಲಿ 'ಕರ್ಣಾಟ'ರೂ ಸೇರಿದಂತೆ ಒಂದು ಬಗೆಯ ವಿಡಂಬನೆ ಕಂಡುಬರುತ್ತದೆ. ದ್ರಾವಿಡರು 'ಅನಾರ್ಯ' 'ದಾಸ' 'ದಸ್ಯು'ಗಳೆಂದೇ ಅವರ ಪರಿಭಾವನೆಯಾಗಿತ್ತು. ಒಂದು ಪ್ರಬಲ ಸಂಸ್ಕೃತಿ ತನ್ನ ಸ್ವಪ್ರತಿಷ್ಠೆ ಹಾಗೂ ಪ್ರಾಬಲ್ಯಗಳಲ್ಲಿ ಅನ್ಯ ಸಂಸ್ಕೃತಿಯನ್ನು ಹೇಗೆ ಕೀಳರಿಮೆಗೊಳಿಸಬಲ್ಲುದೆಂಬುದಕ್ಕೆ ಆರ್ಯ-ದ್ರಾವಿಡ ಜನಾಂಗದ ಸಂಧಿಕಾಲದ ಸಾಹಿತ್ಯ ನಮಗೆ ಅದೆಷ್ಟೋ ಅವಾಸ್ತವ ಹಾಗೂ ಅದ್ಭುತ ರಮ್ಯ ಕಲ್ಪಕತೆಗಳನ್ನು ಹರಹಿರುವ ಕತೆಗಳಲ್ಲಿ ತೆರೆದು ತೋರುತ್ತದೆ. ಋಗ್ವೇದ, ಮನುಸ್ಮೃತಿ, ರಾಮಾಯಣ, ಮಹಾಭಾರತಗಳಷ್ಟಲ್ಲದೆ, ವೈದಿಕ ಒತ್ತಡದಲ್ಲಿ ರೂಪಿತವಾಗಿರುವ ಸ್ಕಾಂದ ಮಹಾಪುರಾಣ, ವಿಷ್ಣುಧರ್ಮೋತ್ತರ ಮಹಾಪುರಾಣ–ಇವೇ ಮೊದಲಾದ ಪುರಾಣಗಳಲ್ಲಿಯೂ ಸ್ಮೃತಿಚಂದ್ರಿಕಾ, ಮೃಚ್ಛಕಟಿಕಾಗಳಲ್ಲಿಯೂ ಈ ಬಗೆಯ ಅಪನಿಂದಾತ್ಮಕ ಹೇಳಿಕೆಗಳಿರುವುದನ್ನು ನಾವು ಕಾಣುತ್ತೇವೆ. ಈ ಉಕ್ತಿಗಳು ಸ್ವಕೀಯದರ ಸಮರ್ಥನೆ ಹಾಗೂ ಏಕಪಕ್ಷಪಾತೀಯವಾದ ಮಿಥ್ಯಾರೋಪಣೆಗಳೆನ್ನಿಸುತ್ತವೆ. ಕರ್ನಾಟಕದ ಪ್ರಾಚೀನ ಉಲ್ಲೇಖಗಳನ್ನು ಅವು ಎಷ್ಟು ಪೂರ್ವದ ದಾಖಲೆಯಾಗಿದೆಯೆಂದು ಬೆಲೆಗೊಡುವುದಕ್ಕಿಂತ ಅವನ್ನು ಯಾವ ಸಂದರ್ಭ ಮತ್ತು ಅರ್ಥಗಳಲ್ಲಿ ಪ್ರಯೋಗಿಸಲಾಗಿದೆ, ಅಲ್ಲಿನ ಧೋರಣೆಗಳೇನು? ಎಂಬ ದೃಷ್ಟಿಯಿಂದ ಅರಿಯುವುದು ಇಲ್ಲಿ ಮುಖ್ಯವೆನಿಸುತ್ತದೆ.

**ಕರ್ನಾಟಕ ಸಂಸ್ಕೃತಿಯ ಹಿರಿಮೆ:** ಕರ್ನಾಟಕ ದೇಶ, ಜನಾಂಗ, ಭಾಷೆ ಕುರಿತಾದ ಸದುಕ್ತಿಗಳು ಈ ನಾಡಿನ ವಾಸ್ತವಿಕ ಸಂಸ್ಕೃತಿಯ ಮೇಲೆ ಬೆಳಕು ಚೆಲ್ಲುತ್ತವೆ. ಅವುಗಳಲ್ಲಿ ಮುಖ್ಯವಾದ ಕೆಲವನ್ನಿಲ್ಲಿ ಉಲ್ಲೇಖಿಸಿದೆ.

ಸಂಸ್ಕೃತ ಉಲ್ಲೇಖಗಳು:

ಅಥಾಪರೇ ಜನಪದಾಃ ದಕ್ಷಿಣಾ ಭರತರ್ಷಭ
ದ್ರಾವಿಡಾಃ ಕೇರಲಾಃ ಪ್ರಾಚ್ಯಾ ಮೂಷಿಕಾ ವನವಾಸಿಕಾಃ
ಕರ್ಣಾಟಕಾ ಮಹೀಷಕಾದಿಕಲ್ಪಾ ಮೂಷಕಸ್ತಥಾ
ಝಿಲ್ಲಿಕಾಃ ಕುಂತಲಶ್ಚೈವ ಸೌಹೃದಾ ನಭಕಾನನಾಃ

(ಮಹಾಭಾರತ-ಭೀಷ್ಮಪರ್ವ, ೫೮-೫೯)

ಕರ್ನಾಟ 'ದೇಶ'ವಾಚಿಯಾದ ಆಕರಗಳಿಗೆ ಇಲ್ಲಿ ಕೆಲವನ್ನು ಉದ್ಧರಿಸಿದೆ: 'ಕರ್ಣಾಟಕಾನ್ ದೇಶಾನ್' (ಭಾಗ), 'ಕರ್ಣಾಟಕಾ' (ಪದ್ಮ), ಶ್ರೀ ಕರ್ಣಾಟಕ ವಸುನ್ಧರಾ (ಭರ್ತೃಹರಿ-ಸುಭಾಷಿತ), 'ಕರ್ಣಾಟಕಾನ್' (ಜಿನಸೇನನ ಪೂರ್ವಪುರಾಣ), 'ಕರ್ಣಾಟ'

---

೬ 'ಸ್ತೇನಾನಾಂಪತಯೇ ನಮಃ' ಎಂದು ರುದ್ರಾಧ್ಯಾಯದಲ್ಲಿ ಹೇಳಿದೆ.

(ಸೋಮದೇವ-ಯ.ಚಂ.), ಕರ್ಣಾಟಾಃ (ರಾಜಶೇಖರ-ವಿದ್ಧಶಾಲಭಂಜ್ಞಿಕಾ ಹಾಗೂ ಬಾಲರಾಮಾಯಣ), 'ಕರ್ಣಾಟತ್ವಂ' (ಕ್ಷೇಮೇಶ್ವರ-ಚಂಡಕೌಶಿಕ), 'ಕರ್ಣಾಟ' (ಬಿಲ್ಹಣ, ಕಲ್ಹಣ, ಜಲ್ಹಣರು), 'ಕರ್ಣಾಟಾವನಿ' (ಆರ್ಯಪಾರ್ಯ, ಕರ್ಣಾಟ' ವರಾಹಮಿಹಿರ), 'ಕರ್ಣಾಟವಿಷಯೋರ್ಮಧ್ಯೇ ಮಹಾರಾಷ್ಟ್ರ ವಿಷಯಂ' (ವಾತ್ಸಾಯನ), ಪ್ರಾಚ್ಯಕರ್ಣಾಟ (ಮಾರ್ಕಂಡೇಯನ ಪ್ರಾಕೃತ ಸರ್ವಸ್ವಮ್), ಕರ್ಣಾಟ, ಕರ್ಣಾಟದೇಶ (ಹೇಮಾದ್ರಿ ಹಾಗೂ ಶಕ್ತಿಸಂಗಮತಂತ್ರ, ವಾಚಸ್ಪತ್ಯ, ಶಂಭುರಹಸ್ಯ, ಇತ್ಯಾದಿ).

**ಪಾಲಿ, ಪ್ರಾಕೃತ, ಅಪಭ್ರಂಶ ಉಲ್ಲೇಖಗಳು:** 'ಲಾಡಾ ಕಣ್ಣಡಾ' (ಉದ್ಯೋತನ ಸೂರಿಯ ಕುವಲಯ ಮಾಲಾಕಹಾ), 'ಕಣ್ಣಾಡೀಣಂ' (ರಾಜಶೇಖರನ ಕಪ್ಪೂರಮಂಜರಿ) 'ಕನ್ನಡ' (ಧನಪಾಲನ ಭವಿಸ್ಸಮತ್ತ ಕಹಾ), 'ಕಣ್ಣಾಟ' (ಚೂಳವಂಸೀಯ) (ಪ್ರಾಕೃತ) ಮಹಿಷರಾಷ್ಟ್ರ (ದೀಪವಂಸ-ಪಾಲಿ).

**ಇತರ ಔತ್ತರೇಯ ಆರ್ಯಭಾಷೆಗಳಲ್ಲಿನ ಉಲ್ಲೇಖಗಳು:** ಚುಡಗಂಗ ಕರ್ಣಾಟದೇಸರು (ಒರಿಯಾ-ಮಾದಲಾಪಾಞ್ಜಿ), 'ಕರ್ಣಾಟಕ', 'ಕಾನಡಾ' (ಮರಾಠೀ, ಜ್ಞಾನದೇವನ ಅಭಂಗಗಳು), ಕರಸಾಟೀ (ಹಿಂದೀ-ಪೃಥ್ವೀರಾಜರಾಸೊ).

**ಕರ್ಣಾಟಕ ಆಳರಸರ ನಾಮಖ್ಯಾತಿ:** ಕರ್ಣಾಟಕದ ಆಳರಸರು ಯಾವ ಸಂತತಿಯವರೇ ಆಗಿರಲಿ, ಅವರು ಎಲ್ಲೇ ಆಳಿದ್ದಿರಲಿ ತಮ್ಮನ್ನು ಕರ್ಣಾಟಕ ವಂಶಸ್ಥರು, ತಮ್ಮದು 'ಕನ್ನಡಕುಲ'ವೆಂದು ಹೇಳಿರುವುದು ಅವರ ರಾಷ್ಟ್ರೀಯತಾ ಮನೋಧರ್ಮದ ಪ್ರತೀಕವಾಗಿದೆ. ಶಾತವಾಹನ ರಾಜಮನೆತನದ ಹಾಲರಾಜನು ತನ್ನ ಗಾಥಾಸಪ್ತಶತಿಯ ಪ್ರತಿ ಪ್ರಕರಣಾಂತ್ಯ ಗದ್ಯ (Colophon)ದಲ್ಲಿ 'ಶ್ರೀಮತ್ಕುಂತಲ ಜನಪದೇಶ್ವರ ಪ್ರತಿಷ್ಠಾನ ಪತ್ತನಾಧೀಶ್ವರ....ಹಾಲಾದ್ಯುಪನಾಮಕ ಶ್ರೀ ಸಾತವಾಹನ ನರೇಂದ್ರ ನಿರ್ಮಿತಾ' ಎಂದಿದ್ದಾನೆ. ಇಲ್ಲಿನ ಕುಂತಲ ಜನಪದವು ಕರ್ನಾಟಕವನ್ನೊಳಗೊಂಡುದಾಗಿತ್ತೆಂದು ಬೇರೆ ಹೇಳಬೇಕಿಲ್ಲ.[೭] ಅನ್ಯತ್ರ ಕಡೆಗಳಲ್ಲಿ ರಾಜ್ಯವಾಳಿದ ಕರ್ನಾಟಕದ ಹತ್ತಾರು ರಾಜವಂಶಗಳಲ್ಲಿ ಗುಜರಾತದ ಚಾಳುಕ್ಯ, ಒರಿಸ್ಸಾದ ರಾಷ್ಟ್ರಕೂಟ, ಕೊಲ್ಲಾಪುರದ ಶಿಲಾಹಾರ, ಬಂಗಾಳದ ಸೇನ ಹಾಗೂ ಮಿಥಿಲೆ ಮತ್ತು ನೇಪಾಳದ ಸಾನ್ಯದೇವಾದಿ ಕರ್ಣಾಟ ಕ್ಷತ್ರಿಯ ಮನೆತನದವರು ಪ್ರಸಿದ್ಧರಾಗಿದ್ದಾರೆ. ಬಂಗಾಲದ ಸೇನರು ಮೂಲತಃ ಧಾರವಾಡದ ನೆರೆಹೊರೆಯವರಾಗಿದ್ದು ಸಂಚಾರಗೈಯುತ್ತ ಗಂಗಾತೀರದ 'ರಾಢ'ದಲ್ಲಿ ಮೊದಲಿಗೆ ನೆಲಸಿ ಮುಂದೆ ಬಂಗಾಲದಲ್ಲಿ ಒಂದೂವರೆ ಶತಮಾನ ಕಾಲ ರಾಜ್ಯವಾಳಿದರು. ಇವರು ತಮ್ಮನ್ನು 'ಕರ್ನಾಟ ಕ್ಷಿತಿಪಾಲ'ರೆಂದು ವಿಶೇಷಿಸಿಕೊಂಡಿದ್ದಾರೆ. ಇವರೆಲ್ಲರಲ್ಲಿ ಬಹುದೂರದ ಮಿಥಿಲೆಯ ಕರ್ಣಾಟೇಶ್ವರರ ಬಗೆಗೆ ನಮಗೀಗ ಇನ್ನೂ ಹೆಚ್ಚಿನ ಮಾಹಿತಿಗಳು ಉಪಲಬ್ಧವಾಗುತ್ತವೆ. ಇತಿಹಾಸಜ್ಞರು ಇವರ ಮೂಲದ ಬಗೆಗೆ ಬೆಳಕು ಚೆಲ್ಲಿದ್ದಾರೆ.[೮] ಚಾಳುಕ್ಯ ಆರನೆಯ ವಿಕ್ರಮಾದಿತ್ಯನ ಉತ್ತರದ ದಿಗ್ವಿಜಯಗಳ ಮೇಲಿಂದ ಮೂರು ಔತ್ತರೇಯ

---

೭ ಕುಂತಲನಾಡಿನ ಭೌಗೋಳಿಕ ವ್ಯಾಪ್ತಿ, ಗಡಿ-ಗೆರೆಗಳ ಬಗೆಗೆ ಜೆ. ಎಫ್. ಫ್ಲೀಟ್, ಜಿ. ಎಸ್. ಗಾಯಿ ಮುಂತಾದವರು ಯೋಚಿಸಿದ್ದಾರೆ. ಅಜಂತೆಯುನ್ನೊಳಗೊಂಡು ಕರ್ನಾಟಕದ ಧಾರವಾಡ, ಬಳ್ಳಾರಿ, ಬನವಾಸಿ, ಬೆಳಗಾಂ ಜಿಲ್ಲೆಗಳ ಭಾಗ ಕುಂತಲದಲ್ಲಿ ಸೇರುತ್ತವೆ. ಕರ್ನಾಟಕದ ಆಳರಸರು ಮುಖ್ಯವಾಗಿ ಕಲ್ಯಾಣಿ ಚಾಳುಕ್ಯರು ತಮ್ಮನ್ನು 'ಕುಂತಲೇಶ್ವರ' ಎಂದಿದ್ದಾರೆ.

೮ "The Sena Inscriptions reveal to us that originally the Karnatas belong to

ರಾಜಮನೆತನಗಳು ಹೊಸದಾಗಿ ಬೆಳಕಿಗೆ ಬಂದಿವೆಯೆಂದೂ ಅವುಗಳಲ್ಲಿ ಕನೋಜ, ಮಿಥಿಲೆ ಹಾಗೂ ಬಂಗಾಲ ಕರ್ನಾಟ ಮಿಥಿಲೇಶ್ವರರು ವಿಖ್ಯಾತರಾಗಿರುವರೆಂದೂ ಡಾ|| ಸಿ. ಪಿ. ಎನ್. ಸಿನ್ಹಾ ಉಲ್ಲೇಖಿಸುತ್ತಾರೆ. ಆ ವಂಶದ ಮೂಲಪುರುಷನಾದ ಸಾನ್ಯದೇವನು 'ಕರ್ನಾಟ ಕುಲಭೂಷಣ'ನೆಂದೂ ಇವನಿಗೆ ಆಧೀನನಾದ ಬಂಗಾಲದ ಸೇನಸಾಮಂತನು 'ಕರ್ನಾಟ ಕ್ಷತ್ರಿಯಾಣಾಯಜನಿಕುಲ ಶಿರೋಧಾಮ ಸಾಮಂತಸೇನ'ನೆಂದೂ ಕೀರ್ತಿಗೊಂಡಿದ್ದಾರೆ.

ನೇಪಾಳ ಶಾಸನಗಳಲ್ಲಿ ಮಿಥಿಲೆಯ ಅರಸರನ್ನು 'ಕರ್ನಾಟ ಚೂಡಾಮಣಿ' ಎಂದಿದೆ.[೯] 'ಕರ್ನಾಟ ವಂಶೋದ್ಭವ', 'ಕರ್ನಾಟಾಧಿಪತಿ' ಎಂದಾಗಿ ಚಂಡೇಶ್ವರನು ನೇಪಾಳ ಚರಿತ್ರೆಯಲ್ಲಿ ಉಲ್ಲೇಖಿಸುತ್ತಾನೆ.[೧೦] ನಾನ್ಯದೇವ ಲಿಖಿತ 'ಭರತ ಭಾಷ್ಯ'ದಲ್ಲಿ 'ಕರ್ನಾಟ ಕ್ಷತ್ರಿಯ' 'ಕರ್ನಾಟ ಕುಲಭೂಷಣ' ಎಂಬ ಒಕ್ಕಣಿಕೆಗಳಿವೆ. ಮಿಥಿಲಾಮಧ್ಯದ ಆಂಥತರಿ ಶಾಸನದಲ್ಲಿ ಹಾಗೂ ಮಿಥಿಲೆಯ ಸ್ಥಳಪುರಾಣವೊಂದರಲ್ಲಿ 'ಪರಮಾರ ಕರ್ನಾಟ ಕ್ಷತ್ರಿಯ' ಎಂಬ ಪ್ರಶಸ್ತಿಗಳು ದೊರೆಯುತ್ತವೆ.[೧೧] 'ನಾನ್ಯ' ಹೆಸರು ನೇಪಾಲಿಯಲ್ಲಿ ನಾನ್ಯು, ನನ್ಯುಪ, 'ನನ್ಯುಪದೇವ' ಎಂಬುದೂ ಸಹ ಕನ್ನಡದ ಪದವೇ ಆದ 'ನನ್ನಯ್ಯ' ಎಂದರೆ 'affectionate' ಎಂಬರ್ಥ ಹೊಂದಿರುವುದಾಗಿ ಕೆ. ಪಿ. ಜಯ್ಸವಾಲ ಹಾಗೂ ಕೆ. ಎಲ್. ಬರುವಾ ಸಂಭಾವಿಸಿರುವುದು ಉಚಿತವಾಗಿಯೇ ಇದೆ.[೧೨] ಕೇವಲ ನಾನ್ಯದೇವ ಅಷ್ಟೇ ಅಲ್ಲದೆ ಅವನ ತರುವಾಯದಲ್ಲಿ ರಾಜ್ಯವಾಳಿದ ಎಲ್ಲ ಅರಸರೂ ಸಹ ತಮ್ಮ ವಂಶಮೂಲವನ್ನು 'ಕರ್ನಾಟ'ವೆಂದಿರುವುದು ಇಲ್ಲಿ ಹೆಮ್ಮೆಯ ಸಂಗತಿಯಾಗುತ್ತದೆ. ನಾನ್ಯದೇವನ ಮಗ ಮಲ್ಲದೇವ 'ಕರ್ನಾಟ ವಂಶೋದ್ಭವ' (Supreme Scion of Karnata Race). ಇವನ ಆಸ್ಥಾನ ಪೋಷಿತ ಸವರ್ಧಮಾನನು ತನ್ನನ್ನು 'ಕರ್ನಾಟ ಲಾಲನ' ಎಂದುಕೊಳ್ಳುತ್ತಾನೆ.[೧೩] ಕರ್ನಾಟ ಮಿಥಿಲೇಶ್ವರರ ೩ನೆಯ ದೊರೆ ನರಸಿಂಹದೇವನನ್ನು ಕ್ರಿ.ಶ. ೧೧೮೮-೧೨೨೭ 'ದಾನಪದ್ಧತಿ' ಎಂಬ ನೇಪಾಳೀ ಹಸ್ತಪ್ರತಿಯಲ್ಲಿ 'ಕರ್ನಾಟ ಕುಲಭೂಷಣ' (The Crest-Jewel of the Karnatas) ಎಂದು ಲಿಖಿಸಲಾಗಿದೆ. ಕೊನೆಯ ಅರಸನಾದ ಹರಿಸಿಂಹದೇವನನ್ನು ವಿದ್ಯಾಪತಿಯ ಪುರುಷಪರೀಕ್ಷೆಯಲ್ಲಿ 'ಕರ್ನಾಟ ಕುಲಸಂಭವ' ಹಾಗೂ 'ಕರ್ನಾಟ ವಂಶೋದ್ಭವ'ವೆಂದಿದ್ದರೆ ಚಂಡೇಶ್ವರನು ತನ್ನ 'ಕೃತ್ಯ ರತ್ನಾಕರ'ದಲ್ಲಿ 'ಕರ್ನಾಟ ಚೂಡಾಮಣಿ' ಎಂದು ಸಂಬೋಧಿಸಿದ್ದಾನೆ. ಮೈಥಿಲೆಯಲ್ಲಿ ಮಧುಸೂದನ ಠಾಕೂರ ರಚಿಸಿರುವ 'ಕಂಟಕೋದಾರ' (ಹಸ್ತಪ್ರತಿ)ಯಲ್ಲಿ ಓರ್ವ ರಾಮರಾಯನ ಹೆಸರಿದ್ದು, 'ಕರ್ನಾಟ ಚಕ್ರವರ್ತಿ' 'ಭುಜಬಲ ಭೀಮ' ಎಂದು ಪ್ರಶಂಸಿಸಿದೆ. ಇದರಿಂದ ಕ್ರಿ.ಶ.

---

the South" - *Inscriptions of Bengal,* Nos, 110, 113, Verse IV, of . IHQ., XII (611-12); ವಿಶೇಷಕ್ಕೆ: J.F. Fleet: *The Topographical List of Brihit Samhit,* 1973

೯ *Dynastic History of Northern India*

೧೦ 'Levi to Nepal', *Indian Antiquary,* 1880

೧೧ ರಾಸ್‌ಬಿಹಾರಿದಾಸ: ಮಿಥಿಲಾ ದರ್ಪಣ

೧೨ K.P. Baruva: *Early History of Kamarupa*

೧೩ ಮಲ್ಲದೇವನು ತನ್ನ ಹೆಸರಿನಲ್ಲಿ 'ಮಲ್ಹಾಡ' ಎಂಬ ಊರನ್ನು ಸ್ಥಾಪಿಸಿದ್ದು, ಅದನ್ನು ಕರ್ನಾಟಕದ ಗ್ರಾಮನಾಮವೆಂದೇ ಸ್ವೀಕರಿಸಬಹುದಾಗಿದೆ. (ನೇಪಾಲ-ಸುಪಾಲ ವಲಯದಲ್ಲಿ ಈ ಸ್ಥಳ ಈಗಲೂ ಅಸ್ತಿತ್ವದಲ್ಲಿದೆ).

೧೬ನೆಯ ಶತಮಾನದ ಅಂತ್ಯದವರೆಗೂ ನೇಪಾಳ-ಮಿಥಿಲೆಗಳಲ್ಲಿ ಕರ್ಣಾಟ ಅರಸರು ಬಾಳಿರಬೇಕೆಂದು ಆರ್. ಕೆ. ಚೌಧರಿ ಅಭಿಪ್ರಾಯಪಡುತ್ತಾರೆ.[೧೪]

**ಕನ್ನಡಿಗರ ಗುಣ-ಸ್ವಭಾವ ನಿರೂಪಣೆ:** ಸಂಸ್ಕೃತ ಕಾವ್ಯ-ನಾಟಕಗಳಲ್ಲಿ ಮುಖ್ಯವಾಗಿ ಶೂದ್ರಕನ ಮೃಚ್ಛಕಟಿಕದಲ್ಲಿ 'ಕರ್ಣಾಟ ಕಲಹ ಪ್ರಯೋಗಂ ಕರೋಮಿ' ಎಂದರೆ ಕನ್ನಡಿಗರು ಯುದ್ಧಪ್ರಿಯರು ಎಂದಿದೆ. ರಾಜಶೇಖರನು 'ಸಮರ ಕರ್ಮಣಿ ನಿಸರ್ಗೋದ್ಭಟಾ ಏವ ಕರ್ಣಾಟಾ' (ವಿದ್ಧಶಾಲಭಞ್ಜಕಾ) 'ಅಖಂಡಿತ ಪ್ರಸರಾಹಿ ಪುರುಷಾಕಾರಾಃ ಕರ್ಣಾಟಾನಾಂ' (ಬಾಲರಾಮಾಯಣ) 'ಕರ್ಣಾಷ್ಟಂಕಾರೋತ್ಕರ ಪಾರಿನ' (ಕಾವ್ಯಮೀಮಾಂಸೆ) ಎಂದಾಗಿ ಕನ್ನಡಿಗರ ಶೌರ್ಯ-ವೀರ ಸ್ವಭಾವಗಳನ್ನು ಎತ್ತಿ ಹೇಳುತ್ತಾನೆ. ಕರ್ನಾಟಕ ಸ್ತ್ರೀಯರ ಸೌಂದರ್ಯ, ಕಲಾಭಿಜ್ಞತೆ ಹಾಗೂ ಸಾಹಿತ್ಯಾಭಿರುಚಿಗಳ ಬಗೆಗೂ ನಮಗೆ ಆಕರಗಳು ದೊರೆಯುತ್ತವೆ. ಹಿಂದಿಯ ಪ್ರಪ್ರಥಮ ವೀರಕಾವ್ಯವಾದ ಚಂದಬರದಾಯಿಯ 'ಪೃಥ್ವೀರಾಜರಾಸೊ' (ಕ್ರಿ.ಶ. ೧೧೨೬-೬೨)ದಲ್ಲಿ ಕೆಳಗಿನ ಉಕ್ತಿಯಿದೆ:

ಲೈ ಆಯೌ ನಾಯಿಕ್ಕ ಸಥ ಕರಣಟೀ ಪ್ರಿಥಿರಾಜ
ಜತ್ರ ತತ್ರ ಏಕಠ ಭವಸಖ್ಖೈ ನಾಜ ಸಮ್ಮಜ

ಪೃಥ್ವೀರಾಜನ ಆಸ್ಥಾನದ ರಾಜನರ್ತಕಿಯೋರ್ವಳ ಹೆಸರು ಇಲ್ಲಿ 'ಕರನಾಟೀ' ಎಂದಿರುವುದು ವಿಶೇಷವಾಗಿದೆ. ಸೋಮದೇವನ 'ಯಶಸ್ತಿಲಕ ಚಂಪೂ'ದಲ್ಲಿ 'ಕರ್ಣಾಟ ಯುವತೀ ಶೈತವ ವಿದಗ್ಧ' ಎಂಬ ವರ್ಣನೆಯಿದೆ. ಜಲ್ಹಣನ 'ಸೂಕ್ತಿಮುಕ್ತಾವಲಿ'ಯಲ್ಲಿ ಕಾಳಿದಾಸನ ತರುವಾಯದಲ್ಲಿ ವೈದರ್ಭೀ ಶೈಲಿಗೆ ಹೆಸರಾದವಳು ಕನ್ನಡನಾಡಿನ ವಿಜಯೆಯೆಂಬ ಪ್ರಶಂಸೋಕ್ತಿಯಿದೆ.[೧೫] ಉತ್ತರದ ಶಕ-ವಾಕಾಟಕ-ಚೇದಿ ಮುಂತಾದ ರಾಜರೊಡನೆ ಕರ್ನಾಟಕದ ರಾಜಕನ್ಯೆಯರ ವಿವಾಹ ಪ್ರಸಂಗಗಳೇರ್ಪಟ್ಟುದರಿಂದ ಕರ್ನಾಟಕ ಸಂಸ್ಕೃತಿಯ ಕೊಡು-ಕೊಳೆ ಸಾಧ್ಯವಾಗಿದೆಯೆಂದೂ ಸಹ ನಾವಿಲ್ಲಿ ಭಾವಿಸಬಹುದಾಗಿದೆ.

**ಕರ್ನಾಟಕ ಧರ್ಮಪರಂಪರೆ:** ಕರ್ನಾಟಕಕ್ಕೆ ವಲಸೆ ಬಂದ ಔತ್ತರೇಯ ಮತ-ಧರ್ಮ-ಪಂಥಗಳಲ್ಲಿ ಬೌದ್ಧ ಧರ್ಮವು ಪ್ರಸಾರಗೊಂಡಿತಾದರೂ ಅದು ಸ್ಥಿರವಾಗಿ ಉಳಿಯಲಿಲ್ಲ. ಆದರೆ ಜೈನಮತ ಧರ್ಮ, ಕಲೆ, ಸಾಹಿತ್ಯ, ಸಂಸ್ಕೃತಿ ಕರ್ನಾಟಕದಲ್ಲಿ ವ್ಯಾಪಕವಾಗಿ ಹರಡಲು ಸಾಧ್ಯವಾಯಿತು. ವಡ್ಡಾರಾಧನದ ಭದ್ರಬಾಹುಮುನಿಗಳ ಕಥೆ, ಚಂದ್ರಗುಪ್ತಮೌರ್ಯನ ಆಳ್ವಿಕೆಯ ಕಾಲದಿಂದಲೇ ಹೇಗೆ ಜೈನಧರ್ಮಕ್ಕೆ ಕರ್ನಾಟಕದ 'ಕಳ್ವಪ್ಪು' (ಶ್ರವಣಬೆಳಗೊಳ) ಮುಖ್ಯನೆಲೆಯಾಯಿತೆಂಬುದನ್ನು ವಿವರಿಸುತ್ತದೆ.[೧೬] ಉತ್ತರಭಾರತದ ಒರಿಸ್ಸಾದಲ್ಲಿ ಪ್ರಚಲಿತವಿದ್ದ ಜೈನಧರ್ಮದ 'ಯಾಪನೀಯ' ಎಂಬ ಹೆಸರಿನ ಶ್ವೇತಾಂಬರ ಸಂಪ್ರದಾಯಕ್ಕೂ ಸಹ ಇಡೀ ದಕ್ಷಿಣಭಾರತದಲ್ಲಿ ರಕ್ಷಣೆ ದೊರಕುವಂತಾದುದು

---

೧೪ *The Later Karnatas of Mithila*

೧೫ ಸರಸ್ವತೀವ ಕರ್ಣಾಟೀ ವಿಜಯಾಂಕಾ ಜಯತ್ಯ ಸೌ
ವಿದರ್ಭಗಿರಾಂ ವಾಸಃ ಕಾಲಿದಾಸಾದನಂತರಮ್। ಜಲ್ಹಣ

೧೬ "ಕಟ್ವಿಪ್ಪುನಾಡನೆಯ್ದಿ ಪೋಗುತ್ತುಂ ಭದ್ರಬಾಹುಭಟ್ಟಾರರ್ ತಮ್ಮಾಯುಷ್ಯಪ್ರಮಾಣಮಱಿದಾಮಿಲ್ಲಿ ಸಂನ್ಯಸನಂಗೆಯ್ದಪ್ಪೆವು" -ಡಿ. ಎಲ್. ಎನ್. ಸಂ.: ವಡ್ಡಾರಾಧನ

ಕರ್ನಾಟಕದಲ್ಲಿ ಮಾತ್ರವೆಂಬುದನ್ನೂ ಸಹ ನಾವು ಮರೆಯುವಂತಿಲ್ಲ.[೧೭] ಇದರಂತೆಯೇ ಅತಿ ಪ್ರಾಚೀನವಾದ ಕೆಲವೊಂದು ಔತ್ತರೇಯ ಶೈವಶಾಖೆಗಳಾದ ಗುಜರಾಥದ ಪಾಶುಪತ-ಲಾಕುಲೀಶ, ಕಾಶ್ಮೀರ ಶೈವ, ಬಂಗಾಲ-ನೇಪಾಲಗಳ ರಸೇಶ್ವರ ಹಾಗೂ ಉತ್ತರಪ್ರದೇಶದ 'ನಾಥ' ಸಂಪ್ರದಾಯಗಳು ಕರ್ನಾಟಕದ ವೀರಶೈವದ ಮೇಲೆ ಪ್ರಭಾವ ಬೀರಲು ಕಾರಣವಾದವು.[೧೮]

**ಭಕ್ತಿಪಂಥ, ಪ್ರಸಾರ, ಪ್ರಭಾವಗಳು:** ಪದ್ಮಪುರಾಣದಲ್ಲಿ ''ಉತ್ಪನ್ನೇ ದ್ರಾವಿಡೇಸಾಹಂ ವೃದ್ಧಿಂ ಕರ್ನಾಟಕೇ ಗತಾ। ಕ್ವಚಿತ್ ಕ್ವಚಿನ್ಮಹಾರಾಷ್ಟ್ರೇ ಗುರ್ಜರೇ ಜೀರ್ಣತಾಂ ಗತಾ'' ಎಂದು ಹೇಳಿರುವುದರಿಂದ 'ಭಕ್ತಿ' ಜನಿಸಿದ್ದು ದ್ರಾವಿಡದೇಶದಲ್ಲಿ, ವೃದ್ಧಿಗೊಂಡುದು ಕರ್ನಾಟಕದಲ್ಲಿ. ಕರ್ನಾಟಕದ ಶಿವಶರಣರ ಭಕ್ತಿಪ್ರಭಾವಲಯದಲ್ಲಿ ಕಾಶ್ಮೀರದಿಂದ ಕೇರಳದವರೆಗಿನ ಶರಣರೂ ಪಾಲ್ಗೊಂಡಿದ್ದರೂ ಸಹ ಬಸವೇಶ್ವರರ ತರುವಾಯ ಅದು ಹೆಚ್ಚು ಉತ್ತರದ ಕಡೆಯಲ್ಲಿ ಪ್ರಸಾರಗೊಳ್ಳಲಿಲ್ಲ. ಆದರೆ ಕರ್ನಾಟಕದಲ್ಲೇ ಹುಟ್ಟಿದ ಮಾಧ್ವಪಂಥ, ಮಧ್ವಾಚಾರ್ಯರ ಜ್ಞಾನಯಾತ್ರೆಗಳ ಫಲವಾಗಿ ಹರಿದಾಸಪಂಥದ ಪ್ರಭಾವ ಉತ್ತರದಲ್ಲಿ ಹೆಚ್ಚುವಂತಾಯಿತು. ಮಧ್ವಾಚಾರ್ಯರು ಬಂಗಾಲದೇಶದಲ್ಲಿ ಪುರಸ್ಕೃತರಾದ ಸಂಗತಿ 'ತಾರೀಖೇ ಫಿರೋಜಶಾಹಿ' ಎಂಬ ಗ್ರಂಥದಲ್ಲಿ ವ್ಯಕ್ತಗೊಂಡಿದೆ. ಇಂದಿಗೂ ಬಂಗಾಳದ ರಾಜೇಂದ್ರಮಠದಲ್ಲಿ ಮಾಧ್ವ ಸಾಂಪ್ರದಾಯಿಕ ಆಚರಣೆ-ನೇಮಗಳು ರೂಢಿಯಲ್ಲಿವೆ. ಮಧ್ವಾಚಾರ್ಯರ ಸೈದ್ಧಾಂತಿಕ ಪ್ರಭಾವ ಬಂಗಾಲದ ಚೈತನ್ಯ ಪಂಥದ ಮೇಲೆ ದಟ್ಟವಾಗಿದೆ. ಇದಕ್ಕೆ ಕಾರಣವೂ ಉಂಟು. ಚೈತನ್ಯ ಮಹಾಪ್ರಭುವಿನ ತತ್ತ್ವಗಳನ್ನು ಪ್ರಚುರಪಡಿಸಿದ ಅವನ ಆರುಜನ ಪ್ರಮುಖ ಶಿಷ್ಯರಲ್ಲಿ ಮೂವರು ಸ್ವಾಮಿಗಳು–ರೂಪ ಗೋಸ್ವಾಮಿ, ಸನಾತನಗೋಸ್ವಾಮಿ ಹಾಗೂ ಜೀವಗೋಸ್ವಾಮಿಗಳು ಕನ್ನಡದ ಪರಂಪರೆಯಲ್ಲಿ ಬಂದವರು.

ಇವರಲ್ಲಿ ರೂಪ ಗೋಸ್ವಾಮಿಯನ್ನು ಚೈತನ್ಯಭಕ್ತಿಪಂಥದ ಮಹಾಶಿಲ್ಪಿ, ಬಂಗಾಲದ ವೈಷ್ಣವ ಭಕ್ತಿಪಂಥದ ಹರಿಕಾರನೆಂದು ಭಾವಿಸಲಾಗಿದೆ. ವಾಗ್ಗೇಯಕಾರನಾಗಿ ನಾಟಕ, ರೂಪಕಗಳ ರಚಿಯಿತೃವಾಗಿ ಅಲ್ಲದೆ ಕೃಷ್ಣಭಕ್ತಿಯ ತತ್ವ-ಸಿದ್ಧಾಂತಗಳ ಸಮಾಲೋಚಕನಾಗಿ ಬಂಗಾಲಿ ಸಾಹಿತ್ಯಚರಿತ್ರೆಗೆ ಇವನಿತ್ತ ಕೊಡುಗೆ ಅತ್ಯಪೂರ್ವವಾಗಿದೆ. ಕೃಷ್ಣನ ಆಖ್ಯಾಯಿಕೆಗಳನ್ನಾಧರಿಸಿ ಈ ದಾನಕೇಲಿಕೌಮುದಿ, ಹಂಸದೂತ, ಉದ್ದವಸಂದೇಶ, ವಿದಗ್ಧಸಂದೇಶ, ಲಲಿತಮಾಧವ, ವೃಂದಾವನಲೀಲ ಮುಂತಾದ ಉಪರೂಪಕ, ರೂಪಕಗಳನ್ನು ರಾಗ-ತಾಳ-ನೃತ್ಯ-ನಾಟಕಕ್ಕಳವಡುವಂತೆ ರಚಿಸಿದ್ದಾನೆ. ಲಘುಪ್ರಕಾರದ ಸಾಹಿತ್ಯವಷ್ಟೇ ಅಲ್ಲದೆ, 'ಪ್ರಯುಕ್ತಾಖ್ಯಾತ ಚಂದ್ರಿಕಾ' ಎಂಬ ಬಂಗಾಳಿ ಭಾಷೆಗೆ ಸಂಬಂಧಿಸಿದ ಒಂದು ವ್ಯಾಕರಣ ಕೃತಿಯನ್ನೂ ಸಹ ರಚಿಸಿದ್ದಾನೆ. ಇಂತಹ ಶ್ರೇಷ್ಠ ಶಿಷ್ಯಸಂತಾನಶ್ರೇಣಿ ಕರ್ನಾಟಕ

---

೧೭ ವಿವರಗಳಿಗೆ: ಎಂ. ಚಿದಾನಂದಮೂರ್ತಿ: ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೭೫-೭೯

೧೮ ಉತ್ತರದ ೮೪ ನಾಥರಲ್ಲಿ 'ಕಣ್ಣಪಾ' ದಕ್ಷಿಣಾತ್ಯ ಬಹುಶಃ ಕರ್ನಾಟಕದವನೆಂದು ರಾಹುಲ ಸಾಂಕೃತ್ಯಾಯನ ಭಾವಿಸಿದ್ದಾರೆ. ಗೋರಕ್ಷನಿಗೂ ಅಲ್ಲಮಪ್ರಭುವಿಗೂ ಉಂಟಾದ ಸಂಬಂಧಗಳ ಮೇಲಿಂದಲೂ ನಾವು ಉತ್ತರದ ನಾಥ ಸಂಪ್ರದಾಯದ ಪ್ರಭಾವವನ್ನು ಗುರುತಿಸಬಹುದು. ಗೋರಕ್ಷನ ಹಠಯೋಗ ಪ್ರದೀಪಿಕೆಯಲ್ಲಿ 'ಅಲ್ಲಮಾಪ್ರಭುದೇವಶ್ಚ ಕಂಡಃ... ಇತ್ಯಾದಯೋಮಹಾ ಸಿದ್ಧಾಹಠಯೋಗ ಪ್ರಭಾವತಃ' ಎಂದು ಹೇಳಿದೆ ಹಠಪ್ರ. ೧-೬ ನೋಡಿ: ಮ. ಸು. ಕೃಷ್ಣಮೂರ್ತಿ: ಸಿದ್ಧಸಾಹಿತ್ಯ.

ವಂಶವಲ್ಲರಿಯಾಗಿ ಬಂಗಾಲದಲ್ಲಿ ಹೆಸರಾದುದು ಕರ್ನಾಟಕದ ಭಕ್ತಿ ಪರಂಪರೆಯ ಚರಿತ್ರೆಯಲ್ಲಿ ಉಲ್ಲೇಖನೀಯ ಸಂಗತಿಯಾಗಿದೆ.

**ಕರ್ನಾಟಕ ಸಂಗೀತ:** 'ಉತ್ತರಾದಿ'ಯೆಂದು ಪ್ರತೀತಿಯಲ್ಲಿರುವ ಸಂಗೀತ ಪದ್ಧತಿಯಲ್ಲಿ ಆಯಾ ದೇಶ ಮಾರ್ಗ ಪದ್ಧತಿಗನುಸರಿಸಿ ವಿವಿಧ ರಾಗಗಳನ್ನು ಹೆಸರಿಸಲಾಗಿದೆ. ಅವುಗಳಲ್ಲಿ 'ಕರ್ನಾಟ' ರಾಗವೂ ಒಂದು. ಮತಂಗನ 'ಬೃಹದ್ದೇಶಿ' ಅಭಿನವಗುಪ್ತನ 'ಅಭಿನವ ಭಾರತಿ' ಕರ್ನಾಟಕ ಮಿಥಿಲೇಶ್ವರ ನಾನ್ಯದೇವನ 'ಸರಸ್ವತೀ ಹೃದಯಾಲಂಕಾರ' ಹರಿಪಾಲನ 'ಸಂಗೀತ ರತ್ನಾಕರ' ಮುಂತಾದ ಕಡೆಗಳಲ್ಲಿ 'ಕರ್ನಾಟ' ರಾಗದ ಪ್ರಶಸ್ತಿಯಿದೆ.

ದೇವಗಿರಿಯ ದೊರೆ ಸಿಂಘಣನ ಆಸ್ಥಾನ ಪೋಷಕ ಹಾಗೂ ಕೋಶಾಧ್ಯಕ್ಷನಾಗಿದ್ದ ನಿಶ್ಯಂಕ ಶಾರ್ಙ್ಗದೇವನ 'ಸಂಗೀತ ರತ್ನಾಕರ' ಭಾರತೀಯ ಸಂಗೀತಶಾಸ್ತ್ರಕ್ಕೆ ಮೂಲಾಧಾರ ಗ್ರಂಥವೆಂದು ಮಾನ್ಯವಾಗಿದೆ. 'ಕರ್ನಾಟಕ' ಸಂಗೀತವನ್ನು 'ದಕ್ಷಿಣಾದಿ' ಪದ್ಧತಿಯೆಂದು ಕರೆಯಲಾಗುತ್ತಿದ್ದರೂ ಶಾರ್ಙ್ಗದೇವ ಎಲ್ಲಿಯೂ ತನ್ನ ಗ್ರಂಥದಲ್ಲಿ ಅದನ್ನು 'ದಕ್ಷಿಣಾದಿ'ಯೆಂದೂ ಕರೆಯದೆ ಕರ್ನಾಟ ಸಂಗೀತವೆಂದೇ ಹೆಸರಿಸುತ್ತಾನೆ. ಉತ್ತರಾದಿ ರಾಗಗಳೊಂದಿಗೆ ಹೊಂದಿಸಿ ಕರ್ನಾಟಕ ಸಂಗೀತದ ವ್ಯಾಪ್ತಿಯನ್ನು ಭಾರತಾದ್ಯಂತ ಪ್ರಚುರಪಡಿಸಿದ ಕೀರ್ತಿ ಶಾರ್ಙ್ಗದೇವನದಾಗಿದೆ. ಇದನ್ನು ಇನ್ನಷ್ಟು ಸ್ಥಿರಗೊಳಿಸಿ ಅದರ ಪ್ರಸಾರಕ್ಕೆ ಕಾರಣನಾದ ವ್ಯಕ್ತಿ 'ಪುಂಡರೀಕ ವಿಠಲ', ತನ್ನನ್ನು 'ಕರ್ನಾಟ ಜಾತೀಯ'ನೆಂದೇ 'ಸದ್ರಾಗಚಂದ್ರೋದಯ'ದ ಪ್ರತಿ ಪ್ರಕರಣಾಂತ್ಯದಲ್ಲಿ ಹೇಳಿಕೊಂಡಿದ್ದಾನೆ.[೧೯] ಪುಂಡರೀಕ ವಿಠಲನ ಜೀವನ ವೃತ್ತಾಂತಗಳು ಅತ್ಯಂತ ರೋಚಕವಾಗಿವೆ. ಹುಟ್ಟು ಕನ್ನಡಿಗನಾದರೂ ಔತ್ತರೇಯ ಸಂಗೀತದ ಮಹೋಪಾಸಕನಾದ ಈತನನ್ನು ಹಿಂದುವಾಗಿದ್ದರೂ ಕಲಾಪ್ರೇಮದಿಂದಾಗಿ ಅಹಮ್ಮದನಗರದ ಬುರಹಾನಖಾನ್ ಈತನಿಗೆ ಆಶ್ರಯವಿತ್ತು ಅವ್ಯವಸ್ಥಿತವಾದ ಸಂಗೀತವನ್ನು ಸುವ್ಯವಸ್ಥಿತಗೊಳಿಸಬೇಕೆಂದು ಬಿನ್ನವಿಸಿದಾಗ 'ಸದ್ರಾಗಚಂದ್ರೋದಯ' ಗ್ರಂಥವನ್ನು ಪುಂಡರೀಕ ವಿಠಲ ರಚಿಸಿದ್ದಾಗಿ ತಿಳಿದುಬರುತ್ತದೆ. ರಾಗಮಂಜರಿ ಅಥವಾ ರಾಗ-ರಾಗಿಣಿ ಪದ್ಧತಿಗಳನ್ನು ಇದರಲ್ಲಿ ವಿವರಿಸಲಾಗಿದ್ದು ಮೇಳಪದ್ಧತಿಯ ಸಂಗೀತಕ್ಕೆ ಇವನ ಗ್ರಂಥ ಆಕರವಾಗಿದೆ. ಅಹಮ್ಮದನಗರದ ಪತನಾನಂತರ ಗ್ವಾಲಿಯರದ ಮಾರಸಿಂಹನ ಆಸ್ಥಾನದಲ್ಲಿ ಕೆಲಕಾಲವುಳಿದು ಅನಂತರ ಮೊಗಲ್ ಬಾದಶಹನಾದ ಅಕ್ಬರನ ಆಸ್ಥಾನ ಗಾಯಕರಲ್ಲಿ ವಿರಾಜಿತನಾಗಿ ವಿಖ್ಯಾತನಾದುದು ಕರ್ನಾಟಕ ಸಂಗೀತಗಾರನೊಬ್ಬನ ದಿಗ್‌ದಿಗಂತದ ಪ್ರಭಾವಕ್ಕೆ ನಿದರ್ಶನ. ಇದರಂತೆಯೇ 'ಸಂಗೀತ ಚಂದ್ರೋದಯ'ದ ಕರ್ತೃ ಲಕ್ಷ್ಮೀಧರಪಂಡಿತನ ಮಗ ದಾಮೋದರಪಂಡಿತನೂ ಸಹ ಕನ್ನಡಿಗನೇ ಆಗಿದ್ದು ಜಹಂಗೀರನ ಆಸ್ಥಾನ ಗಾಯಕನಾಗಿದ್ದು 'ಸಂಗೀತದರ್ಪಣ'ವನ್ನು ಬರೆದಿದ್ದಾನೆ.

**ಶಿಲ್ಪ-ಚಿತ್ರ-ನಾಟ್ಯ-ನಾಟಕ ಕಲೆಗಳ ಪ್ರಸಿದ್ಧಿ:** ಕರ್ನಾಟಕವು ಕಲೆಗಳ ಬೀಡೆಂಬುದು ಕೇವಲ ಕರ್ನಾಟಕದ ಇಂದಿನ ಗಡಿರೇಖೆಗಳನ್ನು ಗಮನಿಸಿ ಹೇಳಿದರೆ ಅದರ ವ್ಯಾಪ್ತಿಗೆ ಅರ್ಥವೇ ಉಳಿಯುವುದಿಲ್ಲ. ಅದನ್ನು ನಾವು ಐತಿಹಾಸಿಕವಾಗಿ ನೋಡಿದಾಗ ಕರ್ನಾಟಕದ

---

೧೯ ''ಇತಿ ಶ್ರೀ ಕರ್ನಾಟ ಜಾತೀಯ ಪುಂಡರೀಕ ವಿಠಲ ವಿರಚಿತೇ ಸದ್ರಾಗ ಚಂದ್ರೋದಯೇ''- ಪ್ರಕರಣಾಂತ್ಯ ಗದ್ಯ

ಆಳರಸರು ಕರ್ನಾಟಕ ಸಂಸ್ಕೃತಿಯ ಹೆಗ್ಗುರುತುಗಳನ್ನು ಕಲಾಪ್ರಪಂಚದಲ್ಲಿ ಹೇಗೆ ಸ್ಥಿರಗೊಳಿಸಿ, ಸಮನ್ವಯೀಕರಿಸಿ ಹೋಗಿರುವರೆಂಬ ಅಂಶ ಸ್ಪಷ್ಟವಾಗುತ್ತದೆ.

ಅಶೋಕನ ಕಾಲದಿಂದಲೂ ಬೌದ್ಧರ ಚೈತ್ಯ, ಸ್ತೂಪ ಮಾದರಿಯ ಕಟ್ಟಡಗಳನ್ನು ನಾವು ಕರ್ನಾಟಕದಲ್ಲಿ ಕಾಣುತ್ತೇವೆ. ಫರ್ಗ್ಯುಸನ್ ಪ್ರಪ್ರಥಮವಾಗಿ ಹೆಸರಿಸಿದ 'ಚಾಳುಕ್ಯ ಶಿಲ್ಪ' ಎಂಬುದು ದಕ್ಷಿಣದ ದ್ರಾವಿಡ ಹಾಗೂ ಉತ್ತರದ 'ನಾಗರ' ಇವೆರಡು ಶಿಲ್ಪಶೈಲಿಗಳ ಮಿಶ್ರಛಾಯೆಯನ್ನೊಳಗೊಂಡಿವೆಯೆಂಬುದಕ್ಕೆ ಐಹೊಳೆಯ ದುರ್ಗಾ ದೇವಾಲಯ ಇಲ್ಲಿ ಉಲ್ಲೇಖನೀಯವಾಗಿದೆ. ಬಾದಾಮಿಯ ಗವಿಗಳಿಗೂ ಅಜಂತೆಯ ಲೋಕಪ್ರಸಿದ್ಧ ಗುಹಾಂತರ ದೇವಾಲಯಗಳಿಗೂ ಶಿಲ್ಪ, ವಿಗ್ರಹ ಹಾಗೂ ವಾಸ್ತುಶಿಲ್ಪ ಮಾದರಿಯಲ್ಲಿ ನಿಕಟ ಸಂಬಂಧವಿದೆ. ಬಾದಾಮಿಯ ಒಂದು ಶಿವ ದೇವಾಲಯದಲ್ಲಿರುವ ಲಾಕುಲೀಶ ಶಿವ ವಿಗ್ರಹ ಕುರಿತು ಹೆನ್ರಿ ಕಸಿನ್ಸ್ ಹೇಳುವಂತೆ ಇಲ್ಲಿನ ಶಿಲ್ಪ ವಿಗ್ರಹ ಮಾದರಿಯನ್ನು ಹೋಲುವ ಇತರ ವಿಗ್ರಹಗಳು ಮಧ್ಯಪ್ರದೇಶ, ರಾಜಸ್ತಾನ ಹಾಗೂ ಬರೋಡ ಜಿಲ್ಲೆಯ ಕಾರವಾನಗಳಲ್ಲಿ ದೊರೆಯುತ್ತವೆ. ಚಾಳುಕ್ಯಶಿಲ್ಪದ ಪ್ರಸಿದ್ಧಿ ಕೇವಲ ಕರ್ನಾಟಕದ ಉತ್ತರಭಾಗದಲ್ಲಿ ಮಾತ್ರವಲ್ಲದೆ ಉತ್ತರದ ಗೋದಾವರಿವರೆಗೂ ಹೆಚ್ಚಿದೆ. ಮಹಾರಾಷ್ಟ್ರದ 'ಹೇಮಾಡಪಂಥಿ' ಗುಡಿಗಳ ಮೇಲೆ ಚಾಳುಕ್ಯಶಿಲ್ಪ ಪ್ರಭಾವ ಎದ್ದು ಕಾಣುತ್ತದೆ. ಫರ್ಗ್ಯೂಸನರೇ ಇದರ ವ್ಯಾಪ್ತಿಯ ಮೇರೆಗಳನ್ನು ಒಂದೆಡೆಗೆ ಕೊಟ್ಟಿದ್ದಾರೆ.

ರಾಷ್ಟ್ರಕೂಟ ಕನ್ನರನ ವಿಜಯ ಪ್ರಶಸ್ತಿಯನ್ನು ಸಾರುವ ಒಂದು ಕನ್ನಡ ಶಿಲಾಶಾಸನ ಇಂದಿನ ಮಧ್ಯಪ್ರದೇಶದ ಮೇಹರ್ ಹತ್ತಿರದ 'ಜುರಾ' ಎಂಬಲ್ಲಿನ ದೇವಾಲಯವೊಂದರಲ್ಲಿ ಸಿಕ್ಕಿರುವುದನ್ನು ನೋಡಿದರೆ ಕರ್ನಾಟಕ ಭಾಷೆ, ಲಿಪಿ, ಶಿಲ್ಪ-ಕಲೆಗಳ ಸಾಂಸ್ಕೃತಿಕ ವಿಸ್ತಾರದ ಬೃಹದ್ ಕಲ್ಪನೆ ನಮಗಾಗುತ್ತದೆ. ರಾಷ್ಟ್ರಕೂಟ ದೊರೆ ಮುಮ್ಮಡಿ ಕೃಷ್ಣ ನಿರ್ಮಿತ ಎಲ್ಲೋರಾದ ಕೈಲಾಸ ದೇವಾಲಯದ ಕೀರ್ತಿಯಂತೂ ಅನ್ಯಾದೃಶ. ಇದರ ವೈಭವದ ವರ್ಣನೆ ಬರೋಡೆಯ ತಾಮ್ರಪಟಗಳಲ್ಲಿ ನಿರೂಪಿತವಾಗಿದೆ. ಮಿಥಿಲೇಶ್ವರ ಕರ್ನಾಟಕ ದೊರೆಗಳು ಸಹ ದೇವಾಲಯಗಳನ್ನಲ್ಲದೆ ಲೋಕಕಲ್ಯಾಣಾರ್ಥವಾಗಿ ದೊಡ್ಡ ದೊಡ್ಡ ಕೆರೆಕುಂಟೆಗಳನ್ನು ನೇಪಾಲ, ಬಂಗಾಲ, ಹರಬಂಗಾ ಹಾಗೂ ಓರಿಸ್ಸಾ ಕಡೆಗಳಲ್ಲಿ ಕಟ್ಟಿಸಿರುವ ಸಂಗತಿ ವ್ಯಕ್ತಪಡುತ್ತದೆ. ವಿಜಯನಗರ ಕಾಲಕ್ಕೆ ಮುಸ್ಲೀಂ ಪ್ರಭಾವ ಹೆಚ್ಚಿದಾಗ ಹಿಂದೂ-ಮುಸ್ಲೀಂ ಶೈಲಿದ್ವಯದಲ್ಲಿ ಇಂಡೋ-ಸಾರ್ಸೆನಿಕ್ ಮಾದರಿಯ ಕಟ್ಟಡಗಳು ನಿರ್ಮಾಣಗೊಂಡುದಕ್ಕೆ ಇಂದಿಗೂ ವಿಜಯನಗರದಲ್ಲಿನ 'ಕಮಲಮಹಲ್' ಒಂದು ಉದಾಹರಣೆಯಾಗಿದೆ.

ಮಥುರಾ, ವೃಂದಾವನ ಕಡೆಗಳಲ್ಲಿ ಇಂದು ಪ್ರಚಲಿತವಾಗಿರುವ 'ರಾಸಲೀಲಾ' ನೃತ್ಯನಾಟಕ ಶೈಲಿಯ ಸಂಯೋಜನೆ, ಪ್ರದರ್ಶನ ಹಾಗೂ ಸಂಗೀತ ಪದ್ಧತಿಗಳಿಗೆ ರೂಪುಕೊಟ್ಟವರಲ್ಲಿ ರಘುನಾಥಪಂಡಿತನೆಂಬವನ ಉದಾರ ಕೊಡುಗೆಯಿದೆ. ಇವನಿಗೆ ಅಂದು ಸಹಾಯಕರಾಗಿದ್ದವರು ಚೈತನ್ಯಭಕ್ತಿ ಪ್ರಸಾರಕರಾದ ಮೂವರು ಗೋಸ್ವಾಮಿಗಳು. ಇವರೆಲ್ಲರೂ ಕರ್ನಾಟಕದಿಂದ ಮಿಂಚಿದ ಪ್ರತಿಭಾನ್ವಿತ ವ್ಯಕ್ತಿಗಳೆಂಬುದು ಇಲ್ಲಿ ಸಂಸ್ಮರಣೀಯವಾಗುತ್ತದೆ. ಕರ್ನಾಟಕ ನಾಟ್ಯ, ನಾಟ್ಯಕಾರ ಹಾಗೂ ನಾಟಕಕರ್ತೃಗಳ ಲೋಕಪ್ರಸಿದ್ಧಿಯನ್ನು ಕುರಿತು ನಾವಿಲ್ಲಿ ಒಂದು ಅಲ್ಪಜ್ಞಾತವಾದ ಸಂಗತಿಯೊಂದರ ಕಡೆಗೆ ಗಮನ ಸೆಳೆಯಬಹುದಾಗಿದೆ. ವಿಜಯನಗರದ ಕಾಲವೆಂದರೆ ಕರ್ನಾಟಕದ ಲಲಿತಕಲೆಗಳು ಮುಖ್ಯವಾಗಿ ನಾಟ್ಯ, ನಾಟಕ ಕಲೆಗಳು ಪರಿಪೂರ್ಣ ವಿಕಾಸಗೊಂಡ ಕಾಲ. ವಿಜಯನಗರದ

ನರ್ತಕಿಯರ ಬಗೆಗೂ ನಾಟ್ಯಶಾಲೆಗಳ ಬಗೆಗೂ ಅಂದಿನ ವಿದೇಶೀಯರ ಬರೆಹಗಳಲ್ಲೂ ನಮ್ಮ ಕಾವ್ಯ, ಪುರಾಣಗಳಲ್ಲೂ ಸಾಕಷ್ಟು ಉಲ್ಲೇಖಗಳು ನಮಗೆ ದೊರೆಯುತ್ತವೆ.[೨೦] ೧೫ನೆಯ ಶತಮಾನದ ಮಧ್ಯಗಡುವು. ೨ನೆಯ ದೇವರಾಯ ಅಥವಾ ಪ್ರೌಢದೇವರಾಯನ ಆಳ್ವಿಕೆಯ ತರುವಾಯ ಆತನ ಮಗ ಮಲ್ಲಿಕಾರ್ಜುನನು ಸಿಂಹಾಸನದಲ್ಲಿದ್ದಾಗ ಆಸ್ಥಾನದ ಪಂಡಿತರನ್ನು ''ನಮ್ಮ ತಂದೆಯವರ ಕಾಲದಲ್ಲಿ ಪ್ರಸಿದ್ಧನಾಗಿದ್ದ 'ಗಂಗಾಧರ ಕವಿ' ಈಗ ಎಲ್ಲಿ?'' ಎಂದು ಪ್ರಶ್ನಿಸುತ್ತಾನೆ. ಉತ್ತರದಿಂದ ಬಂದ ಓರ್ವ ವೈತಾಳಿಕನು ಗಂಗಾಧರ ಕವಿಯ ಔತ್ತರೇಯ ಕಲಾದಿಗ್ವಿಜಯದ ಸವಿಸ್ತಾರ ಮಾಹಿತಿಯನ್ನಿತ್ತು ಇಲ್ಲಿನ ನಾಟ್ಯ ಕಲಾವಿದರನ್ನು ಗುಜರಾಥದ ಚಂಪಾನೇರಕ್ಕೆ ಕರೆತರಲು ತನ್ನನ್ನು ಕಳುಹಿಸಿರುವುದಾಗಿ ತಿಳಿಸುತ್ತಾನೆ. ಈ ಸಂಗತಿ ಗಂಗಾಧರ ಪ್ರಣೀತ 'ಗಂಗಾದಾಸ ಪ್ರತಾಪ ವಿಲಾಸಂ' ಎಂಬ ಸಂಸ್ಕೃತ ನಾಟಕದಲ್ಲಿ ಪ್ರಸ್ತಾಪಗೊಂಡಿದೆ. ಗಂಗಾಧರನು ಪ್ರೌಢದೇವರಾಯನ ಆಸ್ಥಾನದಲ್ಲಿ ಸಾಕಷ್ಟು ಪ್ರಸಿದ್ಧನಾದ ಮೇಲೆ ಹೊರರಾಜ್ಯದ ವಿದ್ವದ್‌ಗೋಷ್ಠಿಗಳಲ್ಲಿ ವಿಜಯ ಸಾಧಿಸಲು ಹೊರಡುತ್ತಾನೆ. ಮೊದಲು ದ್ವಾರಕೆಯ ಯಾತ್ರೆ ಮುಗಿಸಿ ಅಹಮ್ಮದಾಬಾದಿನ ೨ನೆಯ ಮಹಮ್ಮದನ ಆಸ್ಥಾನದ ಪಂಡಿತರನ್ನು ಮೂಕವಿಸ್ಮಿತಗೊಳಿಸಿ ಅವನಿಂದ ಸನ್ಮಾನಿತನಾಗುತ್ತಾನೆ. ಅನಂತರ ಗುಜರಾಥದ ಚಂಪಾನೇರದ ಗಂಗಾದಾಸ ದೊರೆಯ ಆಶ್ರಯದಲ್ಲಿ ಉಳಿಯುತ್ತಾನೆ. ಚಂಪಾನೇರದ ಆಳಿಕೆ ಕೊನೆಗೊಂಡ ಮೇಲೆ ಜುನಾಗಡದಲ್ಲಿ ನೆಲಸಿ ಮಾಂಡಲಿಕ ಮಹಾಕಾವ್ಯವನ್ನು ರಚಿಸಿರುವುದಾಗಿಯೂ ತಿಳಿದುಬರುತ್ತದೆ. ಚಂಪಾನೇರದ ಗಂಗಾದಾಸನು ಮ್ಲೇಚ್ಛನಾದ ಅಹಮ್ಮದನಗರದ ಸುಲ್ತಾನ ಮಹಮ್ಮದನಿಗೆ ತನ್ನ ಮಗಳನ್ನು ಧಾರೆಯೆರೆಯಲೊಪ್ಪದೆ ಯುದ್ಧ ಸಾರಿ ಅದರಲ್ಲಿ ಜಯಶಾಲಿಯಾದ ಪ್ರಸಂಗವನ್ನಾಧರಿಸಿ ಗಂಗಾಧರ ಕವಿಯು ಬರೆದ ನಾಟಕವೇ 'ಗಂಗಾದಾಸ ಪ್ರತಾಪ ವಿಲಾಸಂ.' ಇದನ್ನು ಪ್ರತ್ಯಕ್ಷ ಪ್ರಯೋಗಕ್ಕೆ ತಂದು ಅಭಿನಯಕ್ಕಾಗಿ ಅಲ್ಲಿ ಯೋಗ್ಯ ನಟರು ದೊರಕದಿದ್ದಾಗ ವಿಜಯನಗರದ ನಾಟ್ಯ ಕಲಾವಿದರನ್ನು ಕರಸಿಕೊಂಡು ಅದನ್ನು ಮಹಾನವಮಿಯ ಪರ್ವಕಾಲದಲ್ಲಿ ಅಲ್ಲಿ ಪ್ರದರ್ಶಿಸಲಾಯಿತು. ವಿಜಯನಗರದ ಕಲೆ, ಸಂಸ್ಕೃತಿ, ಪರ್ವ, ಉತ್ಸವಗಳೆಲ್ಲವೂ ಇಲ್ಲಿ ಚಿತ್ರಿತವಾಗಿರುವುದಷ್ಟೇ ಅಲ್ಲ, ಅದರ ಅಭಿನಯದಲ್ಲಿ ಪಾಲ್ಗೊಂಡವರೂ ಸಹ ಕರ್ನಾಟಕದ ನಟರು. ಅದರ ರಚಯಿತೃ ಕನ್ನಡಿಗ. ಗುಜರಾಥದ ಚಂಪಾನೇರದ ದೊರೆ 'ಗಂಗಾದಾಸ'ನ ಮುಖದಿಂದಲೇ ಆ ನಾಟಕದಲ್ಲಿ ಹೊರಹೊಮ್ಮಿ ಬರುವ ಒಂದು ಮಾತು: 'ಕರ್ಣಾಟ ನಾಟ್ಯಕಾರೇಣ ಯುವರಾಜಾದಿ ರೂಪಕಾಭಿನಯಂ ಕರೋಮಿ!' ಏಕೈಕ ಲಭ್ಯವಾದ ಈ ನಾಟಕದ ಹಸ್ತಪ್ರತಿ ಇದೀಗ ಗಾಯಕವಾಡ ಪ್ರಾಚ್ಯ ಸಂಶೋಧನ ಮಾಲಿಕೆಯಲ್ಲಿ ಪ್ರಕಟಗೊಂಡಿದ್ದು, ಅದರ ಪೂರ್ವಪೀಠಿಕೆಯಲ್ಲಿ ಮೇಲಿನ ಸಂಗತಿಗಳನ್ನೂ ಪ್ರಸ್ತಾಪಿಸಲಾಗಿದೆ.

ಇಂತಹ ಇನ್ನೆಷ್ಟೋ ಅನ್ಯತ್ರ ಕಡೆಗಳಲ್ಲಿನ ಕರ್ನಾಟಕ ಸಂಸ್ಕೃತಿಯ ಕುರುಹುಗಳನ್ನು ನಾವು ಒಂದೆಡೆಗೆ ಸಂಗ್ರಹಿಸಿ, ಬೃಹತ್ ಸಾಂಸ್ಕೃತಿಕ ಕರ್ನಾಟಕದ ಪರಿಕಲ್ಪನೆ ನಮಗಷ್ಟೇ ಅಲ್ಲದೆ ಹೊರಗಿನವರಿಗೂ ಸಹ ಹೊಳೆಯುವಂತೆ ಮಾಡುವ ಪ್ರಯತ್ನ ನಡೆಯಬೇಕಾಗಿದೆ. ಜನಾಂಗ, ಭಾಷೆ, ಧರ್ಮ, ಕಲೆ, ಆಡಳಿತ, ಸಾಹಿತ್ಯ, ಸಮಾಜ ಇವು ಯಾವುದೇ ನಾಡಿನವರಿಗೂ ಸಹ ಅವರವರ ಮಟ್ಟಿಗೆ ಅಭಿಮಾನದ ವಿಷಯಗಳೇ ಆಗುತ್ತವೆ. ಆದರೆ ಸಾಂಸ್ಕೃತಿಕ ಸಂದರ್ಭದಲ್ಲಿ

೨೦ B. A. Saletore: *Political and Social Life under Vijayanagar Empire*

ಇಂತಹ ವಿಷಯಗಳಿಗೆ ಭೌಗೋಲಿಕ, ರಾಜಕೀಯವಾದ ಗಡಿರೇಖೆಗಳನ್ನು ಗೊತ್ತುಪಡಿಸುವುದು ಆಗದ ಮಾತು. ಸಂಸ್ಕೃತಿಯ ಅರ್ಥ ವಿಶಾಲವಾದುದು. ಅದು ಪರಸ್ಪರ ಪ್ರೇರಿತ, ಪೋಷಿತ. ಕರ್ನಾಟಕ ಸಂಸ್ಕೃತಿ ತನ್ನ ಸತ್ತ್ವವನ್ನು ಹೊರಗೆ ಪ್ರಕಟಿಸಿರುವಂತೆ ಹೊರಗಿನ ಎಷ್ಟೋ ಅಂಶಗಳಿಂದ ಪ್ರಭಾವಗೊಂಡುದೂ ಉಂಟು. ಈ ನಿಟ್ಟಿನಲ್ಲಿ ಪಾರಸ್ಪರಿಕ ಸಾಂಸ್ಕೃತಿಕ ವಿನಿಮಯದ ಅಧ್ಯಯನಕ್ಷೇತ್ರವನ್ನು ನಾವೀಗ ವಿಸ್ತರಿಸಬೇಕಾಗಿದೆ.

*ಸಂಶೋಧನ, ೧೯೯೧, ಪು. ೫೬೭-೭೬*



# ೧೪. ಚಿತ್ರದುರ್ಗ ಜಿಲ್ಲೆಯಲ್ಲಿ ಬೌದ್ಧಧರ್ಮದ ಕುರುಹುಗಳು

● ಹುಲ್ಲೂರು ಶ್ರೀನಿವಾಸ ಜೋಯಿಸ

ಉತ್ತರ ಭರತಖಂಡದ ಕಪಿಲವಸ್ತುವಿನ ರಾಜಪುತ್ರನಾದ ಸಿದ್ಧಾರ್ಥನು ತನ್ನ ೩೫ನೆಯ ವರ್ಷದಲ್ಲಿ ಬೋಧಿಜ್ಞಾನ ಪಡೆದು ೪೫ ವರ್ಷಗಳ ಕಾಲ ಊರೂರುಗಳನ್ನು ಅಲೆದು ಧರ್ಮ ಬೋಧನ ಮಾಡಿ ತನ್ನ ೮೦ನೆಯ ವರ್ಷದಲ್ಲಿ ಪರಿನಿರ್ವಾಣ ಹೊಂದಿದನು. ಅಂದಿನಿಂದ ಎರಡೂವರೆ ಶತಮಾನ ಕಾಲ ಬೌದ್ಧಧರ್ಮ ರಾಜಾಶ್ರಯ ಪಡೆದು ಉತ್ತರ ಭರತ ಖಂಡದಲ್ಲಿ ಪ್ರಚಾರದಲ್ಲಿತ್ತು. ಆದರೆ ಅದನ್ನು ಪ್ರಪಂಚದ ಮುಖ್ಯ ಧರ್ಮವನ್ನಾಗಿ ಹರಡಿದ ಕೀರ್ತಿಯು ಅಶೋಕ ಚಕ್ರವರ್ತಿಗೆ ಸಲ್ಲುತ್ತದೆ. ಕಳಿಂಗಯುದ್ಧದಲ್ಲಿ ಆದ ಮಾನವ ಹಿಂಸೆಯನ್ನು ಕಂಡು ಚಿಂತೆಗೊಳಗಾಗಿ, ಮನ ಮರುಗಿ ಜೀವರಾಶಿಗಳೆಲ್ಲಾ ಶಾಂತಿಯಿಂದ ಬಾಳಬೇಕೆಂಬ ಹೆಬ್ಬಯಕೆಯಿಂದ ಅಶೋಕನು ಸಾಮ್ರಾಜ್ಯದ ಸಮಸ್ತ ಭಾಗಗಳಲ್ಲಿಯೂ ಬೌದ್ಧ ಧರ್ಮದ ಸಾರವನ್ನು ಸಾರುವ ಶಿಲಾಸ್ತಂಭಗಳನ್ನೂ, ಶಿಲಾಶಾಸನಗಳನ್ನೂ ಕೊರೆಯಿಸಿದನು. ಧರ್ಮಮಹಾಮಾತ್ರರುಗಳನ್ನು ನೇಮಿಸಿದನು. ಏಷ್ಯಾಖಂಡದ ನಾನಾ ದೇಶಗಳಿಗೂ, ಯೂರೋಪುಖಂಡದ ಪೂರ್ವ ಭಾಗಕ್ಕೂ, ಈಜಿಪ್ಟ್ ಮುಂತಾದ ದೇಶಗಳಿಗೂ ಧರ್ಮಪ್ರಸಾರಕರನ್ನು ಕಳುಹಿಸಿದನು. ಇದರಿಂದ ಬೌದ್ಧಧರ್ಮವು ಹರಡಿ ಇಂದು ಏಷ್ಯಾಖಂಡದ ನಾನಾ ರಾಜ್ಯಗಳ ಮುಖ್ಯ ಧರ್ಮವಾಗಿ ಪ್ರಪಂಚದ ಮುಖ್ಯ ಧರ್ಮಗಳಲ್ಲಿ ಒಂದಾಗಿ ಪ್ರಸಿದ್ಧವೆನಿಸಿದೆ. ಹೀಗಿದ್ದರೂ ಅದು ಪ್ರಾರಂಭವಾದ ಭರತಖಂಡದಲ್ಲೇ ನಶಿಸಿಹೋಗಿದೆ. ಒಮ್ಮೆ ಈ ಬೌದ್ಧಧರ್ಮವು ಭರತಖಂಡದ ಮುಖ್ಯ ಧರ್ಮವಾಗಿತ್ತೆಂಬ ಕುರುಹುಗಳೂ ಸಹ ದೊರೆಯದಂತಾಗಿದೆ. ಚಿತ್ರದುರ್ಗ ಜಿಲ್ಲೆಯಲ್ಲಿರುವ ಬೌದ್ಧಧರ್ಮದ ಕುರುಹುಗಳನ್ನು ಓದುಗರ ಗಮನಕ್ಕೆ ತರುವುದೇ ಈ ಲೇಖನದ ಉದ್ದೇಶವಾಗಿದೆ.

ಧರ್ಮ, ಅರ್ಥ, ಕಾಮ, ಮೋಕ್ಷಗಳೇ ಭಾರತೀಯ ಜೀವನದ ಹೆಗ್ಗುರಿ. ಇಹಲೋಕದಲ್ಲಿ ಸುಖವೂ ಪರಲೋಕದಲ್ಲಿ ಮೋಕ್ಷವೂ ಸಾಧಿಸುವ ಮಾರ್ಗವೇ ಧರ್ಮ. ಧರ್ಮಸಂಸ್ಥಾಪನೆಯೇ ರಾಜನ ಮುಖ್ಯವಾದ ರಾಜನೀತಿ. ತನ್ನ ಪ್ರಜೆಗಳೆಲ್ಲರೂ ಸುಖಶಾಂತಿಯಿಂದ ಬಾಳಬೇಕೆಂಬ ರಾಜನೀತಿಯಿಂದ ಅಶೋಕ ಚಕ್ರವರ್ತಿಯು ಪ್ರಜೆಗಳು ಅನುಸರಿಸಬೇಕಾದ ಸಾಧಾರಣವಾದ ಧರ್ಮಮಾರ್ಗವನ್ನು ಬಂಡೆಗಳ ಮೇಲೂ, ಶಿಲಾಸ್ತಂಭಗಳ ಮೇಲೂ ಬರೆಯಿಸಿ ತನ್ನ ರಾಜ್ಯದ ಹಲವು ಕಡೆಗಳಲ್ಲಿ ಸ್ಥಾಪಿಸಿದನು. ಹೀಗೆ ಕೊರೆಯಿಸಿದ ಬಂಡೆಯ ಶಾಸನಗಳಲ್ಲಿ ಮೂರು ಶಾಸನಗಳು ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲ್ಲೂಕಿನಲ್ಲಿ ದೊರೆತಿವೆ.

೧ **ಅಶೋಕ ಶಾಸನಗಳು:** ಚಿತ್ರದುರ್ಗದ ಸಮೀಪದ ಓಬಳೇಗುಡ್ಡದಲ್ಲಿ ಹುಟ್ಟುವ ಜನಗಿಹಳ್ಳವೆಂಬ ಸಣ್ಣನದಿಯು ಚಿಕ್ಕಹಗರಿ (ಅಗ+ಹರಿ=ಪಾಪನಾಶಿನಿ) ಎಂಬ ಹೆಸರಿನಿಂದ ಬೆಂಗಾಡಾದ ಭೂಮಿಯನ್ನು ನಲಿವ ನಂದನವನ್ನಾಗಿ ಮಾಡಿ ಜಟ್ಟಂಗಿಗಿರಿ ಮತ್ತು ಬ್ರಹ್ಮಗಿರಿ ಎಂಬ ಎರಡು ಗುಡ್ಡಗಳ ಮಧ್ಯಭಾಗದಲ್ಲಿ ಪ್ರಶಾಂತವಾಗಿ ಹರಿಯುತ್ತಿದೆ. ಈ ಸ್ಥಳವು ರಾಮಾಯಣ ಕಾಲದಿಂದಲೂ ಸೀತಾದೇವಿಯ ಚೋರನಾದ ರಾವಣನೊಡನೆ ಜಟಾಯುವು ಕಾದಾಡಿ ವೀರ ಮರಣವನ್ನು ಹೊಂದಿದ ಪುಣ್ಯಭೂಮಿ ಎಂಬ ಹೆಸರಿನಿಂದ

ಪ್ರಸಿದ್ಧವಾಗಿದೆ. ಜನಕತನಯಳ ಸ್ನಾನಪುಣ್ಯೋದಕವೆಂಬ ಸೀತಾ ದೋಣೆಯಿಂದಲೂ, ಶ್ರೀರಾಮನು ಏಕಾಂತವಾಸಮಾಡಿದ ರಾಮಗಿರಿ ಆಶ್ರಮದಿಂದಲೂ ಇದು ಪುಣ್ಯಭೂಮಿಯಾಗಿದೆ. ಇಲ್ಲಿ ಅಶೋಕ ಚಕ್ರವರ್ತಿಯು ಮೂರು ಶಾಸನಗಳನ್ನು ಪಾಳಿ ಭಾಷೆಯಲ್ಲಿ ಕೊರೆಯಿಸಿದನು. ಇವು ಬ್ರಾಹ್ಮೀ ಲಿಪಿಯಲ್ಲಿವೆ. ಅಖಿಲ ಕರ್ನಾಟಕದಲ್ಲಿಯೇ ಅತ್ಯಂತ ಪ್ರಾಚೀನ ಶಿಲಾಕ್ಷರಗಳು ಇವು.

೧. ಚಿನ್ನ ಹಗರಿಯ ಬಲದಡದ ಬ್ರಹ್ಮಗಿರಿಯ ತಪ್ಪಲಲ್ಲಿರುವ ಬಂಡೆ ಶಾಸನವು ಅನೂಚಾನದಿಂದಲೂ '**ಅಕ್ಷರಗುಂಡು**' ಎಂಬ ಹೆಸರಿನಿಂದ ಕರೆಯಲ್ಪಡುತ್ತಿದೆ. ಈ ಬಂಡೆಯ ಮೇಲಿರುವ ಅಕ್ಷರಗಳನ್ನು ನೀರಿನಿಂದ ತೊಳೆದು, ಆ ತೀರ್ಥವನ್ನು ಸೇವಿಸಿದರೆ ಮಾನವರ ಮತ್ತು ಪ್ರಾಣಿಗಳ ಕಾಹಿಲೆಗಳು ಗುಣವಾಗುವುವೆಂಬ ನಂಬಿಕೆ ಸುತ್ತಮುತ್ತಲಿನ ಪ್ರದೇಶದ ಜನರಲ್ಲಿದೆ.

೨. ಈ ಬಂಡೆ ಶಾಸನದ ಪಶ್ಚಿಮಕ್ಕೆ ಸುಮಾರು ಒಂದು ಮೈಲಿ ದೂರದಲ್ಲಿ ೨ನೆಯ ಶಿಲಾಶಾಸನವಿದೆ. ಇದರ ಅಕ್ಷರಗಳು ಬಹಳ ಸವೆದಿವೆ. ಇದನ್ನು '**ಯಮ್ಮೆತಮ್ಮನ ಗುಂಡು**' ಎಂದು ಕರೆಯುವರು.

೩. ಜಿನಗಿಹಳ್ಳದ ಎಡದಡದಲ್ಲಿರುವ ಜಟ್ಟಂಗಿ ಗಿರಿಯ ಮೇಲೆ ಮೂರನೆಯ ಶಾಸನವಿದೆ. ಇದನ್ನು '**ಬಳೆಗಾರರ ಗುಂಡು**' ಎಂದು ಕರೆಯುವರು. ರಾಮೇಶ್ವರದೇವರ ಉತ್ಸವ ಕಾಲಗಳಲ್ಲಿ ಬಳೆಗಾರರು ಈ ಬಂಡೆಯ ಮೇಲೆ ಕುಳಿತು ಬಳೆ ಮಾರುತ್ತಿದ್ದರಂತೆ.

ಈ ಮೂರು ಶಾಸನಗಳನ್ನೂ ಬರೆದವನು 'ಚಪಡ' ಎಂಬ ಲಿಪಿಕಾರನು. ತನ್ನ ರುಜುವನ್ನು ಮಾತ್ರ ಪೆಷಾವರ್ ಬಳಿ ಬಳಕೆಯಲ್ಲಿ ಇದ್ದ ಖರೋಷ್ಠಿ ಅಂದರೆ ಕತ್ತೆಯ ಮುಖದ ಅಕ್ಷರಗಳಲ್ಲಿ ಬರೆದಿರುವನು. ಬಹುಶಃ ಈ ಚಪಡನು ಪೆಷಾವರ್ ಪ್ರಾಂತದಿಂದಲೋ ಅಥವಾ ಅಶೋಕನ ರಾಜಧಾನಿಯಾದ ಪಾಟಲೀಪುತ್ರದಿಂದಲೋ ಇಲ್ಲಿಗೆ ಬಂದಿರಬೇಕು. 'ಚಪಡೇನ ಲಿಖಿತಂ ಲಿಪಿಕರೇಣ' ಎಂದಿದೆ. ಮೂರು ಶಾಸನಗಳೂ ಒಂದೇ ತೆರನಾಗಿರುವುವು.

ಈ ಮೂರು ಶಾಸನಗಳನ್ನೂ ಪ್ರಿಯದರ್ಶಿಯಾದ ಅಶೋಕ ಚಕ್ರವರ್ತಿಯು ತನ್ನ ಪ್ರಾಂತವಾದ ದಕ್ಷಿಣಾಪಥದ ರಾಜಧಾನಿ ಸುವರ್ಣಗಿರಿಯಲ್ಲಿ ರಾಜಪ್ರತಿನಿಧಿಯಾಗಿದ್ದ ಆರ್ಯಪುತ್ರನಿಗೆ ಬರೆದಿರುವನು. ಆರ್ಯಪುತ್ರನು ತನ್ನ ಮಹಾಮಾತ್ರರೆಂಬ ಪರಿಷತ್ತಿನಲ್ಲಿ ಈ ರಾಜಾಜ್ಞೆಯನ್ನು ವಿಮರ್ಶಿಸಿ ಐಸಿಲ ವಿಷಯ (ಜಿಲ್ಲೆ)ದ ಮಹಾಮಾತ್ರರ ಪರಿಷತ್ತಿಗೆ ಕಳುಹಿಸಿಕೊಟ್ಟಿದ್ದಾನೆ. ಅಶೋಕ ಚಕ್ರವರ್ತಿಯು ಉಪಾಸಕಣದ ೨ ವರ್ಷಗಳ ನಂತರ ಕಳುಹಿಸಿದ ಆಜ್ಞೆಯೇ ಮೂರು ಶಾಸನಗಳಲ್ಲಿ ಪ್ರಕಟವಾಗಿದೆ. ಈ ಶಾಸನಗಳ ಸರಳಾನುವಾದ ಏನೆಂದರೆ:

''ಸುವರ್ಣಗಿರಿಯಿಂದ ಆರ್ಯಪುತ್ರ ಮತ್ತು ಮಹಾಮಾತ್ರರ ವಚನಾನುಸಾರ ಐಸಿಲದ ಮಹಾಮಾತ್ರರಿಗೆ ಆರೋಗ್ಯವನ್ನು ಬಯಸಿ ಹೀಗೆ ಹೇಳತಕ್ಕದ್ದು.

ದೇವಾನಾಂಪ್ರಿಯನಾದ ಅಶೋಕನು ಈ ರೀತಿ ಅಪ್ಪಣೆ ಮಾಡುತ್ತಾನೆ. ನಾನು ಉಪಾಸಕನಾಗಿ ಎರಡೂವರೆ ವರ್ಷಗಳಿಗಿಂತ ಹೆಚ್ಚಾಯಿತು. ಆದರೆ ನಿಜವಾಗಿಯೂ ಒಂದು ವರ್ಷದವರೆಗೂ ಹೆಚ್ಚು ಪ್ರಯತ್ನ ಮಾಡಲಿಲ್ಲ. ನಾನು (ಬೌದ್ಧ )ಸಂಘವನ್ನು ಸೇರಿ ಈಗ್ಗೆ

ಒಂದು ವರ್ಷದ ಮೇಲಾಯಿತು. ಆಗಿನಿಂದಲೂ ಹೆಚ್ಚಾದ ಶ್ರದ್ಧೆಯನ್ನು ವಹಿಸಿರುವೆನು. ದೇವತೆಗಳೊಡನೆ ಬೆರೆಯದೇ ಇದ್ದ ಜಂಬೂದ್ವೀಪದ ಜನರು ಇಷ್ಟು ಕಾಲದಲ್ಲೇ ಅವರೊಂದಿಗೆ ಕಲೆತರು. ಇದೆಲ್ಲಾ ಶ್ರದ್ಧೆಯ ಫಲವು. ಇದು ಸತ್ಯವಾಗಿಯೂ ಮಹಾತ್ಮರಿಗೆ ಮಾತ್ರವೇ ಲಭ್ಯವಲ್ಲ. ಅಲ್ಪ ಮನುಷ್ಯನಿಗೂ ಪ್ರಯತ್ನದಿಂದ ವಿಪುಲವಾದ ಸ್ವರ್ಗವನ್ನು ಹೊಂದಲು ಸಾಧ್ಯವು. ಅಲ್ಪರೂ ದೊಡ್ಡವರೂ ಈ ರೀತಿಯಾಗಿ ಪ್ರಯತ್ನ ಪಡಬೇಕೆಂದೂ, ನನ್ನ ರಾಜ್ಯದ ನೆರೆಯವರು ಇದನ್ನು ತಿಳಿಯಬೇಕೆಂದೂ ಈ ಶ್ರದ್ಧೆಯು ಚಿರಸ್ಥಾಯಿಯಾಗಬೇಕೆಂದೂ ಈ ಪ್ರಕಟಣೆಯನ್ನು ಪ್ರಸಿದ್ಧಿಪಡಿಸಿದೆ. ಈ ವಿಷಯವನ್ನು ಇನ್ನೂ ಅಭಿವೃದ್ಧಿ ಮಾಡುವೆನು. ಅಧಿಕವಾಗಿ ವಿಸ್ತರಿಸುವೆನು. ಈಗಿರುವುದಕ್ಕಿಂತ ಒಂದೂವರೆ ಪಾಲಿನಷ್ಟಾದರೂ ಹೆಚ್ಚಿಸುವೆನು. ಈ ಆಜ್ಞೆಯು ಬುದ್ಧನ ನಿರ್ವಾಣಕಾಲದಿಂದ ೨೫೬ ವರ್ಷಗಳು ಕಳೆದ ಬಳಿಕ ಹೊರಟಿರುವುದು.

ದೇವನಾಂಪ್ರಿಯನು ಹೀಗೆಂದು ಹೇಳಿರುವನು:

ತಾಯಿ ತಂದೆಗಳ ಸೇವೆಯನ್ನು ಮಾಡಬೇಕು. ಹೀಗೆಯೇ ಹಿರಿಯರಲ್ಲಿಯೂ ಗೌರವ ತೋರಿಸಿ ಸುಚಾರಿತ್ರದಿಂದ ನಡೆದುಕೊಳ್ಳಬೇಕು. ಪ್ರಾಣಿಗಳಲ್ಲಿ ದಯೆ ತೋರಿಸಬೇಕು. ಸತ್ಯವನ್ನು ನುಡಿಯಬೇಕು. ಈ ರೀತಿಯ ಸದ್ಧರ್ಮ ಗುಣಗಳನ್ನೇ ಆಚರಿಸಬೇಕು. ಅದೇ ರೀತಿಯಲ್ಲಿ ಶಿಷ್ಯರು ಆಚಾರ್ಯರನ್ನು ಮರ್ಯಾದಿಸಬೇಕು. ನಂಟರಿಷ್ಟರಲ್ಲಿ ಸೂಕ್ತವಾದ ಗೌರವ ತೋರಿಸಿ ಸರಿಯಾಗಿ ನಡೆದುಕೊಳ್ಳಬೇಕು. ಇವೆಲ್ಲಾ ಪೂರ್ವಕಾಲದಿಂದಲೂ ನಡೆದುಬಂದಿರುವ ಸತ್ಸಂಪ್ರದಾಯ. ಹೀಗೆ ಆಚರಿಸುವುದರಿಂದ ಆಯಸ್ಸು ಅಭಿವೃದ್ಧಿಯಾಗುವುದು. ಈ ರೀತಿಯಲ್ಲಿ ಸರ್ವರೂ ಈ ಸದ್ಗುಣಗಳನ್ನು ಆಚರಿಸಬೇಕು. ಲಿಪಿಕಾರನಾದ ಚಪಡನು ಬರೆದುದು.''

ಸೂಚನೆ: ಬುದ್ಧನು ಸೀಗಲವಾದದಲ್ಲಿ ಸೀಗಲನಿಗೆ ಹೇಳಿದ ಬುದ್ಧಿವಾದವನ್ನೇ ಈ ಶಿಲಾಶಾಸನಗಳಲ್ಲಿ ತಿಳಿಸಿದೆ. ಪುರಾಣದಲ್ಲಿ ಉಕ್ತವಾಗಿರುವ ಸತ್ಸಂಪ್ರದಾಯ ಎಂದರೆ, ''ಮಾತೃದೇವೋಭವ, ಪಿತೃದೇವೋಭವ'' ಎಂದು ಮುಂತಾಗಿ ತೈತ್ತರೀಯೋಪನಿಷತ್ತಿನಲ್ಲಿ ಹೇಳಿದೆ. ಇದನ್ನೇ ಅಶೋಕನು 'ಪುರಾಣೋಕ್ತ' ಎಂದು ಹೇಳಿದಂತೆ ಕಾಣುತ್ತದೆ.

ಐಸಿಲ - ಎಂದರೆ ಋಷಿಪಟ್ಟಣ. ಈಗ ಈ ಚಿನ್ನಹಗರಿಯ ದಡದಲ್ಲಿ ಈ ಹೆಸರಿನ ಊರು ಇರುವುದಿಲ್ಲ. ಈ ಶಾಸನದ ಬಳಿ ಹೂತುಹೋಗಿರುವ ನಗರಗಳ ಸಂಶೋಧನೆ ನಡೆದಿದೆ. ಅಗೆದಾಗ ಅಲ್ಲಿ ಒಂದರಮೇಲೆ ಒಂದರಂತೆ ನಾಲ್ಕು ಪಟ್ಟಣಗಳು ಕಟ್ಟಲ್ಪಟ್ಟಿದ್ದ ಗುರುತು ಕಂಡುಬಂದಿದೆ. ಮೇಲಿನಿಂದ ಎರಡನೆಯದೇ ಐಸಿಲ ಅಥವಾ ಋಷಿಪಟ್ಟಣ ಎಂದು ದಿವಂಗತ ಎಂ. ಎಚ್. ಕೃಷ್ಣರು ಅಭಿಪ್ರಾಯಪಟ್ಟಿದ್ದಾರೆ.[೧] 'ರಾಮಗಿರಿಯಾಶ್ರಮ' ಅಂದರೆ ರಾಮಗಿರಿಯು ಋಷಿಗಳಿಗೆ ಯೋಗ್ಯವಾದ ಆಶ್ರಮವಾಗಿತ್ತೆಂದು ಕವಿ ಕಾಳಿದಾಸನು ಮೇಘದೂತದಲ್ಲಿ ವರ್ಣಿಸಿರುವುದು ಈ ಐಸಿಲವನ್ನೇ ಎಂದು ಕಾಣುತ್ತದೆ. ಔತ್ತರೇಯರು ದಕ್ಷಿಣಾಪಥಕ್ಕೆ ಬಂದಾಗ ಉತ್ತರದ ಊರು, ನಗರ, ನದಿ, ಪರ್ವತಗಳ ಹೆಸರುಗಳನ್ನೇ ಇಡುವ ಪದ್ಧತಿ ಇತ್ತು. ಬುದ್ಧನು ಮೊದಲಬಾರಿ ಧರ್ಮಬೋಧನೆ ಮಾಡಿದ ವಾರಣಾಸಿ ಬಳಿಯ ಋಷಿಪತ್ತನದ ಮೃಗವನದ ಹೆಸರಿನಲ್ಲಿ ಅಶೋಕನ ಪಕ್ಷದವರು ಇಲ್ಲಿಗೆ ಬಂದಾಗ ಇದನ್ನು

---

೧ *Mysore Archaeological Report*, 1936, p. 26

ಋಷಿಪತ್ತನ ಎಂದೇ ಕರೆದಿರಬಹುದು. ಅದೇ ಮಾಗಧಿಯಲ್ಲಿ ಐಸಿಲವಾಯಿತು ಎಂದು ತೋರುತ್ತದೆ.

೨ **ಸಿದ್ಧಾಪುರ:** ಜಿನಗಿಹಳ್ಳ ಅಥವಾ ಚಿನ್ನಹಗರಿ, ಅಥವಾ ಹನಯ ನದಿ ಎಂದು ಹೆಸರುಳ್ಳ ಈ ಕೆರೆಯ ಬಲದಡದಲ್ಲಿರುವ ಎರಡು ಶಾಸನಗಳ ಬಳಿ ಈಗ ಇರುವ ಹಳ್ಳಿಗೆ ಸಿದ್ಧಾಪುರ ಎಂದು ಹೆಸರು. ಸಿದ್ಧಮತವು ಬೌದ್ಧಮತದ ಒಂದು ಉಪಶಾಖೆ. ಅನೇಕ ಬೌದ್ಧ ಶಾಸನಗಳು 'ಸಿದ್ಧಂ' ಎಂಬ ಶಬ್ದದಿಂದ ಆರಂಭವಾಗುತ್ತದೆ. ಸಿದ್ಧಪು ಎಂಬ ಹೆಸರಿನಿಂದಲೇ ಅಲ್ಲಿ ಸರ್ವಾರ್ಥಸಿದ್ಧನ ಶಿಷ್ಯರಿದ್ಧ ಪುರ ಎಂದು ತೋರುತ್ತದೆ. ಕಾಳಿದಾಸನು ಮೇಘದೂತದ ೧೪ನೆಯ ಶ್ಲೋಕದಲ್ಲಿ ಹೇಳಿರುವ 'ಸಿದ್ವಾಂಗನೆ'ಯರು ಈ ಸಿದ್ಧಾಪುರದ ಬೌದ್ಧರ ಸ್ತ್ರೀಯರನ್ನು ಕುರಿತಾಗಿರಬಹುದೆಂದು ತೋರುತ್ತದೆ.

೩ **ಏಕಾಂತ ತೀರ್ಥ:** ಜಟ್ಟಂಗಿ ರಾಮೇಶ್ವರ ಬೆಟ್ಟದ ಮೇಲೆ, ಗುಡಿಯ ಉತ್ತರ ಭಾಗದಲ್ಲಿ ಬಂಡೆಗಳ ಕೆಳಗೆ ಇರುವ ತಣ್ಣೀರು ದೊಣೆಯನ್ನು 'ಏಕಾಂತ ತೀರ್ಥ' ಎಂದು ಕರೆಯುವರು. ಈ ದೊಣೆಯ ಬಳಿ ಶ್ರೀರಾಮನು ಜಟಾಯುವಿಗೆ ಅಗ್ನಿಸಂಸ್ಕಾರ ಮಾಡಿದನಂತರ ಕೆಲವು ದಿವಸಗಳು ಏಕಾಂತವಾಗಿ ವಾಸವಾಗಿದ್ದುದರಿಂದ ಈ ಹೆಸರು ಬಂತೆಂದು ಸ್ಥಳದ ಐತಿಹ್ಯ. ಆದಿ ಬುದ್ಧನಿಗೆ ಏಕನಾಥ ಎಂದೂ, ಬೌದ್ಧಮತಕ್ಕೆ ಏಕನಾಥ ಮತ ಎಂದೂ ಹೆಸರಾಗಿದೆ.[೨] ಏಕಾಂತ ತೀರ್ಥವು ಬೌದ್ಧರ ಒಂದು ಪುಣ್ಯ ತೀರ್ಥವಾಗಿರುವಂತೆ ತೋರುತ್ತದೆ. ಬೌದ್ಧಮತವು ನಶಿಸಿದಮೇಲೆ, ವೇದಮತೀಯರು ಶ್ರೀರಾಮನ 'ಏಕಾಂತ'ದ ತೀರ್ಥ ಎಂದು ಹೆಸರು ಕೊಟ್ಟಂತೆ ಕಾಣುತ್ತದೆ.

೪ **ಚಂದ್ರವಳ್ಳಿ:** ಇಂದಿನ ಚಿತ್ರದುರ್ಗದ ಬಳಿ ಇದ್ದು ಈಗ ಹೂತುಹೋಗಿರುವ ಪ್ರಾಚೀನ ರಾಜಧಾನಿ ನಗರ. ಅಲ್ಲಿ ಭೂಶೋಧನೆ ಮಾಡಿದಾಗ ಮೌರ್ಯಕಾಲದ 'ಪುರಾಣ' ಎಂಬ ಬೆಳ್ಳಿಯ ನಾಣ್ಯಗಳೂ, ಕ್ರಿ.ಪೂ. ೧೪೭ರಲ್ಲಿ ಆಳುತ್ತಿದ್ದ ಹ್ಯಾನ್‌ಉಗಿ ಎಂಬ ಚೀಣ ಚಕ್ರವರ್ತಿಯ ಹಿತ್ತಾಳೆಯ ನಾಣ್ಯವೂ, ಕ್ರಿಸ್ತಶಕದ ಆದಿಭಾಗದಲ್ಲಿ ಹೊರ ದೇಶದಲ್ಲಿ ಆಳುತ್ತಿದ್ದ ಅಗಸ್ಟಸ್, ಟೈಬೀರಿಯಸ್ ಮೊದಲಾದ ಚಕ್ರವರ್ತಿಗಳ ಬೆಳ್ಳಿ ನಾಣ್ಯಗಳೂ ದೊರೆತಿವೆ. ಇವಲ್ಲದೆ ಸ್ಥಳದಲ್ಲಿ ಆಳುತ್ತಿದ್ದ ಚುಟುಕುಲಾನಂದ, ಮುದಾನಂದ ಮೊದಲಾದ ಹೆಸರಿನ ಮಹಾರಥಿಗಳ ಮತ್ತು ಸಾಮಂತ ರಾಜರ ಸೀಸ ಮತ್ತು ತಾಮ್ರ ಮಿಶ್ರವಾದ ಪೋಟಿನ್ ಎಂಬ ಲೋಹದ ನಾಣ್ಯಗಳೂ, ಪ್ರತಿಷ್ಠಾನ ನಗರದಲ್ಲಿ ಆಳುತ್ತಿದ್ದ ಯಜ್ಞಶ್ರೀ ಮುಂತಾದ ಶಾತವಾಹನ ಚಕ್ರವರ್ತಿಗಳ ನಾಣ್ಯಗಳೂ ದೊರೆತಿವೆ. ಸಾಮಂತರ ಸೀಸದ ನಾಣ್ಯಗಳಲ್ಲಿ ಆನೆ, ವೃಷಭ, ಬೋಧಿವೃಕ್ಷ, ನಂದಿಪಾದ, ಸ್ವಾಸ್ತಿಕ, ತ್ರಿರತ್ನ, ಚೈತ್ಯ, ಶ್ರೀವತ್ಸ ಮುಂತಾದ ಅನೇಕ ಗುರುತುಗಳು ಮುದ್ರಿತವಾಗಿವೆ. ಇವುಗಳಲ್ಲಿ ಹಲವು ಬೌದ್ಧಧರ್ಮದ ಗುರುತುಗಳು. ಆದ್ದರಿಂದ ಅಶೋಕನ ಕಾಲದಿಂದ ಶಾತವಾಹನರ ಅಂತ್ಯಕಾಲದವರೆಗೆ ಸ್ಥಳದ ಸಾಮಂತ ರಾಜರು ಬೌದ್ಧಧರ್ಮೀಯರಾಗಿದ್ದರೆಂಬುದರಲ್ಲಿ ಸಂಶಯವಿಲ್ಲ. ಈ ಭೂ ಸಂಶೋಧನೆಯಲ್ಲಿ ದೊರೆತ ಮೃಣ್ಮಯ ಪಾತ್ರೆಗಳಲ್ಲಿ ಕೆಲವು ಸಣ್ಣ ಪಾತ್ರೆಗಳು ಭಿಕ್ಷುಗಳ ಭಿಕ್ಷಾಪಾತ್ರೆಯಂತೆ ತೋರುವುವು.

---

೨ *Quarterly Journal of the Mythic Society,* 1940, p. 325.

**೫ ಅಂಕಲಿ ಮಠ**[೩]: ಅಂಕಲಿ ಎಂಬ ಊರಿನಿಂದ ಬಂದಿದ್ದ ವೀರಶೈವ ಸ್ವಾಮಿಗಳೊಬ್ಬರು ಈಗ್ಗೆ ಸುಮಾರು ೭೦ ವರ್ಷಗಳ ಹಿಂದೆ ಈ ಗವಿಯನ್ನು ತಮ್ಮ ಆವಾಸವಾಗಿ ಮಾಡಿಕೊಂಡಿದ್ದರು. ಆದ್ದರಿಂದ ಇದಕ್ಕ ಈ ಹೆಸರು ಬಂದಿದೆ. ಅದಕ್ಕೂ ಮುಂಚೆ ಭರಮಣ್ಣ ನಾಯಕನ ಕಾಲದಿಂದ (ಕ್ರಿ.ಶ. ೧೬೮೯-೧೭೨೧) ಇದನ್ನು ಪರದೇಶಪ್ಪನ ಗವಿ ಎಂದು ಕರೆಯುತ್ತಿದ್ದರು.

ಇದು ಒಂದು ಪ್ರಾಚೀನ ಕಾಲದ ನೆಲಗವಿ. ನಾಸಿಕದಲ್ಲಿರುವ ಸೀತಾ ಗುಂಫಾದಂತೆಯೇ ಇದೆ. ಬುದ್ಧನು ಧರ್ಮೋಪದೇಶ ಮಾಡಿದ ೪೫ ವರ್ಷಗಳಲ್ಲಿ ಪ್ರತಿವರ್ಷವೂ ಮಳೆಗಾಲದಲ್ಲಿ ನಾಲ್ಕು ತಿಂಗಳಕಾಲ ಸಂಚಾರ ಮಾಡದೆ ತನ್ನ ಶಿಷ್ಯರ ಗೃಹಗಳಲ್ಲಿ, ಊರಿನ ಸಮೀಪದ ಗುಹೆ, ವನವಿಹಾರ ಮುಂತಾದವುಗಳಲ್ಲಿ ವಾಸವಾಗಿದ್ದನು. ಭಿಕ್ಷುಗಳೂ ಅದನ್ನೆ ಅನುಸರಿಸುತ್ತಿದ್ದರು. ಈ ಗುಹೆಯು ಮಳೆಗಾಲದಲ್ಲಿ ವಾಸಯೋಗ್ಯವಾದ ಸ್ಥಳವಾಗಿತ್ತು. ಪಕ್ಕದಲ್ಲಿ ತಿಳಿನೀರಿನ ಹಳ್ಳವೂ, ಆರೋಗ್ಯಕರವಾದ ಹವೆಯೂ, ಭಿಕ್ಷಾಟನಕ್ಕೆ ಚಂದ್ರವಳ್ಳಿ ನಗರವೂ ಇದ್ದುದರಿಂದ ಈ ಗುಹೆಯನ್ನು ತಮ್ಮ ವಸತಿಯಾಗಿ ಮಾಡಿಕೊಂಡು ಮಳೆಗಾಲದಲ್ಲಿ ಶಿಷ್ಯರಿಗೆ ಧರ್ಮೋಪದೇಶ ಮಾಡುತ್ತಿದ್ದಂತೆ ತೋರುವುದು. ಇದು ದಾನಿಗಳು ಭಿಕ್ಷುಗಳಿಗೆ ನಿರ್ಮಿಸಿದ ನೆಲಗವಿ ಎಂದು ತೋರುವುದು.

**೬ ಏಕನಾಥೇಶ್ವರಿ ದೇವಾಲಯ:** ಚಿತ್ರದುರ್ಗದ ಪಾಳೆಯಗಾರರ ಕಾಲದಿಂದ (ಕ್ರಿ.ಶ. ೧೫೬೮ರಿಂದ) ಚಿತ್ರದುರ್ಗದ ದುರ್ಗಾಭಿಮಾನ ದೇವತೆಯಿದು. ಗುಹಾಂತರ್ದೇವಾಲಯದ ಮುಂಭಾಗದಲ್ಲಿ ಶಿಲಾಮಂಟಪವನ್ನು ಪಾಳೆಯಗಾರರು ಕಟ್ಟಿಸಿರುವರು. ಅದಕ್ಕೆ ಮುಂಚೆ ಏಕನಾಥೇಶ್ವರೀ ದೇವತೆ ಇರುವ ಗುಹೆಯು ಮುಳ್ಳುಪೊದೆಗಳಿಂದ ಮುಚ್ಚಿಹೋಗಿತ್ತೆಂದು ಸ್ಥಳದ ಇತಿಹಾಸದಿಂದ ವ್ಯಕ್ತವಾಗಿದೆ.

ಪ್ರಾಚೀನಕಾಲದಲ್ಲಿ ಇದು ಬೌದ್ಧದೇವತೆ. ಆದಿಬುದ್ಧನಿಗೆ ಏಕನಾಥ ಎಂಬ ಹೆಸರೂ ಇದೆ. ಏಕನಾಥನ ಈಶ್ವರಿಯು ಏಕನಾಥೇಶ್ವರಿಯಾದಳು. ಬೌದ್ಧಧರ್ಮವು ದಕ್ಷಿಣಾಪಥದಲ್ಲಿ ನಶಿಸಿಹೋದಮೇಲೆ ವೈದಿಕರು ಬೌದ್ಧ ದೇವತೆಗಳನ್ನು ತಮ್ಮ ಅನುಕೂಲಕ್ಕಾಗಿ ತಮ್ಮ ಧರ್ಮದ ದೇವತೆಗಳನ್ನಾಗಿ ಮಾರ್ಪಡಿಸಿಕೊಂಡು ದೇವಾಲಯಗಳನ್ನೆಲ್ಲ ತಮ್ಮದೆಂದೇ ಕರೆದರು. ಬೌದ್ಧರ ವಿಹಾರಗಳೂ, ಚೈತ್ಯಗಳೂ ಬ್ರಾಹ್ಮಣರ ದೇವಾಲಯಗಳಾದವು. ಏಕನಾಥೇಶ್ವರಿಯ ದೇವಾಲಯ ಇಂತಹವುಗಳಲ್ಲಿ ಒಂದು.[೪]

**೭ ಚಂಪಕಾಸಿದ್ಧೇಶ್ವರ ದೇವಾಲಯ:** ಚಿತ್ರದುರ್ಗ ಬೆಟ್ಟದ ಮೇಲಿರುವ ಗುಹಾಂತರ್ಗತ ದೇವಾಲಯ. ಈಗ ಇದರಲ್ಲಿ ಚಂಪಕಾಸಿದ್ಧೇಶ್ವರ, ವೀರಭದ್ರ, ಪಾರ್ವತಿ, ಶೂಲಬ್ರಹ್ಮ ಮುಂತಾದ ಶೈವದೇವತೆಗಳೂ, ಅಲ್ಲಮ ಮತ್ತು ಜಕಣಾಚಾರಿಯ ವಿಗ್ರಹಗಳೂ ಶೋಭಿಸುವುವು. ಇಲ್ಲಿ ಶ್ರೀ ರೇವಣಸಿದ್ಧರೂ, ಶ್ರೀ ಮರುಳಸಿದ್ಧರೂ, ಜಕಣಾಚಾರಿಯೂ, ರಸಸಿದ್ಧರೂ ಗುಹೆಗಳಲ್ಲಿ ವಾಸವಾಗಿದ್ದರಂತೆ. ಹಿಡಿಂಬನಹಲ್ಲು ಎಂದು ಆನೆಯ ದವಡೆಹಲ್ಲನ್ನು ತೋರಿಸುವರು. ಹಲ್ಲು ಬುದ್ಧನ ಮತ್ತು ಬೋಧಿಸತ್ವರ ದಂತದ ಅವಶೇಷದ ಸಂಕೇತ.

---

೩ ಬೆಳಗಾಂವಿ ಜಿಲ್ಲೆಯಲ್ಲಿ 'ಅಂಕಲಗಿ' ಎಂಬ ಪ್ರಸಿದ್ಧವಾದ ವೀರಶೈವರ ಮಠವಿದೆ. ಅಲ್ಲಿಂದ ಬಂದ ಸ್ವಾಮಿಗಳೊಬ್ಬರು ಇಲ್ಲಿ ವಾಸವಾಗಿದ್ದಿರಬೇಕು.

೪ *Quarterly Journal of the Mythic Society,* Vol. XXX, p. 326

ಚಂದ್ರವಳ್ಳಿಯು ಬೌದ್ಧರ ಪ್ರಾಬಲ್ಯದ ಕಾಲದಲ್ಲಿ ರಾಜಧಾನಿಯಾಗಿದ್ದಾಗ ಈ ಬೆಟ್ಟದ ಮೇಲೆ ಬೋಧಿಸತ್ವನ ಅವಶೇಷಗಳನ್ನು ಭರಣಿಗಳಲ್ಲಿಟ್ಟು ಭೂಗತಮಾಡಿ ಅವುಗಳ ಮೇಲೆ ಚೈತ್ಯ ಮತ್ತು ವಿಹಾರಗಳು ನಿರ್ಮಿತವಾಗಿರಬೇಕು. ಇಲ್ಲಿ ಬೌದ್ಧರ ಧರ್ಮವು ನಶಿಸಿಹೋದಮೇಲೆ ಶೈವ ಪ್ರಾಬಲ್ಯವು ಹೆಚ್ಚಾಗಿ ಅವೆಲ್ಲಾ ಶೈವದೇವಾಲಯಗಳಾಗಿ ಮಾರ್ಪಾಟಾದಂತೆ ತೋರುತ್ತದೆ. ಮೂಲದಲ್ಲಿ ಬೌದ್ಧ ಗೃಹಗಳಾಗಿದ್ದುವೆಂಬುದಕ್ಕೆ ಸಿದ್ಧನಾಥ ಎಂಬ ಹೆಸರೂ, ಹಲ್ಲಿನ ಸಂಕೇತವೂ ಮುಖ್ಯವಾದ ಸಾಕ್ಷಿಗಳಾಗಿವೆ.

೮ **ಅಗಸನಕಲ್ಲು ಅಥವಾ ಅಸಗನಕಲ್ಲು:** ಇಂದಿನ ಚಿತ್ರದುರ್ಗ ನಗರಕ್ಕೆ ಸೇರಿದ ಉಪನಗರ ಮತ್ತು ಅದೇ ಹೆಸರಿನ ಗುಡ್ಡ. ಚಿತ್ರದುರ್ಗ ಬೆಟ್ಟದ ಅನೇಕ ಕೋಡುಗಲ್ಲುಗಳಿಗೆ ಒಂದೊಂದು ಹೆಸರಿದೆ. ಉದಾ: ಅಗಸನಕಲ್ಲು, ಕಿರುಬನಕಲ್ಲು, ಹುಲಿಕಲ್ಲು, ಬೆಮ್ಮತ್ತನಕಲ್ಲು, ಹಿಡಿಂಬನಕಲ್ಲು, ಭೀಮನಕಲ್ಲು, ಕಿನ್ನರಿಗಲ್ಲು, ಈರಣ್ಣನಕಲ್ಲು ಮುಂತಾದವುಗಳು. ಸಂಸ್ಕೃತದ ಅಶೋಕ ಶಬ್ದಕ್ಕೆ ಪಾಳಿಯಲ್ಲಿ ಅಸಗ ಎಂದರ್ಥ. ಅಶೋಕ ವೃಕ್ಷಕ್ಕೆ ಅಸುಗೆಮರ ಎಂದು 'ಅಭಿಧಾನರತ್ನಮಾಲ'ದ ನಾಗವರ್ಮ ವಿರಚಿತ ಟೀಕೆಯಲ್ಲಿ ಉಕ್ತವಾಗಿದೆ (ಪುಟ ೩೨, ಪದ್ಯ ೩೯ರ ಟೀಕೆ). ಈ ಅಗಸ ಅಥವಾ ಅಸಗನಕಲ್ಲು ಗ್ರಾಮದ ಬಳಿಯ ಚಂದ್ರವಳ್ಳಿಯ ಅಗೆತದಲ್ಲಿ ಮೌರ್ಯರ ಕಾಲದ ಪುರಾಣ ಎಂಬ ಬೆಳ್ಳಿಯ ನಾಣ್ಯಗಳೆರಡು ದೊರೆತಿವೆ. ಈ ಕಾರಣಗಳಿಂದ ಅಶೋಕ ಚಕ್ರವರ್ತಿಯ ನಾಮಾಂಕಿತವಾಗಿ ಈ ಕೋಡುಗಲ್ಲಿಗೆ ಗ್ರಾಮಕೂಟ, ಅಸಗನಕಲ್ಲು ಎಂದು ಕರೆದಂತೆ ಕಾಣುತ್ತದೆ. ಊಹೆಯು ನಿಜವಾಗಿದ್ದಲ್ಲಿ ಅಶೋಕನ ಕಾಲದಿಂದಲೇ ಇಲ್ಲಿ ಬೌದ್ಧರ ಪ್ರಾಬಲ್ಯ ಆರಂಭವಾಗಿದೆ ಎಂದು ತಿಳಿಯಬಹುದು.

೯ **ಬೊಮ್ಮತ್ತನಕಲ್ಲುದುರ್ಗ:** ಕಲ್ಯಾಣದ ಚಾಲುಕ್ಯರ, ದೋರಸಮುದ್ರದ ಹೊಯ್ಸಳರ ಮತ್ತು ವಿಜಯನಗರದ ಅರಸರ ಕಾಲದಲ್ಲಿ ಚಿತ್ರದುರ್ಗಕ್ಕೆ ಇದ್ದ ಹೆಸರು. ಅಂದಿನ ಶಾಸನಗಳಲ್ಲಿ ಬೆಮ್ಮತ್ತನಕಲ್ಲು ದುರ್ಗ, ಬೆಮ್ಮತ್ತನ್ನೂರುಪಟ್ಟಣ, ಬೆಮ್ಮಜ್ಜನೂರು ಮುಂತಾಗಿ ಈ ಊರನ್ನು ಹೆಸರಿಸಿವೆ. ಈ ಹೆಸರಿನಲ್ಲೇನಿದೆ? ಬೆಟ್ಟದ ಮೇಲೆ ಬ್ರಹ್ಮರಾಕ್ಷಸನು ವಾಸವಾಗಿದ್ದನೆಂದೂ, ಅವನು ಚಂದ್ರವಳ್ಳಿಯನ್ನು ಅನೇಕ ಸಲ ನಾಶಮಾಡಿದನೆಂದೂ ಸ್ಥಳದ ಐತಿಹ್ಯ. ಇಂದಿಗೂ ಚಿತ್ರದುರ್ಗದ ರಕ್ಷಕರಾದ ನವದುರ್ಗಿಯರ ಉತ್ಸವಗಳಲ್ಲಿ ಇಬ್ಬರು ರಾಕ್ಷಸರ ವೇಷಗಳನ್ನು ಧರಿಸಿ ಕುಣಿಯುವರು.

ಶ್ರೇಷ್ಠಪುರುಷರು ಕಾರಣಾಂತರಗಳಿಂದ ಶ್ರೇಷ್ಠ ಬ್ರಾಹ್ಮಣರ ಹತ್ಯೆಗೆ ಕಾರಣರಾದರೆ ಅವರು ಬ್ರಹ್ಮರಾಕ್ಷಸರಾಗಿ ಹುಟ್ಟಿ ಎತ್ತರವಾದ ಕಲ್ಲಿನ ಮೇಲೋ, ಎತ್ತರವಾದ ಆಲದಮರದ ತುದಿಯಲ್ಲಿಯೋ ವಾಸಮಾಡಬೇಕಾಗುವುದಂತೆ. ಬ್ರಹ್ಮರಾಕ್ಷಸರು ಸ್ವತಃ ಆಹಾರ ನೀರು ಸೇವಿಸುವಂತಿಲ್ಲ. ಅವರಿಗೆ ಮಾನವಜನ್ಮದ ವಿದ್ಯೆಯೂ ಜ್ಞಾನವೂ ಸ್ಮರಣೆಯಲ್ಲಿರುವುದು. ಯೋಗ್ಯ ಬ್ರಾಹ್ಮಣನಿಗೆ ತನ್ನ ಜ್ಞಾನವನ್ನೂ ವಿದ್ಯೆಯನ್ನೂ ಬ್ರಹ್ಮರಾಕ್ಷಸನ ಅವಸ್ಥೆಯಲ್ಲಿಯೇ ಬೋಧಿಸಿದಲ್ಲಿ ಆ ಪುಣ್ಯದಿಂದ ಹತ್ಯಾಪಾಪ ನಾಶವಾಗಿ ಪುನಃ ನರಜನ್ಮವನ್ನು ಹೊಂದಿ ಹಸಿವು ತೃಷೆಗಳನ್ನು ಪರಿಹಾರ ಮಾಡಿಕೊಂಡು ಮೋಕ್ಷ ಸಾಧಿಸುವರಂತೆ. ಇದೊಂದು ಪ್ರಚಾರದಲ್ಲಿರುವ ಐತಿಹ್ಯ. ಶ್ರೀ ಶಂಕರಾಚಾರ್ಯರೂ, ಶ್ರೀ ವಿದ್ಯಾರಣ್ಯರೂ ತಮ್ಮ ಕಾಲದ ಬ್ರಹ್ಮರಾಕ್ಷಸರಿಗೆ ಶಾಪವಿಮೋಚನೆ ಮಾಡಿ ಹೇರಳವಾಗಿ ಆಹಾರ ದಾನಮಾಡಿ ರಕ್ಷಿಸಿದರಂತೆ. ಶೃಂಗೇರಿ ಮತ್ತು ಕೂಡಲಿ ಮಠಗಳಲ್ಲಿ ಈಗ್ಲೂ ರಾಕ್ಷಸನಿಗೆ ಅನ್ನವನ್ನು ಬಲಿ ಕೊಡುವ

ಅನೂಚಾನವಾದ ಪದ್ಧತಿ ನಡೆದುಬರುತ್ತಿದೆ. ವಿದ್ಯಾತೀರ್ಥರು 'ಬೌದ್ಧಾನುದ್ಧಾರಯಂತಂ' ಎಂದು ವರ್ಣಿಸಲ್ಪಟ್ಟಿರುವರು. ಈ ಬ್ರಹ್ಮರಾಕ್ಷಸ ಶಬ್ದದಲ್ಲಿ ನಿಜವಾದ ಚರಿತ್ರೆಯೂ ಅಡಗಿದೆ. ಬ್ರಾಹ್ಮಣರು, ಬಲಿ, ಆಹುತಿಗಳಿಗಾಗಿ ಆಚರಿಸುತ್ತಿದ್ದ ಹಿಂಸಾಮಾರ್ಗವನ್ನು ಗೌತಮಬುದ್ಧನು ವಿರೋಧಿಸಿದನಷ್ಟೆ. ಬೌದ್ಧಧರ್ಮವು ರಾಜಾಶ್ರಯದಿಂದ ಪ್ರಭಾವ ಪಡೆದಿದ್ದಾಗ ಬ್ರಾಹ್ಮಣರು ಯಾವ ಗೋಜಿಗೂ ಹೋಗದೆ ಸುಮ್ಮನಿದ್ದರು. ಆದರೆ ಅವರಿಗೆ ರಾಜಾಶ್ರಯ ತಪ್ಪಿದಾಗ ಬ್ರಾಹ್ಮಣರು ರಾಜಾಶ್ರಯ ಪಡೆದು ನಗರಗಳಿಂದ ದೂರವಾಗಿ ವಾಸಿಸುತ್ತಿದ್ದ ಭಿಕ್ಷುಗಳನ್ನೂ ಸ್ಥವಿರರನ್ನೂ ಬ್ರಹ್ಮರಾಕ್ಷಸರೆಂದು ಸಂಬೋಧಿಸಿದಂತೆ ಕಾಣುತ್ತದೆ. ಕಾಲಕ್ರಮದಲ್ಲಿ ಬೌದ್ಧ ಪಂಡಿತರ ಜೀವನಮಟ್ಟವೂ ಕೆಳಗಿಳಿಯಿತು. ಕೆಲವರಂತೂ ದುರ್ನಡತೆಗೀಡಾದರು. ಅಂತಹರೇ ಬ್ರಹ್ಮರಾಕ್ಷಸರಾದರು. ಕಾಲಕ್ರಮದಲ್ಲಿ ಬ್ರಹ್ಮ ರಾಕ್ಷಸ ಪದವು 'ಬೌದ್ಧಪಂಡಿತ' ಎಂಬ ಸಮಾನಾರ್ಥವಾಯಿತು.[೫]

ಚಂದ್ರವಳ್ಳಿಯಲ್ಲಿ ಅಶೋಕನ ಕಾಲದಿಂದಲೂ ಕದಂಬರ ಕಾಲ ಆರಂಭವಾಗುವವರೆಗೆ ಬೌದ್ಧಸ್ಥವಿರರೂ, ಭಿಕ್ಷುಗಳೂ ವಾಸವಾಗಿದ್ದ ಕುರುಹುಗಳಿವೆ. ಮಯೂರಶರ್ಮನು ವೇದಮತೀಯರಿಗೆ ಆಶ್ರಯದಾತನಾದನು. ಆಗ ಇಲ್ಲಿ ಇದ್ದ ಬೌದ್ಧರ ವಾಸಸ್ಥಳವು 'ಬ್ರಹ್ಮರಾಕ್ಷಸನಕಲ್ಲು' ಎಂದು ಕರೆಯಲ್ಪಟ್ಟು ಅಪಭ್ರಂಶವಾಗಿ ಬೆಮ್ಮತ್ತನಕಲ್ಲು ಎಂದಾಗಿರಬೇಕು. ಕಲ್ಯಾಣದ ಚಾಲುಕ್ಯರ ಕಾಲಕ್ಕೆ ಮುಂಚೆಯೇ ಚಂದ್ರವಳ್ಳಿ ನಗರವು ಹೂತುಹೋಗಿ ಬೆಮ್ಮತ್ತನಕಲ್ಲು ರಾಜಧಾನಿಯಾಯಿತು. ಅಲ್ಲಿಂದ ಈಚೆಗೆ ಬೆಮ್ಮತ್ತನಕಲ್ಲುದುರ್ಗ, ಬೆಮ್ಮತ್ತನೂರು, ಚಿತ್ರಕಲ್ಲುದುರ್ಗ ಎಂದು ಹೆಸರಾಗಿ ಈಗ ಚಿತ್ರದುರ್ಗ ಎಂಬ ಹೆಸರಿನಿಂದ ಶೋಭಿಸುತ್ತಿದ್ದೆ. ಏಕನಾಥೇಶ್ವರಿ, ಸಿದ್ಧನಾಥ, ಹಿಡಿಂಬನಕಲ್ಲು, ಬೋಧಿವೃಕ್ಷ-ಚೈತ್ಯವೃಷಭಾದಿ ಗುರುತುಗಳುಳ್ಳ ನಾಣ್ಯಗಳು, ಭಿಕ್ಷಾಪಾತ್ರೆಗಳು, ಅಂಕಲೀ ಮಠದ ಗುಹೆ ಮತ್ತು ಚಿತ್ರದುರ್ಗ ಎಂಬ ಹೆಸರು ಈ ಊರಿನ ಪ್ರಾಚೀನ ಬೌದ್ಧ ಅವಶೇಷಗಳಾಗಿವೆ.

**೧೦ ಅಸಗಗೋಡು:** ಇದು ಜಗಳೂರು ತಾಲ್ಲೂಕಿನಲ್ಲಿರುವ ಪ್ರಾಚೀನ ಗ್ರಾಮ. ಗೋಡು ಎಂದರೆ ಸಾಧಾರಣಾರ್ಥದಲ್ಲಿ ಬಾವಿ, ಕೆರೆ, ಕುಂಟೆ, ನದಿಗಳ ತಳದಲ್ಲಿ ನಿಲ್ಲುವ ಜೇಡಿ ಮಣ್ಣು ಎಂದಾಗುವುದು. ಆದರೆ ಇಲ್ಲಿ ಗೋಡು ಎಂಬುದು ಪಟ್ಟಣ ಎಂಬ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿದೆ. ಉದಾ: ಕುರುಗೋಡು, ಮುರುಗೋಡು, ಯಳಗೋಡು. ಅಶೋಕ ಎಂಬುದು ಪಾಳಿಯಲ್ಲಿ ಅಸಗ ಎಂದಾಗಿದೆ. ಆದ್ದರಿಂದ ಅಸಗಗೋಡು ಎಂದರೆ ಅಶೋಕನ ಪಟ್ಟಣ. ಅಶೋಕನ ಹೆಸರಿನಲ್ಲಿ ನಿರ್ಮಿತವಾದ ನಗರ. ಬಿಳಿಚೋಡು ಗ್ರಾಮದಲ್ಲಿರುವ ಒಂದು ಕೈಬರಹದ ಗ್ರಂಥದಲ್ಲಿ ಅಶೋಕನು ಈ ಪ್ರಾಂತ್ಯದಲ್ಲಿ ಕೆಲವು ಕಾಲ ಬೀಡುಬಿಟ್ಟಿದ್ದನು ಎಂದಿದೆಯಂತೆ.[೬]

ಈ ಊರಿನ ಸ್ವಯಂಭು ಕಲಿದೇವ ಸ್ವಾಮಿಯ ದೇವಾಲಯದಲ್ಲಿ ಕಲ್ಯಾಣ ಚಾಲುಕ್ಯರ ಆರಂಭಕಾಲದಿಂದ ೫ ಶಿಲಾಶಾಸನಗಳಿವೆ. ಶಕ ೬೭೬ನೆಯ ವರ್ಷದ ಶಿಲಾಶಾಸನದಲ್ಲಿ

---

೫ The Brahmaraksasa was a synonym for Buddhist scholar, *Quarterly Journal of the Mythic Society,* Vol. xxxi, p. 334, article by P. Lakshminarasu

೬ ಆದರೆ ಈ ಗ್ರಂಥವು ಮಾತ್ರ ಎಷ್ಟು ಪ್ರಯಾಸಪಟ್ಟರೂ ನನಗೆ ದೂರಕಲಿಲ್ಲ

''ಇದು ಕಾಳಾಮುಖಸ್ಥಾನಂ ನೈಷ್ಠಿಕ ವೇದಿಕರ್ತರ ಮಠಂ'' ಎಂದಿದೆ. ಆಗ್ಗೆ ಮೊದಲಿದ್ದ ದೇವಸ್ಥಾನವನ್ನು ಇನ್ನೂ ವಿಸ್ತಾರವಾಗಿ ಈಶ್ವರ ದೇವಾಲಯವು ಎತ್ತಿಸಲ್ಪಟ್ಟಿತು. ಅಂದರೆ ಅದಕ್ಕೂ ಮುಂಚೆಯೇ ಅಲ್ಲಿ ದೇವಾಲಯವಿತ್ತು. ಅದಕ್ಕೆ ಸ್ವಯಂಭುದೇವ ಎಂಬ ಹೆಸರು ಉಕ್ತವಾಗಿದೆ. ಈಚೆಗೆ ಅಂದರೆ ಶಕ ೯೭೬ರಲ್ಲಿ ಕಟ್ಟಿಸಿದ ದೇವಾಲಯ ಈಶ್ವರಾಲಯ ಎಂದಿದೆ. ಬೌದ್ಧ ತ್ರಿಮೂರ್ತಿವಾದದಲ್ಲಿ ಆದಿ ಬುದ್ಧನಿಗೆ ಬುದ್ಧ, ಶೂನ್ಯ ಅಥವಾ ಸ್ವಯಂಭೂ ಎಂಬ ನಾಮಗಳಿವೆ. ವೇದಮತೀಯರ ತ್ರಿಮೂರ್ತಿವಾದದಲ್ಲಿ ಬ್ರಹ್ಮನಿಗೂ ಸ್ವಯಂಭೂ ಎಂಬ ನಾಮವಿದೆ.[೭] ಆದರೆ ಇದು ಬ್ರಹ್ಮದೇವರ ಗುಡಿಯಲ್ಲ. ಆದ್ದರಿಂದ ಇದು 'ಸ್ವಯಂಭೂದೇವ' ಎಂದರೆ ಆದಿಬುದ್ಧನ ದೇವಾಲಯವಾಗಿರಬೇಕು.

ಈ ಅಸಗಗೋಡು ಗ್ರಾಮವು ಪ್ರಾಚೀನ ಕಾಲದಿಂದಲೂ ರಾಜಧಾನಿ ನಗರವಾದ ಉಚ್ಚಂಗಿ ದುರ್ಗದಿಂದ ನಾಲ್ಕೈದು ಮೈಲಿಯಳತೆಯಲ್ಲಿದೆ. ಇದರ ಸಮೀಪದಲ್ಲಿಯೇ ಮೌರ್ಯರ ಕುಟ್ರಿ ಎಂಬ ಬೃಹದ್ ಶಿಲಾಸಮಾಧಿಗಳು ಇವೆ. ಇವು ಮೌರ್ಯರ ಸಂಬಂಧವನ್ನು ಸೂಚಿಸುವುವು.

ಅಸಗಗೋಡುಪುರವು ಒಂದು ವಿದ್ಯಾಕೇಂದ್ರವಾಗಿತ್ತು. ಆದ್ದರಿಂದಲೇ ರಾಜಕುಮಾರ ಚೋರಯ್ಯದೇವನೂ, ನಾಗತಿಯರಸನೂ ತಪೋಧನರ ಮತ್ತು ವಿದ್ಯಾರ್ಥಿಗಳ ಆಹಾರ ದಾನಕ್ಕೆ ಮತ್ತಿಕಟ್ಟ ಎಂಬ ಗ್ರಾಮವನ್ನೇ ದಾನ ಮಾಡಿದರು. ಈಚೆಗೆ ಶ್ರೀ ಮರುಳಸಿದ್ಧನು ಈ ಸ್ವಯಂಭು ದೇವಾಲಯದಲ್ಲಿದ್ದ ಮಠಕ್ಕೆ ಸ್ಥಾನಪತಿಯಾಗಿದ್ದು ಅಸಗಗೋಡಿನ ಕೀರ್ತಿಯನ್ನು ಹೆಚ್ಚಿಸಿದನು. ಅಲ್ಲದೆ ಕೀರ್ತಿವೆತ್ತ ಮಠದ ಸ್ಥಾನಪತಿ (Principal) ಯಾದ್ದರಿಂದಲೇ ಶ್ರೀ ಮರುಳಸಿದ್ಧನ ಕೀರ್ತಿಯು ವಸುಮತಿಯಲ್ಲಿ ಹರಡಿತು.

ಈ ಅಂಶಗಳನ್ನೆಲ್ಲಾ ವಿಮರ್ಶಿಸುವುದರಿಂದ ಅಸಗಗೋಡು ಪುರವು ಅಶೋಕನ ಕಾಲದಿಂದಲೂ ಬೌದ್ಧಧರ್ಮದ ವಿದ್ಯಾಕೇಂದ್ರವಾಗಿದ್ದು ಈಚೆಗೆ ಶೈವರ ಪ್ರಾಬಲ್ಯದಿಂದ ಇನ್ನೂ ಹೆಚ್ಚಿಗೆ ಕೀರ್ತಿ ಪಡೆದು ಶೋಭಿಸಿದಂತೆ ಕಾಣುತ್ತದೆ.

೧೧ **ಶ್ಯಾಬನೂರು:** ಶಾಬ ಎಂದರೆ ಒಂದು ಜಿಂಕೆಯ ಮರಿ. ಬುದ್ಧನು ಬೋಧಿಸುತ್ತಿದ್ದಾಗ ತಂಗಿದ 'ಮೃಗವನ' (Dear park) ಜಿಂಕೆಯ ತೋಪಿನ ಹೆಸರಿನಲ್ಲಿ ಜಿಂಕೆಗಳು ಹೆಚ್ಚಾಗಿ ವಾಸಿಸುತ್ತಿದ್ದ ಬಳಿ ನಿರ್ಮಿತವಾದ ಊರಾಗಿರಬಹುದೇ? ದಾವಣಗೆರೆ ಬಳಿ ಇರುವ ಈ ಹಳ್ಳಿಯನ್ನು ನಾನು ನೋಡಿದಾಗ ಪೂಜೆಗೊಳ್ಳುತ್ತಿರುವ ಜೈನಮೂರ್ತಿಗಳೂ, ಭಿನ್ನಮೂರ್ತಿಗಳೂ ಕಂಡುಬಂದವು. ಹಿರಿಯರ ಸಂಗಡ ಮಾತಾಡಿದಾಗ ಜಿಂಕೆಗಳ ಕಥೆ ಹೇಳಿದರು.

೧೨ **ಲೋಕೀಕೆರೆ, ಲೋಕದ ಹೊಳಲು:** ದಾವಣಗೆರೆಯ ಬಳಿ ಇರುವ ಲೋಕೀಕೆರೆ ಗ್ರಾಮವೂ, ಹೊಳಲ್ಕೆರೆ ತಾಲ್ಲೂಕಿನಲ್ಲಿರುವ ಲೋಕದ ಹೊಳಲು ಗ್ರಾಮವು ಬೌದ್ಧರ ಲೋಕನಾಥ, ಅವಲೋಕೀಶ್ವರ ಎಂಬುವ ಹೆಸರಿನ ಊರುಗಳಾಗಿರಬಹುದೇ? ಇತ್ತಕಡೆ ಚಾರಿತ್ರಿಕ ಸಂಶೋಧಕರು ಗಮನ ಕೊಡಬೇಕಾಗಿ ಪ್ರಾರ್ಥಿಸಿದೆ.

೧೩ **ನಾಗಾರ್ಜುನ:** ಬೌದ್ಧಮಹಾಯಾನ ಧರ್ಮಪ್ರವರ್ತಕನಾದ ನಾಗಾರ್ಜುನನು

---

೭ ಬ್ರಹ್ಮಾತ್ಮಭೂಃ ಸುರಜ್ಯೇಷ್ಠಃ ಪರಮೇಷ್ಠೀಪಿತಾಮಹಃ।
ಹಿರಣ್ಯಗರ್ಭೋ ಲೋಕೇಶಃ ಸ್ವಯಂಭೂಶ್ಚತುರಾನನಃ॥ (ಅಮರಕೋಶ)

ಅಚ್ಚಕನ್ನಡಿಗ. ಇವನ ಹೆಸರು ನಾಗಾರ್ಜುನಕೊಂಡ, ನಾಗಾರ್ಜುನ ಸಾಗರಗಳ ಜೊತೆಗೆ ಶಾಶ್ವತಗೊಳಿಸಲ್ಪಟ್ಟಿದೆ. ಪ್ರತಿಷ್ಠಾನ ನಗರಾಧಿಪತಿಯಾದ ಶಾತವಾಹನನ ಪರಮ ಮಿತ್ರ ಮತ್ತು ಮಂತ್ರಿ. ವೈದ್ಯವಿದ್ಯಾನಿಪುಣ; ಮಹಾವಿಜ್ಞಾನಿ. ಈ ನಾಗಾರ್ಜುನನು ಚಿತ್ರದುರ್ಗದ ಜಿಲ್ಲೆಯ ಹಲವೆಡೆಗಳಲ್ಲಿ ಹೂಳಿಟ್ಟಿರುವ ಸಿದ್ಧರಸ, ಶಿಲಾರಸ, ಔಷಧ ಮುಂತಾದವು ದೊರೆಯುತ್ತವೆ. ಇವೆಲ್ಲ ನಾಗಾರ್ಜುನ ಕೃತ ಎಂಬ ನಂಬಿಕೆ ಇದೆ. ಹೊಳಲ್ಕೆರೆ ತಾಲ್ಲೂಕು ಶಿವಗಂಗೆಯ ಬಳಿ ಹುಟ್ಟುಬಂಡೆಯಲ್ಲಿ ಕೊರೆದಿರುವ ಗುಂಡಿಗಳು, ಹೊಸದುರ್ಗದ ತಾಲ್ಲೂಕು ಶ್ರೀರಾಮಪುರದ ಬಳಿ ಮೈಲಾರಪುರದಲ್ಲಿ ಕೊರೆದಿರುವ ಪಾಂಡವಗುತ್ತಿ ಎಂಬ ಕಲ್ಲುಗುಂಡಿಗಳೂ, ದಾವಣಗೆರೆ ತಾಲ್ಲೂಕು ದೇವರ ಬೆಳಕೆರೆ ಬಳಿ ಹೊಲಗಳಲ್ಲಿ ದೊರಕುವ ಹಗೇವುಗಳೂ ಇವುಗಳಲ್ಲಿ ಕುಡಿಕೆ ಮಡಿಕೆಗಳೂ ಕಂಡುಬಂದವು. ಇವು ನಾಗಾರ್ಜುನ ಕೃತವಾದರೆ ಅಲ್ಲಿ ಬೌದ್ಧರು ವಾಸವಾಗಿರಬಹುದೆಂದು ತಿಳಿಯಬಹುದು. ಈಚೆಗೆ ಚಿತ್ರದುರ್ಗದ ತಾಲ್ಲೂಕು ಕಸವರಹಳ್ಳಿಯಲ್ಲಿಯೂ ಈ ತರಹದ ಕುಡಿಕೆ ಮಡಿಕೆಗಳು ದೊರೆತಿವೆ. ಕಸವರಹಳ್ಳಿ ಅಂದರೆ ಕಡಿಮೆ ಬೆಲೆಯ ಲೋಹಗಳಿಂದ ಬಂಗಾರ ಮಾಡುತ್ತಿದ್ದವರು ವಾಸವಾಗಿದ್ದ ಹಳ್ಳಿಯಾಗಿರಬಹುದೇ?[೮]

ಈ ವಿಷಯಗಳಿಗೆ ಚಾರಿತ್ರಿಕ ಸಂಶೋಧಕರ ಗಮನವನ್ನು ಸೆಳೆಯುವುದು ನನ್ನ ಕರ್ತವ್ಯವಾಗಿದೆ.

*ಶರಣ ಸಾಹಿತ್ಯ, ೧೯-೩, ೪*
*ಹುಲ್ಲೂರು ಶ್ರೀನಿವಾಸ ಜೋಯಿಸರ*
*ಐತಿಹಾಸಿಕ ಲೇಖನಗಳು, ೧೯೭೬, ಪು. ೧೮-೨೦*

---

೮ 'ಕಸವರ' ಅಂದರೆ ಕನ್ನಡದಲ್ಲಿ ಚಿನ್ನ ಎಂದರ್ಥ.

# ೧೫. ಕರ್ನಾಟಕ-ಮಹಾರಾಷ್ಟ್ರದಲ್ಲಿ ಚೈತನ್ಯ ಸಂಪ್ರದಾಯ

● ಕಪಟರಾಳ ಕೃಷ್ಣರಾವ್

ಮಹಾರಾಷ್ಟ್ರ ಸಾಧು-ಸಂತರ ಇತಿಹಾಸದಲ್ಲಿ ಎರಡು ಗುರುಸಂಪ್ರದಾಯಗಳ ಪರಂಪರೆಯು ಕಂಡುಬರುತ್ತದೆ. ಮೊದಲನೆಯದು ನಾಥಸಂಪ್ರದಾಯ ಅಂದರೆ ಮತ್ಸ್ಯೇಂದ್ರ ನಾಥ, ಗೋರಖನಾಥರಿಂದ ಬಂದದ್ದು. ಈ ಸಂಪ್ರದಾಯದಲ್ಲಿ ಜ್ಞಾನೇಶ್ವರ ಮುಂತಾದವರು ಉದಯಿಸಿದರು. ಇವರ ಮುಂದಿನ ಶಿಷ್ಯಪರಂಪರೆಯನ್ನು ಆಮೇಲೆ ವಿವೇಚಿಸಲಾಗುವುದು.

ಇನ್ನೊಂದು ಮಹತ್ವದ ಸಂಪ್ರದಾಯವೆಂದರೆ ಚೈತನ್ಯಸಂಪ್ರದಾಯವು. ಮಹಾರಾಷ್ಟ್ರದ ಸಾಧು-ಸಂತರುಗಳಲ್ಲಿ ೧. ಕೇಶವ ಚೈತನ್ಯ, ೨. ರಾಘವ ಚೈತನ್ಯ, ೩. ಬಾಬಾಚೈತನ್ಯ, ೪. ಅನಂತ ಚೈತನ್ಯ ಎಂದು ನಾಲ್ವರ ಪ್ರಾಚೀನ ಹೆಸರುಗಳನ್ನು ಉಲ್ಲೇಖಿಸಲಾಗುತ್ತವೆ. ಆದರೆ ಇವರು ಯಾರು? ಇವರ ಪರಂಪರೆ ಎಲ್ಲಿಯದು? ಇವರ ಕಾಲವಾವುದು? ಇವೇ ಮುಂತಾದ ಸಂಗತಿಗಳು ಮಾತ್ರ ಇದುವರೆಗೂ ಗೂಢವಾಗಿವೆ. ಅದರಂತೆ ನಾಗನಾಥ ಎಂಬ ಸಿದ್ಧನ ವಿಷಯದಲ್ಲೂ ಸ್ಪಷ್ಟವಾದ ಐತಿಹಾಸಿಕ ಸಂಗತಿಗಳು ಬೆಳಕಿಗೆ ಬಂದಿಲ್ಲ. ಈ ನಾಗನಾಥನ ಶಿಷ್ಯಪರಂಪರೆಯಲ್ಲಿಯೇ ಪ್ರಾಚೀನರಾದ ಪ್ರಸಿದ್ಧ ಸಾಧು-ಸಂತರುಗಳು ಬರುವರು. ಇವರ ವಿಷಯದಲ್ಲಿ ಐತಿಹಾಸಿಕ ಚರ್ಚೆಯಾಗುವುದು ಅವಶ್ಯಕವಾಗಿದೆ.

ಮೊದಲು ಕೇಶವ ಚೈತನ್ಯ, ರಾಘವ ಚೈತನ್ಯ, ಬಾಬಾ ಚೈತನ್ಯ, ಅನಂತ ಚೈತನ್ಯರ ಪರಂಪರಾಗತವಾಗಿ ನಿರ್ದೇಶಿಸುತ್ತ ಬಂದ ಸ್ಥಳಗಳನ್ನು ಕುರಿತು ವಿಚಾರಗೈಯ್ಯುವುದು ಲೇಸು.

೧. ಕಲ್ಬುರ್ಗಿಯಲ್ಲಿ ಪ್ರಸಿದ್ಧವಾಗಿರುವ ಬಂದೇನವಾಜ ಎಂಬ ಮುಸ್ಲಿಮ ಸಾಧುವಿನ ಪ್ರಸಿದ್ಧ ದರ್ಗಾ ಇದೆಯಷ್ಟೆ. ಇದೇ ಸ್ಥಳಕ್ಕೆ ಕೇಶವಚೈತನ್ಯನ ಸ್ಥಳವೆಂದು ಮಹಾರಾಷ್ಟ್ರದ ಹಿಂದುಗಳು ನಂಬುತ್ತಾರೆ.

೨. ಅದರಂತೆ ಕಲ್ಬುರ್ಗಿ ತಾಲ್ಲೂಕಿನಲ್ಲಿ 'ಅಲ್ದಿ' (ಆಳಂದೆ)[೧] ಎಂಬ ಊರಲ್ಲಿ ಷೇಖದಾಡ್ಲೆ ಮಷಾಯಖ ಎಂಬ ಪ್ರಸಿದ್ಧವಾದ ಮುಸ್ಲಿಮ ಫಕೀರನ ದರ್ಗಾ ಇದೆ. ಇದೇ ಸ್ಥಳಕ್ಕೆ ರಾಘವ ಚೈತನ್ಯನ ಸ್ಥಳವೆಂದು ಹಿಂದು ಜನರ ನಂಬುಗೆ. ಈ ಸ್ಥಳಕ್ಕೆ ನಾನು ಸ್ವತಃ ಹೋಗಿ ನೋಡಿದೆನು. ಮೂಲ ದರ್ಗಾದ ಗೋರಿಯಿದ್ದ ಹೊರ ಅಂಗಣದಲ್ಲಿ ಒಂದು ಚಿಕ್ಕ ಗೋರಿಯಿದೆ. ಈ ಗೋರಿಯ ಸಮೀಪದಲ್ಲಿ ಅಗಸೆಯ ಬೊಡ್ಡಗಲ್ಲಿ ನಂತಿರುವ ಲಿಂಗಾಕಾರವಾದ ಒಂದು ಕಲ್ಲನ್ನು ರಾಘವ ಚೈತನ್ಯ ಸ್ಥಳವೆಂದು ಅಲ್ಲಿಯ ಬಲ್ಲವರು ತೋರಿಸಿದರು. ಅದಲ್ಲದೆ ಅದರ ಬ್ರಾಹ್ಮಣ ಪೂಜಾರಿಗೆ ಇನಾಮು ಭೂಮಿಯಿದೆ ಎಂದೂ, ದಿನವೂ ಪೂಜೆ ಮಾಡುತ್ತಾನೆಂತಲೂ ಹೇಳಿದರು. ಈ ಸ್ಥಳವನ್ನು ನೋಡಿ ಇದು ಕೃತ್ರಿಮವೆಂದೆನಿಸಿತು. ಮತ್ತು ಇವರ ಹೇಳಿಕೆಯು ಸಮರ್ಪಕವೆನಿಸಲಿಲ್ಲ.

೩. ಬಾಬಾ ಚೈತನ್ಯನ ಸ್ಥಳವು ಅದೇ ಕಲ್ಬುರ್ಗಿ ತಾಲ್ಲೂಕಿನಲ್ಲಿ ಭೀಮಾ ನದಿಯ ದಡದಲ್ಲಿರುವ ಮಾಯಿನಾಳ ಎಂಬ ಸಣ್ಣ ಹಳ್ಳಿ. ಅದನ್ನು ಕೂಡ ನಾನು ಸ್ವತಃ ನೋಡಿದೆನು.

---

೧. ಈ 'ಅಳಂದೆ' ವೀರಶೈವ ಸಾಹಿತ್ಯದಲ್ಲಿ ಸುಪರಿಚಿತನಾದ ಏಕಾಂತರಾಮಯ್ಯನ ಊರು.

ಇಲ್ಲಿಯೂ ಪ್ರಸಿದ್ಧ ಮುಸ್ಲಿಮ ಫಕೀರನ ದರ್ಗಾ ಇದೆ. ಈ ದರ್ಗಾಪೂಜಾರಿಗಳು ಮುಸಲ್ಮಾನರು. ಷೇಖಷಹಾಬುದ್ಧೀನನ ಗೋರಿಯನ್ನು ತೋರಿಸಿದರು. ಈ ಷೇಖಷಹಾಬುದ್ಧೀನನ ಗೋರಿಯ ಕೊನೆಯ ಭಾಗದಲ್ಲಿ ಅಂತಹುದೇ ಅಗಸೆ ಬೊಡ್ಡೆಗಲ್ಲಿನಂತಹ ನಿಡಿದಾದ ಕಲ್ಲನ್ನು ಅದರ ಮೇಲ್ಭಾಗದಲ್ಲಿ ಲಿಂಗಾಕಾರವಾಗಿ ಕಟೆಯಲಾಗಿದೆ. ಅದಕ್ಕೆ ಬಾಬಾ ಚೈತನ್ಯ ಸ್ಥಳವೆಂದು ಹಿಂದುಗಳು ನಡೆದುಕೊಳ್ಳುವರು. ಇದನ್ನೂ ನೋಡಿ ನನಗೆ ಇದೂ ಕೂಡ ಹಿಂದೂ ಸಾಧು ಸ್ಥಳವೆಂದು ನಂಬಿಕೆಯಾಗಲಿಲ್ಲ. ಇದೂ ಕೃತ್ರಿಮವೆನಿಸಿತು. ಯಾರಿಗಾದರೂ ಎನ್ನಿಸುವಂತಿದೆ. ಈ ಸ್ಥಳಕ್ಕೆ ಕೆಲವರು ಬ್ರಾಹ್ಮಣರೂ ನಡೆದುಕೊಳ್ಳುತ್ತಾರೆ.

೪. ಅಕ್ಕಲಕೋಟ ಸಂಸ್ಥಾನದಲ್ಲಿ ಬುರಹಾಣಪುರ ಎಂಬ ಊರು. ಅದು ಸಿದ್ಧಪ್ಪಯ್ಯ ಅನಂತ ಚೈತನ್ಯನ ಸ್ಥಳವೆಂದು ಹೇಳುತ್ತಾರೆ. ಇದೂ ಕೂಡ ಮುಸಲ್ಮಾನ ಫಕೀರನ ಗೋರಿ. ಮುಸಲ್ಮಾನರು ಷೇಖ ಅಲ್ಲಾವುದ್ದೀನನ ದರ್ಗಾ ಎಂದು ನಡೆದುಕೊಂಡರೆ, ಹಿಂದುಗಳು ಸಿದ್ಧಪ್ಪಯ್ಯನ ಸಮಾಧಿ ಅಥವಾ ಅನಂತ ಚೈತನ್ಯನ ಸ್ಥಳವೆಂದು ನಡೆದುಕೊಳ್ಳುವರು. ನನ್ನ ಕೆಲವು ಲಿಂಗಾಯತ ಮಿತ್ರರ ಮನೆಯ ಕುಲದೇವತಾ ಅಂತ ಈ ಸ್ಥಳ. ಇತ್ತೀಚೆಗೆ ಕೆಲವರಂತೂ ಈ ಸ್ಥಳಕ್ಕೆ ರೇವಣಸಿದ್ಧನ ಸ್ಥಳವೆಂದು ಅಭಿಮಾನದಿಂದ ಬರೆಯುತ್ತಾರೆ. ಈ ಗೋರಿಯ ಒಂದು ಕಡೆ ಮುಸ್ಲಿಮರು ಮತ್ತೊಂದು ಕಡೆ ಹಿಂದೂಗಳು ನಡೆದುಕೊಳ್ಳುವ ರೂಢಿಯಿದೆ. ಈ ಎಲ್ಲ ಸ್ಥಳಗಳಲ್ಲಿರುವ ಕಟ್ಟಡಗಳು ಮುಸ್ಲಿಮ ದರ್ಗಾಗಳಾಗಿದ್ದು ಪ್ರಾಚೀನ ಬಾದಶಹರ ಕಾಲದವುಗಳು. ಹಿಂದು ಸಾಧುಗಳ ಸ್ಥಳಗಳೆಂಬುದಕ್ಕೆ ಸಾಕಷ್ಟು ನಿದರ್ಶನಗಳಿಲ್ಲ. ಈ ಸ್ಥಳಗಳನ್ನೂ, ಮುಸ್ಲಿಮ ಮತ್ತು ಹಿಂದು ಸಾಧುಗಳ ಹೆಸರುಗಳನ್ನೂ ಸಂಕ್ಷೇಪವಾಗಿ ಇಲ್ಲಿ ಕೊಡಲಾಗಿದೆ :

| ಸ್ಥಳ | ಕಲ್ಬುರ್ಗಿ | ಆಲ್ದಿ | ಮಾಯಿನಾಳ | ಬುರಹಾಣಪುರ |
|---|---|---|---|---|
| ಮುಸ್ಲಿಮ ಹೆಸರು: | ಬಂದೇನವಾಜ | ದಾಡ್ಡೆಮಷಾಯಕ | ಷಹಾಬುದ್ದೀನ | ಅಲ್ಲಾಉದ್ದೀನ |
| ಹಿಂದು ಹೆಸರು: | ಕೇಶವಚೈತನ್ಯ | ರಾಘವಚೈತನ್ಯ | ಬಾಬಾಚೈತನ್ಯ | ಅನಂತಚೈತನ್ಯ (ಸಿದ್ಧಪ್ಪಯ್ಯ) |

ಕೇಶವ-ರಾಘವ-ಬಾಬ ಮತ್ತು ಅನಂತಚೈತನ್ಯರೆಂದು ನಂಬಿರುವ ಆಧುನಿಕ ಮಹಾರಾಷ್ಟ್ರದ ಭಾವಿಕರು ಈ ಮುಸಲ್ಮಾನೀ ವಿಸಂಗತಕ್ಕೆ ಸಮಾಧಾನವನ್ನು ಹೇಳುವ ರೀತಿಯಿದು. ಪೂರ್ವದಲ್ಲಿ ಈ ಸ್ಥಳಗಳು ಹಿಂದೂ ಸತ್ಪುರುಷರ ಸ್ಥಾನಗಳಾಗಿದ್ದವು. ಮುಸ್ಲಿಮರು ಆಕ್ರಮಣದಿಂದ ಅವುಗಳನ್ನು ಈಗಿನ 'ದರ್ಗಾ'ಗಳನ್ನಾಗಿ ಮಾಡಿಕೊಂಡಿರುವರು ಎಂದು ತಮ್ಮ ಶ್ರದ್ಧೆಯನ್ನು ಆಧುನಿಕ ರೀತ್ಯಾ ಸಮರ್ಥಿಸುವರು. ಆದರೆ ಇಂತಹವರು ಹೇಳಿಕೊಳ್ಳುವ ಮಾತಿನಲ್ಲಿ ತಥ್ಯಾಂಶವಿಲ್ಲ. ಯಾಕಂದರೆ ಮುಸ್ಲಿಮರಲ್ಲಿ ಈ ಫಕೀರ (ಸಾಧು)ಗಳ ವಿಷಯದಲ್ಲಿ ಇತಿಹಾಸವಿದೆ. ಮುಸಲ್ಮಾನ ಬಾದಶಹರು ಕೊಟ್ಟ ಜಾಗೀರು-ಇನಾಮುಗಳಿಗೆ ಸನದುಗಳಿವೆ. ಯಾವ ಬಾದಶಹರ ಕಾಲದಲ್ಲಿ ಈ ದರ್ಗಾಗಳು ಕಟ್ಟಲ್ಪಟ್ಟವು ಎಂಬ ಇತಿಹಾಸವಿದೆ. ಅಂದಿನಿಂದ ಇಂದಿನವರೆಗೆ ವಂಶಪರಂಪರೆಯಿಂದ ನಡೆದುಕೊಂಡು ಬಂದ ಮೌಲ್ವಿಗಳ ಮನೆತನಗಳಿವೆ. ಈ ಸಾಧುಗಳ ಶಿಷ್ಯಪರಂಪರೆಯಿದೆ. ಈ ಸಾಧುಗಳ ಐತಿಹಾಸಿಕ ಚರಿತ್ರೆಯಿದೆ. ಇಷ್ಟೆಲ್ಲಾ ಇರುತ್ತಿರುವಾಗ ಮುಸ್ಲಿಮರು ಆಕ್ರಮಿಸಿ ಹಿಂದು ಸ್ಥಳಗಳನ್ನು ಮುಸ್ಲಿಮೀಕರಣ

ಮಾಡಿಕೊಂಡಿರುವರೆಂದು ಹೇಳಿಕೊಳ್ಳುವುದರಲ್ಲಿ ಎಳ್ಳಷ್ಟೂ ಸತ್ಯಾಂಶವಿಲ್ಲವೆಂಬುದು ಸ್ಪಷ್ಟವಿದೆ. ಹಿಂದುಗಳ ಕುರುಹುಗಳಾದರೂ ಅಷ್ಟಕಷ್ಟೇ.

ಮುಸ್ಲಿಮ ಇತಿಹಾಸದಿಂದ ತಿಳಿದುಬರುವ ಸಂಗತಿಗಳ ಸಾರಾಂಶವನ್ನು ಈ ಕೆಳಗೆ ಕೊಡಲಾಗಿದೆ. ಅದರಿಂದ ಈ ವಿಷಯದ ಮೇಲೆ ಇನ್ನಷ್ಟು ಪ್ರಕಾಶ ಬೀಳುವುದು.

ಮೊಹಮ್ಮದ್ ತೊಗಲಖ್‌ನ ಕಾಲದಲ್ಲಿ ದಿಲ್ಲಿಯಲ್ಲಿ ಷೇಕನಸೀರುದ್ದೀನ್ ಚಿರಾಘ್ ಎಂಬ ಪ್ರಸಿದ್ಧ ಮುಸ್ಲಿಮ ಸತ್ಪುರುಷನಿದ್ದನು. ಇವನು ಅಜಮೀರದ ನಿಜಾಮುದ್ದೀನ ಅವಲಿಯಾ ಎಂಬುವನ ಶಿಷ್ಯಪರಂಪರೆಯವನು. ಈ ನಸೀರುದ್ದೀನನು ದಿಲ್ಲಿಯಲ್ಲಿ ಇರುತ್ತಿದ್ದನು. ಆ ಕಾಲದ ಮುಸ್ಲಿಮರಲ್ಲಿ ಇವನ ಕೀರ್ತಿಯು ಬಹಳವಾಗಿ ಪಸರಿಸಿತು. ಇವನ ಶಿಷ್ಯಶಾಖೆಯು ಬಂಗಾಳ-ಪಂಜಾಬು-ಗುಜರಾತಗಳಲ್ಲಿ ಹಬ್ಬಿತು. ದಕ್ಷಿಣದಲ್ಲಿಯೂ ಇವನ ಶಿಷ್ಯರು ಬಂದು ನೆಲೆಸಿದರು. ದಕ್ಷಿಣಕ್ಕೆ ಬಂದ ಇವನ ಶಿಷ್ಯರು ಮುಂದೆ ಬಾಹಮನಿ ಅರಸರ ಮನ್ನಣೆಯನ್ನು ಪಡೆದರು. ಅವರ ಸಮಾಧಿಯ ಸ್ಥಳಗಳಲ್ಲಿ ದೊಡ್ಡ ದರ್ಗಾಗಳು ಕಟ್ಟಲ್ಪಟ್ಟವು. ಜಾಗೀರು-ಇನಾಮುಗಳು ದೊರೆತವು. ಈ ಮೇಲೆ ಹೇಳಿದ ನಾಲ್ವರು ಸಾಧುಗಳು ಈ ದಿಲ್ಲಿಯ ಷೇಖನಸೀರುದ್ದೀನ ಚಿರಾಘನ ಶಿಷ್ಯರು. ಈ ನಸಿರುದ್ದೀನನು ೧೩೭೪-A.D.ರಲ್ಲಿ ದಿಲ್ಲಿಯಲ್ಲಿ ತೀರಿಹೋದನು. ಇವನ ಶಿಷ್ಯನಾದ ಕಲ್ಬುರ್ಗಿಯ ಬಂದೆನವಾಜನು ಫಿರೋಜಷಹ ಬಹಮನಿಯ ಕಾಲದಲ್ಲಿ ಅಂದರೆ, ೧೪೨೨ನೇ ಇಸವಿಯಲ್ಲಿ ತೀರಿಕೊಂಡನು. ಇಸವಿ ಸನ್ ೧೩೪೭ರಿಂದ ೧೪೨೨ರ ಮಧ್ಯದ ೩೫ ವರ್ಷಗಳಲ್ಲಿ ಕಲ್ಬುರ್ಗಿಯಲ್ಲಿ ೧. ಹಸನಗಂಗು, ೨. ಮೊಹಮ್ಮದ್‌ಷಹ, ೩. ಮುಜಾಹಿದಷಹ, ೪. ದಾವುದಷಹ, ೫. ಮಹಮದಷಹ, ೬. ಫಿರೋಜಷಹ - ಈ ಆರು ಜನ ಬಾದಶಹರು ಆಳಿರುವರು. ಸುಮಾರು ಇದೇ ಕಾಲದಲ್ಲಿ ಈ ಮುಸಲ್ಮಾನ ಫಕೀರ ಸಾಧುಗಳು ಆಗಿಹೋಗಿರುವರು. ಈ ಸಾಧುಗಳ ಸ್ಥಳಗಳಾದರೂ ಕಲ್ಬುರ್ಗಿಯ ಸುತ್ತಮುತ್ತ ಇರಲು ಕಾರಣ ಈ ಬಾದಷಹರ ಆಶ್ರಯ. ಸ್ವಲ್ಪ ಹೆಚ್ಚು ಕಡಿಮೆ ಉಳಿದ ಮೂವರ ಕಾಲವಾದರೂ ಇದೇ. ಸ್ವಲ್ಪ ಪ್ರಯತ್ನ ಪಟ್ಟರೆ ಇವರೆಲ್ಲರ ಕಾಲವು ಸುನಿಶ್ಚಿತವಾಗಿ ತಿಳಿದುಬರುವುದು. ಆದರೆ ಸದ್ಯಕ್ಕೆ ಇಷ್ಟು ಗೊತ್ತಾದರೆ ಸಾಕು. ಈ ಮುಸ್ಲಿಮ ಸಾಧುಗಳಿಗೆ ಹಿಂದೂ ಹೆಸರಿನೊಡನೆ ಚೈತನ್ಯ ಎಂಬ ಉಪಪದ ಹೇಗೆ? ಇದನ್ನು ಮುಂದೆ ವಿವರಿಸಲಾಗುವುದು. ಶಿರೋಲೇಖನದಲ್ಲಿ ಚೈತನ್ಯ ಸಂಪ್ರದಾಯ ಎಂದು ಬರೆದಿದೆಯಷ್ಟೆ. ಚೈತನ್ಯ ಸಂಪ್ರದಾಯಗಳು ಅನೇಕವಾಗಿವೆ. ಉದಾಹರಣಾರ್ಥವಾಗಿ ವಂಗದೇಶದ ಚೈತನ್ಯ ಸಂಪ್ರದಾಯ, ಇದಲ್ಲದೆ ಕಾಶ್ಮೀರದ ಚೈತನ್ಯ ಸಂಪ್ರದಾಯ ಒಂದಿದೆಯೆಂದು ಹೇಳಲಾಗುತ್ತದೆ. ಆದರೆ ಇಲ್ಲಿ ವಿವಕ್ಷಿತವಾಗಿರುವ ಚೈತನ್ಯ ಸಂಪ್ರದಾಯವೆಂದರೆ ನಸೀರುದ್ದೀನನ ಗುರುಪಂಥಕ್ಕೆ ಇಟ್ಟುಕೊಂಡ ಹೆಸರು. ಇದೇ ಸಂಕುಚಿತಾರ್ಥದಲ್ಲಿಯೇ ಉಪಯೋಗಿಸಲಾಗಿದೆ.

ಇದೇ ವಿಷಯಕ್ಕೆ ಸಂಬಂಧಪಟ್ಟ ಕೆಲವು ಮರಾಠಿ ಸಂತರುಗಳು ಚರಿತ್ರೆಯನ್ನು ಅರಿತುಕೊಳ್ಳಬೇಕಾಗಿದೆ. ಶ್ರೀ ಲ. ರಾ. ಪಾಂಗಾರಕರ ಬಿ.ಎ., ಎಂಬುವರು ಭಕ್ತ ಪರಾಯಣರು. ಮಹಾರಾಷ್ಟ್ರದ ಭಕ್ತಿಪಂಥಕ್ಕೆ ಸಂಬಂಧಿಸಿದ ಅನೇಕ ಸಂತರುಗಳ ಚರಿತ್ರೆಯನ್ನು ಸಂಶೋಧನಾಪೂರ್ವಕವಾಗಿ ಬರೆದಿರುವರು. ಇವರು ಬರೆದ ಮರಾಠಿವಾಙ್ಮಯದ, ಇತಿಹಾಸದ ೨ನೆಯ ಖಂಡದಿಂದ ಈ ಕೆಳಗಿನ ಸಂಗತಿಗಳು ತಿಳಿದುಬರುವುವು.

೧ ಪಾನು ೨೬ರಲ್ಲಿ ಅಜ್ಞಾನಕವಿಯ ವಿಷಯವನ್ನು ಹೇಳಲಾಗಿದೆ. ಅದು ಹೀಗೆ—ಈ

ಅಜ್ಞಾನಕವಿಯ ಕಾಲ ಶಕೆ ೧೩೦೦ರಿಂದ ೧೩೫೦ (ಇಸವಿ ಸನ್ A.D ೧೩೭೮-೧೪೨೮). ಇದೇ ಕಾಲದಲ್ಲಿ ಈ ಕವಿಯು ವರದನಾಗೇಶ ಎಂಬ ಗ್ರಂಥವನ್ನು ಬರೆದಿರುವನು. ಇದರಲ್ಲಿ ೧೧ ಅಧ್ಯಾಯಗಳಿದ್ದು, (ಓವಿ) ಸಂಖ್ಯೆ ೧೮೫೦ ಇವೆ. ಇದಲ್ಲದೆ ಕಾಲಜ್ಞಾನ, ಗುರುಶಿಷ್ಯ ಸಂವಾದ, ಪಂಚೀಕರಣ ಪ್ರಮೇಯ, ಇತ್ಯಾದಿ ಚಿಲ್ಲರೆ ಪ್ರಕರಣಗಳನ್ನೂ ಬರೆದಿರುವನು. ಈ ಅಜ್ಞಾನ ಕವಿಯು ನಾಗನಾಥ ಉರ್ಫ ನಾಗೇಶನ ಶಿಷ್ಯ. ಕವಿಯ ಅಂಕಿತ ಅಜ್ಞಾನ, ಇವನ ಗುರು ನಾಗನಾಥನೆಂಬುದಕ್ಕೆ ಈ ಕೆಳಗಿನ ಓವಿಗಳನ್ನು ಕೊಡಲಾಗಿದೆ :

೧. ಐಸೆ ಶ್ರೀಗುರು ನಾಗನಾಥೆ। ಪ್ರಬೋಧುನಿ ಅಜ್ಞಾನ ಶಿಷ್ಯಾತೆ ॥ ೩-೧೮೫

೨. ತೂಂ ಉದಾರೂ ನಾಗನಾಥಾ। ಫೇಡಿ ಅಜ್ಞಾ ನಾಚಿ ವೆಥಾ ॥ ೫-೧೧೭

೩. ಸದ್ಗುರು ನಾಗನಾಥೆ। ಉಪದೇಸಿಲೆ ಅಜ್ಞಾನ ಶಿಷ್ಯಾತೆ ॥ ೫-೨೧೭

೪. ನಾಗನಾಥೇವಿರನಲೆ। ಅಜ್ಞಾನ ಮತೀತೆ.....೧೦-೬

ಈ ವಚನಗಳಿಂದ ಅಜ್ಞಾನಸಿದ್ಧನ ಗುರು ನಾಗನಾಥನೆಂಬುದು ಸಿದ್ಧವಾಗುತ್ತದೆ. ಇದಲ್ಲದೆ ಈತನ ಸ್ಥಳದ ವಿಷಯದಲ್ಲೂ ಈ ಕೆಳಗಿನಂತೆ ಉಲ್ಲೇಖಗಳು ಸಿಕ್ಕುತ್ತವೆ :

೧. ಜಾಣೆ ಹೇ ಬಾಹ್ಯಾಂತ । ನಾಗೇಶು ಅಖಂಡ । ವಡವಾಳ ವಿತಂಡ ।
ಹೇ ವಿಶ್ವರೂಪ ॥ ೪-೬೮.

೨. ಸಾಂಡವೀ ನಾಗೇಶು । ವಡವಾನಳಣಾಸು । ಹುತಾಸು ।
ಧರಿಯಲಾ ಜೇಣೆ ॥ ೪-೯೩.

೩. ಅಫಳು ತೇಸಕಳಾ। ವಿಶ್ವರೂಪ ವಡವಾನಳ । ಸಿದ್ಧಲಿಂಗನಿರ್ಮಳ।
ಗುರು ನಾಗನಾಥು॥ ೧೪-೧೨

ಈ ಉಕ್ತಿಗಳನ್ನು ಆಧಾರವಾಗಿಟ್ಟುಕೊಂಡು ಈ ನಾಗನಾಥನ ವಿಷಯದಲ್ಲಿ ತಮ್ಮ ಅಭಿಪ್ರಾಯವನ್ನು ಈ ಕೆಳಗೆ ತೋರಿಸಿದಂತೆ ವ್ಯಕ್ತಗೊಳಿಸಿರುವರು :

ನಾಗನಾಥ, ನಾಗೇಶ, ಸಿದ್ಧಲಿಂಗ, ಸಿದ್ಧರಾಜ, ವಡವಳ ನಾಗೇಶ ಈ ಎಲ್ಲ ಹೆಸರುಗಳೂ ಒಬ್ಬನವೇ ಆಗಿದ್ದು, ಅವನು ಅಜ್ಞಾನಕವಿಯ ಗುರು. ಜ್ಞಾನೇಶ್ವರನಂತೆ ನಾಗನಾಥನೂ 'ನಾಥ' ಸಂಪ್ರದಾಯಿ ಎಂದು ಕಾಣುತ್ತದೆ. ಅಜ್ಞಾನಕವಿಯು ತನ್ನ ಯೋಗಕ್ಕೆ ಶಿವಯೋಗ ಎನ್ನುವನು. ತನ್ನ ಗ್ರಂಥದ ಹೆಸರು ವರದನಾಗೇಶ. ಇವನು ಬಾಲೆಘಾಟದ ಕಡೆಯ ಸಿದ್ಧಪುರುಷ. ಈ ಗ್ರಂಥವು ವಿವೇಕಸಿಂಧುವಿನಂತಿದೆ. ವೇದಾಂತದ ಎಲ್ಲ ವಿಷಯಗಳನ್ನೂ ಒಳಗೊಂಡಿದೆ.

ಬ **ಬಹಿರಾಜಾತಾವೇದ ಉರ್ಫ್ ಭೈರವ** ಎಂಬ ಬ್ರಾಹ್ಮಣನು ಷಟ್‌ಶಾಸ್ತ್ರ ಸಂಪನ್ನನಾಗಿದ್ದು ವೈರಾಗ್ಯವನ್ನು ತಾಳಿದನು. ಮುಸಲ್ಮಾನನಾದನು. ಪುನಃ ಪ್ರಾಯಶ್ಚಿತ್ತವನ್ನು ಹೊಂದಿದನು. ಪೈಠಣದಲ್ಲಿ ಕೆಲವು ದಿನಗಳ ನಂತರದಲ್ಲಿ ವಡವಾಳ ನಾಗನಾಥನ ಭೇಟಿಯಾಗಿ ಕಣ್ಣು ತೆರೆದನು. ಹಿಂದು ಮುಸಲ್ಮಾನ ಎಂಬುದು ದೇಹ ಧರ್ಮದಿಂದ ಆದದ್ದು. ಆದರೆ ನೀನು ಆತ್ಮಾರಾಮನು. ಗುರುಕೃಪೆಯಾಯಿತು ಎಂದಿರುವನು. ಇವನ ಗ್ರಂಥಗಳು ದಶಮಸ್ಕಂಧ ಭಾಗವತ (೪೫,೦೦೦ ಓವಿ) ಸಂಕಟಹಾರಿಣಿ (೧೪೧ ಓವಿ). ಇದರ ರಚನೆಯ ಕಾಲ ಶಕೆ ೧೨.೧೩.-(೧೩೯೧ A.D. ) ಇವನು ತನ್ನ ಗುರುವಿನ ಹೆಸರು ವಡವಾಳ

ನಾಗನಾಥನೆಂದು ಹೇಳಿಕೊಂಡಿರುವನು. ಕೆಲವೆಡೆ ಗುರುಚಿಂತಾಮಣಿಯ ಪ್ರಸಾದದಿಂದ ಗೋವಿಂದ ಚರಿತ್ರವನ್ನು ಹಾಡಿರುವೆನೆಂದು ಹೇಳಿರುವನು. ಆದರೆ ಮಹೀಪತಿಯು ಈ ರೀತಿ ಅನ್ನುವನು :

ಐಸೆ ಬಹುತಾ ದಿವಸಿ। ಹಿಂಡತ ಆಲಾ ವಡವಾಳಾಸಿ। ಸದ್ಗುರು ವರಾಸಿತಾಹಿಲಾ ॥
ತಂನಾಥಸಿದ್ಧತ್ಯಾಪಾಸಿನಾಗನಾಥಾ ಚಿಕೃಪಾಹೋತಾಚಿ ಜಾಣ ।
ಬಹಿರ್‍ಯಾಪಾಸಿ ಝಾಲೆ ಜ್ಞಾನ...

**ಕ ಕಾನ್ಹೋಪಾಠಕ.** "ಗುರೂಪದೇಶ ನಾಗನಾಥ। ಕಾನ್ಹೋಪಾಠಕ ವಿನವಿ, ಹೃದಯೀ ಧರೀ ನಾಗೇಶ। ಮ್ಹಣೆ ಕಾನ್ಹೋಪಾಠಕ" ಈ ವಾಕ್ಯಗಳಿಂದ ಇವನೂ ನಾಗಾನಾಥನ ಶಿಷ್ಯನು. ನಾಗೇಶ ಮತ್ತು ಅವನ ಶಿಷ್ಯರ ಶಕೆ ೧೨೮೦ ಶಕೆ ೧೩೫೦ (೧೩೫೮-೧೪೨೮ A.D.) ಎಂದು ಪಾಂಗಾರಕರವರು ಅಭಿಪ್ರಾಯಪಟ್ಟಿರುವರು.

**ಡ ವೈಜನಾಥಪರಳಿಯಲ್ಲಿ** ಜಗಮಿತ್ರನಾಗಾ ಎಂಬುವನ ಸ್ಥಾನವಿದೆ. ಇವನು ಬ್ರಾಹ್ಮಣನು. ಇವನ ಗುರುವಿನ ಹೆಸರು ನಾಗೇಶ ಇದ್ದುದರಿಂದ ಇವನು ತನಗೆ ನಾಗಾ ಎಂದುಕೊಂಡಿರುವನು.

**ಇ ಕಾನ್ಹೋತಿರುಮಲಪಾಠಕ**-ಶುಕ್ಲ ಯಜುರ್ವೇದಿ ಬ್ರಾಹ್ಮಣ. ಜ್ಞಾನೇಶ್ವರನ ಪ್ರೀತಿಪಾತ್ರನು. ಇವನ ಗುರುವಿನ ಹೆಸರೂ ನಾಗನಾಥ. ಗೀತಾಸಾರ, ಅಶ್ವಮೇಧವನ್ನು ಬರೆದಿರುವನು. ಕಾಲ ಸುಮಾರು ಶಕ ೧೩೦೦ (೧೩೭೮).

ಈ ಮರಾಠಿ ಗ್ರಂಥಕಾರರ ಚರಿತ್ರೆಯಿಂದ ವಡವಾಳನಾಗನಾಥನ ಪ್ರಭಾವವು ಆಗಿನ ಕಾಲದಲ್ಲಿ ಎಷ್ಟಿತ್ತೆಂಬುದನ್ನು ಊಹಿಸಬಹುದು.

ನಾಗನಾಥ-ನಾಗೇಶ (೧೩೩೦) ಅಜ್ಞಾನಕವಿ (೧೩೭೮-೧೪೨೮), ಬಹಿರಂಭಟ (೧೪೨೮), ಕಾನ್ಹೋಪಾಠಕ (೧೩೫೮-೧೪೨೮), ಜಗಮಿತ್ರನಾಗಾ ( ), ಕಾನ್ಹೋತಿರುಮಲ (೧೩೭೮)

ಈ ನಾಗನಾಥನು ನಾಥಪಂಥಿಯೆಂದು ಪಾಂಗಾರಕರವರು ಊಹಿಸಿರುವರು. ಮತ್ತು....ವಿಶ್ವರೂಪ ವಡವಾಳ ಸಿದ್ಧಲಿಂಗ ನಿರ್ಮಳ ಗುರುನಾಗನಾಥನು ಒಂದೇ ವ್ಯಕ್ತಿಯೆಂದು ತರ್ಕಿಸಿರುವರು. ಅಂತೂ ಪ್ರಸಿದ್ಧಪುರುಷನಾದ ನಾಗನಾಥನು (ನಾಗೇಶನು) (ಗೇಶನು) ವಡವಾಳದವನು ಎಂಬುದು ಮಾತ್ರ ನಿಶ್ಚಯ. ಈ ವಡವಾಳ ಎಂಬ ಊರು ಸೊಲ್ಲಾಪುರ ಜಿಲ್ಲೆಯ ಮಹೋಳವೆಂದು ಹೇಳುತ್ತಾರೆ. ಈ ಮಹೋಳಕ್ಕೆ ಒಂದು ಮೈಲಿನ ಅಂತರದಲ್ಲಿ ವಡವಾಳ ಎಂಬ ಊರು ಮತ್ತು ನಾಗನಾಥನ ಗುಡಿಯು ಇವೆಯಂತೆ.

ನನ್ನಲ್ಲಿರುವ ತಾಡೋಲೆಯ ಒಂದು ಗ್ರಂಥದ ಕೊನೆಯಲ್ಲಿ ಬಿಡಿಯಾದ ಒಂದೇ ಒಂದು ಓಲೆಯು ಗರಿಯಿದೆ. ಕನ್ನಡ ಅಕ್ಷರಗಳಲ್ಲಿ ಪ್ರಾಚೀನ ಹಿಂದೂಸ್ಥಾನಿ ಭಾಷೆಯಲ್ಲಿ ಪದಗಳ ರೂಪವಾಗಿ ಬರೆಯಲಾಗಿದೆ. ಅಲ್ಲಲ್ಲಿ ಎಷ್ಟೋ ಕಡೆ ಶಬ್ದಗಳು ಅರ್ಥವಾಗದಂತೆ ವಿಕೃತವಾಗಿದೆ. ಬರಹಗಾರನ ದೋಷಗಳ ಮೂಲಕ ಹೀಗಾಗಿದೆ. ಆದಾಗ್ಯೂ ಒಟ್ಟಿನ ಮೇಲೆ ಅರ್ಥವು ಸ್ಪಷ್ಟವಾಗುತ್ತದೆ. ಈ ತಾಡೋಲೆಯ ಬರಹವು ಸುಮಾರು ೨೦೦ ಅಥವಾ ೩೦೦ ವರ್ಷಗಳ ಆಚೆಯದು ಇರಬಹುದು. ಹಿಂದುಸ್ತಾನೀ ಪದ್ಯಗಳನ್ನು ರಚಿಸಿ ಹಾಡಿದವನ

ವಿಷಯವಾಗಿ ಅನಂತರ ಚರ್ಚಿಸಲಾಗುವುದು. ಮೊದಲು ಅದನ್ನು ಇದ್ದಕ್ಕಿದ್ದಂತೆ ಅರ್ಥಸಹಿತವಾಗಿ ಕೊಡುತ್ತೇನೆ. ೧೦ನೇ ಪದ್ಯದಿಂದ ಮುಂದಿನ ಭಾಗ ದೊರೆತಿದೆ. ಅರ್ಥವಾಗದ ಪದಗಳನ್ನು ಕಂಸದಲ್ಲಿ ಇದ್ದಕ್ಕಿದ್ದಂತೆಯೇ ಕೊಟ್ಟಿರುತ್ತೇವೆ.

.....ದಕರ ದೀನ ಸುಕರ ಜೋಸ್ತಿ ತನ ಧನ ಜ್ಯೋಬನ ಘೋಥಮಸ್ತಿ।
ನ ವಸ್ತು ವವಾಸೋ ಅದಸಿ ಇಲಾಹಿ। ಕಹೆ ಸಿದ್ಧಲಿಂಗ ಖುದಾಕಿ ಖುದಾಯಿ ॥

ದೀನ ಅಂದರೆ ಧರ್ಮದ ಕಡೆ ಸ್ನೇಹ ಮಾಡು. ತನು ಧನ ಯವ್ವನದ ಕೊಬ್ಬನ್ನು ಬಿಡು.....ಹೇ ದೇವನೇ ಸಿದ್ಧಲಿಂಗನು ದೇವನ ದೇವತ್ವವನ್ನು ಹೇಳಿಹನು.

ಫಿಕಿರ ಛೋಡ ಫಕೀರ ಹೂ ಜಕೀರ ಕರ ಖುದಾಕಿ। ಮಕ (ಠ) ಮಾಂ
ದುನಿಯಾಫನಾತಿಲ್ ಘಡಿಕಿ।
ಶಕ್ಕರ ಸೂ ಮೀಠಾ ಪೀರಕಾ ನಾಮ ಲೇಣಾ। ಕಹೆ ಸಿದ್ಧಲಿಂಗ ಕಮಾಯಿ ಕಮಾನಾ ॥

ಚಿಂತೆಯನ್ನು ಹೂರು (ದೇವರ ವಿಷಯದಲ್ಲಿ ಮನನ ಎಂದರ್ಥ). ದೇವರ ನಾಮಸ್ಮರಣೆ ಮಾಡು. ಘಳಿಗೆಯಲ್ಲಿ ನಾಶವಾಗುವ ಪ್ರಪಂಚವನ್ನು ನಂಬಬೇಡ. ಗುರುವಿನ ಹೆಸರನ್ನು ನೆನೆಯುವುದು ಸಕ್ಕರೆಗಿಂತ ಸಿಹಿ. ಸಿದ್ಧಲಿಂಗ ಹೇಳಿಹನು. ಗಳಿಕೆಯನ್ನು ಗಳಿಸು.

ದರದೂರ ಕರದಿಲ್ ದರವೇಶಹೋಣಾ। ಹರ ಕದಮ್ ಕದಮ್ ಪಿಯೂಷ ಜಿವಲಾಣಾ।
ಆರಿಫಲ ಅವಜೂರ ಪರತ ಕ್ಯಾತು ಬನಾವೊ। ಕಹೆ ಸಿದ್ಧಲಿಂಗ ಗುರುಕುಮನಾವೊ ॥

ಮನೆಮಾರು ಕಡೆಗಣಿಸು, ಮನಸ್ಸನ್ನೂ ಭಕ್ತನನ್ನಾಗಿಸು, ಹೆಜ್ಜೆ ಹೆಜ್ಜೆಗೆ ಅಮೃತವನ್ನು ಸೇವಿಸು. ಸುತ್ತಿನ ಅರಿವು ನೀ ಏನು ಮಾಡುವಿ? ಗುರುವನ್ನು ಮನ್ನಿಸೆಂದು ಸಿದ್ಧಲಿಂಗನು ಹೇಳಿಹನು.

ಗುರು ಶೇಖನಸಿರುದೀನ್ ಚಿರಾಘ ದಿಲ್ಲಿ। ಕರಾಮತ ಕಾ ಪೀರ ವೊಪಾಕವಲ್ಲಿ।
ಕೈಲಾಖ ಬಂದೆಸವಾಜೆ ನಜೀನೆ। ಕಹೆ ಸಿದ್ಧಲಿಂಗ ರಹೊ ಕದಮ್ ಕನೆ ॥

ದಿಲ್ಲಿಯ ಶೇಖನಸೀರುದ್ದೀನ್ ಚಿರಾಘ ಎಂಬ ಗುರುವು, ಪವಿತ್ರವಲಿಯು ಅಂದರೆ ಸತ್ಪುರುಷನು ಮತ್ತು ಪವಾಡಪುರುಷನು. ಎಷ್ಟೋ ಲಕ್ಷ ಮನುಜರನ್ನು ಉದ್ಧಾರ ಮಾಡಿರುವನು ಅಥವಾ ಅನುಗ್ರಹಿಸಿರುವನು. ಅವನ ಪಾದದಲ್ಲಿರು ಎಂದು ಸಿದ್ಧಲಿಂಗನು ಹೇಳಿಹನು.

ಕದಂಮೇ ಅದಮಾಖ ಬಗಯಾ ಖಾಕ ಹುವಾ। ವಹಿ ಖಾಕ ಮೌಜೂದ ಚಡಾಯಾ।
ಹುವಾ ಜೋಗಿ ಯಾ ಜುಕ್ತ ಸೂ ಜ್ಯಾಗಜಾಗೆ। ಕಹೆ ಸಿದ್ಧಲಿಂಗ ಕಪುದೂರಭಾಗೆ ॥

ಪಾದದಲ್ಲಿ ಬೂದಿಯಾದನು, ಅದೇ ಬೂದಿಯನ್ನೇರಿಸಿದನು. ಯೋಗಿಯಾಗಲಿ ಜೋಗಿಯಾಗಲಿ ಎಚ್ಚರಗೊಂಡನು. ಭವಿತನವು ದೂರ ಓಡಿಹೋಗುವದೆಂದು ಸಿದ್ಧಲಿಂಗನು ಹೇಳಿಹನು.

ಮದನ ಮಾರಕರ ಕ್ರೋಧಕೀ ಬಾಲ ಬನಾಯಾ। ಪರಬ್ರಹ್ಮಧಾಗಾ
ಫಲಖ ಮೇಭರಾಯಾ। ನಿರಾಲಂಬರ್ಝೋಲಿ ಲಿಯಾ ಹಾತ ಮ್ಯಾನೇ ಕಹೆ ಜನ
ಭೀಕ ಮಾಗೆ ॥

ಆಟಲ್ಕಾ ಭೀಕ ದಾತಾ ಧನಿಪೀರ ಭುಜಂಗಾ। ದಿಯಾ ದಾನ ನೀದಾನ ನೀಮಗ್ನ ಕಿಯ
ಸಹಜ ಮೇ ಸಿಹಜ ಸಿದ್ಧ ಬೋಧ ಪಾಯಾ। ಖುಮಾರೀಲಗೆ ದಂಗ ಹೋಕರ ರಹ್ಯಾ ॥
ತಹಾವುನ್ಮನೀ ಗೈಬ.....ಗುರುನಾಮ ನ ಬತ ನಿಸೀದಿನ ಜಾಗೆ ॥
ಗುರುಕೆ ಚ ಮಾಮಸಿ ಸದಾಲಕ್ಷ ಉಗೆ। ಪಲಕ ಮೆ ಅಲಖಸೂರೆ...ರಿ ॥

ಮದನನನ್ನು ಕೊಂದು ಕ್ರೋಧದ ಚರ್ಮಮಾಡಿದನು. ಪರಬ್ರಹ್ಮವೆಂಬ ದಾರವನ್ನು ಮುಗಿಲಲ್ಲಿ ತುಂಬಿದನು. ನಿರಾಲಂಬ ಎಂಬ ಜೋಳಿಗೆಯನ್ನು ಕೈಯಲ್ಲಿ ಹಿಡಿದು ಭಿಕ್ಷೆಯನ್ನು ಬೇಡಿದನೆಂದು ಸಿದ್ಧಲಿಂಗನು ಹೇಳಿಹನು. ನಿರಂತರ ದಾನಕೊಡತಕ್ಕವನು ಧಣಿಯಾದ ಭುಜಂಗ ಎಂಬ ಗುರುವು. ನಿಧಾನವನ್ನು ಕೊಟ್ಟು ಉನ್ಮನಿಯವಸ್ಥೆಯಲ್ಲಿ ನಿಮಗ್ನನನ್ನಾಗಿ ಮಾಡಿದನು. ಸಹಜದಲ್ಲಿ ಸಹಜವಾದ ಸಿದ್ಧಬೋಧವನ್ನು ಪಡೆದನು. ಚಕಿತನಾದನು. ಹಗಲಿರುಳು ಗುರುವನ್ನು ನೆನೆಯುತ್ತ ಗುರುವಿನ ಪಾದದ ಕಡೆ ಲಕ್ಷವೇಧಿಸುತ್ತ ಬಯಲಲ್ಲಿ ಅಲಖನಾದನು.

ಗುರು ಸಿದ್ಧನಾಗೇಶ ಸಾಹೇಬ ಮೆರಾ । ಪರವಖ್ತ ಮಾಮೂರ ದರಬಾರ ತೇರಾ
ಮುಶಾರಾದಿಯಾವೊ...ಜಾನಾಪುರಾಯಾ ॥

ನನ್ನ ಗುರುವು ಸಿದ್ಧನಾಗೇಶಸಾಹೇಬರು. ಅವರ ಅರಮನೆಯು ಯಾವಾಗಲೂ ತುಂಬಿರುತ್ತದೆ.

ಹಜಾರ ನಾವಕಾ ಯೇಕಸಾಯಾಯಿಲ್ಲಿಲ್ಲಾ। ದುಜಾಕೋಯಿನಾಹಿ ಖುದಾಕಾ ಕಹೇ
ಸಿದ್ಧಲಿಂಗ ಹಕೀಕ ಸಮಾ ॥ ಸಾವಿರ ನಾವುಗಳಿಗಿಂತ ಒಬ್ಬ ದೇವರ ಛಾಯೆ ।
ದೇವರಿಗಿಂತ ಅನ್ಯರಿಲ್ಲ।

ಸಿದ್ಧಲಿಂಗನು ಅನುಭವವನ್ನು ಹೇಳಿಹನು. (ಟಿಪ್ಪಣಿ ಎಲ್ಲ ಸಾಧು ಸಂತರುಗಳು ನೆರೆದು ಸಭೆ ಕೂಡಿದಾಗ ದೇವರ ವಿಷಯದಲ್ಲಿ ಹಾಡಿ ಮೈಮರೆತು ಕುಣಿಯುವ ರೂಢಿ ಮುಸಲ್ಮಾನರಲ್ಲಿ ಇತ್ತು. ಆ ದೃಶ್ಯವನ್ನು ನೋಡಿಕೊಳ್ಳುತ್ತಿದ್ದರು. ಪ್ರತಿಯೊಬ್ಬನೂ ಅನುಭವವನ್ನು ಹೇಳುತ್ತಿದ್ದನು. ಅದಕ್ಕೆ ಹಕೀಕತಸಮಾ ಎಂದು ಹೆಸರು ಅಂದರೆ ಸ್ವಾನುಭವದ ವಚನಗಳು.)

ಕುರಾನಕೆ ಬಯಿನಾ । ಬೇದ ಕಾ ಸಾರ ಬೋಲ್ಯಾ । ಗುರು ಗೈಬ ಗಾಲಿಬ ವೊಪೀರ
ಮಿಲಿಯಾ ನವೊ ಭೆಕದರಿ ನ ವೊ ಬ್ರಹ್ಮಚಾರಿ । ಕಹೆ ಸಿದ್ಧಲಿಂಗನವೊ ಘರಬಾದಿರಿ ॥

ಕುರಾನಿನ ಹೇಳಿಕೆ, ವೇದದ ಸಾರವನ್ನು ಹೇಳಿದನು. ಅವನು ಧರ್ಮಗುರು ಅಚಿಂತ್ಯ ಶಕ್ತಿಯುಳ್ಳವನು. ಅವನು ಬ್ರಹ್ಮಚಾರಿಯು ಅಲ್ಲ. ಮನೆಮಾರುಗಳಿಲ್ಲೆಂದು ಸಿದ್ಧಲಿಂಗನು ಹೇಳಿಹನು.

ನವೋ ಬೀಕ ಮಾಗೆ ನಹುದ್ದಾ ಕಮಾವೆ। ನಹಿ ಮಾಲಾ ಮತ್ತಾ, ಅಲ್ಲಂಕು ಜಿವಾವೆ ।
ನಹಿ ನಾವನಾ ರೂಪನಾ ರಂಗಜಾಕೋ ಕಹೆ ಸಿದ್ಧಲಿಂಗ ಖುದಂ ಖಿಕ ಪಾಕೊ ॥

ಅವನು ಭಿಕ್ಷೆಬೇಡುವವನಲ್ಲ. ಅಧಿಕಾರ ಸ್ಥಳವನ್ನು ಗಳಿಸುವವನಲ್ಲ. ಅದರಂತೆ ವೈಭವವನ್ನು ಅಪೇಕ್ಷಿಸಿಲ್ಲ. ಅಲ್ಲಮ್ಮನಿಗೆ ಚೇತರಿಸಿದನು. ಅವನಿಗೆ ನಾಮರೂಪರಂಗಿಲ್ಲ. ಅವನ ಪಾದಧೂಳಿಯನ್ನು ಹೊಂದಿ ಇವೆಲ್ಲವನ್ನು ಹೊಂದಿದೆನೆಂದು ಸಿದ್ಧಲಿಂಗನು ಹೇಳಿಹನು.

ನಿರಾಕಾರ ಆಕಾರ ಕರ್ತಾರ ಮೌಲಾ । ಕುಳಂ ನೈನ ಮೋಹಿತ ಹುವಾ ನಿರಾಲಾ ।
ಜೇಬಾ ಸ ಕಂಹು ಕ್ಯಾ ಅಂಖ್ಯಾ ಖೋಲ ದೇಖೋ । ಕಹೆ ಸಿದ್ಧಲಿಂಗ ಗುರು ರಸಜಾಯೊ

ಒಡೆಯನ ಆಕಾರವು ನಿರಾಕಾರ. ಕಣ್ಣುತೆರೆದು ಮೋಹಿತನಾದೆನು. ಅವನ ವೈಭವವನ್ನು ಏನು ಹೇಳಲಿ? ಕಣ್ಣು ತೆರೆದು ನೋಡು. ಗುರುರಸವನ್ನು ಸವಿ ಎಂದು ಸಿದ್ಧಲಿಂಗನು ಹೇಳಿಹನು.

ವಡವಾಲ ಮೌತಪ್ತ ಮಾಪರಪ್ಪೆರಾ । ಬಡಾಸಿದ್ಧನಾಗೇಶ ಪೂಪೀರಧೀರಾ ।
ಖಡತರ ಖಂಡಾಗುರುಗಮ್ಮಬಾಣಿ । ಕಹೆಸಿದ್ಧಲಿಂಗ ನಸೀಹತಬೇದಬಖಾನಿ ॥

ವಡವಾಳದಲ್ಲಿ ಗದ್ದುಗೆಯ ಮೇಲೆ ಕುಳಿತಿರುವನು ಸಿದ್ಧನಾಗೇಶನು. ಧೀರನಾದ ದೊಡ್ಡ ಗುರುವು. ಗುರುವಿನ ವಾಣಿ ಒಳ್ಳೆಯ ಗಡಚು. ವೇದದ ಉಪದೇಶವನ್ನು ಸಿದ್ಧಲಿಂಗನು ಹೇಳಿಹನು.॥

ಶ್ಲೋಕ: ಮುಜೆ ಲಾಲನೆ ಲಾಲ ಲಾಲೀ ಲಖಾಯಾ। ಹುವಾ ಲಾಲಾ ಮೈಲಾಲ ಮೈ
ದಾನ ಪಾಯಾ। ದಿಯಾ ಲಾಲ ಲತ್ತಾ ಸೂಹಿ ಮರ್ದಸಾರಾ ॥ ಬಡ್ಯಾ ಲಾಲವೊ
ಸಿದ್ಧಸಾಹೇಬ ಮೇರಾ ॥
ಲಗಾಯಾ ಬಡಾ ಲಾಲನಿಶಾನ ಪೂಜಾ । ಖಡಾಹಯೆ ಆ ಪಸಿದ್ಧ ನಾಗೇಶ ನೀಜಾ
ನಿಶಾನಿ ಅಲೈಖ॥

ನನ್ನ ಪ್ರಿಯನು ನನ್ನನ್ನು ಬೆಳಗಿದನು. ನಾನು ಬೆಳಕಿನ ಅಂಗಳವನ್ನು ಕಂಡೆನು. ಎಲ್ಲ ಆಸ್ತಿಯನ್ನು ಕೊಟ್ಟ ಗಂಡಸು ಅವನು. ನನ್ನ ಪ್ರಿಯಕರನಾದ ಆ ದೊಡ್ಡ ಸಿದ್ಧಸಾಹೇಬನು ಉನ್ನತವಾದ ದೊಡ್ಡ ಕೆಂಪುಪತಾಕೆಯನ್ನು ನಿಲ್ಲಿಸಿರುವನು. ಅದರ ಕೆಳಗೆ ತಾನು ನಿಂತು ಕುಣಿಯುತ್ತಾನೆ. ನೀಲಿಯ ನಿಶಾಣಿ ಅಲೈಖ.

ಈ ಮೇಲಿನ ಹಿಂದುಸ್ಥಾನಿ ಪದ್ಯಗಳಿಂದ ಕೆಲವು ಮಹತ್ವದ ಐತಿಹಾಸಿಕ ಸಂಗತಿಗಳು ಹೊರಬೀಳುತ್ತವೆ. ಬರೆದವನು ಸಿದ್ಧಲಿಂಗ ಕವಿಯು. ಹಿಂದುಸ್ಥಾನಿ ಭಾಷೆಯಲ್ಲಿ ನೈಪುಣ್ಯವನ್ನು ಸಂಪಾದಿಸಿರುವನಲ್ಲದೆ ಮುಸಲ್ಮಾನರ ಸಂಸ್ಕೃತಿಯನ್ನು ಸಮರಸ ಹೊಂದಿ ಮಾತನಾಡುತ್ತಾನೆ. ಅವರಲ್ಲಿಯ ಸೂಫಿ ಪಂಥದಲ್ಲಿಯ ಸಿದ್ಧಾಂತದ ಪಾರಿಭಾಷಿಕ ಶಬ್ದಗಳನ್ನು ಬಲ್ಲವನಾಗಿದ್ದಾನೆ. ಅವರಲ್ಲಿಯ ಸಮಯಾಚಾರವನ್ನೂ ವರ್ಣಿಸುತ್ತಾನೆ. ಅದಿರಲಿ. ಐತಿಹಾಸಿಕ ಸಂಗತಿಗಳು ಈ ಕೆಳಗಿನಂತಿವೆ:

೧. ಈ ಪದ್ಯಗಳನ್ನು ಬರೆದವನು ಸಿದ್ಧಲಿಂಗ ಕವಿಯು.

೨. ''ಗುರುಶೇಖ ನಸೀರುದ್ದೀನ ಚಿರಾಘ ದಿಲ್ಲಿ'' ಎಂದೂ ''ಕರಾಮತ ಕಾ ಪೀರ'' ಅಂದರೆ ಪವಾಡಪುರುಷನೆಂದೂ, ಎಷ್ಟೋ ಲಕ್ಷ ಮನುಷ್ಯರ ಮೇಲೆ ಅನುಗ್ರಹ ಮಾಡಿದನೆಂದೂ, ಅವನ ಪಾದಗಳಲ್ಲಿ ಇರತಕ್ಕುದೆಂದೂ ಅನ್ನುತ್ತಾನೆ.

೩. ನನ್ನ ಗುರು ಶಿದ್ಧನಾಗೇಶ ಸಾಹೇಬರು.

೪. ಈ ನಾಗೇಶನು ವಡವಾಳದಲ್ಲಿ ಗದ್ದುಗೆಯ ಮೇಲೆ ಕುಳಿತಿರುವನು. ಮೇಲೆ ಉನ್ನತವಾದ ಕೆಂಪು ಪತಾಕೆಯು ಹಾರಾಡುತ್ತದೆ. ತಾನು ಅದರ ಕೆಳಗೆ ನಿಂತು ಕುಣಿಯುತ್ತಿರುವನು.

ನಸೀರುದ್ದೀನ್ ಚಿರಾಫ ದಿಲ್ಲಿಯ ವಿಷಯದಲ್ಲಿ ಮುಸಲ್ಮಾನಿ ಇತಿಹಾಸದಿಂದ ತಿಳಿದುಬರುವ ಸಂಗತಿಗಳಿಂದ ಈತನು ೧೪ನೇ ಶತಮಾನದ ಕೊನೆಯಲ್ಲಿ ೮೨ನೇ ವಯಸ್ಸಿನಲ್ಲಿ ಅಂದರೆ ೧೫ನೇ ಶತಕದ ಉತ್ತರಾರ್ಧದಲ್ಲಿ ಗತಿಸಿದನು. ಇವನು ದಿಲ್ಲಿಯಲ್ಲಿ ಮೊಹಮ್ಮದ ತೊಗಲಕನ ಕಾಲದಲ್ಲಿದ್ದವನು. ಆ ಕಾಲದಲ್ಲಿ ಇವನು ಬಲು ದೊಡ್ಡ ಫಕೀರ (ಸಾಧು)ನೆಂದು ಮುಸಲ್ಮಾನರು ನಂಬಿದ್ದರು. ಇವನ ಶಿಷ್ಯಶಾಖೆಯು ಉತ್ತರ ದಕ್ಷಿಣ ಹಿಂದೂಸ್ಥಾನದಲ್ಲೆಲ್ಲ ಹರಡಿತ್ತು.

ಈ ಸಿದ್ಧಲಿಂಗನು ಶೇಕ ನಸಿರುದ್ದೀನನನ್ನು ಮತ್ತು ಸಿದ್ಧನಾಗೇಶನನ್ನು ಮುಕ್ತಕಂಠದಿಂದ ಹೊಗಳುತ್ತಾನೆ. ಗುರುವೆಂದೂ, ಪವಾಡಪುರುಷನೆಂದೂ, ಅವನ ಪಾದದಲ್ಲಿ ಇರುವುದೇ ಲೇಸೆಂದೂ ಶೇಕನ ವಿಷಯದಲ್ಲಿ ಅನ್ನುವುದಲ್ಲದೆ, ಸಿದ್ಧನಾಗೇಶನು ತನ್ನ ಗುರುವೆಂದೂ, ತನ್ನನ್ನು ಅವನು ಬೆಳಗಿದವನೆಂದೂ ಹೇಳುತ್ತಾನೆ. ಅವನು ವಡವಾಳದ ಗದ್ದುಗೆ ಮೇಲೆ ಕುಳಿತಿರುವನೆಂದು ಹೇಳುತ್ತಾನೆ. ಇವನ ವರ್ಣನೆಯಿಂದ ಸಿದ್ಧನಾಗೇಶನು ಈ ಸಿದ್ಧಲಿಂಗನ ಸಾಕ್ಷಾತ್ ಗುರುವೆಂದು ಹೇಳಬಹುದು. ಮತ್ತು ಶೇಖನು ಇವನ ಪರಮ ಗುರುವಾಗಿರುವನು. ಸಿದ್ಧಲಿಂಗ ಎಂಬ ಹೆಸರಿರುವುದರಿಂದ ಇವನು ಲಿಂಗಾಯತನೆಂದು ತಿಳಿಯುವಂತಿದೆ.

ರಾ॥ ಪಾಂಗಾರಕರರವರು ಅಜ್ಞಾನ ಕವಿಯ ಗುರುವು ನಾಗನಾಥ ಅಥವಾ ನಾಗೇಶನೆಂದೂ, ವಡವಾಳದವನೆಂದೂ ಇವನ ಗ್ರಂಥದ ಉಕ್ತಿಗಳನ್ನೇ ಕೊಟ್ಟಿರುವರು. ಆದರೆ ಈ ಸಿದ್ಧಲಿಂಗ ಎಂಬುದು ಕೂಡ ನಾಗನಾಥನ ಹೆಸರೆಂದೂ ಊಹಿಸಿರುವರು. ಈ ಊಹೆಗೆ 'ಅಫಳುತೇ ಸಕಳ ವಿಶ್ವರೂಪ ವಡವಾನಳ ಸಿದ್ಧಲಿಂಗ ನಿರ್ಮಳ ಗುರುನಾಗನಾಥು' ಎಂಬ ಪದ್ಯವೇ ಕಾರಣವಾಗಿದೆ. ಅಜ್ಞಾನ ಕವಿಯು ತನ್ನ ಯೋಗಕ್ಕೆ 'ಶಿವಯೋಗ' ಎನ್ನುವುದರಿಂದಲೂ, ಸಿದ್ಧಲಿಂಗ ಎಂಬ ಹೆಸರಿನಿಂದಲೂ ಮತ್ತು ತನ್ನ ಗುರುವು ನಾಗನಾಥನೆಂದು ಅಜ್ಞಾನ ಕವಿಯು ಮತ್ತು ಸಿದ್ಧಲಿಂಗನು ಹೇಳಿಕೊಳ್ಳುವುದರಿಂದಲೂ ಅಜ್ಞಾನ ಸಿದ್ಧನು ಮತ್ತು ಸಿದ್ಧಲಿಂಗನು ಒಂದೇ ವ್ಯಕ್ತಿ ಎಂಬುದು ಸ್ಪಷ್ಟವಾಗುತ್ತದೆ. ಈ ಅಜ್ಞಾನಸಿದ್ಧನು ಅವಿಂಧ ಭಾಷೆಯಲ್ಲಿ ಅಂದರೆ ಆ ಕಾಲದ ತುರುಕರ ಭಾಷೆಯಲ್ಲಿ ಬರೆದಿರುವನೆಂದು ಪ್ರತೀತಿ ಇದೆ. ಸಿದ್ಧಲಿಂಗನ ಹಿಂದುಸ್ಥಾನೀ ಪದ್ಯಗಳು ದೊರಕಿವೆ. ಗುರುಪರಂಪರೆಯೂ ಸರಿಯಾಗುವುದು, ಇಬ್ಬರು ಸಾಕ್ಷಾತ್ ನಾಗನಾಥನೇ ಗುರುವೆಂದು ಹೇಳಿಕೊಂಡಿರುವರು. ಸಿದ್ಧಲಿಂಗ ಎಂಬ ಹೆಸರು ವಡವಾಳ ಸಿದ್ಧನಾಗೇಶನಿಗೆ ಪಾಂಗಾರಕರರವರ ಅಭಿಪ್ರಾಯದಂತೆ ಅನ್ವಯಿಸಿದರೆ ನಮಗೆ ದೊರೆತ ಸಿದ್ಧಲಿಂಗನ ಹಿಂದುಸ್ಥಾನಿ ಪದ್ಯಗಳಿಗೆ ವಿರೋಧ ಮತ್ತು ವಿಸಂಗತವಾಗುವುದು. ಆದುದರಿಂದ ವರದ ನಾಗೇಶ ಎಂಬ ಮರಾಠಿ ಗ್ರಂಥವನ್ನು ಬರೆದ ಅಜ್ಞಾನ ಕವಿಯು ಮತ್ತು ಈ ಸಿದ್ಧಲಿಂಗನು ಒಬ್ಬನೇ ಎಂಬುದು ಸಮಂಜಸವಾಗಿ ಕೂಡುತ್ತದೆ. ಮತ್ತು ಗುರುಪರಂಪರೆಯು ಸರಿಬೀಳುತ್ತದೆ. ಮರಾಠಿ ಮತ್ತು ಹಿಂದುಸ್ಥಾನಿಯನ್ನು ಬರೆದ ಸಿದ್ಧಲಿಂಗ ಅಥವಾ ಅಜ್ಞಾನಸಿದ್ಧನು ಎರಡು ಭಾಷೆಯಲ್ಲಿ ತಜ್ಞನು. ಆದರೆ ಇವನು ಲಿಂಗಾಯತನಾಗಿದ್ದಾಗ್ಯೂ ಕನ್ನಡದಲ್ಲಿ ಮಾತ್ರ ಬರೆದಿರಲಿಕ್ಕಿಲ್ಲವೇ?

ಈ ಅಜ್ಞಾನಸಿದ್ಧನ ಗ್ರಂಥಗಳು ಕಲ್ಬುರ್ಗಿಯ ತಾಲ್ಲೂಕಿನ ಆಪ್ಜಂದ ಮಠದಲ್ಲಿವೆಯೆಂದು ಐತಿಹ್ಯವಿದೆ. ಸಂಶೋಧಕರು ಹೋಗಿ ನೋಡಬೇಕಾಗಿದೆ.

ಮೇಲೆ ಹೇಳಿದ ವಡವಾಳದ ಪ್ರಸಿದ್ಧನಾಗನಾಥನಿಗೆ ಇನ್ನೊಬ್ಬ ಶಿಷ್ಯನು ಇರುವನು.

ಇವನ ವಿಷಯದಲ್ಲಿ ತಿಳಿದುಬರುವದೇನೆಂದರೆ ಇವನು ನಾಶಿಕ ಭಾಗದವನು. ಪಠಾಣ ಜಾತಿಯವನು. ಇವನ ಹೆಸರು ಅಲ್ಲಮಖಾನ್ (ಮೂಲ ಆಲಮಖಾನ್) ಇರಬಹುದು. ವಡವಾಳ ಸಿದ್ಧನಾಗನಾಥನು ಇವನಿಗೆ ಬೀದರ ಪ್ರಾಂತದಲ್ಲಿ ಇರಲು ಹೇಳಿದನಂತೆ. ಅಂತೆಯೇ ಇವನು ಆ ಪ್ರಾಂತದಲ್ಲಿ ನೆಲೆಸಿದನು. ಇವನ ಎರಡು ಪದಗಳು ಮಾತ್ರ ನಮಗೆ ದೊರೆತಿವೆ. ಅವು ಮರಾಠಿ ಭಾಷೆಯಲ್ಲಿವೆ. ಇವನ ವಿಷಯದಲ್ಲಿ ಇನ್ನೂ ಹೆಚ್ಚು ಸಂಶೋಧಿಸಬೇಕಾಗಿದೆ.

ಜಯ ಜಯ ಆರತಿ ನಾಗನಾಥ।
ದೇವಾ ಸದ್ಗುರುನಾಥ।
ದೋನ್ಹಿಕರ ಜೋಡುನಿ।
ಚರಣ ಠೇವಿಲೆ ಮಾಥಾ
ಪಂಚತತ್ವ ಪಂಚ ಆರತಿ।
ಪಂಚವೀಸ ವಾತಿದೇವಾ ॥

ಅವಿದ್ಯೇಚೆ ಘೃತಕಾಡುನಿ ಉಜಳಿಲ್ಯಾ ಜ್ಯೋತಿ, ಜ್ಯೋತಿಚೆಯ ಜ್ಯೋತಿ ಪ್ರಕಾಶಜೌಹಲಾ ಮೀ, ತೂಂ, ಪಣ, ಓವಾಳುನಿ ದೀಪ ವಾಜಳಿಲಾ ಅಹಂತತ್ವ, ಸೋಹಂತತ್ವ, ಅಸಿಪದ, ತ್ವಂಪದ, ತತ್ಪದ, ನಿರಸುನಿ ಭೇದ ಸ್ಥೂಲ, ಸೂಕ್ಷ್ಮ, ಕಾರಣ, ಮಹಾತಾಣ ಚಾರಹೀ ದೇಹ ದೇವ

ಕುರವಂಡಿ ಕರೂನ ಸಹಜ ಚಿ ಆರತಿ ನಿಜಭಾವಾ ಆಲಮಖಾನ್ ಓವಾಳಿ ನಾಗೇಶ ದೇವಾ ॥
ಕೂರ್ಮದೃಷ್ಟಿ ಪಾಹಿ ಮಾಝೂಕರಿಹೊ ಸಾಂಭಾಹಳ, ಅನಾಥಾ ಜಾ ನಾಥ
ದೀನಬಂಧು ಕೃಪಾಳ।

ಸ್ವಾಮಿಚರಣಾಚಿ ಆವಡಿ ದೇವಾ ಮ್ಹಣಿವುನಿ ಶರಣಾಗತ ಆಲೊ, ಮೀತುಜ ಭೇಟಿ ದೇವುನಿ ಮಾಝೀ ಪುರವಿ ಕೋಡ-ತುಜವಿ ನಮ ಜಕಾಂ ಹಿನ ಲಾಗೆ ಗೋಡಕಾಳಿ ಆಹೆ ಮಜಭರ ವಸಾ ತುಝಾದೇವ-ಜನ್ಮಮೃತ್ಯುಭವಭಯ ನಿರಸೀ ಮಾಝೂ.

ಪದೋಪದಿನಾಮ ತುಝುಗಾತೆ ಅಭಂಗೀ ದೇವಾ ಹಾಚಿ ಮಜಲಾಗಿ ಶೇಷ.

ಬ್ರಹ್ಮಾನಾಚತೀ ರಂಗೀ ಸಿದ್ಧನಾಗೇಶ ವರದಾನ ದೇವುನಿ, ಆಲಮಖಾನ್ ಉಭಾ
ಅಸೆ ಅನಂತ ಕೀರ್ತನಿ ॥

ಈ ಎರಡು ಪದಗಳು ಆಲಮಖಾನನ ಅಂಕಿತ ಉಳ್ಳವುಗಳು. ತನ್ನ ಗುರುವಾದ ನಾಗನಾಥ ಅಥವಾ ನಾಗೇಶನ ಸ್ತುತಿ ಪರವಾಗಿವೆ. ಅರ್ಥ ಕೊಡುತ್ತ ಹೋಗುವುದರಿಂದ ಲೇಖನವು ಬೆಳೆಯುವುದು. ಮೂಲ ಮರಾಠಿಯು ಬಹಳ ಸರಳವಾಗಿದೆ. ಸುಲಭವಾಗಿ ಗ್ರಹಿಸಿಕೊಳ್ಳಬಹುದು. ಈ ಆರತಿ ಪದಗಳಿಂದ ಆಲಮಖಾನನ ಗುರುವು ನಾಗನಾಥ ಅಥವಾ ನಾಗೇಶನೆಂಬುದು ಸ್ಪಷ್ಟವಿದೆ. ಈ ನಾಗನಾಥನು ವಡವಾಳ ಸಿದ್ಧನಾಗನಾಥನಲ್ಲದೆ ಬೇರೆಯಲ್ಲ.

ಈ ಆಲಮಖಾನನಿಗೆ ಅಲಮಣ್ಣ, ಆಲಮಾಪ್ರಭು, ಅಲ್ಲಮಪ್ರಭು, ಶಾಹದತ್ತ ಆಲಮ ಎಂದು ಸಾಮಾನ್ಯವಾಗಿ ಅನಂತರ ರೂಢಿಯಾಗಿದೆ.

ಕಲ್ಬುರ್ಗಿ ತಾಲ್ಲೂಕಿಯ ಮಡಿಹಾಳ ಎಂಬ ಊರಲ್ಲಿ ಅಲ್ಲಮಪ್ರಭುವಿನ ಸ್ಥಾನವಿದೆ

ಎಂದು ಕೇಳಿ ನಾನು ಅಲ್ಲಿಗೆ ಹೋಗಿ ನೋಡಿಕೊಂಡು ಬಂದೆನು. ಮೂರು ಮುಸ್ಲಿಮ ದರ್ಗಗಳು ಒಂದೇ ಅಂಗಳದ ಕಟ್ಟೆಯಮೇಲೆ ಕಟ್ಟಲ್ಪಟ್ಟವೆ. ದರ್ಗಾದ ಗುಂಬಜಗಳಲ್ಲಿ ಮುಸಲ್ಮಾನರ ಗೋರಿಗಳಂತೆ ಒಂದರಲ್ಲಿ ಮೂರು ಗೋರಿಗಳಿವೆ. ಮುಖ್ಯವಾದ ದೊಡ್ಡ ಗೋರಿಗೆ ಜನರು ಅಲ್ಲಮ ಪ್ರಭುವಿನ ಸಮಾಧಿ ಎನ್ನುವರು. ಮುಸಲ್ಮಾನರು ಸುಲ್ತಾನ ಪಾಷಾನ ಗೋರಿ ಎನ್ನುವರು. ಬೀದರ ಕೋಟೆಯಲ್ಲಿ ಸುಲ್ತಾನ ಪಾಷಾ ಅಥವಾ ಅಲ್ಲಮ ಪ್ರಭುವಿನ ಮೂಲ ಗೋರಿಯಿದೆ. ಅಲ್ಲಿ ಹೋಳಿ ಹುಣ್ಣಿಮೆಯ ಸುಮಾರಿಗೆ 'ಉರುಸು' ಆಗುತ್ತದೆ. ಈ ಮಡಿಹಾಳದ ಅಲ್ಲಮಪ್ರಭುವಿನ ಗೋರಿಯ ಪೂಜಾರಿಗಳು ಒಕ್ಕಲಿಗರು. ಲಿಂಗಧಾರಣವಿಲ್ಲ. ಈ ಪೂಜಾರಿಯು ಹೋಳಿ ಹುಣ್ಣಿಮೆಯ ಮರುದಿನ ಪಲ್ಲಕ್ಕಿಯೊಡನೆ ಬೀದರ ಕೋಟೆಗೆ ಹೋಗುತ್ತಾನೆ. ಇವನು ಹೋದನಂತರ ಬೀದರದಲ್ಲಿಯ ಉತ್ಸವವು ಪ್ರಾರಂಭವಾಗುತ್ತದೆ. ಬೀದರದಲ್ಲಿಯ ಉರುಸು ಸರಕಾರದಿಂದ ಆಗುವುದು. ಅಲ್ಲಿಯ ಪೂಜಾರಿಗಳಿಗೆ ಕಾವಡೇರು ಎಂದು ಕರೆಯುತ್ತಾರೆ. ಇವರು ಸಾಳಿಯ ಜಾತಿಯವರಂತೆ. ಹಡಗಲಿಯ ಗೋರಿಗೆ ಇನಾಮುಗಳಿವೆ. ಇದರ ಕೆಳಗೆ ಅದೇ ಕಲ್ಬುರ್ಗಿ ತಾಲ್ಲೂಕೆಯ ಹುಣಸಿಹಡಗಲಿ, ಜೇರೊಳ್ಳಿ ಹೆಬ್ಬಳ್ಳಿ ಈ ಮೂರು ಸ್ಥಳಗಳಲ್ಲೂ ಒಂದೇ ಕಾಲಕ್ಕೆ ಇದೇ ಅಲ್ಲಮಪ್ರಭುವಿನ ಜಾತ್ರೆಗಳಾಗುತ್ತವೆ. ಅಲ್ಲಲ್ಲಿ ಸಣ್ಣ ಸಣ್ಣ ಗೋರಿಗಳಿವೆಯಂತೆ. ಈ ಪೂಜಾರಿಯ ವಂಶಸ್ಥರು ಎಲ್ಲೆಲ್ಲಿ ಇರುವರೋ ಅಲ್ಲಲ್ಲಿ ತಮ್ಮದೇ ಅಲ್ಲಮಪ್ರಭುವಿನ ಸ್ಥಾನವನ್ನು ಕಲ್ಪಿಸಿಕೊಂಡಂತೆ ಕಾಣುತ್ತದೆ.

ಒಂದು ಕೈಫಿಯತ್ತಿನಲ್ಲಿ ಈ ಮುಂದಿನಂತೆ ಐತಿಹ್ಯ ಬರೆಯಲಾಗಿದೆ :

ಅಲ್ಲಮಣ್ಣನು ಯೋಗಸಾಧನ ಮಾಡಬೇಕೆಂದು ಕೊಲ್ಲಾಪುರದ ಕಡೆಗೆ ಹೋದನು. ಕೊಲ್ಲಾಪುರದಿಂದ ಐದು ಹರಿದಾರಿ ಮೇಲಿರುವ ಸ್ಥಳದಲ್ಲಿ ಯೋಗಸಾಧನ ಮಾಡಿದನು. ಇವನು ತನ್ನ ಮಗನಾದ ಸಿದ್ಧರಾಮನಿಗೆ ಪ್ರತಿವರ್ಷ ಆದಿಸ್ಥಳಕ್ಕೆ ಯಾತ್ರೆ ಮಾಡಬೇಕೆಂದು ಅಜ್ಞಾಪಿಸಿದನು. ಆದರಂತೆ ಮಡಿಹಾಳ-ತಡವರಿಗಿ-ತೋರಣಸಂಗೋಳಿ-ಜಿರಹಳ್ಳಿಗೆ ಬಂದನು. ಇವನ ಮಕ್ಕಳು ಏಳು ಜನ. ನಾಲ್ವರು ಜಿರಹಳ್ಳಿಯಲ್ಲಿ ನೆಲಸಿದರು. ಒಬ್ಬನು ಕೊಲ್ಲಾಪುರದ ಕಡೆ ಹೋದನು. ಮತ್ತೊಬ್ಬನು ವಾಗದರಿಗೆ ಹೋದನು. ಇವರ ಸಂತತಿಗೆ ಒಡೇರು ಎಂದು ಹೆಸರು. ಈ ಸಿದ್ಧರಾಮನು ಆಲಮಖಾನ್ ಅಥವಾ ಅಲ್ಲಮಪ್ರಭುವಿನ ಶಿಷ್ಯನಿರಬಹುದು. ಗುರುವಿನ ಮೂಲಸ್ಥಾನವಾದ ಬೀದರಿಗೆ ಹೋಗುವ ಪರಿಪಾಠವಿದ್ದಿರ ಬೇಕು. ಕೊಲ್ಲಾಪುರದ ಕಡೆ ತೇರ್ದಾಳ ಎಂಬ ಊರು ಇರುವುದು. ಈ ತೇರ್ದಾಳದಲ್ಲಿ ಅಲ್ಲಮಪ್ರಭುವಿನ ಸ್ಥಾನವಿದೆಯಂತೆ. ಅದೂ ಕೂಡ ಮುಸಲ್ಮಾನರ ಗೋರಿಯಾಗಿದೆ ಎಂದು ಕೇಳಿರುವೆ. ಈ ಗೋರಿಯಾದರೂ ಇವೇ ಆಲಮಖಾನನ ಗೋರಿ ಇರಬಹುದು. ಮತ್ತು ಅವನ ಶಿಷ್ಯನಾದ ಸಿದ್ಧರಾಮನ ಮಗನಾಗಲಿ ಅಥವಾ ಅವನ ವಂಶಜನಾಗಲಿ ಕಟ್ಟಿಸಿ ಬೆಳೆಸಿರಬಹುದು.

ಇಲ್ಲಿ ಇನ್ನೊಂದು ಸಂಗತಿಯನ್ನು ಸ್ಪಷ್ಟಗೊಳಿಸಬೇಕಾಗಿದೆ. ಅಲ್ಲಮಪ್ರಭುವಿನ ಸ್ಥಾನಗಳೆಂದು ಅವು ಮುಸಲ್ಮಾನರ ಗೋರಿಯಂತಿದ್ದು ದರ್ಗಾಗಳಾಗಿದ್ದಾಗ್ಯೂ, ಹಿಂದು ಜನರು ಈ ಸ್ಥಳಗಳನ್ನು ಬಸವೇಶ್ವರನ ಕಾಲದ ಪ್ರಸಿದ್ಧಪುರುಷನಾದ ಅಲ್ಲಮಪ್ರಭುವಿಗೆ ತಳಿಕೆ ಹಾಕಿ ನಂಬುತ್ತಿದ್ದರೂ ವೀರಶೈವರ ಅಲ್ಲಮಪ್ರಭುವಿಗೆ ಈ ಅಲ್ಲಮಪ್ರಭುವೆಂದು ಕರೆಯಿಸಿಕೊಳ್ಳುವ ಅಲ್ಲಮಖಾನನಿಗೂ ಯಾವ ಸಂಬಂಧವೂ ಇಲ್ಲ. ಅಲ್ಲಮಪ್ರಭುವಿನ

ವಿಷಯದಲ್ಲಿ ಹರಿಹರ ರಾಘವಾಂಕರು ಹೇಳುವಂತೆ ಸೊನ್ನಲಾಪುರದ ಸಿದ್ಧರಾಮೇಶ್ವರನಿಗೆ ಭೆಟ್ಟಿಯಾಗಿ ನೆಟ್ಟಗೆ ಶ್ರೀಶೈಲದ ಕದಳಿವನಕ್ಕೆ ಪ್ರಭುವು ಹೋದನೆಂದು ಹೇಳುತ್ತಿರುವಾಗ ಅಲ್ಲಲ್ಲಿ ಅವನ ಸಮಾಧಿಗಳು ಹೇಗೆ? ಅವು ಕೂಡ ಮುಸಲ್ಮಾನರ ಗೋರಿಗಳಂತೆ ಇರುವುದು ಸಂಭವವೇ ಇಲ್ಲ. ಈ ಇಬ್ಬರು ವ್ಯಕ್ತಿಗಳೂ ಬೇರೆಬೇರೆಯಾಗಿರುವರು.

ಇದೇ ಸಂದರ್ಭದಲ್ಲಿ ಇನ್ನೊಂದು ಮಾತನ್ನು ಬರೆಯಬೇಕಾಗಿದೆ. ಇದೇ ಕಲ್ಬುರ್ಗಿ ಜಿಲ್ಲೆಯ ಸುರಪುರ ತಾಲ್ಲೂಕೆಯಲ್ಲಿ ಕೊಡೆಕಲ್ಲ ಎಂಬ ಊರು ಇದೆ. ನನ್ನ ಪರಮಸ್ನೇಹಿತರಾದ ಆಸ್ಥಾನವಿದ್ವಾನ್, ಪಂಡಿತರತ್ನಂ, ಕೀರ್ತನಾಚಾರ್ಯ ವೇ|| ಬಿ. ಶಿವಮೂರ್ತಿ ಶಾಸ್ತ್ರಿಗಳು 'ವೀರಶೈವ ಕ್ಷೇತ್ರಗಳು' ಎಂಬ ಲೇಖನವೊಂದನ್ನು ಶರಣ ಸಾಹಿತ್ಯದಲ್ಲಿ ಬರೆದಿರುವರು. ಆ ಸಂದರ್ಭದಲ್ಲಿ ಕೊಡೆಕಲ್ಲು ವೀರಶೈವ ಕ್ಷೇತ್ರವೆಂದು ಬರೆದಿರುವರಲ್ಲದೆ, ಅಲ್ಲಿ ವಚನಗಳಿಗಷ್ಟೇ ಪೂಜೆಯಾಗುತ್ತದೆ ಎಂದು ಬರೆದಿರುವರು. ಈ ಕೊಡೆಕಲ್ಲನ್ನು ಶಾಸ್ತ್ರಿಗಳು ಸ್ವತಃ ನೋಡಿಲ್ಲವೆಂದು ಕಾಣುತ್ತದೆ. ಕೇಳಿಕೆಯ ಮಾತನ್ನು ನಂಬಿ ಬರೆದಿರುವರು. ನಾನು ಸ್ವತಃ ಆ ಸ್ಥಳಕ್ಕೆ ಹೋಗಿ ನೋಡಿರುವೆ. ಅದರ ಸ್ಥಿತಿ ಈ ಕೆಳಗಿನಂತಿದೆ–

ಅಲ್ಲಿಯ ಕಟ್ಟಡವು ಕ್ರಿ.ಶ. ೧೫ನೇ ಶತಮಾನದಲ್ಲಿ ಮುಸಲ್ಮಾನರ ಆಳಿಕೆಯ ಕಾಲದ ಮಾದರಿಯಾಗಿದೆ. ಮಡಿಹಾಳದ ಅಲ್ಲಮಪ್ರಭುವಿನ ದರ್ಗಾವು ಮತ್ತು ಇದು ಒಂದೇ ಹೋಲಿಕೆಯವು. ಈ ದರ್ಗಾದಲ್ಲಿ ಮುಸಲ್ಮಾನರ ಗೋರಿಯಿದೆ. ಈ ಗೋರಿಯ ಮೇಲೆ ಕಾಜಿನ ಬಿಲ್ವಾರ ಹಾಂಡೆಗಳು ತೂಗುಬಿದ್ದಿವೆ. ಈ ಬಿಲ್ವಾರ ಹಾಂಡೆಗಳ ಮೇಲೆ ಸ್ವರ್ಣಾಕ್ಷರಗಳಿಂದ "ಲಾ ಇಲಾಹಿ ಇಲ್ಲಿಲ್ಲಾ ಮಹಮ್ಮದ್ ರಸೂಲಿಲ್ಲಾ" ಎಂಬ ಅಕ್ಷರಗಳಿವೆ. ಗೋರಿಯ ಆಕಾರವು ಲೋಭಾನ ಹಾಕುವ ಮಣ್ಣಿನ ಪಾತ್ರೆಯು. ಗೋರಿಯ ಮೇಲಿನ ಗಲಾಫು ಎಲ್ಲವೂ ಮುಸಲ್ಮಾನಿ ವೇಷ. ಈ ಸ್ಥಳಕ್ಕೆ ಕೊಡೆಕಲ್ಲಬಸವಣ್ಣ ಎಂದು ಹಿಂದು ಮುಸ್ಲಿಮರು ನಡೆದುಕೊಳ್ಳುವರು. ಈ ಊರಲ್ಲಿ ಜಾಡರು ವಿಶೇಷವಾಗಿದ್ದಾರೆ. ಈ ಜಾಡರಲ್ಲಿ ಒಂದು ಕುಟುಂಬದವನು ಇದರ ಪೂಜಾರಿ. ಈ ಕುಟುಂಬದವರಿಗೆ ಬೋಳಕರೆಂದು ಹೆಸರು. ಇವರೂ ಜಾಡರೇ. ನಾನು ಪೂಜಾರಿಗೆ ಇದು ಮುಸಲ್ಮಾನರ ಗೋರಿ ಏಕೆ? ಎಂದು ಕೇಳಿದಾಗ ಬಸವೇಶ್ವರನು ಯವನ ರೂಪದಿಂದ ಅವತರಿಸಿ ಬಂದನೆಂದು ಹೇಳಿದನು. ಇಲ್ಲಿ ಯವನ ಕಾಲವು ಬಿಜಾಪುರದ ಮೊದಲನೇ ಬಾದಶಹನಾದ ಯುಸುಫ ಆದಿಲಶಹನ ಕಾಲವೆಂದು ತಿಳಿಯಿತು. ಈ ಯುಸುಫ ಆದಿಲಶಹನ ಕಾಲವು ಸುಮಾರು ಕ್ರಿ.ಶ. ೧೫ ಶತಮಾನದ ಮಧ್ಯ. ಈ ಬಾದಶಹನ ಗುರುವಿನ ದರ್ಗಾವು ಗೋಗಿ ಎಂಬ ಊರಲ್ಲಿದೆ. ಇದೇ ಕಾಲದಲ್ಲಿ ತಿಂಥಿಣಿಯ ಮೋನಪ್ಪನ ಸ್ಥಳವೊಂದು ಕೃಷ್ಣಾ ತೀರದಲ್ಲಿದೆ. ಇವನ ವಚನಗಳಿವೆ. ಕೊಡೇಕಲ್ಲಿನ ವಚನಗಳಾದರೂ ಕನ್ನಡದಲ್ಲಿವೆ. ಭಾಮಿನಿ ಷಟ್ಪದಿಯಲ್ಲಿವೆ ಎಂದು ತಿಳಿದುಬಂದಿತು.

ಈ ಕೊಡೆಕಲ್ಲಿನಲ್ಲಿ ವರ್ಷದೊಳಗೆ ಎರಡಾವರ್ತಿ ಉತ್ಸವಗಳಾಗುತ್ತವೆ. ಆ ಕಾಲದಲ್ಲಿ ಅಲ್ಲಿಯ ಸಾಧುವಿನ ವಚನಗಳನ್ನು ಪಲ್ಲಕ್ಕಿಯಲ್ಲಿಟ್ಟು ಮೆರೆಸುತ್ತಾರೆ. ಉಳಿದ ಕಾಲದಲ್ಲಿ ಆ ವಚನದ ಗಂಟು ಪೂಜಾರಿಯ ಮನೆಯಲ್ಲಿರುತ್ತದೆ. ದಿನಾಲು ಈ ಗೋರಿಗೆ ಪೂಜೆ ಇಸ್ಲಾಮಿ ಪದ್ಧತಿಯಂತೆ ನಡೆಯುತ್ತದೆ. ಇದು ವೀರಶೈವ ಕ್ಷೇತ್ರವೆಂದಿಗೂ ಆಗಲಾರದು.

ಅದಿರಲಿ. ಅಲಮಣ್ಣ, ಅಲಮಖಾನ್, ಅಲ್ಲಮಪ್ರಭು, ಶಾಹಸುಲ್ತಾನ ಎಂದು ಕರೆಯಿಸಿಕೊಳ್ಳುವ ಇತನಿಗೆ ಶಾಪದತ್ತ ಅಲಂ ಎಂದೂ ಮಹಾರಾಷ್ಟ್ರದಲ್ಲಿ ವ್ಯವಹಾರವಿದೆ. ಈ ಶಾಪದತ್ತ ಅಲಂನ ಶಿಷ್ಯನೇ ಜನಾರ್ದನಸ್ವಾಮಿ. ಈ ಜನಾರ್ದನಸ್ವಾಮಿಯ ಶಿಷ್ಯನೇ

## ಗುರು ಪೀಳಿಗೆ

### ಶೇಖ್ ನಸರುದ್ದೀನ್ ಚಿರಾಘ್ ದಿಲ್ಲಿ
### (೧೩೪೨)

| | ೧ | ೨ | ೩ | ೪ | ೫ |
|---|---|---|---|---|---|
| ಡಿ ಮಹಾಳ ಪರಂಪರೆ | ಬಂದೇ ನವಾಜ | ಶಾಹಬುದ್ದೀನ | ಡಾಡ್ಲೆಮಷಾಯಖ | ಅಲ್ಲಾವುದ್ದೀನ | ವಡವಾಳ ಸಿದ್ಧನಾಥ |
| ಅಹಮ್ಮದಶಹವಲಿ ಬಹಮನಿ | ಕಲ್ಬುರ್ಗಿ | ಮಾಯಿಳ | ಅಲ್ದಿ | ಬರಹಾಣಪುರ | ವಡವಾಳ |
| ಸಿದ್ಧರಾಮೇಶ್ವರ | ಕೇಶವ ಚೈತನ್ಯ | ಬಾಬಾ ಚೈತನ್ಯ | ರಾಘವ ಚೈತನ್ಯ | ಅನಂತ ಚೈತನ್ಯ | |
| | ೧೯೧೫-೧೯೨೦ | | | ಸಿದ್ಧಪ್ಪಯ್ಯ | ೧೩೩೦ |
| | ೧ | ೨ | ೩ | ೪ | ೫ |
| | ಅಜ್ಞಾನಸಿದ್ಧ | ಬಹಿರಂಭಟ | ಕಾನ್ಹೋಪಾಠಕ | ಜಗನ್ಮಿತ್ರನಾಗ | ಕಾನ್ಹೋತ್ರಿಮಲ |
| | ಸಿದ್ಧಲಿಂಗ | | | | |
| | ೧೩೭೮-೧೪೨೮ | ೧೪೨೮ | ೧೩೫೮-೧೪೨೮ | ಪರಳಿ | ೧೩೭೮ |

೬. ಆಲಂಖಾನ (ಶರದತ್ತ ಆಲಂ): ಜನಾರ್ದನಸ್ವಾಮಿ (೧೪೨೬-೧೯೯೭): ಏಕನಾಥ ಮಹಾರಾಜ.

ಮಹಾರಾಷ್ಟ್ರದ ಪ್ರಸಿದ್ಧ ಭಕ್ತನೂ, ಗ್ರಂಥಕಾರನೂ ಆದ ಏಕನಾಥ ಮಹಾರಾಜನು. (ಗುರುಪೀಳಿಗೆ ಹಿಂದಿನ ಪುಟದಲ್ಲಿ ತೋರಿಸಿದೆ).

ಅನುಭವನದ ದೃಷ್ಟಿಯಿಂದ ಮಾತನಾಡಲು ನಮಗೆ ಅಧಿಕಾರವಿಲ್ಲ; ಸಮಾಜಶಾಸ್ತ್ರ ದೃಷ್ಟಿಯಿಂದ ಹೇಳುವುದಾದರೆ ಹಿಂದುಗಳು ತುರುಕರಿಗೆ ಕೇವಲ ರಾಜ್ಯವನ್ನಷ್ಟೇ ಸೋತಿಲ್ಲ; ಆಧ್ಯಾತ್ಮಿಕ ವಿದ್ಯೆಯಲ್ಲೂ ಸೋಲನ್ನು ಒಪ್ಪಿಕೊಂಡಿರುವರು. ಅದು ಕಾರಣವೇ ಹಿಂದುಗಳ ಆಧ್ಯಾತ್ಮಿಕ ಪ್ರಭಾವವು ಮುಸಲ್ಮಾನರ ಮೇಲಿಲ್ಲ.

## ವಿಶೇಷ ಟಿಪ್ಪಣಿ

೧. ಈ ಪ್ರಾಂತದಲ್ಲಿ ಬಕಪ್ರಭು-ಮಾಣಿಕಪ್ರಭು ಮುಂತಾದ ಪ್ರಭು ಸಂಪ್ರದಾಯ ಒಂದಿದೆ. ಅದೂ ಕೂಡ ಚೈತನ್ಯ ಸಂಪ್ರದಾಯವೇ ಎಂದು ಹೇಳಬಹುದು.

೨. ದತ್ತ ಸಂಪ್ರದಾಯದಲ್ಲೂ ಈ ಸಂಪ್ರದಾಯವು ಸೇರಿಕೊಂಡಿದೆ. ಗಾಣಗಾಪುರದ ನೃಸಿಂಹ ಸರಸ್ವತಿಯ ಕಾಲವಾದರೂ ಜನಾರ್ದನ ಅಥವಾ ಆಲಂಖಾನನ ಕಾಲಕ್ಕೆ ಸ್ವಲ್ಪ ಹೆಚ್ಚು ಕಡಿಮೆ ಸರಿಬೀಳುವುದು.

೩. ಕಲ್ಬುರ್ಗಿಯ ಸಮೀಪದಲ್ಲಿ ಸಾವಳಗಿ ಎಂಬ ಸ್ಟೇಷನ್ನಿದೆ. ಈ ಸಾವಳಿಗಿಯಲ್ಲಿ ಪ್ರಾಚೀನವಾದ ವಿರಕ್ತಮಠವೊಂದಿದೆ. ಇದೂ ಕೂಡ ಇದೇ ಸಂಪ್ರದಾಯಕ್ಕೆ ಸೇರಿದ್ದು. ಇಂದಿಗೂ 'ಬಂದೇನವಾಜ ಕಿ ದೋಸ್ತಾ ರಾಹೋ ದೀನ' ಎಂದು ಈ ಮಠದಲ್ಲಿ ದೀನ ಹೊಡೆಯುತ್ತಾರೆ. ಪರಂಪರೆಯಿಂದ ಬಂದ ಪದ್ಧತಿಯಿದು.

*ಶರಣ ಸಾಹಿತ್ಯ, ೧೨-೧೧*

*ಕರ್ನಾಟಕ ಸಂಸ್ಕೃತಿಯ ಸಂಶೋಧನೆ, ೧೯೭೦, ಪು. ೧೭೮-೯೩*

# ೧೬. ಕರ್ನಾಟಕದ ಸೂಫಿಕರಣದ ನಾಲ್ಕು ಪರಂಪರೆಗಳು

● ರಹಮತ್ ತರೀಕೆರೆ

## ಸೂಫಿ ಹಾಗೂ 'ಲಿಂಗಾಯತ' ಸಂಬಂಧಗಳು

೧೨ನೇ ಶತಮಾನದ ನಂತರ ಕರ್ನಾಟಕವನ್ನು ಪ್ರವೇಶಿಸಿದ ಸೂಫಿಗಳು ಹಾಗೂ ನಂತರ ಕರ್ನಾಟಕದಲ್ಲಿ ಹುಟ್ಟಿ ಬೆಳೆದ ಸೂಫಿಗಳು, ವಚನ ಪರಂಪರೆಯ ಜತೆ ಹೇಗೆ ಅನುಸಂಧಾನ ಮಾಡಿದರು ಎಂಬ ನಿಗೂಢವನ್ನು ಇನ್ನು ಅರಿಯಬೇಕಾಗಿದೆ. ನಾಸಿರುದ್ದೀನ್ ನಾಗನಾಥ ಮೂಲದಿಂದ ಹೊರಡುವ ಮರಾಠಿ ಸದ್ಗುರು ಪರಂಪರೆಯು, ಅಲ್ಲಮಪ್ರಭುವನ್ನು ಶಾ ಆಲಮಪ್ರಭು ಕಮಾಲುದ್ದೀನನ್ನಾಗಿ ಮಾಡಿ, ಉಳಿದ ವಚನಕಾರರನ್ನು ಅವನ ಶಿಷ್ಯರನ್ನಾಗಿ ಕಂಡಿತಷ್ಟೆ. ಇದನ್ನು ವಚನ ಪರಂಪರೆಯ ನಾಥೀಕರಣ ಹಾಗೂ ಸೂಫೀಕರಣ ಎಂದು ಕರೆಯಬಹುದು. ಬಿಜಾಪುರದ ಅಮೀನುದ್ದೀನ್ ಚಿಸ್ತಿಯನ್ನು 'ಆಲಮಪ್ರಭು'ವಿನ ಶಿಷ್ಯನಾಗಿ ನೋಡಿರುವುದನ್ನು ಕಂಡರೆ ಸೂಫಿಗಳ ಶರಣೀಕರಣವೂ ಆಗಿದೆ. ವಚನಕಾರರಲ್ಲಿ ಇಬ್ಬರು ಮಾತ್ರ (ಅಲ್ಲಮಪ್ರಭು ಹಾಗೂ ಚನ್ನಬಸವಣ್ಣ) ಬೇರೆ ಬೇರೆ ಬಗೆಯಲ್ಲಿ ಸೂಫಿ ಪರಂಪರೆಯ ಪಾತ್ರಗಳಾಗಿ ಪ್ರವೇಶ ಪಡೆದುಕೊಳ್ಳುತ್ತಾರೆ. ಅದರಲ್ಲೂ ಅಲ್ಲಮಪ್ರಭು ಧಾರೆಯು ಸೂಫಿ ಮತ್ತು ನಾಥ ಧಾರೆಗಳ ಜತೆ ಬೆರೆತು ಅನೇಕ ಸಂಕರರೂಪಗಳನ್ನು ಸೃಷ್ಟಿಸಿದೆ. ಸಂಕರವೇಕೆಂದರೆ, ಇವು ಬಂದೇನವಾಜ ಸಂಪ್ರದಾಯದಂತೆ ಪೂರಾ ಸೂಫಿಯೂ ಅಲ್ಲ; ಕದಿರಿಬೆಟ್ಟದಲ್ಲಿರುವಂತೆ ಪೂರಾನಾಥವೂ ಅಲ್ಲ. ಈ ಸಂಕರ ವಿಚಿತ್ರತನವೆ ಕರ್ನಾಟಕದ ಅನುಭಾವಿ ಪರಂಪರೆಗಳ ಆಕರ್ಷಕ ಮುಖ. ಕೊಡೇಕಲ್ ಬಸವಣ್ಣನ ಪರಂಪರೆ, ಶಿರಹಟ್ಟಿ ಫಕೀರೇಶನ ಪರಂಪರೆ, ಸಾವಳಿಗಿ ಶಿವಯೋಗಿ ಪರಂಪರೆ, ತಿಂತಿಣಿ ಮೋನಪ್ಪಯ್ಯ ಪರಂಪರೆ, ಮಳೆಯ ಮಲ್ಲೇಶ ಪರಂಪರೆ, ಕಾಡಸಿದ್ಧೇಶ್ವರನ ಪರಂಪರೆ, ದೀನದಾರ್ ಚನ್ನಬಸವೇಶ್ವರ ಪರಂಪರೆ–ಇವು ಕರ್ನಾಟಕದ ಸೂಫಿಕರಣಗೊಂಡ ಕೆಲವು ಪರಂಪರೆಗಳು. ಇವುಗಳಲ್ಲಿ ಕೊಡೇಕಲ್, ಕಾಡಸಿದ್ಧ, ತಿಂತಿಣಿ ಹಾಗೂ ದೀನದಾರ್ ಚನ್ನಬಸವೇಶ್ವರ ಇವು ವಚನಕಾರರ ಗಾಢಸ್ಮೃತಿಯಲ್ಲಿ ರೂಪುತಳೆದಂಥವು.

ಈ ಅನುಭಾವಿ ಪರಂಪರೆಗಳ ಒಳಗೆ ಇರುವ ವಚನಕಾರರ ಸ್ಮೃತಿಗಳು ಹಾಗೂ ಈಗ ಇವು ಪಡೆದುಕೊಳ್ಳುತ್ತಿರುವ ಲಿಂಗಾಯತೀಕರಣ, ಇವನ್ನು ವೀರಶೈವ ತೆಕ್ಕೆಗೆ ಸೇರಿಸುವುದಕ್ಕೆ ಪ್ರೇರಿಸುತ್ತವೆ. 'ಲಿಂಗಾಯತ' ವಿದ್ವಾಂಸರು ಸಾವಳಗಿ-ಕೊಡೇಕಲ್ ಪರಂಪರೆಗಳನ್ನು ''ವೀರಶೈವ ಕ್ಷೇತ್ರ''ಗಳ ಪಟ್ಟಿಯಲ್ಲಿ ಸೇರಿಸಿದಾಗ ಕಪಟರಾಳರು ಇವುಗಳ ಒಳಗಿನ ಸೂಫೀತನವನ್ನು ವಿವರಿಸಬೇಕಾಯಿತು. ಕನ್ನಡದಲ್ಲಿ ವಚನಕಾರರ ಅಧ್ಯಯನವೆಂದರೆ ಲಿಂಗಾಯತ ಅಧ್ಯಯನವೆಂಬಂತಾಗಿಬಿಟ್ಟಿದೆ. ಕರ್ನಾಟಕದ ಅನೇಕ ಸಂಕರರೂಪಿ ಅನುಭಾವಿ ಪರಂಪರೆಗಳನ್ನು ೧೨ನೇ ಶತಮಾನದ ಶರಣರ ಜತೆಗಿಟ್ಟು, ವ್ಯತ್ಯಾಸ-ಹೋಲಿಕೆಗಳನ್ನು ಚರ್ಚಿಸುವುದು, ಈ ಅಧ್ಯಯನಗಳ ಚಾಳಿಯಾಗಿಬಿಟ್ಟಿದೆ. ಕನ್ನಡದಲ್ಲಿ ಸೂಫಿಗಳ ಹಾಗೂ ಶರಣರ ಬಗ್ಗೆ ಮಾಡಲಾಗಿರುವ ತೌಲನಿಕ ಅಧ್ಯಯನಗಳೆಲ್ಲ ಈ ಜಾಡಿನವು. ಇಂಥ ಅಧ್ಯಯನಗಳ ಹಿನ್ನೆಲೆ ಏನು? ಅಕೆಡಮಿಕ್ ಕುತೂಹಲವೇ?

ಲಿಂಗಾಯತ ಪ್ರಭಾವವನ್ನು ಉಳಿದ ಕಡೆ ಕಾಣುವುದೇ? ವಿಶ್ವದ ಧರ್ಮ-ಪಂಥಗಳೆಲ್ಲ ಒಂದೇ ಸತ್ಯದ ಬೇರೆಬೇರೆ ರೂಪಗಳು ಎನ್ನುವ ಸರ್ವಧರ್ಮ ಸಾಮರಸ್ಯ ಮನೋಭಾವವೇ? ಕರ್ನಾಟಕದ ಜನಸಮುದಾಯವು ತನ್ನ ಬಾಳಿನ ಸಂದರ್ಭದಲ್ಲಿ ಈ ಪಂಥಗಳನ್ನಿಟ್ಟುಕೊಂಡು ಮಾಡಿರುವ ಅಪೂರ್ವ ತಾತ್ವಿಕ ಪ್ರಯೋಗವನ್ನು ಕಾಣುವ ಸಾಂಸ್ಕೃತಿಕ ಬೆರಗು ಇಲ್ಲದಿದ್ದರೆ, ಅಕೆಡಮಿಕ್ ಅಧ್ಯಯನಗಳು ಜಡವಾಗಿಬಿಡುತ್ತವೆ. ಷಣ್ಮುಖಯ್ಯ ಅಕ್ಕೂರಮಠ ಅಂಥವರು ಸೂಫಿ ಹಾಗೂ ಶರಣರ ಅನುಭಾವಗಳಲ್ಲಿದ್ದ ವ್ಯತ್ಯಾಸ ಮತ್ತು ಹೋಲಿಕೆಗಳನ್ನು ಥಿಯರಿಗಳ ನೆಲೆಯಲ್ಲಿ ಸಮೀಕ್ಷೆ ಮಾಡುತ್ತಾರೆ.[೧] ಶರಣರ ಷಟ್‌ಸ್ಥಲಗಳೇ ಸೂಫಿಗಳ ಶರೀಯತ್ ತರೀಕತ್ ಇತ್ಯಾದಿ ಹಂತಗಳು; ಗುರುಕಾರುಣ್ಯಸ್ಥಲವೇ ಪೀರ್ ಕಲ್ಪನೆ; ಏಕದೇವೋಪಾಸನೆ- ತೌಹೀದ್ ಕಲ್ಪನೆ; ಅಷ್ಟಾವರಣ-ನಮಾಜ್ ಮುಂತಾದ ಪಂಚತತ್ವಗಳು. ಹೀಗೆ ಹೊರರೂಪಿಯಾದ ಸಾಮ್ಯ-ಭೇದಗಳನ್ನು ಪಟ್ಟಿಮಾಡುವುದರಿಂದ ಕರ್ನಾಟಕದ ಸೂಫಿಗಳು ಹೇಗೆ ಈ ತತ್ವಗಳನ್ನು ಬದುಕಿದರು ಎಂಬ ಬಗ್ಗೆ ಏನೂ ಹೇಳಿದಂತಾಗುವುದಿಲ್ಲ. ಈ ಗ್ರಹಿಕೆಗಳು ಸೂಫಿಸಂ ಮತ್ತು ಇಸ್ಲಾಮ್, ವೀರಶೈವ ಮತ ಹಾಗೂ ಅದರ ಅನುಭಾವಿಧಾರೆಗಳನ್ನು ಏಕರೂಪಿಯಾಗಿ ನೋಡುತ್ತವೆ. ಸೂಫಿ ಅಥವಾ ಶರಣರನ್ನು ರೂಪಿಸಿದ ಆಯಾ ಕಾಲದ ಚಾರಿತ್ರಿಕ-ರಾಜಕೀಯ-ಆರ್ಥಿಕ ಸನ್ನಿವೇಶಗಳ ಹಿನ್ನೆಲೆಯನ್ನು ಕೈಬಿಟ್ಟು ನೋಡುತ್ತವೆ.

ವಚನಕಾರರ ನಂತರ ಕರ್ನಾಟಕ ಭೂಮಿಕೆಯನ್ನು ಪ್ರವೇಶಿಸಿದ ಸೂಫಿಗಳು, ವಚನಕಾರರು ಆಡಿದ ಹೊಲದಲ್ಲಿ ಬದುಕುವಾಗ ಯಾವ ಪ್ರೇರಣೆ ಪಡೆದುಕೊಂಡರು. ವಚನಕಾರರ ಪರಂಪರೆ ಸೂಫಿಗಳ ಜತೆ ಹೇಗೆ ಬೆರೆಯಿತು–ಎಂಬ ಎರಡು ಪ್ರಶ್ನೆಗಳನ್ನು ಬಿಡಿಸಿದರೆ, 'ಕರ್ನಾಟಕ' ಸಂಸ್ಕೃತಿಯ ಹಲವು ಗುಟ್ಟುಗಳು ಹೊರಬರುತ್ತವೆ.

## ಹೊರರೂಪಿ ಹೋಲಿಕೆಗಳು ಹಾಗೂ ಸಾಮರಸ್ಯವಾದಿಗಳು

ಭಾರತದ ರಾಜಕಾರಣದಲ್ಲಿ ಕೋಮುವಾದವು ಬೆಳೆಯುತ್ತಿದ್ದಂತೆ, ಪತ್ರಿಕೋದ್ಯಮದಲ್ಲಿರುವ 'ಪ್ರಗತಿಪರ' 'ಸೆಕ್ಯುಲರ್' ದನಿಗಳು ಕ್ರಿಯಾಶೀಲಗೊಂಡವು. ಅವು ಕೋಮುಸಾಮರಸ್ಯದ ನಿದರ್ಶನಗಳನ್ನು ನಿಧಿ ಹುಡುಕುವಂತೆ ಹುಡುಕುತ್ತ, ವರದಿಮಾಡ ತೊಡಗಿದವು. 'ಹಿಂದೂ' ಸಂತನು 'ಇಸ್ಲಾಮೀ' ರಿವಾಜುಗಳನ್ನು ಮಾಡುತ್ತಿದ್ದರೆ, 'ಮುಸ್ಲಿಂ' ಸಂತನಿಗೆ 'ಹಿಂದೂ' ಶಿಷ್ಯನಿದ್ದರೆ, ಒಂದು ಧರ್ಮದ ದೈವಕ್ಕೆ ಇನ್ನೊಂದು ಧರ್ಮದ ಭಕ್ತರು ನಡೆದುಕೊಳ್ಳುತ್ತಿದ್ದರೆ ಸಾಕು, ಅದು ಧಾರ್ಮಿಕ ಸಾಮರಸ್ಯ ಆಗಿಬಿಡುತ್ತಿತ್ತು. ಮೂಲತಃ ಹಿಂದೂ-ಮುಸ್ಲಿಂ ಎಂಬ ಪರಿಭಾಷೆಯೆ ಕೋಮುವಾದಿಯಾದುದು. ಅದು ಜನರನ್ನು ಅವರ ಬಾಳಿನ ಸಂಸ್ಕೃತಿಯ ನೆಲೆಯಲ್ಲಿ ನೋಡದೆ ಧಾರ್ಮಿಕ ಗುರುತುಗಳ ಹಿನ್ನೆಲೆಯಲ್ಲಿ ನೋಡುತ್ತದೆ. ಎಂತಲೇ ಅದಕ್ಕೆ ಗೋವಿಂದಭಟ್ಟ-ಶಿಶುನಾಳರ ಗುರುಶಿಷ್ಯತ್ವ ಬೆರಗಿನ ಸಂಗತಿಯಾಗುತ್ತದೆ. ಕರ್ನಾಟಕ ಸೂಫಿಗಳು ಹಾಗೂ ಇತರೆ ಪಂಥಗಳ ಅನುಯಾಯಿಗಳು ಸಹಜವಾಗಿ ಮಾಡಿರುವ ತತ್ವಚಿಂತನೆ, ಅದನ್ನು ಸಹಜವಾಗಿ ಬದುಕುತ್ತಿರುವ ಜನ–ಇಲ್ಲೆಲ್ಲ ಕೋಮುಸಾಮರಸ್ಯದ ಉದ್ದೇಶಗಳೆ ಇಲ್ಲ. ಅಸಾಂಸ್ಕೃತಿಕವಾದ ಈ ಹಿಂದು ಮುಸ್ಲಿಂ

---

೧. ನೋಡಿ : ಸೂಫಿ ಮತ್ತು ಶರಣರ ಅನುಭಾವಪಥ

ಸಾಮರಸ್ಯವಾದಿ ಗ್ರಹಿಕೆಯಿಂದ ತಪ್ಪಿಸಿಕೊಂಡು, ಸೂಫೀಕರಣಗೊಂಡ ಕರ್ನಾಟಕದ ಅನುಭಾವಿ ಪರಂಪರೆಗಳನ್ನು ನೋಡುವುದೆ ಒಂದು ಸವಾಲಾಗಿಬಿಟ್ಟಿದೆ. ಒಂದು ಕಾಲಕ್ಕೆ ಈ ಧಾರೆಗಳು ಒಡನಾಡಿವೆ ಎಂಬುದನ್ನು ಈಗಲೂ ಕೆಲವು ಕುರುಹುಗಳ ಮೂಲಕ ಈ ಪರಂಪರೆಗಳು ಪ್ರಕಟಿಸುತ್ತಿವೆ.

**(i) ಗುರು-ಶಿಷ್ಯರ ಅಥವಾ ಗೆಳೆತನದ ಸಂಬಂಧ**

ಕರ್ನಾಟಕದ ಅನೇಕ ಅನುಭಾವಿ ಸಂಪ್ರದಾಯಗಳಲ್ಲಿ ಗುರು-ಶಿಷ್ಯ ಹಾಗೂ ಸ್ನೇಹದ ಸಂಬಂಧಗಳು, ಧಾರ್ಮಿಕವಾಗಿ ಬೇರೆ ಬೇರೆ ಎಂದು ತೋರುವ ವ್ಯಕ್ತಿಗಳ ನಡುವೆ ಏರ್ಪಟ್ಟಿವೆ. ಮುರ್ತುಜಾಖಾದ್ರಿ-ಮಹಾಂತ ಶಿವಯೋಗಿ; ಗಾದಿಲಿಂಗ-ಶೇಕ್‌ಶಾವಲಿ; ನಿಡುವಂಚಿ ಭದ್ರೇಶ್ವರ-ತುರಾಸಾಹೇಬ; ಗೂಗಿ ಚಂದಾಸಾಹೇಬ-ಡಿಗ್ಗಿ ಸಂಗಮನಾಥ; ಮಿರ್ಜಿ ಮೀರಾಸಾಹೇಬ-ಕಾಡಸಿದ್ಧೇಶ್ವರ; ನಾಸಿರುದ್ದೀನ್-ಸಿದ್ಧಲಿಂಗ. ಬಂದೇನವಾಜ-ಶರಣ ಬಸವೇಶ್ವರ; ಅಲ್ಲಿಸಾಬು-ಶಿಲವೇರಿ ಶಿವಪ್ಪ, ಕಡಕೋಳ ಮಾಡಿವಾಳಪ್ಪ-ಚನ್ನೂರ ಜಲಾಲಸಾಬ. ಹೀಗೆ ಅನೇಕ ಜೋಡಿಗಳು ಕಾಣಸಿಗುತ್ತವೆ. ಇಂಥ ಗೆಳೆತನ ಅಖಿಲ ಭಾರತ ಮಟ್ಟದಲ್ಲಿ ಕೂಡ ಇರುವಂಥದ್ದು. ಹೆಚ್ಚಿನ ಕಡೆ ಗುರುತನವು ಸೂಫಿಸಂತರದ್ದಾಗಿದೆ. ಆದರೆ ೧೮, ೧೯ನೇ ಶತಮಾನಗಳತ್ತ ಬಂದಂತೆ, ಬಂದೇನವಾಜನಂಥ ಸೂಫಿಗಳು ಇಲ್ಲವಾದ್ದರಿಂದಲೊ ಏನೊ, ಗುರುತನವು 'ಮುಸ್ಲಿಮ' ಅಲ್ಲದ ಸಮುದಾಯದವರ ಪಾಲಾಗಿದೆ. ಶಿಷ್ಯತ್ವವನ್ನು ಗುರುಸೇವೆ ಮಾಡಿ ಪಡೆದವರಿದ್ದಾರೆ; ಗುರುವೊಡ್ಡಿದ ಸ್ಪರ್ಧೆಯಲ್ಲಿ ಗೆದ್ದು ಪಡೆದವರಿದ್ದಾರೆ. ಈ ಗುರುಶಿಷ್ಯ ಸಂಬಂಧಗಳು ಜನ್ಮಾಂತರದಲ್ಲೂ ಮುಂದುವರೆಯುತ್ತವೆ! ಗೆಳೆತನಗಳು ಸಾಮಾನ್ಯವಾಗಿ ಶಕ್ತಿ ಪರೀಕ್ಷೆಯ ನಂತರ ಉಂಟಾಗಿವೆ. ಸಾವಳಗಿ ಶಿವಲಿಂಗನು ಈ ಸ್ಪರ್ಧೆಯಲ್ಲಿ ಗೆದ್ದು, ಬಂದೇನವಾಜನಿಂದ ಶೈಲಿ, ಶಮಲ, ಶಿಲೇಮನಿಗಳನ್ನು ಪಡೆದುಕೊಂಡು ಜಗದ ಜನರೆಲ್ಲ ಜಗದ್ಗುರುವಾದವನು. ಶೈಲಿ, ಶಮಲ, ಶಿಲೇಮನಿ ಪಡೆಯುವುದು ಎಂದರೆ ಸೂಫಿಗುರುವಿನಿಂದ ಸಾಧನೆ ಮುಗಿದ ಶಿಷ್ಯನು ಖಿಲಾಫತ್ ಪಡೆಯುವುದು, ಖಲೀಫನಾಗುವುದು.

**(ii) ಮಠ-ಖಾನಖಾಗಳು**

ಸೂಫಿ ಖಾನಖಾಗಳಿಗೂ ಈಗ 'ವೀರಶೈವ' ಎನಿಸಿಕೊಳ್ಳುವ ಮಠಗಳಿಗೂ ನಡುವೆ ಇರುವ ಸಾಮ್ಯಗಳು ಕಣ್ಣು ಸೆಳೆಯುತ್ತವೆ. ಸೂಫಿಗುರುವಿನ ಏಕಾಂತಕ್ಕೆ, ಸಂಸಾರಕ್ಕೆ, ಶಿಷ್ಯರೊಡನೆ ಬೆರೆಯುವುದಕ್ಕೆ, ದೊರೆ ಬಂದಾಗ ಮಂತ್ರಾಲೋಚನೆ ಮಾಡಲು, ಜನ ಬಂದಾಗ ಅವರನ್ನು ಭೇಟಿಯಾಗಲು ಖಾನಖಾದಲ್ಲಿ ಬೇರೆ ಬೇರೆ ಭಾಗಗಳಿರುತ್ತಿದ್ದವು. ಇಡೀ ಖಾನಖಾಕ್ಕೆ ನಿಶ್ಚಿತ ಆದಾಯ ಬರುವಂತೆ ಇನಾಮ-ಜಹಗೀರುಗಳಿರುತ್ತಿದ್ದವು. ಒಂದು ಕಾಲಕ್ಕೆ ಅನುಭಾವಿ ಶಿಕ್ಷಣಕೇಂದ್ರವಾಗಿದ್ದ ಮಠಗಳೂ ಹೀಗೆ ಇದ್ದವು. ಸಾವಳಗಿ, ಶಿರಹಟ್ಟಿ ಹಾಗೂ ಅಮೀನುದ್ದೀನರ ಮಠ-ಖಾನಖಾಗಳ ಆರ್ಥಿಕ-ಆಡಳಿತ ರಚನೆ ಒಂದೇ ರೀತಿಯಲ್ಲಿದೆ. ಬೌದ್ಧರು ಇದ್ದ ಮಠಗಳು ನಾಥರ ಕಾಲದಿಂದಲೂ ವಿಭಿನ್ನ ಕಾಲಘಟ್ಟದಲ್ಲಿ ತರತರದ ರೂಪಧಾರಣೆ ಮಾಡಿಕೊಂಡು ಬಂದಿವೆ.

**(iii) ವಾಸ್ತುವಿನ ಸಾಮ್ಯತೆ**

ಹಿಂದೂ-ಮುಸ್ಲಿಂ ಸಾಮರಸ್ಯವಾದಿಗಳಿಗೆ ಎದ್ದು ಕಾಣುವುದು ಇವುಗಳ ವಾಸ್ತುರಚನೆ.

ಸೂಫಿಕರಣಕ್ಕೆ ಒಳಗಾದ ಅನುಭಾವಿಗಳ ಸಮಾಧಿಗಳು ಹಾಗೂ ಖಾನಖಾಗಳು 'ಇಸ್ಲಾಮಿ' ಎಂದು ಕರೆಯಲಾಗುವ ಇಂಡೋಸಾರ್ಸೆನಿಕ್ ರಚನೆಯನ್ನು ಪಡೆದುಬಿಟ್ಟವೆ. ಸೂಫಿಗಳ ಸಮಾಧಿ ಉತ್ತರ ದಕ್ಷಿಣಕ್ಕೆ ಮಲಗಿರುವ ಆಕಾರದಲ್ಲಿದ್ದರೆ, ಸೂಫಿ ಶಿಷ್ಯನಾದ ಸಿದ್ಧಪಂಥದ ಸಂತನಿಗೆ ಕುಳ್ಳಿರಿಸಿದ ರೀತಿಯಲ್ಲಿ ಇರುತ್ತದೆ. ಸಮಾಧಿಕಟ್ಟಡದ ಹೊರರೂಪ ಮಾತ್ರ ಒಂದೇ ರೀತಿಯಲ್ಲಿರುತ್ತದೆ. ಅಂಥ 'ಇಸ್ಲಾಮಿ' ವಾಸ್ತುವಿನಲ್ಲಿರುವ ಕೆಲವು ಗದ್ದುಗೆ ಮಠಗಳೆಂದರೆ–

ಸಾವಳಗಿ ಶಿವಯೋಗಿ, ತಿಂತಿಣಿ ಮೋನಪ್ಪ, ಕೊಡೇಕಲ್ ಬಸವಣ್ಣ, ದಿಗ್ಗಿ ಸಂಗಮನಾಥ, ನಾಯಕನಹಟ್ಟಿ ತಿಪ್ಪೇಸ್ವಾಮಿ, ಸಾಲೋಟಗಿ ಶಿವಯೋಗಿ ಇವರ ಗದ್ದುಗೆಗಳು, ಅಲ್ಲಮಪ್ರಭು ಹಾಗೂ ಮಳೆಪ್ಪಯ್ಯನವರ ಗುಡಿಗಳು, ಶಿರಹಟ್ಟಿ ಮಠ–ಮುಂತಾದವು. ಕೆಲವು ಕಡೆ ಗೆಳೆಯನೊ ಗುರುವೊ ಆದ ಸೂಫಿಸಂತನ ತೋರುಗದ್ದಿಗೆ ಮೇಲಿದ್ದು, ಕೆಳಗೆ ಸಂತನ ಗದ್ದಿಗೆ ಇರುತ್ತದೆ. ದಿಗ್ಗಿ ಸಂಗಮನಾಥನ ಮೇಲೆ ಚಂದಾಸಾಹೇಬನ, ಸಾವಳಗಿ ಶಿವಲಿಂಗನ ಮೇಲೆ ಖಾಜಾ ಬಂದೇನವಾಜನ, ಮೋನಪ್ಪಯ್ಯನ ಮೇಲೆ ಮಹಮದ್ ಪೈಗಂಬರನ ತೋರುಗದ್ದಿಗೆಗಳು ಇವೆ.

ಇಸ್ಲಾಂ ಅಥವಾ ನಿರಾಕಾರವಾದಿ ದೈವವನ್ನು ನಂಬುವ ಧರ್ಮಗಳೆಲ್ಲ ಆಕಾರ ವಿರೋಧಿಯಾದವು. ಆದರೆ ಅನೇಕ ಚಾರಿತ್ರಿಕ ಕಾರಣಗಳಿಂದ ಇಸ್ಲಾಮಿಗೆ ಕಾಬಾದ ಕಟ್ಟಡವನ್ನು (ಇಸ್ಲಾಮ್ ಹುಟ್ಟುವ ಮುಂಚೆ ಇದು ಮೂಲತಃ ಅರಬ್ ಬುಡಕಟ್ಟುಗಳು ತಮ್ಮ ದೈವಗಳನ್ನಿಡುತ್ತಿದ್ದ ಮಂದಿರವಾಗಿತ್ತು) ಪವಿತ್ರ ಸಂಕೇತವಾಗಿ ಉಳಿಸಿಕೊಳ್ಳಬೇಕಾಗಿ ಬಂದಿತು. ಇದು ಬೇರೆಯೇ ಸಂಗತಿ. ಜೀವವುಳ್ಳ ಪ್ರಾಣಿಯ ಯಾವುದೇ ಆಕೃತಿಯನ್ನು ನಿರ್ಮಿಸುವುದು ಸೃಷ್ಟಿಕರ್ತನಿಗೆ ಹಾಕುವ ಸವಾಲು ಎಂದು ಇಸ್ಲಾಂ ಧರ್ಮಶಾಸ್ತ್ರ ವಿಧಿಸಿದಾಗ, ಇಸ್ಲಾಮಿನ ಸೃಜನಶೀಲತೆ ವಾಸ್ತುವಿನಲ್ಲಿ ಹೊರಹೊಮ್ಮತೊಡಗಿತು. ಮಸೀದಿಗಳು, ಸಮಾಧಿಕಟ್ಟಡಗಳು ರೂಪುಗೊಳ್ಳತೊಡಗಿದವು. ಮಧ್ಯ ಏಶಿಯಾದಿಂದ ಬಂದ ವಾಸ್ತುಶಿಲ್ಪಿಗಳೂ ಇವರ ಪ್ರಭಾವ ಪಡೆದ ದೇಶೀಯ ವಾಸ್ತುಶಿಲ್ಪಿಗಳೂ ಕೂಡಿ ಹುಟ್ಟಿಸಿದ ಸಂಕರ ಶೈಲಿಯಲ್ಲಿ ಈ ಕಟ್ಟಡಗಳು ಮೇಲೆದ್ದವು. ಸಂತನ ಭಕ್ತನಾದ ದೊರೆಯೊ ಗೌಡನೊ ಯಾರೇ ದರ್ಗಾ ಕಟ್ಟಿಸಿದರೂ ಈ ಶೈಲಿ ಬಂದುಬಿಡುತ್ತಿತ್ತು. ವರವಿಯ ಮೋನಪ್ಪಯ್ಯನ ಗುಡಿಯನ್ನು ಬಿಜಾಪುರದ ರಾಜ್ಯಪಾಲ ಅಂಕುಸಖಾನನೂ ಗದ್ದನಕೇರಿಯ ಮಳೆಪ್ಪಯ್ಯನ ಗುಡಿಯನ್ನು ಬಿಜಾಪುರದ ದೊರೆಗಳೂ ಕಟ್ಟಿಸಿದ್ದರಿಂದ, ಅವು ಅನಿವಾರ್ಯವಾಗಿ 'ದರ್ಗಾ'ಗಳಾಗಿ ಹೋದವು. ಗುಡಿಯನ್ನು ದರ್ಗಾ/ ಮಸೀದಿ ಆಕಾರದಲ್ಲಿ ಕಟ್ಟಿದರೆ ಮುಸ್ಲಿಂ ದಾಳಿಕೋರರು ಕೆಡಹುವುದಿಲ್ಲ ಎಂಬ ಭೀತಿಮೂಲವಾದ ರಕ್ಷಣಾತಂತ್ರ ಈ ವಾಸ್ತುವಿನ ಹಿಂದೆ ಕೆಲಸ ಮಾಡಿದೆ ಎಂದು ಚರಿತ್ರಕಾರರು ಹೇಳುತ್ತಾರೆ. ಭಾಷೆ, ಸಂಗೀತ, ಸಾಹಿತ್ಯ, ತತ್ವಶಾಸ್ತ್ರಗಳ ನಡುವೆ ನಡೆದ ಮಹಾಸಂಕರದ ಒಂದು ಭಾಗವಾಗಿ ಬಂದಿರುವ ಈ ವಾಸ್ತು ರೂಪಾಂತರವನ್ನು ಹೀಗೆ ಸರಳೀಕರಿಸುವುದು ಕಷ್ಟ. ಸತ್ಯ ಏನೇ ಇರಲಿ, ಈ ಇಸ್ಲಾಮೀ ವಾಸ್ತುವಿನಲ್ಲಿರುವ ದರ್ಗಾ/ ಗುಡಿಗಳು ಮುಂದೆ ಜನತೆಯ ಶ್ರದ್ಧಾಕೇಂದ್ರಗಳಾಗಿಬಿಟ್ಟವು.

### (iv) ಹೆಸರು, ವೇಷ, ಆಚರಣೆಗಳ ಸಾಮ್ಯತೆ

ಸೂಫಿಕರಣಕ್ಕೆ ಒಳಗಾದ ಅನುಭಾವಿಗಳು, ತಮ್ಮ ಹೆಸರುಗಳನ್ನು ಫಕೀರೇಶ, ಜಾಂಗಪೀರ್, ಭದ್ರುದ್ದೀನ್ (ಭದ್ರೇಶ್ವರ), ಮೌನುದ್ದೀನ್, ಹುಚ್ಚೂಸಾಹೇಬ ಎಂದೂ,

ಸೂಫಿಗಳು ಯೌಗಿಕ ಅರ್ಥವಿರುವಂತೆ 'ಖಾದರಲಿಂಗ' ಎಂದೂ ಬದಲಿಸಿಕೊಳ್ಳುವುದು ಸಾಮಾನ್ಯ. ಈ ಭಾಷಿಕ ಸ್ವೀಕಾರ ವೇಷಗಳಲ್ಲೂ ಪ್ರವೇಶಿಸಿತು. ಕೊಡೇಕಲ್, ಸಾವಳಗಿ, ಶಿರಹಟ್ಟಿ ಬಾಬಲಾದಿ ಪರಂಪರೆಗಳಲ್ಲಿ ಈಗ ಗುರುಪೀಠ ಏರುವ ವ್ಯಕ್ತಿಗಳು ಹಸಿರುಪೇಟ, ಶೇರ್ವಾನಿ, ಪಾಯಿಜಾಮ ವೇಷವನ್ನು ಧರಿಸುತ್ತಾರೆ. ನಿಡವಂಚಿ ಭದ್ರೇಶ್ವರ, ಮಾಣಿಕಪ್ರಭು, ತಿಂತಿಣಿ ಮೊನ್ನಪ್ಪ ಕೂಡ ಈ ಉಡುಪು ಧರಿಸುತ್ತಿದ್ದರೆಂದು ತಿಳಿದುಬರುತ್ತದೆ. ಬಿಜಾಪುರದ ಸೂಫಿಗಳ ಗಾಢಸಂಸರ್ಗದಲ್ಲಿ ಬದುಕಿದ್ದ ಚಿದಾನಂದ ಅವಧೂತನ (೧೭೮೧) ಒಂದು ಪದ, ಹಲವು ರೂಪಗಳಲ್ಲಿ ಫಕೀರತನವು ತನ್ನನ್ನು ಆವರಿಸಿಕೊಂಡಿದ್ದನ್ನು, ಬಣ್ಣಿಸುತ್ತದೆ :

ಮಾಡಿದನೆನ್ನ ಫಕೀರನಾ ಸದ್ಗುರು । ಮಾಡಿದನೆನ್ನ ಫಕೀರನ
ನೋಡಲಿಕಾಶ್ಚರ್ಯ ಪ್ರಪಂಚ ಕಳೆದೆ ನಾಮರೂಪಕೆ ದೂರ ॥ಪ॥

ಅನುಭವ ಕಪ್ಪರ ಹೃದಯ ಜೋಳಿಗೆ ಇನ್ನಯ ಕಂಕೊಳೊಳಿಟ್ಟಾ
ಅನಿಮಿಷ ದೃಷ್ಟಿ ಅರುಹಿನ ಕಪನಿ ಅಮೃತ ಕಮಂಡಲು ಕೊಟ್ಟ ॥೧॥

ನಾದದ ಕಿನ್ನರಿ ಕೈಯೊಳಗಿಟ್ಟ ಟೊಪ್ಪಿಗೆ ಪೆಟ್ಟಿಗೆಯಿಟ್ಟ
ಬೋಧದ ಭಂಗಿಯು ನಿರ್ಗುಣ ಲುಂಗಿಯು ಸೈರಣೆ ಲುಟಿಕೆಯ ಕೊಟ್ಟ ॥೨॥

ಈಪರಿ ಮಾಡಿಯೆ ಬಯಲನು ಹಿಡಿ ಎಂದು ಕರವನು ನೆತ್ತಿಯಲಿಟ್ಟ
ಭೂಪಚಿದಾನಂದ ಫಕೀರನಾಗಿಯೆ ತಿರುಗೆಂದಪ್ಪಣೆ ಕೊಟ್ಟ ॥೩॥

ಕಪನಿ, ಲುಂಗಿ, ಟೊಪ್ಪಿಗೆ–ಹೀಗೆ ಫಕೀರ ವೇಷದ ಬಾಹ್ಯ ವಸ್ತುಗಳೆಲ್ಲ ಈ ಪದದಲ್ಲಿ ಬಂದಿವೆ. (ಆದರೆ ವೇಷದ ಪರಿಭಾಷೆ ಪದ ಬಳಸಿ ಹೇಳುತ್ತಿರುವ ಸಂಗತಿ ಬೇರೆ.)

ಕೊಡೇಕಲ್ ಬಸವಣ್ಣನ ವೇಷ ಇನ್ನೂ ವಿಚಿತ್ರವಾಗಿತ್ತು. ಅವನ ಗುರು ಸಂಗಮನಾಥನು ಅವನಿಗೆ ತೊಡಿಸಿದ ವೇಷ ''ತೊಗಲಿನ ಇಜಾರ, ತೊಗಲಿನ ಟೊಪ್ಪಿಗೆ''; ಜತೆಗೆ ಬಸವಣ್ಣ ತನ್ನ ಎರಡು ಕಾಲುಗಳಿಗೂ ಎರಡು ಬಗೆಯ ಪಾದರಕ್ಷೆಗಳನ್ನು ಸಾಂಕೇತಿಕವಾಗಿ ತೊಡುತ್ತಿದ್ದನು; ಸಾವಳಗಿ ಶಿವಲಿಂಗನೂ ಬಂದೇನವಾಜನಿಂದ ಟೊಪ್ಪಿಗೆ ಪಡೆಯುತ್ತಾನೆ. ಕೊಡೆಯಂತೆ ಮೇಲೆ ಚೂಪಾಗಿರುವ ಕೇಸರಿ ಬಣ್ಣದ ಈ ಸೂಫಿ ಟೋಪಿಯನ್ನು ದೀಕ್ಷೆಪಡೆದ ಜನ ಈಗಲೂ ಧರಿಸುವುದನ್ನು ಉರುಸುಗಳಲ್ಲಿ ನೋಡಬಹುದು. ಕರ್ನೂಲ ಸೀಮೆಯಲ್ಲಿ ಒಬ್ಬ ಸೂಫಿ ಕುಳಾಯಿ(=ಕುಲಾವಿ) ಸ್ವಾಮಿ ಎಂದೇ ಹೆಸರಾಗಿದ್ದಾನೆ. ಆಶ್ಚರ್ಯವೆಂದರೆ ಮಂಟೇಸ್ವಾಮಿ ಪರಂಪರೆಯಲ್ಲಿ ಬರುವ ಕಪ್ಪಡಿರಾಚಪ್ಪಾಜಿ ಆಚರಣೆಗಳಲ್ಲಿ ಈ ಸೂಫಿಟೋಪಿ ಉಳಿದುಕೊಂಡು ಬಂದಿರುವುದು! ಹಸಿರುಪೇಟೆ, ಹಸಿರು ಗಲೀಫ, ನವಿಲಗರಿ ಮುಂತಾದ ಸಂಕೇತಗಳು ಕೂಡ ಈ ಪರಂಪರೆಯಲ್ಲಿ ಮುಂದುವರೆದಿವೆ.

ಇದಕ್ಕೆ ಪ್ರತಿಯಾಗಿ ಅಮೀನುದ್ದೀನ್, ಗೂಗಿಯ ಚಂದಾಹುಸೇನಿ ಹಾಗೂ ಕೌತಾಳಂನ ಖಾದರಲಿಂಗ–ಈ ಸೂಫಿಗಳ ವಂಶಜರು ಕಾವಿಯನ್ನು ಧರಿಸುತ್ತಾರೆ. ಚಂದಾಸಾಹೇಬನ ಪೀಠದ ಈಗಿನ ಖಲೀಫರಾದ ಶಮ್ಸ್‌ಆಲಮ್ ಹುಸೈನಿ ತಮ್ಮ ಕಾವಿಪಟಗವನ್ನು ತೋರಿಸುತ್ತ, ಇದು ವಿರಕ್ತ ಗುರುಗಳ ಜತೆಗೆ ಚಂದಾಸಾಹೇಬನ ಸ್ನೇಹದ ಗುರುತಾಗಿ ಬಂದಿದ್ದು ಎಂದು ವಿವರಿಸಿದರು. ಹಸಿರು ಅಲ್ಲಿ, ಕೇಸರಿ ಇಲ್ಲಿ ಇರುವುದು ಆಕಸ್ಮಿಕ ಇರಬಹುದು. ನಾಟಕೀಯ ಅನಿಸಬಹುದು. ಆದರೆ ಇವು ಹಿಂದಿನವರ ಸ್ನೇಹದ

ಗುರುತುಗಳೆಂದು ಈಗಿನವರು ಇನ್ನೂ ಭಾವಿಸಿರುವುದು ಮುಖ್ಯ. ಈ ವೇಷ ಬದಲಾವಣೆಯು, ಸೂಫಿಗಳು ಇತರ ಸಂತರೊಡನೆ ತಾತ್ವಿಕ ಒಡನಾಟವೆಸಗಿ ಆಗಿದ್ದು ಎಂದು ನಂಬುವುದಾದರೆ, ಈ ಬದಲಾವಣೆ ಅಖಿಲ ಭಾರತ ಮಟ್ಟದಲ್ಲೂ ಇತ್ತು. ಒಂದು ಸಲ ಗುರುನಾನಕ, ಬೃಂದಾವನದ ಬಳಿ ಒಬ್ಬ ಫಕೀರನನ್ನು ನೋಡುತ್ತಾನೆ. ಸ್ವತಃ ನಾನಕನಿಗೆ ಅವನ ವೇಷ ವಿಶೇಷವೆನಿಸುತ್ತದೆ. ಹಣೆಯಲ್ಲಿ ಕುಂಕುಮ, ಕೊರಳಲ್ಲಿ ಜಪಮಾಲೆ, ತಲೆಗೆ ದರವೇಶಿಟೋಪಿ, ಕಾವಿಯ ಕಪಿನಿ, ಬಿಳಿಯ ಅಂಗವಸ್ತ್ರವನ್ನು ಅವನು ಧರಿಸಿದ್ದನಂತೆ!

ಅನುಭಾವಿಗಳಿಗೆ ವೇಷ ಮುಖ್ಯವಾಗಿರಲಿಲ್ಲ. ಆದರೆ ಕೆಲವು ಬಣ್ಣದ ಅಂಗವಸ್ತ್ರ ಧರಿಸುವುದು ಯೋಗಸಾಧನೆಯಲ್ಲಿ ತಲುಪಿರುವ ಬೇರೆ ಬೇರೆ ಹಂತಗಳನ್ನೂ ಸೂಚಿಸುತ್ತಿತ್ತಂತೆ. ಮೊದಮೊದಲು ಸೂಫಿಗಳು ಕಪಿನಿಯನ್ನು ಧರಿಸುತ್ತಿದ್ದರು. ರಾಜಾಶ್ರಯಕ್ಕೆ ಬಂದ ಮೇಲೆ ಅವರೂ ರಾಜಪೋಷಾಕುಗಳನ್ನು ಧರಿಸಲು ಶುರುಮಾಡಿದಂತೆ ಕಾಣುತ್ತದೆ. ಈಗಿನ ಶಿರಹಟ್ಟಿಯ ಹಾಗೂ ಸಾವಳಗಿ 'ಗುರು'ಗಳು ಧರಿಸುವ ದರ್ಬಾರಿ ವೇಷವು, ರತ್ನಾಭರಣ, ಚಿನ್ನ-ಬೆಳ್ಳಿ ತಾರಕಶಿಮಾಡಿದ ಪೈಜಾಮ ಶೇರ್ವಾಣಿಗಳಿಂದ ಕೂಡಿದ್ದು, ಆದಿಲಶಾಹಿ ದೊರೆಗಳ ವೇಷವಾಗಿದೆ.

ಫಕೀರೇಶ ಪರಂಪರೆಯ ಒಬ್ಬ ಗುರುವಿನ ಸಮಾಧಿಯ ಬಾಗಿಲ ಮೇಲೆ ಫಾರಸಿ ಅಥವಾ ಅರಬ್ಬಿಯಲ್ಲಿ ಒಂದು ಮಂತ್ರ ಬರೆಯಲಾಗಿದೆ. ಸುಣ್ಣಹೊಡೆದು ಅಕ್ಷರಗಳು ಮಸುಕಾಗಿರುವುದರಿಂದ ಏನೆಂದು ಸ್ಪಷ್ಟ ತಿಳಿಯಲಿಲ್ಲ. ಬಹುಶಃ ಮಕ್ಕಾಯಾತ್ರೆ ಮಾಡಿಬಂದ 'ಜೋಗಿ' ಆತನೇ ಇರಬೇಕು. ಇವನನ್ನು ಒಳಗೊಂಡಂತೆ ಕನ್ನಡದ ಮೂರು ಜನ ಯೋಗಿಗಳು ಮಕ್ಕಾಗೆ ಹೋಗಿ ಬಂದಿದ್ದಾರೆ. ಉಳಿದವರೆಂದರೆ ಮಳೆಯಮಲ್ಲೇಶ ಹಾಗೂ ಬೇಳೆಯೊಡೆಯ. ಇವರು ಮಕ್ಕೆಗೆ ಹೋಗಿ ಮಾಡಿದ ಪವಾಡಗಳನ್ನು ವಿರೂಪಾಕ್ಷಪಂಡಿತನ 'ಚೆನ್ನಬಸವ ಪುರಾಣ' ಹಾಗೂ ಸಿದ್ಧನಂಜೇಶನ 'ಗುರುರಾಜ ಚಾರಿತ್ರ' ಕೃತಿಗಳು ಬಣ್ಣಿಸುತ್ತವೆ. ಈ ಮಕ್ಕಾಯಾತ್ರೆಯು ಸೂಫಿಸಂತರ ತಿರುಗಾಟದ ಭಾಗವಾಗಿ ನಡೆಯಿತೊ, ಇಸ್ಲಾಮಿನ ಸಾಂಪ್ರದಾಯಿಕ ಆಚರಣೆಯಾಗಿ ನಡೆಯಿತೊ ಗೊತ್ತಾಗುವುದಿಲ್ಲ. ಯಾಕೆಂದರೆ ಸ್ಥಾವರವಾಗಿರುವ ಮಕ್ಕಾದ ಕಾಬಾ ಕಟ್ಟಡ ಸೂಫಿಗಳಿಗೆ ಬಹಳ ಮುಖ್ಯಸಂಗತಿಯೇನಲ್ಲ.

ಸೂಫಿಗಳ ಅಧ್ಯಯನದಲ್ಲಿ ಮುಖ್ಯ ಸಮಸ್ಯೆಯೆಂದರೆ, ದಾಖಲೆಗಳ ಮೂಲಕ ಸಿಗುವ ಚಿತ್ರವನ್ನು ಸೂಫಿಸಂತರ ಹೆಸರಲ್ಲಿ ಈ ಹೊತ್ತು ಉಳಿದು ಬಂದಿರುವ ಆಧುನಿಕ ರೂಪಗಳ ಜತೆ ಮುಖಾಮುಖಿ ಮಾಡಿಸುವುದು. ಒಂದು ಕಾಲದಲ್ಲಿದ್ದ ಸಂತನ ಅನುಭಾವಿಕ ಸಾಧನೆ, ತಾತ್ವಿಕ ಚಿಂತನೆ, ಸಾಹಿತ್ಯ ಯಾವುವೂ ಅವನ ಉತ್ತರಾಧಿಕಾರಿಯಲ್ಲಿ ಕಾಣುವುದಿಲ್ಲ; ಕಾಣಲು ಸಾಧ್ಯ ಕೂಡ ಇಲ್ಲ. ಊಳಿಗಮಾನ್ಯ ವ್ಯವಸ್ಥೆಯನ್ನು ರೂಢಿಸಿಕೊಂಡು, ಅದರಲ್ಲಿ ಆಡಂಬರ, ಮತೀಯತೆ, ವ್ಯವಹಾರಿಕತೆಗಳನ್ನು ತುಂಬಿಕೊಂಡಿರುವ ಈಗಿನ ಮಠ ಖಾನಖಾ ವ್ಯವಸ್ಥೆಗಳು ಪತನರೂಪಿಯಾಗಿ ಕಾಣುತ್ತವೆ. ನಮ್ಮ ಕಾಲದ ಮೌಲ್ಯಗಳ ದೃಷ್ಟಿಯಿಂದ ಮುಜುಗರ ಬರಿಸುವ ಹಲವು ಸಂಗತಿಗಳು ಇಲ್ಲಿ ಉಳಿದುಬಂದಿವೆ. ಆದರೆ ಈ ವ್ಯವಸ್ಥೆಯನ್ನು ಮಾನ್ಯ ಮಾಡಿರುವ ಅಪಾರ ಜನಸಮುದಾಯ, ತನ್ನ ಸೃಜನಶೀಲತೆ, ಭಕ್ತಿಗಳಿಂದ ಇದರಲ್ಲಿ ಸೇರಿಹೋಗಿದೆ. ಈ ವ್ಯವಸ್ಥೆಯನ್ನು ವೈಭವೀಕರಿಸುವುದಕ್ಕೆ ಅದು ತನ್ನ ಸೃಜನಶೀಲತೆಯನ್ನು ಬಳಸುತ್ತಿದೆ. ಇಂಥ ಸಂದರ್ಭದಲ್ಲಿ ಸಂತರ ಮೇಲಿನ ಅಧ್ಯಯನಗಳು ಸಾಮಾನ್ಯವಾಗಿ ಎರಡು ದಿಕ್ಕನ್ನು ಹಿಡಿಯುತ್ತಿವೆ. ಒಂದು: ಈ ಹೊತ್ತಿನ ಆಚರಣೆ, ನಂಬಿಕೆ, ಸಾಹಿತ್ಯ, ವಾಸ್ತುಗಳಲ್ಲಿ ಕಾಣುವ

'ಅನ್ಯಧರ್ಮ'ದ ಗುರುತುಗಳನ್ನು 'ಮುಸ್ಲಿಮರ ದಬ್ಬಾಳಿಕೆಯ ಭಯದಿಂದ ಬಂದು ಸೇರಿರುವುವು' ಎಂದು ವ್ಯಾಖ್ಯಾನಿಸುವ ಮತೀಯ ಚರಿತ್ರೆಕಾರರ ದಿಕ್ಕು. ಇನ್ನೊಂದು: ಈ 'ಅನ್ಯಧರ್ಮ'ದ ಗುರುತುಗಳು ಎರಡು ಧರ್ಮಗಳ ಸಹಬಾಳ್ವೆಯ ಸಂಕೇತಗಳೆಂದು ಸಂಭ್ರಮಿಸುವ ಸಾಮರಸ್ಯವಾದಿ ಚಿಂತಕರ ದಿಕ್ಕು.

ಎರಡೂ ಹಾದಿಗಳು ಆರಂಭವಾಗುವುದು ಒಂದೇ ಬಿಂದುವಿನಿಂದ. ಮೂಲತಃ ಎರಡು ಧರ್ಮಗಳು ಬೇರೆ ಬೇರೆ. ಆಯಾ ಧರ್ಮ ನಂಬಿದ ಜನ ಕೂಡ ಬೇರೆ ಬೇರೆ. ಈ ಧರ್ಮ ಅಥವಾ ಜನ ಕೂಡಿರುವುದು ಯಾವುದೋ ಸಂದರ್ಭದ ಒತ್ತಡಗಳಿಂದ ಅಥವಾ ಉದಾರತೆಯಿಂದ ಎಂದು ಆ ಬಿಂದು ಹೇಳುತ್ತದೆ. ಅಪಚಾರರೂಪಿಯಾದ ಈ ಹಾದಿಗಳಿಂದ ತಪ್ಪಿಸಿಕೊಂಡು ಕರ್ನಾಟಕದ ಅನುಭಾವಿ ಪರಂಪರೆಗಳನ್ನು ನೋಡಬೇಕಾಗಿದೆ.

### ೧. ಕೊಡೇಕಲ್ ಬಸವಣ್ಣ

ಕೊಡೇಕಲ್ಲು ಗುಲಬರ್ಗಾ ಸೀಮೆಯಲ್ಲಿ ಡೋಣಿ ಹೊಳೆಯ ಸಮೀಪವಿರುವ ಊರು. ಇದನ್ನು ಕಡೇಕಲ್ಯಾಣ ಎಂದು ಕರೆಯುವುದುಂಟು. ಸೂಫಿಸಿದ್ಧ ಹಾಗೂ ಕಾಲಜ್ಞಾನ ವಚನಕಾರನಾದ ಕೊಡೇಕಲ್ ಬಸವಣ್ಣನಿಂದ ಇದು ಹೆಸರಾಗಿದೆ. ಕೊಡೇಕಲ್ಲಿನಲ್ಲಿರುವ ಪ್ರಭುದೇವರ ಗುಡಿ, ಬಸವಣ್ಣನ ಹೆಸರು, ವಚನಗಳ ರೂಪ–ಇವೆಲ್ಲ ೧೨ನೇ ಶತಮಾನದ ಶರಣ ಸಂಬಂಧವನ್ನು ನೆನಪಿಸುತ್ತವೆ. ಆದರೆ ಕೊಡೇಕಲ್ ಪರಂಪರೆ ತಾತ್ವಿಕವಾಗಿ ಶರಣರ ಮುಂದುವರಿಕೆ ಅಲ್ಲ. ಶರಣರ ಜತೆಯಿದ್ದ ಅಲ್ಲಮಪ್ರಭು ಶಾಖೆಯು ನಾಥಸಿದ್ಧ ಹಾಗೂ ಸೂಫಿಗಳ ಸಹಜೀವನದಿಂದ ಹುಟ್ಟಿದ ಕೂಸು. ಮಂಟೇಸ್ವಾಮಿಗೆ ಮಾಂಕ್ಷಾವಲಿ ಎಂದು ಕರೆಯಲಾಗುತ್ತಿತ್ತು ಹಾಗೂ ಶಿವನಸಮುದ್ರದ ಮರ್ದಾನೆಗೈಬ್ ಎಂಬ ಸೂಫಿ, ಮಂಟೇಸ್ವಾಮಿ ಜತೆ ಕಲ್ಯಾಣದಿಂದ ಬಂದವನು ಎಂಬ ಸಂಗತಿಗಳನ್ನು ಇಲ್ಲಿ ಉಲ್ಲೇಖಿಸಬೇಕು.[೨] ಲಿಂಗಧಾರಣಾ ಆಚರಣೆಯನ್ನು ನಿಷ್ಠುರ ವಿಮರ್ಶೆಗೊಳಪಡಿಸುವ ಈ ಪರಂಪರೆ, ಮಠೀಯವಾಗುತ್ತ ಲಿಂಗಾಯತ ಜಾತಿಯಾಗುತ್ತ ಹೋದ ಶರಣರಿಗೆ ಅನುಭಾವಿಗಳು ಕೊಟ್ಟ ಉತ್ತರದಂತಿದೆ. ಕೊಡೇಕಲ್ ಬಸವಣ್ಣನ ಪರಂಪರೆಯ ಇನ್ನೊಂದು ಕವಲಾಗಿರುವ ಮೈಸೂರು ಸೀಮೆಯ ಮಂಟೇಸ್ವಾಮಿ ಪರಂಪರೆ ಕೂಡ, ಕಲ್ಯಾಣದ ಮತ್ತು ಇಷ್ಟಲಿಂಗವಾದಿ ಶರಣರ ವಿಮರ್ಶೆಯಾಗಿದೆ. 'ನಾಯಿಗೂ ಲಿಂಗ, ನರಿಗೂ ಲಿಂಗ, ಎತ್ತಿಗೂ ಲಿಂಗ, ಕೊತ್ತಿಗೂ ಲಿಂಗ' ಕಟ್ಟಿ, ಅವಕ್ಕೆಲ್ಲ ಗುರುವಾಗಿದ್ದ ಬಸವಣ್ಣನು, ಸ್ವತಃ ಗುರುವಿಲ್ಲದ ಗುಡ್ಡನಾಗಿದ್ದಾಗ ಮಂಟೇಸ್ವಾಮಿ ಕಲ್ಯಾಣಕ್ಕೆ ಬರುತ್ತಾನೆ. ಲಿಂಗವಿಲ್ಲದ ಅವನಿಗೆ ಕಲ್ಯಾಣದಲ್ಲಿ ಪ್ರವೇಶ ಸಿಗುವುದಿಲ್ಲ. ಆಗ ಮಂಟೇಸ್ವಾಮಿ ತನ್ನ ಕುಡಿಜಡೆಯಿಂದ ರಾಶಿಗಟ್ಟಲೆ ಲಿಂಗಗಳನ್ನು ಉದುರಿಸಿ ಪವಾಡ ಮಾಡುತ್ತಾನೆ. ಜಂಗಮರ ಲಿಂಗಗಳನ್ನೆಲ್ಲ ಮಾಯಮಾಡಿ, ಅವರನ್ನು ಕಲ್ಯಾಣದ ಕಡೆಬಾಗಿಲಲ್ಲಿ ಕಲ್ಲುವಡ್ಡರಾಗಲು ಶಾಪವಿಕ್ಕುತ್ತಾನೆ. ಕಲ್ಯಾಣದಲ್ಲಿ ವಂಚನೆಯಿರುವುದನ್ನು ಬಸವಣ್ಣನಿಗೆ ಮನವರಿಕೆ ಮಾಡಿ, ಇಡೀ ಕಲ್ಯಾಣವನ್ನು ಖಾಲಿ ಮಾಡುತ್ತಾನೆ.

ಇಂಥ ಮಂಟೇಸ್ವಾಮಿ ಕೊಡೇಕಲ್ಲಿಗೆ ಸಂಬಂಧಪಟ್ಟವನಾಗಿರುವುದು ಅರ್ಥಪೂರ್ಣವಾಗಿದೆ. ಕೊಡೇಕಲ್ ಪರಂಪರೆಯಲ್ಲಿ ಮತ್ತೆ ಮತ್ತೆ ಇಷ್ಟಲಿಂಗವನ್ನು ತ್ಯಾಗಮಾಡುವ

೨ ಮಂಟೇಸ್ವಾಮಿ ಕಾವ್ಯ, ಪು. ix

ಪ್ರಸಂಗಗಳು ಬರುತ್ತವೆ. ಗುರು ಆರೂಢ ಸಂಗಮನಾಥನು ಕೊಡೇಕಲ್ಲು ಬಸವಣ್ಣನ ಕೊರಳಲಿಂಗವನ್ನು ಕಿತ್ತುಹಾಕಿ, ಅಂತರಂಗಕ್ಕೆ ಆರೂಢತತ್ತ್ವವನ್ನು ಅಳವಡಿಸಿ, 'ಹಸ್ತಮಸ್ತಕ' ಮಾಡುತ್ತಾನೆ. ಅನುಭಾವಿ ಪಂಥಗಳಲ್ಲಿ ದೀಕ್ಷೆ ತೆಗೆದುಕೊಳ್ಳುವ ಕ್ರಮವನ್ನು ಹಸ್ತಮಸ್ತಕ ಎನ್ನುತ್ತಾರೆ. ಗುರು ಶಿಷ್ಯನ ತಲೆಯ ಮೇಲೆ ಕೈಯಿಟ್ಟು ಅವನಿಂದ ಕೆಲವು ವಚನ ಪಡೆಯುತ್ತಾನೆ. (ಸೂಫಿ ದೀಕ್ಷೆಯಲ್ಲಿ ಗುರು ಶಿಷ್ಯನ ಕೈಮೇಲೆ ಕೈಯಿಟ್ಟು ವಚನ ತೆಗೆದುಕೊಳ್ಳುತ್ತಾನೆ.) ಶರಣರಲ್ಲಿ ಲಿಂಗಧಾರಣೆಯೆ ದೀಕ್ಷೆಯಾದರೆ, ಇಲ್ಲಿ ಲಿಂಗತ್ಯಾಗದ ಮೂಲಕ ದೀಕ್ಷೆ ಶುರುವಾಗುತ್ತದೆ. ಬಸವಣ್ಣನ ಶಿಷ್ಯ ನಾಗಾಯಿ ಈರಪ್ಪನು ತನ್ನ ಲಿಂಗವನ್ನು ಕತ್ತೆಯ ಕೊರಳಿಗೆ ಕಟ್ಟುತ್ತಾನೆ. ಕೊಡೇಕಲ್ ಪರಂಪರೆಯಲ್ಲಿರುವವರು ಲಿಂಗವಿಲ್ಲದ 'ಬೋಳ ಜಂಗಮರು.'

ಕೌತಾಳಂ ಖಾದರಲಿಂಗನು ರುಕುಂದಿ ಈರಣ್ಣನ ಜತೆ ನಡೆಸುವ ಸ್ಪರ್ಧೆಯು, ಲಿಂಗಧಾರಣೆಯ ನಿರರ್ಥಕತೆಯನ್ನು ಸೂಚಿಸುತ್ತದೆ. ಮಿತ್ ಪ್ರಕಾರ ಇಬ್ಬರೂ ತಂತಮ್ಮ ಶಕ್ತಿಗಳನ್ನು ಪರೀಕ್ಷಿಸುವ ಜಿದ್ದಿಗೆ ಬೀಳುತ್ತಾರೆ. ಒಂದು ಬಾವಿಯಲ್ಲಿ ತಂತಮ್ಮ ಲಿಂಗಗಳನ್ನು ಹಾಕುತ್ತಾರೆ. ಈರಣ್ಣನದು ಬೆಳ್ಳಿಲಿಂಗ. ಅಲ್ಲಾವುದ್ದೀನನದು ಖರ್ಜೂರದ ಲಿಂಗ. ಈಗ ತಂತಮ್ಮ ಲಿಂಗಗಳನ್ನು ಕರೆದು ಪಡೆದುಕೊಳ್ಳಬೇಕು. ಈರಣ್ಣ ಕರೆಯುತ್ತಾನೆ. ಲಿಂಗ ಬರುವುದಿಲ್ಲ. ಅಲ್ಲಾವುದ್ದೀನ್ ಕರೆಯುತ್ತಾನೆ. ಈರಣ್ಣನ ಲಿಂಗ ಬಂದು ಇವನ ಕಾಲಿಗೆ ಸುತ್ತಿಕೊಳ್ಳುತ್ತದೆ. ಅಂದಿನಿಂದ ಅಲ್ಲಾವುದ್ದೀನ್ ಕಾಲಿಗೆ ಲಿಂಗ ಕಟ್ಟಿಕೊಂಡು ಖಾದರಲಿಂಗನಾಗುತ್ತಾನೆ. (ಖಾದರಲಿಂಗನ ವಂಶಜರು ಈಗಲೂ ಕಾಲಿಗೆ ಲಿಂಗವನ್ನು ಕಟ್ಟಿಕೊಳ್ಳುವ ಸಂಪ್ರದಾಯವಿದೆ.) ಖಾದರಲಿಂಗನೆಂದರೆ, ಯೋಗದ ಮೂಲಕ ಆತ್ಮಲಿಂಗನನ್ನು ಸಾಕ್ಷಾತ್ಕರಿಸಿಕೊಂಡವನು. ಈ ಮಿತ್ ಮತ್ತು ಮಂಟೇಸ್ವಾಮಿ ಕಲ್ಯಾಣದಲ್ಲಿ ಶರಣ ಲಿಂಗಗಳನ್ನು ನೀರಲ್ಲಿ ಕಳೆದುಹಾಕುವ ಮಿತ್ ಎರಡೂ ಒಂದೇ. ಇವು ಪ್ರಾಣಲಿಂಗಿಗಳಾದ ಅನುಭಾವಿಗಳಿಗೂ ಇಷ್ಟಲಿಂಗವಾದಿಗಳಾದ ಭಕ್ತರಿಗೂ ನಡೆದ ಸಂಘರ್ಷದ ಸಂಕೇತಗಳು. ಈ ಸಂಘರ್ಷಗಳು ಅಲ್ಲಮನ ಕಾಲದಿಂದಲೂ ಇರುವಂಥವು.

> ಅಂಗದ ಮೇಲೆ ಲಿಂಗಸ್ವಾಯತವಾದಡೇನು, ಭಕ್ತನಾಗಬಲ್ಲನೇ?
> ಇಟ್ಟಕಲ್ಲು ಮೆಳೆಯ ಮೇಲೆ ಸಿಲುಕಿದರೆ
> ಆ ಕಲ್ಲು ಲಿಂಗವೇ? ಆ ಮೆಳೆ ಭಕ್ತನೆ? ಇಟ್ಟಾತ ಗುರುವೆ?
> ಇಂತಪ್ಪವರ ಕಂಡಡೆ ನಾಚುವೆನಯ್ಯಾ ಗುಹೇಶ್ವರಾ

ಲಿಂಗ ಕಟ್ಟುವ ಶರಣರ ಪ್ರಭಾವ ತಗ್ಗಿದಂತೆ ಯೌಗಿಕ ಪಂಥಗಳು ಮತ್ತೆ ಚೈತನ್ಯ ಪಡೆದವು. ಸೂಫಿಗಳು ಸಹಜವಾಗಿ ಇಂಥ ಅನುಭಾವ ಪಂಥಗಳ ಜತೆ ಸೇರಿಕೊಂಡರು. ನಿರಾಕಾರವಾದಿ ಇಸ್ಲಾಮಿಗೂ ಇದು ಪ್ರಿಯವಾದ ಚಿಂತನೆ ಆಗಿತ್ತು. ಹೀಗೆ ಬದಲಾದ ರಾಜಕೀಯ-ಧಾರ್ಮಿಕ ಸನ್ನಿವೇಶದಲ್ಲಿ ಕೊಡೇಕಲ್ ಬಸವಣ್ಣ ರೂಪುಗೊಂಡನು.

ಈಗಲೂ ಕೊಡೇಕಲ್ ಪರಂಪರೆಯಲ್ಲಿ ಸ್ಥಾವರಗಳ ಆರಾಧನೆಯಿಲ್ಲ. ಬದಲಿಗೆ ಗುರುವಿನ ವಚನ ಓದುವ, ಅವಿರುವ ಹೊತ್ತಗೆಗಳನ್ನು ಗೌರವಿಸುವ ಆಚರಣೆಗಳಿವೆ. ಕೊಡೇಕಲ್ಲಿನ ಕುಡಿಯಾದ ಮಂಟೇಸ್ವಾಮಿ ಪರಂಪರೆಯಲ್ಲೂ ಹೊತ್ತಗೆಗಳು ಬಹುಮುಖ್ಯ ಸ್ಥಾನ ಪಡೆದಿವೆ. ಗುರು ಗ್ರಂಥಗಳ ಗೌರವಿಸುವುದು, ಗುರುವಾಣಿಯ ಹಾಡುವುದು,

ಗುರುಪಂಥಗಳ ಎಂದಿನ ರಿವಾಜು. ಸೂಫಿಸಂನ ಸಂಪರ್ಕದಿಂದ ಮೂಡಿದ ಸಿಖ್ ಪಂಥದ 'ಗ್ರಂಥಸಾಹಿಬ'ದಲ್ಲಿ ಸೂಫಿಕವಿಗಳ ಪದ್ಯಗಳು ಸೇರಿರುವುದನ್ನು ನೆನೆಯಬೇಕು.

ಕೊಡೇಕಲ್ ಪರಂಪರೆಯನ್ನು ಸೂಕ್ಷ್ಮವಾಗಿ ನೋಡಿದರೆ, ಅದು ಸೂಫಿ ಅನುಭಾವದಷ್ಟೆ ಇಸ್ಲಾಂ ಧರ್ಮದಿಂದಲೂ ಪ್ರಭಾವ ಪಡೆದಿದೆ ಅನಿಸುತ್ತದೆ. ಕೆಲವು ಸಲ ಸೂಫಿ-ಇಸ್ಲಾಮುಗಳನ್ನು ಪ್ರತ್ಯೇಕಿಸಲು ಕಷ್ಟವಾಗುವಂತೆ ಪ್ರಭಾವಗಳಿರುತ್ತವೆ. ಕೊಡೇಕಲ್ ಬಸವಣ್ಣನಿಗೆ ''ತೊಗಲಿನ ಇಜಾರ, ತೊಗಲಿನ ಟೊಪ್ಪಿಗೆ'' ತೊಡಿಸುವ ಗುರು ಸಂಗಮನಾಥನು, ''ಮಹಮ್ಮದ ಅವತಾರವಿದು'' ಎಂದು ಘೋಷಿಸುತ್ತಾನೆ. ಮುಸ್ಲಿಮ್ ಭಕ್ತರು ಕೊಡೇಕಲ್ ಬಸವಣ್ಣನಿಗೆ ''ಸರ್ವರ್ ಮಹಮದ್'' ಎಂದು ಕರೆಯುವುದನ್ನು ಇಲ್ಲಿ ಉಲ್ಲೇಖಿಸಬೇಕು. ಕೊಡೇಕಲ್ ಬಸವಣ್ಣನ ಚಾರಿತ್ರ ಬರೆದಿರುವ ಬಾಲಸಂಗಯ್ಯನು ''ಹಿಂದುವ ರಕ್ಷೆಯನು ಮೆಟ್ಟುತ ಮುಂದೆ ಮುಸಲ್ಮಾನ ಕಂಸಿಯ ನಡೆಸುತ'' ಕೊ. ಬಸವಣ್ಣ ಹೋಗುತ್ತಿದ್ದುದನ್ನು ವರ್ಣಿಸುತ್ತಾನೆ. 'ಹಿಂದುರಕ್ಷೆ' ಮೆಟ್ಟುವ, ಆಧಾರ ನೆಲೆಯಾಗುವ ಕೆಲಸ ಮಾಡಿದರೆ 'ಮುಸಲ್ಮಾನ ಕಂಸಿ'ಯ ನಡೆಸುವ, ಚಲಿಸುವ ಕೆಲಸ ಮಾಡುತ್ತಿದೆ. ಒಂದು ಹಿಂದೆ, ಮತ್ತೊಂದು ಮುಂದೆ. ಈ ವರ್ಣನೆ ಸಾಂಕೇತಿಕವಾಗಲು ಬಯಸಿದೆ. ಆದರೆ ಈ ಗ್ರಹಿಕೆಯ ಒಳಗೆ ಕೆಲಸ ಮಾಡುತ್ತಿರುವುದು ಸಾಮರಸ್ಯವಾದಿ ಮನಸ್ಸು. ಹಿಂದುವಾಗಿ ಮುಸ್ಲಿಂ ಧರ್ಮದಿಂದ ಪಡೆದು ಏಕೀಭವಿಸಿದನು ಎಂಬಂತಹ ತಿಳಿವಳಿಕೆ. ಈ ಏಕೀಭವಿಸುವಿಕೆಯ ಕ್ರಿಯೆಗಳನ್ನು ಬಾಲಸಂಗಯ್ಯ ಬಗೆಬಗೆಯಾಗಿ ಚಿತ್ರಿಸುತ್ತಾನೆ :

ಇವರಿಗೋಂಕಾರ ಅವರಿಗಲೀಫವು
ಇವರ ಪ್ರಮಾಣ ಅವರ ಕರ್ಮವು
ಇವರಿಗಲ್ಲಮ ಅವರಿಗಲ್ಲಾ ನಾಮಗಳು
ಇವರು ಬಸವನು ಅವರು ಮಹಮ್ಮದ
ಇವರ ವೇದವು ಅವರ ಮುಸ್ತಾಫವು
ಇವರು ಬಲಕೆ ಅವರು ಮಾತ್ರವೆ ಎಡಹುರುಪ ॥ (೬-೬)

ಮೇಲಿನ ಪದ್ಯದಲ್ಲಿ 'ಅಲೀಫ' ಎಂದರೆ ಅರಬಿವರ್ಣಮಾಲೆಯ ಮೊದಲಕ್ಷರ. ಇದು ಅಲ್ಲಾ ಶಬ್ದದ ಮೊದಲಕ್ಷರ ಕೂಡ. 'ಮುಸ್ತಾಫ' ಎಂದರೆ ಕುರಾನು. 'ಹುರುಪ' ಎಂದರೆ ಅಕ್ಷರ.

ಪದ್ಯದೊಳಗಿರುವ ಮಾತುಗಳನ್ನು ಕಲ್ಯಾಣದ ಕಡೆದಿನಗಳಲ್ಲಿ ಅಲ್ಲಮಪ್ರಭು ಬಸವಣ್ಣನಿಗೆ ಕರೆದು ಹೇಳುತ್ತಾನೆ. ನಂದಿಯಾದ ನೀನು ಒಮ್ಮೆ ಕಲ್ಯಾಣದ ಬಸವಣ್ಣನಾಗಿ ಹುಟ್ಟಿದೆ. ಆದರೆ ಶಿವನಾಜ್ಞೆಯಂತೆ ನೀನು ಮತ್ತೊಮ್ಮೆ ಕೊಡೇಕಲ್ ಬಸವಣ್ಣನಾಗಿ ಹುಟ್ಟಬೇಕಾಗುತ್ತದೆ ಎಂದು ವಿಧಿಸುತ್ತಿದ್ದಾನೆ. ಇದೇ 'ನಂದಿ ಆಗಮಲೀಲೆ'. ಮಹಮ್ಮದನು ಪ್ರವಾದಿಯಾಗಿ ಹುಟ್ಟುವುದಕ್ಕೂ, ಬಸವಣ್ಣನು ಕೊಡೇಕಲ್ಲ ಬಸವಣ್ಣನಾಗಿ ಹುಟ್ಟುವುದಕ್ಕೂ ಇಲ್ಲಿ ಸಮೀಕರಣವಾಗಿದೆ. ಎಂತಲೇ ಕೊ. ಬಸವಣ್ಣ ''ಮಹಮ್ಮದ ಅವತಾರ''. ಧಾರವಾಡದಲ್ಲಿರುವ ಉರ್ದುಕವಿ, ಶ್ರೀ ನಾಲತವಾಡ ಅವರು ಹೇಳುವಂತೆ, ಇಪ್ಪತ್ತು ವರುಷಗಳ ಹಿಂದೆ ಕೊಡೆಕಲ್ಲಿನಲ್ಲಿ ಫಾತೆಹಾ ಆದ ಬಳಿಕ ಕೂಗುತ್ತಿದ್ದ ದೀನ್ ಹೀಗಿತ್ತು :

ಅವ್ವಲ್ ಮಹಮದ್ ಆಖಿರ್ ಮಹಮ್ಮದ್
ಜಾಹಿರ್ ಮಹಮದ್ ಬಾತಿನ್ ಮಹಮ್ಮದ್
ಕುಫ್ರ್ ಭಾಗೆ ಇಸ್ಲಾಂ ಜಾಗೆ
ಹಜರತ್ ಮಹಮದ್ ಕಿ ದೋಸ್ತಾರಾ ದೀನ್

(ಪ್ರಥಮದಲ್ಲೂ ಕೊನೆಯಲ್ಲೂ ಮಹಮ್ಮದನು. ಅಂತರಂಗದಲ್ಲೂ ಬಹಿರಂಗದಲ್ಲೂ ಮಹಮ್ಮದನೇ. ಅಶ್ರದ್ಧೆ ತೊಲಗಲಿ. ಇಸ್ಲಾಮ್ ಎಚ್ಚರಗೊಳ್ಳಲಿ. ಗುರುಮಹಮದನ ಗೆಳೆತನಕ್ಕೆ ಉಘೆ ಉಘೆ) ಇಲ್ಲಿ ಜಾಹಿರ್ ಬಾತಿನ್‌ಗಳು ಮಾತ್ರ ಸೂಫಿ ಪರಿಭಾಷೆಗಳು. ಉಳಿದಂತೆ ಇಸ್ಲಾಮಿನ ಏಳಿಗೆ ಹಾರೈಸುವ ದನಿಯು ತಸವ್ವುಫ್ ತತ್ವಕ್ಕೆ ಭಿನ್ನವಾಗಿದೆ. ಈ ದನಿ ಧಾರ್ಮಿಕ ಸೂಫಿಗಳ ಪ್ರಭಾವದಿಂದ ಬಂದಿರಬಹುದು. ಸೂಫಿ ಅನುಭಾವ ಹಾಗೂ ಇಸ್ಲಾಮಿನ ಗಡಿಗಳು ಕಲಸಿಕೊಳ್ಳುವುದು ಹೀಗೆ.

ಕೊ. ಬಸವಣ್ಣನ ಸಮಾಧಿಯು ದರ್ಗಾ ವಾಸ್ತುವಿನಂತೆಯೆ ಇದೆ. ಒಳಗೆ ಸಮಾಧಿಯ ಮೇಲೆ ತೂಗುಬಿದ್ದಿರುವ ಗಾಜಿನ ಹಂಡೆಗಳಲ್ಲಿ ಇಸ್ಲಾಮಿನ ಮೂಲ ಮಂತ್ರ ''ಲಾ ಇಲಾಹ ಇಲ್ಲಲ್ಲಾ, ಮಹಮದ್ ರಸೂಲಿಲ್ಲ'' (ದೇವರೊಬ್ಬನೆ, ಅವನ ಬಿಟ್ಟು ಅನ್ಯದೇವರಿಲ್ಲ, ಮಹಮ್ಮದನು ಅವನ ಪ್ರವಾದಿಯು) ಕೆತ್ತಲಾಗಿದೆ. ಗೋರಿಯ ಮೇಲಿನ ಹಸಿರು ಗಲೀಫ (ಗೋರಿಗುಬುಸ), ಹಸಿರು ನಿಶಾನೆ ಗಂಧ ಬಳಿಯುವುದು, ಲೋಬಾನ ಉರಿಸುವುದು, ಸಕ್ಕರೆ ಓದಿಸುವುದು, ಮಾಲ್ದ ಊಟ, ಕುದುರೆ-ತೊಟ್ಟಿಲು ಹರಕೆ ಅರ್ಪಿಸುವುದು–ಎಲ್ಲವೂ ದರ್ಗಾ ಸಂಸ್ಕೃತಿಯಲ್ಲಿರುವಂಥದ್ದೆ, ಕೊಡೇಕಲ್ಲ ಗುರುಗಳ ವೇಷವು ಸೂಫಿ ವೇಷವಾಗಿದೆ.

ಕೊಡೇಕಲ್ ಜಾತ್ರೆಯ ವಿಶೇಷವೆಂದರೆ ಮೊದಲಿಗೆ ಮುಸ್ಲಿಮ ವ್ಯಕ್ತಿಯೊಬ್ಬ ದೀನ್ ಜಗಾಯಿಸಿ ಧೂಳುಗಾಯಿ ಒಡೆಯುತ್ತಾನೆ. ಅನಂತರ ೨೧ ಜಾತಿಯ ಜನ ಕಾಯಿ ಒಡೆಯಲು ಶುರು ಮಾಡುತ್ತಾರೆ. ಕೊಡೇಕಲ್ಲ ಬಸವಣ್ಣನ ಭಕ್ತರು ಹಲವು ಮತಗಳಿಂದ ಇರುವಂತೆ ಅವನ ಶಿಷ್ಯರು ಕೂಡ ಹಲವು ಜಾತಿ/ಧರ್ಮಗಳಿಂದ ಬಂದವರು. ಅದರಲ್ಲೂ ಕೃಷ್ಣಾ ಹೊಳೆಯಿಂದ ದಲಿತರು ತಂದ ನೀರಿನಲ್ಲೆ ಅವನಿಗೆ ಗಂಧ ತೇಯುವ ಆಚರಣೆಯಿತ್ತಂತೆ. ಈ ಸಲ (೧೯೯೬) ಇದು ಇದ್ದಂತೆ ತೋರಲಿಲ್ಲ. ಕೊಡೇಕಲ್ ಸಾಹಿತ್ಯವನ್ನು ಪಲ್ಲಕ್ಕಿಯಲ್ಲಿ ಮೆರವಣಿಗೆ ಮಾಡುವಾಗ, ಹಿಂದು ಹಿಂದಕ್ಕೆ ನಡೆಯುತ್ತ ಆ ಸಾಹಿತ್ಯವನ್ನು ಹಾಡಲಾಗುತ್ತದೆ. ಈ ಹಾಡುಗಾರರಲ್ಲಿ ತುಂಬ ಹಳಬನೆಂದರೆ ಕಗ್ಗೋಡಿನ ಮೋದಿನ ಸಾಬ. ಹೀಗಿದ್ದೂ ಇಡೀ ಜಾತ್ರೆಯಲ್ಲಿ ಮುಸ್ಲಿಮರ ಭಾಗವಹಿಸುವಿಕೆಯು ತುಂಬಾ ಕಡಿಮೆಯಿತ್ತು.

ಕೊಡೇಕಲ್ ಪರಂಪರೆಯಲ್ಲಿ ಉಳಿದಿರುವ ನಾಥ ಸಂಪ್ರದಾಯದ ಕುರುಹುಗಳಲ್ಲಿ ಮುಖ್ಯವಾದುದು ಹಂಡಿಭಿಕ್ಷ. ಕೊಡೇಕಲ್ ಗುರುಗಳು ಹಂಡಿಹಿಡಿದು ಭಿಕ್ಷಕ್ಕೆ ಹೋಗುವ, ಹಂಡಿಪೂಜೆ ಮಾಡುವ ಆಚರಣೆಗಳಿವೆ. 'ಹಂಡಿ' ಎಂದರೆ ನಾಥರು ಬಳಸುತ್ತಿದ್ದ ಮಣ್ಣಿನ ಬೋಗುಣಿ. ಚಿದಾನಂದಮೂರ್ತಿಯವರು ''ತಾಂತ್ರಿಕ ಆಚರಣೆಗೆ ಸಂಬಂಧಿಸಿದ ಒಂದು ಅಪರೂಪದ ಮಡಕೆ''ಯ ಬಗ್ಗೆ ಲೇಖನ ಬರೆಯುತ್ತಾ, ಆ ಹುಂಡಿಯನ್ನು ಒಬ್ಬ ಮುಸ್ಲಿಮರ ಮನೆಯಿಂದ ಪಡೆದೆನೆಂದು ಉಲ್ಲೇಖಿಸುತ್ತಾರೆ. ಬಹುಶಃ[೩] ಆ ಮನೆಯವರು ಸೂಫಿ-ನಾಥರ

೩ ಹೊಸತು ಹೊಸತು ಪು. ೨೭೪

ಸಂಬಂಧವುಳ್ಳವರಾಗಿದ್ದಾರೂ ಏನೂ? ಕರ್ನಾಟಕದಲ್ಲಿ 'ಹಂಡಿ'ಯ ಹೆಸರಿನ ಸೂಫಿನಾಥ ಸಿದ್ಧರು ಇದ್ದಾರೆ. ಕೊಡೇಕಲ್ಲಿನ ಹಂಡಿಯ ಮೂಲ ಇಂಥದೇ ಆಗಿರಬೇಕು. ಸಿದ್ಧರು ಬಂದು ನೆಲೆಸುತ್ತಿದ್ದ ಮಠಗಳು, ಬೂದಿಕುಂಡಗಳು, ಅವರ ಗದ್ದುಗೆಗಳು ಕೊಡೇಕಲ್ಲಿನ ತುಂಬ ಕಾಣಸಿಗುತ್ತವೆ.

ಹೀಗೆ ಕೊಡೇಕಲ್ ಪರಂಪರೆ ತನ್ನ ಗರ್ಭದಲ್ಲಿ ವಚನಕಾರರಾದ ಅಲ್ಲಮಪ್ರಭು ಹಾಗೂ ಬಸವಣ್ಣರನ್ನೂ ಹಂಡಿನಾಥರನ್ನೂ ಮಹಮದ್ ಸರ್ವರನನ್ನೂ ಒಟ್ಟಿಗೆ ಬೆರೆಸಿ, ಸಂಕೀರ್ಣವಾದ ರೂಪದಲ್ಲಿ ಇಟ್ಟುಕೊಂಡಿದೆ. ಸಾವಳಗಿ, ಶಿರಹಟ್ಟಿ ಪರಂಪರೆಗಳಲ್ಲಾದರೂ ಒಬ್ಬ ಸೂಫಿಯ ಗುರುಹಿನ್ನೆಲೆಯಿದೆ; ಆದರೆ ಕೊಡೇಕಲ್, ತಿಂತಿಣಿಗಳಲ್ಲಿ ಯಾವೊಬ್ಬ ಸೂಫಿಯ ಹೆಸರು ಕೇಳಿ ಬರುವುದಿಲ್ಲ. ಬದಲಾಗಿ ಇಸ್ಲಾಮಧರ್ಮದ ಹಾಗೂ ಪ್ರವಾದಿ ಮಹಮ್ಮದನ ಹಿನ್ನೆಲೆ ಕಾಣುತ್ತದೆ. ಈ ಸಂಕರ ಪರಂಪರೆಗಳ ನಾಯಕರು ಕಲ್ಯಾಣದ ಶರಣರ ಅವತಾರಗಳೆಂದು ಅನಂತರದ ಕಾಲದಲ್ಲಿ ಭಾವಿಸಲಾಗಿದೆ ಅನಿಸುತ್ತದೆ. ಕೊಡೇಕಲ್ಲಿನಲ್ಲಿ ಬಸವಣ್ಣನ ಅವತಾರವಾದರೆ, ಸಾಲೊಟಗಿ ಹಾಗೂ ದೀನದಾರ್ ಪರಂಪರೆಗಳಲ್ಲಿ ಅವುಗಳ ನಾಯಕರು ಚೆನ್ನಬಸವಣ್ಣನ ಅವತಾರಿಗಳು. ಸಾಲೊಟಗಿ ಶಿವಯೋಗಿಯೂ ಮೋನಪ್ಪನಂತೆ, ಕೊ. ಬಸವಣ್ಣನಂತೆ ಕಾಲಜ್ಞಾನಿ. ಅವನ ಗುಡಿಯೂ ದರ್ಗಾಕಾರಿಯಾದುದು. ಅಲ್ಲಿ ಕೂಡ ಮಧುರಚೆನ್ನರ ಪ್ರಕಾರ ''ಮುಸಲ್ಮಾನಿ'' ದೀನ್ ಜಗಾಯಿಸಲಾಗುತ್ತದೆ. ಉರುಸುಗಳ ಲಕ್ಷಣಗಳೆಲ್ಲ ಅಲ್ಲಿವೆ. ಆದರೆ ಸಾಲೊಟಗಿ ಶಿವಯೋಗಿಯ ಡಂಗುರ ವಚನಗಳನ್ನು ಓದುವಾಗ ಅವನಿಗೆ ಸೂಫಿ ಪರಂಪರೆಯ ಹಿನ್ನೆಲೆಯಿತ್ತು ಅನಿಸುವುದೆ ಇಲ್ಲ.

### ೨. ತಿಂತಿಣಿ ಮೋನಪ್ಪಯ್ಯ

ತಿಂತಿಣಿಯ ಮೋನಪ್ಪಯ್ಯ ಎಂದೊಡನೆ ಮೊದಲು ನೆನಪಾಗುವುದು ಅವನ ಆಚರಣೆಗಳಲ್ಲಿ ಕೂಗುವ ದೀನ್; ಅದರ ಭಾಷಾಮಿಶ್ರಣ, ಪುರಾಣ ಮಿಶ್ರಣ. ಧರ್ಮಗಳ ಬೆರಕೆ ಕೃತಕವೂ ಆಕಸ್ಮಿಕವೂ ಅಲ್ಲ. ೧೭ನೇ ಶತಮಾನದ ಗುಲಬರ್ಗಾ ಸೀಮೆಯಲ್ಲಿ ಮೋನಪ್ಪ ಮೂಡಿದಾಗ ಇದ್ದಿರಬಹುದಾದ ಸಹಜಲಯವಾಗಿದೆ. ಮೋನಪ್ಪ ಹುಟ್ಟಿದ್ದು ಸುರಪುರದ ಗೋನಾಳದಲ್ಲಿ. ಬೆಳೆದಿದ್ದು ಲಿಂಗನಬಂಡಿಯಲ್ಲಿ (ರಾಯಚೂರು), ಕುರುಹುತೋರಿದ್ದು ಶಿರಹಟ್ಟಿಯ ವರವಿಯಲ್ಲಿ, ನೆಲೆಗೊಂಡಿದ್ದು ತಿಂತಿಣಿಯಲ್ಲಿ. ಕೃಷ್ಣಾ ತುಂಗಭದ್ರೆಯರ ಆಸುಪಾಸಿನ ಈ ಇಡೀ ಪ್ರದೇಶ ರಾಜಕೀಯವಾಗಿ ಆದಿಲಶಾಹಿಗಳ ರಾಜ್ಯವಾಗಿತ್ತು ಮತ್ತು ಇದೇ ಸೀಮೆಯಲ್ಲಿ ಅನೇಕ ಸೂಫಿಗಳು ಮೋನಪ್ಪನ ಕಾಲಕ್ಕೆ ೧೭ನೇ ಶತಮಾನ ಆಗಿಹೋಗಿದ್ದರು. ಮೋನಪ್ಪ ತಿರುಗಾಡಿದ ಪ್ರದೇಶಗಳು (ಕಲ್ಯಾಣ, ಕಲ್ಬುರ್ಗಿ, ಸಗರ, ಗೂಗಿ, ಬಿಜಾಪುರ, ಹಾನಗಲ್ಲು, ಬಂಕಾಪುರ, ಶಿರಹಟ್ಟಿ, ಲಕ್ಷ್ಮೇಶ್ವರ, ಹಂಪಿ, ಮುದಗಲ್ಲು) ಸೂಫಿ ಹಾಗೂ ನಾಥ ಕೇಂದ್ರಗಳೇ. ಮೋನಪ್ಪ ತನ್ನನ್ನು ಕುರಿತು ಮಾಡಿಕೊಂಡಿರುವ ಬಣ್ಣನೆ ಹಾಗೂ ಜನಪದರು ಅವನನ್ನು ಬಣ್ಣಿಸುವ ರೀತಿ ಕಂಡರೆ, ಅವನೊಬ್ಬ ಫಕೀರನಾಗಿದ್ದನು :

ನೀನೆ ಮೌನನು ನೀನೆ ದೀನನು ನೀನೆ ಪೀರ ಫಕೀರನು
ಲುಂಗಿ ಕಫನಿಯ ಟೋಪಿ, ಪಾದದಲ್ಲಿ ಜಂಗು ನೀ ಧರಿಸಿದೆಯೋ[೪]

---

೪ ಮೌನೇಶ್ವರ ಕುರಿತು ಜಾನಪದ ಹಾಡುಗಳು, ಪು. ೧೬

ಕಪನಿ ಎಂದರೆ (=ಅರಬ್ಬಿಯಲ್ಲಿ ಶವದುಡುಗೆ ಎಂದರ್ಥ) ಸೂಫಿ ಫಕೀರರ ನಿಲುವಂಗಿ. ಲುಂಗಿ ಕಪನಿ ಟೋಪಿ ಧರಿಸಿ ಪೀರ ಫಕೀರನಾಗಿರುವ ಮೋನಪ್ಪ ಕಾಲಲ್ಲಿ ಧರಿಸಿರುವುದು ಜಂಗು! ಮೋನಪ್ಪನನ್ನು ಕುರಿತು ಚಾರಿತ್ರ ಬರೆದಿರುವ ಬೋಳಮಲ್ಲನು (ಮೌನೇಶ್ವರ ಬಾಲಲೀಲೆ)

ಒಂದು ಚರಣ ಕೆರವು ಕೇಳ ಮ
ತ್ತೊಂದು ಚರಣಕೆ ಪಾಪೋಸು-

ಎಂದು ವರ್ಣಿಸುತ್ತಾನೆ. ಇವು ಕೊಡೇಕಲ್ಲ ಬಸವಣ್ಣನಿಗೆ ಹಾಗೂ ಶಿರಹಟ್ಟಿಯ ಫಕೀರೇಶನಿಗೆ ಇದ್ದ ವೇಷಗಳೇ. ಇವನ್ನು ಮಿತ್ ಕಟ್ಟಿದ ಜನರೊ, ಚಾರಿತ್ರ ಬರೆದ ಕವಿಗಳೊ ತೊಡಿಸಿರುವ ಸಾಧ್ಯತೆಯೂ ಇದೆ. ಸೂಫಿಕರಣ ಇಸ್ಲಾಮೀಕರಣಗಳಿಗೆ ಒಳಗಾಗಿರುವ ಈ ಸಂತರ ಹೆಸರುಗಳನ್ನು ಕೂಡ ಅನಂತರ ಭಕ್ತರು ಕೊಟ್ಟಿರುವಂಥವು ಅನಿಸುತ್ತದೆ. ಮೋನಪ್ಪನಿಗೆ 'ವರವಿಯ ಪಾಚ್ಛಾ' (ಪಾಚ್ಛಾ=ಬಾದಶಹ, ಫಾರಸಿಯಲ್ಲಿ ದೊರೆ) 'ಮೌನುದ್ದೀನ್' ಎಂಬ ಜನಪ್ರಿಯ ಹೆಸರುಗಳಿದ್ದವು.

ಕೊಡೇಕಲ್ ಬಸವಣ್ಣ ಕಲ್ಯಾಣದ ಬಸವಣ್ಣನನ್ನು ತನ್ನ ಹೆಸರಲ್ಲಿ ಇರಿಸಿಕೊಂಡಿದ್ದರೆ, ಮೋನಪ್ಪ ತನ್ನ ವಚನಗಳ ಅಂಕಿತದಲ್ಲಿ ಇಟ್ಟುಕೊಂಡಿದ್ದಾನೆ. ಕೊ. ಬಸವಣ್ಣನ ಪರಂಪರೆಯಲ್ಲಿ ಲಿಂಗತ್ಯಾಗ ಮಾಡಿದ ಬೋಳಜಂಗಮರು ಇರುವಂತೆ, ಇಲ್ಲಿ ಬೋಳಮಲ್ಲರು ಇದ್ದಾರೆ. ತಾವು ಇಷ್ಟಲಿಂಗಧಾರಣೆ ಮಾಡುವವರು ಎಂಬುದನ್ನು ಹೆಸರುಗಳಲ್ಲೆ ಘೋಷಿಸಿಕೊಳ್ಳುವಷ್ಟು ಈ ಅನುಭಾವಿಗಳು ತಾತ್ವಿಕವಾಗಿ ದೃಢವಾಗಿದ್ದರು. ಇದಕ್ಕೆ ಸೂಫಿಗಳ ಗೆಳೆತನ ಎಷ್ಟು ಕಾರಣವೊ ನಾಥಸಿದ್ಧರ ಸಹವಾಸ ಎಷ್ಟು ಕಾರಣವೊ ಗೊತ್ತಿಲ್ಲ. ಆದರೆ ಎರಡೂ ಪರಂಪರೆಗಳು ಅಲ್ಲಮನ ನೆನಪುಗಳನ್ನುಳ್ಳವು.

ಆಕಾಶ ಭೂಕಾಂತೆ ಏಕಲಿಂಗವಾಗಿರಲಿಕ್ಕೆ
ಯಾಕೋ ಎನಗೊಂದು ಪ್ರತಿಲಿಂಗ
ಅಲ್ಲಮನೆಂಬ ಸೂಕ್ಷ್ಮಲಿಂಗಯೆನಗುಂಟು
ಲೋಕದ ಮೂಕಲಿಂಗದೊಡವೆ ನಮಗ್ಯಾಕೊ ಬಸವಣ್ಣ ॥ (೧-೫೦)

ತೋರುಲಿಂಗ ಕಟ್ಟುವ ಪೋರಜಂಗಮನಲ್ಲ
ಈರೇಳು ಭವನದ ಒಡೆಯ ಅಲ್ಲಮನೆಂಬ
ಮೀರದ ಲಿಂಗ ಎನಗುಂಟೆ ॥ (೩-೫೧)[೫]

ಅಲ್ಲಮ ಎಂದರೆ ಇಲ್ಲಿ ಕಲ್ಯಾಣದ ಒಬ್ಬ ವಚನಕಾರ ಅಲ್ಲ, ಅನುಭಾವದಲ್ಲಿ ಪಡೆವ ಆತ್ಮಲಿಂಗ ಎಂಬ ಪರಿಭಾಷೆ. ಕಲ್ಯಾಣದ ಶರಣರ ಜತೆ ವಿಮರ್ಶಾತ್ಮಕವಾಗಿ ಇದ್ದ ಈ ಅನುಭಾವಿ ಪರಂಪರೆಗಳೆಲ್ಲ ಅಲ್ಲಮನ ಜತೆ ಅನುಸಂಧಾನ ಮಾಡಿಕೊಂಡು ಬಂದಿವೆ. ಸೂಫಿಗಳು ಇಸ್ಲಾಮಿನಿಂದ ಇಂಥದೇ ವಿವೇಕ-ವಿಮರ್ಶೆಗಳ ಜತೆ ಬಾಳ್ವೆ ಮಾಡಿದವರು.

---

೫ ತಿಂಥಣಿ ಮೌನೇಶ್ವರ ವಚನಗಳು ಕೃತಿಯಿಂದ ಆಯ್ದ ವಚನಗಳು

ಆದರೆ ಈ ಪರಂಪರೆಗಳನ್ನು ಅಧ್ಯಯನ ಮಾಡುವ ವಿದ್ವಾಂಸರು ಇವನ್ನು ವೀರಶೈವ ಚಳುವಳಿಯ ಪಡಿನೆಳಲಾಗಿ, ಮುಂದುವರಿಕೆಯಾಗಿ ನೋಡುವ ಗೀಳಿನಿಂದ ಹೊರಬರುವುದಿಲ್ಲ. ಈ ಪರಂಪರೆಗಳು ''ಮುಸಲ್ಮಾನರ ಸಾಂಸ್ಕೃತಿಕ ದಾಳಿಯನ್ನು ಸಂಘರ್ಷದ ರೂಪದಲ್ಲಿ ಎದುರಿಸುತ್ತಲೇ ಸಂಧಾನರೂಪದಲ್ಲಿ ಒಪ್ಪಿಕೊಳ್ಳುತ್ತ'' ''ವೀರಶೈವ ಸಂಸ್ಕೃತಿಯ ರಕ್ಷಣೆ ಸಮನ್ವಯ'' ಮಾಡುತ್ತವೆಂದು ವಿಶ್ಲೇಷಿಸುತ್ತಾರೆ.[೬] ಆದರೆ ಶರಣರನ್ನು ಮೋನಪ್ಪ ಗ್ರಹಿಸುವ ರೀತಿ ನೋಡಿ :

ಅಗಣಿತದ ಶರಣರು ಒಂದೆ ವಿಗಡದಿಂದ ಇಳಿದಾರು
ಟಗರು ತಾಕಿದ ಹಾಗೆ ತಾಕ್ಯಾರು
ಭಗಭಗನೆ ಉರಿವರು, ಘನಕ್ಕೆ ಮುಚ್ಚಳವನಿಕ್ಕುವರು
ಹೊಗಗೊಡರು ತಮ್ಮ ಗರಡಿಯ ಬಸವಣ್ಣ

ವಿಶ್ವಕರ್ಮನಾಗಿ, ಕಮ್ಮಾರನ ಮನೆಯಲ್ಲಿ ಹುಟ್ಟಿದ ಮೋನಪ್ಪಯ್ಯ ಶರಣರನ್ನು ಟೀಕಿಸುತ್ತಿರುವುದು ಅವರ ಮತೀಯ ಉಗ್ರತೆಗೊ ಅಥವಾ ಘನವನರಿಯದ ಅಸಾಮರ್ಥ್ಯಕ್ಕೊ? ಸೂಫಿ ನಾಥಪಂಥಗಳು ಜಾತಿ ಧರ್ಮಗಳ ಹಂಗಿಲ್ಲದೆ ಕೆಳಜಾತಿ-ವರ್ಗಗಳಿಗೆ ಆಧ್ಯಾತ್ಮಿಕ ಹಕ್ಕನ್ನು ಒದಗಿಸಿರುವ ಬಗ್ಗೆ ನಾವಿನ್ನೂ ತಿಳಿಯಬೇಕಿದೆ. ಅನುಭಾವವನ್ನು ಬಿಟ್ಟುಕೊಟ್ಟು ಸ್ಥಾವರ ಆರಾಧನೆಗೆ ನಿಂತುಹೋಗಿರುವ ಸೂಫಿಸಂಅನ್ನು ಮೋನಪ್ಪ ವಿಮರ್ಶಿಸುತ್ತಾನೆ :

ಧರಣಿಯಲ್ಲೊಂದು ಕಲ್ಲೊಡದು ಗೋರಿಗುಮ್ಮಟ ಕಟ್ಟಿ
ವೀರಪೀರನ ಮಲಗಿಸಿದಂಥ ಶೂರ ಬೇರೆಹಾನೆ ಕಡೆಯಲ್ಲಿ
ಲೋಕದ ಪೋರರಿಂದೇನು ನಡಿವದು ಬಸವಣ್ಣ ॥ (೨-೮೩)

ಮೋನಪ್ಪನ ಕಾಲವೆಂದರೆ ಸಂದು ಹೋದ ಸೂಫಿಸಂತರ ಸಮಾಧಿಗಳ ಮೇಲೆ ದೊರೆಗಳು ಭವ್ಯವಾದ ದರ್ಗಾ ಕಟ್ಟಡ ಕಟ್ಟುತ್ತಿದ್ದಕಾಲ. ವ್ಯಂಗ್ಯವೆಂದರೆ, ಮೋನಪ್ಪ ಕೂಡ, ತಾನು ದೇಹ ಬಿಟ್ಟಮೇಲೆ ಇಂಥದೆ ಗೋರಿಗುಮ್ಮಟದೊಳಗೆ ಮಲಗಬೇಕಾಗಿದ್ದು. ಮೇಲಿನ ವಚನವು ಗೋರಿಗುಮ್ಮಟ ಕಟ್ಟುವ ಕ್ರಿಯೆಯನ್ನು ವಿರೋಧಿಸುತ್ತಿದೆಯೆಂದು ಹೇಳುವಷ್ಟು ಸ್ಪಷ್ಟತೆಯಿಂದ ಕೂಡಿಲ್ಲ. ಬೆಡಗಿನ ಭಾಷಾಬಳಕೆಯ ಈ ವಚನಗಳಿಗೆ ಅರ್ಥ ಹೇಳುವುದು ಕಷ್ಟವಾಗಿದೆ :

ಸದರ ಸಾಹೇಬನ ಕೌಲು
ಅಲ್ಲಮರಾಯ ಪರಶಿವನಾಣೆ
ಮೀರಿನಡೆದರೆ ನೆಲವೆದ್ದು ಬಡಿಯುವದು
ಸಾದರಿಗೆ ಸಂತೋಷರಾಗಲಿ
ಸಾಹೇಬರ ನಜರಾಗಲಿ
ಸತ್ಯಕ್ಕೆ ಸರಸವು ಸಲ್ಲದು ॥ (೫-೧೦೬)

---

೬ ತಿಂತಿಣಿ ಮೋನಪ್ಪಯ್ಯ ಒಂದು ಅಧ್ಯಯನ, ಪು. ೪

ಬಾಜಿಗಾರಿಕೆ ಬಿಡಹೇಳಿದ ಧರ್ಮದ
ಖಾಜಿ ಕೊಟ್ಟಂಥ ಅಭಯ ಹಸ್ತ
ಸ್ವಾಮಿ ಮಜಾರಕ್ಕೆ ಕರ್ತ, ಸದರಿಗೆ ಸಾಹೇಬ ॥ (೬-೯)

ಸೂಫಿ ಪರಂಪರೆಗೆ ಸಂಬಂಧಿಸಿದ ಪದಗಳನ್ನು ಈ ರಚನೆಗಳು ಬಳಸಿವೆ. ಸದರ ಎಂದರೆ ಫಾರಸಿಯಲ್ಲಿ ನಾಯಕ, ಗುರು; ಸಂತರ ಗದ್ದಿಗೆಗಳಲ್ಲಿ ಇರುವ ಸದರಗಟ್ಟೆಗಳು ಗುರು ಬೋಧನೆಗೆ ಕೂರುತ್ತಿದ್ದ ವೇದಿಕೆಗಳು. ಸಮಸ್ಯೆಯೆಂದರೆ ಈ ವಚನಗಳು ಏನು ಹೇಳುತ್ತಿವೆ? ಕಾಲಜ್ಞಾನ ವಚನಕಾರರು ಒಂದು ಬಗೆಯ ನಿಗೂಢತೆಯನ್ನು, ಸಾಂಕೇತಿಕತೆಯನ್ನು ಅಳವಡಿಸಿ ರಚನೆ ಮಾಡುತ್ತಾರೆ. ಈ ಸಾಂಕೇತಿಕತೆ ಹಲವು ವ್ಯಾಖ್ಯಾನಗಳಿಗೆ ದಾರಿಮಾಡಿಕೊಡುತ್ತದೆ. ಮುಂದೆ ೨೦ನೇ ಶತಮಾನದಲ್ಲಿ, ದೀನದಾರ್ ಸಮಾಜ ಸ್ಥಾಪಿಸಿದ ಮೌಲಾನಾ ಸಿದ್ದೀಕ್ ದೀನದಾರ್ ಚೆನ್ನಬಸವೇಶ್ವರನು, ತಾನು ಚೆನ್ನಬಸವೇಶ್ವರನ ಅವತಾರವೆಂದು ಸಮರ್ಥಿಸಿಕೊಳ್ಳಲು ಕೊಡೇಕಲ್ ಬಸವ ಹಾಗೂ ತಿಂತಿಣಿ ಮೋನಪ್ಪರ ವಚನಗಳನ್ನು ಬಳಸಿಕೊಂಡನು.

## ೩. ಸಾವಳಗಿ ಶಿವಲಿಂಗ

'ಸಾವಳಗಿ ಶಿವಲಿಂಗೇಶ್ವರರ ಚರಿತ್ರೆ' ಎಂಬ ಲೇಖನದಲ್ಲಿ ಕಪಟರಾಳರು ಶಿವಲಿಂಗನ ಜೀವನ ಚರಿತ್ರೆಯಿಂದ ಗೊಂದಲಗೊಂಡು ಹೀಗೆ ಬರೆಯುತ್ತಾರೆ :

> ಶಿವಲಿಂಗನು ಪ್ರಸಿದ್ಧ ಬಂದೇನವಾಜನ ಉರುಸಿಗೆ ಹೋಗಿ ಅಲ್ಲಿ ಟೊಪ್ಪಿಗೆ ಶಮಸ ಶೈಲಿಗಳನ್ನು ಪಡೆಯುವುದೂ, ಅವರಂಗಜೇಬನ ಮಗನಾದ ಅಕ್ಬರನಲ್ಲಿ ಬಾಲಖೇಡಕ್ಕೆ ಹೋಗಿ ತನ್ನ ಮಹಿಮೆಯನ್ನು ತೋರುವುದೂ, ಲಾಕುಳವನ್ನು ಹಿಡಿದು ಕೃಷ್ಣೆಯನ್ನು ದಾಟಿ ತುಗಚಿಯ ವಲಿಗಳಿಗೆ ಚೆರಗುಗೊಳಿಸುವುದೂ, ಇವೆಲ್ಲವನ್ನೂ ಪರ್ಯಾಲೋಚಿಸುವಾಗ ಯಾವನೊಬ್ಬ ಹಿಂದು ಗುರುವಿನ ಸಂಬಂಧವಿಲ್ಲದಿರುವುದೂ, ಇಂದಿಗೂ ಪರಂಪರೆಯಿಂದ ''ಬಂದೇನವಾಜಕೀ ದೋಸ್ತಹಾರಾ ಹೋದೀನ'' ಎಂದು ಜಯಘೋಷ ಹೊಡೆಯುವ ಪದ್ಧತಿ ಇಟ್ಟುಕೊಂಡಿರುವುದೂ ಇದರಿಂದ ಏನನ್ನು ಊಹಿಸಬೇಕೋ ಅದನ್ನು ವಾಚಕರಿಗೆ ಒಪ್ಪಿಸುವೆವು.[೭]

ಕಪಟರಾಳರು ತಮ್ಮ ಲೇಖನಕ್ಕೆ ಅಜ್ಞಾನ ಕವಿ ಬರೆದಿರುವ 'ಶಿವಲಿಂಗೇಶ ಕಾವ್ಯ'ವನ್ನು ಆಧರಿಸಿದ್ದಾರೆ. ಅವರ ಆಶ್ಚರ್ಯದೊಳಗಿನ ಕಪಟವಿಲ್ಲದ ಮನಸ್ಸನ್ನು, ಊಹೆ ಮಾಡಲು ವಾಚಕರಿಗೆ ಒಪ್ಪಿಸುವ ಮುಗ್ಧತೆ ಕಂಡು ಆದರ ಹುಟ್ಟುತ್ತದೆ.

ಸಾವಳಗಿ ಶಿವಲಿಂಗನ ಬಗ್ಗೆ ಗುಲಬರ್ಗಾಸೀಮೆಯ ಶಿವಪುರದ ಸಿದ್ಧಲಿಂಗ ಕವಿ (೧೯ನೇ ಶತಮಾನ) ''ಶ್ರೀ ಶಿವಲಿಂಗೇಶ್ವರ ಪುರಾಣ'' ಎಂಬ ಭಾಮಿನಿಷಟ್ಪದಿಯ ಕಾವ್ಯ ರಚಿಸಿದ್ದಾನೆ. ಬಹುಶಃ ಕಪಟರಾಳರಿಗೆ ಈ ಕೃತಿ ಸಿಕ್ಕಿಲ್ಲ. ಸಾವಳಗಿ ಶಿವಲಿಂಗನ ಜೀವನದಲ್ಲಿ ಮುಖ್ಯ ಘಟನೆಯೆಂದರೆ ಖಾಜಾಬಂದೇನವಾಜನನ್ನು ಭೇಟಿಮಾಡಿದ್ದು. ಸಾವಳಗಿಯ ಜನ ಹೇಳುವಂತೆ ಬಂದೇನವಾಜನು ಹುಲಿಯ ಮೇಲೆ ಬಂದಾಗ, ಶಿವಲಿಂಗ ತಾನು ಕುಳಿತು

---

೭ ಕರ್ನಾಟಕ ಸಂಸ್ಕೃತಿ ಸಂಶೋಧನೆ, ಪು. ೧೬೪

ಕಟ್ಟೆಯನ್ನು ನಡೆಸಿಕೊಂಡು ಹೋಗಿ ಬಂದೇನವಾಜನನ್ನು ಬೆರಗುಗೊಳಿಸಿದನು. ಶಿವಲಿಂಗನ ಮಹಿಮೆಗೆ ಮಣಿದ ಬಂದೇನವಾಜ ತನ್ನ ಉರುಸಿಗೆ ಶಿವಲಿಂಗನನ್ನು ಕರೆದುಕೊಂಡು ಹೋಗಿ ಶೈಲಿ ಶಮಲ ಶಿಲೇಮನಿಗಳನ್ನು ಕೊಟ್ಟು ಗೌರವಿಸಿದನು. ಸಿದ್ಧಲಿಂಗಕವಿಯೂ ಇದನ್ನು ವರ್ಣಿಸುತ್ತಾನೆ.

ಈ ಶೈಲಿ ಶಮಲ ಶಿಲೇಮನಿಗಳೆಂದರೇನು? ಇವು ಸೂಫಿ ಗುರುವು ದೀಕ್ಷೆ ಪಡೆದ ಶಿಷ್ಯನಿಗೆ ಕೊಡುವ ವಸ್ತುವಿಶೇಷಗಳು. ಶಮಲ ಎಂದರೆ ಕೇಸರಿ ಅಂಗವಸ್ತ್ರ. ಶಿಲೇಮನಿ ಬಹುಶಃ ಜಪದ ಸರ. ಇವನ್ನು ಧರಿಸಿದ ಬಂದೇನವಾಜನ ವರ್ಣನೆಯನ್ನು ಸಿದ್ಧಲಿಂಗ ಮಾಡುತ್ತಾನೆ :

ಪಿಡಿದು ಎಡಬಲ ಬರುವ ಶಿಷ್ಯರು
ಹಿಡಿದು ಮೋರ್ಚಾಮರಗಳಿಂದಲಿ
ಕೊಡೆಯು ಟೊಪ್ಪಿಗೆ ಶೈಲೆ ಶಮನಗಳಿಂದಲೊಪ್ಪಿರುತ
ಉಡಿಗೆ ಶುಭ್ರವು ಮೆಟ್ಟಿ ಪಾವುಗೆ
ತೊಡುಗೆ ಶಿಲಮಾನಗಳು ಕಂಠದಿ
ಜಡೆಯ ಭಸ್ಮವು ಕೂರ್ಚ ಬಂದೇನವಾಜ ಮೆರೆದಿಹನು ॥ (೬-೪೧)

ಸಾವಳಗಿ ಶಿವಲಿಂಗನ ಕಾಲ ೧೭ನೇ ಶತಮಾನದ ಕೊನೆಭಾಗ. ಅವನು ಬಾಳಖೇಡದಲ್ಲಿ ಔರಂಗಜೇಬನನ್ನು ಭೇಟಿಮಾಡಿ, ಪವಾಡ ಮೆರೆದು, ಒಂದು ಮಠವನ್ನು ಕಟ್ಟಿಸಿಕೊಳ್ಳುತ್ತಾನೆ. ಆದಿಲಶಾಹಿ ರಾಜ್ಯವು ಕೊನೆ ಉಸಿರೆಳೆಯುತ್ತ ಇದ್ದ ಈ ಕಾಲದಲ್ಲಿ, ಈ ರಾಜ್ಯಗಳನ್ನು ಅಳಿಸಿ ಹಾಕುವಂಥ ದಂಡಯಾತ್ರೆ ನಡೆಸುತ್ತ ಔರಂಗಜೇಬ ದಖನ್ನಿಗೆ ಬಂದಿದ್ದನು. ಹೀಗಾಗಿ ಶಿವಲಿಂಗನ ಸಂಗಾತಿಯಾದ ಸೂಫಿಸಂತನು ಮೊದಲನೇ ಬಂದೇನವಾಜ್ (೧೩೧೭-೧೪೨೨) ಅಲ್ಲ. ಅವನ ೧೭ನೇ ತಲೆಮಾರಿನ ಖಲೀಫನಾದ ಖ್ವಾಜಾವಲಿ ಹುಸೇನ್ ಬಂದೇನವಾಜನು (೧೬೭೬). ಬಂದೇನವಾಜನ ಕಾಲದಿಂದಲೂ ಗುಲಬರ್ಗ ಬಗ್ದಾದಿನಂತೆ, ದಖನ್ನಿನ ಪ್ರಸಿದ್ಧ ಸೂಫೀ ದಾರ್ಶನಿಕ ಕೇಂದ್ರವಾಗಿತ್ತು. ಗುಲಬರ್ಗೆಗೆ ಕೇವಲ ೧೦ ಮೈಲಿ ದೂರದ ಸಾವಳಗಿಯಲ್ಲಿದ್ದ ಶಿವಲಿಂಗನು, ಬಂದೇನವಾಜ ದರ್ಗಾದ ಪ್ರಭಾವದೊಳಗೆ ಬಂದಿರುವುದು ಸಹಜವಾಗಿದೆ. ಆದರೆ 'ಪುರಾಣ ಕವಿಗಳು, ಶಿವಲಿಂಗನೇ ಬಂದೇನವಾಜನಿಗೆ ಗುರುವಾಗಿರುವಂತೆ ಚಿತ್ರಿಸುತ್ತಾರೆ. ಉರುಸಿಗೆ ಬಂದ ಶಿವಲಿಂಗನು ತನ್ನ ಗುರುವನ್ನು ಬಂದೇನವಾಜನ ಸುಪರ್ದಿಗೆ ಬಿಟ್ಟು–

ಗುರುವೊಡೆಯ ಸಿದ್ದೇಶ್ವರನು ನಿನ್ನಯ ಗುಡಿಯ
ಯೊಳಿರುತಿಹನವನನುದಿನ ಬಿಡದಲೆರ್ಚಿಪುದು

–ಎಂದು ಅಪ್ಪಣೆಮಾಡಿ ಹೊರಡುತ್ತಾನೆ. ಈಗಲೂ ಬಂದೇನವಾಜ ದರ್ಗಾದಲ್ಲಿ ಸಿದ್ಧರ ಗದ್ದಿಗೆಯಿದೆ. ಈ ಸಿದ್ಧೇಶನು ಮೊದಲನೇ ಬಂದೇನವಾಜನಿಗೆ ಶಿಷ್ಯನಾಗಿದ್ದ ಕುಕನೂರಿನ ಸಿದ್ಧಪ್ಪನೊ ಏನೋ ತಿಳಿಯದು.

ಶಿವಲಿಂಗನು ಮುಂದೆ ೩೬೦ ಮಠಗಳನ್ನು ಸ್ಥಾಪಿಸಿದನೆಂದು ಜಾತ್ರೆಯ ಕರಪತ್ರ ಹೇಳುತ್ತದೆ. ಬಾಳಖೇಡ, ಹಿರೇಸಾವಳಗಿ, ಜಮಖಂಡಿ, ಸಾವಳಗಿ, ತುಂಗಳ, ಸರವಣೆ,

ತುಗಚಿ, ಕುರುಬೆಟ್ಟ ಮುಂತಾದ ಕಡೆ ಈ ಮಠಗಳಿವೆ. ಈಗ ಶಿವಲಿಂಗನ ಗದ್ದಿಗೆ ಇರುವ ಘಟಪ್ರಭಾ ದಂಡೆಯ ಗೋಕಾಕ ಸಾವಳಗಿಯು ಮುಖ್ಯವಾಗಿದೆ. ಶಿವಲಿಂಗನ ಗದ್ದಿಗೆಯ ಮೇಲೆ ಬಂದೇನವಾಜ ಕೊಟ್ಟ ಮಂಚ ಸುಪ್ಪತ್ತಿಗೆಗಳನ್ನು ಇಟ್ಟು ಗೌರವ ತೋರಲಾಗಿದೆ. ಶಿವಲಿಂಗನ ಜಾತ್ರೆಯಲ್ಲಿ ಗಣನೀಯ ಸಂಖ್ಯೆಯಲ್ಲಿ 'ಮುಸ್ಲಿಮ್' ಭಕ್ತರು ಇರುವುದನ್ನೂ ಕಾಣಬಹುದು. ಶಿವಲಿಂಗೇಶನ ಶತಕ ಬರೆದಿರುವ ಕವಿ ಪಾಶ್ಚಾಪುರದ ಇಬ್ರಾಹಿಂಸಾಬ ಪಠಾಣ ಅವರನ್ನು ನಾನು ಕಂಡಿದ್ದು ಇದೇ ಜಾತ್ರೆಯಲ್ಲಿ. ಸಾವಳಗಿ ಸುತ್ತಮುತ್ತ ಘಟಪ್ರಭೆಯ ದಂಡೆಯುದ್ದಕ್ಕೂ ಕಾಡಸಿದ್ಧೇಶ್ವರ, ಭೀಮಾಶಂಕರ, ದತ್ತಾತ್ರೇಯ ಗುಡಿ-ಮಠಗಳು ತುಂಬಿಕೊಂಡಿವೆ. ಇವೆಲ್ಲ ನಾಥ ಹಾಗೂ ಸೂಫಿ ಪರಂಪರೆಗಳ ಕೂಡಿಕೆಯ ಕುರುಹುಗಳನ್ನು ಧರಿಸಿರುವವು ಎಂಬುದನ್ನು ವಿವರಿಸಬೇಕಿಲ್ಲ.

### ೪. ಶಿರಹಟ್ಟಿ ಫಕೀರೇಶ

ಕರ್ನಾಟಕದ ಸೂಫಿಗಳು ಬಿಟ್ಟುಹೋಗಿರುವ ಶಿಷ್ಯಶಾಖೆಗಳಲ್ಲಿ ಶಿರಹಟ್ಟಿ ಫಕೀರೇಶ್ವರ ಪರಂಪರೆಯೂ ಒಂದು. ಸಾವಳಗಿ ಶಿವಲಿಂಗನು ರಾಜಗುರುವಾಗಿದ್ದ ವಿದ್ವಾಂಸ ಸೂಫಿ ಬಂದೇನವಾಜ ಚಿಸ್ತಿ ಪರಂಪರೆಗೆ ಸೇರಿದರೆ, ಫಕಿರೇಶನು ಪ್ರಭುತ್ವವಿರೋಧಿಯಾದ ದರ್ವೇಶ್ ಸೂಫಿ ಅಮೀನುದ್ದೀನ್ ಚಿಸ್ತಿ ಪರಂಪರೆಗೆ ಸೇರಿದವನು. ಮಿತ್‌ಗಳ ಪ್ರಕಾರ ಈ ಗುರು ಶಿಷ್ಯರ ಸಂಬಂಧಗಳು ಜನ್ಮಾಂತರದಲ್ಲೂ ಮುಂದುವರೆಯುತ್ತವೆ. ಈ ಮಿತ್‌ಗಳನ್ನು ಆಧರಿಸಿ ದ್ಯಾಂಪುರದ ಚೆನ್ನಕವಿ 'ಶ್ರೀ ಫಕಿರೇಶ್ವರ ಪುರಾಣ' ಬರೆದಂತಿದೆ. ಅದರಲ್ಲಿ ಬರುವಂತೆ ಅಮೀನುದ್ದೀನನು ದೇಹ ಬಿಡುವಾಗ ಫಕಿರೇಶನು ಕಣ್ಣಲ್ಲಿ ನೀರುತಂದು, 'ಗುರುಗಳೇ ನಿಮ್ಮ ದರ್ಶನ ಮತ್ತೆ ಯಾವಾಗ' ಎಂದು ಹಲುಬುತ್ತಾನೆ. ಆಗ ಅಮೀನನು 'ಚಿಂತೆ ಬೇಡ,' ಗೋನಾಳದಲ್ಲಿ ಹಾವಮ್ಮನೆಂಬ ಶಿವಭಕ್ತೆ ಸಂತಾನಕ್ಕಾಗಿ ಶಿವಪೂಜೆ ಮಾಡುತ್ತಿದ್ದಾಳೆ

> ಶಿವರೂಪವನೊಲಿದು ಪಡೆದಾ
> ಯುವತಿಯ ಪವಿತ್ರೋದರದಿ ನಾ
> ನವತರಿಸಿ ಮೌನಯ್ಯನೆಂಬ ನಾಮವನು ತಳೆದು ॥ (೫೦೩೪)

ಹುಟ್ಟಿ ಬರುತ್ತೇನೆಂದು ಭರವಸೆ ಕೊಡುತ್ತಾನೆ.

ಅಮೀನುದ್ದೀನ್ (೧೬೭೫) ಬಿಜಾಪುರದ ಸೂಫಿಗಳಲ್ಲಿ ತುಂಬ ಉಜ್ವಲವಾಗಿ ಬಾಳಿದವನು. ಈಟನನ್ನನ 'ಸೂಫಿಸ್ ಆಫ್ ಬಿಜಾಪುರ್' ಓದಿದರೆ, ಅದರ ನಾಯಕ ಅಮೀನುದ್ದೀನನೆ. ಸಮಕಾಲೀನ ಸೂಫಿಗಳೆಲ್ಲ ಪಾರಿವಾಳಗಳಂತೆ ರಾಜಾಸ್ಥಾನದ ಗೂಡುಗಳಲ್ಲಿ ಆಸರೆ ಪಡೆದುಕೊಂಡಿದ್ದಾಗ, ಸಾಂಪ್ರದಾಯಿಕ ಇಸ್ಲಾಮಿಗೂ ರಾಜಪ್ರಭುತ್ವಗಳಿಗೂ ಅಮೀನುದ್ದೀನ್ ಒಡ್ಡಿದ ಪ್ರತಿರೋಧವು ಬಹುಶಃ ಈಟನ್‌ಗೆ ಆಕರ್ಷಕವಾಗಿ ಕಂಡಿದೆ. ಅಮೀನುದ್ದೀನನ ಬಗ್ಗೆ ವಿಸ್ತಾರವಾಗಿ ಚರ್ಚಿಸುವ ಈಟನ್, ಅವನ ಶಿಷ್ಯನಾದ ಫಕೀರೇಶನ ಬಗ್ಗೆ ಆಸಕ್ತಿ ತೋರಿಸುವುದಿಲ್ಲ. ಇದಕ್ಕೆ ಕಾರಣ ಅವನು ನೆಚ್ಚುವ ಉರ್ದು-ಫಾರಸಿ ಆಕರಗಳು. ಅವನಿಗೆ ಸ್ಥಳೀಯ ಜನಪದ ಪರಂಪರೆಗಳಲ್ಲಿ ಪ್ರವೇಶಿಸಲು ಆಗದಿದ್ದರೂ ಅವುಗಳ ಮಹತ್ವವೇನೆಂದು ಗೊತ್ತಿತ್ತು. Indeed the whole phenomenon of Lingayat devotionalism at Sufi darghas holds promising avenues of

investigation for researchers utilizing the techniques of gathering oral tradition.[8]

ಲಿಂಗಾಯತ ಕುಶಲಕರ್ಮಿಗಳು ರಾಜಧಾನಿಗಳಿಗೆ ವಲಸೆಬಂದು ಬೀಡುಬಿಟ್ಟು ಇಸ್ಲಾಮೀಕರಣಕ್ಕೆ ಒಳಗಾಗಿದ್ದರಿಂದ, ಅವರಿಗೆ ಸೂಫಿ ಪರಂಪರೆಯೊಳಗೆ ಭಕ್ತರಾಗಿ, ಶಿಷ್ಯರಾಗಿ ಹೋಗಲು ಸುಲಭಸಾಧ್ಯವಾಯಿತು ಎಂದು ಈಟನ್ ಗುರುತಿಸುತ್ತಾನೆ. ಚೆನ್ನವೀರಯ್ಯ (ಫಕಿರೇಶನ ಮೂಲ ಹೆಸರು) ಹುಟ್ಟಿದ್ದು ಬಿಜಾಪುರದಲ್ಲಿ. ಶಿವಯ್ಯ-ಗೌರಮ್ಮ ಎಂಬ ಜಂಗಮ ದಂಪತಿಗಳು ಅಮೀನುದ್ದೀನನ್ನು ಬೇಡಿ ಪಡೆದ ಮಗು. 'ಫಕಿರೇಶ್ವರ ಪುರಾಣ'ದ ಆಧಾರದಲ್ಲಿ ಹೇಳುವುದಾದರೆ–ಒಂದು ದಿನ ಮಕ್ಕಳಿಲ್ಲದ ಗೌರಮ್ಮ 'ಘನಖಾಜಾ ಅಮೀನ್ದೀನು ಎಂದೆನಿಪ ಬಲ್ತವಸಿಯ ಚೆಲ್ವದರಗಕೆ' ಬರುತ್ತಾಳೆ. ಅಮೀನನು ಅವಳ ಸಂಕಟವರಿತು, 'ಮಗಳೆ ನೀಂ ಪೇಳ್ವಂದದಿಂ ಮೊದಲುದಿಸಿದಣುಗನನೆಮಗೆ ಕೊಡು' ಎಂದು ವಚನಪಡೆದು ಎರಡು ಖರ್ಜೂರಗಳನ್ನು ಆಕೆಗೆ ಕೊಡುತ್ತಾನೆ. ಚೆನ್ನವೀರಯ್ಯ ಹುಟ್ಟುತ್ತಾನೆ. ಹುಟ್ಟುವ ಮೊದಲು ಕೂಸನ್ನು ಅಮೀನನಿಗೆ ಸಿಸುಮಗನಾಗಿ ಕೊಡುತ್ತೇನೆಂಬ ವಚನವನ್ನು ತಾಯಿ ಮರೆತುಬಿಡುತ್ತಾಳೆ. ಸಂತ ಚಾರಿತ್ರಗಳಲ್ಲಿ ಈ ಮಿತ್ ಮತ್ತೆ ಮತ್ತೆ ಬರುತ್ತದೆ. ಹೊನ್ನೂರಪ್ಪನ ಕತೆಯಲ್ಲಿ ಬರುತ್ತದೆ. ಮಂಟೇಸ್ವಾಮಿ ಕಥೆಯಲ್ಲೂ ಬರುತ್ತದೆ. ಕೊನೆಯ ಮಗ ಕೆಂಪಾಚಾರಿಯನ್ನು ಶಿಶುಭಿಕ್ಷೆಯಾಗಿ ಕೊಡುತ್ತೇನೆಂದು ಮಾತು ಕೊಟ್ಟಿದ್ದ ಮುದ್ದಮ್ಮ ಮಾತಿಗೆ ತಪ್ಪಿದಾಗ, ಮಂಟೇಸ್ವಾಮಿ ಕೆಂಪಾಚಾರಿಗೆ ಬೆಪ್ಪುನೀಲಿ ಬರಿಸಿ ಕರೆದುಕೊಂಡು ಹೋಗುತ್ತಾನೆ. ಇಲ್ಲೂ ಹೀಗೆ ಆಗುತ್ತದೆ. ಮಗು ರೋಗದಿಂದ ಸಾಯುತ್ತದೆ. ಸತ್ತ ಕೂಸನ್ನು ಅಮೀನ್ ಬದುಕಿಸಿ ತನ್ನ ಸಿಸುಮಗನಾಗಿ ಮಾಡಿಕೊಳ್ಳುತ್ತಾನೆ. ಈ ಸಾವು ಮತ್ತು ಪುನರ್ಜನ್ಮಗಳು, ವ್ಯಕ್ತಿಯನ್ನು ಲೌಕಿಕ ಬಾಳಿನಿಂದ ಕತ್ತರಿಸಿ ದೀಕ್ಷೆ ಕೊಡುವುದರ ಸಂಕೇತಗಳು. ದೀಕ್ಷೆ ಕೊಟ್ಟಮೇಲೆ ಹೆಸರೂ ಬದಲಾಗಬೇಕು.

ನೀನೆ ನಾನ್ಪೆ ನಾನು ನೀನ್ಪೆ
ಮಾನಸದೊಳಿಂದಿನಿಸು ಭೇದ
ಮೇನುಮಿಲ್ಲೆಂದರಿ ಮಹಾತ್ಮಾ ನೀನು ನರನಲ್ಲ
ಮಾನವನವೊಲ್ಕಂಡರುಂ ಜಿತ
ಭಾನಜನ ಸರಿಯೆಂದು ಬಲ್ಲೆನು
ಜ್ಞಾನಿಯೆ ನಿರಂಕುಶಿತ ವೃತ್ತಿಯೊಳಿರ್ಪ ಶಿವಶರಣ ॥ (೩-೫೧)

ಚೆನ್ನವೀರನೆನಿಪ್ಪ ಪೆಸರಿ
ರ್ದುಂ ನಿನಗೆ ಸಲ್ಲಕ್ಷಣಗಳಿಂ
ಸನ್ನುತ ಫಕೀರೇಶನೆಂಬೀ ಪೆಸರು ಸಲ್ಲುವುದು
ಇನ್ನು ಮರೆಯಲಿ ಜಗದೊಳೀನಾ
ಮಂ ನಿರಂತರಮೆಂದು ನುಡಿದಂ
ತನ್ನಭೀಪ್ಸಿತೆಯಂತೆ ಖಾಜಾಮೀನದಿನ್ನಲಿಯು ॥ (೩-೫೪)

8 *Sufis of Bijapur*, p. 250

‘ಪರ’ಧರ್ಮದ ಗುರುವನ್ನು ಪಡೆದುದಕ್ಕೆ ಶಿಷ್ಯನೂ ‘ಪರ’ ಮತದ ಶಿಷ್ಯನಾಗಿಸಿಕೊಂಡ ಕಾರಣಕ್ಕೆ ಗುರುವೂ, ತಂತಮ್ಮ ಧರ್ಮಗಳ ಸನಾತನಿಗಳಿಂದ ಪಡುವ ಪಾಡು ಬಹುಶಃ ಇಲ್ಲಿಂದ ಶುರುವಾಗುತ್ತದೆ.

ಒಂದು ಮಿತ್ ಪ್ರಕಾರ, ಬಿಜಾಪುರದ ದೊರೆ ಎಲ್ಲ ಮುಸಲ್ಮಾನರ ಜತೆಗೆ ಹಬ್ಬದ ನಮಾಜಿಗೆ ಹೊರಟಿದ್ದ. ಎಂದೂ ನಮಾಜಿಗೆ ಬಾರದ ಅಮೀನುದ್ದೀನನನ್ನು ಈ ಸಲ ಕರೆದುಕೊಂಡು ಹೋಗಲೇಬೇಕು ಎಂಬುದು ಅವನ ಉದ್ದೇಶ. ದೊರೆಯ ಜತೆ ಹೋಗುವ ಅಮೀನುದ್ದೀನ ಎಲ್ಲರು ಮಾಡುವಂತೆ ನಮಾಜು ಮಾಡುವುದಿಲ್ಲ. ಫಕೀರೇಶನು ನಮಾಜು ಕಂಬಳಿಯನ್ನು ಝಾಡಿಸಿ ಕೆರೆಯ ನೀರಿನಲ್ಲಿ ನಡುವೆ ಗುರುವಿನ ನಮಾಜಿಗಾಗಿ ನಮಾಜು ಗಟ್ಟಿಯನ್ನು ಮಾಡುತ್ತಾನೆ. ಮತ್ತೊಮ್ಮೆ ಝಾಡಿಸಿ ನೀರಿನ ಮೇಲೆ ನಡೆದುಹೋಗಲು ಪಾವಟಿಗೆ ಮಾಡುತ್ತಾನೆ. ಅಮೀನನ ಮಹಿಮೆ ಹಾಗೂ ಅವನ ಶಿಷ್ಯನ ಮಹಿಮೆ ಕಂಡು, ದೊರೆಗೂ ನೆರವಿಗೂ ದಂಗುಬಡಿಯುತ್ತದೆ.

ಈ ಮಿತ್, ಎರಡು ಸಂಗತಿಗಳತ್ತ ಸನ್ನೆ ಮಾಡುತ್ತಿದೆ. ಒಂದು: ಅಮೀನನು ಸಾಂಪ್ರದಾಯಿಕ ಮುಸ್ಲಿಮರಂತೆ ಇಸ್ಲಾಮಿನ ಆಚರಣೆಗಳನ್ನು ಪಾಲಿಸುತ್ತಿರಲಿಲ್ಲ ಹಾಗೂ ದರ್ವೇಶಿ ಸೂಫಿಯಾಗಿ ಅನೇಕ ಸ್ಥಳೀಯ ಅನುಭಾವಿ ಪಂಥಗಳ ಜತೆ ಸಂಪರ್ಕ ವಿಟ್ಟುಕೊಂಡಿದ್ದ. ಎರಡು: ಈ ಕಾರಣಕ್ಕಾಗಿಯೆ ಅವನು ದೊರೆತನ ಹಾಗೂ ಸನಾತನಿಗಳ ಜತೆ ಅಪಾರ ವಿರೋಧ ಕಟ್ಟಿಕೊಂಡಿದ್ದ.

ಖಾದ್ರಿಯ ಪಂಥದ ಸೂಫಿಯೊಬ್ಬ ತನ್ನ ಗೆಳೆಯನಿಗೆ ಬರೆದ ಪತ್ರದಲ್ಲಿ ಅಮೀನುದ್ದೀನ್ ಗಳಿಸಿರುವ ಅಪಾರ ಜನಪ್ರಿಯತೆಯನ್ನು ಪ್ರಸ್ತಾಪಿಸುತ್ತಾನೆ. ಇಡೀ ದಖನ್ನಿನ ಜನ ಅವನನ್ನು ಗೌರವಿಸುತ್ತಾರೆ. ಕೆಲವು ಅಜ್ಞಾನಿ ಸೂಫಿಗಳೂ ಅವನ ಶಿಷ್ಯರಾಗಿ ಬಿಟ್ಟಿದ್ದಾರೆ–ಎಂದು ಅಸೂಯೆಯಿಂದ ಬರೆಯುವ ಆತ ಹೇಳುತ್ತಾನೆ :

> ಅಮೀನನ ಅನುಯಾಯಿಗಳು ಅಲ್ಲಾನನ್ನು ನಂಬದವರು. ಅವರು ತಮ್ಮ ಇರುವಿಕೆಗಾಗಿ ದೇಹಕ್ಕೆ ಪ್ರಾಮುಖ್ಯ ನೀಡುವವರು. ಈ ಕತ್ತೆಗಳಿಗೆ ತಮ್ಮ ಅಸ್ತಿತ್ವದ ಅರ್ಥವೂ ಗೊತ್ತಿಲ್ಲ. ಅವರು ಐದು ಅಂಶಗಳ ಬಗ್ಗೆ ಹೇಳುತ್ತಾರೆ. ಅವು ಐದು ಸೈತಾನಗಳು. ಅವನ್ನು ಹುಚ್ಚರಷ್ಟೆ ನಂಬಬೇಕು.[⁷]

ಇಸ್ಲಾಮಿಗೆ ಹೊರತಾದ ಯಾವ ಯಾವುದೊ ತತ್ವಗಳನ್ನು ಅಮೀನನು ಪಡೆದುಕೊಂಡಿದ್ದ ಎಂಬುದನ್ನು ಈ ಟೀಕೆಗಳು ಹೇಳುತ್ತಿವೆ. ಆ ತತ್ವಗಳು ಖಂಡಿತವಾಗಿಯೂ ಯೋಗತತ್ವಗಳೆ ಆಗಿರಬೇಕು. ಅಮೀನುದ್ದೀನ ಸಾಹಿತ್ಯದ ಮೂಲಕ ಅವನು ಸೂಫಿಯಲ್ಲದ ಪರಂಪರೆಗಳಿಂದ, ಅದರಲ್ಲೂ ಅಲ್ಲಮನಿಂದ ಯಾವ ಬಗೆಯ ಪ್ರೇರಣೆ ಪಡೆದುಕೊಂಡಿದ್ದಾನೆ ಎನ್ನುವುದನ್ನು ಶೋಧಮಾಡಬೇಕು. ಮಸೀದಿಯಲ್ಲಿ ದೇವರು ಹುಡುಕುವವರ ಬಗ್ಗೆ ಅಮೀನನ ಪದ್ಯ ಒಂದು ಹೀಗೆ ಹೇಳುತ್ತದೆ :

> ದೊಡ್ಡ ಮನುಷ್ಯರು ಕೆಲವರು ಹೇಳುತ್ತಾರೆ. ದೇವರು ಮಸೀದಿಯಲ್ಲಿದ್ದಾನೆ ಎಂದು. ಹಗಲೂರಾತ್ರಿ ಅವರು ಮಸೀದಿಯಲ್ಲಿ ಕಾಲಕಳೆಯುತ್ತಾರೆ. ಆದರೆ ಇಡೀ ಸೃಷ್ಟಿಯೆ ಮಸೀದಿ. ದೇಹ ಅದರೊಳಗಿನ ದೀಪದ ಗೂಡು. ಹೃದಯವೆ ದೀಪ. ಈ ಅಧ್ಯಾತ್ಮದ ದೀಪವನ್ನು ಒಳಗೆ ಬೆಳಗಿಸಿಕೊಂಡರೆ ಅದೇ ನಮಾಜು.

ಸ್ಥಾವರವನ್ನು ನಿರಾಕರಿಸುವ ವಚನಕಾರರನ್ನು ಇದು ನೆನಪಿಸುತ್ತದೆ. ಇದು ಎಲ್ಲ ಅನುಭಾವಿ ಪಂಥಗಳ ಮೂಲಭೂತ ತತ್ವ ಕೂಡ. ತನ್ನ ಕಾಯದ ಒಳಗೆ ಇರುವ ಸ್ವಯವನ್ನ, ಅಲ್ಲಮ ಹೇಳುವ ತನ್ನತಾನರಿವುದನ್ನು, ಯೋಗದ ಮೂಲಕ ಪಡೆದುಕೊಳ್ಳಬೇಕು ಎನ್ನುವುದನ್ನು ಅಮೀನ್ ಮತ್ತೆಮತ್ತೆ ಹೇಳುತ್ತಾನೆ. ತಾನೆ ದೈವವಾಗ ಬಯಸುವ 'ಅದ್ವೈತಿ' ಅವನು.

ನೋಡುಗನಾಗಿದ್ದೆ ನೀನು ಆದಿಸೃಷ್ಟಿಯ ದಿನ
ನೋಡುಗನಾಗಿತ್ತು ನನ್ನ ಬೆಳಕು ಕೂಡ
ಹೊಮ್ಮಿಸಿಕೊಳ್ಳುತ್ತಿತ್ತು ನನ್ನ ಬೆಳಕು ತನ್ನ
ನಿನ್ನದೇ ಕನ್ನಡಿಯಾಗಿತ್ತು ನನ್ನೊಳಗಿನ ಬೆಳಕು
ನನ್ನ ಬೆಳಕಿನಲ್ಲಿ ಇಟ್ಟೆ ನಿನ್ನ ಗುಣಗಳ, ಅಡಗಿದ ನಿಧಾನದಂತೆ
ನೀನು ನನಗಿತ್ತ ಗುಣಗಳು, ನಿನ್ನ ಗುಣಗಾನಗಳೆ
ಇಂತಿರಲು ಹೇಗೆ ಬೇರೆ ಗೆಯ್ಯಲಿ ನನ್ನನ್ನು ನಿನ್ನಿಂದ?

ಅಮೀನುದ್ದೀನನ ಈ ಪದ್ಯವನ್ನು ಅಲ್ಲಮನ ಈ ವಚನದೊಂದಿಗೆ ಇಟ್ಟು ನೋಡಬೇಕು :

ತನ್ನಲ್ಲಿ ತನ್ನ ತೋರಿ ನನ್ನಲ್ಲಿ ನನ್ನ ತೋರಿದನಾಗಿ
ನಾನು ನೀನೆಂಬುದಿಲ್ಲ ನೀನು ನಾನೆಂಬುದಿಲ್ಲ, ತಾನೇ ತಾನಾದುದು
ಬಯಲು ಬಯಲ ಕೂಡಿದ ಹಾಗೆ

ಹಲ್ಲಾಜ್ ಹೇಳಿದ, 'ಅನಲ್ ಹಕ್' ತತ್ವ ಎಂದರೆ ಇದೇ. ಬಗ್ದಾದಿನ ಹಲ್ಲಾಜ್, ಕಲ್ಯಾಣದ ಅಲ್ಲಮ, ಬಿಜಾಪುರದ ಅಮೀನ್, ಶಿಶುನಾಳದ ಶರೀಫ ಒಂದೇ ಗರಡಿಯೊಳಾಡಿದ ಮಾನಿಸರಾಗುತ್ತಾರೆ. ಯಾವತ್ತೂ ಅನುಭಾವಿಗಳ ರಚನೆಗಳಲ್ಲಿ ಒಂದು ಬಗೆಯ ಗರ್ವವಿರುತ್ತದೆ. ಈ ಅಹಂ ಮೂಲತಃ 'ನಾ ದೇವಲ್ಲದೆ ನೀ ದೇವನೇ?' ನಿಲುವಿನಿಂದ ('ಅಹಂ ಬ್ರಹ್ಮಾಸಿ' ನಿಲುವು) ಬಂದುದು. ಈ ನಿಲುವೇ ಧಾರ್ಮಿಕ ಕರ್ಮಚಾರಗಳನ್ನು ಎದುರಿಸಲು ದಿಟ್ಟತನ ಕೊಡುತ್ತದೆ. ಅಮೀನುದ್ದೀನನ್ನು ಒಂದು ವಜ್ರಕ್ಕೆ ಹೋಲಿಸಿ, ಅವನ ಸಮಕಾಲೀನ ಸೂಫಿಯೊಬ್ಬ ಪದ್ಯ ಬರೆದಿದ್ದಾನೆ.

ಅಮೀನ, ದಿಟವಾಗಿಯೂ ನೀ ಮಜ್ಜಬ್
ಮಜ್ಜಬನ ಹಾದಿಯನಾರೂ ತುಳಿಯರು
ಮಜ್ಜಬನಾರಿಗೂ ದಾರಿತೋರನು
ಹುಚ್ಚರು ಅರಸುವುದು ಹುಚ್ಚರನ್ನೆ
ಮಜ್ಜಬರಿಗೆ ಇಲ್ಲ ಶಿಷ್ಯ ಪರಂಪರೆ
ವಜ್ರಗಳಂತೆ ಅವರು.
ಬೆಳಕ ಸೂಸರು, ಬೆಳಕ ಫಲಿಸರು
ಎಲ್ಲ ತಮ್ಮೊಳಗೆ ಹುದುಗಿಸಿಕೊಳ್ಳುವರು

ಅನುಭಾವಿಗಳು ಈ ಅರ್ಥದಲ್ಲಿ ವ್ಯಕ್ತಿವಾದಿಗಳು ನಿಜ. ಆದರೆ ಶಿಷ್ಯರಹಿತರಲ್ಲ. ಅಮೀನುದ್ದೀನನ ಅಜ್ಜ ಶಾಮಿರಂಜಿ ದೊಡ್ಡ ದಖನಿ ಕವಿ. ಮಕ್ಕಾದಿಂದ ಬಿಜಾಪುರಕ್ಕೆ ಬಂದವನು. ಅಮೀನನ ಅಪ್ಪ ಶಾ ಬುರ್ಹಾನುದ್ದೀನನೂ ಒಬ್ಬ ಸೂಫಿ. ಆದರೆ

ಇವರಿಬ್ಬರಿಗಿಂತ ಅಮೀನ್ ಕ್ರಾಂತಿಕಾರಿಯಾಗಿ ಬೇರೆಯಾದನು. ದರ್ವೇಶಿ ಸೂಫಿಯಾದನು. ಇದಕ್ಕೆ ಎರಡನೇ ಇಬ್ರಾಹಿಂ ನಂತರ ಬಿಜಾಪುರದ ರಾಜಕೀಯದಲ್ಲಿ ಅಸ್ಥಿರತೆ ಉಂಟಾಗಿ ಮೂಲಭೂತವಾದಿಗಳು ಪ್ರಬಲಗೊಂಡ ಕಾರಣಗಳೂ ಇರಬೇಕು. ಕನ್ನಡ ಅನುಭಾವಿ ಪರಂಪರೆಗಳ ಜತೆ ಅವನಿಗಿದ್ದ ಸಂಬಂಧಗಳೂ ಕಾರಣವಿರಬೇಕು. ಅಮೀನನಿಗೆ ಮುಸ್ಲಿಮರಲ್ಲದ ಭಕ್ತರು-ಶಿಷ್ಯರು ಅಪಾರವಾಗಿ ಇದ್ದರು. ''ಎರಡು ಲಕ್ಷ ಬ್ರಾಹ್ಮಣರು ಒಂದು ಲಕ್ಷ ಜಂಗಮರು ಅಮೀನುದ್ದೀನನ ಬಳಿಗೆ ಬಂದರು. ರಹಸ್ಯ ಪ್ರಶ್ನೆಗಳನ್ನು ಕೇಳಿದರು. ಅವನು ಕೊಟ್ಟ ಉತ್ತರದಿಂದ ಸಂತೃಪ್ತರಾಗಿ ಅಲ್ಲೇ ಅವನ ಶಿಷ್ಯರಾದರು'' ಎಂದು ಈಟನ್ ಹೇಳುತ್ತಾನೆ. ಈ ಸಂಖ್ಯೆಯಲ್ಲಿ ಉತ್ಪ್ರೇಕ್ಷೆ ಇರಬಹುದು. ಅಮೀನ್ ಜನರನ್ನು ಮಿಶನರಿಗಳಂತೆ ಮತಾಂತರಕ್ಕೆ ಎಳಸದೆ, ಯೋಗತತ್ವಗಳಿಗಾಗಿ ದೀಕ್ಷೆ ಕೊಡುತ್ತ ನಿಜವಾದ ಸೂಫಿ ಬದುಕನ್ನು ನಡೆಸಿದ ಅನಿಸುತ್ತದೆ. ಈಹೊತ್ತುಕೂಡ ಇಡೀ ಬಿಜಾಪುರದ ಸೂಫಿಗಳಲ್ಲಿ ಲಿಂಗಾಯತ ಸಮುದಾಯಗಳನ್ನು ಅತಿ ಹೆಚ್ಚು ಆಕರ್ಷಿಸುತ್ತಿರುವುದು ಅಮೀನುದ್ದೀನನೇ. ಶಿರಹಟ್ಟಿಯ ಫಕೀರೇಶನು ಅವನ ಪ್ರಿಯ ಖಲೀಫ ಆಗಿದ್ದನು. ಅವನ ಅನೇಕ ಖಲೀಫರಲ್ಲಿ ಖ್ಯಾತರಾಗಿರದವರೆಂದರೆ–ಕೌತಾಳಂನ ಖಾದರಲಿಂಗ (ಅಲ್ಲಾವುದ್ದೀನ್ ಅಲಿ ಮಹಷೂಕ್ ರಬ್ಬಾನಿ) ಹಾಗೂ ಹೊನ್ನೂರಿನ ಹೊನ್ನೂರಸ್ವಾಮಿ (ಸರ್ಮಸ್ತ್ ಹುಸೈನಿ ಚಿಸ್ತಿ). ಬಳ್ಳಾರಿ ಸೀಮೆಯಲ್ಲಿ ನೆಲೆಸಿದ ಈ ಇಬ್ಬರು ಗುರು ಅಮೀನನಂತೆ ಲಿಂಗಾಯುತ, ಕುರುಬ, ದಲಿತ ಸಮುದಾಯಗಳಲ್ಲಿ ಜನಪ್ರಿಯರಾಗಿ ರುವರು. ಖಾದರಲಿಂಗನು ಆದವಾನಿ ಭಾಗದ ಉರುಕುಂದಿ ಈರಣ್ಣನ ಜತೆ, ಲಿಂಗ ಧಾರಣೆ ವಿಷಯದಲ್ಲಿ ಸಂಘರ್ಷಮಾಡಿ, 'ಲಿಂಗಾಯತ' ಗುರುಗಳಿಂದಲೆ ಖಾದರಲಿಂಗ ನೆಂದೂ ''ಲಿಂಗ್‌ಬಂದ್ ಜಗದ್ಗುರು'' ಎಂದೂ ಹೆಸರು ಪಡೆದವನು. ಈ ಹೊತ್ತಿಗೂ ಅವನ ವಂಶಜರು ಕಾಲಿಗೆ ಲಿಂಗಕಟ್ಟುವ ಪದ್ಧತಿಯಿದೆ.

ಶಿರಹಟ್ಟಿ ಫಕಿರೇಶನು ಶಿಶುನಾಳನಂತೆ, ಕವಿಯಲ್ಲ. ಆದರೆ ಸೂಫಿಯೊಬ್ಬನ ಶಿಷ್ಯನಾಗಿದ್ದಕ್ಕೆ ಲಿಂಗಾಯತರಿಂದ ಅವನು ಸಾಕಷ್ಟು ವಿರೋಧವನ್ನು ಎದುರಿಸಬೇಕಾಯಿತು. ''ಫಕಿರೇಶ್ವರ ಪುರಾಣ''ದ ಪ್ರಕಾರ 'ಕೆಲ ಗಣಂಗಳು ಕೆಲ ಭಕ್ತರು' ಸೇರಿ ಫಕೀರೇಶನ 'ನಂಬಿದ ಹಲವು ಜನರಂ ಕರೆದು' ಬುದ್ಧಿ ಹೇಳುತ್ತಾರೆ.

> ಹರಮತೀಯರೊಳುದಿಸಿ ಪಿತೃಗಳು
> ಕರೆದ ಪೆಸರಂ ಬಿಟ್ಟು ನಾಣ್ಚದೆ
> ತುರುಕರಿಟ್ಟ ಫಕೀರನೆಂಬಾ ನಾಮಮಂ ಪೊಂದಿ
> ನಿರುತಮುಂ ಪಸುರರುವೆಯಂ ನೆರೆ
> ಧರಿಸುತೆ ಶಿಲೇಮಾನ ಮಣಿಯಿಂ
> ಮೆರೆವನು ಮುಸಲ್ಮಾನರಂದದೆ ಕಾಣದೆ ನಿಮಗೆ ॥ (೧೫-೯)

ಆದರೆ ಜನರ ಪ್ರತಿಕ್ರಿಯೆ ಬೇರೆಯಿದೆ. ''ವೇಷಭೂಷಣಗಳೊಳದೇನುಂಟು. ಶೂಲಿ ತೊವಲಂ ಪೊದೆದನುಟ್ಟನು''; 'ಫಕೀರನೆಂಬೀ ಪೆಸರು ತುರುಕರದಾದೊಡೇನಾಯ್ತು?' ಅವನು ಆಚರಿಸುತ್ತಿರುವುದೂ ಶಿವಧರ್ಮವೇ ಎಂದು ಸಮರ್ಥಿಸಿಕೊಳ್ಳುತ್ತಾರೆ, ಪ್ರಕರಣ ಚಿತ್ರದುರ್ಗದ ಮುರುಘರಾಜೇಂದ್ರ ಗುರುವಿನ ಎದುರು ಬರುತ್ತದೆ. ಫಕೀರೇಶನ ಮೇಲಿನ ದೂರು ಸ್ವಾರಸ್ಯಕರವಾಗಿದೆ.

ತುರುಕರ
ಹೆಮ್ಮೆ ಬಹಳವಗೊಟ್ಟಿಗವನಿಂ ಧರ್ಮವಳಿದಿಹುದು
ತುರುಕರಂದದ ವೇಷವಿರುವದು
ತುರುಕರಂತಾಚಾರವುಂಟಾ
ತುರುಕರೊಡನಾಟವದು ಹೆಚ್ಚಿಹುದವನದು...॥ (೧೫-೧೯)

ಫಕೀರೇಶನಿಗೆ ಗುರುಗಳು ಬಹಿಷ್ಕಾರ ಪತ್ರಕೊಟ್ಟಾಗ, ಫಕೀರೇಶ ಪವಾಡ ಮಾಡಿ ಅವರೆಲ್ಲರನ್ನು ಸೋಲಿಸುತ್ತಾನೆ. ಅಮೀನುದ್ದೀನನೂ ತನ್ನ ವಿಚಾರಣೆಗೆಂದು ಬಂದ ಖಾಜಿಗಳನ್ನು ಸೋಲಿಸುವ ಪವಾಡ ಮಾಡುತ್ತಾನೆ. ಇಲ್ಲಿನ ಮುಖ್ಯ ಸಂಗತಿಯೆಂದರೆ ಇವರಿಗೆ ಜನರಿಂದ ಸಿಕ್ಕ ಬೆಂಬಲ.

ಫಕೀರೇಶ ಪರಂಪರೆಯು ಅಮೀನ್ ದರ್ಗಾದ ಜತೆ ಸಂಬಂಧವನ್ನು ಈಗಲೂ ಎರಡು ಸಂದರ್ಭಗಳಲ್ಲಿ ಉಳಿಸಿಕೊಂಡಿದೆ. ಹೊಸ ಸ್ವಾಮಿಯ ಪಟ್ಟಾಭಿಷೇಕ ಆಗುವಾಗ ಅಮೀನ ದರ್ಗಾದ ಗುರು ಬಂದು, ಪೇಟವಿಕ್ಕಿ ಹರಸುತ್ತಾನೆ. ಸ್ವಾಮಿ ಸತ್ತಾಗ ಬಂದು ಮುಸಲ್ಮಾನೀ ರೀತಿಯಲ್ಲಿ ಶವಸಂಸ್ಕಾರ ಮಾಡುತ್ತಾನೆ. ಶಿರಹಟ್ಟಿಯ ಎಲ್ಲ ಆಚರಣೆಗಳಲ್ಲಿ ಅಮೀನುದ್ದೀನನ ಹೆಸರನ್ನು ಜಗಾಯಿಸಲಾಗುತ್ತದೆ.

ಅನಂತರದ ಘಟ್ಟದಲ್ಲಿ ಶಿರಹಟ್ಟಿ ಪರಂಪರೆ ಅಮೀನನ ದರ್ವೇಶಿ ಸೂಫಿ ಸಂಪ್ರದಾಯ ದಿಂದ, ಆದಿಲಶಾಹಿಗಳ ದರ್ಬಾರಿ ಆಚರಣೆಗಳಿಗೆ, ಇಸ್ಲಾಮಿ ರೀತಿಗೆ ಜುಣುಗಿಕೊಂಡಂತೆ ಕಾಣುತ್ತದೆ. ಉದಾ: ಒಂಟೆ ಸಾಕುವುದು, 'ಇಸ್ಲಾಮಿ' ಶೈಲಿಯಲ್ಲಿ ಖಾನಖಾ ಕಟ್ಟುವುದು ಮುಂತಾದುವು. ಆದರೆ ಈಗ ಅದು ಮತ್ತೆ ಲಿಂಗಾಯತೀಕರಣದತ್ತ ಹೊರಳಿಕೊಂಡಿದೆ. ಫಕೀರೇಶನ ಇಸ್ಲಾಮಿಶೈಲಿಯ ಸಮಾಧಿಕಟ್ಟಡವನ್ನು ಹಳೆಯದೆಂದು ಕೆಡವಿ ಹೊಸ ಕಟ್ಟಡ ಕಟ್ಟಿದೆ. ಫಕೀರೇಶನ ಗದ್ದುಗೆ ಪೂಜೆಯ ಹೊತ್ತಲ್ಲಿ ಸಂಸ್ಕೃತ ಶಿವಾಷ್ಟಕಗಳನ್ನು ಹಾಡಲಾಗುತ್ತಿದೆ.

***ಕರ್ನಾಟಕದ ಸೂಫಿಗಳು, ೧೯೯೮, ಪ. ೭೪-೯೬***

# ೧೭. ಬೋಳಬಸವೇಶ್ವರ: ಒಂದು ಸ್ಥೂಲ ಅಧ್ಯಯನ

● ವೀರಣ್ಣ ರಾಜೂರ

ಬಸವಾದಿ ಪ್ರಮಥಪ್ರಣೀತ ವೀರಶೈವವನ್ನು ಉಜ್ವಲವಾಗಿ ಬೆಳಗಿದವರಲ್ಲಿ ತೋಂಟದ ಸಿದ್ಧಲಿಂಗ ಶಿವಯೋಗಿಗಳ ಹೆಸರು ಶಿರೋರತ್ನಪ್ರಾಯವಾದುದು. ಹದಿನಾರನೆಯ ಶತಮಾನದಲ್ಲಿ ಎಡೆಯೂರನ್ನು ಕೇಂದ್ರವಾಗಿಟ್ಟುಕೊಂಡು ನಾಡಿನ ಉದ್ದಗಲಕ್ಕೂ ಸಂಚರಿಸಿ, ಷಟ್‌ಸ್ಥಲ ತತ್ವಬೋಧೆಯ ಮೂಲಕ ಅಜ್ಞಾನತಮವನ್ನು ದೂಡುತ್ತ, ಜ್ಞಾನಸೂರ್ಯನಂತೆ ಜನಮನವನ್ನು ಬೆಳಗಿ, ಲೋಕಕಲ್ಯಾಣ ಮಣಿಹವನ್ನು ಅರ್ಥಪೂರ್ಣವಾಗಿ ಪೂರೈಸಿದ ಮಹಾತ್ಮನೀತ. ಆತನ ಆತ್ಮೀಯ ಪರಿಸರದಲ್ಲಿ ಬೆಳೆದು, ಆತ ಹರಿಸಿದ ಜ್ಞಾನಗಂಗೆಯಲ್ಲಿ ಮಿಂದು, ಆತನುಣಿಸಿದ ಜ್ಞಾನಾಮೃತವನ್ನು ಸವಿದು, ಪುನೀತರಾಗಿ, ಅದನ್ನು ಲೋಕಕ್ಕೆ ಹಂಚಿ ಬದುಕಿನ ಸಾರ್ಥಕ್ಯವನ್ನು ಮೆರೆದ ವ್ಯಕ್ತಿಗಳು ಹಲವು. ಅವರಲ್ಲಿ ಬೋಳಬಸವೇಶ್ವರನ ಹೆಸರು ಅಗ್ರಗಣ್ಯವಾದುದು.

**ಬೋಳಬಸವೇಶ್ವರ:** ಬೋಳಬಸವೇಶ್ವರ ತೋಂಟದ ಸಿದ್ಧಲಿಂಗರ ತರುವಾಯ ನಿರಂಜನಪೀಠದ ಪಟ್ಟಾಧ್ಯಕ್ಷನಾಗಿ, ಗುರುವಿನ ಹಾದಿಯಲ್ಲಿಯೇ ನಡೆದು ಆ ಪೀಠದ ಘನತೆ-ಗೌರವಗಳನ್ನು ಹೆಚ್ಚಿಸಿದ ದಿವ್ಯಾತ್ಮ. ನಿರಂಜನಪೀಠದ ಪರಂಪರೆ ಶ್ರೀಮಂತವಾದುದು. ಅದರ ಆರಂಭ, ಮೂಲಪುರುಷ, ಮುಂದೆ ಆಗಿಹೋದ ನಿರಂಜನಮೂರ್ತಿಗಳ ಹೆಸರುಗಳ ಬಗೆಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳು ತಲೆದೋರಿವೆ.[೧] ತೋಂಟದ ಸಿದ್ಧಲಿಂಗೇಶ್ವರರ ವಚನ (೮), ವಿರಕ್ತತೋಂಟದಾರ್ಯನ ಸಿದ್ಧೇಶ್ವರಪುರಾಣ, ಗುರುಸಿದ್ಧದೇವನ ಚಿದೈಶ್ವರ್ಯ ಚಿದಾಭರಣಗಳ ಪ್ರಕಾರ ಬೋಳಬಸವೇಶ್ವರನು ಹದಿನೇಳನೆಯ ಪಟ್ಟಾಧ್ಯಕ್ಷನೆನಿಸಿದರೆ[೨] ನಿರಂಜನ ವಂಶರತ್ನಾಕರದ ಪ್ರಕಾರ ೨೦ನೆಯವನಾಗಿ, ನಿರಂಜನಜಂಗಮವಂಶದರ್ಪಣದ ಪ್ರಕಾರ ೧೮ನೆಯವನಾಗಿ ಮತ್ತು ಮಹಾದೇವನ ಮಹಾಲಿಂಗೇಂದ್ರವಿಜಯದ ಪ್ರಕಾರ ೩ನೆಯವನಾಗಿ ತೋರುತ್ತಾನೆ. ಈ ಪರಂಪರೆ ಉಳಿದ ಕೃತಿಗಳಲ್ಲಿ ಅನಾದಿ ಗಣೇಶ್ವರನಿಂದ ಆರಂಭವಾದರೆ, ನಿರಂಜನವಂಶರತ್ನಾಕರದಲ್ಲಿ ಪ್ರಭುದೇವರಿಂದ, ಮಹಾಲಿಂಗೇಂದ್ರ ವಿಜಯದಲ್ಲಿ ಚೆನ್ನಬಸವಣ್ಣನಿಂದ ಆರಂಭವಾಗುತ್ತದೆ. ಎಲ್ಲ ಕೃತಿಗಳಲ್ಲಿಯೂ ಬೋಳಬಸವೇಶ್ವರನ ಹೆಸರು ತೋಂಟದ ಸಿದ್ಧಲಿಂಗರ ನಂತರ ಕಡ್ಡಾಯವಾಗಿ ಬರುವುದರಿಂದ ಈತ ಅವರ ಪ್ರಥಮ ಪಟ್ಟದ ಶಿಷ್ಯ ಎಂಬದು ನಿರ್ವಿವಾದ.

ಬೋಳಬಸವೇಶ ೭೦೧ ವಿರಕ್ತರಲ್ಲಿ ಒಬ್ಬ. ಭೂಲೋಕದಲ್ಲಿ ಅನಾಚಾರ ಹೆಚ್ಚಿ, ವೀರಶೈವಾಚಾರ ಕುಂದಲು, ಈಶ್ವರನ ಅಪ್ಪಣೆಯ ಮೇರೆಗೆ ಕೈಲಾಸದ ನಿರಂಜನ ಗಣೇಶ್ವರನು ಶ್ರೇಷ್ಠವಾದ ಏಳುನೂರು ಗಣೇಶ್ವರರನ್ನು ಕೂಡಿಕೊಂಡು, ಭೂಮಿಯಲ್ಲಿ ಸಿದ್ಧಲಿಂಗ ಎಂಬ ಹೆಸರಿನಿಂದ ಜನಿಸಿ, ಜಂಗಮಸ್ಥಲವನ್ನು ಸ್ವೀಕರಿಸಿ ಷಟ್‌ಸ್ಥಲವನ್ನು

---

೧ ವಿವರಗಳಿಗೆ ನೋಡಿ: ಪಿ. ಎಂ. ಗಿರಿರಾಜು: 'ತೋಂಟದ ಸಿದ್ಧಲಿಂಗಯತಿಗಳ ಗುರುಪರಂಪರೆ', ಬಸವ ಪಥ, ೩-೧, ಪು. ೨೫; ಆರ್. ಸಿ. ಹಿರೇಮಠ, ಸಂ.: ಷಟ್‌ಸ್ಥಲಜ್ಞಾನಸಾರಾಮೃತ, ಪ್ರಸ್ತಾವನೆ.

೨ ಇಲ್ಲಿಲ್ಲ ಬೋಳಬಸವೇಶ್ವರನ ಹೆಸರನ್ನು ಗುರುಪರಂಪರೆಯಲ್ಲಿ ಸೇರಿಸಿಲ್ಲ. ತೋಂಟದ ಸಿದ್ಧಲಿಂಗರಿಗೆ ಅದು ನಿಲ್ಲುತ್ತದೆ. ಅವರ ನಂತರದ ಅಧ್ಯಕ್ಷ ಇವನೆಂದು ಗಣಿಸಿ ಈ ಸಂಖ್ಯೆಯನ್ನು ಹೇಳಲಾಗಿದೆ.

ಉದ್ಧರಿಸಿದನು ಎಂದು ವಿರೂಪಾಕ್ಷಪಂಡಿತನ ಚೆನ್ನಬಸವಪುರಾಣದಲ್ಲಿ ಹೇಳಲಾಗಿದೆ. ಅಲ್ಲದೆ ೩೩ ಜನ ವಿರಕ್ತರ ಹೆಸರುಗಳನ್ನೂ ಅದರಲ್ಲಿ ಉಲ್ಲೇಖಿಸಲಾಗಿದೆ. ಇವರಲ್ಲಿ ಕೆಲವರ ಹೆಸರುಗಳನ್ನು ವಿರಕ್ತತೋಂಟದಾರ್ಯನ ಸಿದ್ಧೇಶ್ವರಪುರಾಣ, ಸಿದ್ಧನಂಜೇಶನ ಗುರುರಾಜ ಚಾರಿತ್ರ, ಮತ್ತು ಎಡೆಯೂರ ಶಾಸನಗಳಲ್ಲಿಯೂ ಕಾಣಬಹುದು.[೩] ಬೋಳಬಸವೇಶ್ವರನ ಹೆಸರು ಮಾತ್ರ ನಾಲ್ಕೂ ಕೃತಿಗಳಲ್ಲಿ ನಿಯತವಾಗಿ ಬರುವುದರಿಂದ ಈತ ಏಳುನೂರಾ ಒಂದು ವಿರಕ್ತರಲ್ಲಿ ತುಂಬ ಪ್ರಸಿದ್ಧನಾಗಿದ್ದ ಎಂದು ಹೇಳಬಹುದು.

**ಹೆಸರು:** ಬೋಳಬಸವೇಶ್ವರನಿಗೆ ಬೋಳಬಸವ,[೪] ಬೋಳಬಸವೇಶ,[೫] ಬೋಳಬಸವೇಶ್ವರ,[೬] ಬೋಳಬಸವರಾಜ,[೭] ಬೋಳಬಸವದೇವ,[೮] ಬೋಳಬಸವಾರ್ಯ,[೯] ಬೋಳಬಸವೇಶಾರ್ಯ,[೧೦] ಬೋಳಬಸವೇಶಾಚಾರ್ಯ,[೧೧] ಬೋಳಬಸವರಾಜದೇವರು,[೧೨] ಬೋಳಬಸವೇಶಸ್ವಾಮಿ,[೧೩] ಬೋಳಬಸವದೇಶಿಕ,[೧೪] ಬೋಳೇಶ, ಬೋಳೇಶ್ವರ,[೧೫] ನಿರಕ್ಷರ

---

೩ ವಿವರಗಳಿಗೆ ನೋಡಿ: i. ಚೆನ್ನಬಸವಪುರಾಣ, ವಿರೂಪಾಕ್ಷ ಪಂಡಿತ: ತೋಂಟದ ಸಿದ್ಧಲಿಂಗ, ಸಪ್ಪೆಯಾರ್ಯ, ಬೋಳಬಸವೇಶ ಶಿವಪೂಜೆಯಾರ್ಯ, ಉಪ್ಪಿನಹಳ್ಳಿಯಾರ್ಯ, ಗುಮ್ಮಳಾಪುರದ ವರಸಿದ್ಧಲಿಂಗೇಶ್ವರ, ಪಟ್ಟಣದದೇವರು, ಶೀಲವಂತಾರ್ಯ, ಘನಲಿಂಗಿದೇವ, ಸಿದ್ಧಮಲ್ಲೇಶ, ಬತ್ತಲೆಯದೇವ, ಬೆಡಗಿನಪರ್ವತೇಶ, ಕಂಕಣದದೇವ, ಸಂಪಗೆಯ ರಾಚವಟ್ಟದೇವರು, ಚಂದ್ರಶೇಖರ, ದೊಡ್ಡಸಿದ್ಧಲಿಂಗೇಶ್ವರ, ಸಿದ್ಧಲಿಂಗೇಶ್ವರ, ಮಳಯದೇವ, ಕೂಡಗಿಯ ಹಳ್ಳಿಯಾರ್ಯ, ಕಂಬಾಳದೇವ, ಸಿದ್ಧನಂಜೇಶ್ವರ, ಲಂಬಕರ್ಣದದೇವರು, ಎಡತೊರೆಯ ಪುರಗುರುಸಿದ್ಧವೀರಣ್ಣೊಡೆಯರು, ಚಿಕ್ಕಮಲ್ಲೇಶ, ಮದ್ದೇಶ್ವರ, ಸುರಗಿಯಾರ್ಯ, ಶಾಂತಮಲ್ಲಿಕಾರ್ಜುನ, ಜಿಗುನಿಯ ಮರುಳದೇವರು, ಜೋಲಿಯ ಬಸವೇಶ್ವರ, ರಾಚವಟ್ಟಿ, ಕೋರಿಯ ಸಿದ್ಧಬಸವೇಶ್ವರ, ಹಿರಣ್ಯಾರ್ಯ, ಚೆನ್ನಮಲ್ಲೇಶ್ವರ.

ii. ಸಿದ್ಧೇಶ್ವರಪುರಾಣ, ವಿರಕ್ತತೋಂಟದಾರ್ಯ: ತೋಂಟದ ಸಿದ್ಧಲಿಂಗ, ಸಪ್ಪೆಯ ಯತೀಶ, ಬೋಳಬಸವೇಶ, ಉಪ್ಪಿನಹಳ್ಳಿಯಯ್ಯ, ಗುಮ್ಮಳಾಪುರ ಸಿದ್ಧಲಿಂಗೇಶ, ಪಟ್ಟಣದ ದೇವರು, ಶೀಲವಂತೇಶ್ವರ, ಘನಲಿಂಗಿದೇವ, ಸುತ್ತೂರ ಸಿದ್ಧಮಲ್ಲೇಶ, ಬತ್ತಲೆಯದೇಸಿಕ, ಹುಚ್ಚಪರ್ವತೇಶ, ಕಂಕಣದದೇವರು, ರಾಚವೀಟಿಯದೇವರು, ಗುರುಚಂದ್ರಶೇಖರ, ದೊಡ್ಡಸಿದ್ಧೇಶ, ನಂಜದೇಶಿಕೇಂದ್ರ, ಗಟ್ಟಿಸಿದ್ಧಯ್ಯ.

iii. ಎಡೆಯೂರ ಶಾಸನ: ತೋಂಟದ ಸಿದ್ಧಲಿಂಗ, ಸಪ್ಪೆದೇವರು, ಬೋಳಬಸವರಾಜದೇವರು, ಉಪ್ಪಿನಹಳ್ಳಿಯಸ್ವಾಮಿ, ಗುಮ್ಮಳಾಪುರದ ಸಿದ್ಧಲಿಂಗದೇವರು, ಶೀಲವಂತದೇವರು, ಸಿದ್ಧದೇವ, ಕೊಡಗಿಯಹಳ್ಳಿಯದೇವರು, ನಂಜೇದೇವರು, ರೇವಣಸಿದ್ಧದೇವರು.

iv. ಗುರುರಾಜಚಾರಿತ್ರ, ಸಿದ್ಧನಂಜೇಶ: ತೋಂಟದ ಸಿದ್ಧಲಿಂಗ, ಸಪ್ಪೆಯಯ್ಯ, ಬೋಳಬಸವೇಶ, ಸಿದ್ಧಲಿಂಗೇಶ, ಮಳೆಯ ಮಲ್ಲೇಶ.

೪ ಮಹಾಲಿಂಗೇಂದ್ರವಿಜಯ.

೫ ಸಿದ್ಧೇಶ್ವರ ಪುರಾಣ, (ವಿತೋಂ), ಚೆನ್ನಬಸವಪುರಾಣ, ಗುರುರಾಜಚಾರಿತ್ರ, ಸಿದ್ಧಲಿಂಗ ಸಾಂಗತ್ಯ, ಮಹಾಲಿಂಗೇಂದ್ರವಿಜಯ, ಚತುರಾಚಾರ್ಯಪುರಾಣ;

೬ ಚೆಪುಶೂಸಂ ಗುಂಗೂ, ಷಸಾಜೆವ ಟೀಕೆ; ಶೀಲವಂತಯ್ಯನ ತ್ರಿವಿಧಿವ್ಯಾಖ್ಯಾನ, ಮಹಾಲಿಂಗೇಂದ್ರ ವಿಜಯ, ಸಿಪು (ವಿತೋಂ).

೭ ಸಿಪು (ವಿತೋಂ).

೮ ಸಿಪು (ವಿತೋಂ).

೯ ಶೂಸಂ (ಗೂ).

೧೦ ಶೂಸಂ (ಗೂ).

೧೧ ಶೂಸಂ (ಗುಂ).

೧೨ ಎಡೆಯೂರ ಶಾಸನ.

೧೩ ಮಹಾಲಿಂಗೇಂದ್ರ ವಿಜಯ.

೧೪ ಶೂಸಂ (ಗೂ).

೧೫ ಇಮ್ಮಡಿ ಚಿಕ್ಕಭೂಪಾಲನ ಸಾಂಗತ್ಯ, ೧-೫೪.

ಬೋಳಬಸವೇಶ್ವರ,[೧೬] ನಿಜಬೋಳಬಸವ,[೧೭] ಶಿವಪೂಜೆಯಾರ್ಯ,[೧೮] ಶಿವಪೂಜೆಯಾರ್ಯನೆಂದೆನಿಪ ಬೋಳಬಸವೇಶ[೧೯] ಎಂಬ ನಾಮಾಂತರಗಳಿವೆ. ಈತನ ಹೆಸರು ಉಲ್ಲೇಖಿಸುವ ಮೊದಲ ಕೃತಿಯೆಂದರೆ ಗುಬ್ಬಿಯ ಮಲ್ಲಣಾರ್ಯನ (೧೫೩೦) ಭಾವಚಿಂತಾರತ್ನ. ಅದರಲ್ಲಿ ಈತನಿಗೆ ಶಿವಪೂಜೆಯಾರ್ಯನೆಂದು ಕರೆಯಲಾಗಿದೆ.[೨೦] ಈ ಶಿವಪೂಜೆಯಾರ್ಯನೇ ಬೋಳಬಸವೇಶನೆಂಬುದಕ್ಕೆ ಚೆನ್ನಬಸವಪುರಾಣದ 'ಶಿವಪೂಜೆಯಾರ್ಯನೆಂದೆನಿಪ ಬೋಳಬಸವೇಶ'[೨೧] ಎಂಬ ಹೇಳಿಕೆ ಸ್ಪಷ್ಟೀಕರಣ ನೀಡುತ್ತದೆ. ನಿರಂಜನ ವಂಶರತ್ನಾಕರ ಮತ್ತು ಮಹಾಲಿಂಗೇಂದ್ರವಿಜಯಗಳಲ್ಲಿ ಈತನನ್ನು 'ನಿರಕ್ಷರ ಬೋಳ ಬಸವೇಶ್ವರ' ಎಂದು ಕರೆದಿದೆ. ಈತನಿಗೆ ಈ ಹೆಸರು ಬರಲು ಕಾರಣವನ್ನು ಮಹಾಲಿಂಗೇಂದ್ರವಿಜಯದಲ್ಲಿ ಕೊಡಲಾಗಿದೆ.[೨೨]

ಚಿಕ್ಕಂದಿನಲ್ಲಿ ಈತನಿಗೆ ಮಾತು ಬರುತ್ತಿರಲಿಲ್ಲವಾದುದರಿಂದ 'ನಿರಕ್ಷರ'ನೆಂದೂ ಬಹಳ ಬೋಳೇ (ಸಾಧು) ಸ್ವಭಾವದವನಾದುದರಿಂದ 'ಬೋಳ'[೨೩]ನೆಂದೂ ಭಕ್ತಿ ಭಾಂಡಾರಿಯಾದುದರಿಂದ 'ಬಸವ'ನೆಂದೂ–ಹೀಗೆ ಎಲ್ಲ ಸೇರಿ 'ನಿರಕ್ಷರ ಬೋಳಬಸವೇಶ'ನೆಂಬ ಅನ್ವರ್ಥಕನಾಮ ಪ್ರಾಪ್ತವಾಯಿತಂತೆ. ತೋಂಟದ ಸಿದ್ಧಲಿಂಗರ ಕೃಪೆಯಿಂದ ಈ ನಿರಕ್ಷರಿಗೆ ಅಕ್ಷರಜ್ಞಾನ ಬರುತ್ತದೆ. ಅಂದಿನಿಂದ ಈತ ಅವರ ಶಿಷ್ಯತ್ವ ವಹಿಸಿ, ಅವರ ಸನ್ನಿಧಿಯಲ್ಲಿಯೇ ಇದ್ದು, ನಿತ್ಯ ಅವರ ಶಿವಪೂಜೆಗೆ ವಸ್ತುಗಳನ್ನು ಅಣಿಮಾಡುವ ಪವಿತ್ರಕಾರ್ಯವನ್ನು ವಹಿಸಿಕೊಂಡಿರಬೇಕು.[೨೪] ಈ ಕಾರಣದಿಂದ ಈತನಿಗೆ 'ಶಿವಪೂಜೆಯಾರ್ಯ' ಎಂಬ ಹೆಸರು ರೂಢಿಗೊಂಡಿರಬೇಕು. ಕಾಲಾಂತರದಲ್ಲಿ ಈತನು ಮಹಾಜ್ಞಾನಿಯಾಗಿ ಧರ್ಮತತ್ವಬೋಧೆಗೆ ತೊಡಗಿದಾಗ ಈ ಹೆಸರು ಅಪ್ರಚಲಿತವಾಗಿ, ನಿರಕ್ಷರ ಬೋಳಬಸವೇಶ ಎಂಬ ಹೆಸರಿನಲ್ಲಿಯ 'ನಿರಕ್ಷರ' ಎಂಬ ವಿಶೇಷಣವೂ ಮಾಯವಾಗಿ ಕೇವಲ 'ಬೋಳಬಸವೇಶ' ಎಂಬುದು ಮಾತ್ರ ಉಳಿದುಕೊಂಡಿರಬೇಕು. ಅದನ್ನೇ ಮುಂದೆ ಬಂದ ಕವಿಗಳೆಲ್ಲ ಬಳಸುತ್ತ ಬಂದಿರಬೇಕು. ಮಹಾಂತಸ್ವಾಮಿಯ ಸಾಂಧ್ಯದಲ್ಲಿ ಈತನನ್ನು 'ನಿಜಬೋಳಬಸವ' ಎಂದು ಕರೆಯಲಾಗಿದೆ.[೨೫] ಇದು ಈತನ ಸತ್ಯನಿಷ್ಠೆಗೆ ಅನುಗುಣವಾಗಿ ಬಂದ ಹೆಸರಾಗಿರಬೇಕು.

ಇನ್ನು ಈತನ ಹೆಸರಿಗೆ ಹತ್ತಿದ ಆರ್ಯ, ಆಚಾರ್ಯ, ದೇವ, ರಾಜ, ಈಶ, ಈಶ್ವರ, ಸ್ವಾಮಿ,

---

೧೬ ನಿರಂಜನವಂಶರತ್ನಾಕರ, ಮಹಾಲಿಂಗೇಂದ್ರ ವಿಜಯ.

೧೭ ಮಹಾಂತಸ್ವಾಮಿಯಸಾಂಧ್ಯ.

೧೮ ಭಾವಚಿಂತಾರತ್ನ.

೧೯ ಚೆನ್ನಬಸವಪುರಾಣ;.

೨೦ ಭಾವಚಿಂತಾರತ್ನಸಂಗ್ರಹ, ೧-೫, ೧-೯.

೨೧ ಚೆನ್ನಬಸವಪುರಾಣ, ೬೩-೪೯.

೨೨ ಎಲ್. ಬಸವರಾಜು, ಸಂ.: ಮಹಾಲಿಂಗೇಂದ್ರ ವಿಜಯ, ೧೫-೪.

೨೩. ಶಿವನಿಗೆ 'ಬೋಳೇಶಂಕರ' ಎಂದು ಕರೆಯಲಾಗುತ್ತದೆ ಎಂಬುದನ್ನು ಇಲ್ಲಿ ಗಮನಿಸಬೇಕು.

೨೪ ಇಲ್ಲವೆ ಆತ ಮೊದಲಿನಿಂದಲೂ ಶಿವಪೂಜೆಯನ್ನು ನಿತ್ಯನಿಷ್ಠೆಯಿಂದ ಮಾಡುತ್ತ ಬಂದುದರಿಂದ ಆತನಿಗೆ ಈ ಹೆಸರು ಬಂದಿರಲೂಬಹುದು.

೨೫ ಎಸ್. ಶಿವಣ್ಣ, ಸಂ.: ಮುಳಗುಂದ ಶಾಂತವೀರಸ್ವಾಮಿಗಳ ಸ್ತೋತ್ರಕರಂಡ, ಪು. ೩: ಮಹಾಂತಸ್ವಾಮಿಗಳು ನಿರೂಪಿಸಿದ ಸಾಂಧ್ಯ, ನುಡಿ ೧೧.

ದೇಶಿಕ ಎಂಬುವು ಈತನ ಮಹಾನ್ ವ್ಯಕ್ತಿತ್ವಕ್ಕೆ ಸಲ್ಲಿಸಿದ ಗೌರವಸೂಚಿ ಪದಗಳಾಗಿವೆ.[೨೬]

**ಸ್ಥಳ:** ಗುಬ್ಬಿಯ ಮಲ್ಲಣಾರ್ಯ ತನ್ನ ಭಾವಚಿಂತಾರತ್ನದಲ್ಲಿ ಶಿವಪೂಜೆಯಾರ್ಯನನ್ನು ಕುರಿತು–''ಶಿವನ ಕಲ್ಯಾಣದುತ್ಸವದ ನಾಗವಲ್ಲಿಯ ಮೆರೆವ ಶಿವಪೂಜೆಯಾರ್ಯ''[೨೭] ''ಕಥೆಯರಿವ ಯತಿ ನಾಗವಲ್ಲಿಯರು ಶಿವಪೂಜೆಯಾರ್ಯ''[೨೮] ಎಂದು ಹೇಳಿದ್ದಾನೆ. ಇಲ್ಲಿ ಬರುವ 'ನಾಗವಲ್ಲಿ' ಎಂಬುದು ಶಿವಪೂಜೆಯಾರ್ಯನ ಸ್ಥಳವಾಗಿರಬೇಕು. ಇದು ಚಾಮರಾಜ ನಗರ ತಾಲೂಕಿಗೆ ಸೇರಿದ ಒಂದು ಊರು. ಇಲ್ಲಿ ದೊರೆತ ಒಂದು ಶಾಸನದಲ್ಲಿ[೨೯] 'ಶಿವಭಕ್ತಿಗೆ ಕಲ್ಯಾಣವೆನಿಸಿದ ನಾಗವಲ್ಲಿ' ಎಂದು ಈ ಊರನ್ನು ವರ್ಣಿಸಲಾಗಿದೆ. ಭಾವಚಿಂತಾರತ್ನದಲ್ಲಿ ವರ್ಣಿತವಾದ 'ಶಿವನ ಕಲ್ಯಾಣದುತ್ಸವದ ನಾಗವಲ್ಲಿ' ಮತ್ತು ಶಾಸನದಲ್ಲಿ ಬಣ್ಣಿಸಿದ 'ಶಿವಭಕ್ತಿಗೆ ಕಲ್ಯಾಣವೆನಿಸಿದ ನಾಗವಲ್ಲಿ' ಎರಡೂ ಒಂದೇ ಎಂಬುದರಲ್ಲಿ ಸಂಶಯವಿಲ್ಲ.[೩೦] ಶಿವಭಕ್ತಿಗೆ ಆಗರವೆನಿಸಿದ ಈ ಊರಲ್ಲಿ 'ಬಸವೇಶ್ವರರ ಮಹತ್ವವನ್ನು ಶರಣರಿಗೆ ತಿಳಿಸುವುದರಲ್ಲಿ ನಿಪುಣನೆನಿಸಿ ತನ್ನ ವಚನದಿಂದಲೂ ಭಕ್ತಿಯಿಂದಲೂ ಕೀರ್ತಿಯನ್ನು ಗಳಿಸಿದ್ದ ಯತಿಯಾಗಿದ್ದ–ಶಿವಪೂಜೆಯಾರ್ಯ–ಎಂಬುದು ಮಲ್ಲಣಾರ್ಯನ ಹೇಳಿಕೆ.' ಆದರೆ ಭಾವಚಿಂತಾರತ್ನಕ್ಕೆ ಟೀಕೆಯನ್ನು ಬರೆದ ಮರಿಸಿದ್ಧಲಿಂಗದೇಶಿಕ ಅಥವಾ ಪಟ್ಟುಗಂಬಳಿಯ ಸಿದ್ಧಲಿಂಗ (೧೭೪೧)–ಈತನು 'ಗಿರಿಜಾಕಲ್ಯಾಣ ಕೃತಿಯನ್ನು ನಾಗವಲ್ಲಿಯಲ್ಲಿ ಪ್ರತಿವರ್ಷವೂ ಮೆರವಣಿಗೆ ಮಾಡಿಸುತ್ತಿದ್ದ ಒಬ್ಬ ಗುರು' ಎಂದು ಹೇಳುತ್ತಾನೆ.[೩೧] ಅಂತೂ ಶಿವಪೂಜೆಯಾರ್ಯನ ಮೂಲಸ್ಥಳ ನಾಗವಲ್ಲಿ ಎಂಬುದು ಸ್ಪಷ್ಟ.[೩೨]

ಗುರುರಾಜಚಾರಿತ್ರದಲ್ಲಿ ಬೋಳಬಸವೇಶ್ವರನು ಬಿಜ್ಜಾವರದಲ್ಲಿ ಮಹಿಮೆಯನ್ನು ಮೆರೆಯುತ್ತ ಇದ್ದು ಅಲ್ಲಿಯೇ ಐಕ್ಯವಾದ ಎಂದು ಹೇಳಿದರೆ, ವಿರಕ್ತತೋಂಟದಾರ್ಯನ ಸಿದ್ಧೇಶ್ವರಪುರಾಣದಲ್ಲಿ ಈತ ಕಗ್ಗೆರೆಯಲ್ಲಿ ಸಿದ್ಧಲಿಂಗರಿಂದ ಷಟ್‌ಸ್ಥಲಬೋಧೆ ಮಾಡಿಸಿಕೊಂಡ ಎಂದು, ನಿರಂಜನವಂಶರತ್ನಾಕರದಲ್ಲಿ ಈತ ಎಡೆಯೂರಿನಲ್ಲಿ ಭಕ್ತಿಯಿಂದ ಪೂಜೆಗೊಳ್ಳುತ್ತಿದ್ದು ಮಧುಗಿರಿಯಲ್ಲಿ ಐಕ್ಯವಾದ ಎಂದು, ಇಮ್ಮಡಿ ಚಿಕ್ಕಭೂಪಾಲನ ಸಾಂಗತ್ಯದಲ್ಲಿ ಈತ ಬಿಜ್ಜಾವರದಲ್ಲಿ ಮುಮ್ಮಡಿ ಚಿಕ್ಕಭೂಪಾಲನಿಗೆ ಪಟ್ಟಗಟ್ಟಿದ ಎಂದು, ಮಹಾಲಿಂಗೇಂದ್ರ

---

೨೬ ವೀರಶೈವಸಾಹಿತ್ಯ ಚರಿತ್ರೆಯಲ್ಲಿ 'ನಿರ್ವಾಣಿ ಬೋಳೇಶ' ಸಂಪಾದನೆಯ ಬೋಳಬಸವೇಶ'–ಎಂಬ ಇಬ್ಬರು ವ್ಯಕ್ತಿಗಳು ಪ್ರಸಿದ್ಧರಾಗಿದ್ದಾರೆ. ಇವರು ಬೋಳಬಸವೇಶ್ವರನಿಂದ ಭಿನ್ನರು. ನಿರ್ವಾಣಿ ಬೋಳೇಶ ನೂರೊಂದು ವಿರಕ್ತರಲ್ಲಿ ಒಬ್ಬನಾಗಿ ಸ್ವರವಚನಗಳನ್ನು ರಚಿಸಿದ್ದಾನೆ–ನೋಡಿ: ವೀರಣ್ಣ ರಾಜೂರು, ಸಂ.: ಶಿವಯೋಗ ಪ್ರದೀಪಿಕೆ, ಪ್ರಸ್ತಾವನೆ, ಪು. ii; ಸಂಪಾದನೆಯ ಬೋಳಬಸವೇಶನು ಬೋಳಬಸವನ ಶಿಷ್ಯಪರಂಪರೆಗೆ ಸೇರಿದ ಸಂ. ಸಿದ್ಧವೀರಣ್ಣನ ಶಿಷ್ಯನಾಗಿದ್ದಾನೆ. ಈತ ಬಸವಸ್ತೋತ್ರದ ವಚನ, ಷಟ್‌ಸ್ಥಲ ಬ್ರಹ್ಮಾನಂದ ವಿರಕ್ತಚಾರಿತ್ರ, ಸಂಪಾದನೆಯ ವಚನಗಳು ಎಂಬ ಕೃತಿಗಳನ್ನು ಸಂಯೋಜಿಸಿದ್ದಾನೆ–ನೋಡಿ: ಎಂ. ಎಂ. ಕಲಬುರ್ಗಿ, ಸಂ.: ಬಸವಸ್ತೋತ್ರದ ವಚನಗಳು, ಪು. xiii.

೨೭ ಸಿ. ಮಹಾದೇವಪ್ಪ, ಸಂ.: ಭಾವಚಿಂತಾರತ್ನ ಸಂಗ್ರಹ, ೧-೫.

೨೮ ಅದೇ, ೧-೯

೨೯ ಎ. ಕ., ಸಂ. ೪ (ಹೊಸ ಆವೃತ್ತಿ), ೧೯೭೫, ಸಂ. ೭೪, ಪು. ೧೨೮

೩೦ ಇದನ್ನು ಪ್ರೊ|| ಸಿ. ಮಹಾದೇವಪ್ಪನವರು ಗುರುತಿಸಿದ್ದಾರೆ. ಸಿದ್ಧಲಿಂಗಶಿವಯೋಗಿ, ಪು. ೧೦೪

೩೧ ಭಾವಚಿಂತಾರತ್ನ ಸಂಗ್ರಹ, ಅನುಬಂಧ, ಪು. ೯೮

೩೨ ತೋಂಟದ ಸಿದ್ಧಲಿಂಗರು ಗುರುಗೋಸಲ ಬಸವೇಶ್ವರರಿಂದ ದೀಕ್ಷೆ ಪಡೆದುದು ಇದೇ ಚಾಮರಾಜನಗರ ತಾಲೂಕಿಗೆ ಸೇರಿದ ಹರದನಹಳ್ಳಿಯಲ್ಲಿ ಎಂಬುದನ್ನು ಗಮನಿಸಬೇಕು.

ವಿಜಯದಲ್ಲಿ ಈತ ಮದ್ದಿಗಿರಿಯಲ್ಲಿ ಐಕ್ಯನಾದ ಎಂದು ತಿಳಿಸಲಾಗಿದೆ.

ಈ ಎಲ್ಲ ಅಭಿಪ್ರಾಯಗಳನ್ನು ಕ್ರೋಡಿಕರಿಸಿ ಹೀಗೆ ಹೇಳಬಹುದು: ಬೋಳ ಬಸವೇಶ್ವರ ಮೂಲತಃ ನಾಗವಳ್ಳಿಯವನಾಗಿದ್ದು, ನಂತರ ಸಿದ್ಧಲಿಂಗರ ಶಿಷ್ಯತ್ವ ವಹಿಸಿ ಎಡೆಯೂರಿಗೆ ಬಂದಿರಬೇಕು. ಅಲ್ಲಿ ಅವರಿಂದ ಷಟ್‌ಸ್ಥಲಬೋಧೆ ಪಡೆದು ದೇಶಸಂಚಾರ ಕೈಕೊಂಡು ಮುಂದೆ ಅವರ ಶಿಷ್ಯರಾದ ಮಹಾನಾಡಪ್ರಭುಗಳ ರಾಜಧಾನಿ ಬಿಜ್ಜಾವರಕ್ಕೆ ಬಂದು ರಾಜಗುರುವಾಗಿ, ಮದ್ದಗಿರಿಯಲ್ಲಿ ನಿಂತು ವೀರಶೈವ ತತ್ವಪ್ರಚಾರ, ರಾಜಕಾರ್ಯ ಎರಡನ್ನೂ ನೆರವೇರಿಸಿ ಅಲ್ಲಿಯೇ ಐಕ್ಯವಾಗಿರಬೇಕು.

ಬೋಳಬಸವೇಶ್ವರನ ಐಕ್ಯಸ್ಥಳವನ್ನು ತಿಳಿಸುವ ಕೃತಿಗಳಲ್ಲಿ ಏಕಾಭಿಪ್ರಾಯವಿಲ್ಲ. ಗುರುರಾಜಚಾರಿತ್ರ, ಬಿಜ್ಜಾವರ ಎಂದು ಹೇಳಿದರೆ, ನಿರಂಜನವಂಶರತ್ನಾಕರ ಮತ್ತು ಮಹಾಲಿಂಗೇಂದ್ರವಿಜಯ ಮದ್ದಿಗ್ರಿ ಎಂದು ಹೇಳುತ್ತವೆ. ಆದರೆ ಇಂದು ಈತನ ಗದ್ದುಗೆ ಇರುವುದು ಸಿದ್ಧಾಪುರದಲ್ಲಿ. ಇದು ಈ ರಾಜರ ಪರಮಗುರುವಾದ ಸಿದ್ಧಲಿಂಗೇಶ್ವರ ಹೆಸರಿನಲ್ಲಿ 'ಸಿದ್ಧಲಿಂಗಪುರ'[೩೩] ಎಂಬ ಹೆಸರಿನಿಂದ ಕಟ್ಟಿಸಿದ ಊರೆಂದು ತಿಳಿದುಬರುತ್ತದೆ.[೩೪] ಬಿಜ್ಜಾವರ-ಮದ್ದಗಿರಿ-ಸಿದ್ಧಾಪುರ—ಈ ಮೂರು ಊರುಗಳು ಒಂದೇ ಸೀಮೆಯಲ್ಲಿ ಇದ್ದು, ಹಿಂದೆ ಒಂದೇ ವಿಸ್ತರಣಕ್ಕೆ ಒಳಪಟ್ಟವುಗಳಾಗಿರಬೇಕು.[೩೫]

**ಕಾಲ:** ಇತ್ತೀಚಿನ ಹೊಸ ಆಧಾರಾಂಶಗಳ ಹಿನ್ನೆಲೆಯಲ್ಲಿ ತೋಂಟದ ಸಿದ್ಧಲಿಂಗರ ಜೀವಿತಕಾಲವನ್ನು ೧೬ನೆಯ ಶತಮಾನದ ಉತ್ತರಾರ್ಧವೆಂದು ನಿರ್ಧರಿಸಲಾಗಿದೆ.[೩೬] ಇದರಿಂದ ಅವರ ಪ್ರಥಮ ಶಿಷ್ಯನೆನಿಸಿದ ಬೋಳಬಸವೇಶ್ವರನ ಕಾಲವೂ ಸಹಜವಾಗಿ ಈಚೆಗೆ ಸರಿದುಬರುತ್ತದೆ. ಬೋಳಬಸವೇಶ್ವರನನ್ನು ಉಲ್ಲೇಖಿಸುವ, ಈಗ ಉಪಲಬ್ಧವಾದ ಪ್ರಥಮ ಆಕರವೆಂದರೆ ೧೫೧೩ರಲ್ಲಿ ರಚಿತವಾದ ಗುಬ್ಬಿಯ ಮಲ್ಲಣಾರ್ಯನ ಭಾವಚಿಂತಾರತ್ನ. ಇದರಿಂದ ಬೋಳಬಸವೇಶ್ವರ (ಶಿವಪೂಜೆಯಾರ್ಯ) ಇದಕ್ಕಿಂತ ಪೂರ್ವದಲ್ಲಿ ಇದ್ದನೆಂಬುದು ಖಚಿತ.

ಇಮ್ಮಡಿ ಚಿಕ್ಕಭೂಪಾಲನ ಸಾಂಗತ್ಯ ಬೋಳಬಸವೇಶ್ವರನ ಕಾಲನಿರ್ಧಾರಕ್ಕೆ ಆಧಾರವಾದ ಮತ್ತೊಂದು ಮಹತ್ವದ ಕೃತಿ. ಬಿಜ್ಜಾವರದ ಮಹಾನಾಡಪ್ರಭುಗಳ ಇತಿಹಾಸದ ಮೇಲೆ ಬೆಳಕುಚೆಲ್ಲುವ ಇದರಲ್ಲಿ ಬೋಳ ಬಸವೇಶ್ವರ ಈ ಅರಸರಿಗೆ ರಾಜಗುರುವಾಗಿದ್ದನೆಂಬ ಸಂಗತಿ ವ್ಯಕ್ತವಾಗಿದೆ. ಈ ಕೃತಿಯ ನಾಯಕ ಇಮ್ಮಡಿ ಚಿಕ್ಕಭೂಪಾಲ ಮತ್ತು ಅವನ ಮಗ ತೋಟೇಂದ್ರ ಸು. ೧೫೫೪ರಲ್ಲಿ ನಡೆದಿರಬಹುದಾದ ಹರವೆ ಕಾಳಗದಲ್ಲಿ ಮಡಿಯುತ್ತಾರೆ. ಆಗ ಇಮ್ಮಡಿ ಚಿಕ್ಕಭೂಪಾಲನ ಎರಡನೆಯ ಮಗ ಸಪ್ಪೇಂದ್ರ ಅಥವಾ ಮುಮ್ಮಡಿ

---

೩೩. ಈ ಊರು ಕಟ್ಟಿದ ಸ್ಥಳ ಮದ್ದಗಿರಿ ಸರಹದ್ದಿನಲ್ಲಿ ಇದ್ದಿರಬೇಕು. ಬೋಳಬಸವರು ಐಕ್ಯರಾದ ನಂತರ ಊರು ನಿರ್ಮಾಣವಾಗಿರಬೇಕು. ಹೀಗಾಗಿ ಮೊದಲು ಮದ್ದಗಿರಿಯಲ್ಲಿದ್ದ ಅವರ ಸಮಾಧಿ, ನಂತರ ಸಿದ್ಧಾಪುರದ ವಲಯಕ್ಕೆ ಒಳಪಟ್ಟಿರಬೇಕು.

೩೪. ಜಿ. ಶಿವಮೂರ್ತಿಶಾಸ್ತ್ರಿ: 'ಬಿಜ್ಜಾವರ ಮತ್ತು ಸಿದ್ಧಾಪುರ', ಕಭಾ. ೮-೨, ಪು. ೫೯-೬೪

೩೫. ಬಿಜ್ಜಾವರದಿಂದ ಮದ್ದಗಿರಿ ೩ ಮೈಲು ದೂರದಲ್ಲಿದ್ದರೆ, ಸಿದ್ಧಾಪುರ ಮದ್ದಗಿರಿಯಿಂದ ೨ ಮೈಲು ದೂರದಲ್ಲಿದೆ.

೩೬. ಎಂ. ಎಂ. ಕಲಬುರ್ಗಿ: 'ತೋಂಟದ ಸಿದ್ಧಲಿಂಗಯತಿಗಳ ಕಾಲ', ಮಾರ್ಗ, ಸಂ. ೧, ಪು. ೩೮೨-೩೮೫

ಚಿಕ್ಕಭೂಪಾಲನಿಗೆ ಬೋಳಬಸವೇಶ್ವರನು ಪಟ್ಟಗಟ್ಟಿ ಹರಸುತ್ತಾನೆ.[೩೭] ಇದು ೧೫೯೪ರಲ್ಲಿ ಬೋಳಬಸವೇಶ್ವರ ಇನ್ನೂ ಜೀವಿಸಿದ್ದನೆಂಬುದಕ್ಕೆ ಸಾಕ್ಷಿ.

ಸಿದ್ಧನಂಜೇಶ ತನ್ನ ಗುರುರಾಜ ಚಾರಿತ್ರದಲ್ಲಿ ''.....ಶ್ರೀ ಕೈಲಾಸಪುರದ ಬಾಗಿಲೊಳು ತಮ್ಮಯ ಪಾದಸೇವನಾತುರನು ಬಿಜ್ಜಾವರದ ಗೌಡ ತೋಂಟನ ತಡೆದುಮಿರ್ದಪರು, ನಾವು ಪೋಗಿ ಬಿಡಿಸಿ ಕರೆದೊಯ್ಯುವೇಳ್ಕೆಂದು ಸರ್ವರೊಳುಸುರ್ದು ಪೊಡವಿ ಬೆರಗಾಗಲಾ ಶಿವಸಮಾಧಿಯೊಳೆಯ್ದಿ ಮೃಡನ ಸನ್ನಿಧಿಗೆ ಕರೆದೊಯ್ದು ಮೋಕ್ಷವನಿತ್ತ ಪ್ರತ್ಯಕ್ಷ ಶಿವಮೂರ್ತಿಯು''[೩೮] ಎಂದು ಬೋಳಬಸವನನ್ನು ಕುರಿತು ಹೇಳಿದ್ದಾನೆ. ಇಲ್ಲಿ ಉಲ್ಲೇಖಗೊಂಡ ಬಿಜ್ಜಾವರದ ಗೌಡ ತೋಂಟನೆಂದರೆ ಇಮ್ಮಡಿ ಚಿಕ್ಕಭೂಪಾಲನ ಮಗ ತೋಟೇಂದ್ರ ಎಂಬುದು ಸ್ಪಷ್ಟ. ಇವನು ತನ್ನ ತಂದೆಯ ಜೊತೆಯಲ್ಲಿ ವೈರಿಗಳೊಡನೆ ಹೋರಾಡಿ ಹರವೆ ಕಾಳಗದಲ್ಲಿ ಮಡಿದ ಎಂಬ ವಿಷಯ ಇಮ್ಮಡಿ ಚಿಕ್ಕಭೂಪಾಲನ ಸಾಂಗತ್ಯದಲ್ಲಿ ಉಕ್ತವಾಗಿದೆ ಎಂಬುದನ್ನು ಮೇಲೆ ಉಲ್ಲೇಖಿಸಲಾಗಿದೆ. ಈತನನ್ನು ಕೈಲಾಸಪುರದ ಬಾಗಿಲಲ್ಲಿ ತಡೆಯಲು ಬೋಳಬಸವೇಶ್ವರನು ಶಿವಸಮಾಧಿಯನ್ನು ಹೊಂದಿ ಹೋಗಿ ಬಿಡಿಸಿ ಅವನನ್ನು ಮೃಡನ ಸನ್ನಿಧಿಗೆ ಕರೆದೊಯ್ದು ಮೋಕ್ಷವೀಯುತ್ತಾನೆ. ಅಂದರೆ ತೋಟೇಂದ್ರ ತೀರಿದ ಕೆಲವೇ ದಿನಗಳಲ್ಲಿ ಬೋಳಬಸವೇಶ್ವರನೂ ಐಕ್ಯನಾದನು ಎಂಬ ಧ್ವನಿ ಇಲ್ಲಿ ಅಡಗಿರುವಂತೆ ಕಾಣುತ್ತದೆ. ಇದರಿಂದ ಬೋಳಬಸವೇಶ್ವರನು ತಪ್ಪೇಂದ್ರನಿಗೆ ಪಟ್ಟಗಟ್ಟಿ ಸ್ವಲ್ಪೇ ದಿನಗಳಲ್ಲಿ ಅಂದರೆ ೧೫೯೪ರಲ್ಲಿಯೇ ಶಿವಸಮಾಧಿಯನ್ನು ಹೊಂದಿದನು ಎಂದು ಹೇಳಬೇಕಾಗುತ್ತದೆ. ಈ ಆಧಾರಗಳ ಮೇಲಿಂದ ಬೋಳಬಸವೇಶ ೧೫೧೩ಕ್ಕಿಂತ ಮೊದಲು ಹುಟ್ಟಿ, ೧೫೯೪ರಲ್ಲಿ ಐಕ್ಯವಾದನು ಎಂದು ನಿರ್ಧರಿಸಬಹುದು. ಈತ ೯೬ ವರ್ಷ ಬಾಳಿ ಬದುಕಿದನೆಂದು ನಿರಂಜನವಂಶರತ್ನಾಕರ ಮತ್ತು ಮಹಾಲಿಂಗೇಂದ್ರವಿಜಯಗಳಲ್ಲಿ ಹೇಳಲಾಗಿದೆ. ಮೇಲಿನ ಕಾಲಾವಧಿ ಈ ಹೇಳಿಕೆಗೆ ಪುಷ್ಟಿ ನೀಡುತ್ತದೆ.

**ಜೀವನ ಚರಿತ್ರೆ:** ಬೋಳಬಸವೇಶ್ವರನ ಜೀವನೇತಿಹಾಸ ಕುರಿತ ಸಾಮಗ್ರಿ ತೀರ ಅಲ್ಪ. ತೋಂಟದ ಸಿದ್ಧಲಿಂಗರನ್ನು ಕುರಿತು ವಿಪುಲ ಸಾಹಿತ್ಯ ದೊರಕುವಾಗ, ಅವರ ತರುವಾಯ ನಿರಂಜನ ಪೀಠದ ಅಧ್ಯಕ್ಷನಾಗಿ ವೀರಶೈವಧರ್ಮ ತತ್ವಗಳನ್ನು ಪ್ರಚುರಪಡಿಸುವಲ್ಲಿ ಮಹತ್ವದ ಪಾತ್ರವಾಡಿ, 'ಎರಡನೆಯ ಸಿದ್ಧದೇಶಿಕ'ನೆಂದು ಶಿಷ್ಯರಿಂದ ಗೌರವಿಸಿಕೊಂಡ ಈತನ ಬಗೆಗೆ- ಈತ ಮಾಡಿದ ಸಾಧನೆ, ಸಿದ್ಧಿಗಳನ್ನು ವಿವರಿಸುವ ಒಂದೂ ಕೃತಿ ರಚನೆಗೊಳ್ಳದೆ ಇರುವುದು ಸೋಜಿಗದ ಸಂಗತಿ.[೩೯]

ತೋಂಟದ ಸಿದ್ಧಲಿಂಗರ ಚರಿತ್ರೆಯನ್ನು ಹೇಳುವ ಕೆಲವು ಕಾವ್ಯಗಳಲ್ಲಿ ಕೊನೆಗೆ ಸಿದ್ಧಲಿಂಗರು ತಮ್ಮ ಶಿಷ್ಯನಾದ ಬೋಳಬಸವೇಶ್ವರನಿಗೆ ಷಟ್‌ಸ್ಥಲೋಪದೇಶ ಮಾಡಿ, ನಿರಂಜನಪೀಠದ ಪಟ್ಟಾಧಿಕಾರವನ್ನು ವಹಿಸಿ ನಿರ್ವಿಕಲ್ಪಸಮಾಧಿಯನ್ನು ಹೊಂದಿದರು ಎಂದು ಮಾತ್ರ ಹೇಳಲಾಗಿದೆ. ಅದೇ ಮಹಾತ್ಮನ ಚರಿತ್ರೆಯನ್ನು ಹೇಳುವ ಶಾಂತೇಶನ ಸಿದ್ಧೇಶ್ವರ

---

೩೭ ಎಂ. ಎಂ. ಕಲಬುರ್ಗಿ, ಬಿ. ಆರ್. ಹಿರೇಮಠ (ಸಂ.): ಇಮ್ಮಡಿ ಚಿಕ್ಕಭೂಪಾಲನ ಸಾಂಗತ್ಯ, ೧೭-೬೮

೩೮ ಗುರುರಾಜಚಾರಿತ್ರ, ೧೬-೩., ೪.

೩೯ ಹಾಗೇ ಈ ಪೀಠದ ಮುಂಚೆ ಬಂದ ಅನೇಕ ಗುರುಗಳ ಬಗೆಗೂ ಕಾವ್ಯಗಳೂ ಹುಟ್ಟಲ್ಲ. ಸಿದ್ಧಲಿಂಗನ ಪ್ರಭಾವವೇ ಹೆಚ್ಚಾಗಿ ಹೀಗಾಗಿರಬೇಕೆ?

ಪುರಾಣ, ಚೆನ್ನವೀರಜಂಗಮದೇವನ ಷಟ್‌ಸ್ಥಲವಲ್ಲಭ ಕೃತಿಗಳಲ್ಲಿ ಈ ವಿಷಯವೂ ಸಹಿತ ಬರದೇ ಇರುವುದು ಇನ್ನೂ ವಿಸ್ಮಯದ ಸಂಗತಿಯಾಗಿದೆ. ವಿರಕ್ತ ತೋಂಟದಾರ್ಯರ ಸಿದ್ಧೇಶ್ವರ ಪುರಾಣ, ತೀರ ಈಚಿನದಾದ ಮಹಾದೇವನ (೧೮೭೦) ಮಹಾಲಿಂಗೇಂದ್ರವಿಜಯ, ಗದ್ಯಕೃತಿಗಳಾದ ನಿರಂಜನಜಂಗಮವಂಶದರ್ಪಣ ಮತ್ತು ನಿರಂಜನವಂಶರತ್ನಾಕರಗಳಲ್ಲಿ ಈತನನ್ನು ಕುರಿತ ಕೆಲವು ಹೆಚ್ಚಿನ ವಿವರಗಳು ದೊರೆಯುತ್ತವೆ. ಸಿದ್ಧನಂಜೇಶನ ಗುರುರಾಜಚಾರಿತ್ರ, ವಿರೂಪಾಕ್ಷಪಂಡಿತನ ಚೆನ್ನಬಸವಪುರಾಣ, ವಿರಕ್ತ ತೋಂಟದಾರ್ಯನ ಪಾಲ್ಕುರಿಕೆ ಸೋಮೇಶ್ವರಪುರಾಣ, ಗುಬ್ಬಿಮಲ್ಲಣಾರ್ಯನ ಭಾವಚಿಂತಾರತ್ನಗಳಲ್ಲಿ ಈತನ ವ್ಯಕ್ತಿ ವೈಶಿಷ್ಟ್ಯಗಳನ್ನು ಅಳವಡಿಸಿಕೊಂಡ ಸ್ತುತಿಪದ್ಯಗಳು ಬಂದರೆ, ಸಂಪಾದನೆಯ ಪರ್ವತೇಶನ ಚತುರಾಚಾರ್ಯಪುರಾಣ, ಸಂಪಾದನೆಯ ಗುರುಲಿಂಗದೇವನ ಶೀಲವಂತಯ್ಯನ ತ್ರಿವಿಧಿ ವ್ಯಾಖ್ಯಾನ, ಸೋಮಶೇಖರ ಶಿವಯೋಗಿಯ ಷಟ್‌ಸ್ಥಲಜ್ಞಾನಸಾರಾಮೃತ, ಬೆಡಗಿನ ವಚನಗಳ ಟೀಕೆ, ಮಹಾಂತಸ್ವಾಮಿಯ ನಾಂದ್ಯ, ಬಸವಲಿಂಗ ಶಿವಯೋಗಿಯ ಮಾಚಿದೇವ ಮನೋವಿಲಾಸ ಮತ್ತು ಎಡೆಯೂರ ಶಾಸನಗಳಲ್ಲಿ ಗುರುಪರಂಪರೆಯ ಮಾಲಿಕೆಯಲ್ಲಿ ಈತನ ಹೆಸರು ಮಾತ್ರ ಉಲ್ಲೇಖವಾಗಿದೆ.

ಅಲ್ಲಲ್ಲಿ ಬರುವ ಬಿಡಿಬಿಡಿಯಾದ ಈ ಎಳೆಗಳನ್ನು ಜೋಡಿಸಿ ಬೋಳಬಸವೇಶ್ವರನ ಜೀವನಚರಿತ್ರೆಯನ್ನು ಕೆಳಗಿನಂತೆ ಹೆಣೆಯಬಹುದು:

ನಾಗವಲ್ಲಿ ಎಂಬ ಊರಲ್ಲಿ ಶಿವಪೂಜೆಯಾರ್ಯನೆಂಬ ಶರಣನಿದ್ದ. ನಿತ್ಯ ನಿಷ್ಠೆಯಿಂದ ಶಿವಪೂಜೆ ಮಾಡುವುದು ಅವನ ಕಾಯಕವಾಗಿತ್ತು. ಅವನಿಗೆ ನಿರಕ್ಷರ ಬೋಳಬಸವನೆಂದು ಮತ್ತೊಂದು ಹೆಸರು. ಚಿಕ್ಕಂದಿನಲ್ಲಿ ಆತ ನಿರಕ್ಷರಿಯೂ ಬೋಳೇಸ್ವಭಾವದವನೂ ಸದ್ಭಕ್ತಸಂಪನ್ನನೂ ಆದುದರಿಂದ ಆತನಿಗೆ ಈ ಹೆಸರು ಅನ್ವರ್ಥವಾಗಿ ಬಂದಿತ್ತು.

ಕಾಲಾಂತರದಲ್ಲಿ ಈತನಿಗೆ ತೋಂಟದ ಸಿದ್ಧಲಿಂಗರ ಕೃಪೆಯಿಂದ ಮಾತು ಬಂತು; ಮಾತಿಗೆ ಮೀರಿದ ಮತಿ ಪ್ರಾಪ್ತವಾಯಿತು. ವೇದ ಆಗಮ ಉಪನಿಷತ್ತು ಪುರಾಣ ನ್ಯಾಯ ತರ್ಕ ಮೀಮಾಂಸೆ ವ್ಯಾಕರಣ ಛಂದಸ್ಸು ಸಕಲ ಶಾಸ್ತ್ರಗಳಲ್ಲಿ ಆತ ಪಾರಂಗತನಾದ. ಕೇವಲ ಇಪ್ಪತ್ತೊಂದು ದಿನಗಳಲ್ಲಿ ಆತ ಸುಜ್ಞಾನಿ, ವಾಗ್ವಿದಾವರ, ವಾದಪಟುವಾಗಿ ತನ್ನೊಡನೆ ಸ್ಪರ್ಧೆಗಿಳಿದವರನ್ನು ಸುಲಭವಾಗಿ ಜಯಿಸಿದ. ತಾನು ಸಂಪಾದಿಸಿದ ಈ ಅಪೂರ್ವ ಜ್ಞಾನವನ್ನು ಲೋಕಕಲ್ಯಾಣಕ್ಕಾಗಿ ಹಂಚತೊಡಗಿದ.

ಹೀಗಿರುವಾಗ ತೋಂಟದ ಸಿದ್ಧಲಿಂಗರು ಲೋಕಸಂಗ್ರಹಕ್ಕಾಗಿ ಷಟ್‌ಸ್ಥಲೋಪದೇಶ ಮಾಡುತ್ತ ಸಂಚಾರ ಕೈಕೊಂಡರು. ಅವರ ಹಿಂದೆ ೭೦೦ ಜನ ವಿರಕ್ತ ಚರಮೂರ್ತಿಗಳು ಸಾಗಿದರು. ಅವರಲ್ಲಿ ಬೋಳಬಸವನೂ ಒಬ್ಬನಾಗಿ ನಡೆದ. ಗುರುವಿನ ಸೇವೆಯನ್ನು ಭಯ-ಭಕ್ತಿ-ನಿಷ್ಠೆಗಳಿಂದ ಮಾಡತೊಡಗಿದ. ಅದರಿಂದ ಸಹಜವಾಗಿ ಈತನ ಮೇಲೆ ಗುರುವಿನ ಕೃಪಾಕಟಾಕ್ಷ ಬಿದ್ದಿತು. ದಿನದಿಂದ ದಿನಕ್ಕೆ ಗುರುಶಿಷ್ಯರಲ್ಲಿ ಆತ್ಮೀಯತೆ ಬೆಳೆಯಿತು. ಬೋಳಬಸವ ಗುರುವಿನ ಅಂತರಂಗದ ಶಿಷ್ಯನಾದ. ಗುರುಗಳು ತಾವು ಕಂಡುಂಡು, ಸಾಧಿಸಿದ ಅನುಭವಾಮೃತವನ್ನು ಈತನಿಗೆ ಎರೆಯುತ್ತ ನಡೆದರು. ಹಾಗೇ ಊರಿಂದೂರಿಗೆ, ನಾಡಿನಿಂದ ನಾಡಿಗೆ, ದೇಶದಿಂದ ದೇಶಕ್ಕೆ ಸಂಚಾರ ಸಾಗಿತು. ಅಲ್ಲಲ್ಲಿ ಬಯಸಿ ಬಂದ ಭಕ್ತರನ್ನು ಉದ್ಧರಿಸುತ್ತ, ಅವರಿಗೆ ಬಂದ ರೋಗರುಜಿನ ಆಪತ್ತು-ವಿಪತ್ತುಗಳನ್ನು ಪರಿಹರಿಸುತ್ತ ಅನೇಕ ಪವಾಡಗಳನ್ನು ಮೆರೆಯುತ್ತ ಮುನ್ನಡೆದರು.

ಹಾಗೆ ನಡೆದು ಕಗ್ಗೆರೆಗೆ ಬಂದರು. ಅಲ್ಲಿ ಗುರುಸಿದ್ಧಲಿಂಗರು ಲಿಂಗಾರ್ಚನೆಯಲ್ಲಿ ಮಗ್ನರಾದರು. ಬಾಹ್ಯಪ್ರಪಂಚದ ಅರಿವನ್ನು ಮೀರಿ ಶಿವಯೋಗಸಮಾಧಿಯಲ್ಲಿ ಮುಳುಗಿದರು. ಗುರುವಿನ ಲಿಂಗಲೀಲಾವಿಲಾಸವನ್ನು, ಲಿಂಗಾರ್ಚನನಿಷ್ಠೆಯನ್ನು ಕಂಡು ಬೋಳಬಸವ ನಿಬ್ಬೆರಗಾದ. ಮನದುಂಬಿ ಸ್ತುತಿಸಿದ; ಹರ್ಷದಿಂದ ಕುಣಿದು ಕುಪ್ಪಳಿಸಿದ; ಕುಕಿಲಿರಿದು ಕೂಗಿದ.

ಮತ್ತೊಂದು ದಿನ ನಾಗಿಣಿನದಿಯ ತೀರದ ಶಿಲಾಮಂಟಪದಲ್ಲಿ ಸರ್ವವಿರಕ್ತರ ಮಧ್ಯ ಸಿದ್ಧಲಿಂಗಗುರು ಮಂಡಿಸಿದ್ದರು. ಬೋಳಬಸವ ಕಂಡು ಅತ್ಯಂತ ಹರ್ಷಚಿತ್ತನಾಗಿ ಬಂದು ಸಾಷ್ಟಾಂಗವೆರಗಿದ. ಚರಣಕಮಲವನ್ನು ಅಪ್ಪಿ ''ಉಜ್ವಲಮಹಾತೇಜೋಮೂರ್ತಿ, ಕಾರುಣ್ಯನಿಲಯ ಮದ್ಗುರುವೆ, ಸದ್ಗುರುವೆ, ಚಿದ್ಗುರುವೆ ಷಟ್‌ಸ್ಥಲವನರುಪಿ ಸಲಹೆನ್ನನು'' ಎಂದು ಬಿನ್ನವಿಸಿದ. ಗುರು ಸಿದ್ಧಲಿಂಗರಿಗೆ ಅತ್ಯಾನಂದವಾಯಿತು. ನಸುನಗುತ್ತ ಶಿಷ್ಯನ ಶಿರವಿಡಿದು ಕರುಣೆಯಿಂದ ಮೇಲೆತ್ತಿ ಕಾರುಣ್ಯಾಮೃತ ಕಟಾಕ್ಷಗಳಿಂದ ನೋಡಿ, ಮೈದಡವಿ ''ನೀನು ಕೇಳಿದ ಮಹಾಪ್ರಶ್ನೆ ಲೇಸಾದುದು. ಹೇಳುವೆ ಚಿತ್ತಶುದ್ಧಿಯಿಂದ ಕೇಳು'' ಎಂದು ವಿವರಿಸತೊಡಗಿದರು. 'ವೀರಶೈವರಲ್ಲಿ ಜನ್ಮವೊಂದರಲ್ಲಿಯೇ ನಿಜಮೋಕ್ಷ' ಎಂದು ವೀರಶೈವದ ಮಹತಿಯನ್ನು ಹೇಳುತ್ತ, ಮುಂದೆ ಭಕ್ತಾದಿ ಐಕ್ಯಾಂತ ಷಟ್‌ಸ್ಥಲಗಳ ಸ್ವರೂಪ-ಸಂಬಂಧ-ಲಕ್ಷಣಗಳನ್ನು, ಅಂಗಸ್ಥಲ ಲಿಂಗಸ್ಥಲ ಸಮನ್ವಿತ ಏಕೋತ್ತರ ಶತಸ್ಥಲಗಳ ರಚನೆ-ರಹಸ್ಯವನ್ನು 'ವಿರತಕುಲ ತಿಲಕ'ನೆನಿಸಿದ ಬೋಳಬಸವನಿಗೆ ಬೋಧಿಸಿದರು. ಕೊನೆಯಲ್ಲಿ ''ಕೇಳಲೈ ಕಂದ ನಿನಗೀಮಾರ್ಗವಳಪಟ್ಟಿತು ಅವನಿಯೊಳು ಕುಂದದಾನಂದದಿಂದಾಚರಿಸುತಿರ್ಪುದು.'' ''ಈ ಸಹಜ ಷಟ್‌ಸ್ಥಲಬ್ರಹ್ಮಮಂ ಮುಮುಕ್ಷುಗಳಿ ಗೊಲವಿಂದರಿಪಿ ರಕ್ಷಿಸುವುದು'' ಎಂದು ಹೇಳಿದರು. ಅದಕ್ಕೆ ಬೋಳಬಸವೇಶ್ವರನು ಸಂದೇಹ-ಸಂತೋಷಗಳಿಂದ ''ಸದ್ಗುರುವೆ, ನೀನಿಂತೇ ಪರಿಯೊಳು ನಿರವಿಸಲು ಎನಗೆ ಸತ್ವವುಂಟೆ ಬೋಧಿಸುವೊಡೆಲ್ಲಕೆ?'' ಎಂದು ಪ್ರಶ್ನಿಸುತ್ತಾನೆ. ಆಗ ಸಿದ್ಧಲಿಂಗ–''ನಿನಗೇಕೆ ಸಂದೆಯಂ ಅಖಿಳಲೋಕದೊಳಗೆ। ಅನುವಿನಿಂ ಪರಮ ಷಟ್‌ಸ್ಥಲದೆ ಸನ್ಮಾರ್ಗಮಂ। ಘನಹರ್ಷದಿಂದುಂಟುಮಾಡಲೆಂದವನಿಯೊಳು ಬಂದ ಕಾರಣದಿ ನಾನು ॥ ನಿನಗೆ ಪೇಳ್ದನು ನೀನವರ ಚಿತ್ತಗಳನರಿದು। ವಿನಯದಿಂದವರ ಬೋಧಿಸಿ ನಿಲಿಸಿ ನಿಜಮುಕ್ತಿವನಿತೆ ಯೊಳಗೇಕತ್ವಮಂ ಮಾಳ್ಪುದು...'' (೨೫-೪) ಎಂದು ತಿಳಿಸಿದ. ಬೋಳಬಸವನಿಗೆ ಇದು ನುಂಗಲೂಬಾರದ, ಉಗುಳಲೂಬಾರದ ಬಿಸಿತುಪ್ಪದಂತೆನಿಸಿತು. ಆದರೆ ತನಗೀಕಾರ್ಯ ಅನಿವಾರ್ಯವೆಂದು ಅನಿಸಿ, ಮತ್ತೆ ಗುರುವಿನಲ್ಲಿ ಸಂದೇಹ ಪರಿಹಾರಕ್ಕಾಗಿ ''ದೇವ ನೀವು ನನ್ನ ಮೇಲಿನ ಪ್ರೀತಿಯಿಂದ ಹೀಗೆ ಹೇಳುತ್ತಿದ್ದೀರಿ. ಆದರೆ ನನಗೊಂದೂ ತಿಳಿಯದು. ಈ ಲೋಕದಲ್ಲಿ ಷಟ್‌ಸ್ಥಲಬ್ರಹ್ಮವನ್ನು ಯಾರಿಗೆ ಹೇಳಬೇಕು? ಇದನ್ನು ಕೇಳಲು ಯೋಗ್ಯ ಅಧಿಕಾರಿಗಳು ಯಾರು? ದಯವಿಟ್ಟು ತಿಳಿಸಿ ರಕ್ಷಿಸಬೇಕು'' ಎಂದು ವಿನಂತಿಸಿಕೊಳ್ಳುತ್ತಾನೆ. ಆಗ ತೋಂಟದಾರ್ಯರು ಅದನ್ನು ವಿವರಿಸತೊಡಗುತ್ತಾರೆ; ಅನಂತರ ಉನ್ನತವಾದ ಆಸನದ ಮೇಲೆ ಬೋಳಬಸವೇಶನನ್ನು ಕುಳ್ಳಿರಿಸಿ, ಸತ್ಕರುಣದಿಂದ ಪ್ರಸಾದದ ವೀಳೆಯವನ್ನು ಕೊಟ್ಟು, ಜಯಘೋಷಗಳನ್ನು ಮಾಡುವ ಸುಜ್ಞಾನಿಗಳ ಮಧ್ಯೆ, ಲೋಕಹಿತಕ್ಕೋಸ್ಕರ ಷಟ್‌ಸ್ಥಲಾಚಾರ್ಯ ಪಟ್ಟವನ್ನು ಕಟ್ಟಿ ಆನಂದಿಸಿದರು. ಅದನ್ನು ಕಂಡು ಸಪ್ಪೆಯದೇಶಿಕ, ಪಟ್ಟಣದದೇವ, ಚಂದ್ರಶೇಖರದೇವ, ದೊಡ್ಡ ಸಿದ್ದೇಶ, ಬಿಟ್ಟಿಗದೇವ, ಶೀಲವಂತೇಶ, ಉಪ್ಪಿನಹಳ್ಳಿಯಯ್ಯ

ಮೊದಲಾದ ಶಿಷ್ಯಸಮೂಹವೆಲ್ಲ ಸಂತಸಗೊಂಡು, ಇವನು 'ಎರಡನೆಯ ಸಿದ್ಧದೇಶಿಕ'ನಲ್ಲದೆ ಬೇರಲ್ಲ ಎಂದು ಭಾವಿಸಿ, ಈತನಿಂದ ಲೋಕದಲ್ಲಿ ಕುಂದದ ಷಟ್‌ಸ್ಥಲಮಾರ್ಗ ಪಸರಿಸುವುದು ಎಂದು ನಲಿದಾಡುತ್ತ, ಸಕಲಸನ್ಮಾರ್ಗವನ್ನು ಅವನಿಂದ ತಿಳಿದು, ಶಿವಜ್ಞಾನಯುಕ್ತರಾಗಿ ಅವಿರಳನಿಜಾನಂದದಲ್ಲಿ ಮುಳುಗಿದರು.

ಭೂಮಿಯ ಮೇಲಿನ ವಿರಕ್ತರೆಲ್ಲ ಪ್ರೀತಿಯಿಂದ ಬಂದು ಬೋಳಬಸವನ ಚರಣ ಕಮಲಕ್ಕೆರಗಿ, ಷಟ್‌ಸ್ಥಲಮಾರ್ಗವನ್ನು ತಿಳಿದು, ಭಕ್ತಿಜ್ಞಾನವೈರಾಗ್ಯಸಂಪನ್ನರಾಗಿ ಸತ್ಕೀರ್ತಿಯನ್ನು ಹೊಂದಿ ಲೋಕದಲ್ಲೆಲ್ಲ ಸಂಚರಿಸತೊಡಗಿದರು. ಲೋಕದಲ್ಲೆಲ್ಲ ಷಟ್‌ಸ್ಥಲಬ್ರಹ್ಮಿಗಳು ತುಂಬಿ, ಭೂತಳವೆಲ್ಲ ಷಟ್‌ಸ್ಥಲಮಯವಾಗಲು ಚಿಜ್ಯೋತಿ ಸ್ವರೂಪನಾದ ತೋಂಟದಾರ್ಯ ಇದನ್ನು ಕಂಡು ಸಂತಸಪಟ್ಟು, ಪ್ರೀತಿಯಿಂದ ಬೋಳಬಸವ ಮೊದಲಾದ ತನ್ನ ಶಿಷ್ಯರನ್ನೆಲ್ಲ ಹತ್ತಿರ ಕರೆದು, ಸಂತೈಸಿ, ''ಭೂತಳದೊಳಾನೆನ್ನ ಸ್ವಾತಂತ್ರ್ಯದಿಂ ಬಂದ ಲೀಲೆ ಸೌಖ್ಯವನಿತ್ತುದು'' ಎಂದು ಹೇಳಿ ಶಿವಯೋಗ ಸಮಾಧಿಯಲ್ಲಿ ಮೂರ್ತಗೊಂಡರು.

ಮುಂದೆ ಬೋಳಬಸವ ಗುರುವಿನ ಆಣತಿಯನ್ನು ಶಿರದಲ್ಲಿ ಧರಿಸಿ ಲೋಕಸಂಚಾರ ಕೈಕೊಂಡು ಗುರುವಿನಂತೆ ಅನೇಕ ಮಹಿಮೆಗಳನ್ನು ಮೆರೆದನು. ತನ್ನಿಂದ ಈ ಲೋಕದ ಜನ ಉದ್ಧಾರವಾಗಲಿ ಎಂದು ಬೋಧನ ಸಂಸ್ಥೆಯನ್ನು ಸ್ಥಾಪಿಸಿ, ಏಳುನೂರು ಜನ ಚರಮೂರ್ತಿಗಳಿಗೆ ಮತ್ತು ಮೂರುಸಾವಿರ ಜನ ವಿರಕ್ತರಿಗೆ ಶಾಸ್ತ್ರಾದಿಗಳನ್ನು ಬೋಧಿಸಿ, ಸಮಾಜ ಸುಧಾರಣೆಯ ಕಾರ್ಯದಲ್ಲಿ ಅವರು ಪಾಲ್ಗೊಳ್ಳಲು ಯೋಗ್ಯವಾದ ತರಬೇತಿಯನ್ನು ಕೊಟ್ಟನು. ''ಸಮಾಜದಲ್ಲಿ ಮುಂದಾಳೆನಿಸಿಕೊಳ್ಳುವ ಜನ ಚೆನ್ನಾದ ಹೊರತು ಸಾಮಾನ್ಯ ಜನದ ಜೀವನ ಹಸನಾಗಲು ಉತ್ತೇಜನ ದೊರೆಯದೆಂಬುದು''[೬೦] ಆತನ ನಿಲುಮೆಯಾಗಿತ್ತು. ಅದಕ್ಕಾಗಿ ಸ್ವತಃ ಜ್ಞಾನಿಯಾದ ಅವನು ಮುಂದಿನ ತನ್ನ ಉತ್ತರಾಧಿಕಾರಿಗಳು ಸಮಾಜದಲ್ಲಿ ಋಜುತ್ವವನ್ನು ಪ್ರಸಾರಮಾಡಲು ಸಮರ್ಥರಾಗಬೇಕೆಂದು ಅಂಥ ಸನ್ಯಾಸಿಗಳ ಮತ್ತು ಸಂತರ ಒಂದು ದೊಡ್ಡ ತಂಡವನ್ನೇ ಸಿದ್ಧಗೊಳಿಸಿ ಈ ಮೂಲಕ ತನ್ನ ಗುರುವಿನ ಕನಸನ್ನು ನನಸಾಗಿಸುವತ್ತ ದಿಟ್ಟ ಹೆಜ್ಜೆಗಳನ್ನಿಟ್ಟನು. ದೇಶಸಂಚಾರ ಕೈಕೊಂಡಾಗ ವೀರಶೈವ ಸಿದ್ಧಾಂತವನ್ನು ಪ್ರತಿಭಟಿಸಿದವರನ್ನು ವಾದದಿಂದ ಸೋಲಿಸಿ, ಇಚ್ಛಿಸಿದಲ್ಲಿ ಅವರಿಗೆ ದೀಕ್ಷೆಯನ್ನು ಕೊಟ್ಟನು. ಗುರುವಿನಿಂದ ದೊರೆತ ಗಣಸಮೂಹ ಮುಂತಾದ ೭೨ ಬಿರುದುಗಳುಳ್ಳ ಸಕಲ ಸಂಭ್ರಮವನ್ನು ಒಪ್ಪಿಸಿಕೊಂಡನು. ಎಡೆಯೂರಿನಲ್ಲಿ ಪೂಜೋತ್ಸವಗಳನ್ನು ನೆರವೇರಿಸುತ್ತ, ನಿತ್ಯ ಗುರುವಿನ ಪೂಜೆ, ಜಂಗಮದಾಸೋಹ ಸಾಂಗವಾಗಿ ನಡೆಯುವ ವ್ಯವಸ್ಥೆ ಮಾಡಿದನು.

ಹಾಗೇ ದೇಶಸಂಚಾರ ಮಾಡುತ್ತ ತೋಂಟದ ಸಿದ್ಧಲಿಂಗರ ಕೃಪಾಪಾತ್ರರಾದ ಬಿಜ್ಜಾವರದ ಮಹಾನಾಡಪ್ರಭುಗಳ ರಾಜಧಾನಿಗೆ ಬಂದನು. ಅವರಿಂದ ಸೇವೆಯನ್ನು ಸ್ವೀಕರಿಸಿ, ರಾಜಗುರುವಾಗಿ ಯೋಗ್ಯ ಮಾರ್ಗದರ್ಶನ ನೀಡಿದನು. ಎಡೆಯೂರಿನ ನಂತರ ಬಿಜ್ಜಾವರವನ್ನು ತನ್ನ ಧರ್ಮಪ್ರಚಾರದ ಕೇಂದ್ರವನ್ನಾಗಿ ಮಾಡಿಕೊಂಡು ವಿಧಾಯಕ ಕಾರ್ಯಗಳನ್ನು ಎಸಗಿದನು. ಹರವೆಯ ಕಾಳಗದಲ್ಲಿ ಇಮ್ಮಡಿ ಚಿಕ್ಕಭೂಪಾಲ ಮತ್ತು ಅವನ ಮಗ ತೋಟೇಂದ್ರ, ವೀರಮರಣವನ್ನಪ್ಪಲು, ಇಮ್ಮಡಿ ಚಿಕ್ಕಭೂಪಾಲನ ಎರಡನೆಯ ಮಗ ಸಪ್ಪೇಂದ್ರನಿಗೆ ಪಟ್ಟಗಟ್ಟಿ ಹರಸಿದನು. ಬಿಜ್ಜಾವರದಿಂದ ಸಪ್ಪೇಂದ್ರ ತನ್ನ ರಾಜಧಾನಿಯನ್ನು

---

೬೦ ಮಹಾಲಿಂಗೇಂದ್ರವಿಜಯ, ಪೀಠಿಕೆ, ಪು. ೫೪

ಮದ್ದಗಿರಿಗೆ ಸ್ಥಳಾಂತರಿಸಲು, ಬೋಳಬಸವನೂ ತನ್ನ ಧರ್ಮಪ್ರಚಾರಕೇಂದ್ರವನ್ನು ಮದ್ದಗಿರಿಗೆ ವರ್ಗಾಯಿಸಿದನು. ಅಲ್ಲಿ ಅನೇಕ ಮಹಿಮೆಗಳನ್ನು ಮೆರೆದು, ಲಿಂಗಾಭಿಷೇಕ ಉದಕವನ್ನು ಮಸ್ತಕದಲ್ಲಿ ಧರಿಸಿ ಶರಣಾಗತರ ಬಯಕೆಗಳನ್ನು ಈಡೇರಿಸುತ್ತ 'ಭೂತಳದಲ್ಲಿ ಚರಿಸುವ ಮಹಾ ಮಹಿಮ' ಎಂದು ಹೊಗಳಿಸಿಕೊಳ್ಳುತ್ತ ಇರುವಾಗ, ಒಂದು ದಿನ ಒಣಗಿದ ಅತ್ತಿಯ ಮರವನ್ನು ಕರುಣಕಟಾಕ್ಷದಿಂದ ನೋಡಿ, ಆ ಕ್ಷಣವೇ ಅದು ಚಿಗುರುವಂತೆ, ಫಲಗಳಿಂದ ತುಂಬುವಂತೆ ಮಾಡಿದ. ಅದನ್ನು ಕಂಡು ಜನರೆಲ್ಲ ಹೊಗಳಿ ಗೌರವ ಸಲ್ಲಿಸಿದರು. ಹೀಗೆ ಇರುವಾಗ ಮತ್ತೊಂದು ದಿವಸ ಕೈಲಾಸಪುರದ ಬಾಗಿಲಲ್ಲಿ ತಮ್ಮ ಪಾದಸೇವಾತುರನಾದ ಬಿಜ್ಜಾವರದ ಗೌಡ ತೋಂಟನ ತಡೆದಿದ್ದಾರೆಂದು, ತಾನು ಹೋಗಿ ಬಿಡಿಸುತ್ತೇನೆಂದು ಎಲ್ಲರಿಗೂ ಹೇಳಿ ಭೂಮಿಯ ಜನರೆಲ್ಲ ಬೆರಗಾಗುವಂತೆ ಶಿವ ಸಮಾಧಿಯಲ್ಲಿ ನಿಂತು, ಆತನನ್ನು ಶಿವನ ಸನ್ನಿಧಿಗೆ ಕರೆದೊಯ್ದು ಮೋಕ್ಷವನ್ನು ಕರುಣಿಸಿದನು. ಹೀಗೆ ಬೋಳಬಸವೇಶ್ವರನು ೯೬ ವರ್ಷ ಕಾಲ ಬದುಕಿದ್ದು, ನಿತ್ಯವೂ ಮಾನವಕಲ್ಯಾಣ ಕುರಿತು ಚಿಂತಿಸುತ್ತ ಮದ್ದಗಿರಿಯಲ್ಲಿ–ಇಂದಿನ ಸಿದ್ಧಾಪುರದಲ್ಲಿ–ಸಿದ್ಧಸಮಾಧಿಯನ್ನು ಹೊಂದಿದನು.

**ವ್ಯಕ್ತಿತ್ವ:** ಬೋಳಬಸವೇಶ್ವರನು ಘನವ್ಯಕ್ತಿತ್ವವನ್ನು ಪಡೆದ ಸಾತ್ವಿಕ ಶಿವಯೋಗಿಯಾಗಿದ್ದ. ಆತನ ಈ ವ್ಯಕ್ತಿತ್ವದ ಅನನ್ಯತೆಯನ್ನು ಕವಿಗಳು ಮುಕ್ತಕಂಠದಿಂದ ಹೊಗಳಿದ್ದಾರೆ. ಆತನ ಶಿಷ್ಯರು ನುಡಿಗೌರವ ಸಲ್ಲಿಸಿದ್ದಾರೆ. ವಿರಕ್ತತೋಂಟದಾರ್ಯ ಆತನನ್ನು ಚಿಂತಾರಹಿತ, ಮಹಾಚಾರ್ಯ, ಅಘತಿಮಿರಸೂರ್ಯ, ವಿರತಕುಲತಿಲಕ, ಷಟ್‌ಸ್ಥಲಾಚಾರ್ಯ, ಪರಮಸಚ್ಚರಿತ, ಗರುಕುಲಾಗ್ರಣಿ, ಚಿದಾನಂದಸ್ವರೂಪ, ಸಂಯಮೀಶ್ವರ, ಪರಮಶಿವಮೂರ್ತಿ ಎಂದು ಕರೆದರೆ, ಸಿದ್ಧನಂಜೇಶ ಪರಮಶಾಂತಮೂರ್ತಿ, ಮಹಾಮಹಿಮ, ಅನಘಪಾವನ ಸಂಯಮಿ, ಘನವಿರಕ್ತ ಪ್ರತ್ಯಕ್ಷ ಶಿವಮೂರ್ತಿ ಎಂದು ಬಣ್ಣಿಸಿದ್ದಾನೆ. ಗುಬ್ಬಿಯ ಮಲ್ಲಣಾರ್ಯನು ನಿರ್ಮಲಕೀರ್ತಿ, ಶ್ರೇಷ್ಠಭಕ್ತಿ, ಮುದ್ದುವಚನದಿಂದ ಕಲ್ಯಾಣದ ಬಸವನ ಮಹತ್ವವನ್ನು ಶರಣರಿಗೆ ಕಲ್ಯಾಣದುತ್ಸವ ಮಾಡಲು ಬಂದವನು ಎಂದು ಹೇಳುತ್ತಾನೆ.

ಮಲ್ಲಿಕಾರ್ಜುನನು ''ವರಗುಣಭೂಷಣ ಸೂನೃತಭೂಷಣ ದುರಿತ ಕರ್ದಮ ಶೋಷಣ, ಕರುಣಾಕರ'' ಎಂದೂ ಮಹಾದೇವನು ''ಕಡುವಿರಕ್ತ, ವಿಷಯ ಪ್ರಪಂಚ ನಿರ್ಲಿಪ್ತ, ಬಂಧುಬಾಂಧವ ಸಂಬಂಧರಹಿತ, ಘನಜಗದ್ಗುರು, ಮೋಹವೆಂಬ ಮೇಘ ಮಾಲೆಗೆ ಚಂಡಮಾರುತ, ಭಕ್ತರೆಂಬ ತಾವರೆ ತಂಡಕ್ಕೆ ಉದಯೋನ್ಮುಖ ಸೂರ್ಯ'' ಎಂದೂ ವರ್ಣಿಸಿದ್ದಾರೆ. ಗುಮ್ಮಳಾಪುರದ ಸಿದ್ಧಲಿಂಗ 'ಅಘದೂರ ಬೋಳಬಸವಾಚಾರ್ಯನ ಕಾರುಣ್ಯದಿಂದ ಶೂನ್ಯಬೋಧೆಯನ್ನು ಹೇಳಿದೆ'ನೆಂದೂ ಬೋಳಬಸವೇಶ್ವರನ ಕೃಪೆಯಿಂದ ಸಿದ್ದೇಶ್ವರನೆಂಬ ಪರುಷ ಎನಗೆ ಸಾಧ್ಯವಾಯಿತೆಂದೂ ತಿಳಿಸುತ್ತಾನೆ. ಗೂಳೂರ ಸಿದ್ಧ ವೀರಣ್ಣೊಡೆಯ 'ಆಮಿಷಕುಂತಳ ಛೇದ್ಯನಾದ ಬೋಳಬಸವದೇಶಿಕನ ಕೃಪೆಯಿಂದ ಅಲ್ಲಮಪ್ರಭುರಾಯನ ಪರಮಾನು ಭಾವಬೋಧೆಯನ್ನು ಬರೆದೆ'ನೆಂದೂ ಹೇಳುತ್ತಾನೆ. ಅಲ್ಲದೆ ''ಜಗದಾರಾಧ್ಯರಪ್ಪ ತೋಂಟದ ಸಿದ್ಧಲಿಂಗೇಶ್ವರರ ಕೃಪಾಪ್ರಸನ್ನ ಪಾತ್ರರಾದ ಬೋಳಬಸವೇಶ್ವರ'' ತೋಂಟದ ಸಿದ್ಧಲಿಂಗ ಸದ್ಗುರುವರನಾಥನಾದರದೊಳಿರ್ಪ ಬೋಳಬಸವೇಶ್ವರ'' ಎಂದು ಆತನನ್ನು ವಿಶೇಷಿಸಿದ್ದಾನೆ. ಸಂಪಾದನೆಯ ಪರ್ವತೇಶ ತನ್ನ ಚತುರಾಚಾರ್ಯಪುರಾಣದಲ್ಲಿ ''ಗುರುವಿನನುಪಮಪೀಠಕಾ ಪ್ರಸಾದದ ಮಹಿಮಸರಸಾನು ಭಾವನಾದ ಬೋಳಬಸವ'' ಎಂದು, ಸಂಪಾದನೆಯ ಗುರುಲಿಂಗದೇವ ತನ್ನ

ಶೀಲವಂತಯ್ಯನ ತ್ರಿವಿಧಿವ್ಯಾಖ್ಯಾನದಲ್ಲಿ ''ತೋಂಟದ ಸಿದ್ಧಲಿಂಗಪ್ರಭುವೆಂಬಾಚಾರ್ಯರ ನಿಜದರಿವಿನಾಚರಣೆಯನುಭವಿಯೇ ಬೋಳಬಸವೇಶ್ವರನು'' ಎಂದು ಹೇಳಿದ್ದಾರೆ.

ಈ ಎಲ್ಲ ಗುಣ ವಿಶೇಷಣಗಳು ಬೋಳಬಸವನೊಬ್ಬ ಶ್ರೇಷ್ಠ ವಿರಕ್ತನಾಗಿದ್ದ, ಮಹಾನುಭಾವಿಯಾಗಿದ್ದ, ಸಚ್ಚಾರಿತ್ರ, ಸದ್ಭಕ್ತಿ, ಕಡುಸಂಯಮ, ಸಾತ್ವಿಕತೆ, ಸದ್ಗುಣಗಳ ಸಂಗಮನೆನಿಸಿ ಶಿವಸಾಕಾರವೆನಿಸಿದ್ದ, 'ಸದ್ಗುರುವಿನಿಂದಾದ ಶಿಷ್ಯ ಸದ್ಗುರುವಪ್ಪುದು ತಪ್ಪದು' ಎಂಬಂತೆ ಘನಗುರು-ಗುರುಕುಲಾಗ್ರಣಿ ಎನಿಸಿದ್ದ. ಪಾಪದೂರನಾಗಿ, ಪಾಪಿಗಳನ್ನು ತನ್ನ ಪರುಷದೃಷ್ಟಿ-ಪರುಷನುಡಿ-ಪರುಷಹಸ್ತದಿಂದ ಪವಿತ್ರಗೊಳಿಸುವ ಪರಶಿವಮೂರ್ತಿ ಎನಿಸಿದ್ದ, ಪರಮಶಾಂತಿಯೇ ಮೈವೆತ್ತಂತಿರುವ ಪರಂಜ್ಯೋತಿಸ್ವರೂಪನಾಗಿದ್ದ ಎಂಬುದನ್ನು ಎತ್ತಿ ಹೇಳುತ್ತವೆ; ಆತನ ವ್ಯಕ್ತಿತ್ವದ ಉತ್ತುಂಗತೆಯನ್ನು ಹೊತ್ತು ಸಾರುತ್ತವೆ.

**ಶಿಷ್ಯಪರಂಪರೆ:** ತೋಂಟದ ಸಿದ್ಧಲಿಂಗರ ಶಿಷ್ಯ-ಪ್ರಶಿಷ್ಯ ಪರಂಪರೆ ಅನಂತ ಶಾಖೋಪಶಾಖೆಗಳಲ್ಲಿ ಹಬ್ಬಿ ಮಹಾವೃಕ್ಷವಾಗಿ ಬೆಳೆದುನಿಂತಿದೆ. ಇವರ ಶಿಷ್ಯರಲ್ಲಿ ಬೋಳಬಸವೇಶ್ವರನಿಗೆ ಅಗ್ರಪ್ರಾಶಸ್ತ್ಯ. ಸಿದ್ಧಲಿಂಗರ ಪ್ರಥಮ ಶಿಷ್ಯನಾಗಿ ಅವರ ನಂತರದಲ್ಲಿ ನಿರಂಜನಪೀಠವನ್ನು ಮುಂದುವರಿಸಿಕೊಂಡು ಸಾಗಿದ ಈತನಿಂದ ಅನುಗ್ರಹಿತರಾಗಿ, ಶಿಷ್ಯತ್ವ ವಹಿಸಿ ಸಾಹಿತ್ಯ-ಸಿದ್ಧಾಂತ-ಆಧ್ಯಾತ್ಮ ಕ್ಷೇತ್ರಗಳಲ್ಲಿ ಗಣನೀಯ ಸೇವೆ ಸಲ್ಲಿಸಿದವರ ಸಂಖ್ಯೆ ಅಪಾರ. ಅವರಲ್ಲಿ ಕೆಲವರು ಕೇವಲ ಆಧ್ಯಾತ್ಮವಾದಿಗಳಾಗಿ ಷಟ್‌ಸ್ಥಲೋಪದೇಶ ಮಾಡುತ್ತ ಲೋಕಕಲ್ಯಾಣಕಾರ್ಯದಲ್ಲಿ ತೊಡಗಿದವರಾದರೆ, ಮತ್ತೆ ಕೆಲವರು ಸಾಹಿತ್ಯಸೃಷ್ಟಿ ಮಾಡಿ ಆಧ್ಯಾತ್ಮತತ್ವಗಳನ್ನು ಸಾಹಿತ್ಯಕೃತಿಗಳ ಮೂಲಕ ಜನತೆಗೆ ಬೋಧಿಸಿದವರು. ಇನ್ನೂ ಕೆಲವರು ಬಸವಾದಿಪ್ರಮಥರು ಉಸುರಿದ ವಚನಸಾಹಿತ್ಯವನ್ನು ಶೋಧಿಸುವ, ಸ್ಥಲಾನುಗುಣವಾಗಿ ಜೋಡಿಸುವ, ವ್ಯಾಖ್ಯಾನ, ಟೀಕೆ-ಟಿಪ್ಪಣಿ ಬರೆಯುವ ಕಾರ್ಯದಲ್ಲಿ ತೊಡಗಿದವರು. ವಿವಿಧ ಮೂಲಗಳಲ್ಲಿ ದೊರೆಯುವ ಆತನ ಶಿಷ್ಯ-ಪ್ರಶಿಷ್ಯ ಪರಂಪರೆಯನ್ನು, ಅದರಲ್ಲಿ ಉಂಟಾದ ಕವಲುಗಳನ್ನು ಕೆಳಗಿನಂತೆ ಗುರುತಿಸಬಹುದು:




---

* i. ಷಟ್‌ಸ್ಥಲಜ್ಞಾನಸಾರಾಮೃತ ಬೆಡಗಿನವಚನ ಟೀಕೆ
ii. ಶೀಲವಂತಯ್ಯನ ತ್ರಿವಿಧಿ ವ್ಯಾಖ್ಯಾನ
iii. ಚತುರಾಚಾರ್ಯಪುರಾಣ
iv. ಪಾಲ್ಕುರಿಕೆ ಸೋಮನಾಥಪುರಾಣ
v. ಮಾಚಿದೇವ ಮನೋವಿಲಾಸ




## ನಿರಂಜನ ಪೀಠ ಪರಂಪರೆ*




* ಸಿದ್ಧಲಿಂಗ ಶಿವಯೋಗಿ, ಮೈಸೂರು ವಿಶ್ವವಿದ್ಯಾನಿಲಯದ ಪ್ರಕಟಣೆ, ಪು. ೧೧೨ರ ನಂತರದ ನಕ್ಷೆ


ಅರ್ಧನಾರೀಶ್ವರಸ್ವಾಮಿ
ಈಸೂರ ನಂದೀಶ್ವರಸ್ವಾಮಿ
ಸದಾಶಿವಸ್ವಾಮಿ
ಮಹಾಂತಸ್ವಾಮಿ
ವೃದ್ಧ ತೋಂಟದಾರ್ಯ
ಮೃತ್ಯುಂಜಯಸ್ವಾಮಿ
ಸಿದ್ದೇಶ್ವರಸ್ವಾಮಿ
ಗುರುಬಸವಸ್ವಾಮಿ
ಶಿವಕುಮಾರಸ್ವಾಮಿ
ತೋಂಟದ ಸಿದ್ಧಲಿಂಗಸ್ವಾಮಿ
(ಗದುಗಿನಲ್ಲಿದ್ದವರು)
ಕಪ್ಪಿನಂಜೇ ಸ್ವಾಮಿ
ಸ್ವಾದಿವೀರಚೆನ್ನ ಬಸವಾರ್ಯ
ಮಹಾಂತ ಸ್ವಾಮಿ
ಶಿರಹಟ್ಟಿ ಸಿದ್ಧಲಿಂಗಸ್ವಾಮಿ
ಗುರುಪಾದಸ್ವಾಮಿ
ಮೂರು ಸಾವಿರದ ಗುರುಪಾದಸ್ವಾಮಿ
ಮೂರು ಸಾವಿರದ ಸಿದ್ಧಲಿಂಗಸ್ವಾಮಿ
ಒಪ್ಪೊತ್ತಿನ ಚೆನ್ನವೀರಸ್ವಾಮಿ
ಗುರುಮಲ್ಲಸ್ವಾಮಿ
ವ್ಯಾಕರಣದ ಸಿದ್ಧಲಿಂಗಸ್ವಾಮಿ
ನಿಘಂಟಿನ ಸಿದ್ಧಬಸವಸ್ವಾಮಿ
ಸಣ್ಣ ಬರಹದ ರಾಚೋಟಸ್ವಾಮಿ
ಮಹಾಲಿಂಗಸ್ವಾಮಿ
ಹೆಬ್ಬಾಳದ ರುದ್ರಸ್ವಾಮಿ
ಮುಪ್ಪಿನ ರುದ್ರಸ್ವಾಮಿ
ಮುಪ್ಪಿನಸ್ವಾಮಿ
ಸಿದ್ಧಬಸವಸ್ವಾಮಿ
ಹುಬ್ಬಳ್ಳಿ ಸಂಗನ ಬಸವದೇಶಿಕ
ಶಾಂತವೀರದೇಶಿಕ
ಕುಮಾರದೇಶಿಕ
ಶಿವಪೂಜಾ ಬಸವಲಿಂಗದೇಶಿಕ
ಇಮ್ಮಡಿ ಬಸವಲಿಂಗದೇಶಿಕ
ಸಿದ್ಧಬಸವಲಿಂಗದೇಶಿಕ
ಬಸವಲಿಂಗದೇಶಿಕ

|
ಜಯದೇವಸ್ವಾಮಿ
|
ಜಯವಿಭವಸ್ವಾಮಿ
|
ಮಲ್ಲಿಕಾರ್ಜುನಸ್ವಾಮಿ
(ಚಿತ್ರದುರ್ಗದ ಬೃಹನ್ಮಠದ ಅಧ್ಯಕ್ಷರು)

ಕನ್ನಡ ಸಾಹಿತ್ಯ ಮತ್ತು ಸೈದ್ಧಾಂತಿಕ ಕ್ಷೇತ್ರಗಳಿಗೆ ಬೋಳಬಸವೇಶನ ಶಿಷ್ಯರು ಕೊಟ್ಟ ಕೊಡುಗೆ ಅನನ್ಯವಾದುದು. ಗುಮ್ಮಳಾಪುರದ ಸಿದ್ಧಲಿಂಗ, ಗೂಳೂರ ಸಿದ್ಧವೀರಣ್ಣೊಡೆಯರು ಶಿವಶರಣರ ಮಹಾನುಭಾವ ಪ್ರಸಂಗವೆನಿಸಿದ ಶೂನ್ಯಸಂಪಾದನೆಗಳನ್ನು ಸಂಯೋಜಿಸಿದರೆ, ಹರತಾಳ ಚೆನ್ನಂಜೇದೇವ, ಎಳಮಲೆಯ ಗುರುಶಾಂತದೇವ, ಸಂಪಾದನೆಯ ಸಿದ್ಧ ವೀರಣಾರ್ಯ, ಸಂಪಾದನೆಯ ಬೋಳಬಸವ ಮೊದಲಾದವರು ಬಸವಾದಿ ಶರಣರ ವಚನಗಳನ್ನು ಸಂಗ್ರಹಿಸುವ, ಸ್ಥಲಾನುಗುಣವಾಗಿ ಸಂಕಲಿಸುವ ಕಾರ್ಯ ಮಾಡಿ, ಪರ್ವತಶಿವಯೋಗಿ, ವಿರಕ್ತತೋಂಟದಾರ್ಯ, ಎಳಂದೂರ ಹರೀಶ್ವರ, ಆನಂದ ಬಸವಲಿಂಗಶಿವಯೋಗಿ, ಕಟ್ಟಿಗೆಹಳ್ಳಿ ಸಿದ್ಧಲಿಂಗ, ಮುರಿಗೆ ಗುರುಸಿದ್ಧದೇವ ಮೊದಲಾದವರು ವಿಶಿಷ್ಟಕಾವ್ಯರಚನೆ ಮಾಡಿ, ಸಂಪಾದನೆಯ ಗುರುಲಿಂಗದೇವ, ಸೋಮಶೇಖರಶಿವಯೋಗಿ ಕಾವ್ಯ, ವಚನ, ಶಾಸ್ತ್ರಗಳಿಗೆ ವ್ಯಾಖ್ಯಾನ, ಟೀಕೆ ಟಿಪ್ಪಣಿ ಬರೆದು ವೀರಶೈವ ಸಾಹಿತ್ಯಕ್ಷೇತ್ರವನ್ನು ಶ್ರೀಮಂತಗೊಳಿಸಿದ್ದಾರೆ. 'ಸಂಪಾದನ ಸಮಯ' ಎಂಬುದೊಂದು ಈ ಪರಂಪರೆಯಲ್ಲಿ ಹುಟ್ಟಿಕೊಂಡು ನೂರೊಂದು ವಿರಕ್ತರ ನಂತರ ಬಸವಾದಿ ಪ್ರಮಥರ ವಚನಸಾಹಿತ್ಯವನ್ನು ರಕ್ಷಿಸುವ-ಉಳಿಸುವ-ಬೆಳೆಸುವ-ಅದರ ಉದಾತ್ತತೆಯನ್ನು ಎತ್ತಿತೋರುವ ಕಾರ್ಯವನ್ನು ಸಾಂಘಿಕವಾಗಿ ತುಂಬ ಯಶಸ್ವಿಯಾಗಿ ನೆರವೇರಿಸಿ, ವಚನಸಾಹಿತ್ಯದ ಪುನರುಜ್ಜೀವನಕ್ಕೆ ಕಾರಣವಾಯಿತು.

ಇನ್ನು ಆಧ್ಯಾತ್ಮಕ್ಷೇತ್ರದತ್ತ ದೃಷ್ಟಿ ಹರಿಸಿದರೆ, ಅಲ್ಲಿಯೂ ಬೋಳಬಸವನ ಶಿಷ್ಯಪರಂಪರೆ ಅದ್ವಿತೀಯವಾದ ಕೆಲಸ ಮಾಡಿದುದು ಗಮನಕ್ಕೆ ಬರುತ್ತದೆ. ಗಗನಾರ್ಯನಿಂದ ಮುಂದುವರಿದ ಈ ಪರಂಪರೆಯಲ್ಲಿ ಮುಂದೆ ಚೀಲಾಳ ಸಮಯ-ಮುರಿಗಾ ಸಮಯ-ಕುಮಾರ ಸಮಯ ಎಂಬ ಮೂರು ಶಾಖೆಗಳು ಹುಟ್ಟಿಕೊಂಡು, ಒಂದೊಂದು ಶಾಖೆಗಳೂ ಸ್ವತಂತ್ರಪೀಠಗಳಾಗಿ ಬೆಳೆದು ಧಾರ್ಮಿಕಜಾಗೃತಿ, ವೀರಶೈವ ಧರ್ಮತತ್ವ-ಸಾಹಿತ್ಯ-ಸಿದ್ಧಾಂತಗಳ ಪ್ರಚಾರ, ತನ್ಮೂಲಕ ಮಾನವಕಲ್ಯಾಣವನ್ನು ನಿರಂತರವಾಗಿ ಮಾಡುತ್ತ ಸಾಗಿದವು.

ಈ ಎಲ್ಲ ಚಟುವಟಿಕೆಗಳು ತುಂಬ ವ್ಯವಸ್ಥಿತವಾಗಿ, ವ್ಯಾಪಕವಾಗಿ ನಡೆಯಲು ಬೋಳಬಸವೇಶ್ವರನು ಸತ್‌ಸಂಪ್ರದಾಯ ಹಾಕಿಕೊಟ್ಟು ಚೈತನ್ಯದ ಚಿಲುಮೆಯಾಗಿ, ಪ್ರೇರಕಶಕ್ತಿಯಾಗಿ, ಮಾರ್ಗದರ್ಶಿಯಾಗಿ ನಿಂತುದೇ ಕಾರಣವಾಗಿದೆ.

ಭಾವಚಿಂತಾರತ್ನದ ''ಲೌಲ್ಯವಲಿದೇವ ನಿಮ್ಮಯ ವಚನ'' ಎಂಬ ಉಕ್ತಿಯನ್ನು ಗಮನಿಸಿ ಬೋಳಬಸವೇಶ್ವರನು (ಶಿವಪೂಜೆಯಾರ್ಯ) ವಚನಕಾರನಾಗಿದ್ದನೆಂದು ವಿದ್ವಾಂಸರು ಊಹಿಸಿದ್ದಾರೆ. ಆದರೆ ಆತ ರಚಿಸಿರಬಹುದಾದ ಒಂದು ವಚನವೂ

ಇದುವರೆಗೂ ದೊರೆತಿಲ್ಲ. ಇದರಿಂದ ಮೇಲಿನ ಉಕ್ತಿ ಆತ ರಚಿಸಿದ ವಚನಗಳನ್ನು ಸೂಚಿಸದೆ ಆತನ ಮಾತಿನ ಮಾಧುರ್ಯ, ವಾಕ್‌ಚಾತುರ್ಯವನ್ನು ಧ್ವನಿಸುವಂತಿದೆ ಎಂದು ಹೇಳಬಹುದು. ಮಹಾಲಿಂಗೇಂದ್ರವಿಜಯ ಮತ್ತು ನಿರಂಜನವಂಶರತ್ನಾಕರಗಳು ಬೋಳಬಸವನು ಮಹಾಪಂಡಿತನಾಗಿದ್ದ, ವೇದಾಗಮ ಪುರಾಣಶಾಸ್ತ್ರಗಳು ಆತನಿಗೆ ಕರತಲಾಮಲಕವಾಗಿದ್ದವು, ವಾದದಲ್ಲಿ ಆತ ಅನೇಕ ಪಂಡಿತರನ್ನು ಸೋಲಿಸಿದ ಎಂದು ಹೇಳುತ್ತವೆ. ಇದಕ್ಕೆ ಪೋಷಕವೆನ್ನುವಂತೆ 'ವಾದಕಾಂಡವಿಚಾರ ಸಂಗ್ರಹ' ಮತ್ತು 'ಜಂಗಮ ಮಹತ್ವ' ಎಂಬ ಕೃತಿಗಳನ್ನು ಸಂಸ್ಕೃತದಲ್ಲಿ ರಚಿಸಿದ್ದಾನೆಂದು ತಿಳಿದುಬರುತ್ತದೆ.[೪೧]

ಡಾ|| ಎಲ್. ಬಸವರಾಜು ಅವರು "ಬೋಳಬಸವನು ಸಂಪಾದಿಸಿದ ಬಸವಾದಿ ಪ್ರಮಥರ ಒಂದು ವಚನಸಂಕಲನವಿದೆ. ವಿರಕ್ತರ ಆಚರಣೆಗೆ ಸಂಬಂಧಿಸಿದ್ದು" ಎಂದು ಹೇಳಿದ್ದಾರೆ.[೪೨] ಆದರೆ ಇದು[೪೩] ಈತನ ಪ್ರಶಿಷ್ಯನಾದ ಸಂಪಾದನೆಯ ಬೋಳಬಸವನದಾಗಿದೆ. ಪ್ರೊ|| ಸಿ. ಮಹಾದೇವಪ್ಪನವರು "ತೋಂಟದ ಸಿದ್ದೇಶ್ವರನ ಶಿಷ್ಯನಾದ ಬೋಳೇಶನ ವಚನವನ್ನು ಉದಾಹರಿಸುವುದಾಗಿ ಕಂಬಾಳ ಶಾಂತಮಲ್ಲೇಶ ಅಥವಾ ಕಂಬಾಳದೇವ ಹೇಳಿರುವುದರಿಂದ ಮಲ್ಲಣಾರ್ಯನು ಸೂಚಿಸಿರುವಂತೆ ಬೋಳಬಸವೇಶನು ವಚನಕಾರ ನಾಗಿದ್ದನೆಂಬುದು ಯಥಾರ್ಥವಾದ ಸಂಗತಿಯೆಂದು ತಿಳಿಯಬಹುದು" ಎಂದಿದ್ದಾರೆ.[೪೪] ಆದರೆ ಗಣವಚನರತ್ನಾವಳಿಯಲ್ಲಿ ಸೇರಿದ ಸ್ವರವಚನಗಳು ಸಿದ್ಧಲಿಂಗೇಶ್ವರರ ಶಿಷ್ಯ ಬೋಳಬಸವೇಶನವಾಗಿರದೆ ನೂರೊಂದು ವಿರಕ್ತರಲ್ಲಿ ಒಬ್ಬನಾಗಿರಬಹುದಾದ ನಿರ್ವಾಣಿ ಬೋಳೇಶನವಾಗಿವೆ.[೪೫]

ಇದರಿಂದ ಬೋಳಬಸವೇಶ್ವರ ರಚಿಸಿದ ಒಂದೂ ಕೃತಿ ಇನ್ನೂ ಲಭ್ಯವಾಗಿಲ್ಲವೆಂದೇ ಹೇಳಬೇಕಾಗುತ್ತದೆ. ಹೀಗೆಂದಾಕ್ಷಣ ಆತನ ವ್ಯಕ್ತಿತ್ವಕ್ಕೇನೂ ಕುಂದಿಲ್ಲ. ಸಾಹಿತ್ಯಕೃತಿ ರಚನೆಗಿಂತ ಆತ ಧಾರ್ಮಿಕ, ಸಾಮಾಜಿಕ, ಆಧ್ಯಾತ್ಮಿಕ ಕ್ಷೇತ್ರಗಳಲ್ಲಿ ಮಾಡಿದ ಕಾರ್ಯ ನೂರುಪಟ್ಟು ಹಿರಿದಾಗಿದೆ. ಆಧ್ಮಾತ್ಮಕೇಂದ್ರವನ್ನು ಸ್ಥಾಪಿಸಿ ಏಳುನೂರು ಜನ ಚರಮೂರ್ತಿಗಳಿಗೆ, ಮೂರುಸಾವಿರ ಜನ ವಿರಕ್ತರಿಗೆ ಯೋಗ್ಯ ತರಬೇತಿ ಕೊಟ್ಟು ಲೋಕಕಲ್ಯಾಣ ಕಾರ್ಯದಲ್ಲಿ ತೊಡಗುವಂತೆ ಮಾಡಿದ್ದು, ದೇಶಸಂಚಾರ ಕೈಕೊಂಡು ದೀನರ-ದುಃಖಿತರ ನೋವು, ದಾರಿದ್ರ್ಯಗಳನ್ನು ದೂರ ಮಾಡಿದ್ದು, ಗುಬ್ಬಿ ಮಲ್ಲಣಾರ್ಯ, ಗುಮ್ಮಳಾಪುರದ ಸಿದ್ಧಲಿಂಗ, ಗೂಳೂರ ಸಿದ್ದವೀರಣ್ಣೊಡೆಯ ಮೊದಲಾದವರಿಗೆ ಕೃತಿರಚನೆಗೆ ಪ್ರೇರಣೆ ನೀಡಿದ್ದು, ಮಹಾನಾಡಪ್ರಭುಗಳ ರಾಜಗುರುಗಳಾಗಿ ಉನ್ನತ ಮಾರ್ಗದರ್ಶನ ನೀಡಿದ್ದು, ತಮ್ಮ ಸಾತ್ವಿಕ ನಡೆ ನುಡಿ, ನಿರ್ಮಲ ಬೋಧೆಯ ಮೂಲಕ ಮಾನವಸಮಾಜವನ್ನು ಋಜುತ್ವಮಾರ್ಗದತ್ತ ನಡೆಸಿದ್ದು–ಯಾವ ಮಹಾಕಾವ್ಯ ರಚನೆಗೂ ಕಡಿಮೆಯದಲ್ಲ.

ಈ ಗುರುಶ್ರೇಷ್ಠನನ್ನು ಅವರ ಶಿಷ್ಯ-ಪ್ರಶಿಷ್ಯರು ತಮ್ಮ ಕೃತಿಗಳಲ್ಲಿ ಸ್ತುತಿಸಿ ಕೃತಜ್ಞತೆ

---

೪೧ ಆರ್. ಸಿ. ಹಿರೇಮಠ, ಸಂ.: ಗುಮ್ಮಳಾಪುರದ ಸಿದ್ಧಲಿಂಗನ ಶೂನ್ಯಸಂಪಾದನೆ, ಪ್ರಸ್ತಾವನೆ, ಪು. ೧೭ ನಿರಂಜನಜಂಗಮವಂಶದರ್ಪಣ

೪೨ ಮಹಾಲಿಂಗೇಂದ್ರವಿಜಯ, ಪೀಠಿಕೆ, ಪು. ೪೨

೪೩ ಇದರ ಹೆಸರು 'ಷಟ್‌ಸ್ಥಲಬ್ರಹ್ಮಾನಂದ ವಿರಕ್ತಚಾರಿತ್ರ, ಸಂಪಾದನೆಯ ವಚನಗಳು'

೪೪ ಸಿದ್ಧಲಿಂಗ ಶಿವಯೋಗಿ, ಮೈಪಿಪಿ., ಪು. ೧೦೪

೪೫ ನೋಡಿ: ಎಸ್. ಉಮಾಪತಿ, ಸಂ.: ಗುಣವಚನ ರತ್ನಾವಳಿ, ಗದಗ

ಸಲ್ಲಿಸಿದ್ದಾರೆ. ಆತನ ಶಿಷ್ಯರಲ್ಲೊಬ್ಬನಾದ ಗುಮ್ಮಳಾಪುರದ ಸಿದ್ಧಲಿಂಗನು ತಾನು ರಚಿಸಿದ ವಚನಗಳಿಗೆ ''ಜೋಳಬಸವೇಶ್ವರಾ ನಿಮ್ಮ ನಿಮ್ಮ ಧರ್ಮ''[೪೬] ಎಂಬ ಅಂಕಿತವನ್ನು ಇಟ್ಟುಕೊಂಡು ಗುರುವಿನ ಹೆಸರನ್ನು ಚಿರಗೊಳಿಸಿದ್ದಾನೆ.[೪೭] ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯ ಕನ್ನಡ ಅಧ್ಯಯನಪೀಠದಲ್ಲಿ ಅಸ್ತಿತ್ವಕ್ಕೆ ಬಂದ ಬಸವೇಶ್ವರಪೀಠದ ವೀರಶೈವ ಗ್ರಂಥಾಲಯದಲ್ಲಿ ಸಿದ್ಧಲಿಂಗರು ಜೋಳಬಸವೇಶ್ವರನಿಗೆ ಷಟ್‌ಸ್ಥಲೋಪದೇಶ ಮಾಡುವ ಒಂದು ಅಪೂರ್ವ ತೈಲಚಿತ್ರವಿದೆ. ಅದು 'ಊಟ' ಎಂಬ ಗ್ರಾಮದಿಂದ ತಂದುದಾಗಿದೆ. ಆ ಊರಿನ ಸದ್ಭಕ್ತರು ಅದನ್ನು ಬರೆಯಿಸುವುದರ ಮೂಲಕ ಆ ಗುರುಶಿಷ್ಯರಿಗೆ ಗೌರವ ಸಲ್ಲಿಸಿದ್ದಾರೆ. ವೀರಶೈವ ಸಾಹಿತ್ಯ ಸಂಸ್ಕೃತಿಗಳ ಪಿತಾಮಹರೆನಿಸಿದ ಡಾ|| ಬಿ. ಶಿವಮೂರ್ತಿಶಾಸ್ತ್ರಿಗಳು ಈತನ ಸ್ಥಳದ ಬಗೆಗೆ ಹೆಚ್ಚಿನ ಸಂಶೋಧನೆ ಕೈಕೊಂಡು,[೪೮] ಕಾವ್ಯಗಳಲ್ಲಿ ಉಕ್ತವಾಗಿದ್ದಂತೆ ಜೋಳಬಸವೇಶನ ಗದ್ದುಗೆ ಮದ್ದಗಿರಿ ಗಿರಿಯಲ್ಲಿ ಇಲ್ಲ; ನೆರೆಯ ಊರಾದ ಸಿದ್ಧಾಪುರದಲ್ಲಿದೆ ಎಂದು ಗುರುತಿಸಿದ್ದಾರೆ. ''ಈಗ ಅದು ಜೋಳಾರಾಧ್ಯರಮಠ, ಬಾಳಯ್ಯಸ್ವಾಮಿಮಠ ಎಂದು ಕರೆಯಿಸಿಕೊಳ್ಳುತ್ತದೆ. ಈ ವಿಷಯ ಈ ಪರಂಪರೆಯ ಗುರುಗಳಿಗೇ ಗೊತ್ತಿಲ್ಲ. ಅಲ್ಲಿಗೆ ಹೋಗಿ ಭಕ್ತಿಪೂಜೆ ಸಲ್ಲಿಸುತ್ತಿಲ್ಲ. ಈ ಸ್ಥಿತಿಯು ವೀರಶೈವ ಸಮಾಜದ ಭಾವದಾರಿದ್ರ್ಯಕ್ಕೆ ಒಂದು ಒಳ್ಳೆಯ ನಿದರ್ಶನವಾಗಿದೆ'' ಎಂದು ಅವರು ವಿಷಾದ ವ್ಯಕ್ತಪಡಿಸಿದ್ದಾರೆ. ಆದರೆ ಆಲಸ್ಯ ಅಜ್ಞಾನಗಳನ್ನು ಅರಿಯದೆ ನಿತ್ಯ ಲೋಕಕಲ್ಯಾಣವನ್ನೇ ಚಿಂತಿಸಿದ ಈ ಯೋಗಿ ನಮ್ಮ ಈ ದಾರಿದ್ರ್ಯವನ್ನು ಲೆಕ್ಕಿಸದೆ, ಅನ್ಯರಿಂದ ಯಾವುದೇ ರೀತಿಯ ಗೌರವಾದರಗಳನ್ನು ಬಯಸದೆ, ಸ್ವಯಂ ಗೌರವಾನ್ವಿತನಾಗಿ ಸಿದ್ಧಾಪುರದ ಸಿದ್ಧಸಮಾಧಿಯಲ್ಲಿ ಪ್ರಶಾಂತಚಿತ್ತದಿಂದ ಮಲಗಿದ್ದಾನೆ. ಆತನ ದಿವ್ಯಚೇತನ ಮಾತ್ರ ಸದಾ ಜಾಗೃತವಾಗಿದ್ದು ಪರಂಜ್ಯೋತಿಯಂತೆ ಲೋಕವನ್ನೇ ಬೆಳಗುತ್ತಿದೆ. ಆ ಬೆಳಕಿನಿಂದ ಬಾಳು ಬೆಳಗಿಸಿಕೊಳ್ಳುವುದು ಬಿಡುವುದು ನಮಗೆ ಸೇರಿದ್ದು.

*ಸಂಶೋಧನಾ, ೧೯೯೧, ಪು. ೫೧೭-೨೦*

---

೪೬ ಈ ವಚನ ಸಂಕಲನಕ್ಕೆ 'ಷಟ್‌ಸ್ಥಲ ಲಿಂಗಾಂಗಸಂಬಂಧದ ನಿರ್ವಚನ' ಎಂದು ಹೆಸರು. ಇದರಲ್ಲಿ ೧೮ ವಚನಗಳಿವೆ.

೪೭ ಆಧುನಿಕ ವಚನಕಾರರಾದ ಪಿ. ಬಸವಣ್ಣ ಅವರು 'ಜೋಳಬಸವೇಶ್ವರ' ಎಂಬ ಅಂಕಿತದಲ್ಲಿ ವಚನಗಳನ್ನು ರಚಿಸಿದ್ದಾರೆ. ಅವರ ವಚನಸಂಕಲನದ ಹೆಸರು: 'ಜೋಳಬಸವನ ಜೊಂತೆ'.

೪೮ ಬಿಜ್ಜಾವರ ಮತ್ತು ಸಿದ್ಧಾಪುರ, (ಬ.ಪ. ೮-೨, ಪು. ೬೪)

# ೧೮. ನಾಮಧಾರಿ ಲಿಂಗಾಯಿತರು

● ಕೆ. ಜಿ. ನಾಗರಾಜಪ್ಪ

೧

ನಾಮಧಾರಿ ಲಿಂಗಾಯಿತರು ಎಂಬ ಶಬ್ದ ಕಿವಿಗೆ ಬಿದ್ದೊಡನೆ ವೀರಶೈವರಿಗೆ ಮೈ ಉರಿಯುತ್ತದೆ, ಅನ್ಯರಿಗೆ ಕಿವಿ ನಿಮಿರುತ್ತದೆ. ವಿಷ್ಣುಭಕ್ತರಿಗೆ ತಬ್ಬಿಬ್ಬಾಗುತ್ತದೆ. ಎಂದೂ ಕಂಡಿರದ, ಕೇಳರಿಯದ, ವೀರಶೈವ ಪರ ಮತ್ತು ವಿರೋಧಿ–ಯಾವ ಗ್ರಂಥಗಳಲ್ಲಿಯೂ ಹೆಸರಿಸದ ಈ ನಾಮಧಾರಿ ಪಂಗಡ ಯಾವುದು ಎಂದು ಸೋಜಿಗವಾಗುತ್ತದೆ. ಪರಮಪತಿವ್ರತೆಗೆ ಗಂಡನೊಬ್ಬ ಹೇಗೊ ಹಾಗೆ ವೀರಶೈವ ಭಕ್ತನಿಗೆ ಶಿವನೊಬ್ಬನೇ ದೇವರು. ಏಕದೇವತಾನಿಷ್ಠನಾದ ಶಿವಭಕ್ತ, ಪತಿವ್ರತಾಧರ್ಮದ ವ್ರತಿಯಾಗಿ, ತಾನು ನಂಬಿರುವ ತತ್ತ್ವಕ್ಕೆ ವಿರುದ್ಧ ನಾಮಧಾರಿಯಾಗಿ ಶರಣ ಸತಿ, ಲಿಂಗ ಪತಿ ಧರ್ಮಕ್ಕೆ ಭಂಗ ತರುವುದು ಎಂದಾದರೂ ಸಾಧ್ಯವೇ? ಅಂಥ ಒಂದು ಪಂಗಡ ಯಾರ ಕಣ್ಣಿಗೂ ಬೀಳದೆ ಒಂದು ಪಕ್ಷ ಅಸ್ತಿತ್ವದಲ್ಲಿದ್ದರೆ, ಅದರ ಪದ್ಧತಿ ಯಾವುದು? ಅದಕ್ಕೆ ಇತಿಹಾಸವಿದೆಯೊ ಅಥವಾ ಇತ್ತೀಚಿನದೊ? ಅದು ವೀರಶೈವರ ಒಂದು ಒಳಪಂಗಡವೊ ಅಥವಾ ಅವರ ವಿರುದ್ಧ ಸಿಡಿದು ಪ್ರತ್ಯೇಕಗೊಂಡ ಪಂಥವೊ? ಅದರ ಆಚಾರ ವಿಚಾರಗಳು ಯಾವುವು? ನಾಮಧಾರಿ ಲಿಂಗಾಯಿತರಿಗೆ ವೀರಶೈವ ವಿಧಿಯಂತೆ ದೀಕ್ಷೆಯಾಗುವುದೊ ಇಲ್ಲವೊ? ಅದರ ಮೂಲ ಪುರುಷ ಯಾರು? ಮುಂತಾದ ಪ್ರಶ್ನೆಗಳ ಸುರಿಮಳೆಯಾಗುತ್ತದೆ. ಆದರೆ ಸಹನೆಯಿಂದ ಪರಿಶೀಲಿಸಿದರೆ ಇಂಥ ಒಂದು ಪದ್ಧತಿ ವೀರಶೈವಧರ್ಮದ ಆಚರಣೆಯಲ್ಲಿಯೇ ಬಹು ಹಿಂದಿನಿಂದಲೂ ಮುಂದುವರಿದಿರುವುದು ಕಂಡುಬರುತ್ತದೆ. ವೀರಶೈವ ವಿದ್ವಾಂಸರು ಗೊತ್ತಿದ್ದೂ ಗೊತ್ತಿಲ್ಲದಂತೆ (ಕಂಡೂ ಕಾಣದಂತೆ) ಇರುವುದರಿಂದಲೊ, ಅನ್ಯಮತೀಯ ವಿದ್ವಾಂಸರಿಗೆ ಅರ್ಥವಾಗದೆಯೊ, ಸಮಾಜಶಾಸ್ತ್ರಜ್ಞರ ಅಸಡ್ಡೆಯಿಂದಲೊ ಅಥವಾ ತಾಂತ್ರಿಕ ಅಂಶಗಳ ತೊಡಕಿನಿಂದಲೊ ನಾಮಧಾರಿ ಲಿಂಗಾಯಿತರ ಆಚರಣೆಯನ್ನು ಯಾರೂ ಅಧ್ಯಯನ ಮಾಡಿರುವುದಿಲ್ಲ. ಆದರೆ ನಾಮಧಾರಿ ಲಿಂಗಾಯಿತರ ಅಧ್ಯಯನ ಕರ್ನಾಟಕ ಸಂಸ್ಕೃತಿ ಅಧ್ಯಯನಕ್ಕೆ ಒಂದು ವಿಶೇಷ ಕಾಣಿಕೆಯಾಗುವುದರಲ್ಲಿ ಯಾವ ಸಂಶಯವೂ ಇಲ್ಲ. ವೀರಶೈವ ಧರ್ಮಕ್ಕೆ ಎಷ್ಟು ಇತಿಹಾಸವಿದೆಯೋ ಅಷ್ಟೇ ಇತಿಹಾಸ ನಾಮಧಾರಿ ಲಿಂಗಾಯಿತರ ಆಚರಣೆಗೂ ಇದೆ. ವಚನಗಳಲ್ಲಿ ನೇರವಾಗಿ ಅಲ್ಲದಿದ್ದರೂ ಪರೋಕ್ಷವಾಗಿ ಅನ್ಯಮತಖಂಡನೆ ಮತ್ತು ಶಿವಭಕ್ತ ಅನಾಚಾರಿಗಳ ನಿಂದೆಯಲ್ಲಿ ನಾಮಧಾರಿ ಲಿಂಗಾಯಿತರ ಮೂಲವನ್ನು ಅರಸಬಹುದಾಗಿದೆ. ದೀಕ್ಷೆ ಹೊಂದಿ ವೀರಶೈವರಾದ ಅನಂತರವೂ ಬಹು ದೇವತೋಪಾಸನೆಯನ್ನು ಮುಂದುವರಿಸಿದವರನ್ನು ಡಾಂಬಿಕರು, ಅನಾಚಾರಿಗಳು ಎಂದು ಕರೆಯುತ್ತಾರೆ. ಅನಾಚಾರಿಗಳನ್ನು ಬಸವಣ್ಣನವರು ಹಾದರಿಗರು ಎನ್ನುತ್ತಾರೆ. ಶಿವಭಕ್ತರಾದ ವಿಷ್ಣು ಪೂಜೆಯ ವೀರಶೈವರಿಗೆ ಅನಾಚಾರಿಗಳು ಎಂಬ ಮಾತು ಒಪ್ಪುತ್ತದೆ. ಶಿವಭಕ್ತರಾಗಿದ್ದು ವಿಷ್ಣುಪೂಜೆಯನ್ನು ಮಾಡುವವರೇ ನಾಮಧಾರಿ ಲಿಂಗಾಯಿತರು. ಅನಾಚಾರಿಗಳ ಶಿವನಿಷ್ಠೆ ತೀವ್ರವಾಗಿದ್ದರೆ 'ಗುಪ್ತಭಕ್ತರು' ಎಂದು ಕರೆಯುತ್ತಾರೆ. ಅನ್ಯರಾಗಲಿ ಅಥವಾ ವೀರಶೈವರೇ

ಆಗಲಿ ಅಂಥ ಶಿವಭಕ್ತ ವಿಷ್ಣುಪೂಜಕರನ್ನು ನಾಮಧಾರಿಗಳು ಎಂದು ಕರೆಯುವ ರೂಢಿಯಲ್ಲಿಲ್ಲ. ವಿಷ್ಣು ಪೂಜಕರಾದರೂ ಶಿವಭಕ್ತರೆಂದೇ ಕರೆದುಕೊಳ್ಳುವುದಕ್ಕೆ ಅವರಿಗೆ ಹೆಮ್ಮೆ. ಅಲ್ಲದೆ ನಾಮಧಾರಿ ಲಿಂಗಾಯಿತರು ಎಂದು ತಮ್ಮನ್ನು ಕರೆದುಕೊಳ್ಳುವುದಕ್ಕೆ ತಾಂತ್ರಿಕ ಅಂಶಗಳ ತೊಡಕು ಬರುತ್ತದೆ. ನಾಮಧಾರಿ ಲಿಂಗಾಯಿತರು ವೀರಶೈವ ಧಾರ್ಮಿಕ ವಿಧಿಗೆ ಅನುಗುಣವಾಗಿ ದೀಕ್ಷಾಬದ್ಧರಾಗಿದ್ದು, ದೇಹದ ಮೇಲೆ ಲಿಂಗ ಧರಿಸಿ ಭಕ್ತ ದೇವಕದೇಹಿಗಳಾಗಿರುತ್ತಾರೆಯೆ ಹೊರತು ವಿಷ್ಣುಭಕ್ತಿ ಸಂಪ್ರದಾಯದ ಜನಿವಾರವನ್ನು ಧರಿಸಿರುವುದಿಲ್ಲ. ನಾಮಧಾರಿ ಲಿಂಗಾಯಿತರ ದೀಕ್ಷಾ ಪದ್ಧತಿ ವೀರಶೈವರದ್ದು, ಧಾರ್ಮಿಕ ಆಚರಣೆಯ ಪದ್ಧತಿ ಮಾತ್ರ ವಿಷ್ಣುಪಂಥದ್ದು. ಅಂತ್ಯಕ್ರಿಯೆಯೂ ವೀರಶೈವ ವಿಧಿಗನುಗುಣವಾಗಿರುತ್ತದೆ. ನಾಮಕರಣ, ವಿವಾಹ, ಸೂತಕ ಮುಂತಾದುವು ವಿಷ್ಣು ಪದ್ಧತಿಯವು. ನಾಮಧಾರಿ ಲಿಂಗಾಯಿತರು ನಾಮ ಧರಿಸಿದರೂ ಅವರಿಗೆ ವಿಭೂತಿ ವರ್ಜ್ಯವಲ್ಲ. ವಿಷ್ಣು ಮತ್ತು ಶಿವ ಪದ್ಧತಿಗಳು ನಾಮಧಾರಿ ಲಿಂಗಾಯಿತರ ಆಚರಣೆಯಲ್ಲಿ ಬೆರೆತಿದ್ದರೂ ವಿಷ್ಣು ಮತ್ತು ಶಿವ ಪಂಥಗಳ ಸಾಮರಸ್ಯಸಾಧಕರಲ್ಲ. ನಾಮಧಾರಿ ಲಿಂಗಾಯಿತರ ಆಚರಣೆಗಳನ್ನು ವೀರಶೈವ ಧಾರ್ಮಿಕ ಮತ್ತು ತಾತ್ತ್ವಿಕ ದೃಷ್ಟಿಯಿಂದ ಸಮರ್ಥಿಸಿಕೊಳ್ಳುವುದು ಕಷ್ಟವಾದರೂ ಇಂಥ ಪದ್ಧತಿಯನ್ನು ಅನುಸರಿಸುವ ಶಿವಭಕ್ತ ವಿಷ್ಣುಪೂಜೆಯ-ನಾಮಧಾರಿ ಲಿಂಗಾಯಿತರ ಸಂಖ್ಯೆ ಕರ್ನಾಟಕಾದ್ಯಂತ ಗಣನೀಯವಾಗಿರುವುದನ್ನಂತೂ ಯಾರೂ ಅಲ್ಲಗಳೆಯುವಂತಿಲ್ಲ. ಇಂಥ ಶಿವಭಕ್ತ ವಿಷ್ಣು ಪೂಜಕರನ್ನು ನಾಮಧಾರಿ ಲಿಂಗಾಯಿತರೆಂದು ಗುರುತಿಸುವುದಕ್ಕೆ ಯಾವ ಅಡ್ಡಿಯೂ ಇರುವುದಿಲ್ಲ. ಅಂಥ ಪಂಗಡದ ಅಧ್ಯಯನ ಅಗತ್ಯ ಎಷ್ಟಿದೆ ಎಂಬುದನ್ನು ಹೇಳಬರುವಂತಿಲ್ಲ. ನಾಮಧಾರಿ ಲಿಂಗಾಯಿತರ ಅಧ್ಯಯನದಿಂದ ಅನೇಕ ಹೊಸ ಹೊಸ ಅಂಶಗಳು ಹೊರಬೀಳುತ್ತವೆ. ಕರ್ನಾಟಕ ಸಂಸ್ಕೃತಿಯನ್ನು ಅರ್ಥಮಾಡಿಕೊಳ್ಳುವುದರಲ್ಲಿ ಅದು ಒಂದು ವಿಶೇಷ ಸಾಧನೆಯಾಗಿ ಕಳೆದುಹೋಗಿರುವ ಕೊಂಡಿಯೊಂದು ದೊರಕಿದಂತೆ ಆಗುತ್ತದೆ.

ಒಕ್ಕಲಿಗರಲ್ಲಿ ನಾಮಧಾರಿ ಲಿಂಗಾಯಿತರು ಎಂಬ ಪಂಗಡವೊಂದಿದೆ. ಅವರ ಪೂರ್ವೇತಿಹಾಸ ಅಸ್ಪಷ್ಟವಾಗಿದೆ. ಅವರು ಇತರೆ ಒಕ್ಕಲಿಗರಿಗಿಂತ ಭಿನ್ನವಾದ ಆಚಾರವನ್ನು ಪಾಲಿಸುತ್ತಾರೆ. ಬಯಲುನಾಡಿನ ನಾಮಧಾರಿ ಒಕ್ಕಲಿಗರು ಮುಖ್ಯವಾಗಿ ಮಾಂಸ ತಿನ್ನುವುದಿಲ್ಲ. ಆದರೆ ಮಲೆನಾಡಿನ ಒಕ್ಕಲಿಗರಿಗೆ ಮಾಂಸ ನಿಷಿದ್ಧವಲ್ಲ. ನಾಮಧಾರಿ ಎಂಬುದು ವಿಷ್ಣುಪಂಥವನ್ನು ಸೂಚಿಸುತ್ತಾದರೂ ಅವರಲ್ಲಿ ಶಿವಪಂಥದವರೂ ಇದ್ದಾರೆ. ನಾಮಧಾರಿ ಒಕ್ಕಲಿಗರಲ್ಲಿಯೇ ವಿಷ್ಣುಭಕ್ತ ಮತ್ತು ಶಿವಭಕ್ತರಿದ್ದಾರೆ. ಇವರಿಬ್ಬರಲ್ಲಿ ಕೊಳುಕೊಡಿಗೆ ಇದ್ದು ರಕ್ತ ಸಂಬಂಧಕ್ಕೆ ಅವಕಾಶವಿದೆ. ಅವರಲ್ಲಿ ಯಾವ ಭೇದವೂ ಇರುವುದಿಲ್ಲ. ಇಬ್ಬರೂ ಸಂಪೂರ್ಣವಾಗಿ ಸಸ್ಯಾಹಾರಿಗಳು. ಇಂಥ ಸಸ್ಯಾಹಾರಿ ಒಕ್ಕಲಿಗರಲ್ಲಿ ಮತ್ತೊಂದು ಚೋಳೂರು ಒಕ್ಕಲಿಗರು ಎಂಬ ಪಂಗಡವಿದೆ. ಅವರು ಸಂಪೂರ್ಣವಾಗಿ ಶಿವಭಕ್ತರಾದರೂ ಅವರಲ್ಲೂ ವಿಷ್ಣುಭಕ್ತರಿದ್ದಾರೆ. ಚೋಳರು ಎಂದರೆ ಚೋಳಕಾಲದವರು ಎನ್ನುತ್ತಾರೆ. ಚೋಳರಂತೆ ಇವರೂ ಶಿವಭಕ್ತರು. ಇವರು ತಮ್ಮ ಮೂಲವನ್ನು ಚೋಳರ ಇತಿಹಾಸದಲ್ಲಿ ಗುರುತಿಸಿಕೊಳ್ಳುತ್ತಾರೆ. ನಾಮಧಾರಿ ಒಕ್ಕಲಿಗರಿಗೂ ಚೋಳ ಒಕ್ಕಲಿಗರಿಗೂ ಆಚರಣೆಯಲ್ಲಿ ಅನೇಕ ಅಂಶಗಳಲ್ಲಿ ಸಾಮ್ಯವಿದೆ. ಎರಡೂ ಬಣಗಳಲ್ಲಿಯೂ ವಿಷ್ಣು ಮತ್ತು ಶಿವಭಕ್ತರಿದ್ದಾರೆ. ವಿಷ್ಣು ಭಕ್ತರಲ್ಲಿ ಜನಿವಾರ ಧರಿಸುವುದಾಗಲಿ, ಶಿವಭಕ್ತರಲ್ಲಿ ಲಿಂಗ ಧರಿಸುವ ಪದ್ಧತಿಯಾಗಲಿ

ಇರುವುದಿಲ್ಲ. ವಿಷ್ಣುಭಕ್ತರು ನಾಮ ಧರಿಸುತ್ತಾರೆ. ಶಿವಭಕ್ತರು ವಿಭೂತಿ ಧರಿಸುತ್ತಾರೆ. ಇವರಲ್ಲಿ ಉಪನಯನ ಅಥವಾ ದೀಕ್ಷೆಯ ಧಾರ್ಮಿಕ ವಿಧಿ ಇರುವುದಿಲ್ಲ. ಇವರಿಗೆ ಯಾವ ಗುರುವಾಗಲಿ, ಮಠವಾಗಲಿ, ಒಂದು ಕುಲದೈವವಾಗಲಿ ಇಲ್ಲ. ಆಯಾ ಪ್ರಾಂತ್ಯದ ಸ್ಥಳೀಯ ಧಾರ್ಮಿಕ ಪ್ರಭಾವಕ್ಕೆ ಒಳಗಾಗಿರುತ್ತಾರೆ. ಇವರು ಯಾವುದೋ ಕಾಲದಲ್ಲಿ ಜೈನಧರ್ಮದ ಪ್ರಾಬಲ್ಯವಿರುವಾಗ ಜೈನಧರ್ಮಕ್ಕೆ ಮತಾಂತರಿಯಾದವರು. ರಾಮಾನುಜರು ಕರ್ನಾಟಕಕ್ಕೆ ಬಂದು ಜೈನರನ್ನು ವೈಷ್ಣವರನ್ನಾಗಿ ಮತಪರಿವರ್ತನೆ ಮಾಡಿದಾಗ, ಈ ಜೈನ ಒಕ್ಕಲಿಗರನ್ನು ವೈಷ್ಣವರನ್ನಾಗಿಸಿದ ಅನಂತರ ನಾಮಧಾರಿ ಒಕ್ಕಲಿಗರು ಎಂದು ಹೆಸರು ಬಂದಿತು. ಅದೂ ಅಲ್ಲದೆ ವ್ಯವಸಾಯವನ್ನೇ ಮುಖ್ಯ ಕಸುಬಾಗಿರುವ ಜೈನ ಒಕ್ಕಲಿಗರಿಗೆ, ಉಳುವಾಗ ಹಿಂಸೆಗೆ ಅವಕಾಶವಿರುವುದರಿಂದ ಜೈನರಲ್ಲಿ ಅವರ ಬಗ್ಗೆ ಅಂಥ ಗೌರವ ಇರುವುದಿಲ್ಲ. ಜೈನರಲ್ಲಿಯೇ ಕೆಳವರ್ಗವಾಗಿ ಉಳಿಯುವ ಬದಲು ವೈಷ್ಣವರಾಗಿ ಪ್ರತ್ಯೇಕವಾದ ನಾಮಧಾರಿ ಒಕ್ಕಲಿಗ ಬಣವಾದರು. ನಾಮಧಾರಿ ಒಕ್ಕಲಿಗರಾದ ಅನಂತರವೂ ಕೆಲವು ಜೈನ ಸಂಪ್ರದಾಯಗಳು ಅವರಲ್ಲಿ ಮುಂದುವರಿದಿವೆ. ಜೈನೆಡೆ ಮುಂತಾದ ಆಚರಣೆಗಳು ನಾಮಧಾರಿ ಒಕ್ಕಲಿಗರಲ್ಲಿ ಜೈನಮತದ ಅವಶೇಷಗಳಾಗಿ ಉಳಿದುಕೊಂಡುಬಂದಿರುವ ವಿಷಯ ಕುವೆಂಪು ಅವರ 'ನೆನಪಿನ ದೋಣಿಯಲ್ಲಿ' ಮತ್ತು ಅವರ ಇತರ ಕಾದಂಬರಿಗಳಲ್ಲಿ ವ್ಯಕ್ತವಾಗಿದೆ. ಕೇರಳದ ವೈನಾಡಿನ ಒಕ್ಕಲಿಗರು ನಾಮಧಾರಿ ಒಕ್ಕಲಿಗರು ಎಂಬುದಕ್ಕೆ ಬದಲಾಗಿ ತಮ್ಮನ್ನು ತಾವು 'ವೈಷ್ಣವ ಗೌಡರು' ಎಂದು ಕರೆದುಕೊಳ್ಳುತ್ತಾರೆ. ವೈಷ್ಣವ ಗೌಡರಿಗೂ ಮತ್ತು ಜೈನ ಗೌಡರಿಗೂ ಸಂಬಂಧವಿದೆ. ಅವರಿಬ್ಬರ ನಡುವೆ ಹೆಣ್ಣು ಕೊಟ್ಟು ತರುವ ರೂಢಿಯಿದೆ. ಹೆಗ್ಗಡದೇವನ ಕೋಟೆಯ ನಾಮಧಾರಿ ಒಕ್ಕಲಿಗರು ಶಿವಭಕ್ತರು. ವೈನಾಡಿನ ವೈಷ್ಣವ ಗೌಡರು ಮತ್ತು ಹೆಗ್ಗಡದೇವನಕೋಟೆಯ ಶಿವಭಕ್ತರಾದ ನಾಮಧಾರಿ ಗೌಡರ ನಡುವೆ ಹೆಣ್ಣು ಕೊಟ್ಟು ತರುವ ಸಂಪ್ರದಾಯವಿದೆ. ಒಟ್ಟನಲ್ಲಿ ವಿಷ್ಣು, ಶಿವ ಮತ್ತು ಜೈನ ಒಕ್ಕಲಿಗರು ಸಂಪೂರ್ಣವಾಗಿ ಸಸ್ಯಾಹಾರಿಗಳಾಗಿದ್ದು ಪರಸ್ಪರ ಹೆಣ್ಣು ಕೊಟ್ಟು ತರುವ ಸಂಪ್ರದಾಯವಿರುತ್ತದೆ. ಆಯಾ ಸ್ಥಳೀಯ ಒತ್ತಡಕ್ಕೆ ಸಿಕ್ಕಿ ವಿವಿಧ ಮತಗಳು ತತ್ತ್ವಗಳನ್ನು ಅನುಸರಿಸಿದ್ದಾರೆ.

ಕೇವಲ ಒಕ್ಕಲಿಗರಲ್ಲಿಯೇ ಅಲ್ಲದೆ ಇಡೀ ಕೆಳವರ್ಗದವರಲ್ಲಿಯೇ ಇಂಥ ಅವಸ್ಥಾಂತರದ ಧಾರ್ಮಿಕ ಸ್ಥಿತಿಗತಿಗಳನ್ನು ಗುರುತಿಸಬಹುದಾಗಿದೆ. ಜೈನ ಧರ್ಮದ ಪ್ರಾಬಲ್ಯವನ್ನು ಕುಗ್ಗಿಸಿದ ವಿಷ್ಣು ಮತ್ತು ಶಿವ ಪಂಥಗಳು ಭಾರತದ ಜನಾಂಗವನ್ನೇ ವಿಷ್ಣು ಮತ್ತು ಶಿವ ಪಂಥದವರನ್ನಾಗಿ ಇಬ್ಭಾಗ ಮಾಡಿತು. ಉಚ್ಚವರ್ಗದಿಂದ ಕೆಳವರ್ಗದತನಕ ಎಲ್ಲಾ ಹಿಂದೂ ಪಂಥೀಯರಲ್ಲೂ ವಿಷ್ಣು ಮತ್ತು ಶಿವಭಕ್ತರು ಇರುವುದನ್ನು ಸ್ಪಷ್ಟವಾಗಿ ಗುರುತಿಸಬಹುದು. ವಿಷ್ಣು ಭಕ್ತರನ್ನು ವೈಷ್ಣವರು, ನಾಮಧಾರಿಗಳು, ಶನಿವಾರದವರು, ದೇಶಾಭಾಗಸ್ಥರು–ಮುಂತಾಗಿ ಕರೆಯುತ್ತಾರೆ. ಶೈವಭಕ್ತರನ್ನು ಶೈವರು, ಗಂಧದವರು, ಸೋಮವಾರದವರು, ಮುಳ್ಳುಜನ ಎನ್ನುತ್ತಾರೆ. ವಿಷ್ಣುಪಂಥದ ಉಚ್ಚವರ್ಗದ ಧಾರ್ಮಿಕ ವಿಧಿಯ ಮಾರ್ಗದರ್ಶಕರನ್ನು ಗುರುಗಳು, ಆಚಾರ್ಯರು ಎಂದು ಕರೆದರೆ, ಅದೇ ಪಂಥದ ಕೆಳವರ್ಗದ ವಿಷ್ಣುಪಂಥಗಳ ಧಾರ್ಮಿಕ ವಿಧಿಯ ಮಾರ್ಗದರ್ಶಕ ದಾಸಯ್ಯನಾಗುತ್ತಾನೆ. ಹಾಗೆಯೇ ಶೈವರಿಗೆ ಉಚ್ಚವರ್ಗಕ್ಕೆ ಗುರು, ಆಚಾರ್ಯ ಇದ್ದರೆ, ಕೆಳವರ್ಗಕ್ಕೆ ಗೊರವಯ್ಯ ಇರುತ್ತಾನೆ. ಒಂದೇ ಪಂಥದ ಕೆಳವರ್ಗ ಮತ್ತು ಉಚ್ಚವರ್ಗದ ಆಚಾರ ವಿಚಾರಗಳು ಭಿನ್ನವಾಗಿವೆ.

* * * * *

ಭಕ್ತಿಪಂಥ ಸ್ತ್ರೀ ಮತ್ತು ಶೂದ್ರರಿಗಾಗಿ ಅಸ್ತಿತ್ವಕ್ಕೆ ಬಂದದ್ದು. ಆದರೆ ಅದರಲ್ಲಿ ಮತ್ತೆ ಕರ್ಮಪ್ರಧಾನ ವಿಧಿ ನುಸುಳಿತು. ವೈದಿಕ ವಿಧಿಯ ವಿರೋಧದ ಅನೇಕ ಅಂಶಗಳು ಭಕ್ತಿ ಪಂಥದಲ್ಲಿ ಕಂಡುಬಂದರೂ ಕ್ರಮೇಣ ಭಕ್ತಿಪಂಥಕ್ಕೆ ವೈದಿಕ ಮುದ್ರೆ ಬಿದ್ದಿತು. ಬ್ರಾಹ್ಮಣರಲ್ಲಿಯೇ ವಿಷ್ಣು ಮತ್ತು ಶಿವ ಪಂಥಗಳಿವೆ. ವಿಷ್ಣುಪಂಥದಲ್ಲಿಯೇ ತಮಿಳುನಾಡಿನ ವೈಷ್ಣವ ಪಂಥಕ್ಕಿಂತ ಬಂಗಾಳದ ವೈಷ್ಣವ ಪಂಥ ಭಿನ್ನವಾಗಿದೆ. ವಿಶಿಷ್ಟಾದ್ವೈತದ ವೈಷ್ಣವ ಪಂಥಕ್ಕೂ ಮಾಧ್ವ ಮತದ ವೈಷ್ಣವ ಪಂಥಕ್ಕೂ ಅಜಗಜಾಂತರ ವ್ಯತ್ಯಾಸವಿದೆ. ತಮಿಳುನಾಡಿನ ಶೈವ ಸಿದ್ಧಾಂತದ ವೈದಿಕ ಅಂಶಗಳನ್ನು ಕರ್ನಾಟಕದ ವೀರಶೈವರು ತಿರಸ್ಕರಿಸಿ ವೇದ ವಿರೋಧಿ ಶೈವ ತತ್ತ್ವಗಳನ್ನು ಎತ್ತಿಹಿಡಿದರು. ಆದರೆ ಅಂಥ ವೀರಶೈವರಲ್ಲಿಯೇ ಕ್ರಮೇಣ ಹಲವು ಪಂಗಡ ಒಳಪಂಗಡಗಳು ಸೃಷ್ಟಿಯಾದವು. ಶುದ್ಧವೀರ ವೈಷ್ಣವ ಮತ್ತು ಶುದ್ಧ ವೀರಶೈವರು ಪರಸ್ಪರ ಕಟ್ಟಾ ವಿರೋಧಿಗಳು. ಅವರಲ್ಲಿ ಪರಸ್ಪರ ಮುಖದರ್ಶನ ಮತ್ತು ನಾಮಸ್ಮರಣೆ ಕಿವಿಗೆ ಬಿದ್ದೊಡನೆ ಪಾಪ ಸಂಚಯವಾಗುತ್ತದೆ. ಯಮ ಆನೆಯ ರೂಪದಲ್ಲಿ ಬಂದು ಶಿವಾಲಯಕ್ಕೆ ಅಟ್ಟಿಸಿಕೊಂಡು ಹೋದರೂ ಶಿವಾಲಯವನ್ನು ಪ್ರವೇಶಿಸಕೂಡದೆಂದು ವೀರವೈಷ್ಣವರ ಪ್ರತಿಜ್ಞೆ. (ಯಾನೈ ವಂದಾಲುಂ ಶಿವಾಲಯಂ ಪುಗವೇಂಡಾ) ವೈಷ್ಣವನ ಶವದ ಮೇಲೂ ಊರ್ಧ್ವ ತ್ರಿಪುಂಡ್ರ ದರ್ಶನವಾಗುತ್ತಿರಲೇಬೇಕೆಂಬುದೇ ಅವರ ನಂಬಿಕೆ. ವೀರ ವೈಷ್ಣವರು ವಿಷ್ಣುವಲ್ಲದೆ ಅನ್ಯದೇವರ ದರ್ಶನಮಾಡದವರನ್ನು 'ಏಕಾಂತಿಗಳು' ಎನ್ನುತ್ತಾರೆ. ಅವರು ಅಪ್ಪಿತಪ್ಪಿ ಮರೆತಾದರೂ 'ಶಿವ' ಎಂಬ ಶಬ್ದ ನಾಲಿಗೆ ಮೇಲೆ ಬರದಂತೆ ಎಚ್ಚರಿಕೆ ವಹಿಸುತ್ತಾರೆ. ತಮಿಳಿನಲ್ಲಿ ''ಬೋಶಿ ವಾಂಗಿಟ್ಟು ವಾಡಾ'' ಎಂಬ ಮಾತಿದೆ. (ಬೋಶಿ=ಚರಕಲು, ವಾಂಗಿಟ್ಟು=ತೆಗೆದುಕೊಂಡು, ವಾಡಾ=ಬಾ) ಅದಕ್ಕೆ ಕನ್ನಡದಲ್ಲಿ ''ಚರಕಲನ್ನು ತೆಗೆದುಕೊಂಡು ಬಾ'' ಎಂದು ಅರ್ಥ. ಈ ವಾಕ್ಯದ ಎರಡು ಪದಗಳಾದ ಬೋಶಿ ಮತ್ತು ವಾಂಗಿಟ್ಟು ಎಂಬ ಪದಗಳ, ಮೊದಲನೆಯ ಪದದ ಅಂತ್ಯ ಅಕ್ಷರ 'ಶಿ', ಎರಡನೆಯ ಪದದ ಮೊದಲನೆಯ ಅಕ್ಷರ 'ವಾ' ಸೇರಿ ಉಚ್ಚರಿಸುವಾಗ 'ಶಿವಾ' ಎಂದಾಗಿಬಿಡುತ್ತದೆ. ಇದರಿಂದ 'ಶಿವ' ನಾಮಸ್ಮರಣೆಯಾದಂತಾಗಿ ಪಾಪ ಸಂಚಯವಾಗುವುದೆಂದು ಹೆದರುವ ವೀರ ವೈಷ್ಣವರು ''ಬೋಶಿ ವಾಂಗಿಟ್ಟು ವಾಡಾ'' ಎಂಬ ವಾಕ್ಯವನ್ನೇ ಉಚ್ಚರಿಸುವುದಿಲ್ಲ. ಅದಕ್ಕೆ ಬದಲಾಗಿ ''ಬೋಶಿ ಎಡತ್ತ್ಕೊಂಡು ವಾಡಾ'' (ಬೋಶಿ = ಚರಕಲು, ಎಡತ್ತ್ಕೊಂಡು= ಎತ್ತಿಕೊಂಡು, ವಾಡಾ =ಬಾ) ಎಂದು ಉಚ್ಚರಿಸುತ್ತಾರೆ. ಇದರಿಂದ ಶಿವ ಎಂದು ನಾಲಿಗೆ ಮೇಲೆ ಬಂದಾಗ ಬರುವ ಪಾಪವನ್ನು ಎರಡನೆಯ ಪದವನ್ನೇ ಬದಲಿಸಿ 'ಶಿಎ' ಎಂದು ಉಚ್ಚರಿಸಿ ತಪ್ಪಿಸಿಕೊಳ್ಳುತ್ತಾರೆ. ಶುದ್ಧ ವೀರಶೈವರಿಗೆ ಅನ್ಯದೇವರು 'ಹಾದರ'. ಘಂಟಾಕರ್ಣ ಶಿವನಲ್ಲದೆ ಅನ್ಯದೇವರ ಶಬ್ದ ಕಿವಿಗೆ ಬೀಳದಂತೆ ಘಂಟೆ ಕಟ್ಟಿಕೊಂಡಿರುತ್ತಾನೆ. ಶಿವ ವೇಷಧಾರಿಯಾಗಿ ಬಂದು ಅವನನ್ನು ಪರೀಕ್ಷಿಸುವುದಕ್ಕಾಗಿ 'ಹರಿಯಿತು' ಎಂಬ ಶಬ್ದವನ್ನು ಪ್ರಯೋಗಿಸುತ್ತಾನೆ. ಅದರಿಂದ ಸಿಡಿಮಿಡಿಗೊಂಡ ಘಂಟಾಕರ್ಣ ವೇಷಧಾರಿ ಶಿವನನ್ನು ಸಟ್ಟುಗ ಹಿಡಿದು ಅಟ್ಟಿಸಿಕೊಂಡು ಹೋಗುತ್ತಾನೆ. 'ಹರಿಯಿತು' ಎಂಬ ಪದದ 'ಹರಿ' ಎಂಬ ಮಾತು ಶಿವಭಕ್ತ ಘಂಟಾಕರ್ಣನಿಗೆ ಹರಿಯ ನಾಮಸ್ಮರಣೆಯಾಗಿ ಕಿವಿಗೆ ಬಿದ್ದು ವ್ರತಭಂಗವಾಗಿಬಿಡುತ್ತದೆ. ಶಿವಭಕ್ತರಿಗೆ ಭವಿಯೊಂದಿಗೆ ವ್ಯವಹಾರ ನಿಷಿದ್ಧ. ವೀರಶೈವರಲ್ಲಿಯೂ ಅನ್ಯದೇವರನ್ನು ಪೂಜಿಸದ, ನಾಮಸ್ಮರಣೆ ಕೇಳದ ವೀರ ವ್ರತಿಗಳಿಗೆ 'ಏಕಾಂತಿ'ಗಳು ಎಂದು ಕರೆಯುವ ರೂಢಿಯಲ್ಲಿ ಇತ್ತೆಂಬುದಕ್ಕೆ ಏಕಾಂತದ ರಾಮಯ್ಯನ ಬದುಕೇ ಸಾಕ್ಷಿ.

ತಮಿಳುನಾಡಿನ ಶ್ರೇಷ್ಠ ಸಂತ ನಮ್ಮಾಳ್ವಾರರ ದಿವ್ಯ ಪ್ರಬಂಧಗಳಲ್ಲಿ ಸ್ಮಾರ್ತರ

ವಿಭೂತಿಯ ಬಗ್ಗೆ ಸಹಸೆಯ ಮಾತು ಬರುತ್ತದೆ. ಆದರೆ ಅನಂತರ ಬಂದ ವೇದಾಂತ ದೇಶಿಕರಿಗೆ ಅದನ್ನು ಸಹಿಸದಾಗುತ್ತದೆ. ದೇಶಿಕರು ವಿಭೂತಿಗೆ 'ವಿಷ್ಣುವಿನ' ಪಾದದ ಧೂಳಿ ಎಂದು ವ್ಯಾಖ್ಯಾನಿಸಿ ಅದಕ್ಕೆ ವಿಷ್ಣುಪರವಾದ ಅರ್ಥದಿಂದ ಶಿವಪರವಾದ ಅರ್ಥದ ದೋಷವನ್ನು ತೊಡೆಯುತ್ತಾರೆ. ಹಾಗೆಯೇ ವೀರಶೈವರಲ್ಲಿಯೂ ಇದಕ್ಕೆ ಸಂವಾದಿಯಾಗಿ ಒಂದು ಉದಾಹರಣೆ ದೊರೆಯುತ್ತದೆ. ಗುಪ್ತಮಂಚಣ್ಣ ಶಿವಭಕ್ತ. ಆದರೂ ಅವನು ನಾಮಧಾರಿಯಾಗಿ ವಿಷ್ಣು ಪೂಜಕನಾದ 'ನಾಮದ ದಾಸ' ಎಂದು ತಾನು 'ಹರಿಭಕ್ತನೇ ಹೊರತು ಶಿವಭಕ್ತನಲ್ಲ' ಎಂದು ಘೋಷಿಸುತ್ತಾನೆ. ವೀರಶೈವರನ್ನು ಇದು ತುಂಬ ಇಕ್ಕಟ್ಟಿಗೆ ಸಿಕ್ಕಿಸುತ್ತದೆ. ವೀರಶೈವರು ಮಂಚಣ್ಣನನ್ನು 'ಗುಪ್ತಭಕ್ತ'ನೆಂದು ಕರೆದು ಅವನಿಗೆ ಅಂಟಿರುವ ವಿಷ್ಣು ಭಕ್ತಿ ಕಳಂಕವನ್ನು ತೊಳೆಯಲು ಪ್ರಯತ್ನಿಸುತ್ತಾರೆ. ಅದೂ ಅಲ್ಲದೆ ಗುಪ್ತಮಂಚಣ್ಣ "ಮಾಧವನ ಮನೆಯ ಬಾಗಿಲಿನಲ್ಲಿ ಮಹಾಜನಂಗಳೆಲ್ಲರು ಕೂಡಿ" ಮತ್ತು "ತೊಳಸಿಯ ಗಿಡವ ಮೆಲಲಾರದೆ ಕಿವಿಯೊಳಗಿಕ್ಕಿ"– ಈ ಎರಡು ವಿಷ್ಣುಪರ ಬೆಡಗಿನ ವಚನಗಳಿಗೆ ವೀರಶೈವ ಟೀಕಾಕಾರರು ಶಿವಪರವಾದ ಅರ್ಥಮಾಡಿರುವುದರಿಂದ ವಿಷ್ಣುಪರವಾದ ಅರ್ಥದ ದೋಷವನ್ನು ತೊಡೆಯುತ್ತಾರೆ.

* * * * *

೨

ಸಮಕಾಲೀನ ಲಿಂಗಾಯಿತರಲ್ಲಿ ವಿಷ್ಣುಪೂಜೆಯ ಸಂಪ್ರದಾಯದ ಶಿವಭಕ್ತರನ್ನು ಇಂದಿಗೂ ಗುರುತಿಸಬಹುದಾಗಿದೆ. ಇದು ಹನ್ನೆರಡನೆಯ ಶತಮಾನದ ಶಿವಭಕ್ತ ವಚನಕಾರನಾದ ವಿಷ್ಣುಪೂಜೆಯ ಗುಪ್ತಮಂಚಣ್ಣ ಮತ್ತು ಇತರ ವಚನಕಾರರ ಸಂಪ್ರದಾಯವನ್ನೇ ಮುಂದುವರಿಸಿಕೊಂಡು ಬಂದಿರುವುದು ಕಂಡುಬರುತ್ತದೆ. ತುಮಕೂರು ಜಿಲ್ಲೆಯಲ್ಲಿ ನಡೆಸಿರುವ ನನ್ನ ಕ್ಷೇತ್ರಕಾರ್ಯದಿಂದ ಈ ಅಂಶ ಸ್ಪಷ್ಟವಾಗಿರುತ್ತದೆ. ಶಿವಪುರಾಣ ಕಾಲದ ಹರಿಹರ ಸಾಮರಸ್ಯ ಸಾಧಿಸುವ ಒಂದು ಕಲ್ಪನೆ ಮತ್ತು ವಚನಕಾರರ ಕಾಲದಲ್ಲಿ ಮತಾಂತರಗೊಂಡ ಶಿವಭಕ್ತ ವಿಷ್ಣುಪೂಜೆಯ ಪದ್ಧತಿ–ಈ ಎರಡೂ ಸಂಪ್ರದಾಯಗಳು ಸಮಕಾಲೀನ ಲಿಂಗಾಯಿತರ ಆಚರಣೆಯಲ್ಲಿ ಇಂದಿಗೂ ಜೀವಂತವಾಗಿರುವುದು ಕಂಡುಬರುತ್ತದೆ. ಪಂಚಾಚಾರ್ಯರು ಮತ್ತು ಬಸವ ಪಂಥದ ಅಚ್ಚ ಶಿವಭಕ್ತರು ವಿಷ್ಣು ಪೂಜೆಯ ಶಿವಭಕ್ತರನ್ನು ಕುಲದಲ್ಲಿ ಕಡಿಮೆಯಾಗಿ ಭಾವಿಸುವುದು ಸ್ಪಷ್ಟವಾಗಿದೆ. ಪಂಚಾಚಾರ್ಯರಲ್ಲಿ ವಿಷ್ಣು ಪೂಜೆಯ ಶಿವಭಕ್ತರಿಲ್ಲ. ಶಿವಭಕ್ತರಾದ ವಿಷ್ಣುಪೂಜಕರು ಬಸವ ಪಂಥದ ಒಳಪಂಗಡಗಳಲ್ಲಿ ಮಾತ್ರ ಕಂಡುಬರುತ್ತಾರೆ. ತುಮಕೂರು ಮತ್ತು ಚಿತ್ರದುರ್ಗ ಜಿಲ್ಲೆಯಲ್ಲಿ ಶಿವಭಕ್ತ ವಿಷ್ಣುಪೂಜಕರ ಸಂಖ್ಯೆ ಅಧಿಕವಾಗಿ ಕಂಡುಬಂದರೂ, ಕರ್ನಾಟಕಾದ್ಯಂತ ಇಂಥ ನಾಮಧಾರಿ ಲಿಂಗಾಯಿತರು ಇರುವುದನ್ನು ಗುರುತಿಸಬಹುದು.

ತುಮಕೂರು ಜಿಲ್ಲೆಯಲ್ಲಿ ವೀರಶೈವರ ಎಲ್ಲಾ ಪಂಗಡಗಳೂ ಇವೆ. ಅವುಗಳಲ್ಲಿ ಪಂಚಪೀಠದ ಪಂಚಾಚಾರ್ಯರು, ಬಸವ ಪಂಥದ ಗೌಡ ಲಿಂಗಾಯಿತರು, ನೊಣಬ ಲಿಂಗಾಯಿತರು ಮತ್ತು ಸಾದು ಲಿಂಗಾಯಿತರು ಪ್ರಮುಖರು. ಪಂಚಾಚಾರ್ಯರಲ್ಲಿ ರೇಣುಕ ಪೀಠದವರೇ ಅಧಿಕ ಸಂಖ್ಯೆಯಲ್ಲಿದ್ದಾರೆ.

* * * * *

ಪಂಚಾಚಾರ್ಯರು ಪಂಚಪೀಠಗಳ ವ್ಯವಸ್ಥೆಗೆ ಒಳಪಟ್ಟು ಉತ್ತಮ ವ್ಯವಸ್ಥೆಯ

ಪಂಗಡವಾಗಿದ್ದಾರೆ. ಶೆಟ್ಟಿ ಮತ್ತು ಯಜಮಾನ ವ್ಯವಸ್ಥೆಯಿಂದ ಪಂಚಾಚಾರ್ಯರ ಸಮಾಜದಲ್ಲಿ ಕಟ್ಟುಪಾಡಿದ್ದು ಒಂದು ಬಿಗಿ ಇದೆ. ಧಾರ್ಮಿಕ ಶಿಸ್ತು ಇದೆ. ಪಂಚಾಚಾರ್ಯರು ಅಚ್ಚ ಶೈವ ವೈದಿಕ ಸಂಪ್ರದಾಯದವರು. ಹುಟ್ಟಿನ ಸಿದ್ಧಾಂತದ ಮಹತ್ವವನ್ನು ಎತ್ತಿ ಹಿಡಿಯುತ್ತಾರೆ. ವೀರಶೈವ ಸಮಾಜದ ಧಾರ್ಮಿಕ ಶ್ರೇಣಿಯ ಪ್ರಥಮ ಸ್ಥಾನ ತಮ್ಮದೆಂದೇ ಭಾವಿಸುತ್ತಾರೆ. ಈ ಜಿಲ್ಲೆಯ ಎಲ್ಲಾ ವೀರಶೈವ ಮಠಗಳೂ ಮತ್ತು ಪೀಠಗಳೂ ಒಂದಲ್ಲ ಒಂದು ಕಾಲದಲ್ಲಿ ಪಂಚಪೀಠಕ್ಕೆ ಸೇರಿದ ಪಟ್ಟಾಧಿಕಾರಿ ಅಥವಾ ಜಂಗಮ ವಿರಕ್ತ ಶೂನ್ಯಪೀಠದ ಶಾಖಾ ಮಠಗಳಾಗಿದ್ದು ಕ್ರಮೇಣ ಸ್ಥಳೀಯ ಪರಿಸರದ ಒತ್ತಡದಿಂದ ಅಲ್ಲೊಂದು ಇಲ್ಲೊಂದು ಭಕ್ತ ವಿರಕ್ತ ಮಠಗಳಾಗಿ ಸ್ವತಂತ್ರವಾಗಿವೆಯೇ ಹೊರತು, ಅಧಿಕ ಸಂಖ್ಯೆಯ ಮಿಕ್ಕ ಮಠಗಳು ಇಂದಿಗೂ ಜಂಗಮ ಮಠದ ಶಾಖಾ ಮಠಗಳೆಂದೇ ಪ್ರತಿಷ್ಠೆಯಿಂದ ಹೇಳುತ್ತಾರೆ. ಆದರೆ ಸಾಧನೆಯ ಸಿದ್ಧಾಂತವನ್ನು ಎತ್ತಿಹಿಡಿದು ಹುಟ್ಟಿನ ಸಿದ್ಧಾಂತವನ್ನು ಅಲ್ಲಗಳೆಯುವ ಬಸವ ಪಂಥದ ಒಳಪಂಗಡದವರು ಪಂಚಾಚಾರ್ಯರ ವೀರಶೈವ ಸಮಾಜದ ಹುಟ್ಟಿನ ಸಿದ್ಧಾಂತದ ಜಂಗಮ ಮಹತ್ವ ತತ್ತ್ವವನ್ನು ಒಪ್ಪುವುದಿಲ್ಲ. ಒಳಪಂಗಡದ ಭಕ್ತ ವಿರಕ್ತಮಠಗಳು ತಮ್ಮವು ಸ್ವತಂತ್ರ ಸಂಸ್ಥಾನಗಳೆಂದೇ ಘೋಷಿಸುತ್ತ ಬಸವಾದಿ ಪ್ರಮಥರ ಶೂನ್ಯ ಪೀಠದ ಮೂಲಕ್ಕೆ ತಮ್ಮ ಪೀಠಗಳ ಇತಿಹಾಸವನ್ನು ಗುರುತಿಸಿಕೊಳ್ಳುತ್ತಾರೆ. ಪಂಚಾಚಾರ್ಯರು ಸಂಸ್ಕೃತ ಗ್ರಂಥಗಳನ್ನೇ ತಮ್ಮ ಆಧಾರ ಗ್ರಂಥಗಳನ್ನಾಗಿ ಸ್ವೀಕರಿಸಿದರೆ, ಕನ್ನಡದ ಬಸವ ಪಂಥದ ಭಕ್ತ ವಿರಕ್ತ ಪೀಠಗಳೂ, ಪಂಚಾಚಾರ್ಯರು ಮತ್ತು ಬ್ರಾಹ್ಮಣರೊಂದಿಗೆ ಸ್ಪರ್ಧಿಸಿ ಪ್ರತಿಷ್ಠಿತ ಸ್ಥಾನಮಾನ ಪಡೆಯಲು ಸಂಸ್ಕೃತ ಗ್ರಂಥಗಳನ್ನೇ ಆಧಾರ ಗ್ರಂಥವೆಂದು ಸ್ವೀಕರಿಸಿ ಅನುಕರಣೆ ಮಾಡುತ್ತಿದ್ದಾರೆ. ಬಸವಾದಿ ಪ್ರಮಥರ ವಚನಗಳನ್ನು ಬಾಯಿಪಾಠ ಮಾಡಿ ಪುಂಖಾನುಪುಂಖವಾಗಿ ಹೇಳಿದರೂ, ಧಾರ್ಮಿಕ ವಿಧಿಯ ಆಚರಣೆ ಮಾತ್ರ ಸಂಸ್ಕೃತೀಕರಣವಾಗುತ್ತಿರುವುದು ಕಂಡುಬರುತ್ತದೆ. ಆದರೆ ಬಸವ ಪಂಥದ ಒಳಪಂಗಡಗಳಲ್ಲಿ ಒಂದು ವ್ಯವಸ್ಥೆ ಶಿಸ್ತು ಮತ್ತು ಕಟ್ಟುಪಾಡು ಕಂಡುಬರುವುದಿಲ್ಲ. ಒಳಪಂಗಡಗಳಲ್ಲಿ ಕೆಲವರಿಗೆ ಮಠಗಳು ಮುಖ್ಯವಾದರೆ, ಮತ್ತೆ ಕೆಲವರಿಗೆ ದೇವಾಲಯಗಳು ಮುಖ್ಯವಾಗುತ್ತವೆ. ಮತ್ತೂ ಕೆಲವರಿಗೆ ಶಿವದೇವಾಲಯಗಳಾಗಲಿ, ಶೈವ ಮಠವಾಗಲಿ ಪ್ರಮುಖವಾಗದೆ ವಿಷ್ಣುದೇವಾಲಯಗಳು ಧಾರ್ಮಿಕ ಚಟುವಟಿಕೆಯ ಕೇಂದ್ರಗಳಾಗಿರುತ್ತವೆ. ನೊಣಬ ಲಿಂಗಾಯಿತರಿಗೆ ಸಿದ್ಧರಾಮ ಗದ್ದುಗೆ ಅಥವಾ ಸಿದ್ಧರಾಮ ದೇವಾಲಯಗಳು ಅತ್ಯಂತ ಮುಖ್ಯವಾದುವು. ಅಲ್ಲದೆ ಗೋಡೇಕೆರೆ ಮಠಕ್ಕೆ ನೊಣಬರ ಒಂದು ಗುಂಪು ನಡೆದುಕೊಂಡರೆ ಮತ್ತೊಂದು ಗುಂಪು ಯಾವ ಮಠಕ್ಕೂ ಒಕ್ಕಲಾಗಿರುವುದಿಲ್ಲ. ನಾಮಧಾರಿ ಲಿಂಗಾಯಿತರಿಗಂತೂ ಶಿವದೇವಾಲಯಗಳಾಗಲಿ, ಮಠಗಳಾಗಲಿ ಮುಖ್ಯವಾಗದೆ ರಾಮ, ಆಂಜನೇಯ, ರಂಗನಾಥ, ನರಸಿಂಹಸ್ವಾಮಿ ದೇವಾಲಯಗಳು ಮುಖ್ಯಕೇಂದ್ರಗಳಾಗಿವೆ. ಬಸವ ಪಂಥದ ಒಳಪಂಗಡಗಳಲ್ಲಿಯೇ ಧಾರ್ಮಿಕ ನಾಯಕತ್ವಕ್ಕೆ ತೀವ್ರವಾದ ತಿಕ್ಕಾಟವಿದೆ. ಪಂಚಾಚಾರ್ಯರ ಪಂಚಪೀಠಗಳಲ್ಲಿ ಒಂದು ವ್ಯವಸ್ಥೆಯಿದ್ದು ಯಾವುದಾದರೂ ಒಂದು ಪೀಠದವರು ಗುರುಗಳಾದರೆ, ಮಿಕ್ಕ ಪೀಠದವರು ಜಂಗಮರಾಗುತ್ತಾರೆ. ಹೀಗೆ ಅವರಲ್ಲಿ ಪರಸ್ಪರ ಅರಿವು ಇದ್ದು ವೈದಿಕ ಸಂಪ್ರದಾಯವನ್ನು ಅನುಸರಿಸುತ್ತಾರೆ. ಬಸವ ಪಂಥದವರಲ್ಲಿ ತೀವ್ರವಾದ ಭಿನ್ನಾಭಿಪ್ರಾಯವಿದ್ದರೂ, ವೈದಿಕ ವಿರೋಧಿ ತತ್ತ್ವವನ್ನು ಅನುಸರಿಸುತ್ತಿದ್ದರು.

* * * * *

ಪಂಚಾಚಾರ್ಯರಿಗೆ ಗೋತ್ರ, ಸೂತ್ರ ಮತ್ತು ಪ್ರವರ ಮುಖ್ಯವಾದರೆ, ಬಸವ ಪಂಥದ ಒಳಪಂಗಡದವರಿಗೆ ಸಮಯ ಮತ್ತು ಬೆಡಗು ಮುಖ್ಯವಾದುವು. ಮುರುಘಾಮಠ, ಗದಗಿನ ಡಂಬಲ್ ಮಠ, ಸಂಪಾದನೆ ಮಠ, ಜಡೆಮಠ, ಕಪನಿಮಠ ಇವು ಸಮಯಕ್ಕೆ ಉದಾಹರಣೆಗಳು. ಗೌಡ ಲಿಂಗಾಯಿತರಲ್ಲಿ ಪೆಟ್ಟಿಗೆಯವರು ಮತ್ತು ಬಿಜ್ಜಣಿಗೆಯವರು, ನೊಣಬರಲ್ಲಿ ಮೂರು ದಿವಸದವರು ಮತ್ತು ನಾಲ್ಕು ದಿವಸದವರು, ಸಾದರಲ್ಲಿಯೂ, ಸಜ್ಜನರಲ್ಲಿಯೂ ಅನೇಕ ಬೆಡಗುಗಳಿವೆ. ಆಳವಾದ ಅಧ್ಯಯನದಿಂದ ಸಮಯ ಮತ್ತು ಬೆಡಗುಗಳಲ್ಲಿ, ಕೆಲವು ಧಾರ್ಮಿಕ ವಿಧಿಗಳಲ್ಲಿ ಆಚಾರ ಭಿನ್ನತೆಯನ್ನು ಗುರುತಿಸಬಹುದು. ಉದಾಹರಣೆಗೆ ನೊಣಬರಲ್ಲಿ ಮೂರು ದಿವಸ ಮತ್ತು ನಾಲ್ಕು ದಿವಸದವರಲ್ಲಿ ''ದೇವರನ್ನು ಮಾಡುವುದರಲ್ಲಿ'' ವ್ಯತ್ಯಾಸವಿದೆ. ನಾಲ್ಕು ದಿವಸದವರು ಹೊಂಗೇಸ್ವಾಮಿ ಅಥವಾ ತಿಪ್ಪೇಸ್ವಾಮಿಯನ್ನು ವಿವಾಹ ಕಾಲದಲ್ಲಿ ಮಾಡುತ್ತಾರೆ. ಅಲ್ಲಿಗೆ ಮೂರು ದಿವಸದವರನ್ನಾಗಲಿ ಅನ್ಯರನ್ನಾಗಲಿ ಸೇರಿಸದೆ, ಸರಿರಾತ್ರಿಯಲ್ಲಿ ರಹಸ್ಯವಾಗಿ ರಕ್ತಸಂಬಂಧಿಗಳೇ ಸೇರಿಕೊಂಡು ಮಾಡುವ ಧಾರ್ಮಿಕ ವಿಧಿ. ರೆಡ್ಡಿಗಳಲ್ಲಿ ನರವಲ ರೆಡ್ಡಿ ಮತ್ತು ಪಾಕನಾಟ ರೆಡ್ಡಿಗಳು ಶಿವಭಕ್ತರು. ನಾಮದ ರೆಡ್ಡಿಗಳು ವಿಷ್ಣುಭಕ್ತರು. ವಿಷ್ಣುಭಕ್ತ ನಾಮದ ರೆಡ್ಡಿಗಳನ್ನು ನಾಮಧಾರಿ ಲಿಂಗಾಯಿತ ರೆಡ್ಡಿ ಎಂದೂ ಕರೆಯುತ್ತಾರೆ. ಪಾಕನಾಟ ಶಿವಭಕ್ತ ಲಿಂಗಾಯಿತರು ಮದುವೆ ಸಂದರ್ಭದ ಒಂದು ಧಾರ್ಮಿಕ ವಿಧಿಯಲ್ಲಿ ಹೆಣ್ಣಿನ ತಲೆಯ ಮುಸುಕನ್ನು ಎಂದಿಗಿಂತ ಬದಲಾಗಿ ವಿರುದ್ಧ ದಿಕ್ಕಿನಲ್ಲಿ ಹಾಕುತ್ತಾರೆ. ಅದು ಅವರ ಮತಾಂತರದ ಪೂರ್ವ ಪದ್ಧತಿಯ ಸಂಪ್ರದಾಯವಾಗಿದೆ. ನಾಲ್ಕು ದಿವಸದವರು ಮಾಡುವ ದೇವರು ಕಳ್ಳದೇವರಾಗಿದ್ದು ಅದು ಅವರ ಮತಾಂತರದ ಪೂರ್ವ ಜಾತಿಯ ಪದ್ಧತಿಯಾಗಿದೆ. ತುಮಕೂರು ಜಿಲ್ಲೆಯಲ್ಲಿ ಅನೇಕ ಪವಿತ್ರ ಸ್ಥಳಗಳು ಇಂದಿಗೂ ಎರಡು ಸಂಸ್ಕೃತಿಗಳ ಸಂಗಮವಾಗಿವೆ. ಗುಬ್ಬಿ ತಾಲ್ಲೂಕು ಆಳಲಘಟ್ಟದ ಸಾಕ್ಸಂದ್ರದ ಕೆಂಪಮ್ಮದೇವರು ಲಿಂಗಾಯಿತರು ಮತ್ತು ಗಂಗಟಿಕಾರ ಒಕ್ಕಲಿಗರಿಗೆ ಮನೆದೇವರಾಗಿದೆ. ದಂಡಿನಶಿವರದ ಗಂಗಟಿಕಾರ ಒಕ್ಕಲಿಗರು ಮತ್ತು ಚೇಳೂರ ಲಿಂಗಾಯಿತ ಒಕ್ಕಲಿಗರು ಹಿಂದೆ ಅಣ್ಣತಮ್ಮಂದಿರು. ಕೆಲವರು ಮತಾಂತರವಾದರೆ ಮತ್ತೆ ಕೆಲವರು ಹಾಗೆಯೆ ಉಳಿದರು. ಆದರೆ ಮತಾಂತರವಾದವರೂ ತಮ್ಮ ಹಿಂದಿನ ಮನೆ ದೇವರನ್ನು ಮಾತ್ರ ಬಿಡದೆ ಮುಂದುವರಿಸಿದರು. ಹತ್ಯಾಳು ನರಸಿಂಹ, ದೇವರಾಯನ ದುರ್ಗದ ನರಸಿಂಹ ಮತ್ತು ಸೀಬಿಯ ನರಸಿಂಹ ಭಕ್ತರು ಲಿಂಗಾಯಿತರಾಗಿದ್ದು ಇಂದಿಗೂ ಮುಂದುವರಿದಿದ್ದಾರೆ. ಹುಳಿಯಾರು ಬಳಿ ಪ್ರಸಿದ್ಧ ರಂಗನಾಥ ದೇವಾಲಯವೂ ಇಂಥ ಒಂದು ಕೇಂದ್ರವಾಗಿದೆ. ವಚನಕಾರರು ಕ್ಷುದ್ರದೇವರನ್ನು ಮತ್ತು ಅನ್ಯದೇವರನ್ನು ಎಷ್ಟೇ ತೀವ್ರವಾಗಿ ಖಂಡಿಸಿದ್ದರೂ ಮತಾಂತರವಾದ ವೀರಶೈವ ಬಸವ ಪಂಥದ ಒಳಪಂಗಡಗಳಲ್ಲಿ ಇಂದಿಗೂ ಅನ್ಯದೇವರು ಮತ್ತು ಕ್ಷುದ್ರದೇವರ ಆರಾಧನೆಯನ್ನು ಗುರುತಿಸಬಹುದು. ಅಲ್ಲದೆ ಅವರ ಪೂರ್ವ ಜಾತಿಯ ಆಚಾರ ವಿಚಾರಗಳೇ ಮುಂದುವರಿದಿವೆ. ನಾಲ್ಕು ದಿವಸದ ನೊಣಬರಲ್ಲಿ ಕತ್ತಿಪೂಜೆಯ ಸಂಪ್ರದಾಯವಿದೆ. ಅದು ನಾಯಕ ಜನಾಂಗದವರಲ್ಲಿಯೂ ಇದೆ. ನಾಲ್ಕು ದಿವಸದವರ ಕತ್ತಿ ಪೂಜೆಗೆ ನಾಯಕರೂ, ನಾಯಕರ ಕತ್ತಿಪೂಜೆಗೆ ನಾಲ್ಕು ದಿವಸದ ನೊಣಬ ಲಿಂಗಾಯಿತರೂ ಹೋಗಿ ಬರುವ ಪದ್ಧತಿ ಇದೆ. ಒಳಪಂಗಡದವರ ಮದುವೆ ಕಾಲದ ಧಾರ್ಮಿಕ ವಿಧಿಯ ಅಧ್ಯಯನದಿಂದ ಅನೇಕ ಸಾಂಸ್ಕೃತಿಕ ಅಂಶಗಳು ಬೆಳಕಿಗೆ ಬರುತ್ತವೆ. ಕುಂಚಿಟಿಗ ಸಾದು ಒಕ್ಕಲಿಗರಲ್ಲಿ ಹಲವು ಕುಟುಂಬಗಳು ಮತಾಂತರವಾಗಿವೆ. ಸಾದು ಕುಂಚಿಟಿಗ ಒಕ್ಕಲಿಗರಲ್ಲಿ ಅನೇಕರು ಮಾಂಸಾಹಾರಿಗಳಲ್ಲ. ಮಾಂಸಾಹಾರಿಗಳಲ್ಲದ ಸಾದು ಕುಂಚಿಟಿಗರಿಗೂ,

ಮತಾಂತರಿಯಾದ ಲಿಂಗಾಯಿತ ಸಾದು ಕುಂಚಿಟಗರಿಗೂ ಹಿಂದಿದ್ದ ಸಂಬಂಧ ಹಲವು ಕಡೆ ಮುಂದುವರೆದಿದೆ. ಶಿವಮೊಗ್ಗ ಜಿಲ್ಲೆಯ ಹೊನ್ನಾಳಿ ತಾಲ್ಲೂಕಿನಲ್ಲಿ ಇಂಥ ಸಂಬಂಧ ನೂರಾರು ವರ್ಷಗಳಿಂದ ನಡೆದು ಬಂದಿರುತ್ತದೆ. ಗೌಡ ಲಿಂಗಾಯಿತ ವಿಷ್ಣುಪೂಜಕರಿಗೆ ಮಾಗಡಿ ರಂಗನಾಥ ಕೇಂದ್ರಸ್ಥಳ. ಮನೆದೇವರಾದ ಹತ್ತಾಳು ನರಸಿಂಹನಿಗೆ ಕೆಲವು ಲಿಂಗಾಯಿತರು, ಅನ್ಯರಿಂದ ಮಾಂಸಹಾರದ ಎಡೆ ಮಾಡಿಸುವ ಪದ್ಧತಿಯೂ ಇದೆ. ಮತಾಂತರಿ ಲಿಂಗಾಯಿತರ ಮನೆಗಳಲ್ಲಿ ಪೆಟ್ಟಿಗೆ ದೇವರುಗಳಿವೆ. ಅವರು ಎಂದೂ ಪೆಟ್ಟಿಗೆಯನ್ನು ತೆರೆದು ನೋಡುವುದಿಲ್ಲ ಅಥವಾ ಯಾರಿಗೂ ತೆರೆದು ನೋಡಲು ಅವಕಾಶ ಕೊಡುವುದಿಲ್ಲ. ಪೆಟ್ಟಿಗೆ ದೇವರು ಲಿಂಗಾಯಿತರ ಪೂರ್ವ ಜಾತಿಯ ಮನೆದೇವರುಗಳೇ ಆಗಿರುತ್ತವೆ. ವರ್ಷಕ್ಕೊಮ್ಮೆ ಪೆಟ್ಟಿಗೆಗೆ ವಿಶೇಷ ಪೂಜೆ ಸಲ್ಲಿಸುತ್ತಾರೆ. ಇದಕ್ಕೆ ಬನಶಂಕರಿ ಪೆಟ್ಟಿಗೆ ಉತ್ತಮ ಉದಾಹರಣೆಯಾಗಿದೆ. ದೇವಾಂಗದವರಿಗೆ ಬನಶಂಕರಿ ಕುಲದೇವತೆ. ದೇವಾಂಗದವರು ಲಿಂಗಾಯಿತರಾಗಿ ಮತಾಂತರಿಗಳಾಗಿ ಶಿವನನ್ನು ಕುಲದೇವರಾಗಿ ಸ್ವೀಕರಿಸಿದ ಅನಂತರ ತಮ್ಮ ಮನೆದೇವರಾದ ಬನಶಂಕರಿಯನ್ನು ಬಹಿರಂಗವಾಗಿ ಪೂಜಿಸುವುದನ್ನು ಬಿಟ್ಟರೂ ಅಂತರಂಗಿಕವಾಗಿ ತಲೆ ತಲಾಂತರದಿಂದ ಪೂಜಿಸಿಕೊಂಡು ಬಂದ ಮನೆದೇವರನ್ನು ತೊರೆಯಲು ಹೆದರಿಕೆ ಯಾಗುತ್ತದೆ. ಅದನ್ನು ರಹಸ್ಯವಾಗಿ ಪೂಜಿಸಿಕೊಂಡು ಬರುತ್ತಾರೆ. ಅದನ್ನೇ ಕಳ್ಳ ದೇವರು ಎನ್ನುತ್ತಾರೆ. ಪೂರ್ವ ಮತದ ಮನೆದೇವರು ಮತಾಂತರಿಗೆ ಕಳ್ಳದೇವರಾಗಿ ಅವರು ಆ ದೇವರಿಗೆ ಕಳ್ಳ ಒಕ್ಕಲಾಗುತ್ತಾರೆ. ತಿರುಪತಿ ತಿಮ್ಮಪ್ಪನಿಗೆ ಲಿಂಗಾಯಿತ ಕಳ್ಳ ಒಕ್ಕಲ ಸಂಖ್ಯೆ ಅಧಿಕವಾಗಿದೆ. ಇಡೀ ಗ್ರಾಮ ಅಥವಾ ಕುಟುಂಬ ಮತಾಂತರವಾದಾಗ ಹೊಸ ದೇವರು ಒಗ್ಗಿ ಬರದೆ, ಧರ್ಮದ ತತ್ತ್ವಕ್ಕೆ ವಿರುದ್ಧವಾದರೂ ತಮ್ಮ ಪೂರ್ವದ ಮನೆದೇವರನ್ನೇ ಲಿಂಗಾಯಿತರಾದ ಅನಂತರವೂ ಮನೆದೇವರೆಂದೇ ಘೋಷಿಸಿಕೊಂಡು ಬಹಿರಂಗವಾಗಿ ಪೂಜಿಸುತ್ತಾರೆ. ಅಂಥ ಲಿಂಗಾಯಿತ ಭಕ್ತರಲ್ಲಿ ವಿಷ್ಣುಪೂಜೆಯ ಶಿವಭಕ್ತರನ್ನು ಉದಾಹರಿಸಬಹುದು. ಅಂಥ ಒಳಪಂಗಡದವರಲ್ಲಿ 'ಉಡುವಲ್ಲಿ ಉಂಬುವಲ್ಲಿ' ಕುಲಾಚಾರ ಅಡ್ಡಿ ಬರದಿದ್ದರೂ ಹೆಣ್ಣನ್ನು 'ಕೊಡುವಲ್ಲಿ ಕೊಂಬಲ್ಲಿ' ಕುಲಾಚಾರದ ತೊಡಕು ಬರುತ್ತದೆ. ಎಲ್ಲರೂ ಶಿವದೀಕ್ಷೆಯ ಶಿವಸಹೋದರರಾದರೂ ಮತ್ತೆ ಪೂರ್ವ ಮತದ ರಕ್ತಸಂಬಂಧದ ಆಚಾರ ಸಂಬಂಧ ಬೆಳೆಸುವಲ್ಲಿ ಅಡ್ಡಿ ಬರುತ್ತದೆ.

* * * * *

ಗೌಡ ಲಿಂಗಾಯಿತ, ನೊಣಬ ಲಿಂಗಾಯಿತ, ಸಾದು ಲಿಂಗಾಯಿತ ಮತ್ತಿತರ ಹದಿನೆಂಟು ಪಣದ ಬಸವ ಪಂಥದ ಒಳಪಂಗಡದ ಲಿಂಗಾಯಿತರಲ್ಲಿ ಮುಖ್ಯವಾಗಿ ಶಿವ ಮತ್ತು ವಿಷ್ಣುಪೂಜಕರಿದ್ದಾರೆ. ಬಸವಪಂಥದವರು ಮುಖ್ಯವಾಗಿ ದೀಕ್ಷೆಯಿಂದ ಮತಾಂತರಗೊಂಡು ವೀರಶೈವರಾದವರು. ಎಲ್ಲರೂ ಲಿಂಗ ಧರಿಸುತ್ತಾರೆ. ಒಳಪಂಗಡದವರಲ್ಲಿ ಶನಿವಾರದ ಲಿಂಗಾಯಿತರು ಮತ್ತು ಸೋಮವಾರದ ಲಿಂಗಾಯಿತರು ಎಂದು ಎರಡು ಗುಂಪುಗಳಿವೆ. ಶನಿವಾರದ ಲಿಂಗಾಯಿತರೇ ವಿಷ್ಣುಪೂಜೆಯ ಶಿವಭಕ್ತರು. ಅವರೇ ನಾಮಧರಿಸುವ ನಾಮಧಾರಿ ಲಿಂಗಾಯಿತರು. ಸೋಮವಾರದ ಲಿಂಗಾಯಿತರು ಅಚ್ಚ ಶಿವಭಕ್ತರು. ಸೋಮವಾರದ ಲಿಂಗಾಯಿತರು ನಾಮ ಧರಿಸುವುದಿಲ್ಲ. ವಿಷ್ಣು ಪೂಜೆ ಅವರಿಗೆ ನಿಷಿದ್ಧ. ಶನಿವಾರದ ಲಿಂಗಾಯಿತರಿಗೆ ವಿಭೂತಿ ಮತ್ತು ಶಿವಪೂಜೆ ನಿಷಿದ್ಧವಲ್ಲ. ಇಬ್ಬರಲ್ಲಿಯೂ ಆಚಾರ ವಿಚಾರದಲ್ಲಿ ಕೆಲವು ಭೇದಗಳಿವೆ. ಕೆಲವು ಕಡೆ ಊಟ ಉಪಚಾರ ಕೊಳುಕೊಡೆ ನಿಷಿದ್ಧವಾದರೂ ಮತ್ತೆ ಕೆಲವು ಕಡೆ ಯಾವ ಭೇದವೂ ಇರುವುದಿಲ್ಲ. ಸೋಮವಾರದ

ಲಿಂಗಾಯಿತರು ನೊಣಬರಲ್ಲಿ ಸಾಮಾನ್ಯವಾಗಿ ಸಿದ್ಧರಾಮನ ಭಕ್ತರು. ಗೌಡ ಲಿಂಗಾಯಿತರಲ್ಲಿ ಸಾಮಾನ್ಯವಾಗಿ ಸೋಮವಾರದವರು ಸಿದ್ಧಲಿಂಗನ ಭಕ್ತರು, ಶನಿವಾರದವರು ರಂಗನಾಥನ ಭಕ್ತರು. ನೊಣಬರಲ್ಲಿ ಶನಿವಾರದವರು ಮುಖ್ಯವಾಗಿ ನರಸಿಂಹನ ಭಕ್ತರು. ಅಥವಾ ಆಯಾ ಸ್ಥಳೀಯ ವಿಷ್ಣುದೇವಾಲಯದ ಪ್ರಭಾವಕ್ಕೆ ಒಳಗಾದವರು. ಸೋಮವಾರದ ಲಿಂಗಾಯಿತರಿಗೆ ಸಿದ್ಧರಾಮನ ಗದ್ದುಗೆಗಳು ಮತ್ತು ಗೋಡೇಕೆರೆ ಮಠ ಕೇಂದ್ರವಾಗಿರುವುದು ಕಂಡುಬರುತ್ತದೆ. ಶನಿವಾರದ ಲಿಂಗಾಯಿತರಿಗೆ ಇಂಥ ಶಿವ ದೇವಾಲಯಗಳಾಗಲಿ, ಗದ್ದುಗೆಗಳಾಗಲಿ ಕೇಂದ್ರವಾಗಿರುವುದು ಕಂಡುಬರುವುದಿಲ್ಲ. ಶನಿವಾರದವರಲ್ಲಿಯೇ ಕುಟುಂಬದ ಒಬ್ಬ ನಿತ್ಯಸ್ನಾನಿಯಾಗಿ 'ಅಯ್ಯನಾಗಿ' ದೀಕ್ಷೆ ಕೊಡುವ, ಧಾರ್ಮಿಕ ವಿಧಿಯ ಕಾರ್ಯವನ್ನು ತೂಗಿಸುವುದು ರೂಢಿಯಾಗಿದೆ. ಗುಬ್ಬಿ ಹೊಸಳ್ಳಿಯ ಅರಸು ಮನೆತನದ ನಾಲ್ಕು ದಿವಸದ ನೊಣಬ ಲಿಂಗಾಯಿತರು ಮಾತ್ರ ವೀರಭದ್ರನ ಒಕ್ಕಲಾಗಿ ರೇಣುಕ ಪೀಠದವರಿಂದಲೇ ದೀಕ್ಷೆ ಪಡೆಯುವ ಸಂಪ್ರದಾಯ ನಡೆದುಬಂದಿದೆ. ಅವರನ್ನು ಅರಸು ಲಿಂಗಾಯಿತರು ಎಂದು ಕರೆಯುತ್ತಾರೆ. ಪೂರ್ವದಲ್ಲಿ ಸಂಸ್ಥಾನದ ಆಧಿಪತ್ಯ ನಡೆಸಿದ ಅವರ ಅರಮನೆಗೆ ಪಂಚಾಚಾರ್ಯರ ರೇಣುಕಪೀಠ ಗುರುಮನೆಯಾಗಿ ಪ್ರಭಾವ ಬೀರಿರುವುದು ಕಂಡುಬರುತ್ತದೆ. ಅರಸು ಲಿಂಗಾಯಿತರಲ್ಲಿ ವಿಷ್ಣುಪೂಜಕರಿಲ್ಲ. ಆದರೆ ವಿಜಯದಶಮಿ ಕಾಲದಲ್ಲಿ ಆಯುಧ ಪೂಜೆ ಸಲ್ಲಿಸುತ್ತಾರೆ. ಇಂದಿಗೂ ಅವರು 'ಮುತ್ತಿನ ಮುಮ್ಮಡಿ ಏಳುನಾಡು ಪ್ರಭುಗಳು' ಎಂಬ ಬಿರುದು ಹೊತ್ತು ಸಂಸ್ಥಾನಾದ್ಯಂತ ತಿರುಗಿ ಕಪ್ಪಕಾಣಿಕೆ ವಸೂಲಿ ಮಾಡುತ್ತಾರೆ. ಏಕಸುಳಿ ಸಂತಾನದ ಅರಸು ಲಿಂಗಾಯಿತ ಮನೆತನದಲ್ಲಿ ಪಟ್ಟ ನಡೆಯುವ ಪದ್ಧತಿ ಇಂದಿಗೂ ನಡೆದುಕೊಂಡು ಬಂದಿರುತ್ತದೆ. ಶನಿವಾರದ ಲಿಂಗಾಯಿತರು ನರಸಿಂಹ, ರಂಗನಾಥ ಮತ್ತು ಆಂಜನೇಯನ ಭಕ್ತರೇ ಅಲ್ಲದೆ ತಿರುಪತಿ ತಿಮ್ಮಪ್ಪನ ಒಕ್ಕಲೂ ಆಗಿ, ಮನೆಯಲ್ಲಿ ತಿಮ್ಮಪ್ಪದೇವರನ್ನು ಪೂಜಿಸುತ್ತಾರೆ. ಲಿಂಗಾಯಿತರಾಗಿ ತಿಮ್ಮಪ್ಪನನ್ನು ಪೂಜಿಸುವುದು ಸರಿಯೆ ಎಂದರೆ ತಿಮ್ಮಪ್ಪ ಹಿಂದೆ ವೀರಭದ್ರನಾಗಿದ್ದ ಎಂದು ಸಮಾಧಾನ ಹೇಳಿ ಸಮರ್ಥಿಸಿಕೊಳ್ಳುವುದರಲ್ಲಿ ಅರ್ಥವಿಲ್ಲ ಎನ್ನಿಸುತ್ತದೆ. ವಿಷ್ಣುಪೂಜೆಯ ಲಿಂಗಾಯಿತರ ಆಚಾರ ವಿಚಾರಗಳನ್ನು ಅಧ್ಯಯನ ಮಾಡಿದರೆ, ಅವರಲ್ಲಿ ಸಂಪೂರ್ಣವಾಗಿ ವಿಷ್ಣುಪಂಥದ ಆಚರಣೆಗಳನ್ನು ಗುರುತಿಸಬಹುದಾಗಿದೆ. ವಿಷ್ಣುಪೂಜಕ ಲಿಂಗಾಯಿತರು ನಾಮ ಧರಿಸುತ್ತಾರೆ, ತುಳಸಿ ಬಳಸುತ್ತಾರೆ, ಕಾರ್ತೀಕ ಸೋಮವಾರಕ್ಕಿಂತ ಶ್ರಾವಣ ಶನಿವಾರವನ್ನು ಅದ್ಧೂರಿಯಾಗಿ ಆಚರಿಸುತ್ತಾರೆ. ಹುಟ್ಟು ಸಾವು, ಶುಭ ಅಶುಭ ಕಾರ್ಯಗಳಲ್ಲಿ 'ಅಯ್ನೋರಿಗಿಂತ' ದಾಸಯ್ಯ ಬಂದು ಧಾರ್ಮಿಕ ವಿಧಿಯ ಕಾರ್ಯವನ್ನು ತೂಗಿಸುತ್ತಾನೆ. ದೀಕ್ಷೆಗೆ ಮಾತ್ರ ಅಯ್ನೋರನ್ನ ಕರೆದರೆ ಮಿಕ್ಕ ಕಾಲದಲ್ಲಿ ದಾಸಯ್ಯನೇ ಪುರೋಹಿತನಾಗಿ ಕಾರ್ಯ ನಿರ್ವಹಿಸುತ್ತಾನೆ. ಶ್ರಾವಣ ಶನಿವಾರದಲ್ಲಿ ದಾಸಯ್ಯನನ್ನು ಕರೆದು ಜೊವನಾಸಿ ತುಂಬಿಸಿ, ಶಂಖದ ಕೂಗುಹಾಕಿಸಿ, ಜಾಗಟೆ ಬಡಿಸಿ ಗೋವಿಂದನನ್ನು ಇಕ್ಕಿಸಿ ಕಾಲಿಗೆ ಬೀಳುತ್ತಾರೆ. ಮದುವೆ ಕಾಲದಲ್ಲಿ ಮನೆ ದೇವರು ವಿಷ್ಣುವನ್ನೇ ಪೂಜಿಸುತ್ತಾರೆ. ಮಕ್ಕಳ ಮುಡಿಯನ್ನು ವಿಷ್ಣುದೇವರಿಗೇ ಕೊಡುತ್ತಾರೆ. ಮದುವೆಯ ನಾಗೋಲೆ ಶಾಸ್ತ್ರದಲ್ಲಿ ಸಂಬಂಧಿ ಒಬ್ಬ ದಾಸಯ್ಯನ ವೇಷ ಧರಿಸಿ ಮಣೇವು ಹಾಕಿಸುವ ಪದ್ಧತಿಯೂ ಉಂಟು. ಲಿಂಗಾಯಿತರಲ್ಲಿ ಪ್ರಸಾದ ಎಂದರೆ ಅತ್ಯಂತ ಪವಿತ್ರವಾದುದು ಮತ್ತು ಪ್ರಮುಖವಾದುದು. ನಾಮಧಾರಿ ಲಿಂಗಾಯಿತರು ಅಂಥ ಪ್ರಸಾದ ಸ್ವೀಕರಿಸುವಾಗ 'ಶ್ರೀಮದ್ರಮಾರಮಣ ಗೋವಿಂದ ಗೋವಿಂದ' ಎಂದು ಹರೀಯ ಗೋವಿಂದನನ್ನು ಮೊದಲು ಇಕ್ಕಿ, ಅನಂತರ 'ಜಯ ಜಯ ನಮಃ ಪಾರ್ವತೀ ಪತೇ ಹರ

ಹರ ನಮಃ' ಎಂದು ಹರನನ್ನು ಸ್ತುತಿಸುವ ಪದ್ಧತಿ ಇಂದಿಗೂ ಇದೆ. ನಾಮಧಾರಿ ಲಿಂಗಾಯಿತರಲ್ಲಿ ದಾಸಯ್ಯ ಮತ್ತು ಅಯ್ನೋರನ್ನು ಒಂದೇ ದಿನ, ಒಂದೇ ಕಾಲದಲ್ಲಿ ಮನೆಗೆ ಕರೆದು ಧಾರ್ಮಿಕ ಕೆಲಸಕಾರ್ಯವನ್ನು ತೂಗಿಸುವುದು ರೂಢಿಯಲ್ಲಿದೆ. ಅಯ್ನೋರು ಲಿಂಗಾಯಿತರಾದುದರಿಂದ ಒಳಗೆ ದೇವರ ಮನೆಯಲ್ಲಿ, ದಾಸಯ್ಯ ತಮಗಿಂತ ಕೀಳುಕುಲದವನಾದುದರಿಂದ ನಡುಮನೆಯಲ್ಲಿ—ಹೀಗೆ ಏಕ ಕಾಲದಲ್ಲಿ ಹರಿ ಮತ್ತು ಹರನ ಸೇವೆಗೆ ಏರ್ಪಾಟು ಮಾಡುವ ಸಂದರ್ಭಗಳೂ ಉಂಟು. ವಿಷ್ಣುದೇವಾಲಯಗಳಲ್ಲಿ ಕೆಳವರ್ಗದ ಪೂಜಾರಿಗಳಿಂದ ತೀರ್ಥಪ್ರಸಾದ ಸ್ವೀಕರಿಸುವುದಕ್ಕೆ ನಾಮಧಾರಿ ಲಿಂಗಾಯಿತರಿಗೆ, ಪೂಜಾರಿಯ ಜಾತಿ ಅಡ್ಡಿ ಬರುವುದಿಲ್ಲ. ಅಲ್ಲದೆ ಅನೇಕ ವಿಷ್ಣು ದೇವಾಲಯಗಳಲ್ಲಿ ಲಿಂಗಾಯಿತರೇ ಪೂಜಾರಿಗಳಾಗಿ ಸೇವೆ ಸಲ್ಲಿಸುತ್ತಿರುವುದು ತಮಗೆ ಅವಮಾನ ಎಂದು ನಾಮಧಾರಿ ಲಿಂಗಾಯಿತರು ಎಂದೂ ಭಾವಿಸುವುದಿಲ್ಲ. ನಾಮಧಾರಿ ಲಿಂಗಾಯಿತರು ಗುಪ್ತ ಭಕ್ತರಲ್ಲ, ವಿಷ್ಣುವಿನ ಕಳ್ಳ ಒಕ್ಕಲಲ್ಲ, ಶಿವಕುಲದ ವಿಷ್ಣುವಿನ ನಿಷ್ಠಾವಂತ ಬಹಿರಂಗ ಭಕ್ತರು. ಅವರು ಲಿಂಗಾಯಿತ ಬ್ರಾಹ್ಮಣ ಪುರೋಹಿತರಾದ ಜಂಗಮರನ್ನು ತಲೆ ಮೇಲೆ ಹೊತ್ತು ಮೆರೆಸುವುದಿಲ್ಲ. ಅಂತೆಯೇ ಕೆಳವರ್ಗದ ಪುರೋಹಿತರನ್ನು ಕಡೆಗಾಣಿಸುವುದಿಲ್ಲ. ನಾಮಧಾರಿ ಲಿಂಗಾಯಿತರ ಸಂಸ್ಕೃತಿಯ ಅಧ್ಯಯನ ಕರ್ನಾಟಕದ ಸಂಸ್ಕೃತಿ ಅಧ್ಯಯನಕ್ಕೆ ವಿಶೇಷ ಕಾಣಿಕೆ ಸಲ್ಲಿಸುವುದರಲ್ಲಿ ಸಂಶಯವಿಲ್ಲ. ಅಷ್ಟಾವರಣ, ಷಟ್‌ಸ್ಥಲ, ಪಂಚಾಚಾರ, ಏಕದೇವತಾನಿಷ್ಠೆ ಅಥವಾ ಯಾವ ವೀರಶೈವ ಪೀಠಾಧಿಪತಿಯಾಗಲಿ, ವೀರಶೈವ ಧರ್ಮ ಪ್ರಚಾರಕರಾಗಲಿ ನಾಮಧಾರಿ ಲಿಂಗಾಯಿತರ ವಿಷ್ಣುಪೂಜೆಯನ್ನು ಬದಲಿಸಲು ಮಾತ್ರ ಶತಮಾನಗಳಿಂದ ಸಾಧ್ಯವಾಗಿಲ್ಲ. ವಿಷ್ಣುಪೂಜಕರನ್ನು ಲಿಂಗಧಾರಿಗಳನ್ನಾಗಿ ಮತಾಂತರಿಸಿರಬಹುದೇ ಹೊರತು, ಅವರನ್ನು ಏಕನಿಷ್ಠ ಶಿವಪೂಜಕರನ್ನಾಗಿ ಸಂಪೂರ್ಣ ಪರಿವರ್ತಿಸುವಲ್ಲಿ ವೀರಶೈವ ಧರ್ಮ ವಿಫಲವಾಗಿದೆ. ದೀಕ್ಷೆಗೆ ವಿರುದ್ಧವಾಗಿ ಬಹುದೇವತೋಪಾಸಕರಾದ ವಿಷ್ಣು ಪೂಜೆಯ ಲಿಂಗಾಯಿತರನ್ನು ವಾರದಲ್ಲಿ ಒಂದು ದಿನದ ವಿಷ್ಣು ಪೂಜಕರು ಎಂದು ಕರೆದಿರುವ ವಿದ್ವಾಂಸರ ಅಭಿಪ್ರಾಯ ಆಳವಾದ ಅಧ್ಯಯನದಿಂದ ಬಂದ ತೀರ್ಮಾನವಲ್ಲ. ಪಂಚಾಚಾರ್ಯರು ಮತ್ತು ಉಚ್ಚ ವರ್ಗದಿಂದ ಮತಾಂತರವಾದ ಬಸವ ಪಂಥದ ಅಚ್ಚ ಶಿವಭಕ್ತರು ನಾಮಧಾರಿ ಲಿಂಗಾಯಿತರನ್ನು ಒಂದು ಬಣ್ಣ ಕಡಿಮೆಯಾಗಿ ಕಂಡು, ತಾವೇ ಶ್ರೇಷ್ಠ ಎಂದು ಭಾವಿಸುತ್ತಾರೆ. ಧಾರ್ಮಿಕ ಪ್ರತಿಷ್ಠಿತರು, ಬುದ್ಧಿಜೀವಿಗಳು ಮತ್ತು ಶ್ರೀಮಂತರು ಮಾತ್ರ ನಿತ್ಯ ಸ್ನಾನಿಗಳಾಗುತ್ತಾರೆ. ಗ್ರಾಮಾಂತರ ಪ್ರದೇಶದಲ್ಲಿ ಯಾವುದೇ ಜಾತಿಯ ಕೆಳವರ್ಗ ನಿತ್ಯಸ್ನಾನಿಗಳಾಗಿರುವುದಿಲ್ಲ. ಅವರ ಆರ್ಥಿಕ ದುಃಸ್ಥಿತಿಯೇ ಧಾರ್ಮಿಕ ಸ್ಥಿತಿಗತಿಯನ್ನೂ ನಿಯಂತ್ರಿಸುತ್ತದೆ. ಹಳ್ಳಿಯ ಪರಿಸರವೇ ಅವರನ್ನು ವಾರಸ್ನಾನಿಗಳು, ಪಕ್ಷಸ್ನಾನಿಗಳು ಮತ್ತು ಮಾಸ ಸ್ನಾನಿಗಳನ್ನಾಗಿಸುತ್ತದೆ. ಧಾರ್ಮಿಕ ವಿಧಿ ಕೆಳವರ್ಗಕ್ಕೆ ವೃತ್ತಿಯಾಗುವುದಿಲ್ಲ. ದುಡಿಮೆಯಿಂದ ಪ್ರಾಮಾಣಿಕವಾಗಿ ಬೆವರು ಸುರಿಸಿ ಗಂಜಿಕುಡಿವ ಅವರಿಗೆ ಧಾರ್ಮಿಕ ಪೂಜೆಗೆ ಪ್ರತ್ಯೇಕವಾಗಿ ಕಾಲವನ್ನು ಮೀಸಲಿಡಲು ಸಮಯವೂ ಇರುವುದಿಲ್ಲ ಮತ್ತು ಅವರ ಆರ್ಥಿಕ ಸ್ಥಿತಿಗತಿ ಅನುಕೂಲವೂ ಆಗಿರುವುದಿಲ್ಲ. ಧರ್ಮ ತತ್ತ್ವಗಳು ಅವರ ಉಸಿರಿನಷ್ಟೇ ಬದುಕಿನ ಸಹಜ ಅಂಗವಾಗಿರುತ್ತವೆ. ಲಿಂಗಾಯಿತರಿಗೂ ಇತರ ಕೋಮಿನವರಿಗೂ ವಾರದ ಆಚರಣೆಯಲ್ಲಿ ಯಾವ ವ್ಯತ್ಯಾಸವೂ ಇರುವುದಿಲ್ಲ. ವಾರಕ್ಕೊಮ್ಮೆ ಕೆಳವರ್ಗದ ಉತ್ತಮ ಜಾತಿಯವರು ತಪ್ಪದೆ ಸ್ನಾನಮಾಡಿ ಮನೆ ದೇವರನ್ನು ಪೂಜಿಸುತ್ತಾರೆ. ವಾರದ ಇಡೀ ದಿನವನ್ನು ಹಬ್ಬದ ದಿನದಂತೆ ವಿಶೇಷವಾಗಿ

ಆಚರಿಸುತ್ತಾರೆ. ತಪ್ಪದೆ ದೇವರ ಪೂಜೆಯನ್ನು ಮಡಿ ಉಪವಾಸದಿಂದ ನಿಷ್ಠಾವಂತರಾಗಿ ಮಾಡುತ್ತಾರೆ. ಕುಟುಂಬ ಆಚರಿಸುವ ವಾರವೇ ಅದು ಶಿವಪಂಥದ್ದೊ ಅಥವಾ ವಿಷ್ಣುಪಂಥದ್ದೊ ಎಂಬುದು ನಿರ್ಧಾರವಾಗುತ್ತದೆ. ಶನಿವಾರ ಆಚರಿಸುವವರು ವಿಷ್ಣು ಪಂಥದವರೆಂದೂ, ಸೋಮವಾರ ಆಚರಿಸುವವರು ಶಿವ ಪಂಥದವರೆಂಬುದಂತೂ ನಿರ್ವಿವಾದ ಸಂಗತಿ. ಅನೇಕ ಕುಟುಂಬಗಳು ಮನೆಯಲ್ಲಿ ವಾರವನ್ನೂ ಆಚರಿಸದಷ್ಟು ಅನಾನುಕೂಲ ಸ್ಥಿತಿಯಲ್ಲಿದ್ದು, ಆಗೊಮ್ಮೆ ಈಗೊಮ್ಮೆ ಕೆರೆಯಲ್ಲಿ ಸ್ನಾನಮಾಡಿ ತಮ್ಮ ತಮ್ಮ ದೇವರಿಗೆ ಕೈಮುಗಿಯುವುದರಲ್ಲಿಯೇ ಅವರ ಪಂಥನಿಷ್ಠೆ ಮಿತಗೊಂಡಿರುತ್ತೆ. ಆದ್ದರಿಂದ ನಾಮಧಾರಿ ಲಿಂಗಾಯಿತರು ವಾರದಲ್ಲಿ ಒಂದು ದಿನ ನಾಮಧರಿಸುವ ಲಿಂಗಾಯಿತರಲ್ಲ. ಅವರ ಬದುಕಿನಲ್ಲಿ ವಿಷ್ಣುಪಂಥದ ಸಂಪ್ರದಾಯ ಆಳವಾಗಿ ಬೇರುಬಿಟ್ಟು ಹಾಸುಹೊಕ್ಕಾಗಿ ಹೆಣೆದಿರುವುದು ಸ್ಪಷ್ಟವಾಗುತ್ತದೆ. ಹುಟ್ಟಿನಿಂದ ಸಾಯುವ ತನಕ ನಾಮಧಾರಿ ಲಿಂಗಾಯಿತರ ಧಾರ್ಮಿಕ ವಿಧಿಯಲ್ಲಿ ವಿಷ್ಣುಪಂಥದ ಆಚರಣೆಯ ಅನುಸರಣೆ ಕಂಡುಬಂದು ವಿಷ್ಣುಪೂಜಕರು ನಾಮಧಾರಿ ಲಿಂಗಾಯಿತರು ಎಂಬುದರಲ್ಲಿ ಯಾವ ಸಂಶಯವೂ ಇಲ್ಲ.

ಕುಲದೇವರು, ಮನೆದೇವರು ಮತ್ತು ಇಷ್ಟದೇವರು ಈ ಮೂರು ದೇವರು ವ್ಯಕ್ತಿ, ಕುಟುಂಬ ಮತ್ತು ಸಮಾಜಕ್ಕೆ ಅನ್ವಯಿಸುತ್ತದೆ. ಕುಲದೇವರು ಆ ವ್ಯಕ್ತಿ ಯಾವ ಕುಲಕ್ಕೆ ಸೇರಿದವನೆಂಬುದನ್ನು ತೋರಿಸುತ್ತದೆ. ಮನೆದೇವರು ವ್ಯಕ್ತಿಯು ಯಾವ ವಂಶ ಮತ್ತು ಕುಟುಂಬಕ್ಕೆ ಸೇರಿದವನು ಎಂಬುದನ್ನು ತಿಳಿಸುತ್ತದೆ. ಇಷ್ಟದೇವರು ವ್ಯಕ್ತಿಯ ವೈಯಕ್ತಿಕ ಅಭಿರುಚಿಯನ್ನು ತೋರಿಸುತ್ತದೆ. ಈ ಮೂರಕ್ಕೂ ವ್ಯಕ್ತಿಗೂ ಸಂಬಂಧವಿರುತ್ತದೆ. ವ್ಯಕ್ತಿಯ ಮೂರು ದೇವರನ್ನು ಪ್ರಶ್ನಿಸುವುದರಿಂದ ಅವನ ಕುಲ, ವಂಶ ಮತ್ತು ಅವನ ಸ್ವಭಾವವನ್ನು ಪತ್ತೆ ಹಚ್ಚಬಹುದು. ಕೆಲವರಿಗೆ ಈ ಮೂರು ದೇವರು ಒಂದೇ ಆಗಿರುತ್ತವೆ. ಮತ್ತೆ ಕೆಲವರಿಗೆ ಭಿನ್ನ ಭಿನ್ನವಾಗಿರುತ್ತವೆ. ಕುಲದೇವರು ಆ ಕುಲದ ಸಮಾಜದ ಎಲ್ಲಾ ಸದಸ್ಯರಿಗೂ ಒಂದೇ ಆಗಿರುತ್ತದೆ. ಲಿಂಗಾಯಿತರಿಗೆ ಕುಲದೇವರು ಶಿವ. ಆದರೆ ಮನೆದೇವರು ಮತ್ತು ಇಷ್ಟದೇವರು ಬೇರೆಬೇರೆಯಾಗಬಹುದು. ಕುಟುಂಬದ ವ್ಯಕ್ತಿ ವ್ಯಕ್ತಿಗೂ ಇಷ್ಟದೇವರು ಬೇರೆ ಬೇರೆಯಾಗಬಹುದು. ಆದರೆ ಕುಟುಂಬದ ಎಲ್ಲಾ ವ್ಯಕ್ತಿಗಳಿಗೂ ಮನೆದೇವರು ಒಂದೇ ಆಗಿರುತ್ತದೆ. ಒಂದೇ ಕುಲದ ಬೇರೆ ಬೇರೆ ಕುಟುಂಬಗಳಿಗೆ ಕುಲದೇವರು ಒಂದೇ ಆಗಿ ಮನೆ ದೇವರು ಬೇರೆಬೇರೆಯಾಗಿ ಇರಲು ಸಾಧ್ಯ. ಕುಟುಂಬ ಅಥವಾ ವ್ಯಕ್ತಿಮತಾಂತರಿಯಾದಾಗ ಕುಲ ಅಥವಾ ಇಷ್ಟದೇವರು ಬದಲಾಗಲು ಸಾಧ್ಯ. ಆದರೆ ಮನೆದೇವರು ಅಷ್ಟು ಸುಲಭವಾಗಿ ಬದಲಾಗುವುದಿಲ್ಲ. ಅನುವಂಶದ ರಕ್ತಸಂಬಂಧ ಮನೆದೇವರ ಆರಾಧನೆಯಲ್ಲಿ ಅಡಗಿರುತ್ತದೆ. ಯಾರೂ ಒಂದು ಪಕ್ಷ ಕುಲ ಬಿಟ್ಟರೂ ಮನೆ ದೇವರನ್ನು ಮಾತ್ರ ಅಷ್ಟು ಸುಲಭವಾಗಿ ಬಿಡುವುದಿಲ್ಲ. 'ಮನೆದೇವರನ್ನು ಬಿಟ್ಟರೆ ಮನೆ ಹಾಳು' ಎಂಬ ಗಾದೆಯೇ ಹುಟ್ಟಿದೆ. ಮದುವೆ ಮುಂತಾದ ಸಂದರ್ಭದಲ್ಲಿ ನಡೆಸುವ ದೇವತಾಕಾರ್ಯದಿಂದ ಮನೆ ದೇವರು ಪತ್ತೆಯಾಗುತ್ತದೆ. ವ್ಯಕ್ತಿಯನ್ನು ಮತಾಂತರಿಸಬಹುದೇ ಹೊರತು, ಅವನ ಮನೆದೇವರನ್ನು ಮತಾಂತರಿಸುವುದು ಸುಲಭಸಾಧ್ಯವಿಲ್ಲ. ಆದ್ದರಿಂದ ವಿಷ್ಣು ಮನೆದೇವರಾದ ನಾಮಧಾರಿ ಲಿಂಗಾಯಿತರ ಮನೆದೇವರು ಬದಲಾಗುವುದಿಲ್ಲ. ವಿಷ್ಣು ವಿರೋಧಿ ಏಕನಿಷ್ಠ ವೀರಶೈವರಿಗೆ ನಾಮಧಾರಿ ಲಿಂಗಾಯಿತರು ಎಂದು ಕರೆದುಕೊಳ್ಳುವುದಕ್ಕೆ ಇರಸುಮುರುಸಾದರೂ ಅಂಥ ಸಂಪ್ರದಾಯದ ಪಂಥದವರು ಇರುವುದನ್ನು ಅಲ್ಲಗಳೆಯುವುದಂತೂ ಸಾಧ್ಯವಿಲ್ಲ. ವಿಷ್ಣು

ಭಕ್ತರಾದ ಲಿಂಗಾಯಿತರು ತಿಮ್ಮಪ್ಪ, ಗೋವಿಂದ, ನರಸಿಂಹ, ರಂಗನಾಥ, ಶ್ರೀನಿವಾಸ ಮುಂತಾದ ವಿಷ್ಣುಭಕ್ತರ ಹೆಸರನ್ನು ಇಟ್ಟುಕೊಳ್ಳುವುದಕ್ಕೆ ನಾಚುವುದಿಲ್ಲ, ಚಿತ್ರದುರ್ಗದ ಮುರುಘಾಮಠದವರ ನಿರೂಪದಲ್ಲಿ 'ದ್ರಾಕ್ಷಾರಾಮ ಕ್ಷೇತ್ರ ರಾಮನಾಥ ಲಿಂಗೋದ್ಭವ ಪ್ರಭು ಪರಂಪರಾನ್ವಯ' ಎಂಬ ಮಾತು ವಿಷ್ಣುಭಕ್ತರ ಕುತೂಹಲವನ್ನು ಕೆರಳಿಸುತ್ತದೆ.

ತುಮಕೂರು ಜಿಲ್ಲೆಯಲ್ಲಿ ಹತ್ಯಾಳು ನರಸಿಂಹ, ಸೀಬಿ ನರಸಿಂಹ ಮತ್ತು ದೇವರಾಯನದುರ್ಗದ ನರಸಿಂಹ ನಾಮಧಾರಿ ಲಿಂಗಾಯಿತರ ಪವಿತ್ರ ಸ್ಥಳಗಳು. ನಾಮಧಾರಿ ಲಿಂಗಾಯಿತರು ಲಗ್ನಪತ್ರಿಕೆಗಳಲ್ಲಿ 'ನರಸಿಂಹಾಯ ನಮಃ' ಎಂದೇ ಮನೆದೇವರ ಹೆಸರನ್ನು ಮುದ್ರಿಸುತ್ತಾರೆ. ಹತ್ಯಾಳಿನ ನರಸಿಂಹಸ್ವಾಮಿಯ ಪೂಜಾರಿ ಲಿಂಗಾಯಿತರು, ನಿತ್ಯ ನಾಮಧರಿಸಿ ಎದೆಯ ಮೇಲೆ ಲಿಂಗವಿದ್ದೇ ಗೋವಿಂದನನ್ನು ಇಕ್ಕಿ ನರಸಿಂಹನ ಪೂಜೆ ಮಾಡುವುದನ್ನು ಕಾಣಬಹುದು. ಈ ಸ್ಥಳಗಳಲ್ಲಿ ವಿಷ್ಣುಭಕ್ತ ಲಿಂಗಾಯಿತರ ಮಂಟಪಗಳಿವೆ. ಜಾತ್ರೆ ಕಾಲದಲ್ಲಿ ಪರ ಮಾಡಿ ನರಸಿಂಹದೇವರಿಗೆ ಎಡೆ ಅರ್ಪಿಸುತ್ತಾರೆ. ಸಂಜೆ ಹೊತ್ತು ಹತ್ಯಾಳು ನರಸಿಂಹನಿಗೆ ಮಾಂಸದ ಎಡೆಯೂ ಆಗುತ್ತದೆ. ಲಿಂಗಾಯಿತ ಪೂಜಾರಿ ಅದಕ್ಕೆ ವಿರೋಧಿಸುವುದಿಲ್ಲ, ಅವನೂ ಪ್ರಸಾದವನ್ನು ಬಳಸುತ್ತಾನೆ. ಪರೀಕ್ಷೆ ಮಾಡಿದವರಿಗೆ ಮಾಂಸ ಬಾಳೆಕಾಯಿ ಮತ್ತು ಹಲಸಿನಕಾಯಿಯ ಪಲ್ಯವಾಗಿ ಕಂಡಿದೆಯಂತೆ! ಇಂಥ ಸಂಪ್ರದಾಯ ಗುಟ್ಟಾಗಿ ನಡೆಯುತ್ತಿದೆ. ಇಂಥ ಪದ್ಧತಿಯಿಂದ ಆಶ್ಚರ್ಯಪಡುವ ಅಗತ್ಯವಿಲ್ಲ. ಒಂದೇ ಪಂಥದಲ್ಲಿ ಶಿಷ್ಟ ಮತ್ತು ಜಾನಪದ ಸಂಪ್ರದಾಯಗಳು ಏರ್ಪಟ್ಟಿದ್ದರಿಂದಲೇ ಇಂಥ ಆಚರಣೆಗಳಿಗೆ ಅವಕಾಶವಾಯಿತು. ಇಂಥ ಆಚಾರಗಳ ಅಧ್ಯಯನದಿಂದ ಆಯಾ ಸಾಂಸ್ಕೃತಿಕ ಸಂದರ್ಭವನ್ನು ಅರಿಯಲು ಸಾಧ್ಯವಾಗುತ್ತದೆ. ನಾಮಧಾರಿ ಲಿಂಗಾಯಿತರ ಮತ್ತಷ್ಟು ಅಧ್ಯಯನದಿಂದ ಕರ್ನಾಟಕ ಸಂಸ್ಕೃತಿಗೆ ಹೊಸ ಬೆಳಕು ಚೆಲ್ಲುವುದು ಸಾಧ್ಯ.

*ಮರುಚಿಂತನೆ, ೧೯೮೫, ಪು. ೧೨೧-೮೩*

# ೧೯. ಕನ್ನಡ ಸಾಹಿತ್ಯ ಮತ್ತು ಕಲೆ

## (ಜೈನ ಸಾಹಿತ್ಯವು ಮೂರ್ತಿಲಕ್ಷಣಗಳ ಮೇಲೆ ಚೆಲ್ಲುವ ಬೆಳಕಿನ ಒಂದು ಕಿರಣ)

● ಷ. ಶೆಟ್ಟರ್

ಕನ್ನಡ ಸಾಹಿತ್ಯದಲ್ಲಿ ಭಾರತೀಯ ಕಲೆಯ–ವಾಸ್ತು, ಶಿಲ್ಪ, ಚಿತ್ರ, ಮೂರ್ತಿಲಕ್ಷಣ, ವೇಷಭೂಷಣ, ಸಂಗೀತ ಮುಂತಾದವುಗಳ ಬಗ್ಗೆ ಸಾಕಷ್ಟು ಸಾಮಗ್ರಿ ಹುದುಗಿದೆ. ಸಾಂಪ್ರದಾಯಿಕವೆಂದು ಹೊರತೋರಿಕೆಗೆ ಕಾಣುವ ಈ ವಿವರಗಳನ್ನು ಕೂಲಂಕಷವಾಗಿ ಪರಿಶೋಧಿಸಿ, ವೈಜ್ಞಾನಿಕ ವೈಚಾರಿಕತೆಗೆ ಒರೆಹಚ್ಚಿ ನೋಡಿದರೆ, ನಮ್ಮ ನಾಡಿನ ಹಾಗೂ ದೇಶದ ಕಲೆಯ ತಿಳಿವಳಿಕೆಗೆ ಉಪಯುಕ್ತ ವಿಷಯ ತಿಳಿಯುವುದೆಂಬುದರಲ್ಲಿ ಅನುಮಾನವಿಲ್ಲ.

ನಾನಿಲ್ಲಿ ಭಾರತೀಯ ಜೈನ ಕಲೆಯ–ಪ್ರಮುಖವಾಗಿ ದಿಗಂಬರ ಶಾಖೆಯ ಕಲೆಯ–ಅರಿವಿಗೆ ಕನ್ನಡ ಜೈನ ಸಾಹಿತ್ಯದಲ್ಲಿ ದೊರೆಯಬಹುದಾದ ವಿವರಗಳ ಬಗ್ಗೆ ವಿಚಾರಿಸಿರುವೆ. ಕನ್ನಡದಲ್ಲಿರುವ ಜೈನ ಸಾಹಿತ್ಯ ನನ್ನ ತೆಕ್ಕೆಗೆ ಮೀರಿದ್ದು; ಕಾರಣ ಇಲ್ಲಿ ನಾನು ಉಪಯೋಗಿಸಿರುವ ಸಾಹಿತ್ಯ ಸಹಜವಾಗಿ ಸೀಮಿತವಾಗಿದೆ.

ಜೈನ ಕಲೆಯಲ್ಲಿ ಇಪ್ಪತ್ತುನಾಲ್ಕು ತೀರ್ಥಂಕರರು ಮತ್ತು ಪ್ರತಿ ತೀರ್ಥಂಕರನ ಯಕ್ಷ-ಯಕ್ಷಿಯರು (ಅಥವಾ ಶಾಸನ ದೇವತೆಗಳು) ಪ್ರಮುಖವಾಗಿ ಕಾಣುವ ದೇವತೆಗಳು. ಇಪ್ಪತ್ತುನಾಲ್ಕು ತೀರ್ಥಂಕರರ ಜೀವನ ಚರಿತ್ರೆಯನ್ನು ಚಾವುಂಡರಾಯನು ತನ್ನ ಪುರಾಣದಲ್ಲಿ ನಿರೂಪಿಸಿದ್ದರೂ, ಆ ಇಡೀ ಗ್ರಂಥದಲ್ಲೆಲ್ಲೂ ಅವರ ಮೂರ್ತಿಲಕ್ಷಣದ ಬಗ್ಗೆಯಾಗಲೀ, ಶಾಸನ ದೇವತೆಗಳ ಬಗ್ಗೆಯಾಗಲೀ ಅವನು ಉಲ್ಲೇಖಿಸುವುದಿಲ್ಲ. ಹತ್ತನೆಯ ಶತಮಾನದ ಕನ್ನಡ ಜೈನ ಕವಿಗಳಲ್ಲಿ ರನ್ನನೇ ಮೊದಲ ಬಾರಿಗೆ ಇಪ್ಪತ್ತುನಾಲ್ಕು ತೀರ್ಥಂಕರರನ್ನೂ, ಪ್ರತಿ ತೀರ್ಥಂಕರನ ಶಾಸನ ದೇವತೆಗಳನ್ನೂ ಹೆಸರಿಸಿರುವುದಲ್ಲದೆ, ಹದಿನಾಲ್ಕು ಮನುಗಳ, ಹನ್ನೆರಡು ಚಕ್ರವರ್ತಿಗಳ, ಒಂಬತ್ತು ಬಲದೇವರ, ಒಂಬತ್ತು ವಾಸುದೇವರ, ಒಂಬತ್ತು ಪ್ರತಿ ವಾಸುದೇವರ ಮತ್ತು ಇಪ್ಪತ್ತುನಾಲ್ಕು ತೀರ್ಥಂಕರ ಕ್ಷತ್ರಿಯರ ಯಾದಿಯನ್ನು ಕೊಡುವನು.[1] ಪಂಪನು ಈ ಬಗೆಯ ವಿವರಗಳನ್ನು ತನ್ನ ಆದಿಪುರಾಣದಲ್ಲಿ ಕೊಡುವುದಿಲ್ಲ.

ರನ್ನನಲ್ಲಿ ದೊರೆಯುವ ವಿವರಗಳು ಸಾಂಪ್ರದಾಯಿಕವೇನೋ ನಿಜ–ಆದರೆ, ಇದರಿಂದ ಜೈನರಲ್ಲಿ ಯಕ್ಷ-ಯಕ್ಷಿಯರ ಆರಾಧನೆಯ ಪ್ರಭಾವ ಅಥವಾ ಆರಾಧನೆಯ ಆರಂಭಕಾಲವನ್ನು ನಿರ್ಣಯಿಸಲು ಹಾಗೂ ಶ್ವೇತಾಂಬರ-ದಿಗಂಬರ ಶಾಸನ ದೇವತೆಗಳ ಹೆಸರಿನಲ್ಲಿ ಹತ್ತನೆಯ ಶತಮಾನದ ಸುಮಾರಿಗೆ ಇದ್ದ ಅಂತರವನ್ನು ನಿರ್ಧರಿಸಲು, ಇತಿಹಾಸಕಾರನಿಗೆ ಬಹಳ ಉಪಯೋಗವಾಗುವುದು. ಉದಾಹರಣೆಗೆ, ರನ್ನನು (ಅದರಂತೆ ಪಂಪನೂ) ಆದಿನಾಥನ ಯಕ್ಷನನ್ನು ವೃಷಭಮುಖನೆಂದು ಹೆಸರಿಸಿದರೆ, ಸಂಸ್ಕೃತದಲ್ಲಿ ಬರೆದಿರುವ ಬಹುತೇಕ ದಿಗಂಬರ ಗ್ರಂಥಗಳಲ್ಲಿ ಅವನನ್ನು ಗೋಮುಖ ಎಂದು ಹೆಸರಿಸಲಾಗಿದೆ. ಅಂತೆಯೇ ಅನೇಕ ದಿಗಂಬರ ಗ್ರಂಥಗಳಲ್ಲಿ ಆರನೆಯ ತೀರ್ಥಂಕರನ

೧ ೧೪ನೆಯ ತೀರ್ಥಂಕರನ ಪಾತಾಳಯಕ್ಷ, ೧೮ನೆಯ ತೀರ್ಥಂಕರನ ತಾರಾಯಕ್ಷಿ ಹೆಸರುಗಳನ್ನು ರನ್ನ ಬಿಟ್ಟಿದ್ದಾನೆ.

ಯಕ್ಷನನ್ನು ಪುಷ್ಪಯಕ್ಷ ಎಂದು ಹೆಸರಿಸಿದರೆ, ಅವನನ್ನು ಕುಸುಮ ಯಕ್ಷ ಎಂದು ರನ್ನನು ಹೆಸರಿಸಿರುವನು. (ರನ್ನನು ಹೇಳುವ ಈ ಹೆಸರನ್ನು ನಾವು ಸಂಸ್ಕೃತಮೂಲದ ಶಾಸ್ತ್ರಸಾರ ಸಮುಚ್ಚಯ ಟೀಕುವಿನಲ್ಲೂ ಕಾಣಬಹುದು). ಅದರಂತೆ, ರನ್ನನಲ್ಲಿ ಬರುವ ಏಳನೆಯ ತೀರ್ಥಂಕರನ ಯಕ್ಷ ಮಾರ್ತಾಂಡ ಎಂಬುದು ಉಳಿದ ಗ್ರಂಥಗಳಲ್ಲಿ ಮಾತಂಗ ಎಂದೂ, ಎಂಟನೆಯ ತೀರ್ಥಂಕರನ ಯಕ್ಷ ವಿಜಯ ಎಂಬುದು (ಶ್ವೇತಾಂಬರ ಗ್ರಂಥಗಳಲ್ಲಿ ಹೆಚ್ಚು ರೂಢಿಯಲ್ಲಿದ್ದು) ದಿಗಂಬರ ಗ್ರಂಥಗಳಲ್ಲಿ ಶ್ಯಾಮ ಎಂದೂ ರೂಢಿಯಲ್ಲಿರುವುದು. ಹನ್ನೊಂದನೆಯ ತೀರ್ಥಂಕರನ ಯಕ್ಷೇಂದ್ರನನ್ನು ವಿಜಯನೆಂದೂ, ಇಪ್ಪತ್ತೊಂದನೆಯ ತೀರ್ಥಂಕರನ ಭೃಕುಟಯಕ್ಷನನ್ನು ವಿದ್ಯುತ್ಪ್ರಭ ಎಂದೂ ಹೆಸರಿಸಲಾಗಿದೆ. ಯಕ್ಷಿಯರ ಹೆಸರಿನಲ್ಲಿಯೂ ಈ ಬಗೆಯ ವೈವಿಧ್ಯತೆ ಕಂಡುಬರುವುದು. ಉದಾಹರಣೆಗೆ ಅನೇಕ ಗ್ರಂಥಗಳಲ್ಲಿ ಇಪ್ಪತ್ತೊಂದನೆಯ ತೀರ್ಥಂಕರನ ಯಕ್ಷಿಯನ್ನು ಚಾಮುಂಡಾ ಎಂದು ಹೆಸರಿಸಿದ್ದರೆ, ರನ್ನನು ಅವಳನ್ನು ವಿದ್ಯುತ್ಪ್ರಭೆ ಎಂದು ಹೆಸರಿಸಿರುವನು.

ರನ್ನನ ಗ್ರಂಥದಲ್ಲಿ ತೀರ್ಥಂಕರರ ಮತ್ತು ಅವರ ಶಾಸನ ದೇವತೆಗಳ ಹೆಸರುಗಳ ಯಾದಿ ಸಿಕ್ಕರೂ, ಈ ಎಲ್ಲ ದೇವತೆಗಳ ಮೂರ್ತಿಲಕ್ಷಣಗಳ ವಿವರ ದೊರೆಯುವುದಿಲ್ಲ. ಆದರೆ ಸುಮಾರು ಹತ್ತನೆಯ ಶತಮಾನದಿಂದ (ಬಹುಶಃ ಪಂಪನಿಂದ)ಲೂ ಕನ್ನಡ ಜೈನ ಕವಿಗಳಲ್ಲಿ ರೂಢಿಯಲ್ಲಿರುವ ಗ್ರಂಥದ ಆರಂಭದಲ್ಲಿಯ ಪಂಚಪರಮೇಷ್ಠಿಗಳ ಸ್ತುತಿಪದ್ಯಗಳಿಂದ, ಅತ್ಯಂತ ಉಪಯುಕ್ತವಾದ ಹಾಗೂ ವಿವರವಾದ ವರ್ಣನೆ ನಮಗೆ ದೊರೆಯುವುದು.

ಪಂಪನ ಆದಿಪುರಾಣದಲ್ಲಿ ದೊರೆಯುವ ಆದಿನಾಥನ ಶಾಸನದೇವತೆಗಳಾದ ವೃಷಭಯಕ್ಷ ಹಾಗೂ ಚಕ್ರೇಶ್ವರಿ ಯಕ್ಷಿಯರ ವರ್ಣನೆ ಸಂಸ್ಕೃತ ಗ್ರಂಥಗಳಲ್ಲಿ ದೊರೆಯುವ ಮೂರ್ತಿಲಕ್ಷಣಗಳ ವರ್ಣನೆಗಿಂತಲೂ ಪುರಾತನ ಹಾಗೂ ವಿವರವಾಗಿದೆ. ಅಂದರೆ ಪಂಪನ ಕಾಲಕ್ಕೆ, (ಅ) ಪ್ರತಿಯೊಬ್ಬ ತೀರ್ಥಂಕರನಿಗೆ ನಿಯಮಿಸಲಾದ ಯಕ್ಷ-ಯಕ್ಷಿಯ ಸಂಪ್ರದಾಯ ರೂಢಿಗೊಂಡದ್ದು ತಿಳಿದುಬರುವುದಲ್ಲದೇ, (ಆ) ಈ ಯಕ್ಷ-ಯಕ್ಷಿಯರ ಮೂರ್ತಿ ಲಕ್ಷಣಗಳಲ್ಲಿಯ ವಿವರವೂ ತಿಳಿದುಬರುವುದು. ಈ ವಿವರವನ್ನು ಗಮನದಲ್ಲಿಟ್ಟುಕೊಂಡು ನಮ್ಮ ನಾಡಿನ ಜೈನ ಮೂರ್ತಿಗಳನ್ನೂ ಹುಡುಕಿ ಅಭ್ಯಾಸ ಮಾಡಿದರೆ, ಸಾಹಿತ್ಯಕ್ಕೂ ಮತ್ತು ಕಲೆಗೂ (ಸಾಹಿತಿಗೆ ಇದ್ದ ಸಾಂಪ್ರದಾಯಿಕ ಜ್ಞಾನಕ್ಕೂ-ಕಲೆಗಾರನಿಗೆ ಇದ್ದ ಮೂರ್ತಿಲಕ್ಷಣ ಜ್ಞಾನಕ್ಕೂ) ಇದ್ದ ಸಾಮ್ಯ-ವೈಷಮ್ಯ ತಿಳಿಯಲು ಸಾಧ್ಯವಾಗಬಹುದು. ಯಕ್ಷ-ಯಕ್ಷಿಯರ ಲಾಂಛನ ವಾಹನ, ಮುದ್ರಾ ಮತ್ತು ಆಯುಧಗಳಿಂದಲೇ ತೀರ್ಥಂಕರರನ್ನು ಗುರುತಿಸಲು ಮಾತ್ರ ಸಾಧ್ಯವಾದುದರಿಂದ, ಈ ವಿವರಗಳಿಂದ ದೊರೆಯುವ ಉಪಯುಕ್ತತೆಯನ್ನು ಒತ್ತಿ ಒತ್ತಿ ಹೇಳಬೇಕಾಗಿಲ್ಲ. ಹತ್ತನೆಯ ಶತಮಾನದಲ್ಲಿ ಪಂಪನು ರಚಿಸಿದ ಆದಿಪುರಾಣದಲ್ಲಿ ಯಕ್ಷ-ಯಕ್ಷಿಯರ ಶಾಸ್ತ್ರೋಕ್ತ ವರ್ಣನೆ ಮೊದಲ ಬಾರಿಗೆ ಬರುವಂತೆ ತೋರುವುದು. ವೃಷಭಯಕ್ಷನನ್ನು,

> ಪರಶು ಫಲಾಕ್ಷಸೂತ್ರ ವರದೋಚಿತ ಚಿಹ್ನ ಚತುರ್ಭುಜಂ ಮನೋ
> ಹರವೃಷಲಾಂಛನಂ ವೃಷಮುಖಂ ವೃಷವಾಹನನಿಂದುಕುಂದಸೌಂ
> ದರತರವರ್ಣ್ಣನೀ ವೃಷಭನಾಥ ಕಥಾರಚನೋಕ್ತಿಯಲ್ಲಿ ಮಾ
> ಚ್ಚರದಮಗಾಗಳುಂ ವೃಷಭಯಕ್ಷನವಿಘ್ನಮನಃ ಪ್ರವೃತ್ತಿಯಂ ॥ (೧-೪)

ಎಂದು ಹೊಗಳಿರುವನು.

ವೃಷಭಮುಖನೂ, ವೃಷಭಾರೂಢನೂ, ವೃಷಭಲಾಂಛನವನ್ನು ಹೊಂದಿದ ವೃಷಭಯಕ್ಷನಿಗೆ ಚತುರ್ಭುಜಗಳಿದ್ದುವೆಂದೂ, ಅವನ ನಾಲ್ಕು ಕೈಗಳಲ್ಲಿ ಪರಶು, ಫಲ ಅಕ್ಷಸೂತ್ರ ಮತ್ತು ವರದ ಮುದ್ರೆಗಳಿದ್ದುವೆಂದೂ ಅಲ್ಲದೆ ಅವನು 'ಕುಂದ ಸೌಂದರತರ ವರ್ಣ'ನಾಗಿದ್ದನೆಂದೂ ತಿಳಿಯುವುದು.

ಸಂಸ್ಕೃತ ಭಾಷೆಯ ಜೈನ-ಪ್ರತಿಷ್ಠಾ ಗ್ರಂಥಗಳಲ್ಲಿ ಪಂಪನಲ್ಲಿ ದೊರೆಯುವುದಕ್ಕಿಂತ ಹೆಚ್ಚು ವಿವರ ದೊರೆಯುವುದಿಲ್ಲ. ಉದಾಹರಣೆಗೆ ಪಂಪನ ನಂತರದ (ಸುಮಾರು ೨೫೦) ವರ್ಷ ಆಶಾಧರನ ಪ್ರತಿಷ್ಠಾಸಾರೋದ್ಧಾರ (೨-೧೨೯) ಎಂಬ ಸಂಸ್ಕೃತ ಗ್ರಂಥದಲ್ಲಿ ಕೊಡಲಾದ ವಿವರಗಳಿಗೂ ಪಂಪನಲ್ಲಿ ದೊರೆಯುವುದಕ್ಕೂ ಏನೂ ವ್ಯತ್ಯಾಸವಿಲ್ಲ. ಆದಿನಾಥನ ಪಕ್ಕದಲ್ಲಿ ಕೆತ್ತಲಾದ ಚಿಕ್ಕಪ್ರಮಾಣದ ಹಲವಾರು ಉಬ್ಬು ಚಿತ್ರಗಳನ್ನು ಬಿಟ್ಟರೆ, ನನಗೆ ಇಲ್ಲಿಯವರೆವಿಗೂ ತಿಳಿದಿರುವಮಟ್ಟಿಗೆ, ಹಾಸನ ಜಿಲ್ಲೆಯ ಮಾರ್ಕಳಿಯ ತ್ರಿಕೂಟ ಬಸ್ತಿಯಲ್ಲಿ ಇರುವ ಸ್ವತಂತ್ರ ಹಾಗೂ ಭವ್ಯವಾದ ವೃಷಭಯಕ್ಷನ ಮೂರ್ತಿಯಲ್ಲಿಯ ಲಕ್ಷಣಗಳು ಪಂಪನಿಗೆ ತಿಳಿದ ಮೂರ್ತಿಲಕ್ಷಣದ ಸಂಪ್ರದಾಯದ್ದಾಗಿದೆ ಎಂದು ಸುಲಭವಾಗಿ ಗ್ರಹಿಸಬಹುದು. ಚತುರ್ಭುಜವುಳ್ಳ ಈ ಯಕ್ಷನ ಹಸ್ತದಲ್ಲಿ ಪರಶು, ಅಕ್ಷಮೂಲ, ಫಲ ಹಾಗೂ ವರದ ಮುದ್ರೆಗಳನ್ನು ಕಾಣುತ್ತೇವೆ. ವೃಷಭಮುಖಿಯಾಗಿರದಿದ್ದರೂ ದಿಗಂಬರ ಸಂಪ್ರದಾಯದಲ್ಲಿರುವ ವೃಷಭಮುಖಿ ಯಕ್ಷನ ಪ್ರತಿಮೆಗಳು ನಮ್ಮ ನಾಡಿನ ಹಲವೆಡೆಯಲ್ಲಿ ಇರುವುದು, ಕಲೆಯ ವಿದ್ಯಾರ್ಥಿಗೆ ಪರಿಚಿತ ಸಂಗತಿ.

ಆದಿನಾಥನ ಯಕ್ಷಿ ಚಕ್ರೇಶ್ವರಿಯ ವರ್ಣನೆ ಪಂಪನಲ್ಲಿ ಇಂತಿದೆ:

ವರದಂ ಪದ್ಮಾಂಕಿತಂ ತೋಳೆರಡು ನಿಶಿತ ವಜ್ರಪ್ರಭಾಭಾಸುರಂ ತೋ
ಳೆರಡುದ್ಯಚ್ಚಕ್ರಿಚಕ್ರೋಜ್ಜ್ವಲತರತರಲಜ್ಯೋತಿ ತೋಳೆಂಟಗುರ್ವಾ
ಗಿರೆ ಬಣ್ಣಂ ಪೊನ್ನ ಬಣ್ಣಕ್ಕೆಣೆಯೆನೆ ಗರುಡಂ ವಾಹಮಾಗಿರ್ಪ ಚಕ್ರೇ
ಶ್ವರಿ ಭಾಸ್ವದ್ಧರ್ಮ ಚಕ್ರಾಕ್ರಮಿಗಳನೆಲೆದಾಟಕ್ಕೆ ವಿಕ್ರಾಂತದಿಂದಂ ॥ (೧-೭)

ಗರುಡವಾಹನೆಯಾದ, ಹೊನ್ನಬಣ್ಣದ, ಉಗ್ರಕಳೆಯನ್ನು ಹೊಂದಿದ, ಚಕ್ರೇಶ್ವರಿಗೆ ಹನ್ನೆರಡು ತೋಳುಗಳು. ಒಂದು ಹಸ್ತವನ್ನು ವರದಮುದ್ರೆಯಲ್ಲಿ ಹಿಡಿದಿದ್ದರೆ ಮತ್ತೊಂದರಲ್ಲಿ ಪದ್ಮವನ್ನು, ಎರಡು ಹಸ್ತಗಳಲ್ಲಿ ವಜ್ರಗಳನ್ನೂ ಮತ್ತು ಉಳಿದ ಎಂಟು ಹಸ್ತಗಳಲ್ಲಿ ಚಕ್ರಗಳನ್ನೂ ಧರಿಸಿರುವಳು.

ಚಾವುಂಡರಾಯನಾಗಲೀ, ಕನ್ನಡದಲ್ಲಿ ಪೂರ್ವಪುರಾಣ ಬರೆದ ಹದಿಮೂರನೆಯ ಶತಮಾನದ ಹಸ್ತಿಮಲ್ಲನಾಗಲೀ ವೃಷಭಯಕ್ಷ ಚಕ್ರೇಶ್ವರಿಯರ ಬಗ್ಗೆ ವಿವರ ಕೊಡುವುದಿಲ್ಲ.[೨] ಕರ್ನಾಟಕದಲ್ಲಿ ಚಕ್ರೇಶ್ವರಿಯ ಹಲವಾರು ಮೂರ್ತಿಗಳೂ, ಸುಮಾರು ೨-೩ ಅಡಿ ಎತ್ತರದ ಉಬ್ಬುಶಿಲ್ಪಗಳೂ ಕಂಡುಬಂದಿವೆ. ಇವುಗಳಲ್ಲಿ ಮಾರ್ಕಳಿಯಲ್ಲಿರುವ ಚಕ್ರೇಶ್ವರಿಯ ಸ್ವತಂತ್ರಮೂರ್ತಿಯು ಬಹು ಮಹತ್ವದ್ದಾಗಿದೆ. ಈ ಮೂರ್ತಿಗೆ ಹನ್ನೆರಡು ಕರಗಳಿದ್ದು, ಅವುಗಳಲ್ಲಿ ಎಂಟು ಚಕ್ರಗಳನ್ನು, ಎರಡು ವಜ್ರಗಳನ್ನು, ಒಂದರಲ್ಲಿ ಪದ್ಮ ಹಾಗೂ ಇನ್ನುಳಿದುದರಲ್ಲಿ ವರದ ಮುದ್ರೆಯನ್ನು ನಾವು ಕಾಣಬಹುದು. ಅಲ್ಲದೆ, ಅವನ ವಾಹನವಾದ

---

೨ ನೇಮಿಚಂದ್ರನ ಲೀಲಾವತಿಯಲ್ಲಿ ಚಕ್ರೇಶ್ವರಿಯ ಮಂದಿರದ, ಮೂರ್ತಿಯ ಉಲ್ಲೇಖ ದೊರೆತರೂ ಮೂರ್ತಿಲಕ್ಷಣಗಳು ದೊರೆಯುವುದಿಲ್ಲ.

ಗರುಡನನ್ನೂ ನಾವು ಪೀಠದ ಮೇಲೆ ಕಾಣುವೆವು.

ಚಕ್ರೇಶ್ವರಿ-ವೃಷಭಯಕ್ಷರ ಬಗ್ಗೆ ಇನ್ನೂ ಸಂಶೋಧನೆಯಾಗಬೇಕಾಗಿದೆ. ಕರ್ನಾಟಕದ ಮೂಲೆಮೂಲೆಯಲ್ಲಿರುವ ಬಸದಿಗಳಲ್ಲಿ ಹಲವಾರು ಮೂರ್ತಿಗಳು ಉಳಿದುಬಂದಿರುವ ಸಾಧ್ಯತೆ ಇದೆ. ಮುಂದಿನ ಸಂಶೋಧನೆಯಿಂದ ಹೆಚ್ಚು ವಿವರಗಳನ್ನು ಪಡೆಯುವುದರಲ್ಲಿ ಅನುಮಾನವಿಲ್ಲ–ಆದರೆ ಪಂಪನು ಸಂಪಾದಿಸಿಕೊಂಡ ಮೂರ್ತಿಲಕ್ಷಣದ ಜ್ಞಾನದ ಶಾಖೆಯಲ್ಲಿಯೇ ಕನ್ನಡ ನಾಡಿನ ಶಿಲ್ಪಿಗಳು, ಅಲ್ಪ ಸ್ವಲ್ಪ ವ್ಯತ್ಯಾಸ ಮಾಡಿಕೊಂಡು, ಈ ಸಂಪ್ರದಾಯವನ್ನು ಬೆಳೆಸಿಕೊಂಡು ಬಂದಿರಲು ಸಾಧ್ಯವೆಂದು ಸುಲಭವಾಗಿ ಊಹಿಸ ಬಹುದು.[೩]

ಅಜಿತನಾಥನ ಬಗ್ಗೆ ಕನ್ನಡ ಕವಿ ರನ್ನನು ಹತ್ತನೆಯ ಶತಮಾನ ಬರೆದ ಕಾವ್ಯ ಮಾತ್ರ ಈಗ ನಮಗೆ ದೊರಕುವುದು. ಒಂದು ಪದ್ಯದಲ್ಲಿ ರನ್ನನು ಅಜಿತತೀರ್ಥಕರನ ವಿವರಗಳನ್ನೂ, ಅವನ ದಂತಿ ಲಾಂಛನವನ್ನೂ ಹಾಗೂ ಅವನ ಶಾಸನದೇವತೆಗಳಾದ ಮಹಾಯಕ್ಷ ಮತ್ತು ರೋಹಿಣಿಯಕ್ಷಿಯರ ಹೆಸರನ್ನೂ ಕೊಟ್ಟಿರುವನು.

> ಜನಕಂ ಶ್ರೀಜಿತಶತ್ರು ತಾಯ್ ವಿಜಯಸೇನಾದೇವಿ ಸಂದಿರ್ದಯೋ
> ಧ್ಯೆ ನಿಜಾಮ್ನಾಯದ ರಾಜಧಾನಿ ಮಹಿಜಂ ಸಪ್ತಚ್ಛದಂ ದಂತಿಲಾಂ
> ಛನಮಾ ರೋಹಿಣಿ ತಾರೆ ಯಕ್ಷಿ ತನಗಾ ಯಕ್ಷಂ ಮಹಾಯಕ್ಷನೆಂ
> ಬಿನೆಗಂ ಸಂದಜಿತಂ ಜಿತಾರಿ ಪಡೆದಂ ಸಮ್ಮೇದದೊಳ್ ಮುಕ್ತಿಯಂ ॥ (೯-೩)

ರನ್ನನು ಯಕ್ಷ-ಯಕ್ಷಿಯರಿಗಾಗಿ ಎರಡು ಪದ್ಯಗಳನ್ನು ಮೀಸಲಾಗಿಟ್ಟಿದ್ದರೂ ಅವರ ಮೂರ್ತಿಲಕ್ಷಣದ ವಿವರಗಳನ್ನು ಕೊಡುವುದಿಲ್ಲ. (೧-೧೪, ೧೫) ಈ ಶಾಸನದೇವತೆಗಳ ಬಗ್ಗೆ ಬೇರೆ ಜೈನ ಪುರಾಣಗಳಲ್ಲೆಲ್ಲಿಯಾದರೂ ವಿವರವಾದ ವರ್ಣನೆ ಬರುವುದೇನೋ ನಾನರಿಯೆ. ಅಲ್ಲದೇ, ಕರ್ನಾಟಕದಲ್ಲಿರುವ ಅವರ ಸ್ವತಂತ್ರಮೂರ್ತಿಗಳನ್ನು ನಾವಿನ್ನೂ ಬೆಳಕಿಗೆ ತರಬೇಕಾಗಿದೆ.

ಹನ್ನೆರಡನೆಯ ಶತಮಾನದ ಕನ್ನಡ ಕವಿ ಅಗ್ಗಳನು ತನ್ನ ಚಂದ್ರಪ್ರಭಪುರಾಣದಲ್ಲಿ ಎಂಟನೆಯ ತೀರ್ಥಂಕರನಾದ ಚಂದ್ರಪ್ರಭ ಹಾಗೂ ಅವನ ಶಾಸನದೇವತೆಗಳಾದ ವಿಜಯಯಕ್ಷ ಮತ್ತು ಜ್ವಾಲಾಮಾಲಿನಿ ಯಕ್ಷಿಯರ ಬಗ್ಗೆ ವಿವರವಾದ ವರ್ಣನೆ ಕೊಟ್ಟಿರುವನು. ಅನೇಕ ದಿಗಂಬರ ಗ್ರಂಥಗಳಲ್ಲಿ ಚಂದ್ರಪ್ರಭನ ಯಕ್ಷನನ್ನು ಶ್ಯಾಮ ಎಂದು ಹೆಸರಿಸಿದ್ದರೂ,[೪] ಕನ್ನಡ ಗ್ರಂಥಗಳಲ್ಲಿ (ಶ್ವೇತಾಂಬರರಲ್ಲಿ ಹೆಚ್ಚು ರೂಢಿಯಿರುವ) ವಿಜಯಯಕ್ಷ ಎಂಬ ಹೆಸರಿನಿಂದ ಅವನನ್ನು ಕರೆಯಲಾಗಿದೆ. ಅಗ್ಗಳನು ಈ ಯಕ್ಷನನ್ನು ಹೀಗೆ ವರ್ಣಿಸಿರುವನು:

> ಮರಕತಕಾಂತಿಯ ತಳೆದ ಮೆಯ್ವೆಳಗಿಂ ನೊಸಲೊಳ್ ಪೊದೆಱ್ದ ತಾ
> ವರೆಯೆಸಳ್ವೊಟ್ಟಿನಂತೆಸೆವ ಕಣ್ಮಲರಿಂ ವರದಪ್ರಫುಲ್ಲಪಂ

---

೩. ನೋಡಿ : S. Settar, Chakreshwari in Kannada Literature and Art, *Oriental Art*, 1971, Springswamia-Oxford, XVII-I.

೪. ಈ ಹೆಸರು ಚಂದ್ರಮನ ಕಾರ್ಕಳದ ಗೋಮಟೇಶ್ವರ ಚರಿತೆಯಲ್ಲಿದೆ (೧-೭).

ಕರುಹ ಕಶಾಂಕುಶಾಂಕಿತ ಚತುರ್ಭುಜದಿಂದೆಸೆವಂ ಕಪೋತವಿ
ಷ್ಕಿರರಥನಬ್ಜಜಿಂ ವಿಜಯಯ ಕ್ಷನೊಡರ್ಚುಗಮೋಘರಕ್ಷೆಯಂ ॥ (೧-೨)

ಕಪೋತವಿಷ್ಕಿರರಥಾರೂಢನಾದ ವಿಜಯಯಕ್ಷನ ಚತುರ್ಭುಜದಲ್ಲಿ ವರದ, ಪ್ರಫುಲ್ಲ-ಪಂಕರುಹ (ಪದ್ಮ), ಕಶ ಹಾಗೂ ಅಂಕುಶವಿದ್ದ ಬಗ್ಗೆ ಇಲ್ಲಿ ವಿವರವಿದೆ. ಕರ್ನಾಟಕದಲ್ಲಿ ಮಾತ್ರವಲ್ಲದೆ ಇಡೀ ನಾಡಿನಲ್ಲಿಯೇ ಬಹುಶಃ ಅತ್ಯಂತ ಪುರಾತನ ಕಾಲದ ಶ್ಯಾಮನ ಸ್ವತಂತ್ರಮೂರ್ತಿಯು ಬಿಜಾಪುರ ಜಿಲ್ಲೆಯ ಐಹೊಳೆಯಲ್ಲಿ ದೊರೆತಿದೆ. ಅರ್ಧಪರ್ಯಂಕಾಸನಾರೂಢನಾದ ಈ ಯಕ್ಷನ ಚತುರ್ಭುಜಗಳಲ್ಲಿ ಪರಶು, ಕಶ, ಫಲ ಹಾಗೂ ಪದ್ಮಗಳನ್ನು ಕಾಣುವೆವು. ಶಿಲ್ಪ ವೈವಿಧ್ಯತೆಗಾಗಿ ವರದ-ಅಭಯ ಮುದ್ರೆಯ ಬದಲು ಪದ್ಮ-ಫಲಗಳನ್ನು ಕೊಡುವ ಸಂಪ್ರದಾಯ ಕಲೆಯು ವಿದ್ಯಾರ್ಥಿಗೆ ತಿಳಿದ ವಿಷಯವಾಗಿದೆ. ಇಲ್ಲಿ ಅಗ್ಗಳನು ಹೇಳಿದ ಅಂಕುಶದ ಬದಲು ಈ ಮೂರ್ತಿಯಲ್ಲಿ ಪರಶು ಇರುವುದನ್ನು ನಾವು ಕಾಣುವೆವು. ಇದನ್ನು ಈ ಆಯುಧಕ್ರಿಯೆಯ ಮೂಲದಿಂದಾಗಲೀ, ಅಥವಾ ಸಂಪ್ರದಾಯದಲ್ಲಿ ಆದ ಬದಲಾವಣೆಯನ್ನು ಗಮನದಲ್ಲಿಟ್ಟುಕೊಂಡಾಗಲೀ ಸರಿಹೊಂದಿಸಿಕೊಳ್ಳಬೇಕಾಗುವುದು.

ಎಂಟನೆಯ ತೀರ್ಥಂಕರನ ಯಕ್ಷಿ ಜ್ವಾಲಾಮಾಲಿನಿಯ ಬಗ್ಗೆ ಅಗ್ಗಳನಲ್ಲಿ ಬರುವ ವಿವರ ಹೀಗಿದೆ :

ಪ್ರಾಳೇಯಾಮಳಿನಾಂಗಿ ತುಂಗಮಹಿಷೇಂದ್ರಾರೂಢೆಯಾತ್ತಾಷ್ಟದೋ
ರ್ಮಾಳಾಂಳಂಕೃತ ಚಕ್ರಶೂಲಶರಚಾಪೋತ್ಕೇತು ಚಂಚತ್ಕಶಾ
ಭೀಳಾಸಿಸ್ಫುಟಖೇಟಕಾನ್ವಿತೆ ಚಳದ್ಭಾಳಾಕ್ಷಿ ಸಂಪ್ರೀತಿಯಿಂ
ಜ್ವಾಳಾಮಾಳಿನಿ ಮಾಳ್ಕೆ ಮತ್ಕೃತಿಗೆ ನಿರ್ವಿಘ್ನೋಕ್ತಿನಿರ್ವಾಹಮಂ ॥ (೧-೯)

ಪ್ರಾಳೇಯಾಮಳಿನಾಂಗಿಯಾದ, ನೊಸಲಲ್ಲೊಂದು ಕಣ್ಣುಳ್ಳ, ಮಹಿಷಾರೂಢೆಯಾದ ಜ್ವಾಲಾಮಾಲಿನಿಯ ಕೈಗಳಲ್ಲಿ ಚಕ್ರ, ಶೂಲ, ಶರ, ಚಾಪ, ಉತ್ಕೇತು, ಚಂಚತ್-ಕಶ, ಅಸಿ, ಸ್ಫುಟ-ಖೇಟಕ ಧರಿಸಿದ ಬಗ್ಗೆ ತಿಳಿಯುವುದು.[೫]

ಐಹೊಳೆಯಲ್ಲಿ ಈ ಯಕ್ಷಿಯ ಅತ್ಯಂತ ಪುರಾತನವಾದ ಸ್ವತಂತ್ರಮೂರ್ತಿ ದೊರೆತಿದೆ. ಜ್ವಾಲಾ-ಮಕುಟವನ್ನು ಧರಿಸಿ, ಮಹಿಷವಾಹನದ ಮೇಲೆ ಒಂದು ಪಾದವನ್ನಿಟ್ಟು ಸುಖಾಸನದಲ್ಲಿ ಕುಳಿತಿರುವ ಈ ಯಕ್ಷಿಯ ಹಣೆಯಲ್ಲೊಂದು ಕಣ್ಣು, ಅವಳ ಎಂಟು ಕೈಗಳಲ್ಲಿ ಶರ, ತ್ರಿಶೂಲ, ಖೇಟಕ, ಅಸಿ, ಶಂಖ, ಕಶ, ಚಾಪ ಹಾಗೂ ಫಲ (ಈಗ ಭಗ್ನವಾಗಿದೆ) ಗಳಿವೆ[೬]. ಪಾಠದಲ್ಲಿ ಬರುವ ವಿವರಕ್ಕೂ ಮತ್ತು ಶಿಲ್ಪದಲ್ಲಿ ಕಂಡುಬರುವ ವಿವರಕ್ಕೂ ಇರುವ ಸಾಮ್ಯ ಸ್ಪಷ್ಟವಿದೆ.

ಗುಣವರ್ಮನ ಪುಷ್ಪದಂತ ಪುರಾಣದಲ್ಲಿ ಒಂಬತ್ತನೆಯ ತೀರ್ಥಂಕರನ ಬಗ್ಗೆ ಹಾಗೂ ಅವನ ಶಾಸನದೇವತೆಗಳಾದ ಅಜಿತಯಕ್ಷ ಮತ್ತು ಮಹಾಕಾಳಿಯಕ್ಷಿಯ ಮೂರ್ತಿಲಕ್ಷಣಗಳ

---

೫ ಚಂದ್ರಮ ಇವಳನ್ನು ''ಬೆಳದಿಂಗಳ ಪುತ್ಥಳಿಯಂತೆ ಚೆಲುವಿನಿಂದ ಕಳಕಳಿಸುವ ಕೋಮಲಾಂಗಿ'' ಎಂದಿದ್ದಾನೆ.

೬ S. Settar, The Cult of Jwalamalini and the earliest images of Jwala and Shyama, *Artibus Assai*, New York 1969, pp. 309-20.

ವಿವರವಿದೆ. ಪುಷ್ಪದಂತ ಹೆಸರಿನ ಬಗ್ಗೆ ಗುಣವರ್ಮನು ಕೊಟ್ಟ ವಿವರ ಗಮನಾರ್ಹವಾಗಿವೆ:

ಪ್ರವಿತತ ಪುಣ್ಯೋದಯದಿಂ
ಭುವನಸ್ತುತಸುಕೃತಿಯೆನಿಪ ಕುವಳಯಕಮಳೋ
ತ್ಸವಕರನೆನಿಪೀ ಸ್ವಾಮಿಗೆ
ಸುವಿಧಿವೆಸರ್ ಪುಷ್ಪದಂತವೆಸರನ್ವರ್ಥಂ ॥ (೧೨-೫೩)

ಪುಷ್ಪದಂತನ ಯಕ್ಷನಾದ ಮಹಾಯಕ್ಷನು ನವ್ಯಕುಮುದ ಬಣ್ಣವುಳ್ಳವನೂ, ಕೂರ್ಮ ವಾಹನನೂ–ಆಗಿದ್ದನಲ್ಲದೇ, ಅವನ ಚತುರ್ಭುಜಗಳಲ್ಲಿ ಕಶ, ತ್ರಿಶೂಲ, ದಂಡ ಮತ್ತು ಕುಠಾರಗಳಿದ್ದವೆಂದು ಹೇಳಲಾಗಿದೆ–

ಸ್ಫುರಿಪ....ನವ್ಯಕುಮುದದ್ಯುತಿಮತ್ತನು ಕೂರ್ಮವಾಹನಂ
ಸ್ಫಾರಕಶಾತ್ರಿಶೂಲಘನದಂಡಕುಠಾರಚತುಷ್ಟಯೋಲ್ಲಸ
ದ್ಭೂರಿಭುಜಾಚತುಷ್ಟಯನಶೇಷ ಜಿನೇಶ್ವರಧರ್ಮವರ್ತಿ ವಿ
ಸ್ತಾರಕನೀಗೆ ಕೂರ್ತಜಿತಯಕ್ಷನವಿಘ್ನವಚೋವಿಲಾಸಮಂ ॥ (೧-೧೧)

ಮಹಾಕಾಳಿ ಯಕ್ಷಿಯ ವರ್ಣನೆಯನ್ನು ಗುಣವರ್ಮನು ಹೀಗೆ ಮಾಡಿರುವನು:

ಕನಕಚ್ಛಾಯೆಯೆನಾಳ್ದ ದೇಹರುಚಿ ಚೆಲ್ವಂ ಬೀಱಿದೋರ್ವಲ್ಲಿನಾ
ಲ್ಕೆನಸುಂ ತಳ್ತಿರೆ ಖಡ್ಗ ಖೇಟಕಲಸದ್ವಜ್ರಾಬ್ಜಮೊಳ್ಪೊಪ್ಪುವಾ
..........ರಕ್ಷಿಪ್ಪ ಮಾಕಾಳಿ .
ಕ್ಷಿ ನವೀನಾಭರಣಾಂಗೆ ಮತ್ಕೃತಿಗೆ ಮಾಳ್ಕೋರಂತೆ ನಿರ್ವಿಘ್ನಮಂ ॥ (೧-೧೦)

ಕನಕವರ್ಣದ ಈ ಚತುರ್ಭುಜ ಯಕ್ಷಿಯು ಖಡ್ಗ, ಖೇಟಕ, ವಜ್ರ ಹಾಗೂ ಪದ್ಮ ಲಾಂಛನ ಹೊಂದಿದವಳಾಗಿರುವಳು. ದುರದೃಷ್ಟವಶಾತ್ ಅವಳ ವಾಹನವನ್ನು ಉಲ್ಲೇಖಿಸುವ ಪದ್ಯಭಾಗ ಅಳಿಸಿಹೋಗಿದೆ–ಆದರೆ ಸಂಸ್ಕೃತ ಪ್ರತಿಷ್ಠಾ ಗ್ರಂಥಗಳಲ್ಲಿರುವ ವಿವರದಿಂದ ಅದು ಸಿಂಹವಾಗಿತ್ತೆಂದು ನಮಗೆ ತಿಳಿಯುವುದು.

ಪುಷ್ಪದಂತ ತೀರ್ಥಂಕರನ ಮೂರ್ತಿಗಳು ಕರ್ನಾಟಕದ ಹಲವೆಡೆಯಲ್ಲಿ ದೊರೆತಿದ್ದರೂ, ಮಹಾಯಕ್ಷ ಹಾಗೂ ಮಹಾಕಾಳಿಯ ಸ್ವತಂತ್ರ ವಿಗ್ರಹಗಳಿನ್ನೂ ನಮಗೆ ದೊರೆಯಬೇಕಾಗಿದೆ. ಆದರೆ ಶ್ರವಣಬೆಳ್ಗೊಳದ ಭಂಡಾರ ಬಸ್ತಿಯಲ್ಲಿರುವ ಪುಷ್ಪದಂತ ತೀರ್ಥಂಕರ ವಿಗ್ರಹದ ಪಾದದ ಇಕ್ಕೆಡೆಗಳಲ್ಲಿ, ಚಿಕ್ಕ ಆಕೃತಿಯ ಉಬ್ಬುಶಿಲ್ಪಗಳಿವೆ. ಅಲ್ಲಿಯ ಯಕ್ಷನು ಗದೆ, ದಂಡ, ಪರಶು ಮತ್ತು ತ್ರಿಶೂಲಗಳನ್ನು ತನ್ನ ಚತುರ್ಭುಜಗಳಲ್ಲಿ ಪಡೆದಿದ್ದರೆ, ಯಕ್ಷಿಯ ಹಸ್ತದಲ್ಲಿ ಖಡ್ಗ, ಖೇಟಕ, ವಜ್ರ ಹಾಗೂ ಪದ್ಮಗಳಿವೆ. ಗುಣವರ್ಮನ ವಿವರದೊಡನೆ ಇರುವ ಸ್ಥೂಲಸಾಮ್ಯ ಗಮನಾರ್ಹವಾಗಿದೆ.

ಜನ್ನನ (ಹದಿಮೂರನೆಯ ಶತಮಾನ) ಅನಂತನಾಥ ಪುರಾಣದಲ್ಲಿ ಹದಿನಾಲ್ಕನೆಯ ತೀರ್ಥಂಕರನಾದ ಅನಂತನಾಥನು ಕನಕಛಾಯೆಯ ಪಾತಾಳಯಕ್ಷ ಹಾಗೂ ಅನಂತಮತಿ ಯಕ್ಷಿಯರ ಸೇವೆ ಪಡೆದವನೆಂದು ತಿಳಿದುಬರುವುದು. ಈ ಕವಿಯು ಪಾತಾಳಯಕ್ಷನನ್ನು ಹೀಗೆ ವರ್ಣಿಸಿರುವನು :

ಫಳ ಪದ್ಮಂ ಹಳ ಶೂಲಮಂಕುಶ ಕಶಾಯುಗ್ಮಂ ಭುಜಾದಂಡಮಂ
ಡಳದೊಳ್ ತಳ್ತಿರೆ ಮೂಱುವಕ್ತ್ರವಳಯಂ ಶ್ವೇತಾಂಗವರ್ಣಕ್ಕೆ ಪಾ
ಲ್ದೊಗ್ಗಳದೊಳ್ ಪಂಕಜಪುಂಜದಂತೆಸೆದು ತೋರ್ಪಂ ಮತ್ಕೃತಿಶ್ರೀಗೆ ಮಂ
ಗಳಮಂ ಮಾೞ್ಕಧಿರೂಢಪಸ್ತಿಮಕರಂ ಪಾತಾಳಯಕ್ಷೇಶ್ವರಂ ॥ (೧-೧೦)

ಶ್ವೇತವರ್ಣದ ಈ ಯಕ್ಷನಿಗೆ ಮೂರು ಮುಖಗಳೂ, ಆರು ಭುಜಗಳೂ ಇವೆ ಎಂದು ಹೇಳಲಾಗಿದೆ. ಈ ಆರು ಹಸ್ತಗಳಲ್ಲಿ ಅವನು ಫಲ, ಪದ್ಮ, ಹಲ, ಶೂಲ, ಅಂಕುಶ ಮತ್ತು ಕಶಗಳನ್ನು ಧರಿಸಿರುವನು.

ಅನಂತಮತಿಯಕ್ಷಿಯ ವರ್ಣನೆಯನ್ನು ಈ ಕವಿ ಹೀಗೆ ಮಾಡಿರುವನು:

ಪರದಕರಾಂಬುಜಂ ಮೆಱೆವ ಕೆಯ್ಯ ಪಳಂ ಕಡುರಯ್ಯಮಾದ ತೋ
ಳಿರಡಱ ಬಿಲ್ಲಕೋಲ ಪೊಸದೇಸೆ ವಿಳಾಸಮನಾಂತ ಯಕ್ಷಿ ಪಿಂ
ಜರರುಚಿ ಹಂಸವಾಹನೆ ಚತುರ್ಭುಜೆ ಶಾಸನದೇವಿ ಮದ್ವಚಃ
ಪರಿಣತಿಗೊಲ್ದನಂತಮತಿ ಮಾಡುಗನಂತಮತಿಪ್ರಕಾಶಮಂ ॥ (೧-೯)

ಅನಂತನಾಥನಿಗೆ ಕರ್ನಾಟಕದಲ್ಲಿ ಕಟ್ಟಿಸಿದ ದೇವಾಲಯಗಳು ಹಲವಾರು. ಆದರೆ ಈ ತೀರ್ಥಂಕರನ ಸ್ವತಂತ್ರ ಶಾಸನದೇವತೆಗಳ ಶಿಲ್ಪಗಳಿನ್ನೂ ಬೆಳಕು ಕಂಡಿಲ್ಲ. ಜನ್ನನ ವಿವರಗಳಿಂದ ಅವುಗಳನ್ನು ಗುರುತಿಸುವುದು ಸುಲಭವಾಗುವುದು. ಆದರೆ ಈ ಶಾಸನದೇವತೆಗಳ ಚಿಕ್ಕಪ್ರಮಾಣದ ಉಬ್ಬುಚಿತ್ರಗಳಿಗೇನೂ ಕೊರತೆ ಇಲ್ಲ–ಈ ಚಿತ್ರಗಳೊಡನೆ ಜನ್ನನ ವಿವರವನ್ನು ಒರೆಹಚ್ಚಿ ನೋಡುವ ಕಾರ್ಯ ಇನ್ನೂ ಆಗಬೇಕಾಗಿದೆ.

ಹದಿನೈದನೆಯ ತೀರ್ಥಂಕರ ಧರ್ಮನಾಥನ ಚರಿತೆಯನ್ನು ಬರೆದ ಇಬ್ಬರು ಕವಿಗಳಲ್ಲಿ ಮಧುರ (ಹದಿನಾಲ್ಕನೆಯ ಶತಮಾನ) ಮೊದಲಿಗನಾದರೆ, ಬಾಹುಬಲಿ (ಹದಿನಾರನೆಯ ಶತಮಾನ) ಎರಡನೆಯವನು. ಆದರೆ ಈ ಕವಿಗಳ ಎರಡು ಕೃತಿಗಳಲ್ಲೂ ಧರ್ಮನಾಥ ತೀರ್ಥಂಕರನ ಹಾಗೂ ಅವನ ಶಾಸನದೇವತೆಗಳ ಮೂರ್ತಿಲಕ್ಷಣದ ಬಗ್ಗೆ ವಿವರ ದೊರೆತಂತೆ ಕಂಡುಬರುವುದಿಲ್ಲ. ಆದರೆ ಹದಿನಾರನೆಯ ತೀರ್ಥಂಕರ ಶಾಂತಿನಾಥನ ಬಗ್ಗೆ ಕನ್ನಡದಲ್ಲಿ ಸಾಕಷ್ಟು ವಿವರಗಳಿವೆ–ಕನಿಷ್ಠ ಮೂವರು ಕನ್ನಡ ಕವಿಗಳು ಬರೆದ ಕೃತಿಗಳು ನಮಗೆ ಲಭ್ಯವಿವೆ. ಅವು: ಪೊನ್ನನ ಶಾಂತಿ ಪುರಾಣ ಹತ್ತನೆಯ ಶತಮಾನ, ಕಮಲಭವನ ಶಾಂತೀಶ್ವರ ಪುರಾಣ (ಹದಿಮೂರನೆಯ ಶತಮಾನ) ಮತ್ತು ಶಾಂತಿಕೀರ್ತಿಮುನಿಯ ಶಾಂತಿನಾಥಚರಿತೆ (ಹದಿನೈದನೆಯ ಶತಮಾನ). ಇವುಗಳಲ್ಲಿ ಮೊದಲ ಎರಡು ಕೃತಿಗಳು ಪ್ರಕಟಗೊಂಡಿವೆ. ಶಾಂತಿ ಪುರಾಣದ ಕವಿಯಾದ ಪೊನ್ನನು ಶಾಂತಿನಾಥನ ಶಾಸನದೇವತೆಗಳನ್ನು ಹೆಸರಿಸುವಲ್ಲಿ ಒಂದು ವಿಶಿಷ್ಟಮಾರ್ಗವನ್ನು ಅನುಸರಿಸಿರುವನು–ಅವನು ಯಕ್ಷಿಯನ್ನು ಹೆಸರಿಸದೇ, ಯಕ್ಷ ಸರ್ವಾಹ್ಣನನ್ನು ಪ್ರಾರ್ಥಿಸಿರುವನು (೧-೬, ೭). ಆದರೆ ಕರ್ಣಪಾರ್ಯನು ಗರುಡಯಕ್ಷ ಹಾಗೂ ಮಹಾಮಾನಸಿ ಯಕ್ಷಿಯರನ್ನು ಹೆಸರಿಸಿರುವನು. ಈ ಹೆಸರನ್ನು ನಾವು ರನ್ನನ ಯಾದಿಯಲ್ಲಿಯೂ, ಸಂಸ್ಕೃತ ಪ್ರತಿಷ್ಠಾ ಗ್ರಂಥಗಳಲ್ಲೂ ಕಾಣುವೆವು. ಅಂದರೆ ಕನ್ನಡ ಕವಿಗಳಲ್ಲಿ ಕಮಲಭವನು ಮಾತ್ರ, ಈ ತೀರ್ಥಂಕರ ಹಾಗೂ ಶಾಸನದೇವತೆಗಳ ಮೂರ್ತಿಲಕ್ಷಣಗಳಿಗೆ ಹೆಚ್ಚು ಗಮನ ಕೊಟ್ಟಂತೆ ನಮಗೆ ತಿಳಿದುಬರುವುದು. ಗರುಡಯಕ್ಷನನ್ನು ಕಮಲಭವನು ಹೀಗೆ ವರ್ಣನೆ ಮಾಡಿರುವನು :

ಹರಿನೀಳಪ್ರಭೆಯಂ ಪಳಂಚಲೆವ ಚಂಚತ್ಕಾಂತಿ ಸಂಪತ್ತಿ ಸೌಂ
ದರಗಾತ್ರಂ ವಿಲಸತ್ಪದಾಂಬುಜವಿಭಾಸ್ವದ್ವಜ್ರಚಕ್ರಾಯುಧೋ
ದ್ಧುರದೋರ್ಮಂಡಳಮಂಡಿತಂ ಗರುಡಯಕ್ಷಂ ವಿಕ್ರಮಾತರ್ಕ್ಯ ತಾ
ರ್ಕ್ಷ್ಯರಥಂ ಮತ್ಕೃತಿಗೀಗವಿಘ್ನವಿಭವಪ್ರೋದ್ದಾಮಮಂ ಪ್ರೇಮದಿಂ ॥ (ಶಾಂತೀಶ್ವ. ೧-೧೧)

ಹರಿನೀಲವರ್ಣದ, ತಾರ್ಕ್ಷ್ಯರಥಾರೂಢನಾದ ಗರುಡಯಕ್ಷನ ಚತುರ್ಭುಜಗಳಲ್ಲಿ ಅಂಬುಜ, ವಜ್ರ, ಚಕ್ರ ಮತ್ತು ಉದ್ಧುರ (ಅಭಯ) ಮುದ್ರೆಗಳಿವೆ. ಇದೇ ಕವಿಯು ಮಹಾಯಕ್ಷಿಯ ಲಕ್ಷಣಗಳನ್ನು ಹೀಗೆ ನಿರೂಪಿಸಿರುವನು:

ಕ್ಷಣರುಗ್ಜಾಳಾಮಯಾಬ್ದಕ್ಕೆಣೆಯೆನಿಸೆ ಚಳತ್ಕಾಂತಿಯುಕ್ತಾಂತರಂಗೋ
ಲ್ಬಣೆ ಸಕ್ರಾರೂಢೆ ಖಡ್ಗಪ್ರಕಟಫಲಕದಂಬಾಳಿ ಪಾಶಾವಳೀ ತೋ
ರಣದೋರ್ದಂಡಪ್ರಜೋದ್ಭಾಸುರೆ ಸಲೆ ಮುದದಿಂದಾ ಮಹಾಮಾನಸೀ ಯ
ಕ್ಷಿಣೆಯೆಂದುಂ ಮಾಳ್ಕೆ ಶಾಂತೀಶ್ವರಚರಿತಕೃತಿಶ್ರೀಗೆ ಸೌಭಾಗ್ಯದೊಳ್ಪಂ ॥ (ಶಾಂತೀಶ್ವ ೧-೧೦)

ಪ್ರಕಾಶಮಾನವಾದ ವರ್ಣವುಳ್ಳ, ನಕ್ರಾರೂಢೆಯಾದ ಮಹಾಮಾನಸಿಯ ಚತುರ್ಭುಜಗಳಲ್ಲಿ ಖಡ್ಗ, ಫಲ, ಕದಂಬಾಳಿ ಮತ್ತು ದಂಡಗಳಿವೆ.

ಗರುಡಯಕ್ಷ-ಮಹಾಮಾನಸಿಯಕ್ಷಿಯರ ಸ್ವತಂತ್ರ ಮೂರ್ತಿಗಳನ್ನಿನ್ನೂ ಬೆಳಕಿಗೆ ತರಬೇಕಾಗಿದೆ.

ನಾಗಚಂದ್ರನು ಹನ್ನೊಂದನೆಯ ಶತಮಾನ ತನ್ನ ಮಲ್ಲಿನಾಥ ಪುರಾಣದಲ್ಲಿ (೧೧-೨೨ ವ.) ಹತ್ತೊಂಬತ್ತನೆಯ ತೀರ್ಥಂಕರನಾದ ಮಲ್ಲಿನಾಥನು ಕುಂಭರಾಜ-ಪ್ರಭಾವತಿಯ ಪುತ್ರನೆಂದೂ ಕನಕವರ್ಣದ ಈ ಮಹಾಪುರುಷನಿಗೆ ಕುಂಭಲಾಂಛನವೂ ಹಾಗೂ ಕುಬೇರಯಕ್ಷ ಮತ್ತು ಅಪರಾಜಿತೆ ಯಕ್ಷಿಯರೆಂಬ ಶಾಸನದೇವತೆಗಳಿರುವರೆಂದೂ ವರ್ಣಿಸಿರುವನು.

ನಾಗಚಂದ್ರನ ಅಲಂಕಾರಯುಕ್ತ ವರ್ಣನೆಯಲ್ಲಿ ಕುಬೇರಯಕ್ಷನಿಗೆ ಚತುರ್ಮುಖಗಳೂ, ಅಷ್ಟಭುಜಗಳೂ ಹಾಗೂ ಗಜವಾಹನವೂ ಇದ್ದುವೆಂದು ತಿಳಿಯುವುದು. ಅಷ್ಟಭುಜಗಳಲ್ಲಿದ್ದ ಆಯುಧ-ಮುದ್ರೆಗಳ ವಿವರಣೆಯನ್ನು ನಾಗಚಂದ್ರನು ಕೊಟ್ಟಿಲ್ಲ. ಅವನ ಕುಬೇರನ ವರ್ಣನೆ ಹೀಗಿದೆ:

ವಾರಣವಾಹನಂ ಪೃಥುತರಾಷ್ಟಭುಜಂ ವಿಜಯಾಂಗನಾಗೃಹ
ದ್ವಾರದನೇಕ ಶಾಖೆಯೆನೆ ವಕ್ತ್ರಚತುಷ್ಟಯಮೊಂದೆ ನಾಳದೊಳ್
ನೀರಜಮುಳ್ಳಲರ್ದವೆನೆ ರಂಜಿಸುವಂ ಸುರಚಾಪ ರುಗ್ಮನೋ
ಹಾರಿ ಕುಬೇರಯಕ್ಷನೊಸೆದೀ ಕೃತಿಗೀಗೆ ಗುಣಪ್ರತಿಷ್ಠೆಯಂ ॥ (೧-೮)

ವಾರಣವಾಹನವುಳ್ಳವನೂ, ವಿಜಯಾಂಗನಾಗೃಹದ್ವಾರದ ಅನೇಕ ಶಾಖೆಯಂತಿರುವ ಅಷ್ಟಭುಜಗಳನ್ನುಳ್ಳವನೂ, ಒಳಗೇ ಅರಳಿದ ಕಮಲಗಳಂತೆ ಇರುವ ಚತುರ್ಮುಖಗಳನ್ನುಳ್ಳವನೂ, ಸುರಚಾಪದಂತೆ ರುಗ್ಮನೋಹಾರಿಯಾಗಿ ರಂಜಿಸುವ ಕುಬೇರಯಕ್ಷನು ಈ ಕೃತಿಗೆ ಗುಣಪ್ರತಿಷ್ಠೆಯನ್ನು ಕೊಡಲಿ.

ಆದರೆ ಅಪರಾಜಿತೆಯನ್ನು ವರ್ಣಿಸುವಾಗ ಈ ಕವಿಯು ಅವಳ ಅಲಂಕಾರ ಹಾಗೂ ಆಯುಧಗಳ ಪೂರ್ಣ ವಿವರಗಳನ್ನು ಕೊಟ್ಟಿರುವನು:

ವರದ ಫಲಾಸಿ ಖೇಟಕಚತುರ್ಭುಜೆ ತನ್ನ ಶರೀರ ಕಾಂತಿಯಿಂ
ಮರಕತರತ್ನದಿಂ ಸಮೆದಪ್ರೊಲ್ಶರಭಂ ನಿಜವಾಹನಂ ಮನೋ
ಹರಮೆನೆ ಧರ್ಮಚಕ್ರಪರಚಕ್ರಮನಾಕ್ರಮಿಸಲ್ಕೆ ಸಾಲ್ವ ಭಾ
ಸುರತರತೀವ್ರತೇಜದಪರಾಜಿತೆ ಮಾಳ್ಕೆ ಮತಿಪ್ರಕಾಶಮಂ ॥ (೧-೯)

ಮರಕತರತ್ನದಂತೆ ಮೈಬಣ್ಣವುಳ್ಳವಳೂ, ಶರಭವಾಹನವುಳ್ಳವಳೂ, ಚತುರ್ಭುಜಗಳಲ್ಲಿ ವರದ, ಫಲ, ಅಸಿ ಮತ್ತು ಖೇಟಕಗಳನ್ನುಳ್ಳವಳೂ, ಧರ್ಮಚಕ್ರ, ಪರಚಕ್ರಗಳೆರಡನ್ನೂ ಆಕ್ರಮಿಸುವಂತಹ ಭಾಸುರವೂ ತೀವ್ರವೂ ಆದ ತೇಜಸ್ಸನ್ನುಳ್ಳ ಅಪರಾಜಿತೆಯು ಮತಿಗೆ ಪ್ರಕಾಶವನ್ನು ಕೊಡಲಿ.

ಕುಬೇರ ಮತ್ತು ಅಪರಾಜಿತೆಯರ ಸ್ವತಂತ್ರ ವಿಗ್ರಹಗಳನ್ನಿನ್ನೂ ಬೆಳಕಿಗೆ ತರಬೇಕಾಗಿದೆ. ಆದರೆ ಮಲ್ಲಿನಾಥ ತೀರ್ಥಂಕರನ ಬಸದಿಯನ್ನು ಕಟ್ಟಿಸಿದ ಸಾಕಷ್ಟು ಉಲ್ಲೇಖಗಳು ಶಾಸನಗಳಲ್ಲಿ ಬರುತ್ತಿರುವುದರಿಂದ, ಕರ್ನಾಟಕದಲ್ಲಿನ್ನೂ ಅವು ಉಳಿದು ಬಂದಿರುವ ಸಾಧ್ಯತೆ ಇಲ್ಲದಿಲ್ಲ.

ಇಪ್ಪತ್ತೆರಡನೇ ತೀರ್ಥಂಕರ ನೇಮಿನಾಥನ ಚರಿತೆಯನ್ನು ಕನ್ನಡದಲ್ಲಿ ಹಲವು ಕವಿಗಳು ಬರೆದಿರುವರು. ಇವುಗಳಲ್ಲಿ ಕರ್ಣಪಾರ್ಯನ ನೇಮಿನಾಥಪುರಾಣ, ನೇಮಿಚಂದ್ರನ ಅರ್ಧನೇಮಿಪುರಾಣ ಮತ್ತು ಮಂಗರಸನ ನೇಮಿಜಿನೇಶಸಂಗತಿ ಸುಲಭವಾಗಿ ಲಭ್ಯವಿವೆ. ಇವುಗಳಲ್ಲಿ ಕರ್ಣಪಾರ್ಯನ ಕೃತಿ ಬಹುಮುಖ್ಯ. ನೇಮಿನಾಥನ ಯಕ್ಷನನ್ನು ದಿಗಂಬರ ಕಾವ್ಯಗಳಲ್ಲಿ ಗೋಮೇಧ ಎಂದು ಕರೆಯುವ ವಾಡಿಕೆ ಇದ್ದರೂ, ಅವನ ಮತ್ತೊಂದು ಹೆಸರಾದ ಸರ್ವಾಹ್ಣ (ಸಾಮಾನ್ಯ ಶ್ವೇತಾಂಬರರಲ್ಲಿ ಹೆಚ್ಚು ಪ್ರಚಾರದಲ್ಲಿರುವ) ಎಂಬುದೂ ಕರ್ನಾಟಕದಲ್ಲಿ ಪ್ರಚಾರದಲ್ಲಿದ್ದಂತಿದೆ. ಆದರೆ ಕನ್ನಡ ಗ್ರಂಥಗಳಲ್ಲಿ ಅವನ ಪೂರ್ಣ ವಿವರಗಳು ದೊರೆಯುವುದಿಲ್ಲ. ನೇಮಿಚಂದ್ರನು ಸರ್ವಾಹ್ಣನನ್ನು ''ಸಮಸ್ತಯಕ್ಷತಿಳಕಂ'' ಎಂದು ಅವನ ಗಜವಾಹನವನ್ನು ಉಲ್ಲೇಖಿಸುವನು (೧-೮). ಕರ್ಣಪಾರ್ಯನು ಇವನನ್ನು ''ಯಕ್ಷರ ಜಿನಮತಜನಸಂತಾನ ಸಂರಕ್ಷದಕ್ಷಂ'' ಎಂದು ಕರೆದಿರುವನು (೧-೭). ಸರ್ವಾಹ್ಣನನ್ನು ಇನ್ನುಳಿದ ಕವಿಗಳೂ ಸ್ಮರಿಸಿರುವರು–ಇದು ಈ ಯಕ್ಷನ ಪ್ರಭಾವಕ್ಕೆ ಪ್ರತಿಬಿಂಬವಾಗಿದೆ. ಉದಾಹರಣೆಗೆ ಪೊನ್ನನು ಶಾಂತಿಪುರಾಣದಲ್ಲಿ ಅವನನ್ನು ಹೀಗೆ ಹೊಗಳಿರುವನು:

ಅಣಿಮಾದ್ಯಷ್ಟ ಗುಣಂಗಳಂ ಪಡೆವುದುಂ ಜೈನೋಕ್ತಿವಾರಾಶಿ ವಾಃ
ಕಣದಿಂದಂ ಪಡೆದಿರ್ದ ಸಿದ್ಧಪದಮಂ ಕೆಯ್ಕೊಳ್ವುದರ್ಕಡ್ಡಮೊ
ಡ್ಡಣಮೊಡ್ಡಿರ್ದಘಸೈನ್ಯಮಂ ತುಳಿಯಿಸಲ್ ಸರ್ವಾಹ್ಣಯಕ್ಷಂ ಸ್ವವಾ
ರಣಕಾಧೋರಣನಾದನುಂತಪರಣಂಗೇಕಾರಣಂ ವಾರಣಂ ॥ (೧-೭)

ಅಂತೆಯೇ ಚಂದ್ರಮನೂ ತನ್ನ ಕಾರ್ಕಳದ ಗೋಮಟೇಶ್ವರ ಚರಿತೆಯಲ್ಲಿ ಹೀಗೆ ವರ್ಣಿಸಿರುವನು:

ತರಣಿಮಂಡಲವನೇಳಿಪ ಧರ್ಮಚಕ್ರವ। ಶಿರದೊಳು ಧರಿಸಿ ಭವ್ಯರಿಗೆ
ವರವಿತ್ತು ರಕ್ಷಿಪ ಸರ್ವಾಹ್ಣಯಕ್ಷನೀ। ಪರಿಹರಿಸೆಮ್ಮ ವಿಘ್ನಗಳ ॥ (೧-೯)

ಸರ್ವಾಹ್ಣನ ಗಜವಾಹನ ಹಾಗೂ ಕಿರೀಟದಲ್ಲಿರುವ ಧರ್ಮಚಕ್ರ ಹಾಗೂ ವರದಮುದ್ರೆ ಬಿಟ್ಟು ಉಳಿದ ವಿವರಗಳಿಲ್ಲದಿದ್ದುದರಿಂದ, ಸಾಮಾನ್ಯವಾಗಿ ಅವನಿಗೆ ಎರಡೇ ಕೈಗಳಿದ್ದುವೆಂದೂ, ಇವುಗಳಲ್ಲಿ ಅವನು ವರದ (ಅಥವಾ ಅಭಯ) ಮುದ್ರೆ ಅಥವಾ ಫಲ-ಪುಷ್ಪ ಧರಿಸಿದ್ದನೆಂದೂ ಗ್ರಹಿಸಬಹುದು. ಈ ಯಕ್ಷನ ಹತ್ತಾರು ಸ್ವತಂತ್ರ ವಿಗ್ರಹಗಳು ನಮಗಿಂದು ಲಭ್ಯವಿವೆ-ಸಾಮಾನ್ಯವಾಗಿ ಎರಡು ಭುಜದ, ಕಿರೀಟಧಾರಿಯಾದ, ಗಜವಾಹನದಿಂದೊಡಗೂಡಿದ ವಿಗ್ರಹಗಳನ್ನು ನಾವು ಕಾಣುವೆವು.

ಸರ್ವಾಹ್ಣಯಕ್ಷನಷ್ಟೇ ಪೂಜಾರ್ಹಳಾಗಿ ನೇಮಿನಾಥ ತೀರ್ಥಂಕರನ ಯಕ್ಷಿ ಕೂಷ್ಮಾಂಡಿನಿಯು ಕರ್ನಾಟಕದಲ್ಲಿ ಕಂಡುಬರುವಳು. ಅವಳಿಗಿದ್ದ ಮತ್ತೊಂದು ಹೆಸರು ಅಂಬಿಕೆ. ನೇಮಿಚಂದ್ರನು ತನ್ನ ನೇಮಿನಾಥ ಪುರಾಣದಲ್ಲಿ ಇವಳನ್ನು ಹೆಸರಿಸುವುದಿಲ್ಲ (೧-೯). ಆದರೆ ಅಂಬಿಕೆಯ ಲಕ್ಷಣಗಳ ಪೂರ್ಣಜ್ಞಾನ ಅವನಿಗಿದ್ದುದರಲ್ಲಿ ಅನುಮಾನವಿಲ್ಲ. ಇದೇ ಕವಿಯ ಲೀಲಾವತೀ ಪ್ರಬಂಧದಲ್ಲಿ ಕುತೂಹಲಕಾರಿ ಉಲ್ಲೇಖಗಳು ಬರುವುವು. ಗಂಧ ನದಿಯ ದಡದ ಮೇಲಿದ್ದ ವನವನ್ನು ಕಂದರ್ಪದೇವನು ಪ್ರವೇಶಿಸಿದಾಗ, ಆ ವನದ ಮಧ್ಯದಲ್ಲಿ ಕಲ್ಪವೃಕ್ಷದ ಬಳಿ ಇದ್ದ ಅಂಬಿಕಾ ಮೂರ್ತಿಯನ್ನು ಅವನು ಆರಾಧಿಸುವ ಉಲ್ಲೇಖವಿದೆ. ''ದೇವಿಯ ಬಿರುದಂ ಪಾಡುವ'' (೮-೫೩) ಭಕ್ತರ ವಿವರ, ''ಅಂಬಿಕೇ ಜಗದಂಬಿಕೆ'' (೮-೫೭ ಶ್ಲೋ) ಎಂದು ಕಂದರ್ಪದೇವನು ಮಾಡುವ ಪ್ರಾರ್ಥನೆಯ ವರ್ಣನೆ ನಮಗೆ ದೊರೆಯುವುದು.

ಕವಿಯ ಮಾತಿನಲ್ಲಿ, ಅಂಬಿಕೆಯ ವರ್ಣನೆ ಹೀಗೆ ಬರುವುದು :

ತೊಳಗುವ ವಜ್ರದೋಲೆ ಪೊಸಮುತ್ತಿನ ಲಂಬಣಮಾಯ್ತು ಮಾಣಿಕಂ
ಗಳ ಮಿಸುಪ್ಪೆಸರಂ ಪಸಿಯ ನೇತ್ರದ ಬಲ್ಲಿಜಿ ತೋರ್ಪ ಮಿಂಚುವ
ಲ್ಗಳ ಬೆಳಗುಳ್ಳ ಬಾಯ್ದೆಱೆ ಬಟಲ್ಮುಡಿ ಸಾಂದಿನ ಬೊಟ್ಟು ಚೆಲ್ವಿನ
ಗ್ಗಳಿಕೆಯನೀಯೆ ಕಣ್ಗೆಸೆವ ಯಕ್ಷಿಯನಬ್ಜದಳಾಯತಾಕ್ಷಿಯಂ ॥ (೮-೫೭)

ಬಿಂಬೋಷ್ಠಿ ಮೇ ಮಹಾಕಾವ್ಯಂ ಕಂಬುಕಂಠಿ ತವಾಜ್ಞಯಾ
ಚುಂಬಿತಂ ದೇಹಿ ಸೌಭಾಗ್ಯಮಂಬಿಕೇ ಜಗದಂಬಿಕೇ ॥ (೮-೫೭)

ಎಂದಂಬಿಕೆಯಂ ಬೇಡಿ ವರಂಬಡೆದು...... ॥ (೮-೫೭ ವ.)

ಕರ್ಣಪಾರ್ಯನು ಇವಳನ್ನು ಕೂಷ್ಮಾಂಡಿನಿ ಎಂದು ಹೆಸರಿಸಿ ಪ್ರಾರ್ಥಿಸಿದರೂ, ಅವಳ ಲಾಂಛನ-ಆಯುಧಗಳನ್ನು ವಿವರಿಸುವುದಿಲ್ಲ (೧-೬). ಮಂಗರಸ ಇವಳನ್ನು ಯಕ್ಷೇಶ್ವರಿ ಎಂದು ಕರೆದಿರುವನು (ನೇಮಿಜಿ ೧-೯). ಮತ್ತು ಚಂದ್ರಮನು ಅವಳನ್ನು ಅಂಬಿಕೆ ಎಂದು ಹೆಸರಿಸಿರುವನು (೧-೧೦). ಆದರೆ ಈ ಯಾವ ಕವಿಯೂ ಅಂಬಿಕೆಯ ಲಾಂಛನ-ಆಯುಧಗಳನ್ನು ವಿವರಿಸುವುದಿಲ್ಲ.

ಕೂಷ್ಮಾಂಡಿನಿಯ ಅನೇಕ ವಿಗ್ರಹಗಳು ಕರ್ನಾಟಕದಲ್ಲಿ ದೊರೆತಿವೆ. ಅವಳ ಅತ್ಯಂತ ಪುರಾತನ ವಿಗ್ರಹವು ಐಹೊಳೆಯ ಮೇಗುತಿ ದೇವಾಲಯದಲ್ಲಿದೆ. ಶ್ರವಣಬೆಳ್ಗೊಳ, ಹುಂಚ,

ಕಂಬದಹಳ್ಳಿ ಮುಂತಾದೆಡೆ ಮಧ್ಯಕಾಲದ ಅನೇಕ ವಿಗ್ರಹಗಳು ದೊರೆತಿವೆ. ಸಾಮಾನ್ಯವಾಗಿ ಈ ಯಕ್ಷಿಯು ಮಾವಿನ ಮರದ ಕೆಳಗೆ ಕುಳಿತು ತನ್ನ ಇಬ್ಬರು ಪುತ್ರರಿಂದೊಡಗೂಡಿರುವಳು–ಅವಳ ಎರಡು ಕೈಗಳಲ್ಲಿ ಅಭಯ ಮುದ್ರೆ ಮತ್ತು ಮಾವಿನ ಗೊಂಚಲು ಇರುವುದು ಸಹಜ. ಅವಳ ವಾಹನವಾದ ಸಿಂಹದ ಮೇಲೆ ಒಬ್ಬ ಮಗನು ಕುಳಿತಿರುವುದನ್ನು ನಾವು ಕಾಣುವೆವು. ಹೊಯ್ಸಳ ಕಾಲದಲ್ಲಿದ್ದ ನೇಮಿಚಂದ್ರ ಕವಿಯು ಇಂತಹ ಅನೇಕ ವಿಗ್ರಹಗಳನ್ನು ಕಣ್ಣಾರೆ ಕಂಡಿರಲು ಸಾಧ್ಯ. ಲೀಲಾವತಿ ಪ್ರಬಂಧದಲ್ಲಿ ಬರುವ ಈ ವರ್ಣನೆಯು ನಮ್ಮ ಊಹೆಯನ್ನು ಸಮರ್ಥಿಸುವುದು:

> ನೆಱೆದ ಮಗನೇಱೆ ಸಿಂಗದ
> ಮಱೆಯಿಂ ಕರಮೊಪ್ಪಿ ತೋಱಲವನಪ್ಪಿಂ ನೇ
> ರ್ಗಿಱಿಯ ಮಗಂ ಪನೆಗೊನೆಗಳ
> ಕಿಱುಮೊಳೆಯೆನೆ ನಗುತ ಸೋಂಕಿ ಸೋಗಿಲೊಳಸೆಯಲ್ ॥ (೮-೫೬)

ಇಪ್ಪತ್ತಮೂರನೆಯ ತೀರ್ಥಂಕರನಾದ ಪಾರ್ಶ್ವನಾಥನ ಜೀವನ ಚರಿತ್ರೆಯನ್ನು ವಸ್ತುವನ್ನಾಗಿ ಮಾಡಿಕೊಂಡ ಕನ್ನಡ ಕವಿಗಳಲ್ಲಿ ಪಾರ್ಶ್ವಪಂಡಿತ ಪ್ರಮುಖನು. ಈ ಕವಿಯ ಪಾರ್ಶ್ವನಾಥಪುರಾಣ ನಮಗೆ ಲಭ್ಯವಿದೆ. ಚಾವುಂಡರಾಯ ಪುರಾಣ (ಪು. ೧೬೧)ದಲ್ಲಿ ಪಾರ್ಶ್ವನ ಮಾತಾಪಿತೃಗಳನ್ನು ವಿಶ್ವಸೇನ ಬ್ರಹ್ಮಾದೇವಿ ಎಂದು ಹೆಸರಿಸಲಾಗಿದ್ದರೆ, ಪಾರ್ಶ್ವಪಂಡಿತನು ಅವರನ್ನು ಅಶ್ವಸೇನ-ಬ್ರಹ್ಮದತ್ತೆ ಎಂದು ಕರೆದಿರುವನು (೧೨-೧೨೧, ೧೨೫). ಆದರೆ ಪಾರ್ಶ್ವಪಂಡಿತನು ಈ ತೀರ್ಥಂಕರನ ಶಾಸನದೇವತೆಗಳಾದ ಧರಣೇಂದ್ರ ಹಾಗೂ ಪದ್ಮಾವತಿಯರ ಮೂರ್ತಿ ಲಕ್ಷಣಗಳ ಬಗ್ಗೆ ಹೆಚ್ಚು ವಿವರ ಕೊಟ್ಟಿಲ್ಲ. ಆದರೆ ನಾಗರಾಜನಾದ ಧರಣೇಂದ್ರನು ಕಮಠನು ಒಡ್ಡಿದ ಉಪಸರ್ಗಗಳನ್ನು ಅಳಿಸಿ, ಧ್ಯಾನದಲ್ಲಿ ತೊಡಗಿ ಪಾರ್ಶ್ವನಾಥ ತೀರ್ಥಂಕರನನ್ನು ಹೇಗೆ ರಕ್ಷಿಸಿದನು, ತನ್ನ ಪತಿಯ ನೆರವಿಗಾಗಿ ಪದ್ಮಾವತಿಯು ಹೇಗೆ ನೆರವಿತ್ತಳು ಎನ್ನುವ ಪೂರ್ಣ ವಿವರವನ್ನು ನಾವು ಈ ಕಾವ್ಯದಲ್ಲಿ ನೋಡುವೆವು(೧-೯) . ಈ ವಿವರಗಳನ್ನು ಪ್ರತಿಬಿಂಬಿಸುವ ಸುಂದರ ಶಿಲ್ಪಗಳು ಬಾದಾಮಿ ಐಹೊಳೆಯ ಗುಹಾಲಯಗಳಲ್ಲಲ್ಲದೇ, ಹುಂಚದ ದೇವಾಲಯಗಳಲ್ಲಿಯೂ ಇವೆ. ಧರಣೇಂದ್ರನ ಸ್ವತಂತ್ರ ಮೂರ್ತಿಗಳಿಗಂತೂ ಕೊರತೆಯೇ ಇಲ್ಲ–ಹತ್ತಾರು ಮೂರ್ತಿಗಳನ್ನು ನಾವು ಶ್ರವಣಬೆಳ್ಗೊಳ ಮತ್ತಿನ್ನಿತರ ಜೈನ ಕೇಂದ್ರಗಳಲ್ಲಿ ಕಾಣಬಹುದು.

ಪಾರ್ಶ್ವಪಂಡಿತನು ಪದ್ಮಾವತಿಯನ್ನು ವರ್ಣಿಸಿ ಅವಳಿಗೆ ಚತುರ್ಭುಜಗಳಿದ್ದುವೆಂಬ ವಿಷಯವನ್ನು ತಿಳಿಸುವನು. ಆದರೆ ಈ ಚತುರ್ಭುಜಗಳಲ್ಲಿದ್ದ ಮುದ್ರೆಗಳನ್ನು ಹೇಳದೆ, ಆ ಭುಜಗಳನ್ನು ನಾಲ್ಕು ಪುರುಷಾರ್ಥಗಳಿಗೆ ಹೋಲಿಕೆ ಮಾಡುವನು.

> ಭಾವಿಸೆ ಕುಂಕುಮೋಪಮತನುಪ್ರಭೆ ಸೂಚಿಸೆ ರಾಗಸಾಗರ
> ಶ್ರೀವಧುವೀಕೆಯೆಂದು ಪುರುಷಾರ್ಥಚತುಷ್ಟಯಮಂ ಪದಾನತ
> ರ್ಗೀವುದನೆಯ್ದೆ ಸೂಚಿಸೆ ಚತುರ್ಭುಜಮೊಪ್ಪುವ ಪುಣ್ಯಮೂರ್ತಿ ಪ
> ದ್ಮಾವತಿದೇವಿ ಮಾಳ್ಕೆಮಗೆ ಸೌಖ್ಯಸಮಾಗಮಧರ್ಮರಾಗಮಂ ॥ (೧-೮)

ನೇಮಿಚಂದ್ರನ ಲೀಲಾವತಿ ಪ್ರಬಂಧದಲ್ಲಿ ಪದ್ಮಾವತಿಯ ಉಲ್ಲೇಖ ಮೇಲಿಂದ ಮೇಲೆ ಬರುವುದು. ಒಂದೆಡೆ, (೭-೩೯ ವ.) ''ಬಾಱೆಯ ಬಾಳೋದ್ಯಾನದ ನಡುವೆ ಪೂವಿನ

ಪುಡಿಯೊಟ್ಟಿ ಬೆಟ್ಟಾಗಿರ್ದಂತಿರ್ದ ಪೊನ್ನ...ಬಸದಿಯೊಳ್......ಬಿದಿ ಬಯ್ತಭುವನ ಭಾಗ್ಯದೇವತೆ ಯಂತಿರ್ದ ಪದ್ಮಾವತಿ.......'' ಎಂದಿದೆ. ಅಲ್ಲಿಯೇ ಒಂದು ಪದ್ಯದಲ್ಲಿ, (೭-೪೬) ''ಪದ್ಮಾವತಿ ನಿಜಕರದೊಳೆಸೆಯೆ ವಜ್ರಾಂಕುಶಮಂ'' ಎಂದು ಅವಳ ಕರದಲ್ಲಿದ್ದ ಎರಡು ಲಾಂಛನಗಳನ್ನು ಹೇಳಲಾಗಿದೆ. ಹತ್ತನೆಯ ಅಧ್ಯಾಯದ ೯ನೆಯ ಪದ್ಯದಲ್ಲಿ ಅವಳ ಮೂರ್ತಿಲಕ್ಷಣ ಪೂರ್ಣ ಪ್ರತಿಬಿಂಬಿತವಾಗಿದೆ:

> ಪೂವಿನ ಪಾಶಮಂ ವಿಪುಳಹೇಮಫಳಂಗಳನಿಂಬುವೆತ್ತ ಪೊಂ
> ಗಾವಿನ ವಜ್ರದಂಕುಶಮನಂಕಿತ ಕುಂಕುಮಪದ್ಮಪುಷ್ಪಮಂ
> ತೀವಿ ತಳಂಗಳೊಳ್ ಕರಚತುಷ್ಟಯಮೊಪ್ಪಮನಪ್ಪುಕೆಯ್ಯೆ ಪ
> ದ್ಮಾವತಿಯಂ ವಿಳಾಸವತಿ ಪೂಜಿಸಿದಳ್ ಪತಿಲಾಭಕಾಂಕ್ಷೆಯಿಂ

ಇಲ್ಲಿ ಅವಳ ಚತುರ್ಭುಜದಲ್ಲಿದ್ದ ಪಾಶ, ಫಳ, ಅಂಕುಶ ಮತ್ತು ಪದ್ಮಗಳ ಉಲ್ಲೇಖವಿದೆ. ಕರ್ನಾಟಕದಲ್ಲಿ ದೊರೆಯುವ ಪದ್ಮಾವತಿಯ ಅನೇಕ ಮೂರ್ತಿಗಳಲ್ಲಿ ಅವಳು ಚತುರ್ಭುಜೆಯಾಗಿರುವುದೂ, ಪಾಶ, ಫಲ, ಅಂಕುಶ ಮತ್ತು ಪದ್ಮ ಧರಿಸಿರುವುದು ಕಂಡು ಬಂದಿದೆ. ಇಲ್ಲಿ ಸಾಹಿತ್ಯದಲ್ಲಿ ದೂರೆಯುವ ವಿವರಕ್ಕೂ, ಕಲೆಯಲ್ಲಿ ಕಂಡುಬರುವ ವಿವರಕ್ಕೂ ಇರುವ ದಟ್ಟಸಾಮ್ಯ ಗಮನಾರ್ಹವಾಗಿದೆ.

ಕೊನೆಯ ತೀರ್ಥಂಕರನಾದ ವರ್ಧಮಾನ ಮಹಾವೀರನ ಚರಿತೆಯನ್ನಾಯ್ದು ಕೊಂಡು, ಕನ್ನಡ ಕವಿ ಆಚಣ್ಣನು ವರ್ಧಮಾನ ಪುರಾಣವನ್ನು ಹದಿಮೂರನೆಯ ಶತಮಾನದಲ್ಲಿ ರಚಿಸಿದನು. ಇಪ್ಪತ್ತುನಾಲ್ಕನೆಯ ತೀರ್ಥಂಕರನ ಯಕ್ಷನನ್ನು ಮಾತಂಗನೆಂದು ಹಲವಾರು ದಿಗಂಬರ ಗ್ರಂಥಗಳಲ್ಲಿ ಹೆಸರಿಸಲಾಗಿದೆ–ಆಚಣ್ಣನು ಅವನನ್ನು ಗಜೇಂದ್ರ ನೆಂದು ಕರೆದಿರುವನು. ಆದರೆ ಅವನ ಆಯುಧ-ಲಾಂಛನಗಳ ವಿವರಗಳಾವೂ ಅಲ್ಲಿಲ್ಲ. ಅಂತೆಯೇ ಸಿದ್ಧಾಯಿಕ ಯಕ್ಷಿಯ ವಿವರಗಳೂ ಈ ಕಾವ್ಯದಲ್ಲಿ ದೊರೆಯುವುದಿಲ್ಲ.

*ಶ್ರೀಕಂಠತೀರ್ಥ, ೧೯೭೬, ೧೯೮೦, ಪು. ೭೧೮-೨೨*

# ೨೦. ಬಖೈರು: ಒಂದು ಅಧ್ಯಯನ

● ಲಕ್ಷ್ಮಣ್ ತೆಲಗಾವಿ

೧

ಚರಿತ್ರೆಯ ಬರವಣಿಗೆಗೆ ಬಳಸಿಕೊಳ್ಳುವ ಸಾಮಗ್ರಿಗಳಲ್ಲಿ ಶಾಸನ, ತಾಳೆಯಗರಿ, ಕಡತ, ಕೈಫಿಯತ್ತು, ನಾಮೆ, ಬಖೈರು ಮೊದಲಾದುವು ಮೂಲ ಆಕರವೆನಿಸುತ್ತವೆ. ಕಲ್ಲು, ಲೋಹ, ವಿಶೇಷವಾಗಿ ತಯಾರಿಸಿದ ಹಲಗೆ, ಬಟ್ಟೆ ಹಾಗೂ ಕಾಗದದ ಮೇಲೆ ಕೆಲವು ವೃತ್ತಾಂತಗಳನ್ನು ಬರೆಯಲಾಗಿರುತ್ತದೆ. ಆಯಾ ಸಂದರ್ಭವನ್ನು ಅನುಸರಿಸಿ ಚರಿತ್ರೆಯ ರಚನೆಗೆ ಅವು ನೆರವಾಗುತ್ತವೆ. ಪ್ರಾಚೀನ ಭಾರತದಲ್ಲಿ ಭೂರ್ಜಪತ್ರ ಮತ್ತು ತಾಡಪತ್ರಗಳನ್ನು ಬರಹಸಾಧನವಾಗಿ ಬಳಸುತ್ತಿದ್ದುದು ಸರ್ವವಿದಿತ. ಪ್ರಾಚೀನ ಕರ್ನಾಟಕದಲ್ಲಿ ಹುಟ್ಟಿಕೊಂಡ ಕಾವ್ಯಕೃತಿಗಳು ತಾಳೆಯಗರಿಗಳಲ್ಲಿಯೇ ಅಡಕಗೊಂಡಿವೆ.

ಮಧ್ಯಕಾಲೀನ ಕರ್ನಾಟಕದಲ್ಲಿ 'ಕಡತ'ಗಳ ಉಪಯೋಗ ಆಗಲೇ ಆರಂಭಗೊಂಡಿದ್ದಿತು. ಕ್ರಿಸ್ತಶಕ ೧೦ನೆಯ ಶತಮಾನದಲ್ಲಿಯೇ ಕಡತಗಳು ಬಳಕೆಗೊಳ್ಳುತ್ತಿದ್ದ ಬಗೆಗೆ ಕಾವ್ಯೋಲ್ಲೇಖಗಳು ದೊರಕುತ್ತವೆ.[1] ಕಾಗದ (ಕಾಗಜ್)ದ ಮಟ್ಟಿಗೆ, ಈ ಶಬ್ದವೂ ವಸ್ತುವೂ ನಮ್ಮ ದೇಶಕ್ಕೆ ಬಂದುದು ಮಹಮ್ಮದೀಯರ ಮೂಲಕವೆಂದೂ ಗುಜರಾತಿನಲ್ಲಿ ದೊರೆತ ಕಾಗದದ ಒಂದು ಹಸ್ತಪ್ರತಿ ಕ್ರಿ.ಶ. ೧೨೨೦-೨೪ರ ಕಾಲಕ್ಕೆ ಸೇರಿದುದೆಂದೂ ಗೊತ್ತಾಗುತ್ತದೆ.[2] ಪತ್ರಲೇಖನಕ್ಕಾಗಿ ಮಾತ್ರ ಕಾಗದವನ್ನು ಬಳಸಲಾಗುತ್ತಿದ್ದಿತೆಂಬುದನ್ನು ಅಭಿನವ ಮಂಗರಾಜನು ತನ್ನ 'ಅಭಿನವಾಭಿಧಾನಂ' ಕ್ರಿ.ಶ. ೧೩೯೮ನಲ್ಲಿ ಹೇಳಿರುವುದು (''ಪತ್ತಳಿಕೆಯೆನಲು ಕಾಗದಮಕ್ಕು ಧೌತಿ ಮಸಿಪಾತ್ರೆಯಕ್ಕು ಕಲಾಮು ಲೇಖನಿಯಕ್ಕು'') ಗಮನಾರ್ಹ.[3] ಕರ್ನಾಟಕದ ಮಟ್ಟಿಗೆ, ''ಶಕವರ್ಷ ೧೪೧೨ ಸಂದ ಸಿದ್ಧಾರ್ಥಿ ಸಂವತ್ಸರದ ಆಶ್ವಯುಜ ಬಹುಳ ೧೦ (ಕ್ರಿ.ಶ. ೧೫೦೦)ರಲ್ಲೂ'' ಲಿಖಿಸಿರುವ 'ಏಕೋತ್ತರ ಶತಸ್ಥಲ ಟೀಕು' ಅತ್ಯಂತ ಹಳೆಯದಾದ ಕಾಗದದ ಪ್ರತಿಯೆಂದು ಹೇಳಲಾಗುತ್ತದೆ.[4] ಅಂದರೆ ೧೫ನೆಯ ಶತಮಾನದ ಅಂತ್ಯದ ವೇಳೆಗೆ ಕಾಗದದ ಬಳಕೆಯು ವ್ಯಾಪಕವಾಗಿದ್ದಿತು.

ದಕ್ಷಿಣ ಭಾರತದಲ್ಲಿ ಬಹು ಹಿಂದೆಯೇ ಕಾಗದದ ಕಾರ್ಖಾನೆಯು ಸ್ಥಾಪಿತವಾಗಿದ್ದ ವಿಚಾರದಲ್ಲಿ ಸ್ಪಷ್ಟ ಆಧಾರವಿಲ್ಲವೆನ್ನುವುದುಂಟು. ಕರ್ನಾಟಕದಲ್ಲಿ ಈಚೆಗೆ ಅಲ್ಲಲ್ಲಿ ಸ್ಥಳೀಯವಾಗಿ ಕೋರಿಕಾಗದ ಅಥವಾ ಕತ್ತೆಕಾಗದವು ತಯಾರಿಸಲ್ಪಡುತ್ತಿತ್ತು. ಉದಾಹರಣೆಗೆ, ಚಿತ್ರದುರ್ಗ ಜಿಲ್ಲೆ, ಚಳ್ಳಕೆರೆ ತಾಲ್ಲೂಕಿನ ದೊಡ್ಡೇರಿಗ್ರಾಮ (ಆಗ ತಾಲ್ಲೂಕಿನ ಮುಖ್ಯ ಸ್ಥಳ)ದಲ್ಲಿಯೂ[5] ಮಂಡ್ಯ ಜಿಲ್ಲೆ, ಶ್ರೀರಂಗಪಟ್ಟಣ ಸಮೀಪದ ಗಂಜಾಂ ಹಾಗೂ ಇನ್ನೂ

---

೧ ನೋಡಿ: ಎಚ್. ದೇವೀರಪ್ಪ: ಕನ್ನಡ ಹಸ್ತಪ್ರತಿಗಳ ಇತಿಹಾಸ, ಬೆಂಗಳೂರು, ೧೯೭೭, ಪು. ೩-೪

೨ ಡಿ. ಎಲ್. ನರಸಿಂಹಾಚಾರ್: ಕನ್ನಡ ಗ್ರಂಥಸಂಪಾದನೆ, ಮೈಸೂರು, ೧೯೭೦, ಪು. ೪೧

೩. ಕನ್ನಡ ಹಸ್ತಪ್ರತಿಗಳ ಇತಿಹಾಸ, ಪು. ೬; ಕನ್ನಡ ಗ್ರಂಥಸಂಪಾದನೆ, ಪು. ೪೧

೪ ಕನ್ನಡ ಹಸ್ತಪ್ರತಿಗಳ ಇತಿಹಾಸ, ಪು. ೨೦

೫ B. Lewis Rice: *Mysore*, Vol. 2, Westminster, 1900, p. 521: ''It (Dodderi) was once celebrated for its paper manufacture, and the size of the sheets regulated the Dodderi gaz or yard, which was a standard measure of length.''

ಒಂದೆರಡು ಸ್ಥಳಗಳಲ್ಲಿಯೂ[೬] ಈ ಬಗೆಯ ಕೈಕಾಗದವನ್ನು ತಯಾರಿಸಲಾಗುತ್ತಿದ್ದಿತು. ಚಳ್ಳಕೆರೆ ತಾಲ್ಲೂಕಿನ ಕಾಟಪ್ಪನಹಟ್ಟಿ ಮತ್ತು ಪರಶುರಾಮಪುರಗಳಲ್ಲಿ ಇಂತಹ ಕಾಗದವನ್ನು ತಯಾರಿಸುವವರು ವಾಸಿಸುತ್ತಿದ್ದರು.[೭] ಎಲ್ಲೆಲ್ಲಿ ಮುಸಲ್ಮಾನರ ಆಡಳಿತದ ಪ್ರಭಾವವಿದ್ದಿತೋ ಅಲ್ಲೆಲ್ಲ ಹಸ್ತಪ್ರತಿ ಲೇಖನಕ್ಕಾಗಿ ಕೈಕಾಗದವನ್ನು ಹೆಚ್ಚಾಗಿ ಬಳಸಲಾಗುತ್ತಿದ್ದಿತೆಂಬುದು ಗಮನಾರ್ಹ.[೮] ಒಟ್ಟಿನಲ್ಲಿ, ಈಚೆಗೆ ಬರೆಯಲಾದ ಎಲ್ಲ ರಾಜಕೀಯ ಮತ್ತು ಇತರ ವೃತ್ತಾಂತಗಳೂ ಕಾಗದದ ದಾಖಲೆಯಲ್ಲಿವೆ. ಮೇಲೆ ಪ್ರಸ್ತಾಪಿಸಿದ ಕೈಫಿಯತ್ತು, ನಾಮೆ, ಬಖೈರು, ವಂಶಾವಳಿ ಇತ್ಯಾದಿ ಈ ವರ್ಗಕ್ಕೆ ಸೇರಿದಂತಹವು.

ಕಾಗದದ ಮೇಲೆ ಬರೆಯಲ್ಪಟ್ಟ ನಾಮೆ, ವಂಶಾವಳಿ, ಪಟ್ಟಿ, ಚರಿತ್ರೆ, ನಿರೂಪ, ಸ್ಥಳಪುರಾಣ ಹಾಗೂ ಬಖೈರುಗಳಲ್ಲಿ 'ಕೈಫಿಯತ್ತು' ಎಂದು ಕರೆಯಲಾದ ದಾಖಲೆಗಳೇ ಅಧಿಕ. ಮದರಾಸು ಸರ್ಕಾರದ ಪ್ರಾಚೀನ ಹಸ್ತಪ್ರತಿ ಸಂಗ್ರಹಾಲಯ ವಿಭಾಗದವರು ಪ್ರಕಟಿಸಿರುವ ಕರ್ನಲ್ ಕೋಲಿನ್ ಮೆಕೆಂಜಿಯು ಸಂಗ್ರಹಿಸಿದ ಕನ್ನಡ ಹಸ್ತಪ್ರತಿಗಳ ಪಟ್ಟಿಯಲ್ಲಿ ಸುಮಾರು ೩೨೪ ಕೈಫಿಯತ್ತುಗಳಿವೆ.[೯] ಕೆಲವು ವಂಶಾವಳಿಗಳು ಹಾಗೂ ಒಂದೆರಡು ಬಖೈರುಗಳು ಉಲ್ಲೇಖಗೊಂಡಿವೆ.

೨

'ಕೈಫಿಯತ್' ಎಂಬ ಶಬ್ದವು ಅರಾಬಿಕ್ ಮೂಲದ್ದು. ಅದಕ್ಕೆ ವಿವರಣೆ, ಹೇಳಿಕೆ, ಖಟ್ಲೆ, ವ್ಯಾಜ್ಯ, ಆಜ್ಞಾಪತ್ರ, ವಾಸ್ತವಿಕ ವಿಷಯಗಳ ಲಿಖಿತ ಸಂಗ್ರಹದ ಕಡತ, ಲಿಖಾವಟ್ಟು, ಇತ್ಯಾದಿ ಅರ್ಥಗಳಿವೆ.[೧೦] ಹಿಂದಿ ಮತ್ತು ಮರಾಠೀ ಭಾಷೆಗಳಲ್ಲಿರುವ ಈ ಶಬ್ದದ ಪರ್ಯಾಯ

---

೬-೭ V. S. Sambasiva Iyer: *The Resources, Industries, Trade and Commerce of the Mysore State* - in 3 Parts, Bangalore, 1914, p. 49; Ibid., p. 50

೮ ಕನ್ನಡ ಹಸ್ತಪ್ರತಿಗಳ ಇತಿಹಾಸ, ಪು. ೨೦

೯ T. Chandrasekharan: *An Alphabetical Index of Kannada Manuscripts in the Government Oriental Manuscripts Library, Madras* (Mackenzie's Collection), Madras, 1952; ಈ ಪಟ್ಟಿಯಲ್ಲಿ ವರ್ಗೀಕರಿಸಿದ ೧೪೩ ಕೈಫಿಯತ್ತುಗಳ ಯಾದಿಯನ್ನು ಸಿದ್ಧಪಡಿಸಿ ಪ್ರತ್ಯೇಕವಾಗಿ ಪ್ರಕಟಿಸಲಾಗಿದೆ–ನೋಡಿ: ಜಿ. ವರದರಾಜರಾವ್: 'ಕನ್ನಡ ಕೈಫಿಯತ್ತುಗಳು', ಮಣಿಹ (ಫ. ಗು. ಹಳಕಟ್ಟಿ ಸಂಸ್ಮರಣ ಸಂಪುಟ), ಬೆಂಗಳೂರು, ೧೯೮೨, ಪು. ೧೯೮-೨೧೨; ಹಾಗೂ ಗಮನಿಸಿ: G. Varadaraja Rao: 'Kaifiyats in Kannada', *Srikanthika* (Prof, S. Srikantha Sastri Felicitation Volume), Mysore, 1973, pp. 187-194.

* ಕೆ. ಕುಶಾಲಪ್ಪಗೌಡ, ಕೆ ಚಿನ್ನಪ್ಪಗೌಡ, ಸಂ: ದಕ್ಷಿಣಕನ್ನಡ ಜಿಲ್ಲೆಯ ಕೈಫಿಯತ್ತುಗಳು, ಉಜಿರೆ (ದ.ಕ.), ೧೯೮೩; ಮೆಕೆಂಜಿ ಸಂಗ್ರಹದಿಂದ ಆಯ್ದ ದಕ್ಷಿಣಕನ್ನಡ ಜಿಲ್ಲೆಗೆ ಮಾತ್ರ ಸಂಬಂಧಿಸಿದ ಒಟ್ಟು ೪೧ ಕೈಫಿಯತ್ತುಗಳನ್ನು ಈ ಪುಸ್ತಕದಲ್ಲಿ ಪ್ರಕಟಿಸಲಾಗಿದೆ. ಚಾರಿತ್ರಿಕ, ಸ್ಥಳಪುರಾಣ, ಸಂಕೀರ್ಣ ವಿಷಯಗಳು ಮತ್ತು ಮಠಗಳಿಗೆ ಸಂಬಂಧಿಸಿದ ಕೈಫಿಯತ್ತುಗಳು–ಎಂಬುದಾಗಿ ನಾಲ್ಕು ವಿಭಾಗಗಳನ್ನಾಗಿ ಮಾಡಿ, ಪ್ರಸ್ತಾವನೆಯಲ್ಲಿ ಕೈಫಿಯತ್ತಿನ ಅರ್ಥವ್ಯಾಪ್ತಿ, ಅವುಗಳ ಕರ್ತೃ, ರಚನೆಯಾದ ಕಾಲ, ಅವುಗಳ ಸಾರಾಂಶ, ವೈಶಿಷ್ಟ್ಯ, ಅವುಗಳಿಂದ ತಿಳಿದುಬರುವ ಜನರ ನಂಬಿಕೆಗಳು, ಸಮಾಜ ಚಿತ್ರಣ, ಭಾಷೆಯ ಲಕ್ಷಣ ಮೊದಲಾದುವನ್ನು ಸ್ಥೂಲವಾಗಿ ವಿವೇಚಿಸಲಾಗಿದ್ದು, ಕೈಫಿಯತ್ತುಗಳ ಶಾಸ್ತ್ರೀಯ ಅಧ್ಯಯನದ ಬಗೆಗೆ ನಿರ್ದೇಶಿಸುತ್ತದೆ ಈ ಸಂಗ್ರಹ.

೧೦ A Shankar Kedilaya: *Foreign Loan Words in Kannada (Arabic and Persian)*, Madras, 1970, p. 178: Kaifiyat=Statement, Event; ಎ. ಸುಬ್ಬರಾವ್ ಅವರ *Selection of Stories and Revenue Papers* (Madras, 1846) ಗ್ರಂಥದಲ್ಲಿರುವ Kaiphiyatu,

ರೂಪಗಳು: ಕೈಫೀಯತ್, ಕೈಫತ್, ಕೈಫಯಿತ್, ಕೈಫೇತ್, ಇತ್ಯಾದಿ.[೧೧] 'ಕೈಫ಼ೋತ್ತ್, ಕೈಪೇತ್ ಎಂಬ ಗ್ರಾಮ್ಯ ರೂಪಾಂತರಗಳೂ ಇವೆ.[೧೨]

'ನಾಮೆ' ಅಥವಾ 'ನಾಮಾ' ಸಹಾ ಕೈಫಿಯತ್ತಿನಂತೆ ಅನ್ಯದೇಶೀಯ ಶಬ್ದ; ಪರ್ಷಿಯಾ ಮೂಲದ್ದು. ಇದಕ್ಕಿರುವ ಅರ್ಥ ಕಾಗದ, ಪತ್ರ, ದಾಖಲೆ, ಇತ್ಯಾದಿ.[೧೩] ಹಿಂದಿ ಮತ್ತು ಮರಾಠಿಗಳಲ್ಲಿ 'ನಾಮಾ' ಎಂದು ಕರೆಯಲಾಗಿದೆ. ಚರಿತ್ರೆ ಬರವಣಿಗೆಗೆ ನೆರವಾಗುವ ಕನ್ನಡದಲ್ಲಿಯ 'ಹೈದರ್‌ನಾಮಾ' ಮತ್ತು 'ಕೊಡಗಿನ ರಾಜೇಂದ್ರನಾಮೆ' ದಾಖಲೆಗಳನ್ನು ಇಲ್ಲಿ ಉದಾಹರಿಸಬಹುದು.

ಇನ್ನು 'ಬಖೈರ್'ನ ವಿಚಾರ. ಇದು ಮರಾಠೀ ಶಬ್ದವೆನಿಸಿದ್ದು, ಬಖರ್, ಬಖಿರ್ ಹಾಗೂ ಬಖೆರ್ ರೂಪಗಳಲ್ಲಿಯೂ ಬಳಕೆಗೊಂಡಿದೆ.[೧೪] ಕನ್ನಡದಲ್ಲಿ 'ಬಖೈರು' ಎಂದಾಗಿದೆ. ಇದಕ್ಕೆ ಇರುವ ಅರ್ಥವೆಂದರೆ ಚಾರಿತ್ರಿಕ ಘಟನೆಗಳನ್ನು ಸೂಚಿಸುವ ವಿವರ, ಇತಿಹಾಸ, ಪುರಾಣ, ವಾರ್ತೆ ಇತ್ಯಾದಿ. ಆದರೆ ಬಖೈರ್ ಎಂಬುದು ಮರಾಠೀಜನ್ಯ ಶಬ್ದವಲ್ಲವೆಂಬುದು ಗಮನಾರ್ಹ. ಅದು ಅರಬ್ಬೀ ಮೂಲದಿಂದ ಜನಿಸಿ ಮರಾಠೀಯಲ್ಲಿ ಭಿನ್ನರೂಪದಿಂದ ಬೆಳೆದು ದೃಢವಾಗಿರುವಂತಹದು. 'ಅರಬ್ಬೀ ಶಬ್ದವು ವರ್ಣವ್ಯತ್ಯಾಸ ಹೊಂದಿ ಬಖೈರ್ ರೂಪ ಹೊಂದಿರಬಹುದೇ?' ಎಂದು ವಿದ್ವಾಂಸರು ಈ ಕುರಿತು ಶಂಕಿಸಿರುವರು.[೧೫] ಹಿಂದಿಯಲ್ಲಿ ಪ್ರವೇಶಿಸಿರುವ 'ಖಬರ್' (ಖಬ್ರ್) ಶಬ್ದಕ್ಕೆ 'ಬಖರ್'ನ ಅರ್ಥವೇ ಇದೆ.[೧೬] ಫಾರ್ಸಿ ಹಾಗೂ ಅರಬ್ಬಿಗಳನ್ನು ಸಂಪರ್ಕ ಭಾಷೆಗಳನ್ನಾಗಿ ಹೊಂದಿದ್ದ ಮರಾಠೀಯಲ್ಲಿ ಇಂತಹ

---

Kaipitu, *Kaiphiyyatu* ಎಂಬ ರೂಪಗಳನ್ನು statement, a case, a suit, a plaint ಎಂಬ ಅರ್ಥಗಳನ್ನೂ *Kaipiti* (Mal.), *Kaiphiyyatu* (Tel.) ಎಂಬ ಪ್ರಯೋಗಗಳನ್ನೂ ಗಮನಕ್ಕೆ ತರಲಾಗಿದೆ– Ibid., p.178 ಕನ್ನಡದಲ್ಲಿ 'ಕೈಫಿಯತ್ತು' ಪ್ರಯೋಗವು 'ಕೊಡಗಿನ ರಾಜೇಂದ್ರನಾಮೆ'ಯಲ್ಲಿ ಮೊದಲು ಪ್ರಯೋಗವಾದಂತೆ ತೋರುತ್ತದೆ.

೧೧ ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು, ಎರಡನೆಯ ಸಂಪುಟ, ಬೆಂಗಳೂರು, ೧೯೭೯, ಪು. ೨೧೩೨

೧೨ ದಕ್ಷಿಣಕನ್ನಡ ಜಿಲ್ಲೆಯ ಕೈಫಿಯತ್ತುಗಳು, ಪು. ೧

೧೩. *Foreign Loan Words in Kannada*, p. 263: *Namah* (Singular), *Name* (Plural)= a letter, a record; 'ನಾಮೆ' ಎಂಬುದಕ್ಕೆ deed ಎಂತಲೂ 'ರೋಜುನಾಮೆ' ಎಂಬುದಕ್ಕೆ ledger-book ಎಂತಲೂ ಅರ್ಥಗಳಿವೆ. ವಾಣಿಜ್ಯ ಮತ್ತು ಲೆಕ್ಕ ವ್ಯವಹಾರಗಳಲ್ಲಿ ಈ ಪದಗಳು ಬಳಕೆಗೊಳ್ಳುತ್ತಿದ್ದವು-Ibid., pp. 52, 54; Duncan Forbes: *A Dictionary*, Part I (Hindustani & English), London, II Edn., 1891, p. 730: *Nama* (m.)= a letter, book, writing ; history, account.

೧೪ ನೋಡಿ: H. H. Wilson: *A Glossary of Judicial and Revenue Terms*, II Edn., Delhi, 1968, p. 49: *bakhar, Bakhur* (Marathi)= a history, a narrative, memoirs & c.; ಮಹಾರಾಷ್ಟ್ರ ಶಬ್ದಕೋಶ, ೫ನೆಯ ಭಾಗ, ಪೂನಾ, ೧೯೩೬, ಪು. ೨೨೦೨: ಬಖರ್-ಖರ್ (ಸ್ತ್ರೀ)ಭಾ ೧. ಲಿಹಿಲೆಲಾ ಇತಿಹಾಸ್, ಕಥಾನಕ್ ಅಗರ್ ಚರಿತ್ರ, ೨. ಹಕೀಕತ್, ಬಾತ್ಮೀ

೧೫. K. P. Kulkarni (Ed.): *Marathi Etymological Dictionary* (Historical & Comparative), Poona, 1963, p. 583: ''ಮೂಲ್ ಅರಬೀ ಶಬ್ದಾಚ ವರ್ಣವ್ಯತ್ಯಾಸ್ ಹೋಪೂನ್ ಬಖರ್ ಹೆಂ ರೂಪ್ ಬನ್‌ಲೇಂ ಕಾಯ್?'' ಇವರು 'ಬಖೈರ್'ಗೆ ನೀಡಿರುವ ಮತ್ತೊಂದು ಅರ್ಥ 'ಆಖ್ಯಾಯಿಕಾ.'

೧೬ *A Glossary of Judicial and Revenue Terms*, p. 273 (note); *Khabar, Khabur*, (Hindi), (Arabic) Neuss, information: Care, protection; S. Muhammad Husayn Nainar: Arabic and Persian Words in the Tamil Languagee', *Annals of Oriental Research of the University of Madras* (AORUM), Vol. 3, Part 2, 1938 39: *Khabar (Khbr)*-gossip-(Arabic, *akhbar*, pl. of *Khabar* = news <*Khbr*)

ಶಬ್ದಗಳು ಪ್ರವೇಶಿಸಿದುದು ತೀರಾ ಸಾಮಾನ್ಯ ಸಂಗತಿಯಾಗಿದ್ದಿತು. ಇಲ್ಲಿ 'ಖಬರ್' ಶಬ್ದವು ವರ್ಣಪಲ್ಲಟ ಅಥವಾ ವರ್ಣ ವ್ಯತ್ಯಯದಿಂದಾಗಿ 'ಬಖರ್' ಆಗಿರುವುದನ್ನು ಗಮನಿಸಬಹುದು.

'ಬಖೈರ್' ಶಬ್ದದ ನಿಷ್ಪತ್ತಿ ಕುರಿತು ರಾಜವಾಡೆ, ಪಿ. ಎನ್. ಜೋಷಿ, ಜಗನ್ನಾಥಶಾಸ್ತ್ರಿ ವಿ. ಜಿ. ಅಪಟೆ, ಎಮ್. ಟಿ. ಪಟವರ್ಧನ, ಶಂಕರನಾರಾಯಣ ಜೋಷಿ ಇವರೇ ಮೊದಲಾದ ಮರಾಠೀ ವಿದ್ವಾಂಸರು ವಿಚಾರ ಮಾಡಿದ್ದಾರೆ. ಶಂಕರನಾರಾಯಣ ಜೋಷಿಯವರು ಸಂಪಾದಿಸಿದ 'ಕೃಷ್ಣಾಜಿ ಅನಂತ ಸಭಾಸದ ವಿರಚಿತ ಛತ್ರಪತಿ ಶಿವಾಜಿ ರಾಜೆಯಾಂಚೀ ಬಖರ್'ನ ಪ್ರಸ್ತಾಪನೆಯಲ್ಲಿ ಬಖೈರ್ ಶಬ್ದದ ವ್ಯುತ್ಪತ್ತಿ, ಅರ್ಥ, ವೈಶಿಷ್ಟ್ಯ ಹಾಗೂ ಲಕ್ಷಣಗಳನ್ನು ಕುರಿತು ವಿವರವಾಗಿ ಚರ್ಚಿಸಲಾಗಿದೆ.[೧೭]

ಈ ಬಖೈರ್ ಪ್ರಸ್ತಾಪನೆಯಲ್ಲಿರುವ ವಿಚಾರಗಳನ್ನು ಈ ಕೆಳಕಂಡಂತೆ ಸಂಗ್ರಹಿಸಿ ಕೊಡಲಾಗಿದೆ:

"'ಬಖರ್' ಶಬ್ದವನ್ನು 'ಬಕ್' ಧಾತುವಿನಿಂದ ಮರಾಠೀಯಲ್ಲಿ ಸ್ವೀಕರಿಸಲಾಯಿತೆಂದು ರಾಜವಾಡೆಯವರು 'ಐತಿಹಾಸಿಕ ಪ್ರಸ್ತಾವನಾ'ದಲ್ಲಿ ಬರೆದಿದ್ದಾರೆ. 'ಬಕ್' ಎಂಬುದರ ಅರ್ಥ ಮಾತನಾಡುವುದು, ನುಡಿಯುವುದು. ಆದರೆ ರಾಜವಾಡೆಯವರು ಹೇಳಿದ ವ್ಯುತ್ಪತ್ತಿಯು ಸರಿಯಲ್ಲ. ಏಕೆಂದರೆ 'ಬಖರ್' ಎಂಬುದು ಅರಬ್ಬೀ ಶಬ್ದ. ಹಿಂದಿನ ಸಂಗತಿಗಳ ಹೇಳಿಕೆ, ಕಿವಿಯಿಂದ ಕೇಳಿದ, ಅತಿಶಯೋಕ್ತಿಯುಕ್ತ, ಕಲ್ಪಿತ ಇಲ್ಲವೆ ಸ್ಮರಣದಲ್ಲಿದ್ದ ಸಂಗತಿಗಳನ್ನು ಗದ್ಯ ರೂಪದಲ್ಲಿ ಬರೆದ ಹೊತ್ತಿಗೆಯೆಂದು ಇದಕ್ಕೆ ಅರ್ಥ. ಸಹಿ ಹಾಗೂ ಶಿಕ್ಕೆಯಿಂದೊಡಗೂಡಿದ ಪ್ರಾಮಾಣ್ಯವಿರುವ ಮಾಹಿತಿ ಪತ್ರವೆಂತಲೂ ಕರೆಯಬಹುದು. ಸಹಿಯಿಂದೊಡಗೂಡಿದ ಈ 'ಬಖರ್'ಅನ್ನು ಪತ್ರಗಳಲ್ಲಿ ಒಂದು ವಿಧವೆಂತಲೂ ಪರಿಗಣಿಸಲಾಗಿದೆ. ಸಹಿಯಿಂದೊಡಗೂಡಿದ ಇದು ಎಲ್ಲರಿಗೂ ಪ್ರಮಾಣಭೂತವಾಗಿದ್ದಿತು. ಅನೇಕ ವಿಧದ ವ್ಯವಹಾರಯೋಗ್ಯ ಕಚೇರಿ ಪತ್ರಗಳಿದ್ದುವು. ಅವುಗಳಲ್ಲಿ ಕ್ರಯಪತ್ರ, ಅಭಯಪತ್ರ, ಕೊಡುಗೆಪತ್ರ ಮುಂತಾದುವುಗಳನ್ನು ಆಯಾ ವ್ಯವಹಾರಗಳಿಗೆ ತಕ್ಕಂತೆ ಒಂದು ವಿಶಿಷ್ಟ ಪದ್ಧತಿಯಲ್ಲಿ ಬರೆಯಲಾಗುತ್ತಿತ್ತು. ಅದೇ ಪ್ರಕಾರ ವ್ಯವಹಾರ ಯೋಗ್ಯವಾಗುವ ಹಾಗೆ 'ಬಖರ್ ಪತ್ರ'ವನ್ನೂ ಬರೆಯುತ್ತಿದ್ದರು. ನ್ಯಾಯದಾನದ ಕಾರ್ಯದಲ್ಲಿ ಸಾಕ್ಷೀಪತ್ರ, ವಿಚಾರಣೆ ಪತ್ರ ಇಲ್ಲವೆ ಮಾಹಿತಿ ಪತ್ರವೆಂದು ಈ 'ಬಖರ್‌ಪತ್ರ'ವನ್ನು ಸಿದ್ಧಪಡಿಸುತ್ತಿದ್ದರು. ಅದರ ಮೇಲೆ ಶಿಕ್ಕೆಯನ್ನೂ ಲೇಖನಾಲಂಕಾರವನ್ನೂ ಒತ್ತಿದ ಮೇಲೆ ಅಲ್ಲಿದ್ದವರು ಸಾಕ್ಷ್ಯ ಹಾಕುತ್ತಿದ್ದರು. ಆಗ ಇದಕ್ಕೆ ವ್ಯವಹಾರಯೋಗ್ಯವೆಂದು ಅಧಿಕೃತ ಮಾಹಿತಿಯನ್ನು ನೀಡಲಾಗುತ್ತಿದ್ದಿತು. ಆದ್ದರಿಂದ ಇಲ್ಲಿ 'ಬಖರ್'ಅನ್ನು ಅಧಿಕೃತ ದಾಖಲೆಗಳ ಸಾಲಿಗೆ ಸೇರಿಸಲಾಗುವುದರಿಂದ 'ಬಕ್' ಎಂಬುದರ ಅರ್ಥವ್ಯಾಪ್ತಿಗೆ ಇದನ್ನು ಒಳಗುಮಾಡಲಾಗದು. ಸ್ವತಃ ರಾಜವಾಡೆಯವರೇ ಮುಸಲ್ಮಾನರ ತವಾರಿಖೆಗಳನ್ನು ನೋಡಿ ಮರಾಠರೂ 'ಬಖರ್' ಬರೆಯುವ ಪದ್ಧತಿಯನ್ನು

೧೭ ಮರಾಠೀ ಭಾಷೆಯಲ್ಲಿರುವ ಈ ಪ್ರಸ್ತಾವನೆಯ ಎರಡು ಪುಟಗಳು ಮತ್ತು ಪಿ. ಎನ್. ಜೋಷಿ ಅವರ 'ರಾಜವಾಡೇ ವಿಚಾರದರ್ಶನ' ಎಂಬ ಕೃತಿಯಲ್ಲಿರುವ ಬಖೈರ್‌ಗೆ ಸಂಬಂಧಿಸಿದ ಒಂದು ಪುಟ– ಇವುಗಳನ್ನು ನನ್ನ ಕೋರಿಕೆಯ ಮೇರೆಗೆ ಕನ್ನಡಕ್ಕೆ ಅನುವಾದಿಸಿ ಕಳುಹಿಸಿಕೊಟ್ಟು (ದಿನಾಂಕ ೨೧ ಜನವರಿ ೧೯೮೪) ಸಹಕರಿಸಿದ ಪುಣೆ ವಿಶ್ವವಿದ್ಯಾನಿಲಯದಲ್ಲಿ ಇತಿಹಾಸ ವಿಭಾಗದ ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರಾಗಿರುವ ಡಾ|| ಕೆ. ಎನ್. ಚಿಟ್ನೀಸ್ ಅವರಿಗೆ ನಾನು ಅತ್ಯಂತ ಕೃತಜ್ಞನಾಗಿದ್ದೇನೆ.

ಆರಂಭಿಸಿದರೆಂದು ಹೇಳಿದ್ದಾರೆ.

"''ಬಖೈರ್' ಎಂದರೆ ಕುಶಲ ಸಮಾಚಾರವೆಂತಲೂ ಬರೆದಿಟ್ಟ ಬರಹವೆಂತಲೂ ಕರೆಯಲಾಗಿದೆ. ಒಟ್ಟಾರೆ, ಈ ಶಬ್ದವನ್ನು ವ್ಯವಹಾರಪತ್ರ, ಐತಿಹಾಸಿಕ ಸಾಹಿತ್ಯ ಹಾಗೂ ಕ್ಷೇಮ ಸಮಾಚಾರ ಬರಹಗಳೆಂದು ಮೂರು ವಿಧದಲ್ಲಿ ಗುರುತಿಸಬಹುದಾಗಿದೆ. ಐತಿಹಾಸಿಕ ಸಾಹಿತ್ಯದ ಪ್ರಕಾರದ 'ಬಖರ್'ನ ಲಕ್ಷಣಗಳು ಈ ಮುಂದಿನಂತಿವೆ: ೧. ಇದರಲ್ಲಿಯ ಪ್ರತಿಯೊಂದು ವಿಷಯವೂ ವ್ಯಾವಹಾರಿಕ ಸಂಗತಿಗಳನ್ನಷ್ಟೆ ಕುರಿತದ್ದಾಗಿರುತ್ತದೆ; ಸಾಹಿತ್ಯ, ತತ್ತ್ವಜ್ಞಾನ ಮೊದಲಾದ ಸಂಗತಿಗಳ ಬಗೆಗೆ ಅಲ್ಲ; ೨. ಇದನ್ನು ಮೋಡಿ ಲಿಪಿಯಲ್ಲಿ ಬರೆಯಲಾಗಿರುತ್ತದೆ; ೩. ಇದರ ಭಾಷೆ ಮರಾಠೀ; ೪. ಇದು ದೇವಗಿರಿ ಯಾದವರ (ಸೇವುಣರ) ಕಾಲದ ನಂತರದ್ದೂ ಆಂಗ್ಲರ ಕಾಲಕ್ಕಿಂತ ಮುಂಚಿನದ್ದೂ ಆಗಿರುತ್ತದೆ; ೫. ಇದು ಗದ್ಯರೂಪದಲ್ಲಿರುತ್ತದೆ.''

೩

ಈ ಮೇಲಿನ ಸಂಗತಿಗಳಿಗೆ ಪೂರಕವಾಗಿ ಇಲ್ಲಿ ಇನ್ನಷ್ಟು ವಿವೇಚಿಸುವುದಾದರೆ, 'ಬಖೈರ್ ಸಾಹಿತ್ಯ'ವು ಮೂಲತಃ ಮರಾಠೀಯಲ್ಲಿಯೇ ಸೃಷ್ಟಿಯಾಗಿರುವುದರಿಂದ, 'ಬಖೈರು' ಪದದ ವ್ಯುತ್ಪತ್ತಿಯನ್ನಾಗಲೀ ಆ ಪ್ರಕಾರದ ಸಾಹಿತ್ಯವನ್ನಾಗಲೀ ಅರಿಯಲು ಮರಾಠೀ ಸಾಹಿತ್ಯವನ್ನೆ ಅವಲಂಬಿಸಬೇಕಾಗುತ್ತದೆ. ಸ್ವತಃ ಮರಾಠೀ ಸಾಹಿತ್ಯದ ಸಮೃದ್ಧ ಪರಂಪರೆಯಲ್ಲಿ ಯಾದವ ಕಾಲದ ಗದ್ಯ, ಮಹಾನುಭಾವ ಗದ್ಯ, ಬಖರ್‌ಗದ್ಯ, ಪೇಷ್ವೆಕಾಲದ ಗದ್ಯವೆಂದು ಗುರುತಿಸಲಾಗಿದ್ದು, ಬಖರ್ ಗದ್ಯವನ್ನು ಆರ್. ವಿ. ಹೆರವಾಡಕರ್, ಗ್ರಾಮೋಪಾಧ್ಯೇ ಮೊದಲಾದವರು ವಿಶೇಷವಾಗಿ ಅಭ್ಯಾಸ ಮಾಡಿದ್ದಾರೆ. ಬಖರ್ ಗದ್ಯದ ಅಧ್ಯಯನಕ್ಕೆ ನೀಡಿರುವ ಪ್ರಾಮುಖ್ಯತೆಯನ್ನೆ ಸಮಕಾಲೀನವಾದ ಕಾವ್ಯ ಮತ್ತು ಗದ್ಯದ ಸೊಗಡಿನಿಂದ ಕೂಡಿದ 'ಪತ್ರಾತ್ಮಕ ಗದ್ಯ'ಕ್ಕೂ ನೀಡದೆ ಉಪೇಕ್ಷಿಸಲಾಗಿದೆಯೆಂಬ ಮಾತೂ ಇದೆ.[೧೮] ವಿಶಿಷ್ಟ ವಿಧದ ಬಖರ್ ಗದ್ಯವು ಸಾಹಿತ್ಯ ಮಹತ್ವ ಹೊಂದಿರುವಂತೆಯೇ ಐತಿಹಾಸಿಕ ಮಹತ್ವವನ್ನೂ ಪಡೆದಿದೆ. ಬಖರ್ ಗದ್ಯವನ್ನು ರಚಿಸುವವರು ಓದುಗರನ್ನು ಆಕರ್ಷಿಸಲು ಐತಿಹಾಸಿಕ ವಸ್ತುವಿನ ನಿರೂಪಣೆಯಲ್ಲಿ ಸಾಕಷ್ಟು ಸಾಹಿತ್ಯಕ ಅಂಶಗಳನ್ನು ಅಂದರೆ ಪದ್ಯ, ಉಪಕತೆ, ಮುಕ್ತಕ, ಸೂಕ್ತಿ, ಅನ್ಯದೇಶೀಯ ಶಬ್ದ, ಅರ್ಧ ಹಿಂದಿ ಹಾಗೂ ಅರ್ಧ ಮರಾಠೀ ವಾಕ್ಯ ಇತ್ಯಾದಿಗಳನ್ನು ಬಳಸಿಕೊಳ್ಳುತ್ತಿದ್ದರು.[೧೯]

೧೮೭೮ರಲ್ಲಿ ಮರಾಠೀ ವಿದ್ವಾಂಸರುಗಳಾದ ಚಿಪಳೂಣಕರ್ ಮತ್ತು ಕಾಶೀನಾಥ ನಾರಾಯಣ ಸಾನೆಯವರು ಪ್ರಾರಂಭಿಸಿದ 'ಕಾವ್ಯೇತಿಹಾಸ ಸಂಗ್ರಹ' ಮಾಸಪತ್ರಿಕೆಯಲ್ಲಿ 'ಬಖರ್ ಸಾಹಿತ್ಯ'ವು ಪ್ರಕಟವಾಗಿ ಹೊರಬರತೊಡಗಿತು.[೨೦] ರಾಜವಾಡೆ, ಖರೆ, ಸಾನೆ ಹಾಗೂ ಪಾರಸನೀಸ್‌ರಂತಹ ಅನೇಕ ಇತಿಹಾಸಾಚಾರ್ಯರು, ಪಂಡಿತರು ಆರಂಭಿಸಿದ

---

೧೮ Sudhakar Pawar: 'Shivakalin Patratmak Gadya' (Marathi). *Journal of Shivaji University* (Humanities), Kolhapur, Vol. 7, No. 13, 1974, p. 1

೧೯ Chandulal Dubey: " 'Bakhar' Sahity me Hindi ka Prayog " (Hindi). Ibid., Vols -3, 4, 5&6, 1969-70, p. 115

೨೦ Ibid., Vol. 7, No. 13, 1974, p. 1

ಇತಿಹಾಸ ಸಂಶೋಧನೆ, ಅಧ್ಯಯನಗಳಿಂದಾಗಿ ಗ್ರಂಥಗಳು, ಮುಖ್ಯವಾಗಿ 'ಬಖರ್ ಸಾಹಿತ್ಯ'ವು ಬೆಳಕಿಗೆ ಬರತೊಡಗಿತು. ಅವುಗಳಲ್ಲಿ ಸುಮಾರು ೪೦-೫೦ ಗ್ರಂಥಗಳು ಚರಿತ್ರ ಮತ್ತು ಸಾಹಿತ್ಯದ ದೃಷ್ಟಿಯಿಂದ ಮಹತ್ವಪೂರ್ಣವಾದುವುಗಳೆಂದು ವ್ಯಕ್ತಪಡುತ್ತದೆ.[೨೧] ಅಲ್ಲದೆ, ಪಾರ್ಸಿ ಮತ್ತಿತರ ಯವನ ಭಾಷೆಗಳಿಂದ ತಪ್ಪಿಸಿಕೊಳ್ಳಲು ಹಾಗೂ ಆಡಳಿತ ಮತ್ತು ಸಾಹಿತ್ಯದಲ್ಲಿ ಸಂಸ್ಕೃತ ಭಾಷೆಯನ್ನು ಪರಿಣಾಮಕಾರಿಯಾಗಿ ಜಾರಿಗೆ ತರುವುದರೊಡನೆ ಭಾರತೀಯ ಸಂಸ್ಕೃತಿಯ ಬಗೆಗೆ ಮರಾಠರಲ್ಲಿ ಜಾಗೃತಿ ಮೂಡಿಸಲು ಶಿವಾಜಿ ಮೊದಲಾದವರು ಕೈಗೊಂಡ ಪ್ರಯತ್ನಗಳಲ್ಲಿ ಬಖರ್ ಸಾಹಿತ್ಯದ ಪ್ರಭಾವವು ಅಗಾಧವಾದುದು. ಸಂಸ್ಕೃತ ಸಾಹಿತ್ಯ ಕೃತಿಗಳೊಡನೆ ಬಖರ್ ಮತ್ತು ಪ್ರಶಸ್ತಿ ಸಾಹಿತ್ಯವೂ ಸೃಷ್ಟಿಯಾಗತೊಡಗಿತು.[೨೨]

ಶಂಕರನಾರಾಯಣ ಜೋಷಿ ಅವರು ತಮ್ಮ ಸಂಪಾದನಾ ಕೃತಿಯ ಪ್ರಸ್ತಾವನೆಯಲ್ಲಿ ನೀಡಿರುವ ಬಖೈರ್‌ಗೆ ಸಂಬಂಧಿಸಿದ ಸಂಗತಿಗಳನ್ನು ಮೇಲೆಯೇ ಉಲ್ಲೇಖಿಸಿದೆ. ಇತಿಹಾಸಾಚಾರ್ಯ ರಾಜವಾಡೆಯವರ ಪ್ರಕಾರ 'ಬಖರ್'ನ ವ್ಯುತ್ಪತ್ತಿಯು 'ಬಕ್(ಖ್)' ಧಾತುವಿನಿಂದ ಉಂಟಾಗಿದ್ದು ಹಾಗೂ ಇದು ಸಂಸ್ಕೃತದ 'ಭಾಷ್' ಧಾತುವಿನ ಭ್ರಷ್ಟರೂಪ.[೨೩] ಅಲ್ಲದೆ, 'ಬಖರ್'ನ ವ್ಯುತ್ಪತ್ತಿಯು ಅರಬ್ಬೀ ಭಾಷೆಯ 'ಫಕ್ರ್' ಶಬ್ದದಿಂದ ಉಂಟಾಗಿರಬಹುದೆಂತಲೂ ಹೇಳಲಾಗುತ್ತದೆ. ಬಖರ್ ಸಾಹಿತ್ಯದಲ್ಲಿ ಯಾವುದೇ ವ್ಯಕ್ತಿಯ ಗುಣಗಾನವನ್ನು ಮಾಡಿರುವುದರಿಂದಲೂ ಮುಸಲ್ಮಾನ ಅರಸರ 'ತಾವಾರಿಕ್' (ಇತಿಹಾಸ) ಕೃತಿಗಳು 'ಬಖರ್' ಗ್ರಂಥಗಳ ಮೇಲೆ ಪ್ರಭಾವ ಬೀರಿರುವುದೆಂದು ಊಹಿಸಿರುವುದ ರಿಂದಲೂ[೨೪] ಈ ರೀತಿಯ ಹೇಳಿಕೆಗಳಿಗೆ ಆಸ್ಪದವಾಗಿದೆಯೆನ್ನಬಹುದು.

ಬಖೈರ್‌ನ ಖಚಿತತೆ, ವ್ಯಾಪ್ತಿ, ಚರಿತ್ರೆ ಬರವಣಿಗೆಯಲ್ಲಿ ಅದರ ಉಪಯೋಗ, ಇತ್ಯಾದಿ ಕುರಿತು ಇಲ್ಲಿ ವಿವೇಚಿಸಬಹುದು. ಮೊದಲನೆಯದಾಗಿ, ದೇಶಭಾಷೆಯಲ್ಲಿ ಗದ್ಯದಲ್ಲಿ ಬರೆಯಲ್ಪಟ್ಟ ಇತಿಹಾಸ, ಕಥಾನಕ, ಚರಿತ್ರೆ, ಬಾತ್ಮಿ (ವರ್ತಮಾನ)ಯನ್ನೇ 'ಬಖರ್' ಎನ್ನಲಾಗುತ್ತದೆಂದು 'ಮಹಾರಾಷ್ಟ್ರ ಶಬ್ದಕೋಶ'ವು ತಿಳಿಸುತ್ತದೆ. ಬಖೈರು ಸಾಹಿತ್ಯವು ಮರಾಠಾ ಸಾಮ್ರಾಜ್ಯದ ಹರಿಕಾರ (ಸೇವಕ) ಅಥವಾ ಪ್ರತಿನಿಧಿಗಳಿಂದ ಬರೆಯಲ್ಪಟ್ಟುದು; ಮುಕ್ಕಾಲು ಪಾಲು ಫಾರ್ಸಿ ಭಾಷಾಭೂಯಿಷ್ಠವಾದ ಅಶುದ್ಧ ಬರವಣಿಗೆಯನ್ನು ಒಳಗೊಂಡುದು. ಈ ಸಾಹಿತ್ಯವೆಲ್ಲವೂ ಸುಮಾರು ೧೭ನೆಯ ಶತಮಾನದ ಈಚಿನದು ಹಾಗೂ ಸಮಕಾಲೀನವಾದುದು. ಮರಾಠಾ ಇತಿಹಾಸಕಾರರು ಈ ಸಾಹಿತ್ಯದ ಸಮಗ್ರ ಅಧ್ಯಯನವನ್ನು ಮಾಡಿದ್ದು, ಅದು ಸಮಕಾಲೀನವಾಗಿರುವಂತೆಯೇ ಆನಂತರದ ಕಾಲದ್ದೂ ಆಗಿದೆಯೆಂಬುದನ್ನು ಎತ್ತಿ ತೋರಿಸಿದ್ದಾರೆ.

ವಾಸ್ತವವಾಗಿ, ಕೈಫಿಯತ್ತು, ನಾಮೆ, ವಂಶಾವಳಿ, ಶಕಾವಳಿ (annals), ದಫ್ತರ್ (dairies) ಮೊದಲಾದವು ಸಹಾ ತಕ್ಕಮಟ್ಟಿಗೆ ಸಮಕಾಲೀನ ದಾಖಲೆಗಳೇ. ಸಂದರ್ಭಾನುಸಾರ, ಹಿಂದಿನ ದಾಖಲೆಗಳನ್ನೂ ಹೇಳಿಕೆಗಳನ್ನೂ ಬಳಸಿಕೊಳ್ಳುವುದರೊಡನೆ ಹಿಂದಿನ ವೃತ್ತಾಂತವನ್ನು

---

೨೧ V. V. Dravid: 'Chitragupth Bakhar me Upalabd Hindi Amsh' (Hindi), Ibid., p. 9

೨೨ Govind Sakaram Sardesai: New History of the Marathas, Vol, 1, Bombay, 1946, p. 33

೨೩ *JSU.*, Vol. 7, N0. 3, 1974, p. 9

೨೪ Ibid.

ಸವಿಸ್ತಾರವಾಗಿ ಹೇಳಬಲ್ಲವರನ್ನು ಸಂದರ್ಶಿಸಿ ಸಂಗ್ರಹಿಸಿದ ಸಂಗತಿಗಳನ್ನೂ ಸೇರಿಸಿ ಅವುಗಳನ್ನು ವಿಸ್ತರಿಸಿರುವುದೂ ಉಂಟು.

ಇಂತಹ ದಾಖಲೆಗಳು ಇತಿಹಾಸ ರಚನೆಯಲ್ಲಿ ವಾಸ್ತವಾಂಶಯುಕ್ತ ಮಾಹಿತಿ ಒದಗಿಸಬಲ್ಲುವೇ? ಈ ಕುರಿತು ತಜ್ಞರಿಂದ ಹಲವು ಬಗೆಯ ಮಿಶ್ರ ಪ್ರತಿಕ್ರಿಯೆಗಳು ವ್ಯಕ್ತಪಟ್ಟವೆ. ''ಕೈಫೀಯತ್ತು, ಬಖೈರು ಮತ್ತು ಸಾಮಾ ಎಂಬ ಪದಗಳು ಕನ್ನಡದಲ್ಲಿ ಸಮಾನಾರ್ಥವುಳ್ಳವು; ಅವುಗಳಿಗೆ 'ವಿವರಣೆ' ಎಂಬ ಅರ್ಥವಿದೆ''[೨೫] ಎಂಬುದು ಒಂದು ಸಾಮಾನ್ಯ ಹೇಳಿಕೆ. ಇದನ್ನು ಮೇಲೆಯೇ ಗಮನಿಸಿದೆ. ಡಾ|| ಪಿ. ಬಿ. ದೇಸಾಯಿ ಅವರು ಅಭಿಪ್ರಾಯಪಟ್ಟಿರುವಂತೆ, ಕೈಫಿಯತ್ತುಗಳು ಇತ್ತೀಚಿನವು; ಅವುಗಳು ಆನುಷಂಗಿಕ ಆಧಾರಗಳನ್ನು ಅವಲಂಬಿಸಿ ರಚಿತವಾದುವು; ಆದರೂ ಇತಿಹಾಸ ಅಧ್ಯಯನದಲ್ಲಿ ತಮ್ಮದೇ ಆದ ಸ್ಥಾನವನ್ನು ಹೊಂದಿವೆ.[೨೬] ಅಂತೆಯೇ, ಈ ಎಲ್ಲ ಪದಗಳೂ ಸಾಮಾನ್ಯ ಒಂದೇ ಅರ್ಥದಲ್ಲಿ ಅಂದರೆ ಬರೆದಿಟ್ಟ ದಾಖಲೆಗಳು ಎಂಬಂತೆ ಪ್ರಯೋಗದಲ್ಲಿದ್ದರೂ ಬಖೈರು ಮತ್ತು ನಾಮಗಳು ಹೆಚ್ಚು ಚಾರಿತ್ರಿಕ ಐತಿಹ್ಯಗಳಾಗಿಯೂ ಕೈಫಿಯತ್ತುಗಳು ಚಾರಿತ್ರಿಕಾಂಶ, ಸ್ಥಳಪುರಾಣ, ಜನಜನಿತ ಕಲ್ಪಿತ ವಿಷಯಗಳನ್ನೊಳಗೊಂಡ ಬರಹಗಳಾಗಿಯೂ ಇವೆಯೆಂಬ ಹೇಳಿಕೆಯೂ ಉಂಟು.[೨೭] ಕೇವಲ ಕೈಫಿಯತ್ತುಗಳಿಗೆ ಸಂಬಂಧಿಸಿದಂತೆ ವ್ಯಕ್ತಪಡಿಸಲಾದ ಅಭಿಪ್ರಾಯವೆಂದರೆ, ''ಒಂದು ಪ್ರದೇಶದ ಭೂವಿವರ, ರಾಜಕೀಯ, ಸಾಂಸ್ಕೃತಿಕ ವಿವರಗಳನ್ನು ಅದೇ ಗ್ರಾಮದ ಪಟೇಲ ಅಥವಾ ಗ್ರಾಮಲೆಕ್ಕಿಗರಿಂದ ಬರೆಯಿಸಿ ಸಂಗ್ರಹಿಸಿಟ್ಟ ಪುರಾತನ ಆಧಾರಗಳೇ ಕೈಫಿಯತ್ತುಗಳು.''[೨೮]

ಬಖೈರು ಸಾಹಿತ್ಯವು ಸಮಕಾಲೀನವಾಗಿದ್ದರೂ ಅದರಲ್ಲಿಯ ಹಲವಾರು ವಿರೋಧಾಭಾಸಗಳಿಂದಾಗಿ ಅದು ಅನುಷಂಗಿಕ ಚರಿತ್ರ ಲೇಖನ (Sεcondary Historiography) ವೆಂದೇ[೨೯] ಪರಿಗಣಿಸಲ್ಪಡುತ್ತದೆ. ಅಲ್ಲದೆ, ಬಖೈರುನಲ್ಲಿಯ ಸಂಗತಿಯು ಯಾವುದೇ ವಿಷಯ, ಪ್ರದೇಶ ಹಾಗೂ ಕಾಲಮಿತಿಗಳಿಂದ ಮುಕ್ತವಾದುದೆಂತಲೂ ಹೇಳಲಾಗುವುದರಿಂದ, ಕೈಫಿಯತ್ತಿನಂತೆ ಬಖೈರು ಸಹಾ ಕೆಲವೊಮ್ಮೆ ಉತ್ಪ್ರೇಕ್ಷಿತ ಹಾಗೂ ನೈಜವಲ್ಲದ ಸಂಗತಿಗಳನ್ನು ಪ್ರಸ್ತಾಪಿಸುವುದುಂಟೆಂಬ ವ್ಯಾಪಕ ಅಭಿಪ್ರಾಯವೂ ಇದೆ.

೪

ಬಖೈರ್ ಸಾಹಿತ್ಯವು ಮುಖ್ಯವಾಗಿ ಮರಾಠಿಯಲ್ಲಿ ಇರುವಂತಹದೆಂದೂ ಮರಾಠಾ ಇತಿಹಾಸದ ವಿವಿಧ ಚಾರಿತ್ರಕ ಆಧಾರಗಳಲ್ಲಿ ಬಖೈರ್ ಸಾಹಿತ್ಯಪ್ರಕಾರವೂ ಒಂದೆಂದೂ ಮೇಲೆಯೇ ತಿಳಿಯಲಾಗಿದೆ. ಕ್ರಿ.ಶ ೧೬೫೦ರಿಂದ ೧೮೫೦ರ ವರಗೆ ಉತ್ಪತ್ತಿಯಾದ ಇಂತಹ ಬಖೈರುಗಳ ಸಂಖ್ಯೆ ಒಂದು ನೂರಕ್ಕೂ ಅಧಿಕ. ಕೆಲವು ಬಖೈರುಗಳನ್ನು ಉದಾಹರಣಾರ್ಥ ಇಲ್ಲಿ ಪ್ರಸ್ತಾಪಿಸಬಹುದು: ಸಭಾಸದ್ ಬಖರ್ (ಶಿವಛತ್ರಪತೀಚೆ ಚರಿತ್ರ/ಛತ್ರಪತಿ ಶ್ರೀ

೨೫ *Srikanthika*, p. 187

೨೬ *Jainism in South India and Some Jaina Epigraphs*, Sholapur, 1957, p. 11

೨೭ ದಕ್ಷಿಣ ಕನ್ನಡ ಜಿಲ್ಲೆಯ ಕೈಫಿಯತ್ತುಗಳು, ಪು. ೧

೨೮ ಕೆ. ಸುಬ್ರಮಣ್ಯಭಟ್, ಎಂ. ಜಿ. ಹೆಗಡೆ: 'ಕೈಫಿಯತ್ತುಗಳು', ರತ್ನಮಂಜೂಷ ಅಖಿಲ ಭಾರತ ೫೧ನೆಯ ಕನ್ನಡ ಸಾಹಿತ್ಯ ಸಮ್ಮೇಳನ ವಿಶೇಷ ಸಂಪುಟ, ಧರ್ಮಸ್ಥಳ, ೧೯೭೯, ಪು. ೧೫೫-೧೫೬

೨೯ A. K. Warder: *An Introduction to Indian Historiography*, Bombay, 1972, p. 148

ಶಿವಾಜಿರಾಜೇಯಾಂಚೀ ಬಖರ್), ಚಿತ್ರಗುಪ್ತ ಬಖರ್ ಶಿವಾಜಿ ಮಹಾರಾಜಾಂಚೀ ಬಖರ್, ಚಿಟ್ನೀಸ್ ಬಖರ್ ಶ್ರೀ ಛತ್ರಪತೀಂಚೆ ಸಪ್ತ ಪ್ರಕರಣಾತ್ಮಕ್ ಚರಿತ್ರ್, ಶಿವದಿಗ್ವಿಜಯ ಬಖರ್ (ಶ್ರೀ ಶಿವಾಜಿ ಮಹಾರಾಜಾಂಚ್ಯ ಚರಿತ್ರಾಚೀ ಬಖರ್), ಶ್ರೀ ಶಿವಾಜಿ ಪ್ರತಾಪ ಬಖರ್, ಶಿವಛತ್ರಪತೀಚಿ ಶಹನಾವ್ ಕಲಮೀ ಬಖರ್, ಶೇಡಗಾಂವ್‌ಕರ್ ಬಖರ್ ಶ್ರೀಮಂತ್ ಮಹಾರಾಜ್ ಭೋಸ್ಲೆಯಾಂಚೀ ಬಖರ್, ಭೋಂಸ್ಲೆ ಬಖರ್ (ಕಾಶೀರಾಜ್), ಭೋಂಸ್ಲೆ ಬಖರ್ (ಗುಪ್ತೆ), ರಾಮದಾಸಿ, ಬಖರ್, ಹನುಮಂತಸ್ವಾಮೀ ಬಖರ್, ಮಹಿಕಾವತೀ ಬಖರ್, ಸರದೇಸಾಯಿ ಬಖರ್, ಮೋರೆ ಬಖರ್, ಭಾವೂಸಾಹೇಬಾಂಚೀ ಬಖರ್ (ಶ್ರೀಮಂತ ಭಾವೂಸಾಹೇಬ್‌ಯಾಂಚೆ ಕೈಫಿಯತ್ ಎಂಬುದೂ ಇದೆ). ಪೇಷ್ವಯಾಂಚೀ ಬಖರ್, ಕಾಯಸ್ಥ ಪ್ರಭುಂಚೀ ಬಖರ್, ನಾರಾಯಣರಾವ್ ಫೇಷ್ವ ಬಖರ್, ಮರಾಠಾ ಸಾಮ್ರಾಜ್ಯಾಚೀ ಛೋಟೀ ಬಖರ್, ಮಿಂಚುರ್‌ಕರ್ ಬಖರ್, ಶಕ್ತಿ ಬಖರ್, ಸಾಹೂ ಮಹಾರಾಜ್ ಚೀ ಬಖರ್, ಪಂತ್ ಅಮಾತ್ಯಾಚೀ ಬಖರ್, ಪಂತ್ ಪ್ರತಿನಿಧೀಚೀ ಬಖರ್, ಸಿಂದ್‌ಖೇಡ್‌ಕರ್ ಜಾಧವರಾವ್‌ಯಾಂಚೀ ಬಖರ್, ರಾಯ್ರಿ ಬಖರ್, ಪಾಣೀಪಟ್ ಬಖರ್ (ಪಾಣಿಪಟಾಚೀ ಬಖರ್), ಖರ್ದಾ ಬಖರ್, ಮುಧೋಳ್ ಬಖರ್, ಇತ್ಯಾದಿ. ಡಾ|| ಆರ್. ವಿ. ಹೆರವಾಡಕರ್ ಅವರ 'ಮರಾಠೀ ಬಖರ್', ಜಿ. ಬಿ. ಗ್ರಾಮೋಪಾಧ್ಯೇ ಅವರ 'ಮರಾಠೀ ಬಖರ್ ಗದ್ಯ' ಮೊದಲಾದುವು ಈ ದಿಸೆಯಲ್ಲಿ ಗಮನಿಸಬಹುದಾದ ಸಂಗ್ರಹ ಕೃತಿಗಳು.

ಇಲ್ಲಿಯ ಕೆಲವು ಬಖೈರುಗಳು ಅಮೂಲ್ಯವೂ ಉಪಯುಕ್ತವೂ ಸ್ವಾರಸ್ಯಕರವಾದುವೂ ಆಗಿವೆ. ಪ್ರತಿಯೊಂದು ಬಖೈರ್‌ನ ಹುಟ್ಟಿಗೂ ಇರುವ ಕಾರಣಗಳು ಕೆಲವೊಮ್ಮೆ ಗಮನಾರ್ಹವಾದುವು. ಚಾರಿತ್ರಿಕ ಮಹತ್ವದ ಈ ದಾಖಲೆಗಳನ್ನು ಮರಾಠ ಸರದಾರರು, ರಾಜಪ್ರತಿನಿಧಿಗಳು ಇನ್ನಿತರರು ಬರೆದಿಟ್ಟಿರುವರು. ಉದಾಹರಣೆಗೆ, ಶಿವಾಜಿಯ ಸಮಕಾಲೀನನೂ ಅವನ ಸಾಧನೆಗಳನ್ನು ಕಣ್ಣಾರೆ ಕಂಡಿದ್ದವನೂ ಆದ ಕೃಷ್ಣಾಜಿ ಅನಂತ ಸಭಾಸದನು, ಶಿವಾಜಿಯ ಮಗ ಛತ್ರಪತಿ ರಾಜಾರಾಮನ ಸೂಚನೆಯಂತೆ ೧೬೯೦ರಲ್ಲಿ ಜಿಂಜಿಯಲ್ಲಿ ತನ್ನ ಬಖೈರನ್ನು (ಸಭಾಸದ್ ಬಖರ್) ಬರೆದನು. ಶಿವಾಜಿಯ ಜೀವನ ವೃತ್ತಾಂತವನ್ನು ದಾಖಲಿಸಿರುವವರಲ್ಲಿ ಇವನು ಮೊದಲಿಗನೆಂದು ಗುರುತಿಸಲಾಗಿದೆ. ಈತನು ತನ್ನ ಬಖೈರನ್ನು ಬರೆದುದು ಶಿವಾಜಿಯ ಮರಣದ ೧೭ ವರ್ಷಗಳ ತರುವಾಯ. ಶಿವಾಜಿಯನ್ನು ಕುರಿತು ಬರೆಯಲಾದ ೯ ಬಖೈರುಗಳಲ್ಲಿ ಸಭಾಸದ್ ಬಖರ್ ಪ್ರಮುಖವಾದುದು. ಸಭಾಸದನು ತನ್ನ ಬಖೈರ್‌ನಲ್ಲಿ ಶಿವಾಜಿಯ ಕಾಲದ ರಾಜಕೀಯ ಆಗುಹೋಗುಗಳನ್ನೆ ಪ್ರಧಾನವಾಗಿ ಚಿತ್ರಿಸಿದ್ದರೂ ಶಿವಾಜಿಯು ಜಾರಿಗೆ ತಂದ ಪೌರ ಮತ್ತು ಸೈನಿಕ ನಿಯಮಾವಳಿಗಳ ಬಗೆಗೂ ಕೆಲವಾರು ಪುಟಗಳಷ್ಟು ಬರೆದಿರುವನು.

ಶಿವಾಜಿಯ ಜೀವನ, ಹೋರಾಟ, ಆಡಳಿತ ಇತ್ಯಾದಿ ಕುರಿತು ಹೇಳುವ ಇತರ ಬಖೈರುಗಳಲ್ಲಿ ಶಿವದಿಗ್ವಿಜಯ ಬಖರ್, ಶ್ರೀ ಶಿವಾಜಿ ಪ್ರತಾಪ್ ಬಖರ್ ಮೊದಲಾದುವು ಸಭಾಸದನ ಬಖೈರನ್ನೇ ಬಹುಪಾಲು ಅನುಸರಿಸಿದಂತಹವು. ಶಿವದಿಗ್ವಿಜಯ ಬಖರನ್ನು ಶಿವಾಜಿಯ ಚಿಟ್ನೀಸ್ ಬಾಳಾಜಿ ಆವ್‌ಜೀಯ ಮಗ ಖಂಡೋ ಬಲ್ಲಾಳನು ೧೭೧೮ರಲ್ಲಿ ಬರೆದನೆಂದು ತಪ್ಪಾಗಿ ಭಾವಿಸಲಾಗಿದ್ದು, ವಾಸ್ತವವಾಗಿ ೧೯ನೆಯ ಶತಮಾನದಲ್ಲಿ ಕಾಯಸ್ಥ

ಪ್ರಭುಪೂರ್ವನಿಂದ ಅದು ಬರೆಯಲ್ಪಟ್ಟಿತೆಂತಲೂ ಹೇಳಲಾಗುತ್ತದೆ. ಇದೇ ಸಾಲಿನಲ್ಲಿ ಬಂದ ಅನಾಮಿಕನ ಇನ್ನೊಂದು ಬಖೈರು ಸಹಾ ಸಭಾಸದನ ಕೃತಿಯನ್ನೇ ಪೂರ್ಣವಾಗಿ ಅವಲಂಬಿಸಿದೆ. ಶಹನಾವ್ ಕಲಮೀ ಬಖರ್‌ನ ಹಸ್ತಪ್ರತಿಯು ಶಿವಾಜಿಯ ಸೇವೆಯಲ್ಲಿದ್ದು ಆಡಳಿತದಲ್ಲಿ ಪ್ರಮುಖ ಪಾತ್ರ ವಹಿಸಿದ ಅಣ್ಣಾಜಿ ದತ್ತೋ ಎಂಬ ಬ್ರಾಹ್ಮಣ ಅಧಿಕಾರಿಯ ಕಚೇರಿಯಲ್ಲಿ ಪ್ರತಿಮಾಡುವ ವೃದ್ಧನೊಬ್ಬನಿಗೆ ದೂರೆತುದೆಂಬುದು ಸ್ವಾರಸ್ಯಕರವಾದುದು.

'ಚಿತ್ರಗುಪ್ತ'ನೆಂಬ ಪೌರಾಣಿಕ ಹೆಸರನ್ನು ಧರಿಸಿ ಪುರಾಣದ ಶೈಲಿಯಲ್ಲಿಯೇ ತನ್ನ ಬಖೈರನ್ನು (ಚಿತ್ರಗುಪ್ತ ಬಖರ್) ರಚಿಸಿದ ರಘುನಾಥ ಯಾದವನು ಶಿವಾಜಿಯ ವಿಶ್ವಾಸಕ್ಕೆ ಪಾತ್ರನಾಗಿದ್ದ ಚಿಟ್ನೀಸ್ ಬಾಳಾಜಿ ಆವ್‌ಜೀ ('ಚಿತ್ರೆ')ಯೊಡನೆ ನಿಕಟಸಂಬಂಧ ಹೊಂದಿದ್ದು, ಸಭಾಸದನ ಬಖೈರನ್ನೇ ಅಲ್ಲಲ್ಲಿ ಸ್ವಂತ ರಚನೆಯ ಕತೆಗಳನ್ನೂ ಪದ್ಯಗಳನ್ನೂ ಸೇರಿಸುವುದರೊಡನೆ ವಿಸ್ತರಿಸಿ ಬರೆದನು. ಮರಾಠ ಅಧಿಕಾರಿಗಳ ಕರ್ತವ್ಯಗಳನ್ನು ಕುರಿತಂತೆ ಈತನು ಅಧಿಕ ಮಾಹಿತಿ ಒದಗಿಸಿರುವನು. ಈತನೇ ಹೇಳಿಕೊಂಡಿರುವಂತೆ, ಕೊಲ್ಹಾಪುರದ ಸಂಭಾಜಿಯ ಪ್ರಾರ್ಥನೆಯಂತೆ ಈ ಬಖೈರನ್ನು ಬರೆಯಲಾಯಿತು. ಇದು ರಚಿತಗೊಂಡುದು ೧೭೬೦ರಿಂದ ೧೭೭೦ರ ಮಧ್ಯದ ಕಾಲಾವಧಿಯಲ್ಲಿ. ಮೊಗಲರು ಮತ್ತು ಮರಾಠರ ನಡುವೆ ನಡೆದ ಮೂರನೆಯ ಪಾಣಿಪತ್ ಕಾಳಗ (೧೭೬೧) ಕುರಿತ ಪಾಣಿಪತ್ ಬಖರ್ ಸಹಾ ರಘುನಾಥ ಯಾದವನಿಂದಲೇ ೧೭೬೩ರಲ್ಲಿ ಆಲಂಕಾರಿಕ ಶೈಲಿಯಲ್ಲಿ ರಚಿತವಾಗಿದ್ದು, ಇದನ್ನು ಪೇಶ್ವೆಯ ಕುಟುಂಬದ ಸದಸ್ಯರೋರ್ವರ ಆಣತಿಯಂತೆ ಸಿದ್ಧಪಡಿಸಲಾಯಿತು. ಪಾಣಿಪತ್ ಕಾಳಗ ಕುರಿತು ಮಾಹಿತಿ ಒದಗಿಸುವ ಇನ್ನೆರಡು ಮಹತ್ವದ ದಾಖಲೆಗಳೆಂದರೆ ಕೃಷ್ಣಾಜೀ ಶಾಮರಾಯನ ಭಾವೂಸಾಹೇಬಾಂಚೀ ಬಖರ್ (೧೭೬೨-೬೩) ಮತ್ತು ಶ್ರೀಮಂತ್ ಭಾವೂಸಾಹೇಬ್ ಯಾಂಚೀ ಕೈಫಿಯತ್. ಭೋಂಸ್ಲೆ ಬಖರ್‌ನ ಕಾಶೀರಾಜ್ ನೀಡುವುದಕ್ಕಿಂತಲೂ ಅಧಿಕ ಹಾಗೂ ಅಧಿಕೃತ ಮಾಹಿತಿಯನ್ನು ಈ ಎರಡು ದಾಖಲೆಗಳು ಪೂರೈಸುತ್ತವೆಂದೂ ಇವುಗಳ ಕರ್ತೃಗಳಿಗೆ ಯುದ್ಧಕ್ಷೇತ್ರದ ಸಂಪೂರ್ಣ ತಿಳಿವಳಿಕೆ ಇದ್ದಿರಬೇಕೆಂದೂ ಅವರು ಸ್ವತಃ ಯುದ್ಧಭಾಗಿಗಳಾಗಿದ್ದಿರಬೇಕೆಂದೂ ಇತರ ದಾಖಲೆಗ ಳೊಡನೆ ಹೋಲಿಸಿ ನೋಡಿದರೆ ಇವರ ವೃತ್ತಾಂತವು ಸಾಕಷ್ಟು ಅಧಿಕೃತವಾಗಿರುವುದೆಂದೂ ಇವುಗಳ ವ್ಯಾಪಕ ಅಧ್ಯಯನ ನಡೆಸಿರುವ ತ್ರ್ಯಂಬಕ ಶಂಕರ ಶೆಜ್‌ವಾಲ್ಕರ್ ಅವರು ಅಭಿಪ್ರಾಯಪಟ್ಟಿರುವರು. ಇವುಗಳೊಡನೆ ಇದೇ ಕಾಳಗ ಕುರಿತ ಇನ್ನೂ ನಾಲ್ಕು ಅಪೂರ್ಣ ಬಖೈರುಗಳನ್ನು ಗಮನಿಸಬಹುದು. ಹಾಗೆಯೇ ಖರ್ದಾ ಕದನ ಕುರಿತು ಹೇಳುತ್ತದೆ ಖರ್ದಾ ಬಖರ್.

ರಾಜಸೇವಾಸಕ್ತ ಅಧಿಕಾರಿಯಾಗಿದ್ದ ಮಲ್ಹಾರ್ ರಾಮರಾವ್ ಚಿಟ್ನೀಸನು, 'ಅಬಾ ಸಾಹಿಬ್' ಎಂದು ಕರೆಯಲ್ಪಡುತ್ತಿದ್ದ ಕಿರಿಯ ಶಾಹೂ ಮಹಾರಾಜನ (''ಕ್ಷತ್ರಿಯಕುಲಾವತಂಸ ಶ್ರೀರಾಜಾಧಿರಾಜ ಶ್ರೀಮಹಾರಾಜಾ ಪ್ರತಾಪೀ ಶಾಹೂ ನೃಪತಿ'') ಅಪ್ಪಣೆಯಂತೆ, ೧೮೧೦-೧೧ರಲ್ಲಿ ಶಿವಾಜಿಯ ಜೀವನ ಮತ್ತು ಆಡಳಿತ ವೃತ್ತಾಂತವನ್ನೊಳಗೊಂಡ ಬಖೈರನ್ನು (ಚಿಟ್ನೀಸ್ ಬಖರ್) ರಚಿಸಿದನು. ತನ್ನ ಕಾಲದ ಬಹು ಮುಖ್ಯ ಘಟನೆಗಳನ್ನು ಏಳು ಅಧ್ಯಾಯಗಳಲ್ಲಿ ದಾಖಲಿಸಿದ್ದಾನೆ ಚಿಟ್ನೀಸ್. ಹಲವಾರು ಸಂಸ್ಕೃತ ಗ್ರಂಥಗಳು ಮತ್ತು ಸರ್ಕಾರದ ಹಳೆಯ ಕಾಗದ-ಪತ್ರಗಳನ್ನು ತನ್ನ ಬರವಣಿಗೆಯಲ್ಲಿ ಬಳಸಿಕೊಂಡಿರುವುದಾಗಿ ಅವನು ಹೇಳಿಕೊಂಡಿದ್ದಾನೆ. ಸಭಾಸದ್ ಬಖರ್ ನಂತರ ಹುಟ್ಟಿದ ಶಿವದಿಗ್ವಿಜಯ

ಬಖರ್‌ನಷ್ಟೇ ಚಿಟ್ನೇಸ್ ಬಖರ್ ಕೂಡಾ ಮಹತ್ವದ ದಾಖಲೆಯೆಂದೂ ಶಿವಾಜಿಯ ಆಡಳಿತ ಕ್ರಮದ ಬಗೆಗೆ ಸಭಾಸದನಿಗಿಂತಲೂ ಚಿಟ್ನೇಸ್ ಹೆಚ್ಚು ವಿವರಗಳನ್ನು ನೀಡಿರುವನೆಂದೂ ತಿಳಿಯುತ್ತದೆ.

ಶಹನಾವ್ ಕಲಮೀ ಬಖರನ್ನು ೧೬೮೫ರಲ್ಲಿ ದತ್ತೋ ತ್ರಿಮಲ ವಾಕನೀಸನು ಬರೆದನೆನ್ನಲಾಗಿದೆ. ಆದರೆ ಈಗ ದೊರೆತಿರುವುದು ಖಂಡೋ ಅಣ್ಣಾಜಿ ಮಾಲಕರೆಯು ವಾಕನೀಸನ ಬಖೈರುನಲ್ಲಿಯ ಆಯ್ದ ಕೆಲವು ಭಾಗಗಳೊಡನೆ ಬೇರೆ ವೃತ್ತಾಂತವನ್ನು ಸೇರಿಸಿ ಬರೆದ ಬಖೈರು. ಮಾಲಕರೆಯು ತನ್ನ ಬಖೈರ್‌ನಲ್ಲಿ ತನ್ನ ತಂದೆ ಅಣ್ಣಾಜಿ ರಂಗನಾಥನು ಶಿವಾಜಿಯ ಕಾಲದಲ್ಲಿ ತೋರಿದ ಶೌರ್ಯದ ಬಗೆಗೆ ಉತ್ಪ್ರೇಕ್ಷಿಸಿ ಬರೆದಿರುವನು. ಇದು ಸಮಕಾಲೀನ ಬಖೈರು ಆಗಿರುವುದರಿಂದ ನಂಬಿಕೆಗೆ ಅರ್ಹವಾದುದೆಂದು ಕೆಲವು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

ಇವುಗಳಲ್ಲದೆ, ಬಾಳಾಜೀ ಗಣೇಶ ಕಾರಕೂನನ ಪೇಶ್ವೆ ಯಾಂಚೀ ಬಖರ್ (೧೭೮೩), ಕಾಯಸ್ಥ ಪ್ರಭುಂಚೀ ಬಖರ್ (೧೮೦೧) ಮೊದಲಾದುವೂ ಗಮನಾರ್ಹವಾದುವು. ಆದರೆ ಇವು ಇತ್ತೀಚಿನವಾದುದರಿಂದ ಚರಿತ್ರೆ ಬರವಣಿಗೆಯಲ್ಲಿ ಅಷ್ಟಾಗಿ ಉಪಯೋಗಕ್ಕೆ ಬರಲಾರವೆಂತಲೂ ಹೇಳಲಾಗಿದೆ. ಕಾಯಸ್ಥ ಪ್ರಭುಂಚೀ ಬಖರ್‌ನ ಸಂಬಂಧದಲ್ಲಿ ವ್ಯಕ್ತಪಟ್ಟಿರುವ ಸಂಗತಿಯೆಂದರೆ, ಶಿವಾಜಿಯ ಜೀವನ ವೃತ್ತಾಂತವನ್ನು ಬಖೈರು ರೂಪದಲ್ಲಿ ದಾಖಲಿಸಿರುವ ಒಂಬತ್ತು ಲೇಖಕರಲ್ಲಿ ಕನಿಷ್ಠ ಮೂವರು ಪ್ರಭುಕಾಯಸ್ಥ ವರ್ಗಕ್ಕೆ ಸೇರಿದವರು. ಇವರಲ್ಲಿ ಇಬ್ಬರು ಸಭಾಸದರಾಗಿದ್ದರು.

ವಿದ್ವಾಂಸರನೇಕರು ಬಖೈರು ಸಾಹಿತ್ಯದ ಸಂಗ್ರಹಣೆ, ಪ್ರಕಟಣೆ ಹಾಗೂ ಅಧ್ಯಯನ ಕೈಗೊಂಡು ಮರಾಠೀ ಸಾಹಿತ್ಯ ಮತ್ತು ಮರಾಠಾ ಚರಿತ್ರೆಯ ಕ್ಷೇತ್ರಗಳಿಗೆ ಮಹದೋಪಕಾರ ಮಾಡಿದ್ದಾರೆ. ರಾವ್ ಬಹಾದೂರ್ ಕಾಶೀನಾಥ ನಾರಾಯಣ ಸಾನೆ ಅವರು ಈ ದಿಸೆಯಲ್ಲಿ ಮಾಡಿರುವ ಕೆಲಸವನ್ನು ಮೇಲೆಯೇ ಸೂಚಿಸಿದೆ. ಪಾರಸನೀಸ್ ಅವರು ತಮ್ಮ 'ಮರಾಠ್ಯಾಂಚೆ ಪರಾಕ್ರಮ' (ಬಂದೇಲ್‌ಖಂಡ ವಿಭಾಗ)ದಲ್ಲಿ ಭಾವೂಸಾಹೇಬಾಂಚೀ ಬಖರನ್ನು ಸೇರಿಸಿದ್ದಾರೆ. ವಿ. ಎಸ್. ವಾಕಸ್ಕರ್ ಅವರು ಸಭಾಸದ್ ಬಖರನ್ನು ೧೯೬೨ರಲ್ಲಿ ಸಂಪಾದಿಸಿ ಪ್ರಕಟಿಸಿರುವರು. ಎಲ್. ಕೆ. ದಾಂಡೇಕರ್ ಮತ್ತು ಪಿ. ಆರ್. ನಾಂದುರ್ ಬಾರ್ಕರ್ ಅವರುಗಳು ಸಂಯುಕ್ತವಾಗಿ ಶಿವದಿಗ್ವಿಜಯ ಬಖರನ್ನೂ ಶ್ರೀ ಶಿವಾಜಿ ಪ್ರತಾಪ್ ಬಖರನ್ನೂ ಸಂಪಾದಿಸಿ ಹೊರತಂದಿರುವರು. ವಿ. ಕೆ. ಭಾವೆ ಅವರ 'ಮರಾಠೀ ದಫ್ತರ್'ನಲ್ಲಿ ಅನಾಮಿಕ ಸೋರ್ವನಿಂದ ರಚಿತವಾದ ಶಿವಾಜಿಯನ್ನು ಕುರಿತ ಆರನೆಯ ಬಖೈರು ಪ್ರಕಟವಾಗಿದೆ. ಶಹನಾವ್ ಕಲಮೀ ಬಖರ್ ಈ ಸರಣಿಯಲ್ಲಿ ಏಳನೆಯದೆಂದು ಗುರುತಿಸಲ್ಪಟ್ಟಿದ್ದು, ಇದನ್ನು ಚಂದೋರ್‌ಕರ್ ಅವರು ಮರಾಠೀ ನಿಯತಕಾಲಿಕೆ 'ಪ್ರಭಾತ್'ನಲ್ಲಿ ಪ್ರಕಟಿಸಿದರು. ರಾಯ್ರಿಕೋಟೆಯಲ್ಲಿ ದೊರೆತ ಬಖೈರು (ರಾಯ್ರಿಬಖರ್)ನ ಇಂಗ್ಲಿಷ್ ಅನುವಾದವನ್ನು ಪ್ರಕಟಿಸಿದವರು ಪ್ರೊ॥ ಸರ್ ಜಿ. ಫಾರೆಸ್ಟ್ ಅವರು. ೧೮೧೧ರಲ್ಲಿ ಈ ಕುರಿತು ಬರೆದ ಸ್ಕಾಟ್ ವಾರಿಂಗ್ ಈ ಬಖೈರ್‌ನ ಮೂಲಪ್ರತಿಯ ಬಗೆಗೆ ವಿಶೇಷವಾಗಿ ಪ್ರಶಂಸಿಸಿದ್ದಾರೆ. ಆದರೆ ಮೂಲಪ್ರತಿಯು ಕಳೆದುಹೋಗಿರುವುದರಿಂದ ಜಸ್ಟಿಸ್ ತೆಲಂಗ್ ಅವರು ಈ ಬಖೈರ್‌ನ ಇಂಗ್ಲಿಷ್ ಅನುವಾದದ ವಿಶ್ವಸನೀಯತೆಯನ್ನು ಪ್ರಶ್ನಿಸಿರುವರು. ಶಹನಾವ್ ಕಲಮೀ ಬಖರ್‌ನ ಪಾಠವನ್ನು ಪ್ರೊ॥ ಫಾರೆಸ್ಟ್ ಅವರು ತಮ್ಮ ಅನುವಾದದಲ್ಲಿ ಬಳಸಿಕೊಂಡಿರುವ

ರೆಂದು ವ್ಯಕ್ತಪಡುತ್ತದೆ. ಈ ಬಖೈರ್‌ನ ಒಂದು ಪ್ರತಿಯನ್ನು ರಾಜವಾಡೆ ಅವರೂ ಇನ್ನೊಂದನ್ನು ಪಾರಸನೀಸ್ ಅವರೂ ಪ್ರಕಟಿಸಿರುವರು. ವಿ. ಎಸ್. ವಾಕಸ್ಕರ್ ಅವರು ಈ ಬಖೈರನ್ನು ೧೯೩೧ರಲ್ಲಿ ಸಂಪಾದಿಸಿ ಹೊರತಂದಿರುವರು.

ವಿ. ಕೆ. ರಾಜವಾಡೆ ಅವರು 'ಪ್ರಭಾತ್'ನಿಯತಕಾಲಿಕೆಯಲ್ಲಿ ಸುಮಾರು ಒಂದುನೂರು ಪುಟದಷ್ಟು ಅಷ್ಟೇನೂ ಉಪಯುಕ್ತವಲ್ಲದ ಬಖೈರು ಒಂದರ ವೃತ್ತಾಂತವನ್ನು ಪ್ರಕಟಿಸಿದ್ದು, ಅದರ ಇಡೀ ಪಾಠವು ತಂಜಾವೂರಿನ ದೇವಾಲಯವೊಂದರ ಕಲ್ಲುಗೋಡೆಯ ಮೇಲೆ ಕಂಡರಿಸಲ್ಪಟ್ಟ ಪಾಠದ ಮರುಪ್ರತಿಯೇ ಆಗಿದೆ. ಇದು ಸ್ವಾರಸ್ಯಪೂರ್ಣವೂ ಮಾನವ ಶ್ರಮದ ಅಪವ್ಯಯಕ್ಕೆ ವಿಶಿಷ್ಟ ಉದಾಹರಣೆಯೂ ಆಗಿದೆಯೆಂದು ಅನ್ಯ ವಿದ್ವಾಂಸರು ಭಾವಿಸಿರುವುದುಂಟು.

ಕಳೆದ ಶತಮಾನದ ಅಂತ್ಯದಲ್ಲಿ ಜಗನ್ನಾಥ ಲಕ್ಷ್ಮಣ ಮಂಕರ್ ಅವರು ಸಭಾಸದ್ ಬಖರನ್ನು ಇಂಗ್ಲಿಷ್‌ಗೆ ಭಾಷಾಂತರಿಸಿದ್ದು, ಈ ಬಖೈರ್‌ನ (ಸಾನೆ ಅವರು ಸಂಪಾದಿಸಿದ ಪಾಠ) ಎರಡನೆಯ ಇಂಗ್ಲಿಷ್ ಅನುವಾದವನ್ನು ಕೈಗೊಂಡವರು ಸುರೇಂದ್ರನಾಥ ಸೇನ್ ಅವರು. ಸಭಾಸದ್ ಬಖರ್‌ನೊಡನೆ ಚಿಟ್ನೀಸ್ ಬಖರ್ ಮತ್ತು ಶಿವದಿಗ್ವಿಜಯ ಬಖರ್‌ಗಳ ಕೆಲವು ಭಾಗಗಳನ್ನು ಅವರು ಇಂಗ್ಲಿಷ್‌ಗೆ ಅನುವಾದಿಸಿ ೧೯೨೦ರಲ್ಲಿ ಕಲ್ಕತ್ತಾದಿಂದ ಪ್ರಕಟಿಸಿದ್ದಾರೆ. ಹಾಗೆಯೇ, ಶಿಂದ್‌ಖೇಡ್ಕರ್ ಜಾಧವರಾವ್‌ಯಾಂಚೀ ಬಖರ್ ಡಿ. ಬಿ. ಮಹಾಜನ್ ಅವರಿಂದ ಸಂಪಾದಿತಗೊಂಡು ಪ್ರಕಟಿಸಲ್ಪಟ್ಟಿದೆ. ಇವು ವಿದ್ವಾಂಸರು ಕೈಗೊಂಡ ಬಖೈರುಗಳ ಅಧ್ಯಯನ, ಇತ್ಯಾದಿ ಕುರಿತು ಕೆಲವು ಉದಾಹರಣೆಗಳು ಮಾತ್ರ.

ಈ ವಿದ್ವಾಂಸರು ಹಾಗೂ ಮರಾಠಾ ಚರಿತ್ರೆಯಲ್ಲಿ ಅಧ್ಯಯನ ಕೈಗೊಂಡ ಇತರರು ಇಲ್ಲಿಯ ಹಲವಾರು ಬಖೈರುಗಳನ್ನು ವಿವರವಾಗಿಯೇ ವಿಮರ್ಶಿಸಿದ್ದಾರೆ. ಮರಾಠರ ಅಭ್ಯುದಯಕ್ಕೆ ಕಾರಣನಾದ ಛತ್ರಪತಿ ಶಿವಾಜಿಯನ್ನು ಮೊದಲ್ಗೊಂಡು, ಉತ್ತರಭಾರತದಲ್ಲಿ ಮರಾಠರ ವಿಸ್ತರಣೆಗೆ ಹಾಗೂ ಅವರ ಪ್ರತಿಷ್ಠೆಗೆ ಪೆಟ್ಟುಕೊಟ್ಟ ೧೭೬೧ರ ಪಾಣಿಪತ್ ಕಾಳಗದವರೆಗೆ ಸೃಷ್ಟಿಗೊಂಡ ಬಖೈರುಗಳಲ್ಲಿ ಕಾಲಕಾಲಕ್ಕೆ ಆದ ರಾಜಕೀಯ ಬದಲಾವಣೆಗಳು, ವೈಪರೀತ್ಯಗಳು ಮೊದಲಾದುವುಗಳನ್ನು ಸವಿಸ್ತಾರವಾಗಿಯೇ ದಾಖಲಿಸಲಾಗಿದೆ. ಈ ದಾಖಲೆಗಳು ಮಹಾರಾಷ್ಟ್ರೀಯರ ಪಾಲಿಗೆ ಇತಿಹಾಸದ ಗಣಿಗಳು. ತಮ್ಮ ಪರಂಪರೆ, ಭಾಷೆ, ಸಾಧನೆ, ಪ್ರಭಾವ ಇತ್ಯಾದಿಗಳ ಬಗೆಗೆ ಹೆಮ್ಮೆಯಿಂದ ಬೀಗಲು ಮರಾಠರಿಗೆ ತಾವು ಉಳಿಸಿಕೊಂಡು ಬಂದ ಇಂತಹ ಚಾರಿತ್ರಿಕ ಕಡತಗಳೂ ಕಾರಣ. ಇವುಗಳನ್ನು ತಲಸ್ಪರ್ಶಿಯಾಗಿ, ತುಲನಾತ್ಮಕವಾಗಿ ಅಧ್ಯಯನ ಮಾಡಿರುವ ವಿದ್ವಾಂಸರು, ಇವುಗಳಲ್ಲಿಯ ನೈಜ ಚಾರಿತ್ರಿಕಾಂಶಗಳನ್ನೂ, ಉತ್ಪ್ರೇಕ್ಷಿತ ಮಿಥ್ಯೆಗಳನ್ನೂ ಕೇವಲ ರಸವತ್ತಾದ ವರ್ಣನೆ ಇತ್ಯಾದಿಗಳನ್ನೂ ಯಾವುದೇ ಪಕ್ಷಪಾತಕ್ಕೆ, ಧೋರಣೆಗೆ ಕಟ್ಟುಬೀಳದೆ ನೇರವಾಗಿ ಎತ್ತಿ ತೋರಿಸುವುದು ವಿಶೇಷ. ಇಂತಹ ವಸ್ತುನಿಷ್ಠ ಅಧ್ಯಯನದಿಂದ ಮರಾಠಾ ಚರಿತ್ರೆಗೆ ಮತ್ತಷ್ಟು ಮಹತ್ವ ಪ್ರಾಪ್ತವಾಗಿರುವುದೂ ವಾಸ್ತವ ಸಂಗತಿಯೇ.

ಬಖೈರುಗಳನ್ನು ಆಧರಿಸಿ ಘಟನೆಗಳನ್ನು ನಿರೂಪಿಸುವಾಗ ಚರಿತ್ರಕಾರರು ಹಲವಾರು ಸಂದೇಹ–ಸಮಸ್ಯೆಗಳಿಗೆ ಉತ್ತರ ಕಂಡುಕೊಳ್ಳಬೇಕಾಗುತ್ತದೆಂಬುದು ಸ್ಪಷ್ಟ. ಶಿವಾಜಿಯ ಸಮಕಾಲೀನನೂ ವಸ್ತುನಿಷ್ಠ ಬಖೈರು ನೀಡಿದವನೆಂದು ತಿಳಿಯಲ್ಪಟ್ಟವನೂ ಆದ ಕೃಷ್ಣಾಜಿ ಅನಂತ ಸಭಾಸದನು ತನ್ನ ಬಖೈರ್‌ನಲ್ಲಿ ಎಷ್ಟೋ ಸಂಗತಿಗಳನ್ನು ತಪ್ಪಾಗಿ ನಿರೂಪಿಸಿರುವನೆಂಬ

ಆಕ್ಷೇಪಣೆಗೆ ಗುರಿಯಾಗಿದ್ದಾನೆ. ಇವನ ಬಖೈರು ಮೂಲ ಚರಿತ್ರಲೇಖನ (Primary Historiography)ವೆಂದು ಪರಿಗಣಿಸಲ್ಪಟ್ಟಿದ್ದು, ಬಹುಮಂದಿ ವಿದ್ವಾಂಸರು ತಮ್ಮ ಬರವಣಿಗೆಗಳಲ್ಲಿ ಇವನ ದಾಖಲೆಯನ್ನೆ ಮುಖ್ಯಾಧಾರವಾಗಿ ಪರಿಗ್ರಹಿಸಿರುವರು. ಅವರು ಸಭಾಸದನು ತನ್ನ ಬಖೈರ್‌ನಲ್ಲಿ ಮಾಡಿರುವ ತಪ್ಪುಗಳತ್ತ ಬೊಟ್ಟು ಮಾಡಿದ್ದಾರೆ. ಉದಾಹರಣೆಗೆ, ಯುದ್ಧ ಪರಿಸ್ಥಿತಿಯ (ಉದಾ: ಚೆಂಜಿ ಯುದ್ಧ) ವಿವರಗಳನ್ನು ಸರಿಯಾಗಿ ನಿರೂಪಿಸದಿರುವುದು, ಘಟನೆಗಳನ್ನು ಉಲ್ಲೇಖಿಸುವಲ್ಲಿ ಕಾಲಾನುಕ್ರಮಣಿಕೆಯನ್ನು ಅನುಸರಿಸದಿರುವುದು, ನೆನಪಿನ ಬಲದಿಂದಲೇ ಎಷ್ಟೋ ಸಂಗತಿಗಳನ್ನು ಬರೆದಿರುವುದು, ಇತ್ಯಾದಿ. ಶಿವಾಜಿಯ ಬಾಲ್ಯವನ್ನು ಕುರಿತು ಇವನು ಏನನ್ನೂ ಹೇಳದೆ ಮೌನವಹಿಸಿದ್ದಾನೆ. ಘಟನೆಗಳನ್ನು ಸಾಕಷ್ಟು ಸಂಕ್ಷಿಪ್ತವಾಗಿಯೇ ನಿರೂಪಿಸಿದ್ದಾನೆ. ಸುರೇಂದ್ರನಾಥ ಸೇನ್ ಅವರು ಅಭಿಪ್ರಾಯಪಟ್ಟಿರುವಂತೆ, ಸಭಾಸದನು ತನ್ನ ಬಖೈರನ್ನು ಮನಃಪೂರ್ವಕವಾಗಿ ಬರೆಯದೆ ಕೇವಲ ಕರ್ತವ್ಯದ ದೃಷ್ಟಿಯಿಂದ ಪೂರೈಸಿರುವನು.[೩೦] ಸಭಾಸದನು ತನ್ನ ಬಖೈರನ್ನು ಬರೆಯುವ ವೇಳೆಗೆ ತೀರಾ ವೃದ್ಧನಾಗಿದ್ದು, ತನ್ನ ಹತ್ತಿರ ಸಮಕಾಲೀನವಾದ ಯಾವುದೇ ಅಧಿಕೃತ ಕಾಗದ-ಪತ್ರ ಇಲ್ಲದಿದ್ದಾಗ್ಗೂ ಕೇವಲ ನೆನಪಿನ ಬಲ ಮತ್ತು ಇತರರ ಬಾಯಿಮಾತನ್ನು ಆಧರಿಸಿ ಬರೆದಿರುವುದರಿಂದ, ಈತನ ದಾಖಲೆಯು ಹೇಳಿಕೊಳ್ಳುವಷ್ಟು ವಿಶ್ವಸನೀಯವಲ್ಲವೆಂದು ವ್ಯಕ್ತಪಡುತ್ತದೆ.

ಸಭಾಸದ್ ಬಖರನ್ನು ಆಧರಿಸಿರುವ ರಘುನಾಥ ಯಾದವನ ಚಿತ್ರಗುಪ್ತ ಬಖರ್ ಬರೆಯಲ್ಪಟ್ಟುದು ಮೂರನೆಯ ಪಾಣಿಪತ್ ಯುದ್ಧಾರಂಭಕ್ಕೆ ಒಂದೆರಡು ವರುಷ ಮೊದಲು. ಅಂದರೆ ೧೭ನೆಯ ಶತಮಾನದ ವೃತ್ತಾಂತವನ್ನು ೧೮ನೆಯ ಶತಮಾನದಲ್ಲಿ ಬರೆಯಲಾಗಿರುವುದರಿಂದ ಈ ಬಖೈರು ಸಹಾ ನಂಬಿಕೆಗನರ್ಹವೆಂದು ಪರಿಗಣಿಸಲ್ಪಡುತ್ತದೆ. ಹಾಗೆಯೇ, ಮಲ್ಹಾರ ರಾಮರಾವ್ ಚಿಟ್ನೀಸನ ಚಿಟ್ನೀಸ್ ಬಖರ್ ಸಹಾ ಕ್ರಮವಲ್ಲದ ಕಾಲಾನುಕ್ರಮಣಿಕೆ, ವ್ಯಕ್ತಿ ಮತ್ತು ಸ್ಥಳಗಳ ತಪ್ಪು ಉಲ್ಲೇಖ, ಬಳಸಿಕೊಂಡ ಅನ್ಯ ಆಧಾರಗಳ ಬಗೆಗೆ ಮೌನ—ಇಂತಹ ಕೆಲವಾರು ದೋಷಗಳಿಂದಾಗಿ ವಿದ್ವಾಂಸರ ಟೀಕೆಗೆ ಗುರಿಯಾಗಿದೆ. ಇತಿಹಾಸಾಚಾರ್ಯ ಸರ್ ಜಾದೂನಾಥ ಸರ್ಕಾರ್ ಅವರು, ೧೮೨೬ರಲ್ಲಿ ಗ್ರ್ಯಾಂಟ್‌ಡಫ್ ರಚಿಸಿದ 'ಎ ಹಿಸ್ಟರಿ ಆಫ್ ದಿ ಮರಾಠಾಸ್' ಆಂಗ್ಲ ಕೃತಿಯ ಬಗೆಗೆ ಪ್ರಸ್ತಾಪಿಸುವಾಗ, ಶಿವಾಜಿಯು ಜನಿಸಿದ ೧೮೩ ವರುಷಗಳ ತರುವಾಯ ಬರೆಯಲಾದ ಚಿಟ್ನೀಸ್ ಬಖರ್ ಸಾಕಷ್ಟು ಸತ್ಯದೂರವಾದ ಸಂಗತಿಗಳನ್ನು ಒಳಗೊಂಡಿರುವ ಹಾಗೂ ಇಂತಹ ಬಖೈರುಗಳನ್ನು ಆಧರಿಸಿ ಗ್ರ್ಯಾಂಟ್ ಡಫ್ ಅಂತಹವರು ಕೃತಿ ರಚಿಸಿರುವ ಬಗೆಗೆ ಟೀಕಿಸಿದ್ದಾರೆ. ಆದರೆ ಶಿವಾಜಿಯ ಆಸ್ಥಾನದಲ್ಲಿದ್ದ ಸಭಾಸದನು ರಚಿಸಿದ ಬಖೈರನ್ನು ತಾವು

---

೩೦ *Siva Chhatrapati (Extracts and Documents Relating to Maratha History),* Vol. 1, Calcutta, 1920: Notes and Appendices, No. 1, p. 254
ಸಭಾಸದನು ತನ್ನ ಬಖೈರನ್ನು ಆರಂಭಿಸಿರುವುದು ಹೀಗೆ: "ಶ್ರೀಮಂತ ಮಹಾರಾಜ ರಾಜಶ್ರೀ ರಾಜಾರಾಮ ಸಾಹೇಬ್ ಛತ್ರಪತಿ...ವಿನಂತಿ ಸೇವಕ ಕೃಷ್ಣಾಜೀ ಅನಂತ ಸಭಾಸದ್ ಕೃತಾನೇಕ ವಿಜ್ಞಾಪನಾ ಏಸೌ ಜೇ ಸಾಹಿಬೀ ಮೆಹರ್‌ಬಾನೀ ಕರೂನ್ ಸೇವಕಾಸ್ ಪುಸೀಲೆ ಕೀ" (Your majesty graciously enquired of your servant,'...'so said your Majesty. Accordingly I beg to submit the information thus:-...) Ibid., p. 256.

ಮೆಚ್ಚಿಕೊಳ್ಳುವುದಾಗಿಯೂ ಬರೆದಿದ್ದಾರೆ.[೩೧] ಜಸ್ಟೀಸ್ ರಾನಡೆ ಮತ್ತು ಇತರರು ಸಹಾ ಗ್ರ್ಯಾಂಟ್‌ಡಫ್ ಅವರ ಕೃತಿಯನ್ನು ಸಾಕಷ್ಟು ತೆಗಳಿರುವರು. ಶಿವಾಜಿಯನ್ನು ಕುರಿತ ಬಖೈರುಗಳೆಲ್ಲವೂ ಪ್ರಕಟಗೊಂಡಾಗಲೇ ಈ ಕೃತಿಯಲ್ಲಿಯ ತಪ್ಪುಗಳನ್ನು ನಿವಾರಿಸಬಹುದೆಂತಲೂ ಅಭಿಪ್ರಾಯಪಡಲಾಗಿದೆ.

ರಾಜವಾಡೆ ಅವರು ಚಿಟ್ನೀಸ್ ಬಖರ್‌ನ ಕಾಲಮಾನದ ಬಗೆಗೆ ವ್ಯಕ್ತಪಡಿಸಲಾದ ಅಭಿಪ್ರಾಯವು ಗಮನಾರ್ಹವೆನಿಸಿದೆ. ಚಿಟ್ನೀಸನು ಹೇಳಿಕೊಂಡಂತೆ, ಆತನು ತನ್ನ ಬಖೈರನ್ನು ಬರೆಯಲಾರಂಭಿಸಿದುದು ೧೮೧೦ ಜೂನ್ ೮ರಂದು, ಶಾಹೂ ಛತ್ರಪತಿಯ ಆದೇಶದಂತೆ. ಆದರೆ ಈ ಛತ್ರಪತಿಯು ಮರಣಹೊಂದಿದುದು ೧೮೦೮ ಮೇ ೪ರಂದು. ಆದ್ದರಿಂದ ಚಿಟ್ನೀಸನು ಆತನ ಆದೇಶದಂತೆ ಬಖೈರನ್ನು ಬರೆದನೆಂಬುದು ಇಲ್ಲಿ ಅಸಂಗತವಾಗಿ ತೋರುತ್ತದೆಯಲ್ಲದೆ, ಬಖೈರ್‌ನ ವಿಶ್ವಸನೀಯತೆಯ ಬಗೆಗೆ ಶಂಕೆಯುಂಟಾಗುತ್ತದೆ. ಚಿಟ್ನೀಸನು ಛತ್ರಪತಿಯ ಸಮಕಾಲೀನನಾಗಿದ್ದು ಇಂತಹ ತಪ್ಪೆಸಗಲು ಸಾಧ್ಯವಿಲ್ಲದ್ದರಿಂದ, ಬಖೈರ್‌ನ ಆರಂಭದಲ್ಲಿ ಬರೆಯಲಾದ ವಾಕ್ಯಗಳು ಆತನವು ಅಲ್ಲವೇ ಅಲ್ಲವೆಂಬ ತೀರ್ಮಾನಕ್ಕೂ ಬರಬಹುದೆಂದು ಭಾವಿಸಲಾಗಿದೆ.[೩೨] ಆದರೂ ಈ ಬಖೈರು ತನ್ನ ಸಮಕಾಲೀನ ಪ್ರಮುಖ ಘಟನೆಗಳನ್ನು ದಾಖಲಿಸಿದ್ದು, ಶಿವಾಜಿಯ ಆಡಳಿತಕ್ಕೆ ಸಂಬಂಧಿಸಿದಂತೆ ಸಭಾಸದ್ ಬಖರ್‌ಗಿಂತಲೂ ಹೆಚ್ಚು ವಿವರಗಳನ್ನು ಒದಗಿಸುತ್ತದೆಂಬ ಪ್ರಶಂಸೆಗೂ ಪಾತ್ರವೆನಿಸಿದೆ.

ಶಿವಾಜಿಯ ಬದುಕು-ಸಾಧನೆಗಳನ್ನು ಕುರಿತು ಹುಟ್ಟಿದ ಬಖೈರುಗಳ ಚಾರಿತ್ರಿಕ ಮೌಲ್ಯವನ್ನು ನಿರ್ಧರಿಸಲು ಪ್ರಯತ್ನಿಸಿದ್ದಾರೆ ವಿದ್ವಾಂಸರು. ಈ ವೀರನನ್ನು ಕುರಿತ ಬಹುಪಾಲು ಬಖೈರುಗಳು ಕಾಲ್ಪನಿಕ, ಉತ್ಪ್ರೇಕ್ಷಿತ, ಸಾಂಪ್ರದಾಯಿಕ, ಧರ್ಮಪ್ರೇರಿತ ಇತ್ಯಾದಿ ಸಂಗತಿಗಳಿಂದ ತುಂಬಿಹೋಗಿದ್ದು, ಕಾಲಾನುಕ್ರಮಣಿಕೆಯ ಏರುಪೇರಿನಿಂದಲೂ ಚಾರಿತ್ರಿಕ ಘಟನೆಗಳ ತಪ್ಪು ಉಲ್ಲೇಖಗಳಿಂದಲೂ ಕೂಡಿವೆಯೆಂಬುದು ಅವರೆಲ್ಲರ ಒಟ್ಟು ಅಭಿಪ್ರಾಯ. ಇದಕ್ಕೆ ಮುಖ್ಯ ಕಾರಣ, ಎ. ಕೆ. ವಾರ್ಡರ್ ಅವರ ಪ್ರಕಾರ, ಒಬ್ಬರು ಬರೆದಿಟ್ಟದ್ದನ್ನು ಮತ್ತೊಬ್ಬರು ಅನುಸರಿಸಿದುದೇ ಆಗಿದೆ.[೩೩] ಮರಾಠೀ ಬಖೈರು ಸಾಹಿತ್ಯವನ್ನು ಆದ್ಯಂತವಾಗಿ ವ್ಯಾಸಂಗ ಮಾಡಿದ ಜದುನಾಥ ಸರ್ಕಾರ್ ಅವರು, ಬಖೈರುಗಳು ಅನಂತರದ ಊಹಾಪೋಹದ ರಚನೆಗಳೆಂಬ ಹಾಗೂ ಅಫೀಮು ಸೇವಿಸುವವರು ಹೇಳುವ ಕತೆಗಳಿಗಿಂತಲೂ ಉತ್ತಮವಾದುವೇನಲ್ಲವೆಂಬ ಕಟುವಾದ ಅಭಿಪ್ರಾಯ ವ್ಯಕ್ತಪಡಿಸಿರುವುದೂ ಉಂಟು.[೩೪] ಶಿವಾಜಿಯನ್ನು ಕುರಿತ ಬಖೈರುಗಳನ್ನು ಪ್ರತ್ಯೇಕವಾಗಿ ಗಮನಿಸಿದ ಅವರು, ಸಮಕಾಲೀನ ಪಾರ್ಸಿ ಮತ್ತು ಇಂಗ್ಲಿಷ್ ದಾಖಲೆಗಳೇ ಈ ಬಖೈರುಗಳಿಗಿಂತ ಹೆಚ್ಚು ವಿಶ್ವಸನೀಯವೆಂಬ ತೀರ್ಮಾನಕ್ಕೆ ಬಂದರು.[೩೫] ಆದರೂ ರಾಯ್ರಿ ಬಖರ್ ಮತ್ತು ತಾರೀಖ್-ಇ-ಶಿವಾಜಿ ಕೃತಿಗಳನ್ನು ಅವಲಂಬಿಸಿ ಸರ್ಕಾರ್ ಅವರು ತಮ್ಮ ಬರವಣಿಗೆಯನ್ನು

---

೩೧ *Shivaji and His Times*, Calcutta, 1919: Preface, p. 6

೩೨ *Siva Chhtrapati*, Vol. 1, p. 256

೩೩ *An Introduction to Indian Historiography*, pp. 148-151

೩೪ *Fall of the Mughal Empire*, p. 2: Tryambak Shankar Shejwalkar: Panipat: 1761, Poona, 1946, p. 130

೩೫ Bal Krishna: *Shivaji the Great*, Vol. I, Bombay, 1932: Introduction, p. 17

ಮಾಡಿರುವರಲ್ಲದೆ, ಅಧಿಕೃತ ದಾಖಲೆಗಳೊಡನೆ ಹೋಲಿಸಿ ನೋಡಿದಾಗ ಕೆಲವು ಬಖೈರುಗಳಾದರೂ ಸತ್ಯಾಂಶಗಳಿಂದ ಕೂಡಿರುವುದಾಗಿ ಕಂಡುಬರುತ್ತವೆಂತಲೂ ಹೇಳಿರುವರು.

ಚರಿತ್ರಕಾರರು ಗುರುತಿಸಿರುವಂತೆ, ಶಹನಾವ್ ಕಲಮೀ ಬಖರ್ ಮತ್ತು ಫಾರ್ಸಿಯಲ್ಲಿರುವ ತಾರೀಖ್-ಇ-ಶಿವಾಜಿ ಪರಸ್ಪರ ಸಂಬಂಧಿಸಿದಂತಹವು. ಶಿವದಿಗ್ವಿಜಯ ಬಖರ್ ಈಗ ಕಳೆದುಹೋಗಿರುವ ಮೂಲ ಬಖೈರೊಂದರ ಪರಿಷ್ಕೃತ ಕೃತಿಯಾಗಿದ್ದು, ಅದರ ಫಾರ್ಸೀ ಅನುವಾದವೇ ತಾರೀಖ್-ಇ-ಶಿವಾಜಿ ಆಗಿದೆಯೆಂದು ಸರ್ಕಾರ್ ಅವರೂ ಹೇಳಿದ್ದಾರೆ. ಶಹನಾವ್ ಕಲಮೀ ಬಖರ್ ಸಮಕಾಲೀನ ದಾಖಲೆಯೆಂಬುದನ್ನು ಇನ್ನೂ ಸಮರ್ಥಿಸಲಾಗಿಲ್ಲವೆಂಬ ಅಭಿಪ್ರಾಯವೂ ಇದೆ. ಬಾಲಕೃಷ್ಣ ಅವರು ತಮ್ಮ ಕೃತಿಯ ಪರಿಶಿಷ್ಟ ೧ರಲ್ಲಿ, ಈ ಬಖೈರ್‌ನ ೧ನೇ ಪ್ರಕರಣದಿಂದ ೨೩ನೆಯ ಪ್ರಕರಣದವರೆಗಿನ ವೃತ್ತಾಂತವನ್ನು ವಿಮರ್ಶಿಸಿ, ಚರಿತ್ರೆ ಮತ್ತು ಬಖೈರ್‌ನ ಮಧ್ಯೆ ಇರುವ ವ್ಯತ್ಯಾಸಗಳನ್ನು ತೋರಿಸಿ ಕೊಟ್ಟಿರುವರು.[೩೬]

ಶಿವದಿಗ್ವಿಜಯ ಬಖರ್, ಶೇಡ್‌ಗಾಂವ್‌ಕರ್ ಬಖರ್ ಮೊದಲಾದುವು ಸಭಾಸದ್ ಬಖರನ್ನೇ ಸಾಕಷ್ಟು ಅವಲಂಬಿಸಿದ್ದು, ಶಿವಾಜಿಯ ಕಾಲದ ರಾಜಕೀಯ ಆಗುಹೋಗುಗಳು ಮತ್ತು ಆಡಳಿತ ವ್ಯವಸ್ಥೆ ಕುರಿತು ಒದಗಿಸುವ ವೃತ್ತಾಂತವು ಅಷ್ಟೇನೂ ಪ್ರಯೋಜನಕಾರಿಯಲ್ಲವೆನ್ನುವುದು ಹಾಗೂ ಅವುಗಳ ಲೇಖಕರು ಸ್ವಂತವಾಗಿ ಹಲವಾರು ಸಂಗತಿಗಳನ್ನು ಪ್ರಸ್ತಾಪಿಸಿರುವ ಭಾಗಗಳೂ ಉಪಯುಕ್ತವಲ್ಲವೆನ್ನುವುದು ಕೆಲವು ವಿದ್ವಾಂಸರ ಅಭಿಮತ. ಹಾಗೆಯೇ, ಶ್ರೀ ಶಿವಾಜಿ ಪ್ರತಾಪ್ ಬಖರ್ ಕೇವಲ ಐತಿಹ್ಯಗಳ ಸಂಗ್ರಹವೆನಿಸಿದೆ. ಈ ಎಲ್ಲಾ ಬಖೈರುಗಳೂ ಶಿವಾಜಿಯು ದೈವಾಂಶಸಂಭೂತನೆಂದೂ ಶಿವನ ಅಪರಾವತಾರಿಯೆಂದೂ ತನ್ನ ಹೋರಾಟದ ಪ್ರತಿ ಹಂತದಲ್ಲಿಯೂ ತನ್ನ ಮನೆದೇವತೆಯಿಂದ ರಕ್ಷಿಸಲ್ಪಟ್ಟು ಮುಂದುವರೆದವನೆಂದೂ ತನ್ನ ಎಲ್ಲ ಯೋಜನೆಗಳಲ್ಲಿ ಯೋಗಪುರುಷನ ಮಾರ್ಗದರ್ಶನದಂತೆ ನಡೆದವನೆಂದೂ–ಹೀಗೆ ಚಾರಿತ್ರಕವಾಗಿ ಸುಲಭದಲ್ಲಿ ಸಮರ್ಥಿಸಲಾಗದ ಹಲವಾರು ಕತೆಗಳನ್ನು ಒಳಗೊಂಡಿದೆ. ಮುಖ್ಯವಾಗಿ, ಈ ಬಖೈರುಗಳು ಪರಸ್ಪರ ಪೂರಕವಾಗಿರುವಂತಹವು. ಬಾಲಕೃಷ್ಣ ಅವರ ಮಾತುಗಳಲ್ಲೇ ಹೇಳುವುದಾದರೆ, ಇವುಗಳಲ್ಲಿರುವ ಕೆಲವೇ ವಾಸ್ತವಾಂಶಗಳೂ ಪೌರಾಣಿಕ ಮತ್ತು ದಂತಕತೆಗಳ ರಾಶಿಯಲ್ಲಿ ಹೂತುಹೋಗಿವೆ. ಈ ರಾಶಿಯಲ್ಲಿ ಸಿಕ್ಕ ಕೆಲವು ಸಂಗತಿಗಳು ಎಷ್ಟರಮಟ್ಟಿಗೆ ಗಲಿಬಿಲಿಗೊಂಡಿವೆಯೆಂದರೆ, ಇಲ್ಲಿ ಸತ್ಯ ಕೊಲೆಯಾಗಿದೆ; ಕಾಲಾನುಕ್ರಮಣಿಕೆ ಬಲಿಯಾಗಿದೆ ಮತ್ತು ಚರಿತ್ರೆ ಊನಗೊಂಡಿದೆ. ಆದ್ದರಿಂದ ಶಿವಾಜಿಯ ಪೂರ್ವಜರು, ಆತನ ತಂದೆ ಷಾಜಿಯ ಜೀವನ ವೃತ್ತಾಂತ ಅಥವಾ ಶಿವಾಜಿಯ ಬಾಲ್ಯವನ್ನು ಕುರಿತು ಈ ಬಖೈರುಗಳನ್ನು ಎಚ್ಚರಿಕೆಯಿಂದ ಬಳಸಿಕೊಳ್ಳಬೇಕು.[೩೭] ಅಲ್ಲದೆ, ಶಿವಾಜಿಯನ್ನು ಕುರಿತ ಪರಮಾನಂದ ಕವಿಯ ಸಂಸ್ಕೃತ ಮಹಾಕಾವ್ಯ 'ಶಿವಭಾರತ'ವು ನಂಬಲರ್ಹವಾಗಿರುವುದರಿಂದ, ಈ ಸಂಬಂಧದ ಬಖೈರುಗಳನ್ನು ಕೈಬಿಡಬಹುದೆಂಬ ಹೇಳಿಕೆಯೂ ಇದೆ.[೩೮]

---

೩೬ Ibid, pp. 174-184

೩೭ Ibid., p. 173

೩೮ Sethumadhavarao S. Pagadi : *Shivaji*, New Delhi, 1983, p. 16

ನಿರ್ದಿಷ್ಟ ಕಾಲಾನುಕ್ರಮಣಿಕೆಯನ್ನು ಬಹುಮಂದಿ ಬಖೈರು ರಚನಕಾರರು ಅನುಸರಿಸದಿರುವುದರಿಂದ ಮರಾಠಾ ಚರಿತ್ರೆಯಲ್ಲಿ ಹಲವಾರು ಗೊಂದಲಗಳು ಉಂಟಾಗಿವೆ. ಅಧಿಕೃತ ತೇದಿಯನ್ನು ಗುರುತಿಸಿಕೊಡುವುದು ಅಗತ್ಯವೆಂಬ ಕಲ್ಪನೆಯೇ ಇಲ್ಲದೆ ಘಟನೆಗಳನ್ನು ನಿರೂಪಿಸಿರುವುದೂ ಈ ಬಖೈರುಗಳ ವೈಶಿಷ್ಟ್ಯ. ಕೆಲವೆಡೆ ತೇದಿಗಳನ್ನು ಪ್ರಸ್ತಾಪಿಸಿದ್ದರೂ ಅವುಗಳು ಪರಸ್ಪರ ಹೊಂದದಿರುವುದೂ ಇಲ್ಲಿಯ ಕೊರತೆ. ಉದಾಹರಣೆಗೆ, ಶಿವಾಜಿಯ ಜನನದ (ಹಾಗೂ ಮರಣದ) ವರುಷದ ಬಗೆಗೆ ಆತನನ್ನು ಕುರಿತ ಬಖೈರುಗಳಲ್ಲಿ ಒಮ್ಮತವಿಲ್ಲ. ಚಿಟ್ನೀಸ್ ಮತ್ತು ಶಿವದಿಗ್ವಿಜಯ ಬಖರ್‌ಗಳಲ್ಲಿ ಶಿವಾಜಿಯ ಜನನವು ವೈಶಾಖ ಮಾಸ ಪ್ರಥಮಾರ್ಧ ಬಿದಿಗೆ ಗುರುವಾರದಂದು ಆಯಿತೆಂದಿದ್ದು, ಇಲ್ಲಿ ತೇದಿ ಮತ್ತು ವಾರಗಳು ಪರಸ್ಪರ ಸಂಬಂಧಿಸದಿರುವುದು ಗಮನಾರ್ಹ. ರಾಯ್ರಿ ಬಖರ್ ಶಕ ೧೫೪೮ ಎಂತಲೂ ಶೇಡಗಾಂವ್‌ಕರ್ ಬಖರ್ ಶಕ ೧೫೪೯ ಎಂತಲೂ ಜೇಧೆ ಶಕಾವಲಿಯು ಶಕ ೧೫೫೧ ಎಂತಲೂ ಶಿವಾಜಿಯ ಜನನದ ಕಾಲವನ್ನು ಸೂಚಿಸುತ್ತವೆ.[೩೯]

ಮರಾಠಾ ವಿದ್ವಾಂಸರನ್ನು ಪೇಚಿಗೆ ಸಿಕ್ಕಿಸಿರುವ ಇತರ ಬಖೈರುಗಳಲ್ಲಿ, ಶಿವಾಜಿ ಮತ್ತು ಆತನ 'ರಾಜಕೀಯ ಗುರು' ರಾಮದಾಸರ ನಡುವೆ ಇದ್ದ ಗಾಢ ಸಂಬಂಧ ಕುರಿತಂತೆ ಉಪಲಬ್ಧವಿರುವ ರಾಮ್‌ದಾಸೀ ಬಖರ್ ಹಾಗೂ ಹನುಮಂತಸ್ವಾಮೀ ಬಖರ್‌ಗಳೂ ಇವೆ. ಇವುಗಳಲ್ಲಿಯ ಉತ್ಪ್ರೇಕ್ಷಿತ ಚಾರಿತ್ರಿಕ ಅಂಶಗಳು ಮತ್ತು ವಿರೋಧಾಭಾಸಗಳಿಂದ ಕೂಡಿದ ಹೇಳಿಕೆಗಳ ಬಗೆಗೆ ದೀರ್ಘವಾಗಿ ಚರ್ಚಿಸಲಾಗಿದೆ.[೪೦] ಪಾಣಿಪತ್ ಕಾಳಗ ಕುರಿತ ಕೆಲವು ಬಖೈರುಗಳು ಸಹಾ ಇತರ ಅಧಿಕೃತ ದಾಖಲೆಗಳಿಗಿಂತ ಹೊಸ ಸಂಗತಿಗಳನ್ನೇನೂ ಒಳಗೊಂಡಿಲ್ಲವೆಂತಲೇ ವ್ಯಕ್ತಪಟ್ಟಿದೆ. ಶೇಡ್‌ಗಾಂವ್‌ಕರ್ ಬಖರ್‌ನ ಕಾಲದ ಬಗೆಗೂ ಚರ್ಚೆ ನಡೆದಿದೆ. ಈ ಬಖೈರು ಸೃಷ್ಟಿಗೊಂಡುದು ೧೮೫೪ರ ನಂತರ. ೧೬೭೮ರಲ್ಲಿ ನಡೆದ ಘಟನೆ ಬಗೆಗೆ ೧೮೧೧ರಲ್ಲಿಯೂ ೧೮೫೪ರ ನಂತರವೂ ಬರೆದಿರುವುದರಿಂದ ಇದರ ವಿಶ್ವಸನೀಯತೆಯನ್ನು ಶಂಕಿಸಲಾಗಿದೆ.

ಇಷ್ಟಾದರೂ ವಿದ್ವಾಂಸರು ಬಖೈರುಗಳ ಪ್ರಯೋಜನ ಕುರಿತು ಹಲವು ವಿಧದಲ್ಲಿ ಸಮರ್ಥಿಸಿರುವರು. ಅವುಗಳ ಭಾಷೆ, ನಿರೂಪಣಾಕ್ರಮ, ವಿಷಯ ಸಂಗ್ರಹ ಇತ್ಯಾದಿಗಳ ದೃಷ್ಟಿಯಿಂದ ಅವು ಅವರ ಗಮನ ಸೆಳೆದಿವೆ.

ಕೊಲ್ಹಾಪುರ ಮನೆತನದ ಸ್ಥಾಪಕರಲ್ಲಿ ಒಬ್ಬಳೆನಿಸಿದ ಮಹಾರಾಣಿ ತಾರಾಬಾಯಿಯ ಚರಿತ್ರೆಯನ್ನು ರಚಿಸಿದ ಬ್ರಿಜ್ ಕಿಶೋರ್ ಅವರು, ತಮ್ಮ ಬರವಣಿಗೆಯಲ್ಲಿ ಪ್ರಮುಖ ಬಖೈರುಗಳನ್ನು ಬಳಸಿಕೊಂಡಿರುವರು. ಅವರು ಬರೆದಿರುವಂತೆ, ಕೆಲವೊಮ್ಮೆ ಘಟನೆಗಳು, ವ್ಯಕ್ತಿ ಮತ್ತು ಸ್ಥಳನಾಮಗಳನ್ನು ತಪ್ಪಾಗಿ ಉಲ್ಲೇಖಿಸಿದ್ದರೂ ಪ್ರಮುಖ ಘಟನೆಗಳಿಗೆ ಸಂಬಂಧಿಸಿದ ನಿರೂಪಣೆಯೂ ದೊರೆಯುತ್ತದಾದ್ದರಿಂದ, ಬಖೈರುಗಳನ್ನು ಸಂಪೂರ್ಣವಾಗಿ ನಿರ್ಲಕ್ಷಿಸಲಾಗದು.[೪೧] ಬಖೈರುಗಳು 'ಅಫೀಮು ಸೇವಿಸುವವರು ಹೇಳುವ ಕತೆ'ಗಳೆಂಬ

---

೩೯ ವಿವರಗಳಿಗೆ: B. Muddachari: *The Mysore -Maratha Relations in the 17th Century,* Mysore, 1969, pp. 66-67

೪೦ ನೋಡಿ: A. G. Pawar 'Shivaji and Ramdas' JSU., Vols. 2 &3, Nos. 3 to 6, 1969-70, pp. 75-97

೪೧ *Tara Bai and Her Times,* Bombay, 1963 pp. 15-16

ಹೇಳಿಕೆಯಿದ್ದರೂ ಮರಾಠಾ ಚರಿತ್ರೆಯನ್ನು ಕುರಿತ ದಾಖಲೆಗಳನ್ನು ಗಮನಿಸುವಾಗ ಬಖೈರುಗಳಿಗೇ ಪ್ರಥಮ ಆದ್ಯತೆ ನೀಡಬೇಕಾಗುತ್ತದೆ; ಅವು ಮರಾಠರ ಆಡಳಿತದ ಆರಂಭದ ದಾಖಲೆಗಳೆಂಬುದನ್ನು ಒಪ್ಪಿಕೊಳ್ಳಬೇಕಾಗುತ್ತದೆ.[೪೨]

ಮೇಲೆಯೇ ಪ್ರಸ್ತಾಪಿಸಿದಂತೆ, ಬಖೈರುಗಳನ್ನು ಬರೆದವರು ಮರಾಠಾ ಸರದಾರರು, ಸಭಾಸದರು, ರಾಜಪ್ರತಿನಿಧಿಗಳು ಮೊದಲಾದವರು. ಇವರು ತಮ್ಮ ಬಖೈರುಗಳಲ್ಲಿ ತಾವು ಮಾಡಿದುದನ್ನು, ನೋಡಿದುದನ್ನು ಅಥವಾ ತಮ್ಮ ಅಧೀನದ ಇತರರಿಂದ ಕೇಳಿದುದನ್ನು ಚಾಚೂ ತಪ್ಪದೆ ವರದಿರೂಪದಲ್ಲಿ ಸಿದ್ಧಪಡಿಸಿ ತಮ್ಮ ಮೇಲಿನವರಿಗೆ ಕಳುಹಿಸಿಕೊಡುತ್ತಿದ್ದರು. ಜಾದೂನಾಥ ಸರ್ಕಾರ್ ಅವರು ಇಂತಹ ದಾಖಲೆಗಳನು ಅಧಿಕೃತ ಕಾಗದ-ಪತ್ರ, ರಾಜಪ್ರತಿನಿಧಿಗಳ ವರದಿ ಹಾಗೂ ಸುದ್ದಿಪತ್ರಗಳೆಂದು ಮೂರು ಭಾಗವಾಗಿ ವಿಂಗಡಿಸಿದ್ದು, ಅವುಗಳ ಸ್ವರೂಪ ಮತ್ತು ಉದ್ದೇಶಗಳನ್ನು ವಿವರಿಸಿರುವರು.[೪೩] ಮರಾಠಾ ರಾಜಪ್ರತಿನಿಧಿಗಳು (ಹರಿಕಾರರು) ದೆಹಲಿಯ ಮೊಗಲರು, ಕಲ್ಕತ್ತಾದ ಗವರ್ನರ್ ಜನರಲ್ಲರು, ಗೋವೆಯ ಪೋರ್ಚುಗೀಸರು, ಹೈದರಾಬಾದಿನ ನಿಜಾಮರು, ಶ್ರೀರಂಗಪಟ್ಟಣದ ನವಾಬರು (ಟಿಪ್ಪುಸುಲ್ತಾನ್), ಮಹದಾಜಿ ಸಿಂಧಿಯಾ, ಅಹಲ್ಯಾಬಾಯಿ ಹೋಳ್ಕರ್, ಜೋಧಪುರ ಮಹಾರಾಜ ಇವರೇ ಮೊದಲಾದವರ ಆಸ್ಥಾನಗಳಲ್ಲಿ ಮರಾಠಾ ಸಾಮ್ರಾಜ್ಯವನ್ನು ಪ್ರತಿನಿಧಿಸಿದ್ದರು. ಹರಿಕಾರರು ಸ್ಥಳೀಯ ಆಗುಹೋಗುಗಳ ಬಗೆಗೆ ತಮ್ಮ ಸರಕಾರಕ್ಕೆ ವರದಿಗಳನ್ನು (ಕೆಲವೊಮ್ಮೆ ರಹಸ್ಯ ವರದಿಗಳನ್ನು) ಕಳುಹಿಸುತ್ತಿದ್ದರು. ಬಖೈರು ಸಾಹಿತ್ಯದಲ್ಲಿ ಸ್ಥಳೀಯ ವೃತ್ತಾಂತವು ಹೇರಳವಾಗಿರುವುದಕ್ಕೂ ಇದೇ ಕಾರಣ. ಈ ಕುರಿತು ಎಸ್. ಪಿ. ಸೇನ್ ಅವರು ಬರೆಯುವಂತೆ, ಬಖೈರು ಲೇಖಕರು ತಮ್ಮ ಗಮನವನ್ನೆಲ್ಲಾ ತಮ್ಮ ಸುತ್ತಮುತ್ತಲಿನ ಜನರು ಮತ್ತು ಘಟನೆಗಳ ಮೇಲೇ ಕೇಂದ್ರೀಕರಿಸಿರುತ್ತಿದ್ದರು. ತಮ್ಮ ಪರಿಸರದ ಆಚೆಯ ಸಂಗತಿಗಳನ್ನು ಅವರು ಗಮನಿಸುತ್ತಲೇ ಇರಲಿಲ್ಲ. ಇತ್ಯಾದಿ.[೪೪] ಬಖೈರುಗಳು ಪ್ರಾದೇಶಿಕ ಚರಿತ್ರೆಯ ಅಧ್ಯಯನಕ್ಕೆ ಅತ್ಯುಪಯುಕ್ತ ಆಕರಗಳಾಗಿವೆಯೆಂಬುದು ಇದರಿಂದ ವ್ಯಕ್ತಪಡುವ ಸಂಗತಿ.

ಮಹಾರಾಷ್ಟ್ರದಲ್ಲಿ ನಡೆಯುತ್ತಿರುವ ಚಾರಿತ್ರಕ ಸಂಶೋಧನೆಗೆ ಲಭ್ಯವಿರುವಷ್ಟು ವಿವಿಧ ಬಗೆಯ ದಾಖಲೆಗಳು ಭಾರತದ ಯಾವ ಭಾಗದಲ್ಲಿಯೂ ಕಂಡುಬರಲಾರವೆಂತಲೂ ಈ ಬಗೆಗೆ ಮರಾಠರು ಹೆಮ್ಮೆಪಡಬೇಕೆಂತಲೂ ಬಹು ಹಿಂದೆಯೇ ಬರೆದವರು ಖ್ಯಾತ ಮರಾಠಾ ಚರಿತ್ರಕಾರ ಗೋವಿಂದ ಸಖಾರಾಮ ಸರ್‌ದೇಸಾಯಿ ಅವರು.[೪೫] ಶಿವಾಜಿ, ಪೇಶ್ವೆಗಳು, ಹೋಳ್ಕರರು ಮೊದಲಾದವರನ್ನು ಕುರಿತು ಬಖೈರುಗಳು ಉತ್ತಮ ದರ್ಜೆಯ ರಚನೆಗಳೆನಿಸಿದ್ದು, ಮರಾಠರ ಆಸೆ-ಆಕಾಂಕ್ಷೆ, ಒಲವು-ನಲಿವು, ದುಃಖ-ದುಮ್ಮಾನ, ಧೈರ್ಯ-ಉತ್ಸಾಹ, ಲೋಪ-ದೋಷಗಳನ್ನು ಪ್ರತಿಬಿಂಬಿಸುವಂತಹವಾಗಿವೆಯೆಂತಲೂ ವ್ಯಕ್ತಪಡಿಸಿರುವರು. ಶೆಜ್‌ವಾಲ್ಕರ್ ಅವರು ಬಖೈರುಗಳನ್ನು ಟೀಕಿಸುವವರಿಗೆ ಉತ್ತರರೂಪದ ವಿವರಣೆಯು ಇಲ್ಲಿ ಗಮನಾರ್ಹ.[೪೬] ನಾನಾ ಮೂಲಗಳಿಂದ ಸಂಗ್ರಹಿಸಿದ ಮಾಹಿತಿಯನ್ನು ತುಲನೆ ಮಾಡಿ

---

೪೨ S. P. Sen: *Studies in Modern Indian History – A Regional Survey*, Calcutta, 1969, pp. 78-79

೪೩ 'Despatches and Reports in Indian History', *B. C. Law Volume* (Felicitation Volume), Part I, Calcutta, 1945, pp. 9-18

೪೪ Studies in Modern Indian History–*A Regional Survey*, p. 79

೪೫ *The Main Currents of Maratha History*, Bombay, 1933, p. 21

೪೬ *Panipat:* 1761, p. 130

ಸಂಗತಿಯನ್ನು ನಿರೂಪಿಸುವ ಕಾರ್ಯವು ಇತರರಿಂದಲೂ ನಡೆಯುತ್ತಿರುವುದರಿಂದ, ನಿರೂಪಕರ ಸ್ಥಾನ-ಮಾನಗಳನ್ನು ಸರಿಯಾಗಿ ತಿಳಿಯದ ನಮಗೆ ಮರಾಠೀ ಬಖೈರುಗಳು ನೀಡುವ ವೃತ್ತಾಂತವನ್ನು ತಳ್ಳಿಹಾಕುವಂತಹ ಸಮರ್ಥನೀಯ ಕಾರಣವೇ ಕಂಡುಬರುವುದಿಲ್ಲವೆಂದಿದ್ದಾರೆ, ಅವರು.

ಬಖೈರು ಸಾಹಿತ್ಯ ಕುರಿತು ವಿದ್ವಾಂಸರು ಪರ-ವಿರೋಧ ಚರ್ಚೆಗಳನ್ನು ನಡೆಸಿದ್ದರೂ ಪ್ರಸ್ತುತ ಸಂದರ್ಭದಲ್ಲಿ, ಪ್ರೊ॥ ಜಿ. ಎಚ್. ಖರೆ ಅವರು ಈ ಸಾಹಿತ್ಯದ ಬಗೆಗೆ ವ್ಯಕ್ತಪಡಿಸಿರುವ ಖಚಿತ ಅಭಿಪ್ರಾಯವನ್ನೂ ಇಲ್ಲಿ ಗಮನಿಸಬಹುದು. ಅವರು ತಮ್ಮ ಉಪನ್ಯಾಸವೊಂದರಲ್ಲಿ, ಬಖೈರುಗಳನ್ನು ತಾವು ಸಂಪೂರ್ಣ ನಿರ್ಲಕ್ಷಿಸಿರುವುದಾಗಿ ಹೇಳಿರುವರು.[೪೨] ಅವರು ಪ್ರತಿಪಾದಿಸಿರುವ ಅಂಶಗಳಿವು: ಈಗಾಗಲೇ ಅಧಿಕೃತ ಹಾಗೂ ಸಮಕಾಲೀನ ಮರಾಠೀ, ಫಾರ್ಸಿ, ಇಂಗ್ಲಿಷ್ ದಾಖಲೆ, ಕಾಗದ-ಪತ್ರ, ಇತ್ಯಾದಿ ಸಾಮಗ್ರಿಗಳು ಪ್ರಕಟಗೊಂಡಿರುವುದರಿಂದ, ಮರಾಠಾ ಚರಿತ್ರಕಾರರು ಬಖೈರುಗಳಿಗೆ ಅತಿಯಾದ ಮಹತ್ವವನ್ನು ನೀಡುತ್ತಿಲ್ಲ; ಮರಾಠಾ ವಿದ್ವಾಂಸರು ಈಗ ಮಹಾರಾಷ್ಟ್ರದ ಚರಿತ್ರೆಯನ್ನು, ಅದರಲ್ಲೂ ಪೇಶ್ವೆಕಾಲೀನ ಚರಿತ್ರೆಯನ್ನು ಈ ಬಖೈರುಗಳನ್ನು ಬಳಸಿಕೊಳ್ಳದೆಯೇ ಬರೆಯಬಲ್ಲವರಾಗಿರುವರು; ಬಖೈರುಗಳು ಎಂದಿನಂತೆ ಅಸಂಖ್ಯಾತ ದೋಷಗಳಿಂದ ಕೂಡಿರುವ ಕಾರಣದಿಂದಾಗಿ ಸಾಮಾನ್ಯವಾಗಿ ಅವುಗಳನ್ನು ಮೂಲ ದಾಖಲೆಗಳೆಂದು ಮಾನ್ಯ ಮಾಡದೆ ಕೈಬಿಟ್ಟಿರುವರು; ಬಖೈರುಗಳು ಕೆಲವು ವ್ಯಕ್ತಿಗಳು ಸಂಗ್ರಹಿಸಿಕೊಟ್ಟಿರುವ ಅನುಷಂಗಿಕ ಚರಿತ್ರ ಲೇಖನಗಳಾಗಿವೆ; ಇತ್ತೀಚೆಗೆ ಇವುಗಳನ್ನು ೧೬ರಿಂದ ೧೯ನೆಯ ಶತಮಾನದವರೆಗಿನ ಮರಾಠೀ ಭಾಷೆಯ ಸ್ವರೂಪವನ್ನು ಭಾಷಾವಿಜ್ಞಾನದ ದೃಷ್ಟಿಯಿಂದ ಅಧ್ಯಯನ ಮಾಡಲೋಸುಗ ಬಳಸಿಕೊಳ್ಳಲಾಗುತ್ತಿದೆ, ಇತ್ಯಾದಿ.

೫

ಕರ್ನಾಟಕ ಚರಿತ್ರೆ ರಚನೆಯ ಸಾಧನವಾಗಿ ಮರಾಠೀ ಬಖೈರುಗಳನ್ನು ಕನ್ನಡದ ವಿದ್ವಾಂಸರು ಅಷ್ಟಾಗಿ ಬಳಸಿಕೊಂಡಂತಿಲ್ಲ. ಪುಣೆಯ ಪ್ರಾಚ್ಯವಿದ್ಯಾ ಸಂಶೋಧನಾಲಯದಲ್ಲಿ ಸಂರಕ್ಷಿಸಲಾಗಿರುವ ಪೇಷ್ವದಫ್ತರಿನ ರುಮಾಲು (ಗಂಟು)ಗಳು ಮತ್ತಿತರ ದಾಖಲೆಗಳಲ್ಲಿ ಕನ್ನಡನಾಡಿಗೆ ಸಂಬಂಧಿಸಿದ ಮಹತ್ವದ ಚಾರಿತ್ರಕ ಸಂಗತಿಗಳಿದ್ದು, ಅವುಗಳ ಪ್ರಯೋಜನವನ್ನು ಹೆಚ್ಚಾಗಿ ಪಡೆಯುತ್ತಿಲ್ಲವೆಂಬ ಮಾತೂ ಇದೆ. ಮುಂಬಯಿ ಕರ್ನಾಟಕದ ಭಾಗಗಳಾಗಿದ್ದ ಕೆಲವು ಪ್ರದೇಶಗಳ ಚಾರಿತ್ರಕ ವೃತ್ತಾಂತವು ಮೋಡಿಲಿಪಿಯಲ್ಲಿರುವ ಈ ದಫ್ತರುಗಳಲ್ಲಿ ದೊರಕುತ್ತವೆ. ಇವುಗಳಲ್ಲಿ ಕೆಲವು ಈಗಾಗಲೇ ಮುದ್ರಣ ಕಂಡಿವೆ. ಕಿತ್ತೂರು, ಸವಣೂರು, ಧಾರವಾಡ, ಬೆಳವಡಿ, ಬೆಳಗಾವಿಗಳಲ್ಲದೆ ಚಿತ್ರದುರ್ಗ, ಸಿರಾ, ಬೆಂಗಳೂರು ಮೊದಲಾದ ಪ್ರದೇಶಗಳ ಚಾರಿತ್ರಕ ಘಟನೆಗಳ ವಿವರಗಳೂ ಈ ದಾಖಲೆಗಳಲ್ಲಿವೆ. ಮರಾಠರು ಈ ಪ್ರದೇಶಗಳಲ್ಲಿ ತಮ್ಮ ಪ್ರಭಾವ ಬೀರಿದ್ದರು; ರಾಜಕೀಯ ಬಾಂಧವ್ಯ

---

೪೨ 'Marathi Sources for the History of Karnataka', The Quarterly Journal of the Mythic Society, LXXI-1, 2, January-June 1980, pp. 1-16

ಇರಿಸಿಕೊಂಡಿದ್ದರು. ಈ ಹಿನ್ನೆಲೆಯಲ್ಲಿ ಕರ್ನಾಟಕ ಚರಿತ್ರೆಯ ಮರುರಚನೆಯಲ್ಲಿ ಈ ಸಾಮಗ್ರಿಯನ್ನು ಉಪಯೋಗಿಸಿಕೊಳ್ಳುವ ಅಗತ್ಯದ ಬಗೆಗೆ ಒತ್ತಿ ಹೇಳಲಾಗುತ್ತದೆ.

ಹದಿನೇಳನೆಯ ಶತಮಾನದಲ್ಲಿ ಕರ್ನಾಟಕದ ಸಣ್ಣ ಸಂಸ್ಥಾನಗಳಲ್ಲೊಂದಾಗಿದ್ದ (ಈಗಿನ ಬೆಳಗಾವಿ ಜಿಲ್ಲೆ, ಬೈಲಹೊಂಗಲ ತಾಲ್ಲೂಕಿನ) ಬೆಳವಡಿಯನ್ನು ಕುರಿತು, ಕೆಲವು ಮರಾಠೀ ಬಖೈರುಗಳಲ್ಲಿರುವ ಚಾರಿತ್ರಿಕ ಸಂಗತಿಗಳನ್ನು ಸಂಗ್ರಹಿಸಿ ಡಾ॥ ಕೆ. ಎನ್. ಚಿಟ್ನೀಸ್ ಅವರು, 'ಮರಾಠಿ ಬಖರುಗಳಲ್ಲಿ ಬೆಳವಡಿ ಮಲ್ಲಮ್ಮ' ಎಂಬ ತಮ್ಮ ಲೇಖನದಲ್ಲಿ ಬಳಸಿಕೊಂಡಿದ್ದಾರೆ.[೪೮] ಸಭಾಸದ್ ಬಖರ್, ಚಿತ್ರಗುಪ್ತ ಬಖರ್, ಶಹನಾವ್ ಕಲಮೀ ಬಖರ್, ಶಿವದಿಗ್ವಿಜಯ ಬಖರ್, ಚಿಟ್ನೀಸ್ ಬಖರ್ ಹಾಗೂ ಶೇಡಗಾಂವ್‌ಕರ್ ಬಖರ್‌ಗಳಲ್ಲಿಯೂ ಜೇಧೆ ಶಕಾವಲಿಯಲ್ಲಿಯೂ ಉಕ್ತಗೊಂಡಿರುವ ಬೆಳವಡಿ ಮಲ್ಲಮ್ಮ ಮತ್ತು ಛತ್ರಪತಿ ಶಿವಾಜಿಯರ ನಡುವೆ ೧೬೭೮ರಲ್ಲಿ ನಡೆದ ಯುದ್ಧ ವರ್ಣನೆಯನ್ನು ಕುರಿತು ಈ ಲೇಖನದಲ್ಲಿ ವಿವೇಚಿಸಲಾಗಿದೆ. ಮುಖ್ಯವಾಗಿ, ಬಖೈರುಗಳ ಅಂತರಂಗವನ್ನು ವಿವರವಾಗಿ ಪರಿಶೀಲಿಸಿ ವಿಮರ್ಶಿಸಲಾಗಿದೆ. ಇಲ್ಲಿಯ ಬಖೈರುಗಳು ಹೇಳುವಂತೆ, ಬಖೈರುಗಳ ಅಂತರಂಗವನ್ನು ವಿವರವಾಗಿ ಪರಿಶೀಲಿಸಿ ವಿಮರ್ಶಿಸಲಾಗಿದೆ. ಇಲ್ಲಿಯ ಬಖೈರುಗಳು ಹೇಳುವಂತೆ, ಬೆಳವಡಿಯ ಈಶಪ್ರಭುವು ಶಿವಾಜಿಯ ಸೈನಿಕರೊಡನೆ ಯುದ್ಧ ಮಾಡಿ ಮಡಿದನು. ಆತನ ರಾಣಿ ಮಲ್ಲಮ್ಮಳು ತನ್ನ ಪತಿಯು ಮಡಿದುದರಿಂದಾಗಿ ಸ್ವತಃ ತಾನೇ ರಣರಂಗವನ್ನು ಹೊಕ್ಕು ತನ್ನ ಪರಾಕ್ರಮದಿಂದ ಅಖಂಡ ೨೭ ದಿವಸಗಳ ಕಾಲ ಹೋರಾಡಿ ಮರಾಠರನ್ನು ಹಿಮ್ಮೆಟ್ಟಿಸಿದಳು. ಆದರೆ ಕಡೆಯಲ್ಲಿ ಅಸಹಾಯಕಳಾದಾಗ ಶಿವಾಜಿಯು ಆಕೆಯನ್ನು ಸನ್ಮಾನಿಸಿ ಆಕೆಗೆ ಜಹಗೀರನ್ನು ಹಾಕಿಕೊಟ್ಟನು. ಡಾ॥ ಚಿಟ್ನೀಸ್ ಅವರು ತಮ್ಮ ಈ ಅಧ್ಯಯನದಲ್ಲಿ, ಮರಾಠೀ ಬಖೈರುಗಳನ್ನು ಬಳಸಿಕೊಳ್ಳುವ ದಿಸೆಯಲ್ಲಿ ವಿದ್ವಾಂಸರು ಅವುಗಳ ವಿಶ್ವಸನೀಯತೆಯ ವಿಚಾರದಲ್ಲಿ ಎಚ್ಚರ ವಹಿಸಬೇಕಾದುದು ಅಗತ್ಯವೆಂಬುದನ್ನು ಸೋದಾಹರಣವಾಗಿ ತೋರಿಸಿಕೊಟ್ಟಿರುವುದು ಇಲ್ಲಿಯ ವೈಶಿಷ್ಟ್ಯ. ಇದೇ ಘಟನೆಯನ್ನು ನಿರೂಪಿಸುವ 'ಶಿವಾಜಿ-ಮಲ್ಲಮ್ಮಾಜಿ ಸಮರೋತ್ಸವ' (೧೮ನೆಯ ಶತಮಾನ) ಎಂಬ ಮರಾಠೀ ಭಾಷೆ ಮತ್ತು ಕನ್ನಡ ಲಿಪಿಯ ಹಸ್ತಪ್ರತಿಯೊಂದನ್ನು ಡಾ॥ ಚಿಟ್ನೀಸ್ ಅವರೇ ೧೯೮೯ರಲ್ಲಿ ಸಂಪಾದಿಸಿಕೊಟ್ಟಿರುವುದನ್ನೂ ಇಲ್ಲಿ ನೆನೆಯಬಹುದು.

ಕನ್ನಡ ಭಾಷೆಯಲ್ಲಿಯೂ ಕೆಲವು ಬಖೈರುಗಳಿವೆ. ಇವು ಕರ್ನಾಟಕದ ಒಂದೆರಡು ಸಂಸ್ಥಾನಗಳಿಗೆ ಸಂಬಂಧಪಟ್ಟುವು. 'ಬಖೈರು' ಅಂಕಿತ ಪಡೆದ ಅಥವಾ ಹಾಗೇ ಆರೋಪಿಸಲ್ಪಟ್ಟ ಕನ್ನಡ ಭಾಷೆಯಲ್ಲಿರುವ ದಾಖಲೆಗಳು—ಈ ಲೇಖಕನಿಗೆ ತಿಳಿದಮಟ್ಟಿಗೆ—ಸುಮಾರು ನಾಲ್ಕು: ೧. ರಾಮರಾಯನ ಬಖೈರು,[೪೯] ಹೈದರನಾಮಾ ಬಖೈರು,[೫೦]

೪೮ ಬಿ. ಆರ್. ಜಕಾತಿ (ಪ್ರ. ಸಂ.): ವೀರರಾಣಿ ಮಲ್ಲಮ್ಮ ಬೆಳವಡಿ (೩ನೆಯ ಶತಮಾನೋತ್ಸವ ಸ್ಮರಣ ಸಂಚಿಕೆ, ೧೬೭೮-೧೯೭೮), ಬೆಳವಡಿ, ೧೯೭೯, ಪು. ೩೧-೩೭

೪೯ ಈ ಬಖೈರು ಪ್ರತಿಗಳು ಮೂರು: ರಾಮರಾಜನ ಬಖೈರು (ಎರಡು ಪ್ರತಿಗಳು) ಮತ್ತು ವಿಜಯನಗರದ ರಾಮರಾಯನ ಬಖೈರು- *An Alphabetical Index of Kannada Manuscripts*, Sl. Nos. 1354, 1355 & 1418, pp. 38, 40; ತಿ. ತಾ. ಶರ್ಮ (ಸಂ. ): ಚಾರಿತ್ರಿಕ ದಾಖಲೆಗಳು, ಬೆಂಗಳೂರು, ೧೯೭೧, ಪು. ೨೧-೧೫೩; ಈ ಸಂಗ್ರಹದಲ್ಲಿ ರಾಮರಾಯನ ಬಖೈರು, ಹೈದರ್‌ನಾಮಾ ಮತ್ತು ಕೊಡಗು ವೀರರಾಜೇಂದ್ರರ ಪತ್ರ-ಈ ಮೂರು ದಾಖಲೆಗಳನ್ನು ಪ್ರಕಟಿಸಲಾಗಿದೆ.

೫೦ ಚಾರಿತ್ರಿಕ ದಾಖಲೆಗಳು

ನಾಯಕನಹಟ್ಟಿ ಬಖೈರು[೫೧] ಮತ್ತು ಚಿತ್ರದುರ್ಗದ ಬಖೈರು.[೫೨] ಈ ಬಖೈರುಗಳು ಒಳಗೊಂಡಿರುವ ವಿಷಯದ ಚರ್ಚೆಯನ್ನು ಇಲ್ಲಿ ಕೈಗೊಳ್ಳದೆ, ಅವುಗಳ ವಿವಿಧ ಹಸ್ತಪ್ರತಿಗಳು, ಅವುಗಳ ಕರ್ತೃಗಳು, ಇತ್ಯಾದಿ ಕುರಿತ ಪರಿಚಯವನ್ನು ಮಾತ್ರ ಈ ಕೆಳಗಿನಂತೆ ಮಾಡಿಕೊಟ್ಟಿದೆ:

**ರಾಮರಾಯನ ಬಖೈರು:** ಈ ಬಖೈರನ್ನು ಮೈಸೂರಿನ ಕರ್ಣಾಟಕ ಗ್ರಂಥಮಾಲೆಯ ಮೂಲಕ ಮೊದಲ ಬಾರಿಗೆ ೧೯೨೨ರಲ್ಲಿ ಪ್ರಕಟಿಸಿ ಹೊರತಂದವರು ತಿ. ತಾ. ಶರ್ಮ ಅವರು.[೫೩] ಅವರ ಪ್ರಕಾರ, ''ಈ ಬಖೈರ್ ಮರಾಠಿಗೂ ಭಾಷಾಂತರವಾಗಿರುವಂತೆ ಕಂಡುಬರುತ್ತದೆ.'' ಈ ಬಖೈರನ್ನು ಯಾರು ಬರೆದರೆಂಬುದನ್ನಾಗಲೀ ಬರೆದವನ ಉದ್ದೇಶವನ್ನಾಗಲೀ ಅವರು ಪ್ರಸ್ತಾಪಿಸಲು ಅಥವಾ ಚರ್ಚಿಸಲು ಪ್ರಯತ್ನಿಸಿಲ್ಲ. ''ಇದನ್ನು ಬರೆದವನು ವಿಜಯನಗರದ ರಾಮರಾಯನ ಸನ್ನಿಧಿಯಲ್ಲೆ ಇದ್ದವನು. ಅವನೇ ಇದನ್ನು ಬರೆದವನು'' ಎಂದಷ್ಟೆ ಸರಳವಾಗಿ ಹೇಳಿರುವರು. ಆದರೆ 'ತಾಳೀಕೋಟೆ' ಯುದ್ಧ ಸಂದರ್ಭದಲ್ಲಿ ವಿಜಯನಗರದ ಆಸ್ಥಾನದಲ್ಲಿ (ಮರಾಠರ?) ಪ್ರತಿನಿಧಿಯಾಗಿದ್ದ ರಾಮ್‌ಜೀ ತಿರುಮಲ ಎಂಬುವನು ಈ ವೃತ್ತಾಂತವನ್ನು ಬರೆದನೆಂತಲೂ ಇಷ್ಟರ ವಿನಾ ಅವನ ಬಗೆಗೆ ಹೆಚ್ಚಿನ ಸಂಗತಿಯು ಈ ಕೃತಿಯಿಂದ ತಿಳಿದುಬರುವುದಿಲ್ಲವೆಂತಲೂ ಅನ್ಯತ್ರ ಹೇಳಿದೆ.[೫೪] ಅವನು ಯಾರ ಪ್ರತಿನಿಧಿಯಾಗಿ ನೇಮಕಗೊಂಡಿದ್ದನೆನ್ನುವುದನ್ನು ಅಲ್ಲಿ ಸ್ಪಷ್ಟಪಡಿಸಲಾಗಿಲ್ಲ. ಆದರೆ ರಾಮಾಜಿ ತಿರುಮಲ ಹರಿಕಾರೆಯು (ಇದು ಈತನ ಪೂರ್ತ ಹೆಸರು) ೧೬೩೨ರಿಂದ ೧೬೪೨ರ ವರೆಗೆ ಆಳಿದ ಇಮ್ಮಡಿ ವೆಂಕಟ(ಪತಿ)ನ ಸೇವೆಯಲ್ಲಿ ತನ್ನ ಪ್ರಭು(?)ವಿನ ಆಣತಿಯಂತೆ ಇದ್ದವನು.[೫೫]

ರಾಮರಾಯನ ಬಖೈರು ಮರಾಠೀ ಭಾಷೆಯಲ್ಲಿಯೂ ಇದೆ. ಈ ಬಗೆಗೆ ಚರಿತ್ರಕಾರರು ಹೇಳುವಂತೆ, ಯಾವ ಭಾಷೆಯಲ್ಲಿ ಮೊದಲಿಗೆ ಇದನ್ನು ಬರೆಯಲಾಯಿತೆಂಬುದನ್ನು ಖಚಿತವಾಗಿ ಹೇಳಲಾಗದಿದ್ದರೂ ಈ ದಾಖಲೆಯ ಆಧಾರದಿಂದಲೇ ನಿರ್ಧರಿಸುವುದಾದರೆ, ಇದು ಮೂಲದಲ್ಲಿ ಕನ್ನಡದಲ್ಲೆ ಬರೆಯಲ್ಪಟ್ಟಿದೆನ್ನಬಹುದು. ಆದರೂ ಈ ಬಗೆಗೆ ಶೋಧನೆ ಅಗತ್ಯ.[೫೬] ಪಿ. ಬಿ. ದೇಸಾಯಿ ಅವರು ಈ ಬಖೈರ್‌ನ ವಸ್ತುನಿಷ್ಠತೆ ಕುರಿತು ತಮ್ಮ ಶಂಕೆ ವ್ಯಕ್ತಪಡಿಸಿರುವರಲ್ಲದೆ, ಈ ದಾಖಲೆಯು ಕಾಲ್ಪನಿಕ ಹಾಗೂ ಅತಿಶಯೋಕ್ತಿಗಳಿಂದ ಕೂಡಿದ ಆನಂತರದ ರಚನೆಯೆಂದು ಅಭಿಪ್ರಾಯಪಟ್ಟಿರುವರು.[೫೭]

---

೫೧ ಎಂ. ಎನ್. ಪ್ರಭಾಕರ್ (ಸಂ.): 'ನಾಯಕನಪಟ್ಟಿ ಬಖೈರು', ಚಂದ್ರವಳ್ಳಿ (ಚಿತ್ರದುರ್ಗ ಜಿಲ್ಲೆಯ ಇತಿಹಾಸ ಕುರಿತ ಲೇಖನಗಳ ಸಂಗ್ರಹ), ಚಿತ್ರದುರ್ಗ, ೧೯೭೬: ಭಾಗ-೪, ಪು. ೨೨-೩೬

೫೨ ಹುಲ್ಲೂರು ಶ್ರೀನಿವಾಸ ಜೋಯಿಸ (ಸಂ.): ಚಿತ್ರದುರ್ಗದ ಬಖೈರು, ಮೈಸೂರು, ೧೯೬೮

೫೩ ಅವರು ರಾಮರಾಯನ ಬಖೈರನ್ನು (ಎರಡು ಪ್ರತಿಗಳನ್ನು) ಮದರಾಸಿನ ಸರ್ಕಾರಿ ಪ್ರಾಚ್ಯ ಹಸ್ತಪ್ರತಿಗಳ ಭಂಡಾರ (Government Oriental Manuscripts Library)ದಲ್ಲಿ ರಕ್ಷಿಸಿಡಲಾಗಿರುವ ಮೆಕೆಂಜಿಯ ಸಂಗ್ರಹ ದಿಂದ ಪ್ರತಿಮಾಡಿಕೊಂಡಿದ್ದಾರೆ.

೫೪ S. Krishnasvami Aiyangar: *Ancient India and South Indian History and Culture*, Vol. II, Poona, 1941, p. 173

೫೫ K. A. Nilakanta Sastri & N. Venkataramanayya: *Further Sources of Vijaynagara History*, Madras, 1946, pp. 204-5; P. B. Desai (Ed.): *A History of Karnataka*, Dharwar, 1970, p. 23

೫೬ *Ancient India and South Indian History and Culture*, p. 173

೫೭ *A History of Karnataka* , p. 23

**ಹೈದರ್‌ನಾಮಾ ಬಖೈರು:** 'ಹೈದರ್‌ನಾಮಾ'ದ ಕಡೆಯಲ್ಲಿ ''ಕ್ರೋಧಿ ಸಂವತ್ಸರದ ಆಷಾಡಶು್ದ ೧೧ ಮಂಗಳವಾರು ಸೂರ್ಯೋದಯವಾದ ಆ್ರೈದು ಘಳಿಗೆ ಹೈದರನಾಮಾ ಬಕೈರೆ ಸಂಪೂರ್ನವಾಯಿತು'' ಎಂದಿದೆ. ಇದರಿಂದಾಗಿ ಈ 'ನಾಮಾ' ಸಹಾ ಬಖೈರು ಎಂಬುದಾಗಿ ಕರೆಸಿಕೊಂಡಿರುವುದು ವ್ಯಕ್ತಪಡುತ್ತದೆ. ಇದು ಪರಿಶೀಲನಾರ್ಹವಾದುದು. ತಿ. ತಾ. ಶರ್ಮ ಅವರು 'ಹೈದರ್‌ನಾಮಾ'ವನ್ನು ಬಖೈರ್ ಎಂತಲೂ ಕರೆದು, ಅದನ್ನು ಆ ಹೆಸರಿನಿಂದಲೇ ಸಂಪಾದಿಸಿ ಪ್ರಕಟಿಸಿರುವರು.[೫೮] ಆದರೆ ಈ ಕೃತಿಗೆ 'ಬಕೈರ್' ಎಂದು ಏಕೆ ಕರೆಯಲಾಗಿದೆಯೆಂಬುದಕ್ಕೆ ಅವರು ವಿವರಣೆ ನೀಡಿಲ್ಲ. ೧೯೩೪ರಲ್ಲಿ ಇದೇ ಹಸ್ತಪ್ರತಿಯನ್ನು ನಲ್ಲಪ್ಪನ ವಂಶಜರಿಂದ ಸಂಗ್ರಹಿಸಿ ಅದರ ಸಾರಾಂಶವನ್ನು ಮೈಸೂರು ಪುರಾತತ್ತ್ವ ಇಲಾಖೆಯ ವಾರ್ಷಿಕ ವರದಿಯಲ್ಲಿ ಪ್ರಕಟಿಸಿದ ಡಾ॥ ಎಂ. ಎಚ್. ಕೃಷ್ಣ ಅವರು ಇದನ್ನು 'ಹೈದರ್‌ನಾಮಾ' ಎಂದಷ್ಟೇ ಕರೆದಿದ್ದಾರೆ.[೫೯] ಅಲ್ಲದೆ, ಈ ದಾಖಲೆಯನ್ನು ಕುರಿತು ಪ್ರತ್ಯೇಕವಾಗಿ ಬರೆದು ಪ್ರಕಟಿಸಿದ ತಮ್ಮ ಲೇಖನದಲ್ಲಿಯೂ ಡಾ॥ ಕೃಷ್ಣ ಅವರು ಬಖೈರು ಎಂಬ ಸಂಬೋಧನೆಯ ಬಗೆಗೆ ಏನನ್ನೂ ಪ್ರಸ್ತಾಪಿಸಿಲ್ಲ.[೬೦] ಬಹುಶಃ ಆ ಪದವನ್ನು ಅವರು ಅಷ್ಟಾಗಿ ಗಮನಿಸದೆ ನಿರ್ಲಕ್ಷಿಸಿದ್ದಿರಬಹುದು. 'ಹೈದರ್‌ನಾಮಾ'ದ ಇತರ ಪ್ರಕಟಣೆಗಳಲ್ಲಿಯೂ[೬೧] ಈ ಬಗೆಗೆ ಗಮನಿಸಬೇಕಿದೆ.

'ನಾಮಾ' ಎಂದರೇನೆಂಬುದನ್ನು ಮೇಲೆಯೇ ತಿಳಿದಿದ್ದೇವೆ. ಚಾರಿತ್ರಕ ದಾಖಲೆಗಳ ಸಾಲಿಗೆ 'ನಾಮಾ'ಗಳೂ ಸೇರಿವೆ. ಆದರೆ ಇಲ್ಲಿ ಅಂತಹ ಪ್ರಯೋಗದೊಡನೆ 'ಬಕೈರೆ' ಎಂಬುದನ್ನು ಸಹಾ ಸೇರಿಸಿ ಕರೆದಿರುವುದರ ಔಚಿತ್ಯವನ್ನು ಗಮನಿಸಬೇಕಿದೆ. ಪ್ರಾಯಶಃ ಕನ್ನಡದಲ್ಲಿಯ ಕೆಲವು ದಾಖಲೆಗಳನ್ನು ಚರಿತ್ರೆ-ಪುರಾಣ,[೬೨] (ರಾಜ) ವಂಶಾವಳಿ-ಕೈಫಿಯತ್ತು,[೬೩] ವಿಷಯ-ವ್ಯಾಖ್ಯಾನ,[೬೪] ಉತ್ಪತ್ತಿ-ಇತಿಹಾಸ,[೬೫] ಪೂರ್ವೋತ್ತರ-ಸಂಗತಿ[೬೬]

---

೫೮ ನೋಡಿ: 'Haidar Nama or Bakhair by Nallappa', QJMS., Vol. 56, Nos. 1-4, April 1965-January 1966: Vol-56, Nos- 1-4, April 1966-January 1967 & Vol. 58, Nos. 1-4, April 1967-January 1968

೫೯ *Annual Report of the Mysore Archaeological Department,* 1934, pp. 79-106: 'HyderNama' (A manuscript in Kannada)

೬೦ 'The Hyder-Nama on the Administration of Hyder Ali', *Proceedings of the Indian History Congress* (Third Session), Calcutta, 1939, 00. 1554-1564

೬೧ ಉದಾಹರಣೆಗೆ, ಮೈಸೂರಿನ 'ಗ್ರಾಜುಯೇಟ್ಸ್ ಟ್ರೇಡಿಂಗ್ ಅಸೋಸಿಯೆಷನ್'ನವರು ಮಾರಾಟಕ್ಕೆ ಸಿದ್ಧಪಡಿಸಿದ ಭಾವಚಿತ್ರ ಸಹಿತವಾದ 'ಹೈದರ್‌ನಾಮಾ', ಆರ್. ನರಸಿಂಹಾಚಾರ್ ಅವರು 'ಕರ್ಣಾಟಕ ಕವಿಚರಿತೆ'ಯ ತೃತೀಯ ಸಂಪುಟ (ಬೆಂಗಳೂರು, ೧೯೭೪, ಪು. ೨೩೪)ದಲ್ಲಿ ಉಲ್ಲೇಖಿಸಿರುವ ಎಚ್. ಅಪ್ಪಣಶೆಟ್ಟಿ ಎಂಬಾತನ 'ಹೈದರ್‌ನಾಮೆ', ಇತ್ಯಾದಿ.

೬೨ ಎಸ್. ಶಿವಣ್ಣ: ಕರ್ಣಾಟಕ ಕವಿಚರಿತೆಯ ಅನುಕ್ತಕೃತಿಸೂಚಿ, ಮೈಸೂರು, ೧೯೬೭, ಪು. ೩೮: ಕ್ರಮಸಂಖ್ಯೆ ೧೩೩೦: ಪಾರ್ಶ್ವನಾಥಸ್ವಾಮಿ ಚರಿತ್ರೆ ಪುರಾಣ

೬೩ ಅದೇ, ಕ್ರಮಸಂಖ್ಯೆ ೧೭೩೨, ೨೫೨೮, ಪು. ೫೦, ೭೩ಚ AIKM., Sl. Nos. 1325, 1625-1627, pop. 37,46

೬೪ ಕಕಅಕೃ., ಕ್ರಮಸಂಖ್ಯೆ ೨೨೫೫, ಪು. ೬೫: ಶಿವಪಾರಮ್ಯ ವಿಷಯ ವ್ಯಾಖ್ಯಾನ

೬೫ ಅದೇ, ಕ್ರಮಸಂಖ್ಯೆ ೨೬೯೫, ಪು. ೭೯: ಹವಿಕ ದ್ರಾವಿಡ ಬ್ರಾಹ್ಮಣರ ಉತ್ಪತ್ತಿಯ ಇತಿಹಾಸವು

೬೬ AIKM., Sl. No. 1317, p. 37

ರಿವಾಜು- ಕೈಫಿಯತ್ತು,[೬೭] ಇತ್ಯಾದಿಯಾಗಿ ಸಾಮಾನ್ಯವಾಗಿ ಒಂದೇ ಅರ್ಥವನ್ನು ವ್ಯಕ್ತಪಡಿಸುವ ಇಂತಹ ಪರ್ಯಾಯ ಪದಗಳಿಂದ ಕರೆದಿರುವಂತೆಯೇ 'ನಾಮಾ-ಬಖೈರು' ಎಂತಲೂ ಕರೆದಿರಬಹುದು. ಇನ್ನೊಂದು ಗಮನಾರ್ಹ ಅಂಶವೆಂದರೆ, 'ನಾಮಾ-ಬಖೈರು' ಎಂದಿರುವಂತೆಯೇ 'ಕೈಫಿಯತು ನಾಮೆ' ಎಂಬ ಉದಾಹರಣೆಗಳೂ[೬೮] ದೊರೆಯುವುದರಿಂದ 'ನಾಮಾ-ಬಖೈರು' ಎಂಬುದನ್ನು ಸಹಾ ಮೇಲಿನವುಗಳಂತೆಯೇ ಅಭ್ಯಾಸದಿಂದ/ರೂಢಿಯ ಬಲದಿಂದ ಕರೆದಿರಬಹುದು. ಹಾಗೆಯೇ, ಇಂತಹ ಪ್ರಯೋಗಗಳನ್ನು 'ಬೇಕಾಬಿಟ್ಟಿಯಾಗಿ' ಬಳಸಿರುವ ಸಾಧ್ಯತೆಯೂ ಇಲ್ಲದಿಲ್ಲ.

**ನಾಯಕನಹಟ್ಟಿ ಬಖೈರು:** ಇದು ಚಿತ್ರದುರ್ಗ ಜಿಲ್ಲೆ, ಚಳ್ಳಕೆರೆ ತಾಲ್ಲೂಕಿನ ನಾಯಕನಹಟ್ಟಿ ಪಾಳೆಯಗಾರರನ್ನು ಕುರಿತ ದಾಖಲೆ. ದಪ್ಪ ಕೈಕಾಗದದ ಮೇಲೆ ಕನ್ನಡದ ಮೋಡಿ ಅಕ್ಷರಗಳಲ್ಲಿ ಬರೆಯಲ್ಪಟ್ಟ ಈ ದಾಖಲೆಯು, ಸುಮಾರು ಒಂದುನೂರು ವರುಷಗಳಷ್ಟು ಹಳೆಯದಿರಬಹುದೆಂಬುದು ಅದರ ಸಂಗ್ರಹಕಾರರ ಅಭಿಪ್ರಾಯ. ದಾಖಲೆಯ ಆರಂಭದಲ್ಲಿ 'ನಾಯಕನಹಟ್ಟಿ ಬಖೈರು ಶ್ರೀಶೈಲ ಮಲ್ಲೇಶ್ವರ' ಎಂಬ ಅಂಕಿತವಿದೆ. ಯಾವ ಕಾರಣಕ್ಕಾಗಿ ಇದನ್ನು ಬಖೈರು ಎಂದು ಸಂಬೋಧಿಸಲಾಗಿದೆಯೋ ಸೂಚನೆಯಿಲ್ಲ. ಕಥಾರೂಪದಲ್ಲಿ ಹರಿಯುವ ಇಲ್ಲಿಯ ವೃತ್ತಾಂತವು ಅಪರೂಪವೆನ್ನುವಷ್ಟರ ಮಟ್ಟಿಗೆ ಅನ್ಯದೇಶೀಯ ಪದಗಳನ್ನು ಹೊಂದಿದೆ.

**ಚಿತ್ರದುರ್ಗದ ಬಖೈರು:** ಇದು ಚಿತ್ರದುರ್ಗ ನಾಯಕ ಅರಸರ ಚರಿತ್ರೆಯನ್ನು ತಿಳಿಸುವ ಚಾರಿತ್ರಕ ದಾಖಲೆ. ಈ ಸಂಸ್ಥಾನದ ಕೊನೆಯ ಅರಸ ರಾಜಾವೀರ ಮದಕರಿನಾಯಕನ (೧೭೫೪-೧೭೭೯) ಆಳ್ವಿಕೆಯ ಅವಧಿಗೆ ಸಂಬಂಧಿಸಿದ ರಾಜಕೀಯ ವ್ಯವಹಾರ, ಪರಿಣಾಮ, ಇತ್ಯಾದಿಗಳನ್ನು ಕೂಲಂಕಷವಾಗಿ ವಿವರಿಸುವ ಉದ್ದೇಶ ಈ ಬಖೈರ್‌ನದು. ಈ ಸಂಸ್ಥಾನದ ಹಿನ್ನೆಲೆ ಹಾಗೂ ಇತರ ಆಗುಹೋಗುಗಳ ಬಗೆಗಿನ ವಿವರಣೆಗಳೂ ಇದರಲ್ಲಿವೆ. ಈ ಚರಿತ್ರೆಯ ಮಟ್ಟಿಗೆ, ಈ ಬಖೈರು ಸಮಕಾಲೀನವೂ ಅಧಿಕೃತವೂ ವಿಶ್ವಸನೀಯವೂ ಆದುದೆಂದು ಪರಿಗಣಿಸಲ್ಪಟ್ಟಿದೆ.

ಮೊದಲಿಗೆ ಈ ದಾಖಲೆಯನ್ನು ಕರ್ನಾಟಕದ ಜನರಿಗೆ ಪರಿಚಯಿಸಿಕೊಟ್ಟವರು 'ಇತಿಹಾಸ ಸಂಶೋಧನ ಪ್ರಸಕ್ತ' ಹಾಗೂ 'ಐತಿಹ್ಯ ವಿಮರ್ಶನ ವಿಚಕ್ಷಣ' ಬಿರುದುಗಳಿಂದ ಪುರಸ್ಕೃತರಾದ ಚಿತ್ರದುರ್ಗದ ಹುಲ್ಲೂರು ಶ್ರೀನಿವಾಸ ಜೋಯಿಸರು (೧೮೯೨-೧೯೫೬). ೧೯೫೨ ಜುಲೈ ೧೩ರಿಂದ ಡಿಸೆಂಬರ್ ೨೧ರ ವರೆಗೆ ಒಟ್ಟು ೨೧ ಲೇಖನಗಳಲ್ಲಿ ಈ

---

೬೭ Ibid., Sl. No. 1695, p. 48

೬೮ ನೋಡಿ: ದಕ್ಷಿಣಕನ್ನಡ ಜಿಲ್ಲೆಯ ಕೈಫಿಯತ್ತುಗಳು -ಉದಾ-ಯೆಲ್ಲೂರ ದೇವಸ್ಥಾನದ ಕೈಫಿಯತು (ಕೈಪಿಯತು ನಾಮ/ಕೈಫಿಯತು ನಾಮೆ), ಪು. ೧೭೫; ಕುಂಬಕಾಸಿ ಸ್ಥಳದ ಕುಂಬೇಶ್ವರ ಮಹತ್ವ (/ಕೈಫಿಯತು ನಾಮೆ ವಿವರ), ಪ್ರ. ೩೭೮ಜ ಪಲಿಮಾರ್ ಮಠದ ಕೈಫಿಯತು (/ಗುರುಪೀಳಿಗೆ ಕ್ರಮದ ಕೈಫಿಯತು ನಾಮೆ), ಪ್ರ. ೨೯೨; ಕ್ರಿಷ್ಣಾಪೂರ್ ಮಠದ ಕೈಫಿಯತ್ (/ಗುರುಪಾರಂಪರ್ಯದ ಕೈಫಿಯತು ನಾಮೆ), ಪು. ೨೨೪, ಇತ್ಯಾದಿ

ಇತರ ಉದಾಹರಣೆಳು: ಸೋದೆಮಠ ಕೈಪಿಯತು (/ಗುರುಪೀಳಿಗೆ(, ಪು. ೨೩೧; ಆದಮಾರ ಮಠದ ಕೈಪಿಯತು (/ವಂಶಾವಳಿ), ಪು. ೨೩೭; ಪೇಜಾವರ ಮಠದ ಕೈಫಿಯತು (/ವಿವರ), ಇತ್ಯಾದಿ

ಬಖೈರ್‌ನ ಪಾಠವನ್ನು ಅಂದಿನ ಪ್ರಸಿದ್ಧ 'ತಾಯಿನಾಡು' ಕನ್ನಡ ದೈನಿಕದಲ್ಲಿ ಪ್ರಕಟಿಸಿದರು.[೧೯] ವಾರಕ್ಕೊಮ್ಮೆಯಂತೆ ಧಾರಾವಾಹಿಯಾಗಿ ಪ್ರಕಟವಾದ ಈ ದಾಖಲೆಯಲ್ಲಿ ಜೋಯಿಸರು, ಸಾಮಾನ್ಯರೂ ಸುಲಭವಾಗಿ ಅರ್ಥಮಾಡಿಕೊಳ್ಳಲು ಸಾಧ್ಯವಾಗುವಂತೆ ಸೂಕ್ತ ಟಿಪ್ಪಣಿಗಳನ್ನೂ ಶೀರ್ಷಿಕೆಗಳನ್ನೂ ಸೇರಿಸಿದರು. ಈ ಲೇಖಾಂಕಗಳನ್ನು ಒಟ್ಟಿಗೆ ಸೇರಿಸಿ ೧೯೬೮ರಲ್ಲಿ ಅವರ ಹೆಸರಿನಲ್ಲಿಯೇ ಪುಸ್ತಕರೂಪದಲ್ಲಿ ಹೊರತರಲಾಯಿತು.[೨೦]

ಜೋಯಿಸರು ಈ ಬಖೈರನ್ನು ಪ್ರಕಟಿಸುವ ಮುನ್ನವೇ, ಎಂ. ಎಸ್. ಪುಟ್ಟಣ್ಣ ಅವರು ೧೯೨೪ರಲ್ಲಿ ತಾವು ಹೊರತಂದ 'ಚಿತ್ರದುರ್ಗದ ಪಾಳಯಗಾರರು' ಕೃತಿಯಲ್ಲಿ ಈ ಬಖೈರ್‌ನಲ್ಲಿರುವ ಕೆಲವಂಶಗಳನ್ನು ಪ್ರಸ್ತಾಪಿಸಿದ್ದರು.[೨೧] ಇವರಂತೆಯೇ, ಎಸ್. ಶ್ರೀಕಂಠಶಾಸ್ತ್ರಿ ಅವರು ಸಹಾ ಇಂಗ್ಲಿಷ್‌ನಲ್ಲಿ ಸಿದ್ಧಪಡಿಸಿದ ಈ ಬಖೈರ್‌ನ ಸಂಗ್ರಹರೂಪವನ್ನು ಪ್ರಕಟಿಸಿದ್ದರು.[೨೨] ಈ ಬಖೈರು ಕುರಿತು ಅನ್ಯಭಾಷೆಯಲ್ಲಿ ಪ್ರಕಟಗೊಂಡ ಮೊದಲ ಲೇಖನ ಇದು. ಪುಟ್ಟಣ್ಣ ಮತ್ತು ಶ್ರೀಕಂಠಶಾಸ್ತ್ರಿ–ಇವರೀರ್ವರೂ ತಮಗೆ ದೊರೆತ ಅಥವಾ ತಾವು ಆಧರಿಸಿದ ಈ ಬಖೈರ್‌ನ ಪ್ರತಿಗಳ ಮೂಲವನ್ನಾಗಲೀ ಅವುಗಳ ಪೂರ್ಣ ವಿವರಗಳನ್ನಾಗಲೀ ನೀಡಿಲ್ಲದಿರುವುದು ಲೋಪವೇ ಆಗಿದೆ.[೨೩]

ಹುಲ್ಲೂರು ಶ್ರೀನಿವಾಸ ಜೋಯಿಸ ಅವರು ಸಂಪಾದಿಸಿದ 'ಚಿತ್ರದುರ್ಗದ ಬಖೈರು' ಸದ್ಯಕ್ಕೆ ಲಭ್ಯವಿರುವ ಏಕೈಕ ಪ್ರಕಟಿತ ಕೃತಿ. ಇದನ್ನು ಹೊರತುಪಡಿಸಿ ಇದೇ ಬಖೈರ್‌ನ ಇನ್ನೂ ಐದು ಅಪ್ರಕಟಿತ ಹಸ್ತಪ್ರತಿಗಳೆಂದರೆ, ೧. ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿರುವ ಕೈಕಾಗದದ ಹಸ್ತಪ್ರತಿ, ೨. ತ. ರಾ. ಸುಬ್ಬರಾವ್ (ತರಾಸು) ಅವರ

---

೧೯ ಈ ಲೇಖಾಂಕಗಳ ಫೈಲ್ ಅನ್ನು ಪರಾಮರ್ಶೆಗಾಗಿ ನನಗೆ ಒದಗಿಸಿದವರು ಹುಲ್ಲೂರು ಶ್ರೀನಿವಾಸ ಜೋಯಿಸರ ಹಿರಿಯ ಪುತ್ರರಾ ಹು. ಶ್ರೀ ಪಾಂಡುರಂಗ ಜೋಯಿಸ್ ಅವರು ಹಾಗೂ ಲೇಖಾಂಕಗಳು ಪ್ರಕಟವಾದ ಕಾಲವನ್ನು ತಿಳಿಯುವಲ್ಲಿ ಸೂಚನೆ ನೀಡಿದವರು ದಿವಗಂತ ಡಾ|| ಜಿ. ವರದರಾಜರಾವ್ ಅವರು. ಹಾಗೆಯೇ, ತಮ್ಮ ಸಂಗ್ರಹದಲ್ಲಿದ್ದ ಹು. ಶ್ರೀ. ಜೋಯಿಸರು ಸಿದ್ಧಪಡಿಸಿದ, ಇದೇ ಬಖೈರ್‌ನ ಇಂತಹದೇ ಫೈಲ್ ಅನ್ನು ನನಗೆ ನೀಡಿ ಸಹಕರಿಸಿದವರು ಕರ್ನಾಟಕ ಗ್ಯಾಜೆಟಿಯರ್‌ನ ಮುಖ್ಯ ಸಂಪಾದಕ ಡಾ|| ಸೂರ್ಯನಾಥ ಕಾಮತ್ ಅವರು.

೨೦ 'ಚಿತ್ರದುರ್ಗದ ಬಖೈರು', ತ. ವೆಂ. ಸ್ಮಾರಕ ಗ್ರಂಥಮಾಲೆ, ಮೈಸೂರು, ಪುಟಗಳು xiv+೧೪೪; ಮೊದಲ ಮಾತು: ಜಿ. ವರದರಾಜರಾವ್, ಶಬ್ದಕೋಶ: ಪ್ರಧಾನ ಗುರುದತ್.

೨೧ ಇವರು ತಮ್ಮ ಪುಸ್ತಕದ ಪೀಠಿಕೆಯಲ್ಲಿ (ಪು. ೪) 'ಕಡೇ ಮದಕರಿನಾಯಕನ ಚರಿತ್ರೆ ಪ್ರತಿ'ಯನ್ನು ಬಳಸಿಕೊಂಡಿರುವುದಾಗಿ ಸೂಚಿಸಿರುವರು. ಈ ಪುಸ್ತಕದ ೧೬ನೆಯ ಅಧ್ಯಾಯದಿಂದ ಆರಂಭಗೊಳ್ಳುವ 'ಕಡೇ ಮದಕರಿನಾಯಕ'ನಿಗೆ ಸಂಬಂಧಿಸಿದ ಚರಿತ್ರೆಯ ಭಾಗವು ೨೦ನೆಯ ಹಾಗೂ ಕಡೆಯ ಅಧ್ಯಾಯದವರೆಗೂ ಮುಂದುವರೆಯುತ್ತದೆ. ಬಖೈರ್‌ನಲ್ಲಿ ಪ್ರಸ್ತಾಪಿಸಲಾದ ಅಂಶಗಳನ್ನೆ ಬಳಸಿಕೊಂಡು ಈ ಭಾಗವನ್ನು ಬರೆಯಲಾಗಿದೆಯೆಂಬುದು ಸ್ಪಷ್ಟ. ಅಲ್ಲಲ್ಲಿ ತಮ್ಮ ಸ್ವಂತ ವಿವರಣೆಗಳನ್ನೂ ಸೇರಿಸಿರುವರು.

೨೨ ನೋಡಿ: 'Capitulation of Chitradurga'QJMS., Vol. 18, N0. 2, October 1927, pp. 145-154

೨೩ ಎಂ.ಎಸ್. ಪುಟ್ಟಣ್ಣ ಅವರು ತಮ್ಮ ಕೃತಿರಚನೆಯಲ್ಲಿ ಈಗ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯ ಹಸ್ತಪ್ರತಿ ವಿಭಾಗದಲ್ಲಿ ಇಡಲಾಗಿರುವ 'ಮದಕರಿನಾಯಕನ ಚರಿತ್ರೆ' ಹೆಸರಿನ ಬಖೈರನ್ನು ಬಳಸಿಕೊಂಡಿರುವರೆಂದು ಆ ವಿಭಾಗದ ಸಂಪಾದಕ ಜಿ. ಜಿ. ಮಂಜುನಾಥನ್ ಅವರು ತಿಳಿಸಿರುತ್ತಾರೆ. (ಮೈಲಹಳ್ಳಿ ರೇವಣ್ಣ ಅವರ ಪತ್ರ: ದಿನಾಂಕ ೬-೪-೧೯೯೧). ಈ ವಿಭಾಗದ ಉಪನಿರ್ದೇಶಕರಾದ ಮೈಲಹಳ್ಳಿ ರೇವಣ್ಣ ಅವರು ಈ ಚರಿತ್ರೆಯ ಕೆಲವು ಜೆರಾಕ್ಸ್ ಪುಟಗಳನ್ನು ಒದಗಿಸಿ ಸಹಕರಿಸಿರುವರು.

ಸಂಗ್ರಹದಲ್ಲಿದ್ದ ಕಾಗದದ ಹಸ್ತಪ್ರತಿ, ೩. ಚಿತ್ರದುರ್ಗದ ನಿಶಾನಿ ರಾಮಣ್ಣ ಅವರ ವಶದಲ್ಲಿರುವ ಕಾಗದದ ಹಸ್ತಪ್ರತಿ, ೪. ಚಿತ್ರದುರ್ಗದ ಸರಾಫ್ ಆರ್. ಕೋದಂಡರಾಮಶೆಟ್ಟಿ ಅವರ ವಶದಲ್ಲಿದ್ದ ನೋಟ್‌ಬುಕ್‌ನಲ್ಲಿ ಬರೆಯಲಾದ ಹಸ್ತಪ್ರತಿ, ಹಾಗೂ ೫. ಭದ್ರಾವತಿಯ ಸಿ. ಪರಶುರಾಮನಾಯಕ ಅವರ ವಶದಲ್ಲಿದ್ದ ನಕಲು ಹಸ್ತಪ್ರತಿ. ಈ ಬಖೈರ್‌ನ ಇನ್ನೂ ಒಂದೆರಡು ಹಸ್ತಪ್ರತಿಗಳು ಲಭ್ಯವಿದ್ದು, ಸದ್ಯಕ್ಕೆ ಅವನ್ನಿಲ್ಲಿ ಪರಿಗಣಿಸಲಾಗಿಲ್ಲ. ಇವುಗಳಲ್ಲಿ ಹುಲ್ಲೂರು ಶ್ರೀನಿವಾಸ ಜೋಯಿಸ ಅವರು ಉಪಯೋಗಿಸಿಕೊಂಡ ಮೂಲಪ್ರತಿಯ ಬಗೆಗೆ ಮಾಹಿತಿಯಿಲ್ಲ. ಇಲ್ಲಿ ಪ್ರಸ್ತಾಪಿಸಲಾಗಿರುವ ಹಸ್ತಪ್ರತಿಗಳ ವಿವರ ಈ ಕೆಳಗಿನಂತಿದೆ:

೧. ಈಗ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಸಂರಕ್ಷಿಸಲಾಗಿರುವ 'ಮದಕರಿನಾಯಕನ ಚರಿತ್ರೆ' (ಕೆ. ಬಿ. ೪೮೨) ಎಂದು ಕರೆಯಲಾದ ಬಖೈರನ್ನು ಪ್ರತಿಮಾಡಿಕೊಳ್ಳಲು ಬಳಸಿರುವ ಕಾಗದ, ಮಸಿ, ಕೈಬರಹಗಳಲ್ಲದೆ, ಪಾಠದ ದೃಷ್ಟಿಯಿಂದಲೂ ತಕ್ಕಮಟ್ಟಿಗೆ ಪರಿಶುದ್ಧವಾದುದೆಂದು ಕಂಡುಬರುವುದರಿಂದ ಇದನ್ನು 'ಮಾತೃಕೆ'ಯೆಂದು ಸ್ವೀಕರಿಸಬಹುದಾಗಿದೆ.[೭೪] ಇದರಲ್ಲಿಯ ಬರಹವು ಸುಲಭವೂ ಸುಂದರವೂ ಆದುದು. ಪ್ರತಿ ಪುಟಕ್ಕೆ ಸುಮಾರು ೧೮ ಸಾಲಿನಂತೆ ಒಟ್ಟು ೮೭ ಪತ್ರಗಳೂ ೧೮೮೦ ಗ್ರಂಥಗಳೂ (ಅಕ್ಷರಗಳ ಸಮುದಾಯ; ಗ್ರಂಥ = ೩೨ ಅಕ್ಷರಗಳ ಸಮುದಾಯ) ಇವೆ. ಹಸ್ತಪ್ರತಿಯ ಕೊನೆಯಲ್ಲಿರುವ ಕುದುರೆ ಸವಾರನ ರೇಖಾಚಿತ್ರವನ್ನು ಮದಕರಿನಾಯಕನು ಕುದುರೆಯ ಮೇಲೆ ಕುಳಿತುಕೊಂಡಿರುವ ಚಿತ್ರವೆಂದು ಭಾವಿಸಿರುವುದೂ ಉಂಟು.[೭೫] ಈ ಹಸ್ತಪ್ರತಿಯನ್ನು '(ಕ) ಪ್ರತಿ' ಎಂದು ಇಲ್ಲಿ ಪರಿಗಣಿಸಲಾಗಿದೆ.

೨. ತರಾಸು ಅವರ ಸಂಗ್ರಹದಲ್ಲಿದ್ದ 'ಮೆದಕೆರಿನಾಯ್ಕರ ಬಖೈರು' ('ಮದಕರಿನಾಯ್ಕ ಬಕೈರು')[೭೬] ಗೆರೆರಹಿತ ಬಿಳಿ ಹಾಳೆಯ (೧೮೮೫ರಲ್ಲಿ ತಯಾರಾದ ಕಾಗದ) ನೋಟ್‌ಬುಕ್‌ನಲ್ಲಿ ಬರೆಯಲ್ಪಟ್ಟಿರುವಂತಹದು. ಒಟ್ಟು ೮೧ ಪಾನ್ (೧೬೨ ಪುಟ)ಗಳನ್ನು ಒಳಗೊಂಡಿದೆ. ಕೈಬರವಣಿಗೆಯು ಕೆಲವು ಪುಟಗಳಲ್ಲಿ ಒಂದೇ ತರನಾಗಿರದೆ ಕ್ಲಿಷ್ಟವಾಗಿದೆ. ಇದನ್ನು ಮೂಲದಿಂದ ಎತ್ತಿ ಬರೆದವರ ಬಗೆಗೆ ಸೂಚನೆ ಇಲ್ಲದಿದ್ದರೂ ಈ ನೋಟ್‌ಬುಕ್ಕಿನ ರಟ್ಟಿನ ಮೇಲೆ ಹಾಗೂ ಕಡೆಯಲ್ಲಿ 'ಪರಶುರಾಮಪ್ಪನಾಯ್ಕ್' ಎಂಬ ಹೆಸರು ಕಂಡುಬರುತ್ತದೆ. '೮-೮-೮೭ನೇ ಸೋಮವಾರ ಸಮಾಪ್ತ' ಎಂದು ಕಡೆಯಲ್ಲಿ ಸೂಚಿಸಿರುವುದು, ಈ ಬಖೈರ್

---

೭೪ ಮೈಸೂರು ವಿಶ್ವವಿದ್ಯಾನಿಲಯದ ಪ್ರಾಚ್ಯ ವಿದ್ಯಾ ಸಂಶೋಧನಾಲಯ (ORI)ದಲ್ಲಿ ಕನ್ನಡ ಹಸ್ತಪ್ರತಿಗಳ ಸಂಗ್ರಹದಲ್ಲಿದ್ದ 'ಚಿತ್ರದುರ್ಗದ ಮದಕರಿನಾಯ್ಕನ ಚರಿತ್ರೆ' ಎಂಬ ಹೆಸರಿನ ಈ ಕಾಗದದ ಪ್ರತಿಯನ್ನು (General No. 11153/B 482) ದಿನಾಂಕ ೨-೨-೧೯೫೩ರಲ್ಲಿ ಪಡೆಯಲಾಯಿತೆಂದೂ 'ಶ್ರೀ ಎ. ಎಸ್. ಭವಾನೀಶಂಕರ್, ೧೫೫೯/ಎನ್. ಆರ್. ಮೊಹಲ್ಲಾ, ಮೈಸೂರು ಅವರಿಂದ ಖರೀದಿಗೆ (ರೂ. ೧೫-೦೦) ತೆಗೆದುಕೊಂಡಿದೆ'ಯೆಂದೂ ಈ ಸಂಶೋಧನಾಲಯದ ದಾಖಲೆಯಲ್ಲಿ ಉಲ್ಲೇಖಿಸಲಾಗಿದೆ-Register of Letter Heads, 28-4-53, p. 34.

೭೫ ನೋಡಿ: ಜಿ. ಎಸ್. ಸಣ್ಣಯ್ಯ (ಸಂ.): ಮೈಸೂರು ಪ್ರಾಚ್ಯವಿದ್ಯಾ ಸಂಶೋಧನಾಲಯದ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚೀ, ತೃತೀಯ ಸಂಪುಟ, ಮೈಸೂರು, ೧೯೬೩, ಪು. ೨೩೦: ಕ್ರಮಸಂಖ್ಯೆ ೧೨೪೦; ಈ ಚರಿತ್ರೆಯ ಕರ್ತೃವಿನ ಬಗೆಗೆ ಇಲ್ಲಿ ಹೇಳಿಲ್ಲ. ೧೮ನೆಯ ಶತಕವೆಂದು ಇದರ ಕಾಲವನ್ನು ಗೊತ್ತುಪಡಿಸಲಾಗಿದೆ (ಪು. ೨೨೯).

೭೬ ಪಾಂಡವಪುರದ ನಾ. ಪ್ರಭಾಕರ್ ಅವರ ಸೌಜನ್ಯದಿಂದ ಈ ಪ್ರತಿಯು ನನ್ನ ಕೈ ಸೇರಿರುತ್ತದೆ.

ಪ್ರತಿಯ ಕಾಲವನ್ನು ನಿರ್ಧರಿಸಲು ಸಹಾಯಕಾರಿಯಾಗಿದೆ. ಆದರೆ ಈ ಪಾಠದ ಪುಟ ೨೩ರಲ್ಲಿ ೧೨-೭-೮೮ ಮತ್ತು ಪುಟ ೯೧ರಲ್ಲಿ ೨೮-೨-೮೮ ಎಂಬ ತೇದಿಗಳೂ ನಮೂದಿಸಲ್ಪಟ್ಟಿರುವುದರಿಂದ, ಈ ಬಖೈರ್‌ನ ಪ್ರತಿಯು ೧೮೮೭-೮೮ರ ಕಾಲಾವಧಿಯಲ್ಲಿ ಸಿದ್ಧಗೊಂಡಿರುವ ಸಾಧ್ಯತೆಯುಂಟು. ಪುಟ ೧ರಲ್ಲಿ ಅನಂತರದಲ್ಲಿ ಬರೆಯಲಾಗಿರುವ 'ಶ್ರೀ ರಾಮಚಂದ್ರಾಯ ನಮಃ' ಎಂಬ ಅಂಕಿತವಾಗಲೀ, 'ಹರಿಹರದಿಂದ ಬಂದಿರುವುದು' ಎಂಬ ಸೂಚನೆಯಾಗಲೀ ಪರಿಶೀಲನಯೋಗ್ಯವಾಗಿದೆ. ಅಧ್ಯಯನ ನಿಮಿತ್ತ ಇದನ್ನು ('ಚಪ್ರತಿ') ೧೮೮೭-೮೮ರ ಪ್ರತಿಯೆಂದು ಇಲ್ಲಿ ಕರೆದಿದೆ.

೩. ಚಿತ್ರದುರ್ಗದ ನಿಶಾನಿ ರಾಮಣ್ಣ ಅವರ ವಶದಲ್ಲಿರುವ ಕಾಗದದ ಹಸ್ತಪ್ರತಿಯು ಉಳಿದೆಲ್ಲ ಪ್ರತಿಗಳಿಗಿಂತ ಸುಂದರ ಕೈಬರವಣಿಗೆಯಿಂದ ಕೂಡಿದೆ.[೭೭] ಈ ಹಸ್ತಪ್ರತಿಯ ಮೇಲುಹೊದಿಕೆಯ (ರಟ್ಟಿನ ಕವಚದ) ಒಳಬದಿಯಲ್ಲಿ 'ಶ್ರೀರಾಮಾ' ಎಂಬ ಅಂಕಿತದೊಡನೆ ಆರಂಭವಾದ ''ಸ್ರ್ ೧೮೮೬ನೇ ಯಿಸಿವೀ ಪೇಬ್ರವರೀ ತಾರೀಕು ೧೯ನೇ ಶುಕ್ರವಾರದಲ್ಲು ಚಿತ್ರದುರ್ಗದಲ್ಲಿ ಯಿರುೃವಾ ಯಾಕಾಸಿನಾಯ್ಕರ ಮಗ।। ಶ್ರೀಮತು ಡಲಾಯಿ್ತ ಭೀಮಣ್ಣನೂ। ಚಿತ್ರದುರ್ಗದಲ್ಲಿ। ಕೆಳಗಳ ಗರುಡೀ ಪ್ರವೀಟ್ ಸಾಲೇ ಯಿಟ್ಟಿರುೃವ ನಿಶಾನಿ ರಂಗದಾಸಪ್ಪಗೇ। ಹಿನಾಮಾಗಿ ಕೊಟ್ಟ ಬುಕ್ಕು।।'' ಎಂಬ ಒಕ್ಕಣೆಯು ಯಾರಿಂದ ಯಾವಾಗ ಈ ಪುಸ್ತಕವು ಕಾಣಿಕೆಯಾಗಿ ಬಂದಿತೆಂಬುದನ್ನು ಸೂಚಿಸುತ್ತದೆ.

ಈ ಬಖೈರ್‌ನ ಹಸ್ತಪ್ರತಿ ಹಾಳೆ ಪಾನ್ ೧ರಲ್ಲಿ ''ಓಂ ಶ್ರೀ ಜಗದ್ಗುರು ಮುರುಘಾರಾಜೇಂದ್ರ-ಶ್ರೀ ಗುರುಭ್ಯೋನ್ನಮಃ।।'' ಎಂಬ ಇಷ್ಟಗುರುವಿನ ಸ್ಮರಣೆಯೊಡನೆ ಈ ಮುಂದಿನಂತೆ ಬರವಣಿಗೆಯನ್ನು ಆರಂಭಿಸಲಾಗಿದೆ. ''ಶ್ರೀಮನ್ಮಹಾನಾಯಕಾಚಾರ್ಯ ನಾಯಕ ಶಿರೋಮಣಿ। ಕಾಮಗೇತಿ ಕಸ್ತೂರಿ ರಾಜಾ ಹೆಬ್ಬುಲೀ ಗಂಡುಗೊಡ್ಲಿಸರ್ಜಾ ಗಾಧುರಿ। ಬಿಚ್ಚುಕತ್ತಿ ವೀರಮದಕರಿನಾಯ್ಕ ಚಿತ್ರದುರ್ಗದ ಸಂಸ್ಥಾ ಮಹಾರಾಜ ಮದಕರಿನಾಯ್ಕರ ಬಖೈರುೃ-ಚಿತ್ರದುರ್ಗದ ನಿಶಾನಿ ತಿಮ್ಮದಾಸೈಯ್ಯನ ವಷಿಯಲ್ಲು ಬರದದ್ದೂ ತಾರೀಕು ೬-೯-೮೭ ಸರ್ವಜಿತು ಸಂ।। ಬಾದ್ರಪದ ।।ಬ।। ೪ ಮಂಗಳವಾರದಲ್ಲೂ ಬರಿಯುವದಕ್ಕೆ ಶುಭಮಸ್ತೂ। ಶೋಭನಮಸ್ತೂ। ಆಯುರಾರೋಗ್ಯಮಸ್ತೂ। ಐಶ್ವರ್ಯಮಸ್ತೂ। ಶ್ರೀರಸ್ತೂ।। ಶ್ರೀಗುರುಭ್ಯೋನ್ನಮಃ ।।''

ಬಖೈರ್‌ನ ಕೊನೆಯಲ್ಲಿ, ಹಾಳೆ ೫೩ (ಪಾನ್ ೨೫)ರಲ್ಲಿ, ''ಸಂಪೂರ್ಣವಾದ ತಾರೀಖು ೨-೧೧-೯೪'' ಎಂದಿದೆ. ಅಲ್ಲಿಯೇ, ನಿಶಾನಿ ರಂಗಯ್ಯ ಅಸಿಸ್ಟೆಂಟ್ ಮಾಸ್ಟರ್, ಚಿತ್ರದುರ್ಗ –ಎಂದು ಇಂಗ್ಲಿಷ್‌ನಲ್ಲಿ ಬರೆದಿರುವುದರಿಂದ ಈ ಪ್ರತಿಯನ್ನು ತಯಾರಿಸಿದವರು ಅವರೇ ಎಂಬುದೂ ವ್ಯಕ್ತಪಡುತ್ತದೆ. ಕಡೆಯಲ್ಲಿ, ''ಶ್ರೀ ಗುರುಗಣಾಧೀಶ ಶಾರದಾಂಬಾಯೇನ್ನಮಃ।।'' ಎಂಬುದೂ ಹಿಂದಿ ಭಾಷೆಯಲ್ಲಿ ಪ್ರತಿಮಾಡಿದವರ ಹೆಸರೂ ಇವೆ. ಈ ಹಸ್ತಪ್ರತಿಯ ಒಟ್ಟು ಹಾಳೆ (ಪಾನ್)ಗಳು ೩೦; ಪುಟಗಳು ೬೦. ಪ್ರತಿ ಪುಟದಲ್ಲಿಯ ಸಾಲುಗಳು (ಸರಾಸರಿ) ೩೫. ಕಪ್ಪುಶಾಯಿ ಬಳಸಿದೆ. ಮಧ್ಯೆ ಮಧ್ಯೆ ಕೆಲವು ಪುಟಗಳನ್ನು ಖಾಲಿ ಬಿಡಲಾಗಿದೆ. ೧೮೮೭ರಿಂದ ೧೮೯೪ರ ವರೆಗೆ, ಏಳು ವರುಷಗಳ ಅವಧಿಯಲ್ಲಿ ಈ ಪ್ರತಿಯು ಸಿದ್ಧವಾಗಿದೆ. ಹಸ್ತಪ್ರತಿಯನ್ನು, ಅಂದರೆ ಬರವಣಿಗೆಯುಳ್ಳ ಒಟ್ಟು ೩೪ ಪುಟಗಳನ್ನು ಒಬ್ಬರೇ ಬರೆದು

---

೭೭ ಇದನ್ನು ಪಡೆಯುವಲ್ಲಿ ನನಗೆ ಸಹಕಾರ ನೀಡಿದವರು ಚಿತ್ರದುರ್ಗದ ಎಚ್. ಶ್ರೀಶೈಲ ಆರಾಧ್ಯ ಅವರು.

ಮುಗಿಸಿದ್ದಾರೆ. ೩೩ ಸೆಂ. ಮೀ. ಉದ್ದ ಮತ್ತು ೨೩.೪ ಸೆಂ. ಮೀ. ಅಗಲದ ಫೈಲಿನಂತಿರುವ ರಟ್ಟು ಕಟ್ಟಿರುವ ಪುಸ್ತಕವು ವಿದೇಶದಲ್ಲಿ ತಯಾರಾದುದೆಂಬುದಕ್ಕೆ ಪುಸ್ತಕದ ಆರಂಭದ ಪುಟ ಮತ್ತು ಕೊನೆಯ ಪುಟಗಳು ಮಾಹಿತಿ ನೀಡುತ್ತವೆ. '೧೮೭೯' ಎಂಬ ವರುಷವೂ 'W & S' ಎಂಬ ಸಂಕ್ಷೇಪವೂ ಕಾಗದ ತಯಾರಿಕಾ ಸಂಸ್ಥೆಯ ಲಾಂಛನವೂ Watermarkನಲ್ಲಿ ಕಂಡುಬರುತ್ತವೆ. ಈ ಪ್ರತಿಯನ್ನು ಅಧ್ಯಯನದ ಸಲುವಾಗಿ '(ಟ)ಪ್ರತಿ' (೧೮೯೪ರ ಪ್ರತಿ)ಯೆಂದು ಗುರುತಿಸಿಕೊಂಡಿದೆ.

೪. ಚಿತ್ರದುರ್ಗದ 'ಮುರುಘಾಸ್ವಾಮಿಗಳವರ ಮಠದ ಬಳಿಯಿರುವ ಕರುಬರಹಟ್ಟಿ ಸ್ಕೂಲ್' (ಮೊಕ್ಕಾಂ)ನ ಯನ್. ತಿಮ್ಮಯ್ಯ, ಮಾಸ್ಟರ್– ಅವರು ನಕಲು ಮಾಡಿದ ಈ ಬಖೈರ್‌ನ ಪಾಠವು ಗೆರೆಯುಳ್ಳ 'ನೋಟ್ ಬುಕ್'ನಲ್ಲಿ ೧೧೨ ಪುಟಗಳಷ್ಟಿದೆ.[೨೮] ಪ್ರತಿಯೊಂದು ಪುಟದಲ್ಲಿಯೂ ೨೧ ಸಾಲುಗಳಿವೆ. ದುಂಡಾದ ಅಕ್ಷರ, ಸುಂದರ ಕೈಬರವಣಿಗೆ. ಈ ನಕಲು ಮಾಡುವ ಕಾರ್ಯವನ್ನು ದಿನಾಂಕ ೨೧-೫-೧೯೨೦ರಂದು ಪ್ರಾರಂಭಿಸಿ ೨೮-೧೦-೧೯೨೦ ಗುರುವಾರದಂದು ಮುಗಿಸಿರುವುದಾಗಿ ಪ್ರತಿಮಾಡಿದವರು ಹೇಳಿಕೊಂಡಿದ್ದಾರೆ. ''ಈ ವಿಷಯವೆಲ್ಲಾ ಹಳೇ ಪ್ರತಿಯಲ್ಲಿದ್ದಂತೆ ವ್ಯತ್ಯಾಸವಿಲ್ಲದೆ ಬರೆದಿಧೆ''ಯೆಂತಲೂ ಪುಟ ೫೧ರಲ್ಲಿ ಬರೆದುಕೊಂಡಿದ್ದಾರೆ.

ಮುಖ್ಯವಾದ ಸಂಗತಿಯೆಂದರೆ, ಈ ಹಸ್ತಪ್ರತಿ ಆರಂಭದಲ್ಲಿ, ''ಇದರ ಅಸಲ್ ಪೂರ್ವದ ಕರಡಾ ಕಾಗದದ ಬುಕ್ಕಿನಲ್ಲಿ ಇದ್ದದ್ದನ್ನು ನಾನು ಬರೆಯುವದಕ್ಕೆ ಪ್ರಾರಂಭಿಸಿ ಪೂರೈಸಿದ ನಂತರ ವಿದ್ಯಾಭ್ಯಾಸದ ಯಿಲಾಖಾ ಚಳ್ಳಕೆರೆ ರೇಂಜ್ ಅಸಿಸ್ಟೆಂಟ್ ಇನ್‌ಸ್ಪೇಕ್ಟರಾಗಿದ್ದ ಮಿ. ಶ್ರೀಕಂಠಯ್ಯನವರು ನೋಡಿ ಅಸಲ್‌ಪುಸ್ತಕವನ್ನು ಮೈಸೂರು ಮಹಾರಾಜರವರ ಪುಸ್ತಕ ಭಂಡಾರಕ್ಕೆ ಕಳುಹಿಸಿದರು. ತಲಪಿದ್ದಕ್ಕೆ ರಶೀದಿ ಸಹ ಬಂತೆಂತ ತಿಳಿಸಿದರು'' ಎಂದು ಸೂಚಿಸಿರುವುದರಿಂದ, ಈ ಬಖೈರನ ಮೂಲಪ್ರತಿಯ ಬಗೆಗೂ ಇಲ್ಲಿ ಸೂಚನೆ ದೊರೆಯುತ್ತದೆ. ಇಲ್ಲಿಯ 'ಮೈಸೂರು ಮಹಾರಾಜರವರ ಪುಸ್ತಕ ಭಂಡಾರ'ವು ಮೈಸೂರು ಅರಮನೆಯಲ್ಲಿದ್ದ 'ಸರಸ್ವತೀ ಭಂಡಾರ'ವೋ ಹೇಗೋ ಸ್ಪಷ್ಟವಾಗುವುದಿಲ್ಲ. ೧೮೯೭ರಲ್ಲಿ ಮೊದಲಿದ್ದ ಅರಮನೆಯು ಬೆಂಕಿಗಾಹುತಿಯಾದಾಗ ಈ ಭಂಡಾರದಲ್ಲಿದ್ದ ಅಳಿದುಳಿದ ಹಸ್ತಪ್ರತಿಗಳನ್ನು ಜಗನ್ಮೋಹನ ಅರಮನೆಗೆ ಸ್ಥಳಾಂತರಿಸಲಾಯಿತಲ್ಲದೆ, ೧೯೨೮ ನವೆಂಬರ್‌ನಲ್ಲಿ ಈ ಭಂಡಾರವನ್ನು ಮಹಾರಾಜಾ ಸಂಸ್ಕೃತ ಕಾಲೇಜಿನ ಮಧ್ಯದ ತೊಟ್ಟಿಗೆ ವರ್ಗಾಯಿಸಲಾಯಿತು. ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಇದು ಚಾಮುಂಡಿ ತೊಟ್ಟಿಗೆ ಹೊಂದಿಕೊಂಡಿದ್ದಿತು. ಈ ಭಂಡಾರದಲ್ಲಿ ಕನ್ನಡ ಮತ್ತು ಸಂಸ್ಕೃತ ಭಾಷೆಗಳಲ್ಲಿಯ ಸಹಸ್ರಾರು ಹಸ್ತಪ್ರತಿಗಳಿದ್ದುವು.[೨೯] ಇಲ್ಲಿದ್ದ ಹಸ್ತಪ್ರತಿಗಳನ್ನು ಪ್ರಾಚ್ಯವಿದ್ಯಾ ಸಂಶೋಧನಾಲಯಕ್ಕೆ ಕಳುಹಿಸಲಾಯಿತೆಂದು ತಿಳಿಯುತ್ತದೆ. ಶ್ರೀಕಂಠಯ್ಯ ಅವರು ಬಖೈರ್‌ನ ಹಸ್ತಪ್ರತಿಯನ್ನು

---

೨೮ ಚಿತ್ರದುರ್ಗದ ದೊಡ್ಡಪೇಟೆಯಲ್ಲಿರುವ ಪ್ರೈವೆಟ್ ಮನೆತನದ ಎಸ್. ಆರ್. ಕೋದಂಡರಾಮ ಶ್ರೇಷ್ಠಿ ಅವರ ಮನೆಯಲ್ಲಿದ್ದ ಈ ಹಸ್ತಪ್ರತಿಯನ್ನೂ ಅವರ ವಂಶಸ್ಥರ ವಿವರಗಳನ್ನೂ ಸಂಗ್ರಹಿಸಿ ನನ್ನ ಅಧ್ಯಯನಕ್ಕೆ ನೀಡಿ ಸಹಕರಿಸಿದವರು ಎಚ್. ಶ್ರೀಶೈಲ ಆರಾಧ್ಯ ಅವರು.

೨೯ Palace Administration Report, 1868-1918, p. 36; J. V. Gayathri: 'Saraswathi Bhandara- The Palace Library' (Synopsis). (ಸೌಜನ್ಯ: ಟಿ. ಜಿ. ನರಸಿಂಹಮೂರ್ತಿ ಮತ್ತು ಆರ್. ಟಿ. ಡಿ. ರಮೇಶ್ ಗಾಂಧಿ)

ಯಾವ ಭಂಡಾರಕ್ಕೆ ಕಳುಹಿಸಿದ್ದರೆಂಬುದಕ್ಕೆ ಸದ್ಯಕ್ಕೆ ಯಾವ ಸೂಚನೆಯೂ ದೊರೆಯುವುದಿಲ್ಲ.[೮೦] ೧೯೨೦ರ ಈ ಪ್ರತಿಯನ್ನು '(ತ)ಪ್ರತಿ' ಎಂದು ಕರೆಯಲಾಗಿದೆ.

೫. ಭದ್ರಾವತಿಯ ಸಿ. ಪರಶುರಾಮನಾಯಕರ ವಶದಲ್ಲಿದ್ದ ಬಖೈರ್‌ನ ನಕಲು ಪ್ರತಿ ಸಹಾ ಗೆರೆರಹಿತ 'ನೋಟ್‌ಬುಕ್'ನಲ್ಲಿಯೇ ಬರೆಯಲ್ಪಟ್ಟಿದೆ.[೮೧] ಒಟ್ಟು ೮೧ ಪುಟಗಳಲ್ಲಿ ಬಖೈರು ಅಡಗಿದೆ. ಸುಲಭವಾಗಿ ಓದಬಹುದಾದ ಬರವಣಿಗೆ. ಮೇಲೆ ಪ್ರಸ್ತಾಪಿಸಿದ ಇತರ ಪ್ರತಿಗಳಿಗಿಂತ ಇದು ಈಚಿನದು (೧೯೩೧). ಬಹುಶಃ ತರಾಸು ಅವರ ಸಂಗ್ರಹದ ಬಖೈರ್‌ನ ಪಾಠದ ಮರುಪ್ರತಿ ಇದಾಗಿದೆಯೆಂದು ತೋರುತ್ತದೆ. ಇದನ್ನು ಪರಿಶೀಲಿಸಬೇಕಿದೆ. ಇದರ ಪಾಠದ ನಕಲು ಮಾಡುವಾಗ ಕೆಲವು ಬದಲಾವಣೆಗಳನ್ನು ಸ್ವಲ್ಪಮಟ್ಟಿಗಾದರೂ ಮಾಡಿಕೊಂಡಿರಬಹುದೆಂಬ ಅನುಮಾನ ನಕಲು ಪ್ರತಿಯ ಆರಂಭದಲ್ಲಿ ಪ್ರತಿಮಾಡಿದವರು ನೀಡಿರುವ ವಿವರಣೆಯಿಂದ ಮೂಡುತ್ತದೆ. ಆ ವಿವರಣೆ ಇಂತಿದೆ: ''ಸ್‌ ೧೯೩೧ನೇ ಇಸವಿ ಜನವರಿ ೧ನೇ ತಾರೀಖಿನಲ್ಲೂ ಶ್ರೀಮರ್ಾ ಮಹಾನಾಯಕಾ ನಾಯಕಾಚಾರ್ಯೇ ನಾಯಕ ಶಿರೋಮಣಿ ಕಾಮಗೇತ ಕಸ್ತೂರಿ ರಾಜ ಗಾದ್ರಮಲೇ ಹೆಬ್ಬುಲಿ ವೀರಮೆದಕೇರಿ ನಾಯಕರ ಚರಿತ್ರೆ-ಚಿತ್ರದುರ್ಗದ ಸಂಸ್ಥಾನ್ ಚಪ್ಪೇಚಾವಡಿ ದಳವಾಯಿ ಕಾಮಗೇತಿ ಕಾಟಪ್ಪನಾಯಕರು ಬರೆದಿಟ್ಟಿದ್ದ ಮಹಾರಾಷ್ಟ್ರ ಭಾಷಾಮಿಶ್ರಿತವಾದ ಪೂರ್ವದ ಬಖೈರುನನುಸರಿಸಿ ಅಲ್ಲಲ್ಲಿಗೆ ಪುಲಿಷ್ಟಾಪು ಹಾಕಿ ಶುದ್ಧವಿರಳವಾಗಿ....ಚಿತ್ರದುರ್ಗದ ಸಂಸ್ಥಾನ್ ಚಪ್ಪೇಚಾವಡಿ ದಳವಾಯಿ ಕಾಟಪ್ಪನಾಯಕರು ಇವರ ಮರಿಮಕ್ಕಳು ಹುಚ್ಚಪ್ಪನಾಯಕರ ಮಕ್ಕಳು ಪರಶುರಾಮನಾಯಕರು ಚಿತ್ರದುರ್ಗದ ಡಿಷ್ಟ್ರಿಕ್ಟು ಹಿರಿಯೂರು ತಾಲ್ಲೋಕಿಗೆ ಸೇರಿದ ಐಮಂಗ್ಲ ಹೋಬಳಿ ಬುರುಜರ್ಿನರೊಪ್ಪದ ಶ್ಯಾನುಭೋಗರು ಜಟಂಗಿರಾಮಪ್ಪನವರ ಮೊಮ್ಮಕ್ಕಳು ಸುಬ್ಬಣ್ಣನವರ ಮಕ್ಕಳು ಬಿ. ರಾಮರಾಯರಿಂದ ಬರೆಸಿದ್ದು–ಇವರು ಹಳೇ ಭಖೈರಿನಿಂದ ಉತ್ತೀರ್ಣಸಿದ್ದು-''

ಇಲ್ಲಿ ಪ್ರಸ್ತಾಪಿಸಲಾದ 'ಹಳೇ ಭಖೈರ್'ಅನ್ನು ಬರೆದಿಟ್ಟಿದ್ದವರು ಕಾಟಪ್ಪನಾಯಕರು ಎಂದಿದೆ. ವಾಸ್ತವವಾಗಿ, ಚಿತ್ರದುರ್ಗದ ಬಖೈರನ್ನು ಬರೆದವನು ಭೀಮಾಜಿ ಪಂತ್ ಎಂಬ ಮರಾಠಾ ರಾಜಪ್ರತಿನಿಧಿ. ಇದೇ ನಕಲು ಪ್ರತಿಯಲ್ಲಿ ಈ ಬಗೆಗೆ ದಾಖಲಿಸಲಾದ ಸಾಲುಗಳಿವು: ''ಕಡೇ ಮೆದಕೇರಿನಾಯಕರು ಚಿತ್ರದುರ್ಗಕ್ಕೆ ಶ್ರೀರಂಗಪಟ್ಟಣದ ನವಾಬು ಹೈದರಾಲ್ಲೀಖಾನ ಬಹದ್ದೂರ್ ಸಂಸ್ಥಾನದವರು ಶ|| ೧೬೯೯ ಕಿ|| ೧೭೭೬ ಹೇವಳಂಬಿ ಸಂವತ್ಸರ ಆಷಾಢ ಶುದ್ಧ ೧೦ನೆ ಪ್ರಾತಃಕಾಲ ಮುತ್ತಿಗೆಹಾಕಲು ಸಂಸ್ಥಾನದ ಸಹಾಯಕ್ಕಾಗಿ ಪುಣೆ ಪೇಷ್ವೆ ಮಾಧವರಾಯರು ಚಿತ್ರದುರ್ಗದವರಿಗೆ ೫೦೦೦೦ ಪೌಜು ಕೂಕಿ ಕೊಡುತ್ತೇವಂತ ಹೇಳಿದ ಪ್ರಕಾರ–ಭೀಮಾಜಿಪಂತ ಎಂಬ ಸರದಾರನನ್ನು ಚಿತ್ರದುರ್ಗದ ರಾಜಾ ಮೆದಕೇರೆನಾಯಕರ ರಾಜ್ಯಲಕ್ಷ್ಮಿ ಪೌಜು ಜಂಗೀ ಸರಂಜಾಮು ವಗೈರೆ ತಿಳಿಸಲು ಬರೆಸಿದ ಪತ್ರ ಪ್ರಾರಂಭ ಶುಭಮಸ್ತು.'' ಆದ್ದರಿಂದ ಕಾಟಪ್ಪನಾಯಕರು ನಾಯಕ ಅರಸರ ಅಧೀನದಲ್ಲಿ ದಳವಾಯಿ ಆಗಿದ್ದರೂ ತಮ್ಮ ಪರಾಮರ್ಶನಕ್ಕಾಗಿ ಪಂತ್‌ನ ಬಖೈರ್‌ನ (ಮೂಲ?) ಪ್ರತಿಯಿಂದ ನಕಲನ್ನು ತಯಾರಿಸಿಕೊಂಡಿದ್ದಿರಬಹುದು. ಇವರ ನಕಲಿನಿಂದ ('ಹಳೇ ಭಖೈರು')ನಿಂದ ಹೊಸದಾಗಿ ಉತ್ತೀರ್ಣಸಿದ ಬಿ. ರಾಮರಾಯರು 'ಅಲ್ಲಲ್ಲಿಗೆ ಪುಲಿಷ್ಟಾಪು ಹಾಕಿ ಶುದ್ಧ ವಿರಳವಾಗಿ' ಪ್ರತಿ ಮಾಡಿರುವುದರಿಂದ ಈ ನಕಲು ತನ್ನ ಮೂಲತನವನ್ನು ಕಾಯ್ದಿಟ್ಟುಕೊಂಡಿರುವುದರ ಬಗೆಗೆ ಸಂದೇಹ ಮೂಡದಿರದು. ಇದನ್ನು ೧೯೩೧ರ ಪ್ರತಿ-'(ಪ)ಪ್ರತಿ'ಯೆಂದು ಇಟ್ಟುಕೊಂಡಿದೆ.

ಮೇಲೆ ಪ್ರಸ್ತಾಪಿಸಿದ ಬಖೈರ್‌ನ ಭಿನ್ನಪ್ರತಿಗಳಲ್ಲಿ ಸದ್ಯಕ್ಕೆ 'ಮೂಲ ಪ್ರತಿ'ಯೆಂದು ಭಾವಿಸಬಹುದಾದ ಕನ್ನಡ ಅಧ್ಯಯನ ಸಂಸ್ಥೆಯ ಪ್ರತಿಯನ್ನುಳಿದು, ಇತರ ನಾಲ್ಕು ಪ್ರತಿಗಳು ಖಾಸಗಿಯವರ ವಶದಲ್ಲಿವೆ. ಗಮನಾರ್ಹ ಸಂಗತಿಯೆಂದರೆ, ಈ ಪ್ರತಿಗಳನ್ನು ಹೊಂದಿರುವವರ ಹಿರಿಯ ತಲೆಮಾರಿನವರು ಚಿತ್ರದುರ್ಗ ನಾಯಕ ಅರಸರ ಕಾಲದಿಂದಲೂ ಈ ಸಂಸ್ಥಾನದೊಡನೆ ಸಂಬಂಧ ಇರಿಸಿಕೊಂಡುಬಂದಂತಹವರು. ಈ ವಂಶಸ್ಥರ ಹಿನ್ನೆಲೆಯನ್ನು ಗಮನಿಸಿದರೆ ಇದು ಮನದಟ್ಟಾಗುತ್ತದೆ.

ಉದಾಹರಣೆಗೆ, '(ಟ)ಪ್ರತಿ' (೧೮೫೪ರ ಪ್ರತಿ)ಯನ್ನು ಹೊಂದಿರುವ ನಿಶಾನಿ ರಾಮಣ್ಣ ಅವರ ಹಿರಿಯರು ನಾಯಕ ಅರಸರ (ಬಿಚ್ಚುಗತ್ತಿ ಭರಮಣ್ಣನಾಯಕ?) ಕಾಲದಿಂದಲೂ 'ಹನುಮದ್ಗರುಡ ನಿಶಾನಿ' (ಚಂದ್ರಗಾವಿ ವರ್ಣದ ನಿಶಾನಿ)ಯನ್ನು ಇಲ್ಲಿಯ ಧಾರ್ಮಿಕ ಉತ್ಸವಗಳ ಮುಂದೆ ಹಿಡಿಯುವ ಗೌರವಕ್ಕೆ ಪಾತ್ರರಾದವರು. ಇಂದಿನ ದಾವಣಗೆರೆ ತಾಲ್ಲೂಕು ನೀರ್ಥಡಿ ಗ್ರಾಮದಲ್ಲಿರುವ ರಂಗನಾಥಸ್ವಾಮಿ ದೇವಾಲಯದ ಪಹರೆಯ ಮುಖ್ಯಸ್ಥನಾಗಿದ್ದ ಈ ಮನೆತನದ ರಂಗದಾಸಿ ಎಂಬಾತನೇ ಈ ಗೌರವವನ್ನು ಪಡೆದವನೆಂದು ತಿಳಿದುಬರುತ್ತದೆ. ಈ ಸಂಬಂಧದಲ್ಲಿ ಹೇಳಲಾಗುವ ಕತೆಯೆಂದರೆ, ಒಮ್ಮೆ ಶತ್ರುಗಳು ಈ ದೇವಾಲಯದ ಮೇಲೆ ದಾಳಿ ಮಾಡಿದಾಗ ಗಾಯಗೊಂಡ ರಂಗದಾಸಿಯು ಚಿತ್ರದುರ್ಗಕ್ಕೆ ಬಂದು ನಾಯಕರಿಗೆ ಸುದ್ದಿ ಮುಟ್ಟಿಸಿದನು. ನಾಯಕರು ೩೦೦೦ ದಂಡಿನೊಡನೆ ನೀರ್ಥಡಿಗೆ ಹೋಗಿ ಅವರನ್ನು ಹೊಡೆದೋಡಿಸಿದರು. ರಂಗದಾಸಿಯು ಸಲ್ಲಿಸಿದ ಸೇವೆಯನ್ನು ಮೆಚ್ಚಿದ ನಾಯಕರು ಅವನ ಕೋರಿಕೆಯಂತೆಯೇ 'ಹನುಮದ್ಗರುಡ ನಿಶಾನಿ'ಯನ್ನು ಗೌರವಪೂರ್ವಕವಾಗಿ ಅನುಗ್ರಹಿಸಿದರು. ಅಂದಿನಿಂದ ಈ ತನಕ ಈ ನಿಶಾನಿಯನ್ನು ಹಿಡಿದು ಉತ್ಸವಗಳಲ್ಲಿ ಅಗ್ರಭಾಗದಲ್ಲಿರುವ ಗೌರವವು ಈ ಮನೆತನದವರಿಗೆ ಮುಂದುವರೆದುಕೊಂಡು ಬಂದಿದೆ. ಇಂದಿಗೂ ವಿಜಯದಶಮಿ ಸಂದರ್ಭದಲ್ಲಿ 'ಬನ್ನಿ ಮುಡಿಯುವ' ಉತ್ಸವದಲ್ಲಿ ಈ ಮನೆತನದವರು ತಮ್ಮ 'ನಿಶಾನಿ'ಯನ್ನು ಹಿಡಿದು ಹೊರಡುವರು. ಹಿಂದೆ ಇಂತಹ ಸಂದರ್ಭದಲ್ಲಿ ಇವರಿಗೆ ೧೦ ವರಹಗಳನ್ನು ಕಾಣಿಕೆಯಾಗಿ ಕೊಡಲಾಗುತ್ತಿತ್ತು.

೧೯೨೦ರ '(ತ)ಪ್ರತಿ'ಯನ್ನು ರಕ್ಷಿಸಿಟ್ಟಿದ್ದ ವೈಶ್ಯ ಜನಾಂಗದ ಸರಾಫ್ ಆರ್. ಕೋದಂಡರಾಮಶೆಟ್ಟಿ ಅವರ ಹಿರಿಯರು ನಾಯಕ ಅರಸರ ಕಾಲದಲ್ಲಿ ಚಿನ್ನ-ಬೆಳ್ಳಿ ವರ್ತಕರಾಗಿದ್ದರು. ಆಗ ದೊಡ್ಡವರ ಮದುವೆಗಳಿಗೆ ತಮ್ಮ ಒಡವೆ ವಸ್ತುಗಳನ್ನು ಎರವಲು ಕೊಡುತ್ತಿದ್ದರು. ಅರಮನೆಯಿಂದ ಇವರಿಗೆ ಆಹ್ವಾನವಿರುತ್ತಿದ್ದು, ಮದುವೆ-ಮುಂಜಿ ಸಮಾರಂಭಗಳಲ್ಲಿ ಅಲ್ಲಿಂದ ಇವರಿಗೆ ಒಣಪಡಿ ಅಕ್ಕಿ, ಬೆಲ್ಲ, ತುಪ್ಪ, ವೀಳೆಯ ಇತ್ಯಾದಿ ಬರುತ್ತಿದ್ದಿತು. ಕಾಮನ ಬಾವಿಯಿಂದ ಎತ್ತಿ ಹಾಯಿಸಿದ ನೀರು ದೊಡ್ಡ ಪೇಟೆಯ ಇವರ ಮನೆಗೆ ನೆಲದೊಳಗಿನ ಕಾಲುವೆಯ ಮೂಲಕ ಹರಿದು ಬರುವ ವ್ಯವಸ್ಥೆಯಿದ್ದಿತು. ಈಚೆಗೆ ಇವರ ಮನೆ ದುರಸ್ತಿಯಾಗುವಾಗ ಆ ಗಾರೆಯ ಗುಂಡಿ, ಕೊಳವೆಗಳು ಬೆಳಕಿಗೆ ಬಂದಿವೆ. ಪೂರ್ವದಲ್ಲಿ ಇವರ ಮನೆತನಕ್ಕೆ ಇದ್ದ ಹೆಸರು 'ಆಬಾ'. ಆನಂತರ ಚಿನ್ನ-ಬೆಳ್ಳಿ ಅಂಗಡಿಯಿಂದಾಗಿ ಇವರ ಪೀಳಿಗೆಯವರಿಗೆ 'ಸರಾಫ್' ಎಂಬ ಹೆಸರೇ ರೂಢಿಗೆ ಬಂದಿತು.

ಇನ್ನು, ೧೯೩೧ರ '(ಪ)ಪ್ರತಿ'ಯನ್ನು ಹೊಂದಿದ್ದ ಸಿ. ಪರಶುರಾಮನಾಯಕ ಅವರು ಚಿತ್ರದುರ್ಗ ನಾಯಕ ಅರಸರ ಅಧೀನದ ಹಾಗೂ ಮುಖ್ಯ ಚಾವಡಿಗಳಲ್ಲೊಂದಾಗಿದ್ದಿತೆಂದು

ತಿಳಿಯಲಾದ 'ಚಪ್ಪೆ ಚಾವಡಿ'ಅಧಿಕೃತ ಪತ್ರಗಳಿಗೆ ಮೊಹರು (ಛಾಪ) ಮಾಡುತ್ತಿದ್ದ ಕಛೇರಿ?]ಯ ದಳವಾಯಿ ಕಾಟಪ್ಪನಾಯಕನ ವಂಶಸ್ಥರು. ಬಖೈರು ಪ್ರತಿ ಮಾತ್ರವಲ್ಲದೆ ಇನ್ನಿತರ ಚಾರಿತ್ರಿಕ ದಾಖಲೆಗಳನ್ನೂ ಇವರ ಕುಟುಂಬ ವರ್ಗದವರು ರಕ್ಷಿಸಿಕೊಂಡು ಬಂದಿರುವರು.

ಈ ಎಲ್ಲ ಪ್ರತಿಗಳನ್ನು ಪರಸ್ಪರ ಹೋಲಿಸಿ ನೋಡಿದರೆ, ಪ್ರತಿಯೊಂದು ಪುಟದಲ್ಲಿಯೂ ಸಾಕಷ್ಟು ಪ್ರಮಾಣದಲ್ಲಿ ಅಕ್ಷರ ಸ್ಖಾಲಿತ್ಯವು ಕಂಡುಬರುತ್ತದೆ. ಅಲ್ಲಲ್ಲಿ ಪಾಠ ವ್ಯತ್ಯಾಸವಾಗಿರುವುದೂ ಉಂಟು. ಆದರೆ ಮೂಲ ವಿಷಯಕ್ಕೆ ಇದರಿಂದ ಚ್ಯುತಿಯುಂಟಾಗಿಲ್ಲ ವೆನ್ನಬಹುದು.[೮೨]

**ಶ್ರೀ ಕೃಷ್ಣದೇವರಾಯನ ದಿನಚರಿ:** ಈ ಕೃತಿಯ ಸ್ವಂತ ಹೆಸರು '॥ಕೃಷ್ಣರಾಯರ ದಿನಚರಿಯ ಕೃತ್ಯಗಳ ವಿಸ್ತಾರ॥'[೮೩] ಇದು ವಿಜಯನಗರದ ಸಾಮ್ರಾಟ ಶ್ರೀ ಕೃಷ್ಣದೇವರಾಯನ (೧೫೦೯-೧೫೨೯) ದಿನಚರಿಯ ವಿವರಗಳುಳ್ಳ ತಾಳೆಗರಿ ಹಸ್ತಪ್ರತಿಯೆಂತಲೂ ಗರಿಗಳ ಚಿತ್ರವನ್ನು ಪುಸ್ತಕದಲ್ಲಿ ಸೇರಿಸಿದೆ ಎರಡೂ ಬದಿಯಲ್ಲಿ ಬರೆಯಲಾದ ೬೩ ತಾಳೆಗರಿಗಳನ್ನು ಹೊಂದಿದೆಯೆಂತಲೂ ಬಹುಶಃ ೧೬ನೆಯ ಶತಮಾನದ ತಾಳೆಯೋಲೆ ಗ್ರಂಥವೆಂತಲೂ ದೊರೆಯ ಅಪ್ಪಣೆಯಂತೆ ಇದನ್ನು ಮುಕ್ಕು ತಿಮ್ಮಯ್ಯ ಮತ್ತು ಮಾದಯ್ಯನವರ ಮಲ್ಲಯ್ಯ ಎಂಬವರು ಬರೆದರೆಂತಲೂ ಈ ಪುಸ್ತಕದ ಸಂಪಾದಕರು ಬರೆದಿರುವರು. ಆದರೆ ಇಲ್ಲಿಯ ಗಮನಾರ್ಹ ಸಂಗತಿಯೆಂದರೆ ಈ ದಿನಚರಿಯನ್ನು 'ಬಖೈರು' ಎಂದು ಕರೆದಿರುವುದು.

ಕೃತಿಯ ಪ್ರಸ್ತಾವನೆಯಲ್ಲಿ ಪ್ರಧಾನ ಸಂಪಾದಕ ಪ್ರೊ॥ ಎಂ. ವಿ. ಸೀತಾರಾಮಯ್ಯ ಅವರು ಬರೆದಿರುವುದು ಹೀಗೆ: ''ಕೃಷ್ಣದೇವರಾಯನ ದಿನಚರಿಯೂ ಒಂದು ಬಖೈರು. 'ಕಾಗಜ' ಎಂಬ ಮಾತು ಕೃಷ್ಣದೇವರಾಯನ ಈ ದಿನಚರಿಯಲ್ಲಿಯೇ ಬಳಕೆಯಾಗಿದೆ. ಹೀಗಿದ್ದರೂ ಈ ಬಖೈರು ತಾಳೆಗರಿಯ ಮೇಲೆ ಲಿಖಿತವಾಗಿರುವುದು ಬಹಳ ಕುತೂಹಲಕಾರಿಯಾದ ವಿಷಯ. ಅಲ್ಲದೆ, ಈವರೆಗೂ ಉಪಲಬ್ಧವಾಗಿದ್ದ ಈ ಬಖೈರು ದೊರೆತಿರುವವುಗಳಲ್ಲಿ ('ರಾಮರಾಯನ ಬಖೈರು', 'ಹೈದರ್‌ನಾಮೆ', 'ರಾಜೇಂದ್ರನಾಮೆ') ಅತ್ಯಂತ ಪ್ರಾಚೀನವಾದದ್ದು ಎಂದು ಕಂಡುಬರುತ್ತದೆ. ಅಲ್ಲದೆ, ನಮ್ಮ ಗಮನಕ್ಕೆ ಬಂದಂತೆ, ಸದ್ಯಕ್ಕೆ ಓಲೆಗರಿಯಲ್ಲಿ ಬರೆದ ಬಖೈರು ಇದೊಂದೇ ದೊರೆತಿರುವುದು.''

ಹಿಂದೆಯೇ ತಿಳಿದಂತೆ, ಬಖೈರುಗಳನ್ನು ಬರೆದಿಟ್ಟವರು ಮರಾಠಾ ಸರದಾರರು ಹಾಗೂ ರಾಜಪ್ರತಿನಿಧಿಗಳು. ಬಖೈರುಗಳು ಕಾಗದದ ಮೇಲೆ ಬರೆಯಲಾದ ದಾಖಲೆಗಳು. ಓಲೆಗರಿಯಲ್ಲಿ ಬರೆದ ಈ ಬಗೆಯ ವೃತ್ತಾಂತಕ್ಕೆ ಬಖೈರು ಎಂದು ಸಂಬೋಧಿಸಿರುವುದು ಇನ್ನೆಲ್ಲಿಯೂ ಇರುವಂತೆ ಕಾಣದು. ''ಕೃತಿ ಕೃಷ್ಣದೇವರಾಯನ ಸಮಕಾಲೀನವೇ ಆದರೂ

---

೮೦ ಕೆಲವು ವರುಷಗಳ ಹಿಂದೆ ನಾನು ಮಹಾರಾಜಾ ಸಂಸ್ಕೃತ ಕಾಲೇಜಿನಲ್ಲಿ ಈ ಬಖೈರ್‌ನ ಹಸ್ತಪ್ರತಿಯ ಬಗೆಗೆ ವಿಚಾರಿಸಿದಾಗ ಅದು ಇಲ್ಲದಿರುವ ಬಗೆಗೆ ಸ್ಪಷ್ಟನೆ ದೊರೆಯಿತು.

೮೧ ಈ ಪ್ರತಿಯನ್ನು ಸಿ. ಪರಶುರಾಮನಾಯಕ ಅವರೇ ಒದಗಿಸಿರುತ್ತಾರೆ.

೮೨ ಚಿತ್ರದುರ್ಗ ಬಖೈರ್‌ನ ಪರಿಷ್ಕೃತ ಆವೃತ್ತಿಯನ್ನು ನಾನು ಸಿದ್ಧಪಡಿಸುತ್ತಿದ್ದು, ಇದರ ಚಾರಿತ್ರಿಕ ವಿಮರ್ಶೆಯನ್ನು ಪ್ರತ್ಯೇಕವಾಗಿ ಮಾಡಲಿದ್ದೇನೆ.

೮೩. ಸಂಪಾದಕರು: ವಿ. ಎಸ್. ಎಸ್. ಆಚಾರ್ಯ, ಬಿ. ಎಂ. ಶ್ರೀ. ಪ್ರತಿಷ್ಠಾನ ಬೆಂಗಳೂರು ೧೯೮೩

ನಮಗೆ ದೊರಕಿರುವ ಹಸ್ತಪ್ರತ ಮೂಲಮಾತೃಕೆಯ ನಕಲಾಗಿರುವ ಸಂಭವವೇ ಹೆಚ್ಚು'' ಎಂದು ಈ ದಿನಚರಿಯ ಪ್ರಧಾನ ಸಂಪಾದಕರೇ ಬರೆದಿರುವುದು ಉಚಿತವಾಗಿಯೇ ಇದೆ. ಈ ದಿನಚರಿಯ ಕಾಲ ೧೭-೧೮ನೆಯ ಶತಮಾನವೆಂತಲೂ ಅವರು ಹೇಳಿರುವುದರಿಂದ, ಇದನ್ನು ಬಖೈರು ಸ್ವರೂಪದ ದಾಖಲೆಯೆನ್ನಬಹುದೇ ವಿನಾ ಇದನ್ನೇ ಬಖೈರು ಎನ್ನಲಾಗದು.

ಮರಾಠೀ ಸಾಹಿತ್ಯದಲ್ಲಿರುವಂತೆ ಬಖೈರು ಸಾಹಿತ್ಯ ಪ್ರಕಾರವನ್ನಾಗಲೀ ಅಥವಾ ಅದನ್ನು ಹೋಲುವ ಯಾವುದೇ ಉದಂತ ಸಾಹಿತ್ಯ ಪ್ರಕಾರವನ್ನಾಗಲೀ ಕನ್ನಡ ಸಾಹಿತ್ಯದಲ್ಲಿ ಪ್ರತ್ಯೇಕವಾಗಿ ಗುರುತಿಸಿರುವಂತೆ ಕಂಡುಬರುವುದಿಲ್ಲ. ಕನ್ನಡ ಭಾಷೆಯಲ್ಲಿ ವಿಪುಲವಾಗಿರುವ ಕೈಫಿಯತ್ತು, ಬಖೈರು, ನಾಮಾ ಹಾಗೂ ಇಂತಹದೇ ಅನ್ಯ ಕೃತಿಗಳನ್ನೂ ಬರವಣಿಗೆಗಳನ್ನೂ ಆಮೂಲಾಗ್ರವಾಗಿ ಅಭ್ಯಸಿಸಿ, ಅವುಗಳ ಸ್ವರೂಪ, ವೈಶಿಷ್ಟ್ಯ ಇತ್ಯಾದಿಗಳನ್ನು ವಿಶದೀಕರಿಸುವ ಅಗತ್ಯವಿದೆ. ಚರಿತ್ರೆ, ಸಂಸ್ಕೃತಿ, ಭಾಷೆ ಮತ್ತಿತರ ಕ್ಷೇತ್ರಗಳಿಗೆ ಅಮೂಲ್ಯವೆನಿಸುವ ಇಂತಹ ದಾಖಲೆ/ಸಾಹಿತ್ಯದ ಕಡೆಗೆ ವಿದ್ವಾಂಸರು ತಮ್ಮ ಗಮನ ಹರಿಸುವಂತಾಗಬೇಕು.

*ಸಂಶೋಧನ, ೧೯೯೧, ಪು. ೬೫೭-೮೩*

# ೨೧. ಸಂಬಳಿಗೋಲು

● ಎ. ಆರ್. ಕೃಷ್ಣಶಾಸ್ತ್ರೀ

''ಹರಿಶ್ಚಂದ್ರ ಕಾವ್ಯ ಸಂಗ್ರಹ''ದಲ್ಲಿ (೭-೩೧, ೪೭) 'ಸಂಬಳಿಗೋಲು'[೧] ಎಂಬ ಮಾತು ಬರುತ್ತದೆ. ಇದಕ್ಕೆ ಅರ್ಥವೇನು? 'ಬಿದಿರುಕೋಲು' ಎಂಬ ಅರ್ಥವಿರಬಹುದೇ ಎಂದು ಸಂಪಾದಕರು ಸಂಶಯ ಸೂಚಿಸಿದ್ದಾರೆ. (ಐದನೆಯ ಮುದ್ರಣ, ೧೯೫೦, ಪುಟ ೧೩೩.) ಕಿಟ್ಟೆಲ್ ಅವರು ತಮ್ಮ ನಿಘಂಟಿನಲ್ಲಿ ಈ ಪದವನ್ನು ಕೊಟ್ಟಿಲ್ಲ. ಅವರು ಕೊಟ್ಟಿರುವ 'ಸಮ್ಬಲ' (=ಶಮ್ಬಲ, ಸಮ್ಬಳ= ಬುತ್ತಿ), ಸಮ್ಬಲಿ(=ಶಮ್ಬಲಿ=ಕುಂಟಣಿ), ಸಮ್ಬಳಿಗೆ (=ಸಂಪುಟಿಗೆ=ಪೆಟ್ಟಿಗೆ) ಈ ಮಾತುಗಳಿಗೂ 'ಸಂಬಳಿ'ಗೂ ಸಂಬಂಧವಿಲ್ಲ. ಕಾರಂತರ 'ಸಿರಿಗನ್ನಡ ಅರ್ಥಕೋಶ'ವು (೧೯೪೧) 'ಸಂಬಳಿ' 'ಸಂಬಳಿಗೋಲು' ಇವನ್ನು ಕೊಟ್ಟಿಲ್ಲ. 'ಕನ್ನಡ ನಿಘಂಟು' (ಮಚ್ಚಿಮಲೆ ಶಂಕರನಾರಾಯಣರಾವ್ ಇತ್ಯಾದಿ ೧೯೫೧) 'ಸಂಬಳಿಗೋಲು' ಎಂಬ ಶಬ್ದವನ್ನು ಕೊಟ್ಟು ಇದು ಕನ್ನಡ ಶಬ್ದ, ಅದಕ್ಕೆ ಕೊಕ್ಕೆಕೋಲು (?) ಎಂಬ ಅರ್ಥವಿರಬಹುದು ಎಂದು ಸೂಚಿಸಿದೆ (ಪುಟ. ೨೬೦). ಟಿ, ಕೆ. ಅನಂತನಾರಾಯಣ ಅವರ 'ಶಬ್ದಾರ್ಥ ಸಂಗ್ರಹ'ವು (ಅಮುದ್ರಿತ), 'ಸಂಬಳಿಗೋಲು' ಎಂಬ ಪದವನ್ನು ಕೊಟ್ಟು ಅದಕ್ಕೆ ಜೀತದ ದೊಣ್ಣೆ, ಬಿದಿರುಕೋಲು, ಕೊಕ್ಕೆಕೋಲು ಎಂಬ ಅರ್ಥವನ್ನು ಹೇಳಿದೆ. ಇವರು ಯಾರೂ ಆಕರವನ್ನಾಗಲಿ ತಾವು ಸೂಚಿಸಿರುವ ಅರ್ಥಕ್ಕೆ ಆಧಾರವನ್ನಾಗಲಿ ಕೊಟ್ಟಿಲ್ಲ.

ಹರಿಶ್ಚಂದ್ರ ಕಾವ್ಯಸಂಗ್ರಹದ ಸಂಪಾದಕರು ಬಿದಿರುಕೋಲು ಎಂಬ ಅರ್ಥವಿರಬಹುದೇ ಎಂದು ಸೂಚಿಸಿರುವುದನ್ನು ವಿಚಾರಮಾಡೋಣ. ಬಿದಿರುಕೋಲು ಎಂಬ ಅರ್ಥವನ್ನು ಊಹಿಸುವುದಕ್ಕೆ ಆಧಾರವನ್ನು ಮುಂದೆ ಕೊಟ್ಟಿದೆ. ಅದರ ಸಂಶಯಕ್ಕೆ ಎಡೆ ಏನೆಂದರೆ, ಸಂಬಳಿಗೋಲು ಎಂಬುದನ್ನು 'ವೇಣುದಂಡ' ಎಂಬಂತೆ ಬಿದಿರು ಕೋಲು ಎಂಬರ್ಥದಲ್ಲಿ ಸಮಾನಾರ್ಥಕವಾಗಿ, ಸಾರ್ವತ್ರಿಕವಾಗಿ, ಉಪಯೋಗಿಸಲಾಗುವುದಿಲ್ಲ. ಇದೇ ಗ್ರಂಥದಲ್ಲಿ ಮುಂದೆ (೭-೪೮) ಹರಿಶ್ಚಂದ್ರನು 'ಸಂಬಳಿ!' 'ಸಂಬಳಿ!' ಎಂದುಕೊಂಡು ಹೋಗುತ್ತಿದ್ದನೆಂದು ಉಕ್ತವಾಗಿದೆ. ಹಾಗೆಂದರೆ, ಅವನು 'ಬಿದಿರು! ಬಿದಿರು!' ಎಂದುಕೊಂಡು ಹೋದನೇ? ಇದು ಹೊಂದುವುದಿಲ್ಲ. ಇಲ್ಲಿನ ಸಂದರ್ಭವೇನೆಂದರೆ, ಹರಿಶ್ಚಂದ್ರನು ತನ್ನನ್ನು ಹೊಲೆಯನಿಗೆ ಮಾರಿಕೊಳ್ಳುತ್ತಾನೆ. ಅವನು ತನ್ನ ದಾಸನಾದ ಹರಿಶ್ಚಂದ್ರನಿಗೆ ತಾನು ಹಿಡಿದಿದ್ದ 'ಸಂಬಳಿ ಗೋಲ ಮುದ್ರೆ' ಗೊಡುತ್ತಾನೆ. ಅದು ಅವನ ಅಧಿಕಾರದ ಅಥವಾ ಉದ್ಯೋಗದ ಅಥವಾ ಸಾಮಾಜಿಕಸ್ಥಾನದ ಸೂಚಕ, ಲಾಂಛನ. ಅದನ್ನು ಅವನು ತನ್ನ ಜೊತೆಯಲ್ಲಿಯೇ

---

೧ ಇದು 'ಸೆಂಬುಳಿಗೋಲ್' 'ಸಂಬಳಿಗೆಗೋಲ್' ಎಂಬ ರೂಪಗಳಲ್ಲಿಯೂ ಕೆಲವುಕಡೆ ದೊರೆಯುತ್ತದೆ: ಮುಂದೆ ೩೧೦-೧೧ನೆಯ ಪುಟಗಳಲ್ಲಿ ಕೊಟ್ಟಿರುವ ಶಾಂತಿಪುರಾಣ, ನೇಮಿನಾಥ ಪುರಾಣಗಳ ಪ್ರಯೋಗಗಳನ್ನು ನೋಡಿ. ಹರಿಶ್ಚಂದ್ರ ಕಾವ್ಯದ (ಕಾವ್ಯಕಲಾನಿಧಿ, ೧೯೦೯) ಸ್ಥಲ ೧೧ ಪದ್ಯ ೧೭, ೩.೬ ಗಳಲ್ಲಿಯೂ ಸೆಂಬುಳಿ ಎಂಬ ರೂಪವಿದೆ. ಅದೇ ಸ್ಥಲದ ೩೭ನೆಯ ಪದ್ಯದಲ್ಲಿ ಸೆಂಬೊಳಿ ಎಂಬ ರೂಪವಿದೆ. ಬಹುಕಡೆ 'ಸಂಬಳಿ'ಯೇ ದೊರೆಯುವುದರಿಂದಲೂ, ಇದಕ್ಕೇ ತೃಪ್ತಿಕರವಾದ ನಿರುಕ್ತಿಯನ್ನು ಹೇಳಬಹುದಾದ್ದರಿಂದಲೂ ಈ ರೂಪವೇ ಸರಿಯೆಂದು ತೋರುತ್ತದೆ.

ತೆಗೆದುಕೊಂಡು ಹೋಗುತ್ತಿದ್ದಂತೆ ತೋರುತ್ತದೆ. ಇಂಥದೇ ಒಂದು ಸನ್ನಿವೇಶವು ನಾಗವರ್ಮನ 'ಕಾದಂಬರಿ'ಯ ಮೊದಲಲ್ಲಿ ಬರುತ್ತದೆ. ಅದರ ಪರಿಶೀಲನೆಯಿಂದ ಅರ್ಥವು ಇನ್ನೂ ಸ್ವಲ್ಪ ಸ್ಪಷ್ಟಪಡುತ್ತದೆ. ಆ ಭಾಗ ಇದು (ಚಂಡಾಲ ಕನ್ಯೆಯು ಶೂದ್ರಕರ ಆಸ್ಥಾನಕ್ಕೆ ಬಂದದ್ದು):

೧. .....ಕೋಮಲಕರತಳದೊಳ್ ತಳೆದದೊಂದು **ಸಂಬಳಿಗೋಲಿಂ**[೧] ದಿರದೆ ಪಳಂಚಿಸಿದಳ್ ಜರ್ಝರರವಮೊಗೆಯಲ್ಕೆ ನೃಪಸಭಾಕುಟ್ಟಿಮಮಂ ಅಂತು ಸಂಬಳಿಗೋಲಿಂ ಸನ್ನೆಗೆಯ್ಯೆ,

೨. **ಸಂಬಳಿಗೋಲಿಂ**ದೊಗೆದೊಂದುಲಿಪಿಂಗೆ....

ಇದು ಈ ಭಾಗಗಳಿಗೆ ಸಂವಾದಿಯಾದ ಬಾಣನ ಕಾದಂಬರಿಯ ಸಂಸ್ಕೃತ ಮೂಲ:

೧. ಕೋಮಲೇನ ಪಾಣಿನಾ ಜರ್ಜರಿತ ಮುಖಭಾಗಾಂ **ವೇಣುಲತಾ**ಮಾದಾಯ ನರಪತಿಪ್ರತಿಬೋಧನಾರ್ಥಂ ಸಕೃತ್ಸಭಾಕುಟ್ಟಿಮಮಾಜಘಾನ, ಯೇನ ಸಕಲಮೇವ ತದ್ರಾಜಕಮೇಕಪದೇವನಕರಿಯೂಥಮಿವ ತಾಲಶಬ್ದೇನ ಯುಗಪದಾವಲಿತವದನಮವನಿಪಾಲಮುಖಾದಾಕೃಷ್ಟಚಕ್ಷುಸ್ತದಭಿಮುಖಮಾಸೀತ್.

೨. ತೇನ ವೇಣುಲತಾಧ್ವನಿನಾ....

ಈ ಭಾಗಗಳಿಂದ 'ಸಂಬಳಿಗೋಲು' ಕಿರುಬಿದಿರಿನದೆಂದು ಗೊತ್ತಾಗುತ್ತದೆ; ಅದು ಕೈಯಲ್ಲಿ ಬೆತ್ತದಂತೆ ಹಿಡಿದುಕೊಳ್ಳಬಹುದಾದದ್ದು; (ಬೊಂಬು ಅಲ್ಲ, ಹೆಬ್ಬಿದಿರಿನದಲ್ಲ). ಸಂಸ್ಕೃತ ಮೂಲದಲ್ಲಿ ಬಂದಿರುವ ವಿವರಗಳನ್ನು ನೋಡಿದರೆ ಇನ್ನೂ ಹೆಚ್ಚಿನ ಅರ್ಥವು ತಿಳಿದುಬರುತ್ತದೆ. ೧ನೆಯ ವಾಕ್ಯವನ್ನು ಹೀಗೆ ಕನ್ನಡಿಸಬಹುದು:

ಜಜ್ಜಿದ ತುದಿಯುಳ್ಳ ಬಿದಿರುಕೋಲನ್ನು ತನ್ನ ಕೋಮಲವಾದ ಕೈಯಿಂದ ತೆಗೆದುಕೊಂಡು, ಅವಳು ರಾಜನನ್ನು ಎಚ್ಚರಿಸುವುದಕ್ಕೋಸ್ಕರ ಒಂದು ಸಲ ಸಭಾಮಂದಿರದ ನೆಲದಮೇಲೆ ಹೊಡೆದಳು. ಅದರಿಂದ ಅಲ್ಲಿದ್ದ ರಾಜರೆಲ್ಲರೂ ತಟ್ಟನೆ, ಕಾಡಾನೆಗಳ ಹಿಂಡು ತಾಳ ಶಬ್ದದಿಂದ ಹೇಗೋಹಾಗೆ, ತಮ್ಮ ಮುಖವನ್ನು ಹಿಂದಕ್ಕೆ ತಿರುಗಿಸಿ ದೊರೆಯ ಮುಖದಿಂದ ದೃಷ್ಟಿಯನ್ನು ತೆಗೆದು ಅವಳ ಕಡೆಗೆ ನೋಡಿದರು. ಹೀಗ ಅವಳು ಸಂಜ್ಞೆ ಮಾಡಲು (ಸೂಚನೆ ಕೊಡಲು)....

ಭಾನುಚಂದ್ರ ಸಿದ್ಧಚಂದ್ರರು ಈ ಭಾಗದಮೇಲೆ ಹೀಗೆ ವ್ಯಾಖ್ಯಾನ ಮಾಡಿದ್ದಾರೆ:

**ವೇಣುಯಷ್ಟಿಂ** ವಿಶೇಷಯನ್ನಾಹ, **ಜರ್ಜರಿತೇತಿ**. ಜರ್ಜರಿತೋ ಜರ್ಜರೀಭೂತೋ ಮುಖಭಾಗೋ ಅಗ್ರಭಾಗೋ ಯಸ್ಯಾಸ್ತಾಂ. ಅಗ್ರಭಾಗದಲನಾತ್ ಶಬ್ದವಿಶೇಷೋ ಜಾಯತ ಇತಿ ಪ್ರಸಿದ್ಧೇಃ

ಈ ಬಿದಿರುಕೋಲಿನ ಒಂದು ತುದಿ ಜಜ್ಜಿತ್ತೆಂದರೆ ಲೊಡ್ಡಾಗಿರುವುದಿಲ್ಲ- ಸೀಳಿರುತ್ತದೆ.

---

೧ ಇದಕ್ಕೆ 'ಕಾದಂಬರಿ'ಯ ಸಂಪಾದಕರು ಅಡಿಯಲ್ಲಿ 'ಬಿದಿರುಕೋಲು' ಎಂದು ಅರ್ಥಕೊಟ್ಟಿದ್ದಾರೆ. (ಬಿ. ಮಲ್ಲಪ್ಪನವರ ಪರಿಷ್ಕರಣ, ೧೮೯೨: ಪುಟ. ೮)

ಆ ತುದಿಯನ್ನು ನೆಲದಮೇಲೆ ಬಡಿದರೆ ಫಳಾರನೆ ಸದ್ದಾಗುತ್ತದೆ. ಇಂಥ ಸೀಳಿದ ತುದಿಯುಳ್ಳ ಕೋಲನ್ನು ಇಂದಿಗೂ ಖೆಡ್ಡಾದಲ್ಲಿ ಆನೆಗಳನ್ನು ಹೆದರಿಸುವುದಕ್ಕೆ ಧಾರಾಳವಾಗಿ ಉಪಯೋಗಿಸುತ್ತಾರೆ. ಕ್ಷಣಮಾತ್ರದಲ್ಲಿ ಮರಗಳನ್ನೇ ಮುರಿಯಬಲ್ಲ ಕಾಡಾನೆಗಳು, ಈ ಬಿದಿರಕೋಲ ಸದ್ದಿಗೆ ಬೆದರಿ ಘೀಳಿಡುತ್ತ ಹಿಮ್ಮೆಟ್ಟುತ್ತವೆ. ಒಬ್ಬೊಬ್ಬರೇ ಈ ಒಡಕು ಬಿದಿರಿನ ಸದ್ದಿನಿಂದ ಅವನ್ನು ಓಡಿಸುತ್ತಾರೆ. ಇಲ್ಲಿಯೂ ಹಾಗೆಯೇ ಒಬ್ಬ ಹೊಲತಿ ಕಾಡಾನೆಗಳಂತಿದ್ದ ರಾಜರ ಸಮೂಹವನ್ನು ಹಿಂತಿರುಗಿಸುತ್ತಾಳೆ. ಅವಳು ಹಾಗೆ ನೆಲದಮೇಲೆ ಬಡಿದು ಸದ್ದು ಮಾಡಿದ್ದರ ಉದ್ದೇಶವೇನು?-ನರಪತಿ ಪ್ರತಿಬೋಧನಾರ್ಥಂ: ಎಂದರೆ ರಾಜನನ್ನು ಎಚ್ಚರಗೊಳಿಸುವುದಕ್ಕೆ; ಸರಿಯಾಗಿ ಹೇಳಬೇಕಾದರೆ, ಎಚ್ಚರಿಕೆ ಕೊಡುವುದಕ್ಕೆ (ಅವನೇನು ನಿದ್ರೆ ಹೋಗುತ್ತಿರಲಿಲ್ಲ 'ಎಚ್ಚರಗೊಳಿಸು'ವುದಕ್ಕೆ!) ಎಚ್ಚರಿಕೆ ಏಕೆ? ತಾನು ಹೊಲೆಯಳು; ಹತ್ತಿರ ಹೋಗುವಹಾಗಿಲ್ಲ; ಪ್ರಾಯಶಃ ಅಪ್ಪಣೆ ಇಲ್ಲದೆ ಅವನೊಡನೆ ಮಾತನಾಡುವಹಾಗಿಲ್ಲ; ಆದ್ದರಿಂದಲೇ 'ಸನ್ನೆ' ಮಾಡಿದ್ದು. ಗ್ರಾಮಾಂತರಗಳಲ್ಲಿ ಈಗ್ಗೆ ಕೆಲವು ವರ್ಷಗಳವರೆಗೂ ಹೊಲೆಯರು ಕೈಯಲ್ಲಿ ಬಿದಿರುಕೋಲನ್ನು ಹಿಡಿದು ತಿರುಗುತ್ತಿದ್ದರು. ಯಾರಾದರೂ ಬಂದರೆ ದಾರಿಬಿಟ್ಟು ಅರುಗಾಗಿ ದೂರ ನಿಲ್ಲುತ್ತಿದ್ದರು. ಆದರೆ ಅವರು ಕೋಲನ್ನು ಹೀಗೆ ಸೀಳಿಕೊಂಡಿದ್ದು ಅದರಿಂದ ಸದ್ದು ಮಾಡಿದ್ದನ್ನಾಗಲಿ ಎಚ್ಚರಿಕೆ ಕೊಟ್ಟಿದ್ದನ್ನಾಗಲಿ ನಾನು ಗಮನಿಸಿಲ್ಲ. ಈಗ ಈ ಪದ್ಧತಿ ಎಲ್ಲಾದರೂ ರೂಢಿಯಲ್ಲಿದೆಯೋ ಇಲ್ಲವೋ ತಿಳಿಯದು.

ಆತ್ಮರಕ್ಷಣೆಗಾಗಿ ದಂಡಧಾರಣೆ ಮಾಡುವುದು ಹಿಂದೆ ಸರ್ವಸಾಧಾರಣವಾಗಿತ್ತು. ಸಂನ್ಯಾಸಿ ಸ್ನಾತಕ ಬ್ರಹ್ಮಚಾರಿ ಎಲ್ಲರೂ ದಂಡವನ್ನು ಹಿಡಿದಿರುತ್ತಿದ್ದರು. ಸಂನ್ಯಾಸಿ ಸ್ನಾತಕರದು ವೇಣುದಂಡವಾಗಿದ್ದರೆ ನೂತನ ಬ್ರಹ್ಮಚಾರಿಯದು ವಟುವಿಗೆ ತಕ್ಕಂತೆ ಮೃದುವಾದ ತೆಳುವಾದ ಮುತ್ತುಗದ ಕೋಲಾಗಿತ್ತು. ಬೌದ್ಧಸಂನ್ಯಾಸಿಗಳೂ 'ಶಲಾಕಾ' ಎಂಬ ಬಿದಿರು ಕೋಲನ್ನು ಹಿಡಿದಿರುತ್ತಿದ್ದರು. ಆದರೆ ಈ ಬಿದಿರು ದೊಣ್ಣೆಗಳು ಸೀಳಿರುತ್ತಿರಲಿಲ್ಲವೆಂದು ತೋರುತ್ತದೆ. ಸೀಳಿರುವ ಬಿದಿರುದೊಣ್ಣೆಯನ್ನು ಬೆದರಿಸುವುದಕ್ಕೂ, ಆಮೇಲೆ ಎಚ್ಚರಿಕೆ ಕೊಡುವುದಕ್ಕೂ ಉಪಯೋಗಿಸುತ್ತಿದ್ದರೆಂದು ಊಹಿಸಬಹುದು. ಭರತನು ಇಂದ್ರಧ್ವಜೋತ್ಸವದಲ್ಲಿ 'ಮಹೇಂದ್ರ ವಿಜಯ'ವನ್ನು ಅಭಿನಯಿಸಿದಾಗ ದೈತ್ಯದಾನವರಿಗೆ ಅದು ಅಪ್ರಿಯವಾಗಿ ಅವರು ವಿಘ್ನವನ್ನು ತಂದು ಒಡ್ಡಿದರಂತೆ. ಸೂತ್ರಧಾರನ ಮತ್ತು ನಟರ ಕೈಬಾಯಿಗಳು ಕಟ್ಟಿ ಹೋದುವಂತೆ. ಆಗ ಇಂದ್ರನು ತನ್ನ ಧ್ವಜವನ್ನೇ ಕಿತ್ತುತಂದು ಅವರನ್ನು ಅದರಿಂದ ಹೊಡೆದು ಓಡಿಸಿದನಂತೆ. ಆಗ ಅದು ಸೀಳಿ ಜರ್ಜರವಾಯಿತಂತೆ. ಈ ಇಂದ್ರಧ್ವಜೋತ್ಸವದ ವರ್ಣನೆ ಪ್ರಾಚೀನ ತಮಿಳು ಗ್ರಂಥಗಳಲ್ಲಿಯೂ ಕೆಲವು ಸಂಸ್ಕೃತ ಗ್ರಂಥಗಳಲ್ಲಿಯೂ ಕಂಡುಬರುತ್ತದೆ. ಭರತನಾಟ್ಯ ಶಾಸ್ತ್ರದಲ್ಲಿ ಈ ಜರ್ಜರದ ವೃತ್ತಾಂತವಿದೆ :

> ಜರ್ಜರೀಕೃತ ದೇಹಾಂಸ್ತಾನಕರೋತ್ ಜರ್ಜರೇಣ ಸಃ
> ನಿಹತೇಷು ಚ ಸರ್ವೇಷು ವಿಘ್ನೇಷು ಸಹ ದಾನವೈಃ ॥
>
> ಸಂಪ್ರಹೃಷ್ಟ ತತೋ ವಾಕ್ಯಮಾಹುಃ ಸರ್ವೇ ದಿವೌಕಸಃ
> ಅಹೋ ಪ್ರಹರಣಂ ದಿವ್ಯಮಿದಮಾಸಾದಿತಂ ತ್ವಯಾ॥
>
> ಜರ್ಜರೀಕೃತಸರ್ವಾಂಗಾ ಯೇನೈತೇ ದಾನವಾಃ ಕೃತಾಃ
> ಯಸ್ಮಾದನೇನ ತೇ ವಿಘ್ನಾಃ ಸಾಸುರಾ ಜರ್ಜರೀಕೃತಾಃ॥

ತಸ್ಮಾಜ್ಜರ್ಜರ ಏವೇತಿ ನಾಮತೋಯಂ ಭವಿಷ್ಯತಿ
ಶೇಷಾ ಯೇ ಚೈವ ಹಿಂಸಾರ್ಥಂ ಉಪಯಾಸ್ಯಂತಿ ಹಿಂಸಕಾಃ ॥

ದೃಷ್ಟ್ವೈವ ಜರ್ಜರಂ ತೇಪಿ ಗಮಿಷ್ಯಂತ್ಯೇವಮೇವ ತು
ಏವಮೇವಾಸ್ತ್ವಿತಿ ತತಃ ಶಕ್ರಃ ಪ್ರೋವಾಚ ತಾನ್ ಸುರಾನ್ ॥

ರಕ್ಷಾಭೂತಶ್ಚ ಸರ್ವೇಷಾಂ ಭವಿಷ್ಯತ್ಯೇಷ ಜರ್ಜರಃ
ಪ್ರಯೋಗೇ ಪ್ರಸ್ತುತೇ ಹ್ಯೇವಂ ಸ್ಥಿತೇ ಶಕ್ರಮಹೇ ಪುನಃ॥ (೧-೭೦-೭೫)

ಇಂದ್ರಧ್ವಜೋತ್ಸವದಲ್ಲಿ ಮುಖ್ಯವಾಗಿ ಒಂದು ಬಿದಿರುಗಳೆಯನ್ನು ನೆಟ್ಟು ಅದನ್ನು ಅಲಂಕಾರ ಮಾಡಿ ಪೂಜಿಸುತ್ತಾರೆ; ಪ್ರಾಯಶಃ ಅದರ ತುದಿ ಸೀಳಿದ್ದು ಅದಕ್ಕೆ ಧ್ವಜವನ್ನೋ ಪಟವನ್ನೋ ಸಿಕ್ಕಿಸುತ್ತಿದ್ದರು. (ದೈತ್ಯರನ್ನು ಹೊಡೆದಮೇಲೆ ಅದು ಸೀಳಿತೋ, ಮೊದಲೇ ಸೀಳಿತ್ತೋ-ಅದು ಹೇಗಾದರೂ ಇರಲಿ!) ಜರ್ಜರಿತ ಎಂದರೆ ಗಳಿತವಾದ, ಮುಪ್ಪಡಸಿದ, ನಜ್ಜುಗುಜ್ಜಾದ ಎಂದು ಮುಂತಾಗಿ ಅರ್ಥವಾಗುತ್ತದೆ. ಬಿದಿರನ್ನು ಜಜ್ಜಿದರೆ ಅದು ಸೀಳುತ್ತದೆ ಎಂಬುದೂ ತಿಳಿದ ಸಂಗತಿ. ''ಅತಿಶಯೇನ ಜೀರ್ಣೀಕೃತೋ ದೇಹಃ ಯೇಷಾಂ ತೇ ಜರ್ಜರೀಕೃತದೇಹಾಃ'' ಎಂದು ಅಭಿನವಗುಪ್ತರು ವ್ಯಾಖ್ಯಾನ ಮಾಡಿದ್ದಾರೆ.

ಹೀಗೆ 'ಸಂಬಳಿಗೋಲು' ಎಂಬುದು ತುದಿ ಜಜ್ಜಿ ಸೀಳುಬಿಟ್ಟ ಬಿದಿರು ಗೋಲಾಗಿರುವುದು ಸಂಭವ ಎಂದಾಯಿತು. ಅದನ್ನು ಹೊಲೆಯರು ತಮ್ಮ ಗುರುತಾಗಿ ಉಪಯೋಗಿಸುತ್ತಿದ್ದರು ಎಂದೂ ಇಟ್ಟುಕೊಳ್ಳಬಹುದು. ಈ ಕೋಲನ್ನು ಕುಟ್ಟಿ ಸದ್ದುಮಾಡಿ ಜನರಿಗೆ 'ಎಚ್ಚರಿಕೆ' ಕೊಡುತ್ತಿದ್ದರು ಎಂಬುದನ್ನು 'ಸಂಬಳಿ' ಶಬ್ದದ ಪರಿಶೀಲನದಿಂದ ತಿಳಿಯಬಹುದು.

ಇದು ದ್ರಾವಿಡ ಶಬ್ದವಲ್ಲ ಎಂಬುದು ಅದರ ರೂಪದಿಂದಲೇ ಸ್ಪಷ್ಟಪಡುತ್ತದೆ; ಹಾಗಿದ್ದರೆ ತದ್ಭವವಾಗಿರಬೇಕು; ಕನ್ನಡದಲ್ಲಿ ಮಹಾರಾಷ್ಟ್ರೀಯಿಂದ ಬಂದ ತದ್ಭವಗಳೇ ಹೆಚ್ಚು; ಹರಿಹರ ರಾಘವಾಂಕರು ಉತ್ತರ ಕರ್ಣಾಟಕ ಪ್ರಾಂತದಲ್ಲಿ ಮಹಾರಾಷ್ಟ್ರದ ನೆರೆಯಲ್ಲಿದ್ದವರು. ಆದ್ದರಿಂದ ಇದಕ್ಕೆ ಮಹಾರಾಷ್ಟ್ರದ ಮೂಲವನ್ನೇ ಅರಸಬೇಕು. ಸಂಬಳಿ ಎಂಬುದು ಮಹಾರಾಷ್ಟ್ರಕೋಶದಲ್ಲಿ ದೊರೆಯುವುದಿಲ್ಲ; ಸಂಭಾಳ, ಸಾಂಭಾಳ ಶಬ್ದಗಳು ದೊರೆಯುತ್ತವೆ.

೧. ಗೋವಿಂದ ಶಂಕರಶಾಸ್ತ್ರೀ ಬಾಪಟರ 'ವ್ಯುತ್ಪತ್ತಿಪ್ರದೀಪ'ದಲ್ಲಿ (ಐದನೆಯ ಮುದ್ರಣ, ೧೯೯೭, ಪುಟ ೪೯) ಹೀಗೆ ಹೇಳಿದೆ:ಭೃ.....ಸಂಭರಣ=ಸಾಂಭಾರೇ, ಸಾಂಭಾಳ, ಸಂಭಾಳಣೇ[1].

ಅಡಿಟಿಪ್ಪಣಿ: (ಕನ್ನಡದಲ್ಲಿ) ಪೋಷಣಾರ್ಥಕ ಭೃ ಧಾತುವಿಗೆ ಚೆನ್ನಾಗಿಸು ಎಂಬ ಅರ್ಥದ ಸಂ ಉಪಸರ್ಗವು ಸೇರಿ 'ಸಂಭಾರ' ಶಬ್ದವಾಯಿತು.[2] ಅದರಿಂದ 'ಸಾಂಭಾಳ' ಶಬ್ದ ಬಂತು. ಲ ಮತ್ತು ರ ಇವುಗಳ ಸ್ಥಳದಲ್ಲಿ ಳಕಾರವು ಬಹು ಕಡೆ ಬರುತ್ತದೆ.

೨. ಕೃಷ್ಣಾಜೀ ಪಾಂಡುರಂಗ ಕುಲಕರ್ಣಿಯವರ ಮರಾಠೀ 'ವ್ಯುತ್ಪತ್ತಿಕೋಶ'ದಲ್ಲಿ

---

೧ ಏಕಾರದ ಮುಂದೆ ಬರುವ ಅನುಸ್ವಾರಗಳನ್ನು ಬಿಟ್ಟಿದೆ.

೨ ಭೃ ಧಾತುವಿನಿಂದಲೇ ತುಂಬು ಎಂಬರ್ಥವುಳ್ಳ 'ಭರ್ತಿ' ಬಂದಿರುವುದು. ಸಂ ಎಂಬ ಉಪಸರ್ಗಕ್ಕೆ 'ಚೆನ್ನಾಗಿಸು' ಎಂಬ ಅರ್ಥದ ಜೊತೆಗೆ 'ಒಟ್ಟುಗೂಡಿಸು' ಎಂಬ ಅರ್ಥವೂ ಇದೆ.

(ಮೊದಲನೆಯ ಮುದ್ರಣ ೧೯೪೬, ಪುಟ ೭೧೩) ಹೀಗೆ ಹೇಳಿದೆ:

**ಸಂಭಾಳ (ಣೇ)**-ಕ್ರಿಯಾಪದ, ರಕ್ಷಣಕರಣೇ, ಪಾಳಣೇ, ಕಾಳಜೀಘೇಣೇ to protect, to take care, to rear.

(ಸಂಸ್ಕೃತ-ಸಂಭಾರಯತಿ, ಸಂಭಾರಃ (ಯೋಗಕ್ಷೇಮ), ಬಂಗಾಳಿ-ಸಾಮಾಲಾ. ಪಾಳಿ-ಸಂಭಾರೋ (ಏಕೀಕರಣ, ಪುಂಜ).....ಸಂಪಾಲಯತಿ ಎಂಬುದರಿಂದ ಸಂಭಾಳಣೇ ಎಂಬುದರ ವ್ಯುತ್ಪತ್ತಿ ಹೆಚ್ಚು ಗ್ರಾಹ್ಯವಾಗಿದೆ).

೩. ಯ. ರಾ. ದಾತೆಯವರ 'ಮಹಾರಾಷ್ಟ್ರ ಶಬ್ದಕೋಶ'ದಲ್ಲಿ (೧೯೩೮: ಸಂಪುಟ ೭, ಪುಟ. ೩೦೨೪) ಹೀಗೆ ಹೇಳಿದೆ:

**ಸಂಭಾಳ**-.....ಅಕರ್ಮಕ ಕ್ರಿಯಾಪದ. ಜಪಣೇ, ಕಾಳಜೀಯೇಣೇ, ಸಾವಧ ರಾಹಣೇ. '**ಸಂಭಾಳ**, ಅಪಥ್ಯ ಕೇರ್ಲೆಸತರ ದುಖಣೇ ವಾಢೇಲ.'

ಇವುಗಳಿಂದ 'ಸಂಭಾಳ' ಶಬ್ದಕ್ಕೆ ಸಂರಕ್ಷಿಸು, ಪಾಲಿಸು, ಯೋಗಕ್ಷೇಮ ನೋಡಿಕೊ, ಒಟ್ಟುಗೂಡಿಸು ಎಂಬ ಅರ್ಥಗಳಲ್ಲದೆ 'ಎಚ್ಚರಿಕೆ!' ಎಂಬ ಅರ್ಥವೂ ಇದೆ ಎಂದು ಗೊತ್ತಾಗುತ್ತದೆ. ಇದೂ ಪಾಲನದಿಂದ ಬಂದ ಅರ್ಥವೇಯೆ. 'ನಿನ್ನನ್ನು ರಕ್ಷಿಸಿಕೋ' ಎಂಬುದನ್ನೇ ಹುಷಾರ್! ಜೋಕೆ! ಎಚ್ಚರಿಕೆ! ಎಂದು ಒಂದು ಮಾತಿನಲ್ಲಿ ಹೇಳುತ್ತೇವೆ. ಈ ಅರ್ಥದಲ್ಲಿ ಮಹಾರಾಷ್ಟ್ರ ಶಬ್ದಕೋಶವು ಒಂದು ಪ್ರಯೋಗವನ್ನು ಮೇಲೆ ಕೊಟ್ಟಿದೆ. ಆ ವಾಕ್ಯಕ್ಕೆ 'ಜೋಕೆ! ಅಪಥ್ಯ ಮಾಡಿದರೆ ರೋಗ ಹೆಚ್ಚಾದೀತು!' ಎಂದು ಅರ್ಥ. ಈ ಮಾತು ಈ ಅರ್ಥದಲ್ಲಿ ಇಂದಿಗೂ ಮರಾಠಿಗರ ಬಾಯಲ್ಲಿ ಕೇಳ ಬರುತ್ತದೆ.

ಕಿಟ್ಟೆಲ್ ಅವರು ಸಮ್ಬಾಳಿ ಸಮ್ಬಾಳಿಸು ಈ ಮಾತುಗಳನ್ನು ಕೊಟ್ಟು ಸಮ್ಬಾಳಿಗೆ ಗುಂಪು ಅಧಿಕ ಸಂಖ್ಯೆ ಎಂಬರ್ಥವನ್ನೂ ಸಮ್ಬಾಳಿಸುವಿಗೆ ರಕ್ಷಿಸು, ಪಾಲಿಸು, ಬಾಳಿಕೆ ಬರು ಎಂಬರ್ಥಗಳನ್ನೂ ಕೊಟ್ಟಿದ್ದಾರೆ.

ಸಿರಿಗನ್ನಡ ಅರ್ಥಕೋಶವು ಸಂಬಾಳಿಸು ಶಬ್ದವನ್ನು ಕೊಟ್ಟು ಅದಕ್ಕೆ ಸಮಜಾಯಿಸು, ಸಮಾಧಾನಪಡಿಸು, ಕಾಪಾಡು, ಪೊರೆ, ತಡೆದುಕೊ-ಎಂಬ ಅರ್ಥಗಳನ್ನು ಹೇಳಿದೆ. ಆಕರವನ್ನು ಕೊಟ್ಟಿಲ್ಲ.

ಮಚ್ಚಿಮಲೆಯವರ ಕನ್ನಡ ನಿಘಂಟು ಇದೇ ಮಾತಿಗೆ, ನಡೆಸಿಕೊಂಡು ಹೋಗು, ಸುಧಾರಿಸು, ಆದರಿಸು, ಸಮಾಧಾನಪಡಿಸು-ಎಂಬ ಅರ್ಥಗಳನ್ನು ಹೇಳಿದೆ. ಇದೂ ಆಕರವನ್ನು ಕೊಟ್ಟಿಲ್ಲ.

ಅನಂತನಾರಾಯಣರವರ ಶಬ್ದಾರ್ಥ ಸಂಗ್ರಹವು ವ್ಯವಸ್ಥೆ ಮಾಡು, ಪಾಲಿಸು, ಬಾಳಿಕೆ ಬರು, ಜೋಕೆಯಿಂದ ರಕ್ಷಿಸು ಮುಂತಾದ ಅರ್ಥಗಳನ್ನು ಕೊಟ್ಟಿದೆ. ಇದೂ ಆಕರವನ್ನು ಹೇಳಿಲ್ಲ.

ಕಿಟ್ಟೆಲ್ ಅವರು 'ಗುಂಪು' ಎಂಬ ಅರ್ಥಕ್ಕೆ ತೊರವೆ ರಾಮಾಯಣದ ೧-೧೩-೭ ಮತ್ತು ೬-೫೦, ೧೨ ಈ ಪದ್ಯಗಳನ್ನು ಆಕರವಾಗಿ ಕೊಟ್ಟಿದ್ದಾರೆ.

'ಎಚ್ಚರಿಕೆ!' ಎಂಬ ಮೂರನೆಯ ಅರ್ಥ ಇವರ ಯಾರ ಗಮನಕ್ಕೂ ಬಂದ ಹಾಗಿಲ್ಲ. 'ಸಂಬಳಿ! ಸಂಬಳಿ!' ಎಂಬುದಕ್ಕೆ 'ಎಚ್ಚರಿಕೆ! ಎಚ್ಚರಿಕೆ!' ಎಂದು ಅರ್ಥ ಹೇಳಿದರೆ

ಹೊಂದುತ್ತದೆ. ಆಗ 'ಸಂಬಳಿಗೋಲು' ಎಂದರೆ ಹೊಲೆಯರು ಎಚ್ಚರಿಕೆ ಕೊಡುವುದಕ್ಕಾಗಿ ತಮ್ಮ ಕೈಯಲ್ಲಿ ಹಿಡಿದುಕೊಂಡು ಹೋಗುತ್ತಿದ್ದ ತುದಿ ಸೀಳಿದ ಬಿದಿರುಕೋಲು-ಎಂದು ಅರ್ಥವಾಗಬಹುದು. ಇದು ಪ್ರಕರಣಕ್ಕೂ ಹೊಂದುತ್ತದೆ.

ಕರ್ಣಪಾರ್ಯನ ನೇಮಿನಾಥಪುರಾಣ ಅಥವಾ ಹರಿವಂಶದಲ್ಲಿ (ಮದ್ರಾಸ್ ಯೂನಿವರ್ಸಿಟಿ ಕರ್ಣಾಟಕ ಗ್ರಂಥಮಾಲಾ ಸಂಖ್ಯೆ ೮, ಪು. ೨೪೭-೪೮) ಸಂಬಳಿಗೋಲಿನ ಪ್ರಸ್ತಾಪ ಬಂದಿದೆ. ರುಕ್ಮಿಣಿಯು ತನ್ನ ಮಗನಾದ ಮನ್ಮಥನಿಗೆ ತನ್ನ ಅಣ್ಣನ ಮಗಳಾದ ವಿದರ್ಭೆಯನ್ನು ಕೊಡಬೇಕೆಂದು ಹೇಳಿಕಳುಹಿಸುತ್ತಾಳೆ. ಅವನು ಒಪ್ಪದೆ 'ಹುಡುಗಿಯನ್ನು ನಿಮಗೆ ಕೊಡುವುದಕ್ಕೆ ಬದಲು ಒಬ್ಬ ಮಾದಿಗನಿಗೆ ಕೊಡುತ್ತೇನೆ' ಎನ್ನುತ್ತಾನೆ. ಆಗ ಶಂಭುಕುಮಾರನೂ ಮನ್ಮಥನೂ ಮಾದಿಗರ ವೇಷದಿಂದ 'ಬಂದು ರಾಜಮಂದಿರಮಂ ಪೊಕ್ಕು ರುಗ್ಮಿಣ ನೃಪಂಗೆ ದೂರಾಂತರದಿಂ ಪ್ರಣತರಾಗಿರು'ತ್ತಾರೆ. ಇದು ಅವರ ವರ್ಣನೆ (೮-೪೬):

ಪೆಗಲೊಳ್ ತಗುಳ್ಚಿ ಮಿಳಿಗಳ
ಸೊಗೆಯಲ್ ಸೆಂಬಳಿಗೆಗೋಲ ಕೆರ್ಪುಟಿ ಸಹಿತಂ
ಪುಗುತರೆ ಜನಮಂದವರ್ಗಳ
ಸೊಗಯಿಪ ರೂಪಿಂಗೆ ವಿಸ್ಮಯಂಗೊಂಡರ್ ॥

ಸಂಬಳಿಗೋಲಿನ ರೂಪಾಂತರವೇ 'ಸೆಂಬಳಿಗೆ ಗೋಲು' ಎಂಬುದು ಸ್ಪಷ್ಟವಾಗಿದೆ. ಆದರೆ 'ಕೆರ್ಪುಟಿ ಸಹಿತಂ' ಎಂಬುದಕ್ಕೆ ಅರ್ಥವಾಗುವುದಿಲ್ಲ. ಅದಕ್ಕೆ ಅಡಿಯಲ್ಲಿ 'ಬಿಲ್ಲುಲಿ ಪುರಮಂ' ಎಂದೂ, ೫೮೬ನೆಯ ಪುಟದಲ್ಲಿ 'ಬಲ್ಲುಲಿ ಪುರಮಂ' ಎಂದೂ ಪಾಠಾಂತರಗಳನ್ನು ಕೊಟ್ಟಿದೆ. ಇವುಗಳಲ್ಲಿ 'ಬಲ್ಲುಲಿ ಪುರಮಂ' ಎಂಬ ಪಾಠವನ್ನಿಟ್ಟುಕೊಂಡರೆ 'ಸೆಂಬಳಿಗೆಗೋಲಿನ ಗಟ್ಟಿಯಾದ ಸದ್ದು ಕೇಳಬರುತ್ತಿರುವಂತೆ ಅವರು ಊರನ್ನು ಪ್ರವೇಶಿಸಲು...' ಎಂದು ಅರ್ಥವಾಗಬಹುದು. ಕೆರ್ಪುಟಿಯ ಉತ್ತರಾರ್ಧವು ಉಲಿಯನ್ನು ಹೋಲುತ್ತದೆ. ಕೆರ್ಪು ಎಂದರೆ ಕೆರ. ಕೆರ್ಪುಲಿಯನ್ನು ಇಟ್ಟುಕೊಂಡರೆ ಹಾಗೂ ಹೀಗೂ ಅನ್ವಯವಾಗುತ್ತದೆ. ಆದರೆ (ಬ)ಬಿಲ್ಲುಲಿ ಕೆರ್ಪುಟಿ[೧] ಹೇಗಾದೀತು?

ಬಂಧುವರ್ಮನ ಹರಿವಂಶದ ಈ ಪ್ರಕರಣದಲ್ಲಿ ಮುಂದಿನ ಪದ್ಯವು ಬರುತ್ತದೆ: (ಎರಡನೆಯ ಪಾದದಲ್ಲಿ ತಪ್ಪಿದೆ.)

ಇಳಿಗಿಳಿತಂದಮರೇಂದ್ರನ
ನನುಕರಿಸಿರ್ದ ರೂಪುಮಂ ತಿದಿಯುಂ ಸಂ
ಬಳಿಗೋಲುಂ ಕೆಂಪುಂ ಪೊಸ
ಮಿಳಿಯುಂಬೆರಸಂತೆ ಬಂದು ಪೊಳಲಂ ಪೊಕ್ಕರ್ ॥

ಇಲ್ಲಿ ಸಂಬಳಿಗೋಲಿನ ಜೊತೆಗೆ 'ಕೆಂಪು' ಬಂದಿದೆ. ಇದು ಶಬ್ದರೂಪದಲ್ಲಿ ಹಿಂದಿನ 'ಕೆರ್ಪುಟಿ'ಯನ್ನು ಹೋಲುತ್ತದೆ. ಪೊನ್ನನ ಶಾಂತಿಪುರಾಣದಲ್ಲಿ (೭-೧೩೬) 'ಅಳಿವೃತಮಪ್ಪ ಕೊಂಬಳಿಯೆ ಸೆಂಬುಳಿಗೋಲ್ ವಸನಂ ಮಿಸುಪ್ಪ ಕೆಂದಳಿರ್....' ಎಂಬ ವರ್ಣನೆಯಲ್ಲಿ

೧ 'ಕಿತ್ತುವ ಆಯುಧ ಸಲಕರಣೆ' ಎಂದು ಅರ್ಥವಾಗಬೇಕಾದರೆ ಕುಳವಿರಬೇಕು.

ಕೆಂಪಿನ ಪ್ರಸ್ತಾಪವಿದೆ. ಆದ್ದರಿಂದ 'ಕೆರ್ಪುಟಿ'ಯ ಸರಿಯಾದ ರೂಪವೇನು ಅರ್ಥವೇನು ಎಂಬುದನ್ನು ಸಂಸ್ಕೃತದ ಅಥವಾ ಅಪಭ್ರಂಶದ ಮೂಲವನ್ನು ನೋಡಿ ನಿಶ್ಚಯಿಸಬೇಕಾಗಿದೆ. ಆದರೆ ಆ ಪಾಠವಾಗಲಿ ಮಾದಿಗರ ಮಿಕ್ಕ ಲಕ್ಷಣಗಳಾಗಲಿ ಪ್ರಕೃತವಲ್ಲವಾದ್ದರಿಂದ ಈ ವಿಚಾರವನ್ನು ಅಲ್ಲಿಗೆ ಬಿಡೋಣ!

ಹರಿಶ್ಚಂದ್ರ ಕಾವ್ಯಸಂಗ್ರಹದ ೭-೪೮ನೆಯ ಪದ್ಯದಲ್ಲಿ 'ಕಂಕರಿಗೋಲು' ಎಂಬ ಶಬ್ದ ಬರುತ್ತದೆ. ಇದೂ ಸಂಬಳಿಗೋಲೂ ಒಂದೇಯೇ? ಇದಕ್ಕೆ ಕಿಟ್ಟಲ್ ಅವರು ಚತುರಾಸ್ಯ ನಿಘಂಟನ್ನು ಅನುಸರಿಸಿಯೂ, ಅವರನ್ನು ಅನುಸರಿಸಿ ಮಿಕ್ಕವರೂ 'ಬಲವಾದ ಚಾಟಿ' ಎಂಬ ಅರ್ಥವನ್ನು ಹೇಳುತ್ತಾರೆ. ಹರಿಶ್ಚಂದ್ರ ಕಾವ್ಯದ (ಕಾವ್ಯಕಲಾನಿಧಿ ೧೯೦೯ ಸ್ಥಲ ೧೧ ಪದ್ಯ ೩೭) ಈ ಭಾಗದಲ್ಲಿ 'ಕಂಕರಿಗೋಲು' ಗೆ ಬದಲಾಗಿ 'ಗರ್ಗರಿಗೋಲು' ಬರುತ್ತದೆ:

> ನಸುಕುಸಿದ ದೇಹ **ಗರ್ಗರಿಗೋಲು**ವಿಡಿದು ಸಾ
> ಱಸುವ ಕೈನೀಡಿ ಸೆಂಬೊಳಿ ಸೆಂಬೊಳೆಂದೆಂದು
> ಕೊಸರುತಿಹ ಬಾಯಿಕ್ಕಿವೆರಸಿ ಬೀದಿಯೊಳು ನಡೆದಂ ಸತ್ಯಸಂಪನ್ನನು

ಗಗ್ಗರ, ಗಗ್ಗರಿ, ಘರ್ಘರಿ ಎಂಬುದು ಘಲಘಲನೆ ಸದ್ದುಮಾಡುವ ಹಿತ್ತಾಳೆಯ ದುಂಡುಘಂಟೆ, ಬಳೆ ಅಥವಾ ಬೆಳ್ಳಿಯ ಕಡಗ ಎಂದು ಕಿಟ್ಟಲ್ ಅವರು ಅರ್ಥ ಹೇಳುತ್ತಾರೆ. ಇದೇ ತಮಿಳಿನ ಶಿಲಂಬು (ಶಿಲಪ್ಪು). ಇದು ಪೊಳ್ಳಾಗಿದ್ದು ಅದರೊಳಗೆ ಕಲ್ಲೋ, ಲೋಹದ ಚೂರೋ, ಮುತ್ತೋ, ರತ್ನವೋ ಹಾಕಿರುತ್ತದೆ. ಇದನ್ನು ಮಾರವಾಡಿ ಹೆಂಗಸರು ಕಾಲಿಗೆ ಇಂದೂ ಧರಿಸಿ ಓಡಾಡುವುದನ್ನು ನೋಡಬಹುದು. ಗಗ್ಗರಗೋಲು ಇಂಥ ಗಗ್ಗರಗಳನ್ನು ಕಟ್ಟಿದ ಕೋಲು ಎಂದು ಕಿಟ್ಟಲರ ನಿಘಂಟು ತಿಳಿಸುತ್ತದೆ. ಕೆಲವು ಜಂಗಮರು ಇಂಥ ಕೋಲನ್ನು ಹಿಡಿದು ಸದ್ದು ಮಾಡುತ್ತಾ ಬರುತ್ತಾರೆ. ಆದ್ದರಿಂದ ಗರ್ಗರಿಗೋಲೂ ಸಂಬಳಿಗೋಲಿನಂತೆ ಸದ್ದುಮಾಡಿ ಎಚ್ಚರಿಕೆ ಕೊಡಬಹುದು. ಹರಿಶ್ಚಂದ್ರನು ಯಾವ ಕೋಲನ್ನಾದರೂ ಹಿಡಿದಿರಲಿ, ಅವನು ಗರ್ಗರಿ! ಕಂಕರಿ! ಎಂದುಕೊಂಡು ಹೋಗಲಿಲ್ಲ; ಸಂಬಳಿ।। ಸಂಬಳಿ! ಎಂದುಕೊಂಡು ಹೋದ. ಸಂಬಳಿಯು-ಸಂಬಳಿಗೋಲೂ-ನಮಗೆ ಪ್ರಕೃತವಾದದ್ದು; ಅದರ ಅರ್ಥವೂ ವ್ಯುತ್ಪತ್ತಿಯೂ ಈಗ ನಿರ್ಧರವಾಯಿತೆಂದು ಭಾವಿಸಬಹುದು.

ಗಗ್ಗರಕ್ಕೆ 'ಗಂಗರ' ಎಂಬ ರೂಪವೂ ಇರುವಂತೆ ಕಿಟ್ಟಲ್ಲರು ಹೇಳುತ್ತಾರೆ. 'ಗಂಗರ' ವಿದ್ದರೆ 'ಗಂಗರಿ'ಯೂ ಇರಬಹುದು. ಗಂಗರಿಗೂ ಕಂಕರಿಗೂ ಬಹುದೂರವಿಲ್ಲ. ಕಂಕರಿಗೆ ತೃಪ್ತಿಕರವಾದ ವ್ಯುತ್ಪತ್ತಿ ಹೇಳಲಾಗುವುದಿಲ್ಲ (=ಖಂಕರೀ=ಕೂದಲು?). ಅದು ಗತ್ಯರ್ಥಕ ಕಕಿ ಧಾತುವಿನಿಂದ ಹುಟ್ಟಿದ್ದೆಂದೂ ಅದಕ್ಕೆ ಮುದುಕ ಎಂದು ಅರ್ಥವೆಂದೂ ಕಾಶಕೃತ್ಸ್ನ ಶಬ್ದಕಲಾಪ ಧಾತುಪಾಠದಲ್ಲಿ ಹೇಳಿದೆ (ಪುಟ ೯೦). ಮುದುಕರು ಹಿಡಿದುಕೊಳ್ಳುವ ಊರುಗೋಲಾದ್ದರಿಂದ ಕಂಕರಿ ಗೋಲು ಎಂಬ ಹೆಸರು ಬಂತೇನೋ! ಅಂತೂ ಅದರ ಅರ್ಥ ನಿಷ್ಕೃಷ್ಟವಿಲ್ಲ. ಗಗ್ಗರಿ ಎಂಬುದು ಘರ್ಘರಿ ಎಂಬ ಸಂಸ್ಕೃತ ಶಬ್ದದಿಂದ ಹುಟ್ಟಿದಂತೆಯೂ, ಘರ್ಘರಿಯು ಅನುಕರಣಶಬ್ದವಾಗಿರುವಂತೆಯೂ, ಅದಕ್ಕೆ ನೀರಿನ ಸುಳಿ, ಕಡೆಯುವ ಪಾತ್ರೆ ಎಂದು ಮೂಲತಃ ಅರ್ಥವಿರುವಂತೆಯೂ ತೋರುತ್ತದೆ. ಗರ್ಗರವು ಬಹಳ ಹಳೆಯ ಶಬ್ದ; ಅಥರ್ವಣ ವೇದದಲ್ಲಿಯೇ ಸಿಕ್ಕುತ್ತದೆ. ಲ್ಯಾಟಿನ್ ಭಾಷೆಯಲ್ಲಿ ಇದಕ್ಕೆ ಸಂಬಂಧಪಟ್ಟ 'ಗರ್ಗಸ್' ಎಂಬ ಪದವಿದೆ. ಆದರೆ ಹೀಗೆ ಕಂಕರವನ್ನೂ ಹಿಂಬಾಲಿಸಿ

ಬಹುದೂರ ಹೋಗಲಾಗುವುದಿಲ್ಲ. ಬೌದ್ಧ ಭಿಕ್ಷುಗಳು ಹಿಡಿಯುತ್ತಿದ್ದ ಕೋಲಿಗೆ 'ಖಕ್ಖರ'ವೆಂದು ಹೆಸರಿತ್ತು. ಇದು ಘರ್ಘರದ ರೂಪಾಂತರವಿರಬಹುದು. ಈ ಖಕ್ಖರಕ್ಕೂ ಕಂಕರಿಗೂ ಮಧ್ಯೆ ಖಿಕ್ಖಿರೀ ಎಂಬ ಶಬ್ದವಿದೆ. ಇದಕ್ಕೆ ಹೇಮಚಂದ್ರನ ದೇಶೀನಾಮಮಾಲೆಯಲ್ಲಿ (೨-೭೩) 'ಡುಂಬಾದೀನಾಂ ಸ್ಪರ್ಶ ಪರಿಹಾರಾರ್ಥಂ ಚಿಹ್ನಯಷ್ಟಿಃ' (A stick in the hand of Chandala as a sign of untouchability) ಎಂದು ಅರ್ಥ ಹೇಳಿದೆ. ಆದ್ದರಿಂದ ಕಟ್ಟಕಡೆಯಲ್ಲಿ ಕಂಕರಿಗೋಲು, ಗಗ್ಗರಿಗೋಲು, ಒಂದೇ ಆಗಿ, ಸಂಬಳಿಗೋಲು ಎಂಬ ಅರ್ಥ ಕೊಡಬಹುದಾದದ್ದು ಸಂಭವ. ಹರಿಶ್ಚಂದ್ರನು ಚಾವಟಿ ಸಂಬಳಿಗೋಲು ಎರಡನ್ನೂ ಹಿಡಿದುಕೊಂಡು ಹೋಗಿರಲಾರನು. ಆದ್ದರಿಂದ ಮೂರೂ ಒಂದೇ ವಸ್ತುವಿನ ಹೆಸರಾಗಿದ್ದು ಮೊದಲೆರಡೂ ರೂಢನಾಮಗಳೂ ಮೂರನೆಯದು ಅನ್ವರ್ಥನಾಮವೂ ಆಗಿದ್ದಿರಬಹುದು.

ರಾಘವಾಂಕನ ಗ್ರಂಥದಲ್ಲಿ ಈ ಶಬ್ದ ಬಂದಿರುವುದರಿಂದ ಅದನ್ನು ಅವನ ಸಮಕಾಲೀನನಾದ ಹರಿಹರನಲ್ಲಿಯೂ ನಿರೀಕ್ಷಿಸಬಹುದು. ಇದು ಅವನ 'ಸಾಮವೇದಿಗಳ ರಗಳೆ'ಯಿಂದ ಒಂದು ಪ್ರಯೋಗ:

> ಬರುತಿರ್ದನಾರ್ತಜನವತ್ಸಲಂ ನಡೆಗೊಂಡು
> ಪೊತ್ತ ಕರುವಿಡಿದ **ಸಂಬಳಿಗೋಲಿ**ನೀಶ್ವರಂ ॥

ಹೀಗೆ 'ಸಂಬಳಿಗೋಲು' ಎಂಬ ಪ್ರಯೋಗ ಅಲ್ಲಲ್ಲಿ ದೊರೆಯುತ್ತಿದ್ದರೂ 'ಸಂಬಳಿ' ಎಂಬುದು ಪ್ರತ್ಯೇಕವಾಗಿ, ಅದರ ಅರ್ಥವನ್ನು ನಿರ್ವಿವಾದವಾಗಿ ಸ್ಪಷ್ಟಪಡಿಸುವಂತೆ, ದೊರೆತಿರುವುದು ಹರಿಶ್ಚಂದ್ರಕಾವ್ಯ ಸಂಗ್ರಹದ 'ಸಂಬಳಿ! ಸಂಬಳಿ!' (೭-೪೮) ಎಂಬ ಒಂದೇ ಕಡೆಯಲ್ಲಿಯೇ.

ಸಂಬಳಿ ಶಬ್ದವು ತೆಲುಗಿನಲ್ಲಿಯೂ ಇದೆ. ಇಂಥ ಪ್ರಕರಣದಲ್ಲಿಯೇ ಬಂದಿದೆ. ಬ್ರೌನ್ ಅವರು ತಮ್ಮ ತೆಲುಗು-ಇಂಗ್ಲಿಷ್ ನಿಘಂಟಿನಲ್ಲಿಯೂ ಸೀತಾರಾಮಾಚಾರ್ಯರು ತಮ್ಮ ಶಬ್ದರತ್ನಾಕರದಲ್ಲಿಯೂ ಹರಿಶ್ಚಂದ್ರದ್ವಿಪದಿಕಾವ್ಯ ರಾಮಾಭ್ಯುದಯಗಳಿಂದ ಒಂದೊಂದು ವಾಕ್ಯವನ್ನು ಉದಾಹರಿಸುತ್ತಾರೆ. ಇವುಗಳಲ್ಲಿ 'ಸಂಬಳಿ! ಸಂಬಳಿ!' ಎಂಬ ಮಾತುಗಳೇ ಬರುತ್ತವೆ. ಇಲ್ಲಿ 'ಸಂಬಳಿ' ಗೆ ಬ್ರೌನ್ ಅವರು 'ಹೊಲೆಯ' ಎಂದೂ ಸೀತಾರಾಮಾಚಾರ್ಯರು 'ತೊಲಗಿ!' ಎಂದೂ ಅರ್ಥ ಹೇಳಿದ್ದಾರೆ. ಈ ಅರ್ಥಗಳು ಹೇಗೆ ಬಂದುವೆಂಬುದನ್ನು ತಿಳಿಸಿಲ್ಲ. ಸಂದರ್ಭಕ್ಕೆ ಹೊಂದುವ ಅರ್ಥವನ್ನು ಊಹಿಸಿಕೊಟ್ಟಿರುವಂತೆ ತೋರುತ್ತದೆ.

ಈಗ 'ಸಂಬಳಿಗೆ' ಎಂಬ ಪದವು 'ಸಂಪುಟಿಕೆ' ಎಂಬುದರಿಂದ ಹುಟ್ಟಿದ್ದೇ ಎಂದು ಸಂದೇಹಕ್ಕೆ ಅವಕಾಶವಾಯಿತು. ಇದು ಸಂಬುಳಿಗೆ ಬ ಉಕಾರಘಟಿತವಾದ ರೂಪದಲ್ಲಿ ಎಲ್ಲಿಯೂ ದೊರೆಯುವುದಿಲ್ಲ. ಆದ್ದರಿಂದ ಮೂಲತಃ ಸಂ-ಭೃ ಧಾತುವಿನಿಂದ ಹುಟ್ಟಿ, 'ಸಂಬಳಿ'ಯಾಗಿ, ತುಂಬಿಡತಕ್ಕ ಕೈಪೆಟ್ಟಿಗೆ ಎಂದು ಅರ್ಥವಾಗಬಹುದು. ಇದು ಸಂದೂಕವಲ್ಲ; ವೀಳೆಯದೆಲೆಯನ್ನು ಜೋಡಿಸಿಡುವ 'ಸಂಬಳಿಗೆ' ಇನ್ನೂ ಕೆಲವೆಡೆ ಪ್ರಯೋಗದಲ್ಲಿಯೂ ಉಪಯೋಗದಲ್ಲಿಯೂ ಇದೆ; ಪಂಪಭಾರತದ (೮-೧೬) 'ಸಂಬಳಿಗೆವೋಗು' ಇತ್ಯಾದಿ ಕಡೆಗಳಲ್ಲಿ ಈ ಅರ್ಥ ಒಪ್ಪುತ್ತದೆ.

ಮುಂದೆ ಸಂಬಾಳಿ, ಸಂಬಾಳಿ, ಸಂಬಾಳಿಸು, ಸಂಭಾಳಿಸು ಇವುಗಳು ಬಂದಿರುವ ಕೆಲವು ಹಳಗನ್ನಡ ಪ್ರಯೋಗಗಳನ್ನು ಕೊಟ್ಟಿದೆ:

ಕುಮಾರವ್ಯಾಸ ಭಾರತ

೧. ಸಂಭಾಳಿಸಿತು ನಳ ನಹುಷ ಚರಿತವನಿವರ ಪರಿಪಾಟಿ (ಆದಿಪರ್ವ ೪-೭)

೨. ಸೋಲಿಸಿತಲಾ ಚೂಣಿಯಲಿ ಸಂಪಾಳಿಸಿದ ಸೌಗಂಧ (ಅರಣ್ಯಪರ್ವ ೧೦-೪)

೩. ಹೊಳೆವ ಸೂರ್ಯಗೆ ರಥದ ಘನಸಂ
ಕುಳದ ಸಂದಣಿಯಾಯ್ತು ಭೂಪರ
ವಿಳಯದಲ್ಲಿ ಸಂಬಾಳಿ ಪಾಯವಧಾರುಗಳ ರಭಸ॥
(ದ್ರೋಣಪರ್ವ, ಪರಿಶಿಷ್ಟ ಪುಟ. ೨೮೬, ಪಂಕ್ತಿ ೩೩. ಓ. ಲೈ; ಮುದ್ರಣ)

೪. ಬಿರುದ ಸಂಭಾಳಿಸುವ ಭಟ್ಟರ
ನಿಱಿದರಾರೋಹಕರು ಕರಿಗಳ
ತಿರುಹಿ ಗುಳಱಿಂಚೆಗಳ ಕೊಯ್ದಿಡಾಡಿದರು ನೆಲಕೆ॥ (ಗದಾಪರ್ವ ೧-೧೬)

ತೊರವೆಯ ರಾಮಾಯಣ

೧. ಮೇಲುಕಟ್ಟಿನ ಮಲಯಜಸ್ತಂ
ಭಾಳಿಗಳ ಮಣಿಪುತ್ರಿಕೆಯ ಸಂ
ಭಾಳಿಯಲಿ ಸೊಗಸಿದುದು ಚಪ್ಪರವೆರಡುಯೋಜನದ॥ (ಬಾಲಕಾಂಡ-೧೩-೭)

೨. ಎಡಬಲದ ಸಂಬಾಳಿಗಳ
ಸಬುದಗಳು ನಿಂದುವು....(ಯುದ್ಧಕಾಂಡ-೪೪-೨೬)

೩. ಸಂಬಾಳಿಸಿತು ಸೌರಂಭ
ಸುರುಚಿರ ಸೇತುಬಂಧನದ.....(ಯುದ್ಧಕಾಂಡ-೫-೨೩)

೪. ಬಿಲ್ಲುಗಳ ಸಂಭಾಳಿಯಲಿ (ಯುದ್ಧಕಾಂಡ-೫೦-೧೨)

ಆನಂದ ರಾಮಾಯಣ

ಕೇಳಿ ಜನಕನು ಸಚಿವರಂ ಬರ
ಹೇಳಿ ಕುಶಲವನೊರಸುಮಿಗೆ ಸಂಬಾಳಿಸಿಯೆ....(೧-೨೪-೭)

*ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ೩೯-೧, ೧೯೫೪*
ಭಾಷಣಗಳು ಮತ್ತು ಲೇಖನಗಳು, ೧೯೬೦, ಪು.೧೬೭-೭೬

# ೨೨. ಕನ್ನಡಕ್ಕೆ ಹೊಸ ನಿಘಂಟು

● ಡಿ. ಎಲ್. ನರಸಿಂಹಾಚಾರ್

ಕನ್ನಡ ಕಾವ್ಯಗಳನ್ನು ಅಭ್ಯಾಸ ಮಾಡುವವರಿಗೆ ನಾನಾ ತೆರನಾದ ಸಹಾಯವನ್ನು ಹಿಂದಿನವರೂ ಇಂದಿನವರೂ ಮಾಡಿಕೊಟ್ಟಿದ್ದಾರೆ, ಕೊಡುತ್ತಲಿದ್ದಾರೆ. ವ್ಯಾಕರಣ, ಛಂದಸ್ಸು, ಅಲಂಕಾರ, ನಿಘಂಟು, ಕಾವ್ಯಸ್ವರೂಪ ನಿರೂಪಣೆ-ಮುಂತಾದ ಲಕ್ಷಣ ಶಾಸ್ತ್ರಗಳಲ್ಲಿ ನಮ್ಮವರು ಹಿಂದಿನಿಂದಲೂ ಆಸಕ್ತಿವಹಿಸಿ ಹಲವು ಗ್ರಂಥಗಳನ್ನು ರಚಿಸಿದ್ದಾರೆ. ಇವುಗಳಲ್ಲಿ ಪ್ರಕೃತ ನಮಗೆ ಬೇಕಾಗಿರುವುದು ನಿಘಂಟು. ಹಿಂದಿನ ನಿಘಂಟುಗಳನ್ನೂ ಕೇಶಿರಾಜನ ಧಾತುಪಾಠವನ್ನೂ ಕಾವ್ಯಗಳಲ್ಲಿ ಅಲ್ಲಲ್ಲಿ ಕಾಣುವ ಅಪರೂಪವಾದ ಸಾವಿರಾರು ಪದಗಳನ್ನೂ ಎಚ್ಚರಿಕೆಯಿಂದ ಕಲಿತು ಕಣ್ಣಿಟ್ಟು ವಿಚಾರ ಮಾಡಿ ಹದಿನೈದು ವರ್ಷಗಳ ಕಾಲ ಒಂದೇ ಸಮನೆ ದುಡಿದು ಕನ್ನಡಕ್ಕೆ ಒಂದು ಕೋಶವನ್ನು ಮಾಡಿದ ಕೀರ್ತಿ ಡಾ. ಕಿಟ್ಟೆಲ್ ಅವರಿಗೆ ಸೇರಿದ್ದು. ಅದು ಪ್ರಕಟವಾಗಿ ನಲವತ್ತಾರು ವರ್ಷಗಳು ಉರುಳಿಹೋಗಿದ್ದರೂ ಅದನ್ನು ಮೀರಿಸುವ ಬೇರೊಂದು ಗ್ರಂಥ ಇದುವರೆಗೂ ಕನ್ನಡದಲ್ಲಿ ಹುಟ್ಟಿಲ್ಲ. ಅಂಥ ಮತ್ತೊಂದು ನಿಘಂಟುವಿಗೆ ಅವಶ್ಯಕತೆ ಇಲ್ಲವಾದ್ದರಿಂದ ಹುಟ್ಟಲಿಲ್ಲ ಎಂದು ಕುಂಟು ನೆಪವನ್ನು ಹೂಡಿ ಕುಳಿತುಬಿಡುವುದು ಸುಲಭವಾದ ಕೆಲಸ. ಹಿಂದಿನ ಕಾವ್ಯಗಳನ್ನು ಮೊದಲಿನಿಂದ ಕಡೆಯವರೆಗೂ ಓದಿ ಯಾವ ಪದಕ್ಕೂ ಬಿಡದೆ ಅರ್ಥವನ್ನು ತಿಳಿಯಲೇಬೇಕೆಂದು ಹಠತೊಟ್ಟು ಹೊರಟವರಿಗೆ ಮಾತ್ರ ಹೊಸ ನಿಘಂಟು ಒಂದು ಇದ್ದಿದ್ದರೆ ಚೆನ್ನಾಗಿತ್ತಲ್ಲ ಎಂದು ಅಡಿಗಡಿಗೆ ಹೇಳಬೇಕಾದ ಅವಸ್ಥೆ ಬಂದಿದೆ. ಡಾಕ್ಟರ್ ಕಿಟ್ಟೆಲ್ಲರ ಕೋಶ ಅಪೂರ್ಣವಾದದ್ದೆಂಬ ತಿಳಿವಳಿಕೆ ಅಂಥವರಿಗೆ ಅನಿವಾರ್ಯವಾಗಿ ಆಗ ಬರಲೇಬೇಕು. ಅದು ಅಪೂರ್ಣವಾಗಿದ್ದರೂ ಅದರಿಂದ ಕನ್ನಡ ಕಲಿಯುವವರಿಗೆ ಇದುವರೆಗೆ ಆಗಿರುವ, ಮುಂದೆ ಆಗುವ ಸಹಾಯವು ಎಲ್ಲರೂ ಕೃತಜ್ಞತೆಯಿಂದ ನೆನೆಯುವಂಥದು. ಕನ್ನಡ ವಿದ್ವತ್ತಿನ ಒಂದು ಭಾಗವಾದ ಶಬ್ದಾರ್ಥ ಜ್ಞಾನಕ್ಕೆ ಆ ಕೋಶ ಬಹಳ ಸಹಕಾರಿಯಾಗಿದೆ. ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ, ತಕ್ಕಮಟ್ಟಿನ ವಿದ್ವತ್ತನ್ನು ಗಳಿಸುವುದಕ್ಕೂ ಅದು ಸಾಕು ಎಂದು ತೀರ್ಮಾನಿಸಬಹುದು.

ಈ ಕೋಶ ಅಪೂರ್ಣವಾಗಿರುವುದಕ್ಕೆ ಒಂದೆರಡು ಕಾರಣಗಳನ್ನು ಸೂಚಿಸಬಹುದು. ಈಗ ಸಿಕ್ಕಿ ಅಚ್ಚಾಗಿರುವ ಹಲವು ಕಾವ್ಯಗಳು ಅವರ ಕಾಲದಲ್ಲಿ ಇನ್ನೂ ಅಜ್ಞಾತವಾಸದಲ್ಲಿದ್ದುವು. ಅವುಗಳಲ್ಲಿ ಅಡಗಿರುವ ಅಪೂರ್ವವಾದ ಪದಗಳ ಗಂಧ ಕೂಡ ಆ ಕಾಲದ ಗಾಳಿಯಲ್ಲಿ ತೇಲುತ್ತಿರಲಿಲ್ಲ. ತಮಗೆ ದೊರೆತ ಕಾವ್ಯಗಳಿಂದ ಡಾ. ಕಿಟ್ಟೆಲ್ ಅವರು ಪದಗಳನ್ನು ಅರ್ಥವಿವರಣೆಗಾಗಿ ಆರಿಸಿಕೊಳ್ಳುವಾಗ ಅನೇಕ ಪದಗಳನ್ನು ನೋಡಿಯೂ ಕೈಬಿಟ್ಟರು. ಅವುಗಳ ಅರ್ಥ ಸ್ಪಷ್ಟವಾಗಿ ತಿಳಿಯದೇ ಇದ್ದದ್ದೂ ಅದನ್ನು ಹುಡುಕುತ್ತ ಕುಳಿತುಕೊಂಡರೆ ಇನ್ನೂ ಹೆಚ್ಚು ಕಾಲ ಹಿಡಿಯುತ್ತದೆಂಬುದೂ ಅವರು ಹೀಗೆ ಮಾಡಿದ್ದಕ್ಕೆ ಕಾರಣವಾಗಿರಬೇಕು. ಅವರು ಮಾಡಿರುವಷ್ಟು ಕೆಲಸಕ್ಕೇ ಅವರ ಬದುಕು ಕೊನೆಮುಟ್ಟಬೇಕಾಯಿತು. ಮೇಲಾಗಿ ಅವರದು ವ್ಯಕ್ತಿಯ ಪ್ರಯತ್ನ. ತಮಗೆ ನೆರವಾದವರನ್ನು ಅವರು ಎದೆತುಂಬಿ ಹೊಗಳಿದ್ದರೂ ಅದನ್ನು ತೃಪ್ತಿಕರವಾಗಿ ಸಾಧಿಸುವ ಪ್ರಯತ್ನವೆಲ್ಲ ಅವರದೇ. ತಮ್ಮ ಕೋಶದಲ್ಲಿರುವ ದೋಷವನ್ನೂ ಕೊರತೆಯನ್ನೂ ಅವರು ಚೆನ್ನಾಗಿ ತಿಳಿದವರಾಗಿದ್ದರು. ''ಶಬ್ದಪಾರಮಾರ್ಗಮಸಾಧ್ಯಂ'' ಎಂಬ

ಕೇಶಿರಾಜನ ಉಕ್ತಿ ಅವರಿಗೆ ಚಿರಪರಿಚಿತವಾಗಿತ್ತು. ಈ ಕಾರಣಗಳಿಂದ ಅವರ ಕೋಶ ಕನ್ನಡ ಶಬ್ದಭಂಡಾರವನ್ನೆಲ್ಲ ತೆರೆದು ವಿವರಿಸಲು ಅಸಮರ್ಥವಾಯಿತು. ಅವರು ಮಾಡಿರುವ ಕೆಲಸವನ್ನು ಮುಂದುವರಿಸುವುದು ಕನ್ನಡಿಗರ ಮೇಲೆ ಬಿದ್ದಿರುವ ಹೊರೆ. ಅವರು ನಮಗೆ ದಾರಿ ತೋರಿಸಿದ್ದಾರೆ; ಅದನ್ನೇ ನಾವೂ ಹಿಡಿಯಬೇಕಾಗಿದೆ.

ಡಾ. ಕಿಟ್ಟೆಲ್ ಅವರ ಕ್ರಮ ಬಲುಮಟ್ಟಿಗೆ ಶಾಸ್ತ್ರೀಯವಾದದ್ದು. ಕೆಲವು ಪದಗಳಿಗೆ ಹಿಂದಿನ ನಿಘಂಟುಗಳಿಂದ ಅರ್ಥ ತಿಳಿದುಬಂದಿರುವುದೇನೊ ನಿಜ; ಆದರೆ ಕವಿಗಳು ಅವನ್ನು ಬಳಸುವಾಗ ಅವುಗಳ ಪ್ರಸಿದ್ಧಾರ್ಥಕ್ಕಿಂತ ತುಸು ಭಿನ್ನವಾದ ಬೇರೆ ಬೇರೆ ಬಣ್ಣದ ಅರ್ಥಗಳಲ್ಲಿ ಪ್ರಯೋಗ ಮಾಡಿದ್ದಾರೆ. ಆದ್ದರಿಂದ ಅಂಥ ಪ್ರಯೋಗಗಳನ್ನು ಮೊದಲು ಹುಡುಕಬೇಕು. ಅಪೂರ್ವವಾದ ಪದಗಳಿಗೂ ಹೀಗೆಯೇ. ಬೇರೆ ಬೇರೆ ಸಂದರ್ಭಗಳಲ್ಲಿ ಹೇಗೆ, ಯಾವ ಅರ್ಥದಲ್ಲಿ, ಪದಗಳನ್ನು ಕವಿಗಳು ಉಪಯೋಗಿಸಿರಬಹುದೆಂಬುದನ್ನು ತಿಳಿಯಬೇಕಾದರೆ ಅವರ ಕಾವ್ಯಗಳಲ್ಲಿ ಮಿನುಗುವ ಅವರ ಪ್ರಯೋಗಗಳೇ ಶರಣು. ಸಾಧ್ಯವಾದಾಗಲೆಲ್ಲ ಡಾ. ಕಿಟ್ಟೆಲ್ಲರು ಪ್ರಯೋಗಗಳನ್ನು ತೋರಿಸಿದ್ದಾರೆ. ಹೀಗೆ ಅವುಗಳನ್ನು ಕೂಡಿಹಾಕಿದ ಮೇಲೆ ಅರ್ಥವಿಚಾರಕ್ಕೆ ಹೊರಟಿದ್ದಾರೆ. ಆಮೇಲೆ ಪದದ ಮೂಲವನ್ನು ಬೆದಕಿ ಕಂಡುಹಿಡಿಯಲು ಪ್ರಯತ್ನ ನಡೆಯಬೇಕು. ಅದು ಕನ್ನಡವಾಗಿದ್ದಲ್ಲಿ ಯಾವ ಧಾತುವಿನಿಂದ ನಿಷ್ಪನ್ನವಾದದ್ದು; ಇತರ ದ್ರಾವಿಡ ಭಾಷೆಗಳಲ್ಲಿ ಅದು ಇರುವುದೆ; ಅಲ್ಲಿ ಅದಕ್ಕೆ ಯಾವ ಅರ್ಥವಿದೆ; ಸಂಸ್ಕೃತ ಪ್ರಾಕೃತಗಳಿಂದ ಅದು ಬಂದಿರಬಹುದೆ; ಬೇರೆ ಯಾವುದಾದರೂ ಭಾಷೆಯಿಂದ ಅದು ಸಾಲವಾಗಿ ಬಂದದ್ದೆ-ಎಂಬೀ ವಿಚಾರಗಳನ್ನೆಲ್ಲ ಎಚ್ಚರಿಕೆಯಿಂದ ನಡಸಬೇಕು. ಒಟ್ಟಿನಲ್ಲಿ ಆ ಪದದ ಚರಿತ್ರೆಯನ್ನು ತೆಗೆದು ತೋರಿಸುವುದು ಮುಖ್ಯವಾದ ಕೆಲಸ. ಇದಕ್ಕೆ ಶಬ್ದಾರ್ಥ ಶಾಸ್ತ್ರದ (Semantics) ಪರಿಚಯ ಆವಶ್ಯಕ. ಡಾ. ಕಿಟ್ಟೆಲ್ ಅವರು ಈ ಆದರ್ಶವನ್ನು ಸದಾ ಕಣ್ಣಮುಂದೆ ಇಟ್ಟುಕೊಂಡು ಆದಷ್ಟು ಮಟ್ಟಿಗೆ ಗುರಿಯನ್ನು ಸಾಧಿಸಲು ಪ್ರಯತ್ನಿಸಿದ್ದಾರೆ. ಈಗ ಇದೇ ಕ್ರಮವನ್ನು ಹಿಡಿದು ಕೆಲವು ಪದಗಳ ಅರ್ಥವಿಚಾರ ಮಾಡುವುದು ಈ ಲೇಖನದ ಮುಖ್ಯ ಉದ್ದೇಶ. ಡಾ. ಕಿಟ್ಟೆಲ್ಲರಷ್ಟು ದಕ್ಷತೆಯಿಂದ ಇದನ್ನು ನೆರವೇರಿಸಲು ಸಾಧ್ಯವಿಲ್ಲದಿದ್ದರೂ ನಮ್ರತೆಯಿಂದ ಇಲ್ಲಿ ಅದಕ್ಕೆ ತೊಡಗಿದೆ. ಎಷ್ಟೋ ವೇಳೆ ಅರ್ಥನಿರ್ಣಯ ಕಷ್ಟವಾಗಿದ್ದರೂ ಅದರ ವಿಚಾರ ಮಾಡಬೇಕಾದ ಅಗತ್ಯವನ್ನು ತೋರಿಸಿದೆ; ಕನ್ನಡಕ್ಕೆ ಹೊಸ ನಿಘಂಟು ಬೇಕೆಂಬ ಮಾತಿನ ತಿರುಳನ್ನು ತೆಗೆದಿಟ್ಟಿದೆ.

೧. **ಮೇಗಾಳಿ, ಕಿಗ್ಗಾಳಿ:** ಎರಡು ಮೂರು ವರ್ಷಗಳ ಹಿಂದೆ ಬೇಸಿಗೆ ರಜದಲ್ಲಿ ಪಟ್ಟಣ ಬಿಟ್ಟು ಹಳ್ಳಿಗೆ ಹೋಗಬೇಕಾಗಿ ಬಂದಿತು. ಆ ಹಳ್ಳಿಯ ಸುತ್ತಲೂ ಬೆಟ್ಟಗಳ ಸಾಲು, ಕಣಿವೆಗಳಲ್ಲಿ ದಟ್ಟವಾದ ಕಾಡು. ಸಂಜೆ ಕಾಲಾಡಿಸಿಕೊಂಡು ಬರೋಣವೆಂದು ನಾಲ್ಕಾರು ಜನ ಆ ಊರಿನ ನಂಟರೊಡನೆ ಬೆಟ್ಟಗಳನ್ನು ಹತ್ತಿ ಇಳಿದು ಅಲೆದಾಡುತ್ತ ಕಾಡಿನ ನಡುವೆ ದಣಿವಾರಿಸಿಕೊಳ್ಳಲು ನಿಲ್ಲಬೇಕಾಯಿತು. ಆಗ ನಂಟರೊಬ್ಬರು ತಮ್ಮ ಬೇಟೆಯ ಅನುಭವವನ್ನು ಹೇಳಲು ಮೊದಲುಮಾಡಿದರು. ಹುಲಿ ಹೊಂಚುಕಾದು ಹಸುವನ್ನು ಹೇಗೆ ಹಿಡಿದು ಕೊಲ್ಲುತ್ತದೆಂಬುದನ್ನು ಅವರು ಮೈತುಂಬಿ ಹೇಳುತ್ತಿರುವಾಗ ಆಶ್ಚರ್ಯದಿಂದಲೂ ಭಯದಿಂದಲೂ ಮೂಕರಾಗಿ ಬಾಯಿಬಿಟ್ಟುಕೊಂಡು ಉಳಿದ ನಾವೆಲ್ಲ ಕೇಳುತ್ತಿದ್ದೆವು. ಹೇಳುತ್ತ ಹೇಳುತ್ತ ಅವರು ''ಹುಲಿ ಕಿಗ್ಗಾಳಿಗೆ ಬಂತು'' ಎಂದು ಅಭಿನಯಿಸಿ ತೋರಿಸಿದರು. ಆ ಕೂಡಲೇ ನಾನು ಎದ್ದುನಿಂತು ಕುಣಿದಾಡುತ್ತ ಅವರನ್ನು ತಬ್ಬುವ ಹಾಗೆ ಕೈಹಿಡಿದು 'ಸ್ವಾಮಿ,

ಕೊಂಚ ತಾಳಿ, ಕಿಗ್ಗಾಳಿ ಎಂದರೆ ಏನು' ಎಂದು ಕೇಳಿದೆನು. ಉಳಿದವರಿಗೆಲ್ಲ ಆಶ್ಚರ್ಯ-ಇವನಿಗೆ ಈ ಪದದ ಅರ್ಥ ತಿಳಿಯದೇ ಎಂದು. ಅವರು ನನ್ನ ಕಡೆ ತಿರಸ್ಕಾರದಿಂದ ನೋಡಿದರು. ಅವರ ನೋಟ ನನ್ನ ಕುತೂಹಲವನ್ನು ಕುಗ್ಗಿಸಲಿಲ್ಲ. ಕಾವ್ಯದಲ್ಲಿ ಒಂದೆರಡು ಬಾರಿ ಆ ಪದವನ್ನು ಕಂಡು ಅರ್ಥವೇನೆಂದು ತಲೆ ಕೆರೆದುಕೊಂಡು ಕೋಶಗಳನ್ನೆಲ್ಲ ತಿರುವಿಹಾಕಿ ನಿರಾಶನಾಗಿದ್ದ ನನಗೆ ಅನಿರೀಕ್ಷಿತವಾದ ಕಡೆಯಿಂದ ಬೆಳಕು ಬಂದದ್ದು ಕುತೂಹಲ ಇಮ್ಮಡಿಸುವಂತಾಯಿತು. ಮುಂದಕ್ಕೆ ಕಥೆ ಹೇಳಲು ಅವರನ್ನು ಬಿಡದೆ ಅರ್ಥ ತಿಳಿಸಲೇಬೇಕೆಂದು ಮೊಂಡಾಟ ಮಾಡಿದಾಗ ಅವರು ನಕ್ಷೆ ಬರೆದು ಅದನ್ನು ವಿವರಿಸಿದರು.

ಹರಿಶ್ಚಂದ್ರನು ಬೇಟೆಯಾಡಿದ್ದನ್ನು ವರ್ಣಿಸುವಾಗ ರಾಘವಾಂಕ 'ಮೇಗಾಳಿ, ಕಿಗ್ಗಾಳಿ' ಎಂಬ ಈ ಪದಗಳನ್ನು ಪ್ರಯೋಗಿಸಿದ್ದಾನೆ. ಪ್ರಾಣಿಗಳನ್ನು ಬೇಟೆಯಾಡುವುದಕ್ಕೆ ಪಳಗಿಸಿದ ಹುಲಿಗಳನ್ನು ಉಪಯೋಗಿಸುವ ರೂಢಿ ಇತ್ತು, ಚಿಕ್ಕ ಹಕ್ಕಿಗಳನ್ನು ಹಿಡಿಯಲು ಸಾಕಿದ ಸಾಳ್ವನೆಂಬ ಗಿಡುಗವನ್ನು ಉಪಯೋಗಿಸುವ ಹಾಗೆ. ಹರಿಶ್ಚಂದ್ರನ ಜೊತೆಯಲ್ಲಿ ಹೋದ ಬೇಟೆಗಾರರು ಹುಲಿಯಿದ್ದ ಬೋನನ್ನು ಬಂಡಿಯಮೇಲಿಟ್ಟು ಕಾಡಿಗೆ ಕೊಂಡುಹೋಗಿ ಅಲ್ಲಿ ಮೃಗಗಳ ಹಕ್ಕೆಯನ್ನು ಕಂಡುಹಿಡಿದು ಆ ದಿಕ್ಕಿಗೆ ಸರಿಯಾಗಿ ಒಂದುಕಡೆ ದೂರದಲ್ಲಿ ಎತ್ತನ್ನು ಕಟ್ಟಿ ಬೋನಿನ ಹುಲಿಗೆ ಅದನ್ನು ತೋರಿಸಿ ಬೇಟೆಯಾಡು ಎಂದು ಬೆನ್ನುತಟ್ಟಿ ಕಳಿಸುತ್ತಾರೆ. ಎತ್ತನ್ನು ಹೊಡೆಯಬೇಕೆಂದು ಹೊರಟ ಹುಲಿ ದಾರಿಯಲ್ಲಿರುವ ಮೃಗದ ಹಕ್ಕೆಗೆ ಹೋಗಿ ಅವುಗಳನ್ನು ಕೊಲ್ಲುತ್ತದೆ. ಈ ಸಂದರ್ಭದಲ್ಲಿ ''ಕಾಂತಾರದೊಳು ಮೃಗವ ನೆಲೆಗೊಳಿಸಿ ಮೇಗಾಳಿಯಿಂ ದೂರದಿಂತೋಱೆತ್ತನೊಡ್ಡಿ ಕಿಗ್ಗಾಳಿಯಿಂ ಬಂಡಿಯಿಂದಿಳುಹಿ ಹುಲಿಯ ಹಾರಯಿಸಿ ತಲೆದಡವಿ ತೋಱಿ ಹಾಸವ ತಿವಿದು'' ಬೇಡರು ಬಿಟ್ಟರೆಂದು ರಾಘವಾಂಕನ ಮಾತು.[೧] ಪಾಂಡವರು ಅರಗಿನ ಮನೆಯಿಂದ ಬದುಕಿ ಹಿಡಿಂಬ ವನದಲ್ಲಿ ಇರುಳು ಭೀಮನ ಆರೈಕೆಯಲ್ಲಿ ಮಲಗಿರಲು ಅವರ ಇರವು ಹಿಡಿಂಬನಿಗೆ ತಿಳಿಯಬಂದದ್ದನ್ನು ಹೇಳುವಾಗ ''ಮುರಿ ಮುರಿದು ಮೇಗಾಳಿಯಲಿ ಮೂಗರಳಿ ಮಾನವಗಂಧವಿದು ಗೋಚರಿಸಿತೆತ್ತಣದೋ''[೨] ಎಂದು ಕುಮಾರವ್ಯಾಸನ ಉಕ್ತಿ. ಈ ಸಂದರ್ಭಗಳಲ್ಲಿ ಬರುವ 'ಮೇಗಾಳಿ', 'ಕಿಗ್ಗಾಳಿ' ಎಂಬ ಪದಗಳ ಅರ್ಥವನ್ನು ತಿಳಿಯಬೇಕಾಗಿದೆ. ಇದಕ್ಕೆ ಹಿಂದೆ ಸೂಚಿಸಿದ ನಕ್ಷೆಯನ್ನು ಕೆಳಗೆ ಕಾಣಿಸಿದೆ:




ಕಾಡಿನ ಒಂದೆಡೆಯಲ್ಲಿ ಹಸು ಮೇಯುತ್ತಿದೆ. ಬೇಟೆಗಾಗಿ ಹೊರಟ ಹುಲಿ ಓಡಾಡುತ್ತ ಒಂದನೆಯ ಸ್ಥಳಕ್ಕೆ ಒಂದು ಹಸುವನ್ನು ದೂರದಿಂದ ನೋಡುತ್ತದೆ. ಗಾಳಿ ಬೀಸುವ ದಿಕ್ಕನ್ನು ತಿಳಿಯುವ ಕೌಶಲ ಹುಲಿಗೆ ಹುಟ್ಟಿನಿಂದ ಬಂದದ್ದು. ಬಾಣದ ಗುರುತು ಗಾಳಿಬೀಸುವ ದಿಕ್ಕನ್ನು ತೋರಿಸುತ್ತದೆ. ೧ನೆಯ ಸ್ಥಾನದಲ್ಲಿ ಹುಲಿಯಿದ್ದಾಗ ಗಾಳಿ ಅದರ ಮೇಲಿಂದ ಹಸುವಿನ ಕಡೆಗೆ ಬೀಸುತ್ತದೆ. ಇದರಿಂದ ಹಸುವಿಗೆ ಹುಲಿಯ ಸೊಗಡು ಗೊತ್ತಾಗಿ ಅದು ಓಡಿಹೋಗಬಹುದು. ಆದ್ದರಿಂದ ಹುಲಿ ಹಸುವನ್ನು ಗುರುತಿಸಿದ ಕೂಡಲೇ, ತನ್ನ ಕಡೆಯಿಂದ ಗಾಳಿ ಅದರ ಕಡೆಗೆ

೧ 'ಹರಿಶ್ಚಂದ್ರ ಕಾವ್ಯ ಸಂಗ್ರಹ', ೩-೨೧.
೨ 'ಕನ್ನಡ ಭಾರತ', ಆದಿ. ೯-೧೦.

ಬೀಸುವಂತಿದ್ದರೆ, ಆ ಸ್ಥಳವನ್ನು ಬಿಟ್ಟು ಬಳಸಿಕೊಂಡು ಬೇಗನೆ ೨ನೆಯ ಸ್ಥಳಕ್ಕೆ ಬರುತ್ತದೆ. ಗಾಳಿ ತನ್ನ ದಿಕ್ಕನ್ನು ಅಷ್ಟರಲ್ಲಿ ಬದಲಾಯಿಸದೆ ಇದ್ದ ಪಕ್ಷದಲ್ಲಿ, ಹಸುವಿನ ಕಡೆಯಿಂದ ಹುಲಿಯ ಕಡೆಗೆ ಬೀಸುತ್ತಿರುತ್ತದೆ. ಹುಲಿಯ ಸುಳಿವು ಹಸುವಿಗೆ ಈಗ ಗೊತ್ತಾಗುವಹಾಗಿಲ್ಲ. ಅದು ಮೆಲ್ಲಮೆಲ್ಲಗೆ ಹಸುವಿನ ಹತ್ತಿರಕ್ಕೆ ಜುಣುಗಿ ಬಂದು ಅದಕ್ಕೆ ತಿಳಿಯದೆಯೇ ಅದರ ಕೊರಳ ಕೆಳಗೆ ನುಸಿದು ಮುಂಗೈಗಳಿಂದ ಸಾವು ಅಪ್ಪಿಕೊಳ್ಳುವಂತೆ ತಬ್ಬಿಕೊಂಡು ತನ್ನ ಹಿಂಗಾಲುಗಳನ್ನು ಹಸುವಿನ ಹಿಂಗಾಲುಗಳಿಗೆ ಅದು ಓಡದಂತೆ ಬಲವಾಗಿ ಆನಿಸಿ ಆಮೇಲೆ ಗೋಮಾಳವನ್ನು ಹಲ್ಲಿನಿಂದ ಇರಿದು ರಕ್ತ ಹೀರುತ್ತದೆ. ಹಸು ಹೆದರಿಕೆಯಿಂದ ಉಚ್ಚಿಕೊಂಡು ರಕ್ತ ಕಡಮೆಯಾಗುತ್ತ ಬಂದಹಾಗೆಲ್ಲ ಶಕ್ತಿಗುಂದಿ ಏನು ಮಾಡುವುದಕ್ಕೂ ತೋರದೆ ತೆಪ್ಪಗಿರುತ್ತದೆ. ಹುಲಿ ಹಿಂಗಾಲುಗಳಿಂದ ಹಸುವಿನ ಕೆಳಹೊಟ್ಟೆಯನ್ನು ಒದೆದು ತಾನು ಮೇಲಾಗಿ ಹಸು ಕೆಳಗಾಗುವಂತೆ ಬೀಳಿಸುತ್ತದೆ. ಇಲ್ಲಿಗೆ ಅದರ ಬೇಟೆ ಮುಗಿದಂತೆ. ಹುಲಿ ೧ನೆಯ ಸ್ಥಾನದಲ್ಲಿರುವಾಗ ಅದು ಮೇಗಾಳಿಯಲ್ಲಿರುತ್ತದೆ; ೨ನೆಯ ಕಡೆಗೆ ಬಂದಾಗ ಅದು ಕಿಗ್ಗಾಳಿಯಲ್ಲಿರುತ್ತದೆ. ಬೇಟೆಯಾಡುವ ಮೃಗದ ಮೇಲಿಂದ ಬೇಟೆಗೆ ಗುರಿಯಾದ ಪ್ರಾಣಿಯ ಕಡೆಗೆ ಬೀಸುವ ಗಾಳಿಗೆ ಮೇಗಾಳಿಯೆಂದೂ, ಪ್ರಾಣಿಯ ಕಡೆಯಿಂದ ಆ ಮೃಗದ ಕಡೆ ಬೀಸುವ ಗಾಳಿಗೆ ಕಿಗ್ಗಾಳಿಯೆಂದೂ ಹೆಸರು. ಇದು ತಿಳಿದರೆ ರಾಘವಾಂಕನ ಮಾತಿಗೆ ಅರ್ಥ ಸ್ಫುಟವಾಗುತ್ತದೆ. ಅದನ್ನು ಹೀಗೆ ತೋರಿಸಬಹುದು:

× ———→ ಗಾಳಿಯ ದಿಕ್ಕು × ———→ ×

(ತೋಱೆತ್ತು) (ಮೃಗದ ಹಕ್ಕೆ) (ಹುಲಿ )

ಮೊದಲು ಮೃಗದ ಹಕ್ಕೆಯನ್ನು ಕಂಡುಹಿಡಿದು ಅದಕ್ಕೆ ಮೇಗಾಳಿಯಲಿ ತೋಱೆತ್ತನ್ನು ಕಟ್ಟಿ ಅದನ್ನು ಹುಲಿಗೆ ತೋರಿಸಿ ಆಮೇಲೆ ಆ ಹುಲಿಯನ್ನು ಕಿಗ್ಗಾಳಿಯಲ್ಲಿ ಬಿಟ್ಟರೆ ಅದು ಎತ್ತನ್ನು ಬೇಟೆಯಾಡಲು ಒರಟು ಮೃಗದ ಹಕ್ಕೆಯ ಮಾರ್ಗವಾಗಿಯೇ ಹೋಗಬೇಕಾಗುತ್ತದೆ. ಆಗ ಅದು ಅಲ್ಲಿರುವ ಮೃಗಗಳನ್ನು ಹಿಡಿಯಲು ಹವಣಿಸುತ್ತದೆ. ಅಷ್ಟು ಹೊತ್ತಿಗೆ ಕಟ್ಟಿದ ಎತ್ತನ್ನು ಬಿಚ್ಚಿಕೊಂಡು ಬರಬಹುದು. ಮೃಗಗಳು ಹಕ್ಕೆಯಲ್ಲಿ ಅವಿತುಕೊಂಡಿರುವುದರಿಂದ ಅದರ ಮೇಲೆ ಬೀಸುವ ಗಾಳಿಯಲ್ಲಿ ಅವುಗಳ ಗಂಧ ಬರಲು ಕಾರಣವಿಲ್ಲ. ಆದ್ದರಿಂದ ಹುಲಿಗೆ ಅವುಗಳ ಇರವು ತಿಳಿಯುವಂತಿಲ್ಲ. ಇದಕ್ಕಾಗಿ ತೋಱೆತ್ತನ್ನು ಕಟ್ಟಬೇಕಾಗುತ್ತದೆ. ಕುಮಾರವ್ಯಾಸನ ಪ್ರಯೋಗವೂ ಈಗ ಅರ್ಥವಾಗುತ್ತದೆ. ಪಾಂಡವರ ಮೇಲಿಂದ ಹಾಯ್ದು ಬರುವ ಗಾಳಿಯನ್ನು ಮೇಗಾಳಿ ಎಂದು ಕರೆದಿದ್ದಾನೆ; ಅವರು ಹಿಡಿಂಬನಿಗೆ ಮೇಗಾಳಿಯ ಸ್ಥಾನದಲ್ಲಿದ್ದಾರೆ, ಹಿಡಿಂಬನು ಕಿಗ್ಗಾಳಿಯಲ್ಲಿದ್ದಾನೆ.

ಈಗ ಇವೆರಡು ಪದಗಳು ಹೇಗೆ ಹುಟ್ಟಿರುವುವೆಂಬುದನ್ನು ತಿಳಿಯುವುದು ಸುಲಭ. ಮೇಗಾಳಿ ಎಂಬುದು ಮೇಲ್+ಗಾಳಿಯಿಂದಲೂ, ಕಿಗ್ಗಾಳಿ ಎಂಬುದು ಕಿಟ್+ಗಾಳಿಯಿಂದಲೂ ಬಂದಿರಬೇಕೆಂಬುದು ಸ್ಪಷ್ಟ; ಮೇಲ್ಗಾಳಿ>ಮೇಗಾಳಿ; ಕಿಟ್ಗಾಳಿ>ಕಿರ್ಗಾಳಿ>ಕಿಗ್ಗಾಳಿ. ಇವುಗಳ ಅರ್ಥ ತಿಳಿಯದಿರುವಾಗ ''ಕಿಗ್ಗಾಳಿ (೩.೨೧) ಇಲ್ಲಿ ಪಾಠವೇ ತಪ್ಪಿರಬೇಕು'' ಎಂದು ವಿಮರ್ಶಕರೊಬ್ಬರು ಹೇಳಿರುವುದು ಸಾಹಸದ ಮಾತೇ ಸರಿ.[೧]

೧ 'ಜಯಕರ್ಣಾಟಕ', ಸಂ. ೯, ಪು. ೭೬೬.

ಇಂಥ ಪದಗಳು ನಮ್ಮ ಜನರ ದಿನದ ಬದುಕಿನಲ್ಲಿ ಇನ್ನೂ ಬಳಕೆಯಾಗಿವೆ. ಕಮ್ಮಾರ ಚಮ್ಮಾರ ಗಾಣಿಗ ಈಡಿಗ ಜಾಡಬೇಡರೇ ಮುಂತಾದ ಕಸಬುದಾರರಲ್ಲಿ ಅವರವರ ಕೆಲಸಕ್ಕೆ ಸಂಬಂಧಪಟ್ಟ ಕೆಲವು ಪದಗಳು ಈಗಲೂ ರೂಢಿಯಲ್ಲಿವೆ. ಅಂಥವರೊಡನೆ ಸ್ನೇಹ ಬೆಳಸಿ ಅವರ ಬಳಿ ಕೊಂಚ ಓಡಾಡುತ್ತಿದ್ದರೆ ಅವರು ಬಳಸುವ ಪದಗಳ ಅರಿವುಂಟಾಗುತ್ತದೆ. ಆ ಪದಗಳು ಕಾವ್ಯದಲ್ಲಿ ಬಂದಾಗ ಅವಕ್ಕೆ ಅರ್ಥ ಹೇಳಬೇಕಾದರೆ ಇದೊಂದೇ ದಾರಿ. ಇದು ಒಬ್ಬರಿಂದಲೇ ಆಗುವ ಕೆಲಸವಲ್ಲ. ಶನಿವಾರದ ದಿನ ಭಿಕ್ಷೆ ಬೇಡಲು ಬಂದ ಹಳ್ಳಿಯ ಹೆಂಗಸೊಬ್ಬಳು ''ಬುದ್ಧಿ, ಇವತ್ತು ವಡವಾರ, ಅಕ್ಕಿಕೊಡಿ'' ಎಂದು ಹೇಳಿದ್ದನ್ನು ಕೇಳಿ ಅಚ್ಚರಿಯುಂಟಾಯಿತು. ಕನ್ನಡ ಶಾಸನಗಳಲ್ಲಿ ಹಲವು ಸಲ ಬರುವ ವಡ್ಡವಾರದ ವಿಷಯದಲ್ಲಿ ಚರ್ಚೆ ಇನ್ನೂ ನಡೆಯುತ್ತಿದೆ. ಅದು ಇನ್ನೂ ಬದುಕಿದೆಯೆಂದು ಕನಸಿನಲ್ಲಿಯೂ ಎಣಿಸಿರಲಿಲ್ಲ. ಆದರೆ ಇದೆ. ಬರಿ ಪುಸ್ತಕ ಓದುವವರಿಗೆ ಗೊತ್ತಿಲ್ಲ, ಅಷ್ಟೇ. ಕನ್ನಡ ಕೋಶ ಮಾಡುವವನಿಗೆ ಹಳ್ಳಿಯ ಮಾತೂ ಜೀವನದ ರೀತಿಯೂ ತಿಳಿದಿದ್ದರೆ ತುಂಬ ಪ್ರಯೋಜನವುಂಟು.

೨. **ಹುಡುಕುನೀರು:** ಹೊಲತಿಯರ ಕಾಟವನ್ನು ತಾಳಲಾರದೆ, ಹರಿಶ್ಚಂದ್ರನೂ ಅವನ ಪ್ರಧಾನನೂ ಸೇರಿ ಚಾವಟಿಯಿಂದ ಅವರನ್ನು ಹೊಡೆದು ಅಟ್ಟಿದ ಬಳಿಕ ಆ ಸುದ್ದಿಯನ್ನು ತಿಳಿದ ವಿಶ್ವಾಮಿತ್ರ ಕೋಪದಿಂದ ಕುದಿದು ಹರಿಶ್ಚಂದ್ರನಿದ್ದೆಡೆಗೆ ಹರಿದು ಬಂದು ಬಯ್ಯುತ್ತ ತನ್ನ ಪ್ರತಾಪವನ್ನು ಕೊಚ್ಚಿಕೊಳ್ಳುವಾಗ ''ಕದನಕ್ಕೆಂದು ಬಂದಮುರರಂ ಕೆಡಹಿ ಹುಡುಕುನೀರದ್ದುವೆನ್ನಳವನಱಿಯಾ'' ಎಂದು ಗರ್ಜಿಸುತ್ತಾನೆ.[೧] ತನ್ನ 'ಸಿದ್ಧರಾಮ ಪುರಾಣ'ದಲ್ಲಿಯೂ ರಾಘವಾಂಕ ಈ ಪದವನ್ನು ಬಳಸಿರುವುದು ''ಶಿವನಂ ನೆನೆಯದೆಡೆಯೊಳನ್ಯಾಯಮಂ ಮಾಡಿ ಮತ್ತಂ ನೆನೆಯುತಿರ್ದೊಡಾ ಶಿವನ ನಾಮಂ ಹುಡುಕುನೀರದ್ದಿಹುದೇ ಮಗನೆ'' ಎಂಬ ಪದ್ಯಭಾಗದಲ್ಲಿ(೮-೧೮) ಕಂಡು ಬರುತ್ತದೆ. ಇನ್ನೂ ಕೆಲವು ಪ್ರಯೋಗಗಳನ್ನು ನೋಡಬಹುದು. ಜಲಕೇಳಿಯಾಡುತ್ತಿದ್ದ ನೀರೆಯೊಬ್ಬಳ ಹುರುಡನ್ನು ನಾಗಚಂದ್ರ

ಕಡುನೀಱ್ ಜಂತ್ರದಂಚೆಯ
ನಡಿಗಡಿಗಾ ನೀರೊಳರ್ದಿದಳ್ ನಡವೆಡೆಯೊಳ್
ಗಡ ನಾಣ್ಚದೆ ಪುರುಡಿಪುದೆ
ನ್ನೊಡನೆಂದುಯ್ದಲ್ಲಿ ಪುಡುಕುನೀರರ್ದುವವೊಲ್ ॥

ಎಂದು ವರ್ಣಿಸಿರುವನು.[೨] ಪಾಪಿ ಜೀವರಿಗೆ ನರಕದಲ್ಲಿ ಆಗುವ ನಾನಾ ಹಿಂಸೆಗಳಲ್ಲಿ ಒಂದನ್ನು ಕುರಿತು ''ವೈತರಣೀ ಪ್ರವಾಹಂಗಳೊಳ್ ಹುಡುಕುನೀರದ್ದುವುದುಂ'' ಎಂದು ಕಮಲಭವನು ಹೇಳಿದ್ದಾನೆ.[೩] ನೀರಾಟದಲ್ಲಿ ತೊಡಗಿದ್ದ ಹೆಂಗಸರು ತಮ್ಮ ಕೊಡಗಳನ್ನು ''ಅತಿಗರ್ವಂಬೆತ್ತುವು ತಾವಿವೆನುತ ಕಡುಮುಳಿಸಿಂದೊತ್ತಿ ಹುಡುಕುನೀರದ್ದುವತೆಱನಂ'' ತೋರಿಸಿದರೆಂದು ಮಂಗರಸನ ಮಾತು.[೪]

---

೧ 'ಹರಿಶ್ಚಂದ್ರ ಕಾವ್ಯಸಂಗ್ರಹ', ೫-೧೦.
೨ 'ಮಲ್ಲಿನಾಥಪುರಾಣ', ೬-೧೦೦.
೩ 'ಶಾಂತೀಶ್ವರ ಪುರಾಣ', ೯-೧೧೦ ಗದ್ಯ.
೪ 'ಜಯನೃಪ ಕಾವ್ಯ', ೯-೧೪.

ಮೇಲಿನ ಯಾವ ಪ್ರಯೋಗವನ್ನು ನೋಡಿದರೂ 'ಹುಡುಕುನೀರು' ಎಂಬುದರ ಅರ್ಥ ಖಚಿತವಾಗಿ ಆಗುವಂತಿಲ್ಲ. ಅದನ್ನು ಬೇರೆ ರೀತಿಯಿಂದ ಕಂಡುಹಿಡಿಯಬೇಕು. ಇದಕ್ಕೆ ವಿಚಾರ ಆವಶ್ಯಕ.

ಈ ಪದದ ಹಳೆಯ ರೂಪ 'ಪುಡುಕುನೀರ್' ಎಂದು ನಾಗಚಂದ್ರನ ಪ್ರಯೋಗ ಸಾರುತ್ತದೆ. ಪುಡುಕು+ನೀರ್ ಎಂದು ಅದರ ವಿಭಜನೆ. 'ಪುಡುಕು' ಎಂದರೆ ಏನು? ಶೋಧನೆ ಮಾಡು ಎಂಬರ್ಥದಲ್ಲಿ ಪುಡುಕು>ಹುಡುಕು ಎಂಬ ಧಾತು ಬೇರೆ ಒಂದಿದೆ. ಪ್ರಕೃತ ಸಂದರ್ಭಕ್ಕೆ ಇದು ಹೊಂದುವುದಿಲ್ಲವಾದ್ದರಿಂದ ಅದರ ಗೊಡವೆ ಇಲ್ಲಿ ಬೇಡ. 'ಪುಡುಕು' ಎಂಬಲ್ಲಿರುವ ಕೊನೆಯ ಅಕ್ಷರವಾದ-ಕು ಒಂದು ಪ್ರತ್ಯಯ ಸ್ವರೂಪವಾಗಿರುವುದರಿಂದ (Formative Suffix) ಈ ಪದದ ಮೂಲರೂಪ 'ಪುಡು' ಎಂದಾಗುತ್ತದೆ. ಈಗ ಪಂಪನ ಒಂದು ಪದ್ಯ ನೆನಪಿಗೆ ಬರುತ್ತದೆ:[೧]

ಸಂಗತ ಧೂಮಾವಳಿಯನಿ
ಭಂಗಳೆ ಗೆತ್ತೊತ್ತಳಿಱ ಪಾಯ್ದು ಪೊಗೆ ಪುಗೆ ಕಣ್ಣಂ
ಸಿಂಗಂಗಳಳುರೆ ಗರ್ಜಿಸಿ
ಲಂಗಿಸಿ ಪುಡಪುಡನೆ ಪುೞ್ಗಿ ಸತ್ತುವು ಪಲವುಂ ॥

ಇಲ್ಲಿರುವ 'ಪುಡಪುಡನೆ ಪುೞ್ಗಿ' ಎಂಬ ಮಾತುಗಳು ಮುಖ್ಯವಾದುವು 'ಪುೞ್ಗು' ಎಂಬ ಧಾತುವನ್ನು ಕೇಶಿರಾಜ ಕೊಟ್ಟು ಅದಕ್ಕೆ ದಹನಕ್ರಿಯೆ ಎಂದರ್ಥವನ್ನು ತಿಳಿಸಿದ್ದಾನೆ. ತಮಿಳಿನಲ್ಲಿ ಇದರ ರೂಪಾಂತರವಾದ ಪುೞುಂಗು ಎಂಬ ಧಾತುವುಂಟು; ಅದಕ್ಕೆ ಅರ್ಥ ಕುದಿ, ಬೇಯು ಎಂದು. ಕನ್ನಡಿಗರ ಕುಸುವಲಕ್ಕಿ (<√ಕುದಿ+ಅಕ್ಕಿ) ಎಂದು ಕರೆಯುವುದನ್ನು ತಮಿಳರು ಪುೞುಂಗಲರಿಸಿ ಎಂದು ಹೇಳುತ್ತಾರೆ. ಹುಗ್ಗಿ ಎಂಬ ಕನ್ನಡ ಪದ ಈ ಪುೞ್ಗು ಧಾತುವಿನಿಂದ ಹುಟ್ಟಿದ್ದು. ಆದ್ದರಿಂದ ಆ ಧಾತುವಿಗೆ ಸುಡು ಎಂಬರ್ಥವೊಂದೇ ಅಲ್ಲದೆ ಕುದಿ, ಬೇಯು ಎಂಬರ್ಥಗಳೂ ಇದ್ದಿರಬೇಕೆಂದು ಸ್ಪಷ್ಟವಾಗುತ್ತದೆ. ಪುಡು ಎಂಬ ಮೂಲಧಾತುವಿಗೆ ಗು-ಎಂಬ ಪ್ರತ್ಯಯ ಸೇರಿ (Formative Suffix) ಪುೞ್ಗು ಆಗಿದೆ. ಆದ್ದರಿಂದ ಪುಡುವಿಗೂ ಕುದಿ, ಬೇಯು ಎಂಬರ್ಥಗಳು ಇದ್ದಿರಬೇಕು. ಪಂಪನ ಪದ್ಯದಲ್ಲಿರುವ 'ಪುಡಪುಡನೆ' ಎಂಬ ಶಬ್ದ ಪುಡು ಎಂಬ ಮೂಲಧಾತುವಿದ್ದಿರಬೇಕೆಂಬುದನ್ನು ವಿಶದಗೊಳಿಸುತ್ತದೆ. ಇದರಿಂದಲೇ 'ಪುಡುಕು' ಎಂಬ ಧಾತು ಬಂದು ಕುದಿ, ಬೇಯು ಎಂಬರ್ಥವನ್ನು ಪಡೆದಿರಬೇಕೆಂದು ಅರಿವಾಗುತ್ತದೆ. ಪುಡುಕುನೀರ್-ಎಂದರೆ ಕುದಿನೀರು, ಬಿಸಿನೀರು, ಸುಡುನೀರು ಎಂದರ್ಥ. ಇದನ್ನು ಸಮರ್ಥಿಸುವುದಕ್ಕಾಗಿ ತೆಲುಗಿನ 'ಉಡುಕುನೀಳ್ಳು' ಎಂಬ ಪದವನ್ನು ನೋಡಬಹುದು. ಇಲ್ಲಿನ ಉಡುಕು ಎಂಬ ಶಬ್ದ ಏನು? ಪದದ ಆದಿವ್ಯಂಜನ ಮಾಯವಾಗಿ ಅದರ ಮೇಲಿನ ಸ್ವರ ನಿಂತುಬಿಡುವುದು ದ್ರಾವಿಡ ಭಾಷೆಗಳಲ್ಲಿ ಕೆಲವು ವೇಳೆ ಕಾಣುವ ವ್ಯಾಪಾರ; ನೀರುಳ್ಳಿ>ಈರುಳ್ಳಿ, ಚಿಗುರು>ಇಗುರು, ತೊಡನೆ>ಒಡನೆ, ತೊಗರ್>ಒಗರ್, ಎಂಬೀ ವ್ಯತ್ಯಾಸಗಳು ನಡೆದಿರುವ ಹಾಗೆಯೇ 'ಪುಡುಕು' ಎಂಬುದು 'ಉಡುಕು' ಎಂದು ತೆಲುಗಿನಲ್ಲಿ ಆಗಿದೆ. ಈ ಕಾರಣಗಳಿಂದ ಪುಡುಕುನೀರ್ ಎಂಬುದಕ್ಕೆ ಕುದಿನೀರೆಂಬರ್ಥ ಸಾಧುವಾಗಿದೆಯೆಂದು ಹೇಳಬಹುದು. ಮೇಲೆ ಕಾಣಿಸಿರುವ ಎಲ್ಲ ಪ್ರಯೋಗಗಳಿಗೂ ಇದು

೧ 'ಪಂಪಭಾರತ', ೫-೯೨.

ಅನ್ವಯಿಸುವುದಾಗಿದೆ. ಹುಡುಕು ನೀರದ್ದುವುದು ಒಂದು ದಂಡನೆ. ಅದ್ದಿಸಿಕೊಂಡವನು ಎದ್ದು ಬರುವ ಹಾಗೇ ಇಲ್ಲ. ಒಂದು ವೇಳೆ ಬಂದರೆ ಮೈಯೆಲ್ಲ ಬೆಂದುಹೋಗಿರುತ್ತದೆ.

೩. ಬಡಪ: ಅಶ್ವತ್ಥಾಮನೂ ಪಾಂಡ್ಯನೂ ಒಬ್ಬರನ್ನೊಬ್ಬರು ಎದುರಿಸಿ ಯುದ್ಧ ಮಾಡುವಾಗ ಪಾಂಡ್ಯನು ಬಾಣದ ಮಳೆ ಸುರಿಸಿದ್ದನ್ನು ಪಂಪನು

ಎನೆ ಬೆಳ್ಮಸೆಯಂಬಿನ ಸರಿ
ಮೊನೆಯಂಬಿನ ಸೋನೆ ಪಾರೆಯಂಬಿನ ತಂದಲ್
ಘನಮಾದುದಲ್ಲಿ ಕಿತ್ತಂ
ಬಿನ ಬಡಪಮಿದೆನಿಸಿ ಪಾಂಡ್ಯನಂಬಂ ಕಱೆದಂ ॥

ಎಂದು ವರ್ಣಿಸಿದ್ದಾನೆ.[೧] ಇಲ್ಲಿ 'ಬಡಪ'ಕ್ಕೆ ಪಂಪಭಾರತದ ಸಂಪಾದಕರು ಪ್ರವಾಹ ಎಂಬರ್ಥವನ್ನು ಕೊಟ್ಟಿದ್ದಾರೆ. ಅದಕ್ಕೆ ಅವರು ಯಾವ ಆಧಾರವನ್ನೂ ಸೂಚಿಸಿಲ್ಲವಾದ್ದರಿಂದ ಅದರ ವಿಷಯವಾಗಿ ಸಂದೇಹ ಹುಟ್ಟುತ್ತದೆ. ಬೇರೆ ಪ್ರಯೋಗಗಳನ್ನು ನೋಡಿ ಆಮೇಲೆ ಅದನ್ನು ನಿರ್ಣಯಿಸಬಹುದು.

ರುದ್ರಭಟ್ಟ ಮಳೆಗಾಲದ ವರ್ಣನೆ ಮಾಡುವಾಗ ಒಂದುಸಲ ಮಾತ್ರ ಈ ಪದವನ್ನು ಬಳಸಿದ್ದಾನೆ[೨] :

ಬಲ್ಸರಿ ಬಿಱುಸರಿ ಪೆರ್ಮೞೆ
ಮೆಲ್ಸರಿ ತುಂತುಱ್ ತುಷಾರವಿಡುಕುಂಬನಿ ತಂ
ದಲ್ಸೋನೆ ನಟ್ಟ ಬಡಪಮೆ
ನಲ್ಸುರಿದುವು ಬಿಡದೆ ಮೞೆಗಳಿರುಳುಂ ಪಗಲುಂ ॥

ಬೆಟ್ಟದ ತಪ್ಪಲಲ್ಲಿ ಮೇಯುತ್ತಿದ್ದ ಮಂದೆಗಳು "ಬಡಪಂ ಬೆಂಬತ್ತೆ ಮೇವಂ ಮಱೆದು" ವೆಂದೂ[೩] ಆಕಾಶ ಗಂಗಾಪ್ರವಾಹವು "ಚಂದ್ರಕಾಂತದ ನೆಗೆದ ಮುಗಿಲಟ್ಟಣೆಗಳಂ ಮೆಟ್ಟಿ ಬಡಹಮನೊಡರ್ಚೆ ಬಳಸಿದಗೞನೊಗುಮಿಗೆ ತಿಂಬಿ ತುಂಬುವರಿಯಿಸಿ" ದು ವೆಂದೂ[೪] ಅಗ್ಗಳನ ಹೇಳಿಕೆ. ಕಮಲಭವನು ಈ ಪದವನ್ನು ಐದು ಬಾರಿ ಬಳಸಿದ್ದಾನೆ.[೫] ದೇವಕವಿ ಇದೇ ಐದನ್ನೂ ಕೊಟ್ಟಿರುವುದಲ್ಲದೆ "ಈ ಭುವನ ಗರ್ಭಕುಹರಂ ತಾನಾವಗಮಿಡಿದಡಸಿದ ತುಂತುಱ ಹಗವಮಿದೆನಿಸಿದುದು ಬಿಡದ ಬಡಹದ ಕೊರ್ಬಿಂ" ಎಂಬ ಆರನೆಯ ಪ್ರಯೋಗವನ್ನೂ ಮಾಡಿದ್ದಾನೆ.[೬] ಇವರಿಬ್ಬರ ಕಾವ್ಯಗಳಿಂದ ಪೆರ್ವಡಹ, ತನಿವಡಹ, ಸೀರ್ಪನಿವಡಹ ಎಂಬ ಸಮಾಸ ಪದಗಳು ದೊರೆಯುತ್ತವೆ. ಕೊನೆಯದಾಗಿ ಸುರಂಗನ ಈ ಕೆಳಗಿನ ಪದ್ಯವನ್ನು ಗಮನಿಸಬಹುದು.[೭] :

ಅಡಸರಿ ಬಲ್ಸರಿ ಮರಮಳೆ
ಯಿಡುಕುಂಬನಿ ನಟ್ಟವನಿ ತುಷಾರಂ ಬಡಹಂ

---

೧ 'ಪಂಪಭಾರತ', ೧೨-೮೦.
೨ 'ಜಗನ್ನಾಥವಿಜಯ', ೪-೩೨.
೩ 'ಚಂದ್ರಪ್ರಭ ಪುರಾಣ', ೪-೪೭.
೪ 'ಅದೇ', ೮-೪೩ ಗದ್ಯ.
೫ 'ಶಾಂತೀಶ್ವರ ಪುರಾಣ', ೧೨-೫೫, ೫೬, ೫೭, ೫೮, ೫೯.
೬ 'ಕುಸುಮಾವಳೀ ಕಾವ್ಯಂ', ೬-೪೦.
೭ 'ತ್ರಿಷಷ್ಟಿ ಪುರಾತನ ವಿಳಾಸ', ೮-೩೯.

ಜಡಿ ಜಿನುಗು ಜುಂಜು ತುಂತು
ಬಿ ಡದಡಿಯಿಡಗೊಡದೆ ಕಱೆದುವಿರುಳುಂ ಪಗಲುಂ ॥

ಈ ಪ್ರಯೋಗಗಳ ಬಲದಿಂದಲೇ ಅರ್ಥನಿರ್ಣಯ ಸಾಧ್ಯ. ರುದ್ರಭಟ್ಟ ಸುರಂಗರ ಪದ್ಯಗಳನ್ನು ಕಣ್ತೆರೆದು ನೋಡಿದರೆ ಬಡಪ ಎಂಬುದು ಒಂದು ಬಗೆಯಾದ ಮಳೆಯೆಂದು ವ್ಯಕ್ತವಾಗುತ್ತದೆ. ಇರಬಹುದಾದ ಅಲ್ಪಸ್ವಲ್ಪ ಸಂದೇಹವನ್ನೂ ಹೇಮಚಂದ್ರಾಚಾರ್ಯನು ಖಚಿತವಾಗಿ ಹೋಗಲಾಡಿಸುತ್ತಾನೆ; ತನ್ನ ಪ್ರಾಕೃತ ನಿಘಂಟುವಿನಲ್ಲಿ 'ವಡಪ್ಪಂ' ಎಂಬ ಶಬ್ದವನ್ನು ಕೊಟ್ಟು ಅದಕ್ಕೆ 'ಲತಾಗಹನಂ', 'ನಿರಂತರವೃಷ್ಟಿಃ' ಎಂಬರ್ಥಗಳನ್ನು ಬರೆದಿದ್ದಾನೆ; ''ಝೂಡರುಖುಡೀಸು ವಡಪ್ಪಂ'' ಎಂದು ಅದಕ್ಕೆ ಪ್ರಾಕೃತ ಪರ್ಯಾಯ ಶಬ್ದಗಳನ್ನೂ ಹೇಳಿದ್ದಾನೆ.[೧] ವಡಪ್ಪಂ ಎಂಬುದಕ್ಕೂ ಬಡಪಂ ಎಂಬುದಕ್ಕೂ ನಂಟುತನವಿದೆ. ಕನ್ನಡದಲ್ಲಿ ವಕಾರಾದಿಯಾದ ಶಬ್ದಗಳು ತೀರ ಕಡಿಮೆಯಾಗಿರುವುದೂ ತಮಿಳು ತೆಲುಗು ಕೋಶಗಳಲ್ಲಿ ಈ ಪದ ದೊರೆಯದಿರುವುದೂ ವಡಪ್ಪಂ ಎಂಬುದು ದ್ರಾವಿಡೇತರ ಶಬ್ದವಾಗಿರಬಹುದೆಂಬ ಊಹೆಗೆ ಕಾರಣಗಳು. ಅದು ಕನ್ನಡಕ್ಕೆ ಬಂದು ವಿಕಾಸ ಹೊಂದಿದೆ: ವಡಪ್ಪ>ಬಡಪ>ಬಡಹ. ಈಗ ಬಳಕೆಯಲ್ಲಿದೆಯೋ ಇಲ್ಲವೋ ತಿಳಿಯದು. ಅದರ ಅರ್ಥ ನಿರಂತರವಾದ ಮಳೆಯೆಂದೇ ಹೊರತು 'ಪ್ರವಾಹ'ವಲ್ಲ; ಲತಾಗಹನ ಎಂಬರ್ಥದಲ್ಲೂ ಅದು ಕನ್ನಡದಲ್ಲಿ ಪ್ರಯೋಗವಾಗಿದ್ದರೆ ಸೋಜಿಗವೇನೂ ಅಲ್ಲ.

೪. **ಓಹರಿ ಸಾಹರಿ:** ಖರನೂ ವಿರಾಧಿತನೂ ತಂತಮ್ಮ ಸೈನ್ಯಗಳೊಡನೆ ಬಂದು ಎದುರಿಸಿ ಬಿರುಸಿನಿಂದ ಕಾಳಗವಾಡುತ್ತಿದ್ದಾಗ ಅರೆನೆಲೆಯಲ್ಲಿದ್ದ ಲಕ್ಷ್ಮಣ ಸಂತೋಷದಿಂದ ಅದನ್ನು ನೋಡುತ್ತಿದ್ದನೆಂದೂ ಆಗ ಆ ಎರಡು ಸೈನ್ಯಗಳು-''ಅರವರಿಸದೆ [ಮೋಹರಿಸಿಹರಿಯ] ಮಾಡುತ್ತಿರ್ದಪುವು'' ಎಂದೂ ಕುಮುದೇಂದು ಕವಿಯ ವರ್ಣನೆ.[೨] ಇಲ್ಲಿ ಆ ಗ್ರಂಥದ ಮಾನ್ಯ ಸಂಪಾದಕರ ಪಾಠ ಸರಿಯಲ್ಲವೆಂದೂ ಅದು''-ಅರವರಿಸದೆ [ಯೋ] ಹರಿ ಸಾ[ಹ]ರಿಯಂ ಮಾಡುತ್ತಿರ್ದಪುವು'' ಎಂದಿರಬೇಕೆಂದೂ ಅವರೇ ಕೊಟ್ಟಿರುವ ಪಾಠಾಂತರಗಳ ಸಹಾಯದಿಂದ ಒಂದು ಕಡೆ ಹೇಳಿದ್ದೆನು.[೩] ಓಹರಿ ಸಾಹರಿ ಎಂಬ ಒಂದು ಪದ ಕನ್ನಡದಲ್ಲಿತ್ತೆಂಬುದಕ್ಕೆ ಸುರಂಗಕವಿ ಒಂದು ಆಧಾರವಾಗಿದ್ದಾನೆ. ಅವನ ಗ್ರಂಥದ ಕಲಿಕಾಮದೇವರ ಕಥೆಯಲ್ಲಿ ಯುದ್ಧವರ್ಣನೆ ಬರುತ್ತದೆ. ಅಲ್ಲಿ ''ಅಂತು ವೋಹರಿ ಸಾಹರಿಯಾಗಿ ಕಾದುವರಂ ಕಲಿಕಾಮದೇವಂ ಕಂಡು ಕೋಪಮಂ ತಾಳ್ದಾಗಳ್'' ಎಂದು ಪ್ರಯೋಗವಿದೆ.[೪] ಇದರ ಅರ್ಥವನ್ನು ತಿಳಿಯಬೇಕಾದರೆ, ತೆಲುಗು ಸಾಹಿತ್ಯದಿಂದ ನೆರವು ಬರುತ್ತದೆ. ಕೃಷ್ಣದೇವರಾಯನು ಬರೆದಿರುವ 'ಆಮುಕ್ತಮಾಲ್ಯದ' ಎಂಬ ಕಾವ್ಯದಲ್ಲಿ ''ಓಹರಿ ಸಾಹರಿಂ ಬ್ರಥಮವೊಲ್ಕಡುಧಾರಲ'' ಎಂಬ ಪ್ರಯೋಗವಿದೆಯೆಂದೂ ಅದಕ್ಕೆ 'ತಂಡೋಪತಂಡವಾಗಿ' ಎಂಬರ್ಥವಿದೆಯೆಂದೂ ತಿಳಿದುಬಂದಿದೆ.[೫] ಈ ಅರ್ಥ

೧ 'ದೇಶೀನಾಮಮಾಲಾ', ೭-೮೩.
೨ 'ಕುಮುದೇಂದು ರಾಮಾಯಣ', ೮-೮೨.
೩ 'ಕನ್ನಡ ಸಾಹಿತ್ಯಪರಿಷತ್ಪತ್ರಿಕೆ', ಸಂ. ೨೪, ಪು. ೨೩೪.
೪ 'ತ್ರಿಷಷ್ಟಿಪುರಾತನ ವಿಲಾಸ', ೫-೯ ಗದ್ಯ.
೫ 'ಶಬ್ದರತ್ನಾಕರಮು', ಪುಟ. ೧೮೬.

ಸುರಂಗಕವಿಯ ಪ್ರಯೋಗಕ್ಕೆ ಚೆನ್ನಾಗಿ ಹೊಂದುತ್ತದೆ; ಕುಮುದೇಂದುವಿನ ಪದ್ಯಕ್ಕೆ ಅಷ್ಟು ಚೆನ್ನಾಗಿ ಸೇರುವುದಿಲ್ಲ. ಆದರೂ ಅದರ ಅರ್ಥಸ್ಥೂಲವಾಗಿ ತಿಳಿದಹಾಗಾಗಿದೆ; ತುಸು ಭಿನ್ನವಾದ ಬೇರೆ ಯಾವುದಾದರೂ ಅಭಿಪ್ರಾಯ ಆ ಪದದಿಂದ ಸೂಚಿತವಾಗಿರಬಹುದು.

೫. ಒಲ್ಲಣಿಗೆ : ಈಗ ತಿಳಿದಮಟ್ಟಿಗೆ ಈ ಪದವನ್ನು ಮೊದಲು ಬಳಸಿರುವುದು ಶಿವಕೋಟ್ಯಾಚಾರ್ಯನ 'ವಡ್ಡಾರಾಧನೆ'ಯೆಂಬ ಗ್ರಂಥದಲ್ಲಿ. ಗಂಭೀರೆ ಎಂಬಾಕೆ ಮಗಳ ಊರಿಗೆ ಹೋಗುತ್ತ ದಾರಿಯಲ್ಲಿ ಕಳ್ಳರ ಕೈಗೆ ಸಿಕ್ಕಿಬಿದ್ದು ಉಪಾಯದಿಂದ ಅವರನ್ನು ನಂಬಿಸಿ ಹತ್ತಿರಿದ್ದ ಊರಿಗೆ ಅವರನ್ನು ಕರೆದುಕೊಂಡು ಹೋಗಿ ''ಅವರ್ಗೆಲ್ಲಂ ನೀರ ನಿಡಿಸಿ ತಲೆಯಂ ಪೂಸಿಸಿಯೊಲ್ಲಣಿಗೆಯುಡಿಸಿ ತಲೆಯೊಳ್ ಕಟಿೞಯಂ'' ಹೊಯ್ಯುತ್ತಾಳೆ.[1] ಕರ್ಣನ ಪರಾಕ್ರಮವನ್ನು ಶಾರದ್ವತನಿಂದ ಹೊಗಳಿಸುತ್ತ ಪಂಪನು ''ಮುನ್ನೆ ಚಕ್ಷುಷ್ಮನೆಂಬ ಮನುವಾದ ಕಾಲದೊಳ್ ಧರಾತಳಮನೊಲ್ಲಣಿಗೆಯಿಂ ಪಿೞಿವಂತೆ ....ಪಿೞಿದ ಸಾಹಸಮುಮಂ'' ಎಂದೂ[2] ಭೂಮಿ ಕೋಪಗೊಂಡು ಹಿಂದಿನ ಹಗೆ ಕಾರಣವಾಗಿ ಕರ್ಣನ ರಥದ ಗಾಲಿಯನ್ನು ನುಂಗುವ ಸಂದರ್ಭದಲ್ಲಿ ''ತನ್ನಂ ಮು[ನ್ನೆ ಮುಯ್ಯೇಟ್] ಸೂಟ್ವಿರಮೊಲ್ಲಣಿಗೆಯಂ ಪಿೞಿವಂತೆ ಪಿಂಡಿ ಪಿೞಿದ ಪಗೆಗೆ'' ಎಂದೂ[3] ಉಸುರಿದ್ದಾನೆ. ಬ್ರಾಹ್ಮಣರು ಮಾಡುವ ಶ್ರಾದ್ಧಾದಿ ಕರ್ಮಗಳಿಂದ ಏನೂ ಪ್ರಯೋಜನವಿಲ್ಲವೆಂದು ನಗುತ್ತ

ಮಿಂದೊಲ್ಲಣಿಗೆಯ ಪಿೞಿನೀ
ರಿಂದಂ ಕಾಲ್ಗರ್ಚೆ ನೆಲದೊಳಿರ್ದಾ ಕೊೞೆನೀ
ರಿಂದಂ ಪಾರ್ವರ ಮಡಗೂ
ೞಿಂದಂ ಪಿತೃತೃಪ್ತಿಯಕ್ಕುಮೆಂಬರ್ ಪಾರ್ವರ್॥

ಎಂಬುದಾಗಿ ಬ್ರಹ್ಮಶಿವನ ಚುಚ್ಚುಮಾತು.[4] ಇವು ಇದುವರೆಗೆ ಸಿಕ್ಕಿರುವ ಪ್ರಯೋಗಗಳು. ಇದರ ಅರ್ಥವೇನು?

ಪಂಪಭಾರತದ ಸಂಪಾದಕರು ಇದಕ್ಕೆ 'ಗಾಣ' ಎಂದು ಅರ್ಥ ಹೇಳಿಬಿಟ್ಟರು. ಆಧಾರವಿದೆಯೊ, ಬರಿ ಊಹೆಯೊ ತಿಳಿಯದು. ವಿದ್ವಾಂಸರೊಬ್ಬರು ಯಾವ ವಿಷಯವಾಗಿಯೋ ಬರೆಯ ಹೊರಟು ಹೇಗೋ ಈ ಪದಕ್ಕೆ ಕೈಹಾಕಿ 'ಇದಕ್ಕೆ 'ಆರ್ದ್ರವಸ್ತ್ರ' ಎಂಬರ್ಥವಿರಬೇಕೆಂದು ಬೇರೆ ಯಾವ ಪ್ರಯೋಗದ ಬಲವೂ ಇಲ್ಲದೆಯೇ ಊಹಿಸಿದ್ದಾರೆ.[5] ಊಹೆ ಸರಿಯಾಗಿದೆ; ಅದು ಸಾಧಾರವಾಗಿಯೂ ಇದ್ದರೆ ಚೆನ್ನಾಗಿತ್ತು. ಸ್ನಾನ ಮಾಡುವಾಗ ಉಡುವ ಬಟ್ಟೆಯೆಂದು ಆ ಪದಕ್ಕೆ ಅರ್ಥ ಪ್ರಯೋಗಗಳಿಂದಲೇ ಸ್ಪಷ್ಟವಾಗಿದೆ. ಪಂಪನ ಮೊದಲನೆಯ ಪ್ರಯೋಗದಲ್ಲಿ 'ಒಲ್ಲಣಿಗೆಯಿಂ' ಎಂಬ ತೃತೀಯೆಗೆ ಬದಲಾಗಿ ದ್ವಿತೀಯೆ ಇರಬೇಕು. ಮೀಯುವಾಗ ಉಡುವ ಬಟ್ಟೆಯ ನೆಯ್ಗೆ ಜಾಳುಜಾಳು; ಬೇಗ ನೀರನ್ನು ಹೀರುತ್ತದೆ; ಒಂದು ತೊಟ್ಟು ನೀರು ಕೂಡ ಇಲ್ಲದಂತೆ ಹಿಂಡುವುದೂ ಅತಿ ಸುಲಭ. ಈ ಸೌಲಭ್ಯ ಪಂಪನ ಪ್ರಯೋಗದಲ್ಲಿ ಧ್ವನಿತವಾಗಿದೆ; ವಾಚ್ಯಾರ್ಥವೇನೊ ಬಟ್ಟೆಯೆಂದೇ. ಈ

---

೧ 'ಕನ್ನಡ ಸಾಹಿತ್ಯಪರಿಷತ್ಪತ್ರಿಕೆ', ಸಂ.೨೪, ಸಂಚಿಕೆ ೪-೧೫. ೨ 'ಪಂಪಭಾರತ', ೧೨-೪೮ ಗದ್ಯ. ೩ 'ಅದೇ' ೧೨-೨೦೬ ಗದ್ಯ. ೪ 'ಸಮಯಪರೀಕ್ಷೆ' ೧೧ ೫. 'ಪಣ್ಣತ ಮಂಡಲ ಪತ್ರಿಕೆ', ೧೯೪೯, ನವರಾತ್ರಿಯ ಸಂಚಿಕೆ, ಪು. ೨೪.

ಅರ್ಥವನ್ನು ಸಮರ್ಥಿಸುವುದಕ್ಕೆ ಇಲ್ಲಿ ತುಳು ಭಾಷೆ ನೆರವಾಗುತ್ತದೆ. ಆ ಭಾಷೆಯ ಕೋಶವೊಂದರಲ್ಲಿ ಒಲ್ಲಣಿಗೆ ಎಂಬ ನಾಮಪದ A cloth covering the Privities ಎಂಬರ್ಥದಲ್ಲಿ ಕಂಡುಬರುತ್ತದೆ.[೧] ತುಳುವರಲ್ಲಿ ಈ ಪದ ಇನ್ನೂ ಜೀವಂತವಾಗಿರಬಹುದು. ಇದು ಯಾವ ಭಾಷೆಯದೊ ಕನ್ನಡಕ್ಕೆ ಹೇಗೆ ಬಂತೊ ಇದರ ನಿಷ್ಪತ್ತಿಯೇನೊ ಯಾವುದನ್ನೂ ಸದ್ಯದಲ್ಲಿ ವಿವರಿಸಲು ಅವಕಾಶವಿಲ್ಲ.

**೬. ಮೂವಿಟ್ಟಿ** : ಪಂಪಭಾರತ (೬-೩೦)ರಲ್ಲಿ ಬರುವ ಈ ಪದ್ಯಕ್ಕೆ ಆ ಗ್ರಂಥದ ಸಂಪಾದಕರು ಅರ್ಥ ಹೇಳುವಾಗ ಅದನ್ನು ಮೂಱು+ಬಿಟ್ಟಿ ಎಂದು ವಿಭಾಗಿಸಿ ವಿಷ್ಟಿ ಎಂದು ಎರಡನೆಯದರ ಸಂಸ್ಕೃತಮೂಲವನ್ನು ಸೂಚಿಸಿ ಪೊನ್ನನ 'ಶಾಂತಿಪುರಾಣ'ದ ಒಂದು ಪ್ರಯೋಗವನ್ನೂ ತೋರಿಸಿ (೯-೨) ತಟಸ್ಥರಾಗಿದ್ದಾರೆ. 'ವಿಷ್ಟಿ'ಗೆ ಅರ್ಥವೇನೆಂದು ವಿಶದಪಡಿಸಿಲ್ಲ. ಅದನ್ನು ತಿಳಿದ ಮೇಲೆ ಮೂರು ಬಿಟ್ಟಿಗಳಾವುವೆಂಬುದನ್ನು ಗೊತ್ತುಹಚ್ಚಬೇಕಾಗಿದೆ. ಇನ್ನೂ ಕೆಲವು ಪ್ರಯೋಗಗಳನ್ನು ನೋಡೋಣ. ಪಾರ್ಶ್ವಪಂಡಿತನದು ಹೀಗಿದೆ[೨] :

ಕೊಟ್ಟಿಯ್ದೆ ಕಪ್ಪಮಂ ಮಗು
ಟ್ಟಿಟ್ಟಿಯೆ ಬೞಗೊಲ್ದು ಪೇಟ್ದ ತಾಣಕ್ಕೆ ನೃಪ
ರ್ವಿಟ್ಟು ಭುಜಗರ್ವಮಂ ಮೂ
ವಿಟ್ಟಿಗೆ ಬರೆ ನೆಗಟ್ದನೆಳೆಯೊಳರವಿಂದ ನೃಪಂ ॥

ದಾವಣಗೆರೆ ೩೨ನೆಯ ಶಾಸನದಲ್ಲಿ "ಭಯದಿಂ ಮೂವಿಟ್ಟಿಯಿಂ ಬಂದು ಜೀವಿಸದಿರ್ಪುದ್ಧತರಿಲ್ಲ" ಎಂದೂ[೩] ೨೫ನೆಯ ಶಾಸನದಲ್ಲಿ "ವೀರಾರಿ ನೃಪಾಳರಂ ಬರಿಸಿದಂ ಮೂವಿಟ್ಟಿಗಂ ಬಿಟ್ಟಿಗಂ" ಎಂದೂ[೪] ಈ ಪದ ಬಳಕೆಯಾಗಿದೆ. ನಾಗಚಂದ್ರನು 'ಇಱಿವಿಟ್ಟಿ' (ಇಱಿವ+ಬಿಟ್ಟಿ; ಇದು ಎಱಿವಿಟ್ಟಿ ಎಂದಿರಬೇಕೇನೊ?) ಎಂಬ ಹೊಸ ಪದವನ್ನು ನಿರ್ಮಿಸಿಕೊಂಡಿದ್ದಾನೆ.[೫] 'ಮೂವಿಟ್ಟಿಗಂಬರಿಸಿದಂ' ಎಂಬುದಕ್ಕೆ 'ಶಾಸನಪದ್ಯಮಂಜರಿ'ಯ ಕೋಶದಲ್ಲಿ '? ದಾಸರನ್ನಾಗಿ ಮಾಡಿದನು' ಎಂದು ಅರ್ಥಸೂಚಿತವಾಗಿದೆ. ಇದು ಸರಿಯೇ? ವಿಷ್ಟಿ ಎಂಬುದು ಅರ್ಥಶಾಸ್ತ್ರಕ್ಕೆ ಸಂಬಂಧಿಸಿದ ಪದ. ಇದಕ್ಕೆ ಕೌಟಿಲ್ಯನ ವಿವರಣೆ ಹೀಗೆ: "ಶಿಬಿರ ಮಾರ್ಗ ಸೇತು ಕೂಪ ತೀರ್ಥ ಶೋಧನ ಕರ್ಮಯಂತ್ರ ಆಯುಧಾವರಣ ಉಪಕರಣ ಗ್ರಾಸವಹನಂ ಆಯೋಧನಾಚ್ಚ ಪ್ರಹರಣಾವರಣ ಪ್ರತಿವಿದ್ಧಾಪನಯನಂ ಇತಿ ವಿಷ್ಟಿಕರ್ಮಾಣಿ."[೬] ಸೈನ್ಯ ಬೀಡುಬಿಟ್ಟಿರುವಾಗಲೂ ಪಯಣ ಮಾಡುತ್ತಿರುವಾಗಲೂ ಅದಕ್ಕೆ ಬೇಕಾದ ಅನುಕೂಲ್ಯಗಳನ್ನೆಲ್ಲ ಒದಗಿಸಿಕೊಡಲು ಸಂಬಳ ಕೊಡದೆ ಚಾಕರಿ ತೆಗೆಯುವ ರೂಢಿ ಹಿಂದೆ ಇತ್ತು. ಕೌಟಿಲ್ಯನ ವಾಕ್ಯಕ್ಕೆ ಮಾಡಿರುವ ಇಂಗ್ಲಿಷಿನ ತರ್ಜುಮೆಯಲ್ಲಿ ವಿಷ್ಟಿಕರ್ಮಗಳನ್ನು

---

೧ *Tulu-English Dictionary,* 1886: By Rev A. Manner.

೨ 'ಪಾರ್ಶ್ವನಾಥಪುರಾಣ', ೨-೧೫.

೩ 'ಶಾಸನ ಪದ್ಯಮಂಜರಿ', ಪದ್ಯ ೭೭೦.

೪ 'ಅದೇ', ಪದ್ಯ ೧೪೯೨.

೫ 'ಪಂಪರಾಮಾಯಣ', ೮-೨೬.

೬ 'ಕೌಟಲೀಯ ಅರ್ಥಶಾಸ್ತ್ರ', ಪು. ೩೭೧ (Mysore Govt. Oriental Library Edition).

ಮೂರು ಗುಂಪುಗಳಾಗಿ ವಿಭಾಗಿಸಿರುವುದು ಕಂಡುಬರುತ್ತದೆ.[೨] ಶೋಧನ ಕರ್ಮ, ವಹನ ಕರ್ಮ, ಅಪನಯನ ಕರ್ಮ ಎಂಬ ಈ ಮೂರು ಬಗೆಯಾದ ವಿಷ್ಟಿಗಳನ್ನು ಕನ್ನಡ ಕವಿಗಳು 'ಮೂವಿಟ್ಟಿ' ಎಂಬ ಪದದಿಂದ ನಿರ್ದೇಶಿಸಿರುವ ಹಾಗೆ ಕಾಣುತ್ತದೆ. ಸೋತ ರಾಜರು ಗೆದ್ದ ರಾಜರಿಗೆ ಈ ವಿಷ್ಟಿಕರ್ಮಗಳನ್ನೂ ಮಾಡುವ ದೈನ್ಯಾವಸ್ಥೆಗೆ ಗುರಿಯಾಗುತ್ತಿದ್ದರು; ಗೆದ್ದವನ ಪರಾಕ್ರಮವನ್ನು ಹೇಳುವ ಕನ್ನಡದ ಧಾಟಿಯನ್ನು ಮೇಲಿನ ಪ್ರಯೋಗಗಳಲ್ಲಿ ಕಾಣುತ್ತೇವೆ. ಪಂಪ ಪೊನ್ನ ಪಾರ್ಶ್ವರ ಪದ್ಯಗಳಲ್ಲಿ 'ಮೂವಿಟ್ಟಿ'ಗೆ ಇರುವ ಆನುಪೂರ್ವಿ ಹೆಚ್ಚುಕಡಮೆ ಒಂದೇ ರೀತಿಯಾಗಿರುವುದು ಸೋಜಿಗದ ವಿಷಯ.

ಮೇಲೆ ಕೊಟ್ಟಿರುವ ಪದಗಳು ಮಾದರಿಗಾಗಿ ಎತ್ತಿಕೊಂಡವು. ಕನ್ನಡ ಕಾವ್ಯಗಳಲ್ಲಿಯೂ ಶಾಸನಗಳಲ್ಲಿಯೂ ಇಂಥ ಸಾವಿರಾರು ಪದಗಳು ಅವಿತುಕೊಂಡಿವೆ. ಕಾವ್ಯಗಳಲ್ಲಿ ಕೆಲವು ಮುದ್ರಿತ; ಹಲವು ಇನ್ನೂ ಅಚ್ಚುಕೂಟದ ಮುಖವನ್ನೇ ನೋಡಿಲ್ಲ. ಶಾಸನಗಳೂ ಲೆಕ್ಕವಿಲ್ಲದಷ್ಟಿವೆ. ಇವುಗಳನ್ನೆಲ್ಲ ಕಣ್ಣಿಟ್ಟು ಓದಿ ಸರಿಯಾದ ಪಾಠವೇನೆಂಬುದನ್ನೂ ನಿರ್ಣಯಿಸಿ ಪದಗಳನ್ನೂ ಕೂಡಿಹಾಕುವ ಕೆಲಸ ಮೊದಲು ನಡೆಯಬೇಕು. ಇದಾದಹೊರತು ಮುಂದೆ ಕಾಲಿಡುವ ಹಾಗಿಲ್ಲ.

ನಮ್ಮ ಕವಿಗಳಲ್ಲನೇಕರು ಹಲವು ಶಾಸ್ತ್ರಗಳನ್ನು ಬಲ್ಲವರಾಗಿದ್ದರು. ''ತರ್ಕ ವ್ಯಾಕರಣ ಭರತ ಚಾಣಕ್ಯ ವಾತ್ಸ್ಯಾಯನ ಭಾರತ ರಾಮಾಯಣ ಮೋಕ್ಷೋಪಾಯಾತ್ಮಜ್ಞಾನ ಧಾತುವಾದ ರತ್ನಪರೀಕ್ಷಾ ವೈದ್ಯಕ ಜ್ಯೌತಿಷ ಧನುರ್ವೇದ ಗಜತುರಗ ಪುರುಷಲಕ್ಷಣ ದ್ಯೂತೇಂದ್ರಜಾಲ ಪ್ರಕೀರ್ಣೇಷು ಪರಿಚಯಃ ಕವಿ ಸಾಮ್ರಾಜ್ಯ ವ್ಯಂಜನಃ''[೩] ಎಂಬ ಕ್ಷೇಮೇಂದ್ರನ ಮಾತಿನಂತೆ ಕವಿಯಾಗಲು ಬಯಸುವವನು ಈ ಶಾಸ್ತ್ರಗಳನ್ನೂ ಇಲ್ಲಿ ಹೇಳದೆ ಇರುವ ಚಿತ್ರ-ಸೂಪಶಾಸ್ತ್ರಾದಿಗಳನ್ನೂ ಕಲಿತಿರಬೇಕಾಗಿತ್ತು. ಪ್ರತಿಭೆಯೊಂದೇ ಕಾವ್ಯಸೃಷ್ಟಿಗೆ ಪರಿಕರವೆಂಬ ರಾಜಶೇಖರನ ಮಾತನ್ನು ಮೊದಲು ಒಪ್ಪಿಕೊಂಡು ಆಮೇಲೆ ಕ್ಷೇಮೇಂದ್ರನ ಮಾತಿಗೆ ಬೆಲೆ ಕಟ್ಟಬೇಕಾಗಿದೆ. ಈ ವಿಷಯ ಹಾಗಿರಲಿ. ನಮ್ಮ ಹಿರಿಯ ಕವಿಗಳಲ್ಲಿ ಪ್ರತಿಭೆಯೂ ಶಾಸ್ತ್ರಪರಿಚಯವೂ ಒಂದರೊಡನೊಂದು ಮೇಲಾಟ ನಡಸುತ್ತಿವೆ. ಇದರಿಂದ ಒಂದು ಕಡೆ ಕಾವ್ಯಸೌಂದರ್ಯದ ಬುಗ್ಗೆಬೆಳಗಿದ್ದರೆ ಮತ್ತೊಂದು ಕಡೆ ಆಯಾ ಶಾಸ್ತ್ರದ ಶಬ್ದಪ್ರವಾಹವು ಹೆದರಿಸುವಂತೆ ಮೊರೆಯುತ್ತಿದೆ. ಇದರ ಜೊತೆಗೆ 'ಚತುರ್ಭಾಷಾ ಕವಿ ಚಕ್ರವರ್ತಿ'ಗಳ ಪಾಂಡಿತ್ಯ ಬೇರೆ ಉಂಟು. ಅವರ ಪದಗಳಿಗೆ ಅರ್ಥೈಸಬೇಕಾದರೆ ನಿಘಂಟುಕಾರನಿಗೆ ಈ ವಿವಿಧ ಶಾಸ್ತ್ರಪರಿಭಾಷೆಗಳ ಪರಿಚಯ ಇರಲೇಬೇಕು. ಕನ್ನಡಭಾಷೆ ಸಾಹಿತ್ಯಗಳ ತುಂಬು ಪಾಂಡಿತ್ಯದೊಡನೆ ಸಂಸ್ಕೃತ ಪ್ರಾಕೃತ ತಮಿಳು ತೆಲುಗು ಮಲಯಾಳವೇ ಮುಂತಾದ ಭಾಷೆಗಳ ಪರಿಜ್ಞಾನವೂ ಸಾಹಿತ್ಯಗಳ ಲೋಲುಪ್ತಿಯೂ ತುಳು ಮೊದಲಾದ ಇತರ ದ್ರಾವಿಡ ಭಾಷೆಗಳ ವ್ಯಾಕರಣ ಕೋಶಗಳ ಸಾನ್ನಿಧ್ಯವೂ ಆಧುನಿಕ ಭಾಷಾಶಾಸ್ತ್ರದ ತಿರುವುಮುರುವುಗಳ ಗಭೀರ ಜ್ಞಾನವೂ ಭಾಷೆಯ ಒಳಭೇದಗಳ ತಿಳಿವಳಿಕೆಯೂ ಗ್ರಾಮಜೀವನದ ಅರಿವೂ ಅಲ್ಲದೆ ಶಕ್ತಿಯೂ ತಾಳ್ಮೆಯೂ ಸಹೃದಯತೆಯಿಂದ ಸೇರಬೇಕು. ಇಷ್ಟೆಲ್ಲ ಒಂದೇ ವ್ಯಕ್ತಿಯಲ್ಲಿ ಸಂಗಮಿಸಿದ್ದರೆ ಅದು ಅವನ ಪುಣ್ಯ, ಭಾಷೆಯ ಭಾಗ್ಯ. ಆದರೆ ಅದು ಮೊರಡಿಯಲ್ಲಿ ಮಾದಲದ ಹಣ್ಣು ಬಿಟ್ಟಂತೆ.

---

೨ *Kautiliya Arthasastra*: Tr. Dr. Shamasastri, p. 339.

೩ 'ಕವಿಕಂಠಾಭರಣ', ೫ನೆಯ ಸಂಧಿ.

ಆದ್ದರಿಂದ ಕನ್ನಡಕ್ಕೆ ಒಂದು ಹೊಸ ನಿಘಂಟುವನ್ನು ಮಾಡುವುದು ಬರಿ ಬಾಯಿಮಾತಿನಿಂದ ಆಗುವ ಕೆಲಸವಲ್ಲವೆಂದು ತಿಳಿದಹಾಗಾಯಿತು. ಕನ್ನಡದಲ್ಲಿ ಪಾಂಡಿತ್ಯವೇನಿದೆ, ಇದ್ದರೂ ಅದರಿಂದ ಆಗಬೇಕಾದದ್ದೇನು ಎಂದು ತಾತ್ಸಾರದಿಂದ ಮೂಗು ಮುರಿಯುವವರು ಒಂದಿಷ್ಟು ಕಣ್ಣುಬಿಟ್ಟು ನೋಡಲಿ; ಇದರಿಂದ ಅಂಥವರ ತಾತ್ಸಾರ ಪ್ರೋತ್ಸಾಹವಾಗಿ ಪರಿಣಮಿಸಲಿ. ಕನ್ನಡದಲ್ಲಿ ಆಳವಾದ ಪಾಂಡಿತ್ಯವಿದ್ದು ಹಿಂದೆ ಹೇಳಿದ ಶಾಸ್ತ್ರಗಳಲ್ಲೂ ಭಾಷೆಗಳಲ್ಲೂ, ಕನಿಷ್ಠಪಕ್ಷ ಒಂದರಲ್ಲಿಯಾದರೂ, ಪರಿಚಯವಿರುವ ಹತ್ತಾರು ಜನರು ಒಕ್ಕೂಟವಾಗಿ ಹಮ್ಮುಬಿಮ್ಮುಗಳಿಲ್ಲದೆ, ಕಲಹಕಾತರಗಳಿಲ್ಲದೆ ಸಹಕರಿಸಿ ಮಾಡಬೇಕಾದ ಕೆಲಸವಿದು. ಮದ್ರಾಸ್ ವಿಶ್ವವಿದ್ಯಾನಿಲಯವು ಸರ್ಕಾರದ ಪ್ರೋತ್ಸಾಹದಿಂದ ನಾಲ್ಕು ಲಕ್ಷ ರೂಪಾಯಿಗಳನ್ನು ಖರ್ಚುಮಾಡಿ ಇಪ್ಪತ್ತುಮೂರು ವರ್ಷಗಳ ಕಾಲ ದುಡಿದು ತಮಿಳು ಭಾಷೆಗೆ ನಿಘಂಟುವನ್ನು ತಯಾರಿಸಿದೆ. ಇಂಥ ಹೆಮ್ಮೆ ಕನ್ನಡಕ್ಕೂ ಬೇಗ ಉಂಟಾಗಲಿ.

*ಸಂಭಾವನೆ, ೧೯೪೧*

*ಪೀಠಿಕೆಗಳು-ಲೇಖನಗಳು, ೧೯೭೧, ಪು.೮೩೦-೪೨*

# ೨೩. ಪಂಪನ ವಿಕ್ರಮಾರ್ಜುನ ವಿಜಯದಲ್ಲಿ ಬರುವ ಗೌರವ ಸೂಚಕ ಸರ್ವನಾಮಗಳ ಪ್ರಯೋಗಗಳು

● ಕೆ. ಕುಶಾಲಪ್ಪ ಗೌಡ

೧.೦ ಸಾಮಾಜಿಕ ಶ್ರೇಣಿ, ಹಿರಿಯರಿಗೆ ಕಿರಿಯರು ತೋರಬೇಕಾದ ಗೌರವ, ಜಾತಿಯ ಮತ್ತು ಅಧಿಕಾರಗಳ ದೆಸೆಯಿಂದುಂಟಾದ ಮೇಲು, ಕೀಳುಗಳ ತಾರತಮ್ಯ, ಮುಂತಾದವುಗಳು ನಮ್ಮ ಸಂಸ್ಕೃತಿಯಲ್ಲಿ ಬೆರೆತುಹೋದ ಅಂಗಗಳಾಗಿವೆ. ಈ ತಾರತಮ್ಯ ಭಾಷೆಯಲ್ಲಿ, ಮುಖ್ಯವಾಗಿ, ಮಾತಿನಲ್ಲಿ ನಾವು ಬಳಸುವ ಸರ್ವನಾಮಗಳಲ್ಲಿ ಪ್ರತಿಫಲಿಸುತ್ತದೆ. ಕನ್ನಡದಲ್ಲಿ ಮೂರೂ ಪುರುಷಗಳಲ್ಲಿ ಗೌರವಾರ್ಥಕ ಬಹುವಚನವನ್ನು ಉಪಯೋಗಿಸುವ ಕ್ರಮವಿದೆ. ಕೇಶಿರಾಜ ಗೌರವಾರ್ಥಕ ಬಹುವಚನವನ್ನು ಗಮನಿಸಿ, ಮೂರು ಸನ್ನಿವೇಶಗಳಲ್ಲಿ, ಅಂದರೆ (೧) ಅಯತ್ನಕೃತ ಗೌರವ ಮುಖದಲ್ಲಿ, ಉದಾ: ಎಮ್ಮ ತಂದೆಗಳ್, ಎಮ್ಮ ತಾಯ್ಗಳ್; (೨) ಗುರು ಮುನೀಶ್ವರಾದಿ ವಿಶಿಷ್ಟೋದ್ಭವ ವಿನಯದಲ್ಲಿ, ಉದಾ:- ಸಮಂತಭದ್ರ ಸ್ವಾಮಿಗಳ, ಕವಿ ಪರಮೇಷ್ಠಿ ಸ್ವಾಮಿಗಳ, ಪೂಜ್ಯಪಾದ ಸ್ವಾಮಿಗಳ, ಮತ್ತು (೩) ಅಸಹ್ಯ ವೃತ್ತಿಗಳಲ್ಲಿ, ಉದಾ: ಬಡವಾದಿರಸ... ಕಡಲೆಗಳೇಂ ನಿಮ್ಮೊಡಿಯೊಳಗೆ ಕುಡದ ನಿಮಗಮೀ (ಸೂ. ೧೦೪ ಪ. ೧೧೨) ಎಂಬಂತೆ ಏಕವ್ಯಕ್ತಿಯನ್ನು ಹೇಳುವಾಗಲೂ ಬಹುವಚನ ರೂಪ ಬರುತ್ತದೆಂದಿದ್ದಾನೆ. ತಂದೆಗಳ್, ತಾಯ್ಗಳ್ ಎಂಬಲ್ಲಿ ಬಹುವಚನ ಪ್ರತ್ಯಯ ಆಯಾ ನಾಮಪದಗಳಿಗೆ ಬಂದಿರುವುದು ಮಾತ್ರವಲ್ಲದೆ, 'ಎಮ್ಮ' ಎಂಬ ಸರ್ವನಾಮದಲ್ಲಿಯೂ ತೋರಿಬರುತ್ತದೆ. ಇಲ್ಲಿಯೂ ಇದು ಏಕವ್ಯಕ್ತಿಗೆ ಬಂದಿರುವ ಗೌರವ ಸೂಚನೆ. ಅಂದರೆ, ತಂದೆ, ತಾಯಿ, ಮುಂತಾದ ಗೌರವಭಾಜನರಾಗಿರುವ ವ್ಯಕ್ತಿಗಳನ್ನು ಸೂಚಿಸುವ ಪದಗಳಿಗೆ ಮಾತ್ರವಲ್ಲದೆ ಅದರೊಡನೆ ಬರುವ ಅನ್ಯ ಸರ್ವನಾಮಕ್ಕೂ ಗೌರವಾರ್ಥಕ ಬಹುವಚನ ಪ್ರತ್ಯಯ ಆರೋಪಿತವಾಗುತ್ತದೆ. ಇದು ಕನ್ನಡದಲ್ಲಿ ಇಂದಿಗೂ ಸಹಜವಾಗಿದೆ. ಪ್ರಾಚೀನ ಕಾಲದಿಂದಲೂ ಈ ಪದ್ಧತಿ ಕಂಡು ಬರುತ್ತದೆ. ಉಳಿದ ದ್ರಾವಿಡ ಜ್ಞಾತಿ ಭಾಷೆಗಳಲ್ಲೂ ಹೀಗೆಯೇ ಇದೆ. ಯಾರನ್ನು ಉದ್ದೇಶಿಸಿ ಮಾತನಾಡುತ್ತೇವೆಯೋ, ಅಂಥವರು ಮಾತನಾಡುವವರಿಗಿಂತ ವಯಸ್ಸಿನಲ್ಲಿ ಕಿರಿಯರು, ಯಾರನ್ನು ಕುರಿತು ಮಾತನಾಡುತ್ತೇವೆಯೋ ಅವರು ಉದ್ದೇಶಿತ ವ್ಯಕ್ತಿಗೆ ಹಿರಿಯರು, ಗೌರವಭಾಜನರು. ಆ ವ್ಯಕ್ತಿಗಳನ್ನು ಉದ್ದೇಶಿತ ವ್ಯಕ್ತಿ ಗೌರವ ಸಂಬೋಧನೆಯಿಂದ ಕರೆಯಬಹುದು ಅಥವಾ ಕರೆಯದಿರಲೂಬಹುದು. ಆದರೂ ಮಾತಿನಲ್ಲಿ ಈ ಮಧ್ಯಮ ವ್ಯಕ್ತಿಯನ್ನು ನಿರ್ದೇಶಿಸುವ ಸರ್ವನಾಮ ಬಹುವಚನದಲ್ಲೇ ಇರುತ್ತದೆ. ಈ ಪರಿಸ್ಥಿತಿಯನ್ನು ಕೆಳಗಿನ ರೇಖಾಚಿತ್ರದಿಂದ




ಚಿತ್ರ ೧




ಚಿತ್ರ ೨

ಸ್ಪಷ್ಟಗೊಳಿಸಬಹುದು:

ಚಿತ್ರ೧ರಲ್ಲಿ $E_1$ ಮತ್ತು $E_2$ ಹಿರಿಯರು. Y ಕಿರಿಯ ವ್ಯಕ್ತಿ. Yಯನ್ನುದ್ದೇಶಿಸಿ $E_2$ಯನ್ನು ಕುರಿತಾಡುವಾಗ Yಗೆ ಬಹುವಚನ ರೂಪ $E_1$ನ ಮಾತಿನಲ್ಲಿ ಬರುತ್ತದೆ. ಕಾರಣ, Yಗೆ $E_2$ ಹಿರಿಯ ವ್ಯಕ್ತಿಯಾದುದರಿಂದ. ಚಿತ್ರ ೨ರಲ್ಲಿ $Y_2$, $Y_1$ಗಿಂತ ಹಿರಿಯ ವ್ಯಕ್ತಿಯಾದುದರಿಂದ Eಅವರನ್ನು ಕುರಿತು ಹೇಳುವಾಗ ಏಕವಚನ ರೂಪವೇ ಬರುತ್ತದೆ. ಉದಾ: ತಂದೆ ಮಗನನ್ನುದ್ದೇಶಿಸಿ, ಮಗನ ತಾಯನ್ನೋ, ಅಣ್ಣನನ್ನೋ, ಅಕ್ಕಂದಿರನ್ನೋ ಕುರಿತಾಡುವಾಗ ಮಗನನ್ನು ನಿರ್ದೇಶಿಸುವ ಮಧ್ಯಮಪುರುಷ ಸರ್ವನಾಮಕ್ಕೆ ಬಹುವಚನ ಆರೋಪಿತವಾಗುವುದು ರೂಢಿ:

೧. (ನೀನು) ನಿಮ್ಮಮ್ಮನ ಹತ್ತಿರ ಇದನ್ನು ಕೊಡು

೨. (ನೀನು) ನಿಮ್ಮಣ್ಣನನ್ನು ಕರೆ, ಇತ್ಯಾದಿ.

ಈ ಸಾಮಾನ್ಯ ರೂಢಿಯನ್ನು ಉದ್ದೇಶಪೂರ್ವಕವಾಗಿ ಮೀರಿ ಮಾಡಿದ ಪ್ರಯೋಗವೋ ಎಂಬಂತೆ ಪಂಪನ ಕೆಳಗಿನ ಪ್ರಯೋಗ ಕಾಣುತ್ತದೆ. ಆ ಸಂದರ್ಭ ಹೀಗಿದೆ:

ಗಂಗಾತಡಿಯಲ್ಲಿ ಕರ್ಣನಿಂದ ಪುರಿಗಣೆಯ ಪ್ರಯೋಗದ ಬಗ್ಗೆ ವಚನ ತೆಗೆದುಕೊಳ್ಳಲು ಕುಂತಿ ಬರುತ್ತಾಳೆ. ತನ್ನ ಐವರು ಮಕ್ಕಳನ್ನು ಕಾಪಾಡಬೇಕೆಂಬ ಅವಳ ಬಯಕೆ ಕರ್ಣನ ದೃಷ್ಟಿಯಿಂದ ಅವನಿಗೆಷ್ಟು ಮಾರಕವೆಂಬುದನ್ನು ಅವನೂ ಬಲ್ಲ. ಆದರೆ ದಾನಶೂರನಾದ ಅವನು ತನ್ನನ್ನೇ ತಾನು ನಿಯಂತ್ರಿಸಲಾರ. ಅವನಿಗೆ ಕುಂತಿ ತಾಯಿಯಾಗಿಯೂ, ಪ್ರಾರಂಭದಿಂದಲೇ ಅವನ ಜೀವನಕ್ಕೆ ಗಂಡಾಂತರ ಮತ್ತು ಅವಮಾನವನ್ನೇ ತಂದವಳು. ಅವೆಲ್ಲವನ್ನೂ ಸ್ವಶಕ್ತಿಯಿಂದ ಮೀರಿ ಮೇಲೇರಿದರೂ, ಈಗ ಕೊನೆಯದಾಗಿ ಅವನನ್ನು ಮುಗಿಸುವ ಉದ್ದೇಶಕ್ಕೋ ಎಂಬಂತೆ ಬಂದಿದ್ದಾಳೆ. ಅವಳ ಉದ್ದೇಶ ಅದಾಗಿರದಿದ್ದರೂ, ಪರಿಣಾಮ ಅದೇ ಎಂಬುದರಲ್ಲಿ ಸಂಶಯವಿಲ್ಲ. ಕುಂತಿ ತನ್ನ ಮಗನಾದ ಕರ್ಣನಿಗೇನೇನು ಆಪತ್ತನ್ನು ತಂದಿತ್ತಳೆಂದು ಎಲ್ಲವನ್ನೂ ಬಲ್ಲ ಸೂರ್ಯನಿಗೆ ನೋಡಿ ನೋಡಿ ಸಾಕಾಗಿದೆ, ಅವನು ರೋಸಿ ಜುಗುಪ್ಸೆಗೊಂಡಿದ್ದಾನೆ. ಈ ಕಾರಣದಿಂದಲೇ, ಅವನು ಮನಸ್ಸಿನಲ್ಲಿ ಕುದಿದು, ತಾಯಾದ ಅವಳು ಯಾವಾಗ ತನ್ನ ಕರ್ತವ್ಯದಿಂದ ಹೊರಗಾದಳೋ ಆಗ ಯಾವ ಗೌರವವೂ ಅವಳಿಗೆ ಸಲ್ಲತಕ್ಕದ್ದಲ್ಲವೆಂಬ ಭಾವನೆಯಿಂದ ಕುಂತಿಯನ್ನು ಕುರಿತು ಕರ್ಣನಿಗೆ ಹೇಳುವಾಗ 'ನಿನ್ನಂಬಿಕೆ' ಎನ್ನುತ್ತಾನೆ. ಸಾಮಾನ್ಯ ಸನ್ನಿವೇಶದಲ್ಲಿ ಇಲ್ಲಿ 'ನಿಮ್ಮ' ಎಂಬ ಸರ್ವನಾಮ ಬರಬೇಕಿತ್ತು.

ನುಡಿಯೆನಿದಂ ನಿನ್ನಂಬಿಕೆ
ಪಡೆಮಾತೇಂ ಕೊಂತಿ ಹರಿಯ ಮತದಿಂ ಕಾಯ
ಲ್ಕೊಡರಿಸಿ ಬಂದಳ್ ಸುತರಂ
ಕೂಡದಿರ್ ಪುರಿಗಣೆಯನೆನಿತು ಲಲ್ಲೆಸಿದೊಡಂ (೯-೭೮)

ಎಂಬ ಮಾತಿನಲ್ಲಿ 'ನಿಮ್ಮ' ಎಂಬ ಬದಲಿಗೆ 'ನಿನ್ನ' ಬಳಸಿದ್ದು ಈ ಕಾರಣದಿಂದ ಅರ್ಥಪೂರ್ಣ. ಆದರೆ ಪ್ರಥಮ ಪುರುಷದಲ್ಲಿರುವ ವ್ಯಕ್ತಿಗಳು ಮಧ್ಯಮ ಪುರುಷದ ವ್ಯಕ್ತಿಗಳಿಗಿಂತ ಕಿರಿಯರಾದಲ್ಲಿ ಮಧ್ಯಮಪುರುಷಕ್ಕೆ ಬಹುವಚನ ಆರೋಪಿತವಾಗುವುದಿಲ್ಲ. ತಂದೆ, ತಾಯಿ ಅಥವಾ ಬೇರೆ ಯಾರೇ ಹಿರಿಯರು 'ನಿಮ್ಮ ತಮ್ಮನಿಗೆ/ತಂಗಿಗೆ ಇದನ್ನು

ಕೊಡು' ಎಂದು ಹೇಳುವುದು ಸಾಧ್ಯವಿಲ್ಲ. ಉತ್ತಮ ಪುರುಷದ, ಅಂದರೆ, ಮಾತಾಡುವ ವ್ಯಕ್ತಿಗೆ, ಮಧ್ಯಮ ಪುರುಷದಲ್ಲಿ ನಿರ್ದೇಶಿತವಾದ ವ್ಯಕ್ತಿ ಹಿರಿಯನಾಗಿದ್ದರೆ ಮಾತ್ರ ಇದು ಸಾಧ್ಯ. ಕೃಷ್ಣ ಧರ್ಮರಾಯನನ್ನುದ್ದೇಶಿಸಿ ಹೇಳುವ,

೩. ನಾಲ್ಕುಂ ದೆಸೆಗೆ ಬೆಸಸಿಂ ನಿಮ್ಮನುಜರಂ...ನೀಂ ಪೆಸರ್ವೆಸರೊಳಾ ನಾಲ್ವರುಮನ್ ೬-೨೮

ಎಂಬ ಮಾತು ಈ ರೀತಿಯದು. ಹೊಸಗನ್ನಡದಲ್ಲೂ ಇದೇ ರೂಢಿಯಿದೆಯೆಂಬುದು ವಿಶದವಾದ ಸಂಗತಿಯೇ. ಹಳಗನ್ನಡದಲ್ಲಿಯೂ ಇದು ಹೀಗೆ ಇದ್ದಿರಬೇಕೆಂಬುದೂ ಸ್ಪಷ್ಟ. ಆದರೆ ಮಧ್ಯಮ ಪುರುಷದ ವ್ಯಕ್ತಿ ಉತ್ತಮ ಪುರುಷದ ವ್ಯಕ್ತಿಗಿಂತ ಕಿರಿಯನಾಗಿರುವಾಗಲೂ ವಿಕ್ರಮಾರ್ಜುನ ವಿಜಯದಲ್ಲಿ ಇದಕ್ಕೆ ವ್ಯತಿರಿಕ್ತವಾದ ಪ್ರಯೋಗವೊಂದು ಬಂದಿದೆ:

ವಿಚಿತ್ರವೀರ್ಯ ಸತ್ತ ಮೇಲೆ ವಂಶೋದ್ಧಾರಕ್ಕೆ ಮಕ್ಕಳಿಲ್ಲ; ಭೀಷ್ಮ ಪುರುಷವ್ರತವನ್ನು ಮೀರುವವನಲ್ಲ. ಆದುದರಿಂದ ಸತ್ಯವತಿ, ತನ್ನ ಮೊದಲ ಮಗನಾದ ವ್ಯಾಸನನ್ನು ನೆನೆದು ಬರಿಸುತ್ತಾಳೆ. ಅಂಬಿಕೆ, ಅಂಬಾಲಿಕೆಯರು ಗರ್ಭವತಿಯರಾಗುವಂತೆ ಮಾಡಬೇಕೆಂದು ಕೇಳಿಕೊಳ್ಳುವ ಸಂದರ್ಭದಲ್ಲಿ ಸತ್ಯವತಿ ವ್ಯಾಸನೊಡನೆ:

೪. 'ನಿಮ್ಮ ತಮ್ಮ ವಿಚಿತ್ರವೀರ್ಯನ ಕ್ಷೇತ್ರದೊಳ್...' ೧-೮೪ವ. ಎಂದು ಹೇಳುತ್ತಾಳೆ.

ತನಗೆ ಮಗನಾಗಿದ್ದರೂ, ಈಗ ಆತ ಋಷಿ. ಗೌರವ ಭಾಜನನೆಂಬ ಕಾರಣವೋ ಅಥವಾ ವಿಚಿತ್ರವೀರ್ಯ ವ್ಯಾಸನಿಗಿಂತ ಚಿಕ್ಕವನಾದರೂ, ತಮ್ಮನಾದರೂ, ಚಕ್ರವರ್ತಿಯಾಗಿದ್ದುದರಿಂದ ವ್ಯಾಸನಿಗೂ ಗೌರವಾರ್ಹನೆಂಬ ಕಾರಣದಿಂದಲೊ ಅಥವಾ ತಮ್ಮ ಎಂಬ ಪದದೊಡನೆ ಪ್ರಾಸಬದ್ಧವಾಗಿ ಸೇರಿಕೊಂಡ ಕಾರಣದಿಂದಲೋ 'ನಿಮ್ಮ' ಎಂಬ ಬಹುವಚನ ಪ್ರಯೋಗವಾಗಿದೆ.

ಹಿರಿಯರು ಕಿರಿಯರನ್ನು ಏಕವಚನದಿಂದಲೇ ಕರೆಯುವ ಸಂಪ್ರದಾಯ ಪಂಪನ ವಿಕ್ರಮಾರ್ಜುನ ವಿಜಯದಲ್ಲಿ ಸರ್ವತ್ರ ಕಂಡುಬರುತ್ತದೆ. ಪರಶುರಾಮ ಭೀಷ್ಮನನ್ನು (೧-೧೬), ಸತ್ಯವತಿ ಭೀಷ್ಮನನ್ನು (೧-೮೧), ಪರಶುರಾಮ ಕರ್ಣನನ್ನು (೧-೧೦೫ವ), ವ್ಯಾಸ ಗಾಂಧಾರಿಯನ್ನು (೧-೧೩೧), ದ್ರೋಣ ಅರ್ಜುನನನ್ನು (೨-೬೧), ದುರ್ಯೋಧನನನ್ನು (೮-೭೮), ಕರ್ಣನನ್ನು (೨-೮೨), ಭೀಷ್ಮ ಕರ್ಣನನ್ನು (೧೦-೨೩), ಶಲ್ಯ ದುರ್ಯೋಧನನನ್ನು (೧೨-೯೪, ೯೫, ೧೦೦), ದ್ರುಪದ ಅರ್ಜುನನನ್ನು (೩-೬೯) ಉದ್ದೇಶಿಸಿ ಮಾತಾಡುವಾಗಲೆಲ್ಲ ಸರ್ವನಾಮದಲ್ಲೂ, ಕ್ರಿಯಾಪದದಲ್ಲೂ ಏಕವಚನವೇ ಬಂದಿದೆ. ಅತ್ಯಂತ ಸಮೀಪಸಂಬಂಧಿಗಳಲ್ಲಿ ಈಗಲೂ ಕಿರಿಯರನ್ನು ಹಿರಿಯರಾದವರು ಉದ್ದೇಶಿಸಿ ಮಾತಾಡುವಾಗ ಏಕವಚನವೇ ಪ್ರಯೋಗವಾಗುತ್ತದೆಯ ಹಿಂದಿದ್ದಂತೆ ಕೇವಲ ವಯಸ್ಸಿನ ಅಂತರದಿಂದ ಇತರ ಹಿರಿಯರಾದವರು ಕಿರಿಯ ವಯಸ್ಸಿನವರೆಲ್ಲರನ್ನೂ ಏಕವಚನದಲ್ಲೇ ಕರೆಯುವುದು ಈಗ ರೂಢಿಯಲ್ಲಿಲ್ಲ. ಆತ್ಮೀಯತೆಯ ಅನೌಪಚಾರಿಕತೆ ದೂರವಾಗಿ, ಔಪಚಾರಿಕತೆಯೇ ಹೆಚ್ಚುತ್ತ ಬರುತ್ತಿರುವುದರಿಂದ, ಅತ್ತೆ ಮಾವಂದಿರು ಅಳಿಯನಾದವನನ್ನು, ಉಪಾಧ್ಯಾಯರು ವಿದ್ಯಾರ್ಥಿಗಳನ್ನು (ಮುಖ್ಯವಾಗಿ ಕಾಲೇಜು ತರಗತಿಗಳಿಗೆ ಬಂದ ಮೇಲೆ) ಗೌರವಾರ್ಥಕ ಬಹುವಚನದಿಂದ ಕರೆಯುವುದು ಈಗ

ಪ್ರಚಲಿತವಾಗಿದೆ. ಬಹುಶಃ ಇದೊಂದು ಹೊಸಗನ್ನಡ ಕಾಲದಲ್ಲಾದ ಸಾಂಸ್ಕೃತಿಕ ಬದಲಾವಣೆಯೆನ್ನಬೇಕು. ಪಂಪನ ವಿ.ವಿ.ದಲ್ಲಿ ಈ ಅನೌಪಚಾರಿಕ ಸರಳ ರೀತಿಯೇ ಬಳಕೆಯಲ್ಲಿರುವುದು ಕಂಡುಬರುತ್ತದೆಯಾದರೂ ಒಂದೆಡೆಯಲ್ಲಿ ಇದಕ್ಕೂ ಅಪವಾದವಿರುವಂತೆ ಕಾಣುತ್ತದೆ.

ಅರ್ಜುನ ಬ್ರಾಹ್ಮಣ ವೇಷದಲ್ಲಿದ್ದು ದ್ರೌಪದಿಯನ್ನು ಗೆದ್ದುದಕ್ಕೆ, ಕ್ಷತ್ರಿಯ ಕನ್ಯೆಯನ್ನು ಬ್ರಾಹ್ಮಣ ಪಡೆಯುತ್ತಾನೆಂದು ಕುದಿಗೊಂಡು ಅರಸರು ದ್ರುಪದನ ಮೇಲೆ ಯುದ್ಧಕ್ಕೇಳುವಲ್ಲಿ, ಅರ್ಜುನನೊಡನೆ ದ್ರುಪದ:

೫. ಧನುವಂ ನೀಂ ತೆಗೆದೆಚ್ಚು...ಅವನೋ ನೀನಲ್ಲದೆ...(೩-೬೯) ಎಂದು ಏಕವಚನ ಪ್ರಯೋಗಿಸುವುದು ರೂಢಿಯುಕ್ತವಾಗಿಯೇ ಇದೆಯಾದರೂ, ಮದುವೆಯ ಭೋಜನಾದಿಗಳು ಮುಗಿದು ಅವನನ್ನು ಸೆಜ್ಜೆಗೆ ಕಳುಹಿಸುವಾಗ,

೬. ಗುಣಾರ್ಣವನಂ ಸೆಜ್ಜೆಗೆ ಬಿಜಯಂಗೆಯ್ಯಿಂ (೩-೮೧) ಎಂದು ಗೌರವಸಂಬೋಧನೆಯಿಂದ ಹೇಳುತ್ತಾನೆ. ಬಹುಶಃ ಇಲ್ಲಿ ದ್ರೌಪದಿಯನ್ನೂ ಸೇರಿಸಿ ಹೇಳುವುದಾಗಿರಬೇಕು. ಆದುದರಿಂದ ಈ ಬಹುವಚನ ಗೌರವಾರ್ಥವಾಗಿರದೆ ಸಹಜವಾದುದಾಗಿರಬಹುದು.

## ೨.೦ ಉತ್ತಮ ಪುರುಷದ ಆರೋಪಿತ ಗೌರವ ಬಹುವಚನ

೭. ಎಮ್ಮಾಚಾರ್ಯರ್...೧-೭೦

ಪರಶುರಾಮ ಭೀಷ್ಮನೊಡನೆ ತಾನು ಹೇಳುವಂತೆ ಅಂಬಿಕೆಯನ್ನು ಮದುವೆಯಾಗುವುದಿಲ್ಲವಾದರೆ ತಾನು ಅವನಿಗೆ ಗುರುವೆಂಬುದನ್ನು ಮರೆತು ಯುದ್ಧ ಮಾಡಬೇಕೆಂದಾಗ ಹೀಗೆ ಹೇಳುತ್ತಾನೆ. ಭೀಷ್ಮನಿಗೆ ಗುರುವಾದ ಪರಶುರಾಮನ ಮೇಲಿರುವ ಗೌರವ ಭೀಷ್ಮ ಅವನೊಡನೆ ಮಾತಾಡುವಾಗ ಪರಶುರಾಮನಿಂದಲೇ 'ಎಮ್ಮ' ಎಂಬ ಸರ್ವನಾಮಕ್ಕೆ ಆರೋಪಿತವಾಗುತ್ತದೆ. ಈ ರೀತಿ ಕಿರಿಯರಾದವರು ಹಿರಿಯರಿಗೆ ಗೌರವ ತೋರುವಲ್ಲಿ, ಕಿರಿಯರಾದವರನ್ನು, ಇಲ್ಲವೇ ಇತರ ಕಾರಣಗಳಿಂದ ಕೆಳಗಣ ಸ್ತರದಲ್ಲಿರುವವರನ್ನು ನಿರ್ದೇಶಿಸುವ ಉತ್ತಮ ಪುರುಷ ಸರ್ವನಾಮಕ್ಕೆ ಗೌರವ ಬಹುವಚನ ಆರೋಪಿತವಾಗುತ್ತದೆ. ವಿ.ವಿ.ದಲ್ಲಿ ಪಂಪ ಇದನ್ನು ಎಲ್ಲೆಡೆಗಳಲ್ಲೂ ಸರಿಯಾಗಿಯೇ ಉಪಯೋಗಿಸಿದ್ದಾನೆ:

೮. ಎಮ್ಮಯ್ಯಂನಂ ಬೇಡಿರೇ....೧-೭೦ ಸತ್ಯವತಿ ಶಂತನುಗೆ,

೯. ಎಮ್ಮಣ್ಣನೆ...೩-೧೪ ಹಿಡಿಂಬೆ ಭೀಮನಿಗೆ ತನ್ನ ಅಣ್ಣನನ್ನು ಕುರಿತು,

೧೦. ಎಮ್ಮಣ್ಣನೆ ....೮-೩೩ ಭೀಮ ಹನುಮಂತನನ್ನು ಕುರಿತು,

೧೧. ಎಮ್ಮರಸರ....೮-೧೭ ಷಣ್ಮುಖ ಈಶ್ವರನನ್ನು ಕುರಿತು ಅರ್ಜುನನಿಗೆ,

೧೨. ದುಶ್ಶಳೆ ತಮ್ಮಣ್ಣನಲ್ಲಿಗೆ ವಂದು....೧೧-೧೨೨ ವ.

೧೩. ಅಟ್ಟದನೆಮ್ಮ ಭೂಭುಜಂ...೮-೮೯ ಸಂಜಯ ಕೌರವನನ್ನು ಕುರಿತು ಪಾಂಡವರಿಗೆ ಹೇಳುವಲ್ಲಿ;

ಸಾಮಾನ್ಯವಾಗಿ ತಮ್ಮ ಅಂತಸ್ತು ಗೌರವಗಳ ಅರಿವುಳ್ಳ ವ್ಯಕ್ತಿಗಳು ಮಾತನಾಡುವಾಗ ತಮಗೆ ತಾವೇ ಈ ಗೌರವಾರೋಪಿತ ಸರ್ವನಾಮ ರೂಪವನ್ನು ಪ್ರಯೋಗಿಸುವುದು ವಿ.ವಿ.ದಲ್ಲಿ ಸರ್ವತ್ರ ಕಂಡುಬರುತ್ತದೆ. ವಿಶೇಷ ಕಾರಣಗಳಿಗಾಗಿ ಕೆಲವೊಮ್ಮೆ ಏಕವಚನ ಪ್ರಯೋಗವಾಗುತ್ತದೆ.

ಋಷಿಗಳು, ಬ್ರಾಹ್ಮಣರು, ಹಿರಿಯರು, ಸಾಮಾನ್ಯವಾಗಿ ಈ ರೀತಿ ತಮಗೆ ತಾವೇ ಗೌರವವನ್ನು ಆರೋಪಿಸಿ ಮಾತಾಡುತ್ತಾರೆ.

೧೪. ಆಮುಮದಂ ನೋಡಲಾರದೆ...೬-೧೭ ವ. ನಾರದ ಯುಧಿಷ್ಠಿರನೊಡನೆ;

೧೫. ಉಪದೇಶಂಗೆಯ್ಯಲ್ ಬಂದೆವು....೭-೬೬ ವ್ಯಾಸ ಯುಧಿಷ್ಠಿರನೊಡನೆ;

೧೬. ಕೆಲವು ದೆವಸಮೆಮ್ಮ ಲೋಕದೊಳ್...೮-೭೬ ಇಂದ್ರ, ಅರ್ಜುನನೊಡನೆ;

೧೭. ಅರಿಯಿರೆ ನೀಮುಮಾಮುಮೊಡನೋದಿದೆವೆಂಬುದನಣ್ಣ..೨-೪೮ ದ್ರೋಣ ದ್ರುಪದನೊಡನೆ;

೧೮. ಎಮ್ಮನನ್ಯರವೋಲೇಂ ನೀಂ ಪ್ರಾರ್ಥಿಸಲೆವೇೞ್ಪುದೆ... ೧೦-೧೦ ಭೀಷ್ಮ ದುರ್ಯೋಧನನೊಡನೆ;

೧೯. ಎಮ್ಮ ಮಮ್ಮಂಗಮೆಮಗಮೀಗಳನುವರಂ ದೊರೆಯಾಯ್ತು...೧೪-೧೨ ಭೀಷ್ಮ ಸ್ವಗತ

೨೦. ಎಮ್ಮ ಪೆಂಡತಿಯನೀವೆನಪ್ಪೊಡೆ....೩-೨೫ ಬ್ರಾಹ್ಮಣ ಕುಂತಿಯೊಡನೆ;

೨೧. ಆಂ...ಇರ್ಪೆವು ಎಮ್ಮೊಡನೆ ನೆತ್ತಮನಾಡುವನ್...೮-೫೨ ಬ್ರಾಹ್ಮಣ ವೇಷದ ಯುಧಿಷ್ಠಿರನೊಡನೆ.

ಮಾತಾಡುವ ಸಂದರ್ಭದಲ್ಲಿ ಈ ರೀತಿ ಗೌರವ ಸೂಚಕ ಬಹುವಚನದ ಪ್ರಯೋಗವಾಗಿದೆ. ಇಷ್ಟಲ್ಲದೆ ಇತರ ಕಿರಿಯ ಪಾತ್ರಗಳೂ ಕೆಲವೊಮ್ಮೆ ಗೌರವಯುಕ್ತ ಬಹುವಚನವನ್ನು ಸೇರಿಸಿ ಮಾತಾಡುತ್ತವೆ. ಉದಾ:

೨೨. ಎಮ್ಮಂ ಪಿಡಿದೆೞೆವಂದಿನ ೭-೩೯ ದ್ರೌಪದಿ ದುರ್ಯೋಧನ, ದುಶ್ಶಾಸನರು ಗಂಧರ್ವರಿಗೆ ಸೆರೆಯಾದಾಗ, ಅವರನ್ನು ಬಿಡಿಸುವಾಗ;

೨೩. ಎಮ್ಮಂ ಕಿಱಿದಂತರಂ ಕೞಿಪಿ ಮಗುೞ್ಚಿ ೯-೬೩ ಕೃಷ್ಣ ಕರ್ಣನೊಡನೆ;

೨೪. ಎಮ್ಮಂಬುಗಳ್...೧೨-೩೯ ಅಶ್ವತ್ಥಾಮ ಸ್ವಗತ

೨೫. ಎಮ್ಮಳವೆ....೧೨-೫೪ ಕರ್ಣ ಭೀಷ್ಮನೊಡನೆ

೨೬. ಪ್ರಾಯದ ಪೆಂಪೆಮಗೆ ೧೪-೧೭ ಯುಧಿಷ್ಠಿರ ಕೃಷ್ಣನೊಡನೆ,

ಮಾತಾಡುವಾಗ ಈ ರೀತಿ ಗೌರವ ರೂಪವನ್ನು ತಮಗೆ ತಾವೇ ಆರೋಪಿಸಿ ಮಾತಾಡುವುದು ಕಾಣುತ್ತದೆ. ಋಷಿಗಳು, ಬ್ರಾಹ್ಮಣರು, ತಮ್ಮ ಮೇಲ್ಮೆಯನ್ನು ಅಂತಸ್ತನ್ನು ಸೂಚಿಸುವುದಕ್ಕೆ ಮಾತ್ರವೆಂದರೂ, ಕೆಲವು ಕ್ಷಾತ್ರ ಪಾತ್ರಗಳಲ್ಲಿ ಹಾಗೂ ಇತರ ಕಡಮೆ ತರಗತಿಯ ಪಾತ್ರಗಳಲ್ಲಿ ಅವು ಅಂತಹ ಅಹಂಭಾವದ ಪ್ರದರ್ಶನಕ್ಕಲ್ಲ, ವಿನಯ ಪ್ರದರ್ಶನಕ್ಕಾಗಿ ಬರುತ್ತವೆಂಬುದು ಗಮನಾರ್ಹ. ಮೇಲೆ ೨೦ರಲ್ಲಿ ಬ್ರಾಹ್ಮಣ ಕುಂತಿಯೊಡನೆ

ಎಮ್ಮ ಪೆಂಡತಿಯನೀವೆನಪ್ಪೊಡೆ'' ಎಂದು ಹೇಳುವ ಪ್ರಯೋಗ ಕುತೂಹಲಕಾರಿಯಾಗಿದೆ. 'ಎಮ್ಮ' ಎಂಬುದು ವ್ಯಾವರ್ತಕ (Exclusive) ರೂಪವಾಗಿರಬೇಕು. ಹೆಂಡತಿ ಒಬ್ಬನಿಗೆ ಮಾತ್ರ ಹೆಂಡತಿ (ಪಾಂಡವರಲ್ಲಿ ಹೊರತು) ಎಂದಿರುವಾಗ ಅಲ್ಲಿ ಉತ್ತಮಪುರುಷದಲ್ಲಿ ಬಹುವಚನ ಬರುವಂತಿಲ್ಲ. ಹೊಸಗನ್ನಡದಲ್ಲೂ 'ನಮ್ಮ ತಂದೆ' 'ನಮ್ಮ ತಾಯಿ' 'ನಮ್ಮ ಅಣ್ಣ' ಎಂಬಿತ್ಯಾದಿಯಾಗಿ ಹೇಳುವಾಗ ಎದುರಿಗಿದ್ದ ವ್ಯಕ್ತಿಗೆ ಆ ಸಂಬಂಧವಿಲ್ಲದೆಯೂ 'ನಮ್ಮ' ಎಂಬ ಗೌರವರೂಪವೇ ಪ್ರಯೋಗದಲ್ಲಿ ಬರಬಹುದು. ಆದರೆ 'ನಮ್ಮ ಹೆಂಡತಿ' ಎಂದು ಕನ್ನಡ ಗೊತ್ತಿರುವವರು ಯಾರೂ ಹೇಳುವುದು ಸಾಧ್ಯವಿಲ್ಲ. ಅದೇ ರೀತಿ, ಗಂಡನ ಮೇಲಣ ಗೌರವದಿಂದ ಹೆಂಡತಿಯಾದವಳು 'ನಮ್ಮ ಗಂಡ' ಎಂದೂ ಹೇಳಲಾರಳು. ಪಂಪ ಇಲ್ಲಿ ಮಾಡಿದ ಪ್ರಯೋಗಕ್ಕೆ ವ್ಯಾವರ್ಥಕ ಮತ್ತು ಅಭಿವ್ಯಾಪಕ ಸರ್ವನಾಮಗಳು ಅವನ ಕಾಲದಲ್ಲಿ ಪ್ರಯೋಗದಲ್ಲಿದ್ದುದೇ ಕಾರಣವಾಗಿರಬೇಕು. ಅಲ್ಲದೆ ಈ ಮಾತನಾಡುವ ಬ್ರಾಹ್ಮಣನೆದುರಿಗಿರುವ ಕುಂತಿಯೂ ಒಬ್ಬ ಹೆಂಗಸಾದುದರಿಂದ ಅಪಾರ್ಥಕ್ಕೆ ದಾರಿಯಾಗದಿರುವುದು ಹಾಗೂ ಮಾತಾಡುವವನು ಉಚ್ಚ ಕುಲವಾದ ಬ್ರಾಹ್ಮಣನೆಂಬ ಅರಿವಿರುವುದೂ ಕಾರಣವಾಗಿರಬೇಕು. ಅಭಿವ್ಯಾಪಕ ಮತ್ತು ವ್ಯಾವರ್ತಕ ವ್ಯತ್ಯಾಸ ಇಂದು ಕನ್ನಡದಲ್ಲಿ ಅಳಿಸಿ ಹೋಗಿದೆ. ಆದುದರಿಂದ ಎಲ್ಲೆಲ್ಲಿ 'ಎಮ್ಮ' ಎಂಬ ರೂಪ ಬಳಕೆಯಾಗುತ್ತಿತ್ತೋ, ಅಲ್ಲೆಲ್ಲ ಇಂದು 'ನಮ್ಮ' ಎಂಬ ಪ್ರಯೋಗವಾಗುತ್ತದೆ. ಈ ಕಾರಣದಿಂದಲೇ 'ಎಮ್ಮ ತಂದೆಗಳ್' 'ಎಮ್ಮ ತಾಯ್ಗಳ್' ಎಂಬ ಹಳಗನ್ನಡ ಸ್ಥಾನದಲ್ಲಿ 'ನಮ್ಮ ತಂದೆಯವರು' 'ನಮ್ಮ ತಾಯಿಯವರು' ಎಂದು ಇಂದಿನ ಕನ್ನಡದಲ್ಲಿ ಪ್ರಯೋಗವಿದೆ. ಹೀಗೆ 'ಎಮ್ಮ ಪೆಂಡತಿ' ಎಂಬುದನ್ನು ಹೊಸಗನ್ನಡಕ್ಕೆ ಪರಿವರ್ತಿಸಿ 'ನಮ್ಮ ಹೆಂಡತಿ' ಎಂದು ಬಿಟ್ಟರೆ ಅಪಾರ್ಥಕ್ಕೆ ಮತ್ತು ಅಪಹಾಸ್ಯಕ್ಕೆ ದಾರಿಯಾಗುತ್ತದೆ. ತಮ್ಮ ಹೆಂಡತಿಯನ್ನು ಕುರಿತು ಇತರರೆದುರು ಮಾತಾಡುವ ಸಂದರ್ಭದಲ್ಲಿ ಗೌರವಯುಕ್ತವಾಗಿ ಪದಪ್ರಯೋಗ ಮಾಡುವುದು ಈಗಿನ ಸುಧಾರಿತರಲ್ಲಿ ರೂಢಿಯಾಗುತ್ತ ಇದೆ. ಆದರೆ ಅಂತಹ ಸಂದರ್ಭದಲ್ಲಿ 'ನಮ್ಮ' ಎಂಬ ಸರ್ವನಾಮ ರೂಪ ಮಾತ್ರ ಪ್ರಯೋಗವಾಗದು.

ಕ್ಷಾತ್ರ ಪಾತ್ರಗಳಾದ ಭೀಷ್ಮ, ಕರ್ಣ ಮುಂತಾದವರ ಮಾತಿನಲ್ಲಿ ಈ ಸರ್ವನಾಮಗಳನ್ನು ಪಂಪ ಕ್ರಮವರಿತು ಉಪಯೋಗಿಸಿದ್ದಾನೆ. ವಿನಯಪೂರ್ವಕ ಅವರಲ್ಲಿ ಮಾತಾಡುವಾಗ ಉತ್ತಮ ಪುರುಷ ಸರ್ವನಾಮಕ್ಕೆ ಬಹುವಚನ ಬರುತ್ತದೆ. (೯), (೧೦), (೧೭), (೨೫) ಮತ್ತು (೨೬)ರಲ್ಲಿ ಇದನ್ನು ನೋಡುತ್ತೇವೆ. ಇತರರೆದುರಲ್ಲಿ ವಿನಯ ತೋರಿಸದೆ, ತಮ್ಮ ಹೆಮ್ಮೆಯನ್ನು, ಅಭಿಮಾನವನ್ನು ಪ್ರದರ್ಶಿಸಲು ಅಗತ್ಯ ಕಂಡಾಗ ಅಥವಾ, ಏಕಾಂತದಲ್ಲಿ ಈ ಸರ್ವನಾಮಕ್ಕೆ ಏಕವಚನವೇ ಬರುತ್ತದೆ. ಭೀಷ್ಮ, ದುರ್ಯೋಧನನ ಉದ್ಧಟತನವನ್ನು ಸಹಿಸದೆ, ಅವನನ್ನು ಹದಕ್ಕೆ ತರಬೇಕೆಂದಾಗ;

೨೮. ಆಂ ತಡೆದಿರ್ಪೆನೆ...೪-೬೭.

೨೯. ಎನ್ನ ಕೊಟ್ಟುದನೆ ಕೊಂಡು...೪-೭ ಎಂದು ಗದರಿಸುತ್ತಾನೆ. ಕರ್ಣ ಹಂಗಿಸಿ ಸಭಾಮಧ್ಯದಲ್ಲಿ ಅವಹೇಳನ ಮಾಡಿದಾಗ, ತಾಳ್ಮೆ ತಪ್ಪದೆಯೂ ಇರುತ್ತ ಅವನು ಮಾತಾಡುವ ಮಾರ್ಮಿಕ ಮಾತುಗಳಲ್ಲಿ:

೩೦. ನಿನಗುಳ್ಳನಿತೇನೆನಗುಂಟೆ ೧೦-೨೩

೩೧. ಎನ್ನ ನುಡಿಯಂ ಕೇಳಿಂ ೧೦-೨೪ ಎಂದು ಘೋಷಿಸುತ್ತಾನೆ.

ಎಲ್ಲರೆದುರಿನಲ್ಲಿ ಬಹಿರಂಗವಾಗಿ, ತನಗೆ ಏಕವಚನವನ್ನು ಭೀಷ್ಮ ಬಳಸಿದುದು ಇದೊಂದೇ ಸಾರಿ. ಏಕಾಂತದಲ್ಲಿ ಮತ್ತು ಅತ್ಯಂತ ಆತ್ಮೀಯ ಸಂದರ್ಭದಲ್ಲಿ ತನ್ನ ಮನಸ್ಸಿನ ತಳಮಳವನ್ನು ಸೂಚಿಸುವೆಡೆಯಲ್ಲಿ ಮಾತ್ರ ಆತನ ಮಾತಿನಲ್ಲಿ ಉತ್ತಮ ಪುರುಷ ಸರ್ವನಾಮದಲ್ಲಿ ಏಕವಚನವೇ ಪ್ರಯೋಗವಾಗುತ್ತದೆ:

೩೨. ಎನ್ನನೆ ನಚ್ಚಿದನನುವರದೊಳ್ ೧೦-೧೧ ಸ್ವಗತ

೩೩. ಎನ್ನಯ ಮಕ್ಕಳೊಳಂ ಎನ್ನ ಮೊಮ್ಮಕ್ಕಳೊಳಂ ೧೦-೧೧ಸ್ವಗತ

೩೪. ಮಾರ್ಕೊಳ್ವರೆನ್ನನ್...೧೦-೧೧ ಸ್ವಗತ

೩೫. ಸಾವೆನಗಪ್ಪುದು ೧೧-೩೨ ಭೀಷ್ಮ ಯುಧಿಷ್ಠಿರನೊಡನೆ

೩೬. ಎನ್ನದಟುಮಳುರ್ಕೆಯುಂ ಪಿರಿದು ೧೧-೪೫ ಸ್ವಗತ

೩೭. ಎನ್ನೊಡವೋಕೆ ೧೧-೪೯ ದುರ್ಯೋಧನನೊಡನೆ

ಹೀಗೆ ಏಕಾಂತದಲ್ಲಿ, ಸ್ವಗತವಾಗಿ ಹಾಗೂ, ಮೊಮ್ಮಕ್ಕಳಾದ ಧರ್ಮರಾಯ, ದುರ್ಯೋಧನರೊಡನೆ ಮಾತಾಡುವ ಸಂದರ್ಭದಲ್ಲಿ, ಭೀಷ್ಮ ತನ್ನ ಬಗ್ಗೆ ಏಕವಚನವನ್ನು ಪ್ರಯೋಗಿಸುತ್ತಾನೆ. ಇಂತಹ ಪ್ರಯೋಗಗಳು ಪಾತ್ರ ಸಹಜವಾಗಿವೆ. ಸಂದರ್ಭಕ್ಕೆ ಅರ್ಥ ಶೋಭೆಯನ್ನು ಕೊಡುತ್ತವೆ.

ಇನ್ನುಳಿದ ಕ್ಷಾತ್ರ ಪಾತ್ರಗಳು, ಭೀಷ್ಮನ ಅಂತಸ್ತಿಗಿಂತ ಕಡಿಮೆಯಾದವುಗಳೆಲ್ಲ ಮಾತಾಡುವಾಗ ಅಲ್ಲಿ ಏಕವಚನವನ್ನೇ ಪಂಪ ಪ್ರಯೋಗಿಸಿದ್ದಾನೆ. ಬಕ, ಅಂಗದರ್ಪಣ, ಶಿಶುಪಾಲಾದಿಗಳು ತಮ್ಮ ಅಹಂಭಾವ, ದರ್ಪಗಳನ್ನು ಪ್ರದರ್ಶಿಸುವ ಹಾಗೂ ಯಾರಿಗೂ ಗೌರವ ತೋರದ, ಸ್ವಭಾವದವುಗಳು. ಈ ಸ್ವಭಾವ ಆಯಾ ಪಾತ್ರಗಳ ಮಾತಿನಲ್ಲಿ ಸ್ಫುಟವಾಗಿ ವ್ಯಕ್ತವಾಗುವಂತೆ ಅವುಗಳ ಬಾಯಲ್ಲೆಲ್ಲ ಉತ್ತಮ ಪುರುಷ ಏಕವಚನವೇ ಬರುವಂತೆ ಪಂಪ ನೋಡಿಕೊಂಡಿದ್ದಾನೆ. 'ಕುಲಮಂ ನಾಲಗೆ ತುಬ್ಬುವ ವೋಲ್' ಎಂಬ ಅವನ ಮಾತು ಸಾರ್ಥಕವಾಗುವಂತೆ ನೋಡಿಕೊಂಡಿದ್ದಾನೆ.

೩೮. ಎನ್ನುಮನಿಂತು ಸಮೆಯೆ ತುತ್ತುಗುಂ ೩-೨೯ ವ. ಬಕ. ಸ್ವಗತ.

೩೯. ಬನಮೆನ್ನಾಳ್ವ ಬನಂ ೩-೩೪ ಅಂಗದರ್ಪಣ ಅರ್ಜುನನಿಗೆ

೪೦. ಆನಿರೆ...೬-೪೭ ಶಿಶುಪಾಲ ಧರ್ಮರಾಯ, ಕೃಷ್ಣನಿಗೆ ರಾಜಸೂಯದಲ್ಲಿ ಅಗ್ರಪೂಜೆಯನ್ನು ಕೊಡುವುದನ್ನು ಆಕ್ಷೇಪಿಸುವಾಗ-ಏಕವಚನವೇ ಪ್ರಯೋಗವಾಗಿದೆ. ಅದೇ ರೀತಿ ಅಶ್ವತ್ಥಾಮನೂ ಸಿಟ್ಟಿನ ಸಂದರ್ಭದಲ್ಲಿ ಏಕವಚನದಿಂದ,

೪೧. ಆನಿರೆ ನೀನೀ ಸೂತಸುತಂಗೆಡೆಗೊಂಡು ೧೨-೪೩ ಎಂದೆನ್ನುತ್ತಾನೆ.

ಗೌರವ, ಮರ್ಯಾದೆಯನ್ನು ಮೀರದ ಪಾತ್ರಗಳಲ್ಲಿಯೂ ಸಂದರ್ಭಕ್ಕನುಸರಿಸಿ, ಮಾತಿನಲ್ಲಿ ಏಕವಚನ ಬರಬೇಕಾದ ನಿರ್ಬಂಧವಿರುವುದನ್ನು ಭೀಷ್ಮನ ಪಾತ್ರ ಸನ್ನಿವೇಶದಲ್ಲಿ ನೋಡಿದ್ದೇವೆ. ದ್ರುಪದ ದ್ರೌಪದಿಯ ಸ್ವಯಂವರದಲ್ಲಿ ನೆರೆದ ರಾಜರನ್ನುದ್ದೇಶಿಸಿ,

ಬಹಿರಂಗ ಘೋಷಣೆ ಮಾಡುವಾಗ:

೪೨. ಎನ್ನ ಮಗಳಂ ಮದುವೆಯಪ್ಪುದು ೩-೫೭ವ. ಎನ್ನುತ್ತಾನೆ. ವಿನಯ, ಗೌರವ ಹಾಗೂ ಅಹಂಕಾರ ಔದ್ಧತ್ಯಗಳ ಮಿಶ್ರವ್ಯಕ್ತಿತ್ವದ ಕರ್ಣ, ಭೀಷ್ಮನಿಗೆ ಸೇನಾಧಿಪತಿಯ ಪಟ್ಟ ಕಟ್ಟುವುದೆಂದು ನಿಶ್ಚಯವಾದಾಗ, ನೋವು, ನಿರಾಶೆ, ಸಂಕಟಗಳ ತುಮುಲದಲ್ಲಿ,

೪೩. ..ಎನಗೆ ಪಟ್ಟಂಗಟ್ಟಾ ೧೦-೧೭

ಎಂದು ಏಕವಚನ ಪ್ರಯೋಗಿಸುವುದು ಸಂದರ್ಭೋಚಿತವಾಗಿದೆ. ಇಂತಹ ಕರ್ಣನೇ ಶರಶಯ್ಯಾಗತನಾದ ಭೀಷ್ಮನಲ್ಲಿಗೆ ಏಕಾಂಗಿಯಾಗಿ ಬಂದು, ಅತ್ಯಂತ ವಿನಯದಿಂದ ಕೂಡಿ, ಹಾರ್ದಿಕವಾಗಿ ಮಾತಾಡುವಾಗ, ಭೀಷ್ಮನ ಮೇಲೆ ತನಗೆ ಉಕ್ಕಿ ಬಂದ ಗೌರವವನ್ನು ಸಹಜವಾಗಿ ವ್ಯಕ್ತಮಾಡುವಾಗ:

೪೪. ನಿಮ್ಮಡಿಯಂ ನೋಯೆ ನುಡಿದೆಂ

ಎಂದು, ಅಂದರೆ, ಈಗ ಪರಮಪೂಜ್ಯರಾದವರಿಗೆ ಹೇಳುವಂತೆ ತಮ್ಮ ಪಾದನೋಯುವಂತೆ...ಎಂಬುದಾಗಿ ಮಾತ್ರವಲ್ಲದೆ, ತನ್ನನ್ನು ಕುರಿತು,

೨೫ ಎ....ಎಮ್ಮಳವೆ? ೧೨-೫೪

೨೬ ಎ...ಎಮ್ಮಂದಿಗರ ೧೨-೫೫ ಎಂದು ಬಹುವಚನ ಪ್ರಯೋಗಿಸುವುದು ವಿನಯ ಕಾರಣದಿಂದಲೆ

ದ್ರೋಣ ಮಾತಾಡುವ ಸಂದರ್ಭಗಳಲ್ಲೆಲ್ಲ ತನ್ನನ್ನು ಏಕವಚನದಲ್ಲೇ ಹೇಳಿಕೊಳ್ಳುವುದು ಗಮನಾರ್ಹ. ಜಾತಿಯಿಂದ ಬ್ರಾಹ್ಮಣನಾಗಿದ್ದ ಆತ ವೃತ್ತಿಯಿಂದ ಕ್ಷತ್ರಿಯನೇ ಆದ. ಅವನ ಮಗನಾದ ಅಶ್ವತ್ಥಾಮ ತಾನು ಬ್ರಾಹ್ಮಣ, ಮೇಲಂತಸ್ತಿಗೆ ಸೇರಿದವನೆಂಬುದನ್ನು ಮರೆತವನಲ್ಲ. ದುಃಖ ಮತ್ತು ಕೋಪಗಳಲ್ಲಿ ಮಾತ್ರ ಅಶ್ವತ್ಥಾಮ ತನ್ನನ್ನು ಕುರಿತು ಏಕವಚನದಲ್ಲಿ ಮಾತಾಡುತ್ತಾನೆ ಹೊರತು, ಉಳಿದೆಡೆಗಳಲ್ಲಿ ಬಹುವಚನಗಳಲ್ಲಿಯೇ ಮಾತಾಡುತ್ತಾನೆ. ಅವನ ತಂದೆಯಾದ ದ್ರೋಣ ಒಮ್ಮೆ ಮಾತ್ರ ತನಗೆ ಬಹುವಚನವನ್ನು ಪ್ರಯೋಗಿಸುತ್ತಾನೆ. ತನ್ನ ಬಾಲ್ಯದ ಸಹಾಧ್ಯಾಯಿಯಾಗಿದ್ದ, ಈಗ ರಾಜನಾಗಿದ್ದ, ದ್ರುಪದನನ್ನು ನೋಡಲು ಆತ ಬಂದಿದ್ದಾನೆ. ತನಗೆ ಅಡಸಿದ ಬಡತನ ತನ್ನ ಗೆಳೆಯನಿಂದ ನಿವಾರಣೆಯಾಗಬಹುದೆಂಬ ನಿರೀಕ್ಷೆಯೊಂದು ಕಡೆ; ಅಲ್ಲದೆ ಬಾಲ್ಯದಲ್ಲಿ ಒಂದಾಗಿದ್ದ ಗೆಳೆತನ, ಎಷ್ಟೋ ಕಾಲದಿಂದ ಅಗಲಿದ್ದು ಮಿತ್ರನನ್ನು ನೋಡುವ ಸಂತೋಷ. ಇದರಿಂದ ಮೃದುವಾಗಿದ್ದ ಅವನು ತನ್ನೆಲ್ಲ ಪ್ರೀತಿಯೇ ಹೊರಸೂಸುವಂತೆ, ತನ್ನ ಪರಿಚಯ ದ್ರುಪದನಿಗೆ ಮರೆತು ಹೋಗಿದ್ದಿರಬಹುದು-ತಾನದನ್ನು ನೆನಪು ಮಾಡಿದರೆ, ಗುರುತಿಸಬಹುದು-ಎಂದು 'ಅರಿಯಿರೆ ನೀಮುಮಾಮುಮೊಡನೋದಿದೆವೆಂಬುದನಣ್ಣ'(೨-೪೮) ಎಂದು ತನ್ನನ್ನು ಮಾತ್ರವಲ್ಲ, ದ್ರುಪದನನ್ನೂ ಬಹುವಚನದ ಗೌರವದಿಂದಲೇ ಸಂಬೋಧಿಸುತ್ತಾನೆ. ಆದರೆ, ಇದಕ್ಕೆ ದೊರಕಿದ ಅವಮಾನದ ಪ್ರತಿಕ್ರಿಯೆಯಿಂದ ಭುಗಿಲೆದ್ದ ಕೋಪದಿಂದ ಮಾತಾಡುವ ಮುಂದಣ ಮಾತುಗಳೆಲ್ಲ ಏಕವಚನದಿಂದಲೇ ಕೂಡಿದೆ.

ಭೀಷ್ಮ ಮತ್ತು ದ್ರೋಣರು ನೇರವಾಗಿ ಎದುರೆದುರು ಮಾತಾಡಿಕೊಳ್ಳುವ ಸಂದರ್ಭ ವಿ.ವಿ.ದಲ್ಲಿ ಒಮ್ಮೆ ಮಾತ್ರ. ಕೌರವ ಪಾಂಡವರಿಗೆ ಬಿಲ್ಲು ವಿದ್ಯೆ ಕಲಿಸಲು ಗುರುವಾಗುವಂತೆ

ಭೀಷ್ಮ ದ್ರೋಣನನ್ನು ಕೇಳಿಕೊಳ್ಳುವ ಸಂದರ್ಭದಲ್ಲಿ ಭೀಷ್ಮ:

೪೫. ನೀನಾಗು ಕುಂಭೋದ್ಭವಾ ೨-೫೩ ಎಂದು ಏಕವಚನದಿಂದಲೇ ಸಂಬೋಧಿಸುವುದು ಗಮನಾರ್ಹ. ಕ್ಷತ್ರಿಯನಾದ ಭೀಷ್ಮ, ಬ್ರಾಹ್ಮಣನಾದ ದ್ರೋಣನನ್ನು ಏಕವಚನದಿಂದ ಕರೆಯುತ್ತಾನೆಂಬುದು ಸಾಮಾಜಿಕ ನೆಲೆಯಿಂದ ವಿಪರ್ಯಾಸವಾದರೂ, ಅದರಿಂದ ಭೀಷ್ಮನ ಮಹೋನ್ನತ ವ್ಯಕ್ತಿತ್ವ ಧ್ವನಿಸುವಂತೆ ಪಂಪ ಮಾಡಿದ್ದಾನೆ. ದ್ರೋಣ ನೇರವಾಗಿ ಭೀಷ್ಮನೊಡನೆ ಮಾತಾಡುವ ಒಂದೇ ಒಂದು ಸಂದರ್ಭದಲ್ಲಿ ಭೀಷ್ಮನನ್ನು ದ್ರೋಣ ಗೌರವ ಸಂಬೋಧನೆಯಿಂದಲೇ,

೪೬. ..ಏಂ ಕಿನಿಸದಿರಿಂ ೨-೫೫ ಎಂದು ಮಾತಾಡಿಸುತ್ತಾನೆ. ಉಳಿದೆಡೆಗಳಲ್ಲೆಲ್ಲ ದ್ರೋಣ ಭೀಷ್ಮನ ಮೇಲೆ ಅಪಾರ ಗೌರವವನ್ನು ತೋರುತ್ತಾನೆ. ಬೇರೊಬ್ಬರಿಗೆ ಅವನನ್ನು ಕುರಿತು ಹೇಳುವಾಗಲೂ ಭೀಷ್ಮನಿಗೆ ಗೌರವ ಸೂಚಕ ಬಹುವಚನವನ್ನೇ ಉಪಯೋಗಿಸುತ್ತಾನೆ.

ಅರ್ಜುನ ದ್ರುಪದನನ್ನು ಸೆರೆ ಹಿಡಿದು ತಂದು ತನ್ನ ಮಂಚದ ಕಾಲಿಗೆ ಕಟ್ಟಿದಾಗ ಅವನನ್ನು ಅವಮಾನಪಡಿಸಲು ಬೇಕೆಂತಲೇ ದ್ರುಪದನಿಗೆ ಬಹುವಚನವನ್ನು ಪ್ರಯೋಗಿಸುತ್ತಾನೆ. (೨-೬೩, ೬೪). ಇಷ್ಟನ್ನು ಬಿಟ್ಟರೆ ದ್ರೋಣ, ಉಳಿದ ಕ್ಷಾತ್ರ ಪಾತ್ರಗಳಂತೆಯೇ ತನ್ನನ್ನು ಏಕವಚನದಲ್ಲಿಯೇ ಸಂಬೋಧಿಸುವುದು ಕಂಡು ಬರುತ್ತದೆ:-

೫೭. ಎನಗೆ ವಿದ್ಯಾಧನಮೆ ಧನಮಪ್ಪುದಱಿಂ ೨-೪೬, ವ. ಪರಶುರಾಮನೊಡನೆ,

೪೮. ಎನ್ನ ಚಟ್ಟರಿಂ ತಳವೆಳಗಾಗಿ ಕಟ್ಟಿಸದೆ ಮಾಣ್ದೊಡೆ ೨-೫೦ ದ್ರುಪದನನ್ನುದ್ದೇಶಿಸಿ,

೪೯. ಎನ್ನ ಚಟ್ಟರೊಳೀತನೆ ಜೆಟ್ಟಿಗನೆಂದು ೨-೬೧, ಅರ್ಜುನನನ್ನುದ್ದೇಶಿಸಿ,

೫೦. ಎನಗೆ ಸಂತಸಮಪ್ಪಿನಂ ೨-೬೭ ಅರ್ಜುನನನ್ನುದ್ದೇಶಿಸಿ,

೫೧. ಮೆಚ್ಚಿದಪ್ಪೆನೆನ್ನ ವಿದ್ದೆಯ ೨-೬೫ ಭೀಷ್ಮ, ಧೃತರಾಷ್ಟ್ರರನ್ನುದ್ದೇಶಿಸಿ,

೫೨. ಎನಗಲ್ತಾರ್ಗಮಸಾಧ್ಯನಲ್ತೆ ವಿಜಯಂ ೧೧-೮೪ ದುರ್ಯೋಧನನನ್ನುದ್ದೇಶಿಸಿ,

೫೩. ಸಮರಕೆನ್ನೊಡನಂಜಿ ಪೋದೆ ೧೧-೧೩೦ ಅರ್ಜುನನನ್ನುದ್ದೇಶಿಸಿ,

೫೪. ಸಿಂಧುಕ್ಷಿತಿಪನೇನಾದಂ ರಣದೊಳದನೆ ಪೋಗಾನುಮಪ್ಪೆಂ ೧೧-೧೨೬ ದುರ್ಯೋಧನನನ್ನುದ್ದೇಶಿಸಿ,

೫೫. ಎನಗಾತನಸಾಧ್ಯನವಧ್ಯನಾನುಮೀ ಪೊರೆಯೊಳೆ ನಿಂದು ಕಾದಿದಪೆನ್... ಎನ್ನವರೂಥ ಸೂತ...೧೧-೧೩೮ ದುರ್ಯೋಧನನನ್ನುದ್ದೇಶಿಸಿ,

೫೬. ಕಮ್ಮಱಿಯೊವಜಂ ಬಿಲ್ಲೊವಜನೆಂಬುದಂ ಮಾಡುವೆನೇ ೧೨-೩ ಸ್ವಗತ

೫೭. ನುಡಿದುದನೀಗಳ್ ತಪ್ಪುವೆನ....ತಪ್ಪದು ವಲಮೆನ್ನ ನುಡಿಯುಮನ್ನೆಚ್ಚಂಬುಂ ೧೨-೪ ಸ್ವಗತ

೫೮. ರಣದಲ್ಲಿ ಮುನ್ನೆ ಬಿಲ್ವಿಸುಟನಿದನಂತು ಪೇಟ್ ಪಿಡಿವೆನಿನ್...೧೨-೨೯

ಇದಿಷ್ಟು ಅವನು ತನ್ನನ್ನು ಕುರಿತು ಮಾತನಾಡುವ ಸಂದರ್ಭ. ತನ್ನ ವ್ಯಕ್ತಿತ್ವದ ಬಗ್ಗೆ ತನ್ನ ಮಗನೇ ಆದ ಅಶ್ವತ್ಥಾಮನಿಗಿರುವ ಬ್ರಾಹ್ಮಣಿಕೆಯನ್ನು ದ್ರೋಣ ಪ್ರದರ್ಶಿಸಲಿಲ್ಲ. ಕೋಲ ಗುರುವಾದ ಅವನು, ತನ್ನ ಕ್ಷಾತ್ರಗುಣಕ್ಕನುಗುಣವಾಗಿ, ನಡೆದಿದ್ದಾನೆ ಮಾತ್ರವಲ್ಲ ನುಡಿದಿದ್ದಾನೆ. ಹೀಗೆ ನುಡಿಸುವುದರಿಂದ ಪಂಪ ಸೂಕ್ಷ್ಮವಾಗಿ ಅವನ ಪಾತ್ರ ಚಿತ್ರಣ ಮಾಡಿದ್ದಾನೆಂದು ಬೆರಗಾಗುವಂತಾಗುತ್ತದೆ.

### ೩.೦ ಮಧ್ಯಮ ಪುರುಷ ಸರ್ವನಾಮದಲ್ಲಿ ಆರೋಪಿತ ಗೌರವ ವಚನ

ಸಾಮಾಜಿಕ ಅಂತಸ್ತನ್ನು ಸರಿಯಾಗಿ ಮಾತಿನಲ್ಲೂ ಪ್ರತಿಬಿಂಬಿಸುವುದು ಮಧ್ಯಮ ಪುರುಷ ಸರ್ವನಾಮದಲ್ಲಿ. ಇದನ್ನೂ ಪಂಪಕವಿ ಸರಿಯಾಗಿಯೇ ಬಳಸಿದ್ದಾನೆ. ಉತ್ತಮ ಪುರುಷದಲ್ಲಿ ಆಗುವಂತೆ ಇದರಲ್ಲೂ ಪ್ರಥಮ ಪುರುಷದ ವ್ಯಕ್ತಿ ಮಧ್ಯಮ ಪುರುಷದ ವ್ಯಕ್ತಿಗೆ ಗೌರವಾರ್ಹನಾಗಿದ್ದಾಗ, ಗೌರವದ ಬಹುವಚನ ಮಧ್ಯಮ ಪುರುಷಕ್ಕೆ ಆರೋಪಿತವಾಗುವ ಉದಾಹರಣೆಯಿದೆ. ಸಮಾಜದಲ್ಲಿ ಇದೊಂದು ರೂಢವಾದ ಸಂಪ್ರದಾಯ. ಇದಕ್ಕೆ ಪಂಪನ ವಿ.ವಿ.ದಲ್ಲಿ ಎರಡು ಉದಾಹರಣೆಗಳು ದೊರೆಯುತ್ತವೆ:

೫೯ ಪಿಡಿದುಯ್ದುದು ಗಡ-ನಿಮ್ಮಣ್ಣನಂ ಸುಯೋಧನನಂ ೭-೩೭ ಯುಧಿಷ್ಠಿರ ಅರ್ಜುನನಿಗೆ ಹೇಳುವಾಗ,

೬೦ ನಿಮ್ಮಣ್ಣನಪ್ಪಣುವನೆನಾನಪ್ಪೆನ್ ೮-೩೩, ಹನುಮಂತ ಭೀಮನಿಗೆ ಹೇಳುವುದು, ಕುಂತಿ ಕರ್ಣನ ವಿಚಾರ ಯುಧಿಷ್ಠಿರಾದಿಗಳಿಗೆ ತಿಳಿಸುವಾಗ ಹೇಳುವ,

೬೧ ನಿಮ್ಮಣನ್...ನಿಮ್ಮಯ ಮೋಹದಿಂದೀತಂಗೆ...೧೪-೯, ಎಂಬಲ್ಲಿ, ನಿಜವಾದ ಬಹುವಚನ ಹಾಗೂ ಗೌರವ ಬಹುವಚನಗಳು ಏಕೀಭವಿಸಿವೆಯೆನ್ನಬೇಕು.

ಹತ್ತಿರದ ಸಂಬಂಧಿಗಳಾದ ತಂದೆ ಮಕ್ಕಳಲ್ಲಿ, ಅಜ್ಜ ಮೊಮ್ಮಕ್ಕಳಲ್ಲಿ ಸರ್ವತ್ರ ಏಕವಚನ ಪ್ರಯೋಗವಾಗುವುದು ಈಗಲೂ ಸುಧಾರಿತರಲ್ಲದವರಲ್ಲಿ ಬಳಕೆಯಾಗಿದ್ದರೂ, ಸುಧಾರಣೆ ಹೊಂದಿದವರಲ್ಲಿ ಇದು ಈಗ ವ್ಯತ್ಯಸ್ತವಾಗಿದೆ. ಮಕ್ಕಳು ತಂದೆಯನ್ನು ಗೌರವ ಬಹುವಚನದಲ್ಲಿ, ತಾಯನ್ನು ಏಕವಚನದಲ್ಲಿ ಕರೆಯುತ್ತಾರೆ. ಅಣ್ಣ ಅಕ್ಕಂದಿರನ್ನು ತಮ್ಮ ತಂಗಿಯರು ಏಕವಚನದಲ್ಲಿ, ಅತ್ತಿಗೆ ಭಾವಂದಿರನ್ನು ಬಹುವಚನದಲ್ಲಿ ಕೆರಯುವುದು ರೂಢಿ. ತಂಗಿಯ ಗಂಡನನ್ನು ಅಥವಾ ಹೆಂಡತಿಯ ತಮ್ಮನನ್ನು ಗೌರವ ಬಹುವಚನದಲ್ಲಿ ಕರೆಯುವುದು ಅಗತ್ಯವಿಲ್ಲದಿದ್ದರೂ, ಹಾಗೆ ಕರೆಯುವುದು ರೂಢಿಯಾಗುತ್ತಿದೆ. ಅತ್ತೆ ಮಾವಂದಿರು ಮಗಳ ಗಂಡನನ್ನು ಏಕವಚನದಲ್ಲಿ ಕರೆಯುವುದು ಕ್ರಮವಾದರೂ, ಈಗ ಆ ಕ್ರಮ ಬದಲಾಗುತ್ತ ಗೌರವ ಬಹುವಚನ ಬಳಕೆಗೆ ಬರುತ್ತಾ ಇದೆ. ಪಂಪ ವ್ಯಕ್ತಿಗಳ ವಯಸ್ಸು ಮತ್ತು ಅಂತಸ್ತಿಗನುಗುಣವಾಗಿಯೇ, ಮಧ್ಯಮ ಪುರುಷದಲ್ಲಿ ಗೌರವ ಬಹುವಚನ ಮತ್ತು ಏಕವಚನವನ್ನು ಬಳಸುತ್ತಾನೆ. ಇದೂ ಅಂದಿನ ಸಾಮಾಜಿಕ ರೂಢಿಯನ್ನು ಪ್ರತಿಬಿಂಬಿಸುತ್ತದೆನ್ನಬಹುದು.

ಮೊಮ್ಮಕ್ಕಳು ಅಜ್ಜನಿಗೆ, ಮಕ್ಕಳು ತಂದೆಗೆ, ಶಿಷ್ಯರು ಗುರುವಿಗೆ ಗೌರವ ಬಹುವಚನವನ್ನೇ ಸಂಬೋಧನೆಯಲ್ಲಿ ಉಪಯೋಗಿಸುವುದು ಕಂಡುಬರುತ್ತದೆ. ಬ್ರಾಹ್ಮಣೇತರರು ಬ್ರಾಹ್ಮಣರನ್ನು ಹಾಗೂ ಅಪರಿಚಿತ ವ್ಯಕ್ತಿಗಳನ್ನು ಮಾತಾಡಿಸುವ ಸಂದರ್ಭದಲ್ಲಿಯೂ, ಬಹುವಚನ ಹೊರತು

ಏಕವಚನ ಪ್ರಯೋಗವಿಲ್ಲ.

### ೩.೧ ಅಜ್ಜ-ಮೊಮ್ಮಕ್ಕಳ ಸಂಬಂಧದಲ್ಲಿ

ಭೀಷ್ಮ ಕುಲವೃದ್ಧನಾಗಿ, ಕೌರವ ಪಾಂಡವರೆಲ್ಲರಿಗೂ ಅಜ್ಜ. ಅವರೆಲ್ಲ ಅವನ ತೋಳೆ ತೊಟ್ಟಿಲಾಗೆ ಬೆಳೆದವರು. ಅವರೆಲ್ಲರಿಗೂ ಅವನ ಮೇಲೆ ಗೌರವವಿದೆ. ಹೀಗೆ ಅವನೊಡನೆ ಮಾತಾಡುವಾಗಲೆಲ್ಲ ಗೌರವ ಬಹುವಚನವೇ ಮಧ್ಯಮಪುರುಷ ಸರ್ವನಾಮದಲ್ಲಿ ಬರುತ್ತದೆ. ಉದಾ:

೬೨. ನೀಮೆಂದುದನೆಂದು ಬಾಜ್ವೆನೆ ೪-೭ ವ, ದುರ್ಯೋಧನ

೬೩. ನೀಮೆ ಬಿಡಿಸಿದಿರಲ್ತೇ ೧೦-೬ ದುರ್ಯೋಧನ

೬೪. ನಿಮಗಮಸುರವೈರಿಗಮೇನಂತರಂ ೧೦-೭

೬೫. ನಿಮ್ಮೊಳಗ್ಗದ ಪರಶುಧರಂ ಪೊಣರ್ದು ೧೦-೭

೬೬. ಆಂ ನಿಮ್ಮಡಿಯಂ ಪಿಡಿದೆಂ ೧೦-೮

೬೭. ನಿಮ್ಮ ದಯೆಯಿಂ ನಿಮ್ಮಂಕರಂ...ಬೆಸಸಿಂ ನಿಮ್ಮೊಂದಭಿಪ್ರಾಯಮಂ ೧೦-೯

೬೮. ಅಜ್ಜ...ನಿಮ್ಮನೆ ನಂಬಿ ಮಾಡಿದೆನ್ ೧೧-೧೪

೬೯. ನೀಂ ಮೇಳಿಸಿ ನಣ್ಪನೆ ಬಗೆದಿರ್...ಇನಿಸು ಬಗೆಯಿಂ ನಿಮ್ಮೊಳ್ ೧೧-೧೫

೭೦. ಇದೊಂದವಸ್ಥೆನಿಮಗೆನ್ನಯ ಕರ್ಮದಿನಾದುದು ೧೧-೪೯ ಇವು ದುರ್ಯೋಧನ ಭೀಷ್ಮನೊಡನಾಡುವ ಮಾತುಗಳು.

ಕೆಳಗಿನವುಗಳು ಯುಧಿಷ್ಠಿರ ಭೀಷ್ಮನೊಡನಾಡುವ ಮಾತುಗಳು:

೭೧. ನಿಮ್ಮಂಬಿನ ಬಂಬಲೊಳೆ ೧೧-೨೯

೭೨. ನಿಮ್ಮೀ ಕ್ರಮಕಮಲಕ್ಕೆಱಗದೆ ೧೧-೩೦

೭೩. ನಿಮತಿಚ್ಚೆಯೆನೆ...ನಿಮ್ಮಡಿ ಕೊಲೆ ೧೧-೩೧

೭೪. ನಡಪಿದಜ್ಜರ್ ನೀಮಿಂತಿರೆಯುಂ ೧೧-೪೮

ಭೀಷ್ಮನ ವಿಶಿಷ್ಟ ವ್ಯಕ್ತಿತ್ವ ಸರ್ವರಿಂದಲೂ ಗೌರವವನ್ನುಕ್ಕಿಸುವಂಥದು. ಪ್ರಾಣಾಂತಿಕ ಯುದ್ಧದಲ್ಲಿ ಆತನಿಗೆ ಎದುರಾಳಿಯಾಗಿ ಹೋರಾಡಿ, ಆತನಿಂದ ಹತನಾಗುವ ಪಾಂಡವ ಪಕ್ಷದ ಶ್ವೇತಕೇತು ಆತನಿಗೆದುರಾಗಿ ಬಿಲ್ಲೆತ್ತಿದಾಗ, ಆ ಬಿಲ್ಲಿನಲ್ಲಿ ನೆಲೆಗೊಂಡಿರುವ ಪರಮೇಶ್ವರ ಮೂರ್ತಿಗೆ ಭೀಷ್ಮ ಕೈ ಮುಗಿಯುತ್ತಾನೆ. ಇದನ್ನು ಕಂಡು ಶ್ವೇತಕೇತು ಭೀಷ್ಮನನ್ನು ಮೂದಲಿಸುತ್ತಾನೆ. ಮರ್ಮಘಾತಕವಾದ ಆ ಮೂದಲೆಯಾದರೂ ಗೌರವದ ಎಲ್ಲೆಯನ್ನು ಮೀರದೆ ಶ್ವೇತಕೇತು ಭೀಷ್ಮನನ್ನು ಬಹುವಚನದಿಂದ, ಭೀಷ್ಮ ಆತನನ್ನು ಏಕವಚನದಿಂದ ಸಂಬೋಧಿಸುವಂತೆ ಮಾಡುತ್ತಾನೆ ಪಂಪ.

೭೫. ಇದಂತೊ ನಿಮ್ಮ ಪೆರ್ಮಾತಿನ ಬೀರಂ ೧೦-೧೧೮

೭೬. ನಿಮ್ಮೊಳೆ ವಲಂ ತಱಿಸಂದಿಱಿಯಲ್ಕೆ ೧೦-೧೧೯

೭೭. ಕಾಗೆವೊಲಿಂತು ಬಿಲ್ಗೆಕರಮಂಜುವಿರ್...ನಿಮ್ಮನದಿರ್ಪುವಲ್ಲಿ ೧೦-೧೨೨
ಇದರಲ್ಲಿ ಭೀಷ್ಮನ ಘನತೆ ಮತ್ತು ಶ್ವೇತಕೇತುವಿನ ಸುಸಂಸ್ಕೃತತೆ ಎರಡೂ ಏಕಕಾಲದಲ್ಲಿ ವ್ಯಕ್ತವಾಗುತ್ತದೆ.

ಪಂಪನ ಕಾವ್ಯದಲ್ಲಿ ಕಿರಿಯರ ಪಾತ್ರಗಳೆಂದೂ ಹಿರಿಯರನ್ನು ಧಿಕ್ಕರಿಸಿ ಏಕವಚನದಲ್ಲಿ ಮಾತಾಡುವುದಿಲ್ಲವೆಂಬುದು ನಿಜವೇ ಆದರೂ, ಕೇವಲ ಒಂದೇ ಒಂದು ಸಂದರ್ಭದಲ್ಲಿ ಮಾತ್ರ ಭೀಮ ಕೋಪದ ಪರಾಕಾಷ್ಠೆಯಲ್ಲಿ ಹಾಗೆ ಮಾಡುವುದನ್ನು ಕಾಣುತ್ತೇವೆ. ರಾಜಸಭೆಯಲ್ಲಿ ತಮಗಾದ, ಅದರಲ್ಲೂ ದ್ರೌಪದಿಯ ಮಾನಾಪಹಾರದ, ಅವಮಾನದ ವೇಳೆಯಲ್ಲಿ ಅವನು ಕೋಪಭಯಂಕರನಾಗುತ್ತಾ ಪ್ರತಿಜ್ಞೆ ಮಾಡುತ್ತಾನೆ. ಅವರೆಲ್ಲ ಹಿರಿಯರು, ಪೂಜ್ಯರು ಎಂಬುದು ಅನ್ವರ್ಥವಾಗಿದ್ದಿದ್ದರೆ, ಇಂತಹ ಹೇಯ ಕೃತ್ಯವನ್ನು ಅವರು ತಡೆಯಬೇಕಾಗಿತ್ತು. ಹಾಗೆ ಮಾಡಲು ಅವರು ಅಸಮರ್ಥರಾದುದರಿಂದ, ಕೈಲಾಗದ ಇತರ ಸಾಮಾನ್ಯರಿಗೂ ಅವರಿಗೂ ಅಂತರವಿಲ್ಲ. ಆ ಸಂದರ್ಭದಲ್ಲಿ ಅವರು ಯಾವ ಗೌರವಕ್ಕೂ ಅರ್ಹರಲ್ಲ ಎಂಬ ಭಾವ ಕೋಪದಲ್ಲಿ ಭೀಮನಿಗೆ ಉಂಟಾಗುವುದು ಸಹಜ. ಹಾಗಾಗಿ ಅವನು ಅವರೆಲ್ಲರನ್ನೂ ಏಕವಚನದಿಂದಲೇ ಸಂಬೋಧಿಸಿ:

೭೮. ಸುರಸಿಂಧು ಪ್ರಿಯ ಪುತ್ರ ಕೇಳ್ ಕಳಶಜಾ ನೀಂ ಕೇಳ್ ಕೃಪಾ ಕೇಳ ಮಂ
ದರದಿಂದಂಬುಧಿಯಂ ಕಲಂಕಿದಸುರಪ್ರಧ್ವಂಸಿವೋಲ್ ಬಾಹುಮಂ-
ದರದಿಂ ವೈರಿ ಬಲಾಬ್ಧಿ ಘೂರ್ಣಿಸೆ ಬಿಗುರ್ತೀ ಕೌರವರ್ ಕೂಡೆ ನೂ-
ರ್ವರುಮಂ ಕೊಲ್ವೆನಿದೆನ್ನ ಪೂಣ್ಕೆ ನುಡಿದೆಂ ನಿಮ್ಮೀ ಸಭಾಮಧ್ಯದೊಳ್ (೭-೧೫)

ಎಂದು ನುಡಿಯುತ್ತಾನೆ. ಇದರಲ್ಲಿ ಅವನ ಕೋಪದ ಪರಮಾವಧಿ ಸುವ್ಯಕ್ತವಾಗುವಂತೆ ಪಂಪ ಕೌಶಲದಿಂದಲೇ ಮಾಡಿದ್ದಾನೆ.

### ೩.೨ ಮಕ್ಕಳು ತಂದೆ ತಾಯಂದಿರನ್ನು ಸಂಬೋಧಿಸುವುದು

ದುರ್ಯೋಧನ ಮತ್ತು ಧರ್ಮರಾಯರು ಧೃತರಾಷ್ಟ್ರನೊಡನೆ ಮಾತಾಡುವ ಸಂದರ್ಭದಲ್ಲಿ ಗೌರವ ಬಹುವಚನವನ್ನೇ ಮಧ್ಯಮ ಪುರುಷ ಸರ್ವನಾಮದಲ್ಲಿ ಬಳಸುತ್ತಾರೆ. ಮಕ್ಕಳು ತಾಯನ್ನು ಹೇಗೆ ಸಂಬೋಧಿಸುತ್ತಿದ್ದರೆಂಬುದಕ್ಕೆ ಇವರ ಮಾತಿನಲ್ಲಿ ಉದಾಹರಣೆ ದೊರೆಯುವುದಿಲ್ಲ. ಕರ್ಣ ಕುಂತಿಯೊಡನೆ ಗೌರವ ಬಹುವಚನವನ್ನೇ ಬಳಸುವುದನ್ನು ಕಾಣುತ್ತೇವೆ. ಅವಳು ತನಗೆ ತಾಯಾಗಿದ್ದರೂ, ಅಪರಿಚಿತಳಾದ ದೂರದವಳಂತಿರುವುದರಿಂದ ಬಹುಶಃ ಹೀಗೆ ಮಾಡುತ್ತಾನೆಂದು ಕಾಣುತ್ತದೆ. ಪರೋಕ್ಷವಾಗಿ ದುರ್ಯೋಧನ ತನ್ನ ಚಿಕ್ಕಪ್ಪನಾದ ಪಾಂಡುವಿನ ಕುರಿತಾಡುವಾಗ ಏಕವಚನವನ್ನೇ ಬಳಸುತ್ತಾನೆ. ಅದೇ ರೀತಿ ಧರ್ಮರಾಯನೂ, ಭೀಷ್ಮಾದಿ ಹಿರಿಯರನ್ನು ಪರೋಕ್ಷದಲ್ಲಿ ಏಕವಚನದಿಂದಲೇ ಮಾತಾಡುವುದು ಕಾಣುತ್ತದೆ.

#### ೩.೨.೧ ದುರ್ಯೋಧನ ಧೃತರಾಷ್ಟ್ರನೊಡನೆ

೭೯. ಪಿರಿಯರ್ ನೀಮಿರೆ...೨-೮೯

೮೦. ನಿಮಗಯ್ಯ ವಿಧಾತೃಯೋಗದಿಂ...೨-೯೧

೮೧. ತೊಡರದೆ ನೀಮುಂ...ನಿಮಗಿಲ್ಲ...೧೩-೧೮

೮೨. ಪೇೞಿಂ ಅಯ್ಯ...೧೩-೧೯

೮೩. ಪೋಗಿಮೇೞಿಂ...೧೩-೨೦

### ೩.೨.೨ ಧರ್ಮರಾಯ ಧೃತರಾಷ್ಟ್ರನೊಡನೆ

೮೪. ನೀಮೆ ಬೆಸಸೆಯುಂ ಕುಡದೆ...ಅಯ್ಯ ನೀಮದರ್ಕಱುದಿರಿಂ...೧೪-೬

೮೫. ಎನ್ನ ಪೇೞ್ವುದು ಗೆಯ್ಯಿಂ...೧೪-೭

### ೩.೨.೩ ಅಭಿಮನ್ಯು ಧರ್ಮರಾಯನೊಡನೆ

೮೬. ನಿಮಗತ್ತಳಗಂ ಬರೆ ಮಾೞ್ಪೆನೇ...೧೧-೮೬

### ೩.೨.೪ ಕರ್ಣ ಕುಂತಿಯೊಡನೆ

೮೭. ನಿಮ್ಮ ಕರುಣಾ ಬಲದಿಂ...೯-೮೦

೮೮. ನೀಮೆನ್ನನಿಂದು ಮಗನೆಂದುದಱಿಂ...೯-೮೦

೮೯. ನೀಮೆನಗೆಡೆಮಡಗದೆ...ಬೆಸಸಿಂ...೯-೮೧

೯೦. ಅಬ್ಬೆ ಪೇೞಿಂ ೯-೮೪

೯೧. ನಿಮಗಂ ಮಗನಾದಂಗೆ..ಪಂಬಲನೆ ಬಿಸುಡಿಂ...೯-೮೫

೯೨. ..ಇನಿತೇಂ ಪೇೞಬ್ಬೆ...೯-೮೬

ಇಲ್ಲಿ ಕೊನೆಯದಾಗಿ ಕರ್ಣ ಹೇಳುವ ಮಾತು ಗಮನಾರ್ಹ. ಇದು ಏಕವಚನದಲ್ಲಿದೆ. ಗೌರವ ಬಹುವಚನವಾದರೆ ಪೇೞಿಂ ಅಬ್ಬೆ ಎಂದಾಗಬೇಕಿತ್ತು. ಛಂದಸ್ಸಿನ ಕಾರಣದಿಂದ ಬಿಂದುವನ್ನು ಲೋಪಗೊಳಿಸಿ, ಪೇೞು+ಅಬ್ಬೆ ಪೇೞಬ್ಬೆ ಎಂದಾದುದಲ್ಲ. ಪೇೞ್+ಅಬ್ಬೆ ಪೇೞಬ್ಬೆ ಎಂದು ಇದು ಏಕವಚನದ ರೂಪವೇ. ಇಷ್ಟರ ತನಕ ದೂರವಾಗಿದ್ದರೂ, ತನಗವಳು ತಾಯಿಯೇ ಎಂಬ ಭಾವನೆ ಕರ್ಣನಿಗೆ ಒತ್ತರಿಸಿ ಬರುತ್ತದೆ. ತಾನು ಪಾಂಡವ ಪಕ್ಷಕ್ಕೆ ಬರುವವನಲ್ಲವೆಂದು ದೃಢವಾಗಿ ಹೇಳುವಾಗ, ಕುಂತಿ ತನಗಿನ್ನು ಬಾಳುವಾಸೆಯೇ ಇಲ್ಲ; ಉಳಿದ ಮಕ್ಕಳ ಆಸೆಯನ್ನೂ ಬಿಟ್ಟು ಬಿಟ್ಟೆನೆಂದು ಅಳುತ್ತಿರುವ ಕುಂತಿಗೆ. 'ಶೋಕಾಗ್ನಿ ಪೊಂಪುಳಿವೋಗುತ್ತಿರೆ' ತಾನೂ ಅತ್ಯಂತ ದುಃಖಿತನಾಗಿ, ಆತ್ಮೀಯಭಾವದಿಂದ ಆಡುವ ಮಾತಿನಲ್ಲಿ ಏಕವಚನದ ರೂಪವನ್ನೇ ಪಂಪ ಕೊಟ್ಟಿದ್ದಾನೆ. ಅವಳನ್ನು ಹಿಂದೆಯೂ 'ಅಬ್ಬೆ' ಎಂದು ಕರೆಯುವ ಅವಕಾಶ ಅವನಿಗಿರಲಿಲ್ಲ. ಮುಂದೆಯೂ ಇಲ್ಲ. ಈ ಅಲ್ಪಾವಕಾಶದಲ್ಲಿಯೇ ಮೂರು ಸಲ ಅವನು ಕುಂತಿಯನ್ನು 'ಅಬ್ಬೆ' ಎಂದು ಕರೆದುಕೊಳ್ಳುತ್ತಾನೆ. ಮೊದಲೆರಡು ಸಲವೂ ಗೌರವದಿಂದ ಬಹುವಚನವನ್ನು ಉಪಯೋಗಿಸಿ, ಕೊನೆಯ ಸಲ ಅಬ್ಬೆಯೆಂದಾಗ ಏಕವಚನವನ್ನೇ ಉಪಯೋಗಿಸಿ, ಪೇೞಬ್ಬೆ ಎಂದಾಗ ಅತ್ಯಂತ ಆತ್ಮೀಯತೆಯುಂಟಾಗುತ್ತದೆ. ಆ ಆತ್ಮೀಯತೆಯ ಕಾರಣದಿಂದಲೇ, ಅವಳಾಗಿ ಬಾಯ್ತೆರೆದು ತನ್ನ ಇಚ್ಛೆಯನ್ನು, ತಾನು ಬಂದ ಉದ್ದೇಶವನ್ನು, ತಾನಾಗಿ ಹೇಳುವ ಸ್ಥಿತಿಗೆ ಅವಳನ್ನು ಈಡು ಮಾಡದೆ ತಾನಾಗಿಯೇ ಅರ್ಜುನ ಎದುರಿಸಿದರೂ, ಪುರಿಗಣೆಯನ್ನು ಹಿಡಿಯುವುದಿಲ್ಲ. ಮತ್ತೆ,

೯೩. ಉೞಿದ ನಿನ್ನ ಮಕ್ಕಳನಿನ್ನೇರ್ದೂಡಮೞಿಯೆಂ, ಪೆರ್ಜಸಮನೆ ಪಿಡಿದೆನ್ನನೆ ರಣದೊಳೞಿವೆನ್ ೯-೮೭

ಎಂಬಲ್ಲಿಯೂ ಏಕವಚನವೇ ಬರುತ್ತದೆ. ಹೀಗೆ ಮಾಡಿದುದರಿಂದ ಪಾತ್ರ ಮತ್ತು ಸನ್ನಿವೇಶಗಳಿಗೆ ಅತ್ಯಂತ ಸಹಜತೆಯ ಜೀವಕಳೆ ತುಂಬಿದೆ. ಆದರೆ ಈ ಕಂದಪದ್ಯದ ಕೊನೆಯಲ್ಲಿ ಮತ್ತೆ ಗೌರವ ಸೂಚಕ ಬಹುವಚನ,

೯೪. ಇರದಡಿಯೆತ್ತಿಂ

ಎಂದು ಬಂದಿದೆ. ಈ ಪದ್ಯದಲ್ಲಿ ಪಾಠಾಂತರಗಳೂ ಇವೆ. 'ಎತ್ತಿಂ' ಎಂಬುದಕ್ಕೆ ಪಾಠಾಂತರವಾಗಿ 'ಎತ್ತೆಂ' ಎಂದು ಕೊಟ್ಟಿದೆ. ಇದು ಸ್ಪಷ್ಟವಾಗಿಯೇ ಅಸಮಂಜಸವಾಗಿದೆ. 'ಪೇೞೆಬ್ಬೆ', 'ನಿನ್ನ ಮಕ್ಕಳ' ಎಂದೆಲ್ಲ ಆತ್ಮೀಯತೆಯ ಭಾವ ಸೂಚಕವಾಗಿ ಏಕವಚನವೇ ಬಂದಿರುವಾಗ, ಕೊನೆಗೆ ಮಾತ್ರ, ಮತ್ತೆ ಗೌರವ ಸೂಚಕ ರೂಪ ಬರುವುದರಿಂದ ಸ್ವಲ್ಪ ಕ್ಲೇಶವಾಗುವಂತೆ ಕಾಣುತ್ತದೆ. ಮೊದಲು ಮೈಮರೆಯುವಂತೆ ಭಾವಪರವಶವಾಗಿದ್ದು, ಅನಂತರ ಎಚ್ಚೆತ್ತಂತಾಗಿ, ಮತ್ತೆ ಹಿಂದಿನಂತೆ ಗೌರವದ ಮಾತನ್ನು ಬಳಸಿದ್ದೆಂದು ಸಮರ್ಥಿಸಬಹುದು. ಹೀಗೆ ಮಾಡಿದರೂ, ಪಂಪನ ಸೂಕ್ಷ್ಮಗ್ರಾಹಿತನಕ್ಕೆ ಮೆಚ್ಚುಗೆ ಸಲ್ಲಲೇಬೇಕು. ಆದರೆ ಸುಸಂಬದ್ಧತೆಗೋಸ್ಕರ ಇಲ್ಲಿಯೂ ಏಕವಚನ ರೂಪವೇ ಇತ್ತೇನೋ ಎಂಬ ಸಂಶಯ ಆ ಭಾಗದಲ್ಲಿರುವ ಪಾಠಾಂತರದಿಂದ ಬರುತ್ತದೆ. 'ಅಡಿಯೆತ್ತಿಂ' ಎಂಬುದರ ಬದಲು 'ಅಡಿಯೆತ್ತೌ' ಎಂದೇನಾದರೂ ಇತ್ತೇ? ಅದು ಸರಿಯಾಗಿ ತಿಳಿಯದೆ, ಪ್ರತಿಕಾರರಿಂದ ಪಾಠಾಂತರದಲ್ಲಿ ಹಾಗೂ ಗ್ರಂಥದ ಪಾಠದಲ್ಲಿ ಕೊಟ್ಟಂತಹ ರೂಪ ಸಿದ್ಧಿಸಿತೇ ಎಂಬುದು ಸಂದೇಹ.

### ೩.೩ ಅಣ್ಣ ತಮ್ಮಂದಿರು

ಅಣ್ಣ ತಮ್ಮಂದಿರೊಳಗೆ ಅನೌಪಚಾರಿಕವಾಗಿ ಏಕವಚನವೇ ರೂಢಿಯಲ್ಲಿರುವುದು ಈಗಿನ ಸಂಪ್ರದಾಯ. ಔಪಚಾರಿಕ ಸಂದರ್ಭಗಳಲ್ಲಿ ಮಾತ್ರ ಉದಾ: ಪತ್ರ ವ್ಯವಹಾರಗಳಲ್ಲಿ, ತಮ್ಮ ಅಥವಾ ತಂಗಿ ಅಣ್ಣನಿಗೆ ಗೌರವ ಬಹುವಚನವನ್ನು ಉಪಯೋಗಿಸುವುದಿದೆ. ತುಂಬ ಸುಧಾರಿತರಾದ ಹೊಸ ಸಂಪ್ರದಾಯವಂತರಲ್ಲಿ ತಮ್ಮ, ತಂಗಿಯರು ಅಣ್ಣನಿಗೆ ಗೌರವ ಬಹುವಚನವನ್ನು ಪ್ರಯೋಗಿಸಿಯೇ ಮಾತಾಡುವ ಕ್ರಮವೊಂದು ಕಡೆಯಾದರೆ, ಪರಸ್ಪರರನ್ನು ಪ್ರತಿಯೊಬ್ಬರೂ ಹೆಸರು ಹಿಡಿದು ಕರೆಯುವ ರೂಢಿಯೂ ಇನ್ನೊಂದೆಡೆಯಲ್ಲಿದೆ. ಪಂಪನ ವಿ. ವಿ.ದಲ್ಲಿ ಅಣ್ಣಂದಿರನ್ನು ತಮ್ಮಂದಿರು ಗೌರವ ಬಹುವಚನದಿಂದ ಕರೆಯುವ ಸುಧಾರಿತ ಸ್ಥಿತಿಯನ್ನೇ ಬಹುಮಟ್ಟಿಗೆ ಕಾಣುತ್ತೇವಾದರೂ, ಕೆಲವೆಡೆ ಇದು ಅತಿಕ್ರಮಿಸುವುದಿದೆ.

೯೫. ಕೇಳಿಮಿನ್ ಕೇಳದಿರಿನ್...ನಿಮ್ಮಂ ನುಡಿಯಿಸದಪುದೆನ್ನ ಮನದ ಮುನಿಸವನಿಪತೀ ೭-೫೩

ಎಂಬಲ್ಲಿ ಭೀಮ ಧರ್ಮರಾಯನಿಗೆ ಗೌರವ ಬಹುವಚನವನ್ನು ಪ್ರಯೋಗಿಸಿದ್ದಾನೆ. ಆದರೆ, ಮುಂದಿನ ಕ್ಷಣದಲ್ಲಿ,

೯೬. ನಿನ್ನಗೆ ದಾಯಿಗಂಗಳೆಯನೊಪ್ಪಿಸಿದೆಂ ಗಡಿಮೆಂಬ ಮಾತುಗಳ್ ನಿನ್ನವು...೭-೫೪

ಎಂಬಂತೆ 'ನಿನ್ನವು' ಎಂಬ ಏಕವಚನದ ಪ್ರಯೋಗವಾಗುತ್ತದೆ. ನನ್ನಿ ಎಂಬ ಪದಕ್ಕೆ ಪ್ರಾಸವಾಗಿ ಇಲ್ಲಿ ಹೀಗೆ ಬಂತೇ ಎಂದು ಸಂದೇಹಿಸಬಹುದು. ಆದರೆ ಇವನಿಗಿಂತ ಹಿಂದೆ ದ್ರೌಪದಿ ಧರ್ಮರಾಯನೊಡನೆ ಮಾತಾಡುವಾಗಲೂ ಪ್ರಾರಂಭದಲ್ಲಿ ಔಪಚಾರಿಕವಾಗಿ ಬಹುವಚನದಿಂದ ಆರಂಭಿಸಿ, ಮತ್ತೆ ಅನೌಪಚಾರಿಕವಾಗಿ ಅಥವಾ ಕೋಪದಿಂದ, ಏಕವಚನದ ಪ್ರಯೋಗಕ್ಕೆ ತೊಡಗುವಂತೆ, ಇಲ್ಲಿ ಭೀಮನ ಮಾತೂ ಬಂದಿರಬಹುದೆಂದು ಊಹಿಸಲು ಅವಕಾಶವುಂಟು.

## ಅರ್ಜುನ-ಧರ್ಮರಾಯ ಮತ್ತು ಭೀಮರೊಡನೆ

ನಯ ವಿನಯ ಸಂಪನ್ನನಾದ ಅರ್ಜುನ ಅಣ್ಣಂದಿರನ್ನು ಬಹುವಚನದಿಂದ ಗೌರವದಿಂದಲೇ ಮಾತಾಡಿಸುತ್ತಾನೆ. ದುರ್ಯೋಧನ ತನಗಿಂತ ಹಿರಿಯನೇ ಆದರೂ, ಅವನಿಗೆ ಗೌರವ ಸೂಚಿಸುವುದಿಲ್ಲ.

೯೭. ನಿಮ್ಮಡಿಯೊಳ್ ಮಾರ್ಕೊಂಡು...ನಿಮ್ಮಂ ಮುಳಿಯಿಸಿದ ೧೨-೧೩೧ ಎಂದು ಧರ್ಮರಾಯನೊಡನೆ ಹೇಳುತ್ತಾನೆ. ಭೀಮನೊಡನೆ:

೯೮. ಇಂದಿನನುವರಮೆಲ್ಲಮಂ ನಿಮ್ಮೊರ್ವರ ಮೇಲಿಕ್ಕಿ ೧೨-೧೩೪ ವ.

೯೯. ನಿಮ್ಮ ಭುಜಬಲಕ್ಕದೇವಿರಿದು...೧೨-೧೩೫ ವ.

೧೦೦. ನೀಮೆನ್ನ ಕಾಳೆಗಮಂ...ನೋಡುತ್ತಮಿರಿ ೧೨-೧೩೫ ವ.

ಎಂದು ಗೌರವದಿಂದಲೇ ಮಾತಾಡುತ್ತಾನೆ.

ಭಕ್ತಿ, ಗೌರವದಿಂದ ಭೀಮ, ತನಗೆ ಅಣ್ಣನಾಗುವ ಹನುಮಂತನನ್ನು ಬಹುವಚನದಲ್ಲಿ ಸಂಬೋಧಿಸುತ್ತಾನೆ. ಪ್ರಾರಂಭದಲ್ಲಿ

೧೦೧. ನೀನೆಮ್ಮಣ್ಣನೆ ೮-೩೩

ಎಂಬಲ್ಲಿ 'ನೀನು' ಎಂದು ಏಕವಚನ ರೂಪವನ್ನು ಉಪಯೋಗಿಸಿದ್ದಾನೆ. ಆದರೆ 'ಎಮ್ಮ' ಎಂಬಲ್ಲಿ ಗೌರವ ಸೂಚನೆಯಿದೆ. ನನ್ನಂತಹ ಸಹೋದರನಿದ್ದೂ ನಿನಗೆ ಈ ಕಷ್ಟವೇ? ನಿನ್ನ ಹಗೆಗಳ ಬೇರಿಗೇ ಬಿಸಿನೀರು ಹೊಯ್ದು ನಿನಗೆ ರಾಜ್ಯವನ್ನೊಪ್ಪಿಸುತ್ತೇನೆ ಎಂಬ ಹನುಮಂತನಿಗೆ ಉತ್ತರಿಸುವಾಗ, ಅವನ ಸಾಹಸವನ್ನು ಹೊಗಳಿ,

೧೦೨. ನೀಂಬರೆಗಮಾ ಕೌರವರ್ ಗಂಡರೇ ೮-೩೫ ಎಂದು ಗೌರವ ಸೂಚಿಸುವುದಲ್ಲದೆ,

೧೦೩. ವಿಜಯಂಗೆ ವಿಜಯಮಾಗಿರೆ ನೀಮಾತನ ಕೇತನದೊಳ್ ಫಣಿಕೇತನ ಬಲಕುತ್ಪಾತಕೇತುವಪ್ಪುದೆ ಸಾಲ್ಗುಂ ೮-೩೬ ಎಂಬುದಾಗಿ ವಿನಯವನ್ನು ಮೆರೆಯುತ್ತಾನೆ.

## ೩.೪ ಗಂಡ ಹೆಂಡತಿಯರು

ಗಂಡ ಹೆಂಡತಿಯನ್ನು ಏಕವಚನದಲ್ಲಿ ಕರೆಯುವುದು ಈಗಣ ಸರ್ವೇಸಾಮಾನ್ಯವಾದ ರೂಢಿ. ಪುರುಷ ಪ್ರಧಾನವಾದ ನಮ್ಮ ಸಮಾಜದಲ್ಲಿ ಸ್ತ್ರೀಯಾದವಳು ಗಂಡಸಿಗೆ ಗೌರವ ತೋರಿಸಬೇಕಾದ ಅನಿವಾರ್ಯತೆಯೊದಗಿದುದರಿಂದ ಹೀಗಾಗಿರಬಹುದು. ಅಲ್ಲದೆ

ಹೆಂಡತಿಯಾದವಳ ವಯಸ್ಸು ಗಂಡಸಿಗಿಂತ ಕಿರಿಯದಾಗಿರುವುದರಿಂದ, ಇದೇನೂ ವಿಪರೀತವಾಗಿ ಕಾಣಿಸುವುದಿಲ್ಲ. ಪಂಪನ ಕಾವ್ಯದಲ್ಲಿ ಕೇವಲ ಅಪೂರ್ವ ಪ್ರಸಂಗದಲ್ಲಿ ದ್ರೌಪದಿ ಧರ್ಮರಾಯನೊಡನೆ ಮಾತಾಡುವಾಗ ಗೌರವ ಬಹುವಚನವನ್ನು ಬಳಸುತ್ತಾಳಾದರೂ, ಅದು ಮುಂದೆ ಬಹುಬೇಗನೆ ಏಕವಚನ ರೂಪಕ್ಕಿಳಿಯುತ್ತದೆ. ಭೀಮ, ಅರ್ಜುನ ಮುಂತಾದವರೊಡನೆ ಅವಳು ಮಾತಾಡುವಾಗಲೆಲ್ಲ ಏಕವಚನವನ್ನೇ ಬಳಸುವುದು ಕಂಡು ಬರುತ್ತದೆ.

**೩.೪.೧ ದ್ರೌಪದಿ ಧರ್ಮರಾಯನನ್ನು ಉದ್ದೇಶಿಸಿ ಹೇಳುವ ಮಾತುಗಳು**

೧೦೪. ನಿನ್ನ ಮನಮನೊನಲಿಸಿತಿಲ್ಲ ೭-೪೬

೧೦೫. ನಿನಗಿತ್ತದಟಂ...ನಿನಗೆ ಸಂಚಿತ ಶೌರ್ಯಧನಂ ೭-೪೭

೧೦೬. ನೋಯಿಸರಯ್ ನಿನ್ನ ನನ್ನಿಕಾಱನ ಮನಮಂ ೭-೪೮

೧೦೭. ನಿನ್ನ ಮನಕೆ ಚಿಂತೆಯುಮಿಲ್ಲಾ ೭-೪೯

೧೦೮. ನೀಂ ಮನದೊಳ್ ನೆನೆಯ...ನಿನ್ನಿರವಂ ನೀಂ ಮರುಳ್...ಚಿಂತಿಸುತಿರ್ಪಾ ೭-೫೦

೧೦೯. ನೀಂ ಬಗೆವೊಡೆ...೭-೫೧

೧೧೦. ನಿನಗಹಿತರೆಯ್ದೆ ತಪ್ಪಿದರೆ ೭-೫೨

**೩.೪.೨ ಅರ್ಜುನನೊಡನೆ ಅವಳಾಡುವ ಮಾತು**

೧೧೧. ನಿನ್ನ ಬಗೆಯೊಳ್ ಪಾರ್ಥಾ ೭-೬೭

**೩.೪.೩ ಭೀಮನೊಡನೆ ಅವಳಾಡುವ ಮಾತುಗಳು**

೧೧೨. ಇನ್ ನೀನಱಿವಯ್...ನೀಗು ನೀಂ ಭೀಮಸೇನಾ ೮-೭೧

**೩.೪.೪ ಪಾಂಡು ಮರಣ ಹೊಂದಿದಾಗ, ಮಾದ್ರಿ ಮತ್ತು ಕುಂತಿಯರು ಗೋಳಾಡುವಲ್ಲಿ ಅವನನ್ನುದ್ದೇಶಿಸಿ ಹೇಳುವ ಮಾತುಗಳು ಏಕವಚನದಲ್ಲೇ ಇವೆ**

೧೧೩. ಓಪನೆ ನೀನೆನ್ನ ೨-೨೦ ಮಾದ್ರಿ,

೧೧೪. ನಿನ್ನೊಡನೆ ವಂದು ನಿನ್ನ ಮನೋರಥ...೨-೨೧ ಮಾದ್ರಿ.

೧೧೫. ನೀಂ ಪೇೞದೆ...ನಿನ್ನ ಬೞಿವೞಿಯನೆ...ಕುಂತಿ.

ಪಾಂಡುವೂ ಕುಂತಿಯನ್ನು 'ಮೆಚ್ಚಿಸು ನೀಂ. ಪಡೆ ನೀಂ' ೧-೧೧೮ ಎಂದು ಹೇಳುವುದು ನಮ್ಮ ಈಗಣ ಸಾಮಾಜಿಕ ನೆಲೆಗೂ ಸರಿಯಾಗಿಯೇ ಇದೆ. ವಿಪರ್ಯಾಸದಂತೆ ತೋರುವುದು, ಹೆಂಡತಿಯಾದವಳು ಗಂಡನನ್ನು ಏಕವಚನದಿಂದ ಕರೆಯುವುದು. ಇಷ್ಟು ಮಾತ್ರವಲ್ಲ, ಪುತ್ರ ವರ ಪ್ರದಾನ ಮಾಡುವ ದೇವತೆಗಳನ್ನು ಉದ್ದೇಶಿಸಿ ಮಾತಾಡುವಾಗಲೂ, ಅಂತಹ ಪುರುಷ ದೇವತೆಗಳನ್ನು ಕುಂತಿ ಏಕವಚನದಿಂದಲೇ ಕರೆಯುತ್ತಾಳೆ.

೧೧೬. ನಿನ್ನ ದೊರೆಯನೆ ಮಗನಕ್ಕ ೧-೯೧ ಕುಂತಿ ಸೂರ್ಯನಿಗೆ.

೧೧೭. ಈವುದು ನಿನ್ನನೆ ಪೋಲ್ವ ಪುತ್ರನಂ ೧-೧೯ ಕುಂತಿ ಯಮನಿಗೆ.

೧೧೮. ಕುಡು ರಿಪುತಂತ್ರಕ್ಷಯಕರನನೆನಗೆ ಹಿತನಂ ಸುತನಂ ೧-೧೨೪ ಕುಂತಿ ವಾಯುವಿಗೆ.

೧೧೯. ನಿನ್ನೆಸಕದ ಮಸಕಮನೆ ೧-೧೩೯ ಕುಂತಿ ಇಂದ್ರನಿಗೆ.

ಇದನ್ನೆಲ್ಲ ಪರಿಭಾವಿಸಿದರೆ, ಪಂಪನ ಕಾಲದ ಸಾಮಾಜಿಕ ಸ್ಥಿತಿಯಲ್ಲಿ ಗಂಡಹೆಂಡತಿಯರ ನಡುವಣ ಸಂಬಂಧದ ಮಾತುಕತೆಗಳು ಈಗಿನಂತೆ ಔಪಚಾರಿಕವಾಗಿ, ಮೇಲು-ಕೀಳು ತಾರತಮ್ಯವಿಲ್ಲದೆ, ಸಮಾನತೆಯಿಂದ ಕೂಡಿತ್ತು ಎಂದು ಊಹಿಸಬಹುದು.

೩. ೪. ೫. ಸ್ತ್ರೀಯರು ಇತರ ಹಿರಿಯ ಸಂಬಂಧಿಕರಾದ ಗಂಡಸರನ್ನು ಮಾತಾಡಿಸುತ್ತಿದ್ದುದಕ್ಕೆ ಉದಾಹರಣೆ ದ್ರೌಪದಿಯದು. ದುರ್ಯೋಧನ ಮತ್ತು ದುಶ್ಶಾಸನರು ಗಂಧರ್ವರಿಗೆ ಸೆರೆಸಿಕ್ಕಿದವರನ್ನು ಬಿಡಿಸಿಕೊಂಡು ಬಂದಾಗಣ ಮಾತಿನ ಸಂದರ್ಭ ದೊರೆಯುತ್ತದೆ. ಇಲ್ಲಿ ಪ್ರಯೋಗಿಸುವ ಬಹುವಚನದಿಂದ ನಿಶ್ಚಯವಾಗಿ ಏನೂ ಹೇಳುವಂತಿಲ್ಲ. ಕಾರಣ ಅಲ್ಲಿ ಇಬ್ಬರು ವ್ಯಕ್ತಿಗಳಿರುವುದರಿಂದ ಅದು ಸಹಜ ಬಹುವಚನವಾಗಿರಲೂಬಹುದು. 'ನಿಮ್ಮದಟುಗಳೀಗಳೆತ್ತವೋದುವೊ? ಪಿಡಿವಟ್ಟಮ್ಮ ಬಟಲ್ದಿರೆ? ಕಂಡಿರೆ ನಿಮ್ಮಳವಂ, ನಿಮಗಮೀಗಳೀಯೆಡರಾಯ್ತೆ? ೭-೩೯. ಆದರೆ ತನ್ನನ್ನು ಕುರಿತು ಗೌರವ ಬಹುವಚನವನ್ನೇ ಪ್ರಯೋಗಿಸಿದ್ದಾನೆ: ಎಮ್ಮಂ ಪಿಡಿದೆಲೞಿವಂದಿನ ೭-೩೯.

ಭಾನುಮತಿ ತನ್ನ ಗಂಡನನ್ನು ರಕ್ಷಿಸಬೇಕೆಂದು ಧರ್ಮರಾಯನಲ್ಲಿ ಮೊರೆಯಿಡುವಾಗ ಬಹುವಚನವೇ ಪ್ರಯೋಗವಾಗಿದೆ. 'ಎನಗೆ ಪುರುಷಭಿಕ್ಷಮನಿಕ್ಕಿಂ' ೭-೩೪ ಎಂದು. ಅದಕ್ಕೆ ಉತ್ತರವಾಗಿ ಧರ್ಮರಾಯ ಭಾನುಮತಿಯನ್ನುದ್ದೇಶಿಸಿ ಮಾತಾಡುವಾಗ ಏಕವಚನದಲ್ಲೇ ಅವಳನ್ನು ಕರೆಯುತ್ತಾನೆ. ನಿನ್ನಾಣ್ಮನಂ ನಿನ್ನೊಳಿಂದಿರದಾಂ ಕೊಡುವೆ...ಕೇಳ ೭-೩೬. ಇದು ಕೌಟುಂಬಿಕ ನೆಲೆಯಿಂದ ಹಿರಿಯ ಕಿರಿಯ ತಾರತಮ್ಯಕ್ಕನುಸರಿಸಿಯೇ ಇದೆ. ದ್ರೌಪದಿ ಭಾನುಮತಿಗೆ ಅವಳ ಗಂಡನನ್ನೂ ಮೈದುನನನ್ನೂ ಒಪ್ಪಿಸಿ ಕೊಡುವ ಸಂದರ್ಭದಲ್ಲಿ 'ನಿನ್ನಾಣ್ಮನುಮಂ, ನಿನ್ನ ಮೈದುನನುಮಂ ನೀನೊಪ್ಪುಗೊಳ್...೭-೩೯ ಎಂಬಲ್ಲಿ ಕುಟುಂಬದ ಅಕ್ಕ ತಂಗಿಯಾರಾಗುವಲ್ಲಿಯೂ ಏಕವಚನವೇ ಬಳಕೆಯಲ್ಲಿರುವುದನ್ನು ನೆನೆಯಬಹುದು. ಮಾದ್ರಿ-ಕುಂತಿಯರು ಮಾತಾಡಿಕೊಳ್ಳುವ ಸನ್ನಿವೇಶದಲ್ಲೂ ಪರಸ್ಪರರು ಏಕವಚನವನ್ನು ಪ್ರಯೋಗಿಸುತ್ತಾರೆ. ಉದಾ: ಕುಂತಿ, ಮಾದ್ರಿಗೆ: 'ನೀನೀ ಕೂಸುಗಳಂ ಕೈಕೊಂಡು ನಡಪು, ನಲ್ಲನನೆನಗೊಪ್ಪಿಸು' ೨-೨೫ ವ; ಎಂದಾಗ ಮಾದ್ರಿ: 'ಎನ್ನ ಸೂೞಿಂ ನಿನಗಾನೆನಿತಾದೊಡಮೀವೆನೆ' ೨-೨೬ ಎಂದು ಕುಂತಿಗೆ ಹೇಳುತ್ತಾಳೆ. ಈ ಪರಿಸ್ಥಿತಿ ಸಹ ಇಂದು ಬದಲಾಗಿದೆ.

ಬೇರೆ ಬೇರೆ ಕುಟುಂಬಗಳಿಗೆ ಸೇರಿದ ಹೆಣ್ಣುಗಳು ಮದುವೆಯಾಗಿ ಬಂದ ಅಣ್ಣ ತಮ್ಮಂದಿರ ಹೆಂಡತಿಯರು ಅಕ್ಕ ತಂಗಿಯರ ನೇರದವರಾಗುತ್ತಾರೆ. ಇಂತಹ ಸಂದರ್ಭದಲ್ಲಿ ಹಿಂದೆ ಪರಸ್ಪರರು ಮಾತಾಡುವಾಗ ಏಕವಚನವೇ ಪ್ರಯೋಗವಾಗುತ್ತಿತ್ತು. ಆದರೆ ಈಗ ಇವರ ಮಾತಿನಲ್ಲೂ ಹಿರಿ-ಕಿರಿ ವ್ಯತ್ಯಾಸದ ಔಪಚಾರಿಕತೆಯ ಪ್ರಯೋಗಗಳೇ ಕಂಡು ಬರುತ್ತವೆ. ಮಯ್ದುನರಾದವರು ಅತ್ತಿಗೆಯಂದಿರನ್ನು ಹೇಗೆ ಕರೆಯುತ್ತಿದ್ದರೆಂದು ತಿಳಿಯಲು ವಿ. ವಿ.ದಲ್ಲಿ ಯಾವ ಉದಾಹರಣೆಯೂ ಇಲ್ಲ. ದುಶ್ಶಾಸನ ದ್ರೌಪದಿಯನ್ನು ರಾಜಸಭೆಗೆ ಎಳೆದು ತರುವಲ್ಲಿ

ಏಕವಚನದಲ್ಲೇ ಅವಳನ್ನು ಕರೆಯುತ್ತಾನೆ. ಈಗ ಅವಳನ್ನು ಧರ್ಮರಾಯ ಪಣದಲ್ಲಿ ಸೋತಿದ್ದಾನೆ. ಅವಳು ತೊತ್ತಿಗೆ ಸಮಾನಳು ಎಂಬುದರಿಂದ ಅವಳಿಗೆ ಗೌರವ ತೋರಿಸುವಂತಿಲ್ಲ. ಆದುದರಿಂದ ಏಕವಚನ ಪ್ರಯೋಗವೇ ಸರಿಯಾದುದಾಗಿರಬೇಕು. ಅವನು ಅವಳನ್ನು ಅದಕ್ಕಾಗಿ, 'ತೊೞ್ತೆಸಕೆಯ್, ಪೋ ಪೋಗು ನೀನೆಂದು' ೭-೫ ಎಂದು ಕರೆಯುತ್ತಾನೆ.

**೩.೫ ದುರ್ಯೋಧನ-ಶಲ್ಯ**

ತಾನು ಅಧಿರಾಜನಾಗಿದ್ದರೂ, ಶಲ್ಯ ತನಗಿಂತ ಹಿರಿಯನೆಂಬ ಕಾರಣದಿಂದಲೂ, ಕೌಟುಂಬಿಕ ನೆಲೆಯಲ್ಲಿ ಆತ ತನಗೆ ಮಾವನಾಗಬೇಕೆಂಬ ಕಾರಣದಿಂದಲೂ, ದುರ್ಯೋಧನ ಶಲ್ಯನನ್ನು ಗೌರವದಿಂದಲೇ ಸಂಬೋಧಿಸುತ್ತಾನೆ. ಅದೇ ಕಾರಣದಿಂದ ಶಲ್ಯನೂ ಅವನನ್ನು ಏಕವಚನದಿಂದಲೇ ಕರೆಯುತ್ತಾನೆ. ದುರ್ಯೋಧನ ಶಲ್ಯನೊಡನಾಡುವ ಮಾತು ಹೀಗಿದೆ:

೧೨೦. ಅಂತೆ ಕುಳ್ಳಿರಿರಪ್ಪೊಡೆ ನಿಮಗಾಣೆ ೧೨-೨೮

೧೨೧. ಜಯವಧುಕೂರ್ತೊರ್ಸೆದಿರ್ಕುಂ ಮಾವ ನಿಮ್ಮ ದಯೆಯಿಂದೆಮ್ಮಂ ೧೨-೯೦

೧೨೨. ..ಅಂತೆ ನೀಮುಂ ಪೆಸರಂ ಕರ್ಣಂಗೆ ಮಾಡಿ...೧೨-೯೧

೧೨೩. ..ನೀಮೆನಗಿನಿತಂ...ಮನಂ ನೊಂದು ಬೆಸಸಿದಿರ್...೧೨-೯೨

ಇವನ ಪರೋಕ್ಷದಲ್ಲಿ ಶಲ್ಯನನ್ನು ಏಕವಚನದಿಂದಲೇ ದುರ್ಯೋಧನ ಹೇಳುತ್ತಾನೆ:

೧೨೪. ಮಾವಂ ತಾನೇನನೆಂಬನ್...ಮೀರದೊಡಂಬಡು ನೀನೆಂದು ೧೨-೧೦೨ ಎಂದು ಕರ್ಣನೊಡನೆ ಹೇಳುತ್ತಾನೆ. ದುರ್ಯೋಧನನನ್ನು ಶಲ್ಯ ಸಹಜವಾದ ಏಕವಚನದಿಂದಲೇ ಮಾತಾಡಿಸುತ್ತಾನೆ:

೧೨೫. ನೀಂ ದಯೆಗೆಯ್ದು ಪೇೞ್ದಿಯಿದನಾರ್ ಪಡೆವರ್ ಫಣಿರಾಜಕೇತನಾ ೧೨-೯೪

೧೨೬. ನೀನಿನ್ನೆನಿತಂ ಕೂರದೊಡಂ...ನಿನ್ನ ನುಡಿಯನಾನಾಜಿರಂಗದೊಳ್...೧೨-೯೫

೧೨೭. ನೃಪ ನೀಂ ನೆಗೞ್ವನ್ನೆಯಲ್ಲೆಯಾನಱುವೆನೆ...೧೨-೧೦೦

**೩.೬ ಕರ್ಣ-ಅಶ್ವತ್ಥಾಮ**

ಮಾತು ಮಾತಿಗೆ ಕರ್ಣನನ್ನು ಮೀಂಗುಲಿಗ, ಸೂತಪುತ್ರನೆಂದು ಹಳಿಯುತ್ತ ಮಾನಭಂಗ ಮಾಡುತ್ತ, ತಾನು ಉತ್ತಮ ಜಾತಿಯವನೆಂದು ತನಗೆ ಗೌರವ ಬಹುವಚನವನ್ನೂ, ಇತರರಿಗೆ ಏಕವಚನವನ್ನೇ ಬಳಸುವ ಅಶ್ವತ್ಥಾಮ ತನ್ನನ್ನು ಏಕವಚನದಲ್ಲೇ ಕರೆದರೂ, ಕರ್ಣ ಇಂತಹ ಅವಮಾನಿತ ಸಂದರ್ಭದಲ್ಲೂ ಅಶ್ವತ್ಥಾಮನನ್ನು ಗೌರವ ಬಹುವಚನದಿಂದಲೇ ಸಂಬೋಧಿಸುವುದು ಸಾಮಾಜಿಕ ಕಟ್ಟುಪಾಡುಗಳಿಂದ ಎನ್ನಬಹುದು.

೧೨೮. ಏಂ ನಿಮಗೞ್ತಿಯೋ ಗಂಡವಾತುಗಳ್...೧೨-೪೧

೧೨೯. ..ನಿಷ್ಕಾರಣಂ ಕೆಯ್ದುವಿಕ್ಕುವ ಕಣ್ಣೀರ್ಗಳನಿಕ್ಕುಮೀಯೆರಡಂ ನಿಮ್ಮಯ್ಯನೊಳ್ ಕಲ್ತಿರೇ ೧೨-೪೪

ಹೀಗೆ ಎಷ್ಟು ತಡೆ ಹಿಡಿದರೂ, ಉಕ್ಕಿ ಬರುತ್ತಿರುವ ಕೋಪ ಮೇರೆ ಮೀರಿದಾಗ, ಕರ್ಣ ಒಮ್ಮೆ ಮಾತ್ರ ಅಶ್ವತ್ಥಾಮನನ್ನು 'ನೀನು' ಎಂದು ಕರೆಯುತ್ತಾನೆ. ಕರ್ಣ ಸತ್ತಲ್ಲದೆ ತಾನು ಬಿಲ್ಲು ಹಿಡಿಯೆನೆಂದು ಅಶ್ವತ್ಥಾಮ ಶಪಥ ಮಾಡಿದಾಗ, ಕರ್ಣನನ್ನು ಒಂದೇ ಮಾತಿನಿಂದ, 'ಮುಳಿಸುವೆರಸಿದ ಮುಗುಳ್ನಗೆಯಿಂದ...' ಎಂದು ಪಂಪ ಸೊಗಸಾಗಿ ವರ್ಣಿಸುತ್ತಾನೆ. ಈ ಸ್ಥಿತಿಯಲ್ಲಿ ಅವನು, 'ನಿಮ್ಮಯ್ಯನೊಳ್ ಕಲ್ತಿರೇ' ಎಂದು ಹೇಳುವ ಮೊದಲಿಗೆ ಆಡುವ ಮಾತು:

೧೩೦. ..ಎನ್ನ ಕೈದುವಿನೊಳ್ ತೀರದುದಾವ ಕೈದುವಿನೊಳಂ ತೀರ್ದಪ್ಪುದೇ, ನಿನ್ನ ಕೈದುವನೆಂತುಂ ಬಿಸುಟಿರ್ದ ಲೆಕ್ಕಮೇ ವಲಂ ೧೨-೪೪

ಎಂಬಲ್ಲಿ ಒಮ್ಮೆ ಮಾತ್ರ ಅಶ್ವತ್ಥಾಮನಿಗೆ ಏಕವಚನ ಪ್ರಯೋಗ ಮಾಡುತ್ತಾನೆ. ಆದರೆ ಅಶ್ವತ್ಥಾಮ ಮರೆತಾದರೂ ಅವನಿಗೆ ಗೌರವ ಬಹುವಚನವನ್ನು ಉಪಯೋಗಿಸದೆ ಬಹಳ ಸಹಜವಾಗಿ, ನೀನು, ನೀನು ಎಂದು ಹಲವು ಸಲ ಕರೆಯುತ್ತಾನೆ:

೧೩೧. ..ನಿನ್ನನೆ ಪೀನಂ ನಚ್ಚಿ ನಿನ್ನಾಳ್ದನೆ ನುಡಿಯಿಸೆ ನೀನಾಡಿದೈ..೯-೪೫

೧೩೨. ..ನೀನೆ ನಿಲ್..ತೋಱುವಂ ನೀನುಮಾನುಂ ೯-೪೫, ಎಂಬುದಾಗಿ.

## ೩.೬ ಕೃಷ್ಣ ಮತ್ತು ಇತರ ಪಾತ್ರಗಳು

ಕೃಷ್ಣ ತನಗೆಲ್ಲಿಯೂ ಬಹುವಚನವನ್ನು ಉತ್ತಮ ಪುರುಷದಲ್ಲಿ ಆರೋಪಿಸಿ ಮಾತನಾಡುವುದಿಲ್ಲ. ಬೇರೆಯವರನ್ನು ಕುರಿತಾಡುವಾಗ ಒಮ್ಮೆ ಮಾತ್ರ ಅವನು ಧರ್ಮರಾಯನನ್ನು ಗೌರವ ಬಹುವಚನದಿಂದ ಸಂಬೋಧಿಸುತ್ತಾನೆ. ಉಳಿದ ಎಲ್ಲರನ್ನೂ ಅವನು ಕರೆಯುವುದು ಏಕವಚನದಲ್ಲೆ-ಎಂಬುದು ಗಮನಾರ್ಹ. ಭೀಷ್ಮನ ವ್ಯಕ್ತಿತ್ವದಂತೆ ಕೃಷ್ಣನ ಸ್ಥಾನವೂ ಉಳಿದೆಲ್ಲ ಪಾತ್ರಗಳಿಗಿಂತ ಹಿರಿದೆಂದು ಇದರಿಂದ ವ್ಯಕ್ತವಾಗುತ್ತದೆ. ಅರ್ಜುನನಿಗೆ ಹಾಗೂ ಭೀಮನಿಗೆ ಅವನೊಡನೆ ಸಮಾನ ಸಲುಗೆಯಿದೆ. ಆದುದರಿಂದ ಅವರಿಬ್ಬರೂ ಅವನೊಡನೆ ಮಾತಾಡುವಾಗ ಏಕವಚನದ ಬಳಕೆಯೇ ಬರುತ್ತದೆ. ಧರ್ಮರಾಯ ವಯಸ್ಸಿನ ಹಿರಿತನದಿಂದ ಅವನನ್ನು ಏಕವಚನದಲ್ಲಿ ಕರೆಯಬಹುದು, ಹಾಗೆ ಕರೆಯುತ್ತಾನಾದರೂ, ಔಪಚಾರಿಕ ಸನ್ನಿವೇಶದಲ್ಲಿ ಹಾಗೂ ಯುದ್ಧದ ಸಂಕಟ ಸನ್ನಿವೇಶದಲ್ಲಿ ಅವನನ್ನು ಗೌರವ ಸಂಬೋಧನೆಯಿಂದ ಕರೆಯುವುದಿದೆ.

೧೩೩. .....ಪಿಡಿದೆತ್ತಲೆಂದು ಬಂದೈ ಬರವಂ....೯-೧೫

೧೩೪. ...ನಿನ್ನ ಮಹತ್ವದಿಂದಮೆ ೯-೧೭

೧೩೫. ..ನೀನೆ ಪೇೞ್ ಬಗೆದು ಕಜ್ಜಮನ್ ೯-೧೫

ಎಂಬಲ್ಲಿ ಏಕವಚನದಲ್ಲೇ ಧರ್ಮರಾಯ ಕೃಷ್ಣನನ್ನು ಕರೆದರೆ ಇತರೆಡೆಗಳಲ್ಲಿ:

೧೩೬. ನಿಮ್ಮೀ ಬಸಿಱಂ ಪೊಕ್ಕೆಮ್ಮಯ್ವರ ೯-೧೬

೧೩೭. ನಿಮ್ಮನುಬಲದೊಳಂ ೯-೧೭

೧೩೮. ನಿಮ್ಮ ಪಿಡಿದೆನಗರಿದೆನಲ್...೧೧-೨೫

೧೩೯. ಆರ್ಗೆ ವೀರಪಟ್ಟಮಂ ಕಟ್ಟುವಂ ಪೇೞಿಂ ೧೦-೩೩, ೧೧-೪೮.

ಎಂದು ಗೌರವದ ಬಹುವಚನವನ್ನು ಪ್ರಯೋಗಿಸುತ್ತಾನೆ. ಇದೇ ಸಂದರ್ಭದಲ್ಲಿ ಎರಡರ ಮಿಶ್ರವಾದ ಮಾತೂ ಬರುತ್ತದೆ:

೧೪೦. ....ಪಾಳಿಸುವೈ ನೀನೆ, ನಿಮ್ಮೊಳಾಳೋಚಿಸದೆ ೬-೨೨.

ಕೃಷ್ಣ ೩ ರಲ್ಲಿ ಕೊಟ್ಟಂತೆ ಬಹುವಚನದಿಂದ ಧರ್ಮರಾಯನನ್ನು ಒಮ್ಮೆ ಕರೆದರೂ ಮತ್ತೆ ಏಕವಚನದಿಂದಲೇ ಕರೆಯುತ್ತಾನೆ.

೧೪೧. ...ನಿನಗಾಳ್ವೆಸಕೆಂದಿರ್ದನಲ್ತೆ ಧೃಷ್ಟದ್ಯುಮ್ನಂ ೧೧-೫

೧೪೨. ...ನೀನೆಂದಂತು...ನಿನಗೇನೆಂದು...ನಿನ್ನ ಮುಂದೀಗಳ್...೯-೧೮

## ೩.೬.೧ ಕೃಷ್ಣ-ದುರ್ಯೋಧನ

ದುರ್ಯೋಧನ ಮತ್ತು ಕೃಷ್ಣ ಇವರ ನಡುವಣ ಮಾತುಕತೆಯ ಸಂಬಂಧವೂ ಕುತೂಹಲಕರವಾಗಿದೆ. ವಿರೋಧ ಪಕ್ಷಕ್ಕೆ ಸೇರಿದ ಕೃಷ್ಣನೊಡನೆ ದುರ್ಯೋಧನ, ಅವನು ಸಂಧಿಯ ಮಾತಾಡುವಾಗ ಮೊದಲು ನಯ ವಿನಯದಿಂದ ಕೂಡಿದ ಗೌರವದಿಂದಲೇ ಔಪಚಾರಿಕವಾಗಿ ಬಹುವಚನ ಪ್ರಯೋಗದಿಂದ ಮಾತಾಡಿಸುತ್ತಾನೆ.

೧೪೩. ..ಆವ ಬೆಸನಂ ಬೆಸಸಲ್ ಬಂದಿರ್ ೯-೩೩

೧೪೪. ..ನೆಟ್ಟನೊಟ್ಟಜೆಯಿನಂಜಿಸಿಕೊಳ್ಳದಿರ್ಪಿರೇ ೯-೪೭

೧೪೫. ..ನಿಮ್ಮಡಿ ಕೆಮ್ಮನೆ ಬಟಲಿಸಲ್ವೇಡ...೯-೪೭

ಎಂಬಲ್ಲೆಲ್ಲ ಗೌರವದ ಬಹುವಚನ ಪ್ರಯೋಗವಾಗಿದೆ. ಆದರೆ ಪಾಂಡವರಿಗೆ ರಾಜ್ಯಕೊಡಬೇಕೆಂದು ಸಂಧಿಯ ಮಾತನ್ನು ಕೃಷ್ಣ ಎತ್ತಿದುದೇ ತಡ, ದುರ್ಯೋಧನನಿಗೆ ಕೋಪವೊತ್ತರಿಸಿ ಬಂದು, ಮತ್ತೆಲ್ಲ ಕೃಷ್ಣನನ್ನು ಏಕವಚನದಿಂದಲೇ ಸಂಬೋಧಿಸುತ್ತಾನೆ.

೧೪೬. ..ಗೋವುಗಾದ ಕಿಱಿಯಂದಿನ ಗೋವಿಕೆ ನಿನ್ನ ಚಿತ್ತದೊಳ್...೯-೪೪

೧೪೭. ..ವೈಷ್ಣವ ಮೋಹಮೆ ನಿನ್ನ ಮೈಯೊಳಗ್ಗಲಿಸಿದುದಕ್ಕಂ ೯-೪೪

೧೪೮. ..ಅಲ್ಲದೊಡೆ ನೀನಿನಿತಂ ನುಡಿವೈ ಪಳಾಳಮಂ ೯-೪

೧೪೯. ..ನೀಂ ಮಂತ್ರಿಯಾಗೆ..೯-೪೭

೧೫೦. ..ಏಟ್ಬೋಗು...ನೀನುಂ ಮೆಟ್ಟುಟ್ಟು ನುಡಿಯಿಸೆ ನುಡಿದೈ ೯-೫೮

ಕೃಷ್ಣ ಕೇವಲ ಒಂದೆರಡು ಸಲ ಮಾತ್ರ ಧರ್ಮರಾಯನನ್ನು ಗೌರವ ಬಹುವಚನದಿಂದ ಕರೆಯುತ್ತಾನೆಂದು ಹಿಂದೆ ನೋಡಿದ್ದೇವೆ. ಆತ ತನಗೆ ಹಿರಿಯಳಾದ ಸೋದರತ್ತೆಯೆಂಬ ಗೌರವದಿಂದ ಕುಂತಿಯನ್ನುದ್ದೇಶಿಸಿ ಮಾತಾಡುವಾಗ:

೧೫೧. ..ನೀಮುಂ ನಿಮ್ಮ ಚೊಚ್ಚಿಲ ಮಗನಪ್ಪ...ಮಾಡಿ ಬನ್ನಿಂ...೯-೬೩ ಎಂದು ಗೌರವ ಬಹುವಚನವನ್ನುಪಯೋಗಿಸುತ್ತಾನೆ. ಉಳಿದೆಲ್ಲರನ್ನೂ ಅವನು ಮಾತಾಡಿಸುವುದು ಏಕವಚನದಲ್ಲೇ. ಹಾಗೆಯೇ ದುರ್ಯೋಧನನನ್ನೂ ಮೊದಲಿಂದಲೂ ಅವನು ಏಕವಚನದಲ್ಲೇ ಕರೆಯುತ್ತಾನೆ:

೧೫೨. ..ನಿನಗೀ ಕುವಳಯಪತಿಯೆಂಬ ಪೆಂಪು ೯-೩೭

೧೫೩. ...ನಿನಗೆ ಕುರುಕುಳಾಂಬರ ಭಾನೂ ೯-೩೯

೧೫೪. ..ನಿನಗೊಡವುಟ್ಟಿದರಾದೊರೆಯರಾಗೆ ೯-೪೦

೧೫೫. ..ನೀಂ ಕರುಣಿಸಿದಾಗಳಲ್ಲದವರ್ಗಾಱದು ೯-೪೨

೧೫೬. ..ನಾಡ ಚಲ್ಲವತ್ತರ ನುಡಿಗೊಳ್ಳದಿರ್ ೯-೪೨

೧೫೭. ..ನಿನಗೆ ಪಾಂಡವರಪ್ಪುದನಾರುಮಪ್ಪರೇ ೯-೫೨

೧೫೮. ..ದಯೆಗೆಯ್ದು ನೀಂ ಕುಡುವಿನಂ ಪೆಱತೇಮಾತೊ ೯-೪೩

ತನ್ನನ್ನುದ್ದೇಶಿಸಿ ಮಾತಾಡುವವನು ತನಗೆ ಗೌರವ ಬಹುವಚನವನ್ನು ಉಪಯೋಗಿಸಿದರೂ, ತಾನು ಅವನಿಗೆ ಏಕವಚನವನ್ನೇ ಉಪಯೋಗಿಸಿ ಮಾತಾಡುವುದು, ತನ್ನ ಹಿರಿತನಕ್ಕೆ ಸಾಕ್ಷಿ. ಅದರಂತೆ ಕೃಷ್ಣ ತನ್ನ ಹಿರಿತನಕ್ಕನುಗುಣವಾಗಿಯೇ ಮಾತಾಡುತ್ತಾನೆ. ಕೇವಲ ಪ್ರಾಯದ ಪೆಂಪು ಮಾತ್ರ ಕಾರಣವಾಗಿದೆಯೆಂಬುದಕ್ಕೆ ಎಲ್ಲ ವ್ಯಕ್ತಿಗಳೂ ಸರಿಬರುವುದಿಲ್ಲ. ಆ ರೀತಿ ನೋಡಿದರೆ, ಕರ್ಣ ಧರ್ಮರಾಯನಿಗಿಂತಲೂ ಹಿರಿಯ. ಕೃಷ್ಣನಿಗೂ ಇದು ಗೊತ್ತಿದೆ. ಆದರೂ ಕೃಷ್ಣ ಕರ್ಣನನ್ನು ಏಕವಚನದಿಂದಲೂ, ಕರ್ಣ ಕೃಷ್ಣನನ್ನು ಗೌರವ ಬಹುವಚನದಿಂದಲೂ ಮಾತಾಡಿಸುವುದು ಕಾಣುತ್ತದೆ. ಅದು ವ್ಯಕ್ತಿಯ ಅಂತಸ್ತನ್ನೂ ಹೊಂದಿಕೊಂಡಿದೆಯೆಂಬುದು ಸ್ಪಷ್ಟ.

**೬. ೨. ಕೃಷ್ಣ-ಕರ್ಣ**

೧೫೯. ..ಕೇಳ ಕರ್ಣ ನಿನ್ನಾದಿಯೊಳಬ್ಬೆ ಕೊಂತಿ...ನಿನಗಮ್ಮನಹರ್ಪತಿ...
ನಿನ್ನದೀ ಮೇದಿನಿ...ಪಟ್ಟಮುಂ ನಿನತೆ...ನೀನಿರೆ...೯-೬೪

೧೬೦. ..ನಿನ್ನುತ್ಪತ್ತಿಯನ್...ನಿನ್ನಂಬಿಕೆ ಕೊಂತಿ...೯-೬೪

೧೬೧. ..ನಿನ್ನನೇತಱಿನೊಳ್ ನಂಬಿದನ್...ನೀನುಂ ತಾನುಂ...ನಿನಗೆ ಮುನ್ನಮೇರಲ್
ತರಿಸಿದೊಡೆ...ನಿನ್ನಂ ಪೋಗಲ್ವೇೞ್ದು...೯-೬೬

ಆದರೆ ಇದಕ್ಕೆ ಉತ್ತರವಾಗಿ ಕರ್ಣ ಮಾತಾಡುವಾಗ:

೧೬೨. ..ಮುನ್ನೆ ನೀವೆನಗಿದನೇಕೆ ಪೇೞ್ದಿರೊ...

೧೬೩. ..ಪಾಂಡವರನೊಳಪೊಕ್ಕಡೆ ನೀಮ ಪೇಸಿರೇ ೯-೬೮

೧೬೪. ..ನಿಮ್ಮೊಳೆ ಪೊಕ್ಕೊಡೆ ಬೇಡನಲ್ಲನೇ ೯-೬೯

ಎಂದು ಗೌರವ ಬಹುವಚನದಲ್ಲೇ ಉತ್ತರಿಸುತ್ತಾನೆ.

**೩. ೭. ಇತರ ಪಾತ್ರಗಳು**

ಹೀಗೆ ಸರ್ವರಿಂದಲೂ ಗೌರವಭಾಜನನಾದ ಕೃಷ್ಣನನ್ನು ಲೆಕ್ಕಿಸದ ಶಿಶುಪಾಲನಂತಹರ ಮಾತಿನಲ್ಲಿ ಅವನ ಬಗ್ಗೆ ಗೌರವದ ಸುಳಿವೇ ಇಲ್ಲ. ೬-೫೦ರಿಂದ ೬-೫೭ರವರೆಗಿನ ಕಂದ ಪದ್ಯಗಳಲ್ಲಿ ಶಿಶುಪಾಲ ಕೃಷ್ಣನನ್ನು 'ನೀನು' ಎಂಬ ಏಕವಚನ ರೂಪವನ್ನೇ ಬಳಸಿ ಬಯ್ಯುವಂತೆ ಪಂಪ ಬರೆದಿದ್ದಾನೆ. ಶಿಶುಪಾಲನಂತೆಯೇ ಇತರ ಕೆಲವು ಪಾತ್ರಗಳು

ಅಹಂಕಾರ-ದರ್ಪದಿಂದ ತಾವೇ ತಾವಾಗಿ ವಿಜೃಂಭಿಸುತ್ತವೆ. ದುರ್ಯೋಧನನನ್ನು ಸೆರೆ ಹಿಡಿದು ಕೊಂಡು ಹೋದ ಚಿತ್ರಾಂಗದನೆಂಬ ಗಂಧರ್ವ, ಭೀಷ್ಮ, ದ್ರೋಣಾದಿಗಳಂತಹ ಗೌರವಾನ್ವಿತ ವ್ಯಕ್ತಿಗಳನ್ನೂ ಏಕವಚನದಿಂದಲೇ ಸಂಬೋಧಿಸುತ್ತಾನೆ. ಅವನು ಗಂಧರ್ವನಾದುದರಿಂದ, ಬಹುಶಃ ಅವನ ಭಾಷಾ ವ್ಯಾಕರಣದಲ್ಲಿ ಗೌರವ ಬಹುವಚನರೂಪದ ಬಳಕೆಯಿಲ್ಲದಿದ್ದಿರಬಹುದು:

೧೬.೫. ಮಿಡುಕದೆ ಭೀಷ್ಮ ನೋಡುತ್ತಿರು ಕುಂಭಜ ಸುರ್ಕಿರು ಕರ್ಣ ಮಿಕ್ಕುಮಾರ್ನುಡಿಯದೆ ಮೂಗುವಟ್ಟಿರು ಗುರು ಪ್ರಿಯನಂದನ ಕೂಗಡಂಗದಿರ್ದೊಡೆ ಬರ್ದುಕಾವುದಿರ್ ಪೊಡರ್ದೊಡೀಗಡೆ ಕೊಂದಪೆನೆಂದುಕೊಡೆ ಕಣ್ಗಿಡೆ ಜಡಿದುಯ್ದನಾ ಖಚರನಿರ್ವರುಮಂ ಪರಮಾಣು ಮಾರ್ಗದಿಂ

## ೪.೦ ಸಾಮಾಜಿಕ ರೂಢಿ

ಮಧ್ಯಮಪುರುಷದಲ್ಲಿ ಏಕವಚನವನ್ನೇ ಉಪಯೋಗಿಸಿ ಮಾತಾಡುವ ಪರಿಪಾಠ ಕೆಲವು ಹಂತದ ಪಾತ್ರಗಳಲ್ಲಿರುವುದನ್ನು ವಿ.ವಿ. ದಲ್ಲಿ ಕಾಣುತ್ತೇವೆ. ಕರ್ಣ-ದುರ್ಯೋಧನರಲ್ಲಿ ಆತ್ಮೀಯತೆಯ ಕಾರಣದಿಂದ, ತಾವಿಬ್ಬರೂ ಅನೌಪಚಾರಿಕವಾಗಿ, 'ನೀನು' 'ತಾನು' ಎಂದು ಕರೆದುಕೊಳ್ಳಬೇಕೆಂದು ದುರ್ಯೋಧನನೇ ಕರ್ಣನಲ್ಲಿ ಕೇಳಿಕೊಂಡಿದ್ದಾನೆ. ಸಮಾನ ವಯಸ್ಕರಲ್ಲಿ ಮಿತ್ರರಾಗಿರುವವರಲ್ಲಿ ಇದು ಹೆಚ್ಚು ಕಡಿಮೆ ಇಂದಿಗೂ ನಡೆಯುತ್ತಿರುವ ಪದ್ಧತಿಯೇ ಆಗಿದೆ. ಕೌಪೀನ ಮಿತ್ರರಾಗಿದ್ದವರು, ಕಂಠಕೌಪೀನಧಾರಿಗಳಾಗುವ ಹೊತ್ತಿಗೆ ಪರಸ್ಪರರನ್ನು 'ನೀನು' ಎಂದು ಕರೆಯುವುದಕ್ಕೆ ಸಂಕೋಚವುಂಟಾಗಿ, 'ನೀವು' ಎಂದು ಸಂಬೋಧಿಸಲು ಆರಂಭಿಸುತ್ತಾರೆ. ಕೆಲವೊಮ್ಮೆ ಇದಕ್ಕೂ ಸಂಕೋಚವಾಗಿ, ಒಪ್ಪಂದ ಮಾಡಿಕೊಳ್ಳುತ್ತಾರೆ; ಒಪ್ಪಂದವನ್ನು ಮುರಿಯುತ್ತಾರೆ. ಇದು ಸಮಾಜದ ಒಂದು ಸ್ತರ. ವಿ.ವಿ.ದಲ್ಲಿ ಅರಸ-ಆಳು; ವಿಟ-ವೇಶ್ಯೆ; ಯಜಮಾನ-ಸೇವಕರು ಮುಂತಾದವರೆಲ್ಲ ಪರಸ್ಪರ ಏಕವಚನದಲ್ಲಿಯೇ ಮಾತಾಡುವ ಕ್ರಮವಿರುವುದನ್ನು ಕಾಣುತ್ತೇವೆ. ಉದಾ: ವಿರಾಟನೊಡನೆ ಧರ್ಮರಾಯ, ಭೀಮಾದಿಗಳು, ಅಂತೆಯೇ ಸೈರಂಧ್ರಿಯಾದ ದ್ರೌಪದಿ ಸುದೇಷ್ಣೆಯೊಡನೆ, ಆಡುವ ಮಾತುಗಳು ಹಾಗೂ ನಾಲ್ಕನೆಯ ಆಶ್ವಾಸದಲ್ಲಿ ಬರುವ ವಿಟನ ಮತ್ತು ವೇಶ್ಯೆಯರ ಮಾತುಗಳು. ಇವೆಲ್ಲ ಏಕವಚನದಲ್ಲೇ ಇವೆ. ಇಂದಿಗೂ ಸಮಾಜದ ಕೆಳಸ್ತರದ ವ್ಯಕ್ತಿಗಳಲ್ಲಿ ಇದು ವಾಡಿಕೆಯಲ್ಲಿದೆ. ತಮ್ಮ ತಮ್ಮಲ್ಲಿ ಮಾತ್ರವಲ್ಲ, ಸರ್ವತ್ರವಾಗಿ ಅಂಥವರು ಏಕವಚನವನ್ನೇ ಮಾತಿನಲ್ಲಿ ಬಳಸುವುದು ಸಹಜವಾಗಿದೆ.

ಹೀಗೆ ವಿ.ವಿ.ದಲ್ಲಿ ಹಿರಿಯ-ಕಿರಿಯ, ಮೇಲಂತಸ್ತಿನ, ಜಾತಿಯ, ಪದವಿಯ ಅಂತರಗಳು ಸ್ಫುಟವಾಗುವಂತೆ ಸರ್ವನಾಮಗಳನ್ನು ಗೌರವ ಬಹುವಚನದಿಂದ ಅಥವಾ ಕೇವಲ ಏಕವಚನದಿಂದ ಉಪಯೋಗಿಸುವುದನ್ನು ಕಾಣುತ್ತೇವೆ. ಆಯಾ ಪಾತ್ರಗಳ ಸ್ವಭಾವವನ್ನು ತಕ್ಕ ರೀತಿಯ ಸರ್ವನಾಮ ರೂಪಗಳನ್ನು ಉಪಯೋಗಿಸುವುದರಿಂದ ಅರ್ಥಶೋಭೆಯನ್ನು ಪಂಪ ಕೌಶಲದಿಂದ ಉಂಟುಮಾಡುತ್ತಾನೆ. ಇದನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ಇದರಿಂದ ಪಂಪನ ಕಾಲದ ಸಾಮಾಜಿಕ ಹಾಗೂ ವೈಯಕ್ತಿಕ ರೀತಿ ನೀತಿಗಳ ಹೊಳಹು ದೊರೆಯುತ್ತದೆ. ಆಯಾ ಪಾತ್ರಗಳ ಸ್ತರಗಳು ಮತ್ತು ಸ್ವಭಾವಗಳು ಈ ರೀತಿಯಿವೆ:

೧. ವಯಸ್ಸಿನ ಕಾರಣದಿಂದ ಯಾವಾಗಲೂ ಗೌರವ ಭಾಜನರು:
ಉದಾ: ಭೀಷ್ಮ, ದ್ರೋಣಾದಿಗಳು.

೨. ಜಾತಿಯ ಕಾರಣದಿಂದ ಯಾವಾಗಲೂ ಗೌರವ ಭಾಜನರು:
ಉದಾ: ಬ್ರಾಹ್ಮಣರು ಮತ್ತು ಋಷಿಗಳು

೩. ಕೇವಲ ವೈಯಕ್ತಿಕ ಔನ್ನತ್ಯದಿಂದ ಶ್ರೇಷ್ಠರಾಗಿ ಪರಿಗಣಿತರಾದವರು:
ಉದಾ: ಭೀಷ್ಮ ಮತ್ತು ಕೃಷ್ಣ.

೪. ಶಿಷ್ಟಸಂಪ್ರದಾಯದವರು:
ಉದಾ: ಧರ್ಮರಾಯ, ದುರ್ಯೋಧನ, ಭೀಮ, ಅರ್ಜುನ, ಕರ್ಣ, ಶ್ವೇತಕೇತು, ದ್ರೌಪದಿ.

೫. ಅಹಂಕಾರಿಗಳು: ಉದಾ: ಶಿಶುಪಾಲ, ಚಿತ್ರಾಂಗದ, ಶಲ್ಯ.

೬. ಸಾಮಾನ್ಯರು: ಉದಾ: ಸ್ತ್ರೀಪಾತ್ರಗಳು; ಅರಸ-ಆಳು; ಯಜಮಾನ-ಸೇವಕ; ಗಂಡ-ಹೆಂಡತಿಯರು; ವಿಟ-ವೇಶ್ಯೆಯರು; ಅಣ್ಣ-ತಮ್ಮಂದಿರು; ಅಕ್ಕ-ತಂಗಿಯರು.

*ಸಾಧನೆ, ೧೫-೩, ೪ ೧೬-೧, ೨ ೧೯೮೬-೮೭, ಪು.೩೬-೪೦*

# ೨೪. ಪಂಪನ ದೇಸಿ

● ಕೆ. ವಿ. ನಾರಾಯಣ

ಬಗೆ ಪೊಸತಪ್ಪುದಾಗಿ ಮೃದುಬಂಧದೊಳೊಂದುವುದೊಂದಿ ದೇಸಿಯೊಳ್
ಪುಗುವುದು ಪೊಕ್ಕು ಮಾರ್ಗದೊಳೆ ತಳ್ವುದು ತಳ್ತೊಡೆ ಕಾವ್ಯಬಂಧಮೊ
ಪ್ಪುಗುಮುವೆಳಮಾವು ಕೆಂದಳಿರ ಪೂವಿನ ಬಿಣ್ಪೊಱೆಯಿಂ ಬಱಲ್ದು ತುಂ
ಬಿಗಳಿಸೆ ತುಂಬಿ ಕೋಗಿಲೆಯ ಬಗ್ಗಿಸೆ ಸುಗ್ಗಿಯೊಳೊಪ್ಪುವಂತೆ ವೋಲ್ ॥ ವಿ.ವಿ. (೧-೮)

ಈ ವೃತ್ತದಲ್ಲಿ ಪಂಪ ಕಾವ್ಯಪದ್ಧತಿಯ ಬಗ್ಗೆ ತನ್ನ ನಿಲುವನ್ನು ಹೇಳುತ್ತಿದ್ದಾನೆ. ಕಾವ್ಯದ ಸೊಬಗಿನ ಈ ಆದರ್ಶ ಸ್ಥಿತಿ, ಪಂಪನ ಪ್ರಕಾರ ಅವನ ಕಾವ್ಯವನ್ನು ಕುರಿತ ಮಾತೂ ಆಗಬಹುದಾಗಿದೆ. ಕಾವ್ಯದ ಒಟ್ಟು ಸೊಬಗಿಗೆ ಕಾರಣವಾಗುವ ಅಂಗಗಳು ಮತ್ತು ಅವುಗಳ ನಡುವಿನ ಅನುರೂಪತೆಯನ್ನು ಇಲ್ಲಿ ಒತ್ತಿ ಹೇಳಲಾಗಿದೆ. 'ದೇಸಿ' ಕಾವ್ಯದ ಒಂದು ಅಂಗ; ಅದು ಇತರ ಅಂಗಗಳ ನಡುವ ಕಲ್ಪಿಸಿಕೊಳ್ಳುವ ಸಂಬಂಧದ ಮೇಲೆ ಆ ಕಾವ್ಯದಲ್ಲಿ ಅದರ ಮೇಲ್ಮೆ, ಔಚಿತ್ಯ ಇತ್ಯಾದಿಗಳನ್ನು ನಿರ್ಣಯಿಸಬಹುದು. ಈ ನಿಲುವಿನಲ್ಲಿ ಪಂಪನ ದೇಸಿಯನ್ನು ಕುರಿತು ವಿವೇಚನೆ ನಡೆಸುವ ಸಾಧ್ಯತೆಗಳಿವೆ.

ನಮ್ಮ ಕವಿಗಳಲ್ಲಿ ಲಾಕ್ಷಣಿಕರಲ್ಲಿ 'ದೇಸಿ'[1] ಎನ್ನುವ ಶಬ್ದ ಮತ್ತೆ ಮತ್ತೆ ಬಳಕೆಯಾಗುವುದನ್ನು ಕಾಣುತ್ತೇವೆ. ಇದನ್ನು ಮುಖ್ಯವಾಗಿ ಎರಡು ಅರ್ಥಚ್ಛಾಯೆಯನ್ನು ಬಳಸಿದಂತೆ ತೋರುತ್ತದೆ. ಭೌಗೋಳಿಕ ವೈಶಿಷ್ಟ್ಯ (ಇಲ್ಲಿ ದೇಸಿ ಎನ್ನುವುದು ದೇಶ್ಯದ ತದ್ಭವ) ವೆನ್ನುವುದು ಒಂದು ಅರ್ಥವಾದರೆ ಚೆಲುವು', 'ಸೊಗಸು' ಎನ್ನುವುದು ಇನ್ನೊಂದು ಅರ್ಥ. ಪಂಪನಲ್ಲೇ ಇವೆರಡೂ ಅರ್ಥದಲ್ಲಿ 'ದೇಸಿ'ಯ ಉಪಯೋಗವಾಗಿದೆ.[2] ಈ ಪ್ರಬಂಧದ ಉದ್ದಕ್ಕೂ 'ದೇಸಿ' ಎಂದರೆ 'ಚೆಲುವು' ಎನ್ನುವ ಅರ್ಥವನ್ನು ಗಮನಿಸುವುದಿಲ್ಲ.

ಕನ್ನಡದ ವಿಶಿಷ್ಟ ಲಕ್ಷಣಗಳನ್ನೂ 'ದೇಸಿ' ಎಂದು ಕವಿರಾಜಮಾರ್ಗದಲ್ಲೇ ಸೂಚಿಸಲಾಗಿದೆ.[3] ಈ ವಿವರಣೆಯ ಹಿನ್ನೆಲೆಯಲ್ಲಿ ಸಂಸ್ಕೃತವಿದೆ. ಸಂಸ್ಕೃತದ ರೀತಿ (norms)ಗೆ ಸಲ್ಲದಿರುವ, ಅಂಶಗಳನ್ನೆಲ್ಲಾ 'ದೇಸಿ' ಎಂದು ಕರೆಯಲಾಗಿದೆ. 'ದೇಶ್ಯ' ಎನ್ನುವ ಸಂಸ್ಕೃತ ಪದದ ತದ್ಭವವನ್ನೂ ಬಳಸಿರುವುದು ಕೂಡ ಇದಕ್ಕೆ ಪೋಷಕವಾಗಿದೆ. ಆದ್ದರಿಂದ 'ದೇಸಿ' ಎನ್ನುವುದನ್ನೂ ಸಂಸ್ಕೃತದ ಸಂದರ್ಭದಲ್ಲಿಯೇ ವಿವರಿಸುವುದು ಅನಿವಾರ್ಯ. ಭೌಗೋಳಿಕ

---

೧ ದೇಸಿ ವೇಱೆವೇಱೆಯಪ್ಪುದಱಿಂ ವಾಸುಗಿಯುಂ ಬೇಸಱಿಸುಗುಂ

ಕವಿರಾಜಮಾರ್ಗ (೧-೪೬)

೨. ಮಿಳಿರ್ವ ಕುರುಳ್ಗಳೊಳ್ ತೊಡರ್ದು ದೇಸಿಯನಾವಗಮೀವ
ಚೆನ್ನಪೂಗಳನವನೊಯ್ಯನೋಸರಿಸುತಂ

ವಿಕ್ರಮಾರ್ಜುನವಿಜಯ (೨-೧೭)

೩ ದೋಸಮನೆ ಗುಣದವೋಲು
ದ್ಭಾಸಿಸಿ ಕನ್ನಡದೊಳೊಲ್ದು ಪೂರ್ವಾಚಾರ್ಯರ್
ದೇಸಿಯೆನೆ ನಿಱಿಸಿ ಖಂಡ
ಪ್ರಾಸಮನತಿಶಯಮಿದೆಂದು ಯತಿಯಂ ಮಿಕ್ಕರ್

(ಕವಿರಾಜಮಾರ್ಗ)

ಮಿತಿಗಳಲ್ಲಿ ಭಾಷೆಯಲ್ಲಿ ಹಲವು ವ್ಯತ್ಯಾಸಗಳನ್ನು ಕಾಣಬಹುದು. ಈ ವ್ಯತ್ಯಾಸಗಳನ್ನೆಲ್ಲಾ 'ಉಪಭಾಷೆ'ಯಲ್ಲಿ ಅಳವಡಿಸಿಕೊಂಡರೆ ಆಗ 'ದೇಸಿ'ಯ ಕಲ್ಪನೆ ಕೂಡ ಈ ಉಪಭಾಷೆಯ ವ್ಯತ್ಯಾಸದೊಂದಿಗೆ ಬದಲಾಗುತ್ತ ಹೋಗಬೇಕಾಗುತ್ತದೆ.

ಕಾವ್ಯಮೀಮಾಂಸೆಯ ಪಾರಿಭಾಷಿಕ ಶಬ್ದವಾಗಿ 'ದೇಸಿ' ಶಬ್ದ ಬಳಕೆಯಾಗತೊಡಗಿದ ಸಂಗತಿ ವಿಚಾರಣೀಯ. ಸಂಗೀತ ಮತ್ತು ನೃತ್ಯಕಲೆಗಳಲ್ಲಿ ಇದು 'ಮಾರ್ಗ'ದ ಜತೆ ಒಂದು ಜೋಡಿಯನ್ನು ರಚಿಸಿಕೊಂಡು ಪಾರಿಭಾಷಿಕ ಶಬ್ದವಾಗಿ ಬಳಕೆಯಾಗಿದೆ. ದ್ರಾವಿಡ ಸಹಜವಾದುದಕ್ಕೆ ಅಲ್ಲಿ 'ದೇಸಿ' ಎನ್ನಲಾಗುತ್ತದೆ. ಕಾವ್ಯಮೀಮಾಂಸೆಗೂ ಇದೇ ಹಿನ್ನೆಲೆಯಲ್ಲಿಯೇ 'ದೇಸಿ'ಯ ಪ್ರವೇಶವಾಗಿರಬೇಕು. ಅಭಿವ್ಯಕ್ತಿಗೆ ಸಂಬಂಧಿಸಿದಂತೆ ಇರುವ ವ್ಯತ್ಯಾಸಗಳನ್ನು 'ಮಾರ್ಗ' ಮತ್ತು 'ದೇಸಿ'ಗಳು ಸೂಚಿಸುತ್ತವೆಯಾದ್ದರಿಂದ ಇದು ಮುಖ್ಯವಾಗಿ ಶೈಲಿಗೆ ಅಥವಾ ರೀತಿಗೆ ಸಂಬಂಧಿಸಿದ ಪ್ರಶ್ನೆ. ಸಂಸ್ಕೃತ ಕಾವ್ಯಗಳ ಪ್ರಭಾವವಿದ್ದು, ಕನ್ನಡದಲ್ಲಿ ಬರೆಯ ಹೊರಟ ನಮ್ಮ ಕವಿಗಳಿಗೆ ಅಭಿವ್ಯಕ್ತಿ ಸಮಸ್ಯೆ ಸಾಕಷ್ಟು ದೊಡ್ಡದಾಗಿತ್ತು. ಪಂಪನ ವೇಳೆಗಾಗಲೇ ಸಂಸ್ಕೃತ ಕಾವ್ಯಮೀಮಾಂಸೆಯಲ್ಲಿ ಶೈಲಿಯನ್ನು ವಿಂಗಡಿಸಲು ಎರಡು ವಿಧಾನಗಳನ್ನು ಅನುಸರಿಸಿಯಾಗಿತ್ತು. ಮೊದಲನೆಯ ವರ್ಗೀಕರಣದಲ್ಲಿ ಭಾಷೆಯ ಸಮಾಸಯುಕ್ತತೆ ಮತ್ತು ಕೆಲವು ಶಬ್ದಗುಣಗಳು ಆಧಾರವಾಗಿದ್ದು, ಈ ವರ್ಗೀಕರಣದಲ್ಲಿ ಮೇಲು ಕೀಳಿನ ಬಣ್ಣವಿದೆ. ಎರಡನೆಯದಕ್ಕೆ ಪ್ರಾದೇಶಿಕ ಉಪಭಾಷೆಗಳು ಮಾತ್ರ ಆಧಾರವಾಗಿದ್ದು ಈ ವಿಂಗಡಣೆ ವಸ್ತುಸ್ಥಿತಿಯ ವಿವರಣೆ ಮಾತ್ರ.

ರೀತಿಯ ವಿಚಾರದಲ್ಲಿ ಸಂಸ್ಕೃತ ಕಾವ್ಯವನ್ನು ಅನುಸರಿಸಿದಾಗ ಮಾರ್ಗಶೈಲಿ ಕನ್ನಡದಲ್ಲಿ ಸಿದ್ಧವಾಯಿತು. ಇದರ ಜತೆಯಲ್ಲಿಯೇ 'ದೇಸಿ' ಎಂದು ಕರೆಯಲಾಗುವ ಶೈಲಿಯ ಜನಪದಕಾವ್ಯವೂ ಇತ್ತು. ಇವೆರಡಕ್ಕೂ ಅರ್ಥಾತ್ ಸಂಬಂಧವಿದ್ದಿರಲಾರದು. ಸಂಸ್ಕೃತದಲ್ಲಿ ಆದರ್ಶವೆಂದು ಹೇಳಲಾಗುವ ರೀತಿಯ ಚೌಕಟ್ಟನ್ನು ಅನುಸರಿಸಿದಾಗ ಸಮಾಸಯುಕ್ತತೆಯನ್ನು ಕಾಯ್ದುಕೊಳ್ಳಲು ಸಂಸ್ಕೃತ, ಕನ್ನಡಗಳ ಮಿಶ್ರಣವನ್ನು ಅಭಾಸವೆಂದು, ಅಹಿತವೆಂದು ಹೇಳುವ ಪ್ರವೃತ್ತಿಯೂ ಬಲವಾಗಿತ್ತು.

ಸಂಸ್ಕೃತದ ಚೌಕಟ್ಟಿನ ಶೈಲಿ ಆಕರ್ಷಣೆ (ಅದಕ್ಕೆ ಆಗ ಮಾನ್ಯತೆ ಇತ್ತು) ಮತ್ತು ಸಂಸ್ಕೃತ ಕನ್ನಡಗಳ ಮಿಶ್ರಣಕ್ಕೆ ಇದ್ದ ಪ್ರತಿರೋಧ. ಇವೆರಡರ ನಡುವೆ ಇದ್ದ ವಿರೋಧವನ್ನು ಪರಿಹರಿಸಿಕೊಳ್ಳುವುದು ಆಗಿನ ಕವಿಯ ಸಮಸ್ಯೆ. ಇದು ಪ್ರತಿಯೊಬ್ಬರನ್ನು ಎದುರಿಸಿದರೂ, ಅದಕ್ಕೆ ಪ್ರತಿಯೊಬ್ಬನ ಉತ್ತರವೂ ಬೇರೆ ಬೇರೆ. ಈ ಉತ್ತರದ ಒಂದು ತುದಿಯಲ್ಲಿ 'ಶುದ್ಧದೇಸಿ' ಇದ್ದರೆ ಇನ್ನೊಂದು ತುದಿಯಲ್ಲಿ 'ಶುದ್ಧಮಾರ್ಗ'ವಿರುತ್ತವೆ. ದೇಸಿಯ ಕಲ್ಪನೆ ಮಾರ್ಗವನ್ನು ಹೊಂದಿಕೊಂಡೇ ಬರುವುದನ್ನು ಈಗ ಸ್ಪಷ್ಟಪಡಿಸಿಕೊಂಡಂತಾಗಿದೆ.

ಶೈಲಿಯಲ್ಲಿ ಪ್ರಾದೇಶಿಕ ಅಂಶಗಳು ನುಸುಳುವುದು ರುದ್ರಟನ ಪ್ರಕಾರ ದೋಷ.[1] ಪಂಡಿತರಿಂದ ಮಾನ್ಯ ಮಾಡಲಾದ ಶಿಷ್ಟ ಕನ್ನಡದಲ್ಲಿ ಬರೆಯುವ ಕವಿ ತನ್ನ ಉಪಭಾಷೆ ಅಂಶಗಳನ್ನು ಬೆರೆಸುವುದೂ ಹೀಗೆ ದೋಷವಾಗಬೇಕಲ್ಲವೇ? ಆದರೆ ಔಚಿತ್ಯದ ನೆಲೆಯೊಂದಿದೆ. ಅದನ್ನು ಹೊಂದಿದ ದೋಷ ಗುಣವೇ ಆಗುತ್ತದೆ. ದೇಸಿ-ಉಪಭಾಷೆಯ

---

೧. ರುದ್ರಟ ಪದ-ದೋಷಗಳನ್ನು ಹೇಳುವಾಗ (೬-೭) 'ದೇಶ್ಯ'ವನ್ನು 'ಗ್ರಾಮ್ಯ'ದ ಜತೆ ದೋಷವನ್ನಾಗಿ ತಿಳಿಸುತ್ತಾನೆ.

ವೈಶಿಷ್ಟ್ಯಗಳು ದೋಷವಾಗದೆ ಗುಣವಾಗುವ ಉಚಿತ ಸಂದರ್ಭ ವ್ಯಾಪಕವಾದುದು. ಅದನ್ನು ಒಬ್ಬ ಭಾಷಾವಿದನ ದೃಷ್ಟಿಯಲ್ಲಿ ಹೀಗೆ ವಿವರಿಸಬಹುದು. ಎಲ್ಲ ಅಭಿವ್ಯಕ್ತಿಗಳಿಗೂ ಉದ್ದೇಶಿತವಾದ ಪ್ರತಿಕ್ರಿಯೆಯೊಂದಿರುತ್ತದೆ. ಸಹೃದಯ ಅಥವಾ ಕಾವ್ಯವನ್ನು ವಿವಕ್ಷೆಯಲ್ಲಿರಿಸಿಕೊಂಡಾಗ ಓದುಗನಲ್ಲಿ ಉಂಟಾಗುವ ಪ್ರಕ್ರಿಯೆಗೆ ತಕ್ಕ ಭಾಷಾ ಪ್ರಚೋದಕ (Linguistic stimulus) ಕವಿಯ ಅಭಿವ್ಯಕ್ತಿಯಲ್ಲಿರಬೇಕು. ತಾನು ಬಯಸುವ ಪ್ರತಿಕ್ರಿಯೆ ಹೆಚ್ಚು ನಿಖರ (concrete) ವಾಗಬೇಕೆಂದು ಕವಿ ಬಯಸಿದಾಗ ಆತ ನೀಡುವ ಭಾಷಾ ಪ್ರಚೋದಕ ಓದುಗನ ಅನುಭವಕೋಶಕ್ಕೆ ತೀರಾ ಹತ್ತಿರವಾದುದಾಗಿರಬೇಕು. ದೇಸಿ ಈ ನೆಲೆಗೆ ಬರುವ ಭಾಷಾ ಪ್ರಚೋದಕ. ಇದರ ಬಳಕೆಯಿಂದ ನಿಖರವಾದ ಪ್ರತಿಕ್ರಿಯೆಯನ್ನು ಪಡೆಯುವ ಅವಕಾಶಗಳಿವೆ. (ಈ ನಿಲುವನ್ನು ಮುಂದೆ ಸಮರ್ಥಿಸಲಾಗುತ್ತದೆ.) ಇಲ್ಲಿಯೂ ಬಳಕೆಗೆ ನೆಲೆ ಔಚಿತ್ಯ. ದೇಸಿಯ ಬಳಕೆಯೂ ಅಥವಾ ದೇಸಿಯ ಅನುಸರಣೆಯೂ ಕೂಡ ದೋಷವಾಗಬಲ್ಲುದು.[೧]

ಈಚಿನ ದಿನಗಳಲ್ಲಿ ವಿಮರ್ಶೆಯಲ್ಲಿ ಬಳಕೆಯಾಗುತ್ತಿರುವ ಜನಪದ ಪ್ರಜ್ಞೆಗೂ, ದೇಸಿಗೂ ಇರುವ ಸಂಬಂಧದ ಬಗೆ ಒಂದು ಮನೋಧರ್ಮವಾಗಿ, ಕೃತಿಯ ಆಶಯಕ್ಕೆ ಯಾವುದೋ ಹಂತದಲ್ಲಿ ಕೊಂಡಿಹಾಕಿಕೊಂಡರೆ, ಎರಡನೆಯದು ಅಭಿವ್ಯಕ್ತಿಗೆ ಸಂಬಂಧಿಸಿದ್ದು. ಜನಪದ ಪ್ರಜ್ಞೆ ಅಭಿವ್ಯಕ್ತವಾಗುವ ಬಗೆಗಳಲ್ಲಿ ದೇಸಿಯೂ ಒಂದು ಅಷ್ಟೆ. ಅಂದರೆ ಒಬ್ಬ ಕವಿಯ ದೇಸಿಯನ್ನು ಕುರಿತು ನಡೆಸುವ ಅಭ್ಯಾಸದಿಂದಲೇ ಅವನ ಜನಪದ ಪ್ರಜ್ಞೆಯ ಒಟ್ಟು ಸ್ವರೂಪವನ್ನು ಗ್ರಹಿಸುವುದು ಅಸಾಧ್ಯವಷ್ಟೇ ಅಲ್ಲ; ಸೂಕ್ತವೂ ಅಲ್ಲ.

ಪಂಪ 'ದೇಸಿ' ಎಂದಾಗ ಪಂಪನಲ್ಲಿ ದೇಸಿ ಎನ್ನುವ ಅರ್ಥವೇ ಬರುತ್ತದೆ. ಕನ್ನಡದಲ್ಲಿ ಬರೆದ ಕವಿಯೊಬ್ಬನ ಮಾತುಗಳಲ್ಲಿನ ದೇಸಿ ಎನ್ನುವಾಗ ಒಂದು ವಿರೋಧಾಭಾಸ ಕಾಣುತ್ತದೆ. ಇದನ್ನು ಹೀಗೆ ವಿವರಿಸಬಹುದು. ಕಾವ್ಯದ ಯಾವುದೋ ಘಟ್ಟದಲ್ಲಿ ಬರುವ ನಾಣ್ನುಡಿಯನ್ನೋ, ಅನುಭವದ ಮಾತನ್ನೋ ಎತ್ತಿಕೊಂಡು ಅದನ್ನು 'ದೇಸಿ' ಎಂದು ವಿವರಿಸಲಾಗುತ್ತದೆ. ಎಂದರೆ ತನ್ನ ಕಾವ್ಯವನ್ನೆಲ್ಲಾ ಕನ್ನಡದಲ್ಲಿಯೇ ಬರೆದವನಲ್ಲಿ ಉದಾಹೃತ ಸಂದರ್ಭಗಳು ಮಾತ್ರ ಹೇಗೆ ವಿಶಿಷ್ಟ? ಈ ಪ್ರಶ್ನೆ ಮತ್ತೆ 'ದೇಸಿ'ಯ ಕಲ್ಪನೆ 'ಮಾರ್ಗ' ದೊಡನೆ ಹೆಣೆದುಕೊಳ್ಳುವುದರತ್ತವೇ ನಮ್ಮನ್ನು ಎಳೆದೊಯ್ಯುತ್ತಿದೆ. ಪಂಪನಿಗೆ ಸಂಬಂಧಿಸಿದಂತೆ ಈ ಪ್ರಶ್ನೆಗೆ ಉತ್ತರ ನೀಡಬಹುದು. ಪಂಪನಿಗೆ ಸಂಬಂಧಿಸಿದಂತೆ ಎಂದೆನಷ್ಟೆ. ಆತನನ್ನು ಮಾರ್ಗಕಾವ್ಯ ಪರಂಪರೆಯಲ್ಲಿ ಗುರುತಿಸಲಾಗಿದೆ. ಕನ್ನಡದಲ್ಲಿಯೇ ಬರೆಯುತ್ತಿದ್ದರೂ, ಆ ಭಾಷೆಯ ಬಳಕೆ ಮಾರ್ಗಶೈಲಿಯ ಅವಶ್ಯಕತೆಗಳಿಗೆ ತಕ್ಕಂತೆ ಹೊಂದಿಕೊಂಡಾಗ, ತನ್ನ ಹಲವು ವಿಶಿಷ್ಟ ಲಕ್ಷಣಗಳನ್ನು, ಮುಖ್ಯವಾಗಿ ಅದರ ಸಾಮೀಪ್ಯವನ್ನು ಉಳಿಸಿಕೊಂಡ ಸಂದರ್ಭಗಳು ಪಂಪನಲ್ಲಿ ನಮಗೆ ಸಿಗುತ್ತವೆ. ಅವುಗಳನ್ನೇ ನಾವು ದೇಸಿಗೆ ಉದಾಹರಣೆಗಳನ್ನಾಗಿ ಕೊಡುತ್ತೇವೆ.[೧]

---

೫. ಛಂದಮಿದಾವುದೆಂದೊಡಱಿಯರ್ ಪದಬಂಧದೊಳೀ ಪ್ರಯೋಗಮಂ
ತೆಂದೊಡೆ ಬಯ್ವರಾವ ಕವಿಮಾರ್ಗಮಿದೆಂದೊಡೆ ಪೊಯ್ವರರ್ಥಮೇ
ನೆಂದೊಡೆ ತೊಂಡು ಭಂಡುಗೆಡೆದು ಉಟ್ಟುದನಿಕ್ಕುವರ್ ಆವ ನೀತಿ ಪೇೞ್
ಎಂದೊಡೆ ಕೊಲ್ವರ್ ಈಗಳಿನ ದೇಸಿಗೆ ಬಿಟ್ಟ ಮಹಾಕವೀಶ್ವರರ್

ಸೂಕ್ತಿಸುಧಾರ್ಣವ (೧-೭೫)

ಹಲವು ದೃಷ್ಟಿಗಳಿಂದ ಸಮನ್ವಯವಾದಿಯಾದ ಪಂಪ ಸುವರ್ಣಮಾಧ್ಯಮವೊಂದರ ಸೃಷ್ಟಿಯ ಕಡೆಗೆ ತನ್ನ ಪ್ರತಿಭೆ, ವ್ಯುತ್ಪತ್ತಿಗಳೆಲ್ಲವನ್ನು ದುಡಿಸಿದನು. ಶೈಲಿಯಲ್ಲೂ ಈ ಸಮನ್ವಯಕ್ಕೆ ಅವಕಾಶ ಕೊಟ್ಟದ್ದರಿಂದ ಪಂಪನ ದೇಸಿಯನ್ನು ಕುರಿತು ಮಾತನಾಡುವಾಗ ಸಾಪೇಕ್ಷವಾದ ನಿಲುವು ಅವಶ್ಯವಾಗುತ್ತದೆ.

ಅಲ್ಲದೆ ಇಡೀ ಕಾವ್ಯದ ತುಂಬಾ ಇರುವ, ಈಗ ಬಳಕೆಯಿಂದ ಜಾರಿಹೋಗುತ್ತಿರುವ ಶಬ್ದಗಳು, ಪದಸಮುಚ್ಚಯಗಳು, ಗಾದೆಗಳು ಇವನ್ನೆಲ್ಲಾ ಕಂಡು ಸಂಭ್ರಮಿಸುವುದು ಅನವಶ್ಯಕ. ಇವುಗಳಲ್ಲಿ ಯಾವುದು ಔಚಿತ್ಯದ ನೆಲೆಯಲ್ಲಿ ತನ್ನನ್ನು ತಾನು ಸಮರ್ಥಿಸಿಕೊಳ್ಳುತ್ತದೋ ಅದು ಮಾತ್ರ ಮುಖ್ಯ.

ಈಗ ಪಂಪ ದೇಸಿಯನ್ನು ಬಳಸುವ ಹಲವು ವಿಧಗಳಲ್ಲಿ ಕೆಲವನ್ನು ನೋಡಬಹುದು.

೧. ಸಂಭಾಷಣೆಯಲ್ಲಿ: ಮಾತಿನಲ್ಲಿ ಬರುವ ಕಾಕು (intonation)ವಿನ ಬಳಕೆ. ವಾಕ್ಯೋತ್ತರ ಘಟಕವಾದ ಕಾಕು ಬರೆಹದ ಭಾಷೆಯಲ್ಲಿ ಉಳಿದುಕೊಳ್ಳುವುದಿಲ್ಲವಾದ್ದರಿಂದ ಬರೆಹದ ಭಾಷೆ ಕಳೆದುಕೊಳ್ಳುವ ಅಂಶ ಹೆಚ್ಚಿರುತ್ತದೆ. ಎಲ್ಲ ಕಾಲದ ಕವಿಗಳು ಈ ಸಮಸ್ಯೆಯನ್ನು ಎದುರಿಸುತ್ತಾರೆ. ಪಂಪನಿಂದ ಈ ಉದಾಹರಣೆಗಳನ್ನು ನೋಡಿ:

ಗುರುವಿಲ್ಲಾ ಕರ್ಣನಿಲ್ಲಾ ಗುರುವಿನ ಮಗನಿಲ್ಲಾ ಕೃಪಾಚಾರ್ಯನಿಲ್ಲಾ
ಕುರುರಾಜ ನಿನ್ನ ತಮ್ಮಂದಿರೊಳಿನಬರೊಳ್ ಆರಿಲ್ಲ ಗಾಂಗೇಯನಿಲ್ಲಾ
ಮರುಳೇ ಗಾಂಡೀವಿ ಯಾರೆಂದೆಣಿಕೆಗಳೆವೆ ಗಂಧರ್ವರುಯ್ವಂದು ನಿನ್ನಂ
ಕರುವಿಟ್ಟಂತಿರ್ದುದಿಲ್ಲಾ ನೆರೆದ ಕುರುಬಲಂ ತಂದವಂ ಪಾರ್ಥನಲ್ಲಾ ॥

ವಿ. ವಿ. (೯-೫೫)

ಮಾತಿನ ಧಾಟಿಯಲ್ಲಿ ಇಲ್ಲಿ ಭೇಡಿಸುವಿಕೆ ಉಳಿದುಕೊಂಡಿರುವುದನ್ನು ಗಮನಿಸಬಹುದು.

ಕೇಳಿರೆ ಕಂಕಭಟ್ಟನೆ ಯುಧಿಷ್ಠಿರನ್ ಆ ವಲಲಂ ವೃಕೋದರಂ
ಬಾಳೆಯಂದಲಾಡಿಪ ಬೃಹಂದಳೆ ಫಲ್ಗುಣನಂಕದಶ್ವಗೋ
ಪಾಳಕರೆಂಬರ್ ಆ ನಕುಳನುಂ ಸಹದೇವನುಂ ಆದರ್ ಎಂ ಮಹೀ
ಪಳರೂಳಾದ ಕಾರ್ಯಗತಿಗಳ್ ಬಗೆಯೆಲ್ಕೆ ಬಹು ಪ್ರಕಾರಮೋ ॥

ವಿ. ವಿ. (೯-೬)

ಔತ್ಸುಕ್ಯ ಮತ್ತು ಬಯಲಾದ ರಹಸ್ಯಗಳು ಗಟ್ಟಿಪಿಸುಮಾತಿನಲ್ಲಿ (loud whisper) ಮಾಡುತ್ತವೆ. ಇದರ ಜತೆಗೆ ಸುದ್ದಿ ಜನರಿಂದ ಹಬ್ಬುತ್ತ ಹೋದಂತೆ ಕೊನೆಕೊನೆಗೆ ಅದನ್ನು ತಮ್ಮ ಅನುಭವಕ್ಕೆ ಸಿಲುಕುವಂತೆ ಸಾಮಾನ್ಯೀಕರಿಸುತ್ತಾರೆ ಎನ್ನುವುದೂ ಕೂಡ ಅಂತರ್ಗತ.

---

೧ ಶ್ರೀಮುಳಿಯ ತಿಮ್ಮಪ್ಪಯ್ಯನವರು ಪಂಪನ ದೇಸಿಯನ್ನು ಕುರಿತು ಬರೆದ (ನಾಡೋಜಪಂಪ) ತಮ್ಮ ಲೇಖನದಲ್ಲಿ ವಿವರಣೆಗೆ ಹೆಚ್ಚು ಪ್ರಾಧಾನ್ಯವನ್ನು ನೀಡಿದ್ದಾರೆ. ಪದಗಳೂ ಸಮುಚ್ಚಯ ನುಡಿಗಟ್ಟು, ಛಂದಸ್ಸು, ವರ್ಣನೆ ಈ ಹಂತಗಳಲ್ಲಿ ಬರುವ ದೇಸಿಗೆ ಉದಾಹರಣೆಗಳಿವೆ. ಅಧ್ಯಯನದ ವ್ಯಾಪಕತೆ ಎದ್ದು ಕಾಣುತ್ತದೆ. ಶ್ರೀರಂ. ಶ್ರೀ. ಮುಗಳಿಯವರು ತಮ್ಮ ಲೇಖನದಲ್ಲಿ (ಪಂಪನಲ್ಲಿ ದೇಸಿ) ದೇಸಿಯ ಔಚಿತ್ಯವನ್ನೂ ಗಮನದಲ್ಲಿಟ್ಟುಕೊಂಡು, ಒಂದು ಸಂದರ್ಭದ ಚಿತ್ರಣದಲ್ಲಿ ಕವಿ ಬಳಸುವ ದೇಸಿ ಹೇಗೆ ಉಚಿತವಾಗಿದೆ ಎಂಬುದನ್ನು ವಿವರಿಸಿದ್ದಾರೆ.

೨. ವಾಕ್ಯದ ಭಾವಪರಿಸರವನ್ನು ಉಳಿಸಿಕೊಳ್ಳಲು ವಾಕ್ಯದ ಸಹಜರೂಪವನ್ನೂ ಪದಗಳ ಅನುಕ್ರಮಣಿಕೆಯನ್ನು ಬದಲಾಯಿಸುವುದು[೧]:

ಎಲೆಪೋಗು ದೂತನಪ್ಪನ
ಬೆಟ್ಟನ ನುಡಿಗೇಳ್ದು ಮುಳಿಯಲಾಗದು ನೀನುಂ
ಮೆಟ್ಟುವುದು ವಿದುರನೆಂಬೀ
ತೋಟ್ಟುಟ್ಟಿಯ ಮನೆಯ ಕೂಟ ನುಡಿಯಿಸೆ ನುಡಿದ್ರೈ ॥

ವಿ. ವಿ (೯-೫೮)

ಮಸೆದುದು ಮದನನ ಬಾಳ್ ಕೂ
ರ್ಮಸೆಯಿಟ್ಟು ಕಾಮನಂಬು ಬಾಯ್ಗೂಡಿದುದಾ
ಕುಸುಮಾಸ್ತ್ರನ ಚಕ್ರವಿದೆಂ
ಬೆಸಕಮಾಳ್ದತ್ತು ಪಸದಂ ದ್ರೌಪದಿಯಾ ॥

ವಿ. ವಿ. (೨-೪೭)

ಕ್ರಿಯಾಪದ ಸ್ಥಾನವನ್ನು ಬದಲಾಯಿಸುವುದರಿಂದ ಸಂದರ್ಭದ 'ನಿರ್ಧಾರ'ದ ಬಣ್ಣವನ್ನು ಉಳಿಸಿಕೊಳ್ಳಲಾಗಿದೆ. ಇದು ಕೊಂಚ ಮಟ್ಟಿಗೆ ಪಂಪನ ಶೈಲಿಯ ಒಂದು ಲಕ್ಷಣವಾಗಿರುವಂತೆ ತೋರುತ್ತದೆ.

ಕಾಕು ಮತ್ತು ವಾಕ್ಯದ ಪದಗಳ ಸ್ಥಾನಪಲ್ಲಟ ಪರಿಣಾಮಗಳು ಕನ್ನಡದ ಅಂದರೆ ಪಾರಿಭಾಷಿಕವಾಗಿ ದೇಸಿಯ ಒಂದು ಅಂಗವೆಂದು ತಿಳಿಯುವುದರಿಂದ ಅವುಗಳನ್ನು ಔಚಿತ್ಯದಿಂದ ಬಳಸುತ್ತಿರುವ ಪಂಪ ಮತ್ತೊಂದು ನೆಲೆಯಲ್ಲೂ ಸಮರ್ಥನೀಯ. ಮಾರ್ಗ ಛಂದಸ್ಸಿಗೆ ದೇಸಿಯ ಅಂಶಗಳನ್ನು ಹೊಂದಿಸುತ್ತಿರುವುದರಿಂದ ಅವನ ಸಮನ್ವಯತೆಯ ಲಕ್ಷಣವೂ ಉಳಿದುಕೊಂಡಂತಾಗಿದೆ.

ಇದರ ಜತೆಗೆ ಆಡುನುಡಿಯಿಂದ ನೇರವಾಗಿ ಎಳೆದ ಮಾತುಗಳನ್ನು ಉಚಿತವಾಗಿ ಬಳಸುವ ಕೆಲವು ಸಂದರ್ಭಗಳನ್ನು ನೋಡಿ:

ಎನ್ನೋಲೆಯ ಕಡಗದಲೆವೇನಂ ನೋಡಿದ

(ದುಶ್ಶಳೆ ದುರ್ಯೋಧನನಿಗೆ ಹೇಳುವ ಮಾತು)

ಗಂಟಲನೊಡೆಯೊತ್ತಿ ಕೊಂದಪೆನಿದಲ್ತಿದಱಮ್ಮನುಮೆನ್ನನಾಂಪುದೇ

(ಸುಪ್ರತೀಕಗಜದ ಪ್ರಸಂಗ) (ವಿ.ವಿ. ೧೧-೭೩)

ಸಂದರ್ಭದ ಆಳವನ್ನು ಆಡುನುಡಿಯಿಂದ ಕಾವ್ಯದಲ್ಲಿ ಸಹಜವಾದ ಮಾತು ಎನ್ನೋಣ ಪಂಪ ಉಳಿಸಿಕೊಳ್ಳುತ್ತಿದ್ದಾನೆ. ಶೈಲಿಯನ್ನು 'ಅವಕಾಶ' (Choice) ಎನ್ನುವ ಅರ್ಥದಲ್ಲಿ[೨]

೧. ಪದಗಳ ಅನುಕ್ರಮಣಿಕೆಯನ್ನೂ ಬದಲಾಯಿಸಿದರೆ ಭಾವಪರಿಸರವನ್ನು ಉಳಿಸಿಕೊಳ್ಳಲು ಆಗುತ್ತದೆ ಎನ್ನುವುದು ಭಾಷೆಯಲ್ಲೇ ಅಡಗಿದ್ದ ಸಾಧ್ಯತೆ (Competence). ಆದರೆ ಕವಿ ಅದನ್ನು ತನ್ನ ನೆಲೆಗೆ ಪೂರಕವಾಗುವ ಹಾಗೆ, ಸಾಧ್ಯತೆಯನ್ನು ಅವತಾರ (Realisation) ಗೊಳಿಸಬೇಕಾಗುತ್ತದೆ.

೨. ಒಂದು ಸಂದರ್ಭದಲ್ಲಿ ಬರಬಹುದಾದ ಮಾತುಗಳು ಒಂದು ನಿಶ್ಚಿತವರ್ಗಕ್ಕೆ ಸೇರುತ್ತವೆ. ಅವುಗಳಲ್ಲಿ ಯಾವುದನ್ನು ಆಯ್ದುಕೊಳ್ಳಬೇಕು ಎಂಬುದು ಕವಿಯ ಕೆಲಸ. ಅಲ್ಲಿ ಅವನಿಗೆ ಆಯ್ಕೆಗೆ ಅವಕಾಶವಿರುತ್ತದೆ.

ಭಾಷಾವಿದರು ವಿವರಿಸುತ್ತಾರೆ. ಪಂಪ ಒಂದು ಸಂದರ್ಭಗಳಲ್ಲಿ ಬರಬಹುದಾದ ಮಾತುಗಳಲ್ಲಿ ಅತ್ಯಂತ ಸೂಕ್ತವೆಂದು ಮೇಲೆ ಹೇಳಿದ ಸಂದರ್ಭಗಳಲ್ಲಿ ದೇಸಿಯನ್ನು ಆಯ್ದುಕೊಳ್ಳುತ್ತಾನೆ.

ಪಂಪನಿಂದ ಇದುವರೆಗೂ ಕೊಟ್ಟ ಉದಾಹರಣೆಗಳಿಂದಾಗಿ ಎರಡು ಪ್ರಶ್ನೆಗಳು ಏಳಬಹುದು.

ಅ) ದೇಸಿಯ ಮಾತುಗಳು ಸ್ವಭಾವೋಕ್ತಿಯನ್ನು ಹೋಲುತ್ತವೆಯಲ್ಲವೇ?

ಆ) ಈ ಉದಾಹರಣೆಗಳು ಪಂಪನಿಗೇ ಏನು ವಿಶಿಷ್ಟ, ಎಲ್ಲ ಕವಿಗಳಲ್ಲೂ ಸಿಗುವಂತಹವೇ ಅಲ್ಲವೇ?

ಮೊದಲನೆಯ ಪ್ರಶ್ನೆ: ಸ್ವಭಾವೋಕ್ತಿಯೂ ಕಾವ್ಯದಲ್ಲಿ ತನ್ನ ಪರಿಸರದಿಂದಾಗಿ ಉಚಿತವಾಗುತ್ತದೆಯಷ್ಟೆ. ಈ ಮಾತು ದೇಸಿಗೂ ನಿಜ. ಒಂದು ಮಾತು ಮುಖ್ಯವಾಗುತ್ತದೆ. ಒಂದು ದೇಸಿ ಅಭಿವ್ಯಕ್ತಿ ಒಮ್ಮೆ ಬಳಕೆಯಾದ ಮೇಲೆ ಮತ್ತೊಮ್ಮೆ ಬಳಕೆಯಾಗಬೇಕಾದರೆ ತನ್ನ ಅರ್ಥಚ್ಛಾಯೆಯನ್ನು ಹೆಚ್ಚಿಸಿಕೊಳ್ಳಬೇಕಾಗುತ್ತದೆ. ಆದ್ದರಿಂದಲೇ 'ಪೊಸದೇಸಿ' ಎನ್ನುವ ಮಾತು ಬಳಕೆಯಲ್ಲಿ ಕಾಣುವುದು. ಈ ನೆಲೆಯಿಂದ ನೋಡಿದಾಗ ಪ್ರತಿಯೊಬ್ಬ ಕವಿಯ ದೇಸಿಯ ಬಳಕೆ ಅವನವನಿಗೆ ವಿಶಿಷ್ಟವಾಗುವುದು ಅನಿವಾರ್ಯವೆಂದು ತಿಳಿಯಬೇಕಾಗುತ್ತದೆ.

ಈ ಮಾತಿನಿಂದ ಎರಡನೆಯ ಪ್ರಶ್ನೆಗೆ ಬರಬಹುದು: ಪಂಪನಿಂದ ಆಯ್ದ ಉದಾಹರಣೆಗಳು ಏನನ್ನು ಸಮರ್ಥಿಸುತ್ತವೋ ಅದನ್ನು ಇತರ ಕವಿಗಳಿಂದಲೂ ಆಯ್ದ ಮಾತಿನಿಂದ ಸಮರ್ಥಿಸಲು ಸಾಧ್ಯವಷ್ಟೆ. ಈ ಮಾತಿನಿಂದ 'ದೇಸಿ' ಒಂದು ಕಾವ್ಯ ಪರಿಕರ ಅದನ್ನು ಪಂಪನು, ಇತರ ಕವಿಗಳಂತೆ ಬಳಸಿಕೊಳ್ಳುತ್ತಿದ್ದಾನೆ. ಆದರೆ ಬಳಸಿಕೊಳ್ಳುವಿಕೆಯಲ್ಲಿಯೇ ಪಂಪ ತನ್ನತನವನ್ನು ಉಳಿಸಿಕೊಂಡಿದ್ದಾನೆ ಎನ್ನುವುದು ಮುಖ್ಯ. ಒಂದು ಹೋಲಿಕೆಯಿಂದ ಈ ಮಾತನ್ನು ಸ್ಪಷ್ಟಪಡಿಸಿಕೊಳ್ಳಬಹುದು. ಪಂಪನಲ್ಲಿ ಆಡುನುಡಿ, ಮಾತಿನ ಧಾಟಿ ಮುಂತಾದವು ಬಂದರೆ ಅವು ತಮ್ಮ ಮಾರ್ಗ ಪರಿಸರದಲ್ಲಿ ನಿರ್ದಿಷ್ಟ ಪ್ರತಿಕ್ರಿಯೆಗೆ ಕಾರಣವಾಗುತ್ತವೆ. ಕುಮಾರವ್ಯಾಸನನ್ನು ಈ ದೃಷ್ಟಿಯಿಂದ ಗಮನಿಸಿದಾಗ ಅವನ ಆಡುನುಡಿ, ಮಾತಿನ ಧಾಟಿ ಕೇವಲ ಅರ್ಥವನ್ನು ಉಳಿದು ತಮ್ಮ ಧಾಟಿಯಲ್ಲೇ ಓದುಗನಿಗೆ ತಲುಪುತ್ತವೆ. ಆ ಕವಿಯಲ್ಲಿ ಬರುವ ಬೈಗಳುಗಳು, ಕಟಕಿ ನುಡಿಗಳು ಇದಕ್ಕೆ ಉದಾಹರಣೆಗಳಾಗಬಲ್ಲವು.

ದೇಸಿಯನ್ನು ಕಾವ್ಯ ಕೌಶಲ್ಯಕ್ಕೆ (Poetic craft) ಸಂಬಂಧಿಸಿದ ಸಂಗತಿ ಎಂದುಕೊಂಡದ್ದರಿಂದ ಅದರ ವಿಶ್ಲೇಷಣೆ ಒಂದು ಪ್ರತ್ಯೇಕ ಪ್ರತಿಕ್ರಿಯೆಯಾದರೂ ಒಟ್ಟಾರೆ ಕಾವ್ಯವನ್ನು ಕುರಿತು ಆಡುವ ಮೌಲ್ಯಾತ್ಮಕ ಮಾತುಗಳಿಗೆ ಪೂರಕವೇ ಆಗುತ್ತದೆ. ದೇಸಿಯ ಬಳಕೆಯ ಪ್ರತಿಯೊಂದು ನಿದರ್ಶನವೂ ತಂತಾನೇ ಒಂದೊಂದು ಘಟಕವಾಗಿದ್ದು, ಎಲ್ಲ ಘಟಕಗಳೂ ವಿಶ್ಲೇಷಣೆಗೆ ಅರ್ಹ. ಆದರೆ ಎಲ್ಲವುದರ ವಿಶ್ಲೇಷಣೆಯಿಂದ ದೊರಕಬಹುದಾದ ಸಾಮಾನ್ಯ ನೆಲೆ ಮಾತ್ರ ತುಂಬಾ ಅಸ್ಪಷ್ಟ. ಆದರೆ ಇದರಿಂದ ಪ್ರಯೋಜನವಿಲ್ಲವೆಂದೇನಲ್ಲ: ದೇಸಿಯ ಸ್ವರೂಪನಿರ್ಣಯಕ್ಕೆ ಸಾಮಗ್ರಿ ದೊರಕುತ್ತದೆ. ಒಂದೇ ಲಯದಲ್ಲಿ ಬರೆದ

---

ಈಗ ನಾಮಪದಗಳ ಬಗ್ಗೆ ಗಮನಿಸಬಹುದು. 'ಭೀಮ' ಎನ್ನುವುದರ ಬದಲು ಭಾಸ ತನ್ನ ಊರುಭಂಗದ ಒಂದು ದೃಶ್ಯದಲ್ಲಿ 'ವೃಕೋದರ' ಎಂದು ಹೇಳಿಸಿದ್ದು ಎಷ್ಟು ಉಚಿತವಾಗುತ್ತದೆಂಬುದನ್ನು ತೀ. ನಂ. ಶ್ರೀ ತಿಳಿಸಿದ್ದಾರೆ.

ಗೀತೆಗಳಿವೆ ಎಂದರೆ ಗೀತೆಗಳ ಭಾವಗಳಿಂದ ಒಂದು ಸಾಮಾನ್ಯ ಅಂಶವನ್ನು ಗುರ್ತಿಸಿಲಯಕ್ಕೂ, ಆ ಸಾಮಾನ್ಯ ಅಂಶಕ್ಕೂ ಸಾಹಚರ್ಯವನ್ನು ಕಲ್ಪಿಸುತ್ತೇವೆ. ಈ ಮಾತು ದೇಸಿಯ ವಿಚಾರದಲ್ಲೂ ನಿಜ. ಪಂಪ ನಮ್ಮ ಪ್ರಾಚೀನ ಕವಿಗಳಲ್ಲಿ ಒಬ್ಬ ಎನ್ನುವ ಕಾರಣದಿಂದ ಈ ಬಗೆಯ ಅಧ್ಯಯನ ಲಾಭದಾಯಕವಾಗುತ್ತದೆ.

ದೇಸಿ ಕವಿಯ ವ್ಯುತ್ಪತ್ತಿಯ ಒಂದು ಭಾಗವೂ ಆಗಿರಬೇಕು. ಆಸ್ಥಾನದಲ್ಲಿದ್ದು, ಪಂಡಿತರ ನಡುವೆ ಬದುಕಿದ ಪಂಪ, ತನ್ನ ಕಾಲದ ಜೀವಜೀವನವನ್ನು ಕುತೂಹಲದಿಂದ ಕಂಡಿದ್ದಾನೆ. ಅದನ್ನು ಸೃಜನಾತ್ಮಕವಾಗಿ ಬಳಸಿದ್ದಾನೆ. ಈ ಮಾತಿಗೆ ಅವನಲ್ಲಿ ಬರುವ ಹಲವು ಗಾದೆ ಮಾತುಗಳು, ಸಮಕಾಲೀನ ಬದುಕಿನ ಮೌಲ್ಯಗಳನ್ನು ಉದಾಹರಣೆಗೆ ಕುಲ, ತ್ಯಾಗ ಇತ್ಯಾದಿಗಳು ಕುರಿತ ಮಾತುಗಳು ಉದಾಹರಣೆಗಳಾಗುತ್ತವೆ. ಇದಲ್ಲದೆ ಬದುಕಿನ ಹತ್ತಿರದ ನೋಟ ಅವನನ್ನು ಸೂಕ್ಷ್ಮ ಚಿತ್ರಕಾರನನ್ನಾಗಿ ಮಾಡಿದೆ:

ಅೞೆ ಕುಡಲಾದ ಕೂಸು ನೆಲದೊಳ್ ಪೊರಳುತ್ತಿರೆ ಧರ್ಮಪತ್ನಿ ಬಾ
ಯೞಿದು ಕೊರಲ್ಗೆ ಪಾಯ್ದು ಪರಿದಾಡುವ ಬಾಲಕನಾದ ಶೋಕದಿಂ
ಗೞಗೞ ಕಣ್ಣನೀರ್ ಸುರಿಯೆ ಚಿಂತಿಪ ಪಾರ್ವನ ಶೋಕದೊಂದು ಪೊಂ
ಪುೞಿಯನೆ ನೋಡಿ ನಾಡೆ ಕರುಣಂ ತನಗಾಗಿರೆ ಕೊಂತಿ ಚಿಂತೆಯಿಂ ॥

(ವಿ. ವಿ. ೩-೨೫)

ದುರ್ಯೋಧನನ ಮೊಗಂ ತಲೆನವಿರ ಗಂಟಿಂ ಕಿೞಿದಾಗೆ ॥

(ವಿ.ವಿ. ೨-೭೭ವ)

ವ್ಯುತ್ಪತ್ತಿಯ ಶ್ರೀಮಂತಿಕೆ ಒಂದು ಅವಶ್ಯಕ ಪರಿಕರವೇನೋ ಸರಿ. ಆದರೆ ಆನಂದವರ್ಧನ ಅದರ ಸ್ಥಾನವನ್ನು ಗೌಣವೆನ್ನುತ್ತಾನೆಂಬುದನ್ನು ಮರೆಯುವಂತಿಲ್ಲ. ಪ್ರತಿಭೆ ಮುಖ್ಯ. ಆದ್ದರಿಂದ ಪಂಪನ ದೇಸಿಯನ್ನು ಅಭ್ಯಾಸ ಮಾಡಲು ನಿರ್ಧರಿಸಿಕೊಂಡ ಔಚಿತ್ಯ ಹಾಗೂ ವೈಶಿಷ್ಟ್ಯದ ನೆಲೆಗಳಲ್ಲಿ ಪ್ರತಿಭೆ ಪ್ರವೃತ್ತವಾಗುತ್ತದೆ.

ಚಾರಿತ್ರಿಕ ಕಾರಣಗಳಿಂದಲೂ 'ಪಂಪನ ದೇಸಿ'ಯನ್ನು ಗಮನಿಸಬಹುದು. ಈ ಮಾತು ಎಲ್ಲ ಕವಿಗಳಿಗೂ ಅನ್ವಯಿಸುತ್ತದೆ. ಈ ಕಾರಣಗಳಲ್ಲಿ ಒಂದು ಭಾಷಾವಿದರಿಗೆ ಸಂಧಿಸಿದ್ದು. ಒಂದು ಪದದ, ಪದಸಮುಚ್ಚಯದ, ಆಕೃತಿಯ ಚಾರಿತ್ರಿಕ ಬೆಳವಣಿಗೆಯನ್ನು ಗುರುತಿಸುವ ಭಾಷಾವಿದನಿಗೆ ಶಾಸನಗಳ ನಂತರ ಕಾವ್ಯಗಳೇ ಆಧಾರ. ಇದು ಕವಿಯಾಗಿ ಪಂಪನ ಮೌಲ್ಯವನ್ನು ಬದಲಿಸುವುದಿಲ್ಲವಾದರೂ ಅವನ ದೇಸಿ ಅಭಿವ್ಯಕ್ತಿಯಲ್ಲಿ ಬರುವ ಅವನ ಕಾಲದ ಮಾತು ಇಂದು ಮುಖ್ಯವಾಗುವ ಸಾಧ್ಯತೆ ಇದೆ.[೧]

ಇದಲ್ಲದೆ ಇನ್ನೊಂದು ಚಾರಿತ್ರಿಕ ಕಾರಣವಿದೆ. ಇದು ಒಟ್ಟಾರೆ ಸಾಹಿತ್ಯ ಚರಿತ್ರೆಯ

---

೧. ಇದಕ್ಕೆ ನಿದರ್ಶನವಾಗಿ ಶ್ರೀ ಮುಳಿಯ ತಿಮ್ಮಪ್ಪಯ್ಯನವರು ಕೊಡುವ ಉದಾಹರಣೆಗಳನ್ನು ನೋಡಬಹುದು. ತೆಗೆಲೆ (೧೧-೧೩೬), ಕುಮ್ಮರಿ (೧೦-೮೮) ಮುಂತಾದ ಪದಗಳು, ಅಕ್ಕಿಗೊಟ್ಟು ಮಡಗೂಟಣ್ಬಂದಂ (ಆ.ಪು. ೧೪-೩೨) ಒಂದೆಡಕೆಯುಮಿಲ್ಲ ಕೈಯೊಳ್ (೨-೩೬) ಮುಂತಾದ ಪ್ರಯೋಗಗಳನ್ನು ನೋಡಿ.
ಇದರ ಜತೆಗೆ ಯುದ್ಧ, ಮೃಗಯಾವಿಹಾರ, ವೇಶ್ಯಾವಾಟಿಕೆ ಇತ್ಯಾದಿಗಳ ವರ್ಣನೆಯಲ್ಲಿ ಬರುವ, ಅಂದಿನ ಜನಪದ ಚಿತ್ರವನ್ನು ಪುನಾರಚಿಸಲು ಅವಕಾಶ ನೀಡುವ, ಪ್ರಯೋಗಗಳನ್ನು ಕಾಣಬಹುದು.

ಅಧ್ಯಯನದಿಂದ ಹೊರಬೀಳುವಂತದು. ರೀತಿಯ ದೃಷ್ಟಿಯಿಂದ ಒಂದು ಸಾಹಿತ್ಯದ ಚರಿತ್ರೆಯನ್ನು ಗಮನಿಸಿದರೆ ಅದು ತಾಳುವ ಸ್ವರೂಪ ಹೀಗಿರುತ್ತದೆ. ದೇಸಿಯಿಂದ ಮಾರ್ಗ ಅಥವಾ ಅಭಿಜಾತತೆಗೆ, ಮತ್ತೆ ಮಾರ್ಗದಿಂದ ದೇಸಿಗೆ ಇದೊಂದು ಚಕ್ರೀಯ ಪ್ರಕ್ರಿಯೆ. ದೇಸಿಯಿಂದ ಮಾರ್ಗಕ್ಕೆ ಹೋಗುವಾಗ ವ್ಯುತ್ಪತ್ತಿಯೇ ಪ್ರಧಾನವಾಗುತ್ತದೆ; ಪ್ರತಿಭೆ ಹಿಂದೆ ಸರಿಯಲೂಬಹುದು. ಆದರೆ ಒಮ್ಮೆ ಮಾರ್ಗಶೈಲಿಯನ್ನು ತಲುಪಿದ ಮೇಲೆ ದೇಸಿಗೆ ಹಿಂತಿರುಗಿಸುವುದು ಮಹಾಕವಿಯೊಬ್ಬನ ಕೆಲಸ. (ಜನರ ಆಡುನುಡಿಗೆ ಕಾವ್ಯ ಹಿಂತಿರುಗಬೇಕೆಂಬ ಮಾತು ಈ ಕಾಲದ್ದು) ಪಂಪನ ಹಿಂದಿನ ಕಾವ್ಯ ಪರಂಪರೆಯನ್ನು ನಾವಿನ್ನೂ ಸುಸಂಘಟಿತ ಪ್ರಯತ್ನದಿಂದ ಪುನರ್ರಚಿಸಬೇಕಾಗಿದೆ. ಆದರೆ ಪಂಪನ ಕಾವ್ಯಗಳನ್ನೇ ನೋಡಿದಾಗ ಆತ ಮಾರ್ಗದಿಂದ ದೇಸಿಯ ಕಡೆಗೆ ರೀತಿಯನ್ನು ತರಲು ಯತ್ನಿಸಿದವನೆಂದು ತೋರುತ್ತದೆ. ಭಾಷೆಯ ಸಹಜ ಗುಣಗಳನ್ನು ರೀತಿಯ ಅವಿಭಾಜ್ಯ ಅಂಗಗಳನ್ನಾಗಿ ಮಾಡುವ ಪಂಪ ದೇಸಿಯ ಬಗ್ಗೆ ಈಗಾಗಲೇ ಹೇಳಿದ ಮಾತುಗಳನ್ನು ಇಲ್ಲಿ ಮತ್ತೆ ಗಮನಿಸಬಹುದಾಗಿದೆ. ಇದಲ್ಲದೆ ವೃತ್ತಗಂಧಿಯಾದ ಚೌಕಟ್ಟಿನಲ್ಲಿ ಸಂಭಾಷಣೆಯ ಧಾಟಿಯನ್ನು ತರುವಾಗಲೇ ಪಂಪ ದೇಸಿಯ ಮೂಲಸಾಮಗ್ರಿಯಿಂದ ಒಂದು ಸಂಘಟಿತ ಘಟಕವನ್ನು ಧ್ವನಿಪೂರ್ಣಸೇಂದ್ರಿಯ ಘಟಕವನ್ನು ರಚಿಸುತ್ತಾನೆ ಎಂಬುದನ್ನು ವಿಮರ್ಶಕರು ಗಮನಿಸಿದ್ದಾರೆ.[೧]

ಮಾರ್ಗ ಶೈಲಿಯ ಗಂಭೀರಮೌನ ಮತ್ತು ದೇಸಿಶೈಲಿಯ ಅಸ್ತವ್ಯಸ್ತ ಲಕ್ಷಣರಹಿತಸ್ಥಿತಿ ಇವೆರಡರ ನಡುವೆ ಸುವರ್ಣಮಾಧ್ಯಮವನ್ನು ಪಂಪ ಕಂಡುಕೊಂಡಿದ್ದಾನೆ. ಈ ದಿಕ್ಕಿನಲ್ಲಿ ನಡುವೆಯ ವಿವೇಚನೆ ಅವನ ಕಲೆಗಾರಿಕೆ ಬಗ್ಗೆ ಹೆಚ್ಚು ಮಾಹಿತಿಯನ್ನು ಕೊಡಬಲ್ಲುದು.

ಈ ಪ್ರಬಂಧದಲ್ಲಿ ಪಂಪನ ದೇಸಿಯ ಬಗ್ಗೆ ಹೇಳಿದ ಮಾತುಗಳು ಬಹುಪಾಲು ಅವನ ದೇಸಿಯ ಅಧ್ಯಯನಕ್ಕೆಂದು ನೆಲೆಯನ್ನು ಹುಡುಕುವಲ್ಲಿ, ಅಧ್ಯಯನದ ವ್ಯಾಪ್ತಿ ಮಹತ್ವವನ್ನು ಕಂಡುಕೊಳ್ಳುವಲ್ಲಿ ನಿರತವಾಗಿವೆ. ಇದು ಪ್ರಾರಂಭ ಮಾತ್ರ. ಅವನ ದೇಸಿಯ ಅಭ್ಯಾಸ ಇತರ ಕಾವ್ಯಪರಿಕರಗಳ-ಉದಾಹರಣೆಗೆ ಅಲಂಕಾರ, ಛಂದಸ್ಸುಗಳ -ಅಭ್ಯಾಸಕ್ಕಿಂತ ಮುಖ್ಯವೆಂಬುದನ್ನು ಮಾತ್ರ ನಾವು ಗಮನದಲ್ಲಿಟ್ಟುಕೊಳ್ಳಬೇಕು.

*ಪಂಪ : ಒಂದು ಅಧ್ಯಯನ, ೧೯೭೪*

*ಬೇರು ಕಾಂಡ ಚಿಗುರು, ೧೯೯೭, ಪು.೧೩೩-೪೨*

---

೧. ಮೃಗಯಾವ್ಯಾಜದಿನೊರ್ಮೆ....(ವಿ.ವಿ.೧-೭೦) ವೃತ್ತವನ್ನು ಕುರಿತು ಶ್ರೀ ಪೂರ್ಣಚಂದ್ರ ತೇಜಸ್ವಿಯವರು ಮಾಡಿರುವ ಪ್ರಾಯೋಗಿಕ ವಿಮರ್ಶೆ (ಪ್ರಾಯೋಗಿಕ ವಿಮರ್ಶೆ: ಸಂ. ಜಿ. ಎಸ್. ಶಿವರುದ್ರಪ್ಪ ಮತ್ತು ಎನ್. ಎಸ್. ಲಕ್ಷ್ಮೀನಾರಾಯಣ ಭಟ್ಟ)

## ೨೫. ಧರ್ಮಾಮೃತ-ಭಾಷಾವಿಜ್ಞಾನದ ದೃಷ್ಟಿಯಲ್ಲಿ

● ಸಂಗಮೇಶ ಸವದತ್ತಿಮಠ

ತಿರುಳುಗನ್ನಡ ಪ್ರದೇಶದವನಾದ ನಯಸೇನ ಕವಿ ಸಹಜವಾಗಿಯೇ ತನ್ನ ಸಮಕಾಲೀನ ಕನ್ನಡ ನುಡಿಯ ಸೊಗಡನ್ನು ಬಹಳಷ್ಟು ಮಟ್ಟಿಗೆ ಧರ್ಮಾಮೃತದಲ್ಲಿ ಹಿಡಿದಿಟ್ಟಿರುವುದರಿಂದ ಭಾಷಾ ದೃಷ್ಟಿಯಿಂದಲೂ ಅದೊಂದು ಗಮನಾರ್ಹ ಕೃತಿಯೆನಿಸಿದೆ. ಶಿಷ್ಟಭಾಷೆಗಿಂತ ಆಡುಭಾಷೆಯಲ್ಲಿ ಜೀವಂತಿಕೆ, ವೈವಿಧ್ಯ, ಧ್ವನಿಪೂರ್ಣತೆ ಇರುವುದರಿಂದಲೇ ಭಾಷಾ ವಿಜ್ಞಾನಿಗಳು ಆಡುನುಡಿಗೆ ಹೆಚ್ಚು ಮಹತ್ವ ನೀಡುತ್ತಾರೆ. ಅಂತೆಯೆ ಆಡುಮಾತಿನ ಜಾಡನ್ನು ಹಿಡಿದು ಕನ್ನಡ ನುಡಿಯನ್ನು ಬಳಸಿಕೊಂಡ ಕಾವ್ಯಗಳಲ್ಲಿ ಧರ್ಮಾಮೃತದ ಸ್ಥಾನ ಹಿರಿದಾಗಿದೆ. ಹನ್ನೆರಡನೆಯ ಶತಮಾನದ ಆರಂಭಕಾಲದ ಜನಸಾಮಾನ್ಯರ ನಾಲಗೆಯ ಮೇಲಾಡುತ್ತಿದ್ದ ಕನ್ನಡ ಭಾಷೆಯ ಸ್ವರೂಪದ ಎಳೆಗಳು ಶಿಷ್ಟರೂಪದಲ್ಲಿ ದೊರೆತರೂ, ಧರ್ಮಾಮೃತ ಅವುಗಳಿಗೆ ನೀಡಿರುವ ಮಹತ್ವದ ದೃಷ್ಟಿಯಿಂದ ಅರ್ಥಪೂರ್ಣವೇ ಎನಿಸುತ್ತದೆ. ನಯಸೇನನು ಪುಂಖಾನುಪುಂಖವಾಗಿ ನಾಣ್ನುಡಿ, ಸೂಕ್ತಿ, ಉಪಮೆ ಮುಂತಾದವುಗಳನ್ನು ಬಳಸಿರುವುದರಿಂದ ತತ್ಕಾಲೀನ ಭಾಷಾಸೌಂದರ್ಯವೂ ನಮ್ಮನ್ನು ಆಕರ್ಷಿಸುತ್ತದೆ. ಸಾಮಾನ್ಯ ಜನತೆಯನ್ನೇ ಗುರಿಯಾಗಿಸಿಕೊಂಡು ಧರ್ಮಾಮೃತವನ್ನು ಅವನು ನಿರೂಪಿಸುತ್ತಿರುವುದರಿಂದ, ಜನಸಾಮಾನ್ಯರ ಸರಳ ಸತ್ವಯುತ ಭಾಷೆಯನ್ನೇ ನಯಸೇನನು ತನ್ನ ಕಾವ್ಯಭಾಷೆಗೆ ಬಳಸಿಕೊಂಡದ್ದರಲ್ಲಿ ಸಾರ್ಥಕತೆ ಇದೆ. ಈ ಕುರಿತು ನಯಸೇನನ ದೃಷ್ಟಿಕೋನವೂ ಸ್ಪಷ್ಟವಾಗಿಯೇ ಇದೆ: '...ನಾಣ್ನುಡಿ ದೇಸಿವೆತ್ತ ಪೊಸನುಡಿ'ಯಿಂದ ಕೂಡಿದ ''ಪೊಸಗನ್ನಡದಿಂ ವ್ಯಾವರ್ಣಿಸುವೆಂ ಸತ್ಕೃತಿಯನೆಂದು ಕನ್ನಡಮಂ ಚಿಂತಿಸಿ'' ''ಕೂಡಲಾಱದ ಮಿಸುಂಕದ ಸಕ್ಕದಮನಿಕ್ಕದ''' ರೀತಿಯಲ್ಲಿ ಧರ್ಮಾಮೃತವನ್ನು ರಚಿಸಲಾಗಿದೆಯೆಂದು ನಿರೂಪಿಸಿದ್ದಾನೆ. ತನ್ನ ಕಾವ್ಯದ ವೈಗೆ ಮಾಧ್ಯಮವಾದ ಭಾಷೆಯ ಬಗೆಗೆ ಇಷ್ಟೊಂದು ಖಚಿತ ಅಭಿಪ್ರಾಯವಿಟ್ಟುಕೊಂಡಿದ್ದು ಮೆಚ್ಚುವ ಸಂಗತಿಯೇ.

ಸಂಸ್ಕೃತ ಕನ್ನಡ ಬೆರಕೆಯ ಬಗೆಗೆ ಅವನು ಹೇಳಿರುವ ಸುಪ್ರಸಿದ್ಧ ಮಾತು ''ಸಕ್ಕದಮಂ ಪೇೞ್ವೊಡ ನೆಱೆ ಸಕ್ಕದಮಂ ಪೇೞ್ಗೆ ಸುದ್ಧಗನ್ನಡ ದೊಳ್ತಂದಿಕ್ಕುವುದೇ ಸಕ್ಕದಮಂ, ತಕ್ಕುದೆ ಬೆರಸಲ್ಕೆ ಘೃತಮುಮಂ ತೈಲಮುಮಂ''-ನಯಸೇನನು ಕನ್ನಡದ ಬಗೆಗೆ ಇಟ್ಟುಕೊಂಡಿದ್ದ ಕಳಕಳಿಯನ್ನು ಆವೇಶಯುತ ಧ್ವನಿಯಲ್ಲಿ ವ್ಯಕ್ತಪಡಿಸುವ ಖಂಡಿತ ಅಭಿಪ್ರಾಯವನ್ನು ಸೂಚಿಸುತ್ತದೆ. ಆದರೆ ಸಂಸ್ಕೃತವನ್ನು ತಂದಿಕ್ಕುವುದು ಒತ್ತಟ್ಟಿಗಿರಲಿ ಎಣ್ಣೆತುಪ್ಪ ಕೂಡಿಸಿದಂತಾಗಿರುವ ಕೆಲವು ಪ್ರಯೋಗಗಳು ಪ್ರಾಯಶಃ ಅವನಿಗೆ ಗೊತ್ತಿದ್ದೂ ತನ್ನದೇ ಕಾವ್ಯದಲ್ಲಿ ನುಸುಳಿರುವುದು ಅಚ್ಚರಿ ಹುಟ್ಟಿಸುತ್ತದೆ. 'ಸುದ್ದಗನ್ನಡ'ದ ಪ್ರಜ್ಞೆಯುಳ್ಳ ಪ್ರಬುದ್ಧ ಕವಿ ನಯಸೇನ ತನ್ನದೇ ಎಚ್ಚರಿಕೆಯನ್ನು ಕಾವ್ಯದ ತುಂಬ ಉಳಿಸಿಕೊಂಡು ಬಂದಿದ್ದರೆ ಕಾವ್ಯದ ಎತ್ತರ ಭಾಷಾದೃಷ್ಟಿಯಿಂದ ಅತ್ಯುನ್ನತವಾಗಿರುತ್ತಿತ್ತು. ಪೊಸಗನ್ನಡದಲ್ಲಿ ವಿವರಿಸುವೆನೆಂದು ಕವಿ ಸಾರಿದ್ದರೂ, ಅನೇಕ ಹಳಗನ್ನಡ ರೂಪಗಳೂ ಧರ್ಮಾಮೃತದಲ್ಲಿ ಪ್ರತ್ಯಕ್ಷವಾಗಿವೆ. ಒಂದು ರೀತಿಯಲ್ಲಿ ಧರ್ಮಾಮೃತವು ಹಳಗನ್ನಡದಿಂದ ನಡುಗನ್ನಡಕ್ಕೆ ಪರಿವರ್ತಿತಗೊಳ್ಳುವ ಸಂಕ್ರಮಣ ಕಾಲದ ಭಾಷಾಸ್ವರೂಪವನ್ನು ಹೊಂದಿದೆ. ಪೊಸಗನ್ನಡ ಎಂಬುದನ್ನು ಡಾ. ಬಿ.

ವ್ಹಿ. ಮಲ್ಲಾಪುರ ಅವರು ಭಾಷೆಯ ಅವಸ್ಥಾ ಸೂಚಕವಾಗಿರದೆ ಹೊಸ ಬಗೆಯ ಶೈಲಿಯನ್ನು ಸೂಚಿಸುವಂತಹುದಾಗಿದೆ ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.[೧]

ನಯಸೇನ ಹೇಳಿರುವ 'ಪೊಸಗನ್ನಡ' ಎಂಬ ಪದವು ಕೂಡ ಶೈಲಿಯನ್ನೇ ಸೂಚಿಸುತ್ತದೆ. ಕಾವ್ಯದಲ್ಲಿ ಸಂಸ್ಕೃತ ಶಬ್ದಗಳ ಮಿಶ್ರಣ ಎಷ್ಟು ನಡೆದಿತ್ತೆಂದರೆ; ಕವಿಗಳಾದವರು ಅದರಲ್ಲಿಯೂ ಪಂಡಿತ ಕವಿಗಳಾದವರು ಕನ್ನಡ ಪದಪದ್ಧತಿಗಾಗಿ ಚಿಂತಿಸುವ ಪ್ರಸಂಗ ಬಂದಿತ್ತು ಎಂದರೆ ಕನ್ನಡ ಬಡವಾಗಿತ್ತೆಂದಲ್ಲ, ಕನ್ನಡದ ನುಡಿಗಟ್ಟುಗಳನ್ನು ಹೇಗೆ ಬಳಸಬೇಕೆಂಬುದೇ ಅವರಿಗೆ ಸಮಸ್ಯೆಯಾಗಿತ್ತು. ಕವಿರಾಜಮಾರ್ಗಕಾರನ ಕಾಲಕ್ಕೆ ಪೂರ್ವದಲ್ಲಿ ಉಪಯೋಗಿಸಲ್ಪಡುತ್ತಿದ್ದ ಕನ್ನಡ ದೇಶೀಪದಗಳ ವಿಶಿಷ್ಟರೀತಿ ಪಟಗನ್ನಡ ಅಥವಾ ಹಳೆಯ ರೀತಿಯಾದರೆ, ಅಲ್ಲಿಂದ ಮುಂದೆ ಬಂದ ಸಂಸ್ಕೃತ ಮಿಶ್ರಿತ ಪದಪದ್ಧತಿಯು ನಯಸೇನನಿಗೆ ಹಳೆಯ ಶೈಲಿಯಾಗಿ ಕಂಡಿತು. ಆದುದರಿಂದಲೇ ನಯಸೇನ ಒಂದು ರೀತಿಯ ಹಟಕ್ಕೆ ಬಿದ್ದವನಂತೆ ಕಾವ್ಯದ ತುಂಬ ಕನ್ನಡ ನುಡಿಗಟ್ಟುಗಳನ್ನು, ಉಪಮೆಗಳನ್ನು, ನಾಣ್ಣುಡಿಗಳನ್ನು ಸೂರೆಮಾಡಿ ಅನೇಕ ಹೊಸ ನಾಣ್ಣುಡಿ ಜಾಣ್ಣುಡಿಗಳಂತಹ ಸೂಕ್ತಿಗಳನ್ನು ರಚಿಸಿ ಚಂಪೂರೂಪದಲ್ಲಿಯೇ ಹೊಸಶೈಲಿಯ ಕೃತಿಯೊಂದನ್ನು ಕನ್ನಡಕ್ಕಿತ್ತು, ಕೀರ್ತಿಕಾಯನಾದ. ಈ ಅರ್ಥದಲ್ಲಿಯೇ ನಯಸೇನ 'ಪೊಸಗನ್ನಡ' ಶಬ್ದವನ್ನು ಬಳಸಿರುವುದು. ಕನ್ನಡ ಆಡುಮಾತಿನ ಶ್ರೀಮಂತಿಕೆಯನ್ನು ಅದರ ವಿಶಿಷ್ಟ ಪದಬದ್ಧತೆಯ ಬೆಡಗು ಬಿನ್ನಾಣಗಳನ್ನು, ಗೂಢ ತತ್ತ್ವಗಳ ವಿವೇಚನೆಗೆ ಅದು ಉತ್ತಮ ಮಾಧ್ಯಮವಾಗಬಲ್ಲುದೆಂಬುದನ್ನು ಒಟ್ಟಿನಲ್ಲಿ ಕನ್ನಡದ ಸತ್ವ ಸಾಮರ್ಥ್ಯಗಳನ್ನು ಮನವರಿಕೆ ಮಾಡಿಕೊಡಬಲ್ಲ ವಿಶಿಷ್ಟ ಶೈಲಿಯಲ್ಲಿ ರಚನೆಗೊಂಡ ನಯಸೇನನ ಧರ್ಮಾಮೃತ, ನಿಜವಾದ ಅರ್ಥದಲ್ಲಿ ಅಂದಿನ ಕಾಲಕ್ಕೆ 'ಪೊಸಗನ್ನಡ' ಕೃತಿಯೇ. ಆದರೆ ಅದರ ಪ್ರಭಾವ ಅವನ ಅನಂತರದ ಕನ್ನಡ ಜೈನ ಕವಿಗಳ ಮೇಲೆ ಅಷ್ಟಾಗಿ ಆಗದೇ ಇರುವುದು ಸಾಹಿತ್ಯ ಪ್ರಪಂಚದ ವೈಚಿತ್ರ್ಯಗಳಲ್ಲೊಂದು.

ನಯಸೇನನು 'ಮಿಸುಕದ ಸಕ್ಕದ'ದ ಬಗೆಗೆ ಹೇಳಿದಂತೆ, ತನ್ನ ಕಾವ್ಯದಲ್ಲಿ ಅನುಸರಿಸಿಲ್ಲ-ಎಂಬುದನ್ನು ಗಮನಿಸಬಹುದು. ಸಂಸ್ಕೃತವನ್ನು ಅಲ್ಲಲ್ಲಿ ತಕ್ಕಮಟ್ಟಿಗೆ ಬಳಸಿರುವುದೇ ವಿರೋಧಾಭಾಸವೆನಿಸುತ್ತದೆ. ''ಸಂಸ್ಕಾರ ಶತೇನಾಪಿ ನ ಗೂಥಃ ಕುಂಕುಮಾಯತೇ'' ಇಂತಹ ನೇರ ಸಂಸ್ಕೃತ ಉದ್ಧರಣೆಗಳು ಒತ್ತಟ್ಟಿಗಿರಲಿ

ಧರಣೇಸ್ತುತ್ಯಂ ಗುಣಾಂಭೋನಿಧಿ ಜಿನಚರಣಾಂಭೋಜಮತ್ತಾಳಿಧಾತ್ರೀ
ಧರ ಧೈರ್ಯಂ ವಾಗ್ವಧೂವಲ್ಲಭನಮಳಯಶಂ ನಿರ್ಮಳಂ ನಿಷ್ಕಷಾಯಂ
ವರಭವ್ಯಾಂಭೋಜಸೂರ್ಯಂ ನಿರುಪಮನೊಸೆದಂ ಕೇಳ್ದು ತ್ರೈವಿದ್ಯಚಕ್ರೇ
ಶ್ವರ ಪಾದಾಂಭೋಜಭೃಂಗ ಸುಕವಿಜನಮನಃಪದ್ಮಿನೀರಾಜಹಂಸಂ ||

ಇಂತಹ ಸಂಸ್ಕೃತ ಭೂಯಿಷ್ಠ ಪದ್ಯಗಳಿಗೂ ಕೊರತೆಯಿಲ್ಲ. ಒಟ್ಟಿನಲ್ಲಿ ಕನ್ನಡ ಕಾವ್ಯದಲ್ಲಿ ಸಂಸ್ಕೃತದ ಬಳಕೆಯನ್ನು ಟೀಕಿಸಿಯೂ ನಯಸೇನನು ಅದನ್ನು ಚಾಚೂ ತಪ್ಪದೆ ನಡೆಸಿ ತೋರಿಸಲಾಗಲಿಲ್ಲ. ಅಂತೆಯೇ 'ಪೊಸಗನ್ನಡ' 'ಸುದ್ಧಗನ್ನಡ'ದಲ್ಲಿ ಬರೆಯುವೆನೆಂದು ಹೇಳಿಯೂ ಹಳಗನ್ನಡದ ಜಾಡು ಬಿಡಲಾರದೆ ಅಲ್ಲಿಷ್ಟು ಇಲ್ಲಿಷ್ಟು ಹೊಸಗನ್ನಡ ರೂಪಗಳನ್ನು ಸೇರಿಸಿ ಬಹಳಷ್ಟು ಕಡೆಗೆ ನಾಣ್ಣುಡಿ ಮುಂತಾದವುಗಳನ್ನು ದೇಸಿ ರೂಪಗಳನ್ನು ಅಳವಡಿಸಿ

೧. ಬಿ. ವ್ಹಿ. ಮಲ್ಲಾಪುರ, ನಯಸೇನ ಮತ್ತು ಅವನ ಕೃತಿಗಳು, ಪು. ೪೧೩ (೧೯೭೭).

ಹೊಸ ರೀತಿಯಲ್ಲಿ ಕಾವ್ಯ ರಚಿಸಿದ್ದೇ ವೈಶಿಷ್ಟ್ಯ ಎನ್ನಬೇಕು.

ಭಾಷಾವಿಜ್ಞಾನದ ದೃಷ್ಟಿಯಿಂದ ಧರ್ಮಾಮೃತದ ಭಾಷೆಯನ್ನು ಇಲ್ಲಿ ಸ್ಥೂಲವಾಗಿ ವಿವರಿಸಲಾಗಿದೆ.

## ಧ್ವನಿಮಾ ವಿಭಾಗ

ಧರ್ಮಾಮೃತದಲ್ಲಿ ಅಚ್ಚಗನ್ನಡದ ಒಟ್ಟು ೩೨ ಧ್ವನಿಮಾಗಳು ಬಳಕೆಯಾಗಿವೆ :

ಸ್ವರಗಳು-೧೦ ಹ್ರಸ್ವ-ಅ, ಇ, ಉ, ಎ, ಒ

ದೀರ್ಘ-ಆ, ಈ, ಊ, ಏ, ಓ

ದೀರ್ಘ ಆ, ಏ, ಓ ಸ್ವರಗಳು ಆಜ್ಞಾರ್ಥಕ, ಪ್ರಶ್ನಾರ್ಥಕ, ಸಂಬೋಧನಾರ್ಥಕ ಅಥವಾ ಅವಧಾರಣೆ ಸೂಚಿಸುವ ಶಬ್ದಗಳಲ್ಲಿ, ಶಬ್ದಾಂತ್ಯದಲ್ಲಿ ಬಳಕೆಗೊಳ್ಳುತ್ತವೆ. ಉಳಿದೆಲ್ಲ ದೀರ್ಘ ಮತ್ತು ಹ್ರಸ್ವ ಸ್ವರಗಳು ಶಬ್ದಾರಂಭ ಮಧ್ಯ ಹಾಗೂ ಅಂತ್ಯದಲ್ಲಿ ಬಳಕೆಯಾಗುತ್ತವೆ.

ವ್ಯಂಜನಗಳು - ೨೨ ಪ್, ಬ್, ತ್, ದ್, ಟ್, ಡ್, ಕ್, ಗ್

ಚ್, ಜ್, ಮ್, ನ್, ಣ್, ಲ್, ಱ್, ಳ್,

ರ್, ೞ್, ಯ್, ವ್, ಸ್, ಹ್,

(ಸಂಸ್ಕೃತ-ಪ್ರಾಕೃತ ಭಾಷೆಗಳಿಂದ ಸ್ವೀಕೃತ ಪದಗಳಲ್ಲಿ ಫ್, ಭ್, ಥ್, ಧ್, ಠ್, ಢ್, ಖ್, ಘ್, ಛ್, ಝ್ ಮಹಾಪ್ರಾಣ ವ್ಯಂಜನ ಧ್ವನಿಗಳು ಬಳಕೆಗೊಂಡಿವೆ.)

ಣ್, ಳ್, ೞ್ ಹಾಗೂ ಟ್, ಧ್ವನಿಮಾಗಳು ಶಬ್ದಾರಂಭದಲ್ಲಿ ಬಳಕೆಯಾಗಿಲ್ಲ. ಶಬ್ದಾಂತ್ಯದಲ್ಲಿ ಸಾಮಾನ್ಯವಾಗಿ ರ್, ಣ್, ಳ್, ಯ್ ಧ್ವನಿಮಾಗಳು ಬಳಕೆಯಾಗಿವೆ. ಉಳಿದ ಅಚ್ಚಗನ್ನಡ ವ್ಯಂಜನ ಧ್ವನಿಮಾಗಳು ಶಬ್ದಾರಂಭ ಹಾಗೂ ಮಧ್ಯದಲ್ಲಿ ದೊರಕುತ್ತವೆ. ಮ್, ನ್, ಣ್ ಇವು ಅನುನಾಸಿಕ ಧ್ವನಿಮಾಗಳು. ಶಬ್ದಾರಂಭ ಹಾಗೂ ಮಧ್ಯದಲ್ಲಿ ದೊರಕುತ್ತವೆ. ಮ್, ನ್, ಣ್ ಇವು ಅನುನಾಸಿಕ ಧ್ವನಿಮಾಗಳು . ಮ್, ನ್, ಣ್, ಙ್, ಞ್, ಈ ಐದು ಅನುನಾಸಿಕಗಳು ಮುಂದೆ ಬರುವ ವ್ಯಂಜನಕ್ಕನುಗುಣವಾಗಿ ಉಚ್ಚರಿಸಲ್ಪಡುತ್ತಿರಬಹುದಾಗಿದ್ದು, ಅವುಗಳನ್ನು ಬಿಂದುವಿನ ಸಂಕೇತದಿಂದ ಬಳಸಲಾಗಿದೆ.

ಹಳಗನ್ನಡದ ಸಬಿಂದುಕ ರೂಪಗಳು ಧರ್ಮಾಮೃತದಲ್ಲಿ ಹೆಚ್ಚಾಗಿ ಸಬಿಂದುಕಗಳಾಗಿಯೇ ಬಳಕೆಗೊಂಡಿವೆ. ಆದರೆ, ಬರ್ದುಂಕು-ಬರ್ದುಕು, ಇೞುಂಪೆ-ಇೞುಪೆ ಈ ಎರಡು ಉದಾಹರಣೆಗಳು ಸಬಿಂದುಕ ಹಾಗೂ ಅಬಿಂದುಕ ಎರಡೂ ಬಗೆಯಲ್ಲಿ ಬಳಕೆಯಾಗಿರುವುದನ್ನು ಗಮನಿಸಬೇಕು.

ವ್ಯಂಜನ ದ್ವಿತ್ವದಲ್ಲಿ ಪ್‌ಪ್, ಬ್‌ಬ್, ತ್‌ತ್, ದ್‌ದ್, ಟ್‌ಟ್, ಡ್‌ಡ್, ಕ್‌ಕ್, ಗ್‌ಗ್, ಚ್‌ಚ್, ಜ್‌ಜ್, ಮ್‌ಮ್, ನ್‌ನ್, ಣ್‌ಣ್, ರ್‌ರ್, ಱ್‌ಱ್, ಲ್‌ಲ್, ಳ್‌ಳ್, ಸ್‌ಸ್, ಯ್‌ಯ್, ವ್‌ವ್-ಈ ಇಪ್ಪತ್ತು ದೊರೆಯುತ್ತವೆ. ವ್ಯಂಜನ ದ್ವಿತ್ತ್ವಗಳು ಶಬ್ದಮಧ್ಯದಲ್ಲಿ ಬಳಕೆಯಾಗಿವೆ: ವಿಜಾತಿ ವ್ಯಂಜನ ದ್ವಿತ್ತ್ವಗಳಲ್ಲಿ-ಣ್‌ಮ್, ಣ್‌ಟ್, ಣ್‌ಸ್, ಣ್‌ದ್, ಣ್‌ಕ್, ಣ್‌ಗ್, ಣ್‌ಚ್, ಣ್‌ಕ್, ಣ್‌ಡ್, ಯ್‌ತ್, ಯ್‌ಗ್, ಯ್‌ದ್, ಟ್‌ಕ್, ಟ್‌ಲ್, ಟ್‌ದ್, ಟ್‌ವ್, ಟ್‌ಣ್, ರ್‌ವ್, ರ್‌ನ್, ರ್‌ಮ್, ರ್‌ದ್, ರ್‌ಲ್, ರ್‌ಕ್, ರ್‌ಟ್, ರ್‌ಮ್,

ಲ್‌ಮ್, ಲ್‌ದ್, ಲ್‌ಗ್, ಲ್‌ವ್, ಲ್‌ನ್, ಲ್‌ತ್, ಲ್‌ಟ್, ನ್‌ದ್, ನ್‌ತ್, ಳ್‌ಗ್, ಳ್‌ಕ್, ಳ್‌ಬ್, ಳ್‌ನ್, ಱ್‌ಳ್, ಮುಂತಾದ ೫೦ಕ್ಕೂ ಹೆಚ್ಚು ದೊರೆಯುತ್ತವೆ.

ಪದಗಳಲ್ಲಿ ಅಕ್ಷರ ವ್ಯವಸ್ಥೆ ಹೀಗಿದೆ :

ಏಕಾಕ್ಷರ-ಪೊನ್, ತಾಯ್, ಕಣ್, ಈ
ದ್ವ್ಯಕ್ಷರಃ-ತೊಟ್ಟು, ಒಪ್ಪು, ಪೆಂಪು, ಪಸಿ, ಮರ್ದು, ಓದು
ತ್ರ್ಯಕ್ಷರ- ಅರಸಿ, ಅಸಗ, ಬಾಗಿಲು, ಕುಂಟಣಿ, ಪೆರ್ಗಡೆ
ಬಹುಅಕ್ಷರ- ಅಡ್ಡಣಿಗೆ, ಸಡಗರ, ಪೊಡಮಡು

## ಧ್ವನಿಮಾ ವ್ಯವಸ್ಥೆಯಲ್ಲಿ ಕಂಡುಬರುವ ಕೆಲವು ವಿಶೇಷ ಅಂಶಗಳು

ಶಬ್ದಾರಂಭದ 'ಪ್' ಕಾರವು ಧರ್ಮಾಮೃತದಲ್ಲಿ ಕೆಲವೆಡೆ 'ಹ್' ಕಾರವಾಗಿರುವುದಕ್ಕೆ ಉದಾಹರಣೆಗಳಿವೆ.[೪] ಪ್>ಹ್ ಬದಲಾವಣೆ ದ್ರಾವಿಡ ಭಾಷೆಗಳ ಪೈಕಿ ಕನ್ನಡದಲ್ಲಿ ಮಾತ್ರ ಇರುವ ವಿಶೇಷ ಅಂಶವಾಗಿದೆ. ಹಳಗನ್ನಡದಲ್ಲಿ 'ಪ್' ಮಾತ್ರ ಇದ್ದು ಕ್ರಿ.ಶ. ೧೦ನೆಯ ಶತಮಾನದ ವೇಳೆಗೆ 'ಹ್' ಕಾರವಾಗಿ ಮಾರ್ಪಡತೊಡಗಿತು. ಪ್>ಹ್ ಬದಲಾವಣೆ ನಡುಗನ್ನಡದ ವೈಶಿಷ್ಟ್ಯ. ಧರ್ಮಾಮೃತದಲ್ಲಿ ಒಂದೇ ಶಬ್ದ ಕೆಲವೊಮ್ಮೆ 'ಪ್' ಕೆಲವೊಮ್ಮೆ 'ಹ್' ಒಳಗೊಂಡಿರುವುದಕ್ಕೆ ಉದಾಹರಣೆಗಳು ದೊರೆಯುತ್ತವೆ.

ಪಾಸು ~ಹಾಸು, ಪೊರಸು ~ ಹೊರಸು, ಪೆಚ್ಚುಗೆಡು ~ ಹೆಚ್ಚುಗೆಡು. 'ಪಾಪೆ' ಈ ಶಬ್ದ 'ಹಾಹೆ' ಆಗದೆ ಹಾಗೆಯೇ ಉಳಿದಿರುವುದೂ ಗಮನಾರ್ಹ.

'ಪ್' ಕಾರಕ್ಕಿಂತ 'ಹ್' ಕಾರಯುಕ್ತಪದಗಳು ಕಡಿಮೆ ಪ್ರಮಾಣದಲ್ಲಿರುವುದನ್ನು ಗಮನಿಸಬಹುದು. ಶಬ್ದಮಧ್ಯದಲ್ಲೂ ಪ್/ಹ್ ಬಳಕೆ ಉಂಟು. ಉದಾ: ಬಡಿಪು ~ ಬಡಿಹು, ಪಡಪಾಳಿ ~ಹಡಹಾಳಿ -ಧರ್ಮಾಮೃತದಲ್ಲಿ ಬಳಕೆಗೊಂಡ ಪದಗಳ ಸಂಖ್ಯಾದೃಷ್ಟಿಯಿಂದ ಪರಿಶೀಲಿಸಿದರೆ ಪ್/ಹ್ ಬದಲಾವಣೆ ಗೌಣವೆಂದೇ ತೋರುತ್ತದೆ. ಹಸ್ತಪ್ರತಿಕಾರರ ಕೈವಾಡದಿಂದೇನಾದರೂ ಈ ಬಗೆಯ ಕೆಲವು ಪದಗಳು ನುಸುಳಿರುವವೇನೋ.

ಕೆಲವು ಸಂಯುಕ್ತಾಕ್ಷರಗಳನ್ನು ಮಧ್ಯದಲ್ಲಿ ಸ್ವರವನ್ನು ಸೇರಿಸಿ ಬಿಡಿಸಿ ಬಳಸಿರುವ ಉದಾಹರಣೆಗಳಿವೆ. ಇದೂ ನಡುಗನ್ನಡ ಭಾಷೆಯ ವೈಶಿಷ್ಟ್ಯ. ಉದಾ-ಚೆಲ್ವು-ಚೆಲುವು, ಅಳ್ಕಿ-ಅಳುಕಿ, ರತ್ನ-ರತುನ, ವರ್ಷ-ವರುಷ. ರೇಫಯುಕ್ತ ಸಂಯುಕ್ತಾಕ್ಷರಗಳಲ್ಲಿಯ ರೇಫದೊಡನಿದ್ದ ಧ್ವನಿಮಾ ದ್ವಿತ್ವವಾಗಿ ರೇಫ ಲೋಪವಾಗುವ ಕ್ರಿಯೆ ನಡುಗನ್ನಡದ ಇನ್ನೊಂದು ವೈಶಿಷ್ಟ್ಯ. ಅಂತಹ ಉದಾಹರಣೆಗಳೂ ಧರ್ಮಾಮೃತದಲ್ಲಿವೆ. ಕರ್ಬೊನ್-ಕಬ್ಬುನ, ಪೆರ್ಗಣ-ಪೆಗ್ಗಣ. ರೇಫವಿಲ್ಲದಲ್ಲೂ ಒಂದು ಧ್ವನಿಮಾ ಲೋಪವಾಗಿ ಇನ್ನೊಂದು ದ್ವಿತ್ವವಾಗುವುದೂ ಉಂಟು. ಕಟ್ತಲೆ-ಕತ್ತಲೆ, ತೊಟ್ತು-ತೊತ್ತು.

## ಆಕೃತಿಮಾ ವಿಭಾಗ

ನಾಮಾಕೃತಿಮಾಗಳಲ್ಲಿ ಅಂಕಿತ ನಾಮಪದಗಳು ಸಂಸ್ಕೃತ-ಪ್ರಾಕೃತ ನಾಮಗಳೇ ಬಳಕೆಯಾಗುವುದು ವಿಶೇಷ. ಸಾಳಂಕಾರ, ಪ್ರಭಾವತಿ, ವರಸೇನ, ಶೀಲವತಿ, ವಸುಭೂತಿ, ಲಲಿತಾಂಗ, ಅನಂತಮತಿ, ಸೋಮದತ್ತ, ಧನಕೀರ್ತಿ, ಜಿನದಾಸ, ಗುರುದತ್ತ, ಚಂದ್ರಾಭ, ಗುಣಪಾಲ, ಧನಶ್ರೀ, ವಿಷ್ಣುಕುಮಾರ ಇತ್ಯಾದಿ.

ರೂಢನಾಮಗಳಲ್ಲಿ ಶುದ್ಧಗನ್ನಡದವುಗಳೇ ಹೆಚ್ಚು. ಆದರೂ ಸಂಸ್ಕೃತ ಮೂಲದವೂ ಉಂಟು. ಉದಾ-ಬೊಜಗ, ಗುಡ್ಡ, ತೊಟ್ಟಿ, ತಳಾಱ, ಪೆರ್ಗಡೆ, ಅಸಗ, ಪಂಡಿತೆ, ಗುರು ಇತ್ಯಾದಿ.

ಸಂಬಂಧವಾಚಿನಾಮಗಳಲ್ಲಿ ಅಚ್ಚಗನ್ನಡ ನಾಮಗಳ ಬಳಕೆಯೇ ಹೆಚ್ಚು. ಅಣ್ಣ, ತಮ್ಮ, ಅಳಿಯ, ತಂಗಿ, ತಂದೆ, ತಾಯಿ, ಮೈದುನ, ಮಗಳು, ಮಗ ಇತ್ಯಾದಿ.

ಮಾನವೇತರ ನಾಮಪದಗಳಲ್ಲಿ ತತ್ಕಾಲೀನ ಕನ್ನಡದಲ್ಲಿ ದೊರೆಯುವ ಸಾಮಾನ್ಯ ಪದಗಳೇ ಬಳಕೆಯಾಗಿವೆ. ಉದಾ: ಪಗಲು, ಪಲ್ಲು, ಪೊರಸು, ಪೂ, ಆಟ, ನೀರು, ತುಪ್ಪ, ಕಣ್, ಕೇಡು, ಸೊರ್ಕು, ಆನೆ, ಪಾವು, ಗೀಜಗವಕ್ಕಿ ಇತ್ಯಾದಿ. ಸಂಖ್ಯಾವಾಚಿಗಳಲ್ಲಿ ಒಂದರಿಂದ ಪತ್ತು, ಪದಿನೆಂಟು, ಮೂವತ್ತೆರಡು, ಇಪ್ಪತ್ತೆಂಟು, ನೂರ್ ಮುಂತಾದವು ಬಳಕೆಗೊಂಡಿದೆ. ಸಾಸಿರ/ಸಹಸ್ರ ಬಳಕೆಗೊಂಡಿದೆ.

ಸಾಧಿತ ಮಾನವನಾಮಪದಗಳು ತದ್ಧಿತ ಪ್ರತ್ಯಯಗಳನ್ನು ಅನ್ವಯಿಸಿಕೊಳ್ಳುವುದರ ಮೂಲಕ ರಚಿತವಾಗಿ ಬಳಕೆಗೊಂಡಿವೆ. ಉದಾ: -ಬಡವ, ದಾನಿ, ಪಾದರಿಗ, ತಂಬುಲಿಗ, ತೆಲ್ಲಿಗ, ದೂಸಿಗ, ಸಿಪ್ಪಿಗ, ಅಕ್ಕಸಾಲಿಗ, ಸುಂಕಿಗ, ಮಣಿಗಾಱ, ಪೊಱುಕಾಱ, ಪುಲಿವೇಂಟೆಕಾಱ, ಬೆಟ್ಟೇಱುಕಾಱ, ಅರಸಿ, ಒಕ್ಕಲಿತಿ, ಸರಸಿಜಮುಖಿ, ಕುಂಟಣಿ ಇತ್ಯಾದಿ.

**ಲಿಂಗವಚನ**

ಶಬ್ದಾಂತ್ಯದಲ್ಲಿ-ನ್ ಪುಲ್ಲಿಂಗವನ್ನು ಸೂಚಿಸುತ್ತದೆ. ಇದು ಐಚ್ಛಿಕವಾಗಿದೆ. ಮಗನ್ ಮಗಂ, ಪಿರಿಯನ್. ಪಿರಿಯಂ, ಇದೇ ರೀತಿ ಶಬ್ದಾಂತ್ಯದಲ್ಲಿ-ಳ್ ಸ್ತ್ರೀಲಿಂಗ ಸೂಚಕವಾಗಿದೆ. ಮಗಳ್-ಓರ್ವಳ್, ಪಿರಿಯಳ್. ಪುಲ್ಲಿಂಗ ರೂಪಗಳನ್ನು 'ಗಂಡು' ಸ್ತ್ರೀಲಿಂಗರೂಪಗಳನ್ನು 'ಪೆಣ್' ಎಂಬ ಶಬ್ದಗಳನ್ನು ಅನ್ವಯಿಸಿ ರೂಪಿಸುವ ಉದಾಹರಣೆಗಳಿವೆ-ಗಂಡಾನೆ, ಪೆಣ್ಪುಲಿ.

ಮಾನವ ನಾಮಗಳಿಗೆ ಅರ್, ವಿರ್, ಇರ್, ಬಹುವಚನ ಪ್ರತ್ಯಯಗಳು ಮಾನವೇತರ ನಾಮಗಳಿಗೆ ಗಳ್ ಹಾಗೂ ಗೌರವ ಸೂಚಿಸುವಲ್ಲಿ 'ಅರ್ಕಳ್' ಒಂದು ಹೆಚ್ಚಿನ ಪ್ರತ್ಯಯ ಅವ್ಯಯವಾಗುತ್ತವೆ. ಉದಾ: ಅಂಗಸ್ತನೆಯರ್, ಸೊಸೆವಿರ್, ತೊಟ್ಟಿರ್, ಕಣ್ಗಳ್, ವೀರರ್ಕಳ್.

**ಸರ್ವನಾಮಗಳು**

| | | | |
|---|---|---|---|
| ನಾನ್ | ಆನ್ | ನಾವ್ | ಆವ್ |
| ನೀನ್ | ನೀ | ನೀವ್ | |
| ಅವನ್ | ಇವನ್ | | |
| ಆತನ್ | ಈತನ್ | ಅವರ್ | ಇವರ್ |
| ಅವಳ್ | ಇವಳ್ | | |
| ಆಕೆ | ಈಕೆ | | |
| ಅದು | ಇದು | ಅವು | ಇವು |

**ವಿಭಕ್ತಿಪ್ರತ್ಯಯಗಳು**

| | | |
|---|---|---|
| ಪ್ರಥಮಾ | - | ಮ್ |
| ದ್ವಿತೀಯಾ | - | ಅನ್-ಅಮ್ |
| ತೃತೀಯಾ | - | ಇನ್, ಇಂದ್/ಇಂದೆ, -ಇಮ್, -ಇವೆ<br>ಉದಾ: ಎಳಲತೆಯಿನೆ, ಉಪಾಯದಿಂದ/ಉಪಾಯದಿಂದೆ, ಪೊನ್ನಿಂ |
| ಚತುರ್ಥೀ | - | ಕ್ಕೆ, -ಗೆ-ಇಂಗೆ-ಅಂಗೆ<br>ಉದಾ: ಉಬ್ಬರಕ್ಕೆ, ಬಾಗಿಲ್ಗೆ, ತಾಯ್ಗಂ, ಚಾಗಂಗೆ, ಮಗಳಿಂಗೆ |
| ಪಂಚಮೀ | - | ಇಂದ/-ಇಂದೆ, -ಇಮ್, -ಅತ್ತಣಿಂ |
| ಷಷ್ಠೀ | - | ಅ-ಆ,<br>ತೊಟ್ಟಿರ, ಭೂಪತಿಯಾ<br>ಈ ಷಷ್ಠೀದೀರ್ಘ 'ಆ' ಪ್ರತ್ಯಯ ಹಳಗನ್ನಡದ ಅವಶೇಷವೆಂಬುದನ್ನು ಗಮನಿಸಬೇಕು. ೧೨ನೆಯ ಶತಮಾನದಲ್ಲಿ ಇದರ ಬಳಕೆ ನಿಂತಿದ್ದರೂ ನಯಸೇನನಲ್ಲಿ ಈ ಉದಾಹರಣೆ ದೊರೆತಿರುವುದು ವಿಶೇಷ. |
| ಸಪ್ತಮೀ | - | ಅಲ್ಲಿ, ಒಳ್/ಒಳು, ಒಳಗೆ |
| ಸಹತ್ವ | - | ಒಡನೆ, ಬೆರಸಿ |

**ವಿಶೇಷಣಗಳು**

ಕೆರ್, ಚೆನ್, ಕೂರ್, ನಿಡು, ನೀಳ್, ನಳಿ, ಸುಲಿ, ಮೊಳ, ಪೊಱ, ತಣ್, ನಸು, ಮುಂತಾದ ಹಲವಾರು ರೂಪಗಳನ್ನು ಪದಪೂರ್ವದಲ್ಲಿ ಅನ್ವಯಿಸಿ ಗುಣವಾಚಿಗಳನ್ನು ವಿಶೇಷಣಗಳನ್ನು ರೂಪಿಸಿರುವ ಉದಹಾರಣೆಗಳಿವೆ. ಉದಾ-ಕೆರ್ಬಳ್ಳಿ, ಚೆಂಬೊನ್ನು ಕೂರಲಗು, ನಿಡುದಲೆ, ನೀಳ್ದಲೆ, ನಳಿತೋಳ್, ಸುಲಿಪಲ್, ಮೊರಗಿವಿ, ಪೊಱಪಲ್ಲು, ಮೊರಗಾಲು, ತಣ್ಣೆಳಲು, ನಸುಗೆಂಪು ಇತ್ಯಾದಿ.

ಹೋಲಿಕೆಯನ್ನು ಸೂಚಿಸುವ 'ಅಂತಪ್ಪ' ಎಂಬ ಪದವನ್ನು ಅನ್ವಯಿಸಿ ವಿಶೇಷಣ ರೂಪ ಸಾಧಿಸಿದ ಬಗೆಯೂ ವಿಪುಲವಾಗಿದೆ.

ಉದಾ: ಒರಳಂತಪ್ಪ ಕಾಲ್ಗಳುಂ; ಮೊರದಂತಪ್ಪ ಕಿವಿಗಳುಂ

**ಕ್ರಿಯಾಪದಗಳು**

ಕನ್ನಡಕ್ಕೆ ಸಹಜವಾಗಿರುವ ಕ್ರಿಯಾಪದ ವ್ಯವಸ್ಥೆಯನ್ನೇ ಧರ್ಮಾಮೃತದಲ್ಲಿ ಕಾಣುತ್ತೇವೆ. ಅಱಿಸು, ತರು, ನೂಂಕು, ತಿನ್, ಕರೆ ಮುಂತಾದ ಕ್ರಿಯಾಪದಗಳು ಸಹಜ ಕರ್ಮಾರ್ಥವುಳ್ಳವುಗಳಾಗಿದ್ದರೆ ಪಾಡು, ಕಿಡೆ, ಮುನಿ ಮುಂತಾದ ಅಕರ್ಮಕ ಕ್ರಿಯಾಪದಗಳೂ ಉಂಟು.

ಅಕರ್ಮಕಗಳನ್ನು ಇಸು, ಚು ಪ್ರತ್ಯಯಗಳನ್ನು ಅನ್ವಯಿಸಿ ಸಕರ್ಮಕ ಮಾಡಬಹುದಾದ ಓಡು, ಉರುಳು, ಬಾಡು, ತೀರು ಮುಂತಾದ ಕ್ರಿಯಾ ಪ್ರಾತಿಪದಿಕಗಳು ದೊರೆಯುತ್ತವೆ. ದಪ್ಪ/ದಪ ಕಾಲವಾಚಿ ಪ್ರತ್ಯಯ ಭೂತೇತರ ಹಾಗೂ ಭೂತಕಾಲಗಳಲ್ಲಿ ಬಳಕೆಯಾಗಿದೆ. ಗುಂ/ಕುಂ ಪ್ರತ್ಯಯವೂ ಲಿಂಗವಚನಾತೀತವಾಗಿ ಭೂತೇತರ ಹಾಗೂ ಭೂತಕಾಲಗಳಲ್ಲಿ ಬಳಕೆಯಾಗಿದೆ. ಪೆರ್ಚುಗುಂ, ಕುಡುಗುಂ, ಆಗಲಾರ್ಕುಂ ಕೈಪೆಯಕ್ಕುಂ. ಕ್ರಿಯಾಪ್ರಾತಿಪದಿಕಗಳಿಗೆ ಬೇರೆ ಬೇರೆ ಪುರುಷಲಿಂಗ ವಚನಗಳಲ್ಲಿ ಕಾಲಗಳಲ್ಲಿ ಅನ್ವಯವಾಗುವ ಪ್ರತ್ಯಯಗಳಿಗೆ ಸಂಬಂಧಿಸಿದಂತೆ ಧರ್ಮಾಮೃತದಲ್ಲಿ ವಿಶೇಷ ವ್ಯತ್ಯಾಸ ಬೆಳವಣಿಗೆಗಳೇನೂ ಕಾಣುವುದಿಲ್ಲ. ವಿಧ್ಯರ್ಥ ಆಶೀದರ್ಥಗಳಲ್ಲಿ ಕೆ, ಗೆ, ಅಲ್ಲದೆ ಇಂ, ಇರಿ, ಅಮ್, ಅವ್, ಪ್ರತ್ಯಯಗಳೂ ಬಳಕೆಯಾಗಿವೆ. ಉದಾ: ಪೇಳ್ವೆ, ಪೇಳೇ, ಆಜ್ಞಾರ್ಥಕದಲ್ಲಿ ಉಪಯೋಗಿಸಲ್ಪಡುವ ಇಂ, ಇರಿ ಪ್ರತ್ಯಯಗಳಲ್ಲಿ ಇರಿ ಹಳಗನ್ನಡದಲ್ಲೂ ಇಂ ಹೊಸಗನ್ನಡದಲ್ಲೂ ಬಳಕೆಗೊಳ್ಳುವಂಥವು. ಅವೆರಡೂ ಧರ್ಮಾಮೃತದಲ್ಲಿ ಬಳಕೆಯಾಗಿವೆ. ಉದಾ: ಬನ್ನಿರಿ, ಬನ್ನಿಂ, ಕರೆಯಿರಿ ಕರೆಯಿಂ, ತನ್ನಿರಿ ತನ್ನಿಂ.

ಕ್ರಿಯಾ ಪ್ರಾತಿಪದಿಕಗಳಿಗೆ ಹತ್ತುವ 'ಎನ್' ಪ್ರತ್ಯಯ ಪುಂ. ಸ್ತ್ರೀ. ಎರಡೂ ನಾಮಗಳಿಗೂ ಹತ್ತಿರುವ ಉದಾಹರಣೆ ಧರ್ಮಾಮೃತದಲ್ಲಿವೆ. ಈ ಬಗೆಯ ಉದಾಹರಣೆಗಳು ನಡುಗನ್ನಡ/ಹೊಸಗನ್ನಡಗಳಲ್ಲಿ ಬಹಳ ಕ್ವಚಿತ್. ಉದಾ- ನಾನರಸನ ಮಗನೆಂ, ಅನಂತಮತಿಯೆಂ.

ಸಂಧಿ ಸಮಾಸಗಳಿಗೆ ಹೊಸತೇನನ್ನು ಧರ್ಮಾಮೃತದಲ್ಲಿದೆ ಕಾಣೆವು. ನಡುಗನ್ನಡ/ಹಳಗನ್ನಡದಲ್ಲಿ ದೊರೆವ ಸಂಧಿ ಸಮಾಸಗಳನ್ನೇ ಇಲ್ಲಿ ಗುರುತಿಸಬಹುದು. ಕನ್ನಡ ಸಂಸ್ಕೃತ ಪದಗಳನ್ನು ಬೆರೆಸಬಾರದು ಎಂದು ಸ್ಪಷ್ಟವಾಗಿ ಹೇಳಿದ ನಯಸೇನ ಅರಿಸಮಾಸದೆಡೆಗೆ ಲಕ್ಷ್ಯವೀಯದೆಯೆ ತಾನೇ ಬಳಸಿರುವ ಪದಗಳು ನಮ್ಮ ಗಮನಸೆಳೆಯುತ್ತವೆ. ಇದೊಂದು ವಿಶೇಷ.

ಉದಾ: ಪೆಱೆಮುಖಿ, ಕುರುಳಪಂತಿ, ಪವಳಾಧರಂ

**ವಾಕ್ಯಗಳು**

ಧರ್ಮಾಮೃತದಲ್ಲಿ ಸಹಜ, ಸಮಸ್ತ, ಸಂಕೀರ್ಣ, ಖಂಡ, ಅಖಂಡ ಮುಂತಾದ ಹಲವಾರು ಪ್ರಕಾರದ ವಾಕ್ಯಗಳು ಲಭಿಸುತ್ತವೆ. ಅವುಗಳ ರಚನೆಯ ವಿವರಣೆಗೆ ಕೈ ಹಾಕದೆ ಉದಾಹರಣೆಗಳನ್ನು ಮಾತ್ರ ಇಲ್ಲಿ ನೀಡಲಾಗಿದೆ :

**ಸಹಜ** ವಿದ್ಯಾಧರೆ ಇಂತೆಂದಳ್; ನಾನರಸನಮಗನೆಂ ಉಡುವುದು ದಿವ್ಯಾಂಬರಮಂ; ನಿನಗೇಕೆ ತಪಸ್ಸಿನ ಕುತ್ತಂ. ನಿಮ್ಮ ದೇಶವಾವುದು, ಊರಾವುದು, ದೇವರಂ ಬಂದಿಸುತಿರ್ದನಂ.

**ಸಮಸ್ತ** ನಂಟರ್ ಜೀಯೆನೆ ಸರಸಿಜಮುಖಿ ನಿನ್ನ ಮದುವೆಯಂ ಮಾಡಿದಪ್ಪೆಂ. ಬಲ್ಲಿದನೆನ್ನರಸಂ ಕಳ್ಳೊಡಂ ಕೊಲ್ವನಲ್ಲಂ. ಅರವರಿಸುವನ್ನನಕ ಕೊಲ್ಲದೆ ಮಾಣಂ; ಸ್ತ್ರೀರತ್ನಮಂ ದೇವರ್ಗೆ ಪಾಗುಡಂ ತಂದೆನೆಂದೊಪ್ಪಿಸುವುದು.

**ಸಂಕೀರ್ಣ** ನೀನಾರ್ಗೆ ನಿನ್ನ ಪೆಸರೇನೆಂಬುದೇನಂ ಸಾಧಿಸಲೆಂದು ಬಂದೆಯೆಂದು ಬೆಸಗೊಳ್ವುದುಂ, ದಿವದೊಳ್ ಭೋಗಿಪೆನೆಂದೀ ಭವದ ಮಹಾಸೌಖ್ಯಮೆಲ್ಲಮಂ ಕಿಡಿಸಿ ಶರೀರವನೊಕ್ಕು ಕುದಿದು ಕೆಮ್ಮನೆ ಸವಣಮರುಳ್ಗೊಳ್ಳದರಸಿ ಸುಖಮನೆ ಬಗೆಯಾ

ವಾಕ್ಯರಚನೆಯಲ್ಲಿ ನಯಸೇನನು ಶಬ್ದಗಳನ್ನು ಸ್ಥಾನಪಲ್ಲಟಗೊಳಿಸಿಯೂ ತೋರುವ ನಯಗಾರಿಕೆ ಮನಸೆಳೆಯುತ್ತದೆ. ಕನ್ನಡ ಭಾಷೆಯ ಚೆಲ್ವಿಕೆ, ಕೋಮಲತೆ, ಸಂಕೀರ್ಣತೆ ಎದ್ದು ಕಾಣುವಂತೆ ಬಳಸಿರುವ ವಾಕ್ಯಗಳು ಧರ್ಮಾಮೃತದ ಭಾಷಾ ವೈಶಿಷ್ಟ್ಯವೆನಿಸುತ್ತವೆ. ಸಣ್ಣ ಸಣ್ಣ ವಾಕ್ಯಗಳಂತೆಯೇ ಉದ್ದುದ್ದ ವಾಕ್ಯಗಳೂ ಕಂಗೊಳಿಸುತ್ತವೆ. ವಾಕ್ಯರಚನಾ ಶೈಲಿಯ ಕೆಲವು ಉದಾಹರಣೆಗಳನ್ನಿಲ್ಲಿ ನೋಡಿ :

ಸುೞಿವುವು ಜುಮ್ಮೆಂದು ಕಂಡವರ್ಪೆಸುವಿನಿಂ
ವರಚಂದ್ರಪುರಮನಾಳ್ವಂ ಗರುಡನೆಂಬ ವಿದ್ಯಾಧರರಾಜಸ್ಥಾತನ
ಮಹಾದೇವಿ ವಿಭ್ರಮಾನ್ವಿತೆ ಪೆಸರಿಂ ಅನಂತಮತಿಯೆಂಬಳ್
ಆ ಇರ್ವರ್ಗಂ ಪುಟ್ಟಿದೆಂ ಪವನವೇಗೆಯೆಂಬೆಂ.
ಮುನ್ನಂ ತನಗೆಂತಳವಡಿಸಿ ಪೇೞ್ದನಂತಾ ತೆಱದಿಂ ಮನದ
ಮಹಾಭಯದಿಂದಂ ಜನ ಚೋರಂಗೞಿಯೆ ಪೇೞೆ.
ನೀನಾರ್ಗೆ ನೀಂ ಸಾಧಿಸುವ ವಿದ್ಯೆಯ ಪೆಸರೇನಿದು
ನೀವೇನಂ ತರವೇೞ್ವೊಡಂ ತಂದಿತ್ತಪೆನಿದೊಂದು ಮಾತ್ರಬೇಡ
ಪೊನ್ನೆತ್ತಣಿಂ ಬರ್ಪುದಿದನಾರಯ್ವೆನ್.
ತೆಂಗಿನ ಪೊಸನೇಣಿಂದಱುದಿಂಗಳ್ವರಮಡಸಿ ಕಂಬಿಯಿಂ ಕಟ್ಟಿದೊಡಂ
ತಾಂ ಗಡ ಬಿಚ್ಚೊಡೆ ಮತ್ತಂ ಪಿಂಗದು ಡೊಂಕೆಂಬ
ನಾಯಬಾಲದತೆಱದಿಂ
ಪೋದದಿಂ ಪೋಗಲಿ ಪೆಱಗನೆಣಿಸಲಾಗದು.

ನಯಸೇನನು ಬಳಸಿರುವ ನಾಣ್ಣುಡಿಗಳು, ಸೂಕ್ತಿಗಳು, ಉಪಮೆಗಳು ಓದುಗನನ್ನು ದಂಗುಬಡಿಸುತ್ತವೆ. ಎಷ್ಟೋ ಸಲ ಅವನು ಬಳಸಿರುವ ವಾಕ್ಯ, ವಾಕ್ಯಖಂಡಗಳೇ ನಾಣ್ಣುಡಿ ಸೂಕ್ತಿಯಂತೆ ಶೋಭಿಸಿವೆ. ಇವೆಲ್ಲವುಗಳಿಂದ ಅರ್ಥದೃಷ್ಟಿಯ ವಾಕ್ಯಗಳಿಗೆ ಪುಷ್ಟಿ ದೊರೆತು ಭಾಷೆಯ ಸೊಗಸು ಮೇರೆ ಮೀರುತ್ತದೆ. ಅರ್ಥಸೌಂದರ್ಯ ಮನಸೆಳೆಯುತ್ತದೆ. ನಾಣ್ಣುಡಿ, ಸೂಕ್ತಿ, ಉಪಮೆಗಳಲ್ಲದೆ, ಧರ್ಮಾಮೃತದಲ್ಲಿ ಅಲ್ಲಲ್ಲಿ ಸಹಜವಾಗಿ ಬರುವ ಪ್ರತಿಧ್ವನಿತ ಶಬ್ದಗಳು (Echo Words), ದ್ವಿರುಕ್ತಿಗಳು ಮುಂತಾದವೂ ಭಾಷೆಯ ಸೊಗಸಿಗೆ ಕಳೆ ನೀಡಿವೆ.

ಅಂತಹ ಕೆಲವು ಉದಾಹರಣೆಗಳನ್ನಿಲ್ಲಿ ಗಮನಿಸಿ;

ಖೇಚರಿಯಲ್ಲ ನಾಂ ಗೀಚರಿ, ಅಜ್ಜಂ-ಪಜ್ಜಂ, ನೆರಿಯುಂ-ಗಿರಿಯುಂ, ಸುಖಮುಂ-ಗಿಖಮುಂ, ಜಮ-ಗಿಮ, ಕರ್ಮ-ಗಿರ್ಮ, ಬಿದಿ-ಗಿದಿ, ವಿಧಾತ್ರ-ಗಿಧಾತ್ರ, ದೈವ-ಗಿಯ್ವ, ಪಾಪ-ಗೀಪ, ಮುದ್ದು-ಗಿದ್ದು, ಪೆಟ್ಟು-ಗಿಟ್ಟು ಇತ್ಯಾದಿ.

ಬಡಿ ಬಡಿ, ತಿವಿ ತಿವಿ, ಪೊಡೆ ಪೊಡೆ, ಕಡಿ ಕಡಿ, ತೞಿ ತೞಿ, ಬಿಡು ಬಿಡು, ಕೊಯ್ ಕೊಯ್, ಮಗುಳ್ ಮಗುಳ್ -ಇತ್ಯಾದಿ.

ಒಟ್ಟಿನಲ್ಲಿ ಧರ್ಮಾಮೃತವನ್ನು ಭಾಷಾವಿಜ್ಞಾನದ ದೃಷ್ಟಿಯಿಂದ ನೋಡಿದಾಗ ತಿಳಿದುಬರುವ ಮುಖ್ಯ ಅಂಶ ಇಷ್ಟು :

ನಯಸೇನನು ತನ್ನ ಕಾವ್ಯದಲ್ಲಿ ಎಂತಹ ಕನ್ನಡ ಭಾಷೆಯನ್ನು ಬಳಸಬೇಕೆಂಬ ಬಗೆಗೆ ಸ್ಪಷ್ಟ

ಕಲ್ಪನೆಯನ್ನು ಇಟ್ಟುಕೊಂಡಿದ್ದರೂ ಸಂಸ್ಕೃತ ಬಳಕೆಯ ಬಗೆಗೆ ಅವನು ಹೇಳಿರುವ ಅಭಿಪ್ರಾಯವನ್ನು ಕಾವ್ಯದಲ್ಲಿ ದೊರೆಯುವ ಸಾಮಗ್ರಿ ಸಮರ್ಥಿಸುವುದಿಲ್ಲ.

ಧರ್ಮಾಮೃತದ ಕನ್ನಡವು ಹಳಗನ್ನಡ ಹಾಗೂ ನಡುಗನ್ನಡ ಎರಡರ ಲಕ್ಷಣಗಳನ್ನೂ ಹೊಂದಿರುವುದು ಸ್ಪಷ್ಟವಾಗಿದೆ. ಕವಿಯ ಹಳಗನ್ನಡ ಪಾಂಡಿತ್ಯ ಹಾಗೂ ಅವನ ಸಮಕಾಲೀನ ಕನ್ನಡ (ನಡುಗನ್ನಡ) ಪ್ರಜ್ಞೆ ಇವೆರಡರ ವಿಶಿಷ್ಟ ಸಮ್ಮಿಳನದಿಂದಾಗಿ ಸಂಕ್ರಮಣಾವಸ್ಥೆಯ ಒಂದು ವಿಶಿಷ್ಟ ಕನ್ನಡ ಭಾಷೆಯ ಚಿತ್ರ ಇಲ್ಲಿ ದೊರೆಯುತ್ತದೆ. ಪ್ರಜ್ಞಾಪೂರ್ವಕವಾಗಿ ವಿಪುಲದೇಸಿ ಹಾಗೂ ತಕ್ಕಷ್ಟು ಸಂಸ್ಕೃತ ಎರಡನ್ನು ಬಳಸಿಯೂ ಶಿಷ್ಟ ಕನ್ನಡದ ಚೌಕಟ್ಟಿನಲ್ಲಿ ಧರ್ಮಾಮೃತ ರಚಿತವಾಗಿರುವುದರಿಂದ ಕನ್ನಡ ಕಾವ್ಯಗಳಲ್ಲಿ ಭಾಷಾದೃಷ್ಟಿಯಿಂದ ಅತ್ಯಂತ ಗಮನಾರ್ಹ ಕೃತಿಯಾಗಿ ನಿಂತಿದೆ.

*ಸಾಧನೆ ೧೭-೧, ೨ ೧೯೮೮*
*ಭಾಷಾಲೇಖ, ೧೯೯೯, ಪು. ೧೩೬-೪೬*

# ೨೬. ಪಂಚಮೀ ವಿಭಕ್ತಿ

●ಸೇಡಿಯಾಪು ಕೃಷ್ಣಭಟ್ಟ

ಕನ್ನಡದಲ್ಲಿ ಪಂಚಮೀ ವಿಭಕ್ತಿ ಸಹಜವಾಗಿ ಇದೆಯೇ? ಇಲ್ಲವೇ? - ಈ ಪ್ರಶ್ನೆಗೆ ಯಥಾಮತಿಯಾಗಿ ಉತ್ತರ ಕೊಡಲು ಯತ್ನಿಸುತ್ತೇನೆ.

ಹಳೆಗನ್ನಡ ವ್ಯಾಕರಣಗಳಲ್ಲಿ 'ಅತ್ತಣಿಂ' ಎಂಬುದು ಪಂಚಮೀ ವಿಭಕ್ತಿಯೆಂದೂ, ಹೊಸಗನ್ನಡದವುಗಳಲ್ಲಿ 'ದೆಸೆಯಿಂದ' ಎಂಬುದು ಆ ವಿಭಕ್ತಿಯೆಂದೂ ಬರೆಯುವ ವಾಡಿಕೆ ಇದೆಯಷ್ಟೆ. ಆದರೆ ಆ ರೂಪಗಳು ಭಾಷೆಯಲ್ಲಿ ಅಪೂರ್ವವೆಂಬುದು ಹಳೆಗನ್ನಡ-ಹೊಸಗನ್ನಡ ಭಾಷಾವಿದರಿಗೆಲ್ಲ ತಿಳಿದುದೇ ಆಗಿದೆ. ಅಲ್ಲದೆ ಅತ್ತಣಿಂ- ಎಂಬುದು 'ಇಂ' ಪ್ರತ್ಯಯಾಂತವಾದ ಒಂದು ಸ್ವತಂತ್ರ ದಿಗ್ವಾಚಕ; ದೆಸೆಯಿಂದ- ಎಂಬುದು 'ಇಂದ'ವನ್ನು ಅಂಟಿಸಿಕೊಂಡ 'ದಿಶಾ' ಎಂಬ ಸಂಸ್ಕೃತ ಶಬ್ದದ ತದ್ಭವ. ಆದುದರಿಂದ ಇವು ಪ್ರತ್ಯಯಾವಸ್ಥೆಯಲ್ಲಿಲ್ಲವೆಂಬುದು ಸ್ಪಷ್ಟ. ಅಲ್ಲದೆ ದೆಸೆಯಿಂದ ಎಂಬುದನ್ನು ಷಷ್ಠೀ ವಿಭಕ್ತಿಯಿಲ್ಲದೆ ಕೇವಲ ಪ್ರಾತಿಪದಿಕಕ್ಕೆ ಸೇರಿಸಲಾಗುವುದಿಲ್ಲ. ಉದಾ:- ಮರದ ದೆಸೆಯಿಂದ; ರಾಮನ ದೆಸೆಯಿಂದ. ಮತ್ತು 'ರಾಮನ ದೆಸೆಯಿಂದ...' ಇತ್ಯಾದಿಯಾಗಿ ಮಾತಾಡಿದರೆ ಪಂಚಮೀ ವಿಭಕ್ತಿಯ ಅರ್ಥವು ವ್ಯಕ್ತವಾಗುವ ಬದಲು, 'ರಾಮನ ಉಪದ್ರವದಿಂದ...' ಎಂಬರ್ಥವೇ ಹೊಳೆಯುವುದು. ಈ ಕಾರಣದಿಂದ ಹೊಸಗನ್ನಡ ವ್ಯಾಕರಣ ಪುಸ್ತಕಗಳಲ್ಲಿ ಇತ್ತಿತ್ತ ಅದರ 'ದೆಸೆಯಿಂದ' ನಾವು ಬಿಡುಗಡೆ ಹೊಂದುತ್ತಿದ್ದೇವೆ. ಹಳೆಗನ್ನಡದ 'ಅತ್ತಣಿಂ' ಸೇರುವಾಗಲೂ ಅದು ಸ್ವತಂತ್ರ ಶಬ್ದವಾದುದರಿಂದ ಷಷ್ಠ್ಯಂತಕ್ಕೆ ಸೇರಿದಂತೆ ಮನಸ್ಸಿಗಾಗುತ್ತದೆ (ರಾಮನ+ಅತ್ತಣಿಂ- ಆಕಾರ ಲೋಪವಾಗಿ ರಾಮನತ್ತಣಿಂ). ಆದರೆ ಅದನ್ನು ರಾಮ+ನ್+ಅತ್ತಣಿಂ ಎಂದೂ ಕಾಣಿಸಬಹುದಾದುದರಿಂದ ಆ ವಾದಕ್ಕೆ ನಾವೀಗ ಕೈ ಹಾಕುವುದೇ ಬೇಡ. ಅಂತೂ, ವೈಯಾಕರಣರ ಪಂಚಮಿಯ 'ಅತ್ತಣಿಂ'ದ ಹಳೆಯ ಕಾಲದ ಸಾಮಾನ್ಯರಾದ ಕನ್ನಡಿಗರಿಗೆ, ನಮಗೆ 'ದೆಸೆ'ಯಿಂದ ಉಂಟಾಗುವ ವೇದನೆಯೇ ಆಗುತ್ತಿತ್ತೋ? ಇಲ್ಲವೋ- ಎಂದು ತಿಳಿಯಲು ಸಾಧನವಿಲ್ಲದಾಗಿದೆ. ಉಚ್ಚಾರಕ್ಕೆ ದೊರಕದ ಱಳಕುಳ ಭೇದಗಳಿಗಾಗಿ ಬೇಸರಿಸಿದ ಹರಿಹರನೂ ಈ ಕುರಿತು ಏನೂ ಹೇಳಿದಂತೆ ತೋರುವುದಿಲ್ಲ! ಇರಲಿ. ಸ್ಥಿತಿ ಹೀಗಿರುವುದರಿಂದ ಇಂದಿನ ವಿದ್ವಾಂಸರು ಕನ್ನಡದಲ್ಲಿ ಪಂಚಮೀ ವಿಭಕ್ತಿ ಸಹಜವಾಗಿ ಇಲ್ಲ; ಆ ಅರ್ಥವನ್ನು ತೃತೀಯಾ ವಿಭಕ್ತಿಯಿಂದಲೇ ಕನ್ನಡವು ವ್ಯಕ್ತಪಡಿಸುತ್ತದೆ - ಎಂದು ಹೇಳುತ್ತಾರೆ.

ಇದರ ಯಥಾರ್ಥತೆಯನ್ನು ವಿಮರ್ಶಿಸುವ ಮೊದಲು, ವಿಭಕ್ತಿ-ವಿಭಕ್ತ್ಯರ್ಥಗಳೊಳಗೆ ನಾವು ವಿವೇಕವನ್ನು ಮಾಡಿಕೊಳ್ಳಬೇಕು. ಆಧುನಿಕರ ಮತದಂತೆ ಕನ್ನಡದಲ್ಲಿ ಪಂಚಮೀ ವಿಭಕ್ತಿ ಇಲ್ಲವೆಂದರೆ, ಪಂಚಮೀ ವಿಭಕ್ತಿಯಿಂದ ಸಂಸ್ಕೃತಾದಿ ಭಾಷೆಗಳಲ್ಲಿ ವ್ಯಕ್ತವಾಗುವ ಅರ್ಥವನ್ನು ಕನ್ನಡದಲ್ಲಿ ಸ್ಫುಟವಾಗಿ ತಿಳಿಸುವುದಕ್ಕೆ ಬರುವುದಿಲ್ಲವೆಂದಲ್ಲ; ಅದನ್ನೇ ಪ್ರಕಟಿಸುವ ಸ್ವತಂತ್ರವಾದ ಪ್ರತ್ಯಯವಿಲ್ಲ - ಎಂದು ಮಾತ್ರ ಆಗಿದೆ. ಹಾಗಿದ್ದರೆ, ತೃತೀಯಾ ವಿಭಕ್ತಿ ಎಂದೆನ್ನಿಸಿಕೊಳ್ಳುವ ಪ್ರತ್ಯಯವು ಎಲ್ಲಿ ತೃತೀಯಾರ್ಥವನ್ನು ತಿಳಿಸುತ್ತದೆ, ಎಲ್ಲಿ ಪಂಚಮ್ಯರ್ಥವನ್ನು ವ್ಯಂಜಿಸುತ್ತದೆ-ಎಂಬುದನ್ನು ಗುರುತಿಸಲು ಸಾಧನವಾವುದು?-ಎಂಬ ಪ್ರಶ್ನೆ

ಸಹಜವಾಗಿ ಉದ್ಭವಿಸುತ್ತದೆ. ಇದನ್ನು ತಿಳಿಯಬೇಕಾದರೆ, ತೃತೀಯಾರ್ಥವಾವುದು, ಅದರ ವಿಶಿಷ್ಟತೆಯೇನು? ಪಂಚಮ್ಯರ್ಥವಾವುದು, ಅದರ ವಿಶಿಷ್ಟತೆಯೇನು-ಎಂಬುದನ್ನು ಮೊದಲು ಮನದಟ್ಟಿಸಿಕೊಳ್ಳಬೇಕು.

ಕನ್ನಡದ ವಿಭಕ್ತಿ ವಿಚಾರವು ಸಂಸ್ಕೃತದಿಂದಲೇ ಮೊದಲಾಯಿತೆಂಬುದು ನಿರ್ವಿವಾದ ವಿಷಯ. ಇದಕ್ಕೆ ಆಯಾ ವಿಭಕ್ತಿಗಳ ಹೆಸರೇ ಸಾಕ್ಷಿ. ಇಂದು ನಾವು ದ್ವಿತೀಯಾ, ತೃತೀಯಾ, ಪಂಚಮೀ ಎಂದು ಮುಂತಾಗಿ ಮಾಡುವ ವ್ಯವಹಾರಕ್ಕೆ ಸಂಸ್ಕೃತ ವ್ಯಾಕರಣವೇ ಮೂಲಾಧಾರ. ಆದುದರಿಂದ ತೃತೀಯಾ ಪಂಚಮಿಗಳ ವೈಶಿಷ್ಟ್ಯವೇನೆಂಬುದನ್ನು ತಿಳಿಯಬೇಕಾದರೆ ಸಂಸ್ಕೃತ ವ್ಯಾಕರಣವನ್ನೇ ಅವಲೋಕಿಸಬೇಕೆಂಬುದು ಸಹಜ. ಆದರೆ ನಮ್ಮ ಹಳೆಯ ವ್ಯಾಕರಣಗಳಲ್ಲಿ ಸಂಸ್ಕೃತದ ಆಯಾ ವಿಭಕ್ತ್ಯರ್ಥಗಳನ್ನೇ ಹೆಚ್ಚು ಕಡಿಮೆ ಅನುವಾದಿಸಿದಂತಿರುವುದರಿಂದ, ಕನ್ನಡ ವ್ಯಾಕರಣ ಗ್ರಂಥಗಳನ್ನೇ ನೋಡಿದರೂ ಅದೇ ಪ್ರಯೋಜನವು ದೊರಕುವುದು.

ಕನ್ನಡದಲ್ಲಿ ಪ್ರಸಿದ್ಧರಾದ ವೈಯಾಕರಣರು ಮೂವರು-ನಾಗವರ್ಮ, ಕೇಶಿರಾಜ, ಭಟ್ಟಾಕಳಂಕ. ಇವರೊಳಗೆ ಭಟ್ಟಾಕಳಂಕನು ತೃತೀಯಾ ವಿಭಕ್ತಿಗೆ ಸಂಸ್ಕೃತದಲ್ಲಿ ಎಷ್ಟು ಅರ್ಥಗಳಿವೆಯೋ ಅವೆಲ್ಲವನ್ನೂ ಹೇಳಿ, ಕನ್ನಡದಲ್ಲಿಯೂ ಆ ಎಲ್ಲಾ ಅರ್ಥಗಳೂ ಉಂಟೆಂದು ಸಾಧಿಸಲು ಶ್ರಮಪಟ್ಟಿದ್ದಾನೆ. ಅದಕ್ಕಾಗಿ ಅವನು ಕೊಡುವ ಉದಾಹರಣೆಗಳನ್ನು ನೋಡಿದರೆ, ''ಇದೂ ಕನ್ನಡವೆ!'' ಎಂದು ಯಾರಾದರೂ ಉದ್ಗಾರ ತೆಗೆಯಬೇಕು! ಉದಾ:- ''ಕಮಂಡಲುವಿಂ ಛಾತ್ರನಂ ಕಂಡಂ'' (ಸೂತ್ರ ೨೧೯). ಇದು ಸಂಸ್ಕೃತ ವ್ಯಾಕರಣಗಳಲ್ಲಿ ಕೊಟ್ಟ ಉದಾಹರಣೆಯ ಭಾಷಾಂತರವೇ ಆಗಿದೆ. ಆದುದರಿಂದ ಅವನು ಹೇಳುವ ಎಲ್ಲಾ ತೃತೀಯಾರ್ಥವನ್ನು ನಾವು ಪರಿಶೀಲಿಸಬೇಕಾಗಿಲ್ಲ. ಅಲ್ಲದೆ, ಅವನ ಪ್ರಯತ್ನವು ಕನ್ನಡವನ್ನು ಸಂಸ್ಕೃತ ಮಾಡುವುದೇ ಆಗಿದೆಯೋ ಎಂದು ಕೆಲವೆಡೆಗಳಲ್ಲಿ ಶಂಕೆ ಹುಟ್ಟದಿರದು. ಹೋಗಲಿ. ನಾಗವರ್ಮ ಕೇಶಿರಾಜರ ಮತದಂತೆ ತೃತೀಯೆಗೆ ಕರ್ತೃ, ಕರಣ, ಹೇತು, ಸಹಯೋಗ ಇಷ್ಟು ಅರ್ಥಗಳಿವೆ. ಇವುಗಳೊಳಗೆ ಕರ್ಮಣಿ ಪ್ರಯೋಗದಲ್ಲಿ ಮಾತ್ರ ತೃತೀಯೆ ಕರ್ತೃವನ್ನು ಹೇಳುವುದು. ಕನ್ನಡದಲ್ಲಿ ಕರ್ಮಣಿ ಪ್ರಯೋಗವು ಬರವಣಿಗೆಯಲ್ಲಿ, ಉಪನ್ಯಾಸಗಳಲ್ಲಿ, ಮಾತ್ರ ಅಲ್ಲಲ್ಲಿ ಗೋಚರಿಸುವುದು ಹೊರತು, ಆಡುವ ಮಾತಿನಲ್ಲಿ ಎಲ್ಲಿಯೂ ಇಲ್ಲ. ಭಾಷೆಯ ಸಹಜಸ್ವರೂಪವನ್ನು ತಿಳಿಯುವುದಕ್ಕೆ ಅಕೃತ್ರಿಮವಾದ ಆಡುನುಡಿಯೇ ಪ್ರಬಲಪ್ರಮಾಣವೆಂದು ಭಾಷಾವಿಜ್ಞಾನಿಗಳ ಮತವೂ ಯುಕ್ತಿಸಮ್ಮತವೂ ಆಗಿದೆ. ಈ ದೃಷ್ಟಿಯಿಂದ ನೋಡಿದರೆ, ಕನ್ನಡಕ್ಕೆ ಕರ್ಮಣಿ ಪ್ರಯೋಗವು ಸಹಜವಲ್ಲವೆಂಬುದರಲ್ಲಿ ಮತಭೇದವಿರಲಾರದು. ಆದುದರಿಂದ ತೃತೀಯಾ ವಿಭಕ್ತಿಯ ಅರ್ಥಗಳೊಳಗೆ ಕರ್ತ್ರರ್ಥವನ್ನು ಇಂದಿನ ಪ್ರತಿಪಾದನೆಯಮಟ್ಟಿಗೆ ನಾವು ಕಳೆದುಹಾಕಬಹುದು. ಉಳಿದ ಅರ್ಥಗಳೊಳಗೆ ಹೇತು ಎಂದರೆ ನಿಮಿತ್ತವು ಪಂಚಮಿಯ ಅರ್ಥವೂ ಆಗಿದೆ. ಆದುದರಿಂದ ಅದು ತೃತೀಯೆಗೆ ಮೀಸಲಾದ ಅರ್ಥವಲ್ಲ. ಹಾಗಾದರೆ ಕರಣ ಮತ್ತು ಸಹಯೋಗ ಎಂಬ ಎರಡು ತೃತೀಯಾ ವಿಭಕ್ತಿಯ ವಿಶಿಷ್ಟಾರ್ಥಗಳೆಂದು ತಿಳಿದುಕೊಳ್ಳಬಹುದು.

ಇನ್ನು ಪಂಚಮಿಯ ವಿಶಿಷ್ಟಾರ್ಥವೇನೆಂದು ನೋಡೋಣ. ಭಟ್ಟಾಕಳಂಕನ ಮತದಂತೆ ಹೇತು, ವಿಶ್ಲೇಷ ಎಂಬ ಎರಡು ಅದರ ಅರ್ಥಗಳು. ನಾಗವರ್ಮನು ಭಾಷಾ ಭೂಷಣದಲ್ಲಿ,

ಅಪದಾನ ಅಥವಾ ಅಪನಯ ಎಂದರೆ ಯಾವುದಾದರೊಂದರಿಂದ ತೊಲಗುವಿಕೆ-ಎಂದರೆ ವಿಶ್ಲೇಷ ಎಂಬ ಒಂದೇ ಅರ್ಥವನ್ನು ಹೇಳಿದ್ದಾನೆ. ಕೇಶಿರಾಜನು ಅಪಾದಾನ, ಭಯ, ಸ್ವೀಕಾರ, ಇಷ್ಟ, ಅನಿಷ್ಟ, ಹೇತು, ಉದಯ, ಗೌರವ-ಎಂದು ಅದನ್ನು ವಿಸ್ತರಿಸಿದ್ದಾನೆ. ಇವುಗಳೊಳಗೆ ಭಯ, ಸ್ವೀಕಾರ, ಇಷ್ಟ ಅನಿಷ್ಟ ಎಂಬವುಗಳಿಗೆ ಅವನು ಕೊಟ್ಟ ಉದಾಹರಣೆಗಳನ್ನು ನೋಡಿದರೆ ಅವೆಲ್ಲ ಹೇತು ಎಂದರೆ ನಿಮಿತ್ತ ಎಂಬ ಅರ್ಥದಲ್ಲಿಯೇ ಅಡಗಬಹುದೆಂದು ಕಾಣುತ್ತದೆ. ಉದಯ ಎಂದರೆ ಉತ್ಪತ್ತಿ. ಗೌರವಾರ್ಥಕ್ಕೆ ಕೊಟ್ಟ ಉದಾಹರಣೆಯು ಮನನೀಯವಾಗಿದೆ. ''ಕೃಷ್ಣನತ್ತಣಿಂ ಬಲಭದ್ರಂ ಪಿರಿಯಂ''. ಇದರಿಂದ ಇಲ್ಲಿ ಗೌರವವೆಂದರೆ ತರತಮಭಾವವೆಂದು ತೋರುತ್ತದೆ. ಮೂವರು ವೈಯಾಕರಣರ ಅಭಿಪ್ರಾಯಗಳನ್ನೂ ಸಂಕಲಿಸಿದರೆ ವಿಶ್ಲೇಷ ಹೇತು, ಉತ್ಪತ್ತಿ, (ಉತ್ಪತ್ತಿಯೂ ಹೇತುವಿನಲ್ಲಿ ಅಡಗಬಹುದು) ತಾರತಮ್ಯ-ಎಂಬಿವು ಪಂಚಮಿಯ ಅರ್ಥಗಳೆಂದಾಗುವುದು. ಇವುಗಳೊಳಗೆ ಹೇತುವನ್ನು-ಪ್ರಧಾನವಾಗಿ ಅದು ಪಂಚಮಿಯ ಅರ್ಥವೇ ಆಗಿದ್ದರೂ-ತೃತೀಯೆಯೂ ಹೇಳಬಲ್ಲುದಾದುದರಿಂದ ವಿಶ್ಲೇಷ, ಉತ್ಪತ್ತಿ, ತಾರತಮ್ಯ ಎಂಬಿವು ಪಂಚಮಿಯ ವಿಶಿಷ್ಟಾರ್ಥವೆಂದಾಯಿತು. ಈ ಮೂರು ಅರ್ಥಗಳನ್ನು ಭಟ್ಟಾಕಳಂಕನು ವಿಶ್ಲೇಷ ಎಂಬ ಒಂದರಲ್ಲೇ ಅಡಗಿಸಿದ್ದಾನೆ.

ಕರಣವೆಂದರೇನು?-ಕ್ರಿಯೆಯ ಮುಖ್ಯ ಸಾಧನ. ''ಸಾಧಕತಮಂ ಕರಣಂ''. ಉದಾ:- ಕಡಿಯುವ ಕ್ರಿಯೆಯಲ್ಲಿ ಕರ್ತೃವಿಗೆ ಮುಖ್ಯ ಸಾಧನವು ಕೊಡಲಿ; ಇಲ್ಲಿ ಕೊಡಲಿ ಕರಣ, ಎಂದರೆ ಕ್ರಿಯೆಗೆ ಸಹಕಾರಿಯಾದ ಉಪಕರಣ. ಶಾಸ್ತ್ರೀಯ ಭಾಷೆಯಲ್ಲಿ ಕರಣ-ಉಪಕರಣ ಗಳೊಳಗೆ ಭೇದವಿದ್ದರೂ, ಸಾಧಾರಣ ಭಾಷೆಯಲ್ಲಿ ಕರಣವನ್ನು ಉಪಕರಣವೆಂದು ವಿವರಿಸಿದರೆ ತಪ್ಪಾಗದು. ಉಪಕರಣವು ಕ್ರಿಯೆ, ಕೊನೆ ಮುಟ್ಟುವವರೆಗೆ ಅವಶ್ಯವಾಗಿರುತ್ತದೆ; ಕರ್ತೃವಿಗೂ ಕರ್ಮಕ್ಕೂ 'ಮಧ್ಯವರ್ತಿ'ಯಾಗಿರುತ್ತದೆ. ಈ 'ಸಹ' ಕಾರಿತೆ ಅಥವಾ ಮಧ್ಯವರ್ತಿತ್ವವು ಕರಣಾರ್ಥ. 'ಸಹ' ಯೋಗವೂ ತೃತೀಯೆಯ ಇನ್ನೊಂದು ಅರ್ಥ. ಹಾಗಾದರೆ ತೃತೀಯಾರ್ಥದ ವಿಶಿಷ್ಟ ಲಕ್ಷಣವು ಸಹಭಾವವೆಂದು ಹೇಳಬಹುದು. ಹಾಗೆಯೇ ಪಂಚಮ್ಯರ್ಥದ ವಿಶಿಷ್ಟ ಧರ್ಮವು ವಿಶ್ಲೇಷ ಅಥವಾ ವಿಯೋಗವೆಂದೂ ತಿಳಿದುಕೊಳ್ಳಬಹುದು.

ಕನ್ನಡ ವೈಯಾಕರಣರ ಮತದಂತೆ, ಹಳೆಯ ಭಾಷೆಯಲ್ಲಿ ತೃತೀಯಾ ವಿಭಕ್ತಿಗೆ ಮೂರು ಅಥವಾ ನಾಲ್ಕು ರೂಪಗಳಿವೆ. ಇಂ, ಇಂದಂ, ಇಂದೆ; ಈ ಮೂರಕ್ಕೂ ನಪುಂಸಕ ಲಿಂಗದ ಏಕವಚನದಲ್ಲಿ ಆದೇಶವಾಗಿ 'ಎ' ಬರುವುದು. ಪಂಚಮ್ಯರ್ಥದಲ್ಲಿಯೂ ಇವೇ ಪ್ರತ್ಯಯಗಳು (ಪ್ರಾಚೀನರ ಮತದಂತೆ ಅತ್ತಣ್ ಎಂಬುದರೊಡನೆ) ಬರುವುದಾದರೂ, ಇವಕ್ಕೆ ಆದೇಶವಾದ ಎಕಾರವಿಲ್ಲವೆಂದು ಸ್ಪಷ್ಟೀಕರಿಸಿದ್ದಾರೆ. ಆದರೆ ಈ ವಿಚಾರವು ಸಪ್ತಮಿಯೆಂದು ನವೀನ ವಿದ್ವಾಂಸರು ನಿರ್ಣಯಿಸಿದ್ದಾರೆ. (''ಕನ್ನಡ ಕೈಪಿಡಿ''ಪುಟ. ೪೧೩.) ಹಾಗಾದರೆ ಇಂದ, ಇಂದಂ, ಇಂದೆ ಎಂಬ ಪ್ರತ್ಯಯಗಳು ಸಹಭಾವವನ್ನು ಹೇಳುವಾಗ ತೃತೀಯಾರ್ಥಕಗಳೆಂದೂ ವಿಶ್ಲೇಷವನ್ನು ಹೇಳುವಾಗ ಪಂಚಮ್ಯರ್ಥಕಗಳೆಂದೂ ಹೇಳಿದಂತಾಯಿತು.

ಈಗ ಇಲ್ಲಿ ಒಂದು ಪ್ರಶ್ನೆ ಹುಟ್ಟುತ್ತದೆ. ತೃತೀಯಾ ಪಂಚಮಿಗಳೆಂಬ ಎರಡು ಅರ್ಥಗಳಿಗೂ ಒಂದೇ ಪ್ರತ್ಯಯವೆನ್ನುವಾಗ (ಅವು ಮೂರಿದ್ದರೂ, ಇಂ ಎಂಬ ಒಂದನ್ನೇ

ಬೆಳೆಯಿಸಿ ಉಳಿದೆರಡು ರೂಪುಗೊಂಡಿರುವುದರಿಂದಲೂ, ಅಭಿನ್ನಾರ್ಥಕಗಳಾದುದರಿಂದಲೂ, ಈ ಮೂರಕ್ಕ ಬದಲಾಗಿ ಹೊಸಗನ್ನಡದಲ್ಲಿ 'ಇಂದ' ಎಂಬ ಒಂದೇ ರೂಪವು ತೋರುವುದರಿಂದಲೂ ಭಾಷಾವಿಜ್ಞಾನ ದೃಷ್ಟಿಯಿಂದ ಅದನ್ನು ಒಂದೇ ಎಂದು ಹೇಳಬೇಕಾಗುತ್ತದೆ.) ಅದನ್ನು ತೃತೀಯೆಯೆಂತಲೇ ಏಕೆ ಹೇಳಬೇಕು? ಅದು ಪಂಚಮೀ ಪ್ರತ್ಯಯವೆಂದು ಹೇಳಿದರೂ ಅಷ್ಟೇ ಸಾಧುವಾಗಲಾರದೆ? ಈ ಪ್ರಶ್ನೆಗೆ ಉತ್ತರವಾಗಿ, ಕನ್ನಡದ ಪ್ರಾಚೀನ ವೈಯಾಕರಣರು ಅದನ್ನು ತೃತೀಯಾ ಪ್ರತ್ಯಯವೆಂದು ಹೇಳಿರುವುದರಿಂದಲೂ ಆಧುನಿಕ ದ್ರಾವಿಡ ಭಾಷಾ ತತ್ವಜ್ಞರಲ್ಲಿ ಶಿರೋಭೂತರಾದ ಕಾಲ್ಡ್‌ವೆಲ್ ಸಾಹೇಬರು, ಪಂಚಮೀ ವಿಭಕ್ತಿಯು ಮೂಲತಃ ದ್ರಾವಿಡ ಭಾಷೆಗಳಲ್ಲಿ ಇರಲಿಲ್ಲವೆಂದು ಅಭಿಪ್ರಾಯಪಟ್ಟಿರುವುದರಿಂದಲೂ, ಅದು ಪಂಚಮೀ ಪ್ರತ್ಯಯವಲ್ಲವೆಂದು ಹೇಳಬೇಕಾಗುತ್ತದೆ ಎಂದು ಕೆಲವರು ತೀರ್ಮಾನಿಸಬಹುದು. ಆದರೆ ಕಾಲ್ಡ್‌ವೆಲ್ ಸಾಹೇಬರು, ದ್ರಾವಿಡ ಭಾಷೆಗಳ ಪಂಚಮಿಯು ತೃತೀಯಾಜನ್ಯವೆಂದು ಹೇಳಿಲ್ಲ; ಸಪ್ತಮೀಜನ್ಯವಾಗಿರಬಹುದೆಂದು ಒಂದು ಊಹೆಯನ್ನು ಮಾಡಿದ್ದಾರೆ ಎಂಬುದನ್ನು ನಾವು ಗಮನಿಸಬೇಕು. (ಕನ್ನಡದ ಮಟ್ಟಿಗೆ ತೃತೀಯೆಯೂ ಪಂಚಮಿಯೂ ಒಂದೇ ಎಂದು ಅವರು ಹೇಳಿರುವುದು ನಿಜ. ಆದರೆ, ತುಳುವಿನ ವಿಚಾರವಾಗಿಯೂ ತೃತೀಯಾ ಪಂಚಮಿಗಳು ಒಂದೇ ಎಂದು ಅವರು ಹೇಳಿರುತ್ತಾರೆ. ಇದರ ಸಾಧುತ್ವವನ್ನು ಮುಂದೆ ವಿಮರ್ಶಿಸುತ್ತೇನೆ.) ಈ ಪ್ರಶ್ನೆಯನ್ನು ಬಗೆಹರಿಸಬೇಕಾದರೆ ನಾವು ಭಾಷೆಯ ಆಡುನುಡಿಯ ಹಳೆಯ 'ದೇಸಿ' (idiom) ಗಳನ್ನು ಪರಿಶೀಲಿಸಬೇಕು; ಅವುಗಳಲ್ಲಿ ಸಹಭಾವವೂ ವಿಶ್ಲೇಷವೂ ಹೇಗೆ ಪ್ರಕಟವಾಗುತ್ತದೆಂಬುದನ್ನು ಪರೀಕ್ಷಿಸಬೇಕು; (ಏಕೆಂದರೆ, ಹೆಚ್ಚು ಕಡಿಮೆ ಪರಸ್ಪರ ವಿರುದ್ಧವಾದ ಸಹಭಾವ ವಿಶ್ಲೇಷಗಳು ಮೂಲದಲ್ಲಿ ಒಂದೇ ರೂಪದಲ್ಲಿ ಪ್ರಕಟವಾಗುವುದು ಆಗದ ಮಾತು.) ಅಲ್ಲದೆ, ಕನ್ನಡಕ್ಕೆ ಹೊಂದಿರುವ ಇತರ ದ್ರಾವಿಡ ಭಾಷೆಗಳ ವಿಭಕ್ತಿ ಪ್ರಯೋಗವನ್ನು ವಿಮರ್ಶಿಸಬೇಕು; ಅನಂತರ ಈಗಿನ ಆಡುನುಡಿಯ ದೇಸಿಗಳಲ್ಲಿ ಮತ್ತು ಪ್ರಾಚೀನ ಗ್ರಂಥ ಭಾಷಾರೂಪಗಳಲ್ಲಿ ಅದರ ರೂಪ ರೇಖೆ ಹೇಗಿದೆ ಎಂಬುದನ್ನು ಅವಲೋಕಿಸಿ ಒಂದು ನಿರ್ಣಯಕ್ಕೆ ಬರಬೇಕು. ಆ ದೊಡ್ಡ ಹೊರೆಯನ್ನು ಸಾಧ್ಯವಾದಷ್ಟು ದೂರ ಹೊರುವ ಪ್ರಯತ್ನ ಮಾಡುತ್ತೇನೆ.

ಕನ್ನಡವನ್ನುಳಿದ ಎಲ್ಲಾ ದ್ರಾವಿಡ ಭಾಷೆಗಳಲ್ಲಿ ಉತ್ತಮ ಪುರುಷ ಬಹುವಚನ ಸರ್ವನಾಮರೂಪವು ಎರಡು ವಿಧವಾಗಿದೆಯೆಂದು ಕಾಲ್ಡ್‌ವೆಲ್ ಸಾಹೇಬರು ಹೇಳುತ್ತಾರೆ. (*Comparative Grammar of the Dravidian Languages,* p. 414.) ಇವುಗಳಲ್ಲಿ ಒಂದು ಕೇವಲ ಉತ್ತಮ ಪುರುಷ; ಮತ್ತೊಂದು ಮಧ್ಯಮಪುರುಷ ಸಹಿತವಾದುದು. ಕನ್ನಡದಲ್ಲಿಯೂ ಒಂದಾನೊಂದುಕಾಲದಲ್ಲಿ ಇದು ಇದ್ದಿರಬೇಕೆಂಬುದರಲ್ಲಿ ಮತಭೇದವಿರಲಾರದು. ಈ ವಿಶಿಷ್ಟ ಲಕ್ಷಣವು ಕನ್ನಡದ ಯಾವುದೊಂದು ಆಡುನುಡಿಯಲ್ಲಿದ್ದರೆ ಅದೊಂದು ಹಳೆಯ ದೇಸಿಗಳನ್ನು ಕಾದಿಟ್ಟುಕೊಂಡ ಆಡುನುಡಿಯೆನ್ನಬಹುದು. ಹವೀಕರ ಕನ್ನಡ ಮಾತಿನಲ್ಲಿ ಈ ಲಕ್ಷಣವಿದೆ. ಅಲ್ಲದೆ, ಉತ್ತಮಪುರುಷ ಬಹುವಚನದ ವಿಧಿರೂಪಕ್ಕೆ ಹಳಗನ್ನಡದಲ್ಲಿ ಪೋಪಂ' ಮಾಟ್ಪಂ ಅಥವಾ ಮಾಡುವಂ-ಎಂಬ ಸಾಧಾರಣರೂಪಗಳಲ್ಲದೆ, ಪೋಪೊಂ, ಮಾಡುವೊಂ, ತಿಂಬೊಂ-ಇತ್ಯಾದಿ ಅತಿಪ್ರಾಚೀನ ರೂಪಗಳೂ ಇವೆಯಷ್ಟೆ. ಹವೀಕರ ಭಾಷೆಯಲ್ಲಿ ಈ ಕುರುಹುಗಳು ಸ್ಪಷ್ಟವಾಗಿ ಇವೆ. ಉದಾ:- ಹೋಪೊ, ಮಾಡುವೊ, ತಿಂಬೊ-ಎಂಬುದೇ ಇಂದಿಗೂ ಆ ಮಾತಿನ ರೂಢಿ. ಸಾಧಾರಣವಾಗಿ ಹೊಸಗನ್ನಡ

ಮಾತಾಡುವವನಿಗೆ ಆ ನುಡಿ ಹಳೆಗನ್ನಡವಾಗಿಯೇ ಕೇಳುವುದು, ಎಕಾರವು ಇಂದೂ ಆ ನುಡಿಯಲ್ಲಿ ಕೆಲವು ಕಡೆ ಸಪ್ತಮೀ ವಿಭಕ್ತಿಯಾಗಿ ಪ್ರಯುಕ್ತವಾಗುತ್ತದೆ. ಉದಾ:-ಒಂದು ದಿಕ್ಕೆ(=ಒಂದು ದಿಕ್ಕಿನಲ್ಲಿ). ಪಂಪನ ಭಾಷೆಯಲ್ಲಿ ಕಾಣುವ ಇಲ್ಲೆಯೋ (=ಇಲ್ಲವೊ) ಎಂಬುದೇ ಇಂದೂ ಅದರ ರೂಪ. ಇವಲ್ಲದೆ ಇನ್ನು ಎಷ್ಟೋ ಪುರಾತನ ಲಕ್ಷಣಗಳು ಅದರಲ್ಲಿವೆ. ಆದುದರಿಂದ ಕನ್ನಡದ ಹಳೆಯ ದೇಸಿಯನ್ನು ತಿಳಿಯುವುದಕ್ಕೆ ಈ ಆಡುಮಾತು ಅತ್ಯಂತ ಸಹಕಾರಿಯಾಗಿದೆ.

ಹವೀಕರ ಮಾತಿನಲ್ಲಿ 'ಇಂದ' ಎಂಬ ಪ್ರತ್ಯಯವು ಕೇವಲ ಪಂಚಮ್ಯರ್ಥದಲ್ಲಿಯೇ ಪ್ರಯುಕ್ತವಾಗುತ್ತದೆ. (ಕೆಲವು ಬಾರಿ ಇದು'ಂದ-ಎಂದಿಷ್ಟೇ ಆಗುವುದು. ಕಾಡಿಂದ, ಕಾಲಿಂದ ಎಂಬಲ್ಲಿ 'ಇಂದ' ಎಂಬ ರೂಪವೇ ತೋರಿದರೂ, ಎನ್ನಂದ (=ನನ್ನಿಂದ), ಮರಂದ (=ಮರದಿಂದ) ಎಂದಾಗುವುದು.) ಉದಾ:-ಮರಂದ ಹಣ್ಣು ಬಿದ್ದತ್ತು. (=ಮರದಿಂದ ಹಣ್ಣು ಬಿದ್ದಿತು.) ಎನ್ನ ತಂಗೆ ಎನ್ನಂದ ಉದ್ದ. (=ನನ್ನ ತಂಗಿ ನನ್ನಿಂದ (ನನಗಿಂತ) ಉದ್ದ (ಎತ್ತರ.)) ಪುತ್ತೂರಿಂದ ಬಪ್ಪಾಗ ರಾಮಂಗೆ ಮೂರು ವರ್ಷ ಆಗಿಕ್ಕು. (=ಪುತ್ತೂರಿಂದ ಬರುವಾಗ ರಾಮನಿಗೆ ಮೂರು ವರ್ಷ ಆಗಿದ್ದೀತು) ಇತ್ಯಾದಿ. ತೃತೀಯಾರ್ಥದಲ್ಲಿ ಸರ್ವತ್ರ ಸಪ್ತಮಿಯೇ ಪ್ರಯೋಗಿಸಲ್ಪಡುತ್ತದೆ. ಉದಾ:-ಅಣ್ಣ ಎನಗೆ ಕೈಲಿ ಬಡಿದ (=ಅಣ್ಣನು ನನಗೆ ಕೈಯಲ್ಲಿ ಬಡಿದನು.) ಅಪ್ಪ ಮರದ ಕತ್ತಿಲಿ ಕಡಿದ (=ಅಪ್ಪನು ಮರವನ್ನು ಕತ್ತಿಯಲ್ಲಿ ಕಡಿದನು.) ಇಂದಿನ ಕನ್ನಡದಲ್ಲಿ ಮತ್ತು ಹಳೆಯ ಕಾವ್ಯಗಳಲ್ಲಿ, ಹೀಗೆ ಕರಣಾರ್ಥದಲ್ಲಿ ಸಪ್ತಮಿಯನ್ನು ಪ್ರಯೋಗಿಸುವುದು ಮಾತಿನಲ್ಲಿಯೂ ಬರವಣಿಗೆಯಲ್ಲಿಯೂ ಇದೆ; ಆದರೆ ವಿಕಲ್ಪವಾಗಿ 'ಇಂದ'ವನ್ನು ಬರೆಯುತ್ತಾರೆ. ಹವೀಕರ ಮಾತಿನಲ್ಲಿ ಈ ತೃತೀಯಾರ್ಥದ ಸಪ್ತಮಿಗೆ ಪಲ್ಲಟವಾಗಲಿ, ಅಪವಾದವಾಗಲಿ ಒಂದೂ ಇಲ್ಲ.

ಇನ್ನು, ದ್ರಾವಿಡ ಭಾಷೆಗಳೊಳಗೆ ಕನ್ನಡಕ್ಕೆ ಅತಿ ಸಮೀಪವಾದ, ಕನ್ನಡ ನಾಡಿನೊಳಗೇ ಹುದುಗಿರುವ, ದ್ರಾವಿಡ ಭಾಷೆಗಳ ಕೆಲವು ವಿಶಿಷ್ಟ ಲಕ್ಷಣಗಳನ್ನು ಕಾಪಾಡಿಕೊಂಡು ಬಂದಿರುವ, ಗ್ರಂಥ ಭಾಷೆಯಲ್ಲದಿದ್ದರೂ ಚೆನ್ನಾಗಿ ರೂಪುಗೊಂಡಿರುವ ತುಳು ನುಡಿಯನ್ನು ಪರೀಕ್ಷಿಸುವ. ಕಾಲ್ಡ್‌ವೆಲ್ ಸಾಹೇಬರು (The Tulu ablative of motion, which is also used as an instrumental, is d'du d'd'. p. 286) ತುಳುವಿನ ಅಪಾದಾನಾರ್ಥಕ ವಿಭಕ್ತಿ 'ಡ್‌ದು ಅಥವಾ ಡ್‌ದ್' ಎಂದಾಗಿದೆ; ಇದು ಕರಣಾರ್ಥದಲ್ಲಿಯೂ ಪ್ರಯುಕ್ತವಾಗುತ್ತದೆ-ಎಂದಿದ್ದಾರೆ. ಹೀಗೆ ಹೇಳಿ ಕನ್ನಡದ 'ಇಂದ'ಕ್ಕೆ ಅದನ್ನು ಹೊಂದಿಸಿದ್ದಾರೆ. ಕಾಲ್ಡ್‌ವೆಲ್ಲರಿಗೆ ತುಳು ಭಾಷೆಯ ಸಾಕ್ಷಾತ್ ಪರಿಚಯವಿರಲಿಲ್ಲವೆಂದು ತೋರುತ್ತದೆ; ಯಾರೋ ಇತರರ ಅಭಿಪ್ರಾಯವನ್ನು ಅವಲಂಬಿಸಿ ಹಾಗೆ ಹೇಳಿರಬೇಕು. ಅಲ್ಲದಿದ್ದರೆ ಅಂತಹ ಕೂಲಂಕಷ ವಿಚಾರ ಸಮರ್ಥರಾದ ಘನ ವಿದ್ವಾಂಸರು, ನಿರಾಧಾರವಾದ ಮಾತನ್ನು ಎಂದೂ ಹೇಳುತ್ತಿದ್ದಿಲ್ಲ. ತುಳುವನ್ನಾಡುವ ಯಾವನೊಬ್ಬನೂ 'ಡ್‌ದ್' (=ಡ್ದ್) ಎಂಬುದನ್ನು ತೃತೀಯಾರ್ಥದಲ್ಲಿ ಪ್ರಯೋಗಿಸಲಾರನು; ಅದು ತುಳುವಿನ ಶುದ್ಧ ಪಂಚಮೀ ವಿಭಕ್ತಿಯಾಗಿದೆ. ಉದಾ:-ರಾಮೆ ಮರಡ್ದ್ ಬೂರಿಯೆ. (=ರಾಮನು ಮರದಿಂದ ಬಿದ್ದನು.) ಎನ ಕಾರ್‌ಡ್‌ದ್ ತರಮುಟ್ಟ ಸೂ ಲಕ್ಕ್ಂಡ್. (=ನನ್ನ ಕಾಲಿನಿಂದ ತಲೆಯವರೆಗೆ ಬೆಂಕಿ ಎದ್ದಿತು.) ರಾಮಡ್ದ್ ಸೋಮೆ ಮಲ್ಲಾಯೆ (=ರಾಮನಿಂದ (ರಾಮನಿಗಿಂತ) ಸೋಮನು ದೊಡ್ಡವನು.)ಇತ್ಯಾದಿ. ಇದಕ್ಕೆ ತೃತೀಯಾರ್ಥದಲ್ಲಿ ಎಂದೂ

ಪ್ರಯೋಗವಿಲ್ಲ; ನಿರಪವಾದವಾಗಿ ಇದು ಪಂಚಮಿ. ತೃತೀಯಾರ್ಥವನ್ನು ಹೇಳುವುದಕ್ಕೆ ತುಳುವಿನಲ್ಲಿ ಸರ್ವತ್ರ ಸಪ್ತಮಿಯೇ ಪ್ರಯುಕ್ತವಾಗುತ್ತದೆ. ಉದಾ:-ಏನ್ ಕಣ್ಣ್‌ಡ್ ತೂತೆ. (=ನಾನು ಕಣ್ಣಿನಲ್ಲಿ ಕಂಡಿದ್ದೇನೆ.) ಅಮ್ಮೆ ಕುಡಾರಿಡ್ ಮ್ಹರನ್ ಕಡ್ತೆ. (=ಅಪ್ಪನು ಕೊಡಲಿಯಲ್ಲಿ ಮರವನ್ನು ಕಡಿದನು.) ಇತ್ಯಾದಿ. ಹೀಗೆ ತೃತೀಯಾರ್ಥದಲ್ಲಿ ಒಂದೇ ಒಂದು ಅಪವಾದವಿಲ್ಲದೆ ಸಪ್ತಮಿಯೇ ಕಾಣಿಸಿಕೊಳ್ಳುತ್ತದೆ.

ಹವೀಕರ ಕನ್ನಡಲ್ಲಿ ಮಾತ್ರವಲ್ಲ; ಆ ನುಡಿಗಿಂತ ಎಷ್ಟೋ ಹೆಚ್ಚಾಗಿ ಹೊಸ ರೂಪವನ್ನು ತಳೆದ, ಕುಂದಾಪುರದ ಸುತ್ತಮುತ್ತಣ ಆಡುನುಡಿಯಾದ ಕನ್ನಡದಲ್ಲಿಯೂ 'ಇಂದ' ಎಂಬುದು ಕೇವಲ ಪಂಚಮಿಯಾಗಿ ಸಪ್ತಮಿಗೂ ತೃತೀಯಾರ್ಥಕ್ಕೂ ಒಂದೇ ಪ್ರತ್ಯಯವಾಗಿ, ಬಳಕೆಯಲ್ಲಿದೆ. ಉದಾ:- ಈ ಮಾಣಿಗೆ ಕೋಲೊಳಗೆ ಎರಡ್ ಬಡೀಕ್ (=ಈ ಮಾಣಿಗೆ (ಬ್ರಾಹ್ಮಣರ ಹುಡುಗನಿಗೆ) ಕೋಲೊಳಗೆ ಎರಡು ಬಡಿಯಬೇಕು) ಸಪ್ತಮಿಯ ರೂಪವು ಆ ಮಾತಿನಲ್ಲಿ 'ಒಳಗೆ' ಎಂದೇ ಇದೆ.

ಮೈಸೂರು-ಬೆಂಗಳೂರು ಕಡೆಯ ಹಳ್ಳಿಗರ ಆಡುಮಾತಿನಲ್ಲಿಯೂ ಹೀಗಿರಬಹುದೇ ಎಂದು ನನಗೆನಿಸುತ್ತದೆ; ಅದೂ ನಿರಾಧಾರವಾಗಿ ಅಲ್ಲ. ಶ್ರೀ ಸಿ.ಕೆ.ವೆಂಕಟರಾಮಯ್ಯನವರು ಬರೆದ ಕತೆಗಳಲ್ಲಿ ಹಳ್ಳಿಗರ ಆಡುನುಡಿ ಅಲ್ಲಲ್ಲಿ ಕಾಣುತ್ತದೆ; ಅಂತಹ ಸಂದರ್ಭಗಳಲ್ಲಿ ಸಪ್ತಮಿಯೇ ತೃತೀಯಸ್ಥಾನದಲ್ಲಿರುತ್ತದೆ. ಉದಾ:- 'ಅಂಜನ'ವೆಂಬ ಕತೆಯಲ್ಲಿ ವೆಂಕಟಮ್ಮನೆಂಬ ಹಳ್ಳಿಯ ಹೆಂಗುಸು ಮೋಡಗಳನ್ನು ''ಬಂಗಾರದಲ್ಲಿ ಮಾಡಿದ ಹತ್ತೀ ಮುದ್ದೆಗಳ ಹಾಗೆ'' ಎಂದು ಬಣ್ಣಿಸುತ್ತಾಳೆ; ''ಆ ಬಂಗಾರದ ಹತ್ತೀಲಿ ನೂಲು ತೆಗೆದು ಮಾಡಿದ ಸೀರೆ''ಯನ್ನು ಕಲ್ಪಿಸಿಕೊಳ್ಳುತ್ತಾಳೆ. ಹವೀಕರ ಕನ್ನಡ, ಕುಂದಾಪುರ ಕನ್ನಡ, ತುಳು ಇವುಗಳಲ್ಲಾದರೂ ಇಂತಹ ಸಂದರ್ಭದಲ್ಲಿ ಸಪ್ತಮಿಯೇ ಬರುವುದು ಹೊರತು, 'ಇಂದ'ವಾಗಲಿ 'ಡ್' ಆಗಲಿ ಬರಲಾರದು.

ಹೀಗೆ ಕನ್ನಡದ ಬೇರೆಬೇರೆ ಆಡುನುಡಿಗಳಲ್ಲಿ ಕಾಣುವ ತೃತೀಯಾರ್ಥದ ಸಪ್ತಮಿ ಸುಸಂಸ್ಕೃತವಾದ ಗ್ರಂಥ ಭಾಷೆಯಲ್ಲಿ ಎಷ್ಟರಮಟ್ಟಿಗೆ ಕಾಣಿಸಿಕೊಳ್ಳುತ್ತದೆ ಎಂದು ನೋಡುವ. ಪುರಾತನ ಭಾಷಾ ಸ್ವರೂಪವನ್ನು ತಿಳಿಯಬಹುದಾದ ಗ್ರಂಥಗಳಲ್ಲಿ ಪಂಪಭಾರತವೊಂದು ಪ್ರಮಾಣ ಗ್ರಂಥವೆಂದರೆ ಆಕ್ಷೇಪವಿರಲಾರದು. ಅದರ ತೃತೀಯಾರ್ಥಕ ಪ್ರಯೋಗಗಳನ್ನು ನೋಡಿದರೆ, 'ಇಂ' 'ಇಂದಂ' 'ಇಂದೆ'ಗಳೂ ಸಪ್ತಮಿಯೂ ಎರಡೂ ಕಾಣುವುವು. ಉದಾ:-''ಕವಿವ ಮದಾಳಿಯಿಂ ಮಸುಳನಾಗಿ ಪಯೋಜರಜಂಗಳೊಳ್ ಕವಿಲ್ಗವಿಲನು ಮಾಗಿ.'' (ಕ.ಸಾ.ಪಂ. ಪುಟ. ೪೨) ಹೀಗೆ ಎರಡೂ ಪ್ರಯುಕ್ತವಾಗುವುದಾದರೂ, ಸ್ಪಷ್ಟವಾದ ಕರಣಾರ್ಥದಲ್ಲಿ ಎಂದರೆ ಕ್ರಿಯಾನಿಷ್ಪತ್ತಿಗೆ ಸಾಧನವಾದ ಉಪಕರಣ ವಿಷಯದಲ್ಲಿ ಸಪ್ತಮಿಯೇ ಅಧಿಕವಾಗಿ ಪ್ರಯೋಗ ಹೊಂದಿದೆ ಎಂಬುದು ಪರೀಕ್ಷಿಸಿದರೆ ತಿಳಿಯುವುದು:- ಉದಾ:-''ವಜ್ರ ಕೀಟಂಗಳ್ ಕರ್ಣನೆರಡುಂ ತೊಡೆಯುಮನುಳಿ ಯನೂಱಿ ಕೊಡಂತಿಯೊಳ್ ಬೆಟ್ಟಿದಂತತ್ತಮಿತ್ತಮುರ್ಚೆ'' (ಪುಟ. ೨೫) ''ಕತ್ತುರಿಯಲ್ ಬರೆದಂತಪ್ಪ ವಿಕ್ರಾಂತ ತುಂಗನ ಮೀಸೆಗಳ್'' (ಪುಟ ೪೯). ''ಕಲ್ಲೊಳಂ ಮರದೊಳಂ ಬಡಿದೊಯ್ಯನೆ'' (ಪುಟ. ೭೨). ''ಆ ಕೊಳ್ಳಿಯೊಳಿಟ್ಟೊಡಂತದು'' (ಪುಟ. ೭೮) ''ಮುಸುಕಿದ ನೀರದಾವಳಿಗಳಂ ಕಿರಣಂಗಳೊಳೊತ್ತಿ ತೇಜಮರ್ವಿಸುವಿನಂ'' (ಪುಟ. ೮೪) ಇತ್ಯಾದಿ. ಎಷ್ಟು ಉದಾಹರಣೆಗಳನ್ನೂ ಕೊಡಬಹುದು. ಭಟ್ಟಾಕಳಂಕನು 'ಇಮ್ ಸಿದ್ಧೌ' (ಸೂತ್ರ

೨೦೮) ಎಂದು ಸೂತ್ರಿಸಿ, 'ಮಾಸದಿಂ ವ್ಯಾಕರಣಂ ಪೂರ್ಣಮಾದುದು; ಬರಿಸದಿಂ ಶಾಸ್ತ್ರಂ ಮುಗಿದುದು'' ಎಂದು ಮುಂತಾಗಿ 'ಇಂ' ಪ್ರತ್ಯಯದ ಪ್ರಯೋಗಗಳನ್ನು ತೋರಿಸುತ್ತಾನೆ. ಆದರೆ ಇದೆಲ್ಲ ಸಂಸ್ಕೃತವೇ ಹೊರತು ಕನ್ನಡವಲ್ಲ. ಕನ್ನಡವು ಹೀಗಿದೆ - ''ಅಱುದಿಂಗಳೊಳೊಂದು ಮೂರು ತಿಂಗಳೊಳಗೆ ಸಮಾಪ್ತಿಯಾದುದು''. (ಪಂಪಭಾರತ, ಪುಟ. ೪೧೭.) ಇರಲಿ. ಮೇಲೆ ಕೊಟ್ಟ 'ಕೊಡಂತಿಯೊಳ್ ಬೆಟ್ಟಿದಂತೆ'', ''ಕತ್ತುರಿಯಲ್ ಬರೆದಂತಪ್ಪ'' ಎಂಬ ಎರಡು ಉದಾಹರಣೆಗಳೂ ಗದ್ಯದಲ್ಲಿವೆಯೆಂಬುದು ಮನನೀಯವಾಗಿದೆ. ಪದ್ಯದಲ್ಲಾದರೆ, ವಿಕಲ್ಪವಾಗಿ ಹಾಗೂ ಹೀಗೂ ಹೇಳಬಹುದಾದುವುಗಳನ್ನು ಛಂದಸ್ಸಿಗಾಗಿ ಹೇಗೋ ಪ್ರಯೋಗಿಸಿದನೆನ್ನಬಹುದು; ಗದ್ಯದಲ್ಲಾದರೆ ಸಹಜವಾದ ಪ್ರಯೋಗವೇ ಸ್ವಾಭಾವಿಕವಾಗಿ ಬರುವುದೆಂಬುದನ್ನು ವಾಚಕರು ಲಕ್ಷಿಸಬೇಕು. ಹೀಗೆ ಪಂಪನ ಒಲವು ತೃತೀಯಾರ್ಥದಲ್ಲಿ ಹೆಚ್ಚಾಗಿ ಸಪ್ತಮಿಯನ್ನೇ ಹೇಳುವುದಾಗಿದೆ.

ಹಳೆಯ ಪಂಪನನ್ನು ಬಿಟ್ಟು ಮತ್ತಣ ಕವಿಗಳ ಪ್ರಯೋಗಗಳನ್ನೂ ನೋಡೋಣ. ಗದುಗಿನ ನಾರಾಣಪ್ಪನು ಪಂಪನಿಗೆ ಸಾಟಿಯಾದ ಕವಿಯೆಂದು ಹೇಳಬಹುದು; ಅಲ್ಲದೆ ಸಂಪ್ರದಾಯವನ್ನಾಗಲಿ ಒತ್ತಾಯದ ನಿಯಮಗಳನ್ನಾಗಲಿ ಎಂದೂ ಮನ್ನಿಸುವವನಲ್ಲ; ಸಹಜವಾಗಿ ಮಾತಾಡಿದಂತೆ ನಿರರ್ಗಳವಾಗಿ ಬರೆಯುವವನು. ಇವನ ವಾಕ್ಯಗಳಲ್ಲಿ ತೃತೀಯಾರ್ಥದಲ್ಲಿ ಸಪ್ತಮೀ ಪ್ರತ್ಯಯಗಳೇ ತುಂಬಿವೆ. ಉದಾ:-''ಕವಿಶಲ್ಯ ಬೆರಳಲಿ ಮೀಸೆಗಳ ಮುರಿದು'' (ಕರ್ಣಪರ್ವ) ಇತ್ಯಾದಿಯಾಗಿ ಕರಣಾರ್ಥವನ್ನು ಸಪ್ತಮಿಯಲ್ಲೇ ಹೇಳುವನು. ಅಲ್ಲದೆ-'ಮೂಲಕವಾಗಿ, ಮಾರ್ಗವಾಗಿ'' ಎಂಬರ್ಥದಲ್ಲಿಯೂ ಸಪ್ತಮಿಯನ್ನೇ ಪ್ರಯೋಗಿಸುತ್ತಾನೆ. ಉದಾ:-''ನಿನ್ನಯ ನಾಲಗೆಯ ಹೆಡದಲೆಯಲುಗಿವರ್ಜುನನನೀಗಳೆ ತೋರಿಸುವೆನು'' (ಕರ್ಣಪರ್ವ).

ಆದರೆ ವಿಭಕ್ತಿಪಲ್ಲಟವೆಂಬುದೊಂದು ಪ್ರಕರಣವು ವ್ಯಾಕರಣದಲ್ಲಿದೆಯಷ್ಟೆ. ಮೇಲೆ ಉದಾಹರಿಸಿದ ಸಂದರ್ಭಗಳಲ್ಲಿ ತೃತೀಯ ಸ್ಥಾನದಲ್ಲಿ ಸಪ್ತಮಿಯು ಪಲ್ಲಟವಾಗಿ ಬಂದಿದೆಯೆಂದು ಏಕೆ ಹೇಳಬಾರದೆಂದು ಕೆಲವರು ಕೇಳಬಹುದು. ಆದರೆ ಅಲ್ಲೊಂದು ಇಲ್ಲೊಂದು ಪ್ರಯೋಗವು ಕಂಡುಬರುವುದಾದರೆ ಮಾತ್ರ ಪಲ್ಲಟವೆನ್ನಬಹುದು ಹೊರತು, ನಿಯತವಾದ ಪ್ರತ್ಯಯದಷ್ಟೇ ಅಥವಾ ಅದಕ್ಕೂ ಹೆಚ್ಚಾಗಿ ಮತ್ತೊಂದು ಪ್ರತ್ಯಯವು ಕಾಣಿಸಿಕೊಳ್ಳುವುದಾದರೆ, ಪಲ್ಲಟವೆನ್ನುವುದರಲ್ಲಿ ಔಚಿತ್ಯವಿಲ್ಲ. ಅಲ್ಲದೆ ಮೇಲೆ ತೋರಿಸಿದ ಆಡುನುಡಿಗಳ ಪ್ರಬಲಾಧಾರವಿರುವಾಗ ಗ್ರಂಥಭಾಷೆಯ ರೂಪಗಳಿಗೆ ಅಲ್ಲೇ ಮೂಲವನ್ನು ಹುಡುಕುವುದು ಭಾಷಾವಿಜ್ಞಾನ ಸಮ್ಮತವಾಗಿದೆ.

ಹೊಸಗನ್ನಡದಲ್ಲಿಯೂ, ಕೆಲವೆಡೆ ಹಳಗನ್ನಡದಲ್ಲಿಯೂ 'ಒಡನೆ' ಎಂಬ 'ಅನುಸರ್ಗ'ವು (post position) ಷಷ್ಠ್ಯಂತಕ್ಕೆ ಸೇರಿ ಸಹಾರ್ಥವನ್ನು ಕೊಡುತ್ತದೆ. ಉದಾ: ''ಆರೊಡನೆ ನುಡಿವೆನಟ್ಟಿಯೊಳ್'' (ರನ್ನನ ಗದಾಯುದ್ಧ). ಹಳೆಯ ಕನ್ನಡದಲ್ಲಿ ಸಪ್ತಮೀ ಪ್ರತ್ಯಯದ ಒಂದು ರೂಪದಿಂದಲೂ ಈ ಅರ್ಥವು ಪ್ರಕಟವಾಗುತ್ತಿತ್ತು ಎಂಬುದನ್ನು ಪಂಪನ ಪ್ರಯೋಗಗಳು ನಿಸ್ಸಂದಿಗ್ಧವಾಗಿ ಸ್ಪಷ್ಟೀಕರಿಸುತ್ತವೆ. ಉದಾ: ''ಒರ್ವಗಂಧರ್ವನೊಳೆ'' ಚಿತ್ರಾಂಗದಂ ದ್ವಂದ್ವಯುದ್ಧಮಂ ಪೊಣರ್ಚೆ'' (ಪುಟ. ೧೭) ''ಅಂಬೆಯೊಳ್ ಎನ್ನಂಬೆಮೊಲಂ ವಿವಾಹವಿಧಿಯಂ ಮಾಟ್ಪೆಂ'' (ಪುಟ. ೧೮) ''ಎಮ್ಮೊಳ್

ಕಾದಲ್ವೇೞ್ಪುದು'' (ಪುಟ. ೧೯) ''ಎನ್ನೊಳ್ ಪುಸಿದು'' (ಪುಟ. ೨೯) ಹೀಗೆ ಎಷ್ಟೊ ಉದಾಹರಿಸಬಹುದು.

ಸಹಯೋಗ ಎಂದರೆ ಸಹಾರ್ಥವನ್ನು ಕೊಡುವ ಶಬ್ದವು ಸಮೀಪಿಸುವಾಗ ತೃತೀಯೆ ಬರುವುದೆಂದು ಭಟ್ಟಾಕಳಂಕನು ಸೂತ್ರಿಸಿ, (ಸೂತ್ರ ೨೧೧) ''ಮಗನಿಂ ಕೂಡಿ ಬಂದಂ ತಂದೆ'', ಇತ್ಯಾದಿ ಉದಾಹರಣೆಗಳನ್ನು ಕೊಟ್ಟಿರುವನು. ಈ ತರದ ಪ್ರಯೋಗಗಳು ಸಂಸ್ಕೃತದ ಪ್ರಭಾವದಿಂದ ಹುಟ್ಟಿದವುಗಳೆಂದೂ ಪ್ರಾಚೀನವಲ್ಲವೆಂದೂ ತೋರುತ್ತವೆ. ಈಗಿನ ಬರವಣಿಗೆಗಳಲ್ಲಿ ಇಂತಹವು ತುಂಬ ಕಾಣುವುದುಂಟಾದರೂ, ಆಡುನುಡಿಯಲ್ಲಿ ಇರುವಂತೆ ತೋರುವುದಿಲ್ಲ.''ಮಗನನ್ನು ಕೂಡಿಕೊಂಡು'', ''ಮಗನೊಡಗೂಡಿ'' ಇತ್ಯಾದಿ ಪ್ರಯೋಗಗಳೇ ಸಾಧುತರವೆಂದು ಹೇಳಬಹುದು. ಕೇಶಿರಾಜನೂ 'ಇಂ' ಪ್ರತ್ಯಯವು ''ಸಹಯೋಗದೊಳಮುಂಟು''- ಎಂದು ಹೇಳಿ, ''ಸಂಗಡದಿಂ ಬಂದಂ'' ಎಂದು ಉದಾಹರಿಸಿದ್ದಾನೆ. ಆದರೆ ಇದು ಸಹಯೋಗಕ್ಕೆ ಉಚಿತವಾದ ಉದಾಹರಣೆಯಲ್ಲ. ಏಕೆಂದರೆ ಇಲ್ಲಿ ಸಹಾರ್ಥಕ ಶಬ್ದಕ್ಕೇ 'ಇಂ' ಸೇರಿದೆ ಹೊರತು, ಅದರೊಡಗೂಡಿದ ನಾಮಕ್ಕಲ್ಲ. ಪ್ರಾಯಃ ಸಹಾರ್ಥಕ ಶಬ್ದದೊಡನೆ ನಾಮಕ್ಕೆ 'ಇಂ' ಸೇರಿದ ಹೊರತು, ಪ್ರತ್ಯಯದ ಸಂಯೋಗವು ಹೆಚ್ಚಾಗಿಲ್ಲದಿದ್ದುದರಿಂದ, ಹುಡುಕಿ ಕಾಣದೆ ಕೊಟ್ಟ ಉದಾಹರಣೆಯೋ ಎಂಬಂತೆ ಇದು ಭಾಸವಾಗುತ್ತದೆ. ತಾತ್ಪರ್ಯವೇನೆಂದರೆ, ತೃತೀಯಾರ್ಥಗಳೊಳಗೊಂದಾದ ಸಹಯೋಗದಲ್ಲಿಯೂ 'ಇಂ' ಪ್ರತ್ಯಯವು ಗೋಚರಿಸುವುದು ಅಪೂರ್ವ. ದ್ರಾವಿಡ ಭಾಷೆಗಳನ್ನು ಪರಿಶೀಲಿಸಿದರೆ ಸಹಾರ್ಥಕವಾದೊಂದು ವಿಭಕ್ತಿಯೇ ಅವುಗಳಲ್ಲಿ ಉಂಟೆಂದು ಹೇಳಬೇಕಾಗುತ್ತದೆಂದು ಕಾಲ್ಡ್‌ವೆಲ್ಲರ್ ಮತ. ಆದರೆ ಹಳೆಯ ಕನ್ನಡವನ್ನೂ ತುಳುವನ್ನೂ ಪರೀಕ್ಷಿಸಿದರೆ ಸಪ್ತಮಿಯೇ ಅಥವಾ ಅದರೊಂದು ರೂಪವೇ ಆ ಅರ್ಥವನ್ನು ಪ್ರಕಟಿಸುವುದೆಂದು ಹೇಳಬೇಕಾಗುತ್ತದೆ.

ಆಯಾ ದ್ರಾವಿಡ ಭಾಷೆಯಲ್ಲಿ ಒಡು, ಉಡನೆ, ಒಡನೆ-ಎಂದು ಮೊದಲಾಗಿ ಭಿನ್ನರೂಪಗಳನ್ನು ತಾಳುವ ಸಹಾರ್ಥಕವಾದ ಶಬ್ದದ ಮೂಲವೇನೆಂಬುದನ್ನು ಕಾಲ್ಡ್‌ವೆಲ್ಲರು ನಿಸ್ಸಂದಿಗ್ಧವಾಗಿ ನಿರೂಪಿಸಿದಂತೆ ತೋರುವುದಿಲ್ಲ. ಅದರ ಮೂಲವು 'ಒಡ್' ಎಂದಾಗಿರಬಹುದೆಂದು ಅವರು ಊಹಿಸುತ್ತಾರೆ. ಆದರೆ ಕನ್ನಡದಲ್ಲಿ ಅದರ ಮೂಲವು ಇರಬಹುದೇ? 'ಒಳ್' ಎಂಬ ಸಪ್ತಮೀ ಪ್ರತ್ಯಯವು ಪಂಪನ ಭಾಷೆಯಲ್ಲಿ ಸ್ಪಷ್ಟವಾಗಿ ಸಹಾರ್ಥಕವಾಗಿದೆಯೆಂದು ಮೇಲೆ ತೋರಿಸಿರುವೆನು. ಕನ್ನಡದಲ್ಲಿ ಳಕಾರ ಡಕಾರಗಳ ವಿಪರ್ಯಯವು ಅಪೂರ್ವವಲ್ಲ. ಉದಾ: ಕೆಳೆ=ಗೆಡೆ;ಈಗಳಿನ=ಈಗಡಿನ;ದಿನವೆಂಬ ಅರ್ಥವುಳ್ಳ 'ನಾಳ್' ಎಂಬ ಮೂಲಶಬ್ದವು 'ನಾಳೆ' ಎಂಬುದರಲ್ಲಿ ಳಕಾರವಾಗಿಯೇ ಇದ್ದರೂ 'ನಾಡಿದು' ಎಂಬುದರಲ್ಲಿ ಡಕಾರವಾಗುತ್ತದೆ. ಆದುದರಿಂದ 'ಒಳ್' ಎಂಬುದರಲ್ಲಿರುವ ಳಕಾರವು ಏಕೆ ಡಕಾರವಾಗಿರಬಾರದು? ಒಳ್ ಎಂಬುದಕ್ಕೆ 'ಉಳ್' ಮೂಲವೆನ್ನುತ್ತಾರೆ. ಹಾಗಾದರೆ 'ಉಡನೆ' 'ಒಡನೆ' ಇತ್ಯಾದಿಗಳಿಗೂ ಅದೇ ಮೂಲವೆಂದರೆ ತಪ್ಪಾಗಲಾರದೆಂದು ತೋರುತ್ತದೆ. ಈ ದೃಷ್ಟಿಯಿಂದ ನೋಡಿದರೆ, ಸಪ್ತಮೀ ಪ್ರತ್ಯಯವಾದ 'ಒಳ್' ಎಂಬುದು 'ಒಡನೆ'ಯಂತೆಯೇ ಸಹಾರ್ಥವನ್ನು ಹೇಳುವ ಮರ್ಮವು ಹೊಳೆಯುವುದು. ಕನ್ನಡದ ಅವ್ಯಯಗಳ ಕೊನೆಯ 'ಅಗೆ'ಯೂ 'ಅನೆ'ಯೂ ವಿಪರ್ಯಯ ಹೊಂದುವುದು ಸಾಮಾನ್ಯವಾಗಿದೆ. ಉದಾ:-ಮೆಲ್ಲನೆ=ಮೆಲ್ಲಗೆ. ಹಾಗಾದರೆ 'ಒಳಗೆ'ಯೂ 'ಒಡನೆ'ಯೂ

ಒಂದಾನೊಂದು ಕಾಲದಲ್ಲಿ ಒಂದೇ ಶಬ್ದದ ಎರಡು ರೂಪಗಳಾಗಿದ್ದಿರಬಹುದೆ? ಭಾಷಾತತ್ವ ಪ್ರಿಯರಿದನ್ನು ಮಥಿಸಬೇಕು.

ತುಳುವಿನಲ್ಲಿ ಸಪ್ತಮಿಯು 'ಡ್' ಅಥವಾ ಉಚ್ಚಾರಭೇದದಿಂದ 'ಟ್' ಎಂದಿರುತ್ತದೆ. ಕೆಲವೆಡೆಗಳಲ್ಲಿ ದ್ವಿತ್ವ ಬರುತ್ತದೆ; ಹಾಗೆ ಬಂದಾಗ ಟಕಾರವೇ ಕಾಣುತ್ತದೆ. ಉದಾ:-ಕತ್ತಿಡ್=ಕತ್ತಿಟ್, ಕೈಟ್ಟ್ (ಕತ್ತಿಯಲ್ಲಿ, ಕೈಯಲ್ಲಿ.) ಇದು ನಪುಂಸಕಲಿಂಗದಲ್ಲಿ, ಮುಖ್ಯವಾಗಿ ಅಪ್ರಾಣಿ ವಾಚಕದಲ್ಲಿ ಪ್ರಯೋಗ ಹೊಂದುವ ರೂಪ. ಪುಂಸ್ತ್ರೀಲಿಂಗಗಳಲ್ಲಾದರೆ, 'ಡ' ಅಥವಾ 'ಟ' ಎಂದಾಗುತ್ತದೆ. ಉದಾ:-ನಿನಡ (=ನಿನ್ನಲ್ಲಿ), ರಾಮಡ (=ರಾಮನಲ್ಲಿ), ಆಳೆಡ (=ಅವಳಲ್ಲಿ) ಇತ್ಯಾದಿ. ಸಂಭಾಷಣಾದಿ ವಿಷಯಗಳಲ್ಲಿ ಸಹಾರ್ಥವನ್ನು ಹೇಳುವಾಗಲೂ ಇದೇ 'ಡ' ಅಥವಾ 'ಟ' ಪ್ರತ್ಯಯವು ಎಂದರೆ ಸಪ್ತಮಿಯು ಕಾಣಿಸಿಕೊಳ್ಳುತ್ತದೆ. ಉದಾ:-ಅಧಿಕರಣಕ್ಕೆ-''ರಾಮಡ ಒಂಜಿ ಕೊರತೆ ಉಂಡು'' (=ರಾಮನಲ್ಲಿ ಒಂದು ಕೊರತೆ ಉಂಟು) ಸಹಾರ್ಥಕ್ಕೆ -''ರಾಮಡ ಏನ್ ನಟ್ಟೆಯೆ'' (=ರಾಮನೊಡನೆ ನಾನು ಬೇಡಿದೆನು) ''ಕೋರಿಡ ಕೇಂಡ್‌ದ್ ಸಂಬಾರ ಅರೆಪುನೆನೋ?'' (=ಕೋಳಿಯೊಡನೆ ಕೇಳಿ ಸಂಬಾರ ಅರೆಯುವುದೋ?) ಇತ್ಯಾದಿ. ನಪುಂಸಕವು ಪ್ರಾಣಿವಾಚಕವಾದರೆ ಅಧಿಕರಣಾರ್ಥದಲ್ಲಿ ಸಪ್ತಮಿಯ ಎರಡು ರೂಪಗಳೂ ಬರುತ್ತವೆ. ಉದಾ:-''ಆ ಕೋರಿಡ್ (ಅಥವಾ ಕೋರಿಡ) ಎಂಕ್ ಎಡ್ಡೆ ಮನಸುಂಡು. (=ಆ ಕೋಳಿಯಲ್ಲಿ ನನಗೆ ಒಳ್ಳೆ (ಹೆಚ್ಚು) ಮನಸ್ಸುಂಟು.) ಇತ್ಯಾದಿ. ಕನ್ನಡದಲ್ಲಿ 'ಒಳ್' ಎಂಬ ಸಪ್ತಮೀ ಪ್ರತ್ಯಯವು ಅಧಿಕರಣಾರ್ಥವನ್ನೂ ಸಹಾರ್ಥವನ್ನೂ ಹೇಳುವಂತೆಯೇ, ತುಳುವಿನಲ್ಲಿ 'ಡ' ಎಂಬ ಸಪ್ತಮೀ ಪ್ರತ್ಯಯವು ಆ ಎರಡು ಅರ್ಥಗಳನ್ನು ಕೊಡುವುದು ಈಯೆರಡು ಭಾಷೆಗಳ ಸಮೀಪ ಸಂಬಂಧವನ್ನು ತೋರಿಸುತ್ತದೆ. ಕರಣವೆಂದರೆ ಕ್ರಿಯಾಫಲ ನಿಷ್ಪತ್ತಿಯಾಗುವವರೆಗೆ ಕರ್ತೃವಿನೊಡನೆ ಸಹಕರಿಸುವ ವಸ್ತುವೆಂಬುದನ್ನೂ, ಹಳೆಯ ಕನ್ನಡದಲ್ಲಿಯೂ ತುಳುವಿನಲ್ಲಿಯೂ ಸಹಾರ್ಥವನ್ನು ಸಪ್ತಮೀ ಪ್ರತ್ಯಯವೇ ಹೇಳುವುದೆಂಬುದನ್ನೂ, ಇತರ ದ್ರಾವಿಡ ಭಾಷೆಗಳಲ್ಲೂ ಸಹಾರ್ಥವನ್ನು ಕೊಡುವ 'ಒಡನೆ' ಇತ್ಯಾದಿ ರೂಪವುಳ್ಳ ಶಬ್ದದ ಮೂಲವೂ ಕನ್ನಡದ 'ಒಳ್' ಎಂಬ ಸಪ್ತಮಿಯ ಮೂಲವೂ ಒಂದೆಂಬುದನ್ನೂ ಅವಧಾರಿಸಿದರೆ, ಕನ್ನಡದಲ್ಲಿ ಮೂಲತಃ ಸಪ್ತಮೀ ಪ್ರತ್ಯಯವೇ ತೃತೀಯಾರ್ಥವನ್ನು ಹೇಳುವುದು ಸಹಜವೆಂದು ತೋರದಿರದು.

ಕನ್ನಡ ತುಳುಗಳಲ್ಲಲ್ಲದೆ ಇತರ ದ್ರಾವಿಡ ಭಾಷೆಗಳಲ್ಲಿ ಇದಕ್ಕೆ ಆಧಾರವಿಲ್ಲವೆಂದು ಹೇಳಲಾಗುವುದಿಲ್ಲ. ಕಾಲ್ಡವೆಲ್ ಸಾಹೇಬರ ತುಲನಾತ್ಮಕ ದ್ರಾವಿಡ ವ್ಯಾಕರಣದಲ್ಲಿ ತೋರುವಂತೆ ತಮಿಳಿನ ತೃತೀಯಾ ವಿಭಕ್ತಿ 'ಆಲ್' ಎಂದಿದೆ. ಇದು 'ಕಾಲ್' ಎಂದರೆ (ನೀರಿನ) ಕಾಲುವೆ ಎಂಬ ಶಬ್ದದಿಂದ ರೂಪಗೊಂಡಿರಬೇಕೆಂದು ಅವರು ಹೇಳುತ್ತಾರೆ! ಆದರೆ ಹೀಗೆ ಅರ್ಥವನ್ನು ಎಳೆದೆಳೆದು ಹತ್ತಿಸಬೇಕಾದ ಅವಶ್ಯಕತೆಯೇನೂ ನನಗೆ ತೋರುವುದಿಲ್ಲ. ಕನ್ನಡದ ಸಪ್ತಮೀ ಪ್ರತ್ಯಯಗಳಲ್ಲಿ 'ಅಲ್' ಎಂಬುದೂ ಒಂದಾಗಿದೆ. ಮೂಡಲ್ (=ಮೂಡದಿಕ್ಕಿನಲ್ಲಿ), ಇರಲ್=ಇರೆ (=ಇರುವಲ್ಲಿ) ಎಂಬ ರೂಪಗಳನ್ನೂ, ಪಂಪನ ಕತ್ತುರಿಯಲ್, ಅಯ್ಯನಲ್, ತನ್ನಲ್ ಎಂಬ ರೂಪಗಳನ್ನೂ ನೋಡಿದರೆ, 'ಎ'ಕಾರದಂತೆಯೇ 'ಅಲ್' ಎಂಬುದೂ ಸಪ್ತಮಿಯ ಒಂದು ಹಳೆಯ ರೂಪವೆಂದು ಸಿದ್ಧವಾಗುತ್ತದೆ. ಈ 'ಅಲ್' ತೃತೀಯಾರ್ಥವನ್ನೂ ಕೊಡುವುದೆಂದು ಹಿಂದೆಯೇ

ತೋರಿಸಲಾಯಿತು. ತಮಿಳಿನಲ್ಲಿಯೂ ಅದೇ ಏಕೆ ಆ ಅರ್ಥವನ್ನು ಕೊಡಲಾರದು? ಆದರೆ ತಮಿಳಿನಲ್ಲಿರುವುದು 'ಅಲ್' ಎಂಬ ರೂಪವಲ್ಲ, 'ಅಲ್' ಎಂಬುದೆಂದು ಆಕ್ಷೇಪವೆತ್ತುವವರು 'ಅನ್' ಎಂಬ ದ್ವಿತೀಯಾ ವಿಭಕ್ತಿಯು 'ಅನ್' ಎಂದು ಹಳೆಯ ಕನ್ನಡದಲ್ಲಿ ಆಗಿರುವುದನ್ನು ಲಕ್ಷಿಸಬೇಕು. ಉದಾ: ಬಿಲ್ಲನ್=ಬಿಲ್ಲಾನ್, ''ತನತ್ತು ಬಿಲ್ಲಾನದನೆತ್ತಿ ಕೀಸುವಂ'' ಇತ್ಯಾದಿ ಪ್ರಯೋಗಗಳು ಪ್ರಸಿದ್ಧವಾಗಿವೆ. ಅಲ್ಲದೆ ಹವೀಕರ ಭಾಷೆಯಲ್ಲಿ ಅಕ್ಷರಗಳ ಸ್ವರೂಪವನ್ನು ಕಲಿಯುವಾಗ 'ಇಳಿಯಾಂ ತೆಗೆ'' (ಇಳಿಯನ್ನು ತೆಗೆ=ದೀರ್ಘವನ್ನು ಎಳೆ) ಎಂದು ಹೇಳುವ ಕ್ರಮವಿತ್ತು. ತಮಿಳಿನಲ್ಲಿ ಇಂದಿಗೂ 'ಇಲ್' ಎಂಬುದು ಸಪ್ತಮ್ಯರ್ಥವನ್ನು ಕೊಡುವುದೆಂದು ಕಾಲ್ಡ್‌ವೆಲ್ಲರು ಹೇಳುತ್ತಾರೆ. ಇಲ್ ಎಂಬುದು ಅಲ್ ಎಂಬುದರ ಇನ್ನೊಂದು ರೂಪವೆಂದು ಒಪ್ಪಲು ದ್ರಾವಿಡ ಭಾಷಾ ವಿಜ್ಞಾನಿಗಳಿಗೆ ಕಷ್ಟವಾಗಲಾರದು. ಆದುದರಿಂದ 'ಅಲ್' ಎಂಬುದು ದೀರ್ಘತ್ವವನ್ನು ಹೊಂದಿ ತಮಿಳಿನ 'ಅಲ್' ಎಂಬ ತೃತೀಯೆಯಾಯಿತೆಂದು ಹೇಳುವುದರಲ್ಲಿ ದೋಷವಿರದು. ಕನ್ನಡದಲ್ಲಿ ''ಕತ್ತಿಯಲ್ ಕಡಿದಂ'' ಎಂದು ಹೇಳುವ ಮಾತು ತಮಿಳಿನಲ್ಲಿ ''ಕತ್ತಿಯಾಲ್...'' ಎಂದಾಗುವುದು. ಮಲಯಾಳದಲ್ಲಿಯೂ ತೃತೀಯಾ ವಿಭಕ್ತಿಯು 'ಆಲ್' ಎಂದಿದೆಯೆಂದು ಕಾಲ್ಡ್‌ವೆಲ್ಲರು ಹೇಳುತ್ತಾರೆ. ತೆಲುಗಿನ ವಿಷಯವಾಗಿ ಅವರ ಮಾತನ್ನೇ ಉದ್ಧರಿಸುತ್ತೇನೆ : "In Telugu the most classical instrumental is identical with the inflexional locative" (p. 275) ಎಂದರೆ ತೆಲುಗಿನಲ್ಲಿ ಸಪ್ತಮಿಯೂ ತೃತೀಯೆಯೂ ಒಂದೇ ಎಂದು ಹೇಳಿದಂತಾಯಿತು. ಹಾಗಾದರೆ ಪ್ರಸಿದ್ಧವಾದ ಪಂಚದ್ರಾವಿಡ ಭಾಷೆಗಳಿಗೆ ಇದು ಸಾಮಾನ್ಯ ಧರ್ಮವೆನ್ನಬಹುದು. ಕನ್ನಡದ 'ಇಂ' ಎಂಬುದು ಪಂಚಮಿಯೆಂದು ಹೇಳಲೂ ತಮಿಳಿನಲ್ಲಿ ಆಧಾರವಿದೆಯೆಂದು ತೋರುತ್ತದೆ. ಕನ್ನಡದ 'ಇಂ'ನಿಜವಾಗಿ 'ಇಮ್' ಅಲ್ಲ; 'ಇನ್' ಎಂದೇ ಆಗಿದೆಯೆಂದು ಸ್ವರ ಸೇರುವಾಗ ಸಿದ್ಧವಾಗುತ್ತದೆ. ತಮಿಳಿನಲ್ಲಿಯೂ 'ಇನ್' ಎಂಬುದು ಪಂಚಮಿಯೆಂದು ಕಾಲ್ಡ್‌ವೆಲ್ಲರು ಹೇಳುತ್ತಾರೆ. ಅವರು ಕೊಡುವ ಉದಾಹರಣೆ ಇದು-ಮಲೆಯಿನ್ ವಿೞುಂ ಅರುವಿ'' (ಪುಟ. ೨೮೫). ಕನ್ನಡದಲ್ಲಿ ಇದು ''ಮಲೆಯಿಂ ಬೀೞ್ವ ಅರ್ವಿ (ಅಥವ ಅರ್ಬಿ)'' ಎಂದಾಗುವುದು. ಇದು ಶುದ್ಧವಾದ ಅಪಾದಾನಾರ್ಥವೆಂಬುದು ಸ್ಪಷ್ಟ; ಎಂದರೆ ಪಂಚಮಿ.

ತುಲನೆಯನ್ನು ಮಾಡುವಾಗ ತರತಮಭಾವವನ್ನು ಹೇಳುವುದೂ ಪಂಚಮಿಯ ಒಂದು ಧರ್ಮ. ಇದನ್ನು ಕೇಶಿರಾಜನ 'ಗೌರವಾರ್ಥ'ದ ಪಂಚಮಿಯ ವಿಚಾರದಲ್ಲಿ ಹಿಂದೆ ಸೂಚಿಸಲಾಗಿದೆ. ಕನ್ನಡದಲ್ಲಿ ಚತುರ್ಥಿಯೂ ಈ ಅರ್ಥವನ್ನು ಹೇಳುತ್ತದೆ. ಉದಾ:- 'ಇಂ' ಬರುವುದಕ್ಕೆ-''ನುಡಿಯಂ ಛಂದದೊಳೊಂದಿರೆ ತೊಡರ್ಚಲಱಿವಾತನಾತನಿಂದಂ ಜಾಣಂ'' (ಕವಿರಾಜಮಾರ್ಗ); ಚತುರ್ಥಿಗೆ -''ಕನ್ನಡ ಕವಿತೆಯೊಳಸಗಂಗಂನೂರ್ಮಡಿ'' (ಪೊನ್ನ). ಹೊಸಗನ್ನಡದಲ್ಲಿ 'ಇಂದ' ಅಥವಾ 'ಚತುರ್ಥಿ' ಪ್ರಯುಕ್ತವಾಗುವುದಲ್ಲದೆ, ಸ್ಪಷ್ಟತೆಗಾಗಿ ಚತುರ್ಥಿಯ ಮೇಲೆ 'ಇಂತ' ಎಂಬ ಅನುಸರ್ಗವೂ ಬರುವುದುಂಟು. ಉದಾ: ''ಅದಕ್ಕಿಂತ ಇದೇ ಮೇಲು''. ಈ 'ಇಂತ'ದ ಮೂಲವೆಲ್ಲಿ? ದೂರ ಹುಡುಕಬೇಕಾಗಿಲ್ಲ; 'ಇಂದ'ದ ರೂಪಾಂತರವೇ ಅದೆಂದು ತೋರುವುದು. ತ ದ ಗಳ ವಿಪರ್ಯವು ದ್ರಾವಿಡಧರ್ಮ. ತಾರತಮ್ಯವನ್ನು ತೃತೀಯೆಯ ಮೂಲಕ ಹೇಳುವುದು ನನ್ನ ತಿಳಿವಿನಲ್ಲಿ ಯಾವ ಭಾಷೆಯಲ್ಲಿಯೂ ಇಲ್ಲ; ಅದು ಪಂಚಮಿಯ ಸೊತ್ತು. ಆದುದರಿಂದ 'ಇಂದ' ಎಂಬುದು ಸ್ವಭಾವತಃ ಪಂಚಮಿಯೆಂಬುದಕ್ಕೆ ಇದೂ ಒಂದು ಆಧಾರವಲ್ಲವೆ?

ತೃತೀಯಾ ವಿಭಕ್ತಿ ರೂಪಗಳೆನ್ನಿಸಿಕೊಳ್ಳುವುವುಗಳಲ್ಲಿ ಎಕಾರವೊಂದು ಪಂಚಮಿಯಾಗುವುದಿಲ್ಲವೆಂದು ಕೇಶಿರಾಜಾದಿಗಳು ಹೇಳುವರಷ್ಟೆ. ಈಗ ಇದರ ಕಾರಣವು ಜಲಕ್ಕನೆ ಹೊಳೆಯುವುದು; ಎಕಾರವು 'ಇಂ' ಮೊದಲಾದುವುಗಳಂತೆ ಪಂಚಮೀ ವಿಭಕ್ತಿಯಲ್ಲದುದರಿಂದಲೇ ಅದು ಪಂಚಮ್ಯರ್ಥದಲ್ಲಿ ಪ್ರಯುಕ್ತವಾಗುವುದಿಲ್ಲ. ವಸ್ತುತಃ ಎಕಾರವು ಸಪ್ತಮಿಯಾದುದರಿಂದ ತೃತೀಯಾರ್ಥವನ್ನು ಕೊಡುವುದಕ್ಕೆ ಸಮರ್ಥವಾಗುತ್ತದೆ. (ಎ ಎಂಬುದು ನಪುಂಸಕಲಿಂಗದ ಏಕವಚನದಲ್ಲಿ ಮಾತ್ರವೇ ಪ್ರಯುಕ್ತವಾಗುತ್ತದೆ. ಆದುದರಿಂದ ಮೂಲದಲ್ಲಿಯೇ ಅದು ನಪುಂಸಕ ಸಪ್ತಮಿಯಾಗಿದ್ದಿರಲೂಬಹುದು. ಲಿಂಗ ಭೇದದಿಂದ ಸಪ್ತಮೀ ವಿಭಕ್ತಿ ಭೇದವು ತುಳುವಿನಲ್ಲಿಯೂ ಇರುವುದೆಂಬುದನ್ನು ಇಲ್ಲಿ ಗಮನಿಸಿದರೆ ಇದರಲ್ಲಿ ವೈಚಿತ್ರ್ಯವು ತೋರಲಾರದು. ಉಪಕರಣವು ಸಹಜವಾಗಿ ನಪುಂಸಕವಾಗಿರಬೇಕಾದುದರಿಂದ ತೃತೀಯಾರ್ಥವನ್ನು ಹೇಳುವುದಕ್ಕೆ ಇದು ತಕ್ಕುದಾಗಿದೆ). ಅಲ್ಲದೆ 'ನಡುಗನ್ನಡ'ದಲ್ಲಿ, 'ಇಂ' ಪ್ರತ್ಯಯವು ಬೆಳೆದು 'ಇಂದಲಿ' ಎಂದು ಬೆಳೆದುದಕ್ಕೂ ಕಾರಣವನ್ನು ಈಗ ಕಾಣಬಹುದು. ಪಂಚಮಿಯು ತೃತೀಯಾಸ್ಥಾನಕ್ಕೆ ಬರುತ್ತಿದ್ದಾಗ, ಸಪ್ತಮಿಯು ಮಾಡಿದ ಪ್ರತಿಕ್ರಿಯೆಯಿದು. ಆದರೆ ಪರಿಣಾಮವಾಗಿ, ತೃತೀಯಾ ಪಂಚಮಿಗಳೆರಡರಲ್ಲಿಯೂ 'ಇಂದ'ದೊಂದಿಗೆ 'ಅಲಿ' ಸೇರುವುದಾಯಿತು. ಇಂದಿನ ಕನ್ನಡದಲ್ಲಿ ಕೆಲವೆಡೆ ಲಕಾರಾಗಮವಾಗಲೂ ಇದೇ ಕಾರಣ. ಉದಾ:- ''ಧರಣಿ ಮಂಡಲ ಮಧ್ಯದೊಳಗೆ ಮರೆಯುತಿಹ ಕರ್ಣಾಟ ದೇಶದಿ'' ಎಂಬ ರೂಪವೂ ಸಪ್ತಮಿಗುಂಟಾಯಿತು.

ಹಾಗಾದರೆ ಹಳೆಯ ಗ್ರಂಥಗಳ ಕನ್ನಡದಲ್ಲಿಯೂ, ಇಂದಿನ ಗ್ರಂಥ ಭಾಷೆಯಲ್ಲಿಯೂ, ಸ್ವಲ್ಪ ಮಟ್ಟಿಗೆ ಇಂದಿನ ಸುಸಂಸ್ಕೃತರ ಆಡುನುಡಿಯಲ್ಲಿಯೂ, 'ಇಂ' ಮತ್ತು ತಜ್ಜನ್ಯ ರೂಪಗಳು ಕರಣಾದಿ ತೃತೀಯಾರ್ಥಗಳಲ್ಲಿ ಪ್ರಯುಕ್ತವಾಗಲೂ, ಕನ್ನಡ ವೈಯಾಕರಣರು ಅವುಗಳನ್ನು ತೃತೀಯಾ ಪ್ರತ್ಯಯಗಳೆಂದು ಹೇಳಲೂ ಕಾರಣವೇನು?

ಹೇತು ಎಂದರೆ ಕಾರಣ ಅಥವಾ ನಿಮಿತ್ತ. ಈ ಅರ್ಥದಲ್ಲಿ ಸಂಸ್ಕೃತದಲ್ಲಿ ಕೆಲವೆಡೆ ಪಂಚಮಿಯೂ ಕೆಲವೆಡೆ ತೃತೀಯೆಯೂ ಪ್ರಯುಕ್ತವಾಗುತ್ತವೆ. ಮೂಲತಃ ಆ ಅರ್ಥವು ಪಂಚಮಿಯದೇ ಆಗಿರಬೇಕು. ಏಕೆಂದರೆ ನಿಮಿತ್ತವು ಕಾರ್ಯದ ಉತ್ಪತ್ತಿಗೆ ಮೂಲ ಹೊರತು ಕರಣವಲ್ಲ. ಉತ್ಪತ್ತಿಯನ್ನು ಪಂಚಮಿಯೇ ಸ್ಫುಟಗೊಳಿಸುವುದು. ಉದಾ- ''ಆಕಾಶಾದ್ವಾಯುಃ ವಾಯೋರಗ್ನಿಃ'' ಇತ್ಯಾದಿ. ಆದರೆ ಕರಣವೂ ಒಂದು ಕಾರಣವೇ ಆದುದರಿಂದ, (ಅಸಾಧಾರಣಂ ಕಾರಣಂ ಕರಣಂ) ಪ್ರಾಮುಖ್ಯವನ್ನು ಕೊಡುವ ರೀತಿಯಿಂದ ವಿವಕ್ಷಾ ಭೇದದಿಂದ ಹೇತುವನ್ನು ತೃತೀಯೆಯೂ ಹೇಳಲು ಸಮರ್ಥವಾಗುತ್ತದೆ. ಆಗ ಪಂಚಮಿಯೂ ತೃತೀಯೆಯೂ ಸಮಾನಾರ್ಥಕವೆಂಬಂತೆ ತೋರಲು ತೊಡಗುತ್ತವೆ. ಕನ್ನಡದಲ್ಲಿ ಪಂಚಮೀ ವಿಭಕ್ತಿಯೂ ತೃತೀಯಾರ್ಥದಲ್ಲಿ ಸಂಕ್ರಾಂತವಾಗಲು ಇದೇ ಕಾರಣವೆಂದು ತೋರುತ್ತದೆ. ಕಾಲ್ಡ್‌ವೆಲ್ಲರು ಕೊಡುವ ತಮಿಳಿನ ಉದಾಹರಣೆಯೊಂದನ್ನು ನಾವಿಲ್ಲಿ ಪರಾಮರ್ಶಿಸಬಹುದು,-''ವಾಳಿನ್ ಆಯ ವಡು'' (=ಬಾಳಿಂದ ಆದ (ಗಾಯದ) ಕಲೆ. ಪುಟ. ೨೭೬) ಪಂಚಮೀ ಪ್ರತ್ಯಯವು ಹೇಗೆ ತೃತೀಯಾರ್ಥದಲ್ಲಿ ಪ್ರಯೋಗಿಸಲ್ಪಡುತ್ತದೆ ಎಂಬುದನ್ನು ತೋರಿಸುವುದಕ್ಕಾಗಿ ಇದನ್ನವರು ಉದಾಹರಿಸಿದ್ದಾರೆ. ಇಲ್ಲಿ ತಾತ್ಪರ್ಯಾರ್ಥ ಪ್ರಕಾರ ಗಾಯದ ಕಲೆಯೆಂಬ ಕ್ರಿಯಾಫಲಕ್ಕೆ ಬಾಳು ಕಾರಣವೇನೋ ನಿಜ. ಆದರೆ ವಾಕ್ಯಕ್ರಮದಲ್ಲಿ ಎಂದರೆ ವ್ಯಾಕರಣ ದೃಷ್ಟಿಯಲ್ಲಿ ಬಾಳು ಎಂಬ ಕಾರಕವು ಆದ

ಎಂಬ ಕ್ರಿಯಾವಾಚಕದಲ್ಲಿಯೇ ಅನ್ವಯಿಸುವುದಾಗಿದೆ. 'ಆದ' ಎಂಬ ಕ್ರಿಯೆಗೆ ಬಾಳು ಉತ್ಪತ್ತಿಸ್ಥಾನ ಅಥವಾ ನಿಮಿತ್ತಮಾತ್ರವೆಂದೇ ಇಲ್ಲಿ ವಿವಕ್ಷೆ ಎಂಬುದು ಸ್ಪಷ್ಟ. 'ಆಗು' ಎಂಬುದಕ್ಕೆ 'ಉಂಟಾಗು' ಎಂಬುದೇ ಅರ್ಥ. ಹಾಗಾದರೆ ಇದನ್ನು ಉತ್ಪತ್ತಿ ಎಂಬ ಅರ್ಥವಿಶೇಷ ಬೋಧಕವಾದ ಅಥವಾ ನಿಮಿತ್ತಾರ್ಥಕವಾದ ಪಂಚಮಿ ಎಂದು ಹೇಳುವುದೇ ಸಮಂಜಸ; ಹೊರತು, ತೃತೀಯಾರ್ಥವನ್ನು ಕೊಡುವ ಪಂಚಮಿಯೆಂದು ಹೇಳಲಾಗುವುದಿಲ್ಲ. ಆದರೆ ಹೇತು ವಿವಕ್ಷಿತವಾದಲ್ಲಿ ಹೇಗೆ ಪಂಚಮಿಯು ತೃತೀಯಾ ಭ್ರಾಂತಿಯನ್ನುಂಟು ಮಾಡುತ್ತದೆಂಬುದಕ್ಕೆ ಇದು ಉದಾಹರಣವಾಗಬಹುದು. ಇದರಿಂದ ಪಂಚಮಿಯು ತೃತೀಯಾಸ್ಥಾನವನ್ನು ಆಕ್ರಮಿಸಿಕೊಳ್ಳಲಿಕ್ಕೆ ಹೇತ್ವರ್ಥವೇ ಕಾರಣವೆನ್ನಬಹುದು. ಹೀಗೆ ಗ್ರೀಕ್, ಲಾಟಿನ್ ಮೊದಲಾದ ಹಲವು ಭಾಷೆಗಳಲ್ಲಿ ತೃತೀಯಾ ಪಂಚಮಿಗಳು ಬೆರಸಿಹೋಗಿ, ಕೊನೆಗೆ ತೃತೀಯಾ ವಿಭಕ್ತಿಯೇ ನಷ್ಟವಾಗಿ ಪಂಚಮಿ ಆ ಸ್ಥಳವನ್ನು ಆಕ್ರಮಿಸಿಕೊಂಡಿತೆಂದು ಕಾಲ್ಡ್‌ವೆಲ್ಲರು ಹೇಳುತ್ತಾರೆ (ಪುಟ ೨೭೬). ಆದರೆ ಬಹು ಭಾಷಾಭಿಜ್ಞರಾದ ಅವರು ಯಾವ ಭಾಷೆಯಲ್ಲಾದರೂ ತೃತೀಯೆ ಪಂಚಮಿಯ ಸ್ಥಾನವನ್ನು ಆಕ್ರಮಿಸಿದುದನ್ನು ಹೇಳದಿರುವುದು ಮನನೀಯವಾಗಿದೆ. ಇದರಿಂದ ಕನ್ನಡದಲ್ಲಿಯೂ ಆ ಭಾಷೆಗಳಂತೆ ಪಂಚಮೀ ಪ್ರತ್ಯಯವು ಮೆಲ್ಲ ಮೆಲ್ಲನೆ ತೃತೀಯಾಸ್ಥಾನವನ್ನು ಆಕ್ರಮಿಸುತ್ತ ಬಂದು ಕೊನೆಗೆ ತೃತೀಯೆಯೆಂದೇ ಭಾವಿಸಲ್ಪಟ್ಟಿತೆಂದು ಊಹಿಸುವುದು ನ್ಯಾಯವಾಗದಿರದು. ಏಕೆಂದರೆ ಮನಃಪ್ರವೃತ್ತಿಕ್ರಮವು ಮನುಷ್ಯರಿಗೆಲ್ಲ ಹೆಚ್ಚು ಕಡಮೆ ಸಮಾನ.

'ಇಂ' ಎಂಬುದನ್ನು ತೃತೀಯೆಯೆಂದು ಕನ್ನಡ ವೈಯಾಕರಣರು ಭಾವಿಸಲು ಇನ್ನೂ ಒಂದು ಕಾರಣವಿರಬಹುದು. ಕರ್ಮಣೀಪ್ರಯೋಗವು ಕನ್ನಡಕ್ಕೆ ಸಹಜವಲ್ಲದಿದ್ದರೂ ಸಂಸ್ಕೃತದ ಆ ಪ್ರಯೋಗದ ವಾಕ್ಯಗಳನ್ನು ಕನ್ನಡಕ್ಕೆ ಇದ್ದಂತೆ ತರುವಾಗ 'ಇಂ' ಎಂಬುದನ್ನೇ ಪ್ರಯೋಗಿಸಬೇಕಾಯಿತು. ಕರ್ಮಣಿಪ್ರಯೋಗವೆಂದರೆ ಕರ್ತೃವಿಗೆ ಅಪ್ರಾಧಾನ್ಯವನ್ನುಂಟು ಮಾಡುವುದು; ಉಪಕರಣದ ಸ್ಥಾನವನ್ನು ಕೊಡುವುದು. ಕನ್ನಡದಲ್ಲಿ ಕರ್ಮಣಿಪ್ರಯೋಗವು ಕ್ರಮಪ್ರಕಾರ ಇಲ್ಲದಿದ್ದರೂ ಕರ್ತೃವಿಗೆ ಅಪ್ರಾಧಾನ್ಯವನ್ನುಂಟುಮಾಡುವ ವಾಕ್ಯರೀತಿಗಳಿವೆ. ಉದಾ: ''ಈ ಕೆಲಸವನ್ನು ನಾನು ಮಾಡಿದೆನು'' ಎಂಬುದನ್ನೇ ನಿರಹಂಕಾರತೆಯಿಂದ ಹೇಳುವಾಗ, ಎಂದರೆ ನಿಮಿತ್ತ ಮಾತ್ರತ್ವವನ್ನು ಆರೋಪಿಸುವಾಗ, ''ಈ ಕೆಲಸ ನನ್ನಿಂದಾಯಿತು'' ಎಂದಾಗುತ್ತದೆ. ನಿಮಿತ್ತಾರ್ಥದಲ್ಲಿ ಕನ್ನಡದಲ್ಲಿ ನಿರಪವಾದವಾಗಿ 'ಇಂ' ಮತ್ತು ತಜ್ಜನ್ಯರೂಪಗಳೇ ಬರುತ್ತವೆ. ಕರ್ತೃವಿಗೆ ಕರ್ಮಣಿ ಪ್ರಯೋಗದಲ್ಲಿಯೂ 'ನಿಮಿತ್ತಾರೋಪಣ' ಪ್ರಯೋಗದಲ್ಲಿಯೂ ಅಪ್ರಾಧಾನ್ಯವು ಬರುವುದರಿಂದ, ಮೊದಲು ಭಾಷೆಯಲ್ಲಿ ಅಭ್ಯಸ್ತವಾದ ಪ್ರಯೋಗದಲ್ಲಿದ್ದ 'ಇಂ' ಪ್ರತ್ಯಯವು ಕರ್ಮಣಿ ಪ್ರಯೋಗದಲ್ಲಿ ಸಹಜವಾಗಿ ಸೇರಿಕೊಂಡಿರಬೇಕು. ಪ್ರೇರ್ಯ ಕರ್ತೃವೂ ಅಪ್ರಾಧಾನ್ಯವನ್ನು ಪಡೆಯುವುದರಿಂದ 'ಇಂ' ಪ್ರತ್ಯಯವೇ ಅದಕ್ಕೂ ಬರುವುದು. ಹೀಗೆ ಸಂಸ್ಕೃತ ಭಾಷಾಮರ್ಯಾದೆಯಂತೆ ತೃತೀಯೇ ಬರುವ ಎರಡು ಅಥವಾ ಮೂರು ಸ್ಥಾನಗಳಲ್ಲಿ ಕನ್ನಡದಲ್ಲಿ 'ಇಂ' ಪ್ರತ್ಯಯವು ಬರುತ್ತಿದ್ದುದರಿಂದ ಅದನ್ನು ತೃತೀಯೆಯೆಂದೇ ಸಂಸ್ಕೃತಪಂಡಿತರಾದ ಕನ್ನಡ ವೈಯಾಕರಣರು ಭಾವಿಸಿದರೆ ಆಶ್ಚರ್ಯವಿಲ್ಲ. ಕಾರಣವನ್ನು ಹೇಳುವುದಕ್ಕೆ ಕನ್ನಡದಲ್ಲಿ 'ಇಂ' ಪ್ರತ್ಯಯವೇ ಸಮರ್ಥವಾದುದೆಂಬುದನ್ನೂ, ಕರಣವೆಂಬುದು ಕಾರಣದೊಳಗೇ (ಅಸಾಧಾರಣಂ ಕಾರಣಂ

ಕರಣಂ) ಸೇರಬಹುದೆಂಬುದನ್ನೂ ತಿಳಿದುಕೊಂಡರೆ ಕನ್ನಡದ, ಸಹಜವಲ್ಲದ, ಕರ್ಮಣಿ'' ಪ್ರಯೋಗದಲ್ಲಿ ಪಂಚಮಿಯು ಸೇರುವುದು ಅಸಂಭವವಲ್ಲವೆಂದು ಹೇಳಬಹುದು.

ಒಂದುವೇಳೆ ಕೃತ್ರಿಮವಾದ ಆ ಕರ್ಮಣಿ ಪ್ರಯೋಗದ ಬಗೆ ಹೇಗೂ ಇರಲಿ, 'ಇಂ' ಇತ್ಯಾದಿಗಳು ಪಂಚಮೀ ಪ್ರತ್ಯಯಗಳೇ ಹೊರತು ತೃತೀಯಾ ಪ್ರತ್ಯಯಗಳಲ್ಲವೆಂದು ಸಾಧಾರವಾಗಿ ಪ್ರತಿಪಾದಿಸಿದಂತಾಯಿತೆಂದು ನಂಬುತ್ತೇನೆ. ಈ ವಿಚಾರ ಸರಣಿಯು ಗ್ರಾಹ್ಯವಾದರೆ, ಕನ್ನಡದಲ್ಲಿ ಸಹಜವಾಗಿ ಪಂಚಮೀ ವಿಭಕ್ತಿ ಇದೆಯೆಂದೂ ತನ್ನದೇ ಆದ ಪ್ರತ್ಯಯವಿಲ್ಲದೆ ಒಮ್ಮೆ ಸಪ್ತಮಿಯನ್ನು ಇನ್ನೊಮ್ಮೆ ಪಂಚಮಿಯನ್ನು ಆಶ್ರಯಿಸುವುದು ತೃತೀಯಾರ್ಥವೆಂದೂ, ದ್ರಾವಿಡ ಭಾಷಾಮರ್ಯಾದೆಗೆ ಇದು ಅವಿರುದ್ಧ ಮಾತ್ರವಲ್ಲ, ಸಹಜವೆಂದೂ ಸಿದ್ಧವಾದಂತಾಗುವುದಿಲ್ಲವೇ?

(ಸೂ. ಇಂಗ್ಲಿಷಿನಲ್ಲಿ ತೃತೀಯಾರ್ಥವು By, With ಎಂಬ ಶಬ್ದಗಳಿಂದಲೂ ಪಂಚಮ್ಯರ್ಥವು From ಎಂಬ ಶಬ್ದದಿಂದಲೂ ವ್ಯಕ್ತವಾಗುತ್ತದೆ.)

*ಪ್ರಬುದ್ಧ ಕರ್ಣಾಟಕ, ೨೬-೨, ೧೯೪೪*
*ವಿಚಾರ ಪ್ರಪಂಚ, ೧೯೯೨, ಪು. ೧೬೩-೭೮*

# ೨೭. ಕನ್ನಡದ ಉಪಭಾಷೆಯೊಂದರಲ್ಲಿ ತಾಲವ್ಯೀಕರಣ ಮತ್ತು ಕಂಠ್ಯೀಕರಣ

● ಎಂ. ಚಿದಾನಂದಮೂರ್ತಿ

[೧]ಗ್ರಂಥಸ್ಥ ದ್ರಾವಿಡ ಭಾಷೆಗಳಲ್ಲಿ ತಮಿಳು, ಮಲಯಾಳಂ ಮತ್ತು ತೆಲುಗುಗಳು ತಾಲವ್ಯೀಕರಣ (palatalizing) ಭಾಷೆಗಳು,[೨] ಕನ್ನಡ ಅತಾಲವ್ಯೀಕರಣದ ಭಾಷೆಯೆಂಬುದು ಎಲ್ಲರಿಗೂ ತಿಳಿದ ವಿಷಯವೇ. ಆ ಮೂರು ಭಾಷೆಗಳಲ್ಲಿ ತಾಲವ್ಯೀಕರಣವು ನಿರ್ದಿಷ್ಟ ಪರಿಸರಗಳಲ್ಲಿ ನಡೆಯುತ್ತದೆಯೆಂಬುದನ್ನು ಇಲ್ಲಿ ಜ್ಞಾಪಿಸಿಕೊಳ್ಳುವುದು ಅಗತ್ಯವಾಗಿದೆ. ಪೂರ್ವಸ್ವರಗಳಾದ ಇ, ಈ, ಎ, ಏ, ಗಳ ಹಿಂದಿನ [ಕ್ -] ಸ್ವನವು ತೆಲುಗಿನಲ್ಲಿ ನಿಯತವಾಗಿ [ಚ್ -] ಆಗುತ್ತದೆ. ತಮಿಳು ಮಲಯಾಳಗಳಲ್ಲಿ ಅದೇ ಪೂರ್ವಸ್ವರಗಳ ಮುಂದೆ ಮೂರ್ಧನ್ಯವ್ಯಂಜನವಿರದಿದ್ದರೆ, ಪದಾದಿಯ [ಕ್ -] ಸ್ವನವು [ಚ್ -] ಆಗಿ ಪರಿವರ್ತಿತವಾಗುತ್ತದೆಂದು ಸ್ಥೂಲವಾಗಿ ಹೇಳಬಹುದು. ಕನ್ನಡದಲ್ಲಿ ಸಾಮಾನ್ಯವಾಗಿ ಯಾವುದೇ ಪರಿಸರದಲ್ಲೂ ತಾಲವ್ಯೀಕರಣವಾಗುವುದಿಲ್ಲ; ಮತ್ತು ಚೆದರು (<ಕೆದರು), ಚೆನ್ (<ಕೆನ್) ಇಂತಹ ರೂಪಗಳು ಬೇರೆ ಭಾಷೆಯೊಂದರಿಂದ ಬಂದಿವೆಯೆಂದು ಭಾವಿಸುವುದೇ ಉಚಿತ.

ಆದರೆ, ಕನ್ನಡದ ಉಪಭಾಷೆಯೊಂದರಲ್ಲಿ ತಾಲವ್ಯೀಕರಣವಾಗುವುದು ಬಹು ಅಪೂರ್ವ ಸಂಗತಿಯಾಗಿದೆ ಮತ್ತು ತಾಲವ್ಯೀಕರಣದ ಜೊತೆ, ಅದಕ್ಕೆ ಪ್ರತಿಸ್ಪರ್ಧಿಯೆಂಬಂತೆ ಕಂಠ್ಯೀಕರಣವು (velarization) ನಡೆದಿರುವುದು ಇನ್ನೂ ಹೆಚ್ಚಿನ ಸ್ವಾರಸ್ಯದ ಸಂಗತಿಯಾಗಿದೆ.

ಈ ಉಪಭಾಷೆಯ ಪ್ರಾದೇಶಿಕ ವ್ಯಾಪ್ತಿಯನ್ನು ಇನ್ನೂ ನಿರ್ಧರಿಸಬೇಕಾಗಿದೆ. ಸದ್ಯಕ್ಕೆ ಇದು ಹಾಸನ ಜಿಲ್ಲೆಯ ಕೆಲವು ತಾಲ್ಲೂಕುಗಳು ಮತ್ತು ಅವುಗಳ ಸುತ್ತ ಮುತ್ತ ಇರುವ ತಾಲೂಕುಗಳಲ್ಲಿ ಗೋಚರವಾಗಿದೆ. ಹೊಳೆ ನರಸೀಪುರ, ಚನ್ನರಾಯಪಟ್ಟಣ, ಅರಕಲಗೂಡು, ಸಕಲೇಶಪುರ, ಮೂಡಿಗೆರೆ, ಕೃಷ್ಣರಾಜಪೇಟೆ ತಾಲೂಕುಗಳಲ್ಲಿ, ಬಹುಮಟ್ಟಿಗೆ ಹರಿಜನರ ಭಾಷೆಯಲ್ಲಿ ಈ ತಾಲವ್ಯೀಕರಣ ಕಂಡು ಬಂದಿದೆಯಾದ್ದರಿಂದ ಈ ಸಾಮಾಜಿಕ-ಪ್ರಾದೇಶಿಕ (social-cum-regional) ಉಪಭಾಷೆಯ ಪ್ರದೇಶ ಅದೇ ಎಂದು ಸದ್ಯಕ್ಕೆ ಇಟ್ಟುಕೊಳ್ಳಬಹುದು. ಒಂದು ಕಾಲಕ್ಕೆ ಸಮಾಜದ ಮೇಲು ವರ್ಗದ ಜಾತಿಗಳೂ ಅದೇ

---

೧ ಈ ಸಂಪ್ರಬಂಧದ ಮೂಲರೂಪ "A palatalizing and velarizing dialect of Kannada" ಎಂಬ ನನ್ನ ಸಂಪ್ರಬಂಧ. (*International Journal of Dravidian Linguistics,* Vol I. No. 2) ಈಚೆಗೆ ಎಂದರೆ ೧೯-೨-೭೮ ರಂದು ಸಕಲೇಶಪುರ ಸಮೀಪದಲ್ಲಿ ನಡೆಸಿದ ಸಮೀಕ್ಷೆಯಲ್ಲಿ ಹೊಸ ಅಂಶಗಳು ಗೋಚರವಾಗಿ ಅವು ಇಲ್ಲಿ ಸೇರ್ಪಡೆಯಾಗಿವೆ ಎಂಬುದನ್ನು ಇಲ್ಲಿ ಹೇಳುವುದು ಅಗತ್ಯವಾಗಿದೆ. ಆದ್ದರಿಂದ ಈ ಸಂಪ್ರಬಂಧವು ಆ ಹಿಂದಿನ ಬರಹದ ಮುಂದುವರಿದ ರೂಪವಾಗಿದೆ. ಹೆಚ್ಚಿನ ಅಧ್ಯಯನಗಳಿಂದ ಈ ಸಂಪ್ರಬಂಧವನ್ನು ಇನ್ನೂ ಉತ್ತಮಗೊಳಿಸಲು ಅವಕಾಶವಿದೆ. (ಸಂಪ್ರಬಂಧ=Research Paper).

೨ ಕಂಠ್ಯಸ್ವನವೊಂದು (ಉದಾ. ಕ್) ತಾಲವ್ಯಸ್ವನವಾಗುವುದೇ (ಉದಾ. ಚ್) ತಾಲವ್ಯೀಕರಣ ಎನ್ನಿಸಿಕೊಳ್ಳುತ್ತದೆ.

ಉಪಭಾಷೆಯನ್ನು ಆಡುತ್ತಿದ್ದುವೆಂದೂ, ಆಧುನೀಕರಣದ ಫಲವಾಗಿ ಆ ಜಾತಿಗಳಲ್ಲಿ ಅದು ಮಾಯವಾಗುತ್ತಾ ಬಂದು ಸದ್ಯಕ್ಕೆ ಹರಿಜನರಲ್ಲಿ ಉಳಿದಿದೆಯೆಂದೂ ಅಲ್ಲೂ ಕ್ರಮೇಣ ಮಾಯವಾಗುತ್ತಿದೆಯೆಂದೂ ಹೇಳಲು ಪ್ರಬಲ ಕಾರಣಗಳಿವೆ. (ವಿವರಗಳಿಗೆ ಮುಂದೆ ನೋಡಿ) ಅನುಕೂಲಕ್ಕಾಗಿ ಈ ಉಪಭಾಷೆಯನ್ನು 'ಹೊಳೆನರಸೀಪುರದ ಉಪಭಾಷೆ'ಯೆಂದು ಕರೆಯೋಣ.[೧]

ಇಲ್ಲಿ ಪೂರ್ವಸ್ವರಗಳಾದ-ಇ,-ಈ,-ಎ,-ಏಗಳ ಹಿಂದಿನ [ಕ್-], [ಗ್-]ಗಳು ನಿಯತವಾಗಿ [ಚ್-] ಮತ್ತು [ಜ್-] ಆಗುತ್ತವೆ. ಉದಾಹರಣೆಗಳು;

| | |
|---|---|
| ಕಿವಿ | ಚಿವಿ |
| ಕಿಟಕಿ | ಚಿಟಕಿ |
| ಕೀವು | ಚೀವು |
| ಕೆರೆ | ಚೆರೆ |
| ಕೆಳಗಿನ | ಚೆಳಗಿನ |
| ಕೆಂಪು | ಚೆಂಪು |
| ಕೇಳು | ಚೇಳು |
| ಕೆನ್ನೆ | ಚೆನ್ನೆ |
| ಕೆಂಡ | ಚೆಂಡ |
| ಗಿಡ | ಜಿಡ |
| ಗಿಣಿ | ಜಿಣಿ |
| ಗೀಟು | ಜೀಟು |
| ಗೆರೆ | ಜೆರೆ |
| ಗೇಣು | ಜೇಣು |
| ಗೆಯ್ಮಿ | ಜೆಯ್ಮಿ |

ಹೊಳೆನರಸೀಪುರ ತಾಲ್ಲೂಕಿನಿಂದ ಸಂಗ್ರಹಿಸಿದ ಕೆಲವು ಉದಾಹರಣೆಗಳು ಮೇಲಿನವು. ಇಲ್ಲಿ ಪದಾದಿಯಲ್ಲಿ ಮಾತ್ರ ಕ್->ಚ್-ಆಗುತ್ತದೆ, ಗ್->ಜ್-ಆಗುತ್ತದೆ. ಪದಾದಿಯಲ್ಲದ ಕಡೆ ತಾಲವ್ಯೀಕರಣ ಆಗುವುದಿಲ್ಲ. ಕಿಟಕಿ>ಚಿಟಕಿ ಆಗುತ್ತದೆ, *ಚಿಟಚಿ ಆಗುವುದಿಲ್ಲ; 'ರಾಗಿ' ಎಂಬುದು *'ರಾಜಿ' ಎಂದಾಗುವುದಿಲ್ಲ. ಪೂರ್ವ ಸ್ವರಗಳ ಮುಂದೆ ಮೂರ್ಧನ್ಯ ವ್ಯಂಜನವಿದ್ದರೂ ತಾಲವ್ಯೀಕರಣ ನಡೆಯುತ್ತದೆಯೆಂಬುದು ಗಮನಾರ್ಹ. (ಉದಾ: ಕೆಂಡ>ಚೆಂಡ, ಗಿಣಿ>ಜಿಣಿ).

---

೧ ಹೊಳೆನರಸೀಪುರ ಪಕ್ಕದ ಬಾಗಿವಾಳು ಗ್ರಾಮದ ಸಮೀಪದ ಬೆಟ್ಟದ ಸಾತೇನಹಳ್ಳಿ ಎಂಬ ಹಳ್ಳಿಯಲ್ಲಿ ಏಳು ವರ್ಷಗಳ ಹಿಂದೆ ಸಾಮಗ್ರಿ ಸಂಗ್ರಹಣೆ ಮಾಡಿದಾಗ ನನ್ನ ಜೊತೆಯಿದ್ದು ಸಹಕರಿಸಿದ ಶ್ರೀ ಬಿ. ಎಸ್. ಪರ್ವತಯ್ಯ, ಎಂ. ಎ, ಅವರಿಗೆ ನಾನು ಕೃತಜ್ಞನಾಗಿದ್ದೇನೆ.

ಪೂರ್ವೇತರ ಸ್ವರಗಳ ಹಿಂದಿನ [ಕ್-], [ಗ್-]ಗಳಲ್ಲಿ ಏನೂ ವ್ಯತ್ಯಾಸವಾಗುವುದಿಲ್ಲ. ಉದಾ: ಕಾಲು, ಕಣ್ಣು, ಕೋಲು, ಕುಡ್ಲು, ಗರಿ, ಗೂಡು, ಕುರಿ, ಗೋಡೆ ಇತ್ಯಾದಿ.

ತಾಲವ್ಯೀಕರಣ ನಡೆದಿರುವಲ್ಲಿ ಅಪವಾದಗಳೇ ಇಲ್ಲವೆನ್ನಬಹುದು. ಆದರೂ ಒಂದೆರಡು ಉದಾಹರಣೆಗಳು ನಮ್ಮ ಗಮನವನ್ನು ಸೆಳೆಯುತ್ತವೆ. 'ಕೆಯ್' (=hand) ಪದ ನ್ಯಾಯವಾಗಿ *ಚೆಯ್ ಆಗಬೇಕಿತ್ತು. ಆದರೆ, ಅದನ್ನು 'ಕಯ್ಯಿ' ಎಂದು ಉಚ್ಚರಿಸುವುದರಿಂದ, ಆ ಪದ ತಾಲವ್ಯೀಕರಣಕ್ಕೆ ಒಳಗಾಗಲಿಲ್ಲ. 'ಕಪಾಲ'ವು 'ಚಪಾಲ' ಎಂದಾಗುವುದು ನಿರೀಕ್ಷಿತವಲ್ಲ. 'ಕಪಾಲ'ವನ್ನು, ಅದೇ ಅರ್ಥದ 'ಕೆನ್ನೆ'ಯ ಸಾದೃಶ್ಯದಿಂದ 'ಕೆಪಾಲ' ಎಂದು ಹೇಳುತ್ತಿದ್ದ ಪರಿಪಾಠಿಯಿದ್ದುದರಿಂದಲೋ ಏನೋ ಅದು 'ಚೆಪಾಲ'/'ಚಪಾಲ' ಎಂದಾಯಿತೆಂದು ತೋರುತ್ತದೆ.

ಸಕಲೇಶಪುರ ಸುತ್ತಮುತ್ತಣ ಹರಿಜನರ ಕನ್ನಡದಲ್ಲೂ ತಾಲವ್ಯೀಕರಣ ನಡೆದಿದೆ.[೧] ಸಕಲೇಶಪುರಕ್ಕೇ ಆರೇಳು ಮೈಲಿ ದೂರದ ನಾರ್ವೆ ಗ್ರಾಮದ ಹತ್ತಿರದ ಹರಿಜನರಲ್ಲಿ ಪದಾದಿಯಲ್ಲಿ ಮಾತ್ರ ತಾಲವ್ಯೀಕರಣವಾಗಿದೆ; ಆದರೆ ಆದ್ಯೇತರ ಅಥವಾ ಪದಾದಿಯಲ್ಲದ ಪರಿಸರದಲ್ಲಿ ತಾಲವ್ಯೀಕರಣ ಕಾಣಿಸಿಕೊಂಡಿಲ್ಲ. ಉದಾ:ಗೆಜ್ಜೆ>ಜೆಜ್ಜೆ; ಕಿಟಕಿ>ಚಿಟಕಿ; ಕೆನೆ>ಚೆನೆ; ಕೆಂಡು>ಚೆಂಡ; ಕೃಷ್ಣ>ಕಿಷ್ಣ>ಚಿಷ್ಣ; ಕೆಮ್ಲು>ಚೆಮ್ಲು; ಕಿಚಡಿ>ಚಿಚ್ಚಡಿ; ಕೇರು>ಚೇರು; ಕೀಳು>ಚೀಳು; ಕೆಸರು>ಚೆಸರು; ಕೆಂಪನ್ನ>ಚೆಂಪನ್ನ; ಗೀಟು>ಚೀಟು; ಗೆದ್ದಲು>ಜೆದ್ಲೆ/ಜೆಜ್ಲೆ; ಗಿಡ್ಡಮ್ಮ> ಜಿಡ್ಡಮ್ಮ; ಗಿಡಗ>ಜಿಡಗ; ಗೇಣು>ಜೇಣು; ಗೆರಸಿ>ಜೆರಸಿ: ಹೀಗೆ ಉದಾಹರಣೆಗಳನ್ನು ಬೆಳೆಸಬಹುದು. ಹೊಳೆನರಸೀಪುರ ತಾಲ್ಲೂಕಿನಲ್ಲಿಯಂತೆ ಇಲ್ಲಿಯೂ ಆದ್ಯೇತರ ಜಾಗದಲ್ಲಿ ತಾಲವ್ಯೀಕರಣ ಇಲ್ಲ (ಉದಾ: ಅಡಕೆ, ಅಡುಗೆ, ಅಕ್ಕಿ).

ಆದರೆ, ಸಕಲೇಶಪುರ ಪಟ್ಟಣದ ಸುತ್ತಮುತ್ತ, ಒಂದು ಒಂದೂವರೆ ಮೈಲು ದೂರದ ಹಳ್ಳಿಗಳ ಹರಿಜನರಲ್ಲಿ ಮೇಲಿನಂತೆ ತಾಲವ್ಯೀಕರಣ ನಡೆದಿದೆ; ಜೊತೆಗೆ ಪದಾದಿಯಲ್ಲದ [-ಕ್-], [-ಗ್-]ಗಳೂ ಪೂರ್ವಸ್ವರಗಳ ಹಿಂದೆ ತಾಲವ್ಯೀಕರಣವನ್ನು ಪಡೆದಿವೆ; ಎಂದರೆ ಅನುಕ್ರಮವಾಗಿ ಅವು [-ಚ್-], [-ಜ್-] ಆಗಿವೆ.[೨]

| | | | |
|---|---|---|---|
| ಉದಾ:- | ತಂಗಿ | > | ತಂಜಿ |
| | ಬೆಂಕಿ | > | ಬೆಂಚಿ |
| | ಹೊಗೆ | > | ಹೊಜೆ |
| | ಕುಕ್ಕೆ | > | ಕುಚ್ಚೆ |
| | ಅಕ್ಕೆ | > | ಅಚ್ಚೆ |
| | ಅಂಗಿ | > | ಅಂಜಿ |

೧. ಸಕಲೇಶಪುರ ಪ್ರದೇಶದಿಂದ ಸಾಮಗ್ರಿ ಸಂಗ್ರಹಣ ಮಾಡಿದಾಗ ಅಲ್ಲಿಗೆ ಸಮೀಪದ ನಾರ್ವೆ ಗ್ರಾಮದ ಶ್ರೀ ರಾಜಶೇಖರ ನಾರ್ವೆ, ಎಂ. ಎ., ಅವರಿಂದ ದೊರೆತ ಸಹಕಾರವನ್ನು ಸಂತೋಷದಿಂದ ಸ್ಮರಿಸುತ್ತೇನೆ ಮತ್ತು ಸಂಗ್ರಹ ಮಾಡುವಾಗ ಜೊತೆಗಿದ್ದ ಎಂ. ಎ. ಕನ್ನಡ ವಿದ್ಯಾರ್ಥಿಗಳಿಗೂ, ಸಹೋದ್ಯೋಗಿ ಶ್ರೀ ಕೆ. ಪಿ. ಭಟ್, ಎಂ. ಎ. ಅವರಿಗೂ ನಾನು ಕೃತಜ್ಞನಾಗಿದ್ದೇನೆ.

೨. ಈ ಸಾಮಗ್ರಿ ಸಂಗ್ರಹಣದಲ್ಲಿ ನನಗೆ ಶ್ರೀ ಪಿ. ನಿಂಗಪ್ಪ, ಎಂ. ಎ. ಅವರಿಂದ ಸಹಾಯ ದೊರೆತಿದೆ.

| | | |
|---|---|---|
| ಅಡಿಕೆ | > | ಅಡಿಚೆ |
| ರಾಗಿ | > | ರಾಜಿ |
| ಮಡಕೆ | > | ಮಚ್ಚೆ |
| ಹುಡುಗಿ | > | ಹುಡ್ಜಿ |
| ಮಕ್ಕಿಗದ್ದೆ | > | ಮಚ್ಚಿಗದ್ದೆ |
| ಕಿಟಕಿ(ಗೆ) | > | ಚಿಟಗೆ/ಜಿಟಜೆ |
| ಕೋಗಿಲೆ | > | ಕೋಜಿಲಿ |
| ಚಿಕ್ಕಿ | > | ಚಿಚ್ಚಿ |
| ಕಾಗೆ | > | ಕಾಜೆ |
| ಕುಕ್ಕೆ | > | ಕುಚ್ಚೆ |
| ಹಕ್ಕಿ | > | ಹಚ್ಚಿ |

ಈ ಉಪಭಾಷೆಯಲ್ಲಿ ದ್ವಿತ್ವ [-ಕ್ಕ್-] ಕೂಡ[-ಚ್ಚ್-] ಆಗುತ್ತದೆ. 'ಕೇಜಿ' (=kg.) ಯಂತಹ ಇಂಗ್ಲಿಷ್ ಸ್ವೀಕರಣವೂ 'ಚೇಜಿ' ಆಗಿದೆ. ಗಿರಿಜ, ಗೀತಾ ಎಂಬ ಹೆಸರುಗಳು ಜಿರಿಜ, ಜೀತಾ ಆಗುತ್ತವೆ; ಕಿತ್ತೂರು ಎಂಬ ಸ್ಥಳನಾಮ ಚಿತ್ತೂರು ಆಗುತ್ತದೆ.

ನಗು> ನಜಿ, ಹೋಗು> ಹೋಜಿ ಎಂಬ ವ್ಯತ್ಯಾಸಗಳು ಮೇಲಿನ ತಾಲವ್ಯೀಕರಣದ ನಿಯಮಕ್ಕೆ ಹೊಂದಿಕೊಳ್ಳುವಂತೆ ಕಾಣಿಸದೆ ಅಪವಾದಗಳಾಗಿ ತೋರುತ್ತವೆ. ಇಲ್ಲೂ ಸಮರ್ಪಕ ವಿವರಣೆ ಅಸಾಧ್ಯವಲ್ಲವೆಂದು ಹೇಳಬಹುದು. 'ನಗು' ಎಂಬರ್ಥದಲ್ಲಿ 'ನಗೆಯಾಡು' ಎಂಬ ಪ್ರಯೋಗ ಉಂಟು ತಾನೆ! 'ನಗೆಯಾಡು' ಎಂಬುದು 'ನಜೆಯಾಡು' ಎಂದಾಗಿದೆ ಈ ಉಪಭಾಷೆಯಲ್ಲಿ. 'ನಜೆಯಾಡು'ವಿನ ಮೂಲರೂಪ 'ನಜೆ' ಎಂಬುದಾಗಿ ಕಲ್ಪಿತವಾಗಿದೆಯಾದ್ದರಿಂದ (Back-formation), 'ನಜೆ' ಎಂಬುದನ್ನು 'ನಗು' ವಿನಿಂದ ನೇರವಾಗಿ ನಿಷ್ಪತ್ತಿ ಮಾಡಬೇಕಾಗಿಲ್ಲ. ಹಾಗೆಯೇ ಹೋಗು= ಹೋಜಿಗೂ ವಿವರಣೆ ಕೊಡಲು ಸಾಧ್ಯವಾಗಬಹುದು.

ಸಕಲೇಶಪುರಕ್ಕೆ ಹೊಂದಿಕೊಂಡ ಹಳ್ಳಿಗಳಲ್ಲಿ ಮತ್ತು ಅಲ್ಲಿಂದ ಏಳು ಮೈಲಿ ದೂರದ ಸಾರ್ವೆ ಗ್ರಾಮದ ಹತ್ತಿರದ ಹಳ್ಳಿಗಳಲ್ಲಿ ಹೀಗೆ ತಾಲವ್ಯೀಕರಣಕ್ಕೆ ಸಂಬಂಧಿಸಿದ ವ್ಯತ್ಯಾಸಗಳು ಎದ್ದು ಕಾಣುತ್ತವೆ. ಇಷ್ಟು ಸಮೀಪದ ಊರುಗಳಲ್ಲೇ ಸ್ವನವ್ಯತ್ಯಾಸಗಳ ಭಿನ್ನತೆ ಕಾಣುವುದು ಆಶ್ಚರ್ಯಕರ ಸಂಗತಿ. ಸಾಕಷ್ಟು ವಿಶಾಲವಾಗಿರುವ ತಾಲವ್ಯೀಕರಣದ ಉಪಭಾಷಾ ಪ್ರದೇಶದಲ್ಲಿ ಒಳ ಉಪಭಾಷೆಗಳಿರುವುದು ಸ್ಪಷ್ಟವಾಗಿದೆ. ಎಂದರೆ, ಯಾವುದನ್ನು ಹೊಳೆನರಸೀಪುರದ ತಾಲವ್ಯೀಕರಣದ ಉಪಭಾಷೆಯೆಂದು ಕರೆದಿದ್ದೇನೆಯೋ ಆ ಉಪಭಾಷಾ ಪ್ರದೇಶದಲ್ಲಿ ಸೂಕ್ಷ್ಮ ಪ್ರಭೇದಗಳ ಉಪೋಪಭಾಷೆಗಳಿವೆಯೆಂದಾಯಿತು.

ಈ ತಾಲವ್ಯೀಕರಣ ನಡೆದಿರುವಂತೆಯೇ ಹೊಳೆನರಸೀಪುರ ತಾಲೂಕಿನಲ್ಲಿ ಕಂಠ್ಯೀಕರಣವೂ[೧] ನಡೆದಿರುವುದು ಕನ್ನಡದಲ್ಲೇ ಏಕೆ, ಯಾವುದೇ ಭಾಷೆಯಲ್ಲೂ ಅಪೂರ್ವ.

---

೧. ಕಂಠ್ಯವಲ್ಲದ ಸ್ವನವೊಂದು ಕಂಠ್ಯವಾಗಿ ಪರಿವರ್ತನೆ ಹೊಂದುವುದೇ ಕಂಠ್ಯೀಕರಣ. ಉದಾಹರಣೆಗೆ [ಜ್]ಸ್ವನವು [ಕ್] ಆಗುವುದು ಕಂಠ್ಯೀಕರಣ (velarization).

ತಾಲವ್ಯೀಕರಣದ ನಿಯಮಗಳೇ ಇಲ್ಲೂ ಅನ್ವಯವಾಗುತ್ತವೆ. ತಾಲವ್ಯಸ್ವನಗಳಾದ ಪದಾದಿಯ [ಚ್-] [ಜ್-]ಗಳು ಪೂರ್ವಸ್ವರಗಳ ಹಿಂದೆ ಕಂಠ್ಯ [ಕ್-] [ಗ್-] ಆಗುತ್ತವೆ. ಉದಾ:

| | | |
|---|---|---|
| ಚೇಳು | > | ಕೇಣು |
| ಚೆಂಬು | > | ಕೆಂಬು |
| ಚೆಚ್ಚು | > | ಕೆಚ್ಚು |
| ಚೆನ್ನಾಗಿ | > | ಕೆನ್ನಾಗಿ |
| ಕೆಲವರು ಚೆನ್ನಾಗಿ ಬೆಳೆ ಮಾಡ್ತಾರೆ | > | ಚೆಲವ್ರು ಕೆನ್ನಾಗಿ ಬೆಳೆ ಮಾಡ್ತಾರೆ. |
| ಚೆಂಡಾಲ | > | ಕೆಂಡಾಲ |
| ಚೀಲ | > | ಕೀಲ |
| ಜಿರಲೆ | > | ಗಿರಲೆ |
| ಜಿಗಣೆ | > | ಗಿಗಣೆ |
| ಜೀರಿಗೆ | > | ಗೀರಿಗೆ |
| ಜೇನು | > | ಗೇನು |
| ಜೇನ್ ತುಪ್ಪ | > | ಗೇನ್‌ತುಪ್ಪ |
| ಚೆನ್ನಣ್ಣ | > | ಕೆನ್ನಣ್ಣ |
| ಜರಿ (ಜರಿ) | > | ಗಿರಿ |
| ಚಾವಟಿ ಕೋಲು | > | ಕೆವಟೀ ಕೋಲು ('ಚಾ' ಮೊದಲು 'ಚೆ' ಆಗಿ ನಂತರ 'ಕೆ' ಆಗಿರಬೇಕು) |

ಪದಾದಿಯಲ್ಲದ ಕಡೆ ಮತ್ತು ಪೂರ್ವೇತರ ಸ್ವರಗಳ ಹಿಂದೆ [ಚ್] [ಜ್]ಗಳು ಯಾವುದೇ ವ್ಯತ್ಯಾಸವನ್ನೂ ಪಡೆಯುವುದಿಲ್ಲ. (ಕಂಠ್ಯೀಕರಣವು ಸಕಲೇಶಪುರ ತಾಲ್ಲೂಕಿನಲ್ಲಿ ತೀರ ವಿರಳವಾಗಿ ಕಾಣಿಸಿಕೊಂಡಿದೆ)

ಹೊಳೆನರಸೀಪುರ ತಾಲೂಕಿನಲ್ಲಿ ಕಂಠ್ಯೀಕರಣವು ತಾಲವ್ಯೀಕರಣದಷ್ಟು ನಿಯತವಾಗಿ ನಡೆದಿಲ್ಲ. ಪೂರ್ವಸ್ವರಗಳ ಹಿಂದೆ [ಚ್-] [ಜ್-]ಗಳು ಹಾಗೇ ಉಳಿದಿರುವುದಕ್ಕೆ ಸಾಕಷ್ಟು ಉದಾಹರಣೆಗಳಿವೆ. ಉದಾ: ಚಿನ್ನ, ಚಿಲುಕ, ಜಿಪುಣ, ಜಿಗುಟು, ಚಿಕ್ಕಣ್ಣ. ಜೊತೆಗೆ, ತಾಲವ್ಯೀಕರಣ ನಡೆದಿರುವ ಪ್ರದೇಶ ವಿಶಾಲವಾಗಿದೆಯಾದರೆ ಕಂಠ್ಯೀಕರಣವು ಆ ಪ್ರದೇಶದಲ್ಲೇ ಬಹುತೇಕ ಹೊಳೆನರಸೀಪುರ ಪ್ರದೇಶಕ್ಕೆ ಮಾತ್ರ ಸೀಮಿತವಾಗಿದೆ.

ಮೇಲಿನ ಎಲ್ಲ ಸಂಗತಿಗಳು ಕೆಲವು ಪ್ರಶ್ನೆಗಳನ್ನು ಮೂಡಿಸುತ್ತವೆ. ತಾಲವ್ಯೀಕರಣ ಯಾವಾಗ ಆಯ್ತು? ತಾಲವ್ಯೀಕರಣದ ಪ್ರದೇಶದಲ್ಲೇ ಮತ್ತೆ ಒಳ ವ್ಯತ್ಯಾಸಗಳು ಕಾಣಿಸಿಕೊಳ್ಳಲು ಕಾರಣವೇನು? ಈ ದಿನ ಹರಿಜನರಿಗೆ ಮಾತ್ರ ತಾಲವ್ಯೀಕೃತ ರೂಪಗಳು ಸೀಮಿತಗೊಂಡಿದ್ದರೂ, ಹಿಂದೆಯೂ ಹಾಗೆಯೇ ಇತ್ತೆ? ಅಥವಾ ಆ ಪ್ರದೇಶದ ಎಲ್ಲ

ಜಾತಿಯ ಜನರಲ್ಲೂ ಆ ರೂಪಗಳು ಬಳಕೆಯಿದ್ದು ಈ ದಿನ ಮೇಲು ಜಾತಿಗಳಲ್ಲಿ ಅವು ಮಾಯವಾಗುತ್ತ ಬಂದು ಕೆಳಜಾತಿಯಲ್ಲಿ ಅವು ಉಳಿದಿವೆಯೇ? ತಾಲವ್ಯೀಕರಣಕ್ಕೆ ಅನ್ಯ ಭಾಷೆಯ ಪ್ರಭಾವವೇನಾದರೂ ಇದೆಯೇ? ಈ ಎಲ್ಲ ಪ್ರಶ್ನೆಗಳಿಗೆ ಇನ್ನೂ ಹೆಚ್ಚಿನ ಪರಿವೀಕ್ಷಣೆ ನಡೆದು ಇನ್ನೂ ಹೆಚ್ಚು ಹೆಚ್ಚು ಪ್ರದೇಶಗಳಿಂದ ಸಾಮಗ್ರಿ ಸಂಗ್ರಹವಾಗುವವರೆಗೆ ಸ್ಪಷ್ಟ ಉತ್ತರಗಳನ್ನು ಕೊಡಲು ಸಾಧ್ಯವಿಲ್ಲವಾದರೂ ಇಲ್ಲಿ ಕೆಲವು ಸಾಧ್ಯ ಊಹೆಗಳಿಗೆ ಅವಕಾಶವಿದೆ. ಹಾಸನ ಜಿಲ್ಲೆ ಕನ್ನಡ ಭಾಷೆಯ ಒಳನಾಡಿನಲ್ಲಿರುವುದರಿಂದ (monolinguals) ತಾಲವ್ಯೀಕರಣಕ್ಕೆ ಅನ್ಯಭಾಷೆಯ ಪ್ರಭಾವವನ್ನು ಹುಡುಕಿ ಪ್ರಯೋಜನವಿಲ್ಲ. ನಾವು ಅನ್ಯಭಾಷೆಯೊಂದರ ಪ್ರಭಾವವನ್ನು ಸಂಪೂರ್ಣವಾಗಿ ತಳ್ಳಿ ಹಾಕಬಹುದು. ತಾಲವ್ಯೀಕರಣ ಯಾವಾಗ ಆಯ್ತು ಎಂಬುದಕ್ಕೆ ಯಾವುದೇ ಸುಳುಹುಗಳೂ ದೊರಕುವುದಿಲ್ಲ. ಆ ಪ್ರದೇಶದ ಕಳೆದ ಒಂದು ಸಾವಿರ ವರ್ಷಗಳ ಶಾಸನಗಳನ್ನು ತಿರುವಿ ಹಾಕಿದರೆ ಎಲ್ಲೂ ತಾಲವ್ಯೀಕೃತ ರೂಪ ದೊರಕುವುದಿಲ್ಲವಾದ್ದರಿಂದ, ಈ ವ್ಯತ್ಯಾಸ ಆಧುನಿಕ ಕಾಲದ್ದು ಎಂಬ ತೀರ್ಮಾನಕ್ಕೆ ಬರುವುದು ಅಪಾಯಕಾರಿಯಾದುದು. ಏಕೆಂದರೆ, ಈಗಿನಂತೆಯೇ ಹಿಂದೆಯೂ ತಾಲವ್ಯೀಕೃತ ರೂಪಗಳು 'ಅಸಾಧು' ಅಥವಾ ಶಿಷ್ಟೇತರ ರೂಪಗಳು ಎಂಬ ಭಾವನೆಯಿದ್ದಿರಬಹುದಾದ್ದರಿಂದ ಆ ರೂಪಗಳು ಶಾಸನಗಳಲ್ಲಿ ಬಳಕೆಯಾಗಿದ್ದಿರಲಾರವು. ಆಧುನಿಕ ಕಾಲವು ತಾಲವ್ಯೀಕರಣದ ಆರಂಭವನ್ನು ಹೇಳುತ್ತಿಲ್ಲ, ಅಂತ್ಯವನ್ನು ಹೇಳುತ್ತಿದೆ. ಕೆಳವರ್ಗದವರಲ್ಲಿ, ಅದರಲ್ಲೂ ಹರಿಜನರಲ್ಲಿ ಈ ರೂಪಗಳು ಬಳಕೆಯಲ್ಲಿದ್ದು ಅಲ್ಲೂ ಈಗ ಮಾಯವಾಗುತ್ತಿವೆ. ಅವರಲ್ಲಿ ಹಿರಿಯರಾದವರು ಇಂತಹ ಪದಗಳನ್ನು 'ಹಳಗನ್ನಡ'ವೆಂದೋ 'ಹಳೇಮಾತು' ಎಂದೋ ಕರೆಯುತ್ತಾರೆ. ತಾವು ಚಿಕ್ಕವರಾಗಿದ್ದಾಗ ಅವನ್ನು ಬಳಸುತ್ತಿದ್ದುದಾಗಿಯೂ ಅವನ್ನು ಬಳಸಿದರೆ ಈಗಿನ ತಮ್ಮ ಹುಡುಗರೇ ತಮ್ಮನ್ನು ಹಾಸ್ಯ ಮಾಡುವುದಾಗಿಯೂ ತಿಳಿಸುತ್ತಾರೆ. ಆದರೂ ಅವರವರಲ್ಲೇ ಮಾತನಾಡುವಾಗ ಈಗಲೂ ಅದನ್ನು ಬಳಸುತ್ತಿರುವುದಂತೂ ನಿಜ. ಅವರಲ್ಲಿ ಸ್ವಲ್ಪ 'ನಾಗರಿಕ'ರಾದವರ ಬಳಿ 'ಶಿಷ್ಟ' ರೂಪಗಳೂ, ತಾಲವ್ಯೀಕೃತ ರೂಪಗಳೂ ಇದ್ದು ಹೊರಗಿನವರ ಜೊತೆ ಶಿಷ್ಟ ರೂಪಗಳನ್ನು ಮಾತ್ರ ಬಳಸುತ್ತಾರೆ. ತಾಲವ್ಯೀಕೃತ ರೂಪಗಳು ಆಧುನಿಕತೆಯಿಂದಾಗಿ, ಅದರ ಮುಖವಾಣಿಯಾದ ಶಿಷ್ಟಭಾಷೆಯಿಂದಾಗಿ ಕ್ರಮೇಣ ಮಾಯವಾಗುತ್ತಿವೆ.

ತಾಲವ್ಯೀಕರಣವು ಆ ಜಾತಿ ಈ ಜಾತಿಯೆನ್ನದೆ ಒಟ್ಟು ಆ ಇಡೀ ಪ್ರದೇಶವನ್ನೇ ವ್ಯಾಪಿಸಿದ ಕಾಲವೊಂದನ್ನು ಊಹಿಸಬಹುದು. ಇಂದೂ ಹಳ್ಳಿಯ ಸ್ವಲ್ಪ ಮೇಲ್ವರ್ಗದವರಲ್ಲಿ ಎಂದರೆ ಹರಿಜನರಿಗಿಂತ ಮೇಲಿನ ಬ್ರಾಹ್ಮಣೇತರರಲ್ಲಿ ಕೆಲವರಾದರೂ ತಾಲವ್ಯೀಕೃತ ರೂಪಗಳನ್ನು ಬಳಸುತ್ತಿರುವುದು ಈ ಊಹೆಗೆ ಆಧಾರವಾಗಿದೆ. ಬೆಟ್ಟದ ಸಾತೇನಹಳ್ಳಿಯ ಅಂತಹ ಬ್ರಾಹ್ಮಣೇತರರಲ್ಲಿ 'ಜಣೆ' (ಗಿಣೆ), 'ಚಪಾಲ' (ಕಪಾಲ) ರೂಪಗಳು ದೊರಕಿದುವು. ಅಲ್ಲದೆ, ಅರವತ್ತು ಎಪ್ಪತ್ತು ಮೈಲಿಯ ಫಾಸಲೆಯಲ್ಲಿ, ಹರಿಜನವರ್ಗದಲ್ಲಿ ಮಾತ್ರ ತಾಲವ್ಯೀಕರಣವು ಆರಂಭವಾಗಿ ಆ ವರ್ಗದ ಜನರ ಉಪಭಾಷೆಯಲ್ಲಿ ಮಾತ್ರ ಹಬ್ಬಿತು ಎಂದು ಊಹಿಸಲು ಸಾಧ್ಯವೆ ಇಲ್ಲದ ಮಾತು. ಆದ್ದರಿಂದ ಒಂದು ಕಾಲಕ್ಕೆ ಆ ಇಡೀ ಪ್ರದೇಶದಲ್ಲಿ ತಾಲವ್ಯೀಕರಣ ಪ್ರವರ್ತಿಸಿತ್ತೆಂದೂ, ವಿದ್ಯೆ ಹೆಚ್ಚಿ ಶಿಷ್ಟಭಾಷೆಯ ಪ್ರಭಾವಕ್ಕೊಳಗಾಗಿ ಮೇಲ್ವರ್ಗದ ಜನ ಕ್ರಮೇಣ ಆ ಶಿಷ್ಟೇತರ ರೂಪಗಳನ್ನು ಬಿಡುತ್ತಾ ಬಂದರೆಂದೂ, ವಿದ್ಯೆಯಿಂದ ಇನ್ನೂ ದೂರವಿರುವ ತೀರ ಕೆಳವರ್ಗದ ಜನ ಆ ರೂಪಗಳನ್ನು

ಉಳಿಸಿಕೊಂಡು ಬಂದಿರುವರೆಂದೂ ಹೇಳುವುದೇ ತರ್ಕಬದ್ಧವಾಗಿ ತೋರುತ್ತದೆ. ಆ ಕೆಳವರ್ಗದ ಜನರೂ ಆ ರೂಪಗಳನ್ನು ಕ್ರಮೇಣ ಕೈಬಿಡುತ್ತಿದ್ದಾರೆ.

ತಾಲವ್ಯೀಕರಣ ಎಲ್ಲ ಕಡೆಯಲ್ಲಿಯೂ ಪದಾದಿಯ ಕಂಠ್ಯಗಳನ್ನು [ಕ್-, ಗ್-] ಮಾರ್ಪಡಿಸಿರುವುದರಿಂದ, ಬಹುಶಃ ಈ ವ್ಯತ್ಯಾಸ ಮೊದಲು ಆ ಇಡೀ ಪ್ರದೇಶವನ್ನು ವ್ಯಾಪಿಸಿತು ಎಂದು ಕಾಣುತ್ತದೆ. ಬಳಿಕ, ಸಕಲೇಶಪುರದ ಸುತ್ತಮುತ್ತಣ ಪ್ರದೇಶದಲ್ಲಿ ಪದಾದಿಯಂತೆಯೇ ತಾಲವ್ಯೀಕರಣವು ಆದ್ಯೇತರ ಜಾಗಕ್ಕೂ ಹಬ್ಬಿರಬೇಕು. ಈ ಕಡೆ, ಹೊಳೆ ನರಸೀಪುರದ ಪ್ರದೇಶದಲ್ಲಿ ತಾಲವ್ಯೀಕರಣಕ್ಕೆ ಪ್ರತಿಕ್ರಿಯೆಯ ರೂಪದಲ್ಲಿ, ತಾಲವ್ಯೀಕರಣವು ಪ್ರವರ್ತಿಸಿದ ಬಳಿಕ ಕಂಠ್ಯೀಕರಣವು ಕಾಣಿಸಿಕೊಂಡಿರಬೇಕು. ಈ ಸಾಪೇಕ್ಷ ಕಾಲಾನುಕ್ರಮಣಿಕೆಯು (relative chronology) ಊಹೆಯಾದರೂ ಅಷ್ಟು ನಿರಾಧಾರವಾದುದೇನೂ ಅಲ್ಲವೆಂದು ತೋರುತ್ತದೆ.

ಕಂಠ್ಯೀಕರಣಕ್ಕೆ ಕಾರಣ ಹೀಗಿರಬಹುದು. 'ಕೇಳು' (=to listen), 'ಚೇಳು' (scorpion) ಈ ವೈದೃಶ್ಯ (contrast) ಮೊದಲು ಸ್ಪಷ್ಟವಾಗಿತ್ತು. ತಾಲವ್ಯೀಕರಣದ ಬಳಿಕ ಕೇಳು> ಚೇಳು ಆದಾಗ, ಆ ಎರಡು ಅರ್ಥಗಳನ್ನು ಬೇರೆಯಾಗಿಡಲು 'ಚೇಳು' (scorpion) ಎಂಬುದನ್ನು 'ಕೇಳು' (ಕೇಣು) ಎಂದು ಮಾರ್ಪಡಿಸಿರಬಹುದು. ಈ ಪದದಲ್ಲೇ ಮೊದಲು ಕಂಠ್ಯೀಕರಣ ಆರಂಭವಾಯಿತು ಎಂದು ಹೇಳಲು ಸಾಧ್ಯವಿಲ್ಲದಿದ್ದರೂ ತಾಲವ್ಯೀಕರಣದಿಂದಾಗಿ ಮಾಯವಾದ ವೈದೃಶ್ಯದ ಪುನಃ ಪ್ರತಿಷ್ಠಾಪನೆಯು ಕಂಠ್ಯೀಕರಣಕ್ಕೆ ಕಾರಣವಾಗಿರಬಹುದೆಂಬ ಊಹೆಗಾಗಿ ಮೇಲಿನ ನಿದರ್ಶನವನ್ನು ತೆಗೆದುಕೊಳ್ಳಬೇಕಾಯಿತು. ಕಂಠ್ಯೀಕರಣವನ್ನು ಇನ್ನೊಂದು ದೃಷ್ಟಿಯಿಂದಲೂ ನೋಡಲು ಸಾಧ್ಯವಿದೆ. ಕ್→ಚ್, ಗ್→ ಜ್ ಈ ವ್ಯತ್ಯಾಸಗಳು ಮತ್ತೆ ಹಿಮ್ಮುಖವಾಗಿ ಪ್ರವರ್ತಿಸಿ ಚ್→ಕ್, ಜ್→ಗ್ ಆಗಿರುವುದು ಸ್ವನವ್ಯತ್ಯಾಸಗಳು ಕೆಲವು ಬಾರಿಯಾದರೂ ವಿಪರ್ಯಯಗೊಳ್ಳುವುದನ್ನು (reciprocate) ಸೂಚಿಸುತ್ತವೆ. ಇದನ್ನು ಸಮರ್ಥಿಸಲು ಕನ್ನಡದ ಬೇರೆ ಉಪಭಾಷೆಗಳಲ್ಲೂ, ಬೇರೆ ಪ್ರಾಂತದ ಭಾಷೆಗಳಲ್ಲೂ ಉದಾಹರಣೆಗಳು ಉಂಟು. ಆ ಬಗ್ಗೆ ಪ್ರತ್ಯೇಕ ಲೇಖನವೊಂದರಲ್ಲಿ ವಿಸ್ತಾರವಾಗಿ ಚರ್ಚಿಸಲಿದ್ದೇನೆ.

*ಬೆಳ್ವೊಲ, ೧೯೮೧*

*ವಾಗರ್ಥ, ೧೯೮೧, ಪು. ೧೪೯-೫೭*

# ೨೮. ಕನ್ನಡ ಸಮಸ್ತ ಪದಗಳ ವಿಭಜನೆ

●ಡಿ. ಎನ್. ಶಂಕರಭಟ್ಟ

ಕನ್ನಡ ಸಮಸ್ತಪದಗಳನ್ನು ಹೆಚ್ಚಿನ ವ್ಯಾಕರಣಗಳಲ್ಲೂ ಸಂಸ್ಕೃತದಲ್ಲಿರುವ ಸಮಸ್ತಪದಗಳ ಪರಿಶೀಲನೆಯ ಆಧಾರದ ಮೇಲೆ (ಎಂದರೆ ಸಂಸ್ಕೃತ ವೈಯಾಕರಣಿಗಳು ಸಿದ್ಧಪಡಿಸಿರುವಂತಹ ಈ ಸಮಸ್ತಪದಗಳ ವರ್ಣನೆಯ ಆಧಾರದ ಮೇಲೆ) ವಿಭಜಿಸಿ ಹೇಳುವುದನ್ನು ಕಾಣಬಹುದು. ಸಂಸ್ಕೃತ ಸಮಾಸಗಳು ಯಾವುವು, ಅವುಗಳಲ್ಲಿ ಯಾವುವು ಕನ್ನಡದಲ್ಲೂ ಕಾಣಿಸುತ್ತವೆ ಮತ್ತು ಸಂಸ್ಕೃತದಲ್ಲಿಲ್ಲದಂತಹ ಬೇರೆ ಯಾವ ಸಮಾಸಗಳು ಕನ್ನಡದಲ್ಲಿವೆ ಎಂಬುದಾಗಿ ಈ ವಿಭಜನೆ ಸಾಗುತ್ತವೆ. ಹೀಗೆ ಮಾಡುವುದರಿಂದ ಕನ್ನಡ ಸಮಸ್ತಪದಗಳ ವರ್ಣನೆ ಅನವಶ್ಯಕವಾಗಿ ಬಹಳ ಕ್ಲಿಷ್ಟವಾಗುತ್ತದೆ ಮಾತ್ರವಲ್ಲ, ನಿಜಕ್ಕೂ ಕನ್ನಡದ ಸಮಸ್ತಪದಗಳು ಯಾವ ರೀತಿಯವು ಎಂಬ ಪ್ರಶ್ನೆಗೆ ಉತ್ತರ ಸಿಗುವುದೇ ಇಲ್ಲ. ಈ ತೊಡಕು ತೊಡಕಾದ ವಿಧಾನವನ್ನು ತೊರೆದು ಕನ್ನಡದಲ್ಲಿ ಪ್ರಯುಕ್ತವಾಗುವ ಸಮಸ್ತಪದಗಳನ್ನು ನೇರವಾಗಿ ಅವುಗಳ ಆಂತರಿಕ ರಚನೆಯಲ್ಲಿ ಕಾಣಿಸುವ ವೈಶಿಷ್ಟ್ಯಗಳ ಆಧಾರದ ಮೇಲೆ ವಿಭಜಿಸಿ ವಿವರಿಸಲಾಗಿದೆ.

ಈ ರೀತಿ ಕನ್ನಡದ ಸಮಸ್ತಪದಗಳ ನೇರವಾದ ಅಭ್ಯಾಸದಿಂದ ಸಿದ್ಧವಾದ ವಿಭಜನೆ ಪ್ರಚಲಿತ ವ್ಯಾಕರಣಗಳಲ್ಲಿ ಕಾಣಿಸುವ ವಿಭಜನೆಗಿಂತ ಯಾವ ರೀತಿಯಲ್ಲಿ ಭಿನ್ನವಾಗಿದೆ ಎಂಬುದನ್ನು ಸ್ವಲ್ಪ ಸ್ಥೂಲವಾಗಿಯಾದರೂ ಪರಿಶೀಲಿಸುವುದವಶ್ಯ. ಯಾಕೆಂದರೆ, ಹಾಗೆ ಮಾಡುವುದರಿಂದ ಪ್ರಚಲಿತ ವ್ಯಾಕರಣಗಳಲ್ಲಿ ಕಾಣಿಸುವ ವಿಭಜನೆಗಳು ಯಾವ ರೀತಿಯಲ್ಲೆಲ್ಲ ಅಸಮರ್ಪಕವಾಗಿವೆ ಎಂಬ ವಿಷಯ ಸ್ಪಷ್ಟವಾದೀತು.

ತತ್ಪುರುಷ, ಕರ್ಮಧಾರಯ, ದ್ವಿಗು, ಬಹುವ್ರೀಹಿ, ದ್ವಂದ್ವ ಮತ್ತು ಅವ್ಯಯೀಭಾವಗಳೆಂಬ ಆರು ಸಂಸ್ಕೃತ ಸಮಾಸಗಳನ್ನು ತೋರಿಸುವ ಸಮಸ್ತಪದಗಳೂ ಮತ್ತು ಇವಲ್ಲದೆ ಕ್ರಿಯಾಸಮಾಸ ಮತ್ತು ಗಮಕಸಮಾಸಗಳೆಂಬ ಬೇರೆ ಎರಡು ರೀತಿಯ ಸಮಾಸಗಳನ್ನು ತೋರಿಸುವ ಸಮಸ್ತಪದಗಳೂ ಕನ್ನಡದಲ್ಲಿವೆಯೆಂಬುದಾಗಿ ಹದಿಮೂರನೇ ಶತಮಾನದ ಶಬ್ದಮಣಿದರ್ಪಣವೆಂಬ ವ್ಯಾಕರಣದಲ್ಲಿ ಹೇಳಲಾಗಿದೆ. ಇದು ಹಳೆಗನ್ನಡದಲ್ಲಿ ಬರುವ ಸಮಸ್ತಪದಗಳ ವಿಭಜನೆಯಾಗಿದೆಯಾದರೂ ಕೂಡ ಹೊಸಗನ್ನಡಕ್ಕೂ ಇದನ್ನೇ ಅನ್ವಯಿಸಿ ಹೇಳುವುದು ರೂಢಿ. ಪ್ರಚಲಿತ ಕನ್ನಡ ವ್ಯಾಕರಣಗಳಲ್ಲೆಲ್ಲ ಈ ವಿಭಜನೆಯನ್ನೇ ಅಲ್ಪಸ್ವಲ್ಪ ವ್ಯತ್ಯಾಸಗಳನ್ನು ಮಾಡಿ ಹೊಗನ್ನಡದೆಂದು ಕೊಡಲಾಗಿದೆ.

## (೧) ವಿಭಜನೆಯ ಆಧಾರ

ಈ ವಿಭಜನೆಗೆ ಆಧಾರವಾಗಿ ಸಮಸ್ತಪದಗಳ ಅಂಗಗಳಾಗಿ ಬಂದಿರುವ ಪದಗಳ ವರ್ಗ, ಅವುಗಳ ನಡುವಿರುವ ಸಂಬಂಧ ಮತ್ತು ಸಮಸ್ತಪದದಲ್ಲಿ ಕೇಂದ್ರಬಿಂದುವಿನ ಸ್ಥಾನ-ಈ ಮೂರು ವಿಷಯಗಳನ್ನೂ ಒಟ್ಟಾಗಿ ಬಳಸಿಕೊಳ್ಳಲಾಗಿದೆ. ಉದಾಹರಣೆಗಾಗಿ ಸಮಸ್ತಪದದ ಮೊದಲನೆಯ ಅಂಗ ಸಂಖ್ಯಾವಾಚಕವಾಗಿದ್ದರೆ ಅದನ್ನು ದ್ವಿಗುವೆಂದೂ ಮತ್ತು ಎರಡನೆಯದು ಕ್ರಿಯಾಪದವಾಗಿದ್ದರೆ ಅದನ್ನು ಕ್ರಿಯಾಸಮಾಸವೆಂದೂ ಕರೆಯಲಾಗುತ್ತವೆ;

ಸಮಸ್ತಪದದ ಅಂಗಗಳೆರಡೂ ನಾಮಪದಗಳಾಗಿದ್ದು, ಅವು ಬೇರೆ ಬೇರೆ ವಿಭಕ್ತಿಗಳಲ್ಲಿದ್ದರೆ ತತ್ಪುರುಷವೆಂದೂ ಮತ್ತು ಒಂದೇ ವಿಭಕ್ತಿಯಲ್ಲಿದ್ದರೆ ಕರ್ಮಧಾರಯವೆಂದೂ ಕರೆಯಲಾಗುತ್ತದೆ. ಕೇಂದ್ರಬಿಂದು ಸಮಸ್ತಪದದ ಎರಡನೆಯ ಅಂಗದ ಮೇಲಿದ್ದರೆ ತತ್ಪುರುಷವೆಂದೂ, ಮೊದಲನೆಯ ಅಂಗದ ಮೇಲಿದ್ದರೆ ಅವ್ಯಯೀಭಾವ (ಇಲ್ಲವೇ ಅಂಶಿ ಸಮಾಸ)ವೆಂದೂ, ಎರಡರ ಮೇಲೂ ಇದ್ದರೆ ದ್ವಂದ್ವವೆಂದೂ ಮತ್ತು ಸಮಸ್ತಪದದಿಂದ ಹೊರಗಿರುವ ಒಂದು ಪದದ ಮೇಲಿದ್ದರೆ ಬಹುವ್ರೀಹಿಯೆಂದೂ ಕರೆಯಲಾಗುತ್ತದೆ.

ಈ ರೀತಿ ಮೂರು ಬೇರೆ ಬೇರೆ ವಿಷಯಗಳನ್ನು ಒಟ್ಟಿಗೆ ಆಧಾರವಾಗಿ ಇರಿಸಿಕೊಂಡು ರಚಿಸಿದ ಈ ಸಮಸ್ತಪದಗಳ ವಿಭಜನೆ ಅನವಶ್ಯಕವಾಗಿ ಗೊಂದಲಕ್ಕೆಡೆ ಮಾಡುತ್ತದೆ. ಉದಾಹರಣೆಗಾಗಿ ಕೇಂದ್ರಬಿಂದು ಎರಡನೆಯ ಅಂಗದ ಮೇಲಿರುವ ಕರ್ಮಧಾರಯ, ದ್ವಿಗು, ಕ್ರಿಯಾಸಮಾಸ ಮತ್ತು ಗಮಕಸಮಾಸಗಳು ತತ್ಪುರುಷದ ಪ್ರಭೇದಗಳೆಂದು ಹೇಳಬೇಕಾಗುತ್ತದೆ ಮತ್ತು ಅಂಗಗಳೆರಡೂ ಒಂದೇ ವಿಭಕ್ತಿಯಲ್ಲಿ ಬರುವ ದ್ವಿಗುಸಮಾಸ, ಕರ್ಮಧಾರಯದ ಪ್ರಭೇದವೆಂದು ಹೇಳಬೇಕಾಗುತ್ತದೆ. ಮೊದಲನೆಯ ಅಂಗ ಸಂಖ್ಯೆಯಾಗಿರುವ ಸಮಸ್ತಪದ ದ್ವಿಗುವಾಗಿರಲೂ ಸಾಧ್ಯವಿದೆ, ಗಮಕವಾಗಿರಲೂ ಸಾಧ್ಯವಿದೆ. ಹಾಗಿದ್ದರೆ ಅವರೆಡರ ನಡುವಿನ ವ್ಯತ್ಯಾಸವೇನು? ಗಮಕವೆಂಬ ಸಮಾಸ ವಿಧಾನ ಕನ್ನಡಕ್ಕೆ ಅವಶ್ಯವೇ? ಎಂದೆಲ್ಲ ವಾದ-ವಿವಾದಗಳು ಇದರಿಂದಾಗಿ ಮೂಡಿಬಂದಿವೆ.

ವಿಭಜನೆಗೆ ಆಧಾರವಾಗಬಲ್ಲ ಬೇರೆ ಬೇರೆ ವಿಷಯಗಳನ್ನು ಈ ರೀತಿ ಒಟ್ಟುಸೇರಿಸಲು ಯತ್ನಿಸದೆ ಅವನ್ನು ಬೇರೆ ಬೇರಾಗಿ ಇರಿಸಿಕೊಂಡು, ಸಮಸ್ತಪದಗಳ ವಿಭಜನೆಗೆ ಅವು ಯಾವ ರೀತಿಯಲ್ಲಿ ಸಹಾಯಕವಾಗಬಲ್ಲುವು ಎಂಬುದನ್ನು ಪರಿಶೀಲಿಸಿದಲ್ಲಿ ಇಂತಹ ವಾದಗಳಿಗೆಡೆಯಾಗಲಾರದು. ಮೇಲೆ ಕೊಟ್ಟಿರುವ ಕನ್ನಡ ಸಮಸ್ತಪದಗಳ ವಿಭಜನೆ ಈ ಕ್ರಮವನ್ನವಲಂಬಿಸಿದೆ ಎಂಬುದನ್ನು ಗಮನಿಸಬಹುದು.

## (೨) ಪದವರ್ಗಗಳ ಸಂಖ್ಯೆ

ಕನ್ನಡ ಸಮಸ್ತಪದಗಳ ಪ್ರಚಲಿತ ವಿಭಜನೆಗಳು ಪದವರ್ಗಗಳ ವಿಷಯದಲ್ಲಿ ಕನ್ನಡಕ್ಕೂ ಮತ್ತು ಸಂಸ್ಕೃತಕ್ಕೂ ನಡುವಿರುವ ಪ್ರಾಮುಖ್ಯವಾದ ಒಂದು ವ್ಯತ್ಯಾಸವನ್ನು ಸರಿಯಾಗಿ ಗಮನಿಸದಿರುವುದರಿಂದಾಗಿ ಬಹಳಮಟ್ಟಿಗೆ ತಪ್ಪುಹಾದಿ ಹಿಡಿದಿವೆ. ಸಂಸ್ಕೃತದಲ್ಲಿ ನಾಮಪದ ಮತ್ತು ಕ್ರಿಯಾಪದಗಳೆಂಬ ಎರಡೇ ಎರಡು ಮುಖ್ಯ ಪದವರ್ಗಗಳಿದ್ದು ವಿಶೇಷಣಗಳ ಅರ್ಥ ಕೊಡುವ ಶಬ್ದಗಳಲ್ಲಿ ಹೆಚ್ಚಿನವೂ ನಾಮಪದವೆಂಬ ಪದವರ್ಗದಲ್ಲೇನೇ ಸೇರಿಕೊಳ್ಳುತ್ತವೆ ಮತ್ತು ಇದಕ್ಕೆ ವ್ಯತಿರಿಕ್ತವಾಗಿ ಕನ್ನಡದಲ್ಲಿ ನಾಮಪದ, ಕ್ರಿಯಾಪದ ಮತ್ತು ವಿಶೇಷಣಗಳೆಂಬ ಮೂರು ಬೇರೆ ಬೇರೆ ಮುಖ್ಯ ಪದವರ್ಗಗಳಿವೆ ಎಂಬುದನ್ನು ನಾವು ಈ ಹಿಂದಿನ ಅಧ್ಯಾಯದಲ್ಲಿ ನೋಡಿರುವೆವು.

ವಿಶೇಷಣಗಳ ಅರ್ಥಕೊಡುವ ನಾಮಪದಗಳನ್ನು ಇನ್ನೊಂದು ನಾಮಪದದೊಂದಿಗೆ ಸೇರಿಸಿ ಪದಗುಚ್ಛವೊಂದನ್ನು ತಯಾರಿಸಬೇಕಿದ್ದರೆ, ಅದಕ್ಕೆ ಆ ನಾಮಪದದ ಲಿಂಗ-ವಚನ-ವಿಭಕ್ತಿ ಪ್ರತ್ಯಯವನ್ನು ಸೇರಿಸಿಕೊಳ್ಳಬೇಕು ಎಂಬುದು ಸಂಸ್ಕೃತದ ವಾಕ್ಯರಚನೆಯ ಒಂದು ನಿಯಮ. ಉದಾಹರಣೆಗಾಗಿ ಈ ಕೆಳಗಿನ ಸಂಸ್ಕೃತ ವಾಕ್ಯಗಳನ್ನು ಗಮನಿಸಬಹುದು :

(೧) ತತ್ರ ಏಕಃ ಕೃಷ್ಣಃ ಸರ್ಪಃ ಅಸ್ತಿ.
ಅಲ್ಲಿ ಒಂದು ಕಪ್ಪು ಹಾವು ಇದೆ.

(೨) ಹರಿಃ ಏಕಂ ಕೃಷ್ಣಂ ಸರ್ಪಂ ಅಪಶ್ಯತ್.
ಹರಿ ಒಂದು ಕಪ್ಪು ಹಾವನ್ನು ಕಂಡನು.

(೩) ಹರಿಃ ಏಕೇನ ಕೃಷ್ಣೇನ ಸರ್ಪೇಣ ದಷ್ಟಃ.
ಹರಿ ಒಂದು ಕಪ್ಪು ಹಾವಿನಿಂದ ಕಚ್ಚಲ್ಪಟ್ಟ.

ಮೇಲೆ ಕೊಟ್ಟಿರುವ (೧)ನೇ ವಾಕ್ಯದಲ್ಲಿ **ಏಕಃ ಕೃಷ್ಣಃ ಸರ್ಪಃ** (ಒಂದು ಕಪ್ಪು ಹಾವು) ಎಂಬ ನಾಮಪದಗುಚ್ಛ ಬಂದಿದ್ದು ಅದರಲ್ಲಿರುವ ಮೂರು ಪದಗಳೂ ಪುಲ್ಲಿಂಗ-ಏಕವಚನ-ಪ್ರಥಮಾವಿಭಕ್ತಿಯಲ್ಲಿವೆ. ಇದೇ ನಾಮಪದಗುಚ್ಛ (೨) ಮತ್ತು (೩)ನೇ ವಾಕ್ಯಗಳಲ್ಲೂ ಬಂದಿದ್ದೂ, ಅದರಲ್ಲಿರುವ ಮೂರು ಪದಗಳೂ (೨)ನೇ ವಾಕ್ಯದಲ್ಲಿ ಪುಲ್ಲಿಂಗ ಏಕವಚನ-ದ್ವಿತೀಯಾ ವಿಭಕ್ತಿಯಲ್ಲಿ (**ಏಕಂ ಕೃಷ್ಣಂ ಸರ್ಪಂ** ಎಂಬುದಾಗಿ) ಮತ್ತು (೩)ನೇ ವಾಕ್ಯದಲ್ಲಿ ಪುಲ್ಲಿಂಗ ಏಕವಚನ-ತೃತೀಯಾವಿಭಕ್ತಿಯಲ್ಲಿ (**ಏಕೇನ ಕೃಷ್ಣೇನ ಸರ್ಪೇಣ** ಎಂಬುದಾಗಿ) ಬಂದಿವೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾಗಿರುವ ಅಂಶವೇನೆಂದರೆ ಈ ಪದಗುಚ್ಛದ ಮೂರನೇ ಅಂಗವಾದ ಸರ್ಪಃ (ಹಾವು) ಎಂಬುದು ಮಾತ್ರವಲ್ಲದೆ ಅದರ ಮೊದಲನೇ ಅಂಗವಾದ **ಏಕಃ** ಎಂಬುದೂ ಮತ್ತು ಎರಡನೇ ಅಂಗವಾದ **ಕೃಷ್ಣಃ** ಎಂಬುದೂ ಕೂಡ ಈ ರೀತಿ ಲಿಂಗ-ವಚನ-ವಿಭಕ್ತಿ ಪ್ರತ್ಯಯಗಳೊಂದಿಗೆ ಬಂದಿವೆ.

ಕನ್ನಡದ ಪದಗುಚ್ಛಗಳ ರಚನೆ ಇದಕ್ಕಿಂತ ತೀರ ಭಿನ್ನವಾದುದು. ಅವುಗಳಲ್ಲಿ ಬರುವ ಪದಗಳಲ್ಲಿ ಕೊನೆಯದಕ್ಕೆ ಮಾತ್ರ ವಿಭಕ್ತಿ ಪ್ರತ್ಯಯಗಳನ್ನು (ಮತ್ತು ವಚನ ಪ್ರತ್ಯಯಗಳನ್ನು) ಸೇರಿಸಿದರೆ ಸಾಕು. ಮೇಲೆ ಕೊಟ್ಟಿರುವ ಸಂಸ್ಕೃತ ವಾಕ್ಯಗಳ ಕನ್ನಡ ಅನುವಾದಗಳನ್ನು ಗಮನಿಸಿದೆವಾದರೆ ಈ ವಿಷಯ ಸ್ಪಷ್ಟವಾದೀತು. **ಏಕಃ ಕೃಷ್ಣಃ ಸರ್ಪಃ** ಎಂಬ ಸಂಸ್ಕೃತ ಪದಗುಚ್ಛದ ಮೊದಲನೇ ಶಬ್ದದ ಕನ್ನಡ ಅನುವಾದ ಒಂದು ಎಂಬುದು. ಇದೇ ರೀತಿಯಲ್ಲಿ ಎರಡನೇ ಶಬ್ದದ ಅನುವಾದವಾದ **ಕಪ್ಪು** ಎಂಬುದೂ ಕೂಡ ಮೂರು ವಾಕ್ಯಗಳಲ್ಲೂ ಒಂದೇ ರೂಪದಲ್ಲಿ ಬಂದಿದೆ. ವಿಭಕ್ತಿ ಪ್ರತ್ಯಯಗಳನ್ನು ಅವುಗಳ ಅನಂತರ ಬರುವ ಮೂರನೆಯ ಪದಕ್ಕೆ (ಹಾವು ಎಂಬುದಕ್ಕೆ) ಸೇರಿಸಲಾಗಿದೆಯಲ್ಲದೆ **ಒಂದು ಮತ್ತು ಕಪ್ಪು** ಎಂಬ ಪದಗಳಿಗೆ ಸೇರಿಸಿಲ್ಲ ಎಂಬುದನ್ನು ಗಮನಿಸಬಹುದು. ಕನ್ನಡದಲ್ಲಿ ವಿಶೇಷಣಗಳು ನಾಮಪದಗಳಿಗಿಂತ ಭಿನ್ನವಾದ ಬೇರೆಯೇ ಒಂದು ಪದವರ್ಗದಲ್ಲಿ ಬರುತ್ತವೆ ಮತ್ತು ನಾಮಪದಗಳೊಂದಿಗೆ ಅವನ್ನು ನೇರವಾಗಿ (ವಿಭಕ್ತಿ ಪ್ರತ್ಯಯಗಳ ಸಹಾಯವಿಲ್ಲದೆ) ಸೇರಿಸಬಹುದು ಎಂಬ ಕನ್ನಡ ವಾಕ್ಯರಚನೆಯ ನಿಯಮ ಮೇಲೆ ಕೊಟ್ಟಿರುವ ಸಂಸ್ಕೃತ ವಾಕ್ಯರಚನೆಯ ನಿಯಮಕ್ಕಿಂತ ಭಿನ್ನವಾಗಿರುವುದೇ ಈ ವ್ಯತ್ಯಾಸಕ್ಕೆ ಆಧಾರ.

ಸಂಸ್ಕೃತದಲ್ಲಿ **ಏಕಃ ಕೃಷ್ಣಃ ಸರ್ಪಃ** ಎಂಬ ಪದಗುಚ್ಛದ ಬದಲು **ಏಕಃ ಕೃಷ್ಣಸರ್ಪಃ** ಎಂಬುದಾಗಿ ಅದರಲ್ಲಿರುವ ಎರಡನೇ ಮತ್ತು ಮೂರನೇ ಪದಗಳನ್ನು ಒಟ್ಟು ಸೇರಿಸಿ ಒಂದು ಸಮಸ್ತಪದವನ್ನಾಗಿ ಮಾಡಿ ಬಳಸಲು ಸಾಧ್ಯವಿದೆ. ಇಂತಹ ಸಮಸ್ತಪದಗಳಲ್ಲಿ ಮೊದಲನೆಯ ಅಂಗವಾಗಿ ಬರುವ ಶಬ್ದ ತನ್ನ ಲಿಂಗ-ವಚನ-ವಿಭಕ್ತಿ ಪ್ರತ್ಯಯವನ್ನು ಕಳೆದುಕೊಳ್ಳುತ್ತದೆ ಎಂಬುದು ಸಂಸ್ಕೃತದ ಒಂದು ಪದರಚನೆಯ ನಿಯಮ. ಈ ಕಾರಣಕ್ಕಾಗಿ ಆ ಎರಡನೆಯ

ಪದ ಎಲ್ಲಾ ರೀತಿಯ ವಾಕ್ಯಗಳಲ್ಲೂ ಒಂದೇ ರೂಪದಲ್ಲಿ ಬರುತ್ತದೆ. ಇದನ್ನು ಈ ಕೆಳಗಿನ ವಾಕ್ಯಗಳಲ್ಲಿ ಕಾಣಬಹುದು.

(೪) ತತ್ರ ಏಕಃ ಕೃಷ್ಣಸರ್ಪಃ ಅಸ್ತಿ.
ಅಲ್ಲಿ ಒಂದು ಕಪ್ಪು ಹಾವು ಇದೆ.

(೫) ಹರಿಃ ಏಕಂ ಕೃಷ್ಣಸರ್ಪಂ ಅಪಶ್ಯತ್.
ಹರಿ ಒಂದು ಕಪ್ಪು ಹಾವನ್ನು ನೋಡಿದ.

(೬) ಹರಿಃ ಏಕೇನ ಕೃಷ್ಣಸರ್ಪೇಣ ದಷ್ಟಃ
ಹರಿ ಒಂದು ಕಪ್ಪು ಹಾವಿನಿಂದ ಕಚ್ಚಲ್ಪಟ್ಟ.

ಕನ್ನಡದಲ್ಲಿ ಮೇಲೆ ಕೊಟ್ಟಿರುವ **ಕಪ್ಪು ಹಾವು** ಎಂಬ ಪದಗುಚ್ಛ ಸಂಸ್ಕೃತದ ಈ **ಕೃಷ್ಣಸರ್ಪಃ** ಎಂಬ ಸಮಸ್ತಪದವನ್ನು ಹೋಲುವುದಾದ ಕಾರಣ (ಎರಡರಲ್ಲೂ ಮೊದಲಿನ ಅಂಗವಾಗಿ ಬರುವ ಶಬ್ದದೊಂದಿಗೆ ವಿಭಕ್ತಿ ಪ್ರತ್ಯಯ ಬರುವುದಿಲ್ಲವಾದ ಕಾರಣ) ಅದೂ ಕೂಡ ಕರ್ಮಧಾರಯವೆಂಬ ಸಮಾಸದಿಂದ ಸಿದ್ಧವಾದ ಸಮಸ್ತಪದವೆಂದು ಕನ್ನಡ ವೈಯಾಕರಣಿಗಳೆಲ್ಲರೂ ತಪ್ಪಾಗಿ ಗ್ರಹಿಸಿಕೊಂಡಿದ್ದಾರೆ. ನಿಜಕ್ಕೂ **ಕಪ್ಪುಹಾವು** ಎಂಬುದು ಕನ್ನಡದ ವಾಕ್ಯರಚನೆಯ ನಿಯಮಗಳ ಪ್ರಕಾರ ಸಿದ್ಧವಾದ ಪದಗುಚ್ಛವಲ್ಲದೆ ಸಮಸ್ತಪದವಲ್ಲ. ಸಮಸ್ತಪದಗಳಲ್ಲಿ ಕಾಣಿಸುವ ಗುಣಧರ್ಮಗಳಾವುವೂ ಅದರಲ್ಲಿ ಕಾಣಿಸುವುದಿಲ್ಲ. ಇದೇ ರೀತಿಯಲ್ಲಿ ನಾಮಪದದೊಂದಿಗೆ ವಿಶೇಷಣವನ್ನು ಸೇರಿಸಿ ರಚಿತವಾದ **ದೊಡ್ಡಮನೆ, ಚಿಕ್ಕಪುಸ್ತಕ, ಕೆಂಪುಶಾಯಿ, ಬಿಳಿಕಾಗದ** ಮೊದಲಾದವುಗಳೂ ಕೂಡ. ಅವುಗಳಲ್ಲಿ ಮೊದಲನೇ ಅಂಗವಾಗಿ ಬರುವ ಶಬ್ದ ವಿಭಕ್ತಿ ಪ್ರತ್ಯಯದೊಂದಿಗೆ ಬಂದಿಲ್ಲವಾದರೂ, ಕನ್ನಡದಲ್ಲಿ ಸಮಸ್ತಪದಗಳಲ್ಲ ಬರಿಯ ಪದಗುಚ್ಛಗಳು.

ಇಲ್ಲಿ ಗಮನಿಸಬೇಕಾಗಿರುವ ಅಂಶವೇನೆಂದರೆ, ಅಂಗಗಳಾಗಿ ಬರುವ ಎರಡು ನಾಮಪದಗಳನ್ನು ವಿಭಕ್ತಿ ಪ್ರತ್ಯಯವೊಂದು ಪ್ರತ್ಯೇಕಿಸುತ್ತದೆಯೇ ಅಥವಾ ಇಲ್ಲವೇ ಎಂಬ ವಿಷಯದ ಆಧಾರದ ಮೇಲೆ ಸಂಸ್ಕೃತದಲ್ಲಿ ಪದಗುಚ್ಛಗಳನ್ನು ಸಮಸ್ತಪದಗಳಿಂದ ಬೇರ್ಪಡಿಸಿ ಹೇಳಲು ಸಾಧ್ಯವಿದೆ. ಆದರೆ ಕನ್ನಡದಲ್ಲಿ ಇದು ಸಾಧ್ಯವಿಲ್ಲ.

## (೩) ವಿಶೇಷಣಗಳು ಮತ್ತು ವಿಶೇಷ್ಯಗಳು

ಸಂಸ್ಕೃತದಲ್ಲಿ ನಾಮಪದ ಮತ್ತು ವಿಶೇಷಣಗಳೆಂಬ ಎರಡು ಬೇರೆ ಬೇರೆ ಪದವರ್ಗಗಳಿಗೆ ಸೇರುವ ಶಬ್ದಗಳಿಲ್ಲವಾದುದರಿಂದ ಅದರ ಪದಗುಚ್ಛಗಳಲ್ಲಿ ಬರುವ ಶಬ್ದಗಳೊಳಗೆ ವಿಶೇಷಣ-ವಿಶೇಷ್ಯ ಸಂಬಂಧವನ್ನು ಕಲ್ಪಿಸುವುದು ಬಹಳ ಕಷ್ಟ. ಉದಾಹರಣೆಗಾಗಿ ಮೇಲೆ ಕೊಟ್ಟಿರುವ **ಕೃಷ್ಣಃ ಸರ್ಪಃ** ಎಂಬ ಪದಗುಚ್ಛದಲ್ಲಿ ಯಾವುದು ವಿಶೇಷಣ ಮತ್ತು ಯಾವುದ ವಿಶೇಷ್ಯ ಎಂಬುದನ್ನು ನಿಷ್ಕೃಷ್ಟವಾಗಿ ತಿಳಿಸಿ ಹೇಳಲು ಸಾಧ್ಯವಾಗದು. ಪದಗುಚ್ಛಗಳ ಮೊದಲನೆಯ ಸ್ಥಾನದಲ್ಲಿ ಬರುವ ಪದ ವಿಶೇಷಣವೆಂದು ಹೇಳುವುದಾದರೆ **ಸರ್ಪಃ ಕೃಷ್ಣಃ** ಎಂಬುದಾಗಿ ಆ ಪದಗುಚ್ಛದಲ್ಲಿರುವ ಪದಗಳ ಸ್ಥಾನವನ್ನು ಬದಲಿಸಲು ಸಾಧ್ಯವಿದೆಯಾದ ಕಾರಣ **ಸರ್ಪಃ** ಎಂಬುದೂ ಕೂಡ ಮೊದಲಿನ ಸ್ಥಾನಕ್ಕೆ ಬಂದು ವಿಶೇಷಣವೆಂದೆನಿಸಬಲ್ಲುದು. ಈ ಕಾರಣಕ್ಕಾಗಿ ಯಾವುದು ವಿಶೇಷಣ ಮತ್ತು ಯಾವುದು ವಿಶೇಷ್ಯ ಎಂಬುದು ಇಂತಹ

ಪದಗುಚ್ಛಗಳನ್ನು ಬಳಸುವವರ ದೃಷ್ಟಿಕೋನವನ್ನವಲಂಬಿಸಿದೆಯಲ್ಲದೆ ಅವುಗಳಲ್ಲಿ ಅಂಗಗಳಾಗಿ ಬರುವ ಶಬ್ದಗಳ ಸ್ವರೂಪವನ್ನವಲಂಬಿಸಿಲ್ಲ ಎಂಬುದಾಗಿ ಪತಂಜಲಿಯಂತಹ ಸಂಸ್ಕೃತ ವೈಯಾಕರಣಿಗಳು ಅಭಿಪ್ರಾಯಪಟ್ಟಿದ್ದಾರೆ.

ಕನ್ನಡದ ಪದಗುಚ್ಛಗಳು ಇದಕ್ಕಿಂತ ತೀರ ಭಿನ್ನವಾದವುಗಳು. ಕನ್ನಡದ **ಕಪ್ಪು ಹಾವು** ಎಂಬ ಪದಗುಚ್ಛದಲ್ಲಿ **ಕಪ್ಪು** ಎಂಬುದು ಮಾತ್ರವೇ ವಿಶೇಷಣವಾಗಿ ನಿಲ್ಲಬಲ್ಲುದು ಮತ್ತು ಹಾವು ಎಂಬುದು ಮಾತ್ರವೇ ವಿಶೇಷ್ಯವಾಗಿ ನಿಲ್ಲಬಲ್ಲುದು. ಅದರಲ್ಲಿರುವ ಶಬ್ದಗಳ ಸ್ಥಾನವನ್ನು ಬದಲಾಯಿಸಿ **ಹಾವು ಕಪ್ಪು** ಎಂದು ಹೇಳಿದೆವಾದರೆ ಅದು ಒಂದು ಪದಗುಚ್ಛವಾಗಿ ಉಳಿಯದೆ ವಾಕ್ಯವಾಗುತ್ತದೆ.

ಕನ್ನಡದಲ್ಲಿ ಮೊದಲನೆಯ ಅಂಗ ನಾಮಪದವಾಗಿರುವ **ಕೈದೀಪ, ತಾಯಿಮನೆ** ಮೊದಲಾದ ಸಮಸ್ತಪದಗಳಿಗೂ ಮತ್ತು ಮೊದಲನೆಯ ಅಂಗ ವಿಶೇಷಣವಾಗಿರುವ **ದೊಡ್ಡಮ್ಮ, ಬೆಣ್ಕಲ್ಲು** ಮೊದಲಾದ ಸಮಸ್ತಪದಗಳಿಗೂ ನಡುವೆ ಸ್ಪಷ್ಟವಾದ ವ್ಯತ್ಯಾಸಗಳಿವೆ; ಆದರೆ ಸಂಸ್ಕೃತದಲ್ಲಿ ಇಂತಹ ವ್ಯತ್ಯಾಸಗಳಿಲ್ಲ. ಸಂಸ್ಕೃತದಲ್ಲಿ ಗುಣಧರ್ಮವನ್ನು ಸೂಚಿಸುವ ಪದದೊಂದಿಗೆ ವಸ್ತು, ಪ್ರಾಣಿ ಮೊದಲಾದುವನ್ನು ಸೂಚಿಸುವ ಪದವನ್ನು ಸೇರಿಸಿ ರಚಿಸಿರುವ **ಕೃಷ್ಣಸರ್ಪಃ** ಎಂಬಂತಹ ಸಮಸ್ತಪದವನ್ನು ಮಾತ್ರವಲ್ಲದೆ, ವಸ್ತುವನ್ನು ಸೂಚಿಸುವ ಪದದೊಂದಿಗೆ ಇನ್ನೊಂದು ಅಂತಹದೇ ಪದವನ್ನು ಸೇರಿಸಿ ರಚಿಸಿರುವ **ಚಂದ್ರಮುಖಂ, ಗೋಗರ್ಭಿಣೀ** ಎಂಬಂತಹ ಸಮಸ್ತಪದಗಳನ್ನೂ ಕರ್ಮಧಾರಯವೆಂದು ಪರಿಗಣಿಸಬೇಕಾಗಿದೆ (ನಿಜಕ್ಕೂ **ಕೃಷ್ಣಃ** ಎಂಬುದು ಸಂಸ್ಕೃತದಲ್ಲಿ **ಕಪ್ಪು** ಎಂಬುದಾಗಿ ಗುಣಧರ್ಮವನ್ನು ಪಡೆದಿರುವ ವ್ಯಕ್ತಿ ಇಲ್ಲವೇ ವಸ್ತುವನ್ನು ಅದು ಗುರುತಿಸುತ್ತದೆ ಎಂಬುದನ್ನು ನಾವು ಎರಡನೇ ಅಧ್ಯಾಯದಲ್ಲಿ ನೋಡಿರುವೆವು). ಹಾಗಾಗಿ ಸಂಸ್ಕೃತದಲ್ಲಿ ಎರಡು ನಾಮಪದಗಳ ಸೇರಿಕೆಯಿಂದ ರಚಿತವಾದ ತತ್ಪುರುಷಕ್ಕೂ ಮತ್ತು ಈ ಕರ್ಮಧಾರಯಕ್ಕೂ ನಡುವಿರುವ ವ್ಯತ್ಯಾಸ ಅವುಗಳ ಅಂಗಗಳಾಗಿ ಬರುವ ಪದಗಳು ವಿಗ್ರಹವಾಕ್ಯದಲ್ಲಿ ಯಾವ ವಿಭಕ್ತಿಯ ಮೂಲಕ ಸಂಬಂಧಿತವಾಗುತ್ತವೆ ಎಂಬುದು ಮಾತ್ರ. ಅವು ಪ್ರಥಮಾವಿಭಕ್ತಿಯ ಮೂಲಕ ಸಂಬಂಧಿತವಾಗುವುವಾದರೆ ಕರ್ಮಧಾರಯ ಮತ್ತು ಇತರ ವಿಭಕ್ತಿಗಳ ಮೂಲಕ ಸಂಬಂಧಿತವಾಗುವುವಾದರೆ ತತ್ಪುರುಷ.

ಕನ್ನಡಕ್ಕೂ ಮತ್ತು ಸಂಸ್ಕೃತಕ್ಕೂ ನಡುವೆ ಇಂತಹ ಸಮಸ್ತಪದಗಳ ರಚನೆಯಲ್ಲಿ ಬಹಳ ಮುಖ್ಯವಾದ ವ್ಯತ್ಯಾಸಗಳಿವೆಯಾದ ಕಾರಣ ಕನ್ನಡದ ಸಮಸ್ತಗಳನ್ನು ಸಂಸ್ಕೃತದ ಸಮಸ್ತಪದಗಳ ಹಾಗೆಯೇ ಎಂದು ವಿವರಿಸಲು ಯತ್ನಿಸಿದಲ್ಲಿ ಮತ್ತು ಅವನ್ನು ಸಂಸ್ಕೃತದ ತತ್ಪುರುಷ, ಕರ್ಮಧಾರಯ ಮತ್ತು ದ್ವಿಗುಗಳೆಂಬ ಸಮಾಸಗಳಲ್ಲಿ ವಿಂಗಡಿಸಲು ಯತ್ನಿಸಿದಲ್ಲಿ ಅದು ಎಂದಿಗೂ ಸಫಲವಾಗದು.

## (೪) ಸುಬಂತ ಪ್ರತ್ಯಯ

ಸಂಸ್ಕೃತದ ನಾಮಪದಗಳು ಮನುಷ್ಯರನ್ನು ಗುರುತಿಸುತ್ತಿರಲಿ ಇಲ್ಲವೇ ಬೇರೆ ಪ್ರಾಣಿ, ಮರ-ಗಿಡ, ವಸ್ತು, ವಿಷಯ ಮೊದಲಾದುವನ್ನು ಗುರುತಿಸುತ್ತಿರಲಿ, ಅವುಗಳ ಲಿಂಗವೆಂಬುದು ಆ ಪದಗಳ ಕೊನೆಯ ಅಕ್ಷರವೆಂತಹದು ಮತ್ತು ಅವುಗಳೊಂದಿಗೆ ಎಂತಹ ವಿಭಕ್ತಿ ಪ್ರತ್ಯಯಗಳು ಸೇರುತ್ತವೆ ಎಂಬ ವಿಷಯದ ಮೇಲೆ ಅವಲಂಬಿಸಿದೆ. ಹಾಗಾಗಿ ನೃಪ (ಅರಸು), ವೃಕ್ಷ (ಮರ) ಅಶ್ವ (ಕುದುರೆ), ಅನಿಲ (ಗಾಳಿ) ಮೊದಲಾದುವನ್ನು ಪುಲ್ಲಿಂಗ

ಶಬ್ದಗಳೆಂದೂ, ಜನನಿ (ತಾಯಿ), **ಮಾಲಾ** (ಮಾಲೆ), **ಆಜ್ಞಾ** (ಆಜ್ಞೆ), **ಧನೂ** (ಬಿಲ್ಲು), **ತುಷ್ಟಿ** (ಸಂತೋಷ) ಮೊದಲಾದುವನ್ನು ಸ್ತ್ರೀಲಿಂಗ ಶಬ್ದಗಳೆಂದೂ ಮತ್ತು **ಜ್ಞಾನ** (ತಿಳುವಳಿಕೆ), **ಉದಕ** (ನೀರು), ಬ್ರಹ್ಮ (ಪರಮಾತ್ಮ), **ಕಲತ್ರ** (ಹೆಂಡತಿ), **ಪುರ** (ಪಟ್ಟಣ) ಮೊದಲಾದುವುಗಳನ್ನು ನಪುಂಸಕಲಿಂಗ ಶಬ್ದಗಳೆಂದೂ ಹೇಳಬೇಕಾಗುತ್ತದೆ. ಇದಲ್ಲದೆ ಸಂಸ್ಕೃತದಲ್ಲಿ ಒಂದು ಪದದ ಲಿಂಗವನ್ನು ಸೂಚಿಸುವ ಪ್ರತ್ಯಯ ಅದರ ವಚನ ಮತ್ತು ವಿಭಕ್ತಿಗಳನ್ನು ಸೂಚಿಸುವ ಪ್ರತ್ಯಯಕ್ಕಿಂತ ಭಿನ್ನವಾದುದಲ್ಲ; ಇವು ಮೂರನ್ನೂ ಒಂದೇ ಪ್ರತ್ಯಯ ಸೂಚಿಸುತ್ತದೆ.

ಕನ್ನಡ ನಾಮಪದಗಳ ಲಿಂಗ ಭೇದ ಈ ರೀತಿ ಅವುಗಳ ಕೊನೆಯ ಅಕ್ಷರವನ್ನು ಇಲ್ಲವೇ ವಿಭಕ್ತಿ ಪ್ರತ್ಯಯದ ರೂಪವನ್ನು ಅವಲಂಬಿಸಿರದೆ ಅವು ಗುರುತಿಸುವ ವ್ಯಕ್ತಿ, ವಸ್ತು ಮೊದಲಾದವುಗಳ ಸ್ವರೂಪವನ್ನವಲಂಬಿಸಿದೆ. ಸಾಧಾರಣವಾಗಿ ಗಂಡಸರನ್ನು ಗುರುತಿಸುವ ನಾಮಪದಗಳು ಪುಲ್ಲಿಂಗದಲ್ಲೂ, ಹೆಂಗಸರನ್ನು ಗುರುತಿಸುವ ನಾಮಪದಗಳು ಸ್ತ್ರೀಲಿಂಗದಲ್ಲೂ ಮತ್ತು ಉಳಿದ ನಾಮಪದಗಳು ನಪುಂಸಕಲಿಂಗದಲ್ಲೂ ಬರುತ್ತವೆಯೆಂದು ಕನ್ನಡದಲ್ಲಿ ಹೇಳಲು ಸಾಧ್ಯವಿದೆ. ಇದಕ್ಕೆ ಕೆಲವೇ ಕೆಲವು ಅಪವಾದಗಳು ಮಾತ್ರ ಇವೆ. ಈ ಕಾರಣಕ್ಕಾಗಿ ಕನ್ನಡದ ಅರ್ಥಕೋಶಗಳಲ್ಲಿ ನಾಮಪದಗಳ ಲಿಂಗ ಯಾವುದು ಎಂಬುದನ್ನು ಸೂಚಿಸುವ ಆವಶ್ಯಕತೆಯಿಲ್ಲ. ಆದರೆ ಸಂಸ್ಕೃತದ ಅರ್ಥಕೋಶಗಳಲ್ಲಿ ಈ ವಿಷಯವನ್ನು ಸೂಚಿಸುವುದು ಅತ್ಯವಶ್ಯ.

ಸಂಸ್ಕೃತದ ಬಹುವ್ರೀಹಿ ಸಮಾಸಕ್ಕೂ ಮತ್ತು ಕನ್ನಡದ ಬಹುವ್ರೀಹಿ ಸಮಾಸಕ್ಕೂ ನಡುವಿರುವ ವ್ಯತ್ಯಾಸವನ್ನು ತಿಳಿದುಕೊಳ್ಳುವುದು ಅವಶ್ಯ. ಸಂಸ್ಕೃತದಲ್ಲಿ **ಪೀತಾಂಬರಃ** ಎಂಬುದು **ಪೀತ** (ಹಳದಿ) ಮತ್ತು **ಅಂಬರ** (ಬಟ್ಟೆ) ಎಂಬ ಎರಡು ಪದಗಳು ಒಟ್ಟು ಸೇರಿ ಸಮಸ್ತಪದವಾಗಿ, ಆ ಪದಕ್ಕೆ ಪುಲ್ಲಿಂಗ - ಏಕವಚನ - ಪ್ರಥಮಾವಿಭಕ್ತಿ ಪ್ರತ್ಯಯವನ್ನು ಸೇರಿಸುವುದರ ಮೂಲಕ ಸಿದ್ಧವಾಗಿದೆ. ವಿಭಕ್ತಿ ಪ್ರತ್ಯಯ ಪದರೂಪ ಪ್ರತ್ಯಯವಾದ ಕಾರಣ (ಎಂದರೆ ಅದು ಪದದ ಅಂಗವಲ್ಲವಾದ ಕಾರಣ) ಈ ಸಮಸ್ತಪದದಲ್ಲಿ ಎರಡು ಪದಗಳು ಮಾತ್ರ ಇವೆ. ಇದರ ಕೇಂದ್ರ ಬಿಂದು ಪೀತ ಇಲ್ಲವೇ ಅಂಬರ ಎಂಬ ಈ ಎರಡು ಪದಗಳ ಮೇಲೆ ಬೀಳದೆ ಬೇರೊಂದು ಪದದ ಮೇಲೆ ಎಂದರೆ (ಹಳದಿ ಬಟ್ಟೆಯನ್ನು ಧರಿಸಿದ) **ವ್ಯಕ್ತಿ** ಎಂಬ ಪದದ ಮೇಲೆ ಬೀಳುವ ಕಾರಣ ಇದು ಬಹುವ್ರೀಹಿ ಸಮಾಸಕ್ಕೆ ಉದಾಹಣೆಯಾಗಬಲ್ಲುದು.

ಆದರೆ ಕನ್ನಡದಲ್ಲಿ ಇದಕ್ಕೆ ಸಮಾನವಾಗಿ ತೋರುವ **ಹಣೆಗಣ್ಣ**, **ಚಲವಾದಿ** ಮೊದಲಾದ ಸಮಸ್ತಪದಗಳು ಬಹುವ್ರೀಹಿ ಸಮಾಸಕ್ಕೆ ಉದಾಹರಣೆಗಳಾಗಲಾರವು. ಯಾಕೆಂದರೆ ಈ ಪದಗಳ ಕೊನೆಯಲ್ಲಿ ಬರುವ **ಅ** ಮತ್ತು ಇ ಎಂಬುವುಗಳು ಬಹುವಚನ ಮತ್ತು ವಿಭಕ್ತಿ ಪ್ರತ್ಯಯಗಳಿಂದ ಭಿನ್ನವಾದ ಪದರಚನೆಯ ಪ್ರತ್ಯಯಗಳಾಗಿದ್ದು ಅವುಗಳ ಪ್ರಯೋಗವನ್ನು ಪದರಚನೆಯಲ್ಲೇನೇ ಸಾಧಿಸುವುದು ಅವಶ್ಯ. ಹಾಗಾಗಿ, ಈ ಸಮಸ್ತಪದಗಳ ಕೇಂದ್ರಬಿಂದು ಅವುಗಳ ಅಂಗಗಳಾಗಿರುವ **ಕಣ್ಣ**, **ವಾದಿ** ಎಂಬ ಪದಗಳ ಮೇಲೆ, ಇಲ್ಲವೇ **ಕಣ್ಣು**, **ವಾದಿ** ಎಂಬುವುಗಳ ಅನಂತರ ಬರುವ ಪದರಚನೆಯ ಪ್ರತ್ಯಯ (ಅ ಮತ್ತು ಇ)ಗಳ ಮೇಲೆ ಬೀಳುವುದೆಂದು ಹೇಳಬೇಕಾಗುತ್ತದೆ. ಹಾಗಾಗಿ ಈ ಸಮಸ್ತಪದಗಳು ಬಹುವ್ರೀಹಿಗಳಲ್ಲ.

## (೫) ಅವ್ಯಯೀಭಾವ ಸಮಾಸ

''ಅವ್ಯಯೀಭಾವ''ವೆಂಬ ಸಂಸ್ಕೃತ ಸಮಾಸವನ್ನು ಕನ್ನಡಕ್ಕೆ ಹೊರಿಸಹೋದುದರಿಂದಾಗಿ ಹಲಕೆಲವು ಸಮಸ್ಯೆಗಳು ಉದ್ಭವಿಸಿವೆ. ಈ ಸಮಾಸವನ್ನು ತೋರಿಸುವ ಸಮಸ್ತಪದಗಳು ಸಂಸ್ಕೃತದಲ್ಲಿ ಅವ್ಯಯ (ಕ್ರಿಯಾವಿಶೇಷಣ)ಗಳಾಗಿರುತ್ತವೆ ಮತ್ತು ಅವುಗಳ ಮೊದಲನೇ ಅಂಗವಾಗಿರುವ ಶಬ್ದದ ಮೇಲೆ ಅವುಗಳ ಕೇಂದ್ರ ಬಿಂದುವಿರುತ್ತದೆ. ಉದಾಹರಣೆಗಾಗಿ **ಉಪಕೃಷ್ಣಂ** (ಕೃಷ್ಣನ ಹತ್ತಿರ) ಎಂಬ ಸಂಸ್ಕೃತ ಶಬ್ದದಲ್ಲಿ ಕೇಂದ್ರ ಬಿಂದು **ಉಪ** (ಹತ್ತಿರ) ಎಂಬುದರ ಮೇಲಿದೆ. ಇದಲ್ಲದೆ ಈ ಸಮಸ್ತಪದ ಒಂದು ನಾಮಪದವಾಗಿರದೆ ಅವ್ಯಯವಾಗಿದೆ.

ಆದರೆ ಕನ್ನಡದಲ್ಲಿ ಈ ಸಮಾಸಕ್ಕೆ ಉದಾಹರಣೆಯಾಗಿ ಕೊಡುವ ಸಮಸ್ತಪದಗಳು ಅವ್ಯಯ (ಇಲ್ಲವೇ ಕ್ರಿಯಾವಿಶೇಷಣ)ಗಳೂ ಅಲ್ಲ, ಅವುಗಳ ಕೇಂದ್ರಬಿಂದು ಮೊದಲನೆಯ ಅಂಗವಾಗಿರುವ ಶಬ್ದದ ಮೇಲೂ ಬೀಳುವುದಿಲ್ಲ. ಉದಾಹರಣೆಯಾಗಿ ಹಿಂಗಾಲು ಎಂಬುದು ಕಾಲಿನ ಹಿಂಭಾಗವನ್ನು ಸೂಚಿಸುತ್ತಿದ್ದು ಒಂದು ನಾಮಪದವಾಗಿದೆ (ಕ್ರಿಯಾವಿಶೇಷಣವಲ್ಲ); ಅದರ ಕೇಂದ್ರಬಿಂದು **ಹಿಂದೆ** ಇಲ್ಲವೇ **ಕಾಲು** ಎಂಬ ಪದಗಳ ಮೇಲಿರದೆ ಸಮಸ್ತಪದದ ಹೊರಗಿರುವ **ಭಾಗ** ಎಂಬ ಪದದ ಮೇಲಿದೆ.

ಕನ್ನಡದ ಈ ಸಮಸ್ತಪದಗಳು ಸಾಮಾನ್ಯವಾಗಿ ವಸ್ತುಗಳ ಭಾಗ ಇಲ್ಲವೇ ಅಂಶವೊಂದನ್ನು ಗುರುತಿಸುವುವಾದ ಕಾರಣ ಅವುಗಳಲ್ಲಿ ಕಾಣಿಸುವ ಸಮಾಸವನ್ನು ''ಅಂಶಿ'' ಎಂದು ಕರೆಯುವುದು ಸರಿ ಎಂದು ಕೆಲವರು ವಾದಿಸಿದ್ದಾರೆ. ಆದರೆ ಕನ್ನಡದಲ್ಲಿ ಈ ರೀತಿಯ ಸಮಸ್ತಪದಗಳೆಲ್ಲವೂ ''ಅಂಶ''ವನ್ನು ಗುರುತಿಸುತ್ತಿಲ್ಲ. ಉದಾಹರಣೆಗಾಗಿ ಚಿಕ್ಕಮ್ಮ ಎಂಬ ಪದದ ಆಂತರಿಕ ರಚನೆ ಹಿಂಗಾಲು ಎಂಬುದರ ಆಂತರಿಕ ರಚನೆಯಂತೆಯೇ ಇರುವುದನ್ನು ಗಮನಿಸಬಹುದು. ಕನ್ನಡದ ಮಟ್ಟಿಗೆ ಈ ರೀತಿಯ ಸಮಸ್ತಪದಗಳನ್ನು ವಿಶೇಷಣಯುಕ್ತ ಸಮಸ್ತಪದಗಳ ಒಂದು ಭಾಗ ಎಂಬುದಾಗಿಯೂ ಮತ್ತು ಕೇಂದ್ರಬಿಂದು ಸಮಸ್ತಪದದ ಹೊರಗಿರುವ ಕಾರಣ ''ಬಹುವ್ರೀಹಿ'' ಎಂಬ ಸಂಸ್ಕೃತ ಸಮಾಸಕ್ಕೆ ಸಮನಾಗಿರುವಂತಹದು ಎಂಬುದಾಗಿಯೂ ಹೇಳಿದರೆ ಮಾತ್ರವೇ ಈ ಪದಗಳ ರಚನೆ ಸ್ಪಷ್ಟವಾದೀತು.

## (೬) ದ್ವಂದ್ವ ಸಮಾಸ

''ದ್ವಂದ್ವ'' ಎಂಬ ಇನ್ನೊಂದು ಸಮಾಸವನ್ನು ತೋರಿಸುವುವೆಂದು ಹೇಳಲಾಗುವ ಉದಾಹರಣೆಗಳಲ್ಲಿ ಯಾವುವೂ ಕನ್ನಡದಲ್ಲಿ ಸಮಸ್ತಪದಗಳಾಗಿ ಪ್ರಯುಕ್ತವಾಗುತ್ತಿಲ್ಲ. ಅವು ಪದಗುಚ್ಛಗಳು ಮಾತ್ರ. **ರಾಮಲಕ್ಷ್ಮಣರು** ಇಲ್ಲವೇ **ಅಣ್ಣತಮ್ಮಂದಿರು** ಎಂಬುದರಲ್ಲಿ ಎರಡು ನಾಮಪದಗಳನ್ನು ಒಟ್ಟು ಸೇರಿಸಿ ಬಹುವಚನದೊಂದಿಗೆ ಹೇಳಲಾಗಿದೆಯಲ್ಲದೆ ಅವನ್ನು ಒಂದೇ ಪದವಾಗಿ ಪರಿವರ್ತಿಸಿಲ್ಲ. ಅವುಗಳ ಅರ್ಥವನ್ನೂ ಕೂಡ ನೇರವಾಗಿ ಅವುಗಳ ಆಂತರಿಕ ರಚನೆಯಿಂದಲೇನೇ ಪಡೆಯಲು ಸಾಧ್ಯವಿದೆ.

## (೭) ಗಮಕ ಸಮಾಸ

ಕನ್ನಡಕ್ಕೆ ವಿಶಿಷ್ಟವಾಗಿದೆಯೆಂದು ಕೇಶಿರಾಜನು ಹೇಳಿರುವ ಗಮಕ ಮತ್ತು ಕ್ರಿಯಾ ಸಮಾಸಗಳೂ ಕೂಡ ನಿಜಕ್ಕೂ ಸಮಾಸಗಳಲ್ಲ; ಅವಕ್ಕೆ ಉದಾಹರಣೆಗಳಾಗಿ ಕೊಟ್ಟಿರುವುವೆಲ್ಲ

ಪದಗುಚ್ಛಗಳಲ್ಲದೆ ಸಮಸ್ತಪದಗಳಲ್ಲ. ಉದಾಹರಣೆಗಾಗಿ ಮೊದಲನೆಯ ಅಂಗದಲ್ಲಿ ಷಷ್ಠೀ ವಿಭಕ್ತಿಯನ್ನು ಹಾಗೆಯೇ ಉಳಿಸಿಕೊಂಡಿರುವ **ಇಪ್ಪತ್ತೈದು, ಕಿರಿಯ ಮಗ** ಮೊದಲಾದವುಗಳನ್ನು ಮತ್ತು ಕೃದಂತ ಪ್ರತ್ಯಯವನ್ನು ಹಾಗೆಯೇ ಉಳಿಸಿಕೊಂಡಿರುವ **ತೂಗುವ ತೊಟ್ಟಿಲು, ಕಂಡ ವಿಚಾರ** ಮೊದಲಾದುವನ್ನು ಈ ರೀತಿ ಗಮಕ ಸಮಾಸಕ್ಕೆ ಉದಾಹರಣೆಗಳಾಗಿ ಕೊಡಲಾಗಿದೆ. ಆದರೆ ಇವು ಪದಗುಚ್ಛಗಳಲ್ಲದೆ ಸಮಸ್ತಪದಗಳೆಂದು ಹೇಳಲು ಅವುಗಳ ಬಳಕೆಯಲ್ಲಿ ಯಾವ ಆಧಾರವೂ ಇಲ್ಲ.

ಕನ್ನಡ ವೈಯಾಕರಣಿಗಳು ಇಲ್ಲಿಯೂ ಕೂಡ ಮೇಲೆ ಕರ್ಮಧಾರಯದ ವಿಷಯದಲ್ಲಿ ಮಾಡಿರುವಂತಹ ತಪ್ಪನ್ನೇ ಮಾಡಿದ್ದಾರೆ. ಕನ್ನಡ ಮತ್ತು ಸಂಸ್ಕೃತ ಭಾಷೆಗಳ ನಡುವೆ ವಾಕ್ಯರಚನೆಯಲ್ಲಿ ಕಾಣಿಸುವ ಅತ್ಯಂತ ಪ್ರಾಮುಖ್ಯವಾದ ವ್ಯತ್ಯಾಸವೊಂದನ್ನು ಅವರು ಸರಿಯಾಗಿ ಅರ್ಥಮಾಡಿಕೊಂಡಿಲ್ಲ ಎಂಬುದೇ ಇದಕ್ಕೆ ಕಾರಣ. ಈ ಎರಡು ಭಾಷೆಗಳಲ್ಲಿ ಕೃದಂತಗಳ ಪ್ರಯೋಗ ಹೇಗಿದೆಯೆಂಬುದನ್ನು ಈ ಕೆಳಗಿನ ವಾಕ್ಯಗಳನ್ನು ಪರಿಶೀಲಿಸುವುದರ ಮೂಲಕ ತಿಳಿಯಬಹುದು:

(೭) ತತ್ರ ಏಕಃ ಮೃತಃ ಸರ್ಪಃ ಅಸ್ತಿ.
ಅಲ್ಲಿ ಒಂದು ಸತ್ತ ಹಾವು ಇದೆ.

(೮) ರಾಮಃ ಏಕಂ ಮೃತಂ ಸರ್ಪಂ ಅಪಶ್ಯತ್.
ರಾಮ ಒಂದು ಸತ್ತ ಹಾವನ್ನು ನೋಡಿದ.

(೯) ರಾಮಃ ಏಕೇನ ಮೃತೇನ ಸರ್ಪೇಣ ಭೀತಃ.
ರಾಮ ಒಂದು ಸತ್ತ ಹಾವಿಗೆ ಹೆದರಿದ.



(೧೦) ರಾಮಃ ಏಕಸ್ಯ ಮೃತಸ್ಯ ಸರ್ಪಸ್ಯ ಉಪರಿ ಪಾದಂ ನಿಕ್ಷಿಪತ್.
ರಾಮ ಒಂದು ಸತ್ತ ಹಾವಿನ ಮೇಲೆ ಕಾಲಿರಿಸಿದ.

ಮೇಲಿನ ವಾಕ್ಯಗಳಲ್ಲಿ **ಮೃತಃ** ಎಂಬ ಸಂಸ್ಕೃತದ ಕೃದಂತರೂಪವೂ ಮತ್ತು **ಸತ್ತ** ಎಂಬ ಕನ್ನಡದ ಕೃದಂತ ರೂಪವೂ ಪ್ರಯುಕ್ತವಾಗಿವೆ. ಇವುಗಳಲ್ಲಿ ಸಂಸ್ಕೃತದ **ಮೃತಃ** ಎಂಬುದು ಬೇರೆ ಬೇರೆ ವಾಕ್ಯಗಳಲ್ಲಿ ಬೇರೆ ಬೇರೆ ಲಿಂಗ-ವಚನ-ವಿಭಕ್ತಿ ಪ್ರತ್ಯಯಗಳೊಂದಿಗೆ ಬಂದಿದೆಯಾದರೆ, ಕನ್ನಡದ **ಸತ್ತ** ಎಂಬುದು ಎಲ್ಲಾ ವಾಕ್ಯಗಳಲ್ಲೂ ಒಂದೇ ರೂಪದಲ್ಲಿ ಬಂದಿದೆ. ಕನ್ನಡದಲ್ಲಿ ಸಂಸ್ಕೃತದ ಹಾಗೆ ಕೃದಂತಗಳಿಗೆ ಲಿಂಗ-ವಚನ-ವಿಭಕ್ತಿ ಪ್ರತ್ಯಯಗಳನ್ನು ಸೇರಿಸುವ ಅವಶ್ಯಕತೆಯಿಲ್ಲ. ಮಾತ್ರವಲ್ಲ, ಹಾಗೆ ಸೇರಿಸಲು ಸಾಧ್ಯವೂ ಇಲ್ಲ. ಇದಕ್ಕೆ ಕಾರಣವೇನೆಂದರೆ ಕನ್ನಡದಲ್ಲಿ ಕೃದಂತಗಳು ವಿಶೇಷಣಗಳ ಹಾಗೆ ಪ್ರಯುಕ್ತವಾಗುವುವಲ್ಲದೆ ಸಂಸ್ಕೃತದಲ್ಲಿರುವಂತೆ ನಾಮಪದಗಳ ಹಾಗೆ ಪ್ರಯುಕ್ತವಾಗುವುದಿಲ್ಲ. (ನಾಮಪದಗಳ ಹಾಗೆ ಪ್ರಯೋಗಿಸಲು ಅವಕ್ಕೆ ಅವನು, ಅದು ಮೊದಲಾದ ಸರ್ವನಾಮಗಳನ್ನು ಸೇರಿಸಿಕೊಳ್ಳಬೇಕು. ಉದಾ: **ಸತ್ತುದಕ್ಕೆ, ಸತ್ತುದರಿಂದ** ಇತ್ಯಾದಿ).

ಸಂಸ್ಕೃತದ ಕೃದಂತಗಳನ್ನು ಲಿಂಗ-ವಚನ-ವಿಭಕ್ತಿ ಪ್ರತ್ಯಯಗಳಿಲ್ಲದೆಯೂ ಕೂಡ ನಾಮಪದಗಳೊಂದಿಗೆ ಬಳಸಲು ಸಾಧ್ಯವಿದೆ. ಆದರೆ ಅಂತಹ ಪ್ರಯೋಗಗಳನ್ನು ಮೇಲೆ ಕೊಟ್ಟಿರುವ ಪ್ರಯೋಗಗಳಿಂದ ಭಿನ್ನವಾದವುಗಳೆಂದು ತೋರಿಸುವುದಕ್ಕಾಗಿ

''ಸಮಸ್ತಪದ''ಗಳೆಂದು ಪರಿಗಣಿಸಲಾಗಿದೆ. ಇಂತಹ ಪ್ರಯೋಗಗಳನ್ನು ಈ ಕೆಳಗಿನ ವಾಕ್ಯಗಳಲ್ಲಿ ಕಾಣಬಹುದು:

(೧೧) ತತ್ರ ಏಕಃ ಮೃತಸರ್ಪಃ ಅಸ್ತಿ.
ಅಲ್ಲಿ ಒಂದು ಸತ್ತ ಹಾವು ಇದೆ.

(೧೨) ರಾಮಃ ಏಕಂ ಮೃತಸರ್ಪಂ ಅಪಶ್ಯತ್.
ರಾಮ ಒಂದು ಸತ್ತ ಹಾವನ್ನು ನೋಡಿದ.

(೧೩) ರಾಮಃ ಏಕೇನ ಮೃತಸರ್ಪೇಣ ಭೀತಃ.
ರಾಮ ಒಂದು ಸತ್ತಹಾವಿಗೆ ಹೆದರಿದ.

(೧೪) ರಾಮಃ ಏಕಸ್ಯ ಮೃತಸರ್ಪಸ್ಯ ಉಪರಿ ಪಾದಂ ನಿಕ್ಷಿಪತ್.
ರಾಮ ಒಂದು ಸತ್ತ ಹಾವಿನ ಮೇಲೆ ಕಾಲಿರಿಸಿದ.

ಮೇಲಿನ ಎಲ್ಲಾ ವಾಕ್ಯಗಳಲ್ಲೂ **ಮೃತ** ಎಂಬ ಕೃದಂತ (ನಾಮಪದ)ವು ಲಿಂಗ-ವಚನ-ವಿಭಕ್ತಿಪ್ರತ್ಯಯವಿಲ್ಲದೆ ನೇರವಾಗಿ **ಸರ್ಪ** ಎಂಬ ಇನ್ನೊಂದು ನಾಮಪದದೊಂದಿಗೆ ಬಂದಿದೆಯಾದ ಕಾರಣ ಮತ್ತು ಈ ರೀತಿ ನಾಮಪದವೊಂದನ್ನು ಲಿಂಗ-ವಚನ-ವಿಭಕ್ತಿ ಪ್ರತ್ಯಯವಿಲ್ಲದೆ ನೇರವಾಗಿ ಇನ್ನೊಂದು ನಾಮಪದದೊಂದಿಗೆ ಬಳಸುವುದು ಸಂಸ್ಕೃತದಲ್ಲಿ ಒಂದು ಪದರಚನೆಯ ನಿಯಮಕ್ಕೆ ಅನುಸಾರವಾಗಿ ನಡೆದಿದೆಯಾದ ಕಾರಣ, **ಮೃತಸರ್ಪ** ಎಂಬುದನ್ನೊಂದು ಸಮಸ್ತಪದವೆಂದು ಪರಿಗಣಿಸಲಾಗಿದೆ. ಕನ್ನಡದಲ್ಲಿ **ಸತ್ತ ಹಾವು** ಎಂಬುದು ಇದರಂತೆಯೇ ಕಾಣಿಸುವುದಾದರೂ ಅದು ಸಮಸ್ತಪದವಲ್ಲ. ಯಾಕೆಂದರೆ **ಸತ್ತ** ಎಂಬುದು ಲಿಂಗ-ವಚನ-ವಿಭಕ್ತಿ ಪ್ರತ್ಯಯಗಳೊಂದಿಗೆ ಬಾರದಿರುವುದಕ್ಕೆ ಕಾರಣ ಬೇರೆಯೇ ಇದೆ. ಕನ್ನಡದಲ್ಲಿ ಅದೊಂದು ನಾಮಪದವಾಗಿರದೆ ನಾಮಪದದೊಂದಿಗೆ ನೇರವಾಗಿ ವಿಶೇಷಣದ ಸ್ಥಾನದಲ್ಲಿ ಬರಲು ಸಾಧ್ಯವಿರುವ ಕ್ರಿಯಾರೂಪವಾಗಿದೆ. ಅದನ್ನು ಈ ರೀತಿ ನಾಮಪದ ದೊಂದಿಗೆ ಬಳಸಲು ಸಾಧ್ಯ ಎಂಬುದು ಕನ್ನಡದಲ್ಲಿ ಒಂದು ವಾಕ್ಯರಚನೆಯ ನಿಯಮವಲ್ಲದೆ ಪದರಚನೆಯ ನಿಯಮವಲ್ಲ. ಕನ್ನಡಕ್ಕೂ ಮತ್ತು ಸಂಸ್ಕೃತಕ್ಕೂ ನಡುವಿರುವ ಈ ಪ್ರಾಮುಖ್ಯವಾದ ವ್ಯತ್ಯಾಸವನ್ನು ಸರಿಯಾಗಿ ಅರ್ಥಮಾಡಿಕೊಳ್ಳದಿರುವುದೇ ಇಂತಹ ಕೃದಂತಯುಕ್ತ ಪದಗುಚ್ಛಗಳನ್ನು ಸಮಸ್ತಪದಗಳೆಂದು (ಗಮಕ ಸಮಾಸವೆಂದು) ಹೇಳಲು ಕಾರಣವಿರಬೇಕು.

### (೮) ಕ್ರಿಯಾ ಸಮಾಸ

ಕ್ರಿಯಾ ಸಮಾಸವೆಂಬ ಇನ್ನೊಂದು ಕನ್ನಡ ಸಮಾಸವೂ ಇದೇ ರೀತಿಯದು. **ಮರವೇರು, ಕೈಮುಗಿ, ಮರೆಹೋಗು** ಮೊದಲಾದ ಪದಗುಚ್ಛಗಳಲ್ಲಿ ಈ ಸಮಾಸವಿದೆಯೆಂದು ಹೇಳಲಾಗುತ್ತದೆ. ಆದರೆ ಇಲ್ಲಿ ಮೊದಲನೆಯ ಪದದ ವಿಭಕ್ತಿ ಪ್ರತ್ಯಯ ಲೋಪ ಗೊಂಡಿರುವುದು ಕನ್ನಡದ ಒಂದು ವಾಕ್ಯರಚನೆಯ ನಿಯಮದ ಆಧಾರದ ಮೇಲಲ್ಲದೆ ಪದರಚನೆಯ ನಿಯಮದ ಆಧಾರದ ಮೇಲಲ್ಲ. ಕ್ರಿಯಾಪದದೊಂದಿಗೆ ಬರುವ ಈ ನಾಮಪದಗಳನ್ನು ವಾಕ್ಯದ ಇತರ ಸ್ಥಾನಗಳಿಗೆ ವರ್ಗಾಯಿಸಿದಾಗ, ಇಲ್ಲವೇ ಅವುಗಳೊಂದಿಗೆ ಅವಧಾರಣಾರ್ಥಕ ಪ್ರತ್ಯಯವೊಂದನ್ನು ಬಳಸಿದಾಗ ಹೀಗೆ ಲೋಪಗೊಂಡ ವಿಭಕ್ತಿ

ಪ್ರತ್ಯಯ ಕಾಣಿಸಿಕೊಳ್ಳುವುದೆಂಬುದನ್ನು **ಮರವನ್ನು ರಾಜು ಏರುತ್ತಾನೆ. ಮರವನ್ನೂ ಏರಿದ** ಮೊದಲಾದ ಪ್ರಯೋಗಗಳಲ್ಲಿ ಕಾಣಬಹುದು. ಸಮಸ್ತಪದಗಳ ಅಂಗಗಳಾಗಿ ಬರುವ ಶಬ್ದಗಳನ್ನು ಈ ರೀತಿ ವಾಕ್ಯದಲ್ಲಿ ಬೇರೆ ಸ್ಥಾನಗಳಿಗೆ ವರ್ಗಾಯಿಸಲು ಇಲ್ಲವೇ ಅವುಗಳ ಮಧ್ಯದಲ್ಲಿ ಅವಧಾರಣಾರ್ಥಕ ಪ್ರತ್ಯಯಗಳನ್ನು ಬಳಸಲು ಸಾಧ್ಯವಾಗದೆಂಬುದನ್ನು ಗಮನಿಸಬಹುದು.

ಕನ್ನಡದಲ್ಲಿ ಈ ರೀತಿ ಬೇರೆ ಕಡೆಗಳಿಗೆ ವರ್ಗಾಯಿಸಲು ಇಲ್ಲವೇ ಅವಧಾರಣಾರ್ಥಕ ಪ್ರತ್ಯಯಗಳೊಂದಿಗೆ ಬಳಸಲು ಸಾಧ್ಯವಿಲ್ಲದಂತಹ ಅಂಗಗಳಿರುವ **ಮರೆಹೊಗು** ಎಂಬಂತಹ ಕೆಲವು ಸಂಯುಕ್ತ ಕ್ರಿಯಾಪದಗಳಿವೆ. ಆದರೆ ಇವನ್ನು ಸಮಸ್ತಪದಗಳೆಂದು ಪರಿಗಣಿಸದೆ ವಾಗ್ರೂಢಿಗಳೆಂದು ಪರಿಗಣಿಸುವುದೇ ಉತ್ತಮ.

## (೯) ಪಾರಿಭಾಷಿಕ ಪದಗಳ ಬಳಕೆ

ಕನ್ನಡದ ಸಮಸ್ತಪದಗಳನ್ನು ವಿಭಜಿಸಿ ಹೆಸರಿಸುವುದಕ್ಕಾಗಿ ಸಂಸ್ಕೃತದ ತತ್ಪುರುಷ, ಕರ್ಮಧಾರಯ, ದ್ವಿಗು, ಬಹುವ್ರೀಹಿ ಮೊದಲಾದ ಪಾರಿಭಾಷಿಕ ಪದಗಳನ್ನು ಬಳಸಲೇ ಬೇಕೆಂದಿದ್ದಲ್ಲಿ ಅವುಗಳ ಅರ್ಥವನ್ನು ಬಹಳಮಟ್ಟಿಗೆ ಬದಲಿಸಿಕೊಳ್ಳುವುದು ಅವಶ್ಯ ಎಂಬ ವಿಷಯ ಮೇಲಿನ ಪರಿಶೀಲನೆಯಿಂದ ಸ್ಪಷ್ಟವಾಗುತ್ತದೆ. ಉದಾಹರಣೆಗಾಗಿ ಕನ್ನಡದ ಸಮಸ್ತಪದಗಳಲ್ಲಿ ಮೊದಲನೆಯ ಅಂಗ ನಾಮಪದ, ಕ್ರಿಯಾಪದ ಇಲ್ಲವೇ ವಿಶೇಷಣಗಳಲ್ಲಿ ಒಂದಾಗಿರಲು ಸಾಧ್ಯ ಎಂಬ ವಿಷಯದ ಆಧಾರದ ಮೇಲೆ ಅವನ್ನು ನಾಮಪದಯುಕ್ತ, ಕ್ರಿಯಾಪದಯುಕ್ತ ಮತ್ತು ವಿಶೇಷಣಯುಕ್ತ ಎಂಬುದಾಗಿ ಮೇಲೆ ಹೆಸರಿಸಲಾಗಿತ್ತು. ಇದಕ್ಕೆ ಬದಲಾಗಿ ಅವನ್ನೇ ತತ್ಪುರುಷ, ಕ್ರಿಯಾಸಮಾಸ ಮತ್ತು ಕರ್ಮಧಾರಯ ಎಂಬುದಾಗಿ ಹೆಸರಿಸಲು ಸಾಧ್ಯವಿದೆ. ಆದರೆ ಹೀಗೆ ಮಾಡಿದಲ್ಲಿ ಇವತ್ತು ಕನ್ನಡ ವ್ಯಾಕರಣಗಳಲ್ಲಿ ಬಳಕೆಯಲ್ಲಿರುವಂತಹ ಅರ್ಥ ಈ ಪದಗಳಿಗೆ ಲಭಿಸಲಾರದೆಂಬುದನ್ನು ಗಮನಿಸಬೇಕು. ಹೀಗೆ ಮಾಡುವುದರಿಂದ ಕನ್ನಡ ವ್ಯಾಕರಣದ ಅಭ್ಯಾಸ ಸುಲಭವಾಗಬಹುದೇ ಅಥವಾ ಇನ್ನಷ್ಟು ತೊಡಕಿನದಾಗಬಹುದೇ ಎಂಬುದು ನಾವಿಲ್ಲಿ ಪರಿಗಣಿಸಬೇಕಾದ ವಿಷಯ.

ಕನ್ನಡದ ಸಮಸ್ತಪದಗಳನ್ನು ವಿಭಜಿಸುವಲ್ಲಿ ''ಬಹುವ್ರೀಹಿ'' ಎಂಬ ಪದವನ್ನು ಬಳಸಬೇಕಿದ್ದಲ್ಲಿ ಅದು ಮೇಲೆ ವಿವರಿಸಿದ ವಿಭಜನೆಯನ್ನು ಅಡ್ಡಕ್ಕೆ ಕತ್ತರಿಸುವಂತಹ ಒಂದು ವಿಭಜನೆಯಾದೀತು ಎಂಬುದನ್ನು ಗಮನಿಸುವುದವಶ್ಯ. ಯಾಕೆಂದರೆ ಕನ್ನಡದಲ್ಲಿ ನಾಮಪದಯುಕ್ತ ಮತ್ತು ವಿಶೇಷಣಯುಕ್ತಗಳೆಂಬ ಎರಡು ರೀತಿಯ ಸಮಸ್ತಪದಗಳಲ್ಲೂ ಕೂಡ ಕೇಂದ್ರಬಿಂದು ಸಮಸ್ತಪದದ ಒಳಗೆ ಅಥವಾ ಹೊರಗೆ ಇರಲು ಸಾಧ್ಯವಿದೆ. ಉದಾಹರಣೆಗಾಗಿ **ಇಲಿಕಿವಿ** ಮತ್ತು **ದೊಡ್ಡಮ್ಮ** ಎಂಬವುಗಳಲ್ಲಿ ಇದು ಹೊರಗಿದೆ ಮತ್ತು **ಬಯಲಾಟ** ಮತ್ತು **ಕೆಂದಾಳಿ** ಎಂಬವುಗಳಲ್ಲಿ ಒಳಗಿದೆ. ಕ್ರಿಯಾಪದಯುಕ್ತ ಸಮಸ್ತಪದಗಳಲ್ಲೂ ಈ ರೀತಿ ಎರಡು ವಿಧದವುಗಳಿರಲು ಸಾಧ್ಯವಿಲ್ಲವೆನ್ನುವಹಾಗಿಲ್ಲ.

*ಕನ್ನಡ ಶಬ್ದ ರಚನೆ, ೧೯೯೯, ಪು. ೧೧೭-೨೮*

# ೨೯. ಪದಾರ್ಥ ಚಿಂತಾಮಣಿ

● ಪಾಂ. ವೆಂ. ಆಚಾರ್ಯ

೧

**ಟಪಾಲಿಗೆ** ಕನ್ನಡದಲ್ಲಿ **ಅಂಚೆ** ಎಂಬ ಪದ ಬಳಕೆಯಲ್ಲಿದೆಯಲ್ಲ, ಅದು ಒಂದು ರೊಮ್ಯಾಂಟಿಕ್ ಪದವೆಂಬ ಭ್ರಮೆಯಲ್ಲಿ ನಾನು ಇದ್ದೆ. ನಳ-ದಮಯಂತಿ ಕಥೆಯಲ್ಲಿ ಇಬ್ಬರೂ ಪರಸ್ಪರ ಮುಖ ನೋಡದೆಯೇ ಪ್ರೇಮದಲ್ಲಿ ಬಿದ್ದು ಈ ಪ್ರೇಮಿಗಳ ನಡುವೆ ಸಂದೇಶವಿನಿಮಯ ಮಾಡುವುದು ಒಂದು ಹಂಸ ಅಲ್ಲವೆ? ಹಂಸಕ್ಕೆ ಕನ್ನಡ ತದ್ಭವ ಪದ ಅಂಚೆಯೆಂದು. ಅದನ್ನೇ ಟಪಾಲಿಗೆ ಯಾರೋ ಭಾವಿಕರು ಉಪಯೋಗಕ್ಕೆ ತಂದಿರಬೇಕೆಂದು ನ್ಯಾಯವಾದ ಊಹೆಯಾದೀತು. ಆದರೆ ರೊಮ್ಯಾಂಟಿಕರ ದುರ್ದೈವದಿಂದ ಈ ಅಂಚೆಗೂ ನಳ-ದಮಯಂತಿಯರ ಹಂಸಕ್ಕೂ ಏನೂ ಸಂಬಂಧ ಇಲ್ಲವೆಂಬುದು ಅರೊಮ್ಯಾಂಟಿಕ್ ತಥ್ಯ. ಅದು ಪತ್ರ ಸಾಗಿಸುವ ಒಂದು ಹಳೆಗಾಲದ ವಿಧಾನಕ್ಕೆ ಸಾಕ್ಷಿಯಾಗಿರುವುದರಿಂದ ಐತಿಹಾಸಿಕವಾಗಿ ಕುತೂಹಲಕಾರಿಯಾಗಿದೆ.

**ಅಂಚೆ** ಪದದ ಅರ್ಥ ಪ್ರಯಾಣದ **ಮಜಲು** ಅಥವಾ **ಮಜಲು ಮಜಲಾದ ಪಯಣ** ಎಂದು. ಈ ಅರ್ಥದಲ್ಲಿ ಮಲೆಯಾಳಿ, ತಮಿಳಲ್ಲಿ (ಅಂಚಲ್) ಮತ್ತು ತೆಲುಗಲ್ಲಿ (ಅಂಚಲು) ಜ್ಞಾತಿ ಪದಗಳಿವೆ. ಸುದ್ದಿಗಳನ್ನು, ಆಜ್ಞಾಪತ್ರಗಳನ್ನು ದೂರಪ್ರಾಂತಗಳಿಗೆ ಕಳಿಸಲು ಆಳರಸರು ಹಿಂದೆ ಪರಸ್ಪರ ವ್ಯವಹಾರ್ಯ ದೂರಗಳಲ್ಲಿ ಘಟ್ಟಗಳನ್ನು ಗೊತ್ತುಪಡಿಸಿಡುತ್ತಿದ್ದರು. ಒಬ್ಬ ಕಾಲಾಳು ಅಥವಾ ಕುದುರೆ ಸವಾರನ ಮೂಲಕ ಪತ್ರಗಳನ್ನು ಒಂದು ಮಜಲಿನವರೆಗೆ ಕಳಿಸಿ ಅಲ್ಲಿಂದ ಇನ್ನೊಬ್ಬನು ಅವುಗಳನ್ನು ತೆಗೆದುಕೊಂಡು ಮುಂದಿನ ಮಜಲಿಗೆ ಸಾಗಿಸುವುದು ಆಗಿನ ಟಪಾಲು ವ್ಯವಸ್ಥೆಯಾಗಿತ್ತು. ಹೀಗೆ ಪತ್ರವಹನ ಮಾಡುವವನಿಗೆ ತಮಿಳಿನಲ್ಲಿ ಅಂಚಲ್‌ಕಾರನ್ ಎಂದೇ ಹೆಸರಿತ್ತು; ನಾವು **ಅಂಚೆಯಾಳು** ಎನ್ನುತ್ತೇವೆ.

**ಟಪಾಲು** ಎಂಬ ಇನ್ನೊಂದು ಪದ ನಮಗೆ ಮರಾಠಿಯಿಂದ ಬಂದದ್ದು. ಟಪ್ಪಾ ಅಂದರೆ ಹಿಂದಿ ಮತ್ತು ಮರಾಠಿಯಲ್ಲಿ ಮಜಲು ಎಂದೇ ಅರ್ಥ. ಹಿಂದಿಯ **ಟಪ್ಪಾ** ಪ್ರಯಾಣದ ಡೋಲಿ ಹೊರುವವರನ್ನು ಬದಲಿಸುವ ಸ್ಥಳ, ಒಂದು ನಿಶ್ಚಿತ ದೂರ, ಇತ್ಯಾದಿ ಅರ್ಥಾತ್ ಅಂಚೆಯಂತೆ ಇದೂ ಹಿಂದಿನ ಕಾಲದ ಪತ್ರವಹನ ವ್ಯವಸ್ಥೆಯನ್ನೇ ಸೂಚಿಸುತ್ತದೆ.

ಮತ್ತೆ ಇಂಗ್ಲಿಷಿನ **ಪೋಸ್ಟ್**? ಅದರ ಅರ್ಥ ಕೂಡ ಪ್ರಯಾಣದ ಮಾರ್ಗದಲ್ಲಿ ಒಂದು ನಿಟ್ಟು, ಗೊತ್ತು, ಮಜಲು ಎಂಬುದಾಗಿಯೇ. ಪ್ರಯಾಣದಲ್ಲಿ ಕುದುರೆಗಳ ಬದಲಾವಣೆಯ ನಿಶ್ಚಿತ ಸ್ಥಾನ, ಸೈನಿಕರ ಶಿಬಿರ ಇತ್ಯಾದಿ. ಅದೂ ಪತ್ರಾದಿಗಳ ಸಾಗಾಟದ ಹಳೆಗಾಲದ ವಿಧಾನದ ಸೂಚಕವೇ. ಇದರ ಧಾತ್ವರ್ಥ ಲ್ಯಾಟಿನ್ನಿನಲ್ಲಿ (postis) ಇಡುವಿಕೆ, ಇಕ್ಕೆ ಎಂದು. ಹಿಂದಿಯ **ಡಾಕ್** ಕೂಡ ಇದೇ ಅರ್ಥದ ಪದ.

ಈ ಪದಗಳು ಈ ಅರ್ಥದಲ್ಲಿ ಬಳಕೆಗೆ ಬಂದ ಕಾಲವೂ ಗಮನಾರ್ಹವಾಗಿದೆ. ಕನ್ನಡದಲ್ಲಿ ಅಂಚೆ ಪದ ಮಾರ್ಗ ಎಂಬರ್ಥದಲ್ಲಿ ೧೨ನೇ ಶತಮಾನದಲ್ಲೇ ಪ್ರಯೋಗದಲ್ಲಿದ್ದಂತೆ ಮೋಳಿಗೆ ಮಾರಯ್ಯನ ವಚನದಿಂದ ತಿಳಿದರೂ ಟಪಾಲು ಎಂಬರ್ಥದಲ್ಲಿ ೧೬ನೇ

ಶತಮಾನದಲ್ಲಿ ತಾನೇ ಅದರ ಪ್ರಯೋಗ ಕಾಣಿಸುತ್ತದೆ. ಪೋಸ್ಟ್ ಪದ ಇಂಗ್ಲಿಷಿನಲ್ಲಿ ಆ ಅರ್ಥದಲ್ಲಿ ಬಳಕೆಗೆ ಬಂದದ್ದೂ ಅದೇ ಸುಮಾರಿಗೆ. ಟಪಾಲು ಎಂದು ಮರಾಠಿಯಲ್ಲಿ ತಲೆ ಹಾಕಿತೋ ತಿಳಿಯದು. ಆದರೆ ಇಂಗ್ಲಿಷಿಗೆ ಅದು ೧೮ನೇ ಶತಮಾನದ ಕೊನೆಗೆ ಪ್ರವೇಶಿಸಿತ್ತು.

* * * * *

೨

''ಎರಡಾದ ಮೇಲ **ಮೂರಾಗಿಯೇ** ಆಗುತ್ತದೆ'', ''**ಮೂರಕ್ಕೆ** ಮುಕ್ತಾಯ'' ಮೊದಲಾದ ಮಾತುಗಳು ಮನುಷ್ಯನ ಅತಿ ಪುರಾತನ ನಂಬಿಕೆಗಳನ್ನು ಪ್ರತಿಬಿಂಬಿಸುತ್ತವೆ. ಹೆಚ್ಚು ಕಡಿಮೆ ಎಲ್ಲ ಸಂಸ್ಕೃತಿಗಳಲ್ಲಿಯೂ ಸಂಖ್ಯೆಗಳನ್ನು ಕುರಿತ ನಂಬಿಕೆಗಳು ಇವೆ; ಮೂರನ್ನು ಕುರಿತವಂತೂ ಸಾರ್ವತ್ರಿಕವಾಗಿವೆ. ತ್ರಿಮೂರ್ತಿಗಳು ಹಿಂದುಗಳಿಗೆ ಹೇಗೋ ಕ್ರೈಸ್ತರಿಗೂ ಹಾಗೇ ಇದ್ದಾರೆ. ಸ್ವರ್ಗ ಮರ್ತ್ಯ ಪಾತಾಳ ಎಂಬ ಮೂರು ಲೋಕಗಳು ಭಾರತೀಯರಿಗಿವೆ. **ಏಳು ಲೋಕಗಳು** ನಮಗಿರುವಂತೆ ಪಾಶ್ಚಾತ್ಯರಿಗೂ ಇವೆ. ಪರಮ ಸಂತೋಷಗೊಂಡವನನ್ನು **ಏಳನೇ ಸ್ವರ್ಗ** seventh heavenನಲ್ಲಿದ್ದಾನೆ ಎಂದು ಪಾಶ್ಚಾತ್ಯರು ಹೇಳುತ್ತಾರೆ. ನಾವು ಸ್ವರ್ಗಕ್ಕೆ ಮೂರೇ ಗೇಣು ಉಳಿಯಿತು ಎಂದು ಹೇಳುತ್ತೇವೆ. ಮೂರು ಮತ್ತು ಏಳು ಹೆಚ್ಚು ಕಡಿಮೆ ಎಲ್ಲ ಸಂಸ್ಕೃತಿ ನಾಗರಿಕತೆಗಳಲ್ಲಿ ಧಾರ್ಮಿಕ ಮತ್ತು ಶಕುನಾತ್ಮಕ ಮಹತ್ವವನ್ನು ಹೊಂದಿವೆ. ಮಾನವಶಾಸ್ತ್ರಿಗಳ ಅಭಿಪ್ರಾಯದಲ್ಲಿ ಈ ಸಂಖ್ಯೆಗಳ ಗುಣಧರ್ಮಗಳಿಂದ ಪ್ರಾಚೀನ ಮಾನವನಿಗೆ ಆದ ಸೋಜಿಗವೇ ಈ ನಂಬಿಕೆಗಳಿಗೆ ಕಾರಣವಾಗಿದೆ. ಮೂರು, ಐದು, ಏಳು ಪ್ರಥಮ ಅವಿಭಾಜ್ಯ ಸಂಖ್ಯೆಗಳು ತಾನೇ?

ಸಂಖ್ಯೆಗಳಲ್ಲಿಯ ಧಾರ್ಮಿಕ, ಅಲೌಕಿಕ, ಸಂಬಂಧಗಳ ವಿಶ್ಲೇಷಣೆಯನ್ನು ಬದಿಗಿರಿಸಿ ಭಾಷೆಗಳ ಲೌಕಿಕ ಪ್ರವರ್ತನೆಯಲ್ಲಿ ಅವುಗಳ ಪಾತ್ರವನ್ನು ವಿಚಾರಿಸಿದರೆ, ಅನೇಕ ಕೌತುಕಗಳು ಹೊರಡುತ್ತವೆ. ಬೇರೆ ಬೇರೆ ಭಾಷೆಗಳಲ್ಲಿ ಅವುಗಳ ನಡವಳಿಕೆಗಳ ನಡುವೆ ಸಾಮ್ಯಗಳೂ ಇವೆ. ವೈಷಮ್ಯಗಳೂ ಇವೆ. ಕನ್ನಡದಲ್ಲಿ ಮೂರು ಧಾರ್ಮಿಕ, ಶಕುನಾತ್ಮಕ ಪಾವಿತ್ರ್ಯವನ್ನು ಹೊಂದಿರುವಂತೆ ಕ್ಷುಲ್ಲಕತ್ವದ ಧ್ವನಿಯನ್ನೂ ಪಡೆದಿದೆ. ''ಮೂರು ಕಾಸಿನ ಬುದ್ಧಿ'' ಎಂದು ಹೇಳುತ್ತೇವೆ. ಆದರೆ ಇಂಗ್ಲಿಷಿನವರು ಅಲ್ಪತ್ವಕ್ಕೆ ಎರಡನ್ನು ಆಧಾರ ಮಾಡಿಕೊಂಡು I care a tuppence for you (ನಿನಗೆ ನಾನು ಎರಡು ಕಾಸಿನ ಬೆಲೆಯನ್ನೂ ಕೊಡುವುದಿಲ್ಲ) ಎನ್ನುತ್ತಾರೆ. ನಮ್ಮಲ್ಲಿಯೂ ಹಿಂದಿಯಲ್ಲಿ ದು-**ಕಡಹಾ** (ಎರಡು =ದಂಬಡಿ) ತುಚ್ಛತ್ವದ ಪ್ರತೀಕವಾಗಿದೆ: ಕನ್ನಡದಲ್ಲಿಯೂ **ದುಗ್ಗಾಣಿ** (=ಎರಡು ಕಾಣಿ, ಕಾಣಿ= ಹಳಕಾಲದ ಒಂದು ಕ್ಷುಲ್ಲಕ ನಾಣ್ಯ) ಇದೆಯಾದರೂ ಮೂರು ಕಾಸಿನಷ್ಟು ಅದಕ್ಕೆ ಚಲಾವಣೆ ಇಲ್ಲ.

**ಮೂರು** ಅವ್ಯವಸ್ಥೆಯ, ಅನಾಹುತದ ಸೂಚಕವೂ ಆಗಬಹುದು. ''ಮೂರಾಬಟ್ಟೆ ಆಗಿಹೋಯಿತು'' ಎನ್ನುವಾಗ ಮೂರು ದಾರಿ (ಬಟ್ಟೆ) ಎನ್ನುವುದು ಚಲ್ಲಾಪಿಲ್ಲಿ ಎಂಬರ್ಥ ಕೊಡುತ್ತದೆ. ಮರಾಠಿಯಲ್ಲಿಯೂ **ತ್ರೇಧಾ** (ಮೂರು ಬಗೆ) ಎಂದರೆ ಗಾಬರಿ, ಮುಂಗಾಣದಂತಾಗುವುದು, ದುರಾಗ್ರಹಕ್ಕೂ ಮೂರೂ ಸಂಕೇತವಾಗುತ್ತದೆ. ''ತನ್ನ ಕೋಳಿಗೆ ಮೂರು ಕಾಲು'' ಎಂಬ ಗಾದೆಯುಂಟು. ಸಂಸ್ಕೃತದಲ್ಲಿ ಇದಕ್ಕೆ ''ಮುರಾರೇಃ **ತೃತೀಯಃ ಪಂಥಾಃ**'' (ಮುರಾರಿಯದು ಮೂರನೇ ದಾರಿ) ಎಂಬ ನುಡಿ ಇದೆ.

ಮೂರು ಕಾಸಿಗಿಂತಲೂ ಯಾರನ್ನಾದರೂ ಕೆಳಗಿಳಿಸಬೇಕಾದರೆ ನಾವು ''ಒಂದೂವರೆ ಕಾಸಿನವ'' ಎನ್ನುತ್ತೇವೆ. ಮರಾಠಿಯಲ್ಲಿ ಒಂದೂವರೆ ಇನ್ನೊಂದು ನುಡಿಕಟ್ಟಿಗೆ ಮೂಲವಾಗಿದೆ. ಬುದ್ಧಿವಂತಿಕೆಯನ್ನು ಮರೆಯಲು ಯತ್ನಿಸುವ ಹೆಡ್ಡನನ್ನು ಅವರು **ದೀಡ್** (=ಒಂದೂವರೆ) **ಶಹಾಣೇ** (ಅಥವಾ ಸಾಡೇತೀನ್ = ಮೂರುವರೆ ಶಹಾಣೇ) ಎಂದು ಲೇವಡಿ ಮಾಡುತ್ತಾರೆ. ಅಂದರೆ ಒಂದೂವರೆ ಬುದ್ಧಿವಂತ. ಆಶ್ಚರ್ಯವೆಂದರೆ ಇಂಗ್ಲಿಷಿನಲ್ಲಿಯೂ wise by half (= ಅರ್ಧ ಹೆಚ್ಚು ಬುದ್ಧಿವಂತ) ಎನ್ನುವುದುಂಟು.

ಒಂದೂವರೆಗೆ ಹೀಗೆ ಕೀಳರ್ಥವಿದ್ದರೆ **ಒಂದೂಕಾಲಿಗೆ** ಮೇಲರ್ಥ ಬಂದಿರುವುದೊಂದು ವಿಪರ್ಯಾಸ. ಸೇರಿಗೆ **ಸವ್ವಾಸೇರು** (ಹಿಂದಿ, ಮರಾಠಿ-ಸವಾ= ಒಂದೂ ಕಾಲು-ಸಪಾದ) ಎಂದರೆ ಒಬ್ಬನಿಗಿಂತ ಇನ್ನೊಬ್ಬ ಉಪಾಯದಲ್ಲಿ ಮೀರಿದವನಾಗಿರುವುದು. ಸಂಗೀತಾಭಿನಯಗಳಲ್ಲಿ ಶ್ರೇಷ್ಠರಾಗಿದ್ದ ಮರಾಠಿ ನಟ ಬಾಲಗಂಧರ್ವರನ್ನು ಮೀರಿಸುವವರೆಂದು ಕಿರಾಣಾ ಸಂಪ್ರದಾಯದ ಗಾಯಕ ರಾಮಭಾವುರಿಗೆ **ಸವಾಯಿಗಂಧರ್ವ** ಎಂಬ ಬಿರುದು ಬಂತು. ಜಯಪುರ ಮಹಾರಾಜರು ಸವಾಯಿ ಎಂಬ ಬಿರುದನ್ನೇ ಇಟ್ಟುಕೊಂಡಿದ್ದರು: ಸವಾಯಿ ಮಾಧವರಾವ್ ಇತ್ಯಾದಿ. ಒಂದೂಕಾಲಿಗೆ ಏನೋ ಧಾರ್ಮಿಕ ವೈಶಿಷ್ಟ್ಯವೂ ಇದ್ದ ಹಾಗೆ ಕಾಣುತ್ತದೆ. ಸತ್ಯನಾರಾಯಣನಿಗೆ ಎಲ್ಲ ಘಟಕಗಳನ್ನೂ ಒಂದೂ ಕಾಲರ ಅಳತೆಯಲ್ಲಿ ಸೇರಿಸಿ ಪ್ರಸಾದ ತಯಾರಿಸಬೇಕಂತೆ.

**ಪಂಚಾಯತಿ** ಎನ್ನುವುದು ನ್ಯಾಯದಾನದಲ್ಲಿ ಭಾರತೀಯರದೇ ಆವಿಷ್ಕಾರ ಎನ್ನಲಾಗಿದೆ. ಐದು ಜನ ತೀರ್ಪು ಹೇಳುವುದು ಯುಕ್ತ ರೀತಿಯೇ. ಅಭಿಪ್ರಾಯದಲ್ಲಿ ಇಬ್ಬಂದಿಯಾದರೆ ಬಹುಮತದಿಂದ ನಿರ್ಣಯವಾಗಲು ಈ ಸಂಖ್ಯೆ ಅನುಕೂಲ. ಆದರೂ ನಾವು **ನಾಲ್ಕು ಜನ** ಒಪ್ಪುವ ಮಾತಾಗಿರಬೇಕೆಂದು ಹೇಳುತ್ತೇವೆ. ಹೊರತು ಐದು ಜನ ಎನ್ನುವುದಿಲ್ಲ. ಕನ್ನಡಕ್ಕೆ ಇದು ವಿಶಿಷ್ಟ ಎಂದಲ್ಲ. ಹಿಂದಿಯಲ್ಲಿ ಕೂಡ ಇದೇ ರೀತಿಯ ನುಡಿಕಟ್ಟು ಇದೆ. ನಾಲ್ಕನ್ನು ಬಿಟ್ಟರೆ ಹತ್ತೇ ಬಹುಜನ ಮೆಚ್ಚಿಕೆಯ ಸೂಚಕ ಸಂಖ್ಯೆ. **ಹತ್ತು ಜನಕ್ಕೆ** ಬೇಕಾದವ, ಇತ್ಯಾದಿ. ಈ ಹತ್ತು ಸಂಖ್ಯಾವಾಚಕವಾದರೂ ಅದಕ್ಕೆ ಸಂಸ್ಕೃತದಲ್ಲಿ ಬಹಳ ಎಂಬ ಪರಿಮಾಣವಾಚಕ ಅರ್ಥವೂ (ವೇದದಲ್ಲಿ) ಕಾಣಿಸುತ್ತದೆ. ಹೀಗೆ **ದಶಪ್ರಮತಿ** ಎಂದರೆ ಬಹಳ ಬುದ್ಧಿವಂತ ಎಂದರ್ಥ. ಬಹುಶಃ ರಾವಣನ ದಶ ಶಿರಸ್ಸು ಕೂಡ ಬಹಳ ಬುದ್ಧಿಯುಳ್ಳವ ಎಂಬರ್ಥವನ್ನೇ ಸೂಚಿಸುತ್ತದೆ.

ಏಳು ಧಾರ್ಮಿಕ ಶಕುನಾತ್ಮಕವಾಗಿ ಶುಭಪ್ರದವಾಗಿರಬಹುದು. ಆದರೆ ದೇಶಭಾಷೆಗಳಲ್ಲಿ ಅದರ ವರ್ತನೆ ವಿಚಿತ್ರವಾಗಿದೆ. ''ಏಳು ಕೆರೆಯ ನೀರು ಕುಡಿಸಿದ'' ಎಂದರೆ ಬಹಳ ಸತಾಯಿಸಿದ ಎಂದರ್ಥ (ಊರೂರು ಅಲೆದಾಡಿಸಿದ-ಅಂದರೆ ಪೀಡಿಸಿದ). ಮರಾಠಿಯಲ್ಲಿಯೂ ಏಳು (ಸಾತ್) ನೀಚಾರ್ಥದಲ್ಲಿ ಅತಿಶಯವನ್ನು ಸೂಚಿಸುತ್ತದೆ. **ಸಾತ್ ಲಬಾಡ್** ಎಂದರೆ ಮಹಾ ಮೋಸಗಾರ; ಸಾತ್ ಆಳಶೀ ಎಂದರೆ ಮಹಾಮೈಗಳ್ಳ. ಕನ್ನಡದಲ್ಲಿ ನಾವು **ಶತ ಮೈಗಳ್ಳ**, **ಶತಮೂರ್ಖ** ಎನ್ನುತ್ತೇವೆ. ಸಂಖ್ಯೆಯಿಂದ ಪರಿಮಾಣವನ್ನು ಸೂಚಿಸುವ ಉದಾಹರಣೆಗಳೇ ಇವು.

''ಬಹಳ ಕಷ್ಟವಾಯಿತು'' ಎನ್ನುವಲ್ಲಿ ''**ಏಳೂ ಹನ್ನೊಂದು** ಆಯಿತು'' ಎಂಬೊಂದು ನುಡಿಯಿದೆ. ಇದು ಸಂಖ್ಯೆಯನ್ನು ಸೂಚಿಸುವಂತೆ ಕಂಡರೂ ಮಹಾಭಾರತ ಯುದ್ಧ

ಸಾಮ್ಯದಿಂದ ಹುಟ್ಟಿದ ಮಾತು. ಒಂದು ಕಡೆ ಏಳು ಇನ್ನೊಂದು ಕಡೆ ಹನ್ನೊಂದು ಅಕ್ಷೋಹಿಣಿ ಸೇನೆಗಳು ತಾಕಾಲಾಡಿ ಮಹಾ ಅಧ್ವಾನದಿಂದ ದಾಯಾದ್ಯ ವಿವಾದವನ್ನು ತೀರಿಸಿಕೊಂಡಂತೆ ಮಹಾ ಕಷ್ಟದಿಂದ ಕಾರ್ಯ ಸಾಧಿಸಿದಂತಾಯಿತು ಎಂದು ತಾತ್ಪರ್ಯ.

''ಕುಂಟನಿಗೆ **ಎಂಟು** ಬುದ್ಧಿ'' ಎಂಬಲ್ಲಿ ಅಥವಾ ''**ಎಂಟೆದೆ**'' ಎಂಬಲ್ಲಿ ಎಂಟು ಎಂಬುದು ಸಂಖ್ಯಾವಾಚಕವಲ್ಲವೆಂದು ತೋರುತ್ತದೆ. ಎಂಟು ಇಲ್ಲಿ ತಂತ್ರಗಾರಿಕೆ, ದಿಟ್ಟತನವನ್ನು ಸೂಚಿಸುವ ಸ್ವತಂತ್ರ ಶಬ್ದವಿರಬೇಕು. ತುಳುವಿನಲ್ಲಿ ಕೂಡ ಎಂಟು ಈ ಅರ್ಥಗಳಲ್ಲಿ ಪ್ರಯೋಗದಲ್ಲಿದೆ. ಅಲ್ಲಿ ಸಂಖ್ಯಾತ್ಮಕ ಎಂಟು ''**ಎಡ್ಮ**'' ಎಂಬ ರೂಪದಲ್ಲಿರುವುದರಿಂದ ಎಂಟು ಬೇರೆಯೇ ಶಬ್ದ ಎಂದೆಣಿಸಲು ಅವಕಾಶವಿದೆ.

* * * * *

೩

''**ಕನ್ನಡಿ**ಯಂದದಿ ಪೊಳೆವ ಕಪೋಲ'' ಎಂದು ವಿಜಯ ದಾಸರು ಮೋಹಿನೀ ವರ್ಣನೆಯ ತಮ್ಮ ಲಾವಣಿಯನ್ನು ಪ್ರಾರಂಭಿಸಿದ್ದಾರೆ. ಭಾರತೀಯರ ಲೌಕಿಕ ಜೀವನದಲ್ಲಿ ಮಾತ್ರವಲ್ಲ, ಧಾರ್ಮಿಕ ಜೀವನದಲ್ಲಿ ಕೂಡ ಕನ್ನಡಿ ಬಿಡಿಸಲಾರದಂತೆ ಸೇರಿಕೊಂಡಿದೆ. ಮೂರ್ತಿಶಿಲ್ಪಗಳುಳ್ಳ ಯಾವ ಪ್ರಸಿದ್ಧ ದೇವಸ್ಥಾನದಲ್ಲಿಯೂ ಕನ್ನಡಿ ಹಿಡಿದುಕೊಂಡು ತನ್ನ ಸೌಂದರ್ಯವನ್ನು ಮೆಚ್ಚಿಕೊಳ್ಳುತ್ತಿರುವ ಒಂದಾದರೂ ಹೆಣ್ಣುಮೂರ್ತಿ ಇದ್ದೇ ಇರುತ್ತದೆ. ಧಾರ್ಮಿಕವಾಗಿ ಕಲಶದೊಡನೆ ಕನ್ನಡಿಯೂ ಮಂಗಳದ ಕುರುಹಾಗಿದೆ.

**ಕನ್ನಡಿ** ಶಬ್ದ ಅನೇಕ ದ್ರಾವಿಡ ಭಾಷೆಗಳಲ್ಲಿ ಅಲ್ಪಸ್ವಲ್ಪ ವ್ಯತ್ಯಾಸದೊಡನೆ ಕಾಣಿಸುತ್ತದೆ. ಮುಖ ನೋಡಿಕೊಳ್ಳುವ ಕನ್ನಡಿಗಲ್ಲದೆ ಗಾಜಿನ ಫಲಕಕ್ಕೂ ಆ ಹೆಸರು ಸಲ್ಲುತ್ತದೆ. ಇದು **ಕಣ್**;**ಕಾಣ್** ಶಬ್ದಗಳ ಸಂಬಂಧಿಯೆಂದು ನಿರುಕ್ತಕಾರರ ಅಭಿಮತ. ತಮಿಳಲ್ಲಿ, ತುಳುವಿನಲ್ಲಿ **ಕಣ್ಣಾಟಿ** ಎಂಬ ರೂಪವಿದೆ. ಕಣ್+ಆಟಿ=ಹರಳು ಎಂದು ಅದರ ನಿಷ್ಪತ್ತಿ. ತನ್ನನ್ನು ತಾನು ಕಂಡುಕೊಳ್ಳಲು ನೆರವಾಗುವ ಸಾಧನ ಕನ್ನಡಿ. ತೆಲುಗಿನಲ್ಲಿರುವ **ಅದ್ದಮು** ಎಂಬ ಇನ್ನೊಂದು ಶಬ್ದ ಕೂಡ ಕನ್ನಡಿಗೂ, ಗಾಜಿನ ಫಲಕಕ್ಕೂ ನಡೆಯುತ್ತದೆ. ಆದರೆ ಇದು ಮೂಲತಃ ದ್ರಾವಿಡವಾಗಿರಲಿಕ್ಕಿಲ್ಲ. ಪ್ರಾಕೃತದಲ್ಲಿ ಅದ್ದಾಅ ಎಂದರೆ ಕನ್ನಡಿ. ಅದು ಸಂಸ್ಕೃತದ ಆದರ್ಶ ಶಬ್ದದ ತದ್ಭವವಾಗಿರಬೇಕು. ಹಿಂದಿಯ ಆರಸಿ (=ಕನ್ನಡಿ) ಕೂಡ ಆದರ್ಶದ್ದೆ ತದ್ಭವ.

ಸಂಸ್ಕೃತದಲ್ಲಿ ಕನ್ನಡಿಗೆ **ಆದರ್ಶ, ದರ್ಪಣ, ಮುಕುರ** ಎಂಬ ಶಬ್ದಗಳು ಇವೆ. ದ್ರಾವಿಡದ ಕನ್ನಡಿಯ ನಿರುಕ್ತ ಹೇಗೋ ಹಾಗೆ ಸಂಸ್ಕೃತದ ಆದರ್ಶ. ಮತ್ತು ನನ್ನ ಅಭಿಪ್ರಾಯದಲ್ಲಿ ದರ್ಪಣ ಶಬ್ದ ಕೂಡ ನೋಡುವುದು, ನೋಡಿಕೊಳ್ಳುವುದು ಎಂಬ ಕ್ರಿಯೆಯನ್ನಾಧರಿಸಿಯೇ ಹುಟ್ಟಿಕೊಂಡಿದೆ. ಆದರ್ಶ ಶಬ್ದದ ವ್ಯುತ್ಪತ್ತಿಯಂತೂ ಸ್ಪಷ್ಟವೇ ಇದೆ. ದೃಶ್ ಅಂದರೆ ನೋಡುವುದು; ಆದರ್ಶ ಅಂದರೆ ಹತ್ತಿರ ನೋಡಿಕೊಳ್ಳುವುದು. ಋಗ್ ವೇದದಲ್ಲಿ ಆದೃಶ್ ಅಂದರೆ ಕಾಣಿಸಿಕೊಳ್ಳುವಿಕೆ, ತೋರುವಿಕೆ; ಆದರ್ಶ ಅಂದರೆ ಕಣ್ಣಿನಿಂದ ಗ್ರಹಿಸುವುದು. ಆದರೆ ಬ್ರಾಹ್ಮಣ ಮತ್ತು ಉಪನಿಷತ್ತುಗಳ ಕಾಲದಲ್ಲಿ ಆದರ್ಶ ಶಬ್ದಕ್ಕೆ ಕನ್ನಡಿಯೆಂಬ ಅರ್ಥ ಬಂತಷ್ಟೇ.

**ದರ್ಪಣ** ಶಬ್ದಕ್ಕೆ ನಮ್ಮ ನಿರುಕ್ತಕಾರರು ಸೊಕ್ಕನ್ನುಂಟುಮಾಡುವಂತಾದ್ದು ಎಂದು ಅರ್ಥ ಹೇಳುತ್ತಾರೆ. ದೃಪ್ ಧಾತುವಿಗೆ ಸೊಕ್ಕೇರುವುದು ಎಂದು ಅರ್ಥ. ದೃಪ್ತ ಎಂದರೆ ಸೊಕ್ಕು

ಬಂದವ. ತನ್ನನ್ನು ತಾನು ಕನ್ನಡಿಯಲ್ಲಿ ನೋಡಿಕೊಂಡರೆ (ಮತ್ತು ರೂಪವಂತ ಅಥವಾ ರೂಪವತಿಯಾಗಿದ್ದರೆ) ಹಮ್ಮು ಬರುವುದು ಸ್ವಾಭಾವಿಕ. ಇದಕ್ಕೆ ಬೆಂಬಲವಾಗಿ ಇಂಗ್ಲಿಷಿನ Mirror ಶಬ್ದದ ಮೂಲವನ್ನು ನಿರ್ದೇಶಿಸಬಹುದು. Mirror ಅಂದರೆ (ನೋಡಿಕೊಳ್ಳುವ) ಕನ್ನಡಿ. ಅದು ಹುಟ್ಟಿದ್ದು Mirare ಎಂಬ ಲ್ಯಾಟಿನ್ ಧಾತುವಿನಿಂದ. Mirare ಎಂದರೆ ಮೆಚ್ಚು, ಚೋದ್ಯಪಡು. ಇದು ಸೊಕ್ಕಿಗೇರು ಎನ್ನುವುದಕ್ಕೆ ಅರ್ಥದಲ್ಲಿ ತುಂಬ ಹತ್ತಿರದ್ದೆಂದು ಒಪ್ಪಲೇಬೇಕು. ಹೀಗೆ ಕನ್ನಡಿಗೆ ಜಂಬವನ್ನು ತಗಲಿಸುವುದಕ್ಕೆ ಆಧಾರವಿಲ್ಲದೆ ಇಲ್ಲ. ಆದರೂ ದೃಪ್ ಧಾತುವನ್ನು ಹೋಲುವ ಗ್ರೀಕ್ dropo, dropaso ಪದಗಳಿಗೆ ನೋಡು ಎಂಬ ಅರ್ಥವೇ ಇರುವುದನ್ನು ಗಣನೆಗೆ ತೆಗೆದುಕೊಳ್ಳಬೇಕಾಗಿದೆ.

ಅದೂ ಅಲ್ಲದೆ ಇತರ ಭಾರೋಪ್ಯ ಭಾಷೆಗಳಲ್ಲಿ ಕನ್ನಡಿಗಿರುವ ಶಬ್ದಗಳು ನೋಡುವ, ಕಾಣಿಸುವ ಕ್ರಿಯೆಗೆ ಸಲ್ಲುವ ಪದಗಳಿಂದಲೇ ಹುಟ್ಟಿಕೊಂಡಿವೆ. ನಮ್ಮ ನೆರೆಯ ಪಾರಸೀಕ ಭಾಷೆಯಲ್ಲಿ ಕನ್ನಡಿಗೆ **ಆಯಿನಾ** ಎಂದು ಹೆಸರು. ಇದು ಪುರಾತನ ಇರಾಣದ ದಿ=ನೋಡು ಎಂಬ ಧಾತುವಿನ ಸಂತತಿಯದೆಂದು ಶಬ್ದಶಾಸ್ತ್ರಜ್ಞರು ತೀರ್ಮಾನಿಸಿದ್ದಾರೆ. ಪಾಕಿಸ್ತಾನದ ಬಲೂಚಿ ಭಾಷೆಯಲ್ಲಿ ಕೂಡ ಕನ್ನಡಿಗೆ ಆ-ದೇಂಕ್ (=ನೋಡಿಕೋ) ಎಂಬ ಹೆಸರಿದೆ. ಹಳೇ ಜರ್ಮನ್ ಭಾಷೆಯಲ್ಲಿ ಕನ್ನಡಿಗೆ Speagal ಎಂದೂ, ಆಧುನಿಕ ಜರ್ಮನ್ ಭಾಷೆಯಲ್ಲಿ Speigal ಎಂದೂ, ಸ್ಲಾವಿಕ್ ಭಾಷೆಗಳಲ್ಲಿ Zruealo ಎಂದೂ ಹೆಸರುಗಳು. ಇವೆಲ್ಲ ಲ್ಯಾಟಿನ್ Speculum (=ನೋಡುವುದು) ಶಬ್ದದಿಂದ ಹೊರಟವು.

ಸಂಸ್ಕೃತ **ಮುಕುರ** ಶಬ್ದದ ಬೇರು ಯಾವುದೆಂದು ಖಚಿತವಾಗಿಲ್ಲ. ಅದು ಸಂಸ್ಕೃತದಲ್ಲಿ ಕಾಣಿಸಿಕೊಳ್ಳುವುದೂ ತಡವಾಗಿ, ಕನ್ನಡಿಗೆ ಕನ್ನಡದಲ್ಲಿ ಇನ್ನೊಂದು ಹೆಸರು ಕೈಪಿಡಿ. ಬಹುಶಃ ಅನೇಕ ಶಿಲ್ಪಗಳಲ್ಲಿ ತೋರಿಸಿರುವಂತೆ ಕೈಯಲ್ಲಿ ಹಿಡಿದುಕೊಂಡು ಮುಖ ನೋಡಿಕೊಳ್ಳುವ ಚಿಕ್ಕ ಕನ್ನಡಿ ಇದು. ಈಗಿನವರು ವ್ಯಾನಿಟಿ ಬ್ಯಾಗುಗಳಲ್ಲಿ ತಮ್ಮ ಸಂಗಡ ಸರ್ವತ್ರ ಒಯ್ಯುವ ಮಾದರಿಯದು. ಒಂದು ಸೋಜಿಗವೆಂದರೆ ಸಂಸ್ಕೃತದ **ಮುಕುರ** ಮತ್ತು ಕನ್ನಡದ **ಕೈಪಿಡಿ** ಇವೆರಡಕ್ಕೂ ಹಿಡಿಕೆಯೆಂಬ ಇನ್ನೊಂದು ಅರ್ಥ ಇರುವುದು.

ಕನ್ನಡಿಗಿರುವ ಸಂಸ್ಕೃತ ಶಬ್ದಗಳು ಋಗ್ವೇದದಷ್ಟು ಹಿಂದೆ ಹೋಗುವುದಿಲ್ಲ. ''ಆದರ್ಶ'' ಶತಪಥ ಬ್ರಾಹ್ಮಣ, ಬೃಹದಾರಣ್ಯಕ ಉಪನಿಷತ್ತುಗಳಲ್ಲಿ; ''ದರ್ಪಣ'' ಅದಕ್ಕಿಂತ ತುಂಬಾ ಇತ್ತಲಾಗಿನ ಹರಿವಂಶಪುರಾಣದಲ್ಲಿ, ''ಮುಕುರ'' ಅದಕ್ಕೂ ಈಚೆಗಿನ ಕಾವ್ಯಗಳಲ್ಲಿ ಸಿಗುತ್ತವಷ್ಟೇ. ಗ್ರೀಸಿನಲ್ಲಿ ಹೋಮರ್ ಮಹಾಕವಿ ಕನ್ನಡಿಯ ಸುದ್ದಿ ಹೇಳುವುದಿಲ್ಲವಂತೆ. ಗ್ರೀಕ್ ಪುರಾಣದಲ್ಲಿ **ನಾರ್ಸಿಸಿಸ್** ಎಂಬುವನೊಬ್ಬ ತನ್ನ ಮುಖವನ್ನು ನೀರಿನಲ್ಲಿ ನೋಡಿ ಅದಕ್ಕೆ ಮೋಹಿತನಾಗಿ ಅದನ್ನೇ ಹಂಬಲಿಸುತ್ತ ಕೊರಗಿ ಸೊರಗಿ, ಸಾಯುವ ಕಥೆ ಇದೆ. ಋಗ್ವೇದದಲ್ಲಿ ''ರೂಪಂ ರೂಪಂ ಪ್ರತಿರೂಪೋ ಬಭೂವ'' ಎಂದು ಆರಂಭವಾಗುವ ಮಂತ್ರವಿದೆ. ಈ ಮಂತ್ರ ಹೇಳುತ್ತ ನೀರಲ್ಲಿ ಮುಖ ನೋಡಿಕೊಳ್ಳುವ ವಿಧಿ ಕರ್ಮಕಾಂಡದಲ್ಲಿದೆ. ನೀರೇ ಭಾರೋಪ್ಯ ಜನಾಂಗಗಳಿಗೆ ಮೊದಲ ಕನ್ನಡಿಯಾಗಿತ್ತೆ?

ಮೊಟ್ಟಮೊದಲ ಕನ್ನಡಿಗಳು ಸಿಗುವುದು ಈಜಿಪ್ತಿನಲ್ಲಿ. ಅವು ಕಂಚಿನವು. ಗ್ರೀಕರಿಗೂ ಎಟ್ರುಸ್ಕನ್ನರಿಗೂ, ಭಾರತೀಯರಿಗೂ ಪ್ರಾಚೀನ ಕಾಲದಲ್ಲಿ ಗೊತ್ತಿದ್ದದ್ದು ಕಂಚಿನ ಕನ್ನಡಿ. ಪೂಜೆಯಲ್ಲಿ ಉಪಯೋಗಿಸುವುದು ಇಂದಿಗೂ ಕಂಚಿನ ಕನ್ನಡಿಯೇ. ಕಾವ್ಯಗಳಲ್ಲಿ ಪಂಪನ ಕಾಲದಲ್ಲೇ **ಕಂಚು ಕನ್ನಡಿಯ** ವಿಷಯ ಬರುತ್ತದೆ.

ಕನ್ನಡಿ ಮತ್ತು ತತ್ಸಮಾನ ಸಂಸ್ಕೃತ ಪದಗಳು ಒಂದು ವಿಶೇಷವಾದ ಅರ್ಥವಿಸ್ತರಣೆ ಹೊಂದಿ ತತ್ವಗಳನ್ನು, ಗ್ರಂಥಗಳನ್ನು ಅರ್ಥಮಾಡಿಕೊಳ್ಳಲು ನೆರವಾಗುವ ವಿವರಣೆಗಳಿಗೂ ಹೆಸರಾಗಿವೆ. ಉದಾಹರಣೆಗೆ ''ಪಂಪ ಭಾರತದ ಕೈಗನ್ನಡಿ'', ''ಕಾವ್ಯಾದರ್ಶ'', ''ಸಾಹಿತ್ಯ ದರ್ಪಣ'' ಇತ್ಯಾದಿ. ಇದೇ ತರಹದ ವಿಸ್ತರಣೆಯಿಂದ ''ಅಂಗೈ ನೆಲ್ಲಿಗೆ ಕನ್ನಡಿ ಬೇಕೇ?'' ಎಂಬ ಗಾದೆ ಹುಟ್ಟಿದೆ. ನಮ್ಮ ಮುಖ ನಮಗೆ ಕಾಣಬೇಕಾದರೆ ಕನ್ನಡಿ ಬೇಕು; ಅದಿಲ್ಲದೆ ನಮ್ಮನ್ನು ತಿಳಿದುಕೊಳ್ಳಲು ಬೇರೆ ದಾರಿ ಇಲ್ಲ. ಹಾಗೆಯೆ ಕಠಿನ ವಿಷಯಗಳನ್ನು ಅರಿತುಕೊಳ್ಳಲು ಈ ''ದರ್ಪಣ''ಗಳು ಬೇಕು.

ನಮ್ಮ ಮುಖಗಳನ್ನು ನಾವೇ ನೋಡಿಕೊಳ್ಳಲು ಸಾಧ್ಯವಾಗಿ ಮಾಡುವ ಈ ಕಂಚುಗನ್ನಡಿ ಅಥವಾ ಹರಳುಗನ್ನಡಿಗಳು ಪ್ರಾಚೀನರಿಗೆ ಲೋಕೋತ್ತರ ವಸ್ತುಗಳಾಗಿ ಕಂಡಿರಬೇಕು. ಕನ್ನಡಿ ನೋಡಿಕೊಳ್ಳುವುದಕ್ಕೂ ಒಂದು ಮಾಂತ್ರಿಕ ಶಕ್ತಿಯನ್ನವರು ಕಲ್ಪಿಸಿದರು. ಆದ್ದರಿಂದ ಯುಗಾದಿಯ ದಿನ ನುಂಜಾನೆಯೆದ್ದು ದೇವರೆದುರಿಟ್ಟ ಕೈಗನ್ನಡಿಯಲ್ಲಿ ಮುಖ ನೋಡಿಕೊಳ್ಳುವ ಸಂಪ್ರದಾಯವಿದೆ. ಅದು ಶುಭಂಕರ. ಕರ್ನಾಟಕದ ಕೆಲವೆಡೆ ಇದಕ್ಕೆ ''ಕನಿ ನೋಡುವುದು'' ಎನ್ನುತ್ತಾರೆ. ಅದು ವಿಲಾಸದ ಸಾಮಗ್ರಿಯೂ ಹೌದು. ಆದ್ದರಿಂದ ಬ್ರಹ್ಮಚಾರಿಗಳೂ, ವಿಧವೆಯರೂ ಕನ್ನಡಿ ನೋಡಬಾರದು. ಮುಖ ನೋಡಿಕೊಳ್ಳುವ ಕ್ರಿಯೆಗೇ ಒಂಗು ಅಲೌಕಿಕ ಮಹತ್ವವಿತ್ತೆನ್ನಿ. ನೀರಲ್ಲಿ ಮುಖ ನೋಡಿಕೊಳ್ಳುವುದನ್ನು ಮೇಲೆ ಪ್ರಸ್ತಾಪಿಸಿದೆ; ಎಳ್ಳೆಣ್ಣೆಯಲ್ಲಿ ಮುಖನೋಡಿಕೊಳ್ಳುವುದು ದುಷ್ಟಗ್ರಹಬಾಧೆಯ ನಿವಾರಣೆಗೆ ಒಂದು ಉಪಾಯವೆಂದು ಗ್ರಹಿಸಲ್ಪಟ್ಟಿದೆ.

* * * * *

೪

**ಹೋಳಿಗೆ** ಕನ್ನಡಿಗರಿಗೆ ಎಷ್ಟು ಇಷ್ಟ ಮತ್ತು ಪರಿಚಿತವಾಗಿದೆಯೆಂದರೆ ಅದರ ವಂಶಾನುಕ್ರಮದ ಪ್ರಶ್ನೆಯೇ ಅವರ ತಲೆಗಳಲ್ಲಿ ಮೂಡದು. ಆದರೆ ಅದರ ಲಿಖಿತ ದಾಖಲೆ ೧೨ನೇ ಶತಮಾನಕ್ಕಿಂತ ಹಿಂದೆ ಹೋಗುವುದಿಲ್ಲ. ವಾಸ್ತವಿಕವಾಗಿ ಹೆಚ್ಚಿನ ಕೋಶಗಳಲ್ಲಿ ಹೋಳಿಗೆ, ಹೋಳಿಗೆಗಳಿಗೆ ಇರುವ ಅರ್ಥ (ಮೈಯಲ್ಲಿ ಏಳುವ) **ಗುಳ್ಳೆ, ಹುಗುಳು** ಎಂದಲ್ಲದೆ ಸಿಹಿತಿಂಡಿಯೆಂದಲ್ಲ. ಚನ್ನಬಸವಣ್ಣನ ಒಂದು ವಚನದಲ್ಲಿ ಕಡುಬು, ಕಜ್ಜಾಯಗಳೊಡನೆ ಹೋಳಿಗೆಯೂ ಪ್ರಸ್ತಾಪಿಸಲ್ಪಟ್ಟಿದೆಯಾದ್ದರಿಂದ ೧೨ನೇ ಶತಮಾನದಲ್ಲಿ ಅದು ಪ್ರಚಲಿತ ಖಾದ್ಯವಾಗಿತ್ತೆಂದು ವಿದಿತವಾಗುತ್ತದೆ. ೧೩ನೇ ಶತಮಾನದ ಜೈನ ಕಾವ್ಯ ಶಾಂತೀಶ್ವರ ಪುರಾಣದಲ್ಲಿ ಅಂಗರ ಹೋಳಿಗೆಯ ಉಲ್ಲೇಖವಿದೆ. **ಅಂಗರವೋಳಿಗೆ, ಅಂಗರವಳಿಗೆ, ಅಂಗರೋಳಿಗೆ** ಎಂಬ ರೂಪಗಳಲ್ಲಿ ಕೂಡಾ ಅದು ಸಿಗುತ್ತವೆ. ಅದರ ಸಂಸ್ಕೃತ ರೂಪ ಅಂಗಾರ ಸ್ಫೋಟಿಕಾ. ಅಂದರೆ ಕೆಂಡದಲ್ಲಿ ಸುಟ್ಟ ಉಬ್ಬುರೊಟ್ಟಿ. ಸಂಸ್ಕೃತ ಕೋಶಗಳಲ್ಲಿ ''ಅಂಗಾರ ಸ್ಫೋಟಿಕಾ'' ಎಂಬ ತಿಂಡಿಯ ಸುದ್ದಿ ಇಲ್ಲ. ಅಲ್ಲಿ ಕೂಡ **ಸ್ಫೋಟಿಕಾ** ಎಂದರೆ ಗುಳ್ಳೆ ಎಂದೇ ಅರ್ಥ. ''ಅಂಗಾರ ಸ್ಫೋಟಿಕೆ'' ಅಥವಾ ''ಅಂಗರ ಹೋಳಿಗೆ'' ಈಗಿನ ಹೂರಣದ ಸಿಹಿ ತಿಂಡಿಯೇ ಆಗಿತ್ತೋ ಬರಿ ಉಬ್ಬುರೊಟ್ಟಿಯೋ ತಿಳಿಯದು. ಹುಣ್ಣಿಮೆಯ ಚಂದ್ರನಂತೆ ಅದು ಬೆಳ್ಳಗೆ ಮತ್ತು ದುಂಡಾಗಿತ್ತೆಂಬುದು ಶಾಂತೀಶ್ವರ ಪುರಾಣದ ಹೇಳಿಕೆ. ಚನ್ನ ಬಸವಣ್ಣನ ಹೇಳಿಕೆಯಿಂದ ತಾನೇ ಅದು ಸಿಹಿ ಭಕ್ಷ್ಯವೆಂದು ಊಹಿಸಬರುತ್ತದೆ.

**ಸ್ಫೋಟಿಕಾ** ಅಂದರೆ ಉಬ್ಬಲು, ಸುಟ್ಟು ಅಥವಾ ಕಾದು ಉಬ್ಬಿದ್ದು. ಅದೇ **ಪೋಳಿಗೆ, ಹೋಳಿಗೆ.** ಹೀಗೆ ಅದು ಮರಾಠಿಯ ಪೋಳಿ (ಉದಾ:-ಶಂಕರ ಪೋಳಿ=ಶಾಕರ ಪೋಳಿ), ಪೋಡಿ (ಭಜ್ಜಿ) ಇತ್ಯಾದಿಗಳ ಸಗೋತ್ರದ್ದು. ಬಂಗಾಲಿಯಲ್ಲಿ ಪೋಡಾ=ಸುಟ್ಟದ್ದು. ನಾದಿದ ಹಿಟ್ಟಿನ ಉಂಡೆಯೊಳಗೆ ಹೂರಣ ತುಂಬಿ ಲಟ್ಟಿಸಿ ಅಥವಾ ತಟ್ಟಿ ಹಂಚಿನಲ್ಲಿ ಬೇಯಿಸುವ ಉಪಾಯ ಎಂದೋ ಆಮೇಲೆ ಸೇರಿಕೊಂಡದ್ದು. **ಹೂರಣ** ಅಂದರೆ ಸಂಸ್ಕೃತದಲ್ಲಿ **ಪೂರಣ** (=ತುಂಬುವುದು. ಈ ಹೂರಣ ಎಳ್ಳು, ಸಕ್ಕರೆ, ಕಡಲೆ ಅಥವಾ ಹೆಸರು ಬೇಳೆಯದು. ರವಾಶಿರಾ, ಬೆಲ್ಲ ಕಲಸಿದ ತೆಂಗಿನ ತುರಿ ಇತ್ಯಾದಿ ಯಾವುದೇ ಆಗಬಹುದೆಂಬುದು ಆಧುನಿಕ ಪಾಕಶಾಸ್ತ್ರಜ್ಞರ ಆವಿಷ್ಕಾರ.

ಹೋಳಿಗೆಗೆ ಸಂಬಂಧಿಸಿದ ಶಬ್ದಗಳು ಸಂಸ್ಕೃತ-ಪ್ರಾಕೃತ ಮೂಲವಾಗಿದ್ದರೂ ಅದರ ಬೆಳವಣಿಗೆಯೆಲ್ಲ ಕರ್ನಾಟಕದಲ್ಲಿ ಆದಂತೆ ಕಾಣುತ್ತದೆ. ಯಾಕೆಂದರೆ ನೆರೆಯ ಮರಾಠಿ ಮೊದಲಾದ ಭಾಷೆಗಳಲ್ಲಿ ಈ ಶಬ್ದಗಳಿಲ್ಲ. ತೆಲುಗಿಗೂ ಪೋಳಿ ಹೋಗಿದೆ. ''**ಪೋಳಿ**'' ಕನ್ನಡದಿಂದಲೇ ಬಂತೆಂದು ತೆಲುಗು ಕೋಶ ಹೇಳುತ್ತದೆ. ಆದರೆ ಕರ್ನಾಟಕದ ಸೀಮೆಯೊಳಗೇನೇ ಹಳೇ ಮೈಸೂರಿನಲ್ಲಿ ಹೋಳಿಗೆಯನ್ನು ಹೋಲುವ ಒಬ್ಬಟ್ಟು ಇದೆ. ತೆಲುಗಿನಲ್ಲಿ ಕೂಡ ಒಬ್ಬಟ್ಟು ಸೇರಿದೆ. ಹೋಳಿಗೆ, ಒಬ್ಬಟ್ಟು ಒಂದೇ ಎಂದು ತೆಲುಗು ಕೋಶದ ಹೇಳಿಕೆ. ಇತರ ದ್ರಾವಿಡ ಭಾಷೆಗಳಲ್ಲಿ ಈ ಶಬ್ದವಿಲ್ಲ. ಅಲ್ಲದೆ ಈ ಶಬ್ದದ ನಿರುಕ್ತಿಯ ಬಗ್ಗೆ ಕನ್ನಡ ಕೋಶಗಳೂ ಮೌನವಾಗಿವೆ. **ಥಾಲೀಪಟ್ಟು, ಥಾಲೀಪಿಟ್ಟು** ಶಬ್ದದಂತೆ ಅಂಗೈಯಿಂದ ತಟ್ಟಿ ತಯಾರಿಸಿದ ಚಪ್ಪಟೆ (=ಪಟ್ಟು) ಹೂರಣ ಭಕ್ಷ್ಯ ಎಂಬ ಅರ್ಥಕೊಡಬಹುದು. ''ಒಬ್'' ಎಂದರೆ ಬಹುಶಃ ''ಉಬ್ಬು''ವಿನ ಒಂದು ರೂಪ.

**ಪುರಿ ಬಾಸುಂದಿಯ** ಸವಿ ಉತ್ತರ ಕರ್ನಾಟಕದಲ್ಲಿ ಸರ್ವವಿದಿತ. ಈಚೆಗಿನ ವರೆಗೆ, ಅಂದರೆ ಒಳ್ಳೇ ಹಾಲು ಪರಿಮಳದ್ರವ್ಯಗಳು ದುರ್ಮಿಳವಾಗುವವರೆಗೆ! ಅನೇಕ ಸಿಹಿತಿಂಡಿಗಳಂತೆ ಇದೂ ಕನ್ನಡಿಗರಿಗೆ ಹೊರಗಿಂದ ಬಂದದ್ದು. ಅದು ಹಿಂದಿಯ ಬಸೌಂಧೀ ಅಥವಾ **ಬಾಸೌಂಧೀಯ** ಅಪಭ್ರಂಶ. ಬಾಸ್ (ಸಂಸ್ಕೃತ ''ವಾಸ್'') ಎಂದರೆ ವಾಸನೆ, (ಸು)ಗಂಧ+ದುಗ್ಧ(=ಹಾಲು) ಹಾಲು ಮರಳಿಸಿ ಮುದ್ದೆಯ ಮಟ್ಟಕ್ಕೆ ತಂದು ಸಕ್ಕರೆ, ಕೇಶರ ಬೆರೆಸಿ ತಯಾರಿಸಿದ್ದು ಬಾಸುಂದಿ ಎಂದು ಗುಜರಾಥಿ ಕೋಶದ ಹೇಳಿಕೆ.

ಹೆಣ್ಣುಮಕ್ಕಳನ್ನು **ಮೂದೇವಿ** ಎಂದು ಬಯ್ಯುವುದುಂಟಲ್ಲ, ಈ ಮೂದೇವಿ ಯಾರು? ಅವಳು **ಮುದುದೇವಿ.** ಮುದು ಎಂದರೆ ಹಳೆಯ, ಹಿಂದಿನ, ಮುಂಚಿನ, ಮೊದಲಿನ. ಮೊದಲಿನ ದೇವಿ ಅವಳು. ಇಲ್ಲಿ ದೇವಿ ಎಂದರೆ ಮಾ-ದೇವಿ, ಅರ್ಥಾತ್ ಲಕ್ಷ್ಮೀ, ಮಹಾಲಕ್ಷ್ಮಿ. ಅವಳಿಗೆ ಅಕ್ಕನಾದವಳು ಜ್ಯೇಷ್ಠಾದೇವಿ ಅಥವಾ ಜ್ಯೇಷ್ಠಾಲಕ್ಷ್ಮಿ. ಅವಳು ದಾರಿದ್ರ್ಯದ ದೇವತೆ, ಅಮಂಗಲ ದೇವಿ. ಅವಳ ಕಥೆ ಪುರಾಣಗಳಲ್ಲಿ (ಪದ್ಮ, ಭಾಗವತ) ಬರುತ್ತದೆ. ಅವಳು ಹೊಕ್ಕ ಮನೆ ಹಾಳು. ಹೀಗೆ ಮೂದೇವಿ ಎಂದರೆ ಮನೆಹಾಳಿ.

ಈ ''**ಮೂ**'', ''**ಮುದು**'', ''**ಮುನ್**'', **ಮುತ್** ಎಂಬ ಬೇರಿನಿಂದ ಹಲವು ದ್ರಾವಿಡ ಶಬ್ದಗಳು ಹುಟ್ಟಿವೆ. ಮುತ್ತಜ್ಜ ಎಂದರೆ ಮೊದಲಿನ ಅಜ್ಜ ಅರ್ಥಾತ್ ಅಜ್ಜನಿಗಿಂತ ಹಿರಿಯ. ''ಮುತ್ತಪ್ಪ'' ''ಮುತ್ತಯ್ಯ'' ಇತ್ಯಾದಿ ಅಂಕಿತನಾಮಗಳೂ ಬಂದಿವೆ. ಈ ಹೆಸರುಗಳಿಗೂ ಮುತ್ತು (ಚುಂಬನ) ಅಥವಾ ಮುತ್ತು (ಒಂದು ಬೆಲೆಬಾಳುವ ರತ್ನ. ಸಂ. ಮುಕ್ತಾ) ಇವುಗಳಿಗೂ

ಸಂಬಂಧವಿಲ್ಲ; ''ಮುದುಕ'' ಎಂದು ನಾವು ಸಾಮಾನ್ಯವಾಗಿ ತಿಳಿಯುವ ಅರ್ಥವೂ ಇಲ್ಲಿ ಅನ್ವಯಿಸುವುದಿಲ್ಲ. ಹಿರಿಯ, ಶ್ರೇಷ್ಠ, ಜ್ಯೇಷ್ಠ ಎಂದು ತಾನೇ ಇಲ್ಲಿ ಗೌರವಪೂರ್ಣ ಅನ್ವಯ. ಬಹುಶಃ ನಮ್ಮ ವಚನಕಾರ್ತಿ **ಮುಕ್ತಾಯಕ್ಕನ** ಹೆಸರು ಮುತ್ತಾಯಕ್ಕ (ಮುನ್+ತಾಯ್+ಅಕ್ಕ) ಎಂಬುದರ ಸಂಸ್ಕೃತೀಕೃತ ರೂಪ. ಪ್ರಸಿದ್ಧ ''ತಿರುಕನ ಕನಸು'' ಎಂಬ ನೀತಿಪದದ ಕರ್ತ ''**ಮುಪ್ಪಿನ ಷಡಕ್ಷರ**'' ದೇವ; ಅವನು ಅನಂತರ ಬಂದ ಪ್ರಸಿದ್ಧ ಮಹಾಕವಿ ಷಡಕ್ಷರ ದೇವನಿಂದ ಭಿನ್ನ ಮತ್ತು ಹಿಂದಿನವ ಎಂದಷ್ಟೇ ತಾತ್ಪರ್ಯ ಹೊರತು ಮುಪ್ಪು ಬಂದವನೆಂದು ಅಲ್ಲ. ನಮ್ಮ ಪ್ರಸಿದ್ಧ ಸಂಗೀತ ಕೃತಿಗಳ ಕರ್ತರಾದ ಮುತ್ತಯ್ಯ ಭಾಗವತರು, ತಮಿಳುನಾಡಿನ ನವಕೋಟಿ ನಾರಾಯಣ ಮುತ್ತಯ್ಯ ಚೆಟ್ಟಿಯಾರ್ ಮೊದಲಾದವರ ಹೆಸರುಗಳು ''ಮುತ್ತ''ರ ಬಗ್ಗೆ ಹಿಂದಿನ ಕಾಲದಲ್ಲಿದ್ದ ಗೌರವವನ್ನು ಸೂಚಿಸುತ್ತವಲ್ಲದೆ ತುಚ್ಛತೆಯನ್ನಲ್ಲ.

ಸಂಸ್ಕೃತದಲ್ಲಿ ವೃದ್ಧ ಎಂಬ ಶಬ್ದ ಕನ್ನಡದಲ್ಲಿ ಮೇಲೆ ಹೇಳಿದಂತೆ ''ಮುಪ್ಪಿನ'' ಶಬ್ದವು ಮಾಡುವ ಕೆಲಸವನ್ನೇ ಮಾಡುತ್ತದೆ. ''ವೃದ್ಧಪರಾಶರ'' ಎಂಬೊಬ್ಬ ಸ್ಮೃತಿಕಾರನಿದ್ದಾನೆ. ಅವನು ಪ್ರಸಿದ್ಧನಾದ ಪರಾಶರ ಋಷಿಗಿಂತ ಭಿನ್ನನೂ ಅವನಿಗಿಂತ ಪೂರ್ವಿಕನೂ ಆಗಿದ್ದಾನೆ.

ನಾವೀಗ ''**ವೃದ್ಧ**'' ಎಂದರೆ ವಯಸ್ಸು ಮೀರಿದವ ಎಂದು ತಿಳಿಯುತ್ತೇವೆ. ಆದರೆ ಆ ಶಬ್ದದ ಮೂಲ ಅರ್ಥ ''ಬೆಳೆದವ'' (**ವೃಧ್=ಬೆಳೆ; ವೃದ್ಧಿ=ಬೆಳವಣಿಗೆ**). ''ಜ್ಞಾನವೃದ್ಧ'', ''ತಪೋ ವೃದ್ಧ'' ಎಂಬ ಪದಗಳಲ್ಲಿ ವೃದ್ಧ ಶಬ್ದಕ್ಕೆ ಬೆಳೆದ, ಹಿರಿಯ (=ದೊಡ್ಡವ) ಎಂದು ಮಾತ್ರ ಅರ್ಥ. ''ವಯೋವೃದ್ಧ'' ಸಾಕಷ್ಟು ವಯಸ್ಸಾದವನನ್ನು ನಿರ್ದೇಶಿಸುತ್ತದೆ; ಆದರೂ ಇದು ಮುದಿತನವನ್ನು ಸೂಚಿಸುವುದಕ್ಕಿಂತಲೂ ಗೌರವವನ್ನು (ಗೌರವ=ಗುರುತನ, ಹಿರಿಯತನ) ಅಭಿಪ್ರಾಯಿಸುತ್ತದೆ. ಸಂಸ್ಕೃತ ''ವೃದ್ಧ''ವೇ ಪ್ರಾಕೃತದಲ್ಲಿ ''ವಡ್ಡನಾಗಿ'' ಕನ್ನಡಕ್ಕೂ ಬಂದಿದ್ದಾನೆ. ''ವಡ್ಡವಣಿಯ'' ಎಂದರೆ ವೃದ್ಧವಣಿಜ=ಹಿರಿಯ ವರ್ತಕ; ಅವನು ವಯಸ್ಸಿನಲ್ಲಿ ಹಿರಿಯನಾಗಿರಬೇಕಿಲ್ಲ. ''ಗ್ರಾಮವೃದ್ಧ''ನೆ ಗಾಮುಂಡ, ಗಾವುಂಡ, ಗೌಡ. ಇದು ಅಧಿಕಾರಸ್ಥಾನವನ್ನು ಸೂಚಿಸುವ ಶಬ್ದವಾಗಿ ರೂಪುಗೊಂಡಿತು.

ವೃದ್ಧ ಶಬ್ದವೇ ಹಿಂದಿಯಲ್ಲಿ **ಬುಡ್ಢಾ**, ಆಗಿದೆ. ಇದು ಮಾತ್ರ ವಯಸ್ಸಿನಲ್ಲಿ ಮುಪ್ಪಾದವನನ್ನೇ ನಿರ್ದೇಶಿಸುತ್ತದೆ.

*     *     *     *     *

೫

''**ತಾಳ ತಂಬೂರಿ** ಕೈಯೊಳಗೆ ವಿಠಲನ ಭಜನೆ ಮನದೊಳಗೆ'' ಎಂದು ವೈಷ್ಣವ ದಾಸರು ಹಾಡಿದರು. 'ತಾಳ' ಅಥವಾ ಸಂಸ್ಕೃತದಲ್ಲಿ 'ತಾಲ' ಎಂದರೆ ಈಗ ನಮಗೆ ತಟ್ಟನೆ ಹೊಳೆಯುವುದು ಸಂಗೀತದಲ್ಲಿ ಉಪಯೋಗಿಸುವ ಕಾಲಾವರ್ತದ ಗತಿ. ಹಾಡು ನಡೆಯುತ್ತಿರುವಾಗ ಅದು ಸಾಗುವ ಲಯವನ್ನು ಅನುಸರಿಸಿ ಆದಿತಾಳ, ತ್ರಿಪುಟ ತಾಳ, ಮಠ್ಯತಾಳ ಇತ್ಯಾದಿಯಾಗಿ ವರ್ಗೀಕರಿಸುತ್ತೇವೆ. ಈ ತಾಳದ ಗತಿಯನ್ನು ತೋರಿಸಲು ಭಜನೆ ಕೀರ್ತನೆಗಳಲ್ಲಿ ಬಳಸುವ ಬಹುತರವಾಗಿ ಕಂಚಿನ ಚಕ್ರಾಕಾರದ ಜೋಡು ಉಪಕರಣವೂ 'ತಾಳ'ವೇ. ಆದರೆ ಈ ಶಬ್ದದ ಮೂಲಕ್ಕೆ ಹೋದರೆ ಅದು ಮಾನವನ ಯಾವೊಂದು ಶಾಸ್ತ್ರ ಅಥವಾ ಯಾವೊಂದು ಲೋಹೋಪಕರಣಕ್ಕಿಂತ ಹಿಂದಿನ ಆದಿಮಯುಗದ ಗಾನ

ಭಜನೆಗಳ ಪದ್ಧತಿಗೆ ನಮ್ಮನ್ನು ಒಯ್ಯುತ್ತದೆ. ತಾಳ ಅಥವಾ ತಾಲ 'ತಳ' ಅಥವಾ 'ತಲ'ದಿಂದ ಹುಟ್ಟಿದ್ದು. ತಲ ಎಂದರೆ ಸಮತಟ್ಟು; ಬಿಚ್ಚಿದರೆ ಅಂಗೈ ಕೂಡ ಸಮತಟ್ಟಾದ್ದರಿಂದ ಅಂಗೈಯೂ ತಲವೇ. 'ಕೆಂದಳ' ಎಂದರೆ ಕೆಂಪಾದ ಅಂಗೈ. ಆದಿಮ ಮನುಷ್ಯ ಹಾಡುವಾಗ ಲಯವನ್ನು ವಿಭಾಗ ಮಾಡಲು ಬಳಸುತ್ತಿದ್ದದ್ದು ಅಂಗೈಗಳನ್ನೇ. ಅಂಗೈಗಳ ತಟ್ಟುವಿಕೆಯೇ ಆದಿಮ 'ತಾಳ'. ಇಂದಿಗೂ ತಾಳ ವಿಭಾಗವನ್ನು ಸಂಗೀತದವರು ಅಂಗೈಗಳ ಪೆಟ್ಟುಗಳಿಂದ ತೋರಿಸುತ್ತಾರಲ್ಲವೇ? ಲೋಹಗಳು ಕಂಡುಹಿಡಿಯಲ್ಪಟ್ಟು ಎರಕ ಹೊಯ್ಯುವ ವಿದ್ಯೆ ಕರಗತವಾದ ಮೇಲೆ, ಹೆಚ್ಚೆಂದರೆ ನಾಲ್ಕೈದು ಸಾವಿರ ವರ್ಷಗಳ ಹಿಂದೆ ಕಂಚಿನ ತಾಳ ನಿರ್ಮಿಸಲ್ಪಟ್ಟು, ಕೈ ತಟ್ಟುವುದಕ್ಕಿಂತ ಇಂಪಾದ ತಾಳ ಸಾಧನ ಬಳಕೆಗೆ ಬಂದದ್ದು. ಕಂಚಿನ, ಸಂಸ್ಕೃತದಲ್ಲಿ ಕಾಂಸ್ಯದ - ತಾಳವೇ **ಕಂಸಾಳ**. ಹೆಸರು ಮಾತ್ರ ಅಂಗೈ ತಟ್ಟಿನದೇ ಉಳಿಯಿತು. ಅಂಗೈಗಳಂತೆ ಲೋಹ - ತಾಳಗಳೂ ಜೋಡಾಗಿಯೇ ಉಳಿದವು. ಹಾಗೆ ಕೇಳಿದರೆ 'ತಾಳ' ಎಂಬುದು ನಮ್ಮ ಸಂಗೀತದ ಅತಿ ಪ್ರಾಚೀನ ಶಬ್ದವೆನ್ನಲೂಬಹುದು.

ದಾಸರು ಉಲ್ಲೇಖಿಸುವ '**ತಂಬೂರಿ**' ಮಾತ್ರ ಸ್ವದೇಶಿಯಲ್ಲವೆಂದು ಕೇಳಿದರೆ ಮಡಿವಂತರು ಬೆಚ್ಚಿ ಬೀಳಬಹುದು. ನಮ್ಮ ದಾಸರು ಶತಮಾನಗಳಿಂದ ತಂಬೂರಿ ಮೀಟಿದ್ದರೂ ಈ ಶಬ್ದ ಮತ್ತು ಬಹುಶಃ ಅದರ ರೂಪ ರೇಖೆ ಕೂಡ ಅರಬಸ್ತಾನದಿಂದ ಬಂದದ್ದು. **ತಂಬೂರಃ** ಎಂಬುದು ಒಂದು ಅರಬಿ ತಂತ್ರೀ ವಾದ್ಯ. ಹಿಂದಿಗೆ ಬರುವಾಗ ಅದು **ತಾನಪುರಾ** ಎಂಬ ರೂಪಾಂತರವನ್ನು ಹೊಂದಿತು. ಆದರೆ ಶ್ರುತಿಗೆ ತಂತ್ರೀವಾದ್ಯವನ್ನು ನಮ್ಮಲ್ಲಿ ಬಹು ಪ್ರಾಚೀನದಿಂದಲೇ ಬಳಸುತ್ತಿದ್ದರೆಂಬುದಕ್ಕೆ ರಾಮಾಯಣದ ಆದಿಕಾಂಡದಲ್ಲಿ ಲವಕುಶರು ರಾಮಾಯಣವನ್ನು 'ತಂತ್ರೀಲಯವದತ್ಯರ್ಥಂ' ತಂತ್ರೀಲಯಯುಕ್ತವಾಗಿ ಹಾಡಿದರೆಂಬುದು ಸಾಕ್ಷಿಯಾಗಿದೆ. ಎಲ್ಲ ತಂತ್ರೀ ವಾದ್ಯಗಳಿಗೂ ಸೇರಿ ವೀಣೆಯೆಂಬ ಹೆಸರಿತ್ತೆಂದು ಮಂಗರಾಜನ 'ಅಭಿನವಾಭಿದಾನ' (ನಾಟ್ಯವರ್ಗ-೭)ದಿಂದ ತರ್ಕಿಸಬಹುದು. 'ವಲ್ಲಕಿ' ಎಂಬ ಎರಡು ತಂತಿಯ ವೀಣೆಯನ್ನು ಶ್ರುತಿಗೆ (ಈಗ ಶಂಖದಾಸರು ಏಕತಾರಿಯನ್ನು ಬಳಸುವಂತೆ) ಬಳಸುತ್ತಿರಬಹುದು.

**ಮೃದಂಗ, ಮರ್ದಲ** (ಮದ್ದಳೆ) ಅಥವಾ **ಮುರಜ** ಎಂಬ ಚರ್ಮವಾದ್ಯವನ್ನು ಸಂಗಿತದಲ್ಲಿ ನಮ್ಮವರು ಬಳಸುತ್ತಿದ್ದರು. ಈ ಪದಗಳ ಮೂಲಾರ್ಥ ಏನೆಂಬಲ್ಲಿ ಏಕವಾಕ್ಯತೆಯಿಲ್ಲ. ಮೃದಂಗ, ಮರ್ದಲ ಶಬ್ದಗಳು ಮೃದ್, ಮರ್ದ್ ಧಾತುಗಳಿಂದ ಹುಟ್ಟಿದ್ದರೆ ಬಡಿ, ಕುಟ್ಟು, ಹೊಡೆಯೆಂಬರ್ಥದಲ್ಲಿ ಬಡಿಯುವ ವಾದ್ಯವೆಂದು ಸೂಚಿಸಬಹುದು. 'ಮುರಜ' ಎನ್ನುವುದು ಚರ್ಮವನ್ನು ಚರ್ಮದ ಬಾರುಗಳಿಂದ ಮರದ ಕಳಸಕ್ಕೆ ಎಳೆದು ಕಟ್ಟಿದ್ದು (ಮುರ್=ಕಟ್ಟು) ಎಂಬ ಅನ್ವರ್ಥ ಶಬ್ದವಾಗುತ್ತದೆ. ದಾಕ್ಷಿಣಾತ್ಯ ಸಂಗೀತದಲ್ಲಿ ಇಂದಿಗೂ ಈ ವಾದ್ಯಗಳು ಬಳಕೆಯಲ್ಲಿದ್ದರೂ ಹಿಂದೂಸ್ತಾನಿ ಸಂಗೀತದಲ್ಲಿ ಬಳಸುವ ಚರ್ಮವಾದ್ಯ, ತಂತ್ರೀವಾದ್ಯಗಳು ಬಹುತರವಾಗಿ ವಿದೇಶಿ ಮೂಲದವು. ತಬಲಾ ಶಬ್ದ ಅರಬ್ಬಿ (ತಬಲಹ್). ಅದರದೇ ಇನ್ನೊಂದು ಅವತಾರವಾದ 'ತಬಲ್' ದೊಡ್ಡಡೋಲನ್ನು ನಿರ್ದೇಶಿಸುತ್ತದೆ. ನಮ್ಮ ಮಠಗಳಲ್ಲಿ ಕೂಡ ಇಂದು ಬಾರಿಸುವ ನಗಾರಿ ಎಂಬ ಭೇರಿ ಪಾರಸೀಕ ನಗಾರಾ ಶಬ್ದದ ರೂಪಾಂತರ (ಬಹುಶಃ ನಗಾರಾ ನಗಾರೆ-ನಗಾರಿ)ವೇ ಹೊರತು ಅದು ಯಾವ ನಗ(=ಗುಡ್ಡ)ಕ್ಕೂ ಅರಿ (=ಶತ್ರು)ಯಲ್ಲ. ವಿಶಿಷ್ಟ ಕಾಲಗಳಲ್ಲಿ ಕಾಲಸೂಚಕವಾಗಿ ಮಠಗಳಲ್ಲಿ ಬಾರಿಸುವ **ನೌಬತ್ತು** ಕೂಡ ಪಾರಸೀಕ ಮೂಲದ್ದು. ಅದು ನಗಾರಿಯಂಥ ವಾದ್ಯವೇ. ಅದು

ಆನಂದ ಅಥವಾ ವೈಭವಸೂಚಕವಾದ ಬಾಜನೆ. ಈಗ ಹಿಂದೂಸ್ತಾನಿ ಸಂಗೀತದಲ್ಲಿ ವೀಣೆಯಂತೆ ಸ್ವತಂತ್ರ ತಂತ್ರೀವಾದ್ಯವಾಗಿರುವ **ಸಿತಾರು** ಪಾರಸೀಕ (ಸಿತಾರ್) ವಾದ್ಯ - ಪಾರಸೀಕ ಪದಕೂಡ. ಅದು ಸೇಹ (=ಸಪ್ತ=ಏಳು)+ ತಾರ್ (=ತಂತಿ) ಎಂಬ ಸಮಸ್ತ ಪದದ ಸಮಾಹಾರ ರೂಪ.

ದಾಕ್ಷಿಣಾತ್ಯ ಸಂಗೀತ ತನ್ನ ಭಾರತೀಯತೆಯನ್ನು ಶುದ್ಧವಾಗಿ ಉಳಿಸಿಕೊಂಡಿದೆಯೆಂದು ನಾವೆಣಿಸುತ್ತೇವೆ. ಆದರೆ ಅದು ಇಂದು ಪ್ರಧಾನವಾಗಿ ಬಳಸುತ್ತಿರುವ ಪಕ್ಕವಾದ್ಯವಾದ ಪಿಟೀಲು ಮದ್ರಾಸಿನಲ್ಲಿ ಹಾಗೂ ಸುತ್ತ ಮುತ್ತ ಬೀಡು ಬಿಟ್ಟಿದ್ದ ಇಂಗ್ಲಿಷ್ ಜನರ ವಾದ್ಯವಾಗಿತ್ತು. '**ಪಿಟೀಲು**' ಇಂಗ್ಲಿಷ್ **ಫಿಡ್ಲ್** ಶಬ್ದದ ಕನ್ನಡೀಕರಣ. ಅದರದೇ ಇನ್ನೊಂದು ಹೆಸರು **ವಯೋಲಿನ್** ಎಂಬುದು ಈಗ ಪಿಟೀಲು ಎಂಬುದಕ್ಕಿಂತ ಹೆಚ್ಚು ಬಳಕೆಗೆ ಬರುತ್ತಿದೆ. ಇದಕ್ಕೆ ಒಂದು ಕಾರಣ ಬಹುಶಃ 'ಫಿಡ್ಲ್' ಶಬ್ದಕ್ಕೆ ಇಂಗ್ಲಿಷಿನಲ್ಲಿ ಅರ್ಥಾವನತಿ ಆದದ್ದು. ಉದಾಹರಣೆಗೆ fiddle sticks ಅಂದರೆ ಅರ್ಥಹೀನ ಮಾತುಗಳು, second fiddle ಅಂದರೆ ಕ್ಷುಲ್ಲಕ ಪಾತ್ರ ಇತ್ಯಾದಿ. ವಿಚಿತ್ರವೆಂದರೆ ಕನ್ನಡದಲ್ಲಿ ಕೂಡ ಪಿಟೀಲಿಗೆ ಕೆಟ್ಟ ಅರ್ಥ ತಗಲಿಕೊಂಡಿದೆ. ಮೊದಲು ಒಪ್ಪಿಕೊಂಡು ಈಗ ಪಿಟೀಲು ಬಾರಿಸತೊಡಗಿದ್ದಾನೆ (ಕುಂಟು ನೆವ ಮುಂದೊಡ್ಡುತ್ತಿದ್ದಾನೆ) ಎಂದು ದಕ್ಷಿಣ ಕನ್ನಡದಲ್ಲಿ ಹೇಳುವುದುಂಟು. 'ವಯೋಲಿನ್' ಗೌರವಾಸ್ಪದ ಶಬ್ದವೆಂದು ಭಾವಿಸಲಾಗಿದೆ. ಪಿಟೀಲು ಪಕ್ಕವಾದ್ಯವಾಗಿ ಸ್ವೀಕರಿಸಲ್ಪಡುವ ಮುಂಚೆ ದಕ್ಷಿಣದಲ್ಲಿ ವೀಣೆಯೇ ಪಕ್ಕವಾದ್ಯವಾಗಿತ್ತೆಂದು ಹೇಳುತ್ತಾರೆ. ಪಿಟೀಲು ಮನುಷ್ಯ ಕಂಠಕ್ಕೆ ಹೆಚ್ಚು ಸಾಮ್ಯವುಳ್ಳದ್ದಾಗಿದ್ದು 'ಕಮಾನಿ'ನಿಂದ (ಮತ್ತೆ ಪಾರಸೀಕ ಪದ ಕಮಾನ್=ಬಿಲ್ಲು= ಇಂಗ್ಲಿಷ್ bow) ಬಾರಿಸುವುದರಿಂದ ಅದರ ಸ್ವರ ಹರಿಗಡಿಯುವುದಿಲ್ಲ ಎಂಬುದರಿಂದ ದಾಕ್ಷಿಣಾತ್ಯ ಸಂಗೀತಗಾರರು ಅದನ್ನು ಸ್ವೀಕರಿಸಿದರಂತೆ. ಇವೆಲ್ಲ ಇಂದು ಭಾರತೀಯ ಸಂಸ್ಕೃತಿಯಲ್ಲಿ ಹೊಕ್ಕು ಹಾಸುಹೊಕ್ಕಾಗಿ ಬೆರೆತುಹೋಗಿವೆ.

ಸುಷಿರ (ತೂತುಳ್ಳ) ವಾದ್ಯಗಳಲ್ಲಿ ಬಲು ಜನಪ್ರಿಯವಾದದ್ದು **ಕೊಳಲು**. ಬಹಳ ಪ್ರಾಚೀನವಾದದ್ದು ಕೂಡ. ದನಗಾಹಿಗಳೂ ಕುರಿಗಾಹಿಗಳೂ ಅದನ್ನು ಬಾರಿಸುತ್ತಿದ್ದದ್ದು ಅನಾದಿಯಿಂದ. ಗ್ರೀಕ್ ಮತ್ತು ಭಾರತೀಯ ಪುರಾಣ ಸಾಹಿತ್ಯದಲ್ಲಿ ಅದರ ಉಲ್ಲೇಖಗಳಿವೆ. ಕನ್ನಡದಲ್ಲಿ 'ಕೊಳಲು' ಸಂಸ್ಕೃತದಲ್ಲಿ **ವೇಣು, ಮುರಳಿ, ವಂಶಿ**. ಎಲ್ಲ ದೇಶಗಳಲ್ಲಿ ಅದು ಪ್ರಧಾನವಾಗಿ ಬಿದಿರು ಅಥವಾ ಆ ಜಾತಿಯ ಹುಲ್ಲುಗಳ ನಳಿಗೆಗಳಲ್ಲಿ ಕಣ್ಣು ಕೊರೆದು ಮಾಡುತ್ತಿದ್ದ ವಾದ್ಯ. 'ಕೊಳಲು' ಎಂಬ ಪದದ ಮೂಲಶೋಧನೆ ಅಷ್ಟು ಕಷ್ಟದ್ದಲ್ಲ. ಸ್ಪಷ್ಟವಾಗಿಯೇ ಅದು ಕೊಳವಿಯ ಅಕ್ಕನೋ ತಂಗಿಯೋ. ಕೊಳವಿಯೆಂದರೆ ನಳಿಗೆ. ಸಂಸ್ಕೃತದ ವೇಣು ಮತ್ತು ವಂಶ ಎರಡೂ ಬಿದಿರಿನ ಹೆಸರುಗಳು. ವಂಶದಿಂದ ಮೂಡಿದ್ದು ವಂಶಿ; ಅದೇ ಹಿಂದಿಯ ಬಾಂಸುರಿಯ ಮೂಲ. 'ಮುರಲಿ'ಯ ಮೂಲ ಮಾತ್ರ ಸಂದಿಗ್ಧ. ಇಂಗ್ಲಿಷಿನ Flute (=ಕೊಳಲು)ನ ಮೂಲ ಕೂಡ ಅನಿಶ್ಚಿತವೆಂದೇ ಕೋಶಗಳು ಹೇಳುತ್ತವೆ.

ಇಂಗ್ಲಿಷಿನ demandಗೆ ಪ್ರತಿಯಾಗಿ ಉತ್ತರ ಕರ್ನಾಟಕದಲ್ಲಿ ರೂಪಿಸಿಕೊಂಡ ಬೇಡಿಕೆ ಎಂಬ ಶಬ್ದದ ಬಗ್ಗೆ ಈಚೆಗೆ ಬೆಂಗಳೂರಿನಲ್ಲಿ ವಿರೋಧ ವ್ಯಕ್ತವಾಯಿತು. demand ಅಂದರೆ ವಿನಯಪೂರ್ವಕ ಬೇಡುವ ಭಿಕ್ಷೆಯಲ್ಲ. ಹಕ್ಕಿನಿಂದ ಬರಬೇಕಾದ್ದು ಎಂಬುದು ವಾದ. ಆದರೆ ಶಬ್ದಗಳ ಮೂಲಕ್ಕೆ ಹೋಗಿ ಆ ಬೀಜವೋ ಬೇರೋ ಕೊಡುವ ಅರ್ಥವನ್ನೇ ಎಲೆಗೋ ಟೊಂಗೆಗೋ ತೊಡರಿಸಬೇಕೆಂದರೆ ಅನೇಕ ಪೀಕಲಾಟಗಳನ್ನು ಸ್ವಾಗತಿಸಿದಂತೆ. ಬೇಕು,

**ಬೇಡ** ಎಂಬೀ ಎರಡು ಧಡಪ್‌ಶಾಹಿ ಪದಗಳ ತಳಕ್ಕೆ ಹೋದರೆ ಅವೆರಡೂ ಅಕ್ಕ-ತಂಗಿಯರೇ. 'ಬೇಕು' ಎಂಬುದರ ವಂಶಾವಳಿ **ಬೇಡುಗುಂ ಬೇಳ್ಕುಂ** - ಬೇಕು ಎಂಬುದಾಗಿದೆ. ಬೇಕು ಎಂದರೆ ಬೇಡುತ್ತದೆ, ಬೇಡಲ್ಪಡುತ್ತದೆ. ಬೇಡು (ಬೇಳ್) ಎಂದರೆ ಇಚ್ಛಿಸು, ಬಯಸು. ಬೇಡು ಎಂದರೆ ಬೇಡದು. ಬೇಡುವುದಿಲ್ಲ, ಬಯಸುವುದಿಲ್ಲ ಎಂದು ಅದೇ ಧಾತುವಿನ ನಿಷೇಧಾರ್ಥಕ ರೂಪ. ಬಹು ಕಾಲದಿಂದ 'ಬೇಡಿಕೆ' ಬಲಪೂರ್ವಕವಾಗಿ ಬೇಡಿದ್ದು ಎಂಬರ್ಥ ಕೊಡುವಂತೆ ಬಳಕೆಗೆ ಬಂದಿರುವಾಗ ಅದನ್ನೀಗ ಬದಲಿಸುವುದರಲ್ಲೇನು ಫಲ? ಮೇಲಾಗಿ ನಮ್ಮಲ್ಲಿ ಭಿಕ್ಷೆ ಕೂಡ ಹಕ್ಕೇ ಆಗಿತ್ತಲ್ಲವೆ?

*ಪದಾರ್ಥ ಚಿಂತಾಮಣಿ ೧ (೧೯೯೧), ೨(?)*
*ಪದ ಸಂಖ್ಯೆ ೩೫, ೬೬, ೯೯, ೧೧೦, ೧೨೧*

# ೩೦. ಇಗೋ ಕನ್ನಡ

● ಜಿ. ವೆಂಕಟಸುಬ್ಬಯ್ಯ

೧

ಒಂದಱಿಂದೆರಡಹುದನಱಿ ಮೂ
ಱಿಂದವನು ತಿಳಿ ನಾಲ್ಕಱಿಲಿ ಮನ
ಸಂದಿಸದಿರೈದಱಲಿ ವರ್ಜಿಪುದಾಱನೇಳಱಲಿ
ಒಂದಿಸದಿರೆಂಟನು ವಿಚಾರಿಸಿ
ಮುಂದುವರಿಯೊಂಬತ್ತಱಲಿ ಮನ
ಗುಂದದಿರುವೀರೈದಱಲಿ ಭೂಪಾಲ ಕೇಳೆಂದ

(ಕುಮಾರವ್ಯಾಸ, ಉದ್ಯೋಗ ಪರ್ವ ೩-೩)

ಈ ಪದ್ಯದ ಅರ್ಥ ವಿವರಿಸಬೇಕು. ಹಿಂದಿನ ಮೈಸೂರು ಸರಕಾರದ ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಇಲಾಖೆಯು ಪ್ರಕಟಪಡಿಸಿರುವ ಪುಸ್ತಕದಲ್ಲಿ ಈ ಪದ್ಯವು ಮೇಲಿನಂತಿಲ್ಲ. ಅದರಲ್ಲಿ ಱಕಾರವನ್ನು ಬಿಡಲಾಗಿದೆ. ಆದರೆ ಕುಮಾರವ್ಯಾಸನು ತನ್ನ ಕಾವ್ಯದಲ್ಲಿ ಱಕಾರವನ್ನು ಉಪಯೋಗಿಸಿದ್ದನು ಎಂಬುದು ವಿದ್ವಾಂಸರ ಏಕಾಭಿಪ್ರಾಯವಾಗಿರುವುದರಿಂದ ಈ ಪದ್ಯದ ಸ್ವರೂಪವೇ ಮೇಲಿನಂತಿರಬೇಕು. ಈ ಪದ್ಯಕ್ಕೆ ಮೂಲ ವ್ಯಾಸಮಹಾಭಾರತದಲ್ಲಿಯೇ ಇದೆ.

ಆ ಪದ್ಯ ಹೀಗಿದೆ:

ಏಕಯಾ ದ್ವೇ ವಿನಿಶ್ಚಿತ್ಯ ತ್ರೀಂಶ್ಚತುರ್ಭಿರ್ವಶೇ ಕುರು
ಪಂಚ ಜಿತ್ವಾ ವಿದಿತ್ವಾಷಟ್ ಸಪ್ತ ಹಿತ್ವಾ ಸುಖೀಭವ (ಉದ್ಯೋಗ ಪರ್ವ ೨೨-೪೪)

ಉದ್ಯೋಗ ಪರ್ವದಲ್ಲಿ ಹತ್ತು ಉಪಪರ್ವಗಳಿವೆ. ಅವುಗಳಲ್ಲಿ ಮೂರನೆಯದಾದ ಪ್ರಜಾಗರಪರ್ವದಲ್ಲಿ ಈ ಶ್ಲೋಕ ಬರುತ್ತದೆ. ಈ ಪದ್ಯಕ್ಕೆ ಸಾಮಾನ್ಯವಾಗಿ ಅರ್ಥ ಹೇಳುವಾಗ 'ಒಂದು=ಬುದ್ಧಿ ; ಎರಡು=ಒಳ್ಳೆಯ ಕಾರ್ಯ, ಕೆಟ್ಟಕಾರ್ಯ; ಮೂರು=ಶತ್ರು, ಮಿತ್ರ, ತಟಸ್ಥ ಎಂಬ ಅನುಬಂಧಿಗಳು; ನಾಲ್ಕು=ಸಾಮ, ದಾನ, ಭೇದ, ದಂಡ ಎಂಬ ಚತುರೋಪಾಯ ಗಳು; ಐದು=ಪಂಚೇಂದ್ರಿಯಗಳು-ಚರ್ಮ, ಕಣ್ಣು, ಕಿವಿ, ನಾಲಗೆ, ಮೂಗು; ಆರು=ಸಂಧಿ, ವಿಗ್ರಹ, ಯಾನ, ಆಸನ, ದ್ವೈಧೀಭಾವ ಮತ್ತು ಸಮಾಶ್ರಯ ಎಂಬ ಆರು ರಾಜಗುಣಗಳು; ಏಳು=ಸಪ್ತವ್ಯಸನಗಳು, ಅಂದರೆ ಸ್ತ್ರೀ, ಜೂಜು, ಬೇಟೆ, ಮದ್ಯ, ಪರುಷವಾಕ್ಯ, ಅರ್ಥದೂಷಣ ಮತ್ತು ಕಠಿಣ ದಂಡನೆ' ಎಂದು ವಿವರಿಸುತ್ತಾರೆ. ಈ ಏಳಕ್ಕೆ ಸಂಬಂಧವನ್ನು ಹೊಂದಿಸಿ ಹೀಗೆ ಅರ್ಥ ಹೇಳುತ್ತಾರೆ. 'ಬುದ್ಧಿ ಶಕ್ತಿಯಿಂದ ಯಾವುದು ಕೆಟ್ಟಕೆಲಸ, ಯಾವುದು ಒಳ್ಳೆಯ ಕೆಲಸ ಎಂಬುದನ್ನು ನಿರ್ಧಾರ ಮಾಡಿಕೋ. ಒಳ್ಳೆಯ ಕೆಲಸವನ್ನು ಮಾತ್ರ ಮಾಡು. ಸುತ್ತಮುತ್ತ ಓಡಾಡುವವರಲ್ಲಿ ಶತ್ರುಗಳೂ, ಮಿತ್ರರೂ, ಉದಾಸೀನರೂ ಇರುತ್ತಾರೆ. ಈ ಮೂವರನ್ನು ನಾಲ್ಕು ಉಪಾಯಗಳಿಂದ ನಿನ್ನ ವಶಮಾಡಿಕೋ. ಪಂಚೇಂದ್ರಿಯಗಳನ್ನು ಜಯಿಸಿ ಜಿತೇಂದ್ರಿಯನಾಗು. ಆರು ರಾಜಗುಣಗಳನ್ನು ತಿಳಿದುಕೋ. ಸಪ್ತವ್ಯಸನಗಳಿಗೆ

ಒಳಗಾಗಬೇಡ' ಸಂಸ್ಕೃತದ ಶ್ಲೋಕಕ್ಕೆ ಈ ಅರ್ಥ ಸರಿಯಾದೀತು. ರಾಜಕಾರ್ಯ ಸಂಬಂಧವಾದ ಮಾತುಗಳೇ ಇಲ್ಲಿ ಹೇಳಿದೆ ಎಂದು ತಿಳಿದರೆ ಅದೇ ಸರಿ. ಆದರೆ ಕುಮಾರವ್ಯಾಸನ ಪದ್ಯದಲ್ಲಿ 'ವರ್ಜಿಪುದಾರನು' ಎಂದು ಸ್ಪಷ್ಟವಾಗಿ ಹೇಳಿದ್ದಾನೆ. ಈ ಆರನ್ನೂ ತ್ಯಜಿಸು, ದೂರ ಮಾಡು ಎಂದು ಅದರ ಅರ್ಥ. ಈ ಮಾತು ಸಂಸ್ಕೃತದ ಶ್ಲೋಕದ ಅರ್ಥಕ್ಕಿಂತ ಬೇರೆ ಆಯಿತು. ಅಲ್ಲದೆ ಕುಮಾರವ್ಯಾಸನು ಎಂಟು ಒಂಬತ್ತು ಮತ್ತು ಹತ್ತು ಎಂಬ ಸಂಖ್ಯೆಗಳನ್ನು ಹೇಳಿ ಬೇರೆ ಏನನ್ನೋ ತಿಳಿಸುತ್ತಿದ್ದಾನೆ. ಅದಕ್ಕೂ ನಾವು ಅರ್ಥಮಾಡಬೇಕು. ವರ್ಜಿಪುದಾರನು ಎಂಬುದರಲ್ಲಿ ಏನೋ ಪಾಠದೋಷವಿದೆ ಎಂದೆನಿಸುತ್ತದೆ. ಬಹಳ ಸುಲಭವಾದ ತಿದ್ದುಪಾಟು ಮಾಡಿದರೆ ಅದು 'ವರ್ತಿಪುದು' ಆಗಬಹುದು. ಆದರೆ 'ವರ್ತಿಪುದಾರನು' ಎಂಬುದು ಸರಿಯಾದ ಪದ ಸಂಯೋಜನೆಯಾಗುವುದಿಲ್ಲ. 'ವರ್ತಿಪುದಾರರಲಿ' ಎಂದಿದ್ದರೆ ಸರಿಹೋದೀತು. ಮಿಕ್ಕ ಎಂಟು, ಒಂಬತ್ತು, ಹತ್ತು - ಇವುಗಳ ಮಾತು ಹಾಗೆಯೇ ಉಳಿಯಿತು. ಇದೇ ಸಂದರ್ಭದಲ್ಲಿ ನನಗೆ ಇನ್ನೆರಡು ಪದ್ಯಗಳು ನೆನಪಿಗೆ ಬರುತ್ತವೆ. ಒಂದು ಪಂಪಭಾರತದ್ದು. ಇನ್ನೊಂದು ಮುದ್ದಣನ ಶ್ರೀರಾಮ ಪಟ್ಟಾಭಿಷೇಕದ್ದು.

ಒಂದು ಭಾರತದಲ್ಲಿ ಇದೇ ಸಂದರ್ಭದಲ್ಲಿ ಬರುವ ಪದ್ಯ :

> ಪರಿಕಿಪುದೊಂದಱಿಂದೆರಡನೋತೊಳಕೊಳ್ವುದು ಮೂಱಱಿಂದೆ ನಾ
> ಲ್ಕರಿದರಿದಯ್ದಱಿಂದೆ ನೆಱಿಕಲ್ವುದು ನಿರ್ಣಯಮಾಗಿರಾಱಱೊಳ್
> ಪರಿಣತನಪ್ಪುದೇೞಱೊಳಮೊಂದದ ನಿಲ್ವುದು ದುರ್ವಿಮಂತ್ರಮಂ
> ಪರೆಪ ಟಮಾಳಮಂ ಪಿರಿದನೋದಿದೊಡಪ್ಪ ಪದಾರ್ಥಮಾವುದೋ ॥ (೧೩-೬೬)

ಇದಕ್ಕೆ ಅರ್ಥವನ್ನು ಬರೆಯುತ್ತಾ ಪ್ರೊ. ಡಿ. ಎಲ್. ನರಸಿಂಹಾಚಾರ್ಯರು 'ಬುದ್ಧಿಯಿಂದ ಕಾರ್ಯಾಕಾರ್ಯಗಳನ್ನು ಅಥವಾ ಪುಣ್ಯಪಾಪಗಳನ್ನು ಪರೀಕ್ಷಿಸುವುದು. ಶತ್ರುಮಿತ್ರ ಬಾಂಧವ ಎಂಬ ಮೂರರಿಂದ ಪ್ರೀತಿಸಿ ಒಳಪಡಿಸಿಕೊಳ್ಳಬೇಕು. ಸಾಮ, ದಾನ, ಭೇದ, ದಂಡ ಎಂಬ ಉಪಾಯಗಳು ಕಷ್ಟವಾದುವು. ಅವುಗಳನ್ನು ತಿಳಿದುಕೊಂಡು ಐದು ಜ್ಞಾನೇಂದ್ರಿಯಗಳಿಂದ ಪೂರ್ಣವಾಗಿ ಕಲಿಯುವುದು. ನಿಶ್ಚಯವಾಗಿರಲು ಸಂಧಿ, ವಿಗ್ರಹ, ಯಾನ, ಆಸನ, ಸಂಶ್ರಯ ದ್ವೈಧೀಭಾವ ಎಂಬ ಷಡ್ಗುಣಗಳಲ್ಲಿ ಚೆನ್ನಾಗಿ ತಿಳಿದವನಾಗುವುದು. ಏಳರಲ್ಲಿ ಎಂದರೆ ಸಪ್ತವ್ಯಸನಗಳಲ್ಲಿ ಸೇರದೆ ನಿಲ್ಲುವುದು. ದುಷ್ಟಮಂತ್ರಾಲೋಚನೆಯನ್ನು ವಿಸ್ತರಿಸುವ ವಂಚನೆಯ ಮಾತುಗಳನ್ನು ಹಿರಿದಾಗಿ ಹೇಳಿದರೆ ಆಗುವ ಪ್ರಯೋಜನವೇನೋ!' ಈ ವಿವರಣೆಯೂ ಕೂಡ ಸಂಪೂರ್ಣವಾಗಿ ಸಮರ್ಪಕವಾಗಿಲ್ಲ. ಶತ್ರುಮಿತ್ರ ಬಾಂಧವ ಎಂಬ ಮೂರರಿಂದ ಪ್ರೀತಿಸಿ ಒಳಪಡಿಸಿಕೊಳ್ಳುವುದು ಎಂದರೇನು? ವಾಕ್ಯವೇ ಸ್ಪಷ್ಟವಾಗಿಲ್ಲ. ನಾಲ್ಕು ಉಪಾಯಗಳಿಂದ ಶತ್ರು ಮಿತ್ರ ತಟಸ್ಥರೆಂಬುವರನ್ನು ವಶಪಡಿಸಿಕೊಳ್ಳಬೇಕು ಎಂಬುದೇ ಇಲ್ಲಿರುವ ಅರ್ಥಕೂಡ. ಪಂಪನು ಮೂಲದಿಂದ ಬೇರೆ ಹೇಳಿರಲಾರ. ಆದುದರಿಂದ ಈ ಭಾಗವನ್ನು ಬೇರೆ ರೀತಿಯಲ್ಲಿ ಅರ್ಥಮಾಡಬೇಕು. ಹೀಗೆ ಅನ್ವಯ ಮಾಡಬಹುದೇನೋ: 'ಮೂಱಱಿಂದೆ ನಾಲ್ಕರಿದು. ಆದುದರಿಂದ ಓತು ಅರಿದು ಒಳಕೊಳ್ವುದು. ಎಂದರೆ ಶತ್ರು ಮಿತ್ರ ತಟಸ್ಥರೆಂಬ ಮೂರು ಬಗೆಯ ಜನರು ಬೇರೆಬೇರೆ ಸ್ವಭಾವದವರಾದುದರಿಂದ ಅವರಲ್ಲಿ ನಾಲ್ಕು ಉಪಾಯಗಳನ್ನು ಪ್ರಯೋಗಿಸುವುದು

ಕಷ್ಟಸಾಧ್ಯ. ಆದುದರಿಂದ ನೀನೂ ನಾಲ್ಕು ಉಪಾಯಗಳನ್ನು ಪ್ರೀತಿ ವಿಶ್ವಾಸಗಳಿಂದ ಚೆನ್ನಾಗಿ ಕಲಿತು ಆ ಮೂವರನ್ನು ಒಳಗು ಮಾಡಿಕೋ. ಅನ್ವಯದ ಕ್ಲಿಷ್ಟತೆಯಿದ್ದರೂ ಇದೇ ಸರಿಯಾದ ಮೂಲದ ಅರ್ಥವೆಂಬುದು ಸ್ಪಷ್ಟವಾಗಿಯೇ ಇದೆ. ಹಾಗಾದರೆ ಕುಮಾರವ್ಯಾಸನು ಹೇಳುವ 'ಎಂಟು, ಒಂಬತ್ತು, ಹತ್ತು ಏನು?' ಎಂಬ ಮಾತು ಉಳಿದೇ ಉಳಿಯುತ್ತದೆ. ಇದಕ್ಕೆ ನಾವು ಮೂಲಭಾರತವನ್ನೇ ಮೊರೆ ಹೋಗಬೇಕು. ಮೂಲದಲ್ಲಿ ಏಕಯಾದ್ವೇವಿನಿಶ್ಚಿತ್ಯ ಎಂದು ಹೇಳಿ ಕವಿ ಸುಮ್ಮನೆ ಬಿಟ್ಟುಬಿಡಲಿಲ್ಲ. ಅಲ್ಲಿ ಆ ಸಂಖ್ಯೆಗಳಿಗೆ ಬೇಕಾದಷ್ಟು ವಿವರಣೆ ನೀಡಿದ್ದಾನೆ. ಉದಾಹರಣೆಗೆ ಏಕ ಶಬ್ದದ ಸಂಬಂಧವನ್ನೇ ಕವಿ ೪೪, ೪೫, ೪೬, ೪೭, ೪೮, ೪೯, ೫೦, ೫೧, ೫೨ ಈ ಒಂಬತ್ತು ಪದ್ಯಗಳಲ್ಲಿ ವಿವರಿಸಿದ್ದಾನೆ. ಕವಿಯ ಉದ್ದೇಶವು ಗೊತ್ತಾಗಲೆಂಬ ದೃಷ್ಟಿಯಿಂದ ಆ ಪದ್ಯಗಳ ಅರ್ಥವನ್ನು ಇಲ್ಲಿ ಬರೆದಿದೆ.

'ಒಂದಾದ ವಿಷವು ಸೇವನೆ ಮಾಡಿದವನನ್ನು ಮಾತ್ರ ಕೊಲ್ಲುತ್ತದೆ. ಒಂದೇ ಶಸ್ತ್ರವು ಒಂದು ಸಲಕ್ಕೆ ಒಬ್ಬನನ್ನೇ ಕೊಲ್ಲುತ್ತದೆ. ಆದರೆ ರಾಜ್ಯದ ರಹಸ್ಯವು ಬಹಿರಂಗವಾದರೆ ರಾಜ, ಪ್ರಜೆ, ರಾಜ್ಯ ಎಲ್ಲಾ ನಾಶವಾಗಿ ಬಿಡುತ್ತದೆ (೪೫) ದಿವ್ಯವಾದ ಮೃಷ್ಟಾನ್ನವನ್ನು ಒಬ್ಬನೇ ತಿನ್ನಬಾರದು. ರಾಜ್ಯ ವಿಷಯಗಳನ್ನು ಒಬ್ಬನೇ ಚಿಂತಿಸಬಾರದು. ಒಬ್ಬನೇ ತೀರ್ಮಾನ ಮಾಡಬಾರದು. ಒಬ್ಬನೇ ಆಗಿ ರಾಜನು ಪ್ರಯಾಣ ಮಾಡಬಾರದು. ಎಲ್ಲ ಮಲಗಿದ್ದಾಗ ಒಬ್ಬನೇ ಎಚ್ಚರವಾಗಿರಬಾರದು (೪೬) ಸಾಗರವನ್ನು ದಾಟಲು ನಾವೆ ಬೇಕಾಗಿರುವಂತೆ ಸ್ವರ್ಗಸಾಧನೆಗೆ ಸತ್ಯವ್ರತವೇ ಏಕಮಾತ್ರ ಸಾಧನ (೪೭) ಕ್ಷಮಾಗುಣವುಳ್ಳವರ ಮೇಲೆ ಒಂದೇ ಆಪಾದನೆ, ಅವರು ದುರ್ಬಲರೆಂಬುದು. ಆದರೆ ನಿಜವಾಗಿ ಕ್ಷಮಾಗುಣವು ದೌರ್ಬಲ್ಯವಲ್ಲ (೪೮, ೪೯) ಯಾರ ಕೈಯಲ್ಲಿ ಶಾಂತಿ ಎಂಬ ಒಂದು ಖಡ್ಗ ಇರುತ್ತದೆಯೋ ಅವರಿಗೆ ದುರ್ಜನನಾದವನು ಏನು ತಾನೇ ಮಾಡಿಯಾನು? ಧರ್ಮವೆಂಬುದು ಒಂದೇ ಮಾನವನ ಶ್ರೇಯಸ್ಸಿಗೆ ಕಾರಣ. ಕ್ಷಮಾಗುಣವೊಂದೇ ಶಾಂತಿಯನ್ನು ತರಬಲ್ಲದು. ಹಾಗೆಯೇ ಅಹಿಂಸೆಯೊಂದೇ ಎಲ್ಲರಿಗೂ ಸುಖವನ್ನು ತರಬಲ್ಲದು.

ಈ ಪದ್ಯಗಳಲ್ಲಿ ಒಂದು ಎಂಬುದು ಎಷ್ಟಕ್ಕೆ ಅನ್ವಯವಾಗುತ್ತದೆ ನೋಡಿ. ಹೀಗೆಯೇ ಎರಡು ಎಂಬುದಕ್ಕೆ ೫೩ರಿಂದ ೬೧ರವರೆಗೆ, ಮೂರು ಎಂಬುದಕ್ಕೆ ೬೨ರಿಂದ ೬೮, ನಾಲ್ಕು ಎನ್ನುವುದಕ್ಕೆ ೬೯ರಿಂದ ೭೩, ಐದು ಎನ್ನುವುದಕ್ಕೆ ೭೪ರಿಂದ ೭೭, ಆರು ಎನ್ನುವುದಕ್ಕೆ ೭೮ ರಿಂದ ೯೦, ಏಳಕ್ಕೆ ೯೧ ಮತ್ತು ೯೨, ಎಂಟಕ್ಕೆ ೯೩ ರಿಂದ ೯೯, ಒಂಬತ್ತಕ್ಕೆ ೧೦೦, ಹತ್ತಕ್ಕೆ ೧೦೨. ಇಷ್ಟು ವಿವರಣೆಗಳನ್ನು ನೀಡಿ ಆ ಅಧ್ಯಾಯದ ಕೊನೆಯಲ್ಲಿ:

ಯಃ ಸರ್ವ ಭೂತ ಪ್ರಶಮೇ ನಿವಿಷ್ಟಃ
ಸತ್ಯೋಽಮೃದುರ್ಮಾನಕೃಚ್ಛುದ್ಧಭಾವಃ
ಅತೀವ ಸುಜ್ಞಾಯತೇ ಜ್ಞಾತಿಮಧ್ಯೆ
ಮಹಾಮಣರ್ಜಾತ್ಯ ಇವ ಪ್ರಸನ್ನಃ (೧೨೦)

ಯಾರು ಎಲ್ಲ ಜೀವಿಗಳಲ್ಲಿ ಶಾಂತಿಯನ್ನೂ ಸುಖವನ್ನೂ ಕಾಣಲು ಆಸಕ್ತನಾಗಿ ರುತ್ತಾನೋ, ಯಾರು ಸತ್ಯವನ್ನು ವ್ರತದಂತೆ ಆಚರಿಸುತ್ತಾನೋ, ಯಾರು ತನ್ನ ಮೃದು ಸ್ವಭಾವದ ಕಾರಣವಾಗಿ ಇತರರನ್ನು ಗೌರವದಿಂದ ಕಾಣುತ್ತಾನೋ, ಯಾರು ಶುದ್ಧ ಸ್ವಭಾವದವನೋ ಅವನು ಗಣಿಯಿಂದ ತೆಗೆದ ಹೊಳೆಯುವ ರತ್ನದಂತಿರುತ್ತಾನೆ. ಅವನೇ

ಪ್ರಸಿದ್ಧನಾಗುತ್ತಾನೆ. ಇದನ್ನೆಲ್ಲ ಅಭ್ಯಾಸ ಮಾಡಿಯೇ ದಿ|| ಪ್ರೊ. ಎ. ಆರ್. ಕೃಷ್ಣಶಾಸ್ತ್ರಿಗಳು ತಮ್ಮ ವಚನಭಾರತದಲ್ಲಿ ಈ ಸನ್ನಿವೇಶವನ್ನು ಹೀಗೆ ವಿವರಿಸಿದ್ದಾರೆ.

೧. 'ಸತ್ಯವೊಂದೇ ಸ್ವರ್ಗಕ್ಕೆ ಸೋಪಾನ ೨. ಯುದ್ಧ ಮಾಡದ ರಾಜ, ದೇಶ ಸುತ್ತದ ಬ್ರಾಹ್ಮಣ ಈ ಇಬ್ಬರೂ ಹುತ್ತದೊಳಗಿನ ಹಾವಿನಂತೆ ಅಡಗಿ ಹೋಗುವರು. ೩. ಮನುಷ್ಯರಲ್ಲಿ ಉತ್ತಮರು, ಮಧ್ಯಮರು, ಅಧಮರು ಎಂದು ಮೂರುವಿಧ. ಅವರನ್ನೇ ಆ ಮೂರುವಿಧವಾದ ಕಾರ್ಯದಲ್ಲಿ ತೊಡಗಿಸಬೇಕು. ೪. ದೈವಸಂಕಲ್ಪ, ಬುದ್ಧಿವಂತರೊಡನೆ ಆಲೋಚನ, ವಿದ್ಯೆ, ವಿನಯ ಈ ನಾಲ್ಕೂ ಕೂಡಲೇ ಫಲ ಕಾಣತಕ್ಕವುಗಳು. ೫. ದೇವತೆಗಳು, ಪಿತೃಗಳು, ಮನುಷ್ಯರು, ಭಿಕ್ಷುಗಳು, ಅತಿಥಿಗಳು ಈ ಐವರನ್ನು ಪೂಜಿಸುವುದರಿಂದ ಶ್ರೇಯಸ್ಸುಂಟಾಗುತ್ತದೆ. ೬. ಮನುಷ್ಯನಾದವನು ಸತ್ಯ, ದಾನ, ಚಟುವಟಿಕೆ, ಸಹನೆ, ತಾಳ್ಮೆ, ಧೈರ್ಯ - ಈ ಆರೂ ಗುಣಗಳನ್ನು ಯಾವಾಗಲೂ ಬಿಡಬಾರದು. ೭. ಹೆಂಗಸು, ಜೂಜು, ಬೇಟೆ, ಕುಡಿತ, ದುರ್ಭಾಷೆ, ಕಠಿನ ಶಿಕ್ಷೆ, ದುಂದು ಇವುಗಳು ರಾಜರು ಬಿಡಬೇಕಾದ ವ್ಯಸನಗಳು, ೮. ಗೆಳೆಯರೊಡನೆ ಕೂಟ, ಯಥೇಷ್ಟವಾದ ಧನ, ಮಗನ ಆಲಿಂಗನ, ರತಿ, ಸಕಾಲದಲ್ಲಿ ಪ್ರಿಯವಾದ ಮಾತು, ಸ್ವಜನದ ಮೇಲ್ಮೆ, ಇಷ್ಟಪಟ್ಟ ವಸ್ತುವಿನ ಪ್ರಾಪ್ತಿ, ಜನಸಮುದಾಯದಲ್ಲಿ ಗೌರವ ಇವು ಎಂಟೂ ಸಂತೋಷದಲ್ಲಿ ತೇಲುವ ಬೆಣ್ಣೆಯ ಹಾಗೆ. ೯. ಒಂಬತ್ತು ಬಾಗಿಲು, ಮೂರು ಕಂಬ, ಐದು ಕಿಟಕಿ ಇರುವ ಮನೆಯನ್ನೂ ಅದರ ಯಜಮಾನನನ್ನೂ ತಿಳಿದವನೇ ದೊಡ್ಡ ವಿದ್ವಾಂಸ. (ಇಲ್ಲಿ ಒಟ್ಟು ಒಂಬತ್ತು ಎಂದು ಹೀಗೆ ತಿಳಿಯಬೇಕು: ಬಾಗಿಲುಗಳು ಎಲ್ಲ ಸೇರಿ - ೧, ಕಂಬಗಳು - ೩ ಕಿಟಕಿಗಳು - ೫, ಒಟ್ಟು- ೯ ಎಂದರ್ಥ. ಇದು ಮಾನವ ದೇಹಕ್ಕೆ ಸಂಕೇತ) ೧೦. ಮತ್ತ, ಪ್ರಮತ್ತ, ಉನ್ಮತ್ತ, ಬಳಲಿದವನು, ಕೋಪ ಬಂದವನು, ಹಸಿದವನು, ಆತುರಗಾರ, ಹೇಡಿ, ಜಿಪುಣ, ಕಾಮಾತುರ - ಈ ಹತ್ತು ಜನರೂ ಧರ್ಮವನ್ನು ತಿಳಿಯಲಾರರು.

ಇಂಥ ಪ್ರಹೇಳಿಕೆಗಳಿಗೆ ಹೀಗೆಯೇ ಅರ್ಥ ಹೇಳಬೇಕೆಂಬ ನಿಯಮವೇನೂ ಇಲ್ಲ. ಆದುದರಿಂದಲೇ ಬೇರೆ ಬೇರೆ ವಿವರಣೆಗಳು ಹುಟ್ಟಿಕೊಳ್ಳುತ್ತವೆ. ಒಟ್ಟು ಸಂದರ್ಭಕ್ಕೆ ಹೊಂದುವ ಯಾವ ಅರ್ಥವಾದರೂ ಸರಿಯೇ. ಈ ದೃಷ್ಟಿಯಿಂದ ಪ್ರೊ. ಎ. ಆರ್. ಕೃಷ್ಣಶಾಸ್ತ್ರಿಗಳ ಅರ್ಥ ವಿವರಣೆ ವ್ಯಾಸನ ಮೂಲಕ್ಕೂ ಕುಮಾರವ್ಯಾಸನ ಪದ್ಯಕ್ಕೂ ಹೊಂದಿಕೊಳ್ಳುತ್ತದೆ. ಸಂಖ್ಯೆಗಳನ್ನು ಗೂಢಾರ್ಥಗಳಿಗಾಗಿ ಉಪಯೋಗಿಸುವುದು ಕಾವ್ಯದಲ್ಲಿ ಒಂದು ಪದ್ಧತಿ. ಇದು ಹಳೆಯದು. ದಾಸರ ಪದಗಳಲ್ಲಿ, ಕೆಲವು ಸಾಂಗತ್ಯ ಗ್ರಂಥಗಳಲ್ಲಿ ಇಂಥ ಅನೇಕ ಒಗಟುಗಳಿವೆ. ಕನ್ನಡದಲ್ಲಿ ಈ ಸಂದರ್ಭದಲ್ಲಿ ಮುದಣ್ಣನ ಶ್ರೀರಾಮ ಪಟ್ಟಾಭಿಷೇಕದಲ್ಲಿ (೫-೬೪) ಬರುವ ಒಂದು ಪದ್ಯವನ್ನೂ ಆಸಕ್ತರು ಪರಿಶೀಲಿಸುವುದರಿಂದ ಈ ಬಗೆಯ ರಚನೆಗಳು ಹೇಗೆ ಹತ್ತನೆಯ ಶತಮಾನದಿಂದ ಇಪ್ಪತ್ತನೆಯ ಶತಮಾನದವರೆಗೆ ಅವ್ಯಾಹತವಾಗಿ ಬೆಳೆದು ಬಂದಿವೆ ಎಂಬುದು ತಿಳಿಯಬರುತ್ತದೆ.

ಈ ಭಾಗಕ್ಕೆ ಮಹಾಭಾರತದಲ್ಲಿ ವಿದುರನೀತಿ ಎಂಬ ಹೆಸರಿದೆ. ಪ್ರಜಾಗರ ಪರ್ವದಲ್ಲಿ ಬರುವ ಇದು ಬಹಳ ಪ್ರಸಿದ್ಧವಾದ ಪ್ರಸಂಗ. ಧೃತರಾಷ್ಟ್ರನಿಗೆ ವಿದುರನು ಹೇಳಿದ ನೀತಿಪಾಠ ಇದರಲ್ಲಿದೆ. ಪ್ರಜಾಗರ ಎಂದರೆ ಜಾಗರಣೆ ಎಂದೇ ಅರ್ಥ. ಸಂಜಯನು ಪಾಂಡವರಿಂದ ತಂದ ವರ್ತಮಾನವನ್ನು ಕೇಳಿ ಧೃತರಾಷ್ಟ್ರನು ಹೆದರಿಕೊಂಡು ವಿದುರನಿಗೆ ರಾತ್ರಿಯೇ ಹೇಳಿಕಳುಹಿಸುತ್ತಾನೆ. ವಿದುರ ಆ ರಾತ್ರಿಯೇ ಈ ಎಲ್ಲಾ ರಾಜನೀತಿಯನ್ನೂ ತಿಳಿಸುತ್ತಾನೆ.

ಆದರೆ ಧೃತರಾಷ್ಟ್ರನು ಏನನ್ನೂ ಕಲಿಯಲಿಲ್ಲ ಎಂಬುದು ಇಂದಿನ ರಾಜಕಾರಣಕ್ಕೂ ದೃಷ್ಟಾಂತವಾಗಿದೆ.

* * * * *

೨

**ಗಂಡಭೇರುಂಡ** ಗಂಡ = ಪರಾಕ್ರಮಿಯಾದ. ಪ್ರಪಂಚದ ಎಲ್ಲ ದೇಶಗಳಲ್ಲಿಯೂ ಅಲ್ಲಿಯ ಪುರಾಣಗಳಲ್ಲಿ ಪಕ್ಷಿಗಳ ಕಥೆಗಳು ಬರುತ್ತವೆ. ಪುರಾಣವೆಂದರೆ ಹಳೆಯದು ಎಂದರ್ಥ. ಪುರಾಪಿ ನವಃ ಅಂದರೆ ಹಳೆಯದಾದರೂ ಹೊಸದಾಗಿರುವುದು ಎಂದು ಇನ್ನೊಂದು ಅರ್ಥ. ನಮ್ಮ ನೆನಪಿಗೆ ಬಾರದಷ್ಟು ಹಿಂದಿನ ಕಾಲದಿಂದಲೂ ಈ ಕಥೆಗಳು ಜನರಲ್ಲಿ ಬೇರೂರಿರುತ್ತವೆ. ಈ ಕಥೆಗಳಿಗೆ ಕಾಲಕಾಲಕ್ಕೆ ಬೇರೆ ಬೇರೆ ಅರ್ಥಗಳನ್ನು ಸಂಶೋಧನೆ ಮಾಡಿದ ವಿದ್ವಾಂಸರು ವಿವರಿಸುತ್ತಾರೆ. ಈ ಎಲ್ಲ ಕಥೆಗಳೂ ಕಲ್ಪನೆಗಳಿಂದ ಕೂಡಿದ ಸುಳ್ಳುಗಳ ಸರಮಾಲೆ ಎನ್ನುವವರೂ ಇದ್ದಾರೆ. ಈ ಕಥೆಗಳಲ್ಲಿ ಗೂಢವಾದ ಅರ್ಥಗಳಿವೆ. ಇವುಗಳನ್ನು ಅರ್ಥಮಾಡಿಕೊಳ್ಳುವುದು ಕಷ್ಟ. ಆದರೆ ಪ್ರಯತ್ನ ಮಾಡಬಹುದು ಎಂದು ಹೇಳಿ ಈ ಕಥೆಗಳಿಗೆ ಅರ್ಥವನ್ನು ಊಹಿಸಿದವರೂ ಇದ್ದಾರೆ. ಈಜಿಪ್ಟಿನಲ್ಲಿ ಆಕಾಶದ ದೇವತೆಯಾದ ಹೋರಸ್‌ನ ಜೊತೆಯಲ್ಲಿರುವ ಒಂದು ಪಕ್ಷಿಯ ಕಥೆಯಿದೆ. ಆ ಪಕ್ಷಿಯು ಆಕಾಶದಲ್ಲಿ ಹಾರಾಡುತ್ತಾ ನೆಲದ ಮೇಲೆ ಓಡಾಡುತ್ತಿದ್ದ ಪ್ರಾಣಿಗಳಲ್ಲಿ ತನಗೆ ಬೇಕಾದುದನ್ನು ಗುರುತಿಸಿ ಅದರ ಮೇಲೆ ಬಿದ್ದು ತಿನ್ನುತ್ತಿದ್ದಿತಂತೆ. ಮೆಸಪೊಟೋಮಿಯಾದ ಪುರಾಣಗಳಲ್ಲಿ ಬರುವ, ಸಿಂಹದ ಮುಖವುಳ್ಳ ಇಂಡುಗುಡ್ ಎಂಬ ಪಕ್ಷಿಯು ತನ್ನ ರೆಕ್ಕೆಗಳ ನೆರಳಿನಲ್ಲಿ ಎರಡು ಜಿಂಕೆಗಳನ್ನು ರಕ್ಷಿಸುತ್ತಿರುವ ಶಿಲ್ಪವಿದೆ. ಗ್ರೀಕ್ ಪುರಾಣಗಳಲ್ಲಿ ಹಾಲ್ಕಿಯಾನ್ ಎಂಬ ಪಕ್ಷಿಯ ಕಥೆ ಬರುತ್ತದೆ. ಅದು ಹಿಮಗಾಲದಲ್ಲಿ ಮಾತ್ರ ಮೊಟ್ಟೆಗಳನ್ನಿಟ್ಟು ಅವುಗಳನ್ನು ಮರಿಗಳಾಗಿ ಮಾಡುತ್ತಿದ್ದಿತಂತೆ. ಈ ಕಾರ್ಯ ಸಮುದ್ರ ಮಧ್ಯದಲ್ಲಿ ನಡೆಯುತ್ತಿತ್ತು. ಆದುದರಿಂದ ಆ ಕಾಲದಲ್ಲಿ ಸಮುದ್ರವು ಸ್ವಲ್ಪವೂ ಅಲುಗಾಡದೆ ಸ್ತಿಮಿತವಾಗಿ ಇರುತ್ತಿತ್ತಂತೆ. ರೋಮನ್ನರ ದೇವತೆಯಾದ ಜ್ಯೂಪಿಟರನು ಗ್ಯಾನಿಮೀಡ್ ಎಂಬ ಸ್ತ್ರೀಯನ್ನು ಹಾರಿಸಿಕೊಂಡು ಹೋಗಲು ಒಂದು ಹದ್ದಿನ ಆಕಾರ ಪಡೆದ ಕಥೆಯಿದೆ. ವೀನಸ್ ದೇವತೆಗೆ ಪಾರಿವಾಳಗಳು ತುಂಬ ಪ್ರಿಯವಾಗಿದ್ದುವಂತೆ.

ಸ್ಲಾವಾನಿಕ್ ಪುರಾಣಗಳಲ್ಲಿ ವೋಕ್ ಎಂಬ ದೇವತೆಯು ಗಿಡುಗನ ಆಕಾರದಲ್ಲಿ ಆಕಾಶದಲ್ಲಿ ಹಾರಾಡುತ್ತಾ ಇದ್ದು ಬೇಕಾದಾಗ ತೋಳ ಅಥವಾ ಇರುವೆಯಂತೆ ಆಕಾರಗಳನ್ನು ಪಡೆಯುತ್ತಿದ್ದನಂತೆ.

ಟರ್ಕಿ ದೇಶದಲ್ಲಿ ಪುರಾಣಗಳು ಹುಂಜಕ್ಕೆ ಪ್ರಾಧಾನ್ಯವನ್ನು ನೀಡುತ್ತವೆ. ಹುಂಜದ ಕೂಗು ಪಿಶಾಚಿಗಳನ್ನು ಓಡಿಸುತ್ತದೆ ಎಂಬುದು ಅವರ ನಂಬಿಕೆ. ಕೊಕ್ಕರೆಗಳು ನೃತ್ಯ ಮಾಡುವ ಕಥೆಗಳಿವೆ. ಕೊಕ್ಕರೆ ಒಂದೇ ಕಾಲಿನ ಮೇಲೆ ನಿಂತು ನಿದ್ದೆ ಮಾಡುತ್ತದಂತೆ.

ಇಂಗ್ಲೆಂಡಿನ ಟವರ್ ಆಫ್ ಲಂಡನ್ನಿನಲ್ಲಿ ಸಾವಿರಾರು ಕಾಗೆಗಳಿವೆ. ಆ ಕಾಗೆಗಳಿಗೆ ಹಾನಿಯಾದರೆ ಒಟ್ಟು ಬ್ರಿಟನ್ನಿಗೇ ಏನೋ ಅಪಘಾತ ಕಾದಿದೆ ಎಂದು ಇಂಗ್ಲೆಂಡಿನ ಜನ ನಂಬುತ್ತಾರೆ.

ಪಾರಿವಾಳಗಳು ನಿಜವಾಗಿ ಮಾತನಾಡುತ್ತವೆ ಎಂಬ ಕಥೆಗಳಿವೆ. ರೋಮನ್ ಕವಿಗಳು ಪ್ರೇಮದ ದೇವತೆಯಾದ ವೀನಸ್ ಎಂಬುವಳನ್ನು ಪಾರಿವಾಳಗಳು ಎಳೆಯುತ್ತಿದ್ದ ರಥದಲ್ಲಿ ಕುಳಿತಿರುವಂತೆ ವರ್ಣಿಸುತ್ತಾರೆ. ಓವಿಡ್ ಕವಿಯ ಕವನಗಳಲ್ಲಿ ಇದನ್ನು ಕಾಣಬಹುದು. ಹೀಗೆಯೇ ಉಷ್ಟ್ರಪಕ್ಷಿಯು ತನ್ನ ಮೊಟ್ಟೆಗಳನ್ನು ಕಣ್ಣ ನೋಟದಿಂದಲೇ ಒಡೆದು ಮರಿಗಳನ್ನು ಹೊರತರಬಲ್ಲದು ಎಂದು ವರ್ಣನೆಗಳಿವೆ. ನೈಟಂಗೇಲ್ ಪಕ್ಷಿಯ ಹಾಡುಗಳ ಸೊಗಸಿನ ವರ್ಣನೆಗೆ ಎಲ್ಲೆಯೇ ಇಲ್ಲ.

ನಮ್ಮ ದೇಶದಲ್ಲಿ ವಿಷ್ಣುವಿನ ವಾಹನವಾದ ಗರುಡ ರಾಮಾಯಣದ ಜಟಾಯು, ಸಂಪಾತಿ, ಬ್ರಹ್ಮನ ಹಂಸ ಇತ್ಯಾದಿ ಕಥೆಗಳನ್ನು ನಾವೂ ಕೇಳಿದ್ದೇವೆ. ಆದರೆ ಗಂಡಭೇರುಂಡದ ಕಥೆಯೇ ಬೇರೆ. ನಮ್ಮಲ್ಲಿಯೂ ಇದು ಒಂದು ಪೌರಾಣಿಕ ಪಕ್ಷಿ. ಆದರೆ ಇದು ನಮ್ಮ ದೇಶಕ್ಕೆ ಸೀಮಿತವಾದುದಲ್ಲ. ಕ್ರಿಸ್ತಪೂರ್ವಕ್ಕೆ ಮೊದಲೇ ಇದು ಜರ್ಮನಿಯ ಶಿಲ್ಪಗಳಲ್ಲಿ ಕಾಣಸಿಗುತ್ತದೆ ಎಂದು ಹೇಳುತ್ತಾರೆ. ಈ ಪಕ್ಷಿ ಬಂಜೆತನವನ್ನು ನಿವಾರಿಸುವ ಗುಣವುಳ್ಳದ್ದು ಎಂಬ ನಂಬಿಕೆಯಿದೆ.

ಭಾರತದಲ್ಲಿಯೂ ಕ್ರಿಸ್ತಪೂರ್ವದಲ್ಲಿ ಕಲ್ಲಿನಲ್ಲಿ ಕೆತ್ತಿರುವ ಗಂಡಭೇರುಂಡದ ಶಿಲ್ಪವಿದೆ. ಋಗ್ವೇದದ ದ್ವಾಸುಪರ್ಣಾ ಎಂದು ವರ್ಣಿತವಾಗಿರುವ ಎರಡು ಹಕ್ಕಿಗಳ ಮತ್ತು ವಿಷ್ಣುವಿನ ಗರುಡನ ಶಕ್ತಿಗಳ ಮಿಶ್ರಣದಿಂದ ಈ ಕಲ್ಪನೆ ಬೆಳೆದಿರಬೇಕು ಎಂದು ಕೆಲವು ವಿದ್ವಾಂಸರ ವಾದ.

ನರಸಿಂಹಾವತಾರವನ್ನು ತಳೆದ ವಿಷ್ಣು ಹಿರಣ್ಯಕಶಿಪುವನ್ನು ಕೊಂದಮೇಲೆ ಅವನಿಗೆ ಇನ್ನೂ ಕೋಪ ಶಮನವಾಗಿರಲಿಲ್ಲ. ಅವನಿಂದ ಲೋಕಕ್ಕೆ ಏನು ಕಂಟಕವಾಗಬಹುದೋ ಎಂಬ ಹೆದರಿಕೆಯಿಂದ ಸಿಂಹಸ್ವರೂಪವನ್ನು ಹತೋಟಿಗೆ ತರಲು ಶಿವನು ಶರಭಾವತಾರವನ್ನು ತಳೆದನಂತೆ. ಆಗ ವಿಷ್ಣು ಗಂಡಭೇರುಂಡದ ಸ್ವರೂಪವನ್ನು ತಳೆದನೆಂಬ ಪುರಾಣ ಕಥೆಯಿದೆ.

ಉತ್ತರ ಕರ್ನಾಟಕದ ಬೆಳಗಾವಿಯಲ್ಲಿ ಒಂದು ಶಿಲ್ಪವಿದೆ. ಒಂದು ಗಂಡಭೇರುಂಡವು ಒಬ್ಬ ರಾಕ್ಷಸನನ್ನು ತಿನ್ನುತ್ತಿರುವಂತೆ ಕಾಣುವ ಕೆತ್ತನೆಯಿದೆ. ಇದನ್ನು ಭೇರುಂಡೇಶ್ವರ ಎಂದು ಕರೆಯುತ್ತಾರೆ. ಚಾವುಂಡರಾಯನು ಇದನ್ನು ೧೦೧೭ರಲ್ಲಿ ಕೆತ್ತಿಸಿದನೆಂಬ ಉಲ್ಲೇಖವನ್ನು ಒಂದು ಶಾಸನದಲ್ಲಿ ಕಾಣಬಹುದು. ಕೋರಮಂಗಲದ ಬೂಚೇಶ್ವರ ದೇವಾಲಯದಲ್ಲಿ ತುಂಬ ಸೊಗಸಾದ ಶಿಲ್ಪವಿದೆ. ಅಲ್ಲಿ ಒಂದು ಜಿಂಕೆಯನ್ನು ಒಂದು ಹೆಬ್ಬಾವು ತಿನ್ನಲು ಪ್ರಯತ್ನಪಡುತ್ತಿದೆ. ಆ ಹೆಬ್ಬಾವಿನ ಹಿಂದೆ ಒಂದು ಆನೆ ತನ್ನ ಸೊಂಡಿಲಿನಿಂದ ಹಾವನ್ನು ಎಳೆಯುತ್ತಿದೆ. ಆ ಆನೆಯನ್ನು ಒಂದು ಸಿಂಹವು ಸೀಳಲು ಮುಂದಾಗಿದೆ. ಆ ಸಿಂಹವನ್ನು ತಿನ್ನಲು ಶರಭವು ಮುನ್ನುಗ್ಗಿದೆ. ಆ ಶರಭವನ್ನು ಕೊಲ್ಲಲು ಗಂಡಭೇರುಂಡವು ಸಿದ್ಧವಾಗಿದೆ. ಬೇಲೂರಿನ ಕೇಶವ ದೇವಾಲಯದಲ್ಲಿಯೂ ಇಂಥದೇ ಇನ್ನೊಂದು ಶಿಲ್ಪವಿದೆ. ಇದರಿಂದ ಎಲ್ಲಾ ಪ್ರಾಣಿಗಳಿಗಿಂತಲೂ ಗಂಡಭೇರುಂಡವು ಬಲಶಾಲಿಯಾದುದು ಎಂಬ ಅಂಶ ಸ್ಪಷ್ಟವಾಗುತ್ತದೆ. ಈ ಅಂಶವನ್ನು ಅತ್ಯಂತ ಸ್ಪಷ್ಟವಾಗಿ ಚಿತ್ರಿಸುವ ಮತ್ತೊಂದು ಶಿಲ್ಪವು ಕೆಳದಿಯ ಭೈರವೇಶ್ವರ ದೇವಾಲಯದ ಒಂದು ಕಂಭದ ಮೇಲಿದೆ. ಅಲ್ಲಿ ಒಂದು ಗಂಡಭೇರುಂಡವು ತನ್ನ ಎರಡು ಕೊಕ್ಕುಗಳಲ್ಲಿ ಒಂದೊಂದರಲ್ಲಿಯೂ ಒಂದೊಂದು ಆನೆಯನ್ನು ಕಚ್ಚಿಕೊಂಡು ಎರಡು ಕಾಲಿನ ಪಂಜಗಳಲ್ಲಿ ಒಂದೊಂದರಲ್ಲಿ ಒಂದೊಂದು ಆನೆಯನ್ನು ಹಿಡಿದು ಆಕಾಶದಲ್ಲಿ ಹಾರಾಡುತ್ತಿರುವ ಶಿಲ್ಪವಿದೆ.

ಹೀಗೆ ಗಂಡಭೇರುಂಡದ ಕಥೆ ದೊಡ್ಡದು. ಇದರ ಪ್ರಾಧಾನ್ಯವು ಕರ್ನಾಟಕದಲ್ಲಿ ರಾಜಕೀಯವಾಗಿ ೧೧ನೇ ಶತಮಾನದಲ್ಲಿ ಮೂಡಿರಬೇಕು. ಕ್ರಿ.ಶ. ೧೦೪೮ರ ಒಂದು ಶಾಸನದಲ್ಲಿ ಇದು ರಾಜನ ಬಿರುದಿನಲ್ಲಿ ಸೇರಿರುವುದು ಕಂಡುಬಂದಿದೆ. ವಿಜಯನಗರದ ಅಚ್ಯುತರಾಯನ ಕಾಲದ ನಾಣ್ಯಗಳಲ್ಲಿ ಗಂಡಭೇರುಂಡದ ಇಂಥ ಒಂದು ಮುದ್ರೆಯಿದೆ. ಮೈಸೂರ ಅರಸರು ವಿಜಯನಗರದಿಂದ ಸ್ವತಂತ್ರರಾಗಿ ಶಕ್ತರಾದ ಮೇಲೆ ಗಂಡಭೇರುಂಡ ಲಾಂಛನವನ್ನು ಅವರು ಆರಿಸಿಕೊಂಡಿರಬೇಕು. ಇದು ಸ್ಪಷ್ಟವಾಗಿ ತಿಳಿಯುವುದಿಲ್ಲ. ಸುಮಾರು ೧೩೯೯-೧೪೪೩ರ ವೇಳೆಗೆ ಇದು ಇಂದಿನ ಸ್ವರೂಪವನ್ನು ಪಡೆದಿರಬೇಕು. ರಾಜವೊಡೆಯರ ಕಾಲದಲ್ಲಿ ಇದು ನಿಶ್ಚಿತವಾಗಿರುವುದಂತೂ ಸ್ಪಷ್ಟ.

ಈಗಿನ ಕರ್ನಾಟಕದ ಲಾಂಛನದಲ್ಲಿಯೂ ಗಂಡಭೇರುಂಡವು ಕಂಗೊಳಿಸುತ್ತಿದೆ. ಎರಡುತಲೆಗಳ ಇಂಥ ಬಲಶಾಲಿಯಾದ ಪಕ್ಷಿಯ ಕಲ್ಪನೆ ಆಕರ್ಷಕವಾಗಿರುವುದರಲ್ಲಿ ಆಶ್ಚರ್ಯವಿಲ್ಲ.

* * * * *

೩

**ತ್ವಾಟದೂರ** ಈ ಪ್ರಯೋಗಕ್ಕೆ ಕಿವುಡು ಎಂದರ್ಥ. ಈ ಶಬ್ದ ನಮ್ಮ ಗ್ರಾಮೀಣ ಜೀವನದ ಸಂಸ್ಕೃತಿಯ ಒಂದು ಅಂಶವನ್ನು ನಮಗೆ ಪರಿಚಯ ಮಾಡಿಕೊಡುತ್ತದೆ. ಹಳ್ಳಿಯ ಮನೆಗಳಿಗೂ ಆ ಹಳ್ಳಿಯವರ ತೋಟಗಳಿಗೂ ಹೆಚ್ಚು ದೂರವಿರುತ್ತಿರಲಿಲ್ಲ. ಮನೆಯ ಹಿತ್ತಿಲಲ್ಲಿ ನಿಂತು ಗಟ್ಟಿಯಾಗಿ ಮಾತನಾಡಿದರೆ ತೋಟದ ಯಾವ ಮೂಲೆಯಲ್ಲಿದ್ದರೂ ಕೇಳುತ್ತಿತ್ತು. ಹಳ್ಳಿಯ ಮೌನವಾದ ವಾತಾವರಣದಲ್ಲಿ ಇದು ಸಾಧ್ಯವಿತ್ತು. ಒಂದೂರಿಗೂ ಮತ್ತೊಂದು ಊರಿಗೂ ಎಷ್ಟು ದೂರ ಎಂಬುದನ್ನು ಹಿಂದೆ 'ಎರಡು ಕೂಗು ದೂರ, ಮೂರು ಕೂಗು ದೂರ' ಎಂದು ಹೇಳುತ್ತಿದ್ದರು. ಆದುದರಿಂದ 'ಕಿವಿ ಕೇಳಿಸುವವನಿಗೆ ತೋಟ ಹತ್ತಿರ, ಕಿವುಡನಿಗೆ ತೋಟ ದೂರ' ಎಂಬ ಶಬ್ದ ಪುಂಜ ಚಲಾವಣೆಗೆ ಬಂತು. ಈಗ ವ್ಯಂಗ್ಯವಾಗಿ ನಗರದಲ್ಲೂ ಈ ಶಬ್ದಗಳನ್ನು ಉಪಯೋಗಿಸುತ್ತಾರೆ. ಹಳ್ಳಿಗಳು ಬದಲಾದರೂ ಅಲ್ಲಿ ಜೀವನದ ಸಂಸ್ಕೃತಿ ಹೀಗೆ ಭಾಷೆಯಲ್ಲಿ ಉಳಿದುಕೊಂಡು ಬಂದಿರುತ್ತದೆ. ಸಾಮಾಜಿಕ ಭಾಷಾಶಾಸ್ತ್ರದಲ್ಲಿ ಇಂಥ ಅನೇಕ ವಿವರಗಳು ದೊರಕುತ್ತವೆ. ತ್ವಾಟ=ತೋಟ.

* * * * *

೪

**ಪ್ರಾಂಶುಪಾಲ** ಇದೊಂದು ವಿಚಿತ್ರವಾದ ಶಬ್ದ. ಇಂಗ್ಲಿಷ್ ಶಬ್ದಗಳನ್ನು ಕನ್ನಡಕ್ಕೆ ಅದೇ ಉಚ್ಚಾರಣೆ ಇರುವಂತೆ ಅನುವಾದ ಮಾಡುವ ಗೀಳು ಬಹಳ ಹಳೆಯದು. ಷೇಕ್‌ಸ್ಪಿಯರನ *Merchant of Venice* ನಾಟಕವನ್ನು ಅನುವಾದ ಮಾಡಿದ ಹಿಂದಿನ ಕನ್ನಡಿಗರು ಹೀಗೆ ಮಾಡಿದ್ದಾರೆ: Portia- ಪಾಂಚಾಲಿ, Nerissa- ನೀರಜಾಕ್ಷಿ Jessica- ಜಲಜಾಕ್ಷಿ. ಈ ಶಬ್ದವೂ ಅಂಥದೇ. ಸಂಸ್ಕೃತದಲ್ಲಿ ಪ್ರಾಂಶು = ಎತ್ತರವಾದ ಮನುಷ್ಯ. ದೈಹಿಕವಾಗಿ ಉನ್ನತವಾದವನು. ಆ ಶಬ್ದಕ್ಕೆ ಪಾಲ ಸೇರಿಸಿದರೆ ಎತ್ತರವಾದವರನ್ನು ರಕ್ಷಿಸುವವನು ಎಂದು

ಅರ್ಥವಾಗಬೇಕು. ಹೀಗಿದ್ದರೂ ಪ್ರಾಂಶುಪಾಲ = Principal ಶಬ್ದ ಕರ್ನಾಟಕದಲ್ಲಿ ಬೇರೂರಿ ನಿಂತುಬಿಟ್ಟಿದೆ-ಇದನ್ನು ಯಾರು ಟಂಕಿಸಿದರೋ ಅವರ ಜಾತಕ ಬಲದಿಂದ.

* * * * *

೫

**ಬಿಸಿ, ಕಾವು, ಶಾಖ** ಈ ಮೂರು ಶಬ್ದಗಳಲ್ಲಿ ಮೊದಲ ಎರಡು ಶಬ್ದಗಳು ಕನ್ನಡದವು.

ಬಿಸಿ ಒಂದು ವಸ್ತುವಿನ ಉಷ್ಣತೆಗೆ ಸಂಬಂಧಿಸಿದ ಗುಣವನ್ನು ತಿಳಿಸುತ್ತದೆ. ನೀರು ಬಿಸಿಯಾಗಿದೆ. ಮೈ ಬಿಸಿಯಾಗಿದೆ. ಅಡಿಗೆ ಬಿಸಿಯಾಗಿದೆ.

**ಕಾವು** ಬೆಂಕಿಯ ಸ್ಪರ್ಶದಿಂದ ಉಂಟಾಗುವ ಅನುಭವ. ಕಾವು ಬಿಸಿಯನ್ನುಂಟು ಮಾಡುತ್ತದೆ. ನೀರು ಕಾದಿದೆ ಎಂದರೆ ಕಾವಿನಿಂದ ಬಂದ ಗುಣವನ್ನು ಹೊಂದಿದೆ ಎಂದರ್ಥ. ಮೈ ಕಾದಿದೆ ಎಂದರೆ ಜ್ವರದ ತಾಪದಿಂದ ದೇಹದ ಉಷ್ಣ ಹೆಚ್ಚಾಗಿದೆ ಎಂದರ್ಥ. ಬಿಸಿ ನಾಮಪದ. ಕಾವು ಎಂಬುದು ಕಾಯ್ ಎಂಬ ಧಾತುವಿನಿಂದ ಬಂದ ನಾಮಪದ. ಕಾಯ್ ಧಾತುವಿಗೆ ಅರ್ಥ ಬಿಸಿಯಾಗು.

**ಶಾಖ** ಎಂಬ ಮೂರನೆಯ ಶಬ್ದ ಒಂದು ವಿಚಿತ್ರ ಶಬ್ದ. ಇದು ಸಂಸ್ಕೃತ ಶಬ್ದವಲ್ಲ. ಸಂಸ್ಕೃತದಲ್ಲಿ 'ಶಾಖಾ' ಎಂಬ ಶಬ್ದವಿದೆ. ಇದಕ್ಕೆ ೧. ಮರದ ಕೊಂಬೆ ೨. ವೇದದ ಭಾಗ ೩. ಪ್ರಕಾರ, ವಿಧ ೪, ಬಾಹು, ತೋಳು ೫. ಒಂದು ಪಂಗಡ ಇತ್ಯಾದಿ ಅರ್ಥಗಳಿವೆ. ''ಆರುಹ್ಯ ಕವಿತಾ ಶಾಖಾಂ'' ಎಂಬ ವಾಲ್ಮೀಕಿಯ ವರ್ಣನೆಯನ್ನು ನೆನಪು ಮಾಡಿಕೊಳ್ಳಿ. ಕುಮಾರವ್ಯಾಸನ ಒಂದು ಪದ್ಯ ನೆನಪಿಗೆ ಬರುತ್ತದೆ. ''ಬೇರು ನೀರುಂಡಾಗ ತಣಿಯವೆ ಭೂರುಹದ ಶಾಖೋಪಶಾಖೆಗಳು'' (ಅರಣ್ಯ ಪರ್ವ ೧೬-೪೮). ಪರಮಾತ್ಮನನ್ನು ಪ್ರಪಂಚವೆಂಬ ಮರಕ್ಕೆ ಹೋಲಿಸಿ ಎಲ್ಲ ಜೀವಿಗಳನ್ನೂ ಶಾಖೆ ಉಪಶಾಖೆಗಳಾಗಿ ವರ್ಣಿಸಿರುವುದರ ಔಚಿತ್ಯವನ್ನು ಗಮನಿಸಿ. ಶಾಖಾಚರ, ಶಾಖಾಮೃಗ ಎಂದರೆ ಕೊಂಬೆಯಿಂದ ಕೊಂಬೆಗೆ ಹಾರಿ ಮರದ ಮೇಲೆಯೇ ಓಡಾಡುವ ಕಪಿ, ಕೋತಿ. ಸಂಸ್ಕೃತದಲ್ಲಿ ಬಹು ಅಪೂರ್ವವಾಗಿ ಉಪಯೋಗಿಸುವ ಶಾಖ ಶಬ್ದಕ್ಕೆ ಕಾರ್ತಿಕೇಯ, ಸ್ಕಂದ ಎಂದು ಅಂಕಿತನಾಮದ ಅರ್ಥವಿದೆ. **ಶಾಕ** ಎಂಬ ರೂಪದ ಎರಡು ಶಬ್ದಗಳಿವೆ ಕನ್ನಡದಲ್ಲಿ. ಒಂದು ಸಂಸ್ಕೃತದ ಶಾಕ - ತರಕಾರಿ, ಕಾಯಿಪಲ್ಯ, ಸೊಪ್ಪು ಇತ್ಯಾದಿ. ಶಾಕಾಹಾರ, ಶಾಕಾಹಾರಿ ಎಂಬ ಶಬ್ದಗಳನ್ನು ನೋಡಿ. ಶಾಕಾಹಾರ ಮಾಂಸಾಹಾರಕ್ಕೆ ವಿರುದ್ಧವಾದುದು. ಯಾರನ್ನಾದರೂ ನೀವು 'ನಿಮಗೆ ಉಪವೃತ್ತಿಯ ಮೇಲು ಸಂಪಾದನೆ ಎಷ್ಟಿದೆ' ಎಂದು ಕೇಳಿದರೆ ಹಿಂದಿನ ಕಾಲದ ಜನ ಹೇಳುತ್ತಿದ್ದರು - 'ಶಾಕಾಯ ಲವಣಾಯ' ಎಂದರೆ ತರಕಾರಿ ಮತ್ತು ಉಪ್ಪು ಇಷ್ಟಕ್ಕೆ ಸಾಕಾಗುತ್ತದೆ ಎಂದು.

ಎರಡನೆಯದು ಮರಾಠಿಯ **ಶೇಕ್** ಎಂಬ ಶಬ್ದದಿಂದ ಬಂದುದು. ಇದಕ್ಕೆ ಕಾವು ಕೊಡುವಿಕೆ ಬಿಸಿಮಾಡುವಿಕೆ ಎಂದರ್ಥ. ಮೈಕೈಗಳಿಗೆ ಯಾವಾಗಲಾದರೂ ಊತ ಉಂಟಾದರೆ ವೈದ್ಯರು ಸ್ವಲ್ಪ ಶಾಕ ಕೊಡಿ, ವಾಸಿಯಾಗುತ್ತದೆ ಎನ್ನುತ್ತಾರೆ. ಮನೆಗಳಲ್ಲಿ ಶಾಕ ಕೊಡು ಎಂಬ ನುಡಿಗಟ್ಟು ತುಂಬ ಸಾಮಾನ್ಯವಾದುದು. ಈ ಶಬ್ದವನ್ನು ಕುಮಾರವ್ಯಾಸನು ಸೇಕ ಎಂಬ ರೂಪದಲ್ಲಿ ಉಪಯೋಗಿಸಿದ್ದಾನೆ. ''ಸಿಡಿಲ ಪೊಟ್ಟಣಗಟ್ಟಿ ಸೇಕವ ಕೊಡುವಿರೇ''

(ಸಭಾಪರ್ವ ೧೪-೩೭). ದ್ರೌಪದಿಯ ಮಾನಭಂಗಕ್ಕೆ ಪ್ರಯತ್ನಪಟ್ಟ ಕೌರವರಿಗೆ ವಿದುರನು ಹೇಳುವ ಬುದ್ಧಿವಾದದಲ್ಲಿ ಈ ಮಾತು ಬರುತ್ತದೆ. ಪೊಟ್ಟಣದೊಳಗೆ ಸಿಡಿಲನ್ನು ಹಿಡಿದಿಟ್ಟು ಅದರಿಂದ ಮೈಕೈಗಳಿಗೆ ಶಾಕವನ್ನು ಕೊಡುತ್ತಾರೆಯೇ ಎಂಬ ಮಾತಿನ ವ್ಯಾಪಕವಾದ ಅರ್ಥವನ್ನು ಗಮನಿಸಿ. ಪಂಪಭಾರತದಲ್ಲಿ (೫-೭) ''ಕೆಂದಳಿರ್ವಾಸು ಸೇಕದ ತೊವಲ್ಗೆಣೆಯಾಯ್ತು'' ಎಂಬ ಪ್ರಯೋಗ ಬರುತ್ತದೆ. ಸುಭದ್ರೆಯ ವಿರಹ ಸಂತಾಪವನ್ನು ಕಡಿಮೆ ಮಾಡಲು ಹಾಸಿದ ಕೆಂದಳಿರ ಹಾಸುಗೆ ಅವಳ ಮೈ ತಾಪದಿಂದ ಬೆಂಕಿಗೆ ಹಿಡಿದ ಸೊಪ್ಪಿನಂತೆ ಬಾಡಿಹೋಯಿತು ಎಂದರ್ಥ. ಈ ಶಬ್ದವೂ ಮೇಲೆ ತಿಳಿಸಿರುವ ಶೇಕ್‌ಗೆ ಸಂಬಂಧಪಟ್ಟದ್ದು. ಈ ಶಾಕ ಎಂಬ ಶಬ್ದವನ್ನು ಕೆಲವರು ಶಾಖ ಎಂಬಂತೆ ಮಹಾಪ್ರಾಣ ಸಹಿತವಾಗಿ ಉಪಯೋಗಿಸುವುದೂ ಉಂಟು. ಆದರೂ ಇದು ಸಂಸ್ಕೃತದ ಶಬ್ದವಲ್ಲ. ಸಂಸ್ಕೃತದಲ್ಲಿ ಉಷ್ಣ ಎಂಬರ್ಥದಲ್ಲಿ ಶಾಖ ಎಂಬ ಶಬ್ದವಿಲ್ಲ. ಅದು ಸಂಸ್ಕೃತದ ಶಬ್ದವಿರಬೇಕೆಂಬ ಭ್ರಮೆಯಿಂದ ಟಂಕಿಸಿದ ಹೊಸ ಶಬ್ದಗಳು **ಶಾಖೋತ್ಪನ್ನ, ಶಾಖಾವರಣ**. ಅವು ಉಳಿದುಕೊಂಡುಬಿಟ್ಟಿವೆ. ಆದರೆ ಬರಹಗಾರರಿಗೆ ಈ ವಿವರಗಳು ತಿಳಿದಿದ್ದರೆ ಒಳ್ಳೆಯದು.

* * * * *

## ೬

ಬೆಕ್ಕಿಗೆ ಜ್ವರ ಬರುವ ಮಾತು ಎಂಬ ಪದಸಮುಚ್ಚಯವನ್ನು ಅನೇಕ ಸಲ ಕೇಳಿದ್ದೇವೆ. ಅದಕ್ಕೆ ಅರ್ಥವೇನೆಂಬುದು ನಮಗೆ ಗೊತ್ತು. ಯಾವುದಾದರೂ ಸಲ್ಲದ ಮಾತಿಗೆ, ವ್ಯರ್ಥವಾದ ಹೇಳಿಕೆಗೆ, ಸಾಧ್ಯವಿಲ್ಲದ ವಿಷಯಕ್ಕೆ ಈ ಪದಸಮುಚ್ಚಯ ಅನ್ವಯವಾಗುತ್ತದೆ. ವೈಜ್ಞಾನಿಕವಾಗಿ ವಿಚಾರ ಮಾಡಿದಾಗ ಈ ಮಾತಿಗೆ ಅರ್ಥವೇ ಇಲ್ಲ. ಪ್ರಾಣಿಗಳಿಗೆ ಜ್ವರ ಬರುವುದಿಲ್ಲವೆ? ಬೆಕ್ಕು ಒಂದು ಪ್ರಾಣಿ ತಾನೆ! ಆಯುರ್ವೇದ ಶಾಸ್ತ್ರದಲ್ಲಿ ಪ್ರಾಣಿಗಳಿಗೆ ಜ್ವರ ಬರುತ್ತದೆ ಎಂಬುದನ್ನು ಗಮನಿಸಿ ಅಂಥ ಜ್ವರಗಳಿಗೆ ಬೇರೆ ಬೇರೆ ಹೆಸರುಗಳನ್ನು ಹೇಳಿದ್ದಾರೆ. ಆನೆಯ ಜ್ವರಕ್ಕೆ **ಕಾಕಲ** ಎಂದು ಹೆಸರು. ಕುದುರೆಯ ಜ್ವರಕ್ಕೆ **ಅಭಿತಾಪ** ಎಂದು ಹೆಸರು; ಹಸುವಿನ ಜ್ವರಕ್ಕೆ **ಗೋಕರ್ಣ** ಎಂದು ಹೆಸರು; ಆಡಿನ ಜ್ವರಕ್ಕೆ **ಪ್ರಲಾಪ**; ಪಕ್ಷಿಗೆ **ಮಕರ**; ಸರ್ಪಕ್ಕೆ **ಅಕ್ಷಿಕ**; ನಾಯಿಗೆ **ಅಲರ್ಕ**; ಹೀಗೆ ಬೇರೆ ಬೇರೆ ಪ್ರಾಣಿ ಪಕ್ಷಿಗಳಿಗೆ ಬರುವ ಜ್ವರಕ್ಕೆ ಬೇರೆ ಬೇರೆ ಹೆಸರುಗಳಿವೆ. ಆದುದರಿಂದ 'ಬೆಕ್ಕಿಗೆ ಜ್ವರ ಬರುವುದಿಲ್ಲ' ಎಂಬ ಮಾತು ಅರ್ಥವಿಲ್ಲದ್ದು.

ಹಾಗಾದರೆ ಈಗಿನ ಇಷ್ಟೊಂದು ಜನ ಉಪಯೋಗ ಮಾಡುವ ಈ ಪದಸಮುಚ್ಚಯಕ್ಕೆ ಅರ್ಥವೇ ಇಲ್ಲವೆ? ಎಂದು ಕೇಳಬಹುದು. ಎಷ್ಟೋ ವೇಳೆ ಬಹು ಹಿಂದೆ ಅರ್ಥವತ್ತಾಗಿದ್ದ ಪದಸಮುಚ್ಚಯವು ಜನರ ಬಾಯಿಗೆ ಸಿಕ್ಕಿ ಬದಲಾವಣೆಗಳಾಗಿರುವ ಸಾಧ್ಯತೆಯಿದೆ. ಇದಕ್ಕೆ ನಮ್ಮ ಇಂದಿನ ಭಾಷೆಯಲ್ಲಿ ಬೇಕಾದಷ್ಟು ಉದಾಹರಣೆಗಳು ಸಿಕ್ಕುತ್ತವೆ. ಇಲ್ಲಿಯೂ ಅಂಥ ಯಾವುದಾದರೂ ಭಾಷಾ ಸಂಬಂಧಿಯಾದ ಬದಲಾವಣೆ ಆಗಿರುವುದು ಸಾಧ್ಯ.

ಮಾತಿನ ರೀತಿಯಿಂದ ಶಬ್ದಗಳ ಉಚ್ಚಾರಣೆಯಲ್ಲಿ ಕೆಲವು ವೇಳೆ ಯಾವುದಾದರೂ ಒಂದು ಭಾಗ ಲೋಪವಾಗಬಹುದು. ಹೀಗೆ ಲೋಪವಾದಾಗ ಆ ಲೋಪವನ್ನು ಸರಿ ತೂಗುವುದಕ್ಕೆಂದು ಮತ್ತೊಂದು ಕಡೆ ಯಾವುದಾದರೂ ಭಾಗವನ್ನು ಅಧಿಕಗೊಳಿಸುವ ಸಮತಾ

ನಿರ್ಮಾಣ ಕ್ರಿಯೆಯೊಂದಿದೆ. ಇದಕ್ಕೆ ಭಾಷಾಶಾಸ್ತ್ರದಲ್ಲಿ 'ಪರಿಹಾರ' ಎಂಬ ಅರ್ಥವುಳ್ಳ ''Compensation'' ಎಂಬ ಶಬ್ದವನ್ನು ಆಂಗ್ಲ ಭಾಷೆಯಲ್ಲಿ ಉಪಯೋಗಿಸುತ್ತಾರೆ. ಬೆಕ್ಕಿಗೆ ಜ್ವರ ಬರುವ ಮಾತು ಎಂಬ ಶಬ್ದ ಸಮುಚ್ಚಯದಲ್ಲಿ ಅಂಥ ಒಂದು ಕ್ರಿಯೆ ನಡೆದಿದೆ. ಇಲ್ಲಿ ಇರಬೇಕಾದ ಶಬ್ದ 'ಬೆಕ್ಕಿಗೆ' ಅಲ್ಲ; ಅದು ಬೆಂಕಿಗೆ. ಬೆಂಕಿಗೆ ಜ್ವರ ಬರುವ ಮಾತು ಎಂದರೆ ಆಗ ಅದು ಅಸಾಧ್ಯವಾದ ಮಾತು ಎಂಬುದು ಸ್ಪಷ್ಟವಾಗಿ ಗೊತ್ತಾಗುತ್ತದೆ. ಇದು ಭಾಷಾಶಾಸ್ತ್ರದ ಪರಿಚಯದ ಸಹಾಯದಿಂದ ಮಾತ್ರ ಮಾಡಿದ ಸೂಚನೆಯಲ್ಲ. ನನ್ನ ಅಭಿಪ್ರಾಯಕ್ಕೆ ಕನ್ನಡ ಕಾವ್ಯಗಳಲ್ಲಿ ಸಾಕಷ್ಟು ಆಧಾರವಿದೆ.

ಹರಿಹರ ಹದಿಮೂರನೆಯ ಶತಮಾನದಲ್ಲಿದ್ದ ವೀರಶೈವಕವಿ. ಆತನ ಅನೇಕ ರಗಳೆಗಳಲ್ಲಿ 'ರುದ್ರ ಪಶುಪತಿ ರಗಳೆ' ಎಂಬುದು ತುಂಬ ಸ್ವಾರಸ್ಯವಾದ ಕಾವ್ಯಭಾಗಗಳನ್ನು ಹೊಂದಿದೆ. ಅದರಲ್ಲಿ ಬರುವ ಮೂರು ಸಾಲುಗಳನ್ನು ಓದುಗರ ಗಮನಕ್ಕೆಂದು ಇಲ್ಲಿ ಉದ್ಧಾರ ಮಾಡುತ್ತೇನೆ:

> ಜ್ವಲನಂ ಜ್ವರಂಗೊಂಡನೆಂದು ಮಂತ್ರಿಸುವಂತೆ
> ಜಲಕೆ ಶೀತಂಬಂದುದೆಂದು ಭಾವಿಸುವಂತೆ
> ಮಾರುತಂ ಗುರಿ ಎತ್ತಿತ್ತೆಂದು ಮಾಣಿಸುವಂತೆ'

ಇತ್ಯಾದಿ.

ಇಲ್ಲಿ ಜ್ವಲನ ಎಂದರೆ ಬೆಂಕಿ ಎಂದರ್ಥ. ಬೆಂಕಿಗೆ ಜ್ವರ ಬಂದಿದೆ ಎಂದು ಬೆಂಕಿಗೆ ಮಂತ್ರ ಹಾಕುವ ಹಾಗೆ ಎಂಬ ಮಾತನ್ನು ಗಮನಿಸಿ. ಹಾಗೆಯೇ ಅದಕ್ಕೆ ಸಂವಾದಿಯಾದ ನೀರಿಗೆ ಶೀತ ಬಂತು ಎಂದು ತಿಳಿಯುವಂತೆ ಎಂಬುದೂ ಅರ್ಥವತ್ತಾಗಿದೆ. ಬೆಂಕಿಗೆ ಎನ್ನುವುದು ಜನರ ಮಾತಿನ ಭರದಲ್ಲಿ ಬೆಕ್ಕಿಗೆ ಎಂದಾಗಿದೆ. ಹೀಗಾಗಿ ಒಂದು ಅರ್ಥವಿಲ್ಲದ ಮಾತು ರೂಢಿಗೆ ಬಂದುಬಿಟ್ಟಿದೆ. **ಬೆಂಕಿಗೆ ಜ್ವರ ಬರುವ ಮಾತು** ಎಂಬ ಪದಸಮುಚ್ಚಯದ ಅರ್ಥವಿಸ್ತಾರ ಸಾಧ್ಯ. ಅಂಥ ಅರ್ಥದ ಸಾರ್ಥಕ್ಯ ಈಗಿರುವ ಶಬ್ದ ಸಮುಚ್ಚಯದಲ್ಲಿ ಇಲ್ಲ ಎಂಬುದು ಸ್ಪಷ್ಟ. ಹಿಂದೆ ಇಪ್ಪಾರಿನ ಮನೆಗಳನ್ನು ಕಟ್ಟುವಂತೆ ಮನೆ ಕಟ್ಟುವಾಗ, ಇಪ್ಪಾರಿನ ತುದಿಗಳೆರಡರಲ್ಲಿಯೂ ಒಂದೊಂದು **ಬೆಕ್ಕಿನ ಕಿಂಡಿ**ಗಳನ್ನು ಇಡಿಸಬೇಕು ಎನ್ನುತ್ತಿದ್ದರು. ಎರಡು ಪಾರುಗಳು ಸೇರುವ ಭಾಗದಲ್ಲಿ ಗೋಡೆಯಲ್ಲಿ ಇಂಥ ಕಿಂಡಿಗಳನ್ನು ಇಡಿಸುತ್ತಿದ್ದರು. ಆದರೆ ಬೆಕ್ಕು ಬರಲೇಬೇಕೆಂದು ಯಾರು ತಾನೇ ಕಿಂಡಿಗಳನ್ನು ಇಡುತ್ತಾರೆ. ಅದು '**ಬೆಳಕಿನ ಕಿಂಡಿ**', ಅದು ಸಾಮಾನ್ಯರ ಉಚ್ಚಾರಣೆಯಲ್ಲಿ ಬೆಕ್ಕಿನ ಕಿಂಡಿ ಆಗಿತ್ತು. ಈಗ ಅಂಥ ಮನೆಗಳೇ ಇಲ್ಲದಿರುವುದರಿಂದ ಈ ಶಬ್ದ ಮಾತಿನಲ್ಲಿ ನಗರಗಳಲ್ಲಿ ಮಾಯವಾಗಿದೆ. ಹಳ್ಳಿಗಳಲ್ಲಿ ಈಗಲೂ ಬೆಕ್ಕಿನ ಕಿಂಡಿಯ ಮಾತನ್ನು ಕೇಳಬಹುದು. ಬಿಜಾಪುರದ ಕಡೆ ಇದೇ ಬಗೆಯ ಒಂದು ಗಾದೆ ಮಾತನ್ನು ಉಪಯೋಗಿಸುವುದನ್ನು ನಾನು ಕೇಳಿದ್ದೇನೆ. **ಕತ್ತೆಗೆ ಚಳಿ ಬಂದಂತೆ** ಎಂಬುದು ಆ ಮಾತು. ಇದನ್ನು ನಾನು ಅನೇಕ ಸಲ ಕೇಳಿದ್ದೇನೆ. ಇಲ್ಲಿ ಯಾವ ಭಾಷಾ ವ್ಯತ್ಯಾಸವೂ ಆಗಿಲ್ಲ, ಕತ್ತೆ ಎಂದರೆ ಯಾವುದನ್ನೂ ಗಮನಿಸದ (unfeeling) ಎಂಬ ಅರ್ಥ ಅಷ್ಟೇ ಎಂದು ಕೆಲವರು ತಿಳಿದಂತಿದೆ. ಆದರೆ ಅದು ಅಷ್ಟು ಸುಲಭವಾಗಿ ತೀರ್ಮಾನ ಮಾಡುವ ವಿಷಯವಲ್ಲ. ಅದು ಸರಿಯಾಗಿ '**ಕಂಥೆಗೆ ಚಳಿ ಬರುವ ಮಾತು**' ಎಂದಿರಬೇಕು. ಕಂಥೆ=ಕಂತೆ ಸಂನ್ಯಾಸಿಗಳು ಹೊದೆಯಲು ಉಪಯೋಗಿಸುವ ಬಟ್ಟೆ. ಅಂದರೆ ಚಳಿಯನ್ನು ಹೋಗಲಾಡಿಸಲು

ಉಪಯೋಗಿಸುವ, ದಪ್ಪವಾಗಿ ದಾರದಿಂದ ಹೊಲಿದ ಬಟ್ಟೆ. ಅದು ಚಳಿಯನ್ನು ಹೋಗಲಾಡಿಸುವ ಸಾಧನ. ಅದಕ್ಕೇ ಚಳಿ ಬರುವುದು ಸಾಧ್ಯವೇ? ಈ ಅರ್ಥ ಚಮತ್ಕಾರವನ್ನು ಆ ಪದ ಸಮುಚ್ಚಯದಲ್ಲಿ ತುಂಬಿಡಲಾಗಿದೆ. ಈ ಪದ ಸಮುಚ್ಚಯದಲ್ಲಿ ಕತ್ತೆಯನ್ನು ತಂದು ಅದಕ್ಕೆ ಅವಮಾನ ಮಾಡಬೇಕಾಗಿಲ್ಲ. ಕಾಲಕ್ರಮದಲ್ಲಿ ಭಾಷಾಪ್ರಯೋಗದಲ್ಲಿ ಎಂಥೆಂಥ ಚಮತ್ಕಾರಗಳು ನಡೆದು ಹೋಗಿರುತ್ತವೆ ಎಂಬುದಕ್ಕೆ ಇವೆರಡೂ ಒಳ್ಳೆಯ ಉದಾರಣೆಗಳಾಗಿವೆ. ನಾವಾಡುವ ಮಾತಿನ ಕಡೆಗೆ ಸದಾ ಗಮನವಿಟ್ಟು ಪರಿಶೀಲಿಸುವುದಾದರೆ ನಮ್ಮ ಓದುಗರು ಇಂಥ ಅನೇಕ ಉದಾಹರಣೆಗಳನ್ನು ಪಟ್ಟಿ ಮಾಡುವುದು ಸಾಧ್ಯ.

*ಇಗೋ ಕನ್ನಡ, ೧೯೯೭, ಪು. ೧೦೭-೧೧; ೧೫೭-೫೯; ೧೯೧; ೨೦೩; ೨೯೩-೯೪; ೨೯೭-೯೯*

# ೩೧. ಕನ್ನಡ ಛಂದಸ್ಸು: ದ್ರಾವಿಡ ಮೂಲ

● ಬಿ. ಎಂ. ಶ್ರೀಕಂಠಯ್ಯ

ನಾಗವರ್ಮನ ಛಂದೋಂಬುಧಿ– ಇದುವರೆಗೆ ಹೇಳಿದ ವೃತ್ತಕಂದಗಳ ಲಕ್ಷಣಗಳಿಗೆ ಕನ್ನಡದಲ್ಲಿರುವ ಅತಿ ಪ್ರಾಚೀನ ಗ್ರಂಥ. ೧ನೆಯ ಅಧಿಕಾರದಲ್ಲಿ

ಇಂದುಧರಸುಮೆಗೆ ಪೇಳ್ದಾ
ಛಂದಂ ಪಿಂಗಳನಿನವನಿಯೊಳ್ ಪರಪಿದೂಡಾ
ಛಂದೋಂಬುರಾಶಿಯೊಳ್ ಮೊಗೆ
ತಂದದನಾತ್ಮೀಯ ಸತಿಗೆ ನಾಕಿಗನುಸಿರ್ದಂ ॥ (೧-೩೦)

ಎಂದು ನಾಗವರ್ಮನು ಹೇಳುತ್ತಾನೆ. ತನ್ನ ಹಿಂದೆ ಕನ್ನಡದಲ್ಲಿದ್ದಿರಬಹುದಾದ (ಗುಣಗಾಂಕೀಯಂ?) ಯಾವ ಕನ್ನಡ ಛಂದೋಗ್ರಂಥವನ್ನೂ ಹೇಳದೆ, ಸಂಸ್ಕೃತದ ಪಿಂಗಳನಿಂದ ತೆಗೆದು ಹೇಳುತ್ತೇನೆಂದು ತಿಳಿಸಿ, ಅದಕ್ಕೆ ತಕ್ಕಂತೆ, ಮ-ಯ-ರ-ಸ-ತ-ಜ-ಭ-ನ-ಲ-ಗಾಕ್ಷರಗಳನ್ನೂ, ಪ್ರಸ್ತಾರವನ್ನೂ (೩೨~೪೧), ಯತಿಯನ್ನೂ (೪೫~೪೬) ಹೇಳಿ, ಸಂಸ್ಕೃತ ಪ್ರಾಕೃತ ಮುಂತಾದ ಸರ್ವವಿಷಯಭಾಷಾ ಜಾತಿಗಳಾದ ವೃತ್ತಸ್ಕಂಧಕಾದಿಗಳನ್ನು ನಿರ್ದೇಶಿಸಿ, ದೇಶಭಾಷೆಗಳಲ್ಲಿರುವ, ಎಂದರೆ, ಕನ್ನಡದಲ್ಲಿರುವ ಪದ್ಯಗಳನ್ನು ಹೆಸರಿಸುತ್ತಾನೆ :

ಮದನವತಿಯಕ್ಕರಂ ಚೌ
ಪದಿ ಗೀತಿಕೆಯೇಳೆ ತಿವದಿಯುತ್ಸಾಹಂ ಷ
ಟ್ಪದಿಯಕ್ಕರಿಕೆ ಕರಂ ಚೆ
ಲ್ವೊದವಿದ ಛಂದೋವತಂಸಮಬ್ಜದಳಾಕ್ಷೀ ॥ (ಪ. ೪೭)

ಮುಂದೆ ೨, ೩, ೪ನೆಯ ಅಧಿಕಾರಗಳಲ್ಲಿ ವೃತ್ತ ಶ್ಲೋಕ ಕಂದಗಳನ್ನೂ ೬ನೆಯದರಲ್ಲಿ ಷಟ್ಪ್ರತ್ಯಯಗಳನ್ನೂ ಹೇಳಿರುತ್ತಾನೆ. ೫ನೆಯ ಅಧಿಕಾರದಲ್ಲಿ ಕರ್ಣಾಟಕ ವಿಷಯ ಜಾತಿಯನ್ನು ವಿವರಿಸಿದ್ದಾನೆ; ಎಂದರೆ ಗ್ರಂಥದ ಅಲ್ಪಭಾಗವನ್ನು ಮಾತ್ರ ಈ ಅಚ್ಚಗನ್ನಡ ಛಂದಸ್ಸಿಗೆ ವಿನಿಯೋಗಿಸಿದ್ದಾನೆ. ೧೦ನೆಯ ಶತಮಾನದ ವರೆಗಿನ ಕಾವ್ಯ ಶಾಸನಗಳನ್ನು ನೋಡಿದರೂ ಇದೇ ಭಾವನೆ ಹುಟ್ಟುತ್ತದೆ–ಏನೆಂದರೆ ಸಂಸ್ಕೃತ ಛಂದಸ್ಸೇ ಕನ್ನಡದಲ್ಲಿ ಪ್ರಧಾನವೆಂದೂ, ಕನ್ನಡ ಛಂದಸ್ಸು ಅತಿ ವಿರಳವೆಂದೂ, ಕಡೆಗೆ ಅದು ಉಂಟೋ ಇಲ್ಲವೋ, ಇದ್ದರೂ ಅಷ್ಟು ಮಹತ್ತಿನದಲ್ಲವೆಂದೂ ಬುದ್ಧಿಗೆ ಭಾಸವಾಗುತ್ತದೆ. ಆದರೂ ಮೇಲೆ ಹೇಳಿದಂತೆ, ಈ ಕನ್ನಡ ಛಂದಸ್ಸೇ ನಿಜವಾದ ಕನ್ನಡ ಭಾಷೆಯ, ಕನ್ನಡ ಜನರ, ಛಂದಸ್ಸೆಂದೂ, ಇದು ಜನರಲ್ಲಿ (ಪ್ರಾಯಶಃ ಉಳಿಯದೆ ಹೋದ ಜನಪದ ಸಾಹಿತ್ಯದಲ್ಲಿ) ಪ್ರಚಾರದಲ್ಲಿತ್ತೆಂದೂ, ತೆಲುಗು ತಮಿಳುಗಳೊಡನೆ ಹೋಲಿಸಿ ನೋಡಿದರೆ ಇದೇ ಮುಂದೆ ವೀರಶೈವ ಕವಿಗಳು ಮುಂದಕ್ಕೆ ತಂದ ಛಂದಸ್ಸುಗಳ 'ತಾಯಿ' ಎಂದೂ ಚರಿತ್ರೆಯ ದೃಷ್ಟಿಯಿಂದ ನೋಡತಕ್ಕವರಿಗೆ ಸ್ಪಷ್ಟವಾಗದಿರಲಾರದು. ಅದರಲ್ಲಿಯೂ ತಮಿಳಿನ ಛಂದಸ್ಸುಗಳೊಡನೆ ಹೋಲಿಸಿ ನೋಡಬೇಕು: ಏಕೆಂದರೆ ತೆಲುಗೂ ಕನ್ನಡದಂತೆ ಸಂಸ್ಕೃತ ಛಂದಸ್ಸನ್ನೇ ಶರಣುಹೊಕ್ಕು ತನ್ನ 'ಸ್ವದೇಶಿ'ಯನ್ನು ಹಿಂದಕ್ಕೆ ಹಾಕಿತು. ತಮಿಳು ಸ್ವದೇಶಿ ಭಾವನೆಯನ್ನೂ ಸ್ವತಂತ್ರದ ಬೆಳವಣಿಗೆಯನ್ನೂ ಬಿಡದೆ, ಗೌರವ ಕೊಟ್ಟು, ಪ್ರತಿಜ್ಞೆ ಮಾಡಿಯೋ ಎಂಬಂತೆ ಸಾಧಿಸಿ

ನಿಲ್ಲಿಸಿಕೊಂಡಿತು. ಆದರೆ ಸೂಕ್ಷ್ಮವಾಗಿ ಪರಿಶೀಲಿಸತಕ್ಕವರಿಗೆ ಈ ಮೂರು ಭಾಷೆಗಳಲ್ಲಿಯೂ ಸಂಸ್ಕೃತಭಿನ್ನವಾದ, ದ್ರಾವಿಡಭಾಷೆಯಂತೆಯೇ ಸಹಜವಾದ ಒಂದು ದ್ರಾವಿಡ ಛಂದಸ್ಸಿನ ಮೂಲಾಧಾರಗಳು ದೊರೆಯುತ್ತವೆ. ಮಲೆಯಾಳದಲ್ಲಿಯೂ, ಕೊಡಗು ತುಳು ಮುಂತಾದ ಸಾಹಿತ್ಯಕ್ಕೇರದ ಭಾಷೆಗಳ ಹಾಡುಗಳಲ್ಲಿಯೂ, ದ್ರಾವಿಡ ದೇಶಗಳ ಎಲ್ಲಾ ಜನಪದ ಸಾಹಿತ್ಯ ಗಳಲ್ಲಿಯೂ, ಹೆಂಗಸರ ಹಾಡುಗಳಲ್ಲಿಯೂ, ಲಾವಣಿಗಳಲ್ಲಿಯೂ ಈ ಛಂದಸ್ಸಿನ ತಳಹದಿಯನ್ನೂ ರೂಪಾಂತರಗಳನ್ನೂ ಗುರುತಿಸಬಹುದು. ಈ ದೃಷ್ಟಿ ಹುಟ್ಟಿದ ಮೇಲೆ ಈ ಬಗೆಯ ಸಾಹಿತ್ಯಗಳ ಸಂಗ್ರಹಕಾರ್ಯವೂ, ಈ ದ್ರಾವಿಡ ಛಂದಸ್ಸಿನ ಸ್ವರೂಪನಿರ್ಣಯ ಕಾರ್ಯವೂ ಪ್ರಾರಂಭವಾಗಿವೆ.

## ಕನ್ನಡ ಪದ್ಯಗಳು—ಇವುಗಳ ದ್ರಾವಿಡ ಮೂಲ

೧೧ನೆಯ ಶತಮಾನದವರೆಗೆ ಶಾಸನಗಳಲ್ಲಿ, ಪಂಪಾದಿ ಕವಿಗಳಲ್ಲಿ ಮತ್ತು ನಾಗವರ್ಮನಲ್ಲಿ ಕಾಣಬರುವ ಮುಖ್ಯವಾದ ಕನ್ನಡ ಪದ್ಯಗಳು ಯಾವುವೆಂದರೆ: (೧) ತ್ರಿಪದಿ, (೨) ಅಕ್ಕರ, (೩) ರಗಳೆ, (೪) ಷಟ್ಪದಿ. ಇವಕ್ಕೆ, ಮುಂದೆ ಪ್ರಸಿದ್ಧವಾಗಿ, ಈ ಕಾಲದಲ್ಲಿಯೇ ಪ್ರಚಾರ ದಲ್ಲಿದ್ದಿರಬಹುದಾದ ಸಾಂಗತ್ಯವನ್ನೂ ಸೇರಿಸಬಹುದು.

೧೨ನೆಯ ಶತಮಾನದಿಂದೀಚೆಗೆ ಷಟ್ಪದಿ ಒಂದಿದ್ದದ್ದು ಆರು ಬಗೆಯಾಯಿತು. ಯಕ್ಷಗಾನ ಪ್ರಸಂಗಗಳಲ್ಲಿ ತಾಳವನ್ನೂ, ದ್ರಾವಿಡ ಗಣಸ್ವರೂಪವನ್ನೂ ಅನುಸರಿಸಿ ಹೊಸ ಹೊಸ ಪದ್ಯಗಳು ನಿರ್ಮಿತವಾದುವು (ಸೀಸಪದ್ಯ ತೆಲುಗಿನಿಂದ ಸೇರಿದ ಹಾಗೆ ಕಾಣುತ್ತದೆ).

೧೯ನೆಯ ಶತಮಾನದ ಅಂತ್ಯಭಾಗದಲ್ಲಿ ಇಂಗ್ಲಿಷ್ ಸಾಹಿತ್ಯದ ಅನುಭವವುಳ್ಳವರು ಈ ಪೂರ್ವದ ತಳಹದಿಯ ಮೇಲೂ, ನಾಗವರ್ಮನು ಕಾಣದ, ೮೦೦ ವರ್ಷಗಳ ಹೊಸ ಹಾಡುಕಟ್ಟುಗಳ ದಾರಿತೋರಿಕೆಯ ಮೇಲೂ, ಇಂಗ್ಲಿಷ್ ಛಂದಸ್ಸಿನ ಸ್ವಾತಂತ್ರ್ಯ ವೈವಿಧ್ಯ ಸೌಂದರ್ಯಗಳ ಪ್ರೇರಣೆಯ ಮೇಲೂ, ಅವಲಂಬಿಸಿ ಹೊಸ ರೀತಿಯ ಪದ್ಯಗಳನ್ನೂ, ಪಾದಗಳ ವಿನ್ಯಾಸವನ್ನೂ, ಪ್ರಾಸದ ನಿರಾಕರಣ ಮತ್ತು ಹೊಸಬಗೆಯ ವಿನಿಯೋಗವನ್ನೂ, ನಾಲ್ಕು ಆರು ಪಾದಗಳನ್ನೂ ಮೀರಿ ಎಷ್ಟು ದೂರ ಬೇಕಾದರೆ ಅಷ್ಟು ದೂರ ಓಡಬಲ್ಲ ಪದ್ಯರಚನೆಯನ್ನೂ, ಸರಳ ರಗಳೆಯನ್ನೂ, ಪ್ರಯೋಗಿಸುತ್ತಾ ಇದ್ದಾರೆ. ಇವು ಹೊಸದೆಂದು ಆಕ್ಷೇಪಿಸುತ್ತಿದ್ದವರು ಕೂಡ ಇವೂ ಹಳದೇ ಎಂದು ಒಪ್ಪುವ ಕಾಲವೂ ಬಂದಿವೆ.

ಈ ಬಗೆಬಗೆಯಾದ ಕನ್ನಡ ಪದ್ಯಗಳ ಛಂದಸ್ಸನ್ನು ಈಗ ಪರಿಶೀಲಿಸೋಣ.

## ದ್ರಾವಿಡ ಗಣ

ಮೊದಲು ಗಣಸ್ವರೂಪವನ್ನು ಮತ್ತು ಇವು ಹೇಗೆ ದ್ರಾವಿಡದ ಮೂಲಗಣವೆಂದು ಹೇಳಬಹುದೆಂಬುದನ್ನು ನೋಡೋಣ.

ನಾಗವರ್ಮನೇ ಈ ಗಣಸ್ವರೂಪವನ್ನು ಸ್ಪಷ್ಟಪಡಿಸಿದ್ದಾನೆ:

ಎರಡುಂ ಮೂಱುಂ ನಾಲ್ಕುಂ
ಗುರುವಿಂ ಪ್ರಸ್ತರಿಸಲಂಬುನಿಧಿ ಗಜ ಧರಣೀ
ಶ್ವರಗಣಮೊಗೆಗುಮವರ್ಕಂ
ಸರಸಿಜಭವ ವಿಷ್ಣು ರುದ್ರ ಸಂಜ್ಞೆಗಳಕ್ಕುಂ ॥ (೫-೨೮೦)

ಈ ಬ್ರಹ್ಮ, ವಿಷ್ಣು, ರುದ್ರಗಣಗಳನ್ನು[೧] ('ಕನ್ನಡ ಕೈಪಿಡಿ'ಯ) ಈ ಹಿಂದಿನ ಪುಟಗಳಲ್ಲಿ ನಿರೂಪಿಸಿದೆ. ಬ್ರಹ್ಮಗಣ ೪ ಬಗೆ ; ವಿಷ್ಣುಗಣ ೮ ; ರುದ್ರಗಣ ೧೬. ಇವಕ್ಕೆ ತೆಲುಗಿನಲ್ಲಿ ಕ್ರಮವಾಗಿ ಸೂರ್ಯ, ಇಂದ್ರ, ಚಂದ್ರಗಣಗಳೆಂದು ಹೆಸರು ಕೊಟ್ಟಿದ್ದಾರೆ. ತಮಿಳಿನಲ್ಲಿ ಈರಶೈಶೀರ್, ಮೂವಶೈಶೀರ್, ನಾಲಶೈಶೀರ್ ಎಂದು ಹೆಸರು.

ತಮಿಳಿನ ಕ್ರಮವನ್ನು ಅನುಸರಿಸಿ ಹೀಗೆ ಹೇಳಬಹುದು: ಗಣದಲ್ಲಿ ಅಂಶಗಳುಂಟು. ಗಣಕ್ಕೆ ಮೂಲಾಂಶ ಒಂದು ಗುರು (ಲಘುವಲ್ಲ). ಇದೇ ಗಣವಾಗಲಾರದು. ಆದರೆ ಪಾದಾಂತದಲ್ಲಿ ಗಣಸ್ಥಾನದಲ್ಲಿ ನಿಲ್ಲಬಹುದು (ಷಟ್ಪದಿಯ ಅರ್ಧದ ಕೊನೆಯಂತೆ).

ಮೊದಲಿನ ಮೂಲಾಂಶವಾದ ಗುರುವಿಗೆ, ಒಂದು, ಎರಡು, ಮೂರು ಗುರುಗಳನ್ನು ಎಂದರೆ ಅಂಶಗಳನ್ನು ಸೇರಿಸಿದರೆ ಮೂರು ಬಗೆಯ ಗಣಗಳು ಹುಟ್ಟುವುವು: ಯಾವ ವೆಂದರೆ–

– . – (ಎರಡಂಶದ ಗಣ : ಬ್ರಹ್ಮ, ಸೂರ್ಯ)
– . – . – (ಮೂರಂಶದ ಗಣ : ವಿಷ್ಣು, ಇಂದ್ರ)
– . – . – . – (ನಾಲ್ಕಂಶದ ಗಣ : ರುದ್ರ, ಚಂದ್ರ)

ಮೊದಲನೆಯ ಅಂಶಕ್ಕೆ ಮಾತ್ರ, ಎಂದರೆ ಗುರುವಿಗೆ ಬದಲಾಗಿ, ಎರಡು ಲಘುವನ್ನು ಹಾಕಬಹುದು. ಎರಡನೆಯ, ಮೂರನೆಯ, ನಾಲ್ಕನೆಯ ಅಂಶಗಳು ಲಘುವಾಗಿಯೂ ಇರಬಹುದು. ಹೀಗೆ, ಗಣಗಳು ಈ ರೀತಿ ಆಗುವುವು :

ಬ್ರಹ್ಮ: (ಒಂದು ಮೂಲಾಂಶಕ್ಕೆ ಒಂದು ಗುರು ಅಥವಾ ಒಂದು ಲಘು ಸೇರಿ)

| ಅಂಶ | ೧ | . | ೨ |
|---|---|---|---|
| (೧) | – | . | – |
| (೨) | ∪∪ | . | – |
| (೩) | – | . | ∪ |
| (೪) | ∪∪ | . | ∪ |

ವಿಷ್ಣು: (ಮೇಲಿನ ೪ ಬ್ರಹ್ಮಗಳಿಗೆ ಒಂದು ಗುರು ಅಥವಾ ಒಂದು ಲಘು ಸೇರಿ)

| ಅಂಶ | ೧ | . | ೨ | . | ೩ |
|---|---|---|---|---|---|
| (೧) | – | . | – | . | – |
| (೨) | – | . | – | . | ∪ |
| (೩) | ∪∪ | . | – | . | – |

೧ ಇವನ್ನು ಅಕ್ಷರಗಣ ಎನ್ನುವುದಕ್ಕಿಂತಲೂ ಅಂಶಗಣ ಎಂದು ಹೇಳುವುದು ಉತ್ತಮ. ಸಂಸ್ಕೃತದ ಅಕ್ಷರಗಣಕ್ಕೂ ಇವಕ್ಕೂ ಭ್ರಮೆಯಾಗಬಹುದಲ್ಲದೆ ಅಕ್ಷರವೆಂದರೆ ಒಂದೇ ಅಕ್ಷರ (ವರ್ಣ) ಎಂಬ ಭ್ರಾಂತಿಯೂ ಹುಟ್ಟಬಹುದು.

(೪) ∪∪ . – . ∪
(೫) – . ∪ . –
(೬) – . ∪ . ∪
(೭) ∪∪ . ∪ . –
(೮) ∪∪ . ∪ . ∪

ರುದ್ರ: (ಮೇಲಿನ ೮ ವಿಷ್ಣುಗಳಿಗೆ ಒಂದು ಗುರು ಅಥವಾ ಒಂದು ಲಘು ಸೇರಿ)

ಅಂಶ ೧ . ೨ . ೩ . ೪
(೧) – . – . – . –
(೨) – . – . – . ∪
(೩) ∪∪ . – . – . –
(೪) ∪∪ . – . ∪ . ∪ ಹೀಗೆಯೇ ಮುಂದಕ್ಕೂ.

ಮೂಲಾಂಶದ ಮೇಲೇರಿದ ಅಂಶಗಳಿಗೆ ಬದಲಾಗಿ ಎರಡು ಲಘುಗಳ ಪ್ರಯೋಗ ಇಲ್ಲ. ಅಂಶಗಣಗಳು ಸ್ವಚ್ಛವಾಗಿ ಹಾಗೇ ಇರುವವರೆಗೂ ಈ ನಿಯಮವಿತ್ತು. ಆದರೆ ಕ್ರಮೇಣ, ಮೊದಲನೆಯ ಸ್ಥಾನದಂತೆ, ಮಿಕ್ಕ ಸ್ಥಾನಗಳಲ್ಲಿಯೂ ಈ ಬದಲಾವಣೆ ಹಬ್ಬಿಕೊಂಡು ಅಂಶಗಣವಾಗಿದ್ದದ್ದು ಮಾತ್ರಾಗಣವಾಗಿ ಪರಿಣಮಿಸಿತು. ಆಗ ಬ್ರಹ್ಮ, ವಿಷ್ಣು, ರುದ್ರ ಎಂಬ ಅಥವಾ ಎರಡು, ಮೂರು, ನಾಲ್ಕು ಅಂಶಗಳ ಗಣಗಳು ಹೋಗಿ ೩, ೪, ೫ ಮಾತ್ರೆಗಳುಳ್ಳ ಮೂರು ಗಣಗಳು, ಉಳಿದುವು: ಇವಕ್ಕೆ ಉತ್ಸಾಹಗಣ, ಮಂದಾನಿಲಗಣ, ಲಲಿತಗಣ ಎಂದು ಆಯಾ ರಗಳೆಗಳ ಮೇಲೆ ಹೆಸರು ಕಟ್ಟಬಹುದು. ಇವು ಬ್ರಹ್ಮ, ವಿಷ್ಣುಗಳ ಪ್ರತಿಯಾಗಿ ನಿಂತುವು. ರುದ್ರಗಣ ಬ್ರಹ್ಮ+ ವಿಷ್ಣುವಾಗಿ (೩+೪) ಒಡೆದು ನಿಜಸ್ವರೂಪದಲ್ಲಿ ಕಣ್ಮರೆಯಾಯಿತು; ಪಾದಗಳ ಕೊನೆಯಲ್ಲಿ ವಿಷ್ಣು+ ಗುರು ಆಯಿತು (ಕೇವಲ ಗೀತದಲ್ಲಿ ಇದರ ಪ್ರಯೋಗ ಯಾವಾಗಲೂ ಸಾಧ್ಯ).

ಇಲ್ಲಿ ಇನ್ನು ಹೆಚ್ಚು ವಿವರಕ್ಕೆ ಹೋಗಲಾಗುವುದಿಲ್ಲ: ಮುಖ್ಯವಾಗಿ ವಿದ್ಯಾರ್ಥಿಗಳು ಒಂದು, ಎರಡು, ಮೂರು ಅಂಶದ ಗಣಗಳನ್ನೂ, ಮೊದಲನೆಯ ಅಂಶ ಒಂದು ಗುರು ಅಥವಾ ಎರಡು ಲಘುವಾಗಿರಬಹುದು, ಮಿಕ್ಕ ಅಂಶಗಳು ಒಂದು ಗುರು ಅಥವಾ ಒಂದು ಲಘುವಾಗಿರಬೇಕು ಎಂಬ ತತ್ವವನ್ನೂ, ಅಂಶಗಣಗಳು ಕಾಲಕ್ರಮದಲ್ಲಿ ಮಾತ್ರಾಗಣಗಳಾದುವೆಂಬುದನ್ನೂ, ಮೊದಲ ಅಂಶಕ್ಕೆ ಮಾತ್ರ ಎರಡು ಲಘುವಿನ ಸಮಾನತೆ ಇದ್ದದ್ದು ಸರ್ವತ್ರ ಹರಡಿ ಈ ಬದಲಾವಣೆಗೆ ಅವಕಾಶ ಕೊಟ್ಟಿರಬಹುದೆಂಬುದನ್ನೂ ಗಮನದಲ್ಲಿಟ್ಟರೆ ಸಾಕು.

* * * * *

**ಉಪಸಂಹಾರ: ತಮಿಳು ಛಂದಸ್ಸು**

ಸಂಸ್ಕೃತದ ವೃತ್ತ ಕಂದಗಳನ್ನು ಬಿಟ್ಟು ಕನ್ನಡದ ಹಾಡು ಮಟ್ಟುಗಳ ದಾರಿಯನ್ನು ಹಿಡಿದು ಬಲು ದೂರ ಬಂದೆವು. ಅಂಶ, ಗಣ, ಮಾತ್ರೆ, ಪಾದ, ಪ್ರಾಸ, ವಡಿ; ಪದ್ಯದ ಕಟ್ಟು, ೨ ಪಾದ, ೩, ೪, ೬; ತ್ರಿಪದಿ, ಸಾಂಗತ್ಯ, ಷಟ್ಪದಿ, ರಗಳೆ, ಹಾಡುಗಳು, ಸಾಹಿತ್ಯಕ್ಕಿನ್ನೂ ಏರದ ಜನಪದ ಲಾವಣಿಗಳು–ತಮಿಳು, ತೆಲುಗು, ಇವುಗಳ ಗಣಗಳ ಹೋಲಿಕೆ–ದ್ರಾವಿಡ ಛಂದಸ್ಸಿನ

ರಹಸ್ಯ, ಲಕ್ಷಣ, ಬೆಳವಳಿಗೆ–ಇವುಗಳನ್ನು ಪ್ರಕೃತಸ್ಥಿತಿಯಲ್ಲಿ ನಮ್ಮ ತಿಳಿವಳಿಕೆ ಇರುವಮಟ್ಟಿಗೆ ವಿಮರ್ಶಿಸಿದ್ದಾಯಿತು. ಛಂದಶ್ಶಾಸ್ತ್ರಕಾರರು ಗಣಿತಪ್ರಕ್ರಿಯೆಯಿಂದ ಹುಟ್ಟಿಸಿದ ಕೌತೂಹಲಗಳನ್ನೆಲ್ಲಾ ಬದಿಗಿಟ್ಟು, ಕೇವಲ ಕವಿಗಳ ಮತ್ತು ಜನಗಳ ನಾಲಗೆಯಲ್ಲಿ ನಲಿಯುವ ಪದ್ಯಗಳನ್ನೇ ಹೆಚ್ಚಾಗಿ ವಿವರಿಸಿದ್ದಾಯಿತು. ಹೊಸ ಕಾಲದ ಹೊಸ ಕೆಲಸಗಳಿಗೆ ತಕ್ಕ ಸಾಧನದ ಸೃಷ್ಟಿಯ ವಿಚಾರವಾಯಿತು. ಇನ್ನು ತಮಿಳು ಛಂದಸ್ಸಿನಿಂದ ಕೆಲವು ಉದಾಹರಣೆಗಳನ್ನು ಕೊಟ್ಟು ಈ ಕನ್ನಡ ಛಂದಸ್ಸಿನ ಚರಿತ್ರೆಯನ್ನು ಮುಗಿಸಬಹುದು; ಏಕೆಂದರೆ, ಪುರಾತನ ತಮಿಳು ಛಂದಸ್ಸಿನಲ್ಲಿ ಕನ್ನಡ ಛಂದಸ್ಸಿನ ಹಿಂದಿನ ಹೆಜ್ಜೆ ಕಾಣಬರುವುದು.

ಮೊದಲು ಅಶೈ = ಅಂಶ, ಶೀರ್ = ಗಣ, ಇವುಗಳ ಸ್ಥೂಲಜ್ಞಾನವಾದರೂ ನಮಗೆ ಬೇಕು.

**ಅಶೈ:** ನೇರಶೈ: ಒಂದು ಹ್ರಸ್ವ ಅಥವಾ ದೀರ್ಘ, ತಾನೇ ಆಗಲಿ ವ್ಯಂಜನ ಸೇರಿಯಾಗಲಿ ಬರುವುದು: ಆ, ಔ, ಚೊಲ್, ವಾನ್. ಒಂದು ಹ್ರಸ್ವ ಗಣದ ಮೊದಲು ಅಂಶವಾಗಿ ಬರುವುದಿಲ್ಲ.

ನಿರೈಯಶೈ: ಎರಡು ಹ್ರಸ್ವ, ಅಥವಾ ಹ್ರಸ್ವ ದೀರ್ಘ, ತಾನೇ ಆಗಲಿ, ವ್ಯಂಜನ ಸೇರಿಯಾಗಲಿ ಬರುವುದು: ಅಣಿ, ನಿಲಾ, ಕಲಮ್, ಪಡಾಮ್.

ಮಾತ್ರಾದೃಷ್ಟಿಯಿಂದ, ನೇರಶೈ ∪, – . ನಿರೈಯಶೈ ∪ ∪ . ∪ – . ಕನ್ನಡದಲ್ಲಿ ∪ – ಸಾಮಾನ್ಯವಾಗಿ ಇಲ್ಲವೆಂದು ಕಂಡು, ಇರಕೂಡದೆಂದು ತಿಳಿದುಕೊಂಡಿದ್ದೇವೆ. ತಮಿಳಿನಲ್ಲಿ ಇದು ಸರ್ವೇಸಾಧಾರಣ.

**ಶೀರ್:** ನೇರಶೈ, ನಿರೈಯಶೈಗಳು ಈರಶೈ, ಮೂರಶೈ, ನಾಲ್ಕಶೈಗಳಾಗಿ ಸೇರಿ ಗಣಗಳಾಗುತ್ತವೆ. ಇಲ್ಲಿ ಮುಖ್ಯವಾಗಿ ಈರಶೈ ಮೂರಶೈಗಳನ್ನು ಪರಿಶೀಲಿಸೋಣ. ಇವು ಬ್ರಹ್ಮ, ವಿಷ್ಣು, ರುದ್ರಗಣಗಳನ್ನು ಹೋಲುತ್ತವೆ.

**ಈರಶೈ:**

| | | | | |
|---|---|---|---|---|
| ನೇರ್ ನೇರ್ | ... | ತೇ. ಮಾ – ಬ್ರಹ್ಮ | ೧, ೩ | } |
| ನಿರೈ ನೇರ್ | ... | ಪುಳಿ.ಮಾ – ಬ್ರಹ್ಮ | ೨, ೪. | } |
| ನೇರ್ ನಿರೈ | ... | ಕೂ. ವಿಳಂ – ವಿಷ್ಣು | ೫, ೬. | } (ತಮಿಳಿನಲ್ಲಿ ಎರಡಂಶ; |
| ನಿರೈ ನಿರೈ | ... | ಕರು, ವಿಳಂ – ವಿಷ್ಣು | ೭, ೮. | } ಕನ್ನಡದಲ್ಲಿ ಮೂರಂಶ). |

**ಮೂರಶೈ:**

ನೇರ್ ನೇರ್ ನೇರ್ ... ತೇ.ಮಾಂ. ಗಾಯ್– ವಿಷ್ಣು ೧, ೨.
ನಿರೈ ನೇರ್ ನೇರ್ ... ಪುಳಿ.ಮಾಂ.ಗಾಯ್– ವಿಷ್ಣು ೩, ೪.
ನೇರ್ ನಿರೈ ನೇರ್ ... ಕೂ.ವಿಳಂ.ಗಾಯ್ – ರುದ್ರ (ಕನ್ನಡದಲ್ಲಿ ನಾಲ್ಕಂಶ).

ನಿರೈ ನಿರೈ ನೇರ್ ... ಕರು.ವಿಳಂ.ಗಾಯ್– ರುದ್ರ.
ನೇರ್ ನೇರ್ ನಿರೈ ... ತೇ.ಮಾಂ.ಗನಿ – ರುದ್ರ
ನಿರೈ ನೇರ್ ನಿರೈ ... ಪುಳಿ.ಮಾಂ.ಗನಿ – ರುದ್ರ.

ನೇರ್ ನಿರೈ ನಿರೈ ... ಕೂ.ವಿಳಂ.ಗನಿ.
ನಿರೈ ನಿರೈ ನಿರೈ ... ಕರು.ವಿಳಂ.ಗನಿ.

**ನಾಲ್ಕಶೈ:**

ನೇರ್ ನೇರ್ ನೇರ್ ನೇರ್ – ತೇಮಾಂದಣ್ಪೂ }
ನಿರೈ ನೇರ್ ನೇರ್ ನೇರ್ – ಪುಳಿಮಾಂದಣ್ಪೂ } ರುದ್ರ ೧, ೩.

...ಇನ್ನೂ ೧೪ ಗಣಗಳು.

ತಮಿಳಿನಲ್ಲಿ ನಾಲ್ಕು ಈರಶೈಗಳೂ, ಎಂಟು ಮೂರಶೈಗಳೂ, ಹದಿನಾರು ನಾಲ್ಕಶೈಗಳೂ ಕನ್ನಡದ ನಾಲ್ಕು ಬ್ರಹ್ಮ, ಎಂಟು ವಿಷ್ಣು, ಹದಿನಾರು ರುದ್ರಗಳಂತೆ ಇವೆ. ಆದರೆ ∪ – ಈ ಅಶೈ ಬರುವುದರಿಂದಲೂ, ∪ ∪ ಈ ಎರಡು ಹ್ರಸ್ವ ಎರಡು ಮೂರು ನಾಲ್ಕನೆಯ ಅಂಶ ಗಳಲ್ಲಿಯೂ ಬದಲಾಯಿಸಿ ಬರುವುದರಿಂದಲೂ – ಅಂಶ ವಿಭಜನೆ ಎರಡು ಭಾಷೆಯಲ್ಲಿ ಒಂದೇ ಆಗುವುದಿಲ್ಲ. ವಿಷ್ಣು ಈರಶೈ, ಮೂರಶೈಗಳಲ್ಲಿಯೂ ರುದ್ರ ಮೂರಶೈ ನಾಲ್ಕಶೈಗಳಲ್ಲಿಯೂ ಅಡಕವಾಗುತ್ತದೆ. ಈ ಎರಡು ಅಂಶಸ್ವರೂಪ ವಿವರಣೆಗಳನ್ನೂ ಪರಾಮರ್ಶಿಸಿ ದ್ರಾವಿಡಗಣದ ಆದಿಸ್ವರೂಪವನ್ನು ಕಂಡುಹಿಡಿಯಬೇಕು.

ಇಷ್ಟು ಸೂಕ್ಷ್ಮಕ್ಕೆ ಹೋಗದೆ, ಒಟ್ಟಿನ ಮೇಲೆ ಕೆಲವು ಪ್ರಸಿದ್ಧವಾದ ಪುರಾತನದ ತಮಿಳು ವೃತ್ತಗಳನ್ನು ಕನ್ನಡ ಗಣಗಳಿಂದ ಸ್ಥೂಲವಾಗಿ ಅಳೆದು ತೋರಿಸಿದರೆ ಇವೆರಡಕ್ಕೂ ಇರುವ ಸಂಬಂಧ ಮನಸ್ಸಿಗೆ ದೃಢವಾಗುತ್ತದೆ.

**(i) ಕುಱಳ್‌ವೆಣ್ಬಾ :**

ಅಗ.ರ। ಮು.ದ.ಲ। ವೆೞು.ತ್ತೆಲ್ಲಾ। ಮಾ.ದಿ...ಬ್ರ।ಬ್ರ।ವಿ।ಬ್ರ।
ಭಗ.ವನ್। ಮುದಱ್ಱೇ। ಯುಲ.ಗು. ...ಬ್ರ।ಬ್ರ। ನಿರೈ.
ಅಱ.ನೆನ। ಪ್ಪ.ಟ್ಟದೇ। ಇಲ್.ವಾ.ೞ್ಕ್ಕೈ। ಯ. ತ್ತುಂ
ಪಿಱನ್. ಪೞಿ. ಪ್ಪ। ದಿ.ಲ್ಲಾ.ಯಿ। ನನ್ನು... ... ವಿ.ವಿ. ನೇರ್.
ಮ. ಕ್ಕಳ್.ಮಯ್। ತೀಣ್ಡ। ಲುಡ. ಱ್ಕಿನ್. ಬಂ। ಮ.ಱ್ಱವರ್
ಚೊ. ಱ್ಕೇ.ಟ್ಟ। ಲಿ.ನ್ಬಂ.। ಚೆವಿ.ಕ್ಕು

**(ii) ನೇರಿಶೈವೆಣ್ಬಾ :**

ಕಡ.ಲೇ। ಯನೈ.ಯಂ.ಯಾಂ। ಕ.ಲ್ವಿಯಾ। ಲೆನ್ನುಂ।...ಬ್ರ.ವಿ.ಬ್ರ.ಬ್ರ
ಅಡ.ಲೇ। ಅನೈ.ಯ. ಚೆರುಕ್ಕಾೞಿ–ವಿಡಲೇ।
ಮುನಿ. ಕ್ಕರ.ಶು। ಕೈ.ಯಾನ್। ಮುಗಂ. ದು। ಮುೞಂ. ಗುಂ।
ಪನಿ. ಕ್ಕಡ. ಲು । ಮು.ಣ್ಣ। ಪ್ಪಡುಂ

(ಇಲ್ಲಿ ಎರಡನೆಯ ಪಂಕ್ತಿಯ ಕಡೆಯಲ್ಲಿ ಸೇರಿರುವ ಗಣ, ತ್ರಿಪದಿಯ ಎರಡನೆಯ ಪಂಕ್ತಿಯ ಕಡೆಯಲ್ಲಿ ಸೇರುವ ಗಣದಂತೆ).

ಒರು.ನಾಳ್। ಉಣ.ವೈ। ಒಟಿ.ಯೆ.ನ್ಹಾಲ್।ಒಟಿ.ಯಾಯ್।
ಇರು.ನಾ.ಳೈ। ಕ್ಕೇ.ಲೆ.ನ್ಹಾಲ್। ಏಲಾಯ್। – ಒರು.ನಾ. ಳುಂ
ಎ.ನ್ನೋ । ವಱಿ.ಯಾಯ್। ಇಡುಂ. ಬೈ.ಕೂರ್ । ಎನ್.ವಯಿ.ಱೀ।
ಉ.ನ್ನೋ.ಡು। ವಾ.ಟ್ಡಿ। ಲರಿದು

**(iii) ಅಗವಾಲ್ ಪಾ (=ಆಶಿರಿಯಪ್ಪಾ) :**

ತಿ.ಲ್ಶೈ। ಮೂ.ದೂ। ರಾ.ಡಿಯ। ತಿರು.ವಡಿ। (೪ ಬ್ರ)
ಪ.ಲ್ಲುಯಿ। ರೆ.ಲ್ಲಾಂ। ಪಯಿ.ನ್ಹನ। ನಾ.ಗಿ ॥
ಮಾ.ಶಱು। ಪೊ.ನ್ನೇ। ವಲಂಬುರಿ। ಮು.ತ್ತೇ।
ಕಾ. ಶಱು। ವಿರೈ.ಯೇ। ಕರುಂ.ಬೇ। ತೇ.ನೇ।
ಅರುಂ.ಬೆಱಲ್। ಪಾ.ವಾಯ್। ಆ.ರುಯಿರ್। ಮರುಂ.ದೇ।
ಪೆರುಂ. ಗುಡಿ। ವಾ.ಣಿಗನ್। ಪೆರು. ಮಡ। ಮಗ.ಳೇ ॥
ಅವರೋ। ವಾರಾರ್। ತಾನ್ ವನ್। ದನ್ಹೆ।
ಅಂಜಿನ್ನೈ। ಪಾದಿರಿ। ಯಲರ್‌ನ್‌ದೆನ।
ಚೆಂಗಣಿ। ರುಂಕುಯಿ। ಲಱ್ಯೈಯುಂ। ಪೋಱಿದೇ ॥

**(iv) ಆಶಿರಿಯ ವಿರುತ್ತಂ :**

ಮುತ್ತಣಿ । ಕೊಂಗೈಗಳ್। ಆಡ ಆಡ
ಮೊಯ್ ಕುಟಿಲ್। ವಣ್ಡಿನಂ। ಆಡ ಆಡ।
ಚಿತ್ತಂ। ಶಿವನೊಡುಂ। ಆಡ ಆಡ।
ಶೆಂಗಯಲ್। ಕಣ್ಬನಿ। ಆಡ ಆಡ।
ಪಿತ್ತೆಂ। ಬಿರಾನೊಡುಂ। ಆಡ ಆಡ।
ಪಿಱವಿ । ಪಿಱರೊಡುಂ। ಆಡ ಆಡ।

ಅತ್ತನ್। ಕರುಣೈಯೊ। ಡಾಡ ಆಡ।
ಆಡಪ್ಪೊನ್। ಶುಣ್ಣಂ। ಇಡಿತ್ತುನಾಮೇ॥
ಉಡೈಯಾಳ್ ಉನ್‌ತನ್। ನಡುವಿರುಕ್ಕುಂ
ಉಡೈಯಾಳ್। ನಡುವುಳ್। ನೀಯಿರುತ್ತಿ।
ಅಡಿಯೇನ್ ನಡುವುಳ್। ಇರುವೀರುಂ
ಇರುಪ್ಪ। ದಾನಾ। ಲಡಿಯೇನ್ ಉನ್... (೨ ಪಾದ)

ಇಮ್ಮೈಯಿಲೇ। ಪುವಿಯುಳ್ಳೋರ್। ಯಾರುಂ। ಕಾಣ।
ಏಟುಲಗುಂ। ಪೋಱ್ಟಿಶೈಪ್ಪ। ವಮ್ಮೈ। ಯಾಳುಂ। (೧ ಪಾದ)

**(v) ಕಲಿಪ್ಪಾ:**

ನಾ.ಯಿಜ್। ಕಡೈ.ಪ್ಪ.ಟ್ಟ। ನ.ಮ್ಮೈ.ಯುಮೋರ್। ಪೊರುಳ್. ಪಡು.ತ್ತು।
ತಾ.ಯಿಜ್। ಪೆರಿ.ದುಂ। ದಯಾ.ವುಡೈ.ಯ। ತಂ.ಬೆರು.ಮಾನ್।
ಮಾ.ಯ। ಪ್ಪಿಜಿ.ಪ್ಪಜು.। ತ್ತಾ.ಣ್ಣಾನ್.ಎನ್। ವಲ್.ವಿನ್ಯೈ.ಯಿನ್।
ವಾ.ಯಿಜ್। ಪೊಡಿ.ಯ.ಟ್ಟಿ। ಪೂ.ವ.ಲ್ಲಿ। ಕೊ.ಯ್ಯಾ.ಮೋ॥

ಪೂಶುವದುಂ। ವೆಣ್ಣೀಜು। ಪೂಣ್ಬದುವುಂ। ಪೊಂಗರವಂ।
ಪೇಶುವದುಂ। ತಿರುವಾಯಾಲ್। ಮಜ್ಯೈಪೋಲುಂ। ಕಾಣೇಡೀ।
ಪೂಶುವದುಂ। ಪೇಶುವದುಂ। ಪೂಣ್ಬದುವುಂ। ಕೊಂಡೆನ್ನೈ।
ಈಶನವನ್। ಎವ್ವುಯಿರ್ಕ್ಕುಂ। ಇಯಲ್ಬಾನಾನ್। ಚಾಬಿಲೋ ॥

ಕಡೈಯವ। ನೇನ್ನೈ। ಕರುಣ್ಯೈಯಿ। ನಾಲ್ ಕಲಂ। ದಾಣ್ಡುಕೊಂಡ।
ವಿಡೈಯವ। ನೇ ವಿ। ಟ್ಟುಡುದಿ ಕಂ। ಡಾಯ್ ವಿಜಲ್। ವೇಂಗೈಯಿನ್ ತೋಳ್।
ಉಡೈಯವ। ನೇ ಮನ್ನು। ಮುತ್ತರ । ಕೋಶಮಂ। ಗೈಕ್ಕರಶೇ।
ಜಡೈಯವ। ನೇ ತಳರ್‌ನ್। ದೇಸೆಂಬಿ। ರಾನ್ ಎನ್ನೈ। ತಾಂಗಿಕ್ಕೊಳ್ಳೇ।

**(vi) ಸಾಂಗತ್ಯದಂತಿರುವ ಪದ್ಯ:**

ಮುರಜದಿರ್‌ನ್। ದೆಬಿತರು। ಮುದುಕುನ್ಜ। ಮೇವಿಯ।
ಪರಜಮರ್। ಪಡೈಯುಡೈ। ಯೀರೇ
ಪರಜಮರ್। ಪಡೈಯುಡೈ। ಯೀರುಮ್ಮೈ। ಪರವುವಾರ್।
ಅರಶರ್‌ಗ। ಳುಲಗಿಲಾ। ವಾರೇ

**(vii) ಸರಳರಗಳೆಯಂತೆ ಓಡುವ ಸಾಲುಗಳು:**

ಯಾದು। ಮೂರೇ। ಯಾವರುಂ। ಕೇಳಿರ್।
ತೀದು। ನನ್ರುಂ। ಪಿಜರ್‌ತರ। ವಾರಾ।
ನೋದಲುಂ । ತಣಿದಲು । ಮವಜ್ರೋ। ರನ್ನ
ಚಾದಲಂ । ಪುದುವ । ದನ್ರೇ । ವಾಟ್ದಿ ।
ಲಿನಿದೆನ । ಮಗಿಟ್‌ನ್‌ದನ್ರು । ಮಿಲಮೇ । ಮುನಿವಿ।
ನಿನ್ನಾ । ಹೆನ್ರಲು । ಮಿಲಮೇ । ಮಿನ್ನೊಡು ।
ವಾನಂ । ತಣ್ಣುಳಿ । ತಲೈ ಇ । ಯಾನಾದು ।
ಕಲ್‌ಪೊರು । ದಿರಂಗು । ಮಲ್ಲಜ್ । ಪೇರ್‌ಯಾಜ್ರು ।
ನೀರ್‌ವಟಿ।ಪ್ಪಡೂಉಂ। ಪುಣ್ಯೈಪೋ । ಲಾರುಯಿರ್ ।
ಮುಜ್ಯೈವಟಿ । ಪ್ಪಡೂಉ । ಮೆನ್ಪದು । ತಿಜವೋರ್।
ಕಾಟ್ಚಿಯಿ । ಜ್ರಿಳಿಂದನ । ಮಾಗಲಿನ್ । ಮಾಟ್ಚಿಯಿಜ್।

ಪೆರಿಯೋರ್ರೈ । ವಿಯತ್ತಲು । ಮಿಲಮೇ
ಶಿರಿಯೋರ್ರೈ । ಯಿಗಟ್ಟಿ। ಲದನಿನು । ಮಿಲಮೇ

**(viii) ಉತ್ಸಾಹರಗಳೆ :**

ಅಕ್ಕರಂಗಳಕ್ಕರಂಗಳೆನ್ನು ಮಾವದೆನ್ಗೊಲೋ
ಇಕ್ಕುಱಂಬೈ ನೀಕ್ಕಿಯೆನ್ನೈ ಯೀಶನಾಕ್ಕವಲ್ಲೈಯೇಲ್
ಚಕ್ಕರಂಗೊಳ್ ಕೈಯನೇ ಚಡಂಗರ್‌ವಾಯಡಂಗಿಡ
ಉಟ್ಕಿಡಂದ ವಣ್ಣಮೆ ಪುಱಂಬೊಶಿಂದು ಕಾಟ್ಟಡೇ

ಈ ಉದಾಹರಣೆಗಳಿಂದ ಹಳಗನ್ನಡಕ್ಕೂ ತಮಿಳಿಗೂ ಇರುವ ಹತ್ತಿರ ಸಂಬಂಧವನ್ನೂ, ಸಂಘದ ತಮಿಳಿನ ಶುದ್ಧ ಶೈಲಿಯನ್ನೂ, ಕನ್ನಡ ಛಂದಸ್ಸಿನ ವಿಮರ್ಶೆಯಲ್ಲಿ ಮತ್ತು ವೃದ್ಧಿಯಲ್ಲಿ ತಮಿಳಿನ ಬೆಳಕು ಬೀಳಬೇಕೆನ್ನುವುದನ್ನೂ ಕಾಣಬಹುದು. ಇಂಗ್ಲಿಷ್ ಛಂದಸ್ಸಿನ ಪ್ರಭಾವವನ್ನೂ ಸಹಾಯವನ್ನೂ ಬೇರ ಕಡೆ ವಿಮರ್ಶಿಸಲಾಗುತ್ತದೆ. ಕನ್ನಡದ ಛಂದಸ್ಸಿನ ತಾಯಿಬೇರಿನ ಮೇಲೆ ಹೊಸ ಸೌಂದರ್ಯವನ್ನು ಕಸಿಮಾಡಿ ಕಟ್ಟಿ ಬೆಳೆಸುವವರು ಈ ವಿಮರ್ಶೆಯನ್ನು ಮುಂದುವರಿಸ ಬೇಕು.

*ಕನ್ನಡ ಕೈಪಿಡಿ, ೧, ೧೯೩೬*
*ಶ್ರೀಸಾಹಿತ್ಯ, ೧೯೮೩, ಪು. ೫೪೫-೪೭; ೫೭೫-೭೯*

# ೩೨. ಲಯ-ಗತಿ-ರಿಧಂ

● ಸೇಡಿಯಾಪು ಕೃಷ್ಣಭಟ್ಟ

೧

ನಮ್ಮ ಶಬ್ದಕೋಶಕಾರರೂ ಸಂಗೀತಶಾಸ್ತ್ರಕಾರರೂ 'ಲಯ' ಎಂದರೆ ಏನೆಂದು ಹೇಳಿದ್ದಾರೆ, ಗಾಯಕಸಂಪ್ರದಾಯದಲ್ಲಿ ಆ ಪದಕ್ಕೆ ಯಾವ ಯಾವ ಅರ್ಥಗಳು ರೂಢವಾಗಿವೆ, ಶಾಸ್ತ್ರೇತರ ವಾಙ್ಮಯದಲ್ಲಿ ಆ ಪದವನ್ನು ಯಾವ ಯಾವ ಅರ್ಥಗಳಲ್ಲಿ ಬಳಸಲಾಗಿದ ಎಂಬುದನ್ನು ಈವರೆಗೆ ಯಥಾಮತಿ ವಿವರಿಸಿದ್ದಾಯಿತು. ಇನ್ನು ನಮ್ಮ ಛಂದೋಗ್ರಂಥಗಳಲ್ಲಿ ಈ ಪದವನ್ನು ಯಾವ ಅರ್ಥದಲ್ಲಿ ಪ್ರಯೋಗಿಸಿದ್ದಾರೆಂಬುದನ್ನು ನೋಡೋಣ:

ನಾಗವರ್ಮನ 'ಛಂದೋಂಬುಧಿ'ಯಲ್ಲಿ ಹನ್ನೊಂದಕ್ಷರಗಳ ಪಾದದ ಒಂದು ಸಮವೃತ್ತಕ್ಕೆ 'ಲಯಗ್ರಾಹಿ' ಎಂಬ ಹೆಸರಿದೆ. ಆ ವೃತ್ತಸ್ವರೂಪ ಈ ಕೆಳಗಿನಂತೆ :

(೧) ವ್ಯೋಮಂ ನಭೋಕಾಶಮೀಶದ್ವಯಂಗಳ್
ತಾಮೊಂದಿರಲ್ಕಾಗಳಂಭೋಜನೇತ್ರೇ
ನಾಮಂ ಲಯಗ್ರಾಹಿಯೆಂದಾಯ್ತು ವೃತ್ತಂ
ತಾಂ ಮುನ್ನ ಗೋದ್ಭೂತೆಗಂದೊಲ್ದು ಪೇಳ್ದಂ ॥

ಜಯಕೀರ್ತಿಯ 'ಛಂದೋನುಶಾಸನ'ದಲ್ಲಿಯೂ ಇದೇ ಹೆಸರಿನಲ್ಲಿ ಈ ವೃತ್ತದ ಲಕ್ಷಣವು ಹೀಗೆ ಹೇಳಲ್ಪಟ್ಟಿದೆ:

ತೌತಶ್ಚಗೌ ಚೇಲ್ಲಯಗ್ರಾಹಿ ಸಂಜ್ಞಾ ॥

ನಾಗವರ್ಮನು ಹೇಳಿರುವ ಮಾಲಾವೃತ್ತಗಳೊಳಗೆ 'ಲಲಿತವೃತ್ತ' ಎಂಬುದು ಒಂದು. ಇದರ ಪಾದಗಳು ಮೂವತ್ತು ಅಕ್ಷರದವು. ಇದೇ ಸಮವೃತ್ತಕ್ಕೆ ಭೀಮಕವಿಯ ತೆಲುಗು ಛಂದೋಗ್ರಂಥದಲ್ಲಿ 'ಲಯಗ್ರಾಹಿ' ಎಂಬ ಹೆಸರಿರುವುದಾಗಿ ತಿಳಿದುಬರುತ್ತದೆ. ಅಲ್ಲದೆ 'ಅಪ್ರತಿಮವೀರಚರಿತೆ' ಮೊದಲಾದ ಕನ್ನಡಗ್ರಂಥಗಳಲ್ಲಿಯೂ ಈ ವೃತ್ತಕ್ಕೆ 'ಲಯಗ್ರಾಹಿ' ಎಂಬ ಹೆಸರು ಕಂಡುಬರುತ್ತದೆ. ಜಯಕೀರ್ತಿ ಈ ವೃತ್ತದ ಹೆಸರು 'ಲಲಿತ' ಎಂದೂ ಇದು ಲಯಾನ್ವಿತವೆಂದೂ ಹೇಳುತ್ತಾನೆ. ಅವನ 'ಛಂದೋನುಶಾಸನ'ದ ಮುದ್ರಿತವಾಠದಂತೆ ಆ ಭಾಗ ಹೀಗಿದೆ:

(೨) ವೃತ್ತಲಲಿತಂ ಲಲಿತನ್ವತ್ತಮಪಿ ಸುಂದರಲಯಾತ್ತವರನಂ ಭಜಸನಾಭಜಸನಾಭ್ಯಾ ॥

(ಇದರಲ್ಲೇನೋ ಪಾಠದೋಷವಿರುವ ಹಾಗೆ ಕಾಣುತ್ತದೆ. 'ವರನಂ' ಎಂಬುದರ ಅರ್ಥವೇನೆಂದು ಹೊಳೆಯುವುದಿಲ್ಲ; ಮತ್ತು ಇಲ್ಲಿ 'ಅಪಿ' ಎಂಬುದಕ್ಕೆ ಔಚಿತ್ಯ ಕಾಣುವುದಿಲ್ಲ. ಇದರ ಶುದ್ಧಪಾಠ ಈ ಕೆಳಗಿನಂತಿರಬಹುದೋ ಏನೋ :

ವೃತ್ತಲಲಿತಂ ಲಲಿತನ್ವತ್ತಮಿವ ಸುಂದರಲಯಾತ್ತಚರಣಂ ಭಜಸನಾಭಜಸನಾಭ್ಯಾ ॥

ಶುದ್ಧಪಾಠ ಹೇಗೂ ಇರಲಿ, ಲಬ್ಧವಾಗಿರುವ ಪಾಠದಿಂದಲೇ ಗ್ರಂಥಕಾರನ ಆಶಯವೇನೆಂಬುದು ಗೊತ್ತಾಗುತ್ತದೆ.)

ಛಂದೋಂಬುಧಿಯಲ್ಲಿ ‘ಉತ್ಸಾಹ’ ಎಂಬ ‘ಕರ್ಣಾಟಕವಿಷಯಜಾತಿ’ಯೊಂದು ಹೀಗೆ ನಿರೂಪಿಸಲ್ಪಟ್ಟಿದೆ :

(೩) ಭೂಹಿತಾರ್ಥಮೆನಿಸುವಜನ ಗಣಮವೆರಡೆ ಸಪ್ತಸಂ
ದೋಹಮತ್ತಲೊಂದೆ ಗುರು ಬೆಡಂಗನಾಳ್ದು ನಿಲೆ ಲಯ
ಗ್ರಾಹಿಯಾಗಿ ಮಧುರವಚನರಚನೆವೆತ್ತು ಬಂದೊಡು-
ತ್ಸಾಹಮೆಂಬ ಪೆಸರೊಳೆಸೆವುದಬ್ಜಪತ್ರಲೋಚನೆ ॥

(ಇಲ್ಲಿ ‘ಭೂಹಿತಾರ್ಥ’ ಎಂಬುದಕ್ಕೆ ಸಮಂಜಸವಾದ ಅರ್ಥ ಹೇಳುವುದಕ್ಕಾಗುವುದಿಲ್ಲ. ಇದು ಪಾಠದೋಷವಾಗಿರುವಂತೆ ತೋರುತ್ತದೆ. ಇದೇ ಛಂದೋಬಂಧದ ಲಕ್ಷಣವು ಜಯಕೀರ್ತಿಯ ಗ್ರಂಥದಲ್ಲಿ ‘‘ಊಹಿತೋಕ್ತಿತೋ ಗಲಾಂಶ ಸಪ್ತಕಂ...’’ ಇತ್ಯಾದಿಯಾಗಿರುವುದರಿಂದ ಈ ಭಾಗದ ಶುದ್ಧಪಾಠವು ‘‘ಊಹಿತಾರ್ಥಮೆನಿಸುವ ಜನ...’’ ಎಂದಿದ್ದಿರಬಹುದಾಗಿ ಕಾಣುತ್ತದೆ.)

ಜಯಕೀರ್ತಿ ತನ್ನ ಛಂದೋನುಶಾಸನದಲ್ಲಿ ‘ಲಯೋತ್ತರ’ ಎಂಬ ಹೆಸರಿನ ಮಾತ್ರಾಬಂಧದ ಐದು ಪ್ರಭೇದಗಳ ಲಕ್ಷಣಗಳನ್ನೂ ಒಂದೇ ಪದ್ಯದಲ್ಲಿ ನಿರೂಪಿಸಿ, ಕೊನೆಗೆ ಆ ಛಂದೋಬಂಧವನ್ನು ‘ಲಯಾನುಗಾಮಿ’ ಎಂದಿದ್ದಾನೆ. ಆ ಪದ್ಯದ ಕೊನೆಯ ಪಾದ ಹೀಗಿದೆ:

(೪) ತತ್ಸಮೀರಿತಂ ಲಯಾನುಗಾಮಿ ಯಮಕವತ್ತರಂ ವಿಚಿತ್ರಗತಿ ಲಯೋತ್ತರಂ ॥

ಛಂದಃಶಾಸ್ತ್ರಕಾರರು ‘ಲಯ’ ಎಂದರೇನೆಂದು ಗ್ರಹಿಸಿದ್ದರೆಂಬುದನ್ನು ನಿರ್ಧರಿಸುವುದಕ್ಕೆ ಇಷ್ಟು ಉದಾಹರಣಗಳು ಸಾಕಾಗಬಹುದು. ಈ ಉದಾಹರಣಗಳಲ್ಲಿ ಕಾಣುವ ಲಯಗ್ರಾಹಿ, ಲಯಾತ್ತ, ಲಯಾನುಗಾಮಿ ಎಂಬ ಪದಪ್ರಯೋಗಗಳ ಅಭಿಪ್ರಾಯ ಒಂದೇ: ಎಂದರೆ ‘ಲಯಾನ್ವಿತ’ ಎಂಬುದಾಗಿದೆ. (‘ಲಯೋತ್ತರ’ ಎಂದರೆ ‘ಲಯಾಧಿಕ್ಯವುಳ್ಳದ್ದು’ ಅರ್ಥಾತ್ ‘ಲಯನಿಬಿಡವಾದುದು’ ಎಂದರ್ಥ.) ಇಲ್ಲಿ ಗ್ರಂಥಕಾರರು ‘ಲಯ’ವೆಂದು ಹೇಳಿದುದು, ಉದಾಹೃತವಾದ ನಾಲ್ಕು ಪದ್ಯಗಳಲ್ಲಿಯೂ ಇರುವ ಯಾವುದೋ ಒಂದು ಸಮಾನಧರ್ಮವನ್ನೆಂಬುದು ಸ್ಪಷ್ಟ. ಆ ಸಮಾನಧರ್ಮ ಯಾವುದು ?

ಈ ನಾಲ್ಕು ಪದ್ಯಗಳೊಳಗೆ ಮೊದಲಿನ ಎರಡು ಪದ್ಯಗಳು ಅಕ್ಷರವೃತ್ತಗಳು. ಆದರೆ ಇವುಗಳಲ್ಲಿ (ಶಾರ್ದೂಲವಿಕ್ರೀಡಿತಾದಿಗಳಲ್ಲಿರುವಂತಹ) ‘ಗುರುಲಘುಸ್ಥಿರ’ವಾದ ಪಾದ ಸಮತೆ ಮಾತ್ರ ಇರುವುದಲ್ಲ; ಪಾದದ ಎಡೆಯಲ್ಲಿ ಎಲ್ಲಿಯೂ ನಿಲ್ಲಿಸದೆ (ಯಥಾಕ್ಷರಗುರು ಲಘುವಾಗಿ) ಓದುವಾಗ, ಇವುಗಳ ಪಾದಾವಯವಗಳಲ್ಲಿಯೂ ಸಮತೆ ಇರುವುದು ವ್ಯಕ್ತವಾಗುತ್ತದೆ :

| | | | | | |
|---|---|---|---|---|---|
| | (೫) | (೫) | (೫) | (೪+೧) | |
| | - - ∪ | - -∪ | - -∪ | - -∪ | |
| (೧) | ವ್ಯೋಮಂ ನ | ಭೋಕಾಶ | ಮೀಶದ್ವ | ಯಂಗಳ್- | ॥ |

| | | | | | |
|---|---|---|---|---|---|
| | (೫) | (೫) | (೫) | (೫) | (೫) |
| | -∪∪∪ | - ∪∪∪ | -∪∪∪ | - ∪∪∪ | - ∪∪∪ |
| (೨) | ವೃತ್ತಲಲಿ | ತಂ ಲಲಿತ | ನೃತ್ತಮಿವ | ಸುಂ ದರಲ | ಯಾತ್ತಚರ |
| | | | (೫) | (೫) | (೪+೧) |
| | | | - ∪∪∪ | -∪∪∪ | - - ೦ |
| | | | ಣಂ ಭಜಸ | ನಾಭಜಸ | ನಾಭ್ಯಾ- ‖ |

(ಇವೆರಡೂ ಸಮವೃತ್ತಗಳಾದುದರಿಂದ ಒಂದೊಂದೇ ಪಾದಗಳ ಪರೀಕ್ಷಣವು ಸಾಕಾಗುತ್ತದೆ. ಇವುಗಳ ಪಾದಗಳ ಕೊನೆಯದೊಂದು ಅವಯುವವು ಉಳಿದ ಅವಯುವಗಳಿಗಿಂತ ಅಲ್ಪತರವಾಗಿರುವುದಾದರೂ, ಪಾದಾಂತದ ವಿರಾಮದಿಂದಾಗಿ ಕಾಲಾವಕಾಶವು ಆ ಅವಯುವವನ್ನೂ (ಉಚ್ಚಾರಕಾಲದಲ್ಲಿ) ಉಳಿದ ಅವಯುವಗಳಿಗೆ ಸಮನಾಗಿಸುತ್ತದೆ.)

ಈ ಮೇಲಿನ ಎರಡು ಉದಾಹರಣೆಗಳಲ್ಲಿ ಕಂಡುಬರುವ ಅವಯುವ ಸಮತೆ ದ್ವಿವಿಧವಾದುದು: ಅವಯುವಗಳಿಗೆ ಇಲ್ಲಿ ಗುರು ಲಘು ವಿನ್ಯಾಸದ ಸಮತೆಯೂ (ಕೊನೆಯ ಖಂಡವೊಂದು ಹೊರತಾಗಿ) ಇದೆ ; ಉಚ್ಚಾರಕಾಲಾವಕಾಶದ ಎಂದರೆ ಮಾತ್ರಾಸಂಖ್ಯೆಗಳ ಸಮತೆಯೂ ಇದೆ. ಈ ಎರಡು ವಿಧದ ಸಮತೆಗಳೊಳಗೆ 'ಲಯ' ಎಂಬ ಪದಪ್ರಯೋಗದ ಲಕ್ಷ್ಯ ಯಾವುದು ? – ಉದಾಹೃತ ಪದ್ಯಗಳಲ್ಲಿ ಉಳಿದ ಎರಡರ ಸ್ವರೂಪಗಳನ್ನೂ ಪರೀಕ್ಷಿಸಿ ನೋಡಿ ನಿರ್ಧರಿಸೋಣ.

| | | | | | | | | |
|---|---|---|---|---|---|---|---|---|
| | (೩) | (೩) | (೩) | (೩) | (೩) | (೩) | (೩) | (೨+೧) |
| | – ∪ | – ∪ | –∪∪ | ∪∪∪ | ∪∪∪ | ∪∪∪ | – ∪ | – ೦ ‖ |
| (೩) | ಊಹಿ | ತಾರ್ಥ | ಮೆನಿಸು | ವಜನ | ಗಣಮ | ವೆರಡೆ | ಸಪ್ತ | ಸಂ- ‖ |
| | (೩) | (೩) | (೩) | (೩) | (೩) | (೩) | (೩) | (೨+೧) |
| | –∪ | –∪ | –∪ | ∪∪ ∪ | –∪ | –∪ | ∪∪ ∪ | – ೦ ‖ |
| | ದೋಹ | ಮತ್ತ | ಲೊಂದೆ | ಗುರು ಬೆ | ಡಂಗ | ನಾಳ್ದ | ನಿಲೆ ಲ | ಯ- ‖ |
| | (೩) | (೩) | (೩) | (೩) | (೩) | (೩) | (೩) | (೨+೧) |
| | –∪ | –∪ | ∪∪∪ | ∪∪∪ | ∪∪∪ | –∪ | –∪ | – ೦ ‖ |
| | ಗ್ರಾಹಿ | ಯಾಗಿ | ಮಧುರ | ವಚನ | ರಚನೆ | ವೆತ್ತು | ಬಂದೊ | ಡು- ‖ |
| | (೩) | (೩) | (೩) | (೩) | (೩) | (೩) | (೩) | (೨+೧) |
| | –∪ | –∪ | ∪∪∪ | ∪∪∪ | –∪ | –∪ | –∪ | – ೦ ‖ |
| | ತ್ಸಾಹ | ಮೆಂಬ | ಪೆಸರೊ | ಳೆಸೆವು | ದಬ್ಜ | ಪತ್ರ | ಲೋಚ | ನೇ- ‖ |
| | (೩) | (೩) | (೩) | (೩) | (೩) | (೩) | (೩) | (೩) |

| | | | | | | | | |
|---|---|---|---|---|---|---|---|---|
| | – ∪ | – ∪ | – ∪ | – ∪ | – ∪ | – ∪ | – ∪ | – ∪ |
| (೪) | ಉತ್ಸ | ವಾಂಘ್ರಿ | ಪೂರ್ವ | ಕಂ ಯ | ದಾರ | ಮಾಂಘ್ರಿ | ಕೋತ್ತ | ರಂರ |

| | | | | | | | | |
|---|---|---|---|---|---|---|---|---|
| | | | | (೩) | (೩) | (೩) | (೨+೧) | |
| | | | | – ∪ | ∪∪∪ | – ∪ | – ೦ | |
| | | | | ಮಾಂಘ್ರಿ | ಯುಗಲ | ಕೋತ್ತ | ರಂ- | |
| (೩) | (೩) | (೩) | (೩) | (೩) | (೩) | (೩) | (೩) | |
| –∪ | – ∪ | ∪∪∪ | – ∪ | – ∪ | – ∪ | –∪ | – ∪ | |
| ಪ್ರೋತ್ಸ | ವಾಂತ | ರಿತತ | ದಂಘ್ರಿ | ಕೋತ್ಸ | ವಾಂಘ್ರಿ | ನೈಧ | ಸಂರ | |
| | | | | (೩) | (೩) | (೩) | (೨+೧) | |
| | | | | –∪ | ∪∪∪ | –∪ | – ೦ | |
| | | | | ಮಾಂಘ್ರಿ | ರಿತಿಚ | ನೈಧ | ಸಂ- | |
| (೩) | (೩) | (೩) | (೩) | (೩) | (೩) | (೩) | (೩) | (೩) |
| – ∪ | – ∪ | – ∪ | – ∪ | – ∪ | –∪ | ∪∪∪ | – ∪ | – ∪ |
| ಯತ್ಸು | ಮೋದ | ಯಜ್ಞ | ಸಂರ | ಮೈಕ | ಪಾದ | ದಲಪ | ರಂತ | ಘೋತ್ಸ |
| | | | | | | (೩) | (೩) | (೨+೧) |
| | | | | | | – ∪ | – ∪ | – ೦ |
| | | | | | | ವಾದಿ | ಚಾಪ | ರಂ- |
| (೩) | (೩) | (೩) | (೩) | (೩) | (೩) | (೩) | (೩) | (೩) |
| –∪ | – ∪ | – ∪ | – ∪ | – ∪ | ∪∪∪ | –∪ | – ∪ | – ∪ |
| ತತ್ಸ | ಮೀರಿ | ತಂಲ | ಯಾಸು | ಗಾಮಿ | ಯಮಕ | ವತ್ತ | ರಂ ವಿ | ಚಿತ್ರ |
| | | | | | | (೩) | (೩) | (೨+೧) |
| | | | | | | ∪∪∪ | – ∪ | – ೦ |
| | | | | | | ಗ ತಿ ಲ | ಯೋತ್ತ | ರಂ |

ಈ ಎರಡು ಪದ್ಯಗಳು ಮಾತ್ರಾಬಂಧಗಳು. ಮೊದಲಿನ ಎರಡರಲ್ಲಿರುವಂತೆ ಇವುಗಳ ಪಾದಾವಯವಗಳಲ್ಲಿ ಗುರುಲಘುವಿನ್ಯಾಸದ ಸಮತೆ ಇಲ್ಲ. ಆದರೆ ಆ ಎರಡರಲ್ಲಿರುವ ಹಾಗೆಯೇ, ಇವುಗಳ ಪಾದಾವಯವಗಳಲ್ಲಿಯೂ ಮಾತ್ರಾಸಂಖ್ಯಾಸಮತೆ ಇದೆ. ಹಾಗಾದರೆ ಛಂದಃಶಾಸ್ತ್ರಕಾರರಿಂದ ಲಯಾನ್ವಿತಗಳೆಂದು ಪ್ರೋಕ್ತವಾದ ಈ ನಾಲ್ಕೂ ಉದಾಹೃತ ಪದ್ಯಗಳ ಸಮಾನಧರ್ಮವು ''ಪಾದಾವಯವಗಳ ಮಾತ್ರಾಸಮತೆ'' ಎಂದು ಸಿದ್ಧವಾಯಿತು; ಹಾಗೂ ಅದನ್ನೇ ಅವರು 'ಲಯ' ಎಂದು ಹೆಸರಿಸಿದ್ದೆಂದೂ ಗೊತ್ತಾಯಿತು.

ಈಗ–ಛಂದಸ್ಸಿನಲ್ಲಿ 'ಲಯ'ವೆಂದರೆ 'ಪದ್ಯದ ಪಾದಾವಯವಗಳ ಮಾತ್ರಾಸಮತೆ' ಎಂದು ನಿಶ್ಚಿತವಾದಂತಾಯಿತು. ಆದರೆ–ಛಂದೋಗ್ರಂಥಗಳಲ್ಲಿ ಲಕ್ಷಣನಿರೂಪಣೆ ಮಾಡಿರುವ ನಾನಾರೂಪದ ಪದ್ಯಗಳೊಳಗೆ, ಪಾದಾವಯವಗಳಲ್ಲಿ ಮಾತ್ರಾಸಮತೆಯುಳ್ಳವುಗಳು ತುಂಬ ಇವೆ. ನಾಗವರ್ಮನು ನಿರೂಪಿಸಿದ ಸಮವೃತ್ತಗಳೊಳಗೇ ನೂರಕ್ಕಿಂತ ಹೆಚ್ಚು ವೃತ್ತಗಳ ಪಾದಾವಯವಗಳಲ್ಲಿ ಮಾತ್ರಾಸಮತೆಯನ್ನು ಕಾಣಬಹುದಾಗಿದೆ. ಇದಲ್ಲದೆ, ಮಾತ್ರಾಬಂಧಗಳೆಲ್ಲವುಗಳ ಪಾದಾವಯವಗಳಲ್ಲಿ ಮಾತ್ರಾಸಮತೆ ಇದ್ದೇ ಇರುತ್ತದೆ. ಆದರೂ ಅವುಗಳ ಲಕ್ಷಣನಿರೂಪಣೆ ಮಾಡುವಾಗಲೆಲ್ಲ ಶಾಸ್ತ್ರಕಾರರು ಲಯದ ಗೊಡವೆಗೇ ಹೋಗದೆ, ಎಲ್ಲಿಯೋ ನಾಲ್ಕಾರು ಬಂಧಗಳ ಲಕ್ಷಣನಿರೂಪಣಾವಸರದಲ್ಲಿ ಮಾತ್ರ ಅವು ಲಯಾನ್ವಿತವೆಂದು ಹೇಳಿದ್ದಾರೆ. ಇದೇಕೆ ಹೀಗೆ?–ಎಂಬೊಂದು ಶಂಕೆ ಇಲ್ಲಿ ಹುಟ್ಟುವುದು

ಸಹಜ. ಆದರೆ, ಆ ಛಂದೋಗ್ರಂಥಗಳ ಲಕ್ಷ್ಯವೇನಾಗಿತ್ತು, ಮತ್ತು ಆ ಗ್ರಂಥಕಾರರು ತಮ್ಮ ಆ ಶಾಸ್ತ್ರನಿಬಂಧಗಳ ವಿಷಯಕ್ಕೆ ಹಾಕಿಕೊಂಡ ಮೇರೆ ಎಂತಿತ್ತು ಎಂಬುದನ್ನು ತಿಳಿದಾಗ ಈ ಶಂಕೆ ತಾನಾಗಿ ನಿವೃತ್ತಿಹೊಂದುತ್ತದೆ.

ಛಂದೋಬಂಧಗಳ ಯಥಾರ್ಥಸ್ವರೂಪವನ್ನು ಚಾಚೂ ತಪ್ಪದೆ ತಿಳಿಸುವುದು ಮಾತ್ರ ನಮ್ಮ ಪುರಾತನ ಛಂದಃಶಾಸ್ತ್ರಪ್ರಕ್ರಿಯೆಯಾಗಿತ್ತು ಹೊರತು, ಆಯಾ ಛಂದೋಬಂಧದ ಸೌಂದರ್ಯವಿಶೇಷಗಳನ್ನು ಪ್ರಕಾಶಪಡಿಸುವುದಾಗಿರಲಿಲ್ಲ. 'ವೃತ್ತ' ಮತ್ತು 'ಜಾತಿ' ಎಂಬ ಇಬ್ಬಗೆಯ ಛಂದೋಬಂಧಗಳ ಸ್ವರೂಪನಿರೂಪಣೆಯೂ–ಲಘು, ಗುರು, ಮಾತ್ರೆ, ಗಣ, ಪಾದ, ಯತಿ–ಇವಿಷ್ಟರಿಂದಲೇ ಸಾಧ್ಯವಾಗುತ್ತದೆ.[೧] ಆ ಕಾರ್ಯಕ್ಕೆ 'ಲಯ' ಎಂಬ ಸಂಜ್ಞೆಯ

---

೧ ನಮ್ಮ ಛಂದಃಶಾಸ್ತ್ರಗ್ರಂಥಗಳಲ್ಲಿ ಲಕ್ಷಣನಿರೂಪಣೆಮಾಡಲಾಗಿರುವ ಪದ್ಯಗಳ ದ್ವೈವಿಧ್ಯವನ್ನು ತಿಳಿಸುವ ಅಜ್ಞಾತಕರ್ತೃಕವಾದ ಹಳೆಯ ಶ್ಲೋಕವೊಂದು ಹೀಗಿದೆ :

ಪದ್ಯಂ ಚತುಷ್ಪದಂ, ತಚ್ಚ ವೃತ್ತಂ ಜಾತಿರಿತಿ ದ್ವಿಧಾ
ಏಕದೇಶಸ್ಥಿರಾ ಜಾತಿಃ, ವೃತ್ತಂ ಗುರುಲಘುಸ್ಥಿರಂ ॥

(ಈ ಶ್ಲೋಕದ ಪೂರ್ವಾರ್ಧವು ದಂಡಿಯ ಕಾವ್ಯಾದರ್ಶದಲ್ಲಿಯೂ (ಪ್ರಥಮ ಪರಿಚ್ಛೇದ-೧೧) ಕಾಣಿಸಿಕೊಳ್ಳುತ್ತದೆ.)

ಇದರ ತಾತ್ಪರ್ಯ–''ಪದ್ಯ ಎಂದರೆ ನಾಲ್ಕು ಪಾದಗಳುಳ್ಳ ಛಂದೋರಚನೆ. ಅದು ವೃತ್ತ ಮತ್ತು ಜಾತಿ ಎಂದು ಎರಡು ವಿಧವಾಗಿದೆ. ಒಂದು ಪದ್ಯವರ್ಗದಲ್ಲಿ ಕೆಲವು ಅಂಶಗಳು ಮಾತ್ರ 'ಸ್ಥಿರ'ವಾಗಿದ್ದರೆ–ಎಂದರೆ, ಆ ವರ್ಗದ ಎಲ್ಲಾ ಪದ್ಯಗಳು ಕೆಲವು ಅಂಶಗಳಲ್ಲಿ ಮಾತ್ರ ಏಕರೂಪವಾಗಿದ್ದರೆ–ಆ ವರ್ಗದ ಪದ್ಯವು 'ಜಾತಿ' ಎನಿಸಿಕೊಳ್ಳುತ್ತದೆ. ಒಂದು ವರ್ಗದ ಪದ್ಯಗಳ ಎಲ್ಲಾ ಅಕ್ಷರಗಳು ಸ್ಥಿರವಾಗಿದ್ದರೆ–ಎಂದರೆ, ಆ ಪದ್ಯಾಕ್ಷರಗಳ ಗುರುಲಘುತ್ವವು ಆಮೂಲಾಗ್ರವಾಗಿ ಅನುಕ್ರಮ ತಪ್ಪದೆ ಏಕಪ್ರಕಾರವಾಗಿ ಇರುವುದಾದರೆ– ಆ ವರ್ಗದ ಪದ್ಯವು 'ವೃತ್ತ' ಎನಿಸಿಕೊಳ್ಳುತ್ತದೆ.'' (ಪಿಂಗಲಸೂತ್ರ ವ್ಯಾಖ್ಯಾನದಲ್ಲಿ ಹಲಾಯುಧನು ಉದ್ಧರಿಸಿದ ಈ ಶ್ಲೋಕದ ಪಾಠವು (ನಿರ್ಣಯಸಾಗರ ಮುದ್ರಣ, ಪುಟ ೫೭) ''ಏಕದೇಶಸ್ಥಿತಾ ಜಾತಿಃ ವೃತ್ತಂ ಗುರುಲಘುಸ್ಥಿತಂ'' ಎಂದು (ಗುರುಲಘುಸ್ಥಿರಂ–ಎಂಬ ಪಾಠಾಂತರ ಸೂಚನೆಸಹಿತ) ಮುದ್ರಿತವಾಗಿದೆ. ಈ ಪಾಠಭೇದದಿಂದಾಗಿ ಆ ಶ್ಲೋಕದ ಅರ್ಥವು ಬೇರಾಗುವುದಿಲ್ಲವಾದರೂ, ಪೂರ್ವೋಕ್ತ ಪಾಠವು ಅರ್ಥಸ್ವರೂಪವನ್ನು ವಿಶದತರವಾಗಿ ತಿಳಿಸುವುದರಿಂದ ಆ ಪಾಠವೇ ಗ್ರಾಹ್ಯವೆನ್ನಬೇಕು.) 'ವೃತ್ತ' ಮತ್ತು 'ಜಾತಿ' ಎಂಬ ಸಂಜ್ಞೆಗಳ ಮೂಲವೇನು ಎಂಬುದನ್ನು ಖಚಿತವಾಗಿ ತಿಳಿದುಕೊಳ್ಳುವುದಕ್ಕೆ ಈ ಶ್ಲೋಕವು ಅತ್ಯಂತ ಸಹಾಯಕವಾಗಿದೆ. 'ವೃತ್ತ' ಎಂಬ ಪದವನ್ನು ಛಂದಃಶಾಸ್ತ್ರಕಾರರು ಸಹ ನಿಶ್ಚಿತವಾದ ಒಂದೇ ಅರ್ಥದಲ್ಲಿ ಬಳಸಿಲ್ಲ; 'ಪದ್ಯ' ಎಂಬುದಕ್ಕೆ ಪರ್ಯಾಯವಾಗಿಯೂ ಬಳಸಿದ್ದಾರೆ. (ಉದಾ: 'ಮಾತ್ರಾವೃತ್ತ', 'ವೃತ್ತರತ್ನಾಕರ' ಇತ್ಯಾದಿ). ಇದರಿಂದಾಗಿ ವೃತ್ತ ಎಂಬುದರ ಮೂಲಾರ್ಥವು ಶಾಸ್ತ್ರನಿಬಂಧಗಳಲ್ಲಿ ಕಣ್ಮರೆಯಾಗಿದೆ. ಹೀಗಿದ್ದರೂ, ಲೋಕರೂಢಿಯಲ್ಲಿ ಇಂದೂ ಕೂಡ ಖ್ಯಾತ-ಕರ್ಣಾಟಕಾದಿ ಅಕ್ಷರವೃತ್ತಗಳಿಗೆ ಮಾತ್ರ 'ವೃತ್ತ'ವೆಂಬ ಹೆಸರು ಸಲ್ಲುತ್ತದೆ. ಈ ರೂಢಿಯ ಸಾಧುತ್ವವನ್ನು, ವೃತ್ತ ಮತ್ತು ಜಾತಿ ಎಂಬ ಸಂಜ್ಞೆಗಳ ಅರ್ಥವ್ಯಾಪ್ತಿ ಹಾಗೂ ಅನ್ವರ್ಥತೆಯನ್ನೂ ಈ ಶ್ಲೋಕವು ನಮಗೆ ನಿಸ್ಸಂದಿಗ್ಧವಾಗಿ ತಿಳಿಸಬಲ್ಲುದಾಗಿದೆ. ಹಲಾಯುಧನು ಪಿಂಗಲವ್ಯಾಖ್ಯಾನದಲ್ಲಿ ಈ ಶ್ಲೋಕವನ್ನು ಉದ್ಧರಿಸಿರುವನಾದರೂ, ಇದರ ಅರ್ಥದ ಕುರಿತು ಅವನು ಸಾಕಷ್ಟು ಚಿಂತನಮಾಡಿದಂತೆ ತೋರುವುದಿಲ್ಲ. ಅವನು ಹಾಗೆ ಮಾಡಿರುತ್ತಿದ್ದ ಪಕ್ಷದಲ್ಲಿ, 'ವೃತ್ತ' ಎಂಬ ಸಂಜ್ಞೆಗೆ ''ಗಾಯತ್ರ್ಯಾದೌ ಛಂದಸಿ ವರ್ತತೇ ಇತಿ ವೃತ್ತಂ'' ಎಂಬೊಂದು ನಿಷ್ಪತ್ತಿಯನ್ನು ಹೇಳಿಬಿಟ್ಟು ತೃಪ್ತನಾಗುತ್ತಿರಲಿಲ್ಲವೆಂದು ನನ್ನ ಅಲ್ಪಮತಿಗೆ ತೋರುತ್ತದೆ. ಏಕೆಂದರೆ, ಆ ಸಂಜ್ಞೆಯ ನಿಜವಾದ ಅರ್ಥವನ್ನೂ, ತನ್ಮೂಲಕ ಆ ಶಬ್ದದ ನಿಷ್ಪತ್ತಿಯನ್ನೂ ''ಗುರುಲಘುಸ್ಥಿರಂ'' ಎಂಬ ಆ ಶ್ಲೋಕಭಾಗವೇ ಪ್ರಕಟಿಸುತ್ತದೆ. ಅದು ಹೇಗೆಂದರೆ–

ಯಾವುದೊಂದು ಹೆಸರಿನ ವೃತ್ತವರ್ಗದ (ಉದಾ: ಶಾರ್ದೂಲವಿಕ್ರೀಡಿತ) ಪ್ರತಿಯೊಂದು ಪದ್ಯದಲ್ಲಿಯೂ ಅಕ್ಷರಸಂಖ್ಯೆ ಸಮಾನವಾಗಿದ್ದು ಗುರುಲಘುಗಳು ಕ್ರಮತಪ್ಪದೆ ಸ್ವಸ್ಥಾನಗಲ್ಲಿರುತ್ತವೆ; ಹಾಗಿದ್ದರೆ ಮಾತ್ರ ಆ ಪದ್ಯವು ಆ ಹೆಸರನ್ನು ಪಡೆಯುತ್ತದೆ; ಅರ್ಥಾತ್ ಆ ಹೆಸರಿನ ಪದ್ಯಗಳೆಲ್ಲವೂ ಏಕಪ್ರಕಾರವಾದ ಒಂದು ಸ್ಥಿರರೂಪದಲ್ಲಿರುತ್ತವೆ. ಇದಕ್ಕೆ ಅಪವಾದವಿಲ್ಲವೇ ಇಲ್ಲ. ವೃತ್ತ ಎಂಬ ಪದದ ನಾನಾರ್ಥಗಳಲ್ಲಿ 'ದೃಢ' (=ಸ್ಥಿರ) ಎಂಬುದೂ ಒಂದು ಎಂಬುದನ್ನು ಸಂಸ್ಕೃತ ಶಬ್ದಕೋಶಗಳು ಹೇಳುತ್ತವೆ. (ಉದಾ: ಭಾನುಜಿ ದೀಕ್ಷಿತನು ಉದ್ಧರಿಸಿರುವ ಹೈಮಕೋಶದ ವಾಕ್ಯ: ''ವೃತ್ತಂ ವೃತ್ತೌ ದೃಢೇ ಮೃತೇ ಚರಿತ್ರೇ ವರ್ತುಲೇ...) ತಥ್ಯವು ಹೀಗಿರುವುದರಿಂದ, ''ಸ್ಥಿರರೂಪದ ಪದ್ಯ'' ಎಂಬುದೇ 'ವೃತ್ತ' ಎಂಬ ಸಂಜ್ಞೆಯ ಮೂಲಾರ್ಥವೆಂಬುದರಲ್ಲಿ ಸಂದೇಹವಿಲ್ಲ. ಏವಂಗುಣ ವಿಶಿಷ್ಟವಾದ 'ವೃತ್ತ'ಗಳ ಹಾಗೆ ಪ್ರತಿಯೊಂದು ಪದ್ಯವೂ ಸ್ವವರ್ಗದ ಇನ್ನೊಂದು ಪದ್ಯದ ಪಡಿಯಚ್ಚಾಗಿರದ, ''ಏಕದೇಶಸ್ಥಿರ'' ಎಂದರೆ ಪದ್ಯದ ಕೆಲವು ಅಂಶ ಮಾತ್ರ ಆ ವರ್ಗದ ಎಲ್ಲಾ ಪದ್ಯಗಳಲ್ಲಿ 'ಸ್ಥಿರ' (=ಏಕರೂಪ, ಸಮಾನ)ವಾಗಿದ್ದು, ಉಳಿದ ಅಂಶ ಅಸ್ಥಿರವಾಗಿರುವುದಾದರೆ ಅದು ''ಜಾತಿ'' ಎಂದು ಈ ಶ್ಲೋಕ ಹೇಳುತ್ತದೆ. ಇಲ್ಲಿ 'ಜಾತಿ' ಎಂಬ ಈ ಹೆಸರಿನ ಔಚಿತ್ಯವೇನೆಂಬುದನ್ನು ನೋಡೋಣ : ಸಾಧಾರಣವಾಗಿ ಛಂದಃಶಾಸ್ತ್ರಗ್ರಂಥಗಳಲ್ಲಿ ಮಾತ್ರಾಬಂಧಗಳಿಗೆ 'ಜಾತಿ' ಎಂಬ ಹೆಸರು ಕೊಡಲ್ಪಟ್ಟಿದೆ. ಆದರೆ 'ಜಾತಿ' ಎಂಬ ಶಬ್ದದಲ್ಲಿ 'ಮಾತ್ರಾಬಂಧ' ಎಂಬರ್ಥವನ್ನು ಕೊಡುವ ಶಕ್ತಿ ಇರುವಂತೆ ಕಾಣುವುದಿಲ್ಲ. ಈ ಕಾರಣದಿಂದ ಕೆಲವರು–'ವೃತ್ತ' ಎಂದರೆ (ಮೊದಲು) 'ಇದ್ದದ್ದು' ಎಂದೂ, 'ಜಾತಿ' ಎಂದರೆ (ಮತ್ತೆ) 'ಹುಟ್ಟಿದ್ದು' ಎಂದೂ ಅರ್ಥನಿರೂಪಣೆ ಮಾಡಿ,–ಸಂಸ್ಕೃತದಲ್ಲಿ ಮೊದಲು 'ಅಕ್ಷರಬಂಧ'ಗಳು ಮಾತ್ರ ಇದ್ದುದರಿಂದ ಅವುಗಳಿಗೆ 'ವೃತ್ತ'ಗಳೆಂದೂ, ಮಾತ್ರಾಬಂಧಗಳು ಮತ್ತೆ ಸಂಸ್ಕೃತ ಪ್ರಾಕೃತಗಳಲ್ಲಿ ಹುಟ್ಟಿ ಬಂದುದರಿಂದ ಅವುಗಳಿಗೆ 'ಜಾತಿ'ಗಳೆಂದೂ ಹೆಸರು ಬಂತು– ಇತ್ಯಾದಿ ಏನೇನೋ ಅನುಮಾನಿಸಿದ್ದಾರೆ. ಆದರೆ ಪೂರ್ವೋಕ್ತ ಶ್ಲೋಕದ ''ಏಕದೇಶಸ್ಥಿರಾ ಜಾತಿಃ'' ಎಂಬ ಭಾಗದ ಅರ್ಥವನ್ನು ಸರಿಯಾಗಿ ತಿಳಿದುಕೊಳ್ಳುವ ಪ್ರಯತ್ನಮಾಡಿದರೆ, ಒಂದು ಬಗೆಯ ಪದ್ಯವರ್ಗಕ್ಕೆ 'ಜಾತಿ' ಎಂಬ ಹೆಸರೇಕೆ ಬಂತೆಂಬುದರ ನಿಜವಾದ ಕಾರಣ ಗೊತ್ತಾಗುತ್ತದೆ. ಅದು ಹೇಗೆಂದರೆ: ಒಂದು ವಸ್ತುವಿನಲ್ಲಿ ಸ್ವಾಭಾವಿಕವಾಗಿ ಇರುವ ಗುಣಧರ್ಮಗಳು ಅನೇಕ ವಸ್ತುಗಳಲ್ಲಿ-ರುವವಾದರೆ, ಆ ವಸ್ತುಗಳೆಲ್ಲ ಒಂದು 'ಜಾತಿ' ಎನಿಸಿಕೊಳ್ಳುತ್ತವೆ; (ಉದಾ: ಮನುಷ್ಯಜಾತಿ, ಮೃಗಜಾತಿ, ಫಲಜಾತಿ, ರತ್ನ ಜಾತಿ ಇತ್ಯಾದಿ). ಒಂದು ಜಾತಿಗೆ ಒಳಪಡುವ ಒಂದು ವಸ್ತು 'ವ್ಯಕ್ತಿ' ಎನಿಸಿಕೊಳ್ಳುತ್ತದೆ. ಒಂದೇ ಜಾತಿಗೆ ಸೇರಿರುವವೆಂಬುದರಿಂದ ಆ 'ಜಾತಿ'ಯ 'ವ್ಯಕ್ತಿ'ಗಳೆಲ್ಲ ಸಂಪೂರ್ಣವಾಗಿ ಒಂದಕ್ಕೊಂದು ಸಮಾನವಾಗಿರುವುದಿಲ್ಲ. ಆ ಪ್ರತಿಯೊಂದು 'ವ್ಯಕ್ತಿ'ಗೂ ತನ್ನ 'ವಿಶೇಷತೆ' (ವ್ಯತ್ಯಾಸ, ವಿಶಿಷ್ಟತೆ) ಇದ್ದೇ ಇರುತ್ತದೆ. ಈ ತತ್ತ್ವವನ್ನು ಪ್ರಸ್ತುತಕ್ಕೆ ಅನ್ವಯಿಸಿದಾಗ, ಮಾತ್ರಾಬಂಧಗಳಿಗೆ 'ಜಾತಿ' ಎಂಬ ಹೆಸರು ಏಕೆ ರೂಢವಾಯಿತೆಂಬುದು ತಿಳಿಯುತ್ತದೆ. ಯಾವುದೊಂದು ಮಾತ್ರಾಬಂಧದಲ್ಲಿಯೂ ತನ್ನ 'ಜಾತಿ'ಯ ಸಾಮಾನ್ಯ ಲಕ್ಷಣಗಳೊಡನೆ ವೈಯಕ್ತಿಕ ವಿಶೇಷತೆಯೂ ಇರುತ್ತದೆ. ಉದಾ: ಕಂದಪದ್ಯ. ಪ್ರತಿಯೊಂದು ಕಂದಪದ್ಯದಲ್ಲಿಯೂ ಮಾತ್ರಾಸಂಖ್ಯೆ, ಗಣಸಂಖ್ಯೆ, ಪಾದಪ್ರಮಾಣ ಗಳು ಸಮಾನವಾಗಿರುತ್ತವೆ; ಇದು 'ಕಂದಜಾತಿ'ಯ ಸಾಮಾನ್ಯ ಧರ್ಮ. ಆದರೆ ಗಣಾಂತರ್ಗತವಾದ ಛಂದೋರೂಪವು (=ಗುರುಲಘುವಿನ್ಯಾಸ) ಎಲ್ಲಾ ಕಂದಪದ್ಯಗಳಲ್ಲಿ ಒಂದೇ ವಿಧವಾಗಿರುವುದಿಲ್ಲ; ಇರಬೇಕಾಗಿಲ್ಲ. ಇದು 'ಕಂದವ್ಯಕ್ತಿ'ಯ ವಿಶೇಷಧರ್ಮ. ಹೀಗಿರುವುದರಿಂದ 'ಕಂದ' ಎಂಬುದು ಒಂದು 'ವೃತ್ತ' (=ಸ್ಥಿರರೂಪದ ಪದ್ಯ)ವಾಗಿರದೆ, ಒಂದು 'ಜಾತಿ' ಎನಿಸಿಕೊಂಡಿದೆ. ಆ ಛಂದಃಸ್ವರೂಪವು ಅಂಶತಃ ಸ್ಥಿರ ಎಂದರೆ 'ಏಕದೇಶಸ್ಥಿರ'ವಾಗಿದ್ದು, ಅಂಶತಃ ಅಸ್ಥಿರ ಎಂದರೆ ಐಚ್ಛಿಕ ವಾಗಿರುತ್ತದೆ. ಮಾತ್ರಾಬಂಧಗಳೆಲ್ಲವೂ ನಿರಪವಾದವಾಗಿ ಹೀಗೆ 'ಏಕದೇಶಸ್ಥಿರ'ವಾಗಿರುವುದರಿಂದ, 'ಮಾತ್ರಾಬಂಧ' ಎಂದರೂ 'ಜಾತಿ' ಎಂದರೂ ಒಂದೇ ಅರ್ಥ ಎಂಬ ಭಾವನೆ ಹುಟ್ಟಿ ಬೆಳೆದು ರೂಢವಾಗಿಹೋದುದಾಗಿದೆ. ವಸ್ತುತಃ 'ಜಾತಿ' ಎಂಬ ಸಂಜ್ಞೆಯ ಅರ್ಥ ಮಾತ್ರಾಬಂಧವೆಂದೂ ಅಲ್ಲ; ಆ ಸಂಜ್ಞೆಯ ವ್ಯಾಪ್ತಿ ಛಂದಃಶಾಸ್ತ್ರದಲ್ಲಿ ಮಾತ್ರಾಬಂಧಕ್ಕೆ ಸೀಮಿತವಾಗಿಯೂ ಇಲ್ಲ. ಮಾತ್ರಾಬಂಧಗಳಲ್ಲದ ಅಕ್ಕರ, ತ್ರಿಪದಿ ಮೊದಲಾದುವುಗಳಿಗೂ 'ಜಾತಿ' (ಕರ್ಣಾಟಕವಿಷಯಜಾತಿ)

ಎಂದೇ ಹೆಸರು ಕೊಡಲಾಗಿದೆ. ಅಲ್ಲದೆ, ಅಕ್ಷರಚ್ಛಂದಗಳೇ ಆಗಿರುವ, ಇಂದ್ರವಜ್ರ ಉಪೇಂದ್ರವಜ್ರಗಳ, ಅಥವಾ ಇಂದ್ರವಂಶ ವಂಶಸ್ಥಗಳ ಸಂಸೃಷ್ಟಿಯಿಂದಾದ ಪದ್ಯಗಳಿಗೆ ಸಂಸ್ಕೃತದಲ್ಲಿ ''ಉಪಜಾತಿ'' ಎಂಬ ಹೆಸರಿರುವುದನ್ನು (ಎರಡನೆಯದಕ್ಕೆ ಕರಂಬಜಾತಿ ಎಂಬ ಹೆಸರೂ ಇದೆ). ಪರಿಭಾವಿಸಿದರೆ, ''ಏಕದೇಶಸ್ಥಿರಾ ಜಾತಿಃ'' ಎಂಬುದೇ 'ಜಾತಿ' ಎಂಬ ಪದ್ಯವರ್ಗದ ನಿಜವಾದ ಲಕ್ಷಣವ್ಯಾಖ್ಯೆ ಎಂದೂ, ಮಾತ್ರಾಬಂಧವೆಂದಲ್ಲವೆಂದೂ ಸ್ಫುಟವಾಗದಿರದು. ಈ ದೃಷ್ಟಿಯಿಂದ ನೋಡಿದಾಗ, ಸಂಸ್ಕೃತವಾಙ್ಮಯದ ಅಧಿಕಭಾಗವನ್ನು ಆಕ್ರಮಿಸಿ ಮೆರೆಯುತ್ತಿರುವ ಅನುಷ್ಟುಪ್ ಶ್ಲೋಕವನ್ನು 'ಜಾತಿ' ಎಂಬ ಛಂದೋವರ್ಗಕ್ಕೆ ಸೇರಿದ ಪದ್ಯವೆಂದೇ ಪರಿಗಣಿಸಬೇಕಾಗುತ್ತದೆ. ಏಕೆಂದರೆ ಅದೂ 'ಏಕದೇಶಸ್ಥಿರ'ವಾದ ಛಂದೋಬಂಧವಾಗಿದೆ. ಆದರೆ ಯಾವ ಛಂದೋಗ್ರಂಥದಲ್ಲಿಯೂ ಅದನ್ನು 'ಜಾತಿ'ವರ್ಗದ ಬಂಧವೆಂದು ಹೇಳಿದ್ದನ್ನು ನಾನು ಕಂಡಿಲ್ಲ. 'ಜಾತಿಚ್ಛಂದ'ವೆಂದರೆ 'ಮಾತ್ರಾಚ್ಛಂದ'ವೆಂಬ ಭಾವನೆ ರೂಢಮೂಲಿವಾಗಿ ಹೋಗಿದ್ದುದೇ ಇದಕ್ಕೆ ಕಾರಣವೆಂಬುದರಲ್ಲಿ ನನಗೆ ಸಂದೇಹವೇನೂ ತೋರುವುದಿಲ್ಲ. ಏಕೆಂದರೆ, ಒಂದಾನೊಂದು ಕಾಲದಲ್ಲಿ ಇದು 'ಜಾತಿ' ವರ್ಗದ ಪದ್ಯವೆಂದೇ ತಿಳಿಯಲ್ಪಡುತ್ತಿತ್ತೆಂಬುದಕ್ಕೆ ಸಾಕ್ಷ್ಯಗಳು ದೊರಕುತ್ತವೆ: ಒಂದು ಅನುಷ್ಟುಪ್ ಶ್ಲೋಕಕ್ಕೆ ತದರ್ಧವನ್ನು ಸೇರಿಸಿದಾಗ ಅದು 'ಜಾತಿಗಾಥಾ' ಎನಿಸಿಕೊಳ್ಳುತ್ತದೆಂದು; ಜಯಕೀರ್ತಿ ಸೋದಾಹರಣವಾಗಿ ನಿರೂಪಿಸಿದ್ದಾನೆ. ಮತ್ತು ಅನುಷ್ಟುಪ್ ಶ್ಲೋಕದ್ದೇ ಆದ ಒಂದು ವಿಕೃತಿಯ ಸ್ವರೂಪನಿರೂಪಣೆ ಮಾಡಿ, ಅದರ ಹೆಸರು 'ವಿಜಾತಿಗಾಥಾ' ಎಂದೂ ತಿಳಿಸಿದ್ದಾನೆ. (ಛಂದೋನುಶಾಸನ ೪-೩೦, ೩೧) ('ಜಾತಿಗಾಥೆ'ಯ ಸ್ವರೂಪನಿರೂಪಣೆ ನಾಗವರ್ಮನ ಛಂದೋಂಬುಧಿಯಲ್ಲಿಯೂ ಇದೆ). ಗಾಥಾ=ಗಾಥೆ ಎಂದರೆ ಪದ್ಯ ಅಥವಾ ಹಾಡು. ಆದುದರಿಂದ 'ಜಾತಿಗಾಥಾ' ಎಂದರೆ 'ಜಾತಿರೂಪದ ಪದ್ಯ' ಅಥವಾ 'ಜಾತಿವರ್ಗದ ಪದ್ಯ' ಎಂದರ್ಥವಾಗುತ್ತದೆ. ಜಾತಿಗಾಥೆಗೂ ಅನುಷ್ಟುಪ್ ಶ್ಲೋಕಕ್ಕೂ ಇರುವ ವ್ಯತ್ಯಾಸವು ಪಾದಸಂಖ್ಯೆಯಲ್ಲಿ ಮಾತ್ರ; ಛಂದೋರೂಪ ಅಭಿನ್ನ. ಜಾತಿಗಾಥೆಯೆಂದರೆ ಒಂದೂವರೆ ಶ್ಲೋಕ; ಬೇರೇನೂ ಅಲ್ಲ. 'ಒಂದೂವರೆ ಶ್ಲೋಕ'ವು 'ಜಾತಿ' ಎನಿಸುವುದಾದರೆ ಒಂಟಿ ಶ್ಲೋಕವೂ 'ಜಾತಿ'ಯೇ ಸೈ. ಆದುದರಿಂದ ಜಾತಿಗಾಥಾ ಎಂಬ ಹೆಸರು ಹುಟ್ಟಿದ ಕಾಲದಲ್ಲಿ, 'ಜಾತಿ' ಎಂದರೆ ಮಾತ್ರಾಬಂಧವೆಂಬ ಸಂಕುಚಿತವಾದ ಅರ್ಥವಿರಲಿಲ್ಲವೆಂದೂ, 'ಜಾತಿ' ಎಂದರೆ 'ಏಕದೇಶಸ್ಥಿರವಾದ ಪದ್ಯ' ಎಂಬ ವ್ಯಾಪಕವಾದ ಅರ್ಥವೇ ಮಾನ್ಯವಾಗಿತ್ತೆಂದೂ, ತದನುಸಾರವಾಗಿ ಅನುಷ್ಟುಪ್ ಶ್ಲೋಕವೂ ಅದರ ವಿಕೃತಿಗಳೂ ಜಾತಿಗಳೆಂದೇ ತಿಳಿಯಲ್ಪಟ್ಟಿದ್ದುವೆಂದೂ ನ್ಯಾಯವಾಗಿ ಅನುಮಾನಿಸಬೇಕಾಗುತ್ತದೆ. [ಜಾತಿ ಎಂದರೆ ಮಾತ್ರಾಬಂಧವೆಂಬ ಅರ್ಥವನ್ನೇ ಅವಲಂಬಿಸಿದ್ದ ಛಂದೋಗ್ರಂಥಕಾರರಿಗೆ,–ಗುರುಲಘುಸ್ಥಿರವಾದ ವೃತ್ತವೂ ಅಲ್ಲದ, ಮಾತ್ರಾಬಂಧವೂ ಅಲ್ಲದ ಅನುಷ್ಟುಪ್ ಶ್ಲೋಕವನ್ನು ತಮ್ಮ ಗ್ರಂಥಗಳ ಯಾವ ಪ್ರಕರಣದಲ್ಲಿ ಸೇರಿಸುವುದೆಂಬುದು ಕಠಿನವಾದೊಂದು ಸಮಸ್ಯೆಯಾಗಿತ್ತು: ಜಯಕೀರ್ತಿ ಅದನ್ನು ವಿಷಮವೃತ್ತಾಧಿಕಾರದಲ್ಲಿ ಸೇರಿಸಿದ್ದಾನೆ. (ಹಾಗೆ ಮಾಡಿದುದರ ಔಚಿತ್ಯದ ಸಮರ್ಥನೆಗೆಂಬಂತೆ, ವಿಷಮವೃತ್ತಗಳೊಳಗೆ 'ಸಮಾನಾಕ್ಷರಸಂಖ್ಯೆಯ ಪಾದಗಳ ವಿಷಮವೃತ್ತ'ವೆಂಬೊಂದು ವರ್ಗವನ್ನು ಕಲ್ಪಿಸಿದ್ದಾನೆ. ೪-೧) ಹೇಮಚಂದ್ರನು ಅದನ್ನು ಅರ್ಧಸಮವೃತ್ತಗಳ ಮತ್ತು ವಿಷಮವೃತ್ತಗಳ ಎಡೆಯಲ್ಲಿ ತುರುಕಿಸಿದ್ದಾನೆ. ಕೇದಾರಭಟ್ಟನು ಅದನ್ನು 'ಮಾತ್ರಾವೃತ್ತಾಧಿಕಾರ'ದಲ್ಲಿ ಹಾಕಿದ್ದಾನೆ. ಅದು ಮಾತ್ರಾಬಂಧವಲ್ಲವೆಂಬ ಅರಿವು ಭಟ್ಟನಿಗೆ ಇದ್ದಿಲ್ಲವೆಂದು ಹೇಳಿದರೆ ಅದು ಮೂರ್ಖತನವಾದೀತು. ಹಾಗಾದರೆ ಅವನು ಅದನ್ನು ಅಲ್ಲಿ ಏಕೆ ಸೇರಿಸಿರಬಹುದು? ಮಾತ್ರಾಬಂಧಗಳಂತೆ ಅನುಷ್ಟುಪ್ ಶ್ಲೋಕವೂ 'ಜಾತಿ' ಎಂಬ ವರ್ಗಕ್ಕೆ ಸೇರಿದ ಪದ್ಯವೆಂಬುದರಿಂದಲೇ ಅವನು ಹಾಗೆ ಮಾಡಿದ್ದಿರಬೇಕು. ಅವನು ತನ್ನ 'ವೃತ್ತರತ್ನಾಕರ'ದ ದ್ವಿತೀಯಾಧ್ಯಾಯಕ್ಕೆ ''ಮಾತ್ರಾವೃತ್ತಾಧಿಕಾರ'' ಎಂದು ಹೆಸರಿಡದೆ ''ಜಾತ್ಯಧಿಕಾರ'' ಎಂದು ಹೆಸರಿಟ್ಟಿದ್ದರೆ, ಅನುಷ್ಟುಪ್ ಶ್ಲೋಕವನ್ನು ಆ ಅಧ್ಯಾಯದಲ್ಲಿ ಸೇರಿಸಿದುದರ ಔಚಿತ್ಯವು ಪ್ರಕಟವಾಗುತ್ತಿತ್ತು; ಮತ್ತು ಅವನಿಗೆ, ಶ್ರೀಮಾನ್ ವೇಲಣಕರರಂತಹ ಆಧುನಿಕ ಛಂದೋದಿಗ್ಗಜಗಳ ನಿಂದೆಯೂ ಪ್ರಾಯಶಃ (*Jayadaman*--General Introduction II. p. 39) ತಪ್ಪಿಹೋಗುವ ಸಂಭಾವ್ಯತೆಯೂ ಇರುತ್ತಿತ್ತೋ ಏನೋ!] ಅನುಷ್ಟುಪ್ ಶ್ಲೋಕದ ನಾನಾಭೇದಗಳನ್ನು

ನೆರವು ಬೇಕಾಗುವುದಿಲ್ಲ. ವಾಸ್ತವಿಕವಾಗಿ ನೋಡಿದರೆ, 'ಲಯ' ಎಂಬುದು ಛಂದೋನು ಭವಕಾಲದಲ್ಲಿ–ಎಂದರೆ ಉಕ್ತಲಕ್ಷಣಲಕ್ಷಿತವಾದ ಪದ್ಯಗಳ ಶ್ರವಣಕಾಲದಲ್ಲಿ–ಗೋಚರಿಸುವ, ಅರ್ಥಾತ್ ಉಕ್ತಲಕ್ಷಣದ ಪರಿಣಾಮವಾಗಿ ರೂಪುಗೊಂಡ ಛಂದೋಗತಿಯ, ಒಂದು ಗುಣ. ಅದು ವೃತ್ತ ಮತ್ತು ಜಾತಿ ಎಂಬ ದ್ವಿವಿಧ ಪದ್ಯಸ್ವರೂಪಗಳನ್ನು ತಿಳಿದುಕೊಳ್ಳುವುದಕ್ಕೆ ಅಥವಾ ತಿಳಿಸುವುದಕ್ಕೆ ಅವಶ್ಯವಾದ ಒಂದು ಸಾಧನವಲ್ಲ. ಆದುದರಿಂದ 'ಲಯ' ಎಂಬುದು 'ಗತಿ' (=ಧಾಟಿ) ಎಂಬುದು ಹೇಗೋ ಹಾಗೆ, ಛಂದೋಗುಣಮೀಮಾಂಸೆಯಲ್ಲಿ ಉಪಯುಕ್ತವಾಗುವ ಸಂಜ್ಞೆ ಹೊರತು, ವೃತ್ತಜಾತಿಗಳ ಲಕ್ಷಣವನ್ನು ತಿಳಿಸುವುದಕ್ಕೆ ಅವಶ್ಯವಾದ ಸಂಜ್ಞೆಯೇನೂ ಅಲ್ಲ. ನಾನು ಮೇಲೆ ಉದಾಹರಿಸಿದ ನಾಲ್ಕೂ ಛಂದೋಬಂಧಗಳ ಲಕ್ಷಣನಿರೂಪಣೆಯ ಮಾತುಗಳಿಂದ ಲಯದ ಪ್ರಸ್ತಾವವನ್ನು ಕಳೆದುಹಾಕಿದರೂ, ಆ ಬಂಧಗಳ ಪೂರ್ಣ ಸ್ವರೂಪವು ತಿಳಿದುಬರುವುದಕ್ಕೆ ಯಾವ ಅಡ್ಡಿಯೂ ಇಲ್ಲ. ಈ ಕಾರಣದಿಂದಲೇ ನಮ್ಮ ಛಂದಃಶಾಸ್ತ್ರಕಾರರು ಗುರು, ಲಘು, ಗಣ, ಯತಿ ಇತ್ಯಾದಿಗಳಿಗೆ ಮಾಡಿದ ಹಾಗೆ, ತಮ್ಮ ಗ್ರಂಥಗಳಲ್ಲಿ ಲಯಕ್ಕೆ ಲಕ್ಷಣವ್ಯಾಖ್ಯೆ ಮಾಡಲಿಲ್ಲ.[೨] 'ಲಯ' ಎಂಬುದು

---

ಛಂದೋಗ್ರಂಥಗಳಲ್ಲಿ ಕಾಣುವವಾದರೂ, ಸಂಸ್ಕೃತಗ್ರಂಥರಾಶಿಯನ್ನು ತುಂಬಿರುವುದು (ಅಷ್ಟೊಂದು ಕಟ್ಟುನಿಟ್ಟಾದ ನಿಯಮವಿಲ್ಲದ) ಅದರ ಒಂದೇ ರೂಪ ಎಂದರೆ ತಪ್ಪಾಗಲಾರದು. ಅದರ ಲಕ್ಷಣವನ್ನು ಸ್ಥೂಲವಾಗಿ ಹೀಗೆ ಹೇಳಬಹುದು: ಅದಕ್ಕೆ ನಾಲ್ಕು ಪಾದಗಳು ; ಪಾದಕ್ಕೆ ಎಂಟು ಅಕ್ಷರಗಳು. ಸಮ (=ಯುಗ್ಮಕ, even) ಪಾದಗಳ ಮತ್ತು ವಿಷಮ (=ಓಜ, odd) ಪಾದಗಳ ಛಂದೋರೂಪ ಒಂದೇ ಅಲ್ಲ. ಸಮ (=ಯುಗ್ಮಕ) ಪಾದಗಳ ಉತ್ತರಾರ್ಧವು ನಿಯತವಾಗಿ ಲಗಂ ಲಗಂ ಎಂದಿರುತ್ತದೆ. ವಿಷಮ (=ಓಜ) ಪಾದಗಳ ಉತ್ತರಾರ್ಧದಲ್ಲಿ 'ಲಗಂ ಲಗಂ' ಇರುವುದಿಲ್ಲ–ಇಷ್ಟು ಭಾಗ ಮಾತ್ರ ಶ್ಲೋಕ ಜಾತಿಯಲ್ಲಿ ಸ್ಥಿರ; ಉಳಿದುದು ಅಸ್ಥಿರ. ಹೀಗೆ ಅದಕ್ಕೆ ''ಏಕದೇಶಸ್ಥಿರ'' ಎಂಬ ಲಕ್ಷಣವು ಸರಿಯಾಗಿ ಅನ್ವಯಿಸುವುದರಿಂದ ಅದನ್ನು ಜಾತಿವರ್ಗದಲ್ಲಿಯೇ ಸೇರಿಸುವುದು ಯುಕ್ತ. ಯಾವುದೊಂದು ಛಂದೋಬಂಧವು 'ಅಕ್ಷರಚ್ಛಂದ'ವೆಂಬ ಒಂದೇ ಕಾರಣದಿಂದ ವೃತ್ತವರ್ಗಕ್ಕೆ ಸೇರುವುದಿಲ್ಲ. ವೈದಿಕ ಬಂಧಗಳೆಲ್ಲವೂ ಅಕ್ಷರಚ್ಛಂದಗಳೇ ಆಗಿದ್ದರೂ ಅವು 'ವೃತ್ತ'ಗಳಲ್ಲ; ಅವುಗಳನ್ನು ವೃತ್ತಗಳೆಂದು ಯಾರೂ ಹೇಳಿಯೂ ಇಲ್ಲ. 'ಸಮವೃತ್ತ'–ಎಂಬುದು, ನಾಲ್ಕು ಪಾದಗಳೂ ಅಕ್ಷರಸಂಖ್ಯೆಯಲ್ಲಿ ಸಮಾನವಾಗಿರುವ 'ವೃತ್ತ';'ಅರ್ಧಸಮವೃತ್ತ'–ಎಂಬುದು, ಎಲ್ಲಾ ಪಾದಗಳ ಅಕ್ಷರಸಂಖ್ಯೆ ಸಮಾನವಾಗಿರದೆ, ಪೂರ್ವಾರ್ಧದ ಮತ್ತು ಉತ್ತರಾರ್ಧದ ಅಕ್ಷರಸಂಖ್ಯೆಗಳು ಸಮಾನವಾಗಿರುವ 'ವೃತ್ತ'. 'ವಿಷಮವೃತ್ತ'–ಎಂಬುದು, ಪೂರ್ವಾರ್ಧದ ಮತ್ತು ಉತ್ತರಾರ್ಧದ ಅಕ್ಷರಸಂಖ್ಯೆಗಳಲ್ಲಿಯೂ ಸಮಾನತೆ ಇಲ್ಲದಿರುವ 'ವೃತ್ತ'–ಈ ಮೂರು ವಿಧದ 'ವೃತ್ತ'ಗಳಲ್ಲಿಯೂ ಗುರುಲಘುಸ್ಥಿರತೆ ಅಪರಿಹಾರ್ಯ. ಆದುದರಿಂದ (ಕೆಲವು) ಛಂದೋಗ್ರಂಥಗಳಲ್ಲಿ –'ಶ್ಲೋಕ', ಶ್ಲೋಕದ ವಿಸ್ತರಣವಾದ 'ಪದಚತುರೂರ್ಧ್ವ'–ಇಂಥವುಗಳನ್ನು ವಿಷಮವೃತ್ತವರ್ಗದಲ್ಲಿ ಸೇರಿಸಿದ್ದು ಸರಿಯಲ್ಲ. ವಸ್ತುತಃ ಅವು ''ವೃತ್ತ''ಗಳಲ್ಲ. 'ಶ್ಲೋಕ'ವು 'ಏಕದೇಶಸ್ಥಿರ' ವಾಗಿರುವುದರಿಂದ, ಅದು 'ಜಾತಿ'ಬಂಧವೇ ಸರಿ. ಆದರೆ ಅದು ಕಂದ, ಮಾತ್ರಾಸಮಕ, ಷಟ್ಪದಿ ಇತ್ಯಾದಿಗಳಂತೆ ''ಮಾತ್ರಾಜಾತಿ'' ಅಲ್ಲ; ಅಕ್ಕರ, ತ್ರಿಪದಿ ಇತ್ಯಾದಿಗಳಂತೆ, 'ತ್ರಿಮೂರ್ತಿಜಾತಿ (=ಅಂಶಜಾತಿ)ಯೂ ಅಲ್ಲ. ಅದು ಜಾತಿಗಾಥೆ, ವಿಜಾತಿಗಾಥೆ, ಉಪಜಾತಿ, ಕರಂಬಜಾತಿ ಇತ್ಯಾದಿಗಳಂತೆ ''ಅಕ್ಷರಜಾತಿ.''

೨. ನಮ್ಮ ಪುರಾತನ ಛಂದಃಶಾಸ್ತ್ರಪ್ರಕ್ರಿಯೆಯ ಸ್ವಭಾವವನ್ನು ಸೂಕ್ಷ್ಮವಾಗಿ ತಿಳಿಯುವ ಪ್ರಯತ್ನ ಮಾಡಿದರೆ–ಛಂದೋಗತಿಯ ಭೇದೋಪಭೇದಗಳನ್ನು ಪ್ರಕಾಶಪಡಿಸುವುದು ಅದರ ಮುಖ್ಯೋದ್ದೇಶ ವಾಗಿರದೆ, ಪದ್ಯದ ಹಾಗೂ ಪದ್ಯದ ಘಟಕಗಳ ವಿವಿಧ ರೂಪಗಳನ್ನು ಮತ್ತು ಅವುಗಳ 'ಮಾನ' (=ಅಳತೆ)ಗಳನ್ನು ತಿಳಿಸುವುದೇ (ಮುಖ್ಯೋದ್ದೇಶ) ಆಗಿತ್ತೆಂಬುದು ತಿಳಿದುಬಾರದಿರದು. ಆ ಘಟಕಗಳಿಗೆ, ಎಂದರೆ ಪಾದ ಹಾಗೂ ಪಾದಾವಯವಗಳಿಗೆ (ವೃತ್ತ ಮತ್ತು ''ಅಕ್ಷರ ಜಾತಿ''ಗಳಂತೆ)

ಸಂಗೀತಕ್ಕೂ ನೃತ್ಯಕ್ಕೂ ಬೇಕೇಬೇಕಾಗಿರುವ ಒಂದು ಸಂಜ್ಞೆ. ಆದುದರಿಂದ ಶಾಸ್ತ್ರಕಾರರು ಅದರ ಲಕ್ಷಣವ್ಯಾಖ್ಯೆಯನ್ನು ನಾಟ್ಯಶಾಸ್ತ್ರಸಂಗೀತಶಾಸ್ತ್ರಗಳಲ್ಲಿ ಮಾಡಿದ್ದಾಗಿದೆ. ನಮ್ಮ ಛಂದಃಶಾಸ್ತ್ರಗಳಲ್ಲಿ ಛಂದಃಸೌಂದರ್ಯತತ್ತ್ವಗಳ ವಿವೇಚನೆ ಕಂಡುಬರುವುದಿಲ್ಲ ವೆಂಬುದರಿಂದ, ಛಂದಃಸೌಂದರ್ಯವಿಷಯದಲ್ಲಿ ಆ ಶಾಸ್ತ್ರಕಾರರು ಕುರುಡರಾಗಿದ್ದರೆಂದು ಭಾವಿಸಿದರೆ ಅದು ದೊಡ್ಡ ತಪ್ಪು. ಛಂದಃಸೌಂದರ್ಯದ ಎಂದರೆ ಪದ್ಯಗಳ ಗತಿಸೌಂದರ್ಯದ ನಾನಾ ಪ್ರಕಾರಗಳನ್ನು ಅವರು ಎಷ್ಟು ಸೂಕ್ಷ್ಮವಾಗಿ ಪರಿಭಾವಿಸಿದ್ದರೆಂಬು ದಕ್ಕೆ, ಕೆಲಕೆಲವು ವೃತ್ತಗಳಿಗೆ ಅವರು ಕೊಟ್ಟ ಹೆಸರುಗಳೇ ಸಾಕ್ಷಿ. (ಉದಾ: ಮಂದಾಕ್ರಾಂತಾ, ಶಾರ್ದೂಲ ವಿಕ್ರೀಡಿತ, ಭುಜಂಗಪ್ರಯಾತ, ಜಲೋದ್ಧತಗತಿ, ತರಂಗಮಾಲಿಕಾ ಇತ್ಯಾದಿ ಇತ್ಯಾದಿ) ಆದರೆ ಗತಿಸೌಂದರ್ಯವಿವೇಚನೆ ತಮ್ಮ ಶಾಸ್ತ್ರನಿಬಂಧಗಳ ವ್ಯಾಪ್ತಿಗೆ ಒಳಪಟ್ಟುದಲ್ಲವೆಂಬುದು ಅವರ ಅಭಿಮತವಾಗಿತ್ತು, ಅಷ್ಟೆ.

ಹಾಗಾದರೆ ಛಂದೋಗ್ರಂಥಗಳಲ್ಲಿ ಕ್ವಚಿತ್ ಲಯಶಬ್ದಪ್ರಯೋಗವೇಕೆ ಬರ ಬೇಕಾಯಿತು?–ಎಂದು ಯಾರೂ ಕೇಳಬಹುದಾಗಿದೆ. ಅದು ಬಂದುದು ಹೀಗೆ: ಯಾವ ಛಂದೋಗ್ರಂಥಗಳಲ್ಲಿ ಪದ್ಯಸ್ವರೂಪನಿರೂಪಣೆಯು ಲಕ್ಷ್ಯಲಕ್ಷಣಸಮವಾಯರೂಪ

---

ಅಕ್ಷರಸಂಖ್ಯಾಮಿತಿಯಾಗಲಿ, (ಕಂದ ಇತ್ಯಾದಿ ''ಮಾತ್ರಾಜಾತಿ''ಗಳಂತೆ) ಯಥಾಕ್ಷರವಾದ ಮಾತ್ರಾ ಸಂಖ್ಯೆಯ ಮಿತಿಯಾಗಲಿ, ಕೊನೆಯ ಪಕ್ಷ (ಸಾಂಗತ್ಯ, ಅಕ್ಕರ, ತ್ರಿಪದಿ ಇತ್ಯಾದಿಗಳಂತೆ) ಅಕ್ಷರಸಂಖ್ಯೆಗೆ ಕನಿಷ್ಠ ಗರಿಷ್ಠ ಮಿತಿಯಾಗಲಿ ಇಲ್ಲದೆ–ಅಕ್ಷರಗಳನ್ನು ಅನಿಯತವಾಗಿ ಉದ್ದಕ್ಕೆಳೆದೋ, ಗಿಡ್ಡಮಾಡಿಯೋ, ತೇಲಿಸಿಯೋ ಸಮತೆಯನ್ನು ಸಾಧಿಸಿ ಲಯಾನ್ವಿತವಾಗಿ ಮಾಡಿಕೊಳ್ಳಲ್ಪಡುವ ('ಪದ' ಅಥವಾ 'ಹಾಡು' ಎಂದು ಸಾಧಾರಣವಾಗಿ ಕರೆಯಲ್ಪಡುವ) ನಾನಾಪರಿಮಾಣದ ರಚನೆಗಳ ಲಕ್ಷಣವನ್ನು ಛಂದೋದ್ರವ್ಯಾವಲಂಬಿಯಾದ (=ಅಕ್ಷರ ಪರಿಮಾಣಾವಲಂಬಿಯಾದ) ವಿಧಾನದಿಂದ ನಿರೂಪಿಸುವುದು ಅಶಕ್ಯ. ಅವುಗಳ ಲಕ್ಷಣಗಳನ್ನು ಗೀತಗತಿ ಸ್ವರೂಪನಿರೂಪಣ ಪ್ರಕ್ರಿಯೆಯಿಂದ (ತಾಳಮಾನ, ಲಯಭೇದ, ''ವರಣ'', ಗ್ರಹಭೇದ ಇತ್ಯಾದಿಗಳಿಂದ) ಮಾತ್ರ ತಿಳಿಸುವುದು ಶಕ್ಯ. ('ಪದ' ಎಂದು ಕರೆಯಲ್ಪಡುವ ಗೀತಬಂದಗಳಲ್ಲಿ–ಪಾದದ್ವಂದ್ವಗಳ ನಡುವೆ ಇರತಕ್ಕ ವಿರಾಮ ಕಾಲವನ್ನು ಭರ್ತಿಮಾಡುವ ಸಾಹಿತ್ಯಾಂಶಕ್ಕೆ, ಯಕ್ಷಗಾನ ಪರಿಭಾಷೆಯಲ್ಲಿ 'ವರಣ'ವೆನ್ನುತ್ತಾರೆ. ಈ ಶಬ್ದದ ಅರ್ಥವು 'ಸೇತುವೆ' bridge ಎಂದಾಗಿರುವುದರಿಂದ ಇದೊಂದು ಅನ್ವರ್ಥಸಂಜ್ಞೆ. 'ವರಣ'ದ ಸ್ವರೂಪವೇನೆಂಬುದನ್ನು ''ಕನ್ನಡಗೀತಿಕೆಯ ಲಕ್ಷಣ ಮತ್ತು ಧಾಟಿ'' ಎಂಬ ನನ್ನ ಬೇರೊಂದು ನಿಬಂಧದಲ್ಲಿ ನೋಡಬಹುದಾಗಿದೆ.) ನಮ್ಮ ಛಂದೋಗ್ರಂಥಗಳ ಪ್ರಕ್ರಿಯೆ ಹಾಗೆ ಇರದಿದ್ದುದರಿಂದಲೂ ಅಂತಹ 'ಪದ'ಗಳು 'ಪದ್ಯ'ಗಳಂತೆ 'ಪಾಠ್ಯ' 'ಗೇಯ' ಎಂಬ ದ್ವಿವಿಧ ಪ್ರಯೋಗಗಳಿಗೆ ಉಪಯುಕ್ತವಾಗಿರದೆ, 'ಗೇಯ'ರೂಪದಲ್ಲಿ ಮಾತ್ರ ಮನೋಜ್ಞವಾಗುವಂಥವುಗಳಾ ದುದರಿಂದಲೂ ಛಂದೋಗ್ರಂಥಗಳಲ್ಲಿ ಅವಕ್ಕೆ ಅವಕಾಶ ದೊರೆಯದೆ, ಅವು ಸಂಗೀತಕ್ಕೆ ಮೀಸಲೆನಿಸಿಕೊಂಡವು. ಪುರಾತನ ಛಂದೋಗ್ರಂಥಗಳಲ್ಲಿ 'ತಾಳ'ದ ಪ್ರಸ್ತಾವವಿಲ್ಲದಿರುವುದಕ್ಕೆ (ಈ ಮಾತಿಗೆ ಕನ್ನಡ ಛಂದೋಗ್ರಂಥಗಳಲ್ಲಿ ಒಂದೆರಡು ಅಪವಾದಗಳಿವೆ: ಛಂದೋಂಬುಧಿಯಲ್ಲಿ ಕಾಣುವ 'ರಗಳೆ'ಯ ಲಕ್ಷಣನಿರೂಪಣೆ ಅವುಗಳಲ್ಲೊಂದು). ಇದು ಕಾರಣ ತೂರತು–ಕೆಲವರು ಭಾವಿಸಿರುವಂತೆ–ಛಂದಃಶಾಸ್ತ್ರೋಕ್ತವಾದ ಎಲ್ಲಾ ಪದ್ಯಗಳು 'ವಿತಾಲಬಂಧ' (=ತಾಳರಹಿತ)ಗಳೇನೂ ಅಲ್ಲ. ಮಾತ್ರಾಬಂಧಗಳೆಲ್ಲವೂ, ಹಾಗೂ ತ್ರಿಮೂರ್ತಿಗಣಬಂಧಗಳೆಲ್ಲವೂ ತಾಳಕ್ಕೆ ಒಳಪಟ್ಟವುಗಳೇ ಆಗಿವೆ. ಅಷ್ಟು ಮಾತ್ರವಲ್ಲ, ಛಂದಃಶಾಸ್ತ್ರಗ್ರಂಥಗಳಲ್ಲಿ ನಿರೂಪಿತವಾಗಿರುವ ''ವೃತ್ತ''ಗಳಲ್ಲಿ ಸಹ ಸತಾಲಬಂಧ (=ತಾಳಕ್ಕೆ ಒಳಪಟ್ಟ ರಚನೆ)ಗಳ ಸಂಖ್ಯೆಯೇ ದೊಡ್ಡದೆಂಬುದನ್ನು ಬಹಳ ಮಂದಿ ಲಕ್ಷಿಸಿಲ್ಲ, ಅಷ್ಟೆ. (ಈ ನಿಬಂಧದಲ್ಲಿ ಹಿಂದೆಯೇ ವಿವರಿಸಿದಂತೆ–'ಲಯ'ವಿದ್ದಲ್ಲಿ ತಾಳ ಇದ್ದೇ ಇದೆ; ತಾಳಬದ್ಧವಾದುದು ಮಾತ್ರ ಲಯಾನ್ವಿತವೆನಿಸಬಲ್ಲುದಾಗಿದೆ.)

ವಾಗಿದೆಯೋ ಅವುಗಳಲ್ಲಿ ಮಾತ್ರ ಲಯ ಶಬ್ದದ ಪ್ರಯೋಗ ಒಮ್ಮೊಮ್ಮೆ ಕಾಣಿಸಿಕೊಳ್ಳುವುದು ಹೊರತು, ಸೂತ್ರರೂಪದಲ್ಲಿ ಲಕ್ಷಣ ಹೇಳಿದ ಗ್ರಂಥಗಳಲ್ಲಲ್ಲವೆಂಬುದನ್ನು ಮರೆಯಬಾರದು. (ಪದ್ಯನಾಮದಲ್ಲೇ ಲಯ ಶಬ್ದವಿದ್ದರೆ ಆ ಮಾತು ಬೇರೆ) ಲಕ್ಷ್ಯಲಕ್ಷಣಸಮವಾಯರೂಪದ ನಿರೂಪಣೆಗಳಲ್ಲಿ ಪಾದಪೂರಣದ ಅವಶ್ಯಕತೆ ಬಹಳವಾಗಿ ಉಂಟಾಗುತ್ತದೆ. ಆಗ ಗ್ರಂಥಕಾರನು ಏನಾದರೂ ವರ್ಣನೆಮಾಡಿ ಪದ್ಯಪಾದಗಳ 'ಪೂರ್ತಿ'ಯನ್ನು ಮಾಡಬೇಕಾಗುತ್ತದೆ. ಅಂತಹ ಸಂದರ್ಭಗಳಲ್ಲಿ ಏನೇನೋ ವರ್ಣಿಸುವುದರ ಬದಲಾಗಿ, ಆ ಛಂದೋಬಂಧದ ಗುಣವಿಶೇಷವನ್ನು ವಿವರಿಸಿದರೆ ಅಲ್ಲಿ ಒಂದಿಷ್ಟು ಔಚಿತ್ಯವು ಕಂಡುಬರುವಂತಾಗುತ್ತದೆ. 'ಲಯ' 'ಗತಿ' ಇತ್ಯಾದಿ ಛಂದೋಗುಣದರ್ಶಕ ಪದಗಳನ್ನು ಛಂದಃಶಾಸ್ತ್ರಕಾರರು ಬಳಸಿದುದು ಇಂತಹ ಪಾದಪೂರಣಸಂದರ್ಭಗಳಲ್ಲೆಂಬುದು ಈ ಹಿಂದೆ ಉದಾಹೃತವಾದ ಪದ್ಯಗಳನ್ನಷ್ಟೇ ಪರೀಕ್ಷಿಸಿದರೂ ಗೊತ್ತಾಗದಿರದು. ಆ ನಾಲ್ಕೂ ಪದ್ಯಗಳ ಗತಿಯ ವಿಶಿಷ್ಟತೆ ಸ್ಫುಟಲಯತ್ವವೆಂಬುದೂ ಇಲ್ಲಿ ಲಕ್ಷಿಸತಕ್ಕ ಅಂಶ. ನಾಲ್ಕನೆಯ ಉದಾಹರಣಪದ್ಯದ ಪಾದಮಧ್ಯಗಳಲ್ಲಿ ಬೇರೊಂದು ಗತಿವೈಚಿತ್ರ್ಯ–ಒಂದು ಪ್ಲುತಿ–ಅಲ್ಲಿ ಸ್ಫುಟವಾಗಿ ಗೋಚರಿಸುತ್ತದೆ. ''ವಿಚಿತ್ರಗತಿಲಯೋತ್ತರಂ' ಎಂದು ಹೇಳಲು ಅಲ್ಲಿ ಜಯಕೀರ್ತಿಯನ್ನು ಪ್ರೇರಿಸಿದ್ದು ಆ ಗತಿಭಂಗಿ. ಆದರೆ ಈ ಮಾತು ಅಲ್ಲಿ ಬಂದದ್ದು ಪಾದಪೂರಣಸಂದರ್ಭವನ್ನು ಲಾಭಪ್ರದವಾಗಿ ಮಾಡಿಕೊಳ್ಳುವುದಕ್ಕೆ ಹೊರತು, ಅದು ಛಂದೋನಿಯಮನಿರೂಪಣೆಯ ಅಂಶವೇನೂ ಅಲ್ಲ. ಜಯಕೀರ್ತಿ ವಿವರಿಸಿರುವಂತೆ– ''ಉತ್ಸವ (=ಉತ್ಸಾಹ) ಜಾತಿ''ಯ ಪಾದಕ್ಕೆ ''ರವಮಾಜಾತಿ''ಯ ಪಾದವನ್ನು ಕೂಡಿಸಿದೊಡನೆ, ಆ ಗತಿಭಂಗಿ ಅಲ್ಲಿ ತಾನಾಗಿ ಉನ್ಮೀಲಿತವಾಗುತ್ತದೆ.[೩]

೨

'ಲಯ'ವೆಂದರೆ 'ಸಮಾನಕಾಲದ ಕರಾಸ್ಫಾಲನಗಳಿಗೆ ಅಳವಡುವಿಕೆ' ಎಂದು ಅಮರ ಕೋಶವು ಹೇಳುತ್ತದೆ. ಲಯವೆಂದರೆ 'ಛಂದೋಬಂಧದ ಅಕ್ಷರಪುಂಜಗಳ ಮಾತ್ರಾ ಕಾಲಾವಕಾಶದ ಸಮತ್ವ' ಎಂದು ನಾಟ್ಯಶಾಸ್ತ್ರವು ತಿಳಿಸುತ್ತದೆ. ಲಯವೆಂದರೆ 'ಪದ್ಯದ

---

೩. ಈ ಹಿಂದೆ ಮಾಡಲಾದ 'ಲಯ' ಸಂಜ್ಞೆಯ ನಾನಾಪ್ರಯೋಗಸಂದರ್ಭಗಳ ಪರೀಕ್ಷಣದಿಂದ, ಅದರ ಅರ್ಥಸ್ವರೂಪವು ತ್ರಿವಿಧವಾಗಿರುವುದು ತಿಳಿದುಬರುತ್ತದೆ: (೧) ಧ್ವನಿಗಳ, ಧ್ವನಿಪುಂಜಗಳ ಅಥವಾ ಕ್ರಿಯೆಗಳ ಕಾಲಸಮತ್ವ ಎಂದರೆ 'ಕಾಲಖಂಡಗಳ ಪರಸ್ಪರ ಸಮತ್ವ'. (ಆವರ್ತ, ಮಾತ್ರಾಸಮತ್ವ, ಸಮತಾಲಬದ್ಧತೆ ಎಂಬ ಮಾತುಗಳು ಇದನ್ನೇ ಹೇಳುವವುಗಳಾಗಿವೆ.) (೨) ಮಾತ್ರಾಕಾಲ ಪ್ರಮಾಣ; ಅಥವಾ ಅಕ್ಷರಾದಿ ಧ್ವನಿಗಳ ಹಾಗೂ ತಾಳಕ್ರಿಯೆಗಳ ವೇಗ, ಮತ್ತು ವೇಗದ ಸಮತ್ವ. (೩) ನಾದಗಳ 'ಐಕ್ಯ' ಎಂದರೆ ಸಮತ್ವ (=ಸ್ವರಲಯ, ಶ್ರುತಿಲಯ, ತಂತ್ರೀಲಯ ಇತ್ಯಾದಿ.) ಈ ಮೂರರೊಳಗೆ ಒಂದನೆಯದು ವ್ಯಾಪಕವೂ ಪ್ರಧಾನವೂ ಆಗಿದ್ದು, ಸಂಗೀತಕ್ಕೂ ಛಂದಸ್ಸಿಗೂ ಅನ್ವಯಿಸುವ ಅರ್ಥ. ಉಳಿದವುಗಳಿಗೂ ಛಂದಸ್ಸಿಗೂ ಸಂಬಂಧವಿಲ್ಲ; ಅವು ಸಂಗೀತಕ್ಕೆ (=ಗೀತವಾದ್ಯನೃತ್ಯಗಳಿಗೆ) ಮೀಸಲಾಗಿರುವ ಅರ್ಥಗಳು. (ಎರಡನೆಯ ಅರ್ಥವು ಪಾಠಕ್ಕೂ ಅನ್ವಯಿಸುವುದು.) ಈ ಮೂರರೊಳಗೆ ನಮಗೆ ಪ್ರಸ್ತುತವಾದುದು ಛಂದೋಗತವಾದ ಲಯ ಎಂದರೆ ಮೇಲೆ ಹೇಳಿದ ಮೂರರೊಳಗೆ ಒಂದನೆಯದು ಮಾತ್ರ. (ಉಳಿದೆರಡರ ವಿಚಾರವು ಈ ನಿಬಂಧದಲ್ಲಿ ಆನುಷಂಗಿಕವಾಗಿ ಬಂದುದಾಗಿದೆ.) ಆದುದರಿಂದ 'ಲಯ' ಎಂದರೇನೆಂಬುದನ್ನು ಛಂದೋರೂಪಗಳಿಗೆ ಅನ್ವಯಿಸುವಷ್ಟಕ್ಕೆ ಸೀಮಿತಗೊಳಿಸಿ ಹೇಳುವುದಾದರೆ, ಅದು ಹೀಗೆ: ಛಂದಸ್ಸಿನಲ್ಲಿ 'ಲಯ' ಎಂದರೆ–ಪದ್ಯದ ಪಾದಾವಯವಗಳ ಮಾತ್ರಾಸಮತೆ, ಪದ್ಯದ ಸಮತಾಲಬದ್ಧತೆ–ಇಷ್ಟೇ ಆಗಿದೆ.

ಪಾದಾವಯವಗಳ ಮಾತ್ರಾಸಮತ್ವ'ವೆಂದು ಛಂದೋಗ್ರಂಥಗಳಿಂದ ವ್ಯಕ್ತವಾಗುತ್ತದೆ. ಹೀಗೆ ಛಂದೋವಿಷಯಕವಾದ ಲಯಕ್ಕೆ ಖಚಿತವೂ ಏಕರೂಪವೂ ಆದ ಒಂದು ಅರ್ಥವನ್ನು ನಮ್ಮ ಶಾಸ್ತ್ರಗ್ರಂಥಗಳು ಹೇಳುತ್ತಿರುವಾಗ, ಇಂದು ನಮ್ಮ ವಿದ್ವಾಂಸರು ಆ ಸಂಜ್ಞೆಯನ್ನು ಅವ್ಯವಸ್ಥಿತವಾಗಿ ಅನೇಕಾರ್ಥಗಳಲ್ಲಿ ಬಳಸುತ್ತಿರುವುದಕ್ಕೆ ಕಾರಣವೇನು? -ಇದೀಗ ವಿಚಾರಣೀಯ.

ಇಂದು ನಮ್ಮ ಆಧುನಿಕ ವಿದ್ವಾಂಸರು ನಮ್ಮ ಭಾಷೆ, ಸಾಹಿತ್ಯ, ಕಲೆ ಇತ್ಯಾದಿಗಳನ್ನೆಲ್ಲ ವಿಮರ್ಶಿಸುವಾಗ–ಪಾಶ್ಚಾತ್ಯ ವಿದ್ವಾಂಸರು ಸ್ವಕೀಯ ಶಾಸ್ತ್ರಸ್ರೋತಗಳಿಗೆ ಕಡಿದಿಟ್ಟ ಕಾಲುವೆಗಳಲ್ಲೇ ತಮ್ಮ ವಿಚಾರಧಾರೆಯನ್ನು ಹರಿಯಿಸುವುದು ಸರ್ವಸಾಧಾರಣವಾಗಿದೆ ಯೆಂದರೆ ತಪ್ಪಾಗಲಾರದು. ಇದು ಇಂದಿನ ಕಾಲಧರ್ಮವೆಂದರೂ ಸರಿ. ಪಾಶ್ಚಾತ್ಯರ ಛಂದೋಮೀಮಾಂಸೆಯಲ್ಲಿ 'ರಿಧಮ್' (Rhythm) ಎಂಬುದು ಅತಿಮುಖ್ಯವಾದ ವಿಷಯ. ನಮ್ಮ ಛಂದೋಲಕ್ಷಣನಿರೂಪಣವಿಧಾನದಲ್ಲಿ 'ರಿಧಮ್ಮ'ಗೆ ಸಮಾನವೆನ್ನಬಹುದಾದ ಪದಪ್ರಯೋಗದ ಆವಶ್ಯಕತೆ ಬರುವುದಿಲ್ಲವಾದುದರಿಂದ, ಆ ಅರ್ಥವನ್ನು ಕೊಡುವ ಪಾರಿಭಾಷಿಕ ಸಂಜ್ಞೆ ನಮ್ಮ ಛಂದಃಶಾಸ್ತ್ರಗ್ರಂಥಗಳಲ್ಲಿ ಕಾಣಸಿಕೊಳ್ಳುವುದಿಲ್ಲ. ನಮ್ಮ ಸಂಗೀತಾದಿಶಾಸ್ತ್ರಗಳು 'ಲಯ' ಎಂದು ಏನನ್ನು ಹೇಳುತ್ತವೆಯೋ ಅದು 'ರಿಧಮ್' ಎಂಬುದರಲ್ಲಿ ಅಡಕವಾಗಬಲ್ಲ ಒಂದು ಅಂಶ. ಆಧುನಿಕ ವಿದ್ವಾಂಸರಲ್ಲಿ ಪ್ರತಿಷ್ಠಿತರಾದ ಯಾರೋ ತಮ್ಮ ಹೃದಯಾರೂಢವಾದ 'ರಿಧಮ್' ಎಂಬುದನ್ನು ದೇಶಭಾಷೆಯಲ್ಲಿ ಪ್ರಕಟಪಡಿಸುವುದಕ್ಕೆ ಉಚಿತವಾದ ಬೇರೆ ಶಬ್ದವನ್ನು ಕಾಣದೆ, 'ರಿಧಮ್ಮಿ'ನ ಏಕದೇಶವನ್ನು ಹೇಳುವ 'ಲಯ' ಎಂಬ ಪದವನ್ನು ಆ ಅರ್ಥದಲ್ಲಿ (ರಿಧಮ್ಮಿನ ಸಮಗ್ರವಾದ ಅರ್ಥದಲ್ಲಿ' ಪ್ರಯೋಗಿಸಿಬಿಟ್ಟುದೇ ತಡ–''ಯದ್ಯದಾಚರತಿ ಶ್ರೇಷ್ಠಃ ತತ್ತದೇವೇತರೋ ಜನಃ'' ಎಂಬಂತೆ, ಛಂದೋವಿಚಾರಕ್ಕೆ ಕೈ ಹಾಕಿದವರೆಲ್ಲ ಅದನ್ನೆತ್ತಿಕೊಂಡು ಯಥೇಚ್ಛವಾಗಿ–ತಮಗೆ ಕಂಡ ಹಾಗೂ ಕಾಣದ ಅರ್ಥಗಳಲ್ಲಿಯೂ ಬಳಸತೊಡಗಿದರು.[೪] ಆದರೆ 'ರಿಧಮ್'' ಎಂದರೇನು, ಅದರ ಮೂಲಾರ್ಥವೇನು, ಪ್ರಯೋಗವಶಾತ್ ಅದಕ್ಕೆ ಬಂದಿರುವ ಅರ್ಥವಿಶೇಷಗಳೇನು ಎಂಬುದನ್ನಾಗಲಿ, 'ರಿಧಮ್' ಮತ್ತು 'ಲಯ' ಎಂಬವುಗಳ ಮೂಲಕಲ್ಪನೆಗಳಲ್ಲಿ ಸಾಮ್ಯವೇನಿದೆ, ಎಷ್ಟಿದೆ ಎಂಬುದನ್ನಾಗಲಿ, ರಿಧಮ್ ಎಂಬುದರ ಅರ್ಥವನ್ನು ಪೂರ್ಣವಾಗಿ ಹೇಳಬಲ್ಲ ಸಂಜ್ಞೆಯೊಂದು ನಮ್ಮ ಶಾಸ್ತ್ರರೂಢಿಗಳಲ್ಲಿ ಎಲ್ಲಿಯಾದರೂ ಇದೆಯೋ ಇಲ್ಲವೋ ಎಂಬುದನ್ನಾಗಲೀ ಪರಾಮರ್ಶಿಸಿ ತಿಳಿಸುವ ಪ್ರಯತ್ನವನ್ನು–'ರಿಧಮ್' ಎಂಬುದನ್ನು ಮನಸ್ಸಿನಲ್ಲಿಟ್ಟುಕೊಂಡು ಆ ಅರ್ಥದಲ್ಲಿ 'ಲಯ' ಎಂಬ ಪದವನ್ನು ಬಳಸುತ್ತಿರುವ ವಿದ್ವನ್ಮಹನೀಯರಲ್ಲಿ ಯಾರೊಬ್ಬರೂ ಈವರೆಗೆ ಮಾಡಿಲ್ಲ; ಮಾಡಿದ್ದರೆ ಅದು ನನ್ನ ಗೋಚರಕ್ಕೆ ಬಂದಿಲ್ಲ.

Rhythm ಎಂದರೇನೆಂಬುದನ್ನು *Encyclopaedia Britannica* (1965), Vol. 19, page 272ರಲ್ಲಿ ಹೀಗೆ ವಿವರಿಸಲಾಗಿದೆ :

[A] (1) A certain swing or balance in bodily movement, music,

೪ ಈ ಮಾತಿಗೆ ಒಂದು ಅಪವಾದವಾಗಿ–ಡಾ. ಶಿವರಾಮ ಕಾರಂತರು ತಮ್ಮದೊಂದು ನಿಬಂಧದಲ್ಲಿ Rhythm ಎಂಬುದನ್ನು, ತಾವು ಹೊಸತಾಗಿ ನಿರ್ಮಿಸಿಕೊಂಡ ''ತರಂಗಿತತೆ'' ಎಂಬ ಪದಪ್ರಯೋಗದಿಂದ ಪ್ರಕಟಪಡಿಸಲು ಪ್ರಯತ್ನಿಸಿದ್ದು ಕಂಡುಬರುತ್ತದೆ.

verse or prose; often extended by metaphor to apply in other spheres (e.g. "Rhythm of life"). The early critic of prosody, Aristoxenus (C. 320 B.C.) distinguished three elements in rhythm–the speech (lexis), the melody (melos) and the bodily motion (kinesis somalike); but the later tendency had been to separate these elements, and to emphasize more and more the distinction between them. Precision, however, has hardly yet been reached; and there are few subjects, on which opinions, even among experts, differ more widely.....

(2) Rhythm in verse: The line between rhythm and metre is hard to draw. Aristotle is very vague on the question. Seridan says that rhythm is the father of metre, and Quintilian that rhythm is male and metre female...It would appear, however, that to the Greeks metre was with the measurement of poetic periods, and rhythm with their effective chanting or recitation; it cannot therefore have depended largely on ictus or stress and the word is therefore often applied to prose as well as to verse. It is probable that in a quantitative language like Greek, this stress (as it is in modern French) was far less strongly marked than in English: but it is a mistake to think it entirely absent, as, conversely, it is a mistake to think that in English, though accent is, of course, predominent, quantity is unimportant.

(3) As Schipper says–"In English long and short syllables have no constant length, no constant relation: they depend on the context. They do not determine rhythm, but they help to regulate it." No rigid laws, therefore, can be laid down as to the proper employment of rhythmic balance...when the ear is satisfied, we feel that the rhythm is adequate...often indeed the rhythm is so intimately linked with human feeling that no analysis can disentangle them...

ಹೀಗೆ Rhythm ಎಂಬುದರ ಅರ್ಥವು ಅವ್ಯವಸ್ಥಿತವೂ ಅತಏವ ಅನಿರ್ವಚನೀಯವೂ ಆಗಿದೆ ಎಂದು *Encyclopaedia Britannica* ದಂತಹ ಪ್ರಮಾಣಭೂತವಾದ ಮಹಾಗ್ರಂಥವು ಹೇಳುತ್ತದೆ. ಆದರೂ, ಆ ಗ್ರಂಥದಂತೆಯೇ ಪ್ರಮಾಣಭೂತವಾಗಿರುವ *Concise Oxford Dictionary* (1956) ಯಲ್ಲಿ, Rhythm ಗೆ ಬೇರೆ ಬೇರೆ ಸಂದರ್ಭಗಳಲ್ಲಿ ಬರುವ ಅರ್ಥಗಳನ್ನು–ವ್ಯಾವಹಾರಿಕ ದೃಷ್ಟಿಯಿಂದ, ವ್ಯವಸ್ಥಿತವೆಂದು ತೋರುವ ರೀತಿಯಲ್ಲಿ–ಈ ಕೆಳಗಿನಂತೆ ವಿವರಿಸಲಾಗಿದೆ:

[B] (1) Metrical movement determined by various relations of long and short or accented and unaccented syllables; measured flow of

words and phrases in verse or prose.

(2) That feature of musical composition concerned with periodical accent and the duration of notes.

(3) In art: Harmonious co-relation of parts.

(4) In Physics, Physiology and general: Movement with regular succession of strong and weak elements.

(5) [Rhythm ಶಬ್ದದ ನಿಷ್ಪತ್ತಿಯನ್ನು ಅದೇ Dictionaryಯಲ್ಲಿ ಹೀಗೆ ಸೂಚಿಸಲಾಗಿದೆ: From Greek Rhythmos c.f. Rheo=flow.]

Metre ಮತ್ತು Rhythm ಎಂಬವುಗಳ ಭೇದವನ್ನು ಖಚಿತವಾಗಿ ತಿಳಿಸುವುದು ಅಸಾಧ್ಯವೆಂದು *Encyclopaedia Britannica* (A 1 ನೋಡಿರಿ.) ಹೇಳುತ್ತಿರುವುದಾದರೂ – R. S. Sheppard ಎಂಬ ಆಂಗ್ಲ ವಿದ್ವಾಂಸನಿಂದ ಬರೆಯಲ್ಪಟ್ಟ C.M. Barrow, M.A. (Oxen) ಎಂಬ ಆಂಗ್ಲ ಮಹೋಪಾಧ್ಯಾಯನಿಂದ ಪರಿಷ್ಕರಿಸಲ್ಪಟ್ಟ *A Manual of English* (1916) ಎಂಬ ವ್ಯಾಕರಣ ಗ್ರಂಥದಲ್ಲಿ (ಪುಟ 494) Metre ಮತ್ತು Rhythm ಗಳೊಳಗಿನ ಭೇದವನ್ನು ಹೀಗೆ ವಿವರಿಸಲಾಗಿದೆ:

[C] The difference between metre and rhythm is that–to constitute the former, the composition should be divided off into lines of fixed length, and the accents recur at fixed intervals; while rhythm does not require division into lines or the recurrence of accents at fixed intervals, but simply that the accented and unaccented syllables should be mixed up proportionately, so that there may not be too many accented syllables or too many unaccented syllables, arranged according to metrical rules.

ಈ ಮೇಲೆ ಕೊಟ್ಟಿರುವ ಅವತರಣಿಕೆಗಳಲ್ಲಿ ಬಂದಿರುವ ಮಾತುಗಳೊಳಗೆ ಈ ಕೆಳಗಿನವು ಪ್ರಸ್ತುತ ವಿಚಾರದಲ್ಲಿ ಮಾರ್ಗದರ್ಶಕಗಳಾಗಿವೆ:

"Metrical *movement* by various relations of long and short or accented and unaccented syllables." (B1)

"*Movement* with regular succession of strong and weak elements." (B4)

"A certain *swing*...in bodily *movement*..." (A1)

"From Greek *Rhutmos* c.f.=*Rheo flow*." (B5)

ಈ ಮಾತುಗಳು Rhythm ಎಂದರೆ–ಒಲೆಯುವ ಅಥವಾ ಏರಿಳಿತಗಳುಳ್ಳ Movement" ಅರ್ಥಾತ್ ಒಂದು ಬಗೆಯ 'ಗತಿ' ಎಂಬುದನ್ನು ಸ್ಪಷ್ಟವಾಗಿ ತಿಳಿಸುತ್ತವೆ. (Rhythmನ ಮೂಲವಾದ Rheo=flowಎಂಬುದೂ ಗತ್ಯರ್ಥಕ ಶಬ್ದ.)

Rhythm ಮತ್ತು metre–ಇವು ಅವಿಭಾಜ್ಯವೆಂದು *Encyclopaedia Britannica* (A 2) ಹೇಳುತ್ತದೆ. Metre ಎಂದರೆ ಗಣವಿಭಾಗಕ್ಕೆ ಅಳವಡುವ Rhythm ಎಂದು ಇಂಗ್ಲಿಷ್ ವ್ಯಾಕರಣ (C) ಹೇಳುತ್ತದೆ. Metre ಎಂದರೇನೆಂಬುದನ್ನು *Concise Oxford Dictionary* ಈ ಕೆಳಗಿನಂತ ವ್ಯಾಖ್ಯಾನಿಸುತ್ತದೆ :

[D] "Any form of poetic rhythm determined by character and number of feet; metrical group, especially pair of feet in iambic and other rhythms. (From Greek Metron=measure.)"

Oxford ಕೋಶದ ಈ ವಿವೃತಿಯನ್ನು ಮತ್ತು (C) ಅವತರಣಿಕೆಯ ಅಭಿಪ್ರಾಯವನ್ನು ಪರಿಶೀಲಿಸಿದಾಗ–Metre ಎಂಬ ಸಂಜ್ಞೆಗೆ (ನಮ್ಮ ಛಂದಃಶಾಸ್ತ್ರದ ಪರಿಭಾಷೆಯಲ್ಲಿ ಹೇಳುವುದಾದರೆ) 'ಛಂದೋಬಂಧ' ಮತ್ತು 'ಛಂದೋಗಣ' ಎಂಬೆರಡು ಅರ್ಥಗಳಿರುವುದು ತಿಳಿದುಬರುತ್ತದೆ. ಹಿಂದೆ ಉದಾಹೃತವಾದ ಅದೇ ಕೋಶದ (B1) ಅವತರಣಿಕೆಯಲ್ಲಿ Rhythm ಎಂದರೆ metrical movement ಎಂದು ಪ್ರೋಕ್ತವಾಗಿದೆ. ಹಾಗಾದರೆ, "ಛಂದೋವಿಷಯಕವಾದ ರಿಥಮ್" (=poetic rhythm, Rhythm in verse) ಎಂದರೆ "ಛಂದೋಗತಿ" ಎಂದಾಯಿತು.[೫]

'ಲಯ' ಎಂದರೆ ವಸ್ತುತಃ "ಒಂದು ಬಗೆಯ ನಿಲುಗಡೆ" ಎಂಬುದನ್ನು ಹಿಂದೆಯೇ

---

೫ ಪಾಶ್ಚಾತ್ಯರ 'ಛಂದೋಗತಿ' ಎಂಬುದು ಅಕ್ಷರಗಳ ಉಚ್ಚಾರದ ಕಾಲಪ್ರಮಾಣವನ್ನು ಮಾತ್ರ ಅವಲಂಬಿಸಿರದೆ, accent (=ಸ್ವರೋಚ್ಚಾರದ ತೀವ್ರತ್ವ) ಅಥವಾ stress (=ಸ್ವರಭರ) ಎಂಬುದನ್ನೂ ಅವಲಂಬಿಸಿರುವ ಕಾರಣ, ಅದು ಧ್ವನಿ (sound) ರೂಪವೇ ಆಗಿದೆ. ಆದರೆ 'ಗತಿ' ಎಂಬುದು ಧ್ವನಿಯ ಹಾಗೆ ಶ್ರವಣೇಂದ್ರಿಯಗ್ರಾಹ್ಯವಲ್ಲ; ಅದು ವಿಭಿನ್ನಕಾಲಪರಿಮಾಣದ ಧ್ವನಿ ಪರಂಪರೆಯ ಶ್ರವಣದ ಪರಿಣಾಮವಾಗಿ ಚಿತ್ತಫಲಕದಲ್ಲಿ ಮೂಡುವ ಒಂದು 'ಭಾವಸರಣಿ'; ಅದು ಕೇವಲ ಬುದ್ಧಿಗ್ರಾಹ್ಯ. 'ಧ್ವನಿ' ಮತ್ತು 'ಧ್ವನಿಯ ಗತಿ' ಎಂಬಿವು–ಕಾಲು ಮತ್ತು ಕಾಲಿನ ನಡಿಗೆಯ ಹಾಗೆಯೇ–ವಾಸ್ತವಿಕವಾಗಿ ಅವಿಭಾಜ್ಯವಾದರೂ, ವೈಚಾರಿಕವಾಗಿ ಅವೆರಡನ್ನು ಬೇರೆಬೇರಾಗಿ ಭಾವಿಸುವುದು ಶಕ್ಯವಾಗುತ್ತದೆ. ಆದರೆ, – ವಾಸ್ತವಿಕವಾಗಿ ಅವಿಭಾಜ್ಯವಾಗಿರುವ 'ಶಬ್ದ' ಮತ್ತು 'ಛಂದಸ್' ಎಂಬಿವನ್ನು ಭಾರತೀಯ ಛಂದೋವಿದರು ವೈಚಾರಿಕವಾಗಿ ಬೇರ್ಪಡಿಸಿಕೊಂಡಂತೆ (ನಾಟ್ಯಶಾಸ್ತ್ರ ೧೪-೪೦)–ಪಾಶ್ಚಾತ್ಯ ಪಂಡಿತರು Rhythmನ್ನು ಆ ರೀತಿಯಲ್ಲಿ ವಿಶ್ಲೇಷಿಸಿಕೊಳ್ಳದೆ, ಒಮ್ಮೆ 'ಧ್ವನಿರೂಪ'ವನ್ನು (B2 ಮತ್ತು C) Rhythm ಎನ್ನುತ್ತಾರೆ; ಇನ್ನೊಮ್ಮೆ 'ಧ್ವನಿಯ ಗತಿ'ಯನ್ನು (B1) Rhythm ಎನ್ನುತ್ತಾರೆ. ಈ ಅವ್ಯವಸ್ಥೆಗೆ -Rhythmನ ಮೂಲಭೂತ (ಗ್ರೀಕ್) ಕಲ್ಪನೆಯಲ್ಲಿ (A1) Speech (=ಅಕ್ಷರರೂಪಧ್ವನಿ), Melody (=ಸ್ವರಾರೋಹಾವರೂಪವಾದ ಧ್ವನಿ), Bodily motion (=ಅಂಗವಿಕ್ಷೇಪರೂಪವಾದ ಚಲನವಲನ, ಅರ್ಥಾತ್ ಗತಿ) ಎಂಬಿವು ಒಟ್ಟಾಗಿ ಹೆಣೆದುಕೊಂಡಿರುವುದೂ, (Rhythmನ ಈ ಮೂಲಕಲ್ಪನೆಯು ನಮ್ಮ ಶಾಸ್ತ್ರಗ್ರಂಥಗಳಲ್ಲಿ ಪ್ರೋಕ್ತವಾಗಿರುವ 'ತೂರ್ಯತ್ರಯ'ವನ್ನು ನೆನಪಿಗೆ ತರುತ್ತದೆ). ಮತ್ತು ಆ ಹೆಣಿಗೆ ಯನ್ನು ಪಿಂಗಡಿಸುವ ಪ್ರಯತ್ನಗಳು (A1) ಸಮರ್ಪಕವಾಗದಿರುವುದೂ ಕಾರಣಗಳಾಗಿವೆ. ಹೀಗೆ Rhythm ಎಂಬುದರ ಅರ್ಥವು ಅಸ್ಪಷ್ಟವೂ ಅನಿಶ್ಚಿತವೂ ಆಗಿ ಪರಿಣಮಿಸಿರುವುದರಿಂದ (A1) "ರಿಥಮ್ ಎಂಬುದು ಅನಿರ್ವಚನೀಯ" ಎಂಬ ಅಭಿಪ್ರಾಯವನ್ನು ಪಾಶ್ಚಾತ್ಯ ಪಂಡಿತರು ಆಶ್ರಯಿಸುವಂತಾಗಿದೆ (A3).

ತಿಳಿದಿದ್ದೇವೆ.[೬] Rhythm ಎಂದರೆ ''ಒಂದು ಬಗೆಯ ಗತಿ'' ಎಂಬುದನ್ನು ಈಗ ಕಂಡುಕೊಂಡಿದ್ದೇವೆ. ''ನಿಲುಗಡೆ''ಯೂ ''ಗತಿ''ಯೂ ಪರಸ್ಪರ ವಿರೋಧಿಗಳು: ನಿಲುಗಡೆ ಎಂದರೆ ಗತಿಯ ಅವಸಾನ: ನಿಲುಗಡೆಯ ಅವಸಾನವೇ ಗತಿಯ ಆರಂಭ. ತಥ್ಯವು ಹೀಗಿರುವಾಗ–Rhythm ಎಂಬ ಅರ್ಥದಲ್ಲಿ 'ಲಯ' ಎಂದು ಹೇಳಿದರೆ, movement ಎಂಬ ಅರ್ಥದಲ್ಲಿ pause ಎಂದು ಹೇಳಿದರೆ ಹೇಗೋ ಹಾಗಾಗುತ್ತದೆ!

ಹೀಗೆ–'ಗತಿ' ಮತ್ತು 'ನಿಲುಗಡೆ' ಎಂಬವು ತಾತ್ತ್ವಿಕವಾಗಿ ಒಂದು ಇನ್ನೊಂದರ ಅಭಾವ ರೂಪವಾಗಿದ್ದರೂ–ಪ್ರಸ್ತುತ ವಿಷಯದಲ್ಲಿ ಅವೆರಡರೊಳಗೆ ಅಪರಿಹಾರ್ಯವಾದೊಂದು ಸಂಬಂಧವಿರುತ್ತದೆ. ಅದು ಹೇಗೆಂದರೆ: ಛಂದೋಗತಿ ಎಂಬುದು ಯಂತ್ರವಾಹನದ ಗತಿಯಂತೆ ಏಕಾಕಾರವಾದ ಅಖಂಡಗತಿಯಲ್ಲ; ಅದು ನಮ್ಮ ಕಾಲಿನ ನಡಿಗೆಯಂತೆ ಸಖಂಡಗತಿ; ಅದಕ್ಕೂ 'ಹಜ್ಜೆ'ಗಳಿವೆ. ಪ್ರತಿಯೊಂದು ಹಜ್ಜೆಗೂ ಒಂದು 'ನಿಲುಗಡೆ' ಇದೆ. ಆ ನಿಲುಗಡೆಗಳು ಸಮಕಾಲಿಕವಾಗಿದ್ದರೆ ಆ 'ಗತಿ' ಲಯಾನ್ವಿತವೆನಿಸುವುದೆಂದು ನಮ್ಮ ಶಾಸ್ತ್ರಗಳು ಹೇಳುತ್ತವೆ. ಹಾಗೆ ಆಗಬೇಕಾದರೆ ಅವುಗಳ 'ಅಂತರ', ಎಂದರೆ ಆ ನಿಲುಗಡೆಗಳ ಮಧ್ಯದ ಉಚ್ಚಾರಕಾಲಾವಕಾಶ ಒಂದಕ್ಕೊಂದು ಸಮಾನವಾಗಿರಬೇಕಾಗುತ್ತದೆ. ಅವಕಾಶಗಳು ಅಸಮಾನವಾಗಿದ್ದರೆ ಆ ಗತಿ ಲಯರಹಿತವಾಗುತ್ತದೆ. ಹೀಗೆ, ಛಂದೋಗತಿಯು ಸಮಾನಾಂತರಗತಿ (=ಸಮಗತಿ) ಎಂದೂ, ಅಸಮಾನಾಂತರ ಗತಿ (=ವಿಷಮಗತಿ) ಎಂದೂ ದ್ವಿವಿಧವಾಗಿದೆ. ಈ ಎರಡೂ ಗತಿಯ ಛಂದೋಬಂಧಗಳು ನಮ್ಮ ಛಂದಃಶಾಸ್ತ್ರಗ್ರಂಥಗಳಲ್ಲಿ ನಿರೂಪಿಸಲ್ಪಟ್ಟಿವೆ. ಮಾತ್ರಾಸಮಕ, ಷಟ್ಪದಿ ಮೊದಲಾದ ಎಲ್ಲಾ 'ಮಾತ್ರಾಬಂಧ'ಗಳೂ; ಭುಜಂಗಪ್ರಯಾತ, ಲಲಿತಪದ, ರಥೋದ್ಧತಾ ಇತ್ಯಾದಿ (ಹಾಗೂ ಹಿಂದೆ ಉದಾಹರಿಸಲಾದ ಲಲಿತ, ಲಯಗ್ರಾಹಿ ಇತ್ಯಾದಿ) 'ವೃತ್ತ'ಗಳೂ ಸಮಗತಿಬಂಧಗಳಾಗಿದ್ದು 'ಲಯಾನ್ವಿತ'ವಾಗಿವೆ. ಶಾರ್ದೂಲವಿಕ್ರೀಡಿತ, ಚಂಪಕಮಾಲಾ, ಸ್ರಗ್ಧರಾ, ಮಂದಾಕ್ರಾಂತಾ, ಮಾಲಿನಿ, ಶಾಲಿನಿ ಇತ್ಯಾದಿ ವೃತ್ತಗಳೂ ಅನುಷ್ಟುಪ್ ಶ್ಲೋಕ, ಉಪಜಾತಿ, ಕರಂಬಜಾತಿ ಇತ್ಯಾದಿ 'ಅಕ್ಷರಜಾತಿ'ಗಳೂ ವಿಷಮಗತಿಬಂಧಗಳಾಗಿದ್ದು ಲಯರಹಿತವಾಗಿವೆ.

ಆಂಗ್ಲಭಾಷೆಯ ಛಂದೋಬಂಧಗಳು ನಮ್ಮ 'ವೃತ್ತ'ಗಳಂತೆ ಗುರುಲಘುಸ್ಥಿರವಾದ ಅಕ್ಷರಬಂಧಗಳೇ ಆಗಿರುವವಾದರೂ, ಅವುಗಳ ಛಂದೋಗತಿಯಲ್ಲಿ ಸಮ, ವಿಷಮ ಎಂಬ ದ್ವೈವಿಧ್ಯವಿಲ್ಲ; ಅವೆಲ್ಲವೂ–ಉದ್ದೇಶಪೂರ್ವಕವಾಗಿ, ಕ್ವಚಿತ್ ನಿಯಮೋಲ್ಲಂಘನ ಮಾಡಿದ ಸಂದರ್ಭದಲ್ಲಿ ಹೊರತು–ಸಮಗತಿ ಬಂಧಗಳೇ ಆಗಿರುತ್ತವೆ. ಅಷ್ಟು ಮಾತ್ರವಲ್ಲ, ಒಂದು ಪದ್ಯದಲ್ಲಿ ಬರುವ ಗಣಗಳೆಲ್ಲವೂ 'ಸಮರೂಪ'ದವೇ ಆಗಿರುತ್ತವೆ.

∪ – ∪ – ∪ –

ಆ ಪದ್ಯಗಳು ನಮ್ಮ 'ಪಂಚಚಾಮರವೃತ್ತ'ದಂತೆ ಲಗಂ ಲಗಂ ಲಗಂ (iambic) ಎಂದೋ

– ∪ – ∪ – ∪

'ಸೈನಿಕವೃತ್ತ'ದಂತೆ ಗಾಲ ಗಾಲ ಗಾಲ (trochee) ಎಂದೋ 'ತೋಟಕವೃತ್ತ'ದಂತೆ

---

೬ ''ಲಯಶಬ್ದಃ...ಸಮಾನಕಾಲಿಕವಿರಾಮಪರಃ'' ಎಂಬ 'ರಾಮಾಯಣಶಿರೋಮಣಿ'ಯ ವಾಕ್ಯವನ್ನೂ ಪರಾಮರ್ಶಿಸಿರಿ.

∪∪∪- ∪∪∪- ∪∪∪-

ಲಲಗಂ ಲಲಗಂ ಲಲಗಂ (anapoestic) ಎಂದೋ 'ವನಮಂಜರೀವೃತ್ತ'ದಂತೆ

-∪∪ -∪∪ - ∪∪

ಗಾಲಲ ಗಾಲಲ ಗಾಲಲ (dactylic) ಎಂದೋ ಏಕರೂಪದ ಅವಯವಗಳಿಂದ ಘಟಿತವಾಗಿರುತ್ತವೆ ; ಎಂದರೆ, ಒಂದು ಪದ್ಯದ ಅವಯವಗಳೆಲ್ಲವೂ ಒಂದು ಇನ್ನೊಂದರ ಪಡಿಯಚ್ಚಾಗಿರುತ್ತವೆ. ಇದರಿಂದಾಗಿ ಅವುಗಳಲ್ಲಿ 'ಗತಿ'ಯ ಹಜ್ಜೆಗೂ ಪದ್ಯದ ಅವಯವಕ್ಕೂ ಪರಿಪೂರ್ಣವಾದ ಐಕ್ಯವಿರುವುದಾದರೂ, ಆ ಭಾಷೆಯ ಗುರುಲಘು ಪರಿಮಾಣಗಳು ನಮ್ಮ ಭಾಷೆಗಳ ಗುರುಲಘುಪರಿಮಾಣಗಳಂತೆ ಸ್ಥಿರವಾಗಿರುವುದಿಲ್ಲವಾದುದರಿಂದ (A 2,3) ನಮ್ಮ ಭಾಷೆಗಳ ಸಮಗತಿಯ ಪದ್ಯಗಳಲ್ಲಿ 'ಗತಿ'ಯ ಹಜ್ಜೆಗಳ ನಿಲುಗಡೆಗಳು ಕಟ್ಟುನಿಟ್ಟಾದ ಸಮಕಾಲದಲ್ಲಿ ಗೋಚರಿಸುವ ಹಾಗೆ ಆಂಗ್ಲಭಾಷೆಯ ಛಂದೋಗತಿಯ ನಿಲುಗಡೆಗಳು (ಪಠನಕಾಲದಲ್ಲಿ) ಗೋಚರಿಸದೆ, ಸ್ವಲ್ಪ ಹಿಂದೆಯೋ ಮುಂದೆಯೋ ಗೋಚರಿಸುವುದೂ ಉಂಟು. ಆ ಛಂದೋಗತಿ ನಮ್ಮ ಛಂದೋಗತಿಯಂತೆ ಕೇವಲ ಉಚ್ಚಾರಕಾಲಾವಕಾಶವನ್ನವಲಂಬಿಸಿರದೆ, ಅಕ್ಷರೋಚ್ಚಾರದ accent ಎಂದರೆ ಏರಿಕೆಯನ್ನು ಅಥವಾ 'ಸ್ವರಭರ'ವನ್ನು ಎಂದರೆ ಉಚ್ಚಾರದ ಘನತ್ವ (ictus=stress)ವನ್ನು ಮುಖ್ಯವಾಗಿ ಅವಲಂಬಿಸಿರುವುದರಿಂದ ಹೀಗಾಗುವುದಾಗಿದೆ. ಏತದ್ಗುಣದಿಂದ ವಿಶಿಷ್ಟವಾದ ''ಗತಿ''ಯನ್ನೇ (C) ಪಾಶ್ಚಾತ್ಯರು Rhythm ಎನ್ನುವುದು ಹೊರತು, ''ಲಯ''ವನ್ನಲ್ಲ.[೭] 'ಲಯ' ಎಂಬುದು ಸಮಗತಿಯ

---

೭ ಸಂಗೀತದಲ್ಲಾದರೆ ಪಾಶ್ಚಾತ್ಯರೂ ಎಷ್ಟೋ ವೇಳೆ ಕಟ್ಟುನಿಟ್ಟಾದ ಕಾಲವಿಭಾಗಸಮತೆಯನ್ನು ಅವಲಂಬಿಸುವುದುಂಟು. ಆಗ ಆ ಸಂಗೀತರಚನೆಗಳು ನಮ್ಮ ಗೀತಾದಿರಚನೆಗಳಂತೆಯೇ 'ತಾಲಬದ್ಧ' (=ಲಯಾನ್ವಿತ)ವಾಗುತ್ತವೆ; ಮತ್ತು ಆ ''ತಾಳದ 'ಗತ್ತು'ಗಳ ಆವರ್ತ''ವನ್ನು ಅವರು rhythm ಎಂದು ಕರೆಯುತ್ತಾರೆ. ಆದರೆ ಅಲ್ಲಿಯೂ ಅವರು rhythm ಎನ್ನುವುದು ಆ ತಾಳದ ಕಾಲಮಾನವನ್ನಾಗಿರದೆ, ಆವರ್ತಗಳಲ್ಲಿ ಅಡಕವಾಗಿರುವ 'ತಾಳಧ್ವನಿ'ಗಳ ಪುಂಜವನ್ನಾಗಿದೆ. ಅಷ್ಟು ಮಾತ್ರವಲ್ಲ, (B2) ಅವತರಣಿಕೆಯಲ್ಲಿ ಕಾಣುವಂತೆ, periodical accent (ಧ್ವನಿಗಳ ನಿಯತಕಾಲಿಕ ತೀವ್ರತ್ವ) ಎಂಬುದು ಅಲ್ಲಿಯೂ rhythmನ ಅಪರಿಹಾರ್ಯವಾದ ಲಕ್ಷಣವಾಗಿರುತ್ತದೆ; 'ಲಯ'ದ ಹಾಗೆ ಅದು ಆವರ್ತಕಾಲಗಳು ಸಮತ್ವಮಾತ್ರವಲ್ಲ, ಸರ್ವಸಾಧಾರಣವಾದ rhythmನಲ್ಲಿಯೂ (Rhythm in general B4)-''regular succession of strong and weak elements'' (ಪ್ರಬಲ-ದುರ್ಬಲ 'ತತ್ತ್ವ'ಗಳ ಅನುಕ್ರಮವಾದ ಪುನರಾವರ್ತನ) ಎಂಬುದು ಇರಲೇಬೇಕಾದ ಲಕ್ಷಣವಾಗಿದೆ. ತಾತ್ಪರ್ಯವೇನೆಂದರೆ : Rhythm ಎಂಬುದು ಅನುಕ್ರಮವಾದ 'ಏರಿಳಿತ'ಗಳುಳ್ಳ (ಮತ್ತು, ಹಲಕೆಲವು ಸಂದರ್ಭಗಳಲ್ಲಿ ಕಾಲಸಮತ್ವವೂ ಉಳ್ಳ) ಧ್ವನಿಪುಂಜಗಳ 'ಗತಿ'; ಅದು 'ಲಯ'ವಲ್ಲ. ತಥ್ಯವು ಹೀಗಿರುವುದರಿಂದಲೇ, *Music of India* ಎಂಬ ತನ್ನ ಗ್ರಂಥದಲ್ಲಿ Herbert Peopley ಎಂಬ ಆಂಗ್ಲವಿದ್ವಾಂಸನು ನಮ್ಮ ಸಂಗೀತಶಾಸ್ತ್ರದ 'ತಾಳ'ವನ್ನು-ಬೇರೆ ಕೆಲವರಂತೆ rhythm ಎಂದು ಹೇಳದೆ-ತನ್ನ ಆ ಗ್ರಂಥದ ''ತಾಳಾಧ್ಯಾಯ''ಕ್ಕೆ 'Tala or Time-measure' ಎಂಬ ಶಿರೋನಾಮೆಯನ್ನು ಕೊಟ್ಟಿರುವುದಾಗಿದೆ. ಪಾಶ್ಚಾತ್ಯರು ಸಂಗೀತದಲ್ಲಿಯೂ rhythm ಎಂದು ಹೇಳುವುದು ಕಾಲಸಮತ್ವ ಅಥವಾ ಕಾಲಪ್ರಮಾಣ (ಎಂದರೆ ಲಯ)ವನ್ನಾಗಿರದೆ, ವಿಭಿನ್ನ ಶ್ರುತಿರೂಪದ ಹಾಗೂ ವಿಭಿನ್ನ ಪರಿಮಾಣದ ಧ್ವನಿಗಳ 'ಸಂಘಟನೆ' ಅಥವಾ ಪರಂಪರೆಯನ್ನೆಂಬುದನ್ನು ತಿಳಿದುಕೊಳ್ಳುವುದಕ್ಕೆ,-ಈ ಮೇಲೆ ಹೇಳಿದ *Music of India* ಎಂಬ ಗ್ರಂಥದಲ್ಲಿ ಉದ್ಧರಿಸಲ್ಪಟ್ಟಿರುವ (ಪುಟ ೭೪) Fox Strangeways ಎಂಬ ವಿದ್ವಾಂಸನ ಒಂದು ಸಂಗೀತಶಾಸ್ತ್ರಗ್ರಂಥದ ಈ ಒಂದೇ ವಾಕ್ಯ ಸಾಕು: ''In order that *Rhythm*, an articulation of infinite variety of sounds, may

ಹಜ್ಜೆಗಳ ನಿಲುಗಡೆಗಳಲ್ಲಿ ಪ್ರತೀತವಾಗುವ ಒಂದು ಭಾವ; ಅದು ಸಮಗತಿಯ ಒಂದು ಗುಣ. ಆದುದರಿಂದ ಅದನ್ನು ಸಮಗತಿಯ ಒಂದು ಅಂಶ ಎನ್ನಲೂಬಹುದು. Rhythm ಎಂಬುದು ಸಮವಿಷಮ ಎಂಬ (ಖಚಿತವಾದ) ಕಾಲಭೇದವಿವಕ್ಷೆಯಲ್ಲದೆ ಪ್ರಯುಕ್ತವಾಗುವ ಗತ್ಯರ್ಥಕ ಶಬ್ದವಾಗಿರುವುದರಿಂದ, ಅದು ಸಮಗತಿಯನ್ನು ಸೂಚಿಸುವ ಸಂದರ್ಭಗಳಲ್ಲಿ 'ಲಯ'ವನ್ನೂ ಒಳಕೊಳ್ಳುವುದು. ಆದರೆ 'ಲಯ' ಎಂಬುದು ಸಮಗತಿಯ ಅಂಶಮಾತ್ರವಾಗಿರುವುದರಿಂದ, ಗತ್ಯರ್ಥಕವಾದ rhythmನ್ನು ಅದು ಒಳಕೊಳ್ಳಲಾರದು. ಒಂದು ಹೋಲಿಕೆಯಿಂದ ಇದನ್ನು ಹೀಗೆ ಚಿತ್ರಿಸಿ ಹೇಳಬಹುದು: ಸಮಗತಿ ಎಂಬುದು 'ಬಸವ'ನಾದರೆ, ಲಯವೆಂಬುದು ಬಸವನ 'ಬಾಲ', 'ಬಸವ' ಎಂಬ ಮಾತಿನಲ್ಲಿ ಬಸವನ ಬಾಲವೂ ಸೇರಿರುತ್ತದೆ; ಆದರೆ 'ಬಾಲ' ಎಂಬ ಮಾತಿನೊಳಗೆ 'ಬಸವ' ಸೇರುವಂತಿಲ್ಲ. ತಾತ್ಪರ್ಯವೇನೆಂದರೆ: Rhythm ಎಂಬ ಪದದ ಅರ್ಥದೊಳಗೆ 'ಲಯ'ವೂ ಸೇರಬಹುದಾದರೂ, 'ಲಯ' ಎಂಬುದರೊಳಗೆ rhythm ಅಡಕವಾಗಲಾರದು. ಆದುದರಿಂದ rhythm ಎಂಬರ್ಥದಲ್ಲಿ 'ಲಯ' ಎಂದು ಹೇಳಿದರೆ 'ಬಸವ' ಎಂಬರ್ಥದಲ್ಲಿ 'ಬಾಲ' ಎಂದು ಹೇಳಿದರೆ ಹೇಗೋ ಹಾಗಾಗುತ್ತದೆ![೮]

---

be upon some regular plan, the plan must have some recognizable unit of measurement.''...etc.

೮ ನಮ್ಮ ಆಧುನಿಕ ವಿದ್ವಾಂಸರು ಹೆಚ್ಚೇನೂ ವಿಚಾರಕ್ಕೆ ಬೀಳದೆ, Rhythm ಎಂಬರ್ಥವನ್ನಿಟ್ಟು ಕೊಂಡು ಲಯ ಎಂಬ ಪದವನ್ನು ಬಳಸುತ್ತಿರುವುದಕ್ಕೆ ಬೇರೊಂದು ಕಾರಣವಿದ್ದರೂ ಇರಬಹುದು. ಶಾಸ್ತ್ರೀಯ ವಿಚಾರಮಾರ್ಗವು ನಮ್ಮ ಆಧುನಿಕ ವಿದ್ವಾಂಸರಿಗೆ ಪ್ರಾಪ್ತವಾಗಿರುವುದು ಇಂಗ್ಲಿಷ್ ಭಾಷೆಯ ಅಧ್ಯಯನದಿಂದಲೇ ಆಗಿರುವುದರಿಂದ, ಇಂಗ್ಲಿಷಿನಲ್ಲಿ ಆಲೋಚಿಸಿ ದೇಶಭಾಷೆಯಲ್ಲಿ ಬರೆಯುವ ಅಭ್ಯಾಸವು ಅವರಿಗೆ ಸಹಜವಾಗಿ ಬಂದುಬಿಡುತ್ತದೆ. ಇಂಗ್ಲಿಷ್ ಭಾಷೆಯ ಮೂಲಕ ತಾವು ಗ್ರಹಿಸಿದ ಯಾವುದೊಂದು ಭಾವ(idea)ವನ್ನು ದೇಶಭಾಷೆಯಲ್ಲಿ ವ್ಯಕ್ತಪಡಿಸಬೇಕಾಗುವ ಸಂದರ್ಭಗಳಲ್ಲಿ – ನಮ್ಮ ಶಾಸ್ತ್ರೀಯ ವಿಷಯಗಳನ್ನು ಅವರು ನಮ್ಮ ದೇಶದ ಭಾಷೆಗಳ ಮೂಲಕ ಗ್ರಹಿಸಿದವರಲ್ಲವಾಗಿರುವುದರಿಂದ–ಭಾವವನ್ನು ದೇಶಭಾಷೆಯಲ್ಲಿ ಪ್ರಕಟಿಸುವುದಕ್ಕೆ ತಕ್ಕುದಾದ ಶಬ್ದವನ್ನು ಇಂಗ್ಲಿಷ್-ಸಂಸ್ಕೃತ ಶಬ್ದಕೋಶಗಳಿಂದ ಅವರು ಪಡೆಯಬೇಕಾಗುತ್ತದೆ. ಅಂತಹ ಶಬ್ದಕೋಶಗಳೊಳಗೆ ವಿಖ್ಯಾತವಾದುದು ಮೊನಿಯರ್ ವಿಲಿಯಮ್ಸ್ ಎಂಬ ಪಂಡಿತನ *English-Sanskrit Dictionary* ಆಗಿದೆ. ಅದರಲ್ಲಿ rhythm ಎಂಬ ಪದಕ್ಕೆ 'ಲಯ' ಎಂದೂ, 'ತಾಲ' ಎಂದೂ ನಿರ್ವಿಶೇಷವಾಗಿ ಅರ್ಥ ಕೊಡಲಾಗಿದೆ. ಅಂತಹ ಮಹಾಪಂಡಿತನು ಹೇಳಿದುದರಲ್ಲಿ ಶಂಕಿಸಬೇಕಾದುದೇನೂ ಇರಲಾರದೆಂದು ಭಾವಿಸುವುದು ಸಹಜವೇ ಸೈ. ಇದರಿಂದ ನಮ್ಮ ಆಧುನಿಕ ವಿದ್ವಾಂಸರು ತಮ್ಮ 'ಮನಂಬೊಕ್ಕ' rhythmನ್ನು ವ್ಯಕ್ತಪಡಿಸುವುದಕ್ಕೆ 'ಲಯ' ಎಂಬ ಪದವನ್ನು ಅಲ್ಲಿಂದ ಸ್ವೀಕರಿಸಿದ್ದಾಗಿರಲೂಬಹುದು. ಆ 'ಡಿಕ್ಷನರಿ'ಯಲ್ಲಿ rhythm ಎಂಬುದಕ್ಕೆ ಲಯ, ತಾಳ ಎಂದು ಎರಡು ಪದಗಳನ್ನು ಸಮಾನಾರ್ಥಕಗಳಾಗಿ ಕೊಟ್ಟಿದ್ದರೂ–ತಾಳ ಎಂದರೇನೆಂದೂ ಅದರ ಅರ್ಥದ ವ್ಯಾಪ್ತಿ ಎಷ್ಟೆಂದೂ ನಮ್ಮ ಜನಕ್ಕೆಲ್ಲ ಸಾಮಾನ್ಯವಾಗಿ ಗೊತ್ತಿರುವುದರಿಂದ, rhythm ಎಂಬ ವಿಶಾಲವ್ಯಾಪ್ತಿಯ ಭಾವವನ್ನು 'ತಾಳ' ಎಂಬುದರೊಳಗೆ ತುರುಕುವುದು ಅಶಕ್ಯವೆಂದು ಕಂಡುಬಂದು,–ತಾಳ ಎಂಬ ಶಬ್ದದಷ್ಟು ಪ್ರಸಿದ್ಧವಲ್ಲದ ಮತ್ತು ಅರ್ಥವ್ಯಾಪ್ತಿಯ ವಿಷಯದಲ್ಲಿ ಜನಸಾಮಾನ್ಯಕ್ಕೆ ಅಪರಿಚಿತವೂ ಆದ 'ಲಯ' ಎಂಬುದನ್ನೇ, ತಮ್ಮ ಉದ್ದೇಶಸಿದ್ಧಿಗೆ ಉಪಯುಕ್ತವೆಂದು, ನಮ್ಮ ಆಧುನಿಕ ವಿದ್ವಾಂಸರು ಆರಿಸಿಕೊಂಡುದಾಗಿರಲೂ ಬಹುದು. ಆದರೆ ಅದೇ ಕೋಶಕಾರನು ನಿರ್ಮಿಸಿದ, ಮತ್ತು ಆ ಕೋಶಕ್ಕಿಂತಲೂ ಹೆಚ್ಚು ಪ್ರಸಿದ್ಧವಾಗಿದ್ದು, ದೇಶವಿದೇಶಗಳಲ್ಲಿ ಪ್ರಮಾಣಭೂತವೆಂದು ಮನ್ನಿಸಲ್ಪಡುತ್ತಿರುವ Monier Williams's *Sanskrit-English Dictionary* ಎಂಬ ಬೃಹತ್ತರ ಶಬ್ದಕೋಶದಲ್ಲಿ 'ಲಯ' ಎಂಬುದಕ್ಕಾಗಲಿ 'ತಾಲ' ಎಂಬುದಕ್ಕಾಗಲಿ rhythm ಎಂಬರ್ಥವನ್ನು ಅವನು ಬರೆಯಲಿಲ್ಲ!

(ಸುಪ್ರಸಿದ್ಧವಾದ 'ಆಪಟೆ ಸಂಸ್ಕೃ-ಇಂಗ್ಲಿಷ್ ಶಬ್ದಕೋಶ'ದಲ್ಲಿಯೂ 'ಲಯ' ಎಂಬುದಕ್ಕೆ rhythm ಎಂಬರ್ಥವನ್ನು ಹೇಳಿರುವುದಿಲ್ಲ) ಇದಕ್ಕೆ ಕಾರಣವೇನು? – ನನಗೆ ಹೀಗೆ ತೋರುತ್ತದೆ: ಸಂಸ್ಕೃತಗ್ರಂಥಗಳ ಪರಿಶೀಲನದಿಂದ ಮತ್ತು ಸಂಸ್ಕೃತವಿದ್ವಾಂಸರ ಅಭಿಪ್ರಾಯ ಸಂಗ್ರಹಣದಿಂದ– 'ಲಯ' ಎಂಬುದಾಗಲಿ 'ತಾಲ' ಎಂಬುದಾಗಲಿ rhythm ಎಂಬರ್ಥವನ್ನು ಕೊಡುವುದಿಲ್ಲ ವೆಂಬುದು ಅವನಿಗೆ ತಿಳಿದಿದ್ದ ಕಾರಣ, ಲಯ ಹಾಗೂ ತಾಲ ಎಂಬ ಪದಗಳಿಗೆ (ಸಂಸ್ಕೃತ ಇಂಗ್ಲಿಷ್ ಶಬ್ದಕೋಶದಲ್ಲಿ) rhythm ಎಂದು ಅವನು ಅರ್ಥ ಬರೆಯಲಿಲ್ಲ. ಆದರೆ, rhythm ಎಂಬರ್ಥವನ್ನು ಕೊಡಬಲ್ಲ ಸಂಸ್ಕೃತ ಪದ ಅವನಿಗೆ ಹೊಳೆಯಲಿಲ್ಲವಾದುದರಿಂದ– rhythmನೊಳಗೆ ಅಡಕವಾಗಬಲ್ಲ ಲಯ ಅಥವಾ ತಾಲ ಎಂಬುದರ ಅರ್ಥವನ್ನು ಹಿಗ್ಗಿಸಿ rhythm ಎಂಬರ್ಥದಲ್ಲಿ (ಸಂಸ್ಕೃತದಲ್ಲಿ) ರೂಢಿಗೆ ತರಬಹುದು ಎಂಬುದು ಅವನ ಆಶಯವಾಗಿತ್ತೆಂದೂ, ಈ ಕಾರಣದಿಂದ ಅವನು ತನ್ನ ಇಂಗ್ಲಿಷ್-ಸಂಸ್ಕೃತ ಶಬ್ದಕೋಶದಲ್ಲಿ rhythm ಎಂಬುದಕ್ಕೆ 'ಲಯ', 'ತಾಲ' ಎಂದು ಅರ್ಥ ಬರೆದನೆಂದೂ ಊಹಿಸಬೇಕಾಗುತ್ತದೆ. (ಅವನು 'ಇಂಗ್ಲಿಷ್- ಸಂಸ್ಕೃತ ಶಬ್ದಕೋಶ'ವನ್ನು, ಸಂಸ್ಕೃತದಲ್ಲಿ ಬರೆಯಲೆಳಸುವ ಇಂಗ್ಲಿಷ್ ಜನಕ್ಕಾಗಿಯೇ ರಚಿಸಿದನೆಂಬುದು ಆ ಗ್ರಂಥಕ್ಕೆ ಅವನು ಬರೆದ ಮುನ್ನುಡಿಯಿಂದ ತಿಳಿದುಬರುತ್ತದೆ.) ಇದಕ್ಕಿಂತಲೂ ವಿಚಿತ್ರವಾದ ಅರ್ಥ ನಿರ್ದೇಶಗಳನ್ನೂ ಆ ಗ್ರಂಥದಲ್ಲಿ ಕಾಣಬಹುದು. ಉದಾ: metre ಎಂಬ ಇಂಗ್ಲಿಷ್ ಪದಕ್ಕೆ 'ವೇದ' ಎಂಬರ್ಥವೂ ಅದರಲ್ಲಿದೆ! ಸಂಸ್ಕೃತದಲ್ಲಿ 'ಛಂದಸ್' ಎಂಬ ಶಬ್ದಕ್ಕೆ metre ಎಂದೂ 'ವೇದ'ವೆಂದೂ ಅರ್ಥವಿರುವ ಮಾತ್ರದಿಂದ, ಇಂಗ್ಲಿಷಿನ Metre ಎಂಬ ಪದಕ್ಕೂ 'ವೇದ' ಎಂಬರ್ಥ ಹೇಗೆ ಬರುವುದೋ! 'ಏಕತಾಲ' ಎಂದರೂ 'ಏಕತಾನ' ಎಂದರೂ ಅವನಿಗೆ ಸಮಾನವಾಗಿ ಕಂಡಿದೆ ! Melody ಎಂಬುದಕ್ಕೂ ಅವನು 'ತಾಲ' ಎಂದು ಅರ್ಥ ಬರೆದಿದ್ದಾನೆ! ಇಂಗ್ಲಿಷಿನ trochee ಎಂಬುದಕ್ಕೂ ಅವನ ಅರ್ಥ 'ತಾಲ'ವೆಂದೇ ಆಗಿದೆ! ಇದಕ್ಕೆಲ್ಲ ಅವನಿಗೆ ಎಲ್ಲಿ ಆಧಾರ ಸಿಕ್ಕಿತೋ, ಹೇಳುವವರಾರು? ಕೇಳುವವರಾದರೂ ಯಾರು ?– ಪಾಶ್ಚಾತ್ಯ ಪಂಡಿತರು ಏನು ಬರೆದರೂ ಅದು ನಮಗೆ ಪರಮಪ್ರಮಾಣ!!

"Ours 's not to reason why,
Ours 's but to do and die."

(with apology to Lord Tennyson)

*ಛಂದೋಗತಿ, ೧೯೮೫, ಪು.೩೨-೩೦*

# ೩೩. ಯತಿಯ ಸ್ವರೂಪ, ಕಾರ್ಯ

● ಎ. ಸೀತಾರಾಮಯ್ಯ

ಪಂಕ್ತಿಗಳು ಅಖಂಡವಾಗಿರುವಾಗ ಮೊದಮೊದಲ ಕಾಲಗಳಲ್ಲಿ ಇದ್ದಂತೆ ಅರ್ಥವನ್ನು ದ್ಯೋತಿಸಿ ಸ್ವತಂತ್ರ ವಾಕ್ಯಗಳಾಗಿದ್ದಾಗ ಭರತಮುನಿ ಕೊಟ್ಟ ಪಾದಾಂತದಲ್ಲಿ ಯತಿ ಎಂಬ ಲಕ್ಷಣಸೂತ್ರ ಅತ್ಯಂತ ಸಮರ್ಪಕವೇ ಆಗಿ ಅಲ್ಲಿ – ಯತಿಯನ್ನು ಅರ್ಥಸಮಾಪ್ತಿ ಖಚಿತವಾಗಿ ತಿಳಿಸುತ್ತದೆ.[೧] ಅಂಥ ಎರಡೊ ನಾಲ್ಕೊ ವಾಕ್ಯಗಳು ಸಮಾನವಾದುವೊ ವಿರುದ್ಧವಾದುವೊ – ಎರಡು ಸೇರಿ ಅಥವಾ ನಾಲ್ಕಾಗಿ ನಡೆನಡೆದು ಪದ್ಯಗಳು ಮುಗಿಯುತ್ತಿದ್ದುವು. ಮೂಲ ಅಥವಾ – ಅಲ್ಲಿಂದ ಉತ್ಪನ್ನವಾದ – ಅನುಷ್ಟುಭ್, ಪಂಕ್ತಿ, ಜಗತಿ ಪಾದಗಳಲ್ಲಿ ಕ್ರಮವಾಗಿ ೪-೫-೬ ಅಕ್ಷರದ ಎರಡು ಸಮಭಾಗಗಳುಳ್ಳ ಒಟ್ಟು ಪಾದಗಳಾಗಿ ಒಡೆವುವು. ಯತಿ ಅಂಥಲ್ಲಿ ನೇರ ಮಧ್ಯೆ ಬರುತ್ತದೆ. ಕವಿ ಕುಶಲನಾದರೆ ಅಥವಾ ಆವೇಶದ ಭರದಲ್ಲಿ ಅದನ್ನು ದಾಟಬಹುದು. ಪಾದದಲ್ಲಿ ಈಚೆಗೊ ಆಚೆಗೊ ಒಂದಕ್ಷರ ಹಿಂದೆ ಮುಂದೆ ನಿಲ್ಲಿಸಬಹುದು.[೨] ಅಂಥದರಿಂದ ಛಂದೋರಚನೆಯಲ್ಲಿ ಮುನ್ನಡೆ ಉಂಟಾಗುತ್ತಿತ್ತು. ಸುಮಾರು ದೀರ್ಘವಾದ ಅಕ್ಷರಪಾದಗಳಲ್ಲಿ ಯತಿಸ್ಥಾನ ನಿಂತು ಕಾಣುವುದು. ತ್ರಿಷ್ಟುಭ್ ಛಂದಸ್ಸಿನಲ್ಲಿ ಈ ಕ್ರಿಯೆ ಆರಂಭವಾಗುತ್ತದೆ. ದೊಡ್ಡ ಪಾದಗಳಲ್ಲಿ ಸಣ್ಣವುಗಳಿಗಿಂತ ಹೆಚ್ಚು ಯತಿಸ್ಥಾನಗಳಿರುತ್ತವೆ. ಇದು ಸಹಜ, ಅನಿವಾರ್ಯ. ಪಾದ ತುಂಬಾ ನಿಡಿದಾದರೆ ಅದರ ನೆಲಸಿನಲ್ಲಿ ಒಂದಾದಮೇಲೊಂದು ಬರುವ ಅಕ್ಷರಗಳ ಭಾರವೂ ಸ್ವರೂಪವೂ ಪಾದದ ಒಟ್ಟಳತೆಯನ್ನು ಅಳೆದು ಸೇರಿಸಲು[೩] ೨-೩ ಉಸಿರಿನ ಖಂಡಗಳು ಬೇಕಾಗಬಲ್ಲವು. ಅವು ಪಂಕ್ತಿಯಲ್ಲಿನಂತೆ ಸಮವಾದ ಎರಡಾಗಬಲ್ಲವು. ತೋಟಕದಲ್ಲಿನಂತೆ ಬೇರೆ ಬಗೆಯವಾಗಬಹುದು; ತ್ರಿಷ್ಟುಭಿನಲ್ಲಿ ಭಾಗಗಳು ಅಸಮ. ೪+೭ ಅಥವಾ ೫-೬ ಮಂದಾಕ್ರಾಂತದಲ್ಲಿನಂತೆ ೪(೨=೨)+೬+೭ ಆಗಬಹುದು. ಅಂಶಗಳನ್ನು

---

೧ ಆದುದರಿಂದಲೇ ಬಹುಶಃ ಭರತನು ಇದನ್ನು ಉಪೇಕ್ಷಿಸಿದ.

೨ ಅವನಿಗೆ ತಂತ್ರಸಿದ್ಧಿ ಇಲ್ಲವಾದರೆ ಯತಿವಿಲಂಘನ (!) ಆಗುತ್ತದೆ. ದೌರ್ಬಲ್ಯ, ಛಂದಸ್ಸಿನ ರೀತ್ಯಾ ಅದು.

೩ ಅದನ್ನು ಯತಿ, ವಿಚ್ಛೇದ, ವಿರಮ, ಶ್ವಾಸಸ್ಥಾನ ಎಂದು ಹೆಸರಿಸಿದವರಿಗೂ ಅದರ ಸ್ವಭಾವಲಕ್ಷಣ ಸರಿಯಾಗಿ ಮನದಟ್ಟಾಗಿತ್ತು. ವೃತ್ತದ ಸಾಲುಗಳು ತಮ್ಮ ರಚಕಾಂಶಗಳಾಗಿ ಈ ಮೂಲಕ ಒಡೆದು ಕಾಣಿಸುತ್ತವೆ. ಆ ಸ್ಥಾನಗಳಲ್ಲಿ ಶ್ವಾಸ ವಿಶ್ರಾಂತಿ ಪಡೆಯುತ್ತದೆ ಅಥವಾ ನಿಂತು ಮುಂದೆ ಹೋಗುತ್ತವೆ. ಹನುಮಂತನೇ ಲಂಕೆಗೆ ಹಾರುವಾಗ ಮೈನಾಕ ಹೆಜ್ಜೆನಿಲವಿಗೆ ಎಡೆಕೊಟ್ಟಿತಲ್ಲವೆ? ಛಂದಸ್ಸಿಗೆ ಸಂಬಂಧಿಸಿದ ಇತರ ಹಲವಾರು ಕ್ರಿಯಾವರ್ಣನೆಯಲ್ಲಿಯಂತೆ ಈ ವಿಷಯದಲ್ಲಿಯೂ ಕ್ಷೇಮೇಂದ್ರನ ಮನಸ್ಸು ತುಂಬಾ ಸ್ವಚ್ಛವಾಗಿ, ವಿಶದವಾಗಿ ಇರುವಂತಿದೆ. ಒಂದು ಪಾದಕ್ಕೆ ಇಂಥಿಂಥ ಅಕ್ಷರಖಂಡಗಳು – ಪುಂಜಗಳು – ತುಕಡಿಗಳು – ಅಥವಾ ತುಂಡುಗಳು – ಎನ್ನುವಷ್ಟು ಮಟ್ಟಿಗೆ ಅವನು ವೃತ್ತಪಾದಗಳ ಸ್ವರೂಪವನ್ನು ಪ್ರತಿಪಾದಿಸುತ್ತಾನೆ. ಕ್ಷೇಮೇಂದ್ರನ ಈ ಮಾತಿನಿಂದ ಎಂಟು ಅಕ್ಷರದ ಪಾದದವರೆಗೂ ಕಾವ್ಯರಚನೆಯಲ್ಲಿ ಛಂದಸ್ಸು ಅಸುಖವಾಗುತ್ತದೆ ಎನ್ನಬಹುದು. ಇನ್ನೊಂದು ಮಾತು :

ನ ಷಟ್ ಸಪ್ತಾಕ್ಷರೇ ವೃತ್ತೇ ವಿಶ್ರಾಮ್ಯತಿ ಸರಸ್ವತಿ/ಭೃಂಗೀವ ಮಲ್ಲಿಕಾ ಬಾಲಕಲಿಕಾ ಕೋಟಿ ಸಂಕಟೇ (೨-೩ ಸುವೃತ್ತತಿಲಕ).

ಸೇರಿಸುವ ಬೇರೊಂದು ಸೂತ್ರವನ್ನು ಮದಕಲಿನಿ ವೃತ್ತದಲ್ಲಿ ಕಾಣಬಹುದು. ೧-೨೦; ೫+೬, ೫+೬ ('ಸಾರಂಗೀಃ ಬಾಣಾಂಗ್ಯೈಃ' ಎಂಬುದು ಸರಿಯಾದರೆ ಆಗ ಪಾದದ ಒಟ್ಟುದ್ದ ೨೨ ಅಕ್ಷರಗಳಾಗುತ್ತವೆ, ಇಪ್ಪತ್ತಲ್ಲ. ೧೫ ಅಕ್ಷರದ ರುಚಿರಾ ೪+೧+೪+೬[೪] ಆಗುತ್ತದೆ ಎನ್ನುವುದುಂಟು. ಇದನ್ನು ಸರಿಯಾದ ವರ್ಣನೆಯೆಂದು ಸ್ವೀಕರಿಸಿದರೆ ಇದು ಛಂದೋನಿಯಮವಾಗುವುದಿಲ್ಲ, ಗಮಕತಂತ್ರದ ಅಂಗವಾಗುತ್ತದೆ. ವೇದದ ತ್ರಿಷ್ಟುಭಿನಲ್ಲಿ ನಾಲ್ಕು ಅಕ್ಷರಕ್ಕೂ ಐದಕ್ಷರಕ್ಕೂ ಯತಿ ಬಂದಾಗ ಯತಿಗೆ ಮುಂಚಿತವಾಗಿ ಬರುವ ಗಣಗಳಲ್ಲಿ ಧಾರಾಳವೇನೊ ಇರುತ್ತದೆ. ಯತಿಯ ತರುವಾಯ ಬರುವ ಸ್ಥಾನಗಳು ವಿಶೇಷವಾಗಿ ಕಡೆಯ ನಾಲ್ಕಕ್ಷರಗಳು (೪+೩-೪ = ೪+೪-೩) ನಿರ್ಬದ್ಧವಾಗುತ್ತವೆ. ಮುಂದೆ ಇವೇ ಶಾಲಿನಿ, ಮಾಲಿನಿ, ಮಂದಾಕ್ರಾಂತ ವೃತ್ತಗಳ ಪಾದಾಂತಗಣಗಳಾಗುತ್ತವೆ ಅಥವಾ ಇಂದ್ರವಜ್ರದಲ್ಲಿನ ಕಡೆಯ ಗಣಖಂಡಗಳು ವಸಂತತಿಲಕಕ್ಕೆ ಸಾಗುವಂತೆ ಸಾಗುತ್ತವೆ. ಇಂಥಲ್ಲಿ ನಡೆಯ ಸೂತ್ರ ಬದಲಾಯಿಸಿದ ಹಾಗೆ ಕಾಣುತ್ತದೆ. ಆದರೆ ಯತಿಯ ಹಿಂದಿನ ಅಕ್ಷರಸಂಖ್ಯೆ ಗಣಗಳವು, ತರುವಾಯದವು ಕಿವಿಯಲ್ಲಿ ನುರಿತು ಬಗೆಬಗೆಯ ರಚನೆಗಳಿಗೆಅವಕಾಶ ಕೊಡಬಲ್ಲವಾದ್ದರಿಂದ ಯತಿಯ ಸ್ಥಾನ ತುಂಬಾ ಅರ್ಥಪೂರ್ಣವಾದ್ದು.

ಛಂದಶ್ಶಾಸ್ತ್ರಜ್ಞರಲ್ಲಿ ಒಂದು ಶಾಖೆಯವರು ಯತಿಯನ್ನೇ ಒಪ್ಪರು. ದೇಶಭಾಷೆಗಳಲ್ಲಿ ಶಾಸನಕಾರರು ಸಂಸ್ಕೃತದವರು ನಿರ್ದೇಶಿಸಿದ ಸ್ಥಾನಕ್ಕಿಂತ ಒಂದಕ್ಷರ ಸ್ಥಾನ ಮುಂದಕ್ಕೆ ಹಾಕುವುದುಂಟು. ಇನ್ನು ಕೆಲವರು ಯತಿ ಯತಿಯಲ್ಲ; ಅದನ್ನು ಕರುಣೆಯಿಲ್ಲದೆ ನಿರ್ಣಯಿಸಲಾಗುವುದಿಲ್ಲ. ಅರ್ಥರಚನೆಯ ಮೇಲೆ, ವಾಕ್ಯವ್ಯಾಕರಣದ ಮೇಲೆ ಕವಿಗಳ ಇಚ್ಛೆ ಅಥವಾ ಸಮಯಗಳ ಮೇಲೆ ಹೊಂದಿಕೊಳ್ಳುತ್ತದೆ[೫] ಎನ್ನುವವರೂ ಇಲ್ಲದಿಲ್ಲ. ಆದರೂ ಶ್ರುತಿಸುಖ ಮತ್ತು ಪದರಚನೆ ಎಂಬ ಶ್ರವಣಸುಭಗತೆಗೆ ಸಂಬಂಧಿಸಿದ ಒಂದು ಸಂಗತಿ ಉಂಟೇ ಉಂಟು, ಅದಕ್ಕೆ ವಿರುದ್ಧವಾಗಿ ಸ್ಥಾನ ತಪ್ಪಿದ ಯತಿಯ ಅಸೌಖ್ಯದ ಖಂಡನೆಯೂ ಉಂಟು. ಎಂದರೆ, ಅಂಥ ಪಾದಗಳಲ್ಲಿ ಪಾದರಚನೆ ನಡೆದಾಗ ಒಂದು ಗಣ ಪೂರ್ತಿಯಾಯಿತೆ ಅಥವಾ ಒಂದು ಮಾತಿನ ಸಹಜ ಅಂಗಗಳಿಗೆ ಕೊಡಬೇಕಾದ ಗೌರವ ಕೊಟ್ಟಾಯಿತೆ ಇಲ್ಲವೆ ಎಂಬುದರ ಲೆಕ್ಕವಿಲ್ಲದೆ ಯತಿ ಬಡಿಯುತ್ತದೆ.

ಈ ಕಷ್ಟದ ಬಹು ಅಂಶ ನಮಗೆ ಮರೆಯಾಗಬೇಕಾದರೆ ಯತಿಯ ಸ್ವರೂಪಲಕ್ಷಣವನ್ನು ಬೇರೆಯಾಗಿಯೇ ಗ್ರಹಿಸಬೇಕು. ಅದು ಪದಬಂಧದಲ್ಲಿ ಅಕ್ಷರಗಳ ಉಚ್ಚಾರ ಸ್ವರೂಪದಲ್ಲಿ ನಿಷ್ಠವಾದ್ದು ; ಅಗತ್ಯವಾದ ಜೀವಾಂಶ. ಅದಕ್ಕೆ ಸಹಜವಾದ ಆವಶ್ಯಕವಾದ ನಿಲುಗಡೆಯನ್ನು ಲಯಗತಿ ಸೂಚಿಸುವಂತಿದೆ; ಲಯ ನಿರ್ಣೀತವಾದುದು ಎಂಬ ಅಂಶ ಇಲ್ಲಿ ಹೊರಪಡುತ್ತದೆ.

---

೪ ಪ್ರಯೋಗ ಬೇರೆಯಾಗಿ ಪದ್ಧತಿ ಬದಲಾದಂತೆಲ್ಲ ಯತಿಯ ಸ್ಥಾನಕ್ಕೆ ಪ್ರಾಮುಖ್ಯತೆ ಬರುವುದು. ಉದಾ.: ಆ ಮೇಲೆ ಬಂದ ಮಹಾಕಾವ್ಯಗಳ ಕಾಲದಲ್ಲಿ ೧೧-೧೨ ಅಕ್ಷರಗಳ ವೃತ್ತಗಳಲ್ಲಿ ಐದಕ್ಕೂ ಆಚೆಯ ಅಕ್ಷರಗಳಲ್ಲಿ ಯತಿ ಬರುವುದು ಕಾಣುತ್ತದೆ. ಅನವಸಿತ (I-೧೧ ಮತ್ತು ೨೧) ಇದನ್ನು ಹೋಲಿಸಿ. ಅದು ಸ್ವಾಗತದಲ್ಲಿ ರಥೋದ್ಧತದಲ್ಲಿ ಎಲ್ಲಿದೆ? ಅಥವಾ, ವಾಹಿನಿ, ಪುಟ, ಜಲೋದ್ಧತ ಗತಿ –ಇವುಗಳ ಯಾವ ನಿಟ್ಟಿನಲ್ಲಿ ಬರುತ್ತವೇ? ಉದಾ: ಆದರ ಘೋಷ ವೈದಿಕ ಪುರಾತನರ ಘೋಷದಿಂದ ಪೂರ್ತಿಯಾಗಿ ಮಾರ್ಪಟ್ಟಿದೆ. ಇದರಲ್ಲಿ ೧೪ ಲಘು+೧ ಗುರು ಇದ್ದರೂ ನಾಲ್ಕರ ಮೂರು ಗಣಗಳು+ಮೂರರದು ಒಂದು (೨+೧) ಇದೆ.

೫ ಅರ್ಥಭಾವ ನಿಂತ ಕಡೆ ಅದು ಒಂದು ವಿಶೇಷರಂಜನೆ ತರುತ್ತದೆ. ('ಧಿಕ್ ತಾಂ ಚ, ತಂ ಚ, ಮದನಂ ಚ ಇಮಾಂ ಚ ಮಾಂ ಚ' – ನೋಡಿ).

ಹಾಗೆಯೇ, ಇಲ್ಲಿ ನಾವು ಗಮನಿಸುತ್ತಿರುವುದು ಓದುವ ಪಾಠಕನ ಶ್ವಾಸಗತಿಯಲ್ಲ. ಪದಗತಿಯಲ್ಲಿನ ಅಕ್ಷರಗಳ ಉಸಿರೋಟ ಪಾದದ ಆರಂಭದಿಂದ ತೊಡಗಿ ಪಾದಾಂತ್ಯದವರೆಗೂ ಇರುವ ದೂರವನ್ನು ಯಾವ ಗತಿವಿಲಾಸ – ಖಂಡವಿಭಜನೆ ತೋರಿಸುತ್ತದೆ. – ಹೇಗೆ ನಿಂತು, ಹೇಗೆ ನಡೆದು ಕಡೆ ಸೇರುತ್ತದೆ ಅದರ ನಡೆ – ಎಂಬ ಅಂಶವನ್ನು. ಹಾಗಿಲ್ಲದಿದ್ದರೆ ಒಂದು ಪಂಕ್ತಿಯಲ್ಲಿ ಅದು ಮುಂಚೆ ಬರುವುದೆಂದರೇನು, ಮತ್ತೊಂದರಲ್ಲಿ ಆಮೇಲೆ ಬರುವುದೆಂದರೇನು? ಇದು ಸರಿ – ಅಲ್ಲ – ಎಂದು ತಿಳಿಯುವುದಕ್ಕೊ ಭಿನ್ನಾಭಿಪ್ರಾಯ ನಿರ್ಣಯದಲ್ಲಿಯೊ ಈ ಬಗೆಯ ರಚನಾಂಶವಾಗಿ ಯಲ್ಲದಿದ್ದರೆ ಉಚ್ಚಾರ ವಿಲಾಸದ ಅಂಗವಾಗಿಯಲ್ಲದೆ ಹೇಗೆ ಸರಿತಪ್ಪುಗಳನ್ನು ಕಂಡು ಕೊಳ್ಳಬೇಕು? ಅಥವಾ ಬರಿಯ ಸೂತ್ರದ ನೆನಪೂ. ಸೂತ್ರ, ಸೂತ್ರವೇಕಾಯಿತು ?

ಯತಿಗೆ ಇನ್ನೊಂದು ಲಕ್ಷಣವುಂಟು. ಕೆಲವು ವರ್ಣವೃತ್ತಗಳು ತಮ್ಮ ನಡಿಗೆಯಲ್ಲಿ, ಹೆಚ್ಚು ಸಹಜವಾಗಿ, ಮಾತ್ರಾಗಣಗಳಂತೆ ಉಚ್ಚಾರವಾಗುತ್ತವೆ. ಸ್ಪಷ್ಟವಾಗಿ ಇಂಥ ಕಡೆಗಳಲ್ಲಿ ತ್ರಿಕವಿಭಜನೆ ಹೇಗೆ ಸರಿ? ೨-೩-೪।। ೫-೬-೭।। ಅಥವಾ ೮ ಮಾತ್ರಾಗಣಗಳ ಬೇರೆ ಸೂತ್ರಸಂಬಂಧವೊಂದು ಹುಟ್ಟಿಕೊಳ್ಳುತ್ತದೆ. ೨-೩ ಮಾತ್ರೆಗಳವು ಮೂಲಗಣಗಳು; ಎರಡು ತುಂಬಾ ಸಣ್ಣದು. ನಾಲ್ಕು ಮಾತ್ರೆಗಳಲ್ಲಿ ಕೆಲವನ್ನು ಮಾತ್ರ ಹಾಗೂ ಹೀಗೂ ಮಾಡಿ ಮೂಲಗಣದವೆನ್ನಬಹುದು. ಉಳಿದ ಮಾತ್ರಾಗಣಗಳು ಈ ೨-೩-೪ರ ಬಗೆಬಗೆಯ ವಿನ್ಯಾಸದಿಂದಾದ ಸಂಯುಕ್ತ ಗಣಗಳು. (ಒಟ್ಟು ೮ಕ್ಕಿಂತ ಹೆಚ್ಚು ಒಂದು ಖಂಡದಲ್ಲಿ ಅಸುಖ). ಅನೇಕ ದೊಡ್ಡ ವೃತ್ತಗಳು ಕೆಲವೇಳೆ ಆರಂಭದಲ್ಲಿ ಒಂದು ಗುರುವೊ ಅಥವಾ ಎರಡು ಲಘುಗಳು ಉಳ್ಳಂತೆಯೊ ಇಲ್ಲದಂತೆಯೊ ಇಂಥ ಮಾತ್ರಾಗಣಗಳಿಂದ ರಚಿತವಾದಂತೆ ಕಾಣುತ್ತವೆ. ಉದಾ: ಪ್ರಾಕೃತ ಪೈಂಗಳದ ಗೀತಿಕಾ ಮತ್ತು ಚರ್ಚರಿಗಳನ್ನು ನೋಡಬಹುದು. ಅಮೃತಗತಿ ಎಂಬ ವೃತ್ತಕ್ಕೆ 'ನಗನಗ' ಎಂಬ ಸೂತ್ರ ಸಿಕ್ಕುತ್ತದೆ. ಪ್ರಾಕೃತ ಪೈಂಗಳದ ವರ್ಣನೆಯಲ್ಲಿ ನಾಲ್ಕು 'ಲ'+ ಒಂದು 'ಗ' ಎಂದು ವರ್ಣಿತವಾಗುತ್ತದೆ. ನಗನಗವೆಂಬುದು ಅದಕ್ಕಿಂತ ಕಡಮೆ ತೃಪ್ತಿಕರ. ವಿದೂಷಕನೊಬ್ಬನು ಬಳಸುವ ಚಂಪಕಮಾಲೆ ಭಮಸಗ (೧೦ ಅಕ್ಷರದ್ದು) ಎಂದು ಅವಯುವ ರಚನೆಗೊಂಡಿದೆ. ಅಂಥಾ ರಚನೆ ಅವನಿಗೆ ಕ್ಲೇಶವುಂಟುಮಾಡೀತು. (ಓಗರಭತ್ತಾ ರಂಭಾಪತ್ತಾ ಎಂದು ಅವನು ಗುರು+ಎರಡು ಲಘು, ಎರಡು ಗುರು+ಒಂದು ಗುರು, ಎರಡು ಲಘು+ಒಂದು ಗುರು – ಅಕ್ಷರಗಳನ್ನು ಸ್ವಚ್ಛಂದವಾಗಿ ಕುಣಿಸಲು ಯತ್ನಿಸುತ್ತಾನೆ).ರಂಭಾಪತ್ತದ ಮೇಲೆ ಅವನ ಓಗರಭತ್ತಾ ಅಷ್ಟು ಹರ್ಷಕರವಾಗಿದೆ. ಛಂದೋನಿಯಮವನ್ನು ನಿರ್ದಯೆಯಿಂದ ಬೀಸಿದರೆ ಅವನಿಗೆ ಸಿಕ್ಕುವುದು ನಾಲ್ಕು ಮಾತ್ರಾಗಣಗಳ ಎರಡು ಖಂಡಗಳು ಮಾತ್ರ.

ಜಯಕೀರ್ತಿ ಕರ್ಣಾಟಕ ಭಾಷೆಗೆ ಸಂಬಂಧಿಸಿದಂತೆ ಇನ್ನೊಂದು ಮಾತ್ರಾಗಣದ ಜಾತಿಯನ್ನು ಹೆಸರಿಸುತ್ತಾನೆ. ಅಂಥ ಪ್ರತಿಗಣದ ಕೊನೆಗೂ – ಇದು ಎಲ್ಲಾ ಮಾತ್ರಾ ಗಣಗಳಿಗೂ ಸಾಮಾನ್ಯವಾಗಿ ಸಲ್ಲುವ ಸಂಗತಿ – ಒಂದು ಸಹಜವಾಗಿ ಕಾಲದ ಪೆಟ್ಟು ಬೀಳುತ್ತದೆ. ಅಂಥ ಅಂಶಗಳಲ್ಲಿ ಒಂದೊ ಹೆಚ್ಚೊ ಪ್ರಕಾರಗಳುಳ್ಳ ಲಯಖಂಡಗಳನ್ನು ಸೇರಿಸಿ ಛಂದಸ್ಸು ಒಂದು ಗತಿಯನ್ನೊ ವಾಕ್ಯವನ್ನೊ ಮೂಡಿಸಬಹುದು. ಈ ಪೆಟ್ಟು ಅಪೂರ್ಣವಾಗಿಯಾದರೂ ಒಂದು ಯತಿಸ್ಥಾನವೇ. ಪಾದಬಂಧದಲ್ಲಿ ತುಂಬು ಯತಿಪಾದಗಳೊ ಅಥವಾ ಅಂಗಖಂಡಗಳೊ ಮುಗಿದಾಗ ಸ್ಪಷ್ಟವಾಗಿ ಕಾಣುತ್ತವೆ. ಕೆಲವೇಳೆ

ಅನುಪ್ರಾಸವೂ ಒಂದು ಅಂತ್ಯಪ್ರಾಸವೂ ಈ ಸಂಗತಿಯನ್ನು ಸ್ಥಿರೀಕರಿಸುತ್ತದೆ. ಈ ಪೆಟ್ಟುಗಳು ಯಾವ ತಾಳದ ಅಧಿಕಾರವನ್ನು ಸ್ಥಾಪಿಸುವಂತೆಯೂ ಒಂದು ಅವಯವವಾಗಿ ಸೇರಿಕೊಳ್ಳಬೇಕಾದ್ದಿಲ್ಲ. ಹಾಗೆ ಅದಾಗುವುದಾದರೆ, ಆಗಬಲ್ಲದ್ದಾದರೆ ಅದು ವೃತ್ತಕಾರನ ಪ್ರಧಾನ ವಿವಶತೆ. ಅದನ್ನು ಹಾಡುವುದಕ್ಕೆ ಮೂಲಾಂಗವಾಗಿ ಕಾಲದ ಆಧಿಪತ್ಯ ಕಾರ್ಯ ಮಾಡಬಲ್ಲದಾದೀತು. ಈ ಸಂಗತಿ ನಮ್ಮ ಪಿರಿಯಕ್ಕರಕ್ಕೆ ಸಲ್ಲುತ್ತದೆ.[೬] ಒಂದು ಜಾತಿಯ ಅಕ್ಕರದಲ್ಲಿ ಆರಂಭಗಣದ್ದೂ ಒಂದು ವಿಶಿಷ್ಟರೀತಿ ತರುವಾಯ ಬರುವ ಐದು ಇತರ (ವಿ) ಗಣಗಳಿಂದ ತನ್ನನ್ನು ಬೇರ್ಪಡಿಸಿಕೊಳ್ಳುತ್ತದೆ; ಮೂರನೆಯ ಬಗೆಯ ಇನ್ನೊಂದು ರುದ್ರಗಣಪಾದವನ್ನು ಮುಕ್ತಾಯಗೊಳಿಸುತ್ತದೆ. ಕಡೆಯ ಈ ಗಣ ನಿಯತ. ಈ ಪಾದಗಳನ್ನು ಮಾತ್ರಾಲೆಕ್ಕಗಳಲ್ಲಿ ಗಣಗಳಾಗಿ ಎಣಿಸಿದರೆ ಈ ಛಂದಸ್ಸನ್ನೇ ಒಂದು ಜಾತಿಯ ಏಳು ಗಣಗಳ (ಸಾಮಾನ್ಯವಾಗಿ ಎರಡನೆಯದು ಮದನ ವಿಷ್ಣು / ಸೂರ್ಯ ಗಣವೆಂಬುದು) ಪಾದಾಂತ್ಯದಲ್ಲಿ ಆದಕ್ಕೆ ಒಂದು ಗುರು ಸೇರುತ್ತದೆ. ಆಗ ಅದು ಶರ/ಚಂದ್ರ/ರುದ್ರ. ಈ ಅಂಶ (ದೇವ)-ಮಾತ್ರಾಗಣದಂತೆ ನಿರ್ಣಯಗೊಂಡಾಗ ವೃತ್ತಸ್ವರೂಪ ಪೂರ್ತಿಯಾಗಿ ರೂಪಾಂತರಗೊಳ್ಳುತ್ತದೆ. ಎಲ್ಲರಿಗೂ ಅವರವರ ಸ್ವಾತಂತ್ರ್ಯವುಂಟು. ಆದರೆ, ಜನಪದದ ಸಹಜಪ್ರಕಾರದಲ್ಲಿನ ಹಾಡು ರಂಗುಶೀಲ – ಸಂಪನ್ನತೆ – ಸರಸತೆ – ಆಗ ಗುರುತಿಸಲಾಗದಷ್ಟು ವಿಕಾರಗೊಳ್ಳುತ್ತದೆ. ಅದಕ್ಕೆ ಪುನಃ ಉದ್ಧಾರವಿಲ್ಲ. ಮಾತ್ರಾ ಅಥವಾ ಅಂಶಗಳಲ್ಲಿ ಗಣವೇ ತನ್ನ ಬಂಧ ಕಾಣಿಸುತ್ತದೆ.

ಯತಿಯನ್ನು ಕುರಿತು ಮಾತನಾಡುತ್ತಿರುವಾಗ ಇನ್ನೊಂದು ಸಂಗತಿಯನ್ನು ಹೇಳಬಹುದು. ಕವಿ ಕೃತಿರಚನೆ ಮಾಡುತ್ತಹೋದಾಗ ವಾಕ್ಯರಚನೆಯಲ್ಲಿಯೊ ಅಥವಾ ಅರ್ಥಗತಿಯಲ್ಲಿಯೊ ಇರುವ ವಿರಾಮಖಂಡಗಳು ಬೇರೆ; ಪಾದಬಂಧದಲ್ಲಿಯೇ ರಚಕಾಂಶವಾಗಿರುವ ಯತಿ ಬೇರೆ ಎಂಬುದು. ನಾವು ಇಲ್ಲಿ ಪರಿಶೀಲಿಸುತ್ತಿರುವುದು ಪಾದದ ಆಧಾರಲಯದ ಒಂದು ರಚನಾಂಗವನ್ನು (constituent part). ಅದು ಒಂದು ಬಗೆಯ ನೆಲಗಟ್ಟು. ಅದರ ಮೇಲೆ ಛಂದೋಗಾನವನ್ನು ಕುಶಲನಾದ ಕಲೆಗಾರನೂ ನುಡಿತಕ್ಕೆ ಕೃತಿಕಾರನೂ ಆರಿಸಿಕೊಳ್ಳುತ್ತಾನೆ. ಹೀಗೆ ಪ್ರಯೋಗವು ಸಮಯವೂ ಮಿತಿಗಳಲ್ಲಿ ನಡೆಯಬೇಕಾಗುತ್ತದೆ. ಚಪಲತೆಗೆ ಅವಕಾಶವೇ ಇಲ್ಲ. ಒಂದು ಪಾದದ ರಚನೆಯಲ್ಲಿ ಯತಿ ಒಂದು ಗೊತ್ತಾದ ಘಟಕ, ಒಂದು ಕ್ರಿಯಾಖಂಡ. ಕಟ್ಟಡದ ಭಾಗವನ್ನು ಕಾಣಿಸುವ ಅಂಗ (structure). ಅದರ ಒಳಗೆ ಸ್ವರವ್ಯಂಜನಗಳ ರಂಗು, ರಂಜನೆ, ನೆಯ್ಗೆ, ಚೆಲುವು ಕಟ್ಟುತ್ತದೆ. ಇದನ್ನು 'texture' ಎನ್ನಬಹುದು.

ಈವರೆಗೂ ಪೂರ್ಣಯತಿಗಳನ್ನು ಕುರಿತು ಹೇಳಿದ್ದಾಯಿತು. ಕ್ರಮವಾದ ಯತಿಯನ್ನು ಕಾಣುವ ಮುಂಚೆ ಅದಕ್ಕಿಂತ ಸಣ್ಣದಾದ ಅಲ್ಲಲ್ಲಿ ಸುಳಿವ ಕೆಲವು ನಿಲುಗಡೆಗಳಿರುತ್ತವೆ. ಅವುಗಳನ್ನು ಯತಿ, ವಿರಮ, ವಿಚ್ಛಿತ್ತಿಗಳೆಂದು ಸಾಮಾನ್ಯವಾಗಿ ಎಣಿಸುವುದಿಲ್ಲ. ಆದರೂ ಅವಿರುತ್ತವೆ. ನಾಲ್ಕು ದೀರ್ಘಾಕ್ಷರಗಳಲ್ಲಿ ಮೊದಲಾಗುವ ಮಂದಾಕ್ರಾಂತದಲ್ಲಿ, ಸ್ರಗ್ಧರೆಯಲ್ಲಿ, ಎರಡು ಗುರ್ವಕ್ಷರಗಳ ಉಚ್ಚಾರಣೆಯಾದ ತರುವಾಯ ಒಂದು ಸಣ್ಣ ನಿಲುಗಡೆ

---

೬ ಜಯಕೀರ್ತಿಯ 'ಮಹಾಕ್ಷರ'. ಹಾಗೇ,

ಸಾವ ಪುಟ್ಟುವ ಭಯಮಂ ಸಂಸಾರಮಂ ಸಪ್ತದಾವಜನುಂ ದೇಹಸ್ಥಿತಿಮ
ನಾವ ವಸ್ತುವನುಂ ಕೂಡಂ ತಣಿಯದ ಕಾಂಕ್ಷೆಯಂ ಬಗೆದು ತನ್ನೊ॥
(ಎರಡನೆಯ ಸಾಲಲ್ಲಿ 'ಕಾಂಕ್ಷೆಯಂ' ಆದಮೇಲೆ ಒಂದು ವಿಷ್ಣುಗಣ ಲೋಪವಾದಂತಿದೆ.)

ಉಚ್ಚಾರಣೆಯನ್ನು ಹಿಡಿಯುತ್ತದೆ. ಸ್ವಲ್ಪ ನಿಡಿದಾದ ದೂರವನ್ನು ೨-೩ ಹೆಜ್ಜೆಗಳಿಗಿಂತ ಹೆಚ್ಚು ಇಟ್ಟು ದಾಟಬೇಕಾಗಿರುವಾಗ ಹೆಬ್ಬೆಟ್ಟನ್ನು ಒತ್ತಿಯೊ ಅಥವಾ ನೆಲವನ್ನು ಲಘುವಾಗಿ ಚಿಮ್ಮಿಯೊ ಹೆಜ್ಜೆ ಕೆಲಸದ ಗತಿಯನ್ನು ಕಾಣಿಸಿದಂತೆ;ಅಥವಾ ನೃತ್ಯದಲ್ಲಿ ಹೆಜ್ಜೆ ನಡೆದು ಒಂದು ಹಸೆಯನ್ನು ತೋರಿಸುವಂಥ ಕ್ರಿಯೆ ಅದು. 'ಕೋರಿಯೊಗ್ರಾಫಿ' ಒಟ್ಟಂದ – ರಚನೆ – ನಕ್ಷೆಯ ಕೆಲಸ ಅದು ಒಟ್ಟು ಒಂದು ನಾಟ್ಯದ ಚಲನಾ ವಿನ್ಯಾಸ – ಅಂಗ ಆಗಿ. ಅರ್ಧಸಮವೃತ್ತವೊಂದರಲ್ಲಿ ಉದ್ದವಾದ ಮೊದಲ ಸಾಲು ತನಗಿಂತ ಚಿಕ್ಕದಾದ ಎರಡನೆಯ ಪಾದವನ್ನು ತನ್ನ ಕಡೆಗೆ ಎಳೆದೊಯ್ಯುತ್ತದೆ.[೭] (ಇದಕ್ಕೆ ವಿದೃಶವಾದುದು ಮೊದಲನೆಯದು ಸಣ್ಣದಾಗಿ ಎರಡನೆಯದು ನಿಡಿದಾಗಿರುವಾಗ). ಅಂಥ ಸಮಯಗಳಲ್ಲಿ ಪದ್ಯಗಳಲ್ಲಿ ಕಾಣುವುದು ಎರಡು ದೊಡ್ಡ ಪಂಕ್ತಿಗಳು ಮಾತ್ರ ; ನಾಲ್ಕಲ್ಲ. ಮೊದಲ ಸಾಲು ಮುಗಿವ ಸ್ಥಾನದಲ್ಲಿ ವಿರಾಮ ಪೂರ್ತಿಯಾಗಿ ನಿಲ್ಲುತ್ತದೆ.[೮](ಷಟ್ಪದಿಯ ಆರು ಪಾದಗಳನ್ನು ನಾಲ್ಕಾಗಿ ಕಾಣಿಸಬಹುದು. ಮೇಲಿನ ವಾಕ್ಯವನ್ನು ಹಿಗ್ಗಿಸಿದರೆ ವಾರ್ಧಕ ರಾಕ್ಷಸಾಕಾರದ ಎರಡೇ ಸಾಲಿನಂತೆ (೪೦+೩೨ ಮಾತ್ರೆಗಳವು) ಮಾಡಬೇಕಾಗುತ್ತದೆ). ಇದು ಸಮವೃತ್ತದಲ್ಲಿಯೂ ಹೀಗೆಯೇ ಆಗಬಹುದು. ಮೊದಲ ಸಾಲಿನ ಕಡೆಯ ಖಂಡದ ಲಯ ಉಚ್ಚಾರವನ್ನು ತೊಡಗಿಸುವ ನಡೆ ಎರಡನೆಯ ಸಾಲಲ್ಲಿ ಮುಂದುವರಿದು ಅದರ ಕೊನೆಗೆ ಆ ವಿಧಾನಕ್ರಿಯೆ ಮುಗಿಯುತ್ತದೆ ; ಮುಗಿದು ವಿಶ್ರಾಂತವಾಗುತ್ತದೆ. ಮೂರನೆಯ, ನಾಲ್ಕನೆಯ ಸಾಲುಗಳು ಇದೇ ಪ್ರಯೋಗವನ್ನು ಪುನರಾವೃತ್ತಿ ಮಾಡುತ್ತವೆ, ಅಷ್ಟೇ. ಎರಡು ಜೋಡಿ ಎನ್ನಿ ; ಒಂದು ಚೌಕವೆನ್ನಿ. ಆಗ ವೃತ್ತದಲ್ಲಿ ನಾಲ್ಕು ಪಾದಗಳಿರುವುದಿಲ್ಲ, ಎರಡೇ ಜೊತೆಗಳು. ಮೊದಲಿಂದ ಹಿಡಿದು ಸಮಪ್ರಮಾಣ, ಸಮಾನಾಂತರಗಳ ರಚನೆಯಲ್ಲಿ ನಾಲ್ಕು ಪಾದಗಳ ಒಂದು ಚೌಕ ಕಾಣುವುದು ಸಾಮಾನ್ಯ. ಆದರೂ ಎರಡನೆಯ ಸಾಲು ಮುಗಿದುಬಿಟ್ಟ ಮೇಲೆ ಒಂದು ನಡೆ ಅಲ್ಲಿ ಮುಗಿಯುತ್ತದೆ. ಮೂರನೆಯ ಸಾಲಿನಲ್ಲಿ ಇಂಥದೇ ಕ್ರಿಯೆ ಹಿಂದಿನಂತೆಯೇ ಆರಂಭವಾಗಿ ಹಿಂದಿನದಕ್ಕೆ – ಸಮವಾದ – ಸಮಾನವಾದ – ಒಂದು ಜೊತೆಯನ್ನು ನಿರ್ಮಿಸುತ್ತದೆ. ಆದುದರಿಂದ ಎರಡನೆಯ ಕೊನೆಯ ಭಾಗವೂ ಮೂರನೆಯದರ ಆರಂಭ ಭಾಗವೂ ಆಪ್ತವಾಗಿ ಹೊಂದಿಕೊಳ್ಳದು. ಮೊದಲನೆಯದು ಮುಗಿದು ಎರಡನೆಯದು ಆರಂಭವಾಗುವಾಗ ಈ ತೊಡಕು ಕಾಣದು.[೯] ನಮ್ಮ ವೃತ್ತಗಳು ಕೆಲವಲ್ಲಿ ಅರ್ಥವನ್ನು ನಿಲುಗಡೆಯಿಲ್ಲದೆ ಮೊದಲು ಪಾದದ ಮೊದಲಕ್ಷರದಿಂದ ಹಿಡಿದು ಕಡೆಯ ಪಾದದ ಕಡೆಯ ಅಕ್ಷರದವರೆಗೂ ನಡಸುವ ಸಾಹಸವನ್ನು ಕೆಲವರು ಮಾಡುತ್ತಾರೆ. ಆಗ ಅರ್ಥ ಖಂಡವಾಗಿ

---

೭ ಷಟ್ಪದಿಯನ್ನು ನಾಲ್ಕು ಪಾದಗಳ ಪದ್ಯದಂತೆ ಅಚ್ಚುಮಾಡಬಹುದು. ಆಗ ೧-೨, ೪-೫ ದೊಡ್ಡ ಪಾದಗಳಾಗುತ್ತವೆ. ಆಗ ಮೂರು – ಆರೇ ಚಿಕ್ಕವಾಗುತ್ತವೆ. ಚಿಕ್ಕವನ್ನು ಪದ್ಯದ ೨-೪ನೆಯ ಸಾಲುಗಳಾಗಿ ಕಾಣಿಸಬಹುದು. ಒಂದು ಪಾದವೆಂದರೆ ಏನರ್ಥ ? ಸಾಲೆಂದರೆ ಖಚಿತವಾಗಿ ಎಷ್ಟು ಸಾಕು ? ಎಷ್ಟು ಹೆಚ್ಚು? ಪಾದವನ್ನು ಯಾವಂಶ ಪಾದವಾಗಿ – ಹೆಚ್ಚಲ್ಲ ಕಡಮೆಯಲ್ಲ ಎಂಬಂತೆ – ಮಾಡುತ್ತದೆ ? (What makes a line, a letter no more, no less?)

೮ ಎ. ಬಿ. ಕೀತ್ ಅವರ 'ಸಂಸ್ಕೃತ ಸಾಹಿತ್ಯ ಚರಿತ್ರೆ', ಪುಟ ೪೧೭ ನೋಡಿ.

೯ ಅದು ಹುಟ್ಟಿರುವುದು ಹಾಗೆ. ಅದರ ಪ್ರಧಾನ ಗತಿಯನ್ನು ಸಿಳ್ಳೆ ಊದಿ ತೋರಿಸಬಹುದು; ಅಥವಾ, ಯಾವುದಾದರೂ ವಾದ್ಯದ ಮೇಲೆ ಬಾಜಿಸಿ, ಕೈಕಾಲು, ಬೆರಳು, ಮೈ ಬಡಿದು – ತಟ್ಟಿ – ಚಿಟಿಕೆಹಾಕಿ – ಕಾಣಿಸಬಹುದು. ಅದು ಸ್ಪಷ್ಟವಾದ, ಜೀವಂತವಾದ ಒಂದು ಪ್ರಕಾರ.

ಪದ್ಯದ ಅರ್ಥ ಬೆಳೆಯುತ್ತದೆ ಮಾತ್ರ. ಪಾದ, ಯತಿ ಸಹಕರಿಸಿ ಸಂಪನ್ನವಾದ ಸಾವಯವವಾದ ಒಂದು ನೆಯ್ಗೆ ರೂಪಿತವಾಗುತ್ತದೆ. ಅಲ್ಲಿ ಅರ್ಥ, ಭಾವ, ರಂಗು ಪ್ರಧಾನವಾಗಿ ಚಲಿಸುತ್ತಿರುವ ಲಯದ ವಾಹನವನ್ನು ಅದುಮಿ ಕೇಳದಂತೆ ಮಾಡಿರುತ್ತವೆ, ಅಷ್ಟೇ. ಆದರೆ, ಪ್ರತಿಪಾದದ ಒಳರಚನೆಯಲ್ಲಿ ಬಂಧದ ಅನಿವಾರ್ಯ ಅಂಶವಾಗಿ ಯತಿ ನುಡಿದೇ ನುಡಿಯುತ್ತಿರುತ್ತದೆ ಎಂಬುದನ್ನು ಗಮನಿಸಬೇಕು. ಇದನ್ನು ದಾಟುವುದು ಶಕ್ಯವಿಲ್ಲ. ವೃತ್ತದ ರಚನೆಗೆ ಒಳಪಟ್ಟು– ಏನು? ಅದನ್ನು ಆ ಗತಿಯನ್ನಾಗಿ ಮಾಡಿರುವ– ಅಂಗ ಅದು. ಸಮವೃತ್ತದಲ್ಲಿ ಒಂದೇ ಬಗೆಯ ನಾಲ್ಕು ಸಾಲುಗಳಿರುತ್ತವೆ. ಒಂದೊಂದರ ನಡೆಯೂ ಒಂದೇ ರೀತಿ ; ಕಟ್ಟದಲ್ಲಿ.

ಪಾದದ ಲಯಗತಿಯನ್ನು ಬರವಣಿಗೆಯ ಲಿಪಿ ಒಂದರಿಂದಲೇ ನಿರ್ಣಯಿಸುವುದು ತಪ್ಪಾಗಬಲ್ಲದು. ಅದನ್ನು ಓದಬೇಕು; ನಾಲಗೆ ನುಡಿವಾಗ ಕಿವಿಯಿಂದ ಕೇಳಬೇಕು;[೧೦] ಮಾತ್ರಾಗಣಗಳಲ್ಲಂತೂ ಯಾವ ನಡೆ ಅಕ್ಷರ ಶಬ್ದಗಳ ಮೂಲಕ ರೂಪಗೊಳ್ಳುವುದೊ ಅವಕ್ಕೆ ಪೂರ್ಣ ಬೆಲೆಯನ್ನು ಕೊಡಬೇಕು. ನಿಜವಾದ ಸಾಹಿತ್ಯಕೃತಿಯನ್ನು– ಅದರಲ್ಲಿಯೂ ಪದ್ಯವನ್ನು– ಮೌನವಾಗಿ ನಿಶ್ಶಬ್ದವಾಗಿ ಓದಲೇಬಾರದು. ಅದು ಕಣ್ಣ ಸಂತೋಷವಾಗಿ ಮುಗಿಯಬಾರದು. ಕವಿಗಳು ಪದ್ಯರಚನೆಯಲ್ಲಿ ಪಾದದ ಪ್ರಮಾಣವನ್ನು ಉಸಿರ ನಡಿಗೆಯಲ್ಲಿಯೊ ನಾಲಿಗೆಯ ನುಡಿತದಲ್ಲಿಯೊ ನಿರ್ವಹಿಸುತ್ತಾರೆ. ದೇಹವೂ ಕಿವಿಯೂ ರಕ್ತವೂ ಅದರ ಮಿಡಿತದ ಹಸೆಯನ್ನು ಅನುಭವಿಸುತ್ತವೆ, ಹಿಡಿದು ಗುರುತಿಸುತ್ತವೆ. (ಹೊರಕಿವಿ ಕಿವುಡಾಗಿದ್ದರೂ ಒಳಗೆ ನಾಲಗೆ ನುಡಿಯುತ್ತಿರುತ್ತದೆ. ಇಲ್ಲವಾದರೆ ಬೇಥೋವ್ನ್ ಕಿವಿ ಕಿವುಡಾದಮೇಲೆಯೂ ಅಂಥ ಉತ್ತಮ ಗಾನವನ್ನು ನಿರ್ಮಿಸಲಾಗುತ್ತಿತ್ತೆ?(೧೯೭೭)) ನಿಜವಾದ ಕವಿ ಯಾವನೂ ಪಾದಕ್ಕೆ ಎಷ್ಟು ಅಕ್ಷರಗಳಿವೆ ಎಂದು ಲೆಕ್ಕ ಮಾಡುತ್ತ, ಅದಕ್ಕಾಗಿ ತಿಣಿಕುತ್ತ ಅಥವಾ ತ್ರಿಕನಿರ್ದೇಶನ ತತ್ತ್ವದ ವಿಧಿಯನ್ನು ಅನುಸರಿಸುತ್ತ ಬರೆಯುವುದಿಲ್ಲ. ಪಠನ ಮಾಡುವಾಗ ಸಹಜವಾಗಿ ಶಬ್ದಗಳ ಕಾಲಮಾನ, ಸಂಬಂಧ ಸ್ಪಷ್ಟವಾಗುತ್ತವೆ. ಉಸಿರಿಗೆ, ನುಡಿತಕ್ಕೆ, ಕಿವಿಗೆ ಆ ಸಂಸ್ಕಾರವಿರುತ್ತದೆ. ಧಾಟಿ ನಡಸುತ್ತದೆ. ಯತಿಗಳು ತಾವಾಗಿ ಎದ್ದು ಕಾಣುತ್ತ ಅವುಗಳ ಹೊಮ್ಮಿಗೆ ತಟ್ಟುತ್ತದೆ. ನಡೆಯ ಜಾಡನ್ನು ಹಿಡಿದು ಓದಿದಾಗ ಅದು ಸ್ಫುಟವಾಗುತ್ತದೆ. ಕುಶಲಿಯಾದ ಪಾಠಕನೊ ಗಮಕಿಯೊ ಅದನ್ನು ತೇಲಿಸುವಂತೆ ಭಾವಾರ್ಥಗಳನ್ನು ರೂಪಿಸುವಾಗ ಯತಿ ಮರೆಯಾಗಬಲ್ಲದು. ಆದರೆ ಅದು ಛಂದೋವಿಚಿತಿಯಲ್ಲ ; ಅದು ಗಮಕ, ಗಾನ. ಹೇಳುವವನ ವಿಲಾಸ ಕೌಶಲ, ಛಾತಿ ಅಲ್ಲ, ಯತಿ ಪಾದಲಯದ ನಡೆಯಲ್ಲಿ ರಚನಾಂಶವಾಗಿರುವ ನಿಲುಗಡೆ, ಅದು. 'ಅವೆಸ್ತೆನ್' ಪದ್ಯದ ಭಾಗಗಳು, ಮುಂದೆ ಮುಂಚೆ ವೇದಪಂಕ್ತಿಗಳು, ಇತರ ಈಚಿನ ಪಾದಪಂಕ್ತಿಗಳಂತೆಯೇ ಹೀಗೆ ನುಡಿದವಾಗಿರಬೇಕು. ಅವುಗಳಲ್ಲಿ ಪ್ರತಿ ಅಕ್ಷರಕ್ಕೂ ಸ್ವತಂತ್ರ ಕೇವಲತ್ವ ಒಂದಿದ್ದರೂ ಗಣನಿಯಮವನ್ನು ಹೇಳದಿದ್ದರೂ ಅದರ ಪಠನದ ಪ್ರಕಾರ ಗೊತ್ತಾಗಿತ್ತು. ಕೆಲವು ಅಕ್ಷರಗಳು ಪೂರ್ತಿಯಾಗಿ ಉಚ್ಚಾರಗೊಳ್ಳುವುದಿಲ್ಲ. ಕೆಲವನ್ನು ಅವುಗಳ ರಚನಾಂಗಗಳನ್ನು ಒಡೆದು ಹೇಳುತ್ತಾರೆ. ಕೆಲವು ವಾಸ್ತವವಾಗಿ ತಮ್ಮ ಮಾತಿನ ಅಥವಾ ಸಾಹಿತ್ಯರೂಪದಲ್ಲಿ ಮಾರ್ಪಡುತ್ತವೆ.

---

೧೦ ಇವೆಲ್ಲಕೂಡಿ ಪಾದದ ಉರುಳನ್ನುತಿರುಗಸ್ನು<ವೃತ್=turn – ಡಾ. ಎ. ವೆಂಕಟಸುಬ್ಬಯ್ಯ – ಹಾಗೇ ಶ್ರೀಯವರ – ಛಂದವನ್ನು <=(Skend=Dance, Frisk) – ಓೀಗೆಯೆ ಸರಿ ಎಂದು ನಿರ್ದೇಶಿಸುತ್ತವೆ ಎಂದರು. ಅದರ ಗಾನ, ಗುಣ ಅದಕ್ಕೆ ಬರುವುದೂ ಇದರಿಂದಲೇ.

ಸ್ವರಘಾತವು ಪೂರ್ತಿಯಾಗಿ ನಿಷ್ಕ್ರಿಯವಾಗಿದ್ದವೆಂದು ಕೆಲವರು ಹೇಳುವಷ್ಟು ಸ್ಥಿತಿ ಸಾಧ್ಯವಾಗಿರಲಾರದು. ಸ್ಥಾಯಿಗಳು ನುಡಿವಾಗ ಲಯದ ಫಲಪರಿಣಾಮ ವ್ಯಕ್ತವಾಗಿರುತ್ತದೆ.

ಒಂದು ಪಾದದಲ್ಲಿ ಅಧಿಕಾಕ್ಷರಗಳೊ ನ್ಯೂನಾಕ್ಷರಗಳೊ ಸೇರಿ ಹೊಂದಿಕೊಳ್ಳುವುದು ಈ ಉರುಳು ಹೊರಳು ಛಂದಗಳಿಗೆ ಒಳಪಟ್ಟೇ. ಪಾದಕ್ಕೆ ಸಿಕ್ಕಿದ ಇಂಥ ಅಧಿಕಾಂಶ ನ್ಯೂನಾಂಶಗಳು ಅವನ್ನು ಹೇಳುವವರು ನುಡಿವಂತೆ ಕಾಲ ಮೀರುವ ಮುಂಚೆ ಶಬ್ದರೇಖನ ಕ್ರಮದಲ್ಲಿ ಬರೆದುಕೊಳ್ಳುವುದು ಮೇಲು. ತತ್ವದೃಷ್ಟಿಯಿಂದ ತಾಳೆ ಹಾಕಿಕೊಳ್ಳಬಹುದು.[೧೧] ಅವುಗಳ ಸಿದ್ಧಿ ಹೇಗೆಂದು ಅರಿಯುವುದು ಶಕ್ಯವಾಗುತ್ತದೆ. ಒಂದು ವೃತ್ತ ಎಂದರೆ ಛಂದಃಪ್ರಕಾರವನ್ನು ಓದುವಾಗ ಅದು ಛಂದೋಬದ್ಧವಾಗಿ ಓದುವ ರೀತಿಯಲ್ಲಿಯೇ ಬೇರೆ ಬೇರೆ ಬಗೆಯ ಮನೋವಿಲಾಸಗಳು ಕಾವ್ಯಭಾವಗಳು ಹುಟ್ಟಿಕೊಳ್ಳುತ್ತವೆ. ಆಗಲೇ ಬೇರ ಬೇರೆ ಬಗೆಯ ವೃತ್ತಗಳು ಹುಟ್ಟಿಕೊಳ್ಳುತ್ತವೆ. ನಾಗವರ್ಮನು 'ಛಂದೋಂಬುಧಿ'ಯಲ್ಲಿ 'ವನಮಂಜರಿ' ಎಂಬ ವೃತ್ತವನ್ನು ಉದಾಹರಿಸುತ್ತಾನೆ. ಅದನ್ನು 'ಜಯದಾಮನ್' ಪಟ್ಟಿ 'ಮದಿರ-ಲತಾಕುಸುಮ' ಎಂದು ಮುಂತಾದ ಹೆಸರುಳ್ಳದ್ದೆಂದು (I-೨೨-೪) ತಿಳಿಸುತ್ತದೆ. ಅದರ ಗಣನಿರ್ದೇಶನ ಏಳು ಭಗಣ +ಒಂದು ಗುರು. ಅದನ್ನು ಹನ್ನೊಂದನೆಯ ಶತಮಾನದ ಒಬ್ಬ ಕನ್ನಡ ಕವಿ ವರ್ಣಿಸುತ್ತ ಅದು ಎಡೆಯಕ್ಕರ, ಚೌಪದಿ, ಎರಡು ಷಟ್ಪದಿಗಳು, ಬೇರೆ ಹತ್ತಾರು ಇನ್ನೆಷ್ಟೊ ಆಗುತ್ತವೆಂದಿದ್ದಾನೆ. ಈ ವರ್ಣನೆ ಹೊಂದುತ್ತದೆ. ಛಂದೋಬಂಧದಲ್ಲಿ ಇಂತಹ ಅದ್ಭುತದ ಅರ್ಥವೇನು? ಪ್ರತಿಯೊಂದರ ಲಯಗತಿಯೂ ಗೀತಗುಣವೂ ಸ್ಪಷ್ಟ. ಖಚಿತ. ಇದನ್ನು ವಿಶಿಷ್ಟವಾಗಿ ವಿವೇಚಿಸಬಹುದು. ಉದ್ದೇಶದಿಂದ ಹಾಗಾಯಿತೊ ? ಆದಮೇಲೆ ಹಾಗೆ ಓದಬಹುದೊ ?

*Kuppuswamy Research Institute Journal*, **XIX 1945-50**

**ಸಾಹಿತ್ಯಾಲೋಕನ, ೧೯೭೯, ಪು.೨೩೬-೪೪**

೧೧ ಹಾಗೆಯೇ ಕೆಲವು ಪ್ರಾಕೃತ-ಅಪಭ್ರಂಶ ಗತಿಗಳನ್ನೂ ವಿವೇಚಿಸಬಹುದು. ನಮ್ಮ ತ್ರಿಪದಿಗಳದು ಎಷ್ಟು ವಿಧ, ಧಾಟಿ? ಪ್ರಾಕೃತ ಹಿಂಪಿಗಳ ಉದಾ. ದೋಹಾವೂ ಹಾಗೇ. ಒಂದೊಂದು ಕಡೆ ಒಂದೊಂದು ರೀತಿ. ಎಲ್ಲಾ ಚೆನ್ನ.

# ೩೪. ಕನ್ನಡ ಹಾಡಿನ ವಿಕಾಸ ಮತ್ತು ಲಯಸ್ವರೂಪ

● ಎಂ. ವಿ. ಸೀತಾರಾಮಯ್ಯ

[ಪ್ರಾಚೀನ ಕಾಲದಿಂದ ಇಂದಿನವರೆಗೆ ಕನ್ನಡ ಕಾವ್ಯದ ದೇಸೀ ಛಂದಸ್ಸಿನ ಪ್ರಕಾರಗಳು ಕನ್ನಡ ಹಾಡಿನ ಸ್ವರೂಪವನ್ನು ನಿರ್ಧರಿಸಿ, ಬಹುಶಃ ಕರ್ಣಾಟಕ ಸಂಗೀತಕ್ಕೇ ಹೇಗೆ ಆಧಾರಭೂತವಾಗಿದೆ – ಎಂಬುದನ್ನು ಈ ಲೇಖನದಲ್ಲಿ* ವಿವೇಚಿಸಿದೆ.]

ಕರ್ಣಾಟಕ ಸಂಗೀತ ಸಾಮ್ರಾಜ್ಯದ ತ್ರಿಮೂರ್ತಿಗಳೆನ್ನಿಸಿದ ಶ್ಯಾಮಶಾಸ್ತ್ರಿಗಳು, ತ್ಯಾಗರಾಜರು, ಹಾಗೂ ಮುತ್ತುಸ್ವಾಮಿ ದೀಕ್ಷಿತರು ಮತ್ತು ಇವರನ್ನು ಅನುಸರಿಸಿದ ವಾಗ್ಗೇಯಕಾರರು ನಿರ್ಮಿಸಿರುವಂತಹ 'ಧಾತು' ಪ್ರಧಾನವಾದ ಕೃತಿರಾಶಿ ಕನ್ನಡ ವಾಙ್ಮಯದಲ್ಲಿ ವಿರಳ. 'ಕರ್ಣಾಟಕ ಸಂಗೀತ ಪಿತಾಮಹ'ರೆಂದು ಹೆಸರಾದ ಪುರಂದರದಾಸಾದಿ ಕನ್ನಡ ವಾಗ್ಗೇಯಕಾರರು ರಚಿಸಿರುವ ಕೀರ್ತನೆಗಳಲ್ಲಿ ಅಸಲು ಸಂಗೀತಕೃತಿ ಎನ್ನಬಹುದಾದ ಅನೇಕ ರಚನೆಗಳು ದೊರೆತಾವು. ತ್ಯಾಗರಾಜರ ಕೆಲವು ಕೃತಿಗಳಲ್ಲಿ ಪುರಂದರದಾಸರ ಕೀರ್ತನೆಗಳ ಲಯಕಟ್ಟನ್ನು ಬಲ್ಲವರು ಗುರುತಿಸಿದ್ದಾರೆ. ಹೀಗಿದ್ದರೂ, ಹರಿದಾಸರ ಕೀರ್ತನೆಗಳಿಗೆ ಕನ್ನಡ ಸಾಹಿತ್ಯಪ್ರಪಂಚದಲ್ಲಿ ದೊರೆತ ನೆಲೆ, ಬೆಲೆ, ಸಂಗೀತಪ್ರಪಂಚದಲ್ಲಿ ದೊರೆತಿಲ್ಲ ಎಂಬುದು ಸ್ವಯಂಸ್ಪಷ್ಟ. ಗಾಯನ ರಂಜನೆಗೆ ತ್ಯಾಗರಾಜಾದಿ ಪ್ರಭೃತಿಗಳ ಕೃತಿಗಳಲ್ಲಿ ಇರುವ ಬಿಡುಬೀಸು ದಾಸರ ಪದಗಳಲ್ಲಿ ಇಲ್ಲ ಎಂಬುದು ಗಾಯನಪಟುಗಳು ಇದಕ್ಕೆ ಕೊಡುವ ಕಾರಣ ಎಂದು ಕಾಣುತ್ತದೆ. ಈ ಮಾತು ಸ್ವಲ್ಪಮಟ್ಟಿಗೆ ನಿಜ. ದಾಸರ ಉತ್ಸವಮೂರ್ತಿಯನ್ನು ಹೊತ್ತ ಮಾತಿನ ಪಲ್ಲಕ್ಕಿಯ ಮೆರೆವಣಿಗೆಯಲ್ಲಿ ಧಾತುವಿನದು ಬೋಯಿಗಳ ಸ್ಥಾನ. ಈ ಸ್ಥಾನ ನಿಷ್ಕರ್ಷೆಗೆ ಹಾಡಿನ ಸ್ವಭಾವ ಒಂದು ಪಾಲು ಕಾರಣವಾದರೆ, ಇನ್ನೊಂದು ಪಾಲು ಗೇಯಕಾರರದ್ದಾಗಿ ಕಂಡುಬರುತ್ತದೆ.

ಕನ್ನಡ ಹಾಡಿನ ಪಾಡಿನ ಒಂದು ಮುಖ ಇದು. ಇನ್ನೊಂದು, ಅದರ ಚರಿತ್ರೆಗೆ ಸಂಬಂಧಪಟ್ಟದ್ದು. ಹರಿದಾಸ ಸಾಹಿತ್ಯ ಪರಂಪರೆ ಶ್ರೀಪಾದರಾಯರಿಂದ ತೊಡಗಿ ಪುರಂದರದಾಸರ ಕಾಲದಲ್ಲಿ ಉನ್ನತಿಯ ಶಿಖರವನ್ನು ಮುಟ್ಟಿತಷ್ಟೆ. ಕರ್ಣಾಟಕ ಸಂಗೀತ ಸಂಪ್ರದಾಯಕ್ಕೆ ಪುರಂದರದಾಸರು ಭದ್ರವಾದ ಬುನಾದಿ ಹಾಕಿದರೆಂಬುದನ್ನು ಅಲ್ಲಗಳೆಯುವಂತಿಲ್ಲ. ಕರ್ಣಾಟಕ ಸಂಗೀತ ಪ್ರಪಂಚದಲ್ಲಿ ಅವರಿಗಿಂತ ಪೂರ್ವದ ಎಲ್ಲಾ ಲಕ್ಷಣಸಾಹಿತ್ಯ ವಿದ್ವಾಂಸರ ಗಮನಕ್ಕೆ ಬಂದಿರುವಷ್ಟು ಮಟ್ಟಿಗೆ ಎಲ್ಲಾ ಲಕ್ಷ್ಯಸಾಹಿತ್ಯವೂ ಬಂದಿರುವಹಾಗೆ ಕಾಣದು. ಕನ್ನಡ ಗೇಯ ಪರಂಪರೆ ಹರಿದಾಸ ಸಾಹಿತ್ಯದಿಂದ ಮೊದಲಿಟ್ಟಿತು ಎಂಬ ಸರ್ವಸಾಮಾನ್ಯ ಕಲ್ಪನೆ ಸತ್ಯಕ್ಕೆ ದೂರವಾದದ್ದು ; ಆ ಪರಂಪರೆಯ ಪ್ರಾಚೀನತೆಯನ್ನೂ ಸ್ವರೂಪವನ್ನೂ ದಿಗ್ದರ್ಶನ ರೂಪದಲ್ಲಿ ಮಾತ್ರ ಪರಿಚಯಮಾಡಿಕೊಟ್ಟು, ಅದರ ಇಂದಿನ ಮುಂದಿನ ಗತಿಯನ್ನು ಸೂಚಿಸುವುದು ಈ ಲೇಖನದ ಉದ್ದೇಶ.

---

* ಬೆಂಗಳೂರು ಗಾನಕಲಾ ಪರಿಷತ್ತಿನ ಪ್ರಥಮ ಸಮ್ಮೇಳನದಲ್ಲಿ ೧೯-೮-೧೯೭೦ರಂದು ಓದಿದ ಪ್ರಬಂಧ. ಈ ಸಂಪುಟಕ್ಕಾಗಿ ಕೆಲವು ಹೆಚ್ಚಿನ ಅಂಶಗಳನ್ನು ಸೇರಿಸಿ ವಿಸ್ತರಿಸಿ ಬರೆಯಲಾಗಿದೆ. ಪ್ರಬಂಧವನ್ನು ಇಲ್ಲಿ ಬಳಸಿಕೊಳ್ಳಲು ಒಪ್ಪಿಗೆಯಿತ್ತ ಗಾನಕಲಾ ಪರಿಷತ್ತಿನ ಅಧಿಕಾರಿಗಳಿಗೆ ನಾನು ಋಣಿ – ಲೇಖಕ.

ಏನನ್ನು ಬೇಕಾದರೂ ಹಾಡಬಹುದು ; ಆದರೆ ಹಾಡಿದ್ದೆಲ್ಲ 'ಹಾಡು' ಎನ್ನಿಸಿಕೊಳ್ಳದು. ನಿಯತ ಲಯಮಂಟಪದಲ್ಲಿ ಧಾತು – ಮಾತುಗಳ ಸಂಲಗ್ನದ ಸ್ಥಿರ ದಾಂಪತ್ಯ ಹಾಡು. ಕಾವ್ಯದ ಲಯ ಛಂದಸ್ಸು ; ಅದು ನಿಯತವಿರಬಹುದು, ಅನಿಯತವಿರಬಹುದು ; ಹಾಡಿನ ಲಯ ತಾಳ: ಅದು ನಿಯತ. ಕನ್ನಡದಲ್ಲಿ ಏಳೆ, ತ್ರಿಪದಿ, ಷಟ್ಪದಿ, ಚೌಪದಿ, ಅಕ್ಕರ, ರಗಳೆ, ಸಾಂಗತ್ಯ ಎಂದು ಪ್ರಸಿದ್ಧವಾಗಿರುವ ಮಟ್ಟುಗಳೆಲ್ಲ, ಸಾಹಿತ್ಯರೂಪದಲ್ಲಿಯೂ ತಾಳದ ಹೆಜ್ಜೆಯಿಟ್ಟೇ ಪ್ರವೇಶ ಮಾಡಿರುವುದರಿಂದ, ಇವು ಕನ್ನಡ ಕವಿಗಳ ಕೈಯಲ್ಲಿ ಕಾವ್ಯವಾಹಕವಾಗಿ ಉಲಿಯುವ ಮುನ್ನವೇ ಕನ್ನಡನಾಡವರ ಬಾಯಲ್ಲಿ ಹಾಡಿನ ಮೈವೆತ್ತು ನಲಿದು ನರ್ತಿಸಿರಬೇಕು. ''ಕುಱಿತೋದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳ್'' ಎಂಬ ಕವಿರಾಜ ಮಾರ್ಗಕಾರನ ಉಕ್ತಿಯ ಆಧಾರದ ಮೇಲೆ, ಆತನಿಗೂ ಪೂರ್ವದಲ್ಲಿ (ಎಂದರೆ ೯ನೆಯ ಶತಮಾನಕ್ಕೂ ಹಿಂದೆ) ಜನಪದ ಸಾಹಿತ್ಯ ರಾಶಿ ಇಂದು ಉಪಲಬ್ಧವಾಗಿರುವ ನಾಡ ಹಾಡಿನ (ಅಥವಾ 'ನಾಡಪದ'ಗಳ) ಮೂಲ – ಉದ್ಗಮಸ್ಥಾನವಾಗಿರಬೇಕು ಎಂದು ವಿದ್ವಾಂಸರು ತರ್ಕಿಸಿದ್ದಾರೆ. ಈ ಸಾಹಿತ್ಯ ಪ್ರಕಾರಗಳಲ್ಲಿ ನಮಗೆ ಮೊತ್ತಮೊದಲಿನದಾಗಿ ದೊರಕಿರುವುದು, ಕನ್ನಡ ಹಾಡಿನ ಮಟ್ಟುಗಳಲ್ಲಿ ಒಂದಾದ ತ್ರಿಪದಿ. ಕ್ರಿ.ಶ. ೭೦೦ರ ಸುಮಾರಿನ ಬಾದಾಮಿಯ ಶಾಸನದಲ್ಲಿ ಕಂಡುಬಂದ ತ್ರಿಪದಿಗಳಲ್ಲಿ ಒಂದನ್ನು ಇಲ್ಲಿ ಉದಾಹರಿಸಬಹುದು:

ಸಾಧುಗೆ ಸಾಧು ಮಾಧುರ್ಯಂಗೆ ಮಾಧುರ್ಯನ್
ಬಾಧಿಪ್ಪ ಕಲಿಗೆ ಕಲಿಯುಗ ವಿಪರೀತನ್
ಮಾಧವ ನೀತನ್ ಪೆಱನಲ್ಲ ॥

ಕವಿರಾಜಮಾರ್ಗ ಆದಮೇಲೆ, ಒಂದನೆಯ ನಾಗವರ್ಮನ 'ಛಂದೋಂಬುಧಿ' (ಕ್ರಿ.ಶ. ಸು. ೯೯೦), ೨ನೆಯ ನಾಗವರ್ಮನ ಅಲಂಕಾರಶಾಸ್ತ್ರಗ್ರಂಥ 'ಕಾವ್ಯಾವಲೋಕನ' (ಕ್ರಿ.ಶ. ೧೧೫೦), ಜಯಕೀರ್ತಿಯ ಸಂಸ್ಕೃತ ಲಕ್ಷಣ ಗ್ರಂಥ 'ಛಂದೋನುಶಾಸನ' (ಕ್ರಿ.ಶ. ಸು. ೧೦೫೦) ಇವುಗಳಲ್ಲಿಯೂ ಮೇಲೆ ಹೇಳಿದ ಛಂದಃಪ್ರಕಾರಗಳನ್ನೆಲ್ಲಾ ಹೆಸರಿಸಿ ಅವುಗಳ ಲಕ್ಷಣವನ್ನು ತಿಳಿಸಿದ್ದಾರೆ. ಇದರಲ್ಲಿ ಈ ಲೇಖನೋದ್ದೇಶದ ದೃಷ್ಟಿಯಿಂದ ವಿಶೇಷವೇನಿಲ್ಲ. ಸಂಗೀತಶಾಸ್ತ್ರವನ್ನು ಕುರಿತ 'ಬೃಹದ್ದೇಶಿ', 'ಸಂಗೀತರತ್ನಾಕರ', 'ಮಾನಸೋಲ್ಲಾಸ'-ಮುಂತಾದ ಸಂಸ್ಕೃತ ಲಕ್ಷಣ ಗ್ರಂಥಗಳಲ್ಲಿ ಕೆಲವು ಕನ್ನಡ ಛಂದಸ್ಸುಗಳ ಉಲ್ಲೇಖವಿರುವುದು ಗಮನಾರ್ಹ.[೧] ಇವುಗಳಲ್ಲಿ ಪ್ರಾಚೀನವಾದ 'ಬೃಹದ್ದೇಶಿಯ' ಕೆಲವು ಮಾತನ್ನು ಇಲ್ಲಿ ಸ್ಮರಿಸಬಹುದು. ಅದರ ಪ್ರಬಂಧಾಧ್ಯಾಯದಲ್ಲಿ ಕಂದ, ವೃತ್ತ, ಗದ್ಯರೂಪ, ದಂಡಕ, ವರ್ಣಕ, ಆರ್ಯಾ, ತ್ರಿಪದೀ, ಷಟ್ಪದೀ, ದ್ವಿಪದೀ, ಏಲಾ ಎಂದು ಮುಂತಾಗಿ 'ಅಷ್ಟ ಚತ್ವಾರಿಂಶತ್' ಪ್ರಬಂಧ ಪ್ರಕಾರಗಳನ್ನು ಹೆಸರಿಸಿದೆ. ಸಾಹಿತ್ಯಪ್ರಧಾನವಾದ ಗೇಯ ರಚನೆಗಳನ್ನು ಅಂದಿನ ಪ್ರಬಂಧಗಳೆಂದು ಭಾವಿಸಬಹುದು.[೨] 'ರಾಗೈರ್ಯಥಾವದುಕ್ತೈಸ್ತು ಗಾತವಾಗೀತಕೋವಿದೈಃ'

---

೧ ಬೃಹದ್ದೇಶಿಯ ಕಾಲ ಕ್ರಿ.ಶ. ೫ನೆಯ ಶತಮಾನವೆಂದು ಕೆಲವರು ಅಭಿಪ್ರಾಯಪಟ್ಟಿದ್ದಾರೆ. ಆಂತರಿಕ ಪ್ರಮಾಣಗಳಿಂದ ಅದು ೮ನೆಯ ಶತಮಾನಕ್ಕಿಂತ ಹಿಂದಿನದಲ್ಲ ಎಂದು ಬಹುಮಟ್ಟಿಗೆ ನಿಶ್ಚಿತವಾಗಿ ಹೇಳಬಹುದು. ಕಾಲ ವಿಷಯಕ ಚರ್ಚೆ ಇಲ್ಲಿ ಅಪ್ರಕೃತ.

೨ ಆಳ್ವಾರರ ತಮಿಳು ಪ್ರಬಂಧಗಳೂ ತ್ಯಾಗರಾಜರ 'ಪ್ರಹ್ಲಾದ ಭಕ್ತವಿಜಯ' ಮುಂತಾದ ನಾಟಕರೂಪದ ಗೇಯ ಪ್ರಬಂಧಗಳೂ ಭಗವದ್ವಿಷಯಕಗಳಾಗಿದ್ದು, ಭಕ್ತಿರಸಪ್ರಧಾನವಾಗಿವೆ. ಸ್ಥೂಲವಾದ ಅರ್ಥದಲ್ಲಿ ಸಾಹಿತ್ಯ ರಚನೆಗಳೆಲ್ಲ ಪ್ರಬಂಧಗಳೆ.

ಎಂದಿರುವುದರಿಂದ, ಪ್ರಬಂಧಗಳು ಗೇಯ ರಚನೆಗಳು ಎಂಬುದು ಸ್ಪಷ್ಟ. 'ಬೃಹದ್ದೇಶಿ ಮತ್ತು ಶಾರ್ಙ್ಗದೇವನ 'ಸಂಗೀತ ರತ್ನಾಕರ'ಗಳ ಪ್ರಕಾರ ಗದ್ಯಪ್ರಬಂಧವೂ ಹಾಡತಕ್ಕದ್ದೆ.[೩] ನಮಗೆ ಇಲ್ಲಿ ಪ್ರಸ್ತುತವಾದದ್ದು ಕನ್ನಡಕ್ಕೆ ಸಂಬಂಧಪಟ್ಟ ಮಾತು. ಅದು ಹೀಗಿದೆ:

'ತಾಲ ಶೂನ್ಯಾದಿಯಃ ಪಾಟ್ಯೈರ್ವಿರುತ್ಯೈಶ್ಚ ಸಮನ್ವಿತಃ ಸ ಕಂದ ಇತಿ ಕರ್ಣಾಟಭಾಷಾದಿ ಪದಮಿಶ್ರಿತಃ ॥

'ಕಂದಾದಿ ಪ್ರಬಂಧಾ ಲಕ್ಷ್ಯತಃ ಪ್ರಸಿದ್ಧಾ ಏವ', ಕರ್ಣಾಟ ಭಾಷಾದಿ ಪದ ಮಿಶ್ರಿತವಾಗಿದ್ದು, ತಾಲ ಶೂನ್ಯವಾಗಿರುವುದು ಕಂದ ಪ್ರಬಂಧ.[೪] 'ಕರ್ಣಾಟ ಭಾಷಾದಿ' ಎಂದಿರುವುದರಿಂದ ಆಂಧ್ರ ಭಾಷೆಯೂ (ತೆಲುಗು) ಬೃಹದ್ದೇಶಿಕಾರನ ಮನಸ್ಸಿನಲ್ಲಿ ಇದ್ದಿರಬಹುದು. ಕಂದ ಪದ್ಯಗಳ ಪ್ರಾಚುರ್ಯ ಕರ್ಣಾಟಕಾಂಧ್ರ ಭಾಷೆಗಳ ಕಾವ್ಯಗಳಲ್ಲಿ ವಿಶೇಷವಾಗಿದೆ. ಹರಿಹರನ ಗಿರಿಜಾ ಕಲ್ಯಾಣ, ನೇಮಿಚಂದ್ರನ ಲೀಲಾವತಿ –ಇವು ಪ್ರಬಂಧಗಳೆಂದೂ ಪ್ರಸಿದ್ಧವಾಗಿವೆ. ಸಂಸ್ಕೃತ ವರ್ಣವೃತ್ತಕ್ಕಿಂತ ಮಾತ್ರಾವೃತ್ತವಾದ ಕಂದ ಪದ್ಯ ಅಡಕವಾಗಿದ್ದು ತಾಳರಹಿತ ಗಾನಕ್ಕೆ ಒಗ್ಗಿದೆ. ಈ ಅಂಶಗಳನ್ನು ಗಮನಿಸಿದರೆ 'ಕಂದಾದಿ ಪ್ರಬಂಧ ಲಕ್ಷ್ಯ'ಗಳನ್ನು ಗಮನಿಸಿಯೇ ಮತಂಗ ಈ ಮಾತನ್ನು ಹೇಳಿರಬೇಕು. ಯಕ್ಷಗಾನಗಳಲ್ಲಿಯೂ ಈ ಶತಮಾನದ ಪೂರ್ವಾರ್ಧ ದಶಕಗಳಲ್ಲಿ ಜನಪ್ರಿಯವಾಗಿದ್ದ ಸಂಗೀತ ನಾಟಕಗಳಲ್ಲಿಯೂ ಕಂದ ಒಂದು ಗೇಯ ಸಾಹಿತ್ಯವಾಗಿ ಶೋಭಿಸುತ್ತಿತ್ತು.

ಕನ್ನಡ ಸಾಹಿತ್ಯವನ್ನು ವಸ್ತುಕ, ವರ್ಣಕ ಎಂದು ವಿಭಾಗಿಸುವುದು ರೂಢಿ. ಕನ್ನಡ ಕವಿಗಳ ಉಕ್ತಗಳ ಆಧಾರದಮೇಲೆ ಈ ಶಬ್ದಗಳ ಬಗ್ಗೆ ವಿದ್ವಾಂಸರು ಚರ್ಚೆ ಮಾಡಿದ್ದಾರೆ. ಅದರ ಪ್ರಸ್ತಾವಕ್ಕೆ ಇಲ್ಲಿ ಎಡೆಯಿಲ್ಲ. ಒಟ್ಟಿನಮೇಲೆ, ವಸ್ತುಕ ಎಂದರೆ ಸಂಸ್ಕೃತ ವರ್ಣವೃತ್ತ, ಕಂದ, ಗದ್ಯ – ಇವುಗಳಿಂದ ಕೂಡಿದ ಚಂಪೂ ಕಾವ್ಯ ಅಥವಾ ಓದುಗಬ್ಬ ಎಂದೂ, ವರ್ಣಕ ಎಂದರೆ ತ್ರಿಪದಿ, ಸಾಂಗತ್ಯ, ಷಟ್ಪದಿ ಮುಂತಾದ ದೇಸಿ ಛಂದಸ್ಸಿನ ಹಾಡುಗಬ್ಬವೆಂದೂ ವ್ಯಕ್ತಪಡುತ್ತದೆ. ಈ ಪಾಡುಗಬ್ಬದ ವಿವಕ್ಷೆ ನಾಗವರ್ಮನ ಕಾವ್ಯಾವಲೋಕನದಲ್ಲಿ ಕುತೂಹಲಕಾರಿಯಾಗಿದೆ:

ಸಂದಿಸಿರೆ ಕಂದಮುಂ ಪೆಱ -
ತೊಂದಱಿಕೆಯ ವೃತ್ತಜಾತಿಯುಂ ಪದಮವು ತ-
ೞ್ತೊಂದಿರೆ ಪನ್ನೆರಡು ವರಂ
ಸಂದುದು ಮೆಲ್ವಾಡೆನಿಕ್ಕುಮದು ಕನ್ನಡದೊಳ್॥

---

೩ ಪಾಲ್ಕುರಿಕೆ ಸೋಮನಾಥನು, ಶಿವಶರಣರು ಬಾಣಗದ್ಯ, ಅಕ್ಷರಗದ್ಯ, ಪಂಚಗದ್ಯ ಮುಂತಾದ 'ಗದ್ಯ'ಗಳನ್ನು ಓದುತ್ತ ಶ್ರೀಶೈಲ ಪ್ರಯಾಣ ಮಾಡಿದ ಸಂಗತಿಯನ್ನು ತನ್ನ 'ಪಂಡಿತಾರಾಧ್ಯ ಚಾರಿತ್ರ'ದಲ್ಲಿ ತಿಳಿಸಿದ್ದಾನೆ. 'ಪಾಲ್ಕುರಿಕೆ ಸೋಮನಾಥನ ನಮಸ್ಕಾರ ಗದ್ಯ ಪ್ರಸಿದ್ಧವಾಗಿದೆ'. ಹರಿಹರನೂ ತನ್ನ ಒಂದೆರಡು ರಗಳೆಗಳಲ್ಲಿ ಪೂಜಾ ಕಾಲದಲ್ಲಿನ 'ಗದ್ಯ ಪದ್ಯ ಸೇವ್ಯ ಕಾವ್ಯ' ಪ್ರಸಂಗವನ್ನು ಪ್ರಸ್ತಾವಿಸಿದ್ದಾನೆ. ಇವೆಲ್ಲ ಛಂದೋಬದ್ಧವಾಗಿದ್ದು, ಪ್ರಾಸಯುಕ್ತವಾಗಿವೆ. (ನೋಡಿ: ಡಾ॥ ಎಲ್. ಬಸವರಾಜು, 'ಶಿವದಾಸ ಗೀತಾಂಜಲಿ', ಪು. ೬೮-೭೦). ಸಂಗೀತಶಾಸ್ತ್ರಗ್ರಂಥಗಳ ಪ್ರಬಂಧಾಧ್ಯಾಯದಲ್ಲಿ ಉಕ್ತವಾದ ಗದ್ಯ ಗೇಯ ಪ್ರಕಾರಗಳಲ್ಲಿ ಸಮಾವೇಶವಾಗಿರುವುದರಿಂದ, ಈ ಗದ್ಯಗಳು 'ಗೇಯ ಗದ್ಯ' ಎನ್ನಲಡ್ಡಿಯಿಲ್ಲ.

೪ 'ಪದ' ಎಂದರೆ 'ಮಾತು' ಎಂಬ ಸಾಮಾನ್ಯಾರ್ಥ ಇರಲಾರದು. ನಾಗವರ್ಮನು ನಿರೂಪಿಸಿರುವ 'ಪದ' ಇರಬಹುದು; 'ಹಾಡು' ಇರಬಹುದು. ಈ ಪದಗಳು ಮಿಶ್ರಿತವಾಗಿದ್ದು, ಕಂದ (ಪದ್ಯ)ಗಳು ಹೆಚ್ಚಾಗಿದ್ದರೆ ಅದು 'ಕಂದ ಪ್ರಬಂಧ' ಎಂದು ಕಾಣುತ್ತದೆ.

ಪದಿನಯ್ದುಮಿರ್ಪತ್ತಯ್ದುಂ
ಪದಂ ಯಥಾಸಂಭವಂ ಪ್ರಬಂಧದ ಮೆಯ್ಯೊಳ್
ಪುದಿದೊದವಿ ನೆಗಟ್ದೊಡಂತದು
ಸದಲಂಕಾರಂ ರಸಾಸ್ಪದಂ ಪಾಡಕ್ಕುಂ॥

ಪಾಡುಗಳಿಂದಂ ತಱಿಸಲೆ
ಮಾಡಿದುದಂ ಪಾಡುಗಬ್ಬಮೆಂದು ಬುಧರ್ ಕೊಂ-
ಡಾಡುವರದಱಿಂ ದಲ್ ಮೆ-
ಲ್ವಾಡುಂ ರೂಢಿಯ ಬೆದಂಡೆಗಬ್ಬಮುಮಕ್ಕುಂ॥

(ಸೂತ್ರಗಳು: ೨೪೧-೨೪೩)

ನಾಗವರ್ಮನ ನಿರೂಪಣೆಯ ಪ್ರಕಾರ ಕಂದವೃತ್ತಗಳಿಂದ ಕೂಡಿದ ಪ್ರಬಂಧ ಪದ; ೧೫-೨೦ ಪದಗಳಿರುವ ಪ್ರಬಂಧ ಪಾಡು; ಇಂಥ ಪಾಡುಗಳ ಗುಚ್ಛವೇ ಪಾಡುಗಬ್ಬ. ಇದರಿಂದ ರೂಪಗೊಂಡವು ಮೆಲ್ವಾಡು, ಮತ್ತು ರೂಢಿಯ ಬೆದಂಡೆಗಬ್ಬ. ಕವಿರಾಜಮಾರ್ಗಕಾರನೂ ಬೆದಂಡೆಗಬ್ಬ ಕಂದವೃತ್ತ ಘಟಿತವಾದದ್ದು ಎಂದಿದ್ದಾನೆ. ಕವಿರಾಜಮಾರ್ಗಕಾರನು 'ಚತ್ತಾಣ' ಎಂಬ ಇನ್ನೊಂದು ಕಾವ್ಯಪ್ರಕಾರವನ್ನೂ ನಿರೂಪಿಸಿದ್ದಾನೆ. ಅದರ ಲಕ್ಷಣ :

ಕಂದಂಗಳ್ ಪಲವಾಗಿರೆ
ಸುಂದರ ವೃತ್ತಂಗಳಕ್ಕರಂ ಚೌಪದಿ ಮ-
ತ್ತಂ ದಲ್ ಗೀತಿಕೆ ತಿವದಿಗ-
ಳಂದಂಬೆತ್ತೆಸೆಯೆ ಪೇೞ್ದೊಡದು ಚತ್ತಾಣಂ ॥ (೧-೩೫)

'ಚತ್ತಾಣವು ಓದಿ ಹೇಳುವ ಅಥವಾ ತಿಳಿದುಕೊಳ್ಳುವ ದೇಸಿಯ ಶ್ರವ್ಯ ಕಾವ್ಯವಾದರೆ ಬೆದಂಡೆಯೆಂಬುದು ಆಡಿ ತೋರಿಸುವ ದೃಶ್ಯ ಕಾವ್ಯವು' ಎಂದು ದಿ॥ ಮುಳಿಯ ತಿಮ್ಮಪ್ಪಯ್ಯನವರ ತೀರ್ಮಾನ ('ಪಾರ್ತಿಸುಬ್ಬ', ಪು. ೪೨). ನಾಗವರ್ಮನ ಪ್ರಕಾರ ಬೆದಂಡೆ ಹಾಡುಗಬ್ಬ ಎಂಬುದು ಸ್ಪಷ್ಟ; ಒಂದು ವೇಳೆ ದೃಶ್ಯಕಾವ್ಯವಾಗಿದ್ದರೂ ಹಾಡಬಾರದ್ದೇನಲ್ಲ. ಚತ್ತಾಣವನ್ನು ಮಾತ್ರ ಓದುಗಬ್ಬ ಎಂದು ತರ್ಕಿಸುವುದಕ್ಕಿಂತ ವಿವಿಧ ಹಾಡುವ ಮಟ್ಟುಗಳಿಂದ ಕೂಡಿದ ಕಾವ್ಯಪ್ರಕಾರ ಎಂದು ತಿಳಿಯುವುದೇ ಸಾಧು.

ಇವುಗಳ ಜೊತೆಗೆ, ಹಳಗನ್ನಡ ಕಾವ್ಯಗಳಲ್ಲಿ (ಕ್ರಿ.ಶ. ೧೧೦೫ರ ಅಭಿನವ ಪಂಪನ ಮಲ್ಲಿನಾಥ ಪುರಾಣ ಮತ್ತು ಕ್ರಿ.ಶ. ೧೧೮೯ರ ಅಗ್ಗಳನ ಚಂದ್ರಪ್ರಭ ಪುರಾಣ) 'ಎಕ್ಕಲಗಾಣ' ಎಂಬ ಮಾತೂ ಬರುತ್ತದೆ. ಈ ಪದವನ್ನು 'ಯಕ್ಷಗಾನಾಚಾರ್ಯ' ಎಂದು ತಿಮ್ಮಪ್ಪಯ್ಯನವರು ನಿರ್ವಚಿಸಿದ್ದಾರೆ; ಕಾರಂತರು 'ಯಕ್ಷಗಾನವೇ' ಎನ್ನುತ್ತಾರೆ ('ಯಕ್ಷಗಾನ ಬಯಲಾಟ', ಪು. ೯) ಅಂತೂ ಕನ್ನಡಕ್ಕೆ ವಿಶಿಷ್ಟವಾದ ಯಕ್ಷಗಾನ ಬಹಳ ಪ್ರಾಚೀನ ಕಲೆ ಎಂದೂ, ಅದರಲ್ಲಿ ವಿವಿಧ ಛಂದಸ್ಸಿನ ಮಟ್ಟುಗಳಿರುತ್ತಿದ್ದವೆಂದೂ ಊಹಿಸಬಹುದು. 'ಆದರೆ ಕ್ರಿ.ಶ. ೧೬೦೦ಕ್ಕಿಂತಲೂ ಮುಂಚಿತವಾಗಿ ಬರೆದಿರಬಹುದಾದ ಯಕ್ಷಗಾನ ಪ್ರಸಂಗ ಸಾಹಿತ್ಯ ನಮಗೆ ದೊರಕುವುದಿಲ್ಲ' – ('ಯಕ್ಷಗಾನ-ಬಯಲಾಟ', ಶಿವರಾಮಕಾರಂತ, ಪು. ೧೬೧), ಉಪಲಬ್ಧ ಯಕ್ಷಗಾನ ಸಾಹಿತ್ಯದಲ್ಲಿ ಮೇಲೆ ಹೇಳಿದ ಬೆದಂಡೆ ಚತ್ತಾಣಗಳಲ್ಲಿ ಉಕ್ತವಾದ ಕಂದ, ವೃತ್ತ, ಚೌಪದಿಗಳ ಜೊತೆಗೆ ಷಟ್ಪದಿಗಳೂ, ಪದ ಅಥವಾ ಹಾಡುಗಳೂ ದೊರಕುತ್ತವೆ. ಆದರೂ ಆ ಕಾವ್ಯಪ್ರಕಾರಗಳಿಗೂ ಯಕ್ಷಗಾನಕ್ಕೂ ಯಾವ ಬಗೆಯ ನಂಟಸ್ತಿಕೆ ಕಲ್ಪಿಸಬಹುದು

ಎಂಬುದನ್ನು ಖಚಿತವಾಗಿ ಹೇಳುವುದು ಸಾಧ್ಯವಿಲ್ಲ. ಯಕ್ಷಗಾನದ ಕವಿಗಳು ಸಾಹಿತ್ಯ ಸಂಸ್ಕಾರವನ್ನು ಹೊಂದಿದ್ದ ಜಾನಪದ ಕವಿಗಳು. ಇವರು ತಮ್ಮ ಬರವಣಿಗೆಯಲ್ಲಿ ಕಾವ್ಯಗುಣವನ್ನು ಗೌಣವಾಗಿಟ್ಟು ವಿವಿಧ ರಾಗ ತಾಳಗಳಿಗೆ ಒದಗುವಂಥ ಪದ್ಯಗಳನ್ನೂ ಹಾಡುಗಳನ್ನೂ ಅಳವಡಿಸಿಕೊಂಡರು. ಹಾಡುಗಳಿಗೆ ವರ್ಣಮಟ್ಟುಗಳು ರಚಿತವಾಗಿಲ್ಲದಿದ್ದರೂ ಯಕ್ಷಗಾನದ ಭಾಗವತರುಗಳು ಅವುಗಳ ಧಾಟಿಯನ್ನು ಪರಂಪರಾಗತವಾಗಿ ಸಾಗಿಸಿಕೊಂಡು ಬಂದಿದ್ದಾರೆ. ಧಾಟಿಗಳ ಬಗೆಗೆ ಸಂಗೀತಶಾಸ್ತ್ರಜ್ಞರು ಸಂಶೋಧನೆ ನಡಸಬೇಕಾದ ಅಗತ್ಯವಿದೆ. ಒಟ್ಟಿನ ಮೇಲೆ ವರ್ಣಕ ಕಾವ್ಯವೆಂದು ಪ್ರಸಿದ್ಧವಾದ ಹಾಡುಗಬ್ಬವೆ ಆಗಲಿ ಯಕ್ಷಗಾನ ಬಯಲಾಟ ದೊಡ್ಡಾಟ ಎಂಬ ನಾಮಾಂತರಗಳಿಂದ ಪ್ರಸಿದ್ಧವಾದ ದೇಸಿನಾಟಕವೇ ಆಗಲಿ, – ಅವು ಬಳಸುತ್ತ ಬಂದ ದೇಸಿ ಛಂದಸ್ಸೇ ಕನ್ನಡ ಗೇಯ ದ್ರವ್ಯದ ಚೌಕಟ್ಟು.

ಈ ಸಂದರ್ಭದಲ್ಲಿ ಏಲಾ (ಅಥವಾ ಏಳೆ) ಮತ್ತು ವರ್ಣಗಳನ್ನು ಕುರಿತು ನಾಲ್ಕು ಹೆಚ್ಚಿನ ಮಾತನ್ನು ಹೇಳುವುದು ಅಗತ್ಯವೆಂದು ತೋರುತ್ತದೆ.

ಪ್ರಾಚೀನ ಸಂಗೀತಶಾಸ್ತ್ರಗ್ರಂಥಗಳಲ್ಲಿ ಉಕ್ತವಾದ 'ಏಲಾ' ಎಂಬುದು ಕನ್ನಡ ಲಕ್ಷಣ ಗ್ರಂಥಗಳಲ್ಲಿ ಪ್ರಯುಕ್ತವಾದ 'ಏಳೆ' (=ಏಹಿ) ಎಂಬುದರ ಸಂಸ್ಕೃತೀಕರಣ. ಈ ಸಂಗೀತಶಾಸ್ತ್ರ ಗ್ರಂಥಗಳಲ್ಲಿ 'ಏಲಾ'ದ ಲಕ್ಷಣ ನಿರೂಪಣೆ ಬಂದಿರುವುದರಿಂದ ಅದು ಪದ್ಯಜಾತಿ ಮಾತ್ರವಾಗಿರದೆ ಜಾನಪದ ಹಾಡಿನ ಮಟ್ಟೂ ಆಗಿತ್ತೆಂಬುದರಲ್ಲಿ ಸಂದೇಹವಿಲ್ಲ. ಕ್ರಿ.ಪೂ. ೨ನೆಯ ಶತಮಾನದ 'ಶಿಲಪ್ಪದಿಗಾರಂ' ಎಂಬ ತಮಿಳು ಕಾವ್ಯದಲ್ಲಿ – '*ಯಾಹ್' ಎಂಬ ವಾದ್ಯದ ಉಲ್ಲೇಖವಿದೆ. ಇದೊಂದು ತಂತ್ರೀ ವಾದ್ಯ ಎಂದು ವಿದ್ವಾಂಸರ ಊಹೆ. ಇಂಗ್ಲಿಷಿನಲ್ಲಿ 'Lyre' ಎಂಬ ವಾದ್ಯವಿಶೇಷದ ಸಂಬಂಧದಿಂದ ಇಂಗ್ಲಿಷ್ ಗೀತ 'Lyric' ಎಂಬ ಹೆಸರನ್ನು ಪಡೆದಹಾಗೆ, ಕನ್ನಡ ಬೆದಂಡೆ ಬಹುಶಃ 'ವೈದಂಡಕ' ಎಂಬ ವಾದ್ಯವಿಶೇಷದಿಂದ ಹೆಸರು ಹೊತ್ತ ಹಾಗೆ, 'ಯಾಟ್' (<*ಏಟ್?) ವಾದ್ಯ ವಾದನ ಸಮನ್ವಿತವಾದ ಗೀತಕ್ಕೆ '*ಏಟಿ' (=ಏಳೆ) ಎಂಬ ಹೆಸರು ರೂಢಿಗೆ ಬಂದಿರಬಹುದು.[೫] ನಾಗವರ್ಮನೂ ಜಯಕೀರ್ತಿಯೂ 'ಏಳೆ'ಯ ಲಕ್ಷಣ ನಿರೂಪಣೆ ಮಾಡಿರುತ್ತಾರೆ. "ಜಯಕೀರ್ತಿ 'ಏಳೆ'ಯ ಗೇಯತೆಯ ಬಗೆಗೆ ಉಲ್ಲೇಖ ಮಾಡಿದ್ದರೆ ಶಾರ್ಙ್ಗದೇವನು ಅದರ ನಾದದ ಬಗೆಗೆ ಮತ್ತು ಅನುಪ್ರಾಸದ ಬಗೆಗೆ ಹೇಳಿದ್ದಾನೆ" (ಡಿ.ಎಸ್.ಕರ್ಕಿ:'ಛಂದೋವಿಕಾಸ', ಪುಟ ೧೪೯). ಮತಂಗನು – "ಏಲಾ ಬಹು ಭೇದ ಪ್ರವಿಸ್ತರಾ" ಎಂದು ಹೇಳಿ, 'ಲಾಟ ಕರ್ಣಾಟಗೌಡಾಂಧ್ರ ದ್ರವಿಡ' ಎಂಬ ಐದು 'ದೇಶಾಖ್ಯ' ಪ್ರಭೇದಗಳನ್ನೂ, ಮಾತ್ರೈಲಾ ವರ್ಣೈಲಾ ಎಂಬ ಛಂದೋಲಕ್ಷಿತ ವರ್ಣ (ಎಂದರೆ ಗೇಯ) ಲಕ್ಷಿತ ಪ್ರಭೇದಗಳನ್ನೂ ನಿರೂಪಿಸಿದ್ದಾನೆ. ಕರ್ಣಾಟಕದ ಪ್ರಭೇದವನ್ನು ಕುರಿತ ಅವನ ಲಕ್ಷಣ ನಿರೂಪಣೆ ಹೀಗಿದೆ :

> ಪ್ರಾಸೈರ್ಮನೋಹರೈರ್ದಿವ್ಯೈರಾದಿಮಧ್ಯಾಂತ ಗೋಚರೈಃ ಏಲಾ ಕರ್ಣಾಟಕಾ ಪ್ರೋಕ್ತಾ ಲಲಿತಧ್ವನಿ ಸಂಯುತಾ ॥ (೪೪೯)

೫. "ಅದರಲ್ಲಿ ಏಳು ಗಣಗಳಿರುವುದರಿಂದ ಏಳೆಗೆ ಏಳೆ ಎಂಬ ಪ್ರಯೋಗವು ರೂಢಿಗೊಂಡಿರಬಹುದೇ?" (ಡಿ.ಎಸ್.ಕರ್ಕಿ, 'ಛಂದೋವಿಕಾಸ', ಪು. ೧೪೯)

ಏಲಾ ಅಥವಾ ಏಳೆ ತಮಿಳಿನ ಕುಱಳ್, ವೆಣ್ಬಾ – ಇವುಗಳ ಅನುಬಂಧಿ ; ತೆಲುಗಿನ 'ಯಾಲ ಪದ' ಬಹುಶಃ...ಏಳೆಯ ಜ್ಞಾತಿ. ಕುಱಳ್ ಮತ್ತು ಯಾಲ ಪದಗಳ ಗೇಯರೂಪ ಇಂದಿಗೂ ಬಳಕೆಯಲ್ಲಿದೆ ಎಂದು ಕೇಳಿದ್ದೇನೆ. ಕನ್ನಡ ಏಳೆಯ ಪ್ರಾಚೀನ ಗೇಯ ರೂಪವಾಗಲಿ ಸಾಹಿತ್ಯ ಲಕ್ಷ್ಯವಾಗಲಿ ಉಪಲಬ್ಧವಿಲ್ಲ. ಆದರೆ, ಜನಪದ ಸಾಹಿತ್ಯದಲ್ಲಿ ಇದರ ಲಕ್ಷ್ಯ ಮಾದರಿಗಳು ದೊರೆಯುತ್ತವೆ. ಈ ಎರಡು ಪದ್ಯಗಳನ್ನು ಗಮನಿಸಿ :

ಕುದುರೇನ ತಂದೇನಿ ಜೀನ ಬಿಗಿಸಿದೇನಿ
ಬರಬೇಕ ತಂಗೀ ಮದುವೆಗೆ

ಬೇಸಗೆ ಬಿಸಿಲಣ್ಣ ಕೂಸಿನ ತಾಯಣ್ಣಾ
ಹೇಗೆ ಬರಲಣ್ಣ ಮದುವೆಗೆ

('ನಾಡಪದಗಳು': ಸಂ. ಎಲ್. ಗುಂಡಪ್ಪ)

ಈ ಲಕ್ಷ್ಯ ಬಹುಮಟ್ಟಿಗೆ ಅರ್ವಾಚೀನವಾದರೂ ಪ್ರಾಚೀನ ಏಳೆಯ ಸ್ವರೂಪವನ್ನು ಬಿಂಬಿಸುತ್ತದೆ ಎನ್ನಲಡ್ಡಿಯಿಲ್ಲ. ಬೃಹದ್ದೇಶಿಯ ಪ್ರಬಂಧಾಧ್ಯಾಯದಲ್ಲಿ ಹೇಳಿರುವ ಶುಕಸಾರಿತ, ಶುಕಶಾರಿಕ ಇವುಗಳ ಲಕ್ಷಣ (ಶ್ಲೋಕಗಳು: ೪೧೦, ೪೧೧)[೬] ಮೇಲೆ ಉದಾಹರಿಸಿದ 'ಪ್ರಶ್ನೋತ್ತರ' – 'ಸಂವಾದ' ಶೈಲಿಗಳನ್ನೇ ನಿರೂಪಿಸಿದೆ.

ಶೃಂಗಾರರಸಭೂಯಿಷ್ಠವಾದ ತೆಲುಗಿನ ಯಾಲಪದವೂ ಬಹುಮಟ್ಟಿಗೆ ಸಂವಾದ ರೂಪದ್ದೇ ಎಂದು ಕೇಳಿದ್ದೇನೆ.

ಮಥಿತಾಂಶವೇನೆಂದರೆ, 'ಏಳೆ' ಹಳಗಾಲದ ಕನ್ನಡ ಜಾನಪದ ಹಾಡಿನ ಮಟ್ಟು. ಇದು ದಕ್ಷಿಣ ಭಾರತದಲ್ಲಿ ಬೇರೆ ಬೇರೆ ಹೆಸರುಗಳಿಂದ ಅಲ್ಪ ಸ್ವಲ್ಪ ಮಾರ್ಪಾಟುಗಳೊಡನೆ ಪ್ರಚಾರದಲ್ಲಿತ್ತು. ಕರ್ಣಾಟಕ ಪ್ರಭೇದವು ಆದಿ ಮಧ್ಯಾಂತ ಪ್ರಾಸಗಳಿಂದ ಶೋಭಿಸುತ್ತಿತ್ತು. ಎರಡು ಸಾಲಿನ ಈ 'ಏಳೆ' ಕರ್ಣಾಟಕ ಸಂಗೀತ ಕೃತಿಯ ಪಲ್ಲವಿಯಾಗಿ ರೂಪಾಂತರ ಹೊಂದಿರಬಹುದೇ ಎಂಬ ಅನುಮಾನವುಂಟಾಗುತ್ತದೆ. ಇದು ವಿಚಾರಾರ್ಹ.

ವರ್ಣ, ವರ್ಣಮಟ್ಟು– ಎಂಬ ಮಾತುಗಳು ಸಂಗೀತಜ್ಞರಿಗೆ ಪರಿಚಿತ. 'ವರ್ಣ' ಎಂಬ ಶಬ್ದದ ಚರಿತ್ರೆಯೂ ಕುತೂಹಲಕಾರಿ. ಇದರ ವಿಸ್ತಾರವಾದ ವಿಶ್ಲೇಷಣೆಗೆ ಇಲ್ಲಿ ಅವಕಾಶವಿಲ್ಲ. ''ವರ್ಣ ಶಬ್ದೇನ ಗಾನಮಭಿದೀಯತೇ'' ಎಂಬ ಮತಂಗನ ನಿರ್ವಚನದಿಂದ, ಕನ್ನಡದ 'ವರ್ಣಕ' ಕಾವ್ಯಕ್ಕೆ ಹಾಡುಗಬ್ಬ – ಹಾಡುಗವಿತೆ ಎಂಬ ಪರ್ಯಾಯನಾಮಗಳು ಅರ್ಥಾನುಗುಣವಾಗಿ ಸರ್ವಥಾ ಒಪ್ಪುತ್ತವೆ ಎಂದೆನ್ನಬಹುದು. ಮತಂಗನ ಮತ್ತೊಂದು ಮಾತೂ ಇಲ್ಲಿ ಗಮನಾರ್ಹ; ''ತಾಲೇನಾಪಿ ಚ ಯುಕ್ತಃ ಸ್ಯಾತ್ ವರ್ಣಃ ಕರ್ಣಾಟ ಭಾಷಯಾ'' ಎಂದು ಅವನ ಸ್ಪಷ್ಟೋಕ್ತಿ. ಇದು 'ವರ್ಣಕ' ಕಾವ್ಯಾಭಿಧಾನದ ಮೇಲೆ ಹೆಚ್ಚಿನ ಬೆಳಕು ಬೀರುತ್ತದೆ. ವರ್ಣಕ ಕಾವ್ಯ ಹಾಡುಗಬ್ಬವಾಗಿದ್ದರೂ ಅದರಲ್ಲಿ ತಾಳನಿಯಮವಿಲ್ಲ. ೧೯ನೆಯ ಶತಮಾನದ 'ಶ್ರೀಕೃಷ್ಣ-ಬಾಲಲೀಲೆ' ಎಂಬ

---

೬. ಯಸ್ತು ತಾಲದ್ವಯೋಪೇತ ಪದಪಾಟವಿರಾಜಿತಃ
ಪ್ರಶ್ನೋತ್ತರಸಮಾಯುಕ್ತಃ ಸದೋಕ್ತಃ ಶುಕಸಾರಿತಃ
xxಕರ್ಣಾಟಭಾಷಾಯಾಮಥವಾ ಮಿಶ್ರಿತಾ
ಯದಿ ಸಂವಾದಕಪದೋಪೇತಃ ಸಭವೇಚ್ಛುಕಸಾರಿಕಃ ||

ಕೀರ್ತನಗಳ ಪ್ರಬಂಧದಲ್ಲಿ (ಇದು ಹಸ್ತಪ್ರತಿರೂಪದಲ್ಲಿದ್ದು, ಇನ್ನೂ ಪ್ರಕಟವಾಗಿಲ್ಲ) ಕೀರ್ತನೆಗಳಿಗೆ ವರ್ಣಮಟ್ಟು ಇಲ್ಲದಿದ್ದರೂ ಧಾಟಿಯನ್ನು ನಿರ್ದೇಶಿಸಿದೆ. ಒಂದು ಉದಾಹರಣೆ:

ಬಾಲಲೀಲೆಯಲ್ಲಿ ಅಕ್ರೂರ ಪ್ರಕರಣದ ಚುಂಗಡಿ ।
ವಂಭತ್ತನೇ ಕೀರ್ತನೆ। ರಾಗಾ। ಕಾಯೆ ಕಮಲಾಂಬಕೀ
ಎಂಬ ವರ್ಣ। ಬಾರೆಂದು ಭಕ್ತನಾನು । ಅಕ್ರೂರನ ಹರಿ
ತಾನು। ಕಾರುಣ್ಯವಾ ತೋರಿದಾನು ॥ ಪಲ್ಲವಿ ॥

'ಭರತೇಶ ವೈಭವ' ಎಂಬ ಸಾಂಗತ್ಯ (ವರ್ಣಕ) ಕಾವ್ಯದ ಕರ್ತೃ ರತ್ನಾಕರ 'ರತ್ನಾಕರವರ್ಣಿ' ಎಂದೂ ಪ್ರಸಿದ್ಧನಾಗಿದ್ದಾನೆ. ಅವನು ಹಾಡುಗಳನ್ನೂ ರಚಿಸಿದ್ದಾನೆ. ವರ್ಣಗಳ ಕರ್ತೃ ವರ್ಣಿ. ವರ್ಣ ಎಂದರೆ ಹಾಡು ಎಂದು ಅರ್ಥಮಾಡಬಹುದು. ಇದು ಸಾಹಿತ್ಯಪ್ರಧಾನ. ಹಾಡಿಗೆ ಪ್ರತಿಯಾಗಿ ವರ್ಣ ಎಂಬ ಮಾತು ಈಗ ಬಳಕೆ ತಪ್ಪಿದೆ; ಪದ, ಗೀತ ಎಂಬ ಮಾತುಗಳು ಎಂದಿನಿಂದಲೂ ರೂಢಿಯಲ್ಲಿವೆ. 'ಪದ'ಕ್ಕೆ ನಾಗವರ್ಮನ ವಿವರಣೆ ಬೇರೆಯಾದರೂ, ಶಿವಶರಣರ ಮತ್ತು ಹರಿದಾಸರ ರಚನೆಗಳು ಪದಗಳು ಎಂಬ ಹೆಸರಿನಿಂದಲೂ ಪ್ರಸಿದ್ಧವಾಗಿವೆ. ಶಿವಶರಣರ ವಚನಗಳೂ ವಿವಿಧ ಭಕ್ತಿರಸಪ್ರಧಾನ ರಚನೆಗಳೂ ಒಂದು ಕಾಲದಲ್ಲಿ ಗೇಯಪ್ರಕಾರವೇ ಆಗಿದ್ದವು ಎಂದು ಈಚಿನ ಸಂಶೋಧನೆಗಳಿಂದ ವ್ಯಕ್ತಪಟ್ಟಿದೆ.[೭]

ಹಾಡುವ ಮಟ್ಟದ ತ್ರಿಪದಿ[೮] ಛಂದಸ್ಸಿನ 'ಸರ್ವಜ್ಞ ಪದಗಳು' 'ವಚನ' ಎಂಬ ಹೆಸರಿನಿಂದಲೂ ಪ್ರಸಿದ್ಧವಾಗಿರುವುದರಿಂದ, ''ಹಿಂದಿನವರ ಅರ್ಥದಲ್ಲಿ 'ವಚನ'ವೆಂದರೆ ಪದ್ಯಪ್ರಕಾರಗಳೂ ಸೇರ್ಪಡೆಯಾಗುವುದೆಂದು ಮಾತ್ರ ತೀರ್ಮಾನಿಸುವುದು ಒಳ್ಳೆಯದು''– ಎಂಬ (ಡಾ॥ ಬಸವರಾಜು ಅವರ) ಅಭಿಪ್ರಾಯಕ್ಕೆ ಆಧಾರವಿರುವುದರಿಂದ, ವಚನ ಪ್ರಕಾರ ಗೇಯಯೋಗ್ಯ ಎಂದು ಹೇಳುವುದು ಯುಕ್ತವಾಗಿದೆ. ಆದರೆ ಪದ್ಯಗಂಧಿಯಾದ ಗದ್ಯರೂಪದ ವಚನವನ್ನು ತಾಳಬದ್ಧವಾದ ಹಾಡು ಎಂದು ಪರಿಗಣಿಸಿ ಹಾಗೆ ಹಾಡುವುದು ಪ್ರಯೋಗಪಟುತ್ವಕ್ಕೆ ನಿದರ್ಶನವಾಗಬಹುದೇ ಹೊರತು ವಸ್ತುಸ್ಥಿತಿಯ ಪ್ರದರ್ಶನವಾಗಲಾರದು.

---

೭ ಈ ವಿಚಾರದಲ್ಲಿ ಹೆಚ್ಚಿನ ವಿಷಯವನ್ನು ತಿಳಿಯಬಯಸುವವರು ಡಾ॥ ಎಲ್. ಬಸವರಾಜು ಅವರ 'ಶಿವದಾಸ ಗೀತಾಂಜಲಿ'ಗ್ರಂಥವನ್ನು ನೋಡಬೇಕು. ಕೆಲವು ಪ್ರಕಾರಗಳನ್ನು ಇಲ್ಲಿ ಉಲ್ಲೇಖಿಸಬಹುದು: (೧) 'ತಾರಾವಳಿ (೨೭ ನುಡಿ ಅಥವಾ ಪದ್ಯಗಳು, ಪಲ್ಲವಿ – ಇವು ಇರುವ ಹಾಡು); (೨) ಹರಿದಾಸರ 'ಉಗಾಭೋಗ', 'ಗೋಪಿಕಾ ಗೀತೆ', 'ಭ್ರಮರ ಗೀತೆ'; (೩) ಸ್ತೋತ್ರರೂಪದ 'ಅಷ್ಟಕ', ಬಹು ಪ್ರಾಚೀನವೆಂದು ಊಹಿಸಬಹುದಾದ ಜನಪದ ಸಾಹಿತ್ಯ ಪ್ರಕಾರ 'ಓವನಿಗೆ,' 'ಒನಕೆವಾಡು' (ಟಿಪ್ಪಣಿ ೮ ನೋಡಿ); (೪) 'ಅಕ್ಕಮಹಾದೇವಿ, ಕರಸ್ಥಲ ನಾಗಿದೇವ, ಮುಂತಾದವರ ಕಣಿ, ಗೊಂದಲ, ಕೋಲಪದ, ಚಂದಮಾಮಗಳು' ('ಶಿವದಾಸ ಗೀತಾಂಜಲಿ'ಯಲ್ಲಿ ೧೩೦, ೧೩೧, ೧೪೪, ೧೪೫, ೧೬೨ನೆಯ ಹಾಡುಗಳು ಇವಕ್ಕೆ ದೃಷ್ಟಾಂತಗಳು); (ನಷ್ಟಪ್ರಾಯವಾಗುತ್ತಿರುವ) ತತ್ತ್ವಪದ, ಜೋಗುಳ ಹಾಡು, ಹಸೆ ಹಾಡು ಮುಂತಾದವು ಈ ಬಗ್ಗೆ ವ್ಯಾಪಕ ಸಂಶೋಧನೆ, ಅಭ್ಯಾಸ ನಡೆಯಬೇಕು.

೮ ''ಚಂದನದ ಚೌಕಿಗೆಯ ಮುಂದೆ ಮರಕತದೊರಲೊಳ್ ಮುತ್ತಿನಕ್ಕಿಯಂ ಪೊಯ್ದು ಕನಕದೊನಕೆಯಂ ನೆಗಪಿ ಸೂಳೆ ಸಿದ್ಧಾಂತಮಂ 'ಒನಕೆವಾಡಂ' ಮಾಡಿ ಪಾಡುವ ಪೆಂಡಿರ ವಿನೋದ''ವನ್ನು ನೇಮಿಚಂದ್ರ 'ಲೀಲಾವತಿ'ಯಲ್ಲಿ ವರ್ಣಿಸಿದ್ದಾನೆ. ಈ ಒನಕೆವಾಡು ಇಲ್ಲಿ ತ್ರಿಪದಿಗಳ ಗುಚ್ಛ. (೨-೩೨ ರಿಂದ ೪೧ ಪದ್ಯಗಳು).

ಈವರೆಗಿನ ಪರಿಶೀಲನೆಯ ಫಲಿತಾಂಶವಾಗಿ ಇಷ್ಟನ್ನು ಹೇಳಬಹುದು: ಕನ್ನಡ ಕಾವ್ಯದ ಛಂದಸ್ಸೇ ಕನ್ನಡ ಹಾಡಿನ ಲಯಕ್ಕೆ ನಿರ್ಧಾರಕ ಸೂತ್ರವಾಗಿದ್ದು, ಸಂಗೀತದ ತಾಳ ವೈವಿಧ್ಯಕ್ಕೆ ಜನ್ಮ ಕೊಟ್ಟಿದೆ. ಈ ಅಂಶವನ್ನು ಸಂಕ್ಷೇಪವಾಗಿ ಪರಿಶೀಲಿಸಬಹುದು.

ಕನ್ನಡ ಛಂದಸ್ಸಿನ ತಲಕಾವೇರಿ 'ಏಳೆ' ಎಂಬುದು ಬಹುಮಂದಿ ವಿದ್ವಾಂಸರು ಒಪ್ಪಿರುವ ವಾದ. ಏಳೆ ತ್ರಿಪದಿ ಸಾಂಗತ್ಯಗಳಿಗೆ ನೇರವಾಗಿ ದಾರಿಮಾಡಿಕೊಟ್ಟು, ಷಟ್ಪದಿಗಳು ರೂಪಗೊಳ್ಳುವುದಕ್ಕೆ ಪರೋಕ್ಷವಾಗಿ ಕಾರಣವಾಗಿದೆ. (ಈ ಬಗ್ಗೆ ಭಿನ್ನಾಭಿಪ್ರಾಯಗಳೂ ಇಲ್ಲದಿಲ್ಲ). ಇವಕ್ಕೆಲ್ಲ ಆಧಾರಭೂತವಾದ ಲಯ ಅಂಶಗಳ ಘಟಕ, ಅಂಶ ಗಣದಲ್ಲಿ ಗುರು ಮುಖ್ಯ ಘಟಕ. ಎರಡಂಶದ ಗಣ ಬ್ರಹ್ಮಗಣ; ಮೂರಂಶದ್ದು ವಿಷ್ಣು; ನಾಲ್ಕಂಶದ್ದು ರುದ್ರ; ಪ್ರತಿಗಣದ ಆದಿಗುರುವಿನ ಸ್ಥಾನದಲ್ಲಿ ಎರಡು ಲಘುಗಳೂ ಉಳಿದ ಗುರುಗಳ ಸ್ಥಾನದಲ್ಲಿ ಒಂದು ಲಘುವೂ ಬರಬಹುದು. ಅವುಗಳನ್ನು ಮಾತ್ರಾನ್ವಿತವಾಗಿ ಪ್ರಸ್ತಾರ ಮಾಡಿದರೆ ಮಾತ್ರಾನ್ವಿತವಾದ ತ್ರಿಮಾತ್ರಾಗಣ, ಚತುರ್ಮಾತ್ರಾಗಣ, ಪಂಚಮಾತ್ರಾಗಣ, ತ್ರಿಮಾತ್ರೆ ಚತುರ್ಮಾತ್ರೆಗಳ ಮಿಶ್ರಗಣ – ಇವು ಹೊರಡುತ್ತವೆ. ಪ್ರಾಕೃತದ ಮೂಲಕ ಕನ್ನಡಕ್ಕೆ ಬಂದ ರಗಳೆಯ ಛಂದಸ್ಸು ಮಾತ್ರಾಘಟಿತ. ಹೀಗೆ, ಹರಿಹರ ರಾಘವಾಂಕರ ಕಾಲಕ್ಕೆ ಮಾತ್ರಾಗಣಗಳು ರೂಢಿಗೆ ಬಂದು, ಷಟ್ಪದಿಗಳ ಛಂದಸ್ಸು ಏರ್ಪಟ್ಟಿತು. ಶಿವಶರಣರೂ ಹರಿದಾಸರೂ ಈ ಎರಡೂ ಗಣಗಳನ್ನು ಉಪಯೋಗಿಸಿಕೊಂಡು ಹಾಡುಗಳನ್ನು ರಚಿಸಿದರು. ಮಾತ್ರಾಗಣಗಳ ಲಯಗಳು ಸಂಗೀತದ ತ್ರಿಶ್ರ, ಚತುರಶ್ರ, ಖಂಡ ಮತ್ತು ಮಿಶ್ರಜಾತಿಗಳ ಲಯಗಳಿಗೆ ಜನ್ಮಕೊಟ್ಟುವೆಂದರೆ ತಪ್ಪಾಗದು. ಅಂಶಗಣಗಳ ಹಾಡುಗಬ್ಬದಲ್ಲಿ ಲಯ ವೈವಿಧ್ಯ ಸ್ಫುಟಗೊಳ್ಳದಿದ್ದರೂ ಅವನ್ನು ಹಾಡಿಗೆ ಅಳವಡಿಸಿಕೊಂಡಾಗ ಅವುಗಳಲ್ಲಿ ಲಯ ವೈವಿಧ್ಯವನ್ನು ಸಾಧಿಸಿ ಹೆಚ್ಚಿನ ಪ್ರಯತ್ನವಿಲ್ಲದೆ ಏಕತಾಳ, ಚತುರಶ್ರ ಜಾತಿಯ ತ್ರಿಪುಟ ಅಥವಾ ಆದಿತಾಳ ಮಿಶ್ರಜಾತಿಯ ಛಾಪುತಾಳ – ಇವುಗಳಲ್ಲಿ ಹಾಡಬಹುದು. ಉದಾಹರಣೆಯಾಗಿ, ಪುರಂದರದಾಸರ 'ಬೇವ ಬೆಲ್ಲದೊಳಿಡಲೇನು ಫಲ। ಹಾವಿಗೆ ಹಾಲೆರದೇನು ಫಲ' ಎಂಬ ಆದಿತಾಳದ ಹಾಡಿನ ಮೊದಲ ಚರಣಕ್ಕೆ ಅಂಶಗಣ ರೀತ್ಯಾ ಪ್ರಸ್ತಾರ ಹಾಕಿ ತೋರಿಸಬಹುದು.

ಕುಟಿಲವ । ಬಿಡದಲೆ । ಕುಜನರು । ಮಂತ್ರವ
ಪಠನೆಯ । ಮಾಡಿದ । ರೇನು ಫಲ
ಸಟೆಯ । ನ್ನಾಡುವ । ಮನುಜರು । ಮನದಲಿ
ವಿಠಲನ । ನೆನೆದರೆ । ಏನು ಫಲ

ವಿ। ವಿ । ವಿ । ವಿ
ವಿ। ವಿ । ರು ।
ಬ್ರ। ವಿ । ವಿ । ವಿ ।
ವಿ। ವಿ । ರು

ಆದಿತಾಳಕ್ಕೂ ಏಕತಾಳಕ್ಕೂ ನಡೆಯಲ್ಲಿ ವ್ಯತ್ಯಾಸವಿಲ್ಲದ್ದರಿಂದ ಈ ರಚನೆ ಏಕತಾಳಕ್ಕೆ ಒದಗುವುದೆಂದು ಪ್ರತ್ಯೇಕ ಹೇಳಬೇಕಾದ ಅಗತ್ಯವಿಲ್ಲ. ಮಿಶ್ರಛಾಪುತಾಳಕ್ಕೆ ಹೇಗೆ ಒದಗುತ್ತದೆ

ಎಂಬುದನ್ನು ಹಾಡಿಯೂ ತಾಳದ ಅಂಗಗಳ ಪ್ರಸ್ತಾರ ಹಾಕಿಯೂ ತೋರಿಸಬಹುದು.[೯]

ಕನ್ನಡ ಛಂದಸ್ಸು, ಕನ್ನಡ ಹಾಡಿನ ಮಟ್ಟಿನ ಲಯಗಳು – ಇವುಗಳ ಮೂಲ ಒಂದೇ. ಕರ್ಣಾಟಕ ಸಂಗೀತದ ಕೃತಿರೂಪದಲ್ಲಿ ಕಾಣುವ ಪಲ್ಲವಿ, ಚರಣ, ತಾಳ, ಯತಿ, ಪ್ರಾಸಾನುಪ್ರಾಸ ಮುಂತಾದ ಲಕ್ಷಣಗಳೆಲ್ಲ ಕನ್ನಡ ಗೇಯರೂಪದ ಬಳುವಳಿ ಎಂದು ಖಂಡಿತವಾಗಿ ಹೇಳಲಾಗದಿದ್ದರೂ ಅದರ ಬೆಳವಣಿಗೆಯಲ್ಲಿ ಗೋಚರಿಸುತ್ತವೆ. ಈ ದಿಸೆಯಲ್ಲಿ ವ್ಯಾಪಕವಾದ ಸಂಶೋಧನೆ ಆಗಬೇಕಾಗಿದೆ.

ಪುರಂದರದಾಸರೇ ಮುಂತಾದ ಹರಿದಾಸರು ಕನ್ನಡ ಗೀತಸಾಹಿತ್ಯದ ಆದ್ಯ ಪ್ರವರ್ತಕರು ಎಂಬ ಗ್ರಹಿಕೆ ನಮ್ಮಲ್ಲಿ ರೂಢಮೂಲವಾಗಿದೆ. ಆದರೆ ೯-೧೦ನೆಯ ಶತಮಾನಗಳಿಂದಲೇ ಕನ್ನಡ ಗೀತಸಾಹಿತ್ಯ ಪ್ರಚುರವಾಗಿತ್ತು ಎಂಬುದು ಈವರೆಗಿನ ಪರಿಶೀಲನೆಯಿಂದ ವ್ಯಕ್ತಪಡುತ್ತದೆ ಎಂದು ನಂಬಿದ್ದೇನೆ. ನಮ್ಮಲ್ಲಿ ಬೇರೂರಿರುವ ಇನ್ನೊಂದು ತಪ್ಪು ತಿಳಿವಳಿಕೆ ಎಂದರೆ ದ್ವೈತ ಸಂಪ್ರದಾಯದ ದಾಸರ ಪದಗಳು ಮಾತ್ರವೇ ಕನ್ನಡದಲ್ಲಿರುವ ಗೇಯ ಸಾಹಿತ್ಯ ಎಂಬುದು. ದಾಸ ವಾಙ್ಮಯ ಪ್ರಮಾಣದಲ್ಲಿ ದೊಡ್ಡದಾಗಿರಬಹುದು. ವೀರಶೈವ, ಜೈನ, ಅದ್ವೈತ ಮುಂತಾದ ದರ್ಶನಗಳನ್ನು ಪ್ರತಿಬಿಂಬಿಸುವ ಕೀರ್ತನೆಗಳೂ ಸಾಹಿತ್ಯ ವಿದ್ವಾಂಸರ ಪರಿಶ್ರಮದಿಂದ ಬೆಳಕಿಗೆ ಬರುತ್ತಿವೆ. ಇವುಗಳ ಗೇಯಮೌಲ್ಯವನ್ನು ಪ್ರಕಾಶಗೊಳಿಸುವುದು ಸಂಗೀತ ವಿದ್ವಾಂಸರ ಪಾಲಿಗೆ ಉಳಿದಿದೆ.

ಆಧುನಿಕ ಭಾವಗೀತೆ ಕನ್ನಡ ಹಾಡಿನ ಹೊಡೆಯಿಂದಲೇ ಹುಟ್ಟಿ ಬಂದ ಬೆಳಸು. 'ಭೃಂಗದ ಬೆನ್ನೇರಿ ಬಂತು ಕಲ್ಪನಾ ವಿಲಾಸ' ಎಂಬ ಬೇಂದ್ರೆಯವರ ಕಾವ್ಯೋಕ್ತಿಯಲ್ಲಿ, ಭಾವಗೀತೆಯ ರಚನೆಯಲ್ಲಿ ಗೇಯತೆ ಕಾವ್ಯತ್ವಕ್ಕೆ ವಾಹಕವಾಗಿರುವ ಅಂಶವೇ ವ್ಯಕ್ತವಾಗಿದೆ. ಕಾವ್ಯಕ್ಕೂ ಗೇಯತೆಗೂ ಅವಿನಾಭಾವ ಸಂಬಂಧವುಂಟೇ ಇಲ್ಲವೇ ಎಂಬ ತಾತ್ವಿಕ ಚರ್ಚೆ ಇಲ್ಲಿಗೆ ಅಪ್ರಕೃತ. ಪ್ರಾಚೀನ ಕನ್ನಡ ಹಾಡಿನ ಪರಂಪರೆ ಇಂಗ್ಲಿಷ್ ಭಾವಗೀತೆಯ (Lyric) ಪ್ರಭಾವಕ್ಕೆ ಒಳಗಾಗಿ, ತನ್ನ ಮೂಲ ಸ್ವರೂಪ ಲಕ್ಷಣಗಳನ್ನು ಕಳೆದುಕೊಳ್ಳದೆ, ತನ್ನ ಒಡಲಿನ ಮಾಟವನ್ನು ಉಳಿಸಿಕೊಂಡು – ಹೇಗೆ ಹೊಸ ತೊಡಿಗೆಗಳನ್ನು ತೊಟ್ಟು – ಆಧುನಿಕ ಭಾವಗೀತೆಯಾಗಿ ಬೇರೆಯ ಮೈತಳೆಯಿತೆಂಬುದನ್ನು ನಾವು ಗುರುತಿಸಿಕೊಂಡರೆ ಸಾಕು. ಇಂದಿನ ಜನಪ್ರಿಯ ಲಘುಸಂಗೀತಕ್ಕೆ ಸಾಮಗ್ರಿಯನ್ನು ಒದಗಿಸಿ, ಚಿತ್ರಗೀತಕ್ಕೆ (ಸ್ವಲ್ಪಮಟ್ಟಿಗಾದರೂ) ಚೌಕಟ್ಟು ಕೊಟ್ಟಿರುವುದು ಕನ್ನಡ ಭಾವಗೀತೆ. ಹೊಸಗನ್ನಡ ಗೀತರೂಪಕಗಳ ರಾಗ-ತಾಳ ಸಮನ್ವಿತ ಗೀತಗಳು ; ಬಿನ್ನಹ' ('ಶ್ರೀನಿವಾಸ'), 'ಅಂತಃಪುರ ಗೀತೆಗಳು' (ಡಿ.ವಿ.ಜಿ); ಇನ್ನಿತರ ಕೆಲವು ಕವಿಗಳ ಇದೇ ಬಗೆಯ ರಚನೆಗಳು–ಕನ್ನಡ ಹಾಡಿನ ವಿಕಾಸದ ಇಂದಿನ ಪರಿಣತ ಸ್ಥಿತಿಯನ್ನು ಸೂಚಿಸುತ್ತಿವೆ. 'ಮುಕ್ತ ಛಂದಸ್ಸು' ಕನ್ನಡ ಹಾಡಿನ ಮುಂದುವರಿಕೆಗೆ ವಿರುದ್ಧಶಕ್ತಿಯಾಗಿ ಪರಿಣಮಿಸೀತು ಎಂಬ ಶಂಕೆಗೆ ಕಾರಣವಿಲ್ಲವೆಂದು ತೋರುತ್ತದೆ. ವಚನ ಸಾಹಿತ್ಯಪ್ರಕಾರ ದಾಸರ ಪದಗಳ ಬೆಳವಣಿಗೆಯನ್ನು ತಡೆಹಿಡಿಯಲಿಲ್ಲ.

---

೯. 'ಒನಕೆವಾಡು' ತ್ರಿಪದಿಯಲ್ಲಿರುವುದನ್ನು ಹಿಂದೆ ನೋಡಿದ್ದೇವೆ. 'ತ್ರಿಪದಿ'ಯನ್ನೂ 'ಸಾಂಗತ್ಯ'ವನ್ನೂ ವಿವಿಧ ತಾಳಗಳಲ್ಲಿ ಹೇಗೆ ಹಾಡಬಹುದೆಂಬುದನ್ನು ಟಿ. ಕೇಶವಭಟ್ಟರು ಲೇಖನವೊಂದರಲ್ಲಿ ವಿವೇಚಿಸಿದ್ದಾರೆ. (ನೋಡಿ: 'ಸಂಶೋಧನ ರತ್ನಮಾಲಿಕೆ'; ಪು. ೧೫೦-೧೬೪). ಇದು ವಿಚಾರಾರ್ಹ. 'ತ್ರಿಪದೀ ತಾಲಹೀನಾ ಕರ್ಣಾಟಭಾಷಯಾ' ಎಂಬ ಶಾರ್ಙ್ಗದೇವನ ಮತವನ್ನು ಇವರು ಒಪ್ಪುವುದಿಲ್ಲ. ಅವನ ಕಾಲದಲ್ಲಿ ಅದು ತಾಲರಹಿತವಾಗಿ ಗಾಯನವಾಗುತ್ತಿದ್ದಿರಬೇಕು.

ಕನ್ನಡ ಕವಿತೆಯನ್ನು ಸಂಗೀತದ ಬಂಧನದಿಂದ ಮುಕ್ತಮಾಡಬೇಕು ಎಂಬ ಪ್ರವೃತ್ತಿಯೊಂದು ಕನ್ನಡ ಕಾವ್ಯಪ್ರಪಂಚದಲ್ಲಿ ಬಲಿಯುತ್ತಿದೆ. ಅದೇ ರೀತಿ, ಮಾತಿನ ಹೊರೆ ನಮಗೆ ಬೇಕಿಲ್ಲ ಎಂಬ ಪ್ರವೃತ್ತಿ ಸಂಗೀತ ಪ್ರಪಂಚದಲ್ಲಿಯೂ ತಲೆಹಾಕಿದರೆ ಆಶ್ಚರ್ಯವಿಲ್ಲ. ಆದರೆ, ನನ್ನಮಟ್ಟಿಗೆ ಹೇಳುವುದಾದರೆ, ಸಂಗೀತ ಸಾಹಿತ್ಯಗಳು ಪಂಡಿತ ಪಾಮರರಿಬ್ಬರಿಗೂ ಏಕಕಾಲದಲ್ಲಿ ಪ್ರಿಯವಾಗಿ ಉಳಿಯಬೇಕಾದರೆ ಎರಡೂ ಸ್ನೇಹದಿಂದ ಜೊತೆಗೂಡಿಯೇ ಸಾಗಬೇಕು. ಕರ್ಣಾಟಕ ಸಂಗೀತ ಹೀಗೆ ಮುನ್ನಡೆಯುವಾಗ, ಅಗ್ರಮಾನ್ಯತೆಗೆ ಅರ್ಹವಾಗಬಲ್ಲ ವೈವಿಧ್ಯಪೂರ್ಣವಾದ ಗೀತ ಸಾಹಿತ್ಯ ಕನ್ನಡದಲ್ಲಿಯೂ ಇದೆ ಎಂಬುದನ್ನು ಅದು ಮರೆಯದಿರಲಿ ಎಂದು ನಮ್ಮ ಬಿನ್ನಹ.

*ಕದಂಬ, ೧೯೬೩ ಪು.೧೧೩-೨೩*

# ೩೫. ಒನಕೆವಾಡು

● ಟಿ. ಕೇಶವಭಟ್ಟ

ಮಾನವನು ಅನ್ನ ಸೇವಿಸುತ್ತಿದ್ದಾಗಿನಿಂದಲೇ ಬತ್ತ ಕುಟ್ಟುವ ಕೆಲಸವೂ ನಡೆದುಬಂದಿದೆಯೆನ್ನಬಹುದು. ಈ ಕೆಲಸಕ್ಕೆ ಸಾಧನೋಪಕರಣ ಒನಕೆ. ಬತ್ತ ಕುಟ್ಟುವುದು ಜೀವನಾವಶ್ಯಕ ಕಾರ್ಯವೆ ನಿಜ. ಇದು ಶ್ರಾಮಕವೂ ಅವ್ಯಸ್ತವೂ (Monotonous) ಆದ ಕೆಲಸ. ಇದನ್ನು ಮಾಡುವವರು ಶ್ರಮಜೀವಿಗಳಾದ ಹೆಂಗುಸರೇ ಹೆಚ್ಚು. ಅವರು ಬತ್ತ ಕುಟ್ಟುವಾಗ ಆದ ದಣಿವನ್ನು ಕಳೆವುದಕ್ಕೂ ಚಿತ್ತಪ್ರಸನ್ನತೆಯನ್ನು ತಳೆವುದಕ್ಕೂ ತಮ್ಮ ಮೆಚ್ಚಿನ ಹಾಡುಗಳನ್ನು ಹಾಡಿಕೊಳ್ಳುವರು; ಒನಕೆಯ ಕುಟ್ಟಿನ ತಾಳಗತಿಗೆ ಸರಿಯಾಗಿ ಹಾಡಿಕೊಳ್ಳುವರು. ಬತ್ತ ಕುಟ್ಟುವಾಗ ಮಾತ್ರವಲ್ಲದೆ, ಇಂದಿಗೂ ಬೀಸುಗಲ್ಲು ತಿರುಗಿಸುವಾಗ – ತೊಟ್ಟಿಲು ತೂಗುವಾಗ – ಗಾಡಿ ಎಬ್ಬುವಾಗ – ಹಸು ಮೇಪು ಮಾಡಿಸುವಾಗ – ಬೂತದ ಕೋಲ ಏರ್ಪಡುವಾಗ – ನೇಜಿ (ನಾಟಿ) ಕೆಲಸ ನಡೆವಾಗ – ಹಾಡಿನ ದನಿ ಹೊರಟೇಬಿಡುತ್ತದೆ. ಆ ಹಾಡಿನ ದನಿಯೊಡವೆರೆತು ಗ್ರಾಮೀಣ ಜನತೆಯ ಜೀವನದ ಸರಳಸಾಹಿತ್ಯವೂ ಹರಿಯುತ್ತದೆ. ಬತ್ತ ಕುಟ್ಟುವ ಹಾಡು ''ಒನಕೆವಾಡು''. ಈ ಒನಕೆವಾಡಿನ ಹಳಮೆ, ನಡೆ, ನುಡಿ, ಧಾಟಿ, ಹುರುಳು, ಲಕ್ಷಣ – ಮುಂತಾದವನ್ನು ತಿಳಿದು ತಿಳಿಸಬಲ್ಲವರು ವಿರಳ. ಯಂತ್ರ ಯುಗದವರಾದ ಇಂದಿನ ಶ್ರಮಿಕ ವರ್ಗದ ಹೆಂಗುಸರಿಗೆ ಒನಕೆವಾಡು ಅಪರಿಚಿತವೆಂಬಂತಾಗಿದೆ. ಆದರೆ, ಪರಿಶೀಲನೆ ನಡೆಯಿಸಿದಾಗ ಪುರಾತನ ಕಾಲದಿಂದಲೇ ಒನಕೆವಾಡು ಅತ್ಯಂತ ಪರಿಚಿತವೂ ಪ್ರಚಲಿತವೂ ಜನಪ್ರಿಯವೂ ಆದ ಹಾಡಾಗಿತ್ತೆಂದು ತಿಳಿದುಬರುತ್ತದೆ.

ಒನಕೆವಾಡಿನ ಪ್ರಾಚೀನತೆಯ ಆಧಾರ ನಮಗೆ ಋಗ್ವೇದದಲ್ಲೇ ಸಿಗುತ್ತದೆ. ವೇದದಲ್ಲಿ 'ಅವಘಾತ ಮಂತ್ರ' ಎಂಬುದಿದೆ. ಯಜ್ಞಕ್ಕೆ ಬೇಕಾಗುವ ಧಾನ್ಯವನ್ನು ಕುಟ್ಟಿ ಶುದ್ಧಿ ಮಾಡುವಾಗ ಹೇಳುವ ಮಂತ್ರವಿದು. ಪ್ರತಿಯೊಂದು ಒನಕೆ ಪೆಟ್ಟಿಗೂ ಈ ಮಂತ್ರವನ್ನು ಉಚ್ಚರಿಸಬೇಕೆಂದು ಅಲ್ಲಿ ಹೇಳಿದೆ. 'ಪೂರ್ಣಿಕ' ಎಂಬವಳು ಬತ್ತ ಕುಟ್ಟುತ್ತಿರುವುದನ್ನೂ ಮಾಣವಕನು ಆಗ ಅವಘಾತ ಮಂತ್ರ ಹೇಳುವುದನ್ನೂ ಸಾಯಣಭಾಷ್ಯದಲ್ಲಿ ಉಲ್ಲೇಖಿಸಲಾಗಿದೆ.[೧]

ಶಾಸನಗಳ ಕಾಲದಿಂದಲೇ 'ಒನಕೆವಾಡು' ಕನ್ನಡದಲ್ಲಿ ಪ್ರಸ್ತಾಪಿತವಾದುದನ್ನು ಕಾಣಬಹುದು. ಶಿವಮೊಗ್ಗ ಜಿಲ್ಲೆಯ ಹುಂಚದ ಪಂಚಬಸ್ತಿ ಅಂಗಳದ ಶಿಲಾಶಾಸನದಲ್ಲಿ ಒನಕೆವಾಡಿನ ಉಲ್ಲೇಖ ಹೀಗಿದೆ:

ಶಿವಮಾರದೇವಂ ಸೈಗೊಟ್ಟನೆಂಬೆಱಡನೆಯ ಪೆಸಱಿಂ ತಾಳ್ದಿ ಶಿವಮಾರ ಮತಮೆಂದು
ಗಜಶಾಸ್ತ್ರಮಂ ಮಾಡಿ ಮತ್ತಂ

ಕಂದ॥ ಏವೇೞ್ದುದೊ ಶಿವಮಾರ ಮ
ಹೀವಳಯಾಧಿಪನ ಸುಭಗ ಕವಿತಾಗುಣಮಂ

---

೧. ಋಗ್ವೇದ ಸಂಹಿತಾ – ಭಾಗ ೧, ಪುಟ ೩೮೩ (ಶ್ರೀ ಜಯಚಾಮರಾಜೇಂದ್ರ ವೇದ ರತ್ನಮಾಲಾ).

ಭೂವಳಯದೊಳ್ ಗಜಾಷ್ಟಕ
ಮೋವನಿಗೆಯುಮೊನಕೆವಾಡುಮಾದುದೆ ಪೇಟ್ಟುಂ ॥[೭]

ಶಿವಮಾರನೆಂಬ ಈ ಗಂಗರಾಜನು ಕ್ರಿ.ಶ. ೮೦೦ನೆಯ ಕಾಲದಲ್ಲಿದ್ದನು. ಇವನು ಬರೆದ ಗಜಾಷ್ಟಕವು ಓವನಿಗೆಯೂ ಒನಕೆವಾಡೂ ಆಯಿತಂತೆ; ಅಷ್ಟೊಂದು ಪ್ರಚುರವಾಯಿತೆಂದು ಈ ಮಾತಿನ ಭಾವವಾಗಿ ಕಾಣುತ್ತದೆ. ಶಿವಮಾರನ ಗಜಾಷ್ಟಕ ಉಪಲಬ್ಧವಿಲ್ಲ. ಆ ಪ್ರಾಕ್ಕಾಲದ ಓವನಿಗೆ ಹಾಡಾಗಲಿ ಒನಕೆವಾಡಾಗಲಿ ಇಂದಿಗೆ ಉಳಿದಿಲ್ಲ. ಅವು ಗ್ರಾಮೀಣರ ಸಾಹಿತ್ಯವಾಗಿ, ಕವಿಕೃತ ಕಾವ್ಯಪಂಕ್ತಿಗೆ ಸೇರದೆ, ಗ್ರಂಥಸ್ಥವಾಗದೆ ಉಳಿದುದರಿಂದಲೇ ಉಳಿದಿಲ್ಲವೆನ್ನಬಹುದು. ಇವುಗಳಲ್ಲಿ ''ಓವನಿಗೆ'' ಬೇರೊಂದು ಸಂಶೋಧ ಲೇಖನದ ವಸ್ತುವಾಗಬಲ್ಲುದು. ಆದುದರಿಂದ ಒನಕೆವಾಡನ್ನು ಮಾತ್ರ ಸದ್ಯಃ ಇಲ್ಲಿ ಲಕ್ಷ್ಯವಿಟ್ಟಿದೆ. ಇದಂತೂ ಬತ್ತ ಕುಟ್ಟುವಾಗ ಹಾಡುವ ಹಾಡೆಂದು ಮುಂದಿನ ವಿವರಣೆಗಳಿಂದ ವಿದಿತವಾಗುತ್ತದೆ.

ಕ್ರಿ.ಶ. ೧೧೭೦ನೆಯ ಕಾಲದ ಕವಿ ನೇಮಿಚಂದ್ರನು ಒನಕೆವಾಡನ್ನು ''ತಿವುಡೆ'' ಎಂದು ಕರೆದಿದ್ದಾನೆ. ಅದರ ಸ್ವರೂಪವನ್ನು ಹೀಗೆ ತಿಳಿಸಿದ್ದಾನೆ :

ವಚನ....ಮುಂದೆ ಚಂದನದ ಚೌಕಿಗೆಯ ಮುಂದೆ ಮರಕತದೊರಲೊಳ್
ಮುತ್ತಿನಕ್ಕಿಯಂ ಪೊಯ್ದು ಕನಕದೊನಕೆಯಂ ನಳಿತೋಳ್ಗಳಿಂ ನೆಗಪಿ

**ತಿವುಡೆ**

ಅಂಗಜನೈದು ಶರಂಗಳ ಬಂದ ಬ
ನಂಗಳ ಪುಟಿಲ ತಳಿರುಯ್ಯಲಚ್ಚವೆ
ಳ್ದಂಗಳ ಮೇಲೆ ಸಿರಿ ನಿಲ್ಕೆ ॥

ಮನವನಂಟುವ ರೂಪು ದನಿ ನಗೆ ಮೆಲ್ಪುತಂ
ಪನುಗುಣಮುಳ್ಳ ವಧುವಿರೆ ಮತ್ತೆ ಪೂ
ವಿನ ಸರಲೇಕೆ ಮದನಂಗೆ ॥

ಪತ್ತಿದ ಗಂಡರ ಚಿತ್ತವ ಕಿಡಲೀಯ
ದಿತ್ತುದೆ ಕೋಟಿ ತನಗೆಂಬ ಸೂಳೆಯ
ಹಿತ್ತಿಲಲ್ಲಿರದೇ ಸುರಭೂಜ ॥[೮]

ಇಲ್ಲಿ ಇಂತಹ ಹತ್ತು ತ್ರಿಪದಿಗಳ ಕೊನೆಗೆ ಬರುವ ವಚನದಲ್ಲಿ ಹೀಗೆ ಹೇಳಿದೆ :

ಎಂದಿರ್ವರೊಂದಾಗಿ ಸೂಳೆಸಿದ್ಧಾಂತಮನೊನಕವಾಡಂ ಮಾಡಿ ಪಾಡುವ ಪೆಂಡಿರ
ವಿನೋದಕ್ಕೆ ವಿನೋದ ನದೀ ಸಮುದ್ರಂ ನಸುನಗುತ್ತುಂ ಪೋಗೆವೋಗೆ..[೯]

ಈ ಉದಾಹರಣದಿಂದ ಒನಕೆವಾಡು ತ್ರಿಪದೀರೂಪವುಳ್ಳುದೆಂದೂ ಅದಕ್ಕೆ ಸೂಳೆಸಿದ್ಧಾಂತ ವಿಷಯವಾಗುವುದೆಂದೂ ತಿಳಿಸಿದಂತಾಗಿದೆ. ಇದನ್ನೆ ಪುಷ್ಟೀಕರಿಸುವ

---

೭ *Epigraphic Carnatica* Vol. VIII, Shimoga, Part II, Nagar Taluq 35.

೮ ನೇಮಿಚಂದ್ರ – ಲೀಲಾವತೀ ಪ್ರಬಂಧ, ೮.೨, ಪದ್ಯ ೩೫.

೯ ಅಲ್ಲೇ.

ಇನ್ನೊಂದು ಕಾವ್ಯೋದಾಹರಣವಿದೆ. ಕ್ರಿ.ಶ. ೧೨೨೨ನೆಯ ಕಾಲದ ಸೋಮರಾಜನೆಂಬ ಕವಿ ವರ್ಣಿಸಿರುವಂತೆ ಉದ್ಭಟಕ್ಷಿತೀಶನು ಜ್ಯೋತ್ಸ್ನಾವಿಹಾರವನ್ನು ಕೈಕೊಂಡು ಸೂಳೆಗೇರಿ ಹೊಕ್ಕು, ಅಲ್ಲಿಯ ಆಲಾಪಗಳನ್ನು ಕೇಳುತ್ತ ಬರುತ್ತಿರುವಲ್ಲಿ ಹೀಗೆ ಹೇಳಿದೆ :

ಮತ್ತೊಂದೆಡೆಯೊಳೆಳವೆಣ್ ತಳತಳಿಪ ಪೊನ್ನೊನಕೆಗಳಂ ಪಿಡಿದು, ರುಂದ್ರ
ಚಂದ್ರಕಾಂತದೊರಲೊಳ್ ತಂಡುಲಮಮಂ ತೀವಿ ಚಳಿಸುತ್ತಿ ವಿಳಾಸದಿಂ
ಕಲಕಂಠ-ಕಂಠ-ಸಂಜನಿತ-ಮಂಜುಳ-ಮಧುರ-ಸ್ವರಮಂ ಪಱಿವಿಂಚರದಿಂದ
ಪಾಡುತ್ತೆಸೆದಿರ್ದಳ್ ಅದೆಂತೆಂಡೊಡೆ

ನೆವವಿಟ್ಟು ವಿತ್ತಮಂ ಕವರಲಱಿಯದೆ ಸುಮ್ಮ
ನವಿಚಾರದಿಂದೆ ವಿಟನನಂಡಲೆವುದೀ
ಯವನಿಯೊಳ್ ನೀತಿ ಬೆಲೆವೆಣ್ಗೆ ॥

ಚದುರಂಗೆ ನೆತ್ತಮಿಂ ಪೊದವಿದ ಪಾಡು ಸ
ಕ್ಕದದೋದು ಹಾಸ್ಯಮಿನಿಗಬ್ಬಮೊಳ್ಪುಮಿ
ಲ್ಲದ ಸೂಳೆವನೆಯೆ ಬಱಿವನೆಯೆ ॥

ನಡೆಯದದು ಕೊಡದೊಡಂ ಕೆಡುವುದದು ಪಿರಿದೀಯೆ
ಸೊಡರ್ಗುಡಿಗೆಣ್ಣೆಯೆಱಿದಂತೆ ಬೆಲೆವೆಣ್ಗೆ
ಕುಡುವುದು ಹದಕೆ ಚದುರಿಗಂ ॥[೫]

ಇಲ್ಲಿ ಬಂದಿರುವ ಹನ್ನೆರಡು ಪದ್ಯಗಳು ತ್ರಿಪದಿಗಳು. ಇವನ್ನು ಬತ್ತ ಕುಟ್ಟುವಾಗ ಹಾಡಿದಂತೆ ತಿಳಿಸಲಾಗಿದೆ. ಹಿಂದಿನ ಉದಾಹರಣದಂತೆ ಇಲ್ಲಿಯೂ ಸೂಳೆಸಿದ್ಧಾಂತವೇ ಪ್ರತಿಪಾದಿತವಾಗಿದೆ.

ಕ್ರಿ.ಶ. ೧೫೪೦ನೆಯ ಕಾಲದ ದೇವಪ್ಪಕವಿ ಒಂದೆಡೆ ಶಬರಿಯರು ಬಿದಿರಕ್ಕಿ ಕುಟ್ಟುವುದನ್ನು ವಿವರಿಸಿದ್ದಾನೆ :

ಸಾಂಗತ್ಯ ॥ ವದನ ಬೆಮರೆ ಕುರುಳುಣ್ಮಲು ಬಲುಮೊಲೆ
ಗದಗದಿಸಲು ತಂತಮ್ಮ
ಎದೆಯಾಣ್ಮರ ಪಾಡುತ ವನಚರಿಯರು
ಬಿದಿರಕ್ಕಿಯ ತಳಿಸುವರು ॥

ಇಂದುಕಾಂತದ ವೊರಲೊಳು ಬಿದಿರಕ್ಕಿಯ
ಚಂದನದೊನಕೆಯ ಪಿಡಿದು
ನಿಂದು ತಳಿಸುತ ರಾಗದೊಳು ಪಾಡುವ ಪೆಣ್ಣ
ಗೊಂದಣವೆಸೆದುದಾಯೆಡೆಯ ॥[೬]

ಇದು ಸಾಂಗತ್ಯದ ಕಾವ್ಯವಾದುದರಿಂದ ಇಲ್ಲಿ ತ್ರಿಪದಿಗೆ ಆಸ್ಪದವಿಲ್ಲ. ಆದರೆ ಈ ಪದ್ಯಗತಿ ತ್ರಿಪದಿಯದೇ ಆಗಿದೆ. ತ್ರಿಪದಿ ಚೌಕಂಗೊಂಡು ಸಾಂಗತ್ಯವೆನಿಸುವುದು. ಇಲ್ಲಿ ಬಂದಿರುವ

---

೫ ಸೋಮರಾಜ – ಉದ್ಭಟಕಾವ್ಯ, ಆ. ೧೦, ಪದ್ಯ ೮೮, ೯೩, ೯೫.
೬ ದೇವಪ್ಪಕವಿ–ರಾಮ ವಿಜಯಕಾವ್ಯ, ಸಂಧಿ ೧೫, ಪದ್ಯ ೭೫, ೭೭.

ಸಾಹಿತ್ಯಾಂಶವಂತೂ ಒನಕೆವಾಡಿನಂಥದೇ ಆಗಿದೆಯೆಂಬುದು ಸ್ಪಷ್ಟವಿದೆ.

ಹಿಂದಿನ ಕಾಲದ ಒನಕೆವಾಡು ತ್ರಿಪದೀರೂಪದಲ್ಲಿ ಇದ್ದಂತೆ, ಇಂದು ಉಪಲಬ್ಧವಾಗುವ ''ಬತ್ತ ಕುಟ್ಟುವ ಹಾಡು'' ತ್ರಿಪದಿಯಲ್ಲೇ ಇದೆ. ಇದರಲ್ಲಿಯೂ ಹಿಂದಿನದರಂತೆ ರತಿಶೃಂಗಾರದ ಮಾತುಗಳೇ ಬರುತ್ತವೆ :

ತ್ರಿಪದಿ ॥ ಬತ್ತ ತೊಳಿವ ಕೈಗೆ ಬಯಿನೆ ಮುಳ್ಹೆಟ್ಟಿತು
ಮದ್ದಿಗ್ಹೋದಣ್ಣ ಬರಲಿಲ್ಲ ಬಸರೂರ
ಸೂಳೆ ಕಂಡಣ್ಣ– ಜೆರಗಾದ ॥

ಕೋಟ ಕುಂದಾಪುರ ಸೋಟಕ್ಕೆ ಗಂಗೊಳ್ಳಿ
ಪೇಟೆ ಪಟ್ಟಣವು ಬಸರೂರು (ಬಸರೂರ) ಹೆಣ್ಮಕ್ಳು
ನಾಟಕದ ನಗೆಯ ನಗುವರು ॥[೭]

ಅನಾಗರಿಕ ಅನಕ್ಷರ ಜನತೆಯ ಮುಚ್ಚುಮರೆಯಿಲ್ಲದ ಶೃಂಗಾರಹಾಸ್ಯಮಯ ಸಾಹಿತ್ಯಾಂಶವು ಇಂದಿನ ಒನಕೆವಾಡುಗಳಲ್ಲಿ ಕಾಣುತ್ತದೆ. ಈ ಒನಕೆವಾಡುಗಳು ತ್ರಿಪದೀರೂಪದಲ್ಲಿರುವುದೂ ಕಾಣುತ್ತಿದೆ.

ಬತ್ತ ಕುಟ್ಟುವಾಗ ತ್ರಿಪದಿಗಳನ್ನು ಹಾಡಬೇಕೆಂಬ ಶಾಸ್ತ್ರನಿಯಮವು ಹನ್ನೆರಡನೆಯ ಶತಮಾನದಲ್ಲೇ ಇದ್ದಂತೆ ತೋರುತ್ತದೆ. ಕಲ್ಯಾಣಿಯ ಚಾಲುಕ್ಯರಾಜನಾದ ಮೂರನೆಯ ಸೋಮೇಶ್ವರನು (ಕ್ರಿ.ಶ. ೧೧೨೬-೧೧೩೮) ತನ್ನ ''ಅಭಿಲಷಿತಾರ್ಥ ಚಿಂತಾಮಣಿ'' ಅಥವಾ ''ಮಾನಸೋಲ್ಲಾಸ'' ಎಂಬ ಗ್ರಂಥದಲ್ಲಿ ಹೇಳಿರುವ ವಿಚಾರ ಹೀಗಿದೆ :

ತ್ರಿಪದೀ ಕಂಡನೇ ಚೈವ ಶೃಂಗಾರೇ ವಿಪ್ರಲಂಭಕೇ
ಪ್ರಾಯಃ ಶಾಸ್ತ್ರಿಭಿರೇವೈಷಾ ಗೇಯಾ ನಾನಾರ್ಥಭೂಷಿತಾ[೮]

ಬತ್ತ ಮೊದಲಾದ ಧಾನ್ಯವನ್ನು ಕುಟ್ಟುವಲ್ಲಿ, ಶೃಂಗಾರ ವಿಪ್ರಲಂಭಗಳನ್ನು ವರ್ಣಿಸುವಲ್ಲಿ, ಕೊಂಕು-ಅಣಕ-ಕಟಕಿ-ನೇರು ಮುಂತಾದ ಅರ್ಥಗಳಿಂದ ಶೋಭಾಯಮಾನವಾದ ತ್ರಿಪದಿಗಳನ್ನು ಹಾಡಬೇಕೆಂದು ಮೇಲಿನ ಶಾಸ್ತ್ರಾಭಿಪ್ರಾಯ. ಬತ್ತ ಕುಟ್ಟುವ ಹಾಡು ಇಂದಿಗೂ ಇದೇ ಲಕ್ಷಣದಿಂದ ಕೂಡಿರುತ್ತದೆ. ಇದರಿಂದ ಒನಕೆವಾಡಿನ ಸ್ವರೂಪವು ತ್ರಿಪದಿಯೇ ಆಗಿದೆಯೆಂಬುದು ಸಿದ್ಧಾಂತವಾಗುವುದು. ಇದಕ್ಕೆ ಕಾರಣವೇನೆಂಬುದನ್ನು ಪರಿಶೀಲಿಸಬೇಕು.

ಬತ್ತ ಕುಟ್ಟುವುದು ಹೇಗೆ ಅತ್ಯಂತ ಪ್ರಾಚೀನವೋ ಹಾಗೆಯೇ ಕನ್ನಡದ ದೇಶೀಯ ಪದ್ಯರೂಪಗಳಲ್ಲಿ ಅತಿ ಪ್ರಾಚೀನವಾದುದು ಮತ್ತು ಮೂಲರೂಪವಾದುದು ''ತ್ರಿಪದಿ''. ಇದು ಕನ್ನಡದ ಛಂದಸ್ಸಿನ ಓಂಕಾರ ಅಥವಾ ತ್ರಿಮೂರ್ತಿ. ತ್ರಿಪದಿಯನ್ನು ಶ್ರೀ ದ.ರಾ.ಬೇಂದ್ರೆಯವರು ''ಕನ್ನಡ ವೃತ್ತಗಳ ಗಾಯತ್ರಿ''[೯] ಎಂತಲೂ, ಡಿ. ಎಸ್. ಕರ್ಕಿಯವರು ''ಛಂದೋಗಂಗೆಯ ಗಂಗೋತ್ರಿ''[೧೦] ಎಂತಲೂ, ರಂ. ಶ್ರೀ.

೭ ಟಿ. ಕೇಶವಭಟ್ಟ–ಹಾಡಿನ ಚೂಡಾಮಣಿ (ಜನಪದ ಗೀತ ಸಂಗ್ರಹ)
೮ ಪ್ರೊ. ಡಿ. ಎಲ್. ಎನ್. ಅವರ ಲೇಖನ–ಪ್ರಬುದ್ಧ ಕರ್ಣಾಟಕ, ಸಂಪುಟ ೪೫, ಸಂಚಿಕೆ ೨ (೧೯೬೩).
೯ ಹಲಸಂಗಿ ಗೆಳೆಯರು – ಗರತಿಯ ಹಾಡು, ೧೯೫೭, ಪರಿಚಯ ಪುಟ ೧೩.
೧೦ ಡಿ. ಎಸ್. ಕರ್ಕಿ – ಛಂದೋವಿಕಾಸ.

ಮುಗಳಿಯವರು ''ಕನ್ನಡ ಛಂದಸ್ಸಿನ ತಾಯಿಬೇರು''[೧೧] ಎಂತಲೂ ತಿಳಿಸಿರುತ್ತಾರೆ. ಮೊತ್ತ ಮೊದಲಾಗಿ ತ್ರಿಪದಿ ಪದ್ಯವು ಕ್ರಿ.ಶ. ೭೦೦ನೆಯ ಕಾಲದಲ್ಲಿ ಕೆತ್ತಿರುವ ಬಾದಾಮಿಯ ಶಾಸನವೊಂದರಲ್ಲಿ ದೊರೆತಿದೆ. ಅದು ಪೂರ್ವದ ಹಳಗನ್ನಡ ಶಬ್ದರೂಪವುಳ್ಳದು, ಕಪ್ಪೆ ಅರಭಟ್ಟನ ಸ್ತುತಿರೂಪದಲ್ಲಿದೆ. ಆ ತ್ರಿಪದಿಗಳಲ್ಲಿ ಮೊದಲನೆಯದಕ್ಕೆ ಪಾದಗಳು ಎರಡೇ ಇವೆ. ಉಳಿದ ಮೂರು ಪದ್ಯಗಳೂ ಮೂರು ಪಾದಗಳುಳ್ಳವು. ಉದಾಹರಣೆಗೆ ಎರಡನ್ನು ಇಲ್ಲಿ ಕೊಡಲಾಗಿದೆ :

ಕಪ್ಪೆ ಅರಭಟ್ಟನ್ ಶಿಷ್ಟಜನಪ್ರಿಯನ್
ಕಷ್ಟಜನ ವರ್ಜಿತನ್ ಕಲಿಯುಗವಿಪರೀತನ್

ಸಾಧುಗೆ ಸಾಧು ಮಾಧೂರ್ಯಂಗೆ ಮಾಧೂರ್ಯಂ
ಬಾಧಿಪ್ಪ ಕಲಿಗೆ ಕಲಿಯುಗ ವಿಪರೀತನ್
ಮಾಧವನೀತನ್ ಪೆಱನಲ್ಲ[೧೨]

ಇದೇ ರೀತಿ ಷಿಕಾರಿಪುರದ ೧೨೯ನೆಯ, ಕ್ರಿ.ಶ ೧೦೭೧ನೆಯ ಕಾಲದ ಶಾಸನದಲ್ಲಿಯೂ ಎರಡು ತ್ರಿಪದಿಗಳಿವೆ.[೧೩] ಕ್ರಿ.ಶ. ೯ನೆಯ ಶತಮಾನದ ಕವಿರಾಜಮಾರ್ಗದಲ್ಲಿ ''ತಿವದಿ'' ಎಂಬ ಶಬ್ದ ಬಂದಿದೆ. ಕನ್ನಡದಲ್ಲಿ ಪ್ರಾಚೀನವೂ ದೇಶೀಯವೂ ಆಗಿರುವ ತ್ರಿಪದಿ ಅತಿ ಪ್ರಾಚೀನತೆಯುಳ್ಳ ಬತ್ತ ಕುಟ್ಟುವ ಕೆಲಸಕ್ಕೆ ಹೊಂದಿಕೆಯಾದುದು ಸಹಜವೆನಿಸುತ್ತದೆ. ಪ್ರಾಯಃ ತ್ರಿಪದಿಯ ಪ್ರಚಲಿತ ಪದ್ಯವಾವುದಿದ್ದರೂ ಅದನ್ನು ಒನಕೆವಾಡಾಗಿ ಬಳಸುತ್ತಿದ್ದಿರಬಹುದು. ಒನಕೆಯಿಂದ ಬತ್ತ ಕುಟ್ಟುವಾಗ ಸ್ಫೂರ್ತಿಗೊಂಡು ಲಯಬದ್ಧವಾಗಿ ನುಡಿದ ಜೀವನಾನುಭವವೇ ತ್ರಿಪದಿ ರೂಪಗೊಂಡಿರಬೇಕು ಎನಿಸುತ್ತದೆ. ತ್ರಿಪದಿರೂಪದಲ್ಲಿರುವ ಅವೆಷ್ಟೋ ಜೋಗುಳ ಪದಗಳು, ಶೋಭಾನೆಯ ಸೊಲ್ಲುಗಳು, ಬೀಸುವ ಹಾಡುಗಳು, ವಿನೋದದ ಬಿಡಿ ಹಾಡುಗಳು – ಮುಂತಾದುವೆಲ್ಲವೂ ಒನಕೆವಾಡುಗಳೇ ಆಗುತ್ತವೆ. ಅಂದರೆ, ಅವನ್ನೆಲ್ಲ– ಅಂಥವನ್ನೆಲ್ಲ ಬತ್ತ ಕುಟ್ಟುವಾಗ ಹಾಡುತ್ತಾರೆ. ಇದರಿಂದ ತ್ರಿಪದಿಯೆಂಬುದು ಛಂದಸ್ಸೂಚಕವೆಂದೂ, ಒನಕೆವಾಡೆಂಬುದು ಹಾಡುವ ಸಂದರ್ಭಸೂಚಕವೆಂದೂ ಇಟ್ಟುಕೊಳ್ಳಬಹುದು.

''ತ್ರಿಪದಿ'' ಎಂದಾಗ ಅದು ಮೂರು ಪಾದಗಳಿರುವ ಪದ್ಯವೆಂದು ಸ್ಥೂಲವಾಗಿ, ಸ್ಪಷ್ಟವಾಗಿ ತಿಳಿದವರೆಲ್ಲರೂ ಕೊಡುವ ವಿವರಣೆ. ಈ ಮೂರು ಪಾದಗಳಲ್ಲಿ ೧೧ ಅಂಶಗಣಗಳು, ಅವುಗಳಲ್ಲಿ ೬ನೆಯದು ಮತ್ತು ೧೦ನೆಯದು ಬ್ರಹ್ಮಗಣ, ಉಳಿದವೆಲ್ಲವೂ ವಿಷ್ಣುಗಣಗಳು. (ಬ್ರಹ್ಮ-ವಿಷ್ಣು ರುದ್ರಗಣಗಳಿಗೆ ರತಿ-ಮದನ-ಶರಗಣಗಳೆಂಬ ಹೆಸರೂ ಇದೆ.) ನಿಯಮವು ಹೀಗಿದ್ದರೂ ಕೆಲವೆಡೆ ಗಣಪಲ್ಲಟವಿದೆ – ಅಂದರೆ, ವಿಷ್ಣುವಿನ ಸ್ಥಾನದಲ್ಲಿ ಬ್ರಹ್ಮಗಣ ಅಥವಾ ರುದ್ರಗಣ ಬರುವುದಿದೆ. ಹೀಗಿದೆ ತ್ರಿಪದಿಯ ಛಂದೋಲಕ್ಷಣ. ಆದರೆ ತ್ರಿಪದಿಗೆ ಪಾದಗಳೆಷ್ಟು? ಹೆಸರುಗಳಾವುವು ? ಎಂಬಿವನ್ನೂ ವಿವೇಚಿಸುವುದು ಆವಶ್ಯಕ.

ತ್ರಿಪದಿಗೆ ತಿವಿದಿ, ತ್ರಿವಿಧಿ, ತಿವುಡೆ – ಎಂಬ ಹೆಸರುಗಳೂ ಕಾಣಿಸಿವೆ. 'ವಚನ'

---

೧೧ ರಂ.ಶ್ರೀ. ಮುಗಳಿ – ಸಾಹಿತ್ಯ ಚರಿತ್ರೆ, ೧೯೫೩, ಪುಟ ೧೧
೧೨ *Indian Antiquary*, 1881, Vol. X, P. 61.
೧೩ ಶಾಸನ ಪದ್ಯಮಂಜರಿ, ೧೯೨೩, ಪು. ೧೯.

ಎಂದೂ ಅದನ್ನು ಕರೆದಿದ್ದಾರೆ. ಸರ್ವಜ್ಞನ ತ್ರಿಪದಿಗಳಿಗೆ ಸರ್ವಜ್ಞ ಪದಗಳು, ಸರ್ವಜ್ಞ ಮೂರ್ತಿಯ ವಚನಗಳು – ಎಂಬ ಹೆಸರುಗಳಿವೆ. ತ್ರಿಪದಿಯು ಪದ್ಯಗಂಧಿಯಾಗಿರುವ ಗದ್ಯದಂತೆ ಕಾಣಿಸುವುದೇ 'ವಚನ' ಎನಿಸಲು ಕಾರಣವಿರಬಹುದು. ತ್ರಿಪದಿಯು ರಚಿಸಿದ ಕೃತಿಯಲ್ಲ, ಆಡಿದ ಮಾತುಗಳೇ ಇರಬೇಕು. ಕವಿರಾಜಮಾರ್ಗ, ಛಂದೋಂಬುಧಿ ಗ್ರಂಥಗಳಲ್ಲಿ ತ್ರಿಪದಿಯನ್ನು 'ತಿವದಿ' ಎಂದು ಪ್ರಯೋಗಿಸಿದೆ. ಇದು 'ತ್ರಿಪದಿ' ಶಬ್ದದ ತದ್ಭವರೂಪವೇ ಸರಿ. 'ತ್ರಿವಿಧಿ' ಎಂಬುದು ಮಹಾದೇವಿಯಕ್ಕನ ''ಯೋಗಾಂಗ ತ್ರಿವಿಧಿ'' ಎಂಬಲ್ಲಿ ಕಾಣುತ್ತದೆ. ಆದಕ್ಕೆ ಉದಾಹರಣವಿದು :

ಅಷ್ಟದಳ ಕಮಲದಾ ಬಟ್ಟಬಯಲೊಳಗೊಂದು
ಮುಟ್ಟಬಾರದಾ ಘನವಿಹುದು ಮನದೊಳಗೆ
ದೃಷ್ಟಿಯಿಟ್ಟವನೆ ಕಡುಜಾಣ ॥[೧೫]

ಇದು ತ್ರಿಪದಿಯೆ. ತ್ರಿವಿಧಿ ಎಂದುದು. ಅದರಲ್ಲಿ ಅಡಕವಾದ ಪಾದಗಳ ಮೂರು ವಿಧಾನ(ವಿಧಿ)ಗಳನ್ನು ಅಥವಾ ಹಾಡಲು ಪ್ರಸಿದ್ಧವಾದ ಯಾವುದೋ ಮೂರು ಮಟ್ಟುಗಳನ್ನು ಲಕ್ಷ್ಯವಿಟ್ಟಾಗಿರಬಹುದು. ಅಂತು ತ್ರಿವಿಧಿಯು ತ್ರಿಪದಿಗಿಂತ ಬೇರೆಯಲ್ಲವೆಂಬುದು ನಮಗಿಲ್ಲಿ ಬೇಕಾದುದು. ಲೀಲಾವತೀ ಪ್ರಬಂಧದಲ್ಲಿ ''ತಿವುಡೆ'' ಎಂದು ಕರೆದುದು ತ್ರಿಪದಿಗೆ ಹೊಂದುವ ತ್ರಿಪುಟ ತಾಳದ ಗತಿಯನ್ನು ಲಕ್ಷಿಸಿಯೇ ಆಗಿರಬೇಕು. ಯಕ್ಷಗಾನದಲ್ಲಿ ಇಂದಿಗೂ ಹಲವು ಪದ್ಯರೂಪಗಳಿಗೆ ತಾಳದ ಹೆಸರೇ ರೂಢವಾಗಿದೆ. ಅಂಶಗಣಬದ್ಧವಾಗಿರುವ ತ್ರಿಪದಿಗೆ ನಿಶ್ಚಿತವಾದ ತಾಳವಿಲ್ಲ. ಆದುದರಿಂದ ಅದನ್ನು ತಾಳಹೀನ ಪದ್ಯವೆಂದಿದ್ದಾರೆ.

ತದಾ ಸ್ಯಾತ್ ತ್ರಿಪದೀ ತಾಳಹೀನಾ ಕರ್ಣಾಟಭಾಷಯಾ[೧೬]

ತ್ರಿಪದಿಯ ಅಂಶಗಣವನ್ನು ಮಾತ್ರೆಗಳ ಲಯಕ್ಕನುಗುಣವಾಗಿ ಹಿಗ್ಗಿಸಿ, ಕುಗ್ಗಿಸಿ ಬೇರೆ ಬೇರೆ ತಾಳಗಳಿಗೆ ಹೊಂದಿಸಲು ಸಾಧ್ಯವಾಗುವುದೇ ಅದರದೊಂದು ವೈಶಿಷ್ಟ್ಯ. ಅದರ ಪ್ರತಿಯೊಂದು ಅಂಶಗಣವನ್ನೂ ಚತುರ್ಮಾತ್ರಾಗಣಕ್ಕೆ ಸರಿಪಡಿಸಿ ಹಾಡಿದಾಗ ಅದು ಏಕತಾಳಕ್ಕೆ ಸರಿಹೋಗುವುದು. ಐದು ಮಾತ್ರೆಗಳ ಗಣವಾಗುವಂತೆ ಎಳೆದು ಹಾಡಿದಾಗ, ಝಂಪೆತಾಳದ ಗತಿ ಬರುವುದು. ಎಲ್ಲ ಗಣಗಳನ್ನೂ ವಿಷ್ಣುಗಣ ಕಲ್ಪನೆಯಿಂದ ಪ್ರತಿಯೊಂದು ಅಂಶಕ್ಕೂ ಎರಡು ಮಾತ್ರೆಯ ಮೌಲ್ಯವಿತ್ತು ಹಾಡಿದಾಗ ಆರು ಮಾತ್ರೆಗಳಿಂದ ಗತಿವಡೆವ ರೂಪಕತಾಳವಾಗುವುದು. ಹಾಗೆಯೇ ಮೂರು-ನಾಲ್ಕು ಮಾತ್ರೆಗಳ ಖಂಡವಾಗಿ ಮಾಡಿಕೊಂಡರೆ ಅಟ್ಟತಾಳ, ತಿವುಡೆತಾಳಗಳಾಗುವುವು. ಇದರಿಂದ ತ್ರಿಪದಿಗೆ ತಾಳವಾವುದೆನ್ನಲು ಸಾಧ್ಯವಿಲ್ಲ– ಎಂಬುದನ್ನು ಲಕ್ಷಿಸಿಯೇ ಅದನ್ನು ತಾಳಹೀನವೆಂದೂ ವಚನವೆಂದೂ ಪೂರ್ವಿಕರು ಕರೆದರೆಂದು ತೋರುತ್ತದೆ.

ತ್ರಿಪದಿಗೆ ಪಾದಗಳು ಮೂರೇ ಎಂದು ಹೇಳಲು ಬರುವುದಿಲ್ಲ. ಜನಪದ ಗೀತಗಳಲ್ಲಿ ಇಂದಿಗೂ ತ್ರಿಪದಿಯ ಗತಿಯಿಂದ ಕೂಡಿದ ಎರಡೇ ಪಾದಗಳಿರುವ ಹಲವು ಪದ್ಯಗಳಿರುತ್ತವೆ. ಹಿಂದೆ ಉದಾಹರಿಸಿದ ಶಾಸನ ಪದ್ಯದಲ್ಲಿ ಮೊದಲನೆಯದಕ್ಕೆ ಎರಡೇ ಪಾದಗಳು. ಮೂರು ಸಾಲುಗಳಿರುವ ತ್ರಿಪದಿಗಳಲ್ಲಿಯೂ ಎರಡನೆಯ ಸಾಲಿನ ಮೂರನೆಯ ಗಣಕ್ಕೆ ಪದ್ಯವೊಮ್ಮೆ

---

೧೫ ಕರ್ಣಾಟಕ ಕವಿಚರಿತೆ, ಭಾಗ ೧, ಪುಟ ೧೪೯.

೧೬ ಶಾಂರ್ಗದೇವ – ಸಂಗೀತ ರತ್ನಾಕರ (ಅಡ್ಯಾರ್ ಆವೃತ್ತಿ, ೧೯೫೯) ಸಂ. ೪

ಕೊನೆಗೊಂಡು ಪುನಃ ಅದು ಆವೃತ್ತಿ ಹೊಂದಿದಂತೆ ಯಾರಿಗಾದರೂ ಕಾಣುತ್ತದೆ. ಉದಾಹರಣೆಗೆ ಕೆಳಗಿನ ತ್ರಿಪದಿಯನ್ನು ಪರಿಶೀಲಿಸಬಹುದು:

ಹಾಲ ಕಂದಲ ಮುಂದೆ ಬಾಲನ ತೊಟ್ಟಿಲು
ಲೀಲೆಯಾಡುವನಾ ಸೆಳೆಮಂಚ ॥

ಈ ಪದ್ಯವು ಮೂರು ಪಾದಗಳನ್ನು ತಾಳಿದಾಗ –

ಹಾಲ ಕಂದಲ ಮುಂದೆ ಬಾಲನ ತೊಟ್ಟಿಲು
ಲೀಲೆಯಾಡುವನಾ ಸೆಳೆಮಂಚದಾ ಕೆಳಗೆ
ಬಾಳಂತಿ ಮೊಸರ ಕಡೆದಳು ॥[೧೬]

ಇದರಿಂದ ತ್ರಿಪದಿ ಮೂಲತಃ ಎರಡೇ ಪಾದಗಳಿರುವ ಪದ್ಯವಾಗಿತ್ತೆಂದು ಭಾವಿಸಬೇಕಾಗುತ್ತದೆ. ತ್ರಿಪದಿಯು ಮೊದಲು ಎರಡು ಸಾಲಿನ ಹಾಡಾಗಿದ್ದು ಎರಡನೆಯ ಪಾದದ ಪೂರ್ವಭಾಗ ಮತ್ತೊಮ್ಮೆ ಮಗುಚಿ ಬಂದು, ಮೂರು ಸಾಲಾಯಿತೆಂದು ಕೈಪಿಡಿಕಾರರು ಅಭಿಪ್ರಾಯಪಟ್ಟಿದ್ದಾರೆ. ತಮಿಳಿನ ಕುಱಳ್ ಮತ್ತು ವೆಣ್ಬಾವೃತ್ತಗಳನ್ನು ಹೋಲುವುದೆಂದೂ ತಿಳಿಸಿದ್ದಾರೆ.[೧೭]

ಮೂರು ಪಾದಗಳಾಗಿ ಕಾಣುವ ತ್ರಿಪದಿಯನ್ನೇ ದ್ವಿತೀಯಾಕ್ಷರ ಪ್ರಾಸಲಕ್ಷಿತವಾಗಿ ಗಣಿಸಿದಾಗ, ಮೊದಲ ಪಾದದಲ್ಲಿ ಎರಡು ಪಾದಗಳಾಗುತ್ತವೆ. ಆಗ ತ್ರಿಪದಿಗೆ ಪಾದಗಳು ನಾಲ್ಕು –

ಹಾಲ ಕಂದಲ ಮುಂದೆ
ಬಾಲನ ತೊಟ್ಟಿಲು
ಲೀಲೆಯಾಡುವನಾ ಸೆಳೆಮಂಚದಾ ಕೆಳಗೆ
ಬಾಳಂತಿ ಮೊಸರ ಕಡೆದಳು ॥

ಕೆಲವರು ಛಂದಶ್ಶಾಸ್ತ್ರಜ್ಞರು ತ್ರಿಪದಿಗೆ ಪಾದಗಳು ನಾಲ್ಕೆಂದೇ ಹೇಳಿದುದನ್ನಿಲ್ಲಿ ಲಕ್ಷಿಸಬಹುದು. ಶಾಂರ್ಗದೇವನ ವಿಚಾರವಿದು.

ಆದ್ಯಾದ್ವಿ ದ್ವಿಗಣೌ ಪಾದೌ ತೃತೀಯಶ್ಚ ಚತುರ್ಗಣಃ
ಚತುರ್ಥ ಸ್ತ್ರಿಗಣಃ ಪಾದೇಷ್ವೇಕಾದಶಗಣಾ ಇಮೇ ॥[೧೮]

ತ್ರಿಪದಿಯ ಮೊದಲ ಎರಡು ಪಾದಗಳಲ್ಲಿ ಎರಡೆರಡು ಗಣಗಳೂ ಮೂರನೆಯ ಪಾದದಲ್ಲಿ ನಾಲ್ಕು ಗಣಗಳೂ ನಾಲ್ಕನೆಯದರಲ್ಲಿ ಮೂರು ಗಣಗಳೂ ಹೀಗೆ ಒಟ್ಟು ಹನ್ನೊಂದು ಗಣಗಳು – ಎಂದು ಸಂಗೀತರತ್ನಾಕರದಲ್ಲಿ ಹೇಳಿದೆ. ಮಾನಸೋಲ್ಲಾಸದಲ್ಲಿಯೂ ತ್ರಿಪದಿಗೆ ಇದೇ ರೀತಿ ನಾಲ್ಕು ಪಾದಗಳೆಂದು ವಿವರಿಸಿದೆ.[೧೯] ಜಯಕೀರ್ತಿಯು ತ್ರಿಪದಿ ರೂಪದಲ್ಲೇ ಬರೆದ ಸೂತ್ರದಲ್ಲಿ ನಾಲ್ಕು ಪಾದಗಳನ್ನೇ ವಿವರಿಸಿದ್ದಾನೆ.[೨೦] ಹೀಗ ಲಾಕ್ಷಣಿಕರ

---

೧೬ ಹಾಡಿನ ಚೂಡಾಮಣಿ – ಮೊಸರು ಕಡೆವ ಹಾಡು.

೧೭ ಕನ್ನಡ ಕೈಪಿಡಿ, ೧೯೫೫, ಸಂಪುಟ ೧, ಭಾಗ ೨, ಪುಟ ೧೨೫.

೧೮ ಶಾಂರ್ಗದೇವ–ಸಂಗೀತ ರತ್ನಾಕರ, (೧೯೪೪) iv.

೧೯ ಪ್ರ. ಕರ್ಣಾಟಕ, ೪೫-೨, ೧೯೬೩. ಶ್ರೀ ಡಿ. ಎಲ್. ನರಸಿಂಹಾಚಾರ್ ಅವರ ಲೇಖನ, ಪುಟ ೫೬.

೨೦ ಜಯಕೀರ್ತಿ – ಛಂದೋನುಶಾಸನ, ಸಪ್ತಮೋಧಿಕಾರ: ಶ್ಲೋಕ ೨.

ಅಭಿಪ್ರಾಯವು ಕೂಡ ತ್ರಿಪದಿಗೆ ಪಾದಗಳು ನಾಲ್ಕೆಂಬುದು ಕಂಡುಬರುತ್ತದೆ. ನಮ್ಮ ದೃಷ್ಟಿಯಿಂದ ತ್ರಿಪದಿಗೆ ಪಾದಗಳು ಐದೂ ಆಗುತ್ತಿವೆ. ಉದಾಹರಣವಿದು :

ಹಾಲ ಕಂದಲ ಮುಂದೆ
ಬಾಲನ ತೊಟ್ಟಿಲು
ಲೀಲೆಯಾಡುವನಾ ಸೆಳೆಮಂಚ
ಲೀಲೆಯಾಡುವನಾ ಸೆಳೆಮಂಚದಾ ಕೆಳಗೆ
ಬಾಳಂತಿ ಮೊಸರ ಕಡೆದಳು.

ಹೀಗೆ ತ್ರಿಪದಿಗೆ ಪಾದಗಳು ಎರಡರಿಂದ ಐದರವರೆಗೂ ಗಣಿಸಲಾಗುತ್ತಿವೆ. ಹೀಗೆ ಗಣಿಸುವುದು ಅನುಚಿತವೇನೂ ಅಲ್ಲ. ಹಾಗಿದ್ದರೆ ಅದಕ್ಕೆ 'ತ್ರಿಪದಿ' ಎಂಬ ಹೆಸರೇಕೆ ? ಎಂಬುದೀಗ ಸಮಸ್ಯೆಯಾಗಿಯೇ ಉಳಿಯಿತು. ಈ ಸಮಸ್ಯೆಯನ್ನು ಪರಿಹರಿಸಲು ಇಲ್ಲಿ ಯಥಾಸಾಧ್ಯ ಪ್ರಯತ್ನಿಸಲಾಗಿದೆ. ಬತ್ತ ಕುಟ್ಟುವ ಹಾಡಿನೊಳಗಣ ಒಂದು ತ್ರಿಪದಿಯಿದು :

ಮುತ್ತಿರು ಮೆರಿಯಲಿ ಮುದುಕಿಯು ಕೇರಲಿ
ಮತ್ತಿರುವವರು ಬಡಿಯಲು ಜಗಲೀಲಿ
ಕೂತು ನಾವ್ ಕವಳ ಮೆಲ್ಲುವೋ[೨೧]

ಬತ್ತ ಮೆರಿಯಲು ಮೂವರನ್ನಿಲ್ಲಿ ಅಪೇಕ್ಷಿಸಿದೆ. ಬತ್ತವನ್ನು ಒಬ್ಬಳೆ ಕುಟ್ಟುವುದೆಂದರೆ ಬೇಸರ. ಇಬ್ಬರು ಅದಕ್ಕಿಂತ ಲೇಸಾದರೂ ಕೆಲಸವು ಮಧ್ಯಮ. ಮೂವರಿದ್ದರೆ ಲೇಸು, ಕೆಲಸವು ಬೇಗನೆ ಸಾಗುವುದು. ನಾಲ್ವರು ಕೂಡಿ ಒಂದೇ ಗುಳಿಗೆ ಕುಟ್ಟುವುದೆಂದರೆ, ಕೆಲಸವು ಅತಿ ಸಾವಕಾಶವಾಗುವುದು; ಇದು ಆಲಸ್ಯದ ಲಕ್ಷಣವಾಗುವುದು. ಆದುದರಿಂದಲೇ ಮೂವರು ಮೆರಿಯುವುದೇ ಮೇಲು. ಮೂವರು ಮೂರು ಒನಕೆಗಳನ್ನೆತ್ತಿ ಅನುಕ್ರಮವಾಗಿ ನೆಲಕುಳಿಗೆ (ಒರಲಿಗೆ) ಗುರಿತಪ್ಪದೆ ಕುಟ್ಟುವಾಗ ಹೊರಕ್ಕೆ ಹಾರುವ ಧಾನ್ಯವನ್ನು ತಂತಮ್ಮ ಒಂದೊಂದು ಪಾದದಿಂದ ಕೂಡುವರು. ಹೀಗೆ ಕೂಡದಿದ್ದರೆ ಅಕ್ಕಿ ಸರಿಯಾಗಿ ತೊಳ್ಳದು; ಅಲ್ಲದೆ ಒಂದೇ ಭಾಗಕ್ಕೆ ಒನಕೆಯ ಪೆಟ್ಟು ಬಿದ್ದುದರಿಂದ ಅಕ್ಕಿ ಕಡಿಯುವುದು (ಹೋಳಾಗುವುದು). ಆ ಒನಕೆಪೆಟ್ಟಿನ ತಾಳಗತಿ ಒಂದಕ್ಕೊಂದು ಸಮಾನಾವಕಾಶವುಳ್ಳುದಾಗಿ ರೂಪಕತಾಳವಾಗುವುದು. ಈ ಮೂರು ಪೆಟ್ಟುಗಳಲ್ಲಿ ಒಂದು ಮಾತ್ರ ಸ್ವಲ್ಪ ತಡೆದು ಬೀಳುತ್ತಿದ್ದರೆ ಏಕತಾಳವಾಗುವುದು. ಅದು ಇನ್ನಷ್ಟು ತಡೆದು ಬೀಳುತ್ತಿದ್ದರೆ ಆಗ ತ್ರಿಪುಟ ತಾಳವಾಗುವುದು. ಹೀಗೆ ಯಾವುದಾದರೊಂದು ತಾಳಗತಿಗೆ ಅನುಗುಣವಾಗಿ ಮೂರು ಪಾದಗಳ ಕ್ರಿಯೆಯನ್ನೂ ಕೂಡಿಸಿ ಬತ್ತ ಕುಟ್ಟುತ್ತ ಹಾಡಲು ಅಳವಡುವ ಗೀತ ತ್ರಿಪದಿ.

ಈಗ ವಿವರಿಸಿದಂತೆ ಬತ್ತ ಕುಟ್ಟುವ ಕೆಲಸವೇ ತ್ರಿಪದಿಯೆನಿಸುವುದು. ಬತ್ತ ಕುಟ್ಟುವಾಗ ಹಾಡುವ ಗೀತಸಾಹಿತ್ಯವು ಇದರಿಂದಲೇ ತ್ರಿಪದಿಯೆನಿಸಿರಬೇಕು. ತ್ರಿಪದಿಯನ್ನು ಒನಕೆವಾಡಾಗಿ ಹಾಡಬೇಕೆಂದು 'ಮಾನಸೋಲ್ಲಾಸ' ಗ್ರಂಥದಲ್ಲಿ ತಿಳಿಸಿದುದೂ ಈ ಕಾರಣದಿಂದಲೇ ಮತ್ತಷ್ಟು ಸರಿಗಾಣುತ್ತಿದೆ. ಆದುದರಿಂದ ಅನಾದಿ ಕಾಲದಿಂದ ನಡೆದು

---

೨೧ ಹಾಡಿನ ಚೂಡಾಮಣಿ - ಬತ್ತ ಕುಟ್ಟುವ ಹಾಡು

ಬಂದ ಬತ್ತ ಕುಟ್ಟುವ ಕೆಲಸಕ್ಕೆ ಹೊಂದಿಕೆಯಾಗುವ ಹಾಡಾಗಿ 'ಒನಕೆವಾಡು' ಮತ್ತು 'ತ್ರಿಪದಿ' ಎಂಬವೆರಡೂ ಲಾಕ್ಷಣಿಕವಾಗಿ ಅಭಿನ್ನಗಳೆಂದು ನಿರ್ಧಾರಮಾಡಬಹುದಲ್ಲವೆ ?

*ದೀವಿಗೆ, ೧೯೬೪*

*ಸಂಶೋಧನ ರತ್ನ ಮಾಲಿಕೆ, ೧೯೬೯, ಪು.೧೩೮-೪೯*

# ೩೬. ಪಂಪಕವಿ ಮತ್ತು ಕನ್ನಡ ಛಂದಸ್ಸು

● ಟಿ. ವಿ. ವೆಂಕಟಾಚಲಶಾಸ್ತ್ರೀ

೧

ಪಂಪನ ಎರಡು ಕೃತಿಗಳಿಗೂ ಪ್ರತ್ಯೇಕವಾಗಿ ಛಂದಸ್ಸಿನ ಸಂಖ್ಯಾಪಟ್ಟಿಕೆಗಳು ಸಿದ್ಧವಾಗಿವೆ. ಈ ಪಟ್ಟಿಕೆಗಳು ನಿರ್ಣಾಯಕವೇನಲ್ಲ. ಆದರೆ ಪದ್ಯದ ಪರಿಶೀಲನೆಗೆ ಇವು ಸಾಕು. ಗದ್ಯಖಂಡಗಳ ಪ್ರಮಾಣವನ್ನು ಯಾರೂ ಲೆಕ್ಕ ಹಾಕಿದ ಹಾಗಿಲ್ಲ. ಪಂಪನ ಚಂಪುಗಳ ಸ್ವರೂಪ ವಿಶದಪಡಬೇಕಾದರೆ ಪರಿಶೀಲನೆಗೆ ಇದೂ ಸೇರಬೇಕಾಗುತ್ತದೆ.

ಆದಿಪು., ಪಂಪಭಾ.ಗಳಲ್ಲಿ ಕ್ರಮವಾಗಿ ಪದ್ಯಸಂಖ್ಯೆ ೧೬೩೦-೧೬೦೯. ಕಂದಗಳು : ೯೮೯-೭೩೮. ಖ್ಯಾತಕರ್ಣಾಟಕಗಳು : ಮತ್ತೇಭವಿಕ್ರೀಡಿತ ೨೧೮-೨೦೪, ಚಂಪಕಮಾಲೆ ೧೭೪-೪೦೯, ಮಹಾಸ್ರಗ್ಧರೆ ೧೦೮-೩೭, ಉತ್ಪಲಮಾಲೆ ೩೬-೧೪೦, ಶಾರ್ದೂಲ ವಿಕ್ರೀಡಿತ ೨೦-೧೭, ಸ್ರಗ್ಧರೆ ೧೧-೭. ವಿರಳ ವೃತ್ತಗಳು: ಪೃಥ್ವಿ ೨೪-೬, ಮಾಲಿನಿ ೮-೨, ಹರಿಣಿ (ಹರಿಣೀಪ್ಲುತ) ೨-೮, ಶಾರ್ಙ್ಗ (ಖಚರಪ್ಲುತ) ೧-೩, ತರಳ ೧-೮, ಉಜ್ಜ್ವಲ (ಅನವದ್ಯ) ೪-೩, ಮಲ್ಲಿಕಾಮಾಲೆ ೦-೮, ಉಜ್ಜ್ವಲ ೦-೧, ಶಿಖರಿಣಿ ೦-೨, ದ್ರುತವಿಲಂಬಿತ ೦-೧, ಮಂದಾಕ್ರಾಂತ ೦-೧. ರಗಳೆಗಳು : ಪದ್ದಳಿರಗಳೆ (ಮಂದಾನಿಲ) ೧-೨, ಮದನಾವತಾರ ರಗಳೆ (ಲಲಿತ) ೧-೦, ಲಯೋತ್ತರ ರಗಳೆ (ಉತ್ಸಾಹಭೇದ) ೦-೧. ಅಂಶವೃತ್ತಗಳು: ಉತ್ಸಾಹ ೧-೧, ತ್ರಿಪದಿ ೨-೦, ಪಿರಿಯಕ್ಕರ ೩-೯. ಸಂಸ್ಕೃತ ಅನುಷ್ಟುಭ್ ೨೪-೦, ಪುಷ್ಪಿತಾಗ್ರ ೨-೦.

ಈ ಛಂದಸ್ಸಿನ ಹಂದರವನ್ನಿಷ್ಟು ಬೆದಕಿ ನೋಡೋಣ. ಸಂಸ್ಕೃತದ ಅನುಷ್ಟುಭ್ ಹಾಗೂ ಅರ್ಧಸಮವೃತ್ತವಾದ ಪುಷ್ಪಿತಾಗ್ರ ಇವನ್ನು ಬಿಟ್ಟರೆ, ಆದಿಪು.ದಲ್ಲಿ ೧೬೦೪ ಪದ್ಯಗಳೂ ಪಂಪಭಾ.ದಲ್ಲಿ ೧೬೦೯ ಪದ್ಯಗಳೂ ಆಗುತ್ತವೆ. ಅಲ್ಲೂ ಇಲ್ಲೂ ಇನ್ನೂ ಕೆಲವು ಸಂಸ್ಕೃತ ಪದ್ಯಗಳಿವೆ. ಅವನ್ನು ಲೆಕ್ಕಕ್ಕೆ ಮಹತ್ತ್ವದ್ದಾಗಿ ತಿಳಿಯಬೇಕಾಗಿಲ್ಲ. ತನ್ನ ಕೃತಿಗಳ ಒಟ್ಟಂದ, ಗ್ರಂಥಪ್ರಮಾಣ ಪಂಪನಿಗೆ ನಿಚ್ಚಟವಾಗಿ ಕಣ್ಣೆದುರಿನಲ್ಲೇ, ಕಯ್ಯಡಕದಲ್ಲೇ ಇದ್ದಿರಬೇಕೆಂದೂ ಇವುಗಳ ರಚನೆಯಲ್ಲಿ ನಡುವೆ ಹೆಚ್ಚುಕಾಲ ಸಂದಿರಲಾರದೆಂದೂ ತಿಳಿಯಲು ಇದರಿಂದ ಸಾಧ್ಯವಾಗುತ್ತದೆ.

ಆದಿಪು.ದಲ್ಲಿ ಕಂದಗಳ ಸಂಖ್ಯೆ ಸ್ವಲ್ಪ ಹೆಚ್ಚು. ಈ ಏರಿಕೆಗೆ ಕಾರಣವೇನು? ಇಲ್ಲಿ ೨ ಅಧಿಕ ಆಶ್ವಾಸಗಳಿವೆ. ಜೊತೆಗೆ ೩ ಆಶ್ವಾಸಗಳಲ್ಲಿ ನೂರರ ಮೇಲ್ಪಟ್ಟು ಅವುಗಳ ಬಳಕೆಯಿದೆ. ಕಂದಗಳು ಶ್ರೇಣೀಬದ್ಧವಾಗಿ ಬರುವುದು ಆದಿಪು.ದಲ್ಲಿಯೇ ಹೆಚ್ಚು. ಪಂಪಭಾ.ದಲ್ಲಿ ೧ ಆಶ್ವಾಸದಲ್ಲಿ ಮಾತ್ರ ನೂರರ ಮೇಲೆ ಕಂದಗಳಿವೆ. ಒಂದರಲ್ಲಿಯಂತೂ ಬರಿಯ ೨೩ ಕಂದಗಳಷ್ಟೇ ಇವೆ. ಉಳಿದ ಕಡೆ ಏರಿಳಿತಗಳು ಬಲುಮಟ್ಟಿಗೆ ಸಮತೂಕವಾಗಿವೆ.

ಎರಡು ಕೃತಿಗಳಲ್ಲಿಯೂ ಮತ್ತೇಭವಿಕ್ರೀಡಿತ, ಚಂಪಕಮಾಲೆ, ಮಹಾಸ್ರಗ್ಧರೆ, ಉತ್ಪಲಮಾಲೆಗಳು ಅಧಿಕ ಪ್ರಮಾಣದಲ್ಲಿವೆ. ಶಾರ್ದೂಲವಿಕ್ರೀಡಿತ ಸ್ರಗ್ಧರೆಗಳು

ಅತ್ಯಲ್ಪವಾಗಿವೆ. ಆದಿಪು.ದಲ್ಲಿ ಮತ್ತೇಭವೂ ಪಂಪಭಾ.ದಲ್ಲಿ ಚಂಪಕವೂ ಸರ್ವಾಧಿಕ ಸಂಖ್ಯೆಯಲ್ಲಿವೆ. ಆಯಾ ಕೃತಿಗಳ ದೃಢತೆಗೆ ಇವುಗಳ ಸಹಕಾರ ಮಿಗಿಲು. ಕವಿ ವೃತ್ತರಾಶಿಯಲ್ಲಿ ತುಂಬ ಮೆಚ್ಚಿರುವುದು ಇವೆರಡನ್ನೇ. ಮಹಾಸ್ರಗ್ಧರೆ ಉತ್ಪಲಗಳ ಸಂಖ್ಯಾಪ್ರಮಾಣದಲ್ಲಿ ಎರಡು ಕೃತಿಗಳಿಗೂ ನಡುವೆ ಏರುಪೇರುಗಳು ಹೆಚ್ಚು. ಲಯಸಾದೃಶ್ಯದ ದೃಷ್ಟಿಯಿಂದ ೬ ವೃತ್ತಗಳೆಂಬವು ದಿಟವಾಗಿ ೩ ವೃತ್ತಗಳೇ. ಆದ್ದರಿಂದ ಕವಿ ವ್ಯಾಪಕವಾಗಿ ಬಳಸಿರುವುದು ಕಂದಪದ್ಯವನ್ನು, ಶಾರ್ದೂಲ-ಮತ್ತೇಭ, ಉತ್ಪಲ-ಚಂಪಕ, ಸ್ರಗ್ಧರೆ-ಮಹಾಸ್ರಗ್ಧರೆಗಳೆಂಬ ಕಿಂಚಿಲ್ಲಯಭಿನ್ನ ವೃತ್ತತ್ರಯವನ್ನು ಎಂದು ಹೇಳಬಹುದು. ವಿರಳವೃತ್ತಗಳಲ್ಲಿ ಕವಿಗೆ ಬಹಳ ಇಷ್ಟವಾದವು ಎಂದರೆ ಪೃಥ್ವಿ, ಮಾಲಿನಿ, ತರಳ ಮತ್ತು ಮಲ್ಲಿಕಾಮಾಲೆಗಳು. ಉಳಿದವು ಒಕ್ಕೈ ಬೆರಳುಗಳನ್ನೂ ದಾಟುವುದಿಲ್ಲ. ಇವೆಲ್ಲ ವೈವಿಧ್ಯಸಾಧನೆಗೆ ಬಂದವು; ರುಚಿವೈಚಿತ್ರ್ಯವಷ್ಟೇ ಇವುಗಳ ಗುರಿ.

ಈ ವಿರಳವೃತ್ತಗಳ ಬಗೆಗೆ ಒಂದೆರಡು ಹೆಚ್ಚಿನ ಮಾತನ್ನು ಹೇಳಬೇಕಾಗಿದೆ. ಮಲ್ಲಿಕಾಮಾಲೆ-ತರಳಗಳ, ಖಚರಪ್ಲುತ-ಅನವದ್ಯಗಳ ಲಯ ಪಾದಾದಿ ಗುರುಸ್ಥಾನವಿನ್ಯಸ್ತ ದ್ವಿಲಘುವ್ಯತ್ಯಾಸದ ಹೊರತು ಒಂದೇ. ಹಾಗೆಯೇ ಅನವದ್ಯ-ಉಜ್ಜ್ವಲಗಳ ಲಯ ಪಾದಾದಿ ಲಘುಸ್ಥಾನವಿನ್ಯಸ್ತ ಗುರುವಿನ ವ್ಯತ್ಯಾಸದ ಹೊರತು ಒಂದೇ. ಎಂದರೆ ಪಂಪ ಬಳಸಿದ ೩ ಬೇರೆ ಹೆಸರುಗಳ ವೃತ್ತಗಳು ಲಯದ ದೃಷ್ಟಿಯಿಂದ ಬಲುಮಟ್ಟಿಗೆ ಒಂದೇ ಆಗಿದೆ.[೧] ಮಾಲಿನಿ ದ್ರುತವಿಲಂಬಿತಗಳು ಸಂಸ್ಕೃತದಲ್ಲಿ ತಕ್ಕಮಟ್ಟಿಗೆ ಗಣ್ಯ ವೃತ್ತಗಳೇ. ಅಷ್ಟೇ ಗಣ್ಯವಾದವು, ಅತ್ಯಷ್ಟಿಛಂದದ ಪೃಥ್ವಿ, ಮಂದಾಕ್ರಾಂತ, ಶಿಖರಿಣಿಗಳು. ಇವೆಲ್ಲ ಕಾಳಿದಾಸ, ಭಾರವಿ, ಮಾಘ, ಭಟ್ಟನಾರಾಯಣ, ಭವಭೂತಿ, ಭರ್ತೃಹರಿ, ರಾಜಶೇಖರ ಈ ಕೆಲವರು ಸಂಸ್ಕೃತದ ಪ್ರಸಿದ್ಧ ಕವಿಗಳು ಬಳಸಿದಂತಹವೇ. ಸಂಸ್ಕೃತ ಸಾಹಿತ್ಯದಲ್ಲಿ ಪ್ರಸಿದ್ಧವಿದ್ದೂ ಪಂಪನ ಕೃತಿಗಳಲ್ಲಿ ಕಾಣದವು ಎಂದರೆ, ಇಂದ್ರವಜ್ರ-ಉಪೇಂದ್ರವಜ್ರಗಳು, ವಸಂತತಿಲಕ, ರಥೋದ್ಧತ, ವಂಶಸ್ಥ ಈ ಕೆಲವು.

ವಿರಳ ಮಾತ್ರಾವೃತ್ತಗಳಲ್ಲಿ ರಗಳೆಗಳ ಬಗೆಗೆ ಅನ್ಯತ್ರ ವಿವೇಚನೆಗಳು ಬಂದಿವೆ. ಪಂಪ ಬಳಸಿದ ರಗಳೆಗಳು ಪ್ರಾಕೃತ ಪ್ರಭಾವದಿಂದ ರೂಪಗೊಂಡವು. ಕನ್ನಡಕ್ಕೆ ಇವುಗಳ ಪ್ರಥಮ ಪರಿಚಯ ಬಹುಶಃ ಪಂಪನ ಮೂಲಕವೇ. ಅಲ್ಲಿಯ ತಾಳವೃತ್ತಗಳ ಗಣರಚನೆಯನ್ನು ಇಲ್ಲಿ ಹೂಡಿ ಅವು ನಮ್ಮ ಭಾಷೆಗೆ ಒಗ್ಗುವುದೇ ಹೇಗೆ ಎಂದು ಅವನು ಪರೀಕ್ಷಿಸಿದಂತಿದೆ. ಮದನಾವತಾರ ರಗಳೆಯಲ್ಲಿ ಆದಿಪ್ರಾಸಸಂಘಟನೆ ಕವಿಯ ಪ್ರಯೋಗಶೀಲತೆಗೆ ಸಾಕ್ಷಿ.

---

೧ ಇಲ್ಲಿ ಒಂದು ಸಂಗತಿಯನ್ನು ಹೇಳಬೇಕು. ಅನವದ್ಯದೊಂದಿಗೆ ಅಭಿನ್ನವಾದ ಉಜ್ಜ್ವಲ ನಭಭಮಸಸಲಗ ಎಂಬ ವಿನ್ಯಾಸದ್ದು. ಇದನ್ನು 'ಛಂದೋಂಬುಧಿ'ಯಲ್ಲಿ ಅನವದ್ಯವೆಂದಿದೆ; ಹೇಮಚಂದ್ರ ಮುದ್ರಾ ಎಂದೂ ಜಯಕೀರ್ತಿ ಉಜ್ಜ್ವಲ ಎಂದೂ ಇದನ್ನು ಕರೆದಿದ್ದಾರೆ. ಆದ್ದರಿಂದ ಭಭಭಮಸಸಲಗ ಎಂಬ ವಿನ್ಯಾಸದ ಉಜ್ಜ್ವಲ ಬೇರೆಯೇ ವೃತ್ತ. ಇದು ಸಂಸ್ಕೃತದಲ್ಲಿ ಅನುಕ್ತ. ವೃತ್ತನಾಮದ ಆಧಾರ ಬಹುಶಃ 'ಕನ್ನಡ ಕೈಪಿಡಿ'. ಈ ಕಾರಣಗಳಿಂದ ಪಂಪಭಾ.ದ ೧೩-೮೬ರ ವೃತ್ತ ಸಂಪಾದಕರು ತೋರಿಸಿರುವಂತೆ ಅನವದ್ಯವಲ್ಲ. ಅದು ಉಜ್ಜ್ವಲ. ಇದು ಅನವದ್ಯದೊಂದಿಗೆ ಅಭಿನ್ನವಾದ ಉಜ್ಜ್ವಲವಲ್ಲ, ಭಿನ್ನವಾದ ಉಜ್ಜ್ವಲ.

ಹೀಗೆಯೇ ಪಂಪಭಾ.ದಲ್ಲಿ ಹರಿಣಿಯೆಂದೂ ಹರಿಣೀಪ್ಲುತವೆಂದೂ ಬೇರೆ ಬೇರೆಯಾಗಿ ಸಂಪಾದಕರು ಗುರುತಿಸಿರುವುದು, ನಿಜವಾಗಿ ಬೇರೆಬೇರೆಯಲ್ಲ. ಇದು ನಸಮರಸಲಗ ಎಂಬ ವಿನ್ಯಾಸದ ಒಂದೇ ವೃತ್ತ. ಸಂಸ್ಕೃತದಲ್ಲಿ ಹರಿಣಿ ಎಂದು ಪ್ರಸಿದ್ಧವಾಗಿರುವ ಈ ವೃತ್ತವನ್ನು ಹರಣೀಪ್ಲುತವೆಂದು ಕರೆದವನು ಬಹುಶಃ 'ಛಂದೋಂಬುಧಿ'ಯ ನಾಗವರ್ಮ.

ಲಯೋತ್ತರ ರಗಳೆಯ ಶಿಲ್ಪ ಆಕರ್ಷಕವಾದ್ದು; ಸ್ವರೂಪದ ದೃಷ್ಟಿಯಿಂದ ಕುತೂಹಲಕರವಾದ್ದು. ಸದೃಶಬಂಧ ಪ್ರಾಕೃತದಲ್ಲಿಲ್ಲ. ಕನ್ನಡದ ಉತ್ಸಾಹವೆಂಬ ಅಂಶವೃತ್ತ, ಪ್ರಾಕೃತದ ತೋಟಕ (ತೋಣಕ) ವೃತ್ತ, ಹಾಗೂ ಅಪಭ್ರಂಶದ ಕಡವಕ ಬಂಧಗಳ ಪ್ರಭಾವ ಒಗ್ಗೂಡಿ ಪಂಪನ ಲಯೋತ್ತರ ರಗಳೆ ನಿರ್ಮಾಣಗೊಂಡಿರಬಹುದು. ಈ ವಿಶಿಷ್ಟರೂಪದ ರಗಳೆಯನ್ನು ಮುಂದೆ ಕೆಲವು ಕನ್ನಡ ಕವಿಗಳು ಅನುಸರಿಸಿದ್ದಾರೆ. ಅನ್ಯತ್ರ ಇದನ್ನು ಗಮನಿಸಲಾಗಿದೆ.

ಅಂಶ ವೃತ್ತಗಳಲ್ಲಿ ಪಿರಿಯಕ್ಕರದ ಮೇಲೆ ಪಂಪನಿಗೆ ಅಕ್ಕರೆ ಹಿರಿದು. ಆದಿಪು.ದಲ್ಲಿ ಆದಿನಾಥನ ಪೂರ್ವಭವಗಳನ್ನು ಕುರಿತ ೨-೪೪೮ರ ಪದ್ಯ ಕನ್ನಡಸಾಹಿತ್ಯದ ಮೊತ್ತಮೊದಲ ಪಿರಿಯಕ್ಕರ. ಸಾಮಾನ್ಯವಾಗಿ ಪಂಪನ ಎಲ್ಲ ಪಿರಿಯಕ್ಕರಗಳಲ್ಲಿಯೂ ಮಾತುಗಳ ಆಯ್ಕೆ, ಹವಣಿಕೆ, ಧಾಟಿ ಇವುಗಳಲ್ಲಿ ಅಚ್ಚಕನ್ನಡತನ ಎದ್ದು ತೋರುತ್ತದೆ. ಅಪವಾದಗಳಿದ್ದರೂ ಗಣಾಂತ, ಚತುರ್ಗಣಾಂತ, ಪಾದಾಂತಯತಿ ಬಲುಮಟ್ಟಿಗೆ ಎಲ್ಲೆಡೆಯೂ ಪಾಲಿತವಾಗಿದೆ. ಒಂದು ರಚನೆ (೬-೨೭), ಆದಿಪು.ದೊಳಗಿನದು, ವರ್ಣವೃತ್ತದ ಧಾಟಿಯಲ್ಲಿರುವಂತೆ ತೋರುವುದು ಒಂದು ವಿಶೇಷವೇ. ಛಂದಸ್ಸಿನ ದೃಷ್ಟಿಯಿಂದ ಗಲ-ತ್ರಿಲಘುಗಳು ಬೆರೆತು ಬರುವ, ಆದಿಪು.ದ ಒಂದು ಉತ್ಸಾಹವೃತ್ತ (೧೨-೫೫) ಸೂರ್ಯೋದಯ ವ್ಯಾಜದಿಂದ 'ಚಕ್ರ' ಶಬ್ದವನ್ನು ಯಮಕಿತಗೊಳಿಸಿದ ಒಂದು ಚಮತ್ಕಾರ ಪದ್ಯವಾಗಿದೆ. ಇನ್ನೊಂದು ಉತ್ಸಾಹ, ಪಂಪಭಾ.ದೊಳಗಿನದು (೧೨-೧೩), ಕರ್ಣ-ಘಟೋತ್ಕಚರ ಸಂಘರ್ಷವನ್ನು ಸಮರ್ಥವಾಗಿ ವ್ಯಂಜಿಸುವ ಸಹಜರಚನೆ. 'ಇಸು' ಧಾತುವಿನ ನಿಷ್ಪನ್ನರೂಪವೂ ಕ್ರಮವಾಗಿ ೧೯, ೧೯, ೧೭ ಅಕ್ಷರಗಳಿಗೆ ತೂಗಿಬಿಟ್ಟಂತೆ ಬಂದು ನಿಲ್ಲುವ ಅರ್ಥಯತಿಯೂ ರಚನೆಯ ಯಶಸ್ಸಿಗೆ ಕಾರಣಗಳಾಗಿವೆ. ಇನ್ನು, ಪಂಪ ಬಳಸಿದ ೨ ತ್ರಿಪದಿಗಳಲ್ಲಿಯೂ ನಾದಗುಣವೇ ಮೇಲಾಗಿ, ಅದು ಅರ್ಥದ ಸೊಗಸನ್ನು ನುಂಗಿಹಾಕಿದೆ. ಇವುಗಳಲ್ಲಿ ಒಂದರ ಛಂದೋರೂಪವನ್ನು ಪರಿಷ್ಕರಿಸಿ, ಈಚೆಗೆ ನಾನು ಒಂದು ಲೇಖನವನ್ನು ಪ್ರಕಟಿಸಿದ್ದೇನೆ.[೨]

ಕೊನೆಯದಾಗಿ, ಸಂಸ್ಕೃತ ಶ್ಲೋಕಗಳು ಮತ್ತು ಪುಷ್ಪಿತಾಗ್ರ. ಚತುರ್ವಿಂಶತಿ ಜಿನಸ್ತವನ ಎನ್ನಬಹುದಾದ ಶ್ಲೋಕಗುಚ್ಛದಲ್ಲಿ ಕ್ವಚಿದಪವಾದ ಹೊರತಾಗಿ, ಎಲ್ಲ ಲಕ್ಷಣಬದ್ಧವಾದವು. ಇವು ನಿರರ್ಗಳಗತಿಯಲ್ಲಿದ್ದು, ಭಕ್ತಿರಸಾರ್ದ್ರಗಳಾಗಿವೆ. ಪುಷ್ಪಿತಾಗ್ರಗಳೆರಡೂ ಲಕ್ಷಣಾನ್ವಿತವೇ. ಸಂಸ್ಕೃತ ಮಹಾಕಾವ್ಯಗಳ ಬಂಧಗಳ ವಿಷಯದಲ್ಲಿ ತನಗಿರುವ ಆದರವನ್ನು ಪಂಪಕವಿ ಹೀಗೆ ಪ್ರಕಟಿಸಿರುವನೆನ್ನಬೇಕು.

## ೨

ಈಗ ಸ್ವಲ್ಪ ವಿವರದಲ್ಲಿ ಪಂಪನ ರಚನೆಗಳ ಛಂದಃಸ್ವರೂಪವನ್ನು ನೋಡೋಣ. ಯಾವ ವೃತ್ತಗಳನ್ನು 'ಸುವೃತ್ತತಿಲಕ'ದಲ್ಲಿ ಕ್ಷೇಮೇಂದ್ರನು ಸರಲತರ, ಸರ್ವಕಾವ್ಯೋಚಿತ, ಸುಕವಿಪರಿಚಿತ, ಕೀರ್ಣಕರ್ಣಾಮೃತ, ಪರುಷವಿಷಮಮಾತ್ರಾದುರ್ವಿರಾಮೋಜ್ಝಿತಗಳಾದ ಪ್ರಚುರರುಚಿರವೃತ್ತಗಳೆಂಬುದಾಗಿ (೧-೩೮) ತಿಳಿದಿರುವನೋ ಅವನ್ನೇ ಪಂಪನು ತನ್ನ ಕೃತಿಗಳಲ್ಲಿ ವಿಶೇಷವಾಗಿ ಬಳಸಿದ್ದಾನೆ.

---

೨ 'ಆದಿಪುರಾಣ'ದ ತ್ರಿಪದಿಯೊಂದರ (೬-೧೩) ಪಾಠವಿಚಾರ, ಲೋಚನ, ೧-೧, ಪು. ೧೦-೧೭.

## ೧. ಶಾರ್ದೂಲವಿಕ್ರೀಡಿತ

ಪಂಪ ಬಳಸಿದ ಶಾರ್ದೂಲವಿಕ್ರೀಡಿತಗಳಲ್ಲಿ ೧೩ ಸಂಸ್ಕೃತದವನ್ನು ಬಿಟ್ಟರೆ, ಉಳಿದವು ೨೪ ಮಾತ್ರ. ತೆಲುಗು ಭಾರತದಲ್ಲಿಯೂ ಇವು ಅಲ್ಪಸಂಖ್ಯಾಕವೇ. ೧೯ ಅಕ್ಷರಗಳ ಅತಿಧೃತಿ ಛಂದಸ್ಸಿನ ಈ ವೃತ್ತದ ಗಣವಿನ್ಯಾಸ ಮಸಜಸತತಗ. ಇಲ್ಲಿ ೧೧ ಗುರುಗಳೇ ಇರುವುದರಿಂದ, ಇದರದು ವಿಲಂಬಿತಗತಿ. ಪಾದದ ಪೂರ್ವಖಂಡವನ್ನು ಸರ್ವ-ಅಂತ-ಮಧ್ಯಾರೋಹಣಗಳಾದ ಮಸಜಗಳೂ ಉತ್ತರಖಂಡವನ್ನು ಅಂತಾವರೋಹಣಗಳಾದ ತಗಣಗಳೂ ರೂಪಿಸುತ್ತವೆ. ಒಟ್ಟಿನಲ್ಲಿ ವೃತ್ತಗತಿ ಆರೋಹಣಾತ್ಮಕ ವಿಲಂಬಿತಗತಿ. ಯತಿಸ್ಥಾನದವರೆಗೆ ಅವಿಚ್ಛಿನ್ನೋಚ್ಚಾರಣೆಯ ಕಾರಣ, ವಕ್ತೃಗಳಿಗೆ ವಾಚನವು ಶ್ವಾಸಶ್ರಾಂತಿಕರವಾದ್ದು ; ಶ್ರೋತೃಗಳಿಗೆ ಶ್ರವಣವು ಶ್ರವಣೋದ್ವೇಜಕವಾದ್ದು. ಸಮಾಸಘಟಕಗಳ ದೀರ್ಘತೆಯಿಂದ ಪಾದಗಳು ಓಜಸ್ವಿಯಾಗಿ ಹೆಣೆದುಕೊಳ್ಳುತ್ತವೆ. ೨-೩ ಗುರುಗಳ ದೇಶ್ಯಶಬ್ದಗಳು ಕನ್ನಡದಲ್ಲಿ ದುರ್ಲಭವೆಂಬುದೂ ಒಂದು ಕಾರಣವಾಗಿ ಕನ್ನಡ ಪದ್ಯಪದ್ಧತಿಗೆ ಈ ವೃತ್ತ ಹೆಚ್ಚು ಒಗ್ಗಲಿಲ್ಲವೆಂದು ತೋರುತ್ತದೆ.

ಕ್ಷೇಮೇಂದ್ರನು ನಿರೂಪಿಸಿದ ಈ ವೃತ್ತದ ಅಕ್ಷರಶಿಲ್ಪದ ನಿಯಮಗಳು ಕನ್ನಡದ ಜಾಯಮಾನಕ್ಕೆ ಹೊಂದುವಂತಹವಲ್ಲ. ''ಶೌರ್ಯಸ್ತವೇ ನೃಪಾದೀನಾಂ ಶಾರ್ದೂಲ ವಿಕ್ರೀಡಿತಂ ಮತಂ'' ಎಂಬ (೩-೨೨) ವೃತ್ತವಿನಿಯೋಗಸೂಚನೆ ಪಾಕ್ಷಿಕವಾಗಿ ಸರಿ. ಭೋಜನಾದರೋ ಸರ್ವತ್ರ ಬಳಸಬಹುದು ಎಂದಿದ್ದಾನೆ. ಪಂಪ ಸಾಲಾಗಿ ಸ್ತುತಿಪದ್ಯಗಳಿಗೆ ಈ ವೃತ್ತವನ್ನು ಬಳಸಿರುವುದರಿಂದ ನಮಗೆ ಭೋಜನ ಮಾತೇ ಕರಣೀಯವಾಗಿದೆ. ಚಿತ್ತಸ್ಪಂದನವು ಅತ್ಯಂತ ದೀಪ್ತವೋ ಮಂದವೋ ಇದ್ದಾಗ ಈ ವೃತ್ತ ಹೊಂದಬಲ್ಲುದು. ಆದ್ದರಿಂದಲೇ ವೀರರೌದ್ರಾದಿಗಳಿಗೂ ಶೋಕಪ್ರಣಯಾದಿಗಳಿಗೂ ಇದು ಸಮಂಜಸ ವೃತ್ತವಾಗಿದೆ. ಪಂಪ ಆದಿಪು.ದ ನಾಂದೀಪದ್ಯವನ್ನು ಶಾರ್ದೂಲವಿಕ್ರೀಡಿತದಲ್ಲಿಯೇ ಕಟ್ಟಿದ್ದಾನೆ. ತೆಲುಗಿನ ನನ್ನಯ್ಯನೂ ಹೀಗೆಯೇ ಮಾಡಿದ್ದಾನೆ.

ಆದಿಪು.ದಲ್ಲಿ ಸ್ವಯಂಬುದ್ಧ ಧರ್ಮಪ್ರಭಾವನಿವೇದನಾವಸರದ

> ಲಾವಣ್ಯಾಬ್ಧಿತರಂಗಭಂಗಲಲಿತಭ್ರೂಭಂಗದಿವ್ಯಾಂಗನಾ
> ಭಾವಾಪಾಂಗನಿರೀಕ್ಷಣಾಮೃತಕೃತಾನಂಗೋತ್ಸವಂ ಚೋದ್ಯವಿ
> ದ್ಯಾವಷ್ಟಂಭವಿಜೃಂಭಿತಾಂಬರಚರೇಶಾರಾಧ್ಯನಾಗಿರ್ದ ನಿ
> ನ್ನೀ ವಿದ್ಯಾಧರಲಕ್ಷ್ಮಿ ಪುಣ್ಯಜನಿತಂ ವಿದ್ಯಾಧರಾಧೀಶ್ವರಾ॥ (೨-೬)

ಎಂಬ ವೃತ್ತ ಹೇಗೆ ಸಮಾಸಸಮಾಶ್ಲಿಷ್ಟವಾಗಿದೆಯೆನ್ನುವುದನ್ನು ನೋಡಬಹುದು. ಮಹಾಬಲನ ವೈಭವವನ್ನು ಕೀರ್ತಿಸಲೆಂದೇ ಕವಿ ಸ್ವರದೀರ್ಘಗಳು, ಸಂಯುಕ್ತಗಳು ಹಾಗೂ ಸಾನುಸ್ವಾರವಾದ ಅಕ್ಷರಗಳನ್ನು ಹೆಣೆದು, ನಿರ್ವಿರಾಮ ವಾಕ್ಯನಿರ್ಮಾಣಪ್ರವಣವಾದ ಈ ವಿಲಂಬಿತಗತಿಯ ವೃತ್ತವನ್ನು ಕಡೆದಿರಬೇಕು.

ಹೀಗೆಯೇ ಪಂಪಭಾ.ದಲ್ಲಿ ಅರ್ಜುನ ಪಟ್ಟಬಂಧೋತ್ಸವದ

> ರಂಗತ್ತುಂಗತರಂಗಭಂಗುರಲಸದ್ಗಂಗಾಜಳಂ ನರ್ಮದಾ
> ಸಂಗಸ್ವಚ್ಛವನಂ ಪ್ರಸಿದ್ಧವರದಾಪುಣ್ಯಾಂಬು ಗೋದಾವರೀ

ಸಂಗತ್ಯೋರ್ಜಿತವಾರಿ ಸಾರಯಮುನಾಸೀಳೋರ್ಮಿನೀರಂ ಭುಜೋ
ತ್ತುಂಗಂಗೀಗರಿಗಂಗೆ ಮಂಗಳಮಹಾಶ್ರೀಯಂ ಜಯಶ್ರೀಯುಮಂ ॥ (೧೪-೩೧)

ಎಂಬ ಒಂದು ವೃತ್ತದಲ್ಲಿ, ಜಲೋದ್ಧತಗತಿಗೆ ಸಹಜವಾದ, ಕಿವಿಯನ್ನು ತುಂಬುವ, ಅಲೆಗಳ ಉತ್‌ಪ್ಲುತಗತಿಯನ್ನೇ ಕವಿ ಹಿಡಿದಿಟ್ಟಿರುವನೆಂಬಂತೆ ತೋರುವುದು. ಅಲೆಯಂತೆ ಚಿಮ್ಮುವ 'ರಂಗತ್' ಶಬ್ದದೊಂದಿಗೆ ಮೊದಲಾದ ನಡೆ ೨ ತಗಣಗಳ ಅಂತಾವರೋಹಣದೊಂದಿಗೆ ಸಹಜವಾಗಿ ಮುಗಿಯುತ್ತದೆ.

ಶಾರ್ದೂಲ ವಿಕ್ರೀಡಿತವು ವಿಸರ್ಜನೀಯೋಪಧ್ಮಾನೀಯ ಶಷರೇಫಾದಿ ಸಹಜವಾದ ಹ್ರಸ್ವಗುರ್ವಕ್ಷರಬಾಹುಳ್ಯದಿಂದ ಓಜೋವಂತವಾಗಿ, ವೀರ ರೌದ್ರ ಬೀಭತ್ಸಾದಿ ರಸಗಳನ್ನು ವ್ಯಂಜಿಸಲು ಶಕ್ತವಾಗಿದೆಯೆಂದು ಭರತಾದಿಗಳ ನಿರ್ವಚನದಿಂದ ತಿಳಿಯಬಹುದಾಗಿದೆ. ಈ ಉದಾ. ನೋಡಿ:

ಕ್ರಂದತ್ಸ್ಯಂದನಜಾತನಿರ್ಗತ ಶಿಖಿಜ್ವಾಳಾಸಹಸ್ರಂಗಳಾ
ಟಂದೆತ್ತಂ ಕವಿದಟ್ಟಿ ಬೇವ ಶವಸಂಘಾತಂಗಳಂ ಚಕ್ಕುಮೊ
ಕ್ಕೆಂದಾಗಳ್ ಕಡಿದುಗ್ರಭೂತನಿಕರಂ ಕೆಯ್ ಬೇಯೆ ಬಾಯ್ ಬೇಯೆ ತಿಂ
ಬಂದಂ ತನ್ನ ಮನಕ್ಕಗುರ್ವಿಸುವಿನಂ ದುರ್ಯೋಧನಂ ನೋಡಿದಂ ॥ (೧೩-೭೧)

ಇಲ್ಲಿ ರೀತಿ ''ಮಾರ್ಗದೊಳ್ ಪುಗುವುದು, ಪೊಕ್ಕು ದೇಸಿಯೊಳ್ ತಳ್ವುದು'' ಎನ್ನಬೇಕು! ಜೊತೆಗೆ ಭೂತಚರ್ಯೆ ಬೀಭತ್ಸರಸೋತ್ಪಾದಕವಾಗಿರುವುದೂ ಸ್ಪಷ್ಟ.

## ೨. ಮತ್ತೇಭವಿಕ್ರೀಡಿತ

ಕನ್ನಡ ತೆಲುಗುಗಳಲ್ಲಿ ಅಧಿಕ ಪ್ರಚಾರವುಳ್ಳದ್ದು ಈ ವೃತ್ತ. ಸಭರನಮಯಲಗ ಎಂಬುದು ಗಣವಿನ್ಯಾಸ. ೨೦ ಅಕ್ಷರಗಳಲ್ಲಿ ೧೦ ಗುರುಗಳೇ ಆಗಿರುವುದರಿಂದ ಇದರದೂ ವಿಲಂಬಿತಗತಿಯೇ. ಶಾರ್ದೂಲದ ಆದಿಗುರುವನ್ನು ಲಘುದ್ವಯವನ್ನಾಗಿ ಪರಿವರ್ತಿಸಿದ ಕಾರಣ, ರಚನೆಗೆ ಕೊಂಚ ಸೌಕರ್ಯವೇರ್ಪಟ್ಟಿರಬೇಕು. ವ್ಯಸ್ತ ಸಮಸ್ತಪದಗಳು ಸಮಾನವಾಗಿ ಒದಗಬಲ್ಲವು ಎಂಬುದರಿಂದ ರಚನೆಯಲ್ಲಿ ಸುಭಗತೆ ಸಹಜವೇ.

ಭಯ ಶೋಕ ಕ್ರೋಧ ವಿಸ್ಮಯ ಜುಗುಪ್ಸೆ ಮೊದಲಾದ ಭಾವಗಳಲ್ಲಿ ಚಿತ್ತಸ್ಪಂದನವನ್ನು ತರಬಲ್ಲ ಅಭಿವ್ಯಂಜಕ ಶಕ್ತಿ ಈ ವೃತ್ತಕ್ಕೆ ಇದೆ. ವೀರ ರೌದ್ರಾದಿ ರಸವ್ಯಾಪಾರಗಳಿಗೂ ಸಹಜವಾದ್ದು. ಒಟ್ಟಿನಲ್ಲಿ ಗಂಭೀರ ದ್ರವ್ಯ ಗುಣ ಕ್ರಿಯಾ ವರ್ಣನೆಗಳಿಗೆ ಸಹಕಾರಿ. ಈ ವೃತ್ತದ ಸ್ಥಿತಿಸ್ಥಾಪಕ ಗುಣವನ್ನು, ಸ್ನಿಗ್ಧತೆಯ ಸ್ವರೂಪವನ್ನು ಸಮಗ್ರವಾಗಿ ವಿವೇಚಿಸುವುದು ಶ್ರಮಸಾಧ್ಯವಾದ್ದು. ಕೆಲವು ಉದಾ.ಗಳು :

ಚಿತ್ರಪಟದರ್ಶನದಿಂದ ಭವಾಂತರ ಸ್ನೇಹಸಂಬಂಧವನ್ನು ನೆನೆದ ವಜ್ರಜಂಘನ ಮನಃಸ್ಥಿತಿಯಿದು :

ಇದಱಿಂದಂ ಬಿಸವಂದಮಿಂತಿದಮರೇಂದ್ರಾವಾಸದೊಂದಂದಮಿಂ
ತಿದು ದಲ್ ದೇವವಿಮಾನದಂದಮಿದು ದೇವಾನೀಕದೊಂದಂದಮಿಂ
ತಿದು ದೇವಾಂಗನೆಯರ್ ಪಲರ್ ಬಳಸಿಕೊಂಡಿರ್ದಂದಮೀ ತಳ್ತ ರೂ
ಪಿದು ದಲ್ ದೇವನ ದೇವಿಯಂದಮಿದು ಪೇೞ್ ಮುನ್ನೆಲ್ಲಿ ಕಂಡಂದಮೋ ॥ (೪-೫)

ಮನಸ್ಸಿನಲ್ಲಿ ಮೂಡಿದ ಅಚ್ಚರಿಯನ್ನು ''ಇದಱಿಂದಂ ಬಿಸವಂದಂ'' ಎಂಬ ೨ ಸಮವಿನ್ಯಾಸದ ಷಣ್ಮಾತ್ರಾಗಣಗಳು ಹೇಗೆ ಆರಂಭದಲ್ಲಿಯೇ ಸ್ಫೋಟಿಸುತ್ತದೆ, ನೋಡಿ. ಪಂಪಭಾ.ದ ೬-೩೮ ಆರಂಭವೂ ಹೀಗೆಯೇ ''ಇದಱಿಂದಂ ಬಿಸವಂದಂ'' ಎಂದೇ ಆಗಿ, ವಿಸ್ಮಯಜನಕವಾದ ಮಯಸಭಾಗೃಹದ ಅಸಾಮಾನ್ಯತೆಗೆ ಕನ್ನಡಿ ಹಿಡಿಯುತ್ತದೆ. ಪ್ರಸ್ತುತ, ದೈವಿಕವಾದ ಚೆಲುವು ವಜ್ರಜಂಘನ ಅಂತಃಕರಣವನ್ನೆಲ್ಲ ತುಂಬಿಕೊಂಡು, ಅವನ ಹೃದಯಕಲಶದಿಂದ ಧಾರೆಯಾಗಿ ಸೂಸಿ, ಅವನಲ್ಲಿ ಹರ್ಷಾಶ್ಚರ್ಯಗಳನ್ನು ಉಂಟುಮಾಡುತ್ತಿರುವುದು 'ಅಂದಂ', 'ದೇವ' ಎಂಬ ಲಲಿತವಾದ ಶಬ್ದಗಳ ಅಸಕೃದಾವೃತ್ತಿಯಿಂದ ವಿದಿತವಾಗುತ್ತದೆ. ಅಸಂಯುಕ್ತವಾದ ಪದರಚನೆ ಶಯ್ಯೆಯ ಪ್ರಸನ್ನತೆಗೆ ಸಹಕಾರಿಯಾಗಿದೆ. ಅಲ್ಲದೆ ವರ್ಗೀಯಗಳಾದ ತಾಲವ್ಯ ಮೂರ್ಧನ್ಯಗಳಲ್ಲಿ ಒಂದೇ ಒಂದು ಧ್ವನಿಯೂ ಬಳಕೆಯಾಗಿಲ್ಲ ; ಒಂದೇ ಒಂದು ಮಹಾಪ್ರಾಣಾಕ್ಷರವಿಲ್ಲ. ಭಾವದ ಲಾಲಿತ್ಯಕ್ಕೆ ಅನುಗುಣವಾಗಿ ಪದಲಾಲಿತ್ಯ. ದಿಟವಾಗಿ ಇದೊಂದು ಪ್ರಸನ್ನಮತ್ತೇಭವಿಕ್ರೀಡಿತ !

ಧರೆ ರಂಗಂ ಗಗನಂ ಮನೋಹರತರಂ ನಾಟ್ಯಾಲಯಂ ನರ್ತಕಂ
ಸುರರಾಜಂ ಸಭೆ ದೇವಮರ್ತ್ಯಸಭೆ ಸಂದಾರಾಧ್ಯನೀಶಂ ಜಗ
ದ್ಗುರು ತನ್ನೃತ್ಯಫಲಂ ತ್ರಿವರ್ಗವಿಭವಂ ತಾನೆಂದೊಡೇಮಾತೊ ಸಾ
ಸಿರಮುಂ ನಾಲಗೆಯುಳ್ಳ ವಾಸುಕಿಯುಮಿನ್ನೇನೆಂದದಂ ಬಣ್ಣಿಪಂ ॥ (೭-೧೨೭)

ಈ ವೃತ್ತ ಜಿನಜನ್ಮಾಭಿಷವೋತ್ಸವದ ಇಂದ್ರನ ಆನಂದನೃತ್ಯಸಂಬಂಧವಾದ್ದು. ಇಲ್ಲಿ ಹಲವು ಲಘುವಾಕ್ಯಗಳಿವೆ. ಒಂದೊಂದರಲ್ಲಿಯೂ ಕ್ರಿಯೆ ಅಧ್ಯಾಹೃತವಾಗಿದ್ದು, ವಾಚನಗತಿ, ಅದರಿಂದಾಗಿ ನಿರಾಯಾಸವೂ ಸುಖಾವಹವೂ ಆಗಿದೆ. ಕರ್ತೃ ಪ್ರಥಮಾವಿಭಕ್ತ್ಯಂತವಾದ್ದು. ಆದರೆ ಅಲ್ಲಿ ಪ್ರಶ್ನಾರ್ಥಕವಾದ ಕಾಕುವನ್ನು ತಂದರೆ, ಭಂಗ್ಯಂತರದ ಸೊಗಸುಂಟು. ಸಹಸ್ರಜಿಹ್ವನಾದ ವಾಸುಕಿಗೂ ಆ ನರ್ತನದ ವೈಖರಿಯನ್ನು ವರ್ಣಿಸುವುದಾಗದು ಎನ್ನುವುದನ್ನು ತಿಳಿಸಲು, ''ಇನ್ನೇನೆಂದದಂ ಬಣ್ಣಿಪಂ'' ಎಂದು ಕವಿ ಗತಿಯನ್ನು ವಿಲಂಬಿತಗೊಳಿಸಿದ್ದಾನೆ. 'ಏನ್' ಎಂಬ ಪ್ರಶ್ನೆ ಸ್ವರದೀರ್ಘವಾಗಿ ಮಾತ್ರವಲ್ಲದೆ, ಪ್ಲುತವೂ ಪ್ಲುತೋತ್ತರವೂ ಆಗಿ ನುಡಿಯಬಲ್ಲುದಾಗಿದೆ.

ಮುಳಿಸಿಂದಂ ನುಡಿದೊಂದು ನಿನ್ನ ನುಡಿ ಸಲ್ಗಾರಾಗದೆಂಬರ್ ಮಹಾ
ಪ್ರಳಯೋಲ್ಕೋಪಮ ಮದ್ಗದಾಹತಿಯಿನತ್ಯುಗ್ರಾಜಿಯೊಳ್ ಮುನ್ನಮೀ
ಖಳ ದುಶ್ಶಾಸನನಂ ಪೊರಳ್ಚಿಬಸಿಱಂ ಪೋೞ್ದಿಕ್ಕಿ ಬಂಬಲ್ಗರು
ಳ್ಗಳಿನಾನಲ್ತೆ ವಿಳಾಸದಿಂ ಮುಡಿಯಿಪೆಂ ಪಂಕೇಜಪತ್ರೇಕ್ಷಣೇ ॥ (೭-೧೨)

ಇದು ಪಂಪಭಾ.ದೊಳಗಿನ ವೃತ್ತವೆಂಬುದೂ ಭೀಮಸೇನಪ್ರತಿಜ್ಞೆಯ ಭಾಗವೆಂಬುದೂ ವಿದಿತವೇ ಇದೆ. ''ನುಡಿ ಸಲ್ಗೆ'' ಎಂಬವರೆಗಿನ ವೃತ್ತದ ಗತಿ ಮಧ್ಯಮಗತಿಯಲ್ಲಿದ್ದು, 'ತಥಾಸ್ತು' ಎಂಬ ರೀತಿಯಲ್ಲಿ ನಿಲ್ಲುತ್ತದೆ. ''ಆರಾಗದೆಂಬರ್'' ಎಂಬಲ್ಲಿಗೆ ಬಂದಾಗ, ಆರೋಹಣಗತಿಗೆ ಏರುವ ಸೂಚನೆ ಸ್ಪಷ್ಟವಾಗಿ, ಶಕ್ತಿಸಂಚಯನದ ಸಲುವಾಗಿಯೋ ಎನ್ನುವಂತೆ ಸ್ವಲ್ಪಕಾಲ ಗತಿ ತಡೆಗೊಳ್ಳುತ್ತದೆ. ಬಳಿಕ ಸುದೀರ್ಘವಾದೊಂದು ಸಮಾಸಬಂಧವು ಸಂಯುಕ್ತಾಕ್ಷರಘಟಿತ ಶಬ್ದಗಳಿಂದ ಜಟಿಲಿತಗೊಂಡು ಭೀಮನ ಕ್ರೋಧೋದ್ರೇಕವನ್ನು ಮುನ್ನೆಲೆಗೆ ತರುತ್ತದೆ. ಇಲ್ಲಿಂದ ಮುಂದೆ ಸೇಡು ಭುಗಿಲೆದ್ದಂತೆ ''ಮುನ್ನಮೀ ಖಳ ದುಶ್ಶಾಸನನಂ'' ಎಂಬುದಾಗಿ ಮಹಾಪ್ರಾಣ ಮತ್ತು ಊಷ್ಮವರ್ಣಗಳಿಂದ ಬಿಗಿಗೊಂಡು,

ನಮ್ಮ ಎದುರಿನಲ್ಲಿಯೇ ಭೀಮನು ದುಶ್ಶಾಸನನನ್ನು ಸೀಳುತ್ತಿರುವನೋ ಎನ್ನುವಂತೆ 'ಪೊರಳ್ಚಿ', 'ಪೋೞ್ದಿಕ್ಕಿ' ಎಂಬ ಸಮುಚಿತ ಶಬ್ದಗಳ ಮೂಲಕ ರಚನೆ ಕೃತಕೃತ್ಯವಾಗುತ್ತದೆ. ಆ ಮುಂದಿನ ಪಾದಭಾಗದಲ್ಲಿ ಭೀಮನ ಆತ್ಮಾವಷ್ಟಂಭದ ಭಣಿತಿ, ಅಷ್ಟೇ ಸಹಜವಾಗಿ ತಗಣ ಜಗಣಗಳ ಏರಿಳಿತದಿಂದ ಕೂಡಿಕೊಳ್ಳುತ್ತದೆ.

ಪಂಪನ ಕೃತಿಗಳಲ್ಲಿ ಕಣ್ಣಿಟ್ಟೆಡೆ, ಕೈಯಿಟ್ಟೆಡೆ ಮತ್ತೇಭವಿಕ್ರೀಡಿತದ ವಿಜೃಂಭಣೆ ತೂಗಿ ತೊನೆದು ನಿಲ್ಲುವುದನ್ನು ಕಾಣಬಹುದು. ಈ ವೃತ್ತ ನಾದದ ಬಗೆಬಗೆಯ ಹಾಸು ಬೀಸುಗಳನ್ನು ನೇಯುತ್ತದೆ; ಇಂಪು ಸೊಂಪುಗಳನ್ನು ಸೂಸುತ್ತದೆ. 'ವಿಕ್ರಮೋರ್ವಶೀಯ'ದ ಸುಂದರವಾದ ಶಾರ್ದೂಲವಿಕ್ರೀಡಿತವೊಂದನ್ನು ಅನುವಾದಿಸುವಲ್ಲಿ (ಅಂಕ ೧-ಪದ್ಯ ೮), ಪಂಪ ಅದೇ ಛಂದಸ್ಸನ್ನು ಬಳಸದೆ, ಮತ್ತೇಭ ವಿಕ್ರೀಡಿತವನ್ನು ಬಳಸಿರುವುದರಲ್ಲಿಯೂ (೪-೭೫), ಮುದ್ರಾಲಂಕಾರದ ಸೊಗಸಿಗೆ ಇದನ್ನೇ ಆಯ್ದಿರುವಲ್ಲಿಯೂ (೮-೩೭ ; ೯-೨೫, ಪಂಪಭಾ.) ಈ ವೃತ್ತದ ವಿಷಯದಲ್ಲಿ ಪಂಪನಿಗಿರುವ ಇಷ್ಟವೂ ಒಿಡಿತವೂ ನಮಗೆ ಮನವರಿಕೆಯಾಗುತ್ತವೆ.

### ೩. ಉತ್ಪಲಮಾಲೆ

೨೦ ಅಕ್ಷರಗಳ ಕೃತಿಛಂದಸ್ಸಿನ ಈ ವೃತ್ತ ಭರನಭಭರಲಗ ಎಂಬ ಗಣವಿನ್ಯಾಸವುಳ್ಳದ್ದು. ೮ ಗುರುಗಳು ೧೨ ಲಘುಗಳ ಕಾರಣ ಮಧ್ಯಮಗತಿ ಇದರದು. ಭಗಣ ಬಹುಳವಾದ್ದರಿಂದ ಅವರೋಹಣಗತಿ ಸಹಜ. ಇದು ಪ್ರಸಾದ ಮಾಧುರ್ಯಗಳ ವ್ಯಂಜಕಗುಣಕ್ಕೆ ಸಹಾಯಕ. ಭಗಣವನ್ನು ಸ್ಥಗಿತಗೊಳಿಸಿ, ಜಗಣ ಪ್ರಕಟಗೊಳ್ಳುವಂತೆ ವಾಚನಗತಿಯಿದ್ದರೆ ಆ ಉತ್‌ಪ್ಲುತಿಯ ಗಮಕ ವೀರ ರೌದ್ರಾದಿಗಳ ಪ್ರಕಟನೆಗೆ ಅನುಕೂಲವಾಗಿರುವುದು. ಸಾಂಪ್ರದಾಯಿಕ ಅಕ್ಷರಪರಂಪರೆಯ ಕ್ರಮವನ್ನು ಅನುಸರಿಸಿಯೇ, ತಕ್ಕ ಪದವ್ಯವಸ್ಥೆಗಳಿಂದ ಭಿನ್ನಗತಿಗಳನ್ನು ಹೊರಡಿಸಿದರೆ ನಾನಾ ರಸಭಾವ ವ್ಯಂಜನೆಯುಂಟಾಗುವುದು ಇತರ ವೃತ್ತಗಳಲ್ಲಿ ಹೇಗೋ ಈ ವೃತ್ತದಲ್ಲಿಯೂ ಸಾಧ್ಯ. ಭಾವಲಾಲಿತ್ಯದ ಸಂದರ್ಭಗಳಿಗೆ ಈ ಬಂಧದ ಬಳಕೆ ತುಂಬಾ ಸಾಮಾನ್ಯ. ಆದಿಪು.ದಲ್ಲಿ ಲಲಿತಾಂಗ-ಸ್ವಯಂಪ್ರಭೆಯರ, ವಜ್ರಜಂಘ – ಶ್ರೀಮತಿಯರ ಪ್ರಣಯ ಸನ್ನಿವೇಶಗಳನ್ನು ವರ್ಣಿಸುವಾಗ ಈ ವೃತ್ತವೇ ಹೆಚ್ಚಾಗಿ ಬಳಕೆಯಾಗಿದೆ.

ನಾಕಲೋಕಚ್ಯುತಿಯ ಸಮಯ ಸನ್ನಿಹಿತವಾದಾಗ ಲಲಿತಾಂಗ ಕಳವಳಿಸಿದ್ದು ಹೀಗೆ:

> ಸಂತಸದಂತನೆಯ್ದಿ ಸುರತಾಮೃತದೊಳ್ ತಣಿದಟ್ಟಿಱಿಂ ಜಗಿ
> ಲ್ತಂತಿರೆ ಪತ್ತಿ ಮೆಯ್ಗಳೆರಡಾದೊಡಮೇನಸುವೊಂದೆ ನೋೞ್ಪೊಡಂ
> ಬಂತಿರೆ ಕೂಡಿ ನಿನ್ನೊಡನೆ ಭೋಗಿಸಲೀಯದೆ ಕೆಮ್ಮನೆನ್ನನು
> ಯ್ವಂತಕನೆಂಬ ಬೂತನೆಲೆ ಮಾಣಿಸಲಾಗದೆ ಪೇೞ್ ಸ್ವಯಂಪ್ರಭೇ ॥ (೩-೫)

ಈ ವೃತ್ತದಲ್ಲಿ ಒತ್ತುಗಳು, ಪರುಷಗಳು, ಮಹಾಪ್ರಾಣಗಳು ಆಯ್ದು ಯೋಜಿಸಿದಂತೆ ಅಲ್ಪಸಂಖ್ಯಾಕವಾಗಿವೆ. ''ಸುರತಾಮೃತದೊಳ್'', ''ಜಗಿಲ್ತಂತಿರೆ ಪತ್ತಿ'',''ಭೋಗಿಸಲೀಯದೆ'' ಇಂತಹ ಮಾತುಗಳು ಲಲಿತಾಂಗನ ಕಾತರಸ್ವಭಾವವನ್ನು ಕನ್ನಡಿಸುತ್ತವೆ. ''ಕೆಮ್ಮನೆ'' ಎನ್ನುವಲ್ಲಿ ಅವನ ಮುಗ್ಧತೆ ನಿಸ್ಸಹಾಯಕತೆಗಳು ಮನವರಿಕೆಯಾಗುತ್ತವೆ. ಪದ್ಯಾಂತದ ಉದ್ಗಾರ ಸಹಜವಾಗಿ ಹೊಮ್ಮಿದ್ದಾಗಿದೆ.

ಪಂಪನು ''ಉತ್ಪಲಖೇಟಮೆಂಬುದು ಪೊಳಲ್'' (೩-೯) ಎಂಬ ವೃತ್ತವನ್ನು ಉತ್ಪಲಮಾಲೆಯಲ್ಲಿ ಕಟ್ಟಲು, ಆ ಊರ ಹೆಸರೇ ಪ್ರೇರಿಸಿದ್ದರೆ ಆಶ್ಚರ್ಯವಿಲ್ಲ. ''ಈ ಪರಿಜೀತನುಚ್ಛವಿಯನೀ ಪೊಸಜೌವನವೀ ಬೆಡಂಗನೀ। ರೂಪಮನೀ ವಿಳಾಸಮುಮನ್...'' (೩-೨೦) ಎಂಬ ವರ್ಣನಭಾಗವನ್ನು ತಕ್ಕ ಗಮಕದಲ್ಲಿ ಓದುವಾಗ, ಶ್ರೀಮತಿಯ ಚೆಲುವನ್ನು, ಅದರ ಪ್ರತ್ಯಂಶದಲ್ಲಿ ಬಿಡಿಸಿ ಬಿಡಿಸಿ ಸಾವಕಾಶವಾಗಿ, ಮನೋಗತಗೊಳಿಸುತ್ತಿರುವಂತೆ ತೋರುತ್ತದೆ.

ಶ್ರೀಮತಿಯ ವಿರಹದ ಆಲಾಪವನ್ನು ಗಮನಿಸಿ:

ಹಾ ಲಲಿತಾಂಗ ದೇವವನಿತಾವದನಾಂಬುಜಭೃಂಗ ನಿನ್ನ ಲೀ
ಲಾಲಸದೃಷ್ಟಿಪಾತಮೆರ್ದೆಯೊಳ್ ನೆಲಸಿರ್ದುವು ನಿನ್ನ ಮಾತುಗಳ್
ಕೀಲಿಸಿದಂತೆವೋಲ್ ಮನದೊಳಿರ್ದುವು ನಿನ್ನನೆ ಕಾಣಲಾಗದೆಂ
ದಾ ಲಲಿತಾಂಗಿ ಬೆಚ್ಚನುಸಿರ್ದಚ್ಚರಿವೆತ್ತಿರೆ ಮೂರ್ಛೆವೋಪುದುಂ ॥ (೩-೨೩)

ಲಲಿತಾಕ್ಷರಪರಂಪರೆಯ ಇಲ್ಲಿಯ ಗಮಕ ಶ್ರೀಮತಿಯ ಸ್ತ್ರೀಸ್ವಭಾವವನ್ನೂ ಆಕೆಯ ಪ್ರೇಮಾರ್ದ್ರಮನೋಧರ್ಮವನ್ನೂ ಸುಖಕರವಾಗಿ ವ್ಯಕ್ತಮಾಡುತ್ತದೆ. ಕೊನೆಯ ಪಾದದಲ್ಲಿ ದಟ್ಟೈಸಿದ ತಾಲವ್ಯ ವ್ಯಂಜನಗಳಿಗೆ ವಿಶೇಷ ಪ್ರಯೋಜನವಿದೆ. ''ಬೆಚ್ಚನುಸಿರ್ದು'' ಎನ್ನುವಾಗ ಆಕೆಯಿಟ್ಟ ನಿಟ್ಟುಸಿರು ಕಿವಿದಾಗುವಂತೆಯೇ ಇರುವುದಲ್ಲದೆ, ''ಮೂರ್ಛೆವೋಪುದುಂ'' ಎಂಬ ಮುಕ್ತಾಯದ ಮಾತು, ಹಠಾತ್ತನೆ ಆಕೆ ನೆಲಕ್ಕೆ ಬಿದ್ದುದರ ಧ್ವನಿಯನ್ನು ಕಿವಿಗೆ ಕೇಳಿಸುತ್ತದೆ. ಈ ಪಾದದಲ್ಲಿ ಆರಂಭದ 'ಲಲಿತಾಂಗಿ' ಎಂಬ ಮಾತಾದರೂ ಆಕೆ ಎಷ್ಟರಮಟ್ಟಿಗೆ ಲಲಿತಾಂಗನಿಗೆ ಸೇರಿದವಳು ಎನ್ನುವುದರ ಗಾಢಸ್ಪರ್ಶವನ್ನು ಕೊಡುವಂತಹುದಾಗಿದೆ.

ಬಾಲಕನಾದ ಭರತ ಗುಣಶೀಲಾದಿಗಳಲ್ಲಿ ತಂದೆ ಪುರುದೇವನ ಹಾಗೆಯೇ ಎನ್ನುವುದನ್ನು ''ತಂದೆಯ ರೂಪೆ ತಂದೆಯ ವಿಲಾಸಮೆ ತಂದೆಯ ಚೆಲ್ವೆ...'' ಎಂದು ಮುಂತಾಗಿ ತರುವ (೮-೪೩) ಪದಾವೃತ್ತಿಗಮಕದಿಂದ ಸಮರ್ಪಕವಾಗಿ ತಿಳಿಸಿದ್ದಾನೆ, ಕವಿ. ಪಂಪನ ಛಂದಃಕೌಶಲದ ತಂತ್ರಗಳಲ್ಲಿ ಈ ಪದಾವೃತ್ತಿಗಮಕವೂ ಒಂದು.

ಈಗ ಪಂಪಭಾ.ದ ಒಂದೆರಡು ಪದ್ಯಗಳನ್ನು ನೋಡಬಹುದು :

ಮಾರುತಘಾತ ಸಂಚಳಿತ ಕೇತುಸಮೂಹಮುದಗ್ರಚಕ್ರಚೀ
ತ್ಕಾರಮುದಾರ ವೀರಭಟ ಸಿಂಹನಿನಾದ ವಿಮಿಶ್ರಿತೋತ್ಕಟ
ಜ್ಯಾರವಮಂಬರಾಂತರಮನಳ್ಳಿಱಿದವ್ವಳಿಪನ್ನಗಂ ಶರಾ
ಸಾರದಗುರ್ವು ಪರ್ವಿ ನಿಲೆ ತಾಗಿದುವುಗ್ರರಥಂ ರಥಾಳಿಯೊಳ್ ॥ (೧೦-೮೬)

ಇದೊಂದು ರಥಾರಥಿ ಕಾಳೆಗದ ಚಿತ್ರ. ಪದಾದಿಯ ಗುರುವಿನ ಮೇಲೆ ಆಘಾತ ಬೀಳುವುದನ್ನು ಸುಲಭವಾಗಿ ಗಮನಿಸಬಹುದು. ಗಾಳಿಯ ಪೆಟ್ಟಿಗೆ ಪಟಗುಟ್ಟುವ ಬಾವುಟದ ಬಣ್ಣನೆಗೆ ಸ್ವರದೀರ್ಘದ ಅಂತಾವರೋಹಣ, ಚಕ್ರಗಳ ಚೀತ್ಕಾರಕ್ಕೆ ಕಂಠ್ಯ ತಾಲವ್ಯ ರೇಫೆಗಳ ಸಂಯೋಜನ, ಭಟರ ಬೊಬ್ಬೆಗೆ ಓಷ್ಠ್ಯ ಮೂರ್ಧನ್ಯಗಳ ಪದಗುಂಫನ ಇವುಗಳ ಮೂಲಕ, ನಡೆದ ಢಕ್ಕಾಢಿಕ್ಕಿಯಲ್ಲಿಯ ಘಟನೆಗಳು ಕಣ್ಣಿಗೆ ಕಟ್ಟುತ್ತವೆ.

ಭೇದಿಸಲೆಂದ ದಲ್ ನುಡಿದರೆನ್ನದಿರೂಯ್ಯನೆ ಕೇಳ ಕರ್ಣ ನಿ
ನ್ನಾದಿಯೊಳಬ್ಬೆ ಕೊಂತಿ ನಿನಗಮ್ಮನಹರ್ಪತಿ ಪಾಂಡುನಂದನರ್

ಸೋದರರೆಯ್ದೆ ಮಯ್ದುನನೆನಾಂ ಪೆಱತೇಂ ಪಡೆಮಾತೊ ನಿನ್ನದೀ
ಮೇದಿನಿ ಪಟ್ಟಮುಂ ನಿನತೆ ನೀನಿರೆ ಮತ್ತೆ ಪೆಱರ್ ನರೇಂದ್ರರೇ ॥ (೯-೬೪)

ಕರ್ಣಭೇದಪ್ರಸಂಗದ ಈ ವೃತ್ತ ಒಂದು ಲಘುವಾಕ್ಯಸಮುಚ್ಚಯ. ಪ್ರತಿ ವಾದಾಂಶವೂ ನೇರವಾಗಿ ಗುರಿಮುಟ್ಟುವಂತಾಗಲು, ಒಂದೊಂದರ ಬಳಿಕವೂ ಅರ್ಥಯತಿಸ್ಥಾನ ಕಲ್ಪಿತವಾಗಿದೆ. ವಾಕ್ಯಾದಿಯಲ್ಲಿ ಬೀಳುವ ಸ್ವರಾಘಾತ ಕರ್ಣನ ಮನಸ್ಸಿಗೆ ಸಂಬಂಧವನ್ನೂ ಸ್ವಾಮಿತ್ವವನ್ನೂ ಮನದಟ್ಟುಮಾಡುವಂತಿದೆ. ಅಲ್ಲದೆ, 'ನಿನ್ನ', 'ನಿನಗೆ' ಮುಂತಾಗಿ ಬಳಸಿದ ಸರ್ವನಾಮಶಬ್ದಗಳು ಕರ್ಣನನ್ನು ಅಭಿಮುಖೀಕರಣ ಮಾಡಿಕೊಂಡು, ಅವನಲ್ಲಿ ಆತ್ಮಪ್ರತ್ಯಯವನ್ನು ತುಂಬುವಂತೆ, ಅವನ ಮನಸ್ಸಿನಲ್ಲಿ ಆಸೆ ಆಕಾಂಕ್ಷೆಗಳು ಮೊಳೆಯುವಂತೆ ಸಮರ್ಥವಾಗಿ ಬಳಕೆಯಾಗಿವೆ. ದಿಟವಾಗಿ ಈ ವೃತ್ತ, ತಾನು ಕಾಣುತ್ತಿರುವುದಕ್ಕಿಂತ ಹೆಚ್ಚು ವಿಸ್ತಾರವಾದ್ದು.

## ೪. ಚಂಪಕಮಾಲೆ

೨೧ ಅಕ್ಷರಗಳಲ್ಲಿ ೧೪ ಲಘುಗಳೇ ಆಗಿರುವ ಕಾರಣ ದ್ರುತಗತಿಯ ವೃತ್ತವಿದು. ಇದರ ಗಣವಿನ್ಯಾಸ ನಜಭಜಜಜರ. ದ್ರುತವು ವೀರ ರೌದ್ರಾದಿಗಳಿಗೆ ಪೋಷಕವೆಂಬುದು ನಿಜವೇ ಆದರೂ, ಗುರ್ವಕ್ಷರಗಳ ಬೆರಕೆಯಿಂದಾಗಿ ವಿಲಂಬಿತಗತಿಗೂ ಅವಕಾಶವುಂಟು; ಎಂದರೆ ಸುಕುಮಾರಭಾವನೆಗಳ ವ್ಯಂಜನೆಯೂ ಅಷ್ಟೇ ಮಟ್ಟಿಗೆ ಶಕ್ಯ. ವೃತ್ತವು ಜಗಣ ಪ್ರಚುರವಾದ್ದರಿಂದ ದ್ರುತೋತ್ಪತ್ತಿ ಸಹಜ. ಜಗಣಗಳು ಸ್ಥಗಿತಗೊಂಡು ಭಗಣಗಳು ಪ್ರಕಟಗೊಳ್ಳುವಂತೆ ವಾಚನಗತಿಯಿದ್ದರೆ, ದ್ರುತಾವರೋಹಣವೂ ಸಹಜವೇ. ಒಂದರಿಂದ ವೀರಾದಿಗಳೂ ಇನ್ನೊಂದರಿಂದ ಶೃಂಗಾರ ಕರುಣಾದಿಗಳೂ ನಿರ್ವಹಣಗೊಳ್ಳುತ್ತವೆ. ಪದವ್ಯವಸ್ಥೆ ಉಂಟುಮಾಡುವ ಗತಿಭೇದದಿಂದ ಇದು ಸ್ವಾಭಾವಿಕ.

ಆದಿಪು.ದ ಒಂದು ರಣಸನ್ನಾಹ ಚಿತ್ರವಿದು :

ಮಸೆಯಿಪ ಶಸ್ತ್ರಕೋಟಿ ಸಮಕಟ್ಟುವ ಸನ್ನಣಮಟ್ಟಿಯಿಂದಮ
ರ್ಚಿಸುವ ತುರಂಗದಂತಿರಥಸಂಕುಳಮೇಱುವ ದರ್ಭಶಯ್ಯೆ ಪೂ
ಜಿಸುವ ಜಿನೇಂದ್ರಬಿಂಬಮೆಸೆವುಗ್ರರಣಾನಕರೌದ್ರಘೋಷಮೇ
ವ್ರ್ಯಸನಮನುಂಟುಮಾಡಿದುದು ಪಂದೆಗಮಂದಿನ ವೀರಗೋಷ್ಠಿಯೊಳ್ ॥ (೧೪-೯೦)

''ಎಸೆವುಗ್ರರಣಾನಕ ರೌದ್ರಘೋಷಂ'' ಎಂಬಲ್ಲಿಯ ಧ್ವನಿನಿರ್ಮಾಣಕ್ಷಮ ಅಕ್ಷರಾನುಕ್ರಮವಿರಲಿ, ಸನ್ನಾಹದ ಪ್ರತ್ಯಂಶದಲ್ಲಿ ಸ-ಸ್ತ್ರ, ಸ-ಸ, ಅ-ಅ, ಱು-ರ್ಭ, ಜಿ-ಜಿ, ಗ್ರ-ದ್ರ ಈ ಸಾಮ್ಯಗಳನ್ನೂ ಗಮನಿಸಬೇಕು. ಸಮರ್ಥಕವಿ ಪಂಪನಿಗೆ ಪದರಚನೆಯೆನ್ನುವುದು ಒಂದು ಲೀಲೆ !

ಪಂಪಭಾ.ದಲ್ಲಿ ಇದು ದ್ರೌಪದೀಸ್ವಯಂವರದ ಸಂದರ್ಭ :

ಇಳೆಯೊಳುದಗ್ರ ವೀರಭಟತುಂಗಮತಂಗಜವಾಜಿರಾಜಿ ಚೌ
ಪಳಿಗೆಗಳೊಳ್ ಧರಾಧರಧುರಂಧರಬಂಧುರರಾಜಕಂ ವಿಯ
ತ್ತಳದೊಳನೇಕ ಕಿಂಪುರುಷ ಕಿನ್ನರ ಖೇಚರ ಸಿದ್ಧ ಬೃಂದಮ
ಪ್ವಳಿಸಿರೆ ಮೂಱುಲೋಕಮನೆ ಪೋಲ್ತುದು ಮೂನೆಲೆಯಿಂ ಸ್ವಯಂಬರಂ ॥ (೩-೫೨)

ಧುಮ್ಮಿಕ್ಕುವ ಪದಗುಂಫನದಿಂದ ಮದುವೆಮನೆಯ ವೈಭವ, ಸಂಭ್ರಮ, ಗದ್ದಲಗಳನ್ನು ಕವಿ ಇಲ್ಲಿ ಮೂಡಿಸಿದ್ದಾನೆ. ಪಾದಮಧ್ಯದಲ್ಲಿ ಸದೃಶಧ್ವನಿಗಳು ಆವೃತ್ತಿಗೊಂಡು ಉಂಟುಮಾಡುವ ಪರಿಣಾಮಗಳನ್ನು ಗಮನಿಸಬೇಕು. 'ಅವ್ವಳಿಸಿರೆ' ಜನಪ್ರವಾಹದ ನುಗ್ಗಾಟವನ್ನು ನುಡಿಯುವ ಮಾತು.

ವಾಗ್ಧೋರಣೆ ಚಿತ್ರಗಳನ್ನು ರೂಪಿಸಬಲ್ಲದು. ''ಕರಿಕಳಭಪ್ರಚಂಡಮೃಗರಾಜ ಕಿಶೋರ ಕಠೋರ ಘೋರ ಹೂಂ। ಕರಣಭಯಂಕರಾಟವಿಯೊಳ್'' (ಪಂಪಭಾ. ೯-೪೨), ''ಚಳದನಿಳಾಹತಕ್ಷುಭಿತಭಂಗುರ ತುಂಗತರಂಗಮಾಳಿಕಾ। ವಳನ ಸಮುಚ್ಚಳನ್ಮಣಿ....'' (ಪಂಪಭಾ. ೪-೨೫) ಇವು ಕ್ರಮವಾಗಿ ಅರಣ್ಯ ಮತ್ತು ಸಮುದ್ರಗಳ ಚಿತ್ರಗಳು. ''ಸೊಗಯಿಸಿ ಬಂದ ಮಾಮರನೆ ತಳ್ತೆಲೆವಳ್ಳಿಯೆ ಪೂತ ಜಾತಿ ಸಂ। ಪಗೆಯೆ ಕುಕಿಲ್ವ ಕೋಗಿಲೆಯೇ....'' (ಪಂಪಭಾ. ೪-೨೮) ಇದು ರಮ್ಯಪ್ರಕೃತಿಯ ಚಿತ್ರ. ಬೇರೆ ಬೇರೆಯೇ ಕೇಳಬಹುದಾದ ಆನೆಕುದುರೆಗಳು ಮುಂತಾದವುಗಳ ಧ್ವನಿಯ ಪರಿಣಾಮದ ಸಂಕೀರ್ಣ ಚಿತ್ರ: ''ಮದಗಜಬೃಂಹಿತಧ್ವನಿ ತುರಂಗಮಹೇಷಿತಘೋಷದೊಳ್ ಪೊದ। ೞ್ದುದವೆ ಧೀರಮುರಜಧ್ವನಿ ಯೌವನಮತ್ತಕಾಮಿನೀ ಮೃದುಪದನೂಪುರಕ್ವಣಿತದೊಳ್ ಪೆಣೆದೊಂದಿರೆ...'' (ಪಂಪಭಾ. ೯-೨೭) – ಇಂಥವನ್ನು ಎಷ್ಟು ಬೇಕಾದರೂ ಸೂಸಬಹುದು.

ಪಂಪಭಾ.ದಲ್ಲಿ ಕರ್ಣನ ಅಸಹನೋಕ್ತಿಗೆ ಭೀಷ್ಮರ ಮಾತು :

ಕಲಿತನದುರ್ಕು ಜವ್ವನದ ಸೊರ್ಕು ನಿಜೇಶನ ನಚ್ಚು ಮಿಕ್ಕ ತೋ
ಳ್ವಲದ ಪೊಡರ್ಪು ಕರ್ಣ ನಿನಗುಳ್ಳನಿತೇನೆನಗುಂಟೆ ಭಾರತಂ
ಕಲಹಮಿದಿರ್ಚುವಂ ಹರಿಗನಪ್ಪೊಡೆ ಮೊಕ್ಕಳಮೇಕೆ ನೀಂ ಪಳಂ
ಚಲೆದಪೆಯಣ್ಣ ಸೂೞ್ಪಡೆಯಲಪ್ಪುದು ಕಾಣ ಮಹಾಜಿರಂಗದೊಳ್ ॥ (೧೦-೨೩)

ಇಲ್ಲಿ ಜಗಣಗಳ ಉತ್‌ಪ್ಲುತಗತಿ ಕರ್ಣನ ಅಹಮಿಕೆಯನ್ನು ಉಚ್ಛ್ರಾತಿಯ ನೆಲೆಗೆ ಏರಿಸುವಲ್ಲಿ ಶಕ್ತವಾಗಿ ಕಾರ್ಯ ನಿರ್ವಹಿಸಿದೆ. ಕರ್ತೃ ಮತ್ತು ಕ್ರಿಯೆಗಳ ನಡುವೆ 'ಕರ್ಣ' ಎಂಬ ಸಂಬೋಧನೋಕ್ತಿ ತನಿಯಾಗಿ ತಡೆದು ನಿಲ್ಲುವ ಒಂದು ಗಮಕವೂ, ಅನಂತರದಲ್ಲಿ ಯುದ್ಧದ ಭೀಕರತೆಯನ್ನೂ ಪ್ರತಿಕಕ್ಷಿಯ ಬಲೋನ್ನತಿಯನ್ನೂ ತೂಗಿ ನೋಡುವ ಹಾಗೆ ೨-೨ ಮಾತುಗಳಿಂದಲೇ ಮನಸ್ಸಿಗೆ ನಾಟಸುವ ರೀತಿಯೂ ಗಮನಾರ್ಹವಾಗಿದೆ. 'ಮೊಕ್ಕಳಂ', 'ಪಳಂಚಲೆ' ಈ ಶಬ್ದಗಳು ಕರ್ಣನ ಕೂಗಾಟ ಹಾರಾಟಗಳನ್ನು ತಕ್ಕ ಅಕ್ಷರಪರಂಪರೆಯಿಂದಲೇ ಸೂಚಿಸಲು ಶಕ್ತವಾಗಿವೆ. 'ಕರ್ಣ', 'ಅಣ್ಣ', 'ಕಾಣ' ಎಂಬ ಗಲ ವಿನ್ಯಾಸದ ಶಬ್ದಗಳು ಭೀಷ್ಮ ಕರ್ಣನಿಗೆ ಕೊಡುತ್ತಿರುವ ಒಂದೊಂದು ಪೆಟ್ಟೇ ಸರಿ ಎನ್ನುವಂತಿದೆ. ಈ ಣಕಾರಾಂತಗಳನ್ನು ಭೀಷ್ಮರೂ ''ಎನ್ನ ನುಡಿ ಟಾಠಡಾಢಣಂ'' ಎಂಬ ನಿಶ್ಚಯದಿಂದಲೇ ನುಡಿದಿರಬೇಕು !

## ೫. ಸ್ರಗ್ಧರೆ

೨೧ ಅಕ್ಷರಗಳಲ್ಲಿ ೧೨ ಗುರುಗಳಿರುವ ದೆಸೆಯಿಂದ ಈ ವೃತ್ತ ವಿಲಂಬಿತಗತಿಯದು. ಗಣವಿನ್ಯಾಸ ಮರಭನಯಯಯ. ಮೊದಲ ೭ ಅಕ್ಷರಗಳಲ್ಲಿ ೬ ಗುರುಗಳು, ನಡುವಣ ೭ರಲ್ಲಿ ೧ ಗುರು, ಕೊನೆಯ ೭ ಅಕ್ಷರಗಳಲ್ಲಿ ೫ ಗುರುಗಳು. ನಡೆಯನ್ನು ಯತಿ ಸೊಗಸಾಗಿ ನಿರ್ವಹಿಸುತ್ತದೆ. ''ವೀರಸ್ಯ ಭುಜದಂಡಾನಾಂ ವರ್ಣನೇ ಸ್ರಗ್ಧರಾ ಭವೇತ್'' ಎಂದು ಕಾತ್ಯಾಯನೋಕ್ತಿ ;

''ಸಾವೇಗಪವನಾದೀನಾಂ ವರ್ಣನೇ ಸ್ರಗ್ಧರಾಮತಾ'' ಎಂಬುದು ಕ್ಷೇಮೇಂದ್ರನ ಮಾತು ; ''ರೌದ್ರೇ ಸ್ರಗ್ಧರಾದಯಃ''–ಇದು ಭೋಜನ ಗ್ರಹಿಕೆ. ಗುರ್ವಕ್ಷರಬಾಹುಳ್ಯದ ಈ ವೃತ್ತ ವೀರ ರೌದ್ರಗಳಿಗೂ ಕರುಣ ಬೀಭತ್ಸಗಳಿಗೂ ವಿನಿಯೋಗಯೋಗ್ಯವೆಂದು ತಿಳಿಯಬಹುದು.

ಪಂಪ ಬಳಸಿರುವ ಸ್ರಗ್ಧರೆಗಳು ಸ್ವಲ್ಪ ಸಂಖ್ಯೆಯವು. ಆದ್ದರಿಂದ ಒಂದು ಉದಾಹರಣೆ ಸಾಕು. ರಾಜಸೂಯದ ಕೊನೆಗೆ ಧರ್ಮರಾಯ ದಾನಮಾಡಿದುದನ್ನು ಹೇಳುವ ಪದ್ಯವಿದು:

ದಾನಾಂಭಃಪೀನಗಂಡಸ್ಥಳಕರಿನಿಕರಂ ಬಾಜ್ತೆಯೋ ಮೆಚ್ಚುವೇೞಾ
ಜಾನೇಯಾಶ್ವೋತ್ಕರಂ ಬಾಜ್ತೆಯೊ ಮಣಿನಿಚಯಂ ಬಾಜ್ತೆಯೋ ಪೇೞಿಮೆಂದಾ
ದೀನಾನಾಥರ್ಗೆ ವೃದ್ಧದ್ವಿಜಮುನಿನಿಕರಕ್ಕಂದೆಡಜ್ ಪೋಪಿಸಂ ಕಃ
ಕೇನಾರ್ಥೀ ಕೋ ದರಿದ್ರಃ ಎನುತುಮನಿತುಮಂ ಧರ್ಮಜಂ ಸೂರೆಗೊಟ್ಟಂ ॥ (೬-೪೦)

ರಚನೆ ವಾಕ್ಯವೇಷ್ಟನವನ್ನೊಳಕೊಂಡು ಸಂಸ್ಕೃತ ಸಮಾಸಸಂಘಟನೆಗೆ ಸಹಜವಾಗಿ ಒಲಿದಿದೆ. ಆದರೆ ದೇಸಿಯೂ ಬೆರತಿದೆ. ವಿಲಂಬಿತ-ದ್ರುತ-ವಿಲಂಬಿತ ಹೀಗೆ ದ್ರುತಮಧ್ಯ ವಿಲಂಬಿತವಾಗಿ ಸಾಗುವ ಈ ವೃತ್ತದ ಗತಿಗೆ ತನ್ನದೇ ಸೊಗಸುಂಟು. ನಾಲ್ಕನೆಯ ಪಾದದಲ್ಲಿ, ''ಎನುತುಮನಿತುಮಂ'' ಎಂಬ ದ್ರುತಗತಿಯ ಭಾಗದಲ್ಲಿ, ಧರ್ಮರಾಯನಿಗೆ ದಾನಕಾರ್ಯದಲ್ಲಿದ್ದ ಸಂಭ್ರಮ ತ್ವರೆಗಳು ತಿಳಿಯುವಂತಹ ಅಕ್ಷರಪರಂಪರೆಯಿರುವುದನ್ನು ಗಮನಿಸಬೇಕು.

## ೬. ಮಹಾಸ್ರಗ್ಧರೆ

ಪಾದಾದಿಯ ದ್ವಿಲಘುವಿನಿಂದ ಸ್ರಗ್ಧರೆಯ ಮೊದಲಿನ ಆಯಾಸಕರ ಗುರುದೀರ್ಘ ಗತಿಯನ್ನು ನಿವಾರಿಸಿದೆ. ಆ ದೆಸೆಯಿಂದ ರಚನೆಯ ಸೌಕರ್ಯ ಹೆಚ್ಚಿದೆ. ಹಾಗೆಂದೇ ಪದ್ಯಸಂಖ್ಯೆಯೂ ಹೆಚ್ಚು. ಲಯದ ದೃಷ್ಟಿಯಿಂದ, ವಿನಿಯೋಗದ ದೃಷ್ಟಿಯಿಂದ ಸ್ರಗ್ಧರೆಗೆ ಸದೃಶವೆನ್ನುವುದು ವಿದಿತ. ಆಕೃತಿಛಂದಸ್ಸಿನ ಈ ವೃತ್ತದಲ್ಲಿಯ ಗಣವಿನ್ಯಾಸ ಸತತನಸರರಗ. ಸಮಗ್ರ ತೆಲುಗು ಭಾರತದಲ್ಲಿ ೨೦ ಮಾತ್ರವೇ ಮಹಾಸ್ರಗ್ಧರೆಗಳನ್ನು ಬಳಸಿದೆ. ಪಂಪನ ಕೃತಿಗಳಲ್ಲಿ ೧೪೫ ಇವೆ. ಪೊನ್ನ ಮೊದಲಾದ ಮಾರ್ಗಕವಿಗಳ ಕೃತಿಗಳಲ್ಲಿ ಈ ವೃತ್ತಕ್ಕೆ ಅಂತಹ ಪುರಸ್ಕಾರವಿಲ್ಲದಿರುವುದರಿಂದ, ಪಂಪನ ವೈಯಕ್ತಿಕ ಅಭಿರುಚಿ ಇಲ್ಲಿ ಎದ್ದು ತೋರುತ್ತದೆ.

ನಿನಗಾನೇನೆಂಬೆನೆನ್ನಿರ್ದಿರವನಱಿದು ನೀನಿರ್ದೆಯಿನ್ನಾಕೆಗಂ ನೀಂ
ಮನದನ್ನಳ್ ತೋಱು ನಿನ್ನೀ ಪಟಮನೆನಗದಂ ನೋಡಿ ಮತ್ಕಾಂತೆಯಂ ಕಾ
ಣ್ಬನೆಗಂ ಸ್ಥೈರಪ್ಪೆನೆನ್ನೀ ಬರೆದ ಪಟಮುಮಂ ಕೊಂಡು ಪೋಗಾಕೆಗೆಂದಿಂ
ತಿನಿತುಂ ವೃತ್ತಾಂತಮಂ ನಿನ್ನಿನಿಯನಱಿಯೆ ಪೇೞ್ದಟ್ಟಿಂ ಲೋಲನೇತ್ರೆ ॥ (೪-೨೨)

ಶ್ರೀಮತೀ ವಜ್ರಜಂಘರ ಕಥಾಪ್ರಸಂಗದಲ್ಲಿ ಬರುವ ಈ ಪಂಡಿತೆಯ ಮಾತಿನ ಕನ್ನಡ ನುಡಿನಿರಿಗೆಯನ್ನು ಗಮನಿಸಬೇಕು. ಇಲ್ಲಿ ಪದ್ಯಾಂತಶಬ್ದ ಸಂಬೋಧನಪರ ಪಾದಪೂರಣ ಶಬ್ದವಾದರೂ, ಉಳಿದ ಭಾಗ ವಜ್ರಜಂಘನ ಕಳವಳ ಕಾತರಗಳನ್ನು ಸ್ಫುಟವಾಗಿ ತೋರಿಸಬಲ್ಲ ಭಾಗವಾಗಿದೆ. ಆದರೆ ಇಲ್ಲಿ ಗಮನಿಸಬೇಕಾದ್ದು ಎಂದರೆ, ಒಂದು ಕಂದ, ಎರಡು ಚಿಕ್ಕ ಗದ್ಯಖಂಡಗಳನ್ನು ದಾಟುತ್ತಿದ್ದಂತೆಯೇ ಇದೇ ಬಂಧದಲ್ಲಿ ಮಾತಿನ ಧೋರಣೆ ಹೇಗೆ ಬದಲಾಗುತ್ತದೆ ಎನುವುದನ್ನು. ಮಗಳ ಮದುವೆ ನಡಸಲು ವಜ್ರದಂತನ

ಪ್ರಯಾಣೋತ್ಸಾಹವಿದು :

ಕರಿಸೇನಾಸಾರಿನದ್ಧೂತತರಲಕದಲಿಕಾಕಾನನೋಚ್ಚುಂಬ್ಯಮಾನಾಂ
ಬರಚಕ್ರಂ ವಾಜಿರಾಜಿಶ್ರವಣಚಮರಜಶ್ರೇಣಿಸಂವೀಜಿತಾಶಾಂ
ಬರಭಾಗಂ ಪತ್ತಿಶಸ್ತ್ರದ್ಯುತಿಪರಿಕರಸಾಂದ್ರೀಭವಚ್ಚಂಡರೋಚಿಃ
ಕಿರಣೌಘಂ ವಜ್ರಬಾಹು ಕ್ಷಿತಿಪತಿಗಿದಿರಂ ಬಂದನುತ್ಸಾಹದಿಂದಂ ॥ (೪-೨೪)

ಆನೆ ಕುದುರೆಗಳ ಜೊತೆಗೆ ಸಾಗುವ ಮೆರೆವಣಿಗೆ ಸಪ್ಪೆ ಶಬ್ದಗಳಿಂದ ದ್ರುತಗತಿಯಲ್ಲಿ ಸಾಗುವುದು ಸಾಧ್ಯವೇ ಇಲ್ಲವಷ್ಟೆ ! ಪಂಪಕವಿ ಮೆರೆವಣಿಗೆಗಳನ್ನೆಲ್ಲ, ಸುದೀರ್ಘ ಸಂಶ್ಲಿಷ್ಟ ಸವಿಲಂಬ ಪದಗತಿಯಲ್ಲಿ ವರ್ಣಿಸುವುದೇ ಸಾಮಾನ್ಯ. ಮೇಲಿನ ಪದ್ಯದಲ್ಲಿ ಮೊದಲ ಪಾದದ ಮೊದಲ ನಾಲ್ಕಕ್ಷರಗಳ ಮೀಟುಗಣವಾದ ಮೇಲೆ, ಪ್ರಯಾಣದ ಶಿಸ್ತನ್ನು ಪ್ರಕಟಿಸಲೋ ಎನ್ನುವಂತೆ ಲಯಸಾದೃಶ್ಯದ ೨೨ ಅಕ್ಷರಗಳ ಸುದೀರ್ಘ ಸಮಾಸಗಳ ೩ ಖಂಡಗಳು ಗೆರೆ ತಪ್ಪದಂತೆ ಬರುತ್ತವೆ. ಪದರಚನೆಯ ವ್ಯವಸ್ಥೆಯಿಂದ, ಮುಖ್ಯವಾಗಿ ಮಾತುಗಾರಿಕೆಯಲ್ಲಿ ದೇಸಿ ಮಾರ್ಗಗಳ ಭೇದದಿಂದ ಹೇಗೆ ಒಂದೇ ಬಂಧದಲ್ಲಿ ಗತಿಭೇದಗಳುಂಟಾಗುತ್ತವೆ ಎನ್ನುವುದು ಇಂತಹ ಲಕ್ಷ್ಯಗಳಿಂದ ನಮಗೆ ತಿಳಿಯುತ್ತದೆ.

* * * * *

**೭. ಕಂದ**

''ಕಂದಂಗಳಮೃತಲತಿಕಾಕಂದಂಗಳ್'' ಮುಂತಾದ ಪ್ರಶಸ್ತಿಗೆ ಪಾತ್ರವಾದ ಮೋಹಕ ಬಂಧ ಕಂದ. ಪಂಪನ ಕೃತಿಗಳಲ್ಲಿ ಇದು ಸಮೃದ್ಧ. ಸಂಸ್ಕೃತದಲ್ಲಿ ಒಳ್ಳೆಯ ಅನುಷ್ಟುಭ್ ರಚನೆ ಎಷ್ಟು ಕಷ್ಟವೋ ಕನ್ನಡದಲ್ಲಿ ಒಳ್ಳೆಯ ಕಂದದ ರಚನೆಯೂ ಅಷ್ಟೇ ಕಷ್ಟ. ಅನುಷ್ಟುಭ್ ವಿಷಯದಲ್ಲಿ ಕ್ಷೇಮೇಂದ್ರ ತಿಳಿಸುವ ಹಾಗೆಯೇ, ಕಂದ ಸಹ ತನ್ನಲ್ಲಿ ಆಸಕ್ತನಾದ ಕವಿಯ ಮುಖದಿಂದ ಅತ್ಯಂತ ಶಕ್ತವಾಗಿ ಪ್ರಕಟವಾಗುವುದು ನಿಶ್ಚಯ. ಅಡಕವಾದ ಭಾವನೆ. ಕಲ್ಪನೆ ವರ್ಣನೆಗಳಿಗೆ, ಗುಣಶೀಲಗಳ ಚಿತ್ರಣಗಳಿಗೆ, ಸಂವಾದಕ್ಕೆ, ನೀತಿಗೆ, ಇನ್ನೂ ಅನೇಕ ವಿಧದ ಅಭಿವ್ಯಕ್ತಿಗಳಿಗೆ ಕಂದ ಸ್ನಿಗ್ಧವಾಗಿ ಹೊಂದಿಕೊಳ್ಳಬಲ್ಲುದು. ವಿ. ಸೀ. ಅವರು ತಿಳಿಸುವಂತೆ ''ಕವಿಗೆ ಕಂದ ಮಾಡಲಾರದ ಕೆಲಸ ಏನೂ ಇರುವಂತಿಲ್ಲ.''

ಕಂದಪದ್ಯಗಳು ಪಂಪನ ಕೃತಿಗಳಲ್ಲಿ ವಿವಿಧ ವೃತ್ತಗಳ ಹಾಗೂ ಗದ್ಯಖಂಡಗಳ ನಡುನಡುವೆ ಸಾಲುಗಟ್ಟಿ ಬರಬಹುದು, ಎದ್ದು ತೋರುವಂತೆ ೨-೩ರ ಲೆಕ್ಕದಲ್ಲಿ ಬರಬಹುದು, ನುಸುಳಿದ ಹಾಗೆ ಒಂಟಿಯಾಗಿಯೂ ಬರಬಹುದು. ಆದಿಪು.ದಲ್ಲಿ ಪುರಂದರನ ನಗರನಿರ್ಮಾಣ ಪ್ರಸಂಗ (೬.೯೦-೯೯), ಜಿನಜನನಿಯ ಶುಶ್ರೂಷೆಯ ಸಂದರ್ಭ (೭.೫-೨೧), ನೀಲಾಂಜನೆಯ ನಾಟ್ಯಪ್ರಸಂಗ (೯.೧೩-೫೭), ಭರತನ ಅಂತಃಪುರಸ್ತ್ರೀಯರು ವನವಿಹಾರದಲ್ಲಿ ವಿಶ್ರಮಿಸಿದ ಸಂದರ್ಭ (೧೧.೭೩-೭೯), ವೃಷಭನಾಥನು ಭರತನಿಗೆ ಆತನ ಸ್ವಪ್ನಗಳ ಫಲ ನಿರೂಪಿಸಿದ್ದು (೧೫.೨೮-೪೭) ಈ ಕೆಲವು ಭಾಗಗಳಲ್ಲಿ ಕಂದಗಳು ಸಾಲುಗಟ್ಟಿ ಬಂದಿವೆ. ಹಾಗೆಯೇ ಪಂಪಭಾ.ದಲ್ಲಿ ಬೇಟೆಗಾರನೊಬ್ಬ ಅರ್ಜುನನನ್ನು ಬೇಟೆಗೆ ಆಹ್ವಾನಿಸಿದ ಪ್ರಸಂಗ (೫.೩೬-೪೦), ಶಿಶುಪಾಲನ ಕ್ರೋಧೋದ್ರೇಕದ ಸನ್ನಿವೇಶ (೬.೪೨-೪೯, ೫೦-೫೮), ಕೃಷ್ಣರಾಯಭಾರ ಕಥನ (೯.೩೨-೪೧), ಅರ್ಜುನನ ಜಲಾವಗಾಹ ಪ್ರಸಂಗ (೧೧.೧೧೧-೧೧೫) ಈ ಕೆಲವು

ಅಂತಹ ಎಡೆಗಳು. ಉಳಿದ ಬಗೆಗಳಿಗೆ ಸೂಚನೆ ಅನಗತ್ಯ.

ಕಂದಗಳನ್ನು ಪಥ್ಯ, ವಿಪುಲ, ಚಪಲ ಇತ್ಯಾದಿ ಭೇದಗಳನ್ನು ಹಿಡಿದು, ಗುರುಲಘು ಸಂಖ್ಯಾಬಾಹುಳ್ಯವನ್ನು ಹಿಡಿದು, ಚತುರ್ಮಾತ್ರಾಗಣಸ್ವರೂಪವನ್ನು ಹಿಡಿದು ವಿವಿಧ ಪ್ರಭೇದಗಳನ್ನಾಗಿ ವಿಂಗಡಿಸಿಕೊಂಡು, ಛಂದಸ್ಸ್ವರೂಪವನ್ನು ಪರಿಶೀಲಿಸುವುದು ಸಾಧ್ಯವಿದೆ. ಅಲ್ಲದೆ ತ್ರ್ಯಸ್ರ, ಚತುರಸ್ರ, ಪಂಚ ಮತ್ತು ಷಣ್ಮಾತ್ರಾಗತಿಗಳನ್ನು ಗುರುತಿಸಿಯೂ ಪರಿಶೀಲಿಸಬಹುದಾಗಿದೆ. ಇದೊಂದು ಗಾಢವೂ ವಿಸ್ತಾರವೂ ಆದ ಅಭ್ಯಾಸ ವಿಷಯ. ಪ್ರಸ್ತುತ ವೃತ್ತಿ ಮತ್ತು ರೀತಿಗಳನ್ನು ಸ್ಥೂಲವಾಗಿ ಆಶ್ರಯಿಸಿದ ಬೇರೊಂದು ದೃಷ್ಟಿಯಿಂದ ಪರಿಶೀಲನೆ ನಡಸಿ, ಅಷ್ಟರಲ್ಲಿಯೇ ತೃಪ್ತಿಪಟ್ಟುಕೊಳ್ಳಬೇಕಾಗಿದೆ.

೧. ಕಿಱಿಯಂ ಮುತ್ತಂ ಧನದಂ
ಬಱುಮಂ ತೊಱೆದಂ ಗೃಹಸ್ಥನೆನ್ನದೆ ಮುಂಬಿ
ಟ್ಟಱಿಸಿ ಕೊಲುತಿರ್ಪ ಜವನಂ
ಬಱಿಕೆಯ ಪಗೆವಂಗದೆಂತು ಪಂಗಿಗನಪ್ಪಂ ॥ (೪-೭೭)

ಆದಿಪು.ದ ಈ ಉದಾ.ಯಲ್ಲಿ ನಿಯಮಿತ ಗಣವ್ಯವಸ್ಥೆಯನ್ನು ವಿಶೇಷ ಪ್ರಯೋಜನಕ್ಕಾಗಿ ಬಳಸಿರುವುದನ್ನು ಕಾಣಬಹುದು. ನಿರ್ಘೃಣಿಯಾದ ಯಮನು ಒಬ್ಬೊಬ್ಬನನ್ನೇ ಹುಡುಕಿ, ಎಣಿಸಿ ಎಲ್ಲರನ್ನೂ ಕೊಲ್ಲಲು ಸಂಕಲ್ಪಿಸಿರುವನೋ ಎಂಬಂತೆ ಪೂರ್ವಾರ್ಧದ ಮೊದಲೈದು ಗಣಗಳು ಚತುರಸ್ರವಾದ ವ್ಯಸ್ತಪದದ ಗಣಘಟಕಗಳಾಗಿ ಬಂದಿರುವುದು ಸಾರ್ಥಕವಾಗಿದೆ.

೨. ಸಮಲಾವಣ್ಯಪ್ರಸರದ
ಸಮವಿಭವದ ಸಮವಿಲಾಸದಗ್ಗಳಿಕೆಯೊಳಾರ್
ಸಮನಿವರ್ಗೆನೆ ಸಮರಸದೊಳ್
ಸಮಸಂದತ್ತವರ್ಗೆ ಸಮಸಮಾಯೋಗ ಸುಖಂ ॥ (೮-೨೪)

ಇನ್ನೊಂದು ಆದಿಪು.ದ ಪದ್ಯ. 'ಸಮ' ಎಂಬ ಲಲಘಟಿತವಾದ ಲಲಿತಶಬ್ದದ ಅಸಕೃದಾವೃತ್ತಿ ಪುರುದೇವನು ತನ್ನ ಪತ್ನಿಯರೊಂದಿಗೆ, ಅವರಿಗೆ ಅನುರೂಪನಾಗಿ, ಯಾವುದೇ ಏರುಪೇರುಗಳಿಲ್ಲದೆ, ಕುಂದುಕೊರತೆಗಳಿಲ್ಲದೆ, ಸುಖಾನುಭವದಲ್ಲಿದ್ದನೆಂಬುದನ್ನು ಸೂಚಿಸುತ್ತದೆ. ಅಲ್ಲದೆ, ಸಂಯುಕ್ತಾಕ್ಷರಗಳ ಬಾಹುಳ್ಯವಿಲ್ಲದೆ, ಓಷ್ಠ್ಯ ಮತ್ತು ದಂತ್ಯ ಧ್ವನಿಗಳನ್ನೇ ಹೆಚ್ಚಾಗಿ ಹೂಡಿರುವುದು, ಪಡೆದ ಸುಖಾನುಭವ ಹೃದಯಂಗಮವಾದುದು, ನಿರರ್ಗಳವಾದುದು ಎಂಬುದನ್ನು ತೋರಿಸತಕ್ಕುದಾಗಿದೆ.

೩. ಕಟಕ ಕಟಿಸೂತ್ರ ಕುಂಡಲ
ಹಟತ್ ಕಿರೀಟಾಂಗದಾದಿಮಣಿಭೂಷಣಭಾ
ಜಟಿಲಿತ ಮೂರ್ತ್ಯುತ್ಕರ್ಷಂ
ಸ್ಫುಟಹರ್ಷಂ ತನ್ನ ವರ್ಷವರ್ಧನ ದಿನದೊಳ್ ॥ (೨-೨)

ಇನ್ನೂ ಸ್ವಲ್ಪ ಮೊದಲ ಭಾಗದಲ್ಲೇ ಬರುವ ಆದಿಪು.ದ ಪದ್ಯವಿದು. ಮಹಾಬಲನ ಹುಟ್ಟಿದ ಹಬ್ಬದ ಅತಿಶಯತೆಯನ್ನು ಕವಿ ಉಚ್ಚಾರಸ್ಥಾನದ ದೃಷ್ಟಿಯಿಂದ ದಂತ್ಯ ಮೂರ್ಧನ್ಯ ಕಂಠ್ಯಗಳನ್ನು, ಉಚ್ಚಾರವಿಧಾನದ ದೃಷ್ಟಿಯಿಂದ ಸ್ಪರ್ಶ, ತಾಡಿತ, ಅನುನಾಸಿಕಗಳನ್ನು

ಅಧಿಕವಾಗಿ ಬಳಸಿ ಪ್ರಕಟಿಸಿದ್ದಾನೆ. ಧ್ವನಿಗಳು ಕಿವಿಗೆ ಬಡಿಯುವಂತಿರುವುದು ಆಡಂಬರ ವೈಭವಗಳ ಪೋಷಣೆಗಾಗಿಯೇ. ಆಭರಣಗಳ ಕಾಂತಿ ಶರೀರವನ್ನು ಹೆಣೆದಿದೆಯೆಂದು ತಿಳಿಸಲೆಂದೇ ಕವಿ 'ಮೂರ್ತ್ಯುರ್ತ್ಕರ್ಷಂ' ಎಂಬ ಹೆಣೆದುಕೊಂಡ ಅಕ್ಷರಗಳ ಶಬ್ದವನ್ನು ಸಂಯೋಜಿಸಿದ್ದಾನೆ; ಸಂಗತಿಯನ್ನು ದೃಶ್ಯಮಾನ ಮಾಡಿದ್ದಾನೆ.

೪. ರಸಭಾವಾಭಿನಯಂಗಳ್
ಪೊಸವೆ ಪುಗಿಲ್ ಪೊಸವೆ ಚಲ್ಲಿಗಳ್ ಪೊಸವೆ ನಯಂ
ಪೊಸವೆ ಕರಣಂಗಳುಂ ನಿ
ಪ್ಪೊಸವನೆ ಪೊಸಯಿಸಿದಳಾಕೆ ನಾಟ್ಯಾಗಮಮಂ ॥ (೯-೨೫)

ಪುಗುವ ಪೊಱಮಡುವ ತೆಱದೆರ್ದೆ
ವುಗುವಳ್ ಪೊಱಮಡುವಳೆನಿಸೆ ಪೊಸತಮರ್ದಂ ಮೇ
ಗುಗುಜ್ಜಿಪಳೆನಿಸೆ ಮುಗುಳ್ನಗೆ
ನಗೆಮೊಗದೊಳದೇಂ ಬೆಡಂಗವಳ್ಗೊಪ್ಪಿದುದೋ ॥ (೯-೩೦)

ನೀಲಾಂಜನೆಯ ನಾಟ್ಯ ಪ್ರಸಂಗದ ಕಂದಗುಚ್ಛದಿಂದ ಆಯ್ದ ಎರಡು ಹೂಗಳು ಇವು. ಆಕೆಯ ನಾಟ್ಯದ ಭಾವಭಂಗಿಗಳನ್ನು ವಾಗ್ರೂಪದಲ್ಲಿ ದೃಶ್ಯಗೊಳಿಸುವಂತಿದೆ ಇಲ್ಲಿ. ಮೊದಲ ಪದ್ಯದಲ್ಲಿ ಪುನರಾವೃತ್ತಿಯ 'ಪೊಸವೆ' ಎಂಬ ಲಘುತ್ರಯದ ಶಬ್ದ ಒಂದೊಂದು ಭಾವಘಟಕವನ್ನೂ ಸಮಂಜಸವಾಗಿ ಬೇರ್ಪಡಿಸಿ, ಆ ಮೂಲಕ ಆಕೆಯ ಆಂಗಿಕಾಭಿನಯ ತಾಳಬದ್ಧವಾಗಿ ನಡೆಯತೊಡಗಿದುದನ್ನು ಮನಸ್ಸಿಗೆ, ಕಣ್ಣಿಗೆ ತಂದುಕೊಡುತ್ತದೆ. ತನ್ನ ರಚನೆಯಿಂದಲೇ ಅದು ನರ್ತನದ ದ್ರುತಗತಿಯನ್ನು ವ್ಯಂಜಿಸುತ್ತದೆ. ಇದರೊಂದಿಗೆ 'ಪುಗಿಲ್', 'ಲ್ಲಿಗಳ್', 'ನಯಂ' ಮುಂತಾದವುಗಳ ಲಗ ವಿನ್ಯಾಸ ಕರಣಗಳಲ್ಲಿ ಸಹಜವಾದ ಉತ್‌ಪ್ಲುತಿಯನ್ನು, 'ನಿಪ್ಪೊಸವೆನೆ' ಎಂಬ ಪದದ ಗಲಾದಿವಿನ್ಯಾಸ ಅದರ ದ್ರುತಾವರೋಹಣವನ್ನು ಸಮರ್ಥವಾಗಿ ವ್ಯಂಜಿಸುತ್ತವೆ.

ಎರಡನೆಯ ಪದ್ಯದಲ್ಲಿ ಸಂಯುಕ್ತಗಳ ವಿರಳಪ್ರಯೋಗದ ದೆಸೆಯಿಂದ ನಟನೆಯ ದ್ರುತಗತಿ ಸಹಜವಾಗಿಯೇ ಹೃದ್ಯವಾಗುತ್ತದೆ. 'ಮುಗುಳ್ನಗೆ', 'ಬೆಡಂಗು' ಇವುಗಳಲ್ಲಿ ಗಲ, ಲಗಗಳು ಪರಸ್ಪರ ವಿಸದೃಶವಾಗಿ ವರ್ತಿಸಿ, ನಡುವಣ 'ಏಂ' ಎಂಬ ಸರ್ವನಾಮ ದೀರ್ಘದಿಂದಲೂ ಅನಂತರದ ಸಂಯುಕ್ತಗಳಿಂದಲೂ ಪಾದವು ವಿಲಂಬಿತವಾಗಿ ತಡೆದು ನಿಲ್ಲುತ್ತದೆ.

೫. ಆ ನರಸಿಂಹಮಹೀಶ ಮ
ನೋನಯನಪ್ರಿಯೆ ವಿಲೋಳನೀಳಾಳಕೆ ಚಂ
ದ್ರಾನನೆ ಜಾಕವ್ವೆ ದಲಾ
ಜಾನಕಿಗಮಗ್ಗಳಮೆ ಕುಲದೊಳಂ ಶೀಲದೊಳಂ ॥ (೧-೩೯)

ಇದು ಪಂಪಭಾ.ದ ಆರಂಭಭಾಗದಲ್ಲಿ ಬರುವ ಚರಿತ್ರಾಂಶದ ಪದ್ಯ. ದೀರ್ಘಸ್ವರಯುಕ್ತ ಶಬ್ದಗಳ ಪ್ರಚುರತೆಯಿಂದ ನರಸಿಂಹ-ಜಾಕವ್ವೆಯರ ಕೀರ್ತಿ ವ್ಯಾಪ್ತಿಗಳನ್ನು ಉಗ್ಗಡಿಸುವುದು ಇಲ್ಲಿ ಕವಿಯ ಹಂಚಿಕೆ. ಮುಂಗುರುಳ ನುಣುಪನ್ನು 'ವಿಲೋಳ ನೀಳಾಳಕೆ'ಯ ಜಾರುಧ್ವನಿ 'ಳ'ಕಾರ ತಿಳಿಸುತ್ತದೆ.

೬. ಉಡೆವಣಿ ಪಱಿಯದ ಮುನ್ನಮೆ
ತೊಡಗಿ ಚಲಂ ನೆಗೞೆ ರಿಪುಬಲಂಗಳನೆ ಪಡ
ಲ್ವಡಿಸಿ ಪರಬಲದ ನೆತ್ತರ
ಕಡಲೊಳಗಣ ಜಿಗುಳೆ ಬಳೆವ ತೆಱದೊಳೆ ಬಳೆದಂ ॥ (೧-೪೬)

ಇಲ್ಲಿ ಎರಡು ದ್ರುತಗಳಾದ ಲಘುನಿಬಿಡ ಗಣಗಳಿಂದ ಅರಿಕೇಸರಿ ಬಾಲ್ಯದಲ್ಲಿಯೇ ಬಹುಬೇಗ ಅಭ್ಯುದಯಕ್ಕೆ ಬಂದನೆಂಬುದನ್ನೂ 'ಚಲಂ' 'ಬಲಂ' ಎಂಬಲ್ಲಿಯ ಲಗಗಳ ನೆಗೆತದಿಂದ ಅವನ ಗರ್ವಾತಿಶಯವನ್ನೂ 'ಪಡಲ್ವಡಿಸಿ' ಎಂಬ ಮಾತಿನ ಮೂರ್ಧನ್ಯ ಧ್ವನಿಸಹಜವಾದ ಘಾತದಿಂದ ಶತ್ರುನಾಶದ ರೀತಿಯನ್ನೂ "ಕಡಲೊಳಗಣ ಜಿಗುಳೆ ಬಳೆವ ತೆಱದೊಳೆ" ಎಂಬ ಕ್ರಿಮಿಸಂಚಲನೆಗೆ ಉಚಿತವಾದ ಳಕಾರ ಬಾಹುಳ್ಯದ ನಿರಂತರ ಲಘುನಿಬಿಡ ಪದಸಂಯೋಜನೆಯಿಂದ ಶತ್ರುಪಾಳೆಯವನ್ನು ಹೊಕ್ಕು ಅವರನ್ನು ಹಿಂಸಿಸಿದ ಪರಿಯನ್ನೂ ಕವಿ ಸೊಗಸಾಗಿ ವ್ಯಂಜಿಸಿರುವುದರಲ್ಲಿ ಸಂಶಯವಿಲ್ಲ.

೭. ಕುಡವೇೞ್ವನ ಕುಡುವನ ಕುಡೆ
ಪಡೆವನ ಪೆಂಪೇಂ ನೆಗೞ್ತೆವಡೆಗುಮೊ ಪೇೞ್ವಂ
ಕುಡವೇೞ್ಗೆಮ ಕುಡುವಣ್ಣಂ
ಕುಡುಗೆಮ ಕುಡೆ ಕೊಳ್ವ ಕಲಿಯನಱಿಯಲ್ಕಕ್ಕುಂ ॥ (೬-೪೯)

ಶಿಶುಪಾಲನ ಈ ಕಿಡಿನುಡಿಗಳಲ್ಲಿ ಆತನ ಮನಸ್ಸಿನ ಕೋಪ ತಾಪಗಳು, ಆತುರ ಅಸಹನೆಗಳು ಎಷ್ಟು ತೀವ್ರವಾಗಿ ವ್ಯಕ್ತಗೊಂಡಿವೆಯೆಂಬುದನ್ನು, ತಡೆದು ತಡೆದು ಸಾಗುವ ಮಾತುಗಳಿಂದ, ನಿರ್ಧಾರ ಮತ್ತು ಕಾಠಿನ್ಯಸೂಚಕಗಳಾದ ಮೂರ್ಧನ್ಯಧ್ವನಿಗಳಿಂದ ತಿಳಿಯಬಹುದಾಗಿದೆ.

೮. ಮಚ್ಚರದಿನೊರ್ವರೊರ್ವರ
ನುಚ್ಚಳಿಸಿ ತಗುಳ್ದು ಗೋವರಾರ್ದಿಸೆ ಕೇಟಿಂ
ಕರ್ಚಿ ಪುಡಿಯೊಳೆ ಪೊರಳ್ದುವು
ನಚ್ಚಿನ ಕಾಂಭೋಜವಾಜಿಗಳ್ ಕೆಲವಾಗಳ್ ॥ (೮-೯೪)

ಗೋಗ್ರಹಣಸಂದರ್ಭದ ಈ ಚಿತ್ರದಲ್ಲಿ ವಕಾರ ರಕಾರಗಳು, ಭಿನ್ನ ಸ್ಥಾನಿಕಗಳು, ಒಗ್ಗೂಡಿ ಉಂಟುಮಾಡುವ ಧ್ವನಿವೈರುಧ್ಯದಿಂದ ಹೋರಾಟದ ಉಗ್ರತೆ ಮನಸ್ಸಿಗೆ ಬರುತ್ತದೆ. 'ಉಚ್ಚಳಿಸಿ' ಎನ್ನುವಲ್ಲಿ, ಕೋಪದಿಂದ ಪರಸ್ಪರರು ಮೇಲೆ ಹಾಯುವುದನ್ನು ಧ್ವನಿಸುವ ಉತ್‌ಪ್ಲುತಿಯ ರಚನೆಯಿದೆ. ಕುದುರೆಗಳ ಸಂಕಟಕರ ಮರಣವನ್ನು 'ಪೊರಳ್ದುವು' ಎಂಬ ಮಾತು ತೋರಿಸಲು ಶಕ್ತವಾಗಿದೆ.

೯. ಅಟ್ಟಿದಟ್ಟಿಗ ಕರಿಘಟೆಗಳ
ಬಳಗದಿನುಚ್ಚಳಿಸಿ ಮೊರೆವ ನೆತ್ತರ ತೊಱೆಗಳ್
ಸುಟಿಸುಟಿದೊಡವರಿದುವು ಕ
ಲ್ವಟಿಯೊಳ್ ಘೋರ್ಗರೆದು ಪರಿವ ತೊಱೆಗಳ ತೆಱದಿಂ ॥ (೧೧-೩೬)

ಪಂಪಭಾ.ದ್ದೇ ಆಗಿರುವ ಈ ಯುದ್ಧ ಚಿತ್ರದಲ್ಲಿಯೂ, 'ಅಟ್ಟಿದ' ಎಂಬಲ್ಲಿಯ ಭಗಣ ರಚನೆ ಬೀಳುತ್ತಿರುವ ಆನೆಯನ್ನು, 'ಉಚ್ಚಳಿಸಿ' ಎಂಬಲ್ಲಿಯ 'ಉತ್' ಉಪಸರ್ಗವು ರಕ್ತದ ಚಿಮ್ಮುಗೆಯನ್ನು, 'ಸುಟಿಸುಟಿದೊಡವರಿದುವು' ಎನ್ನುವುದು ರಕ್ತದ ಪ್ರವಾಹಗತಿಯನ್ನೂ

'ಭೋರ್ಗರೆದು' ಎಂಬ ಅನುಕರಣಾತ್ಮಕ ಶಬ್ದವು ಆಧಿಕ್ಯವನ್ನೂ ಸಮರ್ಥವಾಗಿ ವ್ಯಂಜಿಸಬಲ್ಲ ರಚನೆಗಳಾಗಿವೆ.

ಪಂಪ ಕವಿಯ ಕೃತಿಗಳ ಛಂದಸ್ಸಿನ ವಿಶ್ಲೇಷಣೆಗೆ ಇಲ್ಲಿ ಕೆಲವು ಉದಾ.ಗಳನ್ನು ಮಾತ್ರ ಕೊಟ್ಟಿದೆ. ಈ ಮಹಾಕವಿ ತಾನು ಬಳಸುವ ಯಾವುದೇ ಬಂಧವನ್ನು ಸರಾಗವಾಗಿ, ಸಶಕ್ತವಾಗಿ ಬಳಸಿದ್ದಾನೆ. ಚಿತ್ರಿಸುವ ದೃಶ್ಯವನ್ನು, ರೂಪಿಸುವ ಭಾವವನ್ನು, ಸ್ವಾನುಭವದಿಂದ ಆತ್ಮೀಕರಿಸಿಕೊಂಡು ಅಪ್ರಯತ್ನವಾಗಿ ಎನ್ನುವಂತೆ ಅವನ್ನು ರೂಪಿಸಿದ್ದಾನೆ. ಆತನ ಛಂದಃಪ್ರಯೋಗಗಳ ಕೌಶಲವನ್ನೂ ಪ್ರಭಾವ ಪರಿಣಾಮಗಳನ್ನೂ ಇನ್ನೂ ವಿಶದವಾಗಿ ಗುರುತಿಸಿದರೆ, ಆತನ ಛಂದಃಸಿದ್ಧಿ ಯಾವ ರೀತಿಯದು ಎಂಬುದನ್ನು ನಾವು ತಿಳಿಯಬಹುದು.

*ಕನ್ನಡ ಛಂದೋವಿಹಾರ, ೧೯೮೯*
*ಶಾಸ್ತ್ರೀಯ, ೨, ೧೯೯೯, ಪು.೨೧೮-೨೯; ೨೩೭-೪೦*

# ೩೭. 'ಮಾನಸೋಲ್ಲಾಸ'ದಲ್ಲಿ ಛಂದಸ್ಸು

● ಡಿ. ಎಲ್. ನರಸಿಂಹಾಚಾರ್

ಕಲ್ಯಾಣಿಯ ಚಾಲುಕ್ಯರಲ್ಲಿ ಅತ್ಯಂತ ಪ್ರಸಿದ್ಧನಾಗಿದ್ದ ಆರನೆಯ ವಿಕ್ರಮಾದಿತ್ಯನ ಮಗ ಮೂರನೆಯ ಸೋಮೇಶ್ವರ ಅಥವಾ ಭೂಲೋಕಮಲ್ಲನು ೧೧೨೬ರಿಂದ ೧೧೩೮ರ ವರೆಗೆ ರಾಜ್ಯಭಾರ ಮಾಡುತ್ತಿದ್ದು 'ಅಭಿಲಷಿತಾರ್ಥ ಚಿಂತಾಮಣಿ' ಅಥವಾ 'ಮಾನಸೋಲ್ಲಾಸ'ವೆಂಬ ಗ್ರಂಥವನ್ನು ೧೧೩೧ರಲ್ಲಿ ಬರೆದನೆಂಬ ವಿಷಯ ಕರ್ಣಾಟಕದ ಚರಿತ್ರೆಯಲ್ಲಿ ಸುವಿದಿತವಾಗಿದೆ. ಈ ಗ್ರಂಥವನ್ನು ಬರೆದದ್ದರಿಂದ ಆ ರಾಜನಿಗೆ ಸರ್ವಜ್ಞಚಕ್ರವರ್ತಿನ್ ಎಂಬ ಹೆಸರುಂಟಾದ ಹಾಗೆ ಕಾಣುತ್ತದೆ. ಈ ಮಹಾಗ್ರಂಥದ ಮೊದಲ ಮೂರು ಪ್ರಕರಣಗಳು 'ಅಭಿಲಷಿತಾರ್ಥ ಚಿಂತಾಮಣಿ' ಎಂಬ ಶೀರ್ಷಿಕೆಯೊಡನೆ ಡಾ|| ಆರ್. ಶಾಮಶಾಸ್ತ್ರಿಯವರಿಂದ ಪರಿಷ್ಕೃತವಾಗಿ ಮೈಸೂರಿನ ಓರಿಯಂಟಲ್ ಲೈಬ್ರರಿಯಿಂದ ಅಚ್ಚಾಗಿ ಪ್ರಕಟವಾಯಿತು ೧೯೨೬ರಲ್ಲಿ. ಬರೋಡಾದ ''ಗಾಯಕ್‌ವಾರ್ ಓರಿಯಂಟಲ್ ಸೀರೀಸ್'' ಎಂಬ ಗ್ರಂಥಮಾಲೆಯಲ್ಲಿ ಈ ಗ್ರಂಥದ ಮೊದಲ ಮೂರು ಪ್ರಕರಣಗಳೂ, ನಾಲ್ಕನೆಯದರಲ್ಲಿ ಎಂಟು ಅಧ್ಯಾಯಗಳೂ ಶ್ರೀ ಜಿ. ಕೆ. ಗೊಂಡೇಕರ್ ಎಂಬವರಿಂದ ಸಂಪಾದಿತವಾಗಿ ಎರಡು ಭಾಗಗಳಲ್ಲಿ ೧೯೨೫ರಲ್ಲೂ, ೧೯೩೮ರಲ್ಲೂ ಪ್ರಕಟವಾದುವು ; ಈಗ (೧೯೬೧) ಚತುರ್ವಿಂಶತಿಯಲ್ಲಿ ಉಳಿದ ಐದು ಅಧ್ಯಾಯಗಳೂ, ಪಂಚವಿಂಶತಿಯೂ ಪ್ರಕಟವಾಗಿ ಗ್ರಂಥವು ಪರಿಪೂರ್ಣವಾಗಿದೆ. ಇದು ಒಂದು ಸಣ್ಣ ವಿಶ್ವಕೋಶವಿದ್ದಂತೆ ಇದೆ; ಆ ಕಾಲದಲ್ಲಿ ಪ್ರಚುರವಾಗಿದ್ದ ಶಾಸ್ತ್ರಗಳ ಮತ್ತು ಕಲೆಗಳ ಪರಿಚಯವನ್ನು ಇದು ಉಂಟುಮಾಡಿಕೊಡುತ್ತದೆ. ಗ್ರಂಥಕರ್ತನ ಮಾತುಗಳಲ್ಲಿ ''ಕಾಮಧೇನುರಿದಂ ಶಾಸ್ತ್ರಂ''; ''ನಾಸ್ತ್ಯನೇನ ಸಮಂ ಶಾಸ್ತ್ರಂ ಸರ್ವ ವಸ್ತು ಪ್ರಕಾಶನೇ.'' ಸಾಹಿತ್ಯ, ಸಂಗೀತ, ಚಿತ್ರ, ಶಿಲ್ಪ, ಅರ್ಥಶಾಸ್ತ್ರಮುಂತಾದ ನೂರು ವಿಷಯಗಳಲ್ಲಿ ಒಂದೊಂದು ಈ ಗ್ರಂಥದಲ್ಲಿರುವ ೧೦೦ ಅಧ್ಯಾಯಗಳಲ್ಲಿ ಒಂದೊಂದಕ್ಕೆ ವಸ್ತುವಾಗಿದೆ. ಚತುರ್ಥವಿಂಶತಿಯ ಹದಿನಾರನೆಯ ಅಧ್ಯಾಯದಲ್ಲಿ ಛಂದಸ್ಸಿನ ವಿಷಯವಾಗಿ ಕೆಲವು ಅಂಶಗಳು ಪ್ರತಿಪಾದಿತವಾಗಿವೆ (೨೦೦-೩೬೭ ಶ್ಲೋಕಗಳು.). ಈ ಶ್ಲೋಕಗಳಲ್ಲಿ ೩೪೫ರಿಂದ ೩೬೦ರ ಮಧ್ಯದಲ್ಲಿ, ಒಂದು ಪ್ರತಿಯಾದ D ಯಲ್ಲಿ ೨೧೦ ಪದ್ಯಗಳನ್ನುಳ್ಳ ಭಿನ್ನಪಾಠವಿದೆ. ಈಗ ಈ ಭಾಗದಲ್ಲಿ ನಿರೂಪಿತವಾಗಿರುವ ಛಂದಸ್ಸಿನ ಕೆಲವು ಅಂಶಗಳನ್ನು ಕೆಳಗೆ ಸಂಗ್ರಹವಾಗಿ ಕೊಡಲು ಪ್ರಯತ್ನಿಸಿದೆ. ಇದರಲ್ಲಿ ಸಂಸ್ಕೃತ, ಪ್ರಾಕೃತ, ಕನ್ನಡ ಛಂದಸ್ಸುಗಳಲ್ಲಿ ಕೆಲಕೆಲವು ಉಕ್ತವಾಗಿವೆ.

ರಾಗಗಳ ಲಕ್ಷಣವನ್ನು ಹೇಳಿದ ಮೇಲೆ ಪ್ರಬಂಧಗಳ ಲಕ್ಷಣವನ್ನು ಹೇಳಿದೆ. ಪದಾಂತರದಲ್ಲಿ ಸ್ವರನ್ಯಾಸ ಮಾಡುವುದರಿಂದ ವೃತ್ತಜಾತಿಗಳು ಹಾಡಲ್ಪಡುತ್ತವೆ; ಅಲ್ಲಿ ತಾಳನಿಯಮವಿಲ್ಲ, ಛಂದಸ್ಸೇ ಮುಖ್ಯ. ಈ ಛಂದಸ್ಸುಗಳ ಪ್ರಭೇದಗಳನ್ನು ವರ್ಣಮಾತ್ರಾದಿ ಸಂಖ್ಯೆಗಳಿಂದ ಉದಾಹರಣ ಸಮೇತವಾಗಿ ನಿರೂಪಿಸಿದೆ. ಇಲ್ಲಿ ಪ್ರಬಂಧಗಳೆಂದರೆ ಬಗೆಬಗೆಯ ವೃತ್ತಜಾತಿಗಳು ಎಂಬರ್ಥವಿರುವಂತೆ ತೋರುತ್ತದೆ. ಆರಂಭದಲ್ಲಿ ಶ್ಲೋಕದ ಲಕ್ಷಣ ಹೇಳಿದೆ ; ಅದಕ್ಕೆ ಒಂದು ಉದಾಹರಣೆಯೂ ಇದೆ. ಅನಂತರ ಮಗಣಾದಿ

ಅಷ್ಟಗಣಗಳ ನಿರೂಪಣೆ ಒಂದು ವೃತ್ತದಲ್ಲಿ ಹೇಳಿದೆ.[೧] ಶಿಶುಭೃತಾ (ನನಮ), ರುಕ್ಮವತೀ (ಭಮಸಗು), ಇಂದ್ರವಜ್ರ (ತತಜ ೨ ಗು), ವಂಶಸ್ಥ (ಜತಜರ), ಪ್ರಹರ್ಷಿಣೀ (ಮನಜರಗು), ವಸಂತತಿಲಕ (ತಭಜಜ ೨ ಗು), ಮಾಲಿನೀ (ನನಮಯಯ;೮, ೭ರಲ್ಲಿ ಯತಿ), ವಾಣಿನೀ (ನಜಭಜರಗು), ಮಂದಾಕ್ರಾಂತ (ಮಭನತತ ೨ ಗು), ಕುಸುಮಿತಲತಾವೇಲ್ಲಿತಂ (ಮತನಯಯಯ), ಶಾರ್ದೂಲವಿಕ್ರೀಡಿತ (ಮಸಜಸತತಗು), ಸುವದನಾ (ಮರಭನಯಭಲಗು), ಸ್ರಗ್ಧರಾ (ಮರಭನಯಯಯ), ಭದ್ರಕ (ಭರನರ ನರನಗು), ಅಶ್ವಲಲಿತಂ (ನಜಭಜಭಜಭಲಗು), ತನ್ವೀ (ಭತನಸಭಭನಯ), ಕ್ರೌಂಚಪದ (ಭಮಸಭ ನನನನ ಗು), ಅಪವಾಹಕರಿ (ಮ ೬ ನಸ ೨ ಗು) – ಈ ವೃತ್ತಗಳ ಲಕ್ಷಣಗಳೂ, ಒಂದೊಂದಕ್ಕೂ ಒಂದೊಂದು ಉದಾಹರಣ ಪದ್ಯವೂ ಅನಂತರ ಉಕ್ತವಾಗಿವೆ. ಉದಾಹರಣೆಯ ಪದ್ಯಗಳೆಲ್ಲ ವಿಷ್ಣುಸ್ತುತಿರೂಪವಾಗಿವೆ. ಗ್ರಂಥವಿಸ್ತಾರ ಭೀತಿಯಿಂದ ವೃತ್ತಗಳ ಅನಂತವಾದ ಅವಾಂತರ ಭೇದಗಳನ್ನು ಹೇಳಿಲ್ಲ. ಇದಾದ ಮೇಲೆ, ವೃತ್ತ ಎಂಬ ಹೆಸರುಳ್ಳ ಒಂದು ವೃತ್ತದ ಲಕ್ಷಣವನ್ನೂ ಹೇಳಬೇಕೆಂದು ಕೆಲವರು ಮತಂಗನ ಮತಾನುಸಾರವಾಗಿ ಹೇಳುತ್ತಾರೆಂದು ತಿಳಿಸಿ, ಪ್ರತಿ ಪಾದದಲ್ಲಿಯೂ ರಗಣ ಜಗಣಗಳು, ಮೂರು ಸಲ ಬಂದು ಕೊನೆಯಲ್ಲಿ ಗುರು ಲಘುಗಳಿದ್ದರೆ ಆ ವೃತ್ತಕ್ಕೆ ವೃತ್ತವೆಂಬ ಹೆಸರೆಂದು ನಿರೂಪಿಸಿ,

> ವಚ(ವೇಧ)ಸಾ ಮನೋಹರ ಸ್ವರಸ್ತವಾಯೋ (ವಾಯ) ಗೇಯಮಾನ (ವೃತ್ತ) ಸಾಮ
> ರಾಜತೇ ಜಗತ್ತ್ರಯೇಽಪಿ ಯಸ್ಯ ದುಷ್ಪದೈತ್ಯವಂಶ ದಾಹಿಧಾಮ
> ಸರ್ವ ಪಾಪಹಾರಿ ಪಾವನಂ ಹರೇಃ ಸದಾ ಸ್ಮರಾಮಿ ತಸ್ಯ ನಾಮ
> ಕೀರ್ತಯಾಮಿವಾದ್ಭುತಂ ಚರಿತ್ರಮಸ್ಯ ವಿಷ್ಟಪತ್ರಯೀ ಲಲಾಮ ॥ ೪-೧೬-೨೪೫.

ಎಂಬ ಒಂದು ಲಕ್ಷ್ಯವನ್ನು ಕೊಟ್ಟಿದ್ದಾನೆ ಸೋಮಭೂಪ, ಗೀತವಿದ್ಯಾವಂತರಾದ ನರರ ಶಿಕ್ಷಣಾರ್ಥವಾಗಿ. ಮುಂದುವರಿಯುತ್ತಾ, ಸೋಮೇಶ್ವರನು ಗದ್ಯದ ಲಕ್ಷಣವನ್ನು

> ಪಾದಾನಾಂ ನಿಯಮೋ ನಾಸ್ತಿ ಛಂದೋ ಯತ್ರ ನ ವಿದ್ಯತೇ
> ಸಮಾಸಪದ ಭೂಯಿಷ್ಠಂ ತತ್ತು ಗದ್ಯಂ ನಿಗದ್ಯತೇ ॥ ೪-೧೬-೨೪೭.

ಎಂದು ನಿರೂಪಿಸಿ ಸುಮಾರು ೧೨ ಪಂಕ್ತಿಗಳಷ್ಟು ದೀರ್ಘವಾದ ವಿಷ್ಣುಸ್ತುತಿರೂಪವಾದ ಒಂದು ಗದ್ಯವನ್ನು ಕೊಟ್ಟಿದ್ದಾನೆ. ಈ ಗದ್ಯವು ಸ್ವರಸಂಯುಕ್ತವೆಂದೂ ತಾಲವಿವರ್ಜಿತವೆಂದೂ ಪ್ರಾಂತತಾಲದಲ್ಲಿ ಹಾಡಬೇಕೆಂದೂ ಹೇಳಿ ದಂಡಕದ ಲಕ್ಷಣ ನಿರೂಪಣೆಗೆ ಗ್ರಂಥಕರ್ತ ತೊಡಗುತ್ತಾನೆ. ಪ್ರತಿ ಪಾದದ ಆದಿಯಲ್ಲಿ ಎರಡು ನಗಣಗಳೂ, ಅನಂತರ ಏಳು ರಗಣಗಳೂ ಬಂದು, ಬಹುಪಾದಗಳಿಂದ ಯುಕ್ತವಾಗಿದ್ದರೆ ಅದು ದಂಡಕವೆಂದು ಪರಿಕೀರ್ತಿತವಾಗುತ್ತದೆ; ಒಂದು ಉದಾಹರಣೆಯನ್ನು ಕೊಟ್ಟಿದೆ. ಮೊದಲನೆಯ ಪಾದದಲ್ಲಿ ೧೨ ಮಾತ್ರೆಗಳು, ಎರಡನೆಯದರಲ್ಲಿ ೧೮ ಮಾತ್ರೆಗಳು, ಮೂರನೆಯದಲ್ಲಿ ೧೨ ಮಾತ್ರೆಗಳು, ನಾಲ್ಕನೆಯದರಲ್ಲಿ ೧೫ ಮಾತ್ರೆಗಳು–ಹೀಗೆ ಇದ್ದರೆ ಆರ್ಯಾವೃತ್ತವಾಗುತ್ತದೆ. ಇದಕ್ಕೇ ಪ್ರಾಕೃತದಲ್ಲಿ ಗಾಥಾವೃತ್ತವೆಂದು ಹೆಸರು. ಒಂದು ಮತ್ತು ಮೂರನೆಯ ಪಾದಗಳಲ್ಲಿ ಮೂರು ಗಣಗಳೂ (ಚತುಷ್ಕಲ) ಒಂದು ಗುರುವೂ, ಎರಡು ಮತ್ತು ನಾಲ್ಕನೆಯ ಪಾದಗಳಲ್ಲಿ

---

೧ ಈ ವೃತ್ತ ನಾಗವರ್ಮನ ಛಂದೋಂಬುಧಿಯ ೧-೩೭ನೆಯ ಪದ್ಯದ ಸಂಸ್ಕೃತರೂಪವೆಂದು ತೋರುತ್ತದೆ.

ಎರಡೆರಡು ಚತುಷ್ಕಲಗಳೂ ಎರಡು ಗುರುವೂ ಇದ್ದರೆ ಅದು ದ್ವಿಪಥಕಂ ಎಂಬ ವೃತ್ತವಾಗುತ್ತದೆ; ಇಲ್ಲಿ ಜಗಣ ಬರಕೂಡದು; ಎರಡು ಮತ್ತು ನಾಲ್ಕನೆಯ ಪಾದಾಂತ್ಯಗಳಲ್ಲಿ ಪ್ರಾಸವಿರಬೇಕು. ಉದಾಹರಣೆ:

ಕುವಲಯ ಕಿಸಲಯ ಕಾಂತಿರ್ವಃ
ಸೌಖ್ಯಂ ವಿತರತು ವಿಷ್ಣುಃ
ತ್ರಿಭುವನ । ಸಂಭವ । ಪರಿರ । ಕ್ಷಾಸಂ
ಹರಣಪ್ರಭ ವಿಷ್ಣುಃ ॥[೨] ೪-೬-೨೬೦

ದ್ವಿಪಥಾ ಎಂಬ ಈ ಪ್ರಬಂಧವನ್ನು ಸ್ವರಸಂಯುಕ್ತವಾಗಿ, ತಾಲವರ್ಜಿತವಾಗಿ ಗೀತ ವಿದ್ಯಾವಿಶಾರದರು ಹಾಡಬೇಕು.

ಇಲ್ಲಿಂದ ಮುಂದಕ್ಕೆ ಮತ್ತೆ ಕೆಲವು ಸಂಸ್ಕೃತ ವರ್ಣವೃತ್ತಗಳು ಲಕ್ಷಣಲಕ್ಷ್ಯಯುಕ್ತವಾಗಿ ನಿರೂಪಿತವಾಗಿವೆ. ದೋಧಕ (೩ ಭ+೨ ಗು); ಇದನ್ನು ''ಯೇನಕೇನಾಪಿ ತಾಲೇನ'' ಹಾಡಬಹುದು; ತೋಟಕ (೪ ಸಗಣಗಳು); ಇದು ಸಂಸ್ಕೃತದಲ್ಲಾಗಲಿ, ಪ್ರಾಕೃತದಲ್ಲಾಗಲಿ ಇರಬಹುದು; ಇದನ್ನು ಅಭೀಪ್ಸಿತವಾದ ರಾಗದಲ್ಲಿ 'ಯೇನಕೇನಾಪಿ ತಾಲೇನ' ಹಾಡಬೇಕು. ಇದಾದ ಮೇಲೆ ಅಡಿಲ್ಲಾ ಎಂಬ ಪ್ರಾಕೃತ ವೃತ್ತದ ಲಕ್ಷಣವನ್ನು ಉದಾಹರಣೆಯ ಸಮೇತ ಹೇಳಿದೆ[೩]; ೪ ಪಾದಗಳು; ಪ್ರತಿ ಪಾದದಲ್ಲಿ ೧೬ ಮಾತ್ರೆಗಳು, ಪಾದಾಂತ್ಯದಲ್ಲಿ ಪ್ರಾಸವಿರಬೇಕು. ಆದಿಯಲ್ಲಿ ಒಂದು ಷಟ್ಕಲ, ಆಮೇಲೆ ಐದು ಚತುಷ್ಕಲಗಳು, ಪಾದಾಂತ್ಯಗಳಲ್ಲಿ ಗುರುವೂ ಇದ್ದರೆ ಅದು ದ್ವಿಪದೀ ಎಂಬ ವೃತ್ತವಾಗುತ್ತದೆ.

ಜಯಕೀರ್ತಿಯ 'ಛಂದೋನುಶಾಸನ'ದಲ್ಲಿ ಹೇಳಿರುವಂತೆ ರತಿ, ಮದನ ಗಣಗಳ ವಿಷಯವನ್ನು ಈ ಕೆಳಗಿನ ಶ್ಲೋಕಗಳಲ್ಲಿ ಸೂಚಿಸಿದೆ :

ಲಘ್ವಾದಿಷುಗಣೇಷ್ವಾದೌ ಕರ್ತವ್ಯಾಸ್ಸಧಿಕೇ ಲಘುಃ
ಗುರ್ವಾದಯಃ ಪ್ರಕೃತ್ಯೈವ ಸ್ಮುರೇತೇ ಮಾಸ್ತ್ರಥಾ ಗಣಾಃ ॥ ೪-೧೬-೨೭೬

ತತ್ರಾದ್ಯಾನಾಂ ಚತುರ್ಣಾಂಚ ಪುರೋರಂತಸ್ಯ ಜಾಯತೇ
ರತಿ ಸಂಜ್ಞಾಮನಂಗೇನ ಗಣ್ಯೆಶ್ಚತ್ವಾರ ಈರಿತಾಃ ॥ ೪-೧೬-೨೭೭

ಈ ಗಣಗಳಿಂದ ರಚಿತವಾಗಿರುವ ತ್ರಿಪದೀ ವೃತ್ತದ ಲಕ್ಷಣವನ್ನು ಕೆಳಗೆ ಕಂಡಂತೆ ಹೇಳಿದೆ:

ಆದ್ಯ ದ್ವಿತೀಯೌ ದ್ವಿಗಣೌ ತೃತೀಯಸ್ತು ಚತುರ್ಗಣಃ
ಚತುರ್ಥಸ್ತ್ರಿಗಣಾಃ ಪಾದೋ ಗಣಾಸ್ತ್ವೇಕಾಧಿಕಾದಶ ॥ ೪-೧೬-೨೭೮

ಷಷ್ಠಸ್ತು ದಶಮಶ್ಚೈವ ಭವೇತ್ಕಾಮ ಪ್ರಿಯಾ (ಯೋ) ಗಣಾಃ (ಣಃ)
ಶೇಷಾ ಸ್ಮರಗಣಾ ಯಸ್ಯಾ ಸ್ತ್ರಿಪದೀ ಸಾ ನಿಗದ್ಯತೇ ॥ ೪-೧೬-೨೭೯

ಇನರಂತೆ ತ್ರಿಪದಿಯನ್ನು ನಾಲ್ಕು ಪಾದಗಳಂತೆ ಭಾವಿಸಬೇಕು. ಮೊದಲ ಪಾದದ ನಾಲ್ಕು ಗಣಗಳಲ್ಲಿ ಮೊದಲ ಎರಡು ಒಂದು ಪಾದ; ಅನಂತರದ ಎರಡು ಗಣಗಳು ಎರಡನೆಯ

---

೨ ಇಲ್ಲಿ ನಾಲ್ಕನೆಯ ಪಾದದಲ್ಲಿ ಎರಡು ಮಾತ್ರೆಗಳು ಸಾಲವು.

೩ ಇದರಲ್ಲಿ ಮೂರೇ ಪಾದಗಳಿವೆ, ನಾಲ್ಕಿರಬೇಕು.

ಪಾದ; ಮೂರನೆಯ ಪಾದದಲ್ಲಿ ನಾಲ್ಕು ಗಣಗಳು; ನಾಲ್ಕನೆಯದರಲ್ಲಿ ಮೂರು ಗಣಗಳು; ಒಟ್ಟು ೧೧ ಗಣಗಳಿರುತ್ತವೆ. ಇವುಗಳಲ್ಲಿ ೬ನೆಯ ಮತ್ತು ೧೦ನೆಯ ಗಣಗಳು ಕಾಮಪ್ರಿಯಾ ಎಂದರೆ, ರತಿಗಣಗಳು (=ಬ್ರಹ್ಮ); ಉಳಿದ ೯ ಗಣಗಳು ಸ್ಮರಗಣಗಳು (=ವಿಷ್ಣು). ಇದಕ್ಕೆ

ಮೇದನೀ ವರ್ಣೆ ಸಲ್ಲೂ ಕಾ ದಿ ಯಣು ಮೀನಾಗಿ ವೇದವೊತ್ತಗೇಯ
ಗಿಪನೇ ಲತದೇಕದವನ ಪಾದಂಗಲಿಗೇ ಮಹಿಮೇಯಂ ॥ ೪-೧೬-೨೮೦

ಎಂಬ ಉದಾಹರಣೆಯಿದೆ. ಇದರ ಭಾಷೆ ಕನ್ನಡವಿರುವಂತೆ ತೋರುತ್ತದೆ. ಹ್ರಸ್ವ ಎ ಮತ್ತು ಒ ಕಾರಗಳು ಸಂಸ್ಕೃತದಲ್ಲಿಲ್ಲದಿರುವುದರಿಂದ ಅವಕ್ಕೆ ಪ್ರತ್ಯೇಕವಾದ ಲಿಪಿ ದೇವನಾಗರಿಯಲ್ಲಿಲ್ಲ; ಇವುಗಳಿಗೆ ಏ ಮತ್ತು ಓ ಕಾರಗಳ ಚಿಹ್ನೆಗಳನ್ನೇ ಬಳಸಿದೆ. ಇದನ್ನು ಗಮನಿಸಿ ಈ ಪದ್ಯವನ್ನು ಇದಕ್ಕೆ ಪಾಠಾಂತರಗಳೇನೂ ಇಲ್ಲದಿದ್ದರೂ ತಿದ್ದಿ ಬರೆಯಬಹುದು, ಸರಿಸುಮಾರಾಗಿ :

ಮೇದಿನಿ ವರ್ಣಿಸಲ್ಕಾದಿಯೊಳ್ ಮೀನಾಗಿ
ವೇದವೊತ್ತಗೆಯನೆತ್ತಿ ತಂದಿತ್ತವನ
ಪಾದಂಗಳೀಗೆ ಮಹಿಮೆಯಂ ॥

ತ್ರಿಪದಿಯಲ್ಲಿ ಬರುವ ಪ್ರಾಸದ ಸ್ವರೂಪವನ್ನೂ, ಅದನ್ನು ಹಾಡುವ ವಿಧಾನವನ್ನೂ ಈ ಕೆಳಗಿನ ಶ್ಲೋಕಗಳು ತಿಳಿಸುತ್ತವೆ :

ದ್ವಿತೀಯಮಕ್ಷರಂ ಪಾದೇ ಪ್ರಾಣಾಕ್ಷರಮಿತಿ ಸ್ಮೃತಮ್
ಪಾದೇಷ್ವಾವರ್ತತೇ ತತ್ತು ಸ್ವರಸ್ಯ ನಿಯಮೋ ನ ಹಿ ॥ ೨೮೧

ಆದ್ಯಂ ಪಾದದ್ವಯಂ ಗೀತ್ವಾ ಕಿಂಚಿಚ್ಛೇಷಂ ತೃತೀಯಕಮ್
ತೃತೀಯಂ ಪುನರಾವರ್ತ್ಯ ಚತುರ್ಥಂ ಪರಿಗೀಯತೇ ॥ ೨೮೨

ಪ್ರತಿಪಾದದ ಎರಡನೆಯಕ್ಷರ ಪ್ರಾಸಾಕ್ಷರ; ಇದನ್ನು ಪ್ರಾಣಾಕ್ಷರವೆಂದು ಇಲ್ಲಿ ಕರೆದಿದೆ; ಈ ಅಕ್ಷರದೊಡನೆ ಇಂಥ ಸ್ವರವಿರಬೇಕೆಂಬ ನಿಯಮವೇನೂ ಇಲ್ಲ; ಹಾಡುವಾಗ ಮೊದಲಿನ ಎರಡು ಪಾದಗಳನ್ನೂ, ಮೂರನೆಯ ಪಾದದ ಸ್ವಲ್ಪ ಭಾಗವನ್ನೂ ಹೇಳಿ, ಅನಂತರ ಅದನ್ನು ಪುನರಾವೃತ್ತಿ ಮಾಡಿ ಮೂರನೆಯ ಪಾದವನ್ನು ಮುಗಿಸಿ, ಆಮೇಲೆ ನಾಲ್ಕನೆಯ ಪಾದವನ್ನು ಹಾಡಬೇಕು.

ತ್ರಿಪದಿಯ ವಿಷಯ ಮುಗಿದ ಮೇಲೆ ಚತುಷ್ಪದಿಯ ಲಕ್ಷಣ ಉಕ್ತವಾಗಿದೆ. ಪ್ರತಿ ಪಾದದಲ್ಲಿ ೧೬ ಮಾತ್ರೆಗಳುಳ್ಳದ್ದು, ೨೧ ಮಾತ್ರೆಗಳುಳ್ಳದ್ದು, ೨೪ ಮಾತ್ರೆಗಳುಳ್ಳದ್ದು—ಎಂದು ಇದರಲ್ಲಿ ಮೂರು ಬಗೆಗಳಿವೆ. ಯಾವುದಾದರೂ ತಾಳದಲ್ಲಿ, ಅಭಿಮತವಾದ ರಾಗದಿಂದ ಸ್ವರಸಂಯುಕ್ತವಾಗಿ ಗೀತಜ್ಞರು ಇದನ್ನು ಹಾಡಬಹುದು.

ತ್ರಿಪದೀ ವಿಷಯವನ್ನು ಹೇಳುವ ಮುನ್ನ ರತಿ ಮದನ ಗಣಸ್ವರೂಪವನ್ನು ಹೇಳಿದೆ ; ಬಾಣಗಣದ ವಿಷಯವನ್ನು ಅಲ್ಲಿ ಹೇಳಿಲ್ಲ. ಚತುಷ್ಪದಿಯ ವಿಷಯ ಮುಗಿದ ಮೇಲೆ

ಗಣಾನಾಂ ಕಾಮ ಸಂಜ್ಞಾನಾಂ ಚತುರ್ಣಾಂ ಪುರತೋ ಗುರುಃ
ಅಷ್ಟಾನಾಂ ಲಘವಸ್ತದ್ವದ್ ಗಣಾಃ ಷೋಡಶ ಬಾಣಕಾಃ ॥ ೨೮೬

ಎಂದು ೧೬ ಬಾಣಗಣಗಳ (=ರುದ್ರಗಣ) ಸ್ವರೂಪವನ್ನು ತಿಳಿಸಿದೆ. ಈ ಗಣಗಳ

ಪ್ರಯೋಗವನ್ನು ಹೊಂದಿರುವ ಷಟ್ಪದಿಯ ಲಕ್ಷಣವನ್ನು ಈ ಕೆಳಗಿನ ಶ್ಲೋಕದಲ್ಲಿ ಹೇಳಿದೆ :

ಪಾದೇ ಪಾದೇ ತು ಕರ್ತವ್ಯೌ ದ್ವೌ ಗಣೌ ಮಾನ್ಮಥಸ್ತ್ರಿಷು
ಅಂತೇ ಬಾಣಸ್ತು ಷಟ್ಪದ್ಯಾಮುತ್ತರಾರ್ಧಂ ತಥೈವ ಚ ॥ ೨೮೭

ಷಟ್ಪದಿಯ ಪೂರ್ವಾರ್ಧದಲ್ಲಿ ಪ್ರತಿಪಾದದಲ್ಲೂ ಎರಡೆರಡು ಮನ್ಮಥಗಣ (=ವಿಷ್ಣು)ಗಳೂ, ಮೂರನೆಯ ಪಾದಾಂತ್ಯದಲ್ಲಿ ಒಂದು ಬಾಣಗಣವೂ (=ರುದ್ರ) ಇರಬೇಕು; ಇದರಂತೆ ಉತ್ತರಾರ್ಧವೂ ಇರುತ್ತದೆ. ಇದಕ್ಕೆ ಕೊಟ್ಟಿರುವ ಉದಾಹರಣೆ:

ಗಡಣದಿ ತುರಗನ ಮೇಡೇ ಚರ್ಣ್ಣಗಲ ದೀಪ್ತಿಃ
ಗೇಡೇ ಗೋಂಡ ತಮಗೇಶ್ರಿಚಾರತಿಯಾ ಸೋದಿರ್ಗಲ ಪೋಲೇ
ಪಾತುಲು ಗಡ ತೊಲಹೀ ವಿಷುಕು ಇತಿ ಕೇನ ಮಂಗಿಸ್ಸಸಂಸಿದ್ಧಿಯು ॥ ೨೮೮

ಇದಕ್ಕೆ D ಪ್ರತಿಯಲ್ಲಿರುವ ಪಾಠಾಂತರ :

ಗಡಣದಿಂದುರಗಣ ಪೇಡೇವಣಿಗಲದೀಪ್ತಿ
ಗೇಡೇ ಗೋಂಡು ತವಗೇತ್ತಿವಾರತಿಯಾ ಸೋಡಿರ್ಗಲ ಪಾಲಿಪಾಲುಗಡಲೋ
ಲಿರ್ದ್ದಾ ವಿಷ್ಣುಕು ಇತಿ ವೇ ನಮಗ್ಗಿಸ್ತಸಂಸಿದ್ಧಯ ॥

ಇದರ ಸಹಾಯದಿಂದ ಈ ಪದ್ಯದ ಪಾಠವನ್ನು ಹೀಗೆ ಪರಿಷ್ಕರಿಸಬಹುದು:

ಗಡಣದಿಂದುರಗನ
ಪೆಡವಣಿಗಳ ದೀಪ್ತಿ
ಗೆಡೆಗೊಂಡು ತಮಗೆತ್ತುವಾರತಿಯಾ
ಸೊಡರ್ಗಳ ಪೋಲೆ ಪಾ
ಲ್ಗಡಲೊಳಿರ್ದಾ ವಿಷ್ಣು
ಕುಡುತಿಕ್ಕೆ ನಮಗಿಷ್ಟಸಂಸಿದ್ಧಿಯಂ ॥

ಇದು ಛಂದಸ್ಸಿನ ದೃಷ್ಟಿಯಿಂದ ನಿರ್ದುಷ್ಟವಾಗಿರುವ ಷಟ್ಪದಿ. ನಾಗವರ್ಮಾದಿಗಳು ಹೇಳಿರುವ ಲಕ್ಷಣದಂತೆ ಇದರಲ್ಲಿ ೧, ೨, ೪, ೫ನೆಯ ಪಾದಗಳಲ್ಲಿ ಎರಡೆರಡು ವಿಷ್ಣು ಗಣಗಳೂ (=ಮದನ), ೩ ಮತ್ತು ೬ನೆಯ ಪಾದಗಳಲ್ಲಿ ಎರಡು ವಿಷ್ಣುಗಣಗಳೂ (=ಮದನ), ಒಂದು ರುದ್ರಗಣವೂ (=ಬಾಣ) ಇರುವುದು ವಿಶದವಾಗಿದೆ. ಇತರರಂತೆ ಇದನ್ನು ಷಟ್ಪದ ಎಂದು ಕರೆಯದೆ ಷಟ್ಪದಿ ಎಂದು ಹೆಸರಿಸಿರುವುದನ್ನು ನೋಡಬಹುದು. ಈ ಷಟ್ಪದಿಯ ವಿಚಾರವಾಗಿ

ಕರ್ಣಾಟಭಾಷಯಾ ಗೇಯಾ ಪ್ರಾಣಾಕ್ಷರ ಸಮನ್ವಿತಾ
ಷಟ್ಪದೀ ತಾಲರಹಿತಾ ಸಾನುಪ್ರಾಸಾ ಕಥಾತ್ಮಿಕಾ ॥ ೨೮೯

ಎಂಬ ಪದ್ಯವಿದೆ. ಇದು ಕರ್ಣಾಟಭಾಷೆಯಲ್ಲಿ ಹಾಡತಕ್ಕದು ; ಪ್ರಾಣಾಕ್ಷರ (ಪ್ರಾಸ)ಗಳನ್ನುಳ್ಳದ್ದು ; ತಾಳರಹಿತವಾದದ್ದು ; ಅನುಪ್ರಾಸಾತ್ಮಕವಾದದ್ದು ; ಕಥೆಯನ್ನು ಒಳಕೊಂಡಿರುವುದು. ಕಥನಕಾವ್ಯಗಳಿಗೆ ಈ ವೃತ್ತವನ್ನು ಬಳಸುತ್ತಿದ್ದರೆಂದು ಊಹಿಸಬಹುದು.

ಪ್ರಥಮ ಪಾದದಲ್ಲಿ ದ್ವಾದಶ ಮಾತ್ರೆಗಳೂ, ದ್ವಿತೀಯ ಪಾದದಲ್ಲಿ ಇಪ್ಪತ್ತು ಮಾತ್ರೆಗಳೂ ಮತ್ತು ಹೀಗೆಯೇ ಉತ್ತರಾರ್ಧವೂ ಇದ್ದರೆ ಅದು ಕಂದಪದ್ಯವಾಗುತ್ತದೆ. ಇದಕ್ಕೆ ಉದಾಹರಣೆ:

ಕೌಸ್ತುಭರುಚಿಯನ್ತಸ್ವರದೋಲು ಕೇಃಣುಗಿಲ ಪೋಣೇರ ವಿದ್ಯಾ ಚ ವಿಯಂನಿ
ರೇಪತರಂಜಿಯ ಸುರಗುರು ಪರಿವೃನ್ದನೇಮಗೀಗೆ ವಿಷ್ಣುರ್ವಡಿದ ಚರಮಿ ॥ ೧೯೨

ಇದಕ್ಕೆ D ಪ್ರತಿಯಲ್ಲಿ ಪಾಠಾಂತರ:

ಸಿರಿಕೌಸ್ತುಭರುಚಿಯಂ ತತ್ಪುರದೋಲು ಕೋಸ್ಫುಲಿಂಗಯೋರಪವಿದ್ಯಾಧವಿಯಂತಿ
ರಪರಿರಂಜಿಷ ಪುರಗಣಪರ ದೃಢನೇಮಗೀಗೇ ವೇಷು ವೇಡಿದ ಪರಮಾ॥

ಡಾ॥ ಶಾಮಶಾಸ್ತ್ರಿಗಳು ಕೊಟ್ಟಿರುವ ಪಾಠ :

ಕೌಸ್ತುಭರುಚಿಯಂತಿಂ ನ್ಯಕರದೂಳುಕೇಃ ನುಗಿಲ ಪೋನೇರಯ ವಿದ್ಯುಚ್ಛ
ಪಿಯಪಿಯನ್ ನಿರೆ ಪಲರಂಜಿಪ ಸುರಗು ಸುಪರಿವೃನ್ದ ಹೆಮಗಿಗೆ ವಿಷ್ಣುರ್ವರದಿದ ಚರಮಿ ॥

ಈ ಪದ್ಯದ ಸರಿಯಾದ ಪಾಠ ಕೆಳಗೆ ಕಂಡಂತೆ ಇರಬೇಕೆಂದು ಡಾ॥ ಶಾಮಶಾಸ್ತ್ರಿಗಳು ಕಾಣಿಸಿದ್ದಾರೆ :

ಕೌಸ್ತುಭರುಚಿಯುಂ ತನ್ನಯುರಸ್ಥಲದೊಲ್ಕರಮದುಲ್ಕೆ ಮುಗಿಲೊಳ್ಸಿರೆ ವಿದ್ಯುಚ್ಛ
ವಿಯಂತಿರ ರಂಜಿಪನಚ್ಯುತನೆಮಗೀಗೆ ವಿಷ್ಣು ಬೇಡಿದ ವರಮಂ ॥

ಮೇಲಿನ ಪದ್ಯದಲ್ಲಿ ಪ್ರಾಸಾಕ್ಷರವೇ ಇಲ್ಲದಂತಾಗಿದೆ; ಆದ್ದರಿಂದ ಈ ಪರಿಷ್ಕರಣ ಸಾಧುವಾಗಿಲ್ಲ. ಅಲ್ಲದೆ ಪಾದಗಳನ್ನಾಗಿ ಪದ್ಯವನ್ನು ವಿಂಗಡಿಸಿಲ್ಲ. ಕೌಸ್ತುಭ ರುಚಿಯುಂ ಎಂಬಲ್ಲಿನ ಉಂ ಸಮುಚ್ಚಯಕ್ಕೆ ಏನೂ ಸಾರ್ಥಕತೆ ಇಲ್ಲ. ಇವನ್ನೆಲ್ಲ ಗಮನಿಸಿ ಪದ್ಯದ ಪಾಠವನ್ನು ಕೆಳಗೆ ಕೊಟ್ಟಿರುವಂತೆ ಪರಿಷ್ಕರಿಸಿದೆ:

ಸಿರಿಕೌಸ್ತುಭರುಚಿಯಂ ತ
ಳ್ತುರದೊಳ್ ಕಾರ್ಮುಗಿಲ ಪೊಣರ ವಿದ್ಯುಚ್ಛವಿಯಂ
ತಿರೆ ಪರಿರಂಜಿಪ ಸುರಗಣ
ಪರಿವೃಢನೆಮಗೀಗೆ ವಿಷ್ಣು ಬೇಡಿದ ವರಮಂ ॥

ಛಂದಸ್ಸಿನ ದೃಷ್ಟಿಯಿಂದ ಈ ಪರಿಷ್ಕರಣ ಸರಿಯಾಗಿದೆಯೆಂದು ಹೇಳಬಹುದು. ಗಾನದ ದೃಷ್ಟಿಯಿಂದ ಇದು ತಾಲಶೂನ್ಯವೆಂದು ಹೇಳಿದೆ:

ಸ ತಾಲಶೂನ್ಯ ಪದ್ಯೈ (ಶ್ಚತುರ್ಭಿ) ಶ್ಚ ಸಮನ್ವಿತಃ
ಕರ್ಣಾಟಭಾಷಯೈವಾಸೌ ಗೀಯತೇ ಕಂದ ಸಂಜ್ಞಕಃ ॥ ೨೯೨

ಇದನ್ನೇ ಕರ್ಣಾಟ ಭಾಷೆಯಲ್ಲಿ ಬಿರುದುಗಳಿಂದ ಕೂಡಿರುವುದಾಗಿ, ವರ್ಣತಾಲದಿಂದ ಹಾಡಿದರೆ ಇದಕ್ಕೆ ವರ್ಣ ಎಂಬ ಹೆಸರುಂಟಾಗುತ್ತದೆ. ಇದಾದ ಮೇಲೆ ವಸ್ತು ಎಂಬ ಹೆಸರಿನ ಪ್ರಬಂಧದ ಲಕ್ಷಣ ಲಕ್ಷ್ಯಗಳು ಉಕ್ತವಾಗಿವೆ; ಲಕ್ಷ್ಯವು ಪ್ರಾಕೃತಭಾಷೆಯಲ್ಲಿದೆ. ಈ ಪ್ರಬಂಧವನ್ನು ನಾಟಕದಲ್ಲಿ ಕೂಡ ಹಾಡುತ್ತಾರೆ.

**ಚರ್ಚರೀ:** ಪ್ರತಿಪಾದದಲ್ಲೂ ೧೬ ಮಾತ್ರೆಗಳು ; ಎರಡೆರಡು ಪಾದಗಳಿಗೆ ಪ್ರಾಸ ; ಈ ತೆರನಾದ ಬಹುಪಾದಗಳಿಂದ ಕೂಡಿದ್ದರೆ ಅದಕ್ಕೆ ಚರ್ಚರೀ ಎಂದು ಹೆಸರು. ರಾಗ ಹಿಂದೋಲಕ ; ತಾಲ ಚರ್ಚರೀ ; ಇದನ್ನು ವಸಂತೋತ್ಸವದಲ್ಲಿ ಹಾಡಬೇಕು, ಪ್ರಾಕೃತ ಭಾಷೆಯಲ್ಲಿ.

**ಚಕ್ರವಾ (ತಾ) ಲಾ:** ಇದು ಪದ್ಯದಲ್ಲಿಯಾದರೂ ಗದ್ಯದಲ್ಲಿಯಾದರೂ ಇರಬಹುದು. ಪಾದಕ್ಕೆ ಇಷ್ಟೇ ಮಾತ್ರೆಗಳೆಂಬ ನಿಯಮವೇನೂ ಇಲ್ಲವೆಂದು ತೋರುತ್ತದೆ. ಒಂದು ಪಾದದ ಅಂತ್ಯದಲ್ಲಿ ಬರುವ ಶಬ್ದದಿಂದ ಮುಂದಿನ ಪಾದ ಆರಂಭವಾಗುತ್ತದೆ ; ಒಂದು ತೆರನಾದ ಮುಕ್ತಪದ ಗ್ರಹಣ ಇದೆ. ಉದಾಹರಣೆ :

ಕಮಲಾ ಕುಚ ಕಲಶ ಕೇಲಿ ಕಲ್ಪಿತ ಕಸ್ತೂರಿಕಾ ಪತ್ರಭಂಗ
ಪತ್ರಭಂಗ ವಿಷದಾನವ ಪೂತನಾ ಪ್ರಲಯಕರ
ಕರಕಲಿತ ಸುದರ್ಶನಾನುಗೃಹೀತ ಪುರಂದರ
ದರ ಚಕಿತ ಭಕ್ತಜನ ವತ್ಸಲ ಕೌಸ್ತುಭ ಪ್ರಭಾಜಾಲ ಸಹಸ್ರ ರಚನಾವಿದಗ್ಧ
ದಗ್ಧ ನಿಖಿಲ ದುರಿತ ಭಗವನ್ನಾರಾಯಣ ನಮಸ್ತೇ ॥ ೩೦೫

**ಜಯಮಾಲಿಕಾ:** ಜಯ ಶಬ್ದದಿಂದ ಆರಂಭವಾಗುವ ಪಾದಗಳಿರುತ್ತವೆ. ಇದರಲ್ಲಿ 'ಯೇನಕೇನಾಪಿ ರಾಗೇನ' ಹಾಡಬಹುದು, ಜಯತಾಲದಲ್ಲಿ.

ಉದಾ:

ಜಯ ಭುಜ ಪರಿಘ ಧೃತ ಗೋವರ್ಧನ ಧರಾಧರ,

ಇತ್ಯಾದಿ ೮ ಪಂಕ್ತಿಗಳು.

**ಮಾತೃಕಾ :** ಪಾದಾದಿಯಲ್ಲಿ ಮಾತೃಕಾಕ್ಷರವೊಂದೊಂದನ್ನು ನಿಯೋಜಿಸಿ ಯಾವ ವೃತ್ತದಲ್ಲಿಯಾದರೂ ಇರುವ ಪ್ರಬಂಧ :

ಅಸೌ ಶರಣ್ಯಃ ಶರಣಾಗತಾನಾಂ
ಆಕಾರ ಮಾಹಾತ್ಮ್ಯ ಪರಾಸ್ತಕಾಮಃ
ಇಷ್ಟಾರ್ಥದಾಯೀ ಸತತಂ ಪ್ರಜಾನಾಂ
ಈಶಾನ ಕಲ್ಪಃ ಕಲಿಕಾಲ ಚೇತಾ....

ಹೀಗೆ ಅಂ ಇಂದ ಆರಂಭವಾಗುವ ಪಂಕ್ತಿಯನ್ನೊಳಕೊಂಡ ಪಾದಗಳಿರುತ್ತವೆ. ಇಲ್ಲಿ ತಾಲನಿಯಮವಿಲ್ಲ. ರಾಗನಿಯಮವೂ ಇಲ್ಲ; ಇದನ್ನು ಸ್ವೇಚ್ಛೆಯಂತೆ ಹಾಡಬಹುದು. ಇದು 'ಪ್ರಬಂಧಾ ಮಾತೃಕಾನಾಮ.'

**ಪದ್ದಲೀ (ಪದ್ಧಡೀ):** ಇದರ ಲಕ್ಷಣ:

ಸ್ವರೈಃ ಪಾಟೈಃ ಸ ಬಿರುದೈಸ್ತಾಲೇನ ಚ ಸಮನ್ವಿತಾ
ಕಯಾಪಿ ಭಾಷಯಾ ಕ್ಲುಪ್ತಾ ಯುಗ್ಮ ಪ್ರಾಸಾತು ಪದ್ಧಡೀ (ಪದ್ದಲೀ)॥

ಇದರ ಲಕ್ಷ್ಯ:

ಜನಿತ ಕಮಲಾನಂದ ಪ್ರಣತ ಸುರ ಗೋವಿಂದ
ದನುಜ ಕುಲ ಸಂಹಾರ ಅಘಕಮಲ ನೀಹಾರ
ಭಕ್ತಜನ ಭಯಹರಣ ಸುರಸಂಘ ನತ ಚರಣ
ಪುಣ್ಯ ಸಂಚಯ ಸದನ ಸರಸಿರುಹನಿಭ ವದನ
ನೀಲ ಜಲಧರ ವರ್ಣ ಮಕರ ಕುಂಡಲ ಕರ್ಣ
ತರುಣ ರವಿನಿಭಚಕ್ರ ಸ್ವಭುಜ ಪಾಲಿತ ಚಕ್ರ

ಹತ ದೈತ್ಯ ಗಣದರ್ಪ ದಮಿತ ಕಾಲಿಯ ಸರ್ಪ
ಕಂಸ ಭುಜಬಲ ನಾಶ ದಕ್ಷ ॥ ೩೧೭

ಇದರ ಪ್ರತಿಪಾದದಲ್ಲೂ ನಾಲ್ಕು ಪಂಚಕಲಗಳಿವೆ. ಎರಡು ಗಣಗಳ ಅಂತ್ಯದಲ್ಲಿ ಪ್ರಾಸವಿದೆ. ಕೊನೆಯ ಪಾದದಲ್ಲಿ ಎರಡು ಪಂಚಮಾತ್ರಾಗಣಗಳು ಬಂದು ಮೂರು ಮಾತ್ರೆಯ ಒಂದು ಗಣ ಅಂತ್ಯದಲ್ಲಿದೆ. ಕನ್ನಡದ ಲಲಿತರಗಳೆಯಲ್ಲಿ ವೈವಿಧ್ಯಕ್ಕಾಗಿ ಈ ತೆರನಾದ ರಚನೆಯನ್ನು ಕೆಲವರು ಕವಿಗಳು ಮಾಡಿದ್ದಾರೆ. ಕ್ರಿ.ಶ. ೧೧೭೭ರಲ್ಲಿ ಲಿಖಿತವಾದ ಒಂದು ಶಾಸನದಲ್ಲಿ[೪] ಲಲಿತರಗಳೆ ಕಂಡುಬರುತ್ತದೆ ; ಅದರಲ್ಲಿ ಕೆಲವು ಪಂಕ್ತಿಗಳು:

ಸಾಹಸೋತ್ತುಂಗರುಂ ಪರಪಾದ ಭೃಂಗರುಂ
ಚಲದಂಕ ರಾಮರುಂ ಬಲಗರ್ವಭೀಮರುಂ
ಅಸಹಾಯ ಶೌರ್ಯರುಂ ಮೇರುಗಿರಿ ಧೈರ್ಯರುಂ
ಏಕೈಕ ವೀರರುಂ ಲೋಕೈಕ ಸೂರರುಂ.......

ಎಂಬಿವು ಇಲ್ಲಿ ಹೇಳಿರುವ ಪದ್ಧಡಿಗೆ ಸಮಾನವಾಗಿವೆ. ಹರಿಹರನ 'ಪುಷ್ಪರಗಳೆ'ಯ ಅಂತ್ಯದಲ್ಲಿ ಹೀಗೆಯೇ ಹಲವು ಪಾದಗಳಿವೆ; ಇಲ್ಲಿ ಆದಿಪ್ರಾಸವನ್ನು ಆ ಕವಿ ಬಳಸಿದ್ದಾನೆ. ತಾಲಸಂಯುಕ್ತವಾಗಿ ಪದ್ಧಡಿಯನ್ನು ಯಾವ ಭಾಷೆಯಲ್ಲಾದರೂ ಹಾಡಬಹುದೆಂದು ಹೇಳಿದೆ:

ಈದೃಕ್ ಪದ್ಧಲಕಾ ಪ್ರಾಂತೇ ಸ್ವರಾಃ ಪಾಟಾಶ್ಚ ಕೋವಿದೈಃ
ತಾಲೇನ ಸಂಯುತಾ ಗೇಯಾ ಭಾಷಯಾ ತು ಯಯಾ ಕಯಾ ॥ ೩೧೮

ಕ್ರೌಂಚಪದ, ಪದದ್ವಯದಲ್ಲಿ ಸಮಾನಗಣ ಸಮ್ಮಿತವಾಗಿ ಸಂಸ್ಕೃತ ಅಥವಾ ದೇಶ್ಯಭಾಷೆಯಲ್ಲಿರುವ ಹಂಸಪದಿ, ಕಲಹಂಸಕ, ಪ್ರಶ್ನೋತ್ತರ ರೂಪದಲ್ಲಿರುವ ಶುಕ ಸಾರಿಕಾ, ಹಯಲೀಲಾ, ಗಜಲೀಲಾ, ಶರಭಲೀಲಕ (೪ ಪಾದಗಳು)– ಈ ಗೇಯ ಪ್ರಬಂಧಗಳ ವಿಷಯವನ್ನು ಹೇಳಿದೆ. ಆಮೇಲೆ ವಿಚಿತ್ರಕ, ತ್ರಿಭಂಗೀ, ಚತುರಂಗಕ, ಸಿಂಹವಿಕ್ರಾಂತ, ರಣರಂಗ ಪ್ರಬಂಧ (ಇದರಲ್ಲಿ ಮೂರು ಬಗೆ), ಉದ್ಗ್ರಾಹ ಮತ್ತು ಆಭೋಗ(=ಉಗಾಭೋಗ?), ಮುಕ್ತಾವಲೀ, ಅಂಕಚಾರಿಣೀ- ಈ ಪ್ರಬಂಧಗಳ ಲಕ್ಷಣವನ್ನೂ, ಲಕ್ಷ್ಯಗಳನ್ನೂ ಪ್ರತಿಪಾದಿಸಿದೆ. ಆಮೇಲೆ ಕಮಲಾನಂದ, ಧ್ವನಿಕುಟ್ಟನೀ, ಲಲಿತ, ಪಂಚಭಂಗಿ, ಪದಾವಲಿ, ಅಕ್ಷರಚ್ಯುತಕ, ರಾಹಡೀ, ದೋಹದ, ಝೊಂಬಡ, ಡೊಲ್ಲರೀ (''ಗೀಯತೇ ಲಾಟಭಾಷಯಾ''), ಕೈವಾಡ, ಧ್ರುವಕ, ಮೇಲಾಪಕ-ಈ ಗೇಯ ಪ್ರಬಂಧಗಳ ವಿಷಯವನ್ನು ಸಂಗೀತ ದೃಷ್ಟಿಯಿಂದ ನಿರೂಪಿಸಿದೆ.

**೧. ಏಲಾ:** ಇದರಲ್ಲಿ ಗಣ್ಯೆಲಾ, ವರ್ಣೈಲಾ, ಮಾತ್ರೈಲಾ ಎಂಬ ಮೂರು ಪ್ರಕಾರಗಳಿವೆ. ಯಗಣಾದಿ ವರ್ಣಗಣಗಳಿಂದ ರಚಿತವಾದ ಏಲಾಗಳಲ್ಲಿ **ನಾದಾವತೀ** ಎಂಬುದರ ಲಕ್ಷಣ ಹೀಗೆ ಉಕ್ತವಾಗಿದೆ:

ಸುಧಾಕರ ಗಣಾಃ ಪಂಚ ಸುರಾಲಯ ಗಣಸ್ತತಃ
ಪದಮೇಕಮಿದಂ ಪ್ರೋಕ್ತಂ ಸಾನುಪ್ರಾಸಂ ತಥಾ ಪರಂ ॥
ಇತಿ ಪಾದತ್ರಯಂ ಯಸ್ಯಾಮೇಲಾ ನಾದಾವತೀ ತು ಸಾ ॥ ೪೪೯

೪ SII. IX. No. 297

ಇದರಂತೆ ೫ ಭಗಣಗಳು ಮತ್ತು ಒಂದು ನಗಣ ಪ್ರತಿಪಾದದಲ್ಲಿಯೂ ಇರಬೇಕು; ಇಂತಹ ಮೂರು ಪಾದಗಳು, ಅಂತ್ಯಪ್ರಾಸಯುಕ್ತವಾಗಿರುವುವು ; ಈ ಏಲೆಗೆ ನಾದಾವತೀ ಎಂಬ ಹೆಸರು. ಉದಾಹರಣೆ :

ಯೌವನ। ಭೂಷಿತ। ಗೋಪವ। ಧೂಮುಖ। ಪದ್ಮಮ। ಧುಕರ
ಶ್ಯಾಮಲ। ವಿಗ್ರಹ। ಕಾಂತಿವಿ। ನಿರ್ಜಿತ। ನವ್ವ ಜ। ಲಧರ
ದೇವಕಿ ನಂದನ ಸ್ಮೇರಸರೋರುಹ ಸಂಚಯ ಪಿಂಜರ
ಶೋಭನ ವಸನ ಕಲಿತ ಸತ್ಕಮಲಾ ನಯನಾಂಬುಜ ವಿಭ್ರಮ ಭವನ
ಪ್ರದುಗ್ಧಾಬ್ಧಿವೃತ ಶಯನ ದಲಿತ ಪುಂಡರೀಕ ನಯನ
ಕೌಸ್ತುಭರತ್ನ ಮರೀಚಿ ಕದಂಬಕ ಭಾಸುರವರದ ಪಾಹಿ ಪುರಂದರ ಗೀತಕ
ಬಿರುದ ಸಪ್ರೇಮ ಕುಸುಮನ ಶರಜನನ ವಿಮೋಹಿತ ನಿಖಿಲಭುವನ
ಉತ್ಪತ್ತಿ ಸ್ಥಿತಿ ಕಾರಣ ಪ್ರಭೋ ನಾರಾಯಣ ॥

ಇದಕ್ಕೆ D ಪ್ರತಿಯಲ್ಲಿ ಪಾಠಭೇದವಿದೆ :

ಯೌವನ ಭೂಷಿತ ಗೋಪವಧೂ ಮುಖಪದ್ಮ ಮಧುಕರ
ಶ್ಯಾಮಲ ವಿಗ್ರಹ ಕಾಂತಿ ವಿನಿರ್ಜಿತ ನವ ಜಲಧರ
ದೇವಕಿ ನಂದನ ಸ್ಮೇರ ಸರೋರುಹ ಕೇಸರ ಸಂಚಯ ಪಿಂಜರ ವಸನ
ಕೇಲಿಲಸತ್ಕಮಲಾನಯನಾಂಬುಜ ವಿಭ್ರಮ ಭವನ, ಪ್ರದುಗ್ಧಾಬ್ಧಿಕೃತ ಶಯನ
ದಲಿತ ಪುಂಡರೀಕ ನಯನ
ಕೌಸ್ತುಭರತ್ನ ಮರೀಚಿ ಕದಂಬ (ಕ) ಭಾಸುರವರದ ಪಾಹಿಪುರಂದರ ಮಂದರ
ಗೀತ ಸುಖಾವಹ ಬಿರುದ ಪರಮ ಕುಸುಮಶರ ಜನನ ವಿಮೋಹಿತ ನಿಖಿಲಭುವನ
ಉತ್ಪತ್ತಿ ಸ್ಥಿತಿ ಕಾರಣ ಪ್ರಭೋ ನಾರಾಯಣ ॥

ಈ ಎರಡು ಪಾಠಗಳಲ್ಲಿರುವ ಮೊದಲೆರಡು ಪಂಕ್ತಿಗಳು ಉಕ್ತ ಲಕ್ಷಣಾನುಸಾರವಾಗಿರುವುದು ಸ್ಪಷ್ಟವಾಗಿದೆ ; ಅಂತ್ಯಪ್ರಾಸವೂ ಇದೆ. ಅಲ್ಲಿಂದ ಮುಂದಕ್ಕೆ ಪಾಠ ಕೆಟ್ಟುಹೋಗಿ ಸರಿಯಾಗಿ ಪಾದಗಳನ್ನು ವಿಂಗಡಿಸುವುದು ಕಷ್ಟವಾಗಿದೆ ; ಪಾದಗಳ ಸಂಖ್ಯೆ ಎಷ್ಟು ಎಂದೂ ತಿಳಿಯುವುದಿಲ್ಲ. ''ಕೌಸ್ತುಭ...ವರದ, ಪಾಹಿ...ಬಿರುದು'' – ಈ ಎರಡು ಪಾದಗಳು ಸರಿಯಾಗಿರುವಂತೆ ತೋರುತ್ತದೆ. ಈ ಏಲೆಯ ಪಾಠವನ್ನು ಸರಿಯಾಗಿ ಪರಿಷ್ಕರಣ ಮಾಡಿ ನಿರ್ಣಯಿಸಬೇಕಾಗಿದೆ.

೨. ಹಂಸವತೀ: ಇದರ ಲಕ್ಷಣ: ೫ ರಗಣಗಳು+೧ ಸಗಣ ಪ್ರತಿಪಾದದಲ್ಲಿ; ಅನುಪ್ರಾಸಯುಕ್ತ. ಇದಕ್ಕೆ ಉದಾಹರಣೆಯಾಗಿ

ರೌದ್ರ ಕಾಲಾನಲೋದ್ಭೂತ ಖಡ್ಗಪ್ರಭಾ ಸುಶೋಭಿತಾ

ಎಂದು ಮೊದಲಾಗುವ ೧೨ ಪಂಕ್ತಿಗಳ ಒಂದು ಪ್ರಬಂಧವಿದೆ. ಇದಕ್ಕೆ D ಪ್ರತಿಯಲ್ಲಿ ಭಿನ್ನಪಾಠವಿದೆ. ಯಾವ ಪ್ರತಿಯದೂ ಸರಿಯಾದ ಪಾಠವಾಗಿಲ್ಲ. ಆದ್ದರಿಂದ ಈ ಏಲೆಗೆ ಉಕ್ತವಾಗಿರುವ ಲಕ್ಷಣವನ್ನು ಲಕ್ಷ್ಯದಲ್ಲಿ ಕಾಣುವುದು ಸಾಧ್ಯವಿಲ್ಲವಾಗಿದೆ.

೩. ನಾದಾವತೀ (ನಂದಾವತೀ) ಏಲಾ: ಪ್ರತಿ ಪಾದದಲ್ಲಿ ೫ ತಗಣಗಳು ಮತ್ತು ಒಂದು

ಜಗಣ ಇರುತ್ತವೆ ; ಮೂರು ಪಾದಗಳು ; ಅನುಪ್ರಾಸವುಳ್ಳುದು.

ಕುಂಡಲಾ। ದೌರ್ಮಂಡ। ಲೋದ್ದಾಮ।ಲೇ ಕೈಶೈ (ಶಿ) ರ್ನಿದಾರಣ (ಶೌಂಡ) ಶೌಂಡ,
ಸಂತುಷ್ಟ ಗೀರ್ವಾಣ। ಮವ್ಯಾಭ। ವಜ್ಜನೋಹಿತ
ಭಾಸ್ವದ್ಭುಜದಂಡ ಪ್ರಕರಕಲಿತ ಚಕ್ರ ಕೃತಾರ್ಥೀಕೃತಶಕ್ರಃ

ಇತ್ಯಾದಿಯಾಗಿ ೧೨ ಸಾಲುಗಳಿವೆ. ಇಲ್ಲಿ ಕೆಲವೆಡೆ ತಗಣಗಳ ವಿನ್ಯಾಸವನ್ನು ಕಾಣಬಹುದು; ಪ್ರಾಸವೂ ಇರುವಂತೆ ಕಾಣುತ್ತದೆ. ಆದರೆ ಪಾಠ ವ್ಯತ್ಯಾಸದಿಂದ ಲಕ್ಷಣವನ್ನು ಪೂರ್ಣವಾಗಿ ಅನ್ವಯಿಸಲಾಗುವುದಿಲ್ಲ. ಇದನ್ನು ಮಾಲವ ಕೈಶಿಕಾ ರಾಗದಲ್ಲಿ ಹಾಡತಕ್ಕದ್ದು.

**೪. ಭದ್ರಾವತೀಏಲಾ:** ಪ್ರತಿಪಾದದಲ್ಲಿ ೪ ಮಗಣ+೧ ಯಗಣ; ಮೂರು ಪಾದಗಳು; ಅನುಪ್ರಾಸವಿರುತ್ತದೆ.

ನಾನಾಕಾರ್ಯೈರ್ನಿಜಾ ಕಾರ್ಯೈರ್ನಿತ್ಯಂ ವಿಕಾರಿತಂ ದೈತ್ಯೇಂದ್ರಾಣಾಮುತ್ರಸ್ನಾಯುಸ್ಫಿಗ್
ವಸಾಮಜ್ಜಾಸ್ಸಕ್ಕರ್ಷಕಾರಿ ಪ್ರಪಾತ ಪೂತನಾ ಲೋಹೇನ ತಾಟಕಾರ್ಪಿತಾ।
ಶಕ್ರಸ್ತ್ರೀಣಾಮಾತ್ಯಂತಾಯಾರ್ತಾನಾಂ ಶೃಣ್ವನ್ನಾಕ್ರಂದಾನಮನ್ದಾನ್

ಇತ್ಯಾದಿಯಾದ ೧೧ ಸಾಲುಗಳಿವೆ. ಇದನ್ನು ಗಣಗಳಂತೆ ವಿಭಾಗಮಾಡಿ ಪ್ರತಿ ಪಾದವನ್ನೂ ಪ್ರತ್ಯೇಕವಾಗಿ ತೋರಿಸುವುದು ಕಷ್ಟವಾಗಿದೆ.

ಮೇಲೆ ಹೇಳಿದ ನಾಲ್ಕು ಏಲಾಗಳು ವರ್ಣಗಣಗಳಿಂದ ರಚಿತವಾದುವು ; ಇವು ಗಣೈಲಾಗಳು. ಹೀಗೆಯೇ ಮಾತ್ರಾಗಣಗಳಿಂದ ರಚಿತವಾದ ನಾಲ್ಕು ಏಲಾಗಳಿವೆ ; ಇವಕ್ಕೆ **ಮಾತ್ರೈಲಾ** ಎಂಬ ಹೆಸರಿದೆ. ಇವುಗಳಲ್ಲಿ

**೧. ರತಿಲೇಖಾ ಎಂಬ ಏಲೆಯ ಲಕ್ಷಣ:**

ಪದಂ ಷಣ್ಮಾತ್ರಮೇಕಂ ಸ್ಯಾತ್ ದ್ವಿತೀಯಂ ಪಂಚಮಾತ್ರಿಕಮ್
ಅನುಪ್ರಾಸ ಸಮೋಪೇತಃ ಪಾದಃ ಪ್ರಥಮ ಈರಿತಃ ॥ ೪೭೩

ಏವಂ ವಿಧೋ ದ್ವಿತೀಯಂ ಸ್ಯಾತ್ತೃತೀಯೋ ದಶಮಾತ್ರಕಃ
ಅನುಪ್ರಾಸೇನ ಸಂಯುಕ್ತಃ ಪ್ರಯುಕ್ತಃ ಪಂಚಭಿಃ ಪದೈಃ (ಪಂಕ್ತಿಭಿಶ್ಚ ಯಥಾಪದೈಃ)॥ ೪೭೪

ವಿಭಜ್ಯತ್ರಿಷು ಮಾತ್ರೇಷು ದ್ವಾತ್ರಿಂಶನ್ಮಾತ್ರಕಾಕ್ರಮಾತ್
ಕ್ರಿಯತೇ ಸಾ ಭವೇದೇಲಾ ರತಿರೇ (ಲೇ) ಖೇತಿ ಸಂಜ್ಞಿತಾ ॥ ೪೭೫

ಇದರಂತೆ ಒಂದನೆಯದು ೬ ಮಾತ್ರೆಗಳುಳ್ಳ ಒಂದು ಪದ ; ಅನಂತರ ಎರಡನೆಯದು ೫ ಮಾತ್ರೆಗಳುಳ್ಳ ಪದ ; ಅನುಪ್ರಾಸವಿರಬೇಕು ; ಉಳಿದದ್ದು ಅಸ್ಪಷ್ಟವಾಗಿದೆ.

ಉದಾಹರಣೆ :

ಪದ್ಮನಯನ ಜಲಶಯನ ಲಕ್ಷ್ಮೀಸ್ತನಾಭೋಗ ಮಧ್ಯಸ್ಥಿತ ಮುಕ್ತಾಹಾರ
ಭಕ್ತಶರಣ ಪ್ರವಿಬುಧಾರ್ತಿಹರಣ ಸಕಲದೈತ್ಯವಂಶಚ್ಛೇದನ ಕುಠಾರ
ಅಘಹರಣ ಭವತಾರಣ ಮೇ ಲಕ್ಷ್ಮೀಕಾಂತ ಜಯಜಯದೇವ ನಾರಾಯಣ
ನಮೋಸ್ತುತೇ। ಆ ಸೋಮೇಶ್ವರದೇವ ವಿರಚಿತೇಯಮೇಲಾ ರೇಖಾವತೀ ॥ ೪೭೬

ಇದರಲ್ಲಿ ಕೊನೆಯ ಸಾಲಿನ ''ಆ ಸೋ...ವತೀ'' ಎಂಬ ಭಾಗ ಉದಾಹರಣೆಯ

ಭಾಗವಲ್ಲವೆಂದು ಭಾವಿಸಬಹುದು. ಉಳಿದ ಪಂಕ್ತಿಗಳನ್ನು ನೋಡಿದರೆ, ಮೊದಲನೆಯದರಲ್ಲಿ ಪ್ರಥಮ ಪದ ೬ ಮಾತ್ರೆ, ದ್ವಿತೀಯ ಪದ ೫ ಮಾತ್ರೆ, ಮುಂದಕ್ಕೆ ೨೩ ಮಾತ್ರೆಗಳು; ಎರಡನೆಯದರಲ್ಲಿ ೬ ಮಾತ್ರೆ, ೯ ಮಾತ್ರೆ, ೧೮ ಮಾತ್ರೆಗಳು; ಮೂರನೆಯದರಲ್ಲಿ ೫ ಮಾತ್ರೆ, ೬ ಮಾತ್ರೆ, ೨೮ ಮಾತ್ರೆಗಳು. ಹೇಳಿರುವ ಲಕ್ಷಣಕ್ಕೆ ಸದೃಶವಾದ ಲಕ್ಷ್ಯವಿದಲ್ಲವೆಂದು ಹೇಳಬೇಕಾಗಿದೆ, ಛಂದಸ್ಸಿನ ದೃಷ್ಟಿಯಿಂದ. ಸಂಗೀತದ ದೃಷ್ಟಿಯಿಂದ ಹೇಗೋ?

**೨. ಕಾಮಲೇಖಾ ಲಕ್ಷಣ:**

ಮಾತ್ರಾಶ್ಚ ರತಿಲೇಖಾಯ ದ್ವೈಗುಣ್ಯೇನ ನಿಯೋಜಿತಾಃ
ಹೃದ್ಯಾಃ ಪಾದಸ್ತ್ರಯೋ ಯಸ್ಯಾಃ ಕಾಮಲೇಖೇತಿ ಸಾ ಸ್ಮೃತಾ ॥ ೪೭೮

ರತಿಲೇಖೆಯಲ್ಲಿರುವಷ್ಟು ಮಾತ್ರೆಗಳನ್ನು ಇಮ್ಮಡಿಸಿದರೆ ಕಾಮಲೇಖಾ ಎಂಬ ಏಲೆಯಾಗುತ್ತದೆ. ೧೨, ೧೦ ಇತ್ಯಾದಿ ಮಾತ್ರೆಗಳಿರಬೇಕು, ಪ್ರತಿ ಪಾದದಲ್ಲಿ; ಪಾದಗಳು ಮೂರು. ಉದಾಹರಣೆ:

೧೨ ೧೦ ೨೧
ನಿಹತ ಖರಾಸುರದೂಷಣ। ಶ್ರೀವತ್ಸ ಭೂಷಣ। ಪ್ರಸಂಸಾರ ಸಾಗರ ತಾರಣ ನಿಖಿಲ
ಭುವನ ಶರಣ
೧೨ ೧೦ ೧೯
ಅಮಿತ ದುಹಾದ್ಭುತ ವಿಕ್ರಮ। ಪಾಲಿತಧರ್ಮ ಕ್ರಮ। ಪ್ರಮಾಯಾವಾಮನರೂಪ
ಬಲಿ ಬಂಧಕರ
೧೨ ೧೦ ೨೧
ಕಂಸಾಸುರ ಮರ್ದನ ದಶ। ಕಂಧರ ತರ್ಜನ ದೃತ। ಜಯರಘುತಿಲಕ ಅಭಿರಾಮ
ನಮೋಸ್ತುತೇ ॥

(ಆ ಸೋಮೇಶ್ವರ ವಿರಚಿತಾ ಕಾಮಲೇಖೇಯಮೇಲಾ)

ಇದರಲ್ಲಿ ಮೂರು ಪಾದಗಳಿರುವುದೂ, ಪ್ರತಿ ಪಾದದ ಆದಿಯಲ್ಲಿ ೧೨ ಮತ್ತು ೧೦, ಹೀಗೆ ಮಾತ್ರಾವಿನ್ಯಾಸವಿರುವುದೂ (ರತಿಲೇಖೆಯ ೬ ಮತ್ತು ೫ರ ಇಮ್ಮಡಿ) ಕಾಣುತ್ತದೆ; ಅಲ್ಲಿಂದ ಮುಂದಕ್ಕೆ ೨೩, ೧೯, ೨೧ ಹೀಗೆ ಅನುಕ್ರಮವಾಗಿ ಮಾತ್ರೆಗಳಿವೆ. ಇದರ ವಿಷಯವೇನೋ? ಇಷ್ಟವಾದ ರಾಗದಲ್ಲಿ, ಬೇಕಾದ ಭಾಷೆಯಲ್ಲಿ ಇದನ್ನು ಹಾಡಬಹುದು.

**೩. ಬಾಣಲೇಖಾ ಲಕ್ಷಣ:**

ರತಿಲೇಖಾಗತಾಮಾತ್ರಾಸ್ತ್ರಿಗುಣಶ್ಚೇತ್ ಪ್ರಯೋಜಿತಾಃ
ವಿಭಜ್ಯ ತ್ರಿಷು ಪಾದೇಷು ಬಾಣಲೇಖಾತು ಸಾ ಭವೇತ್ ॥ ೪೮೧

ರತಿಲೇಖೆಯಲ್ಲಿರುವ ಮಾತ್ರೆಗಳನ್ನು ಮುಮ್ಮಡಿಸಿ, ಮೂರು ಪಾದಗಳಾಗಿ ವಿಂಗಡಿಸಿದರೆ ಬಾಣಲೇಖಾ ಎಂಬ ಏಲೆಯಾಗುತ್ತದೆ.

ಉದಾಹರಣೆ: ನಖಶಿಖಾವ್ಯಾಪಾದಿತದೈತ್ಯ ವಕ್ಷಃಸ್ಥಳ ಪಾಲಿತ ಜಂಭಾರಾತಿ ಭುಜಬಲ ಪ್ರಕರ

ಕಮಲಾ ಕಸ್ತೂರಿಕಾ ಪತ್ರ ಪ್ರಶಮಿತ ನಿಖಿಲ ಭುವನಭಂಗ।

೧೮ ೧೫

ಕರಕಮಲ ಪುಟಾಕಲಿತ ಶಂಖಸುದರ್ಶನ। ಸುಕೃತ ಶತಲಭ್ಯ ಪುಣ್ಯದರ್ಶನ।

೨೬
ಗಂಗಾಪ್ರವಾಹ ಪ್ರಭವ ಪದ ಪಂಕಜಚಿತ್ರಿತ ಜಗತ್ತ್ರಯ।
ಕಾಲಿಂದೀ ಸಲಿಲ ಕೇಲಿಕಾ ರತ್ನ ಸರಭಸರಚಿತ ಕಾಲಿಯ ನಿಕಾರ ಮೇಘಜಠರ
ಕುಹರ ನಿಹಿತವಿಷ್ಟಪತ್ರಯ
ಜಯಜಯದೇವ ಜಗನ್ನಿವಾಸ ವಾಸುದೇವ॥
(ಆ ಸೋಮೇಶ್ವರ ವಿರಚಿತಾ ಬಾಣಲೇಖೇಯಮೇಲಾ)

ಇದರಲ್ಲಿ ಎರಡನೆಯ ಪಂಕ್ತಿಯ ಆರಂಭದಲ್ಲಿ ಕ್ರಮವಾಗಿ ೧೮ ಮತ್ತು ೧೫ ಮಾತ್ರೆಗಳಿವೆ. ಮಿಕ್ಕ ಪಾದಗಳಲ್ಲಿಯೂ ಹೀಗೆಯೇ ಇರಬೇಕು; ಪಾಠವ್ಯತ್ಯಾಸಗಳಿರುವುದರಿಂದ ಈ ವಿಷಯವನ್ನು ನಿರ್ಣಯಿಸುವುದು ಕಷ್ಟ.

**೪. ಚಂದ್ರಲೇಖಾ ಏಲೆಯ ಲಕ್ಷಣ:**

ಯಾ ಮಾತ್ರಾ ರತಿಲೇಖಾಯಾಶ್ಚಾತುರ್ಗುಣ್ಯ ವಿಭಾಜಿತಾ
ಪಾದತ್ರಯೋಽಪಿ ಸಾ ಪ್ರೋಕ್ತಾ ಚಂದ್ರಲೇಖಾ ಸುಶೋಭನಾ ॥ ೪೮೪

ಇದರಂತೆ ಪ್ರತಿಪಾದದ ಆರಂಭದಲ್ಲಿ ೨೪ ಮತ್ತು ೨೦ ಮಾತ್ರೆಗಳಿರಬೇಕು; ಉಳಿದ ಭಾಗದಲ್ಲಿ ಎಷ್ಟಿರಬೇಕೋ!

೨೪ ೨೦
ಶಶಧರಕರ ನಿಕರ ವಿಕಾಸಿತ ಕುವಲಯ ದಲ ಮೇಚಕ। ಸಕಲಭುವನ ತಲ
ಧರ್ಮಾಧರ್ಮ ವಿಮೋಚಕ
೨೪
ಕರ ಕಲಿತ ಭುವನತಲ ಧರ್ಮಾಧರ್ಮ ಮಧುಕೈಟಭ ಶಮನ।
ನಾಭಿನಲಿನ ನಿವಾಸಿತ ಚತುರ್ಮುಖ ಚರಿತ ವಿವಿಧ ಜನ। ದೇವಕೀ ಮಂಡನ
(ನಂದನ) ಪರಿಪಾಲಿತ ಸುರ
ಪತಿವಿಹರಣ ನಂದನ ಪ್ರಕರಕಲಿತ ಪಾಂಚಜನ್ಯ ಭುಜವಿಜಿತ ಮಹಾ ಸುರಸಮರ
ಅಧಿಶಯಿತ ಶಶಧರಕರ ವಿಶದ ಭುಜಗತಲ್ಪ ಪ್ರಣತಜನ ಪೀಯೂಷ ಧಾರಾ
(ಸಾರ) ಕಲ್ಪ ಗುಣಗಣ ನಿಲಯ
ನಿಖಿಲಗುಣ ವಿರಹಿತ ಜಯದೇವ ಪೀತಾಂಬರ ಅಖಿಲ ಭುವನ ವಾಸ ತುಭ್ಯಂ
ನಮಃ ॥ ೪೮೫
(ಆ ಸೋಮೇಶ್ವರ ವಿರಚಿತಾ ಚಂದ್ರಲೇಖೇಯಮೇಲಾ)

ಇಷ್ಟರಾಗಾರ್ಥ ತಾಲದಲ್ಲಿ ಇದನ್ನು ಹಾಡಬೇಕು. ಇದಾದ ಮೇಲೆ ಮದನಾವತಿ ಎಂಬ ಏಲೆಯ ವಿಷಯವನ್ನು ಹೇಳಿದೆ. ಇದನ್ನು ವರ್ಣೇಲಾ ಎಂದು ಕರೆದಿದೆ. ಇದಕ್ಕೆ ಲಕ್ಷ್ಯ:

ಅನವರತ ಭುಜಗ ಶರಣ ಪ್ರಣತಜನ ದುರಿತಹರಣ (ಗಮಕಃ)
ಸಕಲ ಸುರಾಸುರ ಪೂಜಿತ ಪದಯುಗಲಂ। ಸತತ ವಿಬುಧಾಭಯ ಶಮನಂ।
ಶಂಕಾಬ್ಜ ಚಕ್ರಪಾಣಿ ದಾಮೋದರಂ। ವಿಕಚ ಸರಸೀರುಹ ವದನಂ।
ಸಕಲ ಶುಭನಿಚಯ ಸದನಂ। (ಮಧು) ಲಕ್ಷ್ಮೀಕಂಠ ಕಂದಲ ಹಾರಂ
ಸಂಸಾರ ಮಂಡಪ ಸೂತ್ರಧಾರಂ। ನಮಾಮಿ ರಾವಣಾಂತ ಕರಂ ರಾಮಂ
ಗೋಪಿ ಜನ ಮನೋಹರಂ ರಾಮಂ

ಇದರ ಸ್ವರೂಪವನ್ನು ಹೀಗೆ ಹೇಳಿದೆ:

ಏವಂ ಪ್ರಾಸಯುತೈರ್ಪಾದ್ಯೈ ದ್ವಿಪದ್ಯೈ ಸ್ತ್ರಿಭಿರೀರಿತಾಮ್
ದ್ವಿಪಂಚಾಂಕಾದಿಕೈರ್ವರ್ಣೈರ್ಗೀತವ್ಯಾ ಮದನಾವತೀ ॥

೨. **ಶಶಿಲೇಖಾ** : ಇದು ಮದನಾವತೀ ಎಂಬ ಏಲೆಯ ಹಾಗೆ ಇದ್ದು ಪ್ರತಿಪಾದದಲ್ಲಿ ೧೨ ವರ್ಣಗಳನ್ನು ಹೊಂದಿರುತ್ತದೆ. ಉದಾಹರಣೆ:

೧೨ ೧೨
ಮರಕತಮಣಿ ನಯಜ ರುಚಿರಮ್। ದಧತಮುದಧಿಶಯನಮಚಿರಮ್
ಪೀತಾಂಬರಧರಂ ಲಕ್ಷ್ಮೀಪತಿಂ ವಿರಚಿತ ವಿಹಗಪತಿಗಮನಂ
ಅವಿನಯಮದಮತ್ತಾರಿ ಶಮನಂ ಶ್ರೀವತ್ಸಾಂಕಿತ ವತ್ಸಂ ಪುಂಡರೀಕಾಕ್ಷಂ
ಉದರ ನಿಹಿತ ನಿಖಿಲ ಭುವನಮ್, ದಲಿತ ದಶವದನ ಭುಜವನಮ್
ತಂ ಪ್ರಣಮಾಮಿ ದಶರಥ ನಂದನಂ (ಜನಕಸುತಾ ಹೃದಯನಂದನಮ್
ಕೇಶಿ ನಿಷೂದನಂ)[೫] ಕೇಶವದೇವಂ ನಾರಾಯಣಮ್॥

ಇದರಲ್ಲಿ ಸಾಧಾರಣವಾಗಿ ಪ್ರತಿ ಪಾದದಲ್ಲೂ ೧೨ ಅಕ್ಷರಗಳಿವೆ; ಮೂರನೆಯ ಪಾದದಲ್ಲಿ ಮಾತ್ರ ಹತ್ತು ಅಕ್ಷರಗಳಿವೆ, ಏನೋ ಅಪಪಾಠ ಕಾರಣವಾಗಿರಬಹುದು; ಕೊನೆಯ ಪಾದದಲ್ಲಿ ೧೨ಕ್ಕಿಂತ ಅಧಿಕಾಕ್ಷರಗಳಿವೆ. ಒಟ್ಟು ೬ ಪಾದಗಳು, ಎಂದರೆ ೧೨ ಪದಗಳು.

೩. **ಪ್ರಭಾವತೀ ಏಲಾ**: ಪ್ರತಿ ಪದದಲ್ಲಿ ೧೩ ಅಕ್ಷರಗಳು; ಪಾದತ್ರಯ (ಷಟ್ಕ)ವಿರುತ್ತದೆ; ಉದಾಹರಣೆ:

ವಿಹಿತನತಿಮನು ಶುಭಭಾವಕಮ್। ದಶವದನವನ (ದಹನ)ಪಾವಕಮ್
ಪ್ರಲಯಲಕ್ಷ್ಮೀ ಹೃದಯವಲ್ಲಭಂ। ದೇವಂ ಭುವನ ಪತಿಂ ಹರಿಂ
ಅಧಿಸಲಿಲನಿಧಿ ವಿರಚಿತ ಸೇತುಮ್। ಜಗದವನ ನಿಧನಕರಣ ಹೇತುಂ
ಶುದ್ಧ ಸಂವೇದನಮಯಂ ಮಾಧವಂ। ಮಧುಸೂದನಂ ವಿಭುಮ್
ಚರಣಯುಗಲ ಕೃತ ಸಕಲಾಕ್ರಮಣಂ। ತ್ರಿಭುವನ ಮಹಿತ ಕಮಲಾವರಣಂ
ದುರಿತ ಭಯಹರಂ ಕೌಸ್ತುಭ ಭೂಷಣಂ। ಪೀತಾಂಬರ ವಸನಂ ಶ್ರೀಧರಂ ॥

ಇಲ್ಲಿ ಪ್ರತಿಪಾದದಲ್ಲೂ ಸಾಧಾರಣವಾಗಿ ೧೩ ಅಕ್ಷರಗಳಿವೆ. ಹಾಡುವಾಗ ಕಡಮೆ ವರ್ಣಗಳಿರುವ ಪಾದಗಳನ್ನು ವಿಸ್ತರಿಸಿಕೊಳ್ಳಬೇಕೇನೋ? ''ಗೀತವರ್ಣಂ ಸಮಂ ಕೃತ್ವಾತಾಲಮಾನ ವಿಭೂಷಿತ''ವಾಗಿ ಹಾಡಬೇಕು.

೪. **ಮಾಲತೀ**: ೧೪ ಅಕ್ಷರಗಳುಳ್ಳ ಪದಗಳಿಂದಲೂ, ಮೂರು (ಆರು) ಪಾದಗಳಿಂದಲೂ ಕೂಡಿರುತ್ತದೆ. ಉದಾಹರಣೆ:

ನಿಜವಿಭವ ರಚಿತ ದಶಾವತಾರಮ್। ನಿಶಿತ ಶರಶತಕ್ಷತ ದನುಜಭಾರಂ
ಪ್ರಪೂತನಾ ಸೂದನಂ। ಕೇಶಿಕದನಂ ದಾಮೋದರಂ
ಖಗಪತಿಗಮನಮಭಯಪ್ರದಂ। ಕರಸರಸಿಜ ಕಲಿತ ರುಚಿರಗದಂ
ಪ್ರಚಂಡದಾನವ ವಿವಾಸಿನಂ। ಮಧುಸೂದನಂ ರಮಾಪಿತಂ
ಶಿಶುಸಮುಚಿತ (ಲಲಿತ) ಲೀಲಾನಿಹತ ಕರಿಸಂ। ಸ್ಮರತ ನರಹರಿಮಿಹ ಪರಮಹರಿಸಂ

೫ D ಪ್ರತಿಯಲ್ಲಿ ಮಾತ್ರ ಇದೆ.

ಸಂಸ್ಮರ ಸಂಗಭಂಗಕರಂ। ಶಂಖ ಶಾರ್ಙ್ಗಧರಂ
ಶ್ರೀ ವತ್ಸವಕ್ಷಸಂ ತ್ರಿಭುವನ ಗುರುಂ। ನಾಥ ನಾರಾಯಣಂ

ಇದರಲ್ಲಿ ಕೆಲವು ಪದಗಳಲ್ಲಿ ೧೪ ಅಕ್ಷರಗಳಿವೆ; ಕೆಲವೆಡೆ ಕಡಮೆ ಸಂಖ್ಯೆಯವಿವೆ. ದೀರ್ಘಾಕ್ಷರ ಪ್ರಯೋಗ ಬಾಹುಲ್ಯ ಇದರಲ್ಲುಂಟು: "ಪ್ರಯೋಗೈಃ ಬಹುಲೈಃ ದೀರ್ಘೈಃ ಗಾಯಂತಿ."

**(೪) ಲಲಿತಾ :** ಇದರ ಲಕ್ಷಣ

ತಿಥಿ ಸಂಖ್ಯಾಕ್ಷರ ಪದೈಸ್ತ್ರಿಭಿಃ ಪಾದೈರ್ವಿರಾಜಿತಾ
ಏಲಾ ಸಾ ಲಲಿತಾ ನಾಮ ತದುದಾಹರಣಂ ಯಥಾ॥ ೫೦೩

ಪ್ರತಿ ಪದದಲ್ಲಿ ೧೫ ಅಕ್ಷರಗಳಿರುತ್ತವೆ; ಮೂರು (ಐದು) ಪಾದಗಳೆಂದು ಉದಾಹರಣೆಯಿಂದ ತಿಳಿಯುತ್ತದೆ:

ಶಿಶಿರಕರ ಕರನಿಕರ ಸದೃಶ ಶಂಖ ಕರಕಮಲಂ ರಣದಲಿತ ಕುಲಮುಖಂ
ಮುನಿಜನವಂದಿತಂ ಚರಾಚರಪತಿಂ। ಶುಚಿಮಣಿಚಯ ರಚಿತ ವಿಕಟಮಕುಟಂ
ಬಹುದಿತಿತನಯ ಸಮರಸುಭಟಂ। ಅನುಗೃಹೀತ ಪಾರ್ಥಂ ವಸುದೇವನಂದನಂ
ಅಜಮಮರ ಪತಿಸಖಂ ಭಜತ। ಹರಿಮತಿಶಯಿತ ಸಕಲಮಖಮ್
ಅನುಗತ ವೇದಾಂಗಮಂದಿರಂ। ಕೈಟಭರಿಪುಂ ಪದ್ಮನಾಭಂ ಪಿತಾಮಹಜನಕಂ

ಇದನ್ನು ಲಲಿತವಾದ ಗೀತದಿಂದ, ಲಲಿತವಾದ ಗಮಕಗಳಿಂದ ಹಾಡಬೇಕು.

**(೬) ಭೋಗವತೀ:** ಇದರ ಲಕ್ಷಣ

ನಿಶಾಕರಕರಾಃ ಸಂಖ್ಯಾ ವರ್ಣಾರಬ್ಧಪದೈಸ್ತ್ರಿಭಿಃ
ಪಾದೈಃ ಭೋಗವತೀ ಪ್ರೋಕ್ತಾ ವರ್ಣೈರ್ಲಾ ಯತಿಭಿಸ್ತಥಾ ॥ ೫೦೬

ಇದರ ಪ್ರತಿ ಪದದಲ್ಲಿ ೧೬ ಅಕ್ಷರಗಳಿರಬೇಕು; ಪಾದಗಳು ಆರು-(ಮೂರು).

ಉದಾಹರಣೆ:

ಕಚಾಚಿತರುಚಿರ ಚಾರುವಕ್ತ್ರಂ। ಪದಕಮಲಯುಗಲ ನಿಪತಿತ ಶಕ್ರಂ
ಧೃತಗೋವರ್ಧನಂ ಭುವನಭೂಷಣಂ ದೇವಂ। ಮುನಿಭಿರಪಿ ನ ಸಮಧಿ ಗತಮತಿ ಗಹನಂ।
ಅವನಿತಲನಿಹಿತ ಬಲಿದನುಜಾರ್ತಿಹರಂ। ಅದಿತಿನಂದನಂ ಭುವನ ಭೂಷಣಂ ದೇವಂ[೬] ।
ಅಭಿನವ ಜಲಧರ ಭರಸದೃಶವಪುಷಂ। ಪರಮಪರಮಗತರುಷಂ
ಸತತಮಹಂ ಧ್ಯಾಯಾಮಿ ವಿಷ್ಣುಂ। ಉಪದೇಶಾನುಗೃಹೀತ ಜಿಷ್ಣುಂ
ಶಂಖಚಕ್ರಗದಾಧರಂ ಪರಮಾತ್ಮಾನಂ॥

ಬರಿ ವರ್ಣಗಳಿಂದ ಭೂಷಿತವಾಗಿರುವ ಮತ್ತು ಸುಧಾರಸಸ್ಯಂದಿಯಾಗಿರುವ ಈ ಗೀತವನ್ನು ಗಮಕ ಸಮೇತವಾಗಿ ಹಾಡತಕ್ಕದ್ದು.

**(೭) ಕುಸುಮಾವತೀ:** ಇದರ ಲಕ್ಷಣ:

ತ್ರಯಃ ಪಾದಾಃ ಪದೈಷಡ್ಭಿಃ ಸರ್ವೈಃ ಸಪ್ತದಶಾಕ್ಷರೈಃ
ಏಲಾಯಾಂ ಕುಸುಮಾವತ್ಯಾಂ ಸ್ಯುರುದಾಹೃತಿರುಚ್ಯತೇ ॥ ೫೦೯

---

೬ D ಪ್ರತಿಯಲ್ಲಿಲ್ಲ.

ಉದಾಹರಣೆ:

ಕ್ಷಿತಿ ಪವನ ಗಗನ ಹುತವಹ ಜಲ ಭು (ಭ)ವನ। ಪ್ರಣತಮುನಿಜನ ದತ್ತದನುಜ
ವೇದವೇದಾಂಗ ಪಾರಗ ಲೋಕಾವಾಸವಿಭೋ ಶ್ರೀಪತೇ
ಕುಸುಮಶರ ವಿವಶ ಯುವತಿಶತರತಿದಕ್ಷ। ಶರನಿಪತನಹತ ಸುರಪತಿರಿಪುಪಕ್ಷ
ರತಿರುಚಿರ ಪುರೋಧಸಂ ಪಾವನಮೂರ್ತೇ ಮಲಕೀರ್ತೇ
ಸತತ ಗಮನ ವಿಧಿ ವಿರಚಿತ ಚತುರವಿಹಂಗ। ಜಯಜಯ ವಿದಿತ ಜನನ ಮರಣಭಯ ಭಂಗ
ದುರಿತತೃಣದಾವಾನಲ। ಅರಿಷ್ಟದಾವಾನಲ
ಸಕಲ ಜನ ದಯಾಲೋ। ಶೇಷಶಯ್ಯಾಶಯಾಲೋ ॥

ಇಲ್ಲಿ ಕೆಲವು ಪಾದಗಳಲ್ಲಿ ೧೭ ಅಕ್ಷರಗಳಿವೆ. ಇದನ್ನು ದ್ರುತವಿನ್ಯಾಸಗೀತದಿಂದ ನಿಬಿಡವಾದ ಗಮಕಗಳಿಂದ ತಾರಚುಂಬಿನಿಯಾಗಿ ಹಾಡತಕ್ಕದ್ದು.

ಮೇಲೆ ಹೇಳಿರುವ ಬಗೆಬಗೆಯ ಎಲಾ ಪ್ರಬಂಧಗಳಿಗೂ ಕರ್ಣಾಟಕ ವಿಷಯ ಜಾತಿಯಲ್ಲಿ ನಾಗವರ್ಮ ಜಯಕೀರ್ತಿಗಳು ಹೇಳಿರುವ ಏಳೆ ಎಂಬ ವೃತ್ತಕ್ಕೂ ಯಾವ ಸಂಬಂಧವೂ ಇರುವಂತೆ ತೋರುವುದಿಲ್ಲ.

ಮಾನಸೋಲ್ಲಾಸದ D ಪ್ರತಿಯಲ್ಲಿ ಮಾತ್ರ ಉಕ್ತವಾಗಿರುವ ಕೆಲವು ಛಂದೋರೂಪಗಳನ್ನು ನೋಡಬಹುದು. ಇವುಗಳಲ್ಲಿ ಮೊದಲನೆಯದು ಧವಲ ಎಂಬ ಗೀತ. ಇದರ ವಿಷಯವಾಗಿ ಈ ಕೆಳಗಿನ ಲಕ್ಷಣ ಶ್ಲೋಕವಿದೆ:

ಧವಲಾದಿಪದ್ಯೈಃ ಪಾದ್ಯೈರಾಶೀರ್ವಾದ ಸಮನ್ವಿತೈಃ
ಛಂದಸಾ ಯೇನಕೇನಾಪಿ ಕರ್ತವ್ಯೋ ಧವಲಾಭಿಧಃ ॥ ೧೪

ಧವಲಾ ಎಂದು ಆರಂಭವಾಗುವ ಪದಗಳಿಂದ ಕೂಡಿ ಆಶೀರ್ವಾದಯುಕ್ತಗಳಾದ ಪಾದಗಳನ್ನು ಹೊಂದಿದ್ದು ಯಾವ ಛಂದಸ್ಸಿನಲ್ಲಾದರೂ ಇರುವ ಗೀತಕ್ಕೆ ಧವಲಾ ಎಂಬ ಹೆಸರು. ಇದಕ್ಕೆ ಉದಾಹರಣೆ:

ಧವಲು ಹಿಮಾಲಉ ಧವ(ಲ) ಗಂಗಾಧವಲು ಏರಾವಣುಧವಲು।
ಚಂದ್ರಧವಲು ಮಹೇಸರು। ಧವಲು ಛತ್ರ ಅ (ಬ)ಮ್ಹದೇ ಛ ಪಸನೇ ಧವಲು ಚಸು ॥ ೧೫

ಪ್ರಾಕೃತದಲ್ಲಿರುವ ಈ ಉದಾಹರಣೆ ಧವಲಾದಿಪದಗಳಿಂದ ಕೂಡಿದೆ; ಆದರೆ ಆಶೀರ್ವಾದಯುಕ್ತವಾಗಿರುವಂತೆ ಕಾಣುವುದಿಲ್ಲ. ಮುಂದಕ್ಕೆ :

ಆಶೀರ್ವಾದಯುತ್ಯೈಃ ಪಾದ್ಯೈರೀದೃಕ್ ಧವಲ ಪೂರ್ವಕೈಃ
ಅನೇನ ನಿಯಮೇನಾಯಂ ಗೀಯತೇ ಧವಲಾಭಿದಃ ॥

ಎಂಬ ಶ್ಲೋಕವಿದೆ. ಇದರಿಂದ ಹೆಚ್ಚಿನ ವಿಷಯವೇನೂ ತಿಳಿದುಬರುವುದಿಲ್ಲ.

ಹೇಮಚಂದ್ರಾಚಾರ್ಯನು ಧವಲಾಛಂದಸ್ಸಿನ ವಿಚಾರವಾಗಿ ಕೆಲವು ಸೂತ್ರೋದಾರಣೆಗಳನ್ನು ಕೊಟ್ಟಿದ್ದಾನೆ. (ಛಂದೋನುಶಾಸನ, ೫. ೨೩೮.) ಧವಲ ಎಂಬ ಹೆಸರಿನ ಛಂದಸ್ಸಿನಲ್ಲಿ ೮, ೬ ಮತ್ತು ೪ ಪಾದಗಳ ವೃತ್ತಗಳಿವೆ; ಸಾತವಾಹನನ ಮಾತುಗಳಲ್ಲಿ ಇವನ್ನು ನೋಡಬಹುದು. ಇಲ್ಲಿ ದಿಗ್ಮಾತ್ರಸೂಚಿಯಾಗಿ ಮಾತ್ರ ಹೇಳಿದೆ :

(೧) ಶ್ರೀಧವಲ:
೮ ಪಾದಗಳು; ವಿಷಮಪಾದಗಳಲ್ಲಿ ೩ ಚತುಷ್ಕಲಗಳು+೨ ಲಘು;
ಸಮಪಾದಗಳಲ್ಲಿ ೨ ಚತುಷ್ಕಲಗಳು.

(೨) ಯಶೋಧವಲ: ೧ ಮತ್ತು ೩ರಲ್ಲಿ ೩ ಚತುಷ್ಕಲ+೧ ದ್ವಿಕಲ.
೮ ಪಾದಗಳು; ೨ ಮತ್ತು ೪ ರಲ್ಲಿ ೩ ಚತುಷ್ಕಲ.
೫ ಮತ್ತು ೭ರಲ್ಲಿ ೨ ಚತುಷ್ಕಲ+೧ ತ್ರಿಕಲ.
೬ ಮತ್ತು ೮ರಲ್ಲಿ ೨ ಚತುಷ್ಕಲ+ದ್ವಿಮಾತ್ರೆ ಅಥವಾ
೩ ಚತುಷ್ಕಲಗಳು.

(೩) ಕೀರ್ತಿಧವಲ: ೧ ಮತ್ತು ೪ರಲ್ಲಿ ೨ ಷಟ್ಕಲ+೧ ದ್ವಿಮಾತ್ರೆ.
೬ ಪಾದಗಳು; ೨ ಮತ್ತು ೫ರಲ್ಲಿ ೨ ಚತುಷ್ಕಲಗಳು.
೩ ಮತ್ತು ೬ರಲ್ಲಿ ೨ ಷಟ್ಕಲ+೧ ಚತುಷ್ಕಲ ಅಥವಾ
೧ ಪಂಚಕಲ.

(೪) ಗುಣಧವಲ: ವಿಷಮಪಾದಗಳಲ್ಲಿ ೧ ಷಟ್ಕಲ+೨ ಚತುಷ್ಕಲ.
೪ ಪಾದಗಳು; ಸಮಪಾದಗಳಲ್ಲಿ ೧ ಷಟ್ಕಲ+೨ ಚತುಷ್ಕಲ+೧
ದ್ವಿಮಾತ್ರೆ ಅಥವಾ ತ್ರಿಮಾತ್ರೆ.

(೫) ಭ್ರಮರಧವಲ: ವಿಷಮಪಾದಗಳಲ್ಲಿ ೧ ಷಟ್ಕಲ+೧ ಚತುಷ್ಕಲ+೧
ತ್ರಿಮಾತ್ರೆ.
೪ ಪಾದಗಳು; ಸಮಪಾದಗಳಲ್ಲಿ ೧ ಷಟ್ಕಲ+೧ ಚತುಷ್ಕಲ

(೬) ಅಮರಧವಲ: ವಿಷಮಪಾದಗಳಲ್ಲಿ ೧ ಷಟ್ಕಲ+೧ ಚತುಷ್ಕಲ+೧
೪ ಪಾದಗಳು; ಸಮಪಾದಗಳಲ್ಲಿ ೧ ಷಟ್ಕಲ+೧ ಚತುಷ್ಕಲ
ತ್ರಿಮಾತ್ರೆ

(೭) ಮಂಗಲಧವಲ: ೧ ಮತ್ತು ೨ನೆಯ ಪಾದಗಳಲ್ಲಿ ೧ ಷಟ್ಕಲ+೩ ಚತು
೪ ಪಾದಗಳು; ದ್ವಿಕಲ.
೩ ಮತ್ತು ೪ನೆಯ ಪಾದಗಳಲ್ಲಿ ೫ ಚತುಷ್ಕಲ+ದ್ವಿಕಲ
(ಸರ್ವಪಾದೇಷು ಕೊನೆಯಲ್ಲಿ ೧ ದ್ವಿಕಲ).

ಹೇಮಚಂದ್ರನು ನಿರೂಪಿಸಿರುವಷ್ಟು ಧವಲದ ಪ್ರಭೇದಗಳನ್ನು ಮಾನಸೋಲ್ಲಾಸಕಾರನು ಹೇಳಿಲ್ಲ. ಧವಲ ಯಾವ ಛಂದಸ್ಸಿನಲ್ಲಾದರೂ ಇರಬಹುದೆಂಬ ಅವನ ಮಾತಿನಲ್ಲಿ ಎಲ್ಲವೂ ಅಡಕವಾಗಿರುವಂತೆ ತೋರುತ್ತದೆ. ಕನ್ನಡದಲ್ಲೂ 'ಧವಳದ ಹಾಡುಗಳು' ಎಂಬ ರಚನೆಗಳು ಕಾಣುತ್ತವೆ; ಇಂದಿಗೂ ಆ ಹಾಡುಗಳನ್ನು ಅಲ್ಲಲ್ಲಿ ಹಾಡುವುದು ರೂಢಿಯಾಗಿದೆ. ಹತ್ತನೆಯ

ಶತಮಾನದಷ್ಟು ಹಿಂದಿನ ಕಾಲದಲ್ಲೇ ಈ ಹಾಡುಗಳು ಕನ್ನಡ ನಾಡಿನಲ್ಲಿ ಪ್ರಚುರವಾಗಿದ್ದುವು.[೭] ಈ ದಿಕ್ಕಿನಲ್ಲಿ ಇನ್ನೂ ಹೆಚ್ಚು ಕೆಲಸ ನಡೆಯಬೇಕಾಗಿದೆ.

ಎರಡನೆಯದು ಮಂಗಲ ಗೀತಕಂ ಎಂಬ ರಚನೆ. ಇದರ ಲಕ್ಷಣವನ್ನು ಕೆಳಗಿನ ಶ್ಲೋಕದಲ್ಲಿ ಹೇಳಿದೆ:

ಸುಮಂಗಲ ಪದೋಪೇತೈಃ ಶುಭೈರ್ವಾಕ್ಯೈರ್ಮನೋರಮೈಃ
ಕೈಶಿಕ್ಯಾ ಪೋಟ್ಟರಾಗೇಣ ಗೇಯಂ ಮಂಗಲ ಗೀತಕಂ ॥ ೧೭

ಕೈಶಿಕೀ ವೃತ್ತಿಯಲ್ಲಿ, ಪೋಟ್ಟರಾಗದಲ್ಲಿ ಇದನ್ನು ಹಾಡಬೇಕಂತೆ. ಇದಕ್ಕೆ ಉದಾಹರಣೆ:

ದಧಿ ದೂರ್ವಾಕ್ಷತ ಚೂತ ಪಲ್ಲವ ಕನಕ ಕಲಶ ಮಾತುಲುಂಗ ಕಮಲಸ್ವಸ್ತಿಕ
ನಂದ್ಯಾವರ್ತಸಿತ ಕುಸುಮ ಚಂದನ ಕುಂಕುಮ ಲಾಜಾದಿ ಮಂಗಲದ್ರವ್ಯಾಣಿ
ವಿಪ್ರಾಃ ಪುಣ್ಯತಮಾಯೋಷಿತಃ ಮಹರ್ಷಯಃ ದೇವಮಾತರಃ ನವಗ್ರಹಾ
ಲೋಕಪಾಲಾಶ್ಚ ಬ್ರಹ್ಮ ವಿಷ್ಣು ಮಹೇಶ್ವರಾಃ
ಏತೇ ಪ್ರಯಚ್ಛಂತು ಮಮ ಮಂಗಲಮ್ ॥ ೧೮

ಇಲ್ಲಿ ಮಂಗಲದ್ರವ್ಯಗಳು, ಋಷಿಗಳು, ದೇವತೆಗಳು, ವಿಪ್ರರು, ವಿಲಾಸಿನಿಯರು–ಮುಂತಾದ ಮಂಗಲಕರವಾದ ಪದಪ್ರಯೋಗಗಳಿದ್ದು ಶುಭವಾಕ್ಯದಿಂದ ಸಮನ್ವಿತವಾಗಿದೆ. ಅಲ್ಲದೆ ಮಂಗಲಾಭಿಧ ಪ್ರಬಂಧವು ಪ್ರಶಾಂತವಾದ ಮೂರು ಪಾದಗಳನ್ನೊಳಕೊಂಡಿದ್ದು ತೃತೀಯ ತಾಳದಲ್ಲಿ ಹಾಡತಕ್ಕದ್ದಾಗಿದೆ. ಹೇಮಚಂದ್ರಾಚಾರ್ಯನು ''ಉತ್ಸವಾದಿನಾ ಯೇನ್ಯೆವ ಧವಲ ಮಂಗಲ ಭಾಷಾ ಗಾನೇ ತನ್ನಾಮಾದ್ಯೇ ಧವಲ ಮಂಗಲೇ'' ಎಂಬ ಸೂತ್ರದಲ್ಲಿ (೫-೪೦) ಹೇಳಿರುವ ಧವಲ ಮಂಗಲವು ಈ ಮಂಗಲಗೀತಕವಾಗಿರಬಹುದು.

ಮೂರನೆಯದು ಓವಿ ಎಂಬ ಹಾಡು. ಇದರ ಲಕ್ಷಣವನ್ನೂ ಲಕ್ಷ್ಯವನ್ನೂ ಕೆಳಗಿನ ಶ್ಲೋಕದಲ್ಲಿ ಹೇಳಿದೆ:

ಉವಿ ಶಬ್ದೇನ ಸಾಚಾಂತೇ ಕಾರ್ಯಾಸ್ಯಾದೋವಿಕಾ ಬುಧೈಃ
ಗೋತ್ರಲೇಂ ಗೋಲಿ ನಿಷ್ಠಂವಿ ಅಚಲುವಲುತೋ ಮಝುಪಡಿಹೇ ಕನ್ನೋಸಾ
ಚಲೂಲಾದಿ (ಉ) ವಿವಿ ॥

ಸಂಭೋಗ ವಿಪ್ರಲಂಭ ಶೃಂಗಾರಗಳಲ್ಲಿ, ಹೃದಯಸ್ಥಿತ ಪ್ರಿಯನನ್ನು ಉದ್ದೇಶಿಸಿ ಈ ವೃತ್ತದ ಮೂಲಕ ಭಾವಪ್ರದರ್ಶನ ಮಾಡಬೇಕು. ಇಷ್ಟತಾಲದಿಂದ ಹಾಡತಕ್ಕದ್ದು; ಅನುಪ್ರಾಸವುಳ್ಳ ಪಾದದ್ವಯಗಳು ; ಇದನ್ನು ಓವಿಕಾ ಎಂದು ಹೇಳುತ್ತಾರೆ. ಮರಾಠಿ ಸಾಹಿತ್ಯದಲ್ಲಿ ತುಂಬ ಪ್ರಚುರವಾಗಿರುವ ಓವಿ ಎಂಬ ಪದ್ಯಕ್ಕೂ ಇದಕ್ಕೂ ಸಂಬಂಧವಿರಬಹುದು.

ಈ ಅಧ್ಯಾಯದ ಅಂತ್ಯದಲ್ಲಿರುವ ಈ ಕೆಳಗಿನ ಶ್ಲೋಕಗಳು ಗಮನಾರ್ಹವಾಗಿವೆ:

ತ್ರಿಪದೀ ಷಟ್ಪದೀ ಚೈವ ಧವಲೋ ಮಂಗಲಸ್ತಥಾ
ಓವೀ ಚ ಚರ್ಚರೀ ಚರ್ಯಾ ರಾಹಡೀ ದಂತಿಕಾ ತಥಾ ॥ ೫೪

---

೭ 'ಧವಳವೆಂಬ ಹಾಡಿನ ಸ್ವರೂಪ' ಎಂಬ ನನ್ನ ಲೇಖನವನ್ನು ನೋಡಿ: 'ಪಂಜೆಯವರ ನೆನಪಿಗಾಗಿ', ಪು. ೧೯೦-೧೯೬.

ಏತೇ ಸೂಡೇಷುತೋ ಗೇಯಾಃ ಪ್ರಬಂಧಾ ಲೌಕಿಕಾ ಮತಾಃ
ವಿಪ್ರಕೀರ್ಣಾಃ ಪ್ರಗಾತವ್ಯಾ ವ್ಯಾಪಾರೇಷು ಪೃಥಕ್ ಪೃಥಕ್ ॥ ೫೫೦

ತ್ರಿಪದೀ ಕಂಡನೇ ಚೈವ ಶೃಂಗಾರೇ ವಿಪ್ರಲಂಭಕೇ
ಪ್ರಾಯಃಶಾಸ್ತ್ರಿಭಿರೇವೈಷಾ ಗೇಯಾ ನಾನಾರ್ಥ ಭೂಷಿತಾ ॥ ೫೫೧

ಕಥಾಸು ಷಟ್ಪದೀ ಯೋಜ್ಯಾ ವಿವಾಹೇ ಧವಲಸ್ತಥಾ
ಉತ್ಸವೇ ಮಂಗಲೋ ಗೇಯಶ್ಚರ್ಯಾ ಯೋಗಿಜನೈಸ್ತಥಾ ॥ ೫೫೨

ಮಹಾರಾಷ್ಟ್ರೇಷು ಯೋಷಿದ್ಭಿರೋವೀ ಗೇಯಾತು ಕಂಡನೇ
ಹೋಲಾಕೇ ಚಚ್ಚರೀ ಗೇಯಾ ರಾಹಡೀ ವೀರ ವರ್ಣನೇ ॥ ೫೫೩

ದಂತೀ ಗೋಪಾಲಕೈರ್ವಾದೇ ಗಾತವ್ಯಾ ನಿಜ ಭಾಷಯಾ
ಏವಂ ವಿಷಯಭೇದೇನ ಪ್ರಬಂಧಾಃ ಪರಿಕೀರ್ತಿತಾಃ ॥ ೫೫೪

ತ್ರಿಪದಿಯನ್ನು, ಧಾನ್ಯವನ್ನು ಒರಳಲ್ಲಿ ಹಾಕಿ ಕುಟ್ಟುವಾಗಲೂ (=ಕಂಡನ) ಶೃಂಗಾರ ವಿಪ್ರಲಂಭಗಳನ್ನು ವರ್ಣಿಸುವಾಗಲೂ ಹಾಡಬೇಕು ; ಕಥನಕಾವ್ಯದಲ್ಲಿ ಷಟ್ಪದಿಯನ್ನು ಬಳಸಬೇಕು; ವಿವಾಹಕಾಲದಲ್ಲಿ ಧವಲವನ್ನು ಆಲಾಪಿಸಬೇಕು; ಮಂಗಲ ಗೀತವನ್ನು ಉತ್ಸವ ಕಾಲದಲ್ಲಿ ಉಪಯೋಗಿಸಬೇಕು; ಯೋಗಿಜನರು ಅಧ್ಯಾತ್ಮನಿರೂಪಣೆಯಲ್ಲಿ ಚರ್ಯಾ ಎಂಬ ಪ್ರಬಂಧವನ್ನು ರಚಿಸಿಕೊಳ್ಳಬೇಕು; ಮಹಾರಾಷ್ಟ್ರದ ಸ್ತ್ರೀಯರು ಒನಕೆವಾಡಾಗಿ ಓವಿಯನ್ನು ಉಪಯೋಗಿಸುತ್ತಾರೆ; ಚಚ್ಚರೀ ಪ್ರಬಂಧವನ್ನು ವಸಂತಕಾಲದ ಹೋಳಿ ಹಬ್ಬದಲ್ಲಿಯೂ (=ಹೋಲಾಕಾ), ವೀರವರ್ಣನೆಯಲ್ಲಿ ರಾಹಡಿಯನ್ನೂ, ದಂತಿಯನ್ನು ಗೋಪಾಲಕರ ಸಂವಾದದಲ್ಲೂ ತಂತಮ್ಮ ಸಹಜ ಭಾಷೆಯಲ್ಲಿ ಹಾಡಬೇಕು–ಎಂದು ಮೇಲಿನ ಶ್ಲೋಕಗಳ ಅಭಿಪ್ರಾಯ. 'ಮಾನಸೋಲ್ಲಾಸ'ದ ಬೇರೊಂದೆಡೆಯಲ್ಲಿ ತ್ರಿಪದೀ ವಿನಿಯೋಗದ ವಿಷಯವಾಗಿ ಈ ಕೆಳಗಿನ ಶ್ಲೋಕವಿದೆ :

ಪರಿಹಾಸ ಪದಾರ್ಥಾಭಿಃ ಮರ್ಮಭಿನ್ಮಿತ ಗಾಲಿಭಿಃ
ತ್ರಿಪದೀಭಿಃ ಸರಾಗಾಭಿಃ ಗಾಪಯೇಯುಃ ಪರಾಜಿತಾನ್ ॥ (೪-೭-೩೨)

ಅಂಕದಲ್ಲಾಗಲಿ ಮಲ್ಲಯುದ್ಧದಲ್ಲಾಗಲಿ ಸೋತವನನ್ನು ರಾಗಯುಕ್ತವಾದ, ಪರಿಹಾಸ ಗರ್ಭಿತವಾದ ಮತ್ತು ಮರ್ಮಭೇದಕವೂ ಮಿತವೂ ಆದ ನಿಂದೆಯನ್ನುಳ್ಳ ತ್ರಿಪದಿಗಳಿಂದ ಹಾಡಿಸಬೇಕು. ಇಂಥ ಛಂದಸ್ಸನ್ನು ಇಂಥ ಕೆಲಸಕ್ಕೆ ಉಪಯೋಗಿಸಬೇಕೆಂಬ ವಿಷಯದಲ್ಲಿ ಮೇಲಿನ ಶ್ಲೋಕಗಳು ಹೊಸ ತಿಳಿವಳಿಕೆಯನ್ನು ನೀಡುತ್ತವೆ. ಸೋಮೇಶ್ವರನ ಕಾಲಕ್ಕಾಗಲೇ (೧೧೨೬-೧೧೩೮) ಕನ್ನಡದಲ್ಲಿ ಷಟ್ಪದೀನಿಬದ್ಧವಾದ ಕಥನಕಾವ್ಯಗಳು ರಚಿತವಾಗಿದ್ದುವೆಂಬ ಹೊಸ ಅಂಶ ಬೆಳಕಿಗೆ ಬರುತ್ತದೆ. ಅದೇ ಗ್ರಂಥದ ಇನ್ನೊಂದೆಡೆಯಲ್ಲಿ ಚಿತ್ರಕಥಕನ ಲಕ್ಷಣವನ್ನು ಹೇಳುವಾಗ ''ಕರ್ಣಾಟ ಭಾಷಯಾ ಯಸ್ತು ಷಟ್ಪದೀ ಪಠನೋದ್ಯತಃ'' ಎಂದು ಹೇಳಿರುವುದರಿಂದ ಚಿತ್ರಕಥಕನು ಷಟ್ಪದಿಯನ್ನು ಪಠಿಸುತ್ತಿದ್ದನು ಎಂದು ತಿಳಿದುಬರುತ್ತದೆ. ಛಂದಸ್ಸಿನ ದೃಷ್ಟಿಯಿಂದ 'ಮಾನಸೋಲ್ಲಾಸ'ವು ಪ್ರಮುಖವಾದುದೆಂದು ಸ್ಪಷ್ಟವಾಗಿದೆ. ಸಂಸ್ಕೃತ ಪ್ರಾಕೃತ ವೃತ್ತಜಾತಿಗಳ ವಿಷಯವಾಗಿ ನೂತನ ವಿಷಯಗಳೇನೂ ಇಲ್ಲವೆಂದು ಹೇಳಬಹುದು. ಪ್ರಸಿದ್ಧವಾದ ಕೆಲವು ಸಂಸ್ಕೃತ ವರ್ಣವೃತ್ತಗಳ ವಿಷಯವನ್ನು ಸ್ವಲ್ಪ ವಿಸ್ತಾರವಾಗಿ ನಿರೂಪಿಸಿದೆ. ಪ್ರಾಕೃತ ಛಂದೋರೂಪಗಳ ವಿಷಯ ತುಂಬ ಕಡಮೆಯಾಗಿದೆ. ಕರ್ಣಾಟಕ ದೇಶೀಯ

ಛಂದಸ್ಸುಗಳಲ್ಲಿ ಕಂದ, ತ್ರಿಪದಿ, ಷಟ್ಪದಿಗಳ ವಿಷಯವಾಗಿ ಮಾತ್ರ ಪ್ರಸ್ತಾಪಿಸಿದೆ. ಇಲ್ಲಿ ಬರುವ ಏಲಾಪ್ರಬಂಧಗಳ ರಚನೆಯನ್ನು ಛಂದಸ್ಸಿನ ದೃಷ್ಟಿಯಿಂದಲೂ ಸಂಗೀತದ ದೃಷ್ಟಿಯಿಂದಲೂ, ಎರಡನ್ನೂ ಬಲ್ಲವರು ಹೆಚ್ಚು ಗಾಢವಾಗಿ ವಿಚಾರಮಾಡಬೇಕಾಗಿದೆ.

*ಪ್ರಬುದ್ಧ ಕರ್ಣಾಟಕ, ೪೫-೨, ೧೯೬೩*
*ಪೀಠಿಕೆಗಳು ಲೇಖನಗಳು, ೧೯೭೧, ಪು. ೬೮೮-೭೦೭*

# ೩೮. ಶಿವಶರಣರ ಹಾಡುಗಳ ಸ್ವರೂಪ, ಛಂದಸ್ಸು

● ಎಲ್. ಬಸವರಾಜು

೧

ಇಡೀ ಭಾರತೀಯ ಸಾಹಿತ್ಯಕ್ಕೆ ವಚನವೆಂಬ ಅಭೂತಪೂರ್ವ ಕಾಣಿಕೆಯನ್ನು ಕೊಟ್ಟ ಶಿವದಾಸರು ತಮ್ಮ ಕಾಲಕ್ಕೆ ಅಥವಾ ತತ್ಪೂರ್ವಕ್ಕೆ ಕನ್ನಡದಲ್ಲಿ ವಿಷಯಾಂತರವಾಗಿದ್ದ ಹಾಡುಗಳನ್ನು ಆಧ್ಯಾತ್ಮಿಕ ವಿಷಯವಾಗಿ ಬರೆಯಲೂ ಮೊದಲಿಗರಾದರು. ಶಿವಶರಣರು ಬರೆದ ಈ ಹಾಡುಗಳು ಪಲ್ಲವ (=ಪಲ್ಲವಿ)ದಿಂದ ಕೂಡಿ ಬೇರೆ ಬೇರೆ ರಾಗಗಳಲ್ಲಿ ಹಾಡಲು ಅನುವರಿತು ರಚಿತವಾದ ಗೇಯಕೃತಿಗಳು. ಮುಂದೆ ೧೫-೧೬ನೇ ಶತಮಾನಗಳಲ್ಲಿ ಹರಿದಾಸರು[1] ಯಾವ ಕೀರ್ತನಸಾಹಿತ್ಯಪ್ರಕಾರದಿಂದ ಇಡೀ ದಕ್ಷಿಣಭಾರತದ ಸಂಗೀತ ಮತ್ತು ಸಾಹಿತ್ಯ ಪ್ರಪಂಚಗಳೆರಡರಲ್ಲೂ ಅದ್ವಿತೀಯ ಕೀರ್ತಿಯನ್ನು ಗಳಿಸಿದರೋ ಆ ಕೀರ್ತನ ಪ್ರಕಾರಕ್ಕೆ ೧೨ನೇ ಶತಮಾನದ ಬಸವಾದಿ ಶಿವದಾಸರ ಈ ಗೀತಾ (ಹಾಡುಗಳ) ಪ್ರಕಾರವು ಮೂಲವೂ ಮಾದರಿಯೂ ಆಗಿದ್ದವು.

ಬಸವಾದಿ ಶಿವಶರಣರ ಇಂತಹ ಹಾಡುಗಳನ್ನು ಹರಿಹರಾದಿಗಳು ತಮ್ಮ ಕಾವ್ಯಗಳಲ್ಲಿ ಉಲ್ಲೇಖಿಸಿದ್ದಾರೆ. ಬಸವರಾಜದೇವರ ರಗಳೆ (೧೩-೨೭-೩೬)ಯಲ್ಲಿನ–

ನಡೆ ಬಸವ ಕೈಲಾಸಗಿರಿಗೆ ಪುಷ್ಪಕದೊಳಗೆ
ಪೊಡವಿಯೊಳಗಿರವು ಸಾಲ್ವುದು ಬಾ ಮಗನೆ ನಿನಗೆ
ಎನೆ ಕೇಳ್ದು ನಸುನಗುತೆ ನುಡಿದನಾ ಸಂಗಂಗೆ
ಮನಸಿಜ ಹರಂಗೆ ಗಿರಿಶಂಗೆ ಗಿರಿಜೇಶಂಗೆ
ಸಂಗಯ್ಯ ಬಾಯೆಂದು ಕರೆವೆ ನೀನೆನ್ನುವಂ
ಪಿಂಗಲೀಯದು ಶರಣಗೋಷ್ಠಿ ಕೇಳೆನ್ನುವಂ
ಶರಣರೊಕ್ಕುದಱ ಸವಿ ಕೈಲಾಸದೊಳಗುಂಟೆ
ಶರಣ ಸಂಗದ ಸುಖಂ ಕೈಲಾಸದೊಳಗುಂಟೆ
ಇಲ್ಲಿಯ ಸುಖಂ ದೇವ ಅಲ್ಲಿಯುಳ್ಳಡೆ ಲೇಸು
ಅಲ್ಲೆನ್ನೆ ಈಗಳೇ ಕೊಂಡು ಹೋಹುದು ಲೇಸು.

ಎಂಬ ಮಾತನ್ನು ಶಿವದಾಸ ಗೀತಾಂಜಲಿಯಲ್ಲಿನ ೧೭೬ನೇ ಹಾಡಿನ ಪಲ್ಲವಿ ಮತ್ತು ಅದೇ ಹಾಡಿನ ೨, ೩, ೪, ೮ನೇ ನುಡಿಗಳೊಡನೆ ಹೋಲಿಸಿ ನೋಡಿ. ಆ ಹಾಡಿನ ಸ್ವಲ್ಪ ಭಾಗದ ತಾತ್ಪರ್ಯವನ್ನು ಹರಿಹರನು ತನ್ನ ಈ ರಗಳೆಗೆ ಹೊಂದಿಸಿಕೊಂಡಿರುವುದನ್ನು ಗುರುತಿಸಬಹುದು.

ಶಿವದಾಸರ ಈ ಹಾಡುಗಳು ನಮಗೆ ದೊರೆಯುವ ಮೊದಲನೇ ಮೂಲವೆಂದರೆ – ಮಹಲಿಂಗ, ಜಕ್ಕಣ್ಣ ಮತ್ತು ಸಿದ್ಧಲಿಂಗೇಶ್ವರಾಂಕಿತದ ಅನಾಮಧೇಯನೊಬ್ಬ-ಈ ಮೂವರ

---

೧. ಕನ್ನಡದಲ್ಲಿ ಹರಿದಾಸ ಸಾಹಿತ್ಯವು ಶ್ರೀಮಧ್ವಾಚಾರ್ಯರ ಕಾಲ (೧೨೩೮-೧೩೧೭)ಕ್ಕಿಂತ ಹಿಂದಿನದೆನ್ನಲು ಆಧಾರವೇ ಇಲ್ಲ. ಮಧ್ವಾಚಾರ್ಯರ ಶಿಷ್ಯನಾದ ನರಹರಿತೀರ್ಥನ ಒಂದೇ ಒಂದು ಹಾಡು ಉಪಲಬ್ಧವಿದೆ. ಶ್ರೀಪಾದರಾಯ, ವ್ಯಾಸರಾಯ, ಪುರಂದರ, ಕನಕ ಇವರೆಲ್ಲ ೧೫-೧೬ನೇ ಶತಮಾನದವರೇ.

ಮೂರು ಏಕೋತ್ತರಶತಸ್ಥಲಗಳು ಮತ್ತು ೨೧೬ ಸ್ಥಳದ ಗಣವಚನ ರತ್ನಾವಳಿ. ಎರಡನೆಯ ಮೂಲ ಶೂನ್ಯಸಂಪಾದನೆಗಳು, ಮೂರನೆಯದು ''ಶಿವಯೋಗಪ್ರದೀಪಿಕೆ''ಯೆಂಬ ಹಾಡುಗಳ ಸಂಕಲನ ಗ್ರಂಥ, ನಾಲ್ಕನೆಯದು ಮತ್ತು ಕೊನೆಯದು ಸಿಂಗಿರಾಜ ಪುರಾಣದಂತಹ ವೀರಶೈವ ಪುರಾಣ ಮತ್ತು ಧಾರ್ಮಿಕ ಗ್ರಂಥಗಳು.

ಈ ಮೂಲಗಳ ಸ್ವರೂಪವನ್ನೂ ಮತ್ತು ಅಲ್ಲಿ ಸಿಗುವ ಹಾಡುಗಳು ಹೇಗೆ ಬಸವಾದಿ ಶಿವದಾಸರಿಂದ ರಚಿತವಾದವೆನ್ನಬಹುದೆಂಬುದನ್ನೂ ಕ್ರಮವಾಗಿ ವಿಚಾರಿಸೋಣ.

ವಚನ ಮತ್ತು ಹಾಡು–ಇವೆರಡರ ಜೋಡಣೆಯಿಂದ ನಿರೂಪಿತವಾದ ಮಹಾಲಿಂಗನ ಏಕೋತ್ತರಶತಸ್ಥಲ, ಕೇವಲ ಹಾಡುಗಳ ಜೋಡಣೆಯಿಂದಲೇ ಆದ ಜಕ್ಕಣ್ಣನ ಏಕೋತ್ತರಶತಸ್ಥಲ ಮತ್ತು ಜಕ್ಕಣ್ಣನು ಸಂಗ್ರಹಿಸಿದ ಹಾಡುಗಳನ್ನೇ ಇಟ್ಟುಕೊಂಡು, ಜೊತೆಗೆ ಸ್ಥಲಕ್ಕೆ ಒಂದೊಂದರಂತೆ ವಚನ ಮತ್ತು ವೃತ್ತಗಳನ್ನು ಸೇರಿಸಿರುವ ಸಿದ್ಧಲಿಂಗನ ಏಕೋತ್ತರಶತಸ್ಥಲ–ಹೀಗೆ ನಮಗೆ ಮೂರು ವಿಧವಾದ ಏಕೋತ್ತರಶತಸ್ಥಲಗಳು ಸಿಗುವವು. ಆದರೆ ಈ ಮೂರು ಏಕೋತ್ತರಶತಸ್ಥಲಗಳಲ್ಲಿ ಆಯಾ ಸ್ಥಲದ ಸ್ವರೂಪವನ್ನು ನಿರೂಪಿಸಲು ಉಲ್ಲೇಖಿಸಿರುವ ನೂರೊಂದು ಹಾಡುಗಳಲ್ಲೇನೂ ವ್ಯತ್ಯಾಸವಿಲ್ಲ.

ಕೇವಲ ಹಾಡುಗಳನ್ನೇ ಆಯ್ದುಕೊಂಡು, ಒಂದೊಂದು ಹಾಡನ್ನು ಒಂದೊಂದು ಸ್ಥಲಕ್ಕೆ ಮೀಸಲಾಗಿಟ್ಟು, ಆ ಸ್ಥಲದ ಲಕ್ಷಣವನ್ನು ವಿವರಿಸುವ ಒಂದು ಸೂತ್ರವನ್ನು ಅದರೊಡನೆ ಸೇರಿಸಿ, ಷಟ್ಸ್ಥಲಸಿದ್ಧಾಂತವನ್ನು ಸ್ಥಾಪಿಸಲು ಪ್ರಯತ್ನಿಸಿರುವ ಜಕ್ಕಣ್ಣನ ಏಕೋತ್ತರಶತಸ್ಥಲದ[1] ಆದಿಯಲ್ಲಿ ''ಪಿಂಡಾದಿ ಜ್ಞಾನಶೂನ್ಯಾಂತರವಾದ ನೂರೊಂದು ಸ್ಥಲಗಳು; ಅವನೆ ನಿರೂಪಿಸಿದ ಪುರಾತನರ ಮಹಾವಚನಗಳೊಳಗೆ ಜಕ್ಕಣಾಚಾರ್ಯರು ಅವಱೊಳಗೆ ಸಾರವಾದ ನೂರೊಂದು ಸ್ಥಲವಚನಗಳನ್ನು ತೆಗೆದುಕೊಂಡು ಸೂತ್ರವಿಟ್ಟು ಸಂಗ್ರಹಿಸಿದರು.'' (ಪ್ರಾಚ್ಯವಿದ್ಯಾಸಂಶೋಧನಾಲಯ, ಕೆ ೧೮೮) ಎಂದಿದೆ. ಈ ಮೇಲಣ ಒಕ್ಕಣೆಯಿಂದ ಎರಡು ಅಂಶಗಳನ್ನು ನಿರ್ಣಯಿಸಬಹುದು: (೧) ಈ ಜಕ್ಕಣಾರ್ಯನ ಏಕೋತ್ತರಶತಸ್ಥಲದಲ್ಲಿ ಒಂದಾದರೂ ವಚನವಿಲ್ಲದೆ, ಇರುವುದೆಲ್ಲ ಹಾಡುಗಳೇ ಆಗಿರುವುದರಿಂದ, ಆ ಹಾಡುಗಳನ್ನು ''ವಚನ'' ಎಂದು ಕರೆಯುವ ರೂಢಿಯಿತ್ತು. (೨) ನೂರೊಂದು ಸ್ಥಲಗಳನ್ನು ನಿರೂಪಿಸುವ ಶರಣರ ವಚನ(=ಹಾಡು)ಗಳಲ್ಲಿ ಸಾರವಾದ ನೂರೊಂದನ್ನು ಮಾತ್ರ ತೆಗೆದುಕೊಂಡು ಏಕೋತ್ತರಶತಸ್ಥಲವನ್ನು ರಚಿಸಿರುವುದಾಗಿ ಜಕ್ಕಣ್ಣನು ಹೇಳಿಕೊಂಡಿರುವುದರಿಂದ, ಶರಣರ ಹಾಡುಗಳು ಅವನಿಗೆ ಇನ್ನೂ ಹೆಚ್ಚು ಸಂಖ್ಯೆಯಲ್ಲಿ ಉಪಲಬ್ಧವಿದ್ದವು.

ಇದೇ ಜಕ್ಕಣ್ಣನ ಏಕೋತ್ತರಶತಸ್ಥಲದಲ್ಲಿನ ಹಾಡುಗಳನ್ನು ಒಂದು ಓಲೆಯ ಪ್ರತಿ (ಮೈಸೂರಿನ ಸಂಸ್ಕೃತ ಕಾಲೇಜಿನ ಸರಸ್ವತೀಭಂಡಾರದ ೧೩೬೬ನೇ ನಂಬರಿನ ಓಲೆಯ ಗ್ರಂಥ, ಗರಿ ೧೨೨ ೧/೩-೧೬೮)ಯಲ್ಲಿ ''ಸ್ವರಪದ'' ಎಂದೂ ಮತ್ತು ಆ ಏಕೋತ್ತರಸ್ಥಲವನ್ನು ''ಏಕೋತ್ತರಶತಸ್ಥಲಸ್ವರವಚನ'' ಎಂದೂ ಕರೆದಿದೆ. ಹಿಂದೆ ಪ್ರಸ್ತಾಪಿಸಿದ

---

೧ ''ಕುಮಾರ ಬಂಕನಾಥದೇವರ ಶಿಷ್ಯರಾದ ಜಕ್ಕಣಾರ್ಯಪಂಡಿತರು ತಮ್ಮ ಗುರುನಿರೂಪದಿಂದ ಸಕಲಪುರಾತನರ ವಚನಂಗಳಿಂದ ಏಕೋತ್ತರಶತಸ್ಥಲವಂ ಸೂತ್ರವ ಕಲ್ಪಿಸಿ ಸ್ಥಲವಿಟ್ಟು ಪಸ್ತುಕವರ್ಣಕದಿಂದ ಸಂಗ್ರಹಿಸಿ, ಪ್ರಭುದೇವರು ನಿರೂಪಿಸಿದ ವಚನಂಗಳಿಗೆಯೂ ಸೂತ್ರಸ್ಥಲವಿಟ್ಟು ಅರ್ಥಪದ್ಧತಿಯ ವ್ಯಾಖ್ಯಾನಮಂ ಮಾಡಿ''ದರು (ಕ. ಕ. ಜ. ಸಂ. ೨, ಪುಟ ೫೮೮ರಲ್ಲಿ ಉಲ್ಲೇಖ ಮಾಡಿರುವ ಭೈರವೇಶ್ವರಕಾವ್ಯದ ಕಥಾಮಣಿಸೂತ್ರರತ್ನಾಕರದ ಭಾಗ).

ಪ್ರತಿ (ಪ್ರಾಚ್ಯಸಂಶೋಧನಾಲಯದ K೧೮೮)ಯಲ್ಲಿನ ''ವಚನ''ವೆಂಬ ಮಾತಿನೊಡನೆ ಈ ಪ್ರತಿಯಲ್ಲಿನ ''ಸ್ವರವಚನ'' ಮತ್ತು ''ಸ್ವರಪದ'' ಎಂಬುದನ್ನು ಸೇರಿಸಿಕೊಂಡು ನಿರ್ಣಯಿಸಬಹುದಾದುದೇನೆಂದರೆ: ಶರಣರ ವಚನಗಳನ್ನಾಗಲಿ ಹಾಡುಗಳನ್ನಾಗಲಿ ''ವಚನ'' ಎಂಬ ಮಾತಿನಿಂದ ವ್ಯವಹರಿಸುವ ಸಂಪ್ರದಾಯದ ಜೊತೆಗೆ, ಆ ''ವಚನ'' ಎಂಬ ಪದದಿಂದ ಗಮ್ಯವಾಗುವ ಹಾಡುಗಳನ್ನು ''ಸ್ವರವಚನ'' ಎಂದೂ, ''ಸ್ವರಪದ'' ಎಂದೂ ವ್ಯವಹರಿಸುವ ರೂಢಿಯಿತ್ತು. ''ವಚನ''ವೆಂದರೆ ಈಗ ನಮಗೆ ಆಗುವಂತೆ ಚಿರಪರಿಚಿತವಿರುವ ಶರಣರ ವಚನಸಾಹಿತ್ಯಪ್ರಕಾರ ಮಾತ್ರ ಗಮ್ಯವಾಗುವ ಸಂದರ್ಭಗಳು ಆಗಲೂ ಇದ್ದವಾದುದರಿಂದ, ಆ ಶರಣರ ಹಾಡುಗಳನ್ನು ಖಚಿತವಾಗಿ ನಿರ್ದೇಶಿಸಲು 'ವಚನ' ಎಂಬ ಸಾಮಾನ್ಯವಾಚಕವನ್ನು ''ಸ್ವರ'' ಎಂಬುದರಿಂದ ವಿಶೇಷಿಸಿ ''ಸ್ವರವಚನ'' ಎಂದೂ ಕರೆಯುತ್ತಿದ್ದರು. ಆಮೇಲೆ ಸಂಶಯದ ಲವಲೇಶವಾದರೂ ಬಾರದಿರಲೆಂದು ಹಾಡುಗಳನ್ನು (''ವಚನ''ವೆನ್ನದೆ) ''ಸ್ವರಪದ'' (ಸ್ವರಸಹಿತವಾದ ಪದ್ಯಗಳು) ಎಂದು ಕರೆದರು.

ಈ ''ಸ್ವರಪದ''ವೆಂಬ ಮಾತು ಕ್ರಮೇಣ ಜನಸಾಮಾನ್ಯದಲ್ಲಿ ಬಳಕೆಗೆ ಬಂದು ಆ ನಾಮಪದವೇ ಹಾಡಿನ ಪ್ರಕಾರದ ಸಾಹಿತ್ಯಕ್ಕೆ ಖಚಿತವಾಯಿತು.[೧]

ಹೀಗಾಗುವುದಕ್ಕೆ ಮೊದಲು ''ವಚನ''ವೆಂಬ ಪದವು ಬಸವಾದಿಪ್ರಮಥರ ಕೃತಿ ವೈವಿಧ್ಯಗಳನ್ನೆಲ್ಲ ಒಳಗೊಳ್ಳುವ ಒಂದು ವ್ಯಾಪಕವಾದ ಪ್ರಯೋಗವಾಗಿತ್ತು.[೨] ಏಕೋತ್ತರಶತಸ್ಥಲ, ಶೂನ್ಯಸಂಪಾದನೆ, ಲಿಂಗಲೀಲಾವಿಲಾಸಚಾರಿತ್ರ ಮುಂತಾದ ಗ್ರಂಥಗಳನ್ನು ರೂಪಿಸುವಲ್ಲಿ ತಮಗೆ ಬಸವಾದಿಪ್ರಮಥರ ''ವಚನ''ಗಳೇ ಮೂಲ ಸಾಮಗ್ರಿಯೆಂದು ಆ ಗ್ರಂಥಕರ್ತೃಗಳು ಹೇಳಿಕೊಂಡು, ಆ ತಮ್ಮ ಕೃತಿಗಳಲ್ಲಿ ಬಸವಾದಿಪ್ರಮಥರ ಅಂಕಿತವಿರುವ ಷಟ್ಪದಿ, ಹಾಡು, ಮುಂತಾದ ವಚನೇತರ ಪ್ರಕಾರಗಳನ್ನೂ ಸೇರಿಸಿರುವುದರಿಂದ–ಅವರ ''ವಚನ''ವೆಂಬ ಮಾತಿನಲ್ಲಿ ಷಟ್ಪದಿ, ಹಾಡು ಮುಂತಾದ ಪ್ರಕಾರಗಳೂ ಸಮಾಹಾರವಾಗಿವೆಯೆಂಬುದು ಖಚಿತ. ''ಸರ್ವಜ್ಞನ ವಚನ'' ಎಂದಾಗ 'ವಚನ'ವೆಂಬ ಮಾತಿನಲ್ಲಿ ತ್ರಿಪದಿಯೂ ಸೇರಿಕೊಳ್ಳುವುದು. ಆದ್ದರಿಂದ ಹಿಂದಿನವರು ಇಷ್ಟೆಲ್ಲ ವ್ಯಾಪಕವಾದ ಅರ್ಥದಲ್ಲಿ ''ವಚನ''ವೆಂಬುದನ್ನು ಬಳಸಿರುವರೆಂಬುದನ್ನು ಮನಗಾಣಬೇಕು ಮತ್ತು ವಚನವೆಂದರೆ ಕೇವಲ

---

೧ ಬಸವಾದಿ ಶಿವಶರಣರ ಹಾಡುಗಳನ್ನು ಸ್ಥಲವಿಟ್ಟು ಸಂಗ್ರಹಿಸಿರುವ ''ಶಿವಯೋಗ ಪ್ರದೀಪಿಕೆ'' ಎಂಬ ಗ್ರಂಥ (ಪ್ರಾಚ್ಯಸಂಶೋಧನಾಲಯದ ಕೆ. ೬೯ನೇ ನಂಬರಿನ ಓಲೆಯ ಗ್ರಂಥ)ದ ಪೀಠಿಕಾ ಭಾಗದ ಒಕ್ಕಣೆಯಲ್ಲಿ ಹಾಡುಗಳನ್ನು ''ಗೀತ''ಗಳೆಂದು ಕರೆದಿದೆಯಾದರೂ, ಆ ಓಲೆಗರಿಯ ಗ್ರಂಥದ ಮರದ ಕಟ್ಟಿನ ಮೇಲೆ ಅವನ್ನು ''ಸ್ವರಪದಗಳು'' ಎಂದೇ ಕರೆದಿದೆ. ಈ ಕಾರಣದಿಂದ ''ಸ್ವರಪದ''ವೆಂಬುದು ''ಹಾಡು'' ಎಂಬುದಕ್ಕೆ ಪರ್ಯಾಯವಾಗಿ ಜನಬಳಕೆಯಲ್ಲಿತ್ತು ಎನ್ನಬಹುದು.

೨ ವಚನವೆಂದರೆ ಸಂಸ್ಕೃತದಲ್ಲಿ-ಮೋನಿಯರ್ – ವಿಲಿಯಂಸನ ಪ್ರಕಾರ-statement, declaration, express mention, speech, sentence, word, the injunction of a teacher, rule, advice, instruction, direction, order, command'' ಎಂಬ ಅರ್ಥಗಳಿವೆ. ಬಸವಾದಿಪ್ರಮಥರು ಜನೋದ್ಧಾರಕ್ಕಾಗಿ ಏನೆಲ್ಲ ನೀತಿನಿಯಮಗಳನ್ನು ಸಾಹಿತ್ಯದ ಯಾವ ಪ್ರಕಾರದಲ್ಲೇ ಆಗಲಿ ಅಭಿವ್ಯಕ್ತಗೊಳಿಸಿ, ಬೋಧಿಸಿ, ನಿರ್ದೇಶಿಸಿ ಆದೇಶಿಸಿದರೋ ಅದೆಲ್ಲ ''ವಚನ'' ಸಾಹಿತ್ಯವೇ. ವಚನವೆಂದರೆ ಗದ್ಯವೆಂಬ ಅರ್ಥ ಇತ್ತೀಚಿನದೆಂದು ತೋರುವುದು.

ಛಂದೋಗಂಧಿಯಾದ ಗದ್ಯಕೃತಿಮಾತ್ರವೆಂದು ತಪ್ಪುತಿಳಿದು ಅವುಗಳೊಳಗೆ ತ್ರಿಪದಿ, ಷಟ್ಪದಿ ಮುಂತಾದ ಛಂದಸ್ಸಿಗೆ ಹೊಂದಿಕೊಳ್ಳುವ ಕೆಲವು ವಚನಗಳು (ಮತ್ತು ಹಾಡುಗಳು) ಸಿಕ್ಕಿದಾಗ, ವಚನಗಳೆಲ್ಲ ಮೊದಲಿಗೆ ತ್ರಿಪದಿ ಛಂದಸ್ಸಿನಲ್ಲಿದ್ದವು, ಷಟ್ಪದಿ ಛಂದಸ್ಸಿನಲ್ಲಿದ್ದವು–ಎಂದು ಮುಂತಾಗಿ ತಪ್ಪು ನಿರ್ಣಯಕ್ಕೆ ಬರದೆ, ಅಥವಾ ಅವು ಪ್ರಕ್ಷಿಪ್ತವೆಂದು ದುಡುಕದೆ, ಹಿಂದಿನವರ ಅರ್ಥದಲ್ಲಿ ವಚನವೆಂದರೆ ಪದ್ಯಪ್ರಕಾರಗಳೂ ಸೇರ್ಪಡೆಯಾಗುವವೆಂದು ಮಾತ್ರ ತೀರ್ಮಾನಿಸುವುದು ಒಳ್ಳೆಯದು. ಶೂನ್ಯಸಂಪಾದನೆ ಮತ್ತು ಲಿಂಗ ಲೀಲಾವಿಲಾಸಚಾರಿತ್ರಗಳಲ್ಲಿ ಶುದ್ಧವಚನಗಳಲ್ಲದೆ, ನೋಡುವುದಕ್ಕೆ ವಚನದ ಹಾಗೆ ಕಾಣುವ, ಆದರೆ ಪ್ರಸ್ತಾರಹಾಕಿ ಜೋಡಿಸಿ ನೋಡಿದರೆ ಷಟ್ಪದಿಗಳಾಗಿ ಹೊಂದಿಕೊಳ್ಳುವ, ದೇವರದಾಸಿಮಯ್ಯನ ಮತ್ತು ಸಿದ್ಧರಾಮನ ಎಷ್ಟೋ ವಚನಗಳು ದೊರೆಯುವವು. ನೋಡಿ:[೧]

ಹಸ್ತಾಬ್ಜಮಥನದಿಂ
ದೊತ್ತಿ ಭಸ್ಮವಮಾಡಿ
ಮತ್ತೆ ಪಂಚಾಕ್ಷರಿಯ ಜಪಾವಳಿಯ
ಚಿತ್ತ ಶ್ರೋತ್ರದೊಳು
ಮತ್ತೆ ಧಾರೆಯನೆಱೆಯೆ
ಸತ್ಯವದು ನಿನ್ನಂತೆ ರಾಮನಾಥ ॥ (ಲಿಂಗಲೀಲಾವಿಲಾಸಚಾರಿತ್ರ, ಪುಟ ೧೪೧, ವಚನ ೫೭)

ಲಿಂಗ ಕರದೊಳಗಿರಲು
ಅಂಗೈಸಲೇಕನ್ಯ-
ಸಂಗಕ್ಕೆ ಒಳಗಾಗಿ ಲಿಂಗವುಂಟೇ
ಸಂಗವೆಲ್ಲವು ಲಿಂಗ-
ಸಂಗವಾಗಿಪ್ಪವರ ಲಿಂಗ ನೀನೆಂಬೆನ್ಯೆ ಯೋಗಿನಾಥ ॥ (ಅದೇ, ಪುಟ ೩೪೧, ವಚನ ೪೫)
ಎನ್ನ ತನ್ನವನೆನಿಸಿ
ಮನ್ನಿಸಿದ ಭಕ್ತಿಯೊಳು
ಸನ್ನುತನು ಆದೆನ್ಯೆ ಸಕಲದೊಳಗೆ
ಬಿನ್ನಾಣ ದೇಹವನು
ತನ್ನಂತೆ ಮಾಡಿದನು
ಚೆನ್ನಬಸವಣ್ಣನ್ಯೆ ಶ್ರೀ ಮಲ್ಲಿಕಾರ್ಜುನ (=ಮಲ್ಲಿಕಾರ್ಜುನ?)
(ಗೂ. ಸಿದ್ಧವೀರನ ಶೂನ್ಯಸಂಪಾದನೆ, ಪುಟ ೨೩೦, ವಚನ ೬೯)

ಹರಿದಾಸರ ಕೀರ್ತನೆಗಳಂತಹ ಯಾವ ಸಾಹಿತ್ಯ ಪ್ರಕಾರವನ್ನು ನಾವು ಹಾಡು ಎಂದು ಕರೆಯುತ್ತಿದ್ದೇವೋ ಅದನ್ನೂ ವಚನವೆಂದೇ ಮೊದಲಿಗೆ ಕರೆಯುವ ರೂಢಿಯಿದ್ದು, ಆಮೇಲೆ-ಖಚಿತತೆಗೋಸ್ಕರ-ಅಂದರೆ ಛಂದೋಗಂಧಿ ಮಾತ್ರವಾದ ವಚನಗಳನ್ನು ಬಿಟ್ಟು, ಛಂದೋಬದ್ಧವಾದ ಮತ್ತು ರಾಗತಾಳ ಸಹಿತವಾದ ಹಾಡುಗಳನ್ನು ಮಾತ್ರ

೧ See ಲಿಂಗಲೀಲಾವಿಲಾಸಚಾರಿತ್ರ ೩೦೮-೬೯; ೩೦೮-೭೦, ೭೧; ೩೦೯-೭೨; ೩೧೦-೭೩; ೩೨-೪; ೬೨-೧೧; ೧೩೭-೪೪; ೧೩೭-೪೬; ೧೩೮-೪೭; ೧೩೮-೪೯; ೧೯೮-೧೦೦; ೨೨೨-೪೧; ೨೭೫-೮; ೩೦೬-೬೭; ೩೪೦-೪೪; ೩೫೪-೭೩; ಇವುಗಳಲ್ಲಿ ಲಿಂಗವಿಲಾಸಚಾರಿತ್ರದ ೩೭-೪೪, ೪೬ ಹಾಗೂ ೧೩೮-೪೯ನೇ ವಚನಗಳು ಮತ್ತು ಶೂನ್ಯಸಂಪಾದನೆಯ ೨೩೦-೬೯ನೇ ವಚನವೂ ಸಿದ್ಧರಾಮನ ತ್ರಿಪದಿಗಳೆಂದು ಉಲ್ಲಿಖಿತವಾಗಿವೆ. ಲಿಪಿಕಾರರ ಬರವಣಿಗೆಯ ಧೋರಣೆಯ ಫಲವಾಗಿ ಇವು ಗದ್ಯದಂತೆ ಉದ್ದಕ್ಕೆ ಬರೆಯಲ್ಪಟ್ಟು, ಬಿಡಿಸಿ ನೋಡಿದ ಹೊರತು ಅವುಗಳ ಪದ್ಯತ್ವ ಪ್ರಕಟವಾಗುವಂತಿಲ್ಲ.

ನಿರ್ದೇಶಿಸಲು-''ಸ್ವರವಚನ'', ''ಸ್ವರಪದ''-ಎಂದು ಕರೆದರು.

ಹೀಗಾಗಿ ವಚನ, ಸ್ವರವಚನ, ಸ್ವರಪದ, ಪದಂಗಳು, ಗೀತ ಇವೆಲ್ಲವೂ 'ಹಾಡು' ಎಂಬುದಕ್ಕೆ ಪರ್ಯಾಯವಾಚಿಗಳೆಂಬುದನ್ನು ಗಮನದಲ್ಲಿಡಬೇಕು.

*   *   *   *   *

೨

ಶಿವಶರಣರ ಹಾಡುಗಳಲ್ಲಿ ಪಲ್ಲವಿಯಿರುವುದೇ ಹೊರತು, ಅನುಪಲ್ಲವಿಯಿರುವುದಿಲ್ಲ. ಇವುಗಳಲ್ಲಿನ ನುಡಿಗಳ ಸಂಖ್ಯೆ ೩ರಿಂದ ೨೭ರವರೆಗೆ ಸಿಗುವ ವಿಷಮಸಂಖ್ಯೆಯಷ್ಟಿರುವುದು. ಮತ್ತು ಒಂದೇ ಹಾಡಿನಲ್ಲಿ ಎಲ್ಲ ನುಡಿಗಳೂ ಒಂದೇ ಛಂದಃಪ್ರಕಾರದಲ್ಲಿರಬೇಕೆಂಬ ನಿರ್ಬಂಧವಿಲ್ಲ. ಹಾಡುಗಳಲ್ಲಿ ಛಂದಸ್ಸು ಒಂದು ಖಚಿತವಾದ ಚೌಕಟ್ಟಿನಲ್ಲಿ ಸಿಗುವುದಿಲ್ಲವೆಂದಲ್ಲ; ಆದರೆ ಅಪರೂಪ. ಇವುಗಳಲ್ಲಿ ಯಾವುದೋ ವಿಧವಾದ ನಿರ್ದಿಷ್ಟಲಯವನ್ನು ನಿರೀಕ್ಷಿಸಬಹುದೇ ಹೊರತು, ಸರ್ವತ್ರ, ಗಣಸಂಖ್ಯಾನಿಯಮವನ್ನಲ್ಲ. ಹಾಡುವಾಗ, ಒಂದು ಗಣ ಕಡಿಮೆಯಾಗಲಿ ಅಥವಾ ಅಧಿಕವಾಗಲಿ, ಆಲಾಪನೆಯಲ್ಲಿ ಅದು ಸರಿದೂಗುವುದು ಅಥವಾ ಕರಗಿಹೋಗುವುದು. ಆಧುನಿಕ ಸಾಹಿತಿಗಳು ಯಾವ ಲಯವಿನ್ಯಾಸವನ್ನು ಸ್ವಚ್ಛಂದ (free verse)ವೆನ್ನುವರೋ ಅದರ ಮೂಲರೂಪರೇಖೆಗಳನ್ನು ಶರಣರ ಗೀತೆ(ಹಾಡು)ಗಳ ಛಂದಸ್ಸಿನಲ್ಲಿ ಹಲವಾರೆಡೆಗಳಲ್ಲಿ ಗುರುತಿಸಬಹುದು.

ಶಿವದಾಸ ಗೀತಾಂಜಲಿಯಲ್ಲಿನ ಹಾಡುಗಳಿಗೆ ಶಿವಶರಣರು ಅಂಶಗಣದ ''ಕರ್ಣಾಟವಿಷಯಜಾತಿ''ಯ ಛಂದಃಪ್ರಕಾರಗಳಲ್ಲಿ ಹಲವನ್ನು ಬಳಸಿರುವರಲ್ಲದೆ, ಮಾತ್ರಾಗಣಘಟಿತವಾದ ಷಟ್ಪದಿಗಳನ್ನೂ ಅವುಗಳಿಂದ ನಿಷ್ಪನ್ನವಾದ ಮತ್ತಿತರ ಪ್ರಕಾರಗಳನ್ನೂ ಯಥೇಚ್ಛವಾಗಿ ಬಳಸಿದ್ದಾರೆ.

ಮುಂದೆ ತಾಳೆ ನೋಡಲೆಂದು ಕೆಲವು ಅಚ್ಚ ಕನ್ನಡ ಛಂದಸ್ಸುಗಳನ್ನು ಕೊಟ್ಟಿದೆ. ಅವುಗಳ ಪರಸ್ಪರ ಸಾಮ್ಯ-ಸಂಯೋಜನೆಗಳನ್ನು ಗಮನಿಸಿ. ಅವನ್ನು ಇಲ್ಲಿ ಜೋಡಿಸಿರುವ ಕ್ರಮದಲ್ಲಿ ಛಂದೋವಿನ್ಯಾಸದ ಕಡೆ ಅವಧಾರಣೆಯೇ ಹೊರತು, ಅವು ಹಾಗೆ ನಿಷ್ಪನ್ನವಾದವೆಂಬುದರ ಕಡೆಗಲ್ಲ.

**ಏಳೆ:**

ವಿ + ವಿ + ವಿ + ವಿ
ವಿ + ಬ್ರ + ವಿ

**ತ್ರಿಪದಿ:**

ವಿ + ವಿ + ವಿ + ವಿ
ವಿ + ಬ್ರ + ವಿ । + ವಿ
ವಿ + ಬ್ರ + ವಿ

**ಸಾಂಗತ್ಯ:**

ವಿ + ವಿ + ವಿ + ವಿ
ವಿ + ವಿ + ಬ್ರ

ವಿ + ವಿ + ವಿ + ವಿ

ವಿ + ವಿ + ಬ್ರ

**ಸೀಸ:**

ವಿ + ವಿ + ವಿ + ವಿ + ವಿ + ವಿ + ಬ್ರ + ಬ್ರ x ೪

**ಪಿರಿಯಕ್ಕರ:**

ಬ್ರ + ವಿ + ವಿ + ವಿ + ವಿ + ವಿ ರು x ೪

**ಷಟ್ಪದಿ:**

ವಿ + ವಿ

ವಿ + ವಿ

ವಿ + ವಿ + ರು

ವಿ + ವಿ

ವಿ + ವಿ

ವಿ + ವಿ + ರು

**ವೀರಚೌಪದಿ ಅಥವಾ ಚಿಕ್ಕ ಸೀಸ :**

ವಿ + ವಿ + ವಿ + ವಿ

ವಿ + ವಿ + ರು

ವಿ + ವಿ + ವಿ + ವಿ

ವಿ + ವಿ + ರು

**ಅಕ್ಕರಿಕೆ:**

ವಿ + ಬ್ರ + ವಿ + ಬ್ರ + ವಿ + ರು x ೪

**ದೊರೆಯಕ್ಕರ:**

ವಿ + ವಿ + ಬ್ರ + ವಿ + ವಿ + ಬ್ರ x ೪

**ಛಂದೋವತಂಸ:**

ವಿ + ವಿ + ವಿ + ಬ್ರ x ೪

**ಮದನವತಿ:**

ರು + ರು + ರು + ಬ್ರ x ೪

**ಉತ್ಸಾಹ:**

ಬ್ರ + ಬ್ರ + ಬ್ರ + ಬ್ರ + ಬ್ರ + ಬ್ರ + ಬ್ರ + ೧ ಗುರು x ೪

ಮುಂದೆ, ಈ ಗ್ರಂಥಸ್ಥ ಹಾಡುಗಳಲ್ಲಿ ಯಾವ ಯಾವ ಛಂದಃಪ್ರಕಾರಗಳು ದೊರೆಯುವವೆಂಬುದನ್ನು ಗಮನಿಸೋಣ:

**ಏಳೆ:**

ವಿ ವಿ ವಿ ವಿ
ನಮ್ಮಕ : ಪಿಲಸಿದ್ಧ : ಮಲ್ಲೇಶ್ವ : ರಯ್ಯನ
ವಿ ಬ್ರ ವಿ
ಬಿಗಿಬಿಗಿ : ದಪ್ಪಿ : ಕೊಳ್ಳಿರೋ

(ನುಡಿ ೯೧೮)

**ತ್ರಿಪದಿ:**

ವಿ ವಿ ವಿ ವಿ
ಸಂಪಗೆ : ಯ ಮರನ : ನೇಱಿ ಪ : ರಿಮಳದ
ಬ್ರ ಬ್ರ ವಿ ವಿ
ಕಂಪ : ಕೊಯ್ವ : ನಾರೆಲೋ। ಇಂಪುಳ್ಳ
ವಿ ಬ್ರ ವಿ
ಜಾಣನ : ಲ್ಲಮ ಕಾ : ಣೆ ಕೆಳದಿ

(ನುಡಿ ೭೩೪)

ಮೇಲೆ ನಿದರ್ಶನವಾಗಿ ಕೊಟ್ಟಿರುವ ತ್ರಿಪದಿಯ ಎರಡನೆಯ ಪಾದದ ಮೊದಲನೆಯ ಗಣ ವಿಷ್ಣುವಿಗೆ ಬದಲಾಗಿ ಬ್ರಹ್ಮವಾಗಿದೆ.

**ಉತ್ಸಾಹ:**

ಬ್ರ ಬ್ರ ಬ್ರ ಬ್ರ ವಿ ವಿ ಬ್ರ –
ಅಱಿವು : ಗೆಟ್ಟು : ಕುಱುಹ : ಮಱೆದು : ನಿರ್ಣಯ : ನಿಷ್ಪತ್ತಿ : ನಿಜ : ವ
ಬ್ರ ಬ್ರ ಬ್ರ ಬ್ರ ಬ್ರ ಬ್ರ –
ಸಱಿಸಿ : ತೊಳಲಿ : ಬಳಲ : ಲೇಕೆ : ಸ್ವಾನು : ಭಾವ : ಕೆ
ಬ್ರ ಬ್ರ ಬ್ರ ಬ್ರ ಬ್ರ ಬ್ರ ಬ್ರ
ಕಱೆಯ : ಮಱೆಯ : ಮಾಯಾ : ಬಲೆಯ : ಹಱಿಯ : ಲೊಡನೆ : ಬಚ್ಚ
ಬ್ರ ಬ್ರ ಬ್ರ ಬ್ರ ಬ್ರ ಬ್ರ ಬ್ರ –
ಬಱಿಯ : ಬೆಱಗು : ನಿಱುಗೆ : ಯಾಗಿ : ನಿಂದ : ನಿರುಪ : ಮ ಮಹಿ: ಮ

(ನುಡಿ ೩೫೭)

ಪ್ರತಿ ಪಾದದಲ್ಲಿಯೂ ಏಳು ಬ್ರಹ್ಮಗಣ ಮತ್ತು ಮೇಲೊಂದು ಗುರುವಿರುವ ನಾಲ್ಕು ಪಾದಗಳ ''ಉತ್ಸಾಹ'' ಛಂದಸ್ಸಿನ ಸುಳುಹನ್ನು ಮೇಲಣ ನುಡಿಯಲ್ಲಿ ಕಾಣಬಹುದು. ಕೆಲವೆಡೆ ಬ್ರಹ್ಮಕ್ಕೆ ಬದಲಾಗಿ ವಿಷ್ಣುವೂ, ಕೆಲವೊಮ್ಮೆ ಪಾದಗಳಲ್ಲಿ ಒಂದು ಬ್ರಹ್ಮಗಣದಷ್ಟು ಅಥವಾ ಒಂದು ಗುರುವಿನಷ್ಟು ಹೆಚ್ಚು ಕಮ್ಮಿ ಇರುವುದೂ ಉಂಟು:

**ಛಂದೋವತಂಸ:**

ವಿ ವಿ ವಿ ಬ್ರ<br>
ಗುರು ಕರು : ಣದಿ ಶುದ್ಧ : ಶರೀರಿಯಾ : ಗಿ ಸ್ವೀ<br>
ಬ್ರ ಬ್ರ ವಿ ಬ್ರ<br>
ಕರಿಸಿ : ದ ಶಿವ : ಲಿಂಗಾರ್ಚ : ನೆಯ<br>
ಬ್ರ ವಿ ವಿ ಬ್ರ<br>
ಹೊಱಗೆ : ಮಾಡುವ : ಮಾರುಗ : ಕ್ರಿಯಾ<br>
ವಿ ವಿ ವಿ ಬ್ರ<br>
ಪರಮಸಂ : ಪತ್ತಿನೊ : ಳಾದ ಶ : ರಣ

**ಕಿರಿಯಕ್ಕರ:**

ವಿ ವಿ ರು<br>
ಐದು ಬ : ಣ್ಣದ ಪಕ್ಷಿ : ಮೈದೊಳೆವುದು। ಒಂದು ಚಂದಮಾಮ<br>
ವಿ ವಿ ರು<br>
ನೆಯ್ದಿಲು : ಕುಮುದವು : ನೆಱವಾದುದು। ಒಂದು ಚಂದಮಾಮ<br>
ವಿ ಬ್ರ ರು<br>
ಹೊಯ್ದಲೆ : ಚಿಗಿತು : ಹೊಸತಾದುದು। ಒಂದು ಚಂದಮಾಮ<br>
ಬ ವಿ ವಿ<br>
ಐದಲೆ :ನೂಱೊಂದು : ತಲೆಯಾದುದು ।ಒಂದು ಚಂದಮಾಮ

(ನುಡಿ ೯೭೦)

ಹೀಗೆ ೧೬೭ನೆಯದಾದ ''ಚಂದಮಾಮ'' ಎಂಬ ಹಾಡು ಸಂಪೂರ್ಣವಾಗಿ (ನುಡಿ ೯೭೦) ಕಿರಿಯಕ್ಕರವನ್ನು ಹೋಲುವುದು. ಆದರೆ ಮೂರನೇ ಪಾದದ ಎರಡನೇ ಗಣವು ವಿಷ್ಣುವಿಗೆ ಬದಲಾಗಿ ಬ್ರಹ್ಮವಾಗಿದೆ. ಮೇಲಣ ಹಾಡಿನ ಛಂದೋವಿನ್ಯಾಸದ ವಿಶೇಷಾಂಶವೇನೆಂದರೆ–ಅದರ ಪ್ರತಿಯೊಂದು ನುಡಿಯ ಪ್ರತಿಯೊಂದು ಪಾದದ ಕೊನೆಗೂ (ಛಂದಸ್ಸಿನ ಪರಿಧಿಯ ಹೊರಗೆ ನಿಂತ) ''ಒಂದು ಚಂದಮಾಮ'' ಎಂಬ ಮಾತು ಪಲ್ಲವಿಯಾಗಿ ಪುನರಾವೃತ್ತವಾಗಿ ಸೇರಿ ಬಂದಿದೆ.

ವಿ ವಿ ರು<br>
ಕಂಡರೆ : ಬಿಡದಿಹ : ಮೂಕುತಿಯ। ದಿಟ<br>
ವಿ ವಿ ರು<br>
ಗಂಡಡೆ : ಕೊಡುವುದು : ಮೂಕುತಿಯ।<br>
ವಿ ವಿ ರು<br>
ಮಂಡೆಯ : ಪಶ್ಚಿಮ : ದ್ವಾರವ ನೀ। ನೆಱೆ<br>
ವಿ ವಿ ರು<br>
ಕಂಡು ಸು : ಖಿಸುತಿಪ : ಮೂಕುತಿಯ। (ನುಡಿ ೭೫೧)

ಮೇಲಣ ನುಡಿಯೂ ಅದರ ಹಿಂದಣ ನುಡಿಯಂತೆ ''ಕಿರಿಯಕ್ಕರ''ವೇ ಆದರೂ– ಇದರಲ್ಲಿ ಇನ್ನೊಂದು ವಿಶೇಷವಿದೆ: ಮೊದಲನೇ ಮತ್ತು ಮೂರನೇ ಪಾದಗಳ ಕೊನೆಯ ಅಧಿಕಗಣವು – ಮುಂದಿನ ಪಾದಕ್ಕೆ ಜಿಗಿಯಲು ಸಿಡಿಪೀಠದಂತಿದ್ದು, ಪಲುಕಿಗೆ ಪುಟವನ್ನು ಕೊಟ್ಟು ನೂತನ ಯತಿಲಯವಿಲಾಸವನ್ನು ಮೆರೆದಿದೆ.

ಮುಂದೆ ಮಾತ್ರಾಗಣಗಳಿಂದಾದ ಷಟ್ಪದಿಛಂದಸ್ಸು ಶರಣರ ಹಾಡುಗಳಲ್ಲಿ ಹೇಗೆ ಸುಳಿದಿದೆಯೆಂಬುದ್ದು ನೋಡೋಣ :

**ಭೋಗಷಟ್ಪದಿ:**

ಮಾರ : ಮಥನ : ತ್ರಿಪುರ : ದಹನ
ಕಾರ : ಣದೊಳು : ನೋಡೆ : ನಯನ
ವಾರಿ : ಬಿಂದು : ಬೀಳ : ಲುದಯ : ವಾಗಿ : ಮರ್ತ್ಯ : ರ
ಘೋರ : ಪಾತ : ಕಂಗ : ಳನ್ನು
ದಹಿಸಿ : ಭಕ್ತ : ಜನದೊ : ಳೊಪ್ಪಿ

-- ∪ ∪
ತೋಱು : ತಿರ್ಪ : ರುದ್ರಾಕ್ಷಿಯು : ಪುಣ್ಯ : ಪುಂಜ : ವು (ನುಡಿ ೪೨)

ಮೇಲಣ ವಿನ್ಯಾಸದಲ್ಲಿ ವಿಶೇಷಾಂಶವೆಂದರೆ-ಮೂರು ಮಾತ್ರೆಯ ಪೃಥಕ್ಕಾದ ಎರಡು ಗಣಗಳಿಗೆ ಬದಲಾಗಿ, ೪+೨ ಅಥವಾ ೨+೪ ಮಾತ್ರೆಗಳ ತೂಕದ ಜಂಟಿ ಗಣವನ್ನು ಕಾಣಬಹುದು.

ಹಸ್ತ : ದಲ್ಲಿ : ಬಾಹು : ಕಂಠ
ದಲ್ಲಿ : ಕರ್ಣ : ಯುಗಳ : ದಲ್ಲಿ
ಉತ್ತ : ಮಾಂಗ : ದಲ್ಲಿ : ಶಿಖೆಯ : ಮೂಲ : ದಲ್ಲಿ : (೪೪ನೇ ನುಡಿಯ ಅರ್ಧ)

ಮೇಲಣ ಉಲ್ಲೇಖದ ಮೂರನೇ ಪಾದದ ಕೊನಗೆ ಇರಬೇಕಾದ ಒಂದು 'ಗುರು'ವಿನ ಕೊರತೆಯಿದೆ. ಮುಂದಣ ಉಲ್ಲೇಖದಲ್ಲಿ (ಮೇಲೆ ಹೇಳಿದಂತಹ ಜಂಟಿ ಗಣಗಳನ್ನು ಕಾಣಬಹುದು ಮತ್ತು) ಎರಡನೇ ಪಾದದ ಕೊನೆಗೆ ಐದು ಗುರುವಿನಷ್ಟು ಅಧಿಕವಿರುವುದನ್ನೂ ಗಮನಿಸಬಹುದು.

ಮಂತ್ರ : ಮೂಲ : ಗೂಢ : ಪದದ

- -∪ ∪ - -∪ ∪
ಚಿಂತಾಮಣಿ : ರುದ್ರಾಕ್ಷಿಗ : ಳವ
ಱಿಂತು : ವಱಿದು : ಧರಿಸ : ಬಲ್ಲ : ಡಾತ : ರುದ್ರ : ನು

(೭ನೇ ಹಾಡಿನ ಪಲ್ಲವಿ)

ಮೇಲಣ ಉದಾಹರಣೆಗಳಲ್ಲಿ ಆದಿಪ್ರಾಸ ನಿಯಮವಿನ್ನೂ ಬಲಗೊಂಡಿಲ್ಲದಿರುವುದನ್ನು ಗಮನಿಸಬಹುದು.

ಒಂದು ಗಣವು ಮಾತ್ರಾದೃಷ್ಟಿಯಿಂದ ಮಿಕ್ಕ ಗಣಗಳಿಗಿಂತ ದೊಡ್ಡದಾಗಲಿ ಚಿಕ್ಕದಾಗಲಿ, ಅವನ್ನು ಉಳಿದವಕ್ಕೆ ಸಮಗೊಳಿಸಲು, ದ್ರುತಗತಿಯಲ್ಲಿ ಅಥವಾ ವಿಲಂಬಿತಗತಿಯಲ್ಲಿ ಉಚ್ಚರಿಸಬೇಕಾಗಬಹುದು: (೪೫೭ನೇ ನುಡಿಯ ನಾಲ್ಕನೇ ಪಾದದ ಕೊನೆಯ ಗಣ ಮತ್ತು ೪೬೦ನೇ ನುಡಿಯ ಎರಡನೇ ಪಾದದ ಎರಡನೇ ಗಣ ನೋಡಿ.)

ಎಷ್ಟೋ ವೇಳೆ ರೇಫಸಂಯುಕ್ತಾಕ್ಷರದ ಹಿಂದಣ ಅಕ್ಷರ ಗುರುವಾಗಿರುವುದಿಲ್ಲ–೪೮೩ನೇ ನುಡಿಯ ನಾಲ್ಕನೆ ಪಾದದ ಕೊನೆಯ ಗಣ ನೋಡಿ.

**ಭಾಮಿನೀ ಷಟ್ಪದಿ:**

ಪಶು ಪ : ಶುವಿನಂ : ತಿಹುದು : ತಾನಾ
ಪಶುವಿ : ನೊಳಗಣ : ಅಮೃತ : ದಂತಿಹ
ವಿಷಯ : ವಿಷಯಗ : ಳಾಗಿ : ಹವು ತಾ : ನಾ ವಿ : ಷಯದೊಳ : ಗೆ

(೪೮೨ನೇ ನುಡಿಯ ಅರ್ಧ)

**ಪರಿವರ್ಧಿನಿ ಷಟ್ಪದಿ:**

ಜಗವಂ : ದ್ಯ ಗೆ ಬೇ : ಟವ ಮಾ : ಡಿದೆ ನಾ
ಹಗೆಯಾ : ದೆನು ಸಂ : ಸಾರ : ಕ್ಕೆಲ್ಲಾ
UU–U
ನಗುತ್ತೆ : ದರೆಲಜ್ಜೆ : ನಾಚಿಕೆ : ಯೆಲ್ಲವ : ತೊಱೆದವ : ೞಂದೆ : ನ್ನ
ಗಗನಗಿ : ರಿಯ ಮೇ : ಲಿರ್ದಹ : ನೆಂದಡೆ
ಲಗುನಿಯಾಗಿ ನಾ : ನಱಸುತ : ಬಂದೆನು
ಅಘಹರ : ಕರುಣಿಸು : ನಿಮಗಾ : ನೊಲಿದೆನು : ಮಿಗೆ ಒಲೆ : ದಾರತಿ : ಯ

(ನುಡಿ ೨೨೫)

ಮೇಲಣ ಪರಿವರ್ಧಿನಿಯ ಮೂರನೇ ಪಾದದ ಎರಡನೇ ಗಣವನ್ನು ಮಾತ್ರಾಗಣವಲ್ಲದೆ ಅಂಶಗಣವೆಂದುಕೊಂಡರೆ ಅದೊಂದು ವಿಷ್ಣುಗಣವಾಗುವುದು. ಮಾತ್ರಾಗಣದ ಈ ಮೇಲಣ ವಿನ್ಯಾಸದಲ್ಲಿ ಕಾಣಿಸಿಕೊಂಡಿರುವ ಈ ವಿಧವಾದ ಅಂಶಗಣವು, ಅಂಶ ಛಂದಸ್ಸು ಮಾತ್ರಾಛಂದಸ್ಸಾಗಿ ಪರಿವರ್ತಿತವಾದ ಮಾರ್ಗದಲ್ಲಿ ಕಾಣುವ ಪಳೆಯುಳಿಕೆಯಂತಿದೆ. ಮತ್ತು ಐದನೇ ಪಾದದ ಮೊದಲ ಎರಡು ಗಣ ೪+೪ ಆಗಿ ಒಡೆಯದೆ ೩+೫ ಆಗಿ ಹೊಂದಿಕೊಂಡಿವೆ.

**ಕುಸುಮ-ವಾರ್ಧಕ ಷಟ್ಪದಿಗಳು:**

೫ ೫ ೫ ೫
೧. ಭರ ಭರದ : ಉರವಣೆಯ : ಹರಿವ ಪ್ರಕೃ : ತಿಯ ಜಲದ
ತೆರೆ ತೆರೆಯ : ಲಂಘನೆಯ : ಭರಿತನ : ಲ್ಲ
ಶರಿರಧಾ : ರನು ಅಲ್ಲ : ಶಬುದ ಮುಗು : ದನು ಅಲ್ಲ
ಪರಗಮನ : ರಹಿತ ತಾ : ಲಿಂಗೈಕ್ಯ : ನು.

೫ ೫
೨. ಭರಭರದ : ಉರವಣೆಯ
ಹರಿವ ಪ್ರಕೃ : ತಿಯ ಜಲದ
ತೆರೆತೆರೆಯ : ಲಂಘನೆಯ : ಭರಿತನ : ಲ್ಲ
ಶರಿರಧಾ : ರನು ಅಲ್ಲ
ಶಬುದಮುಗು : ದನು ಅಲ್ಲ
ಪರಗಮನ : ರಹಿತ ತಾ : ಲಿಂಗೈಕ್ಯ : ನು. (ನುಡಿ ೨೭೪)

ಮೇಲಣ ಎರಡೂ, ಜೋಡಣೆಯಲ್ಲಿ ಬೇರೆಬೇರೆಯಾದರೂ ಒಂದೇ ಪದ್ಯವೆಂಬುದನ್ನಷ್ಟೇ ಅಲ್ಲ– ಆ ಎರಡರೊಳಗಣ ಛಂದೋವಿನ್ಯಾಸವೂ ಸಂಪೂರ್ಣವಾಗಿ ಒಂದೇ ಎಂಬುದನ್ನೂ ಮನಗಾಣಬಹುದು. ಪಂಚಮಾತ್ರಾಗಣವಿನ್ಯಾಸದ ಮೊದಲನೇ ''ಚೌಪದಿ''ಯನ್ನು ಅದರ ಕೆಳಗೆ ತೋರಿಸಿರುವಂತೆ ಸುಲಭವಾಗಿ ಷಟ್ಪದಿಯಾಗಿ ಬಿಡಿಸಬಹುದು. ಆದರೆ ನಿಜವಾದ ಷಟ್ಪದಿಗೂ ಮೇಲೆ ಬಿಡಿಸಿ ತೋರಿಸಿರುವ ಷಟ್ಪದಿಗೂಇರುವ ಒಂದೇ ಒಂದು ವ್ಯತ್ಯಾಸವೆಂದರೆ–ಚೌಪದಿಯ ಮೂರನೇ ಪಾದವನ್ನು ಮುರಿದಾಗ ಆದ ಷಟ್ಪದಿಯ ಐದನೇ ಪಾದದ ಆದಿಪ್ರಾಸವು ಉಳಿದ ಪಾದಗಳ ಆದಿಪ್ರಾಸಕ್ಕೆ ಹೊಂದಿಕೊಳ್ಳುವುದಿಲ್ಲ. ಆದರೂ ಮೇಲೆ ಕೊಟ್ಟಿರುವ ಮೊದಲನೆಯ ವಿಧದ ಚೌಪದಿಗಳಲ್ಲಿ ''ಷಟ್ಪದಿ''ಯು ಅಂತರ್ನಿಹಿತವಾಗಿರುವುದೆಂಬುದನ್ನು ಗಮನಿಸಬೇಕು. ''ತ್ರಿವಿಧಿ''ಗಳೆಂಬ ಶರಣರ ಕೃತಿಗಳನ್ನು ಯಾಂತ್ರಿಕವೆನ್ನುವಷ್ಟು ಸುಲಭವಾಗಿ ಷಟ್ಪದಿಯಾಗಿ ಮಾರ್ಪಡಿಸಬಹುದು :

ಚೆನ್ನೆಯರ : ಬಲೆಯಲ್ಲಿ : ಎನ್ನನಿರಿ : ಸಿದೆ ಪ್ರಭುವೆ
ಇನ್ನಿದಕೆ : ಭಾವಜನು : ಬೇಂಟೆಗಾ : ರ
ಕುನ್ನಿಗಳು : ತಾವೈದು : ಎನ್ನಗ್ರಹಿ : ಸದ ಮುನ್ನ
ಚಿನ್ಮಯ : ಪ್ರಭು ಸಲಹೊ : ಯೋಗಿನಾ : ಥ

(ಸಿದ್ಧರಾಮನ ಮಿಶ್ರಸ್ತೋತ್ರ ತ್ರಿವಿಧಿ, ೫೪)

ಚೆನ್ನೆಯರ : ಬಲೆಯಲ್ಲಿ
ಎನ್ನನಿರಿ : ಸಿದೆ ಪ್ರಭುವೆ
ಇನ್ನಿದಕೆ : ಭಾವಜನು : ಬೇಂಟೆಗಾ : ರ
ಕುನ್ನಿಗಳು : ತಾವೈದು
ಎನ್ನಗ್ರಹಿ : ಸದ ಮುನ್ನ
ಚಿನ್ಮಯ : ಪ್ರಭು ಸಲಹೊ : ಯೋಗಿನಾ : ಥ

ಮೇಲಣ ತ್ರಿವಿಧಿಯಲ್ಲಿ ಷಟ್ಪದಿಯು ಅಡಗಿದೆಯೆಂಬುದಕ್ಕಿಂತ, ಅದು ಷಟ್ಪದಿಯೇ ಆಗಿದೆಯೆನ್ನಲೂಬಹುದು. ಈ ವಿಧದ ಹೆಣಿಗೆ ಶರಣರ ಗೀತಾ-ಛಂದಸ್ಸಿನಲ್ಲಿ ಅಪರೂಪವೇನಲ್ಲ.

ಕುಸುಮದ ದ್ವಿಗುಣೀಕೃತವೇ ವಾರ್ಧಕ. ಶಿವದಾಸ ಗೀತಾಂಜಲಿಯ ಹಲವು
ಹಾಡುಗಳಲ್ಲಿ ಈ ಬಂಧವಿದೆ :

ಅನವರತ : ದಾಸೋಹ : ದಲ್ಲಿ ಮನ : ಬೆರಸಿ ನಿಜ
ತನು ಕರಗು : ವಂ ಲಿಂಗ : ಜಂಗಮವ : ಕಾಣುತ್ತ
ವಿನಯದಿಂ : ದಶ್ರುಜಲ : ದಾನಂದ : ದಿಂದವರ: ಪದಸೋಂಕಿ : ನಿಂ ಸುರಿಯ : ಲು
ತನುಪುಳಕ : ತಳಿತು ತನ: ತನಗೆ ಹೊರೆ : ಯೇರಿ ನಲಿ
ದನಿಯ ಕೇಳು : ವಂ ಮಹೋ : ತ್ಸಾಹಭಾ : ವ ಗುಡಿಗಟ್ಟಿ
ಕುಣಿಕುಣಿದು : ಕೂರ್ಮೆಯಿಂ : ಮಾಡಿ ದಣಿ: ವಿಲ್ಲದಿರು : ವಂ ಭಕ್ತ : ಸಂಗಚಿ : ಹ್ನ

(ನುಡಿ ೬೧)

**ಪರಿವರ್ಧಿನಿ:**

ತನ್ನಯ : ನೆಳಲಿಗೆ : ತಾನೇ : ಮುನಿವನು
ತನ್ನಯ : ಹೆಸರಿಗೆ : ತಾನೇ : ನಗುವನು
ತನ್ನಯ : ಹಮ್ಮನು : ತಾನೇ : ನಿಂದಿಸಿ : ತಾನಿ : ಲ್ಲದ ಮಹಿ : ಮ

–∪∪∪ –∪∪ –∪
ಎನ್ನವರು। ತನ್ನವ । ರೆಂದು : ಮನದೊಳು

– ∪ ∪∪ –∪
ಮನ್ನಣೆಯ। ಮಾಡ : ಸಂದಳಿ : ದುಳಿದನು
ತನ್ನಲಿ : ತಾನಾಗಿ । ಏನು : ಇಲ್ಲದ : ನಿರ್ಣಯ : ನಿರುಪಮ : ನು (ನುಡಿ ೬೩೪)

ಮೇಲಣ ಪರಿವರ್ಧಿನಿಯ ಉತ್ತರಾರ್ಧದಲ್ಲಿ ನಾಲ್ಕು ಮಾತ್ರೆಯ ಗಣವಿನ್ಯಾಸದಲ್ಲಿ ಶರಣರು ಸಾಧಿಸಿರುವ ವೈವಿಧ್ಯವು ಅದ್ಭುತವಾಗಿದೆ.

ಕೆಲವು ಹಾಡುಗಳಲ್ಲಿ, ಷಟ್ಪದಿಯ ಒಂದು ಪದ್ಯಾರ್ಧದಷ್ಟೇ ಒಂದು ನುಡಿಯಾಗಿದೆ.

ತನುಗುಣ : ಗಳಸಂ । ಗೀಕರಿ । ಸದೆ ಮ
ತ್ತನುಕರಿ : ಸದೆ ಕರ : ಣಾದಿ ವಿ : ಕಾರವ
ನೆನಹನು : ಲಿಂಗದೊ : ಳಗೆ ಮು : ಟ್ಟಿಸ ಬಲ್ಲಡೆ ತಾ : ನದು ಶೀ : ಲ (ನುಡಿ ೨೬೮)

ಶರಣರು ತಮ್ಮ ಹಾಡುಗಳಲ್ಲಿ ತಮ್ಮ ಕಾಲದವರೆಗೆ ಅನೂಚಾನವಾಗಿ ಬಂದಿದ್ದ ಅಂಶಗಣದ ಛಂದಸ್ಸನ್ನು ಯಥೇಚ್ಛವಾಗಿ ಬಳಸಿರುವರಲ್ಲದೆ, ಮಾತ್ರಾಗಣದ ಛಂದಸ್ಸುಗಳ ನಿರ್ಮಾಣದಲ್ಲಿ ಅಪೂರ್ವ ಪ್ರಯೋಗಗಳನ್ನು ಹೀಗೆ ನಡೆಸಿರುವರೆನ್ನಬಹುದು. ಅತ್ಯಾಧುನಿಕವೆನ್ನಬಹುದಾದ ಛಂದಃಪ್ರಕಾರಗಳೂ ಈ ಶಿವದಾಸರ ಗೀತಾಸಾಹಿತ್ಯದೊಡನೆ ರೂಪಧರಿಸುತ್ತ ಬಂದಿರುವುದನ್ನೂ ಗುರುತಿಸಲು ಸಾಧ್ಯವಿದೆ. ಪ್ರಸ್ತುತ ಪೀಠಿಕೆಯಲ್ಲಿ ಸ್ಥಳಾಭಾವದಿಂದ – ಲಂಬಿಸಲಾಗಿಲ್ಲ. ಉದಾಹರಣೆಗೆ, ಮೇಲೆ ಉಲ್ಲೇಖಿಸಿರುವ ನುಡಿಯ ಛಂದೋವಿನ್ಯಾಸಕ್ಕೆ ಒಂದು ಗಣದಷ್ಟು ಸೇರಿಸುವುದರಿಂದ ಅದು ಹೇಗೆ ಪ್ರತ್ಯೇಕ ಛಂದಃಪ್ರಕಾರವಾಗುವುದೆಂಬುದನ್ನು ನೋಡಿ :

ಏಸು : ಬಾರಿ : ಬಂದ : ಭವದ
ದೋಷ : ಗಳನು : ಕೆಡಿಸಿ : ಮುಕ್ತಿ
ವಾಸ : ದೊಳಗೆ : ಕೂಡು : ವುದು ಮ
ಹಾ ಶಿ : ವೈಕ್ಯ : ದರುಶ : ನ (ನುಡಿ ೧೯೭)

ಮತ್ತೆ, ಈ ಕೆಳಗಣ ನುಡಿಯ ಎರಡನೇ ಪಾದದಲ್ಲಿ ಒಂದು ಮಾತ್ರೆಯಷ್ಟನ್ನು ತಗ್ಗಿಸುವುದರಿಂದ ಅದು ಹೇಗೆ ಬೇರೆ ''ಚಂದ''ವಾಗಿದೆ ನೋಡಿ :

ಬೆಳಗಿ : ನೊಳಗೆ : ತೊಳಗಿ : ಬೆಳಗಿ
ಹೊಳೆವ : ಜ್ಯೋತಿ : ಕಾಂತಿ : ಯ
ಬೆಳಗು : ಗೊಹೇ : ಶ್ವರನ: ಘನದ
ತಿಳಿವು : ಲಿಂಗ : ನಿಜಪ : ದ (ನುಡಿ ೨೪೧)

ಒಂದು ಅರ್ಧಷಟ್ಪದಿಯ ಛಂದೋವಿನ್ಯಾಸವನ್ನು ಶತಮಾನಗಳ ಹಿಂದೆಯೇ ಎಷ್ಟು ಬಗೆಯಲ್ಲಿ ಸೊಗಸಾಗಿಸಿರುವರೆಂಬುದನ್ನು ನೆನೆದು – ಆ ಶಿವದಾಸರು ಈ ಕಾರಣದಿಂದಲಾದರೂ ಪವಾಡಪುರುಷರೆಂದರೆ ಆಶ್ಚರ್ಯವೇನೂ ಇಲ್ಲ.

*ಶಿವದಾಸ ಗೀತಾಂಜಲಿ, ೧೯೬೩,*
*ಪೀಠಿಕೆ, ಪು. ೭೭-೮೨; ೧೨೯-೪೨*

# ೩೯. ವಿಘ್ನರಗಳೆ

● ಕೆ. ಜಿ. ನಾರಾಯಣ ಪ್ರಸಾದ್

ಕರ್ಣಾಟಕ ವಿಷಯ ಜಾತಿಮಟ್ಟುಗಳ ಪೈಕಿ ನಾಗವರ್ಮನಾಗಲಿ, ಜಯಕೀರ್ತಿಯಾಗಲಿ ಸೇರಿಸದೆ ಇರುವ ಬಂಧಗಳ ಪೈಕಿ ವಿಘ್ನರಗಳೆಯೂ ಒಂದು. ಈವರೆಗೆ ಈ ಬಂಧವನ್ನು ಗುರುತಿಸಿ ವಿಶ್ಲೇಷಿಸಿ ಹೆಸರಿಸುವ ಪ್ರಯತ್ನಗಳು ವಿಶೇಷವಾಗಿ ನಡೆದಿಲ್ಲವೆಂದೇ ಹೇಳಬೇಕು. ಆದ್ದರಿಂದ ಅದಕ್ಕೆ ಈ ಹೆಸರು ಕೊಟ್ಟು, ಅದು ಯಾವ ಯಾವ ರೂಪಗಳಲ್ಲಿ ಬಳಕೆಯಾಗುತ್ತ ಬಂದಿದೆ, ಮಾತ್ರಾಛಂದಸ್ಸಿನ ರಗಳೆಗೂ ಅದಕ್ಕೂ ಏನಾದರೂ ಸಂಬಂಧವಿದೆಯೇ ಎಂಬ ಅಂಶಗಳನ್ನು ಕುರಿತು ವಿಚಾರಮಾಡುವುದು ಪ್ರಕೃತ ಪ್ರಬಂಧದ ಉದ್ದೇಶವಾಗಿದೆ.

ಲಭ್ಯ ಲಕ್ಷಣಗಳ ವಿಶ್ಲೇಷಣೆಗೆ ತೊಡಗುವ ಮೊದಲು ಒಂದು ಕಾಲ್ಪನಿಕ ಬಂಧವನ್ನು ಸಿದ್ಧಪಡಿಸಿಕೊಂಡು ಅದನ್ನು ವಿಘ್ನರಗಳೆಯೆಂದು ಕರೆಯೋಣ. ಮಾತ್ರಾಛಂದಸ್ಸಿನ ರಗಳೆಗಳ ಸಾಮಾನ್ಯ ಲಕ್ಷಣಗಳೆಂದರೆ, ೧. ಮುಕ್ತಪದಿತ್ವ, ೨. ಪ್ರತಿಪಾದದಲ್ಲೂ ಸಾಮಾನ್ಯವಾಗಿ ಒಂದೇ ರಚನೆಯ ನಾಲ್ಕು ನಾಲ್ಕು ಗಣಗಳಿರುವಿಕೆ, ಮತ್ತು ೩. ಎರಡೆರಡು ಪಾದಗಳಿಗೆ ಆದ್ಯಂತಪ್ರಾಸಗಳಿರುವಿಕೆ. ಈ ಲಕ್ಷಣಗಳ ಆಧಾರದ ಮೇಲೆ ಈ ವಿಘ್ನರಗಳೆಯಲ್ಲಿರಬೇಕಾದ ಲಕ್ಷಣಗಳನ್ನು ಹೀಗೆ ಪಟ್ಟಿಮಾಡಬಹುದು:

೧. ಇದು ಮುಕ್ತಪದಿ ಬಂಧವಾಗಿರಬೇಕು; ಎಂದರೆ ಇದರಲ್ಲಿ ಪಾದಗಳ ಸಂಖ್ಯೆಯು ಅಗತ್ಯಕ್ಕೆ ತಕ್ಕಂತೆ ಹೆಚ್ಚೂ ಕಡಿಮೆಯಾಗಲು ಅವಕಾಶವಿರಬೇಕು.

೨. ಪ್ರತಿ ಪಾದದಲ್ಲೂ ನಾಲ್ಕು ನಾಲ್ಕು ವಿಘ್ನಗಣಗಳಿರಬೇಕು.

೩. ಎರಡೆರಡು ಪಾದಗಳಿಗೆ ಆದ್ಯಂತ ಪ್ರಾಸಗಳಿರಬೇಕು.

ಈ ಲಕ್ಷಣಗಳ ಆಧಾರದ ಮೇಲೆ, ಲಬ್ಧಲಕ್ಷ್ಯಗಳನ್ನು ಕುರಿತು ಇನ್ನು ವಿಚಾರ ಮಾಡಬಹುದು.

೧. **ಜನಪದ ಸಾಹಿತ್ಯದಲ್ಲಿ:** ಜನಪದ ಸಾಹಿತ್ಯಕ್ಕೆ ಸಂಬಂಧಿಸಿದಂತೆ, ಸಂಪ್ರದಾಯದ ಹಾಡುಗಳು, ಜನಪದ ಗೀತೆಗಳು ಹಾಗೂ ಯಕ್ಷಗಾನಗಳಲ್ಲಿ ಇದರ ವಿವಿಧ ರೂಪಗಳನ್ನು ಕಾಣಬಹುದು.

ಅ. **ಸಂಪ್ರದಾಯದ ಹಾಡುಗಳು:** 'ದತ್ತಾತ್ರೇಯನ ಹುಟ್ಟು'[೧]:

ಬಲಿಯ ಪಾ. ತಾಳಕ್ಕೆ. ತುಳಿದ ವಾ. ಮನ ಜೋಜೋ. ವಿವಿವಿವಿ
ಛಲದಿಂದ. ಕೊಡಲಿಯ. ಪಿಡಿದ ರಾ. ಮನೆ ಜೋಜೋ. ವಿವಿವಿವಿ

ಆದ್ಯಂತ ಪ್ರಾಸಗಳಿರುವಿಕೆ, ಪ್ರತಿಪಾದದಲ್ಲೂ ನಾಲ್ಕು ನಾಲ್ಕು ವಿಘ್ನಗಳಿರುವುದು, ಈ

೧. ಜಿ. ಎಸ್. ಸರೋಜ (ಸಂ): ಸಂಪ್ರದಾಯದ ಹಾಡುಗಳು, ಮೈಸೂರು, ೧೯೭೮, ಪು. ೩೬೧, ಪ.೧೨೧.

ಎರಡು ಲಕ್ಷಣಗಳೂ ಇಲ್ಲಿವೆ. ಆದರೆ ಮುಕ್ತಪದಿತನ ಮಾತ್ರ ಇಲ್ಲ; ಸುಡಿಯ ಚೌಕಟ್ಟು ಒದಗಿದೆ.

**ಆ. ಜನಪದ ಗೀತೆಗಳು :** 'ಜಗುನೆಯ ಜಕ್ಕಣ್ಣ ಮಗುನೆಯ ಬ್ಯಾಟಿಕಾರ'[2] ಎಂಬ ಗೀತೆಯಲ್ಲಿ ಎರಡೆರಡು ವಿಷ್ಣುಗಣಗಳನ್ನು ಒಂದೊಂದು ಪಾದವಾಗಿಸಿ, ಅಂತಹ ಪಾದಗಳನ್ನು ಉದ್ದಕ್ಕೆ ಕೂಡಿಸುತ್ತಾ ಹೋಗಿರುವುದನ್ನು ಕಾಣಬಹುದು. ಮಾದರಿಗೆ,

| | |
|---|---|
| ಕಟ್ಟೆಯ. ನೀರಿಗೆ. | ವಿವಿ |
| ಬಟ್ಟೆಯ. ನೊಗಿಯಾಕೆ. | ವಿವಿ |
| ಬಟ್ಟನ್ನ. ಕಲ್ಲಿಗು. | ವಿವಿ |
| ತೆಳ್ಳನ್ನ. ನೀರಿಗು. | ವಿವಿ |
| ಜಲ್ಲರಿಸಿ, ಕಾಯುವ. | ರುವಿ |
| ಬಿಸಿಲಿಗು. ಬಿಸಿಲಿಗು. | ವಿವಿ |

ಅಂತ್ಯಪ್ರಾಸ ಇಲ್ಲಿ ಅನಿಯತ; ಕೆಲವೆಡೆ, ಆದಿಪ್ರಾಸವನ್ನು ಕೂಡ ಮೀರಿರುವುದುಂಟು.

'ಜಗಜಗದ ಒಡೆಯನೆ'[3] ಎಂಬುದರಲ್ಲಿ, ನಾಲ್ಕು-ನಾಲ್ಕು ಗಣಗಳ ಪಾದಗಳಿಂದಾದ ಮೂರು ಸುಡಿಗಳಿದ್ದು, ಪ್ರತಿ ಸುಡಿಯ ಅಂತ್ಯದಲ್ಲೂ 'ಶರಣೋ' ಎಂಬ ಶಿಖಾಪದ ಬರುತ್ತದೆ; ಪಲ್ಲವಿಯು ಪುನರಾವರ್ತಿತವಾಗುತ್ತದೆ. ಮೊದಲೆರಡು ಸುಡಿಗಳಲ್ಲಿ ಒಂಬತ್ತು ಒಂಬತ್ತು ಪಾದಗಳಿವೆ; ಮೂರನೆಯದರಲ್ಲಿ ಐದು ಪಾದಗಳಿವೆ. ಇಡೀ ಕೃತಿಯಲ್ಲಿ ಆದ್ಯಂತ ಪ್ರಾಸಗಳಿಲ್ಲ; ಆದರೆ ಮಧ್ಯೆ ಮಧ್ಯೆ, ಮಧ್ಯಪ್ರಾಸದ ಬಳಕೆಯನ್ನು ಗಮನಿಸಬಹುದು. ಇದು ಹೆಚ್ಚು ಕಡಮೆ ಮೇಲೆ ಹೇಳಿದ ವಿಷ್ಣುರಗಳೆಯೇ ಆಗಿದೆಯೆನ್ನಬಹುದು. ಮಾದರಿಗೆ,

| | |
|---|---|
| ಕಟಿಕಟಿ. ಕಲ್ಲೂರು. ಬೆಡಗಿನ. ಬೇಲೂರು. | ವಿವಿವಿವಿ |
| ಮುಂದೆ ತಾ. ವರೆಗೆರೆ. ಹಿಂದೆ ತಾ. ವರೆಗೆರೆ. | ವಿವಿವಿವಿ |
| ಕಲ್ಲೇಶ. ಲಿಂಗಗೇ. ಮಲ್ಲೇಶ. ಲಿಂಗಗೇ. | ವಿವಿವಿವಿ |
| ಒಡೆಯ ನ. ಮ್ಮಪ್ಪಗೆ. ಒಡೆದ ತೆಂ. ಗಿನಕಾಯಿ. | ವಿವಿವಿವಿ |
| ಓಟೆಯನು. ಎಬ್ಬುವರೆ. ಅಂದ ಚೆಂ. ದಕೆ. ಮೂರು | ರುರುವಿವಿ |
| ಪಟ್ಟೆಯನು. ಧರಿಸುವರೆ, ಪಟ್ಟದಾ. ಕುಲಸ್ವಾ*ಮಿ. | ರುರುವಿವಿ |
| ಪಾದಕೇ. ಬಿದ್ದಂಗೆ. ಸತಿಕೊಡೋ. ಸಾದೇವ. | ವಿವಿವಿವಿ |
| ಮತಿಕೊಡೋ. ಮಾದೇವ. ಇದ್ಯವಾ. ಕಲಿಸಯ್ಯ. | ವಿವಿವಿವಿ |
| ಇನಿಯಂಕ. ಸೂಳೆಗೇರಿ. ಸಿದ್ದಗಣ. ನಾಥಗೇ. ಶರಣೋ. | ವಿರುರುವಿ |

(*ಇದು ಕುಲಸೋಮಿ ಎಂದಾಗುತ್ತದೆ; ಅಥವಾ 'ಸ್ವಾ' ಶಿಥಿಲವಾಗುತ್ತದೆ.)

ಅಲ್ಲಲ್ಲಿ ವಿಷ್ಣುವಿಗೆ ರುದ್ರಾದೇಶಬಂದಿರುವುದು ಗತಿವೈವಿಧ್ಯಕ್ಕೆ ದಾರಿ ಮಾಡಿಕೊಟ್ಟಿದೆ.

---

೨ ಕೆ. ಮರುಳಸಿದ್ದಪ್ಪ (ಸಂ.): ಲಾವಣಿಗಳು, ಬೆಂಗಳೂರು, ೧೯೭೨, ಪು. ೬೫

೩ ಮತಿಘಟ್ಟ ಕೃಷ್ಣಮೂರ್ತಿ (ಸಂ.): ಗೀತೆಗಳು ಸಂಪುಟ ೧, ಬೆಂಗಳೂರು, ೧೯೭೫, ಪು. ೧೦೭

ಇ. ಯಕ್ಷಗಾನಗಳು : ವಿಷ್ಣುಗಳೆಯ ಎರಡೆರಡು ಪಾದಗಳ ನುಡಿಗಳನ್ನೂ ನಾಲ್ಕು ನಾಲ್ಕು ಪಾದಗಳ ನುಡಿಯನ್ನೂ ಯಕ್ಷಗಾನಗಳಲ್ಲಿ ಅಲ್ಲಲ್ಲಿ ಕಾಣುತ್ತೇವೆ. ಮಾದರಿಗೆ,

ಮಡದಿ ಗೋ. ಸುಗವಾಗಿ. ಹೊಡೆದಾಡಿ. ನಿಲುವರೊ. ವಿವಿವಿವಿ
ಸಡಗರ. ವನು ತೋರಿ. ತಿರುಗಿ ಹೋ. ಪರೊಯೆಂದು. ವಿವಿವಿವಿ

(ಪಾರ್ತಿಸುಬ್ಬ: ಅಂಗದ ಸಂಧಾನ)

ಇದರಲ್ಲಿ ಆದಿಪ್ರಾಸ ನಿಯತವಾಗಿದ್ದು ಅಂತ್ಯಪ್ರಾಸವಿಲ್ಲದಿರುವುದನ್ನು ಗಮನಿಸಬೇಕು. ಇದರ ಎರಡರಷ್ಟಿರುವ ಬಂಧದಲ್ಲಿ ಕೂಡ ಇದನ್ನೇ ಕಾಣುತ್ತೇವೆ. ಮಾದರಿಗೆ,

ಸಂಗಡಿ. ಸಿದ ಬಾಣ. ಗಳು ಕ್ಷೋಣಿ. ಯಿಂದ ಸ್ವ. ವಿವಿವಿವಿ
ರ್ಗಾಂಗಣ. ಪರಿಯಂತ. ಸೇತುವೆ. ಯಾಯಿತು. ವಿವಿವಿವಿ
ತುಂಗ ವಿ. ಕ್ರಮ ಪಾರ್ಥ. ಭಳಿರೆನು. ತಲೆ ದಿವಿ. ವಿವಿವಿವಿ
ಜಾಂಗನೆ. ಯರು ಸುಮ. ಮಳೆಗಳ. ಕರೆದರು. ವಿವಿವಿವಿ

(ಪಾರ್ತಿಸುಬ್ಬ: ಐರಾವತ)

ಇಂತಹುದೇ ಪಂಚಪದಿಯಲ್ಲಿ ಐದನೆಯ ಪಾದದ ಕೊನೆಯ ವಿಷ್ಣುವಿಗೆ ಬದಲು ಬ್ರಹ್ಮವನ್ನು ತಂದಿರುವಂತಹದು:

ತಿಳಿದು ಲ. ಕ್ಷ್ಮಣನೆದ್ದಾ.ಗಳೆ ಸುಷೇ.ಣನು ಮದ್ದ. ವಿವಿವಿವಿ
ಉಳಿದವ. ರಿಗೆ ಹಿಂಡ. ಲಿಳೆಗೆ ಮೂ. ರ್ಛೆಯ ಗೊಂಡು. ವಿವಿವಿವಿ
ಮಲಗಿದ. ವರು ಬಂದು. ಎರಗೆ ರಾ. ಘವ ಕಂಡು. ವಿವಿವಿವಿ
ಬೆಳಗಾಗು. ವಷ್ಟರ. ಮೊದಲೀ. ಪ. ರ್ವತವನ್ನು. ವಿವಿವಿವಿ
ಕಳುಹಿಸು. ಮುನ್ನಿದ್ದ. ಬಳಿಗೆಂದು. ಪೇಳ್ದ. ವಿವಿವಿಬ್ರ

(ಪಾರ್ತಿಸುಬ್ಬ: ಕುಂಭಕರ್ಣಾದಿ ಕಾಳಗ)

ಒಟ್ಟಾರೆ ಇಲ್ಲೆಲ್ಲ ಮುಕ್ತಪದಿತನಕ್ಕಿಂತ ಹೆಚ್ಚಾಗಿ, ನುಡಿಯ ಚೌಕಟ್ಟನ್ನು ಹೊಂದಿಸುವತ್ತಲೇ ಕವಿಗಳು ಗಮನವನ್ನು ಹರಿಸಿದ್ದಾರೆಂಬುದು ಸ್ಪಷ್ಟವಾಗುತ್ತದೆ.

೨. ದಾಸಸಾಹಿತ್ಯದಲ್ಲಿ: ದಾಸಸಾಹಿತ್ಯಕ್ಕೆ ಸಂಬಂಧಿಸಿದಂತೆ, ಸದ್ಯದಲ್ಲಿ ನಮಗೆ ಸಿಕ್ಕುವ ವಿಷ್ಣುಗಳೆಯ ಅತಿ ಪ್ರಾಚೀನ ಉದಾಹರಣೆಗಳೆಂದರೆ ವಾದಿರಾಜರು ಮತ್ತು ಕನಕದಾಸರು (೧೬ನೆಯ ಶತಮಾನ). ಮಾದರಿಗೆ ಇವನ್ನು ನೋಡಬಹುದು:

i. ಸ್ತಂಭದಿ. ನರಹರಿ. ಎಂಬ ಭಾ. ವದಿ ಬಂದು. ವಿವಿವಿವಿ
ಕುಂಭಿನಿ. ಪತಿ ಬಹು. ಸಂಭ್ರಮ. ಗೊಳುತಲಿ. ವಿವಿವಿವಿ

(ವಾದಿರಾಜ: 'ಬಾರಯ್ಯ ತ್ವರಿತದಿ ಬೇಗ')

ii. ಬತ್ತಿ ಹೋ. ಯಿತು ನದಿ. ಬಿತ್ತದೆ. ಬೆಳೆಯದೆ. ವಿವಿವಿವಿ
ಅತ್ತರೆ. ಬಹುದೇನೊ. ಉತ್ತಮ. ಫಲಸೂಸಿ. ವಿವಿವಿವಿ

(ಕನಕದಾಸ: 'ಹೇಗೆ ನೀ ದಾಸನಾದೆ')

ಇಂತಹುದೇ ಅಷ್ಟಪದಿ ('ಕೊಕ್ಕೊಕೊ ಎನ್ನಿರೊ ಕುಂಭಿಣಿಯವರೆಲ್ಲ'), ದಶಪದಿ 'ಗೋವಿಂದ ಸಲಹೆನ್ನನು'[೧] ಇವನ್ನು ಕೂಡ ಕನಕದಾಸರು ಬಳಸಿದ್ದಾರೆ. ಮಾದರಿಗೆ,

i. ಕೇಸರಿ. ಎಂಬ ರ. ಕ್ಕಸರನೆ. ಲ್ಲರ ಕೊಂದ. ವಿವಿವಿವಿ
ವೇಷಧಾ. ರಿ(ऽ)ಕಳ್ಳ. ಕೊಕ್ಕೊಕೊ. ಎನ್ನಿರೊ. ವಿವಿವಿವಿ
ಮೋಸದಿ. ಬಲಿಯ ದಾ. ನವ ಬೇಡಿ. ಅನುದಿನ. ವಿವಿವಿವಿ
ಬೇಸರಿ. ಸಿದ ಕಳ್ಳ. ಕೊಕ್ಕೊಕೊ. ಎನ್ನಿರೊ. ವಿವಿವಿವಿ
ಮೀಸಲ. ಅನ್ನವ. ಕೂಸಾಗಿ. ಸವಿದುಂಡ. ವಿವಿವಿವಿ
ವೇಷಧಾ. ರಿ(ऽ) ಕಳ್ಳ. ಕೊಕ್ಕೊಕೊ. ಎನ್ನಿರೊ. ವಿವಿವಿವಿ
ಸಾಸಿರ. ನಾಮಕ್ಕೆ. ಹೆಸರಾದ. ಭಪ್ಪನ್ನ. ವಿವಿವಿವಿ
ದೇಶಧಾ.ರಿ(ऽ)ಕಳ್ಳ. ಕೊಕ್ಕೊಕೊ. ಎನ್ನಿರೊ. ವಿವಿವಿವಿ
('ಕೊಕ್ಕೊಕೊ ಎನ್ನಿರೊ ಕುಂಭಿಣಿಯವರೆಲ್ಲ')

ಈ ಹಿಂದೆ ನೋಡಿದ ಉದಾಹರಣೆಗಳಲ್ಲಿ ಆದಿಪ್ರಾಸವಷ್ಟೇ ನಿಯತವಾಗಿತ್ತು, ಅಂತ್ಯಪ್ರಾಸವಿರಲಿಲ್ಲ. ಆದರೆ ಇಲ್ಲಿ ಆದಿಪ್ರಾಸದ ಜೊತೆಗೆ ಒಂದು ಬಿಟ್ಟು ಒಂದು ಪಾದಕ್ಕೆ ಅದು ಕೂಡ ಬಂದಿದೆ.

ii. ನರಬೊಂಬೆ. ಗಳ ಮಾಡಿ. ಕುಣಿಸುವೆ. ಗೋವಿಂದ. ವಿವಿವಿವಿ
ನರರ ನೋ. ಡಿ(ऽ) ನೋಡಿ. ನಗುತಿರ್ಪೆ. ಗೋವಿಂದ ವಿವಿವಿವಿ
ಅರಿದೆನೆಂ. ಬರಿಗಂತ್ಯ. ತೋರದೊ. ಗೋವಿಂದ. ವಿವಿವಿವಿ
ಅರಿಯದಂ. ತಖಿಳದೊ. ಳಡಗಿರ್ಪೆ. ಗೋವಿಂದ. ವಿವಿವಿವಿ
ಅರಿಯಾಡಂ. ಬರಗಳಿ. ಗಳವಡದ. ಗೋವಿಂದ. ವಿವಿರುವಿ
ಪರಮ ಪಾ. ವನನೆಂಬ. ಬಿರುದುಳ್ಳ. ಗೋವಿಂದ. ವಿವಿವಿವಿ
ಪರಮ ಪು. ರುಷ ಪುರು. ಷೋತ್ತಮ. ಗೋವಿಂದ. ವಿವಿವಿವಿ
ಪರಬ್ರಹ್ಮ. ಪರಮ ಪ. ರಾತ್ಪರ. ಗೋವಿಂದ. ವಿವಿವಿವಿ
ಮರೆಹೊಕ್ಕ. ಭಕ್ತರ. ಸಲಹುವ. ಗೋವಿಂದ. ವಿವಿವಿವಿ
ಕರಿರಾಜ. ಕರೆಯಲೊ. ದಗಿ ಬಂದೆ. ಗೋವಿಂದ. ವಿವಿವಿವಿ
ಗರುಡ ಗ. ಮನ ಗೋ. ವಿಂದ ಕಿ. ನ್ನರ ಸಿದ್ಧ. ವಿಬ್ರವಿವಿ
ಗರುಡ ಸ. ನ್ನುತ ಗೋ. ವಿಂದ ಅ. ಪರಿಮಿತ. ವಿಬ್ರವಿವಿ
ಕರುಣಾ ಸಾ. ಗರ ಗೋ. ವಿಂದ ಅ. ರಿಯದಂಥ. ವಿಬ್ರವಿವಿ
ಪರಮ ಜ್ಯೋ. ತಿಯೆ ಗೋ. ವಿಂದ ತೆ. ತ್ತಿಸಕೋಟಿ. ವಿಬ್ರವಿವಿ
ಪುರದೊಳ. ಗಿಹ ಗೋ. ವಿಂದ ಅಚ್ಚು. ತಾನಂತ. ವಿಬ್ರರುವಿ
ತಿರುಪತಿ. ನೆಲೆಯಾದಿ. ಕೇಶವ. ಹರಿಯೆ. ವಿವಿವಿಬ್ರ
('ಗೋವಿಂದ ಸಲಹೆನ್ನನು')

೧ ಬೆಟಗೇರಿ ಕೃಷ್ಣಶರ್ಮಾ ಮತ್ತು ಬೆಂಗೇರಿ ಹುಚ್ಚರಾವ ಇವರು ಸಂಪಾದಿಸಿರುವ 'ಶ್ರೀ ಕನಕದಾಸರ ಭಕ್ತಿಗೀತೆಗಳು' (ಧಾರವಾಡ, ೧೯೬೫) ಎಂಬ ಆವೃತ್ತಿಯಲ್ಲಿ, ಇದೇ ಕೀರ್ತನೆಯಲ್ಲಿ ನವಪದಿರಚನೆ ಕಾಣುತ್ತದೆ; ಒಂದು ಪಾದ ಪ್ರತಿ ನುಡಿಯಲ್ಲೂ ಕಡಿಮೆಯಿದೆ.

ಇಲ್ಲಿ ಮೊದಲ ಹತ್ತು ಪಾದಗಳು ವಿಷ್ಣುರಗಳೆಯ ಲಕ್ಷಣಕ್ಕೆ ಬದ್ಧವಾಗಿವೆ; ಆದಿಪ್ರಾಸದ ಜೊತೆಗೆ ಅಂತ್ಯಪ್ರಾಸ ಕೂಡ ನಿಯತವಾಗಿ ಬಂದಿದೆ. ಆದರೆ ಉಳಿದ ಎಂಟು ಪಾದಗಳ ರಚನೆ ಮಾತ್ರ ಭಿನ್ನವಾಗಿದೆ. ಈ ಎಂಟರ ಪೈಕಿ, ಮೊದಲ ಏಳರಲ್ಲಿ, ಎರಡನೆಯ ಸ್ಥಾನದಲ್ಲಿ ನಿಯತವಾಗಿ ಬ್ರಹ್ಮಗಣ ಬಂದಿದೆ; ಜೊತೆಗೆ ಅಂತ್ಯಪ್ರಾಸ ಕೂಡ ಅನಿಯತ. ಎಂಟನೆಯದರಲ್ಲಿ, ಎರಡನೆಯ ಸ್ಥಾನಕ್ಕೆ ಬದಲು ನಾಲ್ಕನೆಯ ಸ್ಥಾನದಲ್ಲಿ ಬ್ರಹ್ಮ ಬಂದಿದೆ. ಈ ಬಂಧವನ್ನು ಸಂಪೂರ್ಣವಾಗಿ ವಿಷ್ಣುರಗಳೆಯ ಗುಂಪಿಗೆ ಸೇರಿಸಲು ಸಾಧ್ಯವಿಲ್ಲವಾದರೂ ಮೊದಲ ಹತ್ತು ಪಾದಗಳು ಮಾತ್ರ ಅದೇ ರಚನೆಯವು ಎಂಬಷ್ಟನ್ನಾದರೂ ಒಪ್ಪಲೇಬೇಕಾಗುತ್ತದೆ.

ಏನೇ ಆದರೂ, ಇಲ್ಲೆಲ್ಲ ಗಮನಿಸಬೇಕಾದ ಒಂದು ಪ್ರಮುಖ ಅಂಶವೆಂದರೆ ವಿಷ್ಣುರಗಳೆಯು ತನ್ನ ಮುಕ್ತಪದಿತನವನ್ನು ಕಳೆದುಕೊಂಡು ನಿಯತಪದಿಯಾಗಿ ಬಳಕೆಯಾಗಿದೆಯೆಂಬುದು. ಇಷ್ಟು ಮಾತ್ರವೇ ಅಲ್ಲದೆ, ಪ್ರತಿ ನುಡಿಯ ಅಂತ್ಯದಲ್ಲಿ ಪಲ್ಲವಿಯ ಪುನರಾವರ್ತನೆ ಬರುವುದಂತೂ ನಿರಂತರ ಪ್ರವಾಹಕ್ಕೆ ಮೇಲಿಂದ ಮೇಲೆ ಅಡ್ಡಿಯೊಡ್ಡುತ್ತದೆ ಎಂಬುದು ಕೂಡ. ಇದು ಇದರ ಗತಿಯನ್ನು ರಗಳೆಯ ನಿರಂತರ ಗತಿಗಿಂತ ಬಹಳ ಭಿನ್ನವಾಗಿಸುತ್ತದೆ. ಈ ಮಾತು, ಅನಂತರದ ದಾಸರ ರಚನೆಗಳಿಗೂ ಅನ್ವಯಿಸುತ್ತದೆ. ಅನಂತರದವರ ಪೈಕಿ, ಮಹೀಪತಿರಾಯರು, ಜಗನ್ನಾಥದಾಸರು ಮುಂತಾದವರಲ್ಲಿ ಕೆಲವು ವಿಭಿನ್ನ ರಚನೆಗಳನ್ನು ಕಾಣುತ್ತೇವೆ.

ಮಹೀಪತಿರಾಯರು ತಮ್ಮೆರಡು ಕೀರ್ತನೆಗಳಲ್ಲಿ ('ಅಲ್ಲಿಂದಲ್ಲದೆ ಮಾ' ಮತ್ತು 'ಎಚ್ಚತ್ತಿರಬೇಕು ಮಾ') ಇದನ್ನು ಏಕಪದಿಯಾಗಿ ಪರಿಗಣಿಸಿ ಒಂದೊಂದು ಪಾದವನ್ನೂ ಒಂದೊಂದು ನುಡಿಯಾಗಿ ರೂಪಿಸಿದ್ದಾರೆ. 'ಅಲ್ಲಿಂದಲ್ಲದೆ ಮಾ' ಎಂಬುದರಲ್ಲಿ ೨೮ ಪಾದ (ನುಡಿ)ಗಳೂ 'ಎಚ್ಚತ್ತಿರಬೇಕು ಮಾ' ಎಂಬುದರಲ್ಲಿ ೧೧ ಪಾದ (ನುಡಿ)ಗಳೂ ಇವೆ. ಮೊದಲನೆಯದರಲ್ಲಿ ಗಣಾದೇಶವು ಬಹಳವಾಗಿದೆ. ಇಲ್ಲಿಯ ರಚನೆಗೆ ಮಾದರಿಯಾಗಿ ಇವನ್ನು ನೋಡಬಹುದು:

i. ಅನುಭವ. ದೋರಿದ. ಘನಗುರು. ನಮ್ಮಯ್ಯ ॥ ೨೬ ॥ ವಿವಿವಿವಿ
ಲೇಸು ಲೇ. ಸು(ಽ) ನಮ್ಮ. ಭಾಸ್ಕರ. ಗುರುದಯ ॥ ೨೭ ॥ ವಿವಿವಿವಿ
ಭಾಸುರ. ಭಾಸ್ಕರ. ಕೋಟಿ ತೇ. ಜಾದನು ॥ ೨೮ ॥ ವಿವಿವಿವಿ
('ಅಲ್ಲಿಂದಲ್ಲದೆ ಮಾ')

ii. ಕಚ್ಚಿ ಕೈ. ಬಾಯಿಲೆ. ಹಚ್ಚಿಟ್ಟು. ಹೋಗದೆ. ॥ ೩ ॥ ವಿವಿವಿವಿ
ಕಚ್ಚಿ ಕಿ.ಡದೆ ನೀನು. ಕಾಂಚನ. ದಾಶೆಗೆ ॥ ೪ ॥ ವಿವಿವಿವಿ
ನಚ್ಚಿಕೊಂ. ಡಿರಬ್ಯಾಡಿ. ವ್ಯಚ್ಚಾಗು. ಬದುಕಿಗೆ ॥ ೫ ॥ ವಿವಿವಿವಿ
('ಎಚ್ಚತ್ತಿರಬೇಕು ಮಾ')

ಮೊದಲನೆಯದರಲ್ಲಿ ಆದಿಪ್ರಾಸ ಅಂತ್ಯಪ್ರಾಸಗಳೆರಡೂ ಅನಿಯತ; ಎರಡನೆಯದರಲ್ಲಿ ಎಲ್ಲ ಪಾದಗಳಿಗೂ ಒಂದೇ ಆದಿಪ್ರಾಸವಿದೆ. ಪ್ರತಿಪಾದದ (ನುಡಿಯ) ಅಂತ್ಯದಲ್ಲಿಯೂ ಯಥಾಪ್ರಕಾರವಾಗಿ, ಪಲ್ಲವಿಯೂ ಪುನರಾವರ್ತಿತವಾಗುತ್ತದೆ.

ಇದನ್ನೆಲ್ಲ ನೋಡಿದಾಗ, ಇಲ್ಲಿಯ ಏಕಪದಿ ಪರಿಗಣನೆಯು, ಕರ್ತೃವೇ ಮಾಡಿದ್ದೋ ಅಥವಾ ಅನಂತರದ ಲಿಪಿಕಾರರು ಮಾಡಿದ್ದೋ ಎಂಬ ಸಂಶಯ ತಲೆದೋರುತ್ತದೆ. ಸಂಪಾದಕರೇನೋ ಏಕಪದಿಯಾಗಿಯೇ ಪರಿಗಣಿಸಿದ್ದಾರೆ.[೫] ಆದರೆ ಇಡೀ ಕೃತಿಯನ್ನು ಒಂದೇ ಎಂದು ಭಾವಿಸಿ ಮುಕ್ತಪದಿಯಾಗಿ ಪರಿಗಣಿಸುವುದೇ ಉಚಿತವೆನಿಸುತ್ತದೆ.

ಮಹೀಪತಿರಾಯರು ತಮ್ಮ ಇನ್ನೊಂದು ಕೀರ್ತನೆಯಲ್ಲಿ ('ರಕ್ಷಿಸೋ ಸ್ವಾಮಿ ನೀ ಪಕ್ಷಿ ಸುವಾಹನ') ವಿಷ್ಣುರಗಳೆಯ ಚೌಪದಿಯನ್ನು ಬಳಸಿದ್ದಾರೆ. ಮಾದರಿಗೆ,

ಪಾಲಿಸೊ. ಪ್ರಾಣವ. ಬಾಲಮು. ಕುಂದನೆ. ವಿವಿವಿವಿ
ಲಾಲನೆ. ನೋಡು ಗೋ. ಪಾಲ ಗೋ. ವಿಂದನೆ. ವಿವಿವಿವಿ
ತ್ಯಕ್ತನಾ. ತಾಳು ನೀ. ಸಚ್ಚಿದಾ. ನಂದನೆ. ವಿವಿವಿವಿ
ಕೀಲನೆ. ಹೇಳು ನೀ. ಭಕ್ತಿಯ. ವಂದನೆ. ವಿವಿವಿವಿ

ಇಲ್ಲಿ ಅಂತ್ಯಪ್ರಾಸವನ್ನು ನಿಯತವಾಗಿಸಿ ಆದಿಪ್ರಾಸವನ್ನು ಮೀರಲು ಹೋಗಿರುವುದು ಗಮನಾರ್ಹ.

ಇವರೇ ತಮ್ಮ ಇನ್ನೊಂದು ಕೀರ್ತನೆಯಲ್ಲಿ ('ಅಮ್ಮಾ ಬಾ') ವಿಷ್ಣುರಗಳೆಯ ದ್ವಿಪದಿಯನ್ನು ಬಳಸಿದ್ದಾರೆ. ಜಗನ್ನಾಥದಾಸರು, ಗೋಪಾಲದಾಸರು ಕೂಡ ಇಂತಹದನ್ನು ಬಳಸಿದ್ದಾರೆ. ಮಾದರಿಗೆ,

i. ಬೇಡುವೆ. ನಿಮ್ಮನೆ. ಕಾಡುವೆ. ಸುಮ್ಮನೆ. ವಿವಿವಿವಿ
ಒಡ್ಯಾಡಿ. ಬಂದು ಅಂ. ಡಲಿವೆನಾ. ತಮ್ಮನೆ. ವಿವಿವಿವಿ
(ಮಹೀಪತಿರಾಯರು: 'ಅಮ್ಮಾ ಬಾ')

ii. ತೀರ್ಥಕ್ಷೇ.ತ್ರಂಗಳ. ಮೂರ್ತಿ ಮ. ಹಿಮೆಗಳ. ವಿವಿವಿವಿ
ಕೀರ್ತಿಸಿ. ಜಗದಿ ಕೃ. ತಾರ್ಥನೆಂ. ದನಿಸಿದೆ. ವಿವಿವಿವಿ
(ಜಗನ್ನಾಥದಾಸರು: 'ದಾಸರಾಯಾ ಪುರಂದರದಾಸರಾಯಾ')

iii. ಭಕ್ತರ. ಪಾಲಿಪ. ಶಕ್ತಿ ನಿ. ನ್ನದೊ ದೇವ. ವಿವಿವಿವಿ
ಭಕ್ತಿಯಿಂ. ದಲಿ ನಿನ್ನ. ಪಾದ ತೋರಿ. ಸೊ ದೇವ. ವಿವಿವಿವಿ
(ಗೋಪಾಲದಾಸರು: 'ಪೊರೆ ಎಮ್ಮ ಸ್ವಾಮಿ')

ಶೇಷದಾಸರ ('ವರದವಿಜಯವಿಠಲ') ಒಂದು ಕೀರ್ತನೆಯು[೬] ೨೦ ಪಾದಗಳ ನುಡಿಯಿಂದಾಗಿದೆ. ಇದರಲ್ಲಿ ಮೊದಲ ೧೯ ಪಾದಗಳು ನಾಲ್ಕು ನಾಲ್ಕು ವಿಷ್ಣುಗಣಗಳವು. (ವಿರಳವಾಗಿ ಗಣಾದೇಶ ಕೂಡ ಬರುವುದುಂಟು); ೨೦ನೆಯದು 'ವಿ. ವಿ. ರು' ರಚನೆಯನ್ನು ಹೊಂದಿದೆ. ಎಲ್ಲ ಪಾದಗಳಿಗೂ ಒಂದೇ ಆದಿಪ್ರಾಸವಿದೆ; ಆದರೆ ಅಂತ್ಯಪಾಸ ಅನಿಯತ. ಮಾದರಿಗೆ,

---

೫ ನೋಡಿ: ಜಿ. ವರದರಾಜರಾವ್ (ಸಂ.): ಶ್ರೀ ಮಹೀಪತಿರಾಯರ ಕೃತಿಗಳು, ಮೈಸೂರು, ೧೯೭೬, ಪು. ೧೦ ಮತ್ತು ೬೯.

೬ ಹನುಮಂತರಾವ ಗೊರಬಾಳ (ಸಂ.): ಕರ್ನಾಟಕ ಹರಿದಾಸ ಸಾಹಿತ್ಯ ದ್ವೈಮಾಸಿಕ, ೧-೨, ಲಿಂಗಸುಗೂರ, ೧೯೫೭, ಪು. ೩೮-೩೯

ತಾ ಸಹ. ಗಸಮನ. ಪತಿಸಹ. ಪೋಗುವ. ವಿವಿವಿವಿ
ಆ ಸ್ತ್ರೀಯು. ಬ್ರಹ್ಮಣ್ಯ. ತೀರ್ಥರ. ಲ್ಲಿಗೆ ಪೋಗಿ. ವಿವಿವಿವಿ
ಶ್ರೀಶಬ. ದರಿಯಲ್ಲಿ. ಪೇಳಿದ. ಮಹಿಮೆಯ ವಿವಿವಿವಿ
ಆ ಸುಮ. ಹೀಮ ಪ್ರ. ಲ್ಹಾದನ್ನ. ಸ್ಮರಿಸುತ್ತ. ವಿವಿವಿವಿ
ಮೋಸ ಬ. ರುವದೆಂದಾ. ಲೋಚನೆ. ಇಲ್ಲದೆ. ವಿವಿವಿವಿ
ಆ ಸತಿ. ವಂದಿಸೆ. ಸುಸ ಮಾಂಗ. ಲ್ಯವನಿತ್ತು. ವಿವಿವಿವಿ
ಆ ಸಮ. ಯದಿ ಮಂತ್ರ. ಅರ್ಘ್ಯವ. ಸ್ನೆಸ ಕೊಂಡು. ವಿವಿವಿವಿ
ತಾ ಸುಮ್ಮಾ. ನದಿ ಬಸ್ನೂ. ರಿಗೆ ಪೋಗೆ.... ವಿವಿವಿ...

ಹೀಗೆಯೇ ಮುಂದುವರಿಯುತ್ತದೆ. ಇದರಲ್ಲಿ ಪಾದಸಂಖ್ಯೆ ಹೆಚ್ಚಾಗಿರುವುದರಿಂದ ಮುಕ್ತಪದಿತನವು ಹೆಚ್ಚಾಗಿ ಕಾಣಿಸುತ್ತದೆ.

೩. **ಶರಣಸಾಹಿತ್ಯದಲ್ಲಿ** : ಶರಣಸಾಹಿತ್ಯದಲ್ಲಿ ತಾರಾವಳಿಗಳದ್ದು ಒಂದು ಪ್ರಮುಖ ಪ್ರಕಾರ. ನಮಗೆ ತಿಳಿದಮಟ್ಟಿಗೆ ಇದು ಪ್ರಾರಂಭವಾಗುವುದು ಹದಿನೈದನೆಯ ಶತಮಾನದ ಪೂರ್ವಾರ್ಧದ ಕರಸ್ಥಲದ ನಾಗಲಿಂಗದೇವನ 'ವೀರಮಡಿವಳ ಮಾಚಯ್ಯಗಳ ತಾರಾವಳಿ'ಯಿಂದ. ಹೆಚ್ಚೂ ಕಡಮೆ ಎಲ್ಲಾ ತಾರಾವಳಿಗಳ ಛಂದೋರಚನೆಯೂ ಒಂದೇ ಪ್ರಕಾರವಾಗಿರುತ್ತದೆ; ಪಾದಸಂಖ್ಯೆಯಲ್ಲಿ ಮಾತ್ರ ಹೆಚ್ಚೂ ಕಡಮೆಯುಂಟಾಗಬಹುದು ಅಷ್ಟೆ. ತಾರಾವಳಿಯ ಒಂದು ನುಡಿ ಎಂದರೆ, ಅದರಲ್ಲಿ ಮೂರು ಅಂಗಗಳಿರುತ್ತವೆ. ಮೊದಲನೆಯ ಅಂಗವೇ ನಮಗೆ ಬೇಕಾಗಿರುವುದು. ಇದರಲ್ಲಿ ನಾಲ್ಕು-ನಾಲ್ಕು ವಿಷ್ಣುಗಣಗಳಿಂದಾದ ಪಾದಗಳನ್ನು ಅಗತ್ಯಕ್ಕೆ ತಕ್ಕಂತೆ ಬೇಕಾದಷ್ಟು ಸಂಖ್ಯೆಯಲ್ಲಿ ಕೂಡಿಸಿರಲಾಗುತ್ತದೆ.[೭] ಉದಾಹರಣೆಗೆ 'ಬೈರವೇಶ್ವರ ಪವಾಡ ತಾರಾವಳಿ'[೮]ಯಲ್ಲಿ ಹನ್ನೆರಡು ಇಲ್ಲವೇ ಹದಿಮೂರು ಪಾದಗಳನ್ನು ಕೂಡಿಸಿದ್ದರೆ, ನೀಲಕಂಠಾರ್ಯನ 'ಪರವಾದಿ ಗಜಾಂಕುಶ ತಾರಾವಳಿ'[೯]ಯಲ್ಲಿ ಆ ಸಂಖ್ಯೆಯನ್ನು ೨೫, ೨೬, ೨೭, ೨೮, ೨೯, ೩೦, ೩೧, ೩೪ – ಹೀಗೆ ಇನ್ನೂ ಹೆಚ್ಚಿಸಲಾಗಿದೆ. ಎರಡನೆಯ ಅಂಗವೆಂದರೆ 'ವಿ. ರು. [ಪ್ರ' ರಚನೆಯ ಪಾದಗಳಿಂದಾದದ್ದು. ಇದರಲ್ಲಿ ಪಾದಸಂಖ್ಯೆಯು ಸಾಮಾನ್ಯವಾಗಿ ನಾಲ್ಕು ಇರುತ್ತದೆ. ಕೆಲವೊಮ್ಮೆ ಒಂದೆರಡು ಪಾದಗಳ ಮಿತಿಯಲ್ಲಿ ಅದು ಹೆಚ್ಚು ಕಡಮೆಯಾಗುವುದೂ ಉಂಟು. ಕೊನೆಯ ಅಂಗವೆಂದರೆ ವಿಷ್ಣುರಗಳೆಯ ಒಂದು ಪಾದ. ಇದರ ಸಂಖ್ಯೆಯಲ್ಲಿ ಏರುಪೇರಿಲ್ಲ. ಇದು ಇದರ ಹಂದರ. ಇಲ್ಲಿ ಬರುವ ಒಂದೊಂದು ಅಂಗವೂ ಒಂದೇ ಶರೀರದ ಅಂಗದಂತೆ, ಒಂದಕ್ಕೊಂದು ಸಾವಯವ ಬೆಸುಗೆಯನ್ನು ಹೊಂದಿರುತ್ತದೆ; ಯಂತ್ರದ ಅಂಗಗಳಂತೆ ಪ್ರತ್ಯೇಕವಾಗಿ ಕಳಚಿಡುವಂತಿರುವುದಿಲ್ಲ.

ಇಲ್ಲಿ ನಡೆದಿರುವ ಕಾರ್ಯವೆಂದರೆ, ವಿಷ್ಣುರಗಳೆಗೆ, ವಿಸ್ತಾರಕ್ಕೆ ತಕ್ಕಂತೆ ನುಡಿಯ ಒಂದು ಚೌಕಟ್ಟನ್ನು ಒದಗಿಸುವುದು. ಏಕತಾನತೆಯನ್ನು ಮೀರಿ. ನುಡಿಗೆ ಒಂದು ವಿಶಿಷ್ಟ ಬಾಗು ಬಳುಕನ್ನು ತಂದುಕೊಡುವ ಕಾರ್ಯವನ್ನು ಎರಡನೆಯ ಅಂಗದ ಅಳವಡಿಕೆಯಿಂದ

---

೭ ಈ ವಿಚಾರದ ಕಡೆಗೆ ನನ್ನ ಗಮನ ಸೆಳೆದ ಡಾ|| ಎಂ. ಚಿದಾನಂದಮೂರ್ತಿಯವರಿಗೆ ಕೃತಜ್ಞನಾಗಿದ್ದೇನೆ.
೮ ಎಂ. ಎಸ್. ಬಸವರಾಜಯ್ಯ (ಸಂ.): ತಾರಾವಳೀ ಸಂಪುಟ ೩, ತಿಪಟೂರು, ೧೯೮೯, ಪು. ೧೬೭-೧೭೭
೯ ಅದೇ, ಪು. ೧೨೭-೧೬೩.

ಸಾಧಿಸಲಾಗಿದೆ. ಕೊನೆಯ ಅಂಗವಂತೂ ಮೊದಲನೆಯದರ ತುಣುಕೇ ಆಗಿದೆ. ಅದು ಪ್ರತ್ಯೇಕಿಸಲ್ಪಟ್ಟಿರುವುದು ಕೂಡ ಎರಡನೆಯ ಅಂಗವನ್ನು ಮಧ್ಯೆ ಅಳವಡಿಸಿರುವುದರಿಂದಾಗಿಯೇ. ಮಾದರಿಗೆ ಇದನ್ನು ನೋಡಬಹುದು:

| | |
|---|---|
| ವರ ವೀರ. ಭದ್ರನು. ಧ್ವನಿಸಲ. ತ್ತವರಿಗೆ. | ವಿವಿವಿವಿ |
| ದುರಿತ ದು. ಷ್ಕೃತದ ಸೂ. ಚನೆಯ ಸ್ವ. ಪ್ನಗಳಾಗೆ. | ವಿವಿವಿವಿ |
| ಅರುಣ ಕೋ. ಟಿಗಳೂಗೆ. ದಂತೆ ಪ್ರ. ಜ್ವಲವಾಗೆ. | ವಿವಿವಿವಿ |
| ಸುರಸತಿ. ಯರ ಕರ್ಣ. ಪತ್ರ ಓ. ಸರಿ ಸೋಗೆ. | ವಿವಿವಿವಿ |
| ಶರಧಿ ಘೂ. ರ್ಮಿಸುವಂತೆ. ಸಂಜೆ ಜೊ. ಜ್ಜೆಗಳಾಗೆ. | ವಿವಿವಿವಿ |
| ಉರಿವನ. ಲನುಗತ. ವಾಗಿ ಕಾ. ರ್ಜೂಗೆಯಾಗೆ. | ವಿವಿವಿವಿ |
| ಸುರಮನು. ಮುನಿಗಳು. ಸ್ರವದಂತಾ. ಗಲು ಮಿಗೆ. | ವಿವಿವಿವಿ |
| ಹರಿ ವಿರಿಂ. ಚಿಗಳಿಗೆ. ಹಮ್ಮು ಪ. ಲ್ಲಟವಾಗೆ. | ವಿವಿವಿವಿ |
| ಹರುಷಗುಂ. ದಲು ದಕ್ಷ. ನಿಂತೆಂದ. ಸವರಿಗೆ. | ವಿವಿವಿವಿ |
| ಮರುಳೂಡ. ನಾಡುವ. ಮತಿಹೀನ. ಗೊರವಂಗೆ. | ವಿವಿವಿವಿ |
| ಪೆರತಂಜು. ವೆನೆ ಎಂದನು. । ಆ ನುಡಿಯೊಳು | ವಿರು [ಪ್ರ |
| ಧುರಧೀರ. ನೆಯ್ತಂದನು. । ದಕ್ಷನ ಶಿರ | ವಿರು [ಪ್ರ |
| ವರಿದು ಹೋ. ಮದೊಳಿಟ್ಟನು. । ಪದ್ಮಾಕ್ಷನ | ವಿರು [ಪ್ರ. |
| ಶಿರವ ಹ. ರಿಯಲೆಚ್ಚನು. । ಭಾರತಿಯ ಮೂಗ | ವಿರು [ಪ್ರ |
| ನರಿದು ಕ. ರದೊಳಿತ್ತನು. । ಪೂವಡಿಗನ | ವಿರು [ಪ್ರ |
| ಉರವ ತು. ಳಿದು ಕುಲಿ. ಲೆಂದು ಜೊ. ಬ್ಬರಿದಾನು. | ವಿವಿವಿವಿ |

(ಕರಸ್ಥಲದ ನಾಗಲಿಂಗದೇವ: 'ವೀರಮಡಿವಳ ಮಾಚಯ್ಯಗಳ ತಾರಾವಳಿ')

ಈ ತಾರಾವಳಿಗಳದ್ದು ಒಂದು ಪ್ರವಾಹವಾದರೆ ದಾಸರಲ್ಲಿ ಕಂಡಂತೆಯೇ ದ್ವಿಪದಿ ಮುಂತಾದ ನುಡಿಗಳಿಗೆ ಬಳಸಿಕೊಂಡಿರುವಂತಹ ಸಾಹಿತ್ಯದ್ದು ಇನ್ನೊಂದು ಪ್ರವಾಹ. ಆದರೆ, ಶರಣಸಾಹಿತ್ಯದ ಆ ಪ್ರವಾಹವು ಅಷ್ಟು ಪ್ರಬಲವಾಗಿಲ್ಲ. ಹದಿನೆಂಟನೆಯ ಶತಮಾನದ ಹಾಗಲವಾಡಿ ಮುದ್ವೀರಸ್ವಾಮಿಯವರು ತಮ್ಮ 'ಆತ್ಮಾರಾಮ' ಮತ್ತು 'ಕೌತುಕವಾದ ಕನಸ ನಾ ಕಂಡೆ' ಎಂಬೆರಡು ಕೀರ್ತನೆಗಳಲ್ಲಿ ವಿಷ್ಣು ದ್ವಿಪದಿಯ ನುಡಿಗಳನ್ನು ಬಳಸಿದ್ದಾರೆ. ಮೊದಲನೆಯದರಲ್ಲಿ ಹನ್ನೊಂದು ನುಡಿಗಳೂ ಎರಡನೆಯದರಲ್ಲಿ ಐದು ನುಡಿಗಳೂ ಇವೆ. ಮಾದರಿಗೆ ಈ ಒಂದು ನುಡಿಯನ್ನು ನೋಡಬಹುದು:

| | |
|---|---|
| ಅತಿಶಯ. ವಾದ ಮ. ತ್ತೊಂದೆಡೆ. ಯೊಳಗನು. | ವಿವಿವಿವಿ |
| ಮತಿಸಿ. ಮ. ಹಾಶೂನ್ಯಾ. ಕಾರವಾ. ಗಿರಿವಾತ್ಮ. | ವಿವಿವಿವಿ |

('ಆತ್ಮಾರಾಮ')

ಆದಿಪ್ರಾಸವು ನಿಯತವಾಗಿದ್ದು, ಅಂತ್ಯಪ್ರಾಸವು ಐಚ್ಛಿಕವಾಗಿರುವುದನ್ನು ಇಲ್ಲಿಯೂ ಗಮನಿಸಬಹುದು.

ಅನಂತರದಲ್ಲಿ ಪತ್ತೊಂಬತ್ತನೆಯ ಶತಮಾನದಲ್ಲಿ ಸರ್ಪಭೂಷಣ ಶಿವಯೋಗಿಗಳು, ಬಾಲಲೀಲಾ ಮಹಾಂತ ಶಿವಯೋಗಿಗಳು, ಮೈಲಾರದ ಬಸವಲಿಂಗನ ಶರಣರು

ಮುಂತಾದವರು ಅದನ್ನು ಮುಂದುವರಿಸಿದ್ದಾರೆ. ಸರ್ಪಭೂಷಣರು ತಮ್ಮೆರಡು ಕೀರ್ತನೆಗಳಲ್ಲಿ ಪಲ್ಲವಿಗಾಗಿ ವಿಷ್ಣುದ್ವಿಪದಿಯ ನುಡಿಗಳನ್ನು ಬಳಸಿದ್ದಾರೆ. ಬಾಲಲೀಲಾ ಮಹಾಂತ ಶಿವಯೋಗಿಗಳು ತಮ್ಮ 'ಲಿಂಗ ಮಾಂ ಪಾಹಿ' ಎಂಬ ಕೀರ್ತನೆಯಲ್ಲಿ ಅದನ್ನು ನುಡಿಗಳಿಗಾಗಿ ಬಳಸಿದ್ದಾರೆ. ಅಲ್ಲಿ ಬರುವ ಒಳಪ್ರಾಸವು ಅದನ್ನು ದ್ವಿಗುಣ ಪಾದಗಳ ಚೌಪದಿಯಾಗಿ ಮಾಡುತ್ತದೆ. ಮಾದರಿಗೆ, ಅದರ ಎರಡನೆಯ ನುಡಿಯನ್ನು ನಾಲ್ಕು ಪಾದಗಳಾಗಿ ಹೀಗೆ ಬರೆಯಬಹುದು :

ಫಾಲ ಲೋ. ಚನದಿಂದ. ವಿವಿ
ಕೀಲ ಕ. ಳಚಿ ಪುರ. ವಿವಿ
ನೀಲಗಿ. ರಿಯ ಮಧ್ಯ. ವಿವಿ
ಲೀಲೆಯೊ. ಳಿರುತಿಹ. ವಿವಿ

ಮೈಲಾರದ ಬಸವಲಿಂಗನ ಶರಣರು ತಮ್ಮ 'ಸಲಹಲಿ ತಾನೆ ಒಲಿಯಲಿ', 'ನಂಜಿದೆ ಗುರುವೆ ನಂಜಿದೆ', 'ಧರಿಸಿದೆ ನಂಬಿ ಧರಿಸಿದೆ', 'ಬದುಕಿದೆ ನಾ ಬದುಕಿದೆ ಸತ್ಯ' – ಈ ಕೀರ್ತನೆಗಳಲ್ಲಿ ವಿಷ್ಣುದ್ವಿಪದಿಯ ನುಡಿಗಳನ್ನೇ ಬಳಸಿದ್ದಾರೆ. ಮಾದರಿಗೆ,

ಮೆರೆವ ಬಾಂ. ದಳಕೆ ಭಾ. ಸ್ಕರನಾಗಿ, ಬೆಳಗುವ. ವಿವಿವಿವಿ
ನಿರುಪಮ. ನಿಷ್ಕಲ. ಲಿಂಗದಂ. ಘ್ರಿಗಳೆನ್ನ. ವಿವಿವಿವಿ
('ಸಲಹಲಿ ತಾನೆ ಒಲಿಯಲಿ')

**೪. ಇತರೆಡೆಗಳಲ್ಲಿ:** ಹದಿನೇಳನೆಯ ಶತಮಾನದ ಚಿಕದೇವರಾಜ ಒಡೆಯರ 'ಗೀತಗೋಪಾಲಂ'ನಲ್ಲಿ ಚತುರ್ಗಣಪಾದದ ಚೌಪದಿಯು ಕೀರ್ತನೆಯ ನುಡಿಗಳ ರಚನೆಯಲ್ಲಿ ಒಂದೆಡೆ ಬಳಕೆಯಾಗಿದೆ. ಮಾದರಿಗೆ,

ಪೆತ್ತವ. ರನು ಬಿಟ್ಟು. ಪೆಱರ ಸೇ. ರಿದ ಕಳ್ಳ. ವಿವಿವಿವಿ
ಮತ್ತವ. ರಿಗೆ ತನ್ನ. ಮಾಯದೋ. ಱಿದ ಕಳ್ಳ. ವಿವಿವಿವಿ
ಒತ್ತಿ ಮೊ. ಲೆಯನೂಡೆ. ಉಸಿರುಂಡ. ಬಲುಗಳ್ಳ. ವಿವಿವಿವಿ
ಸುತ್ತುವ. ಗಾಳಿಯ. ಸೋಂಕಿ ಕೊ. ಲುವ ಕಳ್ಳ. ವಿವಿವಿವಿ

ಹದಿನೆಂಟು-ಹತ್ತೊಂಬತ್ತನೆಯ ಶತಮಾನದ ತಿಪ್ಪಣಾರ್ಯನ 'ಹನೂಮದ್ವಿಲಾಸ' ವೆಂಬುದರಲ್ಲಿ ಷೋಡಶಪದಿನುಡಿಯ ಹಾಡೊಂದಿದ್ದು, ಅದರ ರಚನೆ ಹೀಗಿದೆ:

ಕೆಟ್ಟದ. ಶಾಸ್ತ್ರ ಮುಂ. ದರಿಯದೆ. ಬಹುಮತಿ. ವಿವಿವಿವಿ
ಗೆಟ್ಟು ವಾ. ನರಸಿಂಹ. ರಾಜನ. ವಾಲದೊಳ್. ವಿವಿವಿವಿ
ಇಟ್ಟು ಕಾ. ಲಾಗ್ನಿ ದ. ಳ್ಳುರಿಗೊಂಡು. ಗಗನವ. ವಿವಿವಿವಿ
ಮುಟ್ಟಿ ಚುಂ. ಬಿಸೆ ಕಿಡಿ. ಗಳ ಕೋಟಿ. ಧರಣಿಯೋಳ್ ವಿವಿವಿವಿ
ಬೆಟ್ಟದಂ. ತುದುರೆ ಚಿ. ಟಿಟಲೆಂಬ. ರವದೊಳು. ವಿವಿವಿವಿ
ಅಟ್ಟಹಾ. ಸದಿ ಕಂಠೀ. ರವ ಗರ್ಜ. ನೆಯ ಮಾಡಿ. ವಿವಿವಿವಿ
ದಿಟ್ಟತ. ನದಿ ದಶ. ಕಂಠ ನಿ. ದ್ದೆಡೆಗೆ ದು. ವಿವಿವಿವಿ
ಮುಟ್ಟು ಸ. ಭೆಯೊಳಿರ್ದ. ದನುಜರ. ನೆಲ್ಲನೆ. ವಿವಿವಿವಿ

| | |
|---|---|
| ಬಿಟ್ಟು ಪೌ. ಲಸ್ತ್ಯಸ. ವಿಗತಾಂಬ. ರಸಗೈದು. | ವಿವಿವಿವಿ |
| ಸುಟ್ಟು ಮು. ಖಗಳಸಂ. ಬರ ವೀಧಿ. ಪೊಗಿಸಿ ಜೆ. | ವಿವಿವಿವಿ |
| ನ್ನಟ್ಟಿ ಓ. ಡಿಸಿ ಮರಳಿ. – [ಅವಸರಮನೆ | ವಿರು [ಪ್ರ |
| ಬಟ್ಟೆವಿ. ಡಿದು ತೆರಳಿ. – [ಪಾದಕನಿಗೆ | ವಿರು [ಪ್ರ |
| ಕೊಟ್ಟಾಘು. ತಿಯ ಕೆರಳಿ. – [ಕೋಪದಿ ಘುಡುಘುಡು | ವಿರು [ಪ್ರ |
| ಗುಟ್ಟಿಕಿಂ. ಡಗಳರಳಿ. – [ಮಾಣದೆ ರಾಣೀ | ವಿರು [ಪ್ರ |
| ರುಟ್ಟು. ತೊಟ್ಟುದ. ಸುಟ್ಟು. ಬೊಬ್ಬೆಗ. | ಬ್ರ.ವಿ.ಬ್ರ.ವಿ/೩.೪.೩.೪ |
| ಳಿಟ್ಟು. ಸೋಕಿಸೆ. ಬಟ್ಟ ಬಯಲೊಳು. | ಬ್ರ.ವಿ.ಬ್ರ.ವಿ/೩.೪.೩.೪ |

ಇಲ್ಲಿ ಮೊದಲ ಹತ್ತು ಪಾದಗಳು ವಿಷ್ಣುರಗಳೆಯವೇ ಆಗಿವೆ. ಇಡೀ ಸುಡಿಯಲ್ಲಿ ಆದಿಪ್ರಾಸ ನಿಯತವಾಗಿದೆ; ಅಂತ್ಯಪ್ರಾಸ ಐಚ್ಛಿಕ. ಇದರ ರಚನೆಯು ಹೆಚ್ಚೂ ಕಡಮೆ ತಾರಾವಳಿಗಳಲ್ಲಿ ನೋಡಿದ ಸುಡಿರಚನೆಯ ಮೂಲ ತತ್ತ್ವವನ್ನೇ ಹೋಲುವುದನ್ನು ಗಮನಿಸಬೇಕು.

**೫. ಆಧುನಿಕ ಸಾಹಿತ್ಯದಲ್ಲಿ:** ಬೇಂದ್ರೆಯವರ 'ಶಾಂತಿ' (ಸಖೀಗೀತ), 'ಮೀನಕೇತು' (ಯಕ್ಷ-ಯಕ್ಷಿ) ಕವನಗಳಲ್ಲಿ ಎರಡೆರಡು ವಿಷ್ಣುಗಣಗಳ ಪಾದಗಳ ಷಟ್ಪದಿಗಳಿವೆ. ಮಾದರಿಗೆ,

| | |
|---|---|
| ಕರೆದಾರಿ. ನಾಲಿಗಿ. | ವಿವಿ |
| ನಿನ್ನೆದೆ. ಹಾಲಿಗಿ. | ವಿವಿ |
| ಬಾಯಾಸೆ. ಬಿಡತ್ತೈಽತಿ. | ವಿವಿ |
| ಬಾಯಾರಿ. ಕಾಯಲೊ. | ವಿವಿ |
| ಹಸಿವೇರಿ. ಸಾಯಲೊ. | ವಿವಿ |
| ಹೇಳೊಮ್ಮೆ. ಏಸಂಽತಿ? | ವಿವಿ |

('ಶಾಂತಿ')

ಆರು ಮತ್ತು ಹನ್ನೆರಡನೆಯ ಗಣಗಳಲ್ಲಿ ಅವಗ್ರಹ ಚಿಹ್ನೆಯನ್ನು ಬಳಸಿ ಬ್ರಹ್ಮ+ಅಂಶದ ರಚನೆಯನ್ನು ಸೂಚಿಸಿರುವುದು ಗಮನಾರ್ಹ. ಷಟ್ಪದಿಯ ಅರ್ಧದ ಮತ್ತು ಕೊನೆಯ, ಮುಡಿಯ ಛಾಯೆಯನ್ನು ಈ ಮೂಲಕ ಇಲ್ಲೂ ತರಲಾಗಿದೆ. ಜೊತೆಗೆ ಆದಿಪ್ರಾಸವಿಲ್ಲದಿರುವುದು, aab ccb ಮಾದರಿಯ ಅಂತ್ಯಪ್ರಾಸವಿರುವುದು ಇಲ್ಲಿಯ ಮತ್ತೊಂದು ವೈಶಿಷ್ಟ್ಯ.

ಈ ಬಂಧವನ್ನೇ ಕೆಲವೊಮ್ಮೆ ಚೌಪದಿಯಾಗಿ ರೂಪಿಸಿರುವುದೂ ಉಂಟು. ಬೇಂದ್ರೆಯವರ 'ಬಿಸಿಲುಕುದುರೆ,' 'ನನ್ನ ಕೈಹಿಡಿದಾಕೆ' ('ಗರಿ'), 'ಸ್ವರೂಪದೀಪ' ('ಯಕ್ಷ-ಯಕ್ಷಿ') ಈ ಕವನಗಳಲ್ಲಿ ಇದನ್ನು ಗಮನಿಸಬಹುದು. ಮಾದರಿಗೆ,

| | |
|---|---|
| ಹಳ್ಳಽದ. ದಂಡ್ಯಾಗ. ಮೊದಲಿಗೆ. ಕಂಡಾಗ. | ವಿವಿವಿವಿ |
| ಏನೊಂದು. ನಗಿ ಇತ್ತಽ. | ವಿವಿ |
| ಏನೊಂದು. ನಗಿ ಇತ್ತ. ಏನೊಂದು. ನಗಿ ಇತ್ತ. | ವಿವಿ |
| ಏರಿಕಿ. ನಗಿ ಇತ್ತಽ. | |

('ಬಿಸಿಲುಕುದುರೆ')

ಆದಿಪ್ರಾಸ ಅನಿಯತವಾಗಿದ್ದರೂ ಎರಡು ಮತ್ತು ನಾಲ್ಕನೆಯ ಪಾದಗಳಿಗೆ ಒಂದೇ ರೀತಿಯ ಅಂತ್ಯಪ್ರಾಸ ಮಾತ್ರ ಇಡೀ ಕವನದಲ್ಲಿ ನಿಯತವಾಗಿ ಬಂದಿದೆ. ಈ ಉದಾಹರಣೆಯಲ್ಲಿ, ಎರಡನೆಯ ಪಾದದ ಪದಪುಂಜವು ಮೂರನೆಯದರಲ್ಲಿ ಪುನರಾವರ್ತಿತವಾಗುವುದರಲ್ಲಿ ತ್ರಿಪದಿಯಲ್ಲಿಯ ಪುನರಾವರ್ತನೆಯ ಛಾಯೆಯನ್ನು ಗಮನಿಸಬಹುದು. ಆದರೆ ಪಲ್ಲವಿಯ ಈ ನುಡಿಯನ್ನು ಬಿಟ್ಟರೆ ಉಳಿದಂತೆ ಈ ಕವನದ, ಅಂತೆಯೇ ಉಳಿದ ಕವನಗಳ ಯಾವ ನುಡಿಯಲ್ಲೂ ಇಂತಹ ಪುನರಾವರ್ತನೆಯಿಲ್ಲ. ಗಣಾದೇಶದ ಬಳಕೆ ಮಾತ್ರ ಎಲ್ಲದರಲ್ಲೂ ಸಾಕಷ್ಟಿದೆ.

ಹೊಸಗನ್ನಡ ಕವಿತೆಯ ಆರಂಭಕಾಲದಲ್ಲಿ ಪಂಜೆಯವರು ಇದನ್ನು ಬಳಸಿದ್ದಾರೆ. ಅವರ 'ಚಂದ್ರನನ್ನು ತಾ' ಎಂಬ ಹಾಡಿನಲ್ಲಿ ಇದನ್ನು ಕಾಣುತ್ತೇವೆ. ಜಯರಾಯಾಚಾರ್ಯರ 'ಗಡಿಯಾರ', 'ಹೂವನ್ನು ಕೊಯ್ಯುವುದು' (ಅನುಕರಣಗೀತ ಲಹರಿ), ಜಾಗಿರದಾರರ 'ಬಸಿರು ಬಾಲೆ' (ಮೊಗ್ಗಿನ ಮಾಲೆ) ಮುಂತಾದ ಕವನಗಳಲ್ಲಿ ಇದನ್ನೇ ದ್ವಿಗಣ ಚೌಪದಿಯಾಗಿ ನಿರೂಪಿಸಿದೆ. ಮಾದರಿಗೆ,

| | |
|---|---|
| ಮೈಯ ನಿಂ. ಬೆಯ ಬಣ್ಣ. | ವಿವಿ |
| ಹಸಿರು ಸೀ. ರೆಯನುಟ್ಟ. | ವಿವಿ |
| ಬಸಿರಾದ. ಬಾಲೆಯು. | ವಿವಿ |
| ಅಲೆಯುವ. ಸಿರಿನೋಡ. | ವಿವಿ |

('ಬಸಿರು ಬಾಲೆ')

ಆದ್ಯಂತ ಪ್ರಾಸರಾಹಿತ್ಯ ಇಲ್ಲಿ ಗಮನಾರ್ಹ. ಜಯರಾಯಾಚಾರ್ಯರ ರಚನೆಗಳಲ್ಲಿ ಕೆಲವು ವೇಳೆ ೨-೪ನೆಯ ಪಾದಗಳ ಅಂತ್ಯದಲ್ಲಿ ಬ್ರಹ್ಮ ಬರುವುದೂ ಉಂಟು.

ಬೇಂದ್ರೆಯವರ 'ಸಂಜೀಯ ಜಾವಿಗೆ' (ಗಂಗಾವತರಣ) ಕವನದಲ್ಲಿ ನಾಲ್ಕು ನಾಲ್ಕು ವಿಷ್ಣುಗಣಗಳಿಂದಾದ ಸಮಪಂಚಪದಿ ಬಂಧವು ಬಳಕೆಯಾಗಿದೆ. ಮಾದರಿಗೆ,

| | |
|---|---|
| ಮಂಗಲೆ. ಯೊಂದಿಗೆ. ಹಿಗ್ಗಾಯ್ತು. ತಂದೆಗೆ. | ವಿವಿವಿವಿ |
| ಕುಣಿಸ್ಯಾಡಿ. ಕೂಸಿಗೆ. ಅರಳಿಸಿ. ಆಸೆಗೆ. | ವಿವಿವಿವಿ |
| ರಾಗದ. ಸಾಟಿಗೆ. ತೂಗ್ಯಾಡೊ. ಧಾಟಿಗೆ. | ವಿವಿವಿವಿ |
| ಒಲಿದಾಡೊ. ರೀತಿಗೆ. ಹಾಡ್ಯಾನೊ. ಗೀತಿಗೆ. | ವಿವಿವಿವಿ |
| ಸಂಜೀಯ. ಜಾವಿಗೆ. ಹೊರಟೀದಿ. ಬಾವಿಗೆ | ವಿವಿವಿವಿ |

ಆದಿಪ್ರಾಸವನ್ನು ಕೈಬಿಟ್ಟು, ಅಂತ್ಯಪ್ರಾಸವನ್ನಷ್ಟೇ ನಿಯತವಾಗಿ ಪಾಲಿಸಲು ಹೋಗಿರುವುದು ಇಲ್ಲಿ ಗಮನಾರ್ಹ.

ಕೆ. ವಿ. ಸುಬ್ಬಣ್ಣನವರ 'ಬ್ಯಾರಲ್ಲ ಇದು ಭಾವಗಣಿತ' ಮತ್ತು 'ಮೊದಲ ಕೂಟ' (ಹೂವು ಚೆಲ್ಲಿದ ಹಾದಿಯಲ್ಲಿ)ಗಳಲ್ಲಿ ಇಂತಹ ಪಾದಗಳನ್ನು ರಗಳೆಯಂತೆ ಉದ್ದಕ್ಕೆ ಕೂಡಿಸುತ್ತಾ ಹೋಗುವುದನ್ನು ಕೆಲವು ಕಡೆ ಕಾಣುತ್ತೇವೆ. ಮುಕ್ತಾಯ ಸ್ಥಾನದಲ್ಲಿ ತ್ರಿವಿಷ್ಣು ಪಾದಗಳ ಇಲ್ಲವೇ ಪ್ರತ್ಯೇಕಗಣಸಹಿತವಾದ ಕಿರಿಯಕ್ಕರದ ಪಾದಗಳ ಒಂದು ಯುಗ್ಮವನ್ನು ತರುವುದು ಇಂತಹ ಕಡೆಗಳಲ್ಲಿ ಗಮನಿಸಬೇಕಾದ ಅಂಶ.

ಈವರೆಗಿನ ವಿವರಣೆಯನ್ನೆಲ್ಲ ಗಮನಿಸಿದಾಗ, ಈ ಹಿಂದೆ, ಪ್ರಬಂಧದ ಮೊದಲಲ್ಲಿ ರೂಪಿಸಿಕೊಂಡ ವಿಷ್ಣುರಗಳೆಯು ವಿವಿಧ ರೂಪಗಳನ್ನು ತಾಳಿ ಬಳಕೆಯಾಗಿರುವುದು ಸ್ಪಷ್ಟವಾಗುತ್ತದೆ. ಗಣಸಂಖ್ಯೆಯ ದೃಷ್ಟಿಯಿಂದ ಎರಡು ಗಣಗಳ ಪಾದಗಳದ್ದನ್ನು ಕಿರಿ ವಿಷ್ಣುರಗಳೆಯೆಂದೂ ನಾಲ್ಕು ಗಣಗಳ ಪಾದಗಳದ್ದನ್ನು ಹಿರಿ ವಿಷ್ಣುರಗಳೆಯೆಂದೂ ಕರೆಯಬಹುದು. ಕಿರಿಯದರಲ್ಲಿ ಚೌಪದಿ, ಷಟ್ಪದಿ ಮತ್ತು ಮುಕ್ತಪದಿ (ಪಾದಗಳ ಅಳತೆ ಒಂದೇ ಇದ್ದು ಸಂಖ್ಯೆ ಮಾತ್ರ ಐಚ್ಛಿಕವಾಗಿರುವಂತಹ ನುಡಿರಚನೆ)-ಎಂಬ ಮೂರು ಪ್ರಧಾನ ಪ್ರಕಾರಗಳನ್ನು ಗುರುತಿಸಬಹುದು. ಹಿರಿಯದರಲ್ಲಿ, ದ್ವಿಪದಿ, ಚೌಪದಿ, ಪಂಚಪದಿ ಮತ್ತು ಮುಕ್ತಪದಿ ಎಂಬ ನಾಲ್ಕು ಪ್ರಕಾರಗಳನ್ನು ಗುರುತಿಸಬಹುದು. ಹೀಗೆ, ವಿಷ್ಣುರಗಳೆಯು ಒಟ್ಟು ಏಳು ಪ್ರಕಾರಗಳಲ್ಲಿ ವಿಕಸಿತವಾಗಿದೆ. ಸೀತಾರಾಮ ಕೆದಿಲಾಯರು, ಇವುಗಳ ಪೈಕಿ, ಹಿರಿ ವಿಷ್ಣುದ್ವಿಪದಿಯನ್ನು ಉಜ್ಜ್ವಲಗೀತಿ ದ್ವಿಪದಿ ಎಂದೂ ಅದರ ಎರಡರಷ್ಟಿರುವ ಚೌಪದಿಯನ್ನು ಮಂಗಳಗೀತಿ ಎಂದೂ ಕರೆದಿದ್ದಾರೆ.[೧೦] ಆದರೆ, ಅವನ್ನು ಕ್ರಮವಾಗಿ ವಿಷ್ಣುದ್ವಿಪದಿ, ವಿಷ್ಣುಚೌಪದಿ ಎಂದು ಕರೆಯುವುದು ಹೆಚ್ಚು ಉಚಿತವೆಂದು ತೋರುತ್ತದೆ. ಏಕೆಂದರೆ, ಎರಡೂ ಸಂಪೂರ್ಣವಾಗಿ ವಿಷ್ಣುಗಣಗಳಿಂದಲೇ ಆಗಿವೆ, ಸಮಪಾದಗಳಿಂದಲೇ ಕೂಡಿವೆ.

ಒಟ್ಟಿನಲ್ಲಿ ವಿಷ್ಣುರಗಳೆಗೆ ಇಲ್ಲಿ ಮುಕ್ತಪದಿತನಕ್ಕಿಂತ ಹೆಚ್ಚಾಗಿ, ನಿರ್ದಿಷ್ಟಪದಿತ್ವ ಪ್ರಾಪ್ತವಾಗಿದೆಯೆನ್ನಬಹುದು. ಆರಕ್ಕಿಂತ ಹೆಚ್ಚಿನ ಪಾದಗಳ ಬಂಧಗಳಲ್ಲಷ್ಟೇ ತಕ್ಕಮಟ್ಟಿನ ಮುಕ್ತಪದಿತನ ಕಾಣಿಸುವುದು. ಆದರೆ ಅಲ್ಲಿ ಕೂಡ ಅಂತ್ಯದಲ್ಲಿ ಬೇರೆ ರಚನೆಯ ಪಾದಗಳನ್ನು ಕೂಡಿಸುವುದರಿಂದ, ಪಲ್ಲವಿಯ ಪುನರಾವರ್ತನೆಯಿಂದ ನುಡಿಯ ಚೌಕಟ್ಟನ್ನೇ ಭದ್ರ ಪಡಿಸಲಾಗುತ್ತದೆಂಬುದನ್ನು ತಳ್ಳಿಹಾಕುವಂತಿಲ್ಲ. ಪ್ರಾಸದ ಸಂಬಂಧದಲ್ಲಿ ಹೇಳುವುದಾದರೆ ಈ ಹಿಂದಿನ ಶತಮಾನಗಳ ರಚನೆಗಳಲ್ಲೆಲ್ಲ ಆದಿಪ್ರಾಸ ನಿಯತವಾಗಿದ್ದು ಅಂತ್ಯಪ್ರಾಸ ಐಚ್ಛಿಕವಾಗಿರುವುದೇ ಹೆಚ್ಚು. ಈ ಶತಮಾನದ ರಚನೆಗಳಲ್ಲಿ ಆದಿಪ್ರಾಸದ ಮಹತ್ವವು ಅಂತ್ಯಪ್ರಾಸಕ್ಕೆ ಜಾರಿಹೋಗಿದೆ. ಲಯವೈವಿಧ್ಯ ಸಾಧನೆಗೆ, ಶಬ್ದಗಳ ಹೊಂದಾಣಿಕೆ, ಅನುಪ್ರಾಸಾದಿಗಳ ಹೊಂದಾಣಿಕೆ ಇವುಗಳ ಜೊತೆಗೆ ಗಣಾದೇಶ ಕೂಡ ಸಹಾಯಕವಾಗಿದೆ.

ಈ ಅಂಶಗಳನ್ನೆಲ್ಲ ಗಮನಿಸಿದಾಗ, ಈ ಹಿಂದೆ ರೂಪಿಸಿಕೊಂಡ ವಿಷ್ಣುರಗಳೆಯು ಒಂದು ಕಾಲದಲ್ಲಿ ಜನಪದ ಸಾಹಿತ್ಯದಲ್ಲಿ ಬಳಕೆಯಲ್ಲಿದ್ದಿರಬೇಕೆಂದೂ ಅದರಿಂದ ಒಡೆದ ಕವಲುಗಳೇ ಈ ವಿವಿಧ ಬಂಧಗಳೆಂದೂ ಊಹಿಸಲು ಅವಕಾಶವಾಗುತ್ತದೆ. ಈ 'ವಿಷ್ಣುರಗಳೆ'ಯು ಮೂಲದಲ್ಲಿ ಇದ್ದಿರಬೇಕು, ಅದರಿಂದ ಮಾತ್ರಾಲಯದ ರಗಳೆಗಳು ಹುಟ್ಟಿರಬೇಕು ಎಂಬುದು ನಮ್ಮ ಛಂದಶ್ಶಾಸ್ತ್ರಜ್ಞರ ಮನಸ್ಸಿನಲ್ಲಿ ಆಗಾಗ್ಗೆ ಸುಳಿದಿದೆ. ಅಂಶ ಷಟ್ಪದಿಯಿಂದ ಮಾತ್ರಾಷಟ್ಪದಿಗಳು ಹುಟ್ಟಿದುವೆಂಬ ನಿದರ್ಶನವು ಈ ಊಹೆಗೆ ದಾರಿ ಮಾಡಿಕೊಡುತ್ತದೆ. ಆದರೆ ರಗಳೆಯ ಮೂಲವು ಅಪಭ್ರಂಶ ಪ್ರಾಕೃತ ಸಾಹಿತ್ಯಗಳಲ್ಲಿದೆಯೆಂಬ ನಂಬಿಕೆಯೇ ಈಗ ದೃಢವಾಗಿ ಬೇರುಬಿಟ್ಟಿದೆ. ಇದಕ್ಕೆ ವಿರುದ್ಧವಾಗಿ, ಅಂಶ ಛಂದಸ್ಸಿನಲ್ಲಿ ಅದರ ಮೂಲವನ್ನು ಹುಡುಕಲು ಹೋಗಿರುವ ಕೆಲವು ವಿದ್ವಾಂಸರ ಅಭಿಪ್ರಾಯಗಳ ಸಾರ ಹೀಗಿದೆ :

''ಸಂಸ್ಕೃತ, ಪ್ರಾಕೃತ ಗ್ರಂಥಗಳಲ್ಲಿರುವ ಮಾತ್ರಾಸಮಕಗಳಂತೆ ರಗಳೆಗಳನ್ನು

---

೧೦ ನೋಡಿ: ಕ. ಪು. ಸೀತಾರಾಮ ಕೆದಿಲಾಯ: ಛಂದೋದರ್ಪಣಂ, ಕದಿರೆ, ಮಂಗಳೂರು, ೧೯೮೫

ನಾಗವರ್ಮನು ಸಂಸ್ಕೃತ ಛಂದಸ್ಸಿಗೇ ಸೇರಿಸಿದ್ದಾನೆ;...೩ ಮಾತ್ರೆಯ, ೫ ಮಾತ್ರೆಯ ಗಣಗಳಲ್ಲಿ ಮಾತ್ರಾಗಣ ಸ್ಪಷ್ಟವಾಗಿದೆ. ೪ ಮಾತ್ರೆಯ ಗಣಗಳಲ್ಲಿ ಅಂಶವೂ ಮಾತ್ರೆಯೂ ಬೆರಸಿರುವಂತೆ ಕಾಣುತ್ತದೆ. ಜಗಣ, ನಲ ಇವು ಉಂಟೋ ಇಲ್ಲವೋ ನಿರ್ಧರಿಸಿ ಹೇಳುವಂತಿಲ್ಲ. ರಗಳೆ ಸಂಸ್ಕೃತಕ್ಕೆ (ಪ್ರಾಕೃತಕ್ಕೆ) ಸೇರಬೇಕೋ, ಅಂಶಗಣದ ಕರ್ಣಾಟಕ ವಿಷಯ ಜಾತಿಯೋ ಸಂಶಯ ಉಳಿಯುತ್ತದೆ'' – ಎಂಬುದಾಗಿ ಬಿ. ಎಂ. ಶ್ರೀ. ಯವರು ಹೇಳಿದ್ದಾರೆ.[೧೧] ಆದರೆ ಅದು ಅಂಶ ಛಂದಸ್ಸಿಗೆ ಸೇರುತ್ತದೆ ಎಂಬುದನ್ನು ಹೇಳಿಲ್ಲ. ಮುಳಿಯ ತಿಮ್ಮಪ್ಪಯ್ಯನವರು ಕೂಡ, ''ರಗಳೆ ಎಂಬುದು, ದೇಸಿಯಾಗಿಯೇ ಇರುವ ಒಂದು ಹಾಡು. ಅದು ಮಾರ್ಗೀಯವಾದ ವೃತ್ತದ ಹಂತಿಯನ್ನೊಂದಲಿಲ್ಲ''[೧೨] ಎಂದಿರುವರಾದರೂ ಅದು ಒಂದು ಅಂಶಬಂಧವೆಂದು ಹೇಳಲಿಲ್ಲ; ಮೇಲಾಗಿ ಮಾತ್ರಾಸಮಕದೊಂದಿಗೆ ಅದರ ಸಂಬಂಧವನ್ನು ಕಲ್ಪಿಸಲು ಹೋಗಿದ್ದಾರೆ.

ದೇವೀರಪ್ಪನವರು ಹರಿಹರನ ರಗಳೆಗಳನ್ನು ಕುರಿತು ಬರೆಯುತ್ತಾ[೧೩] ಜನಪದ ಸಾಹಿತ್ಯದಲ್ಲಿ ರಗಳೆಯನ್ನು ಹೋಲುವ ಮಾತ್ರಾಬಂಧಗಳಿರುವುದನ್ನು ತೋರಿಸಿಕೊಡುತ್ತಾ, ಇಂತಹ ಬಂಧಗಳ ಆಧಾರದ ಮೇಲೆ, ಅವನು ತನ್ನ ರಗಳೆಗಳನ್ನು ರೂಪಿಸಿಕೊಂಡಿರಬೇಕು ಎಂದಿದ್ದಾರೆ. ಆದರೆ, ಅವರು ಕೂಡ, ಇದರ ಮೂಲವು ಅಂಶಛಂದಸ್ಸಿನಲ್ಲಿದೆಯೆಂದು ಹೇಳಿಲ್ಲ.

ಹಿರೇಮಲ್ಲೂರ ಈಶ್ವರನ್ ಅವರು, ''ಹರಿಹರನು ತನ್ನ ಕಾವ್ಯಗಳಿಗಾಗಿ ಬಳಸಿದ ಉತ್ಸಾಹ, ಮಂದಾನಿಲ, ಲಲಿತ ರಗಳೆಗಳು ಆತನಿಂದಲೇ ಸಂಸ್ಕಾರ ಪಡೆದು 'ಹೆಸರುವಡೆದು' ನೂತನ ಛಂದಸ್ಸಿಗಾಗಿ ಮಾರ್ಪಟ್ಟ ಹಳಗಾಲದ ಜಾನಪದ ರಗಳೆಯ ಮಟ್ಟುಗಳೆಂದು ಹೇಳಲು ಅವಕಾಶವಿದೆ'' ಎಂದಿದ್ದಾರೆ.[೧೪] ಆದರೆ ಈ ಮಾತನ್ನು ಹೇಳುವಲ್ಲಿ ಅವರಮನಸ್ಸಿನಲ್ಲಿರುವುವಾದರೂ ಮಾತ್ರಾಬಂಧಗಳೇ ಹೊರತು ಅಂಶಬಂಧಗಳಲ್ಲವೆಂಬುದನ್ನು ಗಮನಿಸಬೇಕು.

ಮುಗಳಿಯವರು ಈ ದಿಶೆಯಲ್ಲಿ ಇನ್ನು ಸ್ವಲ್ಪ ಖಚಿತವಾದ ಅಭಿಪ್ರಾಯವನ್ನು ನೀಡಿರುವಂತಿದೆ. ''ಮಂದಾನಿಲ ರಗಳೆಯ ಒಂದು ಪ್ರಕಾರವು ಪ್ರಾಕೃತದ ಪ್ರಭಾವದಿಂದ ರೂಪುಗೊಂಡಿರುವುದು ನಿಜ.'' ಆದರೆ ''ಕನ್ನಡ ಜನಪದ ಸಾಹಿತ್ಯದಲ್ಲಿ ತ್ರಿಪದಿಯ ಹಲವು ಆವಿಷ್ಕಾರಗಳಂತೆ ರಗಳೆಯ ಕೆಲವು ಆವಿಷ್ಕಾರಗಳೂ ಇದ್ದಿರಬಹುದು...ಮುಖ್ಯವಾಗಿ ರಗಳೆ. ಇದು ಅಚ್ಚಗನ್ನಡದ ಜಾನಪದ ಛಂದೋರೂಪವಿರಬೇಕೆಂದೂ ಅದು ಹಲವು ಟಿಸಿಲಾಗಿ ಬೆಳೆಯಿತೆಂದೂ ಮಾರ್ಗಕಾವ್ಯದಲ್ಲಿ ಅದೇ ಶಿಷ್ಟಭಾಷೆಯಲ್ಲಿ ಜನ್ಮತಾಳಿತೆಂದೂ ಹೇಳಬಹುದು'' ಎಂದಿದ್ದಾರೆ.[೧೫] ತ್ರಿಪದಿಯ ಹೋಲಿಕೆಯನ್ನು ನೀಡಿರುವುದರಿಂದ, ಬಹುಶಃ ಅಂಶಬಂಧಗಳಲ್ಲೇ ಇದರ ಮೂಲವನ್ನು ಹುಡುಕಬೇಕೆಂದು ಸೂಚಿಸುವುದು ಅವರ ಉದ್ದೇಶವಾಗಿರುವಂತಿದೆ.

---

೧೧ 'ಕರ್ಣಾಟಕ ಛಂದಸ್ಸು', ಕನ್ನಡ ಕೈಪಿಡಿ, ಸಂಪುಟ ೧, ಮೈಸೂರು, ೧೯೭೧, ಪು. ೧೬೭.

೧೨ ನಾಡೋಜ ಪಂಪ, ಮಂಗಳೂರು, ೧೯೩೮, ಪು. ೨೬೪.

೧೩ ಹಂಪೆಯ ಹರಿಹರದೇವರ ಶರಣಚರಿತಮಾನಸಂ, ಮೈಸೂರು, ೧೯೬೮, ಪೀಠಿಕೆ, ಪು. clxxxvi

೧೪ ಹರಿಹರನ ರಗಳೆಗಳು: ಒಂದು ಸಂಖ್ಯಾನಿರ್ಣಯ, ಮೈಸೂರು, ೧೯೭೧, ಪು. ೪೮೫-೮೬.

೧೫ ಪ್ರಾಚೀನ ಕನ್ನಡ ಸಾಹಿತ್ಯ ರೂಪಗಳು, ಮೈಸೂರು, ೧೯೭೩, ಪು. ೧೬೩.

ಈ ಬಗ್ಗೆ ಮೊದಲಬಾರಿಗೆ ಸ್ಪಷ್ಟವಾದ ಅಭಿಪ್ರಾಯ ನೀಡಿದವರೆಂದರೆ ಕೆ. ಶಿವರಾಮ ಐತಾಳರು. ''.ರಗಳೆ, ಪ್ರಥಮತಃ ಅಂಶಗಣದ್ದೇ ವೃತ್ತ. ಜಾನಪದವೇ ಇದರ ತವರು. ಅಪಭ್ರಂಶ ಕಡವಕಗಳ ಪ್ರಭಾವವೂ ಉಂಟಾಯಿತು. ಅಂಶಷಟ್ಪದಿ ಮಾತ್ರಾಷಟ್ಪದಿ ಯಾದಂತೆ ಅಂಶರಗಳೆ ಮಾತ್ರಾರಗಳೆಯಾಗಿರಬಹುದು'' – ಎಂದ್ದಾರೆ, ಖಚಿತವಾಗಿ.[೧೬]

ಈ ಎಲ್ಲರ ಅಭಿಪ್ರಾಯಗಳನ್ನೂ ಗಮನಿಸಿದ ಟಿ. ವಿ. ವೆಂಕಟಾಚಲ ಶಾಸ್ತ್ರೀಯವರು ಈ ಸಂಬಂಧದಲ್ಲಿ ತಮ್ಮ ಅಭಿಪ್ರಾಯಗಳನ್ನು ಹೀಗೆ ಮಂಡಿಸಿದ್ದಾರೆ: ''ನಾಗವರ್ಮ, ರಗಳೆಯನ್ನು ಸಂಸ್ಕೃತ ಛಂದಸ್ಸಿಗೇ ಸೇರಿಸಿರುವನೆಂಬುದನ್ನು ಗಮನಿಸಿಯೂ, ಅವರು ರಗಳೆಯಲ್ಲಿ ಅಂಶಛಂದಸ್ಸಿನ ಧೋರಣೆಯುಂಟೆಂದು ಗ್ರಹಿಸಿದ್ದು ಸೂಕ್ತವಾಗಲಿಲ್ಲ. ಆ ಗ್ರಹಿಕೆ ಕಾರಣವಾಗಿ ಪ್ರಸ್ತಾರದಲ್ಲಿ ತೊಡಕು ಹುಟ್ಟಿತು; ಕೆಲವರು ಹೊರತು, ಈಚಿನ ವಿಮರ್ಶಕರಿಗೂ ಮರುಪರಿಶೀಲನೆ ಅನಾವಶ್ಯಕವೆಂದು ತೋರಿತು''- ಎಂಬುದಾಗಿ ಬಿ.ಎಂ.ಶ್ರೀ.ಯವರ ಅಭಿಪ್ರಾಯದ ಸಂಬಂಧದಲ್ಲಿ ಹೇಳಿದ್ದಾರೆ.[೧೭] ಉಳಿದವರ ಅಭಿಪ್ರಾಯಗಳನ್ನು ಕುರಿತಂತೆ, ''ರಗಳೆಗೆ ಮೂಲ, ಮೂಲತಃ ಅಂಶಗಣದ್ದೇ ವೃತ್ತ, ಜಾನಪದ ಛಂದಸ್ಸಿನ ರಗಳೆಗಳು ಇದಕ್ಕೆ ಆಧಾರ, ನಡುವೆ ಅಪಭ್ರಂಶ ಕಡವಕಗಳ ಪ್ರಭಾವ ಒದಗಿರಬೇಕು ಎನ್ನುವುದಕ್ಕೆ ಈ ದೃಷ್ಟಿಯಿಂದ ಹೆಚ್ಚಿನ ಶೋಧನೆ ತುಲನೆ ವಿಚಾರಗಳ ಅಗತ್ಯವಿದೆ. ಅಪಭ್ರಂಶ ಪ್ರಭಾವದ ರಗಳೆಗಳಿಗೆ ಸಮಾನಾಂತರ ವಾಹಿನಿಯಾಗಿ ಒಂದು ಬಗೆಯ ರಗಳೆಯ ಧಾಟಿಗಳು ಜನಪದ ಸಾಹಿತ್ಯದಲ್ಲಿ ಬೆಳೆದುಬಂದಿರಲೂಬಹುದು''[೧೮] – ಎಂಬುದಾಗಿ ಹೇಳಿದ್ದಾರೆ. ಆದ್ದರಿಂದ ಶಾಸ್ತ್ರಿಗಳು ಕೂಡ ರಗಳೆಯ ಅಂಶಮೂಲವನ್ನು ಸಂಪೂರ್ಣವಾಗಿ ತಳ್ಳಿಹಾಕಿಲ್ಲವೆಂಬುದು ಗಮನಾರ್ಹ.

ಈಗ ಇದರ ಸಾಧ್ಯಾಸಾಧ್ಯತೆಗಳ ಬಗ್ಗೆ ಸ್ವಲ್ಪ ವಿಚಾರ ಮಾಡೋಣ. ಜನಪದ ಸಾಹಿತ್ಯದಲ್ಲಿ ವಿಷ್ಣುರಗಳೆಯು ಮೊದಲಿನಿಂದಲೂ ಪ್ರಚಾರದಲ್ಲಿತ್ತೆಂದು ಭಾವಿಸಿದಲ್ಲಿ, ಇದು ಬಹು ಬೇಗ ಮಾತ್ರಾಛಂದಸ್ಸಿಗೆ ತಿರುಗಿರುವುದಕ್ಕೆ, ಪ್ರಾಕೃತ ಅಪಭ್ರಂಶಗಳ ಸದೃಶಬಂಧಗಳ ಪ್ರಭಾವವೇ ಮೂಲಕಾರಣವೆಂದು ಊಹಿಸುವುದರಲ್ಲಿ ತಪ್ಪಿಲ್ಲ. ಜಾನಪದಬಂಧವೊಂದನ್ನು ಗ್ರಾಂಥಿಕ ಮಟ್ಟಕ್ಕೆ ಏರಿಸುವಾಗ ಅದಕ್ಕೆ ಗ್ರಾಂಥಿಕ ಶೈಲಿಯ-ಭಾಷೆಯ ಮೆರುಗು ಕೊಡುವುದು ಸಹಜ. ಗ್ರಾಂಥಿಕವಾಗಿ ದೊರಕುವ ತ್ರಿಪದಿಯ ಉದಾಹರಣೆಗಳಲ್ಲಿ ಈ ಅಂಶವನ್ನು ಗುರುತಿಸಬಹುದು. ಆದ್ದರಿಂದ ಮಾತ್ರಾಛಂದಸ್ಸಿಗೆ ತಿರುಗಿದ ಅಂಶಬಂಧಗಳ ಪೈಕಿ, ಅತಿ ಪ್ರಾಚೀನವಾದುದು ಇದು ಎಂದು ಹೇಳುವುದರಲ್ಲಿ ತಪ್ಪಿಲ್ಲವೆನಿಸುತ್ತದೆ. ಈ ಪರಿವರ್ತನೆ ಬಹಳ ಹಿಂದೆಯೇ ನಡೆದುಹೋಗಿರಬಹುದಾದ್ದೇ, ನಾಗವರ್ಮಾದಿಗಳು ಇದನ್ನು ಹೇಳದೆ ಬಿಟ್ಟಿರುವುದಕ್ಕೆ ಕಾರಣವೆನಿಸುತ್ತದೆ. ಅವರು ಸ್ವೀಕರಿಸಿ ವಿವರಿಸಿದ ಬಂಧಗಳ ಅರ್ಹತೆಯೆಂದರೆ, ಕಾವ್ಯಪ್ರಯೋಗವೇ ಎಂಬುದನ್ನು ಇಲ್ಲಿ ನೆನೆಯಬೇಕು. ರಗಳೆಯ ಮೇಲಾಗಿರುವ ದಟ್ಟ ಪ್ರಭಾವದ ಮೂಲಗಳು ಸ್ಪಷ್ಟವಾಗಿ ಸಂಸ್ಕೃತಾದಿ (ಪ್ರಾಕೃತ)ಗಳಲ್ಲಿರು

---

೧೬ 'ರಗಳೆಯ ಉಗಮ ಮತ್ತು ಪ್ರಾರಂಭ', ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಸಂಪುಟ ೩, ಬೆಂಗಳೂರು, ೧೯೭೬, ಪು. ೨೨೯.

೧೭ 'ರಗಳೆ, ಉಗಮ, ಲಕ್ಷಣ, ಇತಿಹಾಸ', ಕನ್ನಡ ಛಂದಸ್ಸಿನ ಚರಿತ್ರೆ, ಸಂಪುಟ ೧, ಮೈಸೂರು, ೧೯೮೦, ಪು. ೫೬೧.

೧೮ ಅದೇ, ಪು. ೫೬೭.

ವುದರಿಂದ ಅದನ್ನು ಮಾತ್ರಾಛಂದಸ್ಸಿನ ಚೌಕಟ್ಟಿನಲ್ಲಿ ಪರಿಗಣಿಸಿ ಸಂಸ್ಕೃತ ಛಂದಸ್ಸಿನ ವರ್ಗಕ್ಕೇ ಸೇರಿಸಿರುವುದು ಕೂಡ ಸಹಜವೇ ಆಗಿದೆ.

ಹೀಗೆಯೇ ಆಗಿದೆಯೆಂದು ಊಹಿಸುವುದಕ್ಕೆ ಪ್ರಬಲವಾದ ಆಧಾರಗಳು ಬೇಕಾಗುತ್ತವೆ. ಶಿವರಾಮ ಐತಾಳರೇನೋ, ಜನಪದ ಗೀತೆಗಳ ಕೆಲವು ಉದಾಹರಣೆಗಳನ್ನು ಕೊಡುತ್ತಾ, ''ರಗಳೆಗಳಿಗೆ ಪ್ರಾಕೃತ ಮೂಲವನ್ನು ತೀನಂಶ್ರೀಯವರು ಕಂಡುಹಿಡಿದಿದ್ದಾರೆ. ಪ್ರಾಕೃತಕ್ಕೆ ಎಲ್ಲಿಂದ ಬಂತು? ಜನಪದ ರಗಳೆಗಳನ್ನು, ಬಗೆಬಗೆಯ ರಗಳೆಗಳನ್ನು... ನೋಡಿದ್ದೇವೆ. ತಮಿಳಿನಲ್ಲಿ ಒಂದು ಅಥವಾ ಮೂರು ಪಾದಗಳ ಕನಿಷ್ಠ ಮಿತಿಯಿಂದ ಆರಂಭಿಸಿ ತೊಲ್ಕಾಪ್ಪಿಯವರ ಪ್ರಕಾರ ಸಾವಿರ ಪಾದ ಪರಮಾವಧಿಯಿರುವ, ಆದರೆ ಪ್ರಯೋಗದಲ್ಲಿ ೭೮೨ ಪಾದಗಳು ಸಿಕ್ಕಿರುವ 'ಆಸ್ರಿರಿಯ ವಿರುತ್ತು' ಇದೆ. ಅಂಶಷಟ್ಪದಿ ವಿವಿಧ ಮಾತ್ರಾಷಟ್ಪದಿಗಳಾಗಬಹುದಾದರೆ ಅಂಶರಗಳೆ, ಜನಪದರಗಳೆಗಳು ಮಾತ್ರಾರಗಳೆಗಳೇಕೆ ಆಗಬಾರದು? ಪ್ರಾಕೃತಕ್ಕೂ ದ್ರಾವಿಡರ ಕಾಣಿಕೆ ಏಕಿರಬಾರದು? ಇವೆಲ್ಲ ಪರಿಶೀಲನ ಯೋಗ್ಯ. ರಗಳೆಗಳಿಗೆ ಅಂಶಮೂಲವನ್ನು ಬಿಎಂಶ್ರೀಯವರು ಕಲ್ಪಿಸಿರುವುದು ಹೆಚ್ಚು ಆಧಾರವುಳ್ಳದ್ದೆನಿಸುತ್ತದೆ''[19] – ಎಂಬುದಾಗಿ ಹೇಳಿದ್ದಾರೆ. ಆದರೆ ಇಲ್ಲಿ ಕೆಲವು ಸಂದೇಹಗಳು ತಲೆದೋರುತ್ತವೆ. ಮೊದಲನೆಯದಾಗಿ ಅವರು ಕೊಟ್ಟಿರುವ ಕನ್ನಡ ಜನಪದಗೀತೆಗಳ ಉದಾಹರಣೆಗಳು ಒಂದೊಂದು ಸಾಲಿನವು; ಸಂಪೂರ್ಣ ಲಕ್ಷಣ ವಿವರಣೆಗೆ ಅವು ಸಾಲುವುದಿಲ್ಲ. ಈ ಕೊರತೆಯನ್ನೇನೋ ಪ್ರಕೃತ ಪ್ರಬಂಧದಲ್ಲಿ ಸಾಧ್ಯವಿದ್ದಷ್ಟುಮಟ್ಟಿಗೆ ನೀಗಿಸಲಾಗಿದೆ. ಆದರೆ ಈ ಜನಪದಗೀತೆಗಳ ಉದಾಹರಣೆಗಳು ಎಷ್ಟು ಪ್ರಾಚೀನ ಎಂಬುದು ಮಾತ್ರ ತಿಳಿಯುವುದಿಲ್ಲ. ಎರಡನೆಯದಾಗಿ, ಆಶಿರಿಯವಿರುತ್ತದಲ್ಲಿ ನಾವು ಕಾಣುವುದು ಮುಕ್ತಪದಿತಸದ ಹೋಲಿಕೆಯನ್ನು ಮಾತ್ರ. ಪಾದರಚನೆಯ ದೃಷ್ಟಿಯಿಂದ ರಗಳೆಗೂ ಅದಕ್ಕೂ ಬಹಳಷ್ಟು ವ್ಯತ್ಯಾಸವಿದೆ. ಉದಾಹರಣೆಗೆ ಇದನ್ನು ನೋಡಬಹುದು.

ವೇನೇರ್ ನಿಱುವಿ ವೇಶರಿಸೇರ್ ವಿರಿನ್ದು ತಿಳ್ಳೆತ್ತಮಾರ್ ಶ್ಯೆವಿಯಾ
ನೂನೇ ರೊಱಿಗಿ ಪ್ಪಿಣಕ್ಕುಪ್ಪ್ಯೆಯುದಟ್ಟು ನಾಱುಮ್ ಪೇಟ್ಪ್ಯಾಯಾನ್
ಕಾನೇರ್ ನೆರುಜ್ಗಿಟ್ಟೆಜ್ಕಿಲ್ಯೆನೇರ್ ಕೞಿನಿಳ ಶಿವನ್ದ ತಾಡಿಯಿನಾನ್
ಜೌನೇರಿಲಮಾ ಕೊರುಜ್ಗನ್ಯೆತ್ತುನ್ ತಾಜ್ಗುಜ್ಗುರಕ್ಕು ಮುಗವಡಿವಾ
(ತೇಂಬಾವಣಿ)

ತೇಮಾ। ಪುಳಿಮಾ। ಕೂವಿಳಂಗಾಯ್। ಪುಳಿಮಾ। ಪುಳಿಮಾ। ಕರುವಿಳಂಗಾಯ್।
ತೇಮಾ। ಪುಳಿಮಾ। ಪುಳಿಮಾಂಗಾಯ್। ಪುಳಿಮಾ। ತೇಮಾ ತೇಮಾಂಗಾಯ್।
ತೇಮಾ। ಪುಳಿಮಾ। ಕೂವಿಳಂಗಾಯ್। ಪುಳಿಮಾ। ಪುಳಿಮಾ। ಕೂವಿಳಂಗಾಯ್।
ತೇಮಾ। ಪುಳಿಮಾ। ಕರುವಿಳಂಗಾಯ್। ತೇಮಾ। ಪುಳಿಮಾ। ಕರುವಿಳಂಗಾಯ್।[20]

ಇಲ್ಲಿ ಗಮನಿಸಬೇಕಾದ ಅಂಶವೆಂದರೆ, ಮೊದಲನೆಯದಾಗಿ, ರಗಳೆಯಲ್ಲಿರುವಂತೆ ಇಲ್ಲಿಯ ಪಾದಗಳಲ್ಲಿ ಗಣಸಂಖ್ಯೆ ಎರಡಾಗಲಿ ನಾಲ್ಕಾಗಲಿ ಇಲ್ಲ, ಆರು ಇದೆ. ಎರಡನೆಯದಾಗಿ ಪಾದದಲ್ಲಿರುವ ಗಣಗಳು ಒಂದೇ ಸ್ವರೂಪದವಲ್ಲ. ಜೊತೆಗೆ, ಒಂದು

---

೧೯ 'ಜನಪದ ಛಂದಸ್ಸು', ಕರ್ನಾಟಕ: ಕನ್ನಡ ವಿಷಯ ವಿಶ್ವಕೋಶ, ಮೈಸೂರು, ೧೯೭೯, ಪು. ೬೫೩

೨೦ ನೋಡಿ: Kamil V. Zvelebil: *Classical Tamil Prosody:* An Introduction, Madras, 1989, p. 80-81.

ಪಾದದ ಗಣರಚನೆಯಂತೆ ಮತ್ತೊಂದು ಪಾದದ ಗಣರಚನೆಯಿಲ್ಲ. ಆದ್ದರಿಂದ ರಗಳೆಯ ಮೂಲದ ಬಗ್ಗೆ ಇದು ಬೆಳಕು ಚೆಲ್ಲುವುದು ಕಷ್ಟ. ಆದ್ದರಿಂದ ವಿಷ್ಣುರಗಳೆಯನ್ನು ಹೋಲುವ ಉದಾಹರಣೆಗಳು ಬೇರೆ ಯಾವುವಾದರೂ ಇವೆಯೇ ಇಂದು ಹುಡುಕಬೇಕಾಗುತ್ತದೆ.

ತುಳುವಿನಲ್ಲಿ ಇದನ್ನು ಹೋಲುವ ರಚನೆಯಿರುವುದಾಗಿ ಸೇಡಿಯಾಪು ಅವರು ಹೇಳುತ್ತಾರೆ.[೨೧] ಅದಕ್ಕೆ ಅವರು ಕೊಡುವ ಉದಾಹರಣೆ ಹೀಗಿದೆ:

ಕಜ್ಗೊರ್ಗಳೋ। ಕಜ್ಗೊರ್ಗಳೋ। ಮಾಯಿತಾ। ಪುಣ್ಣಮೆ । ವಿವಿವಿವಿ
ಕಜ್ಗೊರ್ಗಳು। ಪುಟ್ಸೆ। ಕರಿಯ ಬ। ಡೆಕ್ಕಾಯಿ। ವಿವಿವಿವಿ

ಆದರೆ, ಇಲ್ಲಿ ಕೂಡ ಇದು ಎಷ್ಟು ಪ್ರಾಚೀನವಾದುದೆಂಬುದು ತಿಳಿಯುವುದಿಲ್ಲ. ಹೀಗಾಗಿ, ಪ್ರಕೃತದಲ್ಲಿ ಗ್ರಾಂಥಿಕ ಸಾಹಿತ್ಯದತ್ತಲೇ ತಿರುಗಬೇಕಾಗುತ್ತದೆ. ಆದರೆ, ನಮಗೆ ಅಲ್ಲಿ ಸಿಕ್ಕುವ ಅತಿ ಪ್ರಾಚೀನ ಉದಾಹರಣೆಯೆಂದರೆ ಹದಿನೈದನೆಯ ಶತಮಾನದ ಪೂರ್ವಾರ್ಧದ ಕರಸ್ಥಲದ ನಾಗಲಿಂಗದೇವರ 'ವೀರಮಡಿವಳ ಮಾಚಯ್ಯಗಳ ತಾರಾವಳಿ'ಯದೇ (೧೫ನೆಯ ಶತಮಾನದ ಪೂರ್ವಾರ್ಧ). ಮಾತ್ರಾರಗಳೆಗಳಾದರೋ ಅದಕ್ಕಿಂತ ೫೦೦ ವರ್ಷಗಳಷ್ಟು ಹಿಂದಿನಿಂದಲೂ ಬಳಕೆಯಲ್ಲಿವೆ. ಆದ್ದರಿಂದ ಲಭ್ಯ ಉದಾಹರಣೆಗಳನ್ನು ಗಮನಿಸಿ ಖಚಿತವಾಗಿ ಇದು ಹೀಗೇ ಸರಿ ಎಂದು ಹೇಳುವುದು ಸಾಧ್ಯವಾಗುವುದಿಲ್ಲ. ಆದರೆ, ಜನಪದ ಸಾಹಿತ್ಯವು ಅತಿ ಪ್ರಾಚೀನವಾದುದೆಂದು ಭಾವಿಸಿ, ರಗಳೆಗೆ ಅಂಶಮೂಲವನ್ನು ಊಹಿಸುವುದರಲ್ಲಿ ತಪ್ಪಿಲ್ಲ.

ಇವೆಲ್ಲ ಹೇಗೇ ಇದ್ದರೂ ವಿಷ್ಣುರಗಳೆಯೆಂದು ಕರೆಯಬಹುದಾದ ಬಂಧವೊಂದಂತೂ ಪ್ರಚಲಿತವಿದೆಯೆಂಬುದರಲ್ಲಿ ಭಿನ್ನಾಭಿಪ್ರಾಯವಿಲ್ಲ. ಇಂತಹ ಒಂದು ರಗಳೆ ಮೂಲದಲ್ಲಿ ಇದ್ದಿರಬೇಕೆಂಬ ಊಹೆ ಮಾತ್ರ ಈವರೆಗೆ ಪ್ರಚಲಿತವಿತ್ತು, ಅದಕ್ಕೆ ಕೆಲವು ವಿರಳ ಉದಾಹರಣೆಗಳ ಪೋಷಣೆಯೂ ಸಿಕ್ಕುತ್ತಿತ್ತು. ಪ್ರಕೃತ ಪ್ರಬಂಧದಲ್ಲಿ ಅದರ ಅಸ್ತಿತ್ವವನ್ನು ಭದ್ರಪಡಿಸಿ ಸ್ಪಷ್ಟಪಡಿಸಲಾಗಿದೆ; ಅದರ ಪ್ರಾಚೀನತೆಯನ್ನು ಹದಿನೈದನೆಯ ಶತಮಾನದಷ್ಟು ಹಿಂದಕ್ಕೆ ತೆಗೆದುಕೊಂಡು ಹೋಗಲಾಗಿದೆ; ಈ ಮೂಲಕ ವಿಷ್ಣುರಗಳೆ ಮತ್ತು ಮಾತ್ರಾರಗಳೆಗಳ ಜನಕ-ಜನ್ಯಸಂಬಂಧದ ಅಂತರವನ್ನು ತಕ್ಕಮಟ್ಟಿಗೆ ಕಡಮೆ ಮಾಡಲು ಪ್ರಯತ್ನಿಸಲಾಗಿದೆ. ಇದಕ್ಕಿಂತ ಹಿಂದಕ್ಕೆ ಇದರ ಪ್ರಾಚೀನತೆಯನ್ನು ಕೊಂಡೊಯ್ದು ಈ ಸಂಬಂಧವನ್ನು ಖಚಿತಪಡಿಸುವುದು ಸಾಧ್ಯವೇ ಎಂಬುದನ್ನು ಪರಿಶೀಲಿಸುವ ಕೆಲಸ ಇನ್ನೂ ನಡೆಯಬೇಕಾಗಿದೆ.

*ಸಂಶೋಧನ, ೧೯೯೧, ಪು. ೬೪-೭೮*

೨೧ ನೋಡಿ: ಕನ್ನಡ ಛಂದಸ್ಸು, ಮಣಿಪಾಲ, ೧೯೮೮, ಪು. ೧೭.

## ೪೦. ಹೊಸ ಛಂದಸ್ಸಿನ ಲಯಗಳು

● ತೀ. ನಂ. ಶ್ರೀಕಂಠಯ್ಯ

೧

ಈ ಹೊಸ ಯುಗದ ಕವಿಗಳು ಪತ್ರಿಕೆ ಪುಸ್ತಕಗಳಲ್ಲಿ ಪ್ರಕಾಶಗೊಳಿಸುತ್ತಿರುವ ಕವನಗಳಲ್ಲಿ ಪದ್ಯಜಾತಿ ಅನಂತವಾಗಿರುವಂತೆ ಮೇಲುನೋಟಕ್ಕೆ ತೋರಬಹುದು. ಹಿಂದಿನ ಛಂದಸ್ಸಿನಲ್ಲಿದ್ದಂತೆ ಪದ್ಯಕ್ಕೆ ಇಷ್ಟೇ ಚರಣ, ಚರಣಕ್ಕೆ ಇಷ್ಟೇ ಅಕ್ಷರ ಅಥವಾ ಮಾತ್ರೆ ಎಂಬ ಕಟ್ಟಳೆಯೇ ಕಾಣಿಸದೆ, ಹೊಸ ಛಂದಸ್ಸಿನಲ್ಲಿ ಅನಾಯಕತೆ ತಾಂಡವವಾಡುತ್ತಿರುವಂತೆ ಭಾಸವಾಗಬಹುದು. ಆದರೆ ಒಳಹೊಕ್ಕು ಪರಿಶೀಲಿಸಿದರೆ, ಇಲ್ಲಿರುವುದು ವೈವಿಧ್ಯವೇ ಹೊರತು ಸ್ವಚ್ಛಂದತೆಯಲ್ಲವೆಂಬುದು ಸ್ಪಷ್ಟವಾಗುತ್ತದೆ. ಪದ್ಯದಲ್ಲಿ ಎಷ್ಟೆಷ್ಟು ಚರಣಗಳಿರಬೇಕು, ಅವು ಎಷ್ಟೆಷ್ಟು ಉದ್ದವಾಗಿರಬೇಕು, ಒಂದಕ್ಕೊಂದನ್ನು ಹೇಗೆ ಜೋಡಿಸಬೇಕು – ಈ ಮೊದಲಾದ ವಿವರಗಳಲ್ಲಿ ಕೂಡ ಕವಿಗೆ ಹಿತವಾಗುವ, ಹಿಡಿತಕ್ಕೆ ಸಿಕ್ಕುವ ನಿಯಮಗಳುಂಟೆಂದು ತೋರಿಸುವುದು ಕಷ್ಟವಲ್ಲ ; ಆದರೆ ಅವುಗಳ ನಿರೂಪಣೆ ಸದ್ಯದಲ್ಲಿ ನಮ್ಮ ಉದ್ದೇಶಕ್ಕೆ ಮೀರಿದ್ದು. ಇನ್ನು ಈ ವಿವಿಧ ವಿಸ್ತಾರಕ್ಕೆಲ್ಲಾ ಇಂಬುಗೊಟ್ಟು ಅದರ ಜೀವಾಳವಾಗಿ ಮಿಡಿಯುವ ನಡೆಗಳು ಗ್ರಹಿಕೆಗೆ ನಿಲುಕದಷ್ಟೇನೂ ಗಹನವಾಗಿಲ್ಲ; ಅವುಗಳನ್ನು ಎಣಿಕೆಮಾಡುವುದಕ್ಕಂತೂ ನಿಜವಾಗಿ ಎರಡು ಕೈಗಳ ಬೆರಳುಗಳು ಕೂಡ ಅನಾವಶ್ಯಕ. ಈ ಮೂಲಗತಿಗಳು ಯಾವುವು, ಅವುಗಳ ವಿನ್ಯಾಸ ಹೇಗೆ, ಅಲ್ಲಿಯ ಸಮಸ್ಯೆಗಳೇನು ಎಂಬುದನ್ನು ಕೆಲವು ಮಟ್ಟಿಗೆ ವಿಚಾರಮಾಡುವುದೇ ಇಲ್ಲಿಯ ಪ್ರಯತ್ನ.

ಹೊಸ ಕವಿತೆಯ ನಾಡಿನಲ್ಲಿ ಹೆದ್ದಾರಿಗಳನ್ನು ತೆರೆದ 'ಇಂಗ್ಲಿಷ್ ಗೀತಗಳು', 'ಅಶ್ವತ್ಥಾಮನ್' – ಈ ಎರಡು ಕೃತಿಗಳಿಂದ ಎತ್ತಿಕೊಟ್ಟಿರುವ ಕೆಳಗಿನ ಪದ್ಯಖಂಡಗಳನ್ನು ನೋಡಿ:

(೧) ಮೊದಲು ತಾಯ ಹಾಲ ಕುಡಿದು,
ಲಲ್ಲೆಯಿಂದ ತೊದಲ ನುಡಿದು,
ಕೆಳೆಯರೊಡನೆ ಬೆಳೆದು ಬಂದ
ಮಾತದಾವುದು –
ನಲ್ಲೆಯೊಲವ ತೆರೆದು ತಂದ
ಮಾತದಾವುದು –

(೨) ಲೋಕಂ ಪುಟ್ಟಲ್, ಲೋಕಂ ಸಾಯಲ್,
ದೇವತೆಗಳ ಗಣಮೆಲ್ಲಂ ಪಾಯಲ್,
ಒರ್ವನೆ ತಾಂಡವವಾಡುವ ರಾಜಾ,
ನಾಟ್ಯಂಗಲಿಸುವ ಓ ನಟರಾಜ,
ಕುಣಿವೆನ್, ಕಲಿಸೆನಗೀಗಳ್; ಬಾರಯ್,
ಕುಣಿವೆನ್, ಬಾರಯ್!
ಓ ಶಿವ, ಬಾರಯ್!

(೩) ಆಶೆಗಳು; ಆಶೆಯನು ಕಸಲಿಸುವ ವಿಘ್ನಗಳು;
ಆಶೆಯೊಳಡಗಿಹೋಗುವ ಭಯಗಳು;
ಬಹುಕಾಲ ಮನಸಿನಲಿ ಮರಸಿದ್ದು ಬೆಳಸಿದ್ದ,
ಬಹುಕಾಲ ಬೆಳಸಿದ್ದ ವಾಂಛಿತಗಳು.

(೪) ಚೆಲ್ವಿನ ನೆಲೆ, ಕಣ್ಗಳ ಬಲೆ, ಸುಖದೂಱಿತೆಯ ಬನವಾಸೀ,
ಬಳೆದಲೆದಾ ಕಾನ್‌ಮಲೆಗಳನ್ ಆನ್ ಮಱೆವೆನೆ, ಬನವಾಸೀ !
ಭಾರತದೀ ಸುೞಿಗಾಳಿಗೆ ಸಿಲ್ಕುತೆ ನಾನ್ ತಱಗಾದೆನ್;
ಪೆಱೆ ತುಂಬುತೆ, ಪೆಱೆ ತೇಯುತೆ, ಮನೆಗಾಣದೆ ಬಡವಾದೆನ್ ;
ನಿನ್ನನೆ ನೆನೆನೆನೆದೋ ತಾಯ್, ಪಂಬಲಿಸುವ ನೋವೊಂದೇ !
ಇನ್ನನಗೇನಾಸೆಗಳೋ, ಪಾರ್ವುದು ನಾನ್ ಸಾವೊಂದೇ !

(೫) ಒಲಿದುದಾಯಿತು, ನಲಿದುದಾಯಿತು,
ನೊಂದುದಾಯಿತು, ಬೆಂದುದಾಯಿತು.
ಇಲ್ಲೆ ನರಕವ ಕಂಡುದಾಯಿತು;
ಎಲ್ಲ ಆಯಿತು ನಮಗೆ, ನಲ್ಲೆ.

(೬) ನೋಟಸಿಂಗರದ ತೋಟದೊತ್ತಿನಲಿ
ಮುಸುಕುಕೊಂಬೆಗಳ ನೆರಳಲಿ,
ಮೇಳದೊರಗಿರುವರೇಳು ಕನ್ನೆಯರು
ಮಿಸುನಿ ಜಿಂಕೆಗಳ ತೆರದಲಿ........

ಈ ಪದ್ಯಗಳ ನಡೆಗೆ ಗಮನಕೊಟ್ಟು ಓದುತ್ತಿದ್ದರೆ ಅಥವಾ ಕೇಳುತ್ತಿದ್ದರೆ, ನಿಯತವಾದ ಜಾಗಗಳಲ್ಲಿ ತಾಳ ಹಾಕಬೇಕೆನ್ನಿಸುತ್ತದೆ; ಉತ್ಸಾಹಶಾಲಿಗಳು ಹಾಗೆ ಮಾಡಿಬಿಡುವುದೂ ಉಂಟು. ಆದರೆ ಅಂಗಚೇಷ್ಟೆಯಿಲ್ಲದೆ ಪದ್ಯದ ಅಕ್ಷರಗಳನ್ನು ಒತ್ತಿ ಉಚ್ಚರಿಸುವುದರಿಂದಲೇ ತಾಳದ ನೆಲೆಯನ್ನು ತೋರಿಸಬಹುದು. ಸಾಮಾನ್ಯವಾಗಿ ಪದ್ಯವಾಚನದಲ್ಲಿ ಮಾಡುವುದು ಹೀಗೆಯೇ. ಉದಾಹರಣೆಗೆ, ಮೇಲಿನ ಮೊದಲನೆಯ ಪದ್ಯದ ಮೊದಲನೆಯ ಚರಣವನ್ನು ತೆಗೆದುಕೊಳ್ಳೋಣ:

´ಮೊದಲು ´ತಾಯ ´ಹಾಲ ´ಕುಡಿದು

ಇಲ್ಲಿ '' ಎಂಬ ಚಿಹ್ನೆಯನ್ನು ಮುಮ್ಮಗ್ಗುಲಲ್ಲಿ ಬರೆದು ಸೂಚಿಸಿರುವ ಅಕ್ಷರಗಳ ಮೇಲೆ ತಾಳಗಳು ಬೀಳುತ್ತವೆ. ಇವುಗಳ ವಿನ್ಯಾಸವನ್ನು ಅರಿತ ಹೊರತು ಪದ್ಯದ ನಡೆ ಮನಸ್ಸಿಗೆ ತಟ್ಟುವುದಿಲ್ಲ. ಈ ತಾಳಗಳು ಬೀಳುವಾಗ ಒಂದಕ್ಕೊಂದಕ್ಕೆ ನಡುವೆ ಒಂದೇ ಸಮನಾದ ಕಾಲದ ಅಂತರವಿರುತ್ತವೆಂಬುದು ಅನುಭವದ ವಿಷಯ. ಹೀಗೆ ನಿಯತವಾದ ಕಾಲದ ಅಂತರದಲ್ಲಿ ತಾಳಗಳು ಆವರ್ತನೆಯಾಗುವುದಕ್ಕೆ ಲಯ (Rhythm) ಎಂದು ಹೆಸರು. ''ಲಯ''ದ ಅರ್ಥವನ್ನು ಇನ್ನಷ್ಟು ಹಿಗ್ಗಲಿಸಿ, ಸದೃಶಕ್ರಿಯೆಗಳ ಪರಂಪರೆಯಲ್ಲಿ ನಿಯಮಬದ್ಧತೆ ಗೋಚರವಾದಾಗಲೆಲ್ಲ ಅದು ನಿಷ್ಪನ್ನವಾಗುವುದೆಂದು ಹೇಳಬಹುದು. ಈ ದೃಷ್ಟಿಯಿಂದ ನೋಡಿದರೆ, ಮಾನವನ ಒಟ್ಟು ಜೀವನಕ್ಕೇ ಲಯವು ಮೂಲಸೂತ್ರ. ಅವನು ನಡೆಯುವಾಗ ಇಡುವ ಹೆಜ್ಜೆಗಳಲ್ಲಿ ಒಂದಕ್ಕೊಂದಕ್ಕೆ ಒಂದೇ ಅಂತರವಿರುತ್ತದೆ; ಅವನ ನಾಡಿಗಳಲ್ಲಿ ಸುತ್ತುವ ರಕ್ತವು ಹೃದಯದಿಂದ ಅಳತೆ ಮಾಡಿದಹಾಗೆ ಬಿಟ್ಟು ಬಿಟ್ಟು ಉಕ್ಕುತ್ತದೆ;

ಅವನು ಬಿಡುವ ಉಸಿರು ನಿಮಿಷಕ್ಕೆ ಇಷ್ಟು ಸಲ ಎಂಬಂತೆ ನಿಯಮದಿಂದ ಆಡುತ್ತದೆ. ಮಾನವನನ್ನಷ್ಟೇ ಏಕೆ, ಸಮಸ್ತ ವಿಶ್ವವನ್ನೇ ಲಯ ನಡೆಸುತ್ತಿದೆ. ''ಕುಣಿತಿಲ್ದ ಜಗ ಇಲ್ಲಾ!'' ಆದ್ದರಿಂದಲೇ,

ಹಗಲಿರಳ ತಾಳಕ್ಕ
ಮುಗಿಯದ ಕಾಳಕ್ಕ
ಜನುಮಗಳ ಮ್ಯಾಳಕ್ಕ । ಕುಣಿಯೋಣು ಬಾ...

ಎಂದು ಕವಿ ಹಾಡಿರುವುದು. ಹೀಗಿರುವಲ್ಲಿ, ಮಾನವನಿಗೆ ಆನಂದಕೊಡುವ ಕಾವ್ಯ, ಗಾಯನ ಮೊದಲಾದ ಲಲಿತಕಲೆಗಳು ಲಯದ ಆಧಾರವನ್ನೇ ಹಿಡಿದು ನಿಂತಿರುವಲ್ಲಿ ಏನಾಶ್ಚರ್ಯ ?

ನರ್ತನದ ಲಯಕ್ಕೆ ಹೊಂದಿಕೊಂಡು ಪದ್ಯ ಮೊದಲು ಉದಿಸಿತೆಂದು ಸಂಶೋಧಕರ ಅಭಿಪ್ರಾಯ. ಪದ್ಯದ ಸ್ಪಷ್ಟವಾದ ಲಯವೇ ಅದನ್ನು ಗದ್ಯದಿಂದ ಬೇರ್ಪಡಿಸತಕ್ಕದ್ದು. ಇದರಲ್ಲಿ ತಾಳತಾಳಕ್ಕೂ ನಡುವೆ ನಿಯತವಾಗಿ ಬರುವ ಕಾಲದ ಅಂತರವನ್ನು ಅಕ್ಷರಗಳ ಉಚ್ಚಾರಣೆ ತುಂಬುತ್ತದೆ. ಹೀಗೆ ಎರಡು ತಾಳಗಳ ನಡುವೆ ಬರತಕ್ಕ ಅಕ್ಷರಸಮುದಾಯಕ್ಕೆ ''ಗಣ''ವೆಂದು ಹೆಸರು. (ಈ ಲಕ್ಷಣದಲ್ಲಿ, ಕೊನೆಯ ತಾಳದ ಮುಂದೆ ನಿಲ್ಲುವ ಅಕ್ಷರ ಸಮುದಾಯವೂ ಸೇರುತ್ತದೆ,) ನಾವು ಹಿಂದೆ ಪರಿಶೀಲಿಸಿದ ಚರಣದಲ್ಲಿ, ''ಮೊದಲು'', ''ತಾಯ'', ''ಹಾಲ'', ''ಕುಡಿದು''–ಎಂಬ ನಾಲ್ಕು ಗಣಗಳಿವೆ. ಪದ್ಯದ ಒಂದು ಚರಣದಲ್ಲಿ ಲಯಪ್ರತೀತಿ ಉಂಟಾಗಬೇಕಾದರೆ, ಅದರಲ್ಲಿ ಕೂಡಿರುವ ಗಣಗಳ ಉಚ್ಚಾರಣೆಯ ಕಾಲ ಸರಿಸಮನಾಗಿರ ಬೇಕೆಂದು ಬೇರೆ ಹೇಳಬೇಕಾಗಿಲ್ಲ. ಈ ಗಣವೇ ನಮ್ಮ ಛಂದಸ್ಸಿನ ಮಾನದಂಡ.

ಅಕ್ಷರಗಳು ಕೂಡಿ ಗಣವಾಗುತ್ತದೆ. ಈ ಅಕ್ಷರಗಳೆಲ್ಲದರ ಉಚ್ಚಾರಕ್ಕೂ ಒಂದೇ ಅಳತೆಯ ಕಾಲ ಹಿಡಿಯುವುದಿಲ್ಲ. ಹ್ರಸ್ವಸ್ವರಕ್ಕೆ ಕಡಮೆ ಕಾಲ ಸಾಕು; ದೀರ್ಘಸ್ವರಕ್ಕೆ ಹೆಚ್ಚು ಕಾಲ ಬೇಕು. ಒಂದು ಸ್ವರದ ಮುಂದೆ ಒತ್ತಕ್ಷರ ಮೊದಲಾದವು ಇದ್ದರೆ, ಆ ಸ್ವರವು ಹ್ರಸ್ವವಾಗಿದ್ದರೂ ಅದರ ಉಚ್ಚಾರಣೆಯ ಒಟ್ಟು ಕಾಲವು ದೀರ್ಘವಾಗುತ್ತದೆ. ಈ ಪರಿಸ್ಥಿತಿ ಯನ್ನು ಅನುಸರಿಸಿಯೇ ಅಕ್ಷರಗಳನ್ನು ''ಲಘು'', ''ಗುರು'' ಎಂದು ವಿಂಗಡಿಸಿ, ಲಘುವಿನ ಉಚ್ಚಾರಕ್ಕೆ ಒಂದು ಮಾತ್ರೆಯ ಕಾಲವೆಂದೂ, ಗುರುವಿನ ಉಚ್ಚಾರಕ್ಕೆ ಎರಡು ಮಾತ್ರೆಯ ಕಾಲವೆಂದೂ ನಿಷ್ಕರ್ಷಿಸಿದ್ದಾರೆ. ಎಲ್ಲ ಸಂದರ್ಭಗಳಲ್ಲೂ ಲಘುಗುರುಗಳಿಗೆ ಇದೇ ಕಾಲ ಪರಿಮಾಣವಿರುತ್ತದೆಂದು ಹೇಳಲಾಗುವುದಿಲ್ಲ. ಸ್ವಲ್ಪ ಎಳೆದು ಉಚ್ಚರಿಸಿ ಲಘುವನ್ನು ಉದ್ದ ಮಾಡಬಹುದು; ತ್ವರಿತವಾಗಿ ಉಚ್ಚರಿಸಿ ಅಥವಾ ಮುಂದಿನ ಒತ್ತಕ್ಷರ ಮೊದಲಾದದ್ದನ್ನು ತೇಲಿಸಿ ಗುರುವನ್ನು ಮೊಟಕು ಮಾಡಬಹುದು. ಆದರೂ ಒಟ್ಟನಮೇಲೆ, ಛಂದಸ್ಸಿನಲ್ಲಿ ಅಕ್ಷರ ಗಳಿಗೆ ಕೊಟ್ಟಿರುವ ಮಾತ್ರೆಯ ಬೆಲೆ ನಮ್ಮ ಸಾಮಾನ್ಯಾನುಭವಕ್ಕೆ ಸರಿಹೊಂದುತ್ತದೆ. ಗಣಗಳ ಕಾಲನಿರ್ಣಯಕ್ಕಂತೂ ಇಂಥ ಒಂದು ನಿರ್ದಿಷ್ಟವಾದ, ಸುಲಭವಾಗಿ ಗೊತ್ತಾಗುವ ಅಳತೆಯ ಕಡ್ಡಿ ಆವಶ್ಯಕ. ಇದರ ಮೇಲೆ ವಿಶೇಷ ಸಂದರ್ಭಗಳಲ್ಲಿ ಈ ಬೆಲೆಗಳನ್ನು ಹೆಚ್ಚು ಕಡಮೆ ಮಾಡಿ ಕೊಳ್ಳುವುದೂ ಅಸಾಧ್ಯವಲ್ಲ.[೧]

ಇನ್ನು, ಆಗಲೇ ಉದಾಹರಿಸಿರುವ ಆರು ಪದ್ಯಖಂಡಗಳ ಕಡೆಗೆ ಮತ್ತೆ ತಿರುಗೋಣ.

---

೧ ''ಹ್ರಸ್ವಸ್ವರಗಳಿಗೆ ಲಘುವೆಂತಲೂ; ದೀರ್ಘಸ್ವರ, ಪ್ಲುತಸ್ವರ, ಅನುಸ್ವಾರ ವಿಸರ್ಗಗಳಿಂದ ಕೂಡಿದ ಅಕ್ಷರ, ಸಂಯುಕ್ತಾಕ್ಷರಕ್ಕೆ ಹಿಂದಿರುವ ಅಕ್ಷರ–ಇವುಗಳಿಗೆ ಗುರುವೆಂತಲೂ ಸಂಜ್ಞೆ.'' (ಕನ್ನಡ ಕೈಪಿಡಿ, ೧ನೆಯ ಸಂಪುಟ (ಎರಡನೆಯ ಮುದ್ರಣ), ಪು. ೮೩.) ಹೊಸ ಛಂದಸ್ಸಿನಲ್ಲಿ ಒಂದು ಅಕ್ಷರಕ್ಕೆ ಮೂರು ಮಾತ್ರೆಯ

ಇವುಗಳ ಮೊದಲನೆಯ ಚರಣಗಳನ್ನು ತಾಳಕ್ಕೆ ಅನುಸಾರವಾಗಿ ಗಣಗಳಾಗಿ ವಿಂಗಡಿಸಿದರೆ ಈ ರೀತಿ ಆಗುತ್ತದೆ :

UUU -U -U UUU
(೧) ಮೊದಲು । ತಾಯ । ಹಾಲ । ಕುಡಿದು । (೩ + ೩ + ೩ + ೩)

--- -- -- --
(೨) ಲೋಕಂ । ಪುಟ್ಟಲ್ । ಲೋಕಂ । ಸಾಯಲ್ । (೪ + ೪ + ೪ + ೪)

-UUU -UUU UUUUU -UUU
(೩) ಆಶೆಗಳು । ಆಶೆಯನು । ಕನಲಿಸುವ । ವಿಘ್ನಗಳು । (೫ + ೫ + ೫ + ೫)

-UUUU -UUUU UUUUUU UU--
(೪) ಚೆಲ್ವಿನ ನೆಲೆ । ಕಣ್ಗಳ ಬಲೆ । ಸುಖದೊಡತೆಯ । ಬನವಾಸೀ । (೬ + ೬ + ೬ + ೬)

UUU -UU UUU -UU
(೫) ಒಲಿದು । ದಾಯಿತು । ನಲಿದು । ದಾಯಿತು । (೩ + ೪ + ೩ + ೪)

- U -UUU -U -UUU
(೬) ನೋಟ । ಸಿಂಗರದ । ತೋಟ । ದೊತ್ತಿನಲಿ । (೩ + ೫ + ೩ + ೫)

ಈ ಚರಣಗಳಲ್ಲಿ ಪ್ರತಿಯೊಂದರ ನಡೆಯೂ ಬೇರೆ ಬೇರೆ. ಒಂದನೆಯದರಲ್ಲಿ ೩ ಮಾತ್ರೆಯ ಗಣಗಳು ಬಂದಿವೆ; ಅಲ್ಲಿಂದ ಮುಂದಿನ ಮೂರು ಉದಾಹರಣೆಗಳಲ್ಲಿ ಕ್ರಮವಾಗಿ ಗಣಕ್ಕೆ ಒಂದೊಂದು ಮಾತ್ರೆ ಹೆಚ್ಚುತ್ತಾ ೪, ೫ ಮತ್ತು ೬ ಮಾತ್ರೆಯ ಗಣಗಳು ಬಂದಿವೆ. ''ಒಲಿದುದಾಯಿತು ನಲಿದುದಾಯಿತು'' ಎಂಬ ಚರಣದಲ್ಲಾದರೆ, ಒಂದೇ ಬಗೆಯ ಗಣಗಳು ಸಾಲಾಗಿ ಬಾರದೆ ೩ ಮಾತ್ರೆಯದರ ಮುಂದೆ ೪ ಮಾತ್ರೆಯದು ಅನುವೃತ್ತವಾಗಿ ಬರುವಂತೆ ಕಾಣಿಸುತ್ತದೆ. ನಿಜವಾಗಿ ನೋಡಿದರೆ, ಈ ಚರಣದಲ್ಲಿ ಇರತಕ್ಕುದ್ದು ೭ ಮಾತ್ರೆಯ ಗಣಗಳು ಎರಡು. ಈ ಗಣ ದೀರ್ಘವಾಗಿರುವುದರಿಂದ ಅಖಂಡವಾಗಿ ಹಿಡಿತಕ್ಕೆ ಸಿಕ್ಕುವುದಿಲ್ಲ; ಇದರಲ್ಲಿ ಒಳತಾಳ ಬಿದ್ದು ಒಂದೊಂದೂ ೩+೪ ಎಂಬಂತೆ ವಿಭಾಗವಾಗುತ್ತದೆ. ಇದರಂತೆಯೇ ''ನೋಟಸಿಂಗರದ ತೋಟದೊತ್ತಿನಲಿ'' ಎಂಬ ಚರಣದಲ್ಲೂ ಇರುವುದು ಎರಡೇ ಗಣ– ೮ ಮಾತ್ರೆಯ ಎರಡು ಗಣ; ಅದರ ಒಳವಿಭಾಗ ೩+೫ರಂತೆ ಆಗುತ್ತದೆ. ಹೀಗೆ, ಮೇಲಿನ ಉದಾಹರಣೆಗಳಲ್ಲಿ ಕ್ರಮವಾಗಿ ೩, ೪, ೫, ೬, ೭ ಮತ್ತು ೮ ಮಾತ್ರೆಯ ಗಣದ ಲಯಗಳು ಬಂದಿವೆ. ಹೊಸಗನ್ನಡದ ಮಾತ್ರಾ ಛಂದಸ್ಸಿಗೆ[2] ಇವೇ ತಳಹದಿ.

---

(ಇದು ಪ್ಲುತದ ನಿಜವಾದ ಕಾಲ) ಅಥವಾ ಅದಕ್ಕೂ ಹೆಚ್ಚಿನ ಚೆಲೆ ಬರುವುದುಂಟು : ಲಘು ಸ್ವರಕ್ಕೆ, ಮುಖ್ಯವಾಗಿ ಚರಣದ ಕೊನೆಯಲ್ಲಿ, ಗುರುವಿನ ಬೆಲೆ ಬರುವುದುಂಟು; ಮೌನ ಅಥವಾ ವಿರಾಮ ಕೂಡ ಅಪೂರ್ವವಾಗಿ ಮಾತ್ರೆಯ ಎಣಿಕೆಗೆ ಸಿಕ್ಕುವುದುಂಟು. ಇದೆಲ್ಲ ಮಿತವಾಗಿ ಸಂದರ್ಭೋಚಿತವಾಗಿ ಬಂದರೆ ಲಯದ ಸೊಗಸು ಹೆಚ್ಚುತ್ತದೆ. (ಈ ವಿಷಯವನ್ನು ಕುರಿತ ಹೆಚ್ಚಿನ ವಿಚಾರಕ್ಕೆ 'ಮಾತ್ರೆ, ಮುಡಿ, ಪದ್ಯಗಣ' ಎಂಬ ಲೇಖನವನ್ನು ನೋಡಿ.)

೨ ಇಲ್ಲಿ ''ಮಾತ್ರಾ ಛಂದಸ್ಸೆ''ಂಬ ಮಾತನ್ನು ಉದ್ದೇಶಪೂರ್ವಕವಾಗಿ ಉಪಯೋಗಿಸಿದೆ. ಮಾತ್ರಾಗಣದ ನಿಯಮಗಳಿಗೆ ಒಳಪಡದ ಹಿಂದಿನ ಅಕ್ಕರ, ತ್ರಿಪದಿ, ಸಾಂಗತ್ಯ ಮೊದಲಾದವುಗಳ ಧಾಟಿಯಲ್ಲಿ ಕೆಲವು ಪದ್ಯಗಳನ್ನು ಈಗಿನ ಕವಿಗಳೂ ಕಟ್ಟಿದ್ದಾರೆ. (ಉದಾಹರಣೆಗೆ, 'ಇಂಗ್ಲಿಷ್ ಗೀತಗಳ'ಲ್ಲಿ ಸೇರಿರುವ 'ಬ್ಲೇನ್ ಹೀಮ್ ಕದನ' ಎಂಬುದು ಈ ಬಗೆಯದು.) ಇವಕ್ಕೆ ಆಧಾರವಾದ ಬ್ರಹ್ಮ ವಿಷ್ಣು ರುದ್ರ ಗಣಗಳ ರಚನೆ ಬೇರೊಂದು ರೀತಿಯಲ್ಲಿ ಆಗುತ್ತದೆ. ಈ ''ಅಂಶಗಣ''ಗಳ ಸ್ವರೂಪನಿರೂಪಣೆ ನಮ್ಮ ಪ್ರಕೃತೋದ್ದೇಶಕ್ಕೆ ಒಳಪಟ್ಟದ್ದೇ ಆದರೂ ಲೇಖನವು ಅತಿ ದೀರ್ಘವಾದೀತೆಂದು ಅದಕ್ಕೆ ಕೈಹಾಕಿಲ್ಲ.

ಈ ಆರು ಲಯಗಳಲ್ಲಿ ಒಂದು ಹೊರತು ಮಿಕ್ಕ ಯಾವುವೂ ಕನ್ನಡಿಗರಿಗೆ ಅಪರಿಚಿತವಾದವಲ್ಲ. ೩ ಮಾತ್ರೆಯ ಗಣವು ಉತ್ಸಾಹರಗಳೆ ಭೋಗಷಟ್ಪದಿಗಳಲ್ಲೂ, ೪ ಮಾತ್ರೆಯದು ಮಂದಾನಿಲರಗಳೆ ಶರಷಟ್ಪದಿ ಪರಿವರ್ಧಿನೀ ಷಟ್ಪದಿಗಳಲ್ಲೂ, ೫ ಮಾತ್ರೆಯದು ಲಲಿತರಗಳೆ ಕುಸುಮಷಟ್ಪದಿ ವಾರ್ಧಕ ಷಟ್ಪದಿಗಳಲ್ಲೂ, ೭ (=೩+೪) ಮಾತ್ರೆಯದು ಭಾಮಿನೀಷಟ್ಪದಿ ಗೋವಿನ ಕಥೆಯ ಮಟ್ಟುಗಳಲ್ಲೂ ಹಿಂದಿನಿಂದ ನಮಗೆ ಬಳಕೆಯಾಗಿವೆ. ೮(=೩+೫) ಮಾತ್ರೆಯ ಗಣವನ್ನು[೩] ಪಂಪನು ರಗಳೆಯೊಂದರಲ್ಲಿ (ಪಂಪ ಭಾರತ, ೩.೨೨) ಪ್ರಯೋಗಿಸಿದ್ದನು; ಹತ್ತು ಶತಮಾನಗಳೀಚೆಗೆ ಮತ್ತೆ ಅದು 'ಇಂಗ್ಲಿಷ್ ಗೀತಗಳ'ಲ್ಲಿ ತಲೆಯೆತ್ತಿತು. ೬ ಮಾತ್ರೆಯ ಗಣದ ಧಾಟಿ ಮಾತ್ರ, ಈ ಲೇಖಕನಿಗೆ ತಿಳಿದ ಮಟ್ಟಿಗೆ, ಕನ್ನಡಕ್ಕೆ ಹೊಚ್ಚಹೊಸದು ; 'ಅಶ್ವತ್ಥಾಮನ್' ನಾಟಕದಲ್ಲೇ ಅದರ ಆವಿರ್ಭಾವವಾದದ್ದು.[೪] ಅಲ್ಲಿಂದೀಚೆಗೆ ಈ ಧಾಟಿ ಕವಿಜನಪ್ರಿಯವಾಗಿ, ಒಳ್ಳೊಳ್ಳೆಯ ಗೀತೆಗಳು ಅದರಲ್ಲಿ ಬಂದಿವೆ.

ಈಗಿನ ಕವಿಗಳು ಲಯಬದ್ಧವಾಗಿ ರಚಿಸುತ್ತಿರುವ ಪದ್ಯಗಳೆಲ್ಲವೂ ಈ ಆರು ಧಾಟಿಗಳಲ್ಲೇ ಅಡಕವಾಗುತ್ತವೆ. ಮಾತ್ರಾಛಂದಸ್ಸಿನಲ್ಲಿ ಸಾಧ್ಯವಾಗುವ ಲಯಗಳು ಇಷ್ಟು ಮಾತ್ರವೇ ? ಬೇರೆ ಯಾವುದನ್ನಾದರೂ ಯೋಚಿಸುವುದು ಅಶಕ್ಯವೇ ? – ಎಂಬ ಪ್ರಶ್ನೆ ಇಲ್ಲಿ ಏಳಬಹುದು. ಕೇವಲ ಗಣಿತದ ದೃಷ್ಟಿಯಿಂದ ಹೇಳುವುದಾದರೆ ಇನ್ನೆರಡು ಲಯಗಳಿಗೆ ಅವಕಾಶವುಂಟು. ಮೇಲೆ ಪರಿಗಣಿಸಿರುವ ಗಣಗಳಲ್ಲಿ ೩ ಮಾತ್ರೆಯದೇ ಎಲ್ಲಕ್ಕೂ ಕಿರಿಯದು. ಮಾತ್ರಾಸಂಖ್ಯೆಯನ್ನು ಇನ್ನೂ ಕಡಿಮೆಮಾಡಿ ೨ ಮಾತ್ರೆಯ ಗಣವನ್ನು ಕಟ್ಟಬಹುದು. ಆದರೆ ಅದು ಅತಿ ಹ್ರಸ್ವವಾಗುತ್ತದೆ; ತಾಳತಾಳಕ್ಕೆ ಅಂತರ ಬಲು ಕಿರಿದಾಗುತ್ತದೆ. ಅಲ್ಲದೆ, ೨ ಮಾತ್ರೆಯ ಎರಡು ಗಣಗಳಿಗೂ ೪ ಮಾತ್ರೆಯ ಒಂದು ಗಣಕ್ಕೂ ನಿಜವಾದ ಭೇದವೇನೂ ಇರುವುದಿಲ್ಲ. ಇನ್ನು ಉಳಿದದ್ದು ೯ ಮಾತ್ರೆಯ ಗಣದ ನಡೆ. (ಇದನ್ನು ೩ ಮಾತ್ರೆಯ ಗಣದಿಂದ ಬೇರ್ಪಡಿಸಬೇಕಾದರೆ ಉಪಗಣಗಳು (೪+೫ರಂತೆ ಒಡೆಯಬೇಕೆಂಬುದು ಸ್ಪಷ್ಟ.) ಈ ಗಣವು ಗಮನಾರ್ಹವೆಂಬುದಕ್ಕೆ ಸಂಗೀತದ ತಾಳಗಳಲ್ಲಿ ೯ ಮಾತ್ರೆಯ ಬೆಲೆಯುಳ್ಳ ಸಂಕೀರ್ಣಜಾತಿಯೊಂದಿರುವುದು ಪೋಷಕವಾಗುತ್ತದೆ. ಈ ಗಣವನ್ನು ಉಪಯೋಗಿಸಿ ''ಪ್ರೌಢಷಟ್ಪದಿ''ಯೆಂಬ ಹೆಸರಿನಿಂದ ಕೆಲವು ಪದ್ಯಗಳನ್ನೂ ಒಬ್ಬ ಕವಿಗಳು ರಚಿಸಿದ್ದಾರೆ.[೫] ಉದಾಹರಣೆಗೆ–

ಈ ಲೇಖನದಲ್ಲಿ ಹೇಳಿರತಕ್ಕ ಮಾತೆಲ್ಲ ಮಾತ್ರಾಗಣದ ಧಾಟಿಗಳಿಗೆ ಮಾತ್ರ ಅನ್ವಯಿಸುತ್ತದೆ. ಹೊಸಗನ್ನಡದ ಕಾವ್ಯರಾಶಿಯಲ್ಲಿ ಈ ಮಾತ್ರಾಗಣಗಳೇ ಅತ್ಯಂತ ಪ್ರಚುರವಾಗಿರತಕ್ಕವು; ಅಂಶಗಣದ ಧಾಟಿ ಅಲ್ಲೊಂದು ಕಡೆ ಇಲ್ಲೊಂದು ಕಡೆ ಗೋಚರಿಸುತ್ತದೆ.

೩ ಈ ೮ ಮಾತ್ರೆಯ ಗಣ ೩+೫ರಂತೆ ವಿಭಾಗವಾಗುತ್ತದೆ; ೪+೪ರಂತೆ ವಿಭಾಗವಾಗುವುದಿಲ್ಲ. ಆದ್ದರಿಂದಲೇ ಇದರ ಲಯವು ೪ ಮಾತ್ರೆಯ ಗಣದ ಲಯಕ್ಕಿಂತ ಬೇರೆಯಾಗಿದೆ. ಹೀಗೆಯೇ ೬ ಮಾತ್ರೆಯ ಗಣವು ಶುದ್ಧವಾಗಿರಬೇಕಾದರೆ ಅದು ೩ ಮಾತ್ರೆಯ ಗಣಗಳ ಯುಗ್ಮವಾಗಬಾರದು; ೨+೪ ಅಥವಾ ೪+೨ರಂತೆ ಅದರ ರಚನೆಯಾಗಿರಬೇಕು. ಮೇಲಿನ ಉದಾಹರಣೆಗಳನ್ನು ಪರಿಶೀಲಿಸಿದರೆ ಈ ವಿಷಯ ಸ್ಪಷ್ಟವಾಗುತ್ತದೆ.

೪ (ಆದರೆ, ಹಿಂದಿನ ''ಧವಳ''ದ ಹಾಡುಗಳಲ್ಲಿ ೬ ಮಾತ್ರೆಯ ಗಣದ ಲಯ ಪ್ರಚುರವಾಗಿತ್ತೆಂದು ಶ್ರೀ ಡಿ. ಎಲ್. ನರಸಿಂಹಾಚಾರ್ಯರು 'ಧವಳವೆಂಬ ಹಾಡಿನ ಸ್ವರೂಪ' ಎಂಬ ಲೇಖನದಲ್ಲಿ ಈಚೆಗೆ ಪ್ರತಿಪಾದಿಸಿದ್ದಾರೆ ('ಶ್ರೀ ಪಂಜೆಯವರ ನೆನಪಿಗಾಗಿ', ಪು. ೧೯೦-೪).)

೫ ಶ್ರೀಮಾನ್ ಪಟ್ಟೀದ ಚನ್ನಪ್ಪನವರ ಬಸಪ್ಪ: 'ಕನ್ನಡ ಷಟ್ಪದಿಗಳು' (ಪರಿಷತ್ಪತ್ರಿಕೆ, ೧೪-೪)

(೭) ಕಡುಕಂಗೊಳಿಪ ಕರ್ಣಾಟಕ ತಾಯುಮಂ
ಬೆಡಗಿನ ಸಾಹಿತ್ಯ ಸಮ್ಮೇಲನಮುಮಂ
ಪೊಡಮಡುವೆಂ ಜಿಡದಖಿಲ ಕಬ್ಬಿಗರುಮಂ ಪಂಡಿತ ಪಾಮರರುಮಂ ।
ಇಡುವೆಂ ನಿಮ್ಮೆದುರು ಬಡವಂ ಬಸವನಾಂ
ದಿಡ ಬಕುತಿಯ ಪಿಡಿದು ಕನ್ನಡ ಷಟ್ಪದಿಯ
ತೊಡಕಂ ಬಿಡಿಸಲೊಂದಂ ಗಡ ಬೇಡುವೆಂ ಕುಡುವುದಿದಕೆ ಸಲಹೆಯಂ ॥

ಇಲ್ಲಿ ನಿಜವಾಗಿ, ಲಯದ ನೆಲೆಯನ್ನು ಅರಿತುಕೊಳ್ಳುವುದು ಕಷ್ಟವಾಗುತ್ತದೆ.

ಳ ೫ ೪ ೫

''ಕಡುಕಂ। ಗೊಳಿಪ ಕ;। ರ್ಣಾಟಕ। ತಾಯುಮಂ....'' ಈ ರೀತಿ ಇಲ್ಲಿಯ ಗಣವಿಭಾಗವಾಗಬೇಕು; ಎಂದರೆ, ೯ ಮಾತ್ರೆಯ ಗಣದಲ್ಲಿ ಮೊದಲ ೪ ಮಾತ್ರೆಯಾದಮೇಲೆ ಒಳತಾಳ ಬೀಳಬೇಕು. ಹೀಗೆ ಉಪಗಣಗಳಿಂದ ಒಂದು ದೀರ್ಘಗಣವನ್ನು ಕಟ್ಟುವಾಗ ಗಮನಿಸಬೇಕಾದ ನಿಯಮವೊಂದಿರುವಂತೆ ತೋರುತ್ತದೆ: ಈ ಎರಡು ಉಪಗಣಗಳಿಗೂ ಅಳತೆಯಲ್ಲಿ ಸುಸ್ಪಷ್ಟವಾದ, ಸುಲಭಗ್ರಾಹ್ಯವಾದ ವ್ಯತ್ಯಾಸವಿರಬೇಕು. ೭ ಮತ್ತು ೮ ಮಾತ್ರೆಯ ಗಣಗಳಲ್ಲಿ ಈ ವ್ಯತ್ಯಾಸವುಂಟು. ೭=೩+೪; ಈ ಎರಡು ಉಪಗಣಗಳಿಗೂ ಅಳತೆಯಲ್ಲಿ ೩:೪=೧:೧ ೧/೨ರಷ್ಟು ಅಂತರವಿದೆ; ಇದನ್ನು ಮನಸ್ಸು ಸರಿಯಾಗಿ ಹಿಡಿಯುತ್ತದೆಂಬುದು ಅನುಭವಸಿದ್ಧವಾದದ್ದು. ೮ ಮಾತ್ರೆಯ ಗಣದಲ್ಲಂತೂ ಈ ಅಂತರ ಇನ್ನೂ ಸ್ಪಷ್ಟವಾಗಿದೆ– ೩:೫=೧: ೧ ೨/೩ ೯ ಮಾತ್ರೆಯ ಗಣದಲ್ಲಾದರೆ ಈ ಅಂತರ ತುಂಬ ಕಡಮೆಯಾಗುತ್ತದೆ– ೪:೫=೧: ೧ ೧/೪; ಇಲ್ಲಿಯ ಉಪಗಣಗಳಿಗಿರುವ ಈ ಸೂಕ್ಷ್ಮ ವ್ಯತ್ಯಾಸವನ್ನು ಉದ್ದಕ್ಕೂ ಗ್ರಹಿಸಿಕೊಂಡು ಲಯವನ್ನು ಹಿಡಿಯುತ್ತಾ ಹೋಗುವುದು ಕಷ್ಟವಾಗುತ್ತದೆ. ಇದರ ಬದಲು, ೪ ಮಾತ್ರೆಯ ಗಣಕ್ಕೂ ೫ ಮಾತ್ರೆಯ ಗಣಕ್ಕೂ ಒಂದೇ ಬೆಲೆ ಕೊಟ್ಟು ಸಮೀಕರಣಮಾಡಿ ಓದೋಣವೆಂದರೆ, ಅವೆರಡಕ್ಕೂ ಇರುವ ೧ ಮಾತ್ರೆಯ ವ್ಯತ್ಯಾಸ ಅಡ್ಡಿಯಾಗಿ ನಿಲ್ಲುತ್ತದೆ. ಈ ವಿವರಣೆ ಒಪ್ಪಿಗೆಯಾಗಲಿ ಆಗದಿರಲಿ, ೯ ಮಾತ್ರೆಯ ಗಣ ಶ್ರಾವ್ಯವಾಗಿಲ್ಲವೆಂಬುದೇನೋ ಪ್ರಕೃತ ಲೇಖಕನ ಅನುಭವದ ವಿಷಯ. ಸಂಗೀತದಲ್ಲಿ ಕೂಡ ೯ ಮಾತ್ರೆಯ ಸಂಕೀರ್ಣಜಾತಿ ಅಪ್ರಚುರವೆಂಬುದನ್ನು ಇಲ್ಲಿ ಜ್ಞಾಪಿಸಿಕೊಳ್ಳಬೇಕು.

೨

ಛಂದಸ್ಸಿನ ಜೀವಾಳ ಲಯ ; ಲಯವನ್ನು ರೂಪಿಸತಕ್ಕವು ಗಣಗಳು. ನಮ್ಮ ಛಂದಸ್ಸಿನ ಗಣಿತದಲ್ಲಿ ಮಾತ್ರೆಯೇ ಕನಿಷ್ಠ ಮಾಪಕವಾದರೂ ಅದರ ಉಪಯೋಗವೆಲ್ಲಾ ಗಣವನ್ನು ಅಳೆಯುವುದರಲ್ಲಿ. ಮಾತ್ರಾಸಂಖ್ಯೆಯ ಮೇರೆಗೆ ಬೇರೆ ಬೇರೆ ಗಣಗಳು ಆಗುತ್ತವೆ; ಗಣವನ್ನು ಕಟ್ಟಿದಮೇಲೆ ಮಾತ್ರೆಗಳ ಕೆಲಸ ಮುಗಿಯಿತು. ಚರಣದ ರಚನೆಯಲ್ಲಿ ಗಮನಿಸಬೇಕಾದದ್ದು ಗಣವೇ ಹೊರತು ಮಾತ್ರೆಯಲ್ಲ. ಆದ್ದರಿಂದ, ಒಂದು ಚರಣವನ್ನು ಗಣಗಳಾಗಿ ವಿಂಗಡಿಸಲು ಆಗದಿದ್ದರೆ, ಅದರಲ್ಲಿ ಮಾತ್ರೆಗಳ ಲೆಕ್ಕ ಸರಿಯಾಗಿದ್ದರೂ ಲಯ ಪ್ರತೀತಿ ಹುಟ್ಟುವುದಿಲ್ಲ. ಈ ಕೆಳಗಿನ ಉದಾಹರಣೆಯನ್ನು ನೋಡಿ:

∪ ∪∪∪∪ – – ∪ ∪∪∪∪ ∪∪ – ∪
(೮) ಜಡಿಮಳೆಯು । ಹೋ ಎಂದು । ಸುರಿದಿತ್ತು ; । ಬಿರುಗಾಳಿ । (೨೦ ಮಾತ್ರೆ)

∪∪∪ –∪∪ –∪∪– ∪ –∪ –∪
ಬಲೆಗೊಳಗಾದ ಕೇಸರಿಯಂತೆ ಗರ್ಜಿಸಿತ್ತು. (೨೦ ಮಾತ್ರೆ)

ಎರಡು ಚರಣಗಳಲ್ಲೂ ಸಮನಾಗಿ ೨೦ ಮಾತ್ರೆಗಳಿವೆ. ಆದರೆ ಲಯದ ದೃಷ್ಟಿಯಿಂದ ಒಂದಕ್ಕೂ ಇನ್ನೊಂದಕ್ಕೂ ಎಷ್ಟು ವ್ಯತ್ಯಾಸ! ಮೊದಲನೆಯದರೊಳಗೆ ತಾಳ ಬೀಳುವ ಕಡೆ ಹೊಸ ಗಣವು ಹೊಸ ಅಕ್ಷರದಿಂದ ಮೊದಲಾಗುವುದರಿಂದ ಲಯ ಸುಲಭವಾಗಿ ಸಿಕ್ಕುತ್ತದೆ. ಎರಡನೆಯದರಲ್ಲಿ ಈ ರೀತಿಯ ಗಣವಿಭಜನೆ ಸಾಧ್ಯವಲ್ಲ. ಮೊದಲ ಹತ್ತು ಮಾತ್ರೆಗಳನ್ನೇ

∪ ∪ ∪ ∪ –∪ –∪
ನೋಡೋಣ: ''ಬಲೆಗೊಳಗಾದ ಕೇಸ''–ಇಲ್ಲಿ ತಾಳಕ್ಕೆ ಸರಿಯಾಗಿ ಗಣಗಳನ್ನು ವಿಂಗಡಿಸಬೇಕಾದರೆ ''ಗಾ'' ಎಂಬ ಗುರುವನ್ನು ಕತ್ತರಿಸಿ ಒಂದು ಮಾತ್ರೆಯನ್ನು ಹಿಂದಿನ ಗಣಕ್ಕೂ ಇನ್ನೊಂದು ಮುಂದಿನ ಗಣಕ್ಕೂ ಹಂಚಿಕೊಡಬೇಕು. ಹೀಗೆ ಒಂದು ಅಕ್ಷರವನ್ನು ಸೀಳುವುದು ಅಸಾಧ್ಯ. ಆದ್ದರಿಂದಲೇ ಇಲ್ಲಿ ಲಯ ಕೆಟ್ಟುಹೋಗಿದೆ.

ತಾಳ ಬೀಳುವ ಕಡೆ ಅಕ್ಷರವನ್ನು ಕತ್ತರಿಸದೆ ಗಣವಿಭಾಗ ಮಾಡುವಂತಿದ್ದರೆ ಸಾಕೆ? ಇಷ್ಟರಿಂದಲೇ ಚರಣದ ಧಾಟಿ ಕಿವಿಗೆ ಇಂಪಾಗುತ್ತದೆಯೆ? – ಈ ಸಾಲುಗಳನ್ನು ನೋಡೋಣ:

(೯) ಧ್ವನಿಸಿ ಬಯಲಾಗುತಿಹ ಸುರಗಾನದಂತೆ
ಕನಸಿನಲಿ ಗೈದಿರುವ । ಮೃತ ಪಾನ । ದಂತೆ.

ಇಲ್ಲಿಯದು ೫ ಮಾತ್ರೆಯ ಗಣದ ನಡೆ. ಮೊದಲನೆಯ ಚರಣ ಸರಾಗವಾಗಿ ಓಡುತ್ತದೆ. ಎರಡನೆಯದರಲ್ಲಿ ತಾಳ ''ಮೃ'' ಎಂಬ ಅಕ್ಷರದ ಮೇಲೆ ಬೀಳಬೇಕಷ್ಟೆ ; ಅದಕ್ಕೆ ತಕ್ಕಂತೆ ''ಮೃ'' ಎಂಬುದನ್ನು ಒತ್ತಿ ಉಚ್ಚರಿಸಿದರೆ, ಇಲ್ಲಿಯ ಪದಚ್ಛೇದವು ''ಗೈದಿರುವ+ಮೃತಪಾನ'' ಎಂದಾಗಿ ಕವಿಯ ಆಶಯವೇ ಕೆಡುತ್ತದೆ. ''ಅಮೃತಪಾನ'' ಎಂಬ ಪದಸ್ವರೂಪ ಹೊಳೆಯಬೇಕಾದರೆ, ''ವ'' ಎಂಬ ಅಕ್ಷರವನ್ನು ಒತ್ತಬೇಕು; ಆಗ ಲಯ ಕೆಡುತ್ತದೆ.

(೧೦) ವಿಪ್ಲವ ಮೂರ್ತಿಯ ಸಖನಾಗಿಹನ್ನೆ
ಕವಿಗರ । ಸುಗಿರಸು । ಗಳ ಋಣವಿಲ್ಲ.

ಇಲ್ಲಿ ಮೊದಲನೆಯ ಚರಣದಲ್ಲಿ ೪ ಮಾತ್ರೆಗಳಿಗೊಂದು ಬಾರಿ ತಾಳ ಸರಿಯಾಗಿ ಬೀಳುತ್ತದೆ. ಮುಂದಿನ ಚರಣದಲ್ಲಿ ಎರಡನೆಯ ಗಣ ''ಸು'' ಎಂಬ ಅಕ್ಷರದಿಂದ ಮೊದಲಾಗಬೇಕು; ಅದರ ಮೇಲೆ ತಾಳ ಬಿದ್ದರೆ ''ಸುಗಿರಸು'' ಎಂಬ ಯಾವುದೋ ವಿಚಿತ್ರಪದದ ಪ್ರತೀತಿಯುಂಟಾಗುತ್ತದೆ.

ಇನ್ನೆರಡು ಉದಾಹರಣೆಗಳು :

(೧೧) ಅಂಧನೃಪ ನೀ ಮರುಳೆ । ಸಗಿ ನಮ್ಮ । ಬರಿಸಿದ್ಧೆ
ಅಂದು ತೋರಿದೆ ವಾರಣಾವತವನು.

(೧೨) ಮೂಡಲು ಬಿಳುಪೇರಲು ಬೆಚ್ಚಿದರು
ಓಡಿದರಡವಿಯೆ । ದೆಯ ಸೇ । ರಿದರು.

– ಇವುಗಳಲ್ಲಿ ದಪ್ಪ ಲಿಪಿಯಲ್ಲಿ ಕೊಟ್ಟಿರುವ "ಸ", "ದೆ" ಎಂಬ ಅಕ್ಷರಗಳನ್ನು ತಾಳಕ್ಕೆ ಅನುಸಾರವಾಗಿ ಒತ್ತಿದರೆ ಶಬ್ದದ ಪ್ರತೀತಿಯೇ ಕೆಡುತ್ತದೆ.

ಈ ಸಂದರ್ಭದಲ್ಲಿ ನನ್ನ ಅನುಭವದಿಂದಲೇ ಒಂದು ಉದಾಹರಣೆಯನ್ನು ಕೊಟ್ಟರೆ ಅನುಚಿತವಾಗಲಾರದು. ಒಂದು ಕವನದಲ್ಲಿ,

(೧೩) ನನ್ನಳವು ತಿಳಿದರೂ,
ನಿನ್ನ ಮುನಿಸಿರಿದರೂ,
ಮೊಂಡಾಟವು ಬಿಡದಲ್ಲ!

ಎಂದು ಮೊದಲು ಬರೆದೆನು. ಮಾತ್ರೆಗಳ ಲೆಕ್ಕವೇನೋ ಸರಿಹೋಯಿತು; ಆದರೆ ಕೊನೆಯ ಚರಣವನ್ನು ಏನು ಮಾಡಿದರೂ ೫ ಮಾತ್ರೆಯ ಗಣದ ಲಯಕ್ಕೆ ಹೊಂದಿಸಲು ಆಗಲಿಲ್ಲ. "ಮೊಂಡಾಟವು। ಬಿಡದಲ್ಲ" ಎಂದೋ "ಮೊಂಡಾ। ಟವು ಬಿಡ। ದಲ್ಲ" ಎಂದೋ ಗಣಗಳು ಒಡೆಯುತ್ತಿದ್ದುವು. "ಮೊಂಡಾಟವಣಗದಲ್ಲ!" ಎಂದು ಚರಣವನ್ನು ತಿದ್ದಿದಮೇಲೆ ಲಯವೂ ಅರ್ಥವೂ ಹೊಂದಿಕೆಯಾದವು.

ಈ ಪರಿಸ್ಥಿತಿಗೆ ಕಾರಣವೇನು?– ಪದ್ಯದ ಲಯಕ್ಕೆ ಗಮನಕೊಟ್ಟು ಓದುವಾಗ ನಾವು ಏನು ಮಾಡುತ್ತೇವೆಂಬುದನ್ನು ಇಲ್ಲಿ ನೆನಪಿಗೆ ತಂದುಕೊಳ್ಳಬೇಕು. ಮೊದಲ ಒಂದೆರಡು ಚರಣಗಳನ್ನು ದಾಟುವಷ್ಟರಲ್ಲೇ ಪದ್ಯದ ನಡೆ ಯಾವುದೆಂಬುದನ್ನು ಅರಿತುಕೊಳ್ಳುತ್ತೇವೆ. ಬಳಿಕ, ಮನಸ್ಸಿನಲ್ಲಿ ಅದನ್ನೇ ಮೀಟುತ್ತಾ, ತಾಳಕ್ಕೆ ಪ್ರತಿನಿಧಿಯಾಗಿ ಗಣದ ಮೊದಲ ಅಕ್ಷರವನ್ನು ಒತ್ತುತ್ತಾ ಮುಂದೆ ಸಾಗುತ್ತೇವೆ. ಇಷ್ಟನ್ನು ಮಾಡಿದ ಹೊರತು ನಮಗೆ ಗಣವಿಭಾಗ ಅರಿವಾಗುವುದಿಲ್ಲ; ಲಯದ ಅನುಭವ ಉಂಟಾಗುವುದಿಲ್ಲ.

ಈ ಬಗೆಯ ಒತ್ತನ್ನು ತಾಳಬೇಕಾದರೆ, ಪ್ರಾಮುಖ್ಯಕ್ಕೆ ಬರಬೇಕಾದರೆ, ಗಣದ ಮೊದಲಲ್ಲಿ ನಿಲ್ಲುವ ಅಕ್ಷರಕ್ಕೆ ತಕ್ಕಮಟ್ಟಿಗೆ ಅರ್ಹತೆ ಇರಬೇಕು. ಈ ಅರ್ಹತೆ ಪದದ ಎಲ್ಲ ಅಕ್ಷರಗಳಿಗೂ ಒಂದೇಸಮನಾಗಿರುವುದಿಲ್ಲ; ಅವುಗಳಲ್ಲಿ ಕೆಲವಕ್ಕೆ ಉಚ್ಚಾರಣೆ ಸಬಲ, ಇನ್ನು ಕೆಲವಕ್ಕೆ ದುರ್ಬಲ. ಇಂಗ್ಲಿಷಿನಲ್ಲಿರುವ ಹಾಗೆ ಕನ್ನಡದಲ್ಲಿ ಸ್ವರಾಘಾತವು (Accent) ಪ್ರಮುಖವಾಗಿಲ್ಲವೆಂಬುದು ನಿಜ ; ಆದರೆ ಕನ್ನಡದಲ್ಲಿ ಅದು ಇಲ್ಲವೇ ಇಲ್ಲವೆಂದು ಹೇಳುವಂತಿಲ್ಲ. ನಮ್ಮಲ್ಲಿ ಸಾಮಾನ್ಯವಾಗಿ ಪದದ ಮೊದಲನೆಯ ಸ್ವರದ ಮೇಲೆ ಆಘಾತವಿರುತ್ತದೆಂದು ಸ್ಥೂಲವಾಗಿ ಹೇಳಬಹುದು. ಪ್ರತ್ಯಯಗಳು ಈ ದೃಷ್ಟಿಯಿಂದ ದುರ್ಬಲ. ಸ್ವರವು ಗುರುವಾಗಿದ್ದರೆ ಮಾತ್ರ, ಪದದಲ್ಲಿ ಯಾವ ಸ್ಥಾನದಲ್ಲಿದ್ದರೂ ಆಘಾತವನ್ನು ತಡೆಯಬಲ್ಲದು.[೬]

ಛಂದಸ್ಸಿನ ಚೌಕಟ್ಟಿನೊಳಗೆ ಅರ್ಥಗರ್ಭಿತವಾದ ಮಾತುಗಳನ್ನು ಅಳವಡಿಸುವುದು ಪದ್ಯಕಾರನ ಕೆಲಸ. ಒಂದು ಕಡೆ, ತಾಳಮಾನವನ್ನನುಸರಿಸಿ ಛಂದಸ್ಸಿನ ಧಾಟಿಯನ್ನು ಕಾಪಾಡಿಕೊಳ್ಳಬೇಕು; ಇನ್ನೊಂದು ಕಡೆ, ಆಡುವ ಮಾತಿನ ಜೀವಸ್ವರಗಳು ಕೆಡದಂತೆ ನೋಡಿಕೊಳ್ಳಬೇಕು. ಗಾಯಕನಿಗೆ ಹಾಡಿನ ಅಕ್ಷರಗಳನ್ನು ತನ್ನ ಅನುಕೂಲಕ್ಕೆ ತಕ್ಕಂತೆ ಎಳೆದು

---

೬ ಕನ್ನಡದಲ್ಲಿ ಸ್ವರಾಘಾತ ಪರಿಶೋಧನೆ ಶಾಸ್ತ್ರೀಯವಾಗಿ ಇದುವರೆಗೆ ನಡೆದಿಲ್ಲ. ಆದಕಾರಣ, ಅದರ ನಿಯಮಗಳನ್ನು ನಿಷ್ಕೃಷ್ಟವಾಗಿ, ಸಮಗ್ರವಾಗಿ ಇಲ್ಲಿ ಹೇಳಲು ಸಾಧ್ಯವಾಗಿಲ್ಲ. ಈ ವಿಷಯವನ್ನು ಪರಿಶೀಲಿಸತಕ್ಕವರಿಗೆ ಕನ್ನಡ ಛಂದಸ್ಸಿನ ವಿಮರ್ಶೆ ಬಹುಮಟ್ಟಿಗೆ ಉಪಯುಕ್ತವಾಗಬಹುದು.

ತೇಲಿಸಿ ಒತ್ತಿ ಎತ್ತಿ ಹೇಳುವ ಸ್ವಾತಂತ್ರ್ಯವುಂಟು; ಅವನ ಬಾಯಲ್ಲಿ ಕೃತಿಯ ಮಾತುಗಳು ಸ್ವಲ್ಪ ನಲುಗಿದರೂ ಲಕ್ಷ್ಯಕ್ಕೆ ಬರಲಾರದು. ಪದ್ಯಕಾರನಿಗೆ ಈ ಸ್ವಾತಂತ್ರ್ಯವಿಲ್ಲ. ಪದ್ಯದ ಗಣಗಳು ತನ್ನನ್ನು ಆ ಕಡೆಗಷ್ಟು ಈ ಕಡೆಗಷ್ಟು ಹರಿದು ಹಂಚಿಕೊಳ್ಳುತ್ತಿದ್ದರೆ, ಪದವು ಸುಮ್ಮನೆ ಸಹಿಸಿಕೊಂಡಿರುವುದಿಲ್ಲ. ಪದದ ಪ್ರಮುಖವಾದ ಅಕ್ಷರದಿಂದ ಗಣ ಮೊದಲಾದರೆ ಸರಿ; ಇಲ್ಲದೆಹೋದರೆ, ತಾಳವೊಂದು ಕಡೆ ಜಗ್ಗಿದರೆ ಸ್ವರದ ಒತ್ತು ಇನ್ನೊಂದು ಕಡೆ ಜಗ್ಗುತ್ತದೆ. ಲಯ ನೆಲದಪ್ಪಿ, ಪದ್ಯ ಗಂಟುಗಂಟಾಗುತ್ತದೆ.

ಮೇಲಿನ ಮಾತಿಗೆ, ಗಣಕ್ಕೆಂದು ಪದವನ್ನಿಡುತ್ತಾ ಹೋಗಬೇಕೆಂದು ಸರ್ವಥಾ ಅರ್ಥವಲ್ಲ. ಅಂಥ ಪದವಿನ್ಯಾಸಕ್ಕಿಂತ ಬೇಸರಪಡಿಸುವುದು ಬೇರೊಂದಿಲ್ಲ. ಜೀವನದಲ್ಲಿ ಹೇಗೋ ಛಂದಸ್ಸಿನಲ್ಲೂ ಹಾಗೆಯೇ ನಿಯಮವೂ ಬೇಕು, ವೈವಿಧ್ಯವೂ ಬೇಕು. ಇವೆರಡನ್ನೂ ಹೊಂದಿಸುವುದೇ ಕವಿಯ ಮುಂದಿರುವ ಸಮಸ್ಯೆ. ಇದರ ಮೇಲೆ, ಪದದಲ್ಲಿ ಆಘಾತವನ್ನು ಸಹಿಸತಕ್ಕದ್ದು ಅದರ ಮೊದಲ ಸ್ವರವೊಂದೇ ಅಲ್ಲ; ಮಿಕ್ಕ ಸ್ವರಗಳೂ ಸಮಯೋಚಿತವಾಗಿ ತಾಳದ ಏಟನ್ನು ತಡೆಯಬಲ್ಲವು. ಪದ್ಯದ ಶ್ರುತಿ ಎಲ್ಲಿ ಸಹ್ಯವಾಗುತ್ತದೆ, ಎಲ್ಲಿ ಅಸಹ್ಯವಾಗುತ್ತದೆ ಎಂಬುದನ್ನು ತೆರೆದ ಮನಸ್ಸಿನಿಂದ ಗಮನಿಸಿದರೆ, ಕೆಲವು ಕಟ್ಟಳೆಗಳು ಹೊರಡುವಂತೆ ತೋರುತ್ತದೆ. ಅವನ್ನು ಈ ಕೆಳಗೆ ಸೂಚಿಸಲಾಗಿದೆ:

ಪದದ ಆದಿಯಲ್ಲಿ ಒಂದಕ್ಕಿಂತ ಹೆಚ್ಚಾಗಿ ಲಘುಸ್ವರಗಳಿದ್ದರೆ, ಎರಡನೆಯ ಸ್ವರ ಅತಿ ದುರ್ಬಲವಾಗಿರುತ್ತದೆ; ತಾಳದ ಒತ್ತನ್ನು ಅದು ಎಷ್ಟು ಮಾತ್ರಕ್ಕೂ ತಡೆಯಲಾರದು. ಆದ್ದರಿಂದಲೇ, ಮೇಲಿನ ೯, ೧೧ ಮತ್ತು ೧೩ನೆಯ ಉದಾಹರಣೆಗಳಲ್ಲಿ ಯತಿಭಂಗ[೭]ವಾಗಿರುವುದು.

ಪದದ ಕೊನೆಯಲ್ಲಿರುವ ಲಘುವಿನಿಂದಲೂ ಹೊಸ ಗಣ ಆರಂಭವಾಗಬಾರದು. ಮೇಲಿನ ೧೦ ಮತ್ತು ೧೩ನೆಯ ಉದಾಹರಣೆಗಳಲ್ಲಿ ಈ ದೋಷವಿದೆ.

ಗುರು ಪದದಲ್ಲಿ ಎಲ್ಲಿದ್ದರೂ ಸರಿಯೆ, ಒತ್ತನ್ನು ತಡೆದುಕೊಳ್ಳುತ್ತದೆ. ಆದಕಾರಣ, ಪದದ ಎರಡನೆಯ ಸ್ವರವೇ ಆಗಲಿ ಕೊನೆಯ ಸ್ವರವೇ ಆಗಲಿ ಗುರುವಾಗಿದ್ದರೆ, ಅದರಿಂದ ಗಣ ಮೊದಲಾದರೂ ಯತಿ ಕೆಡುವುದಿಲ್ಲ.

ಉದಾಹರಣೆ: ಪದದ ಎರಡನೆಯ ಸ್ವರಕ್ಕೆ–

(೧೪) ಚಟಪಟಗುಟ್ಟ ಚ। ಟಾಕಿಯು ಮುಂಗಡೆ ಠೀವಿಯ ತೋರುತ ಬರುತಿರಲು

(೧೫) ಪುರುಷಬಲವ ಬೆಳಗಿರನುತ ಜಡರ ಪಳಿದು ಮೊಳಗುತಂ
ಪರಿವಳೀ ಕ। ವೇರತನಯೆ ಧೀರಜನನಿಯೆನಿಸುತುಂ.

ಪದದ ಕೊನೆಯ ಸ್ವರಕ್ಕೆ–

(೧೬) ಸುಖದ ದುಃಖದ ವಿಪುಲವೇಣಿ, ಪನ್ನಗವೇಣಿ,
ಭಾಗ್ಯದೇವತೆಯ ಕೊರ। ಲಿಂ ಬಿದ್ದ ಕಟ್ಟಾಣಿ.

---

೭ ಗಣಕ್ಕೆ ಸರಿಯಾಗಿ ಪದವೂ ಮುಗಿಯುವುದಕ್ಕೆ ಅಥವಾ ವಿಭಾಗವಾಗುವುದಕ್ಕೆ ''ಯತಿ''ಯೆಂದು ಇಲ್ಲಿ ಹೆಸರು ಕೊಡಲಾಗಿದೆ. ಈ ''ಯತಿ'' ಸ್ವರೂಪವು ಸಂಸ್ಕೃತ ಛಂದಸ್ಸಿನ ಯತಿಸ್ವರೂಪವನ್ನು ಅನೇಕ ಅಂಶಗಳಲ್ಲಿ ಹೋಲುತ್ತದೆ. ಕುತೂಹಲವುಳ್ಳವರು 'ವೃತ್ತರತ್ನಾಕರ'ಕ್ಕೆ (೧.೧೨) ನಾರಾಯಣಭಟ್ಟನು ಬರೆದಿರುವ ಟೀಕೆಯನ್ನು ನೋಡಬಹುದು.

''ಮುಡಿ''ಯನ್ನು ಕುರಿತು ಒಂದು ಮಾತು.[೮] ಇದು ಸ್ವರೂಪದಲ್ಲಿ ಲಘುವಾಗಿದ್ದಾಗ ಕೂಡ ಇದಕ್ಕೆ ಉಚ್ಚಾರಣೆಯಲ್ಲಿ ಒಂದು ಗುರುವಿನ ಬೆಲೆಯಾದರೂ ಬಂದೇ ಬರುತ್ತದೆ. ಆದಕಾರಣ ಇದರ ಮೇಲೆ ತಾಳ ಬಿದ್ದಾಗ ಯತಿಭಂಗವಾಗುವುದಿಲ್ಲ.

ಅಂತೂ, ಒಂದು ಪದವನ್ನು ಎರಡು ಗಣಗಳಿಗೆ ಹಂಚುವುದಾದರೆ, ಅದರಲ್ಲಿ ಕನಿಷ್ಠ ಪಕ್ಷ ೨ ಮಾತ್ರೆಯಷ್ಟು ಅಕ್ಷರಗಳಾದರೂ (ಎಂದರೆ ಎರಡು ಲಘುಗಳು ಅಥವಾ ಒಂದು ಗುರು) ಒಂದೊಂದು ಗಣಕ್ಕೆ ಸೇರಬೇಕು. (''ಚಟಾಕಿ'', ''ಕವೇರತನಯೆ''–ಇಂಥ ಕಡೆಗಳಲ್ಲಿರುವಂತೆ ಪದದ ಆದಿಯಲ್ಲಿ ಒಂದು ಲಘುವಾದ ಒಡನೆಯೇ ಗುರು ಬಂದರೆ ಈ ನಿಯಮ ಅನ್ವಯಿಸುವುದಿಲ್ಲ.) ಈ ಕೆಳಗಿನ ಚರಣಗಳನ್ನು ನೋಡಿ:

(೧೭) ನಿನ್ನಾ ಮೋಹದ ನಡುವನು ಬಳಸುವ
ಚಿನ್ನದ ಕಟ್ಟಾ । ಗಲು ಬಯ । ಕೆ.

(೧೮) ಮದುವಣಿಗನೊಪ್ಪುತಿರಲವನ ಕೈ । ಗಳ ಬಿಗಿದು
ಪದೆದು ಕೊಂಡೊಯ್ದೊರಗಿ । ಸಿದ ರುದ್ರಭೂಮಿಯಿದು.

ಮೇಲೆ ೧೩ನೆಯ ಉದಾಹರಣೆಯ ''ಮೊಂಡಾಟವು ಬಿಡದಲ್ಲ'' ಎಂಬ ಚರಣದಲ್ಲಿ ಕೆಟ್ಟುಹೋದ ಯತಿ ''ಮೊಂಡಾಟವಣಗದಲ್ಲ'' ಎಂಬುದರಲ್ಲಿ ಹೇಗೆ ಸರಿಹೋಯಿತು? ಈ ತಿದ್ದಿದ ಚರಣದಲ್ಲಿ ತಾಳ ಬೀಳುವ ಕಡೆ ಸಂಧಿಯಾಗಿ ಕ್ಲೇಶವನ್ನು ಪರಿಹರಿಸಿದೆ. ಒಂದು ಅಕ್ಷರದಲ್ಲಿ ಆಘಾತ ಬೀಳುವುದು ಅದರ ಸ್ವರದ ಮೇಲೆ. ಇಲ್ಲಿ ''-ವಣಗದ-'' ಎಂಬ ಗಣದ ಆದಿಸ್ವರವಾದ ''ಅ'' ಎಂಬುದು ''ಅಣಗದು'' ಎಂಬ ಪದದ ಮೊದಲನೆಯ ಸ್ವರವೂ ಆಗಿರುವುದರಿಂದ ತಾಳದ ಒತ್ತನ್ನು ಸರಿಯಾಗಿ ತಡೆಯುತ್ತದೆ. ಈ ಸ್ವರಕ್ಕೆ ''ಮೊಂಡಾಟವು'' ಎಂಬ ಹಿಂದಿನ ಪದದ ''ವ್'' ಎಂಬ ವ್ಯಂಜನ ಅಂಟಿಕೊಂಡಿದ್ದರೂ ಏನೂ ತೊಂದರೆಯಾಗಿಲ್ಲ ; ಸಂಧಿಯಲ್ಲಿ ತನ್ನ ಸ್ವರವನ್ನು ಕಳೆದುಕೊಂಡ ಬಳಿಕ ಅದಕ್ಕೆ ಯಾವ ಮಹತ್ವವೂ ಉಳಿಯಲಿಲ್ಲ. ಹೀಗೆ ಸಂಧಿಸ್ಥಾನದಲ್ಲಿ ಗಣವನ್ನು ಮೊದಲು ಮಾಡುವುದು ಸರ್ವಸಾಮಾನ್ಯವಾದ ರೂಢಿ. ಇದಕ್ಕೆ ಮೇಲಿನ ಉದಾಹರಣೆಗಳಲ್ಲೇ ಎಷ್ಟೋ ನಿದರ್ಶನಗಳು ದೊರೆಯುತ್ತವೆ. ಇನ್ನೂ ಕೆಲವನ್ನು ಕೊಡಬಹುದು:

(೧೯) ಅತ್ತ । ರತ್ತ । ರತ್ತ । ರೆಂದು
ಹೊತ್ತು ಮೂರು ನುಡಿವೆ ನೀನ್.

(೨೦) ನೂರು ತೋಟಗಳಲಿ ನಿಂತು
ಚೆಲುವು ನಗುತ । ಲಿರುವು । ದೆಂತು !

(೨೧) ಚಿಮ್ಮುತ ಎಲೆಯಿಂ । ದೆಲೆಯೆಡೆಗೆ
ಚಿಮುಕಿಸಿ ಮೋಹವ । ನಡಿಗಡಿಗೆ.

೮ ಷಟ್ಪದಿಯ ೩ ಮತ್ತು ೬ನೆಯ ಚರಣಗಳ ಕೊನೆಯಲ್ಲಿ ನಿಲ್ಲುವಂತೆ, ಚರಣದ ಕೊನೆಯಲ್ಲಿ ಬಿಡಿಯಾಗಿ ನಿಂತು ಅದಕ್ಕೆ ಮುಕ್ತಾಯ ಕೊಡುವ ಅಕ್ಷರಕ್ಕೆ ''ಮುಡಿ'' ಎಂಬ ಹೆಸರನ್ನು ಇಲ್ಲಿ ಕೊಟ್ಟಿದೆ. ಮೇಲಿನ ೧೫ನೆಯ ಉದಾಹರಣೆಯಲ್ಲಿ ''...। ತೋರುತ । ಬರುತಿ ।ಲು'' ಎಂಬ ಕಡೆ ''ಲು'' ಎಂಬ ಅಕ್ಷರಮುಡಿ. ಇದರಬೆಲೆ ಒಂದು ಗುರುವಿನಷ್ಟೆಂದು ಹೇಳುವುದು ವಾಡಿಕೆ; ನಿಜವಾಗಿ ಇದರ ಬೆಲೆಯು ಒಂದು ಗಣದ ಕಾಲ. ಮುಡಿಯನ್ನು ಉಚ್ಚರಿಸಿದ ಬಳಿಕ ಉಳಿಯುವ ಕಾಲವನ್ನು ಮೌನ ತುಂಬುತ್ತದೆ. (ಮುಡಿಯನ್ನು ಕುರಿತ ಹೆಚ್ಚಿನ ವಿಚಾರಕ್ಕೆ 'ಮಾತ್ರೆ, ಮುಡಿ, ಪದ್ಯಗಣ' ಎಂಬ ಲೇಖನವನ್ನು ನೋಡಿ.)

(೨೨) ನಕ್ಷತ್ರ । ದುಪ್ಪರಿಗೆ ತುತ್ತತುದಿಯಲಿ ನಿಂತು
ಅಕ್ಷಯದ ಆನಂದ । ವುಣುವರಸಿಯಾಗೆ !

(೨೩) ಎಮ್ಮ ಮನೆ । ಯಂಗಳದಿ ಬೆಳೆದೊಂದು ಹೂವನ್ನು
ನಿಮ್ಮ ಮಡಿ । ಲೊಳಗಿಡಲು ತಂದಿರುವೆವು.

ಆದಷ್ಟುಮಟ್ಟಿಗೂ ಪದಚ್ಛೇದವು ಸ್ವಾಭಾವಿಕವಾಗಿರುವಂತೆ ನೋಡಿಕೊಳ್ಳಬೇಕು. ''ನಡತೆಯಲಿ'' ಎಂಬುದನ್ನು ''ನಡತೆ । ಯಲಿ'' ಎಂದು ವಿಭಾಗಿಸಿದರೆ ಸರಿಹೋಗುತ್ತದೆ; ಏಕೆಂದರೆ ಇಲ್ಲಿ ಛೇದವು ಪ್ರಕೃತಿ ಪ್ರತ್ಯಯಗಳಿಗೆ ನಡುವೆ ಬರುತ್ತದೆ. ಆದರೆ ''ನಡ । ತೆಯಲಿ'' ಎಂಬುದು ಸರಿಹೋಗುವುದಿಲ್ಲ. ಸಮಾಸದಲ್ಲೂ ಹೀಗೆಯೇ:

(೨೪) ಕಾರ್ಮುಸುಕು ರಾತ್ರಿ ಬೆ। ಳ್ಗುದುರೆಗಳ ಸೂರ್ರ್ಯಂಗೆ ಬೆಸ್ನಿತ್ತು ಸರಿಗುಂ.

ಇಲ್ಲಿ ''ಬೆಳ್ಗುದುರೆಗಳ (=ಬೆಳ್। ಗುದುರೆಗಳ)'' ಎಂಬ ಕಡೆ ಛೇದವು ಸಹಜವಾಗಿದೆ, ಹಿತವಾಗಿದೆ. ಇದನ್ನು ''ಬೆಳ್ಗು। ದುರೆಗಳ'' ಎಂಬಂತೆ ಒಡೆಯಬೇಕಾಗಿಬಂದರೆ ಅಸುಖವುಂಟಾಗುತ್ತಿತ್ತು. ಅಂತೂ ಗಣವಿನ್ಯಾಸದಲ್ಲಿ ಅರ್ಥಪ್ರತೀತಿಗೆ ಭಂಗವುಂಟಾಗದಂತೆ ಕವಿ ಮೈಯೆಲ್ಲಾ ಕಣ್ಣಾಗಿ ನೋಡಿಕೊಳ್ಳಬೇಕು.[೯]

(೨೫) .....ಕರಯುಗದಿ
ವಿಜಯಮಾಲೆಯನಾಂತು, ಗಜಪುರದ ಕಡೆಗೊರ್ಮೆ
ಮಣಿಪುರದ ಕಡೆಗೊರ್ಮೆ ಬಗೆಯನಿರ್ಕಡೆ ಮಾಡಿ
ಒಲವಿನುಯ್ಯಾಲೆಯಲಿ ನಲಿದಳ್ ವಿಜಯಲಕ್ಷ್ಮಿ!

ಇಲ್ಲಿ ಕೊನೆಯ ಚರಣದ ನಡೆ ಹೇಗೆ?–

ಒಲವಿನು । ಯ್ಯಾಲೆಯಲಿ । ನಲಿದಳ್ ವಿ । ಜಯಲಕ್ಷ್ಮಿ ।

ಎಂದು ಗಣಗಳನ್ನು ವಿಂಗಡಿಸಿದರೆ ''ವಿ। ಜಯ'' ಎಂಬ ಕಡೆ ಯತಿಭಂಗವಾಗುತ್ತದೆ. ಈ ಚರಣವನ್ನು, ''...। ನಲಿದಳ್ ^ । ವಿಜಯಲ।ಕ್ಷ್ಮಿ!'' ಎಂದು ಓದಬೇಕೆಂದು ತೋರುತ್ತದೆ. ಆಗ, ಮೂರನೆಯ ಗಣದಲ್ಲಿ ಒಂದು ಮಾತ್ರೆಯ ಕಾಲದ ಮೌನ ಅಥವಾ ವಿರಾಮ ಬರುತ್ತದೆ. (ಇದನ್ನು ^ ಈ ಚಿಹ್ನೆಯಿಂದ ತೋರಿಸಿದೆ); ಕೊನೆಯಲ್ಲಿ ''ಮುಡಿ'' ನಿಲ್ಲುತ್ತದೆ. ಇಂಥ ಪ್ರಯೋಗಗಳು ಸರಳರಗಳೆಯಲ್ಲಿ ದೊರೆಯುವುದುಂಟು. ಇಲ್ಲಿ ಗಮನಿಸಬೇಕಾದ ಅಂಶವೇನೆಂದರೆ, ವಿರಾಮ ಬರುವ ಕಡೆ ಪದದಲ್ಲೂ ವಿರಾಮಕ್ಕೆ ಅವಕಾಶವಿರಬೇಕು; ಮುಡಿಯೊಂದಿಗೆ ಭಾವದಲ್ಲೂ ಮುಕ್ತಾಯವಿರಬೇಕು.

(೨೬) ಕಾಡಿಸುವ ಕಾಡುದೇವರಿಗೆ ಹೊಗಳಿಕೆ ಬೇಕು.
ಪ್ರೇಮನಿಧಿಯಾಗಿರುವ। ದೇವರ್ ^ । ಗೊಲುಮೆ ಸಾ। ಕು.

---

೯ ಇಂದಿನ ಛಂದಸ್ಸಿಗೆ ತಳಹದಿಯಾಗಿರುವ ಮಾತ್ರಾಗಣಗಳು ರಗಳೆ ಷಟ್ಪದಿಗಳಲ್ಲಿ ಪ್ರಚುರವಾಗಿದ್ದವು ತಾನೆ. ಇಲ್ಲಿಗೆ ಅನ್ವಯಿಸುತ್ತವೆಂದು ಮೇಲೆ ಗುರುತು ಕಾಣಿಸಿರುವ ಯತಿನಿಯಮಗಳ ವ್ಯಾಪ್ತಿಯನ್ನು ಅಲ್ಲಿಯೂ ನೋಡಬಹುದು. ಹಿಂದಿನ ಕವಿಗಳು ಇವನ್ನು ಉಲ್ಲಂಘಿಸಿರುವ ಕಡೆಗಳಲ್ಲಿ ಪದ್ಯದ ಓಟ ಕೆಟ್ಟಿರುವುದೂ ಗೋಚರವಾಗುತ್ತದೆ. ಇದಕ್ಕೆ ಉದಾಹರಣೆಗಳನ್ನೂ, ಈ ವಿಷಯವನ್ನು 'ಅಂಶ''ದ ದೃಷ್ಟಿಯಿಂದ ವಿಮರ್ಶಿಸಿ ನಡೆಸಿರುವ ಪರಿಶೀಲನೆಯನ್ನೂ 'ಕನ್ನಡ ಕೈಪಿಡಿ', ಸಂಪುಟ ೧ (ಎರಡನೆಯ ಮುದ್ರಣ), ಪುಟ ೧೭೬-೯ರಲ್ಲಿ ನೋಡಬಹುದು.

ಇಲ್ಲಿ, ''ದೇವರಿ-^ ಎಂಬ ಕಡೆ ಪದವೂ ಮುಗಿದಿದ್ದರೆ ಚೆನ್ನಾಗಿರುತ್ತಿತ್ತು. ಅಥವಾ, ''ದೇ'' ಎಂಬುದನ್ನು ಪ್ಲುತವಾಗಿ ಉಚ್ಚರಿಸಿ ಅದಕ್ಕೆ ೩ ಮಾತ್ರೆಯ ಕಾಲವನ್ನು ಕೊಡಬೇಕೋ ಏನೋ.

ಯತಿಯನ್ನು ಪಾಲಿಸುವುದರಲ್ಲಿ ವೈವಿಧ್ಯವನ್ನು ಎಷ್ಟು ಮಟ್ಟಿಗೆ ಉಳಿಸಿಕೊಳ್ಳಬಹುದೆಂಬುದಕ್ಕೆ ಈ ಕೆಳಗಿನ ಒಂದು ನಿದರ್ಶನ ಸಾಕು :

(೨೭) ಕಲೆಯ । ಬಲ್ಲಕು । ಲಾಲ । ಮೂಡಿಪ ।
ಮಾಟ । ದೂಲು ಮೃ । ತ್ತಿಕೆಯೊ । ಳು-
ತಿರುಗಿ । ಜಗವೆಂ । ತಾಗು । ತಿರುವುದು ।
ಪೆರೆಯ । ಕಲೆಯಿಂ । ತಮದೊ । ಳು !

ಚರಣಮಧ್ಯದಲ್ಲಿಯೇ ಯತಿನಿಯಮಗಳು ಇಷ್ಟು ಸೂಕ್ಷ್ಮವಾಗಿರುವಾಗ ಚರಣಾಂತ್ಯದಲ್ಲಿ ಕವಿ ಇನ್ನಷ್ಟು ಎಚ್ಚರಿಕೆ ವಹಿಸಬೇಕೆಂದು ಬೇರೆ ಹೇಳುವುದು ಅನಾವಶ್ಯಕ. ಹೊಸಗನ್ನಡದ ಕವಿತೆಯಲ್ಲಿ ಚರಣದೊಂದಿಗೆ ಪದವನ್ನೂ ಮುಗಿಸುವುದೇ ಪದ್ಧತಿ; ಒಮ್ಮೊಮ್ಮೆ ಲೋಪಸಂಧಿಯ ಸಹಾಯದಿಂದ ಕೊನೆಯ ಪದದ ಅಂತ್ಯ ವ್ಯಂಜನವನ್ನು ಮುಂದಿನ ಚರಣದ ಮೊದಲಿಗೆ ಜೋಡಿಸುವುದುಂಟು. ಇಂದಿನ ರೂಢಿ ಹೀಗಿರುವುದರಿಂದ, ಹಿಂದಿನ ಚರಣಕ್ಕಷ್ಟು ಮುಂದಿನ ಚರಣಕ್ಕಷ್ಟು ಸೇರುವಂತೆ ಒಂದು ಪದವನ್ನು ಛೇದಿಸಿದರೆ, ಅದರಲ್ಲೂ ಯತಿನಿಯಮವನ್ನು ಮೀರಿದರೆ, ಶ್ರುತಿಸಹ್ಯವಾಗದೆ ಹೋಗುವುದು ಖಂಡಿತ:

(೨೮) ಕಾಲಚಕ್ರದಲಿ ಚಿತ್ರಿಸಿದ ಚಕ್ರಾಧಿಪ-
ತ್ಯಗಳ ಗಣನೆಯಂ ಮಾಡಬಲ್ಲವರುಂಟೆ ಕಾ-
ಲಕಾಲಕೆ ತೋರಿ ಸಂಕಲ್ಪ ಕಾರ್ಯವ ಮಾಡಿ
ಮುಳುಗುವುವು;...

(೨೯) ನುಡಿಸುತಿರು ಏಕನಾದವ ಗುರುವೆ! ಜೀವಲಹ-
ರಿಯ ಭೇದ ಒಡೆದು ಕಾಣಲಿ, ಅಭೇದದ ಕಟ್ಟ-
ಡವು ಇಟ್ಟಳಿಸಿ ಬರಲಿ,...

೨೮ನೆಯ ಉದಾಹರಣೆಯಲ್ಲಿ ಗಮನಿಸತಕ್ಕ ಇನ್ನೊಂದು ಅಂಶವುಂಟು. ''ಕಾಲಕಾಲಕೆ'' ಎಂಬ ಪದವು ಚರಣಾಂತ್ಯದಲ್ಲಿ ಛೇದಹೊಂದಿ, ''ಲಕಾಲಕೆ'' ಎಂಬ ಅದರ ಭಾಗವು ಒಂದು ಗಣವಾಗಿ ನಿಂತಿದೆ. ಇಲ್ಲಿ ''ಲ'' ಎಂಬ ಲಘುವಿನ ಮೇಲೆ ಒತ್ತು ಬೀಳಬೇಕು; ಆದರೆ ಅದರ ಮುಂದೆಯೇ ''ಕಾ'' ಎಂಬ ಗುರು ನಿಂತು ಆಘಾತವನ್ನು ತನ್ನ ಕಡೆಗೆ ಸೆಳೆಯುತ್ತದೆ. ಹೀಗಾಗಿ ಗಣದ ರಚನೆ ಶ್ರಾವ್ಯವಾಗಿಲ್ಲ. ಗಣದ ಮೊದಲಲ್ಲಿ ಒಂದು ಲಘುವನ್ನಿಟ್ಟು ಕೂಡಲೇ ಗುರುವನ್ನು ತರುವ ಪದ್ಧತಿ ಕನ್ನಡ ಛಂದಸ್ಸಿನ ಸಂಪ್ರದಾಯಕ್ಕೆ ಅನನುಗುಣವಾದದ್ದು. ಹಿಂದಿನಿಂದಲೂ ಅಷ್ಟೇ; ಕವಿಗಳು ಇಂಥ ಗಣಗಳನ್ನು ಸಾಮಾನ್ಯವಾಗಿ ಉಪಯೋಗಿಸಿಲ್ಲ. ಶಾಸ್ತ್ರಕಾರರು ಒಪ್ಪಿಲ್ಲ. ಷಟ್ಪದಿಗಳಲ್ಲಿ ∪ – (೩ ಮಾತ್ರೆ), ∪ – ∪(೪ ಮಾತ್ರೆ), ∪ – – ಅಥವಾ ∪ – ∪∪(೫ ಮಾತ್ರೆ): ಈ ಗಣಗಳು ಬರಕೂಡದೆಂದು ನಿಷೇಧಿಸಿರುವ ವಿಷಯ ಎಲ್ಲರಿಗೂ ತಿಳಿದಿದೆ. (ಈ ಗಣಗಳನ್ನು ''ವಿಷಮಗಣ''ಗಳೆಂದು ಕರೆಯಬಹುದು.) ಹೀಗೆ ನಿಷೇಧಿಸುವುದಕ್ಕೆ ಸ್ವರಾಘಾತದ ನಿಯಮದ ಮೇರೆಗೆ ಔಚಿತ್ಯವೂ ಉಂಟೆಂದು ಮೇಲೆ ನೋಡಿದ್ದಾಗಿದೆ.

ಆದರೂ, ಈಗಿನ ಕವಿಗಳು ವಿಶೇಷ ಪ್ರಯೋಜನದ ದೃಷ್ಟಿಯಿಂದ ವಿಷಮಗಣಗಳನ್ನು ಕೆಲವು ವೇಳೆ ಪ್ರಯೋಗಿಸುವುದುಂಟು:

(೩೦) ಬೊಬ್ಬೆಯ ಹಬ್ಬಿಸಿ ಒಂದೇ ಬಾರಿಗೆ
ಉಬ್ಬರ ಎಬ್ಬಿಸಿ ಕಡಲಿನ ನೀರಿಗೆ,
∪ – ∪
ಬೊಬ್ಬುಳಿ ತೆರೆಯನು । ದಡಕ್ಕೆ । ಹೊಮ್ಮಿಸಿ,
ಅಬ್ಬರದಲಿ ಭೋರ್ ಭೋರೆನೆ ಗುಮ್ಮಿಸಿ...

ಇದು 'ತೆಂಕಣ ಗಾಳಿಯಾಟ'ದ ಒಂದು ವಿಲಾಸದ ವರ್ಣನೆ. ಇಲ್ಲಿ ದಪ್ಪ ಲಿಪಿಯಲ್ಲಿ ತೋರಿಸಿರುವ ಕಡೆ ವಿಷಮಗಣ ಬಂದು, ತೆರೆ ದಡಕ್ಕೆ ಅಪ್ಪಳಿಸಿದ ಭಾವಕ್ಕೆ ಪುಷ್ಟಿಕೊಡುತ್ತದೆ.

ಮೂರು ಮಾತ್ರೆಯ ಗಣದಲ್ಲಿ ಹೆಚ್ಚು ವೈವಿಧ್ಯಕ್ಕೆ ಅವಕಾಶವಿಲ್ಲ. ∪ – ಎಂಬ ವಿಷಮ ಗಣವನ್ನು ಕೈಬಿಟ್ಟರೆ, – ∪, ∪∪∪ ಈ ಎರಡು ಬಗೆಯಲ್ಲೇ ಆದರ ಪ್ರಸ್ತಾರ ಮುಗಿಯುತ್ತದೆ. ಆದಕಾರಣ ಕವಿಗಳು ೩ ಮಾತ್ರೆಯ ಗಣದಲ್ಲಿ ∪ – ಗಣವನ್ನು ಆಗಾಗ ಉಪಯೋಗಿಸುತ್ತಾರೆ. ಇದು ಹದ ಮೀರದಂತೆ, ಅದರಲ್ಲೂ ಚರಣದ ಕೊನೆಯಲ್ಲಿ, ಬಂದರೆ ಇಂಪಾಗಿಯೂ ಇರಬಲ್ಲದು. ಮುಂದಿನ ಪದ್ಯದಲ್ಲಿ ಹೀಗೆ ವಿಷಮಗಣಗಳು ಸಾಲುಗಟ್ಟಿಕೊಂಡು, ಚರಣದ ನಡುವೆ ಕೂಡ ಬಂದಿವೆ :

(೩೧) ಬಂಡನುಂಡು ದುಂಬಿವಿಂಡು ಹಾಡುತಿಹುವು ಹಾರುತ ;
∪ – ∪ –
ಮತ್ತ । ಮಧು । ಮಾಸ । ವಿದು । ಬನ್ನಿರೆಂದು ಸಾರುತ.
∪ –
ಜಾರುತಿಹುದು ಮಾಗಿ । ಚಳಿ,
∪ –
ಕುಸುಮಿಸಿರುವ ಲತೆಗ । ಳಲಿ
∪ –
ಮೊರೆಯುತಿಹುವು ಸೊಕ್ಕಿ । ದಳಿ
ಮುಕ್ತಜೀವರಂದದಿ !
∪ – ∪ –
ಉಲಿಯೆ । ಪಿಕ, । ಗಳಪೆ । ಶುಕ, । ಸುಗ್ಗಿ ಬಂದಿತಂದದಿ !

ಇಲ್ಲಿಯ ವಿಷಮಗಣಗಳಲ್ಲಿ ಲಘುಸ್ವರಕ್ಕೆ ಗುರುವಿನ ಬೆಲೆಯೂ, ಅಂತ್ಯಪ್ರಾಸದ ಬಿಗಿಯೂ ಸಮುಚಿತವಾಗಿ ಬಂದು ಪದ್ಯ ಮನೋಹರವಾಗಿದೆ.

''ರಗಳೆಯ ಕವಿ'' ಹರಿಹರನು ∪ – ಗಣವನ್ನು ಹಿಂದೆಯೇ 'ಮಹಾದೇವಿಯಕ್ಕನ ರಗಳೆ'ಯಲ್ಲಿ ರಮ್ಯವಾಗಿ ಉಪಯೋಗಿಸಿದ್ದನು:

∪ –
(೩೨) ಬರುತಮಿರ್ದಳಿಂದುಧರನ ಪೂಜೆಗೆಮ್ಮ । ಮಹಾ । ದೇವಿ
∪ –
ಪರಮಭಕ್ತೆ ಶಾಂತಿಯುಕ್ತೆಯತಿವಿರಕ್ತೆ । ಮಹಾ । ದೇವಿ.

ಚರಣದ ಮೊದಲಲ್ಲೇ ತಾಳವೂ ಮೊದಲಾಗಿ ಮುಂದುವರಿಯುವುದೇ ಪದ್ಯದ ರೂಢಿ. ಆದರೆ, ಈ ಉದಾಹರಣೆಯನ್ನು ನೋಡಿ :

(೩೩) ಅ]ನಾಥೆ ಇವ। ಳಿನ್ನೊಬ್ಬ।
ಳೀ ಜನ್ಮ ರೋಸಿ,
ವೇಧೆಯನು ತಾಳದೆಯೆ
ಮುಳುಗಿದಳು ಹೊಳೆಗೆ.

ಮೊದಲನೆಯ ಚರಣದಲ್ಲಿ "ಅ" ಎಂಬ ಲಘು ಬಿಡಿಯಾಗಿ ನಿಂತು, ಅಲ್ಲಿಂದ ಮುಂದೆ ೫ ಮಾತ್ರೆಯ ಎರಡು ಗಣಗಳು ಬಂದಿವೆ. ಹೀಗೆ ತಾಳಕ್ಕೆ ಮೊದಲೇ ಅಕ್ಷರ ಬಂದಿರುವುದು ಹಾರುವ ಅಥವಾ ಓಡುವ ಪಂದ್ಯಗಳಲ್ಲಿ ನೇಮಿಸಿದ ಗೆರೆಗಿಂತ ಕೆಲವು ಹೆಜ್ಜೆ ಹಿಂದಿನಿಂದ ಸ್ಪರ್ಧಾಳು ಓಡಿಬಂದು ವೇಗವನ್ನು ಬೆಳಸಿಕೊಳ್ಳುವಂತೆ. ಚರಣಕ್ಕೆ ಇದರಿಂದ ಹೊಸ ಬಲ ಬರುತ್ತದೆ. ಮೇಲಿನ ಉದಾಹರಣೆಯಲ್ಲಿ ಹೀಗೆ ತಾಳವನ್ನು ಎತ್ತಿಕೊಡುವ ಅಕ್ಷರ ಲಘು; ತ್ವರಿತವಾಗಿ ಅದನ್ನು ಉಚ್ಚರಿಸಬಹುದು. ಆದರ ಮುಂದಿನ ಅಕ್ಷರ ಗುರು ; ಆದ್ದರಿಂದ ಸ್ವರಾಘಾತವೂ ತಾಳವೂ ಅಲ್ಲಿ ಒಡಬೆರೆಯುತ್ತವೆ. ಈ ಬಗೆಯ ವಿನ್ಯಾಸವನ್ನು ಮಿಕ್ಕ ಜಾತಿಯ ಗಣಗಳಲ್ಲೂ ತರಬಹುದು:

(೩೪) ಚ]ಳುಕ್ಯರಾಷ್ಟ್ರಕೂಟರೆಲ್ಲಿ
ಗಂಗರಾ ಕದಂಬರೆಲ್ಲಿ . . . . (೩ ಮಾತ್ರೆಯ ಗಣ)

(೩೫) ಕು]ಮಾರವ್ಯಾಸನು ಹಾಡಿದನೆಂದರೆ
ಕಲಿಯುಗ ದ್ವಾಪರವಾಗುವುದು. (೪ ಮಾತ್ರೆಯ ಗಣ)

೩೫ನೆಯ ಉದಾಹರಣೆಯಲ್ಲಿ, ಕೆಲವರು ಮೊದಲಲ್ಲಿ ವಿಷಮಗಣವನ್ನು ತಂದು, 'ವ್ಯಾ' ಎಂಬ ಒತ್ತಕ್ಷರವನ್ನು ಶಿಥಿಲಮಾಡಿ,

U – U *
ಕುಮಾರ। ವ್ಯಾಸನು ಹಾಡಿದನೆಂದರೆ

ಎಂಬಂತೆ ಓದುತ್ತಾರೆ. ಆದರೆ ಗತ್ತು ಗಾಂಭೀರ್ಯಗಳನ್ನು ಉಳಿಸಿಕೊಳ್ಳಲು ಮೊದಲನೆಯ ಮಾರ್ಗವೇ ಉತ್ತಮವೆಂದು ತೋರುತ್ತದೆ.

೪ ಮಾತ್ರೆಯ ಗಣದ ಧಾಟಿಯಲ್ಲಿ ಮೊದಲ ತಾಳಕ್ಕೆ ಹಿಂದೆ ಎರಡು ಲಘುಗಳನ್ನು ನಿಲ್ಲಿಸಿಯೂ ಸೊಗಸನ್ನು ತಂದಿರುವುದುಂಟು :

(೩೬) ಹಗ]ಲೆಲ್ಲಾ। ಕಳೆಯಿತು। ಸೂರ್ಯನು। ಮುಳುಗೆ

ಖಗ]ಹಾರಿತು ಗೂಡಿನ ಒಳಗೆ

ಜಗ]ವೆಲ್ಲಾ ಬೆಳಗಿತು ದೀಪವು ಬೆಳಗೆ

ಗಗ]ನಾಂಗಣದಲಿ ಉಡು ತೊಳಗೆ....

ಈ ಚರಣಗಳನ್ನು, ''ಹಗಲೆ। ಲ್ಲಾ ಕಳೆ। ಯಿತು ಸೂ। ರ್ಯನು ಮುಳು। ಗೆ''...ಎಂಬಂತೆ ವಿಭಾಗಿಸುವುದೂ ಅಸಾಧ್ಯವಲ್ಲ. ಆದರೆ ಮೊದಲನೆಯ ರೀತಿಯಲ್ಲೇ ಇಂಪು ಹೆಚ್ಚು.

ಮೇಲಿನ ಉದಾಹರಣೆಗಳಲ್ಲೆಲ್ಲಾ, ತಾಳ ಮೊದಲಾಗುವ ಕಡೆ ಗುರು ನಿಯತವಾಗಿ ಬಂದಿರುವುದನ್ನು ಗಮನಿಸಬೇಕು. ಹೀಗಿಲ್ಲದಿದ್ದರೆ ಲಯ ಕೆಡುತ್ತದೆ :

(೩೭) ನೆ]ನೆಯಲಾರೆ ! । ಕಿರಿಯ ದೋ । ಣಿಯು ತೆರೆಗ । ಳಗ್ರದಲಿ ।...

ಇಲ್ಲಿ ಚರಣದ ಎರಡನೆಯ ಅಕ್ಷರ ಲಘುವಾಗಿರುವುದರಿಂದ, ಅದರಲ್ಲೂ ಪದದ ಎರಡನೆಯ ಲಘುವಾಗಿರುವುದರಿಂದ, ಏನು ಮಾಡಿದರೂ ತಾಳ ಅಲ್ಲಿ ಬೀಳುವುದಿಲ್ಲ. ಈ ಚರಣವನ್ನು ಸರಿಹೊಂದಿಸಬೇಕಾದರೆ,

''ನೆನೆಯಲಾ । ರೆ ! ಕಿರಿಯ। ದೋ] ಣಿಯು ತೆರೆಗ । ಳಗ್ರದಲಿ ।'' ಎಂದೋ,

''ನೆನೆಯಲಾ । ರೆ ! ಕಿರಿಯದೋ । ಣಿಯು ತೆರೆಗ । ಳಗ್ರದಲಿ ।'' ಎಂದೋ,

ಓದಬೇಕು. ಆಗ ಚರಣಮಧ್ಯದಲಿ ಒಂದು ಗುರು ಅಧಿಕವಾಗಿ ನಿಲ್ಲುತ್ತದೆ.

೩

ಗಣವಿನ್ಯಾಸದಲ್ಲಿ ಕಾಣಬರುವ ವಿಶೇಷಾಂಶವೊಂದನ್ನು ಈಗ ಕೆಲವುಮಟ್ಟಿಗೆ ಪರಿಶೀಲಿಸಬೇಕಾಗಿದೆ. ಕೆಳಗಿನ ಚರಣಗಳನ್ನು ನೋಡಿ:

(೩೮) ಒಳ್ಳೆಯ ಮಗಳು ಒಳ್ಳೆಯ ಗೆಳತಿ
ಒಳ್ಳೆಯ ಸೊಸೆ ಬಹು ಒಳ್ಳೆಯ ಹೆಂಡತಿ
ಚೆಲುವು ಹೆಚ್ಚೊ ಗುಣ ಹೆಚ್ಚೋ ಎಂಬುದು
ತಿಳಿಯದೊ ಅವಳನು ನೋಡಿದ ಜನಕೆ.
ಮಲ್ಲಮ್ಮಾ ಮಲ್ಲಮ್ಮಾ
ಇಲ್ಲವಾದೆಯಾ ಮಲ್ಲಮ್ಮಾ.

ಇಲ್ಲಿಯ ಲಯ ೪ ಮಾತ್ರೆಯ ಗಣಗಳಿಂದ ಆಗಿದೆಯೆಂಬುದು ಸ್ಪಷ್ಟ. ಆದರೆ ಮೂರನೆಯ ಚರಣವನ್ನು ಗಣಗಳಾಗಿ ವಿಂಗಡಿಸಿ ನೋಡಿ:

ಚೆಲುವು ಹೆಚ್ಚೊ ಗುಣ । ಹೆಚ್ಚೋ । ಎಂಬುದು ।

ಚರಣದ ಪೂರ್ವದಲ್ಲಿ 'ಹೆ-' ಎಂಬ ಗುರುವನ್ನು ಮಧ್ಯಕ್ಕೆ ಕತ್ತರಿಸಿದ ಹೊರತು ೪ ಮಾತ್ರೆಯ ಗಣಗಳೇ ಸಿಕ್ಕುವಂತಿಲ್ಲ. ಇದೇನು, ಗಣವಿನ್ಯಾಸದ ಮೂಲತತ್ತ್ವಕ್ಕೇ ಕುಠಾರ ಬಿದ್ದಿತಲ್ಲ ಎನ್ನಿಸಬಹುದು. ಆದರೆ ಚರಣದ ಶ್ರಾವ್ಯತೆ ಏನೂ ಕಡಿಮೆಯಾಗಿಲ್ಲ; ನಿಜವಾಗಿ ಈ ಭಾಗದಲ್ಲಿ ಅದಕ್ಕೊಂದು ಹೊಸ ಸೊಗಸು ಬಂದಿದೆ. ಬಾಣ ಬಿಟ್ಟಂತೆ ನೇರವಾಗಿ ಸಾಗುವ ಬದಲು, ನಟಿಯಂತೆ ಇಲ್ಲಿ ಬಳುಕಿ ಮುಂದುವರಿಯುತ್ತದೆ. ಇದಕ್ಕೆ ಕಾರಣವೇನು ?

ಇಂಥ ಕಡೆಗಳಲ್ಲಿ ಲಯದ ಮಾನದಂಡ ೪ ಮಾತ್ರೆಯ ಒಂಟಿ ಗಣವಲ್ಲ ; ಅದು ೮ ಮಾತ್ರೆಯ ಕಾಲದ ದ್ವಿಗಣ (೪+೪). ಈ ದೀರ್ಘ ಗಣದಲ್ಲಿ ಒಳತಾಳ ಸಹಜವಾಗಿ ಬರಲೇಬೇಕು ; ಅದು ಸಾಮಾನ್ಯವಾಗಿ ೪+೪ರಂತೆ ಒಡೆಯುತ್ತದೆ. ಆದರೆ ಒಂದೊಂದು ಸಲ

ಈ ೪+೪ಕ್ಕೆ ಬದಲಾಗಿ ೩+೫ರಂತೆ ಗಣವಿನ್ಯಾಸ ಮಾಡಿದರೆ ಮುಖ್ಯಲಯ ಕೆಡುವುದಿಲ್ಲ ; ಅದರ ರಚನೆಯಲ್ಲಿ ವೈವಿಧ್ಯವೊದಗುತ್ತದೆ. ಇದೇ ಮೇಲಿನ ಚರಣದ ಸೊಗಸಿನ ಗುಟ್ಟು. ಅದರ ಗಣವಿಭಾಗವನ್ನು

ಚೆಲುವು : ಹೆಚ್ಚೊ ಗಣ । ಹೆಚ್ಚೋ ಎಂಬುದು

-ಹೀಗೆ ತೋರಿಸಬಹುದು. ಇದರಂತೆಯೇ, ಮೇಲಿನ ಉದಾಹರಣೆಯಲ್ಲಿ ಆರನೆಯ ಚರಣದ ರಚನೆ ಈ ರೀತಿಯದು :

ಇಲ್ಲ : ವಾದೆಯಾ। ಮಲ್ಲಮ್ಮಾ

ಈ ಬಗೆಯ ಗಣವಿನ್ಯಾಸಕ್ಕೆ ಇನ್ನು ಕೆಲವು ಉದಾಹರಣೆಗಳು:

(೩೯) ಹೊಂಬಿಸಿಲೆಚ್ಚರಗೊಳಿಸಿದ ಮೌನ
ರಾಗ : ಮೋದಗಳು । ಕಲಕದ ಮೌನ.

(೪೦) ''ಏಳ್ಗೆ ಕನ್ನಡ ಭಾಗ್ಯವಿಧಾತನೆ''
ಎನುತೆ : ಹಾಡುತಿಹ । ವೈತಾಳಿ.

(೪೧) ಗಳಗಳರವದಿಂ ತೊರೆಯಾಗೋಡಿ
ಬಳುಕಿ : ನಲಿದು ಸುರ । ಗಾನವ ಪಾಡಿ.

(೪೨) ಆಸೆ : ಯೆಸಳು ತಲೆ । ಯೆತ್ತುವ ಮೊದಲೆ
ಸೌಸವವನು ಬಗೆ ಬೀರುವ ಮೊದಲೆ

ಕೊನೆಯ ಎರಡು ಕಡೆಗಳಲ್ಲಿ ''ಬಳುಕಿನ। [ಲಿದು ಸುರ–'', ಆಸೆಯೇ । ಸಳು ತಲೆ–'' ಎಂದು ೪+೪ರಂತೆ ಛೇದ ಮಾಡುವುದು ಸಾಧ್ಯ; ಆದರೆ ಹಾಗೆ ಮಾಡಿದರೆ ಯತಿ ನಿಜವಾಗಿ ಕೆಡುತ್ತದೆ. ೩+೫ರಂತೆ ವಿಂಗಡಿಸಿ ಓದುವುದೇ ಸಹಜ; ಅದರಲ್ಲೇ ಸೊಗಸು.

೪+೪ರ ಸ್ಥಾನದಲ್ಲಿ ೩+೫ ಬಂದಾಗ, ಈ ೫ ಮಾತ್ರೆಯ ಭಾಗವನ್ನು ೩+೨ರಂತೆ ಒಡೆಯಲು ಸಾಧ್ಯವಾದರೆ ಶ್ರಾವ್ಯತೆ ಹೆಚ್ಚೆಂದು ತೋರುತ್ತದೆ. ಮೇಲಿನ ಉದಾಹರಣೆಗಳಲ್ಲೆಲ್ಲಾ ಇದು ಸಾಧ್ಯವಾಗುತ್ತದೆ.

(೪೩) ಜಗ ಬೆಳಗಲು ದೆಸೆ ಹೊಳಲಿಡೆ ನಕ್ಕು
ಮುಗಿಲ : ಬೆನ್ನೇರಿ । ಮೋದದಿ ಮಿಕ್ಕು.

∪ ∪ ∪ – – ∪
ಇಲ್ಲಿ ''ಮುಗಿಲ ; ಬೆನ್ನೇರಿ'' ಎಂಬುದನು ೩+೩+೨ರಂತೆ ವಿಭಾಗಿಸಲಾಗುವುದಿಲ್ಲ.

∪ ∪ ∪ – ∪ ∪ ∪
ಇದರ ಬದಲು ''ಮುಗಿಲ. ಬೆನ್ನಿನಲಿ'' (೩+೩+೨) ಎಂದು ಇದ್ದಿದ್ದರೆ ಚರಣದ ಇಂಪು ಹೆಚ್ಚುತ್ತಿರಲಿಲ್ಲವೆ?

ಹೀಗೆ ೪+೪ರ ಧಾಟಿಯಲ್ಲಿ ಪದ್ಯ ನಡೆಯುತ್ತಿರುವಾಗ ಒಂದೊಂದು ಕಡೆ ೩+೫ನ್ನು ಉಪಯೋಗಿಸುವ ಪದ್ಧತಿ ಆಧುನಿಕ ಯುಗದಲ್ಲಿ ಮೊದಲಾದದ್ದೇನೂ ಅಲ್ಲ; ಇದರ ಸುಖವನ್ನು ಜನ್ನ ರಾಘವಾಂಕರು ಅರಿತಿದ್ದರು.

(೪೪) ಮೊಟಗುವುವಘಮೃಗವಿರದೋಡುವಿನಂ
ಮೊಟಗು ⁝ ಗೆತ್ತು ಕೇ । ಕಿಗಳಾಡುವಿನಂ...
ಸಕಲ ⁝ ದೇಶ ಭಾ । ಷಾಪ್ರತಿಭಾಸಂ
ಪ್ರಕಟಂ ನೆಗೆದುದು ದಿವ್ಯಧ್ವಾಸಂ. (ಅನಂತನಾಥಪುರಾಣ)

(೪೫) ಏವೆ ⁝ ನೇವೆಸಲೆ। ಮಗನೇ ಮಗನೇ
ಸಾವೇಕಾಯಿತ್ತೆಲೆ ಚೆನ್ನಿಗನೇ. (ಹರಿಶ್ಚಂದ್ರಕಾವ್ಯ)

ಈ ರಚನೆ ಕನ್ನಡದಲ್ಲಿ ಮಾತ್ರವಲ್ಲ; ಸಂಸ್ಕೃತದಲ್ಲಿ 'ಗೀತಗೋವಿಂದ'ದಲ್ಲಿಯೇ ಕಾಣಿಸಿಕೊಂಡಿದೆ. ನಾದನಿಧಿಯಾದ ಜಯದೇವಕವಿಗೇ ಇದು ಒಪ್ಪಿಗೆಯಾದ ಮೇಲೆ ಇದರ ಇಂಪಿಗೆ ಬೇರೆ ಪ್ರಮಾಣ ಬೇಕಿಲ್ಲ. ಒಂದು ಉದಾಹರಣೆ ಇಲ್ಲಿಗೆ ಸಾಕು :

(೪೬) ಮದನಮಹೀಪತಿ । ಕನಕ⁝ದಂಡರುಚಿ। ಕೇಶರ ಕುಸುಮ ವಿಕಾಸೇ
ಮಿಲಿತ ಶಿಲೀಮುಖ ಪಾಟಲಪಟಲಕೃತ ಸ್ಮರತೂಣವಿಲಾಸೇ.

ಹೀಗೆ ಲಯದಲ್ಲಿ ಒಂದು ಹೊಸ ಬಳುಕನ್ನು ತರುವುದಕ್ಕಾಗಿ ಒಂದು ಜಾತಿಯ ಗಣಗಳ ಸ್ಥಾನದಲ್ಲಿ ಅದೇ ಮಾತ್ರಾಪರಿಮಿತಿಯ ಇನ್ನೊಂದು ಜಾತಿಯ ಗಣಗಳನ್ನು ಇರಿಸುವುದಕ್ಕೆ ''ಗಣಪರಿವೃತ್ತಿ''ಯೆಂಬ ಹೆಸರನ್ನು ಇಲ್ಲಿ ಕೊಟ್ಟಿದೆ.

೩ ಮಾತ್ರೆಯ ಗಣದ ಧಾಟಿ ಶುದ್ಧವಾಗಿ ನಡೆದರೆ ಅದರಲ್ಲಿ ಏಕನಾದಕ್ಕೆ ಅವಕಾಶ ಹೆಚ್ಚು. ೩+೩ರ ಸ್ಥಾನದಲ್ಲಿ (೨+೪ ಅಥವಾ ೪+೨ರ ರಚನೆಯುಳ್ಳ) ೬ ಮಾತ್ರೆಯ ಗಣವನ್ನು ಪ್ರಯೋಗಿಸುವುದು ಈಗ ರೂಢಿಯಾಗುತ್ತಿದೆ. ಈ ಬಗೆಯ ಪರಿವರ್ತನೆಯನ್ನು ಔಚಿತ್ಯವರಿತು ನಡಸಿದರೆ ಪದ್ಯ ಎಷ್ಟು ರಮ್ಯವಾಗುವುದೆಂಬುದಕ್ಕೆ ಈ ಕೆಳಗಿನ ನಿದರ್ಶನಗಳು ಸಾಕು:

(೪೭) ಗಂಗೆ ಯಮುನೆ ಕೂಡಿ ಹರಿದು
ಸಂಗಮ.ಜಲ । ಬಿಳಿದು ಕರಿದು
ತಿಂಗಳ.ನಗೆ । ಮೇರೆವರಿದು
ಚೇರೆ ಮಿರುಗು ನೀರಿಗು.

(೪೮) ''ಭೃಂಗದ.ಬೆ। ನ್ನೇರಿ ಬಂತು ಕಲ್ಪನಾವಿಲಾಸಾ''...
ಏನು ಏನು? ಜೇನು ಜೇನು?। ಎನೆ. ಗುಂ ಗುಂ। ಗಾನಾ
ಓಂ.ಕಾರದ । ಶಂಖನಾದಕಿಂತ ಕಿಂಚಿದೂನಾ
ಕವಿಯ ಏಕತಾನ ಕವನದಂತೆ ನಾದಲೀನಾ...
ಮಾತು ಮಾತು ಮಥಿಸಿ ಬಂದ । ನಾದದ.ನವ । ನೀತಾ.

೫+೫ರ ಸ್ಥಾನದಲ್ಲಿ ೩+೪+೩ರ ಛಾಯೆಯನ್ನು ತರುವುದಂತೂ ಅತಿ ಸಾಮಾನ್ಯ; ಕಿವಿಗೊಟ್ಟು ಆಲಿಸಿದ ಹೊರತು ಗಮನಕ್ಕೇ ಬಾರದಷ್ಟು ಸಾಮಾನ್ಯ. ಕೆಳಗಿನ ಚರಣದಲ್ಲಿ ಈ ಪರಿವೃತ್ತಿ ಹಿತವಾಗಿ ಬಂದಿದೆ:

(೪೯) ಮೊದಲ ⁝ ಬೇ'ಟದ ⁝ ಮೊಳಕೆ । ಪಣ್ಗೊಂಡ ಕಾನನಂ
ಮೊದಲ ⁝ ಮೋ'ಹದ ⁝ ಬಲೆಯ । ನೆಯ್ದೆಡೆಯ ತಿಳಿಗೊಳಂ
ಮೊದಲ ⁝ ಮಿಲ'ನದ ⁝ ಮತ್ತೆ । ವಿರಹದ ಶಿವಾಲಯಂ.

(೫೦) ಎನ್ನ ⁝ ದೇ'ವರ ⁝ ಗುಡಿಗೆ । ನಂದಿದಾಸೆಯ ದೀಪ
ನಿಟ್ಟುಸಿರ ಮಂತ್ರ; ಉಮ್ಮಳದ ತಂತ್ರ.

ಇಲ್ಲೆಲ್ಲಾ ೫+೫ರಂತೆ ಗಣಗಳನ್ನು ಬಿಡಿಸುವುದು ಸಾಧ್ಯ; ಆದರೆ ೩+೪+೩ರಂತೆ ಇವು ಹೆಚ್ಚು ಸಹಜವಾಗಿ ಒಡೆದು ವೈವಿಧ್ಯವನ್ನು ಉಂಟುಮಾಡುತ್ತವೆ.

(೫೧) ಕ್ರಾಂತಿ ⁝ ಕಾ'ಳಕ ⁝ ಠಾರಿ । ಯಂ ನನ್ನೆದೆಗೆ ಕುರಿತು
ಝಳಪಿಸುತೆ ಬದ್ಧಭ್ರುಕುಟಿ ಕೋಪದಲಿ ನಿಂತು
ದಂಷ್ಟ್ರಾರ್ಷಣರವಂ ಪೊಣ್ಮೆ ಗಜರಿದಳಿಂತು.

ಇಲ್ಲಿ ಮೊದಲನೆಯ ಚರಣದ ಆದಿಯಲ್ಲಿ ೩+೪+೩ರ ಓಟ ಬಂದು ಯತಿಯನ್ನು ಉಳಿಸಿಕೊಡುತ್ತದೆ. ೫+೫ರಂತೆಯೇ ವಿಭಾಗಿಸಬೇಕಾಗಿದ್ದಲ್ಲಿ, ''ಕ್ರಾಂತಿ ಕಾ। ಳಿ ಕಠಾರಿ'' ಎಂದು ಒಡೆದು, ''ಳಿ'' ಎಂಬ ಪದಾಂತ್ಯದ ಲಘುವಿನ ಮೇಲೆ ತಾಳ ಬಿದ್ದು ಯತಿ ಕೆಡುತ್ತಿತ್ತು. (''ಯಂ ನನ್ನೆ[ದೆಗೆ ಕುರಿತು'' ಎಂಬಲ್ಲಿ ಯತಿಭಂಗವಾಗಿದೆ.)

೫ ಮಾತ್ರೆಯ ಗಣದ ಧಾಟಿಯಲ್ಲಿ ಚರಣದ ಮಧ್ಯಭಾಗದಲ್ಲಿ ಈ ಪರಿವೃತ್ತಿಯ ಛಾಯೆ ಬಂದರೆ ಅತಿಶಯವಾದ ಬಳಕು ಅಲ್ಲಿ ಗೋಚರವಾಗುತ್ತವೆ. ಈ ನಿದರ್ಶನಗಳನ್ನು ನೋಡಿ:

(೫೨) ಕೆನ್ನೆಯಲಿ । ಕೆಂಪು ⁝ ಬಿಳು'ಪನು ⁝ ಸುಳಿಸಿ । ಕೇಳಿದಳು
ಕಣ್ಣನಾಚಿಕೆಪಟ್ಟು ನೆಲದಲಿಟ್ಟು.

(೫೩) ಗಡಗಡನೆ । ಭೂಮಿ ⁝ ನಡು'ಗಿತು ⁝ ದುಃಖ । ವಾರ್ತೆಯಂ
ಜಗಕೆಲ್ಲ ಕೇಳಿಸುವ ಮರಣದುಂದುಭಿಯಂತೆ.

(೫೪) ಸರಿಯಾಗಿ ನಡೆವುದಕೆ ಬಾರದಿರುವೆಳೆಗೂಸ
ಪಿಡಿದೆತ್ತಿ । ಕೊಂಡು ⁝ ಮೇ'ಗಡೆ ⁝ ಗೂಯ್ದು । ನು.

(೫೫) ವೀರಕ್ಕೆ । ವಿನಯ ⁝ ಮೆಂ'ಬುದು ⁝ ಮುಡಿಯ । ಮಾಣಿಕಂ.

ಈಗ ಕೆಳಗಿನ ಚರಣಗಳನ್ನು ಪರಿಶೀಲಿಸಿ:

(೫೬) ನಿಮ್ಮ ನೆನೆ । ದೊಡಮೆನ್ನ । **ಗಾನದ ಹಕ್ಕಿ ರೆಕ್ಕೆ** ।
ಮುದುರಿ ರೆ । ಪ್ಪೆಯ ಮುಚ್ಚಿ । ಕಾವು ಕೂ । ರುವುದಳಲ ।
**ಮೊಟ್ಟೆಯ ಮೇಲೆ ಸುಯ್ದು** । ಸುಯ್ದುದೆ∧ । ಚರಮಗೀ । ತೆ.

ಇಲ್ಲಿ ದಪ್ಪ ಲಿಪಿಯಲ್ಲಿ ಅಚ್ಚುಮಾಡಿರುವ ಕಡೆಗಳಲ್ಲಿ ೫+೫ರಂತೆ ವಿಭಾಗ ಮಾಡುವುದು ಅಶಕ್ಯ. ಇವನ್ನು ೪+೩+೩ರಂತೆ ಭಾವಿಸಬೇಕೇನೋ. ಹಾಗಾದರೆ ಲಯ ಕೆಡುವುದಿಲ್ಲವೇ ಎಂಬುದು ವಿಚಾರ ಮಾಡಬೇಕಾದ ವಿಷಯ. ಅಥವಾ ''ಗಾನದ । ಹಕ್ಕಿರೆ । ಕ್ಕೆ'', ''ಮೊಟ್ಟೆಯ। ಮೇಲೆ ಸು।ಯ್ದು'' ಎಂಬಂತೆ ವಿರಾಮವನ್ನು ತಂದು, ಬಿಡಿಯಕ್ಷರವನ್ನು ನಿಲ್ಲಿಸಿ, ಹಿಂದೆ ೨೫ನೆಯ

ಉದಾಹರಣೆಯಲ್ಲಿ ಮಾಡಿದಂತೆ ಅನ್ವಯಿಸಿಕೊಳ್ಳಬೇಕೇನೋ. ಆ ಪಕ್ಷದಲ್ಲಿ ಪದ್ಯದ ಕಟ್ಟು ತುಂಬ ಶಿಥಿಲವಾಗುವುದಿಲ್ಲವೆ ?[೧೦]

ನಮ್ಮ ಕಾವ್ಯಪ್ರಪಂಚದಲ್ಲಿ ಇದು ಹೊಸ ಪ್ರಯೋಗಗಳ ಕಾಲ; ಹಳಬರು ನಡೆದಾಡಿ ಸವೆದು ಕೊರಕಲು ಬಿದ್ದ ಹಳೆಯ ಜಾಡಿನಲ್ಲೇ ಕಣ್ಣುಮುಚ್ಚಿಕೊಂಡು ಸಾಗದೆ, ಹೊಸ ಹೊಸ ದಾರಿಗಳನ್ನು ಹುಡುಕುತ್ತಾ ಅತ್ತ ಇತ್ತ ಸುಳಿದಾಡುತ್ತಿರುವ ಕಾಲ; ಕವಿಗಳು ಹೊಸ ಹೊಸ ಸೊಗಸುಗಳನ್ನು ತಮ್ಮ ಪ್ರತಿಭಾ ಬಲದಿಂದ ನಿರ್ಮಿಸುತ್ತಿರುವ ಕಾಲ; ಜನತೆ ತನ್ನ ಕಿವಿಯನ್ನು ಈ ಹೊಸ ನಾದಗಳಿಗೆ ಪಳಗಿಸಿಕೊಳ್ಳುತ್ತಿರುವ ಕಾಲ. ಈ ಸಂಧಿಕಾಲದಲ್ಲಿ ಛಂದಸ್ಸಿನ ಪ್ರಯೋಗಗಳನ್ನು ಕುರಿತು ಇದೇ ಕೊನೆಯ ಮಾತೆಂದು ವಿಮರ್ಶಕನು ಏನನ್ನೂ ಖಚಿತವಾಗಿ ಸಿದ್ಧಾಂತಿಸಲಾರನು ; ಹಾಗೆ ಸಿದ್ಧಾಂತಿಸಲೂಬಾರದು. ಮೇಲೆ ಮಾಡಿರುವ ಎಲ್ಲ ವಿಚಾರವೂ ನಿರ್ದುಷ್ಟವೆಂಬ ಹಠ ಈ ಲೇಖಕನಿಗಂತೂ ಖಂಡಿತ ಇಲ್ಲ.

ಈ ಕಾಲು ಶತಮಾನದ ಪ್ರಯೋಗ ಪರೀಕ್ಷೆಯಲ್ಲಿ ಒಂದು ಅಂಶವೇನೋ ದೃಢ ಪಟ್ಟಿದೆ. ನಿಯಮಗಳನ್ನು ಅತಿ ಶ್ರದ್ಧೆಯಿಂದ ಅನುಸರಿಸಿದರೆ ಏಕನಾದವುಂಟಾಗಿ ಬೇಸರ ಪಡಿಸುತ್ತದೆ; ಅತಿಕ್ರಮಗಳೂ ಅಪವಾದಗಳೂ ಹೆಚ್ಚಾದರೆ ಲಯದ ನೆಲೆಯೇ ತಪ್ಪಿ ಹೋಗುತ್ತದೆ. ಒಂದು ಕಿವಿಯನ್ನು ತಾಳಕ್ಕೂ ಒಂದು ಕಿವಿಯನ್ನು ಭಾಷಾಗತಿಗೂ ಪದ್ಯಕಾರನು ತೆರೆದಿಟ್ಟು, ಎರಡಕ್ಕೂ ವಿರೋಧ ಬಾರದಂತೆ ತನ್ನ ಹಾಡನ್ನು ಕಟ್ಟಬೇಕು. ನಿಯಮ ವೈವಿಧ್ಯಗಳ ಸಮನ್ವಯವೇ ಛಂದಸ್ಸಿನ ತಿರುಳು.

*ಸಂಭಾವನೆ, ೧೯೪೧*
*ಸಮಾಲೋಕನ, ೧೯೭೪, ಪು. ೧೮೯-೨೧೪*

---

೧೦ (ಆದರೆ ಕನ್ನಡದ ಹಿಂದಿನ ಕಾವ್ಯಗಳಲ್ಲಿಯೇ ೫+೫ರ ಸ್ಥಾನದಲ್ಲಿ ೪+೩+೩ ಬಂದಿರುವುದು ಒಮ್ಮೊಮ್ಮೆ ಗೋಚರಿಸುತ್ತದೆಂಬುದನ್ನು ಇಲ್ಲಿ ನೆನೆಯಬೇಕು. ಉದಾಹರಣೆಗೆ–

(೫೭) ಹರಹರ ⁝ ಮಱೆದ ⁝ ನಲ್ಲಿ। ಸುಗತಿಯಂ ಮುರುಜಮಂ
ಹರಹರ ⁝ ಮಱೆದನಲ್ಲಿ। ಶಿವನುಮಂ ತನ್ನುಮಂ.

(ಹರಿಹರ: ಪ್ರಭುದೇವರ ರಗಳೆ)

(೫೮) ಪೇಳಲೇನಹುದಿನ್ನು ಬಭ್ರುವಾಹನನೊಡನೆ
ಕಾಳೆಗಂಗೊಡುವೆನಾಂ ಕುಲಕೆ ಮಗನೀನೊರ್ವ
ಬಾಳುವೆ ⁝ ಗೆ ಱಸ ಬೇಡ। ಗಜಪುರಕೆ ಪೋಗಿ ಮುರಹರ ಧರ್ಮನಂದನರ್ಗೆ।

(ಲಕ್ಷ್ಮೀಶ: ಜೈಮಿನಿಭಾರತ)

ಮೇಲೆ (೫೧) ನೆಯ ಉದಾಹರಣೆಯಲ್ಲೂ
ಕ್ರಾಂತಿಕಾಳಿ ಕಠಾರಿ। ಯಂ ನ ⁝ ನ್ನೆದೆಗೆ ⁝ ಕುರಿತು
ಎಂದು ಗಣಪರಿವೃತ್ತಿಯನ್ನು ಗುರುತಿಸಬೇಕೇನೋ.)

# ೪೧. ಭ್ರಾಜಿಷ್ಣು: ಆರಾಧನಾ ಕರ್ಣಾಟ ಟೀಕಾ

● ಹಂಪ. ನಾಗರಾಜಯ್ಯ

ಭ್ರಾಜಿಷ್ಣುವನ್ನಾಗಲಿ, ಅವನ ಆರಾಧನಾ ಕರ್ಣಾಟ ಟೀಕೆಯನ್ನಾಗಲಿ, ಸಂಸ್ಕೃತದ ರಾಮಚಂದ್ರ ಮುಮುಕ್ಷು ಹೊರತಾಗಿ ಕನ್ನಡದ ಯಾವ ಲೇಖಕನೂ ಹೆಸರಿಸಿಲ್ಲ. ಇಷ್ಟು ಒಳ್ಳೆಯ ಕೃತಿಯನ್ನು ಅದೇಕೆ ಅನಂತರದ ಬರೆಹಗಾರರಾರೂ ಹೆಸರಿಸಿಲ್ಲವೆಂದು ಕೇಳಿದರೆ ಸರಿಯಾದ ಉತ್ತರಗಳಿಲ್ಲ. ಆರಾಧನಾ ಕರ್ಣಾಟ ಟೀಕಾದಿಂದ (=ಆಕಟೀ) ಸಾಲುಗಳನ್ನು ಅನಾಮತ್ತಾಗಿ, ಹಸಿಹಸಿಯಾಗಿ ಬಳಸಿರುವ ದೇವಚಂದ್ರನು ಕೂಡಾ ಭ್ರಾಜಿಷ್ಣುವನ್ನು ಹೆಸರಿಸಿಲ್ಲ.

ಭ್ರಾಜಿಷ್ಣುವನ್ನು ಅವನ ತರುವಾಯದವರು ಹೆಸರಿಸದಿದ್ದರೂ ಅವನ ಕೃತಿ ಒಂದು ಚಿರಂಜೀವಿ ಕೃತಿಯಾಗಿ ಉಳಿದಿದೆ. ಹಿಂಡನಗಲಿದ ಒಂಟಿ ಸಲಗನಂತೆ, ಭ್ರಾಜಿಷ್ಣು ತಾನೇ ತಾನಾಗಿ ಎಲ್ಲರ ನಡುವೆ ಎದ್ದು ಕಾಣುತ್ತಾನೆ. ಜಿನಮುನಿಗಳನ್ನು ಪರಿಚಯಿಸುವಾಗ, ಉಪಸರ್ಗ-ಪರೀಷಹಗಳನ್ನು ಸಹಿಸಿಕೊಳ್ಳುವಿಕೆಯನ್ನು ವರ್ಣಿಸುವಾಗ ತೋರುವ ತನ್ಮಯತೆಯಿಂದ ಆತನ ಒಲವು ಯಾವ ಕಡೆಗೆ ಎಂಬುದು ಕಂಡುಬರುತ್ತದೆ. ತಾತ್ವಿಕ ವಿವರಗಳನ್ನು ಕೊಡುವಾಗ ಯಾವ ಅಡೆತಡೆಯೂ ಇರದ ಸಲೀಸು ನಡಿಗೆಯೂ, ಕರತಲಾಮಲಕವಾಗಿದ್ದ ಧಾರ್ಮಿಕ ಗ್ರಂಥಗಳ ಮೇಲಿನ ಪ್ರಭುತ್ವವೂ ಈ ಪ್ರವೃತ್ತಿಯ ಫಲ. ಆಕಟೀ. ಗ್ರಂಥವು ಆರಾಧನಾದ ಕನ್ನಡ ವ್ಯಾಖ್ಯಾನವಾದರೂ ಕನ್ನಡ ಅವತರಣಿಕೆಯಲ್ಲ. ಅಜ್ಞಾತವಾಗಿಯೇ ಉಳಿದಿರುವ ಪ್ರಾಕೃತ ವ್ಯಾಖ್ಯಾನ ಗ್ರಂಥವೊಂದರ ಮಾದರಿಯನ್ನು ಅನುಸರಿಸಿರುವುದು ಒಂದು ವೇಳೆ ನಿಜವಾಗಿದ್ದ ಪಕ್ಷದಲ್ಲಿ, ಭ್ರಾಜಿಷ್ಣುವಿನದು ಮಕ್ಕಿಕಾ ಮಕ್ಕಿ ಅನುವಾದದಲ್ಲ. ಅಕಟೀದಲ್ಲಿರುವುದು ಸ್ವತಂತ್ರಕೃತಿಯ ತೇಜಸ್ಸು.

ಭ್ರಾಜಿಷ್ಣು ರಚಿಸಿರುವ ಆರಾಧನಾ ಕರ್ಣಾಟ ಟೀಕಾ ಗ್ರಂಥವು ದೀರ್ಘವಾದ ಆರಾಧನಾ ಕಥಾ ಪರಂಪರೆಗೆ ಸೇರಿದ ದೊಡ್ಡ ಪ್ರಮಾಣದ ಬೃಹದ್ಗ್ರಂಥ. ಅದು ಈಗ ನಮಗೆ ದೊರೆತಿರುವಂತೆ (=ವಡ್ಡಾರಾಧನೆ) ೧೯ ಕಥೆಗಳ ಪರಿಮಿತಿಯಲ್ಲ. ಈಗ ಲಭ್ಯವಿರುವುದರ ಹಿಂದೂ ಮುಂದೂ ಇದ್ದ ಬಹುಭಾಗ ನಷ್ಟವಾಗಿದೆ. ತಲೆ ಬಾಲ ಎರಡೂ ಇಲ್ಲದ ಭವ್ಯ ಬೃಹದ್ದೇಹದ ಒಂದು ಭಾಗವಷ್ಟೇ ಉಳಿದು ಬಂದಿರುವ ಆಕಟೀದ ಒಟ್ಟು ಗಾತ್ರದ ಪರಿಭಾವನೆಗೆ ಕೆಲವು ಪೂರಕ ಆಧಾರಗಳು ಸಿಗುತ್ತವೆ. ವಡ್ಡಾರಾಧನೆಯ ಕವಚವೆಂಬ ಅಧಿಕಾರ ಮಾತ್ರ ಬೇರ್ಪಟ್ಟು-ಪ್ರತ್ಯೇಕಗೊಂಡುದೇಕೆ, ಅದರ ಹಿಂದಣ ಮುಂದಣ ಅಧಿಕಾರಗಳ ಗಾತ್ರ- ಸ್ವರೂಪಗಳೇನು ಎಂಬುದು ಚಿಂತನೀಯ. ಆಕಟೀಕೆಯು ಯಾವ ಸ್ವರೂಪದಲ್ಲಿ ಕನ್ನಡದಲ್ಲಿ ಮೈತಾಳಿರಬಹುದೆಂಬ ಊಹೆಯನ್ನು ಬಲಗೊಳಿಸಲು ಅನ್ಯಾನ್ಯ ಆಧಾರಗಳನ್ನು ಅವಲಂಬಿಸಬೇಕು. ಅವುಗಳಲ್ಲಿ ೧೭೦ ಕಥೆಗಳಿರುವ ಶ್ರೀಚಂದ್ರನ ಕಥಾಕೋಶ ಅಗ್ರಗಣ್ಯವಾಗಿ ನಿಲ್ಲುತ್ತದೆ. ವಿಸ್ತಾರವಾಗಿದ್ದ ಆಕಟೀ ಗ್ರಂಥದ ನಷ್ಟ ಭಾಗವನ್ನು ಶ್ರೀಚಂದ್ರನ ಅಪಭ್ರಂಶ ಪ್ರಾಕೃತ ಭಾಷೆಯ ಕಹ ಕೋಸು ಕಥಾಕೋಶವನ್ನು ಆಶ್ರಯಿಸಿ, ಇವೆರಡರ ತುಲನಾತ್ಮಕ ಅಧ್ಯಯನದಿಂದ ಐದಂಶದ ಸಮಾನತೆಯನ್ನು ಡಾ|| ಎಂ.ಎಂ. ಕಲಬುರ್ಗಿ (೧೯೭೩.) ಸೂಚಿಸಿದ್ದಾರೆ:

೧. ಪ್ರತಿಯೊಂದು ಕಥೆಯ ತಲೆಯ ಮೇಲೆ ಇರುವ ಸಮಾನ ಗಾಹೆ.

೨. ವಡ್ಡಾರಾಧನೆಯಲ್ಲಿ ಗಾಹೆಗಳಿಗೆ ಇರುವುದು ಕನ್ನಡ ಟೀಕೆ-ವಿವರಣೆ; ಶ್ರೀಚಂದ್ರನಲ್ಲಿರುವುದು ಸಂಸ್ಕೃತ ಟೀಕೆ.

೩. ಕನ್ನಡ ಕಥೆಗಳ ಒಡಲಲ್ಲಿ ಸಂಸ್ಕೃತ-ಪ್ರಾಕೃತ-ಕನ್ನಡ ಪದ್ಯಗಳ ಉದ್ಧರಣೆಗಳಿದ್ದರೆ ಶ್ರೀಚಂದ್ರನಲ್ಲಿ ಸಂಸ್ಕೃತ ಪ್ರಾಕೃತ ಉದ್ದರಣೆಗಳಿವೆ.

೪. ಕನ್ನಡ ಕೃತಿಯ ಕಡೆಯಲ್ಲಿ 'ಕವಚವೆಂಬಧಿಕಾರ'ವಿದ್ದರೆ, ಶ್ರೀಚಂದ್ರನಲ್ಲಿ 'ಕವಚಾಹಿಯಾರೋಯಂ' ಎಂದಿದೆ.

೫. ಮೂಲ ಆರಾಧನಾ ಗ್ರಂಥದಲ್ಲಿನ ಕವಚಾಧಿಕಾರದ ೧೬೩೩, ೧೬೪೩, ೧೬೪೯, ೧೬೫೦ ಸಂಖ್ಯೆಯ ಗಾಹೆಗಳಿಗೆ ಹರಿಷೇಣನು ಸಂಸ್ಕೃತ ಬೃಹತ್ಕಥಾಕೋಶದಲ್ಲಿ ಶ್ರೀಪಾಲ, ನಾಮವಾದಿ, ಶಾಲಿಸಿಕ್ಥ, ಸುಭೌಮ (ಸುಭೂಮ) ಚಕ್ರವರ್ತಿಗಳ ಕಥೆಗಳನ್ನು ಹೇಳಿದ್ದಾನೆ. ಆದರೆ ಕನ್ನಡ ಲೇಖಕನೂ ಶ್ರೀ ಚಂದ್ರನೂ ೧೫೫೭ನೆಯ ಗಾಹೆಗೆ ವೃಷಭಸೇನಮುನಿ (ರಿಸಿಯರ) ಕಥೆ ಬರೆದಿದ್ದಾರೆ.

ಈ ಬಗೆಯ ಹೋಲಿಕೆ ಮತ್ತು ಸೂಚನೆಗಳ ಸುಳಿವು ಕೊಟ್ಟ, ಆದ್ಯ ವಕ್ತಾರರು ಡಾ॥ ಆ.ನೇ ಉಪಾಧ್ಯೆ. ಇದರೊಂದಿಗೆ ಅಕಟೀಕಾದ ಲುಪ್ತ ಭಾಗಗಳನ್ನೂ ಲಭ್ಯ ಭಾಗದೊಂದಿಗೆ ಕೂಡಿಸುವ ಕೊಂಡಿಯಾಗಿ ೧೫೭ ಕಥೆಗಳಿರುವ ಹರಿಷೇಣನ ಬೃಹತ್ಕಥಾಕೋಶವನ್ನೂ ಕೂಡಿಸಿಯೇ ತೌಲನಿಕ ಅಧ್ಯಯನವನ್ನು ಕೈಗೊಳ್ಳಬೇಕು. ೧೨೨ ಕಥೆಗಳಿರುವ ಪ್ರಭಾಚಂದ್ರನ ಕಥಾಕೋಶ ಹಾಗೂ ೧೪೪ ಕಥೆಗಳಿರುವ ನೇಮಿದತ್ತನ ಕಥಾಕೋಶಗಳು, ಹರಿಷೇಣ-ಶ್ರೀಚಂದ್ರರ ಕಥಾಕೋಶಗಳ ವ್ಯಾಪ್ತಿ ವೈಭವ ಪಡೆದಿಲ್ಲದಿದ್ದರೂ ಸವಿವರವಾದ ಪರಸ್ಪರ ಹೋಲಿಕೆಗೆ ನೆರವಾಗುತ್ತವೆ. ಅಲ್ಲದೆ ಹರಿಷೇಣ ಶ್ರೀಚಂದ್ರ ಪ್ರಭಾಚಂದ್ರ ನೇಮಿದತ್ತ ನಯನಂದಿ ಸಿಂಹಣಂದಿ ಛತ್ರಸೇನ ಬ್ರಹ್ಮದೇವ ರತ್ನಕೀರ್ತಿ ರಾಮಚಂದ್ರಮುನಿ ನಾಗರಾಜ ಭ್ರಾಜಿಷ್ಣು – ಮೊದಲಾದವರೆಲ್ಲ ಆರಾಧನಾ ಗ್ರಂಥಕ್ಕೆ ಕಥಾರೂಪವನ್ನು ತೊಡಿಸಿದ ಬಿಚ್ಚಳಿಸಿದ ಟೀಕಾಕಾರರು. ಆರಾಧನಾ ಕರ್ಣಾಟ ಟೀಕಾವೂ ಇದೇ ಪಾಳಿಯಲ್ಲಿ ನಿಲ್ಲುವ ಉದ್ಧ ಕೃತಿ.

ಈಗ ಇದರಲ್ಲಿ ಲಭ್ಯವಾಗಿರುವುದು ೧೯ ಕಥೆಗಳು. ಇನ್ನುಳಿದಿರುವ ಸುಮಾರು ೧೫೦ ಕಥೆಗಳಷ್ಟು ಪ್ರಮಾಣದ ಗ್ರಂಥ ನಮಗೆ ಅಲಭ್ಯವಾಗಿದೆ. ಅಂದರೆ ಇನ್ನೂ ಈಗಿರುವುದರ ಏಳರಷ್ಟು ಗಾತ್ರದ ಕೃತಿಭಾಗ ಕಳೆದುಹೋಗಿದೆ. ಗ್ರಂಥದ ಗಾತ್ರ ಮಾತ್ರವಲ್ಲದೆ ಅದರ ಗುಣಾಂಶದ ಲಾಭ ಕನ್ನಡ ಸಾಹಿತ್ಯಕ್ಕೆ ಇಲ್ಲವಾದದ್ದು ದೊಡ್ಡ ಕೊರತೆಯೆನಿಸಿದೆ. ಭ್ರಾಜಿಷ್ಣುವು ಈಗ ದೊರೆತು ಪ್ರಸಾರದಲ್ಲಿರುವ ೧೯ ಕಥೆಗಳಷ್ಟೇ ಬರೆದಿದ್ದನೆ ಎಂಬ ಸಂದೇಹಕ್ಕೆ ಅವಕಾಶವಿಲ್ಲದಂತೆ ಸಂಶಯಗಳನ್ನು ಛಿದ್ರಗೊಳಿಸಿದ ಶ್ರೇಯಸ್ಸು ರಾಮಚಂದ್ರ ಮುಮುಕ್ಷುವಿಗೆ ಸಲ್ಲುತ್ತದೆ. ಒಂದು ವೇಳೆ ಪುಣ್ಯಾಸ್ರವ ಕಥಾಕೋಶ ಅನುಪಲಬ್ಧವಾಗಿದ್ದರೆ, ಅಥವಾ ಅದು ಉಪಲಬ್ಧವಾಗಿಯೂ ರಾಮಚಂದ್ರ ಮುಮುಕ್ಷುವು ತಾನು ಈ ಆರಾಧನಾ ಕರ್ಣಾಟ ಟೀಕಾ ಗ್ರಂಥದ ಆಧಾರದಿಂದ ಶ್ರೇಣಿಕನ ಕಥೆಯನ್ನು ಹೇಳುತ್ತಿರುವುದಾಗಿ ನಮೂದಿಸದೆ ಹೋಗಿದ್ದರೆ ಆಗ ಭ್ರಾಜಿಷ್ಣುವು ಅನಾಮಧೇಯನಾಗಿ ಇನ್ನೂ ಬಹುಕಾಲ ಅಜ್ಞಾತವಾಸವನ್ನು ಅನುಭವಿಸಬೇಕಾಗುತ್ತಿತ್ತು. ಅಹಿಂಸಾಪಾಲಕನಾದ ರಾಮಚಂದ್ರಮುನಿ

ಭ್ರಾಜಿಷ್ಣುವಿಗೆ ಒದಗಬಹುದಾದ ಆ ಬಗೆಯ ಹಿಂಸೆಯನ್ನು ತಪ್ಪಿಸಿದ್ದಾನೆ. ಇಷ್ಟಾಗಿಯೂ ಭ್ರಾಜಿಷ್ಣುವಿನ ಅಸ್ತಿತ್ವವನ್ನು ಒಪ್ಪಿಕೊಳ್ಳಲು ಆ.ನೇ. ಉಪಾಧ್ಯೆ ಹಿಂಜರಿದರು. ವಡ್ಡಾರಾಧನೆ ಸಂಪಾದಕರು, ಅರಸುವ ಬಳ್ಳಿ ಕಾಲಿಗೆ ತೊಡರಿ ಭುಜವಲ್ಲರಿಯಾಗಿ ಆಡರಿ ಕುಳಿತಿದ್ದರೂ ಬಿಡಿಸಿ ಕೊಡವಿದ್ದು ವಿದ್ವತ್‌ಪ್ರಪಂಚದ ಅಚ್ಚರಿಗಳ ಸಾಲಿಗೆ ಸೇರಿಹೋಗಿದೆ.

ಡಿ.ಎಲ್. ನರಸಿಂಹಾಚಾರ್ಯರಲ್ಲಿ, ಭ್ರಾಜಿಷ್ಣುವಿನ-ಕರ್ತೃತ್ವದ ವಿಚಾರವಾಗಿ ಗೊಂದಲವಿದೆ. ಅವರಲ್ಲಿ ದ್ವಂದ್ವವಿರುವುದು ಕೆಲವು ಕಡೆ ಒಡೆದು ಕೇಳುತ್ತದೆ: ಸಂಸ್ಕೃತದಲ್ಲಿರುವ ರಾಮಚಂದ್ರ ಮುಮುಕ್ಷುವಿನ ಪುಣ್ಯಾಸ್ರವ ಕಥಾಕೋಶದ ಬಗ್ಗೆ ಬರೆಯುತ್ತಾ, ಅದರಲ್ಲಿನ ಶ್ರೇಣಿಕ ರಾಜನ ಹಾಗೂ ಭದ್ರಬಾಹು ಮುನಿಯ– "ಕಥೆಗಳಿಗೆ ಕನ್ನಡದ ವಡ್ಡಾರಾಧನೆ ಆಕರವೆಂದು ತೋರುತ್ತದೆ"– ಎಂದು ಒಂದು ಕಡೆ ಸ್ಪಷ್ಟವಾಗಿ ಹೇಳಿದ್ದಾರೆ. (ಶಾಂತಿನಾಥ ಕವಿಯ ಸುಕುಮಾರ ಚರಿತ್ರಂ, ಪೀಠಿಕೆ, ಪುಟ ೨೯, (೧೯೫೪)). ಇನ್ನೊಂದು ಕಡೆ "ಪುಣ್ಯಾಸ್ರವ ಕಥಾಕೋಶವೆಂಬ ಗ್ರಂಥವನ್ನು ಸಂಸ್ಕೃತದಲ್ಲಿ ಬರೆದಿರುವ ರಾಮಚಂದ್ರ ಮುಮುಕ್ಷು, ಆ ಗ್ರಂಥದ ಶ್ರೇಣಿಕನ ಕಥೆಯ ಅಂತ್ಯದಲ್ಲಿ 'ಭ್ರಾಜಿಷ್ಣ್ವಾರಾಧನಾ ಶಾಸ್ತ್ರೇ ಕರ್ಣಾಟ ಟೀಕಾ ಕಥಿತ ಕ್ರಮೇಣೋಲ್ಲೇಖ ಮಾತ್ರಂ ಕಥಿತೇಯಂ ಕಥಾ' ಎಂದು ಹೇಳಿದ್ದಾನೆ. ಈ ಕರ್ನಾಟ ಟೀಕಾ ಪ್ರಕೃತ ಕನ್ನಡ ಗ್ರಂಥವೇ; ಏಕೆಂದರೆ ಇಂಥ ಗ್ರಂಥ ಕನ್ನಡದಲ್ಲಿ ಬೇರೊಂದಿಲ್ಲ. ಆದ್ದರಿಂದ ಈ ಗ್ರಂಥವನ್ನು 'ಆರಾಧನಾ ಶಾಸ್ತ್ರ ಕರ್ನಾಟ ಟೀಕಾ' ಎಂದು ಬೇಕಾದರೂ ಕರೆಯಬಹುದು. ಈ ವಿಷಯ ಹಾಗಿರಲಿ...." ಎಂದೂ ಅಸಂದಿಗ್ಧವಾಗಿ ಬರೆದಿದ್ದಾರೆ (ವಡ್ಡಾರಾಧನೆ, ಪೀಠಿಕೆ, xiv ೧೯೭೦).

ಹೀಗಿದ್ದೂ ಸತ್ಯವಾಕ್ಯಪೆರ್ಮಾನಡಿ ಆಚಾರ್ಯರು ಕೈಹಿಡಿದಿದ್ದ ಆರಾಧನಾ ಕರ್ಣಾಟ ಟೀಕಾಕಾರನಾದ ಭ್ರಾಜಿಷ್ಣುವನ್ನು ಮರೆತು, ನಡುನೀರಿನಲ್ಲಿ ಕೈಬಿಟ್ಟು, ಶೌರಸೇನಿ ಪ್ರಾಕೃತ ಆರಾಧನಾಕಾರನಾದ ಶಿವಕೋಟ್ಯಾಚಾರ್ಯನ ಬೆನ್ನುಹತ್ತಿದರು; ತುಪ್ಪಕ್ಕೆಂದು ಅರಸುತ್ತಿದ್ದ ಬೆಣ್ಣೆಯನ್ನು ತಮ್ಮ ಅಂಗೈ ಮೇಲಿಟ್ಟುಕೊಂಡಿದ್ದರೂ ಊರೆಲ್ಲ ಹುಡುಕಲು ಹೊರಟು ಹೊಲಬು ತಪ್ಪಿದರು. ಭ್ರಾಜಿಷ್ಣುವು ಕನ್ನಡ ಸಂಸ್ಕೃತ ಪ್ರಾಕೃತಗಳಲ್ಲಿ ಘನ ಪಂಡಿತನೆಂಬುದಕ್ಕೆ ಅಕಟೀ ಗ್ರಂಥದುದ್ದಕ್ಕೂ ಸಾದ್ಯಂತವಾಗಿ ಪುರಾವೆಗಳಿವೆ. ವಡ್ಡಾರಾಧನೆ ಎಂಬ ಹೆಸರನ್ನು ಈಗ ನಮಗೆ ಸಿಕ್ಕಿರುವ ೧೯ ಕಥೆಗಳ ಕವಚಾಧಿಕಾರವನ್ನು ಮೂಲದಿಂದ ಕತ್ತರಿಸಿ ತೆಗೆದು ಅದಕ್ಕೆ ಕಸಿಮಾಡುತ್ತ ಬಂದ ಅನಂತರದ ಸಂಪಾದನೆಕಾರರು ಕೊಟ್ಟ ಹೆಸರೊ, ಅಥವಾ ಮೂಲ ಭ್ರಾಜಿಷ್ಣುವೇ ಇಟ್ಟ ಹೆಸರೊ-ಸರಿಯಾಗಿ ತಿಳಿಯದು. ತಾತ್ಕಾಲಿಕ ಗ್ರಹಿಕೆಯಾಗಿ ಇದು ಆಕಟೀದ ಭ್ರಾಜಿಷ್ಣುವೇ ಮಾಡಿದ ನಾಮಕರಣವೆಂದು ಸ್ವೀಕರಿಸುವುದಕ್ಕೆ ಬಾಧಕವಿಲ್ಲ. 'ಭಗವತೀ ಆರಾಧನಾ', 'ಬೃಹದಾರಾಧನಾ' ಎಂಬ ಸಂಸ್ಕೃತ ಶಬ್ದಾರ್ಥರೂಪಕ್ಕೆ ಎಲ್ಲ ವಿಧದಲ್ಲೂ ಸಂವಾದಿಯಾಗಿರುವ ಸಮಾನಾರ್ಥಕ ಆಕೃತಿ 'ವಡ್ಡಾರಾಧನಾ' ಎಂಬುದು. ಇದುವರೆಗೆ (ನಾನೂ ಸೇರಿ ವಡ್ಡಾರಾಧನೆ ಮೈ.ವಿ.ವಿ. ಪ್ರಚಾರೋಪನ್ಯಾಸ ಮಾಲೆ ೧೯೬೮) ಹಲವರು ಹೇಳಿದ್ದ ಹೇಳುತ್ತ ಬಂದಿರುವ–ವರ್ಧಮಾನ, ವೃಧ್‌ರಾಧನೆ, ರೂಪ ಸಿದ್ಧಿಸಿದೆ–ಎಂಬ ವಿವರಣೆಯನ್ನು ಕೈ ಬಿಡುವುದು ಮೇಲು.

'ವಡ್ಡಾರಾಧನೆ' ಎಂಬ ಶಬ್ದರೂಪ ನಿಷ್ಪತ್ತಿ ಕೊಂಚ ಕ್ಲೇಶದಾಯಕವೆಂಬುದು ನಿಜ; ಪ್ರಾಕೃತ ವಿದ್ವಾಂಸರು ಅದನ್ನು ದೇಶೀಶಬ್ದಗಳಲ್ಲಿಟ್ಟಿದ್ದಾರೆ. ಅಂತೂ ಸಂಸ್ಕೃತದ ಬೃಹತ್ಕಥಾ ಎಂಬುದು ಅನಾಮತ್ತಾಗಿ ಪ್ರಾಕೃತೀಕರಣಗೊಂಡು ವಡ್ಡ ಕಥಾ ಎಂದಾಗಿರುವುದು ಹೆಚ್ಚು

ಸಂಭಾವ್ಯ. ಅಚ್ಚಗನ್ನಡ ಅರಸರಾದ ಗಂಗರ ರಾಜನಾದ ದುರ್ವಿನೀತನು ಗುಣಾಢ್ಯನ ಬೃಹತ್ಕಥೆಯನ್ನು ಪೈಶಾಚೀ ಪ್ರಾಕೃತದಿಂದ ಸಂಸ್ಕೃತಕ್ಕೆ ವಡ್ಡ ಕಥೆ (ದೇವ ಭಾರತೀ ನಿಬದ್ಧ ವಡ್ಡಕಥೇನ) ಎಂಬ ಹೆಸರಿನಿಂದ ಪರಿವರ್ತಿಸಿದ್ದನು (Uttanur plates: M.A.R., 1916-1917, 65-66); ಈ ಆಧಾರವು ಕೂಡ 'ವಡ್ಡಾರಾಧನೆಯ ಆದಿಭಾಗವಾದ 'ವಡ್ಡ'ವು ದೊಡ್ಡ ಎಂಬರ್ಥಕ್ಕೆ ಚೊಟ್ಟು ಮಾಡುತ್ತದೆಂಬುದಕ್ಕೆ ಒದೆಗಲ್ಲಾಗಿ ನಿಲ್ಲುತ್ತದೆ. ಪ್ರಾಕೃತ ಕೃತಿಯಾದ ಕುವಲಯಮಾಲಾದಲ್ಲಿ, ಅದರ ಕರ್ತೃವಾದ ಉದ್ಯೋತನಸೂರಿಯು (ಕ್ರಿ.ಶ. ೭೭೯) ಗುಣಾಢ್ಯನ ಬೃಹತ್ಕಥಾವನ್ನು ವಡ್ಡ ಕಹಾ ಎಂದು ಹೆಸರಿಸಿದ್ದಾನೆ.

ಆಕಟೀಕಾರನು ತನ್ನ ಕನ್ನಡ ಟೀಕೆಗೆ ಮೂಲವಾಗಿ ಶಿವಕೋಟಮುನಿಯ ಆರಾಧನಾ ಗ್ರಂಥವನ್ನಷ್ಟೇ ಅವಲಂಬಿಸಿಲ್ಲ. ಭ್ರಾಜಿಷ್ಣುವಿನ ಪ್ರಾಕೃತ ಪಾಂಡಿತ್ಯದ ವಿಸ್ತಾರವನ್ನೂ (ಅಂತರ) ಬಾಹ್ಯಪ್ರಮಾಣಾಧಾರಗಳನ್ನೂ ನೋಡಿದರೆ ಈತನಿಗೆ ಪ್ರಾಕೃತ ವ್ಯಾಖ್ಯಾನವೊಂದು ಕಣ್ಣೆದುರು ಇರುವಂತೆ ತೋರುತ್ತದೆ. ಸಂಸ್ಕೃತ ಪ್ರಾಕೃತಗಳೆರಡರಲ್ಲೂ ಉಭಯ ಭಾಷಾ ಪ್ರಾವೀಣ್ಯವಿದ್ದರೂ ಆಕಟೀದ ಆರಂಭದಿಂದ ಕಡೆಯ ತನಕ ತಲಸ್ಪರ್ಶಿಯಾದ ಪ್ರಾಕೃತ ವಿದ್ವತ್ ಜಿನುಗುತ್ತದೆ. ಜೈನಶೌರಸೇನೀ ಪ್ರಾಕೃತದಲ್ಲಿ ಇರುವ ಆರಾಧನಾದ ಪ್ರಭುತ್ವವೇ ಅಲ್ಲದೆ ಅರ್ಧಮಾಗಧೀ, ಅಪಭ್ರಂಶ ಪ್ರಾಕೃತ ಪ್ರಭಾವವೂ ಆಕಟೀದಲ್ಲಿದೆ. ಆಕಟೀಕಾರನಾದ ಭ್ರಾಜಿಷ್ಣುವೂ, ಕಹಕೋಸು ಕಥಾಕೋಶಕಾರನಾದ ಶ್ರೀಚಂದ್ರನೂ ಹಲವು ವಿಷಯಗಳಲ್ಲಿ ಸಾಮ್ಯರಾಗಿರುವುದರಿಂದ ಇವರಿಬ್ಬರೂ ಒಂದು ಮೂಲದ, ಒಂದು ಸಂಪ್ರದಾಯದ ಆರಾಧನಾ ಟೀಕಾವನ್ನು ಅವಲಂಬಿಸಿರುವ ಸಾಧ್ಯತೆಯಿದೆ. ಏಕೆಂದರೆ ಹರಿಷೇಣಾದಿ ಸಂಸ್ಕೃತ ಕಥಾಕೋಶಕಾರರು ಅನುಸರಿಸಿರುವುದು ಈ ಕನ್ನಡ-ಪ್ರಾಕೃತ ಟೀಕಾಕಾರರಿಂದ ಬೇರೆಯಾದ ಪರಂಪರೆಗೆ ಸೇರಿದ ವ್ಯಾಖ್ಯಾನ ಪಾಠವಾಗಿದೆ. ಅಲ್ಲದೆ ಇಲ್ಲಿಯೇ ಹೇಳಬೇಕಾದ ಇನ್ನೊಂದು ಹೇಳಿಕೆಯೂ ಇದೆ; ಆಕಟೀಕಾರನಾದ ಭ್ರಾಜಿಷ್ಣುವು ಶ್ರೀಚಂದ್ರ, ಹರಿಷೇಣ, ರಾಮಚಂದ್ರ ಮುಮುಕ್ಷು, ಆಶಾಧರಸೂರಿ–ಮೊದಲಾದವರಿಗಿಂತ ಪ್ರಾಚೀನನು, ಅಷ್ಟೇಕೆ, ಇದುವರೆಗೆ ತಿಳಿದು ಬಂದಿರುವ ಆರಾಧನಾ ಟೀಕಾಕಾರರಲ್ಲಿ ಅಪರಾಜಿತಸೂರಿ ಮತ್ತು ಭ್ರಾಜಿಷ್ಣುವೇ ಪ್ರಾಚೀನರು. ಅಪರಾಜಿತಸೂರಿಯ ವಿಜಯೋದಯಾ ವ್ಯಾಖ್ಯಾನವೂ, ಆಕಟೀ.ವೂ ಪರಸ್ಪರ ಯಾವ ನೆಲೆಯಲ್ಲಿ ಪ್ರಭಾವ ತೋರುತ್ತವೆ, ಭಿನ್ನವಾಗಿ ನಿಲ್ಲುತ್ತವೆ, ಯಾವುದು ಪ್ರಾಚೀನ ಎಂಬ ಅಧ್ಯಯನ ಇನ್ನೂ ಆಗಿಲ್ಲ; ಇದು ಇನ್ನೂ ಸಂಶೋಧನೆಗೆ ಮುಕ್ತವಾಗಿ ತೆರೆದ ವಿಷಯ.

## ಭ್ರಾಜಿಷ್ಣುವಿನ ಇತಿವೃತ್ತ

ಭ್ರಾಜಿಷ್ಣು ಯಾರು? ಈತ ಎಲ್ಲಿಯವನು, ಯಾವ ಕಾಲದವನು, ಈತನ ಇತಿವೃತ್ತವೇನು–ಇವಿಷ್ಟೂ ಅಯೋಮಯವಾಗಿದೆ. ಈ ಹೆಸರಿನ ವ್ಯಕ್ತಿಯೊಬ್ಬ ಇರುವನೇ ಎಂಬ ಶಂಕೆ ವ್ಯಕ್ತಪಟ್ಟಿದ್ದೂ ಉಂಟು. ಜೈನರ ಆದಿತೀರ್ಥಂಕರನಾದ ವೃಷಭನಾಥ (ಆದಿದೇವ/ಪುರುದೇವ/ಋಷಭದೇವ)ನಿಗೆ ಇರುವ ನೂರಾರು ಹೆಸರುಗಳಲ್ಲಿ ಭ್ರಾಜಿಷ್ಣು ಎಂಬುದೂ ಒಂದು ಎಂಬುದು ಮೊದಲು ನೆನಪಿಡಬೇಕಾದ ವಿಷಯ. ಎರಡನೆಯದಾಗಿ ಭ್ರಾಜಿಷ್ಣುವನ್ನು, ಅದರಲ್ಲಿಯೂ ಆತನ ಈ ಕೃತಿಯ ಹೆಸರಿನೊಂದಿಗೆ ಪ್ರಸ್ತಾಪಿಸಿರುವ ಅನ್ಯಾನ್ಯ ಉಲ್ಲೇಖಗಳೂ

ಇವೆ. ಈ ಒಳ-ಹೊರಗಿನ ಸಮರ್ಥನೆ ಮಾಡುವ ಪ್ರಮಾಣಗಳ ತಳಹದಿಯಿಂದ ನಾವು ಭ್ರಾಜಿಷ್ಣುವಿನ ಅಸ್ತಿತ್ವವನ್ನು ಪ್ರಶ್ನಿಸುವ ಸಂಶಯಕ್ಕೆ ಪೂರ್ಣವಿರಾಮವಿಡಬೇಕು.

ಭ್ರಾಜಿಷ್ಣುವನ್ನು ಮೊಟ್ಟಮೊದಲನೆಯ ಬಾರಿಗೆ ನಮ್ಮ ಕಣ್ಣ ಮುಂದೆ ತಂದು ನಿಲ್ಲಿಸಿದ್ದು ರಾಮಚಂದ್ರಮುನಿ. ಸಂಸ್ಕೃತದಲ್ಲಿರುವ ಪ್ರಸಿದ್ಧ ಕಥಾಕೋಶಗಳಲ್ಲಿ ರಾಮಚಂದ್ರ ಮುಮುಕ್ಷುವಿನ ಪುಣ್ಯಾಸ್ರವ ಕಥಾಕೋಶವೂ ಒಂದು. ಕೊಂಡಕುಂದಾನ್ವಯದ ಕೇಶವನಂದಿದೇವ ಎಂಬ ಜೈನಯತಿಪತಿಯ ಶಿಷ್ಯನಾದ ರಾಮಚಂದ್ರಯತಿಯ (ರಾಮಚಂದ್ರಮುನಿ/ರಾಮಚಂದ್ರ ಮುಮುಕ್ಷು) ಕಾಲ ವಿಚಾರದಲ್ಲಿ ಸಹಮತವಿಲ್ಲ. ಈತನು ರಚಿಸಿರುವ ಪುಣ್ಯಾಸ್ರವ ಕಥಾಕೋಶವನ್ನೂ ಆಧರಿಸಿ ಕನ್ನಡ ಕವಿಯಾದ ನಾಗರಾಜನು ೧೩೩೧ರಲ್ಲಿ 'ಪುಣ್ಯಾಸ್ರವ ಚಂಪೂ' ಎಂಬ ಕಾವ್ಯವನ್ನು ರಚಿಸಿದ್ದಾನೆ. ಹನ್ನೊಂದನೆಯ ಶತಮಾನದವನಿರಬಹುದೆನ್ನಲಾದ ರಾಮಚಂದ್ರಮುನಿಯ ಈ ಕಥಾಕೋಶದಲ್ಲಿ ೫೭ ಕಥೆಗಳಿವೆ. ಭ್ರಾಜಿಷ್ಣು ಎಂದು ಕೃತಿಕಾರನ ಹೆಸರನ್ನೂ, ಆರಾಧನಾ ಕರ್ಣಾಟ ಟೀಕಾ ಎಂದು ಕೃತಿಯ ಹೆಸರನ್ನೂ ಈ ರಾಮಚಂದ್ರ ಮುಮುಕ್ಷುವು ತನ್ನ ಪುಣ್ಯಾಸ್ರವ ಕಥಾಕೋಶದಲ್ಲಿ, ಶ್ರೇಣಿಕರಾಜನ ಕಥಾ ಪ್ರಸಂಗ ಬಂದಾಗ ಈ ರೀತಿ ಪ್ರಸ್ತಾಪಿಸಿ ಉಪಕರಿಸಿದ್ದಾನೆ :

> ಭ್ರಾಜಿಷ್ಣೋರಾರಾಧನಾ ಕರ್ಣಾಟ ಟೀಕಾ ಕಥಿತ ಕ್ರಮೇಣೋಲ್ಲೇಖ
> ಮಾತ್ರಂ ಕಥಿತೇಯಂ ಕಥಾ ಇತಿ ॥

(ಭ್ರಾಜಿಷ್ಣುವು ಬರೆದಿರುವ ಆರಾಧನಾ ಕರ್ಣಾಟ ಟೀಕಾದಲ್ಲಿ ಹೇಳಲಾಗಿರುವ ರೀತಿಯಲ್ಲಿ ಮಾತ್ರವೇ ಕ್ರಮವಾಗಿ ಕಥಾನಿರೂಪಣೆ ಮಾಡುತ್ತೇನೆ.) ಇಲ್ಲಿ ಮೂರು ಸ್ವಾರಸ್ಯಕರ ಸಂಗತಿಗಳಿವೆ : (1) ರಾಮಚಂದ್ರಮುನಿಯ ಕಾಲಕ್ಕಾಗಲೆ ಆ ಕವಿಯ ಖ್ಯಾತಿ ಅಖಿಲ ಭಾರತ ಮನ್ನಣೆಗಳಿಸಿತ್ತು. (2) ಸಂಸ್ಕೃತ-ಪ್ರಾಕೃತಗಳಿಂದ ಕವಿಗಳು ಕನ್ನಡಕ್ಕೆ ಕೃತಿಗಳನ್ನು ಅಳವಡಿಸುವುದು ವಾಡಿಕೆ. ಸತ್ಸಂಪ್ರದಾಯ ; ಆದರೆ ಕನ್ನಡ ಟೀಕಾ ಗ್ರಂಥವನ್ನು ಆಧರಿಸಿ ಸಂಸ್ಕೃತ ಕಥಾಕೋಶಕಾರನು ತನ್ನ ಕೃತಿರಚನೆಗೆ ತೊಡಗಿದ್ದಾನೆ. ಇದರಿಂದ ಭ್ರಾಜಿಷ್ಣುವಿನ ಹಿರಿಮೆಯೊಂದಿಗೆ ಕನ್ನಡದ ಗರಿಮೆಯೂ ಪ್ರಕಾಶಿತವಾಗಿದೆ. (3) ಆಕಟೀ. ಗ್ರಂಥವು ಕಥಾಕೋಶರೂಪದ ಕೃತಿಯಾಗಿತ್ತು.

ಭ್ರಾಜಿಷ್ಣು ಟೀಕಾಕಾರನಾದರೂ ವಿದುಷ. ಆತನ ವೈದುಷ್ಯವನ್ನು ಆಕಟೀದ ಪ್ರತಿ ಪುಟವೂ ಸಾರುತ್ತದೆ. ಆತನ ಕಲ್ಮೆಯಲ್ಲಿ ಲೌಕಿಕ, ಧಾರ್ಮಿಕ, ಸಾಮಾಜಿಕ, ಭಾಷಿಕ, ಐತಿಹಾಸಿಕ ಅರಿವುಗಳೆಲ್ಲ ಮಿಳಿತವಾಗಿವೆ. ಸಂಪ್ರದಾಯ ತತ್ವಗಳಲ್ಲಿ, ಪರಂಪರೆಯಿಂದ ಹಲವು ತಲೆ ಮೊರೆಗಳ ಮೂಲಕ ಕಾಪಿಟ್ಟು ಬಂದ ಸಾಂಪ್ರದಾಯಿಕ ವ್ಯಾಖ್ಯಾನ ಮಾರ್ಗದಲ್ಲಿ ಹೆಜ್ಜೆ ಹಾಕಿದ್ದರೂ ಅಂಧಶ್ರದ್ಧೆಯಿಂದ ಮುಂದುವರಿದಿಲ್ಲ. ಬಹು ಸೂಕ್ಷ್ಮವಾದ ಜೈನಾಗಮೋಕ್ತ ದೇವತಾ ಶಾಸ್ತ್ರವನ್ನು, ತಾರ್ಕಿಕ ಪ್ರವೃತ್ತಿಯ ಆಧುನಿಕ ದೇವತಾ ಶಾಸ್ತ್ರಜ್ಞನಂತೆ ಭ್ರಾಜಿಷ್ಣು ಅನುಸಂಧಾನಿಸಿರುವುದು ಶ್ಲಾಘ್ಯವಾಗಿದೆ. ಭ್ರಾಜಿಷ್ಣುವು ಬಹುಶ್ರುತನೂ ಬಹುಪಾರಗನೂ ಆಗಿದ್ದರೂ ಆತನದು ಶುಷ್ಕ ವಿದ್ವತ್ತಲ್ಲ. ತನಗಿರುವ ವಿಮರ್ಶನ ಪ್ರಜ್ಞೆ, ಸಮತೋಲನ, ಕವಿಹೃದಯ, ಔಚಿತ್ಯ ಜ್ಞಾನ–ಈ ಬಹುಮುಖಿ ಪ್ರತಿಭೆಯಿಂದಾಗಿ ಭ್ರಾಜಿಷ್ಣುವು ವ್ಯಾಖ್ಯಾನಕಾರರಲ್ಲಿ ಮೂರ್ಧನ್ಯನಾಗಿದ್ದಾನೆ. ಭ್ರಾಜಿಷ್ಣುವಿನ ಮನೋಧರ್ಮ ಅನುದ್ವಿಗ್ನವಾದದ್ದು ಪ್ರಶಾಂತವಾದದ್ದು.

ಟೀಕಾಗ್ರಂಥಗಳು ಕೇವಲ ಸಂಸ್ಕೃತ-ಪ್ರಾಕೃತ ಮೂಲದ ಆಗಮಾದಿ ಕೃತಿಗಳಿಗೆ ಬರೆದ ಕನ್ನಡ ಶಬ್ದಾರ್ಥ ವಿವರಣೆಯಷ್ಟೇ ಆಗಿರಬೇಕಾಗಿಲ್ಲ. ಟೀಕಾಕಾರರಾಗಿ ಘನ ವಿದ್ವಾಂಸರೂ, ದೊಡ್ಡ ಆಚಾರ್ಯರೂ ಆಗಿಹೋಗಿದ್ದಾರೆ. ಮೂಲ ಆಚಾರ್ಯ ಕೃತಿಕಾರರೂ ಬೆಳೆದು ಬಂದು ಬರೆದಿರುವ ಪರಂಪರೆ ಪರಿಸರದಲ್ಲಿ ಕೆಲವು ಟೀಕಾಕಾರರೂ ಬೆಳೆದಿರುವುದರಿಂದ ಪಾರಂಪಾರಿಕ ಪರಿಜ್ಞಾನವುಳ್ಳವರಾಗಿದ್ದಾರೆ, ಒಂದು ಕೃತಿಯ ಧಾರ್ಮಿಕ ಸಾಮಾಜಿಕ ಸಾಂಸ್ಕೃತಿಕ ಆಯಾಮ-ಹಿನ್ನೆಲೆಯನ್ನೂ ಅರಿತವರಾದ ವ್ಯಾಖ್ಯಾನಕಾರರಿದ್ದಾರೆ. ಹೀಗೆ ಸ್ವಯಮಾಚಾರ್ಯರಾದ ಕೆಲವು ಮಹಾನ್ ಟೀಕಾಕಾರರು ಸಂಸ್ಕೃತ ಶ್ಲೋಕ, ಪ್ರಾಕೃತ ಗಾಹೆ – ಇವುಗಳಲ್ಲಿ ಅಡಗಿರುವ ತಾತ್ಪರ್ಯದೊಂದಿಗೆ ತತ್ಸಂಬಂಧವಾದ ಕಥಾಕೋಶ ಭಾವಕೋಶ ಮತ್ತು ಇತರ ಜ್ಞಾತಿ ಮಾಹಿತಿಯ ಮೂಲಗಳಲ್ಲಿ ಸಮಾನ ತಿಳಿವಳಿಕೆಯುಳ್ಳವರೂ ಆಗಿದ್ದರು, ಇಂಥವರ ಸಾಲಿಗೆ ಸೇರಿದ ಮಹಾನ್ ಲೇಖಕ ಈ ಭ್ರಾಜಿಷ್ಣು, ಭ್ರಾಜಿಷ್ಣುವಿನ ಆಕಟೀ, ಗ್ರಂಥವು ವ್ಯಾಖ್ಯಾನ ಪರಂಪರೆಗೆ ಸೇರಿದ ಕೃತಿಯೆಂದು ತಿಳಿಯುವುದಕ್ಕೆ ಗ್ರಂಥಗರ್ಭದಲ್ಲಿಯೇ ಸಾಕ್ಷ್ಯಗಳಿವೆ:

ನಮಃ ಶ್ರೀ ವರ್ಧಮಾನಾಯ.... ಎಂದಿಂತು ೧
ಗಮ್ಮ ಇ ಧಮ್ಮೇಣ ದೇವಲೋಯಂತು ಎಂಬುದು ೮೪
ದೂಣ್ಣಂಪಿ ಖಯೇಣ ಣಿವ್ವಾಣಂ ಎಂದು ೮೫
ಮಿಸ್ಸೇಣ ಮಾಣುಸತ್ತಮೆಂಬುದು ೮೫

ವಡ್ಡಾರಾಧನೆಯ ಮೂಲ ಮತ್ತು ಕರ್ತೃ ಕುರಿತು ವಿವರವಾಗಿ ಚರ್ಚಿಸುತ್ತ ಡಾ. ಎಂ.ಎಂ. ಕಲಬುರ್ಗಿಯವರು ಆ.ನೆ. ಉಪಾಧ್ಯೆ ಮತ್ತು ಡಿ.ಎಲ್.ಎನ್. ಅವರುಗಳು ಸೂಕ್ಷ್ಮವಾಗಿ ಪ್ರಸ್ತಾಪಿಸಿ, ದಿಕ್ಕುತಪ್ಪಿದ ಇಂಥ ಎಳೆಗಳನ್ನು ಹಿಡಿದುಕೊಡಿಸಿದ್ದಾರೆ. ಆರಾಧನಾ, ಮೂಲಾರಾಧನಾ, ಭಗವತೀ ಆರಾಧನಾ ಹಾಗೂ ಶಿವಕೋಟಿ-ಶಿವಕೋಟ್ಯಾಚಾರ್ಯ–ಈ ಮೂಲ ಕೃತಿಯನ್ನು ಮೂಲ ಕೃತಿಕಾರರನ್ನು ಗುರುತಿಸುವಾಗ ಪೂರ್ತಿ ಎಡವಿ ತಪ್ಪು ನಿರ್ಧಾರ ಕೈಗೊಂಡಿದ್ದರೂ ಈ ಕನ್ನಡ ಕಥಾಕೋಶದ ಹೆಸರನ್ನೂ, ಕಥಾಕೋಶಕಾರನ ಹೆಸರನ್ನೂ ಹೇಳುವ ಘಟ್ಟದಲ್ಲಿ, ಹಿಂದಿನವರಂತೆ ಹಿಡಿದು-ಬಿಟ್ಟು ಕಣ್ಣಾಮುಚ್ಚಾಲೆ ಮಾಡದೆ, ಗಟ್ಟಿಯಾಗಿ ಸರಿಯಾದ ನಿರ್ಣಯವನ್ನೇ ಹಿಡಿದಿದ್ದಾರೆ: "ಇನ್ನು ಮುಂದೆ ಕನ್ನಡ ಕೃತಿಯ ಹೆಸರು ವಡ್ಡಾರಾಧನೆಯಲ್ಲ. 'ಆರಾಧನಾ ಕರ್ಣಾಟ ಟೀಕೆ' ಎಂದೂ, ಕರ್ತೃವಿನ ಹೆಸರು ಶಿವಕೋಟ್ಯಾಚಾರ್ಯನಲ್ಲ. 'ಭ್ರಾಜಿಷ್ಣು' ಎಂದೂ ಕರೆಯಬೇಕೆನಿಸುತ್ತದೆ"- (ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ (೧೯೭೩) ಪುಟ. ೨೩೪): 'ಕರೆಯಬೇಕೆನಿಸುತ್ತದೆ" ಎಂಬಲ್ಲಿ ಅನುಮಾನ ಬೆಳೆಯುವುದರಿಂದ ಅದನ್ನು 'ಕರೆಯಬೇಕು' ಎಂದು ದೃಢಸೂಚಕ ಧ್ವನಿಯಿಂದ ಸ್ಥಿರೀಕರಿಸಬೇಕು.

ಈ ಹಂತದಲ್ಲಿ ಎದುರಾಗುವ ಇನ್ನೊಂದು ಸವಾಲಿಗೂ ಉತ್ತರವನ್ನು ಹುಡುಕಬೇಕಾಗಿದೆ. ಆರಾಧನಾ ಕರ್ಣಾಟ ಟೀಕಾ ಎಂಬುದು, ಈಗ ದೊರಕಿರುವ ಗ್ರಂಥದ ಏಳುಪಟ್ಟು ದೊಡ್ಡದಾಗಿರಬೇಕಾದರೆ, ಇನ್ನುಳಿದ ಸಾವಿರಾರು ಪುಟ ಪ್ರಮಾಣದಷ್ಟು ನಷ್ಟವಾಗಿ ಅದರ ಆ ಬಹುಭಾಗದಿಂದ ಈ ೧೯ ಕಥೆಗಳನ್ನಷ್ಟೇ ಪೃಥಕ್ಕರಿಸಿ ಕೊಡಲು ಕಾರಣವೇನು? ಇದಕ್ಕೆ ವಡ್ಡಾರಾಧನೆ ಎಂದು ಹೆಸರಿಟ್ಟವರು ಯಾರು? ಎಂಬಂಥ ಪ್ರಶ್ನೆಗಳೇಳುತ್ತವೆ. ಅಲ್ಲದೆ ಈಗ ೧೯ ಕಥೆಗಳಲ್ಲಿ ೯ನೆಯ ಶತಮಾನದವರೆಗಿನ ಪ್ರಾಚೀನ ಕೃತಿಗಳಿಂದಲ್ಲದೆ ಅನಂತರದ ಕಾಲಕ್ಕೆ,

೧೦-೧೧ನೆಯ ಶತಮಾನಕ್ಕೆ ಸೇರಿದ ಕೃತಿಗಳಿಂದಲೂ ಆಯ್ದು ಪೋಣಿಸಿದ ಗಾಹೆ-ಶ್ಲೋಕ ಪದ್ಯಗಳಿವೆ. ಇದರಿಂದಾಗಿ ಭ್ರಾಜಿಷ್ಣುವಿನ ಕಾಲವನ್ನು ಯಾವುದೆಂದು ಗೊತ್ತುಪಡಿಸಬೇಕೆಂಬ ಪ್ರಶ್ನೆಯೂ ಉದ್ಭವಿಸುತ್ತದೆ.

ವಡ್ಡಾರಾಧನೆಯಲ್ಲಿರುವ ಉದ್ಧೃತ ಪದ್ಯಗಳಿಗೆ ಡಾ. ಆ.ನೇ. ಉಪಾಧ್ಯೆಯವರು ಪತ್ತೆ ಹಚ್ಚಿರುವ ಮೂಲ ಆಕರಗಳಲ್ಲಿ ೮೯೮ರ ಗುಣಭದ್ರಾಚಾರ್ಯರ ಉತ್ತರ ಪುರಾಣದ 'ಆದೌ ಜನ್ಮಜರಾರೋಗ' ಎಂಬ ಶ್ಲೋಕವೂ ಒಂದು. ಈ ಪದ್ಯವೇಷ್ಟನದ ಆಧಾರದಿಂದಲೂ ಮತ್ತು ಇನ್ನಿತರ ಪೂರಕಾಧಾರಗಳಿಂದಲೂ ಈ ಕೃತಿ ೧೧ನೆಯ ಶತಮಾನಕ್ಕೆ ಸೇರುತ್ತದೆಂದು ಉಪಾಧ್ಯೆಯವರು ಸೂಚಿಸಿದ್ದಾರೆ. ಆದರೆ ಡಿ.ಎಲ್.ಎನ್. ರವರು ಆಂತರಿಕ ಆಧಾರಗಳನ್ನು ಸಮಷ್ಟಿ ದೃಷ್ಟಿಯಿಂದ ನೋಡಿ, ಇದು ಪಂಪ ಭಾರತಕ್ಕಿಂತ ಹಿಂದಿನ ರಚನೆಯೆಂದೂ, ಕ್ರಿ.ಶ. ೯೨೦ರಲ್ಲಿ ರಚಿತವಾಗಿರಬಹುದೆಂದೂ ಭಾವಿಸಿದ್ದಾರೆ. (ನಾನು ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಒಪ್ಪಿಸಿದ 'ವಡ್ಡಾರಾಧನೆ : ಸಮಗ್ರ ಅಧ್ಯಯನ' ಎಂಬ ನಿಬಂಧದಲ್ಲಿ ಈ ಎಲ್ಲ ವಿಚಾರಗಳ ಪೂರ್ವಾಪರಗಳನ್ನು ಪ್ರಬಲ ಸಾಕ್ಷ್ಯಾಧಾರಗಳಿಂದ ಚರ್ಚಿಸಿ ತಲಪಿದ ತೀರ್ಮಾನಗಳ ಸಾರಾಂಶವನ್ನು ಇಲ್ಲಿ ಪ್ರತಿಪಾದಿಸುತ್ತೇನೆ).

ಆರಾಧನಾ ಕರ್ಣಾಟ ಟೀಕಾ (ಇದಕ್ಕೆ ಆರಾಧನಾ ಶಾಸ್ತ್ರ ಕರ್ಣಾಟ ಟೀಕಾ ಎಂಬ ರೂಪದ ಹೆಸರೂ ಇದ್ದಿರಬಹುದು) ಎಂಬುದಷ್ಟೇ ಕನ್ನಡ ಟೀಕಾ ಗ್ರಂಥದ ಹೆಸರು. ಇದರ ಕರ್ತೃ ಭ್ರಾಜಿಷ್ಣು. ಈತನ ಇತಿವೃತ್ತದತ್ತ ಬೆಳಕು ಚೆಲ್ಲುವ ಸುಳಿವು ಸೂಚನೆಗಳಿಗೆ ನಾವೀಗ ಮುಗಿಬೀಳಬೇಕಾಗಿದೆ. ಶಿವಕೋಟ್ಯಾಚಾರ್ಯನ (ಸು. ಕ್ರಿ.ಶ. ೧ನೆಯ ಶ.) ಆರಾಧನಾ (ಮೂಲಾರಾಧನಾ, ಭಗವತೀ ಆರಾಧನಾ, ಬೃಹದಾರಾಧನಾ) ಗ್ರಂಥವೇ ಕಥಾ ಕೋಶಗಳಿಗೂ, ಟೀಕಾ (ವ್ಯಾಖ್ಯಾನ) ಗ್ರಂಥಗಳಿಗೂ ಮೂಲ ತಲಕಾವೇರಿ. ಕನ್ನಡ ಕೃತಿ ಆಕರ್ಟೀ ಕೂಡ ಈ ಆರಾಧನಾ ಮತ್ತು ತತ್ಸಂಬಂಧಿಯಾದ ಮೌಖಿಕ ವ್ಯಾಖ್ಯಾನ ಪರಂಪರೆಗೆ ಸೇರಿದ್ದು.

ಪ್ರಾಕೃತ ಆರಾಧನಾ ಗ್ರಂಥಕ್ಕೆ ಪ್ರಥಮ ಬಾರಿಗೆ ವ್ಯಾಖ್ಯಾನವನ್ನು ಬರೆದವನು ಯಾರೆಂಬುದು ಖಚಿತವಾಗಿಲ್ಲ. ಉಪಲಬ್ಧ ವ್ಯಾಖ್ಯಾನಗಳಲ್ಲಿ, ಸಂಸ್ಕೃತದಲ್ಲಿರುವ ವಿಜಯೋದಯಾ ಎಂಬುದು ಮೊದಲನೆಯದು. ಇದರ ಕರ್ತೃವಾದ ಅಪರಾಜಿತ ಸೂರಿಯೂ ತನಗಿಂತ ಹಿಂದಣ ವ್ಯಾಖ್ಯಾನಕಾರರ ಅಭಿಪ್ರಾಯಗಳನ್ನು ಹಲವಾರು ಕಡೆ ಚರ್ಚಿಸಿದ್ದಾನೆ ; ಆ ಪ್ರಾಚೀನ ವ್ಯಾಖ್ಯಾನಗಳೊಂದೂ ದೊರೆತಿಲ್ಲ. ಅಪರಾಜಿತಸೂರಿಗೆ ಶ್ರೀವಿಜಯ ಎಂಬ ಹೆಸರೂ ಇದೆ; ಇವೆರಡೂ ನಾಮವಾಚಕಗಳ ಅರ್ಥ ಒಂದೇ. ಶ್ರೀವಿಜಯ ಅಪರಾಜಿತನು ಕರ್ನಾಟಕದವನೆಂದೂ ಆತನು ೧೧ನೆಯ ಶತಮಾನದ ಆರಂಭದವನೆಂದೂ ಒಂದು ಸೂಚನೆಯನ್ನು ಶಾಸನಗಳ ಆಧಾರದಿಂದ ಡಾ. ಆ.ನೇ. ಉಪಾಧ್ಯೆ ಕೊಟ್ಟಿದ್ದಾರೆ. (ಬೃಹತ್ಕಥಾಕೋಶದ ಪೀಠಿಕೆ; ಉಪಾಧ್ಯೆ ಪೇಪರ್ಸ್, ಮೈಸೂರು ವಿಶ್ವವಿದ್ಯಾಲಯ, ೧೯೮೩, ಪುಟ. ೪೬.) ಅಪರಾಜಿತ (ಶ್ರೀವಿಜಯ) ಸೂರಿಯು ಬ್ರಾಜಿಷ್ಣುವನ್ನು ಹೆಸರಿಸಿಲ್ಲ. ಅಲ್ಲದೆ ವಿಜಯೋದಯ ವ್ಯಾಖ್ಯಾನದಲ್ಲಿ ಅಲ್ಲಲ್ಲಿ ಚರ್ಚಿಸಿರುವ ಪೂರ್ವಸೂರಿಕೃತ ವ್ಯಾಖ್ಯಾನಗಳಲ್ಲಿ ಆಕಟೀ., ಚರ್ಚೆ-ಪ್ರಸ್ತಾಪ ಇದೆಯೇ ಎಂದು ತೌಲನಿಕವಾಗಿ ಪರಾಮರ್ಶಿಸಲು ಆಕಟೀ ಪೂರ್ತಿಯಾಗಿ ದೊರೆತಿಲ್ಲ. ಅಥವಾ ಭ್ರಾಜಿಷ್ಣು ಏನಾದರೂ ಅಪರಾಜಿತಸೂರಿಯನ್ನು ಸ್ಮರಿಸಿದ್ದಾನೆಯೊ, ವಿಜಯೋದಯಾ ವ್ಯಾಖ್ಯಾನವನ್ನು ಅನುಸರಿಸಿದ್ದಾನೆಯೊ—ಎಂಬ ಪರಿಶೀಲನೆಯೂ ಅಸಾಧ್ಯವೆನಿಸಿದೆ.

ಭ್ರಾಜಿಷ್ಣುವಿನ ದೇಶ ಕಾಲ ಕೃತಿ ಕುರಿತ ಜಿಜ್ಞಾಸೆಗೆ ಈಷತ್ ಗ್ರಾಸವಂತೂ ಈಗ ಲಭ್ಯವಿದೆ. ಭ್ರಾಜಿಷ್ಣುವಿನ ಆಕಟೀ ಗ್ರಂಥವು ಪೂರ್ಣಪ್ರಮಾಣದಲ್ಲಿ ಅಲ್ಲವಾದರೂ ಅದರ ೧/೭ ಭಾಗದಷ್ಟಾದರೂ ಲಭ್ಯವಾಗಿದೆ. ಆಕಟೀದ ೧೯ (ಮತ್ತು ಇತರ) ಕಥೆಗಳು ಭಿನ್ನಕರ್ತೃಕಗಳಲ್ಲ, ಅವು ಏಕಕರ್ತೃಕ ಕಥೆಗಳು. ಆ ಕಥೆಗಾರ-ಟೀಕಾಕಾರನಾದ ಭ್ರಾಜಿಷ್ಣುವಿನ ಸ್ವಕೀಯ ಸಂಗತಿಗಳು ತಿಳಿಯುತ್ತಿಲ್ಲ. ಅದರ ಕಾಲ ನಿರ್ಧಾರಕ್ಕೆ ನೆರವಾಗುವ ಅಂಶವೆಂದರೆ ಆಂತರಿಕ ಆಧಾರ ಅದರ ಭಾಷೆಯ ಸ್ವರೂಪವನ್ನು ಪೂರ್ಣವಾಗಿ ಅವಲಂಬಿಸು ವಂತಿಲ್ಲವೆಂದು ಉಪಾಧ್ಯೆಯವರು ಭಾವಿಸಿದ್ದಾರೆ. ಆದರೆ ಈಗ ಇದು ಪ್ರಾಚೀನ ಲೇಖಕನಾದ ಭ್ರಾಜಿಷ್ಣುವಿನ ಕೃತಿಯೆಂದು ನಿಸ್ಸಂದೇಹವಾಗಿ ಸ್ಥಾಪಿತವಾಗಿರುವುದರಿಂದ, ಆಕಟೀದ ಭಾಷೆಯನ್ನೂ ಅನುಲಕ್ಷಿಸುವುದರಲ್ಲಿ ಔಚಿತ್ಯವಿದೆ. 'ಕಾಲ ವಿಷಯದ ಚರ್ಚೆಯಲ್ಲಿ ವಡ್ಡಾರಾಧನೆಯ ಭಾಷೆ' ಎಂಬ ವಿದ್ವತ್‌ಪೂರ್ಣವಾದ ಲೇಖನದಲ್ಲಿ (ಸಾಧನೆ ೯-೨, ಏಪ್ರಿಲ್-ಜೂನ್ ೧೯೮೦, ಪುಟ ೩೩-೪೪) ಡಾ. ಎಂ.ಜಿ. ಭೋಯಿಯವರು (ಡಾ. ಎಂ.ಬಿ. ನೇಗಿನಹಾಳ) ಅವರು ಭಾಷಿಕ ಆಧಾರಗಳನ್ನು ಶಾಸನಗಳಿಂದಲೂ ಕಾವ್ಯಗಳಿಂದಲೂ ಉದಾಹರಿಸಿ, ವಡ್ಡಾರಾಧನೆಯ ಕಾಲವನ್ನು ಭಾಷಿಕ ಸಾಮಗ್ರಿಯ ಬಲದಿಂದ ಚರ್ಚಿಸಿದ್ದಾರೆ. ಡಾ. ಎಂ.ಬಿ. ನೇಗಿನಹಾಳ ಅವರು ಈ ಕೃತಿಯ ಕಾಲವನ್ನು ಕ್ರಿ.ಶ. ೮೦೦ ಎಂದು ಗೊತ್ತುಪಡಿಸಿ ತಮ್ಮ ತೀರ್ಮಾನಕ್ಕೆ ಪೂರಕವಾಗುವ ಪ್ರಬಲವಾದ ಆಧಾರ ಪ್ರಯೋಗಗಳನ್ನು ಮೌಲಿಕವಾದ ಸಂಪ್ರಬಂಧದಲ್ಲಿ ವಿಸ್ತಾರವಾಗಿ ಕೊಟ್ಟಿದ್ದಾರೆ. ಡಾ. ಎಂ.ಬಿ. ನೇಗಿನಹಾಳ ಅವರು ತೀರ್ಮಾನವನ್ನು ಒಪ್ಪಿಕೊಳ್ಳಲು ಈಗ ಹೆಚ್ಚು ಪ್ರತಿಕೂಲ ಸಾಕ್ಷ್ಯಾಧಾರಗಳು ಕಾಣುತ್ತಿಲ್ಲ. ಅಲ್ಲದೆ ಸುಮಾರು ಹತ್ತನೆಯ ಶತಮಾನದವನಾದ ರಾಮಚಂದ್ರ ಮುಮುಕ್ಷುವು ಭ್ರಾಜಿಷ್ಣುವನ್ನೂ ಅವನ ಕೃತಿಯನ್ನೂ ಹೆಸರಿಸುವುದರ ಮೂಲಕ ಆ ಕೃತಿಯ ಉತ್ತರ ಕಾಲದ ಗಡಿಕಲ್ಲನ್ನು ನೆಟ್ಟಿದ್ದಾನೆ. ಡಾ. ಎಂ.ಬಿ. ನೇಗಿನಹಾಳ ಅವರು ಕ್ರಿ.ಶ. ೮೦೦ ಎಂದು ಪೂರ್ವ (ಕಾಲ)ದ ಗಡಿಕಲ್ಲು ನಿಲ್ಲಿಸಿದ್ದಾರೆ.

ಭ್ರಾಜಿಷ್ಣುವಿನ ಊರು ಪ್ರದೇಶ ಯಾವುದಿರಬಹುದೆಂಬ ವಿಚಾರವಾಗಿಯೂ ಜಿಜ್ಞಾಸೆ ನಡೆದಿದೆ. ದಕ್ಷಿಣ ಕನ್ನಡ ಜಿಲ್ಲೆಯವನಿರಬಹುದೆಂದು ಕೆ.ಜಿ. ಕುಂದಣಗಾರರೂ, ಕೋಗಳಿಯವನಿರಬಹುದೆಂದು ಡಿ.ಎಲ್.ಎನ್.ರವರೂ ಸೂಚಿಸಿದ್ದಾರೆ. ಭ್ರಾಜಿಷ್ಣುವು ಇವೆರಡು ಪ್ರದೇಶಗಳ ಪರಿಚಯವಿದ್ದವನಾದರೂ ಈ ಭಾಗದಿಂದ ಹುಟ್ಟಿಬಂದವನಲ್ಲವೆಂದು ಹೇಳಬಹುದು. ಭ್ರಾಜಿಷ್ಣುವು ಈಗಿನ ಗುಲಬರ್ಗಾ ಬೀದರ ಜಿಲ್ಲೆಯ ಕಡೆಯವನೆಂದು ದೃಢವಾಗಿ ಹೇಳಲು ಆಂತರಿಕ ಆಧಾರಗಳು ಸಿಗುತ್ತವೆ :

(ಅ) ಭ್ರಾಜಿಷ್ಣುವು ಯಾಪನೀಯ ಸಂಘದ ಒಲವಿನವನು. ಯಾಪನೀಯಶಾಖೆ ಅತ್ಯಂತ ಕ್ರಿಯಾಶೀಲನವಾಗಿದ್ದ ರಾಷ್ಟ್ರಕೂಟರ (ಚಾಳುಕ್ಯರ ಆಳ್ವಿಕೆಯ ಪ್ರದೇಶ) ಗುರುದತ್ತ ಭಟಾರರ ಕಥೆಯಲ್ಲಿ ಹೇಳಿರುವ ಪಳ್ಳಿಖೇಡ ಎಂಬುದು ಈಗಿನ ಹಳ್ಳಿಖೇಡವಾಗಿದೆ. ಗುಲಬರ್ಗದಿಂದ ಬೀದರದ ಕಡೆಗೆ ಹೋಗುವ ಹೆದ್ದಾರಿಯಲ್ಲಿಯೇ ಇಂದಿಗೂ, ಒಂದಲ್ಲ ಎಂದು ಎರಡು ಹಳ್ಳಿಖೇಡಗಳಿವೆ. ಈ ಹೆಸರು ಇದೇ ಗುರುದತ್ತ ಭಟಾರರ ಕಥೆ ಇರುವ ಪ್ರಾಕೃತ ಸಂಸ್ಕೃತ ಕೃತಿಗಳಲ್ಲಿ ಬಂದಿಲ್ಲದಿರುವುದನ್ನು ಗಮನಿಸಬಹುದು. ಅದರಿಂದ ಭ್ರಾಜಿಷ್ಣುವು, ಇಂದಿನ ಎರಡು ಹಳ್ಳಿಖೇಡಗಳಲ್ಲಿ ಒಂದು ಊರಿಗೆ ಸೇರಿದವನಿರಬೇಕು. ಕೋಗಳಿ ಎಂಬ ಹೆಸರು ಕೂಡ ಕನ್ನಡ ಕೃತಿಯಲ್ಲಿ ಮಾತ್ರ ಪ್ರಸ್ತಾಪಗೊಂಡಿದ್ದು ಅದರ ಸಂವಾದಿ ಕಥೆಗಳಲ್ಲಿ,

ಸಂಸ್ಕೃತ-ಪ್ರಾಕೃತ ಕಥೆಗಳಲ್ಲಿ ಇಲ್ಲ; ಆದರಿಂದ ಭ್ರಾಜಿಷ್ಣು ಕೋಗಳಿಯವನೇ ಏಕಾಗಿರಬಾರದು ಎಂಬ ಪ್ರಶ್ನೆಗೂ ಉತ್ತರಿಸಬೇಕಾಗುತ್ತದೆ. ಭ್ರಾಜಿಷ್ಣುವು ಗುಲ್ಬರ್ಗದ ಕಡೆಯವನೇ ಆಗಿದ್ದಾನೆಂಬುದನ್ನು ತೋರಿಸಲು ಬೇರೆ ಆಧಾರಗಳಿರುವುದನ್ನು ಮುಂದೆ ಹೇಳಿದೆ.

(ಆ) ದಂಡಕರಿಸಿಯ ಕಥೆಯಲ್ಲಿ ಮಳಯಖೇಡದ ಪ್ರಸ್ತಾಪ (ಪಾಠಾಂತರದಲ್ಲಿ) ಇದೆ. ಇದು ರಾಷ್ಟ್ರಕೂಟರ ರಾಜಧಾನಿಯಾದ ಮಳಖೇಡ-ಮಾನ್ಯಖೇಟವೇ ಆಗಿದೆ. ಮಳಖೇಡವು ಪೊನ್ನಕವಿಯ (ಸು. ೯೬೦) ಸಮಕಾಲೀನನಾದ ಪ್ರಾಕೃತ ಪುಷ್ಪದಂತನ ಕಾಲದಲ್ಲಿ ಸುಟ್ಟು ಬೂದಿಯಾದುದನ್ನು ಕಣ್ಣಾರೆ ನೋಡಿ ಪುಷ್ಪದಂತನು ವರ್ಣಿಸಿದ್ದಾನೆ. ಆದರಿಂದ ಭ್ರಾಜಿಷ್ಣುವು ಆಕಟೀಕಾವನ್ನು ಮಳಯಖೇಡವಿನ್ನೂ ರಾಷ್ಟ್ರಕೂಟರ ರಾಜಧಾನಿಯಾಗಿ ವೈಭವದಿಂದ ಕೂಡಿದ್ದ ಕಾಲದಲ್ಲಿಯೇ, ಕ್ರಿ.ಶ. ೯೬೦ಕ್ಕಿಂತ ಮುಂಚೆಯೇ ರಚಿಸಿರುವುದು ಸ್ಪಷ್ಟ.

(ಇ) ವಿದ್ಯುಚ್ಚೋರ ರಿಸಿಯ ಕಥೆಯಲ್ಲಿ ವೆಂಣಾನದಿ ಮತ್ತು ವೇಣಾತಟಾಕದ ಪ್ರಸ್ತಾಪವಿದೆ; ಇದು ಮೂಲ ಸಂವಾದಿ ಕಥೆಗಳಲ್ಲಿ, ಅನ್ಯಭಾಷೆಗಳಲ್ಲಿ ಇರದ ಭ್ರಾಜಿಷ್ಣುವಿನಲ್ಲಿ ಮಾತ್ರ ಬಂದಿದೆ. ವೆಂಣಾನದಿ ಕೂಡ ರಾಷ್ಟ್ರಕೂಟರ ಮತ್ತು ಮಳಖೇಡ ಪ್ರದೇಶದ ತೊರೆಯೆಂಬುದನ್ನು ಮರೆಯುವಂತಿಲ್ಲ.

ಈ ಕಾರಣಗಳಿಂದ ಭ್ರಾಜಿಷ್ಣುವು ಗುಲಬರ್ಗಾ-ಬೀದರ ಜಿಲ್ಲೆಗಳ ಪ್ರದೇಶದವನೆಂದೂ, ರಾಷ್ಟ್ರಕೂಟ ಸಾಮ್ರಾಜ್ಯದ ಆಳ್ವಿಕೆಯಲ್ಲಿ ಇದ್ದವನೆಂದೂ, ಸುಮಾರು ಕ್ರಿ.ಶ. ೮೦೦ರಿಂದ ೮೭೦ರ ಅವಧಿಯಲ್ಲಿ ಆರಾಧನಾ ಶಾಸ್ತ್ರಕರ್ಣಾಟಟೀಕಾವನ್ನು ರಚಿಸಿದನೆಂದೂ ಬಹುಮಟ್ಟಿಗೆ ನಿರ್ಧರಿಸಬಹುದು. ಇದರಿಂದ ಇನ್ನೂ ಒಂದು ವಿಶೇಷ ಮಹತ್ವವು ಈ ಕೃತಿಯ ಹಿರಿಮೆಗೆ ಕೂಡಿಕೊಂಡಂತಾಗುತ್ತದೆ. ಆರಾಧನಾ ಗ್ರಂಥಕ್ಕೆ ರಚಿತವಾಗಿದ್ದು, ಇದುವರೆಗೆ ದೊರೆತಿರುವ ಟೀಕಾ ಗ್ರಂಥಗಳಲ್ಲಿ ಪ್ರಾಚೀನವೆಂದು ತಿಳಿಯಲಾದ ಅಪರಾಜಿತಸೂರಿಯ ವಿಜಯೋದಯಾದ ಕಾಲ ಸುಮಾರು ೯-೧೦ನೆಯ ಶತಮಾನದ ಪೂರ್ವಾರ್ಧವೆಂದು ಇರುವುದರಿಂದ, ಕ್ರಿ.ಶ. ೯ನೆಯ ಶತಮಾನದ ಭ್ರಾಜಿಷ್ಣುವಿನ ಕನ್ನಡ ಟೀಕೆಯೇ ಪ್ರಾಚೀನತಮವಾಗುತ್ತದೆ.

ಈ ನೆಲೆಯಲ್ಲಿ ಎದುರಾಗುವ ಸಂಶಯವೆಂದರೆ (i) ಬೃಹತ್ ಪ್ರಮಾಣದಲ್ಲಿದ್ದ ಆಕಟೀ ಗ್ರಂಥದಿಂದ ಈಗಿರುವ ಈ ೧೯ ಕಥೆಗಳನ್ನಷ್ಟೇ ಏಕೆ ಸುಲಿದಿಟ್ಟರೆಂಬುದು, (ii) ಮೂಲದಿಂದ ಇದನ್ನು ಹೀಗೆ ಬಿಡಿಸಿಟ್ಟವರು ಯಾರು ಎಂಬುದು, ಮತ್ತು (iii) ಮೂಲದಿಂದ ಹೊಕ್ಕಳಬಳ್ಳಿಯನ್ನು ಕತ್ತರಿಸಿ ಈ ೧೯ ಕಥೆಗಳನ್ನು ಬೇರ್ಪಡಿಸಿದ್ದು ಯಾವ ಕಾಲ ಘಟ್ಟದಲ್ಲಿ ಎಂಬುದು. ಇಂಥ ಪ್ರಶ್ನೆಗಳನ್ನು ಇದೇ ಮೊದಲ ಬಾರಿಗೆ ಕೇಳಲಾಗಿದ್ದು ಅವಕ್ಕೆ ಉತ್ತರವನ್ನೂ ಇದೇ ಪ್ರಥಮವಾಗಿ ಇಲ್ಲಿ ನಿರೂಪಿಸುತ್ತಿದ್ದೇನೆ.

ಕನ್ನಡ ನಾಡಿನ ಪರಿಸರದ ಮಟ್ಟಿಗೆ ಹೇಳುವುದಾದರೆ, ಕ್ರಿ.ಪೂ.ದಿಂದ ಜೈನಧರ್ಮದ ಗಟ್ಟಿಯಾಗಿದ್ದ ನೆಲಗಟ್ಟು ೧೧ನೆಯ ಶತಮಾನದ ಉತ್ತರಾರ್ಧದ ಕಡೆಕಡೆಗೆ ಮತ್ತು ೧೨ನೆಯ ಶತಮಾನದಲ್ಲಿ ಸಡಿಲಗೊಂಡು ಕಳಚತೊಡಗಿತ್ತು. ಅತ್ತ ಗಂಗ ಸಾಮ್ರಾಜ್ಯದ ಪತನ, ಇತ್ತ ರಾಷ್ಟ್ರಕೂಟರ ಕುಸಿತ, ಉತ್ತ ಶೈವರ ಏರುಂಜವ್ವನ ಮತ್ತು ಇತರೆ ಸಮಯಗಳ ಪ್ರಾಬಲ್ಯ ಇವೆಲ್ಲಾ ಹುರಿಗೊಂಡ ಪರಿಣಾಮವಾಗಿ, ಅದುವರೆಗೆ ತೋರವಾಗಿ ಬೆಳೆದು ನಿಂತಿದ್ದ

ಮಾನಸ್ತಂಭಗಳು ಅಲುಗಾಡತೊಡಗಿದುವು. ಆಗತ್ಯಕ್ಕಿಂತ ಹೆಚ್ಚಾಗಿದ್ದ ಸನಾತನ ಬಸದಿಗಳು ಒಂದೊಂದಾಗಿ ಅನಾಥವಾಗತೊಡಗಿದವು. ಜೈನಯತಿಗಳಿಗೆ, ಹೋದ ಬಂದ ಎಡೆಗಳಲ್ಲಿ ಅಬಾಧಿತವಾಗಿ ಸಲ್ಲುತ್ತಿದ್ದ ರಾಜಾ-ಪ್ರಜಾ ಮರ್ಯಾದೆಯಲ್ಲಿ ಬಿರುಕುಗಳು ಕಾಣಿಸಿದುವು. ಜೈನ ಶ್ರಾವಕರಿಗೂ ಕನ್ನಡ ನಾಡಿನ ಉದ್ದಗಲದಲ್ಲಿ ದೊರೆಯುತ್ತಿದ್ದ ಮನ್ನಣೆಯ ನೆರೆ ಇಳಿಯತೊಡಗಿತ್ತು. ಜೈನ ಗೃಹಸ್ಥರಿಗೇ ಏನು, ಜೈನ ಮುನಿಗಳಿಗೂ ಅವರು ಪುರಾಣ ಕಾವ್ಯಗಳಲ್ಲಿ ವರ್ಣಿಸುವ ನರಕ ಹಿಂಸೆ ಅಟ್ಟುಳಿ ಉಪಸರ್ಗಗಳು ಈ ಭವದಲ್ಲಿಯೇ ಅನುಭವದ ವಿಷಯಗಳಾಗುವುವು. ಜೈನ ಮುನಿಗಳನ್ನು ಕೊಂದರು, ಗಾಣಕ್ಕೆ ಹಾಕಿ ಹಿಂಡಿದರು, ಅರೆದರು, ನೆಲಮಾಳಿಗೆಯಲ್ಲಿ ಮುಚ್ಚಿ ನೆಲಸಮಾಧಿ ಮಾಡಿದರು, ಅವರ ವಿರುದ್ಧ ವ್ಯವಸ್ಥಿತ ಅಪಪ್ರಚಾರ ಮಾಡಿದರು.

ಇತಿಹಾಸದ ಕಾಲಚಕ್ರದ ಚಲನೆಯಲ್ಲಿ, ಮೇಲಿದ್ದ ಅರಗಳು ಕೆಳಕ್ಕಿಳಿಯಹತ್ತಿದುವು. ಘನಸ್ಥಿತಿ ಕರಗಿ ದ್ರವಸ್ಥಿತಿಗೆ ಎಡೆಮಾಡಿತ್ತು. ಒಂದು ಕಡೆ ರಾಜಪರಿವಾರ, ಇನ್ನೊಂದೆಡೆ ಪ್ರಜಾಕೋಟಿ–ಈ ಎರಡೂ ಪ್ರಬಲ ಶಕ್ತಿ ರಕ್ಷಣೆಯಿಂದ ಜೈನಮತ ಎರವಾಗತೊಡಗಿತು. ಹೀಗೆ ಜೈನಧರ್ಮದ ಮೇಲೆ, ಮೇಲಿಂದ ಮೇಲೆ, ಆದ ಈ ಆಘಾತ ಪ್ರತ್ಯಾಘಾತಗಳು ಮುಂಬರಲಿರುವ ದೊಡ್ಡ ಪತನದ ಕಣ್ಸನ್ನೆಗಳಾದುವು. ಸೂರ್ಯಾಸ್ತವಾದ ಮೇಲೆ ರಾತ್ರಿಯಲ್ಲಿ ಊಟ ಮಾಡುವುದಿರಲಿ ಲೋಟ ನೀರನ್ನೂ ಕುಡಿಯದೆ ಕಟ್ಟುನಿಟ್ಟಾಗಿದ್ದವರು ಜೈನರು. ಈ ಜೈನಧರ್ಮದ ಪ್ರಾಚುರ್ಯ ಪ್ರಸಾರಗಳ ಮೂಲಕ್ಕೇ ಧಕ್ಕೆ ಉಂಟಾಯಿತು; ಜೈನರು ಇರುಳಿನ ಜತೆಗೆ ಹಗಲೂ ಹೊಸ ವ್ರತವನ್ನು ಆಚರಿಸಬೇಕಾದ ಶೋಚನೀಯ ಪರಿಸ್ಥಿತಿಯೊದಗಿತು. ಸ್ಥಳೀಯರೇ ಆದ ಏಕಾಂತರಾಮಯ್ಯ, ಜೈನಕುಠಾರ ವಿರುಪರಸ ಆದಯ್ಯ ಮೊದಲಾದವರ ಮತ್ತು ಹೊರಗಡೆಯ ಚೋಳರ ಆಕ್ರಮಣಗಳನ್ನು ಎದುರಿಸುವುದರಲ್ಲಿ ಪಡಬಾರದ ನೋವನ್ನು ಅನುಭವಿಸಿದರು. ಅನೇಕ ಜೈನ ವರ್ತಕರು ವೀರಶೈವರಾದರು (ಜೈನ ಕೆಟ್ಟು ಬಣಜಿಗನಾದ ಎಂಬ ಗಾದೆ ಹುಟ್ಟಿತು.) ಒಂದು ಕಡೆ ಸೆಟ್ಟರೂ (ವೈಶ್ಯ) ಇನ್ನೊಂದು ಕಡೆ ಸಾದರೂ ಮತ್ತೊಂದು ಕಡೆ ಬಂಟರೂ–ಹೀಗೆ ಕ್ರಮೇಣ ಜೈನ ವೃಕ್ಷದಿಂದ ಕೊಂಬೆಗಳೊಡೆದು ಬೇರೆಯಾದವು. ಗುರುವೃಂದಕ್ಕೂ ಗೃಹಸ್ಥರಿಗೂ ಧಾರ್ಮಿಕ ಆಧಾರಗಳನ್ನಿತ್ತು ಆತ್ಮಸ್ಥೈರ್ಯ ತುಂಬುವುದು ಅನಿವಾರ್ಯವಾಗಿತ್ತು. ಘನ ಘೋರ ಕಷ್ಟಗಳಲ್ಲೂ ಧರ್ಮವನ್ನು ಬಿಡದೆ ಪಾಲಿಸಿದ ಮಹಿಮರ ದೃಷ್ಟಾಂತಗಳನ್ನಿತ್ತು ಜೈನ ಸಮಾಜವನ್ನು ಸಾಂತ್ವನಗೊಳಿಸಬೇಕಾಗಿತ್ತು.

ಪುನರುಜ್ಜೀವನ ಅನಿವಾರ್ಯವಾಗಿದ್ದ ಇಂತಹ ನಡು ಬೇಸಗೆಯ ಕಡು ಸಂಕಟದ ಕಾಲದಲ್ಲಿ ಕಾಣಿಸುವ ತಂಪುದಾಣಗಳಂತೆ ಸಾಹಿತ್ಯ ಕೃತಿಗಳು ಸೃಷ್ಟಿಯಾದುವು: ಧರ್ಮಾಮೃತ (ನಯಸೇನ : ೧೧೧೨), ಧರ್ಮಪರೀಕ್ಷೆ (ವೃತ್ತವಿಲಾಸ: ೧೩೬೦), ಸಮಯಪರೀಕ್ಷೆ (ಬ್ರಹ್ಮಶಿವ: ೧೧೭೫), ಭ್ರಾಜಿಷ್ಣುವಿನ ಆರಾಧನಾ ಕರ್ಣಾಟ ಟೀಕಾದಿಂದ ಕವಚಾಧಿಕಾರದ ೧೯ ಕಥೆಗಳ ಒಂದು ಕಂತೆಯನ್ನು ಮೂಲದ ದೊಡ್ಡ ಕಟ್ಟಿನಿಂದ ಹೊರತೆಗೆದಿರಿಸಿದ್ದು ಈ ಅವಧಿಯಲ್ಲಿ, ಈ ಬಗೆಯಲ್ಲಿ, ಈ ಕಾರಣಕ್ಕಾಗಿ ಆದ ಪ್ರಯತ್ನ. ಇವೆಲ್ಲವೂ ಜೈನಧರ್ಮ ಮಂದಿರ ಕುಸಿಯದೆ ತಡೆಯಲು ಕೊಟ್ಟ ಒದೆಗಲ್ಲು, ಊರೆಗೋಲು. ಅಂತಿಮವಾಗಿ ಜೈನ ಧರ್ಮ ಅಜೇಯವಾಗಿ ಉಳಿಯದಿದ್ದರೂ, ಜೈನ ಕಾವ್ಯಗಳು ಚಿರ ವಿಜಯವನ್ನು ಸಂಪಾದಿಸಿದುವೆಂಬುದು ಸಾಹಿತ್ಯದ ಸೃಜನ ಸಾಮರ್ಥ್ಯಕ್ಕೆ ಸಂದ ಗೌರವ.

ಲಾಗಾಯ್ತಿನಿಂದ ಬಂದ ಜೈನಧರ್ಮ ಸಂಸ್ಕೃತಿಯೊಂದಿಗೆ ಹೊಸದಾದ ದೇಶೀಯವಾಗಿ ಕವಲೊಡೆದು ಕುದುರಿ ಗರಿಗೊಂಡ ಧರ್ಮ ಸಂಸ್ಕೃತಿಯೊಂದಿಗ ಸಂಘರ್ಷವನ್ನು ಜೀರ್ಣಿಸಿಕೊಳ್ಳುವುದು ಅಗತ್ಯವಾಗಿತ್ತು. ಪ್ರತಿಕೂಲ ಸನ್ನಿವೇಶವನ್ನು ಹೇಗೆ ಮುಖಾಮುಖಿಯಾಗಿ ಎದುರಿಸಿದರೆಂಬುದರ ದ್ವಂದ್ವ, ಸಂಕಟಗಳನ್ನು ಕುರಿತ ಅಪೂರ್ವ ಒಳನೋಟಗಳು ಈ ಕಾಲದ ಕೃತಿಗಳಲ್ಲಿವೆ.

ಈ ಬಗೆಯ ಐತಿಹಾಸಿಕವಾದ, ಅನಿವಾರ್ಯವಾದ ನಿಮಿತ್ತದಿಂದ ಭ್ರಾಜಿಷ್ಣುವಿನ ಆರಾಧನಾ (ಶಾಸ್ತ್ರ) ಕರ್ಣಾಟ ಟೀಕಾವನ್ನು ಚೆನ್ನಾಗಿ ಕರತಲಾಮಲಕ ಮಾಡಿಕೊಂಡಿದ್ದ ಜೈನ ಮುನಿಯೊಬ್ಬರು ಈ ೧೯ ಕಥೆಗಳನ್ನು ಬೇರೆಯಾಗಿ ತೆಗೆದಿರಿಸಿದರು. ಅನಂತರ ಅದು ಜೈನ ಮನೆ ಮಠ ಮಂದಿರಗಳಲ್ಲಿ ಮಾನ್ಯತೆ ಪಡೆದು ಕರ್ನಾಟಕದ ನಾನಾ ಭಾಗಗಳಲ್ಲಿ ಪ್ರಸಾರ ಪಡೆಯಿತು. ಆರಾಧನಾ ಪರಂಪರೆಯ ಶಾಸ್ತ್ರಕೃತಿಗಳಿಂದಲೂ ಕಥಾಕೋಶಗಳಿಂದಲೂ ಬೇರೆ ಬೇರೆ ಭಾಗದ ಪ್ರತಿಕಾರರು, ಆಯಾ ಪ್ರದೇಶ ಪರಿಸರದ ಮುನಿಗಳ ಸೂಚನೆಯಂತೆ, ಕೆಲವು ಸಂಸ್ಕೃತ ಪ್ರಾಕೃತ ಪದ್ಯಗಳನ್ನು ಸೇರಿಸುತ್ತಾ ಹೋದರು. ಆದರೆ ಇವರು ಯಾರೂ ಮೂಲದ ಕಥೆಗಳನ್ನು ಮತ್ತು ಭಾಷೆಯನ್ನು ಹೆಚ್ಚು ಬದಲಾಯಿಸುವ ಸ್ವಾತಂತ್ರ್ಯ ವಹಿಸಲಿಲ್ಲವೆನಿಸುತ್ತದೆ. ಹೀಗಾಗಿ ಭ್ರಾಜಿಷ್ಣುವಿನ ಪಾಠ ಪರಂಪರೆಗೆ ಬಾಧಕವಾಗದೆ ಮುಂದುವರಿಯಿತು. ಅದಕ್ಕಾಗಿಯೆ 'ಭ್ರಾಜಿಷ್ಣುವಿನ ಅಭಿಪ್ರಾಯದಲ್ಲಿಯೇ ಈ ಕಥೆಯನ್ನು ಹೇಳುತ್ತೇನೆ' ಎಂಬ ಮಾತು ಬಂದಿರುವುದು. ಭ್ರಾಜಿಷ್ಣುವಿನ ಆಕಟೀ ಗ್ರಂಥದಿಂದ ಈಗಿನ ೧೯ ಕಥೆಗಳನ್ನು ತನಿಯಾಗಿ ತೆನೆಯಾಗಿ ತೆಗೆದಿರಿಸುವ ಕೆಲಸ ೧೨ನೆಯ ಶತಮಾನದ ಅಂತ್ಯದಲ್ಲಿ ನಡೆದಿದೆಯೆಂದು ತೋರುತ್ತದೆ. ಹೀಗೆ ನಿರ್ದಿಷ್ಟ ಕಾಲವನ್ನು ಸೂಚಿಸಲು ಎರಡು ಪ್ರಬಲವಾದ ಕಾರಣಗಳಿವೆ.

೧. ಈಗ ದೊರೆತಿರುವ ಆಕಟೀ ಗ್ರಂಥದ ಹಸ್ತಪ್ರತಿಗಳಲ್ಲಿ ಪ್ರಾಚೀನತಮವಾದ ಹಸ್ತಪ್ರತಿ ಲಿಖಿತವಾಗಿರುವುದು ೧೪೦೩ರಲ್ಲಿ.

೨. ಈಗ ದೊರೆತಿರುವ ಎಲ್ಲ ಹಸ್ತಪ್ರತಿಗಳಲ್ಲೂ ಸಿಗುವ ಕೆಲವು ಸಂಸ್ಕೃತ ಶ್ಲೋಕಗಳನ್ನು ಮತ್ತು ಪ್ರಾಕೃತ ಗಾಹೆಯನ್ನು ಶ್ರೀಚಂದ್ರನ ಕಥಾಕೋಶದಿಂದ ತೆಗೆದುಕೊಳ್ಳಲಾಗಿದೆ.

ಅ. ಗುರುದತ್ತ ಭಟಾರರ ಕಥೆಯಲ್ಲಿ ಬರುವ 'ಯತ್ರಯತ್ರೋಪ ಪದ್ಯಂತೇ...' ಎಂಬ ಶ್ಲೋಕ.

ಆ. ಚಾಣಾಕ್ಯರಿಸಿಯ ಕಥೆಯಲ್ಲಿ ಬರುವ 'ಶಕ್ಯಮೇಕ ಸಹಸ್ರೇಣ....'

ಇ. ಆಕಟೀಯ ಚಿಲಾತಪುತ್ರನ ಕಥೆಯಲ್ಲಿ ಬರುವ ''ಜಂ ಇಚ್ಛಸಿ ತಂ ಣಂ ತಂ....'' ಎಂಬ ಗಾಹೆ.

ಈ ಮೂರು ಪದ್ಯಗಳ ಮೂಲ ಶ್ರೀಚಂದ್ರನ ಕಥಾಕೋಶದ್ದು. ಈ ಶ್ರೀಚಂದ್ರನ ಕಾಲ ಕ್ರಿ.ಶ. ೧೦೭೦.

ಆದ್ದರಿಂದ ಈಗ ಉಪಲಬ್ಧವಿರುವ ೧೯ ಕಥೆಗಳ ಕವಚಾಧಿಕಾರದ ಕಥಾಗುಚ್ಛವನ್ನು ಭ್ರಾಜಿಷ್ಣುವಿನ ಆಕಟೀದಿಂದ ೧೦೭೦ರ ಅನಂತರ ಮತ್ತು ೧೪೦೩ಕ್ಕಿಂತ ಮೊದಲು, ಇವೆರಡರ ನಡುವಣ ಅವಧಿಯಲ್ಲಿ ಬೇರೆಯಾಗಿ ತೆಗೆದು ರೂಢಿಗೆ ತರಲಾಗಿದೆ. ಈ

ನಡುವಣ ಅವಧಿಯು ೧೨ನೆಯ ಶತಮಾನದ ಕಡೆಯಲ್ಲಿ ಮತ್ತು ೧೩ನೆಯ ಶತಮಾನದಲ್ಲಿ ಆರಂಭದಲ್ಲಿರಬೇಕೆಂದು ಊಹಿಸಿದ್ದಕ್ಕೆ ಕಾರಣಗಳನ್ನು ಕೊಟ್ಟಿದ್ದೇನೆ. ಈ ವಿಚಾರದಲ್ಲಿ ಇನ್ನಷ್ಟು ಸಂವಾದಕ್ಕೆ ಅವಕಾಶವಿದೆ. ಈತ ಅನುಸರಿಸಿರುವ ಕಥಾಸಂಪ್ರದಾಯ ಇದುವರೆಗಿನ ಸಂಸ್ಕೃತ ಪ್ರಾಕೃತ ಕಥಾಕೋಶಗಳಿಗಿಂತ ಭಿನ್ನ. ಭ್ರಾಜಿಷ್ಣುವಿನದು ದಾಕ್ಷಿಣಾತ್ಯ ಪಾಠ. ಉಳಿದವರದು ಔತ್ತರೇಯ ಸಂಪ್ರದಾಯ. ಈ ಎಲ್ಲ ಕಥಾಕೋಶಕಾರರಿಗೂ ಮೂಲಾರಾಧನೆಯೇ ಮೂಲ ಆಕರ. ಏಕಮೂಲಾಶ್ರಯಿಗಳಾದರೂ ಪ್ರತಿಯೊಬ್ಬರೂ ತಮಗೆ ಸರಿಕಂಡ ತೆರದಲ್ಲಿ ಕಥೆಗಳನ್ನು ಹಿಗ್ಗಿಸಿ ಕುಗ್ಗಿಸಿ ಬದಲಾಯಿಸಿದ್ದಾರೆ. ಆದರೆ ಯಾರೂ ಕಥೆಗಳ ಮೈಯನ್ನು, ಒಟ್ಟಂದವನ್ನು ಕೆಡಿಸಿಲ್ಲ. ಇವೆಲ್ಲ ಕವಿರಾಜಮಾರ್ಗೋಕ್ತ ಗದ್ಯ ಕಥಾಪರಂಪರೆಗೆ ಸೇರಿದ ಕೃತಿ. ಆಕಟೀಕಾಕಾರ ಭ್ರಾಜಿಷ್ಣುವು ಪ್ರಾಕೃತ ಕಥಾನಿರೂಪಣ ಪರಂಪರೆಯ ಮೂಲವನ್ನು ಅನುಸರಿಸಿದ್ದಾನೆ.

*ವಡ್ಡಾರಾಧನೆ (ಸಂ), ಪೀಠಿಕೆ, ೧೯೯೩*
*ವಡ್ಡಾರಾಧನೆ : ಸಮಗ್ರ ಅಧ್ಯಯನ, ೧೯೯೯,*
*ಅನುಬಂಧ ೩, ಪು. ೪೨೨-೩೪*

# ೪೨. ರನ್ನ - ೯೯೩

● ಆರ್. ನರಸಿಂಹಾಚಾರ್

ಈತನು ಅಜಿತಪುರಾಣವನ್ನೂ ಸಾಹಸಭೀಮವಿಜಯವನ್ನೂ ರನ್ನಕಂದವೆಂಬ ಒಂದು ನಿಘಂಟುವನ್ನೂ ಬರೆದಿದ್ದಾನೆ. ಅಲ್ಲದೆ, ಅಜಿತಪುರಾಣದ ಕೊನೆಯಲ್ಲಿರುವ–

ಕರಮೆಸೆದುವು ರತ್ನತ್ರಯ
ಪರಿಕಲ್ಪದೆ ಪರಶುರಾಮಚರಿತಂ ಚಕ್ರೇ
ಶ್ವರಚರಿತಮಜಿತತೀರ್ಥೇ
ಶ್ವರಚರಿತಂ ರತ್ನನಿಂದೆ ಭುವನತ್ರಯದೊಳ್ ॥

ಎಂಬ ಪದ್ಯದಿಂದ ಈತನು ಪರಶುರಾಮಚರಿತ, ಚಕ್ರೇಶ್ವರಚರಿತ ಎಂಬ ಬೇರೆ ಎರಡು ಗ್ರಂಥಗಳನ್ನು ಸಹ ಬರೆದ ಹಾಗೆ ತಿಳಿಯುತ್ತದೆ. ಸಾಹಸಭೀಮವಿಜಯದಲ್ಲಿಯ ''ಗಂಗಮಂಡಲಚಕ್ರೇಶ್ವರಕಟಕೋತ್ತಮನಾಯಕವಿರಚನೆಯಿನನರ್ಘ್ಯರತ್ನಮಾದಂ ರತ್ನಂ'' ಎಂಬ ವಾಕ್ಯವನ್ನು ನೋಡಿದರೆ ಈತನ ಚಕ್ರೇಶ್ವರಚರಿತೆ ಗಂಗರಾಜನ ಸೇನಾನಾಯಕನಾದ ಮತ್ತು ತನ್ನ ಪೋಷಕನಾದ ಚಾವುಂಡರಾಯನ ವಿಷಯವಾದ ಗ್ರಂಥವೆಂದು ತೋರುತ್ತದೆ. ಈ ಪರಶುರಾಮಚರಿತವೂ ಚಕ್ರೇಶ್ವರಚರಿತವೂ ನಮಗೆ ದೊರೆತಿಲ್ಲ.

ಈ ಕವಿಯ ವಿಷಯವಾಗಿ ಇವನ ಗ್ರಂಥಗಳಿಂದ ಈ ಸಂಗತಿಗಳು ತಿಳಿಯುತ್ತವೆ:

ಈತನು ಜೈನಕವಿ; ಬೆಳುಗರ ನಾಡಿನಲ್ಲಿರುವ ಬೆಳುಗಲಿ ಐನೂರಿನಲ್ಲಿಯ ಜಂಬುಖಂಡಿ ಎಪ್ಪತ್ತರಲ್ಲಿ ಶ್ರೇಷ್ಠವಾದ ಮುದುವೊಳಲಲ್ಲಿ ಸೌಮ್ಯಸಂವತ್ಸರದಲ್ಲಿ (೯೪೯) ಹುಟ್ಟಿದನು; ಬಳೆಗಾರಕುಲಕ್ಕೆ ಸೇರಿದವನು. ಈತನ ತಾಯಿ ಅಬ್ಬಲಬ್ಬೆ; ತಂದೆ ಜಿನವಲ್ಲಭೇಂದ್ರ; ಸಹೋದರರು ದೃಢಬಾಹು, ರೇಚಣ, ಮಾರಯ್ಯ; ಹೆಂಡತಿಯರು ಜಕ್ಕಿ, ಶಾಂತಿ; ಮಗ ರಾಯ; ಮಗಳು ಅತ್ತಿಮಬ್ಬೆ. ಇವನ ಗುರು ಅಜಿತಸೇನಾಚಾರ್ಯ[1]; ಸ್ವಾಮಿ ಚಾವುಂಡರಾಯ. ಇವನಿಗೆ ತೈಲಪನು (೯೭೩-೯೯೭) ಕವಿಚಕ್ರವರ್ತಿಯೆಂಬ ಬಿರುದನ್ನು ಕೊಟ್ಟನು[2].

ಈತನು ಮೊದಲು ಸಾಮಂತರಲ್ಲಿಯೂ ಮಂಡಲೇಶ್ವರರಲ್ಲಿಯೂ ಇದ್ದು ಬಳಿಕ ತೈಲಪನಲ್ಲಿ(೯೯೭-೧೦೦೯) ''ಉದಯಪರಂಪರೆಯ''ನ್ನು ಹೊಂದಿದನು; ಕನಕದಂಡ, ಚಾಮರ, ಆನೆ, ಛತ್ರ ಮೊದಲಾದ ಬಿರುದುಗಳನ್ನು ಪಡೆದಿದ್ದನು. ಅಜಿತಪುರಾಣವನ್ನು ಶಕ ೯೧೫ನೆಯ ವಿಜಯವರ್ಷದಲ್ಲಿ–ಎಂದರೆ ಕ್ರಿ.ಶ. ೯೯೩ರಲ್ಲಿ ಬರೆದನು.

ಈತನಿಗೆ ಕವಿರತ್ನ, ಅಭಿನವಕವಿಚಕ್ರವರ್ತಿ, ಕವಿಕುಂಜರಾಂಕುಶ, ಕವಿಚಕ್ರವರ್ತಿ, ಉಭಯಕವಿ ಎಂಬ ಬಿರುದುಗಳುಂಟು. ಅಲ್ಲದೆ–

---

೧. ಈತನೇ ಚಾವುಂಡರಾಯನಿಗೂ ಮೊದಲನೆಯ ನಾಗವರ್ಮನಿಗೂ ಗುರು.

೨. ಪಡೆಯೆಡೆಯ ಕಡೆಯ ಬಡವರ್
ಕುಡೆ ಪಡೆದನೂ ಚಕ್ರವರ್ತಿಯೊಳಾ ತೈಲಪನೊಳ್
ಪಡೆದಂ ಮಹಿಮೋನ್ನತಿಯಂ
ಪಡೆದಂ ಕವಿಚಕ್ರವರ್ತಿವೆಸರಂ ರನ್ನಂ ॥

ಕವಿಮುಖಚಂದ್ರಂ ಕವಿಚ
ಕ್ರವರ್ತಿ ಕವಿರಾಜಶೇಖರಂ ಕವಿರಾಜಂ
ಕವಿಜನಚೂಡಾರತ್ನಂ
ಕವಿತಿಲಕಂ ಕವಿಚತುರ್ಮುಖಂ ಕವಿರತ್ನಂ ॥

–ಎಂಬ ಪದ್ಯದಲ್ಲಿ ಇತರ ಬಿರುದುಗಳನ್ನೂ ಹೇಳಿಕೊಂಡಿದ್ದಾನೆ.

ಈತನು ತನಗೆ ಹಿಂದೆ ಇದ್ದ ಕವಿಗಳಲ್ಲಿ ಪಂಪನನ್ನೂ ಹೊನ್ನನನ್ನೂ ಹೊಗಳಿ ಅವರ ವಿಷಯವಾಗಿಯೂ ತನ್ನ ವಿಷಯವಾಗಿಯೂ ಹೀಗೆ ಬರೆದಿದ್ದಾನೆ: ಪಂಪನಿಂದ 'ವಾಗ್ವಿಭವೋನ್ನತಿ ನೆಗಲ್ದುದು.' 'ಅವನ ಗುಣದೊಳಗೆಸೆದಿರ್ದ' ಉಭಯ ಕವಿಚಕ್ರವರ್ತಿಗೂ (ಹೊನ್ನ) ಅಭಿನವಚಕ್ರವರ್ತಿಗೂ (ತಾನು) ಸಮಾನರುಂಟೇ? ಕವಿಗಳಲ್ಲಿ ಕವಿತಾಗುಣಾರ್ಣವ (ಪಂಪ), ಕವಿರತ್ನ, ಇವರಿಬ್ಬರೇ ಪುಣ್ಯವಂತರು; ಇವರಿಬ್ಬರೇ ಕೃತಾರ್ಥರು. ಆದಿಪುರಾಣವನ್ನು ರಚಿಸಿದುದರಿಂದ ಪಂಪನು ದ್ವಿಜವಂಶಧ್ವಜವಾದನು. ಅಜಿತಪುರಾಣವನ್ನು ರಚಿಸಿದುದರಿಂದ ರನ್ನನು ವೈಶ್ಯವಂಶಧ್ವಜವಾದನು. ಹಿಂದೆ ಪಂಪನೂ ಪೊನ್ನನೂ ರಟ್ಟರಾಜ್ಯದಲ್ಲಿ ಪ್ರಖ್ಯಾತರಾದರು; ಉಭಯಕವಿಯಾದ ಕವಿರತ್ನನು ಚಾಳುಕ್ಯರಾಜ್ಯದಲ್ಲಿ ಪ್ರಖ್ಯಾತನಾದನು.

ಈ ಕವಿಯನ್ನು ಅಭಿನವಪಂಪ (ಸು.೧೧೦೦), ನಯಸೇನ (೧೧೧೨), ಪಾರ್ಶ್ವ (೧೨೦೫), ಮಧುರ ಸು. (೧೩೮೫), ಮಂಗರಸ (೧೫೦೮), ಮೊದಲಾದ ಕವಿಗಳು ಹೊಗಳಿದ್ದಾರೆ. ನಾಗವರ್ಮ ಕೇಶಿರಾಜರು ಇವನ ಗ್ರಂಥಗಳಿಂದ ಪದ್ಯಗಳನ್ನು ಉದಾಹರಿಸಿದ್ದಾರೆ.

ಈತನು ಸಂಸ್ಕೃತಕವಿಗಳಲ್ಲಿ ರಾಮಾಯಣಭಾರತಕರ್ತೃಗಳಾದ ವಾಲ್ಮೀಕಿ ವ್ಯಾಸರನ್ನೂ ಪದ್ಯರಚನೆಯಲ್ಲಿ ಖ್ಯಾತನಾದ ಕಾಳಿದಾಸನನ್ನೂ ಗದ್ಯರಚನೆಯಲ್ಲಿ ಖ್ಯಾತನಾದ ಬಾಣನನ್ನೂ ಕನ್ನಡಕವಿಗಳಲ್ಲಿ ಪಂಪಪೊನ್ನರನ್ನೂ ಸ್ತುತಿಸಿದ್ದಾನೆ.

ಇವನು ಕ್ಲಿಷ್ಟಕವಿತೆಯನ್ನು ,

ಕಾರಕಪೂರಕವಸ್ತುವಿ
ಚಾರಕನಿಸ್ತಾರಕರ್ಕಳೋಳಿಯೆ ಸಭೆಗೊ
ಟ್ಟೋರಂತೆ ನಾಲ್ವರಿರ್ದು ವಿ
ಚಾರಂಬೇಟ್ವಂತೆ ಪೇಟ್ದ ಕೃತಿಯುಂ ಕೃತಿಯೇ? ॥

ದರವುರಮುಮಂಟಸುಂಟಿಯು
ಮಱಪೊರಕನುಮೆನಿಸಿ ತರತರಂ ನುಡಿದು ಸಭಾಂ
ತರದೊಳ್ ರಂಜಿಪುದೆ ರಸಾಂ
ತರಂಗಳಂ ಮುಟ್ಟೆನುಡಿದು ರಂಜಿಸವೇಡಾ ॥

ಸರಸತಿಯನಬಲೆಯಂ ಗೋ
ಣ್ಮುರಿಗೊಂಡರ್ಥಕ್ಕೆ ಕುದಿದು ನೋಯಿಸುವವನ
ಕ್ಕರಿಗನೆ ಪಾತಕನಾತನೆ
ಸರಸ್ವತೀದ್ರೋಹನವನನಾರ್ ಮುಟ್ಟುವರೋ ॥

–ಎಂಬ ಪದ್ಯಗಳಲ್ಲಿ ನಿಂದಿಸಿ, ತನ್ನ ಸರ್ವೋತ್ಕೃಷ್ಟವಾದ ಉಭಯಕವಿತಾಚಾತುರ್ಯಾದಿಗಳನ್ನು ಈ ಪದ್ಯಗಳಲ್ಲಿ ಹೇಳಿಕೊಂಡಿದ್ದಾನೆ:

ಕೊಂಡಾಟದ ಸಾಮಂತರ
ಮಂಡಲಿಕರ ಸಕಲಚಕ್ರವರ್ತಿಗಳ ಸಭಾ
ಮಂಡಲದೊಳುಭಯಕವಿಮುಖ
ಮಂಡನಮಾಗಿರ್ಪ ರತ್ನಮೀಕವಿರತ್ನಂ ॥

ವಸುಧೆಯೊಳಗೊಂದು ರತ್ನಮಿ
ದೆಸೆದಿರ್ದುದು ಪಲವು ರತ್ನಮಿಲ್ಲೆಂಬಿನಮೇಂ
ಮಸುಳಿಸಿದನೊ ಬಹುರತ್ನಾ
ವಸುಂಧರಾ ಎಂಬ ವಾಕ್ಯಮಂ ಕವಿರತ್ನಂ ॥

ಆರಾತಿಯಕವಿಪುಂಗವ
ರಾರುಂ ಮುನ್ನಾರ್ತರಿಲ್ಲ ವಾಗ್ದೇವಿಯ ಭಂ
ಡಾರದ ಮುದ್ರೆಯನೊಡೆದಂ
ಸಾರಸ್ವತಮೆನಿಪ ಕವಿತೆಯೊಳ್ ಕವಿರತ್ನಂ ॥

ಕನ್ನಡಮೆರಡುನೂಱಱ
ಕನ್ನಡಮಾತಿರುಳ ಕನ್ನಡಂ ಮಧುರಮ್ಮೋ
ತ್ಪನ್ನಂ ಸಂಸ್ಕೃತಮೆನೆ ಸಂ
ಪನ್ನಂ ನೆಗೞ್ದುಭಯಕವಿತೆಯೊಳ್ ಕವಿರನ್ನಂ ॥

ರತ್ನಪರೀಕ್ಷಕನಾಂ ಕೃತಿ
ರತ್ನಪರೀಕ್ಷಕನೆನೆಂದು ಫಣಿಪತಿಯ ಫಣಾ
ರತ್ನಮುಮಂ ರನ್ನನ ಕೃತಿ
ರತ್ನಮುಮುಂ ಪೇೞ್ ಪರೀಕ್ಷಿಪಂಗೆಂಟೆರ್ದೆಯೇ? ॥

ರಸಮಂ ಭಾವಮುಮಂ ಕಾ
ಳಸಮಂ ಕುಣಿಕೆಯುಮನಱಿದು ಕವಿಮಾರ್ಗದೊಳಂ
ಪೊಸದೇಸೆಯ ನುಡಿಗಳೊಳಂ
ಪೊಸಯಿಪ ಬಲ್ಮೆಗೆ ಚತುರ್ಮುಖಂ ಕವಿರನ್ನಂ ॥

ಅವನಿಪರೊಳ್ ನಿಜಭುಜ ಚ
ಕ್ರವರ್ತಿ ರಣಜಯಕೆ ತೈಲನೆಂತಸಹಾಯಂ
ಕವಿಗಳೊಳಮಂತೆ ಕವಿಚಕ್ರವರ್ತಿ
ಕವಿರತ್ನನಂತು ಕೃತಿಗಸಹಾಯಂ ॥

ಮತಿ ಕೋಶಂ ಪದವಿದ್ಯೆ ಕಂಠಿಕೆ ಜಸಂ ಶ್ವೇತಾತಪತ್ರಂ ಸರ
ಸ್ವತಿ ಮಾದೇವಿ ಪದೋಕ್ತಿ ಭೇರಿ ಕಳಿತಂ ಸಿಂಹಾಸನಂ ಸಂದಲಂ
ಕೃತಿ ಚಂಚಚ್ಚಮರೀಜಮಾಗೆ ಕವಿತಾಸಾಮ್ರಾಜ್ಯಮಂ ತಾಳ್ದಿದು
ನ್ನತಿಯಿಂದಂ ಕವಿಚಕ್ರವರ್ತಿವೆಸರೇಂ ರನ್ನಂಗೆ ಮಯ್ವೆತ್ತುದೋ ॥

**ಇವನ ಗ್ರಂಥಗಳಲ್ಲಿ : ೧. ಅಜಿತಪುರಾಣ**

ಇದು ಎರಡನೆಯ ತೀರ್ಥಕರನಾದ ಅಜಿತನಾಥನ ಚರಿತೆ; ಚಂಪೂರೂಪವಾಗಿದೆ; ೧೨ ಆಶ್ವಾಸಗಳಾಗಿ ಭಾಗಿಸಲ್ಪಟ್ಟಿದೆ. ಈ ಪುರಾಣಕ್ಕೆ ಕವಿ 'ಕಾವ್ಯರತ್ನ', 'ಪುರಾಣತಿಲಕ' ಎಂಬ ಹೆಸರುಗಳನ್ನು ಇಟ್ಟಿದ್ದಾನೆ. ಇದರ ಉತ್ಕೃಷ್ಟತೆಯನ್ನು :

ಇನಿತುಪಪತ್ತಿಯಿಲ್ಲಿನಿತುಬಿನ್ನಣಮಿಲ್ಲಿನಿತರ್ಥದೃಷ್ಟಿಯಿ
ಲ್ಲಿನಿತುಚಿತೋಕ್ತಿಯಿಲ್ಲಿನಿತಳಂಕೃತಿಯಿಲ್ಲಿನಿತಾಗಮಾರ್ಥಮಿ
ಲ್ಲಿನಿತುವರಂ ಪ್ರಬೋಧಮಣಮಿಲ್ಲ ಪೆಱಗ್ಗಿದು ಕಾವ್ಯರತ್ನಮಂ
ಡನಮನೆ ಮೆಚ್ಚಿ ಬಣ್ಣಿಸದರಾರ್ ಕವಿರತ್ನನ ಕಾವ್ಯರತ್ನಮಂ ॥

ಎಂಬ ಪದ್ಯದಲ್ಲಿ ಹೇಳುತ್ತಾನೆ.[೧]

ಈ ಗ್ರಂಥವನ್ನು ಬರವುದಕ್ಕೆ ಕಾರಣವನ್ನು ಹೀಗೆ ಹೇಳುತ್ತಾನೆ:

ಪೊನ್ನನಿಂದ ಶಾಂತಿಪುರಾಣವನ್ನು ಬರಯಿಸಿದ ಮಲ್ಲಪನೂ ಪುನ್ನಿಮಯ್ಯನೂ ತೈಲಪನ (೯೭೩-೯೯೭) ಚಮೂಪತಿಗಳಾಗಿದ್ದರು. ಅವರಲ್ಲಿ ಪುನ್ನಿಮಯ್ಯನು ಗೋವಿಂದರನೆಂಬ ದ್ರೋಹಿಯೊಡನೆ ಯುದ್ಧಮಾಡಿ ಕಾವೇರಿಯ ತೀರದಲ್ಲಿ ಮೃತನಾದನು. ಮಲ್ಲಪನು ತೈಲಪನ ಕಾಲವಾದಮೇಲೆ ರಾಜ್ಯವಾಳಿದ, ಇಱಿವಬೆಡಂಗ ಎಂಬ ಬಿರುದುಳ್ಳ, ಸತ್ಯಾಶ್ರಯನ (೯೯೭-೧೦೦೯) ಆಸ್ಥಾನದಲ್ಲಿ ಮುಖ್ಯಾಧಿಕಾರಿಯಾಗಿದ್ದನು. ಈತನಿಗೆ ಐವರು ಗಂಡುಮಕ್ಕಳೂ ಮೂವರು ಹೆಣ್ಣುಮಕ್ಕಳೂ ಇದ್ದರು. ಹೆಣ್ಣುಮಕ್ಕಳಲ್ಲಿ ಅತ್ತಿಮಬ್ಬೆ, ಗುಂಡಮಬ್ಬೆ ಎಂಬಿಬ್ಬರನ್ನು ಚಾಳುಕ್ಯ ಚಕ್ರವರ್ತಿಯ ಮಹಾಮಂತ್ರಿಯಾದ ದಲ್ಲಪನ ಮಗ ನಾಗದೇವನಿಗೆ ವಿವಾಹಮಾಡಿಕೊಟ್ಟನು. ಈಯತ್ತಿಮಬ್ಬೆಯ ಗರ್ಭದಲ್ಲಿ ಪಡೆವಳ ತೈಲ ಎಂಬ ಬಿರುದುಳ್ಳ ಅಣ್ಣಿಗದೇವನೆಂಬ ಪುತ್ರನು ಜನಿಸಿದನು. ಹೀಗಿರುತ್ತಿರಲು ನಾಗದೇವನು ಕುಮರರ ಕಾಳಗದಲ್ಲಿ ತನ್ನ ಸಾಹಸವನ್ನು ತೋರಿಸಿ ಮಹಾರಾಜನನ್ನು ಮೆಚ್ಚಿಸಿ ಸೇನಾಪತಿ ಪದವಿಯನ್ನು ಹೊಂದಿದನು. ಅನಂತರ ಪಂಚಲನನ್ನು ಜಯಿಸಿ ಕರಹಡದೇಶದಿಂದ ಮಲ್ಲಮನನ್ನು ಓಡಿಸಿದನು. ಹೀಗೆ ಇನ್ನೂ ಅನೇಕ ಯುದ್ಧಗಳಲ್ಲಿ ಜಯವನ್ನು ಪಡೆದು ಕೊನೆಗೆ ಮೃತನಾದನು. ಆಗ ಅವನ ಕಿರಿಯ ಹೆಂಡತಿ ಗುಂಡಮಬ್ಬೆ ತನ್ನ ಅಕ್ಕನಾದ ಅತ್ತಿಮಬ್ಬೆಯ ಬಳಿಗೆ ಹೋಗಿ– "ನೀನು ಪುತ್ರವತಿಯಾದುದರಿಂದ ಮಗನನ್ನು ಪರಾಮರಿಸಿಕೊಂಡಿರು. ನಾನು ಪತಿಯೊಡನೆ ಸಹಗಮನವನ್ನು ಮಾಡುತ್ತೇನೆ" ಎಂದು ಹೇಳಿ ಪತಿಯೊಡನೆ ದೇಹತ್ಯಾಗ ಮಾಡಿದಳು. ಬಳಿಕ ಅತ್ತಿಮಬ್ಬೆ ವ್ರತನಿಷ್ಠಳಾಗಿ ಸಾವಿರಾರು ಮಣಿಕನಕಮಯಜಿನಪ್ರತಿಮೆಗಳನ್ನು ಮಾಡಿಸಿ ವಿಶೇಷಪ್ರಖ್ಯಾತಿಹೊಂದಿ ತನ್ನ ತ್ಯಾಗದಿಂದ ಜಗವೆಲ್ಲಾ ದಾನಚಿಂತಾಮಣಿ ಎಂದು ತನ್ನನ್ನು ಹೊಗಳುವಂತೆ ಮಾಡಿದಳು. ಆಕೆಯ ಇಷ್ಟಾನುಸಾರವಾಗಿ ಕವಿ ಈ ಪುರಾಣವನ್ನು ಬರೆದನು.

---

೧. ಈ ಕವಿಯ ಗ್ರಂಥವನ್ನು ಪಾರ್ಶ್ವಪಂಡಿತನು (೧೨೦೫)

ರತ್ನ ಕೃತಿ ಪದಕಮಂ ನುತ
ಸೂತ್ರಾರ್ಥವ್ಯಕ್ತಿಯುಕ್ತಮಂ ಸಂಸ್ಕೃತಿಯಂ
ಯುತ್ನದೆ ಸುಜನರ್ ವಿಜಿತಸ
ಪತ್ನ ಮನತಿಪೃಥುಳಹೃದಯದೊಳ್ ತಳೆಯದರಾರ್ ॥

ಎಂದು ಸ್ತುತಿಸಿದ್ದಾನೆ.

ಗ್ರಂಥಾವತಾರದಲ್ಲಿ ಕವಿ ಅಜಿತಜಿನನನ್ನು ಸ್ತುತಿಸಿದ್ದಾನೆ. ಬಳಿಕ ಸಿದ್ಧಾದಿಗಳನ್ನು[1] ಸ್ತುತಿಸಿ, ಮಲ್ಲಪ, ಪುನ್ನಿಮಯ್ಯ ಇವರ ವಂಶಾದಿಗಳನ್ನು ಹೇಳಿ, ದಾನಚಿಂತಾಮಣಿಯೆಂದು ಪ್ರಸಿದ್ಧಳಾಗಿದ್ದ ಅತ್ತಿಮಬ್ಬೆಯನ್ನು ವಿಶೇಷವಾಗಿ ಹೊಗಳಿ,[2] ತರುವಾಯ ಕಥೆಯನ್ನು ಆರಂಭಿಸಿದ್ದಾನೆ. ಆಶ್ವಾಸಗಳ ಕೊನೆಯಲ್ಲಿ—

> ಇದು ಸಕಲಮುನೀಂದ್ರವೃಂದವೃಂದಾರಕ ಶ್ರೀಮದಜಿತಸೇನಭಟ್ಟಾರಕಶ್ರೀಪಾದ ಪದ್ಮ ಪ್ರಸಾದಾಸಾದಿತರತ್ನತ್ರಯಾಲಂಕೃತ ಶ್ರೀಮದಭಿನವಕವಿಚಕ್ರವರ್ತಿ ಕವಿರತ್ನನಿರ್ಮಿತ ಶ್ರೀ ದಾನಚಿಂತಾಮಣಿನಿರ್ಮಾಪಿತ ಶ್ರೀಮದಜಿತತೀರ್ಥಕರ ಪುರಾಣತಿಲಕದೊಳ್

ಎಂಬ ಗದ್ಯವಿದೆ.

ಈ ಕವಿ ಬಹಳ ಪ್ರಸಿದ್ಧನು. ಇವನ ಬಂಧವು ಸರಸವಾಗಿಯೂ ಪ್ರೌಢವಾಗಿಯೂ ಇದೆ. ಇವನ ಪದಸಾಮಗ್ರಿಯೂ ರಚನಾಶಕ್ತಿಯೂ ಬಂಧಗೌರವವೂ ಆಶ್ಚರ್ಯಾವಹವಾಗಿವೆ. ಪದ್ಯವನ್ನು ಆರಂಭಿಸಿದರೆ ಮಧ್ಯದಲ್ಲಿ ಆವ ತಡೆಯೂ ಇಲ್ಲದೆ ಕೊನೆಯವರೆಗೂ ಪ್ರವಾಹರೂಪವಾಗಿಯೂ ಹೃದಯಂಗಮವಾಗಿಯೂ ಪದಗಳು ಹೊರಡುವಂತೆ ಕಾಣುತ್ತವೆ. ಈ ಕಾರಣದಿಂದಲೇ ಮಧುರನು (ಸು. ೧೩೮೫) ಧರ್ಮನಾಥಪುರಾಣದಲ್ಲಿ ಹೊನ್ನ ರನ್ನ ಇವರ ಚಾತುರಿಯನ್ನು—

> ಬಿನ್ನಣದ ಕುಸುರಿ ಪಸರಿಸು
> ವನ್ನಂ ಗುಣಜಾತಿಬಂಧಮಳವಡೆ ನೆಗಳ್ದ
> ಪೊನ್ನಂ ರನ್ನಂ ಕೂಡಿದೊ
> ಡಿನ್ನೀವಾಗ್ವಧುಗೆ ಭೂಷಣಂ ಪೆಱತುಂಟೇ ॥

ಎಂದು ಚಮತ್ಕಾರವಾಗಿ ವರ್ಣಿಸಿದ್ದಾನೆ.

ಈ ಪುರಾಣದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:

### ವಸಂತ

> ಎಳವೆಱೆ ದಾಡೆ ಕೆಂದಳಿರೆ ನಾಲಗೆ ಮಾಮರದಳ್ಳೆಗೊಂಬಿನೊಳ್
> ಮಿಳಿರ್ವೆಳವಳ್ಳಿ ಬಾಲಮಲರ್ದೊಂಗಲೆ ಕೇಸರಮೆಂಬಿನಂ ಮನಂ
> ಗೊಳೆ ಮಧುಮಾಸಕೇಸರಿ ವಿಯೋಗಿಗಳೆಂಬ ಮೃಗಂಗಳಂ ಭಯಂ
> ಗೊಳಿಸಿದುದುತ್ಕಕೀರಮದಕೋಕಿಲಗರ್ಜಿತತರ್ಜಿತಂಗಳಿಂ[3] ॥

> ನವಸಹಕಾರದಂಕುರದಿನಂಕುರಿಸಿತ್ತು ಪೊದಟ್ಟು ನೀಳ್ದಪ
> ಲ್ಲವತತಿಯಿಂದೆ ಪಲ್ಲವಿಸಿತುನ್ಮದಭೃಂಗಕುಳಕ್ಕೆ ಕಂಪುವೀ

---

೧ ಸಿದ್ಧರು, ಆಚಾರ್ಯರು, ಉಪಾಧ್ಯಾಯರು, ಸಾಧುಗಳು; ಶಾಸನದೇವಿಯರು; ತನ್ನ ಗುರುವಾದ ಅಜಿತಸೇನಮುನಿ, ಅರ್ಹತ್ಸಿದ್ಧಸಾಧುಧರ್ಮ; ಜಿನಾಗಮ, ಗಣಧರಸೇನಾ ನಾಯಕನಾದ ಸಿಂಹಸೇನ, ಸರಸ್ವತಿ ಯಕ್ಷಿಯಕ್ಷರು, ಧರ್ಮಚಕ್ರ.

೨ ಈಕೆಯನ್ನು ಸ್ತುತಿಸುವಾಗ-ದಾನಮಾಡುವುದರಲ್ಲಿ ಬೂತುಗ, ನೊಳಂಬಾಂತಕ, ಚಾವುಂಡರಾಯ, ಶಂಕರಗಂಡ, ಇವರು ಪ್ರಸಿದ್ಧರು, ಇವರಿಗಿಂತ ಈಕೆ ಪ್ರಸಿದ್ಧಳು—ಎಂದು ಹೇಳುತ್ತಾನೆ.

೩ ಶಬ್ದಮಣಿದರ್ಪಣದಲ್ಲಿ ಉದಾಹೃತವಾಗಿದೆ-ಪುಟ ೮೧.

ಱುವ ಕುಸುಮಂಗಳಿಂ ಕುಸುಮಿಸಿತ್ತು ಶುಕವ್ರಜಮುತ್ಸುಕತ್ವದಿಂ
ಸಱಿವ ಫಲಂಗಳಿಂ ಫಲಿತಮಾಯ್ತು ಮನೋಜಮನೋರಥದ್ರುಮಂ ॥

## ಚಂದ್ರ

ಜಗದಾಲೋಕನದರ್ಪಣಂ ಪ್ರಥಮದಿಕ್ಕಾಂತಾನನಂ ಕಂತುರಾ
ಜಗಜೋದ್ದೀಪನಪಿಂಡಮಂಬರಸರಸ್ಫುತ್ತಂಸಹಂಸಂ ವಿಯೋ
ಗಿಗಣಾಕೂತಕುರಂಗಪೋತಭಯಕೃತ್ಕಂಠೀರವಂ ಚೆಲ್ವುವೆ
ತ್ತೊಗೆದತ್ತರ್ಣವಪೀಚಿನರ್ತನನಟಂ ಬಿಂಬಂ ಸುಧಾಸೂತಿಯಾ[೧] ॥

## ಚಂದ್ರಿಕೆ

ಎಲಗಸೆದೀಂಟಿಕೊಂಡು ಕುಡಿಯಲ್ ಮೊಗೆಯಲ್ ಕೊಡಗೊಂಡು ತೀರ್ದ ಬ
ಟ್ಟಲನೆಳದೊಂಟದೊಳ್ ಪರಿಯಿಸಲ್ ಪಱೆಗೋಲ್ಗಳನಿಕ್ಕಿ ಪಾಯಿಸಲ್
ನೆಲೆಯಿನಿಸಂದು ನೋಡಲೊಳಪೊಕ್ಕು ಘುಡುಮ್ಮೆಱೆ ದಾಡಲೀಸಲ
ಗ್ಗಲಿಸಿದಲಂಪಿನಿಂ ಬಗೆದುದಂದು ಜನಂ ಘನಚಂದ್ರಿಕಾಂಬುವಂ[೧] ॥

## ಸೂರ್ಯೋದಯ

ವಾಸವದಿಕ್ತಟಂ ಸಮೆದ ಮೂಷೆ ತಮಂ ಸುರಿದಿರ್ದಲಬ್ಜಸಂ
ವಾಸಿ ಸಮೀರನೇರಣೆಗನಾಗೆ ನಿದಾಘದ ದೀಪ್ತಿವರ್ತಿಯೊಳ್
ಕಾಸೆ ತೆರಳ್ದ ಪಿಂಜರಿಯವೋಲ್ ಕಿಸುಸಂಜೆ ತೆರಳ್ದಿನಂ ಪದಂ
ಗಾಸಿನ ಪೊನ್ನ ಗಟ್ಟಿಯವೊಲೊಪ್ಪಿದುದುದ್ಗತಭಾನುಮಂಡಲಂ ॥

## ಪ್ರಭಾತ

ಕೇಳ್ವನಜಾನನೇ ಷಪರಲೋಚನೆ ಪದ್ಮಿನಿ ಪದ್ಮಬಾಂಧವಂ
ಬಳ್ವಳ ನೀಡಿದಂ ಕರಸಹಸ್ರಮನೆಂದು ಕಳಸ್ವನಂ ಮನಂ
ಗೊಳ್ವಿನೆಗಂ ಕಳಕ್ಕಳಿಸಿ ಸಂತಸವಾತಿನ ಪೂರ್ಣಪಾತ್ರಮಂ
ಕೊಳ್ವವೊಲೀಟ್ಟಿಕೊಂಡುವಳಿಗಳ್ ಸುಮನೋಮಕರಂದಗಂಧಮಂ ॥

## ಸ್ತ್ರೀಜನ

ವಿಳಸಿತಪುಂಡರೀಕಚರಣಂ ಕುಮುದೇಕ್ಷಣಕಾಂತಮಂಜನಾ
ಕುಳಿತವಿಲೋಚನಂ ಸ್ವಗತವಾಮನಮನ್ವಿತಸುಪ್ರತೀಕಮು
ಜ್ಜ್ವಳತರಪುಷ್ಪದಂತಮಮರೇಭಗತಂ ಗೃಹಸಾರ್ವಭೌಮಮು
ಗ್ಗಳಮೆಸೆದತ್ತು ದಿಗ್ವಳಯದಂತೆ ನಿಶಾಂತದೊಳಂಗನಾಜನಂ ॥

## ಸ್ತ್ರೀಶೋಕ

ಪಡಪಡವಾಯ್ತು ಮೆಲ್ಲೆರ್ದೆಗಳಂ ಕರಯುಗ್ಮದಿನೊತ್ತಿ ಕಣ್ಣನೀ
ರಡಿಗಡಿಗುಣ್ಮಿ ಪಾಯ್ತರೆ ಮುಖೇಂದು ಬಿಗುರ್ತಿರೆ ಸುಯ್ಯು ಬೆಂಕೆಯಾ
ನಿಡುಪಮಳುಂಬಮಪ್ಪಿನೆಗಮೀಶನದೆಲ್ಲಿದನೆತ್ತವೋದನಾ
ವೆಡೆಯನಧೀಶನೆಂದು ಪಲವಾಡಿದರಂದಜಿತಾಂಗನಾಜನಂ ॥

---

೧ ನಾಗವರ್ಮನ ಕಾವ್ಯಾವಲೋಕನದಲ್ಲಿ ಉದಾಹೃತವಾಗಿವೆ.

## ವಿರಕ್ತಿ

ಸಾರದೆ ಸಾರಮಪ್ಪ ಜಿನಧರ್ಮಮನಾತ್ಮನಸಾರಮಪ್ಪುದಂ
ಸಾರಮಿದೆಂದು ನಂಬಿ ತನಗಲ್ಲದುದಂ ತನಗಪ್ಪುದೆಂದು ಕೇ
ದಾರವಿಹಾರಸೋದರಕೃಶೋದರಸುಂದರದಾರದಾರಕೋ
ದಾರಪಿಮೋಹದೊಳ್ ತೊಡರ್ದು ದಾರುಣದುಃಖಿಮನೆಯ್ದುದಿರ್ಕುಮೇ ॥

## ೨. ಸಾಹಸಭೀಮವಿಜಯ ಅಥವಾ ಗದಾಯುದ್ಧ

ಈ ಗ್ರಂಥವು ಚಂಪೂರೂಪವಾಗಿದೆ; ೧೦ ಆಶ್ವಾಸಗಳಾಗಿ ಭಾಗಿಸಲ್ಪಟ್ಟಿದೆ. ಇದರಲ್ಲಿ–ಭೀಮನು ದ್ರೌಪದಿಯ ಮುಂದೆ ಪ್ರತಿಜ್ಞೆ ಮಾಡಿದಂತೆ ದುರ್ಯೋಧನನ ಮಕುಟವನ್ನೂ ತೊಡೆಗಳನ್ನೂ ಗದಾಯುದ್ಧದಲ್ಲಿ ಭಂಗಿಸಿ ಅವನನ್ನು ಕೊಂದು ಪಟ್ಟಾಭಿಷಿಕ್ತನಾದನು–ಎಂದು ವರ್ಣಿಸಿದೆ. ಇಱಿವಬೆಡಂಗ, ಸಾಹಸಭೀಮ, ಚಾಳುಕ್ಯನಾರಾಯಣ, ಅಕಳಂಕಚರಿತ, ಆಮ್ಮನಗಂಧವಾರಣ, ಸಾಹಸಾಂಕ ಎಂಬ ಬಿರುದುಗಳುಳ್ಳ ಸತ್ಯಾಶ್ರಯನ (೯೯೭-೧೦೦೯) ಸಾಹಸಗಳನ್ನು ವರ್ಣಿಸಬೇಕೆಂದು ತನಗೆ ಆಶೆ ಹುಟ್ಟಿದುದರಿಂದ ಈ ರಾಜನನ್ನು ಕಥಾನಾಯಕನನ್ನಾಗಿ ಮಾಡಿ ''ಭೀಮನೊಳ್ ಪೋಲಿಸಿಪೇೞ್ದೆನೀಗದಾಯುದ್ಧಮಂ'' ಎಂದು ಕವಿ ಹೇಳುತ್ತಾನೆ. ಈ ರಾಜನು ''ನರಪತಿತ್ರೈಲಪಂ ಬೆಸಸೆ ಘೂರ್ಜರಸೇನೆಗೆ ಸೂಚಿಯಾನೆಯುಂ ಪರಿಯಿಸಿ ಗೆಲ್ದಂ'' ''ಕೊಂಕಣೇಶ್ವರನನಿರಿರ್ದು ಸಾಧಿಸಿದಂ'' ''ಬಲವತ್ತುಂಗಕಳಿಂಗರಾಜಮದವನ್ಮಾತಂಗಸಿಂಗಂ'' ಎಂದೂ, ''ಸರ್ವಗ್ರಾಸಂಗೊಂಡತ್ತಪರಾದಿತ್ಯನ ಮಂಡಲಮಂ ಬಾಹುರಾಹು ಸತ್ಯಾಶ್ರಯನಾ'' ಎಂದೂ ಹೇಳಿದ್ದಾನೆ. ಈ ಸತ್ಯಾಶ್ರಯನ ವಂಶಪರಂಪರೆಯನ್ನು ಈ ರೀತಿಯಾಗಿ ವರ್ಣಿಸಿದ್ದಾನೆ :

> ಅವರ ಪೂರ್ವಜರಪ್ಪರಸುಗಳೊಳಗೆ ಅಯೋಧ್ಯಾಪುರಪರಮೇಶ್ವರನುಂ ದಿಶಾದಂತಿ ಪ್ರಕಟ ಪ್ರಭಾವನುಮಪ್ಪ ಸತ್ಯಾಶ್ರಯವಲ್ಲಭನಿಂ, ವಿಷ್ಣುವರ್ಧನಾಪರನಾಮಧೇಯನಿಂ, ರಾಷ್ಟ್ರಕೂಟ ಗಜಘಟಾವಿಘಟನಸಿಂಹನೆನಿಸಿದ ಜಯಸಿಂಹದೇವನಿಂ, ಅತಿಪ್ರಬಲರಣರಾಮನೆನಿಸಿದ ರಣರಂಗಸಿಂಹನಿಂ, ವಾತಾಪಿಪುರವರೇಶ್ವರನೆನಿಸಿದ ಪುಲಕೇಶಿದೇವನಿಂ, ಪರಿರಕ್ಷಿತಪವಿತ್ರ ವರ್ಮನೆನಿಸಿದ ಕೀರ್ತಿವರ್ಮನಿಂ, ತತ್ತನಯನಪ್ಪೆರಡನೆಯ ಸತ್ಯಾಶ್ರಯದೇವನಿಂ, ಅವನ ಕಿಱಿಯ ಮಗನಪ್ಪ ಮಂಗಳಾರ್ಣವನಿಂ, ಸತ್ಯಾಶ್ರಯನಪ್ಪೆರಡನೆಯ ಸತ್ಯಪ್ರತಿಯಿಂ, ತತ್ತನಯನಪ್ಪಾದಿತ್ಯವರ್ಮನಿಂ, ತದಪತ್ಯನಪ್ಪ ವಿಕ್ರಮಾದಿತ್ಯನಿಂ, ತತ್ಪುತ್ರನಪ್ಪ ದುರ್ಧರಮಲ್ಲನಿಂ, ತನ್ನಂದನನಪ್ಪ ನಿರವದ್ಯಾಪರನಾಮಧೇಯನಪ್ಪ ವಿಜಯಾದಿತ್ಯ ಭಟ್ಟಾರಕನಿಂ, ತತ್ಸೂನುಮಿತ್ರನಪ್ಪ ವಿಕ್ರಮಾರ್ಣವನೆನಿಸಿದ ಕೊಂಕಣವಿಕ್ರಮಾದಿತ್ಯನಿಂ, ತತ್ಸೂನುಮಿತ್ರನಪ್ಪ ಕೀರ್ತಿವರ್ಮನಿಂ, ಆತನ ಕಿಱಿಯ ಮಗನಪ್ಪ ಭೀಮಪರಾಕ್ರಮನಿಂ, ತಜ್ಜಾತನಪ್ಪೆರಡನೆಯ ಕೀರ್ತಿವರ್ಮನಿಂ, ತತ್ಸೂನುವಪ್ಪ ಪಿರಿಯ ತ್ರೈಲಪನಿಂ, ಆತನ ಮಗನಪ್ಪ ಮುಕುಂದಿಯ ಕೊಂದ ಕುಂದಿಯ ಭೀಮನಿಂ, ಆತನ ಮಗನಪ್ಪ ವಿಕ್ರಮಾದಿತ್ಯದೇವನಿಂ, ಆತನ ಮಗನಪ್ಪ ರಣರಂಗ ಮಲ್ಲನೆನಿಪ್ಪಯ್ಯಣದೇವನಿಂ, ಆತನ ಮಗನುತ್ತುಂಗಮಲ್ಲನೆನಿಸಿದ ವಿಕ್ರಮಾದಿತ್ಯನಿಂ, ಚಾಲುಕ್ಯ ಕುಲೋದ್ಭವನಪ್ಪ ವಿಕ್ರಮಾದಿತ್ಯದೇವಂಗಂ ಚೈದ್ಯಕುಲೋದ್ಭವೆಯಪ್ಪ ಬೊಂಕಾದೇವಿಗಂ ಪುಟ್ಟಿದ ಕರಹಟಭಯಂಕರಂ, ಪಲ್ಲಿಕೋಟೋಲ್ಲಂಘನಂ, ಭದ್ರಕವಿದ್ರಾವಣಂ, ಕೊಂಕಣ ಭಯಂಕರಂ, ಯಾದವಕುಲಾಂಬರದ್ಯುಮಣಿ, ರಣರಂಗಭೀಷಣಂ, ಸಾಮಂತಮೃಗ ಶಾರ್ದೂಲ, ರಣರಂಗರಾಕ್ಷಸ, ಅಕಲಂಕರಾಮ, ತಳವರ್ಗತಳಪ್ರಹಾರ, ಅರಿಷ್ಟಘರಟ್ಟ, ರಾಷ್ಟ್ರಕೂಟ ಕಾಳಕೂಟಂ. ಪಾಂಚಾಲಮದೇಭಪಂಚಾನನಂ, ಉತ್ಪಕ್ಯಮಲ್ಲಂ,

ಶ್ರೀಮನ್ನೂರ್ಮಡಿ ತೈಲಪ ನೆನಿಸಿದಾಹವಮಲ್ಲದೇವನಿಂ ಚಾಳುಕ್ಯವಂಶಮುದಿತೋದಿತಮಾದುದು.

ಈ ಗ್ರಂಥವನ್ನು ''ವನರುಹಭವನೆನಿಸಿದ ದಂಡನಾಯಕಂ ಕೇಶಿ ತಿರ್ದೆಪೇೞ್ದಿಂ'' ಎಂದು ಹೇಳುತ್ತಾನೆ. ಈ ಕೇಶಿದಂಡನಾಯಕನಾರೋ ತಿಳಿಯದು. ಕವಿ ಈ ಗ್ರಂಥದಲ್ಲಿ ಭಾರತದ ಕಥೆಯನ್ನೆಲ್ಲಾ ''ಸಿಂಹಾವಲೋಕನಕ್ರಮ''ದಿಂದ ತಿಳಿಸಿರುವಂತೆ ಹೇಳುತ್ತಾನೆ. ಗ್ರಂಥಾವತಾರದಲ್ಲಿ ಶ್ಲೇಷೆಯಿಂದ ಚಾಳುಕ್ಯ ನಾರಾಯಣನನ್ನು ನಾರಾಯಣನಿಗೆ ಹೋಲಿಸಿ ವಿಷ್ಣುಸ್ತುತಿ ಮಾಡಿದ್ದಾನೆ. ಬಳಿಕ ಇದೇ ರೀತಿಯಾಗಿ ಈಶ್ವರನನ್ನೂ ಬ್ರಹ್ಮನನ್ನೂ ಸೂರ್ಯನನ್ನೂ ಮನ್ಮಥನನ್ನೂ ಕ್ರಮವಾಗಿ ಸ್ತುತಿಸಿ ಅನಂತರ ಸರಸ್ವತಿಯನ್ನೂ ಗಣನಾಯಕನನ್ನೂ ಸ್ತುತಿಸಿದ್ದಾನೆ. ಆಶ್ವಾಸಗಳ ಅಂತ್ಯದಲ್ಲಿ–

ಇದು ಸಮಸ್ತಭುವನವಲ್ಲಭ ಶ್ರೀಮದಾಹವಮಲ್ಲದೇವ ಶ್ರೀಪಾದಕಲ್ಪಪಾದ ಪಸದಾಶ್ರಯಾಸನ್ನವರ್ತಿ ಕವಿಚಕ್ರವರ್ತಿ ಕವಿರನ್ನ ವಿರಚಿತಮಪ್ಪ ಚಾಳುಕ್ಯಚಕ್ರವರ್ತಿ ಶ್ರೀ ಸಾಹಸಭೀಮವಿಜಯದೊಳ್

ಎಂಬ ಗದ್ಯವಿದೆ.

ನಮಗೆ ದೊರೆತ ಈ ಗ್ರಂಥದ ಪ್ರತಿಗಳೆರಡರ ಕೊನೆಯಲ್ಲಿಯೂ–

ಶಕಸಮಗತಿಋತುಯುಗಶಶಿ
ನಿಕರಾಂಕಂ ಚಿತ್ರಭಾನು....ಕಾ
ರ್ತಿಕಸಿತಸಪ್ತಮಿ....
ಸುಕರಂ ಬುಧಸೇವ್ಯಮಾಯ್ತು ರನ್ನನ ಕಾವ್ಯಂ ॥

ಎಂಬ ಅಸಮಗ್ರವಾದ ಪದ್ಯವಿದೆ. ಈ ಪದ್ಯದ ಅರ್ಥವು ವಿಶದವಾಗಿಲ್ಲ. ವರ್ಷಸಂಖ್ಯೆಯನ್ನು ನೋಡಿದರೆ ನಾಲ್ಕು ಅಂಕಗಳು ಇರುವಂತೆ ತೋರುತ್ತದೆ. ಶಕವರ್ಷ ಸಾವಿರವೂ ಚಿಲ್ಲರೆಯಾದರೆ ಅಜಿತಪುರಾಣವನ್ನು ಬರೆದ ಶಕ ೯೧೫ಕ್ಕೂ ಇದಕ್ಕೂ ಸಂಬಂಧವೇ ತೋರುವುದಿಲ್ಲ. 'ಶಶಿ' ಎಂಬುದಕ್ಕೆ ಒಂದು ಎಂಬ ಸಂಕೇತವುಂಟು. ಆದರೆ ಈ ಪದ್ಯದಲ್ಲಿರುವ ''ಶಶಿನಿಕರ'' ಎಂಬುದಕ್ಕೆ ಏನರ್ಥವೋ ತಿಳಿಯದು. ಈ ಪದ್ಯವು ಸಮಗ್ರವಾಗಿಯೂ ಸುಬದ್ಧವಾಗಿಯೂ ದೊರೆವವರೆಗೆ ಇದರ ಅರ್ಥವನ್ನು ನಿಶ್ಚಯಿಸುವುದು ಕಷ್ಟವಾಗಿದೆ. ಚಿತ್ರಭಾನು ವರ್ಷ ಎಂಬುದರಿಂದ ಅಜಿತಪುರಾಣವನ್ನು ಬರೆದ ವಿಜಯ ವರ್ಷದಿಂದ ಈಚೆಯ ಚಿತ್ರಭಾನು ಎಂದು ಊಹಿಸುವಪಕ್ಷಕ್ಕೆ ಆ ಗ್ರಂಥವನ್ನು ಬರೆದ ೪೯ ವರ್ಷಗಳ ಮೇಲೆ, ಕವಿಗೆ ೯೩ ವರ್ಷಗಳಾಗಿದ್ದಾಗ, ಈ ಕೃತಿಯನ್ನು ರಚಿಸಿರಬೇಕಾಗುತ್ತದೆ; ಅಲ್ಲದೆ ಆ ಕಾಲದ ರಾಜನೇ ಬೇರೆ; ಆದುದರಿಂದ ವಿಜಯವರ್ಷಕ್ಕೆ ಹಿಂದಣ ಚಿತ್ರಭಾನುವಿನಲ್ಲಿ–ಎಂದರೆ, ಶಕ ೯೦೫ರಲ್ಲಿಯೇ (೯೮೨)–ಈ ಗ್ರಂಥವನ್ನು ಬರೆದಿರಬೇಕು.

ಈ ಗ್ರಂಥದಲ್ಲಿ ಕವಿ ತನ್ನ ವಾಕ್ಪ್ರೌಢಿಮೆಯ ಪರಾಕಾಷ್ಠೆಯನ್ನು ತೋರಿಸಿದ್ದಾನೆ; ಮುಖ್ಯವಾಗಿ ವೀರರಸವನ್ನು ಬಹಳ ಶ್ಲಾಘ್ಯವಾಗಿ ನಿರೂಪಿಸಿದ್ದಾನೆ. ಈ ಗ್ರಂಥದಿಂದ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ:

ದುರ್ಯೋಧನ ವಧಾನಂತರ ''ಇದುವರೆಗಂ ಕುರುಮಹೀಪತಿಯೊಳ್ ನೆಲಸಿರ್ದನೀಗಳುತ್ತಮಪುರುಷೋತ್ತಮಂ ಬಯಸೆ ಪಾಂಡವರೊಳ್ ನೆಲಸಲ್ಕೆ ಪೋದಪೆಂ'' ಎಂದು

ಹೇಳಿದ ಲಕ್ಷ್ಮಿಯನ್ನು ನೋಡಿ ಅಶ್ವತ್ಥಾಮನುಕ್ತಿ-

ಕಲಿ ಪಂದೆಯೆಂದು ಬಗೆಯದೆ
ಕುಲಜಂ ಕುಲಹೀನನೆಂದು ಬಗೆಯದೆ ತರುಣಂ
ಸಲೆ ವೃದ್ಧನೆಂದು ಬಗೆಯದ
ನೆಲಸುವೆ ನಿನ್ನಿಂ ನಿಕೃಷ್ಟರೆಂಬರುಮೊಳರೇ ||

ಇಱಿಯಿಸುವೆ ತಂದೆಮಕ್ಕಳ
ನಿಱಿಯಿಸುವಯ್ ಸೋದರರ್ಕಳಂ ತಮ್ಮೊಳ್ ತ
ಳ್ತಿಱಿಯಿಸುವಯ್ ಗುರುಶಿಷ್ಯಕರ
ನಱುಗುಲಿ ನಿನ್ನಂತು ಕಷ್ಟೆಯಾದರುಮೊಳರೇ ||

ಪೊಡಮಡೆ ಪರಸದ ಬಿನ್ನವಿ
ಪೊಡೆ ಕೇಳದ ಮುಂದ ನಿಂದರಂ ಕಾಣದೆ ತ
ಕ್ಕಡೆಯೊಳ್ ಕಡೆಗಣಿಸುವ ನೃಪ
ವಿಡಂಬಮಿವು ಲಕ್ಷ್ಮಿ ನಿನ್ನ ದೂಸಱಿನಲ್ತೇ ||

ಗುಣಿಗಳ ನೆರೆವೊರ್ದದ ನಿ
ರ್ಗುಣರಂ ಪೊರ್ದುವ ವಿಶಿಷ್ಟರಂ ದುಷ್ಟರೊಳಂ
ಗಣೆಯಿಸಿ ಸಮನೆಂಬವಗುಣ
ಗಣಂಗಳಿವು ಲಕ್ಷ್ಮಿ ನಿನ್ನ ದೂಸಱಿನಲ್ತೇ ||

## ಭೀಮಸೇನನು ಕೊಳದಲ್ಲಿ ಮುಳುಗಿದ್ದ ದುರ್ಯೋಧನನನ್ನು ಮೂದಲಿಸುವುದು

ಹರಿ ಸಂಧಾನಕ್ಕೆ ವಂದಂದವಘಡಿಸಿದಹಂಕಾರಮೆಲ್ಲಿತ್ತೊ ಕೃಷ್ಣಾಂ
ಬರಕೇಶಾಕೃಷ್ಟಿಯಂ ಮಾಡಿಸಿದ ಮದಮದೆಲ್ಲಿತ್ತೊ ಕೌಂತೇಯರಂ ಮ
ಚ್ಚರದಿಂ ಕಾಂತಾರದೊಳ್ ತಿಱ್ರನೆ ತಿರುಪಿದ ಸೊರ್ಕೀಗಳೇನಾದುದೆಂದಾ
ಕುರುವಂಶಾಧೀಶನಂ ಮೂದಲಿಸಿದನದಟಂ ಭೀಮನುದ್ದಾಮಭೀಮಂ ||

## ಭೀಮನ ಗದಾಪ್ರಹಾರ

ಇದು ಲಾಕ್ಷಾಗೇಹದಾಹಕ್ಕಿದು ವಿಷಮವಿಷಾನ್ನಕ್ಕಿದಾನಾಡ ಜೂದಿಂ
ಗಿದು ಪಾಂಚಾಲೀಪ್ರಪಂಚಕ್ಕಿದು ಕೃತಕಸಭಾಲೋಕನ ಭ್ರಾಂತಿಗೆಂದೋ
ವದ ಪೊಯ್ದಂ ಕಾಲ್ಗಳಂ ತೋಳ್ಗಳನಗಲ್ದುರಮಂ ಕೆನ್ನೆಯಂ ನೆತ್ತಿಯಂ ಕೋ
ಪದಿನಯ್ದುಂ ದುರ್ಣಯಕ್ಕಯ್ದೆಡೆಯನುರುಗದಾದಂಡದಿಂ ಭೀಮಸೇನಂ ||

## ದುರ್ಯೋಧನನು ಯುದ್ಧರಂಗದಲ್ಲಿ ಮೃತನಾದ ಕರ್ಣನನ್ನು ನೋಡಿ ಪ್ರಲಾಪಿಸುವುದು

ಗೆಳೆಯಂಗಾಯ್ತು ಸುಮೋಕ್ಷಮಾಗದನಗಂ ಬಾಷ್ಪಾಂಬುಮೋಕ್ಷಂ ಧರಾ
ತಳಮಂ ಕೊಟ್ಟನಿವಂ ಜಳಾಂಜಳಿಯುಮಂ ನಾಂ ಕೊಟ್ಟೆನಿಲ್ಲನ್ಯಮಂ
ಡಳಮಂ ಸುಟ್ಟನಿವಂ ಪ್ರಕೋಪಶಿಖಿಯಿಂದಾನೀತನಂ ಸತ್ಕ್ರಿಯಾ
ನಳನಿಂ ಸುಟ್ಟೆನುಮಿಲ್ಲ ಮತ್ಪ್ರಿಯತಮಂ ಕರ್ಣಂಗಿದೇಕೂರ್ತನೋ ||

### ರಣರಂಗದಲ್ಲಿ ಮೃತನಾದ ದುಶ್ಶಾಸನನನ್ನು ನೋಡಿ ದುರ್ಯೋಧನನು ಪ್ರಲಾಪಿಸುವುದು

ಜನನೀಸ್ತನ್ಯಮನುಂಡೆನಾಂ ಬೞಿಕೆ ನೀಂ ಸೋಮಾಮೃತಂ ದಿವ್ಯಭೋ
ಜನಮುಂಜಿಂತಿವನುಂಡೆನಾಂ ಬೞಿಕೆ ನೀಂ ಬಾಲತ್ವದಿಂದೆಲ್ಲಿಯುಂ
ವಿನಯೋಲ್ಲಂಘನಮಾದುದಿಲ್ಲ ಮರಣಕ್ಕನ್ನಿಂದೆ ನೀಂ ಮುಂಚಿದಯ್
ಮೊನೆಯೊಳ್ ಸೂೞ್ ತಡವಾಯ್ತಿದೊಂದೆಡೆಯೊಳಂ ಹಾ ವತ್ಸ ದುಶ್ಶಾಸನಾ ॥

## ೩. ರನ್ನಕಂದ

ನಮಗೆ ದೊರೆತ ಈ ನಿಘಂಟುವಿನ ಒಂದು ಅಸಮಗ್ರಪ್ರತಿಯಲ್ಲಿ ೧೨ ಕಂದಗಳಿವೆ. ಇವು ಪ್ರಾಯಿಕವಾಗಿ ''ಕವಿರತ್ನ'' ಎಂದು ಮುಗಿಯುತ್ತವೆ. ಇವುಗಳಲ್ಲಿ ಎರಡನ್ನು ಉದಾಹರಿಸುತ್ತೇವೆ :

ಸಣ್ಣದೆನಲ್ ಕಿಱಿದಕ್ಕುಂ
ಪಣ್ಣೆನೆ ಮಾಡೆಂಬವಾಚಿ ಬೞಿಯೆನೆ ವಂಶಂ
ಎಣ್ಣೆನೆ ಲೆಕ್ಕಿಪುದುಂ ಬಿಸು
ಗಣ್ಣೆನೆನಲ್ ಗೂರವನಪ್ಪುದೆಲೆ ಕವಿರತ್ನಾ ॥

ಕೋಸಿತೆನಲ್ ಪೋಣಿಸಿದುದು
ಸೂಸಿದುದೆನೆ ತುಳ್ಕಿತೆಂಬುದುಂ ಪರಿಮಳಮುಂ
ವಾಸಿತಮೆನೆ ಕಂಪುಂ ಪೊಗೆ
ಸೌಸವಮೆನೆ ಸಮ್ಮದಾರ್ಥಮೆಲೆ ಕವಿರತ್ನಾ ॥

*ಕರ್ಣಾಟಕ ಕವಿಚರಿತೆ, ೧, ೧೯೦೭, ೧೯೨೪, ಪು. ೬೮-೭೯*

# ೪೩. ದುರ್ಗಸಿಂಹನ ಪಂಚತಂತ್ರದ ರಚನಕಾಲ ಮತ್ತು ಜೈನಕವಿ ಬ್ರಹ್ಮಶಿವನ ಕಾಲವಿಚಾರ

● ಎಂ. ಗೋವಿಂದ ಪೈ

## ೧

'ಕರ್ಣಾಟಕ ಕಾವ್ಯಮಂಜರಿ'ಯಲ್ಲಿ ಪ್ರಕಟವಾದ ದುರ್ಗಸಿಂಹನ 'ಪಂಚತಂತ್ರ'ದಲ್ಲಿ ಅದು ಬರೆದು ಮುಗಿದ ಕಾಲವನ್ನು ಕುರಿತೇನೂ ಹೇಳಿಲ್ಲ. ಅದನ್ನು ರಚಿಸುವಂದು ಚಾಳುಕ್ಯಾನ್ವಯದ (ಪದ್ಯ ೩.೧-೨) ಚಕ್ರವರ್ತಿ ಜಗದೇಕಮಲ್ಲ (೩.೦; ೩.೩) ಜಯಸಿಂಹನು (೩.೨) ಕರ್ಣಾಟಕ ರಾಜ್ಯವನ್ನು ಆಳುತ್ತಿದ್ದನೆಂದು ಅಷ್ಟೆ ಅದರಲ್ಲಿ ಹೇಳಿದೆ. ಕವಿಚರಿತಕಾರರು ಆ ಅರಸನು IIನೆಯ (ಪೆರ್ಮ) ಜಗದೇಕಮಲ್ಲ (೧೧೩೮-೧೧೫೦) ನೆಂದು ಭಾವಿಸಿ, ದುರ್ಗಸಿಂಹನು ಕ್ರಿ.ಶ. ಸುಮಾರು ೧೧೪೫ರಲ್ಲಿ ಇದ್ದಿರಬಹುದೆಂದರು ಕವಿಚರಿತೆ I -ಪು. ೧೫೧. ಆದರೆ ಡಾ॥ ವೆಂಕಟಸುಬ್ಬಯ್ಯನವರು ಆತನು ಕವಿಚರಿತಕಾರರು ಊಹಿಸಿದ ಅರಸನಲ್ಲ, ಆತನಿಂದ ಸುಮಾರು ೧೦೦ ವರ್ಷಗಳ ಮುಂಚೆ ಆಗಿಹೋದ Iನೆಯ ಜಗದೇಕಮಲ್ಲ (IIನೆಯ) ಜಯಸಿಂಹ (೧೦೧೫-೧೦೪೨) ನೆಂಬ ಅರಸನೇ ಆಗಿರಬೇಕೆಂದು ನಿರ್ಧರಿಸಿ, ಆತನ ಆಳ್ವಿಕೆಯಲ್ಲಿ ರಚಿತವಾದ 'ಪಂಚತಂತ್ರ'ವು ಕ್ರಿ.ಶ. ೧೦೩೫ರಲ್ಲಿ ಹುಟ್ಟಿತೆಂದೂ, ದುರ್ಗಸಿಂಹನು ಆ ಕಾಲದಲ್ಲಿದ್ದನೆಂದೂ ಹೇಳಬಹುದು ಎಂದಿರುವರು. (ಕೆಲವು ಕನ್ನಡ ಕವಿಗಳ ಜೀವನಕಾಲವಿಚಾರ–ಪು. ೨೧) ಡಾ॥ ವೆಂಕಟ ಸುಬ್ಬಯ್ಯನವರು ದುರ್ಗಸಿಂಹನಿಗೆ ನಿರ್ಣಯಿಸಿರುವೀ ಕಾಲವು ಸರಿಯೆಂದು ಆ ಬಳಿಕ ಕವಿಚರಿತಕಾರರೂ ಒಪ್ಪಿರುತ್ತಾರೆ (ಕವಿಚರಿತೆ III. ಅವತರಣಿಕೆ, ಪು. xi).

ಈಗ ಮದ್ರಾಸು ಯೂನಿವರ್ಸಿಟಿಯ ಪ್ರಾಚ್ಯ ಸಂಶೋಧಕ ಸಂಸ್ಥೆಯ ಕನ್ನಡ ಶಾಖೆಯ ಪಾಠಕರಾಗಿರುವ ಶ್ರೀಮಾನ್ ಎಚ್. ಶೇಷಯ್ಯಂಗಾರರವರು ಬಿಹಾರ ಪ್ರಾಂತದ ಆರಾ (Arrah) ಎಂಬಲ್ಲಿಯ ಜೈನಸಿದ್ಧಾಂತ ಭವನದಿಂದ ತರಿಸಿಕೊಂಡ ದುರ್ಗಸಿಂಹನ 'ಪಂಚತಂತ್ರ'ದೊಂದು ಹಸ್ತಪ್ರತಿಯಲ್ಲಿ ದೊರೆವ ಅನೇಕ ಸಾಕೂತವಾದ ಪಾಠಾಂತರಗಳೊಂದಿಗೆ ಅದರ ರಚನಕಾಲವನ್ನು ಹೇಳುವ ಇದೊಂದು ಪದ್ಯ ಇದೆ. ಕಾವ್ಯಮಂಜರಿಯಲ್ಲಿ ಮುದ್ರಿತವಾದ ಪಂಚತಂತ್ರದಲ್ಲಿಯ 'ಪತಿ ಹಿತನುಜನಾತನಯ' (ಪು. ೩೧೨) ಎಂಬಾ ಪದ್ಯದ ತರುವಾಯವೇ ಈ ಪದ್ಯವನ್ನು ಆ ಹಸ್ತಪ್ರತಿಯಲ್ಲಿ ಹೀಗೆ ಕೊಟ್ಟಿದೆ.

> ಅತಿ ಸಂಪನ್ನತೆವೆತ್ತ ಸದ್ಗುಹ ನಿವಾಸಸ್ಥಾನಮೋದಾ ಪ್ರಜಾ
> ಪತಿ ಸಂವತ್ಸರ ಚೈತ್ರಮಾಸ ಸಿತಪಕ್ಷದ್ವಾದಶೀ ತಾರಕಾ
> ಪತಿವಾರಂ ಬರೆ ಪಂಚತಂತ್ರಮಸದತ್ತೀಧಾತ್ರಿಯೊಳ್ ದುರ್ಗನಿ
> ರ್ಮಿತಮುದ್ಯತ್ಕರಿಸೆ....ಮದಲೀಲಾ ಪುಷ್ಪಿತಾಮ್ರದ್ರುಮಂ

ಇದರಲ್ಲಿರುವ 'ಸದ್ಗುಹ ನಿವಾಸಸ್ಥಾನಮೋದಾ' ಎಂಬುದು ಸಂಪ್ರತಿಕಾರರ ಕೈತಪ್ಪಲ್ಲದೆ ಬೇರೆಯಲ್ಲ; ಅದು 'ಸದ್ಗುಣ ನಿವಾಸಸ್ಥಾನಮಾದಾ' ಎಂದಾಗಿರಬೇಕೆಂಬಲ್ಲಿ ಸಂಶಯವಿಲ್ಲ.

ಈ ವೃತ್ತದಲ್ಲಿ ಹೇಳಿರುವ ಮೇರೆಗೆ ಆ ಕಾವ್ಯವು (ಶಾ.ಶ. ೯೫೩) ಪ್ರಜಾಪತಿ ಸಂವತ್ಸರದ ಚೈತ್ರ ಶುಕ್ಲ ದ್ವಾದಶಿ ಸೋಮವಾರದಂದು, ಅಂದರೆ ಕ್ರಿ.ಶ. ೧೦೩೧ನೆಯ ಮಾರ್ಚಿ ೮ನೆಯ ತಾರೀಕು ಸೋಮವಾರದಂದು ರಚಿಸಿ ಮುಗಿಯಿತೆಂದಾಗುತ್ತದೆ.

ಆರಾ ಪ್ರತಿಯಲ್ಲಿಯ ಈ ಮತ್ತೇಭವಿಕ್ರೀಡಿತ ವೃತ್ತವನ್ನು ನನ್ನ ತಿಳುವಳಿಕೆಗೆ ತಂದು ಅದನ್ನು ಪ್ರಕಟಿಸುವರೆ ನನಗೆ ಅನುಮತಿಯನ್ನು ಇತ್ತ ಬಗೆಗೆ ಶ್ರೀಮಾನ್ ಶೇಷಯ್ಯಂಗಾರರವರಿಗೆ ತುಂಬ ಕೃತಜ್ಞನಾಗಿರುತ್ತೇನೆ.

೨

ಜೈನ ಕವಿಯಾದ ಬ್ರಹ್ಮಶಿವನು ತನ್ನ ಸಮಯಪರೀಕ್ಷೆ ಎಂಬ ಕನ್ನಡ ಕಾವ್ಯವನ್ನು ಇಂಥವೇ ಕೆಲವಷ್ಟು ವರ್ಷಗಳೊಳಗೆ ರಚಿಸಿರಬೇಕೆಂದು ಖಂಡಿತವಾಗಿ ನಿರ್ಣಯಿಸತಕ್ಕ ಆಧಾರಗಳು ಅದರಲ್ಲೇ ಹೀಗಿವೆ:

(೧) ಪೊನ್ನನೆ ಪಂಪನೆ ರಜಕನೆ
ರನ್ನನೆ ಕವಿತಾಗುಣೋದಯನೆ ದರ್ಶನ ಸಂ
ಪನ್ನತೆಯೊಳ್ ಕವಿತೆಯೊಳವ
ರನ್ನನೆ ವಿದಿತಾತ್ಮಭಾವನಗ್ಗಳದೇವಂ ॥ ೩೫ ॥[೧]

ಇವರೆಲ್ಲರೂ ಕನ್ನಡ ಜೈನ ಕವಿಗಳು. ಇವರಲ್ಲಿ ಪಂಪನ ಆದಿಪುರಾಣ ಕ್ರಿ.ಶ. ೯೪೨ ರಲ್ಲೂ, ಪೊನ್ನನ ಶಾಂತಿಪುರಾಣ ಕ್ರಿ.ಶ. ಸು. ೯೬೦ರಲ್ಲೂ, ರನ್ನನ ಅಜಿತಪುರಾಣ ಕ್ರಿ.ಶ. ೯೯೩ರಲ್ಲೂ ರಚಿತವಾದುವೆಂದು ಎಲ್ಲರೂ ಬಲ್ಲ ವಿಷಯ. ಕವಿತಾಗುಣೋದಯನೆಂದು ಕಾವ್ಯಾವಲೋಕನ-ವಸ್ತುಕೋಶಗಳನ್ನು ರಚಿಸಿದ II ನಾಗವರ್ಮನ ಬಿರುದು; ಅದನ್ನು ಆತನ ಕಾವ್ಯಾವಲೋಕನದ ಪ್ರತ್ಯೇಕ ಅಧಿಕರಣದ ಕೊನೆಯ ಗದ್ಯದಲ್ಲೂ ('ಅನೂನ ಕವಿತಾಗುಣೋದಯಂ ಶ್ರೀನಾಗವರ್ಮ') ವಸ್ತುಕೋಶದ ಪ್ರತಿ ಕಾಂಡದ ಕೊನೆಯ ಗದ್ಯದಲ್ಲೂ ('ಕವಿತಾಗುಣೋದಯಂ ಶ್ರೀನಾಗವರ್ಮ') ಹೇಳಿದೆ. ಈ II ನಾಗವರ್ಮನು ಕ್ರಿ.ಶ. ೧೧೨೦ರಿಂದ ೧೨೦೦ರೊಳಗೆ ಇದ್ದಿರಬೇಕೆಂದು ನಾನು ನಿರ್ಣಯಿಸಿರುತ್ತೇನೆ.[೨] ಈಗ ರಜಕನೆಂಬ ಕವಿ ಯಾರು? ಬೇರೆ ಯಾರೂ ಅಲ್ಲ, ಕನ್ನಡದಲ್ಲೂ ಸಂಸ್ಕೃತದಲ್ಲೂ ಕಾವ್ಯಗಳನ್ನು ಬರೆದಿರುವ ಅಸಗನೆಂಬ ಜೈನ ಕವಿ. ಅಸಗನೆಂದರೆ ಅಗಸ (ಮಡಿವಾಳ), ಅಗಸನೆಂದರೆ ಸಂಸ್ಕೃತದಲ್ಲಿ ರಜಕ ಅಸಗನು ಶ್ರೇಷ್ಠನಾದ ಕನ್ನಡ ಕವಿಯಾಗಿದ್ದನೆಂದು ಪೊನ್ನನ ಶಾಂತಿ ಪುರಾಣದಲ್ಲಿ 'ಕನ್ನಡ ಕವಿತೆಯೊಳಸಗಂ' (೧-೨) ಎಂಬಲ್ಲಿ ಆತನನ್ನು ಸೀಮಾಪುರುಷನೆಂದು ಬಗೆದಿರುವುದರಿಂದ ಮಾತ್ರವಲ್ಲ. ಕ್ರಿ.ಶ. ಸು. ೯೦೦ರಲ್ಲಿ ವಿರಚಿತವಾದ ಜೈನ ಜಯಕೀರ್ತಿಯ ಸಂಸ್ಕೃತ ಛಂದೋನುಶಾಸನದಲ್ಲಿ[೩] ಅಸಗನು ಕನ್ನಡದಲ್ಲಿ ಕುಮಾರಸಂಭವ ಎಂಬ ಕಾವ್ಯವನ್ನು ರಚಿಸಿರುತ್ತಾನೆಂದು:

---

೧. ಪ್ರಬುದ್ಧ ಕರ್ಣಾಟಕ, ಸಂ. ೨೪ (ಚಿತ್ರಭಾನು ಸಂ। ಕಾಮನ ಸಂಚಿಕೆ, ಪು. ೨೯)

೨. ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ, ಸಂ. ೨೨ (ಯುವ ಸಂ।) ಆಷಾಢಮಾಸದ ಸಂಚಿಕೆ, ಪು. ೧೩೯-೧೫೧.

೩. ಪ್ರಬುದ್ಧ ಕರ್ಣಾಟಕ, ಸಂ. ೨೮ (ವ್ಯಯ ಸಂ। ಸಂಕ್ರಾಂತಿಯ ಸಂಚಿಕೆ. ಪು. ೧೧೩-೧೧೮).

........ಅಸಗಾಖ್ಯ ಕವಿನಾ
ಪ್ರತಿಪಾದಿತಂ ನನು ಕರ್ಣಾಟ ಕುಮಾರಸಂಭವ ಕಾವ್ಯೇ VII. 7[೪]

ಹೇಳಿರುವುದರಿಂದಲೂ ತಿಳಿಯುತ್ತದೆ. ಅಸಗನ ವರ್ಧಮಾನ ಚರಿತ ಎಂಬ ಸಂಸ್ಕೃತ ಕಾವ್ಯದ ಕೊನೆಯಲ್ಲಿ (ಸರ್ಗ ೧೮):

ಸಂವತ್ಸರೇ ದಶ ನವೋತ್ತರ ವರ್ಷಯುಕ್ತೇ ॥ ೧೦೪ ॥

ಅಂದರೆ ಅದು ವಿಕ್ರಮ ಕಾಲದ ೯೧೦ನೆಯ ವರ್ಷದಲ್ಲಿ=ಕ್ರಿ.ಶ. ೮೫೩ನೆಯ ಇಸವಿಯಲ್ಲಿ ರಚಿತವಾಯಿತೆಂದು ಹೇಳಿರುವುದರಿಂದ, ಅಸಗನು ಕ್ರಿ.ಶ. ೯ನೆಯ ಶತಮಾನದಲ್ಲಿ ಇದ್ದನೆಂದು ತಿಳಿಯುತ್ತದೆ. ಮೇಲಣ ಕಂದಪದ್ಯದಲ್ಲಿ ಹೆಸರಿಸಿದ ಕವಿಗಳಲ್ಲಿ ಕೊನೆಯವನಾದ ಅಗ್ಗಳದೇವನೆಂದರೆ, ಕನ್ನಡದಲ್ಲಿ, ಚಂದ್ರಪ್ರಭ ಪುರಾಣವನ್ನು ರಚಿಸಿದ ಅಗ್ಗಳನೆಂಬ ಜೈನ ಕವಿ. ಆ ಹೆಸರಿನ ಮತ್ತೊಬ್ಬ ಕವಿ ಕನ್ನಡದಲ್ಲಿ ಇದ್ದಿಲ್ಲ. ಆತನ ಚಂದ್ರಪ್ರಭ ಪುರಾಣದ ಕೊನೆಯ ಆಶ್ವಾಸದ ಕೊನೆಯ ಕಂದದಿಂದ (೧೬-೮೭) ಅದು

ಏಕಾದಶ ಶತಮುಂ ಮ
ತ್ತೇಕಾದಶಮಾಗೆ ಶಕನೃಪಾಬ್ದಂ ಸೌಮ್ಯ

ಸಂವತ್ಸರದಲ್ಲಿ, ಅಂದರೆ ಶಾಲಿವಾಹನ ಶಕ (ಶಾ.ಶ.) ೧೧೧೧ನೆಯ ಸೌಮ್ಯ ಸಂವತ್ಸರದಲ್ಲಿ= ಕ್ರಿ.ಶ. ೧೧೮೯ರಲ್ಲಿ ರಚಿಸಿ ಮುಗಿಯಿತೆಂದು ವ್ಯಕ್ತವಾಗುತ್ತದೆ.

ಸಮಯ ಪರೀಕ್ಷೆಯಲ್ಲಿ ಆಮೇಲಣದೇ ಮತ್ತೊಂದು ಕಂದಪದ್ಯದಲ್ಲಿ :

(೨) ವಿತ್ತಂ ಸತ್ಪಾತ್ರಕ್ಕಾ
ಯತ್ತಂ ನಿಜವಾಣಿ ತೀರ್ಥಕರ ಕೀರ್ತನೆಗಾ
ಯತ್ತಂ ವ್ರತಕ್ಕೆ ತನುವಾ
ಯತ್ತಮೆನಲ್ ನಾಗಚಂದ್ರ ಬುಧನೆ ಕೃತಾರ್ಥಂ ॥೩೬॥

ಎಂದಿರುವಲ್ಲಿ, ಅಭಿನವಪಂಪ ಎಂಬ ಅಪರನಾಮವನ್ನು ತಾಳಿ, ಮಲ್ಲಿನಾಥ ಪುರಾಣವನ್ನೂ ಪಂಪರಾಮಾಯಣ ಎಂಬ ರಾಮಚಂದ್ರ ಚರಿತ ಪುರಾಣವನ್ನೂ ರಚಿಸಿದ ನಾಗಚಂದ್ರನೆಂಬ ಕನ್ನಡ ಜೈನ ಕವಿಯನ್ನೂ (ಮಲ್ಲಿನಾಥ, ೧-೩೯ ರಿಂದ ೪೨ ಇ; ಪಂಪ ರಾಮಾಯಣ, ೧೬-೯೬, ೯೭ ಮತ್ತು ಸಮಾಪನಗದ್ಯ) ಬ್ರಹ್ಮಶಿವನು ಸ್ತುತಿಸಿರುತ್ತಾನೆ. ಅಭಿನವಪಂಪನೆಂಬ ನಾಗಚಂದ್ರನು ಕ್ರಿ.ಶ. ೧೧೩೦ರೊಳಗೆ ಮಲ್ಲಿನಾಥ ಪುರಾಣವನ್ನೂ ಕ್ರಿ.ಶ. ೧೧೪೦ರಲ್ಲಿ ಪಂಪರಾಮಾಯಣವನ್ನೂ ರಚಿಸಿರಬೇಕೆಂದು ನಾನು ಅನ್ಯತ್ರ ನಿಶ್ಚಯಿಸಿರುತ್ತೇನೆ.[೫]

ಹೀಗೆ ಸಮಯಪರೀಕ್ಷೆಯಿಂದ ಮೇಲೆ ಉದ್ಧರಿಸಿರುವ ಅವೆರಡು ಕಂದಗಳಲ್ಲಿ ಬ್ರಹ್ಮಶಿವನು ಕ್ರಿ.ಶ. ೮೫೩ರಲ್ಲಿದ್ದ ಅಸಗ (=ರಜಕ)ನಿಂದ ೧೧೮೯ರಲ್ಲಿದ್ದ ಅಗ್ಗಳನ ವರೆಗಣ

೪ ಆದೇ. ಸಂ. ೨೮, ವಿನಾಯಕನ ಸಂಚಿಕೆ, ಪು. ೧೩೦.

೫ ಧಾರವಾಡದ ಕರ್ಣಾಟಕ ಕಾಲೇಜಿನ ಸಂಘದಿಂದ ಪ್ರಕಟಿಸಲ್ಪಟ್ಟ 'ಅಭಿನವ ಪಂಪ' (೧೯೩೪). ಪು. ೧-೩೪.

ಕನ್ನಡ ಜೈನ ಕವಿಗಳಲ್ಲಿ ಶ್ರೇಷ್ಠರಾಗಿದ್ದವರನ್ನು ನೆನೆದಿರುವನಷ್ಟೇ ಅಲ್ಲ. ಅದೇ ಕಾವ್ಯದಲ್ಲಿ ತನ್ನನ್ನೇ ಕುರಿತು ಮತ್ತೆರಡು ಕಂದಗಳಲ್ಲಿ :

(೩) ಪಿರಿದರ್ತಿ ಮುನ್ನ ಮಾಹೇ
ಶ್ವರದೊಳ್ ತನಗದಱೊಳೊಳ್ಪುಗಾಣದೆ ನೆಗೞ್ದೀ
ಪರಮ ಜಿನಧರ್ಮದೊಳಪ್ಪೊ
ಕ್ಕು ರಾಗಿಪಂ ಸುಕವಿ ಪಂಪರಾಜನ ಮೊಮ್ಮಂ[೬]

(೪) ಇಳೆಯೊಳ್ ಸಲೆ ನೆಲಸಿದ ಪೊ
ಟ್ಟಳಗೆಱೆಯೊಳ್ ನೆಗೞ್ದ ಸಿಂಗರಾಜನ ಸುತನ
ಗ್ಗಳ ದೇವನ ಕೆಳೆಯಂ ದ್ವಿಜ
ಕುಳರತ್ನಂ ವತ್ಸಗೋತ್ರತಿಳಕಂ ಬ್ರಹ್ಮಂ[೭]

ತನಗೆ ಮುನ್ನೊಮ್ಮೆ ಶೈವಧರ್ಮದಲ್ಲಿ (ಮಾಹೇಶ್ವರದೊಳ್) ತುಂಬ ಅಭಿಮಾನವಿದ್ದರೂ ಈಗ ಅದರಲ್ಲಿ ಲೇಸು ಕಾಣದೆ ತಾನೀಗ ಜೈನಧರ್ಮವನ್ನು ಅವಲಂಬಿಸಿರುತ್ತೇನೆ ಎಂದಿರುವಲ್ಲಿ, ತಾನು ಸುಕವಿ ಪಂಪರಾಜನ ಮೊಮ್ಮಗನೆಂದೂ, ಹೊಟ್ಟಲಕೆರೆಯ ಸಿಂಗರಾಜನ ಮಗನೆಂದೂ, ಅಗ್ಗಳ ದೇವನ ಗೆಳೆಯನೆಂದೂ ಮೊದಲಾಗಿ ಹೇಳಿ ಕೊಂಡಿರುತ್ತಾನೆ. ಇವೆರಡರಲ್ಲಿಯ ಮತ್ತಿನ ಕಂದದಲ್ಲಿ ಬ್ರಹ್ಮಶಿವನು ತಾನು 'ಅಗ್ಗಳದೇವನ ಕೆಳೆಯಂ' ಎಂಬ ಅಗ್ಗಳದೇವನಾದರೂ ಮೇಲಣ ಅದೊಂದು ಕಂದದಲ್ಲಿ (೧) ಆತನು ಅಗ್ಗಳದೇವನೆಂದಿರುವಾತನೇ ಎಂಬಲ್ಲಿ ಸಂಶಯವಿಲ್ಲ. ಆದಕಾರಣ ಬ್ರಹ್ಮಶಿವನು ಅಗ್ಗಳನ ಚಂದ್ರಪ್ರಭ ಪುರಾಣ ರಚಿತವಾದ ಕ್ರಿ.ಶ. ೧೧೮೯ರ ನೆಲೆಯಲ್ಲಿ, ಹೇಗೂ ಆ ಕ್ರಿ.ಶ. ೧೨ನೆಯ ಶತಕದ ಉತ್ತರಾರ್ಧದಲ್ಲಿ ಇದ್ದಿರಬೇಕು.

ಹಾಗಾದರೆ ಮೇಲಣ ಕಂದದಲ್ಲಿ (೩) ತಾನು 'ಸುಕವಿ ಪಂಪರಾಜನ ಮೊಮ್ಮಂ' ಎಂಬಲ್ಲಿಯ ಬ್ರಹ್ಮಶಿವನ ಅಜ್ಜನಾದ ಸುಕವಿ ಪಂಪರಾಜನಾದರೋ, ಕ್ರಿ.ಶ. ೧೧೫೦ರೊಳಗೆ ಮಲ್ಲಿನಾಥ ಪುರಾಣವನ್ನೂ ಪಂಪರಾಮಾಯಣವನ್ನೂ ರಚಿಸಿದ್ದ, ಹಾಗೂ ಸಮಯ ಪರೀಕ್ಷೆಯಿಂದ ಮೇಲೆ ಉದ್ಧರಿಸಿರುವ ಮತ್ತೊಂದು ಕಂದದಲ್ಲಿ (೨) 'ನಾಗಚಂದ್ರ ಬುಧನೆ ಕೃತಾರ್ಥಂ' ಎಂದಿರುವ ನಾಗಚಂದ್ರನೇ ಸರಿ ಎಂಬಲ್ಲಿ ಎದುರು ಮಾತಿಲ್ಲ. ಏಕೆಂದರೆ ಪಂಪ ಎಂಬ ಹೆಸರಿನ ಕನ್ನಡ ಕವಿಗಳೆಂದರೆ ಇಬ್ಬರೇ–(ಆದಿ) ಪಂಪ ಮತ್ತು ಅಭಿನವಪಂಪ–ವಿನಾ ಮತ್ತೊಬ್ಬನಿದ್ದಿಲ್ಲ, ಹಾಗೂ (ಆದಿ) ಪಂಪನಿಗೂ (ಕ್ರಿ.ಶ. ೯೪೨) ಅಗ್ಗಳನ (ಕ್ರಿ.ಶ. ೧೧೮೯) ಗೆಳೆಯನಾದ ಬ್ರಹ್ಮಶಿವನಿಗೂ ಸು. ೨೫೦ ವರ್ಷಗಳಷ್ಟರ ಅಂತರವೂ ಇದೆ. ಅತಏವ ಬ್ರಹ್ಮಶಿವನು (ಆದಿ) ಪಂಪನ ಮೊಮ್ಮಗನಾಗಿರಲಿಕ್ಕೆ ಶಕ್ಯವೇ ಅಲ್ಲ. ಅಭಿನವ ಪಂಪನೆಂಬ ಆ ನಾಗಚಂದ್ರನಿಗೆ ಸಿಂಗರಾಜನೆಂಬ ಮಗನಿದ್ದಿರಬೇಕು, ಆ ಸಿಂಗರಾಜನ ಮಗನೇ ಬ್ರಹ್ಮಶಿವನು.

---

೬. ಪಂಪರಾಮಾಯಣ ಸಂಗ್ರಹ (ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಗ್ರಂಥಮಾಲೆ, ೮) ಪೀಠಿಕೆ, ಪು. ೧೬.

೭. ಪಂಪರಾಮಾಯಣ ಸಂಗ್ರಹ (ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಗ್ರಂಥಮಾಲೆ, ೮), ಪೀಠಿಕೆ, ಪು. ೧೫.

೮. ಕರ್ಣಾಟಕ ಕವಿಚರಿತೆ, ೧, ಪು. ೧೮೯.

ಸಮಯಪರೀಕ್ಷೆಯ ಮತ್ತು ಇವೆರಡು ಪದ್ಯಗಳಲ್ಲಿ ಬ್ರಹ್ಮಶಿವನು ತನ್ನ ಆಪ್ತನಾದ ಪಡುವಣ ಚಾಳುಕ್ಯ ವಂಶದ ಕೀರ್ತಿವರ್ಮನೆಂಬ ರಾಜಕುಮಾರನನ್ನು ಹೀಗೆ ಹೊಗಳಿರುತ್ತಾನೆ:

(೫) ಜನತಾನಂದಂ ಚಳುಕ್ಯಾಭರಣನವನಿಪಾಳೋತ್ತಮಂ ಸಾರ್ವಭೌಮಂ
ಜನಕಂ ತ್ರೈಲೋಕ್ಯಮಲ್ಲಂ ಸಕಳವಸುಮತೀ ವಲ್ಲಭಂ ವಿಕ್ರಮಾಂಕಾ
ವನಿಪಂ ತಾನಗ್ರಜಾತಂ ತ್ರಿಭುವನಪತಿ ದೇವಾದಿದೇವಂ ಜಿನೇಂದ್ರಂ
ತನಗಾಪ್ತಂ ಮತ್ತನಲ್ಕೇಂ ಪಿರಿಯನೊ ಜಗತೀನಾಥರೊಳ್ ಕೀರ್ತಿವರ್ಮಂ ॥

(೬) ಅರಸುಮಗಂ ಗಡ ಕವಿಗಡ
ಪಿರಿದೀವಂ ಗಡ ಬಳಿಕ್ಕೆ ಜೈನ ಗಡೆನಲ್
ಧರಣಿಪತಿ ಕೀರ್ತಿವರ್ಮಂ,
ನಿರತಂ ಪೊನ್ ಕಮ್ಮಿತಾದುದೆನಿಸಿದನಿಳೆಯೊಳ್ ॥

ಬ್ರಹ್ಮಶಿವನಿಗೆ ಮೇಲೆ ಗೊತ್ತುಹಚ್ಚಿರುವ ಕ್ರಿ.ಶ. ೧೨ನೆಯ ಶತಮಾನದ ಉತ್ತರಾರ್ಧದಲ್ಲಿ ಆಳಿದ ಪಡುವಣ ಚಾಳುಕ್ಯರ ಪೀಳಿಗೆಯೂ ಅವರ ಆಳೊತ್ತುಗಳೂ ಹೀಗಿವೆ-

ತ್ರೈಲೋಕ್ಯಮಲ್ಲ
III ತೈಲ
(ಕ್ರಿ.ಶ. ೧೧೫೦-೧೧೬೨)

| ತ್ರಿಭುವನಮಲ್ಲ IV ಸೋಮೇಶ್ವರ (ಕ್ರಿ.ಶ. ೧೧೮೪-೧೨೦೦) | ಕೀರ್ತಿವರ್ಮ |
|---|---|

ಇವರಲ್ಲಿ ತ್ರೈಲೋಕ್ಯಮಲ್ಲ ನೂರ್ಮಡಿ ತೈಲನೂ ಎಂಬ III ತೈಲನ ಮಹಾಮಂಡಳೇಶ್ವರನಾದ ಕಳಚುರ್ಯ ಬಿಜ್ಜಳನು ಕ್ರಿ.ಶ. ೧೧೫೬ರಿಂದ ೧೧೬೨ರೊಳಗ ಚಾಳುಕ್ಯ ರಾಜ್ಯಾಪಹಾರ ಮಾಡಿ III ತೈಲನ ಕಲ್ಯಾಣನಗರದ ಸಿಂಹಾಸನವನ್ನು ತಾನೇರಿ, ತಾನೂ ತನ್ನ ಬಳಿಕ ತನ್ನ ಮಕ್ಕಳೂ ಕ್ರಿ.ಶ. 1184ರ ವರೆಗೆ ಆಳಿದ ಮೇಲೆ, III ತೈಲನ ಮಗನಾದ ತ್ರಿಭುವನಮಲ್ಲ ವೀರಸೋಮೇಶ್ವರನೆಂಬ IV ಸೋಮೇಶ್ವರನು ಕಳಚುರ್ಯರನ್ನು ರಾಜ್ಯಭಾರದಿಂದ ಕೆಡವಿ ತನ್ನ ಹಿರಿಯರ ರಾಜ್ಯವನ್ನು ಮರಳಿ ಸಂಪಾದಿಸಿಕೊಂಡು ಕ್ರಿ.ಶ. (೧೧೮೪ರಿಂದ ೧೨೦೦) ರವರೆಗೆ ಆಳಿದನು. IV ಸೋಮೇಶ್ವರನೊಂದಿಗೆ ಪಡುವಣ ಚಾಳುಕ್ಯರ ವಂಶವು ಕೊನೆಗೊಂಡಿತು. ಅತಏವ ಮೇಲಣ ಮಹಾಸ್ರಗ್ಧರೆಯಲ್ಲಿ (೫) ಬ್ರಹ್ಮಶಿವನ ಆಪ್ತನಾದ ಕೀರ್ತಿವರ್ಮನ ತಂದೆ ಎಂದಿರುವ ತ್ರೈಲೋಕ್ಯಮಲ್ಲನೆಂದರೆ ತ್ರೈಲೋಕ್ಯಮಲ್ಲIII ತೈಲ (ಕ್ರಿ.ಶ. ೧೧೫೦-೬೨) ಹಾಗೂ ಕೀರ್ತಿವರ್ಮನ ಅಣ್ಣನೆಂದಿರುವ ವಿಕ್ರಮಾಂಕನೆಂದರೆ ತ್ರಿಭುವನಮಲ್ಲ IV ಸೋಮೇಶ್ವರ (ಕ್ರಿ.ಶ. ೧೧೮೪-೧೨೦೦). ಪಡುವಣ ಚಾಳುಕ್ಯರ ವಂಶದಲ್ಲಿ ಯಾವ ಅರಸರಿಗೆ ತ್ರಿಭುವನಮಲ್ಲ ಎಂಬ ಬಿರುದಿತ್ತೊ

ಅವರಿಗೆ ವಿಕ್ರಮಾಂಕ = ವಿಕ್ರಮಾದಿತ್ಯ ಎಂಬ ಬಿರುದೂ ಇದ್ದೇ ಇರುವುದರಿಂದ,–ಉದಾ. V ತ್ರಿಭುವನಮಲ್ಲ ವಿಕ್ರಮಾಂಕ=ವಿಕ್ರಮಾದಿತ್ಯ (ಕ್ರಿ.ಶ. ೧೦೦೮-೧೦೧೪). VI ತ್ರಿಭುವನ ಮಲ್ಲ ವಿಕ್ರಮಾದಿತ್ಯ (ಕ್ರಿ.ಶ. ೧೦೭೬-೧೧೨೬)- ತ್ರಿಭುವನಮಲ್ಲ IV ಸೋಮೇಶ್ವರನಿಗೂ ವಿಕ್ರಮಾಂಕ=ವಿಕ್ರಮಾದಿತ್ಯ ಎಂಬ ಬಿರುದು ಇದ್ದಿರಲೇಬೇಕು. ಕೀರ್ತಿವರ್ಮನಾದರೋ ಆಳರಸನಾಗಿ ಇದ್ದಿಲ್ಲದ ಕಾರಣ, ಆತನ ಹೆಸರು ಅವರ ವಂಶಾವಳಿಯಲ್ಲಿ ಇಲ್ಲ.

ಬ್ರಹ್ಮಶಿವನ ಸಮಯಪರೀಕ್ಷೆಯ ಮೇಲಣ ಮಹಾಸ್ರಗ್ಧರೆಯಲ್ಲಿ (೫) ಕೀರ್ತಿವರ್ಮನ ಅಣ್ಣನನ್ನು 'ವಿಕ್ರಮಾಂಕಾವನಿಪಂ ತಾನಗ್ರಜಾತಂ' ಎಂದಿರುವುದರಿಂದ, ಆತನು ಆ ಗ್ರಂಥವನ್ನು ರಚಿಸಿ ಮುಗಿಸುವಾಗ ವಿಕ್ರಮಾಂಕ ಎಂಬ ಬಿರುದನ್ನಾಂತ ಅರಸನು ಚಾಳುಕ್ಯರ ಪಟ್ಟದಲ್ಲಿ ಇದ್ದಿರಬೇಕು. ಹಾಗಾದರೆ ಆ ಗ್ರಂಥವು ಕಂಡಿತವಾಗಿಯೂ ಕೀರ್ತಿವರ್ಮನ ಅಣ್ಣನಾದ ತ್ರಿಭುವನಮಲ್ಲ (VII ವಿಕ್ರಮಾದಿತ್ಯ=ವಿಕ್ರಮಾಂಕ) IV ಸೋಮೇಶ್ವರನ ಆಳಿಕೆಯ ಕ್ರಿ.ಶ ೧೧೮೪ ರಿಂದ ೧೨೦೦ರೊಳಗೆ ರಚಿಸಿ ತೀರಿರಬೇಕು. ಹಾಗೂ ಅದರಲ್ಲಿ ಬ್ರಹ್ಮಶಿವನು ಚಂದ್ರಪ್ರಭ ಪುರಾಣದ (ಕ್ರಿ.ಶ. ೧೧೮೯) ಅಗ್ಗಳನನ್ನು ತನ್ನ 'ಕೆಳೆಯಂ' (೪) ಎಂದಿರುವುದರಿಂದ ಆತನು ಅಗ್ಗಳನ ಸರಿವಯಸ್ಸಿನವನೊ, ಅಥವಾ ಅಗ್ಗಳನನ್ನು ಎರಡು ಬಾರಿಯೂ (೧) ಮತ್ತು (೪) 'ಅಗ್ಗಳದೇವ'ನೆಂದಿರುವುದರಿಂದ ಪ್ರಾಯಶಃ ಅಗ್ಗಳನಿಗಿಂತ ಕೊಂಚ ಕಿರಿ ವಯಸ್ಸಿನವನೊ ಆಗಿರಬೇಕು. ಹೇಗೂ ಬ್ರಹ್ಮಶಿವನು ಕ್ರಿ.ಶ. ಸು. ೧೧೫೦ರಿಂದ ೧೨೦೦ರೊಳಗೆ ಇದ್ದಿರಬೇಕು.

*ರಾಷ್ಟ್ರಬಂಧು, ೧೯೩೧; ರಾಷ್ಟ್ರಬಂಧು, ೧೯೫೩*

*ಗೋವಿಂದ ಪೈ ಸಂಶೋಧನ ಸಂಪುಟ, ೧೯೯೫, ಪು. ೨೩೩-೩೪'; ೨೯೭-೯೯*

# ೪೪. ಎರಡನೆಯ ನಾಗವರ್ಮ : ಕವಿ, ಕಾವ್ಯ, ಕಾಲ ವಿಚಾರ

● ಬಿ. ಎಸ್. ಸಣ್ಣಯ್ಯ

ನಾಗವರ್ಮನ 'ಭಾಷಾಭೂಷಣ'ವನ್ನು ೧೮೮೪ರಲ್ಲಿ ಸಂಪಾದಿಸಿ ಪ್ರಕಟಿಸಿದ ಬಿ.ಎಲ್. ರೈಸ್ ಅವರು ಇಂಗ್ಲಿಷಿನಲ್ಲಿ ಬರೆದ ಅದರ ಪೀಠಿಕೆಯಲ್ಲಿ 'ನಾಗವರ್ಮನು ಕನ್ನಡ ವ್ಯಾಕರಣಕಾರರಲ್ಲಿ ಮೊದಲಿಗನಾಗಿದ್ದಾನೆ' ಎಂದು ಹೇಳಿ, ಈತನು ಬ್ರಾಹ್ಮಣನೆಂದೂ ಕೌಂಡಿನ್ಯಗೋತ್ರದವನೆಂದೂ ವಂಗಿಪಟ್ಟಣಕ್ಕೆ ಸೇರಿದವನೆಂದೂ ತಿಳಿಸಿದ್ದಾರೆ. ಅವನು ಜೈನನಾದ ಮೇಲೆ ವಂಗಿಯನ್ನು ಬಿಟ್ಟು ಕರ್ಣಾಟಕದ ಯಾವುದೋ ಭಾಗದಲ್ಲಿ ನೆಲಸಿದನೆಂದು ಊಹಿಸಿದ್ದಾರೆ. ನಾಗವರ್ಮನು ತನ್ನ ವ್ಯಾಕರಣದಲ್ಲಿ ಕ್ರಿ.ಶ. ೧೧೧೨ರಲ್ಲಿದ್ದ ಧರ್ಮಾಮೃತದ ಕರ್ತೃ ನಯಸೇನನನ್ನು ಹೆಸರಿಸಿರುವುದರಿಂದ ನಯಸೇನನಿಗಿಂತ ಈಚಿನವನು ಎಂಬುದು ಸ್ಪಷ್ಟವಾಗುತ್ತದೆ. ತನ್ನ ವಸ್ತುಕೋಶಕ್ಕೆ ಆಧರಿಸಿದ ಕರ್ತೃಗಳೊಡನೆ ಕ್ರಿ.ಶ. ೧೧೭೨ರಲ್ಲಿ ತೀರಿಕೊಂಡ ಹೇಮಚಂದ್ರನನ್ನು ಹೆಸರಿಸದಿರುವುದರಿಂದ ಅವನಿಗೆ ಮೊದಲಿದ್ದವನು ಎಂದು ಗ್ರಹಿಸಿ ನಾಗವರ್ಮನು ೧೧ನೆಯ ಶತಮಾನದ ಕೊನೆ ಮತ್ತು ೧೨ನೆಯ ಶತಮಾನದ ಮೊದಲಲ್ಲಿ ಬದುಕಿದ್ದವನು ಎಂದು ಹೇಳಿದ್ದಾರೆ.[೧]

ಇದಿಷ್ಟು ನಾಗವರ್ಮನೊಬ್ಬನೇ ಎಂಬ ನಿರ್ಣಯದಿಂದ ಹೇಳಿದ ವಿಷಯವಾಗಿದೆ. ಆದುದರಿಂದಲೇ ಅವರು ನಾಗವರ್ಮನು ಕಾವ್ಯಾವಲೋಕನ, ಛಂದೋಂಬುಧಿ, ಕರ್ಣಾಟಕ ಭಾಷಾಭೂಷಣ, ವಸ್ತುಕೋಶ ಮತ್ತು ಕಾದಂಬರಿಗಳನ್ನು ರಚಿಸಿರುವನು ಎಂದು ಹೇಳಿದ್ದಾರೆ.

ಅನಂತರ ೧೯೦೩ರಲ್ಲಿ ಕಾವ್ಯಾವಲೋಕನವನ್ನು ಸಂಪಾದಿಸಿ ಪ್ರಕಟಿಸಿದ ಶ್ರೀ ಆರ್. ನರಸಿಂಹಾಚಾರ್ಯರು ಅದರ ಉಪೋದ್ಘಾತದಲ್ಲಿ ನಾಗವರ್ಮ ಒಬ್ಬನಲ್ಲ, ಈ ಹೆಸರಿನ ಇಬ್ಬರಿರುವರೆಂಬುದನ್ನು ಸಾಧಾರವಾಗಿ ನಿರೂಪಿಸಿದರು. ಇವರು ಕಾದಂಬರಿ ಮತ್ತು ಛಂದೋಂಬುಧಿಯ ಕರ್ತೃವನ್ನು ಮೊದಲನೆಯ ನಾಗವರ್ಮನೆಂದೂ ಉಳಿದವುಗಳನ್ನು ರಚಿಸಿದವನು ಎರಡನೆಯ ನಾಗವರ್ಮನೆಂದೂ ತೀರ್ಮಾನಿಸಿದರು. ಮೊದಲನೆಯ ನಾಗವರ್ಮನು ಸುಮಾರು ಕ್ರಿ.ಶ. ೯೯೦ರಲ್ಲಿದ್ದವನೆಂದೂ, ಎರಡನೆಯ ನಾಗವರ್ಮನು ಸುಮಾರು ೧೨ನೆಯ ಶತಮಾನದ ಮಧ್ಯದಲ್ಲಿ ಎಂದರೆ ಸುಮಾರು ಕ್ರಿ.ಶ. ೧೧೪೫ರಲ್ಲಿದ್ದವನೆಂದೂ ನಿರ್ಣಯಿಸಿದರು.[೨]

ಕಾವ್ಯಾವಲೋಕನದ ಕೊನೆಯ ಪದ್ಯದಲ್ಲಿ ಕಂಡುಬರುವಂತೆ ಛಂದೋವಿಚಿತಿ, ಅಲಂಕೃತಿ (ಕಾವ್ಯಾವಲೋಕನ), ವಸ್ತುಕೋಶವೆಂಬ ಕೃತಿಗಳನ್ನು ಎರಡನೆಯ ನಾಗವರ್ಮನು ರಚಿಸಿರುವುದು ತಿಳಿದುಬಂದಿದೆ.

ಇದರಲ್ಲಿಯೇ ಕಂಡುಬರುವ ''ದ್ವಿಜವಂಶಾರ್ಣವ'' (೯೬೦) ಮತ್ತು ''ವಾಮನನುಂ

---

೧ ಕರ್ಣಾಟಕ ಭಾಷಾಭೂಷಣ, ಬೆಂಗಳೂರು, ೧೮೮೪.

೨ ಕಾವ್ಯಾವಲೋಕನ, ಆರ್ಕಿಯಲಾಜಿಕಲ್ ಆಫೀಸ್, ಬೆಂಗಳೂರು, ೧೯೦೩, ೩ನೆಯ ಆವೃತ್ತಿ, ಪ್ರಾಚ್ಯ ವಿದ್ಯಾಸಂಶೋಧನಾಲಯ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೬೭.

ರುದ್ರಟನುಂ'' (೯೬೧) ಎಂಬೆರಡು ಪದ್ಯಗಳಿಂದ ಈತನು ಬ್ರಾಹ್ಮಣನೆಂದೂ, ದಾಮೋದರನ ಮಗನೆಂದೂ ವ್ಯಕ್ತವಾಗುತ್ತದೆ.

ಕ್ರಿ.ಶ. ೧೨೩೦ರಲ್ಲಿದ್ದ ಜನ್ನನ ಅನಂತನಾಥಪುರಾಣದಲ್ಲಿ ಬರುವ

ಜನನಾಥಂ ಜಗದೇಕನಲ್ಲಿ ಕಟಕೋಪಾಧ್ಯಾಯನಾ ನಾಗವ
ರ್ಮನಿದಾನೀಂತನ ಶರ್ವವರ್ಮನೆ ಗಡಂ ಜನ್ನಂಗುಪಾಧ್ಯಾಯನಿಂ
ದು ನೃಸಿಂಗಕ್ಷಿತಿನಾಥನಲ್ಲಿ ಕಟಕೋಪಾಧ್ಯಾಯನಾರೆಂಬ ಸೂ
ಕ್ತಿ ನವೀನೋಜ್ವಳ ಬಾಣನಪ್ಪ ಸುಮನೋಬಾಣಂ ಕವಿಶ್ರೇಷ್ಠರೊಳ್ ॥ (೧-೩೪)

ಎನಗನುಕೂಲಮಕ್ಕೆ ಗುಣವರ್ಮನ ಜಾಣ್ನುಡಿ ಪಂಪನಿಂಪು ಪೊ
ನ್ನನ ಬಗೆ ನಾಗವರ್ಮನ ಬಹುಜ್ಞತೆ ರನ್ನನ ಕಾಂತಿ ನಾಗಚಂ
ದ್ರನ ರಸಭಾವಮಗ್ಗಳನ ವಕ್ರತೆ ನೇಮಿಯ ದೇಸೆ ಪುಷ್ಪಬಾ
ಣನ ಮೃದುಬಂಧಮೀ ಕವಿಗಳಲ್ತೆ ಜಿನೇಂದ್ರಪುರಾಣಕರ್ತೃಗಳ್ ॥ (೧-೩೬)

ಎಂಬೆರಡು ಪದ್ಯಗಳ ಆಧಾರದಿಂದ ಕ್ರಿ.ಶ. ೧೧೩೮-೧೧೫೦ರ ವರೆಗೆ ಆಳಿದ ಜಗದೇಕಮಲ್ಲನಲ್ಲಿ ಕಟಕೋಪಾಧ್ಯಾಯನಾಗಿದ್ದ ಅಭಿನವ ಶರ್ವವರ್ಮ ಬಿರುದಾಂಕಿತನಾದ ಎರಡನೆಯ ನಾಗವರ್ಮನು ಜನ್ನನಿಗೆ ಉಪಾಧ್ಯಾಯನಾಗಿದ್ದನು; ಈತನು ಗುಣವರ್ಮ, ಪಂಪ, ಪೊನ್ನ, ರನ್ನರಂತೆ ಒಂದು ಜಿನಪುರಾಣವನ್ನು ಬರೆದಿದ್ದಾನೆ ಎಂಬುದಾಗಿ ಆರ್. ನರಸಿಂಹಾಚಾರ್ಯರು ಹೇಳಲು ಸಾಧ್ಯವಾಯಿತು.

ಹೀಗೆ ನಾಗವರ್ಮನು ಬರೆದಿರಬಹುದಾದ ಜಿನಪುರಾಣವಾವುದೆಂಬುದು ಬಹಳ ಕಾಲದವರೆಗೆ ತಿಳಿದುಬರಲಿಲ್ಲ. ಅನಂತರ ಆಚಣ್ಣನ ವರ್ಧಮಾನಪುರಾಣದ ಒಂದು ಓಲೆಪ್ರತಿಯಲ್ಲಿ ಅಲ್ಲಿನ ಕೆಲವು ಪದ್ಯಗಳಿಗೆ ಸಂವಾದಿಯಾಗಿ ಬರುವ ಇತರ ಕಾವ್ಯಗಳ ಪದ್ಯಗಳನ್ನು ಸೂಚಿಸುವಲ್ಲಿ ೧೨-೭೬ನೆಯ ಪದ್ಯಕ್ಕೆ ''ನಾಗವರ್ಮಕೃತ-ವರ್ಧ-೪'' ಎಂದು ಸೂಚಿಸಿರುವುದನ್ನು ಗಮನಿಸಿದ ಪಂಡಿತ ಎಚ್. ಶೇಷಯ್ಯಂಗಾರ್ಯರು ನಾಗವರ್ಮನು ವರ್ಧಮಾನಪುರಾಣವನ್ನು ಬರೆದಿರುವನೆಂದು ಹೇಳಿದರು. ಆದರೆ, ಇದರ ಕರ್ತೃ ಈಗ ಕವಿಚರಿತೆಕಾರರು ಹೇಳಿರುವ ಇಬ್ಬರು ನಾಗವರ್ಮರಲ್ಲಿ ಯಾರೂ ಆಗಿರದೆ ಮತ್ತೊಬ್ಬ ನಾಗವರ್ಮನೆಂದು ತಿಳಿಸಿದರು. ಅವರು ಈತನ ಕಾಲವನ್ನು ಸುಮಾರು ೯೦೦ ಎಂದು ಊಹಿಸಿದರು.[೧]

ಕವಿಚರಿತೆಕಾರರು ನಿರ್ಣಯಿಸಿದ ನಾಗವರ್ಮರು ಇಬ್ಬರು ಎಂಬುದನ್ನು ಒಪ್ಪದ ಡಾ. ಎ. ವೆಂಕಟಸುಬ್ಬಯ್ಯನವರು ಈ ಐದೂ ಕೃತಿಗಳನ್ನೂ ಒಬ್ಬ ನಾಗವರ್ಮನೇ ರಚಿಸಿದನೆಂದೂ, ಅವನ ಕಾಲ ೧೧ನೆಯ ಶತಮಾನದ ಪೂರ್ವಾರ್ಧವೆಂದೂ ನಿರ್ಧರಿಸಿದರು.[೨]

ಶ್ರೀ ಎಚ್. ಚನ್ನಕೇಶವಯ್ಯಂಗಾರ್ರ್ಯರು 'ಛಂದೋಂಬುಧಿ'ಯ ನಾಗವರ್ಮನೇ 'ಕಾದಂಬರಿ'ಯ ನಾಗವರ್ಮನೂ ಆಗಿದ್ದ ಪಕ್ಷದಲ್ಲಿ ಜಾತಿ, ವಂಶಪರಂಪರೆ, ಪೋಷಕ

---

೧ *Annals of Oriental Research*, University of Madras, Vol. VII-1.

೨ ಕೆಲವು ಕನ್ನಡ ಕವಿಗಳ ಜೀವನ ಕಾಲ ವಿಚಾರ, ಎ. ವೆಂಕಟಸುಬ್ಬಯ್ಯ, ಸೆಂಟ್ರಲ್ ಕಾಲೇಜು, ಕರ್ಣಾಟಕ ಸಂಘ, ಬೆಂಗಳೂರು, ೧೯೨೭.

ಮುಂತಾದ ಪ್ರವರಗಳನ್ನು ತನ್ನ ಗ್ರಂಥದಲ್ಲಿ ಸ್ಪಷ್ಟವಾಗಿ ಹೇಳಿಕೊಂಡಿರುವ ಛಂದೋಂಬುಧಿಕಾರನು 'ಕಾದಂಬರಿ'ಯಲ್ಲಿ ಈ ವಿವರಗಳನ್ನು ಏಕೆ ಹಾಗೆ ಸ್ಪಷ್ಟವಾಗಿ ಹೇಳಿಕೊಳ್ಳಲಿಲ್ಲ? 'ಛಂದೋಂಬುಧಿ'ಯನ್ನು ಮೊದಲು ಬರೆದಿದ್ದರೆ 'ಕಾದಂಬರಿ'ಯಲ್ಲಿ ಆ ಗ್ರಂಥದ ಸೂಚನೆ ಏಕೆ ಕಂಡುಬರುವುದಿಲ್ಲ? ಅಥವಾ 'ಕಾದಂಬರಿ'ಯನ್ನೇ ಮೊದಲು ಬರೆದಿದ್ದರೆ 'ಛಂದೋಂಬುಧಿ'ಯ ಸೂಚನೆ ಅದರಲ್ಲಿ ಏಕಿಲ್ಲ? ಎಂಬ ಪ್ರಶ್ನೆಗಳು ಸಹಜವಾಗಿ ಹುಟ್ಟುತ್ತವೆ'' ಎಂದು ಮೊದಲಾಗಿ ಹೇಳಿ, ''ಇವೆರಡೂ ಗ್ರಂಥಗಳ ಭಾಷಾಶೈಲಿಗಳನ್ನು ವಿಮರ್ಶಕ ದೃಷ್ಟಿಯಿಂದ ಸೂಕ್ಷ್ಮವಾಗಿ ಪರಿಶೀಲಿಸಿದರೆ ಇವು ಬೇರೆ ಬೇರೆ ಕವಿಗಳಿಂದ ರಚಿತವಾದುವೆಂದು ಹೊಳೆಯದೆ ಇರಲಾರದು.''[೧] ಎಂಬ ನಿರ್ಣಯಕ್ಕೆ ಬಂದರು.

ಶ್ರೀ ಮಂ. ಗೋವಿಂದ ಪೈ ಅವರು ಹಲವಾರು ಕಾರಣಗಳನ್ನು ಕೊಟ್ಟು, ಕೂಲಂಕಷವಾಗಿ ವಿಮರ್ಶಿಸಿ, ಕೊನೆಗೆ ''ಛಂದೋಂಬುಧಿ-ಕಾದಂಬರಿಗಳ ರಚಕನಾದ ಬ್ರಾಹ್ಮಣ ನಾಗವರ್ಮನೊಬ್ಬನು, ವಸ್ತುಕೋಶ-ಕಾವ್ಯಾವಲೋಕನ- ಭಾಷಾಭೂಷಣ ಗಳನ್ನು ರಚಿಸಿದ ಜೈನ ನಾಗವರ್ಮನೊಬ್ಬನು, ಚಂದ್ರಚೂಡಾಮಣಿಶತಕವನ್ನು ಬರೆದ ಬ್ರಾಹ್ಮಣ ನಾಗವರ್ಮನೊಬ್ಬನು ಎಂದು ಅನ್ಯಾನ್ಯರಾದ ನಾಗವರ್ಮರು ಮೂವರಾದರೂ ಇದ್ದರು ಎಂಬಲ್ಲಿ ಸಂಶಯವಿಲ್ಲ''[೨] ಎಂಬ ನಿರ್ಣಯವನ್ನು ಮಾಡಿದರು.

ಈಚೆಗೆ 'ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ' ಎಂಬ ಗ್ರಂಥದಲ್ಲಿ ಡಾ. ಎಂ. ಎಂ. ಕಲಬುರ್ಗಿಯವರು 'ಕವಿತಾಗುಣೋದಯ', 'ಕವಿಕರ್ಣಪೂರ' ಎಂಬಿವೇ ಮೊದಲಾದ ಬಿರುದುಗಳನ್ನು ಹೊತ್ತಿರುವ ಎರಡನೆಯ ನಾಗವರ್ಮನೇ 'ವರ್ಧಮಾನಪುರಾಣ'ದ ಕರ್ತೃವಿರಬೇಕು ಎಂದು ಹೇಳಿದರು.[೩]

ಇದರ ಜತೆಗೆ ಭಟ್ಟಹಲಾಯುಧ ವಿರಚಿತ 'ಅಭಿಧಾನ ರತ್ನಮಾಲಾ' ನಿಘಂಟಿಗೆ ಟೀಕು ನಾಗವರ್ಮನಿಂದ ರಚಿತವಾಗಿದೆಯೆಂದು ತಿಳಿದುಬರುತ್ತದೆ. ಇದರಲ್ಲಿ 'ನಾಗವರ್ಮ ವಿರಚಿತಮಪ್ಪ ಟೀಕು' ಎಂದು ಮೊದಲು ಬರುವುದೂ, ಹಾಗೂ ಪ್ರತಿಕಾಂಡದ ಕೊನೆಯಲ್ಲಿ 'ನಾಗವರ್ಮವಿರಚಿತಾಭಿಧಾನ ರತ್ನಮಾಲೆಯ ಟೀಕಿನೊಳ್' ಎಂದು ಬರುವ ಭಾಗವೂ ಈ ಟೀಕು ನಾಗವರ್ಮ ವಿರಚಿತ ಎಂಬುದನ್ನು ಸ್ಥಿರಪಡಿಸುತ್ತದೆ. ಆದರೆ ಯಾವ ನಾಗವರ್ಮನೆಂಬುದು ತಿಳಿಯಬರುವುದಿಲ್ಲ. 'ಅಭಿಧಾನ ವಸ್ತುಕೋಶ'ವನ್ನು ಪದ್ಯರೂಪದಲ್ಲಿ ರಚಿಸಿರುವ ಎರಡನೆಯ ನಾಗವರ್ಮನೇ ಈ ಟೀಕನ್ನೂ ಬರೆದಿರಬಹುದೆ ? ಎಂದು ಯೋಚಿಸುವುದು ಸಾಧ್ಯವಾದರೂ ನಿರ್ಣಯಕ್ಕೆ ಆಧಾರಗಳು ದೊರೆಯುವುದಿಲ್ಲ.

ಈಗ ದೊರೆತಿರುವ ಹಸ್ತಪ್ರತಿಯಂತೆ[೪] ಕೊನೆಯವರೆಗೂ ಟೀಕು ದೊರೆತಿಲ್ಲ. ಟೀಕಾಕಾರ ಈವರೆಗೆ ಮಾಡಿ ನಿಲ್ಲಿಸಿದನೊ, ಅಥವಾ ಪೂರ್ಣ ಟೀಕಿರುವ ಹಸ್ತಪ್ರತಿ ನಮಗೆ ದೊರೆತಿಲ್ಲವೊ ಹೇಳುವುದು ಕಠಿಣವಾಗಿದೆ. ಕೊನೆಯವರೆಗೆ ಟೀಕಿರುವ ಹಸ್ತಪ್ರತಿ ದೊರೆತಲ್ಲಿ

---

೧ ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ, ೧೪-೩, ೧೯೨೯.

೨ ಅದೇ, ೨೦-೨, ೧೯೩೪.

೩ ಎಂ. ಎಂ. ಕಲಬುರ್ಗಿ, ಕವಿರಾಜಮಾರ್ಗದ ಪರಿಸರದ ಕನ್ನಡ ಸಾಹಿತ್ಯ, ಕರ್ಣಾಟಕ ವಿಶ್ವವಿದ್ಯಾನಿಲಯ, ೧೯೭೩, ಪು. ೨೭೩.

೪ ಎ. ವೆಂಕಟರಾವ್ ಮತ್ತು ಎಚ್. ಶೇಷಯ್ಯಂಗಾರ್ ಅವರಿಂದ ಸಂಪಾದಿತವಾಗಿ ಮದ್ರಾಸ್ ಯೂನಿವರ್ಸಿಟಿ ಕನ್ನಡ ಗ್ರಂಥಮಾಲೆಯಲ್ಲಿ ೧೯೪೦ರಲ್ಲಿ ಪ್ರಕಟವಾಗಿದೆ.

ಟೀಕಾಕಾರನ ಸ್ವವಿಷಯವೇನಾದರೂ ಸಿಕ್ಕಬಹುದೊ ಹೇಗೆ ಎಂಬುದನ್ನು ನೋಡಬಹುದಾಗಿದೆ. ಅದುವರೆಗೆ ಈ ಕರ್ತೃವಿನ ವಿಷಯದಲ್ಲಿ ಏನೂ ಹೇಳಲು ಸಾಧ್ಯವಿಲ್ಲವಾಗಿದೆ.

**ವರ್ಧಮಾನ ಪುರಾಣ :** ಈಗ ನಾಗವರ್ಮನ 'ವರ್ಧಮಾನಪುರಾಣ'ದ ಹಸ್ತಪ್ರತಿ ನಮಗೆ ದೊರೆತಿರುವುದರಿಂದ ಈ ಮೇಲಣ ಎಲ್ಲರ ಊಹೆಗಳಿಗೆ, ನಿರ್ಣಯಗಳಿಗೆ ಸ್ವಲ್ಪಮಟ್ಟಿನ ಪರಿಹಾರ ದೊರೆತಂತಾಗಿದೆ. ಕಾವ್ಯಾವಲೋಕನದ ಕರ್ತೃವೇ ಇದರ ಕರ್ತೃವಾಗಿದ್ದಾನೆ ಎಂಬುದು ಖಚಿತವಾಗಿದೆ. ಇದಕ್ಕೆ ಕೆಳಗಣ ಕೆಲವು ಅಂಶಗಳನ್ನು ಗಣನೆಗೆ ತೆಗೆದುಕೊಳ್ಳಬಹುದಾಗಿದೆ.

೧. ಕಾವ್ಯಾವಲೋಕನ ಮತ್ತು ವಸ್ತುಕೋಶಗಳ ಮೊದಲ ಪದ್ಯಗಳಲ್ಲಿ ವರ್ಧಮಾನ ತೀರ್ಥಂಕರನ ಸ್ತೋತ್ರವಿದೆ; ಎಂದರೆ, ನಾಗವರ್ಮನಿಗೆ ವರ್ಧಮಾನಸ್ವಾಮಿಯೇ ಇಷ್ಟದೈವವಾಗಿದ್ದನೆಂಬುದು ಖಚಿತ. ತನ್ನಿಷ್ಟದೈವವಾದ ವರ್ಧಮಾನನನ್ನು ಕುರಿತು ಆತನು ಕಾವ್ಯವನ್ನು ರಚಿಸಿರುವುದು ಸಾಧ್ಯ.

೨. ಕಾವ್ಯಾವಲೋಕನದಲ್ಲಿ ಬರುವ

ದ್ವಿಜವಂಶಾರ್ಣವ ಪಾರಿಜಾತಕುಜದೇಶೀಯಂ ಜಿನೇಂದ್ರಕ್ರಮಾಂ
ಬುಜ ಚಂಚನ್ನವಚಂಚರೀಕ ಯುವಲೀಲೋದ್ದಾಮಸ್ವೈದಂಯುಗೀ
ನ ಜನೋದಾಹರಣ ಪ್ರಸಾದಿತ ಧರಿತ್ರೀಮಂಡಲಂ ಸತ್ಕವಿ
ವ್ರಜ ಚೂಡಾಮಣಿ ನಾಗವರ್ಮನಿದನುರ್ವೀಸಂಸ್ತುತಂ ಮಾಡಿದಂ ॥ (೯೬೦)

ವಾಮನನುಂ ರುದ್ರಟನುಂ
ಭಾಮಹನುಂ ದಂಡಿಯುಂ ಮನಂಗೊಳೆ ಪೇೞ್ದಂ
ತೀ ಮಹಿಗೆ ನೆಗೞೆ ಪೇೞ್ದಂ
ದಾಮೋದರತನಯನೀ ವಚೋಲಂಕೃತಿಯಂ ॥ (೯೬೧)

ಎಂಬ ಎರಡು ಪದ್ಯಗಳಲ್ಲಿ ನಾಗವರ್ಮನು 'ದ್ವಿಜವಂಶಾರ್ಣವ' 'ದಾಮೋದರತನಯ' ಎಂದು ಮಾತ್ರ ತಿಳಿದುಬಂದರೆ, ವರ್ಧಮಾನಪುರಾಣದಲ್ಲಿ ಬರುವ

ಜನಕಂ ವಿಪ್ರಕುಳಪ್ರದೀಪನನಘಂ ದಾಮೋದರಂ ಪೆತ್ತತಾಯ್
ವಿನಯಾಳಂಕೃತೆ ವೀರಕಬ್ಬೆ ವರಣಂ ಶ್ರೀ ವೀರಭಟ್ಟಾರಕಂ
ತನಯಂ ಸದ್ಗುಣಮಂಡನಂ ಮಧುವಲಂ ತಾನೆಂದೊಡಾದೊಂದು ಸೈ
ಪಿನ ಮಾನೋನ್ನತಿಗಿಂತು ನೋಂತ ನರನಾರೀ ನಾಗವರ್ಮಂಬರಂ ॥ (೧-೨೩)

ಎಂಬ ಪದ್ಯದಲ್ಲಿ ಹೆಚ್ಚು ವಿವರವನ್ನು ಕಾಣುತ್ತೇವೆ.

ಎಂದರೆ ಇದುವರೆಗೆ ನಾಗವರ್ಮನು 'ದ್ವಿಜವಂಶಾರ್ಣವ, ದಾಮೋದರ ತನಯ' ಎಂದು ಮಾತ್ರ ತಿಳಿದುಬಂದಿದ್ದನು. ಈಗ ಈತನ ತಂದೆ ಪ್ರಸಿದ್ಧ ದಾಮೋದರನು ಮಾತ್ರವಲ್ಲದೆ 'ವಿನಯಾಳಂಕೃತೆಯಾದ ತಾಯಿ ವೀರಕಬ್ಬೆ ಮತ್ತು ಪೂಜ್ಯರೆಂದರೆ ಶ್ರೀ ವೀರಭಟ್ಟಾರಕರು' ಎಂಬುದು ಗೊತ್ತಾಗುತ್ತದೆ. ಹೀಗೆ ತನ್ನ ಆರಾಧ್ಯದೈವ ಶ್ರೀ ವೀರಭಟ್ಟಾರಕರಾದುದರಿಂದಲೇ ನಾಗವರ್ಮನು ವೀರವರ್ಧಮಾನಪುರಾಣವನ್ನು ಬರೆದು

ಪ್ರಸಿದ್ಧನಾಗಿರಬೇಕು ಎಂದು ತೋರುತ್ತದೆ.

೩. ನಾಗವರ್ಮನ ವಿಷಯವನ್ನು ತಿಳಿಸುವ ಕಾವ್ಯಾವಲೋಕನದಲ್ಲಿ ಬರುವ 'ಸಾರ ವಿಚಾರ ಚಂಚುರ' (೪೯೭) 'ಸಕಲಕಲಾವಿದಂ ಮದವಿದೂರಂ' (೬೭೨) 'ಧರೆಯೆಂತಂತೆ ರಸಾಶ್ರಯಂ' (೮೪೩) ಎಂಬಿವೇ ಮೊದಲಾದ ಕೆಲವು ಪದ್ಯಗಳು ವರ್ಧಮಾನ ಪುರಾಣದಲ್ಲಿಯೂ ಕಂಡುಬರುತ್ತವೆ. ಕಾವ್ಯಾವಲೋಕನದಲ್ಲಿ

ಅಭಿಮತ ಶಬ್ದಸಂಸ್ಮರಣದಿಂ ಜನಮಂ ತಿಳಿವಂತು ಮಾಡಿ ವಾ
ಗ್ವಿಭವಮದಪ್ರತರ್ಕ್ಯಮೆನೆ ಸಂದೆಸಕಂ ದೆಸೆಯಂತಸೆಯ್ದಿ ತ
ತ್ಸಭೆಗಳೊಳಗ್ರಪೂಜೆವಡೆದೊಂದು ಮಹಾಮಹಿಮಾನುಭಾವದಿಂ
ದಭಿನವಶರ್ವವರ್ಮನಿವನೆಂದಪುದುರ್ವರೆ ನಾಗವರ್ಮನಂ ॥ (೪೨೩)

ಎಂದು ಬಂದರೆ, ವರ್ಧಮಾನಪುರಾಣದಲ್ಲಿ

ಜಿನಮತವನಹಂಸಂ ವಿಪ್ರವಂಶಾವತಂಸಂ
ಜಿನನುತಗುಣಧಾಮಂ ಸಚ್ಚರಿತ್ರಾಭಿರಾಮಂ
ವಿನಯನಯನಿಧಾನಂ ನಿಸ್ಸಹಾಯಾವಧಾನಂ
ಸ್ವನುಗತಶುಭಶರ್ಮಂ ನಿರ್ಮಳಂ ನಾಗವರ್ಮಂ ॥ (೧-೩೨)

ಎಂದು ಬರುತ್ತದೆ. ಇವೇ ಅಲ್ಲದೆ ಕಾವ್ಯಾವಲೋಕನದಲ್ಲಿ ಹೇಳುವ ಲಕ್ಷಣಗಳಿಗೆ ಉದಾಹರಣೆಗಳನ್ನು ವರ್ಧಮಾನಪುರಾಣದಿಂದ ಕೊಟ್ಟಿದೆ. 'ಮುನಿಸಿಂ ಮೇಲೆರ್ದು ಬರ್ಪಂದಿನ' (೩೬೪) 'ಪರಿವೃತ್ತತೆಯಿಂ ನುಣ್ಣಿಂ' (೬೬೮) ಎಂದು ಮೊದಲಾಗುವ ಕಾವ್ಯಾವಲೋಕನ ಪದ್ಯಗಳು ವರ್ಧಮಾನಪುರಾಣದ ೨-೪೭ ಮತ್ತು ೩-೩೫ನೆಯ ಪದ್ಯಗಳಾಗಿವೆ. ಹೀಗೆಯೇ ಇನ್ನೂ ಕೆಲವು ಪದ್ಯಗಳನ್ನು ಈ ಗ್ರಂಥದಲ್ಲಿ ಗುರುತಿಸಲಾಗಿದೆ.

೪. ಕಾವ್ಯಾವಲೋಕನದ ಪ್ರತಿ ಅಧಿಕರಣದ ಕೊನೆಯಲ್ಲಿ ''ಇದು ಸಕಲ ಸುಕವಿಜನ ಮನಸ್ಸರೋಜಿನೀರಾಜಹಂಸಾಯಮಾನಾನೂನ ಕವಿತಾಗುಣೋದಯ ಶ್ರೀಮನ್ನಾಗವರ್ಮ ಪ್ರಣೀತಮಪ್ಪ ಕಾವ್ಯಾವಲೋಕನದೊಳ್'' ಎಂದು ಬಂದರೆ, ವರ್ಧಮಾನಪುರಾಣದ ಪ್ರತಿ ಆಶ್ವಾಸದ ಕೊನೆಯಲ್ಲಿ ''ಇದು ಸಕಳ ಸುಕವಿಜನ ಮನಸ್ಸರೋಜಿನೀರಾಜಹಂಸಾಯಮಾನ ಮಾನಾನೂನ ಕವಿತಾಗುಣೋದಯ ಶ್ರೀಮನ್ನಾಗವರ್ಮ ವಿರಚಿತಮಪ್ಪ ಶ್ರೀ ವೀರವರ್ಧಮಾನಪುರಾಣದೊಳ್'' ಎಂದು ಬರುತ್ತದೆ.

ಕಾವ್ಯಾವಲೋಕನದಲ್ಲಿ ಕಂಡುಬರುವ 'ಕವಿತಾಗುಣೋದಯ, ಕವಿಕರ್ಣಪೂರ' ಎಂಬಿವು ವರ್ಧಮಾನ ಪುರಾಣದಲ್ಲಿಯೂ ಕಂಡುಬರುತ್ತವೆ. ಮೊದಲದರಲ್ಲಿನ 'ಅಭಿನವ ಶರ್ವವರ್ಮ' ಎಂಬುದು ಎರಡನೆಯದರಲ್ಲಿ 'ಸ್ವನುಗತ ಶುಭಶರ್ಮ', 'ಅಪಗತಶರ್ಮ' ಎಂದು ಮೊದಲಾಗಿ ಕಂಡುಬರುತ್ತದೆ. ಕಾವ್ಯಾವಲೋಕನದಲ್ಲಿ

ಸಕಲ ಬುಧಸಮಿತಿ ಸೆಜೆ಼ ಕೊಂ
ಡುಕೊನೆದು ನಲವಿಂದ ಕೀರ್ತಿಸುತ್ತಿರೆ ಮುದದಿಂ
ಸುಕರಮದಾಗಿರೆ ಕರ್ಣಾ
ಟಕದಿಂ ಕಾವ್ಯಾವಲೋಕಮಂ ವಿರಚಿಸುವೆಂ ॥

ಎಂದು ಹೇಳಿದರೆ, ವರ್ಧಮಾನಪುರಾಣದಲ್ಲಿ

ಎಂಬ ನೆಗೞ್ತೆ ಜಸಕ್ಕಾ
ಳಂಬಸಮಾಗಿರೆ ವಿನೇಯಜನಮಜ್ಜಿಱೊಳಾ
ದಂ ಬಯಸಿ ಕೇಳೆ ಪೇೞಿ
ಲ್ದಾಂ ಬಗೆದಂ ವೀರನಾಥಚರಿತಾಗಮಮಂ ॥ (೧-೩೩)

ಎಂದು ಹೇಳಿಕೊಂಡಿದ್ದಾನೆ.

ಇಂತಹ ಹಲವಾರು ಸಾದೃಶ್ಯಗಳಿಂದ ಕಾವ್ಯಾವಲೋಕನದ ಕರ್ತೃವಾದ ನಾಗವರ್ಮನೇ ವರ್ಧಮಾನಪುರಾಣದ ಕರ್ತೃವೂ ಆಗಿದ್ದಾನೆ ಎಂಬುದನ್ನು ಯಾರೂ ಅಲ್ಲಗಳೆಯಲಾಗುವುದಿಲ್ಲ.

**ನಾಗವರ್ಮರು ಎಷ್ಟು ಮಂದಿ ?**

ನಾಗವರ್ಮರು ಇಬ್ಬರೇ ? ಮೂವರೇ ? ಈಗ ದೊರೆತಿರುವ ನಾಗವರ್ಮನ ಕೃತಿಗಳೆಲ್ಲವೂ ಒಬ್ಬನಿಂದಲೇ ರಚಿತವಾದುವೆ ? ಅಲ್ಲವೇ ? ಎಂಬ ವಿಷಯದಲ್ಲಿ ಸಾಕಷ್ಟು ಚರ್ಚೆಯಾಗಿದೆ. ಹೊಸ ಕೃತಿಯಿಂದ ದೊರೆತ ಹೆಚ್ಚಿನ ಅಂಶಗಳಿಂದ ಹೇಳುವುದಾದರೆ ಛಂದೋಂಬುಧಿಯ ನಾಗವರ್ಮನಿಂದ ವರ್ಧಮಾನ ಪುರಾಣದ ನಾಗವರ್ಮನು ಬೇರೆ ಎಂಬುದನ್ನು ಅರಿಯಬಹುದಾಗಿದೆ. ಅದಕ್ಕೆ ಈ ಕೆಳಗಣ ಅಂಶಗಳನ್ನು ಪರಿಶೀಲಿಸಬಹುದು.

ಛಂದೋಂಬುಧಿಯಲ್ಲಿ ಬರುವಂತೆ ನಾಗವರ್ಮನ ವಂಶಾವಳಿ ಹೀಗಿದೆ :

**ವೆಣ್ಣಮಯ್ಯ+ಕೌಂಡಿಕಬ್ಬೆ**

**ದಾಮಮಯ್ಯ+ಕುಂದಕಬ್ಬೆ**

**ವೆಣ್ಣಮಯ್ಯ+ಪೋೞಿಕಬ್ಬೆ**

ನಾಗವರ್ಮ

ಈ ನಾಗವರ್ಮನಿಗೆ "ಅರಸಂ ರಕ್ಕಸಗಂಗಂ, ಗುರುಗಳ್ ನೆಗೞ್ದಜಿತಸೇನಪಂಡಿತದೇವರ್". ಆದರೆ ವರ್ಧಮಾನ ಪುರಾಣದ ನಾಗವರ್ಮನು ದಾಮೋದರ ಮತ್ತು ವೀರಕಬ್ಬೆಯರ ಮಗ ; ಇಷ್ಟದೈವ ಶ್ರೀ ವೀರಭಟ್ಟಾರಕರು.

ಇಬ್ಬರಿಗೂ ತಂದೆತಾಯಿಗಳು ಬೇರೆ ಬೇರೆಯಾಗಿರುವಂತೆಯೇ ಮೊದಲನೆಯ ನಾಗವರ್ಮನಿಗೆ ಅಜಿತಸೇನರು ಗುರುಗಳಾದರೆ ಎರಡನೆಯ ನಾಗವರ್ಮನಿಗೆ ಇಷ್ಟದೈವ ಶ್ರೀ ವೀರಭಟ್ಟಾರಕರಾಗಿದ್ದಾರೆ. ಹೀಗೆ ಭಿನ್ನತೆಯು ಸ್ಪಷ್ಟವಾಗಿರುವುದರಿಂದ ಈ ಇಬ್ಬರೂ ಬೇರೆಯೇ ಎಂದು ನಿರ್ಣಯವಾಗುತ್ತದೆ. ಡಾ. ಎ. ವೆಂಕಟಸುಬಯ್ಯನವರು ನಾಗವರ್ಮನೊಬ್ಬನೇ ಎಂಬುದಕ್ಕೆ ಪೋಷಕವಾಗಿ ಕೊಡುವ ಕಾರಣಗಳಲ್ಲಿ ಒಂದಾದ ಛಂದೋಂಬುಧಿಯಲ್ಲಿ ಬರುವ "ನಾಗವರ್ಮನ ತಂದೆಯ ತಂದೆಯಾದ ದಾಮಮಯ್ಯನೇ ಕಾವ್ಯಾವಲೋಕನದ ಅಂತ್ಯದಲ್ಲಿ ೯೬೧ನೇ ಪದ್ಯದಲ್ಲಿರುವ "ಪೇೞ್ದಂ ದಾಮೋದರತನಯನೀ ವಚೋಲಂಕೃತಿಯಂ" ಎಂಬ ವಾಕ್ಯದಲ್ಲಿಯೂ, ವಸ್ತುಕೋಶದ ಅಂತ್ಯದಲ್ಲಿರುವ "ಪೇೞ್ದಂ ದಾಮೋದರಪ್ರಿಯಸುತಂ ಕವಿಕರ್ಣಪೂರಂ" ಎಂಬ ವಾಕ್ಯದಲ್ಲಿಯೂ 'ದಾಮೋದರ'

ಎಂಬ ಪೂರ್ಣವಾದ ಹೆಸರಿನಿಂದ ವ್ಯವಹೃತನಾಗಿರುವನು. ಆದ್ದರಿಂದ ನಾವು ಈ ವಾಕ್ಯಗಳಲ್ಲಿರುವ 'ಸುತ', 'ತನಯ' ಎಂಬ ಪದಗಳಿಗೆ 'ಮಗ' ಎಂದು ಅರ್ಥಮಾಡದೆ 'ಮಗನ ಮಗ' ಎಂದು ಅರ್ಥಮಾಡಬೇಕು''[1] ಎಂದು ಹೇಳಿದ್ದಾರೆ. ಅವರು ಹೀಗೆ ಹೇಳಿದಾಗ ಕಾವ್ಯಾವಲೋಕನದ ಕರ್ತೃವಾದ ನಾಗವರ್ಮನ ತಾಯಿಯ ಮತ್ತು ಪೂಜಾರ್ಹರಾದ ಶ್ರೀ ವೀರಭಟ್ಟಾರಕರ ಹೆಸರುಗಳು ತಿಳಿದಿರಲಿಲ್ಲ. ಅದಕ್ಕೆ ವಿವರಣೆಯನ್ನು ಕೊಡಲು ಅವರಿಗೆ ಸಾಧ್ಯವಾಗಲಿಲ್ಲ. ಈ ಎರಡೂ ಆಗಲೇ ತಿಳಿದಿದ್ದರೆ ಇಬ್ಬರು ನಾಗವರ್ಮರನ್ನು ಒಪ್ಪುತ್ತಿದ್ದರೂ ಏನೋ ತಿಳಿಯದು.

**ಎರಡನೆಯ ನಾಗವರ್ಮನ ಕಾಲ :** ಕಾವ್ಯಾವಲೋಕನದ ಕರ್ತೃ ಎರಡನೆಯ ನಾಗವರ್ಮನೆಂದು ಹೇಳಿದ ಶ್ರೀ ಆರ್. ನರಸಿಂಹಾಚಾರ್ಯರು ಈತನ ಕಾಲವನ್ನು ಸು. ೧೧೪೫ ಎಂದು ನಿರ್ಣಯಿಸಿದರು. ಇದಕ್ಕೆ ಮೊದಲು ನಾಗವರ್ಮನೊಬ್ಬನೇ ಎಂದು ಭಾವಿಸಿದ್ದ ರೈಸ್ ಅವರು ಈತನು ೧೨ನೆಯ ಶತಮಾನದ ಮೊದಲ ಇಪ್ಪತ್ತು ವರ್ಷಗಳಲ್ಲಿದ್ದವನು ಎಂದು ಹೇಳಿದರು. ಒಬ್ಬನೇ ನಾಗವರ್ಮನೆಂದು ಪ್ರತಿಪಾದಿಸಿದ ಡಾ. ಎ. ವೆಂಕಟಸುಬ್ಬಯ್ಯನವರು ''ಕ್ರಿ.ಶ. ೧೦೧೫-೧೦೪೨ರ ವರೆಗೆ ಆಳಿದ ಜಯಸಿಂಹ ಜಗದೇಕಮಲ್ಲನೆಂಬ ಚಾಲುಕ್ಯ ಚಕ್ರವರ್ತಿ''ಯ ಕಾಲದಲ್ಲಿದ್ದವನು ಎಂದು ನಿರ್ಣಯಿಸಿದರು.

ಈಗ ದೊರೆತಿರುವ ವರ್ಧಮಾನಪುರಾಣ ಹಸ್ತಪ್ರತಿಯಲ್ಲಿ ಹದಿನಾರನೆಯ ಆಶ್ವಾಸದ ಕೊನೆಯ ಭಾಗದಲ್ಲಿ

ವಸುವರ್ಗಾಂಕಮಿ[2] [ದಂತ][2] ತೀತ[2] [ಶ][2] ಕಭೂಭೃದ್ವತ್ಸರಂ ಚಿತ್ರಭಾ
ನು ಸಮಾಖ್ಯಾಬ್ದಕಮಾಶ್ವಯುಗ್ಬಹುಳ ಷಷ್ಠೀವಾಸರಂ ತಾಂ ಪುನ
ರ್ವಸು ರುಕ್ಷಂ ಸುರಮಂತ್ರಿವಾರಮಭಿಜಿಲ್ಲಗ್ನೋದಯಂ ಕೂಡೆ ವ
ರ್ತಿಸೆ[2] [ಪೇಟ್ಟಿಂ][2] ಕವಿತಾಗುಣೋದಯನಿದಂ ಚೆಲ್ವಾಗೆ ತಾತ್ಪರ್ಯದಿಂ ॥ (೧೬-೪೭)

ಎಂಬ ಪದ್ಯ ದೊರೆತಿದೆ. ಇದುವರೆಗೆ ಎರಡನೆಯ ನಾಗವರ್ಮನವೆಂದು ಹೇಳುವ ಯಾವ ಕೃತಿಗಳಲ್ಲಿಯೂ ಇಂತಹ ಕಾಲಸೂಚಕ ಪದ್ಯವಾವುದೂ ದೊರೆತಿರಲಿಲ್ಲ. ಆತನ ಕಾಲ ನಿರ್ಣಯಕ್ಕೆ ಇತರ ಆಧಾರಗಳನ್ನು ಮಾತ್ರ ತೆಗೆದುಕೊಳ್ಳಲಾಗಿದ್ದಿತು.

ಈಗ ಈ ಪದ್ಯದಲ್ಲಿ ದೊರೆಯುವಂತೆ ''ಚಿತ್ರಭಾನು ಸಂವತ್ಸರ, ಆಶ್ವಯುಜ ಬಹುಳ ಷಷ್ಠಿ, ಪುನರ್ವಸು ನಕ್ಷತ್ರ, ಗುರುವಾರ, ಅಭಿಜಿಲ್ಲಗ್ನ''– ಮೊದಲಾದುವೆಲ್ಲವೂ ಕ್ರಿ.ಶ. ೧೦೪೨ನೆಯ ಅಕ್ಟೋಬರ್ ತಿಂಗಳ ಏಳನೆಯ ದಿವಸಕ್ಕೆ ಸರಿಹೊಂದುತ್ತವೆ. ಎಂದರೆ, ಶಾಲಿವಾಹನ ಶಕ ೯೬೪ ಎಂದಾಗುತ್ತದೆ. ಆಗ ಈತನ ಕಾಲ ಶ್ರೀ ಆರ್. ನರಸಿಂಹಾಚಾರ್ಯರು ಹೇಳುವ ಕಾಲಕ್ಕಿಂತ ಒಂದು ಶತಮಾನ ಹಿಂದಕ್ಕೆ ಹೋಗುತ್ತದೆ. ಈ ಪದ್ಯದಲ್ಲಿಯೇ ಬರುವ 'ವಸುವರ್ಗಾಂಕ' ಎಂಬುದು ೯೬೪ಕ್ಕೆ ಸರಿಹೊಂದಬೇಕಾಗುತ್ತದೆ. ಇದನ್ನು 'ಅಂಕಾನಾಂ ವಾಮತೋ ಗತಿಃ' ಎಂಬ ಸೂತ್ರಕ್ಕನುಸಾರವಾಗಿ ಅರ್ಥ ಮಾಡಿದರೆ 'ಅಂಕ'-೯, 'ವರ್ಗ'-೬ ಎಂಬುದಾಗಿ ಹೇಳಬಹುದಾಗಿದೆ. ಇದರಲ್ಲಿರುವ ಮತ್ತೊಂದು 'ವಸು' ಪದಕ್ಕೆ ೮ ಎಂಬ ಅರ್ಥವಾಗುವುದೇ ಹೊರತು ೪ ಎಂಬ ಅರ್ಥವಾಗುವುದಿಲ್ಲ. ಆದರೆ 'ವಸು' ಎಂದರೆ

---

೧ ಕ. ಕ. ಕ. ಜೀ., ಕಾಲವಿಚಾರ, ಪು. ೧೬೦.

೨ ದ    ಓ ಳ    ಳ ಳ್ಟಂ

೮ ಎಂಬ ಸಂಖ್ಯೆಯನ್ನಿಟ್ಟುಕೊಂಡು ಅದರ 'ವರ್ಗ' ಎಂದರೆ ೮x೮=೬೪ ಎಂದು ಮಾಡಿಕೊಂಡು 'ಅಂಕ' ಎಂಬುದನ್ನು ೯ ಎಂದು ಹೇಳಿ ೯೬೪ ಎಂದು ಅರ್ಥಮಾಡಬಹುದಾಗಿದೆ. ಹೀಗಾದಾಗ ಅಂಕಿಗಳು ಮತ್ತು ಸಂವತ್ಸರ ಎರಡೂ ರೀತಿಯಿಂದಲೂ ನಾಗವರ್ಮನ ಕಾಲ ಕ್ರಿ.ಶ. ೧೦೪೨ಕ್ಕೆ ಸರಿಹೋಗುತ್ತದೆ. ಎರಡನೆಯ ರೀತಿಯಿಂದ ಅರ್ಥಮಾಡುವುದನ್ನು ತಿರಸ್ಕರಿಸಿದರೂ ೯೬೮ ಎಂಬುದು ಸ್ಪಷ್ಟವಾಗಿದೆ. ಎಂದರೆ ಈ ಮೂರು ಸಂಖ್ಯೆಗಳಲ್ಲಿ ಒಂಬೈನೂರ ಅರವತ್ತನ್ನು ಯಾರೂ ಅಲ್ಲಗಳೆಯಲಾಗುವುದಿಲ್ಲ. ಕೊಟ್ಟಿರುವ ಸಂವತ್ಸರಾದಿ ವಿವರಗಳು ಮತ್ತಾವ ವರ್ಷಕ್ಕೂ ಸರಿ ಹೊಂದುವುದಿಲ್ಲ. ಆದುದರಿಂದ ಈತನ ಕಾಲವನ್ನು ಕ್ರಿ.ಶ. ೧೦೪೨ ಎಂದು ಹೇಳಬೇಕಾಗುತ್ತದೆ.

ಈ ಮೇಲೆ ಹೇಳಿದ ಕಾಲದಿಂದ ಜನ್ನನ ''ಜನನಾಥಂ ಜಗದೇಕನಲ್ಲಿ ಕಟಕೋಪಾಧ್ಯಾಯನಾ'' ಎಂಬ ಪದ್ಯಕ್ಕೆ ಅರ್ಥವೇನು? ಎಂದು ನೋಡಬೇಕಾಗುತ್ತದೆ. ಆರ್. ನರಸಿಂಹಾಚಾರ್ಯರು ಈ ಪದ್ಯವನ್ನು ಅರ್ಥಮಾಡುವಂತೆ ಜನನಾಥ ಜಗದೇಕನಲ್ಲಿ ಕಟಕೋಪಾಧ್ಯಾಯನಾಗಿದ್ದ ನಾಗವರ್ಮನು ಜನ್ನನಿಗೆ ಉಪಾಧ್ಯಾಯನಾಗಿದ್ದವನು. ಮೇಲೆ ಹೇಳಿದ ಜಗದೇಕಮಲ್ಲನು ಕ್ರಿ.ಶ. ೧೧೩೮ರಿಂದ ೧೧೫೦ರ ವರೆಗೆ ಆಳಿದ ಚಾಳುಕ್ಯ ರಾಜನಾಗಿರಬೇಕು. ಹಾಗಾದರೆ ಎರಡನೆಯ ನಾಗವರ್ಮನ ಕಾಲ ಸುಮಾರು ೧೧೪೫ ಎಂದು ನಿರ್ಣಯಮಾಡುತ್ತಾರೆ.

ಈ ನಿರ್ಣಯವನ್ನು ತಿರಸ್ಕರಿಸಿದ ಡಾ. ಎ. ವೆಂಕಟಸುಬ್ಬಯ್ಯನವರು ಕವಿಚರಿತೆಕಾರರು ''ಮಾಡಿರುವ ಅರ್ಥಕ್ಕನುಸಾರವಾಗಿ ಕ್ರಿ.ಶ. ೧೧೩೮-೧೧೪೯ (೧೧೫೧)ರಲ್ಲಿ ಆಳಿದ ಚಾಲುಕ್ಯ ಚಕ್ರವರ್ತಿ ಪೆರ್ಮ ಜಗದೇಕನಲ್ಲಿ ಕಟಕೋಪಾಧ್ಯಾಯನಾಗಿದ್ದ 'ಇದಾನೀಂತನ ಶರ್ವವರ್ಮನಾದ ನಾಗವರ್ಮನು ಕ್ರಿ.ಶ. ೧೨೨೩ರಲ್ಲಿ ಜನ್ನನಿಗೆ ಉಪಾಧ್ಯಾಯ ನಾಗಿದ್ದನೆಂದು ಹೇಳಿದ ಹಾಗಾಗುವುದು. ಇದು ಸುತರಾಂ ಅಸಂಭವವಾದುದು. ನಾಗವರ್ಮನು ಕಟಕೋಪಾಧ್ಯಾಯನಾದಾಗ ಅವನಿಗೆ ಮೂವತ್ತು ವರ್ಷ ಮಾತ್ರ ವಯಸ್ಸೆಂದೂ ಮೇಲೆ ಹೇಳಿದ ಜಗದೇಕಮಲ್ಲನ ಆಳ್ವಿಕೆಯ ಅಂತ್ಯ ವರ್ಷದಲ್ಲಿ, ಎಂದರೆ ಕ್ರಿ.ಶ. ೧೧೪೯ (೧೧೫೧)ರಲ್ಲಿ ಅವನು ಕಟಕೋಪಾಧ್ಯಾಯನಾದನೆಂದು ನಾವು ಇಟ್ಟುಕೊಂಡರೂ ಕೂಡ ಅನಂತನಾಥ ಪುರಾಣವನ್ನು ಜನ್ನನು ಪ್ರಾರಂಭಮಾಡಿದ ಸಮಯಕ್ಕೆ ಎಂದರೆ ಕ್ರಿ.ಶ. ೧೨೨೩ನೆಯ ವರ್ಷಕ್ಕೆ ನಾಗವರ್ಮನಿಗೆ ೧೦೪ (೧೦೨) ವರ್ಷ ವಯಸ್ಸು ಆಗುವುದು. ಇಷ್ಟು ವಯಸ್ಸಿನವರೆಗೆ ಅವನು ಜೀವಿಸಿದ್ದನೆಂದೂ ಆ ಕಾಲದಲ್ಲಿ ಜನ್ನನಿಗೆ ಅವನು ಉಪಾಧ್ಯಾಯನಾಗಿದ್ದನೆಂದೂ ಹೇಳುವುದು ಅಸಾಧ್ಯವೆಂದೇ ನಮಗೆ ತೋರುವುದು. ಅಲ್ಲದೆ ಜನ್ನನಿಗೂ ಕೂಡ ಆ ಕಾಲಕ್ಕೆ ಎಂದರೆ, ಅನಂತನಾಥ ಪುರಾಣವನ್ನು ಪ್ರಾರಂಭಮಾಡುವ ಕಾಲಕ್ಕೆ ಸುಮಾರಾಗಿ ವಯಸ್ಸಾಗಿತ್ತು. ಕ್ರಿ.ಶ. ೧೨೨೩ಕ್ಕಿಂತ ಹಿಂದೆಯೇ ಅವನು ಯಶೋಧರಚರಿತವನ್ನೂ ಪ್ರಾಯಶಃ ಇನ್ನೂ ಒಂದೆರಡು ಗ್ರಂಥಗಳನ್ನೂ ಬರೆದು ವೀರನರಸಿಂಹನ ಆಳ್ವಿಕೆಯಲ್ಲಿ ಮಂತ್ರಿಯೂ ದಂಡಾಧೀಶನೂ ಆಗಿದ್ದನು. ಉಪಾಧ್ಯಾಯರಿಂದ ಪಾಠವನ್ನು ಕಲಿಯುವ ಕಾಲವನ್ನು ಅವನು ಅತಿಕ್ರಮಿಸಿದ್ದನೆಂಬುದಂತೂ ಸುಸ್ಪಷ್ಟವಾಗಿರುವುದು. ಇಂತಹವನಿಗೆ ಕ್ರಿ.ಶ. ೧೨೨೩ರಲ್ಲಿ ಒಬ್ಬ ಉಪಾಧ್ಯಾಯನಿದ್ದನೆಂಬುದನ್ನು

ನೆಂಬುವುದೂ ಕೂಡ ಬಹುಕಷ್ಟವಾಗಿರುವುದು.''[೧] ಎಂದು ಮೊದಲಾಗಿ ವಿವರಿಸಿದ್ದಾರೆ. ಅವರು ಜನ್ನನ ಈ ಮೇಲಣ ಪದ್ಯವನ್ನು '''ಜನನಾಥಂ ಜಗದೇಕನಲ್ಲಿ ಕಟಕೋಪಾಧ್ಯಾಯನಾ ನಾಗವರ್ಮನಿದಾನೀಂತನಶರ್ವವರ್ಮನೆ ಗಡಂ' ಎಂಬವರೆಗೆ ಒಂದು ವಾಕ್ಯವೆಂದೂ ಉಳಿದುದೆಲ್ಲಾ ಮತ್ತೊಂದು ವಾಕ್ಯವೆಂದೂ ಕವಿಯ ಆಶಯವೆಂದು ನಮಗೆ ತೋರುವುದು. ಈ ಪದ್ಯದಲ್ಲಿ ದೃಷ್ಟಾಂತಾಲಂಕಾರವು ಭಾಸವಾಗಿರುವುದು. ಜನ್ನನ ಉಪಾಧ್ಯಾಯನಾದ ಸುಮನೋಬಾಣನಲ್ಲಿ ನಾಗವರ್ಮ ಸಾದೃಶ್ಯವೇ ಈ ಪದ್ಯದ ಮುಖ್ಯ ಪ್ರತಿಪಾದ್ಯ ವಿಷಯವು''[೨] ಎಂದು ಹೇಳಿ ಕ್ರಿ.ಶ. ೧೦೧೫-೧೦೪೨ರ ವರೆಗೆ ಆಳುತ್ತಿದ್ದ (ಜಯಸಿಂಹ) ಜಗದೇಕಮಲ್ಲನೆಂಬ ಚಾಲುಕ್ಯ ಚಕ್ರವರ್ತಿಯಲ್ಲಿ ನಾಗವರ್ಮನು ಕಟಕೋಪಾಧ್ಯಾಯನಾಗಿದ್ದಿರಬೇಕು ಎಂಬುದಾಗಿ ಹೇಳಿದ್ದಾರೆ.

ಮತ್ತೊಂದು ಗಣನೀಯ ಅಂಶವೆಂದರೆ, ಕ್ರಿ.ಶ. ೧೧೧೨ರಲ್ಲಿದ್ದ ನಯಸೇನನನ್ನು ಕರ್ಣಾಟಕ ಭಾಷಾಭೂಷಣದಲ್ಲಿ ಹೇಳುವುದು; ಇದಕ್ಕೆ ಡಾ. ಎ. ವೆಂಕಟಸುಬ್ಬಯ್ಯನವರು ''ಧರ್ಮಾಮೃತ ಕರ್ತೃವಾದ ನಯಸೇನನು ಒಂದು ವ್ಯಾಕರಣ ಗ್ರಂಥವನ್ನು ಬರೆದಿರುವನೆಂದು ಊಹಿಸುವುದಕ್ಕೆ ಯಾವ ಆಧಾರವೂ ಇಲ್ಲವಾದುದರಿಂದಲೂ ಈತನು ಧರ್ಮಾಮೃತವನ್ನು ಕ್ರಿ.ಶ. ೧೧೧೨ರಲ್ಲಿ ಬರೆದನೆಂದು ಆ ಗ್ರಂಥದಲ್ಲಿಯೇ ಹೇಳಲ್ಪಟ್ಟಿರುವುದರಿಂದಲೂ ಕೂಡ ಇವನು ಕ್ರಿ.ಶ. ೧೧೧೨ಕ್ಕಿಂತ ಸುಮಾರು ೭೦, ೮೦ ವರ್ಷಗಳ ಹಿಂದೆ ಬರೆಯಲ್ಪಟ್ಟ ಭಾಷಾಭೂಷಣದಲ್ಲಿ ಸ್ತುತನಾದ ನಯಸೇನನಿಂದ ಭಿನ್ನನೆಂದೂ ಕವಿಚರಿತೆಕಾರರು ಮೇಲೆ ಹೇಳಿದ ಅಭಿಪ್ರಾಯವು ತಪ್ಪೆಂದೂ ಸ್ಪಷ್ಟವಾಗುವುದು'' ಎಂದು ಹೇಳಿ ''ಎಪಿಗ್ರಾಫಿಯ ಇಂಡಿಕ ಪತ್ರಿಕೆಯ ೧೬ನೆಯ ಸಂಪುಟದಲ್ಲಿ (ಪುಟ ೫೪ ಆದಿ) ಡಾ. ಬಾರ್ನೆಟ್‌ರವರು ಮುಳುಗುಂದದಲ್ಲಿರುವ ಒಂದು ಶಿಲಾಶಾಸನವನ್ನು ಪ್ರಕಟಿಸಿರುವರು. ಈ ಶಾಸನದಲ್ಲಿ ಮೂಲಸಂಘದ ಸೇನಾನ್ವಯವನ್ನು ಪ್ರಸ್ತಾಪಮಾಡಿ ಈ ಸೇನಾನ್ವಯದ ಅಜಿತಸೇನ ಭಟ್ಟಾರಕರ ಶಿಷ್ಯರಾದ

ಚಾಂದ್ರಂ ಕಾತಂತ್ರಂ ಜೈ। ನೇಂದ್ರಂ ಶಾಬ್ದಾನುಶಾಸನಂ ಪಾಣಿನಿ ಮ
ತ್ತೈಂದ್ರಂ ನರೇಂದ್ರಸೇನ ಮು। ನೀಂದ್ರಂಗೇಕಾಕ್ಷರಂ ಪೆಱಂಗಿದುಮೊಗ್ಗೇ ॥

ಎಂದು ಹೊಗಳಿ, ಇವರಿಗೆ 'ಸಮಸ್ತಶಬ್ದಶಾಸ್ತ್ರಪಾರಾವಾರಪಾರಗ'ರಾದ ನಯಸೇನ ಪಂಡಿತರು ಶಿಷ್ಯರಾಗಿದ್ದರೆಂದು ಹೇಳಿ, ಅವರನ್ನು

ನಿನಗೇನೆಂಬೆನೊ ಶಾಕಟಾಯನಮುನೀಶಂ ತಾನೆ ಶಬ್ದಾನುಶಾ
ಸನದೊಳ್ ಪಾಣಿನಿ ಪಾಣಿನೀಯದೊಳ ಚಂದ್ರಂ ಚಾಂದ್ರದೊಳ್ ತಜ್ಜಿನೇಂ
ದ್ರನೆ ಜೈನೇಂದ್ರದೊಳಾ ಕುಮಾರನೆ ಗಡಂ ಕೌಮಾರದೊಳ್ ಪೋಲ್ವರಂ
ತೆನೆ ಪೋಲರ್ ನಯಸೇನಪಂಡಿತರೊಳನ್ಯರ್ ವಾರ್ಧಿವೀರ್ತೋರ್ವಿಯೊಳ್ ॥

ಎಂಬ ಪದ್ಯದಲ್ಲಿ ಹೊಗಳಿ, ಈ ನಯಸೇನಪಂಡಿತರಿಗೆ ಕ್ರಿ.ಶ. ೧೦೫೩ನೆಯ ಡಿಸೆಂಬರ್ ೨೪ನೇ ತಾರೀಖು ಶುಕ್ರವಾರದಂದು ಒಂದು ದತ್ತಿಯು ಕೊಡಲ್ಪಟ್ಟಿತೆಂದು ಹೇಳಿರುವುದು. ಭಾಷಾಭೂಷಣದಲ್ಲಿ ನಾಗವರ್ಮನಿಂದ ಕೀರ್ತಿತನಾಗಿರುವ ವೈಯಾಕರಣನಾದ

---

೧ ಕ. ಕ. ಕ. ಜೀ. ಕಾಲವಿಚಾರ, ಪು. ೧೫೭-೧೬೧.
೨ ಅದೇ, ಪು. ೧೨೯-೧೩೦

ನಯಸೇನನು ಒಂದು ವೇಳೆ ಈ ಶಾಸನೋಕ್ತನಾದ ನಯಸೇನಪಂಡಿತನೇ ಇರಬಹುದೆಂದು ನಮಗೆ ತೋರುವುದು''[೧] ಎಂದು ಹೇಳಿರುವ ಮಾತು ಸರಿಯೆಂದು ಹೇಳಬಹುದು.

ಇದಕ್ಕೆ ಸಹಕಾರಿಯಾಗಿ ಈ ವರ್ಧಮಾನ ಪುರಾಣದಲ್ಲಿ ಬರುವ

ಅಘವಿಘಟನ ಕಾರಣಮ । ಮ್ರಘಟಿತ ಪದಬಂಧ ಬಂಧುರಾಳಂಕೃತಿಯಂ
ಲಘುವಾಗೆ ಪೊಗಳೆ ಪೇೞ್ದಂ। ರಘುವಂಶ ಮಹಾಪುರಾಣಮಂ ಶ್ರೀ ವಿಜಯಂ ॥ (೧-೨)

ಸರಸ ಪ್ರಸನ್ನ ಮಾಧು । ರ್ಯರಂಜಿತಂ ದ್ರಪ್ರಮಸ್ತಿತಾರ್ಥಮಿದೆನೆ ವಿ
ಸ್ತರದಿಂ ಹರಿವಂಶಕಥಾಂ । ತರಮಂ ಸೊಗಯಿಸಿದನೆಸೆಪಿನಂ ಗುಣವರ್ಮಂ ॥ (೧-೩)

ಗದ್ಯದೊಳಂ ಪದ್ಯದೊಳಂ । ಚೋದ್ಯಮಿದೆನೆ ವತ್ಸರಾಜಚರಿತಾಗಮಮಂ
ವಿದ್ಯಾಸಿಧಿ ಬರೆದಂ ನಿರ । ವದ್ಯಗುಣಂ ನಾಗವರ್ಮನುಪಚಿತಶರ್ಮಂ ॥ (೧-೪)

ಧರೆಯೊಳಗೆ ನೆಗೞೆ ಶಾಂತೀ । ಶ್ವರವರಕಥೆಯಂ ಪುರಾಣಚೂಡಾಮಣಿಯಂ
ವಿರಚಿಸಿದ ಪೊನ್ನಮಯ್ಯನ । ಚರಿತಾರ್ಥಂ ಕೃತಿಕವೀಂದ್ರಚೂಡಾರತ್ನಂ ॥ (೧-೫)

ಆದಿ ಜಿನನಾಥಚರಿತಮ । ನಾದಮ್ಯ್ಯದಚ್ಚರೀತಿಯೊಳ್ ಪ್ರದಿಪಿಸಮು
ತ್ಪಾದಿಸಿದ ಪಂಪನಂತುದಿ । ತೋದಿತಮೃದುವಚನಗುಣ್ಣಾವನುಮೊಳನೇ ॥ (೧-೬)

ಪರಿಣತ ಸಂಸ್ಕೃತಪದಪ್ರೊಂ । ದಿರೆ ಸೌಂದರಮಪ್ಪ ತಿರುಳ ಕನ್ನಡದೊಳೆ ವಿ
ಸ್ತರಿಸಿದನಜಿತಜಿನೇಶ್ವರ ಚರಿತಮನುಜ್ವಳಯಶಂ ಮಹಾಕವಿರತ್ನಂ ॥ (೧-೭)

ಮೃದುಸಂದರ್ಭಮುದಾತ್ತಂ । ಸದಳಂಕೃತಿಯೆನೆ ಸುಲೋಚನಾಚರಿತಮನಿಂ
ಪೊದವಿರೆ ಪೇೞ್ದಂ ಕವಿತಾ । ವಿದಗ್ಧಮತಿಯೆನಿಪ ನಾಗದೇವ ಕವೀಂದ್ರಂ ॥ (೧-೮)

ಎಂಬ ಪದ್ಯಗಳಲ್ಲಿ ಶ್ರೀವಿಜಯ, ಗುಣವರ್ಮ, ನಾಗವರ್ಮ, ಪೊನ್ನ, ಪಂಪ, ರನ್ನ ಮತ್ತು ನಾಗದೇವರೆಂಬ ಕವಿಗಳನ್ನೂ ಅವರು ಬರೆದಿರುವ ಜೈನಕೃತಿಗಳನ್ನೂ ತಿಳಿಸಿದ್ದಾನೆ. ಭಾಷಾಭೂಷಣದಲ್ಲಿ ಧರ್ಮಾಮೃತದ ನಯಸೇನನನ್ನೇ ಹೇಳಿದ್ದ ಪಕ್ಷದಲ್ಲಿ ವರ್ಧಮಾನ ಪುರಾಣದಲ್ಲಿ ಜೈನಧಾರ್ಮಿಕ ಕಾವ್ಯವನ್ನು ಬರೆದ ಆತನನ್ನು ಹೆಸರಿಸದಿರುತ್ತಿರಲಿಲ್ಲವೆಂದು ಹೇಳಬಹುದಾಗಿದೆ. ಹಾಗೂ ಕಾವ್ಯಾವಲೋಕನದಲ್ಲಿನ ಉದಾಹೃತ ಪದ್ಯಗಳಲ್ಲಿ ಪಂಪ, ಪೊನ್ನ, ರನ್ನ, ಗುಣವರ್ಮರ ಕಾವ್ಯಗಳ ಪದ್ಯಗಳನ್ನು ಕಾಣಬಹುದೇ ಹೊರತು ನಯಸೇನನ ಧರ್ಮಾಮೃತದ ಯಾವ ಪದ್ಯವನ್ನೂ ಕಾಣಲಾಗುವುದಿಲ್ಲ. ಮೇಲೆ ಹೇಳಿರುವ ಶ್ರೀವಿಜಯನ ರಘುವಂಶಪುರಾಣದಿಂದ, ನಾಗವರ್ಮನ ವತ್ಸರಾಜಚರಿತೆಯಿಂದ, ನಾಗದೇವನ ಸುಲೋಚನಾಚರಿತೆಯಿಂದ ಮತ್ತು ಗುಣವರ್ಮನ ಹರಿವಂಶ ಕಥೆಯಿಂದ ಎಷ್ಟು ಪದ್ಯಗಳನ್ನು ತೆಗೆದುಕೊಂಡಿರುವನೆಂಬುದು ಆ ಕಾವ್ಯಗಳು ದೊರೆತಲ್ಲದೆ ತಿಳಿಯದು.

ನಾಗವರ್ಮನ ಕಾಲ ಸು. ೧೧೪೫ ಎಂಬ ವಾದಕ್ಕೆ ಪುಷ್ಟಿಕರವಾಗಿ ಕೊಡುವ ಮತ್ತೊಂದು ಕಾರಣವೆಂದರೆ ಭಾಷಾಭೂಷಣದಲ್ಲಿ ದ್ವಿತೀಯಾರ್ಥದ ಚತುರ್ಥ ವಿಭಕ್ತಿಗೆ ಉದಾಹರಣೆಯಾಗಿ ಕೊಟ್ಟಿರುವ 'ಬಹುತಾಪಕ್ಕೆ ಬಿಗುರ್ತು ವಿಷ್ಣುಪಡೆದಂ ಮತ್ಸ್ಯಾವತಾರಕ್ಕೆ' ಎಂಬ ನಾಗಚಂದ್ರನ ರಾಮಚಂದ್ರಚರಿತಪುರಾಣದ ಪದ್ಯಭಾಗವಿದೆ ಎಂಬುದು. ಕವಿಚರಿತೆಕಾರರು ನಾಗಚಂದ್ರನ ಕಾಲವನ್ನು ಸು. ಕ್ರಿ.ಶ. ೧೧೦೦ ಎಂದಿದ್ದಾರೆ. ಆದರೆ ಡಾ.

---

೧ ಕೆ. ಕ. ಕ. ಜೀವನ ಕಾಲವಿಚಾರ, ಪು. ೪೪.

ಎ. ವೆಂಕಟಸುಬ್ಬಯ್ಯನವರು "ದುರ್ಗಸಿಂಹನು ಕ್ರಿ.ಶ. ೧೦೨೪ರಿಂದ ೧೦೪೨ರ ಒಳಗೆ ತನ್ನ ಪಂಚತಂತ್ರವನ್ನು ಬರೆದನೆಂದು ಮೇಲೆ ವ್ಯಕ್ತಮಾಡಲ್ಪಟ್ಟಿರುವುದರಿಂದ (ಇದರ ವಿವರಗಳನ್ನು ಮೂಲದಲ್ಲಿ ನೋಡಬಹುದು.[1]) (ಈಗ ದುರ್ಗಸಿಂಹನ ಕಾಲ ಕ್ರಿ.ಶ. ೧೦೩೧ ಎಂದು ಖಚಿತವಾಗಿದೆ.) ಆ ಗ್ರಂಥದಲ್ಲಿ ಸ್ತುತಿಸಲ್ಪಟ್ಟ ನಾಗಚಂದ್ರನೂ ಕೂಡ ೧೦೪೨ರ ಹಿಂದೆಯೇ ಇದ್ದನೆಂಬುದು ಸ್ಪಷ್ಟವಾಗುವುದಷ್ಟೆ. ಹೀಗೆಯೇ ಕಾವ್ಯಾವಲೋಕನ, ಕರ್ಣಾಟಕ ಭಾಷಾಭೂಷಣಗಳ ಕರ್ತೃವಾದ ನಾಗವರ್ಮನು ಛಂದೋಂಬುಧಿಯ ಕರ್ತೃವಾದ ನಾಗವರ್ಮನಿಂದ ಅಭಿನ್ನನೆಂದೂ ಕ್ರಿ.ಶ. ೧೧ನೆಯ ಶತಮಾನದ ಸುಮಾರು ಮಧ್ಯಭಾಗದಲ್ಲಿ ಇದ್ದನೆಂದೂ ನಾವು ಮುಂದೆ ವ್ಯಕ್ತಪಡಿಸುವೆವು. ಇದರಿಂದಲೂ ಕೂಡ ನಾಗಚಂದ್ರನು ೧೦೪೨ಕ್ಕಿಂತ ಹಿಂದೆ ಇದ್ದನೆಂಬುದು ಸ್ಪಷ್ಟವಾಗುವುದು. ಆದುದರಿಂದ ಅವನು ಕ್ರಿ.ಶ. ೧೧ನೆಯ ಶತಮಾನದ ಆದಿಭಾಗದಲ್ಲಿಯೋ ಅಥವಾ ೧೦ನೆಯ ಶತಮಾನದ ಅಂತ್ಯಭಾಗದಲ್ಲಿಯೋ ಜೀವಿಸಿರಬೇಕು" ಎಂದು ಹೇಳುತ್ತಾರೆ. ಭಾಷಾಭೂಷಣದಲ್ಲಿ ಬರುವ 'ಬಹುತಾಪಕ್ಕೆ ಬಿಗುರ್ತು ಮತ್ಸ್ಯಾವತಾರಕ್ಕೆ' ಎಂಬ ಪದ್ಯಭಾಗ ಈಗ ದೊರೆಯದಿರುವ ಬೇರಾವುದಾದರೂ ಕಾವ್ಯದಿಂದ ತೆಗೆದುಕೊಂಡುದಾಗಿರಬಹುದೆ? ಈ ಪದ್ಯಭಾಗಕ್ಕೆ 'ಭೂತಾಪಕ್ಕೆ ಬಿಗುರ್ತು ಭೂಪ ಪಡೆದಂ ರಾಜ್ಯಾಧಿಕಾರತ್ವಮಂ' ಎಂಬ ಪಾಠಾಂತರವೂ ಇದೆ.

ಎರಡನೆಯ ನಾಗವರ್ಮನು ೧೦೪೨ರಲ್ಲಿದ್ದವನು ಎಂಬುದಕ್ಕೆ ಪೋಷಕವಾಗಿ ಬರುವ ಮತ್ತೊಂದು ಅಂಶವೆಂದರೆ, ಆತನ ವರ್ಧಮಾನ ಪುರಾಣದಲ್ಲಿ

ಕಥೆ ಗಣಭೃತ್ಪ್ರಣೀತಮಿತಿಹಾಸ ಸಮುದ್ಭವಮಾನತೇಂದ್ರನೀ
ಕೃತಿಗಧಿನಾಯಕಂ ನೆಗಳ್ದ ವೀರಜಿನಂ ಮನವೊಲ್ದು ಪೇಳ್ದನ
ನ್ವಿತಮತಿ ನಾಗವರ್ಮಕವಿ ಶೋಧಿಸಿದರ್ ಸಲೆ ವಾದಿರಾಜಪಂ
ಡಿತರನೆ ಮಚ್ಚದಿಪ್ಪ ಖಳನುಂ ದೊರೆಕೊಳ್ಗುಮೆ ಕೇಳ್ದೊಡಿಂತಿದಂ ॥ (೧-೨೧)

ಎಂದು ಬರುವ ಪದ್ಯವಾಗಿದೆ. ಈ ಪದ್ಯವನ್ನು ನೋಡಿದಾಗ "ಪೇಳ್ದನನ್ವಿತಮತಿ ನಾಗವರ್ಮಕವಿ ಶೋಧಿಸಿದರ್ ಸಲೆ ವಾದಿರಾಜಪಂಡಿತರ್" ಎಂಬುದನ್ನು ಗಮನಿಸಬೇಕಾಗುತ್ತದೆ. ವೀರಜಿನಚರಿತೆಯನ್ನು ವಾದಿರಾಜಪಂಡಿತರು ಶೋಧಿಸಿದ್ದಾರೆ-ಎಂದರೆ, ಸರಿತಪ್ಪುಗಳನ್ನು ನೋಡಿಕೊಟ್ಟಿದ್ದಾರೆ ಎಂದರ್ಥವಾಗುತ್ತದೆ. ಆಗ ವಾದಿರಾಜ ಪಂಡಿತರು ನಾಗವರ್ಮನ ಸಮಕಾಲೀನರೂ ಅಥವಾ ಸ್ವಲ್ಪ ಹಿರಿಯರೂ ಆಗಬೇಕಾಗುತ್ತದೆ. ಹಾಗಾದರೆ ಈ ವಾದಿರಾಜರು ಯಾರು ಎಂಬುದನ್ನು ನೋಡಬೇಕಾಗುತ್ತದೆ.

ಕನ್ನಡ ಸಾಹಿತ್ಯಚರಿತ್ರೆಯಲ್ಲಿ ೧೧-೧೨ನೆಯ ಶತಮಾನಗಳಲ್ಲಿ ಯಾವ ವಾದಿರಾಜರೂ ಕಂಡುಬರುವುದಿಲ್ಲ. ಆದರೆ ಸಂಸ್ಕೃತಕಾವ್ಯಗಳನ್ನು ರಚಿಸಿ ಪ್ರಸಿದ್ಧರಾದ ಮೂರು ಜನ ವಾದಿರಾಜರಿದ್ದಾರೆ. ಅವರಲ್ಲಿ ವಾದಿರಾಜ ಶಿವಮೊಗ್ಗ ಜಿಲ್ಲೆಯ ನಗರ ತಾಲ್ಲೂಕಿನ ೩೫ನೆಯ ಶಾಸನದಲ್ಲಿ ಬರುವ ಕನಕಸೇನ. ಈತನು ಕ್ರಿ.ಶ. ೯೫೦ರಲ್ಲಿ ಆಳುತ್ತಿದ್ದ ಬೂತುಗ ಪೆರ್ಮಾಡಿಯ ಗುರುವಾಗಿದ್ದನು. ಇದಕ್ಕೆ ಸಂಬಂಧಿಸಿದ ಎಲ್ಲ ವಿಷಯಗಳನ್ನೂ ಗಣನೆಗೆ ತೆಗೆದುಕೊಂಡರೆ ಈತನು ಕ್ರಿ.ಶ. ೧೦ನೆಯ ಶತಮಾನದ ಉತ್ತರಾರ್ಧದಲ್ಲಿದ್ದವನು

೧. ಕೆ. ಕ. ಕ. ಜೀ. ಕಾಲ ವಿಚಾರ, ಪು. ೧೭೯-೮೧.

ಎಂಬುದಾಗಿ ಶ್ರೀ ಟಿ.ಎ. ಗೋಪಿನಾಥರಾವ್ ತಿಳಿಸುತ್ತಾರೆ. ''ವಾದಿರಾಜರ ಕೃತಿಗಳಲ್ಲಿ ಒಂದಾದ ಪಾರ್ಶ್ವನಾಥಚರಿತೆಯು ಕ್ರಿ.ಶ. ೧೦೨೫ರಲ್ಲಿ ರಚಿತವಾಗಿರುವುದರಿಂದ ೧೧ನೆಯ ಶತಮಾನದ ಪೂರ್ವಾರ್ಧದ ಕೊನೆಯ ಭಾಗದಲ್ಲಿದ್ದವನು ಎಂದು ಹೇಳಬೇಕಾಗುತ್ತದೆ'' ಎಂದು ಡಾ. ಕೆ. ಕೃಷ್ಣಮೂರ್ತಿಯವರು ತಿಳಿಸಿರುತ್ತಾರೆ. ಡಾ. ಹುಲ್ಷ್ (Dr. Hultsch) ಅವರು ಕನಕಸೇನ ಅಥವಾ ಮೊದಲನೆಯ ವಾದಿರಾಜನು ಬೂತುಗನ ಗುರುವಾಗಿದ್ದನೆಂದೂ ಯಶೋಧರ ಚರಿತೆಯ ಕರ್ತೃ ಎರಡನೆಯ ವಾದಿರಾಜನು ಪಶ್ಚಿಮ ಚಾಳುಕ್ಯರ ದೊರೆ ಎರಡನೆಯ ಜಯಸಿಂಹ ಅಥವಾ ಮೊದಲನೆಯ ಜಗದೇಕಮಲ್ಲ (ಕ್ರಿ.ಶ.೧೦೧೮-೧೦೪೨) ನ ಗುರುವಾಗಿದ್ದನೆಂದೂ ೧೯೧೪ರಲ್ಲಿಯೇ ನಿರ್ಣಯಿಸಿದರು. ಡಾ. ಎ. ವೆಂಕಟ ಸುಬ್ಬಯ್ಯನವರು **ಸ್ಯಾದ್ವಾದವಿದ್ಯಾಪತಿ ತರ್ಕಷಣ್ಮುಖ** ಮತ್ತು **ಜಗದೇಕಮಲ್ಲವಾದಿನ್** ಮೊದಲಾದ ಬಿರುದುಗಳನ್ನು ಪಡೆದಿದ್ದ ಎರಡನೆಯ ವಾದಿರಾಜನು ಅಕ್ಟೋಬರ್ ೨೭, ೧೦೨೫ರ ಅನಂತರ ೧೦೪೨ಕ್ಕೆ ಮೊದಲು ಯಶೋಧರ ಚರಿತೆಯನ್ನು ಬರೆದಿದ್ದಾನೆ ಎಂದು ಹೇಳುತ್ತಾರೆ. ಈ ಎಲ್ಲ ಕಾರಣಗಳನ್ನು ವಿಮರ್ಶಿಸಿದ ಡಾ. ಕೆ. ಕೃಷ್ಣಮೂರ್ತಿಯವರು (೧) ''ಮೊದಲನೆಯ ವಾದಿರಾಜ ಕನಕಸೇನನು ಎರಡನೆಯ ವಾದಿರಾಜನಿಂದ ಬೇರೆಯಾದವನು. (೨) ಎರಡನೆಯ ವಾದಿರಾಜನು ಕ್ರಿ.ಶ. ೧೦೧೮-೧೦೪೨ರ ವರೆಗೆ ಆಳಿದ ಜಗದೇಕಮಲ್ಲ ೨ನೆಯ ಜಯಸಿಂಹನ ಆಸ್ಥಾನ ವಿದ್ವಾಂಸನಾಗಿದ್ದವನು. ಈತನಿಗೆ ಜಗದೇಕ ಮಲ್ಲವಾದಿನ್, ಸ್ಯಾದ್ವಾದ-ವಿದ್ಯಾಪತಿ ಮತ್ತು ಷಟ್‌ತರ್ಕ-ಷಣ್ಮುಖ ಬಿರುದುಗಳಿದ್ದವು''[೧] ಎಂದು ಹೇಳುತ್ತಾರೆ.

ಎರಡನೆಯ ನಾಗವರ್ಮನು ಹೇಳುವ 'ಶೋಧಿಸಿದರ್ ಸಲೆ ವಾದಿರಾಜಪಂಡಿತರ್' ಎನ್ನುವ ವಾದಿರಾಜನು ಈ ಎರಡನೆಯ ವಾದಿರಾಜನೇ ಇರಬಹುದೆಂದು ತೋರುತ್ತದೆ. ಡಾ. ಎ. ವೆಂಕಟಸುಬ್ಬಯ್ಯನವರು ಹೇಳುವಂತೆ, ಜನ್ನನು ತಿಳಿಸುವ ಜನನಾಥ ಜಗದೇಕನಲ್ಲಿಯೇ ಈ ನಾಗವರ್ಮನೂ ಕಟಕೋಪಾಧ್ಯಾಯನಾಗಿದ್ದನು. ಹೀಗೆಂದಾಗ ನಾಗವರ್ಮನಿದ್ದ ಆಸ್ಥಾನದಲ್ಲಿಯೇ ಇದ್ದಂತಹ ವಾದಿರಾಜರು ಈ ಕಾವ್ಯವನ್ನು ಶೋಧಿಸಿರುವುದು ಸಂಭವವಾಗಿದೆ. ಎರಡನೆಯ ನಾಗವರ್ಮನು ಹೇಳುವ ವಾದಿರಾಜರು ಈ ಎರಡನೆಯ ವಾದಿರಾಜರೇ ಎಂಬುದಕ್ಕೆ ಮತ್ತೊಂದು ಪೂರಕ ಅಂಶವಾದ ಕಾವ್ಯಾವಲೋಕನದಲ್ಲಿ ೪೨ನೆಯ ಸೂತ್ರದ 'ವಿದ್ವಾಂಸ' ರೂಪಕ್ಕೆ ಉದಾಹರಣೆಯಾಗಿ ಬರುವ

ಅದ್ವೈತವಾದಿನಿವಹ ಮ
ದದ್ವಿರದಘಟಾವಿಪಾಟನೈಕಪಟಿಷ್ಠಂ
ಸ್ಯಾದ್ವಾದಾಚಲಸಿಂಹಂ
ವಿದ್ವಾಂಸರ್ ಪೊಗೞೆ ವಾದಿರಾಜಂ ನೆಗೞ್ದಂ ॥

ಎಂಬ ಪದ್ಯವನ್ನು ನೋಡಬಹುದಾಗಿದೆ. ಈ ಪದ್ಯ ಯಾವ ಕಾವ್ಯದಿಂದ ತೆಗೆದುಕೊಂಡುದು ಎಂಬುದು ಈಗ ತಿಳಿದುಬರುವುದಿಲ್ಲ. ಆದರೆ ಇಂತಹ ವಿಶೇಷ ಗುಣಗಳನ್ನು ಹೊಂದಿರುವ ವಾದಿರಾಜರೆಂದರೆ ಎರಡನೆಯ ವಾದಿರಾಜರೇ ಎಂಬುದನ್ನು ಮೇಲೆ ನೋಡಲಾಗಿದೆ. ಆದುದರಿಂದ ವಾದಿರಾಜ ಮತ್ತು ನಾಗವರ್ಮರಿಬ್ಬರೂ ೧೧ನೆಯ ಶತಮಾನದ

---

೧ ವಾದಿರಾಜರ ಯಶೋಧರಚರಿತ, ಸಂ. ಡಾ. ಕೆ. ಕೃಷ್ಣಮೂರ್ತಿ, ಪುಟ ೫, ಧಾರವಾಡ, ೧೯೬೩.

ಪೂರ್ವಾರ್ಧದ ಉತ್ತರಭಾಗದಲ್ಲಿದ್ದವರು ಎಂದು ಹೇಳಬಹುದಾಗಿದೆ.

ಈ ಎಲ್ಲ ಕಾರಣಗಳಿಂದಲೂ ವರ್ಧಮಾನ ಪುರಾಣದಲ್ಲಿ ಬರುವ ಕಾಲದ ಪದ್ಯದಿಂದಲೂ ಎರಡನೆಯ ನಾಗವರ್ಮನು ಕ್ರಿ.ಶ. ೧೦೪೨ರಲ್ಲಿದ್ದವನೆಂದು ಸಿದ್ಧವಾಗುತ್ತದೆ.

*ವರ್ಧಮಾನ ಪುರಾಣಂ, ೧೯೭೪, ಪೀಠಿಕೆ, ಪು.೧೨-೨೬*

# ೪೫. ಜನ್ನ-ಸುಮನೋಬಾಣ: ಸಂಬಂಧ, ಮತೀಯ ಹಿನ್ನೆಲೆ

● ಎ. ವೆಂಕಟಸುಬ್ಬಯ್ಯ

ಜನ್ನನು ಯಶೋಧರಚರಿತೆಯಲ್ಲಿ 'ಭಾಳಲೋಚನಂ ಕವಿ ಸುಮನೋಬಾಣನ ಮಗನೆಂದಖಿಳಕ್ಷೋಣಿಗೆ ಪೆಸರಾಯ್ತು' ಎಂದು ಹೇಳಿ, ಅನಂತನಾಥಪುರಾಣದಲ್ಲಿ 'ಶಂಕರಪುತ್ರಂ ಕವಿ ಕಮ್ಮೆವಂಶನಧಿಕಜ್ಞಂ ಕಾಶ್ಯಪಂ', 'ಶಂಕರಶುದ್ಧಾಂತಾಂಗನಾ ಗಂಗೆಗೇನುದಯಂಗೆಯ್ದನೊ ಕಾಶ್ಯಪೋದ್ಭವಕರಂ ಸಾಹಿತ್ಯರತ್ನಾಕರಂ' ಎಂದೂ, ತನ್ನನ್ನು ಸ್ತೋತ್ರಮಾಡಿಕೊಂಡಿರುವುದರಿಂದ, ಕವಿಚರಿತಕಾರರು ಈ ಸುಮನೋಬಾಣನು ಜನ್ನನ ತಂದೆಯಾಗಿದ್ದನೆಂದೂ, ಇವನ ನಿಜವಾದ ಹೆಸರು ಶಂಕರ ಎಂದೂ, ಇವನ ಹೆಂಡತಿಯ ಹೆಸರು ಗಂಗೆ ಎಂದೂ ನಿರ್ಧರಿಸಿರುವರಲ್ಲದೆ 'ಕವಿಸುಮನೋಬಾಣನ ಜಾಮಾತೃ' ಎಂದು ತನ್ನನ್ನು ಹೇಳಿಕೊಂಡಿರುವ ಸೂಕ್ತಿಸುಧಾರ್ಣವವನ್ನು ವಿರಚಿಸಿದ ಮಲ್ಲಿಕಾರ್ಜುನನು ಜನ್ನನ ಸೋದರಿಯ ಗಂಡನೆಂದೂ, 'ಕವಿಸುಮನೋಬಾಣನ ದೌಹಿತ್ರನೆನಾಂ' ಎಂದು ತನ್ನನ್ನು ಸ್ತೋತ್ರಮಾಡಿಕೊಂಡಿರುವ ಶಬ್ದಮಣಿದರ್ಪಣಕಾರನಾದ ಕೇಶಿರಾಜನು ಜನ್ನನ ಸೋದರಳಿಯನೆಂದೂ ಕವಿಚರಿತೆ (೧, ಪು. ೨೬೧ ರಲ್ಲಿ) ಹೇಳಿಬಿಟ್ಟಿರುವರು. ಇದು ವಾಸ್ತವವಾಗಿದ್ದ ಪಕ್ಷದಲ್ಲಿ ಆ ಇಬ್ಬರು ಗ್ರಂಥಕರ್ತೃಗಳು ಜನ್ನನೊಡನೆ ತಮಗಿದ್ದ ಬಂಧುತ್ವವನ್ನು ಏಕೆ ಪ್ರಸ್ತಾವ ಮಾಡಲಿಲ್ಲ? ವೀರಬಲ್ಲಾಳನಿಂದ 'ಕವಿಚಕ್ರವರ್ತಿ' ಎಂಬ ಬಿರುದನ್ನು ಪಡೆದು ಯಶೋಧರಚರಿತ ಅನಂತನಾಥಪುರಾಣವೇ ಮೊದಲಾದ ಕಾವ್ಯಗಳನ್ನು ಬರೆದು ಪ್ರಸಿದ್ಧಿಯನ್ನು ಹೊಂದಿದ್ದ ಜನ್ನನು ಹೊಯ್ಸಲರಾಜರಲ್ಲಿ ಕಟಕೋಪಾಧ್ಯಾಯನಾಗಿದ್ದ ಸುಮನೋಬಾಣನಿಗಿಂತ ಅನ್ಯೂನನಾದವನೆಂಬುದು ಸ್ಪಷ್ಟವೇ ಆಗಿರುವುದು. ಹೀಗಿರುವಲ್ಲಿ, ಮಲ್ಲಿಕಾರ್ಜುನನು 'ಯಾದವಕಟಕಾಚಾರ್ಯ-ಕವಿಸುಮನೋಬಾಣನ ಜಾಮಾತೃ' ಎಂದು ಮಾತ್ರ ತನ್ನ ವಿಷಯವಾಗಿ ಹೇಳಿಕೊಂಡು ಕವಿಚಕ್ರವರ್ತಿಯಾದ ಜನ್ನನು ತನ್ನ ಶ್ಯಾಲನೆಂದು ಏತಕ್ಕೆ ಹೇಳಿಲ್ಲ? 'ಕವಿಸುಮನೋಬಾಣನ ಯಾದವಕಟಕಾಚಾರ್ಯನೆಸೆವ ದೌಹಿತ್ರನೆನಾಂ' ಎಂದೂ, 'ಯೋಗಿಪ್ರವರಚಿದಾನಂದಮಲ್ಲಿಕಾರ್ಜುನಸುತನೆಂ' ಎಂದೂ ತನ್ನನ್ನು ಹೊಗಳಿಕೊಂಡಿರುವ ಅವನ ಮಗನಾದ ಕೇಶಿರಾಜನೂ ಕೂಡ 'ಕವಿಚಕ್ರವರ್ತಿ ಜನ್ನನ ಸ್ವಸ್ರೀಯನು ನಾನು' ಎಂದು ಏತಕ್ಕೆ ಹೇಳಿಕೊಂಡಿಲ್ಲ? ತನ್ನ ತಂದೆಯು ಶಂಕರನೆಂದು ಹೇಳಿರುವ ಜನ್ನನೂ ಕೂಡ ಈ ತಂದೆಯು ಕಟಕೋಪಾಧ್ಯಾಯನಾಗಿದ್ದನೆಂದು ಏತಕ್ಕಾಗಿ ಹೇಳಲಿಲ್ಲ? ಇದೆಲ್ಲವನ್ನೂ ಪರ್ಯಾಲೋಚಿಸಿದರೆ 'ಜನ್ನನು ಕವಿಸುಮನೋಬಾಣನ ಮಗನು' ಎಂಬ ಕವಿಚರಿತಕಾರರ ಅಭಿಪ್ರಾಯವು ತಪ್ಪೆಂದು ಸ್ಪಷ್ಟವಾಗುವುದು. ವಸ್ತುತಃ 'ಭಾಳಲೋಚನಂ ಕವಿಸುಮನೋಬಾಣನ ಮಗನೆಂದಖಿಳಕ್ಷೋಣಿಗೆ ಪೆಸರಾಯ್ತು' ಎಂದು ಮೇಲೆ ಹೇಳಿದ ಯಶೋಧರಚರಿತದಲ್ಲಿನ ಪದ್ಯಭಾಗದಲ್ಲಿರುವ 'ಮಗ' ಎಂಬ ಪದವು ಮುಖ್ಯಾರ್ಥದಲ್ಲಿ ಉಪಯೋಗಿಸಲ್ಪಟ್ಟಿಲ್ಲದೆ ಗೌಣಾರ್ಥದಲ್ಲಿ, ಎಂದರೆ 'ಶಿಷ್ಯ' ಎಂಬ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿರುವುದೆಂಬ ಅಂಶವು ಮೇಲೆ ಹೇಳಿದ 'ಜನನಾಥಂ ಜಗದೇಕನಲ್ಲಿ...' ಎಂಬ ಅನಂತನಾಥಪುರಾಣದ ಪದ್ಯದಲ್ಲಿನ 'ಜನ್ನಂಗುಪಾಧ್ಯಾಯಂ.... ಸುಮನೋಬಾಣಂ' ಎಂಬ ಪದಗಳಿಂದ ವ್ಯಕ್ತವಾಗುವುದು. ಈ ಪದ್ಯದಲ್ಲಿ

ಸುಮನೋಬಾಣನು ಜನ್ನನಿಗೆ ಉಪಾಧ್ಯಾಯನಾಗಿದ್ದನೆಂದು ಹೇಳಲ್ಪಟ್ಟಿರುವುದೆಂದು ನಾವು ಮೇಲೆಯೇ ನಿರೂಪಿಸಿರುವೆವಷ್ಟೆ. ಹೀಗೆ ಜನ್ನನು ಸುಮನೋಬಾಣನ ಶಿಷ್ಯನಾಗಿದ್ದನೆಂಬ ಅಂಶವೇ 'ಭಾಳಲೋಚನಂ ಕವಿಸುಮನೋಬಾಣನ ಮಗನಂ' ಎಂಬ ಮೇಲೆ ಹೇಳಿದ ಪದ್ಯಭಾಗದಿಂದ ಬೋಧಿತವಾಗಿರುವುದೇ ಹೊರತು ಜನ್ನನು ಸುಮನೋಬಾಣನ ಮಗನಾಗಿದ್ದನೆಂಬ ಅರ್ಥವನ್ನು ಆ ಪದ್ಯಭಾಗವು ಬೋಧಿಸುವುದೆಂದು ನಾವು ತಿಳಿದುಕೊಳ್ಳುವುದು ತಪ್ಪು.

'ಮಗ', 'ಸುತ', 'ಪುತ್ರ' ಮೊದಲಾದ ಪದಗಳು ಹೀಗೆ ಗೌಣಾರ್ಥದಲ್ಲಿ ಉಪಯೋಗಿಸಲ್ಪಟ್ಟಿರುವುದಕ್ಕೆ ನಿದರ್ಶನಗಳು ಶ್ರವಣಬೆಳ್ಗೊಳದ ಶಾಸನಗಳಲ್ಲಿ ಹೇರಳವಾಗಿ ದೊರೆಯುವುವು. ಕವಿಚರಿತಕಾರರು ಪ್ರಸ್ತಾಪ ಮಾಡಿರುವ ಕವಿಗಳಲ್ಲಿ ರಾಮಾಯಣಕರ್ತೃವೂ ಮಾಘನಂದಿಸಿದ್ಧಾಂತಿಯ ಶಿಷ್ಯನೂ, ಪದ್ಮನಂದಿವ್ರತಿಯ ಮಗನೂ (ಕವಿಚರಿತೆ ೧, ಪು.೩೧೬) ಆದ ಕುಮುದೇಂದುವು ತಾನು ಬರೆದ ಪ್ರತಿಷ್ಠಾಕಲ್ಪಟಿಪ್ಪಣದಲ್ಲಿ 'ಮಾಘಣಂದಿ ಸಿದ್ಧಾಂತಚಕ್ರವರ್ತಿತನೂಭವಃ', 'ಮಾಘಣಂದಿಸಿದ್ಧಾಂತಚಕ್ರವರ್ತಿಸುತ' ಎಂದು ತನ್ನನ್ನು ವ್ಯವಹರಿಸಿಕೊಂಡಿದ್ದಾನೆ. 'ಹರೀಶ್ವರನ ವರಸುತಂ', 'ಹರಿದೇವಸುತರಾಘವ' ಎಂದು ತನ್ನನ್ನು ಹೊಗಳಿಕೊಂಡಿರುವ ಹರಿಶ್ಚಂದ್ರಕಾವ್ಯವೇ ಮೊದಲಾದ ಗ್ರಂಥಗಳ ಕರ್ತೃವಾದ ರಾಘವಾಂಕನು ಹರೀಶ್ವರನ ಶಿಷ್ಯನಾದುದರಿಂದ ಹೀಗೆ ಹೇಳಿಕೊಂಡಿರಬೇಕೆಂದು ಕವಿಚರಿತಕಾರರೇ ಅಭಿಪ್ರಾಯಪಟ್ಟಿರುತ್ತಾರೆ (ಕವಿಚರಿತೆ ೧, ಪು.೧೮೨). ಆದುದರಿಂದ ಸುಮನೋಬಾಣನ ಶಿಷ್ಯನಾದ ಜನ್ನನು ತಾನು 'ಸುಮನೋಬಾಣನ ಮಗನು' ಎಂದು ಹೇಳಿಕೊಂಡಿರುವುದರಲ್ಲಿ ಯಾವ ಆಶ್ಚರ್ಯವೂ ಇಲ್ಲ.

ಆದುದರಿಂದ 'ಈ ಕವಿಯ ನಿಜವಾದ ಹೆಸರು ಶಂಕರ,' 'ಈತನ ಹೆಂಡತಿ ಗಂಗೆ' ಎಂದು ಕವಿಚರಿತಕಾರರು ಹೇಳಿರುವದೂ ಕೂಡ ತಪ್ಪೆಂದು ಮೇಲೆ ಹೇಳಿದುದರಿಂದ ವ್ಯಕ್ತವಾಗುವುದು.

ಮೇಲೆ ಹೇಳಲ್ಪಟ್ಟ ಶಂಕರನೂ, ಗಂಗೆಯೂ ಸುಮನೋಬಾಣನ ಅಳಿಯನಾದ ಮಲ್ಲಿಕಾರ್ಜುನನೂ ಜೈನರೆಂಬ ಕವಿಚರಿತಕಾರರ ಅಭಿಪ್ರಾಯಕ್ಕೆ ನಮಗೆ ತಿಳಿದಂತೆ ಯಾವ ಆಧಾರವೂ ಇಲ್ಲ. ಹೀಗೆಯೇ ಈ ಮಲ್ಲಿಕಾರ್ಜುನನ ಮಗನೂ ಶಬ್ದಮಣಿದರ್ಪಣದ ಕರ್ತೃವೂ ಆದ ಕೇಶಿರಾಜನು ಜೈನನೆಂಬ ಕವಿಚರಿತಕಾರರ ಅಭಿಪ್ರಾಯಕ್ಕೂ (ಕವಿಚರಿತೆ ೧, ಪು.೩೧೧) ಯಾವ ಆಧಾರವೂ ಇರುವಂತೆ ಕಾಣುವುದಿಲ್ಲ. ಜನ್ನನೂ ಅವನ ಹೆಂಡತಿ ಲಕುಮಾದೇವಿಯೂ ಜಿನಭಕ್ತರಾದುದರಿಂದ ಅವರ ಬಂಧುಗಳೆಂದು ಕವಿಚರಿತಕಾರರು ತಿಳಿದುಕೊಂಡಿರುವ ಸುಮನೋಬಾಣ ಮಲ್ಲಿಕಾರ್ಜುನ ಕೇಶಿರಾಜರೂ, ಶಂಕರಗಂಗೆಯರೂ ಜೈನರೆಂದು ಕವಿಚರಿತಕಾರರು ಹೇಳಿರಬಹುದು. ಹಾಗಿದ್ದಲ್ಲಿ ಈ ಕಾರಣವು ಸರಿಯಾದ ಕಾರಣವೇ ಅಲ್ಲ. ಏಕೆಂದರೆ ಈಗಿನ ಕಾಲದಲ್ಲಿ ಆದಿತ್ಯನ, ಶಕ್ತಿಯ, ಅಥವಾ ಗಣೇಶನ ಉಪಾಸಕನಾದ ಒಬ್ಬ ಮನುಷ್ಯನ ಬಂಧುಗಳೆಲ್ಲರೂ ಆದಿತ್ಯನ, ಶಕ್ತಿಯ, ಅಥವಾ ಗಣೇಶನ ಉಪಾಸಕರೆಂದು ಹೇಳುವುದು ಎಷ್ಟು ಅಯುಕ್ತವೋ ಕ್ರಿ.ಶ. ೧೦-೧೩ನೆಯ ಶತಮಾನಗಳಲ್ಲಿ ಜಿನಭಕ್ತನಾದ ಒಬ್ಬ ಮನುಷ್ಯನ ಬಂಧುಗಳೆಲ್ಲರೂ ಜಿನಭಕ್ತರಾಗಿದ್ದರೆಂದು ಹೇಳುವುದು ಅಷ್ಟೇ ಅಯುಕ್ತವಾಗಿರುವುದು.

ಕ್ರಿ.ಶ. ೧೦-೧೩ನೆಯ ಶತಮಾನಗಳಲ್ಲಿ ಜಿನಭಕ್ತರಾದ ಮನುಷ್ಯರ ಸಮೀಪ ಬಂಧುಗಳು

ಕೂಡ ಕೆಲವು ವೇಳೆ ಅನ್ಯದೇವತಾಭಕ್ತರಾಗಿದ್ದರೆಂಬುದಕ್ಕೆ ನಿದರ್ಶನಗಳು ಮೈಸೂರು ದೇಶದ ಶಾಸನಗಳಲ್ಲಿ ಅನೇಕವಾಗಿರುವವು. ಅವುಗಳಲ್ಲಿ ಕೆಲವನ್ನು ಇಲ್ಲಿ ನಾವು ಉದಾಹರಿಸುವೆವು:

೧. ಮೇಲೆ (ಪುಟ ೩೪) ನಾಗಚಂದ್ರನ ಜೀವನಕಾಲ ವಿಚಾರಾವಸರದಲ್ಲಿ ಅಧ್ಯಾತ್ಮಿಬಾಲಚಂದ್ರನೆಂಬ ಜೈನಗುರುವು ಕ್ರಿ.ಶ. ೧೧೮೧ರಲ್ಲಿ ಬದುಕಿದ್ದಂತೆ ಶ್ರವಣಬೆಳ್ಗೊಳದ ೧೨೪ನೆಯ ಶಾಸನದಿಂದ ತಿಳಿದುಬರುವುದೆಂಬ ಕವಿಚರಿತಕಾರರ ಅಭಿಪ್ರಾಯವನ್ನು ನಾವು ಅನುವದಿಸಿರುವೆವಷ್ಟೆ. ಈ ಶಾಸನದಲ್ಲಿ 'ಅನವರತವಿನಮದಮರಮೌಳಿಮಾಳಾಮಿಳಿತಚಳಣ (-ರಣ-)ನಳಿನಯುಗಳಭಗವದರ್ಹತ್ಪರಮೇಶ್ವರ ಸ್ನಾತಗಂಧೋದಕ ಪವಿತ್ರೀಕೃತೋತ್ತಮಾಂಗೆ' ಯಾದ ಅಚಲದೇವಿಯು ಅಧ್ಯಾತ್ಮಿಬಾಲಚಂದ್ರನಿಗೆ ಒಂದು ದತ್ತಿಯನ್ನು ಕೊಟ್ಟಂತೆ ಹೇಳಿ,

ಪರಮಾರಾಧ್ಯನನಂತಸೌಖ್ಯನಿಳಯಂ ಶ್ರೀಮಜ್ಜಿನಾಧೀಶ್ವರಂ
ಗುರು ಸೈದ್ಧಾಂತಿಕಚಕ್ರವರ್ತಿ ನಯಕೀರ್ತಿಖ್ಯಾತಯೋಗೀಶ್ವರಂ
ಧರಣೀವಿಶ್ರುತಚಂದ್ರಮೌಳಿಸಚಿವಂ ಹೃತ್ಕಾಂತನೆಂದಂದಡಾರ್
ದೊರೆಯಿಯಾಚಲದೇವಿಗಿಂದು ವಿಶದೋದ್ಯತ್ಕೀರ್ತಿಗೀಧಾತ್ರಿಯೊಳ್ ॥

ಭರದಿಂ ಬೆಳ್ಗುಳತೀರ್ಥದೊಳ್ ಜಿನಪತಿಶ್ರೀಪಾರ್ಶ್ವದೇವೋದ್ಭಮಂ
ದಿರಮಂ ಮಾಡಿಸಿದಳ್ ವಿನೂತನಯಕೀರ್ತಿಖ್ಯಾತಯೋಗೀಂದ್ರಭಾ
ಸುರಶಿಷ್ಯೋತ್ತಮಬಾಳಚಂದ್ರಮುನಿಪಾದಾಂಭೋಜನೀಭಕ್ತೆ ಸು
ಸ್ಥಿರೆಯಪ್ಪಾಚಲದೇವಿ ಕೀರ್ತಿವಿಶದಾಶಾಚಕ್ರೆ ಸದ್ಭಕ್ತಿಯಿಂ ॥

ಎಂದು ಈ ಅಚಲದೇವಿಯ ಸ್ತುತಿಯಿರುವುದು. ಇಲ್ಲಿ ಹೇಳಲ್ಪಟ್ಟಿರುವ ಚಂದ್ರಮೌಳಿ ಸಚಿವನು ಮೇಲೆ (ಪುಟ ೯೬) ರುದ್ರಭಟ್ಟನ ಜೀವನಕಾಲವಿಚಾರಾವಸರದಲ್ಲಿ ಪ್ರಸ್ತುತನಾದ ಆ ಹೆಸರಿನ ವೀರಬಲ್ಲಾಳಸಚಿವನೇಯೆ. ಈ ಚಂದ್ರಮೌಳಿಯು ಶಿವಪೂಜಕನಾಗಿದ್ದನೆಂದು ಶ್ರ.ಬೆ. ಇದೇ ೧೨೪ನೇ ಶಾಸನದಲ್ಲಿನ–

ತನಗಾರಾಧ್ಯಂ ಹರಂ ವಿಕ್ರಮಭುಜಪರಿಘಂ ವೀರಬಲ್ಲಾಳದೇವಾ
ವನಿಪಾಲಂ ಸ್ವಾಮಿ ವಿಭ್ರಾಜಿತವಿಮಳಚರಿತ್ರೋತ್ಕರಂ ಶಂಭುದೇವಂ
ಜನಕಂ ಶಿಷ್ಟೇಷ್ಟ ಚಿಂತಾಮಣಿ ಜನನಿ ಜಗತ್ಕಾಂತೆಯಕ್ಕವ್ವೆಯಿಂದಂ
ದಿನಿಸಂ ಶ್ರೀಚಂದ್ರಮೌಳಿಪ್ರಭುಗೆ ಸಮಮ ಕಾಳೇಯಮಂತ್ರೀಶವರ್ಗಂ ॥

ಎಂಬ ಪದ್ಯದಿಂದ ತಿಳಿದುಬರುವುದು.

೨. ಕ್ರಿ.ಶ. ೧೧೨೮ರಲ್ಲಿ ನೊಳಂಬವಾಡಿ ೩೨೦೦೦ ಸೀಮೆಯನ್ನು ಮಂಡಲಿಕ ವೃತ್ತಿಯಿಂದ ಆಳುತ್ತಿದ್ದ ಮಹಾಮಂಡಲೇಶ್ವರ ತ್ರಿಭುವನಮಲ್ಲಪಾಂಡ್ಯನ ಬಳಿಯಲ್ಲಿ ಪ್ರಚಂಡದಂಡನಾಥಪದವೀವಿರಾಜಮಾನನಾದ ಸೂರ್ಯದಂಡನಾಯಕನೆಂಬವನೂ, ಇವನ ತಮ್ಮನೂ ಚಾಳುಕ್ಯವಿಕ್ರಮಾದಿತ್ಯದೇವಸಭಾನರ್ಘ್ಯವಸ್ತುನಾಯಕನೂ ಆದ ಸಮಧಿಗತಪಂಚಮಹಾಶಬ್ದ ಮಹಾಸಾಮಂತಾಧಿಪತಿ ಮಹಾಪ್ರಚಂಡ ದಂಡನಾಯಕ ಆದಿತ್ಯನೂ ಈಶ್ವರಪಾದಾರಾಧಕರಾಗಿದ್ದರೆಂದು ದಾವಣಗೆರೆಯ ೯೦ನೇ ಶಾಸನದಲ್ಲಿ ಹೇಳಿರುವುದು. ಈ ಸೂರ್ಯದಂಡನಾಯಕನ ಪತ್ನಿಯಾದ ಕಾಳಿಯಕ್ಕನಾದರೆ

'ಜಿನಪೂಜಾವಿನೋದೆ' ಎಂದೂ, 'ಜಿನೇಶ್ವರಚರಣಸರಸಿರುಹಮಧುಕರೋಪಮಾನ ಕುಟಿಲಕುಂತಳಕಲಾಪೆ' ಎಂದೂ ಇಲ್ಲಿ ವರ್ಣಿಸಲ್ಪಟ್ಟದ್ದು ಸೆಂಬನೂರಿನಲ್ಲಿ ಒಂದು ಜಿನಬಸದಿಯನ್ನು ಈಕೆಯು ಕಟ್ಟಿಸಿದಳೆಂದೂ ಈ ಶಾಸನದಲ್ಲಿ ಹೇಳಿರುವುದು.

೩. ಹೊಯ್ಸಲಚಕ್ರವರ್ತಿ ವೀರಬಲ್ಲಾಳನ ದಂಡನಾಯಕರಲ್ಲಿ ಒಬ್ಬನಾದ ಸುರಿಗೆಯ ಪೆರುಮಾಳುದಂಡನಾಯಕನಿಗೂ ಇವನ ತಮ್ಮನೂ ಬಲ್ಲಾಳಸಚಿವರಲ್ಲಿ ಒಬ್ಬನೂ ಆದ ಸಿಂಗಪಿಳ್ಳೆಗೂ ಪೆರ್ಗಡೆ ಜವನಯ್ಯನೆಂಬವನು ಭೃತ್ಯನೂ ಸಚಿವನೂ ಆಗಿದ್ದನೆಂದು ಚನ್ನರಾಯಪಟ್ಟಣದ ೨೫೭ನೇ ಶಾಸನದಲ್ಲಿ ಹೇಳಲ್ಪಟ್ಟು ಈ ಜವನಯ್ಯ-ಪೆರ್ಗಡೆಯು ಹೆಬ್ಬಳಲಲ್ಲಿ ಸಿಂಗೇಶ್ವರದೇವರ ಪ್ರತಿಷ್ಠೆಯನ್ನು ಮಾಡಿ ಕೆರೆಯನ್ನು ಕಟ್ಟಿಸಿದನೆಂದೂ ಈ ಶಾಸನದಲ್ಲಿ ಹೇಳಿರುವುದು. ಈ ಜವನಯ್ಯ-ಹೆಗ್ಗಡೆಯು 'ಶಿವಪಾದಶೇಖರ'ನೆಂದು ಇಲ್ಲಿ ವರ್ಣಿತನಾಗಿರುವನು. ಇವನ ಸತಿಯಾದ ಕಲ್ಲಿಯಕ್ಕನಾದರೆ ಜಿನಭಕ್ತಳಾಗಿದ್ದಳೆಂದು ಇದೇ ಶಾಸನದಲ್ಲಿರುವ–

ಜಿನಪತಿ ಕುಲದೈವಂ ಸಲೆ
ಜಿನಮುನಿಗಳ ಗುರುಗಳಮಳಧರ್ಮ್ಮಮೆ ಧರ್ಮ್ಮಂ
ತನಗೆನಲೀ ಜವನನ ಸುತೆ
.................ರಾಜಿಪಳು ಕಲ್ಲಿಯಕ್ಕನಮೋಘ ॥

ಎಂಬ ಪದ್ಯದಿಂದ ತಿಳಿದುಬರುವುದು.

೪. ಶ್ರವಣಬೆಳ್ಗೊಳದ ೫೩ (೧೪೩)ನೆಯ ಶಾಸನದಲ್ಲಿ ಒಬ್ಬ ಬಲದೇವ ದಂಡನಾಯಕನ ಪ್ರಸ್ತಾವವನ್ನು ಮಾಡಿ, ಇವನ ಮತ್ತು ಇವನ ಹೆಂಡತಿ ಮಕ್ಕಳು ಮುಂತಾದ ಇವನ ಬಂಧುಗಳ ಸ್ತುತಿಯು ಹೇಳಲ್ಪಟ್ಟಿರುವುದು. ಈ ಬಲದೇವ ದಂಡನಾಯಕನು 'ಜಿನಸಮಯ ಮಹಾಗಗನ ಶೋಭಾಕರ ದಿವಾಕರ', 'ಜಿನಧರ್ಮನಿರ್ಮಳ', 'ಜಿನಗಂಧೋದಕ ಪವಿತ್ರೀಕೃತೋತ್ತಮಾಂಗಂ', 'ಜಿನಧರ್ಮಕಥಾಕಥನಪ್ರಮೋದಂ' ಎಂದೂ, ಇವನ ಮಗನಾದ ಹೆಗ್ಗಡೆ ಸಿಂಗಿಮಯ್ಯನು 'ಜಿನಪತಿಭಕ್ತಂ ಜಿನಧರ್ಮಾಂಬರತಿಗ್ಮರೋಚಿ' ಎಂದೂ ಇವನ ಮಗಳು ಮಾಚಿಕಬ್ಬೆಯು 'ಜಿನಚರಣಭಕ್ತೆ', 'ಜಿನಪದಭಕ್ತೆ' ಎಂದೂ ಈ ಶಾಸನದಲ್ಲಿ ಹೇಳಲ್ಪಟ್ಟಿದ್ದು, ಈ ಮಾಚಿಕಬ್ಬೆಯು 'ಜಿನಚರಣಾಂಭೋಜಮಂ ಭಾವಿಸುತ್ತಂ', 'ಜಿನನಂ ಮನದೊಳು ಧ್ಯಾನಿಸುತ್ತಂ' ಸನ್ಯಸನಮಂ ಕೈಕೊಂಡು ಮುಡಿಪಿದಳೆಂದು ಹೇಳಲ್ಪಟ್ಟಿರುವುದು. ಆದುದರಿಂದ ಈ ಬಲದೇವದಂಡನಾಯಕನೂ, ಇವನ ಮಗ ಹೆಗ್ಗಡೆ ಸಿಂಗಿಮಯ್ಯನೂ, ಮಗಳು ಮಾಚಿಕಬ್ಬೆಯೂ ಜಿನಭಕ್ತರೆಂಬುದು ಸ್ಪಷ್ಟವಷ್ಟೆ. ಈ ಬಲದೇವದಂಡನಾಯಕನ ಅಳಿಯ ಎಂದರೆ ಈ ಮಾಚಿಕಬ್ಬೆಯ ಗಂಡನಾದ ಹೆಗ್ಗಡೆ ಮಾರಸಿಂಗಯ್ಯನಾದರೆ ಶಿವಪೂಜಕನಾಗಿದ್ದನೆಂದು ಇದೇ ಶಾಸನದಲ್ಲಿರುವ–

ಹರಪಾದಾಂಬುಜಭಕ್ತಿಯೊಳ್ ನಿಯಮದೊಳ್ ಶೀಲಂಗಳೊಳ್ ತಾನೆನಲ್
ಸುರಲೋಕಕ್ಕೆ ಮನೋಮುದಂಬೆರಸು ಪೋದಂ ಭೂತಳಂ ಕೀರ್ತಿಸಲ್ ॥

---

೧ ಈ ದೇವಾಲಯವು ಈಗಲೂ ಇರುವುದು.

ಎಂಬ ಪದ್ಯಭಾಗದಿಂದಲೂ, ಹಾಸನದ ೧೧೬ನೇ ಶಾಸನದ ೪೭ನೆಯ ಪಂಕ್ತಿಯಲ್ಲಿ ಪೆರ್ಗಡೆ ಮಾರಸಿಂಗಯ್ಯನು (ಗ್ರಾಮದಲ್ಲಿ) ಧರ್ಮೇಶ್ವರ ದೇವಾಲಯವನ್ನು[1] ಮಾಡಿಸಿದನೆಂದು ಹೇಳಲ್ಪಟ್ಟಿರುವುದರಿಂದಲೂ ಕೂಡ ವ್ಯಕ್ತವಾಗುವುದು. ಈ ಬಲದೇವ ದಂಡನಾಯಕನ ಮೊಮ್ಮಗಳು ಎಂದರೆ, ಮೇಲೆ ಹೇಳಿದ ಪೆರ್ಗಡೆ ಮಾರಸಿಂಗಯ್ಯ ಮಾಚಿಕಬ್ಬೆಯರ ಪುತ್ರಿಯಾದ ಶಾಂತಲದೇವಿಯು ಇದೇ ಶ್ರವಣಬೆಳ್ಗೊಳದ ೫೩. ೧೪೩ನೆಯ ಶಾಸನದಲ್ಲಿ 'ಚತುಸ್ಸಮಯ ಸಮುದ್ಧರಣೆ' ಎಂದರೆ, ಶೈವ-ವೈಷ್ಣವ-ಬೌದ್ಧಾರ್ಹತಗಳೆಂಬ ನಾಲ್ಕು ಮತಗಳ ಸಮುದ್ಧಾರಕಳೆಂದು ಸ್ತುತಳಾಗಿರುವಳು. ಈ ವಿಶೇಷಣವು ಸ್ತುತಿಮಾತ್ರವಲ್ಲದೆ ಅನ್ವರ್ಥವಾದುದೆಂಬ ವಿಷಯವು ಈಕೆಯು ಶ್ರವಣಬೆಳ್ಗೊಳದಲ್ಲಿ ಕಟ್ಟಿಸಿದ ಸವತಿ ಗಂಧವಾರಣ ಬಸದಿಯಿಂದಲೂ ಮತ್ತು ಈ ೫೩.ನೆಯ ಶಾಸನದಲ್ಲಿ ಹೇಳಿರುವ 'ಜಿನಸಮಯ ಸಮುದಿತಪ್ರಾಕಾರೆ', 'ಜಿನಧರ್ಮಕಥಾಕಥನಪ್ರಮೋದೆ', 'ಜಿನಗಂಧೋದಕ ಪವಿತ್ರೀಕೃತೋತ್ತಮಾಂಗೆ' ಎಂಬ ವಿಶೇಷಣಗಳಿಂದಲೂ, ಇವಳು ಈಶಾಪುರದಲ್ಲಿ ರಾಮೇಶ್ವರ ದೇವಾಲಯವನ್ನು ಕಟ್ಟಿಸಿದುದರಿಂದಲೂ,[1] ಹಾಸನದ ೧೧೬ ಬೇಲೂರು ೧೬ ಮತ್ತು ೫೮ನೆಯ ಶಾಸನಗಳಲ್ಲಿ ಇವಳಿಗೆ ಹೇಳಿರುವ 'ನಗರಾಜ ನಂದಿನೀಪಾದಾರವಿಂದ ವಂದನಾಭಿರುಚಿ' ಎಂಬ ವಿಶೇಷಣದಿಂದಲೂ ಮತ್ತು ಬೇಲೂರಿನ ಕೇಶವದೇವಾಲಯದಲ್ಲಿ 'ಕಪ್ಪೆ' ಚೆನ್ನಿಗರಾಯಸ್ವಾಮಿಯನ್ನು ಈಕೆ ಪ್ರತಿಷ್ಠೆಮಾಡಿದುದರಿಂದಲೂ (ಮ|| ಆರ್. ನರಸಿಂಹಾಚಾರ್ಯರು ಬರೆದ ೧೯೧೧ನೇ ವರ್ಷದ ಮೈಸೂರು ಆರ್ಕಿಯಾಲಾಜಿಕಲ್

---

೨ ಈ ದೇವಾಲಯವನ್ನು ಈಕೆ ಕಟ್ಟಿಸಿದಳೆಂಬ ಅಂಶವು ಬೇಲೂರು ೧೬ನೆಯ ಮತ್ತು ೫೮ನೆಯ ಶಾಸನಗಳಲ್ಲಿ ಈಕೆಗೆ ಹೇಳಿರುವ 'ಈಶಾಪುರರಚಿತರಾಮೇಶ್ವರಪ್ರಾಸಾದೆ' ಎಂಬ ವಿಶೇಷಣದಿಂದ ವ್ಯಕ್ತವಾಗುತ್ತದೆ.

ಮೇಲೆ ಹೇಳಿದ ಈ ವಿಶೇಷಣವಲ್ಲದೆ 'ಧರ್ಮೇಶ್ವರದೇವಲಬ್ಧವರ ಪ್ರಸಾದೆ', 'ಬಲಿಪುರ ವರಕ್ಷೀರವಾರಾಶಿಜನಿತಕಮಲೆ' ಎಂಬ ಎರಡು ವಿಶೇಷಣಗಳೂ ಈ ಎರಡು ಶಾಸನಗಳಲ್ಲಿಯೂ ಇತರ ಶಾಸನಗಳಲ್ಲಿಯೂ ಇವಳಿಗೆ ಹೇಳಲ್ಪಟ್ಟಿರುವುವು. ಇವುಗಳಲ್ಲಿ ಒಂದನೆಯದಾದ 'ಧರ್ಮೇಶ್ವರ ದೇವಲಬ್ಧಪ್ರಸಾದೆ' ಎಂಬುದರಿಂದ (ಧರ್ಮೇಶ್ವರನ ಎಂದರೆ ಮಾರಸಿಂಗಯ್ಯನು ಪ್ರತಿಷ್ಠೆ ಮಾಡಿದ ಧರ್ಮೇಶ್ವರದೇವರ) ವರಪ್ರಸಾದದಿಂದ ಹೆಗ್ಗಡೆ ಮಾರಸಿಂಗಯ್ಯನಿಗೆ ಈ ಮಗಳು ಹುಟ್ಟಿದಳೆಂದು ದ್ಯೋತಿಸಲ್ಪಡುವದು.

ಈ ವಿಷಯವು ಹಾಸನದ ೧೧೬ನೆಯ ಶಾಸನದಲ್ಲಿ 'ಧರ್ಮೇಶ್ವರವರಪ್ರಸಾದ ಪುತ್ರಿ' ಎಂಬ ವಿಶೇಷಣದಲ್ಲಿ ಸ್ಪಷ್ಟವಾಗಿಯೇ ಹೇಳಲ್ಪಟ್ಟಿರುವುದು

ಎರಡನೆಯದಾದ 'ಬಲಿಪುರಕ್ಷೀರವಾರಾಶಿಜನಿತಕಮಲೆ' ಎಂಬ ವಿಶೇಷಣದಿಂದ ಈ ಶಾಂತಲದೇವಿಯು ಬಲಿಪುರದಲ್ಲಿ ಎಂದರೆ, ಈಗಿನ ಶಿಕಾರಿಪುರದ ತಾಲ್ಲೋಕಿನಲ್ಲಿರುವ ಬೆಳಗಾಮೆಯಲ್ಲಿ ಹುಟ್ಟಿದಳೆಂದು ಸೂಚಿಸಲ್ಪಟ್ಟಂತಿರುವುದು. ಈ ಬೆಳಗಾಮೆಯು ಆ ಕಾಲದಲ್ಲಿ ಬನವಸೆ ೧೨೦೦೦ದ ಸೀಮೆಗೆ ರಾಜಧಾನಿಯೂ, ಬಹುದೊಡ್ಡ ಪಟ್ಟಣವೂ, ಕಾಳಾಮುಖಶೈವರಿಂದ ಸಮಾಶ್ರಿತವಾದ ಸ್ಥಾನಗಳಲ್ಲಿ ಮುಖ್ಯವಾದ ಒಂದು ಸ್ಥಾನವೂ ಆಗಿತ್ತೆಂದು ನಾನು 'ಎ ಟ್ವೆಲ್ಫ್ತ್ ಸೆಂಚುರಿ ಯೂನಿವರ್ಸಿಟಿ ಇನ್ ಮೈಸೂರ್' ಮಿಥಿಕ್ ಸೊಸೈಟಿ ಜರ್ನಲ್, ೭ ನೇ ಸಂಪುಟ ಎಂಬ ಲೇಖನದಲ್ಲಿ ನಿರೂಪಿಸಿರುವೆನು. ಈ ಶಾಂತಲದೇವಿಯ ಮೊಮ್ಮಗನಾದ ಹೊಯ್ಸಳಚಕ್ರವರ್ತಿ ವೀರಬಲ್ಲಾಳನ ಅರಸಿಗಳಲ್ಲಿ ಒಬ್ಬಳಾದ ಅಭಿನವಕೇತಲದೇವಿಯು ಕೂಡ ಈ ಬೆಳಗಾಮೆಯ ಸಮೀಪದಲ್ಲಿರುವ ಬಂದನಿಕೆ ಅಥವಾ ಬಾಂಧವಪುರ ಎಂಬ ಊರಿನವಳು (ಪೂರ್ವೋಕ್ತ ಲೇಖನದ ೨೦ನೆಯ ಪುಟವನ್ನು ನೋಡಿ).

ರಿಪೋರ್ಟಿನ ೪೩ನೇ ಪುಟವನ್ನು ನೋಡಿ) ಕೂಡ ಸ್ಪಷ್ಟವಾಗುವುದು. ಬೌದ್ಧಸಮಯವನ್ನು ಈಕೆಯು ಯಾವ ಪ್ರಕಾರದಲ್ಲಿ ಉದ್ಧರಿಸಿದಳೆಂಬುದು ನಮಗೆ ತಿಳಿಯದು.

ಈ ಶಾಂತಲದೇವಿಯ ಪತಿಯಾದ ವಿಷ್ಣುವರ್ಧನ-ಬಿಟ್ಟದೇವ ಹೊಯ್ಸಳನು ವಿಷ್ಣುಭಕ್ತನಾಗಿದ್ದನೆಂದು ಬೇಲೂರು ೫೮, ಬೇಲೂರು ೭೧, ಹಾಸನ ೮೯, ಮೊದಲಾದ ಅನೇಕ ಶಾಸನಗಳಲ್ಲಿ ಇವನಿಗೆ ಹೇಳಿರುವ 'ಶ್ರೀಮನ್ಮುಕುಂದಪಾದಾರವಿಂದವಂದನ ವಿನೋದನುಂ' ಎಂಬ ವಿಶೇಷಣದಿಂದಲೂ ಮತ್ತು ಇವನು ಗದಗು, ಬೇಲೂರು, ತಲಕಾಡು ಮೊದಲಾದ ಊರುಗಳಲ್ಲಿ ವಿಷ್ಣುದೇವಾಲಯಗಳನ್ನು ಕಟ್ಟಿಸಿದ್ದರಿಂದಲೂ ಸ್ಪಷ್ಟವಾಗುವುದು. ಮೇಲೆ ಹೇಳಿದ ಶಾಂತಲದೇವಿಯ ಮರಣಾನಂತರ ಇವನು 'ಶಿವಧರ್ಮಶ್ರೀತಿಲಕ'ಳಾದ ಜಕ್ಕಿಯಬ್ಬೆಯೆಂಬವಳ ಮಗಳಾದ ಚಿಕ್ಕಶಾಂತಲದೇವಿಯನ್ನು ಮದುವೆಯಾದನೆಂದೂ, ಇವಳೂ ಇವಳ ಮಗಳೂ ಪರಲೋಕಕ್ಕೆ ಹೋಗಲಾಗಿ, ಇವರಿಗೆ ಪರೋಕ್ಷವಿನಯವಾಗಿ ಈ ಜಕ್ಕಿಯಬ್ಬೆಯು ಕಟ್ಟಿಸಿದ ಶಿವದೇವಾಲಯಕ್ಕೆ ವಿಷ್ಣುವರ್ಧನನು ದತ್ತಿಯನ್ನು ಕೊಟ್ಟನೆಂದೂ ಹಾಸನದ ೮೯ನೇ ಶಾಸನದಲ್ಲಿ ಹೇಳಿರುವುದು. ವಿಷ್ಣುಭಕ್ತನಾದ ಈ ವಿಷ್ಣುವರ್ಧನನ ಪುತ್ರಿಯರಲ್ಲಿ ಒಬ್ಬಳಾದ ಹರಿಯವೆ ಅಥವಾ ಹರಿಯಬ್ಬರಸಿಯು 'ಭಗವದರ್ಹತ್ಪರಮೇಶ್ವರಚರಣನಖಮಯೂಖಲೇಖಾವಿಳಸಿತಲಲಾಟಫಲಕೆ' ಎಂದರೆ ಜಿನಭಕ್ತಳೂ, ಗಂಡವಿಮುಕ್ತಸಿದ್ಧಾಂತದೇವನ ಗುಡ್ಡಿಯೂ, ಆಗಿದ್ದಳೆಂದೂ ಹಂತಿಯೂರಿನಲ್ಲಿ ಒಂದು ಜಿನಬಸದಿಯನ್ನು ಕಟ್ಟಿಸಿದಳೆಂದೂ ಮೂಡಗೆರೆಯ ೨೨ನೇ ಶಾಸನದಲ್ಲಿ ಹೇಳಿರುವುದು.

ಹೀಗೆ ಮೇಲೆ ಹೇಳಿದ ನಿದರ್ಶನಗಳಿಂದ ಕ್ರಿ.ಶ. ೧೦-೧೩ನೇ ಶತಮಾನಗಳಲ್ಲಿ ಜಿನಭಕ್ತನಾದ ಒಬ್ಬ ಮನುಷ್ಯನ ಅಳಿಯ, ಮೊಮ್ಮಗಳು ಇತ್ಯಾದಿ ಬಂಧುಗಳು ಜಿನದೇವತೆಯನ್ನಲ್ಲದೆ ಇತರ ದೇವತೆಗಳನ್ನು ಪೂಜಿಸುತ್ತಿದ್ದರೆಂಬುದು ನಿರ್ವಿವಾದವಾಗಿ ವ್ಯಕ್ತವಾಗುವುದಷ್ಟೆ. ವಸ್ತುತಃ ಆ ಕಾಲದಲ್ಲಿ ಹುಟ್ಟಿದ ಗ್ರಂಥಗಳಲ್ಲಿ ಅಥವಾ ಶಾಸನಗಳಲ್ಲಿ ಒಬ್ಬ ಮನುಷ್ಯನು ಭಗವದರ್ಹತ್ಪರಮೇಶ್ವರನನ್ನು ಪೂಜಿಸುತ್ತಿದ್ದನೆಂದು, ಒಂದು ಜಿನಬಸದಿಗೆ ದತ್ತಿಯನ್ನು ಕೊಟ್ಟನೆಂದು ಅಥವಾ ಜಿನಬಸದಿಯನ್ನು ಕಟ್ಟಿಸಿದನೆಂದು ಹೇಳಿದಮಾತ್ರದಿಂದಲೇ ಅಂಥವನು 'ಜೈನ'ನೆಂದೂ ಶಿವವಿಷ್ಣ್ವಾದಿದೇವತೆಗಳನ್ನು ಪೂಜಿಸುತ್ತಿರಲಿಲ್ಲವೆಂದೂ ನಿರ್ಧರಮಾಡುವುದೇ ಅಯುಕ್ತವಾಗಿರುವುದು.

ಈಗಿನ ಕಾಲದಲ್ಲೇನೋ ಜಿನಭಕ್ತರಾಗಿರುವವರು ಶಿವ ವಿಷ್ಣ್ವಾದಿಗಳಿಗೆ ಮನ್ನಣೆಯನ್ನು ಮಾಡುವುದಿಲ್ಲವೆಂಬುದೂ ಶಿವ ವಿಷ್ಣ್ವಾದಿ ಭಕ್ತರು ಜಿನನಿಗೆ ಮನ್ನಣೆಯನ್ನು ಮಾಡುವುದಿಲ್ಲವೆಂಬುದೂ ವಾಸ್ತವವೇ ಆಗಿರುವುದು. ಕ್ರಿ.ಶ. ೧೦-೧೩ನೇ ಶತಮಾನಗಳಲ್ಲಿನ ಸ್ಥಿತಿಯಾದರೆ ಹೀಗಿರಲಿಲ್ಲ. ಆಗ ಜಿನಭಕ್ತರು ಶಿವ ವಿಷ್ಣ್ವಾದಿ ದೇವತೆಗಳಿಗೆ ಮನ್ನಣೆ ಮಾಡುತ್ತಿದ್ದರೆಂದೂ, ಶಿವ ವಿಷ್ಣ್ವಾದಿ ದೇವತಾಭಕ್ತರು ಜಿನನಿಗೆ ಮನ್ನಣೆಮಾಡುತ್ತಿದ್ದರೆಂದೂ ಆ ಕಾಲದಲ್ಲಿ ಹುಟ್ಟಿದ ಅನೇಕ ಶಾಸನಗಳಿಂದ ವ್ಯಕ್ತವಾಗುವುದು. ಇಂತಹ ಕೆಲವು ನಿದರ್ಶನಗಳನ್ನು ಈ ಶಾಸನಗಳಿಂದ ಇಲ್ಲಿ ನಾವು ಉದಾಹರಿಸುವೆವು :

೧. ವಿಷ್ಣುವರ್ಧನ-ಬಿಟ್ಟದೇವನ ಸೇನಾನಾಯಕರಲ್ಲಿ ಪ್ರಧಾನನಾಗಿದ್ದು, 'ಸಮಧಿಗತಪಂಚಮಹಾಶಬ್ದ ಮಹಾಸಾಮಂತಾಧಿಪತಿ, ಮಹಾಪ್ರಚಂಡದಂಡನಾಯಕ, ದ್ರೋಹಘರಟ್ಟ, ಹೊಯ್ಸಳರಾಜ್ಯಸಮುದ್ಧರಣ' ಮೊದಲಾದ ಬಿರುದುಗಳುಳ್ಳ

ಗಂಗರಾಜದಂಡನಾಯಕನು ಜಿನಭಕ್ತಾಗ್ರೇಸರನಾಗಿದ್ದನೆಂದು ಅನೇಕ ಶಾಸನಗಳಲ್ಲಿ[3] ಹೇಳಲ್ಪಟ್ಟಿರುವುದು. ಇವನು ಕ್ರಿ.ಶ. ೧೧೨೦ರಲ್ಲಿ ಜಯಂಗೊಂಡೇಶ್ವರ ದೇವರಿಗೆ[4] ಶಿವದೇವರಿಗೆ ಒಂದು ದತ್ತಿಯನ್ನು ಬಿಟ್ಟನೆಂದು ಚನ್ನರಾಯಪಟ್ಟಣದ ೨೬೦ನೇ ಶಾಸನದಲ್ಲಿ ಹೇಳಿರುವುದು ; ಮತ್ತು ನವಿಲೆಯಲ್ಲಿರುವ ನಾಗೇಶ್ವರದೇವರಿಗೆ ಭೂಮಿಯನ್ನು ಕೊಟ್ಟನೆಂದು ಚನ್ನರಾಯಪಟ್ಟಣದ ೨೧೨, ೨೧೩ನೇ ಶಾಸನಗಳಲ್ಲಿ ಹೇಳಿರುವುದು.

೨. ಈ ಗಂಗರಾಜದಂಡನಾಯಕನ ಮಗನಾದ ಬೊಪ್ಪದಂಡನಾಯಕನೂ, ಗಂಗರಾಜನ ಅಣ್ಣನಾದ ಬಮ್ಮದೇವದಂಡನಾಯಕನ ಸತಿಯಾದ ಬಾ (ಭಾ)ಗಣಬ್ಬೆಯೂ ಅವನ ಮಗನಾದ ಏಚದಂಡನಾಯಕನೂ ಹೀಗೆಯೇ ಜಿನಭಕ್ತರಾಗಿದ್ದರೆಂದು ಚನ್ನರಾಯ ಪಟ್ಟಣದ ೨೪೮ನೆಯ ಬೇಲೂರು ೧೨೪ನೆಯ ಮತ್ತು ಶ್ರವಣಬೆಳ್ಗೊಳದ ೧೪೪ನೆಯ ಶಾಸನಗಳಲ್ಲಿ ಹೇಳಿರುವುದು; ಮತ್ತು ಈ ಬೊಪ್ಪದಂಡನಾಯಕನು ತನ್ನ ತಂದೆಯಾದ ಗಂಗರಾಜನು ಲೋಕಾಂತರವನ್ನೈದಲು ಅವನಿಗೆ ಪರೋಕ್ಷವಿನಯವಾಗಿ ದೋರ ಸಮುದ್ರದಲ್ಲಿ ಪಾರ್ಶ್ವನಾಥ ಜಿನಾಲಯವೆಂಬ ಬಸದಿಯನ್ನು ಕಟ್ಟಿಸಿದನೆಂದು ಈ ಬೇಲೂರು ೧೨೪ನೇ ಶಾಸನದಲ್ಲಿ ಹೇಳಿರುವುದು. ಮೇಲೆ ಹೇಳಿದ ಚನ್ನರಾಯಪಟ್ಟಣದ ೨೪೮ನೇ ಶಾಸನದಲ್ಲಾದರೆ ಈ ಬೊಪ್ಪದಂಡನಾಯಕನೂ ಮತ್ತು ಮೇಲೆ ಹೇಳಿದ ಏಚದಂಡನಾಯಕ ಭಾಗಣಬ್ಬೆಯರೂ 'ಬೆಳ್ಗಲಿಯ ಮೂಲಸ್ಥಾನದ ಗಂಗೇಶ್ವರದೇವರ್ಗೆ... ಮಹದೇವ ಶಕ್ತಿಯೆತ್ತಿಸಿದ ದೇವಾಲ್ಯಕ್ಕೆ' ಒಂದು ದತ್ತಿಯನ್ನು ಕೊಟ್ಟಂತೆ ಹೇಳಿರುವುದು. ಹೀಗೆಯೇ ಈ ಬೊಪ್ಪದಂಡನಾಯಕನು ಆಸಂದಿನಾಡಿನಲ್ಲಿರುವ ಕೊಂಡಲಿಯನ್ನು 'ತನ್ನ ಹೆಸರಿಂ ದ್ರೋಹಘರಟ್ಟಚತುರ್ವ್ವೇದಿ ಮಂಗಲಮೆಂದು ಪೆಸರನಿಟ್ಟು,' ಒಂದು ಮಹಾಗ್ರಹಾರವನ್ನಾಗಿ ಮಾಡಿ ೫೨ ಬ್ರಾಹ್ಮಣರಿಗೆ[5] ಕೊಟ್ಟನೆಂದೂ, ಈ ಏಚದಂಡ ನಾಯಕನು ಕ್ರಿ.ಶ. ೧೧೩೭ರಲ್ಲಿ ಲಾಲನಕೆರೆಯಲ್ಲಿರುವ ಮಲ್ಲಿಕಾರ್ಜುನದೇವರಿಗಾಗಿ ಒಂದು ದತ್ತಿಯನ್ನು ಬಿಟ್ಟನೆಂದೂ ಬೇಲೂರು ೧೩೭ನೆಯ ಮತ್ತು ನಾಗಮಂಗಲದ ೨೮ನೆಯ ಶಾಸನಗಳಲ್ಲಿ[6] ಹೇಳಿರುವುದು.

---

೩ ಶ್ರವಣಬೆಳ್ಗೊಳದ ೪೩, ೪೪, ೪೫, ೪೭, ೫೯, ೬೫, ೯೦, ೧೪೪, ೨೫೧, ೩೮೪ ಮತ್ತು ೫೯೭ನೆಯ ಶಾಸನಗಳು; ಬೇಲೂರು ೧೨೪ನೇ ಶಾಸನ.

೪ ಈ ಜಯಂಗೊಂಡೇಶ್ವರದೇವರಿಗೆ ಗಂಗರಾಜದಂಡನಾಯಕನಲ್ಲದೆ ವಿಷ್ಣುವರ್ಧನಬಿಟ್ಟಿದೇವನೂ ಇವನ ಪಟ್ಟಮಹಾದೇವಿ ಶಾಂತಲದೇವಿಯೂ ಮಹಾಪ್ರಧಾನ ದಾವಪನೂ ಮಹಾಪ್ರಧಾನ ಪುಣಿಸಿಮಯ್ಯ ದಂಡನಾಯಕನೂ ದತ್ತಿಗಳನ್ನು ಕೊಟ್ಟಂತೆ ಈ ಶಾಸನದಲ್ಲಿ ಹೇಳಿರುವುದನ್ನು ನೋಡಿದರೆ, ಈ ಜಯಂಗೊಂಡೇಶ್ವರದೇವರನ್ನು ವಿಷ್ಣುವರ್ಧನ-ಬಿಟ್ಟಿದೇವನೇ ತನಗೆ ಯುದ್ಧದಲ್ಲಿ ಜಯವಾದುದಕ್ಕಾಗಿ ಪ್ರತಿಷ್ಠೆ ಮಾಡಿದನೆಂದು ಊಹಿಸಬೇಕಾಗಿರುವುದು.

೫ ಈ ದ್ರೋಹಘರಟ್ಟಚತುರ್ವೇದಿಮಂಗಲದ ಮಹಾಜನಗಳು-'ಯಮನಿಯಮಸ್ವಾಧ್ಯಾಯಧ್ಯಾನಧಾರಣಮೌನಾನುಷ್ಠಾನ ಜಪಸಮಾಧಿ ಶೀಲಗುಣ ಸಂಪನ್ನರೌಪಾಸನಾಗ್ನಿ ಹೋತ್ರದ್ವಿಜಗುರು ದೇವತಾಪೂಜಾತತ್ಪರರುಂ ಮಾರ್ತ್ತಾಂಡೋಜ್ವಳಕೀರ್ತಿಯುತರುಂ ಋಗ್ಯಜುಸ್ಸಾಮಾಥರ್ವಣವೇದ ವೇದಾರ್ಥ ಸಕಳಶಾಸ್ತ್ರಪಾರಾವಾರಾಯಿತರುಮಪ್ಪ ಕೊಂಡಲಿಯ ಶ್ರೀಮದಶೇಷಮಹಾಜನಂಗಳ್' ಎಂದು ಬೇಲೂರು ೧೪೦ನೇ ಶಾಸನದಲ್ಲಿ ವರ್ಣಿತರಾಗಿರುವರು.

೬ ಈ ಬೊಪ್ಪದಂಡನಾಯಕನೂ ಏಚದಂಡನಾಯಕನೂ ಗಂಗರಾಜನ ಮಗನೆಂದೂ ಅವನ ಅಣ್ಣನ ಮಗನೆಂದೂ ಈ ಶಾಸನಗಳಲ್ಲಿ ಹೇಳಲ್ಪಟ್ಟಿಲ್ಲವಾದರೂ ಈ ದಂಡನಾಯಕರಿಗೆ ಈ ಶಾಸನಗಳಲ್ಲಿ ಹೇಳಿರುವ 'ದ್ರೋಹಘರಟ್ಟ', 'ಹೊಯ್ಸಳರಾಜ್ಯಸಮುದ್ಧರಣ' ಮೊದಲಾದ ಬಿರುದುಗಳಿಂದ ಈ ಅಂಶವನ್ನು ನಾವೇ ಊಹಿಸಬಹುದು. ಎಂದರೆ, ಈ ಶಾಸನಗಳಲ್ಲಿ ಹೇಳಲ್ಪಟ್ಟಿರುವ

೩. ಹೊಯ್ಸಳರಾಜನಾದ ಒಂದನೇ ನರಸಿಂಹನ ಬಳಿಯಲ್ಲಿ ಮಹಾಪ್ರಧಾನ ಸರ್ವಾಧಿಕಾರಿ ಹಿರಿಯಭಂಡಾರಿಯಾಗಿದ್ದ ಹುಳ್ಳ (ಹುಳ್ಳಪ-ಹುಳ್ಳಮಯ್ಯ) ದಂಡನಾಯಕನು ಜಿನಭಕ್ತಾಗ್ರೇಸರನೆಂದೂ ಎರಡನೇ ಗಂಗರಾಜನಾಗಿದ್ದನೆಂದೂ ಶ್ರವಣಬೆಳ್ಗೊಳದ ೪೨, ೧೩೭, ೧೩೮ ಮೊದಲಾದ ಶಾಸನಗಳಲ್ಲಿ ಹೇಳಲ್ಪಟ್ಟು ಇವನು ಶ್ರವಣಬೆಳ್ಗೊಳದಲ್ಲಿ ಒಂದು ಬಸದಿಯನ್ನು ಕಟ್ಟಿಸಿ, ಇವನೂ ಇವನ ತಮ್ಮಂದಿರಾದ ಲಕ್ಷ್ಮಣ ಅಮರೇಶ್ವರರೂ ನರಸಿಂಹದೇವನನ್ನು ಬೇಡಿಕೊಂಡು ತಮ್ಮ ಸುಂಕದ ಅಧಿಕಾರದಂದು ಕೆಲವು ತೆರಿಗೆಗಳನ್ನು ಜಿನಾಲಯಕ್ಕಾಗಿ ಅವನ ಕೈಯಿಂದ ಬಿಡಿಸಿದರೆಂದು ಈ ೧೩೮ನೇ ಶಾಸನದಲ್ಲಿ[೭] ಹೇಳಿರುವುದು. ಗುಬ್ಬಿ ೧೨ನೇ ಶಾಸನದಲ್ಲಿ ಇದೇ ಹುಳ್ಳಪ-ದಂಡನಾಯಕನೂ ಮತ್ತು ಲಕ್ಷ್ಮಣ-ಅಮರೇಶ್ವರದಂಡನಾಯಕರೂ ಅದಲಗೆರೆಯಲ್ಲಿರುವ ಕಲ್ಲೇಶ್ವರ ಮತ್ತು ಬ್ರಹ್ಮೇಶ್ವರ ದೇವರುಗಳ ಪೂಜಾನೈವೇದ್ಯಾದಿಗಳಿಗಾಗಿ ಸ್ವಲ್ಪ ಭೂಮಿಯನ್ನು ಬಿಟ್ಟರೆಂದು ಹೇಳಿರುವುದು.[೮]

---

ಪಚದಂಡನಾಯಕನೂ ಮತ್ತು ಬೊಪ್ಪದಂಡ ನಾಯಕನೂ ಗಂಗರಾಜನ ಅಥವಾ ಅವನ ಅಣ್ಣನ ಪುತ್ರರಾಗಿದ್ದರೆಂಬುದರಲ್ಲಿ ಯಾವ ಸಂದೇಹವೂ ಇಲ್ಲ.

೭ ಈ ಲಕ್ಷ್ಮಣ-ಅಮರೇಶ್ವರರೂ ಹುಳ್ಳನಂತೆಯೇ ಹೊಯ್ಸಳನರಸಿಂಹನ ಬಳಿಯಲ್ಲಿ ಮಹಾಪ್ರಧಾನರೂ ದಂಡನಾಯಕರೂ ಆಗಿದ್ದರೆಂದು ಗುಬ್ಬಿ ೧೨ನೆಯ ಶಾಸನದಿಂದ ತಿಳಿದುಬರುವುದು. ಶ್ರವಣಬೆಳ್ಗೊಳದ ಈ ೧೩೮ನೇ ಶಾಸನದಲ್ಲಿ ಈ ಲಕ್ಷ್ಮಣದಂಡನಾಯಕನು ೪೧ನೇ ಪಂಕ್ತಿಯಲ್ಲಿ 'ಲಕ್ಷ್ಮಣ' ಎಂಬ ಹೆಸರಿನಿಂದಲೂ ೬೯ನೇ ಪಂಕ್ತಿಯಲ್ಲಿ 'ಹೆಗ್ಗಡೆ ಲಕ್ಕಯ್ಯ' ಎಂದೂ ವ್ಯವಹೃತನಾಗಿರುವನು. ಅಮರೇಶ್ವರ ದಂಡನಾಯಕನು ೪೧ನೇ ಪಂಕ್ತಿಯಲ್ಲಿ 'ಅಮರ' ಎಂದು ವ್ಯವಹೃತನಾಗಿರುವನು. ೬೯ನೇ ಪಂಕ್ತಿಯಲ್ಲಾದರೆ ಇವನ ಹೆಸರಿನ ಆದಿಯಲ್ಲಿರುವ 'ಅ' ಎಂಬ ಅಕ್ಷರವೊಂದೇ ಸ್ಪಷ್ಟವಾಗಿದ್ದು ಇತರ ಅಕ್ಷರಗಳು ಲುಪ್ತಗಳಾಗಿರುವುವು.

೮ ಈ ಶಾಸನದಲ್ಲಿ ಈ ಹುಳ್ಳ-ಲಕ್ಷ್ಮಣ-ಅಮರೇಶ್ವರರು ವಾಜಿವಂಶದ ನಾಗವರ್ಮನ ಮತ್ತು ಅವನ ಸತಿ ಭಾಗ[ಲದೇವಿ]ಯ ಪುತ್ರರೆಂದು ಹೇಳಿರುವುದು. ಶ್ರವಣಬೆಳ್ಗೊಳದ ೧೩೮ನೇ ಶಾಸನದಲ್ಲಾದರೆ ಲಕ್ಷ್ಮಣ-ಅಮರೇಶ್ವರರ ಅಣ್ಣನಾದ ಈ ಹುಳ್ಳದಂಡನಾಯಕನು ವಾಜಿವಂಶದ ಜಕ್ಕಿರಾಜ ಅಥವಾ ಯಕ್ಷರಾಜನ ಮತ್ತು ಅವನ ಸತಿ ಲೋಕಾಂಬಿಕೆಯ ಪುತ್ರರೆಂದು ಹೇಳಲ್ಪಟ್ಟಿರುವುದು. ಹೀಗೆಯೇ ನಾಗಮಂಗಲದ ೩೦ನೇ ಶಾಸನದಲ್ಲಿ ಮಹಾಪ್ರಧಾನ ಕಂಟಿಮಯ್ಯನು ಈ ಹುಳ್ಳದಂಡನಾಯಕನ ಅಣ್ಣನೆಂದು ಹೇಳಲ್ಪಟ್ಟು ಈ ಕಂಟಿಮಯ್ಯನೂ, ಇವನ ತಮ್ಮ (ಮಹಾಪ್ರಧಾನ-ದಂಡನಾಯಕ ಚೊಕ್ಕಣ್ಣನೂ) ದಂಡನಾಯಕ-ಹರಿಯಣ್ಣನೂ ವಾಜಿವಂಶದ ಮಧುಸೂದನನ, ಮತ್ತು ಅವನ ಸತಿ ಮುದ್ದಿಯಕ್ಕನ ಪುತ್ರರೆಂದು ಹೇಳಲ್ಪಟ್ಟಿರುವುದು.

ಸಹೋದರರಲ್ಲಿ ಒಬ್ಬನಿಗೆ ಹುಟ್ಟಿದ ಮಕ್ಕಳನ್ನು ಇನ್ನೊಬ್ಬನ ಮಕ್ಕಳೆಂದು ವ್ಯವಹಾರಮಾಡುವುದು ಕನ್ನಡ ಶಾಸನಗಳಲ್ಲಿ ಬಳಕೆಯಾಗಿರುವುದರಿಂದ (ಈ ವಿಷಯದಲ್ಲಿ ನಾಗಮಂಗಲ ೩೨ನೇ ಶಾಸನದಲ್ಲಿಯೂ ಚಿಕ್ಕಮಗಳೂರ ೧೬೦ನೇ ಶಾಸನದಲ್ಲಿಯೂ ಮರಿಯಾನೆ-ಭರತದಂಡನಾಯಕರ ತಾಯಿತಂದೆಗಳ ಹೆಸರುಗಳು ಬೇರೆ ಬೇರೆಯಾಗಿ ಕೊಡಲ್ಪಟ್ಟಿರುವುದನ್ನು ನೋಡಿ) ಮೇಲೆ ಹೇಳಿದ ಶಾಸನಗಳಲ್ಲಿ ಕೀರ್ತಿತರಾಗಿರುವ ವಾಜಿವಂಶದ ಯಕ್ಷರಾಜ, ನಾಗವರ್ಮ, ಮಧುಸೂದನರು ಸಹೋದರ ರಾಗಿದ್ದರೆಂದೂ, ಹುಳ್ಳ, ಲಕ್ಷ್ಮಣ, ಅಮರೇಶ್ವರರು ಅವರಲ್ಲಿ ಯಕ್ಷರಾಜನ ಅಥವಾ ನಾಗವರ್ಮನ ಔರಸಪುತ್ರರಾಗಿದ್ದರೆಂದೂ ನಾವು ಊಹಿಸಬೇಕಾಗಿರುವುದು.

ಜಿನಭಕ್ತನಾದ ಹುಳ್ಳನ ಅಣ್ಣನಾದ ಮೇಲೆ ಹೇಳಿದ ಹೆಗ್ಗಡೆ ಕಂಟಿಮಯ್ಯನು ಈಶ್ವರಭಕ್ತನೆಂದೂ, ಅವನು ಶಿವದೇವಾಲಯುವನ್ನು ಕಟ್ಟಿಸಿದನೆಂದೂ, ಅವನೂ (ಅವನ ತಮ್ಮ) ಮಹಾಪ್ರಧಾನದಂಡನಾಯಕ ಚೊಕ್ಕಣ್ಣನೂ, ದಂಡನಾಯಕ ಹರಿಯಣ್ಣನೂ ಕ್ರಿ.ಶ. ೧೧೬೫ರಲ್ಲಿ ಮಧುಕೇಶ್ವರ ಅಂಗಭೋಗನೈವೇದ್ಯಾದಿಗಳಿಗಾಗಿ ಸ್ವಲ್ಪ ಭೂಮಿಯನ್ನು ಕೊಟ್ಟರೆಂದೂ ನಾಗಮಂಗಲದ ಈ ೩೦ನೇ ಶಾಸನದಲ್ಲಿ ಹೇಳಿರುವುದು.

ಈ ಶಾಸನದಲ್ಲಿರುವ 'ಆ ವಿಭುಗಳು ಸುಖದೊಂದವಿಂ' ಎಂದು ಮೊದಲಾಗುವ ಪದ್ಯವನ್ನೂ, ಶ್ರವಣಬೆಳ್ಗೊಳದ ಶಾಸನಗಳಲ್ಲಿ ಹುಳ್ಳನೊಬ್ಬನೇ ಜಿನಭಕ್ತನೆಂದು ಸ್ತುತಿಸಲ್ಪಟ್ಟಿರುವುದನ್ನೂ ಪರ್ಯಾಲೋಚಿಸಿದಲ್ಲಿ ಇವನ ತಮ್ಮಂದಿರಾದ ಲಕ್ಷ್ಮಣ ಅಮರೇಶ್ವರದಂಡನಾಯಕರು ತಮ್ಮ ಪಿತೃವ್ಯಪುತ್ರರಾದ ಕಂಟಿಮಯ್ಯ-ಹೆಗ್ಗಡೆ, ಹರಿಯಣ್ಣ-ದಂಡನಾಯಕರಂತೆ ಶಿವವಿಷ್ಣ್ವಾದಿಗಳ ಭಕ್ತರಾಗಿದ್ದರೆಂದು ನಾವು ಊಹಿಸಬೇಕಾಗಿರುವುದು.[೯]

೪. ಮೇಲೆ ನಾವು ೨ನೇ ಮರಿಯಾನೆ ದಂಡನಾಯಕನ ಮಗಳಾದ ಬಮ್ಮಲೆಯು ಪಾರಿಸಣ್ಣ ಅಥವಾ ಪಾರ್ಶ್ವನನ್ನು ಮದುವೆಯಾದಳೆಂದು ಹೇಳಿರುವೆವಷ್ಟೆ. ಈ ಪಾರ್ಶ್ವನು ೧ನೇ ಹೊಯ್ಸಳ ನರಸಿಂಹನ ಬಳಿಯಲ್ಲಿ ಮಹಾಪ್ರಧಾನ- ಪಟ್ಟಸಭಂಡಾರಿಯಾಗಿದ್ದನೆಂದೂ, ಇವನ ತಂದೆಯು ಚಾವುಂಡಮಯ್ಯನೆಂದೂ, ಇವನು ಜಿನದೇವ ಅಥವಾ ಜಿನ್ನನ ಮಗನೆಂದೂ, ಈ ಜಿನದೇವನ ತಮ್ಮನಾದ ಪಾರ್ಶ್ವನು ನಿಟ್ಟೂರಿನಲ್ಲಿ ಚೈತ್ಯಾಲಯವನ್ನು ಮಾಡಿಸಿದನೆಂದೂ, ಮತ್ತು ಮೇಲೆ ಹೇಳಿದ ಮಹಾಪ್ರಧಾನಭಂಡಾರಿ ಪಾರಿಸಣ್ಣನು ಕಾಳಗದಲ್ಲಿ ಮಡಿಯಲಾಗಿ, ಅವನ ಮಗನಾದ ಶಾಂತಿಯಣ್ಣ ದಂಡನಾಯಕನು ಅವನಿಗೆ ಪರೋಕ್ಷವಿನಯವಾಗಿ ಒಂದು ಬಸದಿಯನ್ನು ಕಟ್ಟಿಸಿದನೆಂದೂ ಅರಶೀಕೆರೆ ೧೪೧ನೆಯ ಶಾಸನದಲ್ಲಿ ಹೇಳಿರುವುದು. ಅರಶೀಕೆರೆ ೧೪೪ನೇ ಶಾಸನದಲ್ಲಾದರೆ ಮೇಲೆ ಹೇಳಿದ ಚಾವುಂಡಮಯ್ಯನು ಕರಿಗುಂದದ ಮೂಲಸ್ಥಾನೇಶ್ವರ ದೇವರಿಗಾಗಿ ಸ್ವಲ್ಪ ಭೂಮಿಯನ್ನು ಬಿಟ್ಟನೆಂದು ಹೇಳಿರುವುದು.

೫. ಹೀಗೆಯೇ 'ಮಂಡಲಿಸಾಯಿರದ ನಾಳ್ಪ್ರಭು ವಡ್ಡವ್ಯವಹಾರಿ ಜಿನೇಂದ್ರ ಪಾದಾರಾಧಕರುಮಪ್ಪ ಹೊಯ್ಸಳಗೊಯ್ದಿಸೆಟ್ಟಿಯರಾಯನಗ್ರತನೂಜಂ ಬಲ್ಲಗಾವುಂಡನಾತನ ತಮ್ಮ ಬೊಪ್ಪಗಾವುಂಡನಿಂತೀ ಸುಪುತ್ರರ್ವೆರಸು.... ಪರೋಪಕಾರಾರ್ಥದಿಂ ಸುಖದಿಂ ಜೀವಿಸುತ್ತಿರ್ದೊಂದು ದೆವಸಂ ಶಿವಧರ್ಮಕಥನವಂ ಕೇಳ್ದು ಚಾಳುಕ್ಯ ವಿಕ್ರಮವರ್ಷದ ೧೪೯ನೆಯ ಶಾರ್ವರಿಸಂವತ್ಸರದುತ್ತರಾಯಣ ಸಂಕ್ರಾಂತಿ ಸೂರ್ಯಗ್ರಹಣ ವಿತೀಪಾತಮಿಂತೀ ಸುದಿನಂ ಕೂಡಲು' ಶ್ರೀ ಸಿದ್ಧೇಶ್ವರದೇವರ ಅಂಗಭೋಗಾದಿಗಳಿಗಾಗಿ ಸ್ವಲ್ಪ ಭೂಮಿಯನ್ನು ಕೊಟ್ಟನೆಂದು ಶಿವಮೊಗ್ಗಾ ೪೦ನೆಯ ಶಾಸನದಲ್ಲಿ ಹೇಳಿರುವುದು.

---

ಚನ್ನರಾಯಪಟ್ಟಣದ ೧೯೭ನೆಯ ಶಾಸನದಲ್ಲಿ ಕೀರ್ತಿತರಾಗಿರುವ ಲಕ್ಷ್ಮಣದಂಡನಾಯಕ ಅಮರೇಶ್ವರದಂಡನಾಯಕರು ಮೇಲೆ ಹೇಳಿದ ಹುಳ್ಳದಂಡನಾಯಕನ ಸಹೋದರರಿಂದ ಭಿನ್ನರು. ಇವರೂ ವಾಜಿವಂಶದವರು, ಮತ್ತು ಸಹೋದರರು, ಆದರೆ ಇವರ ಅಣ್ಣನು ಹುಳ್ಳಪನಲ್ಲ, ವಾಮರಾಜನು; ಇವನು ಎರಡನೆಯ ನರಸಿಂಹನ ಸೇನಾನಾಯಕನಾದ ಅಮಿತದಂಡನಾಯಕನ ತಂದೆಯಾದುದರಿಂದ ಈ ಲಕ್ಷ್ಮಣ ಅಮರೇಶ್ವರರು ಈ ಎರಡನೆಯ ನರಸಿಂಹನ ಕಾಲದಲ್ಲಿಯೋ ಅಥವಾ ವೀರಬಲ್ಲಾಳನ ಕಾಲದಲ್ಲಿಯೋ ಜೀವಿಸಿದ್ದರು.

೯ ವಸ್ತುತಃ ಇವನು ವಿಷ್ಣುಭಕ್ತನಾಗಿದ್ದನೆಂದು ಒಂದನೆಯ ನರಸಿಂಹ ಹೊಯ್ಸಳನ ಕಾಲದಲ್ಲಿ ಹುಟ್ಟಿದ ಹಾಸನದ ೬೬ನೆಯ ಶಾಸನದಿಂದ ತಿಳಿದುಬರುವುದು. ಈ ಶಾಸನದಲ್ಲಿ ಕಾಣ್ವವಂಶೋದ್ಭವನೂ ಕಾಶ್ಯಪಗೋತ್ರಪವಿತ್ರನೂ ಆದ ಒಬ್ಬ ನಾಗದೇವನಾಯಕನ ಹೆಸರನ್ನು ಹೇಳಿ ಇವನ ಮಗನಾದ ಮಹಾಪ್ರಧಾನಲಕ್ಷ್ಮದಂಡನಾಯಕ ಅಥವಾ ಹೆಗ್ಗಡೆ ಲಕುಮಯ್ಯನು ಹೊನ್ನಾವರದ ಕೇಶವದೇವರ ದೇವಾಲಯಕ್ಕೆ ಒಂದು ವೃತ್ತಿಯನ್ನು ಕೊಟ್ಟನೆಂದೂ, ಈ ದಂಡನಾಯಕನು 'ಪುರುಷೋತ್ತಮಾರಾಧನ

೬. ಬೆಳಗಾಮೆಯಲ್ಲಿನ ತ್ರಿಪುರಾಂತಕೇಶ್ವರದೇವಾಲಯದ ಸ್ಥಾನಿಕನಾದ ಶೈವಗುರು ಸೂರ್ಯಾಭರಣನು (ಚಿಕ್ಕ) ಮಾಗಡಿಯಲ್ಲಿರುವ ಜಿನಾಲಯಕ್ಕೆ ಒಂದು ಸ್ಥಳವೃತ್ತಿಯನ್ನು ಕೊಟ್ಟಂತೆ ಷಿಕಾರಿಪುರದ ೧೯೭೦ನೆಯ ಶಾಸನದಲ್ಲಿ ಹೇಳಿರುವುದು.

೭. ಕಮ್ಮಟದ ಮಲ್ಲಿಸೆಟ್ಟಿ ಅಥವಾ ಮಲ್ಲಿದಂಡನಾಯಕನು ವೀರಬಲ್ಲಾಳನ ಕೆಳಗೆ ಬಂದಣಿಕೆ ೭೦ರ ಮೇಲಾಳ್ಕೆಯನ್ನು ನೋಡುತ್ತಿದ್ದನು. ಇವನೂ ಮತ್ತು ಇವನ ಪ್ರಧಾನನಾಗಿದ್ದ ಸೂರ್ಯದಂಡನಾಯಕನೂ 'ನಾರಾಯಣಪದಕಮಲದ್ವಂದ್ವಭೃಂಗ'ರೆಂದು ಷಿಕಾರಿಪುರದ ೨೨೫ ಮತ್ತು ೨೩೫ನೆಯ ಶಾಸನಗಳಲ್ಲಿ ಹೇಳಲ್ಪಟ್ಟಿದ್ದು, ಇವರಿಬ್ಬರೂ ಬಂದಣಿಕೆಯ ಶಾಂತಿನಾಥನ ಬಸದಿಗೆ ದತ್ತಿಯನ್ನು ಬಿಟ್ಟರೆಂದು ಈ ೨೨೫ನೇ ಶಾಸನದಲ್ಲಿ ಹೇಳಿರುವುದು. ಈ ೨೩೫ನೇ ಶಾಸನದಲ್ಲಾದರೆ ಈ ಇಬ್ಬರು ದಂಡನಾಯಕರು ವೀರಬಲ್ಲಾಳನ ಅರಸಿಯಾದ ಅಭಿನವಕೇತಲದೇವಿಗೂ ತದ್ದ್ವಾರಾ ವೀರಬಲ್ಲಾಳದೇವಿಗೂ ಬಿನ್ನಪಮಾಡಿ ೩೩ ಬ್ರಾಹ್ಮಣರಿಗೆ ವೃತ್ತಿಗಳನ್ನು ಕೊಡಿಸಿದರೆಂದು ಹೇಳಿರುವುದು.

೮. ವೀರಬಲ್ಲಾಳನ ಸೇನಾಪತಿಯಾಗಿದ್ದ ಅಮೃತದಂಡನಾಯಕನೂ ಮತ್ತು ಇವನ ಸಹೋದರರಾದ 'ಶಿವಪಾದಶೇಖರ' ಮಸಣಯ್ಯದಂಡನಾಯಕನೂ, ಕಲ್ಲಯ್ಯದಂಡ ನಾಯಕನೂ, ಬಸವದಂಡನಾಯಕನೂ ಅಮೃತಾಪುರದಲ್ಲಿ ಅಮೃತೇಶ್ವರದೇವಾಲಯವನ್ನು ಕಟ್ಟಿಸಿದರೆಂದು ತರೀಕೆರೆ ೪೫ನೆಯ ಶಾಸನದಿಂದ ತಿಳಿದುಬರುವುದು. ಕಡೂರು ೩೬ನೇ ಶಾಸನದಲ್ಲಿ ಈ ಮೇಲೆ ಹೇಳಿದ ನಾಲ್ಕು ದಂಡನಾಯಕರೂ ವಕ್ಕಲಗೆರೆಯಲ್ಲಿ ಯೆಕ್ಕೋಟಿಜಿನಾಲಯವನ್ನು ಕಟ್ಟಿಸಿದರೆಂದು ಹೇಳಲ್ಪಟ್ಟಿದ್ದು, ಮೇಘಚಂದ್ರ, ಪ್ರಭಾಚಂದ್ರ ಎಂದು ಮೊದಲಾದ ಅವರ ಗುರುಕುಲಾನ್ವಯವೂ ಕೊಡಲ್ಪಟ್ಟಿರುವುದು.

೯. ಚಾಲುಕ್ಯಚಕ್ರವರ್ತಿ ಜಯಸಿಂಹ- ಜಗದೇಕಮಲ್ಲನ ಕೆಳಗೆ ಬನವಾಸೆ ೧೨,೦೦೦ವೇ ಮೊದಲಾದ ಸೀಮೆಗಳನ್ನು ಆಳುತ್ತಿದ್ದಂಥಾ ಮಹಾಮಂಡಲೇಶ್ವರ ಚಾಮುಂಡರಾಯನು ಭೇರುಂಡೇಶ್ವರದೇವರಿಗಾಗಿ ಒಂದು ಗ್ರಾಮವನ್ನು ಬಿಟ್ಟನೆಂದು ಷಿಕಾರಿಪುರದ ೧೫೧ನೇ ಶಾಸನದಲ್ಲಿ ಹೇಳಿರುವುದು. ಇದೇ ತಾಲ್ಲೂಕಿನ ೧೨೦ನೇ ಶಾಸನದಲ್ಲಿ ಈ ಚಾಮುಂಡರಾಯನು ಒಂದು ಬಸದಿಗಾಗಿ ಸ್ವಲ್ಪ ಭೂಮಿಯನ್ನು ಕೊಟ್ಟನೆಂದೂ, ನಾಗವರ್ಮವಿಭುಗೆ ಆಜ್ಞಾಪಿಸಿ ಅವನಿಂದ ಬನವಾಸೆದೇಶದಲ್ಲಿ ಜಿನ, ವಿಷ್ಣು, ಈಶ್ವರ ನಿಲಯಗಳನ್ನು ಮಾಡಿಸಿದನೆಂದೂ ಹೇಳಿರುವುದು.

೧೦. ಹೊನ್ನಗವುಂಡನ ಮಗ ಮಹಾಪ್ರಭು ಆದಿಗವುಂಡನು ಆದಿಮಲ್ಲಿ ಕಾರ್ಜುನೇಶ್ವರ ದೇವಾಲಯವನ್ನು ವೀರಬಲ್ಲಾಳನ ಕಾಲದಲ್ಲಿ ಕಟ್ಟಿಸಿ ಅದಕ್ಕಾಗಿ ಭೂಮಿಯನ್ನು ಬಿಟ್ಟನೆಂದು ಬೇಲೂರು ೧೩೭ನೇ ಶಾಸನದಿಂದ ತಿಳಿದುಬರುವುದು. ಇದರ

---

ಪ್ರಸಾದಾಸಾದಿತ ಮಹದೈಶ್ವರ್ಯ'ನಾಗಿದ್ದನೆಂದೂ ಹೇಳಿರುವುದು. ಈ ಕಾಣ್ವವಂಶದ ನಾಗದೇವನಾಯಕನು ಪ್ರಾಯಶಃ ಗುಬ್ಬಿ ೧೨ನೇ ಶಾಸನದಲ್ಲಿ ಪ್ರಸ್ತುತನಾದ ವಾಜಿವಂಶದ ನಾಗವರ್ಮನೇ ಆಗಿರುವುದರಿಂದ ಕಾಣ್ವಶಾಖೆಗೆ ವಾಜಸನೇಯ ಶಾಖೆಯೆಂದೂ ಹೆಸರುಂಟು. ಅಲ್ಲಿ ಪ್ರಸ್ತುತನಾದ ಮಹಾಪ್ರಧಾನ ಲಕ್ಷ್ಮದಂಡನಾಯಕನೇ ಈ ಹಾಸನದ ೬೬ನೇ ಶಾಸನದಲ್ಲಿಯೂ ಕೀರ್ತಿಸಲ್ಪಟ್ಟಿರುವನೆಂಬುದರಲ್ಲಿ ಪ್ರಾಯಶಃ ಯಾವ ಸಂದೇಹವೂ ಇಲ್ಲ. ಕ್ರಿ.ಶ. ೧೧೭೩ರಲ್ಲಿ ವೀರಬಲ್ಲಾಳನು ರಾಜ್ಯವಾಳುತ್ತಿದ್ದಾಗಲೂ ಈ ದಂಡನಾಯಕನು ಈ ದೇವಾಲಯಕ್ಕೆ ಒಂದು ದತ್ತಿಯನ್ನು ಬಿಟ್ಟನೆಂದು ಹಾಸನದ ೬೭ನೆಯ ಶಾಸನದಿಂದ ತಿಳಿದುಬರುವುದು.

ಮುಂದಿನ ಶಾಸನದಲ್ಲಾದರೆ ಇದೇ ಆದಿಗವುಂಡನು ಒಂದು ಬಸದಿಯನ್ನು ಮಾಡಿಸಿ ಅದಕ್ಕಾಗಿ ಒಂದು ದತ್ತಿಯನ್ನು ಬಿಟ್ಟಂತೆ ಹೇಳಿರುವುದು.

೧೧. ಚಾಲುಕ್ಯಚಕ್ರವರ್ತಿ ವಿಕ್ರಮಾದಿತ್ಯ ತ್ರಿಭುವನಮಲ್ಲನ ಬಳಿಯಲ್ಲಿ ಮಹಾಪ್ರಧಾನ ಬಾಣಸವರ್ಗ್ಗಡೆ ದಂಡನಾಯಕನಾಗಿದ್ದ ಅನಂತಪಾಲಯ್ಯನ ಕೆಳಗೆ ನೊಳಂಬವಾಡಿ ೩೨೦೦೦ ಸೀಮೆಯ ಅಚ್ಚುಪನ್ನಾಯವನ್ನು ಆಳುತ್ತಿದ್ದ ಬಮ್ಮರಸನು 'ಈಶ ಪದಾಬ್ಜಸಂಭೃತೋನ್ಮಸ್ತಕ' ನಾಗಿದ್ದನೆಂದು ದಾವಣಗೆರೆ ೧೨ನೆಯ ಶಾಸನದಲ್ಲಿ ವರ್ಣಿಸಲ್ಪಟ್ಟಿರುವುದಲ್ಲದೆ ಇವನು ಜಿನಾಲಯಗಳಿಗೂ ದತ್ತಿಗಳನ್ನು ಕೊಟ್ಟನೆಂದು ಇದೇ ಶಾಸನದಲ್ಲಿರುವ–

ಕೊಂಗಳಿನಾಡೊಳಗ್ಗದ ಕದಂಬಳಿಸಾಯಿರದಾಗರಂಗಳೊಳ್
ದೇಗುಲಕಂ ಜಿನಾಲಯಕವಾರವೆಗಂ ಕೆಱೆಬಾವಿಸತ್ರಕಂ
ರಾಗದೆ ತನ್ನ ಪನ್ನಯದ ಸುಂಕದೊಳಂ ದಶಪನ್ನವತ್ತಸಿಂ
ತಾಗರಮುಳ್ಳಿನಂ ನೆಗರ್ದ ಬಮ್ಮರಸಂ ಗುಣರತ್ನದಾಗರಂ ॥

ಎಂಬ ಪದ್ಯದಲ್ಲಿ ಹೇಳಲ್ಪಟ್ಟಿರುವುದು.

ಹೀಗೆ ಕ್ರಿ.ಶ. ೧೦-೧೩ನೇ ಶತಮಾನಗಳಲ್ಲಿ ಶಿವ ವಿಷ್ಣ್ವಾದಿ ಭಕ್ತರು ಜಿನನನ್ನು ಪೂಜಿಸುತ್ತಿದ್ದರೆಂದೂ ಜಿನಭಕ್ತರು ಶಿವ ವಿಷ್ಣ್ವಾದಿಗಳನ್ನು ಪೂಜಿಸುತ್ತಿದ್ದರೆಂದೂ ನಾವು ಮೇಲೆ ಹೇಳಿರುವ ನಿದರ್ಶನಗಳಿಂದ ಸ್ಪಷ್ಟವಾಗುವುದಷ್ಟೆ. ಜಿನನಂತೆಯೇ ಬುದ್ಧದೇವರನ್ನೂ ಆ ಕಾಲದಲ್ಲಿ ಜನರು ಪೂಜಿಸುತ್ತಿದ್ದರೆಂದೂ ಶಾಸನಗಳಿಂದ ವ್ಯಕ್ತವಾಗುವುದು. ಚಾಲುಕ್ಯಚಕ್ರವರ್ತಿ ಸೋಮೇಶ್ವರ ತ್ರೈಲೋಕಮಲ್ಲನ ಬಳಿಯಲ್ಲಿ ದಂಡನಾಯಕನಾಗಿದ್ದ ರೂಪಭಟ್ಟಯ್ಯನು ಒಂದು ಬೌದ್ಧವಿಹಾರವನ್ನು ಮಾಡಿಸಿದ್ದಲ್ಲದೆ ಶ್ರೀ ಕೇಶವದೇವರ ಲೋಕೇಶ್ವರದೇವರ (ಇದು ಒಂದು ಶಿವಲಿಂಗವೆಂದು ತೋರುವುದು) ಬೌದ್ಧದೇವರ ಮತ್ತು ಪರಿವಾರ ದೇವತೆಗಳ ಅರ್ಚನಾದಿಗಳಿಗಾಗಿ ಸ್ವಲ್ಪ ಭೂಮಿಯನ್ನು ಬಿಟ್ಟನೆಂದು ಷಿಕಾರಿಪುರದ ೧೭೦ನೆಯ ಶಾಸನದಲ್ಲಿ ಹೇಳಿರುವುದು. ವಿಷ್ಣುವರ್ಧನ ಹೊಯ್ಸಳನ ರಾಣಿಯಾದ ಸಾಂತಲದೇವಿಯು ಚತುಸ್ಸಮಯಸಮುದ್ಧರಣಳಾಗಿದ್ದಳೆಂಬುದನ್ನು ನಾವು ಮೇಲೆಯೇ ನೋಡಿರುವೆವು. ಮಱುಗರೆ ನಾಡನ್ನು ಕ್ರಿ.ಶ. ೧೧೫೧ರಲ್ಲಿ ಆಳುತ್ತಿದ್ದ ಚತುಸ್ಸಮಯಧರ್ಮೋದ್ಧಾರ ಧೌರೇಯನಾದ ಸಾಮಂತ ಬಾಚಿದೇವನು-

ಉದ್ಧರಿಸಿ ಜೈನಭವನಮ । ನುದ್ಧರಿಸಿ ಶಿವಾಲಯಂಗಳಂ ಮುದದಿಂದಂ ।
ತುದ್ಧರಿಸಿ ವಿಷ್ಣುಗೇಹಮ । ನುದ್ಧರಿಸಿದನಲ್ತೆ ಬಾಚಿ ಜಸದುನ್ನತಿಯಂ ॥

ಸೊಗಯಿಪ ಕಾಮಧೇನು ಜಿನಶಾಸನಲಕ್ಷ್ಮಿಗೆ ಕಲ್ಪಭೂರುಹಂ
ಮೃಗಧರಭೂಷಣಾಗಮತಪಸ್ಸಿಗೆ ಸಿದ್ಧರಸಪ್ರವಾಹಮೇಂ
ನೆಗೆದುದು ಬುದ್ಧಕೋಟಿಗೆನೆ ಚಿಂತಿಸದೀವ ಮಹಾಂಶುರತ್ನವಾ
ನಗಧರನಾಗಮಜ್ಞರ್ಗಮಂದೊಡೆ ಬಾಚಿಯಿದೇಂ ಕೃತಾರ್ಥನೋ ॥

ಎಂದು ತುಮ್ಕೂರು ೯ನೆಯ ಶಾಸನದಲ್ಲಿ ಸ್ತುತನಾಗಿರುವನಲ್ಲದೆ, ಇವನು ಗಂಗೇಶ್ವರ ಚಲವಱಿವೇಶ್ವರ ಮತ್ತು ರಾಮೇಶ್ವರ ದೇವಾಲಯಗಳನ್ನೂ ಭೀಮಜಿನಾಲಯವನ್ನೂ ಮಾಡಿಸಿದನೆಂದೂ ದಿಬ್ಬೂರ್ಗರನ್ನು ಅಗ್ರಹಾರವನ್ನಾಗಿ ಮಾಡಿ ಬ್ರಾಹ್ಮಣರಿಗೆ ಕೊಟ್ಟನೆಂದೂ ಈ ಶಾಸನದಲ್ಲಿ ಹೇಳಿರುವುದು. ಹೀಗೆಯೇ ಮಾಹೇಶ್ವರ ಬೌದ್ಧ ವೈಷ್ಣವಾರ್ಹತ ಚತುಸ್ಸಮಯ

ಸಮುದ್ಧರಣನಾಗಿ ವೀರಬಲ್ಲಾಳನ ಕೆಳಗೆ ಮಗಣಿ ೩೦೦ನ್ನು ಆಳುತ್ತಿದ್ದ ಒಬ್ಬ ಮಹಾಸಾಮಂತ ಗೋವಿ (ಅಥವಾ ಗೋವಿಂದ) ದೇವನು[೧೦] ಚಿಕ್ಕನಾಯಕನಹಳ್ಳಿ ೧೩, ೧೪ ಮೊದಲಾದ ಶಾಸನಗಳಲ್ಲಿ ಕೀರ್ತಿಸಲ್ಪಟ್ಟದ್ದು ಇವನ ಅಣ್ಣನಾದ ಸಾಮಂತಚಟ್ಟನ ಸತಿಯಾದ ಶಾಂತಲದೇವಿಯು -

ಸ್ಥಿರಗಂಭೀರಉದಾತ್ತಸದ್ಗುಣಸದಾಚಾರತ್ವಮೆಂಬೀ ಗುಣೋ
ನ್ನತಿಯಂ ತಾಳ್ದಿ ಮಹೇಶ್ವರಾಗಮಜಿನ ಶ್ರೀ ಧರ್ಮಸದ್ವೈಷ್ಣವಾ
ಶ್ರಿತಬೌದ್ಧಾಗಮವೆಂಬ ನಾಲ್ಕು ಸಮಯವ್ಯಾಪಾರಮಂ ಮಾರ್ಪ್ಪ ಸಂ
ಗತಚಾತುರ್ಯ್ಯೆಗೆ ಕಾಂತಶಾಂತಲೆಗೆ ಪೇಳಾರುಂ ಸಮಂಬಪ್ಪರೇ ॥

ಎಂದು ಇದೇ ತಾಲ್ಲೂಕಿನ ೨೧ನೇ ಶಾಸನದಲ್ಲಿ ಹೊಗಳಲ್ಪಟ್ಟಿರುವಳು. ನಾಗಮಂಗಲದ ೧೩ನೆಯ ಶಾಸನದಲ್ಲಿಯೂ ಹೀಗೆಯೇ 'ಸಮಯಸಮುದ್ಧರಣ' ಎಂದರೆ ಪ್ರಾಯಶಃ ಚತುಸ್ಸಮಯ ಸಮುದ್ಧರಣನಾದ ಪುರುಷಮಾಣಿಕ್ಯಸೆಟ್ಟಿಯೂ, ಅವನ ಪೌತ್ರನಾದ 'ಜಿನಸಮಯಸಮುದ್ಧರಣ ಪಾರಿಷದೇವರ ಪಾದಾರಾಧಕ'ನಾದ ಹೆಮ್ಮೆಯ ನಾಯಕನೂ, ಇವನ ಮಗನೂ, 'ಚತುಸ್ಸಮಯ ಸಮುದ್ಧರಣನೂ', ವೀರಬಲ್ಲಾಳನ ಕೆಳಗೆ ಮಹಾಸಾಮಂತನೂ ಆದ ದುರ್ಮ್ಮೆಯನಾಯಕನೂ ಸ್ತುತಿಸಲ್ಪಟ್ಟದ್ದು, ಈ ದುರ್ಮ್ಮೆಯನಾಯಕನು ಜಿಟ್ಟಿಗದಲ್ಲಿ ಹೇಮೇಶ್ವರ ದೇವಾಲಯವನ್ನು ಕಟ್ಟಿಸಿದನೆಂದು ಹೇಳಿರುವುದು.

ಅಂತು ಈಗಿನ ಕಾಲದಲ್ಲಿರುವಂತೆ, ವೈದಿಕಮಾರ್ಗಾನುಯಾಯಿಗಳು, ಜೈನರು, ಮತ್ತು ಬೌದ್ಧರೆಂಬ ಪ್ರಭೇದಗಳು ಕ್ರಿ.ಶ. ೧೦-೧೩ನೇ ಶತಮಾನಗಳಲ್ಲಿ ಇರಲಿಲ್ಲವೆಂದು ನಾವು ಮೇಲೆ ಹೇಳಿರುವ ನಿದರ್ಶನಗಳಿಂದ ವ್ಯಕ್ತವಾಗುವುದು. ಈಗಿನ ಕಾಲದಲ್ಲಿ ದೇವಿಯು, ಆದಿತ್ಯನು, ಗಣೇಶನು, ವಿಷ್ಣುವು ಅಥವಾ ಶಿವನೇ ಪರದೈವವೆಂದು ಪೂಜಿಸುವವರೂ ಕೂಡ ಬೇರೆ ಬೇರೆ ಮತದವರಲ್ಲವೆಂದು ಎಣಿಸಲ್ಪಡದೆ ಎಲ್ಲರೂ ವೈದಿಕಮಾರ್ಗಾನುಯಾಯಿಗಳೇ ಎಂದು ಎಣಿಸಲ್ಪಡುವಂತೆಯೇ ಮೇಲೆ ಹೇಳಿದ ಕಾಲದಲ್ಲಿ ಬುದ್ಧನು ಅಥವಾ ಜಿನನೇ ಪರದೈವವೆಂದು ಪೂಜಿಸುತ್ತಿದ್ದವರೂ ಕೂಡ ವೈದಿಕಮಾರ್ಗಾನುಯಾಯಿಗಳೆಂದೇ ಎಣಿಸಲ್ಪಡುತ್ತಿದ್ದರು. ಎಂದರೆ, ಒಂದು ಕುಟುಂಬದಲ್ಲಿ ತಂದೆಯು ವಿಷ್ಣುವನ್ನೂ, ತಾಯಿಯು ಶಿವನನ್ನೂ, ಮಗಳು ದೇವಿಯನ್ನೂ, ಒಬ್ಬ ಮಗನು ಆದಿತ್ಯನನ್ನೂ ಮತ್ತೊಬ್ಬನು ಗಣೇಶನನ್ನೂ ಪರದೈವವೆಂದು ಈಗಿನ ಕಾಲದಲ್ಲಿ ಪೂಜಿಸುವಂತೆಯೇ ಮೇಲೆ ಹೇಳಿದ ಕಾಲದಲ್ಲಿ ಒಂದೇ ಕುಟುಂಬದಲ್ಲಿ ಕೆಲವರು ಜಿನನನ್ನೂ ಅಥವಾ ಬುದ್ಧನನ್ನೂ, ಇನ್ನು ಕೆಲವರು ಶಿವವಿಷ್ಣ್ವಾದಿಗಳನ್ನೂ ಪೂಜಿಸುತ್ತಿದ್ದರು. ಆದ್ದರಿಂದಲೇ 'ವೀರ'ರಾದ ಕೆಲವು ಜನರನ್ನು ಬಿಟ್ಟರೆ ಆ ಕಾಲದಲ್ಲಿ ಇತರ ಜನರೆಲ್ಲರಿಗೂ ಜಿನ ಬುದ್ಧ ಶಿವ ವಿಷ್ಣ್ವಾದಿ ದೇವತೆಗಳೆಲ್ಲರಿಗೂ ಭೇದವಿಲ್ಲದೆ ಮನ್ನಣೆಯನ್ನು ಮಾಡುವುದೂ ಆ ದೇವರ ಪ್ರಸಾದವನ್ನು ಸ್ವೀಕರಿಸುವುದೂ[೧೧]

---

೧೦ ಈ ಗೋಪಿದೇವನು ಹೆಗ್ಗೆಣಿಯಲ್ಲಿ ಒಂದು ಚೆನ್ನಪಾರ್ಶ್ವದೇವರ ಬಸದಿಯನ್ನು ಕಟ್ಟಿಸಿದನೆಂದು ಚಿಕ್ಕನಾಯಕನಹಳ್ಳಿ ೨೨ನೆಯ ಶಾಸನದಿಂದಲೂ, ಕಲಿಕಟ್ಟೆಯ ತೆಲಿಗೇಶ್ವರದೇವರಿಗೆ ಕ್ರಿ.ಶ. ೧೧೪೩ರಲ್ಲಿ ಸ್ವಲ್ಪ ಭೂಮಿಯನ್ನು ಬಿಟ್ಟನೆಂದು ಅರಸೀಕೆರೆ ೫೫ನೆಯ ಶಾಸನದಿಂದಲೂ ತಿಳಿದುಬರುವುದು. ಬೌದ್ಧ-ವೈಷ್ಣವಸಮಯಗಳನ್ನು ಇವನು ಹೇಗೆ ''ಉದ್ಧರಿಸಿದನು'' ಎಂಬುದು ನಮಗೆ ತಿಳಿದಿಲ್ಲ.

೧೧ ಮೇಲೆ ಪುಟ ೧೪೧ ಹೇಳಿದಂತೆ ಬೊಪ್ಪದಂಡನಾಯಕನು ದೋರಸಮುದ್ರದಲ್ಲಿ ತನ್ನ ತಂದೆಯಾದ

ಆಲಯಗಳಿಗೆ ಹೋಗುವುದೂ ಮತ್ತು ಆ ದೇವರುಗಳ ಆಲಯಗಳಿಗೆ ದತ್ತಿಗಳನ್ನು ಬಿಡುವುದೂ ವಾಡಿಕೆಯಾಗಿದ್ದಿತು.

ಹೀಗಿರುವಲ್ಲಿ ಜನ್ನನು ಜಿನಭಕ್ತನಾಗಿದ್ದನೆಂಬುದೊಂದರ ಆಧಾರಬಲದಿಂದಲೇ ಅವನ ತಂದೆತಾಯಿಗಳೂ ಮತ್ತು ಅವನ ಸೋದರಿಯ ಪತಿಪುತ್ರರೂ ಜಿನಪೂಜಕರಾಗಿದ್ದರೆಂದು ಕವಿಚರಿತಕಾರರು ನಿರ್ಧರಿಸಿರುವುದು ಅಸಂಗತವಾದುದೆಂದು ನಮಗೆ ತೋರುವುದು. ವಸ್ತುತಃ ಮೇಲೆ ಹೇಳಿದ ಸುಮನೋಬಾಣ, ಮಲ್ಲಿಕಾರ್ಜುನ, ಕೇಶಿರಾಜರು[೧೨] ಜನ್ನನ ಬಂಧುಗಳೇ ಅಲ್ಲವಾದುದರಿಂದ ಅವರು ಜೈನರಾಗಿದ್ದರೆಂದು ಹೇಳುವುದಕ್ಕೆ ಈ ಕಾರಣವು ಕೂಡ ಸಹಕಾರಿಯಾಗಿಲ್ಲ. ಅವನ ತಂದೆತಾಯಿಗಳಾದ ಶಂಕರ-ಗಂಗೆಯರು ತಮ್ಮ ಮಗನಿಗೆ ಜನಾರ್ದನ ಎಂದು ಹೆಸರಿಟ್ಟುದನ್ನು ನೋಡಿದರೆ ಅವರೂ ಕೂಡ ಜಿನಭಕ್ತರಾಗಿರಲಿಲ್ಲವೆಂದೇ ನಾವು ಊಹಿಸಬೇಕಾಗಿರುವುದು.

*ಪ್ರಬುದ್ಧ ಕರ್ಣಾಟಕ, ೫-೩, ೧೯೨೪*
*ಕೆಲವು ಕನ್ನಡ ಕವಿಗಳ ಜೀವನ ಕಾಲವಿಚಾರ, ೧೯೨೭, ಪು. ೧೩೪-೪೯*

---

ಗಂಗರಾಜನ ಪರೋಕ್ಷವಿನಯಕ್ಕಾಗಿ ಪಾರ್ಶ್ವನಾಥ ಬಸದಿಯನ್ನು ಕಟ್ಟಿಸಿ, ಆ ದೇವರ ತೀರ್ಥಪ್ರಸಾದಗಳನ್ನು ಬಂಕಾಪುರದಲ್ಲಿದ್ದ ತನ್ನ ದೊರೆ ವಿಷ್ಣುವರ್ಧನ ಹೊಯ್ಸಳನಿಗೆ ಕಳುಹಿಸಿದಾಗ ವಿಷ್ಣುಭಕ್ತನಾದ ಈತನು ಸಂತುಷ್ಟನಾಗಿದ್ದು 'ಪಾರ್ಶ್ವದೇವರ ಪ್ರತಿಷ್ಠೆಯ ಗಂಧೋದಕಷೇಶೆಗಳಂ ಕೊಂಡು ಬಂದಿರ್ದ್ದಿಂದ್ರರಂ ಕಂಡು ಬರವೇಳ್ದಿದಿರೆದ್ದು ಪೊಡೆವಟ್ಟು ಗಂಧೋದಕಮುಂ ಷೇಶೆಯುಮುಂ ಸ್ವೀಕರಿಸಿದನೆಂದೂ, ತದನಂತರ ಆ ಪಾರ್ಶ್ವನಾಥದೇವರ ಬಸದಿಗಾಗಿ ಸ್ವಲ್ಪ ಭೂಮಿಯನ್ನು ಬಿಟ್ಟನೆಂದೂ ಬೇಲೂರು ೧೨೪ನೇ ಶಾಸನದಲ್ಲಿ ಹೇಳಿರುವುದು.

೧೨ ಜಿನೇಂದ್ರಪುರಾಣಕರ್ತೃವೆಂದು ಜನ್ನನಿಂದ ಹೇಳಲ್ಪಟ್ಟಿರುವ ಪುಷ್ಪಬಾಣಕವಿಯು ಈ ಸುಮನೋಬಾಣನೇಯೆ ಎಂಬ ಕವಿಚರಿತಕಾರರ ಅಭಿಪ್ರಾಯವು ಸಮಂಜಸವಾಗಿರುವಂತೆ ನಮಗೆ ತೋರುವುದಿಲ್ಲ. ಸುಮನೋಬಾಣ, ಪುಷ್ಪಬಾಣ, ಕಾಮ, ಮನಸಿಜ, ಮನಸ್ಸಂಜಾತ ಎಂಬ ಈ ಪದಗಳೆಲ್ಲವೂ ಏಕಾರ್ಥವಾಚಕಗಳಾಗಿರುವ ಮಾತ್ರದಿಂದಲೇ ಜಿನಪುರಾಣಕರ್ತೃವಾದ ಪುಷ್ಪಬಾಣನು ಕವಿಕಾಮ ಕವಿಸುಮನೋಬಾಣ ಕವಿಮನಸಿಜ ಅಥವಾ ಕವಿಮನಸ್ಸಂಜಾತನೇ ಆಗಿದ್ದನೆಂದು ಹೇಳುವುದು ಯುಕ್ತವಾಗಿರುವಂತೆ ನಮಗೆ ಕಾಣುವುದಿಲ್ಲ.

ಕವಿಚರಿತೆ ೧ನೇ ಸಂಪುಟದ ೨ನೇ ಮುದ್ರಣದಲ್ಲಿ ಮಲ್ಲಿಕಾರ್ಜುನನ ಚರಿತಾವಸರದಲ್ಲಿ ಕವಿಚರಿತಕಾರರು ತತ್ಕೃತವಾದ ಸೂಕ್ತಿಸುಧಾರ್ಣವದ ಎರಡನೇ ಪ್ರತಿಯು ತಮಗೆ ದೊರಕಿತೆಂದೂ ಅದರ ಆದಿಯಲ್ಲಿ ಜಿನಸ್ತುತಿ ರೂಪವಾದ ಒಂದು ಪದ್ಯವಿರುವುದೆಂದೂ ಬರೆದಿರುವರು. ಈ ಪದ್ಯವು ಮೊದಲನೆಯ ಪ್ರತಿಯಲ್ಲಿ ಪ್ರಮಾದದಿಂದ ಬಿಟ್ಟುಹೋಗಿದ್ದರೂ ಇರಬಹುದು, ಅಥವಾ ಎರಡನೆಯ ಪ್ರತಿಯ ಲೇಖಕನಿಂದ ಹೊಸದಾಗಿ ಸೇರಿಸಲ್ಪಟ್ಟಿದ್ದರೂ ಇರಬಹುದು. ಇದು ಹೀಗೆಯೇ ಆಯಿತೆಂಬುದನ್ನು ಯಥಾವತ್ತಾಗಿ ನಿರ್ಧರಿಸುವುದಕ್ಕೆ ಮುಂಚೆ ಈ ಪದ್ಯದ ಆಧಾರ ಬಲವೊಂದರಿಂದ ಮಲ್ಲಿಕಾರ್ಜುನನು ಜಿನಭಕ್ತನಾಗಿದ್ದನೆಂದು ನಿರ್ಣಯಿಸುವುದು ಯುಕ್ತವಲ್ಲ.

ಕೇಶಿರಾಜವಿರಚಿತವಾದ ಶಬ್ದಮಣಿದರ್ಪಣದಲ್ಲಂತೂ ಜಿನದೇವರ ಪ್ರಸ್ತಾವವೇ ಇಲ್ಲ. ಈ ಗ್ರಂಥದ ಅಂತ್ಯದಲ್ಲಿ ಅವನು ಸ್ವಕೃತವೆಂದು ಹೇಳಿರುವ ಚೋಳಪಾಲಕಚರಿತ, ಸುಭದ್ರಾಹರಣ, ಪ್ರಬೋಧಚಂದ್ರ ಮತ್ತು ಕಿರಾತವೆಂಬ ಗ್ರಂಥಗಳ ಹೆಸರುಗಳನ್ನು ನೋಡಿದರೆ ಅವನು ಶಿವಪೂಜಕನಾಗಿದ್ದನೆಂದು ನಾವು ಊಹಿಸಬೇಕಾಗಿರುವುದು. ಈ ವಿಷಯದಲ್ಲಿ ನಾವು ಮುಂದೆ ಇವನ ತಂದೆಯಾದ ಮಲ್ಲಿಕಾರ್ಜುನನ ಜೀವನ ಕಾಲವಿಚಾರದಲ್ಲಿ ಹೇಳಿರುವುದನ್ನು ನೋಡಿ.

# ೪೬. ಬಸವರಾಜದೇವರ ರಗಳೆಯ ಕರ್ತೃ ಹರಿಹರ

● ಟಿ. ಎಸ್. ವೆಂಕಣ್ಣಯ್ಯ

ಈಗಿನ ಕಾಲದವರನೇಕರು ಬಯಸುವುದು ಬಸವಣ್ಣನ ಜೀವನ ಚರಿತ್ರೆಗೆ ಸಂಬಂಧಿಸಿದ ನಿಜವಾದ ಘಟನೆಗಳಾವುವು ಎಂಬುದನ್ನು. ಅವರ ಗಮನವಿರುವುದು ಬಸವಣ್ಣನ ಪವಾಡಗಳ ಕಡೆಗಲ್ಲ, ಆತನ ಜೀವನದ ವಾಸ್ತವ್ಯಾಂಶಗಳ ಕಡೆಗೆ ಅವರು ಬಸವಣ್ಣನ ಚರಿತ್ರೆಯನ್ನು ನೋಡಬಯಸುವುದು ಪೂರ್ವಕಾಲದ ಭಕ್ತಿಯ ದೃಷ್ಟಿಯಿಂದಲ್ಲ, ಆಧುನಿಕ ಕಾಲದ ಐತಿಹಾಸಿಕ ದೃಷ್ಟಿಯಿಂದ. ಈ ದೃಷ್ಟಿಯಿಂದ ಬಸವಣ್ಣನ ಚರಿತ್ರೆಯನ್ನು ತಿಳಿದುಕೊಳ್ಳಲು ದೊರೆಯುವ ಮುಖ್ಯ ಸಾಧನಗಳು ಎರಡು: ೧. ಬಸವಣ್ಣನ ಮತ್ತು ಆತನ ಸಮಕಾಲಿಕರ ವಚನಗಳು. ೨. ವೀರಶೈವ ಪುರಾಣಗಳು[೧] ಹಿಂದೆಯೇ ಹೇಳಿರುವಂತೆ ಪುರಾಣಗಳಲ್ಲಿ ನಿಜವಾದ ಸಂಗತಿಗಳೂ ಕಲ್ಪಿತವಾದುವೂ ಕಲಬೆರಕೆಯಾಗಿ ಹೋಗಿರುವುದರಿಂದ ಅವು ಸಂಪೂರ್ಣ ವಿಶ್ವಾಸಕ್ಕೆ ಅರ್ಹವಾದುವಲ್ಲ. ಆದರೂ ಅವನ್ನು ಪೂರ್ತಿಯಾಗಿ ನಿರಾಕರಿಸುವಂತಿಲ್ಲ. ಏಕೆಂದರೆ, ಅವನ್ನು ಶುದ್ಧಾಂಗವಾಗಿ ಕೈಬಿಟ್ಟರೆ ಬಸವಣ್ಣನ ಚರಿತ್ರೆಯನ್ನು ತಿಳಿದುಕೊಳ್ಳಲು ತಕ್ಕಷ್ಟು ಸಾಧನಗಳೇ ಇಲ್ಲದಂತಾಗುತ್ತದೆ. ಇನ್ನು ವಚನಗಳ ವಿಚಾರ. ಬಸವಣ್ಣನ ಮತ್ತು ಆತನ ಸಮಕಾಲಿಕರ ವಚನಗಳಲ್ಲಿ ಬಸವಣ್ಣನಿಗೆ ಸಂಬಂಧಿಸಿದ ಸಂಗತಿಗಳ ಪ್ರಸ್ತಾಪ ಅಲ್ಲಲ್ಲಿ ಬರುತ್ತದೆ. ಅವುಗಳಿಂದ ತಿಳಿದುಬರುವ ಸಂಗತಿಗಳು ವಿಶ್ವಾಸಾರ್ಹವಾದುವೆಂಬುದರಲ್ಲಿ ಸಂಶಯವಿಲ್ಲ. ಏಕೆಂದರೆ, ಅಲ್ಲಿ ಹೇಳಿರುವುದು ಪುರಾಣ ಕಾರರ ಮಾತಿನಂತೆ ತಾವು ಇನ್ನೊಬ್ಬರಿಂದ ಕೇಳಿ ಹೇಳುವ ಮಾತಲ್ಲ. ಆ ವಚನಕಾರರು ತಾವು ಸ್ವತಃ ಕಂಡುಂಡ ಮಾತು. ಅದೂ ಅಲ್ಲದೆ, ಕಥೆ ಜನರ ಬಾಯಲ್ಲಿ ಬದಲಾಯಿಸುತ್ತಾ ಹೋಗುವಂತೆ ವಚನಗಳು ಕಾಲಕ್ರಮದಲ್ಲಿ ಬದಲಾಯಿಸುವ ಸಂಭವ ಕಡಿಮೆ. ಹೀಗೆ ವಚನಗಳು ವಿಶ್ವಾಸಾರ್ಹವಾದುವಾದರೂ ಅವುಗಳಿಂದ ತಿಳಿದುಬರುವ ಬಸವಣ್ಣನ ಜೀವನದ ಬಾಹ್ಯಸಂಗತಿಗಳು ಬಹು ಸ್ವಲ್ಪ. ಅಷ್ಟೇ ಅಲ್ಲ. ಈ ವಚನಗಳು ಬಿಡಿ ಮಾತುಗಳಾದ್ದರಿಂದ ಅವು ಯಾವ ಸಂದರ್ಭಕ್ಕೆ ಸಂಬಂಧಿಸಿದುವೆಂಬುದನ್ನು ನಿರ್ಧರಿಸುವುದು ಸುಲಭವಲ್ಲ. ಆದಕಾರಣ ಈಗಿನ ಕಾಲದವರು ವಚನಗಳಿಂದ ತಿಳಿದುಬರುವ ಸಂಗತಿಗಳನ್ನೂ ಪುರಾಣಗಳಲ್ಲಿ ಹೇಳಿರುವ ಸಂಗತಿಗಳನ್ನೂ ಸಮನ್ವಯ ಮಾಡಿಕೊಂಡು ಬಸವಣ್ಣನ ಜೀವನಚರಿತ್ರೆಯನ್ನು ನಿರ್ಮಿಸಿಕೊಳ್ಳಬೇಕಾಗಿದೆ. ವಚನದಲ್ಲಿ ಇಲ್ಲದಿರುವ ಸಂಗತಿಗಳ ವಿಚಾರದಲ್ಲಿ ಪುರಾಣಗಳಲ್ಲಿ ಹೇಳುವುದನ್ನೇ ಪ್ರಮಾಣವಾಗಿ ಸ್ವೀಕರಿಸಬೇಕಾಗುತ್ತದೆ. ಜನರ ಬಾಯಲ್ಲಿ ಕಥೆ ಬೆಳೆಯುವಾಗ ಕಾಲ ಕಳೆದಂತೆಲ್ಲ ಹೆಚ್ಚು ಹೆಚ್ಚು ವ್ಯತ್ಯಾಸಗಳಾಗುವ ಸಂಭವವಿರುವುದರಿಂದ ಈ ಪುರಾಣಗಳಲ್ಲಿ ವ್ಯತ್ಯಾಸ ಕಂಡುಬಂದಾಗ ಈಚಿನ

---

೧ ಜೈನಕವಿಗಳು ಬರೆದಿರುವ ಬಿಜ್ಜಳ ಚರಿತ್ರೆಯಲ್ಲಿ ಪ್ರಾಸಂಗಿಕವಾಗಿ ಬಂದಿರುವ ಬಸವಣ್ಣನ ಚರಿತ್ರೆಗೆ ಆಧುನಿಕ ಚರಿತ್ರಕಾರರಲ್ಲಿ ಕೆಲವರು ಹೆಚ್ಚು ಬೆಲೆಯನ್ನು ಕೊಟ್ಟಿರುತ್ತಾರೆ. ಈ ಕವಿಗಳು ಗ್ರಂಥರಚನೆ ಮಾಡಿದ್ದು ಬಸವಣ್ಣನು ಕಾಲವಾದ ಅನೇಕ ಶತಮಾನಗಳ ಮೇಲೆ ; ಅಲ್ಲದೆ, ಅವರ ಕಥೆಗಳಿಗೆ ಆಧಾರವೇನೆಂಬುದೂ ಗೊತ್ತಾಗುವುದಿಲ್ಲ. ಆದ ಕಾರಣ ಇವನ್ನು ಪ್ರಮಾಣವಾಗಿ ಗ್ರಹಿಸುವುದು ಸಂಗತವಲ್ಲವೆಂದು ತೋರುತ್ತದೆ.

ಪುರಾಣಗಳಿಗಿಂತಲೂ ಹಿಂದಿನ ಪುರಾಣಗಳಿಗೆ ಹೆಚ್ಚು ಪ್ರಾಶಸ್ತ್ಯವನ್ನು ಕೊಡುವುದು ನ್ಯಾಯ ಸಮ್ಮತವಾಗುತ್ತದೆ. ಒಂದು ಪುರಾಣವು ಎಷ್ಟು ಹಿಂದಿನದೋ ಅಷ್ಟು ಹೆಚ್ಚು ವಿಶ್ವಾಸಾರ್ಹ ವಾದುದು ಎಂದು ಸ್ಥೂಲವಾಗಿ ಇಟ್ಟುಕೊಳ್ಳಬಹುದು. ಈ ದೃಷ್ಟಿಯಿಂದ ಹರಿಹರನ 'ಬಸವರಾಜದೇವರ ರಗಳೆ'ಯೂ ಪಾಲ್ಕುರಿಕೆ ಸೋಮನಾಥನ ತೆಲಗು 'ಬಸವ ಪುರಾಣವೂ' ಹೆಚ್ಚು ಆದರಣೀಯವಾಗುತ್ತವೆ. ಏಕೆಂದರೆ ಈಗ ತಿಳಿದಿರುವ ಮಟ್ಟಿಗೆ ಬಸವಣ್ಣನ ಚರಿತ್ರೆಯನ್ನು ಕುರಿತ ವೀರಶೈವ ಪುರಾಣಗಳಲ್ಲಿ ಇವೇ ಅತ್ಯಂತ ಪ್ರಾಚೀನವಾದುವು.

ಹರಿಹರನು ಸೋಮನಾಥನಿಗಿಂತಲೂ ಒಂದೆರಡು ತಲೆಮೊರೆ ಹಿಂದಿನವನಾದುದರಿಂದ[1] ಬಸವರಾಜದೇವರ ರಗಳೆ ತೆಲಗು ಬಸವಪುರಾಣಕ್ಕಿಂತಲೂ ಹೆಚ್ಚು ಪ್ರಾಚೀನ ವಾದುದು. ಅಷ್ಟೇ ಅಲ್ಲ, ಬಸವಣ್ಣನವರ ಜೀವನದ ಕಾರ್ಯರಂಗಕ್ಕೆ ಹಂಪೆಯವನಾದ ಹರಿಹರನು ಗೋದಾವರಿ ಜಿಲ್ಲೆಯ ಪಾಲ್ಕುರಿಕೆಯ ಸೋಮನಾಥನಿಗಿಂತಲೂ ಹತ್ತಿರದವನು. ಆದಕಾರಣ ಹರಿಹರನು ಕೇಳಿದ ಮತ್ತು ಬರೆದಿಟ್ಟಿರುವ ಕಥೆಯೇ ಸೋಮನಾಥನದಕ್ಕಿಂತಲೂ ಹೆಚ್ಚು ವಿಶ್ವಾಸಾರ್ಹವಾಗಬೇಕಾದುದು ನ್ಯಾಯವಾಗಿದೆ. ಹೀಗಿದ್ದರೂ ಸೋಮನಾಥನ ತೆಲುಗುಪುರಾಣಕ್ಕೆ ದೊರೆತ ಪುರಸ್ಕಾರ ಆ ಕಾಲದ ವೀರಶೈವರಿಂದ ಹರಿಹರನ ಕನ್ನಡದ ರಗಳೆಗೆ ದೊರೆಯಲಿಲ್ಲವೆಂದು ತೋರುತ್ತದೆ. ಭೀಮಕವಿ ಸೋಮನಾಥನ ಗ್ರಂಥವನ್ನನುಸರಿಸಿ ೧೪ನೆಯ ಶತಮಾನದಲ್ಲಿ ಬಸವ ಪುರಾಣವನ್ನು ಕನ್ನಡದಲ್ಲಿ ರಚಿಸಿದನು. ಆಮೇಲೆ ಆ ಗ್ರಂಥವೇ ಜನಪ್ರಿಯವಾಗಿ ಪರಿಣಮಿಸಿ ಅದಕ್ಕಿಂತ ಎಷ್ಟೋ ಹಿಂದೆ ಹುಟ್ಟಿದ ಬಸವರಾಜ ದೇವರ ರಗಳೆಯನ್ನು ಕೇಳುವವರಿಲ್ಲದಂತಾಯಿತು. ವೀರಶೈವ ಕವಿಗಳಲ್ಲಿ ಆದಿಕವಿಯೆಂದೂ ಅಗ್ರಗಣ್ಯನೆಂದೂ ಗೌರವ ಪಡೆದಿರುವ ಹರಿಹರನೇ ಅದನ್ನು ರಚಿಸಿದ್ದರೂ ಆ ಪುರಾಣದ ಮುಂದೆ ಈ ರಗಳೆ ನಿಲ್ಲಲಾರದೆ ಹೋಯಿತು. ಬಸವಣ್ಣನ ಚರಿತ್ರೆ ಪುರಾಣದಲ್ಲಿ ನಿರೂಪಿತವಾಗಿರುವಷ್ಟು ಉದಾತ್ತವಾಗಿ ರಗಳೆಯಲ್ಲಿ ನಿರೂಪಿತವಾಗಿಲ್ಲವೆಂಬ ಭಾವನೆಯೇ ಈ ಅನಾದರಕ್ಕೆ ಮುಖ್ಯಕಾರಣವೆಂದು ತೋರುತ್ತದೆ. ರಗಳೆಯಲ್ಲಿ ಬಸವನೊಬ್ಬನ ಕಥೆ ಮಾತ್ರ ಇದೆ. ಹರಿಹರನು ತನ್ನ ಯಾವ ರಗಳೆಯ ಗ್ರಂಥದಲ್ಲಾಗಲಿ ಕಥಾನಾಯಕನ ಚರಿತ್ರೆಯನ್ನು ಬಿಟ್ಟು ಆಕಡೆ ಈಕಡೆ ಸುಳಿಯುವುದಿಲ್ಲ. ಪುರಾಣದಲ್ಲಾದರೋ ಬಸವಣ್ಣನ ಕಥೆಯ ಜತೆಗೆ ಅನೇಕ ಶಿವಭಕ್ತರ ಕಥೆಗಳು ಸೇರಿ ಅದೊಂದು ಮಹಾಪುರಾಣವಾಗಿ ಪರಿಣಮಿಸಿದೆ. ಬಸವಪುರಾಣಕ್ಕೆ ದೊರೆತ ಪ್ರಾಶಸ್ತ್ಯಕ್ಕೆ ಇದೂ ಒಂದು ಕಾರಣವಾಗಿರಬಹುದು. ಅದು ಏನೇ ಆಗಲಿ, ಬಸವಪುರಾಣ ಹುಟ್ಟಿದ ಮೇಲೆ ಹರಿಹರನ ಈ ರಗಳೆಯ ಗ್ರಂಥಕ್ಕೆ ಪುರಸ್ಕಾರ ಉಳಿಯಲಿಲ್ಲ. ಮಿಕ್ಕವರ ಮಾತು ಹೋಗಲಿ, ಬಸವಣ್ಣನ ಚರಿತ್ರೆಯನ್ನು ಬರೆದ ಭೀಮಕವಿ, ಷಡಕ್ಷರಿ ಮೊದಲಾದವರು ಕೂಡ ಹರಿಹರನು ಬಸವರಾಜದೇವರ ರಗಳೆಯನ್ನು ಬರೆದನೆಂಬುದನ್ನು ತಮ್ಮ ಗ್ರಂಥಗಳಲ್ಲಿ ಸ್ಮರಿಸಲಿಲ್ಲ.[2] ಹೀಗಾಗಿ ಹರಿಹರನು ಈ ರಗಳೆಯನ್ನು

---

೧ ಹರಿಹರನ ಕಾಲ ಸುಮಾರು ಕ್ರಿ.ಶ. ೧೧೬೦ ಎಂದೂ ಸೋಮನಾಥನದು ೧೧೯೫ ಎಂದೂ ಕವಿಚರಿತೆಯಲ್ಲಿ ಹೇಳಿದೆ. ಇವರಿಬ್ಬರೂ ೧೨ನೆಯ ಶತಮಾನದವರೆಂದೂ ಹರಿಹರನು ಆ ಶತಮಾನದ ಪೂರ್ವಾರ್ಧದಲ್ಲಿಯೂ ಸೋಮನಾಥನು ಉತ್ತರಾರ್ಧದಲ್ಲಿಯೂ ಇದ್ದರೆಂದೂ ಹೇಳುವುದಕ್ಕೆ ಅವಕಾಶವಿದೆ. ಅದೇನೆ ಆಗಲಿ, ಹೇಗೂ ಹರಿಹರನು ಸೋಮನಾಥನಿಗಿಂತ ಒಂದೆರಡು ತಲೆಮೊರೆ ಹಿಂದಿನವನಾಗುತ್ತಾನೆ.

೨ ಶಿವಶರಣರ ಚರಿತ್ರೆಗಳನ್ನು ಈಚೆಗೆ ಬರೆದವರ ಆ ಶರಣರ ಚರಿತ್ರೆಯನ್ನು ಹರಿಹರನು ಬರೆದಿದ್ದ ಪಕ್ಷದಲ್ಲಿ ಅದನ್ನು ತಮ್ಮ ಗ್ರಂಥಗಳಲ್ಲಿ ಸೂಚಿಸುವ ಪದ್ಧತಿಯುಂಟು. ಉದಾಹರಣೆಗೆ, ಹರಿಹರನು

ಬರೆದನೆಂಬುದನ್ನೇ ಜನರು ಕಾಲಕ್ರಮದಲ್ಲಿ ಮರೆತುಬಿಟ್ಟರು. ಪರಿಸ್ಥಿತಿ ಎಲ್ಲಿಗೆ ಇಳಿದಿರುವುದೆಂದರೆ ಈ ರಗಳೆಯನ್ನು ಹರಿಹರನೇ ಬರೆದನೆಂದರೆ ಈಗ ನಂಬುವುದು ಕೂಡ ಕಷ್ಟವಾಗಿಹೋಗಿದೆ.

ಹೀಗೆ ಬಸವರಾಜದೇವರ ರಗಳೆ ತನಗೆ ನ್ಯಾಯವಾಗಿ ಸಲ್ಲಬೇಕಾದ ಆದರ ಗೌರವಗಳಿಂದ ವಂಚಿತವಾಗಿದ್ದರೂ ಜನಸಾಮಾನ್ಯದ ಕಣ್ಮನಗಳಿಂದ ದೂರವಾಗಿ ಹೋಗಿದ್ದರೂ ಕೆಲವರಾದರೂ ಅದನ್ನು ಓದುತ್ತಿದ್ದರೆಂಬುದರಲ್ಲಿಯೂ ಅವರಲ್ಲಿ ಕೆಲವರಾದರೂ ಅದರ ಮಹತ್ವವನ್ನು ಮನಗಂಡಿದ್ದರೆಂಬುದರಲ್ಲಿಯೂ ಸಂಶಯವಿಲ್ಲ.

೧. ಅಂತಹವರಲ್ಲಿ ಒಬ್ಬನಾದ ಸಿದ್ಧನಂಜೇಶನು ತನ್ನ "ರಾಘವಾಂಕಚಾರಿತ್ರ" ಎಂಬ ಗ್ರಂಥದಲ್ಲಿ, ರಾಘವಾಂಕನು ಹರಿಹರನ ಮಹತ್ವವನ್ನು ಕುಮಾರವ್ಯಾಸನಿಗೆ ವಿವರಿಸುವ ಸಂದರ್ಭದಲ್ಲಿ, ಹೀಗೆ ಹೇಳಿದಂತೆ ನಿರೂಪಿಸಿದ್ದಾನೆ –

ಮತ್ತೆ ಕೇಳಲೆ ಕುಮಾರವ್ಯಾಸ ಬಸವನಿ
ಪ್ಪತ್ತೈದು ಸ್ಥಲದ ರಗಳೆಯ ಮಾಡಿ ನಲಿವುತ್ತು
ದಾತ್ತಭಕ್ತಿಯೊಳಾ ವಿರೂಪಾಕ್ಷನಡೆಗೊಯ್ಯಲಿನಿದು ಮಿಗಿಲಾದುದೆಂದು
ಹೊತ್ತಗೆಯ ತೆಗೆದುಕೊಂಡುಜ್ ನುಂಗಿದಂ ಚೆನ್ನ
ಯಿತ್ತ ಪಾಲ್ಗುಡಿದಂತ ಸರ್ವರುಂ ಪೊಗಳಿದರು
ಚಿತ್ತಜಮದಾರಣ್ಯದಾವ ಹರಿಹರದೇವ ಕವಿಚಕ್ರವರ್ತಿಯೆಂದು ॥

ಈ ಪದ್ಯದಲ್ಲಿ ಪ್ರಶಸ್ತಿಪಡಿಸಿರುವ ಭಾಗದಿಂದ ಹರಿಹರನು ಬಸವಣ್ಣನವರ ಚರಿತ್ರೆಯನ್ನು ಒಂದು ದೊಡ್ಡ ರಗಳೆಯ ಗ್ರಂಥವಾಗಿ[೧] ರಚಿಸಿದ್ದಾನೆಂಬುದು ಸ್ಪಷ್ಟವಾಗುವುದೂ ಅಲ್ಲದೆ ಸಿದ್ಧನಂಜೇಶನ ದೃಷ್ಟಿಯಿಂದ ಆ ಗ್ರಂಥದ ಮಹತ್ವವೇನೆಂಬುದೂ ಈ ಪದ್ಯದಿಂದ ಸೂಚಿತವಾಗುತ್ತಿದೆ.

೨. ಉತ್ತರದೇಶದ ಬಸವಲಿಂಗದೇವನು 'ಬಸವೇಶ್ವರ ಪುರಾಣದ ಕಥಾಸಾಗರ'[೨]

---

ರೇವಣಸಿದ್ಧೇಶ್ವರ ರಗಳೆಯನ್ನು ಬರೆದನೆಂದು ಚತುರ್ಮುಖ ಬೊಮ್ಮರಸನು ರೇವಣಸಿದ್ಧೇಶ್ವರ ಪುರಾಣ (ಸಂ. ೧-ಪ. ೨೧)ದಲ್ಲಿಯೂ ಮಹಾದೇವಿಯಕ್ಕನ ರಗಳೆಯನ್ನು ಬರೆದಿರುವನೆಂದು ಚೆನ್ನಬಸವಾಂಕನು ಮಹಾದೇವಿಯಕ್ಕನ ಪುರಾಣ (ಅ. ೧. ಪ. ೧೯) ದಲ್ಲಿಯೂ ಹೇಳಿದ್ದಾರೆ.

೧ ಸಿದ್ಧನಂಜೇಶನ ಹೇಳಿಕೆಯ ಪ್ರಕಾರ ಬಸವರಾಜದೇವರ ರಗಳೆಯಲ್ಲಿ ಇಪ್ಪತ್ತೈದು ಸ್ಥಳಗಳಿರಬೇಕು. ಈಗ ನಮಗೆ ದೊರೆತಿರುವುವು ಹದಿಮೂರು ಸ್ಥಳಗಳು ಮಾತ್ರ. ಹನ್ನೆರಡು ಸ್ಥಳಗಳಿಗೆ ಅರ್ಧಮಾತ್ರ ಕಥೆ ಇದೆ. ಹದಿಮೂರನೆಯ ಸ್ಥಳ ಮಿಕ್ಕ ಸ್ಥಳಗಳಂತಿರದೆ ಅದರಲ್ಲಿ ಕಥೆಯನ್ನು ಓಡಿಸಿಕೊಂಡುಹೋದಂತಿದೆ. ಅಲ್ಲದೆ ಈ ಸ್ಥಳವು ಕೆಲವು ಹಸ್ತಪ್ರತಿಗಳಲ್ಲಿದೆ, ಕೆಲವುಗಳಲ್ಲಿಲ್ಲ. ಆದಕಾರಣ ಈ ಭಾಗವು ಪ್ರಕ್ಷಿಪ್ತವಾದುದೋ ಏನೋ ಎಂಬ ಸಂಶಯಕ್ಕೆ ಅವಕಾಶವಿದೆ.

೨ ಈತನ ಕಾಲವು ಸು. ೧೬೦೦ ಎಂದು ಕವಿಚರಿತೆಯಲ್ಲಿ ಹೇಳಿದೆ. (ಸಂ.೩, ಪು. ೩೨೧) ಈ ಸಂಕಲನದಲ್ಲಿರುವ ಕಥೆಗಳನ್ನು ಹಿಂದಿನ ಪ್ರಮಾಣ ಗ್ರಂಥಗಳಿಂದ ಆರಿಸಿಕೊಂಡಿರುವುದಾಗಿ ಗ್ರಂಥದ ಕೊನೆಯಲ್ಲಿ ಹೀಗೆ ಹೇಳಿದ್ದಾನೆ. "ಶ್ರೀ ಈ ಕಥೆಗಳು ಹದಿನೆಂಟು ಪುರಾಣ, ಭಾರತ ರಾಮಾಯಣದ ಕಥೆಗಳು, ಮತ್ತೆ ವೀರಶೈವಾಮೃತ ಪುರಾಣ, ಆರಾಧ್ಯ ಚಾರಿತ್ರ, ಗಣಾಡಂಬರ, ಸಿಂಗಿರಾಜಯ್ಯನ ಕೃತಿ, ಶಿವತತ್ವಚಿಂತಾಮಣಿ, ಹರೀಶ್ವರದೇವರು ಮಾಡಿದ ರಗಳೆ, ಸಿದ್ಧರಾಮೇಶ್ವರರ ಚಾರಿತ್ರ, ಶೂನ್ಯ ಸಂಪಾದನೆ, ಮೊದಲಾದವರಲ್ಲಿದ್ದ ಕಥೆಗಳನ್ನೇ ಸಂಗ್ರಹಿಸಿದೆವಲ್ಲದೆ ಕಲ್ಪನೆಯ ಕಥೆಗಳನ್ನು ಹೇಳಲಿಲ್ಲ."

ಎಂಬ ಗ್ರಂಥವನ್ನು ಬರೆದಿದ್ದಾನೆ. ಅದರಲ್ಲಿ ಕಿನ್ನರ ಬೊಮ್ಮಯ್ಯನಿಗೆ ಸಂಬಂಧಿಸಿದ ಉಳ್ಳಿಯ ಕಥೆ ಬರುತ್ತದೆ. ಈ ಕಥೆ ನಮಗೆ ತಿಳಿದಿರುವಮಟ್ಟಿಗೆ ಕಂಡುಬರುವುದು ಬಸವರಾಜದೇವರ ರಗಳೆಯಲ್ಲಿ ಮಾತ್ರ. ಅಲ್ಲದೆ ಈ ರಗಳೆಯಲ್ಲಿ ಬರುವ ಕೆಲವು ಭಾಗಗಳೂ ಪದಗಳೂ ವಾಕ್ಯ ಖಂಡಗಳೂ[1] ಬಸವಲಿಂಗದೇವನ ಕಥೆಯಲ್ಲಿಯೂ ಕಂಡುಬರುವುದರಿಂದ ಈ ರಗಳೆಯ ಆಧಾರದ ಮೇಲೆಯೇ ಆತನು ತನ್ನ ಕಥೆಯನ್ನು ಬರೆದಿರುವನೆಂಬುದು ಸ್ಪಷ್ಟವಾಗುತ್ತದೆ. ಬಸವಲಿಂಗದೇವನು ತನ್ನ ಕಥೆಗಳಿಗೆ ಆಧಾರವೆಂಬುದು ಹೇಳಿರುವ ಗ್ರಂಥಗಳಲ್ಲಿ ಹರಿಹರನ ಹೊರತು ಮತ್ತಾವುದೂ ರಗಳೆಯ ಗ್ರಂಥವಲ್ಲವಾದ್ದರಿಂದ ಆತನು ತನ್ನ ಈ ಕಥೆಗೆ ಆಧಾರವಾಗಿ ಇಟ್ಟುಕೊಂಡಿರುವ ರಗಳೆಯ ಗ್ರಂಥ, ಎಂದರೆ ಬಸವರಾಜದೇವರ ರಗಳೆ, ಹರಿಹರನದೇ ಆಗಿರಬೇಕೆಂದು ಸಿದ್ಧವಾಗುತ್ತದೆ.

ಒಂದು ವೇಳೆ ಮೇಲೆ ಹೇಳಿದ ಎರಡು ಆಧಾರಗಳು ದೊರೆಯದೆ ಹೋಗಿದ್ದರೂ ಹರಿಹರನ ಇತರ ರಗಳೆಗಳನ್ನು ಓದಿದ್ದವರು ಈ ರಗಳೆಯು ಹರಿಹರನದೇ ಎಂದು ನಿರ್ಧರಿಸಬಹುದಾಗಿತ್ತು. ಏಕೆಂದರೆ ಹರಿಹರನವೆಂದು ನಿರ್ದಿಷ್ಟವಾಗಿ ಗೊತ್ತಾಗಿರುವ ರಗಳೆಗಳಲ್ಲಿ[2] ಸಾಮಾನ್ಯವಾಗಿ ಕಂಡುಬರುವ ಕವಿತಾ ಸಾಮರ್ಥ್ಯ, ಅಂಕಿತ, ಕಥಾ ರಚನಾಕ್ರಮ – ಇವು ಮಾತ್ರವಲ್ಲದೆ ಕೆಲವು ವಿಶೇಷ ಭಾವಗಳೂ ಮಾತಿನ ಧೋರಣೆ ಮೊದಲಾದುವೂ ಈ ರಗಳೆಯಲ್ಲಿಯೂ ಕಂಡುಬರುತ್ತವೆ. ಇದಕ್ಕೆ ಕೆಲವು ನಿದರ್ಶನಗಳನ್ನು ಇಲ್ಲಿ ಕೊಟ್ಟಿದೆ.

---

೧ ಉದಾಹರಣೆಗೆ ''ಕಿನ್ನರಯ್ಯನ ಬರವನ್ನು ಬಸವಣ್ಣ ಚಂದ್ರೋದಯವ ಚಕೋರ ಬಯಸುವಂತೆ, ಮುಂಗಾರ ಹನಿಯ ಚಾತಕ ಬಯಸುವಂತೆ'' ಬಯಸುತ್ತಿದ್ದನು. ಕಿನ್ನರಯ್ಯ ಮೇಲೋಗರಕ್ಕೆ ಉಳ್ಳಿಯ ಸುಲಿಯುತ್ತಿರಲು 'ಬಸವಣ್ಣನ ನಾಸಿಕಕ್ಕೆ ಕಂಪೆಸೆಯಲು' ವಾಸನಾದ್ರವ್ಯವನಿಲ್ಲಿಗೆ ತಂದವರಾರೆಂದನು. ಆಗ ಕಿನ್ನರಯ್ಯನು 'ಅಮೃತಮಯವಾದ ಉಳ್ಳಿಯ ನಿರಾಕರಿಸಿದರೆ' ಎಂದು ತಾಳುವೆನೆಂದು ಹೊರಟುಹೋದನು. ಶರಣರು ಬಸವನೊಡನೆ ನೀವು ಜರೆಯಲು ಕಿನ್ನರಯ್ಯ 'ಮುನಿದುಹೋದ'ನೆಂದು ಹೇಳಲು, ಆತನು 'ಆನೆಯ ರತ್ನಗಂಬಳಿ, ಕುದುರೆಯ ಹಲ್ಲಣ, ಇವೆಲ್ಲವನ್ನು ಉಳ್ಳಿಯಲ್ಲಿ ಸಿಂಗರಿಸಿ, ಚಪ್ಪರವಿಕ್ಕಿ' ಕಿನ್ನರಯ್ಯನನ್ನು ಅರಮನೆಗೆ ಕರೆತಂದು 'ಮಲ್ಲಿಗೆಯ, ಚಂದ್ರನ, ನಕ್ಷತ್ರದ ಬಿಳುಪಿಗೆ ಸಮಾನವಾದ ಉಳ್ಳಿಯ' ಅಡಿಗೆಯನ್ನು ಮಾಡಿ ಬಡಿಸಿದನು. (ಬಸವರಾಜದೇವರ ರಗಳೆಯಲ್ಲಿ ಬರುವ ನುಡಿಗಳೊಡನೆ ಹೋಲಿಸಿ ನೋಡಿ).

೨ ಅರವತ್ತು ಮೂರು ಪುರಾತನರ ಕಥೆಗಳನ್ನು ತಾನು ಬರೆದಿರುವುದಾಗಿ 'ಅರವತ್ತು ಮೂವರ ಕಥಾ ಗರ್ಭದಲ್ಲಿಯೂ ತಿರುನೀಲಕಂಠರ ರಗಳೆಯ ಆದಿಯಲ್ಲಿಯೂ ಹರಿಹರನೇ ಹೇಳಿಕೊಂಡಿದ್ದಾನೆ. ಇವನ್ನಲ್ಲದೆ ಮತ್ತಾವ ರಗಳೆಗಳನ್ನು ಬರೆದನೆಂಬುದನ್ನು ಆತನು ಎಲ್ಲಿಯೂ ಕಂಠೋಕ್ತವಾಗಿ ಹೇಳಿರುವಂತೆ ತಿಳಿದುಬಂದಿಲ್ಲ. ಆದರೆ ಮತ್ತೆ ಕೆಲವನ್ನು ಈತನು ಬರೆದನೆಂದು ನಿರ್ಧರಿಸುವುದಕ್ಕೆ ನಿಷ್ಕೃಷ್ಟವಾದ ಆಧಾರಗಳು ದೊರೆಯುತ್ತವೆ. ಉದಾಹರಣೆಗೆ ಹರಿಹರನು ರೇವಣಸಿದ್ಧೇಶ್ವರ ರಗಳೆಯನ್ನು ಬರೆದನೆಂದು ಚತುರ್ಮುಖ ಬೊಮ್ಮರಸನೂ ಮಹಾದೇವಿಯಕ್ಕನ ರಗಳೆಯನ್ನು ಬರೆದನೆಂದು ಚೆನ್ನಬಸವಾಂಕನೂ ತಮ್ಮ ಗ್ರಂಥಗಳಲ್ಲಿ ಹೇಳಿರುತ್ತಾರೆ. ಮಹಾಮಹಿಮಾರಗಳೆ ಭೃಂಗೀರಗಳೆಗಳಲ್ಲಿ ಹರಿಹರನ ಹೆಸರೂ ಆತನ ಗುರುಪರಂಪರೆಯೂ ಇರುವುದರಿಂದ ಅವು ಆತನಿಂದಲೇ ರಚಿತವಾದುವೆಂಬುದು ಸಿದ್ಧವಾಗುತ್ತದೆ. ಹೀಗೆ ಹರಿಹರನೇ ಎಂದು ನಿಷ್ಕೃಷ್ಟವಾಗಿ ನಿರ್ಧರಿಸಲಾಗದ, ಆದರೆ ಆತನವೇ ಎಂದು ತೋರುವ ಅನೇಕ ರಗಳೆಗಳಿವೆ. ಈತನು ಬರೆದ ರಗಳೆಗಳ ಸಂಖ್ಯೆ ಒಟ್ಟು ೧೦೧ ಎಂದು ಕೆಲವರೂ; ೧೨೦ ಎಂದು ಕೆಲವರೂ ಹೇಳುತ್ತಾರೆ (ಕವಿಚರಿತೆ, ಸಂ. ೧, ಪು. ೨೩೨).

### ೧. ಅಂಕಿತ, ರಚನಾಕ್ರಮ

(i) ಹರಿಹರನವೆಂದು ಗೊತ್ತಾಗಿರುವ ರಗಳೆಗಳಲ್ಲಿ ರಗಳೆಯ ಆರಂಭಕ್ಕೆ ಮೊದಲೂ ಅದು ಮುಗಿದ ಮೇಲೆಯೂ ಒಂದು ಕಂದ ಅಥವಾ ವೃತ್ತವಿರುತ್ತದೆ. ಅವುಗಳಲ್ಲಿ ಕಥಾ ನಾಯಕನ ಹೆಸರೂ ಪಂಪಾವಿರೂಪಾಕ್ಷನ ಅಂಕಿತವೂ ಇರುತ್ತವೆ.

(ii) ಪ್ರತಿಯೊಂದು ರಗಳೆಯ ಕೊನೆಯ ಪಾದದಲ್ಲಿಯೂ ಪಂಪಾವಿರೂಪಾಕ್ಷನ ಅಂಕಿತವಿರುತ್ತದೆ.

(iii) ವಿಸ್ತಾರವಾದ ಕಥೆಯನ್ನೊಳಕೊಂಡ ರಗಳೆಗಳು ಕೆಲವು ಭಾಗಗಳಾಗಿ ವಿಭಾಗವಾಗಿರುತ್ತವೆ. ಆ ಭಾಗಗಳಿಗೆ ಸ್ಥಲಗಳೆಂದು ಹೆಸರು. ಈ ಸ್ಥಲಗಳಲ್ಲಿ ಮೊದಲನೆಯದು ರಗಳೆಯಲ್ಲಿಯೂ ಎರಡನೆಯದು ಗದ್ಯದಲ್ಲಿಯೂ ಹೀಗೆ ಸ್ಥಲಗಳು ಅನುಕ್ರಮವಾಗಿ ರಚಿತವಾಗಿರುತ್ತವೆ.

(iv) ಅನೇಕ ಸ್ಥಲಗಳಿರುವ ರಗಳೆಗಳಲ್ಲಿ ಎರಡನೆಯ ಸ್ಥಲದಿಂದ ಪ್ರತಿಯೊಂದು ಸ್ಥಲದಲ್ಲಿಯೂ ಆ ಸ್ಥಲದ ಕಥೆಯ ಆರಂಭಕ್ಕೆ ಮೊದಲು ಒಂದು ಕಂದಪದ್ಯ ಅಥವಾ ವೃತ್ತವಿರುತ್ತದೆ (ಕೆಲವು ವೇಳೆ ಹೆಚ್ಚು ಪದ್ಯಗಳಿರುವುದೂ ಉಂಟು). ಅದರಲ್ಲಿ ಹಿಂದಿನ ಸ್ಥಲದಲ್ಲಿ ವರ್ಣಿತವಾದ ಕಥಾಭಾಗವು ಸಂಗ್ರಹವಾಗಿ ಸೂಚಿತವಾಗುತ್ತದೆ.

### ೨. ವಿಶೇಷ ಭಾಗಗಳು, ಮಾತಿನ ಧೋರಣೆ ಇತ್ಯಾದಿ

(i) ಕೈಲಾಸದ ಪ್ರಮಥಗಣಗಳು ಭೂಲೋಕದಲ್ಲಿ ಶಿವಶರಣರಾಗಿ ಹುಟ್ಟಲು ಕಾರಣವು ಅವರು ಕೈಲಾಸದಲ್ಲಿ ಮಾಡಿದ ಯಾವುದೋ ಒಂದು ತಪ್ಪು ಎಂಬುದು ಹರಿಹರನ ಗ್ರಂಥಗಳಲ್ಲಿ ಕಂಡುಬರುವ ಒಂದು ಅಪೂರ್ವವಾದ ಭಾವನೆ. ಈ ವಿಧವಾದ ಭಾವನೆ ನಂಬಿಯಣ್ಣ[೧] ರೇವಣಸಿದ್ಧ, ಮಹಾದೇವಿಯಕ್ಕ ಇವರ ರಗಳೆಗಳಲ್ಲಿ ಕಂಡುಬರುತ್ತದೆ. ಒಂದು ದಿನ ಪುಷ್ಪದಂತನೆಂಬ ಪ್ರಮಥನು ಪಾರ್ವತಿಗಾಗಿ ಹೂವು ಕೊಯ್ಯುತ್ತಿದ್ದ ಇಬ್ಬರು ವಿಲಾಸಿನಿಯರನ್ನು ನೋಡಿ ಮೋಹಗೊಳ್ಳಲು, ನಂಬಿಯಣ್ಣನೆಂಬ ಹೆಸರಿನಿಂದ ಭೂಮಿಯಲ್ಲಿ ಹುಟ್ಟೆಂದು ಶಿವನು ಅವನಿಗೆ ಆಜ್ಞೆಮಾಡುತ್ತಾನೆ. ರೇಣುಕನೆಂಬ ಪ್ರಮಥನು ಒಂದು ದಿನ ಶಿವನ ಪ್ರಸಾದವನ್ನು ಸ್ವೀಕರಿಸುವುದಕ್ಕೆ ಹೋಗುತ್ತಾ ದಾರಿಯಲ್ಲಿ ದಾರುಕನೆಂಬ ಪ್ರಮಥನನ್ನು ದಾಟಿಕೊಂಡು ಹೋಗಲು ಆ ತಪ್ಪಿಗಾಗಿ ಭೂಮಿಯಲ್ಲಿ ಮನುಷ್ಯನಾಗಿ ಹುಟ್ಟುವಂತೆ ಶಿವನು ಅವನಿಗೆ ಆಜ್ಞಾಪಿಸಿದನು. ಮಹಾದೇವಿ ಎಂಬ ರುದ್ರ ಕನ್ನಿಕೆಗೆ ಒಬ್ಬ ಗುಪ್ತ ಗಣೇಶ್ವರನ ಕಾಲು ಸೋಕಲು ಆಕೆ ಅವನನ್ನು ಹೀನಭವಿ ಎಂದು ಬೈದಳು. ಅದನ್ನು ನೋಡಿ ಪಾರ್ವತಿ ಅವಳನ್ನು ಕುರಿತು, ನೀನು ಮರ್ತ್ಯಲೋಕದಲ್ಲಿ ಭಕ್ತರ ಹೊಟ್ಟೆಯಲ್ಲಿ ಹುಟ್ಟಿ ಭವಿಯ ಹೆಂಡತಿಯಾಗಿ ಶಿವಭಕ್ತರ ಸೇವೆಮಾಡಿ ಮರಳಿ ಕೈಲಾಸಕ್ಕೆ ಬಾ ಎಂದು ಆಜ್ಞೆಮಾಡುತ್ತಾಳೆ. ಬಸವಣ್ಣನು ಮನುಷ್ಯನಾಗಿ ಹುಟ್ಟುವುದಕ್ಕೂ ಅಂಥದೇ ಒಂದು ಕಾರಣವು ಬಸವರಾಜದೇವರ ರಗಳೆಯಲ್ಲಿ ಉಕ್ತವಾಗಿದೆ. ಶಿವನ ಆಸ್ಥಾನದಲ್ಲಿ ವೃಷಭಮುಖನೆಂಬ ಗಣಪನು ಪ್ರಸಾದವನ್ನು ಹಂಚುವಾಗ ಷಣ್ಮುಖನಿಗೆ ಕೊಡುವುದನ್ನು ಮರೆತು ಕೊಟ್ಟೆನೆಂದು ಸುಳ್ಳು ಸಾಧಿಸಿದ್ದರಿಂದ ಶಿವನು ಆತನನ್ನು ಕುರಿತು, ಭೂಮಿಯಲ್ಲಿ ಬಸವನೆಂಬ ಹೆಸರಿನಿಂದ ಹುಟ್ಟಿ ''ಇಲ್ಲಿ ಪ್ರಸಾದವಂ

---

೧ ನಂಬಿಯಣ್ಣನು ಅರವತ್ತುಮೂವರು ಪುರಾತನರಲ್ಲಿ ಒಬ್ಬನು.

ಕುಡದಿರ್ದ ಬಳಿಪಿಡಿದು। ಅಲ್ಲಿ ಪ್ರಸಾದಮಂ ವಾದಿನಿಂದಂ ಪಡೆದು। ಗಣಸಮಕ್ಷದ ಪುಸಿಗೆ ಶರಣರ್ಗೆ ಮಾಡುತ್ತೆ । ಅಣಿಯರದೊಳೆನ್ನ ಭಕ್ತಿಯನಿಳೆಗೆ ಕೊಡುತ್ತೆ । ಎನ್ನ ಪ್ರಸಾದ ಸಾಮರ್ಥ್ಯಮಂ ತೋಱುತಂ। ಮನ್ನಣೆಯೊಳಿಲ್ಲಿಗೈತರ್ಪುದಿದು ನಿಮಿತಂ'' (೧: ೭೯-೮೪) ಎಂದು ಹೇಳುತ್ತಾನೆ. ಬಸವಣ್ಣನ ಜನನದ ವಿಚಾರದಲ್ಲಿ ಈ ತೆರನಾದ ಕಲ್ಪನೆ ನಮಗೆ ತಿಳಿದಿರುವ ಮಟ್ಟಿಗೆ ಮತ್ತಾವ ವೀರಶೈವ ಗ್ರಂಥದಲ್ಲಿಯೂ ಕಂಡುಬರುವುದಿಲ್ಲವಾದದ್ದರಿಂದಲೂ ಹರಿಹರನ ಇತರ ರಗಳೆಗಳಲ್ಲಿ ಇದೇ ತೆರದ ಕಲ್ಪನೆ ಕಂಡುಬರುವುದರಿಂದಲೂ ಈ ರಗಳೆ ಹರಿಹರಕೃತವಾಗಿರಬೇಕೆಂಬುದಕ್ಕೆ ಇದೂ ಒಂದು ಸಾಧನವಾಗಿರುತ್ತದೆ.

(ii) ಇಹಪ್ಪಗೆಯಾಂಡರ ರಗಳೆ।ಯಲ್ಲಿ ಶಿವನು ಆತನನ್ನು ಪರೀಕ್ಷಿಸುವುದಕ್ಕಾಗಿ ಸುಖಿಜಂಗಮನ ವೇಷದಲ್ಲಿ ಬಂದಾಗ ಆತನು ತನ್ನ ಹೆಂಡತಿಯಾದ ಪತಿಹಿತವೆಯನ್ನು ಆ ಜಂಗಮನಲ್ಲಿಗೆ ಕಳುಹಿಸಲು ಶಿವನು ಮೆಚ್ಚಿ ಆಕೆಗೆ ಸ್ವಸ್ವರೂಪವನ್ನು ತೋರಿಸಿದನು. ಅದನ್ನು ''ಪತಿಹಿತವೆ ಕಂಡಿ ಹಪ್ಪಗೆಯಾಂಡ ಬಾ ಬಾರ। ಅತಿಕರಂ ಲೇಸಾಯ್ತು ಬಾರಲೆಲೆ ಬಾ ಬಾರ।'' ಎಂದು ಸಂಭ್ರಮದಿಂದ ಕೂಗಿ ''ನೋಡ ದೇವರಿವರಿವರೆನ್ನಲು'' ಆತನು ನಿಶ್ಚಿಂತನಾಗಿ ''ಮರುಳೆ ಮುನ್ನಾರೆಂದು ಕೊಟ್ಟೆನೆಂ''ದುತ್ತರ ಕೊಡುತ್ತಾನೆ. ಬಸವರಾಜದೇವರ ರಗಳೆಯಲ್ಲಿಯೂ (ಸ್ಥಲ ೧೨) ಶಿವನು ಬಸವಣ್ಣನವರ ಭಕ್ತಿಯನ್ನು ಪರೀಕ್ಷಿಸುವುದಕ್ಕಾಗಿ ಸುಖಿಜಂಗಮವೇಷದಿಂದ ಬರುತ್ತಾನೆ. ಬಸವಣ್ಣನವರು ತಮ್ಮ ಪ್ರೀತಿಯ ಪತ್ನಿಯಾದ ಮಾಯಿದೇವಿಯನ್ನು ಜಂಗಮನಿಗೆ ಒಪ್ಪಿಸುತ್ತಾರೆ. ಅದಕ್ಕೆ ಮೆಚ್ಚಿ ಶಿವನು ಮಾಯಾದೇವಿಗೆ ಸ್ವಸ್ವರೂಪ ತೋರಲು ಆಕೆ ''ನೋಡಲಮ್ಮದೆ ನಡನಡಂ ನಡುಗಿ, ಬಸವ ಬಸವಾ, ಜಂಗಮದೇವರು ಸಂಗಮದೇವರಾದರೆನೆ.'' ಬಸವಣ್ಣನವರು ''ತಾಯೆ ತಾಯೆ, ಮುನ್ನವಾರೆಂದು ಕೊಟ್ಟೆನೆಂ''ದುತ್ತರ ಕೊಡುತ್ತಾರೆ.

(iii) ಭೋಗಣ್ಣನ ರಗಳೆ[೨]ಯಲ್ಲಿ ಕೆಂಭಾವಿಯ ಬ್ರಾಹ್ಮಣರು ಆ ಊರಿನ ಅರಸನಾದ ಚಂದಿಮರಸನಲ್ಲಿಗೆ ಹೋಗಿ ಭೋಗಣ್ಣನು ಶಿವಶರಣನೆಂದು ಒಬ್ಬ ಹೊಲೆಯನನ್ನು ಮನೆಯಲ್ಲಿ ಸೇರಿಸಿಕೊಂಡಿರುವನೆಂಬುದಾಗಿ ದೂರಲು ಚಂದಿಮರಸನು ಕರೆಸಿ ಕೇಳಿದಾಗ ಭೋಗಣ್ಣನು –

......ಹೊಲೆಯರಂ ಹೊಗಿಸಿತಿಲ್ಲ ಮನೆಯೊಳಗರಸ।
ನಿನಗೆ ತಿಳಿವಿಲ್ಲ ತಿಳಿವಿಲ್ಲದಡೆ ಕೇಳರಸ।
ನಾರಣಕ್ರಮಿತರಂ ಹೊಗಿಸಿದೆನೆ ಮನೆಯೊಳಗೆ।
ಸೂರಿಭಟ್ಟರನೊಯ್ದು ಪುಗಿಸಿದನೆ ಮನೆಯೊಳಗೆ

---

೧ ಈತನು ಅರವತ್ತ ಮೂರು ಪುರಾತನರಲ್ಲಿ ಒಬ್ಬನು.

೨ ಈ ಭೋಗಣ್ಣನ ರಗಳೆಯನ್ನು ಹರಿಹರನು ಬರೆದನೆಂಬುದಕ್ಕೆ ಅದರ ಅಂಕಿತ ರಚನಾಕ್ರಮಗಳ ಆಧಾರವಲ್ಲದೆ ಪಂಪಾಶತಕದಲ್ಲಿಯೂ ಆಧಾರವು ದೊರೆಯುತ್ತದೆ. ಆ ಶತಕದಲ್ಲಿ ಶಿವಶರಣರ ಮಹಿಮೆಯನ್ನು ಕೊಂಡಾಡುವಾಗ ಪುರಾತನದಲ್ಲಿ ಕೆಲವರ ಹೆಸರಿನ ಜತೆಗೆ ಬೊಮ್ಮಯ್ಯ, ಭೋಗಣ್ಣ, ದಾಸಿಮಯ್ಯ, ಕೊಡಗೂಸು ಇವರ ಹೆಸರುಗಳು ಉಕ್ತವಾಗಿವೆ (ಪ. ೫೯, ೬೬, ೬೭). ಅಲ್ಲಿ ಸೂಚಿತವಾಗಿರುವ ಅವರ ಮಹಿಮೆಯನ್ನು ನೋಡಿದರೆ ಅವರು ತೆಲುಗು ಬೊಮ್ಮಯ್ಯ, ಕೆಂಭಾವಿಯ ಭೋಗಣ್ಣ, ಜೇಡರ ದಾಸಿಮಯ್ಯ, ಕೋಳೂರು ಕೊಡಗೂಸು ಎಂದು ಗೊತ್ತಾಗುತ್ತದೆ. ಪುರಾತನರ ರಗಳೆಗಳನ್ನು ಬರೆದಂತೆಯೇ ಈ ಶಿವಶರಣರ ರಗಳೆಗಳನ್ನೂ ಹರಿಹರನು ಬರೆದಿರಬೇಕೆಂಬುದರಲ್ಲಿ ಸಂಶಯವಿಲ್ಲ.

ಕೃಷ್ಣಪೆದ್ದಿಗಳಸೊಮ್ಮೆಯು ಕರೆದು ಬಲ್ಲನೇ ।
ವಿಷ್ಣುಭಟ್ಟರಸೊಮ್ಮೆಯುಂ ಸೋಂಕಿ ಬಲ್ಲನೇ
ಶಿವನಱಿಯದ ಹೊಲೆಯರಂ ಹೊಗಿಸೆ ಕೇಳರಸ ।
ಶಿವಭಕ್ತನಂ ಹೊಗಿಸಿದಂ ತಪ್ಪೆ ಹೇಳರಸ ।

ಎಂದು ಉತ್ತರ ಕೊಡುತ್ತಾನೆ. ಬಸವರಾಜದೇವರ ರಗಳೆಯಲ್ಲಿಯೂ ಇಂಥ ಒಂದು ಸನ್ನಿವೇಶವಿದೆ. ಮಂಗಳವಾಡದ ಬ್ರಾಹ್ಮಣರು ಬಿಜ್ಜಳನಲ್ಲಿಗೆ ಹೋಗಿ, ಬಸವಣ್ಣನು ನಾಗಿದೇವನೆಂಬ ''ಹೊಲೆಯನೆಂದಡೆ ಕೋಪಂ ಹಿರಿಯಭಕ್ತನ'' ಮನೆಯಲ್ಲಿ ಊಟಮಾಡಿದನೆಂದು ದೂರುತ್ತಾರೆ. ಆಗ ಬಿಜ್ಜಳನು ಕರಸಿ ಕೇಳಲು ಬಸವಣ್ಣನವರು ಕೊಟ್ಟ ಈ ಉತ್ತರವನ್ನು ಭೋಗಣ್ಣನು ಚಂದಿಮರಸನಿಗೆ ಕೊಟ್ಟ ಉತ್ತರದೊಡನೆ ಹೋಲಿಸಬಹುದು :

''ಎಲೆ ಬುದ್ಧಿಯಿಲ್ಲದ ಭೂಪ, ಎರಗಿಪಿಯ ಮರುಳೆ, ನಾರಣಕ್ರಮಿತರ ಕೇರಿಯಂ ಪೊಕ್ಕನೆ ? ಮುಕುಂದಭಟ್ಟರ ಮನೆಯೊಳುಂಡನೆ ? ಸೌರಿಪೆದ್ದಿಗಳ ಸಾರಿ ನಿಂದನೆ ? ದಾಮೋದರಭಟ್ಟರಂ ಪ್ರೇಮದಿಂ ಸೋಕಿದನೆ ? ಕೇಶವ ಘೈಸರ ವಾಸನೆಯುಂಟೆ ? ಹರನನರಿಯದ ಹೊಲೆಯರ ಮನೆಯಂ ಹೊಕ್ಕುಂಟುದಿಲ್ಲ'' (೧೦: ೪೨-೪೭)

'ಗಿರಿಜಾ ಕಲ್ಯಾಣ'ದಲ್ಲಿ ಪಾರ್ವತಿಯನ್ನೂ 'ಮಹಾದೇವಿಯಕ್ಕನ ರಗಳೆ'ಯಲ್ಲಿ ಆಕೆಯನ್ನೂ ''ಹೊಂಗಡಗದ ಲಿಂಗವಂತೆ'' ಎಂದು ವಿಶೇಷಿಸಿದೆ. ಬಸವರಾಜದೇವರ ರಗಳೆಯಲ್ಲಿಯೂ ಬಸವಣ್ಣನ ಮಗನ ಬಾಲ್ಯ ವರ್ಣನೆಯಲ್ಲಿ ಆತನನ್ನು ''ಹೊಂಗಡಗದ ಲಿಂಗವಂತಂ'' ಎಂದು ವಿಶೇಷಿಸಿದೆ. ಗಿರಿಜಾ ಕಲ್ಯಾಣದಲ್ಲಿ ಪಾರ್ವತಿ ಹುಟ್ಟಿದಮೇಲೆ ಲಿಂಗವನ್ನು ತೋರಿಸಲು ಕಣ್ದೆರೆದಳೆಂದು ಹೇಳಿದೆ : ಬಸವಣ್ಣನು ''ಲಿಂಗಮಂ ತೋಱೆ ಕಣ್ದೆಱೆದು ಸುಖಿ''ಯಾದನೆಂದು ಬಸವರಾಜದೇವರ ರಗಳೆಯಲ್ಲಿ ಹೇಳಿದೆ.

ಬಸವರಾಜದೇವರ ರಗಳೆಯ ಈ ಅಂತರಪ್ರಮಾಣಗಳೂ, ಸಿದ್ಧನಂಜೇಶ ಉತ್ತರದೇಶದ ಬಸವಲಿಂಗದೇವ ಇವರ ಗ್ರಂಥಗಳಲ್ಲಿ ದೊರೆಯುವ ಪ್ರಮಾಣಗಳೂ ಎಂಥ ಸಂಶಯ ಗ್ರಸ್ಥರಿಗಾದರೂ ಬಸವರಾಜದೇವರ ರಗಳೆ ಹರಿಹರಕೃತವಾದುದೆಂಬ ನಂಬುಗೆಯನ್ನುಂಟು ಮಾಡದಿರಲಾರವು.

*ಬಸವರಾಜದೇವರ ರಗಳೆ, ೧೯೩೦, ೧೯೬೮, ಪೀಠಿಕೆ, ಪು. ೧೦-೨೦*

# ೪೭. ಶೂನ್ಯಸಂಪಾದನೆಗಳು

● ಎಂ. ಆರ್. ಶ್ರೀನಿವಾಸಮೂರ್ತಿ

ವೀರಶೈವ ಸಾಹಿತ್ಯದಲ್ಲಿ 'ಶೂನ್ಯಸಂಪಾದನೆ' ಮತ್ತು 'ಶೀಲಸಂಪಾದನೆ' ಎಂಬ ಕೆಲವು ಗ್ರಂಥಗಳು ದೊರೆಯುತ್ತವೆ. ಇವು ಸಾಮಾನ್ಯವಾಗಿ ಸಂಭಾಷಣೆಯ ರೂಪದಲ್ಲಿ ಸಂಕಲಿಸಿದ ಶಿವಶರಣರ ಮತ್ತು ಶಿವಶರಣೆಯರ ವಚನಗಳಾಗಿವೆ. ಈ ಲೇಖನದಲ್ಲಿ 'ಶೂನ್ಯಸಂಪಾದನೆ'ಯ ವಿಚಾರವಾಗಿ ಕೆಲವು ಮಾತುಗಳನ್ನು ಹೇಳುತ್ತೇವೆ.

'ಶೂನ್ಯಸಂಪಾದನೆ' ಎಂಬುದು ಶಿವಾನುಭವದ ವಚನಗಳ ಸಂಕಲನೆ. ಆದರೆ ಈ ಸಂಕಲನದಲ್ಲಿ ಅಲ್ಲಮಪ್ರಭುವಿನ ಚರಿತ್ರೆಯು ಸ್ಪಷ್ಟವಾಗಿ ಕಂಡುಬರುತ್ತದೆ. ಅಲ್ಲಮಪ್ರಭು ಅನಿಮಿಷಯ್ಯನೆಂಬ ಗುರುವಿನಿಂದ ಲಿಂಗವನ್ನು ಪಡೆದು ಲೋಕಾನುಗ್ರಹಾರ್ಥವಾಗಿ ಸಂಚರಿಸುತ್ತ ಮುಕ್ತಾಯಕ್ಕ, ಸಿದ್ಧರಾಮ, ಬಸವ, ಚೆನ್ನಬಸವಾದಿಗಳೊಡನೆಯೂ ಮಹದೇವಿಯಕ್ಕನೊಡನೆಯೂ ಮಾಡಿದ ಚರ್ಚೆಗಳು ಮತ್ತು ಶಿವಾನುಭವಮಂಟಪದಲ್ಲಿ ನುಲಿಯ ಚಂದಯ್ಯಾದಿಗಳು ಒಡ್ಡಿದ ಸಮಸ್ಯೆಗಳನ್ನು ವಿಚಾರಬುದ್ಧಿಯಿಂದ ಬಿಡಿಸಿದ ವಿವರಣೆಗಳು ಇವೆಲ್ಲ ಆ ಗ್ರಂಥದಲ್ಲಿ ದೊರೆಯುತ್ತವೆ. ಆದುದರಿಂದ 'ಶೂನ್ಯ ಸಂಪಾದನೆ'ಯನ್ನು 'ಪ್ರಭುದೇವರ ಶೂನ್ಯಸಂಪಾದನೆ' ಎಂದು ಕರೆಯುವ ವಾಡಿಕೆಯುಂಟು.

ಶ್ರೀಮಾನ್ ರಾವ್‌ಸಾಹೇಬ್ ಪಿ. ಜಿ. ಹಳಕಟ್ಟಿ ಅವರು 'ಶೂನ್ಯಸಂಪಾದನೆ' ಎಂಬ ಒಂದು ಗ್ರಂಥವನ್ನು ಪ್ರಕಟಿಸಿದ್ದಾರೆ. ಇದು ಗೂಳೂರು ಸಿದ್ಧವೀರಣಾರ್ಯನಿಂದ ರಚಿತವಾದುದು. ವೀರಶೈವಸಾಹಿತ್ಯದಲ್ಲಿ ಇನ್ನು ಕೆಲವು ಶೂನ್ಯಸಂಪಾದನೆಗಳಿವೆ. ನಮಗೆ ತಿಳಿದಮಟ್ಟಿಗೆ 'ಶೂನ್ಯಸಂಪಾದನೆ' ಎಂಬ ಸಂಕಲನಗಳು ಐದು ಇರಬೇಕೆಂದು ತೋರುವುದು. ಮೊದಲನೆಯದು, ಶಿವಗಣಪ್ರಸಾದಿ ಮಹದೇವಯ್ಯ ಬರೆದದ್ದು. ಇದನ್ನು ಪರಿಷ್ಕರಿಸಿ ಕೆಂಚವೀರಣ್ಣೊಡೆಯ ಎರಡನೆಯ ಶೂನ್ಯಸಂಪಾದನೆಯನ್ನು ಬರೆದಿದ್ದಾನೆ.[೧] ಈ 'ಶೂನ್ಯ ಸಂಪಾದನೆ'ಯನ್ನೋ ಮಹದೇವಯ್ಯನ 'ಶೂನ್ಯಸಂಪಾದನೆ'ಯನ್ನೋ ಪುನಃ ಕೆಂಚವೀರಣ್ಣೊಡೆಯ, ಕಲ್ಲೇಶ್ವರದೇವ, ಹಲಗೆಯದೇವ, ನಂಜೆಯದೇವ ಮುಂತಾದ ಶರಣರು ಪರಿಷ್ಕರಿಸಿ ಮೂರನೆಯ ಗ್ರಂಥವನ್ನು ಬರೆದಿದ್ದಾರೆ.[೨] ಗುಮ್ಮಳಾಪುರದ

---

೧. ಈ ಪುಸ್ತಕ ಇನ್ನೂ ನಮ್ಮ ಕಣ್ಣಿಗೆ ಬಿದ್ದಿಲ್ಲ. ಆದರೆ ಗುಮ್ಮಳಾಪುರದ ಸಿದ್ಧಲಿಂಗಯತಿ "ಪ್ರಸಾದಿಯ ಮಹದೇವಯ್ಯಗಳು ಶೂನ್ಯಸಂಪಾದನೆಯ ರಚಿಸಲು ಅಲ್ಲಿ ಸಿದ್ಧರಾಮದೇವರಿಗೆ ದೀಕ್ಷಾಕ್ರಮವಿಲ್ಲದಿರಲು ಇದಕ್ಕೆ ಕೆಂಚವೀರಣ್ಣೊಡೆಯರದೇವರು ಪುರಾತನರ ವಚನವಿಡಿದು ಸಾವಿರದೇಳನೂರ ವಚನಂಗಳಿಂದ ಸಿದ್ಧರಾಮಯ್ಯದೇವರಿಗೆ ದೀಕ್ಷಾಕ್ರಮದ ಭೇದವನ್ನು ಪ್ರತಿಷ್ಠಿಸಲು" ಎಂದು ಹೇಳಿರುವುದರಿಂದ ಈ ಪುಸ್ತಕವೊಂದಿದೆ ಎಂದು ತಿಳಿಯಬಹುದು (ಶಿವಯೋಗಮಂದಿರದ ಓಲೆಗರಿಯ ಪುಸ್ತಕ, ನಂಬರು ೨೧೩, ಹಾಳೆ ೧೮೩; ಡಿ. ಎಲ್. ನರಸಿಂಹಾಚಾರ್ಯರ ಪ್ರತಿಯಲ್ಲಿ ಹಾಳೆ ೧೧೨). ಈ ವಿಷಯವನ್ನು ಗೂಳೂರು ಸಿದ್ಧವೀರಣಾರ್ಯನು ಹೇಳಿಲ್ಲ.

೨. ಈ ತೃತೀಯ ಗ್ರಂಥದಲ್ಲಿ ಕೆಂಚವೀರಣ್ಣೊಡೆಯನ ಹೆಸರು ಸೇರಿದ್ದರೂ ಇದು ಮೇಲೆ ಹೇಳಿದ ಎರಡನೆಯ ಗ್ರಂಥಕ್ಕೆ ಭಿನ್ನವಾದುದೆಂದು ನಮಗೆ ತೋರುತ್ತದೆ. ಸಿದ್ಧಲಿಂಗಯತಿ ಕೆಂಚವೀರಣ್ಣೊಡೆಯನು ಪರಿಷ್ಕರಿಸಿದನೆಂದು ಸ್ಪಷ್ಟವಾಗಿ ಹೇಳಿದ್ದಾನೆ. ಆದರೆ ಮೂರನೆಯ ಗ್ರಂಥದ

ಸಿದ್ಧಲಿಂಗಯತಿ ಕೆಂಚವೀರಣ್ಣೊಡೆಯನ ಗ್ರಂಥವನ್ನು ಸಂಕ್ಷಿಪ್ತಮಾಡಿ ತಾನೊಂದು 'ಶೂನ್ಯಸಂಪಾದನೆ'ಯನ್ನು ಬರೆದಿದ್ದಾನೆ.[೩] ತರುವಾಯ ಗೂಳೂರಿನ ಸಿದ್ಧವೀರಣಾರ್ಯನು ಸಿದ್ಧಲಿಂಗಯತಿಯ 'ಶೂನ್ಯಸಂಪಾದನೆ'ಯಲ್ಲಿ ಕೆಲವು ಮಾರ್ಪಾಟುಗಳನ್ನು ಮಾಡಿ ಐದನೆಯ 'ಶೂನ್ಯಸಂಪಾದನೆ'ಯನ್ನು ಬರೆದನು.[೪] ಈ ಐದನೆಯ ಗ್ರಂಥವನ್ನೇ ಶ್ರೀಮಾನ್ ಹಳಕಟ್ಟಿ ಅವರು ಪ್ರಕಾಶಪಡಿಸಿರುವುದು.

ಮೇಲೆ ಹೇಳಿದ ಪರಿಷ್ಕರಣಗಳಿಗೆ ಮುಖ್ಯವಾದ ಕಾರಣ ಸಿದ್ಧರಾಮನ ದೀಕ್ಷೆ. ಸೊನ್ನಲಾಪುರದಲ್ಲಿದ್ದ ಸಿದ್ಧರಾಮನನ್ನು ಅಲ್ಲಮಪ್ರಭು ಕಂಡು ಆತನಿಗೆ ಉಪದೇಶಮಾಡಿ ಇಷ್ಟಲಿಂಗದನುವನ್ನು ಬಸವಣ್ಣನವರಿಂದ ಹೇಳಿಸುವುದಕ್ಕಾಗಿ ಕಲ್ಯಾಣಪಟ್ಟಣಕ್ಕೆ ಕರೆದುಕೊಂಡುಹೋದಂತೆ ಕೆಲವು ಗ್ರಂಥಗಳು ತಿಳಿಸುತ್ತವೆ. ಶುದ್ಧಶೈವನಾದ ಸಿದ್ಧರಾಮನು ಇಷ್ಟಲಿಂಗವಿರಹಿತನಾಗಿದ್ದುದರಿಂದ ಆತನನ್ನು ಬಸವಾದಿಪ್ರಮಥರು ಆಕ್ಷೇಪಿಸಿದರು. ಕಡೆಗೆ ಚೆನ್ನಬಸವನಿಂದ ಸಿದ್ಧರಾಮನಿಗೆ ವೀರಶೈವದೀಕ್ಷೆಯಾಯಿತೆಂದು ಕೆಲವು ವಚನಗಳಿಂದಲೂ, 'ಚೆನ್ನಬಸವಪುರಾಣ'ದಿಂದಲೂ ತಿಳಿಯುತ್ತದೆ. ಮೊದಲು 'ಶೂನ್ಯಸಂಪಾದನೆ'ಯನ್ನು ಬರೆದ ಶಿವಗಣಪ್ರಸಾದಿ ಮಹದೇವಯ್ಯನು ಈ ಸಿದ್ಧರಾಮನ ದೀಕ್ಷೆಗೆ ಪ್ರಾಶಸ್ತ್ಯವನ್ನು ಕೊಟ್ಟಂತೆ ಕಾಣುವುದಿಲ್ಲ. ಆದುದರಿಂದ 'ಶೂನ್ಯಸಂಪಾದನೆ'ಯನ್ನು ಪರಿಷ್ಕರಿಸಿದವರು ಆ ವಿಷಯವನ್ನು

---

ಪರಿಷ್ಕರಣದಲ್ಲಿ ''ಹಲಗೆಯದೇವರು ಕಲ್ಲೇಶ್ವರದೇವರು ನಂಜೆಯದೇವರು ಕೆಂಚವೀರಣ್ಣೊಡೆಯರದೇವರು ಮೊದಲಾದ ಶರಣರು ವಿಚಾರಿಸಲು'' ಎಂದು ಇತರ ಹೆಸರುಗಳೂ ಸ್ಪಷ್ಟವಾಗಿವೆ (ಮೈ. ಓ. ಲೈ., ಕೆ. ಎ. ೧೦೫೫, ಪುಟ ೧). ಎರಡನೆಯದಾಗಿ–ಕೆಂಚವೀರಣ್ಣೊಡೆಯನ ಗ್ರಂಥದ ವಿಚಾರದಲ್ಲಿ ''ಸಾವಿರದೇಳನೂರು ವಚನಂಗಳಿಂದ ಸಿದ್ಧರಾಮಯ್ಯದೇವರಿಗೆ ದೀಕ್ಷಾಕ್ರಮದ ಭೇದವನ್ನು ಪ್ರತಿಷ್ಠಿಸಲು ಆದ ಬರೆದೋದಿಕೇಳುವ ಶಿವಭಕ್ತರಿಗೆ ವಿಶೇಷವಾಗಲು'' ಎಂದು ಟೀಕಿಸಿ ''ಆ ಕ್ರಮವಿಡಿದು ಬೀಜದೊಳಗಣ ವೃಕ್ಷದ ಹಾಂಗೆ...'' ಅತಿ ಸೂಕ್ಷ್ಮವಾಗಿ ಸೇರಿಸಿ ತಾನು ಬರೆದುದಾಗಿ ಸಿದ್ಧಲಿಂಗಯತಿ ಹೇಳಿದ್ದಾನೆ. ತೃತೀಯ ಗ್ರಂಥದಲ್ಲಿ ಸಿದ್ಧರಾಮನ ದೀಕ್ಷೆಯ ಬಗ್ಗೆ ಅಷ್ಟೊಂದು ವಚನಗಳಿಲ್ಲ. ಆದುದರಿಂದ ಈ ಗ್ರಂಥಗಳು ಬೇರೆ ಬೇರೆ ಇರಬೇಕೆಂದು ನಮಗೆ ತೋರುತ್ತದೆ.

೩. ತನ್ನ ಗ್ರಂಥವನ್ನು ಬೋಳಬಸವೇಶಾಚಾರ್ಯನ ಕಾರುಣ್ಯದಿಂದ ಬರೆದಂತೆ ಹೇಳಿದ್ದಾನೆ.

೪. ಈತನು ಕೂಡ ತನ್ನ ಗ್ರಂಥವನ್ನು ''ಬೋಳಬಸವೇಶ್ವರಾರ್ಯ ಸತ್ಕರುಣವನಾಂತು'' ಬರೆದಂತೆ ಹೇಳಿದ್ದಾನೆ. ಈತನು ಪ್ರಸಾದಿ ಮಹದೇವಯ್ಯಗಳ ಹೆಸರನ್ನೂ ಗುಮ್ಮಳಾಪುರದ ಸಿದ್ಧಲಿಂಗಯತಿಯ ಹೆಸರನ್ನೂ ಹೇಳಿದ್ದಾನೆ. ಕೆಂಚವೀರಣ್ಣೊಡೆಯ ಮುಂತಾದವರ ಮಾತನ್ನು ಎತ್ತಿಲ್ಲ (ಕೆಂಚವೀರಾಖ್ಯನಿಗೆ ಹಲಗೆಯಾಚಾರ್ಯನು ತತ್ತ್ವವನ್ನು ತಿಳಿಸಿದಂತೆಯೂ ಅದನ್ನೇ ಹಲಗೆಯಾಚಾರ್ಯನ ಅಪ್ಪಣೆಯಮೇರೆಗೆ ಗುಬ್ಬಿಯ ಮಲ್ಲಣಾರ್ಯನು ವೀರಶೈವಾಮೃತಪುರಾಣವನ್ನಾಗಿ ಬರೆದಂತೆಯೂ ಆ ಗ್ರಂಥದ ಪೀಠಿಕಾ ಸಂಧಿಯಿಂದ ತಿಳಿಯುತ್ತದೆ. ವೀರಶೈವಾಮೃತವನ್ನು ಬರೆದು ಮುಗಿಸಿದ್ದು ಕ್ರಿಸ್ತಶಕ ೧೫೩೦ ವಿಕಾರಿ ಸಂವತ್ಸರ. ಕೆಂಚವೀರಾಖ್ಯನು ಕೆಂಚವೀರಣ್ಣೊಡೆಯನೆಂದು ತೋರುತ್ತದೆ. ಪ್ರಭುದೇವರಪುರಾಣವನ್ನು ಬರೆದ ಎಳಂದೂರು ಹರೀಶ್ವರನು ತನ್ನ ಗುರು ವೃಷಭಪುರದ ಸಿದ್ಧವೀರನೆಂದು ಹೇಳಿದ್ದಾನೆ (ಸಂಧಿ ೧. ಪದ್ಯ ೨೦). ವೃಷಭಪುರದ ಸಿದ್ಧವೀರನು ಗೂಳೂರು ಸಿದ್ಧವೀರನೂ ಗೂಳೂರು ಸಿದ್ಧವೀರಣಾರ್ಯನಿರ ಬಹುದೆಂದು ತೋರುತ್ತದೆ. ಪ್ರಭುದೇವರ ಪುರಾಣವನ್ನು ಕ್ರಿ.ಶ. ೧೬೮೬ ಪರಾಭವ ಸಂವತ್ಸರದಲ್ಲಿ ಬರೆದು ಮುಗಿಸಿದ್ದು. ಆದುದರಿಂದ ಗೂಳೂರು ಸಿದ್ಧವೀರಣಾರ್ಯ ಮುಂತಾದವರಿಗೆ ಕವಿಚರಿತ್ರಕಾರರು ಕೊಟ್ಟಿರುವ ಕಾಲವನ್ನು ಮಾರ್ಪಡಿಸಬೇಕಾದೀತೆಂದು ತೋರುತ್ತದೆ.)

ಎತ್ತಿ ಆಡಿ[೫] ಆ ಕೊರತೆಯನ್ನು ಹೋಗಲಾಡಿಸುವುದಕ್ಕಾಗಿ ತತ್ಸಂಬಂಧವಾದ ವಚನಗಳನ್ನು ಸೇರಿಸಿದುದಾಗಿ ಹೇಳಿದ್ದಾರೆ.

ಎರಡನೆಯದಾಗಿ ಮಹದೇವಯ್ಯ, ಕಲ್ಲೇಶ್ವರದೇವ, ಕೆಂಚವೀರಣ್ಣೊಡೆಯ ಮುಂತಾದವರು ಹರಿಹರನು 'ಪ್ರಭುದೇವರ ರಗಳೆ'ಯಲ್ಲಿ ಬರೆದಿರುವ ನಿರ್ಮಾಯನ ವೃತ್ತಾಂತವನ್ನು ಒಪ್ಪಿಕೊಂಡಂತೆ ತೋರುತ್ತದೆ. ಏಕೆಂದರೆ–ಅವರೆಲ್ಲ ಹರಿಹರನು ಬರೆದಿರುವುದನ್ನೇ ಪುಷ್ಟೀಕರಿಸಿ ಒಂದು ಸನ್ನಿವೇಶವನ್ನು ಹೆಚ್ಚಾಗಿ ಸೇರಿಸಿದ್ದಾರೆ. ಅಲ್ಲಮಪ್ರಭುವಿನ ಅವತಾರಕ್ಕೆ ಹರಿಹರನು ಹೇಳಿರುವ ಕಾರಣವು ಹೀಗಿದೆ.[೬] ನಿರ್ಮಾಯನೆಂಬ ಗಣಾಧಿಪನು ಒಂದು ದಿನ ಶಿವನಾಸ್ಥಾನಕ್ಕೆ ಬರುವ ದಾರಿಯಲ್ಲಿ ರುದ್ರಕನ್ನಿಕೆಯೊಬ್ಬಳನ್ನು ನೋಡುವನು. ಕೂಡಲೆ ಅವನ ಮನವಳುಕಲು ಇದೇಕೆ ಹೀಗಾಯಿತೆಂದು ಚಿಂತಾಕ್ರಾಂತನಾಗಿ ಸಭೆಗೆ ಹೋಗುವನು. ಆಗ ಈಶ್ವರನು ನಿರ್ಮಾಯನನ್ನು ಕುರಿತು–ನೀನು ಕಾಮವಶನಾದುದರಿಂದ ಭೂಮಿಯಲ್ಲವತರಿಸು, ಭೂಮಿಯಲ್ಲಿ ಜನಿಸುವ ರುದ್ರಕನ್ನಿಕೆಯೊಡನೆ ಸಂಸಾರಮಾಡಿಕೊಂಡಿರು ಎಂದು ಹೇಳಿ ಅವರಿಬ್ಬರನ್ನೂ ಭೂಮಿಗೆ ಕಳುಹಿಸುವನು. ಮಹದೇವಯ್ಯ,[೭] ಸಂಜೇಶ್ವರದೇವ[೮] ಮುಂತಾದವರು ಆ ರುದ್ರಕನ್ನಿಕೆ ಹಾಗೆ ದಾರಿಯಲ್ಲಿ ನಿಂತಿರುವುದಕ್ಕೆ ಒಂದು ಕಾರಣವನ್ನು ಕಲ್ಪಿಸಿ ಪಾರ್ವತಿ ನಿರ್ಮಾಯನ ಖ್ಯಾತಿಯನ್ನು ಕೇಳಿ ತಾನು ಆತನನ್ನು ಮಾಯಾವಶನನ್ನಾಗಿ ಮಾಡುವೆನೆಂದು ಈಶ್ವರನೊಡನೆ ಪಂಥವನ್ನು ತೊಟ್ಟಂತೆಯೂ[೯] ಆ ಪಂಥದಂತೆ

---

೫ (a) ಮೂರನೆಯ ಗ್ರಂಥದಲ್ಲಿ ''ತನುಮನಧನವ ಗುರುಲಿಂಗಜಂಗಮಕ್ಕರ್ಪಿಸಬೇಕು.... ಧನತನುಮನವ ಜಂಗಮ ಗುರುಲಿಂಗಕರ್ಪಿಸಿದಲ್ಲದೆ ನಿಜಮೋಕ್ಷವಿಲ್ಲೆಂದರಿದ ಪ್ರಭುದೇವರು, ಬಸವರಾಜದೇವರು, ಚೆನ್ನಬಸವೇಶ್ವರದೇವರು ಮುಖ್ಯವಾದ ಷಟ್ಸ್ಥಲಬ್ರಹ್ಮಿಗಳಾದ ವೀರಮಾಹೇಶ್ವರರೆಲ್ಲರೂ ಕೂಡಿ ಸಿದ್ಧರಾಮೇಶ್ವರದೇವರು ಮೊದಲಾದವರ ಶೈವಮಾರ್ಗವಂ ಬಿಡಿಸಿ ವೀರಶೈವದೀಕ್ಷೆಯಿಂದ ಅಂಗಲಿಂಗ ಸಂಗ ಸಮರಸವಾದ ಸಂಪಾದನೆಯ ವಚನ ಬರೆವ ದಿನ'' ಎಂದಿದೆ. (ಮೈ. ಓ. ಲೈ., ಕೆ. ಎ. ೧೦೫, ಪುಟ ೧೮ ಹಿಂಭಾಗ) (b) ಕೆಂಚವೀರಣ್ಣೊಡೆಯ ಸಿದ್ಧರಾಮನ ದೀಕ್ಷಾಭಾಗವನ್ನು ಸೇರಿಸಿದ್ದು, ಸಿದ್ಧಲಿಂಗಯತಿಯ ಗ್ರಂಥದಲ್ಲಿದೆ (ಟಿಪ್ಪಣಿ ೧ ನೋಡಿ). (c) ಗೂಳೂರು ಸಿದ್ಧವೀರಣಾರ್ಯನು ''ಪ್ರಸಾದಿ ಮಹದೇವಯ್ಯಗಳು ತಚ್ಛಿವಗಣಂಗಳ ಶಿವಾನುಭಾವವನು ಭಾವಶ್ರೋತ್ರದ್ವಾರಮುಖಕ್ಕೆ ನಿರ್ಮಳ ದರ್ಪಣವೆನೆ ಸಮರ್ಪಿಸಿದನು.....ಇಲ್ಲಿ ವಚನಕ್ರಮ ತಪ್ಪಿದಡೆ ನಿಮ್ಮ ಪರಿಪೂರ್ಣಜ್ಞಾನದಿಂದ ತಿದ್ದಿಕೊಂಬುದೆಂದು ಎನಲಾಗಿ ಆ ವಾಕ್ಯಪಿಡಿದು ಗುಮ್ಮಳಾಪುರದ ಸಿದ್ಧಲಿಂಗದೇವರು ಅಲ್ಲಿ ಸಿದ್ಧರಾಮಯ್ಯದೇವರಿಗೆ ದೀಕ್ಷಾಕ್ರಮವಿಲ್ಲಧಿರಲು ಬಸವಾದಿ ಪ್ರಮಥರ ವಚನ ಪ್ರಸಿದ್ಧವಾಗಿ ಸೇರಿಸಿದರು'' ಎಂದು ಬರೆದಿದ್ದಾನೆ (ಮುದ್ರಿತ ಪುಸ್ತಕ, ಶೂನ್ಯಸಂಪಾದನೆ, ಪುಟ ೪೦೪).

೬ ಪ್ರಭುದೇವರ ರಗಳೆ, ಪಂಕ್ತಿಗಳು ೧-೧೦.

೭ ಮಹದೇವಯ್ಯನ ಶೂನ್ಯಸಂಪಾದನೆ, ಶ್ರೀಮಾನ್ ಜಿ. ಎಂ. ಪುರಾಣಿಕರು, ಧಾರವಾಡ ಅವರಲ್ಲಿರುವ ಪ್ರತಿ, ಹಾಳೆಗಳು ೧೮೭-೧೮೮ (ಈ ಪುಸ್ತಕದಲ್ಲಿ ಶೂನ್ಯಸಂಪಾದನೆಯಲ್ಲದೆ ಬೇರೆ ಗ್ರಂಥಗಳೂ ಇವೆ).

೮ ಮೈ. ಓ. ಲೈ., ಕೆ.ಎ. ೧೦೫, ಪುಟ ೨.

೯ ಪಾರ್ವತಿಗೂ ನಿರ್ಮಾಯನಿಗೂ ವಾಗ್ವಾದವಾಗುವುದೂ ಪಾರ್ವತಿ ನಿರ್ಮಾಯನನ್ನು ಭಂಗಿಸುವಂತೆ ಶಪಥಮಾಡುವುದೂ ಬೇರೊಂದು ರೀತಿ ಶಿವತತ್ತ್ವಚಿಂತಾಮಣಿಯಲ್ಲಿ ವರ್ಣಿತವಾಗಿದೆ (ಮೈ. ಓ. ಲೈ., ಕೆ. ಎ. ೧೧೦, ಸಂಧಿ ೨೯, ಪದ್ಯಗಳು ೩೪-೪೦).

ರುದ್ರಕನ್ನಿಕೆಯೊಬ್ಬಳಿಗೆ ಅಪೂರ್ವ ಲಾವಣ್ಯಾದಿಗಳನ್ನು ಅನುಗ್ರಹಿಸಿ ನಿರ್ಮಾಯನ ಮನಸ್ಸು ಕೆಡುವಂತೆ ನಿನ್ನ ವಿಲಾಸವನ್ನು ತೋರೆಂದು ಆಜ್ಞಾಪಿಸಿ ಕಳುಹಿಸಿದಂತೆಯೂ ಅದರ ಫಲವಾಗಿ ನಿರ್ಮಾಯನ ಮನವಳುಕಿ ಆತನು ಮಾಯಾಧೀನನಾದಂತೆಯೂ ಬರೆದಿದ್ದಾರೆ. ಇವರ ಶೂನ್ಯಸಂಪಾದನೆಗಳಲ್ಲಿ "ಪ್ರಭುದೇವರ ಪೂರ್ವಸಾಂಗತ್ಯವೆಂತೆನೆ" ಎಂದು ಪ್ರಾರಂಭದಲ್ಲಿಯೇ ಒಂದು ಗದ್ಯಭಾಗವಿದ್ದು, ಅದರಲ್ಲಿ ಮೇಲೆ ಹೇಳಿದ ಕಥೆ ವಿಸ್ತಾರವಾಗಿ ವರ್ಣಿತವಾಗಿದೆ. ರುದ್ರಕನ್ನಿಕೆ ಕಾಮಲತೆಯಾಗಿ ಬಳ್ಳಿಗಾವೆಯಲ್ಲಿ ಹುಟ್ಟುವಳು. ಅಲ್ಲಮನೂ ಅದೇ ಊರಿನಲ್ಲಿ ಜನಿಸುವನು. ಅವರು ಪರಸ್ಪರವಾಗಿ ಪ್ರೇಮಬಂಧನದಲ್ಲಿ ಸಿಕ್ಕಿ ಕೆಲವು ಕಾಲ ಸುಖದಿಂದ ಸಂಸಾರಮಾಡುವರು. ಕಡೆಗೆ ಆಕೆ ಜ್ವರತಪ್ತಳಾಗಿ ಸಾಯಲು ಅಲ್ಲಮನು ವಿರಕ್ತಿಯನ್ನು ಪಡೆಯುವನು.[೧೦]

ಈ ಕಥೆಯನ್ನು ಒಪ್ಪದೆ ಮೊದಲು ಆಕ್ಷೇಪಿಸಿದವನು ಗುಮ್ಮಳಾಪುರದ ಸಿದ್ಧಲಿಂಗಯತಿಯೆಂದು ತೋರುತ್ತದೆ. ಹರಿಹರನು ತಾನು ಬರೆದಿರುವ ಶರಣರಗಳೆಯಲ್ಲಿ ಬಸವಾದಿ ಪ್ರಮಥರು ಕೈಲಾಸದಲ್ಲಿ ಮಾಡಿದ ಆವುದೋ ಒಂದು ಅಚಾತುರ್ಯದ ಫಲವಾಗಿ–ಶಾಪಹೊಂದಿ–ಭೂಮಿಯಲ್ಲಿ ಅವತರಿಸಿದಂತೆಯೇ ಬರೆದಿದ್ದಾನೆ. ಸಿದ್ಧಲಿಂಗಯತಿ "ಪ್ರಭುದೇವರ ಪೂರ್ವಸಾಂಗತ್ಯ" ಎಂಬ ಭಾಗವನ್ನು ತೆಗೆದುಬಿಟ್ಟು ಬಸವಣ್ಣ, ಚೆನ್ನಬಸವಣ್ಣ ಪ್ರಭುದೇವರು ಅನಾದಿ ಗುರುಲಿಂಗಜಂಗಮಸ್ವರೂಪರೆಂದು ಹೇಳಿ "ಇದೇನು ಕಾರಣ ಮರ್ತ್ಯಕ್ಕೆ ಬಂದರೆಂದು ಸಂಕಲ್ಪಿಸಿ ಶಾಪದಿಂದ ಬಂದರೆಂದು ಆವನಾನೊಬ್ಬನು ನುಡಿವುತಿದ್ದಾನು. ಅವನು ಇಪ್ಪತ್ತೆಂಟು "ನರಕದಲ್ಲಿ ರವಿ ಶಶಿವುಳ್ಳನ್ನಬರ ನರಕವನನುಭವಿಸುತಿರ್ಪನು"[೧೧] ಎಂದು ಬರೆದಿದ್ದಾನೆ. ಗೂಳೂರಿನ ಸಿದ್ಧವೀರಣಾರ್ಯನ ಕೂಡ ಸಿದ್ಧಲಿಂಗಯತಿಯ ಮಾರ್ಗವನ್ನು ಅನುಮೋದಿಸಿ ಅದೇ ವಾಕ್ಯಗಳನ್ನು ತನ್ನ 'ಶೂನ್ಯಸಂಪಾದನೆ'ಯಲ್ಲಿ[೧೨] ಸೇರಿಸಿದ್ದಾನೆ.

ಈ 'ಶೂನ್ಯಸಂಪಾದನೆ'ಗಳಲ್ಲಿ ಇನ್ನೂ ಒಂದು ಭೇದವಿದೆ. ಸಿದ್ಧವೀರಣಾರ್ಯನ ಗ್ರಂಥವು ಪೀಠಿಕಾಪ್ರಕರಣ, ಗುರುಕರುಣ, ಮುಕ್ತಾಯಕ್ಕನ ಸಂಪಾದನೆ, ಬಸವೇಶ್ವರನ ಸಂಪಾದನೆ ಎಂದು ಮುಂತಾಗಿ ೨೨ ಪ್ರಕರಣಗಳಾಗಿ ವಿಂಗಡವಾಗಿ ವಚನಸಂಖ್ಯೆಗಳನ್ನು ಪ್ರತಿ ಪ್ರಕರಣದಲ್ಲಿಯೂ ಹೊಸದಾಗಿ ಕೊಟ್ಟಿದೆ. ಹಿಂದಿನ ಸಂಪಾದನೆಗಳು ಹೀಗೆ ಪ್ರಕರಣಗಳಾಗಿ ವಿಂಗಡವಾಗಿಲ್ಲ. ವಚನಸಂಖ್ಯೆ ಕ್ರಮವಾಗಿ ಹೆಚ್ಚುತ್ತ ಕೊನೆಯವರಗೂ ಹೋಗುತ್ತದೆ. ಈ ಪ್ರಕರಣಗಳನ್ನು ಜೋಡಿಸಿರುವ ಕ್ರಮವೂ ಒಂದೇ ರೀತಿಯಾಗಿಲ್ಲ.[೧೩] ಸಿದ್ಧವೀರಣಾರ್ಯನ

---

೧೦ ಇದನ್ನು ಹರಿಹನು ಹೇಳಿದ್ದಾನೆ. ಜ್ವರದಿಂದ ಸತ್ತಳೆಂದು ಮಹದೇವಯ್ಯ, ನಂಜೆಯದೇವರ ಗ್ರಂಥಗಳಲ್ಲಿ ಇಲ್ಲ; "ವಿಶಾಪವನ್ನೈದಲು" ಎಂದು ಹೇಳಿದೆ.
ಹೀಗೆಯೆ ಮಹದೇವಿಯಕ್ಕನು ಜೈನನಾದ ಕೌಶಿಕನನ್ನು ಮದುವೆಮಾಡಿಕೊಂಡು ಕೆಲಕಾಲವಿದ್ದಳೆಂಬುದನ್ನು ಹರಿಹರನ ಮಹದೇವಿಯಕ್ಕನ ರಗಳೆಯಲ್ಲಿರುವಂತೆಯೆ ಕೆ. ಎ. ೧೦೫, ಪುಟ ೧೯೨ರಲ್ಲಿ ಹೇಳಿದೆ. ಆದರೆ ಸಿದ್ಧಲಿಂಗಯತಿ ಮತ್ತು ಸಿದ್ಧವೀರಣಾರ್ಯರು ಈ ವಿಷಯವನ್ನು ಹೇಳದೆ ತೇಲಿಸಿಬಿಟ್ಟಿದ್ದಾರೆ.

೧೧ ಶ್ರೀಮಾನ್ ಡಿ. ಎಲ್. ನರಸಿಂಹಾಚಾರ್ಯರ ಪ್ರತಿ, ಹಾಳೆ ೧, ಹಿಂಭಾಗ.

೧೨ ಮುದ್ರಿತ ಪುಸ್ತಕ, ಶೂನ್ಯಸಂಪಾದನೆ, ಪುಟ ೨.

೧೩. (a) ಕೆ. ಎ. ೧೦೫, ಮೈ. ಓ. ಲೈ., ಪುಸ್ತಕದಲ್ಲಿ ಅಲ್ಲಮಪ್ರಭು ಬಸವಣ್ಣನವರಿಗೆ ಅಹಂಕಾರ ಖಂಡನೆ ಮಾಡಿದ ಮೇಲೆ ಅಂಗಸ್ಥಲ, ಲಿಂಗಸ್ಥಲ ವಿಚಾರಗಳೂ ಮಿಶ್ರಾರ್ಪಣವೂ ಬರುವಂತೆ ಬರೆದಿದೆ. ಈ

ಗ್ರಂಥದಲ್ಲಿ ಹೊಸದಾಗಿ ಅನೇಕ ವಚನಗಳನ್ನು ಸೇರಿಸಿದೆ. ಆಯ್ದಕ್ಕಿಯ ಮಾರಯ್ಯಗಳ ಸಂಪಾದನೆ, ಮೋಳಿಗೆ ಮಾರಯ್ಯಗಳ ಸಂಪಾದನೆ, ಘಟ್ಟಿವಾಳಯ್ಯನ ಸಂಪಾದನೆ ಮುಂತಾದ ಪ್ರಕರಣಗಳು ಮೂರನೆಯ 'ಶೂನ್ಯಸಂಪಾದನೆ'ಯಲ್ಲಿಲ್ಲ. ಘಟ್ಟಿವಾಳಯ್ಯನ ಸಂಪಾದನೆ ಐದನೆಯ ಗ್ರಂಥದಲ್ಲಿದೆ. ನಾಲ್ಕನೆಯದರಲ್ಲಿ ಇಲ್ಲ.

'ಶೂನ್ಯಸಂಪಾದನೆ'ಯ ಸಂಕಲನಗಳು ಸುಮಾರು ಐದು ಇರುವುದರಿಂದಲೂ ಅವುಗಳಲ್ಲಿ ವ್ಯತ್ಯಾಸಗಳನೇಕವಿರುವುದರಿಂದಲೂ[೧೪] ಇತಿಹಾಸದ ದೃಷ್ಟಿಯಿಂದ ನೋಡುವವರಿಗೆ ಈ ಬೆಳವಣಿಗೆ ಮತ್ತು ಮಾರ್ಪಾಟುಗಳು ಬಹಳ ಮುಖ್ಯವಾಗಿ ಕಾಣುವುವು. ಮೊದಲಿನ ಗ್ರಂಥಗಳಲ್ಲಿದ್ದ ಕೆಲವು ಮುಖ್ಯವಾದ ವಚನಗಳಿಗೆ[೧೫] ಸಿದ್ಧಲಿಂಗಯತಿಯ ಕೈಯಿಂದಲೂ ಸಿದ್ಧವೀರಣಾರ್ಯನ ಕೈಯಿಂದಲೂ ಬಹಿಷ್ಕಾರವುಂಟಾಗಿದೆ. ಆದುದರಿಂದ ಸಿದ್ಧರಾಮನ ದೀಕ್ಷೆಯ ವಿಚಾರ, ಅಲ್ಲಮಪ್ರಭುವಿನ ವಿಚಾರ ಮುಂತಾದುವನ್ನು ವಿಮರ್ಶೆಮಾಡತಕ್ಕವರು ಹಿಂದಿನ 'ಶೂನ್ಯಸಂಪಾದನೆ'ಯ ಗ್ರಂಥಗಳನ್ನು ನೋಡುವುದು ಅವಶ್ಯಕ; ಸಿದ್ಧಲಿಂಗಯತಿ ಮತ್ತು ಸಿದ್ಧವೀರಣಾರ್ಯರ ಗ್ರಂಥಗಳಲ್ಲಿ ಹೊಸದಾಗಿ ಸೇರಿರುವ ವಚನಗಳನ್ನು ಒರೆಹಚ್ಚಿ ನೋಡುವುದೂ ಆವಶ್ಯಕ.

*ಪ್ರಬುದ್ಧ ಕರ್ಣಾಟಕ, ೧೫-೪, ೧೯೩೪*
*ಸಾಹಿತ್ಯಾಲೋಕ, ೧೯೭೮, ಪು. ೧೭೧-೭೬*

---

ಭಾಗಗಳು ಸಿದ್ಧಲಿಂಗಯತಿಯ ಮತ್ತು ಸಿದ್ಧವೀರಣಾರ್ಯನ ಗ್ರಂಥಗಳಲ್ಲಿ ಇಲ್ಲ. (b) ಸಿದ್ಧರಾಮನಿಗೆ ದೀಕ್ಷೆಯಾದ ಮೇಲೆ ಮರುಳಶಂಕರದೇವರ ಸಂಪಾದನೆ ಕೆ. ಎ. ೧೦೫ ಮತ್ತು ಸಿದ್ಧಲಿಂಗಯತಿಯ ಗ್ರಂಥಗಳಲ್ಲಿ ಬರುತ್ತದೆ. ಸಿದ್ಧವೀರಣಾರ್ಯನ ಗ್ರಂಥದಲ್ಲಿ ದೀಕ್ಷೆಗೆ ಮೊದಲೇ ಬರುತ್ತದೆ–ಇತ್ಯಾದಿ.

೧೪ (a) ಬಸವನು ಚೆನ್ನಬಸವನಿಗೆ ಉಪದೇಶಮಾಡಿದ ಸಂಪಾದನೆಯಲ್ಲಿ ಬಸವಣ್ಣನವರ ಕಥೆಯನ್ನು ಸಿದ್ಧವೀರಣಾರ್ಯನು ಬರೆದಿಲ್ಲ. ಆದರೆ ಸಿದ್ಧಲಿಂಗಯತಿ ಈ ಪ್ರಕರಣದಲ್ಲಿ ಕೈಲಾಸವರ್ಣನೆ, ಶಿವನ ಆಸ್ಥಾನವರ್ಣನೆ, ನಾರದರ ಆಗಮನ, ಬಸವಾವತಾರಕ್ಕೆ ಕಾರಣ, ಬಸವಣ್ಣನವರ ಜನನ, ಬಿಜ್ಜಳನ ಬಳಿಯಲ್ಲಿ ಮಂತ್ರಿತ್ವ ಇತ್ಯಾದಿಗಳನ್ನೆಲ್ಲ ಬರೆದಿದ್ದಾನೆ. (b) ಸಿದ್ಧರಾಮನ ದೀಕ್ಷೆಯ ವಿಚಾರದಲ್ಲಿ ವಿವರಗಳು ಕೆ. ಎ. ೧೦೫, ಸಿದ್ಧಲಿಂಗಯತಿಯ ಗ್ರಂಥ ಮತ್ತು ಸಿದ್ಧವೀರಣಾರ್ಯನ ಗ್ರಂಥ ಇವುಗಳಲ್ಲೆಲ್ಲ ವ್ಯತ್ಯಾಸವಾಗಿವೆ. ಇವುಗಳಲ್ಲದೆ ಇನ್ನೂ ವ್ಯತ್ಯಾಸಗಳು ಅನೇಕ ಕಡೆಗಳಲ್ಲಿ ಇವೆ.

೧೫ ಉದಾಹರಣೆಗೆ ಈ ಮುಖ್ಯವಾದ ವಚನ ಸಿದ್ಧಲಿಂಗಯತಿಯ ಮತ್ತು ಸಿದ್ಧವೀರಣಾರ್ಯರ ಗ್ರಂಥಗಳಲ್ಲಿ ಅವಳ ನೋಟವನ್ನಮರ್ತ್ಯರ್ಕ್ಕೆ ತಂದುದಯ್ಯಾ ಕೂಟದ ಸವಿ ಅವಗಡಿಸಿ ಕಾಡಿತ್ತಯ್ಯ ಅವಳ ಬೇಟದ ಬೆರಹುರದಲ್ಲಿ ತ್ರಿಪುರ ಹಾಳಾದುದ ಕಂಡೆನು, ಉರಿಯ ಮೇಲೆ ಉರಿಯೆರಗಿದಡೆ ತಂಪುಮಾಡುತ್ತ ಕಂಡೆನು. ಕರಿಯಬೇಡನ ಕಸ್ತುರಿಯ ಮೃಗ ನುಂಗಿದರೆ ಹಿರಿಯ ಹೆಂಡತಿ ಪೋಲೆಗಳೆದುದ ಕಂಡೆನು. ಕಾರಿರುಳ ಕೋಟೆಯ ಕರಿಯ ಕಾಳಗವ ಗೆಲಿದು ಹೂಳಿರ್ದ ನಿಧಾನವ ಕಂಡೆನು ಕಾಣಾ ಗುಹೇಶ್ವರಾ'' ಈ ವಚನ ಅಲ್ಲಮಪ್ರಭು ಅನಿಮಿಷಯ್ಯನ ಸಮಾಧಿಸ್ಥಾನಕ್ಕೆ ಹೋಗುವುದಕ್ಕೆ ಮುಂಚೆ ಹೇಳಿದ್ದು.

# ೪೮. 'ಧರ್ಮನಾಥ ಪುರಾಣ'ದ ಕರ್ತೃ ಬಾಹುಬಲಿಪಂಡಿತನ ಶಾಸನಶಿಲ್ಪ ಮತ್ತು ಪದ್ಯಗಳು

● ಜಿ. ಜಿ. ಮಂಜುನಾಥನ್

೧

ಬಾಹುಬಲಿ ಪಂಡಿತ ಉಭಯ ಭಾಷಾಕವಿ. ಸಂಸ್ಕೃತಭಾಷೆಯ ಹರಿಚಂದ್ರನ 'ಧರ್ಮ ಶರ್ಮಾಭ್ಯುದಯ'ವನ್ನು ಆಧರಿಸಿ ಕನ್ನಡದಲ್ಲಿ 'ಧರ್ಮನಾಥ ಪುರಾಣ'ವನ್ನು ರಚಿಸಿದ್ದಾನೆ; ಈತನ ಸಂಸ್ಕೃತ ಕೃತಿ 'ಗುಮ್ಮಟನಾಥಚರಿತ'. ಬಾಹುಬಲಿ ಪಂಡಿತನು ಕೊಂಡಕುಂದಾನ್ವಯಕ್ಕೆ ಸೇರಿದವನು; ಪುಸ್ತಕಗಚ್ಛ ಪೂರ್ಣತಿಳಕನಾದವನು; ನಯಯುಕ್ತನಾದ ಈತ ಮೂಲಸಂಘದ ಒಡೆಯ ; ದೇಶೀಗಣಾಗ್ರೇಸರ. ನಯಕೀರ್ತಿವ್ರತಿಯ ಶಿಷ್ಯನಾದ ಈತ 'ಸಕಳವಿದ್ಯಾ ಚಕ್ರವರ್ತಿ'ಯೆಂದು ಪ್ರಸಿದ್ಧನಾಗಿದ್ದನು. ಈತನ ಕಾರ್ಯಕ್ಷೇತ್ರ ನಂಜನಗೂಡು ತಾಲ್ಲೂಕು ಏಚಿಗನಹಳ್ಳಿ.

ಮೈಸೂರಿನಿಂದ ನಂಜನಗೂಡಿಗೆ ಹೋಗುವ ದಾರಿಯಲ್ಲಿ ೧೫ ಕಿ.ಮೀ. ದೂರ ಹೋದರೆ, ತಾಂಡವಪುರ (ಹಿಂದಿನ ತಂಡ್ಯ) ಸಿಕ್ಕುತ್ತದೆ. ಅಲ್ಲಿಂದ ಪಶ್ಚಿಮಕ್ಕೆ ೨ ಕಿ.ಮೀ. ದೂರ ಹೋದರೆ ಏಚಿಗನಹಳ್ಳಿ. ಒಂದು ಕಾಲದಲ್ಲಿ ಇದು ಎಳಂದೂರು ದೊಡ್ಡಪಂಡಿತರಿಗೆ ಚಿಕ್ಕದೇವರಾಜನಿತ್ತ ಜಹಗೀರು. ಇಲ್ಲಿಂದ ೧ ಕಿ.ಮೀ. ದಕ್ಷಿಣದಲ್ಲಿ ಕಪಿಲಾನದಿಗೆ ಎಡ ದಂಡೆಯ ಮೇಲೆ ಒಂದು ನೇಮಿನಾಥ ಬಸದಿಯಿದೆ. ಇಲ್ಲಿಯ ಯಕ್ಷ ಕೂಗುವ ಬ್ರಹ್ಮದೇವರು ಪ್ರಸಿದ್ಧ. ನೇಮಿನಾಥ ಬಸದಿ ಇರುವ ಜಾಗದಲ್ಲಿದ್ದ ಕಾರವುರ ಇಂದು ಇಲ್ಲ; ಶಾಸನಸ್ಥ ಉಲ್ಲೇಖ ಮಾತ್ರ ಉಂಟು.

ನೇಮಿನಾಥ ಬಸದಿಯ ಉತ್ತರದ ಬಾಗಿಲಲ್ಲಿ ಒಂದು ಶಾಸನವಿದೆ. ಅದರ ಎತ್ತರ ಎರಡು ಅಡಿ. ಅಗಲ ಒಂದೂವರೆ ಅಡಿ. ಇದರಲ್ಲಿ ಶಕ ೧೨೨೩. ವಿರೋಧಿಕೃತ್ ಮಾರ್ಗಶಿರ ಶುದ್ಧ ೧೫ ಭಾನುವಾರ ೨೩-೧೧-೧೩೦೧ದಂದು ನಿಧನನಾದ ಮೇಘಚಂದ್ರ ಗುರುವಿನ ಸ್ತುತಿ ಇದ್ದು ಶಾಸನ ಪಾಠ ಹೀಗಿದೆ[೧]:

೧. ಶ್ರೀಮತ್ಪರಮ ಗಂಭೀರ ಸ್ಯಾದ್ವಾದಮೋಘಲಾಂಛ
೨. ನಂ ಜೀಯಾತ್ತ್ರೈಲೋಕ್ಯನಾಥಸ್ಯ ಶಾಸನಂ ಜಿನಶಾ
೩. ಸನಂ ॥ ಧೀರರಪಾರ ಸದ್ಗುಣಮಣಿ ಬ್ರಜವಾರಿಧಿ
೪. ಗಳ್ಕಷಾಯಸಂಹಾರಿಗಳಾತ್ಮಭಾವಪರರಿದ್ದಜಿ
೫. ನೇಶ್ವರ ಧರ್ಮರಾಜಿಗಳ್ಪೂರಿಚರಿತ್ರ ಬಾಹುಬಲಿ
೬. ದೇವರಭಿಷ್ಟುತ ಪಾರ್ಶ್ವದೇವರುಂ ಸೂರಿವಿನೂ
೭. ತವದ್ವಿಷದ ಕೀರ್ತಿಯನಾಂತೆಸೆದರ್ನಿರಂತರ
೮. ॥ ಜೈನಮತಾಂಬುರಾಶಿ ಪರಿವರ್ಧನ ಚಂದ್ರ
೯. ನನ್ನಸ್ತತಂದ್ರನಂ ಮಾನಿತಸಾರ ಸರ್ವಗುಣ
೧೦. ರುಂದ್ರನನುನ್ನತ ಕೀರ್ತಿಸಾಂದ್ರನಂ । ಪೀನ
೧೧. ವಿಮೋಹ ಮಾರಣ ಮೃಗೇಂದ್ರನಸುದ್ಧ ಕೃಪಾಸದೀಂದ್ರನಂ ಭೂನುತ ಮೇಘಚಂದ್ರನ



೧೨. ನಶೇಷಜನಂ ನಲಪಿಂದೆ ಬಣ್ಣಿಕುಂ ॥ ಆಱಿಯದ ಪಿದ್ದೆಯಿಲ್ಲ ಬಿಡದೋದದ ಕೇಳದ ಶಾಸ್ತ್ರವಿ

೧೩. ಲ್ಲ ಕೂರ್ತೆಱಿಗದ ಭೂಪರಿಲ್ಲ ಸಲೆ ಸೋಲದ ವಾದಿಗಳಿಲ್ಲ ಸಂತತಂ ನೆಱೆಯೆ ಸಮಸ್ತರುಂ ಪೊ

೧೪. ಗಳದಿರ್ದ ಕವಿತ್ವಮುಮಿಲ್ಲ ಲೋಕದೊಲ್ಲುಱೆ ಪಾರ್ಶ್ವದೇವಸುತ ಬಾಹುಬಲಿ ಬ್ರತಿಶಕ್ತಿಯದ್ದು

೧೫. ತಂ॥ ಸಕವರ್ಷ ೧೨೯೩ನೆಯ ಸಂದ ಪಿರೋಧಿಕೃತು ಸಂವತ್ಸರದ ಮಾರ್ಗಸಿರ ಸು

೧೬. ೧೫ ಆ। ವಾರದ ದಿವದಲ್ಲಿ ಮೇಘಚಂದ್ರದೇವರು ಮುಕ್ತಿಗೆ ಸಂದರು ಮಂಗಳ ಮಹಾಶ್ರೀ

೧೭. ಯವರಿಗೆ ನಿಶಿಧಿಯ ಮಾಡಿಸಿದವ ಕೋಟಿಯ॥ ಮೇಘಚಂದ್ರದೇವರ ಶಿಷ್ಯರು ಮಾಣಿಕ್ಯದೇವರು । ಸ

೧೮. ....ಯ ದೇವರು.

ಈ ಶಾಸನವನ್ನು ಎಪಿಗ್ರಾಫಿಯ ಕರ್ನಾಟಕ III ನಂಜನಗೂಡು ೪೩ನೆಯ ಶಾಸನವಾಗಿ ರೈಸ್ ಅವರು ಮೊದಲು ಪ್ರಕಟಿಸಿದರು. ಕನ್ನಡ ಅಧ್ಯಯನ ಸಂಸ್ಥೆಯ ಮೂಲಕ ಇದೇ ಶಾಸನ ಎಪಿಗ್ರಾಫಿಯ ಕರ್ನಾಟಕ III ನಂಜನಗೂಡು ೧೭೧ನೆಯ ಶಾಸನವಾಗಿ ಮರುಮುದ್ರಣಗೊಂಡಿತು. ರೈಸ್ ಅವರ ಮುದ್ರಣದಲ್ಲಿ ಈ ಶಾಸನವನ್ನು ಹಲವೆಡೆ ತಪ್ಪಾಗಿ ಓದಿ ಉಂಟಾದ ದೋಷಗಳು ಇದರಲ್ಲಿಯೂ ಮುಂದುವರಿದಿವೆ. ಈ ಶಾಸನದ ಸೂಕ್ಷ್ಮ ಪರಿಶೀಲನೆಯಿಂದ ಅವುಗಳನ್ನು ಪರಿಷ್ಕರಿಸಬಹುದಾಗಿದ್ದು, ಅವು ಹೀಗಿವೆ :

| ಶಾಸನದ ಪಂಕ್ತಿ | ಎ.ಕ.ದ ಮುದ್ರಿತಪಾಠ | ತಿದ್ದಿದ ಶಾಸನ ಪಾಠ |
|---|---|---|
| ೪ | ಗಳಪಾಯ | ಗಳ್ಕಪಾಯ |
| ೪ | ಗಳಾದ | ಗಳಾತ್ಮ |
| ೪ | ಪರಿದ್ದ | ಪರರಿದ್ದ |
| ೫ | ಳ್ಳೂರೆ ಚರಿತ್ರ | ಳ್ಳೂರಿ ಚರಿತ್ರ |
| ೬ | ಶಕ್ತಿಯ | ಕೀರ್ತಿಯ |
| ೭ | ನಸ್ತ | ನ್ನಸ್ತ |
| ೧೨ | ವಿಡದೋದದ | ಬಿಡದೋದದ |
| ೧೩ | ಕೂರ್ತಿ... | ಕೂರ್ತೆಱಿಗದ |
| ೧೪ | ಕವೀಶ್ವರು | ಕವಿತ್ವಮು |
| ೧೪ | ದೊಲ್ಲಱೆ | ದೊಲ್ಲುಱೆ |

ಪ್ರಸ್ತುತ ಶಾಸನದಲ್ಲಿ ಪಾರ್ಶ್ವದೇವರು, ಮೇಘಚಂದ್ರ ಮತ್ತು ಬಾಹುಬಲಿ ಬ್ರತಿಯನ್ನು ಕುರಿತ ಮೂರು ಪದ್ಯಗಳನ್ನು 'ಧರ್ಮನಾಥ ಪುರಾಣ'ದಿಂದ[1] ಆಯ್ದುಕೊಳ್ಳಲಾಗಿದೆ. 'ಧರ್ಮನಾಥ ಪುರಾಣ'ವನ್ನು ೪ ಪ್ರತಿಗಳ ಸಹಾಯದಿಂದ ಸಂಪಾದಿಸಲಾಗಿದೆ. ಇದರಲ್ಲಿ ಮೂಡಬಿದರೆಯ ಓಲೆಯ ಪ್ರತಿಯಿಂದ ಪ್ರತಿಮಾಡಿರುವ ಕನ್ನಡ ಅಧ್ಯಯನ ಸಂಸ್ಥೆಯ

೧. ಸಂ. ಎನ್. ಬಸವಾರಾಧ್ಯ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ೧೯೭೫,

ಕೆ.ಎ. ೨೯೬ನೆಯ ಪ್ರತಿಯ ಕಾಲ. ಶಾಲಿವಾಹನ ಶಕವರ್ಷ ೧೩೪೨, ಎಂದರೆ ಕ್ರಿ.ಶ. ೧೪೨೦ ಆಗುತ್ತದೆ. ಇದರದೇ ಮೈಕ್ರೋಫಿಲಂ ಪ್ರತಿ ಕನ್ನಡ ಅಧ್ಯಯನ ಸಂಸ್ಥೆಯಲ್ಲಿರುವ ಎಸ್ ೧೦೦೮ ಎಂದರೆ ಕ ಮತ್ತು ಚ ಸಂಕೇತವಿರುವ ಎರಡು ಪ್ರತಿಗಳೂ ಒಂದೇ ಮೂಲದಿಂದ ಬಂದವು. ಕನ್ನಡ ಅಧ್ಯಯನ ಸಂಸ್ಥೆಯ ಎಸ್. ೧೩೪೮ ಮೈಕ್ರೋ ಫಿಲಂ ಪ್ರತಿ ಗ. ಪ್ರತಿಗೆ ಮೂಡಬಿದರೆಯ ಬೇರೊಂದು ಹಸ್ತಪ್ರತಿ ಮೂಲವಾಗಿದೆ. ಇದನ್ನು ಬರೆದವನು ಓದುವ ಕಮಲನಾಭ; ಬರೆಸಿದವರು ಲಕ್ಷ್ಮೀಸೇನದೇವರು. ಜ. ಪ್ರತಿಯು ಜಿನವಾಣಿಯಲ್ಲಿ ಪ್ರಕಟಿಸಿದ ಅಸಮಗ್ರ ಪ್ರತಿಯಾಗಿದ್ದು ಇದರ ವಿವರಗಳು ಲಭ್ಯವಿಲ್ಲ. ಬಹುಶಃ ಮೇಲಿನ ಪ್ರತಿಗಳಲ್ಲಿ ಒಂದನ್ನು ಆಧರಿಸಿರಬಹುದು. ಒಟ್ಟಿನಲ್ಲಿ ಹೇಳಬಹುದಾದರೆ, ತಾಳೆಗರಿಯ ಪ್ರತಿಗಳಲ್ಲಿ 'ಧರ್ಮನಾಥ ಪುರಾಣ'ದ ಕ್ರಿ.ಶ. ೧೪೨೦ರಷ್ಟು ಹಿಂದಿನ ಹಳೆಯ ಪಾಠ ನಿಕ್ಷಿಪ್ತವಾಗಿದ್ದು ಹೀಗಿವೆ :

ಉ॥ ಮಾ॥ ಧೀರರಪಾರ ಸದ್ಗುಣ ಮಣಿವ್ರಜವಾರಿಧಿಗಳ್ ಕಷಾಯ ಸಂ
ಹಾರಿಗಳಾತ್ಮ ಭಾವಪರರಿದ್ದ ಜಿನೇಶ್ವರ ಧರ್ಮರಾಜಿಗಳ್
ಭೂರಿ ಚರಿತ್ರ ಬಾಹುಬಲಿ ದೇವರಭಿಷ್ಟುತ ಪಾರ್ಶ್ವದೇವರುಂ
ಸೂರಿ ವಿನೂತನರ್ ವಿಶದಕೀರ್ತಿಯನಾಂತೆಸೆದರ್ ನಿರಂತರಂ ॥ (೧-೨೨)

ಜೈನಮತಾಂಬುರಾಶಿ ಪರಿವರ್ಧನ ಚಂದ್ರನನಸ್ತತಂದ್ರನಂ
ಮಾನಿತಸಾರ ಸರ್ವ ಗುಣರುಂದ್ರನನುನ್ನತಕೀರ್ತಿಸಾಂದ್ರನಂ
ಪೀನ ವಿಮೋಹವಾರಣಮೃಗೇಂದ್ರನನುದ್ಧೃತಪಾನದೀಂದ್ರನಿಂ
ಭೂನುತ ಮೇಘಚಂದ್ರನನಶೇಷಜನಂ ನಲವಿಂದೆ ಬಣ್ಣಿಕುಂ ॥ (೧-೨೭)

ಚಂ॥ ಮಾ॥ ಅಱಿಯದ ವಿದ್ಯೆಯಿಲ್ಲ ಜಿಡದೋದದ ಕೇಳದ ಶಾಸ್ತ್ರವಿಲ್ಲ ಕೂ
ರ್ತಱಗದ ಭೂಪರಿಲ್ಲ ಸಲೆ ಸೋಲದ ವಾದಿಗಳಿಲ್ಲ ಸಂತತಂ
ನೆಱೆಯೆ ಸಮಸ್ತರುಂ ಪೊಗಳದಿರ್ದ ಕವಿತ್ವಮುಮಿಲ್ಲ ಲೋಕದ
ಲ್ಲುಱೆ ನಯಕೀರ್ತಿದೇವಸುತ ಬಾಹುಬಲಿವ್ರತಿ ಶಕ್ತಿಯದ್ಭುತಂ ॥ (೧-೪೪)

'ಧರ್ಮನಾಥ ಪುರಾಣ'ದ ಈ ಮೂರು ಪದ್ಯಗಳಿಂದ ಶಾಸನ ಪಾಠವನ್ನು ಮತ್ತಷ್ಟು ಪರಿಷ್ಕರಿಸಬಹುದಾಗಿದೆ. ಶಾಸನದ ೬ ಮತ್ತು ೭ನೆಯ ಪಂಕ್ತಿಗಳಲ್ಲಿ ಬರುವ ''ಸೂರಿ ವಿನೂತವದ್ವಿಷದ ಕೀರ್ತಿಯ'' ಎನ್ನುವ ಪಾಠ ಅಪಪಾಠ. ಅರ್ಥ ಮಾಡುವುದು ಕಷ್ಟ. ಅದರ ಬದಲು ಕಾವ್ಯದ ೧-೨೨ರಲ್ಲಿರುವ, ''ಸೂರಿ ವಿನೂತನರ್ ವಿಶದ ಕೀರ್ತಿಯ'' ಎನ್ನುವ ಪಾಠವನ್ನು ಅಂಗೀಕರಿಸಬಹುದಾಗಿದೆ. ಇದರಿಂದ ಸ್ವಚ್ಛವಾದ, ಶುದ್ಧವಾದ ಕೀರ್ತಿ ಎಂದಾಗುತ್ತದೆ. 'ವಿಶದ' ಎನ್ನುವುದಕ್ಕೆ 'ಬಿಳಿಪು' ಎನ್ನುವ ಅರ್ಥವೂ ಇದ್ದು 'ವಿಶದ ಕೀರ್ತಿ' ಎನ್ನುವ ಶಬ್ದ 'ಧವಳಕೀರ್ತಿ' ಎನ್ನುವ ಶಬ್ದಕ್ಕೆ ಸಂವಾದಿಯಾದುದಾಗಿದೆ.

ಶಾಸನದ ೧೦ ಮತ್ತು ೧೧ನೆಯ ಪಂಕ್ತಿಗಳಲ್ಲಿ ಬರುವ ''ಪೀನ। ವಿಮೋಹ ಮಾರಣ ಮೃಗೇಂದ್ರನನ್'' ಎನ್ನುವ ಪಾಠ ಕೂಡ ಪರಿಶೀಲನಾರ್ಹವಾಗಿದೆ. 'ಮಾರಣ' ಎಂದರೆ 'ಕೊಲ್ಲುವುದು' ಎಂದರ್ಥ. 'ವಿಮೋಹ ಮಾರಣ ಮೃಗೇಂದ್ರನನ್' ಎಂದರೆ 'ವಿಶೇಷವಾದ ಮೋಹವನ್ನು ಕೊಲ್ಲುವ ಸಿಂಹ' ಎಂದು ಅರ್ಥವಾಗುತ್ತದೆ. ಇದು ತನ್ನಷ್ಟಕ್ಕೆ ತಾನ ಚೆನ್ನಾಗಿದ್ದರೂ ಕಾವ್ಯದ ೧-೨೭ರಲ್ಲಿ ದೊರೆಯುವ ''ಪೀನ ವಿಮೋಹವಾರಣ ಮೃಗೇಂದ್ರನನ್'' ಎನ್ನುವುದನ್ನು ಅಂಗೀಕರಿಸಬಹುದಾಗಿದೆ. 'ವಿಶೇಷವಾದ ಮೋಹವೆನ್ನುವ ಆನೆಗೆ ಸಿಂಹ'

ಎಂದು ರೂಪಕವಾಗಿ ಅರ್ಥ ಮತ್ತಷ್ಟು ಸುಂದರವಾಗುತ್ತದೆ. ಆನೆ ಮತ್ತು ಸಿಂಹಗಳ ನಡುವಣ ಜಾತಿವೈರ ಪ್ರಸಿದ್ಧ.

ಶಾಸನದ ೧೪ನೆಯ ಪಂಕ್ತಿಯಲ್ಲಿ ಬರುವ ''ಲ್ಲಜಿ ಪಾರ್ಶ್ವದೇವ ಸುತ ಬಾಹುಬಲಿ ಬ್ರತಿ ಶಕ್ತಿಯದ್ಭುತಂ'' ಎನ್ನುವ ಮಾತು ಗಮನಾರ್ಹವಾಗಿದೆ. ಈ ಶಾಸನ ಭಾಗ ಚಂಪಕ ಮಾಲಾವೃತ್ತವಾಗಿದ್ದು, ಪ್ರಸ್ತಾರಕ್ಕೆ ಧಕ್ಕೆ ಬರುತ್ತದೆ. ಈ ವೃತ್ತದ ಆರಂಭದ ನ ಜ ಗಣಗಳಲ್ಲಿ ನಗಣದ ಕಡೆಯ ಲಘುವೂ ಜಗಣದ ಆರಂಭದ ಲಘುವೂ ಲುಪ್ತವಾಗಿ ಎರಡು ಅಕ್ಷರ ಕಡಿಮೆ ಬೀಳುತ್ತದೆ. ಕಾವ್ಯದ ೧-೪೪ರಲ್ಲಿ ಬರುವ ''ಲ್ಲಜಿ ನಯಕೀರ್ತಿದೇವ ಸುತ ಬಾಹುಬಲಿ ವ್ರತಿ ಶಕ್ತಿಯದ್ಭುತಂ'' ಎನ್ನುವ ಪಾಠದಿಂದ ಮೇಲಿನ ಪಾಠ ಸರಿಹೋಗುತ್ತದೆ. 'ನಯಕೀರ್ತಿದೇವಸುತ' ಎನ್ನುವುದನ್ನು ಉದ್ದೇಶಪೂರ್ವಕವಾಗಿ ಶಾಸನ ಕರ್ತೃ 'ಪಾರ್ಶ್ವದೇವ ಸುತ' ಎಂದು ಬದಲಾಯಿಸಿರುವಂತಿದೆ. ಆದರೆ ಛಂದೋದೋಷ ತಲೆದೋರುವುದರಿಂದ ಈ ಬದಲಾವಣೆ ನಿಲ್ಲುವುದಿಲ್ಲ.

೨

ಏಚಿಗನಹಳ್ಳಿ ಶಾಸನದ ಮಹತ್ವವಿರುವುದು ಮೂರು ಘಟ್ಟಗಳಲ್ಲಿ ಕಂಡುಬರುವ ಉಬ್ಬುಶಿಲ್ಪಗಳಿಂದ. ಎಲ್ಲಕ್ಕಿಂತ ಮೇಲಿನ ಘಟ್ಟದಲ್ಲಿ ಸಿಂಹಲಲಾಟ, ಮುಕ್ಕೊಡೆ, ಸೂರ್ಯ, ಚಂದ್ರ ಮತ್ತು ಚಾಮರಗಳಿಂದ ಕೂಡಿದ ಪದ್ಮಾಸನಾಸೀನ ತೀರ್ಥಂಕರನ ಶಿಲ್ಪವಿದೆ. ಎರಡನೆಯ ಘಟ್ಟದಲ್ಲಿ ಮಧ್ಯದಲ್ಲಿರುವ ಅಟ್ಟವಣೆಯಲ್ಲಿ ತಾಡಪತ್ರಗಳನ್ನಿಟ್ಟುಕೊಂಡು ಅಭ್ಯಾಸಮಾಡುತ್ತಿರುವ ಮುನಿವೃಂದದ ಜೊತೆಯಲ್ಲಿ ಕೈಯೆತ್ತಿ ಮುಗಿದಿರುವ ಶಿಷ್ಯನ ಉಬ್ಬುಶಿಲ್ಪವಿದೆ. ಮೂರನೆಯ ಘಟ್ಟದಲ್ಲಿ ಇಬ್ಬರು ಮುನಿಗಳು ಮತ್ತು ಕಂತಿಯ ಉಬ್ಬುಶಿಲ್ಪವಿದೆ.

ಇದರಲ್ಲಿ ಎರಡನೆಯ ಘಟ್ಟದಲ್ಲಿ ಬರುವ ಶಿಷ್ಯ ಮತ್ತು ಮುನಿವೃಂದದ ಮೇಲೆ ಅವರ ತಲೆಯ ನೇರಕ್ಕೆ ಸರಿಯಾಗಿ ಹೆಸರುಗಳನ್ನು ಬರೆದಿದ್ದು ಹೀಗಿವೆ :

೧. ಕೇತಗೊಂಡನ ಮಗ ಮ    ಮೇಘಚಂದ್ರ    ಬಾಹುಬಲಿ    ಪಾರ್ಶ್ವದೇವರು
೨. ದ್ದಗೊಂಡ    ದೇವರು    ದೇವರು

ಈ ಹೆಸರುಗಳು ಶಾಸನದಲ್ಲಿ ಬಹಳ ಸ್ಫುಟವಾಗಿವೆ. ಆದರೆ ಮೈಸೂರು ಪುರಾತತ್ತ್ವ ಇಲಾಖೆ ವರದಿ ೧೯೩೬. ಶಾಸನ ೫೭ರಲ್ಲಿ ಅವುಗಳನ್ನು ಹೀಗೆ ಓದಿದೆ.

೧. ಕೇತಗೊಂಡನ ಮಗ ಮ    ಮೇಘಚಂದ್ರ    [ಮಾಣಿಕ್ಯನಂದಿ]    ಬರ್ದ್ವ(?)
೨. ದ್ದಗೊಂಡ    ದೇವರು    ದೇವರು    ದೇವರು

ಕೇತಗೊಂಡನ ಮಗ ಮದ್ದಗೊಂಡ, ಮೇಘಚಂದ್ರದೇವರು ಎನ್ನುವ ಹೆಸರುಗಳು ಸರಿಯಾಗಿವೆ. ಸ್ಪಷ್ಟವಾಗಿದ್ದರೂ 'ಬಾಹುಬಲಿ ದೇವರು' ಎನ್ನುವುದನ್ನು [ಮಾಣಿಕ್ಯನಂದಿ] 'ದೇವರು' ಎಂದೂ 'ಪಾರ್ಶ್ವದೇವರು' ಎನ್ನುವುದನ್ನು 'ಬರ್ದ್ವ? 'ದೇವರು' ಎಂದೂ ಏಕೆ ಓದಿದರೋ ತಿಳಿಯದಾಗಿದೆ. ಮೈಸೂರು ಪುರಾತತ್ತ್ವ ಇಲಾಖೆ ವರದಿಯಲ್ಲಿರುವಂತೆಯೇ ಎ.ಕ. III ನಂಜನಗೂಡು ೧೭೧ರಲ್ಲಿ ಸಹ ಪ್ರಕಟವಾಗಿದೆ.

ಧರ್ಮನಾಥ ಪುರಾಣದ ರಚನೆಯ ಕಾಲ :

ಶಾ॥ ವಿ॥ ಸ್ವಸ್ತಿಶ್ರೀ ಶಕವತ್ಸರಂ ಸಲೆ ಚತುಸ್ಸಪ್ತದ್ವಯ್ಯೈಕಾಂಕ ವಿ
ನ್ಯಸ್ತಂ ನಂದನ ವರ್ಷದಲ್ಲಿ ಮಧುಮಾಸ ಶ್ವೇತಪಕ್ಷಾಷ್ಟಮೀ
ವಿಸ್ತಾರೀಕೃತ ಸೋಮವಾರದೊಳಿದಂ ಸಂಪೂರ್ಣಮಂ ಮಾಡಿದಂ
ಪ್ರಸ್ತುತ್ಯಂ ಪ್ರತಿಭಾಪರಂ ಭುಜಬಲಿ ಪ್ರಖ್ಯಾತಯೋಗೀಶ್ವರಂ ॥ (೧೬-೪೩)

ಸ್ವಾಮಿ ಕಣ್ಣುಪಿಳ್ಳೆಯವರ ಪಂಚಾಂಗದಲ್ಲಿ ಮೇಲಿನ ತೇದಿ ೨೪-೩-೧೩೫೨ಕ್ಕೆ ಸರಿಹೊಂದುತ್ತದೆ. ಆದರೆ ಗ್ರಂಥೋಕ್ತ ಸೋಮವಾರದ ಬದಲು ಶನಿವಾರವಾಗುತ್ತದೆ. 'ಧರ್ಮನಾಥ ಪುರಾಣ' ರಚಿತವಾದ ೧೯ ವರ್ಷಗಳಲ್ಲಿ ಅಲ್ಲಿನ ಪದ್ಯಗಳು ಶಾಸನಸ್ಥವಾಗಿವೆ; ಎಂದರೆ ಬಾಹುಬಲಿಪಂಡಿತನ ಕಾಲದಲ್ಲಿಯೆ ಈ ಶಾಸನ ರೂಪುಗೊಂಡಿರಬಹುದಾದ ಸಾಧ್ಯತೆಯಿದೆ. ಆದುದರಿಂದ 'ಬಾಹುಬಲಿ ದೇವರು' ಎಂದು ಉತ್ಕೀರ್ಣವಾಗಿರುವ ಈ ಉಬ್ಬುಶಿಲ್ಪಕ್ಕೆ ಮಹತ್ತ್ವ ದೊರೆಯುತ್ತದೆ. ೬೪೧ ವರ್ಷಗಳ ಹಿಂದೆ 'ಧರ್ಮನಾಥ ಪುರಾಣ'ವನ್ನು ಬರೆದ ಬಾಹುಬಲಿಪಂಡಿತನ ೬೨೨ ವರ್ಷಗಳ ಹಿಂದಿನ ಉಬ್ಬುಶಿಲ್ಪ ವಿಚಿಗನಹಳ್ಳಿಯ ಶಾಸನದಲ್ಲಿ ಲಭಿಸಿರುವುದು ಕನ್ನಡ ಸಾಹಿತ್ಯ ಸಂದರ್ಭಕ್ಕೆ ಒಂದು ಮಹತ್ತ್ವದ ಸಂಗತಿಯಾಗಿದೆ.

ಚಾಮರಾಜನಗರ ತಾಲ್ಲೂಕಿನ ಮಲೆಯೂರು ಜೈನರ ತೀರ್ಥಸ್ಥಳಗಳಲ್ಲಿ ಒಂದು. ಇದು ಪೂಜ್ಯಪಾದ ಮತ್ತು ನಾಗಾರ್ಜುನರ ಜೀವಿತದ ವಿವರಗಳೊಂದಿಗೆ ಎಡೆ ಪಡೆದಿರುವ ಸ್ಥಳ. ಮಲೆಯೂರು ದೇವಚಂದ್ರನ 'ಪೂಜ್ಯಪಾದ ಚರಿತೆ' ಮತ್ತು 'ರಾಜಾವಳೀ ಕಥಾಸಾರ'ಗಳಲ್ಲಿ ಈ ಸ್ಥಳದ ಅತಿಶಯದ ಬಗ್ಗೆ ಹೆಚ್ಚಿನ ವಿವರಗಳಿವೆ.

ಮಲೆಯೂರು ಬೆಟ್ಟದ ಪಾರ್ಶ್ವನಾಥ ಬಸದಿಯ ಪ್ರಾಕಾರದಲ್ಲಿ ದಕ್ಷಿಣದ ಕಡೆ ನಿಲ್ಲಿಸಿರುವ ಕಲ್ಲಿನಲ್ಲಿ 'ಧರ್ಮನಾಥ ಪುರಾಣ' ಕರ್ತೃ ಬಾಹುಬಲಿಪಂಡಿತದೇವನ ಶಿಲ್ಪದೊಂದಿಗೆ ಅವನನ್ನು ಕುರಿತ ಒಂದು ಪದ್ಯ ದೊರೆತಿದ್ದು ಶಾಸನಪಾಠ ಹೀಗಿದೆ[೨].

೧. ಬಾಹುಬಲಿಪಂಡಿತದೇವರು
೨. ನಯಕೀರ್ತಿ ಬ್ರತಿನಂದನಂ ಸಕಳವಿ
೩. ದ್ಯಾಚಕ್ರವರ್ತ್ಯಾಹ್ವಯಂ ದ್ವಯ
೪. ಭಾಷಾ ಕವಿತಾತ್ರಿಣೇತ್ರ
೫. ನುರು ಹೋರಾಶಾಸ್ತ್ರ
೬. ಸರ್ವಜ್ಞಕಂ ನಯಯೋ
೭. ಕ್ತಂ ವರ ಮೂಲ ಸಂಘದೊ
೮. ಡಯಂ ದೇಸಿಗಣಾಗ್ರೇಸರ
೯. ಂಪ್ರಿಯದಂ ಪೊಸ್ತಗಗಚ್ಛ
೧೦. ಪೂರ್ನ್ನ ತಿಳಕಂ ಶ್ರೀಕೊಂ
೧೧. ಡಕುಂದಾನ್ವಯಂ

---

೨. ಎ. ಕ., IV, ಚಾಮರಾ, ೧೫೭ (ಬಿ. ಎಲ್. ರೈಸ್) ; ಎ.ಕ., IV ಚಾಮರಾ, ೩೬೯ (ಕಅಸಂ)

ಈ ಶಾಸನಪಾಠ 'ಧರ್ಮನಾಥ ಪುರಾಣ'ದಲ್ಲಿ ಹೀಗಿದೆ:

ಮ॥ ಪಿ॥ ನಯಕೀರ್ತಿವ್ರತಿನಂದನಂ ಸಕಳಪಿದ್ಯಾಚಕ್ರವರ್ತ್ಯಾಹ್ವಯಂ
ದ್ವಯಭಾಷಾಕಪಿತಾತ್ರಿಣೇತ್ರಸುರುಹೋರಾಶಾಸ್ತ್ರಸರ್ವಜ್ಞಕಂ
ನಯಯುಕ್ತಂ ವರಮೂಲಸಂಘದೊಡೆಯಂ ದೇಶೀಗಣಾಗ್ರೇಸರಂ
ಪ್ರಿಯದಂ ಪುಸ್ತಕಗಚ್ಛ ಪೂರ್ಣತಿಳಕಂ ಶ್ರೀಕೊಂಡಕುಂದಾನ್ವಯಂ ॥ (೧-೪೫)

ಶಾಸನ ಪಾಠಕ್ಕೂ ಕಾವ್ಯ ಪಾಠಕ್ಕೂ ಹೆಚ್ಚು ವ್ಯತ್ಯಾಸಗಳಿಲ್ಲದಿರುವುದು ಗಮನಾರ್ಹ. ಪಿಚಿಗನಹಳ್ಳಿ ಮತ್ತು ಮಲೆಯೂರು ಶಾಸನಗಳಲ್ಲಿ ದೊರೆತಿರುವ ಸಾಕ್ಷ್ಯಾಧಾರಗಳಿಂದ ಸಮಕಾಲೀನ ಪ್ರಪಂಚದಲ್ಲಿ ಬಾಹುಬಲಿಪಂಡಿತನ ಸ್ಥಾನ ಬಹಳ ಮಹತ್ವದ್ದಾಗಿದ್ದಿತು ಎನ್ನುವುದು ವ್ಯಕ್ತವಾಗುತ್ತದೆ.

*ಅಭಿಜ್ಞಾನ, ೧೯೯೫, ಪು. ೪೩೯-೪೫*

# ೪೯. ಜೈನ ಹಸ್ತಪ್ರತಿಕಾರರು

● ವೈ. ಸಿ. ಭಾನುಮತಿ

ಕೈಬರಹದ ಪ್ರತಿಗಳನ್ನು ಹಸ್ತಪ್ರತಿಗಳೆಂದು, ಪ್ರತಿಯನ್ನು ಸಿದ್ಧಪಡಿಸುವವರನ್ನು ಹಸ್ತಪ್ರತಿಕಾರರೆಂದು ಕರೆಯುವುದು ರೂಢಿ. ಮುದ್ರಣಪೂರ್ವದ ಸಾಹಿತ್ಯ ಸಂದರ್ಭದಲ್ಲಿ ಹಸ್ತಪ್ರತಿಗಳಿಗೆ ಮತ್ತು ಹಸ್ತಪ್ರತಿಕಾರರಿಗೆ ಮಹತ್ವದ ಸ್ಥಾನವಿದ್ದಿತು. ಪ್ರಾಚೀನ ಸಾಹಿತ್ಯದ ಅಮೂಲ್ಯ ಗ್ರಂಥರಾಶಿ ಉಳಿದುಬಂದಿರುವುದೆ ಹಸ್ತಪ್ರತಿಕಾರರಿಂದ. ಕವಿ ಕಾವ್ಯವನ್ನು ಸೃಷ್ಟಿಸಿದರೆ ಲಿಪಿಕಾರರು ಆ ಕಾವ್ಯವನ್ನು ಪ್ರತಿಮಾಡಿ ಪೋಷಿಸಿದರು. ಆ ಕಾರಣವಾಗಿಯೆ ಪ್ರತಿಗಳ ಪ್ರತಿಗಳನ್ನು ಪುತ್ರಿಕೆಗಳೆಂದು ಕರೆದಿರುವುದು. ಎಚ್. ದೇವೀರಪ್ಪ ಅವರ ಮಾತಿನಲ್ಲಿ ಹೇಳುವುದಾದರೆ ''ಅನೇಕ ಪ್ರತಿಗಳನ್ನು ಬರೆಯುವುದರ ಮೂಲಕ ಈ ಪ್ರತಿಕಾರರು ಪ್ರಾಚೀನ ಸಾಹಿತ್ಯದ ಒಂದು ಬೃಹದ್ರತ್ನಾಕರವನ್ನೇ ರಚಿಸಿದ್ದಾರೆ. ಇದಕ್ಕಾಗಿ ಪ್ರತಿಯೊಬ್ಬ ಸಾಹಿತ್ಯಾಭಿಮಾನಿಯೂ ಈ ಲಿಪಿಕಾರರನ್ನು ಅಭಿನಂದಿಸಬೇಕು.''[೧] ಹೀಗೆ ಒಂದು ಪ್ರತಿಯಿಂದ ಮತ್ತೊಂದು ಪ್ರತಿ ಹುಟ್ಟಿಕೊಳ್ಳುತ್ತ ಕಾಲದೇಶಗಳನ್ನು ದಾಟಿ ಒಂದು ಕೃತಿ ಜೀವಂತವಾಗಿ ಉಳಿದು ಬರಲು ಸಾಧ್ಯವಾದದ್ದು ಹಸ್ತಪ್ರತಿಕಾರರಿಂದ ಎಂಬುದು ನಿಸ್ಸಂಶಯ.

ಪ್ರಾಚೀನ ಭಾರತೀಯ ಸಾಹಿತ್ಯವೆಲ್ಲ ಧಾರ್ಮಿಕ ಸಾಹಿತ್ಯವೆಂಬುದು ಸರ್ವವಿದಿತ. ಧರ್ಮ ಮತ್ತು ಸಾಹಿತ್ಯಕ್ಕೆ ಗಾಢವಾದ ಸಂಬಂಧವಿದ್ದಂಥ ಕಾಲದಲ್ಲಿ ಹಸ್ತಪ್ರತಿಕಾರರು ತಾವು ನಂಬಿದ ನೆಚ್ಚಿದ ಅನುಸರಿಸಿದ ಧರ್ಮಕ್ಕೆ ಸಂಬಂಧಪಟ್ಟ ಕೃತಿಗಳನ್ನು ಮಾತ್ರ ಪ್ರತಿ ಮಾಡುತ್ತಿದ್ದ ಸಂಗತಿ ಸಾಮಾನ್ಯವೂ ಸಹಜವೂ ಆಗಿತ್ತು. ವೀರಶೈವ ಹಸ್ತಪ್ರತಿಕಾರರು ವೀರಶೈವ ಕೃತಿಗಳನ್ನು, ವೈದಿಕ ಹಸ್ತಪ್ರತಿಕಾರರು ವೈದಿಕ ಕೃತಿಗಳನ್ನು ಪ್ರತಿಮಾಡಿದಂತೆ ಜೈನ ಹಸ್ತಪ್ರತಿಕಾರರು ಜೈನಧರ್ಮದ ಕೃತಿಗಳನ್ನು ಪ್ರತಿಮಾಡಿದರು. ಈ ಮಾತಿಗೆ ಅಪವಾದಗಳೂ ಇಲ್ಲದಿಲ್ಲ. ಪ್ರಸ್ತುತ ಜೈನ ಹಸ್ತಪ್ರತಿಕಾರರ ಪ್ರತಿ ಮಾಡಿದ ಹಸ್ತಪ್ರತಿಗಳು ಮತ್ತು ಅವುಗಳನ್ನು ನಕಲು ಮಾಡುವ ಸಂದರ್ಭದ ಹಿಂದಿದ್ದ ಮನೋಧರ್ಮ ಮತ್ತು ಆಶಯಗಳನ್ನು ಕುರಿತು ವಿವೇಚಿಸಿದೆ[೨].

ಪ್ರತಿಯೊಬ್ಬ ಲಿಪಿಕಾರನೂ ತಾನು ಕೈಗೆತ್ತಿಕೊಂಡ ಗ್ರಂಥವನ್ನು ಪ್ರತಿಮಾಡುವ ಮೊದಲು ಇಷ್ಟದೈವ ಆರಾಧ್ಯದೈವ ಮತ್ತು ಗುರುಗಳನ್ನು ಸ್ತುತಿಸುವುದು ವಾಡಿಕೆ. ''ಶ್ರೀಮತ್ಪಂಚಪರಮೇಷ್ಠಿಭ್ಯೋ ನಮಃ'' ''ಶ್ರೀಮತ್ಪಂಚಗುರುಭ್ಯೋ ನಮಃ'' ''ಶ್ರೀ ವೀತರಾಗಾಯ ನಮಃ'' ಇವುಗಳಲ್ಲಿ ಯಾವೊಂದು ಸ್ತುತಿ ಇದ್ದರೂ ಅದೊಂದು ಜೈನಗ್ರಂಥವೆಂಬುದು ಖಚಿತ. ಕೆ. ಎ. ೨೧೦ ಸಂಖ್ಯೆಯ ಹಸ್ತಪ್ರತಿಯಲ್ಲಿ ''ಶ್ರೀಮತ್ಕನಕಾಚಲದ ಗುಂಡಿನ ಬ್ರಹ್ಮದೇವಾಯ ನಮಃ'' ಎಂದಿದೆ. ಇದು ಮಲೆಯೂರಿನ ಕನಕಗಿರಿಯ ಗುಂಡಿನ ಬ್ರಹ್ಮದೇವರನ್ನು ಕುರಿತದ್ದಾಗಿದೆ. ಕೆ.೮ ಸಂಖ್ಯೆಯ ಪ್ರತಿಯಲ್ಲಿ ''ಶ್ರೀ ವಾಸುಪೂಜ್ಯಾಯ ನಮಃ'' ''ಶ್ರೀಮದ್ವಿಜಯಕೀರ್ತಿ ಮುನಯೇ ನಮಃ'' ಎಂಬ ಸ್ತುತಿಗಳು ಕಂಡುಬರುತ್ತವೆ. ಇವು ಜಿನಮುನಿಗಳಿಗೆ ಸಂಬಂಧಿಸಿದುದಾಗಿವೆ. ವೈದ್ಯ ಸಂಗ್ರಹದ ಕೆ ೧೭೨೭

---

೧ ಹಸ್ತಪ್ರತಿಗಳ ವರ್ಣನಾತ್ಮಕ ಸೂಚೀ: ಪ್ರಥಮ ಸಂಪುಟ, ಪು. ೭

೨ ಈ ಲೇಖನದಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ಹಸ್ತಪ್ರತಿ ಭಂಡಾರದ ಪ್ರತಿಗಳನ್ನು ಮಾತ್ರ ಬಳಸಿಕೊಂಡಿದೆ.

ಸಂಖ್ಯೆಯ ಪ್ರತಿಯಲ್ಲಿ ''ಅರಿಕುಠಾರದ ಪದ್ಮಾವತಮ್ಮನವರ ಚರಣಾರವಿಂದವೇ ಶರಣು ನಾಸಿಕಪುರದ ತ್ರಿಪುರಾಂಬಾಯ ನಮಃ'' ಎಂಬ ಪ್ರಾರ್ಥನೆಯಿದ್ದು ಚಾಮರಾಜನಗರ ಮತ್ತು ಮೂಗೂರುಗಳ ಪೂರ್ವದ ಸ್ಥಳನಾಮಗಳು ಹಾಗೂ ಅಲ್ಲಿನ ದೇವತೆಗಳ ಬಗ್ಗೆ ಬೆಳಕುಚೆಲ್ಲುವುದಲ್ಲದೆ ಇವು ಪ್ರತಿಕಾರನ ಆರಾಧ್ಯದೇವತೆಗಳೆಂಬುದನ್ನೂ ಅರುಹುತ್ತವೆ.

ಪುಷ್ಪದಂತ ಪುರಾಣದ ಕೆ ಎ ೧೪೯೧ ಸಂಖ್ಯೆಯ ಕಾಗದದ ಪ್ರತಿಯಲ್ಲಿ ''ಸರ್ವಸಿದ್ಧಿ ಪ್ರದಾಯಕ ವಿನಾಯಕಾಯ ನಮಃ ಶ್ರೀ ಶಾರದಾಂಬಾಯ ನಮಃ ಶುಭಮಸ್ತು'' ಎಂದು ವೈದಿಕ ದೇವತೆಗಳ ಸ್ತುತಿಗಳಿದ್ದು ಹಸ್ತಪ್ರತಿಕಾರನ ವಿಶಾಲ ಮನೋಭಾವಕ್ಕೆ ಸಾಕ್ಷಿಯಾಗಿವೆ.

ಈಗ ದೊರೆತಿರುವ ಸಹಸ್ರಾರು ಪ್ರಾಚೀನ ಗ್ರಂಥಗಳಲ್ಲಿ ಕವಿಯ ಸ್ವಹಸ್ತಾಕ್ಷರ ಪ್ರತಿಗಳು ಲಭ್ಯವಾಗಿರುವುದು ಕೇವಲ ಬೆರಳೆಣಿಕೆಯಷ್ಟು. ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ಭಂಡಾರದಲ್ಲಿರುವ ಭುಜಬಲಿಚರಿತೆಯ ಕೆ ೧೪೮೩ ಸಂಖ್ಯೆಯ ಪ್ರತಿಯಲ್ಲಿ ಹೀಗೆ ಬರೆಯಲಾಗಿದೆ: ''ಶ್ರೀ ಆನಂದ ಸಂವತ್ಸರದ ಮಾರ್ಗಸಿರ ಶು ೫ಮಿಯು ಬುಧವಾರ ಬೆಳುಗುಳದ ಸ್ಥಾನಿಕ ಚೆನ್ನಪ್ಪೈಯನ ಮಗ ಪಂಚಬಾಣನು ಕವಿತ್ವವ ಹೇಳಿ ತನ್ನ ಸ್ವಹಸ್ತದಲ್ಲಿ ಬರೆದ ಪುಸ್ತಕಕ್ಕೆ ಮಂಗಳ''. ಈ ವಿವರಗಳಿಂದ ಕವಿ ಪಂಚಬಾಣನು ಶ್ರವಣಬೆಳಗೊಳದ ಸ್ಥಾನಿಕ ಚೆನ್ನಪ್ಪಯ್ಯನ ಪುತ್ರನೆಂದೂ ಆತನೇ ಕಾವ್ಯವನ್ನು ರಚಿಸಿ ಖುದ್ದಾಗಿ ಬರೆದನೆಂದೂ ಇದೊಂದು ಸ್ವಹಸ್ತಾಕ್ಷರ ಪ್ರತಿಯೆಂದೂ ದೃಢವಾಗುತ್ತದೆ. ಇದೇ ರೀತಿ ಕವಿಯ ಕೈಬರಹದ ಪ್ರತಿಗಳನ್ನು ಮತ್ತೊಮ್ಮೆ ನೋಡಬೇಕಾದರೆ ಚಂದ್ರಸಾಗರವರ್ಣಿಯ ಕೃತಿಗಳಿಗೆ ಮೊರೆಹೋಗಬೇಕು.

ಚಂದ್ರಸಾಗರವರ್ಣಿ ಸ್ವತಃ ಕವಿಯಾಗಿದ್ದುದಲ್ಲದೆ ಕೆಲವು ಪ್ರತಿಗಳನ್ನೂ ಸಿದ್ಧಪಡಿಸಿದ್ದನು. ವಾಸುದೇವ ಪಾರಿಜಾತ ಎಂಬ ಯಕ್ಷಗಾನ ಕಾವ್ಯದ ಎರಡು ಪ್ರತಿಗಳು ಅಧ್ಯಯನ ಸಂಸ್ಥೆಯ ಭಂಡಾರದಲ್ಲಿವೆ. ಕೆ. ೫೮/೧ ಸಂಖ್ಯೆಯ ಹಸ್ತಪ್ರತಿಯ ಅಂತ್ಯದ ''ಶ್ರೀ ॥ ಸಂ॥ ನಿಜಶ್ರಾವಣ ಶು. ೧೦ವರೆಗೆ ಚಂದ್ರಸಾಗರವರ್ಣಿ ನರಸಿಂಹಪುರದ ಕುಮ್ಮಜ್ಜಗೆ ಬರಕೊಟ್ಟ ವಾಸುದೇವ ಪಾರಿಜಾತಂ'' ಹಾಗೂ ಕೆ. ೪೩/೨ ಪ್ರತಿಯ ''ಶ್ರೀ ಚಂದ್ರಸಾಗರವರ್ಣಿ ವಿರಚಿತಮಪ್ಪ ವಾಸುದೇವ ಪಾರಿಜಾತದೊಳು ರೋಹಿಣಿ ಸ್ವಯಂವರ ಸಂಪೂರ್ಣ ಮಂಗಳ ಮಹಾ ಸರ್ವಜಿತು ಸಂವತ್ಸರದ ಮಾಘ ೮ ಲ್ಲು ಚಂದ್ರಸಾಗರವರ್ಣಿಯು ನಮ್ಮ ಪುಟ್ಟತಿಮ್ಮಪ್ಪಗೆ ಬರಕೊಟ್ಟ ಚಂದನೆಯ ಕಥೆ ವಸುದೇವ ಪಾರಿಜಾತ ಮಂಗಳ ಮಹಾಶ್ರೀ'' ಎಂಬ ಬರಹಗಳು ಇವೆರಡೂ ಪ್ರತಿಯ ಕೃತಿಕಾರ ಮತ್ತು ಲಿಪಿಕಾರ ಚಂದ್ರಸಾಗರವರ್ಣಿ ಎಂಬುದನ್ನು ಸ್ಪಷ್ಟಪಡಿಸುತ್ತವೆ. ಅಂತೆಯೆ ಜಿನಭಕ್ತಿಸಾರವನ್ನು ರಚಿಸಿರುವ ಚಂದ್ರಸಾಗರವರ್ಣಿ ಇತರರಿಗೂ ಪ್ರತಿಮಾಡಿ ಕೊಟ್ಟಿದ್ದಾನೆ. ಕೆ. ೧೬೩೧/೩ ಸಂಖ್ಯೆಯ ಜಿನಭಕ್ತಿಸಾರದ ಪ್ರತಿಯಲ್ಲಿ ''ಚಂದ್ರಸಾಗರವರ್ಣಿ ಬಸ್ತಿ ಪಾಯಣ್ಣಗೆ ಬರಕೊಟ್ಟ ಭಕ್ತಿಸಾರ ಸಂಪೂರ್ಣ ಮಂಗಳ ಮಹಾಶ್ರೀ'' ಎಂದು ಬಸ್ತಿ ಪಾಯಣ್ಣನಿಗೂ ಕೆ. ೧೮೦೩/೨ ಸಂಖ್ಯೆಯ ಪ್ರತಿಯಲ್ಲಿ ''ಧಾತುಸಂವತ್ಸರದ ಮಾಗ ಶು. ೬ ವರಿಗೆ ಚಂದ್ರಸಾಗರವರ್ಣಿ ರತ್ನಗಿರಿ ಚಿಕ್ಕಣ್ಣನ ಮಗ ಪಾಯಣ್ಣಗೆ ಬರಕೊಟ್ಟ ಭಕ್ತಿಸಾರ ಸಂಪೂರ್ಣ'' ಎಂದು ರತ್ನಗಿರಿ ಚಿಕ್ಕಣ್ಣನಿಗೂ ನಕಲು ಮಾಡಿಕೊಟ್ಟ ಸಂಗತಿಯನ್ನು ತಿಳಿಸಿದ್ದಾನೆ.

ಲಿಪಿಕಾರರಲ್ಲಿ ಹವ್ಯಾಸಿ ಲಿಪಿಕಾರರು, ವೃತ್ತಿನಿರತ ಲಿಪಿಕಾರರು ಎಂಬ ಪ್ರಭೇದಗಳನ್ನು ಗ್ರಂಥಸಂಪಾದನಶಾಸ್ತ್ರಕಾರರು ಗುರುತಿಸುತ್ತಾರೆ. ಲಿಪಿಕಾರರು ತಾವು ಪ್ರತಿಮಾಡಿದುದಕ್ಕೆ

ಕಾರಣವನ್ನು, ಪ್ರತಿಮಾಡಿದ ಕಾಲ ಮತ್ತು ಸ್ಥಳಗಳನ್ನು ಕುರಿತು ಹೇಳಿಕೊಳ್ಳುವುದುಂಟು. ಕೆ. ೬೦೨/೧ ಸಂಖ್ಯೆಯ ಅಬ್ಧಿಕಲ್ಪ ಎಂಬ ಕೃತಿಯ ಕಡೆಯಲ್ಲಿ ''ಶ್ರೀ ಶಾಲಿವಾಹನ ಶಕ ೧೬೩೭ನೆಯ ರಾಕ್ಷಸ ಸಂವತ್ಸರದ ಕಾರ್ತಿಕ ಬ ೧೦ ಬುಧವಾರ ಸೂರ್ಯನು ಪೂರ್ವ ಪ್ರತಿಷ್ಠೆಯಾದ ಧನುರ್ಲಗ್ನದಲ್ಲು ಉಮ್ಮತ್ತೂರು ಹಳೆಬಸದಿಯ ಕಳಿಲೆ ಸೂರಿಪಂಡಿತನ ಮಗನು ಪಂಡಿತನು ತನಗೆ ಬೇಕಾಗಿ ಬರೆದ ಅಬ್ಧಿಕಲ್ಪಕ್ಕೆ ಮಂಗಳ ಮಹಾಶ್ರೀ ಹರದನಹಳ್ಳಿಯಲ್ಲಿ ಬರದು ಸಂಪೂರ್ಣವಾಯಿತು'' ಎಂದಿದೆ. ಈ ವಿವರದಿಂದ ಉಮ್ಮತ್ತೂರಿನ ಹಳೆಬಸದಿಯ ಕಳಿಲೆ ಸೂರಿಪಂಡಿತರ ಮಗ ಪಂಡಿತನು ತನ್ನ ಅಧ್ಯಯನಕ್ಕಾಗಿ ಈ ಗ್ರಂಥವನ್ನು ಕ್ರಿ.ಶ. ೧೭೩೫ರಲ್ಲಿ ಹರದನಹಳ್ಳಿಯಲ್ಲಿ ಪ್ರತಿಮಾಡಿರುವ ಸಂಗತಿ ತಿಳಿದುಬರುತ್ತದೆ. ಹೀಗೆ ಅಕ್ಷರಸ್ಥರೂ ಸಾಹಿತ್ಯಾಸಕ್ತರೂ ಆದ ವ್ಯಕ್ತಿಗಳು ತಮ್ಮ ಜ್ಞಾನದಾಹವನ್ನು ಪೂರೈಸಿಕೊಳ್ಳಲು ತಮ್ಮ ಅಭಿರುಚಿಗೆ ಅನುಗುಣವಾದ ಕೃತಿಗಳನ್ನು ಬರೆದುಕೊಳ್ಳುತ್ತಿದ್ದರು.

ಇನ್ನೂ ಕೆಲವು ಕಾವ್ಯಗಳನ್ನು ಸ್ವಂತಕ್ಕಾಗಿ, ಗ್ರಂಥದ ಮೇಲಿನ ಪ್ರೀತಿಯಿಂದ ಬರೆದುಕೊಂಡ ನಿದರ್ಶನಗಳಿವೆ. ಜಿನದತ್ತರಾಯಚರಿತೆಯ ಕೆ ೫೭೭ ಕ್ರಮಸಂಖ್ಯೆಯ ಹಸ್ತಪ್ರತಿಯನ್ನು ''ರುಧಿರೋದ್ಗಾರಿ ಸಂವತ್ಸರದ ಶ್ರಾವಣಶುದ್ಧ ೫ಲ್ಲು ಹಾಸನದ ಹೊಸ್ನಪ್ಪಶೆಟ್ಟರ ಪ್ರಪೌತ್ರ ಪಾಯಪ್ಪಶೆಟ್ಟರ ಪೌತ್ರ ಅಪ್ಪುಶೆಟ್ಟರ ಪುತ್ರ ಪಾಯಪ್ಪನು ತನ್ನ ಮನೋಪ್ರೀತಿಯಿಂದ ಶ್ರೀಪದ್ಮಾವತಿ ಚರಿತೆ ಬರೆದು ಸಂಪೂರ್ಣ ಮಂಗಳ ಮಹಾಶ್ರೀ'' ಎಂದು ಪ್ರತಿಮಾಡಿದ ಸಂಗತಿ ವ್ಯಕ್ತವಾಗಿದೆ.

ಲಿಪಿಕಾರರು ಧರ್ಮದ ಕಾರಣವಾಗಿ ಪುಣ್ಯಪ್ರಾಪ್ತಿಗಾಗಿ ಪ್ರಾಚೀನ ಕಾವ್ಯಗಳನ್ನು ಪ್ರತಿಮಾಡುತ್ತಿದ್ದುದಕ್ಕೆ ಅನೇಕ ದೃಷ್ಟಾಂತಗಳು ಸಿಕ್ಕುತ್ತವೆ. ಆದಿಪರಮೇಶ್ವರ ಪುರಾಣದ ಕೆ ೫೭೩ ಸಂಖ್ಯೆಯ ಪ್ರತಿಯಲ್ಲಿ ''ಚಿಕ್ಕಬಸ್ತಿ ಉಪಾದ್ಯ ಪುಟ್ಟಣ್ಣನವರಿಗೆ ಅಜ್ಯಪ್ಪನವರ ಮಗ ಪುಟ್ಟಯ್ಯನು ಧರ್ಮಾರ್ಥಕಾರಣವಾಗಿ ಬರದುಕೊಟ್ಟ ಯಕ್ಷಗಾನ ಪುಣ್ಯಾರ್ಥವಾಗಿ ಬರಕೊಟ್ಟದ್ದು ಆಯುರಾರೋಗ್ಯ ಐಶ್ವರ್ಯ ಇಹಪರ ವೃದ್ಧಿರಸ್ತು ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕವರ್ಷ ೧೭೬೯ನೇ ವರ್ತಮಾನಕ್ಕೆ ಸಲುವ ಪ್ಲವಂಗ ಸಂವತ್ಸರದ ಮಾರ್ಗಶಿರ ಸು. ೫ವರಿಗೆ ಸಂಪೂರ್ಣ ಮಂಗಲ ಮಹಾಶ್ರೀ'' ಎಂದು ಧಾರ್ಮಿಕ ಆಶಯವನ್ನಿಟ್ಟುಕೊಂಡು ಬರೆದಿರುವುದು ಕಂಡುಬರುತ್ತದೆ.

ಹಸ್ತಪ್ರತಿಕಾರರು ನೀಡುವ ಸೂಚನೆಗಳು ಕೆಲವೊಮ್ಮೆ ಕವಿಕಾಲ ಹಾಗೂ ಸ್ಥಳವನ್ನು ನಿರ್ಧರಿಸಲು ನೆರವಿಗೆ ಬರುತ್ತವೆ. ಪದ್ಮಾವತಿ ಚರಿತೆಯ ಕೆ. ಎ. ೧೪೪ ಸಂಖ್ಯೆಯ ಪ್ರತಿಯ ಅಂತ್ಯದಲ್ಲಿ ಬರುವ ''ತುಳುದೇಶದ ಮೂಲಿಕೆ ಜೈನ ಪದ್ಮನಾಭ ವಿರಚಿತ'' ಎಂಬ ಮಾತಿನಿಂದ ಕವಿ ಪದ್ಮನಾಭನ ಸ್ಥಳ ದಕ್ಷಿಣ ಕನ್ನಡ ಜಿಲ್ಲೆಯ ಮುಲ್ಕಿ ಎಂಬುದು ವಿದಿತವಾಗುತ್ತದೆ. ರತ್ನಕರಂಡಕದ ಕೆ. ಎ. ೨೦೯ನೆಯ ಹಸ್ತಪ್ರತಿಯು ಈ ಕೃತಿಯ ಏಕೈಕ ಹಸ್ತಪ್ರತಿಯಾಗಿದ್ದು ಪ್ರತಿ ಮಾಡಿದ ಕಾಲ ''ಶಾಲಿವಾಹನ ಶಕಾಬ್ದಾ ೧೭೯೭ ಯುವಸಂವತ್ಸರ ಭಾದ್ರಪದ ಕೃಷ್ಣ ದಶಮೀ ಭಾರ್ಗವವಾಸರೆ ರತ್ನಕರಂಡಮಿದಂ ಗ್ರಂಥಂ ಪರಿಸಮಾಪ್ತೋಭೂತ್'' ಎಂದು ನಮೂದಿತವಾಗಿದೆ. ಈ ಆಧಾರದಿಂದ ಕವಿಕೃತಿಯ ಕಾಲವನ್ನು ಊಹಿಸಲು ಸಾಧ್ಯವಾಗಿದೆ.

ಹಸ್ತಪ್ರತಿಗಳನ್ನು ಪ್ರತಿಮಾಡಲು ದೇವಾಲಯ, ಚೈತ್ಯಾಲಯ ಮತ್ತು ಮಠಗಳು ಬಹುಮುಖ್ಯ ಕೇಂದ್ರವಾಗಿದ್ದವು. ಪ್ರಾಚೀನ ಗ್ರಂಥಗಳ ಮೇಲಿನ ಅತುಳವಾದ

ಭಕ್ತಿಯಿಂದಾಗಿ ಪ್ರತಿಕಾರರು ಪ್ರತಿಮಾಡುವುದನ್ನು ಪವಿತ್ರ ಕಾರ್ಯವೆಂದು ತಿಳಿದಿದ್ದರು. ಆದುದರಿಂದ ಪವಿತ್ರ ಸ್ಥಳದಲ್ಲಿ, ದೈವ ಸನ್ನಿಧಿಯಲ್ಲಿ ಕುಳಿತು ಬರೆಯುತ್ತಿದ್ದರು. ರಾಜಾದಿತ್ಯನ ವ್ಯವಹಾರಗಣಿತದ ಕೆ. ಎ ೧೪ ಸಂಖ್ಯೆಯ ಪ್ರತಿಯ ಅಂತ್ಯದ ಪುಷ್ಪಿಕೆಯಲ್ಲಿ ''ಪ್ರಮಾಥಿ ಸಂವತ್ಸರದ ಆಶ್ವೀಜಶುದ್ಧ ಗುರುವಾರ ಸೂರ್ಯೋದಯವಾದ ಘಳಿಗೆ ೧೦ ಮಲೆಯೂರ ಆದೀಶ್ವರನ ಪಾದಸನ್ನಿಧಿಯಲ್ಲಿ ಆದಪ್ಪಯ್ಯನು ಹರವೆ ವಿಜಯಣಯ್ಯಗೆ ಬರೆದ ಪುಸ್ತಕಕ್ಕೆ ಮಂಗಳ ಮಹಾಶ್ರೀ'' ಎಂದಿದ್ದು ಮಲೆಯೂರಿನ ಆದೀಶ್ವರ ಬಸದಿಯಲ್ಲಿ ಪ್ರತಿಯಾಗಿರುವುದನ್ನು ತಿಳಿಯಬಹುದು. ಯೋಗೀಂದ್ರದೇವ ವಿರಚಿತ ಪರಮಾತ್ಮ ಪ್ರಕಾಶ ಎಂಬ ಕೃತಿಯ ಕೆ. ೧೫೮೮/೧ ಸಂಖ್ಯೆಯ ಪ್ರತಿಯು ಕ್ರಿ.ಶ. ೧೮೨೮ರಲ್ಲಿ ಆದಿಪರಮೇಶ್ವರ ಚೈತ್ಯಾಲಯದಲ್ಲಿ ಪ್ರತಿಯಾಗಿದೆ:''ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕವರ್ಷಂಗಳು ೧೭೫೦ನೇ ಸರ್ವಧಾರಿ ಸಂವತ್ಸರದ ಪುಷ್ಯಶುದ್ಧ ೧೪ ಭಾನುವಾರ ದಿವಸ ಯಂತ್ರಪುರದ ಆದಿಪರಮೇಶ್ವರರ ಚೈತ್ಯಾಲಯದಲ್ಲಿ ತತ್ಪಾದಾರ್ಚಕ ಬ್ರಹ್ಮಸೂರಿ ಸಿದ್ಧಾಂತಿಯ ಜ್ಯೇಷ್ಠಕುಮಾರನು ಚಂದ್ರೋಪಾಧ್ಯ ಸಿದ್ಧಾಂತಿಯಂ ಪರಮಾತ್ಮ ಪ್ರಕಾಶಯೆಂಬ ಗ್ರಂಥವಾಖ್ಯಾನ ಸಹಾ ಸಂಪೂರ್ಣವಾಗಿ ಬರೆದುದಕ್ಕೆ ಭದ್ರಂ ಶುಭನ್ಮಂಗಲಂ ಈ ಗ್ರಂಥಭವ್ಯರಿಗೆ ಅಮೃತವಾಗಿ ತೋರುವದು ಅಭವ್ಯರಿಗೆ ಕಾಳಕೂಟ ವಿಷವಾಗಿ ಕಾಣ್ಬುದು ಈ ಗ್ರಂಥ ಪರಮಾಗಮ ನಂಬಿ ಧ್ಯಾನಿಸಿದ ಭವ್ಯರಿಗೆ ಮುಕ್ತಿ ತಪ್ಪದೆವಹುದು ಯಿದಂತು ಹುಶಿಯಲ್ಲಾ ಭವ್ವರು ನಂಬುವದು ಶ್ರೀ.'' ವಿಜಯಕುಮಾರಿ ಚರಿತ್ರೆಯ ಕ ೮೮೪ ಸಂಖ್ಯೆಯ ಪ್ರತಿ ಕೂಡ ಕ್ರಿ.ಶ. ೧೬೫೧ರಲ್ಲಿ ಮಲೆಯೂರಿನ ಆದೀಶ್ವರ ಬಸದಿಯಲ್ಲಿ ಬರೆಯಲಾಗಿದೆ– ''ಸ್ವಸ್ತಿಶ್ರೀಶಕವರುಷ ೧೫೭೩ ಸಂ ದ ಖರ ಸಂವತ್ಸರ ಫಾಲ್ಗುನ ಶು ೫ ಮೀಯೂ ಬುಧವಾರ ಸೂರ್ಯೋದಯವಾದ ಮಲೆಯೂರ ಆದಿಪರಮೇಶ್ವರರ ಪಾದಸನ್ನಿಧಿಯಲ್ಲಿ ಕನಕಗಿರಿಯ ವಿಜಯನಾಥಸ್ವಾಮಿಯ ಪಾದಸೇವಕರಾದ ಮೈಸೂರ ಪದ್ಮನಾಭಯ್ಯನವರಿಗೆ ಕನಕಗಿರಿಯ ಆದಪ್ಪನು ಬರೆದಂಥಾ ವಿಜಯಕುಮಾರಿ ಚರಿತ್ರಕ್ಕೆ ಮಂಗಲ ಮಹಾಶ್ರೀ'' ಎಂಬ ವಿವರಗಳಿಂದ ಸ್ಪಷ್ಟವಾಗುತ್ತದೆ.

ಕರ್ನಾಟಕದ ಗಡಿಭಾಗದಲ್ಲಿರುವ ನೆರೆರಾಜ್ಯದ ಊರುಗಳಲ್ಲಿಯೂ ಕನ್ನಡದ ಕಂಪು ಬೀರಿರುವುದು ಹಸ್ತಪ್ರತಿಯ ಬರಹಗಳಿಂದ ಗೋಚರವಾಗುತ್ತದೆ. ಮಂಗರಸನ ಸಮ್ಯಕ್ತ್ವ ಕೌಮುದಿಯ ಕ ೧೭೯ ಹಸ್ತಪ್ರತಿಯು ಮಲೆಯಾಳದೇಶದ ಪುತ್ತಂಗಡಿಯ ಚಂದ್ರನಾಥನ ಬಸ್ತಿಯಲ್ಲಿ ಪ್ರತಿಯಾಗಿದೆ. ''ಪದುಮಣ ಸದ್ವಿರಲ್ಲ ಭುಜಬಲಿಯು ರಾಕ್ಷಸ ಸಂವತ್ಸರದ ಕಾರ್ತಿಕ ಬಹುಳ ೧೦ಲ್ಲು ಮಲೆಯಾಳದೇಶದ ಪುತ್ತಂಗಡಿ ಚಂದ್ರನಾಥನ ಬಸ್ತಿಯಲ್ಲಿ ಚಂದ್ರಪ್ರಭತೀರ್ಥಕರ ಪಾದಸನ್ನಿಧಿಯಲ್ಲಿ ಬರೆದುಕೊಟ್ಟ ಕೌಮುದಿ ಗ್ರಂಥಕ್ಕೆ ಮಂಗಲ ಮಹಾಶ್ರೀ.'' ಇದೇ ಕೃತಿಯ ಕೆ. ೧೮೦೩/೧ ಹಸ್ತಪ್ರತಿ ಕೂಡ ಹೊರನಾಡಿನಲ್ಲಿ ಪ್ರತಿಯಾಗಿರುವುದು ಆಕಸ್ಮಿಕ. ''ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕವರುಷಗಳು ೧೭೪೧ನೆಯ ಬಹುಧಾನ್ಯ ಸಂವತ್ಸರದ ಶ್ರಾವಣ ಶುದ್ಧ ೨ ಭೌಮ್ಯವಾರ ಮಘಾನಕ್ಷತ್ರ ಪೂರ್ವಾಂಣದಲ್ಲಿ ಘಳಿ ೫ರಲ್ಲಿ ರತ್ನಗಿರಿ ಬಸ್ತಿ ಮಠದ ಧಿಪತಿ ಮಹಾಶಾರದಾದೇವಿಯವರ ದಿವ್ಯಶ್ರೀ ಪದ್ಮಾರಾಧಕನಾದಂತ ಚಿಕ್ಕೈಯ್ಯಾತ್ಮಜ ಪಾಯಂಣನು ಶಾಲಾಪುರದ ಅನಂತಪದ್ಮನಾಭಸ್ವಾಮಿಯವರ ಪಾದದ ಸಂನಿಧಾನದಲ್ಲಿ ಜ್ಞಾನಾವರಣೀಯ ಕರ್ಮೋಪಶಮನ ನಿಮಿತ್ಯವಾಗಿ ಬರದಂಥಾ ಕೌಮುದಿ ಪುಸ್ತಕಕ್ಕೆ ಆಯುರಾರೋ

ಗೈಶ್ವರ್ಯಾಭಿವೃದ್ಧಿರಸ್ತು ಸಿದ್ಧಿರಸ್ತು.'' ಇಲ್ಲಿ ಉಕ್ತವಾಗಿರುವ ಶಾಲಾಪುರವು ಮಹಾರಾಷ್ಟ್ರದ ಈಗಿನ ಶೋಲಾಪುರವಾಗಿದೆ.

ಚಂದ್ರಸಾಗರವರ್ಣಿಕೃತ ಜಿನರಾಮಾಯಣದ ಕೆ. ಬಿ. ೪೨೬ ಹಸ್ತಪ್ರತಿಯನ್ನು ರಾಯಣ್ಣನು ಸ್ವಂತ ಬಳಕೆಗಾಗಿ ಬರೆದುಕೊಂಡರೂ ಪ್ರತಿಮಾಡಿದ ಸ್ಥಳ ಚಂದ್ರನಾಥ ಸ್ವಾಮಿಯ ಚೈತ್ಯಾಲಯವೆಂಬುದು ಗಮನಾರ್ಹ: ''ಶಾಲಿವಾಹನ ಶಕಾಬ್ದಾ ೧೭೬೭ನೆ ಭಾವನಾಮಸಂವತ್ಸರೆ ಶರದೃತು ಕಾಲಯುಕ್ತಾಯಾಂ ಕಾರ್ತಿಕಮಾಸೆ ಕೃಷ್ಣಪಕ್ಷೆ ಅಮಾವಾಸ್ಯಾಂ ತಿಥೌ ಭೌಮ್ಯವಾಸರ ಯುಕ್ತಾಯಾಂ ಮಧ್ಯಾಹ್ನಕಾಲೇ ಗೌತಮಗೋತ್ರೇ ಆದಿಸೂತ್ರೇ ಅಮರಪ್ರವರನಾದ ತೋವಿನಕೆರೆ ಬಸ್ತಿ ಇಂದ್ರವರ್ಗದ ನಾಗಪ್ಪನ ಕುಮಾರ ಪದ್ಮಣ್ಣ ಇವರ ಮಗ ರಾಯಣ್ಣನು ತನ್ನ ಸ್ವಂತಕ್ಕೋಸ್ಕರವಾಗಿ ಶ್ರೀ ಚಂದ್ರನಾಥಸ್ವಾಮಿ ಚೈತ್ಯಾಲಯದಲ್ಲಿ ಬರೆದು ಸಂಪೂರ್ಣ ಮಾಡಿದಂತಾ ಜಿನರಾಮಾಯಣ ಭದ್ರಂ ಶುಭಂ ಮಂಗಳಂ ಶ್ರೀ'' ಎಂಬ ವಿವರದಿಂದ ಪ್ರತಿಮಾಡಿದ ಕಾಲ ಕ್ರಿ.ಶ. ೧೮೭೫ ಎಂಬುದು ಖಚಿತ. ಆ ವೇಳೆಗಾಗಲೇ ಕನ್ನಡದಲ್ಲಿ ಕೆಲವು ಕೃತಿಗಳ ಪರಿಷ್ಕೃತ ಮುದ್ರಣಗಳು ಹೊರ ಬಂದಿದ್ದವು. ಆದರೂ ನಕಲು ಮಾಡುವ ಕಾರ್ಯ ಮುಂದುವರೆದಿತ್ತು.

ಬಾಹುಬಲಿ ವರ್ಧಮಾನ ಕವಿಯ ನಾಗಕುಮಾರಚರಿತೆಯ ಕೆ ೬೮೮ ಸಂಖ್ಯೆಯ ಪ್ರತಿಯನ್ನು ಬೆಳಗುಲಿ ಹುಚ್ಚಯ್ಯನವರ ಎರಡನೆಯ ಮಗನಾದ ಬೊಮ್ಮರಸಯ್ಯನು ಕ್ರಿ.ಶ. ೧೮೪೯ರಲ್ಲಿ 'ಶ್ವೇತಪುರದ ಶ್ರೀ ಆದೀಶ್ವರ ಸ್ವಾಮಿಯವರ ಮುಖಮಂಟಪದಲ್ಲಿ' ಎಂದರೆ ಬೆಳ್ಳೂರಿನ ಬಸ್ತಿಯಲ್ಲಿ ಬರೆದನೆಂದು ತಿಳಿದುಬರುತ್ತದೆ. ನೇಮಿಜಿನೇಶ ಸಂಗತಿಯ ಕೆ. ೧೮೪೯ ಹಸ್ತಪ್ರತಿಯು ''ಯೆನಕ್ಕಲ್ಲಾ ಶ್ರೀಮದನಂತನಾಥಸ್ವಾಮಿಯವರ ಚೈತ್ಯಾಲಯದಲ್ಲಿ'' ಪ್ರತಿಯಾಗಿದೆ. ಇಲ್ಲಿ ಉಕ್ತವಾಗಿರುವ ಸ್ಥಳ ಆನೇಕಲ್ಲು ಇರಬಹುದು. ಪದುಮಣ್ಣನೆಂಬ ಲಿಪಿಕಾರ ನಯಸೇನನ ಧರ್ಮಾಮೃತದ ಕೆ ೧೭೬೯ ಹಸ್ತ ಪ್ರತಿಯನ್ನು ''ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಖಾಬ್ಧ ೧೬೮೫ನೆಯ ಸ್ವಭಾನುಸಂವತ್ಸರ ಜೇಷ್ಠ ಶು ೫ ಗುರುವಾರ ಸಂಕಿಗಟ್ಟದ ವರ್ಧಮಾನ ಸ್ವಾಮಿಯವರ ದಿವ್ಯ ಚೈತ್ಯಾಲಯದಲ್ಲಿ ಪದುಮಣ್ಣ ಬರದಂಥ ಶ್ರೀಮದ್ಧರ್ಮಾಮೃತಪುರಾಣ ಸಂಪೂರ್ಣ ಮಂಗಳ ಮಹಾಶ್ರೀ'' ಎಂದು ಸಂಕಿಗಟ್ಟದ ವರ್ಧಮಾನಸ್ವಾಮಿ ಬಸ್ತಿಯಲ್ಲಿ ಬರೆಯಲಾಗಿದೆ. ಜಿನದತ್ತರಾಯಚರಿತ್ರೆಯ ಕೆ ೧೯ ಸಂಖ್ಯೆಯ ಪ್ರತಿಯನ್ನು ಸಂಕಿಗಟ್ಟದ ಬಸ್ತಿಯ ರಾಯಪ್ಪನ ಕುಮಾರ ಅನಂತಯ್ಯನು ನರಸಿಂಹಪುರದ ಪದ್ಮಯ್ಯನಿಗೆಂದು ಪ್ರತಿಮಾಡಿದ್ದು ಸಂಕಿಗಟ್ಟದ ವೀರವರ್ಧಮಾನಸ್ವಾಮಿಯ ಬಸದಿಯಲ್ಲಿಯೆ ಎಂಬುದು ಗಮನಾರ್ಹ.

ಗೀತವೀತರಾಗದ ಕೆ ೮೫ ಸಂಖ್ಯೆಯ ಹಸ್ತಪ್ರತಿಯು ಕ್ರಿ.ಶ. ೧೭೮೧ರಲ್ಲಿ ಹಳೇಬೀಡಿನ ವಿಜಯಪಾರಿಶ್ವನಾಥನ ಬಸದಿಯಲ್ಲಿ ಪ್ರತಿಯಾಗಿದೆ. ಬಲ್ಲಾಳಪುರದ ಬಸ್ತಿಯಲ್ಲಿ ಪ್ರತಿಯಾದ ನೋಂಪಿ ಕಥೆಗಳ ಕೆ ೨೩/೨ ಸಂಖ್ಯೆಯ ಪ್ರತಿಯ ಲಿಪಿಕಾರ ಲಕ್ಷ್ಮೀಸೇನದೇವರು ಮಠಾಧೀಶರಿರಬೇಕು.

ದೇವಚಂದ್ರಕವಿ ಚಾಮರಾಜನಗರ ತಾಲ್ಲೂಕು ಮಲೆಯೂರಿನವನು. ಈತನ ರಾಮಕಥಾವತಾರದ ಹಸ್ತಪ್ರತಿ ಕೆ ಎ ೫೫ ಇದೇ ಊರಿನಲ್ಲಿ ಸಿದ್ಧವಾಗಿದೆ. ವಿಶೇಷವೆಂದರೆ ಇದು ಚೈತ್ಯಾಲಯದಲ್ಲಿ ಪ್ರತಿಯಾಗದೆ ಮನೆಯಲ್ಲಿಯೇ ಬರೆಯಲಾಗಿದೆ. ''ಶಕವರ್ಷ ೧೮೪೯ ಪ್ರಭವ ಸಂವತ್ಸರದ ಮಾಘ ಬ ೫ ಮಂಗಳವಾರ ಘಳಿಗೆ ೨೮ನೆಯಲ್ಲಿ ಬಡಗಬಾಗಿಲ

ಮನೆ ಪಡಸಾಲೆಯಲ್ಲಿ ಶ್ರೀ ಮಲೆಯೂರಾದೀಶ್ವರಸ್ವಾಮಿ ಪಾದಸ್ಮರಣೆಯಿಂ ರಾಮಕಥಾವತಾರಮಂ ಬರೆದು ಪೂರ್ಣವಾದುದಕ್ಕೆ ಮಂಗಳ ಮಹಾಶ್ರೀ ಶ್ರೀರಾಮಕಥಾವ ತಾರ ಗ್ರಂಥಪ್ರಮಾಣ ೬೮೦೦ಕ್ಕೆ ಮಂಗಳ ಮಹಾಶ್ರೀ.''

ಜೈನರಲ್ಲಿ ಶಾಸ್ತ್ರದಾನ ಮಾಡುವ ಸಂಪ್ರದಾಯವಿದೆ. ಮುದ್ರಣ ಸೌಲಭ್ಯವಿಲ್ಲದಿದ್ದ ಆ ಕಾಲದಲ್ಲಿ ಧಾರ್ಮಿಕ ಗ್ರಂಥಗಳನ್ನು ನಕಲು ಮಾಡಿಸಿ ಸತ್ಪಾತ್ರರಿಗೆ ದಾನನೀಡುತ್ತಿದ್ದರು. ಅತ್ತಿಮಬ್ಬೆ ಪೊನ್ನನ ಶಾಂತಿಪುರಾಣದ ಸಹಸ್ರಪ್ರತಿಯನ್ನು ಶಾಸ್ತ್ರದಾನವಾಗಿ ಕೊಟ್ಟ ಸಂಗತಿ ಪ್ರಸಿದ್ಧವಾಗಿದೆ. ಹಾಗೆ ಚಂದನಾಂಬಿಕೆ ಕಥೆಯ ಹಸ್ತಪ್ರತಿಯೊಂದು ಶಾಸ್ತ್ರದಾನದ ಕಾರಣವಾಗಿ ಪ್ರತಿಯಾಗಿರುವುದು ಕೆ ೫೯/೨ ಸಂಖ್ಯೆಯ ಓಲೆಪ್ರತಿಯಿಂದ ಬೆಳಕಿಗೆ ಬಂದಿದೆ–''ಅಗಳಿ ಪಾಯಣ್ಣಗಳು ಬರದ ಚಂದನೆಕಥೆ ಪ್ರತಿ ಇದ್ದ ಹಾಗೆ ಬರೆದನು...ಶ್ರೀ ಹೇವಿಳಂಬಿ ಸಂವತ್ಸರ ಭಾದ್ರಪದ ಶು ೧೩ಲ್ಲು ದೊಡಸಾಮಿಗೆ ಶಾಸ್ತ್ರದಾನವಾಗಿ ಬರೆದು ಕೊಟ್ಟರ ಅಗಳೀ ಪಾಯಣ್ಣಗಳೂ ಲಕ್ಷ್ಮೀಸೇನದೇವರ ಶಿಷ್ಯರು ಅಗಳಿ ಲಕ್ಷ್ಮೀಸೇನದೇವ.''

ಜನಾಂಗದ ಸಿರಿವಂತರು ತಮಗೆ ಕೇವಲಜ್ಞಾನಪ್ರಾಪ್ತಿಯಾಗಲೆಂದು ತೀರ್ಥಂಕರ ಚರಿತೆಗಳನ್ನು ಪ್ರತಿಮಾಡಿಸಿ ಬಸದಿಗಳಿಗೆ ಕೊಡುತ್ತಿದ್ದ ಸಂಪ್ರದಾಯ ಕಂಡುಬರುತ್ತದೆ. ಧರ್ಮನಾಥಪುರಾಣದ ಕೆ. ಎ. ೨೯೬ ಸಂಖ್ಯೆಯ ಹಸ್ತಪ್ರತಿಯು ಕೇವಲಜ್ಞಾನ ಪರಿಪ್ರಾಪ್ತಿ ನಿಮಿತ್ತವಾಗಿ ಪ್ರತಿಮಾಡಿಸಿ ಕಾರ್ಕಳದ ಶಾಂತಿನಾಥಸ್ವಾಮಿ ಬಸದಿಗೆ ಅರ್ಪಿಸಿದ ಪ್ರತಿಯಾಗಿದೆ: ''ಸ್ವಸ್ತಿ ಶ್ರೀಮತ್ ಶಕವರ್ಷ ಶನಿವಾರದಂದು ಸ್ವಸ್ತಿಯಸವರತ...ಕಲಿಕಾಲ ಗಣಧರರುಮಪ್ಪ ಶ್ರೀಮಲ್ಲಲಿತಕೀರ್ತಿ ಮಲಧಾರಿದೇವರ ಪ್ರಿಯಗುಡ್ಡ ಆಹಾರಅಭಯಂ ಬೈಷಜ್ಯ ಶಾಸ್ತ್ರದಾನ ದತ್ತಾವಧಾನುನಂ ಜಿನಗಂಧೋಧಕ ಪವಿತ್ರೀಕೃತೋತ್ತಮಾಂಗನುಂ ಜಿನಮುನಿಪದಾಂಭೋಜಾತಭೃಂಗನುಮಪ್ಪ ಭಂಡಾರಿದೇವರುಸೆಟ್ಟಿ ತನಗೆ ಕೇವಲಜ್ಞಾನ ಪರಿಪ್ರಾಪ್ತಿ ನಿಮಿತ್ತವಾಗಿ ಕಾರಕಾಳದ ಶಾಂತಿನಾಥಸ್ವಾಮಿಗಳ ಬಸ್ತಿಗೆ ಬರಕೊಟ್ಟ ಧರ್ಮನಾಥಪುರಾಣಕ್ಕೆ ಮಂಗಳಮಹಾ.'' ಕೇಶವವರ್ಣಿ ವಿರಚಿತ ಗೊಮ್ಮಟಸಾರ ಕೃತಿಯ ಕೆ. ೧೪೨೪ ಸಂಖ್ಯೆಯ ಹಸ್ತಪ್ರತಿಯಲ್ಲಿಯೂ ಆಇರಿ ಮಯಿಂದ ಸೆಟ್ಟಿ ಎಂಬಾತ ಕೇವಲಜ್ಞಾನ ಪ್ರಾಪ್ತಿಗಾಗಿ ಗೊಮ್ಮಟನಾಥನ ಇಂದ್ರ ಆದಿಶಾಂತಯ್ಯನಿಂದ ಗೊಮ್ಮಟಸಾರದ ವ್ಯಾಖ್ಯಾನವನ್ನು ಕ್ರಿ.ಶ. ೧೫೯೯ರಲ್ಲಿ ಬರೆಸಿಕೊಟ್ಟುದಾಗಿ ತಿಳಿದುಬರುತ್ತದೆ.

ಆಳುವ ಮಹಾರಾಜರಿಗೆ 'ಸಿರಿವಂತರಿಗೆ' ಹಿತೈಷಿಗಳಿಗೆ ಆಯುರಾರೋಗ್ಯ ಐಶ್ವರ್ಯ ಅಭ್ಯುದಯಗಳನ್ನು ಹಾರೈಸಿ ಹಸ್ತಪ್ರತಿಗಳನ್ನು ಪ್ರತಿಮಾಡಿಕೊಡುತ್ತಿದ್ದರು. ಹಾಗೆ ದೇವರಾಯನೆಂಬ ಲಿಪಿಕಾರ ಕಂಠೀರವ ನರಸರಾಜ ಒಡೆಯರ ಅಭ್ಯುದಯವನ್ನು ಬಯಸಿ ಕೆ. ಎ. ೨೫ ಸಂಖ್ಯೆಯ ಲೀಲಾವತಿಕಾವ್ಯದ ಹಸ್ತಪ್ರತಿಯನ್ನು ಬರೆದಿರುವುದು ಕಂಡುಬರುತ್ತದೆ: ''ಸ್ವಸ್ತಿಶ್ರೀ ಸಕಲ ಕಲ್ಯಾಣಾಭ್ಯುದಯ ಶಾಲಿವಾಹನ ಶಕವರ್ಷ ೧೪೩೨ನೆಯ ವಿಳಂಬಿ ಸಂವತ್ಸರದ ಫಾಲ್ಗುಣಶುದ್ಧ ೧೨ ಆದಿತ್ಯವಾರದಲ್ಲು ಶ್ರೀಮದ್ರಾಜಾಧಿರಾಜರಾದ ಬೆಟ್ಟದ ಚಾಮರಸುವೊಡೆಯರವರ ಕುಮಾರಕರಾದ ಕಂಠೀರವ ನರಸರಾಜೇಂದ್ರಂಗೆ ಆಯುರಾರೋಗ್ಯ ಐಶ್ವರ್ಯಾಭಿವೃದ್ಧಿಯಾಗಲಿಯೆಂದು ಪುತ್ರ, ಪೌತ್ರ ಪರಂಪರೆ ಆಗಲಿಯೆಂದು ವೊಲುಕಂಡಿ ಚಿಟ್ಟಯನ ಕುಮಾರನು ಭಾರತಿ ಅಯ್ಯಣ್ಣನು ಬರೆದುಕೊಟ್ಟಂಥಾ ಲೀಲಾವತಿಯ ಪುಸ್ತಕ ಮಂಗಳ ಮಹಾಶ್ರೀ ಬಹು ಧಾನ್ಯ ಸಂವತ್ಸರದ ಫಾಲ್ಗುಣಶುದ್ಧ ೫ ಶುಕ್ರವಾರದಲ್ಲೂ ಉಗ್ರಾಣದ ಸಿದ್ಧೈಯನ ಮಗ ದೇವರಾಯನು ಬರೆದ

ಲೀಲಾವತಿಯ ಪುಸ್ತಕಕ್ಕೆ ಮಂಗಳ ಮಹಾ'' ಎಂದಿದೆ. ಇದೇ ಮನೋಧರ್ಮ ಮಂಗರಸನ ಶ್ರೀಪಾಲಚರಿತೆಯ ಕೆ ೫೭೬ ಸಂಖ್ಯೆಯ ಹಸ್ತಪ್ರತಿಯಲ್ಲಿ ''ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕವರುಷ ೧೬೩೯ನೆಯ ಜಯನಾಮ ಸಂವತ್ಸರದ ಜ್ಯೇಷ್ಠ ಶುದ್ಧ ೫ ಯಿಂದುವಾರದಲ್ಲು ಹಾಸನದ ಶ್ರೀ ಪಾರಿಶ್ವನಾಥಸ್ವಾಮಿಯ ಸನ್ನಿಧಿಯಲ್ಲಿ ದೊಡುಹೊನ್ನಣ್ಣಸೆಟ್ಟರಿಗೆ ಉಪಾಧ್ಯ ಚಿಕ್ಕಣ್ಣನು ಆಯುರಾರೋಗ್ಯ ಐಶ್ವರ್ಯಾಭಿವೃದ್ಧಿಯಾಗಲೆಂದು ಬರಕೊಟ್ಟಂಥ ಶ್ರೀಪಾಲನ ಚರಿತೆ ಪುಸ್ತಕಕ್ಕೆ ಮಂಗಲ'' ಎಂದು ವ್ಯಕ್ತವಾಗಿದ್ದು ಆ ಮೂಲಕ ಈ ಹಸ್ತಪ್ರತಿಕಾರರು ಪ್ರಾಚೀನ ಕಾವ್ಯಗಳ ಸಂರಕ್ಷಣೆಯಲ್ಲಿ ಭಾಗಿಯಾಗಿದ್ದಾರೆ.

ಧಾರ್ಮಿಕ ಕಾವ್ಯಗಳ ಪಠನದಿಂದ ಕರ್ಮನಿವಾರಣೆಯಾಗುವುದೆಂಬ ಭಾವನೆ ಬಹಳ ಹಿಂದಿನಿಂದಲೂ ಬೇರೂರಿದೆ. ಅಂತೆಯೆ ಅಕ್ಷರ ಬಲ್ಲವರು 'ಜ್ಞಾನಾವರ್ಣೀಯ ಕರ್ಮೋಪಶಮನ' ನಿಮಿತ್ತವಾಗಿಯೂ ಪ್ರಾಚೀನ ಕೃತಿಗಳನ್ನು ಬರೆದುಕೊಡುತ್ತಿದ್ದರು. ನೇಮಿಜಿನೇಶಸಂಗತಿಯ ಕೆ ೧೮೦೬ ಸಂಖ್ಯೆಯ ಓಲೆಪ್ರತಿಯು ಪ್ರತಿಯಾದ ಹಿನ್ನೆಲೆಯಲ್ಲಿ ಇದೇ ಭಾವನೆ ಪ್ರಕಟವಾಗಿದೆ: ''ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕಾಬ್ದಃ ೧೭೭೩ನೆಯ ವಿರೋಧಿಕೃತು ನಾಮ ಸಂವತ್ಸರದ ಶ್ರಾವಣ ಬಹುಳ ೩ವರಿಗೆ ಸಂಕಿಘಟ್ಟಪುರವರಾಧೀಶ ಶ್ರೀಮನ್ಮಹಾವೀರ ವರ್ಧಮಾನ ಸ್ವಾಮಿಯವರ ಪದಾರಾಧಕನಾದಂತ ನಳಿನಾಖ್ಯನ ಕುಮಾರ ನರಸಿಂಹಪುರದ ಶ್ರೀ ಚಂದ್ರನಾಥಸ್ವಾಮಿ ಪಾದಪಯೋಜ ದ್ವಂದ್ವಾರಾಧಕನಾದಂತ ಪಾಯಂಣನು ಶ್ರೀಸ್ವಾಮಿ ಸನ್ನಿಧಿಯಲ್ಲಿ ಜ್ಞಾನಾವರ್ಣೀಯ ಕರ್ಮೋಪಶಮನ' ನಿಮಿತ್ಯವಾಗಿ ಬರದಂತಾ ಹರಿವಂಶದ ಪುಸ್ತಕಕ್ಕೆ ಭದ್ರಂಭೂಯಾತ್.'

ಪುರಾಣ ಪುಣ್ಯಕಥೆಗಳ ವಾಚನ ಜೈನ ಮಹಿಳೆಯರ ಸಂಸ್ಕೃತಿಯ ಅಂಗವಾಗಿತ್ತೆಂದು ಹೇಳಬಹುದು. ಸ್ತ್ರೀ ಶಿಕ್ಷಣ ಶೂನ್ಯವಾಗಿದ್ದ ಕಾಲದಲ್ಲಿ ಕೂಡ ಈ ಮಹಿಳೆಯರು ತಮ್ಮ ಧರ್ಮಗ್ರಂಥಗಳ ಅಭ್ಯಾಸದಲ್ಲಿ ತೋರಿದ ಆಸಕ್ತಿ ಪ್ರಶಂಸಾರ್ಹ. ದೊಡ್ಡಯ್ಯನ ಚಂದ್ರಪ್ರಭಚರಿತೆಯ ಕೆ ೧೫೮೯ ಸಂಖ್ಯೆಯ ಪ್ರತಿ ಅಕ್ಕಮ್ಮ ಎಂಬ ಮಹಿಳೆಗಾಗಿ ಸಿದ್ಧಪಡಿಸಿದುದಾಗಿದೆ : ''ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕವರುಷ ೧೬೭೧ನೆಯ ಪ್ರಮಾತಿ ಸಂವತ್ಸರದ ಪುಷ್ಯ ಶು ೧೩ಲ್ಲು ಶುಭದಿವಸದಲ್ಲು ಮೈಸೂರ ಬಸ್ತಿಯ ದೊಡ್ಡೈಯನವರ ಮಗನು ಶಾಂತೈಯನು ಯಳವಂದೂರ ಮುದ್ದೈಯ್ಯಪಂಡಿತರ ಮಗಳು ಅಕ್ಕಮ್ಮನವರಿಗೆ ಬರದುಕೊಟ್ಟಂಥ ಶ್ರೀ ಚಂದ್ರಪ್ರಭಚರಿತ್ರಕ್ಕೆ ಭದ್ರಂ ಶುಭಂ ಮಂಗಲಂ.'' ವಡ್ಡಾರಾಧನೆಯ ಕೆ. ಎ ೨೯೭ ಸಂಖ್ಯೆಯ ಹಸ್ತಪ್ರತಿಯನ್ನು ಕಮಳ ಶ್ರೀ ಅವ್ವೆಗಳಿಗಾಗಿ ಭಾನುಮುನಿಗಳ ಆದೇಶದ ಮೇಲೆ ಬರೆಯಲಾಗಿದೆ. ಬರೆಸಿಕೊಟ್ಟವರು ಓಜಣ್ಣಸೆಟ್ಟಿಯರ ಮಗ ಕಲ್ಲಣ್ಣಸೆಟ್ಟಿ. ಹೀಗೆ ಕಥಾಕೋಶಗಳು ಮಹಿಳಾಲೋಕದಲ್ಲಿ ಬಹು ಜನಪ್ರಿಯವಾಗಿದ್ದವೆಂದು ಭಾವಿಸಬಹುದು. ಆದಿದೇವನ ಸುಕುಮಾರ ಚರಿತೆಯ ಕೆ. ಎ ೨೬೭ ಸಂಖ್ಯೆಯ ಹಸ್ತಪ್ರತಿಯಲ್ಲಿ ಮೂಲಪ್ರತಿಕಾರನ ಸ್ವವಿವರವುಳ್ಳ ಪದ್ಯ ಹಾಗೂ ಪ್ರಸ್ತುತ ಪ್ರತಿಕಾರ ನೀಡುವ ಪುಷ್ಪಿಕೆಯಿಂದ ಇದು ಮಹಿಳೆಯರಿಗಾಗಿ ಸಿದ್ಧವಾದ ಪ್ರತಿಯೆಂಬುದು ವೇದ್ಯವಾಗುತ್ತದೆ. ಮೂಲಪ್ರತಿಕಾರ ''ತನ್ನ ಪುತ್ರಿತ್ರಯಗಳನೋದಿಸಲೆಂದು'' ಬರೆದನು. ಈ ಪ್ರತಿಕಾರ ನೀಡಿರುವ ''ಸ್ವಸ್ತಿಶ್ರೀ ಶಕವರ್ಷ ೧೪೬೮ನೆಯ ಪರಾಭವ ಸಂವತ್ಸರದ ವೈಶಾಖ ಸುದ ೧೬ ಶುಕ್ರವಾರದಲ್ಲಿ ಯೆದಲಾಪುರದ ಚೆನ್ನಪಾರ್ಶ್ವನಾಥನ ಶ್ರೀಪಾದ ಸನ್ನಿಧಾನದಲ್ಲಿ

ಅಕ್ಕನೂರ ಸಿರಗಪನು ಮಂಡಿಗೆಯ ಪಾಯಣನ ಮಗಳು ಪದುಮಾಯಿಗೆ ಬರದುಕೊಟ್ಟ ಸುಕುಮಾರ ಚರಿತ್ರೆಯ ಪುಸ್ತಕಕ್ಕೆ ಮಂಗಳ ಮಹಾಶ್ರೀ'' ಎಂಬ ವಿವರಗಳಿಂದ ಆದಿದೇವನ ಸುಕುಮಾರ ಚರಿತೆ ಹೆಣ್ಣುಮಕ್ಕಳ ಕಲಿಕೆಯ ಭಾಗವಾಗಿದ್ದಿತೆಂದು ಊಹಿಸಬಹುದು. ಪುಣ್ಯಾಸ್ರವ ಕಥಾಕೋಶದ ಕೆ. ಎ ೬೦೪ ಹಸ್ತಪ್ರತಿಯನ್ನು ಧರಣೇಂದ್ರನೆಂಬ ಲಿಪಿಕಾರ ಕ್ರಿ.ಶ. ೧೮೪೨ರಲ್ಲಿ ''ಸತಿ ಸಹ ಸ್ವಪಠನಾರ್ಥನಾಗಿಯುಂ ಜ್ಞಾನೋದಯ ನಿಮಿತ್ತವಾಗಿಯುಂ'' ಬರದಿರುವುದು ತಿಳಿದುಬರುತ್ತದೆ. ಪ್ರಾಚೀನ ಜೈನ ಗ್ರಂಥಗಳು ಇಲ್ಲಿಯವರೆಗೂ ಉಸಿರಾಡುತ್ತ ಉಳಿದು ಬಂದಿರುವಲ್ಲಿ ಜೈನ ಮಹಿಳೆಯರ ಪಾಲು ತಕ್ಕಮಟ್ಟಿಗೆ ಇದ್ದಿತೆಂಬುದನ್ನು ಮನಗಾಣಬಹುದು.

ತೀರ್ಥಂಕರ ಪುರಾಣಗಳನ್ನು ಪ್ರತಿಮಾಡುವ ಲಿಪಿಕಾರ ತಾನು ನಕಲು ಮಾಡುತ್ತಿರುವುದು ಒಂದು ಸಾಹಿತ್ಯಕೃತಿ ಎನ್ನುವುದಕ್ಕಿಂತ ಮೇಲಾಗಿ ಅದೊಂದು ಪುಣ್ಯ ಪುಂಜವೆಂದು ತಿಳಿದು ಆರಾಧನಾಭಾವದಿಂದ ನಿರ್ವಹಿಸಿರುವುದು ಕಂಡುಬರುತ್ತದೆ. ನೇಮಿಚಂದ್ರನ ನೇಮಿನಾಥಪುರಾಣದ ಕೆ. ಎ. ೫೯ನೇ ಸಂಖ್ಯೆಯ ಹಸ್ತಪ್ರತಿಯ ಕಡೆಯಲ್ಲಿ

> ಬರೆ ಶಾಲಿವಾಹನಂ ಬೇಗದ ಶಕವರುಷಂ ಸಾರೆ ಸಂವತ್ಸರಂ ಸಾ
> ಸಿರದಾಱುನೂಱಱ ಸಂದೂಪ್ಪುವ ಕಲಿಯುಗ ರಕ್ತಾಕ್ಷಿಯೂ ಮಾಘಮಾಸಾ
> ಪರಪಕ್ಷಂ ಸಚ್ಚತುರ್ದಸ್ಯ ಹಿಮಕಿರಣವಾರಂ ಬರಲ್ ಪದ್ಮರಾಜಂ
> ಒರೆದತ್ಯಂತಕ್ಕಱಿಂದತ್ಯಧಿಕ ಭಕತಿಯಿಂದೀ ನೇಮಿಸತ್ಕಾವ್ಯಂ ॥

ಎಂಬಲ್ಲಿ ಕಾವ್ಯದ ಬಗೆಗೆ ಲಿಪಿಕಾರನ ಭಕ್ತಿಭಾವ ಹೊರಹೊಮ್ಮಿದೆ. ಮಹಾಬಲನ ನೇಮಿನಾಥ ಪುರಾಣದ ಕೆ, ೫೫೫ ಸಂಖ್ಯೆ ಪ್ರತಿಯ ಲಿಪಿಕಾರ ಕೂಡ ಪದ್ಮರಾಜ. ಇವರಿಬ್ಬರೂ ಏಕವ್ಯಕ್ತಿಗಳಾಗಿರಬಹುದು.

ರಾಮಾಯಣ ಕಾವ್ಯ ಯಾವುದೇ ಧರ್ಮದ ಚೌಕಟ್ಟಿನಲ್ಲಿ ಅರಳಿರಲಿ ಅದು ಭಾರತೀಯರಿಗೆ ಪರಮಪೂಜ್ಯವಾದುದು. ರಾಮಾಯಣ ಪಾರಾಯಣ ಹಿಂದಿನಿಂದಲೂ ನಡೆದುಬಂದಿರುವ ಪದ್ಧತಿ. ತಂದೆಯೊಬ್ಬ ತನ್ನ ಮಕ್ಕಳು ಓದಲೆಂದು ಪ್ರತಿಮಾಡಿರುವುದು ನಾಗಚಂದ್ರನ ರಾಮಾಯಣದ ಕೆ. ೧೨೯೧ ಸಂಖ್ಯೆಯ ಪ್ರತಿಯ ಅಂತ್ಯದ ವಿವರದಿಂದ ಸ್ಪಷ್ಟವಾಗುತ್ತದೆ: ''ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕಾಬ್ದ ೧೭೬೮ನೆ ಪರಾಭವನಾಮ ಸಂವತ್ಸರದ ಶ್ರಾವಣಶುದ್ಧ ೮ ಮೀ ಗುರುವಾರ ದಿವಸದಲ್ಲು ಬೆಳುಗಲಿ ದೇವಯ್ಯ ಉಪಾಧ್ಯರ ಮಗ ದೇವರಸಯ್ಯ ಉಪಾಧ್ಯನು ತನ್ನ ಮಕ್ಕಳಾದ ನಾಗಚಂದ್ರಯ್ಯ ದೇವಚಂದ್ರಯ್ಯ ಸಹಾ ಓದಿಕೊಳ್ಳು ನಿಮಿತ್ತವಾಗಿ ಬರೆದುಕೊಟ್ಟ ರಾಮಚರಿತ್ರೆಯ ಪುಸ್ತಕಕ್ಕೆ ಭದ್ರಂ ಶುಭಂ ಮಂಗಳಂ.'' ಇದೇ ಕೃತಿಯ ಕೆ. ೧೪೪ ಸಂಖ್ಯೆಯ ಹಸ್ತಪ್ರತಿಯನ್ನು ನಾಗರಾಜಯ್ಯ ಎಂಬ ಪ್ರತಿಕಾರ ಮೈಸೂರಿನ ಶಾಂತೀಶ್ವರಸ್ವಾಮಿ ಬಸದಿಯಲ್ಲಿ ಪಾರಾಯಣ ಮಾಡಲೋಸುಗ ಪ್ರತಿಮಾಡಿದ್ದಾನೆ: ''ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕಾಬ್ದಃ ೧೭೭೩ನೇ ವಿರೋಧಿಕೃತು ನಾಮಸಂವತ್ಸರದ ಶ್ರಾವಣ ಬಹುಳ ೧೪ ಚಂದ್ರವಾರ ಸೂರ್ಯನು ಪೂರ್ವಪ್ರತಿಷ್ಠೆಯಾದ ಘಳಿಗೆ ೧೨ಕ್ಕೆ ಸಲ್ಲುವ ತುಲಾ ಲಗ್ನದಲ್ಲಿ ಶಾಂತೀಶ್ವರಸ್ವಾಮಿಯವರ ದೇವಸ್ಥಾನದ ಮುಖಮಂಟಪದಲ್ಲಿ ನಾಗರಾಜಯ್ಯ ತನಗೆ ಬೇಕಾಗಿ ಪಾರಾಯಣ ಮಾಡುಬಗ್ಯೆ ಶ್ರೀರಾಮಕಥಾವತಾರವನ್ನು ಸಂಪೂರ್ಣವಾಗಿ ಪರಾಭವ ಸಂವತ್ಸರದ ಭಾದ್ರಪದ ಶುದ್ಧ ೧ ಲಾಗಾಯಿತ್ತುಯಿವರಿಗೆ ಸಂಪೂರ್ಣವಾಗಿ

ಬರದ್ವಕ್ಕೆ ಭದ್ರಂ ಶುಭಂ ಮಂಗಲಂ'' ಇದೇ ಶಾಂತೀಶ್ವರಸ್ವಾಮಿ ಬಸದಿಯಲ್ಲಿ ಭಟ್ಟಾಕಳಂಕನ ಶಬ್ದಾನುಶಾಸನದ ಕೆ. ೨೮೧ ಸಂಖ್ಯೆಯ ಪ್ರತಿಯನ್ನು ಕ್ರಿ.ಶ. ೧೭೮೨ರಲ್ಲಿ ನಕಲು ಮಾಡಿದುದಾಗಿ ತಿಳಿದುಬರುತ್ತದೆ. ಭಾಸ್ಕರನ ಜೀವಂಧರಚರಿತ್ರೆಯ ಕೆ. ೭೫೩ ಸಂಖ್ಯೆಯ ಹಸ್ತಪ್ರತಿಯನ್ನು ಮೈಸೂರು ದೇವಸ್ಥಾನದ ರಾತ್ರಿ ಅರ್ಚಕ ನಾಗರಾಜಯ್ಯನು ಜಿನಚಂದ್ರಯ್ಯನಿಗೆ ಬರೆದುಕೊಟ್ಟ ಸಂಗತಿ ಪುಷ್ಪಿಕೆಯಲ್ಲಿ ಉಕ್ತವಾಗಿದೆ. ಇದೇ ಕೃತಿಯ ಕೆ. ೭೬೨ ಹಸ್ತಪ್ರತಿಯನ್ನು ಹುಚ್ಚಯ್ಯನು ವಿಜಯಣ್ಣಪಂಡಿತರಿಗೆ ಪ್ರತಿಮಾಡಿಕೊಟ್ಟದ್ದು ಕೂಡ ಮೈಸೂರಿನಲ್ಲಿಯೆ ಎಂಬುದು ಗಮನಾರ್ಹ.

ಪ್ರತಿಕಾರರು ತಾವು ಮಾತೃಕೆಯಾಗಿಟ್ಟುಕೊಂಡ ಹಸ್ತಪ್ರತಿಗೆ ನಿಷ್ಠರಾಗಿರುವುದು ಅಪೇಕ್ಷಣೀಯ ಮತ್ತು ಅತ್ಯಂತ ಅಗತ್ಯ. ಒಂದು ಹಸ್ತಪ್ರತಿ ಮೂಲಪ್ರತಿಯ ತದ್ರೂಪು ಅಥವಾ ಛಾಯಾಪ್ರತಿಯಾದಾಗ ಮಾತ್ರ ಕವಿಪಾಠ ಮಲಿನವಾಗದೆ ಶುದ್ಧವಾಗಿ ಉಳಿದು ಬರಲು ಸಾಧ್ಯವಾಗುತ್ತದೆ. ಬಹಳಷ್ಟು ಅಪಪಾಠಗಳು ಹಸ್ತಪ್ರತಿಕಾರರಿಂದ ಸಂಭವಿಸುವುದೆಂಬ ಅರಿವು ಲಿಪಿಕಾರರಿಗಿತ್ತು. ಆದುದರಿಂದ ಪ್ರತಿಯಲ್ಲಿ ದೋಷಗಳು ಕಂಡುಬಂದರೆ ತಾವು ಹೊಣೆಗಾರರಲ್ಲವೆಂಬುದನ್ನು ಅರುಹಲು ಮೂಲಪ್ರತಿಗೆ ಸಮಾನವಾಗಿ ಬರೆದಿರುವೆವೆಂದು ನಿವೇದಿಸುವುದುಂಟು. ನಾಗರಾಜಕವಿಯ ಪುಣ್ಯಾಸ್ರವದ ಕೆ. ೧೭೪೯ ಸಂಖ್ಯೆಯ ಹಸ್ತ ಪ್ರತಿಯ ಅಂತ್ಯದಲ್ಲಿ ''ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲವಾಹನ. ಶಕಾಬ್ದ ೧೬೬೮ನೆಯ ಸಿದ್ಧಾರ್ಥಿ ಸಂವತ್ಸರದ ಜೇಷ್ಠ ಶು ೧೩ ಗುರುವಾರ ಶ್ರೀರಂಗಪಟ್ಟಣದ ಅಣ್ಣಯ್ಯನವರ ಕುಮಾರರು ಗೊಮ್ಮಟಯ್ಯನವರಿಗೆ ತಂಮಡಹಳ್ಳಿ ಬೊಮ್ಮರಸಯ್ಯನ ಮಗನು ದ್ಯಾವಯ್ಯನ ದ್ವಿತೀಯಪುತ್ರ ಬೊಮ್ಮರಸಯ್ಯನು ಪ್ರತಿಸಮಾನವಾಗಿ ಬರೆದುಕೊಟ್ಟ ಪುಣ್ಯಾಸ್ರವದ ಪೊಸ್ತಕ್ಕೆ ಭದ್ರಂ ಶುಭಂ ಮಂಗಲಂ'' ಎಂದು ಹೇಳಿದೆ. ಏಚಿಗನಹಳ್ಳಿ ದೇವರಸಯ್ಯನ ಮಗನ ಬೊಮ್ಮರಸಯ್ಯನು ಮಂಗರಸನ ಶ್ರೀಪಾಲಚರಿತ್ರೆಯ ಕೆ. ೧೪೯೫೧ ಸಂಖ್ಯೆಯ ಪ್ರತಿಯನ್ನು ನಕಲು ಮಾಡುವಾಗ ಪ್ರತಿಸಮಾನ ಬರೆದಿರುವೆನೆಂದಿದ್ದಾನೆ. ಕುಮುದಚಂದ್ರನ ಪ್ರತಿಷ್ಠಾಕಲ್ಪದ ಕನ್ನಡ ಟೀಕಿನ ಕೆ. ೫೦೬ ಸಂಖ್ಯೆಯ ಪ್ರತಿಯು ಬಂಗವಾಡಿಪುರದ ಶಾಂತಿತೀರ್ಥೇಶ್ವರನ ಸನ್ನಿಧಿಯಲ್ಲಿ ಪ್ರತಿಸಮಾನವಾಗಿ ಬರೆದದ್ದಾಗಿದೆ. ಹರವೆಯ ಪರರಾಜಯ್ಯನು ಚಂದ್ರಸಾಗರ ವರ್ಣಿಯ ಮುಲ್ಲಾಶಾಸ್ತ್ರದ ಕೆ. ೧೭೧೬ ಹಸ್ತಪ್ರತಿಯನ್ನು ಪ್ರತಿಮಾಡುವಾಗ ಇದೇ ಆಶಯವನ್ನು ವ್ಯಕ್ತಪಡಿಸಿದ್ದಾನೆ. ಕೆ. ೩೬೮ ಸಂಖ್ಯೆಯ ಪದ್ಮಾವತಿ ಚರಿತೆಯನ್ನು ಪ್ರತಿಮಾಡಿದಾತ ಕೂಡ ಹೊಂಬುಚದ ಅಮ್ಮನವರ ಮೂಲಾಪ್ರತಿ ನೋಡಿಕೊಂಡು ಬರೆದುದಾಗಿ ಹೇಳಿದ್ದಾನೆ.

ಹಸ್ತಪ್ರತಿಕಾರ ತನ್ನ ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸಲು ಅಕ್ಷರಜ್ಞಾನವಿದ್ದರಷ್ಟೆ ಸಾಲದು. ಪ್ರಾಚೀನ ಕಾವ್ಯಾಭ್ಯಾಸ, ಸತತ ಅಧ್ಯಯನಶೀಲತೆಯ ಬೆಂಬಲವಿದ್ದರೆ ಮಾತ್ರ ಸ್ಖಾಲಿತ್ಯಗಳನ್ನು ನಿವಾರಿಸಬಹುದು. ಸಾಮಾನ್ಯವಾಗಿ ಜೈನ ಹಸ್ತಪ್ರತಿಕಾರರು ಬಸದಿಯ ಸ್ಥಾನಿಕರೊ, ಪಂಡಿತ ಕುಟುಂಬದ ಹಿನ್ನೆಲೆಯಿಂದ ಬಂದವರೊ ಆದುದರಿಂದ ಸ್ಖಾಲಿತ್ಯಗಳು ಕಡಮೆ. ಕೆಲವು ಪ್ರತಿಕಾರರು ಕಾವ್ಯರಚನಾಶಕ್ತಿಯನ್ನು ಪಡೆದಿದ್ದರು. ಅಂಥವರಲ್ಲಿ ರಾಯಸದ ಲಕ್ಷ್ಮೀಪತಿಯ ಹೆಸರು ಎದ್ದು ಕಾಣುವಂಥದ್ದು. ಈತ ಅಜಿತನಾಥಪುರಾಣದ ಕೆ. ಎ ೫೩ ಸಂಖ್ಯೆಯ ಹಸ್ತಪ್ರತಿಯನ್ನು ಪ್ರತಿ ಮಾಡಿರುವನಲ್ಲದೆ ಗ್ರಂಥಾಂತ್ಯದಲ್ಲಿ ವೃತ್ತಕಂದಗಳನ್ನು ರಚಿಸಿ ಪ್ರತಿಯ ಕಾಲ. ಪ್ರತಿಮಾಡಿಸಿಕೊಂಡಂಥ ಮೈಸೂರು ದೊರೆ ಚಿಕ್ಕರಾಜದೇವನನ್ನು

ವರ್ಣಿಸಿದ್ದಾನೆ :

ಶಾಲೀವಾಹನ ಶಕಾಬ್ದ ಸಾವಿರದಯ್ಯೆನೂರೆಂಭತ್ತೈದಮ
ವೀಲೋಕ್ಕತಿ ಸೌಖ್ಯಮಂ ಕುಡುವ ಶೋಭಕೃತ್ಸಮಾಭಾದ್ರದೊ
ಳ್ಬಾಲೇಂದ್ರಾತ್ಮಜ ಶುಕ್ಲಪಕ್ಷ ತ್ರಿತಯೊಳ್ಚಿಕ್ಕೇಂದ್ರ ಭೂಮೀಶಂಗಂ
ದ್ರಾಲಕ್ಷ್ಮಾಖ್ಯ ಬುಧೋತ್ತಮಂ ಬರೆದುಕೊಟ್ಟಂ ಜೈನಕೃತ್ಯಾಕ್ವಮಂ ॥

ಸಿರಿಯೊಳ್ ಗರ್ವಿಸಿ ಜೇಳ್ವವರ್ಗೆ ಕುಡನ್ಯಾಯತ್ವದಿಂ ಜೀವಮಂ
ಪೊರವುತ್ತಂ ರಣಮಂದೊಡಂಜಿ ಭಯದಿಂ ಕಾಲ್ಗೆಟ್ಟು ಚಿಂತಿಪ್ಪ ಭೂ
ವರರಂ ಪುಟ್ಟಿಸಿ ಪದ್ಮಜಂ ಧರಣಿಯೊಳ್ ಹಾಸ್ಯಕ್ಕೆ ಪಕ್ಕಾದಸಂ
ದೊರೆವಂ ಮೈಸೂರ ಚಿಕ್ಕಭೂರಮಣ ತಾನೇಂ ಜಾಗಿಯೋ ಧೀರನೋ ॥

ಶ್ರೀರಂಗೇಶ ತ್ರಿಣೇಶಸ್ಸಿರಿಗಿರಿ ತನುಜಾಸಾರಿ ಮುಖ್ಯಾಮರರ್ಮ್ಯ
ಸೂರ ಶ್ರೀ ಚಿಕ್ಕದೇವರಾಜಾವನಿಪತಿಗಖಿಳೋರ್ವಿ ಸಮಾಜಸ್ಸು
ಶೌರ್ಯೋದ್ದಾರಾಯುಃ ಪುತ್ರಮಿತ್ರಾವಳಿಯನೊಲವಿನಿಂದಿತ್ತು ರಕ್ಷಿಕ್ಕೇ ಧಾತ್ರಿ
ನಾರಿಂದು ಸೂರ್ಯತಾರಾನಿಲರುದಧಿ ಮಹಾಮೇರುಮಿರ್ಪನ್ನಮೀಗಳ್ ॥

ಶ್ರೀಯುತ ಮೈಸೂರ ಚಿಕ್ಕಯ
ರಾಯನ ರಾಯಸದ ಲಕ್ಷ್ಮೀಪತಿ ಹರ್ಷದಿನಾ
ತ್ರೇಯ ಸಂಗೋತ್ರನೆನಿಪ ತ
ದ್ರಾಯಗೆ ಬರೆದಿತ್ತನಜಿತನಾಥನ ಕೃತಿಯಂ ॥

ಈ ಪದ್ಯಗಳು ಲಕ್ಷ್ಮೀಪತಿಯ ಕಾವ್ಯ ಕಟ್ಟುವ ಸಾಮರ್ಥ್ಯದ ದ್ಯೋತಕವಾಗಿವೆ. ಈತ ಚಿಕ್ಕದೇವರಾಜನ ಆಶ್ರಯದಲ್ಲಿದ್ದನೆಂದು ತೋರುತ್ತದೆ. ಪ್ರಾಚೀನ ಕಾವ್ಯಗಳನ್ನು ಪ್ರತಿಮಾಡಿಸುವ, ಸಂರಕ್ಷಿಸುವ ಕಾರ್ಯದಲ್ಲಿ ಅನೇಕ ರಾಜಮಹಾರಾಜರು ಆಸಕ್ತಿ ತಳೆದಿದ್ದರು. ನೇಮಿಚಂದ್ರನ ಲೀಲಾವತಿ ಕಾವ್ಯದ ಕೆ. ೧೭೨ ಸಂಖ್ಯೆಯ ಹಸ್ತಪ್ರತಿಯನ್ನು ತಳಕಾಡ ದೇವರಸ ಉಪಾಧ್ಯಾಯರು ಹದಿನಾಡ ಅರಸರಿಗೆ ಪ್ರತಿಮಾಡಿಸಿಕೊಟ್ಟದ್ದರು. "ಶ್ರೀ ವಿಕೃತಿ ಸಂವತ್ಸರದ ಚಯಿತ್ರ ಶುದ್ಧ ತ್ರಯೋದಶಿಯೂ ಸೋಮವಾರ ಹದಿನಾಡ ಇಮ್ಮಡಿ ರಾಮರಾಜನಾಯಕರಿಗೆ ತಳಕಾಡ ದೇವರಸ ಉಪಾದ್ಯರು ಬರೆದ ಲೀಲಾವತಿಗಂ ಮಂಗಲ ಮಹಾಶ್ರೀ ಶುಭಮಸ್ತು."

ನೇಮಿನಾಥಪುರಾಣದ ಕೆ ಎ ೬೭ ಸಂಖ್ಯೆಯ ಹಸ್ತಪ್ರತಿಯ ಪ್ರತಿಕಾರ ಒಬ್ಬ ವ್ಯಕ್ತಿಯಾದರೆ ಪ್ರತಿಮಾಡಿದ ವಿವರಗಳನ್ನೊಳಗೊಂಡ ಪದ್ಯರಚಿಸಿದಾತ ಮತ್ತೊಬ್ಬ. ಈ ಹಸ್ತಪ್ರತಿಯ ಅಂತ್ಯದಲ್ಲಿ ದೊರೆಯುವ ಪದ್ಯಗಳು ಹೀಗಿವೆ:

ವರಸತ್ಯಂ ಶತದುಂದುಭಾಬ್ದದ ಸಭಾದ್ರಾಪೂರ್ವದ ದ್ವಾದಶೀ
ಬರ ಹೇಮಾದ್ರಿ ಜಿನೇಂದ್ರ ಪಾರ್ಶ್ವರ ಲಸತ್ ಶ್ರೀಪಾದ ಮೂಲಾಗ್ರದೊಳ್
ದುರಿತಾರಾತಿ ವಿನಾಶ ನೇಮಿಜಿನಪೌರಾಣಂ ಜಗತ್ಪಾವನಂ
ಬರಸಲ್ ಸದ್ಗುಣ ಪದ್ಮರಾಜನಿದು ಪೂರ್ಣಂ ನೇಮಿಚಂದ್ರಾಖ್ಯನಿಂ ॥

ಅತ್ಯಂತಾದರದಿಂ ಶುಭ
ಚಿತ್ತಂ ಮಲೆಯೂರ ಪದ್ಮರಾಜ ಲಿಖಿಸೆಂ

ದಿತ್ತಡೆ ತ್ರಿಕದಂಬಪುರಾ
ಶ್ರಿತ್ವಂ ಗುಣಿ ನೇಮಿಚಂದ್ರ ನಾನಿದ ಬರೆದೆಂ ॥

ಜಯಬಲ ನಾರಾಯಣಸುತ
ಜಯ ನಿರುಪನು ನಿತ್ಯಸೌಖ್ಯ ನಿರ್ಮಲ ಚರಿತಾ
ಜಯ ತ್ರಿಭುವನ ಪೂರ್ಣಚಂದ್ರಾ
ಜಯ ಜಯ ಗುಣರುಂದ್ರ ಸಾಂದ್ರ ನೇಮಿಜಿನೇಂದ್ರಾ ॥

ಏತತ್ಪದ್ಯತ್ರಯಂ ದೇವಚಂದ್ರಕೃತಂ ॥

ಮೇಲಿನ ಪದ್ಯಗಳನ್ನು ಕವಿ ದೇವಚಂದ್ರ ರಚಿಸಿರುವುದು ಪದ್ಯಭಾಗದ ಬಳಿಕ ಬರುವ ಸಣ್ಣ ಸೂಚನೆಯಿಂದ ಸ್ಪಷ್ಟವಾಗುತ್ತದೆ. ಈ ಪ್ರತಿಯನ್ನು ಬರೆಸಿದಾತ ಮೈಸೂರು ಜಿಲ್ಲೆ ಚಾಮರಾಜನಗರ ತಾಲ್ಲೂಕು ಮಲೆಯೂರಿನ ಪದ್ಮರಾಜ. ಪ್ರತಿಕಾರ ತೆರಕಣಾಂಬಿ ವಾಸಿಯಾದ ನೇಮಿಚಂದ್ರ. ಹೀಗೆ ಈ ಪ್ರತಿ ವಿಶಿಷ್ಟವಾಗಿದೆ.

ಶಾಲಾ ಉಪಾಧ್ಯಾಯರಾಗಿದ್ದ ಮಲೆಯೂರಿನ ಪದ್ಮರಾಜಪಂಡಿತರೂ ಕೂಡ ಸಮ್ಯಕ್ತ್ವ ಕೌಮುದಿಯ ಕೆ. ಬಿ. ೨೨ ಸಂಖ್ಯೆಯ ಪ್ರತಿಯನ್ನು ಕ್ರಿ.ಶ. ೧೮೮೯ರಲ್ಲಿ ಸಿದ್ಧಪಡಿಸುವಾಗ ಪದ್ಯ ರಚಿಸಿದ್ದಾರೆ:

ಶ್ರೀಮತ್ಕನ್ನಡ ಸಮ್ಯ
ಕ್ತ್ವೌಮುದಿ ಕಥೆಯಂ ಪರಿಷ್ಕರಿಸಿ ಲಿಖಿಸಿದೆ ನಾಂ
ಆ ಮುತ್ತೈಹಿಕ ಫಲಮಂ
ಕಾಮಿಸಿ ಮಲೆಯೂರು ಪದ್ಮರಾಜೋಪಾಧ್ಯಂ ॥

'ಬಿ. ಎಲ್. ರೈಸ್‌ರವರ ಕಟಾಕ್ಷ ಸಂಪಾದನಾರ್ಥಂ ಪುಸ್ತಕಮಿದಂ ಪದ್ಮರಾಜಪಂಡಿತೇನ ವಿಲಿಖ್ಯದತ್ತಂ ಚಿರಂಜೀಯಾತ್' ಎಂಬ ವಿವರದಿಂದ ಇದು ಬಿ. ಎಲ್. ರೈಸ್ ಅವರ ಪ್ರೇರಣೆಯಿಂದ ಸಿದ್ಧಪಡಿಸಿದ ಸಂರಕ್ಷಿತ ಪ್ರತಿಯಾಗಿರಬಹುದೆಂದು ಊಹಿಸಬಹುದು.

ಹಸ್ತಪ್ರತಿಯನ್ನು ನಕಲು ಮಾಡುವ ಕಾರ್ಯ ಶ್ರಮಸಾಧ್ಯವಾದುದು, ಆದರೂ ಅನೇಕ ಪ್ರತಿಕಾರರು ತಮ್ಮ ಹೆಸರನ್ನು ಹೇಳಿಕೊಳ್ಳದೆಯೆ ಅಚ್ಚುಕಟ್ಟಾಗಿ ಕರ್ತವ್ಯ ನಿರ್ವಹಿಸಿದ್ದಾರೆ. ಕೆಲವರು ತಮ್ಮ ಹೆಸರನ್ನು ಕೈಬಿಟ್ಟು ಪ್ರತಿಮಾಡಲು ಉತ್ತೇಜಿಸಿದ ವ್ಯಕ್ತಿಯನ್ನು ಮಾತ್ರ ಸ್ಮರಿಸಿದ್ದಾರೆ, ಶಾಂತೀಶ್ವರ ಪುರಾಣದ ಕೆ. ೧೪೮೬ ಸಂಖ್ಯೆಯ ಪ್ರತಿಯಲ್ಲಿ ''ಸ್ವಸ್ತಿಶ್ರೀ ಜಯಾಭ್ಯುದಯ ಶಾಲಿವಾಹನ ಶಕವರುಷ ೧೮೯೦ ಸಂದು ವರ್ತಮಾನಕ್ಕೆ ಸಲ್ಲುವ ಯಿವ ಸಂವತ್ಸರದ ಶ್ರಾವಣ ಶು. ೫ ಉ ಸಿಂಗೇರಿಯ ಸಣ್ಣ ಸೆಟ್ಟಿಯ ಮಗ ಭುಜಬಲಿ ಶೆಟ್ಟಿಯು ಬರೆಸಿದ ಶಾಂತಿನಾಥ ಪುರಾಣದ ಪುಸ್ತಕಕ್ಕೆ ಶುಭಮಸ್ತು ಮಂಗಳ ಮಹಾಶ್ರೀ'' ಎಂದು ಭುಜಬಲಿ ಶೆಟ್ಟಿಯನ್ನು ಮಾತ್ರ ಉಲ್ಲೇಖಿಸಿದೆ. ಅಜಿತನಾಥ ಪುರಾಣದ ಕೆ. ೮ ಹಸ್ತಪ್ರತಿಯಲ್ಲಿ ಕೂಡ ''ಅರಸಮ್ಮರಸರು ಬರೆಸಿದ ಪುಸ್ತಕ'' ಎಂದಷ್ಟೆ ಹೇಳಿದೆ.

ಜೈನಕೃತಿಗಳನ್ನು ಬಹುಪಾಲು ಜೈನರೆ ಪ್ರತಿಮಾಡಿದ್ದರೂ ಅಪವಾದವೆಂಬಂತೆ ಪಂಪನ ಆದಿಪುರಾಣದ ಕೆ. ಎ ೭ ಹಸ್ತಪ್ರತಿಯನ್ನು ವೈದಿಕನೊಬ್ಬ ಪ್ರತಿಮಾಡಿರುವುದು ಗಮನಾರ್ಹವಾಗಿದೆ-''ಕಾಳಯುಕ್ತಿ ಸಂವತ್ಸರದ ಕಾರ್ತೀಕ ಬಹುಳ ೧೪ ಆದಿವಾರದಲ್ಲು ನಾಗಮಂಗಲದ ಸ್ಥಳದ ಶಾನುಭಾಗ ಕುಕ್ಕೆ ಲಿಂಗರಸರ ವೆಂಕಪ್ಪಯ್ಯನವರ ಮಗ ತಿರುಮಲಯ್ಯ

ಬರೆದ ಆದಿಪುರಾಣದ ಪುಸ್ತಕಕ್ಕೆ ಶುಭಮಸ್ತು ಶ್ರೀ ಶ್ರೀ ಶ್ರೀ ಆಶ್ವಾಸ ೧೬ಕ್ಕೆ ಮಂಗಳಂ ಶಾಲಿವಾಹನ ಶಕ ೮೬೩ನೇ ಪ್ಲವನಾಮ ಸಂವತ್ಸರ ಕಾರ್ತೀಕ ಶುದ್ಧ ಪಂಚಮೀ ಭಾನುವಾರ ಮೂಲಾನಕ್ಷತ್ರದಲ್ಲಿಯೂ ಆದಿಪುರಾಣ ಮುಗಿಯಿತೆಂಬುದಾಗಿ ಹೇಳಲ್ಪಟ್ಟಿದೆ. ಹಾಗೆ ಆದರೆ ೧೮೭೫ನೇ ಶಾಲಿವಾಹನ ಶಕವರ್ಷವುಳ್ಳ ಈ ಶ್ರೀಮುಖನಾಮ ಸಂವತ್ಸರಕ್ಕೆ ೯೩೨ ಸಂವತ್ಸರಂಗಳಾಯಿತ್ತು.''

ಭಾಸ್ಕರನ ಜೀವಂಧರ ಚರಿತೆಯ ಕೆ. ೩೧೧ ಸಂಖ್ಯೆಯ ಹಸ್ತಪ್ರತಿಯಲ್ಲಿ ''ಶ್ರೀಮತ್ಪಂಡಿತಯ್ಯನು ಬರೆದುಕೊಟ್ಟ ಜೀವಂಧರ ಷಟ್ಪದಿಗೆ ಭದ್ರಂಭೂ್ರಯಾತ್‌ಸನ್ ೧೮೯೧ ಖರನಾಮಸಂವತ್ಸರ ಆಶ್ವೀಜ ಬಹುಳ ೫ ಗುರುವಾರದಲು....'' ಎಂಬ ಬರಹವಿದ್ದು ಮುದ್ರಣಯಂತ್ರ ಬಳಕೆಗೆ ಬಂದ ಮೇಲೂ ತಾಳೆಗರಿಯ ಮೇಲೆ ಕಂಡರಿಸಿರುವುದನ್ನು ಕಾಣಬಹುದು.

ಧನ್ಯಕುಮಾರ ಚರಿತ್ರೆಯ ಕೆ. ಎ ೨೫೬/೧ ಹಸ್ತಪ್ರತಿಯ ಅಂತ್ಯದಲ್ಲಿ ''ಕೊಲ್ಲಸುರದಮ್ರನೆ ಸಿಚಿ ಮಾರ ೨೦ಸದು ಸುಕ್ರವರ ಕರಸಂಹತ್ಸರದಲ್ಲಿ ಬರದು ಪೂರುತಿ ಆಯ್ತು ಕೊಳುಕೊಟ್ಟೆ ಅಣ್ಣೈಯ್ಯವಸ್ಯನ ಮಗ ಚಂದ್ರಣ್ಣ ಬರದ ಧನ್ಯಕುಮಾರ ಚರಿತ್ರೆಗೆ ಮಂಗಳ ಮಹಾಶ್ರೀ ಬುದ್ಧಿ ವಿವೇಕಿಗಳಾದಂತವರ ಅಡಿಗಳಿಗೆ ತ್ರಿಕಾಲದಲ್ಲು ಭಕ್ತಿಯಿಂದಯೆರಗುತ್ತಯಿದ್ದೇನೆ ಶ್ರೀ'' ಎಂಬ ಬರಹದಿಂದ ಲಿಪಿಕಾರ ಅಷ್ಟು ವಿದ್ಯಾವಂತನಲ್ಲವೆಂಬುದು ಅಶುದ್ಧವಾದ ಬರವಣಿಗೆಯಿಂದ ವ್ಯಕ್ತವಾಗುತ್ತದೆ. ಆದರೆ ಬುದ್ಧಿವಂತರೂ ವಿವೇಕಿಗಳೂ ಆದ ವಿದ್ವಾಂಸರ ಬಗೆಗೆ ಆತ ತೋರುವ ಗೌರವಾದರಗಳು ಮೆಚ್ಚುವಂಥಹುದು.

ಮೈಸೂರು ಪದ್ಮಣಯ್ಯನು ಒಬ್ಬ ವೃತ್ತಿನಿರತ ಲಿಪಿಕಾರನಿದ್ದು ವೃತ್ತವಿಳಾಸನ ಧರ್ಮಪರೀಕ್ಷೆಯ ಕೆ. ೧೩೩ ಸಂಖ್ಯೆಯ ಹಸ್ತಪ್ರತಿಯನ್ನು ಪ್ರತಿಮಾಡಿ ಕಡೆಯಲ್ಲಿ ''ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕವರುಷ ೧೬೭೬ನೆ ಭಾವನಾಮ ಸಂವತ್ಸರದ ವೈಶಾಖಶುದ್ಧ ೧೫ ಸೋಮವಾರ ದಿವಸದಲ್ಲು ಮಹಿಶೂರ ಅಠವಣೆ ಚಾವಡಿಯ ಕರಣಿಕ ದೇವರಸಯ್ಯನವರ ಮಗ ಪದುಮಣ್ಣೆಯನು ಧರ್ಮಪರೀಕ್ಷೆಯು ಬರೆದುಕೊಟ್ಟುಯಿರುವಂತಾ ಪುಸ್ತುಕವನೋದಿದವರ್ಗೆ ಮನಮುಟ್ಟಿ ಕೇಳಿದವರ್ಗೆ ವೋದಿಸಿ ಕೇಳಿದವರ್ಗೆ ಸದ್ಧರ್ಮಾಭಿವೃದ್ಧಿರಸ್ತು'' ಎಂದು ಗ್ರಂಥವನ್ನು ಸ್ವತಃ ಓದಿದವರಿಗೆ ಕೇಳಿದವರಿಗೆ ಅನ್ಯರಿಂದ ಓದಿಸಿದವರಿಗೆ ಶುಭಕೋರಿದ್ದಾನೆ. ಅಧ್ಯಯನ ಸಂಸ್ಥೆಯಲ್ಲಿರುವ ಕೆ, ಎ ೪೭ ಮತ್ತು ಕೆ. ಎ ೨೧೭ ಹಸ್ತಪ್ರತಿಗಳು ಮೇಲೆ ತಿಳಿಸಿದ ೧೩೩ ಸಂಖ್ಯೆ ಹಸ್ತಪ್ರತಿಯ ನಕಲುಗಳಾಗಿವೆ.

ಕೆಲವು ಹಸ್ತಪ್ರತಿಕಾರರು ತಾವು ಪ್ರತಿಮಾಡಲು ಆರಂಭಿಸಿದ ಮತ್ತು ಮುಕ್ತಾಯ ಮಾಡಿದ ದಿನ ಕಾಲವನ್ನು ಸ್ಪಷ್ಟವಾಗಿ ಹೇಳಿಕೊಂಡಿದ್ದಾರೆ. ಚಂದ್ರಸಾಗರವರ್ಣಿಯ ಪರಶುರಾಮಭಾರತದ ಕೆ, ಎ ೬೦ ಸಂಖ್ಯೆಯ ಕಾಗದದ ಪ್ರತಿಯನ್ನು ಪಿರಿಯಾಪಟ್ಟಣದ ವೀರಣ್ಣನು ಪ್ರತಿಮಾಡಲು ತೆಗೆದುಕೊಂಡ ಕಾಲ ಆರುತಿಂಗಳೆಂಬುದು ಗ್ರಂಥಾಂತ್ಯದ ಬರಹದಿಂದ ತಿಳಿದುಬರುತ್ತದೆ, ಹಸ್ತಪ್ರತಿ ಇರುವಲ್ಲಿಗೆ ಹೋಗಿ ಪ್ರತಿಕಾರರು ತಮಗೆ ಬೇಕಾದ ಅಥವಾ ಅನ್ಯರಿಗೆ ಅಗತ್ಯವಿರುವ ಕೃತಿಗಳನ್ನು ಪ್ರತಿಮಾಡುತ್ತಿದ್ದರೆಂದು ತೋರುತ್ತದೆ. ತೋಟಿನಕೆರೆ ವೀರಭದ್ರಪ್ಪನವರ ಪುಟ್ಟಣ್ಣನು ಉರುಡುಗೆರೆಯಲ್ಲಿ ಭವ್ಯಾಮೃತ ಮಹಾ ಪುರಾಣವನ್ನು ಎರಡು ತಿಂಗಳ ಅವಧಿಯಲ್ಲಿ ಪ್ರತಿಮಾಡಿದನೆಂಬುದು ಕೆ. ೫೯೪

ಹಸ್ತಪ್ರತಿಯಿಂದ ವಿದಿತವಾಗುತ್ತದೆ. ಶಿಶುಮಾಯಣನ ಅಂಜನಾಚರಿತ್ರೆಯ ಕೆ. ೮೫೪ ಹಸ್ತಪ್ರತಿಯನ್ನು ಬರೆದ ಬೊಮ್ಮರಸ ಪ್ರತಿಮಾಡಿದ ಕಾಲವನ್ನು ನಿರ್ದೇಶಿಸಿದ್ದಾನೆ.

ಲಿಪಿಕಾರರು ಗ್ರಂಥಾಂತ್ಯದಲ್ಲಿ ಪ್ರತಿಮಾಡಿದ ಕಾಲ, ಸ್ಥಳಗಳ ವಿವರಗಳೇ ಅಲ್ಲದೆ ತಮ್ಮ ವಂಶದ ಬಗೆಗೂ ಹೇಳಿಕೊಳ್ಳುವುದುಂಟು. ಇದಕ್ಕೆ ಒಳ್ಳೆಯ ನಿದರ್ಶನವೆಂದರೆ ನಾಗಚಂದ್ರನ ಮಲ್ಲಿನಾಥಪುರಾಣದ ಕೆ ೧೫ ಹಸ್ತಪ್ರತಿ. ಇದರ ಅಂತ್ಯದಲ್ಲಿ ''ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕಾಬ್ದ ೧೬೩೯ ಸಂದಾ ವರ್ತಮಾನ ವಿಳಂಬಿ ಸಂವತ್ಸರೇ ಉತ್ತರಾಯಣೇ ವಸಂತರುತೌ ಮಧುಮಾಸಪ್ರಯುಕ್ತೆ ಬಲಕ್ಷಪಕ್ಷೆ ಸಂತಾನ ಸಪ್ತಮೀ ಸತ್ತಿಥೌ ವಾಚಸ್ಪತಿ ವಾಸರಸ್ಯ ದಿನಮಣಿದುದಯೆದುರ್ಧ್ವಮೇಕವಿಂಶತಿ ಘಟಿಕಾ ನಂತರೆ ಪಂಚಾಸಲಗ್ನದಲ್ಲಿ ಮತ್ತಿತ್ತಾಲೂನಗರಿಯಕೃತ್ರಿಮ ಚೈತ್ಯಾಲಯದೊಳೊಪ್ಪುತಿರ್ಪ ಸಕಲ ಗುಣನಿಧಾನಂ ಸರ್ವಗೀರ್ವಾಣನಾಥಂ ಕುವಲಯಸಖಮಿತ್ರಂ ಭಾರತಿಬಾಳನೇತ್ರಂ ತುಹಿನಗಗನ ಮೂರ್ತಿಂ ಭಾನುಕಲ್ಪಾಂತ ಕೀರ್ತಿಂ ತ್ರಿಭುವನ ನಮತಾಖ್ಯಂ ದೇವ ಪಾರಿಶ್ವನಾಥಂ ಇಂತತಿಶಯ ಗುಣನಿಳಯನಪ್ಪ ಕಮಲೋಪಸರ್ಗ ಪಾರಿಶ್ವನಾಥ ತೀರ್ಥಂಕರ ಪಾದಪಯೋಜ ಸಮೀಪದೊಳು ತತ್ಪುರವಾಸಿಗಳಪ್ಪ ಜೈನ ವಿಪ್ರೋತ್ತಮ ಜನಯಾಜನಾದ್ಯ ಪರದಾನಪ್ರತಿಗ್ರಹಾನುಗ್ರಹಪ್ರಶಸ್ತ ತ್ರಿಕಾಲ ಸಂಧ್ಯೋಪಾಸನ ಜಪ ದೇವಋಷಿ ಪಿತೃ ತರ್ಪಣಾದಿ ನಿತ್ಯಾನುಷ್ಠಾನ ತೀರ್ಥಯಾತ್ರಾ ಪ್ರತಿಷ್ಠಾಷ್ಠಮಿ ಚತುರ್ದಶ್ಯಾಷ್ಟಾಹ್ನಿಕಾದಿ ಪರ್ವ ವಿಶಿಷ್ಟಾದಾನ ಧೃತಾದಿ ನೈಮಿತ್ತಕನಪ್ಪ ಶ್ರೀವತ್ಸಗೋತ್ರ ಔಪಾಸಕ ಸೂತ್ರ ಕಾಶ್ಯಪ್ರವರ ವೃತ್ತಾನುಯೋಗ ಶಾಖೋದಯನಾದ ದೇವರಸಯ್ಯನ ಸೇವ್ಯಶೃಂಗಾರ ಪ್ರವರ್ತನದೇವ ಗುರುಭಕ್ತಿ ಬಂಧುಜನಾಬ್ಜ ಮಿತ್ರೋದಯ ಸ್ವಧರ್ಮಕಾವ್ಯಾನುಸೇವ್ಯನಾದ ಬೊಮ್ಮರಸಯ್ಯನಿಗೆ ತದ್ಗೋತ್ರಜ ತದ್ವಿರುದಾವಲಿ ವಿರಾಜಮಾನವಾದ ಪಡಣದಣದ ಪುರಿವಾಸ ಅಮರಚಂದ್ರನ ಗರ್ಭಜನಪ್ಪ ಸ್ನೇಹಗುಣ ಪ್ರಶಸ್ತನಾದ ವಿಜ್ಜೈಯ್ಯನೂ ಮಲ್ಲಿನಾಥ ಪುರಾಣಮ ಮನಮೊಲ್ದು ಲಿಖಿಸಿದೆ'' ಎಂಬ ಭಾಗದ ಲಿಪಿಕಾರನ ಶೈಲಿಯನ್ನು ಗಮನಿಸಿದಾಗ ಈತನಿಗೆ ಕನ್ನಡ ಮತ್ತು ಸಂಸ್ಕೃತ ಭಾಷೆಗಳೆರಡರಲ್ಲೂ ಪರಿಶ್ರಮವಿದ್ದಂತೆ ತೋರುತ್ತದೆ.

ಮಾತೃದೇವೋಭವ, ಪಿತೃದೇವೋಭವ, ಆಚಾರ್ಯದೇವೋಭವ ಎಂಬ ಮಾತಿನಂತೆ ಲಿಪಿಕಾರರು ಹಸ್ತಪ್ರತಿಯಲ್ಲಿ ತಮ್ಮ ತಂದೆ ತಾಯಿ ಅಥವಾ ಗುರುವಿನ ಹೆಸರು ಹೇಳುವುದುಂಟು. ನಾಗರಾಜ ಕವಿಯ ಪುಣ್ಯಾಸ್ರವದ ಕೆ. ೧೫೩ ಹಸ್ತಪ್ರತಿಯನ್ನು ಸಿದ್ಧಪಡಿಸಿದ ಪಂಡಿತ ಶ್ಯಾಮಣ್ಣನು ತಾನು ''ಶ್ರೀಮದಭಿನವ ಲಕ್ಷ್ಮೀಸೇನಾಚಾರ್ಯ ಶ್ರೀಮದಭಿನಂದನ ದೇವ ನಿರ್ಗ್ರಂಥಾಚಾರ್ಯರ ಶಿಷ್ಯ'' ಎಂದು ಹೇಳಿಕೊಂಡಿದ್ದಾನೆ. ಪಂಚಬಾಣನ ಭುಜಬಲಿ ಚರಿತೆಯ ಕೆ. ಎ ೨೩೯ ಸಂಖ್ಯೆಯ ಪ್ರತಿಯಲ್ಲಿ ''ವಿದ್ಯಾಗುರು ಬೆಳುಗುಳದ ಸ್ಥಾನಿಕ ಚನ್ನಪ್ಪಯ್ಯನ ಪಾದಕ್ಕೆ ನಮಸ್ಕಾರ'' ಎಂದು ಗುರುಭಕ್ತಿ ಪ್ರಕಟಿಸಲಾಗಿದೆ.

ಜೈನಾಚಾರ ಕೃತಿಯ ಕೆ. ೧೬೪೧ ಹಸ್ತಪ್ರತಿಯಲ್ಲಿ ಕೂಡ ''ಧರೆನುತ ಬೆಳ್ಗುಳಗ್ರಾಮದೊಳೊಪ್ಪುವ ಶ್ರೀ ಗೊಮ್ಮಟೇಶಲಾಯಳೂ ಗುರುಪ್ರಭಾಚಂದ್ರಸ್ವಾಮಿಯವರ ಶಿಷ್ಯ ಪಾರಿಶ್ವ ಅಜ್ಜಿಗಳು'' ಎಂದು ಗುರುವನ್ನು ನೆನೆಯಲಾಗಿದೆ.

ಪುಷ್ಪದಂತ ಪುರಾಣದ ಕೆ. ೫೧ ಸಂಖ್ಯೆಯ ಹಸ್ತಪ್ರತಿ ಅಧ್ಯಯನ ಸಂಸ್ಥೆಯ ಹಸ್ತಪ್ರತಿ ಭಂಡಾರದ ಪ್ರಾಚೀನ ಹಸ್ತಪ್ರತಿಗಳಲ್ಲಿ ಒಂದೆನಿಸಿದೆ. ಪ್ರತಿಕಾರ ತನ್ನ ಹೆಸರನ್ನು ಹೇಳದಿದ್ದರೂ ''ಶಕವರ್ಷ ೧೩೫೮ ರಾಕ್ಷಸ ಸಂವತ್ಸರ ಚೈತ್ರ ಶು ೩ ಬುಧವಾರ'' ಎಂದು ಕಾಲವನ್ನು

ಸೂಚಿಸಿರುವುದರಿಂದ ಕ್ರಿ.ಶ. ೧೪೩೬ರಲ್ಲಿ ಪ್ರತಿಯಾಯಿತೆಂದು ಖಚಿತವಾಗಿ ತಿಳಿದು ಬರುತ್ತದೆ.

ಚಾರುಕೀರ್ತಿ ಪಂಡಿತಾಚಾರ್ಯರ ಭವ್ಯಜನ ಚಿಂತಾಮಣಿ ಎಂಬ ಗ್ರಂಥದ ಕೆ. ಬಿ ೨೬ ಸಂಖ್ಯೆಯ ಪ್ರತಿಯ ಕಡೆಯಲ್ಲಿ ''ಯುವ ಸಂವತ್ಸರದ ಕಾರ್ತೀಕಶುದ್ಧ ಪಂಚಮೀ ಸೋಮವಾರ ಚಂದ್ರಸಾಗರವರ್ಣಿ ಬರೆದು ಬೆಳ್ಗುಳದ ಮಠಕ್ಕೆ ಒಪ್ಪಿಸಿದ ಭವ್ಯಜನ ಚಿಂತಾಮಣಿ ಸಂಪೂರ್ಣಂ ಮಂಗಲ ಮಹ'' ಎಂಬ ಬರಹವಿದ್ದು ಈ ಪ್ರತಿಗೆ ಮೂಲವಾಗಿದ್ದ ಪ್ರತಿಯ ಬಗ್ಗೆ ಬೆಳಕು ಚೆಲ್ಲುತ್ತದೆ. ಇಲ್ಲಿ ಉಕ್ತನಾಗಿರುವ ಚಂದ್ರಸಾಗರವರ್ಣಿಯು ಭವ್ಯಾಮೃತ ಮೊದಲಾದ ಕೃತಿಗಳ ಕರ್ತೃ ಈತನ ಪ್ರತಿಯನ್ನು ಆಧರಿಸಿ ಮೈಸೂರು ಅರಮನೆ ಭಂಡಾರಕ್ಕೆಂದು ಶ್ರೀನಿವಾಸ ಎಂಬವರು ೧೮೯೫ರಲ್ಲಿ ಲಿಖಿಸಿದರೆಂಬುದನ್ನು ''ಮಹೀಶೂರ ಮಹಾರಾಜ ಭಾಗದೇಯ ಪ್ರಕಾಶಿನೇ। ವಾಣಿಪಿಲಾಸ ರೂಪಾಯ ಭಾಂಡಾಗಾರಾಯ ಸುಂದರಂ। ಲಿಖಿತಂ ಶ್ರೀನಿವಾಸೇನ ಗೀತಾಸಾರವಾಸಿನಾ। ಭಾರತೀ ಭಾಗ್ಯಭವನ ಶಾಲಾಧ್ಯಕ್ಷೇಣ ಸಾದರಂ। ಮಾನ್ಮಥಾಶ್ವಯುಜೇಮಾಸೆ ಪೂರ್ಣಿಮಾ ಗುರುವಾಸರೇ। ಪೂರ್ಣೋ ಭವದ್ಭವ್ಯಜನ ಚಿನ್ತಾಮಣಿರಯಂ ಶುಭಂ'' ಎಂದು ಸಂಸ್ಕೃತದಲ್ಲಿ ಹೇಳಿಕೊಂಡಿದ್ದಾರೆ. ಅಂತೆಯೆ ಲೀಲಾವತಿ ಕಾವ್ಯದ ಕೆ. ಬಿ ೬೮ ಹಸ್ತಪ್ರತಿ ಮತ್ತು ಲೋಕೋಪಕಾರದ ಕೆ. ಬಿ ೪೪೧ ಹಸ್ತಪ್ರತಿಗಳೂ ಕೂಡ ಮೂಲಕೃತಿಯ ಬಗ್ಗೆ ಉಲ್ಲೇಖಿಸಿವೆ. ಪ್ರತಿಯಿಂದ ಪ್ರತಿಗಳು ಮರುಹುಟ್ಟು ಪಡೆಯುತ್ತ ಸಾಗುವುದನ್ನು ಇಂಥ ವಿವರಗಳಿಂದ ಅರಿಯಬಹುದು.

ಪಾಯಣ್ಣವ್ರತಿಯ ಸಮ್ಯಕ್ತ್ವ ಕೌಮುದಿಯ ಕೆ. ೯ ಹಸ್ತಪ್ರತಿಯನ್ನು ವಿಚಾರದ ನೇಮಿಚಂದ್ರವರ್ಣಿಯವರಿಗೆಂದು ಮೂರುಬಸ್ತಿ ನಾಗಪ್ಪನು ಬರೆದು ಒಪ್ಪಿಸಿದನೆಂದು ತಿಳಿದುಬರುತ್ತದೆ. ಶಾಸ್ತ್ರಸಾರ ಸಮುಚ್ಚಯ ಟೀಕು ಇರುವ ಕೆ. ೩೧೦ ಹಸ್ತಪ್ರತಿಯನ್ನು ತೆರಕಣಾಂಬಿಯ ಬ್ರಹ್ಮಸೂರೋಪಾಧ್ಯಾಯರು ಶಕ ೧೭೮೦ ಅಂದರೆ ಕ್ರಿ.ಶ. ೧೮೫೮ರಲ್ಲಿ ಪ್ರತಿಮಾಡಿದ್ದಾರೆ. ಜನ್ನನ ಅನಂತನಾಥ ಪುರಾಣದ ಕೆ. ೧೦೧೫ ಸಂಖ್ಯೆಯ ಪ್ರತಿಯನ್ನು ಕ್ರಿ.ಶ. ೧೭೧೬ರಲ್ಲಿ ವಿಜಯ್ಯನೆಂಬ ಪ್ರತಿಕಾರ ಬೊಮ್ಮರಸಯ್ಯ ಎಂಬವರಿಗೆಂದು ಬರೆಯಲಾಗಿದೆ. ನಾಗಕುಮಾರಚರಿತೆಯ ಕೆ. ೧೨೧೫ ಹಸ್ತಪ್ರತಿಯ ಅಂತ್ಯದಲ್ಲಿ ''ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕಾಬ್ದ ೧೭೦೧ನೇ ವಿಕಾರಿನಾಮ ಸಂವತ್ಸರದ ಮಾರ್ಗಶಿರ ಬ ೫ ಚಂದ್ರವಾರ ಶುಭದಿವಸದಲ್ಲಿ ಶ್ರೀರಂಗಪಟ್ಟಣದಲ್ಲುಯಿಹ ರಿಕುತಾರದ ಸೂರಿಪಂಡಿತರ ತನೂಭವ ಬೊಮ್ಮರಸಪಂಡಿತರಿಗೆ ನಗರಿಲೆ ದೇವರಸಯ್ಯನು ಬರೆದುಕೊಟ್ಟ ನಾಗಕುಮಾರಚರಿತೆ ಪುಸ್ತಕಕ್ಕೆ ಶುಭಮಸ್ತು'' ಎಂದಿದ್ದು ನಗರ್ಲೆಯ ದೇವರಸಯ್ಯನು ಶ್ರೀರಂಗಪಟ್ಟಣದಲ್ಲಿರುವ ಚಾಮರಾಜನಗರದ ಸೂರಿಪಂಡಿತರ ಮಗ ಬೊಮ್ಮರಸಪಂಡಿತರಿಗೆಂದು ಕ್ರಿ.ಶ. ೧೭೭೯ರಲ್ಲಿ ಪ್ರತಿಮಾಡಿರುವುದು ವ್ಯಕ್ತವಾಗುತ್ತದೆ.

ಕೃತಿಕಾರನ ಬಂಧುಗಳೆ ಪ್ರತಿಮಾಡಿರುವಂಥ ವಿರಳ ಸಂದರ್ಭಗಳು ಕಂಡುಬರುತ್ತವೆ. ಪದ್ಮಣಪಂಡಿತನ ಹಯಶಾಸ್ತ್ರದ ಕೆ. ೪೨೪ ಹಸ್ತಪ್ರತಿಯಲ್ಲಿ ''ಬರೆದಾತಂ ಪದ್ಮಣ ಪಂಡಿತಾರ್ಯನಳಿಯ ಪದ್ಮರಸ'' ಎಂಬ ಉಲ್ಲೇಖವಿದ್ದು ಕವಿಯ ಅಳಿಯನೆ ಪ್ರತಿ ಮಾಡಿರುವುದು ಗೋಚರಿಸುತ್ತದೆ. ಖಗೇಂದ್ರಮಣಿದರ್ಪಣದ ಕೆ. ೧೮೧೪ ಸಂಖ್ಯೆಯ ಪ್ರತಿಯಲ್ಲಿರುವ ''ಸ್ವಸ್ತಿಶ್ರೀ ಜಯಾಭ್ಯುದಯ ಶಾಲಿವಾಹನ ಶಕವರ್ಷ ೧೫೧೬ ಸಂದ ವರ್ತಮಾನ ಜಯಸಂವತ್ಸರದ ಶ್ರಾವಣ ಶು ೧೨ಲ್ಲು ಮುಕ್ಕೊಡೆಹಳ್ಳಿಯರ ಮಗ

ಪದ್ಮರಸಯ್ಯನು ತಮ್ಮ ಹಿರಿಯಣ್ಣಾಜಿಗೆ ಬರೆದಂಥ ಖಗೇಂದ್ರಮಣಿದರ್ಪಣಕ್ಕೆ ಆ ಚಂದ್ರಪ್ರಭಂ ಶುಭಂ'' ಎಂಬ ವಿವರಗಳಿಂದ ಪದ್ಮರಸಯ್ಯನೆಂಬ ಪ್ರತಿಕಾರ ತನ್ನ ತಮ್ಮನಿಗಾಗಿ ಈ ಕೃತಿಯನ್ನು ನಕಲು ಮಾಡಿದ ಸಂಗತಿ ವೇದ್ಯವಾಗುತ್ತದೆ.

ಜೈನ ಹಸ್ತಪ್ರತಿಕಾರರು ಜ್ಯೋತಿಷ್ಯಕ್ಕೆ ಸಂಬಂಧಿಸಿದ ಗ್ರಂಥಗಳನ್ನು ಪ್ರತಿಮಾಡಿದ್ದಾರೆ. ಮಲೆಯೂರ ವಿಜಯಪ್ಪಯ್ಯನು ಶ್ರೀಧರಾಚಾರ್ಯನ ಜಾತಕ ತಿಲಕದ ಕೆ. ೧೫೮೨ ಪ್ರತಿಯನ್ನು ಚಂದ್ರಸಾಗರವರ್ಣಿ ಮಾಧವನ ನರಪಿಂಗಲಿಯ ಕೆ. ೧೭೯೨/೨ ಪ್ರತಿಯನ್ನು ಬರೆದಿದ್ದಾರೆ.

ವಿಜಯಣ್ಣನ ದ್ವಾದಶಾನುಪ್ರೇಕ್ಷೆಯ ಕೆ. ೧೮೪೦ ಸಂಖ್ಯೆ ಪ್ರತಿಯ ಹಸ್ತಪ್ರತಿಕಾರ ತನ್ನ ತಾಯಿಯ ಹೆಸರನ್ನೂ ದಾಖಲಿಸಿರುವ ಅಪೂರ್ವ ಸಂಗತಿ ಉಲ್ಲೇಖಾರ್ಹವಾಗಿದೆ– ''ಶ್ರೀನಂದನ ಸಂವತ್ಸರದ ಮಾರ್ಗಶಿರ ಶುದ್ಧ ೧೦ಲು ಶುಂಕರವಾರ ಚೇಳೂರ ದೊಡ್ಡ ಶಾಮಣ್ಣನ ವಲ್ಲಭೆಯರುಯಿಬ್ಬರು ಹೆಸರು ಪಾಯಮ್ಮಯಂಬವರು ಆವರೊಳಗೆ ಹಿರಿಯಮ್ಮ ಪಾಯಮ್ಮನವರ ಗರ್ಭದಲ್ಲಿ ಹುಟ್ಟಿದವನು ನಾನು ಬ್ರಹ್ಮಪ್ಪ ಬರದಂಥ ದ್ವಾದಶಾನುಪ್ರೇಕ್ಷೆ ಸಮಾಪ್ತ ಮಂಗಲ ಮಹಾಶ್ರೀ.'' ಇದೇ ಕೃತಿಯ ಕೆ. ಬಿ. ೭೫೬ ಸಂಖ್ಯೆಯ ಕಾಗದದ ಪ್ರತಿಯನ್ನು ಹೊಳೆನರಸೀಪುರದ ಪೂಜೆ ಬಸದಿ ಚಂದ್ರನಾಥಸ್ವಾಮಿ ಸೇವಕನಾದ ರಾಯಣ್ಣನ ಕುಮಾರ ಪಾರ್ಶ್ವನಾಥಯ್ಯನು ಕ್ರಿ.ಶ. ೧೮೮೫ರಲ್ಲಿ ಪ್ರತಿಮಾಡಿರುವುದು ತಿಳಿದುಬರುತ್ತದೆ.

ವೃತ್ತವಿಲಾಸನ ಧರ್ಮಪರೀಕ್ಷೆಯ ಕೆ. ೧೫೦೯ ಸಂಖ್ಯೆಯ ಪ್ರತಿಯಲ್ಲಿ ಲಿಪಿಕಾರ ಶ್ರವಣಬೆಳಗೊಳದ ಚಾರುಕೀರ್ತಿಪಂಡಿತಾಚಾರ್ಯರಿಗೆ ಸಂಬಂಧಿಸಿದ ಕೆಲವು ಪ್ರಶಸ್ತಿಗಳನ್ನು ದಾಖಲಿಸಿದ್ದಾನೆ: ''ಸ್ವಸ್ತಿ ಶ್ರೀಮದ್ರಾಯರಾಜಗುರು ಭೂಮಂಡಲಾಚಾರ್ಯವರ್ಯ ಮಹಾವಾದ ವಾದೀಶ್ವರರಾದ ಶ್ರೀಮದಭಿನವ ಚಾರುಕೀರ್ತಿ ಪಂಡಿತಾಚಾರ್ಯ ಸ್ವಾಮಿಯವರ ತಚ್ಛಿಷ್ಯನಾದ ಹಾಸನದ ಅಳ್ಳೆತಾಯಪ್ಪನವರ ಮಗ ಪದುಮಯ್ಯನವರಿಗೆ ಆದಿರಾಜಯ್ಯನು ಬರಕೊಟ್ಟ ಧರ್ಮಪರೀಕ್ಷೆಗೆ ಶುಭಮಸ್ತು.'' ಇದೇ ಕಾವ್ಯದ ಕೆ. ೧೫೧೨ ಸಂಖ್ಯೆಯ ಹಸ್ತಪ್ರತಿ ಹರವೆಯಲ್ಲಿ ಪ್ರತಿಯಾಗಿದೆ. ಮತ್ತೊಂದು ಕೆ. ೧೬೪೩ ಪ್ರತಿಯನ್ನು ಬೊಮ್ಮರಸಯ್ಯನು ಲಿಖಿಸಿದ್ದಾನೆ.

ಮಂಗರಸನ ನೇಮಿಜಿನೇಶ ಸಂಗತಿಯ ಕೆ. ೧೪೮೧ ಸಂಖ್ಯೆಯ ಪ್ರತಿಕಾರನು ಕನಕ ಗಿರಿಯ ವಿಜಯಪಾರ್ಶ್ವನಾಥ, ಉದ್ಯೋಗಪುರದ (ಕೆಲಸೂರು) ಚಂದ್ರನಾಥ ಇವರನ್ನು ಸ್ತುತಿಸಿ ಕಡೆಯಲ್ಲಿ ''ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕವರುಷ ೧೭೫೩ನೆ ಖರಸಂವತ್ಸರದ ಮಾಘಶುದ್ಧ ೧೧ ರವಿವಾರದ ದಿವಸ ಮಲೆಯೂರ ದೇವಚಂದ್ರಯ್ಯಗಳ ದ್ವಿತೀಯ ಪುತ್ರ ಧರ್ಮಚಂದ್ರಯ್ಯನು ಬರೆದು ಸಂಪೂರ್ಣವಾಯ್ತು ಮಂಗಳ ಮಹಾಶ್ರೀ'' ಎಂಬ ವಿವರಣೆ ನೀಡಿದ್ದಾನೆ. ಇಲ್ಲಿ ಉಕ್ತನಾಗಿರುವ ದೇವಚಂದ್ರನು ರಾಜಾವಳಿ ಕಥಾಸಾರದ ಕರ್ತೃವೆ ಇರಬೇಕು. ಇದೇ ಕೃತಿಯ ಕೆ. ೧೬೪೪ ಸಂಖ್ಯೆಯ ಪ್ರತಿಯನ್ನು ಆದಿರಾಜಯ್ಯ, ಕೆ. ೧೭೯೧ ಸಂಖ್ಯೆಯ ಪ್ರತಿಯನ್ನು ಬ್ರಹ್ಮಯ್ಯ ನಕಲುಮಾಡಿದ್ದಾರೆ. ಮೇಲೆ ಉಲ್ಲೇಖಿಸಿದ ಮಲೆಯೂರಿನಲ್ಲಿಯೆ ಪ್ರತಿಯಾದ ಕೆ. ೧೬೦೮ ಸಂಖ್ಯೆಯ ಸ್ವರೂಪಸಂಬೋಧನ ಗ್ರಂಥದ ಪುಷ್ಪಿಕೆಯಿಂದ ಗ್ರಂಥಕರ್ತೃ ಪದ್ಮಣಯ್ಯನು ಮಲೆಯೂರು ವಿಜಯರಾಜಯ್ಯನವರ ದ್ವಿತೀಯ ಪುತ್ರನೆಂಬ ಅಂಶ ವಿದಿತವಾಗುತ್ತದೆ.

ಪಂಚಬಾಣನ ಭುಜಬಲಿಚರಿತೆಯ ಕೆ. ೧೫೨೮ ಸಂಖ್ಯೆಯ ಪ್ರತಿಯನ್ನು ಲಿಪಿಕಾರ ಮರಿಯಣ್ಣನು ಕ್ರಿ.ಶ. ೧೭೫೯ರಲ್ಲಿ ಸಿದ್ಧಪಡಿಸಿದ ಸಂಗತಿ ಗ್ರಂಥಾಂತ್ಯದ ''ಶ್ರೀವಿಜಯಭ್ಯುದಯ ಶಾಲಿವಾಹನ ಶಕವರುಷ ಸಾವಿರದ ೬೭೧ನೆಯ ಶುಕ್ಲ ಸಂವತ್ಸರದ ಭಾದ್ರ ಶು ೧೫ಲ್ಲು ಶ್ರೀಮದ್ಬೆಳಗುಳ ವಿದ್ಯಾದ್ರಿಮಸ್ತಕವಿರಾಜಮಾನ ಶ್ರೀದೋರ್ಬಲಿಜಿನರ ಪಾದಪಯೋರುಹಂಗಳ ಸನ್ನಿಧಾನದಲ್ಲಿ ಪಾಯಿಸೆಟ್ಟರ ಮಗ ಮರಿಯಣ್ಣನು ಮುದ್ದೇನ ಹಳ್ಳಿಯ ಚಿಕ್ಕಣ್ಣಸೆಟ್ಟರಿಗೆ ಬರೆದುಕೊಟ್ಟ ಶ್ರೀ ಭುಜಬಲಿ ಚರಿತ್ರಕ್ಕೆ ಮಂಗಲಂ ಶುಭಂ ಭದ್ರಂ'' ಎಂಬ ವಿವರದಿಂದ ಶ್ರುತಪಡುತ್ತದೆ.

ಈವರೆಗಿನ ಸಮೀಕ್ಷೆಯಿಂದ ಜೈನ ಹಸ್ತಪ್ರತಿಗಳು ಮತ್ತು ಹಸ್ತಪ್ರತಿಕಾರರಿಗೆ ಸಂಬಂಧಿಸಿದಂತೆ ಕೆಲವು ತೀರ್ಮಾನಗಳಿಗೆ ಬರಬಹುದು. ಜೈನ ಪ್ರತಿಕಾರರು ಪ್ರಾಚೀನ ಕಾವ್ಯಗಳ ಮೇಲೆ ಇಟ್ಟಿರುವ ಶ್ರದ್ಧೆ ಗೌರವ ಆದರಗಳು ಪ್ರಶಂಸಾರ್ಹವಾದುವು. ಇತರ ಧರ್ಮದ ಹಸ್ತಪ್ರತಿಕಾರರಂತೆ ಜೈನಹಸ್ತಪ್ರತಿಕಾರರು ತಮ್ಮ ಧರ್ಮದ ಕೃತಿಗಳಿಗೆ ಪ್ರಾಧಾನ್ಯತೆ ನೀಡಿ ಪ್ರತಿಮಾಡಿ ಧಾರ್ಮಿಕಪ್ರೀತಿಯನ್ನು ಮೆರೆದಿದ್ದಾರೆ. ಇವರ ದೃಷ್ಟಿ ಧಾರ್ಮಿಕವಾದರೂ ಆ ಮೂಲಕ ಶ್ರೀಮಂತವಾದ ಸಾಹಿತ್ಯರಾಶಿಯನ್ನು ಪ್ರತಿಮಾಡಿ ಉಳಿಸಿರುವುದು ಮಹತ್ವದ ವಿಷಯವಾಗಿದೆ. ಅದಕ್ಕಾಗಿ ಕನ್ನಡಿಗರು ಋಣಿಯಾಗಿದ್ದಾರೆ. ಜೈನಹಸ್ತಪ್ರತಿಕಾರರು ಗ್ರಂಥಾಂತ್ಯದಲ್ಲಿ ವೈಯಕ್ತಿಕ ಸಂಗತಿಗಳನ್ನು ಬಿತ್ತರಿಸಿರುವುದರಿಂದ ಕೃತಿಯೊಂದು ಯಾವ ಊರಿನಲ್ಲಿ ಮತ್ತು ಯಾವಾಗ ಪ್ರತಿಯಾಯಿತೆಂಬುದು ತಿಳಿಯುತ್ತದೆ. ಕರ್ನಾಟಕದಲ್ಲಿ ಇಂದು ಹಿಂದೆ ಇದ್ದ ಎಷ್ಟೋ ಬಸದಿಗಳು ನಾಶವಾಗಿವೆ. ಅಂಥ ಹೊತ್ತಿನಲ್ಲಿ ಜೈನಹಸ್ತಪ್ರತಿಕಾರರು ನೀಡಿರುವ ವಿಶೇಷಸೂಚನೆಗಳ ನೆರವಿನಿಂದ ಜಿನಬಸ್ತಿಗಳಿದ್ದ ತಾಣವನ್ನು ಗುರುತಿಸಬಹುದು. ಇತರ ಕೆಲವು ಅಂಶಗಳಿಂದ ಅಂದಿನ ಸಮಾಜ ಸಂಸ್ಕೃತಿಗೆ ಸಂಬಂಧಿಸಿದ ಸಂಗತಿಗಳನ್ನು ಮನವರಿಕೆ ಮಾಡಿಕೊಳ್ಳಲು ಸಾಧ್ಯವಾಗಿದೆ. ಅಧ್ಯಯನ ಸಂಸ್ಥೆಯ ಹಸ್ತಪ್ರತಿ ಭಂಡಾರದ ಬಹಳಷ್ಟು ಪ್ರತಿಕಾರರು ಮೈಸೂರು ಜಿಲ್ಲೆಗೆ ಸೇರಿದವರೆಂಬ ಸಂಗತಿ ಕೂಡ ಗಮನಾರ್ಹವಾಗಿದೆ. ಸ್ಥಳನಾಮ ಅಧ್ಯಯನಕ್ಕೆ ಪೂರಕ ಸಾಮಗ್ರಿಯಾಗಿ ನಾಸಿಕಪುರ (ಮೂಗೂರು) ಕನಕಗಿರಿ (ಮಲೆಯೂರು) ಉದ್ಯೋಗಪುರ (ಕೆಲಸೂರು) ಯಂತ್ರಪುರ (ತಗಡೂರು) ಎಂದು ಕನ್ನಡದ ಹೆಸರುಗಳು ಸಂಸ್ಕೃತೀಕರಣಗೊಂಡಿರುವುದನ್ನೂ ಅರಿಕುಠಾರ ಎಂದು ಚಾಮರಾಜನಗರಕ್ಕೆ ಇದ್ದುದನ್ನೂ ಈ ಹಸ್ತಪ್ರತಿಗಳ ಲಿಪಿಕಾರರು ನೀಡಿರುವ ಮಾಹಿತಿಗಳಿಂದ ಅರಿಯಬಹುದು.

*ಅಮೃತವರ್ಷ, ೧೯೯೫*

*ಗ್ರಂಥ ಸಂಪಾದನೆ: ಕೆಲವು ಅಧ್ಯಯನ, ೧೯೯೭, ಪು. ೧-೧೬*

# ೫೦. ಮಂಥನ

● ಎಸ್. ಶಿವಣ್ಣ

**ಪುಷ್ಪದಂತ ಪುರಾಣ: ಅಜ್ಞಾತಕರ್ತೃವಿನ ಅಲಭ್ಯ ಕೃತಿ**

ಕನ್ನಡದ ಉಪಲಬ್ಧ ಮೊದಲ ಕೃತಿ 'ಕವಿರಾಜಮಾರ್ಗ' ರಾಷ್ಟ್ರಕೂಟ ಚಕ್ರವರ್ತಿ ನೃಪತುಂಗ (೮೧೪-೭೭)ನ ಸಮಕಾಲೀನ ಕೃತಿ. ಇದು 'ಅಲಂಕಾರ'ಪ್ರಕಾರಕ್ಕೆ ಸಂಬಂಧಿಸಿದ ಕೃತಿಯಾಗಿದ್ದು ತನ್ನ ಪೂರ್ವಕಾಲೀನ ಕನ್ನಡ ವಾಙ್ಮಯದ ಚಟುವಟಿಕೆಗಳ ಹಲವಾರು ದಾಖಲೆಗಳನ್ನು ಒಳಗೊಂಡಿದೆ. ಗದ್ಯ-ಪದ್ಯ ಕವಿಗಳ ಉಲ್ಲೇಖ, ಚತ್ತಾಣ-ಬೆದಂಡೆ ಮೊದಲಾದ ಕಾವ್ಯಪ್ರಕಾರಗಳ ಉಲ್ಲೇಖ ಮೇಲಿನ ಮಾತಿಗೆ ಉದಾಹರಣೆಯಾಗಿದೆ. ೭-೮-೯ನೆಯ ಶತಮಾನಗಳಲ್ಲಿ ಕನ್ನಡದಲ್ಲಿ ಕಾವ್ಯಾದಿಗಳು ರಚಿತವಾಗಿದ್ದರೂ ಅವೊಂದು ಪೂರ್ಣ ರೂಪದಲ್ಲಿ ಉಳಿದುಬಂದಿಲ್ಲ. ಆದರೂ ನಾಗವರ್ಮ (೧೦೪೨), ಕೇಶಿರಾಜ (ಸು. ೧೨೬೦), ಭಟ್ಟಾಕಳಂಕರ (೧೬೦೪) ವ್ಯಾಕರಣಗಳಲ್ಲಿ ಹಾಗೂ ಮಲ್ಲಿಕಾರ್ಜುನ (ಸು. ೧೨೪೫), ಕವಿಮಲ್ಲ(ಸು. ೧೫೦೦) ಮತ್ತು ಅಭಿನವವಾದಿವಿದ್ಯಾನಂದರ (ಸು. ೧೫೩೩) ಸಂಕಲನ ಕೃತಿಗಳಲ್ಲಿ ಹಲವಾರು ಅಲಭ್ಯ ಕೃತಿಗಳ ಪದ್ಯಗಳು, ವಾಕ್ಯವೇಷ್ಟನಗಳು ಕರ್ತೃ-ಕೃತಿ ನಾಮಗಳಿಲ್ಲದೆ ಪಳೆಯುಳಿಕೆಗಳಂತೆ ಉಲ್ಲೇಖಗೊಂಡಿವೆ. (ಅಭಿನವವಾದಿ ವಿದ್ಯಾನಂದ ಮಾತ್ರ ಪದ್ಯಗಳ ಆಕರಗಳನ್ನು ಸೂಚಿಸಿದ್ದಾನೆ).

ಅಭಿನವವಾದಿ ವಿದ್ಯಾನಂದ (೧೫೩೩) 'ಕಾವ್ಯಸಾರಂ' ಸಂಕಲನದ ಸಂಯೋಜಕ. ಇದರಲ್ಲಿ ೪೫ ಅಧ್ಯಾಯಗಳಿದ್ದು ೧೧೩೭ (+೬) ಪದ್ಯಗಳಿವೆ. ಈತ ತನ್ನ ಕೃತಿಯಲ್ಲಿನ ಉದ್ಧೃತ ಪದ್ಯಗಳಿಗೆ ಆಕರ ತಿಳಿಸಿ ಸಾಹಿತ್ಯಚರಿತ್ರಾಭ್ಯಾಸಿಗಳಿಗೆ ವಿಶೇಷವಾದ ಸಹಾಯ ಮಾಡಿದ್ದಾನೆ.

ಅಭಿನವವಾದಿ ವಿದ್ಯಾನಂದ 'ಪುಷ್ಪದಂತ ಪುರಾಣ' ಎಂಬ ಕೃತಿಗೆ ಸಂಬಂಧಿಸಿದ ೪ ಕಂದ (ಕ್ರಮಾಂಕ: ೧೦೩, ೧೦೪, ೭೪೫ ಮತ್ತು ೭೮೫) ಹಾಗೂ ೩ ವೃತ್ತ (ಕ್ರಮಾಂಕ: ೭೪೪, ೭೪೬, ೧೦೩೬)ಗಳನ್ನು ಉಲ್ಲೇಖಿಸಿದ್ದಾನೆ. ಇವು ಅವನೇ ಉದಾಹರಿಸಿರುವ ಗುಣವರ್ಮ IIನ 'ಪುಷ್ಪದಂತ ಪುರಾಣ'ದಲ್ಲಿಲ್ಲ. ಹೀಗಾಗಿ ಈ ಕಂದ-ವೃತ್ತಗಳನ್ನುಳ್ಳ 'ಪುಷ್ಪದಂತ ಪುರಾಣ' ಗುಣವರ್ಮ IIನ ಕೃತಿಗಿಂತ ಭಿನ್ನವಾದುದೆಂಬುದರಲ್ಲಿ ಸಂದೇಹವಿಲ್ಲ. ಅಲ್ಲದೆ ಕನ್ನಡದಲ್ಲಿ ಮತ್ತೊಂದು 'ಪುಷ್ಪದಂತ ಪುರಾಣ' ರಚಿತವಾಗಿದ್ದ ಸಂಗತಿ 'ಕಾವ್ಯಸಾರ'ದಿಂದ ಬೆಳಕಿಗೆ ಬಂದಂತಾಗಿದೆ.

'ಕಾವ್ಯಸಾರಂ'ನಲ್ಲಿನ ೭ ಕಂದ-ವೃತ್ತಗಳಲ್ಲಿ ಕ್ರಮಾಂಕ ೧೦೩೬ನೆಯ 'ಸುರಪತಿಯಂತೆ ವಿಸ್ಫುರಿತನೇತ್ರ, ಸಹಸ್ರ ವಿರಾಜಿತಂ........' ಎಂಬ ವೃತ್ತ ನಾಗವರ್ಮ IIನ (೧೦೪೨) 'ಕಾವ್ಯಾವಲೋಕನ'ದ ೩೩೮ನೆಯ ಪದ್ಯವಾಗಿ ಉಲ್ಲೇಖಗೊಂಡಿದೆ. ಅಲ್ಲದೆ ಇದೇ ಪದ್ಯ ಮಲ್ಲಿಕಾರ್ಜುನನ 'ಸೂಕ್ತಿಸುಧಾರ್ಣವ'ದಲ್ಲಿಯೂ ಲಭ್ಯವಿದೆ.

ಹೀಗಾಗಿ ಮೇಲಿನ 'ಪುಷ್ಪದಂತ ಪುರಾಣ' ಕ್ರಿ.ಶ. ೧೦೪೨ಕ್ಕಿಂತ ಹಿಂದಿನ

ರಚನೆಯೆಂಬುದರಲ್ಲಿ ಸಂಶಯವಿಲ್ಲ. ಇದರ ಕರ್ತೃ ಯಾರೆಂಬ ಸಂಗತಿ ನಿಗೂಢವಾಗಿದೆ. ಅಲ್ಲದೆ ಗುಣವರ್ಮ IIನಿಗಿಂತ ಪೂರ್ವದಲ್ಲಿಯೆ ಮತ್ತೊಂದು 'ಪುಷ್ಪದಂತ ಪುರಾಣ' ರಚಿತವಾಗಿದ್ದ ಸಂಗತಿ ತಿಳಿದುಬಂದಂತಾಗಿದೆ.

## ಮಾಧುರ್ಯ ಬಿಂಬಾಧರೇ

ಮೇಲ್ಕಂಡ ವೃತ್ತಾಂತ್ಯ ಅಂಕಿತವುಳ್ಳ ಓಲೆಯೊಂದು ದೊರೆತಿದ್ದು ಅದನ್ನು ಈ ಕೆಳಗೆ ವಿವರಿಸಲಾಗಿದೆ.

ಓಲೆಯಲ್ಲಿ ಪತ್ರಸಂಖ್ಯೆಯ ಉಲ್ಲೇಖವಿಲ್ಲ. ಪ್ರತಿ ''ಶ್ರೀ ಗುರವೇ ನಮಃ'' ಎಂದು ಸಾಂಪ್ರದಾಯಿಕ ರೀತಿಯಲ್ಲಿ ಆರಂಭವಾಗಿದ್ದರೂ ಆದಿಯಲ್ಲಿ ಅಸಂಪೂರ್ಣವಾದ ''೨''ನೆಯ ಕ್ರಮಾಂಕ ಸಂಖ್ಯೆಯ ವೃತ್ತದ ಉತ್ತರಭಾಗವಾಗಿದೆ. ಅನಂತರ ''೩'' ಮತ್ತು ''೪''ನೆಯ ವೃತ್ತಗಳಿವೆ. ಪ್ರತಿ ವೃತ್ತಗಳ ಕೊನೆಯಲ್ಲಿ ''ಮಾಧುರ್ಯ ಬಿಂಬಾಧರೇ'' ಎಂಬ ಅಂಕಿತವಿದೆ. ''೪''ನೆಯ ವೃತ್ತಾನಂತರ ''ನಾಲ್ಕು ಜಾತಿಪುರುಷರ ಲಕ್ಷಣಂ'' ಎಂದು ಹೇಳಿ ಸಂಸ್ಕೃತ ಶ್ಲೋಕವೊಂದನ್ನು ಉದಾಹರಿಸಲಾಗಿದೆ. ಶ್ಲೋಕಾಂತ್ಯದೊಡನೆ ಓಲೆಯ ಪತ್ರದ ಬರವಣಿಗೆ ಮುಗಿದಿದೆ. ಇಲ್ಲಿ ಕಾಣಬರುವ ಅಂಕಿತ ಪ್ರಯೋಗದಿಂದ ಕೃತಿ ವೃತ್ತಛಂದೋವಾಹಿಯಾಗಿದ್ದು ''ಶತಕ'' ಪ್ರಕಾರಕ್ಕೆ ಸಂಬಂಧಿಸಿರುವುದಾಗಿ ಭಾವಿಸಬಹುದಾಗಿದೆ. ಅಷ್ಟೇ ಅಲ್ಲದೆ ಉಪಲಬ್ಧ ಪದ್ಯಗಳಿಂದ ಶತಕದ ವಸ್ತು ''ಕಾಮಶಾಸ್ತ್ರ''ದ ಅಭಿವ್ಯಕ್ತಿಗೆ ನಿಯೋಜಿತವಾಗಿರುವ ಅಂಶ ಸ್ಪಷ್ಟವಾಗುವುದು. ಇದಕ್ಕೆ ಪೂರಕವಾಗಿ ಉದ್ಧೃತ ಹೊಂದಿರುವ ಸಂಸ್ಕೃತ ಶ್ಲೋಕವೂ ಮೇಲಿನ ಅಂಶವನ್ನೇ ಪುಷ್ಟೀಕರಿಸುತ್ತದೆ. ಹೀಗಾಗಿ ವಸ್ತುವಿನ ದೃಷ್ಟಿಯಿಂದ ಅಸಮಗ್ರ ಕೃತಿಗೆ ಕನ್ನಡ ಶತಕ ಸಾಹಿತ್ಯದ ಚರಿತ್ರೆಯಲ್ಲಿ ಗಮನಾರ್ಹವಾದ ಬೆಲೆಯುಂಟು.

ಕವಿಕಾಮ (ಸು. ೧೨೦೦) ''ಶೃಂಗಾರ ರತ್ನಾಕರ''ದೊಡನೆ ''ಸ್ತನಶತಕ''ವನ್ನು ರಚಿಸಿರುವುದಾಗಿ ತಿಳಿದಿದೆ. (ಕ. ಕ. ಚ. ೧) ಆದರೆ ದುರದೃಷ್ಟವಶಾತ್ ಆ ಶತಕದ ಉಲ್ಲೇಖವಲ್ಲದೆ ಮತ್ತೇನೂ ತಿಳಿದುಬಂದಿಲ್ಲ. ಮೇಲಿನ ಕೃತಿಗಳೆರಡೂ ವಸ್ತುವಿನ ದೃಷ್ಟಿಯಿಂದ ಸಮಾನತೆಯಿಂದಿರುವ ಕಾರಣ ಎರಡು ಪರಸ್ಪರ ಭಿನ್ನವೋ ಅಭಿನ್ನವೋ ಎಂಬುದನ್ನು ನಿರ್ಧರಿಸಲು ಉಪಲಬ್ಧ ಸಾಮಗ್ರಿ ಸಾಲದು. ಮುಂದಿನ ಸಂಶೋಧನೆಗಳು ಈ ವಿಷಯದ ಬಗೆಗೆ ಹೆಚ್ಚಿನ ಬೆಳಕನ್ನು ಚೆಲ್ಲಬೇಕಾಗಿದೆ.

ಓಲೆಯ ಪ್ರತಿಯಿಂದ ಸಂಪ್ರತಿಸುವಲ್ಲಿ ಸಲಹೆಗಳನ್ನಿತ್ತ ಶ್ರೀ ನ. ಕೃಷ್ಣಜೋಯಿಸ್ ಅವರಿಗೂ ಓಲೆಯನ್ನಿತ್ತ ಅತ್ತಿಬೆಲೆ ಶ್ರೀ ಎಚ್. ಜಿ. ಸಿದ್ಧಲಿಂಗಯ್ಯನವರಿಗೂ ನನ್ನ ವಂದನೆಗಳನ್ನರ್ಪಿಸುತ್ತೇನೆ.

ಈ ಓಲೆಯಲ್ಲಿನ ಪೂರ್ಣಪಾಠ ಇಂತಿದೆ.

*ಭಂಗದೊಳಲ್ತೆ ತಾನೆ ನುಡಿವಂ ಮತ್ತಂಘ್ರಿಯೊಳ್ ಬೀಳ್ವುದಂ
ಕೂಡುವಂ ರಂಜಿಸುವಂ ವಿದೂಷಕನವಂ ಮಾಧುರ್ಯಬಿಂಬಾಧರೇ ॥೨॥

ವಿನಯಂಗುಂದುವನಲ್ಲ ಎಲ್ಲರೊಳಗಂ ಪೇಳ್ದಂತುಟಂ ಮಾಡುವಂ
ಮನಸಂತೋಷಿಪ ಮಾರ್ಗದಪ್ಪ ಪರಿಹಾಸಾಸ್ಪದಂ ನಿರ್ಮಚ್ಚರಂ

ವನಿತಾಲೋಲುಪ ದೇವಭಕ್ತನಿರುತಂ ಮಾಲ್ಯಾನುಲೇಪಪ್ರಿಯಂ
ಜನರೊಳ್ ಸನ್ನುತ ಪೀಠಮರ್ದನನವಂ ಮಾಧುರ್ಯ ಬಿಂಬಾಧರೇ ॥೩॥

[ಅತಿ] ಗಂಭೀರನುದಾರ ಧೀರನುಚಿತಂ ನಾನಾ ಕಥಾಲಾಪನಂ
ರತಿಸಂಪರ್ಕನತಿಪ್ರಪಂಚರಹಿತಂ ಶೌಚವ್ರತಾನೋಜ್ಞತಂ
ಮತಿವಂತಂ ಮದನಾಗಮಜ್ಞನಜಡಂ ಸಂಗೀತ ಸಾಹಿತ್ಯವಾಂಛಿತ
[ಚಿತ್ತಂ] ಗುಣನಾಗಲೀಕನ ತೆಱಂ ಮಾಧುರ್ಯ ಬಿಂಬಾಧರೇ ॥೪॥

ನಾಲ್ಕು ಜಾತಿ ಪುರುಷರ ಲಕ್ಷಣ:

॥ಶ್ಲೋಕ॥ ಮುಖೇಚಕ್ಷುಷಿ ನಾಸಾಭ್ಯಾಂ
ಕಂಠೇವಕ್ಷಸಿ ವಕ್ಷಸಿ (ಚಕ್ಷುಷಿ)
ಪಾದಯೋಃಪ್ರಣವಾಕಾರಂ
ಇತ್ಯೇತೇದೀಪಲಕ್ಷಣಂ॥

## ಪಾಯಣ್ಣವ್ರತಿ: ಕಾಲ ವಿಚಾರ

ಸಾಂಗತ್ಯದಲ್ಲಿನ 'ಸಂಯುಕ್ತ್ವಕೌಮುದಿ'ಯ ಕರ್ತೃ. ಪಾಯಣ್ಣವ್ರತಿ. ಈತ ಸೇನಗಣದ ಲಕ್ಷ್ಮೀಸೇನ ಮುನಿಯಿಂದ ದೀಕ್ಷೆ ಹೊಂದಿದ್ದು ಈತನ ಕಾಲವನ್ನು ಆರ್. ನರಸಿಂಹಾಚಾರ್ಯರು 'ಸುಮಾರು ೧೬೦೦ ಆಗಿರಬಹುದು' ಎಂದಿದ್ದಾರೆ.[೧]

ಈಚೆಗೆ ಅದೃಷ್ಟವಶಾತ್ ಮೇಲಿನ ಪಾಯಣವರ್ಣಿ ಪ್ರತಿಮಾಡಿದ ನಾಗವರ್ಮನ 'ವೀರವರ್ಧಮಾನ ಪುರಾಣ', ಆಚಣ್ಣನ 'ವರ್ಧಮಾನ ಪುರಾಣ' ಮತ್ತು ಅಗ್ಗಳನ 'ಚಂದ್ರಪ್ರಭ ಪುರಾಣ'ಗಳ ಪ್ರತಿಗಳು ಲಭಿಸಿದ್ದು, ಇವುಗಳ ಅಂತ್ಯದಲ್ಲಿ ಪಾಯಣವರ್ಣಿ ತಾನು ಅವುಗಳನ್ನು ಪ್ರತಿಮಾಡಿದ ಕಾಲಗಳನ್ನು ಕೊಟ್ಟು[೨] ಉಪಕರಿಸಿದ್ದಾನೆ. ಅವು ಅನುಕ್ರಮವಾಗಿ ಹೀಗಿವೆ:

೧. ವೀರವರ್ಧಮಾನ ಪುರಾಣ-ಶಾ. ಶ. ೧೪೭೯

೨. ವರ್ಧಮಾನ ಪುರಾಣ (ಆಚಣ್ಣ)-ಶಾ. ಶ. ೧೪೯೧

೩. ಅಗ್ಗಳನ ಚಂದ್ರಪ್ರಭ ಪುರಾಣ-ಶಾ. ಶ. ೧೪೯೪.

ಹೀಗಾಗಿ ಈ ಕೃತಿಗಳು ಕ್ರಿ.ಶ. ೧೫೬೭, ೧೫೬೯, ೧೫೭೨ರಲ್ಲಿ ಪ್ರತಿಯಾಗಿವೆ.

ಹೀಗಾಗಿ ಪಾಯಣವರ್ಣಿಯ ಕಾಲವನ್ನು ಕವಿಚರಿತೆಕಾರರು ಸೂಚಿಸಿದ ಕಾಲವಾದ ಸು. ೧೬೦೦ಕ್ಕಿಂತ ಸುಮಾರು ೫೦ ವರ್ಷ ಹಿಂದಕ್ಕೆ ಹಾಕಿ ಅವನ ಕಾಲ ೧೫೫೦ ಎಂದೆನ್ನಬಹುದಾಗಿದೆ. ಈ ಪ್ರತಿಗಳಿಂದ ಪಾಯಣವರ್ಣಿಯ ಸ್ವಹಸ್ತಾಕ್ಷರ ಲಭಿಸಿದಂತಾಗಿದೆ.

## ಕದಂಬನೀತಿ: ಕರ್ತೃತ್ವ ವಿಚಾರ

ಉಸ್ಮಾನಿಯ ವಿಶ್ವವಿದ್ಯಾಲಯದ ಪ್ರಕಟಿತ ಹಸ್ತಪ್ರತಿಸೂಚಿಯ ಕ್ರಮಾಂಕ ೧೯೦

---

೧ ಕರ್ಣಾಟಕ ಕವಿಚರಿತೆ, ದ್ವಿತೀಯ ಸಂಪುಟ, ಬೆಂಗಳೂರು, ೧೯೧೯

೨ ಬಿ. ಎಸ್. ಸಣ್ಣಯ್ಯ (ಸಂ): ಎರಡನೆಯ ನಾಗವರ್ಮ ವಿರಚಿತ ವರ್ಧಮಾನ ಪುರಾಣಂ, ಪೀಠಿಕೆ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ೧೯೭೪, ಪುಟ ೪ (ಅಡಿಟಿಪ್ಪಣಿ)

(ಪುಟ ೨೨೬-೨೭)ರಲ್ಲಿ 'ಕದಂಬ ನೀತಿ' ಎಂಬ ಹೆಸರಿನ ಕೃತಿಯೊಂದರ[೩] ಪರಿಚಯವಿದೆ. ಕೃತಿಯ ಮೊದಲಿನ ೧೧ ಪದ್ಯಗಳು ಲೋಪವಾಗಿದ್ದು ಕೃತಿ ೧೨ನೆಯ ಪದ್ಯದಿಂದ ಉಪಲಬ್ಧವಿದೆ. ಸೂಚಿಕಾರರು 'ಕದಂಬನೀತಿ'ಯ ಕರ್ತೃ ಕೊಟ್ಟೂರ ಬಸವೇಶ್ವರನೆಂದು ಸೂಚಿಯಲ್ಲಿ ನಮೂದಿಸಿದ್ದಾರೆ.

'ಕದಂಬನೀತಿ'ಯ ಕಾಗದದ ಪ್ರತಿಯೊಂದು ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದ ಸಂಗ್ರಹದಲ್ಲಿದೆ. ಇದರಲ್ಲಿ ಉಸ್ಮಾನಿಯ ಸಂಗ್ರಹದ ಪ್ರತಿಯಲ್ಲಿ ಲೋಪವಾಗಿರುವ ಮೊದಲ ೧೧ ಪದ್ಯಗಳು ಉಪಲಬ್ಧವಿವೆ. ಹೀಗಾಗಿ ಬೆಂಗಳೂರಿನ ಪ್ರತಿಯನ್ನು ಬಳಸಿಕೊಂಡು 'ಕದಂಬನೀತಿ'ಯ ಕರ್ತೃವಿನ ಬಗೆಗೆ ವಿವೇಚಿಸಲಾಗಿದೆ.

'ಕದಂಬನೀತಿ'ಕಾರ ತನ್ನ ಗುರು, ವಾಸಸ್ಥಳ, ಕೃತಿಯ ಆಕರಗಳ ಬಗೆಗೆ ಈ ರೀತಿ ಹೇಳಿದ್ದಾನೆ.

ಇದು ಸಕಲ ಶಿವಶರಣ ಚರಣ ಸರಸಿಜದ ಷ
ಟ್ಪದನೆನಿಪ ಉಜ್ಜನಿಯ ಸಿಂಪಾಸನಾಧೀಶ
ಸದಮಲಾತ್ಮಕ ಚನ್ನ ವೀರೇಶ್ವರನ ಹಸ್ತಕಮಲಸಂಜಾತನೆನಿಪಾ
ಮದನವೈರಿಯ ಕರುಣದಿಂದ ಕೊಟ್ಟೂರ ನಗ
ರದ ಸೀಮೆಯೊಳಗಿರ್ಪ ನವಶೈವಪೌರಾಣ
ಹೃದಯಪೂರಿತ ಸಿದ್ದಲಿಂಗಾಹಾರ್ಯ ಕನ್ನಡಿಸಿದಂ ಕದಂಬದ ನೀತಿಯಾ ॥ (೧೦).

ಇದರಿಂದ ಸಿದ್ಧಲಿಂಗಾರ್ಯ ಉಜ್ಜನಿ ಸಿಂಹಾಸನದ ಚನ್ನವೀರೇಶ್ವರನ ಶಿಷ್ಯನೆಂದೂ ಕೊಟ್ಟೂರ ಸೀಮೆಯವನೆಂದೂ ಕೃತಿಯನ್ನು (ಸಂಸ್ಕೃತದಿಂದ?) ಕನ್ನಡಿಸಿರುವುದಾಗಿಯೂ ತಿಳಿಯುತ್ತದೆ.

ಈ ಮೇಲಿನ ಗ್ರಂಥೋಕ್ತ ಉಲ್ಲೇಖದಿಂದ 'ಕದಂಬನೀತಿ'ಯ ಕೃತಿಕಾರ ಸೂಚಿಕಾರರು ಕೊಟ್ಟಿರುವಂತೆ ಕೊಟ್ಟೂರ ಬಸವೇಶ್ವರನಾಗಿರದೆ, ಸಿದ್ಧಲಿಂಗಾರ್ಯನಾಗಿದ್ದಾನೆ.

ಈ ಮುಂದೆ 'ಕದಂಬನೀತಿ'ಯ ಪರಿಚಯವನ್ನು ಸಂಗ್ರಹವಾಗಿ ಕೊಟ್ಟಿದೆ.

'ಕದಂಬನೀತಿ ಮಾಲಿಕೆ'ಯ ಆದಿಯಲ್ಲಿ ಕವಿ ಕೊಟ್ಟೂರ ಬಸವಲಿಂಗೇಶ, ಎಡೆಯೂರ ತೋಂಟದಸಿದ್ಧ, ಅಗಜಾತೆ, ಕರಿವದನ, ಬಸವೇಶ, ಚನ್ನಬಸವೇಶ, ಪ್ರಭುದೇವ, ದಸರಯ್ಯ, ಸಿದ್ಧರಾಮಯ್ಯ, ಅಜಗಣ್ಣ, ಅನುಮಿಷ, ಸುಂಕದ ಬಂಕಯ್ಯ, ಮಡಿವಾಳ ಮಾಚಯ್ಯ, ಮೋಳಿಗಿ ಮಾರಯ್ಯ ಮೊದಲಾದ ಶಿವಪುರಾತನರನ್ನು ಸ್ಮರಿಸಿದ್ದಾನೆ. ಅನಂತರ ಸಂಸ್ಕೃತ-ಕನ್ನಡಗಳಲ್ಲಿ ಕೃತಿಗಳನ್ನು ರಚಿಸಿದ ಪಾಲ್ಕುರಿಕೆ ಸೋಮ, ಭೀಮ, ಕಾಳಿದಾಸ, ಹರೀಶ, ಬಾಣ, ಮಳೆಯರಾಜ ಮತ್ತು ನಿರೋಷ್ಠದ ಕಾವ್ಯವನ್ನು ಹೇಳಿದ ಮುದ್ದುಲಿಂಗಾರ್ಯರನ್ನು ಹೆಸರಿಸಿರುವನು. ಅಲ್ಲದೆ, ಮುದ್ದುಲಿಂಗಾರ್ಯನ ಅಪ್ಪಣೆಯಂತೆ ತಾನು 'ಕದಂಬನೀತಿ ಮಾಲಿಕೆ'ಯನ್ನು ರಚಿಸಲು ತೊಡಗಿದುದಾಗಿ ತಿಳಿಸಿರುವನು.

---

೩. *A Descriptive Catalogue of the Kannada Manuscripts in the Osmania University Library*, Ed. B. Ramachandrarao & T. V. Venkatachalasastry, Osmania University, Hyderabad (1966).

'ಕದಂಬನೀತಿ ಮಾಲಿಕೆ'ಯಲ್ಲಿ ೧೦೫ ವಾರ್ಧಕ ಷಟ್ಪದಿಗಳಿವೆ. ಪ್ರತಿ ಪದ್ಯವು 'ಶ್ರೀ ಚಂದ್ರಚೂಡಾಮಣೀ' ಎಂಬ ಅಂಕಿತದಿಂದ ಮುಗಿಯುತ್ತದೆ.

ಕೃತಿಯಿಂದ ೨-೩ ಪದ್ಯಗಳನ್ನು ಈ ಕೆಳಗೆ ಉದಾಹರಿಸಿದೆ.

ಪರಮಪಾವನಕಾಯ ಪಾಪಗತ ನಿರ್ಮಾಯ
ಶರಣಜನಮಂದಾರ ಸಾರಕರುಣಾಪೂರ
ವರಮಂತ್ರದಾಗರನೆ ವರದಲೀಲಾಕರನೆ ವಂದಿಸುವ ಸದ್ಭಕ್ತರಾ
ಪೊ[ರೆವುತಿ]ಹ ಪರಮಗುರು ಚನ್ನವೀರೇಶ್ವರನ
ಚರಣಸರಸಿಜವ ನೆರೆ ಹೃತ್ಕಮಲದೊಳಗಿಟ್ಟು
ವರವ ನಾನೀ ಕದ[ಂಬದ] ನೀತಿಮಾಲಿಕೆಯ ಬರೆದೋದಿ ಲಾಲಿಸುವುದೂ ॥ (೧)

ತಾರಾದ್ರಿಯಿಂದಲವತರಿಸಿ ಮರ್ತ್ಯಕೆ ಬಂದು
ಸಾರತರವಾದ ಗುರುಬಸವಲಿಂಗೇಶನೊ[ಳು]
ಕಾರುಣ್ಯ ಲಿಂಗೋಪದೇಶಮಂ ಪಡೆದು ಕೆಲಕಾಲ ದೇಶಾಂತರ[ವ]ನೂ
ಪೂರೈಸಿಯೈವತ್ತುಆರುದೇಶಕಧಿಕವ
ಹ ಗ್ರಾಮ ಕೊಟ್ಟೂರ ಪುರದೊಳಗೆ ಸಂತತ[ದಿ]
ಭೂರಿಯಿಂದೆಸೆವ ಮಹಿಮ ತೋರ್ದ ಬಸವಲಿಂಗೇಶ ಕೊಡು ಮತಿಯನೊಲಿದೂ ॥ (೨)

ಜಯಜಗಕ್ಕಾಧಾರ ಜನನ ದುಃಖವಿದೂರ
ಜಯಲೋಕ ಕಾ[ರಾ]ಧ್ಯ ಸು[ಖ]ಲಲಿತ ಚಿತ್ಸಾಧ್ಯ
ಜಯತು ಪಾವನ ಕಾಯ ಜಯತು ಸುಜನಪ್ರಿಯ ಜಯಜಯತು ಮೃತ್ಯುಂಜಯಾ
ಜಯತು ನಿತ್ಯಾನಂದ ಜಿತಕರ್ಮ ಭವಬಂಧ
ಜಯತು ಪರಸುಖರಾಜ್ಯ ಭುವನೈ(ಕ)ನುತ ಪೂಜ್ಯ
ಜಯ ಜಯತು ಎಡವೂರ ತೋಂಟದಸಿದ್ಧ ಕೊಡು ಎನಗೆ ಎಡಪಿಡದ ಮತಿಯನೊಲಿದೂ ॥ (೩)

ಮನವೆಂಬ ಹಸ್ತಿಮದವೇರಿ ವಿಷಯಗಳೆಂಬ
ವನಕಡರಿ ಪೋಗಿ ತಿರುತಿರುಗಿ ಸಂಚಲಿಸುತಿಹು
ದನಿತರೊಳ್ ಸುಜ್ಞಾನವಂದೆಂಬ ಅಂಕುಶದ ಮೊನೆಯಿಂದ ತಿವಿದು ತಿರುಹೀ
ಮುನಿದು ನಿರ್ಮೋಹವಂದೆಂಬ ಗದೆಯಿಂದೊತ್ತಿ
ಘನಪ್ರಾಣಲಿಂಗವೆಂದೆಂಬ ಕಂಬಕೆ ಕಟ್ಟಿ
ಚಿನುಮಯಾತ್ಮಕನಾಗಿ ಬಾಳುವಾತನೆ ಮುಕ್ತ ಶ್ರೀ ಚಂದ್ರಚೂಡಾಮಣೀ ॥ (೧೭)

## ವಚನಕಾರ ಗೋಣಿಮಾರಯ್ಯ : ಒಂದು ಟಿಪ್ಪಣಿ

ಕ್ರಿ.ಶ. ೧೯೬೫ರಲ್ಲಿ ಮೈಸೂರು ಪ್ರಾಚ್ಯವಿದ್ಯಾ ಸಂಶೋಧನಾಲಯದಿಂದ ಪ್ರಕಟವಾದ 'ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚೀ.' ಚತುರ್ಥ ಸಂಪುಟ ಕ್ರಮಾಂಕ ೧೫೧೭ರಲ್ಲಿನ (ಪುಟ-೨) 'ವಚನಗಳು' ಕೃತಿಯ 'ವಿಶೇಷ'ದಲ್ಲಿ 'ಸತ್ತು ಚಿತ್ತಾನಂದ.....' ಎಂಬ ಕೇಟೇಶ್ವರಲಿಂಗ ಅಂಕಿತದ ವಚನವೊಂದಿದೆ.

ಇದೇ ಅಂಕಿತವನ್ನುಳ್ಳ 'ಸುರಗಿಯಲ್ಲಿ ತಟ್ಟುಚ್ಚಿ.....' ಎಂಬ ವಚನವನ್ನು ಸಂಪಾದನೆಯ ಬೋಳಬಸವ (ಸು. ೧೬೭೫) ತಾನು ಸಂಕಲಿಸಿದ 'ಷಟ್‌ಸ್ಥಲ ಬ್ರಹ್ಮಾನಂದ ವಿರಕ್ತ ಚಾರಿತ್ರ ಸಂಪಾದನೆಯ ವಚನಗಳು' ಕೃತಿಯಲ್ಲಿ ಉದಾಹರಿಸಿದ್ದಾನೆ ([ಸಂ] ಎಸ್. ಉಮಾಪತಿ, ಗದಗ, ೧೯೮೪, ಕ್ರಮಾಂಕ ೧೦೩, ಪುಟ ೨೭-೮).

ಡಾ|| ಬಿ. ವ್ಹಿ. ಶಿರೂರ ಅವರು ಸಂಪಾದಿಸಿದ ಸಂಪಾದನೆಯ ಸಣ್ಣ ಬರಹದ ಗುರುಬಸವರಾಜದೇವರು ಸೇರಿಸಿದ 'ಶರಣಚಾರಿತ್ರದ ವಚನಗಳು' (ಗದಗ, ೧೯೮೪) ಕೃತಿಯಲ್ಲಿ ಕ್ರಮಾಂಕ ೨೨೨ರಿಂದ ೨೨೪ರಲ್ಲಿ (ಪುಟ ೮೨-೩) ಕೀಟೇಶ್ವರಲಿಂಗ ಅಂಕಿತದ ೩ ವಚನಗಳಿವೆ.

ಈ ಮೇಲೆ ನಮೂದಿಸಿದ ಉಲ್ಲೇಖಗಳಲ್ಲಿ ವಚನಕಾರನ ಹೆಸರಿಲ್ಲ. ಅಲ್ಲಿ ಪ್ರಶ್ನಾರ್ಥಕ ಚಿಹ್ನೆ ಇದೆ.

ಗದಗಿನ 'ತೋಂಟದಾರ್ಯಮಠದ' ಹಸ್ತಪ್ರತಿ ಸಂಗ್ರಹದಲ್ಲಿನ ಕ್ರಮಾಂಕ ೩೦೪ನೆಯ ಓಲೆ ಕೃತಿಯ ೩೯-೪೦ನೆಯ ಗರಿಯಲ್ಲಿ 'ಗೋಣಿಮಾರಯ್ಯನ ವಚನ' ಎಂಬ ಶೀರ್ಷಿಕೆಯಲ್ಲಿ 'ಸತ್ತು ಚಿತ್ತಾನಂದ...' ಎಂಬ ವಚನವನ್ನು ಉದಾಹರಿಸಿದೆ. ಇದರಿಂದ ಕೇಟೇಶ್ವರಲಿಂಗ ಅಂಕಿತದ ವಚನಕಾರ ಗೋಣಿಮಾರಯ್ಯನೆಂಬ ಅಂಶ ಸ್ಫುಟವಾಗುತ್ತದೆ. ಅಲ್ಲದೆ ಈತನ ವಚನವನ್ನು ಕ್ರಿ.ಶ. ೧೬೭೫ರಲ್ಲಿದ್ದ ಸಂಪಾದನೆಯ ಬೋಳಬಸವ ಉಲ್ಲೇಖಿಸುವುದರಿಂದ ಗೋಣಿಮಾರಯ್ಯ ಕ್ರಿ.ಶ. ೧೬೭೫ಕ್ಕಿಂತ ಹಿಂದೆ ಇದ್ದ ಸಂಗತಿ ಖಚಿತವಾಗುತ್ತದೆ.

ಬಿ. ವ್ಹಿ. ಶಿರೂರ ಅವರ ಕೃತಿಯಲ್ಲಿನ ವಚನಾಂಕಿತ ಕೀಟೇಶ್ವರಲಿಂಗ ಕೇಟೇಶ್ವರ ಲಿಂಗವೆಂದು ತಿದ್ದುಪಡಿಯಾಗಬೇಕಾಗಿದೆ.

## ಪರ್ವತ ಶಿವಯೋಗಿ: ಕಾಲ ವಿಚಾರ ಮತ್ತು ಕವಿಚರಿತೆಯ ಕೆಲವು ಅನುಕ್ತ ಕೃತಿಗಳು

**ಕಾಲ:** ಪರ್ವತ ಶಿವಯೋಗಿ ಸಿದ್ಧಲಿಂಗಸ್ವಾಮಿಗಳ ಜ್ಞಾನೋಪದೇಶಪಾತ್ರ ಹಾಗೂ ಬಾಲೇಂದುಪುರದ (ಇಂದಿನ ಮೈಸೂರು ಜಿಲ್ಲೆಯ ಯಳಂದೂರು) ಹರೀಶ್ವರ ಶಾಂತವೀರೇಶ್ವರ ಕರಸರಸಿಜಾತ.

ಈತನ ಕಾಲನಿರ್ಣಯದ ಬಗೆಗೆ ಆರ್. ನರಸಿಂಹಾಚಾರ್ಯರು ಕರ್ಣಾಟಕ ಕವಿಚರಿತೆಯ ದ್ವಿತೀಯ ಸಂಪುಟ (೧೯೧೯) ಪುಟ ೩೯೭ರಲ್ಲಿ ''ಮುರಿಗೆಯ ಶಾಂತ ವೀರೇಶನ (ಸು. ೧೫೩೦) ಗ್ರಂಥಕ್ಕೆ ಇವನು ಟೀಕೆಯನ್ನು ಬರೆದಿರುವುದರಿಂದ ಅವನ ಕಾಲಕ್ಕಿಂತ ಈಚೆಯವನು ಎಂಬುದು ಸ್ಪಷ್ಟವಾಗಿದೆ. ಇವನ ಕಾಲವು ಸುಮಾರು ೧೬೫೦ ಆಗಬಹುದೆಂದು ತೋರುತ್ತದೆ'' ಎಂದಿದ್ದಾರೆ.

ಮುಂದೆ ಅವರೇ 'ಕರ್ಣಾಟಕ ಕವಿಚರಿತೆ'ಯ ತೃತೀಯ ಸಂಪುಟವನ್ನು ಕ್ರಿ.ಶ. ೧೯೨೯ರಲ್ಲಿ ಪ್ರಕಟಸಿದಾಗ, ಮುರಿಗೆಯ ಶಾಂತವೀರನ ಶಿಷ್ಯ ಇಮ್ಮಡಿ ಮುರಿಗೆಯಸ್ವಾಮಿ (=ಇಮ್ಮಡಿ ಗುರು-ಸಿದ್ಧ) ವಿರಚಿತ 'ಹಾಲಾಸ್ಯ ಪುರಾಣ ಚಂಪೂ'ವಿನ ಗ್ರಂಥೋಕ್ತ ಕಾಲವಾದ ಕ್ರಿ.ಶ. ೧೭೨೦ನ್ನು ಆಧರಿಸಿ, ಮುರಿಗೆಯ ಶಾಂತವೀರ ಮುಂತಾದವರ ಕಾಲವನ್ನು

ಯಥೋಚಿತವಾಗಿ ಈಚೆಗೆ ಹಾಕಬೇಕಾಗುತ್ತದೆ.[೪] ಎಂದು ತಮ್ಮ ಮೊದಲಿನ ಅಭಿಪ್ರಾಯವನ್ನು ತಿದ್ದಿಕೊಂಡಿರುವರು. ಆದರೆ ಮುರಿಗೆ ಶಾಂತವೀರನ ತಿದ್ದುಪಡಿಯಾದ ಕಾಲವಾವುದೆಂಬ ಬಗ್ಗೆ ತಮ್ಮ ಅಭಿಪ್ರಾಯವನ್ನು ಸೂಚಿಸಿಲ್ಲ.

ಇಮ್ಮಡಿ ಗುರುಸಿದ್ಧ ತನ್ನ ಗುರು ಮುರಿಗೆ ಶಾಂತವೀರನು ಲಿಂಗೈಕ್ಯನಾದ ಮೇಲೆ ಅವನ ಜೀವನ ಚರಿತ್ರಾತ್ಮಕ ಅಂಶಗಳ ನಿರೂಪಣೆಯುಳ್ಳ 'ಮುರಿಗಾ ಶಾಂತವೀರೇಶ್ವರನ ತಾರಾವಳಿ'ಯನ್ನು ರಚಿಸಿದ್ದಾನೆ. ಆದರಲ್ಲಿ ಶಾಂತವೀರನು ಸ್ವಭಾನು ಸಂ। ಅಧಿಕ ಶ್ರಾವಣ ಶುದ್ಧ ಬಿದಿಗೆ ಸೋಮವಾರ ರಾತ್ರಿ ಮೂರೂವರೆ ತಾಸಿನಲ್ಲಿ (ಅಂದರೆ ಕ್ರಿ.ಶ . ೫-೫-೧೭೦೩ರಲ್ಲಿ) ಶಿವಲಿಂಗದಲ್ಲಿ ಬೆರೆದ'ನೆಂದು ತಿಳಿಸಿದ್ದಾನೆ.[೫]

ಈ ಮೇಲಿನ ಹೇಳಿಕೆಯಿಂದ ಮುರಿಗಾ ಶಾಂತವೀರನ ಕಾಲ ಕ್ರಿ.ಶ. ೧೭೦೦ರ ಹಿಂದುಮುಂದೆಂಬ ಸಂಗತಿ ಖಚಿತವಾಗುತ್ತದೆ.

ಹೀಗಾಗಿ ಶಾಂತವೀರನ 'ಪ್ರಭುಲಿಂಗದ ಕಂದ'ಕ್ಕೆ ಟೀಕೆ ಬರೆದ ಪರ್ವತ ಶಿವ ಯೋಗಿಯು ಕ್ರಿ.ಶ. ೧೭೦೦ಕ್ಕಿಂತ ಪ್ರಾಚೀನನಲ್ಲವೆಂಬ ಸಂಗತಿ ಸಿದ್ಧವಾಗುವುದು. ಪ್ರಕೃತದಲ್ಲಿ ಪರ್ವತ ಶಿವಯೋಗಿಯ ಕಾಲದ ಬಗೆಗೆ ಮೇಲಿನ ಪರಿಮಿತಿಯೊಂದರ ವಿನಃ ಮತ್ತೇನನ್ನು ಹೇಳಲು ಸಾಧ್ಯವಿಲ್ಲ.

**ಕೃತಿಗಳು:** ಭೋಜದೇವ ನೃಪತಿಕೃತ 'ತತ್ತ್ವಪ್ರಕಾಶಿಕಾ' (ಶ್ರೀ ಪರ್ವತೇಶಕೃತ, ಕರ್ಣಾಟಕ ಟೀಕಾ ಸಹಿತ) ಎಂಬ ಕೃತಿಯ 'ಪೀಠಿಕೆ' ಪುಟ ೨ರಲ್ಲಿ ಆದರ ಸಂಪಾದಕರು[೬] ಪರ್ವತ ಶಿವಯೋಗಿಯ ಈ ಕೆಳಕಂಡ ೬ ಕೃತಿಗಳನ್ನು ಹೆಸರಿಸಿದ್ದಾರೆ :

೧) ಪ್ರಭುಲಿಂಗ ಕಂದದ ಟೀಕೆ.

೨) ಏಕೋತ್ತರ ಶತಸ್ಥಲೀ ಟೀಕೆ.

೩) ನಾಗಲಿಂಗದೇವರ ತ್ರಿವಿಧಿಯ ಟೀಕೆ.

೪) ಮರುಳದೇವರ ಕಂದದ ಟೀಕೆ

೫) ಗುರುಸ್ತೋತ್ರ ತ್ರಿವಿಧಿಯ ಟೀಕೆ.

೬) ಷಡ್ವಕ್ತ್ರಸ್ತೋತ್ರದ ಟೀಕೆ.

ಆರ್. ನರಸಿಂಹಾಚಾರ್ಯರು ಮೇಲಿನ ೬ ಕೃತಿಗಳಲ್ಲಿ ಕ್ರಮಾಂಕ ೧, ೩ ಮತ್ತು ೫ನೆಯ ಕೃತಿಗಳನ್ನು ಹೆಸರಿಸಿದ್ದಾರೆ. ಉಳಿದ ೨, ೪ ಮತ್ತು ೬ನೆಯ ಕೃತಿಗಳನ್ನು ಹೆಸರಿಸಿಲ್ಲ. ಅಲ್ಲದೆ ಈ ಕೆಳಕಂಡ ೩ ಕೃತಿಗಳು ಪರ್ವತ ಶಿವಯೋಗಿಯ ರಚನೆಗಳೆಂದು ತಿಳಿಸಿದ್ದಾರೆ.[೭]

---

೪ ಆರ್. ನರಸಿಂಹಾಚಾರ್ಯ, ಕರ್ಣಾಟಕ ಕವಿಚರಿತೆ (ತೃತೀಯ ಸಂಪುಟ), ಪುಟ ೨೫೨.

೫ ಬಸವರಾಜಯ್ಯ, ಎಂ. ಎಸ್. 'ಶ್ರೀ ಗುರುಮುರುಘ ಶಾಂತವೀರ ದೇಶಿಕೇಂದ್ರ ಮಹಾಸ್ವಾಮಿಗಳವರು'. ಗುರುಕುಲ, ೧.೧.೧೯೬೯, ೧-೫

೬ ವೀರಶೈವ ಗ್ರಂಥ ಪ್ರಕಾಶಿಕ ವಿದ್ವನ್ಮಂಡಲಿಯಿಂದ ಪರಿಷ್ಕೃತವಾದ ಕೃತಿ. ಮೈಸೂರು (೧೯೦೮).

೭ ಆರ್. ನರಸಿಂಹಾಚಾರ್ಯ, ಕರ್ಣಾಟಕ ಕವಿಚರಿತೆ (ದ್ವಿತೀಯ ಸಂಪುಟ)

೧) ಬಸವೇಶ್ವರ ದೇವರ ವಚನಸಾರಾರ್ಥ.

೨) ಚೆನ್ನಬಸವನ ಕರಣಹಸುಗೆಯ ಟೀಕೆ.

೩) ಚೆನ್ನಬಸವನ ಮಿಶ್ರಾರ್ಪಣದ ಟೀಕೆ.

೪೨ ತ್ರಿಪದಿಗಳ 'ಸಂಗಮೇಶ್ವರಾಂಕಿತ'ದ 'ಗುರು ಸ್ತೋತ್ರ ತ್ರಿಪದಿ'[೮] ಗೆ ಪರ್ವತ ಶಿವಯೋಗಿ ಟೀಕೆ[೯] ಯನ್ನು ಬರೆದಿರುವ ಸಂಗತಿ ಇತ್ತೀಚೆಗೆ ತಿಳಿದುಬಂದಿದೆ.

ಪ್ರೊ॥ ಸಿ. ಮಹಾದೇವಪ್ಪನವರು ಪರ್ವತ ಶಿವಯೋಗಿ 'ತ್ರಿವಿಧ ಮೂರರ ಸಾರದ ಟೀಕೆ' ಎಂಬ ಕೃತಿಯನ್ನು[೧೦] ರಚಿಸಿರುವ ಸಂಗತಿಯನ್ನು ಮೊದಲ ಬಾರಿಗೆ ಬೆಳಕಿಗೆ ತಂದಿದ್ದಾರೆ.

ಆದರೆ ಮಹಾದೇವಪ್ಪನವರು ತಿಳಿಸಿರುವ ಕೃತಿ ಸ್ವತಂತ್ರ ಕೃತಿಯಾಗಿರದೆ ಈ ಮೊದಲೆ ಹೆಸರಿಸಿರುವ ೧) ನಾಗಲಿಂಗದೇವರ ತ್ರಿವಿಧಿಯ ಟೀಕೆ, ೨) ಗುರುಸ್ತೋತ್ರ ತ್ರಿವಿಧಿಯ (ಚೆನ್ನಮಲ್ಲಕೃತ) ಟೀಕೆ, ೩) ಗುರುಸ್ತೋತ್ರ ತ್ರಿವಿಧಿಯ (ಅಂ/ಸಂಗಮೇಶ್ವರ) ಟೀಕೆಗಳ ಸಂಕಲನವೋ ಅಥವಾ ಅವುಗಳ ಸಾರ ಸಂಗ್ರಹವೊಂದು ಆಗಿರುವ ಸಾಧ್ಯತೆ ಇದೆ. ಕೃತಿ ಪ್ರಕಟವಾಗದೆ ಅದರ ಬಗೆಗೆ ಏನನ್ನೂ ಖಚಿತವಾಗಿ ಹೇಳಲಾಗುವುದಿಲ್ಲ.

## ವೆಂಕಟಕವಿ: ಒಂದು ಟಿಪ್ಪಣಿ

ಡಾ॥ ಶ್ರೀನಿವಾಸ ಹಾವನೂರ ಅವರು ''ಹೊಸಗನ್ನಡ ಅರುಣೋದಯ'' ಎಂಬ ತಮ್ಮ ಮಹಾಪ್ರಬಂಧದಲ್ಲಿ ರಂಗಭೂಮಿಯ ಹಾಡುಗಳನ್ನು ಪ್ರಸ್ತಾಪಿಸುವಲ್ಲಿ ಚುರಮರಿ ಶೇಷಗಿರಿರಾಯನ ಶಾಕುಂತಲದಲ್ಲಿನ ಹಾಡುಗಳ ಬಗೆಗೆ ತಮ್ಮ ಅಭಿಪ್ರಾಯವನ್ನು ಈ ರೀತಿ ತಿಳಿಸಿದ್ದಾರೆ:

ಅವರು ''......ಶೇಷಗಿರಿರಾಯನ ಶಾಕುಂತಲದಲ್ಲಿ ೮೦ ಹಾಡುಗಳಿವೆ. ಪ್ರತಿಯೊಂದು ಹಾಡಿನ ರಾಗ, ತಾಳಗಳನ್ನೂ ಅದೇ ರಾಗ, ತಾಳದ ಪೂರ್ವ ಪರಿಚಯದ ಇನ್ನೊಂದು ಹಾಡಿನ ಪ್ರಥಮ ಚರಣ ಪಲ್ಲವಿಯನ್ನು ಕೊಡಲಾಗಿದೆ. ಅದರ ಮೂಲಕ ಕನ್ನಡದ ಅನೇಕ ಅಜ್ಞಾತ ಹಾಡುಗಳ ಅಸ್ತಿತ್ವವು ನಮಗೆ ಗೋಚರವಾಗುತ್ತದೆ. ಒಂದೆರಡು ಕಡೆಗಳಲ್ಲಿ 'ಚಿಕ್ಕದೇವನ ಪದದಂತೆ' 'ಹೇಮಾದ್ರೀಶನ ಕನ್ನಡ ಅಷ್ಟಪದಿಯೊಳಗಿನ ಪದದಂತೆ' ಎಂಬುದಾಗಿ ವಿಶೇಷಿಸಲಾಗಿದೆ. ಈ ಕವಿದ್ವಯರು ಯಾರು ಮತ್ತು ಅವರು ಬರೆದ ಕೃತಿಗಳಾವುವೆಂಬುದು ಮುದ್ರಿತ ರೂಪದಲ್ಲಿ ಬೆಳಕಿಗೆ ಬಂದಿಲ್ಲ'' ಎಂದಿದ್ದಾರೆ.[೧೧]

ಡಾ॥ ಹಾವನೂರರು ಉಲ್ಲೇಖಿಸಿದ 'ಹೇಮಾದ್ರೀಶ' ಅಂಕಿತದ 'ಅಷ್ಟಪದಿ'ಯ ಕರ್ತೃ

---

೮ ಈ ಕೃತಿಯ ೪೧ ತ್ರಿಪದಿಗಳನ್ನು ಶ್ರೀ ಚೆನ್ನಮಲ್ಲಿಕಾರ್ಜುನರು 'ಸದ್ಧರ್ಮದೀಪಿಕೆ' ಮಾಸಪತ್ರಿಕೆಯ ೭೦-೭೧ನೆಯ ಸಂಚಿಕೆಗಳಲ್ಲಿ ಪ್ರಕಟಿಸಿದ್ದಾರೆ.

೯ ಟೀಕಾ ಸಹಿತವಾದ ೨ ಓಲೆ ಕೃತಿಗಳು 'ಕನ್ನಡ ಅಧ್ಯಯನ ಕೇಂದ್ರ'.(ಬೆಂಗಳೂರು ವಿಶ್ವವಿದ್ಯಾಲಯ)ದ ಸಂಗ್ರಹದಲ್ಲಿವೆ.

೧೦ ಸಿ. ಮಹಾದೇವಪ್ಪ, 'ಸಿದ್ಧಲಿಂಗ ಶಿವಯೋಗಿ', ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, (೧೯೭೪) ಪುಟ ೯೭.

೧೧ ಶ್ರೀನಿವಾಸ ಹಾವನೂರ, ಹೊಸಗನ್ನಡದ ಅರುಣೋದಯ, ಪು. ೩೬೯ (೧೯೭೪).

ವೆಂಕಟಕವಿ. ಈತನ ಬಗೆಗೆ ರಾವ್‌ಬಹದ್ದೂರ್ ಆರ್. ನರಸಿಂಹಾಚಾರ್ಯರು 'ಕರ್ನಾಟಕ ಕವಿಚರಿತೆ' (ತೃತೀಯ ಸಂಪುಟ) ಪುಟ ೮೬-೮೭ರಲ್ಲಿ ಈ ಕೆಳಕಂಡಂತೆ ತಿಳಿಸಿದ್ದಾರೆ:

''ಇವನು ಕರ್ಣಾಟಕಾಷ್ಟಪದಿಯನ್ನು ಬರೆದಿದ್ದಾನೆ. ಈತನು ಬ್ರಾಹ್ಮಣ ಕವಿಯೆಂದು ತೋರುತ್ತದೆ.'' ''ಹೇಮಾದ್ರಿವಾಸನ ಪದಪಯೋಜದಾಸ'' ಎಂದು ಹೇಳಿಕೊಂಡಿದ್ದಾನೆ. ''ಸುರಪುರದಲ್ಲಿ ಮೂಜಗದೊಡೆಯ ಗೋಪಾಲಗೊಪ್ಪಿಸಿದನು'' ಎಂಬುದರಿಂದ ''ಇವನ ಸ್ಥಳವು ಸುರಪುರವಾಗಿದ್ದರೂ ಇರಬಹುದು. ಇವನ ಕಾಲವು ಸುಮಾರು ೧೭೫೦ ಆಗಿರಬಹುದೆಂದು ಊಹಿಸುತ್ತೇವೆ.'' ಅಲ್ಲದೆ ಆತನ ಕೃತಿಯ ಬಗೆಗೆ ತಿಳಿಸುತ್ತ ''ಇದು ಜಯದೇವನ ಗೀತ ಗೋವಿಂದದ ಭಾಷಾಂತರವು. ಮೂಲದ ವೃತ್ತಗಳು ಷಟ್ಪದಿಗಳಾಗಿಯೂ, ಪದಗಳು ಹಾಡುಗಳಾಗಿಯೂ ಪರಿವರ್ತಿಸಲ್ಪಟ್ಟವೆ'' ಎಂದು ತಿಳಿಸಿ ಕೃತಿಯಿಂದ ಎರಡು ಷಟ್ಪದಿಗಳು ಹಾಗೂ ಒಂದು ಹಾಡನ್ನು ಉಲ್ಲೇಖಿಸಿದ್ದಾರೆ.[೧೨]

ಇದರಿಂದ ಹೇಮಾದ್ರೀಶ ಅಂಕಿತದ ಹಾಡುಗಳ ಕರ್ತೃ ವೆಂಕಟಕವಿ ಎಂಬ ಸಂಗತಿ ಸ್ಪಷ್ಟವಾಗುತ್ತದೆ. ಈ ಕೃತಿ ಪ್ರಕಟವಾದಂತಿಲ್ಲ. ವೆಂಕಟಕವಿ ಅಷ್ಟಪದಿಯೊಡನೆ ಮತ್ತಾವುದಾದರೂ ಕೃತಿಗಳನ್ನು ರಚಿಸಿರಬಹುದೇ? ಎಂಬ ಸಂಗತಿಯನ್ನು ಪರಿಶೀಲಿಸಬಹುದಾಗಿದೆ.

'ಹೇಮಾದ್ರಿಪಂ' ಎಂಬ ಅಂಕಿತವನ್ನುಳ್ಳ ಪರಿವರ್ಧಿನಿ ಷಟ್ಪದಿಯ 'ಹೇಮಾದ್ರಿ ಶತಕ'ವೆಂಬ ಅಪೂರ್ಣ ಕೃತಿಯೊಂದು ಉಪಲಬ್ಧವಿದೆ.[೧೩] ಕೃತಿ ಅಪೂರ್ಣವಾಗಿರುವುದರಿಂದ ಕೃತಿಕಾರನ ಬಗೆಗೆ ಯಾವ ಸಂಗತಿಯೂ ತಿಳಿಯುವುದಿಲ್ಲ. ಅಂಕಿತದ ಆಧಾರದ ಮೇಲೆ 'ಹೇಮಾದ್ರಿ ಶತಕ'ವು ವೆಂಕಟಕವಿಯ ಮತ್ತೊಂದು ಕೃತಿಯಾಗಿರಬಹುದಾದ ಸಂಭವವಿದೆ. ಆದರೂ ಈ ಬಗೆಗೆ ಖಚಿತವಾಗಿ ತಿಳಿಯಲು ಇದರ ಸಮಗ್ರ ಪ್ರತಿಯೊಂದನ್ನು ಪರಿಶೋಧಿಸಬೇಕಾಗಿದೆ.

ಕೃಷ್ಣನ ಬಾಲಲೀಲೆಯ ಚಿತ್ರಣವನ್ನು ವಸ್ತುವಾಗುಳ್ಳ ಹಲವಾರು ಹಾಡುಗಳ ಸಮೂಹ ರೂಪದ 'ಬಾಲಲೀಲಾ' ಎಂಬ ಕೃತಿಯೊಂದು ಉಪಲಬ್ಧವಿದೆ.[೧೪] ಇಲ್ಲಿನ ಪ್ರತಿ ಹಾಡಿನ ಅಂಕಿತವೂ 'ಹೇಮಗಿರಿವಾಸ ವೆಂಕಟರಮಣ' ಎಂದಿದೆ (ಕೆಲವೆಡೆ 'ಶ್ರೀ ಕೃಷ್ಣ' ಎಂಬ ಅಂಕಿತವೂ ಉಂಟು). ಈ ಕೃತಿಯ ಕರ್ತೃತ್ವ ವೆಂಕಟಕವಿಯದೇ? ಅಥವಾ ಬೇರೊಬ್ಬನದೇ? ಎಂಬ ಸಂಗತಿ ಸಂಶೋಧನಾರ್ಹ.

*ಸಾಧನೆ, ೯-೩, ೧೯೮೦, ಪು. ೧೪೨-೧೪೩; ದೇವಗಂಗೆ, ೧೯೬೮, ಪು. ೪೧೩; ಕಸಾಪ, ೬೭-೨, ೧೯೮೨, ಪು. ೧೪೦; ಕಭಾ, ೧೦-೩, ೧೯೭೮, ಪು. ೧೪೨-೪೪; ಸಾಧನೆ ೧೪-೨, ೧೯೮೫, ಪು. ೧೩೮; ಕಸಾಪ, ೬೧-೧, ೧೯೭೬, ಪು. ೮೬-೮೮; ಸಾಹಿತ್ಯಜೀವಿ, ೧೯೭೬, ಪು. ೮೯-೯೦*

---

೧೨ ನರಸಿಂಹಾಚಾರ್ಯ, ಆರ್., ಕರ್ನಾಟಕ ಕವಿಚರಿತೆ (ತೃತೀಯ ಸಂಪುಟ), ಪು.೮೬-೮೭ (೧೯೭೪).

೧೩ ಕನ್ನಡ ಅಧ್ಯಯನ ಪೀಠದ ಸಂಗ್ರಹ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೧೪ ರಾಮಚಂದ್ರರಾವ್, ಬಿ. ಮತ್ತು ವೆಂಕಟಾಚಲ ಶಾಸ್ತ್ರಿ, ಟಿ. ವಿ. (ಸಂ.): *A Descriptive Catalogue of the Kannada Manuscripts in the Osmania University Library,* No. 241 p. 287-288 (1966).

# ೫೧. ಕನ್ನಡ ಸಾಹಿತ್ಯ: ಧಾರ್ಮಿಕ ಪ್ರೇರಣೆಗಳು

● ಜಿ. ಎಸ್. ಶಿವರುದ್ರಪ್ಪ

ಧರ್ಮವೇ ಜೀವನದ ಉಸಿರೆಂದು ಹೇಳಲಾದ ಭಾರತದಲ್ಲಿ, ಎಲ್ಲ ಕಾವ್ಯ-ಕಲೆಗಳ ಮೂಲಸ್ಫೂರ್ತಿಯೇ ಧರ್ಮವಾಗಿದೆ. ಈ ಮಾತು ಕರ್ನಾಟಕದ ಸಾಹಿತ್ಯ ಕಲೆಗಳಿಗೂ ಯಥಾವತ್ತಾಗಿ ಅನ್ವಯಿಸುತ್ತದೆ. ಇಲ್ಲಿ 'ಧರ್ಮ' ಎಂಬ ಮಾತಿಗೆ ಮತ-ಧರ್ಮಗಳು ಎಂಬ ಅರ್ಥವನ್ನಿಟ್ಟುಕೊಂಡು ವಿಚಾರ ಮಾಡಲಾಗಿದೆ.

ಕನ್ನಡದ ಮೊದಲ ಗ್ರಂಥವೆಂದು ಒಪ್ಪಿಕೊಳ್ಳಲಾದ 'ಕವಿರಾಜಮಾರ್ಗ'ದಲ್ಲಿ 'ಕಸವರಮೆಂಬುದು, ನೆರೆ ಸೈರಿಸಲಾಪೊಡೆ ಪರ ವಿಚಾರಮುಮಂ ಪರಧರ್ಮಮುಮಂ' ಎಂಬ ಚಿನ್ನದಂತಹ ಮಾತೊಂದಿದೆ. ಈ ಮಾತಿನ ಅರ್ಥ, 'ನಿಜವಾದ ಐಶ್ವರ್ಯ (ಚಿನ್ನ)ವೆಂದರೆ, ಪರವಿಚಾರಗಳನ್ನು ಪರಧರ್ಮಗಳನ್ನು ಸಹಿಸತಕ್ಕದ್ದೇ'-ಎನ್ನುವುದು. ಅನ್ಯರ ವಿಚಾರಗಳನ್ನು ಮತ್ತು ಅನ್ಯರ ಧರ್ಮಗಳನ್ನು ಸಹಿಸುವುದೇ ನಿಜವಾದ ಸಂಪತ್ತು-ಎನ್ನುವ ಈ ಸೂಕ್ತಿ ಕನ್ನಡನಾಡು ಧರ್ಮಗಳ ವಿಚಾರಗಳಲ್ಲಿ ಉದ್ದಕ್ಕೂ ತಾಳಿದ ನಿಲುವಿಗೆ ಒಂದು ವ್ಯಾಖ್ಯಾನದಂತಿದೆ. ಕರ್ನಾಟಕ ಸಂಸ್ಕೃತಿಯ ವೈಶಿಷ್ಟ್ಯವೆಂದರೆ, ಅದರ ಧರ್ಮಸಹಿಷ್ಣುತೆಯೇ-ಎಂದು ಹೇಳಬಹುದು. ಕನ್ನಡನಾಡು ಅನೇಕ ಧರ್ಮಗಳಿಗೆ ನೆಲೆಮನೆಯಾದದ್ದರ ಜತೆಗೆ, ಈ ಎಲ್ಲ ಧರ್ಮಗಳು ಜತೆಗೂಡಿ ವರ್ಧಿಸುವ ಅವಕಾಶವನ್ನು ಉದ್ದಕ್ಕೂ ಕಲ್ಪಿಸಿಕೊಟ್ಟಿದೆ. ಕರ್ನಾಟಕದಲ್ಲಿ ಪ್ರವರ್ಧಮಾನವಾದ ಮುಖ್ಯ ಧರ್ಮಗಳು ಇಲ್ಲಿನ ಸಾಹಿತ್ಯ ಹಾಗೂ ಕಲೆಗಳ ಬೆಳವಣಿಗೆಗೆ ಕಾರಣವಾಗಿವೆ. ಅವುಗಳನ್ನು ಜೈನ, ವೀರಶೈವ ಮತ್ತು ವೈಷ್ಣವ ಎಂದು ಗುರುತಿಸಬಹುದು.

ಕನ್ನಡ ಸಾಹಿತ್ಯ ಚರಿತ್ರೆಯನ್ನು ಅಧ್ಯಯನಕ್ಕೆ ಅಳವಡಿಸುವ ಸಲುವಾಗಿ ಅಂದಂದು ಪ್ರಬಲವಾಗಿದ್ದ ಮತ-ಧರ್ಮಗಳ ಮೇಲಿನಿಂದ, ಜೈನಸಾಹಿತ್ಯ, ವೀರಶೈವ ಸಾಹಿತ್ಯ ಹಾಗೂ ವೈಷ್ಣವ ಸಾಹಿತ್ಯ-ಎಂದು ವಿಭಾಗಿಸಿ ನೋಡುವ ಪ್ರಯತ್ನಗಳು ನಡೆದಿವೆ. ಹೆಚ್ಚು ಕಡಿಮೆ ಈ ಅನುಕ್ರಮದಲ್ಲಿಯೇ ಆಯಾ ಮತಧರ್ಮಗಳು ಕರ್ನಾಟಕದಲ್ಲಿ ಉತ್ಕರ್ಷವಾಗಿದ್ದು, ಅಂದಂದಿನ ಸಾಹಿತ್ಯಕ್ಕೆ ಮುಖ್ಯ ಪ್ರೇರಣೆಗಳಾಗಿರುವುದೂ ನಿಜ; ಆದರೆ, ಗೋಡೆಕಟ್ಟಿದಂತೆ ಈ ವಿಭಾಗಗಳು ಇವೆ ಅಥವಾ ಇದ್ದುವು ಎಂದು ಭಾವಿಸುವುದು ಸರಿಯಲ್ಲ. ಈ ಎಲ್ಲ ಧರ್ಮಗಳು ಉದ್ದಕ್ಕೂ ಪ್ರವಹಿಸುತ್ತಾ ಬಂದಿವೆ, ಕೆಲವು ಕಾಲದಲ್ಲಿ ತೀರಾ ಪ್ರಮುಖವಾಗಿ, ಅನಂತರ ಅಪ್ರಧಾನವಾಗಿ. ಇವುಗಳ ಜತೆಗೆ ಕರ್ನಾಟಕದಲ್ಲಿ ಬೌದ್ಧ ಧರ್ಮವೂ ಒಂದು ಕಾಲಕ್ಕೆ ಇದ್ದುದರಿಂದ ಕನ್ನಡದಲ್ಲಿ 'ಬೌದ್ಧಸಾಹಿತ್ಯ'ವೊಂದು ಇದ್ದಿರಬೇಕೆಂದು, ಟಿ. ಎಸ್. ವೆಂಕಣ್ಣಯ್ಯನವರು ಅಭಿಪ್ರಾಯಪಡುತ್ತಾರೆ.[1] ಕರ್ನಾಟಕಕ್ಕೆ ಬೌದ್ಧಧರ್ಮವು ಕ್ರಿ. ಪೂ. ಮೂರನೆಯ ಶತಮಾನದಂದು ಕಾಲಿಟ್ಟು ಸುಮಾರು ಹನ್ನೆರಡನೆಯ ಶತಮಾನದವರೆಗೆ, ಅಂದರೆ ಒಂದೂವರೆ ಸಾವಿರ ವರ್ಷಕ್ಕೂ ಮೀರಿದ ಕಾಲದಲ್ಲಿ ಕರ್ನಾಟಕದಲ್ಲಿತ್ತು. ಅಶೋಕ ತನ್ನ ಮತ ಪ್ರಚಾರಕ್ಕಾಗಿ ಧರ್ಮಬೋಧಕರನ್ನು ಕರ್ನಾಟಕದ ವನವಾಸಿ ಮತ್ತು

೧. ಟಿ.ಎಸ್. ವೆಂಕಣ್ಣಯ್ಯ: 'ಕನ್ನಡ ಸಾಹಿತ್ಯ ಚರಿತ್ರೆ ಮತ್ತು ಇತರ ಲೇಖನಗಳು', ಪು. ೧೪ರಿಂದ ೧೮ (೧೯೫೮)

ಮಹಿಷಮಂಡಲಗಳಿಗೆ ಕಳುಹಿಸಿಕೊಟ್ಟಂತೆ ಉಲ್ಲೇಖಗಳಿವೆ. ಕರ್ನಾಟಕದಲ್ಲಿ ದೊರಕಿರುವ ಅಶೋಕನ ಆರು ಶಾಸನಗಳು, ಬಳ್ಳಿಗಾವೆ, ಬನವಾಸಿ, ಕೋಳಿವಾಡ ಮುಂತಾದ ಕಡೆಗಳಲ್ಲಿ ದೊರಕಿರುವ ಬೌದ್ಧ ಸ್ಮಾರಕಗಳು ಮತ್ತಿತರ ಸಾಕ್ಷ್ಯಗಳಿಂದ ಕರ್ನಾಟಕದಲ್ಲಿ ಬಹುಕಾಲ ಬೌದ್ಧಧರ್ಮವಿತ್ತೆಂಬುದು ನಿರ್ವಿವಾದವಾದ ಸಂಗತಿಯಾಗಿದೆ. ಆದರೆ ಈ ಬೌದ್ಧ ಮತಾನುಯಾಯಿಗಳು ಕನ್ನಡದಲ್ಲಿ ಸಾಹಿತ್ಯ ರಚನೆ ಮಾಡಿದ್ದರೆನ್ನುವುದಕ್ಕೆ ಮಾತ್ರ ಆಧಾರವಿಲ್ಲ. ಅವರು ಕನ್ನಡದಲ್ಲಿ ಕೃತಿ ರಚನೆಯನ್ನು ಮಾಡಿದ್ದರೆನ್ನಲು, ಅವರಿಂದ ರಚಿತವಾಗಿರಬಹುದಾದ ಯಾವ ಕೃತಿಗಳೂ ದೊರಕಿಲ್ಲದಿರುವುದರಿಂದಲೂ, ಕರ್ನಾಟಕದಲ್ಲಿ ಬೌದ್ಧ ಧರ್ಮವು ಎಂದೂ ಬಹುಸಂಖ್ಯಾತರ ಮತವಾಗಿಲ್ಲದಿದ್ದ ಕಾರಣದಿಂದಲೂ, ಕನ್ನಡದಲ್ಲಿ 'ಬೌದ್ಧ ಸಾಹಿತ್ಯ'ವೊಂದು ಇತ್ತೆಂದು ಹೇಳುವುದು ಬರಿಯ ಊಹೆಯ ಮಾತಾಗುತ್ತದೆ. ಐದನೆಯ ಶತಮಾನದ ಹೊತ್ತಿಗೆ, ಪ್ರಬಲವಾಗುತ್ತಿದ್ದ ಜೈನಧರ್ಮದೊಂದಿಗೆ ಹೋರಾಟದಲ್ಲಿ ತೊಡಗಿದ ಬೌದ್ಧ ಧರ್ಮವು, ಮುಂದೆ ಶೈವ-ವೈಷ್ಣವ ಧರ್ಮಗಳ ಪ್ರಭಾವದಿಂದಾಗಿ, ಹದಿಮೂರು-ಹದಿನಾಲ್ಕನೆಯ ಶತಮಾನದ ಹೊತ್ತಿಗೆ ಕರ್ನಾಟಕದಲ್ಲಿ ಹೇಳಹೆಸರಿಲ್ಲದಂತಾಯಿತು. ಈ ಕಾರಣಗಳಿಂದಾಗಿ, ಅದು ಕನ್ನಡ ಸಾಹಿತ್ಯದಲ್ಲಿ ತನ್ನ ಅಭಿವ್ಯಕ್ತಿಯನ್ನು ಕೃತಿರೂಪಗಳಲ್ಲಿ ಪಡೆದುಕೊಳ್ಳಲು ಸಾಧ್ಯವಾಗಲಿಲ್ಲವೆಂದು ಹೇಳಬೇಕಾಗುತ್ತದೆ.

ಆಧುನಿಕ ಕಾಲವನ್ನು ಹೊರತುಪಡಿಸಿ ನೋಡಿದರೆ ಉದ್ದಕ್ಕೂ ಜೈನ, ವೀರಶೈವ, ವೈಷ್ಣವ ಧರ್ಮಗಳು ಕನ್ನಡ ಸಾಹಿತ್ಯದ ಪ್ರೇರಕ ಶಕ್ತಿಗಳಾಗಿವೆ. ಕನ್ನಡ ಸಾಹಿತ್ಯದ ಮಟ್ಟಿಗೆ ಜೈನರೇ ಸಾಹಿತ್ಯದಲ್ಲಿ ಸಮೃದ್ಧಿಯನ್ನು ತಂದ ಮೊದಲಿಗರು. ''ಇದು ಮೊದಲನೆಯ ಘಟ್ಟ. ಕನ್ನಡ ಕಾವ್ಯಗಳು ಕಣ್ಣಿಗೆ ಬೀಳುವುದಕ್ಕೆ ಮುಂಚೆಯೇ ಈ ಜೈನಮತ ಪ್ರಚಾರಣೆ ಕನ್ನಡ ದೇಶದಲ್ಲಿ ನಡೆದು ಅನೇಕ ರಾಜವಂಶಗಳ ಆಶ್ರಯದಲ್ಲಿ ಜೈನ ಕವಿಗಳು ಉತ್ತಮ ಕಾವ್ಯಗಳನ್ನು ರಚಿಸಿರುತ್ತಾರೆ. ತೀರ್ಥಂಕರರ ಚರಿತ್ರೆ, ಪ್ರಸಿದ್ಧ ಪುರುಷರ ಇತಿಹಾಸಗಳು, ಜೈನ ತತ್ವಗಳು ಇವೇ ಮುಂತಾದ ಜೈನಮತ ಸಂಬಂಧವಾದ ವಿಷಯಗಳನ್ನು ಪ್ರೌಢವಾದ ಹಳಗನ್ನಡ ಶೈಲಿಯಲ್ಲಿ ಚಂಪೂ ಗ್ರಂಥಗಳಲ್ಲಿ ವಿಸ್ತಾರವಾಗಿ ಬರೆದಿರುತ್ತಾರೆ. ಈ ಘಟ್ಟ ೯ ರಿಂದ ೧೨ನೆಯ ಶತಮಾನದವರೆಗೆ ಚಾಚಿರುತ್ತದೆ. ಆ ಶತಮಾನದ ಮಧ್ಯದಲ್ಲಿ ಎರಡನೆಯ ಘಟ್ಟ ಅಥವಾ ಚಳವಳಿಯನ್ನು ಸೇರುವೆವು. ಅದು ವೀರಶೈವ ಮತ ಪ್ರಚಾರಣೆ. ಪ್ರಜಾಸಾಮಾನ್ಯದಲ್ಲಿ ಹೆಚ್ಚಾಗಿ ವ್ಯಾಪಿಸಿದ ಈ ಮಹಾಚಲನದ ಪ್ರಭಾವದಿಂದ ಕನ್ನಡ ಸಾಹಿತ್ಯದಲ್ಲಿ ದೊಡ್ಡ ಬದಲಾವಣೆಗಳಾದುವು. ಹಳಗನ್ನಡವನ್ನು ಹಿಮ್ಮೆಟ್ಟಿಸಿ ಆಗ್ಗೆ ಬಳಕೆಯಲ್ಲಿದ್ದ ಹೊಸಗನ್ನಡದಲ್ಲಿ ಗ್ರಂಥ ರಚನೆ ಆರಂಭವಾಯಿತು. ಸಂಸ್ಕೃತ ಛಂದಸ್ಸಿನ ಚಂಪೂಗ್ರಂಥಗಳ ಪ್ರಾಧಾನ್ಯತೆ ತಗ್ಗಿ, ದೇಶ್ಯವೃತ್ತಗಳು ಮತ್ತು ಹಾಡುಗಬ್ಬಗಳು ಮುಂದಕ್ಕೆ ಬಂದವು. ಆದರೂ ಹಳಗನ್ನಡ ಭಾಷೆಯೂ ಚಂಪೂಗ್ರಂಥಗಳೂ ನಿಂತು ಹೋಗಲಿಲ್ಲ. ಪ್ರೌಢ ಕವಿಗಳು ಜೈನ ಕವಿಗಳ ಸಮಾನ ಗೌರವಕ್ಕೆ ಪಾತ್ರರಾಗಬೇಕೆಂದು ಅವರ ಕ್ರಮವನ್ನೇ ಹಿಡಿದರು. ಜೈನಕವಿಗಳೂ ಈ ವೀರಶೈವ ಕವಿಗಳ ಪ್ರಾಬಲ್ಯಕ್ಕೆ ಒಳಪಟ್ಟು ಅವರ ಭಾಷೆಯನ್ನೂ, ಕಾವ್ಯ ರೂಪವನ್ನೂ, ಸಾಹಿತ್ಯ ಲಕ್ಷಣಗಳನ್ನೂ ಸ್ವೀಕರಿಸಿದರು. ಮೂರನೆಯದಾಗಿ ಹದಿನೈದನೆಯ ಶತಮಾನದಲ್ಲಿ ವೈಷ್ಣವ ಭಕ್ತಿಮಾರ್ಗ ಪ್ರಚಾರಣೆಯ ಘಟ್ಟಕ್ಕೆ ಬರುವೆವು. ಇದು ಭಾಷೆಯಲ್ಲಿಯೂ ಕಾವ್ಯ ಸ್ವರೂಪದಲ್ಲಿಯೂ ವೀರಶೈವರ ಮೇಲುಪಂಕ್ತಿಯನ್ನು ಹಿಂಬಾಲಿಸಿತೇ ಹೊರತು ಬೇರೆ ವ್ಯತ್ಯಾಸವನ್ನೇನೂ ಮಾಡಲಿಲ್ಲ. ಮತ ವಿಷಯದಲ್ಲಿ ಮಾತ್ರ ಜಿನಭಕ್ತಿ, ಶಿವಭಕ್ತಿಯನ್ನು ಸಾರಿದ ಕಡೆ ವಿಷ್ಣುಭಕ್ತಿಯನ್ನು

ಸಾರಿ, ವೈದಿಕ ಮತಾನುಸಾರವಾಗಿ ವೇದಾಂತ, ಇತಿಹಾಸ, ಪುರಾಣಗಳನ್ನು ಪ್ರತಿಪಾದಿಸಿತು. ಹೊಳೆ ಬಂದು, ಹೊಳೆ ಇಳಿದು ಹೋದಂತೆ ಕನ್ನಡ ಸಾಹಿತ್ಯದಲ್ಲಿ ಈ ರೀತಿ ಜೈನ, ವೀರಶೈವ, ಬ್ರಾಹ್ಮಣ ಸಾಹಿತ್ಯಗಳು ಒಮ್ಮೆ ಅಭ್ಯುದಯ ಸ್ಥಿತಿಯಲ್ಲಿಯೂ, ಒಮ್ಮೆ ಕ್ಷೀಣದೆಸೆಯಲ್ಲಿಯೂ ಇರುತ್ತ ಹಳೆಯ ನೀರೂ ಹೊಸ ನೀರೂ ಬೆರೆದುಕೊಂಡೇ ಬರುತ್ತಿರುವುವು''[೨]

ಹಿಂದಿನ ಸಾಹಿತ್ಯದ 'ವಸ್ತು'ಗಳನ್ನು ಪಟ್ಟಿಹಾಕಿದರೆ, ಧರ್ಮ-ತತ್ವ-ನೀತಿ ಪ್ರಚಾರವನ್ನೇ ಮುಖ್ಯ ವಸ್ತುಗಳನ್ನಾಗಿ ಮಾಡಿಕೊಂಡ ಕೃತಿಗಳ ಸಂಖ್ಯೆಯೇ ಮಿಗಿಲಾಗಿದೆ. ಸಾಹಿತ್ಯ ಎಂದೂ ಸಾಹಿತ್ಯೋದ್ದೇಶವಷ್ಟರಿಂದಲೇ ರಚಿತವಾದದ್ದು ವಿರಳ. ಸಾಹಿತ್ಯ ಇರುವುದು ಜನರ ಶ್ರೇಯಸ್ಸನ್ನು ಸಾಧಿಸಲು. ಇದು ಪಾಪ, ಇದು ಪುಣ್ಯ, ಇದು ಹಿತ, ಇದು ಅಹಿತ ಎನ್ನುವುದನ್ನು ತಿಳಿಯಹೇಳಲು. ಒಟ್ಟಿನಲ್ಲಿ ಪುರುಷಾರ್ಥ ಪ್ರಾಪ್ತಿಗೋಸ್ಕರ. ಕಾವ್ಯವನ್ನು ಓದುವುದರಿಂದ ಜನಕ್ಕೆ ಪಾಪ ಪರಿಹಾರವಾಗುತ್ತದೆ, ಪುಣ್ಯ ಸಿದ್ಧಿಯಾಗುತ್ತದೆ, ಮೋಕ್ಷ ದೊರೆಯುತ್ತದೆ ಎಂಬ ಪಲ್ಲವಿಯನ್ನು ಪಠಿಸುತ್ತಾ ಬಂದ ಈ ಪರಿಸರದಲ್ಲಿ, ಈ ಎಲ್ಲ ಪ್ರಯೋಜನಗಳನ್ನೂ ಸಾಧಿಸಿಕೊಡುವ 'ಧರ್ಮ'ವೊಂದೇ ಕವಿಗಳ ಕಾವ್ಯದ ವಸ್ತುವಾದದ್ದು ಆಶ್ಚರ್ಯವಲ್ಲ. ಬರೀ ಕಾವ್ಯಗಳಿಂದ ಯಾಕೆ, ಶಾಸ್ತ್ರಗಳಿಂದಲೂ ಮೋಕ್ಷ ಸಂಪಾದನೆಯೇ ಪರಮಪ್ರಯೋಜನ ಎಂದು ಹೇಳಿದ್ದುಂಟು. ಕನ್ನಡದಲ್ಲಿ 'ಶಬ್ದಮಣಿದರ್ಪಣ'ವೆಂಬ ವ್ಯಾಕರಣ ಗ್ರಂಥವನ್ನು ಬರೆದ ಕೇಶಿರಾಜ, ತನ್ನ ವ್ಯಾಕರಣವನ್ನು ಓದುವವರಿಗೆ ''ಆಕಾಂಕ್ಷಿಪ ಮುಕ್ತಿಯಕ್ಕುಂ'' ಎನ್ನುತ್ತಾನೆ.

ಕಾವ್ಯದ ಉದ್ದೇಶವೇ, ಧರ್ಮದ ಉದ್ದೇಶವೂ ಆದಾಗ, ಸಾಹಿತ್ಯ ಎನ್ನುವುದು ಧರ್ಮ ಪ್ರಸಾರದ ಹಾಗೂ ಧರ್ಮ ಪ್ರಚಾರದ ಮಾಧ್ಯಮವಾಯಿತು. ಅಲ್ಲದೆ ಸಾಹಿತ್ಯ ಅತ್ಯಂತ ಸ್ವಾರಸ್ಯವಾಗಿ ಹಾಗೂ ಪರಿಣಾಮಕಾರಿಯಾಗಿ ಧರ್ಮ ಪ್ರಸಾರ ಮಾಡಲು ಇರುವ ಸುಲಭವಾದ ಉಪಾಯವಾಯಿತು. ಜೈನ, ವೀರಶೈವ, ವೈಷ್ಣವ ಈ ಮೂರು ಧರ್ಮದ ಕವಿಗಳು, ಉದ್ದಕ್ಕೂ ಈ ಉದ್ದೇಶದಿಂದ ತಮ್ಮ ಕೃತಿಗಳನ್ನು ಬರೆದಿದ್ದಾರೆ. ತಮ್ಮ ತಮ್ಮ ಕೃತಿಗಳಲ್ಲಿ ಸ್ವವಿಷಯಗಳನ್ನು ಹೇಳಿಕೊಳ್ಳುವಾಗ ತಾವು ಯಾವ ಮತಧರ್ಮದವರು ಎಂಬ ವಿಷಯವನ್ನೂ, ಆಯಾ ಧರ್ಮಗಳ ವಿಚಾರಗಳಲ್ಲಿ ತಮಗಿರುವ ಒಲವು ನಿಲುವುಗಳನ್ನೂ ಹೇಳಿಕೊಂಡಿದ್ದಾರೆ. ಕೆಲವು ವೇಳೆ ಈ ಸಂಗತಿಯನ್ನು ಹೇಳದೆ ಬಿಟ್ಟರೂ, ಅಂಥ ಕವಿಗಳ ಕಾವ್ಯವಸ್ತುವಿನಿಂದಲೂ, ಅವರ ಇಷ್ಟದೇವತಾಸ್ತುತಿಗಳಿಂದಲೂ, ಅವರ ಕಾವ್ಯಗಳಲ್ಲಿನ ಮತೀಯಾಂಶಗಳಿಂದಲೂ, ಅವರು ಯಾವ ಮತ-ಧರ್ಮಕ್ಕೆ ಸೇರಿದವರೆಂಬುದನ್ನು ಗೊತ್ತು ಮಾಡಬಹುದು. ಒಟ್ಟಿನಲ್ಲಿ ಯಾವ ಕವಿಯೂ, ತಾನು ಒಪ್ಪಿಕೊಂಡ ಮತ-ಧರ್ಮಗಳ ಪ್ರಭಾವದಿಂದ ಹೊರಗೆ ನಿಲ್ಲಲು ಸಾಧ್ಯವಾಗಿಲ್ಲ. ಹಾಗೆಯೇ ಆಯಾ ಮತ-ಧರ್ಮಗಳ ಪರವಾದ ಧೋರಣೆಯಿಂದ ಹೊರತಾಗಿರಲೂ ಸಾಧ್ಯವಾಗಿಲ್ಲ. ಅಷ್ಟರಮಟ್ಟಿಗೆ ಆಯಾ ಕವಿಗಳು ಅಂದಂದಿನ ಮತ-ಧರ್ಮಗಳಿಂದ ಬದ್ಧರಾಗಿದ್ದಾರೆ. ಅಲ್ಲದೆ, ಪ್ರತಿಯೊಬ್ಬ ಕವಿಯೂ, ತನ್ನ ಕಾವ್ಯಮುಖೇನ ತಾನು ಹುಟ್ಟಿಬೆಳೆದ ಮತ-ಧರ್ಮಕ್ಕೆ ಅಭಿವ್ಯಕ್ತಿಯನ್ನು ಕೊಡುವುದು ತನ್ನ ಕರ್ತವ್ಯ ಎಂದು ಭಾವಿಸಿದಂತೆ ತೋರುತ್ತದೆ. ಮತ್ತು ಆಯಾ ಧರ್ಮಕ್ಕೆ ಸೇರಿದ ಓದುಗರೂ ಕವಿಯಿಂದ ಇದನ್ನೇ ನಿರೀಕ್ಷಿಸುತ್ತಿದ್ದರೆಂದೂ ತೋರುತ್ತದೆ. ಆದುದರಿಂದಲೇ ಜೈನ ಕವಿಗಳು ''ಭವ್ಯಲೋಕ ಪ್ರಮುದಪ್ರದ''ವಾದ ಜೈನ

---

೨ ಬಿ. ಎಂ. ಶ್ರೀಕಂಠಯ್ಯ: 'ಕನ್ನಡ ಕೈಪಿಡಿ' ಸಂಪುಟ ೨, ಪು. ೪೬೮ (೧೯೪೭ರ ಮೊದಲ ಮುದ್ರಣ)

ಪುರಾಣಗಳನ್ನೂ, ವೀರಶೈವ ಕವಿಗಳು ಶಿವನ ಹಾಗೂ ಶಿವಭಕ್ತರ ಕತೆ-ಪುರಾಣಗಳನ್ನೂ, ವೈಷ್ಣವರು ವಿಷ್ಣುಪರವಾದ ಕೀರ್ತನೆ-ಕಾವ್ಯ ಪುರಾಣಗಳನ್ನೂ ಬರೆದಿರುವುದು. ತಾನು ಒಪ್ಪಿಕೊಂಡ ಧರ್ಮದ ಬಗ್ಗೆ ಶ್ರದ್ಧೆಯನ್ನು ಪ್ರಕಟಸುವುದರ ಜತೆಗೆ ಧರ್ಮವನ್ನು ಪ್ರಚಾರ ಮಾಡುವ ಒಂದು ಕರ್ತವ್ಯದಿಂದ ಬದ್ಧವಾದ ಕವಿಗಳು ಬೇರೆಯ ರೀತಿಯಾದ ಕಾವ್ಯಗಳನ್ನು, ಅಂದರೆ ತಮ್ಮ ಧಾರ್ಮಿಕ ಉದ್ದೇಶಕ್ಕೆ ಹೊರತಾದ ಕಾವ್ಯಗಳನ್ನು ಬರೆದಿದ್ದೂ ಉಂಟು. ನಿದರ್ಶನಕ್ಕೆ ಹತ್ತನೆಯ ಶತಮಾನದ ಕವಿಗಳನ್ನು ನೋಡಬಹುದು. ಪಂಪ 'ಆದಿಪುರಾಣ' ಎಂಬ ಜೈನ ಧಾರ್ಮಿಕ ಕೃತಿಯನ್ನು ಬರೆಯುವುದರ ಜತೆಗೆ 'ವಿಕ್ರಮಾರ್ಜುನ ವಿಜಯ'ವೆಂಬ ಲೌಕಿಕ ಕೃತಿಯನ್ನು ಬರದಿದ್ದಾನೆ. ಇದೇ ರೀತಿಯಾಗಿ ರನ್ನ, ಪೊನ್ನ, ನೇಮಿಚಂದ್ರ ಮೊದಲಾದ ಜೈನ ಕವಿಗಳೂ, ಒಂದು ಧಾರ್ಮಿಕ ಕಾವ್ಯವನ್ನೂ, ಇನ್ನೊಂದು ಲೌಕಿಕ ಕಾವ್ಯವನ್ನೂ ಬರೆದಿದ್ದಾರೆ. ಆದರೆ ಜೈನ ಓದುಗರು, ಈ ಎರಡೂ ಬಗೆಯ ಕೃತಿಗಳಿಗೆ ತೋರಿದ ಪ್ರತಿಕ್ರಿಯೆ ಮಾತ್ರ, 'ಧರ್ಮ'ದ ಪ್ರಭಾವವನ್ನೇ ಎತ್ತಿ ಹಿಡಿಯುತ್ತದೆ. ಈ ಧಾರ್ಮಿಕ ಪುರಾಣಗಳಿಗಿಂತ, ಸಾಹಿತ್ಯದ ದೃಷ್ಟಿಯಿಂದ ಬೆಲೆಯುಳ್ಳ 'ಲೌಕಿಕ' ಕೃತಿಗಳನ್ನು ಓದುಗರು ಪ್ರತಿ ಮಾಡಿ ಉಳಿಸಿಕೊಳ್ಳುವುದರಲ್ಲಿ ಎಂಥ ಉದಾಸೀನವನ್ನು ತಾಳಿದರೆಂಬುದು ಈ ದಿನ ದೊರಕುವ ಈ ಲೌಕಿಕ ಕೃತಿಗಳ ಹಸ್ತಪ್ರತಿಗಳ ಸಂಖ್ಯೆಯನ್ನು ನೋಡಿದರೆ ತಿಳಿಯುತ್ತದೆ. ಪಂಪನ 'ವಿಕ್ರಮಾರ್ಜುನ ವಿಜಯ'ದ ಪ್ರತಿಗಳು ಸಿಕ್ಕಿರುವುದು ಕೇವಲ ಮೂರು; ರನ್ನನ 'ಗದಾಯುದ್ಧ'ದ ಪ್ರತಿ ಸಿಕ್ಕಿರುವುದು ಕೇವಲ ಒಂದೂವರೆ! ಆದರೆ 'ಆದಿಪುರಾಣ' ಹಾಗೂ 'ಅಜಿತಪುರಾಣ'ದ ಪ್ರತಿಗಳು ಸಾಕಷ್ಟು ದೊರಕಿವೆ. ಧರ್ಮಗ್ರಂಥಗಳಲ್ಲದ, ನಿಜವಾದ ಕಾವ್ಯಗಳನ್ನು ಪ್ರತಿಮಾಡಿ ಉಳಿಸಿಕೊಳ್ಳಬೇಕೆನ್ನುವ ಬಗೆಗೆ ಆಯಾ ಮತ-ಧರ್ಮದವರು ತಾಳಿದ ಈ ನಿರಾಸಕ್ತಿಗೆ 'ಧರ್ಮ'ದ ಪ್ರಭಾವವೇ ಕಾರಣ. ಅವರಿಗೆ ಕಾವ್ಯ ಯಾವುದು, ಪುರಾಣ ಯಾವುದು ಎನ್ನುವುದು ಗೊತ್ತಿರಲಿಲ್ಲ ಎಂದಲ್ಲ. ಅವರಿಗೆ ಕಾವ್ಯಗಳಿಗಿಂತ ಪುರಾಣಗಳೇ ಮುಖ್ಯವಾಗಿದ್ದುವು ಅಥವಾ ನಿಜವಾದ ಕಾವ್ಯವೆಂದರೆ, ಧಾರ್ಮಿಕ ಕಾವ್ಯ ಅಥವಾ ಪುರಾಣಗಳೇ ಎಂಬ ಕಲ್ಪನೆ ಮನೆ ಮಾಡಿಕೊಂಡಿದ್ದಿರಬಹುದು. ಅಲ್ಲದೆ ಅಂದಿನ ಪ್ರಮುಖ ವ್ಯಕ್ತಿಗಳು, ಕವಿಗಳು ಬರೆದ ಇಂತಹ ಧಾರ್ಮಿಕ ಕಾವ್ಯಗಳನ್ನು ಅಧಿಕ ಸಂಖ್ಯೆಯಲ್ಲಿ ಪ್ರತಿಮಾಡಿಸಿ ಭಕ್ತಾದಿಗಳಿಗೆ ದೊರಕಿಸಿ ಕೊಡುವುದು ಒಂದು ಧಾರ್ಮಿಕ ಕರ್ತವ್ಯ ಎಂದು ಭಾವಿಸಿದ್ದೂ ಈ ಭಾವನೆಗೆ ಕಾರಣವಿರಬಹುದು. ದಾನಚಿಂತಾಮಣಿ ಎಂದು ಹೆಸರಾದ ಅತ್ತಿಮಬ್ಬೆಯು ಹತ್ತನೆಯ ಶತಮಾನದಲ್ಲಿ, ರನ್ನನಿಂದ 'ಅಜಿತಪುರಾಣ'ವೆಂಬ ಜೈನ ಧಾರ್ಮಿಕ ಕೃತಿಯನ್ನು ಬರೆಯಿಸಿದ್ದಲ್ಲದೆ, ಪೊನ್ನನು ಬರೆದ 'ಶಾಂತಿಪುರಾಣ'ದ ಸಹಸ್ರ ಪ್ರತಿಗಳನ್ನು ಮಾಡಿಸಿ ಸುವರ್ಣ ಜಿನ ಪ್ರತಿಮೆಗಳೊಡನೆ ಅವುಗಳನ್ನು ದಾನ ಮಾಡಿದಳಂತೆ. ಈ ರೀತಿ ಧಾರ್ಮಿಕ ಕೃತಿಗಳನ್ನು ಪ್ರತಿಮಾಡಿಸಿ ದಾನ ಮಾಡುವುದನ್ನು 'ಶಾಸ್ತ್ರದಾನ' ಎಂದು ಕರೆಯಲಾಗಿದೆ. ಒಟ್ಟಿನಲ್ಲಿ ಜೈನ ಧರ್ಮದ ಪ್ರಮುಖ ವ್ಯಕ್ತಿಗಳು ಮತ್ತು ಓದುಗರು, ಕವಿಯಾದವನ ಮೊದಲ ಕರ್ತವ್ಯ 'ಧಾರ್ಮಿಕ ಕಾವ್ಯ'ವನ್ನು ಬರೆಯುವುದು ಎಂದು ಭಾವಿಸಿದಂತೆ ತೋರುತ್ತದೆ. ಕವಿಗಳೂ ಸಹ ಅತ್ಯಂತ ಶ್ರದ್ಧೆಯಿಂದ ಇದನ್ನು ಒಪ್ಪಿಕೊಂಡಿದ್ದರು. ಆದರೆ, ಕವಿಯಾದವನು, ಮೊಟ್ಟಮೊದಲಿಗೆ ಹೀಗೆ ತಾನು ಒಪ್ಪಿಕೊಂಡ ಧರ್ಮಕ್ಕೆ ಕಾವ್ಯ ಮುಖೇನ ಅಭಿವ್ಯಕ್ತಿಯನ್ನು ಕೊಡದೆಹೋದಂತಹ ಸಂದರ್ಭದಲ್ಲಿ, ಅವನನ್ನೂ, ಆತನ ಕಾವ್ಯವನ್ನೂ ತಿರಸ್ಕರಿಸಿ ನೋಡಿದ ಒಂದು ನಿದರ್ಶನ

ಸ್ವಾರಸ್ಯವಾಗಿದೆ. ಅದು ಹನ್ನೆರಡನೆಯ ಶತಮಾನದಲ್ಲಿ ಹರಿಹರ ಮತ್ತು ರಾಘವಾಂಕ ಇವರಿಗೆ ನಡೆದ ಒಂದು ಘರ್ಷಣೆ: ಹನ್ನೆರಡನೆಯ ಶತಮಾನ ವೀರಶೈವ ಧರ್ಮದ ಉತ್ಕರ್ಷದ ಕಾಲ. ವಚನಕಾರರ ಧಾರ್ಮಿಕ ಕ್ರಾಂತಿಯ ನಂತರ ಬಂದ ಕವಿಗಳು ಹರಿಹರ ಹಾಗೂ ಅವನ ಸೋದರಳಿಯನಾದ ರಾಘವಾಂಕ. ಶಿವಕವಿಯಾದ ಹರಿಹರ, ಶಿವನನ್ನೂ, ಶಿವಶರಣರನ್ನೂ ಕುರಿತು ಕಾವ್ಯ ಬರೆಯಬೇಕೇ ಹೊರತು ಮನುಜರ ಮೇಲೆ ಕನಿಷ್ಠರ ಮೇಲೆ ಕಾವ್ಯವನ್ನು ಬರೆಯಬಾರದು ಎಂಬ ಕಾವ್ಯ ಧೋರಣೆಯನ್ನು ಎತ್ತಿ ಹಿಡಿದವನು. ಶಿವನನ್ನೂ, ಶಿವಶರಣರನ್ನೂ ಕುರಿತು ಬರೆಯುವುದರ ಮೂಲಕ, ಶಿವಪಾರಮ್ಯವನ್ನೂ, ಶಿವಭಕ್ತಿಯ ಮಹತ್ವವನ್ನೂ ಪ್ರಕಟಿಸಬಹುದೆನ್ನುವ ಧಾರ್ಮಿಕ ಕರ್ತವ್ಯವನ್ನು ಕವಿ ನಿರ್ವಹಿಸಬೇಕೆನ್ನುವುದು ಹರಿಹರನ ಉದ್ದೇಶ. ಆದರೆ ಇಂಥ ಪರಿಸರದಲ್ಲಿ, ಹರಿಹನ ಸೋದರಳಿಯ ರಾಘವಾಂಕ, ಮೊಟ್ಟಮೊದಲಿಗೆ ಬರೆದದ್ದು, 'ಹರಿಶ್ಚಂದ್ರ ಕಾವ್ಯ'. ಈ ಕಾವ್ಯವನ್ನು ಬರೆದು ಹೊನ್ನ ಹರಿವಾಣದಲ್ಲಿಟ್ಟುಕೊಂಡು ರಾಘವಾಂಕನು ತನ್ನ ಗುರುವೂ, ಮಾವನೂ ಆದ ಹರಿಹರನಲ್ಲಿಗೆ ಒಯ್ದು ಒಪ್ಪಿಕೊಳ್ಳಬೇಕೆಂದು ಕೇಳಿದನು. ಆಗ ಹರಿಹರ, ರಾಘವಾಂಕನ ಹರಿಶ್ಚಂದ್ರ ಕಾವ್ಯವು 'ಶಿವನ ಅಥವಾ ಶಿವಶರಣನ' ಕತೆಯಲ್ಲವೆಂಬ ಕಾರಣಕ್ಕೆ ಅದನ್ನು ತಿರಸ್ಕರಿಸಿದ್ದಲ್ಲದೆ, ತನ್ನ ಎಡಗಾಲ ಪಾದುಕೆಯಿಂದ ರಾಘವಾಂಕನನ್ನು ಹೊಡೆಯಲಾಗಿ, ರಾಘವಾಂಕನ ಹಲ್ಲುಗಳು ಉದುರಿದವು. ಅನಂತರ ರಾಘವಾಂಕನು ಪಶ್ಚಾತ್ತಾಪಪಟ್ಟು 'ಹರಿಶ್ಚಂದ್ರ ಕಾವ್ಯವ ಮುರಿದು' ಶೈವ ಕೃತಿ ಪಂಚಕ–ಅಂದರೆ 'ಸಿದ್ದರಾಮ ಚಾರಿತ್ರ, ಸೋಮನಾಥ ಚರಿತೆ, ವೀರೇಶ ಚರಿತೆ, ಶರಭ ಚಾರಿತ್ರ, ಹರಿಹರ ಮಹತ್ವ' ಎಂಬ ಐದು ಶೈವ ಕಾವ್ಯಗಳನ್ನು–ಬರೆದನಂತರ, ಉದುರಿ ಹೋಗಿದ್ದ ಹಲ್ಲುಗಳು ಮತ್ತೆ ಹುಟ್ಟಿದವು. ಇದು ಒಂದು ಕತೆ. ಬಾಯಿಂದ ಬಾಯಿಗೆ ಹರಿದುಕೊಂಡು ಬಂದ ದಂತಕತೆ. ಇದನ್ನು ಚಿಕ್ಕನಂಜೇಶನು ತನ್ನ 'ರಾಘವಾಂಕ ಚರಿತೆ'ಯಲ್ಲಿ ಉಲ್ಲೇಖಿಸಿದ್ದಾನೆ. ಇದೊಂದು ಕತೆ ಎಂಬುದೇನೋ ನಿಜವೆ; ಆದರೆ ಈ ಕತೆಯ ಹಿಂದಿರುವ ಅರ್ಥ ಇದು: ರಾಘವಾಂಕ ಬರೆದ ಕೃತಿಗಳಲ್ಲಿ 'ಹರಿಶ್ಚಂದ್ರ ಕಾವ್ಯ' ನಿಜವಾದ ಅರ್ಥದಲ್ಲಿ ವೀರಶೈವ ಧಾರ್ಮಿಕ ಕಾವ್ಯ ಅಲ್ಲ. ಯಾವ ಧಾರ್ಮಿಕ ಪರಿಸರದಲ್ಲಿ ರಾಘವಾಂಕನಂಥ ವೀರಶೈವ ಕವಿ, ತಾನು ಹುಟ್ಟಿ ಬೆಳೆದ ವೀರಶೈವ ಧರ್ಮದ ಶ್ರದ್ಧೆಯನ್ನೂ, ನಿಷ್ಠೆಯನ್ನೂ ಪ್ರಕಟಿಸುವ 'ಧಾರ್ಮಿಕ ಕಾವ್ಯ'ವನ್ನು ಮೊಟ್ಟ ಮೊದಲಿಗೆ ಬರೆಯಬೇಕಾದದ್ದು ಅವನ ಕರ್ತವ್ಯವಾಗಿರುವಾಗ, 'ಹರಿಶ್ಚಂದ್ರ ಕಾವ್ಯ'ದಂಥ ಕಾವ್ಯವನ್ನು ಮೊದಲು ಬರೆಯ ಬಾರದಾಗಿತ್ತು-ಎಂದು ಅಂದಿನ ಜನ ತನ್ನ ತೀವ್ರ ಪ್ರತಿಭಟನೆಯನ್ನು ತೋರಿಸಿತೆಂಬುದೇ, ಹರಿಹರ-ರಾಘವಾಂಕರ ಘರ್ಷಣೆಯ ದಂತಕತೆಯಾಗಿ ರೂಪು ತಾಳಿದೆ. ಹರಿಶ್ಚಂದ್ರಕಾವ್ಯದ ಬಗೆಗೆ ಬಂದ ಈ ಪ್ರತಿಭಟನೆಯ ನಂತರ, ರಾಘವಾಂಕನು 'ಸಿದ್ಧರಾಮ ಚಾರಿತ್ರ', 'ಸೋಮನಾಥ ಚರಿತೆ', 'ವೀರೇಶ ಚರಿತೆ'ಗಳ ಮೂಲಕ ತಾನು ಒಪ್ಪಿಕೊಂಡ ಮತ-ಧರ್ಮದ ಪ್ರಸಾರಕ್ಕೆ ಬಂದದ್ದನ್ನು ನೋಡಿದರೆ, ಎಂತಹ ಸ್ವತಂತ್ರ ಮನೋಧರ್ಮದ ಕವಿಯೂ, ಧರ್ಮಶ್ರದ್ಧೆಗೆ ಹೇಗೆ ತನ್ನ ಕಾವ್ಯ ಶ್ರದ್ಧೆಯನ್ನು ಒಪ್ಪಿಸಿಕೊಂಡು ಉಳಿಯಬೇಕಾಯಿತೆಂಬ ಸಂಗತಿ ಇದರಿಂದ ಸೂಚಿತವಾಗುತ್ತದೆ. ರಾಘವಾಂಕನ ಈ ಒಂದು ನಿದರ್ಶನವನ್ನು ಬಿಟ್ಟರೆ ಹನ್ನೆರಡನೆಯ ಶತಮಾನದ ನಂತರ, ಕಾವ್ಯ ಮತ್ತು ಧರ್ಮಗಳು ಮೇಳವಿಸಿಯೇ ಅಭಿವ್ಯಕ್ತಿಯನ್ನು ಪಡೆದಿವೆ. ಹತ್ತನೆಯ ಶತಮಾನದ ಕವಿಗಳು, ತಮ್ಮ ಧರ್ಮಶ್ರದ್ಧೆಗೆ ಒಂದು ಕಾವ್ಯ, ತಮ್ಮ ಲೌಕಿಕಾನುಭವಕ್ಕೆ ಒಂದು ಕಾವ್ಯ ಎಂದು ಕಾವ್ಯಾಭಿವ್ಯಕ್ತಿಯನ್ನು ವಿಭಾಗಿಸಿಕೊಂಡರು. ಆದರೂ ಪಂಪನಂಥ ಕವಿ, ತನ್ನ 'ಆದಿಪುರಾಣ' ಎಲ್ಲಿ ಕೇವಲ

ಧಾರ್ಮಿಕಕಾವ್ಯವೆಂದು, ಜೈನೇತರರಿಂದ ಗೃಹೀತವಾಗದೆ ಹೋದೀತೋ ಎಂಬ ಅಳುಕಿನಿಂದ ''ಆದಿ ಪುರಾಣದೊಳ್ ಅಱಿವುದು ಧರ್ಮಮುಮಂ ಕಾವ್ಯ ಧರ್ಮಮುಮಂ''– ಆದಿಪುರಾಣದಲ್ಲಿ ಧರ್ಮವೂ ಇದೆ, ಕಾವ್ಯ ಧರ್ಮವೂ ಇದೆ, ಅದನ್ನು ಓದುಗರು ತಿಳಿಯಬಹುದು–ಎಂದು ಸ್ಪಷ್ಟವಾಗಿ ಹೇಳಿದ್ದಾನೆ. ಆದರೆ ಹನ್ನೆರಡನೆಯ ಶತಮಾನದ ಕವಿಗಳ ಕಾವ್ಯ ಪ್ರಜ್ಞೆ ಪಂಪನ ಕಾಲದಲ್ಲಾದಂತೆ ಇಬ್ಬಗೆಯಾಗದೆ ಉಳಿದದ್ದರಿಂದ ಅಲ್ಲಿ ಕಾವ್ಯ ಬೇರೆ ಅಲ್ಲ, ಧರ್ಮ ಬೇರೆ ಅಲ್ಲ, ಎಂಬ ದೃಷ್ಟಿಯೇ ಪ್ರಧಾನವಾಗಿದೆ. ಮುಂದಿನ ವೈಷ್ಣವ ಕವಿಗಳಲ್ಲಿಯೂ ಇದೇ ಧೋರಣೆ ಇದೆ. ಪಂಪನಿಂದ ಆರಂಭವಾದ ಒಂದು ವಿಧಾನ, ಧರ್ಮವನ್ನು ಕುರಿತು ಒಂದು ಕೃತಿ, ಮತ ಧರ್ಮದಿಂದ ಬೇರೆಯಾದ ವಿಷಯವನ್ನು ಕುರಿತು ಇನ್ನೊಂದು ಕೃತಿ ಎಂದು, ಆಗಮಿಕ, ಲೌಕಿಕ ಕಾವ್ಯಗಳನ್ನು ಬರೆಯುವ ಪದ್ಧತಿ, ಪಂಪನ ನಂತರದ ಜೈನೇತರ ಕವಿಗಳಲ್ಲೂ ಇದ್ದಿದ್ದರೆ, ಬಹುಶಃ ಕನ್ನಡ ಸಾಹಿತ್ಯಕ್ಕೆ ಇನ್ನಷ್ಟು ವೈವಿಧ್ಯತೆ ಬರುತ್ತಿತ್ತೋ ಏನೋ. ಆದರೆ ಹನ್ನೆರಡನೆಯ ಶತಮಾನದ ವೇಳೆಗೆ, ಧರ್ಮ ಹಾಗೂ ಕಾವ್ಯ ಧರ್ಮಗಳು ಬಿಡಿಬಿಡಿಯಾಗಿ ಗುರುತಿಸುವಂತೆ ಅಭಿವ್ಯಕ್ತವಾಗುವ ಬದಲು, ಅವೆರಡೂ ಇಡಿಯಾಗಿ ವ್ಯಕ್ತವಾಗತೊಡಗಿದವು. ಮುಂದೆ ಬಂದ ಭಾಗವತ ಸಂಪ್ರದಾಯದ ಕತೆಯೂ ಇದೇ ಆಯಿತು.

ಧರ್ಮದಿಂದ ಪ್ರೇರಣೆಗೊಂಡು ರಚಿತವಾದ ಸಾಹಿತ್ಯವನ್ನು, ಮೂರು ವಿಭಾಗಗಳಾಗಿ ಸ್ಥೂಲವಾಗಿ ವಿಂಗಡಿಸಬಹುದು; ಒಂದು, ಧಾರ್ಮಿಕ ಸಾಹಿತ್ಯ (religious literature). ಎರಡು, ಭಕ್ತಿ ಸಾಹಿತ್ಯ (devotional literature), ಮೂರು, ಅನುಭಾವ ಸಾಹಿತ್ಯ (mystic literature). ಈ ಮೂರು ಬಗೆಗಳನ್ನು ಜೈನ, ವೀರಶೈವ, ವೈಷ್ಣವ ಕವಿಗಳ ಕೃತಿಗಳಲ್ಲಿ ಗುರುತಿಸಬಹುದು. ಈ ಮೂರರಲ್ಲಿ ಮೊದಲನೆಯದನ್ನು ಸ್ಪಷ್ಟವಾಗಿ ಬೇರ್ಪಡಿಸಿ ತೋರಿಸುವಂತೆ, ಎರಡು ಮೂರನೆಯವುಗಳನ್ನು ತೋರಿಸುವುದು ಕಷ್ಟ. ಯಾಕೆಂದರೆ ಎರಡು ಮತ್ತು ಮೂರರ ನಡುವಣ ಭೇದ ನೀರಮೇಲಿನ ಗೆರೆಯಂತೆ.

ಮೊದಲನೆಯದಾದ 'ಧಾರ್ಮಿಕ ಸಾಹಿತ್ಯ' ಎಂಬ ಮಾತನ್ನು ಮುಖ್ಯವಾಗಿ ಕವಿಗಳು ತಮ್ಮ ಧರ್ಮಶ್ರದ್ಧೆಯ ಪ್ರಕಟಣೆಗಾಗಿ ಮತ್ತು ಮತಧರ್ಮದ ಪ್ರಚಾರಕ್ಕಾಗಿ ಬರೆದ ಬರವಣಿಗೆಯನ್ನು ಸೂಚಿಸಲು ಬಳಸಿದ್ದೇವೆ. ಕವಿ ಆಕಸ್ಮಿಕವಾಗಿ ಆಯಾ ಮತಧರ್ಮಗಳಲ್ಲಿ ಹುಟ್ಟಿದ್ದರಿಂದ , ಮತ್ತು ತಾನು ಹುಟ್ಟಿ ಬೆಳೆದ ಮತ-ಧರ್ಮದ ಪರಂಪರೆಯನ್ನು ಮೈಗೂಡಿಸಿಕೊಂಡು, ಅದನ್ನು ಕಾವ್ಯ ಮಾಧ್ಯಮದ ಮೂಲಕ ಎತ್ತಿ ಹಿಡಿಯುವುದು ಮತ್ತು ಪ್ರಚಾರ ಮಾಡುವುದು ತನ್ನ ಕರ್ತವ್ಯವೆಂದು ಭಾವಿಸಿದಾಗ ಹುಟ್ಟುವುದು ಇದು. ಇಂಥ ಸಂದರ್ಭಗಳಲ್ಲಿ ಆಯಾ ಧರ್ಮವನ್ನು ಕುರಿತು ಕವಿಗಳ ವೈಯಕ್ತಿಕವಾದ ಒಲವುಗಳು ಪ್ರಕಟವಾಗುವುದರ ಜತೆಗೆ, ಆಯಾಧರ್ಮದ ಮಹಾವ್ಯಕ್ತಿಗಳನ್ನು ಕುರಿತ ಕೃತಿಗಳೂ ರಚಿತವಾಗುತ್ತವೆ. 'ಧರ್ಮಗಳಲ್ಲೆಲ್ಲ ಜೈನ ಧರ್ಮವೇ ಶ್ರೇಷ್ಠ' ಎಂದು ಪಂಪನು ನಂಬಿದಂತೆ, ಉಳಿದೆಲ್ಲ ಜೈನ ಕವಿಗಳೂ ನಂಬಿ, ಅದರ ತತ್ವಗಳನ್ನು ವ್ಯಾಖ್ಯಾನಿಸುವಂಥ, ಜೈನಧರ್ಮದ ಮಹಾವ್ಯಕ್ತಿಗಳ ಚಿತ್ರಗಳನ್ನು ನೀಡಿದ್ದಾರೆ. 'ವಡ್ಡಾರಾಧನೆ'ಯ ಕತೆಗಳಾಗಲಿ, ನಯಸೇನನ 'ಧರ್ಮಾಮೃತ'ದ ಕತೆಗಳಾಗಲಿ, ಬೇರೊಂದು ರಮ್ಯ ವಿಧಾನದಿಂದ ಜೈನಧರ್ಮದ ಪ್ರಚಾರವನ್ನು ಮಾಡುತ್ತವೆ. ಹಾಗೆಯೇ ವೀರಶೈವ ಕವಿಗಳೂ ತಮ್ಮ ಧಾರ್ಮಿಕ ಶ್ರದ್ಧೆಯನ್ನು, ಅರವತ್ತು ಮೂವರು ಪುರಾತನ ಶಿವಭಕ್ತರನ್ನು ಕುರಿತು ಕಾವ್ಯ-ಪುರಾಣಗಳನ್ನು ಬರಯುವುದರ

ಮೂಲಕ, ಬಸವ, ಸಿದ್ಧರಾಮ, ಅಲ್ಲಮ ಮೊದಲಾದ ವೀರಶೈವ ಧರ್ಮದ ಮಹಾವ್ಯಕ್ತಿಗಳನ್ನು ಕುರಿತು ಕಾವ್ಯವನ್ನು ಕಟ್ಟುವುದರ ಮೂಲಕ ಪ್ರಕಟಪಡಿಸಿಕೊಂಡಿದ್ದಾರೆ. ವೈಷ್ಣವ ಕವಿಗಳು ಬರೆದ ಕೀರ್ತನೆಗಳು, ಪುರಾಣ ಹಾಗೂ ಕಾವ್ಯಗಳು ಹೀಗೆಯೇ ಭಾಗವತ ಧರ್ಮವನ್ನು ಪ್ರಚಾರ ಮಾಡುತ್ತವೆ. ಹೀಗೆ ಮತ ಪ್ರಚಾರ ಮಾಡುವಲ್ಲಿ, ತಮ್ಮ ಧರ್ಮದ ಮಹತ್ತನ್ನು ಎತ್ತಿಹಿಡಿಯುವಲ್ಲಿ ಈ ಬಗೆಯ ಕಾವ್ಯ ಒಮ್ಮೊಮ್ಮೆ ಅನ್ಯಮತಗಳನ್ನು ವಿಡಂಬಿಸುವ ಸ್ವರೂಪದ್ದೂ ಆಗುತ್ತದೆ. ಹತ್ತನೆಯ ಶತಮಾನದ ನಂತರ ಹನ್ನೊಂದನೆಯ ಮತ್ತು ಹನ್ನೆರಡನೆಯ ಶತಮಾನಗಳಲ್ಲಿ ಜೈನಮತ ಇಳಿಮುಖವಾದಾಗ, ಶೈವ-ವೈಷ್ಣವ ಧರ್ಮಗಳೊಂದಿಗೆ ಸೆಣಸಾಡುತ್ತಾ ತನ್ನ ವರ್ಚಸ್ಸನ್ನು ಕಳೆದುಕೊಳ್ಳತೊಡಗಿದಾಗ, ಇಂಥ ವಿಡಂಬನ ಕಾಣಿಸಿಕೊಳ್ಳುತ್ತದೆ. ಹತ್ತನೆಯ ಶತಮಾನದ ಜೈನ ಕವಿಗಳಿಗೆ ಕೇವಲ ಧರ್ಮದ ಶ್ರದ್ಧೆ ಹಾಗೂ ಧರ್ಮದ ಮಹತ್ವವನ್ನು ಎತ್ತಿಹಿಡಿಯುವುದು ಮುಖ್ಯವಾಗಿದ್ದರೆ, ಹನ್ನೊಂದು ಹನ್ನೆರಡನೆಯ ಶತಮಾನಗಳಲ್ಲಿ, ಅನ್ಯಮತಗಳೊಡನೆ ಸೆಣಸಾಡುತ್ತ ತನ್ನ ಅಸ್ತಿತ್ವವನ್ನುಳಿಸಿಕೊಳ್ಳುವ ಸಲುವಾಗಿ, ಅನ್ಯಮತಗಳನ್ನು ವಿಡಂಬಿಸುವ ಮತ್ತು ಸ್ವಮತವನ್ನು ರಭಸದಿಂದ ಪ್ರಚಾರ ಮಾಡುವ ಅಗತ್ಯ ಮುಖ್ಯವಾಗಿತ್ತು. ಇದರಿಂದಾಗಿಯೇ ನಯಸೇನ, ಬ್ರಹ್ಮಶಿವ, ವೃತ್ತವಿಲಾಸ ಇವರಂಥ ಕವಿಗಳು ಮತ ಪ್ರಚಾರದ ಮತ್ತು ವಿಡಂಬನ ಪ್ರಧಾನವಾದ 'ಧಾರ್ಮಿಕ ಸಾಹಿತ್ಯ'ವನ್ನು ರಚಿಸಿದರು. ವೀರಶೈವ ವಚನಕಾರರೂ ಮತ್ತು ಕವಿಗಳೂ, ತಮ್ಮ ಎಷ್ಟೋ ವಚನಗಳಲ್ಲಿ ಹಾಗೂ ಕಾವ್ಯಗಳಲ್ಲಿ ಪರಮತಗಳನ್ನು ಖಂಡಿಸುವ ಹಾಗೂ ಸ್ವಮತವನ್ನು ಮಂಡಿಸುವ ಕಾರ್ಯವನ್ನು ಮಾಡಿದ್ದಾರೆ. ಜೈನ ಹಾಗೂ ವೀರಶೈವ ಕವಿಗಳಿಗೆ ಹೋಲಿಸಿದರೆ, ವೈಷ್ಣವ ಕೃತಿಗಳಲ್ಲಿ ಈ ಬಗೆಯ ಅನ್ಯಮತ ವಿಡಂಬನೆಯ ಅಂಶಗಳು ಕಡಿಮೆಯೆಂದೇ ಹೇಳಬೇಕು. ಒಟ್ಟಿನಲ್ಲಿ, ಕವಿಗಳು ಯಾವ ಒಂದು ನೆಲೆಯಲ್ಲಿ ತಾವು ಒಪ್ಪಿಕೊಂಡ ಮತ-ಧರ್ಮಗಳ ಬಗ್ಗೆ ಶ್ರದ್ಧೆ, ಅಭಿಮಾನ, ಆವೇಶಗಳನ್ನು ಇರಿಸಿಕೊಂಡು, ಆಯಾ ಮತ ಧರ್ಮದ ಪ್ರಸಾರ ಹಾಗೂ ಪ್ರಚಾರವನ್ನು ಕಾವ್ಯದ ಮುಖ್ಯ ಗುರಿಯನ್ನಾಗಿ ಮಾಡಿಕೊಂಡು, ಕೃತಿರಚನೆ ಮಾಡಿರುವರೋ, ಅಂಥ ಕೃತಿಗಳನ್ನು 'ಧಾರ್ಮಿಕ ಸಾಹಿತ್ಯ' (religious literature) ಎಂದು ಕರೆದಿದ್ದೇವೆ. ಇಂಥ ಕೃತಿಗಳಲ್ಲಿ, ಆಯಾ ಧರ್ಮದ ತತ್ವಗಳನ್ನೂ, ಪ್ರಕ್ರಿಯೆಗಳನ್ನೂ, ಕುರಿತ ಶಾಸ್ತ್ರಾಂಶಗಳು ತುಂಬಿಕೊಂಡಿರುವುದಲ್ಲದೆ, ಇಂಥ ಕಾವ್ಯ ಅಥವಾ ಪುರಾಣಗಳ ಮಾದರಿ ಹೆಚ್ಚು ಕಡಿಮೆ ಸಿದ್ಧರೂಪದವುಗಳೆಂಬಂತೆ ತೋರುತ್ತವೆ.

ನಾವು ಪ್ರಸ್ತಾಪಿಸಿದ ಇನ್ನೆರಡು ವಿಭಾಗಗಳು ಭಕ್ತಿ ಸಾಹಿತ್ಯ ಮತ್ತು ಅನುಭಾವ ಸಾಹಿತ್ಯ. ಹಿಂದೆ ಹೇಳಿದ ಧಾರ್ಮಿಕ ಸಾಹಿತ್ಯದಲ್ಲಿ, ಅದನ್ನು ಬರೆಯುವವರಿಗೆ ಆಯಾ ಧರ್ಮದ ಬಗ್ಗೆ ಶ್ರದ್ಧೆ ಹಾಗೂ ಅದನ್ನು ಪ್ರಚಾರ ಮಾಡುವ ಮನೋಧರ್ಮ ಮುಖ್ಯವಾದರೆ, ಭಕ್ತಿ ಸಾಹಿತ್ಯ (devotional literature) ಮತ್ತು ಅನುಭಾವ ಸಾಹಿತ್ಯ (mystic literature)ಗಳಲ್ಲಿ ಅದನ್ನು ಬರೆಯುವವರಿಗೆ ಕೇವಲ ಧರ್ಮಶ್ರದ್ಧೆ ಮಾತ್ರವಲ್ಲದೆ, ಒಂದು ಬಗೆಯ ಆಧ್ಯಾತ್ಮಿಕ ನಿಲುವೂ ಮತ್ತು ಅದರೊಂದಿಗೆ ವೈಯಕ್ತಿಕವಾದ ಸಾಧನೆಯೂ ಮುಖ್ಯವಾಗುತ್ತದೆ. ಇಲ್ಲಿ ಕವಿ ಒಬ್ಬ ಸಾಧಕನಾಗುತ್ತಾನೆ. ವಚನಗಳನ್ನು ಬರೆದ ಬಸವಣ್ಣನಂಥವರನ್ನು, ಕೀರ್ತನೆಗಳನ್ನು ಬರೆದ ಪುರಂದರ-ಕನಕದಾಸರಂಥವರನ್ನು ಭಕ್ತಿ ಹಾಗೂ ಅನುಭಾವ ಮಾರ್ಗದ ಸಾಧಕರೆಂದು ಕರೆಯುವಂತೆ, ಪಂಪ-ರನ್ನರಂಥ ಕವಿಗಳನ್ನು ಜೈನಧರ್ಮದ ಸಾಧಕರೆಂದು ಭಾವಿಸುವುದು

ಕಷ್ಟವಾಗುತ್ತದೆ. ಭಕ್ತಿ ಸಾಹಿತ್ಯ ಹಾಗೂ ಅನುಭಾವ ಸಾಹಿತ್ಯಗಳ ನಿರ್ಮಿತಿಗೆ ಒಂದು ಬಗೆಯ 'ಸಾಧಕ' ಮನೋಧರ್ಮ ಅಗತ್ಯ; ಒಂದು ರೀತಿಯಲ್ಲಿ ಆಧ್ಯಾತ್ಮಿಕವಾದ ಅಂತರಂಗಾನುಭವಗಳಲ್ಲಿ ವೈಯಕ್ತಿಕವಾಗಿ ತಮ್ಮನ್ನು ತೊಡಗಿಸಿಕೊಳ್ಳುವ ನಿಷ್ಠೆ ಅಗತ್ಯ. ಇಂಥ ಮನೋಧರ್ಮದಿಂದ ಹೊಮ್ಮಿದವು ಶತಕಗಳು, ಅಷ್ಟಕಗಳು, ವಚನಗಳು, ಕೀರ್ತನೆಗಳು ಮತ್ತು ಹಾಡುಗಳು. ಜೈನ, ವೀರಶೈವ ಹಾಗೂ ವೈಷ್ಣವ ಕವಿಗಳು ಈ ಬಗೆಯ 'ಭಕ್ತಿ ಸಾಹಿತ್ಯ'ವನ್ನು ರಚಿಸಿದ್ದಾರೆ. 'ಧಾರ್ಮಿಕ ಸಾಹಿತ್ಯ'ದ ವಸ್ತುಗಳು ಬಹುಮಟ್ಟಿಗೆ ಆಗಲೇ ಸಿದ್ಧವಾದವುಗಳು. ಆದರೆ ಭಕ್ತಿ ಸಾಹಿತ್ಯದ ವಸ್ತು ಮೂಲತಃ ಅಂತರಂಗದ್ದು. ಸಾಧಕನಾದವನು ತನ್ನ ಅಂತರಂಗದ ಅಭೀಪ್ಸೆಗಳನ್ನು, ತಾಕಲಾಟಗಳನ್ನು ತನ್ನ ಇಷ್ಟದೈವಗಳೊಂದಿಗೆ ನಿವೇದಿಸಿಕೊಳ್ಳುವ, ಕೃಪಾಯಾಚನೆ ಮಾಡುವ ಉದ್ಧಾರದ ಆಸಕ್ತಿಗಳನ್ನು ಪ್ರಕಟಿಸುವ ರೂಪದ್ದು. ನಿದರ್ಶನಕ್ಕೆ ಎಷ್ಟೋ ವಚನಗಳನ್ನು, ಶತಕ ಹಾಗೂ ಕೀರ್ತನೆಗಳನ್ನು ಗಮನಿಸಬಹುದು. 'ಅನುಭಾವ ಸಾಹಿತ್ಯ'ವೆಂಬುದು ಇದರೊಳಗಿನ ಒಂದು ಪ್ರಭೇದವೆನ್ನಬಹುದು. 'ಅನುಭಾವ' ಎನ್ನುವುದು ಒಂದು ವಿಶೇಷವಾದ ಮಾನಸಿಕ ನಿಲುವು. ಈ ನಿಲುವಿನಲ್ಲಿ ಆತ ಕಂಡ ಕಾಣ್ಕೆಗಳು 'ಅನುಭಾವ ಸಾಹಿತ್ಯ'ದಲ್ಲಿ ಪ್ರಕಟವಾಗುತ್ತವೆ. ಅನುಭಾವಿಯು ಮೂಲತಃ ಭಕ್ತನೂ ಆಗಿರುತ್ತಾನೆ; ಆದರೆ ಭಕ್ತರಾದವರೆಲ್ಲಾ ಅನುಭಾವದ ನಿಲುವಿಗೆ ಏರಿರುತ್ತಾರೆಂದು ಹೇಳಲುಬಾರದು.

ಧರ್ಮದಿಂದ ಸ್ಫೂರ್ತಿಗೊಂಡ ಸಾಹಿತ್ಯವನ್ನು 'ಧಾರ್ಮಿಕ ಸಾಹಿತ್ಯ' 'ಭಕ್ತಿ ಸಾಹಿತ್ಯ' ಮತ್ತು 'ಅನುಭಾವ ಸಾಹಿತ್ಯ' ಎಂದು ಸ್ಥೂಲವಾಗಿ, ಅನುಕೂಲಕ್ಕಾಗಿ ವಿಭಾಗಿಸಿಕೊಂಡರೂ, ಈ ಮೂರು ಬಗೆಗಳೂ ಒಂದೇ ಕಾಲದ ಅಥವಾ ಒಂದೇ ಧರ್ಮದ ಸಾಹಿತ್ಯದಲ್ಲಿ ರಲಾರವೆಂದು ಅರ್ಥವಲ್ಲ. ಉದಾಹರಣೆಗೆ ವಚನಸಾಹಿತ್ಯದ ಕೆಲವು ಭಾಗಗಳು ಏಕಕಾಲಕ್ಕೆ, ಧಾರ್ಮಿಕ ಸಾಹಿತ್ಯವೂ ಹೌದು, ಭಕ್ತಿ ಸಾಹಿತ್ಯವೂ ಹೌದು, ಅನುಭಾವ ಸಾಹಿತ್ಯವೂ ಹೌದು. ಈ ವಿಭಾಗಗಳ ಉದ್ದೇಶಕ್ಕೆ ಹೊಂದುವ ವಚನಗಳನ್ನು ಬೇಕಾದರೆ ವಿಂಗಡಿಸಿ ತೋರಿಸಬಹುದು. ಹರಿದಾಸ ಕೀರ್ತನೆಗಳಲ್ಲಿ ಕೆಲವನ್ನು ಹೀಗೆಯೇ ಪರಿಗಣಿಸಬಹುದು.

ಕನ್ನಡ ಸಾಹಿತ್ಯವನ್ನು ಶತಮಾನಗಳ ಉದ್ದಕ್ಕೂ ನಿಯಂತ್ರಿಸಿಕೊಂಡು ಬಂದ ಈ ಧರ್ಮಗಳಿಂದಾಗಿ, ಕನ್ನಡ ಸಾಹಿತ್ಯಕ್ಕೆ ಲಾಭವೇನಾಗಿದೆ, ನಷ್ಟವೇನಾಗಿದೆ ಎನ್ನುವುದು ಮಹಾ ಪ್ರಬಂಧವೊಂದಕ್ಕೆ ವಸ್ತುವಾಗಬಲ್ಲದು. ಆದರೂ ಒಂದೆರಡು ಅಂಶಗಳನ್ನು ಸಂಕ್ಷೇಪವಾಗಿ ಇಲ್ಲಿ ಪ್ರಸ್ತಾಪಿಸಬಹುದು:

ಮೊದಲನೆಯದಾಗಿ ಧರ್ಮವೆಂಬುದು ಎಲ್ಲ ಕಾಲದ ಕವಿಗಳಿಂದಲೂ, ಅವರ ಕಾವ್ಯದ ಕಾಣಿಕೆಯನ್ನು ನಿರೀಕ್ಷಿಸಿದ್ದರಿಂದ, ಧಾರ್ಮಿಕವಲ್ಲದ ಬೇರೆಯ ಶುದ್ಧಕಾವ್ಯಗಳ ಸಂಖ್ಯೆ ತೀರಾ ವಿರಳವಾಯಿತು; ಮತ್ತು ಧಾರ್ಮಿಕವಲ್ಲದ ಕಾವ್ಯಗಳ ವಿಚಾರಕ್ಕೆ ತಿರಸ್ಕಾರವನ್ನು ಓದುಗರಲ್ಲಿ ಬೆಳೆಯಿಸಿತು. ಧಾರ್ಮಿಕ ಕಾವ್ಯಗಳ ಹೆಸರಿನಲ್ಲಿ ರಚಿತವಾದ 'ಪುರಾಣ'ಗಳು, ಒಂದೇ ಮಾದರಿಯವಾಗಿ, ಆಯಾ ಮತ ಧರ್ಮಕ್ಕೆ ಸಂಬಂಧಪಟ್ಟ ಶಾಸ್ತ್ರಾಂಶಗಳ ಸೀಗೇ ಮೆಳೆಗಳಿಂದ ಇಡಿಕಿರಿದು, ನಿಜವಾದ ಕಾವ್ಯಾಸಕ್ತರ ಪಾಲಿಗೆ ನಿರಾಶೆಯನ್ನುಂಟುಮಾಡಿರುವ ನಿದರ್ಶನಗಳೂ ಉಂಟು. ಮತ್ತೊಂದು ಅಪಾಯವೆಂದರೆ, ಈ ಧಾರ್ಮಿಕ ಕಾವ್ಯಗಳು ಸಾರಿದ ಕಾವ್ಯೋದ್ದೇಶದಿಂದಾಗಿ, ಓದುಗರು ಕೇವಲ ಪುಣ್ಯ ಸಂಪಾದನಾರ್ಥಿಗಳಾದ ಶ್ರಾವಕರು ಮಾತ್ರವಾದರೆ ಹೊರತು, ಕೃತಿಗಳನ್ನು ಕುರಿತು ವಿಮರ್ಶೆ ಮಾಡುವ, ಚರ್ಚಿಸುವ ವೈಚಾರಿಕತೆಯ ಬೆಳವಣಿಗೆಗೆ ಅವಕಾಶವೇ ಅವರಿಗೆ ದೊರಕಲಿಲ್ಲ. ಈ ಎಲ್ಲ ಧಾರ್ಮಿಕ

ಕಾವ್ಯಗಳ ಮುಖ್ಯ ಸ್ವರ ಇದು: ಜೀವನ ನಶ್ವರ, ಪರಮಾರ್ಥವೆಂಬುದು ಜೀವನದ ಗುರಿ. ಜೈನರಾಗಲಿ, ವೀರಶೈವರಾಗಲಿ, ವೈಷ್ಣವರಾಗಲಿ ಹೇಳಿದ್ದು ಇದನ್ನೆ. ವಾಸ್ತವ ಬದುಕಿನ ಬಗೆಗೆ ಪ್ರೀತಿ-ಆಸಕ್ತಿ, ಕಾತರತೆ ಹಾಗೂ ತೊಡಗುವಿಕೆಗಳಿಗೆ ತೀರಾ ವಿರುದ್ಧವಾದ ಈ ಉಪದೇಶ, ವಾಸ್ತವ ಹಾಗೂ ಸಹಜಾನುಭವಗಳ ಅಭಿವ್ಯಕ್ತಿಗೆ ಅವಕಾಶವಿಲ್ಲದಂತಹ ಪರಿಸ್ಥಿತಿಯನ್ನು ನಿರ್ಮಾಣಮಾಡಿತು. ಕಾವ್ಯ ನೀತಿಬೋಧೆಗೆ ನೈವೇದ್ಯವಾಯಿತು. ಒಟ್ಟಿನಲ್ಲಿ, ಧರ್ಮವೆಂಬುದು ಕವಿಗಳೆಂಬ ಕುದುರೆಗಳಿಗೆ ಚಾಟಿಯಂತೆ ಕೆಲಸಮಾಡಿದೆ. ಹೀಗೆಂದ ಮಾತ್ರಕ್ಕೆ, ಧರ್ಮದ ಈ ಪ್ರಭಾವ ಹಾಗೂ ನಿಯಂತ್ರಣಗಳು, ಕನ್ನಡ ಸಾಹಿತ್ಯಕ್ಕೆ ಬದುಕಿನ ಮೌಲ್ಯಗಳನ್ನೂ, ಆದರ್ಶಗಳನ್ನೂ, ತಾತ್ವಿಕ ಹಿನ್ನೆಲೆಯನ್ನೂ ಕೊಡಲು ಸಾಧ್ಯವಾಗಿದೆಯೆಂಬುದನ್ನು ಅಲ್ಲಗಳೆಯುತ್ತಿದ್ದೇವೆಂದು ಭಾವಿಸಬಾರದು. ಕನ್ನಡ ಸಾಹಿತ್ಯಕ್ಕೆ ಧಾರ್ಮಿಕ ಪ್ರೇರಣೆಯಿಂದಾಗಿ ಎಂತಹ ಅನುಭಾವಿಕ ಆಳ-ಅಗಲಗಳೂ, ಶಿಖರಗಳೂ ಪ್ರಾಪ್ತವಾಗಿವೆ ಎಂಬುದನ್ನೂ ನಾವು ಮರೆತಿಲ್ಲ. ಆದರೆ, ಧರ್ಮದ ಅತಿಯಾದ ಅನುಸರಣದಿಂದಾಗಿ, ಕನ್ನಡ ಸಾಹಿತ್ಯ ಎಷ್ಟರ ಮಟ್ಟಿಗೆ ಕಳಪೆಯಾಗಿದೆ ಎನ್ನುವುದನ್ನು ನಾವು ಗಮನಿಸಬೇಕಾಗಿದೆ.

ಆಧುನಿಕ ಸಾಹಿತ್ಯದಲ್ಲಷ್ಟೆ, ಸುದೈವದಿಂದ, ಇಂದಿನ ಕವಿಗಳು ಹಿಂದಿನ ಕವಿಗಳಂತೆ ಯಾವ ಮತಧರ್ಮಗಳ ನಿರ್ಬಂಧಕ್ಕೂ ಸಿಕ್ಕಿಕೊಂಡಿಲ್ಲ. ಹಿಂದಿನ ಕವಿ ಕೃತಿಗಳನ್ನೋದುತ್ತಲೆ, ಅವನು ಯಾವ ಮತಧರ್ಮಕ್ಕೆ ಸೇರಿದವನು ಎನ್ನುವುದನ್ನು ಪತ್ತೆಮಾಡಬಹುದಾಗಿತ್ತು. ಆದರೆ ಇಂದಿನ ಯಾವ ಕವಿ ಕೃತಿಗಳ ಆಧಾರದಿಂದಲೂ, ಆತ ಯಾವ ಒಂದು ಮತ ಧರ್ಮಕ್ಕೆ ಸೇರಿದವನೆಂಬುದನ್ನು ಪತ್ತೆ ಹಚ್ಚುವುದು ಸಾಧ್ಯವಾಗುವುದಿಲ್ಲ. ಅಷ್ಟರಮಟ್ಟಿಗೆ ಇಂದಿನ ಸಾಹಿತ್ಯ ಸಾರ್ವತ್ರಿಕವಾಗಿದೆ. ವೈಜ್ಞಾನಿಕ ಯುಗದ ವೈಚಾರಿಕತೆಯಿಂದಾಗಿ, ಮತ-ಧರ್ಮಗಳು ಹೆಚ್ಚೆಂದರೆ ಕೇವಲ ವೈಯಕ್ತಿಕ ಆಸಕ್ತಿಗೆ ಸಂಬಂಧಪಟ್ಟವುಗಳೇ ಹೊರತು, ಅದಕ್ಕಿಂತ ಹೆಚ್ಚೇನಲ್ಲ ಎಂಬ ದೃಷ್ಟಿ ಮೂಡುತ್ತಿದೆ. ಹಿಂದಿನ ಮತ-ಧರ್ಮದ ಸ್ಥಾನವನ್ನು ಇಂದು ವಿಜ್ಞಾನವು ಆಕ್ರಮಿಸಿಕೊಂಡಿದೆ. ದೇವರು-ಧರ್ಮ ಇತ್ಯಾದಿಗಳ ವಿಚಾರದಲ್ಲಿದ್ದ ಅಭಿಪ್ರಾಯಗಳೆಲ್ಲ ತಲೆಕೆಳಗಾಗಿವೆ. ಮತ-ಧರ್ಮಗಳಿಗಿಂತ ಮಹತ್ತಾದ ಪ್ರೇರಣೆಗಳು ಕವಿಯ ಕಾವ್ಯ ಪ್ರಜ್ಞೆಯ ವಸ್ತುಗಳಾಗಿವೆ. ರಾಷ್ಟ್ರೀಯ ಆಂದೋಲನದಿಂದ, ರಾಮಕೃಷ್ಣ, ವಿವೇಕಾನಂದ, ಗಾಂಧಿ, ಅರವಿಂದರಂಥ ಮಹಾವ್ಯಕ್ತಿಗಳ ವಿಚಾರ ಧಾರೆಯಿಂದ, ಹೊಸ ಮಾನವೀಯ ಧರ್ಮವೊಂದು ರೂಪುಗೊಂಡಿದೆ. ಸೌಂದರ್ಯ ಪ್ರಿಯತೆ, ಜೀವನ ಪ್ರೀತಿ, ವಾಸ್ತವದ ಹಂಬಲ, ವಿಶ್ವಪ್ರಜ್ಞೆ-ಇವುಗಳೇ ಇಂದಿನ ಕವಿಯ 'ಧರ್ಮಶ್ರದ್ಧೆ'ಯಾಗಿವೆ. ಇಂಥ ಹಿನ್ನೆಲೆಯಿಂದಾಗಿ ಹೊಸ ಸಾಹಿತ್ಯ ಹಿಂದೆಂದೂ ಕಾಣದ ವೈವಿಧ್ಯ ಹಾಗೂ ವಿನೂತನತೆಯನ್ನು ಪಡೆಯಲು ಸಾಧ್ಯವಾಗಿದೆ.

*ಕನ್ನಡ ಸಾಹಿತ್ಯ ಸಮೀಕ್ಷೆ, ೧೯೭೪, ೧೯೯೯, ಪು. ೩೬-೪೮*

# ೫೨. ಕವಿರಾಜಮಾರ್ಗ: ಶ್ರೀವಿಜಯ, ತಿರುಳ್ಗನ್ನಡ, ಗದ್ಯ ಮತ್ತು ಪದ್ಯ ಕಾವ್ಯ

● ಮುಳಿಯ ತಿಮ್ಮಪ್ಪಯ್ಯ

ಕವಿರಾಜಮಾರ್ಗದ ಗ್ರಂಥಕಾರನ ಹೆಸರೇ ಮೊದಲಾದ ಹೊಲಬುಗಳಾವುವು? ಎಂಬ ಪ್ರಶ್ನೆ ತಲೆದೋರುತ್ತಿದೆ. ಮೂರೂ ಪರಿಚ್ಛೇದಗಳ ಕಡೆಯ ಪದ್ಯಗಳಲ್ಲಿ ಕ್ರಮವಾಗಿ ಗ್ರಂಥಕಾರನ ಹೆಸರೇ ತೋರುವುದನ್ನೆಣಿಸಿರಿ:

೧......ಕವಿಪ್ರಕರಂ ಶ್ರೀವಿಜಯಪ್ರಭೂತಮನಿದಂ ಕೈಕೊಳ್ವುದೀ ಮಾಣ್ಕೆಯಿಂ (೧-೧೪೯)

೨.......ಶ್ರೀವಿಜಯ ಪ್ರಭೂತಮುದಮಂ ತನಗಾಗಿಸಿದೊಂ ಕವೀಶ್ವರಂ (೨-೧೫೩)

೩.......ಪರಮ ಶ್ರೀವಿಜಯ ಪ್ರಭೂತಿಜಯಶಂ ಸ್ತ್ರೀಬಾಲವೃದ್ಧಾಹಿತಂ
ಪರಮಾನಂದಿತಲೋಕಮೊಪ್ಪೆ ನೆಲೆಗೊಳ್ಗೆ......... (೩-೨೩೬)

ಈ ಹೇಳಿಕೆಗಳೊಳಗೆ ಮೊದಲಿನದು ಕವಿಸಮೂಹವನ್ನು ಕುರಿತು ಗ್ರಂಥಕಾರನೇ 'ಇದಂ'-ಎಂದರೆ ಈ 'ಕವಿರಾಜಮಾರ್ಗ'ನಾಮಕ ಗ್ರಂಥವನ್ನು-'ಕೈಕೊಳ್ವುದು' ಎಂದು ಪ್ರಾರ್ಥಿಸುವ ಮಾತು. 'ಶ್ರೀ ವಿಜಯಪ್ರಭೂತಮನಿದಂ' ಎಂದರೆ 'ಶ್ರೀವಿಜಯನೆಂಬಾತ ನಿಂದ ಉತ್ಪನ್ನವಾದ ಈ ಗ್ರಂಥವನ್ನು' ಎಂದು ಅರ್ಥ. ಇದರಿಂದ ಗ್ರಂಥಕಾರನ ಹೆಸರು ಇಲ್ಲಿ ಅತಿ ಸ್ಫುಟವಾಗಿದೆ. ಹೀಗಿರುವಲ್ಲಿ, 'ಕವಿರಾಜಮಾರ್ಗ'ವನ್ನು ರಚಿಸಿದಾತನು ಯಾರು? ಎಂಬ ವಿಷಯದಲ್ಲಿ ವಿದ್ವಾಂಸರೊಳಗೆ ಯಾಕೆ ವಿವಾದವೆದ್ದುದೋ ತಿಳಿಯದಾಗಿದೆ. ಆದರೆ, ಮತ್ತಿನ ಎರಡೂ ಪರಿಚ್ಛೇದಗಳ ಕಡೆಯ ತಾತ್ಪರ್ಯಗಳು ಅಷ್ಟು ವಿಶದವಾಗದುದರಿಂದಲೇ ವಿದ್ವಾಂಸರೊಳಗೆ ವಾದವೆದ್ದಿರಬೇಕೆಂದು ಭಾವಿಸಬಹುದೆ?

ಈ ಗ್ರಂಥವನ್ನು ನಿರ್ಮಿಸಿದುದು ಮಾರ್ಗೀಯ ವಿದ್ವತ್ಕವಿಗಳ ಮೀಸಲಾದ ಪ್ರಯೋಜನಕ್ಕಾಗಿ. ಆ ಮಟ್ಟಕ್ಕೇರದ ಕೆಳಗಿನ ತರಗತಿಯ ದೇಸಿಗಬ್ಬಿಗರನ್ನು ಗುರಿಯಿಟ್ಟು ಇದು ರಚಿತವಾದುದಲ್ಲ. ಈ ಭಾವನೆ ಗ್ರಂಥದೊಳಗೆ ಅಲ್ಲಲ್ಲಿ ಶಬ್ದತಃ ತೋರುತ್ತಿದೆ. ಹಿಂದೆ ದೃಷ್ಟಾಂತಿಸಿದ ''ಬುಧಜನಕ್ಕೆ ಕೆಲವಂ ಪೇಟ್ವೆಂ'', ''ಅತಿ ನಿಪುಣರಱಿಗೆ ತೋರ್ಪೆಂ''-ಇತ್ಯಾದಿ ಪದ್ಯಭಾಗಗಳಿಂದಲೂ ಆ ಭಾವನೆ ನಿಶ್ಚಿತವಾಗುತ್ತಿದೆ. ಅದಕ್ಕನುವಾಗಿಯೇ ಗ್ರಂಥಕಾರನು ಪ್ರಥಮ ಪರಿಚ್ಛೇದಾಂತ್ಯದಲ್ಲಿ ಈ 'ಕವಿರಾಜಮಾರ್ಗ'ವನ್ನು 'ಕವಿಪ್ರಕರ' ಸಾಮಾನ್ಯಕ್ಕೆ ಕಾಣಿಕೆಯಾಗಿ ಒಪ್ಪಿಸಿದ್ದಾನೆ. ದ್ವಿತೀಯ ಪರಿಚ್ಛೇದಾಂತ್ಯದಲ್ಲಿ, ಆ 'ಕವಿ ಪ್ರಕರ'ದೊಳಗೆ ವಿಶಿಷ್ಟವಾದ ಆಗಿನ ಕಾಲದ ಯಾರೋ ಒಬ್ಬ ಕವೀಶ್ವರನು ಈ ಶ್ರೀವಿಜಯ ಗ್ರಂಥದಿಂದೂದಗಿದ ಆನಂದವನ್ನು ಸ್ವೀಕರಿಸಿದನು ಎಂಬ ಅಂಶವನ್ನು ''ಶ್ರೀವಿಜಯ ಪ್ರಭೂತಮುದಮಂ ತನಗಾಗಿಸಿದೊಂ ಕವೀಶ್ವರಂ'' ಎಂದು ಸಾರಿದ್ದಾನೆ. ಬಹುಶಃ ನೃಪತುಂಗನ ಮಹಾಸಭೆಯೊಳಗಿನ ಕವೀಶ್ವರನೊಬ್ಬನು ಈ ಲಕ್ಷಣಗ್ರಂಥದಿಂದ ವಿಶೇಷವಾಗಿ ಆನಂದಗೊಂಡು ತದನುಸಾರವಾಗಿ ಒಂದು ಕಾವ್ಯವನ್ನು ಬರೆದಿರಬೇಕು. ಪ್ರಥಮ ಪರಿಚ್ಛೇದಾಂತ್ಯದಲ್ಲಿ ಗ್ರಂಥಕಾರನು ತಾನೆಸಗಿದ ಪ್ರಾರ್ಥನೆ ಸಫಲವಾಗಲಾರಂಭಿಸಿತು,

ಎಂಬುದನ್ನೇ ದ್ವಿತೀಯ ಪರಿಚ್ಛೇದಾಂತ್ಯದಲ್ಲಿ ಈ ರೀತಿಯಲ್ಲಿ ಸೂಚಿಸಿರಲೂಬಹುದು. ಹೀಗೆ ಕವಿಸಾಮಾನ್ಯಕ್ಕೆ ಸಮರ್ಪಿತವಾಗಿ, ಕವಿವಿಶೇಷದಿಂದ ಅಂಗೀಕೃತವಾದ ಈ ಗ್ರಂಥದ ಕೀರ್ತಿ ಅಥವಾ 'ಶ್ರೀವಿಜಯ ಪ್ರಭೂತಿಜಯಶಸ್ಸು'[೧] 'ಸ್ತ್ರೀಬಾಲವೃದ್ಧಾಹಿತ'[೨] ವಾಗಿ 'ಆಚಂದ್ರತಾರ' ಪರ್ಯಂತವಾಗಿ ನೆಲೆಗೊಳ್ಳಲಿ ಎಂದು ತೃತೀಯ ಪರಿಚ್ಛೇದಾಂತ್ಯದಲ್ಲಿ ಪ್ರಾರ್ಥಿಸುತ್ತಾನೆ. ಹೀಗೆ ತಾತ್ಪರ್ಯಾರ್ಥವನ್ನು ಮನನಮಾಡಿಕೊಂಡಲ್ಲಿ ಗ್ರಂಥಕಾರನ ಉದ್ದೇಶವೂ ಗುರಿಗೊಂಡಂತಾಗುವುದು; ವಿದ್ವಾಂಸರೊಳಗೆ ಒದಗಿದ ವಾದವು ನಿವೃತ್ತವಾಗುವುದು-ಎಂದು ಸೂಚಿಸುತ್ತೇವೆ. ಇದೇ ಗ್ರಂಥದ ಪ್ರಥಮ ಪರಿಚ್ಛೇದದೊಳಗೆ ''ಪರಮ ಶ್ರೀವಿಜಯ ಕವೀಶ್ವರ ಪಂಡಿತ ಚಂದ್ರ ಲೋಕಪಾಲಾದಿಗಳಾ'' (೧- ೩೩) ಎಂದು ಮುಂತಾಗಿ ಸ್ತುತಿಸುವ ಕನ್ನಡ ಕವಿಗಳ ಸಾಲಿನಲ್ಲಿ ಮೊದಲಿನವನಾಗಿ ಒಬ್ಬ 'ಶ್ರೀವಿಜಯ'ನ ಹೆಸರು ತೋರುತ್ತಿದೆ. ಅದು ಪ್ರಕೃತ ಗ್ರಂಥಕಾರನಾದ ಶ್ರೀವಿಜಯನ ಹೆಸರಲ್ಲ ಎಂದು ತಾನಾಗಿ ಗೊತ್ತಾಗುವ ಸಂಗತಿ. ತಾನೇ ತನ್ನನ್ನು ಸ್ತುತಿಸುತ್ತಾನೇನು? ಮಾತ್ರವಲ್ಲ; ಆ ಪದ್ಯದ ಮುಂದಿನ ಭಾಗದಲ್ಲಿ ಆ ಕವಿಗಳ ''ನಿರತಿಶಯ ವಸ್ತುವಿಸ್ತರವಿರಚನೆ''-ಎಂದರೆ ವಸ್ತುಕ ಕಾವ್ಯಗಳು, ಅಥವಾ ಅರ್ಥವೇ ಪ್ರಧಾನವಾಗಿರುವ ಅರ್ಥಕೃತಿಗಳು-''ಆದ್ಯ ಕಾವ್ಯಕ್ಕೆ ಎಂದುಂ ಲಕ್ಷ್ಯಂ'' ಎನ್ನುತ್ತಾನೆ. ಆದರಿಂದ, ಆ ಶ್ರೀವಿಜಯನೆಂದರೆ ಕನ್ನಡದ ಪುರಾತನ ಕವಿಗಳೊಳಗೆ ಪ್ರಮುಖನಾದ ಕವಿಯೊಬ್ಬನು ಎಂಬುದು ಅವನ ಹೇಳಿಕೆಯಿಂದಲೇ ವಿದಿತವಾಗುತ್ತಿದೆ.

## ಶ್ರೀವಿಜಯನು ಹಲಮಂದಿ ಪ್ರಸಿದ್ಧ ಕವಿಗಳಿಂದ ಸ್ತುತನಾದವನು

ಮತ್ತಿನ ಕನ್ನಡ ಸಾಹಿತ್ಯದಲ್ಲಿ ಪಂಪರನ್ನಾದಿಗಳನ್ನು ಹಲಮಂದಿ ಕನ್ನಡ ಕವಿಗಳು ಕೊಂಡಾಡಿದ್ದಾರೆ. ಹಾಗೆಯೇ ಕನ್ನಡ ಸಾಹಿತ್ಯ ಲಕ್ಷಣಶಾಸ್ತ್ರಕ್ಕೆ ಮೊತ್ತಮೊದಲು ತಳಹದಿಯನ್ನೆ ಕಟ್ಟಿದಂತೆ ತೋರುವ ಈ ಶ್ರೀವಿಜಯನನ್ನು ಹೆಸರೆತ್ತಿ ಹೊಗಳಿದವರೂ ಇದ್ದಾರೆ. ಅವರೊಳಗೆ ದುರ್ಗಸಿಂಹನು (ಕ್ರಿ.ಶ. ಸುಮಾರು ೧೧೪೫) ತನ್ನ 'ಪಂಚತಂತ್ರ'ದಲ್ಲಿ ಹೀಗೆನ್ನುತ್ತಾನೆ :

ಶ್ರೀವಿಜಯರ ಕವಿಮಾರ್ಗಂ
ಭಾವಿಪ ಕವಿಜನದ ಮನಕೆ ಕನ್ನಡಿಯುಂ ಕೆಯ್
ದೀವಿಗೆಯುಮಾದುದದಱಿಂ
ಶ್ರೀವಿಜಯರ್ ದೇವರನೇವಣ್ಣಿಪುದೋ ॥[೩] (೧-೫)

ಇಲ್ಲಿಯ 'ಕವಿಮಾರ್ಗಂ' ಎಂದರೆ ಈ ಪ್ರಕೃತದ 'ಕವಿರಾಜಮಾರ್ಗ'ವಲ್ಲ ಎಂದು

---

೧ ಶ್ರೀ ವಿಜಯನಿಂದ ನಿರ್ಮಿತವಾದ 'ಕವಿರಾಜಮಾರ್ಗ'ವೇ ಶ್ರೀವಿಜಯಪ್ರಭೂತಿ; ಅದರಿಂದ ಉತ್ಪನ್ನವಾದ ಕೀರ್ತಿಯೇ ಶ್ರೀ ವಿಜಯ ಪ್ರಭೂತಿಜಯಶಂ. ಇಲ್ಲಿ ಬಹುಶಃ '....'ಪ್ರಭೂತಿ' ಎಂದಲ್ಲ; ಹಿಂದಿನವುಗಳಂತೆ 'ಪ್ರಭೂತಜಯಶಂ' ಎಂದೇ ಮೂಲದಲ್ಲಿದ್ದಿರಬೇಕು ಎಂದು ಸೂಚಿಸುತ್ತೇವೆ.

೨ ಸ್ತ್ರೀ ಬಾಲ ವೃದ್ಧರಲ್ಲಿ ಆಹಿತವಾಗಿ, ಎಂದರೆ ಆರೋಪಿಸಲ್ಪಟ್ಟುದಾಗಿ ಎಂದು ತಾತ್ಪರ್ಯ. ಅಷ್ಟೊಂದು ಸಂಸ್ಕೃತಿಯನ್ನೊಂದದ, ದೇಸಿಯಲ್ಲೇ ಬಳಕೆವಡೆದ ಸ್ತ್ರೀಬಾಲವೃದ್ಧರಲ್ಲಿಯೂ ಈ ಗ್ರಂಥದ ಕೀರ್ತಿ ನೆಲೆಗೊಳ್ಳಲಿ, ಎಂಬುದೇ ಈ ಪ್ರಾರ್ಥನಾಭಾಗದ ಅರ್ಥ. ಇಲ್ಲಿ 'ವೃದ್ಧ ಆಹಿತ' ಎಂದು ಪರಿಚ್ಛೇದವೆಂಬುದನ್ನು ಮರೆಯಬಾರದು.

೩ ದುರ್ಗಸಿಂಹನ 'ಪಂಚತಂತ್ರ' (ಕರ್ಣಾಟಕ ಕಾವ್ಯಮಂಜರಿ ಗ್ರಂಥಮಾಲೆ), ೧೮೯೮, ಪು. ೫.

ಕೆಲವರು ಸಂದೇಹಿಸಿದಂತೆ ತೋರುತ್ತಿದೆ.[1] ಪದ್ಯದ ಪಾದರಚನೆಗನುವಾಗಿ 'ರಾಜ' ಪದವನ್ನು ಲೋಪಿಸಿದರೂ ಅರ್ಥದಲ್ಲಿ ಲೋಪವಾದಂತಿಲ್ಲ. ಈ ಗ್ರಂಥವನ್ನು ಆತನು ಕವಿಜನರ ಹಿತಾರ್ಥವಾಗಿ ಬರೆದುದೆಂದು ಅಲ್ಲಲ್ಲಿ ತೋರುತ್ತಿದೆ. ದುರ್ಗಸಿಂಹನು ಅದನ್ನೇ ''ಭಾವಿಪ ಕವಿಜನದ ಮನಕೆ ಕನ್ನಡಿಯುಂ ಕೈದೀವಿಗೆಯುಮಾದುದು''-ಎಂದರೆ 'ಕವಿತಾ ಸಂಸ್ಕಾರ ಪ್ರದವಾಗಿ ಕವಿಹೃದಯಕ್ಕೂ ಕಾವ್ಯಲೇಖನಕ್ಕೂ ನೆರವಾಗುತ್ತಿದೆ' ಎನ್ನುತ್ತಾನೆ. ಇಂಥ ಗ್ರಂಥವೆಂದರೆ 'ಕವಿರಾಜಮಾರ್ಗ'ವೇ ಸರಿ. ಮಾತ್ರವಲ್ಲ; 'ಶ್ರೀವಿಜಯರ' ಎಂದು ದುರ್ಗಸಿಂಹನಿಂದ ಬಹುವಚನವನ್ನೊಂದಬೇಕಾದರೆ ಗ್ರಂಥಕಾರನು ಲೋಕಮಾನ್ಯನೇ ಆಗಿರಬೇಕು. ''.....ಚಂದ್ರಭಟ್ಟ ಗುಣವರ್ಮ ಶ್ರೀವಿಜಯರ....ಸುಮಾರ್ಗಮಿದಱೊಳೆ ಲಕ್ಷ್ಯಂ''[2] ಎಂದು ಶಬ್ದಶಾಸ್ತ್ರಜ್ಞನಾದ ಕೇಶಿರಾಜನು ಸ್ತುತಿಸುವ ಶ್ರೀವಿಜಯನೂ ಈತನೇ ಆಗಿರಬೇಕು. ಇವರಂತೆ ಮಂಗರಸನೂ ತನ್ನ 'ನೇಮಿಜಿನೇಶ ಸಂಗತಿ'ಯಲ್ಲಿ ''ದೇವ ಚಂದ್ರಪ್ರಭರನು ಕೊಂಡಾಡಿದ ಶ್ರೀವಿಜಯರ....ವಂದಿಪೆನು''[3] ಎಂದು ಬಹುವಚನ ದಿಂದಲೇ ಸೂಚಿಸುವುದರಿಂದ, ಈತನು ಲೋಕಪೂಜ್ಯನಾಗಿರಬೇಕು. ಅಂತೂ ಈತನ ಹೆಸರು ಶ್ರೀವಿಜಯನೆಂದಾಗಿತ್ತೆಂಬಲ್ಲಿ ಸಂಶಯವೇನೂ ತೋರುವುದಿಲ್ಲ. ಮಾತ್ರವೇ ಅಲ್ಲ; ವೈದಿಕಮತಾನುಯಾಯಿ ದುರ್ಗಸಿಂಹ ಕವೀಶ್ವರನಿಂದಲೂ 'ಶ್ರೀವಿಜಯರ...' ಎಂದು ಬಹುವಚನವನ್ನೊಂದಬೇಕಾದರೆ ಈತನಲ್ಲಿ ಅಂಥದೊಂದು ಮಹಿಮೆಯೂ ಇದ್ದಿರಲೇಬೇಕು.

* * * * *

## ಗ್ರಂಥಕಾರನ ಹುಟ್ಟೂರು ಒಂಕುಂದವಿರಬಹುದೆ ?

ಗ್ರಂಥಕಾರನು 'ಪಾರ್ಥಿವಲೋಕಂ' ಅಥವಾ ಕ್ಷತ್ರಿಯ ಸಮಾಜಕ್ಕೆ ಸೇರಿದವನು ಎಂಬುದು ಹಿಂದಿನದೊಂದು ಹೇಳಿಕೆಯಲ್ಲಿ ಗೊತ್ತಾಗಿದೆ-''ಪಾರ್ಥಿವಲೋಕನಪ್ಪನೆಂದುಂ ಕವಿ ವರ್ಣಿಕುಂ'' (೩-೨೨೫). ಅವನು ಕ್ಷತ್ರಿಯನು ಮಾತ್ರವೇ ಅಲ್ಲ, ನೃಪತುಂಗನ ರಾಜ್ಯಭಾರವನ್ನು ನೆಲೆಗೊಳಿಸುವುದರಲ್ಲಿ ಪ್ರಯತ್ನಿಸಿ ಕೃತಾರ್ಥನಾದ ಮಹಾವ್ಯಕ್ತಿ ಎಂಬುದನ್ನೂ ಆಧಾರಪೂರ್ವಕವಾಗಿ ಬಲುಮಟ್ಟಿಗೆ ನಿರ್ಧರಿಸಿದ್ದೇವೆ. ಆತನ ಹುಟ್ಟೂರು ಯಾವುದಾಗಿರಬಹುದು ಎಂಬುದನ್ನು ನಿರ್ಧರಿಸುವಷ್ಟು ಪೂರ್ಣಾಧಾರ ದೊರಕದಿದ್ದರೂ, ಅದರ ಹೊಲಬಾದರೂ ಆಗಬಹುದೋ ನೋಡುವ:

ಪ್ರಥಮ ಪರಿಚ್ಛೇದದ ಆರನೆಯ ಪದ್ಯದಲ್ಲಿ ''ಏಕೆ ವಿವೇಕಬೃಹಸ್ಪತಿಯ ನಗರಮಂ ಪುಗುತರ್ಪಂ'' ಎಂದು ಈತನಾಡುವುದು, ಸಾಮಾನ್ಯವಾಗಿ ವಿದ್ವದ್ವರ್ಗಕ್ಕೇ ಸಂಬಂಧಿಸಿದಂತೆ ಭಾಸವಾಗುತ್ತಿದೆ. ಆದರೂ ಇದು ಏಕವಚನದಲ್ಲಿದ್ದು, ಮುಂದೆ ಅಲ್ಲಲ್ಲಿ ತೋರುವ ''ಪೇೞ್ವೆನಱಿವ ಮಾೞ್ಕೆಯೊಳೆನ್ನಾ'', ''ಪೇೞ್ವೆನುದಾಹರಣಂಗಳಂ'' ಮೊದಲಾಗಿ ತನ್ನನ್ನೇ ಸೂಚಿಸುವ ಉತ್ತಮ ಪುರುಷನಾಮಪದದೊಡನೆಯೇ ಸಂದುಗೂಡಿ ಕಾಣುತ್ತಿದೆ. ಮಾತ್ರವಲ್ಲ, ಇದೇ ಮುಂದೆ ಮೂರನೆಯ ಪರಿಚ್ಛೇದಾಂತದಲ್ಲಿ ತನ್ನನ್ನು ಚಿತ್ರಿಸುವ

---

೧ ನಾ. ಶ್ರೀ. ರಾಜಪುರೋಹಿತ, 'ಕವಿರಾಜಮಾರ್ಗ ಗ್ರಂಥದ' ಕರ್ತೃವು ಯಾರು?' ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ, ಸಂಪುಟ ೬, ಸಂಚಿಕೆ ೨, ಪು. ೧೧೨.

೨ 'ಶಬ್ದ ಮಣಿದರ್ಪಣ' (ಕರ್ಣಾಟಕ ಸಾಹಿತ್ಯ ಪರಿಷತ್ತಿನ ಪ್ರಕಟಣೆ), ಪು. ೩.

೩ ಎ. ಶಾಂತಿರಾಜ ಶಾಸ್ತ್ರೀ (ಸಂ.), ಮಂಗರಸನ 'ನೇಮಿಜಿನೇಶ ಸಂಗತಿ', ೧-೨೪.

'ಮಹಾನೃಪತುಂಗಸಭಾಸದಂ' ಮೊದಲಾದ ಏಕವಚನದ ಆಯಾ ಪದಗಳಲ್ಲಿಯೂ ಬೆಸುಗೆ ವಡೆಯುತ್ತಿದೆ. ಈತನು ಕನ್ನಡ ನಾಡಿನವನು ಮಾತ್ರವೇ ಅಲ್ಲ, ಜನ್ಮತಃ ಕನ್ನಡಿಗನೇ ಇದ್ದಿರಬೇಕೆಂಬಲ್ಲಿ ಸಂಶಯವಿಲ್ಲ. ಇರಲಿ, ಈತನು 'ವಿವೇಕಬೃಹಸ್ಪತಿ'ಯ ನಗರವಾದ ಮಾನ್ಯಖೇಟ ರಾಜಧಾನಿಯನ್ನು ಬಹುಶಃ ವಿಶಿಷ್ಟಾಧಿಕಾರಿಯಾಗಿ ಮಾತ್ರ ಮೊದಲು ಪ್ರವೇಶಿಸಿದ ಸಂಗತಿಯೇ ಹಿಂದಿನ ಪದ್ಯಭಾಗದಲ್ಲಿ ಕಾಣುವುದೆಂದು ನಮ್ಮ ಭಾವನೆ. ಅದಕ್ಕಿಂತಲೂ ಹಿಂದಿನ ಪದ್ಯವು 'ಅತಿಶಯಧವಳನ ಸಭಾಸದರ್' ತನ್ನನ್ನು 'ಮನ್ನಿಸುವರ್' (೧-೫) ಎಂದು ಕಾಣುವುದರಿಂದ, ತಾನು ಆ 'ವಿವೇಕಬೃಹಸ್ಪತಿ'ಯ ನಗರದ ಮಹಾಸಭೆಯಲ್ಲಿ 'ವಾಗಧಿಪ'ನಾಗಿ ಸಭಾಸದರಿಂದ ಮನ್ನಣೆಗೊಂಡುದನ್ನೇ ಅಲ್ಲಿ ಸೂಚಿಸುವುದಾಗಿರಬೇಕು.

''ಕಾವೇರಿಯಿಂದಂ ಆ ಗೋದಾವರಿವರಂ ಇರ್ದ್ದ ನಾಡು'', ''ಕನ್ನಡದೊಳ್ ಭಾವಿಸಿದ ಜನಪದಂ'' ಎಂದು ಪ್ರಥಮ ಪರಿಚ್ಛೇದದ ಮೂವತ್ತಾರನೆಯ ಪದ್ಯದಲ್ಲಿ ಸೂಚಿಸಿ, ತನ್ಮಧ್ಯಗತವಾದ ತಿರುಳುಗನ್ನಡ ಪ್ರದೇಶವನನ್ನು ಮತ್ತಿನ ಈ ಪದ್ಯದಿಂದ ವಿಸ್ತರಿಸುತ್ತಾನೆ:

ಅದಱೊಳಗಂ ಕಿಸುವೊಟಲಾ
ವಿದಿತಮಹಾಕೊಪಣ ನಗರದಾ ಪುಲಿಗೆಱೆಯಾ
ಸದಭಿಸ್ತುತಮಪ್ಪೊಂಕುಂ
ದದ ನಡುವಣ ನಾಡೆ ನಾಡೆ ಕನ್ನಡದ ತಿರುಳ್ ॥ (೧-೩೭)

-'ಆ ಕನ್ನಡ ಜನಪದದೊಳಗಿನದಾದ, ಕಿಸುವೊಟಲು', 'ಕೊಪಣನಗರ', 'ಪುರಿ (ಲಿ) ಗೆರೆ', 'ಒಂಕುಂದ' (ಒಕ್ಕುಂದ) ಎಂಬವುಗಳ ನಡುವಣ ನಾಡೇ ಕನ್ನಡದ ತಿರುಳ್ನಾಡು; ಎಂದರೆ ಸ್ಥಾನದಿಂದ ಮಧ್ಯಗತವಾದುದಷ್ಟೇ ಅಲ್ಲ, ಅಚ್ಚಗನ್ನಡದ ಸಂಸ್ಕೃತಿ ಭಾಷಾ ಶೈಲಿಗಳಲ್ಲಿ ಕನ್ನಡದ ತಿರುಳಾಗಿರುವ ನಾಡದು, ಎಂದು ತಾತ್ಪರ್ಯ. ಈ ಭಾವನೆ ಮತ್ತಿನ ಪದ್ಯದಲ್ಲಿಯೂ ಸೂಚಿತವಾಗಿದೆ:

ಪದನಱಿದು ನುಡಿಯಲುಂ ನುಡಿ
ದುದನಱಿದಾರಯಲುಮಾರ್ಪರಾ ನಾಡವರ್ಗಳ್
ಚದುರರ್ ನಿಜದಿಂ ಕುಱಿತೋ
ದದೆಯುಂ ಕಾವ್ಯಪ್ರಯೋಗಪರಿಣತಮತಿಗಳ್ ॥ (೧-೩೮)

'ಆ ನಾಡವರ್ಗಳ್' ಎಂದುದು ಆ '....ನಡುವಣ' ನಾಡವರನ್ನೇ ಅಲ್ಲದೆ ಅಖಂಡ ವಾದ ಕನ್ನಡ ನಾಡವರನ್ನಲ್ಲ.' ಆ ತಿರುಳುಗನ್ನಡಕ್ಕಿಂತ ತೆಂಕಣ ಕಾವೇರಿಯ ವರೆಗಿನ ಕನ್ನಡ ಸಾಹಿತ್ಯ ಶೈಲಿಯನ್ನೇ 'ದಕ್ಷಿಣಮಾರ್ಗ' ಎಂದೂ, ಅದಕ್ಕಿಂತ ಬಡಗಣ ಗೋದಾವರಿ ವರೆಗಿನದನ್ನೇ 'ಉತ್ತರಮಾರ್ಗ' ಎಂದೂ ಮುಂದೆ ನಿರ್ದೇಶಿಸಿ ಅವುಗಳ ವಿಶಿಷ್ಟ ಲಕ್ಷಣ ಲಕ್ಷ್ಯಗಳನ್ನೂ ವಿಸ್ತರಿಸುತ್ತಾನೆ. ಮಾತ್ರವಲ್ಲ; ಆ ಭಿನ್ನ ಭಿನ್ನ ಪ್ರಾಂತಗಳ ಕನ್ನಡ ಸಾಹಿತ್ಯ ಭಾಷೆ ದೋಷಯುತವಾಗಿರುವುದರಿಂದ 'ಕನ್ನಡ'ವಾಗಿ ಅಲ್ಲ, ಕನ್ನಡಗಳಾಗಿ ತೋರುತ್ತಿವೆ ಎಂಬುದನ್ನು-

..............................................
...................ಕನ್ನಡಂಗಳೊಳೆಂದುಂ

ವಾಸುಗಿಯುಮಱಿಯಲಾಱದ
ಬೇಸಱುಗುಂ ದೇಸಿ ಬೇಱೆವೇಱಪ್ಪುದಱಿಂ ॥ (೧-೪೬)

ಎನ್ನುತ್ತಾನೆ. ಇದರಿಂದ ಆ ತಿರುಳುಗನ್ನಡನಾಡಿನ ಭಾಷಾರೂಪವು ಸುಸಂಸ್ಕೃತವಾಗಿ ಅಭಿನ್ನವಾಗಿತ್ತು ಎಂದು ಭಾಸವಾಗುವುದು.

ಇಷ್ಟೆಲ್ಲ ಹೇಳಿದುದೇಕೆಂದರೆ, ಬಹುಶಃ ಗ್ರಂಥಕಾರನು ಆ ತಿರುಳ್‌ಗನ್ನಡ ಪ್ರಾಂತದೊಳಗಿನವನೇ ಆಗಿರಬೇಕು, ಎಂಬುದನ್ನು ಹೊಳೆಯಿಸಲಿಕ್ಕಾಗಿ. ತನ್ನದಾದ ಈ 'ಕವಿರಾಜಮಾರ್ಗ'ದ ಶೈಲಿಯನ್ನು ಆತನೇ ವಿಸ್ತರಿಸುವುದನ್ನೀಕ್ಷಿಸಿರಿ:

ನುಡಿಗಳೊಡಂಬಡಲ್ ಬಗೆದಪೊಲ್ ಬಗೆಯಂ ಮಿಗಲೀಯದೊಂದೆ ನಾ
ಣ್ನುಡಿಯ ಬೆಡಂಗೆ ಕನ್ನಡದ ಮಾತಿನೊಳಾ ವಿಕಟಾಕ್ಷರಂಗಳೊಳ್
ತೊಡರದೆ ಸಕ್ಕದಂಗಳ ಪದಂ ಪವಣಾಗಿರೆ ಮೆಲ್ಪುವೆತ್ತು ದಾಂ
ಗುಡಿವಿಡುವಂತೆ ನೀಳ್ದು ನಿಲೆ ಪೇೞ್ವುದು ನೀತಿನಿರಂತರಕ್ರಮಂ ॥ (೧-೧೪೮)

ಈ ಪದ್ಯಾರ್ಥವೇನೋ ಲಲಿತವಾಗಿದೆ. ಆದರೂ ಇತರ ತಾತ್ಪರ್ಯವನ್ನು ಇಂದಿನ ಹೊಸಗನ್ನಡದ ಬಿಡುನುಡಿಗಳಲ್ಲಿ ಸೂಚಿಸಿದರೆ, ಸಾಮಾನ್ಯರಾದ ವಾಚಕರಿಗೂ ಮಂದಟ್ಟಾಗಲು ಅನುಕೂಲವಾದೀತೆಂದು ನೆರೆ ನಂಬಿ ಚಿತ್ರಿಸುತ್ತೇವೆ :

''ಹಲವಂದಿ ಕವಿಗಳೆಂಬವರು, ತಾವು ಮುಂದೆ ಬಣ್ಣಿಸಲಿಕ್ಕಿರುವ ವಿಷಯಗಳನ್ನು ಭಾವಿಸಿ ಮಂದಟ್ಟಾಗಿಸಿಕೊಂಡ ಮೇಲೆ, ಅವುಗಳ ಮೆಯ್ಯಾಗಿರಬೇಕಾದ ನುಡಿಯನ್ನೂ ನುಡಿಗಟ್ಟುಗಳನ್ನೂ ಹುಡುಕುತ್ತಾರೆ. ಹುಡುಕಿ ಸರಿಯಾಗಿ ದೊರಕದಲ್ಲಿ, ಪದಗಳನ್ನು ಸೆಳೆದೊಯ್ದು, ಅವುಗಳಲ್ಲಿ ವಿಷಯಗಳನ್ನು ತುರುಕಿ ನುಲಿದು ಹೊಲಿದು ಹೇಗಾದರೂ ಕಾವ್ಯವನ್ನು ರೂಪಿಸುತ್ತಾರೆ. ಈ 'ನೀತಿನಿರಂತರ'ನೆನ್ನಿಸಿದ ಗ್ರಂಥಕಾರನ ಶೈಲಿ ಅಂಥದಲ್ಲ: ವಿಷಯವನ್ನು ಭಾವಿಸಿದಾಗಲೆ ಆದರೊಡನೆ ಪಡುವ–ಎಂದರೆ ಆ ವಿಷಯವನ್ನು ತುಂಬಿಕೊಂಡು ಮಿರುಗಬೇಕಾದ–ನುಡಿಗಳು ಸ್ವಾಭಾವಿಕವಾಗಿ ಮೂಡುತ್ತಿವೆ; ಭಾವನೆಯನ್ನು ಮೀರಲಿಕ್ಕೆಡೆಗೊಡದೆ ಬೆಡಗನ್ನೊಂದಿದ ನಾಣ್ನುಡಿಗಳು ಅಲ್ಲಲ್ಲಿ ತಾವಾಗಿ ಹೆಣೆಯುತ್ತಿವೆ. ಇವನ ಕನ್ನಡದ ಮೆದುನುಡಿಗಳಲ್ಲಿ ಅನ್ನವನ್ನೊಂದಿದ ಕಲ್ಲಹರಳಿನಂತಿರುವ ವಿಕಟಾಕ್ಷರಗಳು ತೊಡಕುವುದೇ ಇಲ್ಲ ; ಸಂಸ್ಕೃತ ಪದಗಳಾದರೂ ಹದಮೀರಿ ನುಸುಳುವುದಿಲ್ಲ. ಹೀಗೆ 'ಮೆಲ್ಪುವೆತ್ತು' ಅಥವಾ 'ಮೃದುಬಂಧ'ವನ್ನೊಂದಿ, ಹೂವಿನ ಬಳ್ಳಿ ಹಬ್ಬಿ ಗೊಂಚಲಿಡುವಂತೆ ಬಣ್ಣಿಸುವ ಈ ಶೈಲಿಯೇ 'ನೀತಿನಿರಂತರ'ನ ಶೈಲಿ.''

ಇದರಿಂದ ಇದು 'ಮೃದುಬಂಧ' ಎಂಬುದು ಸಿದ್ಧವಾಗುತ್ತಿದೆ. ಈ ಮೃದುಬಂಧವೇ ಮೊದಲಾದ ನಾನಾ ಬಂಧಗಳ ಸ್ವರೂಪಗಳನ್ನೆಲ್ಲ ಮುಂದಿನ ಭಾಗದಲ್ಲಿ ವಿಸ್ತರಿಸಲಿದ್ದೇವೆ. ಈ ಪದ್ಯದ ಮತ್ತು ಈವರೆಗೆ ದೃಷ್ಟಾಂತಿಸಿದ ಈ ಗ್ರಂಥಗತಗಳಾದ ಬೇರೆ ಪದ್ಯಗಳ ಸ್ವರೂಪಗಳನ್ನು ಪರಾಂಬರಿಸಿದಲ್ಲಿ, ಗ್ರಂಥಕಾರನ ಶೈಲಿ ಈ ಲಕ್ಷಣವನ್ನನುಸರಿಸಿರುವುದು ಸ್ಫುಟವಾಗುತ್ತಿದೆ. ಅಂತ್ಯದ ಕೆಲಕೆಲವು ಪದ್ಯಗಳಲ್ಲಿ ಸಂಸ್ಕೃತ ಪದಗಳೇ ಹೆಚ್ಚಾಗಿರುವುದಾಗಿ ಕೆಲವರು ಆಕ್ಷೇಪಿಸಬಹುದು. ಅವನಾಡಿದುದು, ತನ್ನ ಶೈಲಿಯಲ್ಲಿ ಸಂಸ್ಕೃತ ಪದಗಳು ಕಡಿಮೆಯಾಗಿ

ಅಥವಾ ಹೆಚ್ಚಾಗಿ ಇದ್ದಾವೆ ಎಂದಲ್ಲ-'ಪವಣಾಗಿರೆ' ಎಂದು. ಆಕ್ಷೇಪಿಸುವ ಆ ಪದ್ಯಗಳ ಸಂಸ್ಕೃತ ಪದಗಳೊಳಗಿನ ಒಂದೇ ಒಂದು ಪದವನ್ನು ಕನ್ನಡವಾಗಿ ಮಾರ್ಪಡಿಸಿದಲ್ಲಿ ಆ ರಚನೆಯೇ ಗುರಿಗೆಟ್ಟುಹೋದೀತು ಎಂಬುದನ್ನು ಮರೆಯಲಾಗದು. ಆ ಸಂದರ್ಭ ಗಳನ್ನೊಂದಿದ ಆ 'ಸಕ್ಕದಂಗಳ ಪದಂ ಪವಣಾಗಿ'ಯೇ ಇದ್ದಾವೆ ಎಂದು ನಮಗಂತೂ ಮನಃಪೂರ್ತಿಯಾಗಿ ತೋರುತ್ತಿದೆ. ಈ ಮೃದುಬಂಧವೆಂಬುದು ತಿರುಳ್ಗನ್ನಡ ಶೈಲಿಗೇ ಮೀಸಲಾದುದು. ಆ ಸಂಗತಿಯನ್ನು ಸುಮಾರು ನೂರು ವರ್ಷಕ್ಕೆ ಮತ್ತಿನವನಾದ ಮಹಾಕವಿ ಪಂಪನೂ 'ಪುಲಿಗೆರೆಯ ತಿರುಳ ಕನ್ನಡದೊಳ್' ತನ್ನ ಗ್ರಂಥವನ್ನು ಬರೆವಲ್ಲಿ, ಈ ಗ್ರಂಥಕಾರನು ಲಕ್ಷಿಸಿದ ರೀತಿಯಲ್ಲೇ, ರೂಪಾಂತರದಿಂದ ಒಪ್ಪಿಕೊಂಡಿದ್ದಾನೆ. ಆದರೆ, ಈ ಗ್ರಂಥಕಾರನು, ಪಂಪನಂತೆ, ತಾನು ನಡುವಣ ನಾಡಿನ ಯಾವ ತಿರುಳ್ಗನ್ನಡದ ಭಾಗಕ್ಕೆ ಸೇರಿದವನೆಂಬುದನ್ನು ಸೂಚಿಸಿಲ್ಲ.

ಮೇಲಿನ ಪದ್ಯದಲ್ಲಿ ತೋರುವ 'ಕೊಪಣ ನಗರ' ಎಂದರೆ ಅಂದಿನ ಮಾನ್ಯಖೇಟ ರಾಜಧಾನಿಗೆ ಹತ್ತಿರದಲ್ಲಿದ್ದ, ಅಥವಾ ಈಗಿನ ಹೈದರಾಬಾದಿನ ಒಳಗಿನ, ಕೊಪ್ಪಳ ಎಂಬುದು ಗೊತ್ತಾಗಿದೆ. 'ಒಂಕುಂದ' ಎಂಬುದು ಈಗಿನ ಬೆಳಗಾವಿಯ ಪ್ರಾಂತದೊಳಗೆ ಇಂದಿಗೂ 'ಒಕ್ಕುಂದ' ಎನ್ನುವ ಹೆಸರಿನಿಂದಲೆ ಇರುವ ನಾಡು. ಮೇಲಿನ ಪದ್ಯದೊಳಗಿನ ನಾಲ್ಕು ತಿರುಳ್ಗನ್ನಡ ನಾಡುಗಳೊಳಗಿನ 'ಕಿಸುವೊೞಲು', 'ಪುಲಿಗೆಱೆ'ಗಳನ್ನು ಗ್ರಂಥಕಾರನು ಯಾವ ವಿಶಿಷ್ಟ ವಿಶೇಷಣಗಳೂ ಇಲ್ಲದೆ ಸೂಚಿಸಿದುದನ್ನೀಕ್ಷಿಸಿರಿ. 'ವಿದಿತ ಮಹಾ' ಎಂದೂ 'ಸದಭಿಸ್ತುತ' ಎಂದೂ ವಿಶಿಷ್ಟ ವಿಶೇಷಣಯುತವಾಗಿ ನಿರ್ದೇಶಿಸಿದುದು ಕ್ರಮವಾಗಿ ಕೊಪಣನಗರ, ಒಂಕುಂದಗಳನ್ನೇ. ರಾಜಧಾನಿಗೆ ಹತ್ತಿರವಾದುದರಿಂದ ಕೊಪಣನಗರವು ಬಾಹ್ಯರಚನೆಯ ಮಹಿಮೆಯಿಂದೊಡಗೂಡಿ ಇದ್ದಿರಬಹುದು. ಆದರೆ 'ಒಂಕುಂದ'ದ ವಿಶೇಷಣವನ್ನೀಕ್ಷಿಸಿರಿ. 'ಸದಭಿಸ್ತುತಮಪ್ಪ' ಎಂದರೆ ಸಜ್ಜನರಾದ ವಿದ್ವಾಂಸರಿಂದ ಹೊಗಳಲ್ಪಟ್ಟ, ಎಂದರ್ಥ. ಇದೇ ಪದವು ಈ ಗ್ರಂಥದೊಳಗೆ ಭಿನ್ನ ಸಂದರ್ಭದಲ್ಲಿಯೂ ಕೆಲವೆಡೆ ಬಂದಿರುವುದನ್ನು ನೋಡಿರಿ:

(೧) **ಸದಭಿಮತ** ಕಾವ್ಯ ಪದವಿಧಿ..... (೧-೮೨)
(೨) **ಸದಭಿಮತಮಾಗಿ** ನಿಲೆ ಪೇೞ್ವುದು ಮಾರ್ಗಂ....(೨-೧೧)
(೩) **ಸದಭಿಕಮನೀಯ** ಗುಣಮಪ್ಪುದು ನಿಯತಂ ಕಾಂತಂ (೨-೬೪)
(೪) **ಸಮುಹಿತ** ಪ್ರಯೋಗಾನುಗತಂ.....(೨-೮೪)
(೫) **ಸದುದಿತಗುಣನದೞಂ** ನಯವಿದನಪ್ಪಂ... (೩-೧೪೬)

ಇವೆಲ್ಲವೂ 'ಸಜ್ಜನರೂ ಸಹೃದಯರೂ ಆದ ವಿದ್ವಾಂಸರಿಗೆ ಅಭಿಮತವಾದ' ಎಂಬ ಅರ್ಥ ವುಳ್ಳವು. ಅದಕ್ಕೆ ಬದಲಾಗಿ 'ಸತ್' ಎಂಬ ಪದಕ್ಕೆ ಬರಿಯ 'ಸಾಧು' ಎಂಬ ಅರ್ಥವಷ್ಟನ್ನೆ ಕಲ್ಪಿಸಬಾರದು. ಸಜ್ಜನತೆಯೊಡನೆ ರಸಿಕತೆಯೂ ಬೆರಸದಿದ್ದಾತನು ಕಾವ್ಯಲಕ್ಷಣಾದಿಗಳನ್ನು ಹೇಗೆ ಸೇವಿಸುವನು, ಮೈಗೂಡಿಸುವನು? ಇವುಗಳಂತೆ 'ಸದಭಿಸ್ತುತಮಪ್ಪ ಒಂಕುಂದ' ಎಂದರೆ 'ಸಜ್ಜನರಾದ ಸಹೃದಯ ವಿದ್ವಾಂಸರಿಂದ ಅಲಂಕೃತವಾದ ಒಂಕುಂದ' ಎಂದೇ ತಾತ್ಪರ್ಯ. ಈ ವಿಶಿಷ್ಟ ವಿಶೇಷಣವು ಬೇರೆ ಮೂರು ಭಾಗಗಳಿಗೂ ತೋರದೆ ಒಂಕುಂದ ಮಾತ್ರಕ್ಕೇ ಮೀಸಲಾಗಿ ತೋರುವುದರಿಂದ, ಗ್ರಂಥಕಾರನು ತನ್ನ ಹುಟ್ಟೂರಿನ ಮಹಿಮೆಯನ್ನೇ ಆ ಪದ್ಯದಿಂದ ಬೆರಳೆತ್ತಿ ಸೂಚಿಸಿದಂತೆ ಭಾವಿಸುತ್ತೇವೆ.

* * * * *

## ಆಗಿನ ಕನ್ನಡ ಸ್ವರೂಪ

ತಿರುಳ್ಗನ್ನಡದ ಸಂಸ್ಕೃತಿಯೂ ಕನ್ನಡನಾಡಿನ ಬಾಹ್ಯ-ಆಂತರಂಗಿಕ ಸ್ವರೂಪಗಳೂ ಆ ಕಾಲದಲ್ಲಿ ಹೇಗಿದ್ದುವು ಎಂಬುದನ್ನು ಒಂದಿಷ್ಟು ವಿವೇಚಿಸುವ.

ಕಿಸುವೊಳಲೇ ಮೊದಲಾದ ನಾಲ್ಕೂರುಗಳಿಂದ ಕಾವೇರಿ ನದಿಯ ವರೆಗಿನ ನಾಡಿಗೆ ತೆಂಕನಾಡು ಎಂಬ ಹೆಸರು. ಗೋದಾವರಿ ಪರ್ಯಂತದ ಊರಿಗೆ ಬಡಗನಾಡೆಂದೂ, ಅದಕ್ಕಿಂತ ಉತ್ತರಕ್ಕೆ ವಿಂಧ್ಯಾಚಲದ ತಪ್ಪಲಿನ ರೇವಾನದಿಯ ವರೆಗಿನ ದೇಶಕ್ಕೆ ಬಡ-ಬಡಗನಾಡು, ಅಲ್ಲವೆ ಉತ್ತರೋತ್ತರ ಕನ್ನಡನಾಡು ಎಂದೂ ಹೆಸರು. ಈ ಉತ್ತರೋತ್ತರ ಕನ್ನಡನಾಡಿನ ಭಾಷಾ ಸಾಹಿತ್ಯವು ಮೆಲ್ಲಮೆಲ್ಲಗೆ ಮೈಸವೆಯುತ್ತ ಬರುತ್ತಿದ್ದ ಕಾಲವದು ಎಂದು ತೋರುತ್ತಿದೆ. ಅಂತೂ ಅಖಂಡ ಕನ್ನಡದೊಳಗೆ ತಿರುಳ್ಗನ್ನಡ ನಾಡು, ತೆಂಕನಾಡು, ಬಡಗನಾಡು, ಬಡ-ಬಡಗನಾಡು ಎಂದು ಅಂದು ಕನ್ನಡದಲ್ಲಿ ನಾಲ್ಕು ಕವಲುಗಳಿದ್ದಂತೆ ವಿಶದವಾಗುತ್ತಿದೆ. ಅವುಗಳಲ್ಲಿ ಒಳಮೈ ಎಂದರೆ ತಿರುಳ್ಗನ್ನಡನಾಡು. ತೆಂಕಬಡಗ ಪ್ರಾಂತಗಳ ಕನ್ನಡ ನುಡಿ, ನೆರೆಹೊರೆಯ ದೇಸಿಗವಲುಗಳ ಮತ್ತು ಹೊರನಾಡು ನುಡಿಗಳ ಸಂಪರ್ಕದಿಂದಲೂ ಅಲ್ಲಲ್ಲಿಯ ಉಚ್ಚಾರಣಾದಿಗಳ ವೈವಿಧ್ಯದಿಂದಲೂ ಮಾರ್ಪುಗೊಂಡು ಕನ್ನಡದ ಹೋಲಬೇ ಆಗದಷ್ಟು ರೂಪಾಂತರವಡೆದಿದ್ದುವಂತೆ. ಆ ಬಗೆಯ ನುಡಿಗಳಿಂದಲೇ ಅಲ್ಲಲ್ಲಿಯ ಕವಿತೆಗಳೂ ತಡೆಯಿಲ್ಲದೆ ಸಾಗುತ್ತಿದ್ದುವು. ಕವಿಗಳ ಕಾವ್ಯಗಳಲ್ಲಿ 'ದೋಷಂ ಇನಿತೆಂದು ಬಗೆ'ಯುವುದು ವಿದ್ವಾಂಸರಿಗೂ ಅಸಾಧ್ಯವಾಯಿತು. ವಿಶೇಷವಾಗಿ ಆ ಶಬ್ದಸ್ವರೂಪಗಳು ನಾನಾ ಮುಖವಾಗಿ ಹರಡಿದ ಕಾರಣ, ಒಂದು ಪ್ರಾಂತದವರಿಗೆ ಇನ್ನೊಂದು ಪ್ರಾಂತದಲ್ಲಿ ತಲೆದೋರಿದ ಕಾವ್ಯವೆಂದರೆ ಬೇರೊಂದು ಕನ್ನಡ ನುಡಿಯದಾಗಿ ಹೋಯಿತು. ಇದರ ಪರಿಣತಿ ಏನು?-ಅಖಂಡವಾಗಿರಬೇಕಾಗಿದ್ದ ಕನ್ನಡ ನುಡಿ 'ಕನ್ನಡಂಗಳ್' ಎಂಬ ಬಹುತ್ವಕ್ಕೀಡಾಯಿತೆಂದು ಗ್ರಂಥಕಾರನೇ ಸಾರುತ್ತಾನೆ. ''ದೇಸಿ ಬೇಱೆವೇಱಪ್ಪುದಱಿಂ'' ಅಂಥ ಕಾವ್ಯಗಳೊಳಗಿನ ಗುಣಾದಿಗಳು ಹಾಗಿರಲಿ, ''ಎಲ್ಲ ಬಣ್ಣವನ್ನೂ ಮಸಿ ನುಂಗಿತು'' ಎಂಬ ಮಾತಿಗನುವಾಗಿ, ಈ ಕನ್ನಡ ಕಾವ್ಯಗಳನ್ನೋದಿ ಮನನ ಮಾಡುವ ಮಂದಿಯೇ ಕುಗ್ಗುತ್ತಾ ಹೋಯಿತು.

ತಿರುಳ್ಗನ್ನಡ ನಾಡಿನ ಕನ್ನಡ ಭಾಷಾ ಸಂಸ್ಕೃತಿಯ ಮಟ್ಟವೇನೋ ಹಾಗಿದ್ದಿಲ್ಲ. ಗ್ರಂಥಕಾರನು ಅದನ್ನು ಪ್ರಥಮ ಪರಿಚ್ಛೇದದ ಆದಿಭಾಗದಲ್ಲೇ ಬಣ್ಣಿಸುವ ಕೆಲವಂಶವನ್ನು ಹಿಂದೆ ಕಾಣಿಸಿದ್ದೇವೆ. ಮತ್ತಿನ್ನದನ್ನು ಪರಾಂಬರಿಸಿರಿ:

ಪದನಱಿದು ನುಡಿಯಲುಂ ನುಡಿ
ದುದನಱಿದಾರಯಲುಮಾರ್ಪರಾ ನಾಡವರ್ಗಳ್
ಚದುರರ್ ನಿಜದಿಂ ಕುಱಿತೋ
ದದೆಯುಂ ಕಾವ್ಯಪ್ರಯೋಗಪರಿಣತಮತಿಗಳ್ ॥ (೧-೩೮)

'ಆ ತಿರುಳುಗನ್ನಡನಾಡಿನವರು ಹದವನ್ನರಿತು ಎದೆಗೊಂಡ ಪದಗಳನ್ನಾಡುತ್ತಿದ್ದರು. ಅನ್ಯರು ಆಡಿದ ನುಡಿಗಳನ್ನು ಭಾವಿಸುತ್ತಿದ್ದರು. ಕುರಿತು ಓದದವರಾಗಿದ್ದರೂ ಹುಟ್ಟು ಗುಣಗಳಿಂದಲೇ ಚದುರರಾಗಿ ಮಾತುಬಲ್ಲವರಾಗಿ ಸಮಾಜದೊಳಗೆ ಹೆಸರುಗೊಂಡಿದ್ದರು. ತಾವು ಕುರಿತೋದದಿದ್ದರೂ ಉತ್ತಮ ಕಾವ್ಯಪ್ರಯೋಗದಲ್ಲೆಡೆಗೊಂಡ ಪದಗಳ ಸವಿ ಏನು, ಅಂಥವಲ್ಲದ ಪದಗಳ ಸಪ್ಪೆ ಏನು? ಎಂಬುದನ್ನು ಸ್ವಾಭಾವಿಕವಾಗಿ ತಿಳಿಯಬಲ್ಲವರಿದ್ದರು'.

ಹಿಂದೆ ವಿಸ್ತರಿಸಿದುದು, ವಿಶೇಷವಾಗಿ ಕುರಿತೋದಿದವರ ಸಂಗತಿಯನ್ನಲ್ಲವಾದರೂ ಸಾಹಿತ್ಯ ವಿಚಾರದಲ್ಲಿ ಒಂದಿಷ್ಟು ನುರಿತವರ ಅಥವಾ ಆದರವುಳ್ಳವರ ವಿಷಯವನ್ನು. ಮುಂದೆ ಸೂಚಿಸುವುದು ಹಾಗೆ ಒಂದಿಷ್ಟು ನುರಿತವರನ್ನು ಅಲ್ಲವಾದರೂ ಏನು?-

ಕುಱಿತವರಲ್ಲದೆ ಮತ್ತಂ
ಪೆಱರುಂ ತಂತಮ್ಮ ನುಡಿಯೊಳೆಲ್ಲಂ ಜಾಣರ್
ಕಿಱುವಕ್ಕಳುಮಾ ಮೂಗರು
ಮಱಿಪಲ್ಕಱಿವರ್ ವಿವೇಕಮಂ ಮಾತುಗಳಂ ॥ (೧-೩೯)

'ಬಲ್ಲವರ ಭಾವನೆಯನ್ನು ಬಗೆಗೊಳ್ಳುವಷ್ಟು ಹದವಾದದ ಅವರಿಗಿಲ್ಲದಿದ್ದರೂ ತಂತಮ್ಮ ನುಡಿಗಳನ್ನು ಪೋಣಿಸುವುದರಲ್ಲಿ ಎಲ್ಲರೂ ಜಾಣರು. ಕಿರುಮಕ್ಕಳಾದರೂ ಸರಿ, ಮೂಕರಾದರೂ ಸರಿ, ತಮ್ಮೆದೆಯ ವಿವೇಕ ಭಾವನೆಗಳನ್ನು ಅರುಹಲು ಬಲ್ಲವರಿದ್ದರು.'

ಜಾಣರ್ಕಳಲ್ಲದವರುಂ
ಪೂಣೆಗರಱಿಯದೆಯುಮಱಿವವೋಲವಗುಣದಾ
ತಾಣಮನಿನಿಸೆಡೆವತ್ತೊಡೆ
ಮಾಣದೆ ಪಿಡಿದದನೆ ಕೃತಿಗಳಂ ಕೆಡೆನುಡಿವರ್ ॥ (೧-೪೦)

'ಅಂಥ ಜಾಣರಲ್ಲದವರಾದರೂ ಕೆಲವರು ವಿಷಯದ ಗುರಿಯನ್ನೇ ಬಿಗಿಹಿಡಿದು ತಾತ್ಪರ್ಯವನ್ನು ಹೀರುತ್ತಿದ್ದರು. ಪದ್ಯದೊಳಗೆ ಅವಗುಣದ ಹೊಲಬಾದರೂ ತಕ್ಷಣದಲ್ಲಿ ಅದನ್ನೇ ಹಿಡಿದೆತ್ತಿ ಕವಿಗಳ ದೋಷವನ್ನು ಬಯಲಾಗಿಸುವರು.'



ಸಕ್ಕದಮುಂ ಪಾಗದಮುಮ
ದಕ್ಕುಂ ಬಗೆದಂತೆ ಸಮಱೆ ಪೇೞಲ್ಮುನ್ನಂ
ನಿಕ್ಕುವಮೊಳವಪ್ಪುದಱಿಂ
ತಕ್ಕಂತವಱವಱ ಲಕ್ಷ್ಯಮುಂ ಲಕ್ಷಣಮುಂ ॥ (೧-೪೧)

'ಸಂಸ್ಕೃತ ಪ್ರಾಕೃತಗಳಲ್ಲಾದರೆ, ಆ ಬಗೆಯೇ ಬೇರೆ. ಅವುಗಳಲ್ಲಿ ಲಕ್ಷ್ಯಗ್ರಂಥಗಳಂತೆ ಲಕ್ಷಣ ಗ್ರಂಥಗಳೂ ಬೇಕಾದಷ್ಟಿವೆ. ಪರಮಾಚಾರ್ಯರಿಂದ ರಚಿತವಾದ ಆ ಲಕ್ಷ್ಯ ಲಕ್ಷಣ ಪ್ರಬಂಧಗಳಿಂದಾಗಿ ಸಂಸ್ಕೃತ ಪ್ರಾಕೃತ ಸಾಹಿತ್ಯ ಸ್ವರೂಪವು ಸುಗಮವಾಗಿದ್ದುದು.

ಅರಿದಾದಂ ಕನ್ನಡದೊಳ್
ತಿರಿಕೊಱೆಗೊಂಡಱಿಯೆ ಪೇೞ್ವೆನೆಂಬುದಿದಾರ್ಗಂ
ಪರಮಾಚಾರ್ಯರ ವೋಲ್ ಸೈ
ತಿರಲಱಿಯರ್ ಕನ್ನಡಕ್ಕೆ ನಾಡವರೊವಜರ್ ॥ (೧-೪೨)

'ಕನ್ನಡದಲ್ಲಾದರೆ ಹಾಗಲ್ಲ. ಲಕ್ಷಣರೂಪವಾದ ಕಾವ್ಯರಚನಾಪದ್ಧತಿಯನ್ನು, ಇಷ್ಟಷ್ಟಾಗಿ ಬಲ್ಲವರೆಂಬವರಲ್ಲಿ ಕೇಳಿಯೇ ತಿಳಿದುಕೊಳ್ಳಬೇಕಾಗಿತ್ತು-ಎಂದರೆ 'ತಿರಿಕೊಱೆ'ಗೊಳ್ಳಬೇಕಾಗಿತ್ತು. ಹಾಗೆ 'ತಿರಿಕೊಱೆ'ಗೊಂಡುದರೊಳಗೆ ಒಪ್ಪುತಪ್ಪುಗಳೆಷ್ಟೆಂಬ ಒಳಗಿನ ಗುಟ್ಟು ಶಿವನಿಗೂ ಗೊತ್ತಿಲ್ಲ. ಆದರಿಂದ ಲಕ್ಷಣ ಗ್ರಂಥಗಳು ಮುಖೋದ್ಗೀತಗಳಾಗಿರುವ ಸಂಸ್ಕೃತ ಪ್ರಾಕೃತಗಳ ಪರಮಾಚಾರ್ಯರಂತೆ 'ಇದಮಿತ್ಥಂ' ಎಂಬ ನಿರೂಪವನ್ನು ಈ ಕನ್ನಡ ಕವಿಗಳಿಗೆ ಯಾರೀಯಬೇಕು? ಕನ್ನಡಕ್ಕೆ ಓಜರೆನಿಸಿದ ನಾಡವರು ಅಂಥ ಪರಮಾಚಾರ್ಯಸನ್ನಿಭರಲ್ಲ'.

ಕನ್ನಡದಲ್ಲಿ ಆ ವರೆಗೆ ಲಕ್ಷಣ ಗ್ರಂಥಗಳೇ ಇದ್ದಿಲ್ಲ ಎಂಬುದನ್ನಾತನು ಆ ಮೇಲೆ ಶಬ್ದತಃ ನಿರೂಪಿಸುತ್ತಾನೆ :

ನೆಲಸಿದ ಕಾವ್ಯಂ ಕಾವ್ಯ
ಕ್ಕೆ ಲಕ್ಷಣಂ ಸತತಮೆಂದೆ ಪೞಗನ್ನಡಮಂ
ಪೊಲಗೆಡಿಸಿ ನುಡಿವರಾಗಮ
ಬಲಹೀನರ್ ದೇಸಿಯಲ್ಲದೆಂದಱಿದಿರ್ದುಂ ॥ (೧-೪೮)

'ಹಿಂದಿನ ಕನ್ನಡ ಕಾವ್ಯವೇ ಮುಂದಿನದಕ್ಕೆ ಲಕ್ಷಣವೆಂದು ಭಾವಿಸಿಕೊಂಡು ಕೆಲವರು ಕಾವ್ಯವನ್ನು ರಚಿಸುತ್ತಾರೆ. ಕೆಲಸಂದರ್ಭಕ್ಕೆ, ಕೆಲಸಮಯಕ್ಕೆ ಅದು ಒಪ್ಪಲೂಬಹುದು. ಆದರೆ ಯಾವಾಗಲೂ ಅದು ಸಲುವಳಿಯಾಗುವುದೆ? ವಿಶೇಷವಾಗಿ ಆ ಪದ್ಧತಿ ಹಿಂದಿನ ದೇಸಿಗೆ, ಅಥವಾ ಹೊಸಗನ್ನಡ ಕಾವ್ಯರಚನೆಗೆ, ಆ ಪದ್ಧತಿ ವಿರಸವೇ ಸರಿ'.

ಆಗಿನ ತಿರುಳ್ಗನ್ನಡ ನಾಡಿನಲ್ಲಿ ಇಂಥವರಲ್ಲದೆ ಮೇಲ್ಮೆಯ ಸಂಸ್ಕೃತಿಯನ್ನೊಂದಿದ ಕೆಲ ವ್ಯಕ್ತಿಗಳಿದ್ದಿರಲೂಬಹುದು. ಆದರೂ ಸಾಮಾನ್ಯವಾಗಿರುವ ನಾಡವರದೆಯ ಮಟ್ಟವನ್ನು ಗ್ರಂಥಕಾರನು ಚಿತ್ರಿಸಿದ್ದಾನೆ. ಇದರಿಂದ, ಆಗ ಕನ್ನಡ ಸಾಹಿತ್ಯದಲ್ಲಿ ಲಕ್ಷಣಗ್ರಂಥದ ಅಭಾವವೇ ಹೊಳೆಯುತ್ತಿದ್ದುದು ವಿಶದವಾಗುತ್ತಿದೆ. ಧಾನ್ಯಾದಿಗಳ ಕೊಳುಕೊಡೆಯ ವ್ಯವಹಾರವು, ಮಾನಪಾತ್ರವಿಲ್ಲದೆ, ಕೈಸೆರೆಯಿಂದಲೆ ಎಷ್ಟು ಕಾಲ ನಡೆದೀತು?

## ಆಗಿನ ಕಾಲದ ಗದ್ಯ ಸಾಹಿತ್ಯ

ಆಗಿನ ಕವಿಗಳು 'ನೆಲಸಿದ ಕಾವ್ಯಂ ಕಾವ್ಯಕ್ಕೆ ಲಕ್ಷಣಂ' ಎಂದು ಬಗೆದು ಬಳಸುತ್ತಿದ್ದವರೆಂದು ಗೊತ್ತಾಯಿತಷ್ಟೆ. ಹಾಗಿದ್ದರೆ, ಆಗ ಯಾವ ಬಗೆಯ ಕಾವ್ಯಗಳು ರೂಢಿಗೊಂಡಿದ್ದುವು? ಎಂಥ ಕವಿಗಳಿದ್ದರು? ಎಂಬುದನ್ನು ಒಂದಿಷ್ಟು ಭಾವಿಸುವ:

ಕನ್ನಡದಲ್ಲಿ ಗದ್ಯ ಪದ್ಯಗಳೆಂಬ ಎರಡು ಬಗೆಯ ಕಾವ್ಯಗಳೇ ಪ್ರಸಿದ್ಧಗಳೆಂದಾಡಿದ ಗ್ರಂಥಕಾರನು ತನ್ಮಿಶ್ರವಾದೊಂದು ಬಗೆಯ ಕಾವ್ಯವೂ ಇದ್ದಂತೆ ಸೂಚಿಸುತ್ತಾನೆ. ಆದರೆ, ಮತ್ತೆ ಹೆಸರುಗೊಂಡಿರುವ ಚಂಪೂಕಾವ್ಯವೇ ಅದು, ಎಂದು ಹೇಳಿಲ್ಲ. ಆ ಮಿಶ್ರಕಾವ್ಯವೆಂದರೆ, ಗದ್ಯರೂಪವಾದ ಕಥೆ, ಮತ್ತು 'ಪ್ರಗೀತಿ' ಎನ್ನುವ ಹಾಡು-ಇವುಗಳಿಂದ ಬೆರಸಿಕೊಂಡಿತ್ತು ಎನ್ನುತ್ತಾನೆ. ಮತ್ತಿನ ಚಂಪೂಕಾವ್ಯಗಳಲ್ಲಿ ಗದ್ಯವಿದ್ದರೂ ವಿಶೇಷವಾಗಿ ವೃತ್ತ ಕಂದಾದಿಗಳೇ ಅಧಿಕವಾಗಿರುವುದು. ಅಲ್ಲಲ್ಲಿ ತೋರುವ 'ರಗಳೆ'ಗಳು ಹಾಡಿನಲ್ಲಿಯೇ ಅಡಕವಾದವುಗಳು. ಆದರೂ ಕಂದ ವೃತ್ತಗಳನ್ನೇನೂ ಸೂಚಿಸದ ಕಾರಣ ಇಲ್ಲಿ ತೋರುವ 'ಸಮ್ಮಿಶ್ರಿತ' ಕಾವ್ಯವೆಂದರೆ, ಆ ಮೇಲೆ ಪ್ರಸಿದ್ಧವಾದ ಚಂಪೂ ಕಾವ್ಯವಾಗಿದ್ದಂತೆ ತೋರುವುದಿಲ್ಲ. ಇರಲಿ, ಆಗಿನ ಕಾಲದಲ್ಲಿ ಗದ್ಯಕಾವ್ಯವು ಮೇಲ್ಮೆಗಡರಿಕೊಂಡಿತ್ತು ಎಂದು ಸೂಚಿಸುವುದನ್ನೀಕ್ಷಿಸಿರಿ:

ವಿಮಳೋದಯ ನಾಗಾರ್ಜುನ
ಸಮೇತ ಜಯಬಂಧು ದುರ್ವಿನೀತಾದಿಗಳೀ
ಕ್ರಮದೊಳ್ನೆಗಳ್ಚಿ ಗದ್ಯಾ
ಶ್ರಮಗುರುಪದತಾ ಪ್ರತೀತಿಯಂ ಕೆಯ್ಕೊಂಡರ್ ॥ (೧-೨೯)

ವಿಮಳ ಉದಯ (ಅಥವಾ ವಿಮಳೋದಯ), ನಾಗಾರ್ಜುನ, ಜಯಬಂಧು, ದುರ್ವಿನೀತ ಮೊದಲಾದವರು ಈ ರೀತಿಯಲ್ಲಿ ರಚಿಸಿ 'ಗದ್ಯಾಶ್ರಮಗುರು'ಗಳು ಎಂಬ

ಪ್ರಸಿದ್ಧಿಯನ್ನೊಂದಿದರು, ಎನ್ನುತ್ತಾನೆ. ಈ ಕನ್ನಡ ಗದ್ಯ ಪ್ರಬಂಧಗಳು ಇನ್ನೂ ಪ್ರಕಾಶ ವಡೆಯಲಿಲ್ಲ. ಆದರೆ ಆಯಾ ಗದ್ಯ ಮಹಾಕವಿನಾಯಕರೊಳಗೆ ಕೆಲಮಂದಿಯ ಹೆಸರು ಗೊತ್ತಾಗುತ್ತಿದೆ. ಆ ಸಾಲಿನಲ್ಲಿ ಕಡೆಯವನಾದ 'ದುರ್ವಿನೀತ' ಎಂದರೆ ಬಹುಶಃ ಕ್ರಿ.ಶ. ೫ನೆಯ ಶತಕದವನೂ ಗಂಗವಂಶೀಯನೂ ಆದ ಅವಿನೀತರಾಜನ ಕುಮಾರಕನಾದ ದುರ್ವಿನೀತನೆಂದೇ ತೋರುತ್ತಿದೆ. ಆ ದುರ್ವಿನೀತನ ೫ನೆಯ ಶತಕದ ಕನ್ನಡ ಗದ್ಯಶಾಸನ ವೊಂದು ಪ್ರಕಟವಾಗಿದೆಯಲ್ಲದೆ, ಭಾರವಿಯ 'ಕಿರಾತಾರ್ಜುನೀಯ' ಕಾವ್ಯದ ೧೫ನೆಯ ಸರ್ಗಕ್ಕೆ ಆತನು ಕನ್ನಡ ವ್ಯಾಖ್ಯಾನವನ್ನು ಬರೆದುದಾಗಿಯೂ ಹೇಳಿಕೆಯುಂಟು. ಅಷ್ಟು ಹಿಂದಿನ ಕಾಲದಲ್ಲಿಯೇ ಕನ್ನಡದಲ್ಲಿ ಕಾವ್ಯಪ್ರಬಂಧಗಳು ನೆಲೆಗೊಂಡುದಷ್ಟೇ ಅಲ್ಲ, ಮೇಲೆ ಸೂಚಿತರಾದವರು ಗದ್ಯಶೈಲಿಯ ಶಿಖರಕ್ಕೇರಿದವರೂ ಆಗಿದ್ದರೆಂದು ತಿಳಿದಂತಾಗುತ್ತಿದೆ. 'ಗದ್ಯಾಶ್ರಮಗುರು' ಎಂಬ ಬಿರುದು ಅಸಾಮಾನ್ಯವಾದುದೇ ಸರಿ. ಇಂಥ ಬಿರುದು, ಆಗಿನ ಪದ್ಯಕವಿಗಳಿಗೆ ಒದಗಿದ್ದಂತೆ ತೋರುವುದಿಲ್ಲ. ಮಾತ್ರವಲ್ಲ; ಹಾಗೆ ಪದ್ಯಾಚಾರ್ಯ ರೆನ್ನಿಸಬೇಕಾದರೆ ಈ ಲಕ್ಷಣ ಗ್ರಂಥವನ್ನು ಸರಿಯಾಗಿ ಮನನ ಮಾಡಬೇಕು ಎಂದು ಗ್ರಂಥಕಾರನು ಕವಿಗಳಿಗೆ ಬೋಧಿಸುವುದನ್ನು ಭಾವಿಸಿರಿ:

ಸಮುಚಿತ ನೃಪತುಂಗದೇವಮಾರ್ಗ
ಕ್ರಮನಮನಾಭಿಮುಖರ್ಕಳಪ್ಪ (ರೆತ್ತಂ)
ಕ್ರಮಸಹಿತಮಗಮ್ಯರೂಪ ಕಾವ್ಯಾ
ಶ್ರಮಪದಮಂ ನಿರಪಾಯಮಯ್ದಲಾರ್ಪರ್ ॥ (೧-೧೪೬)

ಈ 'ಕವಿರಾಜಮಾರ್ಗ'ವನ್ನೋದಿ ಮನನಪೂರ್ವಕವಾಗಿ ಅರಿತ ನುರಿತ ಪ್ರತಿಭಾಶಾಲಿಗಳು ಮುಂದೆ ಇತರರಾರಿಗೂ ಅಗಮ್ಯವಾದ 'ಕಾವ್ಯಾಶ್ರಮಪದಮಂ' ಹೊಂದ ಲಾಪರು, ಎಂಬ ಈ ಮಾತನ್ನವಧರಿಸಿರಿ. ಇಲ್ಲಿ ಸೂಚಿತವಾದ 'ಕಾವ್ಯಾಶ್ರಮಪದಮಂ' ಎಂಬುದರೊಳಗಣ 'ಕಾವ್ಯ' ಪದಕ್ಕೆ 'ಪದ್ಯಕಾವ್ಯ' ಎಂದೇ ಅರ್ಥವೆಂಬುದು ಸಂದರ್ಭ ದಿಂದಲೆ ವಿಶದವಾಗುವುದು. ಈ 'ನೃಪತುಂಗದೇವಮಾರ್ಗ'ವು ಪದ್ಯಕಾವ್ಯ ಲಕ್ಷಣಗ್ರಂಥವೇ ಹೊರತು ಗದ್ಯ ಕಾವ್ಯ ಲಕ್ಷಣವಲ್ಲವಷ್ಟೆ.

ಈ ವಿವೇಚನೆಯಿಂದ, ಕನ್ನಡ ಸಾಹಿತ್ಯದೊಳಗೆ ಆ ಮೊದಲೇ 'ಗದ್ಯಾಶ್ರಮಗುರು' ಗಳಾದವರು, ಎಂದರೆ ಗದ್ಯಾಚಾರ್ಯರು, ಆಗಿ ಹೋಗಿದ್ದರು; ಈ ಗ್ರಂಥವನ್ನು ಮನನವೆಸಗಿದರೂ 'ಕಾವ್ಯಾಶ್ರಮಗುರುಪದ'ವನ್ನೊಂದುವುದು ಸಾಧ್ಯವಲ್ಲ; ಆದರೆ ಕಾವ್ಯಾಶ್ರಮವನ್ನೊಂದಿ ವಿದ್ಯಾರ್ಥಿಗಳಾಗಬಹುದು ಎಂದು ಈ ಪದ್ಯತಾತ್ಪರ್ಯವಾಗುವುದು. ಇದರಿಂದ, ಆಗಿನ ಗದ್ಯಸಂಸ್ಕೃತಿಮಹತ್ತ್ವವೂ ಪದ್ಯ ಸಂಸ್ಕೃತಿಯ ನ್ಯೂನತೆಯೂ ಭಾಸವಾಗುತ್ತಿವೆ.

ಇಂಥ ಮಾರ್ಗೀಯವೆನ್ನಿಸಿದ ಗದ್ಯಸಾಹಿತ್ಯವು ಆಗ ಶಿಖರವನ್ನೇರಿದ್ದರೂ, ಅದರೊಳಗೆ ಯಾವ ವಿಶಿಷ್ಟ ಗ್ರಂಥವೂ ಈ ವರೆಗೆ ದೊರಕದಿರುವುದು ವ್ಯಸನಾಸ್ಪದವೆನ್ನಬೇಕು. ಈಚೆಗೆ ಪ್ರಕಾಶವಾದ 'ವಡ್ಡಾರಾಧನೆ' ಎಂಬ ಗದ್ಯ ಪ್ರಬಂಧವು, 'ಕವಿರಾಜಮಾರ್ಗ'ಕಾರನಾಡುವ ಗದ್ಯಾಶ್ರಮಗುರುಗಳೊಳಗೆ ಯಾರದೂ ಅಲ್ಲವಾದರೂ, ಆ ಸಾಲಿನಲ್ಲಿಯೇ ಸೇರಿದುದಾಗಿರ ಬೇಕೆಂದು ನಮ್ಮ ಭಾವನೆ.

## ಕನ್ನಡದ ಪುರಾತನ ಪದ್ಯಕಾವ್ಯ ಸ್ವರೂಪ

ಭಾಷೆಯಲ್ಲಿ ಪಾಕವಡೆದ ಸಂಸ್ಕೃತಿಯೊದಗಬೇಕಾದಲ್ಲಿ ಬರಿಯ ಗದ್ಯ ಪ್ರಬಂಧ ಚಾತುರ್ಯವೇ ಸಾಲದು. 'ಸಮಸ್ತ ಜನತಾ ಹೃದ್ಯ'ವಾದ ಪದ್ಯದಲ್ಲಿ ಹದವಡೆದ ಚದುರು ಬಗೆಗೂದಗಬೇಕು. ಪದ್ಯರಚನಾಚಾತುರ್ಯವೆಂದರೆ, ಸಾಹಿತ್ಯ ಸಂಸ್ಕೃತಿ ಸಾಧನೆಯಲ್ಲಿ ಪಳಗಿ ನುರಿತ ತಪೋಬಲ ಎನ್ನಬಹುದು. ಬರಿಯ ಗದ್ಯ ಸಾಹಿತ್ಯದ ಜಾಣ್ಮೆ ಜನತೆಯ ಹೃದಯದಲ್ಲಿ ಬೇರೂರಿ ಚಿಗುರಲಾರದು. ಈಗ ಬುಟ್ಟಿಗಳಲ್ಲಿ ನೀರೆರೆದು ಹೂಗಿಡಗಳನ್ನು ಬೆಳೆಯಿಸುತ್ತಾರಷ್ಟೆ; ಅಂಥ ಆರಾಮವದು. ಕೆಲಸಮಯದ ವರೆಗೆ ಚಿಗುರೆಲೆ ಹೂಗಳಿಂದ ಆಲಂಕೃತವಾದ ಗಿಡಬಳ್ಳಿಗಳು ನಲಿದಾಡಬಹುದು; ಪರಿಮಳಿಸಬಹುದು. ಆದರೆ, ಹಣ್ಣುಹಂಪಲುಗಳನ್ನು ಧಾರಾಳವಾಗಿ ಒದಗಿಸಿ ಜನತೆಯ ಆರೋಗ್ಯಕ್ಕೆ, ಸಂಸ್ಕೃತಿಗೆ ಅದು ಸಾಧಕವಾಗಲಾರದು. ಅದಕ್ಕೆ 'ವಿದ್ಯಾಪಾರಪರಾಯಣ'ವಾದ ಪದ್ಯಸಂಸ್ಕೃತಿಯೇ ಬೇಕು. ಅಂಥ ಪದ್ಯಪ್ರಬಂಧಗಳು ಆ ಹಿಂದಿನ ಕನ್ನಡ ಸಾಹಿತ್ಯದೊಳಗೆ ಬೇಕಾದಷ್ಟಲ್ಲವಾದರೆ ಕೆಲವಾದರೂ ಇದ್ದವೆಂಬುದನ್ನು ಹಿಂದೆಯೇ ಸದೃಷ್ಟಾಂತವಾಗಿ ಕಾಣಿಸಿದ್ದೇವೆ. ಕನ್ನಡದ ಆ ಆದ್ಯಕವಿಗಳೊಳಗಿನ ಶ್ರೀವಿಜಯನೆಂದರೆ, ಪ್ರಕೃತ ಗ್ರಂಥಕಾರನಾದ ಶ್ರೀವಿಜಯನಿಗಿಂತ ಎಷ್ಟೋ ಹಿಂದಿನವನು ಎಂಬುದನ್ನೂ ಅಲ್ಲೇ ಸೂಚಿಸಿದ್ದೇವೆ. ಆ ಆದ್ಯಕಾವ್ಯದ ಸ್ವರೂಪ ಹೇಗೆ ಎಂಬುದು ಮುಂದಿನ ಪದ್ಯಾರ್ಥದಿಂದ ವ್ಯಕ್ತವಾಗುವುದು:

> ಕಂದಮುಮಮಳಿನ ವೃತ್ತಮು
> ಮೊಂದೊಂದೆಡೆಗೊಂದು ಜಾತಿ ಜಾಣೆಸೆಯೆ ಬೆಡಂ
> ಗೊಂದಿವಱೊಳಮರೆ ಪೇೞ
> ಲ್ಸುಂದರ ರೂಪಿಂ ಬೆದಂಡೆಗಬ್ಬಮದಕ್ಕುಂ ॥ (೧-೩೪)

'ಕಂದವೂ ನಿರ್ದುಷ್ಟವಾದ ವೃತ್ತವೂ ಒಂದೊಂದೆಡೆಗೆ ಒಂದೊಂದಾಗಿ ಕೂಡಬೇಕು. ಆ ಮೇಲೆ ಜಾಣ್ಮೆಯಿಂದೊಡವರೆದ 'ಜಾತಿ' ಬೆಡಗಿನಿಂದ ಇವುಗಳಲ್ಲಮರಬೇಕು. ಹಾಗಿದ್ದ ವಸ್ತು ವಿಸ್ತರ ವಿರಚನೆಗೆ 'ಬೆದಂಡೆ' ಎಂದು ಹೆಸರು.

> ಕಂದಂಗಳ್ ಪಲವಾಗಿರೆ
> ಸುಂದರವೃತ್ತಂಗಳಕ್ಕರಂ ಚವುಪದಿ ಮ
> ತ್ತಂ ದಲ್ ಗೀತಿಕೆ ತಿವದಿಗ
> ಳಂದಂಬೆತ್ತೆಸೆಯೆ ಪೇೞ್ದೊಡದು ಚತ್ತಾಣಂ ॥ (೧-೩೫)

'ಕಂದಗಳು ಹಲವು, ಸುಂದರಗಳಾದ ವೃತ್ತ-ಅಕ್ಕರ-ಚೌಪದಿ-ಗೀತಿಗೆ-ತ್ರಿಪದಿಗಳು ಕೆಲವು, ಹೀಗೆ ಬೆರೆದ 'ವಸ್ತು ವಿಸ್ತರ ವಿರಚನೆ'ಯೇ ಚತ್ತಾಣವೆಂಬುದು.'

ಮೇಲೆ ತೋರುವ 'ಬೆದಂಡೆ, ಚತ್ತಾಣ' ಎಂಬವು ಆ ಹಿಂದಿನ ದೇಸಿಗಬ್ಬದ ವಿಶಿಷ್ಟ ನಾಮಗಳಾಗಿ ತೋರುತ್ತಿವೆ. ಅವುಗಳ ಒಳಮೈಯನ್ನು ಪರಾಂಬರಿಸಲಿಕ್ಕೆ, ಅಂಥ ಒಂದು ಕಾವ್ಯವಾದರೂ ಈ ವರೆಗೆ ಪ್ರಕಟವಾಗದುದರಿಂದಲೂ ಅವುಗಳ ಲಕ್ಷಣಗ್ರಂಥಗಳು ತಲೆದೋರಲೇ ಇಲ್ಲವೆಂಬುದು ಹಿಂದೆ ಸೂಚಿಸಲ್ಪಟ್ಟುದರಿಂದಲೂ, ಅಸಾಧ್ಯವಾಗಿದೆ.

*ಕವಿರಾಜಮಾರ್ಗ ವಿವೇಕ, ಭಾಗ ೧, ೧೯೪೮*

*ಕವಿರಾಜಮಾರ್ಗ ವಿವೇಕ (ಸಂಯುಕ್ತ ಸಂಪುಟ), ೧೯೭೩, ಪು. ೭೨-೭೫, ೯೨-೯೫, ೯೯-೧೦೪*

# ೫೩. ರನ್ನನ ದುರ್ಯೋಧನನ ಮಹಾನುಭಾವತ್ವವನ್ನು ಕುರಿತ ವಿಚಾರ

● ಜಿ. ಎಚ್. ನಾಯಕ

'ಗದಾಯುದ್ಧ'ದ ದುರ್ಯೋಧನ 'ಮಹಾನುಭಾವ' ಎಂದು ಸಾಧಿಸುವ ವಿಮರ್ಶಪಂಥವೊಂದು ಬೆಳೆದುಬಂದಿದೆ. ಆ ಪಂಥದವರು ದುರ್ಯೋಧನನ ನಡೆನುಡಿಗಳಲ್ಲಿ ಪ್ರಕಟವಾಗುವ ಸದ್ಗುಣಾಂಶಗಳನ್ನು ತುಂಬ ಉದಾರವಾಗಿ ವ್ಯಾಖ್ಯಾನಿಸಿದ್ದಾರೆ (ಭೀಮನ ನಡೆನುಡಿಗಳನ್ನು ವ್ಯಾಖ್ಯಾನಿಸುವಾಗ ಆ ಉದಾರತೆಯನ್ನು ತೋರಿಸಿಲ್ಲ). ದುರ್ಯೋಧನ 'ಮಹಾನುಭಾವ'ನಲ್ಲ ಎಂದು ವಾದಿಸುವ ವಿಮರ್ಶಕರು ಭೀಮಪರವಾಗಿ ವಾದಿಸುತ್ತ ದುರ್ಯೋಧನನ ನಡನುಡಿಗಳನ್ನು ಇನ್ನೊಂದು ತುದಿಗೆ ಹೋಗಿ ವ್ಯಾಖ್ಯಾನಿಸಿದ್ದಾರೆ. ಈ ಎರಡೂ ಅತಿಗಳಿಗೆ ಹೋಗದೆ ಭೀಮನ ಕಥಾನಾಯಕತ್ವವನ್ನು ಪ್ರತಿಪಾದಿಸಿಯೂ ದುರ್ಯೋಧನನ ಸದ್ಗುಣಾಂಶಗಳು ಪ್ರಕಟವಾಗುವಂತಿರುವ ಸಂದರ್ಭಗಳಲ್ಲಿ ದುರ್ಯೋಧನನ ನಡೆನುಡಿಗಳಲ್ಲಿ ಕಾವ್ಯದಲ್ಲಿ ಇರುವುದಕ್ಕಿಂತ ಹೆಚ್ಚಾದ ಅರ್ಥ ಕಂಡು ವ್ಯಾಖ್ಯಾನಿಸಿದ ವಿಮರ್ಶಕರೂ ಇದ್ದಾರೆ. ಇಲ್ಲಿ ಆ ವ್ಯಾಖ್ಯಾನಗಳನ್ನೆಲ್ಲ ಕುರಿತು ವಿವರವಾಗಿ ಚರ್ಚಿಸುವುದಕ್ಕೆ ಅವಕಾಶವಿಲ್ಲವಾದರೂ ದುರ್ಯೋಧನನ ಮಹಾನುಭಾವತ್ವ ಪ್ರಕಟವಾಗುವಂಥ ಸನ್ನಿವೇಶಗಳೆಂದು ವಿಮರ್ಶಕರು ಒಟ್ಟಿನಲ್ಲಿ ಗುರುತಿಸಿರುವ ಕೆಲವು ಸನ್ನಿವೇಶಗಳನ್ನು ಕುರಿತಂತೆ ಚರ್ಚಿಸುವುದು ಅಗತ್ಯವೆನಿಸುತ್ತದೆ.

೧. 'ಮಹಾನುಭಾವ' ಎಂಬ ಮಾತು ದುರ್ಯೋಧನನಿಗೆ ಸಂಬಂಧಿಸಿದಂತೆ ಕಾವ್ಯದಲ್ಲಿ ಪ್ರಯೋಗವಾಗಿರುವುದು ಒಂದೇ ಒಂದು ಸಲ. ಆ ಸಂದರ್ಭ ಹೀಗಿದೆ:

ಅಶ್ವತ್ಥಾಮನು-

> ...ಪಂಚಪಾಂಡವರ ತಲೆಗಳಂ ಕೊಂಡು ತಟತಟನೆ ನೇಸಱ್ ಮೂಡುವಾಗಳ್ ಬಂದು ಕೊಳ್ ನಿನ್ನ ನೆಚ್ಚಿನ ಪಾಂಡವರ ತಲೆಗಳಿವೆಯೆಂದು ದುರ್ಯೋಧನನ ಮುಂದಿಕ್ಕಿದೊಡಾ ಮಹಾನುಭಾವನಾ ತಲೆಗಳಂ ನೀಡುಂ ಭಾವಿಸಿ ನೋಡಿ
>
> ಪವನಜನಾಸ್ಯಮಲ್ತಿದವನಾನನಮಪ್ಪೊಡೆ ಮಟ್ಟಮಿರ್ದು ನೋ
> ಡುವುದೆ ಮದೀಯ ವಕ್ತ್ರಮನೆ ಕೆಮ್ಮನೆ ಪೋಯ್ತುಱಿವಿಲ್ಲದಾಯ್ತು ಪಾಂ
> ಡವರ ಶಿರಂಗಳಲ್ಲವಿವು ಪಾಂಡಸೂನುಗಳಪ್ಪ ಪಂಚ ಪಾಂ
> ಡವರ ಶಿರಂಗಳಂ ನೆಱೆ ವಿಚಾರಿಸದಕ್ಕಟ ಕೊಂಡುಬರ್ಪುದೇ ॥ (೯-೩೩)
>
> ಪರಮೇಶ್ವರಾವತಾರನೆ
> ಪರಮಜ್ಞಾನಿಯೆ ವಿವೇಕವಿಕಳರವೊಲ್ ಬಾ
> ಲರ ತಲೆಯಂ ತಂದುದಱಿಂ
> ದೊರೆಕೊಂಡುದು ನಿನಗೆ ಪಾತಕಂ ಬಾಲವಧಂ ॥ (೯-೩೪)
>
> ಅದು ಕಾರಣಂ ನೀಂ ಪ್ರಾಯಶ್ಚಿತ್ತ ಪವಿತ್ರಗಾತ್ರನಾಗಿ ಹಿಮವಂತಕ್ಕೆ ಪೋಪುದೆಂದು ಸುಯೋಧನನ ನುಡಿದ ನುಡಿಯನವಧಾರಿಸಿ ರುದ್ರಾವತಾರಂ ಕರಂ ಸಿಗ್ಗಾಗಿ ಪಶ್ಚಾತ್ತಾಪಂಬಟ್ಟಾಪ್ರದೇಶದಿಂ ತಳರ್ದು....

-ಎಂದು ಮುಂತಾಗಿ ಈ ಸನ್ನಿವೇಶದ ವರ್ಣನೆ ಬಂದಿದೆ. ಮೊದಲಿನ ಪದ್ಯದಲ್ಲಿ ''ಪವನಜನಾಸ್ಯ...ಕೆಮ್ಮನೆ''ವರೆಗಿನ ಭಾವದಲ್ಲಿ ರನ್ನನ ಸ್ವೋಪಜ್ಞತೆಯನ್ನು ವಿಮರ್ಶಕರು ನ್ಯಾಯವಾಗಿಯೇ ಪ್ರಶಂಸಿಸಿದ್ದಾರೆ. ಆದರೆ, ದುರ್ಯೋಧನನಲ್ಲಿ ''ತಾ ಬಯಸಿಲ್ಲದ ಎಳೆಯ ಮಕ್ಕಳಾದ ಪಂಚಪಾಂಡವರ ಕೊಲೆ ಆಯಿತಲ್ಲ ಎಂಬ ತೀವ್ರ ವಿಷಾದ ಮತ್ತು ಕನಿಕರ''[೧] ವ್ಯಕ್ತವಾಗಿದೆ ಎನ್ನುವ ರೀತಿಯಲ್ಲಿ ವಿಮರ್ಶಕರು ವ್ಯಾಖ್ಯಾನಿಸಿದ್ದನ್ನು ಕಾವ್ಯಸಂದರ್ಭದಲ್ಲಿ ಎಷ್ಟರಮಟ್ಟಿಗೆ ಸಮರ್ಥಿಸುವುದಕ್ಕಾಗುತ್ತದೆ ಎಂಬುದನ್ನು ಪರೀಕ್ಷಿಸಬೇಕು. 'ಅಕ್ಕಟ' ಎಂಬ ಮಾತು ಈ ಬಗೆಯ ವ್ಯಾಖ್ಯಾನಕ್ಕೆ ಕಾರಣವಾಗಿರುವಂತೆ ತೋರುತ್ತದೆ. ಇಲ್ಲಿ ದುರ್ಯೋಧನನ 'ಅಕ್ಕಟ' ಎಂಬ ಉದ್ಗಾರದ ಹಿಂದೆ ''ತಾ ಬೇಡಿದವರ ಕೊಲೆ ತಪ್ಪಿತೆಂಬ ಅತೃಪ್ತಿ, ಆಗಬೇಕಾಗಿತ್ತೆಂಬ ಅದಮ್ಯ ಆಸೆ, ದ್ವೇಷಾಸೂಯೆ''ಗಳ[೨] ಜೊತೆಗೆ, ಆದರೆ ಅದಕ್ಕಿಂತ ಹೆಚ್ಚಾಗಿ, ಅಶ್ವತ್ಥಾಮನಿಗೆ ಬಾಲವಧೆಯ ಪಾತಕ ಅಂಟಿಕೊಂಡಿತಲ್ಲಾ ಎಂಬ ವಿಷಾದವಿದೆ. ಅದರ ಮುಂದಿನ ಪದ್ಯದಲ್ಲಿ ಅವನು ಬಾಲವಧೆಯ ಪಾತಕ ಅಶ್ವತ್ಥಾಮನಿಗೆ ದೊರೆಕೊಂಡುದನ್ನು ಪ್ರಸ್ತಾಪಿಸುತ್ತಾನೆ. ಮುಂದೆ ವಚನಭಾಗದಲ್ಲಿ ''ಪ್ರಾಯಶ್ಚಿತ್ತ ಪವಿತ್ರಗಾತ್ರನಾಗಿ ಹಿಮವಂತಕ್ಕೆ ಪೋಪುದು'' ಎಂದು ಅದೇ ಉಸಿರಿನಲ್ಲಿ ಅಶ್ವತ್ಥಾಮನಿಗೆ ಪಾಪಪರಿಹಾರದ ದಾರಿಯನ್ನು ತಿಳಿಸಿ ಸುಮ್ಮನಾಗಿಬಿಡುತ್ತಾನೆ. ಅಶ್ವತ್ಥಾಮ ಹೊರಟು ಹೋಗಲು 'ಚಿತ್ತಸಮಾಧಾನಂ ಗೆಯ್ದು' ಎಂಬ ಮಾತು ಬೇರೆ ಬರುತ್ತದೆ. ಮಕ್ಕಳ ಕೊಲೆಗಾಗಿ ''ತೀವ್ರ ವಿಷಾದ ಮತ್ತು ಕನಿಕರ''ವಾಗಿದ್ದುದಾದರೆ ಆ ತಲೆಗಳು ಅಲ್ಲೇ ಬಿದ್ದಿದ್ದರೂ ಆತನ ಮನಸ್ಸು ಅತ್ತ ಮತ್ತೆ ಹರಿಯುವುದೇ ಇಲ್ಲವೇಕೆ? ''ಅಕ್ಕಟ'' ಎಂಬ ಮಾತಿನಲ್ಲಿ ತಾ ಬಯಸಿಲ್ಲದ ಎಳೆಯ ಮಕ್ಕಳ ಕೊಲೆ ಆಯಿತಲ್ಲ ಎಂಬ ವಿಷಾದದ (ತೀವ್ರ ವಿಷಾದದ ಅಲ್ಲ) ಛಾಯೆಯೂ ಇರಬಹುದೇ ಎಂಬಂತೆನಿಸುವುದಾದರೂ ಮುಂದೆ ದುರ್ಯೋಧನನ ಮನಸ್ಸು ಹರಿಯುವ ಬಗೆಯನ್ನು ಗಮನಿಸಿದಾಗ ಆ ಗ್ರಹಿಕೆಗೆ ಕಾವ್ಯ ಸಂದರ್ಭದಲ್ಲಿ ತಕ್ಕ ಪುಷ್ಟಿ ದೊರೆಯುವುದಿಲ್ಲ ಎಂಬುದು ಗೊತ್ತಾಗುತ್ತದೆ. ಕಾವ್ಯ ಸಂದರ್ಭದಲ್ಲಿಯೇ ಉದ್ದೀಪನಗೊಂಡ ಆ ಭಾವವನ್ನು ಇನ್ನಷ್ಟು ಪುಷ್ಟಿಗೊಳಿಸುವುದರ ಮೂಲಕ ದುರ್ಯೋಧನನ ಮಹಾನುಭಾವತೆಯನ್ನು ಪ್ರಕರ್ಷಸ್ಥಿತಿಯಲ್ಲಿ ತೋರಿಸುವ ಆಸಕ್ತಿ ಕವಿಗೇ ಇದ್ದಂತೆ ತೋರುವುದಿಲ್ಲ. ಅಶ್ವತ್ಥಾಮನಿಗೆ ನೀತಿದರ್ಶನ ಮಾಡಿಸುವಷ್ಟಕ್ಕೇ ದುರ್ಯೋಧನನ ಸದ್ಗುಣಾಂಶವನ್ನು ಪ್ರಕಾಶಗೊಳಿಸಿ ಕವಿ ಕೈಬಿಟ್ಟಿದ್ದಾನೆ.

ಇನ್ನು ''ಕೆಮ್ಮನೆಪೋಯ್ತಱಿವಿಲ್ಲದಾಯ್ತು'' ಎಂಬ ಮಾತಿನಲ್ಲಿ ಅಶ್ವತ್ಥಾಮ ಅರಿವಿಲ್ಲದೆ ಮಾಡಿದ್ದರಿಂದ ಕೆಲಸ ಕೆಟ್ಟಿತು ಎಂಬ ಭಾವದ ಜೊತೆಗೆ ಹಿಂದೆ ''ಇದುವಂ ನೋಡುವೆನ್...'' (ಇದನ್ನೂ ನೋಡುತ್ತೇನೆ) (೯-೨೯) ಎಂದು ದುರ್ಯೋಧನ ಹೇಳಿದ್ದರ ಹಿನ್ನೆಲೆಯಲ್ಲಿ ನೋಡಿದರೆ ಹಾಗೂ ಕಾವ್ಯದುದ್ದಕ್ಕೂ ದುರ್ಯೋಧನ ಅಶ್ವತ್ಥಾಮನ ಬಗೆಗೆ ತಳೆದ ಧೋರಣೆಯನ್ನು ನೆನೆದರೆ, ಇಲ್ಲಿ ''ಕೆಮ್ಮನೆ ಪೋಯ್ತಱಿವಿಲ್ಲದಾಯ್ತು'' ಎಂಬಲ್ಲಿ ದುರ್ಯೋಧನನಿಗೆ ಅಶ್ವತ್ಥಾಮನಿಂದ ಪಾಂಡವರ ಕೊಲೆಯಾದೀತು ಎಂದು ನಂಬಿದ ತನ್ನ ಅವಿವೇಕದ ಅರಿವು ಆಗಿರುವುದರ ಸೂಚನೆಯೂ ಸಿಗಬಹುದಾದಂತೆ ಇದೆ. ಆಗ 'ಅಕ್ಕಟ' ಎಂಬ ಮಾತಿನಲ್ಲಿ ದುರ್ಯೋಧನನಿಗೆ ತನ್ನ ಅವಿವೇಕದ ಬಗೆಗೆ ಉಂಟಾಗಿರುವ ಪಶ್ಚಾತ್ತಾಪದ

---

೧ ರಂ. ಶ್ರೀ ಮುಗಳಿ (೧೯೪೬) ರನ್ನನ ಕೃತಿರತ್ನ, ೧೯೬೮, ಪು. ೯೬.

೨ ಅದೇ

ಅರ್ಥಛಾಯೆಯೂ ಇದ್ದಿರಬಹುದೇನೊ ಎಂಬಂಥ ಪ್ರತೀತಿ ಓದುಗನಿಗೆ ಉಂಟಾಗುತ್ತದೆ. ಪಂಪನಲ್ಲಿಯೂ ಇದೇ ಸಂದರ್ಭದ ವರ್ಣನೆಯಲ್ಲಿ 'ಅಕ್ಕಟ' (೧೩-೧೦೭) ಎಂಬ ಮಾತು ಪ್ರಯೋಗವಾಗಿದೆ. ಅಲ್ಲಿ ಪದ್ಯದ ಇತರ ವಿವರಗಳ ಸಂದರ್ಭದಲ್ಲಿ ಮಕ್ಕಳ ಕೊಲೆ ಅನ್ಯಾಯವಾಗಿ ಆಯಿತಲ್ಲಾ ಎಂಬ ಬಗೆಗಿನ ದುರ್ಯೋಧನನ ಕನಿಕರವೂ ಸ್ಪಷ್ಟವಾಗಿ ಮೂಡಿದೆ. ಪಂಪನಲ್ಲಿ ಆಗಿದೆ ಎಂಬುದು ಇಲ್ಲಿಯೂ ಆಗಿದೆ ಎಂಬುದಕ್ಕೆ ಸಮರ್ಥನೆಯಾಗಬೇಕಿಲ್ಲ. ಪಂಪನ ಮಾತುಗಳನ್ನೇ ಈ ಸನ್ನಿವೇಶ ನಿರ್ಮಾಣದಲ್ಲಿ ಅಲ್ಲಲ್ಲಿ ಬಳಸಿಕೊಂಡೂ ಪಂಪನಲ್ಲಿಲ್ಲದ ಈ ಪದ್ಯದ 'ಕೆಮ್ಮನ'ವರೆಗಿನ ಭಾವವನ್ನು ಹೊಸದಾಗಿ ಸೇರಿಸಿ ದುರ್ಯೋಧನನಲ್ಲಿ ಇನ್ನೂ ಇರುವ ದ್ವೇಷಾಸೂಯೆಗಳನ್ನು ರನ್ನ ಕವಿ ಚಿತ್ರಿಸಿದ್ದಾನೆ. ಅಂಥ ಕವಿ ದುರ್ಯೋಧನನ ವ್ಯಕ್ತಿತ್ವದ ಘನತೆಯನ್ನು ಹೆಚ್ಚಿಸಬಹುದಾದಂಥ, ಬಾಲಕರಾದ ಪಂಚಪಾಂಡವರ ಅನ್ಯಾಯದ ಕೊಲೆಗೆ ಸಂಬಂಧಿಸಿದಂತೆ ಪಂಪನಲ್ಲಿ ಇರುವಂಥ ಭಾವವನ್ನು ಸರಿಯಾಗಿ ಪೋಷಿಸದೆ ಬಿಟ್ಟಿದ್ದಾನೆ ಎಂಬುದು ಗಮನಿಸಲೇಬೇಕಾದ ಅಂಶವಾಗಿದೆ.

''ತಾನಕ್ಕೆ ತಮ್ಮಮ್ಮನಕ್ಕೆ ತಿರುವಾಯ್ಗೆ ತಂದಱಿವರೆ'' (೨-೧೧), ''ಇಱಿಯಲವರೆಂತಱಿವರ್'' (೨-೧೬) ''ಅರಿಯಂ ಘಾತಿಪ ಶಸ್ತ್ರಾಸ್ತ್ರಮವರ್ಗೆ ಜಾತಿವಿರುದ್ಧಂ'' (೨-೧೭), ''ಮಱಿಯ ಪಾಂಡವಂ ಬಗೆದು ನೋೞ್ಪೊಡಶ್ವತ್ಥಾಮಂ'' (೨-೩೦), ''ತ್ರಿದಶನದೀಸುತನಿಂ ತೀರದ ಕಜ್ಜಂ....ದ್ರೋಣಪುತ್ರನಿಂ ತೀರ್ದಪುದೇ'' (೩-೬೦), ''ದ್ರೋಣನೆಮಗೊಳ್ಳಿಕೆಯ್ದಂ ದ್ರೋಣನ ಸುತನೆಮಗೊಳ್ಳಿಕೆಯ್ಯದಿರ್ಕುಮೆ ಸಮರ ಕ್ಷೋಣಿಯೊಳಿನ್ನವನಾಸೆಯೆ'' (೩-೬೧), ''..ಪೆಱಪೆಱನಿನ್ನ ಘಗೆ ಮಡಿದಪುದೇ'' (೩-೬೩), ''ಪಿನಾಕವೆತ್ತವೋದುದೊ ಶರವೆತ್ತವೋದುದೊ ಲಲಾಟದಿನಿಂಗಳಗಣ್ಣದೆತ್ತವೋದುದೊ ಗುರುಸೂನು ತಾನುಮಣಮುಮ್ಮನಲಂಪುಮದೆತ್ತವೋದುದೋ'' (೪-೫೧)-ಇತ್ಯಾದಿಯಾಗಿ ಅಶ್ವತ್ಥಾಮನನ್ನು ನಿಂದಿಸಿದ, ಅಲ್ಲಗಳೆದ ದುರ್ಯೋಧನ ''ಈಶ್ವರಾಂಗನಶ್ವತ್ಥಾಮಂ ಪರಬಲಕಜೇಯನ್'' ಎಂದು ಅಂತರಂಗದಲ್ಲಿ ಚಿಂತಿಸಿದ್ದು (೯-೨೮), ''ಕೌಂತೇಯರನಿಕ್ಕಿ ಪಂದಲೆಗಳಂ ತಂದೆನ್ನ ಮುಂದಿಕ್ಕು ಕೂರದ ದಾಯಾದರ ಮಿಕ್ಕ ಪಂದಲೆಗಳಂ ಕಣ್ಣಾಱೆ ಕಂಡೆನ್ನ ಚಿತ್ತದೊಳೊಂದುಂ ತೊದಳಿಲ್ಲದೆನ್ನ ಸುಗಣಕ್ಕು ತ್ಕಾಂತಿಯಂ ಮಾಡುವೆಂ'' (೯-೨೯) ಎಂದು ಹೇಳಿದ್ದು ಅವನ ಮನಃಸ್ಥಿತಿಯ ಪಲ್ಲಟವನ್ನೂ ಸ್ಥಿರಭಾವರಾಹಿತ್ಯವನ್ನೂ ಪ್ರಕಟಪಡಿಸುತ್ತದೆ. ಅಶ್ವತ್ಥಾಮನ ಬಗೆಗೆ ಆತನ ಪರಾಕ್ರಮದ ಬಗೆಗೆ ವ್ಯಕ್ತಪಡಿಸಿರುವ ದುರ್ಯೋಧನನ ಆ ಅಪನಂಬಿಕೆಗೂ ಇಲ್ಲಿನ ಅಪಾರ ವಿಶ್ವಾಸಕ್ಕೂ ಎಲ್ಲಿಗೆಲ್ಲಿಯ ಸಂಬಂಧ ಎಂದೆನಿಸುವುದು ಸಹಜ. ಆದರೆ, ಈ ಕಾವ್ಯದಲ್ಲಿ ಕವಿ ದುರ್ಯೋಧನನ ಮನಃಸ್ಥಿತಿಯ ಇಂಥ ಏರುಪೇರುಗಳನ್ನು, ಆತನ ವ್ಯಕ್ತಿತ್ವದ ಗುಣಾವಗುಣಗಳನ್ನು ಪ್ರಜ್ಞಾಪೂರ್ವಕವಾಗಿಯೇ ಚಿತ್ರಿಸುತ್ತ ಬಂದಿದ್ದಾನೆ. ಆದ್ದರಿಂದ ದುರ್ಯೋಧನನ ಸದ್ಗುಣಾಂಶವನ್ನು, ಮಹಾನುಭಾವತೆಯ ಅಂಶಗಳನ್ನು ಪ್ರಕಟಪಡಿಸುವಂಥ ಸನ್ನಿವೇಶಗಳು ಆತನ ಮನಸ್ಸಿನ ಖಾಯಂ ಸ್ಥಿತಿಗಳೆಂದು ತಿಳಿಯಲಾಗದು.

೨. (ಅ) ದುರ್ಯೋಧನನ ಗದೆಯ ಏಟಿಗೆ ಭೀಮ ಮೂರ್ಛೆ ಹೋದಾಗಿನ ಸಂದರ್ಭದಲ್ಲಿ ದುರ್ಯೋಧನನ ನಡೆವಳಿಕೆಯಲ್ಲಿ ಪ್ರಕಟವಾಗುವ ಆತನ ಮಹಾನುಭಾವತ್ವವನ್ನು ಒಬ್ಬಿಬ್ಬರು ವಿಮರ್ಶಕರನ್ನು ಬಿಟ್ಟರೆ ಸಾಮಾನ್ಯವಾಗಿ ಉಳಿದವರೆಲ್ಲರೂ ಕೊಂಡಾಡಿದ್ದಾರೆ. 'ಗದಾಯುದ್ಧ'ದಲ್ಲಿ ಈ ಸಂದರ್ಭ ಹೀಗಿದೆ :

ಕೆಡೆದೊಡೆ ಪವನಜನಾಹವ
ದೆಡೆಯೊಳ್ ಬಿೞ್ದವನನಿಱಿಯಲಾಗದುವೆಂಬರ್
ಗಡಮಂದಂಬರತಳದೊಳ್
ಪೊಡವೀಶಂ ಗದೆಯನೆತ್ತಿ ತಿರಿಪಿದನಾಗಳ್ ॥ (೮-೩೧)

ಆ ಪ್ರಸ್ತಾವದೊಳ್ ಧರ್ಮಯುದ್ಧಮಂ ನೆನೆದು

ಇಱಿಯೆಂ ಬಿೞ್ದನನೆಂಬೀ
ಬಿಱುಬಿಂದಂ ಬೀಸೆ ಗದೆಯ ಗಾಳಿಯ ಕೋಟಿ
ೞ್ಚಱಿಸಿದುದು ಭೀಮನಂ ಮೆ
ಯ್ಮಱೆದವನಂ ತಂದೆ ಸುತರ್ಗೆ ಕೂರದರೊಳರೇ ॥ (೮-೩೨)

ದಾನಿಯುಮಂ ಶೂರನುಮಂ
ತಾನೆೞ್ಚಱಿಕುಂ ಗದಾನಿಲಂ ಮೂರ್ಛಿತನಂ
ದೀನನುಮಂ ಪಂದೆಯುಮಂ
ಪೇನಿಯನೆೞ್ಚಱಿಕುಮಬ್ಜಪೀಜನಪವನಂ ॥ (೮-೩೩)

....ಅಂತು ಮೂರ್ಛೆಯಿಂ ಮಾರುತಿಯೆೞ್ಚರ್ತಾಗಳ್

-'ಬಿೞ್ದನನಿಱಿಯೆನ್' ಎಂದು ಪಂಪನಲ್ಲಿದ್ದರೆ 'ಬಿೞ್ದವನನಿಱಿಯಲಾಗದುವೆಂಬರ್' 'ಇಱಿಯೆಂ ಬಿೞ್ದನನ್' ಎರಡು ರೀತಿಯ ಮಾತುಗಳು ರನ್ನನಲ್ಲಿವೆ. ರನ್ನನ ಮಾತುಗಳಲ್ಲಿರುವ ಅನಿಶ್ಚಿತ ಧೋರಣೆಯನ್ನು ಗಮನಿಸಬೇಕು. ದುರ್ಯೋಧನನೇ ಸ್ವಪ್ರೇರಣೆಯಿಂದ ಮನಸ್ಸಿನಲ್ಲಿ ಹಾಗೆ ಯೋಚಿಸಿದನೆಂಬುದು ಇದ್ದೂ ಇಲ್ಲದಂತೆ ಅಥವಾ ಇತರರು ಬಿದ್ದವನನ್ನು ಇರಿಯಬಾರದು ಎನ್ನುತ್ತಾರೆ ಎಂಬ ಬಾಹ್ಯ ಕಾರಣಕ್ಕಾಗಿ ಹಾಗೆ ಮಾಡಿದನೆಂಬರ್ಥವೂ ಹೊರಡಬಹುದಾದ ರೀತಿಯಲ್ಲಿ ರನ್ನ ನಿರೂಪಿಸಿದ್ದಾನೆ. ಜೊತೆಗೆ ಕವಿ ಇಲ್ಲಿ ದುರ್ಯೋಧನನ ವೀರೋದಾತ್ತ ನಡವಳಿಕೆಯೊಂದನ್ನು ಸುಮ್ಮನೆ ನಿರೂಪಿಸಿದ್ದಾನೆಯೇ ಹೊರತು ಕೀರ್ತಿಸಿಲ್ಲ. ಆ ವೀರೋದಾತ್ತತೆಯ ನಿರೂಪಣೆಯಲ್ಲಿಯೂ ಪಂಪನಲ್ಲಿರುವಂಥ ಸ್ಪಷ್ಟತೆಯಿಲ್ಲ. ಪಂಪ 'ಅಲ್ಪಾಂತರದೊಳ್' ಸುಯೋಧನ ಗದೆ ಬೀಸಿದನೆಂದೂ ಸುಯೋಧನನ ಗದೆಯ ಗಾಳಿಯಿಂದಲೇ ಭೀಮ ಮೂರ್ಛೆಯಿಂದ ಎಚ್ಚತ್ತ ಎಂದೂ ಸ್ಪಷ್ಟವಾಗುವಂತೆ ನಿರೂಪಿಸಿದ್ದರೆ, ರನ್ನ ದುರ್ಯೋಧನ ಗದೆ ಬೀಸಿದ್ದು 'ಅಂಬರತಳದೊಳ್' ('ಅಲ್ಪಾಂತರದೊಳ್' ಎಂಬುದಕ್ಕೂ 'ಅಂಬರತಳದೊಳ್' ಎಂಬುದಕ್ಕೂ ಇರುವ ವ್ಯತ್ಯಾಸವನ್ನು ಗಮನಿಸಬೇಕು) ಎಂದು ಹೇಳಿದ್ದಲ್ಲದೆ ''ತಂದೆ ಸುತರ್ಗೆ ಕೂರದರೊಳರೇ'' ಎಂದು ಅರ್ಥಾಂತರನ್ಯಾಸದಲ್ಲಿ ಮುಂದಿನ ಪದ್ಯ ಮುಗಿಸಿದ್ದಾನೆ. ಮತ್ತೆ ''ದಾನಿಯುಮಂ.....ಮೂರ್ಛಿತನಂ'' (೮-೩೩) ಎಂದು ಭೀಮಪರವಾದ ಮಾತುಗಳನ್ನೇ ಬೇರೆ ಹೇಳಿದ್ದಾನೆ. ದುರ್ಯೋಧನನ ಗದೆಯ ಗಾಳಿಯಿಂದಲೇ ಭೀಮನಿಗೆ ಎಚ್ಚರವಾಯಿತೆಂದಾಗಲಿ, ಭೀಮನನ್ನು ಎಚ್ಚರಗೊಳಿಸಲೆಂದೇ ದುರ್ಯೋಧನ ಗದೆ ಬೀಸಿದನೆಂದಾಗಲಿ ಹೇಳಿಯೂ ಹೇಳದ ರೀತಿಯಲ್ಲಿ ರನ್ನ ತೇಲಿಸಿಬಿಟ್ಟಿದ್ದಾನೆ. ಒಟ್ಟನಲ್ಲಿ ದುರ್ಯೋಧನನ ವ್ಯಕ್ತಿತ್ವದ ವೀರೋದಾತ್ತ ಅಂಶವೊಂದನ್ನು ಈ ಸಂದರ್ಭದಲ್ಲಿ ಪ್ರಕಟಗೊಳಿಸಲು ಕವಿ ಮರೆತಿಲ್ಲ ಎಂಬುದು ನಿಜ. ಅಭಿಮನ್ಯುವಿನ ಸಂದರ್ಭದಲ್ಲಿ ತನ್ನಲ್ಲಿ ''ರಣಕ್ಕೆ ಶುಚಿತ್ವಮನಪ್ಪುಕೆಯ್ವ ಮಾನಸಿಕೆ''ಯನ್ನು ಗೌರವಿಸುವ

ಗುಣವಿರುವುದನ್ನು ಸ್ವತಃ ದುರ್ಯೋಧನನೇ ಹೇಳಿದ (೪-೬೦), ಹಾಗೂ ''ಬಿಟ್ಟಿರುಮನಿಱಿವೆ'', ''ಬಿಟ್ಟಿರುಮಂ ಕೊಲ್ವೆ'' ಎಂದು (೭-೫೩) ಕೃಷ್ಣನನ್ನು ದುರ್ಯೋಧನ ನಿಂದಿಸಿದ ಹಿನ್ನೆಲೆಯಲ್ಲಿ ನೋಡಿದಾಗ ದುರ್ಯೋಧನನ ಈ ರಣಶುಚಿತ್ವ 'ಅನಿರೀಕ್ಷಿತ'[1] ಎಂದು ಹೇಳುವಂತಿಲ್ಲ. ಆದರೆ ದುರ್ಯೋಧನನ ಈ ವೀರೋದಾತ್ತತೆಯನ್ನು ಅದರ ಪ್ರಕರ್ಷ ಸ್ಥಿತಿಯಲ್ಲಿ ಚಿತ್ರಿಸುವ ಆಸಕ್ತಿ ಮಾತ್ರ ಇಲ್ಲಿ ಕವಿಗೆ ಇದ್ದಂತೆ ತೋರುವುದಿಲ್ಲ. ಅವನ ಮನಸ್ಸು ಭೀಮನ ಕಡೆಗೇ ಹರಿಯುತ್ತಿರುವುದು ಸ್ಪಷ್ಟವಾಗಿದೆ.

ಆ) ಇಲ್ಲಿಯೇ ಭೀಮ ಸಿಂಹನಾದ ಮಾಡಿದಾಗ ಕೊಳದ ನೀರೊಳಗಿದ್ದ ದುರ್ಯೋಧನ ಹೊರಬರುವಾಗಿನ ಸಂದರ್ಭವನ್ನು ಕುರಿತಂತೆ ವಿವೇಚಿಸಬಹುದಾಗಿದೆ.

ಆ ಸಂದರ್ಭದ ಪ್ರಖ್ಯಾತ ಪದ್ಯವಿದು:

ಆ ರವಮಂ ನಿರ್ಜಿತ ಕಂ
ಠೀರವರವಮಂ ನಿರಸ್ತಘನರವಮಂ ಕೋ
ಪಾರುಣನೇತ್ರಂ ಕೇಳ್ದಾ
ನೀರೊಳಗಿರ್ದುಂ ಬೆಮರ್ತನುರಗಪತಾಕಂ ॥ (೭-೨೨)

-ಈ ಪದ್ಯವನ್ನೇ ಮುಖ್ಯವಾಗಿ ಉದಾಹರಿಸಿ ''ನೀರೊಳಗಿರ್ದುಂ ಬೆಮರ್ತನುರಗಪತಾಕಂ'' ಎಂಬ ಮಾತಿಗೆ ದುರ್ಯೋಧನಪರವಾದ ಅರ್ಥವನ್ನೇ ಹುಡುಕಿ ಆತನ ಸಾಹಸಧನತೆಯನ್ನು ವಿಮರ್ಶಕರು ಕೊಂಡಾಡಿದ್ದಾರೆ.[2] ಆದರೆ ಕಾವ್ಯಸಂದರ್ಭದಲ್ಲಿ ಈ ವ್ಯಾಖ್ಯಾನ ಸರಿ ಎನ್ನಬಹುದಾದಂತೆ ಗಟ್ಟಿಯಾಗಿ ನಿಲ್ಲುವಂತಿದೆಯೆ ಎಂಬುದನ್ನು ಪರೀಕ್ಷಿಸಬೇಕು. ಈ ಪದ್ಯದಲ್ಲಿ ಮೊದಲು ರವದ ಮೇಲೆ ಅವಧಾರಣೆ ಇದೆ (''ಆ ರವಮಂ/ನಿರ್ಜಿತಕಂಠೀರವರವಮಂ/ ನಿರಸ್ತ ಘನರವಮಂ''). ಆ ರವದ ಸಾಮರ್ಥ್ಯಾರೋಹಣ ಮೂರು ಹಂತಗಳಲ್ಲಿ ಹೆಚ್ಚಿನ ಅವಧಾರಣೆಯನ್ನು ಪಡೆದುಕೊಳ್ಳುತ್ತ ನಡೆದಿರುವುದನ್ನು ಗಮನಿಸಬೇಕು. ಅಂಥ ರವವನ್ನು ''ಕೋಪಾರುಣನೇತ್ರಂ ಕೇಳ್ದು ಆ ನೀರೊಳಗಿರ್ದುಂ ಬೆಮರ್ತನ್''.

ಈ ಪದ್ಯಕ್ಕಿಂತ ಹಿಂದಿನ ಪದ್ಯಗಳನ್ನೂ ವಚನ ಭಾಗಗಳನ್ನೂ ಈಗ ಗಮನಿಸಬೇಕು. ಕವಿ ಭೀಮನ ಸಿಂಹನಾದದ ಭಯಂಕರತೆಯನ್ನು ವರ್ಣಿಸಿದವನು (೭-೧೬) ಮುಂದೆ

---

೧ ನೋಡಿ: ಎಸ್. ವಿ. ರಂಗಣ್ಣ(೧೯೫೯) 'ಅರೆವಜ್ರ', ಹೊನ್ನಶೂಲ, ೧೯೬೮, ಪು. ೨೬.

೨ (ಅ) ಸಿ. ಕೆ. ವೆಂಕಟರಾಮಯ್ಯ (೧೯೨೮) 'ಗದಾಯುದ್ಧಕಾವ್ಯದಲ್ಲಿ ರನ್ನನು ತೋರಿಸಿರುವ ಪಾತ್ರ ರಚನಾ ಕೌಶಲ', ರನ್ನಕವಿ ಪ್ರಶಸ್ತಿ, ಪು. ೧೪೭; (ಆ) ಎಂ. ಆರ್. ಶ್ರೀನಿವಾಸಮೂರ್ತಿ (೧೯೨೮) 'ರನ್ನನ ಪ್ರಾಶಸ್ತ್ಯ', ರನ್ನಕವಿ ಪ್ರಶಸ್ತಿ, ಪು. ೧೮೯; (ಇ)ರಂ. ಶ್ರೀ ಮುಗಳಿ (೧೯೪೬) ರನ್ನನ ಕೃತಿರತ್ನ, ೧೯೬೮ ಪು. ೧೪-೧೫ ಮತ್ತು ೯೨.; (ಈ) ತೀ. ನಂ. ಶ್ರೀಕಂಠಯ್ಯ (೧೯೫೩) ಭಾರತೀಯ ಕಾವ್ಯ ಮೀಮಾಂಸೆ, ೧೯೭೩, ಪು. ೧೯೯-೨೦೦; (ಉ) ತೀ. ನಂ. ಶ್ರೀಕಂಠಯ್ಯ (೧೯೪೯) 'ಟಿಪ್ಪಣಿಗಳು' ಗದಾಯುದ್ಧ ಸಂಗ್ರಹ, ೧೯೭೨, ಪು. ೧೭೨; (ಊ) ಎಂ. ಜಿ. ವೆಂಕಟೇಶಯ್ಯ, (೧೯೭೩). ''ಗದಾಯುದ್ಧ', ರನ್ನ, ಐ. ಬಿ. ಎಚ್. ಪು. ೮೯-೯೦, (ಇವರ ವ್ಯಾಖ್ಯಾನ ಭೀಮ ಪರವೋ ದುರ್ಯೋಧನ ಪರವೋ ಎಂಬುದು ಸರಿಯಾಗಿ ಗೊತ್ತಾಗುವುದಿಲ್ಲ. ರನ್ನಕವಿಯ ಪ್ರಶಂಸೆಯಂತೂ ಇದೆ);(ಋ) ವಿ. ಸೀತಾರಾಮಯ್ಯ (೧೯೭೩) 'ಸಮೀಕ್ಷೆ', ರನ್ನ, ಐ. ಬಿ. ಎಚ್. ಪು. ೧೮೧, ('ಆ ರವಮಂ...' ಪದ್ಯವನ್ನು ಕುರಿತ ಅತಿಶಯವಾದ ಮೆಚ್ಚಿಕೆ ಇದೆ. ವ್ಯಾಖ್ಯಾನ ಇಲ್ಲ.); (ೠ) ಜಿ. ಬ್ರಹ್ಮಪ್ಪ (೧೯೭೪) ರನ್ನಕವಿ, ಪು. ೨೧೦; (ಎ) ಪಿ. ವಿ. ನಾರಾಯಣ (೧೯೭೫) ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ: ಚಂಪೂ ಕವಿಗಳು ಪು. ೭೫.

ಭೀಮಕೋಪಶಿಖಿ, ಭೀಮಕೋಪಾನಳ ಎಂಬ ಮಾತುಗಳನ್ನು ಬಳಸಿದ್ದಲ್ಲದೆ ಆ ಬೆಂಕಿಯ ತೀವ್ರ ಪರಿಣಾಮವನ್ನೂ ಅವುಗಳಲ್ಲಿ ವಿವರಿಸಿದ್ದಾನೆ. ಅದರ ಸುಡುವಿಕೆಯಿಂದ ತಾವರೆ ಅರೆಸೀದವು, ಹಕ್ಕಿಗಳು ಅರೆಬೆಂದವು, ಸರೋವರದ ಸುತ್ತುಮುತ್ತಲಿನ ಮರಳು 'ಪುರಿಗಡಲೆಗೆ ಪುರಿದ' ಮರಳು ಕಾಯ್ವ ರೀತಿಯಲ್ಲಿ ಕಾಯ್ದಿತು, ಕೊಳವೇ ಬ್ರಹ್ಮಾಂಡದವರೆಗೆ ಕಿತ್ತು ಹಾರುವಂತಾಯ್ತು. ಅಷ್ಟೇ ಅಲ್ಲದೆ,

> ಅಳರ್ದು ಕೊಳೆ ಭೀಮಕೋಪಾ
> ನಳನೆಸರ್ಗಾಯ್ದಿಟ್ಟ ತೆಱದೆ ಮಱುಗಿದುದಾಗಳ್
> ಕೊಳನ ಜಲಮೆಯ್ದೆ ಕಾಯ್ದೆಸ
> ರೊಳೆ ಕೊಟ್ ಕುದಿವಂತೆ ಕುದಿದುವಂದಾ ಮೀನ್ಗಳ್ ॥ (೭-೨೧)

''ಅಂತು ಜಲಚರ ಜೀವರಾಶಿಗಳೆಲ್ಲಮಸುಂಗೊಳೆ ಗೋಳುಂಡೆಗೊಳೆ ಕೊಟ್ಟುದಿಗೊಳೆ ಮಹೋತ್ತುಂಗ ಸಿಂಹಕೇತನಂ ಸಿಂಹನಾದಂಗೆಯ್ಯೆ'' ಎಂದು ಹೇಳಿದ ಮೇಲೆ ಮೊದಲು ಉದಾಹರಿಸಿದ 'ಆ ರವಮುಂ...ಪತಾಕಂ'' ಪದ್ಯ ಬಂದಿದೆ. ಆದ್ದರಿಂದ ''ಆ ನೀರೊಳಗಿರ್ದುಂ'' ಎಂಬಲ್ಲಿರುವ 'ಆ ನೀರು' ಮೊದಲು ತಂಪಾಗಿದ್ದದ್ದು ನಿಜವಾದರೂ ಈಗ ಅಂದರೆ ಭೀಮಸಿಂಹನಾದ ಮಾಡಿದಮೇಲೆ ತಂಪಾಗಿಲ್ಲ. ಆದರೆ ಈ ಪದ್ಯಕೆ ವ್ಯಾಖ್ಯಾನ ಮಾಡಿದ ವಿಮರ್ಶಕರೆಲ್ಲರೂ ಆ ನೀರು ಇನ್ನೂ ಅಂದರೆ ಭೀಮಕೋಪಾನಳದ ಜ್ವಾಲೆ ವ್ಯಾಪಿಸಿದ ಮೇಲೆಯೂ ತಣ್ಣೀರಾಗಿಯೇ ಇದೆ ಎಂದು ಗ್ರಹಿಸಿ ಪದ್ಯಕ್ಕೆ ದುರ್ಯೋಧನನ ಕಡೆಯಿಂದ ಅರ್ಥವನ್ನು ಹುಡುಕಲು ಹೊರಟಿದ್ದಾರೆ. ಮೊದಲು ತಣ್ಣೀರಾಗಿದ್ದ ಕೊಳದ ನೀರು ಈಗ ಅಂದರೆ ಭೀಮ ಸಿಂಹನಾದ ಮಾಡಿದ ಮೇಲೆ ''ಎಸರ್ಗಾಯ್ದಿಟ್ಟ ತೆಱದೆ ಮಱುಗಿ''ರುವುದಕ್ಕೆ ಭೀಮನ ಸಿಂಹಧ್ವನಿಯ ಮುಖಾಂತರ ಪ್ರಕಟವಾದ ಆತನ ಕೋಪಾನಳ ಕಾರಣವಾಗಿದೆ ಎಂಬುದನ್ನು ಗಮನಿಸಬೇಕು.

ಮುಂದೆ ಕವಿ ''ಅಂತು ಬೆಮರ್ತುಮ್ಮಳಿಸಿ ಸೈರಿಸಲಾಱದೆ'' ಎಂದು ವಚನ ಭಾಗದಲ್ಲಿ ಹೇಳಿದ್ದಾನೆ. 'ಉಮ್ಮಳಿಸು' ಎಂಬುದಕ್ಕೆ ಕ್ರೋಧಗೊಂಡು ಎಂಬ ಅರ್ಥವಿಲ್ಲ, ಉಷ್ಣವಾಗು, ವ್ಯಥೆಗೊಳ್ಳು, ದುಃಖಗೊಳ್ಳು ಎಂಬಿತ್ಯಾದಿ ಅರ್ಥಗಳಿವೆ.[೧] 'ಕೋಪಾರುಣ ನೇತ್ರಂ' ಮತ್ತು ಮುಂದೆ ವಚನಭಾಗದಲ್ಲಿ ಬರುವ 'ಕೋಪೋದ್ರೇಕಮನೆ ಬಗೆದು' ಎಂಬ ಮಾತುಗಳಿಂದಾಗಿ ಬಹುಶಃ ವಿಮರ್ಶಕರ ವ್ಯಾಖ್ಯಾನದ ಒತ್ತು ದುರ್ಯೋಧನ ಪರವಾಗಿ ಬೀಳುವುದಕ್ಕೆ ಕಾರಣವಾಗಿರಬೇಕು. ಅಥವಾ 'ಪಂಪಭಾರತ'ದಲ್ಲಿ ಈ ಸಂದರ್ಭದಲ್ಲಿ ದುರ್ಯೋಧನನ ಕೋಪ, ಕಲಿತನಗಳು ಪ್ರಕಟವಾಗುವಂತೆ ಮಾಡಿರುವುದೂ ಈ ವ್ಯಾಖ್ಯಾನಕ್ಕೆ ಕಾರಣವಿರಬಹುದು. ಪಂಪನಲ್ಲಿರುವುದು ಇಲ್ಲಿಯೂ ಇದೆ ಎಂದು ಸಾಧಿಸುವುದಕ್ಕೆ ಕಾರಣವಾಗಬೇಕಿಲ್ಲ. ರನ್ನ ಈ ಸನ್ನಿವೇಶ ನಿರ್ಮಾಣದಲ್ಲಿ, ವಿವರದಲ್ಲಿ ಸ್ವಾತಂತ್ರ್ಯವಹಿಸಿದ್ದಾನೆ. ಭೀಮನ ಸಿಂಹನಾದದ ಬಗೆಯನ್ನು, ಪರಿಣಾಮವನ್ನು ರನ್ನನಂತೆ ಪಂಪ ವರ್ಣಿಸಿಲ್ಲ. 'ಕೋಪಾರುಣನೇತ್ರಂ' ಎಂಬ ಮಾತು ರನ್ನನ ಈ ಪದ್ಯದಲ್ಲಿರುವುದು ನಿಜ. ಈ

---

೧ 'ಗದಾಯುದ್ಧ'ದಲ್ಲಿ 'ಉಮ್ಮಳಿಸು' ಎಂಬ ಪದ ಐದು ಕಡೆಗಳಲ್ಲಿ ಪ್ರಯೋಗವಾಗಿರುವುದು ನನ್ನ ಗಮನಕ್ಕೆ ಬಂದಿದೆ (೬-೧೭ ಮತ್ತು ಅದರ ವಚನ, ೬-೩೫, ೭-೨೨, ೮-೪೦). ಈ ಎಲ್ಲ ಪ್ರಯೋಗಗಳೂ ತೀ. ನಂ. ಶ್ರೀಯವರ 'ಗದಾಯುದ್ಧ ಸಂಗ್ರಹ'ದಲ್ಲಿ ಇವೆ. ಆದರೂ ಅವರು ಆ ಪದಕ್ಕೆ ಎಲ್ಲಿಯೂ ಅರ್ಥ ಹೇಳಿಲ್ಲವೇಕೆ ಎಂಬುದು ಕುತೂಹಲಕರವಾದ ಅಂಶವಾಗಿದೆ.

ಕಾವ್ಯಸಂದರ್ಭದಲ್ಲಿ ದುರ್ಯೋಧನನು ಈ ಭೀಮ ಸಿಂಹನಾದಗೈವುದಕ್ಕಿಂತ ಮೊದಲಿನಿಂದಲೇ ಕೋಪಾರುಣನೇತ್ರನಾಗಿರುವುದಕ್ಕೆ ಕಾರಣಗಳಿವೆ. ಅರ್ಜುನ ನಕುಲ ಸಹದೇವರು ಮೂದಲಿಸಿದ್ದಾರೆ, ಭೀಮನಂತೂ 'ಮುಟ್ಟಿ ಮೂದಲಿಸಿ'ದ್ದಾನೆ. ಅವುಗಳನ್ನೆಲ್ಲ ದುರ್ಯೋಧನ ಕೇಳಿಸಿಕೊಂಡಿಲ್ಲ ಎಂಬಂತೆಯೂ ಇಲ್ಲ, ಕೇಳಿಸಿಕೊಂಡಿದ್ದೂ ದುರ್ಯೋಧನ ಶಾಂತನಾಗಿದ್ದನೆಂಬಂತೆಯೂ ಇಲ್ಲ. ಆದ್ದರಿಂದಲೇ ಕವಿ ''ಕೋಪಾರುಣ ನೇತ್ರಂ ಕೇಳ್ದು'' ಎಂದು ಹೇಳಿದ್ದಾನೆ. ಕೇಳಿದ ಮೇಲೆ ಕೋಪಾರುಣನೇತ್ರನಾದ ಎಂಬುದಕ್ಕಿಂತ ಕೋಪಾರುಣನೇತ್ರನಾಗಿದ್ದವನು ಕೇಳಿ ಎಂಬ ಅರ್ಥವೇ ಹೆಚ್ಚು ಸಮಂಜಸವಾಗುವಂತೆ ತೋರುತ್ತದೆ. 'ಆ ರವಮಂ....'' (೭-೨೨) ಎಂಬ ಪದ್ಯ ಮುಗಿದ ತತ್ ಕ್ಷಣವೇ ''ರಸೆಯಿಂ ಕಾಲಾಗ್ನಿರುದ್ರಂ ಪೊಱಮಡುವವೊಲ್...'' (೭-೩೦) ಎಂಬ ಪದ್ಯವೇನಾದರೂ ಪ್ರಾರಂಭವಾಗಿದ್ದುದಾದರೆ ಆಗ ವಿಮರ್ಶಕರ ಈವರೆಗಿನ ವ್ಯಾಖ್ಯಾನಕ್ಕೆ ಸ್ವಲ್ಪ ಹೆಚ್ಚಿನ ಪ್ರಮಾಣದ ಪೋಷಣೆ ಒದಗುತ್ತಿತ್ತೇನೊ! ಆದರೆ, ''ಆ ರವಮಂ...''ದ ಮುಂದಿನ ನಾಲ್ಕು ಪದ್ಯಗಳಲ್ಲಿ (೨೩ ರಿಂದ ೨೬) ದುರ್ಯೋಧನ ಆಲೋಚರಪರನಾಗಿರುವುದರ ವಿವರಣೆ ಬೇರೆ ಬಂದಿದೆ.

ದುರ್ಯೋಧನನಿಗೆ ಕವಿ ಕೇವಲ 'ಉರಗಪತಾಕ' ಎಂದಿದ್ದರೆ ಭೀಮನನ್ನು ಕುರಿತು ಹೇಳುವಾಗಲೂ ಆತನ ಧ್ವಜವನ್ನೇ ನಿರ್ದೇಶಿಸಿ 'ಮಹೋತ್ತುಂಗಸಿಂಹಕೇತನಂ' ಎಂದಿದ್ದಾನೆ. ಆದರೆ ಅಲ್ಲಿ ದುರ್ಯೋಧನನ ಸಂದರ್ಭದಲ್ಲಿ ಇಲ್ಲದ 'ಮಹೋತ್ತುಂಗ' ಎಂಬ ಮಾತಿನಲ್ಲಿ ಭೀಮಪರವಾದ ಪ್ರಶಂಸಾದನಿ ಇರುವುದನ್ನು ಗಮನಿಸಬೇಕು. ಜೊತೆಗೆ ಪಂಪನಲ್ಲಿ ಇದೇ ಸಂದರ್ಭದಲ್ಲಿ ದುರ್ಯೋಧನನ ಸಾಹಸಧನತೆಗೆ ಬರುವ ಹೊಳಪನ್ನು ಉಜ್ವಲಗೊಳಿಸುವುದು ಹೋಗಲಿ, ಅಲ್ಲಿರುವಷ್ಟನ್ನೂ ರನ್ನ ಉಳಿಸಿಕೊಂಡಿಲ್ಲ ಎಂಬುದನ್ನೂ 'ಗದಾಯುದ್ಧ' ಕಾವ್ಯದಲ್ಲಿ ಭೀಮನ ಸಿಂಹಧ್ವನಿಗೆ ಪಂಪನಲ್ಲಿಲ್ಲದಂಥ ಪ್ರತ್ಯೇಕ ಅಸ್ತಿತ್ವ ಮತ್ತು ಶಕ್ತಿಪರಿವೇಷವನ್ನು ರನ್ನ ನಿರ್ಮಿಸಿರುವುದನ್ನೂ ನೋಡಬೇಕು. **ಒಟ್ಟಿನಲ್ಲಿ, ಈ ಸಂದರ್ಭದಲ್ಲಿ ದುರ್ಯೋಧನನ ಸಾಹಸಧನತೆಯನ್ನು ಅಲ್ಲಗಳೆದಿಲ್ಲವಾದರೂ ಭೀಮನ ಸಿಂಹಧ್ವನಿಯ ಸಾಮರ್ಥ್ಯವನ್ನು ಉಜ್ಜ್ವಲೀಕರಿಸುವುದರತ್ತ, ಕೀರ್ತಿಸುವುದರತ್ತ ರನ್ನನ ಭಾವಪಕ್ಷಪಾತವಿರುವುದು ಸ್ಪಷ್ಟವಾಗಿದೆ.**

ಈ ಮೇಲಿನ ಎರಡು ಸಂದರ್ಭಗಳನ್ನೂ ದುರ್ಯೋಧನನ ಸರೋವರಪ್ರವೇಶದ ಸಂದರ್ಭದ ಹಿನ್ನೆಲೆಯಲ್ಲಿ ನೋಡಬೇಕು. ದುರ್ಯೋಧನ ಕೊಳವನ್ನು ಪ್ರವೇಶಿಸಿದ್ದು ತಾನಾಗಿ ಅಲ್ಲ, ಭೀಷ್ಮನ ಉಪದೇಶಕ್ಕೆ 'ಕಟ್ಟುಬಿದ್ದು'[೧] ಎಂದು ಅರ್ಥಮಾಡಿಕೊಂಡು ಹೊರಟ ವಿಮರ್ಶಕರು ಆತ ಕೊಳದಿಂದ ಹೊರಬರುವಾಗಿನ ಸಂದರ್ಭವನ್ನು ದುರ್ಯೋಧನ ಪರವಾಗಿ ಉದಾರವಾಗಿ ವ್ಯಾಖ್ಯಾನಿಸಿದ್ದರಲ್ಲಿ ಆಶ್ಚರ್ಯವೇನಿಲ್ಲ. ಆದರೆ ಕವಿಯ ದೃಷ್ಟಿ ಹಾಗಿದೆ ಎಂಬುದಕ್ಕೆ ಕಾವ್ಯಸಂದರ್ಭದಲ್ಲಿ ತಕ್ಕ ಆಧಾರ ಇಲ್ಲ. ಪಂಪನಲ್ಲಾದರೆ ಈ ವಿಮರ್ಶಕರು ಹಾಗೆ ಅರ್ಥಮಾಡುವುದಕ್ಕೆ ತಕ್ಕಮಟ್ಟಿಗೆ ಅವಕಾಶವುಂಟು. ಏಕೆಂದರೆ ಅಲ್ಲಿ ಭೀಷ್ಮ ಸರೋವರ ಪ್ರವೇಶಿಸುವಂತೆ ಉಪದೇಶ ಮಾಡಿದ ಮೊದಲ್ಗೊಂಡು ಕೊಳವನ್ನು ಪ್ರವೇಶ

---

೧ ನೋಡಿ: (ಅ) ರಂ. ಶ್ರೀ. ಮುಗಳಿ (೧೯೪೬), ರನ್ನನ ಕೃತಿರತ್ನ, ೧೯೬೮, ಪು. ೪. (ಆ) ಎಂ. ಆರ್. ಶ್ರೀನಿವಾಸಮೂರ್ತಿ (೧೯೨೮) 'ರನ್ನನ ಪ್ರಾಶಸ್ತ್ಯ' ರನ್ನಕವಿ ಪ್ರಶಸ್ತಿ, ಪು. ೧೮೯; (ಇ) ತೀ. ನಂ. ಶ್ರೀಕಂಠಯ್ಯ (೧೯೫೩), ಭಾರತೀಯ ಕಾವ್ಯಮೀಮಾಂಸೆ, ೧೯೭೩, ಪು. ೧೯೯. (ಈ) ರಾಶಂಪೂ (೧೯೬೯), 'ರನ್ನನ ದುರ್ಯೋಧನ', ಪ್ರಬುದ್ಧ ಕರ್ಣಾಟಕ, ಸಂಪುಟ ೫೧, ಸಂಚಿಕೆ ೩, ಪು. ೫೯.

ಮಾಡುವವರೆಗಿನ ದುರ್ಯೋಧನನ ಮೌನ ಹಾಗೆ ಊಹಿಸುವುದಕ್ಕೆ ಕಾರಣವಾಗಬಹುದು. ಆದರ ರನ್ನನಲ್ಲಿ ಆ ಊಹೆಗೆ ಅವಕಾಶವಿಲ್ಲ. ಭೀಷ್ಮರು ''ವೈಶಂಪಾಯನ ಸರೋವರಮಂ ಪೊಕ್ಕಿರ್ದು ಇಂದಿನಿರುಳಂ ಕಱಿದು ನೀಂ ನಾಳೆ ನೆಗೞ್ವುದಂ ನೆಗೞ್ವುದು'' ಎಂದು ಹೇಳಲು, ಸ್ವಲ್ಪವೂ ಬೇರೆ ಯಾವ ಬಗೆಯ ಮಾನಸಿಕ ಹೊಯ್ದಾಟಕ್ಕೂ ಒಳಗಾಗದೆ ''ಮಹಾಪ್ರಸಾದಮಿದನೊಡಂಬಟ್ಟೆನಂತೆಗೆಯ್ವೆನ್'' ಎಂದು ರನ್ನನ ದುರ್ಯೋಧನ ಹೇಳುತ್ತಾನೆ. ಮುಂದೆ ಅಲ್ಲಿಂದ ಹೊರಟ ದುರ್ಯೋಧನನಿಗಿರುವ ಚಿಂತೆ ಸರೋವರ ಪ್ರವೇಶಕ್ಕೆ ಸಂಬಂಧಪಟ್ಟಂಥದ್ದಲ್ಲವೇ ಅಲ್ಲ.

ಎರಡನೆಯದಾಗಿ, ಭೀಷ್ಮನ ಉಪದೇಶದಲ್ಲಿ 'ಪಿಂದು ಪೆಱಗಾಗಿ ಪುಗು' ಎಂಬ ಮಾತೂ ಇಲ್ಲ, ಆ ಸೂಚನೆಯೂ ಇಲ್ಲ. ಪಂಪನ ದುರ್ಯೋಧನ 'ಪಿಂದು ಪೆಱಗಾಗಿ' ಪ್ರವೇಶಿಸಿಯೂ ಇಲ್ಲ. ರನ್ನನ ದುರ್ಯೋಧನ ಮಾತ್ರ 'ಪಿಂದು ಪೆಱಗಾಗಿ' ಪ್ರವೇಶಿಸಿದ್ದಾನೆ. ಸ್ವತಃ ರನ್ನಕವಿಯೇ ಆ 'ದುರ್ನಯ'ವನ್ನು ತೀವ್ರವಾಗಿ ಖಂಡಿಸಿದ್ದಾನೆ (೬-೮, ೯). ಅಲ್ಲಿ 'ಪಿಂದು ಪೆಱಗಾಗಿ' ಪ್ರವೇಶಿಸಿದ್ದಕ್ಕೆ ''ಚೀಃ ಎಂದವನಂ ರಾಜ್ಯಲಕ್ಷ್ಮಿ ಪೇಸಿ ಬಿಸುಟ್ಟಳ್'' ಎಂದೂ ದುರ್ಯೋಧನನ ರಾಜ್ಯದ ಮತ್ತು ಆಯದ (ಪರಾಕ್ರಮದ) ಕುಂದನ್ನು (ಅದು) ತಿಳಿಸುವುದಿಲ್ಲವೆ-ಎಂದೂ ಕವಿ ಕೇಳಿದ್ದಾನೆ. ಮನಸ್ಸಿನ ಅಸ್ಥಿರ ಸ್ಥಿತಿಯಲ್ಲಿರುವ, ಉತ್ತಪ್ತ ಸ್ಥಿತಿಯಲ್ಲಿರುವ ದುರ್ಯೋಧನನ ನಡೆವಳಿಕೆಗಳಲ್ಲಿ ಪ್ರಕಟವಾಗುವ ಏರುಪೇರುಗಳನ್ನು ಕವಿ ಚಿತ್ರಿಸುವುದರ ಮೂಲಕ ಆತನ ಗುಣಾವಗುಣಗಳನ್ನು ಕಾವ್ಯದುದ್ದಕ್ಕೂ ತೋರಿಸುತ್ತ ಹೋಗಿದ್ದಾನೆ.[೧] **ಸರೋವರ ಪ್ರವೇಶ ಸಂದರ್ಭವೂ ಕವಿಯ ದೃಷ್ಟಿಯಲ್ಲಿ ದುರ್ಯೋಧನನ ಅವಗುಣವನ್ನು ಎತ್ತಿ ತೋರಿಸುವ ಸಂದರ್ಭಗಳಲ್ಲೊಂದಾಗಿದೆ.**

(ಇ) ಯುದ್ಧಭೂಮಿಯಲ್ಲಿ ದುರ್ಯೋಧನನು ಒಂದಾದ ಮೇಲೊಂದರಂತೆ ಹೆಣಗಳನ್ನು ಕಾಣುತ್ತ ಹೋಗುವ ಸಂದರ್ಭದಲ್ಲಿ ದುರ್ಯೋಧನನ ನಡೆನುಡಿಗಳಲ್ಲಿ ಪ್ರಕಟವಾಗುವ ಮಹಾನುಭಾವತ್ವವನ್ನು ವಿಮರ್ಶಕರು ಗುರುತಿಸಿದ್ದಾರೆ. ಅದರಲ್ಲೂ ದ್ರೋಣ, ಅಭಿಮನ್ಯು, ಕರ್ಣ ಇವರಿಗೆ ಸಂಬಂಧಪಟ್ಟ ಪ್ರಸಂಗಗಳನ್ನು ವಿಮರ್ಶಕರು ಮುಖ್ಯವಾಗಿ ಎತ್ತಿ ಹೇಳಿದ್ದಾರೆ.

## ದ್ರೋಣ ಪ್ರಸಂಗ

ಅಱಿಯೆಮೆ ಬಿಲ್ಲ ಜನ್ಮಣಕೆ ಗಾಂಡಿವಿಯಲ್ತು ಪಿನಾಕಪಾಣಿಯುಂ
ನೆಱಿಯನಿದಿರ್ಚಿ ನಿಮ್ಮೊಡನೆ ಕಾದಿ ಗಲಲ್ಕದು ನಿಮ್ಮುಪೇಕ್ಷೆಯಿಂ
ದಱಿಯೆನಿದನ್ನ ಕರ್ಮವಶಮೆಂದಱಿಯೆಂ ನಿಮಗಿಂತು ಸಾವುಮೇ
ತೆಱದಿನಕಾರಣಂ ನೆಱಿಯೆ ಸಂಭವಿಸಿರ್ದುದೊ ಕುಂಭಸಂಭವಾ ॥ (೪-೫೦)

....ಚಾಪಾಗಮಾಚಾರ್ಯರೊಳ್
ದೂರೆಯಾರಂಜಿನಮಣ್ಮಿ ಸತ್ತಳಪಿದೇಂ ದ್ರೋಣಂಗೆ ಮೈವತ್ತುದೋ ॥ (೪-೫೨)

ಎಂದು ಮುಂತಾಗಿ ದ್ರೋಣಾಚಾರ್ಯನ ಶವವನ್ನು ಕಂಡಾಗ ಅವನ ಅಪ್ರತಿಮವಾದ ಪರಾಕ್ರಮ ಮತ್ತು ಚಾಪಾಗಮಾಚಾರ್ಯತ್ವಗಳ ಹಿರಿಮೆಯನ್ನು ದುರ್ಯೋಧನ ಬಾಯ್ತುಂಬ ಹೊಗಳುತ್ತಾನೆ. ಆದರೆ, ಹಿಂದೆ ಇದೇ ಗುರುವನ್ನು ಕುರಿತು

---

೧ ಈ ಅಂಶವನ್ನು ರಂ. ಶ್ರೀ. ಮುಗಳಿಯವರು ತಮ್ಮ 'ರನ್ನನ ಕೃತಿರತ್ನ'ದಲ್ಲಿ ಗುರುತಿಸಿದ್ದಾರೆ.

ಪದುಳಂ ಕುಳ್ಳಿರ್ದೆಮಗಾ
ಯದ ಮಾತಂ ತಗುಳೆ ಗಱಿಪಿ ಪೋದಂ ಸಂದಿ
ರ್ದದಟರೊಳಿಱಿದಱಿಯಂ ತ
ಪ್ಪದೆ ಕಮ್ಮರಿಯೋಜನೆನಿಸಿದಂ ಬಿಲ್ಲೋಜಂ ॥ (೨-೧೩)

-ಎಂದು ಮುಂತಾಗಿ ನಿಂದೆಯ ಮಾತುಗಳನ್ನು ದುರ್ಯೋಧನ ಆಡಿದ್ದುಂಟು. ಆಗ "ದ್ರೋಣನನ್ನು ಕಟಕಿ ಮಾತಿನಿಂದ ಮೂದಲಿಸಿದ್ದು ಆ ಕ್ಷಣದ ಕ್ಷೋಭದ ಗುರುತು"[೧] ಎಂಬ ಮಾತು ನಿಜ. ಆದರೆ "ಅವನ ವಿಷಯಕ್ಕೆ ಇದ್ದು ಅತ್ಯಂತ ಆದರ ಭಾವವನ್ನು ಅದು ಕಳೆಯಲಾರದು".[೨] ಎಂಬ ಮಾತಿನಲ್ಲಿರುವ 'ಅತ್ಯಂತ' ಎಂಬುದಕ್ಕೆ 'ಗದಾಯುದ್ಧ' ಕಾವ್ಯಸಂದರ್ಭದಲ್ಲಿ ತಕ್ಕ ಸಮರ್ಥನೆಯಿಲ್ಲ. "ಎನ್ನನುಪೇಕ್ಷಿಸಿ ಕಾದಿದನಿನ್ನೀಗುರುಗೆಱಗೆ ನೆನ್ನದೆಱಗಿದನಡಿಯೊಳ್ ಪನ್ನಗಚಿಹ್ನಂ" ಎಂದು ಹೇಳುವುದರ ಮೂಲಕ ಕವಿ 'ಎನ್ನನುಪೇಕ್ಷಿಸಿದನೆಂ'ದು ದ್ರೋಣನನ್ನು ದುರ್ಯೋಧನನು ಈ ಹಿಂದೆ ನಿಂದಿಸಿದ್ದನ್ನು ಓದುಗನಿಗೆ ನೆನಪಿಸಿದ್ದಾನೆ. ಹಾಗಿರುವಾಗ, ದ್ರೋಣನ ವಿಷಯದಲ್ಲಿ ದುರ್ಯೋಧನನು 'ಅತ್ಯಂತ' ಅಥವಾ 'ಚಿರಸ್ಥಾಯಿ'ಯಾದ ಆದರಭಾವವಿದ್ದವನೆಂದು ಕವಿಗೆ ತಿಳಿಸುವುದಿದ್ದರೆ ತಾನು ಹಿಂದೆ 'ಕಳಶಯೋನಿ', 'ಪಂದೆ', 'ಷಂಡ' ಇತ್ಯಾದಿಯಾಗಿ ನೇರವಾಗಿಯೂ ಪರೋಕ್ಷವಾಗಿಯೂ ಗುರುನಿಂದೆ ಮಾಡಿದ್ದಕ್ಕಾಗಿ ಪಶ್ಚಾತ್ತಾಪದ ಒಂದು ಮಾತನ್ನಾದರೂ ದುರ್ಯೋಧನನಿಂದ ಈ ಸಂದರ್ಭದಲ್ಲಿ ಆಡಿಸಬೇಕಾದ ಅಗತ್ಯ ಕವಿಗೆ ಕಾಣಿಸುತ್ತಿತ್ತು.[೩] ದ್ರೋಣನ ಸಾವಿನಿಂದ ದುರ್ಯೋಧನನಿಗೆ ಪಶ್ಚಾತ್ತಾಪ, ದುಃಖ ಎರಡೂ ಆಗಿವೆ (ಪಂಪ ಭಾ. ೧೩-೫೬). 'ತ್ರಿಃಪ್ರದಕ್ಷಿಣೆಗೈದನೆ'ಬುದರಿಂದ ಆ ಕೊರತೆ ತುಂಬಿತು ಎಂಬಂತೆಯೂ ಇಲ್ಲ. ಏಕೆಂದರೆ ಮುಂದೆ ಗದಾಯುದ್ಧ ನಡೆಯುವ ಮೊದಲು ದುರ್ಯೋಧನ ಈ ಗುರುವನ್ನು ಸ್ಮರಿಸುವುದೂ ಇಲ್ಲ. (ಭೀಮ ಮನಸ್ಸಿನಲ್ಲೇ ದ್ರೋಣನಿಗೆ ನಮಸ್ಕಾರ ಮಾಡಿದ್ದಾನೆಂಬುದನ್ನು ನೆನೆಯಬೇಕು.) ಜೊತೆಗೆ ಮೂರನೆಯ ಆಶ್ವಾಸದ ೫೬ ಮತ್ತು ೬೧ನೆಯ ಪದ್ಯಗಳಲ್ಲಿ ದ್ರೋಣನನ್ನು ಕುರಿತಂತೆ ದುರ್ಯೋಧನ ನಿಂದೆಯ ಮಾತುಗಳನ್ನಾಡಿರುವುದನ್ನು ಇಲ್ಲಿ ನೆನೆಯಬಹುದಾಗಿದೆ. ಎರಡನೆಯದಾಗಿ, ದುರ್ಯೋಧನನ ಸಣ್ಣತನಗಳು ಪ್ರಕಟವಾದಲ್ಲೆಲ್ಲ ಸಾಮಾನ್ಯವಾಗಿ ಅದನ್ನು ಸಂಜಯ ಖಂಡಿಸುವಂತೆ ನಿರೂಪಿಸಿಕೊಂಡು ಬಂದ ಕವಿ ದುರ್ಯೋಧನನ ಸದ್ಗುಣಾಂಶ ಪ್ರಕಾಶಗೊಂಡ ಈ ಸಂದರ್ಭದಲ್ಲಿ ಆತನ ಜೊತೆಯಲ್ಲೇ ಇರುವ ಸಂಜಯನಿಂದ ಒಂದೇ ಒಂದು ಮೆಚ್ಚಿಕೆಯ ಮಾತನ್ನೂ ಆಡಿಸದೆ ಆತನನ್ನು ಮೌನವಾಗಿಯೇ ಉಳಿಸಿದ್ದಾನೆ. ಈ ಅಂಶಗಳನ್ನೆಲ್ಲಾ ನೋಡಿದಾಗ, ಇಲ್ಲಿ ಪ್ರಕಟವಾಗಿರುವ ದುರ್ಯೋಧನನ ಸದ್ಗುಣಾಂಶವವನ್ನೂ-ಉಳಿದ ಸಂದರ್ಭಗಳಲ್ಲಿ ಹೇಗೋ ಹಾಗೆ-ಏದರ ಪ್ರಕರ್ಷಸ್ಥಿತಿಯಲ್ಲಿ ಚಿತ್ರಿಸುವ ಆಸಕ್ತಿ ಕವಿಗೇ ಇದ್ದಂತೆ ತೋರುವುದಿಲ್ಲ.

**ಅಭಿಮನ್ಯು ಪ್ರಸಂಗ**

ದ್ರೋಣ ಪ್ರಸಂಗಕ್ಕಿಂತ ಹೆಚ್ಚು ಅಭಿಮನ್ಯುವಿನ ಪ್ರಸಂಗದ ದುರ್ಯೋಧನನ

೧ ರಂ. ಶ್ರೀ. ಮುಗಳಿ, (೧೯೪೬), ರನ್ನನ ಕೃತಿರತ್ನ, ೧೯೬೭ ಪು. ೮೫.

೨ ಅದೇ.

೩ ಈ ಅಂಶವನ್ನು ಗಮನಿಸಿಯೆ ಬಿ. ಎಂ. ಶ್ರೀ. ಯವರು 'ಗದಾಯುದ್ಧ ನಾಟಕ'ದಲ್ಲಿ 'ಆಚಾರ್ಯ, ಕೋಪದೊಳ್ ದೂಷಿಸಿದೆಂ' ಎಂದು ದುರ್ಯೋಧನನಿಂದ ಹೇಳಿಸಿರಬೇಕೆಂದು ಊಹಿಸಬಹುದು.

ನಡೆನುಡಿಗಳಲ್ಲಿ ಪ್ರಕಟವಾಗುವ ಮಹಾನುಭಾವತೆಯನ್ನು ಅನೇಕ ವಿಮರ್ಶಕರು ಕೊಂಡಾಡಿದ್ದಾರೆ.[೧] ಅಭಿಮನ್ಯುವಿನ ಶವವನ್ನು ಕಂಡಾಗ ದುರ್ಯೋಧನ,

ಅಸಮಬಲ ಭವದ್ವಿಕ್ರಮ
ಮಸಂಭವಂ ಪೆಱರ್ಗೆ ನಿನ್ನನಾನಿನಿತಂ ಪ್ರಾ
ರ್ಥಿಸುವೆನಭಿಮನ್ಯು ನಿಜ ಸಾ
ಹಸೈಕದೇಶಾನುಮರಣಮಮಗಕ್ಕೆ ಗಡಾ ॥ (೪-೫೭)

-ಎಂದು ಅಭಿಮನ್ಯುವಿನ ಸಾಹಸವನ್ನು ಮೆಚ್ಚುವುದಲ್ಲದೆ ತನಗೂ ಸಾಹಸದ ಮರಣವನ್ನು ಹಾರೈಸಿ ಆತ ಕಿರಿಯವ, ಪುತ್ರಸಮಾನ, ವೈರಿಯ ಮಗ, ತನ್ನ ಮಗನನ್ನೇ ಕೊಂದವ ಈ ಯಾವೊಂದನ್ನೂ ಮನಸ್ಸಿಗೆ ತಂದುಕೊಳ್ಳದೆ ಆತನ ಸಾಹಸಧನತೆಯೊಂದನ್ನೇ ಭಾವಿಸಿ ಆತನಿಗೆ ಕೈಮುಗಿಯುವ ದುರ್ಯೋಧನನ ದೊಡ್ಡಸ್ತಿಕೆಯನ್ನು ಪ್ರಕಾಶಪಡಿಸುವ ಈ ಸಂದರ್ಭಸೃಷ್ಟಿಯಲ್ಲಿ ರನ್ನನ ಸ್ವೋಪಜ್ಞತೆ ಕಾಣುತ್ತದೆ. ವ್ಯಾಸಭಾರತ ಪಂಪಭಾರತಗಳಲ್ಲಿ ಇಲ್ಲದಂಥ ಈ ಸನ್ನಿವೇಶ ನಿರ್ಮಾಣಕ್ಕೆ ಸೂಚನೆ 'ವೇಣೀಸಂಹಾರ' 'ಊರುಭಂಗ'ಗಳಿಂದ ದೊರೆತಿರಬಹುದೆಂದು ಊಹಿಸಲಾಗಿದೆ.[೨] 'ಊರುಭಂಗ'ದಿಂದ ಸೂಚನೆ ಪಡೆದಿದ್ದೇನಾದರೂ ನಿಜವಾಗಿದ್ದ ಪಕ್ಷದಲ್ಲಿ ರನ್ನ ಈ ಸಂದರ್ಭದ ದುರ್ಯೋಧನನ ದೊಡ್ಡಸ್ತಿಕೆಗೆ ಇನ್ನೂ ಹೆಚ್ಚಿನ ಮೆರುಗು ಕೊಡುವ ಅವಕಾಶವನ್ನು ಬಳಸಿಕೊಂಡಿಲ್ಲವೆಂದೇ ಹೇಳಬೇಕಾಗುತ್ತದೆ. 'ಊರುಭಂಗ'ದಲ್ಲಿ ತಾನು ಪಾಂಡವರಿಗೆ ಮಾಡಿದ ಅನ್ಯಾಯಗಳ ಪಟ್ಟಿಯಲ್ಲಿ ಮೂರನ್ನು ಮಾತ್ರ ಹೇಳುವಾಗ "ಬಾಲನಾದರೂ ಕುಮಾರ ಅಭಿಮನ್ಯುವನ್ನು ರಣರಂಗದಲ್ಲಿ ಕೊಲ್ಲಿಸಿದೆ"[೩] ಎಂದು ದುರ್ಯೋಧನ ಹೇಳುತ್ತಾನೆ. ಮುಂದೆ ತಾನು ಸಾಯುವ ಸಂದರ್ಭದಲ್ಲಿ ಹಲವರಿಯುತ್ತಿರುವಾಗಲೂ "ಓ ಇತ್ತ ಐರಾವತದ ಅಂಬಾರಿಯ ಮೇಲೆ ಇಂದ್ರನೊಡನೆ ಕುಳಿತ ಎಳೆಗೂದಲಿನ ಬಾಲಕ ಅಭಿಮನ್ಯು ನನ್ನನ್ನು ಕೋಪದಿಂದ ನುಡಿಸುತ್ತಿದ್ದಾನೆ"[೪] ಎಂದೂ ದುರ್ಯೋಧನ ಅಲ್ಲಿ ಹೇಳಿದ್ದಾನೆ. ಆದರೆ, ಅಭಿಮನ್ಯುವಿನ ಸಾಹಸಧನತೆಯನ್ನು ಮೆಚ್ಚುವ ರನ್ನನ

---

೧ (ಅ) ಎ. ಆರ್. ಕೃಷ್ಣಶಾಸ್ತ್ರೀ (೧೯೨೮), 'ರನ್ನನ ರಸ ಪ್ರತಿಪಾದನೆ', ರನ್ನಕವಿ ಪ್ರಶಸ್ತಿ, ಪು. ೨೩೪; (ಆ) ತಿರುಮಲೆ ಶ್ರೀನಿವಾಸಾಚಾರ್ಯ (೧೯೨೮), 'ಗದಾಯುದ್ಧದ ನಾಯಕನನ್ನು ಕುರಿತು', ರನ್ನಕವಿ ಪ್ರಶಸ್ತಿ, ಪು. ೧೨೫-೨೬; (ಇ) ತೀ. ನಂ. ಶ್ರೀಕಂಠಯ್ಯ (೧೯೨೮), 'ಗದಾಯುದ್ಧವೂ ಸ್ವೀಕರಣ ವಿಚಾರವೂ', ರನ್ನ ಕವಿ ಪ್ರಶಸ್ತಿ, ಪು. ೯೭; (ಈ) ಎಂ. ಆರ್. ಶ್ರೀನಿವಾಸಮೂರ್ತಿ (೧೯೨೮) 'ರನನ್ನ ಪ್ರಾಶಸ್ತ್ಯ', ರನ್ನಕವಿ ಪ್ರಶಸ್ತಿ, ಪು. ೧೮೫-೮೬; (ಉ) ರಂ. ಶ್ರೀ. ಮುಗಳಿ (೧೯೪೬). ರನ್ನನ ಕೃತಿರತ್ನ, ೧೯೬೮, ಪು. ೧೨; (ಊ) ಎಂ. ಜಿ. ವೆಂಕಟೇಶಯ್ಯ (೧೯೭೩), 'ಗದಾಯುದ್ಧಂ', ರನ್ನ, ಐ. ಬಿ. ಎಚ್., ಪು. ೭೬; (ಋ) ಕೆ. ಎಲ್. ಗೋಪಾಲಕೃಷ್ಣಯ್ಯ (೧೯೭೫), 'ಗದಾಯುದ್ಧದ ಪಾತ್ರಗಳು', ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಸಂಪುಟ-೨, ಪು. ೧೬೪.; (ೠ) ಜಿ. ಬ್ರಹ್ಮಪ್ಪ (೧೯೭೪), ರನ್ನ ಕವಿ, ಪು. ೧೮೫.

೨ (ಅ) ರಂ. ಶ್ರೀ. ಮುಗಳಿ (೧೯೪೬), ರನ್ನನ ಕೃತಿರತ್ನ, ೧೯೬೮, ಪು. ೧೧-೧೨. (ಆ) ಸಿ. ಪಿ. ಕೆ. (೧೯೭೫), 'ಕನ್ನಡ ಸಾಹಿತ್ಯದ ಮೇಲೆ ಸಂಸ್ಕೃತ ನಾಟಕಗಳ ಪ್ರಭಾವ', ಕಬ್ಬಿನ ಹಾಲು. ಪು. ೧೬೩.

೩ ನೋಡಿ: ಕೆ. ಕೃಷ್ಣಮೂರ್ತಿ (೧೯೭೧), 'ಊರುಭಂಗ' ಭಾಸನ ಏಕಾಂಕ ನಾಟಕಗಳು (ಅನು), ಪು. ೩೦.

೪ ಅದೇ. ಪು. ೩೧.

ದುರ್ಯೋಧನ ಅಂಥವನನ್ನು ತಾನು ಕೊಲ್ಲಿಸಿದೆನಲ್ಲಾ ಎಂದಾಗಲಿ, ಅನ್ಯಾಯದಿಂದ ಕೊಂದವಲ್ಲಾ ಎಂದಾಗಲಿ ಪಶ್ಚಾತ್ತಾಪದ ಒಂದು ಮಾತನ್ನೂ ಆಡುವುದಿಲ್ಲ.[೧] ತಮಗೆ ವಂದ್ಯರಾರೆಂದು ಹೇಳುವಾಗ ದುರ್ಯೋಧನ ''ರಣಕ್ಕೆ ಶುಚಿತ್ವಮನಪ್ಪುಕೆಯ್ವ ಮಾನಸಿಕೆ''ಯನ್ನು ಹೆಸರಿಸಿದ್ದಾನೆ. ಅಂಥವರಲ್ಲಿ ಅಭಿಮನ್ಯುವೂ ಒಬ್ಬನೆಂದಿದ್ದಾನೆ. ಆ 'ರಣಶುಚಿತ್ವ'ವನ್ನು ತಮ್ಮ ಕಡೆಯವರು ಅಭಿಮನ್ಯುವಿನ ವಿಷಯದಲ್ಲಿ ತೋರಿಸಲಿಲ್ಲವಲ್ಲಾ ಎಂದು ಮುಂತಾಗಿ ಆಲೋಚಿಸುವುದಕ್ಕೆ ಪ್ರೇರಕವಾಗಬಹುದಾದ ಮಾತು ಅದು. ರನ್ನ ಅದನ್ನು ಅಲ್ಲಿಗೇ ಬಿಟ್ಟುಬಿಟ್ಟದ್ದಾನೆ.

ಎರಡನೆಯದಾಗಿ, ಅಭಿಮನ್ಯುವಿನ ಸಾವಿಗಾಗಿ ಮರುಗುವ ಒಂದು ಮಾತೂ ಇಲ್ಲಿ ಇಲ್ಲ.

ಮೂರನೆಯದಾಗಿ, ಈ ಸಂದರ್ಭದಲ್ಲಿ ಮುಖ್ಯವಾದ ೪, ೫೫, ೫೬, ೫೭ ಈ ಪದ್ಯಗಳನ್ನು ''ಆತ್ಮಗತದೊಳೆ ಬಗೆದು'' ಎಂದು ಕವಿ ಹೇಳಿದ್ದಾನೆ. ಅವನ ಜೊತೆಯಲ್ಲಿಯೇ ಇರುವ ಸಂಜಯನಿಗೆ ಈ ಮಾತು ಕೇಳಿಸಿಲ್ಲವೆಂದಾಯ್ತು. ಸರಿ. ಆದರೆ, ಮುಂದಿನ ೫೮, ೫೯, ೬೦ನೆಯ ಪದ್ಯದಲ್ಲಿ ಅಭಿಮನ್ಯುವಿನ ಶವಕ್ಕೆ ದುರ್ಯೋಧನ 'ಕಯ್ಮುಗಿದ'ನೆಂದಿದೆ. ದುರ್ಯೋಧನನ ವೀರೋದಾತ್ತತೆಗೆ ಇದೊಂದು ಅಪೂರ್ವ ನಿದರ್ಶನ. ಆದರೂ ಕವಿ ಸಂಜಯನಿಂದ ಒಂದು ಮೆಚ್ಚಿಕೆಯ ಮಾತನ್ನೂ ಆ ಬಗ್ಗೆ ಆಡಿಸದೆ ಆತನನ್ನು ಮೌನವಾಗಿಯೇ ಇರಿಸುವುದನ್ನು ಗಮನಿಸಬೇಕು. ಅದನ್ನು ಕೀರ್ತಿಸುವ ಉತ್ಸಾಹ ಕವಿಗೆ ಇಲ್ಲದಿರುವುದೇ ಅದಕ್ಕೆ ಕಾರಣ. ದುರ್ಯೋಧನನ ಸದ್ಗುಣಾಂಶವೊಂದನ್ನು ಪ್ರಕಾಶಪಡಿಸುವುದಕ್ಕಾಗಿಯೇ ಸ್ವಂತವಾಗಿ ಸೃಷ್ಟಿಸಿರುವ ಈ ಸನ್ನಿವೇಶದಲ್ಲಿ ಆ ಸದ್ಗುಣಾಂಶವನ್ನು ಇನ್ನೂ ಉಜ್ಜ್ವಲಗೊಳಿಸಬಹುದಾದ, ಪ್ರಕರ್ಷಸ್ಥಿತಿಗೆ ಒಯ್ಯಬಹುದಾದ ಅವಕಾಶವನ್ನು ಕವಿ ಬಳಸಿಕೊಳ್ಳದೆ ಬಿಟ್ಟಿದ್ದಾನೆ. ಅಭಿಮನ್ಯುವಿನ ಸಾಹಸಧನತೆಯನ್ನು ಮೆಚ್ಚುವ ದುರ್ಯೋಧನನ ವೀರೋದಾತ್ತತೆಯನ್ನು, ಪಾಂಡವರ ಪರಾಕ್ರಮವನ್ನು ಸಂಜಯನ ಎದುರಿನಲ್ಲಿ ಅಲ್ಲಗಳೆಯುವಾಗ, ಇಂದ್ರ ಕೃಷ್ಣ ಹನುಮಂತ ರುದ್ರ-ಇವರನ್ನು ನಿರಾಕರಿಸುವಾಗ ತೋರಿಧ ಆತನ ಕೀಳುರುಚಿಯ ಹಿನ್ನೆಲೆಯಿಂದ ನೋಡಬೇಕು. ಕವಿಯು ಭಾವಸ್ಥಿರತೆಯಿಲ್ಲದ ದುರ್ಯೋಧನನ ಮನಃಸ್ಥಿತಿಯನ್ನೂ ಈ ಸಂದರ್ಭದ ಮೂಲಕ ಸೂಚಿಸುತ್ತಿದ್ದಾನೆಂದು ತೋರುತ್ತದೆ.

### ಕರ್ಣ ಪ್ರಸಂಗ

ಕರ್ಣನ ಶವವನ್ನು ಕಂಡಾಗಿನ ದುರ್ಯೋಧನನ ಅತಿಶಯವಾದ ವಿಲಾಪದ ಸಂದರ್ಭದಲ್ಲಿ ಬರುವ ''ಆನಱಿವೆಂ ಪೃಥೆಯಱಿವಳ್....'' (೫-೧೮) ಪದ್ಯದಲ್ಲಿ ಕರ್ಣ ಯಾರೆಂಬುದು ತನಗೆ ಗೊತ್ತಿತ್ತೆಂದು ದುರ್ಯೋಧನ ಹೇಳುವುದಲ್ಲದೆ, ಮುಂದೆ,

ಒಡವುಟ್ಟಿದನೆಂದಱಿದೊಡೆ
ಕುಡುಗುಂ ರಾಜ್ಯಮನೆ ಧರ್ಮತನಯಂ ನಿನಗಾಂ
ಕುಡಲಾರ್ತೆನಿಲ್ಲ ರಾಜ್ಯ
ಕ್ಕೊಡೆಯನನಱಿಯುತ್ತುಮಿರ್ದೆನಂಗಾಧಿಪತೀ ॥ (೫-೧೯)

೧ ದ. ರಾ. ಬೇಂದ್ರೆ, (೧೯೭೪), 'ರನ್ನ ಕವಿ ಪ್ರಶಸ್ತಿ', ಸಾಹಿತ್ಯದ ವಿರಾಟ್ ಸ್ವರೂಪ, ಪು. ೩೮೮.

-ಎಂದೂ ಹೇಳುವುದರಿಂದ ಆತನ ಮಿತ್ರಪ್ರೇಮದಲ್ಲಿದ್ದ ಕೊರತೆಯ ಕಡೆ ಕವಿ ಪರೋಕ್ಷವಾಗಿ ನಮ್ಮ ಗಮನ ಸೆಳೆದಂತಾಗಿದೆ. 'ರಾಜ್ಯಕ್ಕೊಡೆಯನನಱಿಯುತ್ತು ಮಿರ್ದೆಂ' ಎಂಬುದಕ್ಕೆ ''ರಾಜ್ಯವನ್ನು ನಿನಗೆ ಕೈಯೆತ್ತಿಕೊಡದಿದ್ದರೂ, ಮನಸ್ಸಿನಲ್ಲೇನೋ, ನೀನೇ ಅದರ ಒಡೆಯನೆಂದೂ (ನಾನು ನಿನ್ನ ಪರವಾಗಿ ಆಳುವವನೆಂದೂ) ನಾನು ಚೆನ್ನಾಗಿ ತಿಳಿದುಕೊಂಡಿದ್ದೆ'' ಎಂದು ವಿದ್ವಾಂಸರೊಬ್ಬರು[1] ಮಾಡಿರುವ ವ್ಯಾಖ್ಯಾನವನ್ನು ಒಪ್ಪುವುದು ಕಷ್ಟ.

ಎರಡನೆಯದಾಗಿ, ಧರ್ಮರಾಯನನ್ನು ಈ ಹಿಂದೆ ತೆಗಳಿದ (೩-೨೩ರಿಂದ ೨೬, ೩೨) ದುರ್ಯೋಧನ ಇಲ್ಲಿ ಪರೋಕ್ಷವಾಗಿ ಆತನನ್ನು ಹೊಗಳುತ್ತಿರುವುದನ್ನು ಗಮನಿಸಬೇಕು. ಹಾಗೆಯೇ ಮುಂದಿನ ಪದ್ಯ (೫-೨೧)ದಲ್ಲಿಯೂ ಹಿಂದೆ ತಾನೇ ತೆಗಳಿದ ಅರ್ಜುನನ ಪರಾಕ್ರಮವನ್ನು ಪರೋಕ್ಷವಾಗಿ ಹೊಗಳುತ್ತಿರುವುದನ್ನೂ ಗಮನಿಸಬೇಕು. ದುರ್ಯೋಧನನ ಮನಸ್ಸಿನ ಅಸ್ಥಿರ ಸ್ಥಿತಿಯನ್ನು ಇವು ಸೂಚಿಸುತ್ತಿರುವಂತಿವೆ.

ಮೂರನೆಯದಾಗಿ,

ಪರಶುಧರಂ ಚಕ್ರಧರಂ
ಸುರಪತಿ ಭೂಕಾಂತೆ ಕೊಂತಿಯೆಂದೀ ಪೇಱ್ವ
ಯ್ವರೆ ಕೂಡಿ ನಿನ್ನ ಕೊಂದರ್
ನರನೊರ್ವನೆ ಕೊಂದನಲ್ಲನಂಗಾಧಿಪತೀ ॥ (೫-೨೬)

-ಎಂದು ದುರ್ಯೋಧನ ಹೇಳುವಲ್ಲಿ ದುರ್ಯೋಧನನ ಸಣ್ಣತನವೇ ಪ್ರಕಟವಾಗಿದೆ. ತನಗೆ ಕರ್ಣನ ಹುಟ್ಟಿನ ಸಂಗತಿ ಗೊತ್ತಿದ್ದೂ ಸುಮ್ಮನುಳಿದು ಆತನನ್ನು ವಂಚಿಸಿದ ತನ್ನನ್ನೂ ಇಲ್ಲಿ ಸೇರಿಸಿಕೊಳ್ಳದೆ ಇತರರನ್ನು ಮಾತ್ರ ಆಕ್ಷೇಪಿಸುವ ದುರ್ಯೋಧನನಲ್ಲಿ ಮಹಾನುಭಾವತೆ ಕಾಣುತ್ತದೆ ಎನ್ನುವಂತಿಲ್ಲ. ಕರ್ಣನ ಶವದೆದುರಿಗಿನ ದುರ್ಯೋಧನನ ದುಃಖದಲ್ಲಿ ತೀವ್ರತೆಯಿದೆ, ಪ್ರಾಮಾಣಿಕತೆಯಿದೆ. ಆದರೆ ಆತನ ಮಿತ್ರಪ್ರೇಮ ಪ್ರಕರ್ಷಸ್ಥಿತಿಯಲ್ಲಿ ಪ್ರಕಟಗೊಳ್ಳದಂತೆ ಆಗಿರುವುದಕ್ಕೆ ಮೇಲೆ ಹೇಳಿದ ಅಂಶಗಳು ಕಾರಣಗಳಾಗಿವೆ.

೪) ಕೊನೆಯದಾಗಿ, ಭೀಷ್ಮ ಬಲರಾಮರು ದುರ್ಯೋಧನನನ್ನು ಹೊಗಳಿದ್ದನ್ನೂ ಕೃಷ್ಣನು ದುರ್ಯೋಧನನು 'ಎರಳಟ್ಟುಡಿಯಂ' ಎಂದುದನ್ನೂ ಎತ್ತಿ ತೋರಿಸಿ ದುರ್ಯೋಧನನ ಘನತೆಯನ್ನು ಅವು ಸಾರುತ್ತವೆಯೆಂದು ವಿಮರ್ಶಕರು ಪ್ರತಿಪಾದಿಸಿದ್ದಾರೆ. ಭೀಷ್ಮನು ದುರ್ಯೋಧನನ ''ಸತ್ತ್ವಕ್ಕಂ ತದೇಕಾಂಗಸಾಹಸಕಂ ವಿಸ್ಮಯಮುತ್ತು ಮೆಚ್ಚಿಪೊಗೞ್ದಿಂ'' (೬-೫), ''ಗಂಡನೀ ಪರಿಯೊಳ್ ಮೆಯ್ಗಲಿಯಾವನೆಂದು ಪೊಗೞ್ದಿಂ'' (೬-೬) ಎಂದೂ ಕವಿ ಹೇಳಿದ್ದಾನೆ. ಆದರೆ ಕವಿ ''ಅಂತು ಗಾಂಗೇಯಂ ಮನದೊಳ್ ಪೊಗೞ್ದು'' ಎಂದು ಹೇಳಿರುವುದನ್ನೂ ಗಮನಿಸಬೇಕು. ಜೊತೆಗೆ, ಅದೇ ಭೀಷ್ಮನು ದುರ್ಯೋಧನನನ್ನು ಹೊಗಳುವುದಕ್ಕಿಂತ ಮೊದಲೇ ದುರ್ಯೋಧನ ಅವನಲ್ಲಿಗೆ ಬಂದಿದ್ದಾಗಲೇ ಭೀಮನನ್ನು ಇನ್ನೂ ಅತಿಶಯವಾಗಿ ''ಮನದೊಳ್ ಪೊಗೞ್ದ'' ಸಂಗತಿಯನ್ನೂ ಕವಿ ನಿರೂಪಿಸಿದ್ದಾನೆ. (೫-೫೮ ಮತ್ತು ೬-೧), ಹೀಗೆ ಭೀಷ್ಮ ಇಲ್ಲಿ ಇಬ್ಬರನ್ನೂ ಹೊಗಳಿರುವುದರಿಂದ ಭೀಮನಿಗಿಲ್ಲದ ವಿಶೇಷತೆಯನ್ನು ದುರ್ಯೋಧನನಿಗೆ ವಿಮರ್ಶಕರು ಕೊಡುವುದಕ್ಕೆ ತಕ್ಕ ಕಾರಣ ಕಾಣುವುದಿಲ್ಲ.

೧ ತೀ. ನಂ. ಶ್ರೀಕಂಠಯ್ಯ(೧೯೪೯), 'ಟಿಪ್ಪಣಿಗಳು', ಗದಾಯುದ್ಧಸಂಗ್ರಹ, ೧೯೭೨, ಪು. ೧೪೬.

ಬಲರಾಮನು ಯುದ್ಧ ಭೂಮಿಗೆ ಬಂದವನೆ ಕೃಷ್ಣನೊಡನೆ ''ಕೌರವಕುಲಚೂಡಾಮಣಿಯೊಳೇನನಾಲೋಚಿಸಿದಯ್'' ಎಂದು ಕೇಳಿದಾಗ ಕೃಷ್ಣ ಅದಕ್ಕೆ ಉತ್ತರ ನೀಡುವ ಸಂದರ್ಭದಲ್ಲಿ ''...ನೀವಿದಂ ಸುಯೋಧನನನೆ ಕೇಳಿ ನಂಬುವುದೆರಬ್ಬುಡಿಯಂ ಫಣಿರಾಜಕೇತನಂ'' ಎಂದದ್ದನ್ನು ಉದಾಹರಿಸಿ ದುರ್ಯೋಧನನು 'ಸತ್ಯವ್ರತ' ಎಂದು ವ್ಯಾಖ್ಯಾನಿಸಹೊರಟವರಿದ್ದಾರೆ.[1] ಆ ಸಂದರ್ಭದಲ್ಲಿ ''ಏಕೆ ಮುನಿವಿರ್ ನಿರ್ದೋಷಿಗಳ್ ಪಾಂಡುನಂದನರ್'' ಎಂದು ದುರ್ಯೋಧನ ಹೇಳಿದ ಮಾತಿಗೆ ''ಶತ್ರುಪಕ್ಷದವರನ್ನು ನಿರ್ದೋಷಿಗಳೆನ್ನುವುದು ಮಹಾಪುರುಷರಿಗಲ್ಲದೆ ಇತರರಿಗೆ ಸಾಧ್ಯವಿಲ್ಲ'' ಎಂದು ವ್ಯಾಖ್ಯಾನಿಸಲಾಗಿದೆ.[2] ಆದರೆ ಕೃಷ್ಣನ ಮಾತಿನಲ್ಲಿ ವ್ಯಂಗ್ಯದ ಛಾಯೆ ಇದೆಯೆಂಬುದು ೭-೪೭, ೪೭ವ., ೪೮, ೪೯ನೆಯ ಪದ್ಯಗಳ ಹಿನ್ನೆಲೆಯಲ್ಲಿ ನೋಡಿದಾಗ ಸ್ಪಷ್ಟವಾಗುತ್ತದೆ. ಕೃಷ್ಣ ದುರ್ಯೋಧನನನ್ನು ಎಂಥ ಇಕ್ಕಟ್ಟಿಗೆ ಸಿಕ್ಕಿಸಿದ್ದಾನೆಂಬುದು ಅರ್ಥವಾಗುತ್ತದೆ. ಆ ಹಿನ್ನೆಲೆಯನ್ನು ಅರಿಯದ ಬಲರಾಮ ''ಮನದೊಳ್ ಪೊಗಟ್ದಿ''ನೆಂಬುದಕ್ಕೆ ಹೆಚ್ಚಿನ ಮಹತ್ತ್ವ ಬರುವುದಿಲ್ಲ. ಆದರೂ ದುರ್ಯೋಧನ ಈ ಸಂದರ್ಭದಲ್ಲಿ ತನ್ನ ಸ್ವಾಭಿಮಾನವನ್ನು ಬಿಡಲಿಲ್ಲವೆಂಬುದು ಮೆಚ್ಚತಕ್ಕ ಅಂಶವಾಗಿದೆ.

ದುರ್ಯೋಧನನ ಮಹಾನುಭಾವತೆ ಪ್ರಕಟವಾಗುವಂತಿರುವ ಸನ್ನಿವೇಶಗಳನ್ನು ಕುರಿತ ಈವರೆಗಿನ ನನ್ನ ವಿಮರ್ಶೆಯಲ್ಲಿ ಇತರ ಕೆಲವು ಅಂಶಗಳ ಜೊತೆಗೆ ಬಹುಮುಖ್ಯವಾದ ಈ ಕೆಳಗಿನ ಎರಡು ಅಂಶಗಳು ಸ್ಪಷ್ಟವಾಗಿರಬಹುದು:

೧) 'ಗದಾಯುದ್ಧ' ಕಾವ್ಯದಲ್ಲಿ ದುರ್ಯೋಧನನ ನಡೆನುಡಿಗಳಲ್ಲಿ ಪ್ರಕಟವಾಗುವ ಉದಾತ್ತ ಮತ್ತು ಅನುದಾತ್ತ ಪ್ರಸಂಗಗಳು ಸಾಮಾನ್ಯವಾಗಿ ದುರ್ಯೋಧನನ ಸ್ಥಿರ ಭಾವದ್ಯೋತಕಗಳಾಗಿರದೆ ಮನಸ್ಸಿನ ಅಸ್ಥಿರಸ್ಥಿತಿಯಲ್ಲಿ ಕಾಣಿಸಿಕೊಳ್ಳುವ ಆತನ ವ್ಯಕ್ತಿತ್ವದ ದ್ವಿಧಾವೃತ್ತಿಯ ಅಭಿವ್ಯಕ್ತಿಗಳಾಗಿವೆ.

೨) ದುರ್ಯೋಧನನ ಮಹಾನುಭಾವತೆ ಪ್ರಕಟವಾಗುವಂಥ ಸನ್ನಿವೇಶ ನಿರ್ಮಾಣದ ಸಂದರ್ಭದಲ್ಲಿ ಕವಿ ಮುಕ್ತಮನಸ್ಸಿನಿಂದ ತೊಡಗದೆ ಅರೆಮನಸ್ಸಿನಿಂದ ವ್ಯವಹರಿಸುತ್ತಿರುವಂತೆ ತೋರುತ್ತದೆ. ಆದ್ದರಿಂದ ಅಂಥ ಬಹಳಷ್ಟು ಸಂದರ್ಭಗಳಲ್ಲಿ ವಿಮರ್ಶಕರ ದುರ್ಯೋಧನಪರವಾದ ಉದಾರವ್ಯಾಖ್ಯಾನವಾಗಲಿ, ಆ ವ್ಯಾಖ್ಯಾನವನ್ನು ವಿರೋಧಿಸಲೆಂದೇ ಹೊರಟಂತಿರುವ ವ್ಯಾಖ್ಯಾನವಾಗಲಿ ಸಮಂಜಸವಾಗುವುದಿಲ್ಲ.

*ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ, ೩, ೧೯೭೬*
*ನಿಜದನಿ, ೧೯೮೮, ಪು. ೨೦-೩೮*

---

೧ ಸಿ. ಕೆ. ವೆಂಕಟರಾಮಯ್ಯ (೧೯೨೮). 'ಗದಾಯುದ್ಧ ಕಾವ್ಯದಲ್ಲಿ ರನ್ನನು ತೋರಿಸಿರುವ ಪಾತ್ರ ರಚನಾಕೌಶಲ', ರನ್ನಕವಿ ಪ್ರಶಸ್ತಿ, ಪು. ೧೪೮.

೨ ಅದೇ ಪು. ೧೪೮.

# ೫೪. ಬಸವಣ್ಣನವರ ಷಟ್ಸ್ಥಲವಚನಗಳ ಸಂಪಾದನೆ

● ಶಿ. ಶಿ. ಬಸವನಾಳ

೧

ಪ್ರಾಚೀನ ಸಾಹಿತ್ಯದ ಸಂಪಾದನ ಕಾರ್ಯದಲ್ಲಿ ತೊಡಕುಗಳೆಷ್ಟಿವೆ ಎಂಬುದು ಆ ಕ್ಷೇತ್ರದಲ್ಲಿ ದುಡಿದವರಿಗೆಲ್ಲ ಅನುಭವಕ್ಕೆ ಬಂದ ಸಂಗತಿಯಾಗಿದೆ. ಮುದ್ರಣಗೋಸುಗ ಪರಿಷ್ಕೃತ ಪ್ರತಿಯನ್ನು ಸಿದ್ಧಪಡಿಸುವುದಕ್ಕೆ ಆಯಾ ಕೃತಿಯ ಕೈಬರಹದ ಪ್ರತಿಗಳು ಆವಶ್ಯಕ. ಆದರೆ ಅಂತಹ ಕೈಬರಹದ ಪ್ರತಿಗಳು ಗ್ರಂಥಕರ್ತರಿಂದಲೆ ಬರೆದುವು ದುರ್ಲಭವಾದುದರಿಂದ ಇತರರು ಬರೆದಿಟ್ಟವುಗಳನ್ನೆ ಅವಲಂಬಿಸಬೇಕಾಗುವುದು. ಗ್ರಂಥಕರ್ತರ ಕಾಲದಿಂದ ಇವು ದೂರವಾಗಿದ್ದಷ್ಟು ಮೂಲಗ್ರಂಥದಿಂದ ಹೆಚ್ಚು ಹೆಚ್ಚು ಭಿನ್ನವಾಗುತ್ತ ಹೋಗುವುದೇ ಸಂಭವನೀಯ. ಅಲ್ಲದೆ, ಇಂತಹ ಪ್ರತಿಗಳನ್ನು ಮಾಡಿದವರಿಗೆ ಕೇವಲ ವರ್ಣಜ್ಞಾನದ, ಹೊರತು ಹೆಚ್ಚಿನ ತಿಳುವಳಿಕೆಯಿದ್ದುದು ಕಂಡುಬರುವುದಿಲ್ಲ. ಭಾಷಾಜ್ಞಾನ, ವ್ಯಾಕರಣಜ್ಞಾನ, ವಿಷಯಜ್ಞಾನ ಮುಂತಾದ ಹೆಚ್ಚಿನ, ಆದರೂ ಆವಶ್ಯಕವಾದ, ಜ್ಞಾನವುಳ್ಳ ಪಂಡಿತರು ಪ್ರತಿಮಾಡುವ ಕಾರ್ಯಕ್ಕೆ ಆ ಕಾಲದಲ್ಲಿ ಕೈ ಹಾಕುತ್ತಿದ್ದಿಲ್ಲವೆಂದೇ ತೋರುತ್ತಿದೆ. ಇದರಿಂದಾಗಿ ಹಿಂದಣ ಕೈಬರೆಹದ ಪ್ರತಿಗಳಲ್ಲಿ ಅಕ್ಷರ ಸ್ಖಾಲಿತ್ಯ, ಶಬ್ದಪಾತ, ಪೌನುರುಕ್ತ್ಯಮುಂತಾದ ಹಲವು ಬಗೆಯ ದೋಷಗಳು ತಲೆಹಾಕಿರುವುದು ಸಾಮಾನ್ಯವಾಗಿದೆ. ಅಂತೆಯೆ, ಒಂದೆರಡು ಕೈಬರಹದ ಪ್ರತಿಗಳ ಸಹಾಯದಿಂದ ಪ್ರಾಚೀನ ಗ್ರಂಥಗಳ ಸಂಸ್ಕರಣ ಮಾಡುವ ಕಾರ್ಯ ಪ್ರಯಾಸಕರವೂ ಅತೃಪ್ತಿಕರವೂ ಆಗಿರುವುದೆಂಬುದು ಅನುಭವದ ಸಂಗತಿಯಾಗಿದೆ.

ಆದುದರಿಂದ ಪ್ರಾಚೀನ ಸಾಹಿತ್ಯದ ಆವುದೊಂದು ಗ್ರಂಥವನ್ನು ಸಮರ್ಪಕವಾಗಿ ಪರಿಷ್ಕರಿಸಬೇಕಾದರೆ ಅದರ ಕೈಬರೆಹದ ಪ್ರತಿಗಳು ಎಷ್ಟು ಹೆಚ್ಚು ಸಿಕ್ಕುವವೋ ಅಷ್ಟು ಒಳ್ಳೆಯದು. ಅದರಲ್ಲಿಯೂ ಇತ್ತೀಚಿನವಾದ ಕಾಗದದ ಪ್ರತಿಗಳಿಗಿಂತ ತಾಳೆವೋಲೆಯ ಪ್ರತಿಗಳು ಹೆಚ್ಚು ವಿಶ್ವಸನೀಯವಾದುವು. ಒಂದು ಗ್ರಂಥದ ಸಂಪಾದನಕ್ಕಾಗಿ ಕಲೆಹಾಕಿದ ಪ್ರತಿಗಳನ್ನು ಅವುಗಳಲ್ಲಿ ಕಂಡುಬರುವ ಹೋಲಿಕೆ-ಭಿನ್ನತೆಗಳಿಗನುಸಾರವಾಗಿ ಬೇರೆ ಬೇರೆಯಾಗಿ ವರ್ಗೀಕರಿಸಬೇಕಾಗುವುದು. ಹೋಲಿಕೆ ಹೆಚ್ಚಾಗಿದ್ದವುಗಳಲ್ಲಿಯೂ ಅಂತಹ ಹೋಲಿಕೆಗಳಿಗೆ ಆ ಪ್ರತಿಗಳಿಗೆಲ್ಲ ಮಾತೃಕೆ ಒಂದೇಯಾದುದೆ ಕಾರಣವಾಗಿರಬೇಕೆಂಬುದನ್ನು ಲಕ್ಷ್ಯದಲ್ಲಿಟ್ಟುಕೊಳ್ಳುವುದಲ್ಲದೆ, ಭಿನ್ನತೆಗೆ ಆಯಾ ಪ್ರತಿಕಾರರ ವಿಶಿಷ್ಟ ಬಲಾಬಲಗಳು ಕಾರಣವಾಗಿರಬೇಕೆಂಬುದನ್ನೂ ಗಮನಿಸಬೇಕಾಗುವುದು. ಹಸ್ತಲಿಖಿತ ಪ್ರತಿಗಳ ವರ್ಗೀಕರಣ ಮಾಡುವಲ್ಲಿ ಅನುಸರಿಸಬೇಕಾದ ತತ್ತ್ವಗಳು ಇತ್ತೀಚೆಗೆ ಕಂಡುಹಿಡಿಯಲ್ಪಟ್ಟು ಪ್ರಕಟವಾಗಿವೆ. ಅವುಗಳ ಬಗೆಗೆ ಹೆಚ್ಚಿನ ವಿವರಗಳು ಅನ್ಯತ್ರ ದೊರೆಯುವುದರಿಂದ ಅವನ್ನೆಲ್ಲ ಇಲ್ಲಿ ವಿವೇಚಿಸುವ ಆವಶ್ಯಕತೆಯಿಲ್ಲ. ಆದರೆ ಮಾತೃಕೆಗಳ ಉಪಯೋಗದಲ್ಲಿ ಒಂದು ಶಾಸ್ತ್ರೀಯವಾದ ತಂತ್ರವೆ ಈಗ ಏರ್ಪಟ್ಟಿದೆಯಾದರೂ ಅದರ ಅನುಸರಣದಿಂದ ಕೆಲವೊಂದು ವಿಶಿಷ್ಟಬಗೆಯ ತೊಡಕುಗಳು ನಿವಾರಣೆಯಾಗಬಹುದೇ ಹೊರತು ಎಲ್ಲ ತೊಡಕುಗಳೂ ಬಯಲಾಗುವವೆಂತಲ್ಲ.

ಕೈಬರೆಹದ ಪ್ರತಿಗಳನ್ನಷ್ಟೆ ಕಲೆಹಾಕಿದರೂ ಅವುಗಳಿಂದ ನಿವಾರಣೆಯಾಗದ ಇನ್ನೂ ಎಷ್ಟೋ ತೊಡಕುಗಳು ಸಂಪಾದಕರನ್ನು ಎದುರಿಸುತ್ತಿವೆಯೆಂಬುದು ಸಂಸ್ಕೃತ ಅಥವಾ ಬೇರೆ ದೇಶಭಾಷೆಗಳಿಗಿಂತಲೂ ಕನ್ನಡಕ್ಕೆ ಹೆಚ್ಚು ಅನ್ವಯಿಸುತ್ತಿದೆ. ಕನ್ನಡದ ಹಳೆಯ ಕೈಬರೆಹದ ಪ್ರತಿಗಳಲ್ಲಿ ಎಷ್ಟೋ ಸಂದರ್ಭಗಳಲ್ಲಿ ಕ-ತ, ದ-ವ, ಮ-ವ, ಗ-ನ, ಮೊದಲಾದ ಅಕ್ಷರಗಳು ಪಲ್ಲಟವಾದುದು ಕಂಡುಬರುತ್ತಿದೆ. ಅದೇ ರೀತಿ ಅಲ್ಪಪ್ರಾಣ, ಮಹಾಪ್ರಾಣಗಳ ಪಲ್ಲಟ, ರೇಫೆ ಒತ್ತಕ್ಷರಗಳ ಅನಾವಶ್ಯಕ ಪ್ರಯೋಗ ಅಥವಾ ಆವಶ್ಯಕವೆನಿಸುವ ಒತ್ತಕ್ಷರಗಳ ಅಭಾವ, ಇ, ಉ, ಒ ಮೊದಲಾದ ಸ್ವರಗಳನ್ನು ಯಿ, ವೂ ಎಂದು ವ್ಯಂಜನಾದಿಯ ರೂಪದಲ್ಲಿ ಬರಯುವ ರೂಢಿ-ಇವೆಲ್ಲ ಅರ್ಥದ ಸಂದಿಗ್ಧತೆಯನ್ನು ಬಲಿಸಲು ಕಾರಣವಾಗುತ್ತಿದೆ. ಇದಲ್ಲದೆ, ಕನ್ನಡದ ಹಳೆಯ ಕೈಬರೆಹದ ಪ್ರತಿಗಳಲ್ಲಿ ಹ್ರಸ್ವ ದೀರ್ಘಾಕ್ಷರಗಳನ್ನು ಸ್ಪಷ್ಟವಾಗಿ ಸೂಚಿಸಿರುವುದು ಬಹುವಿರಳ. ಪದ್ಯಗ್ರಂಥಗಳಾಗಿದ್ದರೆ ಛಂದಸ್ಸಿನ ಸಹಾಯದಿಂದ ಬಹುಮಟ್ಟಿಗೆ ಅವುಗಳನ್ನು ನಿರ್ಧರಿಸಬಹುದು.

* * * * *

ಎಷ್ಟೋ ಕಡೆಗಳಲ್ಲಿ ಬರಿಯ ಊಹೆಯಿಂದಲೆ ತಿದ್ದುಪಾಟುಗಳನ್ನು (conjectural emendation) ಕೈಕೊಳ್ಳುವ ಪ್ರಸಂಗವೂ ಒದಗುತ್ತಿದೆ. ಇಂಗ್ಲಿಷ್ ಸಾಹಿತ್ಯದಲ್ಲಿ, ಅದರಲ್ಲಿಯೂ ಶೇಕ್ಸ್ಪಿಯರನ ಕೃತಿಗಳಲ್ಲಿ ಕಂಡುಬರುವ ನ್ಯೂನತೆ, ಸಂದಿಗ್ಧತೆ, ವ್ಯರ್ಥತೆ ಮುಂತಾದವುಗಳನ್ನು ಹೋಗಲಾಡಿಸಲು ಸಮರ್ಥರೆನಿಸಿದ ವಿಮರ್ಶಕರು ಊಹೆಯಿಂದಲೆ ಪಾಠ ಸಂಸ್ಕರಣವನ್ನು ಕೈಕೊಂಡುದುಂಟು. ಅವುಗಳಲ್ಲಿ ಕೆಲವು ವಿದ್ವಜ್ಜನರ ಮಾನ್ಯತೆಯನ್ನು ಪಡೆದಿರುವುದು ನಿಜವಾದರೂ, ಅಸಮರ್ಪಕವೆಂದು ಕಡೆಗಣಿಸಲ್ಪಟ್ಟವುಗಳೆ ಬಹಳ; ಅಲ್ಲದೆ ಅವುಗಳನ್ನು ಸೂಚಿಸಿದವರ ಪಾಂಡಿತ್ಯ ಸಾಹಿತ್ಯಜ್ಞಾನಗಳ ಬಗೆಗೆ ಸಂದೇಹವೂ ಉಂಟಾಗಿದೆ.[೧] ಊಹೆಯಿಂದ ಮಾಡಿದ ಪಾಠ ಸಂಸ್ಕರಣ ಪ್ರತಿಭಾಜನ್ಯವಾಗಿದ್ದರೆ ಸರಿ, ಇಲ್ಲವಾದರೆ ಅತ್ಯಂತ ಅನರ್ಥಕಾರಕವೆಂಬ[೨] ತತ್ತ್ವವನ್ನು ಅಂಗೀಕರಿಸಿಯೆ, ನಾವು ಅನಿವಾರ್ಯವೆಂದೆನಿಸಿದ ಕೆಲವು ಸಂದರ್ಭಗಳಲ್ಲಿ ಮಾತ್ರ ಈ ಬಗೆಯ ತಿದ್ದುಪಾಟುಗಳನ್ನು ಕೈಗೊಂಡಿದ್ದೇವೆ. ಅವುಗಳ ಯುಕ್ತಾಯುಕ್ತತೆಯನ್ನು ಸಹೃದಯರಾದ ವಾಚಕರೆ ಕಂಡುಕೊಳ್ಳಬೇಕು. ಒಂದೆರಡು ಕಡೆ ನಾವು ಉಳಿಸಿಕೊಂಡ ಪಾಠ ನಮ್ಮ ದೃಷ್ಟಿಯಿಂದ ಅಷ್ಟು ಸಮರ್ಪಕವಲ್ಲವೆಂದೆನಿಸಿದರೂ ಅವನ್ನು ತಿದ್ದುವ ಗೊಡವೆಗೆ ನಾವು ಹೋಗಿರುವುದಿಲ್ಲ. ಉದಾಹರಣೆಗಾಗಿ, ಬಸವಣ್ಣನವರ ವಚನವಾದ,

---

೧ "After considerable experience, I feel justified in saying that in most cases ignorance and conceit are the fruitful parents of conjunctural emendation" Willion Aldis Wright, General Introduction: *The Tempest,* p.vii (The New Shakespeare, edited by Sir Arthur Quiller Couch and John Dover Wilson)

೨ The Fact is there is only one general principle of emendation which is in its essence deviod of principle,. At its finest it is an inspiration, which obeys no laws and cannot be produced to order-W.W. Greig (***Bradby's Shakespeare criticism.*** p.70)

ಹೊನ್ನಹಾವುಗೆಯ ಮೆಟ್ಟಿದವನ, ಪಿಡಿಮುಟ್ಟಿದ ಕೆಂಜೆಡೆಯವನ
ಮೈಯಲ್ಲಿ ವಿಭೂತಿಯ ಧರಿಸಿದವನ
ಕರದಲ್ಲಿ ಕಪಾಲವ ಪಿಡಿದವನ
ಅರ್ಧನಾರಿಯಾದವನ, ಬಾಣನ ಬಾಗಿಲ ಕಾಯ್ದವನ;
ನಂಬಿಗೆ ಕುಂಟಣಿಯಾದವನ
ಚೋಳಂಗೆ ಹೊನ್ನಮಳೆಯ ಕರೆದವನ;
ಎನ್ನ ಮನಕ್ಕೆ ಬಂದವನ ಸದ್‌ಭಕ್ತರ ಹೃದಯದಲ್ಲಿಪ್ಪವನ;
ಮಾಡಿದ ಪೂಜೆಯಲೊಪ್ಪುವನ
ಕೂಡಲಸಂಗಯ್ಯನೆಂಬುವನ ॥ (೫೦೩)

ಎಂಬುದರಲ್ಲಿ 'ಮೆಚ್ಚಿದವನ, ಧರಿಸಿದವನ, ಕಾಯ್ದವನ, ಸಂಗಯ್ಯನೆಂಬುವನ', ಮುಂತಾದ ರೂಪಗಳೆಲ್ಲ ದ್ವಿತೀಯಾ ವಿಭಕ್ತಿಯಲ್ಲಿರುವುವೆಂದೇ ಸಕೃದ್ದರ್ಶನಕ್ಕೆ ಹೊಳೆಯುವುದು. ಆ ದೃಷ್ಟಿಯಿಂದ ವಿಚಾರಿಸಿದಾಗ ಈ ವಚನದಲ್ಲಿ ಕ್ರಿಯಾಪದವೇ ಇಲ್ಲವೆಂದೂ ಈ ವಚನವೆ ಅಪೂರ್ಣವಾಗಿರುವುದೆಂದೂ ಭಾಸವಾಗದಿರದು. ಅಂತೆಯೇ 'ಕರ್ನಾಟಕ ಕವಿಚರಿತೆ'ಯ ೧ನೆಯ ಭಾಗದಲ್ಲಿ[೩] ಈ ವಚನವನ್ನು ಉದಾಹರಿಸಿರುವುದನ್ನು ನೋಡಿದರೆ ಅಲ್ಲಿ 'ಕೂಡಲ ಸಂಗಯ್ಯನೆಂಬವನ' ಎಂಬ ಕೊನೆಯ ಶಬ್ದಗಳ ಪೂರ್ವದಲ್ಲಿ 'ಕೊಂಡು ಬಾರೆಲವ್ವಾ' ಎಂಬ ಶಬ್ದಗಳು ಹೆಚ್ಚಾಗಿದ್ದುದು ಕಂಡುಬರುವುದು. ಆದರೆ ತಾಳೆವೋಲೆಯ ಪ್ರತಿಗಳಲ್ಲಿ ಯಾವುದರಲ್ಲಿಯೂ ಈ ಶಬ್ದಗಳಿಲ್ಲದಿರುವುದರಿಂದ ಅರ್ಥಕ್ಕೆ ಅನುಕೂಲವಾಗಲೆಂದು ಹಿಂದಣಿಂದ ಯಾರೋ ಸೇರಿಸಿರಬೇಕೆಂದು ಊಹಿಸಿದರೆ ತಪ್ಪಾಗಲಿಕ್ಕಿಲ್ಲ. ನಮ್ಮ ವಿಚಾರದಲ್ಲಿ, ದ್ವಿತೀಯಾವಿಭಕ್ತಿಯಂತೆ ಕಾಣುವ ರೂಪಗಳು ನಿಜವಾಗಿಯೂ 'ಮೆಚ್ಚಿದವನೆ ಧರಿಸಿದವನೆ' ಎಂದು ಮುಂತಾಗಿ ಅವಧಾರಣೆಯ ಎಕಾರಗಳನ್ನೊಳಗೊಂಡ ಪ್ರಥಮಾ ವಿಭಕ್ತಿಗಳೆಂದೆ ತೋರುವುವು. ಹಳಗನ್ನಡದ ಕೈಬರಹ ಪ್ರತಿಗಳಲ್ಲಿ ಏಕಾರಾಂತವನ್ನು ಅಕಾರಾಂತವಾಗಿಯೆ ಬರೆಯುವ ರೂಢಿ ಹೆಚ್ಚಾಗಿದ್ದಿತು. ಅವುಗಳಲ್ಲಿ 'ಕರೆದ ಬರೆದ'' ಮುಂತಾದವುಗಳನ್ನು 'ಕರದ ಬರದ' ಎಂದೇ ಬರೆದುದು ಸಾಮಾನ್ಯವಾಗಿ ಕಂಡುಬರುತ್ತಿದೆ. ಅಲ್ಲದೆ, 'ಅವನೇ ಬಂದನೆ'ಂಬುದನ್ನು ಮಾತಿನಲ್ಲಿ (ಅವನऽ ಬಂದನೆ'ಂದು ಉಚ್ಚರಿಸುವುದೂ ವಾಡಿಕೆಯಾಗಿದೆ. ಆದುದರಿಂದ 'ಹೊನ್ನ ಹಾವುಗೆ ಮೆಟ್ಟಿದವನ.....ಕಱೆದವನ' ಎಂದು ಮುಂತಾಗಿ ಪುರಾಣಗಳಲ್ಲಿ ವರ್ಣಿತನಾದ ಶಿವನೂ 'ನನ್ನ ಮನಕ್ಕೆ ಬಂದ ಕೂಡಲಸಂಗಯ್ಯನೂ ಒಬ್ಬನೇ' ಎಂದು ಶಿವನಿಗೂ ಕೂಡಲಸಂಗಮದೇವನಿಗೂ ತಾದಾತ್ಮ್ಯವನ್ನು ಕಲ್ಪಿಸಿದ ವಚನವಿದೆಂದು ನಮ್ಮ ಮನವರಿಕೆ. ಹೀಗಿದ್ದರೂ, ಭಿನ್ನಾಭಿಪ್ರಾಯವಾಗಲು ಅವಕಾಶವಿದೆಯೆಂದು ತಿಳಿದು ನಾವು ಈ ವಚನವನ್ನು ಆ ರೀತಿ ತಿದ್ದದೆ ಹಾಗೇ ಬಿಟ್ಟದ್ದೇವೆ.

ಕೈಬರೆಹದಲ್ಲಿ ಆಗುವ ಸ್ವರಪಲ್ಲಟದಿಂದ ಸಂದಿಗ್ಧತೆ ಹೇಗೆ ಉಂಟಾಗುವುದೆಂಬುದಕ್ಕೂ ಒಂದು ಉದಾಹರಣೆಯನ್ನು ಕೊಡುವುದು ಉಚಿತವೆಂದು ತೋರುತ್ತಿದೆ:

ಲಿಂಗಜಂಗಮ ಒಂದೆ ಎಂದು ನಂಬಿದ ಬಳಿಕ
ಅವರಂಗನೆಯರು ಲಿಂಗದ ರಾಣಿವಾಸ:
ಅಲ್ಲಿಯೂ ಮೇಳ. ಇಲ್ಲಿಯೂ ಮೇಳ

---

೩ ಕರ್ನಾಟಕ ಕವಿಚರಿತೆ, ಭಾಗ-೧ (೧೯೨೪) ಪು. ೪೭.

ಚೌಡೇಶ್ವರಿಯಲ್ಲಿಯೂ ಮೇಳ
**ಮೊಲೆಯೆಂಬ** ಭಾವ ತಪ್ಪಿ ಅಪ್ಪಿದವರ
ತಲೆಯ ಕೊಂಬ ಕೂಡಲ ಸಂಗಮದೇವ ॥ (೬೪೧)

ಈ ವಚನದಲ್ಲಿ ದಪ್ಪ ಅಕ್ಷರದ ಭಾಗ ತಾಳವೋಲೆಯ ಪ್ರತಿಗಳಲ್ಲಿದ್ದಂತೆ ಇಲ್ಲಿ ಕೊಟ್ಟಿದೆ. 'ಮೊಲೆಯೆಂಬ' ಇದನ್ನು 'ಮೆಲೆಯೆಂಬ' ಎಂದು ತಿಳಿಯುವುದು ಸ್ವಾಭಾವಿಕವೆ ಆಗಿದೆ. ಆದರೆ 'ಮೊಲೆ' ಎಂಬುದು ಮಾತೆಯ ಚಿಹ್ನವಾದಂತೆ-ಕಾಂತೆಯ ಲಕ್ಷಣವೂ ಆಗಬಹುದಾಗಿದೆ. ಇಲ್ಲಿ 'ಮಾತೆ' ಎಂಬ ಭಾವನೆ ಆವಶ್ಯಕವೆಂದು ಯಾರಿಗಾದರೂ ತೋರಬಹುದಾದುದರಿಂದ ಈ ಭಾಗವನ್ನು ಶ್ರೀ ಹಳಕಟ್ಟಿಯವರ ಸಂಸ್ಕರಣದಲ್ಲಿ[೪] 'ಮಾತೆಯೆಂಬ' ಎಂದು ಮುದ್ರಿತವಾದುದು ಸರಿಯೆಂದೆ ಹೇಳಬಹುದು. ನಾವಾದರೂ ಈ ಸಂಸ್ಕರಣದ ಮೂಲದಲ್ಲಿ ಅದನ್ನೇ ಇಟ್ಟುಕೊಂಡು ಇದು ಊಹೆಯ ಸುಧಾರಣೆಯೆಂದು ತೋರಿಸಲು [ ] ಈ ಕಂಸಗಳನ್ನು ಬಳಸಬೇಕೆಂದಿದ್ದೆವು. ಆದರೆ ಈ ವಚನದಲ್ಲಿ ಮುಂದಿನ ಸಾಲಿನಲ್ಲಿ ಬರುವ 'ತಲೆಯಕೊಂಬ' ಎಂಬುದನ್ನು ನೋಡಿದರೆ ಅದಕ್ಕೆ ಅನುಪ್ರಾಸವಾಗುವ 'ಮೊಲೆಯಂಬ' ಎಂಬುದು ಮೂಲ ಪಾಠಕ್ಕೆ ಹೆಚ್ಚು ಸಮೀಪವರ್ತಿಯಾಗಿರಬೇಕೆಂದು ನಮಗೆ ತೋರಿ, ತಾಳವೋಲೆಯ ಪ್ರತಿಗಳನ್ನೆಲ್ಲ ಇನ್ನೊಮ್ಮೆ ಸರಿಹಚ್ಚುವ ಕಾರ್ಯವನ್ನು ಕೈಕೊಂಡೆವು. ಆಗ ಒಂದು ಪ್ರತಿಯಲ್ಲಿ ಮಾತ್ರ 'ಮೊಲೆಯುಂಬ' ಎಂಬ ಪಾಠ ದೊರಕಿತು. ಈ ಪಾಠವೇ ಸಮರ್ಪಕ ಎಂದು ನಮಗೆ ತೋರಿದ್ದರಿಂದ ಈ ಸಂಸ್ಕರಣದಲ್ಲಿ ಅದನ್ನು ಮೂಲದಲ್ಲಿಯೆ ಅಂಗೀಕರಿಸಿದ್ದೇವೆ.

ಬಸವಣ್ಣನವರ ಕಾಲದಲ್ಲಿಯೆ ಹಳಗನ್ನಡ ನಡುಗನ್ನಡಕ್ಕೆ ತಿರುಗುತ್ತಿದ್ದಿತೆನ್ನಲು ಬಲವಾದ ಆಧಾರಗಳು ಅನೇಕ ದೊರೆಯುವುವು. ಆ ಕಾರಣಕ್ಕಾಗಿಯೆ ಅವರ ವಚನಗಳಲ್ಲಿ ಹಳಗನ್ನಡದ ರೂಪಗಳೊಡನೆ ನಡುಗನ್ನಡದ ರೂಪಗಳನ್ನೂ ಕಾಣಬಹುದು. ಎರಡನೆಯದಾಗಿ, ವಚನಗಳ ಕೈಬರಹದ ಪ್ರತಿಗಳಲ್ಲಾಗಲಿ, ಒಂದೇ ಪ್ರತಿಯಲ್ಲಿ ಬೇರೆ ಬೇರೆ ಕಡೆಗಳಲ್ಲಾಗಲಿ ಕಾಣ ಬರುವವು. ಇಂತಹ ಸಂದರ್ಭಗಳಲ್ಲೆಲ್ಲ ವಚನಕಾರರು ಬಳಸಿದ ಮೂಲರೂಪ ಇದೇ ಎಂದು ನಿರ್ಧಾರವಾಗಿ ಹೇಳುವುದು ಅಸಾಧ್ಯವೇ ಸರಿ. ಆದುದರಿಂದ ಅಂತಹ ಬೇರೆ ಬೇರೆ ರೂಪಗಳನ್ನು ನಮ್ಮೀ ಸಂಸ್ಕರಣದಲ್ಲಿ ಅಲ್ಲಲ್ಲಿ ಉಪಯೋಗಿಸಿಕೊಂಡಿದ್ದೇವೆ. ಈ ಬಗೆಯ ಉಪಯೋಗಗಳ ಮತ್ತು ಶಬ್ದರೂಪಗಳ ಮಾದರಿಯ ಪಟ್ಟಿಯೊಂದನ್ನು ಓದುಗರ ಅವಗಾಹನೆಗಾಗಿ ಇದರಡಿ ಕೊಟ್ಟಿದ್ದೇವೆ:

## (೧) ವ್ಯಾಕರಣ ಪ್ರಯೋಗಗಳು

ಬಯಸು-ಬಯಿಸು-ಬೈಸು-ಬೈಚು. ಬರ್ಪುದು-ಬಪ್ಪುದು-ಬಹುದು-ಬಾಹುದು; (ನೀನ್) ಬಂದೆಯ್-ಬಂದೆ; (ನಾನ್) ಬಂದೇ-ಬಂದೆ-ಬಂದೆನು; ನಿಂದೊಡೆ-ನಿಂದಡೆ-ನಿಂದರೆ; ನನೆಯುತ್ತ-ನೆನೆವುತ್ತ; ಹಲುದೋರೆ-ಹಲುದೋರ; ಮಲು-ಮೆಲ್ಲು, ನಿಲ್ದ-ನಿಂದ; ಕಾಣ್ಬ-ಕಾಂಬ-ಕಾಬ-ಕಾಣುವ; ಕೆನ್ನವಾರೆ-ಕೆನ್ನಾಯರ; ಅರಿದು-ಅರಿತು; ಸವೆಯೆ-ಸವೆಯಲು-ಸವೆಯ; ಕಾಣು ಕಾಣಾ-ಕಾಣ; ಕಂಡಾ-ಕಂಡೆಯಾ; ಬಹೆ-ಬಾಹೆ; ಕೂರ್ಪಿ-ಕೂರ್ಪ

೪ ಹೊಸ ಪದ್ಧತಿಯ ಬಸವೇಶ್ವರನ ವಚನಗಳು. ವಚನ ಸಂ. ೨೯೫.

ಆನ್-ಅನು-ಆ; ನೀನ್-ನೀನು-ನೀ; ಮನ-ಮನವು; ತನು-ತನುವು; ಮಾಡುವ-ಮಾಡವವ; ಎನ್ನ-ಎನ್ನಾ; ಎಲ್ಲ-ಎಲ್ಲಾ;

**(೨) ಸಂಧಿಯನ್ನು ಮಾಡುವ ಅಥವಾ ಬಿಡುವ ಐಚ್ಛಿಕಕ್ಕೆ**

ತನುವ ಬಂದಲೆವರಯ್ಯಾ-ತನುವ ಬಂದು ಅಲೆವರು ಅಯ್ಯಾ; ಜಂಗಮ. ಅನವರತ-ಜಂಗಮನವರತ; ಸತ್ಯ ಸಿದ್ಧೋಪದೇಶ-ಸತ್ಯ ಸಿದ್ಧ ಉಪದೇಶ ;

**(೩) ಶಬ್ದಗಳ ಬೇರೆ ಬೇರೆ ರೂಪಗಳು**

| | |
|---|---|
| ಸೂರೆ—ಸೋರೆ | ಮಾದರ—ಮಾದಾರ |
| ತಂಬುಲ—ತಾಂಬೂಲ | ಕಿಂಕಲ—ಕಿಂಕಿಲ |
| ಪ್ರಮಾಣ—ಪ್ರಮಾಣು | ಡಂಬ—ಡಂಬು—ಡಂಭ |
| ಮಕುಟ—ಮುಕುಟ | ನಡು—ನೆಡು |
| ಮಚ್ಚು—ಮೆಚ್ಚು | ಪೊಡ—ಪೊಡೆ |
| ಮೆಯ್—ಮೈ | ಕ್ರಿ—ಕ್ರೀ—ಕ್ರಿಯೆ |
| ಪುತ್ಥಳಿ—ಪುತ್ತಳಿ | ಟಾವು—ಠಾವು |
| ಸಯಿಧಾನ—ಸುಯಿಧಾನ | ಬೊ—ಭೋ |
| ಕೊನೆ—ಗೊನೆ | ಒಕತನ—ಒಗತನ |
| ನೇಮ—ನೇವ | ಶ್ರಮ—ಶ್ರವ |
| ಶೂಲ—ಸೂಲ | ಪಶು—ಪಸು—ಹಸು |
| ರಾವಣ—ರಾವಳ | ನಾರಿವಾಣ—ನಾರಿವಾಳ |
| ಕಬ್ಬುನ—ಕಬ್ಬುಣ | ಸೊಣಕ—ಸೊಣಗ |
| ರೂಪು—ರೂಹು | ಪಂಜರ—ಹಂಜರ |
| ಒಪ್ಪಚಿ—ಒಪ್ಪಚ್ಚಿ | |

ಆದರೆ ಕೆಲವು ಕಡೆಗಳಲ್ಲಿ ರೂಪವ್ಯತ್ಯಾಸದೊಡನೆ ಅರ್ಥವ್ಯತ್ಯಾಸವೂ ಆಗುವುದೆಂದು ತೋರಿದಲ್ಲಿ ಸಂದರ್ಭಕ್ಕನುಸಾರವಾದ ರೂಪಗಳನ್ನೆ ಇಟ್ಟುಕೊಂಡಿದ್ದೇವೆ. ಅಂತಹ ಕೆಲವು ಉದಾಹರಣೆಗಳನ್ನೂ ಇದರಡಿ ಕೊಟ್ಟದ್ದೇವೆ:

('ಕೊಳ' ಎಂಬುದಕ್ಕೆ ಪ್ರತಿಯಾಗಿ) ಕೋಳ (ವಚನ-೩೧೬) (ಒಲೆ ಎಂಬುದಕ್ಕೆ ಪ್ರತಿಯಾಗಿ) ಓಲೆ (೨೯೬) (ಮೋರೆ ಎಂಬುದರ ಬದಲು) ಮೊರೆ (೫೦೪); (ಬರ ಎಂಬುದಕ್ಕೆ ಬದಲು) ಭರ (೧೨೫); ಸಂಚ (೬೩೬) ಸಂಚು (೫೧೪); ಕಿಂಕರ (೪೬೪), ಕಿಂಕಲ (೫೨೪).

ಒಂದೊಂದು ಕಡೆ ತಾಳೆವೋಲೆಯ ಪ್ರತಿಗಳಲ್ಲಿ ಕಂಡುಬರುವ ಶಬ್ದ ರೂಪಗಳು ತಪ್ಪಾಗಿರಬೇಕೆಂದು ತೋರಿದರೂ ಅಂತಹ ಅಪರೂಪಗಳ ಬಹು ಕಾಲ ಬಳಕೆಯಲ್ಲಿರುವುದು ಸಂಭವನೀಯವಾದುದರಿಂದ ಅವುಗಳ ಪ್ರತಿಯಾಗಿ ಶುದ್ಧರೂಪಗಳನ್ನು ಮೂಲದಲ್ಲಿ

ಬಳಸುವುದು ಅಷ್ಟು ಪ್ರಶಸ್ತವಲ್ಲವೆಂದು ನಮಗೆ ತೋರಿದೆ. ಅಲ್ಲದೆ ಅಂತಹ ರೂಪಗಳನ್ನೆ ಮುಂದಿನ ಬೇರೆ ಗ್ರಂಥಕಾರರು ಪ್ರಯೋಗಿಸಿರುವುದೂ ಸಾಧ್ಯವಿರುವುದರಿಂದ ಅವುಗಳ ಅರ್ಥವನ್ನು ತಿಳಿದುಕೊಳ್ಳಲು ಈ ಅಪರೂಪಗಳು ಸಹಾಯಕವಾಗುತ್ತಿವೆಯೆಂದು ನಮ್ಮ ಗ್ರಹಿಕೆ. ಉದಾಹರಣೆಗಾಗಿ ಮುಂದೆ ನೋಡಿ :

> ಹೋಗಿಬಿಟ್ಟು, ಮರಳಿ ಹಿಂದೆ ನೋಡಿ, ಮತ್ತಾಗಬೇಕೆಂಬ ಸಂದೇಹವುಳ್ಳನ್ನಕ್ಕ, ಅದೆ ಪರದಾರ, ನಾಯಕ ನರಕ ತಪ್ಪದು, ಅನ್ಯವಧುವೆಂಬುದು ನಿಮ್ಮ ರಾಣೀವಾಸ, ಇದೇ ದಿಬ್ಯ ಕೂಡಲಸಂಗಮದೇವ. (೭೫೫)

ಈ ವಚನವನ್ನು ಶ್ರೀ ಫ. ಗು. ಹಳಕಟ್ಟಿಯವರಿಂದ ಸಂಪಾದಿತವಾದ ಬಸವಣ್ಣನವರ ವಚನಗಳ ಮೂರನೆಯ ಸಂಸ್ಕರಣದಲ್ಲಿದ್ದಂತೆ[೫] ಇಲ್ಲಿ ಕೊಟ್ಟಿದ್ದೇವೆ. ಇಲ್ಲಿ ಬಂದಿರುವ 'ಪರದಾರ' ಎಂಬ ಶಬ್ದವು ತಾಳೆವೋಲೆಯ ಪ್ರತಿಗಳಲ್ಲಿಲ್ಲ. ಅಲ್ಲಿ ದೊರೆಯುವುದು 'ಪಾರದ್ವಾರ'ವೆಂಬ ಶಬ್ದ. ಈ ಶಬ್ದವು ಸಂದರ್ಭಕ್ಕೆ ಉಚಿತವಾದ ಅರ್ಥವನ್ನು ಕೊಡುವುದಿಲ್ಲೆಂಬ ಅಭಿಪ್ರಾಯದಿಂದ 'ಪರದಾರ' ಎಂಬ ಶಬ್ದವನ್ನು ಯಾರೋ ಇತರ ಪ್ರತಿಕಾರರು ಪ್ರಯೋಗಿಸಿದ್ದಾರೆಂದು ಊಹಿಸಬಹುದು. 'ಪರದಾರ' ಎಂಬುದು 'ಪರದಾರಾಭಿಗಮನ ಪಾತಕ' ಎಂಬ ಅರ್ಥದಲ್ಲಿ ಪ್ರಯೋಗವಾದಂತೆ ತೋರುತ್ತಿದೆ. ಆದರೆ ಈ ಅರ್ಥ ಕೋಶದಲ್ಲಿ ದೊರೆಯುವುದಿಲ್ಲ. ಅದಕ್ಕೆ 'ಪಾರದಾರ್ಯ' ಎಂಬ ಬೇರೊಂದು ಶಬ್ದವೆ ಇದ್ದುದು ಕಂಡುಬರುತ್ತಿದೆ.[೬] ಈ 'ಪಾರದಾರ್ಯ'ವೆ ಕನ್ನಡಿಗರ ಕೈಬರೆಹದಲ್ಲಿ ಬರಬರುತ್ತ 'ಪಾರದ್ವಾರ'ವಾಗಿರಬೇಕೆಂದು ನಮಗೆ ತೋರುತ್ತಿದೆ. ಆದರೆ ಈ ಅಪರೂಪ ಬಹುಕಾಲ ಬಳಕೆಯಲ್ಲಿದ್ದಿರಬೇಕು. ಏಕೆಂದರೆ 'ಪರದಾರ ಗಮನ ಪಾತಕವನ್ನು ಮಾಡಿದವ' (ಎಂದರೆ 'ಪರದಾರಿ' ಅಥವಾ 'ಪಾರದಾರಿಕ', ಎಂಬ ಅರ್ಥದಲ್ಲಿ 'ಪಾರದ್ವಾರಿ' ಎಂಬ ರೂಪ ಸಿಂಗಿರಾಜ ಪುರಾಣದ ಕೆಳಗಣ ಪದ್ಯದಲ್ಲಿ[೭] ದೊರಕುತ್ತಿದೆ.

> ಸೂನೆಗಾಜ ಕುತಾಲ ವೇಶಿ ಚಕ್ರೇಶ ಮಧು
> ಪಾನಿ ಪಾರದ್ವಾರಿ ತಿಲಘಾತಕಂ ಪಿಸುಣ
> ಹೀನಗುಲ ಸದ್-ಬ್ರಹ್ಮಹತ್ಯನೊಳಗಾದ ಬಲುಘೋರತರ ನಿರಯಾತ್ಮರು
> ಮೇನಕಾತ್ಮಜೆಯರಸನಂ ಸ್ಮರಿಸಿ ಪೂಜಿಸಲು
> ಹೀನತರದತಿ-ಪಾರವಲ್ಲ ಲಯವಾಗಿ ಸೌ
> ಖ್ಯಾನುಭವ ಸುಕೃತಾತ್ಮರಹರೆಂಬ ತಚ್ಛ್ರುತಿಗಳಂ ಕೇಳು ನರಪಾಲಕಾ ॥

ಆದುದರಿಂದ ಈ ಸಂಸ್ಕರಣದಲ್ಲಿ ಮೇಲ್ಕಂಡ ವಚನದ 'ಪಾರದ್ವಾರ' ಎಂಬ ರೂಪವನ್ನೇ ಉಳಿಸಿಕೊಂಡಿದ್ದವೆ. ಕೋಶದಲ್ಲಿ ಅದರ ಶುದ್ಧ ರೂಪವನ್ನು ಸೂಚಿಸಿದ್ದೇವೆ. ಹೀಗೆಯೆ, ಇದೆ ತತ್ತ್ವವನ್ನನುಸರಿಸಿಯೆ 'ಪುರಾತನ' ಎಂಬುದಕ್ಕೆ ಪ್ರತಿಯಾಗಿ 'ಪುರಾತ' ಎಂಬ 'ಕುಂಭೀಪಾಕ' ಎಂಬುದಕ್ಕೆ ಪ್ರತಿಯಾಗಿ 'ಕುಂಭಿಪಾತಕ' ಎಂಬ ಅಪರೂಪಗಳನ್ನೆ-ಅನ್ಯತ್ರ ಈ ರೂಪಗಳು ಸಿಕ್ಕುವುದರಿಂದ-ಹಾಗೆಯೆ ಉಳಿಸಿಕೊಂಡಿದ್ದೇವೆ.

---

೫ ಮಾಹೇಶ್ವರನ ಶರಣ ಸ್ಥಳ, ವಚನ ಸಂ. ೧೮-(ಶ್ರೀ. ಹಳಕಟ್ಟಿಯವರ 'ಬಸವೇಶ್ವರನ ವಚನಗಳು'' ಮೂರನೆಯ ಆವೃತ್ತಿ-೧೯೩೪.

೬ V. S. Apte, *The Practical Sanskrit-English Dictionary*, p.612 and 587

೭ ಸಿಂಗಿರಾಜ ಪುರಾಣ, ಸಂಧಿ ೪೬. ಪದ್ಯ ೨೫.

೨

ಅನೇಕ ವಚನಗಳಲ್ಲಿ ಈಗ ಬಳಕೆಯಲ್ಲಿರುವ ಪಾಠಗಳಿಗೆ ವ್ಯತಿರಿಕ್ತವಾಗಿ ಸರಿಯಾದ ಅರ್ಥವತ್ತಾದ ಪಾಠಗಳನ್ನು ನಮ್ಮೀ ಸಂಸ್ಕರಣದಲ್ಲಿ ಅಂಗೀಕರಿಸಲು ನಮ್ಮ ಸಂಗ್ರಹದಲ್ಲಿದ್ದ ಹಲವು ತಾಳವೋಲೆಯ ಮಾತೃಕೆಗಳು ಸಹಾಯಕವಾಗಿವೆ, ಆಧಾರವಾಗಿವೆ. ಇದರಿಂದಾಗಿ ಎಷ್ಟೋ ವಚನಗಳ ಅರ್ಥದಲ್ಲಿ ಮತ್ತು ಆಶಯದಲ್ಲಿ ಮಹತ್ವದ ಮಾರ್ಪಾಟುಗಳಾಗಿವೆಯೆಂದು ಓದುಗರಿಗೆ ತೋರದಿರದು. ಕೇವಲ ದಿಗ್ದರ್ಶನಕ್ಕೆಂದು ಒಂದೆರಡು ಉದಾಹರಣೆಗಳನ್ನು ಇದರಡಿ ಕೊಡುತ್ತೇವೆ. ಈಗ ಪ್ರಸಾರದಲ್ಲಿರುವ ಬಸವಣ್ಣನವರ ವಚನಗಳ ಮುದ್ರಿತ ಪ್ರತಿಗಳಲ್ಲಿ[೮] ಒಂದು ವಚನ ಕೆಳಗಿನಂತೆ ಮುದ್ರಿತವಾಗಿದೆ:

> ಒಲವಿಲ್ಲದ ಪೂಜೆ, ನೇಹವಿಲ್ಲದ ಮಾಟ, ಆ ಪೂಜೆಯು ಆ ಮಾಟವು ಚಿತ್ರದ ರೂಹು ಕಾಣಿರಣ್ಣ, ಚಿತ್ರದ ರಬ್ಬು ಕಾಣಿರಣ್ಣ. ಅಪ್ಪಿದರೆ ಸುಖವಿಲ್ಲ, ಮೆಲಿದರೆ ರುಚಿಯಿಲ್ಲ, ಕೂಡಲಸಂಗಮದೇವ ನಿಜವಿಲ್ಲದವನ ಭಕ್ತಿ.

ಈ ವಚನವನ್ನು ಅರ್ಥವಿಸಹೋದಲ್ಲಿ, ಅಪ್ಪಿದರೆ ಸುಖವಿಲ್ಲವೆಂಬ ಮಾತು 'ಚಿತ್ರದ ರೂಹನ್ನು' ಅನ್ವಯಿಸುವುದೆಂದು ತಿಳಿದುಕೊಳ್ಳುವುದು ಸುಲಭವಾಗುವುದೆಂದೂ ನೆನೆದರೂ 'ಮೆಲಿದರೆ ರುಚಿಯಿಲ್ಲ' ಎಂಬುದು ಯಾವುದನ್ನು ಕುರಿತು ಹೇಳಿದೆ ಎಂಬುದು ಸಮಸ್ಯೆಯಾಗಿಯೆ ಉಳಿಯುತ್ತದೆ-'ರೂಹ'ನ್ನಾಗಲಿ 'ರಬ್ಬ'ನ್ನಾಗಲಿ ಮೆಲುವುದು ಅಸಮಂಜಸವಾದುದರಿಂದ, ವಚನಕಾರರೆ ಹೀಗೆ ಬರೆದಿದ್ದರೆ, ಉಪಾಯವಿಲ್ಲದೆ ಏನಾದರೂ ಅರ್ಥ ಹೊರಡಿಸಿ ಸಮಾಧಾನಮಾಡಿಕೊಳ್ಳಬೇಕಾಗುತ್ತಿತ್ತು. ಆದರೆ ಈ ವಚನದಲ್ಲಿ ಬಂದಿರುವ 'ರಬ್ಬು' ಶಬ್ದವು ಬಳಕೆಮಾತಿನಲ್ಲಿದೆ; ಎದ್ದುಕಾಣುವುದು, ಸ್ಫುಟವಾದುದು ಎಂಬ ಅರ್ಥದಲ್ಲಿ ಚಿತ್ರ, ಬಣ್ಣ ಮುಂತಾದವುಗಳನ್ನು ಕುರಿತು ಹೇಳುವಲ್ಲಿ ಬರುವುದುಂಟು. ಆದರೆ ಈ ಅರ್ಥದಲ್ಲಿಯಾಗಲಿ, ನಾಮಪದವಾಗಿಯಾಗಲಿ ಈ ಶಬ್ದವು ಕನ್ನಡ ನಿಘಂಟುಗಳಲ್ಲಿ ದೊರೆಯದೆ ಇರುವುದರಿಂದ ಇದು ಕನ್ನಡವಲ್ಲವೆಂದೂ ಬಹುತರ ಅನ್ಯದೇಶ್ಯ ಶಬ್ದವಿರಬೇಕೆಂದೂ ತರ್ಕಿಸಬಹುದಾಗಿದೆ. ಆದುದರಿಂದ ಇಂತಹ ನುಡಿಯನ್ನು ಬಸವಣ್ಣನವರು ಬಳಸಿರಲಾರರೆಂದೆ ಊಹಿಸಬಹುದು. ತಾಳೆವೋಲೆಯ ಮಾತೃಕೆಗಳನ್ನು ನೋಡಲಾಗಿ ಅಲ್ಲಿ ಕಂಡುಬರುವ ಶಬ್ದ 'ಕಬ್ಬು' ಎಂಬುದು. ಆ ಶಬ್ದವನ್ನು ಇಟ್ಟುಕೊಂಡು ಈ ವಚನವನ್ನು ಪುನಃ ಸಂಸ್ಕರಿಸಿ ಕೆಳಗಣಂತೆ-ಬರೆದರೆ, ಅರ್ಥವು ಎಷ್ಟು ಸುಗಮವಾಗುವುದೆಂಬುದು ತಾನೇ ಗೊತ್ತಾಗುತ್ತಿದೆ:

> ಒಲವಿಲ್ಲದ ಪೂಜೆ ! ನೇಹವಿಲ್ಲದ ಮಾಟ !!
> ಆ ಪೂಜೆಯೂ ಆ ಮಾಟವೂ
> ಚಿತ್ರದ ರೂಹು ಕಾಣಿರಣ್ಣಾ ! ಚಿತ್ರದ ಕಬ್ಬು ಕಾಣಿರಣ್ಣಾ !!
> ಅಪ್ಪಿದರೆ ಸುಖವಿಲ್ಲ! ಮೆಲಿದರೆ ರುಚಿಯಿಲ್ಲ !!
> ಕೂಡಲಸಂಗಮದೇವಾ, ನಿಜವಿಲ್ಲದವನ ಭಕ್ತಿ !!

ಈಗ ಚಿತ್ರದ ರೂಹು-ಅಪ್ಪಿದರೆ ಸುಖವಿಲ್ಲ, ಚಿತ್ರದ ಕಬ್ಬು ಮೆಲಿದರೆ ರುಚಿಯಿಲ್ಲ'

೮ ಶ್ರೀ ಹಳಕಟ್ಟಿಯವರ "ಬಸವೇಶ್ವರನ ವಚನಗಳು" (ಮೂರನೆಯ ಆವೃತ್ತಿ ೧೯೩೪) ಪುಟ ೧೯.

ಎಂದು ಬಹು ಸ್ವಾರಸ್ಯವಾದ ಅರ್ಥ ಹೊರಡುತ್ತದೆಂಬುದು ವಾಚಕರಿಗೆ ಸಹಜವಾಗಿಯೆ ಗೊತ್ತಾಗುವಂತಿದೆ.

ಹೀಗೆ ಕಣ್ಣು ತಪ್ಪಿನಿಂದಾಗಲಿ, ಮೂಲಪ್ರತಿಗಳ ಕೊರತೆಯಿಂದಾಗಲಿ ಈಗಾಗಲೆ ಬಳಕೆಯಲ್ಲಿ ಬಂದಿರುವ ಅನೇಕ ಅಪಪಾಠಗಳನ್ನು ಈ ಸಂಸ್ಕರಣದಲ್ಲಿ ಸರಿಯಾಗಿ ತಿದ್ದಿದ್ದೇವೆ. ಅಂತಹವುಗಳಲ್ಲಿ ಈ ಮುಂದೆ ಕಾಣಿಸಿದವು ಕೆಲವು ಮಾತ್ರ:

| ಮೊದಲು ಬಳಕೆಯಲ್ಲಿದ್ದ ಪಾಠ | ವಚನಸಂಖ್ಯೆ | ಈ ಸಂಸ್ಕರಣದಲ್ಲಿ ಅಂಗೀಕೃತವಾದ ಪಾಠ |
|---|---|---|
| ಸಿಂಗರದ ಗಾತ್ರ | ೪೨ | ಸಿಂಗದ ಗಾತ್ರ |
| ಅಂಗಸಂಗಿ | ೧೨೫ | ಅನಂಗಸಂಗಿ |
| ಕುಧರ-ಕುದರ | ೨೬೦ | ಕುದುರು |
| ಅರುಚಿಯುಂಟೆ | ೨೮೫ | ಅನುರುಚಿಯುಂಟೆ |
| ಮಳಲೊಟ್ಟೆ | ೩೦೭ | ಒಳಲೊಟ್ಟೆ |
| ಕಾಗೆ ವೃಷ್ಟಿಸುವ | ೩೬೧ | ಕಾಗೆ ವಿಷ್ಟಿಸುವ |
| ಭೋಜ ದೇವ ಬಲ್ಲಾಳು | ೩೭೨ | ಭೋಜದೇವಲಾಳು |
| ಅಷ್ಟಕೋಟಿ ರೋಮಂಗಳು | ೪೯೧ | ಅವುಟುಕೋಟಿ ರೋಮಂಗಳು |
| ಹೋತ ತಂದು | ೫೭೭ | ಹೊತ್ತು ತಂದು |
| ಜನ್ಮ | ೫೮೩ | ಜನ್ನ |

ಈಗ ಪ್ರಚಾರವಾಗಿರುವ ಬಸವಣ್ಣನವರ ವಚನಗಳ ಮುದ್ರಿತ ಪ್ರತಿಯೊಂದರಲ್ಲಿ[೯] ಒಂದು ವಚನ ಕೆಳಗಿನಂತಿದೆ:

> ಒಲೆಯ ಬೂದಿಯ ಬಲಿಯಲುಬೇಡ. ಒಲಿದಂತೆ ಹೂಸಿಕೊಂಡಿಪ್ಪುದು, ಹುಸಿ, ಏನು ಫಲ ಮನದಲ್ಲಿ ಲೇಸಿರಲ್ಲಿದನ್ನಕ್ಕ? ಒಂದನಾಡಹೋಗಿ ಒಂಬತ್ತನಾಡುವ ಡಂಬಕರ ಮೆಚ್ಚ ಕೂಡಲಸಂಗಮದೇವ.

ಇನ್ನೊಂದು ಮುದ್ರಿತ ಪ್ರತಿಯಲ್ಲಿ 'ಬಲಿಯಲು' ಎಂಬುದಕ್ಕೆ ಬದಲಾಗಿ 'ಬರೆಯಲು' ಎಂದಿದೆ. ಉಳಿದುದೆಲ್ಲ ಮೊದಲಿನಂತೆಯೆ ಇದೆ. ಇದ್ದ ಹಾಗೆಯೆ ಈ ವಚನದ ಅರ್ಥವನ್ನು ಸಮರ್ಪಕವಾಗಿ ಮಾಡುವುದು ಕಠಿಣವೇ ಸರಿ. ಅಂತೆಯೆ ಕನ್ನಡ ಸಾಹಿತ್ಯ ಪರಿಷತ್ತಿನಿಂದ ಪ್ರಕಟವಾದ 'ಕನ್ನಡಬಾವುಟ' (ಪುಟ ೩೯, ೧೯೪೮ರ ಆವೃತ್ತಿ)ದಲ್ಲಿ ಈ ವಚನದ ಮೊದಲಿನ ಭಾಗವನ್ನು ಕೆಳಗೆ ಕಂಡಂತೆ ಸುಧಾರಿಸಿದುದು ಕಂಡುಬರುತ್ತಿದೆ. ಮತ್ತು ಈ ಸುಧಾರಣೆಯನ್ನೆ ಶ್ರೀ ಎಂ. ಆರ್. ಶ್ರೀ ಅವರ 'ವಚನ ಧರ್ಮಸಾರ' (ಪುಟ ೨೨೧, ಪ್ರಥಮ ಸಂಸ್ಕರಣ) ದಲ್ಲಿಯೂ ಅನುಸರಿಸಲಾಗಿದೆ :

---

೯ "ಹೊಸ ಪದ್ಧತಿಯ ಬಸವೇಶ್ವರನ ವಚನಗಳು" (೧೯೪೨-ಪುಟ. ೧೬)

ಒಲೆಯ ಬೂದಿಯ ಬಳಿಯಲು ಬೇಡ. ಒಲೆಯಂತೆ ಹೂಸಿಕೊಂಡಿಪ್ಪುದು ಹುಸಿ.....(ಇತ್ಯಾದಿ).

ಈ ವಚನದಲ್ಲಿ ಕಂಡುಬರುವ 'ಬಲಿಯಲು' ಅಥವಾ 'ಬರೆಯಲು' ಎಂಬ ಮೊದಲೆರಡು ಪಾಠಾಂತರಗಳಿಗೆ ಕೆಲವು ಮಾತೃಕೆಗಳ ಆಧಾರವಿದೆ. ಆದರೆ 'ಕನ್ನಡ ಬಾವುಟ'ದಲ್ಲಿ ಸುಧಾರಣೆಯಾಗಿ ಬಂದಿರುವ 'ಬಳಿಯಲು' ಎಂಬುದಕ್ಕೆ ಮಾತೃಕೆಗಳ ಆಧಾರವೇನೂ ಇಲ್ಲ. ಅರ್ಥದೃಷ್ಟಿಯಿಂದ, ಈ ಮೂರರಲ್ಲಿ ಹೆಚ್ಚು ವ್ಯತ್ಯಾಸವಿರುವಂತೆ ತೋರುವುದಿಲ್ಲ. ಆದರೆ 'ಬಳಿಯಲು' ಎಂಬುದರಿಂದ ಅರ್ಥ ಸರಳವಾಗಬಹುದೇನೋ? ಇನ್ನು 'ಕನ್ನಡ ಬಾವುಟ'ದಲ್ಲಿ ತಿದ್ದಿದ ಪಾಠವಾದ 'ಒಲೆಯಂತೆ' ಎಂಬುದಕ್ಕೂ ಯಾವ ಮಾತೃಕೆಯ ಆಧಾರವೂ ಇಲ್ಲ. ಇಷ್ಟಾದರೂ ಒಟ್ಟನಲ್ಲಿ ಈ ಅರ್ಥದ ವಚನ ಸುಗಮವಾಗುವುದೆಂದು ಹೇಳಲಾಗುವುದಿಲ್ಲ. ಇಂತಹ ಪ್ರಸಂಗಗಳಲ್ಲಿ ಹಲವು (ತಾಳೆವೋಲೆಯ) ಮಾತೃಕೆಗಳ ಆಧಾರದಿಂದಲೆ ವಚನಗಳ ಸಂಸ್ಕರಣವನ್ನು ಕೈಕೊಳ್ಳಬೇಕಾದುದು ಅನಿವಾರ್ಯ. ತಾಳೆವೋಲೆಯ ಆಧಾರದಿಂದಲೇ ಈ ವಚನವನ್ನು ನಾವು ಈ ರೀತಿ ಸಂಸ್ಕರಿಸಿದ್ದೇವೆ:

ಒಲೆಯ ಬೂದಿಯ ಬಿಲಿಯಲು ಬೇಡ:
ಒಲಿದಂತೆ ಹೂಸಿಕೊಂಡಿಪ್ಪುದು
ಹೂಸಿ ಏನು ಫಲ, ಮನದಲ್ಲಿ ಲೇಸಿಲ್ಲದನ್ನಕ್ಕ
ಒಂದನಾಡಹೋಗಿ ಒಂಬತ್ತನಾಡುವ
ಡಂಭಕರ ಮೆಚ್ಚ ಕೂಡಲಸಂಗಮದೇವ ॥

ಶೈವರಿಗೆಲ್ಲ ಮಾನ್ಯವಾದ, ವೀರಶೈವ ಅಷ್ಟಾವರಣಗಳಲ್ಲಿ ಒಂದಾದ ವಿಭೂತಿಯನ್ನು ಕುರಿತು ವಚನವಿದು. ವಿಭೂತಿಯನ್ನು ಘಟ್ಟಿಮಾಡಿ ಉಪಯೋಗಿಸುವ ಕ್ರಮವೊಂದು ಏರ್ಪಟ್ಟಿರುವುದಾದರೂ, ಮೂಲತಃ ಮತ್ತು ತತ್ತ್ವತಃ ಅದು ಬೂದಿಯೆ. ಈ ಸಂಗತಿಯನ್ನು ನೆನಪಿನಲ್ಲಿಟ್ಟುಕೊಂಡು ಈ ವಚನವನ್ನು ವಿಮರ್ಶಿಸುವುದರಿಂದ ಅರ್ಥ ಈ ರೀತಿಯಾಗಿ ಹೊರಹೊಮ್ಮುತ್ತಿದೆ: ''ವಿಭೂತಿಯೆ ಬೇಕೆಂದು ಅದನ್ನು ಪೇಟೆಯಿಂದ ಬಲಿತು (=ಕೊಂಡು) ಪ್ರಯಾಸಬೇಡ. ಎಲ್ಲರ ಮನೆಯಲ್ಲಿಯೂ ಒಲೆಯಲ್ಲಿರುವ ಬೂದಿಯೇ ಸಾಕು; ಅದನ್ನೇನು ಕೊಂಡು ತರುವ ಕಾರಣವಿಲ್ಲ. ಮನಸ್ಸಿಗೆ ಬಂದಂತೆ-ಹೂಸಿ (=ಹಚ್ಚಿ)ಕೊಳ್ಳಬಹುದು. ಆದರೆ ಮನಸ್ಸು ಪರಿಶುದ್ಧಹೊಂದದೆ, ಮೇಲೆ ದೇಹಕ್ಕೆಷ್ಟು ಹೂಸಿಕೊಂಡರೇನು? ಅದೆಲ್ಲ ವ್ಯರ್ಥ. ಬರಿಯ ಮಾತಿನ ಡಂಭಕರನ್ನು ದೇವರು ಮೆಚ್ಚ; ಅಂತಃಶುದ್ಧಿಯಿದ್ದರೆ ಒಲೆಯ ಬೂದಿಯೆ ವಿಭೂತಿಯ ಫಲವನ್ನು ಕೊಡುತ್ತಿದೆ'' ಎಂಬುದೆ ಈ ವಚನದಲ್ಲಿ ಬಸವಣ್ಣನವರು ಮಾಡಿದ ಉಪದೇಶ. ಈ ವಚನದಲ್ಲಿ ಬರುವ 'ಬಿಲಿ' (ಎಂದರೆ ಕೊಂಡುಕೊಳ್ಳು) ಎಂಬ ಶಬ್ದ ಈಗ ಬಳಕೆಯಲ್ಲಿಲ್ಲ: ಬಹುಶಃ ಹಲವು ಶತಮಾನಗಳ ಹಿಂದೆಯೆ ಬಳಕೆ ತಪ್ಪಿರಬೇಕು, ವಚನಗಳ ಪ್ರತಿಮಾಡಿದವರು-ಅರ್ಥ ತಿಳಿಯದೆಯೊ ಕೈತಪ್ಪಿನಿಂದಲೋ-ಈ ಶಬ್ದವನ್ನು 'ಬಲಿ' ಎಂದು ಎಂದೊ 'ಬರೆ' ಎಂದೊ ಮಾರ್ಪಡಿಸಿರಬಹುದು. ಆದುದರಿಂದಲೆ ಈಗಿನ ವಾಚಕರಿಗೆ ಅರ್ಥ ಹತ್ತದೆ ಇನ್ನೂ ಹೆಚ್ಚು ಗೂಂದಲವನ್ನುಂಟುಮಾಡಲು ಕಾರಣವಾಗಿರಬೇಕು. ಇದೆ ಶಬ್ದ ಪ್ರಯೋಗವಾಗಿರುವ ಇನ್ನೊಂದು ಬಸವಣ್ಣನವರ ವಚನದ ಶುದ್ಧ ಪಾಠ ಕೆಳಗಿನಂತಿದೆ:

ಹೊಲಬುಗೊಂಡಱಸಬೇಡ, ಬಿಲಿತು ತರಬೇಡ;
ಒಲಿದೊಮ್ಮೆ ಶಿವಶರಣೆನ್ನಿರಯ್ಯಾ !
ಒಂದು ಸೊಲ್ಲಿಂಗೆ ಮುಕ್ತಿ ಸಿದ್ಧಿ
ಕೂಡಲಸಂಗಮದೇವ ಭಕ್ತಿಲಂಪಟನಾಗಿ ॥ (೧೮೦)

ಈ ವಚನವನ್ನು 'ವಚನಶಾಸ್ತ್ರ ರಹಸ್ಯದಲ್ಲಿ' (ಪುಟ ೭೯, ೨ನೆಯ ಆವೃತ್ತಿ) ಶ್ರೀ ರಂಗನಾಥ ದಿವಾಕರರು ಕೆಳಗಿನಂತೆ ಮುದ್ರಿಸಿದ್ದಾರೆ ;

ಹೊಲಬುಗೊಂಡು ಆರಸಬೇಡ; ಬರಿದು ತೆರಬೇಡ.
ಒಲಿದರೊಮ್ಮೆ ಶಿವಶರಣೆನ್ನಿರಯ್ಯಾ. ಒಂದು ಸೊಲ್ಲಿಂಗೆ ಮುಕ್ತಿ ಸಿದ್ಧಿ....

ಇತ್ಯಾದಿ. ಈ ಸುಧಾರಣೆಗೆ ತಾಳೆವೋಲೆಯ ಪ್ರತಿಗಳ ಆಧಾರವಿಲ್ಲವಾದುದರಿಂದ ಇದು ಕೇವಲ ಊಹೆಯಿಂದಲೆ ಮಾಡಿದುದೆಂದು ಮತ್ತೆ ಹೇಳಬೇಕಾಗಿಲ್ಲ. ಹೀಗೆ ಮೂಲಶಬ್ದದ ನಿಜವಾದ ರೂಪ ಇಲ್ಲವೆ ಅರ್ಥ ಸರಿಯಾಗಿ ತಿಳಿಯದ ಕಾರಣಕ್ಕಾಗಿ ಬೇರೆ ಬೇರೆ ಪ್ರತಿಕಾರರು ಅಥವಾ ಸಂಪಾದಕರು ಮಾಡಿದ ಅನೇಕ ಬಗೆಯ ತಿದ್ದುಪಾಟುಗಳಿಗೆ ನಿಜವಾಗಿಯೂ ಆಸ್ಪದವಿಲ್ಲವೆಂದು ನಮಗೆ ಕಂಡುಬಂದಿದೆ. ಅಂತಹ ಸಂದರ್ಭಗಳಲ್ಲಿ ಮೂಲ ಮಾತೃಕೆಗಳನ್ನು ನೋಡಿ ಸರಿಯಾದ ಪಾಠಗಳನ್ನು ನಿರ್ಧರಿಸಿದ್ದೇವೆ. ಅಂತಹ ಹಲವು ಉದಾಹರಣೆಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಕೊಡುತ್ತೇವೆ :

| **ಬಳಕೆಯಲ್ಲಿದ್ದ ಪಾಠ** | **ಈ ಸಂಸ್ಕರಣದ ವಚನಸಂಖ್ಯೆ** | **ನಾವು ಅಂಗೀಕರಿಸಿದ ಪಾಠ** |
|---|---|---|
| ಹಾವ ತಿಂದವರ | ೧೩೨ | ಹಾವು ತಿಂದವರ |
| ಮುಯ್ಯನಲು | ೧೯೮ | ಮುಯ್ಯಾನಲು |
| ನಡೆಯ ಕಂಡುನಂಬೆ | ೨೫೪ | ನಡೆಯಕಂಡಾ, ನಂಬಿ! |
| ಕಪಟವೇಷದಿಂದಾಡುವೆ | ೩೪೦ | ಕಪ್ಪಡಿ ವೇಷದಿಂದಾನು ಬಂದಾಡುವೆ |
| ಕಳೆದ ಹೊಲೆಯನೆಮ್ಮಯ್ಯ | | ಕಳದ ಹೊಲೆಯನೆಮ್ಮಯ್ಯ; |
| ಜಾತಿಸೂತಕ (ವ) | ೩೪೭ | ಜಾತಿಸೂತಕ! |
| ಕವಚದಹಾರವ | ೪೨೯ | ತ್ವಚದಾಹಾರವ |
| ಆವನೇವನಾದರೇನು, ಹೇವ ವಿಲ್ಲದಂಗೈಸಬಹುದೆ? | ೪೩೮ | ಆವನೇಮವಾದರೇನು ಹೇಮ ವಿಲ್ಲದಂಗೈಸಬಹುದೆ? |
| ಕಿಂಕರನ ಮನೆಯಲ್ಲ ಕಿಂಕರನು ಆನು | ೪೭೯ | ಕಿಂಕರನ ಮನೆಯಲ್ಲಿ ಕಿಂಕಿಲವನು ಆನು ಹಾರುತಿಪ್ಪೆನು |
| ಕೆನ್ನೆಯಲ್ಲಿ ಕೈವಿಡಿದ | ೫೦೭ | ಕನ್ನೆಯಲ್ಲಿ ಕೈವಿಡಿದ |
| ಹೋಮದ ನೇಮದಲ್ಲಿ | ೫೭೮ | ಹೋಮದ ನೆವದಲ್ಲಿ |
| ಹವಿಯ ಬೆಳೆದಂತಾಯ್ತು | ೫೯೫ | ಹವಿಯ ಬೇಳಿದಂತಾಯ್ತು |

ಜೊಳ್ಳು ಆಳು ನಾನಲ್ಲ[೧೦]

| | | |
|---|---|---|
| ಜೋಳವಳೆಯುವವನಾನಲ್ಲ | ೬೯೮ | ಜೋಳವಾಳಿಯಾನಲ್ಲ |
| ತನುಮನಧನವೆಂಬ ಕನ್ನಡಿ | ೮೯೫ | ತನುಮನುಧನವೆಂಬ ಕನ್ನಡ |
| ಕೋಶಪಾಸನ | ೬೪೯ | ಕೋಶಪಾನ |

* * * * *

೩

ಬಸವಣ್ಣನವರ ವಚನಗಳಲ್ಲಿ ಈಗ ಬಳಕೆಯಲ್ಲಿಲ್ಲದ ಅನೇಕ ಶಬ್ದಗಳು ದೊರೆಯುತ್ತಿವೆ. ಅವುಗಳಲ್ಲಿ ಕೆಲವು ಪ್ರಾಚೀನ ಕನ್ನಡ ಸಾಹಿತ್ಯದಲ್ಲಿಯೂ ಅತಿ ವಿರಳವಾಗಿ ಬಳಸಿದಂತೆ-ಕಂಡುಬರುತ್ತಿದೆ. ಮತ್ತೆ ಕೆಲ ಶಬ್ದಗಳಿಗೆ ಸರಿಯಾದ ಅರ್ಥವನ್ನು ಹೇಳಬೇಕಾದರೆ ಮರಾಠಿ, ತೆಲುಗು, ತಮಿಳುಗಳ ಸಾಹಾಯ್ಯವನ್ನು ಪಡೆಯುವ ಅವಶ್ಯಕತೆಯೂ ಉಂಟಾಗುತ್ತಿದೆ. ವಚನಗಳಲ್ಲಿ ಬಳಸಲಾದ ಶಬ್ದಗಳ ಸರಿಯಾದ ಅರ್ಥವಾಗದಿರುವುದರಿಂದ, ಅವುಗಳಿಗೆ ಪ್ರತಿಯಾಗಿ ಸಂದರ್ಭೋಚಿತವೆನಿಸಿದ ಬೇರೆ ಶಬ್ದಗಳನ್ನು ಉಪಯೋಗಿಸಿದ, ಇಲ್ಲವೆ ಅರ್ಥಪೂರಕವೆಂದು ಹೆಚ್ಚಿಗೆ ಶಬ್ದವನ್ನು ಜೋಡಿಸಿದ, ಅಥವಾ ಅಂತಹವುಗಳನ್ನು ಸಂಪೂರ್ಣವಾಗಿ ಕೈಬಿಟ್ಟ ಉದಾಹರಣೆಗಳು ಬೇಕಾದಷ್ಟು ಸಿಕ್ಕುತ್ತಿವೆ. ಅವುಗಳನ್ನೆಲ್ಲ ಇಲ್ಲಿ ವಿಶದವಾಗಿ ತೋರಿಸುವ ಕಾರಣವಿಲ್ಲ. ಕೇವಲ ದಿಗ್ದರ್ಶನಕ್ಕೆಂದು ಒಂದೆರಡು ಉದಾಹರಣೆಗಳನ್ನು ಇದರಡಿ ಕೊಡುತ್ತೇವೆ.

(೧)

ಕೋಣನ ಹೇರಿಂಗೆ ಕುನ್ನಿ **ಬಸಗುತ್ತ** ಬಡೆವಂತೆ
ತಾವು ನಂಬರು; ನಂಬುವವರ ನಂಬಲೀಯರು;
ತಾವು ಮಾಡರು ಮಾಡುವವರ ಮಾಡಲೀಯರು ॥ (೬೬೩)

ಈ ವಚನದಲ್ಲಿ ದಪ್ಪ ಅಕ್ಷರದ ಭಾಗ ಕೆಲ ಹಳೆಯ ಕೈಬರೆಹದ ಪ್ರತಿಗಳಲ್ಲಿದ್ದಂತೆ ಕೊಟ್ಟಿದೆ. ಇಲ್ಲಿ ಬಂದಿರುವ 'ಬಸಗುತ್ತ' ಎಂಬ ಪದದ ಅರ್ಥ ಗೊತ್ತಾಗದೆ ಹೋದುದರಿಂದಲೆ, ಈಗ ಪ್ರಚಾರದಲ್ಲಿರುವ (ಬಸವಣ್ಣನವರ ವಚನಗಳ) ಮುದ್ರಿತ ಪ್ರತಿಗಳಲ್ಲಿ[೧೧] 'ಬಸಗುತ್ತ ಬಾಲವ ಬಡಿವಂತೆ' ಎಂದು ಅಚ್ಚಾಗಿದೆ. ಸಾಮಾನ್ಯವಾಗಿ ನಾಯಿಯ ಕುನ್ನಿಗೆ ಬಾಲಬಡಿಯುವುದು ಸ್ವಾಭಾವಿಕ ಎಂಬ ದೃಷ್ಟಿಯಿಂದ ''ಬಾಲವ'' ಎಂಬ ಶಬ್ದವನ್ನು ಹೆಚ್ಚಾಗಿ ಹಾಕಲಾಗಿದೆಯೆ ಹೊರತು ಅದರಿಂದ ಈ ವಚನದ ಅರ್ಥಕ್ಕೆ ಯಾವ ಬಗೆಯ ನೆರವೂ ಆಗುವುದಿಲ್ಲ. ''ಬಸಗುತ್ತ' ಎಂಬುದಕ್ಕೆ ''ಮುಸಗುಡುತ್ತ'' ಅಥವಾ ''ತೇಗುತ್ತ'' ಎಂಬ ಅರ್ಥವನ್ನು ಬರಿಯ ಊಹೆಯಿಂದ ಮಾಡಿಕೊಂಡಂತೆ ತೋರುತ್ತಿದೆ. ಆದರೆ ''ಬಸಗುತ್ತ

---

೧೦ ಅದೇ. ಪುಟ ೬೭

೧೧ ''ಬಸವೇಶ್ವರನ ವಚನಗಳು (೧೯೪೨) ಪುಟ ೧೦೨, ಶ್ರೀ ಎಂ. ಆರ್. ಶ್ರೀನಿವಾಸ ಮೂರ್ತಿಯವರ ''ಭಕ್ತಿಭಂಡಾರಿ ಬಸವಣ್ಣನವರು'' (ಪರಿಷ್ಕೃತ ಮುದ್ರಣ) ಪುಟ ೬೨; ಆದರೆ (ಶ್ರೀ ಹಳಕಟ್ಟಿಯವರ) ''ಹೊಸ ಪದ್ಧತಿಯ ವಚನಗಳು'' ಇದರಲ್ಲಿ 'ಬಾಲವ' ಶಬ್ದವನ್ನು ಬಿಟ್ಟು ಮುದ್ರಿಸಲಾಗಿದೆ. ಅವರಿಂದಲೇ ಸಂಪಾದಿತವಾದ ಈ ವಚನಗಳ ಮೊದಲನೇ ಆವೃತ್ತಿಯಲ್ಲಿ 'ಬಸುಗುತ್ತ'' ಎಂಬುದಕ್ಕೆ ಪ್ರತಿಯಾಗಿ ''ಮುಸುಗುತ್ತ'' ಎಂದಿರುವುದು.

ಅಥವಾ ಬಸುರ್‌ಗುತ್ತ'' ಎಂಬ ಶಬ್ದಕ್ಕೆ ''ಹೊಟ್ಟೆಬೇನೆ, ಕರುಳಬೇನೆ, ಅತಿಸಾರ'' ಎಂದು ಅರ್ಥವಾಗುವುದೆಂಬುದು ನಿಘಂಟನಿಂದ[೧೨] ಗೊತ್ತಾಗುತ್ತಿದೆ. ''ತನ್ನ ಶಕ್ತಿಗೆ ಸರಿಯಾಗಿ ಕೋಣವು ಹೊರುವ ಭಾರವನ್ನು ನೋಡಿದ ಮಾತ್ರದಿಂದಲೆ ಹೊಟ್ಟೆಬೇನೆಯನ್ನು ಪಡೆಯವ ಕುನ್ನಿಯಂತೆ ಕೆಲವರು ತಾವೂ ನಂಬರು, ನಂಬುವವರನ್ನೂ ನಂಬಗೊಡರು; ತಾವೂ ಮಾಡರು. ಮಾಡುವವರನ್ನೂ ಮಾಡಗೊಡರು'' ಎಂದು ಈ ವಚನಭಾಗದ ಅರ್ಥವಾಗವುದೆಂದು ಓದುಗರಿಗೆ ಸ್ಪಷ್ಟವಾಗಿರಬಹುದು. ''ಕೋಣನ ಹೇರಿಂಗೆ ಕುನ್ನಿ ಬಸಗುತ್ತ ಬಡೆವಂತೆ'' ಎಂಬುದು ಒಂದು ಗಾದೆಯ ಮಾತಾಗಿದ್ದರೂ ಇರಬಹುದೆಂದು ತೋರುತ್ತಿದೆ.

(೨)

ಒಡೆಯರು ತಮ್ಮ ಮನೆಗೆ ಒಡಗೊಂಡು ಹೋದರೆ
ತುಡುಗುಣಿತನದಲ್ಲಿ ಪರವಧುವ ನೋಡುವ ಸರಸಬೇಡ ಕಾಣಿರಣ್ಣಾ:
ಒಡೆಯನರಸಿಯ ಸರಸಬೇಡಾ !
ಕೂಳಸೊಕ್ಕು ತಲೆಗೇರಿ ರಾಣಿವಾಸದೊಡನೆ ಸರಸಬೇಡ:
ಕೂಡಲ ಸಂಗಮ ದೇವ **ಕರಸಿತಗನಯ್ಯಾ** ॥ (೯೪೨)

ಈ ವಚನದಲ್ಲಿ ದಪ್ಪ ಅಕ್ಷರದ ಭಾಗ ಕೈ ಬರೆಹದ ಪ್ರತಿಗಳಲ್ಲಿ ಕೂಡಿಯೆ ಬರೆದಿರುವುದರಿಂದ ಇದನ್ನು ''ಕರಸಿ ತನಗನಯ್ಯಾ'' ಎಂದು ವಿಚ್ಛೇದಿಸಿ ಮುದ್ರಿಸಿದುದು ಕಂಡು ಬರುತ್ತಿದೆ.[೧೩] ''ಕರಸಿ'' ಎಂಬುದನ್ನು ''ಕರೆಯಿಸಿ'' ಎಂದೂ ಸಂಸ್ಕರಿಸಿದುದೂ ಕಂಡು ಬರುತ್ತಿದೆ. ಆದರೆ ಹೀಗೆ ಪದಚ್ಛೇದ ಮಾಡಿದಲ್ಲಿ ''ತಗನಯ್ಯಾ'' ಎಂಬದಕ್ಕೆ ಸರಿಯಾದ ಅರ್ಥ ಮಾಡುವುದು ಕಠಿಣವಾಗುತ್ತಿದೆ. ಬಹುಶಃ ತಗು ಎಂಬುದಕ್ಕೆ 'ಯೋಗ್ಯವಾಗು, ಒಪ್ಪು' ಎಂಬ ಅರ್ಥವಿರುವುದರಿಂದ 'ತಗನು' ಎಂದರೆ ಒಪ್ಪಲಾರನು ಎಂದು ಅರ್ಥ ವಿಸಬೇಕೇನೋ? ಆದರೆ ತಗು ಎಂಬುದು ಅಕರ್ಮಕವಾದುದರಿಂದ ಇಲ್ಲಿ 'ಒಪ್ಪು' ಎಂದರೆ ಸಮ್ಮತಿಸು' ಎಂಬ ಸಕರ್ಮಕ ಅರ್ಥ ಹೊಂದುವುದಿಲ್ಲವೆಂದೇ ಹೇಳಬೇಕಾಗುತ್ತಿದೆ. ನಿಜವಾಗಿ 'ಕರ-ಸಿತಗನಯ್ಯಾ ಎಂಬಿವೆರಡು ಬೇರೆ ಶಬ್ದಗಳು: ಇವುಗಳ ಅರ್ಥ (ಕರ=ಕಡು, ಬಹಳ: ಸಿತಗ=ಕೆಡುಕ) ಬಹಳಕೆಟ್ಟವನು 'ಎಂದು ಮಾಡುವುದರಿಂದ' ಈ ವಚನದ ಮರ್ಮ ಚೆನ್ನಾಗಿ ಅವಗತವಾಗುತ್ತಿದೆ.[೧೪]

---

೧೨ ಕಿಟ್ಟೆಲ್ ಅವರ ಕನ್ನಡ-ಇಂಗ್ಲಿಷ್ ನಿಘಂಟು (ನೋಡು: 'ಬಸು' ಮತ್ತು 'ಬಸುಱ್') ಪುಟ ೧೪೯೨ ಮತ್ತು ಹಲಾಯುಧನ 'ಅಭಿಧಾನ ರತ್ನಮಾಲೆ' (ಮದ್ರಾಸು ವಿಶ್ವ ವಿದ್ಯಾನಿಲಯ ಪ್ರಕಟಣೆ) ಪುಟ ೯೯.

೧೩. ಶ್ರೀ ಹಳಕಟ್ಟಿಯವರ ''ಬಸವೇಶ್ವರನ ವಚನಗಳು'' (೧೯೫೪) ಪುಟ ೯೯. ''ಹೊಸ ಪದ್ಧತಿಯ ಬಸವೇಶ್ವರನ ವಚನಗಳು'' ಪುಟ ೫೮.

೧೪ ಇಂತಹ ಕಡೆಗಳಲ್ಲಿ ಭಿನ್ನಾಭಿಪ್ರಾಯಕ್ಕೆ ಎಡೆಯಿದೆಯೆಂಬುದನ್ನೂ ಮರೆಯಲಾಗದು. ಉದಾಹರಣಾರ್ಥವಾಗಿ ಹರಿಹರದೇವನ ಮಾದಾರ ಚೆನ್ನಯ್ಯನ ರಗಳೆ (ಸಾಲು ೩೧೨) ಯಲ್ಲಿ ಚೆನ್ನಯ್ಯನ ಗುಪ್ತ ಭಕ್ತಿಯನ್ನು ಶಿವನು ಬಹಿರಂಗಪಡಿಸಿದನೆಂಬ ಸಂದರ್ಭದಲ್ಲಿ ''ಮೇದಿನಿಗೆ ಬೀರಿಗರುವಾಯಿತ್ತೆನ್ನಯ ಭಕ್ತಿ'' ಎಂಬಲ್ಲಿ 'ಬೀರಿಗರು' ಎಂಬುದು ಅರ್ಥವಾಗುವುದಿಲ್ಲವೆಂದು ಬಗೆದು ಅದನ್ನು 'ಬೀದಿಗಱು' ಎಂದು ತಿದ್ದಿದರೆ ಅರ್ಥ ಸ್ಪಷ್ಟವಾಗುವುದೆಂದು (ಪ್ರಬುದ್ಧ ಕರ್ನಾಟಕ ಸಂಪುಟ ೩೧-೧. ಪುಟ ೮೮) ''ಕನ್ನಡ ಗ್ರಂಥಗಳ ಸಂಪಾದನೆ ಅಥವಾ ಸಂಸ್ಕರಣ ಎಂಬ ಲೇಖನದಲ್ಲಿ ಶ್ರೀ ಎನ್. ಅನಂತರಂಗಾಚಾರ್ಯರವರು ಸೂಚಿಸಿದ್ದಾರೆ. ಆದರೆ

ಹೀಗೆಯೇ

(೩)

ಕೊಳನ ತಡಿಯಲೊಂದು ಹೊಱಸುಕುಳ್ಳಿರ್ದರೇನು
ಗಳಹಂಸೆಯಾಗಬಲ್ಲುದೆ?

ಎಂಬಲ್ಲಿ ಬರುವ 'ಹೊಱಸು' (=ಪಾರಿವಾಳ) ಎಂಬುದಕ್ಕೆ ಪ್ರತಿಯಾಗಿ 'ಬಕ' ಎಂಬ ಶಬ್ದ ಮುದ್ರಿತ ಪಾಠದಲ್ಲಿ ಕಂಡುಬರುವುದಕ್ಕೂ,

(೪)

ಹಲವು ಕಾಲಧಾವತಿಗೊಂಡು ಒಟ್ಟಿದ ಹಿದಿರೆಯು
ಒಂದು ಮಿಡುಕುಱಿಲ್ಲಿ ಜೀವಂತ

-ಇತ್ಯಾದಿ (೨೧೩) ಎಂಬುದರಲ್ಲಿ ಕಂಡುಬರುವ ''ಮಿಡುಕುಱ'' (=ಬೆಂಕಿಯತಿ) ಎಂಬುದಕ್ಕೆ ಬೇರೆಯಾಗಿ 'ಮಿಡುಕಿಡಿ'[೧೫] ಎಂಬ ಪಾಠ ಪ್ರಚಾರವಾಗಿರುವುದಕ್ಕೂ,

(೫)

ಹಾಲೆಂಜಲು ಪೆಯ್ಯನ ಉದಕವೆಂಜಲು ಮತ್ಸ್ಯದ
ಪುಷ್ಪವೆಂಜಲು ತುಂಬಿಯ-
ಎಂತು ಪೂಜಿಸುವೆನಯ್ಯಾ (ಇತ್ಯಾದಿ) (೮೮೫)

ಎಂಬ ವಚನದಲ್ಲಿ ಬರುವ 'ಪೆಯ್ಯ'[೧೬] (=ಆಕಳ ಕರು) ಎಂಬುದಕ್ಕೆ ಪ್ರತಿಯಾಗಿ ವತ್ಸನ[೧೭] ಎಂಬ ಶಬ್ದ ಪ್ರಚಾರದಲ್ಲಿ ಬಂದಿರುವುದಕ್ಕೂ, ಆ ಶಬ್ದಗಳ ನಿಜವಾದ ಅರ್ಥ ತಿಳಿಯದೆ ಹೋದುದೆ ಕಾರಣವೆನ್ನಬಹುದು.

ಬಸವಣ್ಣನವರ ವಚನಗಳಲ್ಲಿ ಬಳಸಿದ ಶಬ್ದಗಳು ಸಾಮಾನ್ಯವಾಗಿ ಸರಳಾರ್ಥವುಳ್ಳವೆ ಆಗಿವೆಯೆಂದರೂ ಅನೇಕ ಸಂದರ್ಭಗಳಲ್ಲಿ ಶ್ಲೇಷೆಗೂ (ಅಥವಾ ದ್ವಂದ್ವಾರ್ಥ) ಎಡೆಯಿದೆ ಎಂದು ಕಾಣುತ್ತಿದೆ. ಕೆಲವು ಕಡೆಗಳಲ್ಲಿ ಈ ಶ್ಲೇಷೆ ವಿಶೇಷ ಲಕ್ಷ್ಯಗೊಟ್ಟಲ್ಲದೆ ಗೋಚರವಾಗದೆ ಹೋಗುವ ಸಂಭವವೂ ಇದೆ. ಉದಾ:

'ಬೀದಿಗಱುವಾಯಿತ್ತು' ಎಂಬುದನ್ನು ಹೇಗೆ ಅರ್ಥಯಿಸಬೇಕೆಂಬುದನ್ನು ಅವರು ತಿಳಿಸಿಲ್ಲ. ಅದನ್ನು ಬೀದಿಗೆ ಅಱುವಾಯಿತ್ತೆಂದಾಗಲಿ ಬೀದಿಗಱುವಾಯಿತ್ತೆಂದಾಗಲಿ ಎರಡು ರೀತಿಯಲ್ಲಿ ಅನ್ವಯಿಸಿಕೊಳ್ಳಬಹುದೆಂದು ಕಾಣುತ್ತದೆ. ಆದರೆ ಈ ಎರಡು ರೀತಿಯಲ್ಲಿಯೂ ನಮಗೆ ಸರಿಯಾದ ಅಥವಾ ಸ್ಪಷ್ಟವಾದ ಅರ್ಥವಾಗಲಿಲ್ಲ. ಇವೆರಡರಲ್ಲಿಯೂ ಹಿಂದೆ ಇರುವ 'ಮೇದಿನಿಗೆ' ಎಂಬುದರ ಔಚಿತ್ಯ ತಿಳಿಯದೆ ಹೋಗುತ್ತದೆ. ಆದರೆ ಮೊದಲಿದ್ದ ಪಾಠವನ್ನೆ ಇಟ್ಟುಕೊಂಡು ''ಮೇದಿನಿಗೆ ಬೀರಿ ಗರುವಾಯಿತ್ತು'' (=ಜಗತ್ತಿಗೆಲ್ಲ ಗೊತ್ತಾಗಿ ಬಹಳ ದೊಡ್ಡದಾಯಿತು) ಎಂದು ಸಮರ್ಪಕವಾಗಿ ಅರ್ಥ ಮಾಡಿಕೊಳ್ಳಲು ಬರಬಹುದಲ್ಲವೆ ?

೧೫ ಶ್ರೀ ಹಳಕಟ್ಟಿಯವರ ''ಬಸವೇಶ್ವರನ ವಚನಗಳು'' (೧೯೩೪) ಪುಟ ೩೧. ಹೊಸ ಪದ್ಧತಿಯ ''ಬಸವೇಶ್ವರನ ವಚನಗಳು'' (೧೯೪೨) ಪುಟ ೧೧೨.

೧೬ ಈ ಶಬ್ದ ಕೈ ಬರಹದ ಪ್ರತಿಗಳಲ್ಲಿ 'ಪೇಯ' ಎಂದು ದೊರೆಯುತ್ತಿದೆ. ಕನ್ನಡ ನಿಘಂಟುಗಳಲ್ಲಿ ಈ ಶಬ್ದ ನಮಗೆ ದೊರೆಯಲಿಲ್ಲ. ತೆಲುಗಿನಲ್ಲಿ ಇದು 'ಪೆಯ್ಯ' ಎಂದು ದೊರಕುತ್ತಿದೆ. ಆ ರೂಪವನ್ನೆ ಇಲ್ಲಿ ಇಟ್ಟುಕೊಂಡಿದ್ದೇವೆ.

೧೭ ಶ್ರೀ ಹಳಕಟ್ಟಿಯವರ ''ಬಸವೇಶ್ವರನ ವಚನಗಳು'' (೧೯೩೪) ಪುಟ ೨೩೮; ''ಹೊಸ ಪದ್ಧತಿಯ ಬಸವೇಶ್ವರನ ವಚನಗಳು'' (೧೯೪೨) ಪುಟ ೧೧೩

(೬)

ನಂಬಿ ಕರೆದೊಡೆ ಓ ಎನ್ನನೆ ಶಿವನು?
ನಂಬದೆ ನಚ್ಚದೆ ಬರಿದೆ ಕರೆವರ
ಕೊಂಬ ಮೆಟ್ಟಿ ಕೂಗೆಂದ
ನಮ್ಮ ಕೂಡಲ ಸಂಗಮದೇವ

ಎಂಬ ವಚನದಲ್ಲಿ 'ನಂಬಿ' ಎಂಬ ಶಬ್ದದಿಂದ ಸುಪ್ರಸಿದ್ಧ ಶಿವಶರಣನಾದ ಸೌಂದರ ನಂಬಿಯ ಹೆಸರನ್ನೂ ಸೂಚಿಸಲಾಗಿದೆ.[೧೮] ಇನ್ನೊಂದು ಉದಾಹರಣೆ ಎಂದರೆ:

(೭)

ದಕ್ಕ ನುಂಗಿದಂತೆ ಬೆರೆತುಕೊಂಡಿರಬೇಡ;
ಬೇಗಿ ಬೆಳೆದ ಗೊನೆವಾಳೆಯಂತೆ
ಬಾಗಿಕೊಂಡಿದ್ದರೆ ಬೇಡಿದ ಪದವಿಯನೀವ
ಕೂಡಲಸಂಗಮದೇವ

ಎಂಬ ವಚನದಲ್ಲಿ ದಕ್ಕು ಶಬ್ದದಲ್ಲಿ ದ್ವಂದ್ವಾರ್ಥವನ್ನಿರಿಸಲಾಗಿದೆ. [(೧) ಆಸ್ತಿ (೨) ಹದನವಾದ ತುದಿಯುಳ್ಳ ಕಟ್ಟಿಗೆಯ ತುಂಡು ಎಂದು] ತನ್ನ ಸ್ವಂತದ ಆಸ್ತಿಯನ್ನು ಇತರರಿಗೆ ಕೊಡಲು ಸಿದ್ಧವಾಗಿರುವ ಬಾಳೆಯ ಗೊನೆ ಬಾಗಿ (=ನಮ್ರವಾಗಿ)ರುತ್ತದೆ. ಇತರರ ಆಸ್ತಿಯನ್ನು ನುಂಗಿದವರು ಕಟ್ಟಿಗೆಯ ತುಂಡನ್ನು ನುಂಗಿದವರಂತೆ-ಸೆಟೆದು ಕುಳ್ಳಿರುತ್ತಾರೆ, ಎಂಬುದು ಈ ವಚನದಲ್ಲಿ ಧ್ವನಿತವಾಗುತ್ತದೆ.

ಅನೇಕ ತಾಳೆವೋಲೆಯ ಪ್ರತಿಗಳಲ್ಲಿ ಬಸವಣ್ಣನವರ ಒಂದು ವಚನ ಕೆಳಗೆ ಕಾಣಿಸಿದ ರೀತಿಯಲ್ಲಿ ದೊರೆಯುತ್ತಿದೆ:

(೮)

ಮಱೆಯಲಾಗದು ಹರಿಯ, ಮಱೆಯಲಾಗದು ಬ್ರಹ್ಮನ
ಮಱೆಯಲಾಗದು ತೆತ್ತೀಸ ಕೋಟಿ ದೇವರ್ಕಳ!
ನಮ್ಮ ಕೂಡಲಸಂಗಮದೇವನ ಮಱೆಯಲಹುದು

ಸಕೃದ್ದರ್ಶನಕ್ಕೆ ಈ ವಚನ 'ಹರಿ ಬ್ರಹ್ಮರನ್ನು ಮರೆಯಲಾಗದು, ಶಿವನನ್ನು ಮರೆಯಬಹುದು' ಎಂದು ಅರ್ಥವಾಗುವಂತೆ-ಕಾಣುವುದರಿಂದ, ಇತ್ತೀಚಿನ ಹಸ್ತಪ್ರತಿಗಳಲ್ಲಿ:

ಮರೆಯಲಾಗದೆ ಹರಿಯ? ಮರೆಯಲಾಗದೆ ಬ್ರಹ್ಮನ?
ಮರೆಯಲಾಗದೆ ತೆತ್ತೀಸಕೋಟಿ ದೇವರ್ಕಳ?
ನಮ್ಮ ಕೂಡಲಸಂಗಮದೇವನ ಮರೆಯಲಹುದು!

ಎಂದು ತಿದ್ದಿ ಬರೆದಿರಬೇಕೆಂದು ತೋರುತ್ತಿದೆ. ಈ ಪಾಠವೇ ಶ್ರೀ ಹಳಕಟ್ಟಿಯವರ

---

೧೮ ಸೌಂದರ್ಯನಂಬಿಯು ತನ್ನ ಪ್ರಿಯೆಯ ಸ್ತನದಲ್ಲಿಯೇ ಶಿವನನ್ನು ಆಹ್ವಾನಿಸಲು ಶಿವನು ಅಲ್ಲಿಯೇ 'ಓ' ಎಂದನೆಂಬುದು ಸುಪ್ರಸಿದ್ಧ ಕತೆಯಾಗಿದೆ. ಕನ್ನಡ ಸಾಹಿತ್ಯದಲ್ಲಿ ಅನೇಕ ಕಡೆಗಳಲ್ಲಿ ಇದರ ಉಲ್ಲೇಖವಿದೆ. ಬಸವಣ್ಣನವರ ಇನ್ನೊಂದು (೬೮೧) ವಚನದಲ್ಲಿಯೂ ಇದರ ಸ್ಪಷ್ಟವಾದ ಉಲ್ಲೇಖವಿದೆ.

''ಬಸವೇಶ್ವರನ ವಚನಗಳಲ್ಲಿ'' ಅಂಗೀಕೃತವಾಗಿದೆ.[೧೯] ಆದರೆ ಬಸವಣ್ಣನವರು ಹರಿಬ್ರಹ್ಮರನ್ನು ನಂಬುತ್ತಿದ್ದವರನ್ನು ಕುರಿತು ವ್ಯಂಗ್ಯವಾಗಿ ನುಡಿದ ವಚನವಿದೆಂದು ನಮಗೆ ತೋರುತ್ತಿದೆ. ಇಲ್ಲಿ 'ಮಱೆ' ಎಂಬ ಶಬ್ದದಲ್ಲಿ ದ್ವಂದ್ವಾರ್ಥವಿದೆಯೆಂದೂ ಹೇಳಬಹುದು. 'ಮಱೆ' ಕ್ರಿಯಾಪದವಾದಾಗ 'ವಿಸ್ಮರಣೆ ಹೊಂದು' ಎಂಬ ಅರ್ಥವನ್ನೂ ನಾಮವಾದಾಗ 'ಆಶ್ರಯ'ವನ್ನೂ ಸೂಚಿಸುತ್ತಿದೆ. ಆದುದರಿಂದ ''ಹರಿಬ್ರಹ್ಮರನ್ನು ಮರೆಯುವುದು ಈ ಜನರಿಗೆ ಆಗುವುದಿಲ್ಲ; ಆದರೆ ಆ ದೇವತೆಗಳ ಆಶ್ರಯವೂ ಇವರಿಗೆ ಸಿಕ್ಕುವುದಿಲ್ಲ. ಕೂಡಲಸಂಗಮನನ್ನು ಮರೆಯಬಹುದೆಂದು ತಿಳಿದಿದ್ದಾರೆ. ಇವರು; ಆದರೆ ಕೊನೆಗೆ ಇವರಿಗೆ ನಿಜವಾದ ಆಶ್ರಯಸ್ಥಾನ ಆತನೆ'' ಎಂಬುದೇ ಬಸವಣ್ಣನವರ ಅಭಿಪ್ರಾಯವಿದ್ದಿರಬೇಕು.[೨೦] ಆದುದರಿಂದ ಈ ಸಂಸ್ಕರಣದಲ್ಲಿ ಈ ವಚನವನ್ನು ನಾವು ತಾಳೆವೋಲೆಯ ಪ್ರತಿಗಳಿಗನುರೂಪವಾಗಿ ತಿದ್ದಿಕೊಟ್ಟಿದ್ದೇವೆ.

(೯)

ಜಂಗಮಕ್ಕೆಱೆದರೆ ಸ್ಥಾವರ ನೆನೆಯಿತ್ತು (೧೯೬)

ಎಂಬಲ್ಲಿ 'ನೆನೆ' ಎಂಬ ಶಬ್ದದಲ್ಲಿ (೧) ತೊಯ್ಯು (೨) ಸ್ಮರಿಸು ಎಂಬೆರಡು ಅರ್ಥಕ್ಕೂ ಎಡೆಯಿದೆ. [(ಸ್ಥಾವರ) ಲಿಂಗಕ್ಕೆ ಅಗ್ಗವಣೆ ನೀರಿನಿಂದ ಮಜ್ಜನಕ್ಕೆರೆವುದಕ್ಕಿಂತ ಜಂಗಮರಿಗೆ ಧನವನ್ನು ಸುರಿಸಿದರೆ ಲಿಂಗ ತೃಪ್ತಿಯಾಗುವುದೆಂಬ ಭಾವ]

*ಬಸವಣ್ಣನವರ ಷಟ್ಸ್ಥಲದ ವಚನಗಳು, ೧೯೫೧*

*ಶಿ. ಶಿ. ಬಸವನಾಳರ ಬರೆಹಗಳು, ೧೯೮೩, ಪು. ೯೨-೧೦೬, ೧೨೦-೨೫*

---

೧೯ ''ಬಸವೇಶ್ವರನ ವಚನಗಳು'' (೧೯೩೪) ಪುಟ ೮೪; ''ಹೊಸ ಪದ್ಧತಿಯ ಬಸವೇಶ್ವರನ ವಚನಗಳು'' (೧೯೪೨) ಪುಟ ೮೦; ಇದರಲ್ಲಿ ಕೊನೆಯ ಸಾಲು 'ನಮ್ಮ ಕೂಡಲಸಂಗಮ ದೇವರ ಮರೆಯಬಹುದೆ' ಎಂಬ ಪಾಠಾಂತರವಿದೆ.

೨೦ ಹರಿ ಬ್ರಹ್ಮಾದಿಗಳೂ ಭವದಲ್ಲಿ ಬರುವವರಾದುದರಿಂದ ಅವರು ಮೋಕ್ಷ ಕೊಡಲು ಶಕ್ತರಲ್ಲವೆಂದ ವೀರಶೈವರ ನಂಬುಗೆ. ರಾಜಶೇಖರ ವಿಲಾಸದ ಕೆಳಗಣ ಪದ್ಯವು (ಅ. ೩-ಪ. ೪೨) ಈ ಅಭಿಪ್ರಾಯವನ್ನು ಸಮರ್ಥಿಸುತ್ತಿದೆ.

ಭವದೊಳ್ ಬರ್ಪಮರರ್ಕಳಂ ಭವವಿಮುಕ್ತ್ಯರ್ಥಂ ಶರಣ್ ಬೊಕ್ಕೊಡೇ
ನವರೇನೀವರೆ ಮುಕ್ತಿಯಂ, ಭವಹರಂ ನೀನಲ್ಲದಿಷ್ಟಾರ್ಥಮಂ
ತವೆಮಾಡಲ್ ಸುರಪಾದಪಂ ನೆರೆಗುಮೀ ಬರ್ಬೂರವೃಕ್ಷಂಗಳೀ
ವುವೆ ಕೇಳಂತಿರೆ ನೀನೆ ಮೋಕ್ಷವರದಂ ಶ್ರೀ ಶೈಲಜಾ ವಲ್ಲಭಾ ॥

# ೫೫. ಶಿವಶರಣರ ಸ್ಥಾನಗಳು, ಬ್ರಾಹ್ಮಣರು, ಕಸಬುದಾರರು, ಅಸ್ಪೃಶ್ಯರು, ಜೈನರು

● ಫ. ಗು. ಹಳಕಟ್ಟಿ

## ಶಿವಶರಣರ ಸ್ಥಾನಗಳು

ವೀರಶೈವೇತಿಹಾಸದ ದೃಷ್ಟಿಯಿಂದ ಶಿವಶರಣರು ಎಲ್ಲಿಯವರೆಂಬುದನ್ನು ಗೊತ್ತುಹಚ್ಚುವದು ಅತ್ಯಂತ ಮಹತ್ವವಾದದ್ದು. ಇದರಿಂದ ಶಿವಶರಣರು ನಡಿಸಿದ ಚಳವಳಿಯು ಯಾವ ಭಾಗದಲ್ಲಿ ಮೊದಲು ಪ್ರಾರಂಭವಾಯಿತು, ಅದು ಯಾವ ಯಾವ ಭಾಗಗಳಲ್ಲಿ ಮುಂದೆ ಹಬ್ಬುತ್ತ ಹೋಯಿತು, ಈ ಚಳವಳಿಯನ್ನು ಯಾವ ಭಾಗದ ಜನರು ಪುರಸ್ಕರಿಸಿದರು, ಇವೇ ಮೊದಲಾದ ವಿಷಯಗಳನ್ನು ತಿಳಿಯಲು ಬಹಳ ಸಹಾಯವಾಗುತ್ತದೆ. ಇದರಲ್ಲಿ ನಾವು ಶಿವಶರಣರ ಚರಿತ್ರೆಗಳು ಭಾಗ ೧ ಮತ್ತು ಭಾಗ ೨ ಈ ಗ್ರಂಥಗಳಲ್ಲಿ ಉಲ್ಲೇಖವಾಗಿರುವ ಚರಿತ್ರೆಗಳನ್ನು ತೆಗೆದುಕೊಂಡಿದ್ದೇವೆ. ಮುಂದಿನ ಗ್ರಂಥಗಳಲ್ಲಿ ಬರಬಹುದಾದವುಗಳನ್ನು ನಾವು ಇಲ್ಲಿ ಉಲ್ಲೇಖಿಸುವದಿಲ್ಲ. ಆದರೂ ಸ್ಥಾನಗಳು ನಮಗೆ ಗೊತ್ತಾಗದೆ ಇದ್ದಂಥ ಶಿವಶರಣರ ಹೆಸರುಗಳು ಇನ್ನೂ ಅನೇಕ ಇರುತ್ತವೆ. ಅವುಗಳನ್ನು ನಾವು ಇಲ್ಲಿ ಅನಿವಾರ್ಯವಾಗಿ ಬಿಟ್ಟು ಬಿಡಬೇಕಾಗಿರುತ್ತದೆ. ಆದರೂ ನಾವು ಕಂಡುಹಿಡಿದ ಸ್ಥಾನಗಳ ಹೆಸರುಗಳು ಸಾಕಷ್ಟು ಇದ್ದು ಅವುಗಳನ್ನು ವಾಚಕರು ನಿರೀಕ್ಷಿಸಿದಲ್ಲಿ ಮೇಲೆ ಹೇಳಿದ ಮಹತ್ವದ ವಿಷಯಗಳ ಬಗ್ಗೆ ಕೆಲವು ಅನುಮಾನಗಳನ್ನು ನಾವು ಕಂಡುಕೊಳ್ಳಬಹುದಾಗಿದೆ. ಶಿವಶರಣರಿದ್ದ ಸ್ಥಾನಗಳು ಯಾವವೆಂದರೆ-

**(೧) ಸೊಲ್ಲಾಪುರ ಜಿಲ್ಲೆ:** ಸೊಲ್ಲಾಪುರದ ಅಮುಗಿದೇವ.

**(೨) ವಿಜಾಪುರ ಜಿಲ್ಲೆ:** (೧) ಹಾವಿನಹಾಳ ಕಲ್ಲಯ್ಯ. (೨) ನಾವದಿಗೆಯ ಗುಡ್ಡಮ್ಮ. (೩) ಗುಡ್ಡಾಪುರದ ವರದಾನಿ ಗುಡ್ಡಮ್ಮ. (೪) ಹೀರೂರಿನ ತಿಲಕವ್ವೆ. (೫) ಗೋಲಗಿರಿಯ ಗೊಲ್ಲಾಳ. (೬) ಕರಜಗಿಯ ಗಜೇಶ ಮಸಣಯ್ಯ. (೭) ಶಿವಣಗೆಯ ನುಲಿಯ ಚಂದಯ್ಯ. (೮) ಕೋಹಳ್ಳಿಯ ಕೋವೂರು ಬ್ರಹ್ಮಯ್ಯ. (೯) ಮಸಳಿಯ ಅಜಗಣ್ಣ ಮತ್ತು (೧೦) ಮುಕ್ತಾಯಕ್ಕಗಳು. (೧೧) ತಾಳೀಕೋಟೆಯ ಶಿವದೇವ. (೧೨) ಇಲ್ಯಾಳದ ಇಳಿಹಾಳಿ ಬೊಮ್ಮಯ್ಯ. (೧೩) ಮಸೂತಿಯ ಮುಸುಡಿಯ ಚೌಡಯ್ಯ. (೧೪) ಪಟ್ಟದಕಲ್ಲಿನ ಅನುಮಿಷ. (೧೫) ಬಾಹೂರಿನ ಬಾಹೂರು ಬ್ರಹ್ಮಯ್ಯ. (೧೬) ಚಿಮ್ಮಲಿಗೆಯ ಚಂದಿಮರಸು (೧೭) ನಿಜಗುಣ (೧೮) ಎಡೆಮಠದ ನಾಗಿದೇವ ಮತ್ತು (೧೯) ಮಸಣಮ್ಮಗಳು. (೨೦) ಐಹೊಳೆಯ ಮಲ್ಲರಸ. (೨೧) ನಿಂಬಾಳದ ನಿಂಬಾಣ ಗಣೇಶ್ವರ. (೨೨) ಇಂಡಿಯ ಶಾಂತಯ್ಯ. (೨೩) ಪಟ್ಟದಕಲ್ಲಿನ ಗೋರಕ್ಷ. (೨೪) ಮಸಳಿಯ ಕದಿರಿರೆಮ್ಮವ್ವೆ ಇವರು ಇದ್ದಾರೆ. ಇವರಲ್ಲಿ ಗೋರಕ್ಷ, ಶಿವಯೋಗಿ ಮಲ್ಲರಸ, ಅನುಮಿಷ ಮತ್ತು ಇಳಿಹಾಳಿ ಬೊಮ್ಮಯ್ಯ ಇವರು ವಿಜಾಪುರ ಜಿಲ್ಲೆಯ ದಕ್ಷಿಣಭಾಗ ಅಂದರೆ ಕೃಷ್ಣಾನದಿಯ ಕೆಳಗಿನ ಪ್ರದೇಶದವರು. ಉಳಿದವರೆಲ್ಲ ಕೃಷ್ಣಾ ಭೀಮಾ ನದಿಗಳ ಮಧ್ಯ ಪ್ರದೇಶದವರು. ತರ್ದವಾಡಿ ಎಂದು ಈ ಪ್ರಾಂತದ ಪುರಾತನ ಹೆಸರಿದೆ. ಮಂಗಳವಾಡವು

ಈ ಪ್ರಾಂತದ ಮುಖ್ಯ ಪಟ್ಟಣವು.

**(೩) ಕಲಬುರ್ಗಿ ಜಿಲ್ಲೆಯ ಪಶ್ಚಿಮ ಭಾಗ:** ಇದರಲ್ಲಿ ವಿಜಾಪುರ ಜಿಲ್ಲೆಯ ಪೂರ್ವ ಮೇರೆಯಿಂದ ೨೦-೩೧ ಮೈಲುಗಳ ಅಂತರದ ಮೇಲಿನ ಪ್ರದೇಶವನ್ನು ತೆಗೆದುಕೊಂಡಿರುತ್ತೇವೆ. ಇಲ್ಲಿ ಪ್ರಸಿದ್ಧಿಗೆ ಬಂದಂಥ ಶಿವಶರಣರು ಯಾರೆಂದರೆ- (೧) ಕೊಂಡಗುಳಿಯ ಕೇಶಿರಾಜ (೨)ಕೋಳೂರಿನ ಕೊಡಗೂಸು (೩) ಅಗ್ನಿಯ ಅಗ್ಗವಣಿಯ ಹೊನ್ನಯ್ಯ ಮತ್ತು (೪ ಓಲೆಯ ಶಾಂತಯ್ಯಗಳು (೫) ಗೊಬ್ಬೂರಿನ ಬಿಬ್ಬಿ ಬಾಚಯ್ಯ (೬) ಸಗರದ ಬ್ರಹ್ಮಯ್ಯ (೭) ಕೆಂಭಾವಿಯ ಭೋಗಣ್ಣ (೮) ಅಮರೇಶ್ವರದ ಆಯದಕ್ಕಿ ಮಾರಯ್ಯ ಮತ್ತು (೯) ಲಕ್ಕಮ್ಮಗಳು. ಮುದನೂರು ಈ ಪ್ರಾಂತದ ಮಹತ್ವದ ಪಟ್ಟಣವು.

**(೪) ಕಲಬುರ್ಗಿ ಜಿಲ್ಲೆಯ ಪೂರ್ವಭಾಗ:** (೧) ಏಲೇರಿಯ ಏಲೇಶ ಕೇತಯ್ಯ ಮತ್ತು (೨) ರೆಮ್ಮವ್ವಗಳು (೩) ಜೀದರದ ವೀರಸಂಗಯ್ಯ.

**(೫) ಮಹಾರಾಷ್ಟ್ರ ದೇಶ:** (೧) ಕಂಧಾರದ ಉರಿಲಿಂಗದೇವ (೨) ಉರಿಲಿಂಗ ಪೆದ್ದಿಗಳು ಮತ್ತು (೩) ಕಾಳವ್ವೆಗಳು (೪) ಕೋಲಂಬೆಯಲ್ಲಿಯ ಕೋಲಂಬೆ (೫) ಭಾಲ್ಕಿಯ ಕುಂಬಾರ ಗುಂಡಯ್ಯ (೬) ಪರಳಿಯ ವೈಜವ್ವೆ.

**(೬) ಮೈಸೂರು ಪ್ರಾಂತ:** (೧) ಹಿರೇ ಜಂಬೂರಿನ ಮಹಾಕಾಳಯ್ಯ ಮತ್ತು (೨) ಸತ್ಯಕ್ಕಗಳು (೩) ಬಿಜ್ಜಾವರದ ಅಮ್ಮವ್ವೆ. ಬಳ್ಳಿಗಾವಿಯು ಈ ಪ್ರಾಂತದ ಮಹತ್ವದ ಪಟ್ಟಣವು.

**(೭) ತೆಲುಗು ಸೀಮೆ:** (೧) ಭೀಮಾವತಿಯ ಮೈದುನರಾಮಯ್ಯ (೨) ಕದಿರಿಯ ಕದಿರಿರೆಮ್ಮಯ್ಯ ಮತ್ತು (೬) ಅಣ್ಣಲದೇವಿಗಳು (೪) ಬೆಜವಾಡದ ಶ್ರೀಪತಿ ಪಂಡಿತ (೫) ಪಾಲ್ಕುರಿಕೆಯ ವೇಮನಾರಾಧ್ಯ (೬) ತಂಗಟೂರಿನ ಮಾರಯ್ಯ (೭) ಕೋಟಗಿರಿಯ ಬಹುರೂಪಿ ಚೌಡಯ್ಯ[೧] (೮) ಲಿಂಗಂಪಲ್ಲಿಯ (ಜಿ-ಮೆಡಕ) ತೆಲುಗೇಶ ಮಸಣಯ್ಯ (೯) ಕಲ್ಲುಕುರಿಕೆಯ ಸಕಳೇಶ ಮಾದರಸ.

**(೮) ತಮಿಳು ದೇಶ:** (೧) ಕಂಚಿಯ ಮಾದಾರ ಚನ್ನಯ್ಯ ಮತ್ತು (೨) ಪಿಟ್ಟವ್ವೆಗಳು (೩) ತಿರುವಾರೂರಿನ ಮೆರೆಮಿಂಡದೇವ (೪) ಪೂರಾಂಡಲದ ಸೂರಂಬೆ (೫) ಚಂದವೂರಿನ ಶಿವಪ್ರಿಯನಾಚಿ.

**(೯) ಬಳ್ಳಾರಿ:** (೧) ಬಳ್ಳಾರಿಯ ಬಳ್ಳೇಶ ಮಲ್ಲಯ್ಯ.

**(೧೦) ಮಲಯಾಳ:** (೧) ಅವಲೂರಿನ ಗೊಗ್ಗವ್ವೆ (೨) ಕೊಳುಕೊಟ್ಟೆಯ ಭದ್ರಗಾಯಕ (೩) ಕುಡಗಲೂರಿನ ಚಾರಮರಾಯ.

**(೧೧) ಓಡಿಸಾ:** (೧) ಕರ್ಣಿಕಾಪುರದ ಸುಜ್ಞಾನಿದೇವ ಮತ್ತು (೨) ನನ್ನಯ್ಯ.

**(೧೨) ಬನಾರಸ:** (೧) ಕಾಶಿಯ ಶಿವಲೆಂಕ ಮಂಚಣ್ಣ.

**(೧೩) ಗುಜರಾಥ ದೇಶ:** (೧) ಶಿವಪುರದ ಆದಯ್ಯ (೨) ಸೊಡ್ಡಳ ಬಾಚರಸ.

---

೧ ಇವನ ಚರಿತ್ರೆಯಲ್ಲಿ ನಾವು ನೀಲಗಿರಿಯ ಜಿಲ್ಲೆಯಲ್ಲಿರುವ ಕೋಟಗಿರಿ ಎಂದು ಕಾಣಿಸಿದ್ದೇವೆ. ಆದರೆ ನಿಜಾಮ ಸಂಸ್ಥಾನದಲ್ಲಿಯ ನಿಜಾಮಬಾದ ಜಿಲ್ಲೆಯಲ್ಲಿ ಕೋಟಗಿರಿ ಎಂಬ ಗ್ರಾಮವಿದೆ. ಇದು ಕಲ್ಯಾಣಕ್ಕೆ ಬಹಳ ದೂರ ಇಲ್ಲ. ಇದೇ ಚೌಡಯ್ಯನ ಗ್ರಾಮವಾಗಿರಬಹುದು.

**(೧೪) ಧಾರವಾಡ ಜಿಲ್ಲೆ:** ಲಕ್ಷ್ಮೇಶ್ವರದ ಆದಯ್ಯ ಮತ್ತು (೨) ಪುಲಿಗೆರಿಯ ಸೋಮಯ್ಯ (೩) ಅಬ್ಬಲೂರಿನ ಏಕಾಂತದ ರಾಮಯ್ಯ.

**(೧೫) ಕಾಶ್ಮೀರ ದೇಶ:** (೧) ಮಾಂಡವ್ಯಪುರದ ಬೊಂತಾದೇವಿ (೨) ಮೋಳಿಗೆಯ ಮಾರಯ್ಯ ಅಥವಾ ಮಹಾದೇವರಾಜ (೩) ಮಹಾದೇವಿಯಮ್ಮ ಮತ್ತು (೪) ನಿಜಲಿಂಗ ಚಿಕ್ಕಯ್ಯಗಳು.

**(೧೬) ಕಲ್ಯಾಣ:** ಬಸವೇಶ್ವರನ ಕಾಲದಲ್ಲಿ ಬಹುಜನ ಶಿವಶರಣರು ಕಲ್ಯಾಣ ಪಟ್ಟಣದಲ್ಲಿ ವಾಸವಾಡಿದ್ದಾರೆ. ಆದರೆ ಅವರೆಲ್ಲರೂ ಬಹುತರವಾಗಿ ಹೊರಗಿನವರಾಗಿರುವುದರಿಂದ ಅವರ ಹೆಸರುಗಳನ್ನು ನಾವು ಇಲ್ಲಿ ಕಾಣಿಸಿಲ್ಲ.

ಯಾವ ಯಾವ ಭಾಗಗಳಿಂದ ಯಾವ ಶರಣರು ಪ್ರಸಿದ್ಧಿಗೆ ಬಂದಿದ್ದಾರೆಂಬುದನ್ನು ಮೇಲಿನ ಪಟ್ಟಿಯಿಂದ ವಾಚಕರು ಅರಿತಕೊಳ್ಳಬಹುದು. ಇದರ ಮೇಲಿಂದ ನಂ|| ೧, ೨, ೩ ಈ ಪ್ರದೇಶಗಳಲ್ಲಿದ್ದ ಭೂ ಪ್ರದೇಶ ಎಂದರೆ ಭೀಮಾ, ಕೃಷ್ಣಾನದಿಗಳ ಮಧ್ಯದಲ್ಲಿದ್ದ ನಾಡೇ ವೀರಶೈವ ಚಳವಳಿಯ ಮುಖ್ಯ ಕೇಂದ್ರವಾಗಿತ್ತೆಂಬುದು ಕೂಡಲೆ ಗೊತ್ತಾಗುವಂತೆ ಇದೆ. ಈ ಭಾಗದಲ್ಲಿ ಅಥವಾ ಈ ಭಾಗಕ್ಕೆ ತೀರ ಸಮೀಪವಿರುವ ಪ್ರದೇಶಗಳಲ್ಲಿಯೇ ರೇವಣಸಿದ್ಧೇಶ್ವರ, ರುದ್ರಮುನಿ, ಬಸವೇಶ್ವರ, ಸಿದ್ಧರಾಮ, ಮಡಿವಾಳ ಮಾಚಿದೇವ, ದೇವರ ದಾಸಿಮಯ್ಯ ಮೊದಲಾದ ಪ್ರಸಿದ್ಧ ಶಿವಶರಣರು ಉತ್ಪನ್ನರಾಗಿದ್ದಾರೆ. ಇವರ ಚರಿತ್ರೆಗಳನ್ನು ನಾವು ಮುಂದಿನ ಭಾಗಗಳಲ್ಲಿ ಕ್ರಮೇಣ ಪ್ರಸಿದ್ಧಿಸುವೆವು. ಇಲ್ಲಿ ಉಗಮ ಹೊಂದಿದ ಈ ಚಳವಳಿಯು ಇಡೀ ಹಿಂದುಸ್ತಾನವನ್ನು ವ್ಯಾಪಿಸಿತ್ತೆಂಬುದು ನಾವು ಮೇಲೆ ಉಲ್ಲೇಖಿಸಿದ ಶಿವಶರಣರ ಸ್ಥಾನಗಳ ಮೇಲಿಂದ ವಾಚಕರಿಗೆ ತಿಳಿಯದೆ ಇರಲಾರದು. ಕರ್ನಾಟಕದ ಈ ಭಾಗದ ತರುವಾಯ ವೀರಶೈವ ಚಳವಳಿಯು ದೃಢವಾಗಿ ನೆಲೆಗೊಂಡ ಪ್ರದೇಶವೆಂದರೆ ಆಂಧ್ರಪ್ರದೇಶವು. ಇಲ್ಲಿ ಅನೇಕ ವಿದ್ವಾಂಸರೂ ಶಿವಶರಣರೂ ಆಗಿ ಹೋಗಿದ್ದಾರೆ. ಇದು ಕರ್ನಾಟಕ ದೇಶದಲ್ಲಿ ಆಗಿಹೋದ ಚಳವಳಿಯ ಪರಿಣಾಮವಿರುತ್ತದೆ. ಈ ಆಂಧ್ರ ಮತ್ತು ಕರ್ನಾಟಕ ದೇಶಗಳಲ್ಲಿ ಆಗಿ ಹೋದ ಶಿವಶರಣರು ಮುಂದೆ ತಮಿಳು ದೇಶದಲ್ಲಿ ಹೋಗಿ ಅಲ್ಲಿಯ ಮುಖ್ಯ ಪಟ್ಟಣಗಳಲ್ಲಿ ವಾಸಮಾಡಿ ಅಲ್ಲಿ ತಮ್ಮ ತತ್ವಗಳನ್ನು ಪ್ರಸಾರಮಾಡಿದ್ದಾರೆ. ಈ ತಮಿಳರೂ ಕರ್ನಾಟಕಸ್ಥರೂ ಕೂಡಿಕೊಂಡು ಮಲಯಾಳ ದೇಶದಲ್ಲಿ ತಮ್ಮ ಸಂಸ್ಕೃತಿಯನ್ನು ಹೆಚ್ಚಿಸಿದ್ದಾರೆ. ಇಲ್ಲಿ ಆದ ಗೊಗ್ಗವ್ವೆಯು ಕನ್ನಡ ವಚನಕಾರಳಿದ್ದಾಳೆ. ಹಾಗೆಯೇ ಮಹಾರಾಷ್ಟ್ರದಲ್ಲಿ ಗೋದಾವರೀನದೀತೀರ ಪ್ರದೇಶದಲ್ಲಿಯೂ ಶಿವಶರಣರೂ ಶಿವ ಶರಣೆಯರೂ ಆಗಿ ಹೋಗಿದ್ದಾರೆ. ಅವರಲ್ಲಿಯೂ ಕೂಡ ಕೆಲವು ಪ್ರಸಿದ್ಧವಚನಕಾರರಾಗಿದ್ದಾರೆ. ಇಷ್ಟೇ ಅಲ್ಲ, ಶೈವ ಸಂಸ್ಕೃತಿಯ ನಾಡುಗಳೆಂದು ಪ್ರಸಿದ್ಧಿ ಹೊಂದಿದ ಕಾಶ್ಮೀರ ದೇಶ, ಓಡಿಸಾ ಪ್ರಾಂತ, ಸೋಮನಾಥ ದೇವಾಲಯವುಳ್ಳ ಗುಜರಾಥ ಪ್ರಾಂತ, ಈ ದೇಶಗಳಲ್ಲಿ ಇದ್ದ ಅನೇಕ ಶೈವರು ಕರ್ನಾಟಕಕ್ಕೆ ಬಂದು ಇಲ್ಲಿ ಶಿವಾನುಭವದ ತತ್ವಗಳನ್ನು ಅನುಸರಿಸುವವರಾಗಿದ್ದಾರೆ. ಈ ಪ್ರಕಾರ ಉತ್ತರ ವಿಜಾಪುರ ಜಿಲ್ಲೆ ಮತ್ತು ಪಶ್ಚಿ ಮಕಲಬುರ್ಗಿ ಜಿಲ್ಲೆಗಳಲ್ಲಿ ಉಂಟಾದ ವೀರಶೈವ ಚಳವಳಿಯು ಎಲ್ಲ ಕಡೆಗೂ ಪ್ರಸಾರ ಹೊಂದಿತೆಂಬುದು ಮೇಲೆ ಹೇಳಿದ ಶಿವಶರಣರ ಸ್ಥಾನಗಳ ಮೇಲಿಂದ ತಿಳಿದು ಬರುತ್ತದೆ.

ಮೇಲಿನ ಸಂಗತಿಗಳು ಜರಿಗಿದ್ದಕ್ಕೋಸ್ಕರ ನಾವು ವಿಸ್ಮಯಪಡಬೇಕಾದುದೇನೂ ಇಲ್ಲ. ಯಾಕಂದರೆ ೧೧ನೇ ೧೨ನೇ ಶತಮಾನಗಳಲ್ಲಿ ವಿಜಾಪುರ ಮತ್ತು ಕಲಬುರ್ಗಿ ಜಿಲ್ಲೆಗಳು ಮುಂದುವರಿದವುಗಳಾಗಿದ್ದವು. ಆದ್ದರಿಂದ ಹಿಂದುಸ್ಥಾನದಲ್ಲಿಯ ಎಲ್ಲ ಪ್ರಾಂತಗಳ ವಿದ್ವಜ್ಜನರು ಇಲ್ಲಿಗೆ ಬಂದು ಹೋಗುವದು ಬಹು ವಾಡಿಕೆಯಾಗಿತ್ತು. ಆದ್ದರಿಂದ ಶಿವಾನುಭವದ ಉಚ್ಚ ತತ್ವಗಳ ತಿಳಿವಳಿಕೆಯು ಅವರಿಗುಂಟಾಗಿ ಅವರಿಂದ ಈ ದೇಶಗಳಲ್ಲಿಯೂ ಶಿವಾನುಭವಿಗಳುಂಟಾಗಿರುವದು ಸಂಭವನೀಯವಿರುತ್ತದೆ.

## ವಚನಶಾಸ್ತ್ರದ ಮಹತ್ವ

ಈ ಪ್ರಕಾರ ವೀರಶೈವ ಮತವು ಹಿಂದುಸ್ಥಾನದಲ್ಲಿ ಬಹುಕಡೆಗೆ ಹಬ್ಬಲಿಕ್ಕೆ ವಚನಶಾಸ್ತ್ರವೇ ಮುಖ್ಯ ಕಾರಣವಾಯಿತೆಂಬುದು ನಿರ್ವಿವಾದವಾದುದು. ಶಿವಶರಣರ ಉಚ್ಚತತ್ವಗಳು ಈ ವಾಙ್ಮಯದಲ್ಲಿ ಹೃದಯಂಗಮವಾಗಿ ವಿವೇಚಿಸಲ್ಪಟ್ಟಿರುತ್ತವೆ. ಶಿವಶರಣರ ಚರಿತ್ರೆಗಳ ಸಂಖ್ಯೆಯು ಭಾಗ ೧ ಮತ್ತು ಭಾಗ ೨ ಈ ಗ್ರಂಥಗಳಲ್ಲಿ ಒಟ್ಟು ೧೧೪ ಇದ್ದು ಇವರಲ್ಲಿ ೫೫ ಜನರು ಕನ್ನಡ ವಚನಕಾರರು ಮತ್ತು ಮೂವರು ಬೇರೆ ವಿದ್ವಾಂಸರು ಇದ್ದಾರೆ. ಈ ವಿದ್ವಾಂಸರಲ್ಲಿ ನಾವು ಶ್ರೀಪತಿ ಪಂಡಿತ, ವೇಮನಾರಾಧ್ಯ ಮತ್ತು ಕೇಶಿರಾಜ ಇವರನ್ನು ಗಣಿಸುತ್ತೇವೆ. ಉಳಿದ ೫೫ ಜನರು ಉನ್ನತ ಸ್ಥಾನವನ್ನು ಹೊಂದಿದ ಶಿವಾನುಭವಿಗಳೂ ಪೂವಾಡ ಪುರುಷರೂ ಆಗಿದ್ದಾರೆ. ವಚನಕಾರರ ಮತ್ತು ವಿದ್ವಾಂಸರ ಈ ದೊಡ್ಡ ಸಂಖ್ಯೆಯನ್ನು ನೋಡಿದಲ್ಲಿ ವೀರಶೈವ ಧರ್ಮದ ಪ್ರಸಾರವು ಅದರ ಸಂಸ್ಕೃತಿ ಮತ್ತು ಅದರಲ್ಲಿರುವ ಉಚ್ಚ ಮತ್ತು ಉದಾರತತ್ವಗಳ ಮೂಲಕವೇ ಆಗಿರುತ್ತದೆಂಬುದು ನಿಃಸಂದೇಹವಾದದ್ದು.

## ಬ್ರಾಹ್ಮಣರು

ಶಿವಶರಣರಲ್ಲಿ ಅನೇಕ ಜನರು ಬ್ರಾಹ್ಮಣರಿದ್ದಾರೆ. ಅವರು ಶಿವಾನುಭವದ ಉಚ್ಚ ತತ್ವಗಳಿಗೋಸ್ಕರ ಪ್ರೇಮವನ್ನು ವಹಿಸಿ ಅದರಂತೆ ನಡಿದಿದ್ದಾರೆ. ಇಷ್ಟೇ ಅಲ್ಲ, ಅವರು ಅವುಗಳ ಪ್ರಸಾರವನ್ನೂ ಕೂಡ ಮಾಡಿದ್ದಾರೆ. ಅವರು ಕೆಳಗೆ ಉಲ್ಲೇಖಿಸಲ್ಪಟ್ಟಿದ್ದಾರೆ.

ಗುಪ್ತಮಂಚಣ್ಣನು ವೀರವೈಷ್ಣವನಂತೆ ಅವನಿಗೆ ಬ್ರಾಹ್ಮಣ ಸಂಸ್ಕಾರಗಳಾಗಿದ್ದರೂ ಅವನು ಗುಪ್ತವಾಗಿ ಲಿಂಗಧಾರಣೆಯನ್ನು ಹೊಂದಿ ರಾತ್ರಿ ಕಾಲದಲ್ಲಿ ಲಿಂಗಾರ್ಚನೆಯನ್ನು ಮಾಡುತ್ತಿದ್ದನು. ಅವನು ಬಿಜ್ಜಳನ ಅಂತರಂಗ ನಿಯೋಗಿಯಾಗಿದ್ದನು. ಆದರೂ ಅವನು ಬ್ರಾಹ್ಮಣರಿಗೆ ಅಂಜಿ ಹೀಗೆ ಗುಪ್ತವಾಗಿ ನಡಿಯುತ್ತಿದ್ದನು. ಅವನು ಹೀಗೆ ನಡೆಯುವದು ಪ್ರಕಟವಾಗಲು ಅವನು ಸಮಾಧಿಸ್ಥನಾದನು. ಆಗ ಬಸವೇಶ್ವರನು ಅವನನ್ನು ಕೊಂದು ಹಾಕಿದ್ದಾನೆಂದು ಬ್ರಾಹ್ಮಣರು ಅವನ ಮೇಲೆ ಆರೋಪವಿಡಲಾಗಿ ಬಸವೇಶ್ವರನು ಅವನ ಸಮಾಧಿಯನ್ನು ದೂರ ಮಾಡಿ ಅವನಿಗೆ ಪ್ರಾಣವು ತಿರುಗಿಬರುವಂತೆ ಮಾಡಿದನು. ಹೀಗೆ ಅವನ ಭಕ್ತಿಯು ಪ್ರಕಟವಾದ ಬಳಿಕ ಅವನು ವೀರಶೈವರಂತೆ ಬಹಿರಂಗದಲ್ಲಿ ಆಚರಿಸುತ್ತ ವಚನಕಾರನಾದನು.

ಅಮ್ಮವ್ವೆಯು ಬ್ರಾಹ್ಮಣೆಯಾಗಿದ್ದಾಳೆ. ಸಮೀಪದ ಸಂಬಂಧಿಕರೆಲ್ಲರು ಮೃತರಾಗಲು ಅವಳು ಅನಾಥಳಾದಳು. ಆಗ ಅವಳು ನೂಲುವ ಕಾಯಕವನ್ನು ಕೈಕೊಂಡು ಶಿವನು ತನ್ನ ಮಗುವೆಂದು ಭಾವಿಸಿ ಶಿವಭಕ್ತಿಯನ್ನು ನಡಿಸಿದಳು.

ಶಿವಲೆಂಕ ಮಂಚಣ್ಣನು ಕಾಶಿಯಲ್ಲಿ ವಿದ್ವಾಂಸನಾದ ಬ್ರಾಹ್ಮಣನು. ಶಿವನೊಬ್ಬನೇ ದೈವವೆಂದು ಪ್ರತಿಪಾದಿಸುವವನಾಗಿ ವಿಷ್ಣುಮೂರ್ತಿಯು ವಿಶ್ವೇಶ್ವರನಿಗೆ ನಮಸ್ಕರಿಸುವಂತೆ ಪೊವಾಡವನ್ನು ಮಾಡಿದನು. ಅವನು ವಿದ್ವಾಂಸನಿದ್ದಾನೆ, ವಚನಕಾರನೂ ಇದ್ದಾನೆ.

ಏಕಾಂತದ ರಾಮಯ್ಯನು ಜಿನನು ದೈವವಲ್ಲೆಂದು ಪ್ರತಿಪಾದಿಸುತ್ತ ಒಂದು ಪೊವಾಡದ ಮೂಲಕ ಅದನ್ನ ಸಿದ್ಧಪಡಿಸಿದನು. ಅವನು ವಚನಕಾರನಿದ್ದಾನೆ.

ಬಿಬ್ಬಿ ಬಾಚಯ್ಯನು ಬ್ರಾಹ್ಮಣನಾಗಿದ್ದರೂ ಅಸ್ಪೃಶ್ಯರ ಮನೆಯಲ್ಲಿಯ ಪ್ರಸಾದವನ್ನು ಸ್ವೀಕರಿಸಿದನು. ಶ್ರೀಪತಿ ಪಂಡಿತನಾದರೂ ಅವನಂತೆಯೇ ನಡಿದನು. ಇದಕ್ಕೆ ಬ್ರಾಹ್ಮಣ ಸಮಾಜದವರು ಉಭಯತರನ್ನು ವಿರೋಧಿಸಿದರೂ ಇವರು ವೀರಶೈವರಲ್ಲಿ ಜಾತಿಭೇದವಿಲ್ಲೆಂಬುದನ್ನು ಸಿದ್ಧಪಡಿಸಿದ್ದಾರೆ. ಈ ಉಭಯತರೂ ವಿದ್ವಾಂಸರು.

ವೇಮನಾರಾಧ್ಯನು ವಿದ್ವಾಂಸನಾದ ಬ್ರಾಹ್ಮಣನು. ಅವನು ತ್ರಿಪುರಾಂತಕೇಶ್ವರನಿಂದ ಲಿಂಗಧಾರಣೆಯನ್ನು ಹೊಂದಿ ಜೈನ, ಬೌದ್ಧ, ಚಾರ್ವಾಕರನ್ನು ವಾದದಲ್ಲಿ ಜಯಿಸಿದನು.

ಇವರಲ್ಲದೆ ಏಲೇಶ ಕೇತಯ್ಯ, ಕೆಂಭಾವಿ ಭೋಗಣ್ಣ, ಬಹುರೂಪಿ ಚೌಡಯ್ಯ, ಶಿವಯೋಗಿ ಮಲ್ಲರಸ, ಸೂರಾಂಬೆ ಇವರೆಲ್ಲರೂ ಬ್ರಾಹ್ಮಣರು. ಆದರೂ ಇವರೆಲ್ಲರೂ ಶಿವಾನುಭವಿಗಳಾಗಿ ಶಿವಶರಣರೆಂದು ಪ್ರಸಿದ್ಧರಾಗಿದ್ದಾರೆ. ಅವರು ಜಾತಿಭೇದವನ್ನು ನಿರಾಕರಿಸಿದ್ದಾರೆ. ಅವರಲ್ಲಿ ಕೆಲವರು ವಚನಕಾರರಾಗಿ ಶಿವಾನುಭವದ ಪ್ರಸಾರ ಮಾಡಿದ್ದಾರೆ. ಅವರ ಚರಿತ್ರೆಗಳು ಶಿವಶರಣರ ಚರಿತ್ರೆಗಳು ಭಾಗ೧, ಇದರಲ್ಲಿ ಬಂದಿವೆ. ಅವುಗಳನ್ನು ವಾಚಕರು ಆ ಗ್ರಂಥದಲ್ಲಿ ನೋಡಬೇಕು.

## ವೀರಶೈವವು ಬ್ರಾಹ್ಮಣ ವಿರೋಧಿ ಧರ್ಮವಲ್ಲ.

ಅನೇಕರು ವೀರಶೈವವು ಬ್ರಾಹ್ಮಣ ವಿರೋಧೀ ಧರ್ಮವೆಂದು ತಿಳಿದಿದ್ದಾರೆ. ಆದರೆ ಮೇಲೆ ವಿವರಿಸಿದ ಶಿವಶರಣರೆಲ್ಲರೂ ಬ್ರಾಹ್ಮಣರು. ಅವರಲ್ಲದೆ ಬಸವೇಶ್ವರನು, ಅವನ ಮಾವಂದಿರಾದ ಬಲದೇವ ಮಂತ್ರಿ ಮತ್ತು ಸಿದ್ದಣ್ಣೊಡೆಯರು, ಮಧುವರಸನು, ಶಂಕರದಾಸಿಮಯ್ಯನು ಇವರೆಲ್ಲರೂ ಬ್ರಾಹ್ಮಣರು. ಇವರು ರಾಜ್ಯಭಾರದಲ್ಲಿ ಉಚ್ಚಸ್ಥಾನವನ್ನು ಹೊಂದಿದವರೂ, ವಚನಕಾರರೂ, ವಿದ್ವಾಂಸರೂ ಇದ್ದಾರೆ. ಇವರ ಚರಿತ್ರೆಗಳು ಮುಂದಿನ ಭಾಗಗಳಲ್ಲಿ ಕ್ರಮೇಣ ಪ್ರಸಿದ್ಧಿಸಲ್ಪಡುವವು. ಈ ಯಾವತ್ತರ ಚರಿತ್ರೆಗಳನ್ನು ನಾವು ಪರಿಶೀಲಿಸಿದಲ್ಲಿ ವೀರಶೈವವು ಬ್ರಾಹ್ಮಣ ವಿರೋಧೀ ಧರ್ಮವೆಂದು ಅನೇಕರು ತಿಳಿದಿದ್ದು ಇದು ಸರಿಯಾದ ಸಂಗತಿಯಲ್ಲವೆಂದು ಕಂಡುಬರುತ್ತದೆ. ವೀರಶೈವ ಧರ್ಮವು ಬ್ರಾಹ್ಮಣರನ್ನು ವಿರೋಧಿಸುವದಕ್ಕೋಸ್ಕರ ಉಂಟಾಗಿರುವುದಿಲ್ಲ. ಅದರ ಧ್ಯೇಯವು ಸಮಾಜದಲ್ಲಿ ಆತ್ಮಾನುಭವವನ್ನು ಹೆಚ್ಚಿಸುವದೇ ಇರುತ್ತದೆ. ಅದು ಹೀಗಿರದಿದ್ದರೆ ವಿದ್ವಾಂಸರಾದ ಬ್ರಾಹ್ಮಣರು ಅದನ್ನು ಎಂದೂ ಪುರಸ್ಕರಿಸುತ್ತಿದ್ದಿಲ್ಲ. ಅವರಲ್ಲನೇಕರು ವೀರಶೈವ ಧರ್ಮವನ್ನು ಅಂಗೀಕರಿಸಿದ್ದಲ್ಲದೇ ಅವರು ಅದರ ಪ್ರಸಾರವನ್ನೂ ಮಾಡಿದ್ದಾರೆ.

ವೀರಶೈವವು ಹೀಗೆ ಆತ್ಮಾನುಭವಕ್ಕೆ ಮಹತ್ವದ.ಸ್ಥಾನವನ್ನು ಕೊಟ್ಟಿರುವದರಿಂದ ಕೆಲವು ವಿಷಯಗಳ ಬಗ್ಗೆ ಅದಕ್ಕೂ ಬ್ರಾಹ್ಮಣ ಧರ್ಮಕ್ಕೂ ವ್ಯತ್ಯಾಸಗಳುಂಟಾಗಿರುತ್ತವೆ. ವೀರಶೈವವು ಅನುಭವಕ್ಕೆ ಪ್ರಾಧಾನ್ಯವನ್ನು ಕೊಟ್ಟಿದ್ದರಿಂದ ಇಂಥ ಅನುಭವವುಳ್ಳವರಲ್ಲಿ ಅದು ವರ್ಣಭೇದ,

ಜಾತಿಭೇದಗಳನ್ನು ಎಣಿಸಿಲ್ಲ. ಅದು ಒಬ್ಬನೇ ದೈವವೆಂದು ಪ್ರತಿಪಾದಿಸುತ್ತದೆ. ಆದ್ದರಿಂದ ಅದು ಅನೇಕ ದೈವಗಳನ್ನು ಭಜಿಸುವ ಬ್ರಾಹ್ಮಣ ಧರ್ಮವನ್ನು ಟೀಕಿಸುವದುಂಟು. ಯಜ್ಞಾದಿಕರ್ಮಗಳನ್ನು ಅದು ಒಪ್ಪಿಕೊಳ್ಳುವುದಿಲ್ಲ. ಆದರೆ ಬ್ರಾಹ್ಮಣ ಧರ್ಮವು ಅವುಗಳನ್ನು ಒಪ್ಪಿಕೊಳ್ಳುತ್ತದೆ. ಇದಲ್ಲದೆ ಅದು ತನ್ನದೇ ಆದ ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲ, ಏಕೋತ್ತರ ಶತಸ್ಥಲಗಳನ್ನು ಧರ್ಮಾಚರಣೆಗೋಸ್ಕರ ಏರ್ಪಡಿಸಿಕೊಂಡಿರುತ್ತದೆ. ಅದರಿಂದ ಅದು ಬ್ರಾಹ್ಮಣರ ವಿಶಿಷ್ಟ ಆಚರಣೆಗಳನ್ನು ಪಾಲಿಸುವದಿಲ್ಲ. ಆದರೆ ಇವೆಲ್ಲವೂ ತಾತ್ವಿಕ ವಿಭೇದಗಳು. ಅವು ಜಾತಿ, ವರ್ಣ, ಮತದ್ವೇಷದಿಂದ ಉಂಟಾದುವಲ್ಲ. ಇಷ್ಟೇ ಅಲ್ಲ, ವೀರಶೈವ ವಚನಕಾರರೂ ವಿದ್ವಾಂಸರೂ ತಮ್ಮ ಈ ಆಚರಣೆಗಳನ್ನು ಪುರಸ್ಕರಿಸುವಲ್ಲಿ ಬ್ರಾಹ್ಮಣರಂತೆ ವೇದ, ಉಪನಿಷತ್ತು, ಆಗಮ, ಪುರಾಣ ಇವುಗಳ ಆಧಾರಗಳನ್ನು ಆಗಿಂದಾಗ್ಗೆ ತೆಗೆದುಕೊಂಡಿರುತ್ತಾರೆ. ಆದ್ದರಿಂದ ವೀರಶೈವ ಧರ್ಮವು ಅನೇಕರು ತಿಳಿದಿರುವಂತೆ ಕೇವಲ ಬ್ರಾಹ್ಮಣ ದ್ವೇಷಕ್ಕಾಗಿ ಹುಟ್ಟಿದುದಲ್ಲವೆಂಬುದು ಸ್ಪಷ್ಟವಾಗುತ್ತದೆ.

## ಕಸಬುದಾರರು

ಶಿವಶರಣರು ತಮ್ಮ ಶಿವಾನುಭವಕಾರ್ಯದಲ್ಲಿ ಉದ್ಯೋಗಗಳಿಗೆ ಮಹತ್ವದ ಸ್ಥಾನವನ್ನು ಕೊಟ್ಟಿದ್ದಾರೆ. ಆದ್ದರಿಂದ ಶಿವಶರಣರಲ್ಲಿ ಎಲ್ಲತರದ ಕಸಬುದಾರರು ಇದ್ದಾರೆ. ಕಸಬುಗಳಲ್ಲಿ ಇಂಥವು ಕೀಳುತರದವು ಇಂಥವು ಹೆಚ್ಚಿನತರದವು ಎಂಬ ತಾರತಮ್ಯಭಾವವು ಇರುವದಿಲ್ಲ. ಆದ್ದರಿಂದ ಕಸಬುಗಳ ಮೂಲಕ ವೀರಶೈವರಲ್ಲಿ ಉಚ್ಚನೀಚ ಭಾವವೆಂಬುದು ಉಂಟಾಗಲಾರದು. ಇದೊಂದು ಕ್ರಾಂತಿಕಾರಕ ತತ್ವವು. ಇದರ ಮೂಲಕ ವೀರಶೈವ ಧರ್ಮದ ಪ್ರಗತಿಯು ಬಸವೇಶ್ವರನ ಕಾಲದಲ್ಲಿ ಬಹು ತೀವ್ರವಾಗಿ ಎಲ್ಲ ಸಮಾಜಗಳಲ್ಲಿ ಆದಂತೆ ತೋರುತ್ತದೆ. ಕಸಬುಗಳನ್ನು ಮಾಡುತ್ತಿದ್ದ ಶಿವಶರಣರ ವಿವರಣೆಯು ಕೆಳಗೆ ಕಾಣಿಸಲಾಗಿದೆ.

**ಒಕ್ಕಲುತನ ಮಾಡುವವರು:** ಅಜಗಣ್ಣ, ಇಳಿಹಾಳಿಬೊಮ್ಮಣ್ಣ, ಒಕ್ಕಲು ಮುದ್ದಯ್ಯ, ಮುಕ್ತಾಯಕ್ಕ, ಏಲೇಶಕೇತಯ್ಯ, ಬಡಿಹೋರಿಬ್ರಹ್ಮಯ್ಯ, ಬಾಹೂರು ಬ್ರಹ್ಮಯ್ಯ, ಮಾರಗೌಡ, ರೆಮ್ಮವ್ವೆ. **ಕಟ್ಟಿಗೆ ಮತ್ತು ಕುಳ್ಳುಮಾರುವವರು:** ಮೋಳಿಗೆಯ ಮಾರಯ್ಯ, ಸಪ್ಪೆಯಲ್ಲಮದೇವ, ಅಣ್ಣಲದೇವಿ, ಮಾದಾರ ಚನ್ನಯ್ಯ. **ರಾಟಿಯ ಕಾಯಕದವರು:** ಅಮ್ಮವ್ವೆ ಮತ್ತು ಕದಿರು ರೆಮ್ಮವ್ವೆ. **ನೆಯ್ಗೆಯ ಕಾಯಕ ಮಾಡುವವ:** ಅಮುಗಿದೇವ. **ಓಲೆಗಳನ್ನು ಮಾರುವವರು:** ಓಲೆಯ ಶಾಂತಯ್ಯ ಮತ್ತು ನಿಜಲಿಂಗಚಿಕ್ಕಯ್ಯ. **ಕುರುಬನು:** ಗೊಲ್ಲಾಳ. **ಹಗ್ಗಮಾಡುವವ:** ನುಲಿಯ ಚಂದಯ್ಯ. **ದೋಸೆಮಾಡುವವಳು:** ಪಿಟ್ಟವ್ವೆ. **ಗಾಣಿಗನು:** ಮಾರುಡಿಗೆಯ ನಾಚಯ್ಯ. **ಮೇದರರು:** ಮೇದಾರ ಕೇತಯ್ಯ, ಮೊರನ ವೇಮಯ್ಯ. **ಅಕ್ಕಸಾಲಿಗರು:** ವರದಾನಿಗುಡ್ಡಮ್ಮ, ಹಾವಿನ ಹಾಳ ಕಲ್ಲಯ್ಯ. **ಕುಂಬಾರನು:** ಕುಂಬಾರ ಗುಂಡಯ್ಯ. **ಭತ್ತ ಕುಟ್ಟುವವಳು:** ಕೊಟ್ಟಣದ ಸೋಮವ್ವೆ. **ದನಕಾಯುವವರು:** ತೆಲುಗೇಶ ಮಸಣಯ್ಯ. ಶಂಕಿತೊಂಡಿ, ಗೋರಕ್ಷ, ಚರ್ಮ **ಹದಮಾಡುವವ:** ಮಾದಾರ ಧೂಳಯ್ಯ. **ನೀರು ಹಾಕುವವ:** ಅಗ್ಗವಣಿಯ ಹೊನ್ನಯ್ಯ. ಅಲ್ಲದೆ ರಾಜ್ಯಾಧಿಕಾರಿಗಳೂ ಅವರಲ್ಲಿ ಇದ್ದಾರೆ. **ಅಧಿಕಾರಿಗಳು:** ಗುಪ್ತಮಂಚಣ್ಣ, ತಂಗಟೂರು ಮಾರಯ್ಯ, ರಾಯಸದ ಮಂಚಣ್ಣ, ಸೊಡ್ಡಳ ಬಾಚರಸ. **ಗ್ರಾಮದ ಗೌಡನು:** ಮುಸುಡಿಯ ಚೌಡಯ್ಯ. **ವ್ಯಾಪಾರಸ್ಥರು:**

ಆದಯ್ಯ, ಬಳ್ಳೇಶ ಮಲ್ಲಯ, ಶಿವಪ್ರಿಯನಾಚಿ. ಹೀಗೆ ಅನೇಕ ತರದ ಕಸಬುಗಳನ್ನು ಮಾಡುವವರು ಶಿವಶರಣರಲ್ಲಿ ಆಗಿಹೋಗಿದ್ದಾರೆ.

## ಅಸ್ಪೃಶ್ಯರು

ಹೇಗೆ ಶಿವಶರಣರಲ್ಲಿ ಅನೇಕರು ಉಚ್ಚವರ್ಣದವರೂ ಉದ್ಯೋಗಸ್ಥರೂ ಆಗಿರುತ್ತಾರೋ ಹಾಗೆಯೇ ಅಸ್ಪೃಶ್ಯರಲ್ಲಿಯೂ ಕೂಡ ಅವರು ಆಗಿರುತ್ತಾರೆ. ಚನ್ನಯ್ಯನು ಮಾದರವನು. ಆದರೆ ಪರಮಾತ್ಮನು ಅವನ ಭಕ್ತಿಗೆ ಮೆಚ್ಚಿ ಅವನೊಡನೆ ಉಂಡಿದ್ದಾನೆ. ಮಾದರ ಧೂಳಯ್ಯನು ಮೊಚ್ಚೆಯ ಜೋಡುಗಳನ್ನು ಮಾಡುವವನು. ಆದರೆ ಪರಮಾತ್ಮನು ಅವನ ಉಳಿಯ ಮೊನೆಯಲ್ಲಿ ಪ್ರಕಟವಾದನು. ನಾವದಿಗೆಯ ಗುಡ್ಡಮ್ಮೆಯನ್ನು ಬ್ರಾಹ್ಮಣರು ಪೀಡಿಸ ಹತ್ತಲು ಅವಳು ಸೌರಾಷ್ಟ್ರ ಸೋಮನಾಥನನ್ನು ಕಾಣಲು ಹೊರಟಳು. ಆಗ ಪರಮಾತ್ಮನು ಅವಳ ಭಕ್ತಿಗೆ ಮೆಚ್ಚಿ ಅವಳಿದ್ದಲ್ಲಿಯೇ ಬಂದು ಪ್ರಕಟವಾದನು. ಬಸವೇಶ್ವರನು ಶಿವನಾಗಮಯ್ಯನ ಪ್ರಸಾದವನ್ನು ನಿಶ್ಶಂಕೆಯಿಂದ ಸೇವಿಸುತ್ತಾ ಇದ್ದನು. ಬ್ರಾಹ್ಮಣರು ಅದನ್ನು ನೋಡಿ ಬಿಜ್ಜಳನಲ್ಲಿ ದೂರು ಹೇಳಲು ಬಸವೇಶ್ವರನು ಬಿಜ್ಜಳನಲ್ಲಿಗೆ ಬಂದು ಶಿವನಾಗಮಯ್ಯನು ಶ್ರೇಷ್ಠ ಕುಲದವನು, ಅವನ ರಕ್ತವು ಪವಿತ್ರವಾದುದು, ಎಂಬುದನ್ನು ತೋರಿಸಲು ಅವನ ಬೆರಳುಗಳನ್ನು ಹಿಂಡಿ ಅವುಗಳೊಳಗಿಂದ ಹಾಲು ಸುರಿಯುವಂತೆ ಮಾಡಿದನು. ಬಸವೇಶ್ವರನು ಅಸ್ಪೃಶ್ಯರು ಭಕ್ತಿಯುಳ್ಳವರಿದ್ದುದಾದರೆ ಅವರು ಕುಲಜರೆಂಬುದಕ್ಕೆ ಅನೇಕ ಉಕ್ತಿಗಳನ್ನು ನುಡಿದಿದ್ದಾನೆ. ಮೇಲೆ ಉಲ್ಲೇಖಿಸಿದ ಅಸ್ಪೃಶ್ಯರಲ್ಲಿ ನಾವದಿಗೆಯ ಗುಡ್ಡಮ್ಮೆಯ ಹೊರ್ತು ಉಳಿದವರೆಲ್ಲರೂ ಶ್ರೇಷ್ಠ ತರದ ವಚನಕಾರರು ಆಗಿದ್ದಾರೆ.

ಹೇಗೆ ಬಸವೇಶ್ವರನು ಅಸ್ಪೃಶ್ಯರನ್ನು ಪುರಸ್ಕರಿಸಿದನೋ ಹಾಗೆಯೇ ಬಿಬ್ಬಿ ಬಾಚಯ್ಯ, ಶ್ರೀಪತಿ ಪಂಡಿತ, ಕೆಂಭಾವಿ ಭೋಗಣ್ಣ, ಸೂರಾಂಬೆ ಇವರೂ ಕೂಡ ಪುರಸ್ಕರಿಸಿದ್ದಾರೆ. ಇವರೆಲ್ಲರೂ ಬ್ರಾಹ್ಮಣರು! ಈ ಎಲ್ಲ ಸಂಗತಿಗಳಿಂದ ೧೨ನೇ ಶತಮಾನದಲ್ಲಿ ಉಂಟಾದ ಶಿವಾನುಭವದ ಪ್ರಸಾರದ ಮೂಲಕ ಉಚ್ಚಕುಲದವರಿಂದ ಹಿಡಿದು ನೀಚಕುಲದವರವರೆಗೆ ಎಲ್ಲ ತರಗತಿಯ ಜನರು ಹೇಗೆ ಜಾತಿಭೇದವನ್ನು ಕಳೆದು ವಿಶಾಲಹೃದಯಿಗಳಾಗಿದ್ದರೆಂಬುದು ಸ್ಪಷ್ಟವಾಗುತ್ತದೆ. ಈ ಶತಮಾನದಲ್ಲಿ ಕರ್ನಾಟಕದಲ್ಲಿ ಇಂಥ ಸ್ಥಿತಿಯು ಪ್ರಾಪ್ತವಾಗಬೇಕಾದರೆ ಅಲ್ಲಿ ಉಂಟಾದ ನಾಗರಿಕತೆಯ ಉಚ್ಚತಮ ಸ್ಥಿತಿಯನ್ನು ತೋರಿಸುತ್ತದೆ.

## ಜೈನರು

ಬ್ರಾಹ್ಮಣರಂತೆ ಜೈನರಲ್ಲಿಯೂ ಬಹುಜನರು ವೀರಶೈವ ಧರ್ಮವನ್ನು ಸ್ವೀಕರಿಸಿದ್ದಾರೆ. ಹೀಗೆ ಅವರು ವರ್ತಿಸಲಿಕ್ಕೆ ಕೆಲವು ವಿಶೇಷತರದ ಕಾರಣಗಳೂ ಉಂಟು. ಅವುಗಳಲ್ಲಿ ಶಿವಶರಣರು ಜೈನರ ಅಹಿಂಸಾ ತತ್ವವನ್ನು ಪೂರ್ಣವಾಗಿ ಅಂಗೀಕರಿಸಿದ್ದುದು ಮುಖ್ಯವು. ಈ ವಿಷಯವಾಗಿ ದಸರಯ್ಯ, ಹಾವಿನಹಾಳ ಕಲ್ಲಯ್ಯ, ಬಡಿಹೋರಿ ಬ್ರಹ್ಮಯ್ಯ, ನನ್ನಿಯ್ಯ, ಇವರ ಚರಿತ್ರೆಗಳನ್ನು ವಾಚಕರು ನೋಡಬೇಕು. ಈ ಪ್ರಕಾರ ಜೈನರನೇಕರು ಶಿವಾನುಭವದ ತತ್ವಗಳಿಗೆ ಒಲಿದವರಾಗಿ ವೀರಶೈವ ಧರ್ಮವನ್ನು ಅಂಗೀಕರಿಸಿದ್ದಾರೆ. ಈ ಬಗ್ಗೆ ವಾಚಕರು ತಿಲಕವ್ವೆ, ಪುರಿಗರಿಯ ಸೋಮಯ್ಯ, ವೈಜವ್ವೆ, ಬಳ್ಳೇಶ ಮಲ್ಲಯ್ಯ, ಸೋಹಳಿಯ ಸೋಮವ್ವೆ ಇವರ ಚರಿತ್ರೆಗಳನ್ನು ನೋಡಬೇಕು.

ಕೆಲವು ಸಂದರ್ಭಗಳಲ್ಲಿ ಶಿವಶರಣರಿಗೂ ಬ್ರಾಹ್ಮಣ ಮತ್ತು ಜೈನರಿಗೂ ಕಾದಾಟಗಳಾದದ್ದು ಕಂಡುಬರುತ್ತದೆ. ಧರ್ಮಕ್ರಾಂತಿಯ ಆರಂಭಕಾಲದಲ್ಲಿ ಹೀಗಾಗುವದು ಸ್ವಾಭಾವಿಕವಿದೆ. ಆದರೆ ಇದು ಸ್ವಲ್ಪ ಕಾಲ ಮಾತ್ರ ನಡಿಯುತ್ತವೆ. ಮುಂದೆ ಶಾಂತತೆಯು ಉಂಟಾಗುತ್ತದೆ. ಹಿಂದುಸ್ತಾನದಲ್ಲಿ ಬಲುವೆುಯಿಂದ ಯಾವ ಧರ್ಮವೂ ಪ್ರಸಾರಹೊಂದಿರುವುದಿಲ್ಲ. ಆದರೆ ಕೆಳಗೆ ಕಾಣಿಸಿದ ಕೆಲವು ಸಂಗತಿಗಳನ್ನು ವಿಚಾರಮಾಡಿದಲ್ಲಿ ವೀರಶೈವ ಮತ್ತು ಜೈನರಲ್ಲಿ ಹಿಂದಿನ ಕಾಲದಲ್ಲಿ ಪರಸ್ಪರ ವಿರೋಧಭಾವವಿದ್ದುದು ಕಂಡುಬರುವುದಿಲ್ಲ.

## ಜೈನ ಮತ್ತು ವೀರಶೈವ ಸಮಾಜಗಳಲ್ಲಿ ಪರಸ್ಪರ ಲಗ್ನ ವ್ಯವಹಾರಗಳು

ಈ ಕಾಲದಲ್ಲಿ ಜೈನ ಮತ್ತು ವೀರಶೈವರಲ್ಲಿ ಪರಸ್ಪರ ಲಗ್ನ ವ್ಯವಹಾರಗಳು ಆಗಿಂದಾಗ್ಗೆ ನಡಿಯುತ್ತಿದ್ದವೆಂಬುದು ಕೆಲವು ಚರಿತ್ರೆಗಳಿಂದ ಕಂಡುಬರುತ್ತದೆ. ಆದಯ್ಯನು ವೀರಶೈವನು. ಅವನು ವಚನಕಾರನೂ ಇದ್ದಾನೆ. ಅವನು ವೀರಶೈವನಾದರೂ ಪದ್ಮಾವತಿ ಎಂಬ ಜೈನಳನ್ನು ಲಗ್ನವಾಗಿ ಪುಲಿಗೆರೆಯಲ್ಲಿ ವಾಸಮಾಡುತ್ತಿದ್ದನು. ಹೀಗಿರುವಲ್ಲಿ ಒಂದು ದಿವಸ ಕೆಲವು ಶ್ರಾವಕರು ಅವಳ ತಾಯಿಯ ಮನೆಯಲ್ಲಿ ಊಟಕ್ಕೆ ಬಂದರು. ಆಗ ಅವಳಿಗೆ ಅನ್ನವು ಕಡಿಮೆ ಬೀಳಲು ಅವಳು ತನ್ನಮಗಳು ಪದ್ಮಾವತಿಯ ಮನೆಗೆ ಹೋಗಿ ಅವಳು ಮಹೇಶ್ವರರಿಗಾಗಿ ಸಿದ್ಧಮಾಡಿಟ್ಟ ಅನ್ನವನ್ನೆಲ್ಲ ಕಸೆದುಕೊಂಡು ಬಂದಳು! ಇದರಿಂದ ಜೈನ ವೀರಶೈವರಲ್ಲಿ ಪರಸ್ಪರ ಲಗ್ನ ಮತ್ತು ಅನ್ನೋದಕ ವ್ಯವಹಾರಗಳು ನಿರಾತಂಕವಾಗಿ ನಡಿಯುತ್ತಿದ್ದವೆಂಬುದು ಸ್ಪಷ್ಟವಾಗುತ್ತದೆ. ತಿಲಕವ್ವೆಯು ಮೊದಲು ಜೈನಳು. ಅವಳು ಹಿಂದುಗಡೆ ಜೈನಧರ್ಮವನ್ನು ಬಿಟ್ಟು ಶಿವಧರ್ಮವನ್ನು ಸ್ವೀಕರಿಸಿದಳು. ಆದರೂ ಅವಳ ತಂದೆ ತಾಯಿಗಳು ಅವಳನ್ನು ಒಬ್ಬ ಜೈನನಿಗೆ ಕೊಟ್ಟು ಲಗ್ನ ಮಾಡಿದರು. ಹಾಗೆಯೇ ಸೋಹಳಿಯ ಸೋಮವ್ವೆಯ ಲಗ್ನದಲ್ಲಿಯೂ ಜರಗಿರುತ್ತದೆ. ಈ ಲಗ್ನಗಳು ತಿಲಕವ್ವೆ ಮತ್ತು ಸೋಮವ್ವೆಯರ ಮನಸ್ಸಿನ ವಿರುದ್ಧವಾಗಿ ಆಗಿದ್ದು, ಅದರಿಂದ ಮುಂದೆ ಅನಾಹುತಗಳಾದವೆಂದು ಅವರ ಕಥೆಗಳಲ್ಲಿ ಕಂಡುಬರುತ್ತದೆ. ಆದರೂ ಇವುಗಳು ಆಗ ಜೈನ ಮತ್ತು ವೀರಶೈವರಲ್ಲಿ ಲಗ್ನಗಳಾಗುತ್ತಿದ್ದವೆಂಬ ಸಂಗತಿಯನ್ನು ಸ್ಪಷ್ಟಪಡಿಸುತ್ತವೆ. ವೈಜವ್ವೆಯ ತಂದೆತಾಯಿಗಳು ಮೊದಲು ಜೈನರಾಗಿದ್ದರು. ಆದರೆ ಅವರು ಹಿಂದುಗಡೆ ಬಹಿರಂಗವಾಗಿ ವೀರಶೈವಾಚರಣೆಯಂತೆ ನಡೆಯಹತ್ತಿದರು. ಒಂದು ದಿವಸ ವೈಜವ್ವೆಯ ತಂದೆಯ ತಂಗಿಯು ಅವನ ಮನೆಗೆ ಬಂದಿರಲು ವೈಜವ್ವೆಯನ್ನು ತನ್ನ ಮಗನಿಗೆ ಲಗ್ನ ಮಾಡಿಕೊಡಲು ತನ್ನ ಅಣ್ಣನಿಗೆ ಅವಳು ಕೇಳಿದಳು. ಅದಕ್ಕೆ ಅವನು ಅವಳಿಗೆ ನೀವು ಜೈನರಾದ್ದರಿಂದ ನಿಮಗೆ ನನ್ನ ಮಗಳನ್ನು ಕೊಡೆವು ಎಂದು ಹೇಳಿದನು. ಅದಕ್ಕೆ ಅವಳು ಛಲಹಿಡಿದು ಮನೆಯಲ್ಲಿ ಕುಳಿತಳು. ಆಗ ಅವರ ಬಂಧು ಬಳಗದವರು ನೆರೆದು ಇವರು ಜೈನರಾದರೇನಾಯಿತು? ತಂಗಿಯ ಮಗನಿಗೆ ಮಗಳನ್ನು ಕೊಡುವುದೇ ಉಚಿತವೆಂದು ಅಣ್ಣನಿಗೆ ಹೇಳಿ ಉಭಯತರ ಲಗ್ನವನ್ನು ಮಾಡಿಸಿದರು. ಈ ಸಂಗತಿಗಳಿಂದ ಈ ಕಾಲದಲ್ಲಿ ಜೈನ ವೀರಶೈವರಲ್ಲಿ ಆಗಿಂದಾಗ್ಗೆ ಧರ್ಮಾಂತರಗಳು ಆಗುತ್ತಿದ್ದವೆಂತಲೂ ಅವರಲ್ಲಿ ಲಗ್ನ ವ್ಯವಹಾರಗಳು ಸಹ ನಿರಾತಂಕವಾಗಿ ನಡೆಯುತ್ತಿದ್ದವೆಂತಲೂ ಗೊತ್ತಾಗುತ್ತದೆ. ಈ ಕಾರಣಗಳಿಂದ ಉಭಯ ಸಮಾಜದವರು ಈ ಕಾಲದಲ್ಲಿ ಕೇವಲ ವಿರೋಧಿಗಳಾಗಿ ವರ್ತಿಸುತ್ತಿದ್ದರೆಂದು ಹೇಳುವದು ತಪ್ಪಾಗುತ್ತದೆ.

## ಬ್ರಾಹ್ಮಣ ಮತ್ತು ವೀರಶೈವ ಸಮಾಜಗಳಲ್ಲಿ ಪರಸ್ಪರ ಲಗ್ನ ವ್ಯವಹಾರಗಳು

ಈ ಸಂಗತಿಯು ಆಗಿನ ಬ್ರಾಹ್ಮಣ ಮತ್ತು ವೀರಶೈವ ಸಮಾಜಗಳಲ್ಲಿಯೂ ಇದ್ದುದು ಕಂಡುಬರುತ್ತದೆ. ಅಮ್ಮವ್ವೆಯ ತಾಯಿತಂದೆಗಳು ಬ್ರಾಹ್ಮಣರು. ಅವರು ಮುಂದೆ ವೀರಶೈವ ಧರ್ಮವನ್ನು ಪಾಲಿಸುವವರಾದರು. ಆದರೂ ಅವಳ ಸೋದರತ್ತೆಯು ಅವಳನ್ನು ತನ್ನ ಮಗನಿಗೆ ತೆಗೆದುಕೊಂಡು ಲಗ್ನ ಮಾಡಿದಳು. ಕೋವೂರಲ್ಲಿದ್ದ ಭಾಸ್ಕರನು ವೈಷ್ಣವನು. ಆದರೂ ಅವನು ವೀರಶೈವನಾದ ಭೀಮಯ್ಯನ ಮಗಳಾದ ಚಂದ್ರಾಣಿದೇವಿಯನ್ನು ಲಗ್ನವಾಗಲು ಇಚ್ಛಿಸಿದನೆಂದು ವೀರಸಂಗಯ್ಯನ ಚರಿತ್ರೆಯಿಂದ ತಿಳಿದುಬರುತ್ತದೆ.

ಈ ಪ್ರಕಾರ ವೀರಶೈವ ಧರ್ಮವು ಜೈನ ಮತ್ತು ಬ್ರಾಹ್ಮಣ ಸಮಾಜಗಳ ಮೇಲೆ ಪರಿಣಾಮ ಮಾಡಿದ್ದು ಸ್ಪಷ್ಟವಾಗುತ್ತದೆ. ಆದ್ದರಿಂದಲೇ ಈ ತೆರದ ಅನ್ನೋದಕ ವ್ಯವಹಾರಗಳು ಮತ್ತು ಲಗ್ನ ವ್ಯವಹಾರಗಳು ಆ ಕಾಲದಲ್ಲಿ ಪರಸ್ಪರವಾಗಿ ಜರಗುತ್ತಿದ್ದವೆಂದು ತೋರುತ್ತದೆ. ಈ ಸಂಗತಿಗಳು ಹಿಂದಿನ ಕಾಲದಲ್ಲಿ ವೀರಶೈವ, ಜೈನ, ಮತ್ತು ಬ್ರಾಹ್ಮಣ ಈ ಸಮಾಜಗಳಲ್ಲಿ ಪರಸ್ಪರ ವೈರಭಾವವಿದ್ದುದನ್ನು ತೋರಿಸುವದಿಲ್ಲ. ಒಂದುವೇಳೆ ಇಂಥ ಪರಿಸ್ಥಿತಿಯು ಆ ಕಾಲದಲ್ಲಿ ಆಯಾ ಸಮಾಜಗಳಲ್ಲಿ ಇದ್ದಿದ್ದರೆ ವೀರಶೈವ ಧರ್ಮವು ಎಂದೂ ಬೆಳೆಯುತ್ತಿದ್ದಿಲ್ಲ.

*ಶಿವಶರಣರ ಚರಿತ್ರೆಗಳು, ೨, ೧೯೪೮, ಪ್ರಸ್ತಾವನೆ, ಪು. ೪೨-೬೫*

# ೫೬. ವೀರಶೈವ ಪುರಾಣಗಳ ಪರಿಕಲ್ಪನೆ

● ಎಸ್. ವಿದ್ಯಾಶಂಕರ

'ಪುರಾಣ' ಶಬ್ದಕ್ಕೆ ಬಳಕೆಯಲ್ಲಿರುವ ಸಾಮಾನ್ಯ ಅರ್ಥ ಪ್ರಾಚೀನ ಎಂಬುದು. ಹಿಂದೂ ಧಾರ್ಮಿಕ ಸಾಹಿತ್ಯದ ಒಂದು ದೊಡ್ಡ ಭಾಗ ವೈದಿಕ ಪುರಾಣಗಳಾಗಿವೆ. ಅಲ್ಲಿ ಪುರಾಣ ಶಬ್ದದ ವ್ಯಾಪ್ತಿಯೊಳಗೆ ಪ್ರಾಚೀನವಾದುದೆಲ್ಲಾ ಬರುವುದಿಲ್ಲ. ಅಲ್ಲಿ ಪುರಾಣ ಶಬ್ದವು ಮೊತ್ತಮೊದಲು ಇತಿಹಾಸ ಪೂರ್ವದ ವಿಶ್ವೋತ್ಪತ್ತಿ ವೈಚಿತ್ರ್ಯದ ಕಾಲ್ಪನಿಕ ಕಥೆಗಳಿಗೆ (Legend) ಸಂಬಂಧಿಸಿತ್ತು. ಅನಂತರ, ಸಾಂಪ್ರದಾಯಿಕವಾಗಿ ಬಂದ ಪ್ರಾಚೀನ ಘಟನಾವಳಿಗಳು (Episodes), ಹಳಗತೆಗಳು (Ancient tales) ಮೊದಲಾದವುಗಳಿಗೂ ಈ ಹೆಸರು ಕೊಡಲಾಯಿತು. ಬಹುವಾಗಿ ಜಾನಪದಗೀತಗಳ ರೂಪದಲ್ಲಿದ್ದ ಅವನ್ನು 'ಪ್ರಾಚೀನಗಾಥಾ' ಎಂದು ಕರೆಯುತ್ತಿದ್ದರು. ಅವುಗಳ ಸಂಕಲನವು 'ಪುರಾಣಗಾಥಾ' ಆಯಿತು; ಮತ್ತು ಆ ಜಾತಿಯ ಕೃತಿಗಳೆಲ್ಲಾ ಮುಂದೆ ಪುರಾಣವೆಂಬ ಅನ್ವರ್ಥನಾಮದಿಂದಲೇ ರೂಢಿಯಲ್ಲಿ ಬಂದುವು.

ಪ್ರಾರಂಭದಲ್ಲಿ ವೈದಿಕ ಪುರಾಣ ಕರ್ತೃಗಳು ಸರ್ಗ, ಪ್ರತಿಸರ್ಗ, ಮನ್ವಂತರ, ವಂಶ, ವಂಶಾನುಚರಿತ ಎಂಬ ಪಂಚಲಕ್ಷಣಗಳನ್ನು ಹೇಳಿ ಈ ಲಕ್ಷಣಗಳ ಚೌಕಟ್ಟಿನಲ್ಲಿ ಅವರು ಪುರಾಣರಚನೆ ಮಾಡಿದರು. ಆದರೆ, ಬರುಬರುತ್ತ ಪುರಾಣಗಳ ವ್ಯಾಪ್ತಿ ವಿಶಾಲವಾಗುತ್ತಾ ನಡದು ಅವು 'ಭಾರತೀಯ ವಿಶ್ವಕೋಶ'ವಾಗಿ ಮಾರ್ಪಟ್ಟವು. ಪ್ರಾಪಂಚಿಕರಿಗೆ ಸರ್ವತೋಮುಖವಾದ ಪ್ರಯೋಜನ ಲಭ್ಯವಾಗಬೇಕೆಂಬುದೇ ಪುರಾಣಗಳ ಈ ಬಹುಮುಖವಾದ ಬೆಳವಣಿಗೆಯ ಮೂಲೋದ್ದೇಶವಾಗಿದೆಯೆಂದರೆ ತಪ್ಪಾಗಲಾರದು. ಇದರ ಜೊತೆಗೆ, ಪುರಾಣಗಳನ್ನು ರಚಿಸಿದವರ ಧಾರ್ಮಿಕ ಪಂಥ ಹಾಗೂ ಅವರ ಉಪಾಸನಾದೇವತೆಯ ಸರ್ವೋತ್ಕೃಷ್ಟತೆಯನ್ನು ಎತ್ತಿಹಿಡಿಯುವ ಹೆಬ್ಬೊತ್ತಿಗೆಗಳು ಪುರಾಣಗಳಾಗಿವೆಯೆಂಬುದನ್ನೂ ಮರೆಯಲಾಗದು.

ವೈದಿಕ ಪುರಾಣಗಳು ಸಾಮಾಜಿಕ ಹಾಗೂ ಧಾರ್ಮಿಕ ನೆಲೆಯಲ್ಲಿ ಬೀರಿದ ಪ್ರಭಾವ ವನ್ನು ಗಮನಿಸಿದ ಜೈನರೂ ತಮ್ಮ ಪುರಾಣಗಳಿಗೆ ಲೋಕಾಕಾರ ಕಥನ, ದೇಶ ನಿವೇಶೋಪವೇಶ, ನಗರಸಂಪತ್ಪರಿವರ್ಣನ, ರಾಜ್ಯರಾಮಣೀಯಕಾಖ್ಯಾನ, ತೀರ್ಥ ಮಹಿಮಾಸಮರ್ಥನ, ಚತುರ್ಗತಿ ಸ್ವರೂಪ ನಿರೂಪಣ, ತಪೋದಾನ ವಿಧಾನವರ್ಣನ, ತತ್ಫಲಪ್ರಾಪ್ತಿ ಪ್ರಕಟನ ಎಂಬ ಅಷ್ಟಾಂಗಗಳನ್ನು ಹೇಳಿದರು. ಪುರಾಣಪದ್ಧತಿಯಲ್ಲಿ ಮುನಿಪ್ರೋಕ್ತ ಹಾಗೂ ಕವಿಪ್ರೋಕ್ತಗಳೆಂಬ ಎರಡು ಬಗೆಯನ್ನು ಜೈನಕವಿಗಳು ರೂಢಿಗೆ ತಂದರು. ಅವರ ಪ್ರಕಾರ, ದೇಶ-ನಗರ ರಾಜ್ಯೋತ್ಸವಾಖ್ಯಾನಗಳು ಹೊರತಾಗಿ ಇರುವವು ಮುನಿಪ್ರೋಕ್ತ ಪದ್ಧತಿಯಲ್ಲಿ ಮೇಲೆ ಹೇಳಿದ ಅಷ್ಟಾಂಗಗಳು ಇರುವವು. ಇವಲ್ಲದೆ, ತೀರ್ಥಂಕರರ ಹುಟ್ಟಿನಿಂದ ಅಂತ್ಯದವರೆಗಿನ ಐದು ಪ್ರಮುಖ ಉತ್ಸವಗಳಾದ ಪಂಚಕಲ್ಯಾಣಗಳನ್ನು, ಜಿನಧರ್ಮದ ತಾತ್ತ್ವಿಕಾಂಶಗಳನ್ನು ಜೈನಪುರಾಣಗಳು ಒಳಗೊಳ್ಳುವವು.

ವೈದಿಕ ಹಾಗೂ ಜೈನ ಪುರಾಣಕಾರರು ಪ್ರಾರಂಭದಲ್ಲಿ ತಮ್ಮ ಪುರಾಣಗಳಿಗೆ ಲಾಕ್ಷಣಿಕ ಚೌಕಟ್ಟನ್ನು ವಿಧಿಸಿದರೂ ಅವು ಕಾಲಕ್ರಮದಲ್ಲಿ ಮೇರೆ ಮೀರಿದುವು. ಸಮಷ್ಟಿಪ್ರಜ್ಞೆ ಬಹುಶಃ ಈ ಮಿತಿಗಳನ್ನು ದಾಟಲು ಕಾರಣವಾಗಿರಬಹುದು. ತಮ್ಮತಮ್ಮ ಧರ್ಮೀಯರಿಗೆ

ಪರಂಪರೆಯ ತಿಳಿವಳಿಕೆಯ ಜೊತೆಗೆ, ಅವರ ಬದುಕು ಪರಿಪೂರ್ಣವಾಗಲು ಅಗತ್ಯವಿರುವ ಜ್ಞಾನಶಾಖೆಯ ಅರಿವೂ ಅಗತ್ಯವೆಂಬುದು ಮನದಟ್ಟಾಗಿರಬೇಕು.

ವೀರಶೈವ ಧರ್ಮವು ಒಂದು ಸ್ಪಷ್ಟ ರೂಪರೇಷೆಯನ್ನು ಕಂಡುಕೊಂಡದ್ದು ಹನ್ನೆರಡನೆಯ ಶತಮಾನದ ಬಸವಾದಿ ಶಿವಶರಣರು ನಡೆಸಿದ ಜನತಾ ಆಂದೋಳನದಲ್ಲಿ. ಈ ಆಂದೋಳನ ತಿಳಿದವರು ತಿಳಿಯದವರು, ಉಳ್ಳವರು ಇಲ್ಲದವರು ಒಟ್ಟುಗೂಡಿ ನಡೆಸಿದ ಸಂಘಟನೆ - ಐತಿಹಾಸಿಕವಾದುದು. ಏಕೆಂದರೆ, ಇದು ಕೇವಲ ಕೆಲವೇ ಕೆಲವು ವರ್ಷಗಳಲ್ಲಿ ಸಾಮಾಜಿಕ, ಧಾರ್ಮಿಕ, ಸಾಹಿತ್ಯಕ, ಸಾಂಸ್ಕೃತಿಕ ರಂಗಗಳಲ್ಲಿ ಅತ್ಯದ್ಭುತವಾದ ಬದಲಾವಣೆಗಳನ್ನು ತಂದಿತು. ಇಷ್ಟು ಅಲ್ಪಕಾಲಾವಧಿಯಲ್ಲಿ ಕಾಣಿಸಿಕೊಂಡಂತಹ ಮಾರ್ಪಾಟು, ವಿಶ್ವದ ಬೇರೆ ಯಾವ ಆಂದೋಳನದಲ್ಲೂ ಆದಂತೆ ತೋರುವುದಿಲ್ಲ. ಕಲ್ಯಾಣಕ್ರಾಂತಿಯಿಂದಾಗಿ ಎಲ್ಲೆಲ್ಲೋ ಭಯದ ವಾತಾವರಣ ತಲೆದೋರಿದ್ದರಿಂದಾಗಿ ಬಸವಾದಿ ಶಿವಶರಣರ ಸಂಘಟನೆ ಮುರಿಯಿತು. ಶಿವಶರಣರು ಕಲ್ಯಾಣದಿಂದ ಚೆದುರಿಹೋದರು: ಜೇನುಗೂಡಿಗೆ ಕಂಕಿಬಿದ್ದಾಗ ಜೇನು ಹುಳುಗಳು ಚೆಲ್ಲಾಪಿಲ್ಲಿಯಾದಂತೆ. ಸಂಘಟನೆ ಶಕ್ತಿಗುಂದಿದರೂ ಬಸವಾದಿ ಶಿವಶರಣರ ಜೀವನಾದರ್ಶ, ಬೋಧಿಸಿದ ತತ್ವಗಳು ಮರೆಯಲಾಗಲಿಲ್ಲ; ಅವರು ಬರೆದಿಟ್ಟು ಹೋದಂತಹ ಅಮೂಲ್ಯ ಸಾಹಿತ್ಯ ಸಂಪೂರ್ಣವಾಗಿ ನಾಶವಾಗಲಿಲ್ಲ. ಶಿವಶರಣರ ಬದುಕು-ಸಾಹಿತ್ಯ ಚಿರಂತನವಾದ್ದರಿಂದಲೂ ಏನೋ ಅವುಗಳಿಂದ ಸ್ಫೂರ್ತಿ ಪಡೆದ ಹರಿಹರ-ರಾಘವಾಂಕರು ಕಾವ್ಯರಚನೆ ಮಾಡಿದರು.

ಕಲ್ಯಾಣಕ್ರಾಂತಿಯ ನಂತರದ ಕಾಲಾವಧಿಯಲ್ಲಿ ವೀರಶೈವ ಸಾಹಿತ್ಯ ರಚನೆಯಲ್ಲಿ ಮೂರು ಪ್ರಮುಖ ಬಗೆಗಳನ್ನು ಗುರುತಿಸಬಹುದು.

ಮೊದಲನೆಯದು, ಬಸವಾದಿ ಶಿವಶರಣರು ನಡೆಸಿದ ಸಮಾಜೋ ಧಾರ್ಮಿಕ ಚಳುವಳಿಯಿಂದ ಸ್ಫೂರ್ತಿ ಪಡೆದು ವಸ್ತುವಿನ ಆಯ್ಕೆ, ನಿರೂಪಣಾ ವಿಧಾನ, ಭಾಷೆ, ಛಂದಸ್ಸು - ಇವುಗಳಲ್ಲಿ ಜನಸಮ್ಮುಖವಾದುದು.

ಎರಡನೆಯದು, ಆಂಧ್ರದ ಪಾಲ್ಕುರಿಕೆ ಸೋಮನಾಥನು ದ್ವಿಪದದಲ್ಲಿ ಬರೆದ ತೆಲುಗು 'ಬಸವಪುರಾಣ'ವನ್ನು ಕನ್ನಡದ ಭೀಮಕವಿ ಭಾಮಿನಿ ಷಟ್ಪದಿಯಲ್ಲಿ ಕನ್ನಡಕ್ಕೆ ರೂಪಾಂತರಿಸಿದುದು; ಇಲ್ಲಿಂದ ವೀರಶೈವ ಪುರಾಣ ಪರಂಪರೆ ಪ್ರಾರಂಭವಾದುದು. ಮೂರನೆಯದು, ಲಕ್ಕಣ್ಣದಂಡೇಶ, ಜಕ್ಕಣಾರ್ಯ ಮೊದಲಾದವರ ನೇತೃತ್ವದಲ್ಲಿ ವೀರಶೈವ ಪುನರುಜ್ಜೀವನ ಕಾರ್ಯ ಬೃಹತ್ ಪ್ರಮಾಣದಲ್ಲಿ ನಡೆದುದು, ಆ ಹಿನ್ನೆಲೆಯಲ್ಲಿ ವೀರಶೈವ ಸಾಹಿತ್ಯ ಸೃಷ್ಟಿಯಾದುದು.

ಹನ್ನೆರಡನೆಯ ಶತಮಾನದ ಉತ್ತರ ಭಾಗದಲ್ಲಿ ಜೈನಧರ್ಮ ತನ್ನ ಪ್ರಭಾವವನ್ನು ಕಳೆದುಕೊಂಡು ವೀರಶೈವ ಧರ್ಮ ಪ್ರಚಾರಕ್ಕೆ ಬಂದಿತು–ಬಸವಾದಿ ಶಿವಶರಣರ ಸಾಮೂಹಿಕ ಪ್ರಯತ್ನದಿಂದ. ಆಗ ಇದೂ ವೈದಿಕ ಜೈನಧರ್ಮಗಳಂತೆ ತನ್ನ ಪುರಾಣಗಳ ಲಾಕ್ಷಣಿಕ ಚೌಕಟ್ಟನ್ನು ನಿರ್ಮಿಸಿಕೊಳ್ಳಬಹುದಾಗಿತ್ತು. ಆದರೆ, ಹಾಗೆ ಆಗಲಿಲ್ಲ. ಬಹುಶಃ ಶಿವಶರಣರು ಕಾವ್ಯಗಳನ್ನು, ಪುರಾಣಗಳನ್ನು ಬರೆಯದೆ ಅದಂದಿನ ಅನುಭವ ಅನುಭಾವಗಳಿಗೆ ಸ್ಪಂದಿಸಿ ಇತ್ತ ಗದ್ಯವೂ ಅಲ್ಲದ ಅತ್ತ ಪದ್ಯವೂ ಅಲ್ಲದ 'ವಚನ' ಪ್ರಕಾರವನ್ನು ತಮ್ಮ ಅಭಿವ್ಯಕ್ತಿ ಮಾಧ್ಯಮವನ್ನಾಗಿ ಮಾಡಿಕೊಂಡುದು ಪುರಾಣಗಳ ಲಾಕ್ಷಣಿಕ ಚೌಕಟ್ಟನ್ನು ನಿರ್ಮಿಸಿಕೊಳ್ಳದಿರುವುದಕ್ಕೆ

ಕಾರಣವಿರಬಹುದೇನೋ! ಸಾಮಾಜಿಕ ನೆಲೆಯಲ್ಲಿ ಮೇಲು ಸ್ತರದವರಿಗಿಂತ ಹೆಚ್ಚಾಗಿ ಕೆಳಸ್ತರದವರಿಂದಲೇ ಸಾಹಿತ್ಯ ಸೃಷ್ಟಿಯಾದುದು, ಬಹುಶಃ ಮತ್ತೊಂದು ಕಾರಣವಿರಬಹು ದೇನೋ!

ಕಲ್ಯಾಣ ಕ್ರಾಂತಿಯ ನಂತರದ ಮೊದಲ ಪ್ರಮುಖ ವೀರಶೈವ ಕವಿಯಾಗಿ ಕಾಣಿಸಿಕೊಳ್ಳುವ ಹರಿಹರನು ಶಿವಶರಣರ ಬದುಕು-ಸಾಹಿತ್ಯಗಳಿಂದ ಸ್ಫೂರ್ತಿ ಪಡೆದಿರುವನು; ತಮಿಳುನಾಡಿನ ಪುರಾತನ ಶೈವಸಂತರ ನಿಷ್ಠಾಪೂರ್ಣ ಬದುಕಿನಿಂದ ಪ್ರೇರಣೆ ಪಡದಿರುವನು. ಅವನಿಗೆ ಸಾಹಿತ್ಯ ಶಿವನನ್ನು ಕಾಣಲು ಒಂದು ಮಾಧ್ಯಮ. ಹೀಗಾಗಿ ಅವನು ಶಿವನನ್ನು ಹಾಗೂ ಶಿವಸ್ವರೂಪರೇ ಆದ ಶಿವಶರಣರನ್ನು ಸ್ತುತಿಸಲು ಮಾತ್ರ ತನ್ನ ನಾಲಗೆಯನ್ನು ಮೀಸಲಿಟ್ಟಿರುವನು. ಸಾಹಿತ್ಯಸೃಷ್ಟಿ ಸ್ವಾಂತಸ್ಸುಖಾಯವಷ್ಟೇ ಅಲ್ಲ, ಜನಮನವನ್ನು ತಿದ್ದಲು, ಜನಮನದಲ್ಲಿ ಶಿವಭಕ್ತಿ ಶಿವಪ್ರೇಮವೆನ್ನುವ ಬೀಜಾರೋಪಣ ಮಾಡಲು ಎಂಬುದು ಅವನ ಸಿದ್ಧಾಂತ. ಹೀಗಾಗಿ, ಅವನು ಸಂಪ್ರದಾಯವನ್ನು ಮುರಿದು ಶಿವಭಕ್ತರ ಕಥೆಯನ್ನು, ಶಿವಶರಣರ ಬದುಕನ್ನು, ತಮಿಳುನಾಡಿನ ನಾಯನ್ಮಾರರ ಜೀವನನಿಷ್ಠೆಯನ್ನು ಕುರಿತು ಕೃತಿರಚನೆ ಮಾಡುವನು. ಪಿಂಡೋತ್ಪತ್ತಿ, ಪುಷ್ಪ, ಲಿಂಗಾರ್ಚನೆ, ಹಂಪೆಯರಸ- ಇವೇ ಮೊದಲಾದ ಸಂಕೀರ್ಣವಿಷಯಕ ರಗಳೆಗಳನ್ನು ಬರೆದಿರುವನು. ಚಂಪೂ ಪರಂಪರೆಯನ್ನು ಧಿಕ್ಕರಿಸಿ ರಗಳೆಯನ್ನೇ ಛಂದೋಮಾಧ್ಯಮವಾಗಿ ಬಳಸುವನು. ಸಾಂಪ್ರದಾಯಕವಾಗಿರುವ ಅಷ್ಟಾದಶವರ್ಣನೆ, ಅರ್ಥಾಲಂಕಾರಗಳು, ವ್ಯಾಕರಣದ ನಿಯಮಗಳು- ಇವಾವನ್ನೂ ಲಕ್ಷಿಸದೆ ಕೃತಿರಚನೆ ಮಾಡುವನು. ಅವನಿಗೆ ಪುರಾಣಪರಂಪರೆ ತಿಳಿದಿದೆ. ಆದರೂ ಅವನು ಪುರಾಣ ರಚನೆಗೆ ಕೈಹಾಕುವುದಿಲ್ಲ. ವಾಸ್ತವವಾಗಿ ಅವನ 'ಗಿರಿಜಾ ಕಲ್ಯಾಣ'ವು ಕೃತಿನಿರ್ಮಾಣ ಪ್ರತಿಭೆಗೆ ಸವಾಲು; 'ರಗಳೆಯ ಕವಿ' ಎಂಬ ಅವಮಾನವನ್ನು ನೀಗಿಸಿಕೊಳ್ಳಲು ಬರೆದ ಚಂಪೂ ಮಹಾಕಾವ್ಯ. ತಾರಕಸಂಹಾರದ ಲೋಕೋತ್ತರ ಉದ್ದೇಶಗಳನ್ನು ಹೊಂದಿರುವ ಮಹಾಕಾವ್ಯ. ವಸ್ತುವಿನ ದೃಷ್ಟಿಯಿಂದ ಅದು ಶಿವನ ಪಂಚವಿಂಶತಿಲೀಲೆಗಳಲ್ಲಿ ಒಂದು; ಮಹಾಕಾವ್ಯದ ಲಕ್ಷಣಗಳಿಂದ ಕೂಡಿರುವ ಮಹಾನ್‌ಕೃತಿ. ಹೀಗಾಗಿ ಅದು ವೀರಶೈವ ಪುರಾಣವಲ್ಲ, ಹಾಗೆ ಕರೆದಿರುವ ಎಂ. ಆರ್. ಶ್ರೀ. ಅವರ ಅಭಿಪ್ರಾಯ ಸರಿಯಲ್ಲ. ಹರಿಹರನ ರಗಳೆಯ ಕೃತಿಗಳಿಗೆ ಒಂದು ನಿರ್ದಿಷ್ಟ ಸೂತ್ರವಿದೆ. ಅವನ ಒಂದೊಂದು ರಗಳೆಯೂ ನಿರ್ದಿಷ್ಟ ವ್ಯಕ್ತಿಯ ಚರಿತ್ರೆಯನ್ನು ಹೇಳುತ್ತದಲ್ಲದೆ ವೀರಶೈವ ಪುರಾಣಗಳಲ್ಲಿ ಬರುವಂತೆ ನೂರಾರು ಕಥೆ ಉಪಕತೆಗಳ ಮೂಲಕ ಮೂಲಕಥೆಯ ಜಾಡು ತಪ್ಪಿಸುವುದಿಲ್ಲ. ಧರ್ಮ ಪ್ರತಿಪಾದನೆ (ತಾತ್ವಿಕ ವಿವೇಚನೆ), ಅನ್ಯಧರ್ಮದವರೊಡನೆ ನಡೆಸುವ ವಾದ-ವಿವಾದ ಇತ್ಯಾದಿ ವಿಷಯಗಳನ್ನು ತಿಳಿಸುವುದಿಲ್ಲ. ಅವನು ಶಿವನ ಭಕ್ತರ, ಬಸವಾದಿ ಶಿವಶರಣರ, ತಮಿಳುನಾಡಿನ ನಾಯನ್ಮಾರರ ಬಗೆಗೆ ತನ್ನ ಇತಿ - ಮಿತಿಯಲ್ಲಿ ಚರಿತ್ರೆಯನ್ನು ಬರೆಯುವುದರ ಮೂಲಕ ಕನ್ನಡ ಸಾಹಿತ್ಯದಲ್ಲಿ ಹೊಸ ಸಂಪ್ರದಾಯವೊಂದರ ಆರಂಭಿಗನಾದನಷ್ಟೇ ಅಲ್ಲದೆ, ಪುರಾಣ ಬರೆಯುವವರಿಗೆ ಮೂಲ ಆಕರವೂ (Original Source Material) ಆದನು.

ಹರಿಹರನ ಸಂಪ್ರದಾಯವನ್ನು ಮುಂದುವರಿಸಿದವರಲ್ಲಿ ಅವನ ಸೋದರಳಿಯ ರಾಘವಾಂಕನೂ ಮುಖ್ಯನು. ಹರಿಹರ ರಗಳೆ ಛಂದಸ್ಸಿನಲ್ಲಿ ಹೊಸ ಪ್ರಯೋಗಗಳನ್ನು ನಡೆಸಿದಂತೆ ರಾಘವಾಂಕನು ಷಟ್ಪದಿಯಲ್ಲಿ ಹೊಸ ಪ್ರಯೋಗವನ್ನು ಮಾಡಿರುವನು. ಇತರ

ಹೊಸ ಪ್ರಯೋಗಗಳು ದೇಸೀ ಛಂದಸ್ಸಿನಲ್ಲಿ ಕೃತಿಗಳು ಹೊರಬರಲು ಪ್ರೇರಣೆ ನೀಡಿರಬಹುದು. ಹರಿಹರನು ತನ್ನ ಭಕ್ತಿಯ ಆವೇಶಕ್ಕೆ ಸರಿಹೊಂದುವ ರಗಳೆಯನ್ನು ಅಭಿವ್ಯಕ್ತಿ ಮಾಧ್ಯಮವಾಗಿ ಆರಿಸಿಕೊಂಡರೆ, ರಾಘವಾಂಕ ಶಿವನ ಭಕ್ತರ, ಶರಣರ ಸ್ಫಟಿಕ ಸದೃಶವಾದ ಋಜುಜೀವನವನ್ನು ಚಿತ್ರಿಸಲು ವಾರ್ಧಕ ಷಟ್ಪದಿಯನ್ನು ಸ್ವೀಕರಿಸಿದನು. 'ಹರಿಶ್ಚಂದ್ರ ಕಾವ್ಯ'ದಲ್ಲಿ ರಾಘವಾಂಕನು ಜನ ಬದುಕಬೇಕೆಂಬ ಉದ್ದೇಶದಿಂದ ತಾನು ಕೃತಿ ರಚಿಸುವುದಾಗಿ ಹೇಳಿಕೊಂಡಿರುವನು. ನಂತರದ ಕೃತಿಗಳಲ್ಲಿ ರಾಘವಾಂಕನು ಹರಿಹರನ ಕಾವ್ಯೋದ್ದೇಶವನ್ನು ಅಂಗೀಕರಿಸಿದಂತೆ ತೋರುತ್ತದೆ. ಅವನು ತನ್ನ ಮತಿಯನ್ನು ಶಿವನಿಗೂ ಶಿವಭಕ್ತರಿಗೂ ಮಾರಿಕೊಂಡು ಸಿದ್ಧರಾಮ ಚಾರಿತ್ರ, ಸೋಮನಾಥ ಚಾರಿತ್ರ, ಹರಿಹರಮಹತ್ವ (ಇದಕ್ಕೆ 'ಚಾರಿತ್ರ' ಎಂದು ಕರೆಯದಿರುವುದು ಚಾರಿತ್ರಾಂಶಗಳಿಗಿಂತ ಮಹಿಮಾತಿಶಯಗಳ ವರ್ಣನೆಯ ಕಡೆಗೆ ಅವನು ಗಮನವಿತ್ತಿರುವುದೇ ಕಾರಣವಾಗಿರಬಹುದು) ಎಂಬ ಶಿವಶರಣರ ಚರಿತ್ರೆಗಳನ್ನೂ; ವೀರೇಶಚರಿತೆ ಎಂಬ ಶಿವಪಾರಮ್ಯ ಸೂಚಕವಾದ ಶಿವಲೀಲಾಚರಿತ್ರೆಗಳನ್ನೂ ರಚಿಸಿದನು ಮತ್ತು ತನ್ಮೂಲಕ ಚಾರಿತ್ರಕಾವ್ಯಗಳ ಆದ್ಯ ನಿರ್ಮಾತೃವೆನಿಸಿಕೊಂಡನು.

ವೀರಶೈವ ಪುರಾಣ ರಚನಾ ಪರಂಪರೆಗೆ ಮಾರ್ಗಕಾರನೂ, ಶರಣ ಬಸವಣ್ಣನ ಬದುಕನ್ನು ಮೊದಲಿಗೆ ಪೌರಾಣಿಕ ನೆಲೆಯಲ್ಲಿ ವಿಜೃಂಭಿಸಿದವನೂ ಆದ ಆಂಧ್ರದ ಪಾಲ್ಕುರಿಕೆ ಸೋಮನಾಥನು ಆಂಧ್ರದಲ್ಲಿ ನಡೆದ ವೀರಶೈವ ಚಳವಳಿಯಲ್ಲಿ ನಾಯಕಸ್ಥಾನವನ್ನು ವಹಿಸಿದನು. ಇವನ ಕೃತಿಯನ್ನು ಕನ್ನಡಕ್ಕೆ ರೂಪಾಂತರಿಸಿ ಹೇಳುವುದರ ಮೂಲಕ ಭೀಮಕವಿ (೧೩೬೯) ತನ್ನ ಮುಂದಣ ವೀರಶೈವ ಕವಿಗಳಿಗೆ ಪುರಾಣ ರಚನಾ ಪದ್ಧತಿಗೆ ಗಟ್ಟಿಯಾದ ಬುನಾದಿ ಹಾಕಿಕೊಟ್ಟನು. ಬಸವ ಪುರಾಣದ ರಚನಾವಿನ್ಯಾಸ ಗಮನಾರ್ಹವಾದುದು. ಬಸವಣ್ಣನ ಜೀವಿತ ವೃತ್ತಾಂತವೇ ಇಲ್ಲಿ ಪ್ರಧಾನವಲ್ಲ. ಬಸವಪೂರ್ವದ, ಬಸವ ಸಮಕಾಲೀನ ಶಿವಶರಣರ, ಶಿವನ ಭಕ್ತರ, ತಮಿಳುನಾಡಿನ ನಾಯನ್ಮಾರರ ಕಥೆಯೂ ಇಲ್ಲಿ ಪ್ರಧಾನ. ಈ ಭಕ್ತರ ಕಥೆಗಳು ಮುತ್ತುಗಳಾದರೆ, ಅವುಗಳನ್ನು ಒಂದೆಡೆ ಭದ್ರವಾಗಿ ಬಂಧಿಸುವ ಸೂತ್ರ ಬಸವನ ಕಥೆ. ಮೂಲಕಥೆಗೆ ಪೋಷಕವಾಗಿ ನೂರಾರು ಉಪಕಥೆಗಳು ಬರುತ್ತವೆ. ಅವುಗಳ ಅರ್ಥಪೂರ್ಣವಾದ ಜೋಡಣೆ 'ಬಸವ ಪುರಾಣ'ದ ರಚನಾವಿನ್ಯಾಸದ ವಿಶೇಷ. ಭೀಮಕವಿ ತನ್ನ ಕೃತಿಯನ್ನು 'ವರ್ಣಕ'ವೆಂದು ಕರೆದಿರುವನು. ವರ್ಣಕದ ವೈಶಿಷ್ಟ್ಯ ಅದರ ಗೇಯಾಂಶದಲ್ಲಿದೆ. ೩: ೪, ೩: ೪ ಈ ಮಾತ್ರೆಗಳುಳ್ಳ ತಾಳ ಕೇಳುಗರಿಗೆ ಇನಿದಾಗಿದೆ. ''ಸರಸ ಮೃದುಮಧುರೋಕ್ತಿ''ಯಿಂದ ಕೂಡಿರುವ ಬಸವಪುರಾಣವನ್ನು ತಾಳದ ಗಣನೆಗೆ ಒಡಂಬಟ್ಟು ಹಾಡುತ್ತಿದ್ದರೆಂಬುದಕ್ಕೆ ಆಧಾರಗಳಿವೆ. ಗುಬ್ಬಿಯ ಮಲ್ಲಣಾರ್ಯನು (೧೫೩೧) ಬಸವಪುರಾಣದ ವಾಚನ ಹಾಗೂ ಅರ್ಥವಿವರಣೆ ಮಾಡುವುದರಲ್ಲಿ ಬಹಳ ಪ್ರಸಿದ್ಧನು. 'ಭಾವಚಿಂತಾರತ್ನ'ದಲ್ಲಿ ತನ್ನನ್ನು ಕವಿ ಬಸವಪುರಾಣದ ಮಲ್ಲಣಾರ್ಯನೆಂದೇ ಕರೆದುಕೊಂಡಿರುವನು.

ಪ್ರಾರಂಭದ ವೀರಶೈವ ಕವಿಗಳ ಗಮನವೆಲ್ಲ ಶಿವಶರಣರ ಚಾರಿತ್ರ ನಿರೂಪಣೆಯತ್ತಲೇ ಪ್ರಧಾನವಾಗಿ ಹರಿದುದರಿಂದ, ವೀರಶೈವ ಪುರಾಣಗಳ ನಿರ್ದಿಷ್ಟ ಲಕ್ಷಣಗಳ ಬಗ್ಗೆ ವಿಚಾರ ಮಾಡುವ, ನಿರ್ಣಯಿಸುವ ಗೊಡವೆಗೆ ಹೋಗಲಿಲ್ಲ. ಬಸವಪುರಾಣವು 'ಪುರಾಣ'ವೆಂಬ ಹೆಸರನ್ನು ಹೊತ್ತ ಮೊದಲ ಕೃತಿಯಾದರೂ, ಅಲ್ಲೂ ಪುರಾಣ ಲಕ್ಷಣ ಚರ್ಚಿತವಾಗಿಲ್ಲ. ಕಲ್ಯಾಣಕ್ರಾಂತಿ, ದಕ್ಷಿಣದ ಮೇಲೆ ಮಹಮದೀಯರ ದಾಳಿ-ಇವುಗಳಿಂದಾಗಿ ವೀರಶೈವ

ಧರ್ಮ ತತ್ತರಿಸಿತು. ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಿಂದಾಗಿ ಕಮರಿಹೋಗಿದ್ದ ವೀರಶೈವ ಧರ್ಮಕ್ಕೆ ಹೊಸ ಚೈತನ್ಯದ ಮಂತ್ರಸ್ಪರ್ಶವಾಯಿತು - ಲಕ್ಕಣ್ಣದಂಡೇಶ ಹಾಗೂ ಜಕ್ಕಣಾರ್ಯರ ನೇತೃತ್ವದಿಂದ. ಲಕ್ಕಣ್ಣ ದಂಡೇಶನ 'ಶಿವತತ್ತ್ವ ಚಿಂತಾಮಣಿ'ಯು ವೀರಶೈವರ ಪಾಲಿಗೆ ಧಾರ್ಮಿಕ ವಿಶ್ವಕೋಶ. ಚಿಂತಾಮಣಿಯ ಗುಣ ನೆನೆದುದನ್ನು ತಕ್ಷಣ ಈಡೇರಿಸುವಂಥದು. ಕೃತಿಗೆ ಹದಿನೆಂಟು ಅಂಗಗಳಿವೆ. 'ಶಿವತತ್ತ್ವ ಚಿಂತಾಮಣಿ' ಪುರಾಣ ಕೃತಿಯಲ್ಲ. ಇಲ್ಲಿ ಗುರು-ಶಿಷ್ಯಸಂಬಂಧದಲ್ಲಿ ಕಥೆಗಳ ನಿರೂಪಣೆಯಾಗಲೀ, ತತ್ತ್ವಬೋಧೆಯಾಗಲೀ ಬಂದಿಲ್ಲ. ಕವಿಯೇ ನೇರವಾಗಿ ನಿರೂಪಿಸಿರುವನು. ಇದರ ವಸ್ತು ವಿನ್ಯಾಸವನ್ನು ವಿಮರ್ಶಿಸಿದರೆ ಪರತತ್ವ ಸ್ವರೂಪ, ಮಹಾಲಿಂಗ, ಇಪ್ಪತ್ತೈದು ಲೀಲೆಗಳು, ಕೊನೆಯಲ್ಲಿ ಬರುವ ಏಕಪಾದಲೀಲೆಯಿಂದ ಸೃಷ್ಟಿಯೆಲ್ಲ ಧ್ವಂಸವಾಗಿ ಹೊಸದಾಗಿ ಸೃಷ್ಟಿಯಾದದ್ದು, ನಾರದರ ಆಗಮನ, ಬಸವಣ್ಣನ ಜನನ, ಪುರಾತನರ ಮತ್ತು ಇತರ ಶರಣರ ವಿಚಾರ ಮತ್ತು ವೀರಶೈವ ತತ್ತ್ವನಿರೂಪಣೆ - ಈ ಕ್ರಮದಲ್ಲಿ ವಿಷಯಗಳ ಜೋಡಣೆ ಯಿರುವುದು ಕಂಡುಬರುತ್ತದೆ. 'ಶಿವತತ್ತ್ವ ಚಿಂತಾಮಣಿ'ಯಲ್ಲಿಲ್ಲದ ಗುರುಶಿಷ್ಯ ಸಂಬಂಧ 'ವೀರಶೈವಾಮೃತ ಮಹಾಪುರಾಣ'ದಲ್ಲಿ ಕಂಡುಬರುತ್ತದೆ. ಕೃತಿಯ ಪೀಠಿಕಾಸಂಧಿಯಲ್ಲಿ ಸಮುದ್ರ, ಕೈಲಾಸ, ಈಶ್ವರಾಸ್ಥಾನ, ನಾರದರ ಪ್ರವೇಶ, ಭೂಲೋಕದಲ್ಲಿ ಕಲಿಯ ದೆಸೆಯಿಂದಾಗಿ ಧರ್ಮ ಲುಪ್ತವಾಗಿದೆಯೆಂದೂ, ಶೈವಧರ್ಮವನ್ನು ಉದ್ಧರಿಸುವ ಕಾರ್ಯ ವಾಗಬೇಕೆಂದೂ, ವಿನಂತಿಸುವ, ವಿವರಗಳು, ಬರುವುದಿಲ್ಲ. ಇಲ್ಲಿ ಹಲಗೆಯಾಚಾರ್ಯನು ಶಿಷ್ಯನಾದ ಕೆಂಚವೀರನಿಗೆ ಬೋಧೆ ಮಾಡುವನು. ಪ್ರಾರಂಭದಲ್ಲಿ ಪರತತ್ತ್ವ ಸ್ವರೂಪವನ್ನೂ ಮುಂದೆ ಚೈತನ್ಯ ಜಂಗಮಮೂರ್ತಿಯನ್ನೂ ವಿವರಿಸಿ, ಚರಾಚರ ಸೃಷ್ಟಿಗೆಲ್ಲ ಈ ಮೂರ್ತಿ ಮೂಲವೆಂಬುದನ್ನೂ, ಆ ಸೃಷ್ಟಿ ಕ್ರಮದಲ್ಲಿ ಮಹೇಶ್ವರ ಮೂರ್ತಿ ೨೫ ಲೀಲೆಗಳನ್ನು ತಳೆದುದನ್ನು ಮಲ್ಲಣಾರ್ಯನು ವಿಸ್ತಾರವಾಗಿ ಹೇಳಿದ್ದಾನೆ. ೨೫ನೆಯ ಲೀಲೆ ಉರಿಲಿಂಗೋದ್ಭವ ಲೀಲೆ. ಇಲ್ಲಿ ಸಿದ್ಧಾಂತ ಶಾಸ್ತ್ರ ವಿವರಣೆ ಬಂದಿದೆ. ಮುಂದೆ ಬಸವಣ್ಣನ, ಜನನವಿಚಾರ, ಬರುತ್ತದೆ. ಇಲ್ಲಿ ಕವಿ, ಬಸವಣ್ಣನನ್ನು 'ಷಟ್ಸ್ಥಲಸ್ಥಾಪನಾಚಾರ್ಯ'ನೆಂದು ಕರೆದಿರುವನು. ಮುಂದೆ ಕರಣಹಸಿಗೆ, ಷಟ್ಸ್ಥಲ, ಏಕೋತ್ತರ ಶತಸ್ಥಲ, ೬೩ ಪುರಾತನರು, ನೂತನ ಪುರಾತನರು, 'ಶಿವತತ್ತ್ವಚಿಂತಾಮಣಿ'ಯಲ್ಲಿ ಹೇಳಿರುವ, ಹೇಳದೆ ಬಿಟ್ಟಿರುವ ನೂತನ ಶರಣರು, ತನ್ನ ಕಾಲದ ಶರಣರು ಮೊದಲಾದ ವಿಷಯಗಳನ್ನು ಹೇಳಿದ್ದಾನೆ. ಗಮನಿಸಬೇಕಾದ್ದೆಂದರೆ, ಮಲ್ಲಣಾರ್ಯ ತನ್ನ ಕೃತಿಯನ್ನು ಪುರಾಣವೆಂದು ಕರೆದಿರುವುದು, ಲಕ್ಕಣ್ಣದಂಡೇಶ ತನ್ನ ಕೃತಿಯನ್ನು ಪುರಾಣವೆಂದು ಕರೆಯದಿರುವುದು. ಲಕ್ಕಣ್ಣದಂಡೇಶ ಹೇಳಿರುವ ಹದಿನೆಂಟು ಅಂಗಗಳೇ, ಮಲ್ಲಣಾರ್ಯನಲ್ಲೂ ಕಂಡುಬರುವುದು ಲಕ್ಷಿಸಬೇಕಾದ ಸಂಗತಿ.

ವಿರೂಪಾಕ್ಷ ಪಂಡಿತನ 'ಚೆನ್ನಬಸವ ಪುರಾಣ'ದಲ್ಲಿ ಕಥಾನಾಯಕನ ಜೀವನ ಚರಿತ್ರೆಯನ್ನು ಹೇಳುತ್ತ ಚೆನ್ನಬಸವನಿಗೂ ಸಿದ್ಧರಾಮನಿಗೂ ಗುರು-ಶಿಷ್ಯ ಸಂಬಂಧವನ್ನು ಕಲ್ಪಿಸಿ ತತ್ತ್ವಬೋಧೆ ಮಾಡಲಾಗಿದೆ. ಕವಿಯು ತನ್ನ ಪುರಾಣದ 'ಕಥಾಕುಳಕ' (=ಕಥಾಲಕ್ಷಣ)ವನ್ನು ಹೇಳಿರುವನು. ಈ ಕಥಾಲಕ್ಷಣವನ್ನು ಗಮನಿಸಿದಾಗ 'ಶಿವತತ್ತ್ವ ಚಿಂತಾಮಣಿ'ಯಲ್ಲಿ ಹೇಳಿರುವ ಲಕ್ಷಣಗಳಿಗೂ ಇವಕ್ಕೂ ಸಾಮ್ಯವಿದೆಯೆಂಬುದು ತಿಳಿದುಬರುತ್ತದೆ. ಶಿವಾದ್ವೈತಸಿದ್ಧಾಂತ ನಿರೂಪಣೆಯ ಜೊತೆಗೆ ಬಸವೇಶ ಚರಿತ್ರ ಹೇಳುವುದು

ಲಕ್ಕಣ್ಣದಂಡೇಶನಿಗೆ ಪ್ರಧಾನವಾಗಿದ್ದರೆ ವಿರೂಪಾಕ್ಷ ಪಂಡಿತನಿಗೆ ಶಿವಾದ್ವೈತ ಸಿದ್ಧಾಂತ ನಿರೂಪಣೆಯ ಜೊತೆಗೆ ಚೆನ್ನಬಸವೇಶನ ಚಾರಿತ್ರ ಹೇಳುವುದಾಗಿದೆ. ಲಕ್ಕಣ್ಣ ದಂಡೇಶ ಅಷ್ಟಾದಶವರ್ಣನೆಗಳ ಹಂಗು ತೊರೆದು ಕೃತಿ ರಚನೆ ಮಾಡಿದರೆ ವಿರೂಪಾಕ್ಷ ಪಂಡಿತನಲ್ಲಿ ಅದು ಬಲವಾದ ಆಕರ್ಷಣೆಯಾಗಿ ನಿಂತಿದೆ. ಲಕ್ಕಣ್ಣ ದಂಡೇಶನು ಜಗದೋದ್ಧಾರಕ್ಕೆ ಬಸವಾವತಾರ, ಬಸವನ ಬಾಲ್ಯಲೀಲೆ, ಪವಾಡಗಳನ್ನು ಹೇಳಿರುವಂತೆ ವಿರೂಪಾಕ್ಷ ಪಂಡಿತನೂ ಚೆನ್ನಬಸವನ ಉತ್ಪತ್ತಿ, ಆತನ ಲೀಲೆಗಳನ್ನು ದೀರ್ಘವಾಗಿ ಹೇಳಿರುವನು. ಲಕ್ಕಣ್ಣ ದಂಡೇಶನು ''ಭೂಮಂಡಲದಲ್ಲಿ ಶಿವಧರ್ಮಮಾರ್ಗವನ್ನು ನೆರೆ ತೋರಿ ಮೆರೆದ ಗಣಪ್ರಶಂಸೆ''ಯನ್ನು ಒಂದು ಲಕ್ಷಣವಾಗಿ ಹೇಳಿರುವನು. ಲಕ್ಕಣ್ಣ ದಂಡೇಶನು ಹೇಳಿದ ಧರ್ಮಾಧರ್ಮ, ಪಿಂಡದುತ್ಪತ್ತಿ, ಸಂಸಾರನಿರಸನ, ಲಿಂಗಾಧಾರಣೆ, ಶಿವಪೂಜಾ ನಿಯಮ, ಪಾದೋದಕ ಪ್ರಸಾದ ಕ್ರಮ, ಶಿವಾಧಿಕ್ಯ, ಮಾಹೇಶ್ವರಾಚರಣೆ- ಈ ಪಂಚಲಕ್ಷಣಗಳನ್ನು 'ದೀಕ್ಷಾವಿಧಾನ'ವೆಂಬ ಒಂದೇ ಲಕ್ಷಣದಲ್ಲಿ ವಿರೂಪಾಕ್ಷ ಪಂಡಿತನು ಹೇಳಿರುವನು. ಷಟ್ಸ್ಥಲದ ಲಕ್ಷಣವನ್ನು ಇವರೀರ್ವರೂ ಒಂದೇ ಹೆಸರಿನಲ್ಲಿ ಹೇಳಿರುವರು. ಲಕ್ಕಣ್ಣದಂಡೇಶ ಹಾಗೂ ವಿರೂಪಾಕ್ಷ ಪಂಡಿತರಲ್ಲಿ ಲಕ್ಷಣ ವಿಷಯದಲ್ಲಿ ಸಾಮ್ಯ ಹೆಚ್ಚಾಗಿ ಕಂಡುಬಂದರೂ ವೈದಿಕ ಪುರಾಣ ಸಂಪ್ರದಾಯನಿಷ್ಠನಾದ ವಿರೂಪಾಕ್ಷ ಪಂಡಿತನು ಲಕ್ಕಣ್ಣ ದಂಡೇಶನು ಹೇಳದ ಸೋಮಸೂರ್ಯಾನ್ವಯಗಳನ್ನೂ, ಕಾಲಜ್ಞಾನವೆಂಬ ಹೊಸ ವಿಷಯವನ್ನೂ ಹೇಳಿರುವನು.

ಇಷ್ಟು ವಿವರಣೆಯಿಂದ 'ಶಿವತತ್ತ್ವ ಚಿಂತಾಮಣಿ' 'ವೀರಶೈವಾಮೃತ ಮಹಾ ಪುರಾಣ' ಹಾಗೂ 'ಚೆನ್ನಬಸವ ಪುರಾಣ'- ಈ ಮೂರು ಗ್ರಂಥಗಳೂ ಒಂದೇ ಗುಂಪಿಗೆ ಸೇರುತ್ತವೆಯೆಂಬುದು ಸ್ಪಷ್ಟ. ಈ ಕೃತಿಗಳ ಲಕ್ಷಣಗಳನ್ನು ವೀರಶೈವ ಪುರಾಣಗಳ ಲಕ್ಷಣಗಳೆಂದು ಗುರುತಿಸುವುದು ತಪ್ಪಾಗುತ್ತದೆ. ಇವು ವಿಶಿಷ್ಟ ಕಾಲಮಾನದಲ್ಲಿ, ಸನ್ನಿವೇಶದಲ್ಲಿ ಸೃಷ್ಟಿಯಾದ ಮಹತ್ವದ ಗ್ರಂಥಗಳು. ಒಂದರ್ಥದಲ್ಲಿ-ಅವು ಆ ಕಾಲಕ್ಕೆ ಅಗತ್ಯವಿದ್ದ ಧಾರ್ಮಿಕ ವಿಶ್ವಕೋಶಗಳು.

ವೀರಶೈವ ಪುನರುಜ್ಜೀವನದ ಅಂಗವಾಗಿ ಕರ್ನಾಟಕದಾದ್ಯಂತ ವೀರಶೈವ ಮಠಗಳು ಸ್ಥಾಪನೆಯಾಗಿ ಯತಿಗಳಿಗೆ ಸರಿಯಾದ ಶಿಕ್ಷಣ ಕೊಟ್ಟು ಅವರನ್ನು ಧಾರ್ಮಿಕ ಕಾರ್ಯಗಳಿಗೆ ಸಜ್ಜುಗೊಳಿಸುವ ಕಾರ್ಯ ಭರದಿಂದ ಸಾಗಿತು. ಮಠಗಳು ಸಾಂಸ್ಕೃತಿಕ ಕೇಂದ್ರಗಳಾದುವು. ಮಠಪತಿಗಳು, ಯತಿಶ್ರೇಷ್ಠರು ತಮ್ಮ ಸಚ್ಚಾರಿತ್ರ, ಶೀಲ, ವಿದ್ಯೆಗಳಿಂದ ಸಮಾಜದ ಗೌರವ ಪಡೆದರು. ಕೆಲವರು ಕವಿಗಳಾಗಿ, ಕೃತಿರಚನೆಯ ಮೂಲಕ ಪ್ರಸಿದ್ಧರಾದರು. ಇಂತಹ ಮಠಗಳ, ಮಠಾಧಿಪತಿಗಳ ಚರಿತ್ರೆಯನ್ನು ಪುರಾಣರೂಪದಲ್ಲಿ ಬರೆದಿಡುವ ಪದ್ಧತಿ ಕಳೆದ ಒಂದು ಶತಮಾನದಲ್ಲಿ ಉತ್ತರ ಕರ್ನಾಟಕದಲ್ಲಿ ಆಚರಣೆಯಲ್ಲಿ ಬಂದುದನ್ನು ನಾವು ನೋಡುವೆವು.

ಎಂಟುನೂರು ವರ್ಷಗಳ ಸುದೀರ್ಘ ಇತಿಹಾಸದಲ್ಲಿ ವೀರಶೈವ ಪುರಾಣಗಳು ತಮ್ಮ ಲಕ್ಷಣಗಳನ್ನು ರೂಪಿಸದಿರುವುದು ಸಾಹಿತ್ಯದ ವಿದ್ಯಾರ್ಥಿಯಾದ ನನಗೆ ಆಶ್ಚರ್ಯವಾಗಿ ತೋರುತ್ತದೆ. ಪುರಾಣ ನಾಮಾಂಕಿತ ವೀರಶೈವ ಕೃತಿಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಅವುಗಳಿಗೆ ಪುದುವಾದ ಕೆಲವು ಲಕ್ಷಣಗಳಿರುವ ಸಾಧ್ಯತೆಯನ್ನೂ ಊಹಿಸಬಹುದು. ಅವುಗಳನ್ನು ಹೀಗೆ ವಿವರಿಸಬಹುದು :

(ಅ) ವೀರಶೈವ ಪುರಾಣಗಳ ಪ್ರಧಾನ ವ್ಯಕ್ತಿಗಳು ಗುರುವು ಅನುಗ್ರಹಿಸುವ

ಇಷ್ಟಲಿಂಗವನ್ನು ಸದಾ ಶರೀರದ ಮೇಲೆ ಧರಿಸಿ ಆರಾಧಿಸುವವರಾಗಿರುತ್ತಾರೆ.

(ಆ) ಶಿವಾಗಮೋಕ್ತ ವೀರಶೈವವಾಗಲಿ, ಅದನ್ನು ವಿಶ್ವಧರ್ಮವನ್ನಾಗಿ ಮಾಡಲು ಹನ್ನೆರಡನೆಯ ಶತಮಾನದ ಬಸವಾದಿ ಶರಣರು ರೂಪಿಸಿದ ಸುಧಾರಿತ ವೀರಶೈವ ಧರ್ಮವಾಗಲೀ ಅವುಗಳಲ್ಲಿ ಪ್ರತಿಪಾದಿತವಾಗಿರುತ್ತದೆ.

(ಇ) ವೀರಶೈವ ಧರ್ಮಾನುಯಾಯಿಗಳಾದ ಮಹಾಪುರುಷರ ಚರಿತ್ರೆಗಳು ಪ್ರಧಾನವಾಗಿಯೂ, ಅವರು ತಮಗೆ ಆದರ್ಶರೆಂದು ಅಂಗೀಕರಿಸಿದ ಪುರಾತನ ಶೈವಸಂತರು ಹಾಗೂ ಪುರಾತನ ಮತ್ತು ನೂತನ ಶಿವಶರಣರು ಮೊದಲಾದವರ ಕಥೆಗಳು ಪ್ರಾಸಂಗಿಕವಾಗಿಯೂ ಅವುಗಳಲ್ಲಿ ಉಕ್ತವಾಗಿರುತ್ತವೆ.

(ಈ) ಈ ಪ್ರಧಾನ ಪುರುಷರು ಬಹುವಾಗಿ ಪರಶಿವ-ಶಿವೆಯ ಅಂಶ ಇಲ್ಲವೇ ಅವರ ಪರಿವಾರವಾಗಿದ್ದು ಕಾರಣಾಂತರಗಳಿಂದ ಭೂಲೋಕದಲ್ಲಿ ಅವತರಿಸಿದವ ರಾಗಿರುತ್ತಾರೆ. ಮತ್ತು ಈ ಲೋಕದ ಮಣಿಹ ಮುಗಿದೊಡನೆ ಒಂಟಿಯಾಗಿಯೋ ಗುಂಪಾಗಿಯೋ ಮತ್ತೆ ಕೈಲಾಸವನ್ನು ಸೇರುತ್ತಾರೆ.

(ಉ) ವೀರಶೈವ ಧರ್ಮವನ್ನು ಮೆಟ್ಟಿಕ್ಕತೊಡಗಿದ ಪರಸಮಯಿಗಳನ್ನು ಎದುರಿಸಿ, ಸ್ವಧರ್ಮವನ್ನು ರಕ್ಷಿಸಿ, ಬೆಳೆಸಿದ ರೀತಿಯು ಪವಾಡ ಕಥೆಗಳ ರೂಪದಲ್ಲಿ ಪ್ರಧಾನವಾಗಿ ಕಂಡುಬರುತ್ತದೆ.

(ಊ) ವೀರಶೈವವು ಶೈವಧರ್ಮದ ಪ್ರಭೇದವಾದುದರಿಂದ ಶೈವಪುರಾಣಗಳಲ್ಲಿ ಕಂಡು ಬರುವ ಶಿವಪಾರಮ್ಯ ಪ್ರತಿಪಾದನಾ ಕಥೆಗಳಲ್ಲಿ ಪ್ರಧಾನವಾದ ಸುಮಾರು ಇಪ್ಪತ್ತೈದು ಕಥೆಗಳು 'ಲೀಲೆ'ಗಳೆಂಬ ಹೆಸರಿನಿಂದ ಪ್ರಾಸಂಗಿಕವಾಗಿ ವರ್ಣಿತವಾಗಿರುತ್ತವೆ.

ಹೀಗೆ ಲಕ್ಷಣಗಳನ್ನು ಗುರುತಿಸಿದ ಮಾತ್ರಕ್ಕೆ ಇವು ಎಲ್ಲಾ ಪುರಾಣಗಳಲ್ಲೂ ಕಟ್ಟುನಿಟ್ಟಾಗಿ ಅಳವಡಿಸಲ್ಪಟ್ಟಿವೆ ಎಂದು ಅರ್ಥವಲ್ಲ. ಪುರಾಣ ರಚಕರ ರುಚಿಗನುಗುಣವಾಗಿ ಇವುಗಳ ಪ್ರಾಧಾನ್ಯ ಹೆಚ್ಚುಕಡಿಮೆ ಇರುವುದೂ, ಕೆಲವು ಅಂಶಗಳು ಭಾಗಶಃ ಬಂದಿರುವುದೂ ಉಂಟು.

*ವೀರಶೈವ ಪುರಾಣಗಳು: ಒಂದು ಅಧ್ಯಯನ, ೧೯೮೩*
*ನೆಲದ ಮರೆಯ ನಿಧಾನ, ೧೯೯೭, ಪು. ೩೮೨-೮೯*

# ೫೭. ಕನ್ನಡದಲ್ಲಿ ತ್ರಿಷಷ್ಟಿ ಪುರಾತನರು

● ಆರ್. ಸಿ. ಹಿರೇಮಠ

ಕನ್ನಡ ಸಾಹಿತ್ಯದಲ್ಲಿ ವಿಶೇಷತಃ ವೀರಶೈವ ಕಾವ್ಯ ಪುರಾಣಗಳಲ್ಲಿ ಅರುವತ್ತು ಮೂವರು ಪುರಾತನರ ಹೆಸರು ಮೇಲಿಂದ ಮೇಲೆ ಬರುತ್ತದೆ. ಅದಕ್ಕೆ ಕಾರಣ ಪುರಾತನರ ಪ್ರಭಾವ ಈ ಜನಜೀವನದ ಮೇಲೆ ಆದುದು. ಕರ್ನಾಟಕ ಹಾಗೂ ತಮಿಳು ದೇಶಗಳ ನಡುವೆ ರಾಜಕೀಯ ಹಾಗೂ ಧಾರ್ಮಿಕ ಸಂಬಂಧವಿದ್ದುದೂ ಇತಿಹಾಸ ಪ್ರಸಿದ್ಧವಾಗಿದೆ. ಚಾಲುಕ್ಯರು, ಹೊಯ್ಸಳರು, ಚೋಳರು, ಪಾಂಡ್ಯರು ತಮ್ಮ ತಮ್ಮ ದಾಳಿಗಳನ್ನೂ ಆಳಿಕೆಯನ್ನೂ ಕರ್ನಾಟಕ ತಮಿಳು ದೇಶಗಳಲ್ಲಿ ನೆರವೇರಿಸಿದುದು ಇತಿಹಾಸದಿಂದ ವೇದ್ಯವಾಗುತ್ತದೆ. ಪರಮೇಶ್ವರ ಪುಲಕೇಶಿ ಹಾಗೂ ಆತನ ಮಕ್ಕಳು ಪಲ್ಲವರನ್ನು ಸೋಲಿಸಿದುದೂ ಪಲ್ಲವರು ಬಾದಾಮಿಯ ಮೇಲೆ ದಾಳಿಯಿಟ್ಟದೂ ಐತಿಹಾಸಿಕ ಸತ್ಯವಾಗಿದೆ. ಈ ಸಂದರ್ಭದಲ್ಲಿ ಪರಂಜ್ಯೋತಿಯೆಂದು ಹೆಸರಾದ ಚಿರುತ್ತೊಂಡರ್‌ನಾಯನಾರರೇ ಪಲ್ಲವರ ಸೈನ್ಯದ ಸೇನಾಧಿಪತ್ಯವನ್ನು ವಹಿಸಿದ್ದರಂತೆ. ಹೊಯ್ಸಳರು ಚೋಳರಾಜ್ಯಸ್ಥಾಪನಾಚಾರ್ಯರೆಂದು ಹೆಸರಾಗಿರುವರು. ಧಾರ್ಮಿಕ ದೃಷ್ಟಿಯಿಂದಲೂ ತಮಿಳುನಾಡಿನ ತ್ರಿಷಷ್ಟಿ ಪುರಾತನರ ಪ್ರಭಾವ ಕನ್ನಡನಾಡಿನ ಶಿವಶರಣರ ಮೇಲೆ ಆಗಿರುವುದು ಸ್ಪಷ್ಟವಾಗಿ ಗೋಚರವಾಗುತ್ತದೆ. ಬಸವಾದಿ ಪ್ರಮಥರು ಮುನ್ನಿನ ಪುರಾತನರನ್ನು ಭಕ್ತಿಭಾವದಿಂದ ಸ್ಮರಿಸಿರುವರು. ಪುರಾತನರ ಚರಿತ್ರೆಗಳೂ ಉಲ್ಲೇಖಗಳೂ ಕನ್ನಡ ಕಾವ್ಯಗಳಲ್ಲಿ ವಿಪುಲವಾಗಿ ದೊರೆಯುತ್ತವೆ.

* * * * *

ಕೆಲವು ಕಾವ್ಯಗಳಲ್ಲಿ ಕೆಲವು ಪುರಾತನರ ಉಲ್ಲೇಖ ಬರುವುದುಂಟು. ವೀರಶೈವ ಪುರಾಣಗಳಲ್ಲಿ ಕಥಾನಾಯಕನ ಮಹಿಮೆಯನ್ನು ಬಣ್ಣಿಸುವಾಗ, ಅವರು ಎಸಗಿದ ಅದ್ಭುತ ಕಾರ್ಯಗಳನ್ನು ವರ್ಣಿಸುವ ಸಂದರ್ಭದಲ್ಲಿ ಅಂತಹ ಪವಾಡಗಳನ್ನೆಸಗಿದ ಪೂರ್ವದ ಮಹಾನುಭಾವರನ್ನು ಉಲ್ಲೇಖಿಸುವ ಸಂಪ್ರದಾಯ ಉಂಟು. ತದನುಗುಣವಾಗಿ ಅರುವತ್ತು ಮೂವರು ಪುರಾತನರಲ್ಲಿ ಅನೇಕರ ಉಲ್ಲೇಖಗಳು ಸಾಮಾನ್ಯವಾಗಿ ವೀರಶೈವ ಪುರಾಣಗಳಲ್ಲಿ ಬರುವುದುಂಟು.

* * * * *

ಈ ಪುರಾತನರ ನಾಮನಿರ್ದೇಶನ ಮಾಡುವಲ್ಲಿ, ಕೆಲವರ ಕತೆ ಹೇಳುವಲ್ಲಿ ವ್ಯತ್ಯಾಸ ಕಂಡುಬರುವುದೊಂದು ಸೋಜಿಗ. ತಮಿಳು ಭಾಷೆಯ ಹೆಸರುಗಳನ್ನು ಕನ್ನಡದಲ್ಲಿ ಉಚ್ಚರಿಸುವಾಗ ಸ್ವಾಭಾವಿಕವಾದ ಧ್ವನಿವ್ಯತ್ಯಾಸಗಳಾಗುವುದು ಸರಿ. ಅದಕ್ಕೆ ಯಾವ ಆಕ್ಷೇಪವನ್ನೂ ಮಾಡುವಂತಿಲ್ಲ. ಆದರೆ ಪೂರ್ತಿಯಾಗಿ ಕೆಲವು ಹೆಸರುಗಳೇ ಬೇರೆಯಾಗಿಯೂ ಕೆಲವು ಚರಿತ್ರೆಗಳೇ ಭಿನ್ನವಾಗಿಯೂ ಬರುತ್ತವೆ. ಅರುವತ್ತು ಮೂವರು ಪುರಾತನರು ತಮಿಳುನಾಡಿಗೆ ಸಂಬಂಧಪಟ್ಟವರಾದುದರಿಂದ ಅವರ ಚರಿತ್ರೆಗಳನ್ನು ಮೊದಲು ಬರೆದ ತಮಿಳು ಶರಣರಾದ ಸುಂದರಮೂರ್ತಿಗಳ 'ತಿರುತ್ತೊಂಡತ್ತೊಗೈ' ಹಾಗೂ ಶೇಕ್ಕಿಳಾರರ 'ಪೆರಿಯ ಪುರಾಣ' ಇವು ಕನ್ನಡದ ಕವಿಗಳಿಗೆ ಆಧಾರವಾಗುವುದು ಸ್ವಾಭಾವಿಕ.

ಅಲ್ಲಿಯ ಹೆಸರುಗಳೂ ಅವರ ಚರಿತ್ರೆಗಳೂ ಇಲ್ಲಿ ಉದ್ಧೃತವಾಗುವುದೂ ಸಹಜ. ಆದರೆ ಕನ್ನಡ ಕಾವ್ಯಗಳು ಈ ದಿಶೆಯಲ್ಲಿ ತಮಿಳು ಗ್ರಂಥಗಳಿಂದ ಹಲವೆಡೆ ಭಿನ್ನವಾಗಿರುವುವಲ್ಲದೆ ತಮ್ಮತಮ್ಮಲ್ಲಿಯೂ ಕೆಲವು ವ್ಯತ್ಯಾಸಗಳನ್ನೊಳಗೊಂಡಿವೆ. ಇದರಿಂದ ಕನ್ನಡದ ಕವಿಗಳನ್ವಯ ಅರುವತ್ತು ಮೂವರು ಪುರಾತನರು ಯಾರು ಎಂಬುದು ಸಂದೇಹಾಸ್ಪದವಾಗಿಯೇ ಇದುವರೆಗೆ ಉಳಿದುಬಂದಿರುತ್ತದೆ. ಈ ಸಂದೇಹ ಕೆಲಕಾಲದಿಂದಲೂ ನಡೆದು ಬಂದಂತೆ ತೋರುತ್ತದೆ. ಹರಿಹರನ ಪುರಾತನರ ಕಥಾಗರ್ಭದ ಗದ್ಯವೆಂಬುದೊಂದು ದೊರೆತಿದೆ. ಅದರಲ್ಲಿ ಅರುವತ್ತೆರಡು ಜನ ಪುರಾತನರ ಹೆಸರು ಹೇಳಿ ಅರುವತ್ತು ಮೂರನೆಯ ಸ್ಥಾನದಲ್ಲಿ "ಹಿಂದಿಬ್ಬರೊಂದಾಗಿ ಮೆರೆದ ಎಡಗೆಳೆಯ ಪೆರುಮಾಳಯರು ಕೂಡಿ ಅರುವತ್ತು ಮೂವರು ಪುರಾತನರು" ಎಂದು ಉಲ್ಲಿಖಿತವಾಗಿದೆ. ಇದರಿಂದ ಎಡಗೆಳೆಯ ಮಹಾರಾಜ ಹಾಗೂ ಆತನು ಭಕ್ತಿಯ (ಪುಣ್ಯದ) ಭಿಕ್ಷೆಯನ್ನು ಬೇಡಿದ ಹಿರಿಯ ಸದ್ಭಕ್ತ ಇವರಿಬ್ಬರೂ ಪುರಾತನರಲ್ಲಿ ಸಮಾವಿಷ್ಟರಾಗುವರೆಂದು ವ್ಯಕ್ತವಾಗುತ್ತದೆ. ಇದಕ್ಕೆ ಅವರಿಬ್ಬರೂ ಒಡನೆಯೇ ಬೆರೆತು ಕೂಡಿಯೇ ಕೈಲಾಸಕ್ಕೆ ಹೋದರೆಂಬುದು ಕಾರಣವೆಂದು ತೋರುತ್ತದೆ. ಹಾಗಿದ್ದರೆ ಸೌಂದರನಂಬಿ ಚೇರಮರಾಜ ಪೆರುಮಳಲೆಯ ಕುರುಂಬರು ಈ ಮೂವರು ಕೂಡಿಯೇ ಇದ್ದು ಕೂಡಿಯೇ ಕೈಲಾಸಕ್ಕೆ ಹೋಗಿರುವರು. ಹರಿಹರನು ಅವರೆಲ್ಲರ ಹೆಸರುಗಳನ್ನು ಬೇರೆಬೇರೆಯಾಗಿ ನಿರ್ದೇಶಿಸಿರುವನು. ಕಥಾಗರ್ಭದ ಕೊನೆಯ ವಾಕ್ಯದನ್ವಯ ಹಿಂದೆ ಮೂವರೊಂದಾಗಿ ಮೆರೆದ ಎಂಬ ವಿಶೇಷಣ ಇಲ್ಲಿರುವುದಿಲ್ಲ. ಹೀಗೆಯೇ ಇನ್ನೂ ಹಲವಾರು ಪುರಾತನರು ಕೂಡಿಯೇ ಬಾಳಿ, ಕೂಡಿಯೇ ಶಿವಲೋಕಕ್ಕೆ ಸಂದಿರುವರು. ಅವರೆಲ್ಲರ ಹೆಸರುಗಳು ಬೇರೆ ಬೇರೆಯೇ ಉಕ್ತವಾಗಿರುವಲ್ಲಿ ಕೊನೆಯ ಅರುವತ್ತು ಮೂರನೆಯ ಹೆಸರು ಮಾತ್ರ ಈ ರೀತಿಯಲ್ಲಿ ಉಲ್ಲಿಖಿತವಾಗುವುದಕ್ಕೆ ಕಾರಣ ತಿಳಿಯುವಂತಿಲ್ಲ. ಅಲ್ಲದೆ ಈ ಕೊನೆಯ ವಾಕ್ಯ ಹಾಗೂ ಅನಂತರ ಬರುವ ಮತ್ತೆ ಮೂವರ ಹೆಸರುಗಳು ಇನ್ನೂ ಹೆಚ್ಚಿನ ಸಂದೇಹಕ್ಕೆ ಅವಕಾಶವನ್ನು ಕೊಡುತ್ತವೆ. ಆದುದರಿಂದ ಒಂದು ಕಾಲಕ್ಕೆ ಅರುವತ್ತು ಮೂವರು ಪುರಾತನರ ಹೆಸರುಗಳ ಬಗೆಗೆ ಸಂದೇಹ ತಲೆದೋರಿರಲು ಯಾರೋ ಕೆಲವರು ಈ ರೀತಿಯಲ್ಲಿ ಅದನ್ನು ಪೂರೈಸಿರುವಂತೆ ತೋರುತ್ತದೆ. ಹರಿಹರನೇ ಅರುವತ್ತು ಮೂವರು ಪುರಾತನರ ಕಥಾಗರ್ಭದ ಗದ್ಯವೆಂದು ಹೆಸರಿಟ್ಟು ಅರುವತ್ತಾರು ಜನ ಪುರಾತನರ ಹೆಸರುಗಳನ್ನು ಹೇಳಿರಲಿಕ್ಕಿಲ್ಲ. ಈ ಭಾಗದ ಶೈಲಿ, ಅದರ ವಿಷಯ, ಅವುಗಳ ಔಚಿತ್ಯ ಇವನ್ನು ಪರಿಶೀಲಿಸಿದರೆ ಇದು ಪ್ರಕ್ಷಿಪ್ತವೆಂದೇ ನಿರ್ಣಯಿಸಬೇಕಾಗುತ್ತದೆ. ಹಾಗಿದ್ದರೆ ಹರಿಹರನ ಅಭಿಮತದಂತೆ ಅರುವತ್ತು ಮೂರನೆಯ ಪುರಾತನನಾರು ಎಂಬುದು ಸಮಸ್ಯೆಯಾಗಿಯೇ ಉಳಿಯುತ್ತದೆ. ಇದಲ್ಲದೆ ಈ ಕಥಾಗರ್ಭದ ಗದ್ಯದಲ್ಲಿ ಬರುವ ಒಂದೆರಡು ಹೆಸರುಗಳು ಒಂದೇ ಬಗೆಯಾಗಿವೆ. ನಲವತ್ತುಮೂರು ಹಾಗೂ ಐವತ್ತುಮೂರು ಹಾಗೂ ಐವತ್ತೊಂಬತ್ತನೆಯ ಪುರಾತನರ ಹೆಸರುಗಳ ಕಳಚಂಗ ಎಂದೇ ಇದೆ. ಇದು ಹಲವಾರು ಸಂದೇಹಗಳಿಗೆ ಅವಕಾಶವನ್ನು ಕಲ್ಪಿಸಿಕೊಡುತ್ತದೆ.

* * * * *

ಸಾಮಾನ್ಯವಾಗಿ ಪುರಾತನರ ಚರಿತ್ರೆಗಳನ್ನು ಹೇಳುವ ಕನ್ನಡ ಕಾವ್ಯಗಳೆಲ್ಲ ಹರಿಹರನನ್ನೇ ಅನುಸರಿಸಿದರೂ ಹಲವೆಡೆ ವ್ಯತ್ಯಾಸಗಳು ಕಂಡುಬರುತ್ತವೆ. ಸುರಂಗನ ತ್ರಿಷಷ್ಟಿಪುರಾತನ ಚರಿತ್ರೆಯನ್ನೇ ಈ ಸಂದರ್ಭದಲ್ಲಿ ಉಲ್ಲೇಖಿಸಬಹುದು. ಈ ಕಾವ್ಯದ ಆಶ್ವಾಸಗಳ ಸಂಖ್ಯೆಯನ್ನು

ನೋಡಿದರೆ ಅದು ಅರುವತ್ತು ಮೂರಾಗಿರುವುದು. ಒಂದೊಂದು ಆಶ್ವಾಸವನ್ನೂ ಸಾಮಾನ್ಯವಾಗಿ ಒಬ್ಬೊಬ್ಬ ಪುರಾತನ ಚರಿತ್ರೆಗೆ ಮೀಸಲಾಗಿಟ್ಟಿದ್ದರೂ ಪ್ರಥಮಾಶ್ವಾಸ ಕೇವಲ ಕವಿ ಕಾವ್ಯಕ್ಕೆ ಸಂಬಂಧಪಟ್ಟ ಪೀಠಿಕೆಯನ್ನೊಳಗೊಂಡಿರುವುದರಿಂದ ಅರುವತ್ತೆರಡು ಆಶ್ವಾಸಗಳಲ್ಲಿ ಅರುವತ್ತು ಮೂವರ ಚರಿತ್ರೆಯನ್ನು ಹೇಳಿದಂತಾಗುತ್ತದೆ. ಜಡೆಯನೈನಾರ್ ಯಸೈಜ್ಞಾನ ದೇವಿಯರಂತಹರು ಸೌಂದರನಂಬಿಯ ತಂದೆತಾಯಿಗಳಾಗಿರುವುದರಿಂದ ಅವರ ಚರಿತ್ರ ಸೌಂದರನಂಬಿ, ನರಸಿಂಗಮೊನೆಯರ ಕಥೆಯೊಡನೆ ಬಂದುಹೋಗುತ್ತದೆ. ಆದರೆ ಕಾವ್ಯದ ಒಳಭಾಗದಲ್ಲಿ ಆಶ್ವಾಸಗಳ ಪರಿಗಣನೆಯನ್ನು ನೋಡಿದರೆ ಹೆಚ್ಚು ಭಾಗದಲ್ಲಿ ಒಂದೊಂದು ಆಶ್ವಾಸವೂ ಒಬ್ಬೊಬ್ಬ ಪುರಾತನರ ಕತೆಗೆ ಮೀಸಲಾದಂತಿದೆ. ಈ ಸಂದರ್ಭದಲ್ಲಿ ಮೂವತ್ತೈದನೆಯ ಆಶ್ವಾಸವನ್ನು ನೋಡಬೇಕು. ಈ ಆಶ್ವಾಸವು ಶರ್ವಾಣಿಯರ ಕಥಾವೃತ್ತಾಂತವನ್ನು ಹೇಳುತ್ತದೆ. ಶರ್ವಾಣಿ ಸೌಂದರಪಾಂಡ್ಯ ಹಾಗೂ ಅವರ ಪತ್ನಿ ಮಂಗಯಕ್ಕರಸಿಯರ ಮಗಳು; ಶಿವನ ಕಾರುಣ್ಯದಿಂದ ಜನಿಸಿದವಳು. ಮೇಲುನೋಟಕ್ಕೆ ಸುರಂಗನು ಶರ್ವಾಣಿಯನ್ನು ೬೩ ಪುರಾತನರಲ್ಲಿ ಪರಿಗಣಿಸಿದನೇನೋ ಎಂಬ ಸಂಶಯ ಉಂಟಾಗುತ್ತದೆ. ಆದರೆ ಈ ಕಥೆಗಳನ್ನೂ ಇವುಗಳ ಆದ್ಯಂತಗಳನ್ನೂ ಸೂಕ್ಷ್ಮವಾಗಿ ಪರಿಶೀಲಿಸಿದರೆ ಸುರಂಗನು ಪುರಾತನರ ಸಂಬಂಧದಲ್ಲಿ ಒಂದು ವಿಶಿಷ್ಟ ಒಕ್ಕಣೆಕೆಯನ್ನು ಬಳಸಿದಂತೆ ತೋರುತ್ತದೆ. ಇಂತಹರನ್ನು ಕೈಲಾಸಕ್ಕೆ ಕರೆದೊಯ್ದು ''ಜನನುತ ಸೋಮೇಶನೊಲ್ದು ಪಾಲಿಕೆ ನಮ್ಮಂ'' ಎಂದು ಕಥೆಯ ಆದಿಯಲ್ಲಿಯೂ ಅವರನ್ನು ಪುಷ್ಪಕವಿಮಾನದಲ್ಲಿ ಕುಳ್ಳಿರಿಸಿಕೊಂಡು ಕೈಲಾಸಕ್ಕೆ ಕರೆದೊಯ್ದು ಗಣಪದವಿಯನ್ನು ಕೊಡುವುದು ಅಂತ್ಯದಲ್ಲಿಯೂ ಉಕ್ತವಾಗುತ್ತದೆ. ಶರ್ವಾಣಿಯ ಕಥೆಯ ಆದ್ಯಂತಗಳಲ್ಲಿ ಈ ಉಲ್ಲೇಖ ಬಾರದಿರುವುದರಿಂದ ಅವಳನ್ನು ಸುರಂಗನು ಅರುವತ್ತುಮೂವರು ಪುರಾತನರಲ್ಲಿ ಒಬ್ಬಳೆಂದು ಪರಿಗಣಿಸುವುದು ಸಾಧ್ಯವಿಲ್ಲೆಂದು ತೋರುತ್ತದೆ. ಅಲ್ಲದೆ ದ್ವಿತೀಯಾಶ್ವಾಸದಲ್ಲಿ ಪೆರುಮಳಲೆಯ ಕುರುಂಬರ ಚರಿತ್ರ ಬರುವಲ್ಲಿ ಸಾಮಾನ್ಯವಾಗಿ ಆಶ್ವಾಸಾದಿಯಲ್ಲಿ ಬರುವ ಪದ್ಯ ಕಂಡುಬರುತ್ತದೆ. ಇದರಿಂದ ಅವರೊಬ್ಬರು ಪುರಾತನರೆಂದು ಸ್ಪಷ್ಟವಾಗುತ್ತದೆ.

* * * * *

ಎಲ್ಲ ಗ್ರಂಥಗಳ ಕಥೆಯನ್ನು ಬಹು ಸೂಕ್ಷ್ಮವಾಗಿ ಅವಲೋಕನ ಮಾಡಿದಾಗ ಅದರಲ್ಲಿ ಗಮನಾರ್ಹವಾದ ಅಂಶಗಳು ಇಂತಿವೆ:

೧. ಹರಿಹರನ ಪುರಾತನ ರಗಳೆಯ ಕಥಾಗರ್ಭದಲ್ಲಿ ಅರುವತ್ತು ಮೂರನೆಯ ಪುರಾತನರ ಹೆಸರನ್ನು ನೇರವಾಗಿ ಕೊಡದೆ 'ಹಿಂದಿಬ್ಬರೊಂದಾಗಿ ಮೆರೆದ ಎಡಗಣೆಯ ಪೆರುಮಾಳೆಯವರು' ಎಂದು ಹೇಳಲಾಗಿದೆ. ಇದು ಪ್ರಕ್ಷಿಪ್ತವಿರಬೇಕೆಂದು ಹಿಂದೆ ವಿವರಿಸಲಾಗಿದೆ. ಹರಿಹರನ ರಗಳೆಗಳಲ್ಲಿ 'ಪಗಲ್ತೊಣೆಯಾಂಡ'ರ ರಗಳೆ ಎಂಬುದೊಂದಿದೆ. ಆ ರಗಳೆ ಹರಿಹರನದೆಂಬುದರಲ್ಲಿ ಅವ ಸಂದೇಹವೂ ಇಲ್ಲ. ಆತನ ರಗಳೆಗಳ ಸಾಮಾನ್ಯ ಲಕ್ಷಣಗಳನ್ನು ಶೈಲಿಯ ವೈಶಿಷ್ಟ್ಯವನ್ನೂ ಈ ರಗಳೆ ಅಳವಡಿಸಿಕೊಂಡಿದೆ. ಆದುದರಿಂದ ಮಿಕ್ಕ ರಗಳೆಗಳಂತೆ ಇದೂ ಹರಿಹರ ವಿರಚಿತವೆಂದೇ ಹೇಳಬೇಕಾಗುತ್ತದೆ. ಈ ಪಗಲ್ತೊಣೆಯಾಂಡರನ್ನು ಪೆರಿಯ ಪುರಾಣವು ತ್ರಿಷಷ್ಟಿ ಪುರಾತನರಲ್ಲಿ ಸಮಾವೇಶ ಗೊಳಿಸುತ್ತದೆ. ಕನ್ನಡದ ಇತರ ಗ್ರಂಥಗಳೂ ಅಂದರೆ ಸುರಂಗನ ತ್ರಿಷಷ್ಟಿ ಪುರಾತನ ಚಾರಿತ್ರ, ನಿಜಗುಣ ಶಿವಯೋಗಿಗಳ ಪುರಾತನ ತ್ರಿವಿಧಿ ಇವು ಪಗಲ್ತೊಣೆಯಾಂಡರನ್ನು ಅರುವತ್ತು

ಮೂವರು ಪುರಾತನರಲ್ಲಿ ಒಬ್ಬರೆಂದು ಪರಿಗಣಿಸುತ್ತವೆ. ಶೇಕ್ಕಿಳಾರ್, ಹರಿಹರ, ಸುರಂಗ, ನಿಜಗುಣ ಶಿವಯೋಗಿ ಇವರು ಕೊಡುವ ಪಗಲ್ತೋಣೆಯಾಂಡರ ಕತೆ ಒಂದೇ ಬಗೆಯಾಗಿದೆ. ಆದುದರಿಂದ ಹರಿಹರನನ್ವಯ ಪಗಲ್ತೋಣೆಯಾಂಡರೂ ಅರುವತ್ತುಮೂವರು ಪುರಾತನರಲ್ಲಿ ಒಬ್ಬರೆಂಬುದು ಖಚಿತವಾಗುತ್ತದೆ. ಹಿಂದಿಬ್ಬರೊಂದಾಗಿ ಮರೆದ...ಎಂದು ಮುಂತಾದ ಪ್ರಕ್ಷಿಪ್ತಭಾಗವನ್ನು ಬಿಟ್ಟು ಪಗಲ್ತೋಣೆಯಾಂಡರನ್ನು ಹರಿಹರನ ಪುರಾತನರ ಮಾಲಿಕೆಯಲ್ಲಿ ಸೇರಿಸಿಕೊಳ್ಳಲಾಗಿದೆ.

೨. ಪೆರಿಯ ಪುರಾಣದಲ್ಲಿ ಕುಱ್ಱುವನಾಯನಾರ್ ಎಂಬವರು ಅರುವತ್ತು ಮೂವರು ಪುರಾತನರಲ್ಲಿ ಒಬ್ಬರು. ಹರಿಹರ ಸುರಂಗ ಮೊದಲಾದ ಎಲ್ಲ ಕನ್ನಡ ಕವಿಗಳಲ್ಲಿ ಈ ಹೆಸರು ಕಂಡುಬರುವುದಿಲ್ಲ. ಆದರೆ ವೇಳ್ಕೂತರೆಂಬ ಪುರಾತನರ ಉಲ್ಲೇಖ ಕನ್ನಡದ ಮೇಗಣ ಎಲ್ಲ ಕಾವ್ಯಗಳಲ್ಲಿಯೂ ಕಂಡುಬರುತ್ತದೆ. ಪೆರಿಯ ಪುರಾಣದ ಕುಱ್ಱುವನಾಯನಾರರು ಮೊದಲು ಸಾಮಾನ್ಯ ಮಾಂಡಲಿಕನಿದ್ದು ತನ್ನ ಪರಾಕ್ರಮದಿಂದ ಅನೇಕ ದೊರೆಗಳನ್ನು ಸೋಲಿಸಿ ಸಾಮ್ರಾಜ್ಯಪಟ್ಟಾಭಿಷೇಕವನ್ನು ಮಾಡಿಸಿಕೊಳ್ಳಬೇಕೆಂಬ ತವಕದಲ್ಲಿರುವನು. ಚಿದಂಬರ ದೀಕ್ಷಿತರು ಆ ಕಾರ್ಯವನ್ನು ನೆರವೇರಿಸಲು ಒಪ್ಪದೆ ಆ ರಾಜ್ಯವನ್ನು ಬಿಟ್ಟು ಹೋಗುವರು. ಕುಱ್ಱುವನು ವ್ಯಥೆಯಿಂದ ನಟರಾಜನ ಭಕ್ತಿಯಲ್ಲಿ ಕಾಲಕಳೆದು ಅವನ ಪಾದಗಳನ್ನು ತನ್ನ ಶಿರದಲ್ಲಿ ಹೊತ್ತುಕೊಂಡು ರಾಜ್ಯವನ್ನಾಳುತ್ತ ಕಾಲಕಳೆದು ಮುಕ್ತಿಪಡೆಯುವನು.

ಕನ್ನಡದಲ್ಲಿ ಹರಿಹರ ಸುರಂಗರು ಕೊಡುವ ವೇಳ್ಕೂತರ ಕತೆಯಾದರೂ ಬೇರೆ ತೆರನಾಗಿದೆ. ''ಶ್ರೀ ಗುರು ಚರಣವನ್ನು ಶಿರದಲ್ಲಿ ಹೊತ್ತು ಹರಬಂದರೂ ಎರಗದ ನಿಷ್ಠೆಯ ಭಕ್ತ''ನೆಂಬುದು ಇವರಿರ್ವರ ಕತೆಗಳ ಸಾರ. ಆದರೆ ಭಾಷಾಶಾಸ್ತ್ರದ ದೃಷ್ಟಿಯಿಂದ ತಮಿಳಿನ ವೇಡು+ಕುಱ್ಱು ಇದು ವೇಟ್ಕುತ್ತ> ವೇಟ್ಕೂತ> ವೇಳ್ಕೂತ ಎಂದಾಗುವುದು ಕ್ರಮಬದ್ಧವಾಗಿದೆ. ವೇಳ್ಕೂತರೆಂಬ ಪುರಾತನರ ಕತೆಯನ್ನು ನಿಜಗುಣ ಶಿವಯೋಗಿಗಳು ''ಮನಸಿಜಾರಿಯ ಪಾದಕಮಲವನು ಹೊತ್ತು'' ''ಪಾವನತೆಯಿಂದರಸುತನವಾಂತ ವೇಳ್ಕೂತ'' ಎಂದು ಕೊಡುವರು. ಇಲ್ಲಿ ವೇಳ್ಕೂತರ ಹೆಸರು ಹರಿಹರ ಸುರಂಗ ಇವರನ್ನನುಸರಿಸಿದ್ದರೂ ಕತೆ ಪೆರಿಯ ಪುರಾಣವನ್ನು ಹೋಲುತ್ತದೆ. ನಿಜಗುಣ ಶಿವಯೋಗಿಗಳ ಪುರಾತನ ತ್ರಿವಿಧಿಯ ವೇಳ್ಕೂತ ಪೆರಿಯ ಪುರಾಣದ ಕುಱ್ಱುವನಂತೆ ಅರಸನಾಗಿದ್ದನು. ಶಿವನ ಪಾದಗಳನ್ನು ಅಲ್ಲಿಯಂತೆ ಇಲ್ಲಿಯೂ ಶಿರದಲ್ಲಿ ಧರಿಸಿ ರಾಜ್ಯವಾಳಿದನು. ಇದರಿಂದ ಪೆರಿಯ ಪುರಾಣದ ಕುಱ್ಱುವ ಕನ್ನಡ ಕಾವ್ಯಗಳ ವೇಳ್ಕೂತ ಒಂದೇ ಎಂದು ನಿರ್ಧರಿಸಬೇಕಾಗುತ್ತದೆ. ವೀರ ಶೈವಾಮೃತ ಪುರಾಣದಲ್ಲಿಯೂ 'ವಿಷ್ಣುವರಿಯದ ಶಿವಪಾದವನ್ನು ಶಿರದಲ್ಲಿ ಧರಿಸಿಕೊಂಡು ನಿಜವಾದ ವೇಳ್ಕೂತ' ಎಂಬ ಉಲ್ಲೇಖ ಬಂದಿರುತ್ತದೆ. ಕನ್ನಡ ಕಾವ್ಯಗಳಲ್ಲಿ ಈ ಕತೆ ವ್ಯತ್ಯಾಸ ಹೊಂದಿರುವುದು ಇದರಿಂದ ಸ್ಪಷ್ಟವಾಗುತ್ತದೆ. ಚಿದಂಬರೇಶ್ವರ ಪಾದುಕೆ ಮೊದಲು ಶಿವಪಾದವಾಗಿಯೂ ಆಮೇಲೆ ಗುರುಪಾದುಕೆಗಳಾಗಿಯೂ ಮಾರ್ಪಟ್ಟಿರುವಂತೆ ತೋರುತ್ತದೆ. ಆದುದರಿಂದ ಕುಱ್ಱುವ, ವೇಳ್ಕೂತ ಇವರಿಬ್ಬರೂ ಒಬ್ಬರೇ ಎಂಬುದು ನಮ್ಮ ನಿರ್ಣಯ.

೩. ಹರಿಹರನ ಪುರಾತನ ಕಥಾಗರ್ಭದಲ್ಲಿ ಕಳಚಂಗ ಎಂಬ ಹೆಸರು ಕೆಳಗಿನಂತೆ ನಾಲ್ಕು ಸಲ ಬರುತ್ತದೆ.

| ಪುರಾತನರ ಕ್ರಮಾಂಕ | ಹೆಸರು |
|---|---|
| ೨೨ | ಕುಳಚೆಂಗ |
| ೪೩ | ಕಳಚೆಂಗ |
| ೫೩ | ಕಳಚೆಂಗ |
| ೫೯ | ಕಳಚೆಂಗು ಪೆರುಮಾಳೆ |

ಇಲ್ಲಿರುವ ಇಪ್ಪತ್ತೆರಡನೆಯ ಪುರಾತನರಿಗೆ ಪ್ರತಿಯಾಗಿ ಪೆರಿಯ ಪುರಾಣದಲ್ಲಿ ಕುಲಚ್ಚಿರೈಯಾರ್ ಎಂಬವರ ಕತೆ ಬರುತ್ತದೆ. ಇವರೇ ಮಧುರೆಯ ಕೂನಪಾಂಡ್ಯ ದೊರೆಯ ಮಂತ್ರಿ ಕುಲಚ್ಚರಿಯರು. ಇವನೂ ಕೂನಪಾಂಡ್ಯನ ಪತ್ನಿ ಮಂಗಾಯಕ್ಕರಸಿಯೂ ಶಿವಭಕ್ತರಾಗಿದ್ದು ಮಧುರೆಗೆ ತಿರುಜ್ಞಾನಸಂಬಂಧರನ್ನು ಬರಮಾಡಿಕೊಂಡು ಜೈನನಾದ ಕೂನಪಾಂಡ್ಯನನ್ನು ಶೈವಮತಕ್ಕೆ ಪರಿವರ್ತನಗೊಳಿಸಿದರು. ಹರಿಹರನು ಈ ಕುಲಚ್ಚರಿಯರನ್ನೇ ಕುರಿತು ಒಂದು ರಗಳೆಯನ್ನು ಬರೆದಿರುವನು. ಆದುದರಿಂದ ಕಥಾಗರ್ಭದ ಕುಳಚೆಂಗ ಎಂಬ ಹೆಸರು ಇಲ್ಲಿ ಅನುಚಿತವೆಂದು ಹೇಳಬೇಕಾಗುತ್ತದೆ. ಅದರ ಸ್ಥಳದಲ್ಲಿ ಆತನ ಉಪಲಬ್ಧವಿರುವ ಈ ರಗಳೆಯ ಕಥಾನಾಯಕ ಕುಲಚ್ಚರಿಯರ ಹೆಸರೇ ಇರುವುದು ಸೂಕ್ತ. ಅದನ್ನೇ ಇಲ್ಲಿ ಇಟ್ಟುಕೊಳ್ಳಲಾಗಿದೆ. ಮೇಲೆ ನಿರ್ದೇಶಿಸಿದ ಉಳಿದ ಎಲ್ಲ ಕನ್ನಡ ಗ್ರಂಥಗಳಲ್ಲಿಯೂ ಕುಲಚ್ಚರಿಯರ ಹೆಸರು ಬರುವುದನ್ನು ಗಮನಿಸಬೇಕು.

೩. ಇನ್ನು ನಾಲ್ವತ್ತು ಮೂರನೆಯ ಕಳಚೆಂಗರೆಂಬ ಹೆಸರಿನಲ್ಲಿ ಕಥಾಗರ್ಭದಲ್ಲಿ ಬರುವ ಕಥೆ ಹರಿಹರನೇ ಬರೆದಿರುವ ಕಲಿಕಂಪರ ರಗಳೆಗೆ ತಪ್ಪದೆ ತದ್ವತ್ತಾಗಿ ಅನ್ವಯವಾಗುತ್ತದೆ. ಕಲಿಕಂಪರು ಶೇಕ್ಕಿಳಾರ್, ಸುರಂಗ, ನಿಜಗುಣ ಶಿವಯೋಗಿ ಹಾಗೂ ಇತರ ಕವಿಗಳನ್ವಯ ತ್ರಿಷಷ್ಟಿಪುರಾತನರಲ್ಲಿ ಒಬ್ಬರು. ಆದುದರಿಂದ ಕಥಾಗರ್ಭದ ಕಳಚಂಗ ಎಂಬುದು ಇಲ್ಲಿಯೂ ತಪ್ಪಿಬಂದ ಪದವೆಂದೇ ಹೇಳದೇ ಗತ್ಯಂತರವಿಲ್ಲ. ಅಲ್ಲಿ ಕಲಿಕಂಪ ಎಂಬುದನ್ನೇ ಇಟ್ಟುಕೊಂಡಿದೆ.

ಐವತ್ತು ಮೂರನೆಯ ಕಳಚಂಗ ಎಂಬುದು ತಮಿಳಿನ ಕಳರ್ಚಿಂಗ ಎಂಬುದರ ರೂಪಾಂತರವೆಂದು ಸ್ಪಷ್ಟವಾಗುತ್ತದೆ. ಉಳಿದ ಗ್ರಂಥಗಳಲ್ಲಿ ಕುಲಚಂಗ, ಕುಳಚಂಗ, ಕಳಚಂಗ ಎಂಬ ಪದಗಳು ಬಂದಿರುವುದನ್ನು ಗಮನಿಸಬೇಕು.

ತಮಿಳಿನ ಕೊಚ್ಚಂಗಣ್ ಎಂಬ ಹೆಸರೂ ಕಳಚಂಗ ಎಂದು ಕನ್ನಡದಲ್ಲಿ ರೂಪಾಂತರ ಹೊಂದಿರುವುದು ಮೇಗಣ ಪಟ್ಟಿಕೆಯಲ್ಲಿ ಸ್ಪಷ್ಟವಾಗುತ್ತದೆ. ಐವತ್ತು ಮೂರು ಹಾಗೂ ಐವತ್ತೊಂಬತ್ತನೆಯ ಎರಡು ಹೆಸರುಗಳನ್ನು ಭಿನ್ನ ಮಾಡಿ ತೋರಿಸಲು ಐವತ್ತೊಂಬತ್ತನೆಯದನ್ನು ಕಳಚೆಂಗುಪೆರುಮಾಳೆ ಎಂದು ಕನ್ನಡದ ಕವಿಗಳು ಕರೆದಿರುವರು. ಇದರಿಂದ ಇವರಿಬ್ಬರೂ ಭಿನ್ನವೆಂದು ಸ್ಪಷ್ಟವಾಗುತ್ತದೆ.

೪. ಮಿಕ್ಕ ಹೆಸರುಗಳೂ ಅವುಗಳಿಗೆ ಸಂಬಂಧಪಟ್ಟ ಹೆಸರುಗಳೂ ಅತ್ಯಂತ ಸೂಕ್ಷ್ಮದೃಷ್ಟಿಗೆ ಚಿಕ್ಕಪುಟ್ಟ ಕೆಲವು ವ್ಯತ್ಯಾಸಗಳನ್ನು ತೋರಿಸಿದರೂ ಸ್ಥೂಲವಾಗಿ ಒಂದೇ ಆಗಿರುವವು. ಆದರೂ ಹಲವೆಡೆ ಕಂಡು ಬರುವ ವ್ಯತ್ಯಾಸಗಳನ್ನು ಗಮನಿಸುವುದು ಸೂಕ್ತವೆನಿಸುತ್ತದೆ.

(ಅ) ತಮಿಳಿನ ಇಯರ್‌ಪಗೈಯಾರ್ ಎಂಬ ಹೆಸರು ಕನ್ನಡದ ಇತರ ಗ್ರಂಥಗಳಲ್ಲಿ

ಇಹಃಪಗೆಯಾಂಡನೆಂದು ಬಂದರೆ ಸುರಂಗನ ತ್ರಿಷಷ್ಟಿ ಪುರಾತನ ಚಾರಿತ್ರದಲ್ಲಿ 'ಇಹಃಪಗೆಯಾಂಡನೆಂಬ ಸಿಂಧಬಲ್ಲಾಳ' ಎಂದು ಉಕ್ತವಾಗಿದೆ. ಆದರೆ ಕತೆಯಲ್ಲಿ ಯಾವ ಭಿನ್ನತೆಯೂ ಇಲ್ಲ.

(ಬ) ಇಳೆಯಾಂಡಗುಡಿಮಾರರ ಕತೆಯಲ್ಲಿ ಮಗನನ್ನು ದರ್ಭೆ, ಬಾಳೆ ಎಲೆ ತರಿಸಲು ಕಳಿಸುವ ಹಾಗೂ ಆತನು ಅಲ್ಲಿ ಹಾವು ಕಚ್ಚಿ ಮಡಿದು ಬೀಳಲು ಪುನಃ ನಾಯನಾರರ ಆದೇಶದಂತೆ ತಂದೆತಾಯಂದಿರು ಕರೆಯಲು ಎದ್ದು ಓಡಿಬಂದ ಪ್ರಸಂಗ ಹರಿಹರ ಸುರಂಗರಲ್ಲಿದ್ದು ಪೆರಿಯ ಪುರಾಣದಲ್ಲಿ ಇದಿಷ್ಟೇ ಕಂಡುಬರುವದಿಲ್ಲ. ಇಷ್ಟೇ ಈ ಕತೆಯ ಅಂಶ ಪೆರಿಯ ಪುರಾಣದೊಳಗಿನ ಅಪ್ಪೂದಿ ಅಡಿಗಳ ಪ್ರಸಂಗದಲ್ಲಿ ಬರುತ್ತದೆ.

(ಕ) ಪೆರಿಯ ಪುರಾಣ ಹಾಗೂ ಕನ್ನಡ ಕಾವ್ಯಗಳಲ್ಲಿ ಕೆಳಗಣ ಹೆಸರುಗಳಲ್ಲಿ ವ್ಯತ್ಯಾಸ ಕಂಡುಬಂದರೂ ಕತೆ ಒಂದೇ ತೆರನಾಗಿದೆ.

| ಪೆರಿಯಪುರಾಣ | ಕನ್ನಡ ಗ್ರಂಥ |
|---|---|
| ಮೆಯ್‌ಪೊರುಳ್ | ಸೇದಿರಾಜ |
| ಮೂರ್ತಿ | ಒಲಘಾಂಡಮೂರ್ತಿ |
| ತಿರುನಾವಕ್ಕರಸರ್ | ವಾಗೀಶ |
| ಮೂರ್ಕ್ಕ | ಅಚ್ಯುತ |
| ಸೇರಮಾನ್ ಪೆರುಮಾಳ | ಚೇರಮ |
| ಸತ್ತಿನಾಯನಾರ್ | ಕಲಚೆತ್ತಿ |
| ನೆಡುಮಾರ | ಸೌಂದರಪಾಂಡ್ಯ |
| ಇಡಂಗಳಿಯಾರ್ | ಎಡಗೆಳೆಯ |

ಮೇಲೆ ನಿರ್ದೇಶಿಸಿದ ಅರುವತ್ತು ಮೂವರು ತಿಷಷ್ಟಿಪುರಾತನರೆಂದು ಇದುವರೆಗಣ ವಿವೇಚನೆಯಿಂದ ವಿದಿತವಾಗುತ್ತದೆ. ಅವರು ಕನ್ನಡ ಜನಜೀವನದಲ್ಲಿಯೂ ಸಾಹಿತ್ಯದಲ್ಲಿಯೂ ಎಂತಹ ಪ್ರಭಾವಮುದ್ರೆಯನ್ನು ಬೀರಿರುವರೆಂಬುದಕ್ಕೆ ಅವರ ಬಗೆಗೆ ಉಪಲಬ್ಧವಿರುವ ಈ ಸಾಹಿತ್ಯ ಹಾಗೂ ಅನೇಕ ಪುರಾಣಕಾವ್ಯಗಳಲ್ಲಿ ಬರುವ ಅವರ ಉಲ್ಲೇಖ ಇವೇ ಸಾಕ್ಷಿಯಾಗಿವೆ.

*ತ್ರಿಷಷ್ಟಿ ಪುರಾತನ ಚಾರಿತ್ರಂ, ೧೯೬೭,*
*ಪ್ರಸ್ತಾವನೆ, ಪು. ೪೯-೫೫, ೬೨-೬೫*

# ೫೮. ಹರಿದಾಸ ಸಾಹಿತ್ಯದ ಉಗಮ

● ಜಿ. ವರದರಾಜರಾವ್

೧

ಕನ್ನಡ ಹರಿದಾಸ ಸಾಹಿತ್ಯದ ಉಗಮ ಮತ್ತು ಬೆಳವಣಿಗೆಗಳನ್ನು ಕುರಿತು ಈಗಾಗಲೆ ಸಾಕಷ್ಟು ಚರ್ಚೆ ನಡೆದಿದೆ. ಅದರ ಆರಂಭಕಾಲವನ್ನು ಖಚಿತವಾಗಿ ನಿರ್ಧರಿಸುವುದಕ್ಕೆ ಈವರೆಗೂ ಸಾಧ್ಯವಾಗಿಲ್ಲ. ಪ್ರಕೃತದಲ್ಲಿ ಈ ಬಗ್ಗೆ ನಡೆದಿರುವ ವಾದ-ವಿವಾದಗಳನ್ನು ಬಹಳ ಸಂಕ್ಷಿಪ್ತವಾಗಿ ಸೂಚಿಸಿ, ಇತ್ತೀಚೆಗೆ ಕಂಡುಬಂದಿರುವ ಕೆಲವು ಹೊಸ ಸಂಗತಿಗಳನ್ನು ಇಲ್ಲಿ ಹೇಳಲು ಪ್ರಯತ್ನಿಸಿದೆ.

* * * * *

ಶ್ರೀ. ಬೇಲೂರು ಕೇಶವದಾಸರು ಹರಿದಾಸರ ಪರಂಪರೆಯನ್ನು ಪರಿಚಯ ಮಾಡಿ ಕೊಡುವಲ್ಲಿ ಅಚಲಾನಂದದಾಸರು ಎಲ್ಲರಿಗಿಂತಲೂ ಮೊದಲನೆಯವರೆಂದೂ, ಅವರು ಕ್ರಿ.ಶ. ೯ನೆಯ ಶತಮಾನದಲ್ಲಿ ಇದ್ದರೆಂದೂ ಹೇಳಿದರು. ಇದಕ್ಕೆ ಅವರಿಗೆ ದೊರೆತ ಪ್ರಮುಖ ಆಧಾರವೆಂದರೆ ಅಚಲಾನಂದರನ್ನು ಕುರಿತ ಒಂದು ಸಂಸ್ಕೃತ ಪದ್ಯ. ಅದು ಈ ರೀತಿಯಿದೆ:

ಕಾಶೀತಿ ಸಂಖ್ಯಾ ಶಕಕಾಲಕಾಬ್ದೇ
ವಿಳಂಬಿ ವರ್ಷೇ ಕಲಿ ಚೈತ್ರಶುಕ್ಲೇ
ಪಕ್ಷೇ ದಶಮ್ಯಾಂ ದಿನಮಧ್ಯಕಾಲೇ
ಪ್ರತ್ಯಕ್ಷಕೋ ಭೂದ್ಗುರುವಿಠಲಾಖ್ಯಃ

ಈ ಪದ್ಯವು ಅಚಲಾನಂದರಿಗೆ ಪಂಢರಾಪುರದಲ್ಲಿ ಭೀಮಾನದಿಯಲ್ಲಿ ವಿಠಲನ ದರ್ಶನವಾದುದನ್ನು ತಿಳಿಸುತ್ತದೆ. ಶ್ರೀ. ಬೇಲೂರು ಕೇಶವದಾಸರು 'ಕಾಶೀತಿ ಸಂಖ್ಯಾ' ಎಂದರೆ ಶಾ. ಶ. ೮೦೧ ಆಗುವುದೆಂದು ಅಭಿಪ್ರಾಯಪಡುವರು.[೧] ಈ ಮೇರೆಗೆ ಅವರ ಕಾಲ ಕ್ರಿ.ಶ. ೯ನೆಯ ಶತಮಾನವಾಗುವುದು. ಅಚಲಾನಂದವಿಠಲ ವಿರಚಿತ ಕೆಲವು ಉಗಾಭೋಗಗಳನ್ನು ಅವರು ತಮ್ಮ 'ಹರಿದಾಸ ಸಾಹಿತ್ಯ'ವೆಂಬ ಬೇರೊಂದು ಗ್ರಂಥದಲ್ಲಿ ಉದಾಹರಿಸಿರುವರು.[೨] ಶ್ರೀ. ಬೇಲೂರು ಕೇಶವದಾಸರ ಕಾಲಕ್ಕಾಗಲೇ ಈ ಅಭಿಪ್ರಾಯಕ್ಕೆ ಸಾಕಷ್ಟು ಮನ್ನಣೆ ದೊರೆತಂತಿಲ್ಲ. ಏಕೆಂದರೆ ಅಚಲಾನಂದ ವಿರಚಿತ ರಚನೆಗಳ ಭಾಷೆಗೂ, ಅವರ ಕಾಲದ ಕನ್ನಡಕ್ಕೂ ಇದ್ದ ಅಂತರ ಈ ಅಭಿಪ್ರಾಯ ಸ್ವೀಕಾರಕ್ಕೆ ಅಡ್ಡಿಯೆನ್ನಿಸಿತ್ತು. ಆದರೂ, ಶ್ರೀಯುತರು ತಮ್ಮ ಗ್ರಂಥದಲ್ಲಿ, ಕಾಲದ ಬಗ್ಗೆ ತಮ್ಮ ಅಭಿಪ್ರಾಯವನ್ನು ಮಾರ್ಪಡಿಸಿಕೊಳ್ಳಲಿಚ್ಛಿಸದೆ, ಆ ರಚನೆಗಳು ಒಂದು ವೇಳೆ ಆ ಮನೆತನದವರು ಇತ್ತೀಚೆಗೆ ಬರೆದ ರಚನೆಗಳಿರಬಹುದೆಂದು ಭಾವಿಸಿರುವುದೂ ಉಂಟು.[೩]

ಈ ವಿಚಾರವನ್ನು ಮತ್ತಷ್ಟು ಪ್ರಮಾಣಗಳನ್ನಿತ್ತು ಪರಿಶೀಲಿಸಿದವರಲ್ಲಿ ಶ್ರೀ. ಹುಲಗೂರು

---

೧ ಕರ್ನಾಟಕ ಭಕ್ತವಿಜಯ, ಭಾಗ ೧, ೧೯೩೩, ಪು. ೯.
೨ ಹರಿದಾಸಸಾಹಿತ್ಯ, ೧೯೪೪, ಪು. ೭೭-೭೯.
೩ ಕರ್ನಾಟಕ ಭಕ್ತವಿಜಯ, ಭಾಗ ೧, ೧೯೩೩, ಪು. ೭.

ಕೃಷ್ಣಾಚಾರ್ಯರು ಪ್ರಮುಖರು ಎನ್ನಬಹುದು. ಅವರು, ಮೇಲೆ ಉಕ್ತವಾದ ಸಂಸ್ಕೃತ ಪದ್ಯದ ವ್ಯಾಖ್ಯಾನವನ್ನು ಮಾಡುತ್ತ ''ಕಾಶೀತಿಶಾಕೇಗತಕಾಲಿಕಾಬ್ದೇ'' ಎಂದು ಪಾಠವಿದ್ದರೆ ಮಾತ್ರ ಶ್ರೀ.ಕೇಶವದಾಸರು ಹೇಳುವಂತೆ ೮೦೧ ನಿರ್ಣಯವಾಗುತ್ತಿತ್ತು. ಸಂಖ್ಯಾಶಬ್ದವನ್ನು ಉದ್ದೇಶಪೂರ್ವಕವಾಗಿ ಹಾಕಿದ್ದರಿಂದ ೧೨೮೧ ಶಕ ವಿಳಂಬಿ ಸಂವತ್ಸರ ಎಂದು ಆಗುವುದು. ಆದುದರಿಂದ ಮೇಲಿನ ಮಿತಿಯು ಕ್ರಿ. ವ. ೧೩೫೯ ಎಂದಾಗುವುದು' ಎಂಬುದಾಗಿ ಅಭಿಪ್ರಾಯಪಟ್ಟಿರುವುದು ಮಾತ್ರವಲ್ಲದೆ, ಅಚಲಾನಂದ ವಿರಚಿತವಾದ ಒಂದು ರಚನೆಯಲ್ಲಿ ''ಕೇಳೋ ಜೀವನವೆ ನೀ ಮಧ್ವಮತವನನುಸರಿಸಿ ಶ್ರೀಲೋಲನಂಘ್ರಿಗಳ ನೆನೆದು ಸುಖಿಸೋ'' ಎಂದು ಉಕ್ತವಾಗಿರುವುದರಿಂದ ಅವರು ಮಧ್ವಾಚಾರ್ಯರಿಗಿಂತ ಈಚಿನವರೆನ್ನುವುದನ್ನು ತೋರಿಸಿಕೊಟ್ಟರು.[೪] ಈ ಹೊಸ ಅಭಿಪ್ರಾಯವು ಸೂಕ್ತವಾಗಿ ಕಂಡಿದ್ದರಿಂದ ಅಲ್ಲಿಂದ ಈಚೆಗೆ ವಿದ್ವಾಂಸರು ಇದಕ್ಕೆ ಪುರಸ್ಕಾರವಿತ್ತಿರುವುದು ವಿದಿತವಾಗುತ್ತದೆ.

ಇತ್ತೀಚೆಗೆ ಅಚಲಾನಂದದಾಸರ ಮನೆತನದವರಲ್ಲಿದ್ದ ಕೆಲವು ಓಲೆಯ ಪ್ರತಿಗಳನ್ನು ನೋಡುವ ಅವಕಾಶ ನನಗೆ ದೊರೆಯಿತು[೫]. ಅಲ್ಲಿ ಹಲವಾರು ಸಂಸ್ಕೃತ ಗ್ರಂಥಗಳಿವೆ. ಕೆಲವು ದೇವನಾಗರಿ ಲಿಪಿಯಲ್ಲಿದ್ದರೆ, ಉಳಿದ ಕೆಲವು ಕನ್ನಡ ಲಿಪಿಯಲ್ಲಿವೆ. ಕನ್ನಡದಲ್ಲಿ ರಚಿತವಾದ ಒಂದು ಗ್ರಂಥದ ನಾಲ್ಕೇನಾಲ್ಕು ಓಲೆಯ ಗರಿಗಳನ್ನು ನೋಡುವಲ್ಲಿ ಅದರಲ್ಲಿ ಅಚಲಾನಂದರನ್ನು ಕುರಿತ ಕೆಲವು ಸಂಗತಿಗಳು ಕಂಡುಬಂದವು. ಆ ಗ್ರಂಥ ಅಚಲಾನಂದರ ಸಮಗ್ರ ಜೀವನಕ್ಕೆ ಸಂಬಂಧಿಸಿರುವಂತಿದೆ. ಪ್ರಕೃತದಲ್ಲಿ ದೊರೆತ ಭಾಗದಲ್ಲಿ ಅಚಲಾನಂದರಿಗೆ ಪಂಢರಪುರದಲ್ಲಿ ವಿಠಲನ ದರ್ಶನವಾದ ವಿಷಯವನ್ನು ಸ್ಪಷ್ಟವಾಗಿ ಗದ್ಯದಲ್ಲಿಯೇ ಬರೆದಿರುವುದಲ್ಲದೆ, ಆ ವಂಶದವರಲ್ಲಿ ಪೂಜಾದಿಗಳಿಗೆ ಏರ್ಪಟ್ಟ ಇತರ ವಿವರವೂ ಲಿಖಿತವಾಗಿದೆ.

* * * * *

ಆ. ಅಲ್ಪಸ್ವಲ್ಪ ಭಾಗದಿಂದ ಈ ಕೆಲವು ಅಂಶಗಳನ್ನು ನಾವು ಗ್ರಹಿಸಬಹುದು.

(i) ಅಚಲಾನಂದರಿಗೆ ವಿಠಲನ ಸಂದರ್ಶನವಾದ ದಿನವನ್ನು ಈ ಮೊದಲು ವಾದಗ್ರಸ್ತವಾದ ಸಂಸ್ಕೃತ ಪದ್ಯವೊಂದರ ವ್ಯಾಖ್ಯಾನವನ್ನು ಅವಲಂಬಿಸಿ ನಿರ್ಣಯಿಸಬೇಕಾಗಿದ್ದಿತಷ್ಟೆ. ಈಗ ಆ ಅಂಶ ಗದ್ಯದಲ್ಲಿರುವುದರಿಂದ ಅದು ಕ್ರಿ.ಶ. ೯ನೆಯ ಶತಮಾನದಲ್ಲಿಯೇ ನಡೆದಿರಬೇಕೆಂದು ಸ್ಪಷ್ಟವಾಗುತ್ತದೆ.

(ii) ಅಚಲಾನಂದರು ಊರಿಗೆ ಹಿಂತಿರುಗಿದ ಬಳಿಕ (ನಾಗನದಿಯ ಸಮೀಪದಲ್ಲಿರುವುದೇ ಇಂದಿನ ತುರುವೇಕೆರೆ.) ಪೂಜಾವ್ಯವಸ್ಥೆಯನ್ನು ಮಾಡಿದ ಕಾಲವೂ ೯ನೆಯ ಶತಮಾನವೇ ಆಗುವುದರಿಂದ ಮೇಲಿನ ಘಟನೆ ನಡೆದ ಕಾಲಕ್ಕೆ ಇದು ಬೆಂಬಲವನ್ನಿತ್ತಂತಾಗುತ್ತದೆ. (ಕಾಲವನ್ನು ಸೂಚಿಸುವಲ್ಲಿ ಶಾ. ಶ. ವಿಳಂಬಿಸಂವತ್ಸರ ೮೦೧ ಎಂಬಲ್ಲಿ,

---

೪ ಕರ್ನಾಟಕ ಸಂಗೀತವೂ ದಾಸಕೂಟವೂ, ೧೯೫೧, ಪುಟ ೫೯; ಪು. ೬೧.

೫ ಈ ಸದವಕಾಶವನ್ನು ನನಗೆ ಕಲ್ಪಿಸಿಕೊಟ್ಟ, ಇದೇ ಮನೆತನದವರಾಗಿದ್ದು ತಿಪಟೂರಿನಲ್ಲಿ ಅಡ್ವೋಕೇಟರಾಗಿರುವ ಶ್ರೀ. ವಿ. ಎಚ್. ವಿಠಲ ನರಸಿಂಹಯ್ಯನವರಿಗೂ, ಈ ಕಾರ್ಯಕ್ಕೆ ನೆರವಾದ ಶ್ರೀ. ಎಚ್. ಎಸ್. ಹರಿಶಂಕರ್ ಅವರಿಗೂ ನಾನು ಕೃತಜ್ಞನಾಗಿದ್ದೇನೆ. ಈ ದಿಕ್ಕಿನಲ್ಲಿ ನನಗೆ ದಾರಿ ತೋರಿ, ಇದು ನೆರವೇರುವಂತೆ ಸಹಕರಿಸಿದ ನನ್ನ ಪೂಜ್ಯ ಗುರುಗಳಾದ ದಿ|| ಡಿ. ಎಲ್. ನರಸಿಂಹಾಚಾರ್ಯರನ್ನು ಇಲ್ಲಿ ನೆನೆಯಲಾಶಿಸುತ್ತೇನೆ.

ಸಂವತ್ಸರಾನುಸಾರವಾಗಿ ನಿರ್ಣಯಿಸುವುದಾದರೆ ಅದು.ಶಾ. ಶ. ೮೦೦ ಆಗುತ್ತದೆ. ಎರಡು ಕಡೆಗಳಲ್ಲಿಯೂ ವಾರದ ಹೆಸರು ಏಕೆ ಬಿಟ್ಟು ಹೋಗಿದೆಯೋ ತಿಳಿಯದು.)

(iii) ಅಚಲಾನಂದರು ತಮ್ಮ ಪೂಜಾದಿಕಾರ್ಯಗಳಿಗೆ ಒಂದು ಮಠವನ್ನು ನಿರ್ಮಿಸಿದುದಾಗಿ ಉಲ್ಲೇಖಿತವಾಗಿದೆ.

(iv) ಅಚಲಾನಂದರ ಪರಂಪರೆಯಲ್ಲಿ ಗೋಪೀನಾಥದಾಸರು, ಮುದ್ದು ವಿಠಲ ದಾಸರು ಮತ್ತು ಪಾಂಡುರಂಗದಾಸರೆಂಬುವರು ಕಾಲಕಾಲಕ್ಕೆ ಅಧಿಕಾರವನ್ನು ವಹಿಸಿ ಪೂಜಾಕಾರ್ಯವನ್ನು ನಿರ್ವಹಿಸಿದುದಾಗಿ ವ್ಯಕ್ತವಾಗುತ್ತದೆ.

(v) ಈ ಪೂಜಾಕಾರ್ಯಗಳಿಗೆ ಅಚಲಾನಂದರ ಕಾಲದಲ್ಲಿ ಬಲ್ಲಾಳ ರಾಜರಿಂದ ಮಾನ್ಯ ಬಂದುದಾಗಿ ಹೇಳಿದೆ. ಆದರೆ ಆಗ ರಾಷ್ಟ್ರಕೂಟರು ಪ್ರಬಲರಾಗಿದ್ದರು. ಇಲ್ಲಿ ವಿವರ ತಪ್ಪಿರಬಹುದು. ಅನಂತರ ಶಾ. ಶ. ೧೪೬೪ರಲ್ಲಿ (ಕ್ರಿ.ಶ. ೧೫೪೨) ಅಚ್ಯುತರಾಯನು ಮಾನ್ಯವನ್ನು ಕೊಟ್ಟನೆಂದು ತಿಳಿಸಿದೆ. (ಇಲ್ಲಿ ಸಂವತ್ಸರದ ಪಲ್ಲಟವಾಗಿದೆ. ನಂದನ ಸಂವತ್ಸರವಾಗಿದ್ದಲ್ಲಿ ಶಾ. ಶ. ೧೪೫೪ ಆಗುತ್ತದೆ. ಇಲ್ಲವೇ ಶಾ. ಶ. ೧೪೬೪ನೆಯ ಇಸವಿಯೇ ಆಗಿದ್ದಲ್ಲಿ ಆಗ ಶುಭಕೃತು ಸಂವತ್ಸರವಾಗುತ್ತದೆ. ಇದು ಹೇಗಾದರೂ ಸರಿಯೆ, ವಿಜಯನಗರದ ಅಚ್ಯುತರಾಯನ ಕಾಲಕ್ಕೆ ಸರಿಹೋಗುತ್ತದೆ.)

(vi) ಪಾಂಡುರಂಗದಾಸರ ಕಾಲಕ್ಕೆ ಈ ಪೂಜಾವ್ಯವಸ್ಥೆ ಉಡುಪಿಯಲ್ಲಿನ ಪರ್ಯಾಯದಂತೆ ಈ ವಂಶೀಯರಿಗೆ ಸೇರಿದ ಮೂರು ಬುಡಕಟ್ಟಿಗೆ ಹಂಚಿದುದಾಗಿ ತಿಳಿದುಬರುತ್ತದೆ. ಈ ಪಾಂಡುರಂಗದಾಸರನ್ನು **ಭಗವತ್ಪಾದಾಚಾರ್ಯರು** ಎಂಬುದಾಗಿ ನಿರ್ದೇಶಿಸಿರುವುದರಿಂದ ಅಚಲಾನಂದರು ಮೊದಲ್ಗೊಂಡು ಕ್ರಮವಾಗಿ ಪೀಠಕ್ಕೆ ಬಂದವರೆಲ್ಲ ಯತ್ಯಾಶ್ರಮವನ್ನು ಸ್ವೀಕರಿಸಿರಬೇಕು ಎನ್ನಿಸುತ್ತದೆ. ಪಾಂಡುರಂಗದಾಸರವರಗೆ ಈ ಪದ್ಧತಿ ನಡೆದು ಬಂದುದಾಗಿ ಹೇಳಿದೆ.

(vii)ಈ ಗ್ರಂಥದಲ್ಲಿ ಉಕ್ತವಾದ ವಿವರಗಳನ್ನು ಇದೇ ವಂಶದ ಜ್ಯೇಷ್ಠಾಂಶದ ಲಕ್ಷ್ಮಯ್ಯನವರಿಗೆ ಮಕ್ಕಳಿಲ್ಲದಿರಲು ಕನಿಷ್ಠ ಸಂತತಿಯಿಂದ ದತ್ತು ಪಡೆದ ನರಸಿಂಹನ ತಿಳಿವಳಿಕೆಗೋಸ್ಕರ ಬರೆಸಿದುದಾಗಿ ಹೇಳಿದೆ. ಅಚ್ಯುತರಾಯರ ಕಾಲವನ್ನು ನಿರ್ದೇಶಿಸಿರುವುದರಿಂದ ಈ ಲಿಖಿತ ಕ್ರಿ.ಶ. ೧೫೪೨ರಿಂದ ಈಚೆಗೆ ರಚಿತವಾಗಿರಬೇಕೆಂದು ಸ್ಪಷ್ಟವಾಗುತ್ತದೆ.

* * * * *

ಈ ಎಲ್ಲ ಅಂಶಗಳನ್ನೂ ಒಟ್ಟಿಗೆ ಗಮನಿಸಿದ್ದೇ ಆದರೆ, 'ಅಚಲಾನಂದ'ರೆಂಬುವರು ಕ್ರಿ.ಶ. ೯ನೆಯ ಶತಮಾನದಲ್ಲಿಯೇ ಇದ್ದವರೆಂದೂ, ಅವರು ಮೊದಲು ಸಂಸಾರಿಗಳಾಗಿದ್ದು ಅನಂತರ ಒಂದು ಮಠದ ಪೀಠಾಚಾರ್ಯರಾಗಿ ವಿಠಲನ ಉಪಾಸಕರಾಗಿದ್ದರೆಂದೂ, ಅವರನ್ನು 'ಅಚಲಾನಂದಸ್ವಾಮಿಗಳು' ಇಲ್ಲವೇ 'ಅಚಲಾನಂದದಾಸ'ರೆಂದು ಕರೆಯುವ ಪದ್ಧತಿಯಿತ್ತೆಂದೂ ವ್ಯಕ್ತವಾಗುವುದು. ಈಗ ಈ ಮನೆತನಕ್ಕೆ ಸೇರಿದವರು ಸ್ಮಾರ್ತ ಸಂಪ್ರದಾಯದವರಾದರೂ, ವೈಷ್ಣವ ಆಚರಣೆಗಳನ್ನೇ ಅನುಸರಿಸುತ್ತಿರುವುದಾಗಿ ತಿಳಿದುಬರುವುದರಿಂದ, ಶ್ರೀ ಮಧ್ವಾಚಾರ್ಯರ ಕಾಲಕ್ಕೆ ಮುಂಚಿನಿಂದಲೂ ರೂಢಿಯಲ್ಲಿದ್ದ

ಭಾಗವತ ಸಂಪ್ರದಾಯದೊಂದಿಗೆ ಅಚಲಾನಂದರ ಸಂಬಂಧವಿದ್ದಿತೆಂದು ಊಹಿಸಿದರೆ ತಪ್ಪೆನ್ನಿಸದು. ಕನ್ನಡದ ಓಲೆಯ ಪ್ರತಿ ಇತ್ತೀಚಿನದಾದರೂ ಪಂಢರಾಪುರವನ್ನು ನಿರ್ದೇಶಿಸುವಲ್ಲಿ 'ಪಾಂಡುರಂಗೆ' ಎಂದು ಇರುವುದೂ, ಅಚಲಾನಂದರ ಶಿಷ್ಯರಲ್ಲಿ ಹಾಗೂ ಉಂಬಳಿ ಬಿಟ್ಟ ಗ್ರಾಮಗಳಲ್ಲಿ 'ವಿಠಲ' ಎಂಬ ಶಬ್ದವಿರುವುದೂ, ಅಚಲಾನಂದರಿಗೆ ಭೀಮಾನದಿಯಲ್ಲಿ ವಿಠಲಮೂರ್ತಿಯ ಪ್ರತ್ಯಕ್ಷವಾಗುವುದೂ, ಶ್ರೀಮತ್ಪಾಂಡುರಂಗದಾಸರು ವಿಠಲಭಾಷ್ಯವನ್ನು ಬರೆದರೆಂದು ತಿಳಿದುಬರುವುದೂ ಇವೇ ಮೊದಲಾದುವನ್ನು ಮನಗಂಡರೆ ಆ ವೇಳೆಗಾಗಲೆ ಪಾಂಡುರಂಗವಿಠಲನ ಪ್ರಭಾವ ಕನ್ನಡ ಭಕ್ತರ ಮೇಲೆ ಎಷ್ಟು ಗಾಢವಾಗಿತ್ತೆನ್ನುವುದು ಸ್ಪಷ್ಟವಾಗುತ್ತದೆ. ಮಹಾರಾಷ್ಟ್ರದ ಭಕ್ತನಾದ ಜ್ಞಾನದೇವನು ''ಕಾನಡಾ ಹೋ ವಿಟ್ಠಲು ಕರ್ಣಾಟಕೂ ತ್ಯಾನೇ ಮಜಲಾವಿಲಾವೇಧು'' (ಜ್ಞಾನದೇವಗಾಥಾ, ಅಭಂಗ ೭೬೪) (ಕರ್ಣಾಟಕ ದೇಶದಲ್ಲಿಯ ವಿಟ್ಠಲದೇವನು ತನ್ನ ಕಡೆಗೆ ನನ್ನ ಮನಸ್ಸನ್ನು ಆಕರ್ಷಿಸಿಕೊಂಡನು) ಎಂದು ಹೇಳಿದ್ದಾನೆ. ನಾಮದೇವನಾದರೋ ''ಕಾಶಿಯೇ ಕನೋಜಾ ದ್ವಾರಕೇ ಗುಜರು ಕಾನಡಾ ವಿಟ್ಠಲ ಪಂಢರಿಯೇ'' (ನಾಮದೇವಗಾಥಾ, ಅಭಂಗ ೫೩೮-೧) (ಕನೋಜ ಪ್ರಾಂತದಲ್ಲಿ ಹೇಗೆ ಕಾಶೀಕ್ಷೇತ್ರವೋ ಗುಜರಾತ ಪ್ರಾಂತದಲ್ಲಿ ಹೇಗೆ ದ್ವಾರಕಾಕ್ಷೇತ್ರವೋ ಹಾಗೆ ಕರ್ಣಾಟಕ ಪ್ರಾಂತದಲ್ಲಿ ವಿಟ್ಠಲದೇವನ ಪಂಡರೀಕ್ಷೇತ್ರವು) ಎಂದು ಕ್ಷೇತ್ರ ಮಾಹಾತ್ಮ್ಯೆಯನ್ನೇ ತಿಳಿಸಿರುವುದನ್ನು ಕಂಡರೆ ಅಂದಿನ ಕನ್ನಡಿಗರಿಗೆ ವಿಠಲನಲ್ಲಿ ಎಷ್ಟು ಭಕ್ತಿಯಿತ್ತೆಂಬುದು ದೃಢವಾಗುತ್ತದೆ. ಕನ್ನಡ ನಾಡಿನಲ್ಲಿ ವಿಠಲೋಪಾಸನೆ ಹೇಗೆ ಬೆಳೆಯಿತೆಂಬ ಇತಿಹಾಸವನ್ನು ತಿಳಿಯಲು ಈ ಅಚಲಾನಂದಯತಿಗಳ ಸಮಗ್ರ ಜೀವನ ತುಂಬ ನೆರವಾಗಬಹುದು.

ಇನ್ನು 'ಅಚಲಾನಂದವಿಠಲ' ಎಂಬ ಅಂಕಿತವಿರುವ ರಚನೆಗಳು ಭಾಷಾದೃಷ್ಟಿಯಿಂದಲೂ, ಆಂತರಿಕ ಪ್ರಮಾಣದಿಂದಲೂ ಮೇಲೆ ಹೇಳಿದ ೯ನೆಯ ಶತಮಾನದ ಅಚಲಾನಂದರಿಂದ ರಚಿತವಾಯಿತೆಂದು ಹೇಳುವುದು ಸೂಕ್ತವೆನ್ನಿಸದು. ಇವುಗಳನ್ನು ಬರೆದವರು ಮಾಧ್ವಸಂಪ್ರದಾಯಕ್ಕೆ ಸೇರಿದ ಬೇರೊಬ್ಬ ಅಚಲಾನಂದದಾಸರಿರಬೇಕು. ಈಗ ಈ ಅಂಕಿತದಲ್ಲಿ ಕೆಲವು ಉಗಾಭೋಗಗಳೂ, ಕೀರ್ತನೆಗಳೂ ಮತ್ತು ಸುಳಾದಿಯೂ ದೊರೆಯುತ್ತವೆಯಷ್ಟೆ. ಉಗಾಭೋಗಗಳಲ್ಲಿ ಕೆಲವಂತೂ ಅಂಕಿತ ಪಲ್ಲಟವಾಗಿವೆಯೆನ್ನುವುದನ್ನು ಮನಗಾಣಬಹುದು.[೬] ಈ ಹರಿದಾಸರು ಆದ್ಯರೋ ಇಲ್ಲವೇ ಇತ್ತೀಚಿನವರೋ ಎನ್ನುವುದನ್ನು ಪ್ರತ್ಯೇಕವಾಗಿಯೇ ವಿಚಾರಮಾಡಿ ತಿಳಿಯಬೇಕಾಗಿದೆ. ಹರಿದಾಸ ಸಾಹಿತ್ಯದ ಪ್ರಮುಖ ಪ್ರಕಾರಗಳಾದ ಕೀರ್ತನೆ, ಸುಳಾದಿ ಮತ್ತು ಉಗಾಭೋಗಗಳೆಂಬ ಮೂರನ್ನು ಈ ಅಂಕಿತದಲ್ಲಿ ಕಾಣುವುದರಿಂದ ಈ ಪದ್ಧತಿ ಸಾಕಷ್ಟು ಪ್ರಚಾರಕ್ಕೆ ಬಂದ ಬಳಿಕವೇ ಈ ಹರಿದಾಸರು ಇದ್ದಿರಬೇಕು ಎನ್ನಬೇಕಾಗುತ್ತದೆ.

ಈ ಎಲ್ಲ ಕಾರಣಗಳಿಂದ, ಭಾಷಾಸ್ವರೂಪವನ್ನು ಕಡೆಗಣಿಸಿ 'ಅಚಲಾನಂದ ವಿಠಲಾಂಕಿತ'ವಾದ ರಚನೆಗಳನ್ನು ಕ್ರಿ.ಶ ೯ನೆಯ ಶತಮಾನಕ್ಕೆ ಸೇರಿದ ಅಚಲಾನಂದ

---

೬ ಶ್ರೀ ಕಪಟರಾಳು ಕೃಷ್ಣರಾಯರ 'ಹರಿದಾಸ ಪರಂಪರೆ' ಎಂಬ ಪ್ರಬಂಧವನ್ನು ನೋಡಿ: ಕರ್ಣಾಟಕ ಸಂಸ್ಕೃತಿಯ ಸಂಶೋಧನೆ, ೧೯೭೦, ಪು. ೨೮೫-೨೮೭.

ಸ್ವಾಮಿಗಳು ಬರೆದರೆನ್ನುವುದಾಗಲಿ, ಅಥವಾ ಆ ಕೃತಿಗಳ ಸಲುವಾಗಿಯೇ ಅವರನ್ನು ಇತ್ತೀಚಿನ ಕಾಲಕ್ಕೆ ಸರಿಸುವುದಾಗಲಿ ಸರಿಯೆನ್ನಿಸುವುದಿಲ್ಲ. ಆದ್ದರಿಂದ ಬೇರೆ ಬೇರೆ ಕಾಲಕ್ಕೆ ಸೇರಿದ ಇಬ್ಬರು ಅಚಲಾನಂದರು ಇದ್ದಿರಬೇಕು ಎನ್ನುವುದು ಸೂಕ್ತವಾದುದು.

* * * * *

೨

ಹರಿದಾಸ ಪರಂಪರೆಯಲ್ಲಿ ಶ್ರೀಮಧ್ವಾಚಾರ್ಯರ ಸಮಕಾಲೀನರಾದ ಶ್ರೀ ನರಹರಿ ತೀರ್ಥರನ್ನು ಮೊದಲಿಗರೆಂದು ಕೆಲವರು ಹೇಳುವುದುಂಟು. ಶ್ರೀ ಬೇಲೂರು ಕೇಶವದಾಸರು ಇವರ ಜೀವನ ಪರಿಚಯ ಮಾಡಿಕೊಟ್ಟು, ಇವರಿಂದ ರಚಿತವಾದ ಎರಡೇ ಎರಡು ಕೀರ್ತನೆಗಳನ್ನು ಉದಾಹರಿಸಿರುವರು.[೭] ಶ್ರೀ. ಆರ್. ಎಸ್. ಪಂಚಮುಖಿಯವರು ಇವರಿಂದ ರಚಿತವಾದ ''ಇಂತು ಮರುಳಾದೆ ಇಂತು ಮರುಳಾಗಿ ಬಯಲಿಗೆ ಒರಲಿದೆ ರಕ್ಷಿಸಯ್ಯ ರಘುಕುಲತಿಲಕ'' ಮತ್ತು ''ತಿಳಕೊ ನಿನ್ನೊಳಗೆ ನೀನೆ, ಮರುಳೆ ತಿಳಕೊ ನಿನ್ನೊಳಗೆ ನೀನೆ'' ಎಂಬ ಎರಡು ಕೀರ್ತನೆಗಳನ್ನು ಉಲ್ಲೇಖಿಸಿ, ''ಶ್ರೀ ನರಹರಿತೀರ್ಥರು ಶ್ರೀ ಕೂರ್ಮದ ನೃಸಿಂಹದೇವರ ಉಪಾಸಕರಾಗಿದ್ದು ತಮ್ಮ ಆಶ್ರಮದ ಹೆಸರನ್ನೂ ಶ್ರೀಮದಾನಂದ ತೀರ್ಥರಿಂದ ಮೂಲರಾಮದೇವರನ್ನು ಪಡೆದ ಮೇಲೆ ಅದರ ಸ್ಮರಣೆಗೆ ರಘುಪತಿಯ ಅಂಕಿತವನ್ನೂ ಈ ಪದಗಳಲ್ಲಿ ಪ್ರಯೋಗಿಸಿದ್ದಾರೆಂದು ತಿಳಿಯಬಹುದು.''[೮] ಎಂದು ಭಾವಿಸಿ, ಸದ್ಯಕ್ಕೆ ''ನರಹರಿತೀರ್ಥರಿಂದ ದಾಸಕೂಟವು ಕನ್ನಡದಲ್ಲಿ ಮೊದಲಾಯಿತೆಂದು ಗ್ರಹಿಸಬಹುದು'' ಎಂದು ಹೇಳಿರುತ್ತಾರೆ.

ದಿವಂಗತ ಗೋರಬಾಳು ಹನುಮಂತರಾಯರು ನರಹರಿತೀರ್ಥ ವಿರಚಿತವೆಂದು ''ಇಂತು ಮರುಳಾದೆನು ನಾ ಇಂತು ಮರುಳಾದೆ'', ''ತಿಳಕೊ ನಿನ್ನೊಳಗೆ ನೀನೆ ಮರುಳೆ ತಿಳಕೊ ನಿನ್ನೊಳಗ ನೀನೆ'', ''ಎದುರ್ಯಾರೊ ಗುರುವೆ ಸಮರ್ಯಾರೊ'' ಎಂಬ ಮೂರು ಕೀರ್ತನೆಗಳ ಜೊತೆಗೆ ''ಹರಿಯೆ ಇದು ಸರಿಯೇ, ಚರಣ ಸೇವಕನಲ್ಲಿ ಕರುಣ ಬಾರದ್ಯಾಕೆ'' ಎಂಬ ರಚನೆಯನ್ನು ಸಂದೇಹಗ್ರಸ್ತವಾಗಿ ಸೇರಿಸಿರುತ್ತಾರೆ. ಶ್ರೀಯುತರು ಕೊಟ್ಟಿರುವ ಮೊದಲಿನ ಎರಡು ಕೀರ್ತನೆಗಳೂ ಅದೇ ಕೀರ್ತನೆಯ ಇತರ ಪಾಠಗಳಿಗಿಂತ ತುಂಬ ವಿಸ್ತೃತವಾಗಿದೆ. ಮೂರನೆಯ ಕೀರ್ತನೆ ಹೊಸದಾಗಿದೆ. ಈ ಮೂರು ಕೀರ್ತನೆಗಳಲ್ಲಿ 'ರಘುಪತಿ' ಎಂಬ ಅಂಕಿತ ಸಮಾನವಾಗಿದ್ದರೆ ಸಂದೇಹಗ್ರಸ್ತವಾದ ಕೀರ್ತನೆಯ ಅಂಕಿತ ಕೇವಲ 'ನರಹರಿ' ಎಂದು ಮಾತ್ರವಿದೆ. ಶ್ರೀಯುತರು ದಕ್ಷಿಣ ದೇಶದ ಒಬ್ಬ ಬ್ರಾಹ್ಮಣರಲ್ಲಿ ನರಹರಿತೀರ್ಥರಿಂದ ವಿರಚಿತವಾದ ೧೭ ಪದಗಳಿದ್ದವೆಂದೂ ಹೇಳಿರುತ್ತಾರೆ.[೯]

* * * * *

ನರಹರಿತೀರ್ಥರು ಸುಮಾರು ಹನ್ನೆರಡು ವರ್ಷಗಳು ಕಳಿಂಗ ರಾಜ್ಯದಲ್ಲಿಯೇ ನೆಲಸಿ ಅಲ್ಲಿನ ಆಡಳಿತದಲ್ಲಿಯೇ ಮಗ್ನರಾಗಿದ್ದರೂ, ಶ್ರೀಮಧ್ವಾಚಾರ್ಯರ ತರುವಾಯ ಮಠಾಧಿಪತಿಗಳಾಗಿ ಬಂದ ಪದ್ಮನಾಭತೀರ್ಥರು ವೃಂದಾವನಸ್ಥರಾದ ಮೇಲೆ ಕ್ರಿ.ಶ. ಸು.

೭ ಕರ್ಣಾಟಕ ಭಕ್ತವಿಜಯ ಭಾಗ ೧, ಪು. ೧೩-೧೮.

೮ ಶ್ರೀ ಪುರಂದರದಾಸರ ಜೀವನ ಚರಿತ್ರೆ, ೧೯೫೬, ಪು. ೬-೭.

೯ ಹರಿದಾಸರ ಪದ ಸುಳಾದಿಗಳು, ಪು. ೧-೮

೧೩೨೪ರಿಂದ ೧೩೩೩ರ ವರೆಗೆ ಸಂಸ್ಥಾನದ ಆಧಿಪತ್ಯವನ್ನು ವಹಿಸಿಕೊಂಡುದಾಗಿ ತಿಳಿದುಬರುತ್ತದೆ. ಈ ಒಂಬತ್ತು ವರ್ಷಗಳಲ್ಲಿ, ಅವರ ಇಳಿವಯಸ್ಸಿನಲ್ಲಿ ಹಲಕೆಲವು ಕನ್ನಡ ರಚನೆಗಳನ್ನು ಮಾಡಿದ್ದರೇನೂ ಆಶ್ಚರ್ಯವಿಲ್ಲ. ಒಂದು ಪಕ್ಷ ಅವರ ಮನೆ ಮಾತು ತೆಲುಗಾಗಿದ್ದರೂ, ಅವರು ಬಂದು ನೆಲಸಿದ ಕನ್ನಡ ನಾಡಿನಲ್ಲಿ ಅಲ್ಲಿಯ ಪರಿಸರಕ್ಕೆ ತಕ್ಕಂತೆ ಬರೆಯುವುದೇನೂ ಅಸಂಭವವಲ್ಲ. ಅಲ್ಲದೆ, ಮಹಾಸಂಸ್ಥಾನದ ಆಧಿಪತ್ಯವನ್ನು ವಹಿಸಿದ ಉಳಿದ ಶ್ರೀಗಳವರ ಶಿಷ್ಯ ಪರಂಪರೆ ಮೂಲಸಂಸ್ಥಾನದ ಅಂಗವಾಗಿ ಪ್ರತ್ಯೇಕವಾದ ಶಾಖೆಯಾಗಿ ಬೆಳೆದು ಬಂದಿಲ್ಲವಾದ್ದರಿಂದ ಅವರ ವಿಚಾರ ಇತರರಂತೆ ಸ್ವತಂತ್ರವಾಗಿ ಪ್ರವರ್ಧಿಸಲು ಅವಕಾಶವಿಲ್ಲದೆ ಹೋಗಿರಬಹುದು. ಶ್ರೀ ಮಧ್ವಾಚಾರ್ಯರಿಗೆ ಮೂಲ ಸೀತಾರಾಮರನ್ನು ತಂದುಕೊಟ್ಟ ಇಂಥ ಮಹಿಮರ ಹೆಸರು ಮಧ್ವವಿಜಯದಲ್ಲಿ ಉಕ್ತವಾಗಿದೆಯೆ ಇಲ್ಲವೆ ಎಂದು ವಿದ್ವಾಂಸರು ಭಿನ್ನಾಭಿಪ್ರಾಯ ಪಡುವಲ್ಲಿ[೧೦] ಅವರ ಜೀವನದ ಮೇಲೆ ಬೆಳಕನ್ನು ಬೀರಬಲ್ಲ ಶಾಸನಗಳಿರುವುದು ನಮ್ಮ ಭಾಗ್ಯವೇ ಸರಿ. ಅವರು ಸಂಸ್ಕೃತದಲ್ಲಿ ಉದ್ದಾಮಪಂಡಿತರೆನ್ನಿಸಿದ್ದು, ಹದಿನೈದು ಗ್ರಂಥಗಳನ್ನು ರಚಿಸಿದುದಾಗಿ ತಿಳಿದುಬರುತ್ತದೆ.

ಈ ಹಿನ್ನೆಲೆಯಲ್ಲಿ ಪರಿಶೀಲಿಸಿದ್ದೇ ಆದರೆ, ನರಹರಿತೀರ್ಥರು ಕನ್ನಡದಲ್ಲಿಯೂ ಕೃತಿ ರಚನೆ ಮಾಡುವ ಶಕ್ತಿಯನ್ನು ಗಳಿಸಿದ್ದರೆಂದು ಹೇಳಲು ಅಡ್ಡಿಯೇನೂ ಇರಲಾರದು.

ಆದರೆ, ಪ್ರಕೃತದಲ್ಲಿ ಲಭಿಸಿರುವ ಅವರ ನಾಲ್ಕು ರಚನೆಗಳಲ್ಲಿ ವಿದಿತವಾಗುವ ಹಲವಾರು ಪಾಠಸಮಸ್ಯೆಗಳೇ ಯಾವುದಾದರೂ ಒಂದು ಖಚಿತವಾದ ನಿರ್ಣಯವನ್ನು ಮಾಡಲು ಪ್ರತಿಬಂಧಕಗಳಾಗಿವೆ. ''ಹರಿಯೆ ಇದು ಸರಿಯೆ'' ಎಂದು ಮೊದಲಾಗುವ ಕೃತಿಯಲ್ಲಿ, ಉಳಿದ ಕೃತಿಗಳಲ್ಲಿರುವಂತೆ 'ರಘುಪತಿ' ಎಂಬ ಅಂಕಿತವಿರದೆ, 'ನರಹರಿ' ಎಂದು ಮಾತ್ರ ತೋರಿಬರುತ್ತದೆ. 'ವಿಠಲ' ಎಂಬ ಅಂಕಿತವಿಲ್ಲದಿದ್ದರೂ ಬಾಧಕವಿಲ್ಲ. ಏಕೆಂದರೆ, ಹರಿದಾಸ ಸಮುದಾಯದಲ್ಲಿ ಮಠಾಧೀಶರುಗಳಾದ ಶ್ರೀ ವ್ಯಾಸರಾಯರ ಅಂಕಿತ 'ಶ್ರೀಕೃಷ್ಣ'; ಶ್ರೀ ವಾದಿರಾಜರ ಅಂಕಿತ 'ಹಯವದನ', ಶ್ರೀ ರಾಘವೇಂದ್ರತೀರ್ಥರ ಅಂಕಿತ 'ವೇಣುಗೋಪಾಲ'. ಈ ನಿದರ್ಶನಗಳಿಂದ ಯತಿಗಳಾದವರು ತಮ್ಮ ಆಶ್ರಮನಾಮವನ್ನು ಅಂಕಿತವಾಗಿ ಬಳಸದೆ, ಇಷ್ಟದೇವತೆಯ ಹೆಸರನ್ನೇ ಸೂಚಿಸುವುದು ಸಂಪ್ರದಾಯವಾಗಿರುಂತೆ ತೋರಿಬರುವುದರಿಂದ, ಇಲ್ಲಿ 'ನರಹರಿ' ಎಂಬುದು ಅಂಕಿತವಾಗಿದ್ದಿತೆಂದು ಹೇಳಲೆಡೆಯಿಲ್ಲ. ಶ್ರೀ. ಆರ್. ಎಸ್. ಪಂಚಮುಖಿಯವರು ನರಹರಿತೀರ್ಥರು ಕೂರ್ಮ ನೃಸಿಂಹನ ಆರಾಧಕರೂ ಆಗಿರುವುದರಿಂದ ಅದು ಆ ದೇವರ ಪರವಾಗಿರಬಹುದೆಂದು ಎಣಿಸುವರು.[೧೧] ಆದರೆ, ನರಹರಿತೀರ್ಥರ ಜೀವನದಲ್ಲಿ ಮೂಲ ಸೀತಾರಾಮದೇವರ ಪ್ರಸಂಗ ಎಲ್ಲಕ್ಕಿಂತಲೂ ಮಿಗಿಲೆನ್ನುವುದರಲ್ಲಿ ಸಂಶಯವಿಲ್ಲ. ಅಲ್ಲದೆ, ಈ ಮೊದಲೆ ಊಹಿಸಿರುವಂತೆ, ನರಹರಿತೀರ್ಥರು ಈ ಕೃತಿಗಳನ್ನು ತಾವು ಮಠಾಧಿಪತ್ಯವನ್ನು ವಹಿಸಿಕೊಂಡ ಬಳಿಕ, ಮೂಲಸೀತಾರಾಮದೇವರನ್ನು ನಿತ್ಯವೂ ಅರ್ಚಿಸುವ ಸುಕೃತ ಲಭಿಸಿದ ಬಳಿಕ, ತಮ್ಮ

---

೧೦ B. Krishnamurthy Sharma, *A History of the Dvaita School of Vedanta and its Literature*. Vol. I, 1960, p. 298,
D. V. Subbachar., *Glories of the Pontiffs of Uttaradimut*. 1964, p. 78.

೧೧ ಶ್ರೀ ಪುರಂದರದಾಸರ ಜೀವನ ಚರಿತ್ರೆ, ಪು. ೬-೭.

ಇಳಿವಯಸ್ಸಿನಲ್ಲಿ ಬರೆದಿರಬಹುದಾದ್ದರಿಂದ ಅವರ ಅಂಕಿತ 'ರಘುಪತಿ' ಎಂದು ಇದ್ದಿರುವ ಸಂಭವವೇ ಸೂಕ್ತವೆನ್ನಿಸುತ್ತದೆ. ಆದ್ದರಿಂದ, ಈ ಮೊದಲೇ ಶ್ರೀ. ಗೋರಬಾಳು ಹನುಮಂತರಾಯರು ''ಈ ಪದ ಆರದೆಂಬುದು ವಿಚಾರಾಂಶವಿದೆ'' ಎಂದು ಸಂದೇಹಿಸಿರುವಂತೆ[೧೨] ಸದ್ಯಕ್ಕೆ ನಾವೂ ಶಂಕೆ ಸೂಚಿಸಿ ಕೈಬಿಡಬೇಕಾಗುತ್ತದೆ. ಅನಂತರ ''ಎದುರ್ಯಾರೋ ಗುರುವೆ ಎದುರ್ಯಾರೂ'' ಎಂದು ಮೊದಲಾಗುವ ಇನ್ನೊಂದು ರಚನೆ ಶ್ರೀಮದಾಚಾರ್ಯರ ಅವತಾರತ್ರಯಗಳನ್ನು ಕುರಿತುದಾಗಿದೆ. ಇದೂ ಸಹ, ನರಹರಿ ತೀರ್ಥರು ತಮ್ಮ ಇಳಿವಯಸ್ಸಿನಲ್ಲಿ, ಎಂದರೆ, ಶ್ರೀಮದಾಚಾರ್ಯರು ಅದೃಶ್ಯರಾದ ಬಳಿಕ ಬರೆದಿರುವ ಸಂಭವವೇ ಹೆಚ್ಚು. ಆದರೆ, ಸದ್ಯಕ್ಕೆ ಇದು ಒಂದೇ ಒಂದು ಆಕರದಲ್ಲಿ ದೊರೆಯುವುದರಿಂದ ನಿರ್ಧರವಾಗಿ ಏನನ್ನೂ ಹೇಳುವಂತಿಲ್ಲ. ''ತಿಳಕೊ ನಿನ್ನೊಳಗೆ ನೀನೆ ಮರುಳೆ'' ಎಂಬ ಮತ್ತೊಂದು ರಚನೆ, ಪ್ರಕೃತದಲ್ಲಿ ಎರಡು ಆಕರಗಳಲ್ಲಿ ಕಂಡುಬರುತ್ತವೆ[೧೩] ಇವುಗಳನ್ನು ಪರಸ್ಪರವಾಗಿ ಹೋಲಿಸಿ ನೋಡಿದಲ್ಲಿ ಹಲಕೆಲವು ಪಾಠಾಂತರಗಳಿರುವುದರಿಂದ ಇವು ಭಿನ್ನಮೂಲಗಳಿಗೆ ಸೇರಿಸಬಹುದೆಂದು ತೋರುತ್ತದೆ. ಆದರೆ, ಈ ರಚನೆ, ಹದಿನೈದು ನುಡಿಗಳಷ್ಟು ದೀರ್ಘವಾಗಿರುವುದಲ್ಲದೆ, ಶೈಲಿಯಲ್ಲಿ ಅನೇಕ ಕಡೆ ಶೈಥಿಲ್ಯ ಕಂಡುಬರುತ್ತದೆ. ಇದರ ಶುದ್ಧ ಪಾಠ ದೊರೆತು, ಹಾಡಿನ ಪರಿಮಿತಿಗೆ ಒಳಪಟ್ಟಿರುವಂತೆ ಮಿತಸಂಖ್ಯೆಯ ನುಡಿಗಳಿದ್ದಿದ್ದೇ ಆದರೆ, ಆಗ ಇದು ವಿಶ್ವಸನೀಯವಾದೀತು! ಕಡೆಯದಾಗಿ, ಇದೀಗ ನರಹರಿತೀರ್ಥರದೆಂದು ಸುಪ್ರಸಿದ್ಧವಾಗಿರುವ ''ಎಂತು (ಇಂತು)ಮರುಳಾದೆ'' ಎಂಬ ರಚನೆ ಹರಿಭಕ್ತನೊಬ್ಬನು ಲೌಕಿಕಕ್ಕೆ ಕಟ್ಟುಬಿದ್ದು ಪಾಡುಪಟ್ಟ ಪಶ್ಚಾತ್ತಾಪ ಭಾವವನ್ನು ವ್ಯಕ್ತಪಡಿಸುವ ಒಳ್ಳೆಯ ರಚನೆಯೆನ್ನಿಸಿದರೂ, ಅದರ ಭಿನ್ನ ಭಿನ್ನ ಪಾಠಗಳಿಂದ ಮೂಲದ ಸ್ವರೂಪವನ್ನು ಗುರುತಿಸುವುದು ಕ್ಲೇಶಕರವಾಗಿದೆ. ಶ್ರೀ. ಆರ್. ಎಸ್. ಪಂಚಮುಖಿಯವರು ಉದಾಹರಿಸಿರುವ ರಚನೆಯಲ್ಲಿ ಮೂರು ನುಡಿಗಳು ಮಾತ್ರವಿದ್ದರೆ,[೧೪] ಶ್ರೀ. ಬೇಲೂರು ಕೇಶವದಾಸರು ಉದಾಹರಿಸಿರುವಲ್ಲಿ ಏಳು ನುಡಿಗಳಿವೆ.[೧೫] ಬೆಳಗಾಂ ಪ್ರತಿಯಲ್ಲಿ ೧೩ ನುಡಿಗಳಿವೆ.[೧೬] ಮತ್ತೊಂದು ತೆಲುಗಿನ ಲಿಪಿಯಲ್ಲಿರುವ ಹಳೆಯ ಮುದ್ರಿತ ಪ್ರತಿಯಲ್ಲಿ ೧೫ ನುಡಿಗಳಿವೆ.[೧೭] ನಮ್ಮ ಬಳಿಯಿರುವ ಒಂದು ಕಾಗದದ ಹಸ್ತಪ್ರತಿಯಲ್ಲಿ ೯ ನುಡಿಗಳಿವೆ.[೧೮] ಶ್ರೀ ಗೋರಬಾಳು ಹನುಮಂತರಾಯರ ಪುಸ್ತಕದಲ್ಲಿ ೨೩ ನುಡಿಗಳಿವೆ.[೧೯] ಆದ್ದರಿಂದ, ಇಲ್ಲಿ

---

೧೨ ಹರಿದಾಸರ ಪದ ಸುಳಾದಿಗಳು, ಪು. ೮.

೧೩ ಹರಿದಾಸರ ಪದ ಸುಳಾದಿಗಳು, ಪು. ೩. ಸಂ. ಗೋರಬಾಳು ಹನುಮಂತರಾಯರು; 'ಶ್ರೀ ಹರಿದಾಸಭಾರತೀ', ಸಂ.i, ಸಂ. ೭-೮, ಪು. ೩೯-೪೦; ಸಂ. ೯, ಪು. ೭-೧೨.

೧೪ ಹರಿದಾಸ ಸಾಹಿತ್ಯ, ೧೯೫೦, ಪು. ೫೧-೫೨; ಅವರಿಂದ ರಚಿತವಾಗಿರುವ 'ಶ್ರೀ ಪುರಂದರ ದಾಸರ ಜೀವನ ಚರಿತ್ರೆ'; ಎಂಬಲ್ಲಿಯೂ ಇದನ್ನು 'ಮೂರು ನುಡಿಯ ಹಾಡು' ಎಂದೇ ನಿರ್ದೇಶಿಸಿದ್ದಾರೆ, ೧೯೫೬, ಪು. ೬.

೧೫ ಕರ್ಣಾಟಕ ಭಕ್ತವಿಜಯ ಭಾಗ ೧, ೧೯೩೩, ಪು. ೧೭-೧೮.

೧೬ ದಾಸರ ಪದಗಳ ಸಂಗ್ರಹವು, ಭಾಗ ೬, ಪು. ೬೧-೬೨.

೧೭ ಪುರಂದರದಾಸರು ಮೊದಲಾದ ಅಪರೋಕ್ಷಜ್ಞಾನಿಗಳ ಪದಗಳು, ಭಾಗ ೨, ಸಂ. ಮುಡಕಶಿರ ಬಾಲಕೃಷ್ಣರಾವು, ೧೮೯೫, ಪು. ೮೨.

೧೮ ತಾ. ೧೩, ನಕಲು ಪ್ರತಿ, ಪು. ೩೮-೩೯.

೧೯ ಹರಿದಾಸರ ಪದ ಸುಳಾದಿಗಳು, ಪು. ೧-೩.

ಆಕರಗಳ ಸಂಖ್ಯೆಗೆ ಕೊರತೆಯಿಲ್ಲದಿದ್ದರೂ ರಚನೆಯ ಶುದ್ಧಪಾಠ ನಿರ್ಣಯದ ಬಗ್ಗೆ ಸಂದೇಹಗಳು ಉಳಿಯುತ್ತವೆ. ಈ ರೀತಿ, ಸದ್ಯಕ್ಕೆ ನಮಗೆ ದೊರೆತಿರುವ ನರಹರಿತೀರ್ಥರ ರಚನೆಗಳು ಆಂತರಿಕ ಪಾಠಕ್ಲೇಶಗಳಿಂದ ನಿಬಿಡವಾಗಿ ಬಹು ಜಟಿಲವಾಗಿ ಪರಿಣಮಿಸಿವೆ.

ಮೇಲ್ಕಂಡ ಪಾಠದ ಅನಿಶ್ಚಯತೆಯೊಂದಿಗೆ ಈ ರಚನೆಗಳ ಬಂಧದಲ್ಲಿ ತೋರಿಬರುವ ಕೆಲವು ಅಂಶಗಳು ಸಂಗೀತಶಾಸ್ತ್ರದ ದೃಷ್ಟಿಯಿಂದಲೂ ಸಮಸ್ಯಾತ್ಮಕವಾಗಿ ಪರಿಣಮಿಸಿವೆ. ಈ ಎಲ್ಲ ರಚನೆಗಳಲ್ಲಿಯೂ ಕಂಡುಬರುವ ಅನುಪಲ್ಲವಿಯ ಪ್ರಯೋಗ ಕಾಲದ ದೃಷ್ಟಿಯಿಂದ ಕುತೂಹಲಕಾರಿಯಾಗಿದೆ. ಏಕೆಂದರೆ, ತೆಲುಗು ಕೀರ್ತನೆಯ ಪ್ರಕಾರವು ರೂಪು ತಾಳಿದ್ದು ಕ್ರಿ.ಶ. ೧೫ನೆಯ ಶತಮಾನವೆಂದೂ, ತೆಲುಗಿನ ತಾಳ್ಲಪಾಕಂ ಅನ್ನಮಾಚಾರ್ಯರು ತಮ್ಮ ಕೆಲವು ಕೀರ್ತನೆಗಳಲ್ಲಿ ಈ ಅನುಪಲ್ಲವಿಯನ್ನು ಮೊತ್ತ ಮೊದಲಿಗೆ ಪ್ರಯೋಗಿಸಿದರೆಂದೂ ಸಂಗೀತತಜ್ಞರು ಅಭಿಪ್ರಾಯಪಡುತ್ತಾರೆ.[೨೦] ಈ ಹೇಳಿಕೆಗೆ ಪೋಷಕವಾಗುವಂತೆ ಇದೇ ಶತಮಾನಕ್ಕೆ ಸೇರಿದ ಶ್ರೀಪಾದರಾಜರ ಕೆಲವು ಕೃತಿಗಳಲ್ಲಿಯೂ ಪಲ್ಲವಿ, ಅನುಪಲ್ಲವಿಗಳ ವಿಭಜನೆಯನ್ನು ಕಾಣಬಹುದು. ಆದ್ದರಿಂದ, ನರಹರಿತೀರ್ಥರದೆಂದು ಗುರುತಿಸಲಾಗಿರುವ ಈ ರಚನೆಗಳಲ್ಲೆಲ್ಲ ಅನುಪಲ್ಲವಿ ನಿಯತವಾಗಿರುವುದನ್ನು ಕಂಡರೆ ಐತಿಹಾಸಿಕ ದೃಷ್ಟಿಯಿಂದ ಇದು ಒಂದು ಅಸಂಗತವೆನ್ನಿಸುತ್ತದೆ. ಒಂದು ಪಕ್ಷ, ನರಹರಿತೀರ್ಥರು ಆಗಲೇ ಇದನ್ನು ಬಳಸಿದ್ದಲ್ಲಿ, ಅಂದಿನ ಅಪೂರ್ವ ಪರಿಸ್ಥಿತಿಯಲ್ಲಿ ಇದು ಇತರರ ಗಮನಕ್ಕೆ ಬಾರದೆ ಇರುತ್ತಿರಲಿಲ್ಲ! ಇಂದಿನ ಕೀರ್ತನ ರಚನೆಗೆ ಮೂಲಪ್ರೇರಣೆಯೆಂದು ಸಂಗೀತಶಾಸ್ತ್ರಜ್ಞರು ಭಾವಿಸಲಾಗಿರುವ ಜಯದೇವನ 'ಗೀತಗೋವಿಂದ'ದಲ್ಲಿಯೂ ಈ ಅನುಪಲ್ಲವಿಯ ಪ್ರಯೋಗ ಕಂಡುಬರುವುದಿಲ್ಲ. ಕೇವಲ ಭಕ್ತಿಗೀತೆಗಳಾದ ಅತ್ಯಂತ ಪ್ರಾಚೀನವೆನ್ನಿಸಿರುವ ತಮಿಳಿನ ತೇವಾರಂ ಮತ್ತು ಪ್ರಬಂಧಗಳಲ್ಲಿಯೂ ಈ ವಿಭಜನೆಯಿಲ್ಲ. ಕಡೆಗೆ, ಹನ್ನೆರಡನೆಯ ಶತಮಾನದ ಶಿವಶರಣರು ರಚಿಸಿರಬಹುದೆಂದು ಭಾವಿಸಲಾಗಿರುವ ಕನ್ನಡದ ಹಾಡುಗಳಲ್ಲಿಯೂ ಅನುಪಲ್ಲವಿಯಿಲ್ಲ. ಅಷ್ಟೇ ಅಲ್ಲ, ಈ ಶಿವಶರಣರ ಹಾಡುಗಳನ್ನು ಸಂಕಲಿಸಿದ ಅಂದಿನ ಸಂಪಾದಕರು ಇವುಗಳನ್ನು 'ಸ್ವರ ವಚನ, ಸ್ವರಪದ, ಪದಂಗಳು, ಗೀತಗಳು' ಎಂದು ವಿಧವಿಧವಾಗಿ ಕರೆದಿರುವರೇ ವಿನಾ[೨೧] 'ಕೀರ್ತನ' ಎಂಬ ಶಬ್ದವನ್ನು ಎಲ್ಲಿಯೂ ಬಳಸಿಲ್ಲದಿರುವುದನ್ನು ಗಮನಿಸಿದರೆ ಕನ್ನಡದಲ್ಲಿ ಈ ಪ್ರಕಾರ ಆ ವೇಳೆಗೆ ಎಷ್ಟರಮಟ್ಟಿಗೆ ಬಳಕೆಯಲ್ಲಿತ್ತೆಂಬುದೂ ಪ್ರಶ್ನಾರ್ಥಕವಾಗಿದೆ. ಆದ್ದರಿಂದ, ಕ್ರಿ.ಶ. ೧೫ನೆಯ ಶತಮಾನದಿಂದೀಚೆಗೆ ವಿಶೇಷವಾಗಿ ತೋರಿಬರುವ ಕೀರ್ತನೆಯ ಒಂದು ವೈಲಕ್ಷಣ್ಯವು, ಅದಕ್ಕಿಂತ ಹಿಂದಿನ ರಚನೆಗಳಲ್ಲಿಯೇ ಕಂಡುಬರುತ್ತಿರುವುದಕ್ಕೆ ಸದ್ಯಕ್ಕೆ ಬೇರಾವ ಸಮಾಧಾನ ಹೇಳುವುದೂ ಕಷ್ಟವಾಗಿದೆ. ಈ ರಚನೆಗಳಲ್ಲಿ ಇತ್ತೀಚಿನವರ ಕೈವಾಡವೇನಾದರೂ ಇದಕ್ಕೆ ಕಾರಣವಿರಬಹುದು ಎಂಬ ಸಂದೇಹ ಬಾರದೆ ಇರದು!

ನರಹರಿತೀರ್ಥರನ್ನು ಸ್ತುತಿಸುವ ಹರಿದಾಸರಲ್ಲಿ ನಮ್ಮ ಗಮನಕ್ಕೆ ಬಂದಿರುವಮಟ್ಟಿಗೆ ಶ್ರೀ ಪುರಂದರದಾಸರೇ ಬಹಳ ಪ್ರಾಚೀನರು. ಅವರ ಕೀರ್ತನೆಯಲ್ಲಿ ನರಹರಿತೀರ್ಥರು

---

೨೦ The earliest Telugu Kirtanas are by the Tallapakam composers who belong to the 15th Century. For the first time in the history of South Indian music we come across the divisions of a song into pallavi, Anupallavi and charana in their works-P. Sambamoorthy, *History of Indian Music*, 1960, p. 80.

೨೧ ಡಾ. ಎಲ್. ಬಸವರಾಜು, ಶಿವದಾಸ ಗೀತಾಂಜಲಿ, ಪೀಠಿಕೆ, ಪು. ೮೨.

ದ್ವೈತವೇದಾಂತದ ಸಾಮ್ರಾಜ್ಯದಲ್ಲಿ ಹೇಗೆ ಉನ್ನತವಾದ ಸ್ಥಾನವನ್ನು ಗಳಿಸಿದರೆನ್ನುವದನ್ನು ತಿಳಿಸಿದೆ.[೨೨] ಈ ಸಂದರ್ಭದಲ್ಲಿ ಅವರು ಕಳಿಂಗದೇಶದ ರಾಜನ ಭಂಡಾರದಲ್ಲಿದ್ದ ಮೂಲಸೀತಾರಾಮರ ಮೂರ್ತಿಯನ್ನು ಶ್ರೀ ಆನಂದತೀರ್ಥರಿಗೆ ನೀಡಿದ ಸಂಗತಿಗೆ ವಿಶೇಷವಾದ ಮಹತ್ತ್ವವನ್ನು ನೀಡಿರುವರೇ ವಿನಾ, ಅವರು ಕನ್ನಡದ ಕೀರ್ತನಕಾರರೂ ಆಗಿದ್ದರೆಂಬುದನ್ನು ಯಾವ ರೀತಿಯಲ್ಲಿಯೂ ಸೂಚಿಸಿಲ್ಲ. ಒಂದು ವೇಳೆ, ಅವರು ಈ ಸಂಪ್ರದಾಯದ ಆದ್ಯ ಪ್ರವರ್ತಕರಾಗಿದ್ದಿದ್ದರೆ, ಸ್ವತಃ ಕೀರ್ತನಕಾರರಾದ ಶ್ರೀಪುರಂದರದಾಸರಾದರೂ ಅದನ್ನು ಸ್ಮರಿಸದೆ ಇರುತ್ತಿದ್ದರೆ? ಶ್ರೀ ಮೂಲಸೀತಾರಾಮರ ಮಹಿಮೆಯನ್ನು ಕುರಿತ ದಾಸರ ರಚನೆಗಳಲ್ಲಿಲ್ಲ ನರಹರಿತೀರ್ಥರಿಗೆ ವಿಶೇಷವಾದ ಸ್ಥಾನ ಲಭಿಸಿದೆ.[೨೩]

ಕಡೆಯದಾಗಿ, ಶ್ರೀನರಹರಿತೀರ್ಥರ ತರುವಾಯ ಶ್ರೀಪಾದರಾಜರ ಕಾಲದವರೆಗೆ, ಎಂದರೆ, ಸುಮಾರು ೧೦೦ ವರ್ಷಗಳವರೆಗೆ ಬೇರೆ ಯಾರೂ ಕೀರ್ತನಕಾರರು ಖಚಿತವಾಗಿ ಕಂಡುಬಾರದಿರುವುದೂ ಒಂದು ವ್ಯತಿರಿಕ್ತವಾದ ಸಂಗತಿಯೇ ಸರಿ. ಇತ್ತೀಚೆಗೆ, ಈ ಅವಧಿಯಲ್ಲಿ ಆದ್ಯರು ಎನ್ನುವವರು ಇದ್ದಿರಬಹುದೆ ಎಂದು ಕೆಲವರು ಸೂಚಿಸಿರುವುದುಂಟು. ಆದರೆ ಅದೂ ಸಹ ಎಷ್ಟರಮಟ್ಟಿಗೆ ಸಮ್ಮತವಾಗಿಲ್ಲವೆನ್ನುವುದನ್ನು ಮುಂದೆ ವಿಚಾರ ಮಾಡಲಾಗಿದೆ.

* * * * *

೩

ಕನ್ನಡ ಹರಿದಾಸ ಸಾಹಿತ್ಯಕ್ಕೆ ಒಂದು ಪುರಾತನವಾದ ಪರಂಪರೆಯಿದೆಯೆಂದು ಹೇಳುವಲ್ಲಿ, ಪೌರಾಣಿಕ ವ್ಯಕ್ತಿಯಾದ ಮಹಿದಾಸನಿಂದ ಪೀಳಿಗೆಯನ್ನು ಗುರುತಿಸುವ ಪದ್ಧತಿಯುಂಟು. ಆ ನಿಟ್ಟಿನಲ್ಲಿಯೇ ಮುಂದೆ ಸಾಗಿ ಈ ಸಂಪ್ರದಾಯಕ್ಕೆ ೬೦ ಜನ ಆದ್ಯರು, ಹಾಗೂ ೯ ಜನ ಆರಾಧ್ಯರು ಪ್ರಮುಖರೆಂದು ಶ್ರೀ. ಗೋರಬಾಳ ಹನುಮಂತರಾಯರು ತಮ್ಮ ಪ್ರಕಟಣೆಗಳಲ್ಲಿ ಮೇಲಿಂದ ಮೇಲೆ ಪ್ರತಿಪಾದಿಸಿರುತ್ತಾರೆ. ಶ್ರೀ. ಬೇಲೂರು ಕೇಶವದಾಸರು 'ಕರ್ಣಾಟಕ ಭಕ್ತವಿಜಯ'ದ ಮೊದಲನೆಯ ಸಂಪುಟದಲ್ಲಿಯೇ ಶೈವರಾಗಿದ್ದ ಆರಾಧ್ಯ ಬ್ರಾಹ್ಮಣರು ಪಂಢರಾಪುರದಲ್ಲಿ ಅನಿರೀಕ್ಷಿತವಾಗಿ ಪಾಂಡುರಂಗನ ಕೃಪೆಗೆ ಪಾತ್ರರಾಗಿ ಆದ್ಯರೆನ್ನಿಸಿ ಪ್ರಥಮತಃ ಹರಿದಾಸರಾದರೆಂದು ವಿಜಯದಾಸರ ಸುಳಾದಿಯೊಂದರ ಆಧಾರದಮೇಲೆ ಹೇಳಿ, ಇವರನ್ನು ನರಹರಿತೀರ್ಥರಿಗೆ ಪೂರ್ವದಲ್ಲಿ ಸ್ಮರಿಸಿದ್ದಾರೆ (ಪು. ೧೩-೧೪).ಶ್ರೀ. ಗೋರಬಾಳು ಹನುಮಂತರಾಯರು ಈ ಬಗ್ಗೆ ನಮಗೆ ಇನ್ನೂ ಹೆಚ್ಚಿನ ವಿವರಗಳನ್ನು ಒದಗಿಸಿ, ಈ ತಂಡದವರನ್ನು ನರಹರಿತೀರ್ಥರಿಗೂ ಮತ್ತು ಶ್ರೀಪಾದರಾಜರಿಗೂ ಮಧ್ಯೆ ಇದ್ದರೆಂದು ಸೂಚಿಸಿರುತ್ತಾರೆ. ಶ್ರೀಯುತರು ಮೊತ್ತಮೊದಲು ಕರ್ಣಾಟಕ ಶ್ರೀ ಹರಿದಾಸರ ಪರಂಪರೆ (ಪೀಳಿಗೆ)ಯನ್ನು ಕೊಡುವಲ್ಲಿ ೬೦ ಜನ ಆದ್ಯರ ಪೈಕಿ

೨೨ ಹರಿದಾಸರ ಪರಂಪರೆ ಶ್ರೀವಾದಿರಾಜಾದಿ ದಾಸವರ್ಯರ ಸ್ತೋತ್ರ ಪದಗಳು, ೧೯೫೮, ಪದ ೪, ಪು. ೪, ಶ್ರೀ ಗೋರಬಾಳ ಹನುಮಂತರಾಯರು

೨೩. ಕರ್ನಾಟಕ ಹರಿದಾಸರ ಉಗಮ ಮತ್ತು ಶ್ರೀ ಪುರಂದರದಾಸರ ಸುಳಾದಿಗಳು, ೧೯೫೭, ಪು ೯೭-೧೦೭.

೫೨ ಜನರ ಅಂಕಿತಗಳನ್ನು ಹೇಳಿ, ಅವರು ಒಟ್ಟು ೫೧ಪದ ಮತ್ತು ೨೦ ಸುಳಾದಿಗಳನ್ನೂ, ಕೆಲವು ಉಗಾಭೋಗಗಳನ್ನೂ ರಚಿಸಿರುವರೆಂದು ಹೇಳಿರುವರು. ಇವರಲ್ಲದೆ ೯ ಜನ ಆರಾಧ್ಯರು ಬೇರೆ ಇದ್ದರೆಂದು ಹೇಳುವರು.[೨೪] ಅನಂತರ, ಬೆಂಗಳೂರಿನ 'ಶ್ರೀ ಹರಿದಾಸ ಭಾರತೀ' ಎಂಬ ಪತ್ರಿಕೆಯಲ್ಲಿ[೨೫] ಆದ್ಯರ ಕೆಲವು ಉಗಾಭೋಗಗಳನ್ನು ಪ್ರಕಟಿಸಿದರು. ಪುನಃ ತಮ್ಮ ಪುಸ್ತಕ ಮಾಲೆಯ 'ಹರಿದಾಸರ ಪದ ಸುಳಾದಿಗಳು' ಎಂಬ ಪುಸ್ತಕದಲ್ಲಿ ವಿಜಯದಾಸರ ಸುಳಾದಿಯ ೨ ಮತ್ತು ೩ನೆಯ ನುಡಿಗಳನ್ನು ಉಲ್ಲೇಖಿಸಿ, ಅಚಲಾನಂದವಿಠಲ, ಮುದ್ದುವಿಠಲ, ಯೋಗೇಂದ್ರವಿಠಲ, ನರಕಂಠೀರವವಿಠಲ, ಸೊಬಗುವಿಠಲ, ಗರುಡವಾಹನ, ಲಕ್ಷ್ಮೀನಾರಾಯಣ, ಸಿರಿ ಕೃಷ್ಣವಿಠಲ, ಕೃಷ್ಣವಿಠಲ, ವೈಕುಂಠ ವೆಂಕಟೇಶ, ವೈಕುಂಠ ವಿಠಲ, ಅಚ್ಯುತವಿಠಲ, ವರದಕೇಶವ, ಚನ್ನಕೇಶವ, ವರದರಾಜ ವೆಂಕಟೇಶ, ವರದರಾಜರಾಮ, ವರದರಾಜಕೃಷ್ಣ ಮೊದಲಾದ ಅಂಕಿತವುಳ್ಳ ಸುಳಾದಿಗಳನ್ನು ಆದ್ಯರದೆಂದು ಪ್ರಕಟಿಸಿರುತ್ತಾರೆ. ವಿಜಯದಾಸರು ಪುರಂದರದಾಸರಿಂದ ಸ್ವಪ್ನಾಂಕಿತವನ್ನು ಪಡೆದ ಸಂದರ್ಭದಲ್ಲಿ ಈ ಸುಳಾದಿಯನ್ನು ರಚಿಸಿರುವಂತೆ ತೋರಿಬರುವುದರಿಂದ, ಅವರು ಒಂದು ನುಡಿಯಲ್ಲಿ ಪುರಂದರದಾಸರು ಮತ್ತು ಅವರ ಮಕ್ಕಳನ್ನೂ, ಅದಕ್ಕೆ ಹಿಂದಿನ ನುಡಿಯಲ್ಲಿ ಮೇಲ್ಕಂಡ ಅಂಕಿತವುಳ್ಳವರು "ಪರಮ ಭಕುತಿಯಲ್ಲಿ ವಿಜಯವಿಠಲನ್ನ ಸ್ಮರಣೆ ಮಾಡಿದರು ಆದ್ಯರು ನಿರ್ಮಳರಾಗಿ" ಎಂದೂ ಹೇಳಿರುತ್ತಾರೆ. ಹರಿದಾಸ ಸಾಹಿತ್ಯದ ಇತಿಹಾಸವನ್ನು ಬಲ್ಲವರಿಗೆ ವಿಜಯದಾಸರು ಅದರ ದ್ವಿತೀಯ ಹಂತದ ಪ್ರಮುಖರೆನ್ನುವುದು ಸುವಿದಿತವಾಗಿದೆ. ಈ ಮೊದಲು ಪ್ರಥಮ ಹಂತದಲ್ಲಿ ಶ್ರೀಪಾದರಾಜರು, ಶ್ರೀವ್ಯಾಸರಾಜರು, ಶ್ರೀವಾದಿರಾಜರು, ವೈಕುಂಠದಾಸರು ಮತ್ತು ಕನಕದಾಸರು ಈ ಕ್ಷೇತ್ರದಲ್ಲಿ ತುಂಬ ಶ್ರದ್ಧೆಯಿಂದ ಶ್ರಮಿಸಿದವರಾಗಿರುತ್ತಾರೆ. ವಿಜಯದಾಸರು ಈ ಸಂದರ್ಭದಲ್ಲಿ ಇವರಲ್ಲಿ ಯಾರೊಬ್ಬರನ್ನೂ ನೆನೆಯದಿರುವುದು ಕುತೂಹಲಕಾರಿಯಾಗಿದೆ. ಪುರಂದರದಾಸರಿಗೆ ಪೂರ್ವಭಾವಿಯಾಗಿ ಇಷ್ಟು ಜನ ಹರಿದಾಸರಿದ್ದರೆ ಇವರನ್ನು ಪುರಂದರದಾಸರಾಗಲಿ, ಅವರ ಸಮಕಾಲೀನರಾದ ಇತರ ಹರಿದಾಸರಾಗಲಿ ನೆನೆಯದೆ ಇರುವುದುಂಟೆ? ಈ ಮೌನಕ್ಕೆ ಸಮಾಧಾನ ಹೇಳುವುದೇ ಕಷ್ಟವಾಗಿದೆ.

* * * * *

ಈವರೆಗೆ ವಿಚಾರಮಾಡಿ ನೋಡಿದ್ದಲ್ಲಿ, ಕನ್ನಡ ಹರಿದಾಸಪರಂಪರೆಗೆ ಅಚಲಾನಂದರಾಗಲಿ, ಶ್ರೀನರಹರಿತೀರ್ಥರಾಗಲಿ, ಆದ್ಯರೆಂಬುವರಾಗಲಿ ಮುಖ್ಯ ಪ್ರವರ್ತಕರೆಂದು ಹೇಳಲು ಬರುವಂತಿಲ್ಲ. ಈ ಪ್ರಶ್ನೆ, ಬಹುಶಃ ವಿಜಯದಾಸರ ಕಾಲದಲ್ಲಿಯೋ ಇಲ್ಲವೇ ಅನಂತರವೋ ಉದ್ಭವಿಸಿರಬೇಕು. ಆ ಸಂದರ್ಭದಲ್ಲಿ ಈ ಹರಿದಾಸ ಸಂಪ್ರದಾಯದ ಅಧ್ವರ್ಯುಗಳನ್ನು ಕುರಿತು ನಡೆದಿರಬಹುದಾದ ಜಿಜ್ಞಾಸೆಯ ಫಲವಾಗಿ ಈ ಕೆಳಗೆ ಕಾಣುವ ಸ್ತುತಿಮಾಲೆ ಸಿದ್ಧವಾಗಿರಬೇಕು :

ನಮಃ ಶ್ರೀಪಾದರಾಜಾಯ ನಮಸ್ತೇ ವ್ಯಾಸಯೋಗಿನೇ
ನಮಃ ಪುರಂದರಾರ್ಯಾಯ ವಿಜಯಾರ್ಯಾಯ ತೇ ನಮಃ ॥

೨೪ ಶ್ರೀ ಪುರಂದರದಾಸರು ಮತ್ತು ಕರ್ನಾಟಕ ಶ್ರೀ ಹರಿದಾಸರ ಪರಂಪರೆ, ಪ್ರಕಟನೆ ೧-೨. ೧೯೪೪, ಪು. ೬-೭

೨೫ ವಿಜಯಾಂಕರತ್ನ, ಪು. ೧-೨೪.

ಈಗಾಗಲೇ ಗುರುಮಹೀಪತೀದಾಸರು ಮತ್ತು ಮೇಲ್ಗಿರಿವಿಠಲದಾಸರು ಹೇಳಿರುವಂತೆ, ಹರಿದಾಸ ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿಯೂ ಪ್ರಯೋಗ ನಡೆಸಿ ಜಯಶಾಲಿಗಳಾದವರು ಶ್ರೀಪಾದರಾಜರು. ಅವರ ಮಾರ್ಗದಲ್ಲಿಯೇ ನಡೆದು ಹರಿದಾಸರ ಒಂದು ಬಳಗವನ್ನೇ ಕಟ್ಟಿದವರು ಶ್ರೀವ್ಯಾಸರಾಯರು. ಹರಿದಾಸ ಸಾಹಿತ್ಯದ ಮೊದಲನೆಯ ಪರಂಪರೆಗೆ ಕಳಶಪ್ರಾಯರಾದವರು ಪುರಂದರದಾಸರು. ತಟಸ್ಥವಾಗಿದ್ದ ಹರಿದಾಸ ಸಾಹಿತ್ಯಕ್ಕೆ ಮತ್ತೆ ಚೇತನವನ್ನಿತ್ತು ಎರಡನೆಯ ಪರಂಪರೆಗೆ ಪುನರುಜ್ಜೀವನಗೊಳಿಸಿದ ಮಹಿಮರು ವಿಜಯದಾಸರು. ಈ ಪ್ರಮುಖ ಶಕ್ತಿಗಳ ಚಾಲನೆಯಿಂದ ಹರಿದಾಸ ಸಾಹಿತ್ಯದ ಸಂಪತ್ತು ಸಮೃದ್ಧವಾಯಿತು. ಯತಿವರ್ಯರಿಬ್ಬರ ಆಶೀರ್ವಾದ ಬಲದಿಂದ ದೀಕ್ಷಾಬದ್ಧರಾದ ಹರಿದಾಸರೀರ್ವರು ಈ ಸಂಪ್ರದಾಯವನ್ನು ಬೆಳಸಿ ಬೆಳಗಿದರು. ಈ ಗುರುಶಿಷ್ಯರು ಅಪೂರ್ವ ವರ್ತುಲದಲ್ಲಿ ಈ ಭಕ್ತಿಸಾಹಿತ್ಯ ಭದ್ರವಾದ ತಳಹದಿಯ ಮೇಲೆ ನಿಲ್ಲುವಂತಾಯಿತು. ಈ ರೀತಿ ಈ ಮಹತ್ಕಾರ್ಯ ರೂಪುಗಳ್ಳಲು ಕಾಲವೂ ಹದವಾಗಿ ಕೂಡಿ ಬಂದಿತೆನ್ನುವುದನ್ನು ನಾವು ಮರೆಯುವಂತಿಲ್ಲ. ಶ್ರೀಮಧ್ವಾಚಾರ್ಯರ ದ್ವೈತಮತವು ಉದಿಸಿ ಈ ವೇಳೆಗೆ ಇನ್ನೂರು ವರ್ಷಗಳಾಗಿದ್ದುವು. ಅದರ ಪ್ರತಿಪಾದನೆಗೆ ಸಾಕಷ್ಟು ಸಂಸ್ಕೃತ ಗ್ರಂಥಗಳು ನಿರ್ಮಾಣವಾಗಿದ್ದುವು. ಮೊದ ಮೊದಲಿನಂತೆ ಅದು ವಿದ್ವಜ್ಜನರ ಆವರಣದಲ್ಲಿಯೇ ವಿರಮಿಸಲೆಡೆಯಿಲ್ಲದೆ ಸಾಮಾನ್ಯ ಜನರಿಗೂ ಅದರ ಸಾರ ದೊರೆಯಬೇಕಾದುದು ಅಗತ್ಯವೆನಿಸಿತು. ಸಾಲದುದಕ್ಕೆ ಶ್ರೀಪಾದರಾಜರಿಗೆ ಶ್ರೀಸ್ವರ್ಣವರ್ಣತೀರ್ಥರ ಬಳಿಯಲ್ಲಿ ಶ್ರೀರಂಗದಲ್ಲಿರುವಾಗ್ಗೆ ಅಲ್ಲಿನ ಆಳ್ವಾರರ ಪ್ರಬಂಧಗಳನ್ನು ಕೇಳಿ ಕೇಳಿ ಜನತೆಯಲ್ಲಿ ಭಕ್ತಿ ಸಂವರ್ಧನೆಗೆ ಮಾತೃಭಾಷೆ ಎಂತಹ ಉತ್ತಮ ಮಾಧ್ಯಮವೆಂದು ಮನವರಿಕೆಯಾಗಿರಬೇಕು. ಇದಲ್ಲದೆ ಕನ್ನಡನಾಡಿನಲ್ಲಿಯೇ ಶರಣರು ಕನ್ನಡದ ಮೂಲಕವೇ ತಮ್ಮ ಧಾರ್ಮಿಕ ಜಾಗೃತಿಯನ್ನು ಹೇಗೆ ನಿರ್ವಹಿಸಿದರೆನ್ನುವುದೂ ಪ್ರತ್ಯಕ್ಷ ಪ್ರಮಾಣವಾಗಿತ್ತು. ಈ ರೀತಿಯಾದ ಕಾಲಧರ್ಮ ಸಂಯೋಗದಿಂದ ಶ್ರೀಪಾದರಾಜರು ಪೂಜಾಕಾಲದಲ್ಲಿ ತಮ್ಮ ಆರಾಧ್ಯದೇವತೆಗೆ ಕನ್ನಡದಲ್ಲಿಯೇ ಕೀರ್ತನೆಗಳನ್ನು ರಚಿಸಿ, ಕುಣಿದು, ಮಣಿದು, ಸಮರ್ಪಿಸುವ ಸಂಪ್ರದಾಯಕ್ಕೆ ಮೊಳಕೆ ಹಾಕಿದರು. ಅತಿ ಕ್ಷಿಪ್ರಕಾಲದಲ್ಲಿಯೇ ಅವರ ಪ್ರಯತ್ನ ಅಪೂರ್ವ ರೀತಿಯಲ್ಲಿ ಫಲಕಾರಿಯಾಯಿತೆನ್ನುವುದಕ್ಕೆ ಅವರಿಂದ ರಚಿತವಾಗಿರುವ ರಸವತ್ತಾಗಿರುವ ಕೃತಿಗಳೇ ಸಾಕ್ಷಿ. ಗುರುವಿಗೆ ತಕ್ಕ ಶಿಷ್ಯರು ಪರಂಪರೆಯಾಗಿ ಉದಿಸಿ ಬಂದು ಈ ಸಂಪ್ರದಾಯ ಮುಂದುವರಿದು ವಿಶಿಷ್ಟವಾಗಿ ವಿರಾಜಿಸಲಾರಂಭಿತು. ಆದ್ದರಿಂದ, ಶ್ರೀಪಾದರಾಜರನ್ನು ಹರಿದಾಸ ಸಾಹಿತ್ಯದ ಸಂಪ್ರದಾಯದ ಆದ್ಯಪ್ರವರ್ತಕರೆಂದು ಹೇಳುವುದು ಸಕಾರಣವಾಗಿದೆ.

*ಶ್ರೀಪಾದರಾಜರ ಕೃತಿಗಳು, ೧೯೭೩, ಪೀಠಿಕೆ, ಪು. ೧-೧೯*

# ೫೯. ಗೋಸಲಪೀಠ ಪರಂಪರೆಯ ಸಾಹಿತ್ಯ

● ಬಿ. ಆರ್. ಹಿರೇಮಠ

ಕಲ್ಯಾಣಕ್ರಾಂತಿಯ ತರುವಾಯ ನಾಡಿನ ಒಳ-ಹೊರಗೆಲ್ಲ ಚದುರಿಹೋದ ವಚನಗಳನ್ನು ಶೋಧಿಸುವ, ಸಂಗ್ರಹಿಸುವ, ಓದುವ, ಅರ್ಥೈಸುವ, ಬೋಧಿಸುವ, ಸಂಕಲಿಸುವ ಹಾಗೂ ವ್ಯಾಖ್ಯಾನಿಸುವ ಕಾರ್ಯಗಳು ಪವನವೇಗದಲ್ಲಿ ನಡೆದುದು ಹದಿನೈದು-ಹದಿನಾರನೆಯ ಶತಮಾನದ ನೂರೊಂದು ಮತ್ತು ಏಳುನೂರೊಂದು ವಿರಕ್ತರ ಕಾಲದಲ್ಲಿ. ಶಿವಗಣಪ್ರಸಾದಿ ಮಹಾದೇವಯ್ಯನ ಶೂನ್ಯಸಂಪಾದನೆ, ಕಲ್ಲು ಮಠದ ಪ್ರಭುದೇವನ ಲಿಂಗಲೀಲಾವಿಲಾಸಚಾರಿತ್ರ, ಮಹಾಲಿಂಗದೇವನ ಏಕೋತ್ತರ ಶತಸ್ಥಲಗಳು ಇಂಥ ಕ್ರಿಯಾಶೀಲ ಪ್ರಯತ್ನದ ಫಲಗಳಾಗಿರುತ್ತವೆ. ಈ ಯುಗದ ವೀರಶೈವರು ವಚನಗಳ ಮಥನದಿಂದ ತಾತ್ವಿಕ ಸೌಂದರ್ಯವನ್ನು ಸಾಕ್ಷಾತ್ಕಾರ ಮಾಡಿಸಿಕೊಟ್ಟರು. ಹೀಗೆ ಹದಿನೈದನೆಯ ಶತಮಾನದಲ್ಲಿಯೂ ವೀರಶೈವ ವಚನ ಸಾಹಿತ್ಯದ ಸಂಗ್ರಹ, ಸಂಕಲನ, ಸಂಪಾದನ, ವ್ಯಾಖ್ಯಾನ ಚಟುವಟಿಕೆಗಳು ಭರದಿಂದ ನಡೆದುದು ವಿದಿತವಾಗುತ್ತದೆ.

ಏಳುನೂರೊಂದು ವಿರಕ್ತಸಮೂಹದ ನಾಯಕ ವ್ಯಕ್ತಿ, ಶ್ರೀ ತೋಂಟದ ಸಿದ್ಧಲಿಂಗ ಶಿವಯೋಗಿಗಳು. ಹದಿನಾರನೆಯ ಶತಮಾನದಲ್ಲಿ ಅವತಾರವೆತ್ತಿದ ಶ್ರೀ ಸಿದ್ಧಲಿಂಗ ಶಿವಯೋಗಿಗಳು ವೀರಶೈವ ಧರ್ಮ, ಸಮಾಜ, ಸಾಹಿತ್ಯ ಸಂಸ್ಕೃತಿಗಳ ಸಂವರ್ಧಕರಾಗಿ ಶಿಖರಸದೃಶಕಾರ್ಯ ಮಾಡಿದರು. ಈ ತೋಂಟದ ಸಿದ್ಧಲಿಂಗ ಶಿವಯೋಗಿಗಳು ಗೋಸಲಪೀಠ ಪರಂಪರೆಯವರು. ಗೋಸಲ ನಿರಂಜನಪೀಠದ ಷಟ್‌ಸ್ಥಲ ಚಕ್ರವರ್ತಿ ಚನ್ನಬಸವ ಶಿವಯೋಗಿಗಳ ಶಿಷ್ಯರಾದ ಶ್ರೀ ಸಿದ್ಧಲಿಂಗ ಶಿವಯೋಗಿಗಳು ಪ್ರಭುವಿನಂತೆ ನಿರಂಜನಮೂರ್ತಿಯಾಗಿ, ಬಸವಣ್ಣನಂತೆ ವೀರಶೈವ ಧರ್ಮ ಸಂಘಟಕರಾಗಿ, ಚೆನ್ನಬಸವಣ್ಣನವರಂತೆ ತತ್ವವೇತ್ತರಾಗಿ ಬಾಳಿದರು, ಬೆಳಗಿದರು. ಗೋಸಲಪೀಠ ಪರಂಪರಯ ಸಿದ್ಧಲಿಂಗ ಶಿವಯೋಗಿಗಳ ಶಿಷ್ಯ-ಪ್ರಶಿಷ್ಯ ಪರಂಪರೆ ನಾಡಿನಲ್ಲಿ ಹಂದರದ ಬಳ್ಳಿಯಂತೆ ಹಬ್ಬಿಕೊಂಡಿದೆ. ಈ ಶಿಷ್ಯ-ಪ್ರಶಿಷ್ಯ ಸಂತಾನದವರು ತೋಂಟದ ಸಿದ್ಧಲಿಂಗ ಶಿವಯೋಗಿಗಳ ಪ್ರಭಾವಲಯದಲ್ಲಿ ಬೆಳಗುವ ಅನಂತ ಸಾಹಿತ್ಯಜ್ಯೋತಿಗಳಾಗಿದ್ದಾರೆ. ಗೋಸಲಪೀಠ ಪರಂಪರೆಯ ಈ ಶಿವಯೋಗಿಸೂರ್ಯ ಹಾಗೂ ಶಿಷ್ಯ-ಪ್ರಶಿಷ್ಯರು ಸಾಹಿತ್ಯದ ಮೂಲಕ ಕನ್ನಡಿಗರ, ಅದರಲ್ಲಿಯೂ ವೀರಶೈವರ ಬದುಕನ್ನು ತಿದ್ದಿದ್ದಾರೆ; ಭಾವನೆಗಳನ್ನು ಅರಳಿಸಿದ್ದಾರೆ. ಹೀಗೆ ಗೋಸಲಪೀಠ ಪರಂಪರೆಯವರ ಸಾಹಿತ್ಯಕ್ಕೆ ಕನ್ನಡಸಾಹಿತ್ಯದಲ್ಲಿ ಒಂದು ವಿಶಿಷ್ಟ ಗೌರವಾನ್ವಿತ ಸ್ಥಾನವಿದೆ. ಸಾಹಿತ್ಯ ಮಹಾಂತರೆನಿಸಿದ ಇವರು ಕನ್ನಡ ಸಾಹಿತ್ಯಕ್ಷೇತ್ರಕ್ಕೆ ನೀಡಿದ ಕೊಡುಗೆ ವಿಪುಲವೂ ವೈವಿಧ್ಯಪೂರ್ಣವೂ ಆದುದಾಗಿದೆ. ಈ ಗೋಸಲ ಪೀಠ ಪರಂಪರೆಯ ಸಾಹಿತ್ಯವನ್ನು ಸೃಜನಸಾಹಿತ್ಯ, ಸಂಕಲನಸಾಹಿತ್ಯ, ಸಂಪಾದನಸಾಹಿತ್ಯ, ಸಂಗ್ರಹಸಾಹಿತ್ಯ, ವ್ಯಾಖ್ಯಾನಸಾಹಿತ್ಯವೆಂದು ಗುರುತಿಸಿ, ಹೀಗೆ ವಿವರಿಸಬಹುದು:

ಸೃಜನಸಾಹಿತ್ಯ: ಗೋಸಲಪೀಠ ಪರಂಪರೆಯವರ ಈ ವೀರಶೈವ ಸೃಜನಸಾಹಿತ್ಯ

ಮೂರು ರೀತಿಯದ್ದಾಗಿರುತ್ತದೆ: ೧. ವಚನಸಾಹಿತ್ಯ, ೨. ಸ್ವರವಚನಸಾಹಿತ್ಯ, ಹಾಗೂ ೩. ಕಾವ್ಯಸಾಹಿತ್ಯ.

**೧. ವಚನಸಾಹಿತ್ಯ:** ಹನ್ನೆರಡನೆಯ ಶತಮಾನದ ತರುವಾಯ ವಚನ ಸೃಷ್ಟಿಕಾರ್ಯ ಜರುಗಿದುದು ಹದಿನಾರನೆಯ ಶತಮಾನದಲ್ಲಿ. ಈ ಯುಗದಲ್ಲಿ ತೋಂಟದ ಸಿದ್ಧಲಿಂಗ ಶಿವಯೋಗಿ, ಗುಮ್ಮಳಾಪುರದ ಸಿದ್ಧಲಿಂಗದೇವ, ಸ್ವತಂತ್ರಸಿದ್ಧಲಿಂಗೇಶ್ವರ, ಘನಲಿಂಗಿದೇವ, ಮುರಿಗಾ ಶಾಂತವೀರಸ್ವಾಮಿ, ಇಮ್ಮಡಿ ಮುರಿಗಾ ಗುರುಸಿದ್ಧದೇವ, ಹಾಗಲವಾಡಿ ಮುದ್ವೀರಸ್ವಾಮಿಗಳು ಸ್ವತಂತ್ರ ವಚನಗಳನ್ನು ರಚಿಸಿದ್ದಾರೆ.

ಏಳುನೂರೊಂದು ವಿರಕ್ತರ ದ್ಯೋತಕವೆಂಬಂತೆ ತೋಂಟದ ಸಿದ್ಧಲಿಂಗ ಶಿವಯೋಗಿಗಳ 'ಷಟ್‌ಸ್ಥಲ ಜ್ಞಾನ ಸಾರಾಮೃತ'ದಲ್ಲಿ 'ಮಹಾಲಿಂಗ ಗುರುಶಿವಸಿದ್ಧೇಶ್ವರ ಪ್ರಭುವೆ' ಅಂಕಿತದ ೭೦೧ ವಚನಗಳಿದ್ದು, ೧೫+೬ ಸ್ಥಲಗಳಿರುತ್ತವೆ. ವೀರಶೈವ ತತ್ತ್ವ ಪ್ರತಿಪಾದನೆಯೇ ಇಲ್ಲಿ ಪ್ರಧಾನವಾಗಿ ಕಂಡುಬರುತ್ತದೆ. ಆದ್ದರಿಂದ ಇಲ್ಲಿ ತಾತ್ವಿಕ ವಚನಗಳ ಸಂಖ್ಯೆ ಅಧಿಕವಾಗಿರುತ್ತದೆ. ಸ್ವತಂತ್ರ ಸಿದ್ಧಲಿಂಗೇಶ್ವರರು 'ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರ' ಅಂಕಿತದಲ್ಲಿ ೪೩೦ವಚನ ರಚಿಸಿದ್ದಾರೆ. 'ಮುತ್ಯಾಂಗಂಗನೆಯ ಕಂಠಮಾಲೆ' ಇವರ ಇನ್ನೊಂದು ವಚನಕೃತಿ. ಈ ಎರಡೂ ವಚನಕೃತಿಗಳು ವೀರಶೈವ ಸಿದ್ಧಾಂತವನ್ನು ಬೋಧಿಸುತ್ತವೆ. ಗುಮ್ಮಳಾಪುರದ ಸಿದ್ಧಲಿಂಗದೇವರು 'ಬೋಳಬಸವೇಶ್ವರಾ ನಿಮ್ಮ ಧರ್ಮ, ನಿಮ್ಮ ಧರ್ಮ' ಅಂಕಿತದಲ್ಲಿ ೧೮ ವಚನಗಳನ್ನು ಬರೆದಿದ್ದು, ಇವು 'ಷಟ್‌ಸ್ಥಲ ಲಿಂಗಾಂಗ ಸಂಬಂಧದ ನಿರ್ವಚನ' ಹೆಸರಿನಲ್ಲಿ ಲಭಿಸುತ್ತವೆ. ಇಮ್ಮಡಿ ಮುರಿಗಾ ಗುರುಸಿದ್ಧರ ೨೦೮ ವಚನಗಳು 'ಶಿವಲಿಂಗೇಶ್ವರ' ಅಂಕಿತದಲ್ಲಿರುತ್ತವೆ. ಇದರಂತೆ ಮುರಿಗಾ ಶಾಂತವೀರ, ಹಾಗಲವಾಡಿ ಮುದ್ವೀರಸ್ವಾಮಿಗಳ ವಚನಗಳೂ ಇರುವುದಾಗಿ ತಿಳಿದುಬರುತ್ತದೆ. ಈ ಎಲ್ಲ ವಚನಕಾರರ ವಚನಗಳು ಹೆಚ್ಚಾಗಿ ತಾತ್ವಿಕರೂಪದವುಗಳಾಗಿರುತ್ತವೆ. ಈ ವಚನಗಳಲ್ಲಿ ವೀರಶೈವ ತತ್ತ್ವದ ಪುನರ್‌ರಚನೆಯ ಪ್ರಯತ್ನವನ್ನು ನಾವು ಕಾಣುತ್ತೇವೆ. ಬಸವಣ್ಣ, ಪ್ರಭುದೇವ, ಚೆನ್ನಬಸವಣ್ಣ, ಅಕ್ಕ ಮಹಾದೇವಿ ಮೊದಲಾದ ವಚನಕಾರರ ವಚನಗಳ ತಲಸ್ಪರ್ಶಿಯಾದ ಅಧ್ಯಯನ ನಡೆಸಿದಂತೆ ಗೋಸಲಪೀಠ ಪರಂಪರೆಯ ವಚನಕಾರರ ವಚನಗಳ ಅಧ್ಯಯನ ತಲಸ್ಪರ್ಶಿಯಾಗಿ, ಸರ್ವಸಮಗ್ರವಾಗಿ, ವೈವಿಧ್ಯಪೂರ್ಣವಾಗಿ (ಒಂದೆರಡು ಪ್ರಯತ್ನಬಿಟ್ಟರೆ) ಇನ್ನೂ ನಡೆದಿಲ್ಲವೆಂದೇ ಹೇಳಬೇಕು.

**೨. ಸ್ವರವಚನಸಾಹಿತ್ಯ:** ರಾಗ, ತಾಳಗಳ ನಿರ್ದೇಶನವಿರುವ ಸ್ವರವಚನಗಳನ್ನು ಹಾಡುತ್ತಿದ್ದರು. ಹನ್ನೆರಡನೆಯ ಶತಮಾನದ ವಚನಕಾರರೂ ಈ ಸ್ವರವಚನಗಳನ್ನು ಬರೆದಿದ್ದಾರೆ. ಗೋಸಲಪೀಠ ಪರಂಪರೆಯಲ್ಲಿ ಇಮ್ಮಡಿ ಮುರಿಗಾ ಗುರುಸಿದ್ಧದೇವ (೨೧೮ ಸ್ವರವಚನ), ಜಿಗುನಿ ಮರುಳದೇವ (೧೫೬ ಸ್ವರವಚನ) ಹಾಗೂ ಹಾಗಲವಾಡಿ ಮುದ್ವೀರ ಸ್ವಾಮಿ (೧೦೭ ಸ್ವರವಚನ)ಯವರು ಸ್ವರವಚನಸಾಹಿತ್ಯ ಸೃಷ್ಟಿಸಿ, ಈ ಮೂಲಕ ವೀರಶೈವತತ್ತ್ವಗಳನ್ನು ತಿಳಿಯಪಡಿಸಿದ್ದಾರೆ.

**೩. ಕಾವ್ಯಸಾಹಿತ್ಯ:** ಕಾವ್ಯಸಾಹಿತ್ಯದಲ್ಲಿ ಶ್ರವ್ಯಕಾವ್ಯ, ದೃಶ್ಯಕಾವ್ಯವೆಂದು ಮತ್ತೆ ಎರಡು ಪ್ರಕಾರಗಳನ್ನು ಮಾಡಿಕೊಳ್ಳಬಹುದು. ಶ್ರವ್ಯಕಾವ್ಯ ಪರಂಪರೆಯಲ್ಲಿ ವೀರಶೈವಸಾಹಿತ್ಯದ ಹಿರಿಯ ಪ್ರಕಾರಗಳನ್ನೂ ಕಿರಿಯ ಪ್ರಕಾರಗಳನ್ನೂ ಕಾಣುತ್ತೇವೆ. ಕ್ಷೇತ್ರಜ್ಞ ಸುಮನೋವಾದಂ (ಗೋಸಲ ಚೆನ್ನಬಸವ), ಹಾಲಾಸ್ಯಪುರಾಣ-ಸ್ಕಂದಕಲ್ಯಾಣ -ಶಿವರಹಸ್ಯ-ಪಂಚಾಶಿಕೆ

(ಇಮ್ಮಡಿ ಮುರಿಗಾ ಗುರುಸಿದ್ಧದೇವ), ಹಮ್ಮೀರಕಾವ್ಯ (ಮುರಿಗಾ ಶಾಂತವೀರ), ಪ್ರಭುದೇವರ ಪುರಾಣ (ಎಳಂದೂರ ಹರೀಶ್ವರ), ಚತುರಾಚಾರ್ಯಪುರಾಣ (ಸಂಪಾದನೆಯ ಪರ್ವತೇಶ), ಸಿದ್ಧೇಶ್ವರ ಪುರಾಣ-ಪಾಲ್ಕುರಿಕೆಸೋಮೇಶ್ವರಪುರಾಣ -ಚಿದಾನಂದಸಿಂಧು (ವಿರತ ತೋಂಟದಾರ್ಯ) ಮೊದಲಾದ ಹಿರಿಯ ಪ್ರಕಾರದ ಪುರಾಣ-ಕಾವ್ಯಗಳನ್ನೂ ಕೀರ್ತಿಶತಕ-ಶಿವಕಾರುಣ್ಯಾಹ್ವಾನಶತಕ-ಶಿವಲಿಂಗ ವಿಕಳತೆ ಸನ್ನಿದರ್ಶನ ಅರ್ಚನ ಪೂಜನ ಶತಕ (ಗುರುನಂಜ), ಹೋಳಿಹಾಡು-ಶಿವಲಿಂಗನಾಂದ್ಯ-ಶಿವಲಿಂಗಮಹಿಮಾಷಟ್ಪದಿ- ಮಿಶ್ರಾರ್ಪಣ-ಯೋಗ ಕಲಾಪಸಾರ- ಶಿವಮತ ಪ್ರತಿಷ್ಠಾಪನ-ಪರಮತ ಖಂಡನ ವಾರ್ಧಿಕ-ಕೊರವಂಜಿ ಕಟ್ಟಳೆ (ಇಮ್ಮಡಿ ಮುರಿಗಾ ಗುರುಸಿದ್ಧದೇವ), ಪ್ರಭುಲಿಂಗದ ಕಂದ-ಮುರಿಗೆಸ್ವಾಮಿಗಳು ನಿರೂಪಿಸಿದ ನಾಂದ್ಯ-ಶಬ್ದರತ್ನಾಕರ-ಷಡ್ವಕ್ತ್ರಸ್ತೋತ್ರ-ಏಕೋನ ವಿಂಶತಿಪದ-ನೀಲಾಂಜಿಕಾ ಲಲಿತ ಪಂಚವಿಂಶತಿ-ಪಾರಿಜಾತ-ಲಿಂಗದಮಹಿಮೆ-ಮುರಿಗೆಸ್ವಾಮಿಗಳ ಮುಕ್ತಿಪ್ರದೀಪಿಕೆ-ಮುರಿಗೆಸ್ವಾಮಿಗಳ ಸಮಾಧಿಕ್ರಿಯೆ-ಲಿಂಗಸಾವಧಾನ ಪ್ರಣವ ಸಂಬಂಧಿ ಸಮಾಧಿಕ್ರಿಯಾದ ಉದ್ಧರಣೆ (ಮುರಿಗಾ ಶಾಂತವೀರ ಸ್ವಾಮಿಗಳು), ಮರುಳದೇವರಕಂದ (ಜಿಗುನಿ ಮರುಳದೇವ), ಕರ್ನಾಟಕ ಶಬ್ದಮಂಜರಿ-ಶೈವಸಂಜೀವಿನಿ-ಸರ್ವಮಂಗಳೆಶತಕ (ವಿರತ ತೋಂಟದಾರ್ಯ), ಜಂಗಮರಗಳೆ (ಸ್ವತಂತ್ರ ಸಿದ್ಧಲಿಂಗೇಶ್ವರ), ಕಟ್ಟಿಗೆಯ ತಾರಾವಳಿ (ಮುರಿಗಾ ಶಾಂತವೀರರು), ಶಿವಗಣಸಹಸ್ರ ತಾರಾವಳಿ (ಜ್ವಲಕಂಠ ಮಹಾಂತಸ್ವಾಮಿ) ಮುಂತಾದ ಕಿರಿಯ ಪ್ರಕಾರದ ಸಾಹಿತ್ಯಕೃತಿಗಳನ್ನೂ ಗೋಸಲಪೀಠ ಪರಂಪರೆಯವರು ಕನ್ನಡ ಸಾಹಿತ್ಯಕ್ಷೇತ್ರಕ್ಕೆ ನೀಡಿದ್ದಾರೆ.

ದೃಶ್ಯಕಾವ್ಯಸಾಹಿತ್ಯದಲ್ಲಿ ಬಿಜ್ಜಮಹಾದೇವಿಚರಿತೆ (ಇಮ್ಮಡಿ ಮುರಿಗಾ ಗುರುಸಿದ್ಧರು), ಮಡಿವಾಳಯ್ಯನ ಚರಿತೆ (ಕಟ್ಟಿಗೆಹಳ್ಳಿ ಸಿದ್ಧಲಿಂಗ)ಯಂಥ ಯಕ್ಷಗಾನ ಕೃತಿಗಳು ಆಕಾರ ಪಡೆದಿರುತ್ತವೆ. ಹೀಗೆ ಗೋಸಲಪೀಠ ಪರಂಪರೆಯವರ ಸೃಜನಸಾಹಿತ್ಯ ಗಾತ್ರ, ಸತ್ವ ಮತ್ತು ಸಂಖ್ಯೆಗಳ ದೃಷ್ಟಿಯಿಂದ ಅತ್ಯಂತ ಮೌಲಿಕವಾದುದಾಗಿದೆ. ವೀರಶೈವ ಧರ್ಮ-ತತ್ವಗಳ ಪ್ರಸಾರಕ್ಕಾಗಿ ಇವರು ವೀರಶೈವ ಲಘುಸಾಹಿತ್ಯ ಪ್ರಕಾರಗಳನ್ನೇ ವಿಶೇಷವಾಗಿ ಬಳಸಿರುವುದು ಒಂದು ವೈಶಿಷ್ಟ್ಯವಾಗಿದೆ.

**ಸಂಕಲನಸಾಹಿತ್ಯ:** ಕಲ್ಯಾಣಕ್ರಾಂತಿಯ ಕಾರಣದಿಂದ ಹತ್ತಾರು ದಿಕ್ಕಿನಲ್ಲಿ ಹರಿದು ಹಂಚಿಹೋದ ವಚನಸಾಹಿತ್ಯವನ್ನು ಸಂಗ್ರಹಿಸುವ, ಸಂಗ್ರಹಿಸಿದ ವಚನಗಳನ್ನು ಒಂದು ತತ್ತ್ವ ಅಥವಾ ಒಂದು ದೃಷ್ಟಿಕೋನ (ವಿಷಯ)ದ ಹಿನ್ನೆಲೆಯಲ್ಲಿ ಸಂಕಲಿಸುವ ಕಾರ್ಯಗಳು ತೀವ್ರವಾಗಿ, ಗಂಭೀರವಾಗಿ ಸಾಗಿಬಂದವು. ಸರಿಯಾದ, ಭದ್ರವಾದ ನೆಲೆಗಟ್ಟಿನ ಮೇಲೆ ಈ ಕಾರ್ಯ ಆರಂಭವಾದುದು, ಗೋಸಲಪೀಠ ಪರಂಪರೆಯವರಿಂದ. ಇದರೊಂದಿಗೆ ಸಮಗ್ರ ವಚನಸಾಹಿತ್ಯದ ಅಕ್ಷಯ ನಿಧಿಯನ್ನು ಸಂರಕ್ಷಿಸುವ ಜವಾಬ್ದಾರಿಯ ಕೆಲಸವೂ ಪ್ರಾಮಾಣಿಕವಾಗಿ, ಪರಿಶ್ರಮಪೂರ್ವಕವಾಗಿ ನಡೆಯಿತು.

ವೀರಶೈವ ಸಂಕಲನಸಾಹಿತ್ಯವು ಸಂಯೋಜನಸಾಹಿತ್ಯದ ಒಂದು ಅಂಗ. ನಾಡಿನ ನಾನಾ ಮೂಲೆಗಳಿಂದ, ಹಲವಾರು ವರ್ಷಗಳಿಂದ, ನೂರಾರು ಜನರಿಂದ ಸಂಗ್ರಹವಾದ ವಚನರಾಶಿಯನ್ನು ಒಂದು ತತ್ತ್ವ ಅಥವಾ ವಿಷಯದ ಹಿನ್ನೆಲೆಯಲ್ಲಿ ಸಂಯೋಜಿಸುವ ವಿಚಾರ ಸಂಕಲನಕಾರರಿಗೆ ಹೊಳೆದುದು ಒಂದು ಶುಭಗಳಿಗೆ, ಅವರ ಅನುಭಾವದ ಪ್ರತೀಕ. ಸಂಕಲನಕಾರರ ಇಂಥ ಪ್ರಯತ್ನದ ಫಲವಾಗಿ ರೂಪ ತಳೆದ ವಚನಕೃತಿಗಳು 'ಸಂಕಲನ'

ಗಳೆನಿಸುತ್ತವೆ. ಸಂಕಲನಕಾರರು ಈ ಕಾರ್ಯಕ್ಕಾಗಿ ಪರಿಶ್ರಮ, ಪಾಂಡಿತ್ಯಗಳನ್ನು ಮೈಗೂಡಿಸಿಕೊಂಡಿರಬೇಕಾಗುತ್ತದೆ. ವಚನ ಸಂಕಲನಗಳಲ್ಲಿ ಸ್ಥಲಸಹಿತ ಸಂಕಲನ, ಸ್ಥಲರಹಿತ ಸಂಕಲನಗಳಿರುತ್ತವೆ. ಆಚರಣೆಯ ವಚನ (೨೮ ಸ್ಥಲ)-ಸಂಬಂಧದ ವಚನ (೨೪ ಸ್ಥಲ) (ಸಂಪಾದನೆಯ ಚೆನ್ನಂಜೇದೇವ), ಶಿವಮಹಿಮಾಸ್ತೋತ್ರದ ವಚನ (೨೦ ಸ್ಥಲ, ವೀರಸಂಗಯ್ಯ), ಚಿದೈಶ್ವರ್ಯ ಚಿದಾಭರಣ (೧೦+೧ ಸ್ಥಲ, ಗುರುಸಿದ್ಧದೇವ) ಗಳು ಸ್ಥಲವಿಭಜನೆಯುಳ್ಳ ವಚನ ಸಂಕಲನಗಳಾಗಿರುತ್ತವೆ. ಈ ಸ್ಥಲ ವಿಭಜನೆಯ ನಿರ್ಮಾಣದ ಹಿಂದಿರುವ ಷಟ್‌ಸ್ಥಲಜ್ಞಾನಿಗಳಾದ ಸಂಕಲನಕಾರರ ಉದ್ದೇಶ, ತಂತ್ರಗಳ ಅಧ್ಯಯನ ಇನ್ನೂ ನಡೆಯಬೇಕಾಗಿದೆ.

ಆಚರಣೆಯ ಸಂಬಂಧದ ವಚನ-ಲಿಂಗಸ್ತೋತ್ರದ ವಚನ (ಸಂಪಾದನೆಯ ಸಿದ್ಧವೀರಣ್ಣ), ಮಿಶ್ರಸ್ತೋತ್ರದ ವಚನ, ಬಸವಸ್ತೋತ್ರದ ವಚನ (ಸಂಪಾದನೆಯ ಚೆನ್ನಂಜೇದೇವ), ಚಿತ್ಕ್ರಿಯಾ ಸಂಗ್ರಹ (ಜಿಗುನಿ ಮರುಳದೇವ), ಅಷ್ಟಾವರಣ ಸ್ತೋತ್ರದ ವಚನ-ಷಡುಸ್ಥಲಸ್ತೋತ್ರದ ವಚನ-ಶರಣಸ್ತೋತ್ರದ ವಚನ-ಮಿಶ್ರಸ್ತೋತ್ರದ ವಚನ-ಲಿಂಗವಿಕಳಾವಸ್ಥೆಯ ವಚನ (ಎಳಮಲೆಯ ಗುರುಶಾಂತದೇವ), ಷಟ್‌ಸ್ಥಲ ಬ್ರಹ್ಮಾನಂದ ವಿರಕ್ತ ಚಾರಿತ್ರ ಸಂಪಾದನೆಯ ವಚನ-ಬಸವಸ್ತೋತ್ರದ ವಚನ-(ಸಂಪಾದನೆಯ ಬೋಳಬಸವ), ಅನುಭವ ಜ್ಞಾನ ಸಾರಾಮೃತ ಸಂಪಾದನಾಸ್ತೋತ್ರ (ಸಂಪಾದನೆಯ ಪರ್ವತೇಶ), ಕ್ರಿಯಾಸಮರಸದ ವಚನ (ಸಿದ್ಧವೀರದೇವ)ಗಳು ಸ್ಥಲ ವಿಭಜನೆಯಿಲ್ಲದ ವಚನ ಸಂಕಲನಗಳೆನಿಸಿವೆ. ಹಿಂದೆಂದೂ ಸೃಷ್ಟಿಯಾಗದಷ್ಟು ಅಧಿಕ ಸಂಖ್ಯೆಯ ವಚನ ಸಂಕಲನಕೃತಿಗಳು ಈಗ ಕಣ್ದೆರೆದವು. ಸಂಕಲನಕಾರರು ವಚನಗಳ ಮಧ್ಯೆ ಕೆಲವು ಸಲ ವಿವರಣರೂಪದ ಗದ್ಯವನ್ನೂ ಪ್ರಮಾಣರೂಪದ ಸಂಸ್ಕೃತ ಶ್ಲೋಕಗಳನ್ನೂ ಸೇರಿಸಿದ್ದಾರೆ. ಒಟ್ಟಿನಲ್ಲಿ ವೀರಶೈವ ವಚನಸಂಕಲನಸಾಹಿತ್ಯ ಗೋಸಲಪೀಠ ಪಂರಪೆಯವರು ಕನ್ನಡ ಸಾಹಿತ್ಯಕ್ಷೇತ್ರಕ್ಕೆ ಕೊಟ್ಟ ಅಮೂಲ್ಯ ಹಾಗೂ ವಿಶಿಷ್ಟ ಕೊಡುಗೆಯಾಗಿದೆ.

ವಚನ ಸಂಕಲನಗಳಂತೆ ವೀರಶೈವಕಾವ್ಯಗಳನ್ನೂ ಇವರು ಸಂಕಲಿಸಿ ಕೊಟ್ಟಿದ್ದಾರೆ. ಮಿಶ್ರಸ್ತೋತ್ರ (ಭೈರವೇಶ್ವರ ಕಾವ್ಯ)-ಮಿಶ್ರಸ್ತೋತ್ರದ ಷಟ್ಪದಿ-ಶಂಕರದೇವರ ಕಂದ-ಸರ್ವಜ್ಞನ ತ್ರಿಪದಿ-ಲಿಂಗಸ್ತೋತ್ರದ ಷಟ್ಪದಿ-ಲಿಂಗಸ್ತೋತ್ರ (ಕೊಂಡಗುಳಿ ಕೇಶಿರಾಜ)ದ ಕಂದ (ಸಂಪಾದನೆಯ ಸಿದ್ಧವೀರಣ್ಣ), ಅಷ್ಟಾವರಣಸ್ತೋತ್ರದ ಷಟ್ಪದ-ಆಚರಣೆಯ ಸಂಬಂಧದ ಷಟ್ಪದಿ-ವೈರಾಗ್ಯ ಷಟ್ರದಿ (ಸಂಪಾದನೆಯ ಗುರುನಂಜೇಸ್ವಾಮಿ), ಶಂಕರದೇವರಕಂದ-ಬಸವ ಸ್ತೋತ್ರದ ಷಟ್ಪದಿ (ಸಂಪಾದನೆಯ ಚೆನ್ನಂಜೇದೇವ), ಸಿದ್ಧೇಶ್ವರ ಪುರಾಣದ ನಾಂದ್ಯ (ಶಾಂತೇಶ) ಮಂತ್ರಮಹತ್ವದ (ಕೊಂಡಗುಳಿ ಕೇಶಿರಾಜ) ಕಂದ (ಎಳಮಲೆಯ ಗುರುಶಾಂತದೇವ) ಕೃತಿಗಳು ಗೋಸಲಪೀಠ ಪರಂಪರೆಯವರ ಕಾವ್ಯಸಂಕಲನಗಳಾಗಿರುತ್ತವೆ. ಶರಣರ ಸಂಕೀರ್ತನೆ ಹಾಗೂ ವೀರಶೈವ ತತ್ವ ಆಚರಣೆಗಳನ್ನು ಜನರಿಗೆ ತಲುಪಿಸಲು ವೀರಶೈವಕಾವ್ಯಗಳಿಂದ ಪದ್ಯಗಳನ್ನು ಆಯ್ದುಕೊಂಡು ಈ ಕಾವ್ಯಸಂಕಲನಗಳನ್ನು ಸಂಯೋಜಿಸಿದ್ದಾರೆ. ಹೀಗೆ ವೀರಶೈವ ಸಂಕಲನಸಾಹಿತ್ಯ ವಚನಸಂಕಲನ, ಕಾವ್ಯಸಂಕಲನವೆಂದು ಎರಡು ಪ್ರಕಾರಗಳಲ್ಲಿ ದೊರೆಯುತ್ತದೆ. ಈ ಸಂಕಲನಸಾಹಿತ್ಯದಲ್ಲಿ ವಚನ ಸಂಕಲನಗಳು ಮಾತ್ರ ಪ್ರಕಟಿತವಾಗಿದ್ದು, ಕಾವ್ಯಸಂಕಲನಗಳು ಹೆಚ್ಚಾಗಿ ಅಪ್ರಕಟಿತರೂಪದಲ್ಲಿ ದೊರೆಯುತ್ತವೆ.

**ಸಂಪಾದನಸಾಹಿತ್ಯ:** ಕನ್ನಡಸಾಹಿತ್ಯದಲ್ಲಿ 'ವೀರಶೈವ ಸಂಪಾದನಸಾಹಿತ್ಯ' ವಿಶಿಷ್ಟವಾದ, ವಿನೂತನವಾದ ಪ್ರಕಾರದ್ದಾಗಿರುತ್ತದೆ. ಗೋಸಲಪೀಠದವರು ಈ ಸಾಹಿತ್ಯಪ್ರಕಾರಕ್ಕೆ ವಿಶೇಷ ಬೆಲೆ ತಂದುಕೊಟ್ಟಿದ್ದಾರೆ. 'ಶೂನ್ಯ ಸಂಪಾದನೆ'ಗಳು ಈ ಸಂಪಾದನಾ ಸಾಹಿತ್ಯದ ಪ್ರಯೋಗನಿಷ್ಠ ಕೃತಿಗಳಾಗಿವೆ. ಶಿವಗಣ ಪ್ರಸಾದಿ ಮಹಾದೇವಯ್ಯ 'ಶೂನ್ಯಸಂಪಾದನೆ'ಯ ಪ್ರಥಮ ಶಿಲ್ಪಿ. ತರುವಾಯ ಈ ಶಿಲ್ಪದ ಪರಿಷ್ಕರಣ ಕಾರ್ಯ ಕೈಕೊಂಡವರು, ಗೋಸಲ ಪೀಠದ ಗುಮ್ಮಳಾಪುರ ಸಿದ್ಧಲಿಂಗದೇವ, ಗೂಳೂರು ಸಿದ್ಧವೀರಣ್ಣದೇವರು.

ಗುಮ್ಮಳಾಪುರ ಸಿದ್ಧಲಿಂಗದೇವರ ಶೂನ್ಯಸಂಪಾದನೆಯಲ್ಲಿ ಪ್ರಕರಣಗಳ ವಿಭಜನೆಯಿಲ್ಲ. ಆದರೆ ಶಿವಗಣಪ್ರಸಾದಿ ಮಹಾದೇವಯ್ಯನ ಶೂನ್ಯಸಂಪಾದನೆಯಲ್ಲಿ ಇಲ್ಲದ ಆಯ್ದಕ್ಕಿ ಮಾರಯ್ಯನ ಸಂಪಾದನೆ, ಗೋರಕ್ಷನ ಸಂಪಾದನೆಗಳು, ಗುಮ್ಮಳಾಪುರ ಸಿದ್ಧಲಿಂಗದೇವನ ಶೂನ್ಯ ಸಂಪಾದನೆಯಲ್ಲಿ ಹೊಸದಾಗಿ ಸೇರಿಕೊಂಡವು. ಗೂಳೂರು ಸಿದ್ಧವೀರಣ್ಣನ ಶೂನ್ಯಸಂಪಾದನೆಯಲ್ಲಿ ಗೊಗ್ಗಯ್ಯನ ಬೋಧೆ, ಮೋಳಿಗಯ್ಯನ ಸಂಪಾದನೆ, ಘಟ್ಟಿವಾಳಯ್ಯನ ಸಂಪಾದನೆಗಳು ಮತ್ತೆ ಹೊಸದಾಗಿ ಸೇರ್ಪಡೆಯಾದವು. ಇದರಲ್ಲಿ ಪ್ರಕರಣ ವಿಭಜನೆಯಿದೆ. ಹೀಗೆ ಶೂನ್ಯಸಂಪಾದನೆಯ ಪರಿಷ್ಕರಣ ಕಾರ್ಯ ಪರಿಪೂರ್ಣವಾದುದು, ಪರಮಸಿದ್ಧಿ ಪಡೆದುದು ಗೂಳೂರು ಶೂನ್ಯಸಂಪಾದನೆಯಲ್ಲಿ. ಸಂಪಾದನಕಾರರ ಸಂಯೋಜಕಪ್ರತಿಭೆ, ಪಾಂಡಿತ್ಯ, ಪರಿಶ್ರಮಗಳ ಸಾಕಾರರೂಪ ಈ ಶೂನ್ಯಸಂಪಾದನೆಗಳು. ಆರಂಭದಲ್ಲಿಯ ಗುರು ಲಿಂಗ ಜಂಗಮ ಮೊದಲಾದ ಧಾರ್ಮಿಕ ಸಿದ್ಧಾಂತಗಳ ಜೊತೆಯಲ್ಲಿ ಈಗ ಕಾಯಕ, ದಾಸೋಹ ಮುಂತಾದ ಸಾಮಾಜಿಕ ಸಿದ್ಧಾಂತಗಳೂ ಪ್ರವೇಶ ಪಡೆದವು. ಹೀಗೆ 'ಧಾರ್ಮಿಕಗ್ರಂಥ'ವೆನಿಸಿದ ಶೂನ್ಯಸಂಪಾದನೆ, ಕ್ರಮೇಣ 'ಮಾನವ ಧರ್ಮಗ್ರಂಥ'ವಾಗಿ ರೂಪ ಪಡೆಯಿತು. ಶೂನ್ಯಸಂಪಾದನೆ ಜಾಗತಿಕ ಸಾಹಿತ್ಯದ ವಿನೂತನ ಪ್ರಯೋಗಕೃತಿ. ಇದರಿಂದ ಗುಮ್ಮಳಾಪುರ ಸಿದ್ಧಲಿಂಗದೇವ, ಗೂಳೂರು ಸಿದ್ಧವೀರಣ್ಣರು ಜಾಗತಿಕ ಸಾಹಿತ್ಯದ ಮಹಾಂತರೆನಿಸುತ್ತಾರೆ. ಗೋಸಲಪೀಠದವರು ಕನ್ನಡಸಾಹಿತ್ಯಕ್ಕೆ ಹಾಗೂ ಜಾಗತಿಕ ಸಾಹಿತ್ಯಕ್ಷೇತ್ರಕ್ಕೆ ಸಮರ್ಪಿಸಿದ ಅಮೋಘ ಕೊಡುಗೆಗಳಾಗಿವೆ, ಈ ಶೂನ್ಯ ಸಂಪಾದನೆಗಳು.

'ಸಂಪಾದನಾಸಾಹಿತ್ಯ'ದ ಕಾರ್ಯವನ್ನು 'ಕಾಯಕ'ದ ಮಟ್ಟಕ್ಕೆ ಮುಟ್ಟಿಸಿ, ಈ ಸಾಹಿತ್ಯವನ್ನು ಹುಲುಸಾಗಿ ಬೆಳೆಸಿದವರು, ಗೋಸಲಪೀಠದ ಶಿಷ್ಯ-ಪ್ರಶಿಷ್ಯರೆಂಬುದು ಅಭಿಮಾನದ ಸಂಗತಿಯಾಗಿದೆ.

ವಚನಸಾಹಿತ್ಯದ ಸಂಗ್ರಹ, ಸಂಕಲನ, ಸಂಪಾದನೆಗಳಿಗಾಗಿ ವೀರಶೈವ 'ಸಂಪಾದನ ಸಮಯ'ವನ್ನು ಅನಾವರಣಗೊಳಿಸಿದವರು ಈ ಪೀಠದವರು. ಮುಂದೆ ಈ 'ಸಂಪಾದನ ಸಮಯ'ವನ್ನು ಉದ್ದೀಪನಗೊಳಿಸಿದ ಶ್ರೇಯಸ್ಸು ಸಂಪಾದನೆಯ ಚೆನ್ನಂಜೇದೇವ, ಸಂಪಾದನೆಯ ಸಿದ್ಧವೀರಣಾರ್ಯ, ಸಂಪಾದನೆಯ ಬೋಳಬಸವ, ಸಂಪಾದನೆಯ ಗುರುನಂಜ, ಸಂಪಾದನೆಯ ಗುರುಲಿಂಗದೇವ, ಸಂಪಾದನೆಯ ಪರ್ವತೇಶರದಾಗಿದೆ. ಇವರ ದುಡಿಮೆಯ ಫಲವಾಗಿ ಹಾಡಿನಲ್ಲಿ ಸಂಪಾದನೆಯ ಮಠ, ಶೂನ್ಯಸಂಪಾದನೆಯ ಮಠಗಳು ನಿರ್ಮಾಣಗೊಂಡು, 'ಸಂಪಾದನಸಾಹಿತ್ಯ'ವನ್ನು ಮುಂದುವರಿಸಿಕೊಂಡು ಬರುವಂತಾಯಿತು. ವೀರಶೈವಧರ್ಮ, (ವಚನ) ಸಾಹಿತ್ಯ, ಸಮಾಜ, ಸಂಸ್ಕೃತಿಗಳನ್ನು ಬದುಕಿಸಿದ, ಪ್ರಸಾರಗೊಳಿಸಿದ ಕೀರ್ತಿ, ಈ 'ಸಂಪಾದನ ಸಮಯ'ದ ಸಂಪಾದನಕಾರರಿಗೆ, ಸಂಪಾದನೆ-ಶೂನ್ಯಸಂಪಾದನೆಯ ಮಠಗಳಿಗೆ ಸಲ್ಲುತ್ತದೆ.

ತಮಿಳಿನ ಸಂಘಂ ಸಾಹಿತ್ಯ, ನಮ್ಮ 'ವಚನಸಂಕಲನ'ವನ್ನು ಹೋಲುತ್ತಿದ್ದರೂ 'ಸಂಪಾದನೆ'ಯ ಸೃಜನಶೀಲತೆ ಅಲ್ಲಿರುವುದಿಲ್ಲ. ಹೀಗೆ 'ವಚನಸಂಪಾದನಸಾಹಿತ್ಯ' ತಮಿಳಿನ ಸಂಘಂ ಸಾಹಿತ್ಯಕ್ಕಿಂತ ಭಿನ್ನವಾಗಿ ನಿಲ್ಲುತ್ತದೆ.

**ಸಂಗ್ರಹ (=ಸಂಕ್ಷೇಪ) ಸಾಹಿತ್ಯ:** ವೀರಶೈವ ಧರ್ಮ-ತತ್ವಗಳನ್ನು ಸುಲಭವಾಗಿಯೂ ಅಲ್ಪಾವಧಿಯಲ್ಲಿಯೂ ತಿಳಿದುಕೊಳ್ಳಲು ಅನುಕೂಲವಾಗುವಂತೆ 'ವಚನ ಸಂಗ್ರಹರೂಪ'ಗಳು ಹುಟ್ಟಿಬಂದವು. ಈ 'ಸಂಗ್ರಹರೂಪ'ಗಳನ್ನು ಕನ್ನಡ ಸಾಹಿತ್ಯಕ್ಷೇತ್ರಕ್ಕೆ ನೀಡಿದ ಪ್ರಥಮಾಚಾರ್ಯರು, ಈ ಪೀಠದ ಕಟ್ಟಿಗೆಹಳ್ಳಿ ಸಿದ್ಧಲಿಂಗ ಮತ್ತು ಸಂಪಾದನೆಯ ಸಿದ್ಧವೀರಣ್ಣರಾಗಿದ್ದಾರೆ. ಸಾರ, ಸಾರಾಮೃತ ಪದಗಳು ಇಂಥ ವಚನಸಂಗ್ರಹಗಳನ್ನು ಸೂಚಿಸುತ್ತವೆ. ಇಲ್ಲಿಯ ಪ್ರತಿಯೊಂದು ವಚನಕ್ಕೂ ಟೀಕೆ ಇರುವುದು ಈ ಸಂಗ್ರಹಗಳ ವೈಶಿಷ್ಟ್ಯವಾಗಿದೆ. ಕಟ್ಟಿಗೆಹಳ್ಳಿ ಸಿದ್ಧಲಿಂಗನ 'ಸಂಪಾದನೆಯ ಸಾರಾಮೃತ', ಗೂಳೂರು ಸಿದ್ಧವೀರಣ್ಣನ ಶೂನ್ಯಸಂಪಾದನೆಯ ಸಂಗ್ರಹ (=ಸಂಕ್ಷೇಪ) ಕೃತಿಯಾಗಿದೆ. ಗೂಳೂರ ಶೂನ್ಯಸಂಪಾದನೆಯಲ್ಲಿ ಕೇವಲ ವಚನಗಳಿದ್ದರೆ, ಸಂಪಾದನೆಯ ಸಾರಾಮೃತದಲ್ಲಿರುವ ಎಲ್ಲ ವಚನಗಳಿಗೂ ವ್ಯಾಖ್ಯಾನಗಳಿರುತ್ತವೆ. ಕಟ್ಟಿಗೆಹಳ್ಳಿ ಸಿದ್ಧಲಿಂಗನ ಈ ವ್ಯಾಖ್ಯಾನಗಳನ್ನು ವಿವಿಧ ಮೂಲಗಳಿಂದ ಸಂಗ್ರಹಿಸಿದ್ದಾನೆ.

ಕಟ್ಟಿಗೆಹಳ್ಳಿ ಸಿದ್ಧಲಿಂಗ ಹಾಗೂ ಸಂಪಾದನೆಯ ಸಿದ್ಧವೀರಣ್ಣರ ಏಕೋತ್ತರಸಾರಗಳು ಮಹಾಲಿಂಗದೇವನ ಏಕೋತ್ತರಶತಸ್ಥಲದಸಂಗ್ರಹ ಕೃತಿಗಳಾಗಿವೆ. ಇಲ್ಲಿಯೂ ಪ್ರತಿಯೊಂದು ವಚನಗಳಿಗೆ ಟೀಕೆಯಿದೆ. ಹೀಗೆ ವಚನ ಸಂಕಲನ ಮತ್ತು ವಚನ ಸಂಪಾದನೆಗಳ 'ಸಂಗ್ರಹರೂಪ'ಗಳನ್ನು ಕನ್ನಡ ಸಾರಸ್ವತಲೋಕಕ್ಕೆ ನೀಡಿದ ಗೋಸಲಪೀಠದವರ ಸಾಹಿತ್ತಿಕ ಕೊಡುಗೆ ನೆನೆಯುವಂಥದಾಗಿದೆ. ಕನ್ನಡ ಸಾಹಿತ್ಯಕ್ಷೇತ್ರಕ್ಕೆ ಹೊಸ ಹೊಸ ಪ್ರಯೋಗ ಕೃತಿಗಳನ್ನು ಕೊಟ್ಟ ಕಟ್ಟಿಗೆಹಳ್ಳಿ ಸಿದ್ಧಲಿಂಗ ಹಾಗೂ ಸಂಪಾದನೆಯ ಸಿದ್ಧವೀರಣ್ಣರು ಅಭಿನಂದನಾರ್ಹರು.

ವಚನಗಳ ಸಂಗ್ರಹ, ಸಂಕಲನ, ಸಂಪಾದನ ಕೃತಿಗಳ ಪರಿಷ್ಕರಣಕ್ಕಾಗಿ ಇವರು ಅನುಸರಿಸಿದ ಪರಿಷ್ಕರಣ ವಿಧಾನಗಳು ಲಿಖಿತರೂಪದಲ್ಲಿ ಉಳಿದುಬಂದಿಲ್ಲ. ಹೀಗಿದ್ದರೂ ಇದು, ಕನ್ನಡ ಗ್ರಂಥಸಂಪಾದನೆಯ ವಿಧಾನಗಳನ್ನು ಕಾರ್ಯರೂಪಕ್ಕಿಳಿಸಿದ ಪ್ರಥಮ ಪ್ರಯತ್ನವೆನಿಸಿದೆ. ಕನ್ನಡ ಗ್ರಂಥಸಂಪಾದನೆಯ ಇತಿಹಾಸ ಇಲ್ಲಿಂದಲೇ ಆರಂಭವಾಗುತ್ತದೆ. ಇದನ್ನು ಕನ್ನಡ ಗ್ರಂಥಸಂಪಾದನೆಯ ಪ್ರಥಮ ಘಟ್ಟವೆಂದು ಕರೆಯಬಹುದು. ಕನ್ನಡ ಗ್ರಂಥಸಂಪಾದನಾ ಕ್ಷೇತ್ರಕ್ಕೆ ಇವರದು 'ಹೆಸರಿಲ್ಲದ ಹೆಸರಿನ' ಕೊಡುಗೆಯಾಗಿದೆ.

**ವ್ಯಾಖ್ಯಾನಸಾಹಿತ್ಯ:** ಕನ್ನಡ ವ್ಯಾಖ್ಯಾನಸಾಹಿತ್ಯದಲ್ಲಿ ವೀರಶೈವ ವ್ಯಾಖ್ಯಾನಸಾಹಿತ್ಯಕ್ಕೆ ವಿಶೇಷ ಮರ್ಯಾದೆಯಿದೆ. ಹಲವು ಹದ, ಹಲವು ವಿಧಗಳಲ್ಲಿ ರಚಿತವಾದ ವೀರಶೈವ ವ್ಯಾಖ್ಯಾನಸಾಹಿತ್ಯ ಸೃಜನ, ಸಂಕಲನ, ಸಂಪಾದನ ಸಾಹಿತ್ಯದೊಂದಿಗೆ ಸಮೃದ್ಧವಾಗಿಯೇ ಬೆಳೆದುಬಂದಿತು. ಸಾಹಿತ್ಯ, ಧರ್ಮ ಹಾಗೂ ತತ್ವಗಳ ಪ್ರಸಾರ ಮಾಧ್ಯಮವಾಗಿ ವ್ಯಾಖ್ಯಾನಸಾಹಿತ್ಯ ಬಳಕೆಯಾಗಿದೆ. ಗೋಸಲಪೀಠದ ಪರಂಪರೆಯವರೂ ಈ ವ್ಯಾಖ್ಯಾನಸಾಹಿತ್ಯದ ಸೃಷ್ಟಿಯಾಗಿ ಹಿರಿದಾದ ಸೇವೆ ಸಲ್ಲಿಸಿದ್ದಾರೆ. ಈ ವ್ಯಾಖ್ಯಾನಗಳು ಕೃತಿಯ ಅಂತರಂಗ-ಬಹಿರಂಗ ಸೌಂದರ್ಯಗಳನ್ನು ಸಾಕ್ಷಾತ್ಕಾರಗೊಳಿಸಿಕೊಡುತ್ತವೆ.

ಗೋಸಲಪೀಠದ ಪರಂಪರೆಯವರು ರಚಿಸಿದ ವೀರಶೈವ ವ್ಯಾಖ್ಯಾನಸಾಹಿತ್ಯ ೧.

ವಚನಗಳಿಗೆ ಬರೆದ ವ್ಯಾಖ್ಯಾನ, ೨. ಕನ್ನಡ ಕೃತಿಗಳಿಗೆ ಬರೆದ ವ್ಯಾಖ್ಯಾನ, ೩. ಸಂಸ್ಕೃತ ಕೃತಿಗಳಿಗೆ ಬರೆದ ಕನ್ನಡವ್ಯಾಖ್ಯಾನ-ಹೀಗೆ ಮೂರು ಪ್ರಕಾರದ್ದಾಗಿರುತ್ತದೆ. ಸೋಮಶೇಖರ ಶಿವಯೋಗಿ ಶ್ರೀ ತೋಂಟದ ಸಿದ್ಧಲಿಂಗ ಶಿವಯೋಗಿಗಳ ಷಟ್‌ಸ್ಥಲಜ್ಞಾನಸಾರಾಮೃತದ ಬೆಡಗಿನ ವಚನಗಳಿಗೂ ಬಸವಣ್ಣನವರ ಷಟ್‌ಸ್ಥಲದ ಬೆಡಗಿನ ವಚನಗಳಿಗೂ ಟೀಕೆ ಬರೆದಿದ್ದಾನೆ. ಚೆನ್ನಬಸವಣ್ಣನವರ ಕರಣಹಸುಗೆ ಟೀಕೆ, ಮಿಶ್ರಾರ್ಪಣ ಟೀಕೆ, ಜಕ್ಕಣಾರ್ಯನ ಏಕೋತ್ತರಶತಸ್ಥಲದ ಟೀಕೆ, ಬಸವೇಶ್ವರ ವಚನಸಾರಾರ್ಥಗಳು ಪರ್ವತ ಶಿವಯೋಗಿಯ ವಚನ ವ್ಯಾಖ್ಯಾನ ಕೃತಿಗಳಾಗಿವೆ. ಸಂಪಾದನೆಯ ಚೆನ್ನಂಜೇದೇವನು ಸ್ವತಂತ್ರಸಿದ್ಧಲಿಂಗೇಶ್ವರರ ವಚನ ಸಂಕಲನ ಮುಕ್ತ್ಯಾಂಗಂಗನಾ ಕಂಠಮಾಲೆಗೆ ಟೀಕೆ ರಚಿಸಿದ್ದಾನೆ.

ಪರ್ವತ ಶಿವಯೋಗಿಯ ಮರುಳದೇವರಕಂದ ಟೀಕೆ, ಗುರುಸ್ತೋತ್ರದ (ಚೆನ್ನಮಲ್ಲ) ತ್ರಿಪದಿ ಟೀಕೆ, ಷಡ್ವಕ್ತ್ರಸ್ತೋತ್ರದ ಟೀಕೆ, ಕರಸ್ಥಲದ ನಾಗಿದೇವನ ತ್ರಿಪದಿ ಟೀಕೆ, ಮುರಿಗಾಶಾಂತವೀರನ ಪ್ರಭುಲಿಂಗದ ಕಂದದ ಟೀಕೆ, ಸಂಗಮೇಶ್ವರಾಂಕಿತ ಗುರುಸ್ತೋತ್ರದ ತ್ರಿಪದಿ ಟೀಕೆಗಳೂ ಸಂಪಾದನೆಯ ಗುರುಲಿಂಗದೇವನ ಶೀಲವಂತಯ್ಯನ ತ್ರಿಪದಿ ಟೀಕೆ, ವಿರತ ತೋಂಟದಾರ್ಯನ ಸಿದ್ಧಲಿಂಗಶತಕ ಟೀಕೆ, ಮಗ್ಗೆಯ ಮಾಯಿದೇವರ ಶತಕತ್ರಯದ ಟೀಕೆ, ಮನೋವಿಜಯ (ಗುರುಬಸವ)ದ ತಾತ್ಪರ್ಯಗಳೂ ಕನ್ನಡ ಕೃತಿಗಳಿಗೆ ಬರೆದ ವ್ಯಾಖ್ಯಾನಗಳು.

ಸಂಪಾದನೆಯ ಗುರುನಂಜೇಸ್ವಾಮಿಯ ಯಜುರ್ವೇದಭಾಷ್ಯ (ಭಟ್ಟಭಾಸ್ಕರ) ಟೀಕೆ, ಸಾನಂದ ಶಿವಯೋಗಿಯ ಮಾಹೇಶ್ವರಾಚಾರ ಸಾರೋದ್ಧಾರ ಟೀಕೆ, ಪರ್ವತ ಶಿವಯೋಗಿಯ ಭೋಜದೇವಕೃತ ತತ್ವಪ್ರಕಾಶಿಕಾ ಟೀಕೆ, ಇಮ್ಮಡಿ ಮುರಿಗಾ ಗುರುಸಿದ್ಧರ ಲಿಂಗಾಚಾರ ರಚನಾಗಮ ಟೀಕೆ ಹಾಗೂ ವಿರತ ತೋಂಟದಾರ್ಯನ ಪಾಲ್ಕುರಿಕೆ ಸೋಮನಾಥನ ಪಂಚಗದ್ಯಗಳ ಟೀಕೆಗಳು ಸಂಸ್ಕೃತ ಗ್ರಂಥಗಳಿಗೆ ಮಾಡಿದ ಕನ್ನಡ ವ್ಯಾಖ್ಯಾನಗಳಾಗಿರುತ್ತವೆ.

ಪ್ರತಿಪದಾರ್ಥ, ವಾಕ್ಯ ಹಿಮ್ಮೆಟ್ಟಿಸಿ ಬರೆದ ವಾಕ್ಯರೂಪದ ಅರ್ಥ, ಇವೆರಡರ ಸಮ್ಮಿಶ್ರಪದ್ಧತಿ, ಕೇವಲ ಒಂದೆರಡು ಪದ ಅಥವಾ ವಾಕ್ಯಗಳಿಗೆ ಹೇಳಿದ ಅರ್ಥ, ತಾತ್ಪರ್ಯಾರ್ಥ-ಹೀಗೆ ಈ ವ್ಯಾಖ್ಯಾನಕಾರರು ವಚನಗಳಿಗೆ ಹಲವು ರೂಪದ ವ್ಯಾಖ್ಯಾನ ಮಾಡಿದ್ದಾರೆ. ಕಾವ್ಯಗಳಿಗೆ ಹೆಚ್ಚಾಗಿ ಪ್ರತಿಪದಾರ್ಥ ಟೀಕೆಯಿದೆ.

ಈ ವ್ಯಾಖ್ಯಾನಗಳಲ್ಲಿ ವಾಚ್ಯಾರ್ಥಕ್ಕಿಂತ ತಾತ್ವಿಕಾರ್ಥವೇ ಪ್ರಧಾನವಾಗಿ ಕಂಡುಬರುತ್ತದೆ. ವ್ಯಾಖ್ಯಾನಕಾರರ ಆಳವಾದ ಅಧ್ಯಯನ, ಅಪಾರವಾದ ಲೋಕಾನುಭವ, ಪಾಂಡಿತ್ಯ, ಉಭಯಭಾಷಾಜ್ಞಾನ ಹಾಗೂ ಉಜ್ವಲಪ್ರತಿಭೆಗಳು ಇಲ್ಲಿಯ ವ್ಯಾಖ್ಯಾನಗಳಲ್ಲಿ ಮಡುಗಟ್ಟಿನಿಂತಿವೆ. ಈ ವ್ಯಾಖ್ಯಾನಕಾರರರು ವೀರಶೈವ ತತ್ವಗಳ ಪ್ರತಿಪಾದನೆಗಾಗಿ ಕನ್ನಡ ಭಾಷೆಯನ್ನು ಪ್ರಮಾಣಭಾಷೆಯನ್ನಾಗಿ ಸ್ವೀಕರಿಸಿರುವುದೂ ಭಾಷೆಯ ಸರ್ವಸಾಧ್ಯತೆಗಳನ್ನು ಬಳಸಿಕೊಂಡಿರುವುದೂ ಶಬ್ದ-ಅರ್ಥ ಸಂಪತ್ತನ್ನು ಹೆಚ್ಚಿಸಿರುವುದೂ ಅತ್ಯಂತ ಗಮನಾರ್ಹ. ತಾತ್ವಿಕಾರ್ಥ ಮುಂದುವರಿಯಬೇಕೆಂಬ ಈ ವ್ಯಾಖ್ಯಾನಕಾರರ ಹಂಬಲ ಮೆಚ್ಚುವಂತಹದಾಗಿದೆ. ವ್ಯಾಖ್ಯಾನಸಾಹಿತ್ಯದ ಮೂಲಕ ವೀರಶೈವ ತತ್ವಗಳನ್ನು ಸಂರಕ್ಷಿಸಿದ, ಪ್ರಸಾರಗೊಳಿಸಿದ ಈ ವ್ಯಾಖ್ಯಾನಕಾರರು ವೀರಶೈವ ವ್ಯಾಖ್ಯಾನಸಾಹಿತ್ಯಕ್ಕೆ ಕನ್ನಡಸಾಹಿತ್ಯದಲ್ಲಿ

ಅಗ್ರಸ್ಥಾನ ಸಲ್ಲುವಂತೆ ಮಾಡಿದ್ದಾರೆ. ಈ ಸಮಯದಲ್ಲಿ ನಾಡಿನ ತುಂಬ ಹುಟ್ಟಿದ 'ಟೀಕಿನ ಮಠ'ಗಳು ವೀರಶೈವ ವ್ಯಾಖ್ಯಾನಸಾಹಿತ್ಯ ನಿರ್ಮಾಣದ ಕೇಂದ್ರಗಳಾಗಿದ್ದವು.

ಗೋಸಲಪೀಠ ಪರಂಪರೆಯವರ ಈ ಸಂಕಲನ, ಸಂಪಾದನ, ವ್ಯಾಖ್ಯಾನ ಕಾರ್ಯಗಳು ಗ್ರಂಥಲೇಖನ ಕಾರ್ಯದಲ್ಲಿ ನಿರತರಾಗಿದ್ದ ಬಿಜಾಂಟಿಯಂ ಪ್ರದೇಶದ ಕ್ರೈಸ್ತ ಮಠಗಳನ್ನೂ ಇಜಿಪ್ತದ ಪ್ರಸಿದ್ಧ ಗ್ರಂಥ ಸಂಪಾದಕ ಜಿನೋಡೋಟಸ್, ಶಿಷ್ಯ ಅರಿಸ್ಟೋಫೆನಿಸ್, ಶಿಷ್ಯ ಅರಿಸ್ಟಾರ್ಕಸ್‌ರ ಗುರು-ಶಿಷ್ಯ ಪರಂಪರೆಯನ್ನೂ ನಮಗೆ ನೆನಪಿಸಿ ಕೊಡುತ್ತವೆ.

ಹದಿನೈದು-ಹದಿನಾರನೆಯ ಶತಮಾನದ ಗೋಸಲಪೀಠದ ಶಿಷ್ಯ-ಪ್ರಶಿಷ್ಯರ ಸಾಹಿತ್ಯವೆಂದರೆ ಕನ್ನಡ ಸಾಹಿತ್ಯವೆಂದೇ ಅರ್ಥ. ಈ ಹಿನ್ನೆಲೆಯಲ್ಲಿ ಕನ್ನಡ ಸಾಹಿತ್ಯಕ್ಷೇತ್ರಕ್ಕೆ ಗೋಸಲಪೀಠ ಪರಂಪರೆಯವರು ನೀಡಿದ ಕೊಡುಗೆಯನ್ನು ಪರಿಭಾವಿಸಬೇಕು.

ಹೀಗೆ ಮೇಲಿನ ವಿವೇಚನೆಯಿಂದ ಗೋಸಲಪೀಠದ ಶಿಷ್ಯ-ಪ್ರಶಿಷ್ಯರು ಕನ್ನಡ ಸಾಹಿತ್ಯಕ್ಷೇತ್ರಕ್ಕೆ ನೀಡಿದ ವೀರಶೈವ ಸೃಜನ, ಸಂಕಲನ, ಸಂಪಾದನ, ಸಂಗ್ರಹ ಹಾಗೂ ವ್ಯಾಖ್ಯಾನ ಸಾಹಿತ್ಯಗಳ ಕೊಡುಗೆಯ ಸ್ಥೂಲ ಪರಿಚಯ ನಮಗಾಗುತ್ತದೆ.

*ಸಂಶೋಧನ, ೧೯೯೧, ಪು. ೫೧೧-೧೬*

# ೬೦. ಮೈಸೂರು ಅರಸರು ಮತ್ತು ಕನ್ನಡ ಸಾಹಿತ್ಯ

● ಎಸ್. ಎಸ್. ತಾರಾನಾಥ

೧

ಮೈಸೂರನ್ನು ಆಳಿದವರು ಯದುವಂಶದ ಅರಸರು. ಮೈಸೂರು ಅರಸರು ಎಂದರೆ ಯದುವಂಶದ ಅರಸರು. ಇವರಲ್ಲಿ ಮೊದಲನೆಯವರು ಯದುರಾಯರು. ಕೊನೆಯವರು ಜಯಚಾಮರಾಜೇಂದ್ರ ಒಡೆಯರ್ ಅವರು. ಇವರ ಕಾಲಾವಧಿಯನ್ನು ೧೩೯೯ರಿಂದ ೧೯೭೪ರವರೆಗೆ ಎಂದು ಚರಿತ್ರಕಾರರು ಗುರುತಿಸಿದ್ದಾರೆ. ಇವರಲ್ಲಿ ೨೫ ಜನ ರಾಜರು ಆಗಿಹೋಗಿದ್ದಾರೆ. ಯದುರಾಯರಿಂದ ಬೆಟ್ಟದ ಚಾಮರಾಜ ಒಡೆಯರ್ ಸೇರಿದಂತೆ ಈ ವಂಶದ ಮೊದಲ ೮ ದೊರೆಗಳ ಬಗ್ಗೆ ಹೆಚ್ಚು ವಿವರಗಳು ತಿಳಿದಿಲ್ಲ. ೧೫೭೮ರಿಂದ ರಾಜ ಒಡೆಯರ ಆಳ್ವಿಕೆ ಆರಂಭವಾಯಿತು. ಈ ಮನೆತನ ಮತ್ತು ರಾಜ್ಯ ಸುಸ್ಥಾಪಿತವಾದದ್ದು ಇವರ ಕಾಲದಲ್ಲೇ. ಇವರ ಕಾಲದಿಂದ ಒಟ್ಟು ೧೭ ದೊರೆಗಳು ರಾಜ್ಯವಾಳಿದರು. ಇವರಲ್ಲಿ ೧೨ ಮಂದಿ ಕನ್ನಡ ಸಾಹಿತ್ಯಕ್ಕೆ, ಕವಿಗಳಿಗೆ ಆಶ್ರಯ ಕೊಟ್ಟಿದ್ದಾರೆ. ಅವರ ಹೆಸರು, ಆಳ್ವಿಕೆಯ ಅವಧಿ ಈ ಮುಂದಿನಂತಿವೆ: (೧) ರಾಜ ಒಡೆಯರ್ I (೧೫೭೮-೧೬೧೭), (೨) ಚಾಮರಾಜ ಒಡೆಯರ್ VI (೧೬೧೭-೧೬೩೭), (೩) ರಣಧೀರ ಕಂಠೀರವ ನರಸರಾಜ ಒಡೆಯರ್ (೧೬೩೮-೧೬೫೯), (೪) ದೊಡ್ಡದೇವರಾಜ ಒಡೆಯರ್ (೧೬೫೯-೧೬೭೩), (೫) ಚಿಕ್ಕದೇವರಾಜ ಒಡೆಯರ್ (೧೬೭೩-೧೭೦೪), (೬) ದೊಡ್ಡಕೃಷ್ಣರಾಜ ಒಡೆಯರ್ (೧೭೧೪-೧೭೩೨), (೭) ಕೃಷ್ಣರಾಜ ಒಡೆಯರ್II (೧೭೩೪-೧೭೬೬), (೮) ಬೆಟ್ಟದ ಚಾಮರಾಜ ಒಡೆಯರ್ (೧೭೭೦-೧೭೭೬), (೯) ಮುಮ್ಮಡಿ ಕೃಷ್ಣರಾಜ ಒಡೆಯರ್ (೧೭೯೯-೧೮೬೮), (೧೦) ಚಾಮರಾಜೇಂದ್ರ ಒಡೆಯರ್ (೧೮೬೮-೧೮೯೪), (೧೧) ನಾಲ್ವಡಿ ಕೃಷ್ಣರಾಜ ಒಡೆಯರ್ (೧೮೯೫-೧೯೪೦), (೧೨) ಜಯಚಾಮರಾಜೇಂದ್ರ ಒಡೆಯರ್ (೧೯೪೦-೧೯೭೪). ಉಳಿದ ರಾಜರಲ್ಲಿ ಇಮ್ಮಡಿ ರಾಜ ಒಡೆಯರ್ (೧೬೩೭-೧೬೩೮), ಚಾಮರಾಜ ಒಡೆಯರ್ VII (೧೭೩೨-೧೭೩೪), ನಂಜರಾಜ ಒಡೆಯರ್ (೧೭೬೬-೧೭೭೦)- ಇಂಥ ಕೆಲವು ರಾಜರ ಆಳ್ವಿಕೆಯ ಕಾಲ ೧, ೨, ೪ ವರ್ಷಗಳಂತೆ ಅತ್ಯಂತ ಕಡಿಮೆ ಅವಧಿಯವು. ಇದಕ್ಕೆ ಒಂದೇ ಅಪವಾದ ಖಾಸಾಚಾಮರಾಜ ಒಡೆಯರ ೨೦ ವರ್ಷಗಳ ಆಳ್ವಿಕೆಯ ಕಾಲ (೧೭೭೬-೧೭೯೬). ಆದರೆ ಇವರ ಕಾಲದಲ್ಲಿ ಹೈದರ್, ಟೀಪೂಸುಲ್ತಾನರ ಆಳ್ವಿಕೆ, ಪ್ರಾಬಲ್ಯಗಳು ಅಧಿಕವಾಗಿತ್ತು. ಆಳ್ವಿಕೆಯ ಕಾಲಾವಧಿಯ ಹ್ರಸ್ವತೆ ಅಥವಾ ಅನ್ಯರ ಪ್ರಾಬಲ್ಯದ ಆಧಿಕ್ಯ ಕಾರಣವಾಗಿ ಪೂರ್ವೋಕ್ತ ೪ ದೊರೆಗಳ ಸಾಹಿತ್ಯಪೋಷಣೆಯ ವಿಚಾರ ಅನುಕ್ತಗೊಂಡಿದೆ.

ಕನ್ನಡ ಸಾಹಿತ್ಯವನ್ನು ಪೋಷಿಸಿ ಬೆಳೆಸಿದ ೧೨ ದೊರೆಗಳಲ್ಲಿ ಮೂವರು ಸ್ವತಃ ಸಾಹಿತಿಗಳು. ಅವರು ಇಮ್ಮಡಿ ಚಾಮರಾಜ ಒಡೆಯರ್ ('ವಾಲ್ಮೀಕಿ ರಾಮಾಯಣ ಟೀಕೆ', 'ಬ್ರಹ್ಮೋತ್ತರಖಂಡ ಟೀಕೆ'), ಚಿಕ್ಕದೇವರಾಜ ಒಡೆಯರ್ ('ಚಿಕದೇವರಾಜಬಿನ್ನಪ', 'ಭಾಗವತ ಟೀಕೆ', 'ಭಾರತ ಟೀಕೆ', 'ಶೇಷಧರ್ಮ ಟೀಕೆ'), ಮುಮ್ಮಡಿ ಕೃಷ್ಣ ರಾಜ ಒಡೆಯರ್

(‘ಅಖಂಡ ಕಾವೇರಿಮಾಹಾತ್ಮ್ಯ’, ‘ರಾಮಾಯಣತಾತ್ಪರ್ಯದೀಪಿಕಾ ಟೀಕೆ’, ‘ಸೌಗಂಧಿಕಾ ಪರಿಣಯ’, ‘ನಂಜುಂಡಶತಕ’, ‘ಸಂಖ್ಯಾರತ್ನಮಾಲಾ ಟೀಕೆ’, ‘ಕೃಷ್ಣಕಥಾಸಾರಸಂಗ್ರಹ’, ‘ಅದ್ಭುತರಾಮಾಯಣ ಟೀಕೆ’ ಮುಂತಾದ ೫೦ಕ್ಕೂ ಹೆಚ್ಚು ಕೃತಿಗಳು). ಈ ರಾಜರಲ್ಲದೆ ಇವರ ಕುಟುಂಬಕ್ಕೆ ಸೇರಿದ ಇತರರೂ ಕೃತಿಗಳನ್ನು ರಚಿಸಿದ್ದಾರೆ. ದೊಡ್ಡಕೃಷ್ಣರಾಜರ ಪತ್ನಿ ಚೆಲುವಾಂಬೆ (‘ವರನಂದೀಕಲ್ಯಾಣ, ‘ತುಲಾಕಾವೇರೀ ಮಾಹಾತ್ಮ ಟೀಕೆ’, ‘ವೆಂಕಟಾಚಲಮಾಹಾತ್ಮ್ಯ ಲಾಲೀಪದ’, ‘ಅಲಮೇಲುಮಂಗೈಲಾಲೀಪದ’), ಕಳಲೆ ವೀರರಾಜ (‘ಸಕಲವೈದ್ಯಸಂಹಿತ ಸಾರಾರ್ಣವ’), ಕಳಲೆ ನಂಜರಾಜ (‘ಕಕುದ್ಗಿರಿ ಮಾಹಾತ್ಮ್ಯ,’ ‘ಗರಳಪುರಿ ಮಹಿಮಾದರ್ಶ’, ‘ಶಿವಭಕ್ತ ವಿಲಾಸ’, ‘ಹರಿವಂಶ’, ‘ಲಿಂಗಪುರಾಣ’ ಇತ್ಯಾದಿ). ಇಮ್ಮಡಿ ಕೃಷ್ಣರಾಜನ ಮಾವ ಕತ್ತಿ ಗೋಪಾಲರಾಜ ಅರಸು (‘ಕಮಲಾಚಲಮಾಹಾತ್ಮ್ಯ’)-ಈ ಮುಂತಾದವರು ಸಾಹಿತ್ಯರಚನೆ ಮಾಡಿದ್ದಾರೆ. ಆಶ್ರಿತ ಕವಿಗಳಲ್ಲದೆ ಈ ರಾಜರ ಆಸ್ಥಾನದಲ್ಲಿ ಬೇರೆ ಬೇರೆ ಹುದ್ದೆಗಳಲ್ಲಿದ್ದವರೂ ಸಾಹಿತ್ಯರಚನೆಯಲ್ಲಿ ಆಸಕ್ತಿ ತೋರಿಸಿದ್ದಾರೆ. ಚಿಕ್ಕದೇವರಾಜರಲ್ಲಿ ಮಂತ್ರಿಗಳಾಗಿದ್ದ ತಿರುಮಲಾರ್ಯ, ಚಿಕುಪಾಧ್ಯಾಯ, ಅಲ್ಲೇ ಊಳಿಗದಲ್ಲಿದ್ದ ಹೊನ್ನಮ್ಮ-ಶೃಂಗಾರಮ್ಮ, ದೊಡ್ಡಕೃಷ್ಣರಾಜರ ಸೇನಾಧಿಪತಿಯಾಗಿದ್ದ ರಂಗಯ್ಯ, ಮಂತ್ರಿ ವೆಂಕಾಮಾತ್ಯ, ಬೆಟ್ಟದ ಚಾಮರಾಜರ ಗುರು ಸಿಂಗರಾಚಾರ್ಯ ಕೂಡಲೇ ನೆನಪಿಗೆ ಬರುವ ಹೆಸರುಗಳು. ತಿರುಮಲಾರ್ಯ, ಚಿಕುಪಾಧ್ಯಾಯ, ಕಳಲೆ ನಂಜರಾಜರಂಥ ಪ್ರಭಾವಶಾಲೀ ವ್ಯಕ್ತಿಗಳು ತಾವೇ ಇತರರಿಗೆ ಪ್ರೇರಣೆ ಆಶ್ರಯಗಳನ್ನಿತ್ತು ಆ ಇತರರಿಂದಲೂ ಗ್ರಂಥಕೃಷಿ ಮಾಡಿಸಿದ್ದಾರೆ. ಹೀಗೆ ಮೈಸೂರು ದೊರೆಗಳು, ಅವರ ಕುಟುಂಬವರ್ಗ, ಅವರ ಆಸ್ಥಾನ ಪ್ರಮುಖರು ಕನ್ನಡಸಾಹಿತ್ಯ ನಿರ್ಮಾಣ ಪೋಷಣೆಗಳಲ್ಲಿ ಪಾಲ್ಗೊಂಡಿದ್ದಾರೆ.

ಈಗಿರುವಂತೆ ಮೈಸೂರು ಅರಸರ ಕಾಲದ ಸಾಹಿತ್ಯ ಶ್ರೀಮಂತವಾದದ್ದು; ಈ ಕಾಲದ ಲಭ್ಯಕೃತಿಗಳ ಸಂಖ್ಯೆ ಹೆಚ್ಚಾದದ್ದು. ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯ, ಹೊಯ್ಸಳ ಹಾಗೂ ವಿಜಯನಗರ ಕಾಲದ ಕನ್ನಡಸಾಹಿತ್ಯಕ್ಕಿಂತ ಈ ಕಾಲದ ಸಾಹಿತ್ಯ ಸಮೃದ್ಧವಾದದ್ದು, ಸಂಪದ್ಯುಕ್ತವಾದದ್ದು! ಕಾರಣವೇನು? ಈ ಅರಸರ ಕಾಲಮಾನ ನಮ್ಮ ಈ ಕಾಲಕ್ಕೆ ತೀರ ಸಮೀಪವಾಗಿದೆ. ಹಾಗಾಗಿ ಅವರ ಸಾಹಿತ್ಯದ ಬಹುಪಾಲು ನಮಗೆ ಉಳಿದುಬಂದಿದೆ. ಇದಕ್ಕೆ ವ್ಯತಿರಿಕ್ತವಾಗಿ ಉಳಿದ ರಾಜಮನೆತನಗಳ ಕಾಲಮಾನ ನಮಗೆ ದೂರದ್ದೇ. ಆಯಾ ರಾಜಮನೆತನಗಳ ಕೊನೆಯೊಂದಿಗೆ ಆ ಮನೆತನಗಳ ಕಾಲದ ಸಾಹಿತ್ಯ-ಅದೆಷ್ಟೇ ಸಂಪದ್ಯುಕ್ತವಾಗಿದ್ದರೂ-ಅದರ ಬಹುಪಾಲು ನಾಶವಾಗಿರಬೇಕು. ಒಡೆಯರ ಮನೆತನ ಇಂದಿಗೂ ಉಳಿದುಬಂದಿದೆ. ತನ್ನ ಮನೆತನದ ಸಾಹಿತ್ಯದ ಬಹುಭಾಗವನ್ನು ಸಹಜವಾಗಿಯೇ ಅದು ಉಳಿಸಿಕೊಂಡುಬಂದಿದೆ.

೨

೧೩೯೯ರಿಂದ ೧೫೭೮ರವರೆಗೆ ಆಳಿದ ಮೊದಲ ೮ ಮೈಸೂರು ರಾಜರು ವಿಜಯನಗರದ ಅರಸರ ಸಾಮಂತರಾಗಿದ್ದರು. ವಿಜಯನಗರದ ಅರಸರು-ಅದರಲ್ಲೂ ಕೃಷ್ಣದೇವರಾಯ-ಕನ್ನಡ ಸಾಹಿತ್ಯದೊಂದಿಗೆ ತೆಲುಗು, ಸಂಸ್ಕೃತ ಸಾಹಿತ್ಯಗಳಿಗೂ ಪೋಷಣೆಯಿತ್ತಿದ್ದರು. ಆಕಾಲದಲ್ಲಿ ಕೆಲವು ದೇಶಭಾಷಾಕವಿಗಳೇ ಸಂಸ್ಕೃತದಲ್ಲೂ ಕೃತಿರಚನೆ ಮಾಡಿ ಉಭಯಕವಿಗಳೆನಿಸಿಕೊಂಡಿದ್ದುಂಟು! ಇದೇ ಪದ್ಧತಿ ಮೈಸೂರರಸರ ಕಾಲದಲ್ಲೂ

ಕಾಣುತ್ತದೆ. 'ಚಿಕ್ಕದೇವರಾಯ ವಿಲಾಸಮು', 'ಚಿಕ್ಕದೇವರಾಯೋದಾ ಹರಣಮು', 'ಚಿಕ್ಕದೇವರಾಯ ಚಾಟುಪದ್ಯಾಲು' ಎಂಬ ಕೃತಿಗಳು ಚಿಕ್ಕದೇವರಾಜನ ಬಗ್ಗೆ ತೆಲುಗಿನಲ್ಲಿ ರಚಿತವಾಗಿವೆ. ಚಿಕ್ಕದೇವರಾಜನ ಮಗನಾದ ಕಂಠೀರವರಾಜ 'ಲಕ್ಷ್ಮೀವಿಲಾಸಮು', 'ಕಲಾವಾಣೀ ವಿಲಾಸಮು' 'ನಾಟ್ಯವಿದ್ಯಾವಿಲಾಸಮು', 'ವಸಂತೋತ್ಸವ ವಿಲಾಸಮು' ಮುಂತಾದ ೧೨ ಕೃತಿಗಳನ್ನು ತೆಲುಗಿನಲ್ಲಿ ಬರೆದಿದ್ದಾನೆ. 'ಹಾಲಾಸ್ಯ ಮಾಹಾತ್ಮ್ಯಮು', 'ಕಾಶೀಮಹಿಮಾರ್ಥಮಾಹಾತ್ಮ್ಯಮು' ಎಂಬ ಕೃತಿಗಳ ಕರ್ತೃ ಕಳಲೆ ವೀರರಾಜ. ಇದು ವಿಜಯನಗರದ ಅರಸರು ಹಾಕಿಕೊಟ್ಟಿದ್ದ ಬಹುಭಾಷಾಸಾಹಿತ್ಯ ಪೋಷಣಪದ್ಧತಿಯ ಮುಂದುವರಿಕೆಯ ಕುರುಹು. ಚಿಕ್ಕದೇವರಾಜನ ಪ್ರಧಾನಿ ತಿರುಮಲಾರ್ಯ ಶ್ರೀಶೈಲಸೂರಿ ಎಂಬ ಹೆಸರಿಂದ 'ಶ್ರೀ ಯದುಗಿರಿನಾರಾಯಣಸ್ತವ', 'ಶ್ರೀ ಯದುಗಿರಿ ನಾಯಕಿಸ್ತವ', 'ಶ್ರೀ ಲಕ್ಷ್ಮೀನೃಸಿಂಹಸ್ತವ', 'ಶ್ರೀ ಪರವಾಸುದೇವಸ್ತವ' ಎಂಬ ಸಂಸ್ಕೃತ ಕೃತಿಗಳ ರಚಕನಾಗಿದ್ದಾನೆ. ಚಾಮರಾಜ ಒಡೆಯರ್ VI ಕಾಲದಲ್ಲಿ (೧೭೩೨-೧೭೩೪) ಅವಿನಾಶೀಶ್ವರ ರಚಿಸಿದ 'ಶ್ರೀರಂಗರಾಜತಿಲಕಭಾಣ' ಇನ್ನೊಂದು ಸಂಸ್ಕೃತ ಕೃತಿ. ವೆಂಕಾಮಾತ್ಯನ 'ಅಲಂಕಾರಮಣಿ ದರ್ಪಣ', 'ಸುಧಾಲಹರಿ'ಗಳು ಕೂಡ ಸಂಸ್ಕೃತದವೇ. ಕಳಲೆ ನಂಜರಾಜ 'ಸಂಗೀತ ಗಂಗಾಧರ'ವನ್ನಲ್ಲದೆ ಈಗ ದೊರೆಯದ ಇನ್ನೂ ಹಲವಾರು ಸಂಸ್ಕೃತಕೃತಿಗಳನ್ನು ರಚಿಸಿದ್ದ. ತ್ರಿಭಾಷಾಸಾಹಿತ್ಯಪೋಷಣೆ ಮೈಸೂರರಸರ ದೃಷ್ಟಿಯಲ್ಲಿತ್ತೆನ್ನಲು ಇವು ಗಟ್ಟಿ ಆಧಾರಗಳು. ಈ ಪದ್ಧತಿಯ ಅಳವಡಿಕೆಗೆ ವಿಜಯನಗರದ ಅರಸರ ಪ್ರಭಾವ, ಅನುಕರಣೆಗಳೇ ಕಾರಣ.

ಮೈಸೂರರಸರ ಆರಂಭಕಾಲದ ಸಾಹಿತ್ಯ ರಾಜರ ವ್ಯಕ್ತಿಮಹಿಮಾವಿಶೇಷ, ವಿಜಯವೃತ್ತಾಂತಗಳನ್ನು ಕುರಿತ ಕೃತಿಗಳಾಗಿವೆ. ಗೋವಿಂದವೈದ್ಯನ 'ಕಂಠೀರವ ನರಸರಾಜ ವಿಜಯ', ತಿರುಮಲಾರ್ಯನ 'ಚಿಕದೇವರಾಜ ವಿಜಯ', 'ಚಿಕದೇವರಾಯವಂಶಾವಳಿ', 'ಚಿಕದೇವರಾಜಶತಕ' ಹಾಗೂ ಚಾಮಯ್ಯನ 'ದೇವರಾಜೇಂದ್ರ ಸಾಂಗತ್ಯ' ಈ ಬಗೆಯ ಕೃತಿಗಳು. ಇಂಥ ವಿಜಯ, ಅಭ್ಯುದಯ ಕಾವ್ಯಗಳು ವಿಜಯನಗರದ ಅರಸರ ಕಾಲದಲ್ಲೇ ಕಾಣುತ್ತವೆ. ಬುಕ್ಕರಾಯನ ರಾಣಿ ಗಂಗಾದೇವಿಯ 'ಮಧುರಾವಿಜಯ' (೧೩೭೯), ಡಿಂಡಿಮಕವಿಸಾರ್ವಭೌಮನೆಂದು ಖ್ಯಾತನಾಗಿದ್ದ ಎರಡನೆಯ ರಾಜನಾಥನ 'ಸಾಳುವಾಭ್ಯುದಯ' (ಸು. ೧೪೩೦), ಮೂರನೆಯ ರಾಜನಾಥನ 'ಅಚ್ಯುತ ರಾಯಾಭ್ಯುದಯ' (ಸು. ೧೫೪೦) ಕೆಲವು ಉಲ್ಲೇಖನಯೋಗ್ಯ ಕೃತಿಗಳು. ಇವು ಕ್ರಮವಾಗಿ ವೀರಕಂಪಣರಾಯ, ಸಾಳುವ ನಾರಸಿಂಹ ಹಾಗೂ ಅಚ್ಯುತರಾಯರ ಸಾಧನೆ ಸಾಹಸ ಪರಾಕ್ರಮಗಳನ್ನು ವರ್ಣಿಸುತ್ತವೆ. ಕುಮಾರ ಧೂರ್ಜಟಿಯ 'ಕೃಷ್ಣದೇವರಾಯವಿಜಯ' ಕೂಡ ಈ ಗುಂಪಿಗೆ ಸೇರುವಂಥದೇ. ಇನ್ನು ಈ ಮೊದಲೇ ಹೇಳಿದ ಕನ್ನಡದ ಕೃತಿಗಳಾದರೂ ಈ ಬಗೆಯವೇ ಆಗಿವೆ. ಈ ಪರಂಪರೆಯ ಹುಟ್ಟಿಗೆ ವಿಜಯನಗರ ಕಾಲದ ವಿಜಯಕಾವ್ಯ, ಅಭ್ಯುದಯಕಾವ್ಯ ರಚನಾಪದ್ಧತಿಯೇ ಕಾರಣ. ಮೈಸೂರರಸರ ಆಶ್ರಿತಕವಿಗಳು ತಾವು ರಚಿಸಿದ ಮಾಹಾತ್ಮ್ಯ ಹಾಗೂ ಇತರ ಕೃತಿಗಳ ಆರಂಭದಲ್ಲಿ ಆ ರಾಜವಂಶದ ಉಗಮ, ವಂಶಾವಳಿ, ರಾಜರ ಸಾಧನೆ-ಸಾಹಸ ಕುರಿತಂತೆ ಗಮನಾರ್ಹವಾದ ಪ್ರತ್ಯೇಕ ಪ್ರಸ್ತಾಪಗಳನ್ನು ಗ್ರಂಥಾರಂಭದಲ್ಲಿ ತಪ್ಪದೇ ತಂದಿದ್ದಾರೆ. ಇದು ಈ ಪದ್ಧತಿಯ ಇನ್ನೊಂದು ಮುಖದ ಬೆಳವಣಿಗೆಯೇ. ಇಂಥ ವಿಜಯ ಇಲ್ಲವೆ ಅಭ್ಯುದಯಕಾವ್ಯಗಳು ಅರಸರ ಬಗ್ಗೆ ಮಾತ್ರವಲ್ಲ, ತತ್ಕಾಲೀನ ಆಡಳಿತದ ಪ್ರಭಾವಶಾಲೀ ವ್ಯಕ್ತಿಗಳ ಬಗೆಗೂ ಬಂದಿವೆ. ಕೃಷ್ಣರಾಜನ

ದಳವಾಯಿಗಳಾದ ಕಳಲೆದೇವರಾಜ, ನಂಜರಾಜರನ್ನು ಕುರಿತ ನೂರೊಂದಯ್ಯನ 'ಸೌಂದರಕಾವ್ಯ' ಇದಕ್ಕೊಂದು ನಿದರ್ಶನ. ಮುಮ್ಮಡಿ ಕೃಷ್ಣರಾಜರ ಕಾಲದಲ್ಲಿ ಇಂಥ ಕೃತಿಗಳ ಮಹಾಪೂರವೇ ಹರಿದಿದೆ. ಶ್ರೀನಿವಾಸನ (೧೮೧೨) 'ಕೃಷ್ಣನೃಪಜಯೋತ್ಕರ್ಷ', ರಂಗದಾಸನ (ಸು. ೧೮೩೦) 'ಕೃಷ್ಣರಾಜಡೋಳೋತ್ಸವ ಚರಿತೆ', ಶ್ರೀನಿವಾಸನ (ಸು. ೧೮೩೦) 'ಕೃಷ್ಣರಾಜವರ್ಷವರ್ಧಂತೀ ಶತಕ', ಮದ್ದಗಿರಿ ನಂಜಪ್ಪನ (ಸು. ೧೮೪೦) 'ಕೃಷ್ಣರಾಜೇಂದ್ರವಿಲಾಸ' ಮುಂತಾದುವು. ಈ ಬಗೆಯ ೭ ರಚನೆಗಳು ದೇವಲಾಪುರದ ನಂಜುಂಡನಿಂದ ಆಗಿರುವುದೊಂದು ವಿಶೇಷ. 'ಅಪರಾಧಸ್ತೋತ್ರ', 'ಕೃಷ್ಣರಾಜಪಟ್ಟಾಭಿಷೇಕ ವರ್ಣನೆ', 'ಕೃಷ್ಣರಾಜಭಕ್ತಿಸಾರ', 'ಕೃಷ್ಣರಾಜಭೋಗಾವಳಿ', 'ಕೃಷ್ಣರಾಜ ಶೃಂಗಾರಶತಕ', 'ಕೃಷ್ಣರಾಜೇಂದ್ರ ವೃತ್ತ ರತ್ನಾವಳೀ ಟೀಕೆ', 'ಕೃಷ್ಣೇಂದ್ರಗೀತ' ಎಂಬುವೇ ಅವು.

ಇಂಥ ಕೃತಿಗಳು ಏಕೆ ರಚಿತವಾದುವು? ಹೊಸ ರಾಜಮನೆತನವೊಂದು ಅಧಿಕಾರಕ್ಕೆ ಬಂದಾಗ, ತನ್ನ ದೃಢವಾದ ಸ್ಥಾಪನೆಗೆ ಸಾಹಿತ್ಯವನ್ನು ಒಂದು ಉಪಕರಣವಾಗಿ ಬಳಸಿ ರಾಜರ ವೈಭವ-ವಿಕ್ರಮಗಳನ್ನು ಐತಿಹ್ಯದೊಂದಿಗೆ ಬೆರಸಿ ಜನ ಬೆರಗಾಗುವಂತೆ ಬಣ್ಣಿಸಲು ಸಾಹಿತ್ಯದ ನೆರವನ್ನು ಆಶ್ರಯಿಸುತ್ತದೆ. ಚಿಕ್ಕದೇವರಾಜ ಪಟ್ಟಕ್ಕೆ ಬಂದದ್ದು ೧೬೭೩ರಲ್ಲಿ. ಮೈಸೂರು ಅರಸರು ಆಳಲು ತೊಡಗಿದ್ದು ೧೫೭೮ರಲ್ಲಿ. ಎಂದರೆ ಮನೆತನ ನೆಲೆಯೂರಿ ಸುಮಾರು ಒಂದು ಶತಮಾನವಾಗಿತ್ತು. ಮನೆತನದ ಕೀರ್ತನೆಗೆ ಇಂಥ ಕೃತಿಗಳನ್ನು ಆರಂಭಕಾಲದಲ್ಲಿ ರಚಿಸಿದರು. ಮುಮ್ಮಡಿ ಕೃಷ್ಣರಾಜರ ಆಳ್ವಿಕೆಯಲ್ಲೂ ಇಂಥವೇ ಕೃತಿಗಳು ಅಧಿಕವಾಗಿದ್ದುವು. ಆಳ್ವಿಕೆಯ ದೃಷ್ಟಿಯಿಂದ ಅದು ಅಸ್ಥಿರವಾದ ಕಾಲ. ಟೀಪು, ಪಾಳೆಯಗಾರರು, ಫೌಜುದಾರರು, ಬ್ರಿಟಿಷ್ ಕಮೀಷನರ ಹಸ್ತಕ್ಷೇಪ ಕಾರಣವಾಗಿ ಕೃಷ್ಣರಾಜರ ಆಳ್ವಿಕೆ ಚೆನ್ನಿರಲಿಲ್ಲ. ರಾಜ್ಯದಲ್ಲೆಲ್ಲ ಆಂತರಿಕ ದಂಗೆ, ಆರ್ಥಿಕ ದುಃಸ್ಥಿತಿ ತಾಂಡವವಾಡುತ್ತಿತ್ತು. ಹಾಗಾಗಿ ಬ್ರಿಟಿಷ್ ಆಳ್ವಿಕೆಯೇ ಪರೋಕ್ಷವಾಗಿ ರಾಜ್ಯ ನಡೆಸಿತು. ಆದರೆ ಜನರಿಗೆ ಕೃಷ್ಣರಾಜರೇ ದೊರೆಗಳು ಎಂಬುದನ್ನು ಮನವರಿಕೆ ಮಾಡಿಕೊಡಬೇಕಾಗಿತ್ತು. ಆದ್ದರಿಂದ ಸಾಹಿತ್ಯವನ್ನು ಇನ್ನೊಮ್ಮೆ ಉಪಕರಣವಾಗಿಸಿಕೊಂಡು ಅದನ್ನು ಮತ್ತೆ ಮತ್ತೆ ಹೇಳಿದರು.

ಈ ಅವಧಿಯ ಚಾರಿತ್ರಿಕ ಕಾವ್ಯಗಳ ಪ್ರತ್ಯೇಕತೆಯ ಬಗೆಗೂ ಹೇಳಬೇಕು. ಪಂಪ, ಪೊನ್ನ, ರನ್ನರ ಕೃತಿಗಳಲ್ಲಿ ಚಾರಿತ್ರಿಕಾಂಶಗಳು ಕಥಾವಸ್ತುವಿನೊಂದಿಗೆ ಕಲಸಿಹೋಗಿವೆ. ಆಶ್ರಯದಾತ ರಾಜನನ್ನು ಪುರಾಣಪುರುಷರೊಂದಿಗೆ ಸಮೀಕರಿಸಿದ್ದರಿಂದ ಆ ಕಾವ್ಯಗಳು ಶುದ್ಧಚರಿತ್ರೆಗಳಾಗಿಲ್ಲ. ಮಣ್ಣಿನಿಂದ ಹೊನ್ನಿನ ಕಣ ತೆಗೆಯುವಂತೆ ಅಲ್ಲಿ ಚಾರಿತ್ರಿಕಾಂಶ ತೆಗೆಯಬೇಕು. ನಂಜುಂಡ, ಪಾಂಚಾಳಗಂಗರನ್ನು ಬಿಟ್ಟರೆ ನೇರವೂ ಸವಿವರವೂ ಆದ ಚಾರಿತ್ರಿಕ ಕಾವ್ಯಗಳು ಬಂದುದು ಈ ಅವಧಿಯಲ್ಲೇ. ಇದು 'ಕಂಠೀರವ ನರಸರಾಜ ವಿಜಯ'ದಿಂದ ಆರಂಭವಾಗಿ 'ರಾಜಭಕ್ತಿಕಾವ್ಯ'ದವರೆಗೂ ವ್ಯಾಪಿಸಿದೆ. ತಿರುಮಲಾರ್ಯ, ಚಾಮಯ್ಯ, ತಮ್ಮಯ್ಯ, ದೇವಲಾಪುರದ ನಂಜುಂಡರು ಈ ಬಗೆಯ ಒಂದಕ್ಕಿಂತ ಹೆಚ್ಚು ಕೃತಿಗಳ ಕರ್ತೃಗಳು. ರಾಜಾಶ್ರಿತಕವಿಗಳು ತಮ್ಮ ಗ್ರಂಥಾರಂಭದಲ್ಲಿ ಮೈಸೂರು ಅರಸರ ಇತಿಹಾಸ ಹೇಳುವುದು ಒಂದು ಪರಂಪರೆಯೇ ಆಯಿತು.

೩

ಒಡೆಯರ ಕಾಲದ ಸಾಹಿತ್ಯದಲ್ಲಿ ಶ್ರೀವೈಷ್ಣವಧರ್ಮದ ಕೃತಿಗಳು ಹೆಚ್ಚು. ಚಿಕ್ಕದೇವ

ರಾಜನ ಹಿಂದಣ ಮುಂದಣ ಅವಧಿಯ ಸಾಹಿತ್ಯದಲ್ಲಂತೂ ಇದರದೇ ಆಧಿಕ್ಯ. ಚಿಕ್ಕದೇವ ರಾಜನ ಹೆಸರಿನಲ್ಲಿರುವ 'ಚಿಕದೇವರಾಜಬಿನ್ನಪ', 'ಗೀತಗೋಪಾಲ', ಚಿಕುಪಾಧ್ಯಾಯನ ಕಮಲಾಚಲ, ಯದುಗಿರಿ, ವೆಂಕಟಗಿರಿ, ಶ್ರೀರಂಗ, ಪಶ್ಚಿಮರಂಗ ಮಾಹಾತ್ಮ್ಯಗಳು, ಆತನದೇ ಆದ 'ದಿವ್ಯಸೂರಿಚರಿತೆ', 'ತಿರುವಾಯ್ಮೊಳಿ ಟೀಕೆ'ಗಳು ತಿಮ್ಮ, ಮಲ್ಲಿಕಾರ್ಜುನ ಹಾಗೂ ವೆಂಕಟಾರ್ಯಶಿಷ್ಯರು ಬರೆದ ಯಾದವಗಿರಿ, ಶ್ರೀರಂಗ, ವೆಂಕಟಗಿರಿ ಮಾಹಾತ್ಮ್ಯಗಳು, ಚೆನ್ನಯ್ಯ-ಚೆಲುವಾಂಬೆಯರ 'ಪದ್ಮಿನೀಪರಿಣಯ' 'ವರನಂದೀಕಲ್ಯಾಣ'ಗಳು ತತ್ಕಾಲೀನ ಶ್ರೀವೈಷ್ಣವಧರ್ಮದ ಪ್ರಾಬಲ್ಯದ ಕುರುಹುಗಳು. ಈ ಕಾಲದಲ್ಲಿ ಭಾಗವತ, ಶ್ರೀನಿವಾಸಕಲ್ಯಾಣ, ಕೃಷ್ಣಕೇಂದ್ರಿತ ವಸ್ತುವಿನ ಕೃತಿಗಳದೇ ಮೇಲಾಟ. ಕಳಲೆ ದಳವಾಯಿಗಳ ಪ್ರವೇಶದವರೆಗೂ ಈ ಪ್ರವೃತ್ತಿ ಕಾಣುತ್ತದೆ. ಶ್ರೀವೈಷ್ಣವಧರ್ಮ ಕರ್ನಾಟಕವನ್ನು ಪ್ರವೇಶಿಸಿದ್ದು ೧೧ನೆಯ ಶತಮಾನದಲ್ಲಿ. ೧೭ನೆಯ ಶತಮಾನದವರೆಗೆ ಕನ್ನಡ ಸಾಹಿತ್ಯ ಚಟುವಟಿಕೆಗಳಲ್ಲಿ ಆ ಧರ್ಮೀಯರು ತಟಸ್ಥರಾಗಿದ್ದರು. ಈಗ ಒಮ್ಮೆಲೆ ಆ ಧರ್ಮದ ಸಾಹಿತ್ಯ ಕನ್ನಡದಲ್ಲಿ ಚಿಮ್ಮಲು ಕಾರಣವೇನು?

ಈ ಹಿಂದೆಯೇ ಹೇಳಿದಂತೆ ಮೈಸೂರರಸರು ವಿಜಯನಗರದ ಅರಸರ ಪರಂಪರೆ, ಪದ್ಧತಿ ಮುಂದುವರಿಸಿಕೊಂಡು ಬಂದರು. ತುಳುವಂಶದ ಕೃಷ್ಣದೇವರಾಯನೇ ಶ್ರೀವೈಷ್ಣವಪಕ್ಷಪಾತಿ. ವೆಂಕಟರಮಣಸ್ವಾಮಿಯಿದ್ದ ತಿರುಪತಿ, ವರದರಾಜಸ್ವಾಮಿಯಿದ್ದ ಕಂಚಿ, ನರಸಿಂಹದೇವರಿದ್ದ ಸಿಂಹಾಚಲಕ್ಕೆ ಆತ ಹಲವು ಬಾರಿ ಹೋಗಿದ್ದ. ಗೋದಾದೇವಿ ರಂಗನಾಥರ ಕಲ್ಯಾಣ ಹೇಳುವ 'ಆಮುಕ್ತಮಾಲ್ಯದ' ರಚಿಸಿದ್ದ. ಅಳಿಯರಾಮರಾಯನ ಕಾಲದ ಮರಿಗಂಟಿ ಸಿಂಗರಾಚಾರ್ಯ 'ವರದರಾಜಸ್ತುತಿ', 'ಚಕ್ರಲಾಂಛನವಿಧಿ', 'ಶ್ರೀರಂಗಶತಕ', 'ರಾಮಕೃಷ್ಣವಿಜಯ', 'ಶ್ರೀಕೃಷ್ಣಶತಾನಂದೀಯ' ಕೃತಿಗಳ ಕರ್ತೃ. ಇವೆಲ್ಲ ಶ್ರೀವೈಷ್ಣವಪರ ರಚನೆಗಳು. ಇದರೊಂದಿಗೆ ಕೃಷ್ಣದೇವರಾಯ, ಅಚ್ಯುತರಾಯ, ಸದಾಶಿವ ರಾಯ, ಆರವೀಡು ಮನೆತನದ ಮೊದಲನೆಯ ಶ್ರೀರಂಗರಾಯ ಮೇಲುಕೋಟೆಯ ಚೆಲುವನಾರಾಯಣಸ್ವಾಮಿಗೆ ದಾನ-ದತ್ತಿ ನೀಡಿದ್ದಾರೆ. ಎಂದರೆ ವಿಜಯನಗರದ ಅರಸರು ಶ್ರೀವೈಷ್ಣವಧರ್ಮಕ್ಕೆ ಯಥೇಚ್ಛವಾದ ಪೋಷಣೆ-ಪ್ರೋತ್ಸಾಹ ನೀಡಿದರು. ಮೈಸೂರರಸರಿಗೆ ಸಾಮ್ರಾಜ್ಯ, ಸಂಪತ್ತು ದೊರೆತದ್ದೇ ಆರವೀಡು ಮನೆತನದವರಿಂದ. ಸಹಜವಾಗಿಯೇ ಅವರ ದೈವಪರಂಪರೆ, ಕ್ರಮ ಇವರೂ ಮುಂದುವರಿಸಿದರು. ಇದರೊಂದಿಗೆ ಒಡೆಯರ ಆ ಕಾಲದ ರಾಜಧಾನಿ ಶ್ರೀರಂಗಪಟ್ಟಣ. ಇದಕ್ಕೆ ಮೇಲುಕೋಟೆ, ಮಂಡ್ಯ, ಮದ್ದೂರು ಮುಂತಾದ ಶ್ರೀವೈಷ್ಣವಕ್ಷೇತ್ರಗಳು ತೀರ ಸಮೀಪವೇ. ಶ್ರೀರಂಗಪಟ್ಟಣದ ಅಧಿದೈವವಾದರೂ ಶ್ರೀವೈಷ್ಣವರ ಆರಾಧ್ಯದೈವವಾದ ಶ್ರೀರಂಗನಾಥನೇ. ಈ ಎಲ್ಲ ಕಾರಣಗಳಿಂದ ಮೈಸೂರರಸರ ಮೇಲೆ, ಅವರ ಆಶ್ರಿತರ ಚಟುವಟಿಕೆಗಳ ಮೇಲೆ ಶ್ರೀವೈಷ್ಣವಧರ್ಮದ ಪ್ರಭಾವ ಅನಿವಾರ್ಯವಾಗಿ ಆಯಿತು.

ಸಾಹಿತ್ಯದಲ್ಲಿ ಇದು ವ್ಯಕ್ತಗೊಳ್ಳಲೂ ವಿಶಿಷ್ಟವಾದ ಹಿನ್ನೆಲೆಯಿದೆ. ಚಿಕ್ಕದೇವರಾಜನ ಆಶ್ರಯದಲ್ಲಿದ್ದ ತಿರುಮಲಾರ್ಯ, ಚಿಕುಪಾಧ್ಯಾಯರೆಂಬ ಮಂತ್ರಿ, ಸಾಹಿತಿಗಳು ಹುಟ್ಟು ಶ್ರೀವೈಷ್ಣವರು. ಇವರ ಪೂರ್ವಿಕರು ತಮಿಳುನಾಡಿನವರು. ಮೈಸೂರರಸರ ವಂಶಕ್ಕೆ ಪುರಾಣಪರಿವೇಷ ಸೃಜಿಸಿಕೊಟ್ಟದ್ದು ಇವರೇ. ದ್ವಾರಕಾಮೂಲ, ಬ್ರಹ್ಮ-ಅತ್ರಿ-ಚಂದ್ರ-ಬುಧ-ಪುರೂರವರಿರುವ ಯದುವಂಶದ ವಾಂಶಿಕ ಅನುಕ್ರಮ, ಯದುರಾಯ-

ಕೃಷ್ಣರಾಯರಿಂದ ಮನೆತನದ ಆರಂಭ ಕಲ್ಪಿಸಿಕೊಟ್ಟದ್ದು ಇವರೇ. ದ್ವಾರಾವತಿ ಸಮುದ್ರದಲ್ಲಿ ಮುಳುಗಿದಾಗ ಕೃಷ್ಣ ತನ್ನ ಅನುಜಾತೆಯಾದ ಚಾಮುಂಡಿಗೆ ''ನಮ್ಮ ಕುಲದೈವ ಯದುಶೈಲದಲ್ಲಿದೆ. ನನ್ನ ವಂಶದ ಮುಂದಿನ ದೊರೆಗಳನ್ನು ಆ ಪರ್ವತದ ದಕ್ಷಿಣಭಾಗದಲ್ಲಿ ನಿಲ್ಲಿಸು'' ಎಂದ. ಯಾದವರನ್ನು ಮೈಸೂರಿನಲ್ಲಿ ನೆಲೆಗೊಳಿಸಿ, ಚಾಮುಂಡಿ ತಾನು ಸಮೀಪದ ಬೆಟ್ಟದಲ್ಲಿ ನೆಲಸಿ ನಿಂತಳು. ಇಂಥ ಪೌರಾಣಿಕ ಘಟನೆಯನ್ನೂ ಇವರೇ ಕಲ್ಪಿಸಿಕೊಟ್ಟರು. ದ್ವಾರಕೆ, ಯದು, ಕೃಷ್ಣ, ಯಾದವವಂಶ, ಯದುಶೈಲ-ಈ ಸಂಗತಿಗಳಿಂದ ಪುಷ್ಟಗೊಂಡ ಪೌರಾಣಿಕ ಹಿನ್ನೆಲೆ ಶ್ರೀವೈಷ್ಣವಧರ್ಮಾನುಸಾರವಾಗಿಯೇ ಇತ್ತು. ಕೃಷ್ಣಕೇಂದ್ರಿತ ಕೃತಿಗಳಲ್ಲಿ ಒಂದೆಡೆ ಶ್ರೀವೈಷ್ಣವಧರ್ಮವನ್ನೂ ಇನ್ನೊಂದೆಡೆ ತತ್ಕಾಲೀನ ದೊರೆಗಳ ಗುಣಸ್ವಭಾವಗಳನ್ನೂ ಆಯಾ ಕಾಲದ ಕವಿಗಳು ಧ್ವನಿಪೂರ್ವಕವಾಗಿಯೂ ನೇರವಾಗಿಯೂ ವ್ಯಕ್ತಗೊಳಿಸಿದರು. ನಂಜರಾಜ, ದೇವರಾಜ ಎಂಬುವರನ್ನುಳಿದರೆ ಇತರ ಮೈಸೂರು ದೊರೆಗಳ ಹೆಸರುಗಳೆಲ್ಲ ಶ್ರೀವೈಷ್ಣವಪರವಾಗಿದ್ದುದೂ ಇದಕ್ಕೆ ಪೋಷಕವೇ ಆಯಿತು. ತಿಮ್ಮರಾಜ(=ತಿರುಮಲರಾಜ), ಚಾಮರಾಜ(=ಶ್ಯಾಮ, ಕೃಷ್ಣರಾಜ), ಕೃಷ್ಣರಾಜ, ಜಯಚಾಮರಾಜ, ನರಸರಾಜ (=ನರಸಿಂಹರಾಜ) ಎಂಬಲ್ಲೆಲ್ಲ ಕೃಷ್ಣ, ಶ್ರೀನಿವಾಸ, ನರಸಿಂಹ ಎಂಬ ಶ್ರೀವೈಷ್ಣವ ದೈವನಾಮಗಳೇ ಬಂದಿವೆ. ಕೃಷ್ಣರಾಜ, ಚಾಮರಾಜ ಎಂಬುವಂತೂ ಮತ್ತೆ ಮತ್ತೆ ರಾಜನಾಮಗಳಾಗಿ ಬಂದಿವೆ. ಮನೆತನವನ್ನು ದೃಢಗೊಳಿಸಿದ ರಾಜ ಒಡೆಯರು ಅರವೀಡು ಮನೆತನದಂತೆ ಮೇಲುಕೋಟೆಗೆ ನಡೆದುಕೊಂಡರು; ಚೆಲುವನಾರಾಯಣಸ್ವಾಮಿಗೆ 'ರಾಜಮುಡಿ'ಯನ್ನಿತ್ತರು. ಈ ಎಲ್ಲ ಹಿನ್ನೆಲೆಗಳಲ್ಲಿ ಮೈಸೂರರಸರ ಸಾಹಿತ್ಯದಲ್ಲಿ ಶ್ರೀವೈಷ್ಣವಪ್ರವಾಹ ಸಹಜವಾಗಿಯೇ ಗೋಚರಿಸಿತು.

ಒಡೆಯರ ಕಾಲದ ಶ್ರೀವೈಷ್ಣವಪರವಾದ ಅಲೆಗೆ ಪ್ರತಿಯಾಗಿ ಶೈವಪರವಾದ ಅಲೆಬಂದದ್ದು ಕಳಲೆಯ ನಂಜರಾಜನ ಕಾಲದಲ್ಲಿ. ಆತ ಮತ್ತು ಆತನ ಆಶ್ರಿತಕವಿಗಳು ಹಲವಾರು ಶೈವಪರ ಕೃತಿಗಳನ್ನು ರಚಿಸಿದರು. ಶಿವಗಂಗೆ, ನಂಜನಗೂಡು, ಭದ್ರಗಿರಿಗಳ ಮೇಲೆ ಮಾಹಾತ್ಮ್ಯಕೃತಿಗಳನ್ನು ನಂಜರಾಜ ಬರೆದ. ತ್ರಿಷಷ್ಟಿಪುರಾತನರ ಬಗ್ಗೆ 'ಶಿವಭಕ್ತ ವಿಲಾಸದರ್ಪಣ' ರಚಿಸಿ-ಆಳ್ವಾರರ ಚರಿತ್ರೆಗೆ ಪ್ರತಿಯಾಗಿ-ನಾಯನ್ಮಾರರ ಚರಿತೆ ಕನ್ನಡಿಸಿದ; ಹಾಲಾಸ್ಯಮಾಹಾತ್ಮ್ಯದ ಮೂಲಕ ಶಿವಲೀಲಾಕೀರ್ತನವನ್ನು ವರ್ಧಿಸಿದ. 'ಶಿವಗೀತೆ', 'ಲಿಂಗಪುರಾಣ', 'ಕಾಶೀಕಾಂಡ', 'ಶಿವಧರ್ಮೋತ್ತರಟೀಕು' ಈತನ ರಚನೆಗಳೇ. ಆಶ್ರಿತಕವಿಗಳಾದ ವೆಂಕಟೇಶ ಹಾಗೂ ಕಳಲೆ ಲಿಂಗರಾಜರು ಕ್ರಮವಾಗಿ 'ಹಾಲಾಸ್ಯ ಮಾಹಾತ್ಮ್ಯ' 'ಲಿಂಗಪುರಾಣ'ಗಳನ್ನು ರಚಿಸಿದರು. ವೈಷ್ಣವಧರ್ಮ-ಸಾಹಿತ್ಯಗಳ ಪ್ರತಿಸ್ಪರ್ಧಿಯಾಗಿ ಶೈವಧರ್ಮ ಹಾಗೂ ಸಾಹಿತ್ಯಗಳು ಬೆಳೆದದ್ದು ಈ ದಳವಾಯಿಯ ಕಾಲದಲ್ಲೇ. ಈ ತಿರುವು ಮುಂದೆ ದೇವಲಾಪುರದ ನಂಜುಂಡ ಮತ್ತಿತರರಿಗೆ ಹಿನ್ನೆಲೆಯಾಯಿತು.

೪

ಒಡೆಯರ ಕಾಲದ ಸಾಹಿತ್ಯದಲ್ಲಿ ಕೆಲವು ವೈಶಿಷ್ಟ್ಯಗಳು ಎದ್ದುಕಾಣುತ್ತವೆ. ಟೀಕೆ-ವ್ಯಾಖ್ಯಾನಸಾಹಿತ್ಯ, ಮಾಹಾತ್ಮ್ಯಸಾಹಿತ್ಯ, ಪರಿಣಯಕಾವ್ಯ, ಕೃತಿವಸ್ತುನಾವೀನ್ಯ

ಒಡನೆಯೇ ಕಾಣುವ ಕೆಲವು ವೈಶಿಷ್ಟ್ಯಗಳು. ಇವನ್ನು ಸ್ವಲ್ಪ ವಿವರದಲ್ಲಿ ನೋಡಬಹುದು. ಮೊದಲಿಗೆ ಟೀಕೆ-ವ್ಯಾಖ್ಯಾನಗಳ ಬಗ್ಗೆ: ಚಾಮರಾಜ ಒಡೆಯರ ಕಾಲದಿಂದ ಜಯಚಾಮರಾಜೇಂದ್ರ ಒಡೆಯರ ಕಾಲದ ವರೆಗೆ ನೂರಾರು ಸಂಸ್ಕೃತಕೃತಿಗಳಿಗೆ ಟೀಕೆ, ವ್ಯಾಖ್ಯಾನ, ತಾತ್ಪರ್ಯ, ಅರ್ಥವಿವರಣ, ಅನುವಾದ ಕಾರ್ಯಗಳು ನಡೆದಿವೆ. ರಾಮಾಯಣ, ಭಾರತ, ಭಾಗವತ, ಸ್ಮೃತಿ, ಪುರಾಣ, ಧರ್ಮಶಾಸ್ತ್ರಗ್ರಂಥಗಳು ಇದರಲ್ಲಿ ಸ್ಥಾನಪಡೆದಿವೆ; 'ವಾಲ್ಮೀಕಿರಾಮಾಯಣ', 'ಬ್ರಹ್ಮೋತ್ತರಖಂಡ'ಗಳಿಗೆ ಚಾಮರಾಜ ಒಡೆಯರು, 'ಭಾಗವತ', 'ಶೇಷಧರ್ಮ', 'ಭಾರತ' (ಶಾಂತಿಪರ್ವಾನಂತರ)ಗಳಿಗೆ ಚಿಕ್ಕದೇವರಾಜ, 'ಕಾಮಂದಕೀಯ', 'ತಿರುವಾಯ್ಮೊಳಿ'ಗಳಿಗೆ ಚಿಕುಪಾಧ್ಯಾಯ, 'ತುಲಾಕಾವೇರಿ ಮಾಹಾತ್ಮ್ಯ'ಕ್ಕೆ ಚೆಲುವಾಂಬೆ, 'ಶಿವಧರ್ಮೋತ್ತರ'ಕ್ಕೆ ಕಳಲೆ ವೀರರಾಜ, 'ಮಾರ್ಕಂಡೇಯ ಪುರಾಣ', 'ಲಿಂಗಪುರಾಣ'ಗಳಿಗೆ ಕಳಲೆ ನಂಜರಾಜರು ಟೀಕೆ ಇಲ್ಲವೆ ವ್ಯಾಖ್ಯಾನ ರಚಿಸಿದ್ದಾರೆ. ಬೃಹತ್‌ಕೃತಿಗಳಿಗೆ ಈ ಟೀಕಾಕಾರ್ಯ ನಡೆದಿದೆ. ಹೆಚ್ಚುಕಡಿಮೆ ಇವೆಲ್ಲ ವೈದಿಕಸಂಸ್ಕೃತಿಯನ್ನು ಪ್ರತಿನಿಧಿಸುವ ಕೃತಿಗಳೇ. 'ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ' ಎಂಬುದರಲ್ಲಿ ಸಂಸ್ಕೃತದ ಹಲವಾರು ಮಹಾಪುರಾಣ, ಉಪಪುರಾಣ, ಸಂಹಿತೆಗಳನ್ನು ಕನ್ನಡೀಕರಿಸುವ ಬೃಹತ್‌ಯೋಜನೆಯನ್ನೇ ಈಚಿನ ದೊರೆಗಳಾದ ಜಯಚಾಮರಾಜರು ಕೈಗೊಂಡರು. ಟೀಕೆ-ವ್ಯಾಖ್ಯಾನ ಬರೆದು ವೈದಿಕ ಸಂಸ್ಕೃತಿಯನ್ನು ಪುನರುಜ್ಜೀವಿಸುವ ಕೆಲಸವನ್ನು ವಿಜಯನಗರದ ಅರಸರೇ ಕೈಗೊಂಡಿದ್ದರು. ಸಾಯಣ-ಮಾಧವರ ವೇದಭಾಷ್ಯ, ವಿದ್ಯಾರಣ್ಯರ ಪರಾಶರಸ್ಮೃತಿವ್ಯಾಖ್ಯಾನ, ಮಾಧವಮಂತ್ರಿಯ ಸೂತಸಂಹಿತಾ ತಾತ್ಪರ್ಯ ದೀಪಿಕೆ, ನರಹರಿಯ ನೈಷಧದೀಪಿಕೆ, ಈಶ್ವರದೀಕ್ಷಿತನ ರಾಮಾಯಣವ್ಯಾಖ್ಯಾನ, ವಿಜಯಧ್ವಜತೀರ್ಥರ ಭಾಗವತವ್ಯಾಖ್ಯಾನ ಬಂದುದು ಅವರ ಕಾಲದಲ್ಲೇ. ಒಡೆಯರು ಆ ಪರಂಪರೆ ಪದ್ಧತಿಗಳನ್ನೇ ಅನುಸರಿಸಿದರು. ಫಲವಾಗಿ ಟೀಕೆ-ವ್ಯಾಖ್ಯಾನ ಸಾಹಿತ್ಯಕ್ಕೆ ವಿಶೇಷ ಪ್ರೋತ್ಸಾಹ ನೀಡಿದರು.

ಒಡೆಯರ ಕಾಲದ ಇನ್ನೊಂದು ವೈಶಿಷ್ಟ್ಯ ಮಾಹಾತ್ಮ್ಯಸಾಹಿತ್ಯರಚನೆ. ಮೇಲುಕೋಟೆ, ಯಾದವಗಿರಿ, ಶ್ರೀರಂಗಪಟ್ಟಣ, ಪಶ್ಚಿಮರಂಗ, ಹಿಮವದ್ಗೋಪಾಲಸ್ವಾಮಿಬೆಟ್ಟ, ಕಮಲಾಚಲ, ಶ್ರೀರಂಗ, ತಿರುಪತಿ/ವೆಂಕಟಗಿರಿ ಕ್ಷೇತ್ರಗಳ ಬಗ್ಗೆ ಮಾಹಾತ್ಮ್ಯಕೃತಿಗಳು ಬಂದಿವೆ. ಇವುಗಳ ಮೇಲೆ ಕ್ರಮವಾಗಿ ೪, ೩, ೨, ೪, ೪ರಂತೆ ಒಟ್ಟು ೧೭ ಕೃತಿಗಳು ರಚಿತವಾಗಿವೆ. ಚಿಕುಪಾಧ್ಯಾಯ, ತಿಮ್ಮ, ಗೋಪಾಲರಾಜ, ರಂಗಾಚಾರ್ಯ, ಮಲ್ಲಿಕಾರ್ಜುನ, ಸಿಂಗರಾರ್ಯ, ಚೆಲುವಾಂಬೆ, ವೆಂಕಕವಿಗಳು ಇವುಗಳ ರಚನೆಯಲ್ಲಿ ಪಾಲುದಾರರು. ಬ್ರಹ್ಮಾಂಡ-ನಾರದೀಯ-ಭವಿಷ್ಯೋತ್ತರ ಪುರಾಣಗಳ ತೀರ್ಥಕಾಂಡಗಳಿಂದ ಈ ಮಾಹಾತ್ಮ್ಯ ಕಥೆ, ವಸ್ತುಗಳನ್ನು ಆರಿಸಿದೆ. ಕ್ಷೇತ್ರಗಳ ಭೌಗೋಳಿಕ ವರ್ಣನೆ, ತತ್‌ಕೇಂದ್ರಿತ ವೈಷ್ಣವಸಮುದಾಯ ಕಥೆಗಳ ನಿರೂಪಣೆ ಇವುಗಳ ಉದ್ದೇಶ. ವೈಷ್ಣವ ದೇವತೆಗಳ, ಆಳ್ವಾರರ, ಕ್ಷೇತ್ರಾಧಿಷ್ಠಾನ ದೈವಗಳ ಸ್ತುತಿಗಳಿಂದ ಗ್ರಂಥಾರಂಭ; ಬಳಿಕ ಮೈಸೂರರಸರ ವಂಶಾವಳಿ, ತತ್ಕಾಲೀನ ರಾಜರ ಗುಣಶೀಲನಿರೂಪಣೆ-ಇದು ಈ ಕೃತಿಗಳ ಸಾಮಾನ್ಯವಾದ ಆರಂಭ. ಇವುಗಳ ಮಾಧ್ಯಮ ಚಂಪು ಅಥವಾ ಗದ್ಯ. ಈ ಮಾಹಾತ್ಮ್ಯಸಾಹಿತ್ಯ ಕೂಡ ತೆಲುಗಿನಿಂದಲೇ ಪ್ರೇರಿತವಾಗಿದೆ. ತೆಲುಗಿನ ಪ್ರಸಿದ್ಧಕವಿ ಶ್ರೀನಾಥನ ಭಾವಮೈದುನ ದಗ್ಗುಪಲ್ಲಿದುಗ್ಗನ. ಆತನ 'ಶಿವಕಾಂಚೀಮಾಹಾತ್ಮ್ಯ'ದಿಂದ ಈ ಪರಂಪರೆ ತೆಲುಗಿನಲ್ಲಿ ಮೊದಲಾಯಿತು. ಬಳಿಕ

ಕೃಷ್ಣದೇವರಾಯನ ಆಸ್ಥಾನದಲ್ಲಿದ್ದ ಧೂರ್ಜಟಿ 'ಶ್ರೀಕಾಳಹಸ್ತೀಶ್ವರಮಾಹಾತ್ಮ್ಯ'ವನ್ನು, ಕೃಷ್ಣದೇವರಾಯನ ಕಿರಿಯ ಸಮಕಾಲಿಕ ರಾಮಕೃಷ್ಣನು 'ಪಾಂಡುರಂಗಮಾಹಾತ್ಮ್ಯ', 'ಘಟಿಕಾಚಲ ಮಾಹಾತ್ಮ್ಯ'ಗಳನ್ನು, ವಲಗಪೂಡಿ ವೆಂಗನ್ನ 'ಸೇತುಮಾಹಾತ್ಮ್ಯ'ವನ್ನು ಲಿಂಗಮುಗುಟು ರಾಮಯ್ಯ' 'ಆನಂದಕಾನನಮಾಹಾತ್ಮ್ಯ'ವನ್ನು ರಚಿಸಿದರು. ಇವೆಲ್ಲ ೧೫-೧೬ನೆಯ ಶತಮಾನದ ರಚನೆಗಳು. ಇವಕ್ಕೆ ವಾಯು-ಸ್ಕಾಂದ-ಪದ್ಮಪುರಾಣಗಳು ಆಕರ. ಇವುಗಳಲ್ಲಿ ಬಹುಪಾಲು ಶೈವಪರವಾದವು. ವೈಷ್ಣವಪರವಾದವು ಎಂಬುದನ್ನುಳಿದರೆ ಕನ್ನಡ ಮಾಹಾತ್ಮ್ಯಗಳಿಗೆ ಇವೇ ಮಾದರಿ, ಮಾರ್ಗ. ರಾಮಾನುಜಾಚಾರ್ಯರು ಭೇಟಿಯಿತ್ತಿದ್ದ ಸ್ಥಳಗಳನ್ನು ಪ್ರಬಲ ಶ್ರೀವೈಷ್ಣವ ಕ್ಷೇತ್ರಗಳಾಗಿ ಬೆಳೆಸಬೇಕಿತ್ತು. ಹಾಗಾಗಿ ಇಂಥ ಸಾಹಿತ್ಯ ರಚನೆಯಾಯಿತು.

ಪರಿಣಯಕಾವ್ಯಗಳ ವೈಪುಲ್ಯ ಈ ಅವಧಿಯ ಇನ್ನೊಂದು ವೈಲಕ್ಷಣ್ಯ. ಸ್ತ್ರೀ-ಪುರುಷ ಲೇಖಕರಿಬ್ಬರೂ ಇಂಥ ಕೃತಿಗಳನ್ನು ರಚಿಸಿದ್ದಾರೆ. ಶೃಂಗಾರಮ್ಮನ 'ಪದ್ಮಿನೀಕಲ್ಯಾಣ', ಚೆಲುವಾಂಬೆಯ 'ವರನಂದೀಕಲ್ಯಾಣ', ಮುಮ್ಮಡಿ ಕೃಷ್ಣರಾಜನ 'ಉಷಾಪರಿಣಯ' ಹಾಗೂ 'ಸೌಗಂಧಿಕಾಪರಿಣಯ', ಯಾದವನ 'ಕಲಾವತೀಪರಿಣಯ'-ಉಲ್ಲೇಖಿಸಬಹುದಾದ ಕೆಲ ಕೃತಿಗಳು. ಇವುಗಳಲ್ಲದೆ 'ಪ್ರಭಾವತೀ ಪರಿಣಯ', 'ಮದಾಲಸಾ ಪರಿಣಯ', 'ತಪತೀ ಪರಿಣಯ'ಗಳೂ ಇವೆ. ಈ ಪರಿಣಯಕಾವ್ಯಪರಂಪರೆ ಕಾಣಿಸಿಕೊಳ್ಳಲು ಮತ್ತೆ ವಿಜಯನಗರದ ಅರಸರ ಹಾಗೂ ತೆಲುಗು ಕವಿಗಳ ಪ್ರಭಾವವೇ ಕಾರಣ. ಕೃಷ್ಣದೇವರಾಯನ ಸಂಸ್ಕೃತದ 'ಜಾಂಬವತೀಪರಿಣಯ' 'ಉಷಾಪರಿಣಯ'ಗಳು, ಆತನ ಮಗಳು ಮೋಹನಾಂಬೆಯ 'ಮಾರೀಚೀಪರಿಣಯ', ಅಚ್ಯುತರಾಯನ ಪತ್ನಿ ತಿರುಮಲಾಂಬೆಯ 'ವರದಾಂಬಿಕಾಪರಿಣಯ'ಗಳು ಈ ಹಾದಿಯ ಮಾದರಿ ಕಾವ್ಯಗಳು. ತೆಲುಗಿನಲ್ಲಿ ಸುಮಾರು ೧೫೦೦ರಿಂದ ಪೆನುಮತ್ಸ ವೆಂಕಟಾದ್ರಿ, ಅನಂತಕವಿ, ಕುಮಾರ ಧೂರ್ಜಟಿ, ತೆನಾಲಿ ರಾಮಭದ್ರ, ಪೋಲೂರಿ ಗೋವಿಂದಕವಿ ಅಜ-ಇಂದುಮತಿಯರ ವೃತ್ತಾಂತ ಆಧರಿಸಿದ 'ಇಂದುಮತೀಪರಿಣಯ'ಕೃತಿರಚಕರಾಗಿದ್ದಾರೆ. ಇಂಥ ಕೃತಿಗಳೇ ಕನ್ನಡದ ಪರಿಣಯಕಾವ್ಯಪರಂಪರೆಗೆ ಮಾರ್ಗದರ್ಶಿಯಾಗಿವೆ.

ಇತರ ಕೆಲವು ಸಂಗತಿಗಳಲ್ಲಿಯೂ ವಿಜಯನಗರದ ಅರಸರ ಹಾಗೂ ತೆಲುಗು ಸಾಹಿತ್ಯಗಳ ಪ್ರಭಾವವಿದೆ. ನಿದರ್ಶನಕ್ಕೆ ಕೃಷ್ಣಾರ್ಜುನರ ಕಾಳಗದ ನವೀನ ಕಥಾವಸ್ತು ಕೋನಯ್ಯ, ವೆಂಕಟರಮಣಯ್ಯ ಹಾಗೂ ಇನ್ನೊಂದಿಬ್ಬರು ಕನ್ನಡ ಲೇಖಕರನ್ನು ಆಕರ್ಷಿಸಿದೆ. ಕನ್ನಡ ಭಾರತ, ಭಾಗವತಗಳಲ್ಲಿ ಕಾಣದ ವಿಲಕ್ಷಣ ಕಥಾವಸ್ತುವಿದು. ಬ್ರಹ್ಮಾಂಡಪುರಾಣದ ಈ ಕಥಾವಸ್ತುವನ್ನು ಕೃಷ್ಣದೇವರಾಯನ ಆಸ್ಥಾನಕವಿ ಚರಿಗೊಂಡಧರ್ಮನ ಮೊದಲ ಬಾರಿಗೆ ಬಳಸಿ 'ಚಿತ್ರಭಾರತಂ' ಎಂಬ ಜನಪ್ರಿಯ ಕೃತಿ ರಚಿಸಿದ. ಬಳಿಕ ನಾದೆಂಡ್ಲ ಗೋಪಮಂತ್ರಿ ಈತನನ್ನು ಅನುಸರಿಸಿದ. ಕನ್ನಡಕವಿಗಳು ಇದರಿಂದಲೇ 'ಕೃಷ್ಣಾರ್ಜುನ ಕಾಳಗ', 'ಕೃಷ್ಣಾರ್ಜುನಸಂಗರ' ಕೃತಿಗಳನ್ನು ರಚಿಸಿದ್ದಾರೆ. ರಾಮಾಯಣ-ಭಾರತ-ಭಾಗವತಗಳನ್ನು ಆಧರಿಸಿಯೇ ರಚಿತವಾಗುತ್ತಿದ್ದ ಕನ್ನಡ ಕೃತಿಗಳು ವಸ್ತುವಿಗಾಗಿ ಬ್ರಹ್ಮಾಂಡ-ನಾರದೀಯ-ಭವಿಷ್ಯೋತ್ತರ ಪುರಾಣಗಳೆಡೆ ಹೊರಳಿದ್ದು ಮೈಸೂರು ಅರಸರ ಕಾಲದಲ್ಲೇ. ಈ ತಿರುವಿಗಾದರೂ ವಿಜಯನಗರದ ಅರಸರ ಕಾಲದ ತೆಲುಗು ಕವಿಗಳ ಪ್ರಭಾವವೇ ಕಾರಣ. ಅಲಂಕಾರಶಾಸ್ತ್ರ ಗ್ರಂಥರಚನೆಯಲ್ಲೂ ಈ ತೆಲುಗು ಪ್ರಭಾವವನ್ನು ಕಾಣಬಹುದು. ಅಳಿಯ

ರಾಮರಾಯನ ಸೋದರಳಿಯ ನರಸರಾಜ. ಭಟ್ಟುಮೂರ್ತಿ ಈತನನ್ನು ಕುರಿತ ಸ್ತುತಿಪದ್ಯಗಳಿರುವ 'ನರಸಭೂಪಾಲೀಯಮು' ತೆಲುಗುಕೃತಿ ರಚಿಸಿದ್ದಾನೆ.೫ ಆಶ್ವಾಸಗಳ ಅಲಂಕಾರ ಗ್ರಂಥವಿದು. ೪ ಪ್ರಕರಣಗಳ ತಿರುಮಲಾರ್ಯನ 'ಅಪ್ರತಿಮವೀರಚರಿತೆ', ೩ ಉಲ್ಲಾಸಗಳ ಅಳಿಯ ಲಿಂಗರಾಜನ 'ನರಪತಿಚರಿತೆ' ಈ ಮಾದರಿಯವೇ. ಎರಡೂ ಚಿಕ್ಕ ಅಲಂಕಾರಶಾಸ್ತ್ರಕೃತಿಗಳೇ. ಮೊದಲನೆಯದರಲ್ಲಿ ಚಿಕದೇವರಾಜನ ಸ್ತುತಿರೂಪದ ಉದಾಹರಣಪದ್ಯಗಳಿವೆ; ಎರಡನೆಯದರಲ್ಲಿ ಮುಮ್ಮಡಿ ಕೃಷ್ಣರಾಜನ ಬಗ್ಗೆ ಇಂಥ ಪದ್ಯಗಳಿವೆ. ವಿಜಯನಗರಕಾಲದ ತೆಲುಗು ಸಾಹಿತ್ಯದ ಪ್ರೇರಣೆ, ಪ್ರಭಾವ ಇಂಥ ಚಿಕ್ಕವಿಷಯಗಳಲ್ಲೂ ಗೋಚರಿಸುತ್ತದೆ. ಇದು ಆ ಪ್ರಭಾವದ, ಪ್ರಾಬಲ್ಯದ ಕುರುಹು.

೫

ಚಿಕ್ಕದೇವರಾಜ ಮತ್ತು ಮುಮ್ಮಡಿ ಕೃಷ್ಣರಾಜರು ಮೈಸೂರು ಅರಸರಲ್ಲಿ ಪ್ರತ್ಯೇಕ ಕಾರಣಗಳಿಗಾಗಿ ಹೆಸರಾಗಿದ್ದಾರೆ. ರಾಜ್ಯದ ಸುಭದ್ರತೆ, ಸ್ಥಿರತೆ, ಸುಧಾರಣೆಗಳಿಗೆ ಚಿಕ್ಕದೇವರಾಜ ಹೆಸರಾದ; ವ್ಯತಿರಿಕ್ತವಾಗಿ ಅಭದ್ರತೆ, ಆರ್ಥಿಕ ದುಃಸ್ಥಿತಿ, ಆಡಳಿತದ ಹಸ್ತಾಂತರಗಳಿಗೆ ಮುಮ್ಮಡಿಯವರು ಕಾರಣರಾದರು. ಆದರೆ ಕನ್ನಡಸಾಹಿತ್ಯದ ದೃಷ್ಟಿಯಿಂದ ಈ ಇಬ್ಬರ ಆಡಳಿತಾವಧಿ ಪರ್ವಕಾಲ; ಸಂಖ್ಯಾಬಾಹುಳ್ಯಕಾಲ. ಚಿಕ್ಕದೇವರಾಜ ಸ್ವತಃ ಸಾಹಿತಿ, ಜತೆಗೆ ಸಾಹಿತಿಗಳ ಪಡೆಯನ್ನೇ ನಿರ್ಮಿಸಿದ. ತಿರುಮಲಾರ್ಯ, ಸಿಂಗರಾರ್ಯ, ಚಿಕುಪಾಧ್ಯಾಯ, ತಿಮ್ಮಕವಿ, ಮಲ್ಲಿಕಾರ್ಜುನ, ಶೃಂಗಾರಮ್ಮ ಹೊನ್ನಮ್ಮರಿಗೆ ಈತ ಆಶ್ರಯ ಕೊಟ್ಟ; ಅವರ ಸಾಹಿತ್ಯಕ್ಕೆ ಪೋಷಣೆಯನ್ನಿತ್ತ. 'ನೂತನಸಾಹಿತ್ಯಬ್ರಹ್ಮ' ಎಂದು ಈತನನ್ನು ಆ ಕಾಲದ ಸಾಹಿತಿಗಳು ಕೀರ್ತಿಸಿದ್ದಾರೆ. ಈತನ ಕಾಲದಲ್ಲಿ ಚಿಕುಪಾಧ್ಯಾಯ ತಿಮ್ಮರು ಶ್ರೀವೈಷ್ಣವಧರ್ಮದಸೈದ್ಧಾಂತಿಕ ಕೃತಿಗಳನ್ನು ರಚಿಸಿದರು; ಸಿಂಗರಾರ್ಯ ಕನ್ನಡದ ಉಪಲಬ್ಧನಾಟಕಗಳಲ್ಲಿ ಮೊದಲನೆಯದಾದ 'ಮಿತ್ರವಿಂದಾಗೋವಿಂದ' ಬರೆದ; ಊಳಿಗದಲ್ಲಿದ್ದ ಹೊನ್ನಮ್ಮ 'ಹದಿಬದೆಯ ಧರ್ಮ'ವನ್ನು ರಚಿಸಿ ಮಾರ್ಗಪರಂಪರೆಯ ಲೇಖಕಿಯರಿಗೆ ನಾಂದಿ ಹಾಡಿದಳು. ಚಾರಿತ್ರಿಕ ಕಾವ್ಯಸೃಷ್ಟಿ, ಚಂಪೂವಿನ ಪುನರುಜ್ಜೀವನ, ಗದ್ಯಪ್ರಕಾರಪ್ರಯೋಗ, ಲೇಖಕಿಯರಿಗೆ ಪ್ರೋತ್ಸಾಹ ಚಿಕ್ಕದೇವರಾಜನ ಕಾಲದ ವೈಶಿಷ್ಟ್ಯಗಳು.

'ಅಭಿನವಭೋಜ'ರೆಂಬ ಬಿರುದಿಗೆ ಪಾತ್ರರಾಗಿದ್ದ ಮುಮ್ಮಡಿ ಕೃಷ್ಣರಾಜರು ಕೂಡ ಸ್ವತಃ ಸಾಹಿತಿಗಳು, ಸಾಹಿತಿಪೋಷಕರು. ತಿಮ್ಮಪ್ಪದಾಸ, ರಾಮಕೃಷ್ಣಶಾಸ್ತ್ರಿ, ಶ್ರೀನಿವಾಸ, ಅಳಿಯಲಿಂಗರಾಜ, ಕೆಂಪುನಾರಾಯಣ, ಸುಬ್ರಹ್ಮಣ್ಯ, ಮದ್ದಗಿರಿ ನಂಜಪ್ಪ, ಸೀತಾರಾಮ ಸೂರಿ, ದೇವಲಾಪುರದ ನಂಜುಂಡ, ಯಾದವ, ಮುಮ್ಮಡಿಯವರ ಆಸ್ಥಾನಕವಿಗಳು. ಜೈನಸಾಹಿತಿಗಳಾದ ಶಾಂತರಾಜಪಂಡಿತ ಹಾಗೂ ದೇವಚಂದ್ರರು ಪರೋಕ್ಷವಾಗಿ ಮುಮ್ಮಡಿಯವರಿಂದ ಪೋಷಿತರಾದವರೇ. ಎಂದರೆ ಬ್ರಾಹ್ಮಣ, ವೀರಶೈವ, ಜೈನ ಧರ್ಮೀಯ ಕವಿಗಳಿಗೆ ಅವರು ಆಶ್ರಿತರಾಗಿದ್ದರು. ಮುಮ್ಮಡಿ ಕೃಷ್ಣರಾಜರನ್ನೂ ಒಳಗೊಂಡಂತೆ ದೇವಲಾಪುರದ ನಂಜುಂಡ, ಅಳಿಯಲಿಂಗರಾಜರು ವಿಪುಲಸಂಖ್ಯೆಯ ಕೃತಿರಚಕರಾಗಿರುವುದು ಈ ಕಾಲದ ಒಂದು ವೈಶಿಷ್ಟ್ಯ. ಇವರು ಕ್ರಮವಾಗಿ ೫೯, ೧೫ ಮತ್ತು ೫೨ ಕೃತಿಗಳನ್ನು ರಚಿಸಿದ್ದಾರೆ. ಮೂರ್ನಾಲ್ಕನ್ನುಳಿದರೆ ಮುಮ್ಮಡಿಯವರ ಕೃತಿಗಳೆಲ್ಲವೂ

ಗದ್ಯದಲ್ಲಿವೆ; ಇದಕ್ಕೆ ವಿರುದ್ಧವಾಗಿ ಅವರ ಅಳಿಯನಾದ ಲಿಂಗರಾಜನ ಕೃತಿಗಳೆಲ್ಲವೂ ಪದ್ಯದಲ್ಲಿವೆ! ಗದ್ಯ, ಚಂಪೂ, ಷಟ್ಪದಿ, ಯಕ್ಷಗಾನ, ಶತಕ, ಹಾಡು-ಹೀಗೆ ನಾನಾ ಸಾಹಿತ್ಯಪ್ರಕಾರಗಳು ಗೋಚರಿಸಿವೆ. ಅನುವಾದಗದ್ಯ, ಟೀಕಾಗದ್ಯ, ಶಾಸ್ತ್ರಗದ್ಯ, ನಿರೂಪಣಗದ್ಯ, ಯಕ್ಷಗಾನಗದ್ಯ-ಹೀಗೆ ಗದ್ಯ ನಾನಾಮುಖಗಳಲ್ಲಿ ವ್ಯಕ್ತಗೊಂಡಿದೆ. ಕೆಂಪು ನಾರಾಯಣನ 'ಮುದ್ರಾಮಂಜೂಷ' ಹೊಸಗನ್ನಡ ಗದ್ಯಪ್ರವಾಹದ ಮೊದಲ ಮೊರೆತ; ಒಂದರ್ಥದಲ್ಲಿ ಅದು ಕನ್ನಡದ ಮೊದಲ ಕಾದಂಬರಿ! ಈ ಕಾಲದಲ್ಲಿ ಬಂದ ಹಲವಾರು ಯಕ್ಷಗಾನಗಳಲ್ಲಿ ಹೊಸಗನ್ನಡ ನಾಟಕದ ಮೊದಲ ಸ್ಪಷ್ಟ ಕುರುಹುಗಳಿವೆ. ಒಬ್ಬನೇ ಲೇಖಕನ ವಿಪುಲಕೃತಿರಚನಾನಿರ್ಮಾಣ, ವೈವಿಧ್ಯಪೂರ್ಣ ಗದ್ಯದ ಬಳಕೆ, ಯಕ್ಷಗಾನದ ಆಧಿಕ್ಯ, ಹೊಸಗನ್ನಡ ಸಾಹಿತ್ಯದ ಅರುಣೋದಯ ಇವು ಮುಮ್ಮಡಿ ಕೃಷ್ಣರಾಜರ ಕಾಲದ ವೈಶಿಷ್ಟ್ಯಗಳು.

ಮೈಸೂರರಸರ ಕನ್ನಡಸಾಹಿತ್ಯದ ಕಾಲವಿಸ್ತಾರ ನಿಡಿದಾದದ್ದು; ಮೂರು ಶತಮಾನಗಳ ಇತಿಹಾಸದ್ದು. ಈ ಮನೆತನದ ಮೊದಲ ದೊರೆಗಳು ಪರಂಪರೆಯ ಪುನರುಜ್ಜೀವಕರು. ವಿಜಯನಗರದ ಅರಸರ ಕಾಲದ ಸಾಹಿತ್ಯಿಕ ಧೋರಣೆ, ಚಂಪುವಿನ ಪುನರುದಯ, ವೈದಿಕ ಸಂಸ್ಕೃತಿಯ ಪ್ರಚಾರ, ಭಕ್ತಿಪ್ರಧಾನ ಸಾಹಿತ್ಯಸೃಷ್ಟಿ, ಹಳಗನ್ನಡ ಭಾಷಾ-ಶೈಲಿಗಳ ಬಳಕೆ, ಆಶ್ರಯದಾತರ ಸ್ತವನ, ಚಾರಿತ್ರಿಕಕಾವ್ಯಗಳ ಹೆಚ್ಚಳ ಇವು ಚಾಮರಾಜ, ಕಂಠೀರವ ನರಸರಾಜ, ಚಿಕದೇವರಾಜ, ಇಮ್ಮಡಿ ಕೃಷ್ಣರಾಜರ ಕಾಲದಲ್ಲಿ ಗೋಚರಿಸುವ ಸಂಗತಿಗಳು. ಇವು ಪರಂಪರೆ ಹಾಗೂ ಮಾರ್ಗದೀಕ್ಷೆಗಳ ಪ್ರೌಢಪ್ರಯತ್ನಗಳೇ. ಈ ಮನೆತನದ ಕೊನೆಯ ದೊರೆಗಳು ಪರಿವರ್ತನೆಯ ಹರಿಕಾರರು. ಚಂಪುವಿನ ಅಸ್ತ, ಗದ್ಯದ ವಿಜೃಂಭಣೆ, ಮೊದಲ ನಾಟಕ ಮತ್ತು ಯಕ್ಷಗಾನಗಳ ಬಹುಪ್ರಯೋಗ, ಸಾಂಗತ್ಯದ ಸರಳ ಭಾಷೆ-ಶೈಲಿ, ಕಥನಕೃತಿಗಳ ಅಂಕುರಾರ್ಪಣ ಇವು ಮುಮ್ಮಡಿ ಕೃಷ್ಣರಾಜರ, ಆ ಬಳಿಕ ಚಾಮರಾಜರ ಕಾಲದ ಸಾಹಿತ್ಯಿಕ ವೈಶಿಷ್ಟ್ಯಗಳು. ಇವು ಹೊಸ ಸಾಹಿತ್ಯಕ್ಕೆ ಅಗತ್ಯವಾದ ಸಾಂಸ್ಕೃತಿಕ, ಸಾಹಿತ್ಯಿಕ ವಾತಾವರಣದ ಹಿನ್ನೆಲೆ ಕಲ್ಪಿಸಿಕೊಟ್ಟುವು. ಒಟ್ಟಿನಲ್ಲಿ ಪರಂಪರೆಯ ಪುನರುಜ್ಜೀವನ, ನವೋದಯದ ಪ್ರವರ್ತನೆ ಎರಡು ತುದಿಗಳಾಗಿರುವ ಈ ಮನೆತನದ ಸಾಹಿತ್ಯ ಇನ್ನೂ ವಿಸ್ತಾರವಾದ ಅಧ್ಯಯನಕ್ಕೆ, ಸೂಕ್ಷ್ಮವಾದ ವಿಶ್ಲೇಷಣೆಗೆ ಪಾತ್ರವಾಗಬೇಕಾಗಿದೆ.

*ಅಭಿಜ್ಞಾನ, ೧೯೯೫, ಪು. ೫೯೪-೬೦೮*

# ೬೧. ಪಂಪಕವಿಯ ಪರಿಸರ ಪ್ರಜ್ಞೆ

● ಶಿವರಾಮಯ್ಯ

ಸಮುದ್ರವಸನೇ ಪೃಥ್ವಿ ಪರ್ವತ ಸ್ತನ ಮಂಡಲೇ
ವಿಷ್ಣು ಪತ್ನಿ ನಮಸ್ತುಭ್ಯಂ ಪಾದಸ್ಪರ್ಶ ಕ್ಷಮಸ್ವಮೇ ॥

ಅಮ್ಮ! ಭೂಮಿ ತಾಯಿ, ನಿನ್ನನ್ನು ತುಳಿಯುತ್ತಿರುವುದಕ್ಕಾಗಿ ನನಗೆ ಕ್ಷಮೆ ಇರಲಿ ಎಂಬ ಈ ಮಾತು ನಮ್ಮ ನೆಲದ ಬಗ್ಗೆ ನಮಗಿರಬೇಕಾದ ಪರಮಾವಧಿ ಭಕ್ತಿ ಗೌರವಗಳನ್ನು ಸೂಚಿಸುತ್ತದೆ. ಇದು ತುಂಬಾ ಭಾವನಾತ್ಮಕವಾಗಿ ಕಂಡರೂ ವಾಸ್ತವವಾಗಿ ಸತ್ಯವೇ ಆಗಿದೆ. ಈ ಮಟ್ಟದ ಪರಿಸರ ಪ್ರಜ್ಞೆ ಇದ್ದರೆ ಮಾತ್ರ ಭವಿಷ್ಯದಲ್ಲಿ ಮನುಕುಲವು ಈ ಭುವಿಯ ಮೇಲೆ ಬದುಕಿ ಬಾಳಲು ಸಾಧ್ಯ.

ಮನುಷ್ಯ ಏಕಾಂಗಿಯಲ್ಲ. ಅವನ ಸುತ್ತಮುತ್ತಲೂ ಮರಗಿಡಗಳಿವೆ, ಪ್ರಾಣಿ ಪಕ್ಷಿಗಳಿವೆ, ವೈವಿಧ್ಯಮಯವಾದ ಕೀಟಪ್ರಪಂಚವಿದೆ, ಈ ಜೀವಿಗಳೇ ಅಲ್ಲದೆ ನದಿ, ಪರ್ವತ, ಸಾಗರ, ಸರೋವರಗಳಿವೆ; ಗಾಳಿ, ಬೆಳಕು, ಖನಿಜ ಸಂಪನ್ಮೂಲಗಳಿವೆ. ನಮ್ಮ ಪರಿಸರದಲ್ಲಿ ಈ ಎಲ್ಲವೂ ಸೇರುತ್ತವೆ. ಪರಿಸರ ಶಬ್ದಕ್ಕೆ ವೈಜ್ಞಾನಿಕ ನಿರೂಪಣೆಯನ್ನು ನೀಡುವುದಾದರೆ, ಜೀವಿಯ ಮೇಲೆ ಜೈವಿಕವಾಗಿ ಪರಿಣಾಮ ಬೀರುವ ಎಲ್ಲ ಬಾಹ್ಯ ಕಾರಣಗಳನ್ನೂ ಒಟ್ಟಾರೆ ಪರಿಸರ ಎನ್ನಬಹುದು. ಜೀವ-ಜೀವಿಗಳ ನಡುವೆ ಇರುವ ಸಂಬಂಧ ಮತ್ತು ಜೀವ-ಭೌತ ಪರಿಸರಗಳ ನಡುವೆ ಇರುವ ಸಂಬಂಧವೇ ಪರಿಸರ ವಿಜ್ಞಾನಕ್ಕೆ ವಸ್ತು. ಪ್ರಕೃತಿಯ ನಿಯಮಬದ್ಧ ವ್ಯವಸ್ಥೆಯಲ್ಲಿ ಉಳಿದ ಜೀವಿಗಳಂತೆ ಮನುಷ್ಯನೂ ಕೂಡ ಒಬ್ಬ ಪ್ರಜೆ ಮಾತ್ರ, ಅವನು ನಿರಂಕುಶಪ್ರಭುವಲ್ಲ ಎಂಬ ಸತ್ಯವನ್ನು ಪರಿಸರ ವಿಜ್ಞಾನ ಈಗಾಗಲೇ ಸ್ಪಷ್ಟಪಡಿಸಿದೆ. ಪ್ರಾಣಿಜೀವಿಗಳು ಮತ್ತು ಸಸ್ಯಗಳ ಬಗ್ಗೆ ನಮ್ಮ ಗೌರವವನ್ನು ಹೆಚ್ಚಿಸಿ ಅವುಗಳ ಸಂರಕ್ಷಣೆ ಮನಗಾಣಿಸುವುದೇ ಈ ಪರಿಸರ ಪ್ರಜ್ಞೆ.

ಪರಿಸರಮಾಲಿನ್ಯವನ್ನು ತಡೆಗಟ್ಟುವುದು ಇಂದು ನಮ್ಮೆಲ್ಲರ ತುರ್ತಿನ ಕೆಲಸವಾಗಿದೆ: ಬಿಟ್ಟದ್ದು ಬಿಟ್ಟ ಹಾಗೆ ನಿಲ್ಲಿಸಿ, ಜಾಗತಿಕ ವಿಶ್ವ ಈ ನಿಟ್ಟಿನಲ್ಲಿ ಯೋಚಿಸುತ್ತಿದೆ ಕೂಡ. ಮನುಷ್ಯನ ಸ್ವಾರ್ಥ ಸ್ವಯಂಕೃತಾಪರಾಧದ ಫಲವಾಗಿ ನೆಲ, ಜಲ, ಗಾಳಿ, ಗಗನ ಮಂಡಲ ಎಲ್ಲವೂ ಎಲ್ಲಿಯೂ ಮಲಿನಗೊಳ್ಳುತ್ತಿದೆ. ಅಭಿವೃದ್ಧಿಯ ಹೆಸರಿನಲ್ಲಿ ಐಷಾರಾಮ ಸುಖಸಂಪದಗಳನ್ನು ಇನ್ನೂ ಹೆಚ್ಚಿಸಿಕೊಳ್ಳುವ ಆತುರಾತುರದಲ್ಲಿ, ವಿಜ್ಞಾನ-ತಂತ್ರಜ್ಞಾನಗಳ ಸಹಾಯದಿಂದ ಮನುಷ್ಯ ತನ್ನ ಸುತ್ತಲಿನ ಪರಿಸರಕ್ಕೆ ದಾಳಿ ಇಡುತ್ತಿದ್ದಾನೆ. ಜನಸಂಖ್ಯಾ ಸ್ಫೋಟನೆಯ ಕಾರಣದಿಂದಾಗಿ ಪ್ರಕೃತಿಯ ಸಂಪನ್ಮೂಲಗಳನ್ನು ಬಕಾಸುರನಂತೆ ಬರಿದು ಮಾಡುತ್ತಿದ್ದಾನೆ. ದೊಡ್ಡ ದೊಡ್ಡ ನೀರಾವರಿ ಅಣೆಕಟ್ಟೆಗಳನ್ನು ಕಟ್ಟುವ, ಜಲವಿದ್ಯುತ್ ಸ್ಥಾವರಗಳನ್ನು ನಿರ್ಮಿಸುವ ತವಕದಲ್ಲಿ ನಮ್ಮ ಅರಣ್ಯಗಳು ಬಯಲಾಗುತ್ತಿವೆ. ಇದರ ಪರಿಣಾಮವಾಗಿ ಮಳೆ ಕಡಿಮೆಯಾಯಿತು, ಭೂಮಿ ಬರಡಾಯಿತು, ಕ್ಷಾಮ ತಲೆದೋರಿತು. ಪುಣ್ಯ ಜಲ ಎನಿಸಿಕೊಂಡ ಗಂಗೆಯ ನೀರು ಕೂಡ ಇಂದು ಮಾಲಿನ್ಯ ಭರಿತವಾಗಿದೆ. ಇದು ಹೀಗೇ ಮುಂದುವರೆದರೆ ಇರುವುದೊಂದೇ ಈ ನೆಲ ಪಾಳೆಲವಾಗಿ ಹೋಗುವುದರಲ್ಲಿ ಯಾವ ಸಂಶಯವೂ ಇಲ್ಲ. ಪರಿಸರಪ್ರೇಮಿಗಳು ಈಗಾಗಲೇ ಎಚ್ಚರಿಕೆಯ ಗಂಟೆಯನ್ನು ಬಾರಿಸುತ್ತಿದ್ದಾರೆ. ಈ ಬಗೆಯ ಎಚ್ಚರಿಕೆಯನ್ನು ನಮ್ಮ ಪ್ರಾಚೀನ ದಾರ್ಶನಿಕರು, ಕವಿಗಳು ಬಹಳ ಹಿಂದೆಯೇ ಹೇಳಿಬಿಟ್ಟಿದ್ದಾರೆ. ಉಪನಿಷತ್ತಿನ ಋಷಿಗಳು, ವಾಲ್ಮೀಕಿ, ಕಾಳಿದಾಸ

ಮುಂತಾದವರನ್ನು ಇಲ್ಲಿ ಸ್ಮರಿಸಬಹುದು. ಕನ್ನಡಕ್ಕೆ ಬಂದರೆ ಈ ನಿಟ್ಟಿನಲ್ಲಿ ಪಂಪನ ಹೆಸರು ಮೊದಲು ನಿಲ್ಲುತ್ತದೆ.

ಪಂಪ ಕವಿ ಸೌಂದರ್ಯಕ್ಕಾಗಿ ಸೌಂದರ್ಯ ಎಂಬ ಸೂತ್ರವನ್ನು ಬಿಟ್ಟುಕೊಟ್ಟು ಸಕಲ ಜೀವಾತ್ಮಗಳಿಗೆ ಲೇಸ ಬಯಸುವುದೇ ಸೌಂದರ್ಯ ಎಂಬ ತತ್ತ್ವದರ್ಶನಕ್ಕೆ ಮಾರುಹೋದವನು. ಅವನ ಎರಡೂ ಕೃತಿಗಳಲ್ಲಿ ಮೂಡಿ ಬಂದಿರುವ ಪರಿಸರಾಂತರ್ದೃಷ್ಟಿ (Insight) ಬೆರಗುಗೊಳಿಸುವಂತಿದೆ. ಪರಿಸರವನ್ನು ಮಲಿನಮಾಡದಂತೆ ತಾನೂ ಬದುಕಿ, ತನ್ನ ನೆರೆಯವರೂ ತನ್ನಂತೆಯೇ ಬದುಕುವಂತೆ ಪ್ರೇರಣೆ ನೀಡಿ, ಮನುಷ್ಯ ಬದುಕಬೇಕು ಎಂಬ ಸರಳ ಸತ್ಯವನ್ನು ಕಾವ್ಯದ ಮೂಲಕ ನಿರೂಪಿಸಲು ಪಂಪ ಪ್ರಯತ್ನಿಸಿದ್ದಾನೆ. ನಿಸರ್ಗದತ್ತವಾದ ತನ್ನ ಹೂಕ್ಕುಳಬಳ್ಳಿಯನ್ನು ತಾನೇ ಕತ್ತರಿಸಿಕೊಳ್ಳುವ ಮಾನವ ಸರ್ವನಾಶವಾಗಿಹೋಗುತ್ತಾನಷ್ಟೆ! ಆದ್ದರಿಂದಲೇ ವಾಲ್ಮೀಕಿ ಕವಿ ಕೋಗಿಲೆಯು 'ಮಾನಿಷಾದ! ಮಾನಿಷಾದ!' ಎಂದು ತಾರಸ್ವರದಲ್ಲಿ ಕೂಗಿದರೆ, ಪಂಪನ ಕವಿಯಾತ್ಮ ''ಆರಂಕುಶವಿಟ್ಟೊಡಂ ನೆನೆವುದೆನ್ನ ಮನಂ ವನವಾಸಿದೇಶಮಂ'' ಎಂದು ಸುಂದರ ನಿಸರ್ಗಕ್ಕೆ ಹಂಬಲಿಸುತ್ತದೆ. ಸಂಪ್ರದಾಯದ ಪ್ರಕಾರ, ಅಷ್ಟಾದಶ ವರ್ಣನೆಗಳನ್ನು ಬಿಡದೆ ತನ್ನ ಕಾವ್ಯಲೋಕದಲ್ಲಿ ತಂದು ವರ್ಣಿಸಿರುವ ಪಂಪ ಸಮಯೋಚಿತವಾಗಿ ಅವುಗಳಿಂದಲೇ ವಿಶಿಷ್ಟಧ್ವನಿಗಳನ್ನು ಮಿಡಿಸುತ್ತ ಕಾವ್ಯದಲ್ಲಿ ಅವುಗಳಿಗೆ ಸಾವಯವ ಸಂಬಂಧವನ್ನು ಕಲ್ಪಿಸುತ್ತಾನೆ. ಇದಕ್ಕೆ ನಿದರ್ಶನಾರ್ಥವಾಗಿ, ವಿಕ್ರಮಾರ್ಜುನ ವಿಜಯದಲ್ಲಿ ಬರುವ ಹಸ್ತಿನಾಪುರದ ವರ್ಣನೆ, ಪಾಂಡು ಮಾದ್ರಿಯರ ಪ್ರಸಂಗ, ಅರ್ಜುನನ ತೀರ್ಥಯಾತ್ರಾ ಸನ್ನಿವೇಶ, ವೈಶಂಪಾಯನ ಸರೋವರದ ವರ್ಣನೆ, ಸಮವಸರಣ ಮಂಟಪದ ವರ್ಣನೆ ಇತ್ಯಾದಿಗಳನ್ನು ಎತ್ತಿಕೊಂಡು ವಿವರಿಸಬಹುದು.

ಕುರುಜಾಂಗಣದ ನೆಲದ ಸಿರಿಯನ್ನು (ಪಂಪಭಾರತ ೧-೫೩-೫೭) ಅದರ ಅರಣ್ಯಗಳ ಅದ್ಭುತ ಪ್ರಪಂಚದ ಸೌಂದರ್ಯವನ್ನು ಅನಾವರಣ ಮಾಡಿದ ಕವಿ ಅಷ್ಟಕ್ಕೇ ನಿಲ್ಲದೆ, ಅದರ ಪ್ರಯೋಜನವೇನೆಂಬುದನ್ನು ಪಟ್ಟಿಮಾಡಿ ಹೇಳುತ್ತಾನೆ. ವಾಸ್ತವವಾಗಿ ಪಂಪ ಹೇಳುವ ಮಲೆನಾಡಿನ ಪ್ರದೇಶವು ಮೊನ್ನೆಮೊನ್ನೆಯವರೆಗೂ ಸಹಜ ಸಂಪನ್ಮೂಲಗಳಿಂದ ಕೂಡಿ ನಂದನವನಕ್ಕೆ ಹೆಗಲೆಣೆಯಾಗಿಯೇ ಇತ್ತು. ಬ್ರಿಟಿಷರು ಜತನದಿಂದ ಕಾಪಾಡಿಕೊಂಡು ಬಂದಿದ್ದ ಭಾರತದ ಅರಣ್ಯಸಂಪತ್ತು ಸ್ವಾತಂತ್ರ್ಯಾನಂತರ ನಮ್ಮವರಿಂದ ಒಮ್ಮೆಗೇ ಕೊಳ್ಳೆಹೋಯಿತು. ಆ ಪಾಪದ ಫಲವನ್ನು ನಾವು ಈಗಾಗಲೇ ಅನುಭವಿಸುತ್ತಿದ್ದೇವೆ. ಮರ ಗಿಡಗಳ ಸೌಂದರ್ಯ ಹಾಗಿರಲಿ, ಅವುಗಳ ಪ್ರಯೋಜನ ದೃಷ್ಟಿಯಿಂದಲಾದರೂ ಅವುಗಳಿಗೆ ಇಲ್ಲಿ ಸ್ಥಾನವಿರಬೇಕು. ಅವು ಪರಿಸರಮಾಲಿನ್ಯವನ್ನು ತಡೆಗಟ್ಟುತ್ತವೆ, ಹೂ ಹಣ್ಣುಗಳನ್ನು ಕೊಡುತ್ತವೆ, ಮಳೆಯನ್ನು ಸುರಿಸುತ್ತವೆ, ಒಲೆಗಳನ್ನು ಉರಿಸುತ್ತವೆ ಮತ್ತು ಚೆಲುವಿನ ಕಣ್ಣು ತೆರೆಯುವಂತೆ ಹೂ ಚಿಗುರುಗಳನ್ನು ಹೊತ್ತು ರಂಜಿಸುತ್ತವೆ. ಈ ಬಗೆಯಲ್ಲಿ ನಿಸರ್ಗದ ಅಗತ್ಯದ ಅರಿವನ್ನು ಪಡೆದಿದ್ದ ಸಂಸಾರ ಸಾರೋದಯನಾದ ಪಂಪ ಕವಿ ಅರಣ್ಯವನ್ನು ಬದುಕಿನ ಒಂದು ಅವಿಭಾಜ್ಯ ಅಂಗವೆಂಬಂತೆ ವರ್ಣಿಸಿರುವುದರಲ್ಲಿ ಆಶ್ಚರ್ಯವೇನಿಲ್ಲ.

ಪಂಪ ಕವಿ ಹಸ್ತಿನಾಪುರದ ಹೊರವಲಯದ ಉಪವನವನ್ನು (parks) ವರ್ಣಿಸಿರುವ ರೀತಿಯನ್ನು ನೋಡಿದರೆ ಮಾಸ್ಕೊ ನೆನಪಿಗೆ ಬರುತ್ತದೆ. ಮಾಸ್ಕೊ ನಗರದ ಆಧುನಿಕ ನಿರ್ಮಾಣ ಶಿಲ್ಪದೊಂದಿಗೆ ಪಂಪನ ಪುರವರ್ಣನೆಯನ್ನು ಇಟ್ಟು ಹೋಲಿಸಿದರೆ ಗೊತ್ತಾಗುತ್ತದೆ ಕವಿಯ

ವಾಸ್ತುಶಿಲ್ಪ ಜ್ಞಾನ. ಅತ್ಯಾಧುನಿಕ ವಾಸ್ತುಶಿಲ್ಪ ಇಂಜಿನಿಯರ್ ತಯಾರಿಸಿದ ಮಾದರಿಗಳೋ ಎಂಬಂತಿರುವ ಪ್ರಮಾಣಬದ್ಧ ಉದ್ಯಾನವನಗಳು, ಈಜುಕೊಳಗಳು, ಅಲ್ಲಿ ಸರ್ವಋತು ಸಸ್ಯ ವರ್ಗಗಳು, ವಿಶಾಲವಾದ ಕೆರೆಕುಂಟೆಗಳು, ಆದರಲ್ಲಿ ಪಕ್ಷಿ ಸಂಕುಲಗಳು, ಸುತ್ತ ಸುರಿಯುವ ಸುರಗಿ ಹೂಗಳು, ಅವಕ್ಕೆ ಮುತ್ತುವ ದುಂಬಿಗಳು, ಅಲ್ಲದೆ ಮದದಾನೆಗಳು, ಕೆನೆವ ಕುದುರೆಗಳು ಆ ಪ್ರದೇಶ ದಲ್ಲುಂಟು. ಆ ಪಟ್ಟಣ ಪ್ರಾಂತ್ಯದಲ್ಲಿ ಮೃಗಾಲಯವೂ ಇದ್ದಿರಬಹುದೆಂದು ಊಹಿಸಬಹುದು.

ಪಂಪಭಾರತದಲ್ಲಿ ಪಾಂಡು ಮಹಾರಾಜನ ತೋಪಿನ ಬೇಟೆಯ ಪ್ರಸಂಗ ಒಂದು ಅಪ್ರತಿಮ ಪ್ರತಿಮಾ ಚಿತ್ರ. ಮೊದಮೊದಲು ಮನುಷ್ಯನಿಗೆ ಬೇಟೆಯು ಆಹಾರ ಸಂಪಾದನೆಯ ಒಂದು ಸಾಧನಮಾರ್ಗವಾಗಿದ್ದು ಬರಬರುತ್ತ ಅದು ರಾಜಮಹಾರಾಜರ ನಿತ್ಯ ವಿಹಾರದ ಹವ್ಯಾಸವಾಗಿ ಪರಿಣಮಿಸಿತು. ಮೃಗಯಾವಿಹಾರವು ಕಾಡಿನ ಅಮಾಯಕ ಪ್ರಾಣಿಗಳ ಮಾರಣ ಹೋಮಕ್ಕೆ ನಾಂದಿ ಹಾಡಿತು. ಆ ಪ್ರಾಣಿಪಕ್ಷಿಗಳ ದಂತ, ರೆಕ್ಕೆ, ಪುಕ್ಕ, ಚರ್ಮ, ಮಾಂಸ ಮುಂತಾದವುಗಳಿಗೆ ಆಸೆಬಿದ್ದ ಮನುಷ್ಯ ಅವುಗಳ ನಾಶದೊಂದಿಗೆ ತನ್ನ ವಿನಾಶವನ್ನೂ ತಂದುಕೊಳ್ಳುತ್ತಿದ್ದಾನೆ. ಪ್ರಾಣಿವಧೆಯಿಂದ ಪ್ರಕೃತಿ ಪರಿಸರದಲ್ಲಿ ಅಸಮತೋಲನವೇರ್ಪಟ್ಟು ಕ್ರಮೇಣ ಮನುಷ್ಯ ಗೋರಿಗೊಳ್ಳುತ್ತಿದ್ದಾನೆ. ಪಾಂಡುರಾಜನ ಮೃಗ ಬೇಟೆಯು ಇದನ್ನೇ ಧ್ವನಿಸುತ್ತದೆ. ಒಮ್ಮೆ ಮೃಗಯಾವಿಹಾರಕ್ಕೆಂದು ಹೋದ ಪಾಂಡುರಾಜನು ಬೆದೆಯಲ್ಲಿ ಸಂಗಮಿಸಿದ್ದ ಜಿಂಕೆಗಳಲ್ಲಿ ಒಂದನ್ನು ಕೊಂದುಬಿಡುತ್ತಾನೆ. ಆದರೆ ಜಿಂಕೆಯ ರೂಪದಲ್ಲಿದ್ದ ಮುನಿಯೋರ್ವನು 'ನೀನೂ ಸಹ ನಿನ್ನ ಸತಿಯನ್ನು ಕೂಡಿದಾಗ ಮರಣವನ್ನಪ್ಪುವೆ'ಯೆಂದು ಪಾಂಡುವಿಗೆ ಶಾಪವನ್ನು ಕೊಡುತ್ತಾನೆ. ಇಲ್ಲಿ ನಾವು ಆ ಮುನಿಶಾಪವನ್ನು ಒತ್ತಟ್ಟಿಗಿಟ್ಟು ಯೋಚಿಸಿದರೂ ಆ ಕಾಡು ಪ್ರಾಣಿಯ ಮೂಕಶೋಕ ಆ ಋಷಿಶಾಪಕ್ಕಿಂತಲೂ ಅಧಿಕ ಭಯಂಕರ ಎನಿಸುತ್ತದೆ. ಏಕೆಂದರೆ ಆ ಮನುಷ್ಯ ಹೀಗೆ ವೃಥಾ ಮೃಗ ಬೇಟೆಯಾಡುತ್ತಾ ಬಂದುದರಿಂದ ಕಾಡಿನ ಅಪೂರ್ವ ಮೃಗಸಂತತಿಗಳನೇಕ ಹೇಳಹೆಸರಿಲ್ಲದಂತೆ ನಶಿಸಿ ಹೋದವು, ಇನ್ನೂ ಕೆಲವು ವಿನಾಶದ ಅಂಚಿಗೆ ಬಂದು ಮುಟ್ಟಿವೆ. ಹೀಗೆ ಕಾಡಿನ ಜೀವ ಸರಪಳಿಯಲ್ಲಿ ಯಾವುದೇ ಒಂದು ಜೀವಕೊಂಡಿ ಕಳಚಿ ಬಿದ್ದರೂ ಇಡೀ ಜೀವ ಪರಿಸರದ ಏರುಪೇರಾಗುತ್ತದೆ. ಸ್ವತಃ ಒಂದು ಇರುವೆಯನ್ನು ಸೃಷ್ಟಿಸಲು ಸಾಮರ್ಥ್ಯವಿಲ್ಲದ ಈ ಮನುಷ್ಯನಿಗೆ ತನ್ನಂತೆಯೆ ಈ ನೆಲದ ಮೇಲೆ ಬದುಕಲು ಹುಟ್ಟಿರುವ ಜೀವಜಂತುಗಳನ್ನು ಕೊಲ್ಲಲು ಯಾವ ಹಕ್ಕಿದೆ? ಆದ್ದರಿಂದಲೇ ''ಎತ್ತವನಂ ಎತ್ತ ಮೃಗಯಾವೃತ್ತಂ'' ಎಂದು ಅನಂತರ ಪಶ್ಚಾತ್ತಾಪದಿಂದ ಪ್ರಲಾಪಿಸುವ ಪಾಂಡುವಿನ ಸ್ಥಿತಿಯೇ ನಮ್ಮದೂ ಆಗಿದೆ. ಹಾಗಾದರೆ ಆದರ್ಶವಾದ ಪರಿಸರ ಪ್ರಜ್ಞೆ ಹೇಗಿರಬೇಕು ಎಂಬುದಕ್ಕೂ ಪಂಪನಲ್ಲಿ ಹಲವಾರು ನಿದರ್ಶನಗಳಿವೆ. ಅದರಲ್ಲಿ ಬನವಾಸಿಯ ವರ್ಣನೆಯೂ ಒಂದು. ಪಂಪಭಾರತದ ನಾಲ್ಕನೇ ಆಶ್ವಾಸದ ೨೭ರಿಂದ ೩೧ನೇ ಪದ್ಯದ ವರೆಗೆ ಇರುವ ಭಾಗವು ಇಂದಿನ ಪರಿಸರಪ್ರಜ್ಞೆಯ ಪರಿಕಲ್ಪನೆಗೆ ಲಕ್ಷ್ಯ ಲಕ್ಷಣವೋ ಎಂಬಂತಿದೆ.

ಸಂಪತ್ಸಮೃದ್ಧಿಯಿಂದ ಕೂಡಿದ ಬೆಟ್ಟಗಳು, ನಂದನವನಗಳಿಂದ ಕೂಡಿದ ಬನವಾಸಿ ದೇಶದಲ್ಲಿ ವಾಸಿಸುವ ಮನುಷ್ಯರು ಸಾಮಾನ್ಯರೆ? ಅವರು ಚಾಗಕ್ಕೆ ಭೋಗಕ್ಕೆ ಅಕ್ಕರದ ಗೇಯಕ್ಕೆ ಗೊಟ್ಟಿಗೆ ಅಲಂಪಿನಿಂಪುಗಳಿಗೆ ಆಗರವಾಗಿದ್ದರು. ಆದ್ದರಿಂದ ಮನುಷ್ಯನಾಗಿ ಹುಟ್ಟಿದರೆ ಬನವಾಸಿ ನಾಡಿನಲ್ಲಿ ಹುಟ್ಟಬೇಕು. ಇಲ್ಲದಿದ್ದರೆ ಏನು? ಮರಿದುಂಬಿಯಾಗಿ ಮೇಣ್ ಕೋಗಿಲೆಯಾಗಿ ಯಾದರೂ ಹುಟ್ಟಬೇಕೆಂದು ಕವಿಯ ಬಯಕೆ. ಇಷ್ಟು ಆತ್ಮೀಯವಾದ ಸುಂದರ ದೇಶದಿಂದ

ಅಗಲಿ ಹೋಗುವಾಗ ಅರ್ಜುನನ ವಿರಹದ ನೋವು ನಾನಾ ಬಗೆಯಲ್ಲಿ ವ್ಯಕ್ತವಾಗುತ್ತದೆ. ಒಟ್ಟಿನಲ್ಲಿ ಬನವಾಸಿ ದೇಶದ ಸುಖ ಸಮೃದ್ಧಿ ಕಲ್ಪನೆಗೂ ಮಿಗಿಲಾಗಿದ್ದಿತು. ಅದು ಅಷ್ಟು ಮನಸ್ಸನ್ನು ಆಕ್ರಮಿಸಿಬಿಟ್ಟಿತ್ತು. ಆ ಸುಸಂಸ್ಕೃತ ನಾಡನ್ನು "ನೋಡಿ ನಾಡೆ ಮನಂಗೊಂಡಿರೆ ತೆಂಕನಾಡ ಮರೆಯಲ್ಕೆ ಇನ್ನೇಂ ಮನಂಬರ್ಕುಮೇ?" ಎಂದು ಸುಖದ ಸೊಕ್ಕಿನಲ್ಲಿ ಉದ್ಗರಿಸುತ್ತಾನೆ. ನಾಡಾಡಿ ಯಾಗಿ ಬಂದ ಅರಿಕೇಸರಿಗೇ ಹೀಗನ್ನಿಸಿದರೆ ಇನ್ನು ಇಲ್ಲಿನ ನಿವಾಸಿಗಳಿಗೆ ಹೇಗನಿಸಿರಬೇಡ? ಅರಣ್ಯವು ಪ್ರಕೃತಿಯ ಅತ್ಯಂತ ಶ್ರೀಮಂತ ಅಭಿವ್ಯಕ್ತಿ ಎಂಬ ಮಾತಿದೆ. ಪಂಪನ ಬನವಾಸಿ ವರ್ಣನೆಯು ಇದಕ್ಕೆ ಅಕ್ಷರಶಃ ಒಪ್ಪುತ್ತದೆ ಮತ್ತು ಕಾಡು ನಾಡಿನ ಜೀವನಾಡಿ ಎಂಬ ಮಾತಿಗೆ ಬನವಾಸಿ ಕಾಡು ಸಾಕ್ಷಿ ನುಡಿಯುತ್ತದೆ. ಈಗಿನ ಲೋಭಿ ಮಾನವ ಚಿನ್ನದ ಮೊಟ್ಟೆಯ ಆಶೆಗೆ ಬಾತುಕೋಳಿಯ ಕುತ್ತಿಗೆಯನ್ನೇ ಮುರಿವ ಕೃತಘ್ನತೆಯಿಂದ ಮಲೆನಾಡಿನ ಘಟ್ಟಗಳಿಗೆ ಕೊಡಲಿಯನ್ನು ಬೀಸಿ ಬಯಲು ಮಾಡುತ್ತಿದ್ದಾನೆ. ಪಂಪ ಬದುಕಿದ್ದಿದ್ದರೆ 'ಆರಂಕುಶವಿಟ್ಟೊಡಂ ಕಡಿಯ ಬಿಡಲಾರೆನ್' ಎಂದು ಅಪ್ಪಿಕ್ಕೋ ಚಳವಳಿಯ ಪರಿಸರ ಪ್ರೇಮಿಗಳ ಮುಂಚೂಣಿ ಯಲ್ಲಿದ್ದು ಮರಗಿಡಗಳನ್ನು ತಬ್ಬಿ ನಿಲ್ಲುತ್ತಿದ್ದನೇನೊ!

ಇನ್ನು ಪರಿಸರವನ್ನು ಹೀಗೆ ಹಾಳುಮಾಡುತ್ತಾ ಹೋದಲ್ಲಿ ನಾವು ಭವಿಷ್ಯದಲ್ಲಿ ಎಂಥ ಘನ ಘೋರ ದುರಂತಕ್ಕೆ ಇಳಿಯುತ್ತೇವೆ ಎಂಬುದನ್ನು ಪಂಪಭಾರತದ ಒಂದೆರಡು ನಿದರ್ಶನಗಳಿಂದ ನೋಡಬಹುದು: ಮೊದಲಿಗೆ ಖಾಂಡವವನ ದಹನ ಪ್ರಸಂಗ. ಪಂಚಮಾಶ್ವಾಸದ ೭೯ನೇ ಪದ್ಯದಿಂದ ೧೦೦ನೇ ಪದ್ಯದವರೆಗೂ ಇದು ಚಿತ್ರಿತವಾಗಿದೆ. ಮಾನವನ ಆಕ್ರಮಣಶೀಲ ವಸಹಾತುಶಾಹೀಬುದ್ಧಿಗೆ ಮಹಾಭಾರತದ ಈ ಪ್ರಸಂಗ ಪ್ರಥಮ ದಾಖಲೆಯಷ್ಟೇ ಅಲ್ಲ ಅವನು ದುರಂತದ ಕಾಡ್ಗಿಚ್ಚಿಗೆ ಇಟ್ಟ ಪ್ರಥಮ ಹೆಜ್ಜೆ ಎಂಬುದನ್ನೂ ಇದು ಪ್ರತಿಮಿಸುತ್ತದೆ. ನೂರು ಯೋಜನ ಉದ್ದವೂ ನೂರು ಯೋಜನ ಅಗಲವೂ ಇದ್ದ ಖಾಂಡವವನವು ಪಾಂಡವರ ಇಂದ್ರಪ್ರಸ್ಥದ ಸಮೀಪವೇ ಇದ್ದ ಇಂದ್ರನ ಒಂದು ಉಪವನ. ವಿವಿಧ ಬಗೆಯ ಸಸ್ಯಾದಿ ಗಳಿಂದಲೂ ಮೃಗ ಪಕ್ಷಿಗಳಿಂದಲೂ ಕಿನ್ನರ, ಪನ್ನಗ ಮುಂತಾದ ವನಚರರಿಂದಲೂ ಜೀವ ಸಂಕುಲಕ್ಕೆ ಜೀವಾಧಾರವಾಗಿದ್ದ ಅರಣ್ಯ ಇದಾಗಿತ್ತು. ಒಮ್ಮೆ ಇಲ್ಲಿ ಬಂದಾಗ ಶಚೀದೇವಿಯು ಅಶೋಕ ಪಲ್ಲವವನ್ನು ಕೊಯ್ದು ಪ್ರೀತಿಯಿಂದ ತುರುಬಿನಲ್ಲಿಟ್ಟುಕೊಂಡದ್ದಕ್ಕೆ ಇಂದ್ರನು ಆಕೆಯನ್ನು ಗದರಿಸಿಕೊಂಡನಂತೆ. ಮೂಲ ಕಥೆಯ ಚೌಕಟ್ಟಿನಲ್ಲಿಯೇ ಬೆಳಗಿರುವ ಪಂಪನ ಪರಿಸರ ಪ್ರಜ್ಞೆಗೆ ಇಂದ್ರ ಶಚಿಯನ್ನು ಗದರಿಸಿದ್ದು ಒಂದು ಸಣ್ಣ ನಿದರ್ಶನ ಮಾತ್ರ.

'ಯುಗಾಂತ'ದಲ್ಲಿ ಇರಾವತಿ ಕರ್ವೆಯವರು ಗುರುತಿಸಿರುವಂತೆ ಖಾಂಡವವನ ದಹನ ಪ್ರಸಂಗವು ಎರಡು ಭಿನ್ನ ಸಂಸ್ಕೃತಿಗಳ ಸಮಾಜೋ-ಆರ್ಥಿಕ ಸಂಘರ್ಷವನ್ನು ತೋರಿಸಿಕೊಡುತ್ತದೆ. ಪ್ರಭು ಸಂಸ್ಕೃತಿಯ ಮೌಲ್ಯಗಳ ಪ್ರತಿನಿಧಿಗಳಾದ ಪಾಂಡವರು ಖಾಂಡವ ವನವನ್ನು ಸುಟ್ಟು ಅಲ್ಲಿ ವಾಸವಾಗಿದ್ದ ಕಿನ್ನರ ಪನ್ನಗ ಮುಂತಾದ ಗಣ ಸಂಸ್ಕೃತಿಯ ಬುಡಕಟ್ಟು ಜನಾಂಗವನ್ನು ಸರ್ವನಾಶಗೊಳಿಸುತ್ತಾರೆ. ಇಂದ್ರಪ್ರಸ್ಥದ ಬಂಜರು ನೆಲವನ್ನು ಕೌರವರಿಂದ ಭಾಗವಾಗಿ ಪಡೆದ ಪಾಂಡವರು ಕೃಷಿಯೋಗ್ಯವಾದ, ಫಲವತ್ತಾದ ಭೂಮಿಯನ್ನು ಕಂಡು ಅದನ್ನು ಒತ್ತುವರಿ ಮಾಡಿ ವಶಪಡಿಸಿಕೊಂಡರು. ಭಯಂಕರವಾಗಿದ್ದ ಅರಣ್ಯ ಸಸ್ಯರಾಜಿಯನ್ನು ಕಾಡ್ಗಿಚ್ಚಿನ ಮೂಲಕ ಸುಟ್ಟು ಹಾಕಿದರು. ಒಂದು ಪ್ರಾಣಿ ಪಕ್ಷಿ ಏಕೆ, ವನಚರ ಮನುಷ್ಯನೂ ಕೂಡ ತಪ್ಪಿಸಿಕೊಂಡು ಹೋಗದಂತೆ ಕಾವಲು ಕಾದು ಏಕಕಾಲಕ್ಕೆ ಸುತ್ತಲಿಂದ ಬೆಂಕಿ ಹಚ್ಚಿ ನಿರ್ದಯರಾಗಿ

ಸುಟ್ಟುಬಿಟ್ಟರು. ಬುಡಕಟ್ಟು ಜನಾಂಗಗಳು ಇತಿಹಾಸದುದ್ದಕ್ಕೂ ಪಡುವ ಬವಣೆಯ ಪ್ರತೀಕವಾಗಿ, ನಾಗರಿಕ ಜಗತ್ತು ಯಾವತ್ತೂ ತಲೆ ತಗ್ಗಿಸಬೇಕಾದ ವಿಚಾರಕ್ಕೆ ಸುಟ್ಟು ಸ್ಮಾರಕವಾಗಿ, ಖಾಂಡವವನ ದಹನ ಪ್ರಸಂಗ ಚಿತ್ರಿತವಾಗಿದೆ.

ಇಲ್ಲಿರುವ ಮತ್ತೊಂದು ಮಾರ್ಮಿಕ ಸಂಗತಿಯೆಂದರೆ, ತನ್ನ ತೋಟವನ್ನು ಕೃಷ್ಣಾರ್ಜುನರು ಸೇರಿ ಸುಟ್ಟು ಹಾಕುತ್ತಿದ್ದಾರೆಂದು ಸುದ್ದಿಯನ್ನು ಕೇಳಿ ಇಂದ್ರನು ಅಲ್ಲಿಗೆ ಧಾವಿಸಿ ಬಂದನು. ಆದರೆ, 'ಅರ್ಜುನ ಬೇರೆ ಅಲ್ಲ ತನ್ನ ಮಗನೇ' ಎಂಬ ನಿಜ ಸಂಗತಿ ತಿಳಿದ ಮೇಲೆ ಕೃತಾರ್ಥಭಾವದಿಂದ ತನ್ನ ರತ್ನ ಕಿರೀಟವನ್ನು ಅವನ ತಲೆಗಿಟ್ಟು ಆಶೀರ್ವದಿಸಿ ಸನ್ಮಾನಿಸುವನು. ಈ ಹಿಂದೆ ಹೆಣ್ಣುಹೆಂಗಸು ಒಂದು ಚಿಗುರು ಕೊಯ್ದಿದ್ದಕ್ಕೆ ಪಾಪ! ಗದರಿಸಿಬಿಟ್ಟಿದ್ದ ಈತ ಎಂಬುದನ್ನು ಸ್ಮರಿಸಿಕೊಳ್ಳಿ. ಇದು ನಿಜವಾಗಿಯೂ 'ನೆಪೊಟಿಜಮ್' ಕುಲಪಕ್ಷಪಾತ. ತಪ್ಪು ಮಾಡಿದ ಭ್ರಷ್ಟ ಮಗನಿಗೆ ಶಿಕ್ಷೆ ವಿಧಿಸುವುದಿರಲಿ ಉಡುಗೊರೆಯೇ? ಗೈರು ಹಾಜರಿ ಭೂ ಒಡೆತನದಿಂದ ಎಸ್ಟೇಟ್, ಬಂಗಲೆ ಇತ್ಯಾದಿಗಳನ್ನು ಹೊಂದಿರುವುದು ಆಧುನಿಕ ವಸಹಾತುಶಾಹೀ ಶ್ರೀಮಂತಿಕೆಯ ಪ್ರತಿಷ್ಠೆಯ ಲಕ್ಷಣ. ಇವೆಲ್ಲ ಭೋಗದ ಆಡುಂಬೊಲ. ಸತ್ಪುತ್ರನೊಬ್ಬ ಕೀರ್ತಿಲಾಭಕ್ಕಾಗಿ ಇಂಥ ಒಂದು ಎಸ್ಟೇಟನ್ನು ಸುಟ್ಟುಹಾಕಿದರೇನಂತೆ! ಇಂಥವು ಎಷ್ಟೋ ಎಸ್ಟೇಟ್‌ಗಳು ಅವನಿಗುಂಟಷ್ಟೆ? ಮಕ್ಕಳ ಇಂಥ ಪೋಕರಿ ಕೆಲಸಗಳಿಗೆ ಕುಮ್ಮಕ್ಕು ಕೊಡುವ ಶ್ರೀಮಂತ ರಾಜಕಾರಣಿಗಳು ಈಗಲೂ ನಮ್ಮ ಮಧ್ಯೆ ಇರುವರಲ್ಲವೆ?

ಅಮೆಜಾನ್ ನದಿ ಪ್ರದೇಶದ ನೈಲ್ ನದಿ ತೀರದಲ್ಲಿ ನಾಗರಿಕ ಜನರ ಒತ್ತಂಬದಿಂದ ಬವಣೆಪಡುತ್ತಿರುವ ಬುಡಕಟ್ಟು ಜನರನ್ನು ಕೇಳುವರಾರು? ಖಾಂಡವವನ ಪ್ರಸಂಗವು ಮನುಷ್ಯನ ಹೃದಯವಂತಿಕೆಯು ಯಾವತ್ತೂ ಸುಟ್ಟು ಕರಕಾಗಬಾರದು ಎಂಬುದನ್ನು ಜಗತ್ತಿಗೆ ಸುಡುವ ಪ್ರತಿಮೆಯಾಗಿ ಪ್ರತಿಪಾದಿಸಲ್ಪಟ್ಟಿದೆ. ಮಹಾ ಕವಿಗಳು ನೀಡುವ ಒಳನೋಟಗಳನ್ನು ಹೀಗೆ ಗುರ್ತಿಸಬಹುದು.

ಇಂಥದೇ ಇನ್ನೊಂದು ದುರಂತವನ್ನೂ ಪಂಪನ ವೈಶಂಪಾಯನ ಸರೋವರದ ಸಿರಿಗನ್ನಡಿಯು ಇನ್ನೂ ಚೆನ್ನಾಗಿ ಪ್ರತಿಫಲಿಸುತ್ತದೆ. ಭೀಷ್ಮರಿಂದ ಜಲಮಂತ್ರೋಪದೇಶವನ್ನು ಪಡೆದ ದುರ್ಯೋಧನನು ಕಾಲವಂಚನೆ ಮಾಡಲೆಂದು ವೈಶಂಪಾಯನ ಸರೋವರಕ್ಕೆ ಬರುತ್ತಾನಷ್ಟೆ. ಆಗ ಸರೋವರ ಹೇಗೆ ಕಂಡಿತೆಂದರೆ: ಇದು ಪಾತಾಳ ಬಿಲಕ್ಕೆ ಬಾಗಿಲು, ನಿಜಕ್ಕೂ ಇದು ಘೋರಾಂಧಕಾರಕ್ಕೆ ಮಾಡಿದ ಕೂಪ, ಇದು ಬೇರೆ ಏನೂ ಅಲ್ಲ, ಪ್ರಳಯ ಭೀಕರ ಮೇಘಚ್ಛಾಯೆ ತಾನೇ ನಿಜವೆಂಬಂತಿದ್ದು, ಕಡು ನೀಲಿ ಗಾಜಿನ ಬಣ್ಣದಿಂದಲೂ, ಆಳವಾಗಿಯೂ, ವಿಶಾಲವಾಗಿಯೂ, ಬಕಬಳಾಕ ಪಕ್ಷಿಗಳ ಸಮೂಹ ಶಬ್ದದಿಂದಲೂ ಕೂಡಿ ಆ ಸರೋವರವು ಮೊರೆಯುತ್ತಿತ್ತು. ಅಲ್ಲದೆ ಅರಿಕೇಸರಿಯ ಹಾಗೂ ಸಾಹಸ ಭೀಮನ ಕೋಪಾಗ್ನಿಯ ಝಳ ಇಲ್ಲಿಗೂ ವ್ಯಾಪಿಸಿ ಬಂದು ನಮ್ಮನ್ನು ಸುಟ್ಟುಹಾಕದೆ ಬಿಡುವುದಿಲ್ಲ. ಇಲ್ಲಿ ಬಾಳುವ ನಮ್ಮನ್ನು ಕಲಕದಿರು, ಇತ್ತ ಬಾರದಿರು, ಸಾರದಿರು – ಎಂಬಂತೆ ಮದಿಸಿದ ಕಳಹಂಸ ಚಕ್ರವಾಕ ಇತ್ಯಾದಿಗಳ ಸಮೂಹ ಧ್ವನಿಯುಂಟಾಗುತ್ತಿತ್ತು. ಹೀಗೆ ಪಂಪ ನೀರ್ವಕ್ಕಿಗಳ ಕೂಗಿಗೂ ತನ್ನದೇ ಆದ ಒಂದು ವಿಶಿಷ್ಟ ಧ್ವನಿ ಶಕ್ತಿಯನ್ನು ನೀಡಿಬಿಟ್ಟಿದ್ದಾನೆ. 'ಮಾನವ ಲೋಕಕ್ಕೆ ಕಂಟಕಪ್ರಾಯನಾಗಿರುವ ದುರ್ಯೋಧನನೇ ನೀನು ಇಲ್ಲಿಗೂ ಬಂದು ನಮ್ಮ ನೆಮ್ಮದಿಯನ್ನು ಕಲಕಬೇಡ, ಇತ್ತ ಬಾರದಿರು, ಸಾರದಿರು' ಎಂದು ಹುಯ್ಯಲಿಡುವ ಪಕ್ಷಿಗಳ ಧ್ವನಿಯಲ್ಲಿ ಪಂಪನ

ಅಭಿಮತ ಏನೆಂಬುದನ್ನು ಸ್ಪಷ್ಟ ಕಾಣಬಹುದು. ದುರ್ವ್ಯಸನದ ದುರ್ಯೋಧನನು ಮಾನವನ ಮಹತ್ವಾಕಾಂಕ್ಷೆಗೆ ಹಿಡಿದ ಮಹಾ ಪ್ರತಿಮೆ. ನಮ್ಮದಿಯಾಗಿದ್ದ ಜೀವ ಪರಿಸರವೇ ಇಂದು ಕಲಕಿ ಹೋಗುತ್ತಿದೆ. ಕಾಡನ್ನು ಕತ್ತರಿಸಿ, ಸಾಗರ ತಳವನ್ನು ದೋಚಿ, ಆಕಾಶದಂಗಳಕ್ಕೆ ಹೊಗೆ ಹಾಯಿಸಿ ಮಲಿನಗೊಳಿಸುತ್ತಿದ್ದಾನೆ ಇಂದಿನ ದುರ್ಯೋಧನ. ಎರಡನೇ ಜಾಗತಿಕ ಯುದ್ಧದಿಂದ ಭಸ್ಮೀಕೃತವಾದ ಹಿರೋಶಿಮಾ ಮತ್ತು ನಾಗಸಾಕಿಗಳು ಸ್ಮಶಾನ ಕುರುಕ್ಷೇತ್ರಕ್ಕೆ ಯಾವತ್ತೂ ಸಾಕ್ಷಿ ಹೇಳುತ್ತಿವೆ. ಕ್ಷಣಾರ್ಧದಲ್ಲಿ ಇಡೀ ಜಗತ್ತನ್ನು ಸುಟ್ಟು ಬೊಟ್ಟಡುವ ಪ್ರಳಯ ಭಯಂಕರ ಶಸ್ತ್ರಾಸ್ತ್ರಗಳು ಶಕ್ತರಾಷ್ಟ್ರಗಳ ಉಗ್ರಾಣಗಳಲ್ಲಿ ಬುಸುಗುಟ್ಟುತ್ತಿವೆ. ಇದಲ್ಲಕ್ಕೂ ತಡೆಯೊಡ್ಡದಿದ್ದರೆ ಮಾನವ ಕುಲ ಸರ್ವನಾಶವಾಗುತ್ತದೆ ಎಂಬ ನಿತ್ಯ ಸತ್ಯವನ್ನು ಪಂಪ ತನ್ನ ವೈಶಂಪಾಯನ ಸರೋವರದ ಸಿರಿಗನ್ನಡಿಯಲ್ಲಿ ಪ್ರತಿಮಿಸಿ ತೋರಿಸಿದ್ದಾನೆ.

ಇದುವರೆಗೆ ನಿಸರ್ಗದೊಂದಿಗೆ ಮಾನವ ಸಂಬಂಧ ಹೇಗಿರಬಾರದು ಎಂಬುದನ್ನು ನೋಡಿದ್ದಾಯಿತು. ಇನ್ನು ಅವನ ಸಂಬಂಧ ನಿಸರ್ಗದೊಂದಿಗೆ ಹೇಗಿರಬೇಕು, ಹೇಗಿದ್ದರೆ ಚೆನ್ನ ಎಂಬುದನ್ನು ಇನ್ನೊಬ್ಬ ಕನ್ನಡದ ಕವಿ ನಾಗವರ್ಮನ ಕಾದಂಬರಿ ಕಾವ್ಯದ ಅಚ್ಛೋದ ಸರೋವರದ ವರ್ಣನೆಯ ಮೂಲಕ ಮನಗಾಣಿಸಬಹುದು. ಇಂದ್ರಾಯುಧದ ಬೆನ್ನೇರಿ ಕಿನ್ನರ ಮಿಥುನದ ಬೆನ್ನಟ್ಟಿ ಬಾಯಾರಿ ಬಳಲಿ ಬಂದ ಚಂದ್ರಾಪೀಡನಿಗೆ ಹಿಮಾಲಯದ ತಪ್ಪಲಿನಲ್ಲಿದ್ದ ಅಚ್ಛೋದ ಸರೋವರವು ಹಠಾತ್ತನೆ ದೃಗ್ಗೋಚರವಾಗುತ್ತದೆ. ತಾವರೆಯ ಪರಾಗ ಮಿಶ್ರಿತ ತುಂತುರು ಹನಿಯಿಂದ ಕೂಡಿ ತರಂಗಮಾಲಿಕೆಯಲ್ಲಿ ವಿಶ್ರಮಿಸಿ, ಕಲಹಂಸ ನಿನಾದದ ಸಂಭ್ರಮದಿಂದಲೂ ದುಂಬಿಗಳ ಮರ್ಮರ ಧ್ವನಿಯಿಂದಲೂ ಬೆರಸಿ, ಮನುಜೇಂದ್ರ ಚಂದ್ರನಾದ ಚಂದ್ರಾಪೀಡನನ್ನು ''ಅಮರ್ದೂಸೆದಪ್ಪಿಕರೆವಂತೆವೊಲ್'' ಮಂದಮಾರುತವು ಮೆಲ್ಲನೆ ಬೀಸಿ ಬಂತಂತೆ. ಅಲ್ಲಿ ವೈಶಂಪಾಯನ ಸರೋವರದ ನೀರ್ವಕ್ಕಿಗಳು ದುರ್ಯೋಧನನನ್ನು ಇತ್ತ ಬಾರದಿರು ಸಾರದಿರು ಎಂದು ಹುಯ್ಯಲಿಟ್ಟರೆ ಇಲ್ಲಿ ಅಚ್ಛೋದ ಸರೋವರದ ಮೇಲಿನಿಂದ ಬೀಸಿಬರುವ ಮಂದಮಾರುತವು 'ದಯಮಾಡಿಸಯ್ಯಾ' ಎಂದು ಅಮರ್ದೂಸೆದಪ್ಪಿ ಸ್ವಾಗತಿಸುತ್ತಿದೆ. Nature is our teacher ಎಂಬ ಮಾತು ಈ ಇಬ್ಬರು ಕವಿಗಳ ಸರೋವರ ವರ್ಣನೆಯಿಂದ ಸಂವೇದನೆಗೆ ಬರುತ್ತದೆ.

ಕೇವಲ ಮನುಷ್ಯರಾದ ನಾವು ಅರಿತೋ ಅರಿಯದೆಯೋ ಒಮ್ಮೊಮ್ಮೆ ನಿಸರ್ಗದೊಡನೆ ಅತಿವರ್ತಿಸಿ ಅಪಚಾರಮಾಡಿ ಹಾಳುಮಾಡುತ್ತೇವೆ, ನಿಜ. ಆದರೆ ಅರಿವು ಮರಳಿದಾಗ, ವಿಚಾರ ಎಚ್ಚರಗೊಂಡಾಗ, ನಾವು ಮಾಡಿದ ಅಪಚಾರಕ್ಕೆ ಅತಿವರ್ತನೆಗೆ ಪಶ್ಚಾತ್ತಾಪಗೊಂಡು ಕ್ಷಮಾಯಾಚನೆಮಾಡಿ ಮತ್ತೆ ಅದೇ ತಪ್ಪನ್ನು ಪುನರಾವರ್ತನೆಯಾಗದಂತೆ ನೋಡಿಕೊಳ್ಳುವುದೂ ಸಹ ಮನುಷ್ಯನ ಒಂದು ಸೌಜನ್ಯವೇ ಆಗಿದೆ. ಇದಕ್ಕೊಂದು ನಿದರ್ಶನಾಗಿ ಪಂಪನ ಆದಿಪುರಾಣದ ಒಂದು ಸಂದರ್ಭವನ್ನು ಎತ್ತಿಕೊಂಡು ವಿಶ್ಲೇಷಿಸಿ ನೋಡಬಹುದು.

ಆ ಕಾವ್ಯದ ಹತ್ತನೆ ಆಶ್ವಾಸದವರೆಗೆ ಆದಿದೇವನ ಯೋಗಮುಖವಾದ ಭವಾವಳಿಯ ಕಥೆ ಚಿತ್ರಿಸಲ್ಪಟ್ಟರೆ, ಹನ್ನೊಂದನೆ ಆಶ್ವಾಸದಿಂದ ಮುಂದಕ್ಕೆ ಅವನ ಮಗ ಭರತಚಕ್ರಿಯ ಭೋಗಮುಖವಾದ ಕಥೆ ವಿಸ್ತರಿಸಲ್ಪಟ್ಟಿದೆ. ಭರತನ ದಿಗ್ವಿಜಯ ಯಾತ್ರೆಯಲ್ಲಿ ಅವನ ಚತುರಂಗ ಬಲವಲ್ಲದೆ ಅಂತಃಪುರದ ೧೬ ಸಾವಿರ ಜನ ಮಡದಿಯರೂ ಮಕ್ಕಳೂ ಮತ್ತು ಸಕಲ ಪರಿವಾರವೂ ಪಾಲ್ಗೊಳ್ಳುತ್ತದೆಯಷ್ಟೆ. ಈ ಜೈತ್ರಯಾತ್ರೆ ಹೀಗೇ ಮುಂದೆ ಸಾಗುತ್ತಿದ್ದಾಗ ಒಮ್ಮೆ ಅವನ

ವಿಲಾಸಿನಿಯರ ತಂಡ ಒಂದು ಉಪವನ ಪ್ರದೇಶಕ್ಕೆ ಪ್ರವೇಶಿಸಿಬಿಡುತ್ತದೆ. ಅದೊಂದು ಭೂಲೋಕದ ನಂದನವನ. ಸದಾಕಾಲಕ್ಕೂ ಚಿಗುರು ಹೂ ಮಿಡಿ ಕಾಯಿ ಹಣ್ಣುಗಳಿಂದ ಇಡಿಕಿರಿದು ತುಂಬಿರುವ ಸಸ್ಯ ಜಾತಿಗಳಿಂದ ಕೂಡಿ ''ಇಂ ಪೆಱತಾವುದು ಸಂಸಾರಸಾರ ಸರ್ವಸ್ವಂ'' ಎಂಬಂತಿದ್ದಸರ್ವಋತು ಉದ್ಯಾನವನ ಅದು. ಪಂಪನ ಈ ಪುಷ್ಪೋದ್ಯಾನದಲ್ಲಿಲ್ಲದ ಫಲಪುಷ್ಪಗಳು ಯಾವ ವಿಶ್ವಕೋಶದಲ್ಲಿಯೂ ಕಾಣಸಿಗುವಂತಿಲ್ಲ.

ಭರತನ ಸೀಮಂತಿನಿಯರಿಗೆ ಈ ಉಪವನ ಒಂದು ಕ್ರೀಡಾ ಕ್ಷೇತ್ರವಾಯಿತು. ಇದು ೧೧ನೇ ಆಶ್ವಾಸದ ೭೬ನೇ ಪದ್ಯದಿಂದ ಆರಂಭಗೊಂಡು ೧೩೭ನೇ ಪದ್ಯದವರೆಗೂ ಸವಿಸ್ತಾರವಾಗಿ ವರ್ಣಿಸಲ್ಪಟ್ಟಿದೆ. ಭಿನ್ನರುಚಿಯ ರಮಣಿಯರು ಒಬ್ಬೊಬ್ಬರೂ ಒಂದೊಂದು ಹೂವಿನ ಸೊಗಸನ್ನು ಮೆಚ್ಚಿಕೊಂಡು ಹುಚ್ಚರಾದರು. ತಮತಮಗೆ ಮೆಚ್ಚುಗೆಯಾದ ಹೂ ತಳಿರುಗಳಿಂದ ತೊಡವುಗಳನ್ನು ಮಾಡಿಕೊಂಡು ಸಿಂಗರಿಸಿಕೊಂಡರು. ಆ ವನದ ತಳಿರು, ಕಳಿಕೆ, ಮೊಗ್ಗು, ನನೆಗಳು, ಜಿರಿಮುಗುಳ ಹೂವಿನ ಗೊಂಚಲುಗಳು ಜವ್ವನೆಯರ ಸಿಂಗಾರಕ್ಕೆ ಒದಗಿ ಸಮನಾದವು. ಹೀಗೆ ನಾನಾವಿಧ ಕ್ರೀಡೆಗಳಿಂದ ಉಪವನವನ್ನೆಲ್ಲಾ ಸುತ್ತಿ ಬಳಸಿ ಮನಸ್ಸಿಗೆ ಸಂತೋಷವನ್ನು ತುಂಬಿಕೊಂಡರು. ಆದರೆ, ಅವರ ದೊಡ್ಡ ಗುಣ ಎಂದರೆ, ತಮಗೆ ಹೀಗೆ ಸಂತೋಷವನ್ನು ಕೊಟ್ಟ ಆ ವನಕ್ಕೆ ಕೃತಜ್ಞತೆಯನ್ನು ತೋರದ ಅವರು ಹೋಗಲಿಲ್ಲ. ಅರಿಯದ ಆ ವನದ ಚೆಲುವನ್ನು ಸೂರೆಗೊಂಡು ಅಪಚಾರ ಮಾಡಿದ ಆ ತರುಣಿಯರು ಎಚ್ಚರಗೊಂಡ ಮೇಲೆ ಪಶ್ಚಾತ್ತಾಪದಿಂದ ಹೀಗೆ ಉದ್ಗರಿಸುತ್ತಾರೆ: ''ನೀವು ನಮ್ಮನ್ನು ಮರೆಯಬೇಡಿ ನೆನೆಸಿಕೊಳ್ಳಿರಿ ಎಂದು ಹೇಳುವುದಕ್ಕೆ ನಮಗೇ ನಾಚಿಕೆಯಾಗುತ್ತದೆ. ಯಾವ ಸದ್ಗುಣಗಳಿಗಾಗಿ ನೀವು ನಮ್ಮನ್ನು ನೆನೆಯಬೇಕು? ನಾವು ನಮ್ಮ ಕಾಲುಗಳಿಂದ ಒದ್ದಿದ್ದೇವೆ, ಬಾಯಿಯಿಂದ ಉಗಿದಿದ್ದೇವೆ. ನಮ್ಮ ಮದೋತ್ಕಟ ಚೇಷ್ಟೆಗಳಿಂದ ನಿಮ್ಮನ್ನು ನೋಯಿಸಿದ್ದೇವೆ'' ಎಂದು ಅಶೋಕ ವಕುಳ ಮುಂತಾದ ಗಿಡ ಬಳ್ಳಿಗಳಿಗೆ ಕೈಮುಗಿದು ಬಿನ್ನವಿಸಿಕೊಂಡರು. ಅಲ್ಲದೆ ತಮಗೆ ಪ್ರಿಯವಾದ ಮಾವಿನ ಮರವನ್ನುಕುರಿತು

> ನನೆಗಳ ಗೊಂಚಲಂ ತಳಿರ ತೊಂಗಲನ್ ಆಡುವ ಚೆಲ್ವನಪ್ಪಕೊಂ
> ಬಿನಮಿಡಿಯಂ ತೆರಳ್ಚಿ ತೆಗೆದು ಒವದೆ ಕಾಯದೆ ಕ್ರೂರಕರ್ಮದಿಂ
> ಸೊನೆ ಸುರಿವನ್ನೆಗಂ ಪಱಿದು ನೋಯಿಸಿ ಕಾಡಿದವು ಇನ್ನದೊಂದುಮಂ
> ನೆನೆಯದ ನೀನುಮಾಮುಮೊಡನಿರ್ದಿರವಂ ನೆನೆ ಬಾಳಚೂತಮ ॥

ನಾವು ಇಷ್ಟು ಹೊತ್ತಿನತನಕ ನಿಮ್ಮ ಮೊಗ್ಗುಗಳ ಗೊಂಚಲನ್ನು ಚಿಗುರಿನ ಜೊಂಪನ್ನು ಗಾಳಿಗೆ ತೂಗಾಡುವ ಸೊಗಸಾದ ಮಿಡಿಗಳನ್ನು ಒಂದು ಸ್ವಲ್ಪವೂ ಕರುಣೆಯಿಲ್ಲದೆ ಕ್ರೂರ ಕರ್ಮದಿಂದ ಸೊನೆ ಸುರಿವಂತೆ ಹರಿದು ನೋಯಿಸಿ ಕಾಡಿದ್ದೇವೆ. ನೀನು ಇದೊಂದನ್ನು ನೆನೆಯದೆ, ನಾವೂ ನೀನೂ ಕೊಂಚ ಕಾಲ ಜೊತೆಯಲ್ಲಿದ್ದವು ಎನ್ನುವುದನ್ನು ಮಾತ್ರ ನೆನೆ ಎಂದು ಬಾಲಚೂತವನ್ನು ಬೇಡಿಕೊಂಡರಂತೆ. ಅಲ್ಲದೆ ಆ ವನದ ತರುಮರಗಳನ್ನೆಲ್ಲ ಕುರಿತು:

> ಪದೆದು ಉತ್ತಂಸ ಅವತಂಸ ಶೋಭೆಗೆ ಭವತ್ ಬಾಲ ಪ್ರವಾಳೋಲ್ಲಸನ್
> ಮೃದು ಪುಷ್ಪಸ್ತಬಕಂಗಳಂ ಪಱಿದೆವು, ಇನ್ನಾ ದೋಷಮಂ ಕೊಳ್ಳದೆ
> ಇರ್ಪುದು ಕೇಳೀವನಪಾದಪಂಗಳಿರ ಚಿತ್ತಂಗೊಂಡು ಬೀಳ್ಕೊಂಡು ರಾ
> ಗದೆ ನಿಮ್ಮಂ ಬಲಗೊಂಡು ಪೋಪ ಗುಣಮಂ ಕೊಳ್ಳಿಂ ಮನಃಪ್ರೀತಿಯಿಂ ॥

ನಾವು ನಮ್ಮ ಅಲಂಕಾರಗಳಿಗಾಗಿ ನಿಮ್ಮ ಎಳೆಯ ಚಿಗುರು ಹೂಗೊಂಚಲುಗಳನ್ನು ಹರಿದು ಕಿತ್ತೆವು; ಆ ದೋಷವನ್ನು ಕ್ಷಮಿಸಿ ಎಂದು ಪ್ರದಕ್ಷಿಣೆ ಹಾಕಿ ಹೊರಟಿದ್ದೇವೆ. ಅದೊಂದು ಗುಣವನ್ನು ಮಾತ್ರ ಮನಸ್ಸಿನಲ್ಲಿರಿಸಿಕೊಳ್ಳಿರಿ ಎಂದು ಬೇಡಿಕೊಂಡರು.

''ಭರತನ ಅಂತಃಪುರದ ಈ ಲಲನೆಯರ ಸೌಂದರ್ಯಾನುಭವದಲ್ಲಿ ಒಂದು ರೀತಿಯ ಪ್ರಮತ್ತತೆ ಮೊದಮೊದಲು ಕಂಡುಬಂದರೂ, ಆನಂತರ ತಮ್ಮ ಉಪಭೋಗಕ್ಕಾಗಿ ಈ ಪ್ರಕೃತಿ ಸೌಂದರ್ಯವನ್ನು ನೋಯಿಸಿ ಕಾಡಿಸಿದೆವಲ್ಲಾ – ಎಂಬ ಈ ಪಶ್ಚಾತ್ತಾಪದ ಮಾರ್ದವತೆ ಅಪೂರ್ವವಾಗಿದೆ'' ಎಂಬ ಡಾ. ಜಿ. ಎಸ್. ಎಸ್. ಅವರ ಪರಿಶೀಲನೆ ಮನಮುಟ್ಟುವಂತಿದೆ. ಈ ವನವಿಹಾರದ ಪರ್ವ ನಾಡೋಜನಾದ ಪಂಪನ ಸ್ವಂತ ಸೃಷ್ಟಿಯಾಗಿದ್ದು ಅದರ ಹಿನ್ನೆಲೆಯಲ್ಲಿ ಎಂಥ ಪ್ರಬುದ್ಧ ಚೇತನ ಕೆಲಸ ಮಾಡಿದೆ, ಎಂಥ ಸುಸಂಸ್ಕೃತ ಮನಸ್ಸು ಯಾವ ಎತ್ತರದಲ್ಲಿ ವಿಚಾರ ಮಾಡಿದೆ ಎಂಬುದನ್ನು ಗ್ರಹಿಸಬಹುದು.

ಕೊನೆಯದಾಗಿ, ಪಂಪ ಕವಿಯ ಕಾವ್ಯ ಸಂದೇಶ ಅಥವಾ ಪ್ರಬಂಧ ಧ್ವನಿಯ ಬಗ್ಗೆ ಒಂದೆರಡು ಮಾತುಗಳನ್ನು ಇಲ್ಲಿಯೇ ಹೇಳಬಹುದು. ಲೌಕಿಕ ಕಾವ್ಯವಾದ ವಿಕ್ರಮಾರ್ಜುನ ವಿಜಯದ ಮುಕ್ತಾಯವು ಘನಘೋರ ದುರಂತವಾಗಿದೆ. ''ಕನಲ್ವ ಕೆಂಡದ ಮೇಲೆ ಪರೆಯ ಬೇವಿನೆಣ್ಣೆಯೊಳ್ ತೊಯ್ದಿಕ್ಕಿದ ಬೆಳ್ಳುಳ್ಳಿಯ ಕಂಪಿನಂತೆ,'' ಕುರುಕ್ಷೇತ್ರದ ರಣಭೂಮಿಯ ದುರ್ವಾಸನೆ ಸುತ್ತಣ ಪರಿಸರವನ್ನು ಮಲಿನಗೊಳಿಸಿ, ಅದರ ಮೇಲಿಂದ ಬೀಸಿಬರುವ ವಿಷಾನಿಲ ನಭೋಮಂಡಲಕ್ಕೂ ವ್ಯಾಪಿಸಿಬಿಟ್ಟದೆ. ಒಟ್ಟಾರೆ ನೆಲ ಜಲ ವಾಯುಮಂಡಲವೆಲ್ಲ ಮಲಿನಗೊಂಡು ಜೀವಕೋಟಿಯ ವಾಸಕ್ಕೆ ಅಯೋಗ್ಯವೆನಿಸಿದೆ.

ಆದರೆ ಇತ್ತ ಆದಿಪುರಾಣದ ಮುಕ್ತಾಯವು, ಆದಿದೇವನ ಸಮವಸರಣ ಮಂಟಪದ ಕಡೆಯಿಂದ ಬೀಸಿ ಬರುವ ಮಂದಮಾರುತದ ಸುಗಂಧಾನಿಲದಿಂದ ಕೂಡಿ ಆಹ್ಲಾದಕರವಾಗಿದ್ದು ಅದು ಜೀವ ಪರವಾಗಿದೆ. ಪಂಪನ ಒಂದು ಕಾವ್ಯ, ಮನುಷ್ಯ ಹಿಂಸಾರಭಸಮತಿಯಾದರೆ ಪರಿಣಾಮ ಏನಾಗುತ್ತದೆಂಬುದನ್ನು ಧ್ವನಿಸಿದರೆ, ಇನ್ನೊಂದು ಕಾವ್ಯ, ಅದೇ ಮನುಷ್ಯ ಅಹಿಂಸಾಪರನಾದರೆ ಹೇಗೆ ಲೋಕಹಿತ ಸಾಧನೆಯಾಗುತ್ತದೆ ಎಂಬುದನ್ನು ಪ್ರತಿಮಿಸುತ್ತದೆ. ಹೀಗೆ ಪಂಪ ತನ್ನ ಎರಡೂ ಕಾವ್ಯಗಳಲ್ಲಿ ವಿಶ್ವಮಾನ್ಯವಾದ ಜೀವಪರ ನಿಲುವು ಹೇಗಿರಬೇಕು, ಹೇಗಿರಬಾರದು ಎಂಬುದನ್ನು ತಿಳಿಸಿ ಸಂಸಾರಸಾರೋದಯನೆಂಬ ಬಿರುದಿಗೆ ಪಾತ್ರನಾಗಿದ್ದಾನೆ. ಆದ್ದರಿಂದಲೇ ಅವನ ಕಾವ್ಯಲೋಕ ''ನಿಚ್ಚಂ ಪೊಸತು ಅರ್ಣವಂಬೊಲತಿ ಗಂಭೀರಂ'' ಎನಿಸಿರುವುದು. ''ಬಿಳಿಯ ಮೋಡಗಳಿಂದ ಆಚ್ಛಾದಿತವಾದ ನೀಲಿ ಬಣ್ಣದ ಮನೋಹರವಾದ ಪುಟ್ಟಗೋಳ'' ಎಂಬುದಾಗಿ ಬಾಹ್ಯಾಂತರಿಕ್ಷ ವಿಜ್ಞಾನಿ ಭೂಮಿಯನ್ನು ಕಂಡು ಉದ್ಗರಿಸಿದ್ದಾನೆ. ಇದಕ್ಕೂ ಪಂಪ ವರ್ಣಿಸಿರುವ ಸಮವಸರಣ ಭೂಮಿಗೂ ತುಂಬಾ ಸಾದೃಶ್ಯವಿದೆ. ಆದರೆ, ಭೂಮಿಯ ಮೇಲಿರುವ ನಮಗಂತೂ ಈಗಲೀಗ ಈ ಭೂಮಿ ಸ್ವರ್ಗವಲ್ಲ; ಬಡತನ ದುಃಖ ದಾರಿದ್ರ್ಯಗಳ ಜನ್ಮಭೂಮಿ. ನಮ್ಮ ಪರಿಸರವೆಲ್ಲವೂ ವಿಷಮಯವಾಗುತ್ತಿದೆ. ಈ ಪರಿಸ್ಥಿತಿಗೆ ನಾವೇ ಕಾರಣ. ಈ ಭೂಮಿಯನ್ನು ನಾವು ದುಷ್ಯಂತ ಮಹಾರಾಜನು ಭಾವಿಸಿದಂತೆ, ಬೇಟೆಯ ಅರಣ್ಯವೆಂದು ತಿಳಿದಿದ್ದೇವೆಯೇ ಹೊರತು, ಕಣ್ವಾಶ್ರಮದ ವಟುಗಳು ಭಾವಿಸಿದಂತೆ ''ಇವು ಆಶ್ರಮದ ಜಿಂಕೆಗಳು ಕೊಲ್ಲಬೇಡ, ಕೊಲ್ಲಬೇಡ'' ಎಂದು ತಡೆಯುವ ನೈತಿಕ ಧೈರ್ಯದಿಂದ ಕೂಡಿದ ಜೀವಪರ ನಿಲುವನ್ನು ಬೆಳೆಸಿಕೊಂಡಿಲ್ಲ. ಭರತನ ರಾಣಿಯರಲ್ಲಿ ಮೂಡಿದ ಸ್ನೇಹ,

ಸದಸದ್ವಿವೇಕ ನಮ್ಮಲ್ಲಿ ಇನ್ನಾದರೂ ಮೂಡದಿದ್ದರೆ ನಮಗಿಲ್ಲಿ ಉಳಿಗಾಲವಿಲ್ಲ. ಇರುವುದೊಂದೇ ಈ ನೆಲ ಪಾಳ್ನಲವಾಗುವ ಮೊದಲು, ಇದು ನಮ್ಮ ತಾತ ಮುತ್ತಾತರಿಂದ ಬಂದ ಬಳುವಳಿಯಲ್ಲ, ಇದು ನಮ್ಮ ಮಕ್ಕಳು ಮೊಮ್ಮಕ್ಕಳಿಂದ ಎರವಲು ಪಡೆದದ್ದು – ಎಂಬ ಎಚ್ಚರ ಬರುವುದಗತ್ಯ. ಇಂಥ ಪರಿಸರ ಪ್ರಜ್ಞೆ ನಮಗಿಂದು ಆದರ್ಶ ಮಾತ್ರವಲ್ಲ ಅನಿವಾರ್ಯ ಕೂಡ. ಈ ಬಗೆಯ ಶಿಕ್ಷಣವನ್ನು ನಮ್ಮ ಮಕ್ಕಳಿಗೆ ತುರ್ತಾಗಿ ನೀಡಬೇಕು.

*ಸಂಕ್ರಮಣ, ೨೫-೧೧, ೧೯೯೦*

*ಸಾಹಿತ್ಯ ಪರಿಸರ, ೧೯೯೩, ಪು. ೬೪-೭೪*

## ೬೨. ಸರ್ವಾಧಿಕಾರ ಮತ್ತು ಸಂವೇದನಾಶೀಲತೆ

● ಬರಗೂರು ರಾಮಚಂದ್ರಪ್ಪ

ಸರ್ವಾಧಿಕಾರೀ ವ್ಯವಸ್ಥೆಯಲ್ಲಿ ಪರಮ ಅಧಿಕಾರ ಮತ್ತು ಪರಮ ವಿಧೇಯತೆಗಳೆಂಬ ಎರಡು ನೆಲೆಗಳು ಅಸ್ತಿತ್ವದಲ್ಲಿರುವುದರಿಂದ ಸಂವೇದನೆ ಮತ್ತು ಸೃಜನಶೀಲ ಪ್ರಕ್ರಿಯೆಗೆ ಸವಾಲಾಗಿ ಪರಿಣಮಿಸುತ್ತವೆ. ಈ ಮಾತು ಎರಡು ನೆಲೆಗಳಿಗೂ ಅನ್ವಯಿಸುತ್ತದೆ. ಪರಮಾಧಿಕಾರವುಳ್ಳ ಸರ್ವಾಧಿಕಾರಿಯ ಪಂಚೇಂದ್ರಿಯಗಳು ಪ್ರಾಮಾಣಿಕತೆ ಮತ್ತು ಅಧಿಕೃತತೆಯನ್ನು ಕಳೆದುಕೊಳ್ಳುತ್ತವೆ. ಜನರೊಂದಿಗೆ ನೇರ ಸಂವಾದವನ್ನು ಬೆಳಸದೆ ಊಳಿಗಮಾನ್ಯ ಪದ್ಧತಿಯ ದರ್ಪದ ಮೂಲಕ ಜನರ ಬದುಕನ್ನು ಬಂಧಿಸುವ ಈ ಸರ್ವಾಧಿಕಾರಿ ಸ್ವತಃ ತಾನೇ ಬಂಧಿತನಾಗಿರುತ್ತಾನೆ. ಯಾಕೆಂದರೆ ಜನರನ್ನು ವ್ಯಕ್ತಿ ಕೇಂದ್ರಿತ ಊಳಿಗಮಾನ್ಯ ವ್ಯವಸ್ಥೆಯಲ್ಲಿ ಕಟ್ಟಿಹಾಕುವಾಗಲೇ ಅವರ ಸಂಪರ್ಕವನ್ನು ಕಡಿದುಕೊಂಡು, ಹೊರ ಜಗತ್ತನ್ನು ನೋಡಲಾಗದ ಒಂಟಿಜೀವಿಯಾಗುತ್ತಾನೆ. ಒಂಟಿಯಾಗಿದ್ದರೂ ಒಂಟಿತನವನ್ನು ಅನುಭವಿಸಲಾಗದ ಅಧಿಕಾರ ಮದದಿಂದ ನಾಡಿನ ನೆಲದ ತುಂಬ ತನ್ನ ಹೆಸರು ಬಿತ್ತಿ ಬೆಳೆಯಲ್ಪಡುತ್ತಿದೆಯೆಂಬ ಭ್ರಮೆಯಲ್ಲಿ ಸಂವೇದನಾಶೀಲತೆಯನ್ನು ಕಳೆದುಕೊಳ್ಳುವ ಈತ, ಸ್ವತಃ ಸಂವೇದನಾಶೀಲನಾಗುವುದಿಲ್ಲ; ಸೃಜನಶೀಲತೆಗೆ ಪೂರಕವೂ ಆಗುವುದಿಲ್ಲ. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಆಗೊಮ್ಮೆ ಈಗೊಮ್ಮೆ ಕಂಡುಬರಬಹುದಾದ ಸರ್ವಾಧಿಕಾರಿ ಮನೋಧರ್ಮಕ್ಕೂ ಇದು ಅನ್ವಯಿಸುತ್ತದೆ. ಆದ್ದರಿಂದ ಇಲ್ಲಿ ರಾಜಕೀಯ ವ್ಯವಸ್ಥೆಯಂತೆಯೇ ಮುಖ್ಯವಾದದ್ದು ಮನೋಧರ್ಮ. ಅಧಿಕಾರ ಕೇಂದ್ರೀಕರಣದ ವಿರುದ್ಧವಿರುವ ಮನೋಧರ್ಮಕ್ಕೆ ಊಳಿಗಮಾನ್ಯ ವ್ಯವಸ್ಥೆಯಲ್ಲಿದ್ದೂ ಅದರಿಂದ ಹೊರ ಬರುವ ತುಡಿತ ಸಾಧ್ಯ. ಇಂಥ ಮನೋಧರ್ಮ ಕನಸುಗಳ ಗೂಡಾಗಿರುತ್ತದೆ; ಭ್ರಮೆಗಳ ಬಂಡಲಾಗಿರುವುದಿಲ್ಲ. ಪ್ರಜಾಪ್ರಭುತ್ವದಲ್ಲಿ ಆಸ್ತಿ ಮತ್ತು ಅಧಿಕಾರ ಕೇಂದ್ರೀಕರಣದ ವಕ್ತಾರರಾದ ವ್ಯಕ್ತಿಗಳು ಆಳದಲ್ಲಿ ಸರ್ವಾಧಿಕಾರೀ ಮನೋಧರ್ಮವನ್ನೇ ಉಳ್ಳವರಾಗಿದ್ದು ಸಹಜಾಸಂವೇದನೆಗಳಿಂದ ವಂಚಿತರಾಗುತ್ತಾರೆ: ಯಾಕೆಂದರೆ ಇವರು ಭ್ರಮೆಯ ಬಂಧನದಲ್ಲಿರುತ್ತಾರೆ. ಊಳಿಗಮಾನ್ಯ ವ್ಯವಸ್ಥೆಯಲ್ಲಿ ಈ ಭ್ರಮೆಯ ಬಂಧನ ಮತ್ತಷ್ಟು ಬಿಗಿಯಾಗಿರುತ್ತದೆ.

ಇಂಥ ಭ್ರಮೆಗಳ ಬಂಧನದಿಂದ ಹೊರಬರುವ ಪ್ರಯತ್ನದಿಂದಲೇ ಬುದ್ಧ ಸಂವೇದನಾಶೀಲನಾಗಿ ಕಾಣುತ್ತಾನೆ. ಆತನ ಸುಪ್ತ ಸಂವೇದನಾಶೀಲತೆ ಜಾಗೃತವಾಗುವುದು ಹೊರ ಜಗತ್ತನ್ನು ನೋಡಿದಾಗ; ತನ್ನ ಕಣ್ಣುಗಳ ಮೂಲಕ ಅನುಭವಿಸಿದಾಗ. ಈ ನೋಟದಲ್ಲಿ ಅವನ ಕಣ್ಣು ಅವನದೇ ಆಗಿದ್ದುದರಿಂದ ನಿಜದ ನೆಲೆಯರಿಯುವ ಸಂವೇದನಾಶೀಲತೆ ಸಾಧ್ಯವಾಯಿತು. ಬದುಕಿನ ಜಡ ನೆಲೆಗಳನ್ನು ಪರಿವರ್ತಿಸುವ ಕ್ರಿಯೆಯ ಮೂಲಕವೇ ಆತ ಸೃಜನಶೀಲ ನೆಲೆ ನಿರ್ಮಿಸಿದ.

ಆದರೆ ಸರ್ವಾಧಿಕಾರೀ ಮನೋಧರ್ಮದ ಕಣ್ಣು, ಕಿವಿ, ನಾಲಗೆ ಮುಂತಾದ ಪಂಚೇಂದ್ರಿಯಗಳು, ನಾನು ಮೊದಲೇ ಹೇಳಿದಂತೆ, ಪ್ರಾಮಾಣಿಕತೆ ಮತ್ತು ಅಧಿಕೃತತೆಯನ್ನು ಕಳೆದುಕೊಂಡಿರುತ್ತವೆ. ಯಾಕೆಂದರೆ ಸರ್ವಾಧಿಕಾರಿಗೆ ನೇರ ಸಂಪರ್ಕ ಮತ್ತು ಸಂವಾದಗಳು ಕಡಿದುಬಿದ್ದು ಕಂಡವರ ಕಣ್ಣು ಕಿವಿಗಳೇ ಇವನ ಕಣ್ಣು ಕಿವಿಗಳಾಗಿರುತ್ತವೆ. ತನ್ನ ಆಪ್ತೇಷ್ಟರು ಹೇಳಿದ್ದನ್ನು

ಕೇಳಿ ನಂಬುತ್ತಾನೆ. ಆಪ್ತರ ಕಣ್ಣುಗಳ ಮೂಲಕವೇ ಹೊರ ಜಗತ್ತನ್ನು ನೋಡುತ್ತಾನೆ. ಈ ಕಣ್ಣು ಕಿವಿಗಳಿಗನುಗುಣವಾಗಿಯೇ ನಾಲಗೆಯೂ ನುಡಿಯುತ್ತದೆ. ಹೀಗಾಗಿ ಅನ್ಯರು ಕಟ್ಟಿಕೊಡುವ ದೃಶ್ಯ, ಹೇಳುವ ಮಾತು, ಕೇಳಿಸಿದ ದನಿ, ಸಿದ್ಧಮಾಡಿಟ್ಟ ಸುವಾಸನೆ– ಎಲ್ಲವೂ ಇವನದಾಗುತ್ತದೆ. ಆದರೆ ಅಧಿಕೃತವಾಗಿ ಯಾವುದೂ ಇವನದಾಗಿರುವುದಿಲ್ಲ. ಇಂಥ ವಿಪರ್ಯಾಸದ ನಡುವೆ ಸ್ಪರ್ಶೇಂದ್ರಿಯದ ಮಾತಿರಲಿ, ನೇರವಾದ ಮಾನಸಿಕ ಸ್ಪರ್ಶದಿಂದಲೂ ಈತ ವಂಚಿತನಾಗುತ್ತಾನೆ. ಅನ್ಯಾವಲಂಬಿತ ಅನುಭವಕ್ಕನುಗುಣವಾಗಿ ವರ್ತಿಸುವ ಈತನ ಪಂಚೇಂದ್ರಿಯಗಳಿಗೆ ಪ್ರತ್ಯಕ್ಷ ಅನುಭವದ ಅವಕಾಶ ತೀರಾ ಕಡಿಮೆಯಾಗಿ ಸಂವೇದನೆ ಮತ್ತು ಸೃಜನಶೀಲತೆಯ ಅಧಿಕೃತ ಶಕ್ತಿಯನ್ನು ಕಳೆದುಕೊಳ್ಳುತ್ತವೆ.

ಸರ್ವಾಧಿಕಾರೀ ಮನೋಧರ್ಮದಲ್ಲಿ ಸುಪ್ತಸ್ತರದಲ್ಲಾದರೂ ಜನಮುಖಿಯಾದ ಒಂದು ಎಳೆಯಿದ್ದರೆ, ಹೊರ ಜಗತ್ತನ್ನು ತನ್ನದೇ ಕಣ್ಣುಗಳ ಅಧಿಕೃತತೆಯಿಂದ ಅವಲೋಕಿಸಿದ ಯಾವುದಾದರೂ ಒಂದು ಸಂದರ್ಭ ಈ ಎಳೆಯ ಮೂಲಕ ಕಾಡಿಸಲು ಸಾಧ್ಯ. ಸರ್ವಾಧಿಕಾರಿಯ ಏಕಾಂತದಲ್ಲಿ ಈ ಎಳೆ ಸೆಳೆಯತೊಡಗಿದರೆ, ಅಂತರಂಗ ಅಲುಗಾಡಿ ಒಳಗಣ್ಣಿನ ಪೊರೆ ಹರಿದೀತೆಂದು ಆಶಿಸಬಹುದು. ಚರಿತ್ರೆಯಲ್ಲಿ ಇಂಥ ಉದಾಹರಣೆಗಳು ತುಂಬಾ ವಿರಳ. ಒಟ್ಟಿನಲ್ಲಿ ಸರ್ವಾಧಿಕಾರೀ ಮನೋಧರ್ಮಕ್ಕೆ ಸಂವೇದನೆಯ ಸಾಚಾತನವಿರುವುದಿಲ್ಲ.

ಇನ್ನೊಂದು ಕಡೆ, ಪರಮ ವಿಧೇಯತೆಯಿಂದ ಬದುಕುವ ಜನಸಾಮಾನ್ಯರಿದ್ದಾರೆ. ಇವರ ಕಣ್ಣು, ಕಿವಿ, ನಾಲಗೆಗಳೂ ವ್ಯವಸ್ಥೆಯ ನಿಯಂತ್ರಣಕ್ಕೊಳಪಟ್ಟಿರುತ್ತವೆ. ಆದ್ದರಿಂದ ಇವರ ಕಣ್ಣುಗಳಲ್ಲಿ ಕೂತ ''ವ್ಯವಸ್ಥೆ'' ನೋಟದ ನೆಲೆಯನ್ನು ತನ್ನಂತೆ ತಿರುಗಿಸಿಕೊಳ್ಳಬಲ್ಲದು. ಇದೇ ವ್ಯವಸ್ಥೆ ಕಿವಿಯಲ್ಲಿ ಕೂತು ದನಿಗಳನ್ನು ಪರೀಕ್ಷಿಸಿ ಒಳಬಿಡಬಲ್ಲದು; ನಾಲಗೆಯಲ್ಲಿ ಕೂತು ನುಡಿಸಬಲ್ಲದು. ಚರ್ಮದಲ್ಲೊಂದಾಗಿ ಸ್ಪೃಶ್ಯ-ಅಸ್ಪೃಶ್ಯ ಅಂತರವನ್ನು ನಿರ್ಮಾಣ ಮಾಡಬಲ್ಲದು. ಹೀಗೆ ಪರಮ ವಿಧೇಯತೆಯ ನೆಲೆಯಲ್ಲೂ ಪಂಚೇಂದ್ರಿಯಗಳು ಪ್ರಾಮಾಣಿಕತೆ ಮತ್ತು ಅಧಿಕೃತತೆಯನ್ನು ಕಳೆದುಕೊಳ್ಳುವ ಸಾಧ್ಯತೆಯೇ ಹೆಚ್ಚು. ಇಷ್ಟಾದರೂ 'ಅಧಿಕಾರದ ಅರಮನೆ'ಗಳಿಂದ ಹೊರಗೆ ಬದುಕುವ ಜನಸಾಮಾನ್ಯರಿಗೆ ಬದುಕನ್ನು ಅದು ಇರುವಂತೆಯೇ ಒಳಗೊಳ್ಳುವುದು ಸಾಧ್ಯ. ವ್ಯವಸ್ಥೆಯ ಒಳ ಹಿಡಿತದ ನಡುವೆಯೂ ನೇರ ಅನುಭವದ ತೀವ್ರತೆ ತಟ್ಟಿ ಸತ್ಯಶೋಧನೆಯ ಸ್ಫೂರ್ತಿ ಹುಟ್ಟುವುದು ಸಾಧ್ಯ. ಈ ಸಾಧ್ಯತೆಗಳಿರುವುದರಿಂದಲೇ ಹೊಸ ಸಂವೇದನೆ ಮತ್ತು ಸೃಜನಶೀಲತೆಗಳು ಕರುಳಲ್ಲಿ ಕುಡಿಯೊಡೆಯುತ್ತವೆ; ಅಂತರಂಗದಲ್ಲಿ ಅರಳುತ್ತವೆ. ಕೆಲವು ಸಾರಿ ಈ ಕರುಳಕುಡಿ ಕಿಡಿಯಾಗುವುದುಂಟು. ಆಗ ವ್ಯವಸ್ಥೆ ವಿರೋಧಿ ಪ್ರತಿಕ್ರಿಯೆಯನ್ನು ಕಾಣುತ್ತೇವೆ.

ಈ ಸಂದರ್ಭದಲ್ಲಿ ನನಗೆ 'ಪಂಚತಂತ್ರ'ದ ನೆನಪು ಬರುತ್ತದೆ. 'ಪಂಚತಂತ್ರ' ಕೃತಿಯಲ್ಲಿ ಕಷ್ಟಕ್ಕೆ ಸಿಕ್ಕಿದ ಮೃಗರಾಜನಿಗೆ ಸಹಾಯ ಮಾಡುವ ಬಗ್ಗೆ ಕರಟಕ-ದಮನಕರಲ್ಲಿ (ನರಿಗಳು) ಚರ್ಚೆ ನಡೆಯುತ್ತದೆ. ಕರಟಕ ದಮನಕನಿಗೆ ''ಉದರಭರಣ ಮಾತ್ರಮಪ್ಪಂತೆ ರಾಜಾನುಸೇವನಂಗೆಯ್ದಿರ್ಪವು'' ಎಂದು ಹೇಳುತ್ತಾನೆ. ಈತನಿಗೆ ರಾಜಸೇವೆಗೆ ಉತ್ಸಾಹವೇನೂ ಇಲ್ಲ. ಆದರೆ ಹೊಟ್ಟೆಪಾಡಿಗಾಗಿ ರಾಜಸೇವೆ ಮಾಡುತ್ತಿದ್ದೇನೆಯೇ ಹೊರತು ಬೇರೇನೂ ಅಲ್ಲವೆಂದು ಸ್ಪಷ್ಟಪಡಿಸಿ ಈ ಸಂದರ್ಭದಲ್ಲಿ ಮೇಲೆ ಬಿದ್ದು ರಾಜನ ಸಹಾಯಕ್ಕೆ ಹೋಗಲು ಹಿಂದೇಟು ಹಾಕುತ್ತಾನೆ. ಮೃಗರಾಜನ ಸ್ನೇಹ ಬೆಳೆಸಬೇಕೆಂದು ಸಂಜೀವಕನನ್ನು ಒತ್ತಾಯಿಸಿದಾಗ ''ಸೇವಾವೃತ್ತಿ

ಕಷ್ಟಂ. ರಾಜಸೇವೆಯೆಂಬುದು ಜೀವನೋಪಾಯಕ್ಕೆ ಕಾರಣಂ'' ಎಂದು ಹೇಳುವುದಲ್ಲದೆ ''ಇಂತು ಲಘುತರಮಪ್ಪ ಸೇವೆಯಿಂ ತನ್ನಿಚ್ಛೆಯೊಳ್ ಬರ್ದುಂಕುವ ಶುನಕಂ ಲೇಸೆಂದು ವಿದ್ವಾಂಸರ್ ಪೇಳ್ವರ್'' ಎಂದು ಸಮರ್ಥನೆ ಕೊಡುತ್ತಾನೆ. ರಾಜಸೇವೆಗಿಂತ ತನ್ನಷ್ಟಕ್ಕೆ ತಾನು ಸ್ವತಂತ್ರವಾಗಿ ಬದುಕುವ ನಾಯಿಯೇ ಉತ್ತಮವೆಂಬ ಈ ಮಾತು ಅಂತರಂಗದ ಕಿಡಿಯಾಗಿದೆ. ಪಾತ್ರವೊಂದರ ಬಾಯಲ್ಲಿ ಬಂದರೂ ಆ ಕಾಲದ ಒಂದು ಒಳದನಿಯಾಗಿ ಇದಕ್ಕೆ ಮಹತ್ವವಿದೆ. ಇದೇ ಸಂಜೀವಕನ ಬಾಯಲ್ಲಿ ಬರುವ ಇನ್ನೊಂದು ಮಾತನ್ನು ಗಮನಿಸೋಣ: ''ಅರಸಿಂಗೆ ಹಿತವ ಮಾಡುವಾತಂ ಪ್ರಜೆಗೆ ಹಗೆಯಹನು. ಪ್ರಜೆಗೆ ಹಿತವ ಮಾಡುವಾತನನ್ ಅರಸುಗಳ್ ಕೈಪಿಡಿಯರು'' – ಎಂಬ ಈ ಮಾತು ಊಳಿಗಮಾನ್ಯ ಪದ್ಧತಿಯ ನಡುವೆಯೇ ಕಿಡಿಯೊಡೆಯುತ್ತಿದ್ದ ವರ್ಗಪ್ರಜ್ಞೆಯ ಒಂದು ಉದಾಹರಣೆ.

ಹೀಗೆ ಜನತೆಯ ಅನುಭವ, ನಿಯಂತ್ರಕಗಳ ನಡುವೆಯೂ ಅಂತರಂಗದ ಅಧಿಕೃತತೆಗೆ ಅಭಿವ್ಯಕ್ತಿ ಕೊಡುವ ಸಾಧ್ಯತೆಗಳು ಇದ್ದೇ ಇರುತ್ತವೆ. ಪರಮ ವಿಧೇಯತೆಯ ವಾತಾವರಣದಲ್ಲೂ ಅನುಭವದ ಒತ್ತಡ ಹುಟ್ಟುಹಾಕುವ ಸೆಳೆತದಲ್ಲಿ ಸತ್ಯ ಸ್ಫೋಟಗೊಳ್ಳುವ ಸಾಧ್ಯತೆಯೂ ಇರುತ್ತದೆ. ಇಲ್ಲಿ 'ಪಂಚತಂತ್ರ'ದಲ್ಲಿ ಸಂಜೀವಕ ಹೇಳುವ ರಾಜ ವಿರೋಧಿ ಮಾತುಗಳನ್ನು ನೋಡಬಹುದು:

''ಕುಲಜನಪ್ಪನಂ ಕುಲಹೀನನೆಂದಪರ್, ಕುಲಹೀನನಂ ಕುಲಜಾತನೆಂದರ್, ಕಲಿಯಂ ಕಡುಪಂದೆಯೆಂದು ಮಾತಾಡುವರ್; ಕಡುಪಂದೆಯಂ ಕಲಿಯೆಂದು ನುಡಿವರ್; ಪಲಬರ್ ಜೀಯೆನೆ ನನ್ನಿಯಂ ನುಡಿವನಂ ಪುಸಿಗನೆಂಬರ್; ಪುಸಿವಾತಗಂ ನೆಲದೊಳೀತನೆ ಪುಸಿಯಿಲ್ಲದವನೆಂಬ ಅರಸುಗಳ್ಗಿದು ನೈಜ ಗುಣಮಾಗಿರ್ಕುಂ'' – ಎಂಬ ಈ ಮಾತುಗಳಲ್ಲಿ ರಾಜರ ಅಪ್ರಾಮಾಣಿಕತೆ, ವ್ಯತ್ಯಸ್ತಗ್ರಹಿಕೆ ಮತ್ತು ನೋಟಗಳನ್ನು ಗುರುತಿಸಬಹುದು.

ಸರ್ವಾಧಿಕಾರೀ ಅರಸರ ಕಣ್ಣು, ಕಿವಿ, ನಾಲಗೆಗಳು ತಂತಮ್ಮ ಅನುಭವ ಪ್ರಾಮಾಣ್ಯದಿಂದ ವಂಚಿತವಾಗಿರುವ 'ವ್ಯವಸ್ಥೆ'ಯೂ ಈ ಮಾತುಗಳಿಂದ ಅನಾವರಣಗೊಳ್ಳುತ್ತದೆ. ಆದ್ದರಿಂದಲೇ ಸಂಜೀವಕ ಹೇಳುತ್ತಾನೆ: ''ಇಂತಪ್ಪ ಅವಿವೇಕಿಗಳುಮ್ ಅಜ್ಞಾನಿಗಳುಮಪ್ಪ ಅರಸುಗಳನೋಲೈಪುದು ಅರಿದು. ಎಂತುಂ ಸೇವಾವೃತ್ತಿಯೇ ಕಷ್ಟಮ್.''

ಇಂಥ ಪ್ರತಿಕ್ರಿಯೆಗಳಲ್ಲದೆ, ಸೂಕ್ಷ್ಮಸ್ತರದಲ್ಲಿ ಸೃಜನಶೀಲ ಸ್ವಾತಂತ್ರ್ಯವನ್ನು ಸ್ಥಾಪಿಸುವ ಪಂಪನಂಥ ಪ್ರಮುಖ ಕವಿ, ತನ್ನ 'ವಿಕ್ರಮಾರ್ಜುನ ವಿಜಯ'ದಲ್ಲಿ ಅರ್ಜುನನನ್ನು, ಆಶ್ರಯಕೊಟ್ಟ ರಾಜನಾದ ಅರಿಕೇಸರಿಯೊಂದಿಗೆ ಸಮೀಕರಿಸಿಯೂ ಪ್ರತಿನಾಯಕ ಕರ್ಣನ ಮೂಲಕ ಮೌಲ್ಯಪರಿಶೋಧನೆಯ ಪ್ರಶ್ನೆಗಳನ್ನೆತ್ತುವುದು ಮಹತ್ವದ ಸಂಗತಿ.

ಕುಲಂ ಕುಲಮಲ್ತು ಚಲಂ ಕುಲಂ
ಗುಣಂ ಕುಲಭಿಮಾನಮೊಂದೆ ಕುಲಮಣ್ಮು ಕುಲಂ

ಕುಲಮೆಂಬುದುಂಟೆ ಬೀರಮೆ
ಕುಲಮಲ್ಲದೆ ಕುಲಮನಿಂತು ಪಿಕ್ಕದರಿಂ ನೀ
ಮೊಲಿದಲ್ಲಿ ಪುಟ್ಟಿ ಬೆಳೆದಿರೊ
ಕುಲಮಿರ್ದುದೆ ಕೊಡದೊಳಂ ಶರಸ್ತಂಭದೊಳಂ ॥

– ಕುಲದ ಸಾಂಪ್ರದಾಯಿಕ ಪರಿಕಲ್ಪನೆಯನ್ನು ಬದಲಾಯಿಸುವ ಈ ಮಾತುಗಳು ಕರ್ಣನ ಬಾಯಿಂದ ಬಂದಿದ್ದರೂ ಸಂಸ್ಕೃತಿಯ ಚಲನಶೀಲಗತಿಗೆ ಪಂಪ ಕವಿಯ ಸಂವೇದನೆ

ಪ್ರತಿಕ್ರಿಯಿಸುತ್ತಿದೆ; 'ವಿಕ್ರಮಾರ್ಜುನ ವಿಜಯ'ದಲ್ಲಿ ಕರ್ಣ ಪಾತ್ರದ ಮೂಲಕ ಉಂಟುಮಾಡುವ ಗಾಢ ಅನುಭವ ಮತ್ತು ಎತ್ತುವ ಪ್ರಶ್ನೆಗಳು ಊಳಿಗಮಾನ್ಯ ಪದ್ಧತಿಯ ಸರ್ವಾಧಿಕಾರೀ ಸಂಸ್ಕೃತಿಗೆ ತೋರಿಸಿದ ಸೃಜನಶೀಲ ಪ್ರತಿಕ್ರಿಯೆಗಳೂ ಆಗಿವೆ. ''ನೆನೆವೊಡೆ ಕರ್ಣನಂ ನೆನೆಯ'', ''ಕರ್ಣ ರಸಾಯನಮಲ್ತೆ ಭಾರತಂ'' ಎಂಬ ಮಾತುಗಳು ಕೃತಿಯ ಒಂದು ಪ್ರಮುಖ ನೆಲೆಯನ್ನು ಪ್ರಕಟಿಸುತ್ತವೆ. ಆಶ್ರಯ ಕೊಟ್ಟ ಅರಿಕೇಸರಿಯನ್ನು ಅರ್ಜುನನ ಮೂಲಕ ಕಡೆಯುವ ಪ್ರಯತ್ನದ ನಡುವೆಯೇ ನಮ್ಮ ಅನುಭವ ಮತ್ತು ಅರಿವನ್ನು ತಟ್ಟುವ ಕರ್ಣಪರ ಸಂಗತಿ ಪಂಪ ಕವಿಯ ಸಂವೇದನೆ ಮತ್ತು ಸೃಜನಶೀಲ ಅಭಿವ್ಯಕ್ತಿಯ ಒಂದು ವಿಧಾನವೂ ಆಗಿದೆ. ಬದಲಾಗುತ್ತಿರುವ ಬದುಕಿನ ಹೊಸ ಆಶಯಗಳನ್ನು ಒಳಗೊಂಡ ಅರಿವು ಮತ್ತು ಅನುಭವಗಳು ಸತ್ಯಸ್ಥಾಪನೆಗೆ ತೊಡಗಿದ ಎರಡು ವಿಭಿನ್ನ ವಿಧಾನಗಳನ್ನು ದುರ್ಗಸಿಂಹನ 'ಪಂಚತಂತ್ರ' ಮತ್ತು ಪಂಪನ 'ವಿಕ್ರಮಾರ್ಜುನ ವಿಜಯ'ದಲ್ಲಿ ನಾವು ಗುರುತಿಸಬಹುದು.

ಈಗ ಇನ್ನೊಂದು ಉದಾಹರಣೆಯನ್ನು ನೋಡೋಣ.

ಊಳಿಗಮಾನ್ಯ ಸರ್ವಾಧಿಕಾರದ ಫಲವಾಗಿ ಸಂಭವಿಸಿದ ಕುರುಕ್ಷೇತ್ರ ಯುದ್ಧದ ಕತೆ ನಮಗೆ ಗೊತ್ತೇ ಇದೆ. ಆಸ್ತಿ ಮತ್ತು ಅಧಿಕಾರ ಕೇಂದ್ರೀಕರಣದ ಪ್ರತೀಕವಾದ ದುರ್ಯೋಧನ ಪಾಂಡವರಿಗೆ ಐದು ಗ್ರಾಮ ಕೊಡುವುದಕ್ಕೂ ಒಪ್ಪುವುದಿಲ್ಲ. ಆಸ್ತಿ ಮತ್ತು ಅಧಿಕಾರಗಳನ್ನು ತನ್ನಲ್ಲೇ ಕೇಂದ್ರೀಕರಿಸಿಕೊಂಡು ಸರ್ವಾಧಿಕಾರೀ ಧೋರಣೆಯಿಂದ ವರ್ತಿಸಿ ಯುದ್ಧಕ್ಕೆ ಸಿದ್ಧನಾಗುತ್ತಾನೆ. ಈ ಕುರುಕ್ಷೇತ್ರ ಯುದ್ಧವು ಒಂದೇ ವರ್ಗಕ್ಕೆ ಸೇರಿದ ಎರಡು ಗುಂಪುಗಳ ಘರ್ಷಣೆ. ದುರ್ಯೋಧನ ಮತ್ತು ಧರ್ಮರಾಜಾದಿಗಳು ಒಂದೇ ವರ್ಗ ನೆಲೆಯುಳ್ಳವರಾಗಿದ್ದು ಇಬ್ಬರ ನಡುವೆ ನಡೆಯುವ ಯುದ್ಧವನ್ನು ಕುಮಾರವ್ಯಾಸ ಕವಿ ಅತ್ಯಂತ ಉತ್ಸುಕತೆಯಿಂದಲೇ ಚಿತ್ರಿಸಿದ್ದಾನೆ. ಯುದ್ಧದ ಉತ್ಕಟಾನುಭವವನ್ನು ಕೊಡುತ್ತಲೇ ಅದರ ಅಮಾನವೀಯ ಸ್ತರವನ್ನು ಗುರುತಿಸುವ ಸಂದರ್ಭವೂ ಈತನ ಸೃಜನಶೀಲತೆಗೆ ಸಾಧ್ಯವಾಗಿದೆ. ಕರ್ಣನ ಮೇಲೆ ಪಾಂಡವರ ಸೈನ್ಯ ಸಮೂಹ ಎರಗಿದ ಸಂದರ್ಭದ ಈ ಪದ್ಯದ ಭಾಗವನ್ನು ನೋಡಿ:

> ಉರಿಯ ಪೇಟೆಗಳಲಿ ಪತಂಗದ
> ಸರಕು ಮಾರದೆ ಮರಳುವುದೆ ನಿ
> ಬ್ಬರದ ಬಿರುದಿನೊಳೀ ಮಹಾರಥ ರಾಜಿ ರವಿಸುತನ
> ಕೆರಳಿಚಿದಸೈ......

ಇಲ್ಲಿ ಕರ್ಣನ ಮೇಲೆ ಬಿದ್ದ ಸೈನ್ಯವೇ ಪತಂಗ. ಇದು ಉರಿಗೆ ಸಿಕ್ಕಿ ನಾಶವಾಗದೆ ಇರುತ್ತದೆಯೇ ಎಂಬುದು ಇಲ್ಲಿನ ಅರ್ಥ. ಆದರೆ ಈ ಸಾಲುಗಳ ಅರ್ಥ ಇಲ್ಲಿಗೇ ನಿಲ್ಲುವುದಿಲ್ಲ. ಪೇಟೆ, ಸರಕು, ಮಾರು– ಈ ಪದಗಳು ವ್ಯಾಪಾರದ ಪರಿಭಾಷೆಗೆ ಸೇರಿವೆ. ಇಲ್ಲಿ ಸೈನಿಕ ಪತಂಗಗಳು ಕೇವಲ 'ಸರಕು'. ಅವು ಇಲ್ಲಿ ಮಾರಲ್ಪಡುತ್ತವೆ. ಮಾರಲ್ಪಡುವುದು 'ಉರಿಯ ಪೇಟೆಗಳಲಿ'. ಅಂದರೆ ಯುದ್ಧದ ಉತ್ಕಟ ಸಂದರ್ಭದಲ್ಲಿ ವ್ಯಾಪಾರದ ಪರಿಭಾಷೆಯನ್ನು ಬಳಸುವ ಮೂಲಕ ಕುಮಾರವ್ಯಾಸ ಕವಿ ಯುದ್ಧದ ವ್ಯಾವಹಾರಿಕ ನೆಲೆಯನ್ನು ಸೂಕ್ಷ್ಮವಾಗಿ ಹೇಳುತ್ತಿದ್ದಾನೆ. ಸೈನಿಕರು ಕೇವಲ ಸರಕುಗಳಾಗಿ ಪೇಟೆಯಲ್ಲಿ ಮಾರಲ್ಪಡುವ ಸನ್ನಿವೇಶವೊಂದು ಮನುಷ್ಯ ಸಂಬಂಧಗಳ ಅವನತಿಯನ್ನು ಸೂಚಿಸುತ್ತದೆ. ಯುದ್ಧದಲ್ಲಿ 'ಮನುಷ್ಯ' ಮುಖ್ಯವಾಗುವುದಿಲ್ಲ. ಆತ 'ಸರಕು' ಮಾತ್ರವಾಗುತ್ತಾನೆಂಬ ಧ್ವನಿ ಹೊರಡಿಸುವ ಈ ರೂಪಕ ಅನನ್ಯವಾದುದು.

ಸರ್ವಾಧಿಕಾರಿ ಮನೋಧರ್ಮ ಉಂಟುಮಾಡುವ ಒತ್ತಡದಲ್ಲಿ ಒಂದೇ ರೀತಿಯ ಕ್ರಿಯೆ-ಪ್ರತಿಕ್ರಿಯೆಗಳನ್ನು ನಿರೀಕ್ಷಿಸಲಾಗದು. ಆದರೆ ಈ ಒತ್ತಡದ ನಡುವೆಯೂ ಯಥಾಸ್ಥಿತಿಯನ್ನು ಮೀರುವ ಕ್ರಿಯೆ ಮುಖ್ಯವಾದುದು. ಮೀರುವ ಕ್ರಿಯೆ, ಸೃಜನಶೀಲತೆಗೆ ಚೈತನ್ಯವನ್ನು ತಂದುಕೊಡುತ್ತದೆ. ಮೀರುವ ಮನಸ್ಸಿದ್ದೂ ಮೀರಲಾಗದ 'ಸಂಕಟ'ಕ್ಕೂ ಅರ್ಥವಿದೆ. ಆದರೆ ಮೀರಬಾರದೆಂಬ ಜಡ ಸಂಕಲ್ಪ, ತನ್ನ ಪರಿಣಾಮದಲ್ಲಿ ಸರ್ವಾಧಿಕಾರೀ ಮನೋಧರ್ಮದಷ್ಟೇ ಅಪಾಯಕಾರಿಯಾಗಬಲ್ಲದು. ಕುಮಾರವ್ಯಾಸ ಭಾರತದ ಒಂದು ಸನ್ನಿವೇಶದ ವಿವರಣೆ, ನನ್ನ ಈ ಮಾತುಗಳನ್ನು ಸ್ಪಷ್ಟಪಡಿಸುತ್ತದೆ. ಸಭಾಪರ್ವದಲ್ಲಿ ನಡೆಯುವ ಪಗಡೆಯಾಟ, ಮಹಾಭಾರತ ಕತೆಯ ಮುಂದಿನ ಘಟನಾವಳಿಗಳ ಪ್ರೇರಕ ನೆಲೆ, ಧರ್ಮರಾಯ ಪಗಡೆಯಾಟದಲ್ಲಿ ತನ್ನದೆಲ್ಲವನ್ನೂ ಸೋಲುತ್ತಾನೆ. ದ್ರೌಪದಿಯನ್ನೂ ಸೋಲುತ್ತಾನೆ. ಈಕೆಯನ್ನು ಆಸ್ಥಾನಕ್ಕೆ ಎಳೆತಂದಾಗ ಅವಳು ತನ್ನನ್ನು ಪಣವಾಗಿಡುವ ಅಧಿಕಾರ ಧರ್ಮರಾಯನಿಗಿದೆಯೇ ಎಂಬ ತಾಂತ್ರಿಕ ಪ್ರಶ್ನೆಯೊಂದನ್ನು ಮುಂದಿಡುತ್ತಾಳೆ. ಮುಂಚೆಯೇ ರಾಜ್ಯ ಕೋಶಾದಿಗಳನ್ನು ಸೋತವನಿಗೆ ಮತ್ತೆ ಪತ್ನಿಯನ್ನು ಪಣವಾಗಿಡುವುದು ಹೇಗೆ ಸಾಧ್ಯ ಎಂಬುದು ಆಕೆಯ ಪ್ರಶ್ನೆ. ಪ್ರಶ್ನೆಗೆ ಸರಿ ಉತ್ತರ ಸಿಗುವ ಮಾತಿರಲಿ, ವಸ್ತ್ರಾಪಹರಣಕ್ಕೆ ತೊಡಗಿದಾಗ ವಿವಿಧ ವ್ಯಕ್ತಿಗಳ ಪ್ರತಿಕ್ರಿಯೆಯ ಸ್ವರೂಪ ಅವರವರ ನೆಲೆ-ನಿಲುವುಗಳನ್ನು ಅನಾವರಣಗೊಳಿಸುತ್ತದೆ. ಇಲ್ಲಿ ದುರ್ಯೋಧನನು – ಮೊದಲೇ ಹೇಳಿದಂತೆ ಅಧಿಕಾರ ಕೇಂದ್ರೀಕರಣದ ಪ್ರಭುತ್ವ ಶಕ್ತಿ; ಸರ್ವಾಧಿಕಾರಿ. ಈತ ಶಕುನಿ, ದುಶ್ಶಾಸನಾದಿಗಳ ಕಣ್ಣು, ಕಿವಿ, ನಾಲಗೆಗಳ ಮೂಲಕ ದೃಶ್ಯ, ಶ್ರವ್ಯ ಮತ್ತು ಧ್ವನಿಶಕ್ತಿಯನ್ನು ಪಡೆಯುತ್ತಿರುವ ಪ್ರಭು. ಯಾಕೆಂದರೆ ಸರ್ವಾಧಿಕಾರಿಗೆ ಸಂವೇದನೆಯ ಸೌಜನ್ಯ ಇರುವುದಿಲ್ಲ. ಕೇಂದ್ರೀಕೃತ ಅಧಿಕಾರದ ಮದದಲ್ಲಿ ಸಂವೇದನೆಯ ಶಕ್ತಿ-ಸೌಜನ್ಯಗಳು ಹೂತು ಹೋಗುತ್ತವೆ. ಅಧಿಕಾರ ಮದವೇ ಈತನ ದುಷ್ಟಸಂವೇದನೆಯಾಗುತ್ತದೆ; ಭ್ರಮೆಯಲ್ಲಿ ಬಂಧಿಸುತ್ತದೆ. ದುರ್ಯೋಧನನ ಆಜ್ಞಾಪಾಲಕ ದುಶ್ಶಾಸನ, ದುಷ್ಟತನದ ಮೂರ್ತರೂಪವಾಗಿ ಸೀರೆ ಸೆಳೆಯುತ್ತಾನೆ. ಆಗ ದುರ್ಯೋಧನಾದಿಗಳನ್ನು ಹೊರತುಪಡಿಸಿ ಮೂರು ಮುಖ್ಯ ನೆಲೆಗಳು ನಿರ್ಮಾಣವಾಗುತ್ತವೆ. ಕೊಟ್ಟ ಮಾತಿಗೆ ತಪ್ಪದ ಜಡನಿಷ್ಠೆಯ ಧರ್ಮರಾಜ, ತನ್ನ ಪತ್ನಿಯ ವಸ್ತ್ರಾಪಹರಣವನ್ನು ವಿರೋಧ ಮಾಡಲಾಗದ ಅಸಹಾಯಕ ಸ್ಥಿತಿ ತಲುಪಿದ್ದಾನೆ ದುರ್ಯೋಧನನ ಅನ್ನದ ಋಣಕ್ಕೆ ಬದ್ಧವಾಗುವ 'ಮೌಲ್ಯ'ದಲ್ಲಿ ಭೀಷ್ಮದ್ರೋಣಾದಿಗಳು ನಿಷ್ಕ್ರಿಯರಾಗಿದ್ದಾರೆ. ದ್ರೌಪದಿಯ ವಸ್ತ್ರಾಪಹರಣ ಒಂದು ನೀಚ ಕೆಲಸವೆಂದು ಅರಿವಿದ್ದೂ ಅಸಹಾಯಕತೆಯನ್ನು ಆಹ್ವಾನಿಸುವ ಈ ಮೂವರ ಜಡಮೌಲ್ಯ ನಿಷ್ಠೆ – ಒಂದು ನೆಲೆ. ಇನ್ನೊಂದು ನೆಲೆ – ಭೀಮಾರ್ಜುನರ 'ಸಂಕಟ'. ಧರ್ಮರಾಯನ ಜಡಮೌಲ್ಯ ನಿಷ್ಠೆಯನ್ನು ಮೀರಿ ದ್ರೌಪದಿಯ ಸಹಾಯಕ್ಕೆ ಹೋಗುವ ತೀವ್ರತೆಯಿದ್ದರೂ ಅಣ್ಣನ ಕಟ್ಟಳೆಯನ್ನು ಮೀರದೆ ಒಳಗೇ ಉರಿಯುವ ಇವರ ಸಂಕಟವು ಕೇವಲ ಸಂಕಟವಲ್ಲ; ಅದು ಸ್ಫೋಟಗೊಳ್ಳಲಾಗದ ಸಿಟ್ಟು. ಈ ಸನ್ನಿವೇಶದ ಸಂಕಟ, ಸುರುಳಿ ಸುತ್ತಿ ಸ್ಫೋಟಗಳ್ಳುವುದು ದ್ರೌಪದಿಯ ನೆಲೆಯಲ್ಲಿ ಮಾತ್ರ. ''ಸತಿಯನೆನ್ನನು ಮಾರಿ ಧರ್ಮಸ್ಥಿತಿಯ ಕೊಂಡರು'' ಎಂದು ಇಡೀ ಸಭೆಗೆ ಸಾರುವ ದ್ರೌಪದಿ, ಸಾಂಪ್ರದಾಯಿಕತೆಯ ಸೀಮೋಲ್ಲಂಘನ ಮಾಡುತ್ತಾಳೆ; ಹೊಸ ಮೌಲ್ಯವಾಗುತ್ತಾಳೆ. ಮೌಲ್ಯಗಳ 'ತಾಂತ್ರಿಕ ನಿಷ್ಠೆ'ಯನ್ನು ಮೀರುತ್ತ ಧರ್ಮರಾಜಾದಿಗಳ ಮಿತಿಯನ್ನು ತೋರಿಸುತ್ತಾಳೆ. ಧರ್ಮರಾಜಾದಿಗಳ ತಾಂತ್ರಿಕ ಮೌಲ್ಯನಿಷ್ಠೆಯು ಅಕ್ಷರಮಟ್ಟಿಗೆ ಸಂವೇದನಾಶೀಲತೆಯನ್ನು ಜಡಗೊಳಿಸುತ್ತದೆ. ಮೀರಬೇಕೆಂದಿದ್ದರೂ ಮೀರಲಾಗದ ಭೀಮಾರ್ಜುನರ ಸಂಕಟಕ್ಕೆ ಜಡದೂರ ಸಂವೇದನೆಯ ಸ್ಪರ್ಶವಿದೆ. ಆದರೆ ದ್ರೌಪದಿಯ ಮೀರುವ ಕ್ರಿಯೆಯಲ್ಲಿ

ಸಂವೇದನಾಶೀಲತೆಯ ಹೊಸ ಸಾಧ್ಯತೆ ಮತ್ತು ಮೌಲ್ಯ ಶೋಧಕ ಶಕ್ತಿಗಳಿವೆ. ಈ ಶಕ್ತಿ ಜನತಂತ್ರಾತ್ಮಕ ನೆಲೆಗಳ ನಿರ್ಮಿತಿಯಲ್ಲಿ ಮಹತ್ವಪೂರ್ಣವಾದುದು.

ಈ ಎಲ್ಲ ನೆಲೆಗಳನ್ನೂ ಒಳಗೊಂಡು, ಮೀರುವ ಕ್ರಿಯೆಯ ಸನ್ನಿವೇಶ ಸೃಷ್ಟಿಯಲ್ಲಿ ತನ್ನ ಗೆರೆಗಳನ್ನು ವಿಸ್ತರಿಸಿಕೊಳ್ಳುವ ಕುಮಾರವ್ಯಾಸನ ಸಂವೇದನಾಶೀಲತೆ ಇಲ್ಲಿ ಸಾರ್ಥಕತೆಯನ್ನು ಪಡೆಯುತ್ತದೆ. ಊಳಿಗಮಾನ್ಯ ಸಂಸ್ಕೃತಿಯ ಹಲ್ಲೆಯ ವಿರುದ್ಧ ಸಿಡಿಯುವ ದ್ರೌಪದಿಯ ಸಂವೇದನೆ ಕುಮಾರವ್ಯಾಸನದೂ ಆಗುತ್ತದೆ.

ಊಳಿಗಮಾನ್ಯ ಪ್ರಭುತ್ವದ ಅವನತಿಯ ಹಂತದಲ್ಲಿ ಆವರಿಸಿಕೊಳ್ಳುವ ಸಂವೇದನೆಯ ಸಾಚಾತನಕ್ಕೆ ರನ್ನನ ಗದಾಯುದ್ಧ ಕಾವ್ಯದ ದುರ್ಯೋಧನ ವಿಲಾಪ ಸನ್ನಿವೇಶವನ್ನು ನೋಡಬಹುದು.

ತನ್ನವರೆನ್ನುವ ಎಲ್ಲರನ್ನೂ ಕಳೆದುಕೊಂಡಿರುವ ದುರ್ಯೋಧನ ಏಕಾಕಿಯಾಗಿರುವ ಸಂದರ್ಭವಿದು. ಸರ್ವಾಧಿಕಾರೀ ಪ್ರಭುತ್ವ ಸ್ಥಾಪಿಸಿ ಮೆರೆಯುತ್ತಿದ್ದ ಈತನಿಗೆ ಈಗ ರಥವೂ ಇಲ್ಲ, ಪರಿವಾರವೂ ಇಲ್ಲ. ರಕ್ತದ ಕೆಸರಿನಲ್ಲಿ ಸಿಕ್ಕಿಕೊಳ್ಳುವ ಕಾಲುಗಳನ್ನು ಕಿತ್ತಿಡುತ್ತ, ಹೆಣಗಳ ನಡುವೆ ದಾರಿ ಮಾಡಿಕೊಳ್ಳುತ್ತ ಬರುತ್ತಿರುವ ದುರ್ಯೋಧನ, ತನ್ನ ತಮ್ಮ ದುಶ್ಶಾಸನ, ಮಿತ್ರ ಕರ್ಣ, ಮಗ ಲಕ್ಷಣಕುಮಾರ ಮತ್ತು ಅಭಿಮನ್ಯುವಿನ ಹೆಣಗಳ ಬಳಿ ಕೂತು ಕಣ್ಣೀರಿಡುತ್ತಾನೆ. ಅಂತರಂಗದ ಮಾತುಗಳನ್ನು ಆಡುತ್ತಾನೆ. ಕರ್ಣನ ಜನ್ಮವೃತ್ತಾಂತ ಗೊತ್ತಿದ್ದರೂ ಇಲ್ಲೀವರೆಗೆ ಸತ್ಯವನ್ನು ಬಚ್ಚಿಟ್ಟ ಬಗ್ಗೆ ದುರ್ಯೋಧನನ ನಾಲಗೆ ನಿಜ ನುಡಿಯುತ್ತದೆ. ಅಭಿಮನ್ಯುವಿನ ಹೆಣಕ್ಕೆ ಕೈ ಮುಗಿದು ''ನಿಜ ಸಾಹಸೈಕದೇಶಾನು ಮರಣಂ ಎಮಗಕ್ಕೆ ಗಡಾ'' ಎಂದು ನಮಸ್ಕರಿಸಿ ಆತನ ಶೌರ್ಯ ಪ್ರಶಂಸೆ ಮಾಡುತ್ತಾನೆ. ಈ ಇಡೀ ಸನ್ನಿವೇಶದಲ್ಲಿ ದುರ್ಯೋಧನನು ಪ್ರಭುತ್ವದ ಪ್ರತೀಕವಾಗಿಲ್ಲ. ಕುಸಿಯುತ್ತಿರುವ ಊಳಿಗಮಾನ್ಯ ಪ್ರಭುತ್ವದ ಕೆಳಗೆ ಸಿಕ್ಕಿ ನೆಲ ಮುಟ್ಟಿದ ಅನುಭವದಲ್ಲಿ ಮನಬಿಚ್ಚುವ ಮನುಷ್ಯನಾಗಿದ್ದಾನೆ. ಇಲ್ಲಿ ಅವನಿಗೆ ಶ್ವೇತಚ್ಛತ್ರಿಯಿಲ್ಲ; ಅಂತರಂಗದ ದನಿ ಮಾತ್ರ ಇದೆ; ಅವನತಿಯ ಹಂತದಲ್ಲಿ ಅಂತರಂಗವು ತನ್ನೆಲ್ಲ ಸಾಚಾತನದಿಂದ ನುಡಿಯತೊಡಗುತ್ತದೆ. ಪ್ರಭುತ್ವದ ಪೊರೆ ಕಳಚಿಕೊಂಡ ಕಣ್ಣು ನಿಜವನ್ನು ನೋಡುತ್ತಿದೆ; ಕಿವಿ ನಿಜವನ್ನು ಕೇಳುತ್ತಿದೆ; ನಾಲಗೆ ನಿಜವನ್ನು ನುಡಿಯುತ್ತಿದೆ. ಕೇವಲ ಮನುಷ್ಯನಂತೆ ಮಾತಾಡುವ ದುರ್ಯೋಧನನ ಊಳಿಗಮಾನ್ಯ ಪ್ರಭುತ್ವ ಪೂರ್ಣವಾಗಿ ನಾಶವಾಗಿಲ್ಲವಾದ್ದರಿಂದ, ಈತನ ಸಂವೇದನೆ ಪ್ರಭು ಮತ್ತು ಪ್ರಜೆಯ ನಡುವೆ ತುಡಿಯುವ ತಳಮಳದ ನೆಲೆ ಪಡೆದಿದೆ. ಆದ್ದರಿಂದ ಸಾಮಾನ್ಯ ಪ್ರಜೆಯಂತೆ ಅಳುತ್ತ ಅಂತರಂಗವನ್ನು ತೋಡಿಕೊಳ್ಳುವ ದುರ್ಯೋಧನ, ಮರುಕ್ಷಣದಲ್ಲೇ ಸೇಡಿಗೆ ಮಸೆಯುವ ಊಳಿಗಮಾನ್ಯ ಪದ್ಧತಿಯ ಪ್ರಭುವಾಗುತ್ತಾನೆ. ತನ್ನ ಸರ್ವಾಧಿಕಾರೀ ನೆಲೆ ಛಿದ್ರಗೊಳ್ಳುವ ಸಂದರ್ಭದಲ್ಲಿ, ಪ್ರಭು-ಪ್ರಜೆ ಮಿಶ್ರಿತ ಸಂವೇದನಾಶೀಲತೆಯು ದುರ್ಯೋಧನನ ಅಂತರಂಗದ ದನಿಯಾದದ್ದು ಸ್ವಾಭಾವಿಕ. ಊಳಿಗಮಾನ್ಯ ಪ್ರಭುತ್ವದ ಅವನತಿಯ ಹಂತವೂ ಈ ಸಂವೇದನೆಯ ಸಾಚಾತನಕ್ಕೆ ಕಾರಣವಾಗಿದೆ. ಸೋದರ, ಸ್ನೇಹಿತ, ಸೈನಿಕರನ್ನೆಲ್ಲ ಕಳೆದುಕೊಂಡ ಈತನಲ್ಲಿ ಉಳಿದಿರುವುದು ಮನಸ್ಸು ಮಾತ್ರವೇ ಆಗಿರುವುದರಿಂದ ಸಾಚಾ ಸಂವೇದನಾಶೀಲತೆ ಸಾಧ್ಯವಾಗುತ್ತದೆ. ಸರ್ವಾಧಿಕಾರೀ ಪ್ರಭುತ್ವದ ಅವನತಿಯನ್ನು 'ಅನುಭವಿಸುವ' ಕವಿ ಮನಸ್ಸು, ಪಾತ್ರಗಳ ಅಂತರಂಗ ಹೊಕ್ಕು ಹೊರಬರುವ ಸಂವೇದನಾಶೀಲತೆಯನ್ನು ಪಡೆದಿದೆ. ಇದು ರನ್ನನ ಗ್ರಹಿಕೆಯ ವಿಧಾನ ಮತ್ತು ಅಭಿವ್ಯಕ್ತಿಯ ಸ್ವರೂಪವನ್ನು ನಿರ್ಧರಿಸಿದೆ. (ಪಂಪಕವಿಯ 'ವಿಕ್ರಮಾರ್ಜುನ

ವಿಜಯ'ದ ೧೩ ಮತ್ತು ೧೪ನೇ ಆಶ್ವಾಸಗಳನ್ನು ಆಧರಿಸಿ ರನ್ನ ಕವಿಯು ಗದಾಯುದ್ಧ ಕಾವ್ಯ ಬರೆದಿದ್ದಾನೆಂಬ ಸಂಗತಿಯನ್ನು ಇಲ್ಲಿ ನೆನೆಯಬಹುದು. ಯಾಕೆಂದರೆ ಈ ಸನ್ನಿವೇಶದ ಮೂಲ ನೆಲೆ ಪಂಪನಲ್ಲೇ ಇದೆ.)

ರನ್ನನ 'ಗದಾಯುದ್ಧ'ದಲ್ಲಿ ಶರಶಯ್ಯೆಯ ಮೇಲಿದ್ದ ಭೀಷ್ಮ ಧೃತರಾಷ್ಟ್ರನಿಗೆ ಪತ್ರ ಬರೆದು ಕಳಿಸುವ ಸನ್ನಿವೇಶವೊಂದಿದೆ. ದುರ್ಯೋಧನನು ಸಂಧಿಗೆ ಒಪ್ಪುತ್ತಿಲ್ಲವೆಂದೂ, ಹೇಗಾದರೂ ಮಾಡಿ ಆತನನ್ನು ಸಂಧಿಗೆ ಒಪ್ಪಿಸಬೇಕೆಂದು ಒತ್ತಾಯಿಸುವ ಪತ್ರವಿದು. ಹೆಣಗಳ ರಾಶಿ, ರಕ್ತದ ಕೆಸರು, ಮುರಿದ ರಥಗಳು, ಚಲ್ಲಾಪಿಲ್ಲಿಯಾದ ಆಯುಧ ವಿಶೇಷಗಳುಳ್ಳ ರಣರಂಗದ ಒಂದು ಕಡೆ, ಶರಶಯ್ಯೆಯ ಮೇಲಿದ್ದ ಭೀಷ್ಮ 'ಸಂಧಿಪರ ಪತ್ರ' ಬರೆಯುತ್ತಿದ್ದಾನೆಂಬುದು ಧ್ವನಿಪೂರ್ಣವಾಗಿದೆ. ಯುದ್ಧದ ದುಷ್ಪರಿಣಾಮಗಳ ಆವರಣ ನಿರ್ಮಿತಿಯ ನಡುವೆ ಈ ಕ್ರಿಯೆ ನಡೆಯುತ್ತದೆ. ಪತ್ರ ಬರೆದದ್ದನ್ನು ವಿವರಿಸುವ ಪದ್ಯ ಹೀಗಿದೆ:

ಶರಮೊಂದಂ ತೆಗೆದು ನಿಜೋ
ದರದಿಂ ಲೆಕ್ಕಣಿಕೆ ಮಾಡಿ ಗಜಮದಮಸಿಯಂ
ತರಿಸಿ ಪತಾಕಾ ಪಟದೊಳ್
ಬರೆದಟ್ಟಿದನಂದನೃಪತಿಗಾ ಸಿಂಧು ಸುತಂ ||

ಭೀಷ್ಮನು ತನ್ನ ಹೊಟ್ಟೆಯಿಂದಲೇ ಬಾಣವೊಂದನ್ನು ತೆಗೆದು ಲೇಖನಿ ಮಾಡಿಕೊಳ್ಳುತ್ತಾನೆ. ಆನೆಯ ಮದೋದಕ ಮಸಿಯಾಗುತ್ತದೆ. ರಥದ ಬಾವುಟ ಪತ್ರವಾಗುತ್ತದೆ. ಬಾಣ, ಆನೆ ಮತ್ತು ಪತಾಕೆಗಳು ಯುದ್ಧ ಮತ್ತು ಸಾರ್ವಭೌಮತ್ವದ ಸಾಧನ ಸಂಕೇತಗಳಾಗಿದ್ದು, ಈಗ ಅವು ಮೂಲಾರ್ಥವನ್ನು ಕಳೆದುಕೊಂಡು ಸಂಧಿಪರ ಸಾಧನಗಳಾಗುತ್ತವೆ. ತನ್ನ ಹೊಟ್ಟೆಯಲ್ಲಿದ್ದ ಬಾಣವನ್ನು ತೆಗೆದು ಲೇಖನಿ ಮಾಡಿಕೊಳ್ಳುವ ಕ್ರಿಯೆ ಯುದ್ಧದಿಂದುಂಟಾದ ಹಿಂಸ್ರ ಸ್ಥಿತಿಯನ್ನು ಸೂಚಿಸುತ್ತದೆ. ಹಿಂಸ್ರ ಸ್ಥಿತಿಯಿಂದಲೇ ಸಂಧಿಯ ಒತ್ತಾಯಕ್ಕೆ ಈ ಬಾಣ ಬಳಕೆಯಾಗುತ್ತದೆ. ಹೊಟ್ಟೆಯೊಳಗಿಂದ ಕಿತ್ತುಕೊಳ್ಳುವವರೆಗೆ ಯುದ್ಧದ ಸಾಧನವಾಗಿದ್ದ ಬಾಣ, ಅನಂತರ ಸಂಧಿಯ ಸಾಧನವಾದ ಲೇಖನಿಯಾಗುತ್ತದೆ. ಮದೋದಕವು ಈಗ ಅಮಲು ಕಳೆದುಕೊಂಡು ಅರಿವಿನ ಮಸಿಯಾಗುತ್ತದೆ. ಸಾರ್ವಭೌಮಿಕೆಯ ಸಂಕೇತವಾದ ಪತಾಕೆ ಕೇವಲ ಪತ್ರವಾಗುತ್ತದೆ. ಹೀಗೆ ಪರಿವರ್ತನಶೀಲ ಸಂದರ್ಭವೊಂದನ್ನು ಸಾದರಪಡಿಸುವ ಈ ಪದ್ಯ ಶಾಂತಿಪರ ಸ್ಪಂದನೆಯ ಫಲವಾಗಿದೆ. ಸರ್ವಾಧಿಕಾರಿ ಪ್ರಭುತ್ವದ ಸಮರ ನೀತಿಗೆ ಬದಲಾಗಿ ಸಾಮರಸ್ಯದ ಸಂವೇದನೆ ಕಂಡುಬರುತ್ತದೆ.

ದುರ್ಯೋಧನನ ಸಾವು ಸಂಭವಿಸಿ ಪಾಂಡವರು ರಾಜ್ಯಾಧಿಕಾರ ಪಡೆದ ನಂತರದ ಪರಿಣಾಮವನ್ನು, ಲಕ್ಷ್ಮೀಶ ಕವಿಯ 'ಜೈಮಿನಿ ಭಾರತ'ದ ಒಂದು ಪದ್ಯ ಸೊಗಸಾಗಿ ವಿವರಿಸುತ್ತದೆ:

ಕೊಡೆಯೆಂಬರಾತಪತ್ರವನುದರ ದೇಶಮಂ
ಪೊಡೆಯೆಂಬರೊಲಿದು ಮಂಥನವನೆಸಗೆಂಬುದಂ
ಕಡೆಯೆಂಬರಾರಡಿಯನಳಿಯೆಂಬರುದಕ ಪ್ರವಾಹಮಂ ತೊರೆಯೆಂಬರು
ಮಡಿಯೆಂಬರಂಬರದ ಧೌತಮಂ ಕಬರಿಯಂ
ಮುಡಿಯೆಂಬರೆಡೆವಿಡದೆ ಮುಸುಕಿರ್ದ ಮೇಘಮಂ
ಜಡಿಯೆಂಬರುರುಶಿಲೆಯನರೆಯೆಂಬರಲ್ಲದಿದ ನುಡಿಯರವನಾಳ್ವಿಕೆಯೊಳು ||

ಧರ್ಮರಾಜನ ಆಳ್ವಿಕೆಯಲ್ಲಿ ಆತಪತ್ರವನ್ನು 'ಕೊಡೆ'ಯೆಂದೂ ಉದರದೇಶ ಮೆಂಬುದನ್ನು 'ಹೊಟ್ಟೆ' ಎಂದೂ ಮಂಥನವನೆಸಗು ಎಂಬುದನ್ನು 'ಕಡೆ' ಎಂದೂ ಉದಕ ಪ್ರವಾಹವನ್ನು 'ತೊರೆ' ಎಂದೂ ಅಂಬರದ ಧೌತವನ್ನು 'ಮಡಿ' ಎಂದೂ ಕಬರಿಯನ್ನು 'ಮುಡಿ' ಎಂದೂ ಕರೆಯುವ ಜನಭಾಷೆ, ಬಳಕೆಗೆ ಬಂದದ್ದನ್ನು ಈ ಪದ್ಯ ಸೂಚಿಸುತ್ತದೆ. ಭಾಷೆಯ ಬಳಕೆಯಲ್ಲಾದ ಈ ಬದಲಾವಣೆ ಕೇವಲ ಭಾಷೆಗೆ ಸಂಬಂಧಿಸಿದ್ದಲ್ಲ. ದುರ್ಯೋಧನನ ಆಳ್ವಿಕೆಯ ನಂತರ ಜನಬಳಕೆಯ ಭಾಷೆಗೆ ಮನ್ನಣೆ ಸಿಗುತ್ತಿರುವ ಸೂಚನೆಗೆ ವಿಶೇಷಾರ್ಥವಿದೆ. ಧರ್ಮರಾಜನ ಆಡಳಿತಾವಧಿಯ ಪ್ರಾರಂಭದ ಪರಿಭಾಷೆಯ ಸೂಕ್ಷ್ಮವನ್ನು ಹೇಳುವ ಈ ಪದ್ಯ, ಪ್ರಭುತ್ವದಲ್ಲಾದ ಪರಿವರ್ತನೆಯನ್ನು ಸೂಚಿಸುತ್ತದೆ. ದುರ್ಯೋಧನನ ಅವಸಾನದ ನಂತರ ಊಳಿಗಮಾನ್ಯ ಪ್ರಭುತ್ವ ಪದ್ಧತಿ ಬದಲಾಗಿಲ್ಲವೆನ್ನುವುದು ನಿಜ. ಆದರೆ ಧರ್ಮರಾಜ ಮೊದಲಿನಿಂದಲೂ ಅಧಿಕಾರ ಕೇಂದ್ರೀಕರಣದ ಆಮಿಷಕ್ಕೆ ಒಳಗಾಗಿರಲಿಲ್ಲ. ಆದ್ದರಿಂದಲೇ ಐದು ಗ್ರಾಮ ಕೊಟ್ಟರೂ ಒಪ್ಪಿಕೊಂಡು ಸಂಧಿ ಮಾಡಿಕೊಳ್ಳಲು ಸಿದ್ಧನಿರುತ್ತಾನೆ. ಇಂಥ ಉದಾರವಾದಿ ವ್ಯಕ್ತಿ ಪ್ರಭುವಾದಾಗ ಸಹಜವಾಗಿಯೇ ಸರ್ವಾಧಿಕಾರೀ ಧೋರಣೆಯಲ್ಲಿ ಸಡಿಲಿಕೆ ಉಂಟಾಗುತ್ತದೆ. ಅಧಿಕಾರಮದವಿಲ್ಲದ ವಾತಾವರಣ ನಿರ್ಮಾಣವಾಗುತ್ತದೆ. ಜನರ ಭಾಷೆಯಲ್ಲಾದ ಪರಿವರ್ತನೆ ಅವರ ಸಂವೇದನೆಯಲ್ಲಾದ ಪರಿವರ್ತನೆಯ ನೆಲೆಯನ್ನೂ ನಿರ್ದೇಶಿಸುತ್ತದೆ; ಊಳಿಗಮಾನ್ಯ ವ್ಯವಸ್ಥೆಯ ಒಳಗೆ ಜನಮುಖಿ ರಾಜನೆಲೆಯೊಂದು ಕಾಣಿಸಿಕೊಳ್ಳುತ್ತಿರುವ ಸೂಚನೆಯಿದೆ. ಹೀಗೆ ಜನಮುಖಿಯಾಗತೊಡಗಿದ್ದ ಧರ್ಮರಾಜನ ಆಡಳಿತ, ಮುಂದೆ ಅಶ್ವಮೇಧದ ನೆಪದಲ್ಲಿ ಯುದ್ಧಮುಖಿಯಾಗುತ್ತದೆ. ''ಗೋತ್ರ ವಧೆ'' ಯಿಂದಾದ ಪಾಪಕ್ಕೆ ಪ್ರಾಯಶ್ಚಿತ್ತಾರ್ಥವಾಗಿ ನಡೆಯುವ ಅಶ್ವಮೇಧದಲ್ಲಿ ಕುದುರೆ ಕಾಲಿಟ್ಟ ಪ್ರಾಂತ್ಯಗಳಲ್ಲೆಲ್ಲ ಯುದ್ಧ ಸಂಭವಿಸುತ್ತದೆ. ಕೃಷ್ಣನ ನೆರವಿನಿಂದ ಅರ್ಜುನನಿಗೆ ಜಯವಾಗುತ್ತದೆ. ಇದರ ಪರಿಣಾಮವಾಗಿ ಪಾಂಡವರ ಪ್ರಭುತ್ವ ವಿಸ್ತರಿಸುತ್ತದೆ. ಜನಮುಖಿಯಾಗುತ್ತಿದ್ದ ರಾಜ್ಯಭಾರ ಕೆಲಕಾಲದಲ್ಲೇ ಯುದ್ಧಮುಖಿಯಾಗಿ ಪ್ರಭುತ್ವದ ವಿಸ್ತರಣೆಯ ಮೂಲಕ ಅಧಿಕಾರ ಕೇಂದ್ರೀಕರಣಕ್ಕೆ ಕಾರಣವಾದದ್ದು ಊಳಿಗಮಾನ್ಯ ವ್ಯವಸ್ಥೆಯ ಒಂದು ಸಹಜ ವಿಪರ್ಯಾಸ. ಎಷ್ಟಾದರೂ ಪಾಂಡವರೂ ಪ್ರಭುಗಳೇ!

ಇಲ್ಲೀವರೆಗಿನ ವಿಶ್ಲೇಷಣೆಯಿಂದ ಸರ್ವಾಧಿಕಾರ ಮತ್ತು ಸಂವೇದನಾಶೀಲತೆಯ ಸಂಬಂಧದಲ್ಲಿರುವ ಸಾಮ್ಯ-ವೈಷಮ್ಯದ ನೆಲೆಗಳನ್ನು ಗುರುತಿಸಬಹುದು. ಸರ್ವಾಧಿಕಾರೀ ಮನೋಧರ್ಮ ಊಳಿಗಮಾನ್ಯ ವ್ಯವಸ್ಥೆಯಲ್ಲಿರಲಿ, ಪ್ರಜಾಪ್ರಭುತ್ವ ಪದ್ಧತಿಯಲ್ಲಿನ ವ್ಯಕ್ತಿಗಳಲ್ಲಿರಲಿ, ಪಂಚೇಂದ್ರಿಯಗಳಿಗೆ ಪೊರೆಕಟ್ಟಿ ಸಂವೇದನೆಯ ಸಾಚಾತನದಿಂದ ವಂಚಿಸುತ್ತದೆ. ಪ್ರಜಾಪ್ರಭುತ್ವದ ನಿಜನೆಲೆಯನ್ನು ಹುಡುಕುವ ಹೋರಾಟಗಳು ಸಂವೇದನೆಯನ್ನು ಮಾನವೀಯವಾಗಿಸುತ್ತವೆ; ಅರ್ಥಪೂರ್ಣ ಸೃಜನಶೀಲತೆಗೆ ಕಾರಣವಾಗುತ್ತವೆ.

*ಸಂಸ್ಕೃತಿ ಮತ್ತು ಸೃಜನಶೀಲತೆ, ೧೯೯೧, ಪು. ೫-೧೮*

# ೬೩. ವೀರಸಿದ್ಧಾಂತ

● ಎಂ. ಎಂ. ಕಲಬುರ್ಗಿ

ತಿಂತಿಣಿಯಾಗೆ ನಟ್ಟ ಕಣೆಯೊಳ್ ನೆಲ ಮುಟ್ಟದೆ ಮೆಯ್ಯೊಳತ್ತಮಿ
ತ್ತಂ ತೆಱೆದಿರ್ದ ಪುಣ್ಗಳೆಸವಕ್ಕರದಂತಿರೆ ನೋಡಿ ಕಲ್ಲಿಮೆಂ
ಬಂತೆವೊಲಿರ್ದನಟ್ಟವಣೆಕೋಲ್ಗಳ ಮೇಲೆಸೆದಿರ್ದ ವೀರಸಿ
ದ್ಧಾಂತದ ಶಾಸನಂ ಬರೆದ ಪೊತ್ತಗೆಯಂತಮರಾಪಗಾತ್ಮಜಂ ॥

ಪಂಪಭಾರತದ ೧೧-೪೬ನೆಯ ಈ ಪದ್ಯ, ಶರಪಂಜರದ ಮೇಲೆ ಪವಡಿಸಿದ ಭೀಷ್ಮನನ್ನು ವರ್ಣಿಸುತ್ತದೆ. ''ಮೈಯಲ್ಲಿ ಅತ್ತಿತ್ತ ಪ್ರಕಟವಾಗಿದ್ದ ಗಾಯಗಳು ಅಕ್ಷರದಂತೆ ತೋರುತ್ತಿರಲು ನೋಡಿ ಕಲಿಯಿರಿ ಎನ್ನುವ ಹಾಗೆ, ಅಟ್ಟವಣೆಕೋಲ (=ವ್ಯಾಸಪೀಠ) ಮೇಲಿನ ವೀರಸಿದ್ಧಾಂತದ ಶಾಸನವನ್ನು ಬರೆದ ಪುಸ್ತಕದಂತೆ-ಗುಂಪುಗುಂಪಾಗಿ ನಟ್ಟ ಬಾಣಗಳಿಂದ ನೆಲ ಮುಟ್ಟದೆ-ಭೀಷ್ಮನು ಶೋಭಿಸಿದನು'' ಎಂದು ಈ ಪದ್ಯದ ಅರ್ಥ. ಇದು, ಕನ್ನಡ ಸಾಹಿತ್ಯದ ಒಂದು ಅಪರೂಪ ಪದ್ಯವೆಂದು ಎಲ್ಲ ವಿದ್ವಾಂಸರು ಹೊಗಳುತ್ತಲಿದ್ದರೂ ಇಲ್ಲಿಯ ''ವೀರಸಿದ್ಧಾಂತ'' ಪದದ ವಿಶೇಷಾರ್ಥವನ್ನು ಅವರು ಗಮನಿಸಿದಂತಿಲ್ಲ. ಡಾ|| ಡಿ. ಎಲ್. ಎನ್. ಅವರು ಪಂಪಭಾರತ ದೀಪಿಕೆಯಲ್ಲಿ ''ವೀರಸಿದ್ಧಾಂತದ ಶಾಸನಂ ಬರೆದ=ಪ್ರತಾಪದ ತತ್ವಗಳನ್ನು ಶಾಸನವಾಗಿ ಬರೆದ''ಯೆಂದು ಶಬ್ದಾರ್ಥವನ್ನು ಮಾತ್ರ ಕೊಟ್ಟಿದ್ದಾರೆ. ಈ ''ವೀರಸಿದ್ಧಾಂತ'' ಪದವನ್ನು ಪೃಥಕ್ಕರಿಸಿ, ಅದರ ಅರ್ಥವ್ಯಾಪ್ತಿಯನ್ನು ಇಲ್ಲಿ ಅರಿಯಬಹುದಾಗಿದೆ.

ಹಿಂದೂ ಪರಂಪರೆಯ ವ್ಯಾಸಭಾರತದ ಮತ್ತು ಈ ಮಾರ್ಗದಲ್ಲಿ ಹುಟ್ಟಿದ ಇತರ ಭಾರತ ಕೃತಿಗಳಲ್ಲಾಗಲೀ, ಜೈನಪರಂಪರೆಯ ಭಾರತಗಳಾದ ಹರಿವಂಶ ಪುರಾಣ (ನೇಮಿನಾಥ ಪುರಾಣ)ಗಳಲ್ಲಾಗಲೀ ಈ ಪದ ಕಂಡುಬರುವುದಿಲ್ಲ. ಕನ್ನಡಕ್ಕೆ ಬಂದರೆ ಪ್ರಥಮ ಉಪಲಬ್ಧ ನೇಮಿನಾಥ ಪುರಾಣ (ಕರ್ಣಪಾರ್ಯಕೃತ)ದಲ್ಲಿಯೂ ಕಂಡುಬಾರದ ಈ ಪದ, ಬಂಧುವರ್ಮನ ''ಹರಿವಂಶಾಭ್ಯುದಯ''ದಲ್ಲಿ ಮಾತ್ರ ಎರಡು ಕಡೆ (೧೧-೮೦ಗ ೧೦೬ ಗ, ೧೨-೩೧ ಗ -೪೨) ಸಿಗುತ್ತದೆ. ಇವುಗಳ ಪರಿಶೀಲನೆಯಿಂದ, ಇದು ಪ್ರತಾಪವನ್ನು ಸೂಚಿಸುವ ಸಾಮಾನ್ಯಪದವಾಗಿರದೆ ಪುರುಷವ್ರತ, ವೀರಸನ್ಯಾಸಗಳಂತೆ ವಿಶಿಷ್ಟ ಅರ್ಥವನ್ನೊಳಗೊಂಡ ಪದವೆಂದು ಮನವರಿಕೆಯಾಗುತ್ತದೆ.

ಜೈನ ಹರಿವಂಶಪುರಾಣಗಳಲ್ಲಿ ಮಹಾಭಾರತಯುದ್ಧವು ಕೃಷ್ಣ-ಜರಾಸಂಧರ ಮುಖ್ಯ ಯುದ್ಧದ ಒಂದು ಭಾಗವಾಗಿ ಬರುತ್ತದೆ. ಅಲ್ಲಿ ಆ ಮುಖ್ಯ ಯುದ್ಧದ ಪ್ರಥಮ ಸೇನಾಪತಿಗಳು ಭೀಷ್ಮ-ಶ್ವೇತರಲ್ಲ, ಕರ್ಣ-ಅರ್ಜುನರು.

ಮರುದಿನ ಬೆಳಗಾದರೆ ಭಾರತಯುದ್ಧ ಪ್ರಾರಂಭ. ಹಿಂದಿನ ರಾತ್ರಿ ಪಾಂಡವಕೌರವರ ಪಾಳೆಯಗಳಲ್ಲಿ ಆ ಸೈನಿಕರು ಪರಾಕ್ರಮ, ಸಾಹಸಗಳನ್ನು ಕುರಿತು ತಮ್ಮತಮ್ಮಲ್ಲಿ ಮಾತನಾಡುತ್ತಲಿದ್ದಾರೆ. ಬಂಧುವರ್ಮನ ಈ ಪ್ರಸಂಗನಿರ್ಮಾಣಕ್ಕೆ ಪ್ರೇರಣೆ ನೀಡಿದುದು, ಪಂಪಭಾರತ. ಆದರೆ ಅಲ್ಲಿ ಪಾಂಡವರ ಪಾಳೆಯದ ಸೈನಿಕರು ಜೋಳವಾಳಿ, ಸಹಗಮನ, ವೀರಸ್ವರ್ಗಗಳ ಚರ್ಚೆ ನಡೆಸಿದರೆ: ಇಲ್ಲಿ ಕರ್ಣನ ಪಾಳೆಯದ ಸೈನಿಕರು

''ವೀರಸಿದ್ಧಾಂತ''ದ ಚರ್ಚೆ ನಡೆಸುತ್ತಾರೆ. ಈ ಚರ್ಚೆಯ ಸಂದರ್ಭವನ್ನು ಇಡಿಯಾಗಿ ನೋಡಿದರೆ ಮಾತ್ರ ''ವೀರಸಿದ್ಧಾಂತ''ದ ಅರ್ಥ ಸ್ಪಷ್ಟವಾಗುವುದರಿಂದ ಆ ಹಳಗನ್ನಡ ಭಾಗದ ಸರಳಗದ್ಯವನ್ನು ಹೀಗೆ ಕೊಡಬಹುದು.

ರಾತ್ರಿ ಸಂದರ್ಭ: ಯುದ್ಧಕುತೂಹಲಿಗಳಾದ ಕರ್ಣನ ಬೀಡಿನ ಸೈನಿಕರಿಗೆ ನಿದ್ರೆ ಬರಲೊಲ್ಲದು. ಅವರು ರಣಪರಾಕ್ರಮವನ್ನು ಚರ್ಚಿಸುತ್ತ ಕಾಲ ಕಳೆಯುತ್ತಲಿದ್ದಾರೆ. ಆಗ ಕೆಲವರು ''ಪ್ರತಾಪದ ತತ್ವ (=ತುಳಿಲಸಂದಿಕೆಯ ತತ್ವ=ವೀರಸಿದ್ಧಾಂತ)ಗಳನ್ನು ರೂಢಿಸಿಕೊಳ್ಳದವರು ಎಷ್ಟೇ ಲೋಕವಿಖ್ಯಾತರಾಗಿದ್ದು, ಹೋರಾಡಿ ಮಡಿದರೂ ಅವರು ಕಲಿಯೆನಿಸಿಕೊಳ್ಳಬಹುದೇ ಹೊರತು, ತುಳಿಲಸಂದರೆನಿಸಿಕೊಳ್ಳರು''-ಎಂದು ಮಾತಿನ ಮಧ್ಯ ಸಹಜ ಪ್ರಸ್ತಾಪಮಾಡಿದರು. ಇದನ್ನು ಕೇಳಿ (ಒಬ್ಬನು ''ರಣಭೂಮಿಯಲ್ಲಿ) ಸಾಯುವುದರಿಂದ ತುಳಿಲಸಂದನಾಗಲಾರ, ಕಲಿಯಾಗಬಹುದು ಎನ್ನುವಿ, ಕಲಿತನವು ತುಳಿಲಸಂದಿಕೆಯಲ್ಲವೇ?'' ಎಂದು ಪ್ರಶ್ನಿಸುತ್ತಾನೆ. ಆಗ ಅವನು ''ಕಲಿತನ ಒಂದೇ ಅಲ್ಲ, ಅದನ್ನೊಳಗೊಂಡಂತೆ ಆರು ಗುಣಗಳನ್ನು ಆತ್ಮೀಕರಿಸಿಕೊಂಡವನಲ್ಲದೆ ಮಿಕ್ಕವನು ತುಳಿಲಸಂದಯೆಂಬ ಕೀರ್ತಿಗೆ ಪಾತ್ರನಾಗಲಾರನು. ಅದು ಹೇಗೆಂದರೆ: ಕಲಿತನ, ಅಭಿಮಾನ, ಧರ್ಮ, ತ್ಯಾಗ, ಸತ್ಯ, ಶೌಚ – ಈ ಆರು ಗುಣಗಳಿಗೆ ಆಶ್ರಯನಾಗಿರುವವನು ಮಾತ್ರ ತುಳಿಲಸಂದನು.

## ೧. ಕಲಿತನ

ನೆಲವು ಸಚರಾಚರ ಜೀವಸಮೂಹಕ್ಕೆ ಆಧಾರವಾಗಿರುವಂತೆ, 'ಕಲಿತನ' ಎಂಬ ಗುಣವು ಮಿಕ್ಕ ಸಾವಿರಾರು ಗುಣಗಳಿಗೆ ಆಧಾರವಾಗಿದೆ. ಆದುದರಿಂದ ಲೇಸನ್ನು ಬಯಸುವ ತಪೋಧನರೂ ತುಳಿಲಾಳುಗಳೂ ಕಲಿಯಾಗಿರಬೇಕೆಂಬುದು **ಶ್ರೀ ವೀರಸಿದ್ಧಾಂತ** ವಾಗಿದೆ.

ಎಲ್ಲ ಗುಣಗಳೂ ಮಣ್ಣಿನಿಂದಲ್ಲದೆ ಉಂಟಾಗವು. ಅದೇ ರೀತಿ ಕೆಚ್ಚು ಇಲ್ಲದ ಮರ, ಕಲಿತನವಿಲ್ಲದ ಮನುಷ್ಯ – ಇವರು ಭವದಲ್ಲಿ ಬಾಳುವದು ಅಸಾಧ್ಯವಾಗುತ್ತದೆ.

ಸತ್ಪಾತ್ರವನ್ನು ಅರಿಯುವ, ಅರಿತು ದಾನಮಾಡುವ, ಅಭಿಮಾನವನ್ನು ಪ್ರಕಟಿಸುವ, ಶೌಚಗುಣವನ್ನು ರಕ್ಷಿಸುವ, ಸತ್ಯಗುಣವನ್ನು ನಿರ್ವಹಿಸುವ, ಧರ್ಮಸಾಧನೆಗಾಗಿ ಸಂಸಾರ ಬಂಧನವನ್ನು ಹರಿಯುವ ಪ್ರಸಂಗಗಳಲ್ಲಿ ಕಲಿಯಾದವನು ಹೋರಾಡಲೇಬೇಕು – ಇವು ಕಲಿತನದ ನೆಲೆಗಳಾಗಿವೆ.

## ೨. ಅಭಿಮಾನ

ಕಲಿಯಾಗಿದ್ದರೂ ಮನುಷ್ಯನು 'ವಿಭು' ಎನಿಸಿಕೊಳ್ಳುವುದು ಅಭಿಮಾನದಿಂದ ಮಾತ್ರ. ಅರಸರಲ್ಲಿ-ಅನ್ಯರಲ್ಲಿ, ವಿಭವದಲ್ಲಿ-ವಿಪತ್ತಿನಲ್ಲಿ (ಅಭಿಮಾನ) ರಕ್ಷಣೆಯೇ ಸುಭಟನ ಗುಣ, ದೀನ ಭಾವವಲ್ಲ.

ಸಂಕಟ ಪ್ರಸಂಗ ತಲೆದೋರಿದಲ್ಲಿ ಆಸೆಪಟ್ಟು ಹೋಗಿ ಅನ್ಯರಿಂದ ದ್ರವ್ಯವನ್ನು ಯಾಚಿಸಿದರೆ 'ಅಭಿಮಾನ' ಹಾಳಾಗುತ್ತದೆ. ಸದ್ಗುಣಕ್ಕೆ ನೆಲೆಯಾದ ತುಳಿಲಾಳ್ತನದಲ್ಲಿ ಇದು ದೋಷವೇ ಸರಿ. ತಪಸ್ವಿ ಭಿಕ್ಷೆಯನ್ನು ಬೇಡಬಹುದು. ಆದರೆ ವೀರನಿಗೆ ಉಂಟಾದ ದ್ರವ್ಯದ ಆಸೆ ಅಭಿಮಾನವನ್ನು ಹಾಳುಮಾಡುತ್ತದೆ.

ತಪಸ್ವಿಗೆ ಜ್ಞಾನ, ತುಳಿಲಾಳಿಗೆ ಅಭಿಮಾನಗಳು ಸಾರವತ್ತಾದುವು. ಅಜ್ಞಾನಿಯಾದ

ತಪಸ್ವಿ, ಅಭಿಮಾನಶೂನ್ಯವಾದ ತುಳಿಲಾಳು ಈ ಲೋಕದಲ್ಲಿ ಶೋಭಿಸುವುದಿಲ್ಲ.

ವಿನೋದ ಕ್ರೀಡೆಯಲ್ಲಿ, ಸೂಳೆಯ ಮನೆಯಲ್ಲಿ, ತನ್ನ ಮನೆಯಲ್ಲಿ, ಅರಸನು ನೀಡುವ ಪ್ರಸಂಗದಲ್ಲಿ, ಜೂಜಿನ ಸಂದರ್ಭದಲ್ಲಿ, ಹಸಿದ ಸಮಯದಲ್ಲಿ, ಹಣ್ಣು-ಹಂಪಲು ತುಂಬಿದ ತೋಟದಲ್ಲಿ ತುಳಿಲಾಳಾದವನು ತಪ್ಪದೇ ತನ್ನ ಅಭಿಮಾನವನ್ನು ಕಾಯಬೇಕು.

## ೩. ಧರ್ಮ

ತನ್ನ ಮೇಲೆ ಕೋಪಗೊಂಡು ಕೊಲ್ಲಲು ಬಂದವನನ್ನಲ್ಲದೆ, ಸುಮ್ಮನೆ ಬಾಳುವ ಸದ್ಗುಣಿಯನ್ನು ಕೊಲ್ಲಲಾಗದು. ಇದು ತುಳಿಲಸಂದರ ಅನುಪಮವಾದ ಗುಣವಾಗಿದೆ.

ಬೆನ್ನು ತೋರಿಸಿದವನನ್ನು, ಅಂಜಿ ಕೈಮುಗಿದು ಮೊರೆಯಿಡುವವನನ್ನು, ದೀನತೆಯಿಂದ ಹುತ್ತನ್ನೇರಿದವನನ್ನು, ಹುಲ್ಲು ಕಚ್ಚಿ ನಿಂತವನನ್ನು, ಅಸಮರ್ಥನಂತೆ ಅಂಜಿ ಹೋಗಿ ಜಲಪ್ರವೇಶ ಮಾಡಿದವನನ್ನು ಕೊಲ್ಲದಿರುವುದು ಶೌರ್ಯಸಂಪನ್ನನಾದ ತುಳಿಲಾಳಿನ ಧರ್ಮವಾಗಿದೆ.

ದೀನನನ್ನು, ಅಪಮಾನಿತನನ್ನು, ಮೂರ್ಛಿತನನ್ನು, ಆಸೆಪಟ್ಟು ಬೆರಳು ಕಚ್ಚಿದವನನ್ನು, ಕಾಲ್ಗೆರಗಿದವನನ್ನು ಕೊಲ್ಲದಿರುವುದೇ ಸುಪ್ರಸಿದ್ಧ 'ತುಳಿಲಸಂದ' ಧರ್ಮವಾಗಿದೆ.

ಅರೆಜೀವ ಕೊಲ್ಲುವುದು, ಕಳವು ಮಾಡುವುದು, ಏರಿಹೋಗಿ ಮುತ್ತುವುದು, ಯಾರನ್ನಾದರೂ ಸೆರೆಹಿಡಿಯುವುದು, ಚಾಡಿ ಹೇಳುವುದು, ಪ್ರತಿಭಟಿಸಿ ಸೂರೆಗೊಳ್ಳುವುದು, ಸಜ್ಜನರನ್ನು ಮರುಗಿಸುವುದು ಮತ್ತು ಶೋಷಣೆಮಾಡುವುದು, ಅಱೆಯೇಱಿಯಿಱುವುದು (?), ಹೀನಾವಸ್ಥೆಯವರನ್ನು ನಿಂದಿಸುವುದು ಎಷ್ಟೂ ಮಾಡಬಾರದು. ಇದು ತುಳಿಲಾಳುಗಳ ಧರ್ಮವಾಗಿದೆ.

## ೪. ತ್ಯಾಗ

ಉಚಿತ ಪ್ರಸಂಗದಲ್ಲಿ ಕೊಡದ, ತನ್ನ ಸಾಮರ್ಥ್ಯಕ್ಕೆ ತಕ್ಕಷ್ಟು ನೀಡದ ಲೋಭವು ಹೇಡಿಯ ಲೆಕ್ಕಕ್ಕೆ ಬರುತ್ತದೆಯೆಂದು ತಿಳಿದು ಉದಾರನಾಗಿರುವವನೇ ನಿಜವಾದ ತುಳಿಲಾಳು.

ದ್ರವ್ಯವು ಮನುಷ್ಯನಿಗೆ ಬಹಿಃಪ್ರಾಣ. ಈ ಬಹಿಃಪ್ರಾಣವನ್ನು ಕೊಡಬಹುದೇ ಹೊರತು, ಅಂತಃಪ್ರಾಣವಾದ ಜೀವವನ್ನು ಮನುಷ್ಯ ಕೊಡಲಾರ. ಆದರೆ ಅದನ್ನು ಕೊಡುವವನೇ ಮನುಷ್ಯರಲ್ಲಿ ವೀರನು.

ರಾಗವೆಂಬುದು ಪ್ರಿಯತಮನಿಗೆ, ಧನತ್ಯಾಗವೆಂಬುದು ತುಳಿಲಾಳಿಗೆ, ಯೋಗವೆಂಬುದು ತಪಸ್ವಿಗೆ ಯೋಗ್ಯವಾದುವು. ಹಾಗಿಲ್ಲದ (ರಾಗ), ವೀರ, ತಪಗಳಿಂದ ಏನು ಪ್ರಯೋಜನ?

ದಾನಿಗಲ್ಲದೆ (ಉಳಿದವರಿಗೆ) ಧರ್ಮದ ಲೇಸು ಉಂಟಾಗುವುದೆ? ತಕ್ಕಲ್ಲಿ ಜಯವನ್ನು ಗಳಿಸಿಕೊಟ್ಟವನಿಗಲ್ಲದೆ (ಉಳಿದವರಿಗೆ) ಕೀರ್ತಿ ಉಂಟಾಗುವುದೆ? (ದ್ರವ್ಯದ) ಮೋಹವು ಭಯವನ್ನುಂಟುಮಾಡುವುದೆಂದು ನೀಡಿದವನಿಗಲ್ಲದೆ (ಉಳಿದವರಿಗೆ) ಗಂಡುತನ ಶೋಭಿಸುವುದೆ? ಹೀಗೆ ಧರ್ಮ, ಕೀರ್ತಿ, ಗಂಡುತನಗಳೇ ರೂಪ ಪಡೆದಂತಿರುವ ತ್ಯಾಗಗುಣವನ್ನು ಕೊನೆಯ ವರೆಗೂ ಧರಿಸಿರಬೇಕು.

**೫. ಸತ್ಯ**

ಸತ್ಯವೆನ್ನುವುದು ಆರು ಗುಣಗಳಲ್ಲಿಯೂ ಐದು ಮಹಾವ್ರತಗಳಲ್ಲಿಯೂ ಸುತ್ತ್ವವಾದುದು. ಅದು ಸಾಧ್ಯವಾದರೆ ಔಚಿತ್ಯಾಲಂಕಾರವೆನಿಸಿ ಎರಡು ಭವಕ್ಕೂ ಸಾರಭೂತವಾಗುತ್ತದೆ.

ಭಾಷೆ ತಪ್ಪಿದವನಿಗೆ ಸಾವು ತಪ್ಪುವುದೇ? ಆ ತಪ್ಪಿನಿಂದ ಗಳಿಸಿದ ಹಣವು ನಿಲ್ಲುತ್ತದೆಯೇ (ರಣಾಂಗಣದಿಂದ) ಓಡಿಹೋಗಿ ಬದುಕಿದರೆ ದುರ್ಗತಿ ಉಂಟಾಗದೇ? ಹೀಗಾಗಿ ಸತ್ಯವನ್ನು ಹಾಳುಮಾಡಿಕೊಂಡು ಹೋರಾಡಿ ಸಾಯುವ ತುಳಿಲಾಳು ಮಹಾಪಾತಕನೇ ಸರಿ.

ರಣಾಂಗಣದಲ್ಲಿ ಕುಸಿದವನೂ ಗಂಡಾಂತರದಲ್ಲಿ ಹುಸಿದವನೂ ಸಮ. ರಣಾಂಗಣದಲ್ಲಿ ಕುಸಿದವನು ತಾನೊಬ್ಬನೇ ಹಾಳಾಗುತ್ತಾನೆ. ಆದರೆ (ಕುಸಿದವನಿಗಿಂತ) ಹುಸಿದವನನ್ನು ನಂಬಿದವನಿಗೆ ಎರಡು ಪಟ್ಟು ಹಾನಿಯುಂಟಾಗುತ್ತದೆ.

ಸ್ನೇಹ, ಬಲಶಾಲಿಗಳ ಭಯ, ದುರ್ಮೋಹ–ಇವುಗಳಿಗೆ ಗುರಿಯಾಗಿ, ನಂಬಿದೆಡೆಯಲ್ಲಿ ಹುಸಿದವನು ಐಹಿಕ ಮತ್ತು ಆಮುಷ್ಮಿಕಗಳನ್ನು ಹಾಳುಮಾಡಿಕೊಂಡವನೇ ಸರಿ. ಆ ಪಾಪಿಯು ಉಗ್ರವಾದ ರಣರಂಗದಲ್ಲಿ ಶೌರ್ಯದಿಂದ ಕಾದಿದ್ದರೂ ತುಳಿಲಾಳ ಲೆಕ್ಕಕ್ಕೆ ಬರಲಾರನು.

**೬. ಶೌಚ**

ಪರಧನವನ್ನು ಕಳವು ಮಾಡುವುದು, ಪರವನಿತೆಯರನ್ನು ಸೆಳೆದುಕೊಳ್ಳುವುದು ಆಗದು – ಎಂಬ ಶೌಚಗುಣವನ್ನು ಧರಿಸಿದವನೇ ಈ ಲೋಕದಲ್ಲಿ ನಿಜವಾದ ತುಳಿಲಸಂದನು.

ಪರವಧುವನ್ನು ಮೋಹಿಸಿದವನು ವೀರಶ್ರೀ ಪಡೆದರೂ, ಅನ್ಯಧನವನ್ನು ಸೆಳೆದುಕೊಂಡವನು ಅದನ್ನು ಒಳ್ಳೆಯದಕ್ಕೆ ವಿನಿಯೋಗಿಸಿದರೂ ಅವನು ಪೂರ್ವಕ್ಕೆ ಹೋಗಿ ಪಶ್ಚಿಮವನ್ನು ಮುಟ್ಟುವೆನೆಂಬ ಮೂರ್ಖನೇ ಸರಿ. ಹೀಗೆ ಶೌಚವಿಹೀನನಾಗಿ ಹೋರಾಡುವ 'ಅಳಿಯಾಳ್'ನು 'ತುಳಿಲಾಳ್' ಲೆಕ್ಕಕ್ಕೆ ಬಾರನು.

ಒತ್ತೆಗೊಳ್ಳುವ ವೇಶ್ಯೆ ಕೂಡ ಅನ್ಯಳು. ಸ್ವಸ್ತ್ರೀಯಲ್ಲದವರೆಲ್ಲ ತಾಯಂದಿರು, ಏಕೋದರರು ಎಂಬ ಭಾವನೆ ಇಲ್ಲದವನು 'ತುಳಿಲಾಳ್' ಎನಿಸಲಾರನು.

(ರಣರಂಗದಿಂದ) ಓಡಿದವನೊಂದಿಗೆ, ಪರಸ್ತ್ರೀಯನ್ನು ಕೂಡಿದವನೊಂದಿಗೆ (ಪತ್ನಿಯಾಗಿ) ಕೂಡಲು ಪಾತಕಿ, ನಾಚಿಕೆಗೇಡಿ, ಪಿಶಾಚಿ, ಜಾರೆ ಮಾತ್ರ ಇಚ್ಛೆಪಡುವಳು, ಮಿಕ್ಕವಳು ಇಚ್ಛಿಸುವಳೇ? ಅಂಥವನನ್ನು ಕೀರ್ತಿಲಕ್ಷ್ಮಿ ನಿಂತು ಕೂಡ ನೋಡುವುದಿಲ್ಲ, ವೀರಲಕ್ಷ್ಮಿ ಅವರ ಮಾತನ್ನು ಸಹ ಕೇಳಲಿಚ್ಛಿಸುವುದಿಲ್ಲ.

ಹೀಗೆ ಆರು ಗುಣಗಳಿಲ್ಲದವನು ತುಳಿಲಸಂದನಾಗಲಾರ; ಇಪ್ಪತ್ತೆಂಟು ಮೂಲ ಗುಣಗಳಿಲ್ಲದವನು ತಪಸ್ವಿಯಾಗಲಾರನೆಂಬುದು 'ವೀರಸಿದ್ಧಾಂತ'. ಇಂತಹ ಸದ್ಗುಣಗಳಿಗೆ ನೆಲೆಯಾಗಿರುವವನು ಕುಲಜನಾದ ಅರಸನೇ ಆಗಿರಲಿ, ಕುಲಹೀನನಾದ ಹೊಲೆಯನೇ ಆಗಿರಲಿ ಆತನು ತುಳಿಲಸಂದನೆನಿಸುತ್ತಾನೆ. ಅಂಥವನು ಅಲ್ಪ (=ಕಿರುಕುಳ)ನೂ ಒರಟ (=ಕಡ್ಡ)ನೂ ಆಗಿರಬಾರದು; ಧೈರ್ಯವಂತನಾಗಿರಬೇಕು.

ಅಲ್ಪಕ್ಕೆ ಆಸೆಮಾಡಿ, ಹೀನರೊಂದಿಗೆ ವ್ಯರ್ಥವಾಗಿ ವರ್ತಿಸುವವನು ಚಂಚಲ (=ತುಳಿ)ನೆನಿಸುವನೇ ಹೊರತು 'ತುಳಿಲಸಂದ'ನೆನಿಸಲಾರ. ಅರಸರ ಪ್ರಿಯೆಯರೊಡನೆ, ಅವಿಧೇಯರಾದ ರಾಜಪುತ್ರರೊಡನೆ, ರಾಜ್ಯಲೋಭಿಗಳಾದ ಧೂರ್ತರೊಡನೆ, ಸಹಕರಿಸದ

ನಂಟರೊಡನೆ, ಉಪಾಯಮಾರ್ಗದಲ್ಲಿ ನಡೆವ ಆಸುರೀವ್ಯಕ್ತಿಗಳೊಡನೆ, ಉದ್ಧಟರಾದ ಸೇವಕರೊಡನೆ ಹೊಂದಿಕೊಂಡು ವ್ಯವಹರಿಸುವ ತುಳಿಲಾಳು ವ್ಯಕ್ತಿಗೆ ದೋಷ ತಗಲುತ್ತದೆ. ಆದುದರಿಂದ ತಪಸ್ವಿ ಪಾಪಕ್ಕಂಜಿ, ತುಳಿಲಸಂದ ದೋಷಕ್ಕಂಜಿ ನಡೆಯಬೇಕೆಂಬುದು ಸಿದ್ಧಾಂತವಾಗಿರುವುದಾದರೂ ತಪಸ್ವಿಯು ಪಾಪಪ್ರಮಾದವನ್ನು ಪ್ರಾಯಶ್ಚಿತ್ತದಿಂದ ಕಳೆದುಕೊಳ್ಳಬಹುದು; ಆದರೆ ತುಳಿಲಸಂದನಿಗೆ ಕಿಂಚಿತ್ ದೋಷ ತಗುಲಿದರೂ ಹುಳಿ ಮುಟ್ಟದ ಹಾಲು ಮತ್ತೆ ಹಾಲಾಗದಂತೆ ಆತನು ಪರಾಕ್ರಮದಿಂದ ಮಡಿದರೇನು? ತುಳಿಲಸಂದನಾಗಲಾರನು. ಹಂದಿ, ಹುಲಿಗಳಿಗೆ ಬಲವೂ ಉಂಟು, ''ಪಸುಗೆಯಱಿವ ನೆಗಟ್ತೆಯುಂ ತೊಲಗಿ'' ದೋಷವೆಂಬುದೂ ಉಂಟು. ಕಾರಣ ಸುಭಟನಾದವನು ಅಸಿಧಾರಾವ್ರತಿಯೇ ಸರಿ. ಅಂಥವನು ರಣರಂಗದಲ್ಲಿ ಕುದುರೆಯನೇರಿದವನಾಗಿದ್ದರೆ ಆನೆಯನೇರಬೇಕೇ ಹೊರತು ಆನೆಯನೇರಿದವನಾಗಿದ್ದರೆ ಕುದುರೆಯನೇರಲಾಗದು. ಬಿಲ್ಲು ಹಿಡಿದವನಾಗಿದ್ದರೆ ಅಡ್ಡಗೈದು ಹಿಡಿಯಬೇಕೇ ಹೊರತು ಅಡ್ಡಗೈದು ಹಿಡಿದವನಾಗಿದ್ದರೆ ಬಿಲ್ಲು ಹಿಡಿಯಲಾಗದು. ಬಿಲ್ಲು ಹಿಡಿದವನು ಏರಿ ಬಂದರೆ ಬಿಲ್ಲಾಳ್ ತಗರಿನಂತೆ ಏರಿ ಹೋಗಬೇಕೇ ಹೊರತು ಅಂಜಿ ಬೆನ್ನು ತೋರಿಸಲಾಗದು. ವಿಷಮಪ್ರಸಂಗದಲ್ಲಿ ತನ್ನ ಆಯುಧ ಮತ್ತು ಕುದುರೆಗಳು ಬಿದ್ದರೂ ಕುದುರೆಸವಾರನಾದವನು (ರಣರಂಗದಿಂದ) ಹೊರ ಬರಲಾಗದು. ಆನೆಯನ್ನೇರಿದವನು ತನ್ನ ಆನೆ ಅಂಜಿ ಓಡತೊಡಗಿದರೆ ಅದನ್ನು ಕೊಂದು ಮಲೆತು ನಿಲ್ಲಬೇಕು. ಅಡ್ಡಗೈದು ಹಿಡಿದ ಕಾಲಾಳು ಅಡಿಯನ್ನು ಹಿಂದೆ ಇಡಲಾಗದು. ಒಡೆಯನು ಸತ್ತೊಡೆ ತನ್ನ ಮೂರ್ಛಾಪ್ರಸಂಗದಲ್ಲಿಯೂ ಆಳು ಪ್ರಾಣಾರ್ಪಣೆ ಮಾಡಬೇಕು – ಎಂದು ನುಡಿಯುತ್ತಿದ್ದ 'ವೀರಸಿದ್ಧಾಂತ'ದ ನಿಯಮಗಳನ್ನು ಕೇಳಿ ಕೆಲವರು, ಈ ಮೊದಲು ಅರಿಯದಿದ್ದ ತಾವು ಈಗಲಾದರೂ ಅರಿತು ಆಚರಿಸೋಣ ಎಂದು ಜೋಳದ ಪಾಳಿಗೆ, ವೀರಪ್ರತಿಜ್ಞೆಗೆ, ಯಶಕ್ಕೆ, ಸದ್ಗತಿಗೆ, ಯೋಗ್ಯವಾದ ಮರಣಗಳಾವುವು? ಅವುಗಳಲ್ಲಿ ಯಾರು ಯಾವುದನ್ನು ಮೆಚ್ಚುತ್ತಾರೆಂಬುದನ್ನು ನಿಶ್ಚಯಿಸಿ ನುಡಿಯುತ್ತಿರುವಲ್ಲಿ ಸೂರ್ಯೋದಯ ವಾಯಿತು.

ಇನ್ನೊಂದು ಸಂದರ್ಭ: ಎರಡೂ ಪಕ್ಷಗಳಲ್ಲಿ ಅರ್ಜುನ ಮತ್ತು ಕರ್ಣರಿಗೆ ವೀರಪಟ್ಟ ಸಮಾರಂಭ ನೆರವೇರಿದೆ. ''ನಾನು ವೀರಪಟ್ಟ ಧರಿಸಿದ್ದೇನೆ. ಈ ಸಂಗತಿಯನ್ನು ನೆನಪಿನಲ್ಲಿಟ್ಟುಕೊಂಡು ನಾಳೆ ನೀನು ದೃಢಚಿತ್ತನಾಗಿ ಯುದ್ಧಭೂಮಿಗೆ ಬರಬೇಕು'' ಎಂದು ಅರ್ಜುನನು ದೂತನ ಮೂಲಕ ಕರ್ಣನಿಗೆ ಹೇಳಿಕಳಿಸುತ್ತಾನೆ. ಆ ಮೇರೆಗೆ ದೂತನು ಕರ್ಣನ ಪಾಳೆಯವನ್ನು ಪ್ರವೇಶಿಸುತ್ತಲೇ ವೀರಸನ್ಯಾಸ, ರಣದೀಕ್ಷೆ ಮೊದಲಾದ ವ್ರತಗಳಲ್ಲಿಯೂ ವೀರಪ್ರತಿಜ್ಞೆ, ಕೀರ್ತಿಘೋಷಣಗಳಲ್ಲಿಯೂ ತೊಡಗಿದ್ದ ಯೋಧರ, ''ಆಱುಂ ಗುಣದೊಳ್ ಸಲೆ ನೆಗಟ್ದಸಿಧಾರಾವ್ರತಿಗಳಾಗಿರ್ದ'' ತುಱಿಲಸಂದರ ನಡುವೆ ಶೋಭಿಸುವ ''ಷಡ್ಗುಣ ಸಂಪೂರ್ಣ''ನಾದ ಕರ್ಣನನ್ನು ಕಂಡು ದೂತನು ಅರ್ಜುನ ಹೇಳಿದುದನ್ನು ವಿವರಿಸುತ್ತಾನೆ. ಮುಂದುವರಿದು ''ಪರ ಪಕ್ಷದಲ್ಲಿರುವ ಅರ್ಜುನನನ್ನು ಗೆದೆಯುವುದು ಅಸಾಧ್ಯವೆಂದು ಹೇಳುವುದನ್ನು ಬಿಟ್ಟು, ವೀರಪಟ್ಟವನ್ನು ಧರಿಸುವ ಮರುಳತನಮಾಡಿದೆ'' ಎಂದೂ ನುಡಿಯುತ್ತಾನೆ.

''(ಗೆಲುವೇ ಮುಖ್ಯವೆನ್ನುವ) ಬಲ್ಲಾಳ್ತನಕ್ಕಿಂತ (ಹೋರಾಟವೇ ಮುಖ್ಯವೆನ್ನುವ) ತುಳಿಲಾಳ್ತನವು ಬೇರೆಯಾದುದು. ವೀರಸಿದ್ಧಾಂತದ(=ತುಳಿಲಾಳ್ತನದ) ತತ್ವದ ಮೇರೆಗೆ

ಕೀರ್ತಿಶಾಲಿಯಾದವನಿಗೆ, ಎದುರಾದವನನ್ನು ಸಂಹರಿಸುವುದೇ ನಿಜವಾದ ಗೆಲುವು'' ಎಂದು ಉತ್ತರಿಸಿ, ದೂತನನ್ನು ಹಿಂದಿರುಗಿ ಕಳಿಸುತ್ತಾನೆ, ಕರ್ಣ.

ಮರುದಿನ ಮುಂಜಾನೆ ಕರ್ಣ - ಅರ್ಜುನರ ಹೋರಾಟ ಪ್ರಾರಂಭವಾಗಿ ತುಮುಲ ಯುದ್ಧ ನಡೆಯುತ್ತದೆ. ಕರ್ಣನ ಬಾಣಗಳನ್ನೆಲ್ಲ ಸಮರ್ಥವಾಗಿ ಎದುರಿಸುತ್ತ ನಡೆದ ಅರ್ಜುನನು ''ಏನಯ್ಯ? ಕೌರವ ಸೈನ್ಯವೂ ಸೇನಾನಾಯಕನೂ ತಮಗೆ ನೀನೊಬ್ಬನೇ ಆಸೆಯೆಂದು ನಂಬಿದ್ದಾರೆ. ಆದರೆ ಗೆಲ್ಲಲಾರದ ಸಾಮರ್ಥ್ಯವು ಪರಾಕ್ರಮವೆಂದು ಪರಿಗಣಿಸಲ್ಪಡುವುದೆ?'' ಎಂದು ಕರ್ಣನನ್ನು ಮೂದಲಿಸುತ್ತಾನೆ. ಆಗ ಕರ್ಣನು ''ಯುದ್ಧದಲ್ಲಿ ಗೆಲುವು ಪುಣ್ಯವಶಾತ್ ಪ್ರಾಪ್ತವಾಗುತ್ತದೆ. ಕಾರಣ ಶಕ್ತಿಗುಂದಿದರೂ ಅಳುಕದ ನಿಶ್ಚಲನಾಗಿ ನಿಂತು ಹೋರಾಡುವುದೇ ತುಳಿಲಸಂದನಿಗೆ ಯೋಗ್ಯವಾದುದು. ಆರೂ ಗುಣಗಳನ್ನು ಕೈಬಿಡದೆ ಬದುಕುವ, ಶಸ್ತ್ರಹತಿಗೆ ಬಗ್ಗದೆ ಮುನ್ನಡೆವ ತುಳಿಲಾಳು ಒಂದು ವೇಳೆ ಗೆದೆಯದಿದ್ದರೆ ದೋಷವೆ? ಹಿಮ್ಮೆಟ್ಟದವನಾಗಿ ಹೋರಾಡುತ್ತ ಸತ್ತರೂ ಅವನು ಬದುಕಿದವನೇ ಸರಿ. ಮರಣಪರ್ಯಂತ ಯಾವುದೇ ರೀತಿಯ ದೋಷವು ಅಂಟಿಕೊಳ್ಳದಂತೆ ಉದಾತ್ತನಾಗಿ ಬಾಳಬೇಕಾಗಿರುವುದರಿಂದ ವೀರಮರಣವೇ ತುಳಿಲಾಳ್ತನಕ್ಕೆ ಕಳಶಪ್ರಾಯವಾದುದು'' ಎಂದು ಅರ್ಜುನನಿಗೆ ಉತ್ತರ ಕೊಡುತ್ತಾನೆ.

ಹೀಗೆ ಎರಡು ಪ್ರಸಂಗಗಳಲ್ಲಿ – ಒಮ್ಮೆ ಕರ್ಣನ ಸೈನಿಕರಿಂದ, ಇನ್ನೊಮ್ಮೆ ಸ್ವತಃ ಕರ್ಣನಿಂದ – ವೀರಸಿದ್ಧಾಂತದ ಪ್ರಸ್ತಾಪ ಬರುತ್ತದೆ. ಒಂದು ಕಡೆ ವೀರಸಿದ್ಧಾಂತದ ಅಂಗವಾದ ಆರು ತತ್ವಗಳ ವಿವರಣೆ ಬಂದರೆ, ಇನ್ನೊಂದುಕಡೆ ವೀರಸಿದ್ಧಾಂತಿಗೆ ವೀರಮರಣವೇ ಪರಮಗುರಿ, ಯುದ್ಧವಿಜಯವಲ್ಲವೆಂಬ ಸಂಗತಿ ಸ್ಪಷ್ಟವಾಗುತ್ತದೆ. ಹೀಗೆ ''ವೀರಸಿದ್ಧಾಂತ'' ಪದದ ತಾತ್ವಿಕ ಅರ್ಥವನ್ನು ನಮ್ಮ ಗಮನಕ್ಕೆ ತರುತ್ತದೆ, ಹರಿವಂಶಾಭ್ಯುದಯ.

ಪಂಪನು ವೀರಸಿದ್ಧಾಂತಕ್ಕೆ ಉದಾಹರಣೆಯಾಗಿ ಭೀಷ್ಮರನ್ನು ಸೂಚಿಸಿದರೆ, ಬಂಧುವರ್ಮನು ವೀರಸಿದ್ಧಾಂತದ ತತ್ವಗಳನ್ನು ಕರ್ಣನು ಬದುಕಿದವನೆಂದೂ ಅವನ ಸೈನ್ಯಸಮೂಹ ಈ ಸಿದ್ಧಾಂತವನ್ನು ಆದರ್ಶವಾಗಿಟ್ಟುಕೊಂಡಿದ್ದಿತೆಂದೂ ಸ್ಪಷ್ಟಪಡಿಸುತ್ತಾನೆ. ಮಹಾಭಾರತದ ಪಾತ್ರಗಳನ್ನು ಅರ್ಥೈಸಿಕೊಂಡ ಪಂಪನ ಹಿಂದೂದೃಷ್ಟಿ, ಬಂಧುವರ್ಮನ ಜೈನದೃಷ್ಟಿಗಳು ಇಲ್ಲಿ ತುಂಬ ವ್ಯತ್ಯಾಸಯುತವೂ ಗಮನಾರ್ಹವೂ ಎನಿಸಿವೆ.

*ಸಾಧನೆ, ೬-೧, ೧೯೭೭*

*ಮಾರ್ಗ, ೧, ೧೯೮೮, ಪು.೮೩-೯೦*

# ೬೪. ವಚನ ಸಾಹಿತ್ಯ: ಕೈಗಾರಿಕೆಗಳು

● ಪಿ. ವಿ. ನಾರಾಯಣ

೧

ವಚನಕಾಲವು ಸಾಕಷ್ಟು ನಾಗರಿಕ ಜೀವನವನ್ನು ಕಂಡಿದ್ದ ಕಾಲ. ಆ ಹೊತ್ತಿಗೆ ನೂರಾರು ವರ್ಷಗಳಿಂದ ನಿಸರ್ಗದಲ್ಲಿ ದೊರೆಯುವ ವಸ್ತುಗಳನ್ನು ಬಳಸಿಕೊಂಡು ಮನುಷ್ಯ ತನ್ನ ರಕ್ಷಣೆ ಹಾಗೂ ಸಂತೋಷಗಳಿಗೆ ಬೇಕಾದ ನೂರಾರು ವಸ್ತುಗಳನ್ನು ತಯಾರಿಸಿಕೊಳ್ಳುತ್ತಿದ್ದ. ಹೀಗೆ ತನ್ನ ಕೈಯನ್ನು ಬಳಸಿ ನಿರ್ಮಿಸುವ ಕ್ರಮವನ್ನೇ ಕೈಗಾರಿಕೆ ಎಂದು ಕರೆಯುವುದು.

## ಬಟ್ಟೆ ತಯಾರಿಕೆ

ವಚನಕಾಲದಲ್ಲಿ ಬಟ್ಟೆಯ ಕೈಗಾರಿಕೆಯು ಸಾಕಷ್ಟು ಮುಂದುವರೆದಿದ್ದಿತು. ಹತ್ತಿಯಿಂದ ರಾಟೆಯಲ್ಲಿ ನೂಲು ತೆಗೆಯುತ್ತಿದ್ದರು. ರಾಟೆಯ ವಿವಿಧ ಭಾಗಗಳೆಂದರೆ; ಅಡಿಯ ಹಲಗೆ, ತೋರಣ ಬೊಂಬೆ, ಸೂತ್ರಕರ್ಣ ಮತ್ತು ಕದಿರು. ರಾಟೆಯನ್ನು ಕೈಯಲ್ಲಿ ಹಿಡಿದು ತಿರುಗಿಸುತ್ತ ನೂಲು ತೆಗೆಯುತ್ತಿದ್ದರೆ, ಆ ನೂಲು ಕದಿರಿನಲ್ಲಿ ಸುತ್ತಿಕೊಳ್ಳುತ್ತಿತ್ತು.[೧] ನೂಲು ತೆಗೆಯಲು ಬಿಡಿಸಿ ಸ್ವಚ್ಛ ಮಾಡಿದ 'ಹಂಜಿ'ಯನ್ನು ಉಪಯೋಗಿಸುತ್ತಿದ್ದರು. ರಾಟೆ ಹಂಜಿಗಳಲ್ಲದೆ ಜೇಡವು ನೂಲನ್ನು ನಿರ್ಮಿಸುವ ಕ್ರಿಯೆಯನ್ನು ಕಂಡು ವಚನಕಾರರು ವಿಸ್ಮಯವನ್ನು ವ್ಯಕ್ತಪಡಿಸುತ್ತಾರೆ.[೨] ನೂತ ನೂಲನ್ನು ನೆಯ್ಗೆಯುವರಿಗೆ ಮಾರುತ್ತಿದ್ದರು; ಆದರಿಂದ ಮತ್ತೆ ನೂಲುವುದಕ್ಕಾಗಿ ಸ್ವಲ್ಪ ಹತ್ತಿಯನ್ನು ಕೊಳ್ಳುತ್ತಿದ್ದರು.[೩] ಹತ್ತಿಯಿಂದ ನೂಲನ್ನು ತೆಗೆಯುವವರನ್ನು ಕದಿರ ಕಾಯಕದವರೆನ್ನುತ್ತಿದ್ದರು. ಕದಿರ ರೆಮ್ಮವ್ವೆಯೆಂಬ ವಚನಕಾರ್ತಿಯು ಈ ಕಾಯಕದವಳು.

ನೂಲಿನಿಂದ ವಸ್ತ್ರವನ್ನು ನೇಯುವವರು ಜೇಡರು. ಜೇಡರ ದಾಸಿಮಯ್ಯ ಪ್ರಖ್ಯಾತ ವಚನಕಾರ. ನೂಲನ್ನು ಗಂಜಿಯಲ್ಲಿ ಅದ್ದಿ ಅದನ್ನು 'ಹಾಸುಮಣೆ' ಎಂಬ ಮರದ ಚೌಕಟ್ಟಿಗೆ ಕಟ್ಟುತ್ತಿದ್ದರು. ಹೀಗೆ ಕಟ್ಟಿದ ನೂಲನ್ನು ಹುರಿಗೊಳಿಸುವುದಕ್ಕಾಗಿ ತಿರುಗಿಸುತ್ತಿದ್ದರು, ಇದನ್ನೇ ವಚನಗಳಲ್ಲಿ 'ಹಾಸನಿಕ್ಕು' ಎಂದು ಕರೆದಿರುವುದು.[೪] ನೇಯುವುದಕ್ಕಾಗಿ ಮಗ್ಗದಲ್ಲಿ ಉದ್ದುದ್ದವಾಗಿ ಹಾಸಿದ ನೂಲಿನ ಹಾಸನ್ನು ಉಂಕ ಅಥವಾ 'ಉಂಕಿ' ಎಂದು ಕರೆಯುತ್ತಿದ್ದರು.[೫] ಹೀಗೆ ಉಂಕೆಯನ್ನು ಮಾಡುವಾಗ ಅದನ್ನು ಶುಭ್ರಗೊಳಿಸುವುದಕ್ಕೆ 'ಕುಂಚಿಗೆ'ಯನ್ನು ಬಳಸುತ್ತಿದ್ದರು.[೬] ಮಗ್ಗದ ಹಾಸಿನ ಮೇಲೆ ಕಟ್ಟಬೇಕಾದ ನಿರ್ದಿಷ್ಟ ಸಂಖ್ಯೆಯ ನೂಲಿಗೆ 'ಅಣಿ' ಎಂಬ ಹೆಸರಿತ್ತು;[೭] ಇದನ್ನು ಮಗ್ಗದ ಮೇಲ್ಭಾಗದಲ್ಲಿ ಮತ್ತು ಕೆಳಭಾಗದಲ್ಲಿ ಜೋಡಿಸಿ

---

೧. ಶಿವಶ ವ: ಪು. ೩೮೧ (ಕದಿರ ರೆಮ್ಮವ್ವೆ, ೪)
೨. ಬಸವ ವ. ೯೬೩: ಪು. ೪೦೩.೪; ಚನ್ನಬ ವ. ೯: ಪು. ೬
೩. ಅಲ್ಲಮ ವ.ಚಂ. ೩೩೦: ಪು. ೭೫
೪. ಜೆಡಗಿನ ವ. ಪು. ೩೧೨ (ಗುಪ್ತ ಮಂಚಣ್ಣ, ೪)
೫. ದೇವರ ದಾ ವ. ೧೨೪: ಪು. ೪೦
೬. ಜೆಡಗಿನ ವ. ಪು. ೩೧೨ (ಗುಪ್ತ ಮಂಚಣ್ಣ, ೪)
೭. ದೇವರ ದಾ ವ. ೧೨೪: ಪು. ೪೦; ಸಿದ್ಧರಾ ವ, ಮಿಶ್ರ ಸ್ತೋತ್ರ ತ್ರಿವಿಧಿ, ೭೯: ಪು. ೪೯೯

ಕಟ್ಟುವುದನ್ನು 'ಅಣಿಕಟ್ಟು' ಎಂದೇ ಕರೆಯುತ್ತಾರೆ. ಉದ್ದುದ್ದವಾಗಿರುವ ನೂಲನ್ನು 'ಹಾಸು' ಎಂದೂ ಅಡ್ಡಡ್ಡಲಾಗಿರುವ ನೂಲನ್ನು 'ಹೊಕ್ಕು' ಎಂದು ಈಗಿನ ಹೆಸರಿನಿಂದಲೇ ಆಗಲೂ ಕರೆಯುತ್ತಿದ್ದರು; ಇವೆರಡೂ ಬೆರತು ವಸ್ತ್ರವಾಗುತ್ತಿತ್ತು.[೮] ಹೀಗೆ ಹಾಸುಹೊಕ್ಕುಗಳನ್ನು ಸೇರಿಸಲು ನೇಯ್ಗೆಯವನು ಹಿಡಿದಿರುತ್ತಿದ್ದ ನೂಲಿನ ಉಪಕರಣವನ್ನೆ 'ಲಾಳಿ' ಎಂದು ಕರೆಯುತ್ತಿದ್ದುದು.[೯] ಲಾಳಿಯಲ್ಲಿ ಸೇರಿಸಲು ಹಾಕುತ್ತಿದ್ದ ನೂಲಿನ ಉಂಡೆಯನ್ನು 'ಕಂಡಿಕೆ' ಎನ್ನುತ್ತಿದ್ದರು.[೧೦] ಕಂಡಿಕೆಯನ್ನು ಸೇರಿಸುವುದಕ್ಕಾಗಿ ಉಪಯೋಗಿಸುತ್ತಿದ್ದ ಕೊಕ್ಕೆಯನ್ನು 'ಮುಳ್ಳು' ಅಥವಾ 'ಕಂಡಿಕೆಯ ಮುಳ್ಳು' ಎನ್ನುತ್ತಿದ್ದರು.[೧೧] ಬಟ್ಟೆಗಳಿಗೆ ಬಣ್ಣಗಳನ್ನು ಹಾಕುತ್ತಿದ್ದ ಸೂಚನೆಯು ಒಂದು ವಚನದಲ್ಲಿದೆ.[೧೨] ಮಗ್ಗದ ಮೇಲೆ (ಒಂದು ಮಗ್ಗಕ್ಕಿಷ್ಟು ಎಂದು) ತೆರಿಗೆಯನ್ನು ಹಾಕುತ್ತಿದ್ದರು.[೧೩] ಈ ಕಾಲದಲ್ಲಿ ರೇಷ್ಮೆ ವಸ್ತ್ರವನ್ನೂ ತಯಾರಿಸುತ್ತಿದ್ದರು. ರೇಷ್ಮೆಯ ವಸ್ತ್ರವನ್ನು ನೇಯುತ್ತಿದ್ದವರು 'ಪಟ್ಟೆಸಾಲಿಗ'ರು.[೧೪] ರೇಷ್ಮೆಗೂಡುಗಳನ್ನು ಬೇಯಿಸಿ ರೇಷ್ಮೆಯನ್ನು ಪಡೆಯುತ್ತಿದ್ದ ಸೂಚನೆ ಒಂದು ವಚನದಲ್ಲಿದೆ.[೧೫] ರೇಷ್ಮೆಯಿಂದ ನೂಲನ್ನು ತೆಗೆಯುತ್ತಿದ್ದವರೂ ಕದಿರ ಕಾಯಕದವರೇ ಎಂದು ಕಾಣುತ್ತದೆ. ಜೇಡರೂ ರೇಷ್ಮೆ ವಸ್ತ್ರವನ್ನು ನೇಯುತ್ತಿದ್ದಿರ ಬಹುದು. ಹತ್ತಿಯ ಬಟ್ಟೆಗಳಲ್ಲಿಯೇ ಚೆಂದಕ್ಕಾಗಿ 'ಸರಿಗೆ'ಯನ್ನು ಸೇರಿಸುತ್ತಿದ್ದರು.[೧೬] ದೇವಾಂಗವೆಂಬ ವಸ್ತ್ರವು ರೇಷ್ಮೆಯನ್ನೇ ಸೂಚಿಸುತ್ತದೆ.[೧೭]

ಉಡುಪು ತಯಾರಿಸುವ ದರ್ಜಿಗಳನ್ನು ಚಿಪ್ಪಿಗರೆಂದು ಕರೆಯುತ್ತಿದ್ದರು.[೧೮] ಇವರನ್ನು ಸೂಜಿಕಾಯಕದವರೆಂದೂ ಕರೆಯುತ್ತಿದ್ದರು. ಸೂಜಿ ಮತ್ತು ಹೊಲಿಗೆಗಳ ಉಲ್ಲೇಖವು ಋಗ್ವೇದದಲ್ಲಿಯೇ ಇರುವುದರಿಂದ ಉಡುಪುಗಳನ್ನು ಹೊಲಿಯುವ ರೂಢಿಯು ಅಷ್ಟೇ ಹಳೆಯದೆಂದು ಹೇಳಬಹುದು.[೧೯] ಉಡುಪು ತಯಾರಿಸುವುದಕ್ಕಾಗಿ ಬಟ್ಟೆಯನ್ನು ಕತ್ತರಿಸುತ್ತಿದ್ದರು;[೨೦] ಈ ರೀತಿ ಕತ್ತರಿಸಿದ ಪ್ರತಿಯೊಂದು ಭಾಗಕ್ಕೂ 'ಚಿಪ್ಪು' ಎಂಬ ಹೆಸರಿದ್ದಂತೆ ಕಾಣುತ್ತದೆ.[೨೧] ಬಟ್ಟೆಗಳನ್ನು ಸೂಜಿಗಳಲ್ಲಿ ಸೇರಿಸಿದ ದಾರಗಳಿಂದ ಹೊಲಿಯುತ್ತಿದ್ದರು.

---

೮. ಧರ್ಮಾಮೃತ: ೧೧, ೧೮೬ "ಪಾಸುಂ ಪೊಕ್ಕುಂಬೆರಸು ಸೀರೆಯೆಂತು."
೯. ಮೋಳಿಗೆ ಮಾ ವ. ೪೨೭: ಪು. ೧೦೭
೧೦. ದೇವರ ದಾ ವ. ೧೨೪: ಪು. ೪೦
೧೧. ಅದೇ;
೧೨. ಮೋ ಮಾ ವ. (ಸ) ೪೪: ಪು. ೫೩ ("ಬಣ್ಣವನೊಳಕೊಂಡ ಕಪ್ಪಡದಂತೆ.")
೧೩. ಶಿವದಾ ಗೀ: ಪು. ೩೨೭ (ಈ ಪುಟದಲ್ಲಿನ ಸುಂಕದ ಬಂಕಣ್ಣನ ವಚನ)
೧೪. ಪಂಚತಂತ್ರ: ೧೨೬ ಗದ್ಯ: ಪು. ೭೪
೧೫. ಅಕ್ಕನ ವ .೧೭: ಪು. ೧೫
೧೬. ದೇವರ ದಾ ವ. ೧೨೪: ಪು. ೪೦
೧೭. ಅಕ್ಕನ ವ. ೨೧೫: ಪು. ೮೮
೧೮. ಧರ್ಮಾಮೃತ: ೩.೭೩ ("ಚಿಪ್ಪಿಗನಂತೆ ಪೊಲಿವರ್.")
೧೯. A. S. Altekar: *The Position of Women in Ancient Indian Civilisation* p. 292
೨೦. ಚಿಡಗಿನ ವ: ಪು. ೨೯೦ (ಸೂಜಿ ಕಾಯಕದ ರಾಮಿತಂದೆ, ೧)
೨೧. ಚೆಡಗಿನ ವ: ಪು. ೨೯೧ ("ತಲೆಗೆ ಮೂರು ಚಿಪ್ಪು, ಅಂಗಕ್ಕಾರು ಚಿಪ್ಪು, ಮಿಕ್ಕಾದ ಸರ್ವಾಂಗವೆಲ್ಲಕ್ಕೂ ಒಂದೇ ಚಿಪ್ಪಿನ ಕುಪ್ಪಸ" – ಸೂಜಿಕಾಯಕದ ರಾಮಿತಂದೆ, ೩)

ಚನ್ನಬಸವಣ್ಣನ ವಚನವೊಂದರಲ್ಲಿ 'ಉಕ್ಕಿನ ಸೂಜಿ'ಯ ಹೆಸರು ಉಕ್ತವಾಗಿದೆ;[೨೨] ದಬ್ಬಳದ ಉಲ್ಲೇಖವು ಒಂದು ವಚನದಲ್ಲಿದೆ.[೨೩] ಸೂಜಿಯಲ್ಲಿನ ಚೂಪಾದ ಭಾಗವನ್ನು 'ಮೊನೆ' ಯೆಂದೂ ಹಿಂಭಾಗದಲ್ಲಿ ದಾರವನ್ನು ಪೋಣಿಸುವುದಕ್ಕಾಗಿರುವ ಕಣ್ಣನ್ನು 'ಹಿನ್ನಿ'ಯೆಂದೂ ಕರೆಯುತ್ತಿದ್ದರು.[೨೪] ಸೂಜಿ ಕಾಯಕದ ರಾಮಿತಂದೆಯು ನಾಲ್ಕು ಬಗೆಯ ಹೊಲಿಗೆಗಳನ್ನು ಹೆಸರಿಸುತ್ತಾನೆ; 'ಅಂಟುದಾರ', 'ಉಭಯದ ಹೊಲಿಗೆ', 'ಟಬ್ಬಿ' ಮತ್ತು 'ಕಲ್ಲಿಯ ಹೊಲಿಗೆ'.[೨೫] 'ಕುಪ್ಪಸ (<ಸಂ. ಕೂರ್ಪಾಸ)ವೆಂಬುದು ಹೊಲಿದು ಸಿದ್ಧಪಡಿಸಿದ ಉಡು ಪೆಂಬದು ಒಂದು ವಚನದಿಂದ ಸ್ಪಷ್ಟವಾಗುತ್ತದೆ.[೨೬]

### ಮಡಕೆಯ ತಯಾರಿಕೆ

ಮಡಕೆಯನ್ನು ಮಾಡುವವರು ಕುಂಬಾರರು (ಸಂ. ಕುಂಭಕಾರ). ಹದವಾದ ಮಣ್ಣಿನಿಂದ ಮಾತ್ರವೇ ಮಡಕೆಯನ್ನು ತಯಾರಿಸಲು ಸಾಧ್ಯ.[೨೭] ಅದನ್ನು ನೀರಿನಲ್ಲಿ ಕಲೆಸಿ ಚಕ್ರದ ನಾಭಿಯ ಮೇಲಿಟ್ಟು ತಿರುಹುವ ದಂಡದಿಂದ ಚಕ್ರವನ್ನು ತಿರುಗಿಸುತ್ತಿದ್ದ.[೨೮] 'ಹಿಡಿಗುಂಡ'ನ್ನು ಮಡಕೆಯ ತಳದೊಳಗೆಳವಡಿಸಿ, ಎಡಗೈಯನ್ನು ಮಡಕೆಯ ಒಳಭಾಗದಲ್ಲಿಟ್ಟು ಸರಿಪಡಿಸುತ್ತ ಮತ್ತೊಂದು ಕೈಯಲ್ಲಿ 'ಕಲುವಲಿಗೆ' (ಕಲ್ಲಿನ ತೆಳುವಾದ ಹಲಗೆ)ಯನ್ನು ಹಿಡಿದು ಹೊರಭಾಗವನ್ನು ರೂಪಿಸಲು ತಟ್ಟುತ್ತಿದ್ದ.[೨೯] ಹೀಗೆ ರೂಪಗೊಂಡು ಪೂರ್ಣವಾದ ಮಡಕೆಯನ್ನು ನೂಲೆಳೆಯನ್ನುಪಯೋಗಿಸಿ ಚಕ್ರದ ನಾಭಿಯಿಂದ ಬೇರ್ಪಡಿಸುತ್ತಿದ್ದರು; ಈ ಹಸಿಯ ಮಡಕೆಯನ್ನು ಬಿಸಿಲಲ್ಲಿಟ್ಟು ಒಣಗಿಸುತ್ತಿದ್ದರು.[೩೦] ಪೂರ್ಣವಾಗಿ ಒಣಗಿದ ಮಡಕೆಗಳನ್ನು 'ಆವಿಗೆ'ಯಲ್ಲಿಟ್ಟು ಸುಡುತ್ತಿದ್ದರು.[೩೧] ಮಣ್ಣಿನಲ್ಲಿ ಮಾಡಿದ ಬೊಂಬೆಗಳನ್ನೂ ಆವಿಗೆಯಲ್ಲಿಟ್ಟು ಸುಡುತ್ತಿದ್ದರೆಂದು ಕಾಣುತ್ತದೆ.[೩೨] ಕುಂಬಾರ ಗುಂಡಯ್ಯನೆಂಬುವನು ಮಡಕೆಯನ್ನು ಮಾಡುವಾಗ ಭಕ್ತಿಯಿಂದ ಶಿವನನ್ನು ನೆನಸುತ್ತ ಮಡಕೆಯನ್ನು ಹೊಡೆಯವ ತಾಳಕ್ಕೆ ಸರಿಯಾಗಿ ಶಿವನು ಪ್ರತ್ಯಕ್ಷವಾಗಿ ಕುಣಿಯುತ್ತಿದ್ದುದೇ ಹರಿಹರನ 'ಕುಂಬರ ಗುಂಡಯ್ಯನ ರಗಳೆ'ಯ ವಸ್ತು.

### ಗಾಣ

ಗಾಣವಾಡಿಸಿ ಎಣ್ಣೆಗಳನ್ನು ಉತ್ಪಾದಿಸುವವರೇ 'ಗಾಣಿಗ'ರು. ಗಾಣದ ಕಂಬವನ್ನು

---

೨೨. ಚನ್ನಬ ವ. ೫೧೯: ಪು. ೨೩೮

೨೩. ಬೆಡಗಿನ ವ. ಪು. ೩೪೦

೨೪. ಬೆಡಗಿನ ವ. ಪು. ೩೪೬ (ಸುಂಕದ ಬಂಕಣ್ಣ, ೨೮)

೨೫. ಸರ್ವಪು. ವ. ೬೨೭

೨೬. ಸರ್ವಪು. ವ. ೬೩೧

೨೭. ಶಿವಶ: ಪು. ೩೯೭ (ಕೇತಲದೇವಿ)

೨೮. ಹರಿಹರ ರ: ಪು. ೨೫೨ (ಕುಂಬರ ಗುಂಡಯ್ಯ)

೨೯. ಅದೇ: ಪು. ೨೫೩

೩೦. ಬಸವ ವ. ೧೨೩೪: ಪು. ೫೧೨

೩೧. ಗಣಭಾರ ಮಾ: ಪು. ೧೧

೩೨. ಬಸವ ವ. ೧೬: ಪು. ೧೦

'ಸ್ಥಾಣು' ಎನ್ನುತ್ತಿದ್ದರು;[೩೩] ಇದಕ್ಕೆ ಕನ್ನಡದಲ್ಲಿ 'ಅರಳೆ' ಎಂಬ ಹೆಸರಿತ್ತು.[೩೪] ಎಣ್ಣೆಯ ಬೀಜಗಳನ್ನು ಅರೆಯುವುದಕ್ಕಾಗಿ ಹಾಕುವ ಭಾಗವೇ ಗಾಣದ 'ಬಾಯಿ'; ಅದನ್ನರೆಯುವ ಸಾಧನವೇ 'ಕೊಂತ', ಇದನ್ನು ಎತ್ತಿಗೆ ಕಟ್ಟಿ ಅದು ಗಾಣದ ಸುತ್ತಲೂ ಸುತ್ತುವಾಗ ಇದೂ ಸುತ್ತಿ ಬೀಜಗಳನ್ನು ಅರೆಯುತ್ತಿತ್ತು.[೩೫] ಎತ್ತುಗಳನ್ನು ಕಟ್ಟಿ ಗಾಣವಾಡಿಸುವಾಗ ಗಾಣಿಗನು ಗಾಣದ ಕತ್ತರಿಯ ಮೇಲೆ ಕುಳಿತುಕೊಳ್ಳುತ್ತಿದ್ದ (ಕತ್ತರಿಯಿಲ್ಲದೆ ಗಾಣವಾಡುವವನನ್ನು ನಯಸೇನನು ಮೂರ್ಖನೆಂದು ಕರೆಯುತ್ತಾನೆ.[೩೬]) ಗಾಣದೆತ್ತನ್ನು ಬೇರೆಯವರಿಂದ ಹೊಡೆಯಿಸಿ ಎಷ್ಟೋ ವೇಳೆ ಹಿಂಡಿಯನ್ನೇ ಕೂಲಿಯಾಗಿ ಕೊಡುತ್ತಿದ್ದರು, ಹಿಂಡಿಯನ್ನು ಜನರು ತಿನ್ನುತ್ತಿದ್ದರು.[೩೭] ಇದು ಎತ್ತಿನ ಗಾಣದ ವಿಷಯ; ಕೈಯಿಂದಲೇ ಗಾಣವಾಡಿಸುತ್ತಿದ್ದ ಪದ್ಧತಿಯೂ ಇದ್ದಿರಬೇಕು. ಔಡಲು ಅಥವಾ ಹೇರಂಡದಿಂದ ಮಾತ್ರ ಎಣ್ಣೆಯನ್ನು ಸ್ವಲ್ಪ ಭಿನ್ನ ರೀತಿಯಲ್ಲಿ ತಯಾರಿಸುತ್ತಿದ್ದರು. ಹರಳಿನ ಬೀಜಗಳನ್ನು ಪುಡಿ ಮಾಡಿ ಅದನ್ನು ನೀರಿನಲ್ಲಿ ಕಲಿಸಿ ಬೇಯಿಸುತ್ತಿದ್ದರು; ನೀರೆಲ್ಲ ಆವಿಯಾಗಿ ಕೊನೆಗೆ ಹರಳೆಣ್ಣೆಯು ಮಾತ್ರ ಉಳಿಯುತ್ತಿತ್ತು.[೩೮]

**ಚರ್ಮದ ಕೆಲಸ**

ಚರ್ಮದ ಕೆಲಸವು ಎರಡು ಗುಂಪಿನ ಜನರಿಂದ ನಡೆಯುತ್ತಿತ್ತು. ಚರ್ಮವನ್ನು ಸುಲಿದು ಹದಮಾಡಿ ಅದನ್ನು ಉಪಯೋಗಕ್ಕೆ ಯೋಗ್ಯವಾಗಿ ಮಾಡುವವನು 'ಸಮ್ಮಗಾರ' ಅಥವಾ 'ಚರ್ಮಕಾರ'; ಹದಗೊಳಿಸಲ್ಪಟ್ಟ ಚರ್ಮದಿಂದ ಪಾದರಕ್ಷೆ ಮುಂತಾದ ವಸ್ತುಗಳನ್ನು ತಯಾರಿಸುವವನು 'ಮಚ್ಚಿಗ'ನೆನಿಸಿಕೊಳ್ಳುತ್ತಿದ್ದ. ಇವೆರಡನ್ನೂ ಒಬ್ಬನೇ ಮಾಡುತ್ತಿದ್ದಿರಲೂ ಬಹುದು. ಚರ್ಮವನ್ನು ಹದಮಾಡುವ ಕ್ರಮವನ್ನು ಮಾದಾರ ಚನ್ನಯ್ಯನೆಂಬ ವಚನಕಾರನ ಒಂದು ವಚನದಲ್ಲಿ ಹೇಳಲಾಗಿದೆ: ''ಸ್ಥೂಲ ಸೂಕ್ಷ್ಮ ಕಾರಣವೆಂಬ ಮೂರು ಕಂಬವ ನೆಟ್ಟು ಆಗುಛೇಗೆ ಎಂಬ ದಡಿಗೋಲಿನಲ್ಲಿ ಆಡಗದ ಎಮ್ಮೆಯ ಚರ್ಮವ ತೆಗೆದು ಉಭಯ ನಾಮವೆಂಬ ನಾರಿನಲ್ಲಿ ತಿತ್ತಿಯನೊಪ್ಪವ ಮಾಡಿ ತಿಗುಡಿನಲ್ಲಿ ಸರ್ವಸಾರವೆಂಬ ಕಾರದ ನೀರ ಹೊಯ್ದು ಅಟ್ಟೆಯ ದುರ್ಗುಣ ಕೆಟ್ಟು ಮೆಟ್ಟಡಿಯವರಿಗೆ ಮೆಟ್ಟಿಸಬಂದೆ.''[೩೯] ಇದರಲ್ಲಿ ಸತ್ತ ಎಮ್ಮೆಯನ್ನು ಮೂರು ಕಂಬಗಳಿಗೆ ಕಟ್ಟಿ ದಡಿಗೋಲಿನಿಂದ ಅದರ ಚರ್ಮವನ್ನು ತೆಗೆದು, ಲವಣದ ನೀರಿನಲ್ಲಿ ನೆನೆಸಿ ಹದಮಾಡುತ್ತಿದ್ದ ರೀತಿಯನ್ನು ಸ್ಥೂಲವಾಗಿ ಹೇಳಲಾಗಿದೆ. ಇದು ಈಗಲೂ ಹಳ್ಳಿಗಳಲ್ಲಿ ಚರ್ಮ ಹದಮಾಡುವಾಗ ಸಮಗಾರರು ಅನುಸರಿಸುವ ವಿಧಾನವನ್ನೇ ಹೋಲುತ್ತದೆ. ಅವರು ಹದಮಾಡುವ ಕ್ರಮವು ಈ ರೀತಿಯಿದೆ: ದೊಡ್ಡ ದೊಡ್ಡ ಮಣ್ಣಿನ ಬಾನಿಗಳಲ್ಲಿ ಸುಣ್ಣದ ನೀರನ್ನು ಹಾಕಿ ಅದರಲ್ಲಿ ಕಚ್ಚಾಚರ್ಮವನ್ನು ಸುಮಾರು ಒಂದು ತಿಂಗಳ ಕಾಲ ನೆನೆಯಿಡುತ್ತಾರೆ (ಕಾರದ ನೀರ ಹೊಯ್ದು). ಅನಂತರ ಚರ್ಮವನ್ನು ತೆಗೆದು ಅದರಲ್ಲಿನ ಸುಣ್ಣದ ಅಂಶವು ಹೋಗುವಂತೆ ಒಳ್ಳೆಯ ನೀರಿನಲ್ಲಿ ಮತ್ತೆ ಮೂರು ದಿನಗಳ ಕಾಲ

೩೩. ಶಿವನ ವ:, ಪು. ೩೦೪ (ಮೋಳಿಗೆ ಮಹಾದೇವಿ, ೨೩)
೩೪. ಬಸವ ವ. ೫೭೮: ಪು. ೨೩೨
೩೫. ಬೆಡಗಿನ ವ: ಪು. ೨೦೨ (ನಗೆಯ ಮಾರಿತಂದೆ, ೫)
೩೬. ಧರ್ಮಾಮೃತ: ೫.೧೦೬ ಅಡಿಟಿಪ್ಪಣಿ (''ಕತ್ತರಿಯಿಲ್ಲದೆ ಗಾಣವಾಡುವ ಎಗ್ಗನಂ'')
೩೭. ಹರಿಹರ ರ: ಪು. ೩.೬೮ (ರೇವಣಸಿದ್ದೇಶ್ವರ)
೩೮. ಮೋಳಿಗೆ ಮಾ ವ. ೫೦೫: ಪು. ೧೩೦
೩೯. ಸರ್ವಪ್ರ ವ. ೫೫೪

ನೆನಸುತ್ತಾರೆ. ಆಮೇಲೆ ಮತ್ತೊಂದು ಪಾತ್ರೆಯಲ್ಲಿ ನೆಲ್ಲಿ (Phyllanthus Emblica)ಯ ಎಲೆಗಳನ್ನು ಮಿಶ್ರ ಮಾಡಿರುವ ನೀರಿನಲ್ಲಿ ಪುನಃ ಹನ್ನೆರಡು ದಿನಗಳಷ್ಟು ಕಾಲ ನೆನಸುತ್ತಾರೆ. ಅನಂತರ ಚರ್ಮವನ್ನು ನೀರಿನಿಂದ ತೆಗೆದು ಹಿಂಡಿ ಒಂದು ತಿಂಗಳ ಕಾಲ ಹಾಗೆಯೇ ಬಿಡುತ್ತಾರೆ. ಅದಾದ ನಂತರ ಚರ್ಮವನ್ನು ತೊಳೆದು ಹಿಂಡಿ ಅದನ್ನು ಹೊಲಿದು ಅದರಲ್ಲಿ ಗೋಡಂಬಿ, ದದ್ದಾಲ (Careya arboreya Roxb) ಮತ್ತು ನೇರಿಳೆ ಮರಗಳ ತೊಗಟೆಯನ್ನು ತುಂಬಿ ಒಂದು ದಿನದ ಮಟ್ಟಿಗೆ ತೂಗು ಹಾಕುತ್ತಾರೆ ('ತಿತ್ತಿಯನೊಪ್ಪಹ ಮಾಡಿ ತಿಗುಡಿನಲ್ಲಿ'). ಆಮೇಲೆ ಹೊಲಿಗೆಯನ್ನು ಬಿಚ್ಚಿ, ಚರ್ಮವನ್ನು ತೊಳೆದು ಶುದ್ಧಿಮಾಡಿ ಒಂದು ದಿನ ಬಿಸಿಲಿನಲ್ಲಿ ಒಣಗಿಸಿದರೆ ಚರ್ಮವು ಪಾದರಕ್ಷೆಯನ್ನು ತಯಾರಿಸಲು ಯೋಗ್ಯವಾಗುತ್ತದೆ[೪೦]

ಮಾದಾರ ಧೂಳಯ್ಯನೆಂಬ ವಚನಕಾರನ ಕಾಯಕವೂ ಚಪ್ಪಲಿಗಳನ್ನು ತಯಾರಿಸುವುದಾಗಿತ್ತು. ಅಟ್ಟೆ (ಪಾದರಕ್ಷೆಯ ತಳದ ಹಲ್ಲೆ)ಯನ್ನು ಹೊಲಿದು ಹೆಬ್ಬೆರಳು ಹಿಡಿಸುವಂತೆ ಒಂದು ಉಂಗುರವನ್ನು ಹೊಲಿದು ಮೆಟ್ಟಿದಾಗ ಕಾಲಿನಿಂದ ಪಾದರಕ್ಷೆಯು ಜಾರಿ ಹೋಗದಂತೆ ಮಾಡಲಾಗುತ್ತಿತ್ತು. ಇದನ್ನು ದುಡ್ಡಿಗೆ ಮಾರುತ್ತಿದ್ದರು.[೪೧] ಚರ್ಮವನ್ನು ಹೊಲಿಯಲು ಬಳಸುತ್ತಿದ್ದ ಸಾಧನಕ್ಕೆ 'ಉಳಿ' ಎಂದು ಹೆಸರು.[೪೨] ಪಾದರಕ್ಷೆಯನ್ನು ವಚನಗಳು ಹಾವುಗೆ ಎನ್ನುತ್ತವೆ. ಸಂನ್ಯಾಸಿಗಳು ಮುಂತಾದವರು ಮರದ ಹಾವುಗೆಗಳನ್ನು ಹಾಕಿಕೊಳ್ಳುತ್ತಿದ್ದರು. ಇದನ್ನು ವಚನಗಳು 'ಪಾವುಗೊರಡು' ಎಂದು ಕರೆಯುತ್ತವೆ;[೪೩] ಚರ್ಮದಿಂದ ತಯಾರಿಸಿದ ಪಾದರಕ್ಷೆಗಳು 'ಚಮ್ಮಾವುಗೆ' ಎನಿಸಿಕೊಳ್ಳುತ್ತಿತ್ತು.[೪೪]

## ಮರಗೆಲಸ

ಮೋಪುಗಾರರು ಅಥವಾ ಕಾಮಾಟಗಳು ಮನೆಗೆಲಸಕ್ಕೆ ಬೇಕಾಗುವ ಮರದ ಕೆಲಸವನ್ನು ಮಾಡುತ್ತಿದ್ದರು. ಬಡಗಿಗಳು ಹೆಚ್ಚು ನಯಗಾರಿಕೆಯ ಕೆಲಸವನ್ನು ಎಂದರೆ ಪೀಠೋಪಕರಣಗಳು ಮುಂತಾದುವನ್ನು ತಯಾರಿಸುತ್ತಿದ್ದರು. ಒಕ್ಕಲು ಮುದ್ದಣ್ಣನ ಒಂದು ವಚನವು ಈ ರೀತಿಯಿದೆ: ''ಘಟಸ್ಥಾವರದೊಳಗನೊಡದು, ಕಚ್ಚಿನ ಹೊದೆಯ ಕಡೆಗಾಣಿಸಿ ಮಿಕ್ಕಾದ ಹೊರಗಣ ಹೊರೆಯ ತಿಗುಡ ಕೆತ್ತಿ ಕಂಭವ ಶುದ್ಧೈಸಿ, ನೆಲವಟ್ಟಕ್ಕೆ ಚತುರಸವ ಇಂಬುಗೊಳಿಸಿ ಮೇಲಣವಟ್ಟಕ್ಕೆ ಎಂಟು ಧಾರೆಯ ಏಣುಮುರಿದು ಗಡಿಗೆವಟ್ಟವ

೪೦. Edgar Thurston: *Castes and Tribes of Southern India*, p. 280

೪೧. ಡಿ. ಎಲ್. ನರಸಿಂಹಾಚಾರ್: 'ಕೆಲವರು ವಚನಕಾರರು' (ಪೀಠಿಕೆಗಳು, ಲೇಖನಗಳು: ಪು. ೪೬೩)

ಕಟ್ಟಿದೆ ಘಟದಟ್ಟೆಯ ಹೊಲಿದು; ಇಕ್ಕಿದೆ ಚತುರ್ವಿಧದ ನಾಲ್ಕುಂ-
ಗುಟವ ಬಲಿದುಂಗುಟದ ದಾರದಲ್ಲಿ ಸಂಚದ ಬಾರ ತೆಗೆದು
ತೊಡಕು ಬಂಧವನಿಕ್ಕಿ ಅಡಿಯ ಬಿಡದಂತೆ ಹಿಂದಣ ಮಡ
ಮುಂದಣ ಉಂಗುಷ್ಟಕ್ಕೆ ಒಂದನೊದು ಜಾರದಂತೆ ಬಂಧಿಸಿ
ಸಕಲೇಂದ್ರಿಯವೆಂಬ ಉಭಯವ ಸಂಧಿಸಿ ಕುಣಿಕೆಯನಿಕ್ಕಿ
ಕಾಮದ ಒಡಲ ಮಾದಗ ಬಂದ. ಘಟತೊಕುಳ ತೊಗಲು ಹದ ಬಂದಿತ್ತು.
ಹೊತ್ತು ಹೋದೀತಣ್ಣ, ಮೆಟ್ಟಡಿಯ ಕೊಂಡ ರೊಕ್ಕವ ಕೊಡಿ.

೪೨. ಶಿವದಾ ಗೀ: ಪು. ೩೨೩ (ಉದ್ಧೃತವಾದ ಮಾದಾರ ದೂಳಯ್ಯನ ವಚನ)

೪೩. ಚನ್ನಬ ವ. ೧೭೭: ಪು. ೮೩

೪೪. ಬಸವ ವ. ೬೦೩: ಪು. ೨೪೨

ವರ್ತುಳಾಕಾರದಿಂದ ಶುದ್ಧವ ಮಾಡಿ ಏಕೋತ್ತರಶತಸ್ಥಲವನೇಕೀಕರಿಸಿ ಒಂದು ದ್ವಾರದ ಬೋದಿಗೆಯಲ್ಲಿ ಕಂಭವ ಶುದ್ಧೈಸಿ ಕಂಭಯರವಿಲ್ಲದೆ ನಿಂದ ಮತ್ತೆ ಚತುರಸದ ಭೇದ ಅಷ್ಟದಿಕ್ಕಿನ ಬಟ್ಟೆಕೆಟ್ಟು ನವರಸದ ಬಾಗಿಲು ಮುಚ್ಚಿ ತ್ರಿಕೋಣೆಯ ಉಳುವು ಕೆಟ್ಟು ಮುಂದಣ ಬಾಗಿಲು ಮುಚ್ಚಿ ಹಿಂದಣ ಬಾಗಿಲು ಕೆಟ್ಟು ನಿಜ ಒಂದೆ ಬಾಗಿಲಾಯಿತ್ತು.''[೪೫] ಮರಗಳ ತೂಗಟೆಯನ್ನು ಕೆತ್ತಿ ಹಾಕಿ ಮರವನ್ನು ನಯಗೊಳಿಸಿ ನಾಲ್ಕು ಮೂಲೆ – ಎಂಟು ಮೂಲೆ ಇತ್ಯಾದಿ ಆಕಾರಗಳ ಕಂಭಗಳು, ಬಾಗಿಲು, ಬೋದಿಗೆ ಮುಂತಾದ ವಿಷಯವನ್ನು ಮಾತ್ರ ಈ ವಚನದಿಂದ ಅರ್ಥೈಸಬಹುದೇ ಹೊರತು ಮಿಕ್ಕ ವಿವರಗಳು ಸ್ಪಷ್ಟವಾಗುವುದಿಲ್ಲ. ಕಾಮಾಟದ ಭೀಮಣ್ಣನೆಂಬ ವಚನಕಾರನು ಈ ಕಾಯಕದವನು. ಬಡಗಿಯ ಕೆಲಸಕ್ಕೆ ಬಾಚಿ ಕಾಯಕವೆಂದೂ ಹೆಸರಿತ್ತು. ಬಾಚಿ, ಉಳಿಗಳು ಬಡಗಿಗಳ ಪ್ರಮುಖ ಸಾಧನಗಳು; ತನ್ನ ಕಾಯಕವೂ ವಾಸದ ಮನೆಗೆ ಬೇಕಾದ ಮರ ಮುಟ್ಟುಗಳನ್ನು ತಯಾರಿಸುವುದೆಂದು ಬಾಚಿ ಕಾಯಕದ ಬಸಪ್ಪನೆಂಬ ವಚನಕಾರನು ಹೇಳಿಕೊಳ್ಳುತ್ತಾನೆ.[೪೬] ಉಳಿಯನ್ನೂರಿ ಕೊಡಂತಿಯಿಂದ ಮರದ ಮೇಲೆ ಹೊಡೆದು ಕೆತ್ತುತ್ತಿದ್ದ ವಿಷಯವನ್ನು ಪಂಪ ಹೇಳುತ್ತಾನೆ.[೪೭]

## ಬಿದಿರ ಕೆಲಸ

ಬಿದಿರಿನಿಂದ ಬುಟ್ಟಿ, ತೊಟ್ಟಿಲು ಮುಂತಾದವುಗಳನ್ನು ಹೆಣೆಯುವವರು ಮೇದರು. ಮೇದರ ಕೇತಯ್ಯನೆಂಬುವನು ಒಬ್ಬ ವಚನಕಾರ. ಬಿದಿರಿನಿಂದ ಅಟ್ಟವನ್ನೇರಲು ಏಣಿ, ಕಾಲು ಮುರಿದವರಿಗೆ ಊರುಗೋಲು, ಅಂದಣ, ಛತ್ರಿ, ಗುಡಿಗುಡಾರ ಮುಂತಾದವುಗಳನ್ನು ಮಾಡಲು ಉಪಯೋಗಿಸುತ್ತಾರೆಂದು ಅದರ ಉಪಯೋಗವನ್ನು ಬಸವಣ್ಣನು ಒಂದೆಡೆ ವರ್ಣಿಸುತ್ತಾನೆ.[೪೮] ಬಿದಿರಮೇಳೆಯು ಏತಕ್ಕೆ ಗಳೆಯಾಗುವಂತೆ, ಸಮುದ್ರದ ಆಳವನ್ನು ನೋಡಲು ಏಣಿಯನ್ನು ತಯಾರಿಸುವುದಕ್ಕೆ ಬರುವಂತೆ ಎತ್ತರಕ್ಕೆ ಬೆಳೆದಿತ್ತೆಂದು 'ಕಾವ್ಯಾವಲೋಕನ'ದ ಒಂದು ಪದ್ಯವು ವರ್ಣಿಸುತ್ತದೆ.[೪೯] ಆಲವಟ್ಟ (ಸಂ. ಅಲಾವರ್ತ=ಬೀಸಣಿಗೆ)ವನ್ನೂ ಮೇದರೇ ತಯಾರಿಸುತ್ತಿದ್ದರೆಂದು ಕಾಣುತ್ತದೆ.[೫೦] ಮೊರವನ್ನೂ ಬಿದಿರಿನಿಂದಲೇ ತಯಾರಿಸುತ್ತಿದ್ದಿರಬಹುದು. ಕವೆಗಳು ಒಡೆದಿರುವೆಡೆ ಬಿದಿರನ್ನು ಕೊಚ್ಚಿ, ಅದರ ಸಿಕ್ಕನ್ನು ಬಿಡಿಸಿ ಸೀಳಿ ಸಂದು ಕಾಣದ ಹಾಗೆ ನೆಯಿದು (ಹೆಣೆದು) ಅದಕ್ಕೆ ನಾಲ್ಕು ಕಾಲುಗಳನ್ನಿಟ್ಟು ತೊಟ್ಟಿಲನ್ನು ತಯಾರಿಸುವ ವಿಧಾನವೆಂದು ಕೇತಯ್ಯ ಒಂದೆಡೆ ಹೇಳಿಕೊಳ್ಳುತ್ತಾನೆ.[೫೧] ಮೇದರು ತಾವು ಬಳಸುತ್ತಿದ್ದ ಪ್ರತಿ ಕತ್ತಿಗೂ ಸ್ವಲ್ಪ ಹಣದಂತೆ (ಐದು ವೀಸ) ಗವರೇಶ್ವರ ದೇವರಿಗೆ ಬಿಟ್ಟುಕೊಟ್ಟರೆಂದು ಕ್ರಿ.ಶ ೧೦೫೪ರ ಒಂದು ಶಾಸನದಲ್ಲಿ ಹೇಳಿದೆ.[೫೨] ಗವಡೇಶ್ವರವು ಮೇದರ ಕುಲದೈವವಿರಬಹುದು. ಮೇದರ ಕೇತಯ್ಯನ

೪೫. ಬಡಗಿನ ವ: ಪು. ೨೮೮

೪೬. ಶಿವದಾ ಗೀ: ಪು. ೩೪೨ (ಬಾಚಿ ಕಾಯಕದ ಬಸವಪ್ಪ)

೪೭. ಪಂಪಭಾ: ೧.೧೦೪ ಗದ್ಯ (''ವಜ್ರಕೀಟಂಗಳ್ ಕರ್ಣನೆರಡುಂ ತೊಡೆಯುಮನುಳಿಯನೂಱಿ ಕೊಡಂತಿಯೊಳ್ ಬೆಟ್ಟಿದಂತತ್ತಮಿತ್ತಮುರ್ಚಿಪೋಗೆ''.)

೪೮. ಬಸವ ವ. ೧೯೮: ಪು. ೪೬೦

೪೯. ಕಾವ್ಯಾವ: ಪು. ೪೬

೫೦. ಅರಿ ಮಾ ವ. ೩೭: ಪು. ೯

೫೧. ಸರ್ವಪು ವ. ೨೦೯

೫೨. ಎಂ. ಚಿದಾನಂದಮೂರ್ತಿ: ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ: ಪು. ೪೪೨

ವಚನಾಂಕಿತವು 'ಗವರೇಶ್ವರ'ವೆಂಬುದನ್ನಿಲ್ಲಿ ನೆನೆಯಬಹುದು.

### ಇತರೆ

ಹೊದಕೆಯ ಹುಲ್ಲಿನಿಂದ ಹಗ್ಗವನ್ನು ಹೊಸೆಯುತ್ತಿದ್ದರು.[೫೩] ನುಲಿಯ ಚಂದಯ್ಯನೆಂಬ ವಚನಕಾರನ ಕಾಯಕವು ಹಗ್ಗದ ತಯಾರಿಕೆ. ಕಬ್ಬಿನಿಂದ ಬೆಲ್ಲ ಸಕ್ಕರೆಗಳನ್ನು ತಯಾರಿಸುತ್ತಿದ್ದರು. ಕಬ್ಬನ್ನು ಗೆಣ್ಣು-ಗೆಣ್ಣುಗಳಿಗೆ ಕತ್ತರಿಸಿ ತುಂಡು ಮಾಡಿ ಗಾಣದಲ್ಲಿಟ್ಟು ಅರೆಯುತ್ತಿದ್ದರು; ಆ ರಸವನ್ನು ಕಾಸಿ ಪಾಕಮಾಡಿ ಸಕ್ಕರೆಯನ್ನು ತಯಾರಿಸುತ್ತಿದ್ದರು.[೫೪] 'ತವರಾಜ' ಎಂಬ ಒಂದು ಬಗೆಯ ಸಕ್ಕರೆಯ ಹೆಸರು ವಚನಗಳಲ್ಲಿ ದೊರೆಯುತ್ತದೆ.[೫೫] ಇದು ಯವಾಸ ಎಂಬ ಸಸ್ಯದಿಂದ ತಯಾರಿಸುವ ಸಕ್ಕರೆಯ ಪ್ರಭೇದ. ಬೆಲ್ಲದ ಉಲ್ಲೇಖವೂ ಅನೇಕ ವಚನಗಳಲ್ಲಿದೆ; ಬೆಲ್ಲದ ಅಚ್ಚು ಚೌಕಾಕಾರದಲ್ಲಿದ್ದುದನ್ನು ಕೆಲವು ವಚನಗಳು ತಿಳಿಸುತ್ತವೆ.[೫೬] ಪ್ರಾಚೀನ ಕರ್ನಾಟಕದಲ್ಲಿ ಗಾಜಿನ ತಯಾರಿಕೆಯೂ ಇತ್ತು. ಗಾಜಿನಿಂದ ಸರದೊಳಗೆ ಪೋಣಿಸಬಹುದಾದ ಮಣಿಗಳನ್ನು ತಯಾರಿಸುತ್ತಿದ್ದರು.[೫೭] 'ಕುಪ್ಪಿ' ಅಥವಾ 'ಕುಪ್ಪಿಗೆ'ಯೆಂಬ ಗಾಜಿನ ಪಾತ್ರೆಗಳನ್ನು ತಯಾರಿಸುತ್ತಿದ್ದರು.[೫೮]

### ಕೂಲಿ ಇತ್ಯಾದಿ

ದಿನಗೂಲಿ ಮಾಡುವ ಕೂಲಿಕಾರನಿಗೆ ಪ್ರಾಯಶಃ ಧಾನ್ಯದ ರೂಪದಲ್ಲಿ ಕೂಲಿಯನ್ನು ಕೊಡುತ್ತಿದ್ದರು.[೫೯] ದಿನಗೂಲಿಯನ್ನು 'ಕಂಬಳ' ಎನ್ನುತ್ತಿದ್ದರು.[೬೦] ಕೊಟ್ಟಣದಲ್ಲಿ ಬತ್ತವನ್ನು ಕುಟ್ಟಿ ಅಕ್ಕಿ ಮಾಡುವುದೂ ಒಂದು ವೃತ್ತಿಯಾಗಿತ್ತು. ಕೊಟ್ಟಣದ ಸೋಮಮ್ಮನೆಂಬ ವಚನಕಾರ್ತಿಯಿದ್ದಾಳೆ. ''ಹದ ತಪ್ಪಿ ಕುಟ್ಟಲು ನುಚ್ಚಲ್ಲದೆ ಅಕ್ಕಿಯಲ್ಲ'' ಎಂದು ಅವಳ ಹೇಳಿಕೆ.[೬೧] ಒರಳಿನಲ್ಲಿ ಬತ್ತವನ್ನು ಹಾಕಿ ಒನಕೆಯಿಂದ ಥಳಿಸಿ ಅಕ್ಕಿಯನ್ನು ಮಾಡುತ್ತಿದ್ದುದೂ ಉಂಟು.[೬೨] ಕುಟ್ಟುವಾಗ ಒರಳಿನಿಂದ ಹೊರಕ್ಕೆ ಧಾನ್ಯವು ಚೆಲ್ಲದಂತೆ ಮಣ್ಣಿನ ಕುದುರನ್ನು ಉಪಯೋಗಿಸುತ್ತಿದ್ದರು.[೬೩] 'ಕಲ್ಕುಟಿಕ'ರು ಶಾಸನಗಳನ್ನು ಕೆತ್ತುತ್ತಿದ್ದರು; ಕಲ್ಕುಟಿಕರು ಕಲ್ಲಿನ ಲಿಂಗಗಳನ್ನು ತಯಾರಿಸುತ್ತಿದ್ದರೆಂದು ವಚನಗಳು ಹೇಳುತ್ತವೆ.[೬೪] ಇವರನ್ನು 'ಕಲ್ಮುಳಿಗ' ಎಂದೂ ಕರೆಯುತ್ತಿದ್ದರು;[೬೫] ಒರಳು ಗುಂಡು ಮುಂತಾದವುಗಳಿಗೆ ಮುಳ್ಳನ್ನು ಹೊಯ್ಯುತ್ತಿದ್ದುದರಿಂದ ಇವರಿಗೆ ಈ ಹೆಸರು ಬಂದಿರಬೇಕು.

---

೫೩. ಗೂಳೂರು ಶೂನ್ಯ ಸಂ: ಪು. ೨೯೬ (ನುಲಿಯ ಚಂದಯ್ಯ)

೫೪. ಸಿದ್ಧರಾ ವ. ೬೦೬: ಪು. ೧೮೦; ಅಕ್ಕನ ವ. ೫೮: ಪು. ೨೮; ಮೋ ಮಾ ವ (ಸ) ೨೭: ಪು. ೯೭

೫೫. ಅಲ್ಲಮ ವ. ಚಂ. ೧೨೧೭: ಪು. ೨೬೬: ಬಸವ ವ. ೨೯೦: ಪು. ೧೧೮

೫೬. ಸಕಲಪು ವ. ಪು. ೩೯೧ (ಅಂಬಿಗ ಚೌಡಯ್ಯ, ೪೯)

೫೭. ಚನ್ನ ಬ ವ. ೪೨೦: ಪು. ೧೯೧; ಸಿದ್ಧರಾ ವ. ೧೨೪೫; ಪು. ೩೮೪

೫೮. ಮೋಳಿಗೆ ಮಾ ವ. ೨೫೯: ಪು. ೬೩; ಸರ್ವಪು ವ. ೫೩೯

೫೯. K. A. Nilakanta Shastri, *A History of South India*, p. 318

೬೦. ವಚನ ಶಾಸಾ ೧: ಪು. ೨೪೩; ಶಿವಶ ವ: ಪು. ೪೬೨. (ಅಕ್ಕಮ್ಮ, ೯)

೬೧. ಶಿವಶ ವ: ಪು. ೩೯೮ (ಕೊಟ್ಟಣದ ಸೋಮಮ್ಮ)

೬೨. ಅಲ್ಲಮ ವ. ಚಂ. ೧೨೭೦: ಪು. ೨೭೬

೬೩. ಬಸವ ವ. ೨೬೦: ಪು. ೧೦೭

೬೪. ಅಲ್ಲಮ ವ. ಚಂ. ೨೦೯: ಪು. ೪೯: ವ. ೪೮೦: ಪು ೧೦೬

೬೫. ಸಿದ್ಧರಾ ವ. ೧೦೨: ಪು. ೩೩

## ೨

ಗಣಿಗಳು ರಾಜ್ಯದ ಆದಾಯವನ್ನು ಹೆಚ್ಚಿಸುವ ಪ್ರಮುಖ ಆಕರವಾದ್ದರಿಂದ ಅವು ರಾಜ್ಯಕ್ಕೆ ಸೇರಿದ ಸ್ವತ್ತು ಎಂಬುದನ್ನು ಎಲ್ಲ ಶಾಸ್ತ್ರಕಾರರೂ ಹೇಳುತ್ತಾರೆ. ಗಣಿಗಳನ್ನೂ ಖನಿಜ ವ್ಯಾಪಾರವನ್ನೂ ಸರ್ಕಾರವೇ ವಹಿಸಿಕೊಳ್ಳಬೇಕೆಂದು ಒಂದೆಡೆ ಅರ್ಥಶಾಸ್ತ್ರವು ಹೇಳಿದರೂ,[೬೬] ಮತ್ತೊಂದೆಡೆ ಗಣಿಗಳ ಉತ್ಪನನದ ಕಾರ್ಯವನ್ನು ನಿಗದಿಯಾದ ಶುಲ್ಕವನ್ನು ವಿಧಿಸಿ ಖಾಸಗಿಯವರಿಗೆ ವಹಿಸಿಕೊಡಬಹುದೆಂದೂ ಅಭಿಪ್ರಾಯಪಡುತ್ತದೆ.[೬೭] 'ವಿಷ್ಣುಸ್ಮೃತಿ'ಯು ಕೂಡ ಗಣಿಗಳು ರಾಜ್ಯದ ಆಸ್ತಿಯೆಂದೇ ಹೇಳುತ್ತದೆ.[೬೮] ಗಣಿಗಳಿಂದ ಬಂದ ಆದಾಯದಲ್ಲಿ ಅರ್ಧಭಾಗವನ್ನು ಮಾತ್ರ ರಾಜನು ಪಡೆದು ಮಿಕ್ಕ ಅರ್ಧವನ್ನು ದಾನ-ಧರ್ಮಗಳಿಗೆ ಉಪಯೋಗಿಸಬೇಕೆಂದು ಮನುವು ವಿಧಿಸುತ್ತಾನೆ.[೬೯] ಒಟ್ಟಾರೆ ಗಣಿಯು ರಾಜ್ಯದ ಸ್ವತ್ತೇ ಹೊರತು ಖಾಸಗಿಯವರ ಆಸ್ತಿಯಾಗಲಾರದೆಂದು ಎಲ್ಲರ ಅಭಿಮತ, ಆದರೆ ಒಪ್ಪಂದದ ಮೇಲೆ ಅದರ ಕಾರ್ಯವನ್ನು ಬೇರೆಯವರಿಗೆ ಒಪ್ಪಿಸಿ ಶುಲ್ಕವನ್ನು ಪಡೆಯಬಹುದು; ಇದು ಈಗಲೂ ಇರುವ ಪದ್ಧತಿಯೆಂಬುದು ಗಮನಾರ್ಹ.

### ರತ್ನದ ಗಣಿ

ದಕ್ಷಿಣ ಭಾರತವು ಅಮೂಲ್ಯ ಶಿಲೆಗಳು ದೊರೆಯುವ ಪ್ರದೇಶವೆಂದು ಹಿಂದಿನಿಂದಲೂ ಪ್ರಸಿದ್ಧವಾಗಿತ್ತು. ವಚನಕಾಲದಲ್ಲಿ ಕರ್ನಾಟಕದಲ್ಲಿ ಹಲವಾರು ರತ್ನದ ಗಣಿಗಳಿದ್ದಿರಬಹುದು. ಮಾರ್ಕೋಪೋಲೋ ಎಂಬ ಪ್ರವಾಸಿಯು ದಕ್ಷಿಣ ಭಾರತದಲ್ಲಿ ರತ್ನಗಳನ್ನು ಸಂಗ್ರಹಿಸುತ್ತಿದ್ದ ವಿಧಾನದ ಬಗ್ಗೆ ಕೆಲವು ಸ್ವಾರಸ್ಯಕರವಾದ ವಿವರಗಳನ್ನು ನೀಡುತ್ತಾನೆ: ''ಮಳೆಗಾಲದಲ್ಲಿ ಬೆಟ್ಟಗಳಿಂದ ನೀರು ಬಂಡೆಗಳಲ್ಲಿಯೂ ಕುಹರಗಳಲ್ಲಿಯೂ ಬಹಳ ಬಿರುಸಿನಿಂದ ಹರಿಯುತ್ತದೆ. ಮಳೆ ನಿಂತ ಮೇಲೆ ಜನರು ನದಿಯ ಪಾತ್ರಗಳನ್ನು ಹುಡುಕಿ ಅನೇಕ ವಜ್ರಗಳನ್ನು ಆರಿಸಿಕೊಳ್ಳುತ್ತಾರೆ. ಬೇಸಗೆ ಕಾಲದಲ್ಲಿ ಮಳೆಯಿಲ್ಲದಿರುವಾಗ ಕಷ್ಟಪಟ್ಟು ಬೆಟ್ಟಗಳನ್ನು ಹತ್ತಿ ವಜ್ರಗಳನ್ನು ಆರಿಸಿ ತೆಗೆದುಕೊಳ್ಳುತ್ತಾರೆ. ತುದಿಯಲ್ಲಿ ವಜ್ರಗಳುಳ್ಳ ಕುಹರಗಳಿವೆ. ಅಲ್ಲದೆ ಅಲ್ಲಿ ಹಾವುಗಳೂ ಹೆಚ್ಚಾಗಿವೆ. ಬಿಳಿ ಹದ್ದುಗಳು ಈ ಬೆಟ್ಟದಲ್ಲಿ ಗೂಡು ಮಾಡಿಕೊಂಡಿವೆ. ವಜ್ರಗಳನ್ನು ಹುಡುಕಲು ಹೊರಟವರು ಈ ಕುಹರಗಳ ದ್ವಾರದಲ್ಲಿ ಕಾದಿದ್ದು ಕುಹರಗಳ ಒಳಕ್ಕೆ ಮಾಂಸದ ಚೂರುಗಳನ್ನು ಎಸೆಯುತ್ತಾರೆ. ಹೀಗೆ ಎಸೆದ ಮಾಂಸದ ಚೂರುಗಳನ್ನು ಬಿಳಿ ಹದ್ದುಗಳು ಹಿಂಬಾಲಿಸಿಕೊಂಡು ಹೋಗಿ ಮಾಂಸದ ಚೂರುಗಳು ನೆಲದ ಮೇಲೆ ಬಿದ್ದ ಮೇಲೆ ಅವನ್ನು ಕಚ್ಚಿಕೊಂಡು ಹೊರಗಡೆ ಬಂದು ಬಂಡೆಗಳ ಮೇಲೆ ಕುಳಿತುಕೊಳ್ಳುತ್ತವೆ. ಹಾಗೆ ಕುಳಿತುಕೊಂಡ ಕೂಡಲೇ ವಜ್ರ ಶೋಧಕರು ಬಂಡೆಗಳ ಮೇಲೆ ಹತ್ತಿ ಹದ್ದುಗಳನ್ನು ಓಡಿಸಿ ಬಿಟ್ಟು ಅವುಗಳಿಂದ ಮಾಂಸದ ತುಂಡುಗಳನ್ನು ಕಸಿದುಕೊಳ್ಳುತ್ತಾರೆ. ಈ ಮಾಂಸದ ತುಂಡುಗಳಿಗೆ ವಜ್ರಗಳು ಅಂಟಿಕೊಂಡಿರುವುದುಂಟು. ಹಾಗೆ ಅಂಟಿಕೊಂಡಿರುವ ವಜ್ರಗಳು ಈ ವಜ್ರ-ಶೋಧಕರಿಗೆ ಸಿಕ್ಕುತ್ತವೆ. ಆಕಸ್ಮಾತ್ ಮಾಂಸದ ಚೂರುಗಳನ್ನು ಹದ್ದುಗಳು

---

೬೬. R. Shama Sastri (Tr): *Kautilya's Arthasastra*, p. 90

೬೭. ಕೆ. ಕೃಷ್ಣಭಟ್ಟ: ಕೌಟಿಲ್ಯನ ಅರ್ಥಶಾಸ್ತ್ರ: ಪು. ೧೨೭

೬೮. Dipakranjan Das: *Economic History of the Deccan*, p. 171

೬೯. Arthur Coke Burnell: *The Ordinances of Manu*, p. 183

ನುಂಗಿಬಿಟ್ಟರೆ ಅವು ರಾತ್ರಿ ಹೊತ್ತು ಕೂರುವ ಸ್ಥಳವನ್ನು ನೋಡಿಕೊಂಡಿದ್ದು ಬೆಳಗಾದ ಮೇಲೆ ಅವುಗಳ ಪಿಚಿಕೆಗಳನ್ನು ಹುಡುಕಿ ವಜ್ರಗಳನ್ನು ಆಯ್ದುಕೊಳ್ಳುತ್ತಾರೆ. ಹದ್ದುಗಳೇ ಸಿಕ್ಕಿದರೆ ಅವುಗಳನ್ನು ಕೊಯ್ದು ಹೊಟ್ಟೆಯೊಳಗಿರುವ ವಜ್ರಗಳನ್ನು ಆಯ್ದುಕೊಳ್ಳುತ್ತಾರೆ.''[೨೦] ಈಗಲೂ ಗೋದಾವರಿಯಂತಹ ನದಿಗಳ ದಂಡೆಯ ಮೇಲೆ ವಜ್ರದ ಹರಳುಗಳು ಆಗಾಗ ಸಿಕ್ಕುವುದುಂಟು.

ವಚನಕಾರರು 'ನವರತ್ನ'ಗಳನ್ನು ಹೆಸರಿಸುತ್ತಾರೆ.[೨೧] ವಜ್ರ, ವೈಢೂರ್ಯ, ಗೋಮೇಧಿಕ, ಪುಷ್ಯರಾಗ, ನೀಲ, ಮರಕತ, ಮಾಣಿಕ್ಯ, ವಿದ್ರುಮ ಮತ್ತು ಮೌಕ್ತಿಕಗಳನ್ನು ನವರತ್ನಗಳೆನ್ನುತ್ತಾರೆ. ಮುತ್ತು, ವಜ್ರ, ನೀಲಗಳನ್ನು ಅಲ್ಲಮ ಹೆಸರಿಸುತ್ತಾನೆ,[೨೨] ಮಾಣಿಕ್ಯದ ಪ್ರಕಾಶವನ್ನು ಕೆಲವು ವಚನಗಳು ಉಲ್ಲೇಖಿಸುತ್ತವೆ,[೨೩] ಸುಪ್ಪಾಣಿ ಮುತ್ತು ಮುತ್ತಿನ ವಿಶೇಷ ಪ್ರಭೇದವನ್ನು ಸೂಚಿಸುತ್ತದೆ.[೨೪] ಪದಕಗಳಿಗೆ ರತ್ನಗಳನ್ನು ಜೋಡಿಸುತ್ತಿದ್ದರು.[೨೫] ರತ್ನಗಳನ್ನು ಜೋಡಿಸುವ ಕೆಲಸವೇ 'ಕೇವಣ' (ಸಂ. ಕ್ಷೇಪಣ. ಇದು ಆದಯ್ಯದಲ್ಲಿ 'ಕೇಣ' ಎಂಬ ಹ್ರಸ್ವರೂಪದಲ್ಲಿದೆ.[೨೬] ರತ್ನ ಪರೀಕ್ಷೆಯ ಉಲ್ಲೇಖ ಕೆಲವು ವಚನಗಳಲ್ಲಿದೆ.[೨೭] ಮಣಿಗಳನ್ನು ಪೋಣಿಸುವ ವಿಷಯ ವಚನಗಳಲ್ಲಿದೆ.[೨೮] ಮಣಿಗಳಲ್ಲಿ ರಂಧ್ರವನ್ನು ಕೊರೆಯುವುದನ್ನು 'ಎಜ್ಜ' (ವೆಜ್ಜ) ಹಿಡಿಯುವುದು ಎನ್ನುತ್ತಿದ್ದರು.[೨೯]

### ಉಪ್ಪು ತಯಾರಿಕೆ

ಇದು ಅಮೂಲ್ಯ ಶಿಲೆಗಳ ವಿಷಯವಾದರೆ, ಗಣಿಗಳಿಂದ ಬಹು ಸಾಮಾನ್ಯವಾದರೂ ತುಂಬ ಪ್ರಮುಖವಾದ ಉಪ್ಪನ್ನು ತಯಾರಿಸುತ್ತಿದ್ದರು. ವಚನಕಾಲದಲ್ಲಿ ಉಪ್ಪನ್ನು ಎರಡು ವಿಧಾನಗಳಿಂದ ತಯಾರಿಸುತ್ತಿದ್ದರು: ಸಮುದ್ರದ ನೀರನ್ನು ಕಾಯಿಸುವುದರ ಮೂಲಕ ಮತ್ತು ಮಣ್ಣಿನಲ್ಲಿ ಸೇರಿದ ಉಪ್ಪನ್ನು ಬೇರ್ಪಡಿಸುವುದರ ಮೂಲಕ. ಉಪ್ಪಿನ ತಯಾರಿಕೆಯ ಬಗ್ಗೆ ವಚನಗಳಲ್ಲಿ ಹೆಚ್ಚಿನ ವಿವರಗಳೇನೂ ತಿಳಿಯುವುದಿಲ್ಲ. ಅಲ್ಲಮನ ವಚನವೊಂದು ಸಮುದ್ರದ ಉಪ್ಪನ್ನು ಹೆಸರಿಸುತ್ತದೆ.[೩೦] ಇತರ ಗಣಿಯ ಕೈಗಾರಿಕೆಗಳಂತೆ ಉಪ್ಪಿನ ಗಣಿಗಳನ್ನೂ ಸರ್ಕಾರವೇ ವಹಿಸಿಕೊಂಡಿರುತ್ತಿತ್ತು. ಆದ್ದರಿಂದಲೇ ಕೆಲವು ಶಾಸನಗಳಲ್ಲಿ ಭೂಮಿಯನ್ನು ದಾನಮಾಡಿದ್ದರೂ ದಾನ ಸ್ವೀಕರಿಸಿದವನಿಗೆ ಆ ಭೂಮಿಯಿಂದ ಉಪ್ಪನ್ನು ಉತ್ಪಾದಿಸುವ ಅಧಿಕಾರವಿಲ್ಲವೆಂದು ಹೇಳಿರುವುದು.[೩೧] 'ಲವಣಾಧ್ಯಕ್ಷ'ನೆಂಬ ಅಧಿಕಾರಿಯು ಲವಣದ ಉತ್ಪಾದನೆ, ಲವಣ

---

೨೦. ಎಚ್. ಎಲ್. ನಾಗೇಗೌಡ: ಪ್ರವಾಸಿ ಕಂಡ ಇಂಡಿಯಾ ೨: ಪು. ೩೩-೪

೨೧. ಬಸವ ವ. ೯೮೭: ಪು. ೪೧೩

೨೨. ಅಲ್ಲಮ ವ ಚಂ. ೧೧೧: ಪು. ೪೨೪

೨೩. ಅಕ್ಕನ ವ. ೩೦: ಪು. ೧೯; ಬಸವ ವ. ೧೩೭೮: ಪು. ೫೮೧

೨೪. ಅಲ್ಲಮ ವ. ೭೨೪: ಪು. ೧೩೬

೨೫. ಚನ್ನಬ ವ. ೫೩: ಪು. ೨೩

೨೬. ಆದಯ್ಯ ವ. ೪೦: ಪು. ೨೨ ("ಆಣಿಯೊಳಗಣ ಕೇಣದಂತೆ.")

೨೭. ಸಿದ್ಧರಾ ವ. ೯೬೪: ಪು. ೨೯೪: ಅಲ್ಲಮ ವ ಚಂ. ೩೨೫: ಪು. ೭೩

೨೮. ಅಕ್ಕನ ವ. ೧೦೫: ಪು. ೪೫

೨೯. ಸಿದ್ಧರಾ ವ. ೭೨೭: ಪು. ೨೨೧

೩೦. ಅಲ್ಲಮ ವ. ಚಂ. ೮೫: ಪು.೧೫

೩೧. Dipakranjan Das, *Economic History of the Deccan*, p. 171

ವಿಕ್ರಯಗಳ ಉಸ್ತುವಾರಿಯನ್ನು ನೋಡಿಕೊಳ್ಳಬೇಕೆಂದು ಅರ್ಥಶಾಸ್ತ್ರವು ಹೇಳುತ್ತದೆ.[೮೨]

**ಚಿನಿವಾರಿಕೆ**

ದಕ್ಷಿಣಭಾರತವು ಇಡೀ ದೇಶದಲ್ಲಿ ಅತಿ ಹೆಚ್ಚಿನ ಚಿನ್ನದ ನಿಕ್ಷೇಪವಿರುವ ಭಾಗ. ಮೊಹೆಂಜೊದಾರದಲ್ಲಿ ಕಂಡುಹಿಡಿಯಲಾದ ಚಿನ್ನದ ಆಭರಣಗಳು ದಕ್ಷಿಣಭಾರತದಲ್ಲಿ ತೆಗೆದ ಚಿನ್ನದಿಂದ ತಯಾರಿಸಿದವು ಎಂಬುದು ರಾಸಾಯನಿಕ ಪರೀಕ್ಷೆಗಳಿಂದ ಸಿದ್ಧವಾಗಿದೆ.[೮೩] ಕರ್ಣಾಟಕವೂ ಈಗಿನಂತೆಯೇ ಹಿಂದೆಯೂ ಚಿನ್ನಕ್ಕೆ ಪ್ರಸಿದ್ಧವಾಗಿರಬೇಕು. ಇಲ್ಲಿ ಹಿಂದೆ ಗಣಿಗಳಿದ್ದ ಕುರುಹುಗಳು ಕೆಲವೆಡೆ ಈಗಲೂ ಕಾಣಸಿಗುತ್ತವೆ. ಕಲ್ಲಿನ ಮರೆಯಲ್ಲಿ ಸುಪ್ತವಾಗಿರುವ ಚಿನ್ನದ ಅದುರಿನ ಉಲ್ಲೇಖವು ವಚನಗಳಲ್ಲಿದೆ.[೮೪] ಮಣ್ಣಿನಿಂದೊಡಗೂಡಿದ ಚಿನ್ನವನ್ನು ಮಣ್ಣಿನ ಕೋವೆ (ಮೂಸೆ)ಯಲ್ಲಿ ಕರಗಿಸಿ ಚಿನ್ನವನ್ನು ಬೇರ್ಪಡಿಸುತ್ತಿದ್ದರು.[೮೫] ಮಯಣವನ್ನು ಕರಗಿಸಿ ಇದನ್ನು ಅದಕ್ಕೆ ಕೊಳೆಯು ಅಂಟಿಕೊಳ್ಳುವಂತೆ ಮಾಡಿ ಚಿನ್ನವನ್ನು ಶುದ್ಧಿಗೊಳಿಸುತ್ತಿದ್ದರು.[೮೬] ಮಣ್ಣಿನಲ್ಲಿ ಸೇರಿರುವ ಚಿನ್ನದ ಕಣಗಳನ್ನು ಬೇರ್ಪಡಿಸುವುದನ್ನು ಜಲಗು ತೊಳೆಯುವುದು ಎನ್ನುತ್ತಿದ್ದರು.[೮೭] ಜಾವಾ-ದ್ವೀಪದ ಮಣ್ಣನ್ನು ತೊಳೆದರೆ ಸಾಕು ಚಿನ್ನವು ಸಿಕ್ಕುತ್ತದೆಂದು ಅಲ್ಬೆರೂನಿ ಹೇಳುತ್ತಾನೆ.[೮೮] ಈ ರೀತಿ ಜಲಗು ಅಥವಾ ಜರಗಿನಿಂದ ಚಿನ್ನವನ್ನು ತೆಗೆಯುವವರ ಮೇಲೆ 'ಜರಗಿನ ತೆಱೆ' ಎಂಬ ತೆರಿಗೆಯನ್ನು ಹಾಕುತ್ತಿದ್ದರು; ಶಾಸನಗಳಲ್ಲಿ ಉಕ್ತವಾಗಿರುವ 'ಜಲಗಿನಧಿಕಾರಿ' ಎಂಬ ಅಧಿಕಾರಿಯು ಪ್ರಾಯಶಃ ಈ ತೆರಿಗೆಯನ್ನು ವಸೂಲು ಮಾಡುವನು.[೮೯]

ಚಿನ್ನವನ್ನು ಅದು ಉತ್ಪತ್ತಿಯಾದ ಪ್ರದೇಶಕ್ಕನುಗುಣವಾಗಿ ಜಾಂಬೂನದ, ಶಾತಕುಂಬ, ಹಾಟಕ, ವೈಣವ, ಶೃಂಗಶುಕ್ತಿಜ ಎಂಬುದಾಗಿ ಕೌಟಿಲ್ಯನ ಅರ್ಥಶಾಸ್ತ್ರವು ವಿಂಗಡಿಸುತ್ತದೆ.[೯೦] ವಚನಗಳಲ್ಲಿ ಇಂಥ ವಿಭಾಗಕ್ರಮವಾವುದೂ ಇಲ್ಲ. ಚಿನ್ನಕ್ಕೆ ಕೆಲವರು ಇತರ ಲೋಹಗಳನ್ನು ಸೇರಿಸುತ್ತಿದ್ದರು. ಶುದ್ಧವಾದ ಚಿನ್ನಕ್ಕೆ ಕೆಲವು ದುಷ್ಟರು ಲಾಭದಾಸೆಯಿಂದ ತಾಮ್ರ-ಬೆಳ್ಳಿಗಳನ್ನು ಸೇರಿಸಿ ಮೋಸ ಮಾಡುವರೆಂದು 'ಧರ್ಮಾಮೃತ'ವು ಹೇಳುತ್ತದೆ.[೯೧] ಚಿನ್ನಕ್ಕೆ ಸೀಸವನ್ನು ಬೆರಸುತ್ತಿದ್ದ ಸೂಚನೆಯು ಆದಯ್ಯನ ವಚನದಲ್ಲಿದ್ದಂತಿದೆ.[೯೨] ಚಿನ್ನದ ಶುದ್ಧತೆಯನ್ನು ಪರೀಕ್ಷಿಸುವುದಕ್ಕಾಗಿ ಎಂದೇ ಅದರ ಒಂದು ಚೂರನ್ನು 'ವಾಸಿ' (ಬಾಚಿ)ಯಿಂದ

---

೮೨. ಕೆ. ಕೃಷ್ಣಭಟ್ಟ: ಕೌಟಿಲ್ಯನ ಅರ್ಥ ಶಾಸ್ತ್ರ: ಪು. ೧೨೮

೮೩. Sir John Marshall, *Mohenjodaro and the Indian Civilization*. p. 29 f. n.

೮೪. ಅಕ್ಕನ ವ. ೨: ಪು. ೯; ಬಸವ ವ. ೯೬೨: ಪು. ೪೦೩

೮೫. ಬಿಬ್ಬಬಾ ಮರೆ ವ: ಪು.೬೯ (ಮರೆ ಮಿಂಡಯ್ಯ, ೯೨)

೮೬. ಆದಯ್ಯ ವ. ೨೪೦: ಪು. ೧೪೧; ವ. ೨೯೬:ಪು. ೧೬೭-೮

೮೭. ಚೆನ್ನಬ ವ. ೩೦೯: ಪು. ೧೩೬: ಅಲ್ಲಮ ವ ಚಂ. ೧೦೩: ಪು: ೨೫

೮೮. ಎಚ್. ಎಲ್. ನಾಗೇಗೌಡ: ಪ್ರವಾಸಿ ಕಂಡ ಇಂಡಿಯಾ ೧: ಪು. ೩೭೬

೮೯. ಎಂ. ಚಿದಾನಂದಮೂರ್ತಿ: ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ: ಪು. ೩.೭೩

೯೦. R. Shama Sastri, *Kautilya's Arthasastra*, p. 91

೯೧. ಧರ್ಮಾಮೃತ: ೪.೩೩

೯೨. ಆದಯ್ಯ ವ. ೨೪೧: ಪು. ೧೪೨

ತೆಗೆಯುತ್ತಿದ್ದರು.[೯೩] ಈ ಚೂರನ್ನು 'ಮಚ್ಚ' ಎಂದು ಕರೆಯುತ್ತಿದ್ದರು.[೯೪] ಅದನ್ನು ಒರೆಗಲ್ಲಿನ ಮೇಲೆ ಉಜ್ಜಿ ಪರೀಕ್ಷಿಸುತ್ತಿದ್ದರು.[೯೫] ಚಿನ್ನವನ್ನು ಕರಗಿಸಿ ಶುದ್ಧಿಮಾಡಿ ಅದನ್ನು ಬಡಿದು ಬೇಕಾದ ರೂಪಕ್ಕೆ ತಿರುಗಿಸಿ ಆಭರಣಗಳನ್ನು ತಯಾರಿಸುತ್ತಿದ್ದರು.[೯೬] ಅಕ್ಕಸಾಲಿಯು ಉಪಯೋಗಿಸುತ್ತಿದ್ದ ಇಕ್ಕುಳ, ಅಡಿಗಲ್ಲು, ಚಮ್ಮಟಿಗೆಗಳ ಪ್ರಸ್ತಾಪವು ಒಂದು ವಚನದಲ್ಲಿದೆ.[೯೭] ವಚನಗಳಲ್ಲಿ ಕೆಲವು ಆಭರಣಗಳ ಉಲ್ಲೇಖಗಳಿವೆ (ಆದರ ವಿಚಾರ ಬೇರೊಂದೆಡೆಯಲ್ಲಿ ಬರುತ್ತದೆ). ದೇವಾಲಯಗಳ ಚಿನ್ನದ ಕಳಶದ ಉಲ್ಲೇಖವು ವಚನವೊಂದರಲ್ಲಿದೆ.[೯೮] ಬಹುಶಃ ಇದು ಚಿನ್ನದ ಮುಲಾಮು ಹಾಕಿದುದನ್ನು ಸೂಚಿಸುತ್ತದೆ. ಅಕ್ಕಸಾಲಿಗಳನ್ನು ರಾಜರು ಟಂಕಸಾಲೆಯಲ್ಲಿ ನೇಮಿಸಿಕೊಳ್ಳುತ್ತಿದ್ದರು.

## ಕಮ್ಮಾರಿಕೆ

ರೈತರಿಗೆ ವ್ಯವಸಾಯೋಪಯೋಗೀ ಸಲಕರಣೆಗಳನ್ನು ಮಾಡುವುದಕ್ಕೆ ಕಮ್ಮಾರನು ಅತ್ಯವಶ್ಯಕವಾದುದರಿಂದ ಈಗಲೂ ಪ್ರತಿ ಹಳ್ಳಿಯಲ್ಲಿಯೂ ಕಮ್ಮಾರರಿರುವುದನ್ನು ಕಾಣಬಹುದು. 'ಕಾಸಿ ಕಮ್ಮಾರನಾದ' ಎಂದು ಬಸವಣ್ಣ ಸಂಕ್ಷಿಪ್ತವಾಗಿ ಅವನ ಕಾರ್ಯವನ್ನು ಪರಿಚಯ ಮಾಡಿಕೊಡುತ್ತಾನೆ.[೯೯] ಕಬ್ಬಿಣವನ್ನು ಕೆಂಪಗೆ ಕಾಯಿಸಿ, ಬಡಿದು ತನಗೆ ಬೇಕಾದ ಆಕಾರಕ್ಕೆ ತಿರುಗಿಸುತ್ತಿದ್ದ. ಬೆಂಕಿಯನ್ನು ಪಟುಗೊಳಿಸುವುದಕ್ಕಾಗಿ ಗಾಳಿಯನ್ನೂದುವ ತಿದಿಯು ಆಗಲೂ ಕಮ್ಮಾರನಲ್ಲಿ ಬಳಕೆಯಲ್ಲಿತ್ತು. ಭೀಮನು ಮದಗಜಗಳ ಬಾಲವನ್ನು ಹಿಡಿದೆತ್ತಿ ಒತ್ತುವಾಗ ಅವುಗಳ ಮುಖದಿಂದ ಸುರಿಯುವ ರಕ್ತವು ಕಮ್ಮಾರನು ತಿದಿಯೊತ್ತಿದಾಗ ಉರಿಯುವ ಬೆಂಕಿಯ ಹಾಗೆ ಕಾಣಿಸುತ್ತಿತ್ತೆಂದು 'ಶಬ್ದಮಣಿದರ್ಪಣ'ದ ಪ್ರಯೋಗ ಪದ್ಯವು ವರ್ಣಿಸುತ್ತದೆ.[೧೦೦] ಕಾಸಿದ ಕಬ್ಬಿಣಕ್ಕೆ ನೀರನ್ನು ಹಾಕಿದಾಗ ನೀರು ಇಂಗಿಹೋಗುವ ರೀತಿಯು ಕೆಲವು ವಚನಗಳಲ್ಲಿ ಉಪಮೆಯಾಗಿ ಬಳಸಲ್ಪಟ್ಟಿದೆ.[೧೦೧] ಕಬ್ಬಿಣದಿಂದ ಲಿಂಗಗಳನ್ನು ತಯಾರಿಸುತ್ತಿದ್ದ ಸ್ವಾರಸ್ಯಕರ ಅಂಶ ಕೆಲವು ವಚನಗಳಲ್ಲಿ ಉಲ್ಲೇಖಗೊಂಡಿದೆ.[೧೦೨]

ಪ್ರಾಚೀನ ಕರ್ನಾಟಕದ ಜನರಿಗೆ ಉಕ್ಕನ್ನು ತಯಾರಿಸುವ ರೀತಿಯೂ ತಿಳಿದಿದ್ದಿತು. ''ಅರಗು ಮಳಲು ಬೆರಸಿ ಉಕ್ಕ ಗೆಲುವಂತೆ, ನಿಮ್ಮ ಬೆರಸಿದವರು ನಿಟ್ಟುರಿಸದಿಹರೆ ಷಡುದರ್ಶನವ?''[೧೦೩] ಎಂಬ ಸಕಲೇಶ ಮಾದರಸನ ಮಾತಿನಲ್ಲಿ ಉಕ್ಕಿನ ಬಗ್ಗೆ ಏನನ್ನೋ

---

೯೩. ಗೂಳೂರು ಶೂನ್ಯಸಂ: ಪು. ೩೦೯ (ಘಟ್ಟಿವಾಳಯ್ಯ)
೯೪. ಆದಯ್ಯ ವ. ೨೩೭: ಪು. ೧೪೦; ವ. ೨೪೧: ಪು. ೧೪೨
೯೫. ಬಸವ ವ. ೯೬೫: ಪು. ೪೦೫; ಆದಯ್ಯ ವ. ೨೪೧: ಪು. ೧೪೨
೯೬. ಬಸವ ವ. ೨೫೧: ಪು. ೧೦೪
೯೭. ಚನ್ನಬ ವ. ೩೭೧: ಪು. ೧೭೦
೯೮. ಬಸವ ವ. ೩೬೧: ಪು. ೧೪೨
೯೯. ಬಸವ ವ. ೫೮೯: ಪು. ೨೩೭
೧೦೦. ಶಬ್ದಮ ದ: ಪು. ೮೮ (''ಮದಗಜವೆರಡಱ ಬಾಲದ ಮೊದಲಂ ಪಿಡಿದೆತ್ತಿಯೊತ್ತಿ ಸುರ್ಗುತ್ತಿರೆ ಯಾಸ್ಯದಿಸುಗುವ ರಕ್ತಮುರಿಯೇನೆ ತಿದಿಯೊತ್ತುವ ಕಮ್ಮಱಂಬೊಲಿರ್ದಿಂ ಭೀಮಂ.'')
೧೦೧. ಸಿದ್ಧರಾ ವ. ೬೪೯: ಪು. ೧೯೪; ಅಕ್ಕನ ವ. ೬. ಪು. ೩೧; ಬಸವ ವ. ೧೯೭: ಪು. ೬೪
೧೦೨. ಚೆನ್ನಬ ವ. ೯೧೫: ಪು. ೪೩೩ (''ಲಿಂಗ ಬೀಳಲು ಬಲ್ಲುದೆ? ಭೂಮಿ ತಾಳಲು ಬಲ್ಲುದೆ? ಕಮ್ಮಾಱ ಕಡೆದು ಮಾಱಿದ, ಬೋಗಾಱ ತಂದು ಮಾಱಿದ.'')
೧೦೩. ಸಕಲೇಶ ವ. ೪೯: ಪು.೧೩

ಹೇಳುತ್ತಿರುವಂತಿದೆ, ಆದರೆ ಸ್ಪಷ್ಟವಾಗುವುದಿಲ್ಲ. ಚನ್ನಬಸವನಲ್ಲಿ ಉಕ್ಕಿನ ಸೂಜಿಯ ಉಲ್ಲೇಖವಿದೆ,[೧೦೪] ದಬ್ಬಳದ ಉಲ್ಲೇಖವೂ ವಚನವೊಂದರಲ್ಲಿದೆ.[೧೦೫]

**ಕಂಚುಗಾರಿಕೆ**

ಕಂಚುಗಾರನು ಊಟದ ತಟ್ಟೆ, ಕನ್ನಡಿ, ಸಿಪ್ಪು(?), ಸೌಟು, ಬಟ್ಟಲು, ತಾಳ, ಗಿಣ್ಣಲು ಮೊದಲಾದುವನ್ನು ತಯಾರಿಸುತ್ತಿದ್ದನೆಂದು ನಯಸೇನನು ಹೇಳುತ್ತಾನೆ.[೧೦೬] ಊಟ ಮಾಡುವ ಕಂಚಿನ ತಟ್ಟೆಯ ಉಲ್ಲೇಖ ವಚನಗಳಲ್ಲಿದೆ.[೧೦೭] ಊಟ ಮಾಡುವ ತಟ್ಟೆಯನ್ನು 'ಕಂಚು' ಎಂದೇ ಕರೆಯುತ್ತಿದ್ದರು.[೧೦೮] ಕನ್ನಡಿಯನ್ನೂ ಕಂಚಿನಿಂದಲೇ ತಯಾರಿಸುತ್ತಿದ್ದರು; ಪ್ರಾಚೀನ ಕರ್ನಾಟಕದಲ್ಲಿ ಗಾಜಿನ ಕನ್ನಡಿಯು ಬಳಕೆಯಲ್ಲಿರಲಿಲ್ಲ, ಕಂಚಿನ (ಅಥವಾ ಬೇರೆಯ ಲೋಹದ?) ತಟ್ಟೆಗಳನ್ನು ಚೆನ್ನಾಗಿ ಬೆಳಗಿ ಅದನ್ನೇ ಕನ್ನಡಿಯಂತೆ ಬಳಸುತ್ತಿದ್ದರು.[೧೦೯] ಇಂದಿಗೂ ತಿರುವಾಂಕೂರು ಮುಂತಾದ ಪ್ರದೇಶಗಳಲ್ಲಿ ಲೋಹದ ತಗಡುಗಳಿದ್ದ ಕನ್ನಡಿಯನ್ನು ತಯಾರಿಸುವ ರೂಢಿಯಿದೆಯೆಂದು ಗೋಪಿನಾಥರಾವ್ ಹೇಳುತ್ತಾರೆ.[೧೧೦] ಹಿತ್ತಾಳೆ ಎಂಬ ಮಿಶ್ರ ಲೋಹದ ಹೆಸರು ಮಾತ್ರ ವಚನಗಳಲ್ಲಿ ದೊರೆಯುತ್ತದೆ,[೧೧೧] ಹಾಗೆಯೇ ತವರತಾಮ್ರಗಳ ಹೆಸರೂ ಉಕ್ತವಾಗಿದೆ.[೧೧೨] ಆದಯ್ಯ ಸೀಸವನ್ನು ಹೆಸರಿಸುತ್ತಾನೆ, ಅವನ ಮಾತಿನಿಂದ ಸೀಸವನ್ನು ಚಿನ್ನಕ್ಕೆ ಬೆರಸುತ್ತಿದ್ದರೆಂದು ಹೇಳಬಹುದು.[೧೧೩] ಲೋಹದ ಪಾತ್ರೆಗಳನ್ನು ಮಾರುವವರನ್ನು ಬೋಗಾರರು (ಸಂ. ವ್ಯೋಕಾರ) ಎಂದು ಕರೆಯುತ್ತಿದ್ದರು.[೧೧೪] ಕಂಚುಗಾರರು ಕಾಳಿಕಾದೇವಿಯ ಭಕ್ತರೆಂದು ಬಸವಣ್ಣನು ಹೇಳುತ್ತಾನೆ.[೧೧೫] ಮಲಹರ ಕಾಯಕದ ಚಿಕ್ಕದೇವಯ್ಯ ಎಂಬ ವಚನಕಾರನು ತನ್ನೊಂದು ವಚನದ ಮೂಲಕ ತುಂಬ ಸ್ವಾರಸ್ಯಕರವಾದ ವಿಷಯವನ್ನು ಹೇಳುತ್ತಾನೆ. ಅವನ ವಚನವು ಹೀಗಿದೆ: ''ಮುರಿಗಂಚು, ತವರ, ಹಿತ್ತಾಳೆ, ತಾಮ್ರ ಇವು ಮೊದಲಾದ ಲೋಹವ ತನ್ನಿ; ಕಳ್ಳವಣ, ಕಂದುವೆಳ್ಳಿ ಮೊದಲಾದ ರೊಕ್ಕವ ತನ್ನಿ. ನಿಮಗಲ್ಲದೊಡವೆಯೆನಗೆ, ನಿಮಗೊಳ್ಳಿಯೊಡವೆಯಂ ಕೊಡುವೆ;

---

೧೦೪. ಚೆನ್ನಬ ವ. ೫೧೯: ಪು. ೨೩೮

೧೦೫. ಬೆಡಗಿನ ವ. ಪು. ೩೪೦

೧೦೬. ಧರ್ಮಾಮೃತ: ೨.೨೬

೧೦೭. ದೇವರ ದಾ ವ. ೧೨೮: ಪು. ೪೧ (ಎಲೆಯಲ್ಲಿ ಊಟ ಮಾಡುತ್ತಿದ್ದ ಪದ್ಧತಿಯೂ ವಚನಗಳ ಕಾಲದಲ್ಲಿತ್ತು. ನೋಡಿ, ''ಪತ್ರಭಾಜನ ಹರಿಯಿತ್ತೆಂದು ಒಗರವನುಣಲಿಲ್ಲ'' – ಗಣವ ಮಂ: ಪು. ೯೦)

೧೦೮. ಗದಾಯು ಸಂ: ೭.೪೮; ಬಸವ ವ. ೬೯೨: ಪು. ೨೭೬

೧೦೯. ಬಸವ ವ. ೮೬೦ ಪು. ೩೫೩ (''ಉಂಬ ಬಟ್ಟಲು ಬೇಱೆ ಕಂಚಲ್ಲ; ನೋಡುವ ದರ್ಪಣ ಬೇಱೆ ಕಂಚಲ್ಲ; ಭಾಂಡ ಒಂದೆ, ಭಾಜನ ಒಂದೆ, ಬೆಳಗೆ ಕನ್ನಡಿಯೆನಿಸಿತ್ತಯ್ಯಾ!'')

೧೧೦. Dipakranjan Das, *Economic History of the Deccan*. pp. 175-76

೧೧೧. ಚೆನ್ನ ಬ ವ. ೮೪೨: ಪು. ೩೯೯; ಬಸವ ವ. ೬೩೫; ಪು. ೨೫೫; ಸರ್ವಪು ವ. ೬೪೬

೧೧೨. ಸರ್ವಪು ವ. ೬೪೬

೧೧೩. ಆದಯ್ಯ ವ. ೨೪೧: ಪು. ೧೪೨

೧೧೪. ಚನ್ನ ಬ ವ. ೯೧೫: ಪು. ೪೩೩; ದೇ ದಾ ವ (ಹ) ೧೯; ಪು. ೨೮

೧೧೫. ಬಸವ ವ. ೪೫೦; ಪು. ೧೭೬

ಎನ್ನ ಕಂಬಳಿಯ ಚೀಲವಂ ಬಿಡುವೆ. ಅದರಲ್ಲಿರ್ದ ಸಂಭಾರದ್ರವ್ಯದ ಕೂಡುವೆನೆಂಬುದಕ್ಕೆನ್ನ ನಂಜಿ ಬನ್ನಿ.''[೧೧೬] ಇವನು ಒಡೆದುಹೋದ ಪಾತ್ರೆಗಳನ್ನೂ, ಖೋಟಾ ನಾಣ್ಯಗಳು ಶುದ್ಧವಲ್ಲದ ಬೆಳ್ಳಿಯ ನಾಣ್ಯಗಳು – ಇವುಗಳನ್ನೂ ತೆಗೆದುಕೊಂಡು ತಾನು ತನ್ನ ಕಂಬಳಿಯ ಚೀಲದಲ್ಲಿ ತಂದ ಸಾಂಬಾರ ದ್ರವ್ಯಗಳನ್ನು ನೀಡುತ್ತಿದ್ದ. ಈ ವಚನಕಾರನ ಹೆಸರನ್ನು ಗಮನಿಸಿದರೆ ಇದಕ್ಕೆ 'ಮಲಹರ ಕಾಯಕ'ವೆಂಬ ಹೆಸರಿತ್ತೆಂದು ತಿಳಿಯುವುದು. ಈ ಹಳೆಯ ಲೋಹಗಳನ್ನು ಪ್ರಾಯಶಃ ಇವನು ಆಯಾಲೋಹದ ಕೆಲಸಗಾರರಿಗೆ ಮಾರುತ್ತಿದ್ದ.

## ಹೆಂಡವಿಳಿಸುವುದು

ಹೆಂಡವನ್ನು ತಯಾರಿಸುತ್ತಿದ್ದವರು ಈಳಿಗರು. ಅದನ್ನು ಮತ್ತೆ ಕೆಲವರು ಮಾರುತ್ತಿದ್ದರು, ಹೆಂಡದ ಮಾರಯ್ಯ ಎಂಬ ವಚನಕಾರನು ಹೆಂಡವನ್ನು ಮಾರುತ್ತಿದ್ದವನು. ಈಚಲು ಹಾಗೂ ತಾಳೆಯ ಮರಗಳಿಂದ ಮದ್ಯವನ್ನು ತಯಾರಿಸುತ್ತಿದ್ದರು.[೧೧೭] ಪಂಪನು ಮುನ್ನೂರರವತ್ತು ಜಾತಿಯ ಕಳ್ಳುಗಳಿವೆಯೆಂದು ಹೇಳುತ್ತಾನೆ, ಕಳ್ಳನ್ನು ಕುಡಿಯುವಾಗ ನಂಜಿಕೊಳ್ಳುತ್ತಿದ್ದ ಬಿದಿರು ಕುಡಿ, ಮಾವಿನ ಮಿಡಿ, ಬಿಲ್ವಪತ್ರೆಕಾಯಿಯ ತಿರುಳು, ಮೆಣಸು ಕಡಲೆಗಳ ಪುಡಿಯನ್ನು ತುಂಬಿ ಹಸಿ ಶುಂಠಿಯ ಮಿಶ್ರಣವನ್ನುಳ್ಳ 'ಚಕ್ಕಣ'ವನ್ನೂ ಪಂಪ ಹೆಸರಿಸುತ್ತಾನೆ; ಸಿರಿ ಸಿಂಬಿ ತಂಪುಗ ಬಬ್ಬರಿ ಗಂಗಾಸಾಗರ ಸುರಾಳ ಸೋಮ ವರವಾಣಿ ಮಾಳುವ್ಯೋದರಿ ಮರವಟ್ಟ ಎಂಬವುಗಳು ಕೆಲವು ಕಳ್ಳುಗಳ ಹೆಸರುಗಳು.[೧೧೮] ಹೆಂಡದ ಮಾರಯ್ಯನ ಒಂದು ವಚನವು ಮದ್ಯವನ್ನು ತಯಾರಿಸುವ ವಿಧಾನವನ್ನು ಹೇಳುತ್ತದೆ: ''ಘಟಕುಂಭದಲ್ಲಿ ಜೀವವೆಂಬ ಜಂಗಟ ಬಂದಿತ್ತು. ದೃಷ್ಟ ಇಷ್ಟದಲ್ಲಿ ಕಟ್ಟಲಾಗಿ ಮೊಳೆ ಮುರಿದು ಒಡಲಾಯಿತ್ತು. ಲಿಂಗದ ಅಗ್ನಿಯಲ್ಲಿ ಬೇಯಿಸಿ, ಮೂರು ಸಂಗ ಒಡೆದ ಮಡಕೆಯ ಓಡಿನಲ್ಲಿ ಶೃತದೃಷ್ಟ. ಅನುಮಾನವೆಂಬ ಕೋಲಿನಲ್ಲಿ ಕಡೆಯಲಾಗಿ ರಸ ಒಳಗಾಗಿ ಹಿಪ್ಪೆ ಹೊರಗಾಯಿತ್ತು. ಆ ಸುಧೆಯ ತುಂಬಿ ತಂದೆ...''[೧೧೯] ಇಲ್ಲಿ ಮಡಕೆಯಲ್ಲಿ ಮದ್ಯವನ್ನು ಮಾಡುವ ಕ್ರಮವನ್ನು ಹೇಳಿದೆ, ಆದರೆ ಆ ಕ್ರಮವು ಸಂಪೂರ್ಣವಾಗಿ ಅರ್ಥವಾಗುವುದಿಲ್ಲ. ಜಂಗಟ ಎನ್ನುವುದು ಮದ್ಯದ ತಯಾರಿಕೆಯ ಕ್ರಮದಲ್ಲಿ ಬಹು ಮುಖ್ಯವಾದ ಏನನ್ನೋ ಸೂಚಿಸುತ್ತಿದೆ. ಪ್ರಾಯಶಃ ಇದು ಮದ್ಯವನ್ನು ತಯಾರಿಸಲು ಬೇಕಾದ ಹಿಪ್ಪೆ ಹೂ, ದ್ರಾಕ್ಷಿ ಮುಂತಾದ ಮೂಲ ದ್ರವ್ಯವನ್ನು ಸೂಚಿಸುತ್ತದೆ. (ಈ ದ್ರವ್ಯವನ್ನು ಸಂಸ್ಕೃತದಲ್ಲಿ ಕಿಣ್ವ ಅಥವಾ ನಗ್ನ ಹೂ ಎನ್ನುತ್ತಾರೆ). ಇದನ್ನು ಬೇಯಿಸಿ ಕಡೆಯುತ್ತಿದ್ದರು. ಅನಂತರ ಉಳಿದುದನ್ನು 'ಹಿಪ್ಪೆ' ಎನ್ನುತ್ತಿದ್ದರು. ಹೆಂಡವನ್ನು ಚರ್ಮದ ಚೀಲಗಳಲ್ಲಿ (ತಿತ್ತಿ) ತುಂಬಿಡುತ್ತಿದ್ದರು.[೧೨೦] ಮದ್ಯವನ್ನು ಮಣ್ಣಿನ ಹರವಿಗಳಲ್ಲಿಯೂ ತುಂಬಿಡುತ್ತಿದ್ದುದುಂಟು.[೧೨೧] ಎರಡನೆಯ ಪುಲಿಕೇಶಿಯ ಕಾಲದಲ್ಲಿ ಕರ್ಣಾಟಕವನ್ನು ಸಂದರ್ಶಿಸಿದ್ದ ಹ್ಯೂಯೆನ್‌ತ್ಸಾಂಗ್ ಯುದ್ಧಕಾಲದಲ್ಲಿ ಸೈನಿಕರು ಮದ್ಯಪಾನ ಮಾಡುತ್ತಿದ್ದುದಲ್ಲದೆ,

---

೧೧೬. ಶಿವದಾ ಗೀ: ಪು. ೩೭೯ (ಇಲ್ಲಿ ಉದ್ಧೃತವಾದ ವಚನ)
೧೧೭. ಸಿದ್ಧರಾ ವ. ೭೭೨: ಪು. ೨೩೬; ಬಸವ ವ. ೯೦; ಪು. ೪೪
೧೧೮. ಡಿ. ಎಲ್. ನರಸಿಂಹಾಚಾರ್: ಪಂಪ ಭಾರತ ದೀಪಿಕೆ: ಪು. ೧೬೭-೮
೧೧೯. ಸರ್ವಜ್ಞ ಪ. ೬೯೫
೧೨೦. ಸರ್ವಜ್ಞ ವ. ೭೦೩
೧೨೧. ಶಿವಶ ವ: ಪು. ೪೪೩ (ಅಮುಗೆ ರಾಯಮ್ಮ, ೮೫)

ಆನೆಗಳಿಗೂ ಕುಡಿಸಿ ಅವು ಆವೇಶಭರಿತವಾಗುವಂತೆ ಮಾಡುತ್ತಿದ್ದ ಸ್ವಾರಸ್ಯಕರ ವಿಚಾರವನ್ನು ಹೇಳುತ್ತಾನೆ.[೧೨೨]

### ಸೇವಾವೃತ್ತಿಗಳು

ಸಾರ್ವಜನಿಕರಿಗೆ ತಮ್ಮ ಸೇವೆಯಿಂದ ಸೌಲಭ್ಯವನ್ನು ಒದಗಿಸುತ್ತಿದ್ದ ವೃತ್ತಿಯವರ ಬಗ್ಗೆ ನಾವೀಗ ಕೆಲವು ವಿವರಗಳನ್ನು ತಿಳಿಯಬಹುದು. ಅಗಸರು ಅಥವಾ ಮಡಿವಾಳರು ಸಾರ್ವಜನಿಕರ ವಸ್ತ್ರಗಳನ್ನು ಮಡಿಮಾಡುವ ಕಾಯಕದವರು. ಮಡಿವಾಳ ಮಾಚಯ್ಯನೆಂಬ ವಚನಕಾರನ ಕಾಯಕ ನಿಷ್ಠೆಯನ್ನು ಅನೇಕ ಸಮಕಾಲೀನ ವಚನಕಾರರು ಶ್ಲಾಘಿಸಿದ್ದಾರೆ. ಹಲವಾರು ಜನರ ಬಟ್ಟೆಗಳನ್ನು ಶುಭ್ರಗೊಳಿಸಬೇಕಾದುದರಿಂದ ಮಡಿವಾಳರು ಬೇರೆ ಬೇರೆಯವರ ಬಟ್ಟೆಗಳಿಗೆ ಬೇರೆ ಬೇರೆ ಗುರುತುಗಳನ್ನು ಹಾಕುತ್ತಿದ್ದರು; ಅವನು ಮರೆತು ಬೇರೆಯ ಬಟ್ಟೆಯನ್ನು ಕೊಟ್ಟರೂ ಬಟ್ಟೆಯ ಒಡೆಯರು ಅದನ್ನು ಸರಿಯಾಗಿ ಗುರುತಿಸುತ್ತಿದ್ದರು.[೧೨೩] ಮಡಿವಾಳ ತೊಳೆಯಬೇಕಾದ ಬಟ್ಟೆಗಳ ಹೊರೆಯನ್ನು ಕತ್ತೆಗಳ ಮೇಲೆ ಹೇರಿಕೊಂಡು ಹೊಳೆ, ಕೆರೆ, ಬಾವಿಗಳಂತಹ ಸ್ಥಳಕ್ಕೆ ಬಂದು ಕುದಿಯುವ ನೀರಿನಲ್ಲಿ ವಸ್ತ್ರಗಳನ್ನು ಉಬ್ಬೆಗೆ ಹಾಕುತ್ತಿದ್ದ; ಅನಂತರ ತಣ್ಣೀರಿನಲ್ಲಿ ಒಗೆಯುತ್ತಿದ್ದ; ಹಿಂಡಿ ನೀರಿನಲ್ಲಿ ಅದ್ದಿ ಮತ್ತೆ ಒಗೆಯುತ್ತಿದ್ದ; ಅನಂತರ ಶುಭ್ರವಾದ ನೀರಿನಲ್ಲಿ ಹಿಂಡಿ ಬಿಸಿಲಲ್ಲಿ ಒಣಗಿಸಿ ವಸ್ತ್ರಗಳಿಗೆ ಗಂಜಿ ಹಾಕುತ್ತಿದ್ದ;[೧೨೪] ಅನಂತರ ಬಟ್ಟೆಗಳನ್ನು ಮಡಿಸಿ ಕೊಡತಿಯಿಂದ ಘಟ್ಟಿಸುತ್ತಿದ್ದ.[೧೨೫] ಕ್ಷೌರ ಮಾಡುವ ವೃತ್ತಿಯೇ ಕನ್ನಡಿ ಕಾಯಕ. ಕನ್ನಡಿ ಕಾಯಕದ ಅಮ್ಮಿದೇವಯ್ಯನೆಂಬುವನು ಒಬ್ಬ ವಚನಕಾರ. ನಾಯಿಂದ ಮುಖಕ್ಷೌರ, ತಲೆಗೂದಲನ್ನು ಕತ್ತರಿಸುವುದು, ಉಗುರು ತೆಗೆಯುವುದು ಮುಂತಾದ ಸೇವೆಯನ್ನು ಮಾಡುತ್ತಿದ್ದ; ಗುಂಗುರು ಕೂದಲು (ಸೆಡಹು) ಕತ್ತರಿಸಲು ಕತ್ತರಿ, ತುರುಬಿನಂತೆ ದೀರ್ಘವಾಗಿ ಬೆಳೆದ ಕೂದಲನ್ನು ಕತ್ತರಿಸಲು 'ಕೂರಗುರುಳ' ಎಂಬ ಕತ್ತರಿ, ಉಗುರನ್ನು ತೆಗೆಯಲು ಕಡಿಚಣ, ಮೂಗಿನ ಕೂಳೆಯನ್ನು ತೆಗೆಯಲು ಅಂಗುಲಸಂಗಿ ಇವುಗಳನ್ನು ಉಪಯೋಗಿಸುತ್ತಿದ್ದ.[೧೨೬] ಮತ್ತೊಂದು ವಚನದಲ್ಲಿ ಶಸ್ತ್ರ (ಕತ್ತಿ?), ಕತ್ತರಿ, ಚಿಮ್ಮಟ (ಅಂಗುಲಸಂಗಿ?), ಚಣ, ಹಣಿಗೆ, ಕನ್ನಡಿ ಇವುಗಳನ್ನು ಹೆಸರಿಸಲಾಗಿದೆ.[೧೨೭] ಈ ವಸ್ತುಗಳನ್ನು ಇವನು ಹಡಪದಲ್ಲಿಟ್ಟುಕೊಂಡಿರುತ್ತಿದ್ದ.[೧೨೮] ವಚನಗಳ ಕಾಲದಲ್ಲಿ ತಲೆಯನ್ನು ಬೋಳಿಸಿಕೊಳ್ಳುವುದು, ಜಂಡಿಕೆಯನ್ನಿರಿಸಿಕೊಳ್ಳುವುದು ಎರಡೂ ರೂಢಿಯಲ್ಲಿದ್ದುವು.[೧೨೯] ನಾಯಿಂದರ ವೃತ್ತಿಯ ಆದಾಯದ ಮೇಲೆ ತೆರಿಗೆಯನ್ನು ಹಾಕುತ್ತಿದ್ದ ವಿಷಯವು ಕೆಲವೆಡೆ ಶಾಸನೋಕ್ತವಾಗಿದೆ.[೧೩೦]

---

೧೨೨. Dipakranjan Das, *Economic History of the Deccan,* p. 14

೧೨೩. ಕೋಶಾ ಮ ವ: ಪು. (ಕೋಲಶಾಂತಯ್ಯ, ೧೬)

೧೨೪. ಹರಿಹರ ರ: ಪು. ೧೧೭ (ತಿರುಕುಂಡ ತೊಂಡರ ಮಹಾತ್ಮೆ)

೧೨೫. ಬಸವ ವ. ೧೨೮೨: ಪು. ೫೩೨-೩

೧೨೬. ಸರ್ವಪು ವ. ೬೩೭

೧೨೭. ಸರ್ವಪು ವ. ೬೪೧

೧೨೮. ಡಿ. ಎಲ್. ನರಸಿಂಹಾಚಾರ್: 'ಕೆಲವರು ವಚನಕಾರರು-೨' (ಪ್ರಬುದ್ಧ ಕ: ೧೯.೪ ಪು. ೬೨)

೧೨೯. ಚೆಡಗಿನ ವ: ಪು. ೨೯೬ (ಅಮ್ಮಿದೇವಯ್ಯ, ೧)

೧೩೦. Dipakranjan Das, *Economic History of the Deccan,* p.189

ಬೇರೆಯವರ ಮನೆಗಳಿಗೆ ಕೆಲವರು ನೀರು ಹೊತ್ತು ಜೀವನವನ್ನು ಸಾಗಿಸುತ್ತಿದ್ದರು.[೧೩೧] ಅಡಿಗೆ ಮಾಡಿ ಜೀವಿಸುತ್ತಿದ್ದ ಸ್ತ್ರೀಯರು 'ಲಂದಣಗಿತ್ತಿ'ಯರು.[೧೩೨] ಮಾಂಸವನ್ನು ಮಾರುತ್ತಿದ್ದವರು 'ಸೂನೆಗಾರರು'.[೧೩೩] ಹೂವಿನ ಹಾರಗಳನ್ನು ತಯಾರಿಸುತ್ತಿದ್ದವರು ಮಾಲೆಗಾರರು.[೧೩೪] ಕಟ್ಟಿಗೆಯನ್ನು ಸಂಗ್ರಹಿಸಿ ಕೆಲವರು ಮಾರುತ್ತಿದ್ದರು, ಇವರನ್ನು ಮೋಳಿಗೆಯವರು (ಮೋಳಿಗೆ=ಕಟ್ಟಿಗೆ ಹೊರೆ) ಎನ್ನುತ್ತಿದ್ದರು;[೧೩೫] ಮೋಳಿಗೆ ಮಾರಯ್ಯ ಮತ್ತು ಅವನ ಹೆಂಡತಿ ಮಹಾದೇವಿ ಪ್ರಸಿದ್ಧ ವಚನಕಾರರು. ಕಟ್ಟಿಗೆಯ ಹೊರೆಯನ್ನು ಅಂಬಲಿಯನ್ನಿತ್ತು ಕೊಂಡುಕೊಳ್ಳುತ್ತಿದ್ದುದೂ ಉಂಟು.[೧೩೬] ದೊಡ್ಡ ಹುದ್ದೆಗಳಲ್ಲಿರುವ ಅಥವಾ ಶ್ರೇಷ್ಠ ವ್ಯಕ್ತಿಗಳ ಸಮಯಾಸಮಯಗಳನ್ನರಿತು ಸಂದರ್ಶಕರನ್ನು ಒಳಗೆ ಕಳಿಸುತ್ತಿದ್ದವರದು ಉಗ್ಗಡಿಸುವ ಕಾಯಕ; ಉಗ್ಗಡಿಸುವ ಗಬ್ಬಿದೇವಯ್ಯ ವಚನಕಾರ.[೧೩೭] ಸಾರುವುದು ಎಚ್ಚರಿಕೆಯ ಕಾಯಕ.[೧೩೮] ಹುಲ್ಲು ಮಾರಿ ಜೀವಿಸುತ್ತಿದ್ದ ಹೊಡೆಹುಲ್ಲ ಬಂಕಣ್ಣ ಒಬ್ಬ ವಚನಕಾರ. 'ಜಲಗಾರ ಕರೆಯಿಸಿ ಜಲವ ತೊಳೆಯಿಸಿ' ಎಂಬ ಮಾತು ಒಂದು ವಚನದಲ್ಲಿ ಬಂದಿದೆ.[೧೩೯] ಇಲ್ಲಿ ಜಲಗರು ಎಂಬುದು ಜಲಗಾರರನ್ನು ಸೂಚಿಸುವಂತೆ ತೋರುತ್ತದೆ. ಪ್ರಸವ ಸಮಯದಲ್ಲಿ ಸಹಾಯ ಮಾಡುವ ಸೂಲಗಿತ್ತಿಯ ಹೆಸರೂ ವಚನಗಳಲ್ಲಿ ಉಕ್ತವಾಗಿದೆ.[೧೪೦]

## ಮನರಂಜಕ ವೃತ್ತಿಗಳು

ಜನರಿಗೆ ಮನರಂಜನೆಯನ್ನೊದಗಿಸುವುದರ ಮೂಲಕವೇ ಅನೇಕರು ಜೀವಿಸುತ್ತಿದ್ದರು. ರಾಜಾಸ್ಥಾನಗಳಲ್ಲಿ ಶ್ರೇಷ್ಠ ವರ್ಗದ ಅಥವಾ ಶಿಷ್ಟರೆನಿಸಿಕೊಳ್ಳುವ ಜನರ ಮನರಂಜಿಸಲು ಕಲೆಗಾರರಿಗೆ ಸ್ಥಾನವಿರುತ್ತಿತ್ತು, ರಾಜ್ಯದ ಬೊಕ್ಕಸದಿಂದ ಅವರಿಗೆ ಸಂಭಾವನೆಯನ್ನೀಯಲಾಗುತ್ತಿತ್ತು. ಆದರೆ ಹಳ್ಳಿಪಳ್ಳಿಗಳಲ್ಲಿ ಸಾಮಾನ್ಯಜನರಿಗೆ ಬಿಡುವಿನ ವೇಳೆಯಲ್ಲಿ ಮನಸ್ಸನ್ನು ಹಗುರಗೊಳಿಸಿ ಕೆಲವರು ತಮ್ಮ ಜೀವನವನ್ನು ನಡೆಸುತ್ತಿದ್ದರು. ಇವರ ಯೋಗಕ್ಷೇಮವನ್ನು ಸಹಜವಾಗಿಯೇ ಸಮಾಜವೇ ಹೊತ್ತಿತ್ತು. ಇಂತಹ ಅನೇಕ ವೃತ್ತಿಯವರು ವಚನಗಳಲ್ಲಿ ಉಕ್ತವಾಗಿರುವುದನ್ನು ಕಾಣಬಹುದು. ನಗೆಯ ಮಾರಿ ತಂದೆಯೆಂಬ ವಚನಕಾರ ಜನರನ್ನು ನಗಿಸಿ ಹಣ ಸಂಪಾದಿಸುತ್ತಿದ್ದವನು; 'ಈ ಹೊತ್ತ ದೇಹಕ್ಕೆ ನಗೆಯ ಚಿತ್ತದ ಕಾಯಕ'[೧೪೧] ಎಂದು ಅವನೇ ತನ್ನ ಕಾಯಕವನ್ನು ಹೇಳಿಕೊಳ್ಳುತ್ತಾನೆ. ಈ ಕಾಯಕದವರನ್ನೇ ಪ್ರಾಯಶಃ

---

೧೩೧. ಬಸವ ವ. ೩೫೧: ಪು.೧೩೯ ('ಭಾವ ಚಿಂತಾರತ್ನ'ದಲ್ಲಿನ ತಿರುಕೊಳಪಿ ನಾಚಿ ಎಂಬ ಹೆಂಗಸು ಇತರರ ಮನೆಗೆ ನೀರು ಹೊತ್ತು ಜೀವಿಸುತ್ತಿದ್ದವಳು.)

೧೩೨. ಬಸವ ವ. ೨೨೬: ಪು. ೯೪

೧೩೩. ಬಸವ ವ. ೭೩: ಪು. ೩೫

೧೩೪. ಬಸವ ವ. ೮೪೮: ಪು. ೩೩೫

೧೩೫. ಮೊ ಮಾ ವ (ಸ) ೩೭: ಪು. ೯

೧೩೬. ಬಸವ ವ. ೪೭೦: ಪು. ೧೮೩

೧೩೭. ಶಿವದಾ ಗೀ: ಪು. ೩೨೯

೧೩೮. ಚೆಡಗಿನ ವ: ಪು. ೨೫೮

೧೩೯. ಚೆಡಗಿನ ವ: ಪು. ೩೭೧

೧೪೦. ಅಲ್ಲಮ ವ ಚಂ. ೬೨೮: ಪು. ೧೩೭

೧೪೧. ಶಿವದಾ ಗೀ: ಪು. ೩೩೯

'ಸಬ್ಬವಗಾಜಿ' ಎಂಬ ಹೆಸರಿನಿಂದ ಕರೆಯುತ್ತಿದ್ದುದು.[೧೫೨] ದೈಹಿಕವಾದ ವಿಸ್ಮಯಕರ ಆಟಗಳನ್ನು ಆಡಿ, ವೇಷಗಳನ್ನು ಕಟ್ಟ ಡೊಂಬರು ಮನರಂಜಿಸುತ್ತಿದ್ದರು. ಹಾಡುಗಳನ್ನು ಹಾಡಿ ರಂಜಿಸುವ 'ಪಾಣರು', ಪಾತ್ರಧಾರಿಗಳಾದ 'ನಟ್ಟುವಿಗ'ರು, ಹಲವಾರು ವೇಷಗಳನ್ನು ಒಬ್ಬನೇ ಧರಿಸುತ್ತಿದ್ದ ಬಹುರೂಪಿಗಳು, ಕಲಕೇತರು, ತೊಗಲಬೊಂಬೆಯನ್ನಾಡಿಸುವವರು, 'ಪಗರಣಿಗ'ರು, ಹಾವಾಡಿಗರು ಈ ಎಲ್ಲ ವೃತ್ತಿಯವರೂ ಪ್ರಾಯಶಃ ಊರಿಂದೂರಿಗೆ ಹೋಗಿ ತಮ್ಮ ಕೌಶಲವನ್ನು ತೋರಿಸಿ ಹೊಟ್ಟೆ ಹೊರೆಯುತ್ತಿದ್ದ ಅಲೆಮಾರಿಗಳು.

*ವಚನ ಸಾಹಿತ್ಯ : ಒಂದು ಸಾಂಸ್ಕೃತಿಕ ಅಧ್ಯಯನ, ೧೯೮೩, ಪು. ೧೫೫-೭೦*

---

೧೫೨. ಜಗನ್ನಾಥ: ೨.೩೯ ಗದ್ಯ

# ೭೫. ವಚನಕಾರರ ದೃಷ್ಟಿಯಲ್ಲಿ ವರ್ಣ, ಜಾತಿ, ಜಾತಿಸಮಾನತೆ, ಮತಾಂತರ

● ಎಂ. ಚಿದಾನಂದಮೂರ್ತಿ

## ವಚನಕಾರರ ದೃಷ್ಟಿಯಲ್ಲಿ ವರ್ಣ, ಜಾತಿ

ವರ್ಣ, ಜಾತಿ ಪದಗಳ ಅರ್ಥಗಳು ವಚನಕಾರರಿಗೆ ತಿಳಿದಿದ್ದುದು ಮಾತ್ರವಲ್ಲದೆ ಅವುಗಳ ಬಗ್ಗೆ ಅವರಿಗೆ ಸ್ಪಷ್ಟ ಕಲ್ಪನೆಯೂ ಇದ್ದಿತು. 'ಚತುರ್ವರ್ಣ' ಎಂಬ ಮಾತು ಸಿದ್ಧರಾಮನಲ್ಲಿ ಬರುತ್ತದೆ. ವೀರಶೈವನು ಶೂದ್ರನಾದರೂ ('ಚತುರ್ವರ್ಣ') ಚತುರ್ವರ್ಣಗಳನ್ನು ಮೀರಿದವನು, ಚತುರ್ವರ್ಣಗಳ ಆಚೆ ಇರುವವನು ಅಥವಾ ಚತುರ್ವರ್ಣಗಳನ್ನು ಅಥವಾ ಚತುರ್ವರ್ಣಗಳು ಪ್ರತಿಪಾದಿಸುವ ಅನುಶ್ರೇಣಿಯನ್ನು (hierarchy) ಮನ್ನಿಸದವನು ಎನ್ನುತ್ತಾನೆ.[೧] ಎಂದರೆ ಚತುರ್ವರ್ಣಗಳಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಯಾರೇ ಆಗಲಿ, ಯಾವನು ಅವುಗಳ ಮೇಲು ಕೀಳನ್ನು ಗುರುತಿಸುವುದಿಲ್ಲವೋ ಅವನೇ ವೀರಶೈವ. ಒಕ್ಕಲಿಗ ಮುದ್ದಣ್ಣನಿಗೆ ಬ್ರಾಹ್ಮಣ ವೇದವನ್ನೋದುವ, ಕ್ಷತ್ರಿಯ ಯುದ್ಧಮಾಡುವ, ವೈಶ್ಯ ವ್ಯಾಪಾರಮಾಡುವ, ಶೂದ್ರ ಉಳುಮೆಮಾಡುವ ವೃತ್ತಿಯವರೆಂಬ ಸಾಂಪ್ರದಾಯಕ ಸಂಗತಿ ತಿಳಿದಿದೆ. ತಾನು ಶೂದ್ರನಾದರೂ ತನ್ನ ಮಿತಿಗಳನ್ನು ಲಕ್ಷ್ಯಕ್ಕೆ ತಾರದೆ ತನ್ನನ್ನು ಒಪ್ಪಿಕೊಳ್ಳಬೇಕೆಂದು ತನ್ನ ಆರಾಧ್ಯದೈವವನ್ನು ಬೇಡಿಕೊಂಡಿದ್ದಾನೆ.[೨] ವರ್ಣ ವ್ಯವಸ್ಥೆಯ ಅರಿವು ಸಾಂಪ್ರದಾಯಕವಾಗಿ ಬಂದದ್ದು. ಅದನ್ನು ವಚನಕಾರರು ತಮ್ಮ ವಚನಗಳಲ್ಲಿ ಉಲ್ಲೇಖಿಸಿದರು.

ಅಂದಿನ ವಾಸ್ತವತೆಯೆಂದರೆ ಜಾತಿಗಳು. ಅಂಬಿಗರ ಚೌಡಯ್ಯ ಮತ್ತು ಸೊಡ್ಡಳ ಬಾಚರಸರು ಹದಿನೆಂಟು ಜಾತಿಗಳ ಹೆಸರು ಹೇಳಿ, ಅವು ಪ್ರತಿಯೊಬ್ಬ ಮನುಷ್ಯನಲ್ಲೂ ಉಂಟು ಎಂದು ಹೇಳುವುದರ ಮೂಲಕ, ಜಾತಿಗಳು ಸಮಾಜಪುರುಷನ ಬೇರೆ ಬೇರೆ ಅಂಗಗಳೆಂಬುದನ್ನು ಧ್ವನಿಸಿರುವ ಅಂಶವನ್ನು ಹಿಂದೆಯೇ ನೋಡಿದ್ದೇವೆ. ಜಾತಿಗಳ ಉತ್ಪತ್ತಿ ಅಥವಾ ವಿಭಜನೆ ಬೇರೆ ಬೇರೆ ಉದ್ಯೋಗಗಳಿಂದ ಎಂಬುದನ್ನು ಬಸವಣ್ಣ ಗುರುತಿಸಿದ್ದಾನೆ.[೩] ಮೇಲೆ ಹೇಳಿದ ಹದಿನೆಂಟು ಜಾತಿಗಳಲ್ಲಿ ಒಂದೊಂದು ಜಾತಿಗೂ ಬೇರೆ ಬೇರೆ 'ಕಾಯಕ'

---

೧ ಶ್ರೀ ಸಿದ್ಧರಾಮೇಶ್ವರ ವಚನಗಳು, ಸಂ: ಆರ್. ಸಿ. ಹಿರೇಮಠ, ಧಾರವಾಡ, ೧೯೬೮. ವಚನ, ೪೫೦- ''ಚತುರ್ವರ್ಣಿಯಾದಡೇನು, ಚತುರ್ವರ್ಣಾತೀತನೆ ವೀರಶೈವ ನೋಡಾ ಚತುರ್ವೇದಿ ಯಾದಡೇನು ಚರಮ ದೇಹವಳಿಯದವನೆ ಚಾಂಡಾಲ ನೋಡಾ''.

೨. ಸಕಲ ಪುರಾತನರ ವಚನಗಳು, ೩, ಪು. ೪೮- ''ವೇದಶಾಸ್ತ್ರವನೋದುವುದಕ್ಕೆ ಹಾರುವನಲ್ಲ ಇಱಿದು ಮೆಱೆವುದಕ್ಕೆ ಕ್ಷತ್ರಿಯನಲ್ಲ, ವ್ಯವಹರಿಸುವುದಕ್ಕೆ ವೈಶ್ಯನಲ್ಲ, ಉಳುವ ಒಕ್ಕಲಮಗನ ತಪ್ಪ ನೋಡದೆ ಒಪ್ಪುಗೊಳ್ಳಯ್ಯ ಕಾಮ ಭೀಮ ಜೀವಧನದೊಡೆಯ ನೀನೆ ಬಲ್ಲೆ''

೩. ''...ಕಾಸಿ ಕಮ್ಮಾಱನಾದ ಬೀಸಿ ಮಡಿವಾಳನಾದ
ಹಾಸನಿಕ್ಕಿ ಸಾಲಿಗನಾದ ವೇದವನೋದಿ ಹಾರುವನಾದ...''

— ಬಸವಣ್ಣನವರ ಷಟ್ಸ್ಥಲದ ವಚನಗಳು, ವಚನ ೫೮೯.

(ಉದ್ಯೋಗ)ವಿರುವುದನ್ನು ಕನ್ನಡಿ ಕಾಯಕದ ಅಮ್ಮಿದೇವ ಹೇಳಿದ್ದಾನೆ.[೪] ಜಾತಿಯಲ್ಲಿ ಪ್ರಧಾನವಾದುದು ಹುಟ್ಟು ಎಂಬುದನ್ನು ಉರಿಲಿಂಗ ಪೆದ್ದಿ ಗುರುತಿಸಿದ್ದಾನೆ. ಬ್ರಾಹ್ಮಣನ ಮಗ ಬ್ರಾಹ್ಮಣ, ಕ್ಷತ್ರಿಯನ ಮಗ ಕ್ಷತ್ರಿಯ, ವೈಶ್ಯನ ಮಗ ವೈಶ್ಯ, ಶೂದ್ರನ ಮಗ ಶೂದ್ರ.[೫] ಅದೇ ತರ್ಕವನ್ನು ಮುಂದುವರಿಸಿದರೆ, ಕಮ್ಮಾರನ ಮಗ ಕಮ್ಮಾರ, ಮಡಿವಾಳನ ಮಗ ಮಡಿವಾಳ ಇತ್ಯಾದಿ. ಜಾತಿ ವ್ಯವಸ್ಥೆಯ ಅಡಿಗಲ್ಲುಗಳಾದ ಉದ್ಯೋಗ ಮತ್ತು ಜನ್ಮಗಳೆರಡರ ವಿಷಯವು ವಚನಕಾರರಿಗೆ ತಿಳಿದಿತ್ತೆಂಬುದು ಸ್ಪಷ್ಟವಾಗುತ್ತದೆ.

ಪ್ರಾಚೀನ ಕಾಲದಲ್ಲಿ ವರ್ಣಗಳ ಮಿಶ್ರಣವು ವರ್ಣಸಂಕರವೆನ್ನಿಸಿಕೊಂಡಂತೆ, ಮಧ್ಯಯುಗದಲ್ಲಿದ್ದ ಜಾತಿಗಳ ಮಿಶ್ರಣವು 'ಜಾತಿ ಸಂಕರ'ವೆನ್ನಿಸಿಕೊಳ್ಳಬೇಕು. ಬಸವಣ್ಣನಲ್ಲಿ 'ಜಾತಿಸಂಕರ'ವೆಂಬ ಮಾತು ವಾಸ್ತವವಾಗಿ ಬಂದಿದೆ.[೬] ಬಸವಣ್ಣನಿಗೆ ಶರಣರ ಜಾತಿಸಂಕರವು ಪ್ರಿಯವಾದುದು ಮತ್ತು ಬಹುವಾಗಿ ಅಪೇಕ್ಷಣೀಯವಾದುದು. ಜಾತಿಗಳಲ್ಲಿ ವಿಪ್ರ ಮೇಲಿನವನು, ಶ್ವಪಚ ಅಥವಾ ಅಂತ್ಯಜ ಕಡೆಯವನು ಎಂಬುದನ್ನು ವಚನಕಾರರು ಹೇಳುವಾಗ[೭] ತಮ್ಮ ಕಾಲದ ಒಟ್ಟು ಜನಾಭಿಪ್ರಾಯವನ್ನು ವ್ಯಕ್ತಪಡಿಸುತ್ತಿದ್ದಾರೆಯೆಂದು ಅರ್ಥಮಾಡಿಕೊಳ್ಳಬೇಕು ಮತ್ತು ಅದು ವಾಸ್ತವವೂ ಆಗಿತ್ತು. ಜಾತಿಗಳ ಕೊನೆಯಲ್ಲಿದ್ದ ಅಂತ್ಯಜರನ್ನು ಜನ ಅಪಮಾನಕಾರಕ ದುಸ್ಥಿತಿಯಲ್ಲಿ ಇಟ್ಟಿರುವುದನ್ನು ಎತ್ತಿತೋರಿಸಿದ್ದಾರೆ. ಅವರನ್ನು ಜಾತಿಗಳ ಕೊನೆಯಲ್ಲಿಟ್ಟಿರುವುದರ ಸಂಕೇತವೆಂಬಂತೆ ಅವರು ಊರ ಹೊರಗೆ ಇರಬೇಕೆಂಬ ಕಟ್ಟಳೆಯನ್ನು ಹಲವರು ವಿರೋಧಿಸಿದ್ದಾರೆ. ಜಾತಿವಾಚಕವಾದ 'ಹೊಲೆಯ' ಎಂಬುದೇ ಅವಹೇಳನದ ಮಾತಾಗಿ ಪರಿಣಮಿಸಿದ್ದಿತು. 'ಹೊಲೆಯ' ಎಂಬುದನ್ನು ನಿಂದಾವಾಚಕವಾಗಿ ಬಳಸುವುದಾದರೆ, ಆಗ 'ಹೊಱಕೇರಿ'ಯವರು ಮಾತ್ರ ಹೊಲೆಯರಾಗುವುದಿಲ್ಲ. ದುಷ್ಟ ಕಾರ್ಯಗಳನ್ನು ಮಾಡಿದ ಯಾರೇ ಆಗಲಿ (ತಾಯಿಗೆ ಬೈದವ, ನಡೆವ ದಾರಿಗೆ ಮುಳ್ಳು ಹಚ್ಚಿದವ, ಬ್ರಾಹ್ಮಣನನ್ನು, ಹಸುವನ್ನು ಕೊಂದವ) ಹೊಲೆಯರಾಗುತ್ತಾರೆ. ಹಾವಿನಹಾಳ ಕಲ್ಲಯ್ಯ ಶ್ವಪಚ, ಮಚ್ಚಿಗ ಎಂಬ ಅಸ್ಪೃಶ್ಯ ಜಾತಿಗಳಲ್ಲದೆ 'ಬೋಯ' (=ಅಂಬಿಗ) ಎಂಬ ಬಹುಶಃ ಅಸ್ಪೃಶ್ಯ ಜಾತಿಯವರನ್ನು ಹೆಸರಿಸಿದ್ದಾನೆ. ವಿಪ್ರಜನರಂತೆ "ಅಗಸ ಕಮ್ಮಾಱ ನಾವಿದ ಕುಲಜ"ರೂ ದ್ವಿಜರೇ, "ಸ್ವಪಚ ಮಚ್ಚಿಗ ಬೋಯ ಕುಲಜ"ರೂ ದ್ವಿಜರೇ ಎನ್ನುತ್ತಾನೆ ಹಾವಿನಹಾಳ ಕಲ್ಲಯ್ಯ.[೮] 'ಅನಾಮಿಕ'ನಿಗೆ ರಾಜನ ಹೆಸರನ್ನು ಒಂದು

೪. ಸರ್ವಪುರಾತನರ ವಚನಗಳು. ೩, ಪು. ೬೨, ೬೪ – "ಆವ ಜಾತಿ ಗೋತ್ರದಲ್ಲಿ ಬಂದರೂ ತಮ್ಮ ತಮ್ಮ ಕಾಯಕಕ್ಕೆ ಭಕ್ತಿಗೆ ಸೂತಕವಲ್ಲದಿರಬೇಕು"; "ಹದಿನೆಂಟು ಕಾಯಕ".

೫. ಉರಿಲಿಂಗ ಪೆದ್ದಿಗಳ ವಚನಗಳು, ಸಂಖ್ಯೆ ೨೪೯

೬. ಬಸವಣ್ಣನವರ ಷಟ್ಸ್ಥಲದ ವಚನಗಳು, ವಚನ ೭೧೭ – "ಆವ ಕುಲವಾದರೇನು? ಶಿವಲಿಂಗವಿದ್ದವನೆ ಕುಲಜನು. ಕುಲವನಱಸುವರೆ ಶರಣರಲ್ಲಿ ಜಾತಿ ಸಂಕರವಾದ ಬಳಿಕ?

೭. ಅದೇ, ವಚನ ೭೧೦ – "ವಿಪ್ರ ಮೊದಲು ಅಂತ್ಯಜ ಕಡೆಯಾಗಿ"; ಸಕಲ ಪುರಾತನರ ವಚನಗಳು ೨, ಪು. ೭೪೪ – "ಬ್ರಾಹ್ಮಣ ಮೊದಲಾಗಿ ಶ್ವಪಚ ಕಡೆಯಾಗಿ...." (ಹಾವಿನಹಾಳ ಕಲ್ಲಯ್ಯ); "ಒಡೆಯನ ಪ್ರಾಣಕ್ಕೆ ಇದ್ದಿತ್ತೆ ಯಜ್ಞೋಪವೀತ, ಕಡೆಯಲ್ಲಿದ್ದ ಅಂತ್ಯಜನು ಹಿಡಿದಿದ್ದನೆ ಹಿಡಿಗೋಲ" – ಜೇಡರ ದಾಸಿಮಯ್ಯನ ವಚನಗಳು, ವಚನ ೩.

೮. ಸಕಲ ಪುರಾತನರ ವಚನಗಳು ೨, ಪು. ೭೩೨, 'ವ್ಯಾಸ ಬೋಯಿತಿಯ ಮಗ' ಎಂಬ ಬಸವಣ್ಣನ ಮಾತು ನೋಡಿ (ಸವಣ್ಣನವರ ಷಟ್ಸ್ಥಲದ ವಚನಗಳು, ವಚನ ೫೮೮). ಇಲ್ಲಿ ಬೋಯಿ ಮತ್ಸ್ಯಗಂಧಿಯಾದರೆ, 'ಬೋಯ' ಎಂಬುದು ಅಂಬಿಗರ ಜಾತಿಯನ್ನು ಹೇಳುತ್ತದೆ.

ವೇಳೆ ಇಟ್ಟರೂ ಅವನು ಹೆಸರನ್ನು ಹೊತ್ತಿರಬಹುದೇ ಹೊರತು 'ಪಟ್ಟ'ಕ್ಕೆ ಅರ್ಹನಾಗುವುದಿಲ್ಲ ಎನ್ನುತ್ತಾನೆ ಚನ್ನಬಸವಣ್ಣ.[೯] ಚಾಂಡಾಲನು ಜ್ಞಾನಿಯಾದರೂ ಅವನ ಜ್ಞಾನಕ್ಕೆ ಗೌರವವೇ ಹೊರತು, ಅವನ ದೇಹ ಗೌರವಾರ್ಹವಾಗಲಾರದು, ಎಂದರೆ ಬಹಿರಂಗವಾಗಿ ಅವನಿಗೆ ಬಾಗಿ ಗೌರವಿಸಲು ಸಾಧ್ಯವಿಲ್ಲವೆನ್ನುತ್ತಾನೆ ಅದೇ ವಚನಕಾರ. ಒಂದು ಜಾತಿಗೆ ಅದರ ವೃತ್ತಿ ಅನಿವಾರ್ಯ, ಅದರಿಂದ ಅದು ಬೇರೆಯಾಗಲು ಸಾಧ್ಯವಿಲ್ಲವೆಂದು ಚನ್ನಬಸವಣ್ಣನ ಅಭಿಪ್ರಾಯವಿರುವಂತಿದೆ.

''ಜಾತಿಸಂಕರ'' ಎಂಬ ಮಾತನ್ನು ಬಸವಣ್ಣ ಬಳಸಿರುವುದನ್ನು ಆಗಲೇ ನೋಡಿದ್ದೇವೆ. ಆಯಾ ಜಾತಿಯವರು ಆಯಾ ಜಾತಿಯಲ್ಲೇ ಮದುವೆಯಾಗಿ ಮಕ್ಕಳನ್ನು ಪಡೆಯುವುದು ವರ್ಣಪದ್ಧತಿಮಾನ್ಯವಾದುದು. ಬೇರೆ ಬೇರೆ ಜಾತಿಗಳವರ ವಿವಾಹ ಜಾತಿಸಂಕರವೆನ್ನಿಸಿಕೊಳ್ಳುತ್ತದೆ. ಈ ಜಾತಿಸಂಕರವು ಬಸವನ ಸಮಕಾಲೀನರಲ್ಲಿ ನಡೆಯಿತು, ಅದಕ್ಕೆ ಬಸವಣ್ಣ ಪ್ರೋತ್ಸಾಹವನ್ನೂ ನೀಡಿದ. ಬಸವನ ಪ್ರಕಾರ, ಈ ಜಾತಿ ಸಂಕರದ ಪರಿಣಾಮವಾಗಿಯೇ ಹಲವರು ಋಷಿಗಳೇ ಜನ್ಮತಾಳಿದ್ದಾರೆ. ಉದಾಹರಣೆಗೆ, ವ್ಯಾಸ ಬೋಯಿತಿಯ ಮಗ. ಹಾವಿನಹಾಳ ಕಲ್ಲಯ್ಯನು ಬ್ರಾಹ್ಮಣ ಹೆಣ್ಣು ಶ್ವಪಚರ ಗಂಡಿನ ಸಂಪರ್ಕದಿಂದ, ಬ್ರಾಹ್ಮಣ ಗಂಡು ಶ್ವಪಚರ ಹೆಣ್ಣಿನ ಸಂಪರ್ಕದಿಂದ ಹುಟ್ಟಿದ ಸಂತಾನವನ್ನು ಒಂದು ಕಡೆ ಉಲ್ಲೇಖಿಸಿದ್ದಾನೆ.[೧೦]

ಜಾತಿಗಳಲ್ಲೆಲ್ಲ ಮೊದಲಿಂದ ತನ್ನ ಶುದ್ಧಿಯನ್ನು ಉಳಿಸಿಕೊಂಡಿರುವುದು ಬ್ರಾಹ್ಮಣಜಾತಿ ಮಾತ್ರ. ಇದಕ್ಕೆ ಕಾರಣ, ಬ್ರಾಹ್ಮಣ್ಯದಿಂದ ಹೊರಬರಬಹುದೇ ಹೊರತು ಬ್ರಾಹ್ಮಣ್ಯಕ್ಕೆ ಅನ್ಯರಿಗೆ ಪ್ರವೇಶವಿಲ್ಲ. ಇದು ಅಂದಿಗೂ ನಿಜವೆಂಬುದಕ್ಕೆ ಸಾನಂದ ಚರಿತೆಯಲ್ಲಿ ಸೂಚನೆಯಿದೆ.[೧೧] ಕೆಳಜಾತಿಯವನನ್ನು ಏನು ಮಾಡಿದರೂ ಮೇಲುಜಾತಿಯವನನ್ನಾಗಿ ಮಾಡಲು ಸಾಧ್ಯವಿಲ್ಲವಾದರೂ 'ಬಡಗಿ' ಮಾಚಲದೇವಿಯನ್ನು ಕುಲಜೆಯನ್ನಾಗಿ ಪರಿವರ್ತಿಸಲು ಬ್ರಾಹ್ಮಣರು ಯತ್ನಿಸಿದುದನ್ನು ಆ ಸಂದರ್ಭದಲ್ಲಿ ಅವರು ಬಲಿಯಾಗಿ ಕೊಟ್ಟ ಪಶುವನ್ನು ಹಂಚಿಕೊಂಡು ತಿಂದುದನ್ನು ವಚನಕಾರರು ಉಲ್ಲೇಖಿಸಿದ್ದಾರೆ.[೧೨] ಮಾಚಲದೇವಿಯ ಕತೆಯ ಮೂಲವೇನೋ ತಿಳಿಯದು. ಬ್ರಾಹ್ಮಣರು ಶೂದ್ರನನ್ನು ಬ್ರಾಹ್ಮಣನನ್ನಾಗಿ ಮಾಡಲು ಶೂದ್ರನನ್ನು ಚಿನ್ನದ ಎತ್ತಿನಲ್ಲಿ ಹೊಗಿಸಿ ಹೊರಬರುವಂತೆ ಮಾಡುತ್ತಿದ್ದುದನ್ನು ಬಸವಣ್ಣ ಉಲ್ಲೇಖಿಸಿದ್ದಾನೆ.[೧೩] (ಮಾಚಲದೇವಿಯನ್ನು ಕುಲಜೆಯನ್ನಾಗಿ

---

೯. ''ಅರಸಿನ ಹೆಸರಿಟ್ಟ ಅನಾಮಿಕನಂತೆ ನಾಮಕ್ಕರುಹರಲ್ಲದೆ ಪಟ್ಟಕ್ಕರುಹರಪ್ಪರೆ?'' – ಚನ್ನಬಸವಣ್ಣನವರ ವಚನಗಳು, ವಚನ ೬೪; ''ಚಾಂಡಾಲಂಗೆ ಜ್ಞಾನವಂಕುರಿಸಿದರೆ ಆತನ ಅಂತರಂಗದ ವೃತ್ತಿಗೆ ಪೂಜ್ಯತೆಯಲ್ಲದೆ ಬಹಿರಂಗದ ತನುವಿಗೆ ಪೂಜ್ಯತೆಯಾಗದು'' – ಅದೇ, ವಚನ ೯೭.

೧೦. ಸಕಲಪುರಾತನರ ವಚನಗಳು II, ಪು. ೭೫.

೧೧. ಸಾನಂದಚರಿತೆ, ಸಂ: ಎಸ್. ಬಸಪ್ಪ, ಮೈಸೂರು, ೧೯೭೫, ಪು. ೬೧-''ವಿಭೂತಿಯಿಂ ತಳಿದೊಡೆ ಭಕ್ತನಂ ಮಾಡಬಹುದು ಬ್ರಾಹ್ಮಣನಂ ಮಾಡಬಹುದೆಯೆಂದು ಗಳಪುವರಿಗೆ ಪ್ರತ್ಯಯವಂ ತೋಱುವ ಪ್ರಕರಣಂ''. ವಿಭೂತಿಯಿಂದ ಅಬ್ರಾಹ್ಮಣನನ್ನು ಬ್ರಾಹ್ಮಣನನ್ನಾಗಿ, ಬ್ರಾಹ್ಮಣನನ್ನು ಬ್ರಹ್ಮರ್ಷಿಯಾಗಿ ಮಾಡಲು ಸಾಧ್ಯವೆಂಬುದು ಕುಮಾರ ಪದ್ಮರಸನ ಅಭಿಪ್ರಾಯ.

೧೨. ಉರಿಲಿಂಗಪೆದ್ದಿಗಳ ವಚನಗಳು, ವಚನ ೨೦೭; ಬಸವಣ್ಣನವರ ಷಟ್ಸ್ಥಲದ ವಚನಗಳು, ವಚನ ೫೮೨.

೧೩. ''ಹಾರುವರೆಲ್ಲರೂ ನೆರೆದು ಶೂದ್ರನ ಹಾರುವನ ಮಾಡುವಲ್ಲಿ ನಂದಿಮುಖವಲ್ಲದೆ ಮಾಡಲಾಗದು,

ಮಾಡುವಾಗಲೂ ''ಹೊನ್ನ ಕಪಿಲೆಯ ರಾವಣಶಾಖದ ಉಚ್ಚಿಷ್ಟದ ಹಾಲಿನಿಂದ ಕೂಳ''ನ್ನು ಅಡಿಗೆಮಾಡಿ ಬ್ರಾಹ್ಮಣರು ಉಂಡುದನ್ನು ಬಸವಣ್ಣ ಉಲ್ಲೇಖಿಸಿದ್ದಾನೆ). ಈ ಸಾಮಾಜಿಕ ಮೇಲ್ಚಲನೆ (social mobility) ಅಂದಿನ ದಿನಗಳಲ್ಲಿದ್ದುದೋ ಪೌರಾಣಿಕ ಕತೆಗಳಲ್ಲಿದ್ದುದೋ ಹೇಳುವುದು ಕಷ್ಟ. ಶೂದ್ರನನ್ನು ಕ್ಷತ್ರಿಯನನ್ನಾಗಿ ಮಾಡಿದ್ದಕ್ಕೆ ಐತಿಹಾಸಿಕ ನಿದರ್ಶನಗಳಿವೆ (ಉದಾ: ಶಿವಾಜಿ). ಶೂದ್ರನನ್ನು ಬ್ರಾಹ್ಮಣನನ್ನಾಗಿ ಮಾಡಿದ್ದಕ್ಕೆ ನಿದರ್ಶನಗಳು ಇಲ್ಲ.

## ಜಾತಿಗಳ ಸಮಾನತೆ

ವಚನಕಾರರು ಜಾತಿಗಳ ಸ್ವರೂಪವನ್ನು ಬಲ್ಲವರಾಗಿದ್ದುದರಿಂದ ಅವು ಹೋಗಬೇಕು ಎಂಬ ಅಸಾಧ್ಯ ಆದರ್ಶವನ್ನು ಎತ್ತಿಹಿಡಿಯುವುದಕ್ಕಿಂತ ಅವುಗಳ ಮಧ್ಯದ ಅಸಮಾನತೆ ಹೋಗಬೇಕೆಂದು ಬಯಸಿದರು. ಸಮಾನತೆಯನ್ನು ಪ್ರತಿಪಾದಿಸುವ ಒಂದು ಮಾರ್ಗ ಅವರಿಗೆ ಕಾಣಿಸಿದ್ದು ಜಾತಿಗಳಲ್ಲಿ ಉತ್ತಮವೆಂದು ಭಾವಿತವಾಗಿದ್ದ ಬ್ರಾಹ್ಮಣ್ಯದ ಪ್ರಾಶಸ್ತ್ಯದ ಅಪಮೌಲ್ಯೀಕರಣ. ಅದರ ಜೊತೆಗೆ, ಜಾತಿಶ್ರೇಣಿಯ ಇನ್ನೊಂದು ತುದಿಯಲ್ಲಿದ್ದ ಅಸ್ಪೃಶ್ಯನು ಬ್ರಾಹ್ಮಣನಿಗಿಂತ ಕೀಳಲ್ಲ ಎಂದು ಸ್ಪಷ್ಟೋಕ್ತಿಗಳಲ್ಲಿ ಸಾರಿದರು. ಇಲ್ಲಿ ಬ್ರಾಹ್ಮಣ ದ್ವೇಷ ಕಾಣುತ್ತದೆಯೆನ್ನುವುದಕ್ಕಿಂತ ಅವರ ಜನ್ಮಲಬ್ಧ ಶ್ರೇಷ್ಠತೆಯ ನಿರಾಕರಣೆಯ ಮೂಲಕ ಕೆಳಗಿನ ಜಾತಿಯವರಲ್ಲಿ ಆತ್ಮವಿಶ್ವಾಸವನ್ನು ಮೂಡಿಸುವ ಪ್ರಯತ್ನವಿದೆಯೆಂದು ಭಾವಿಸುವುದು ಹೆಚ್ಚು ಉಚಿತ. ಒಂದು ವ್ಯವಸ್ಥೆಯನ್ನು ಭಂಗಗೊಳಿಸಲು ಇರುವ ನೇರ ಸುಲಭಮಾರ್ಗವೆಂದರೆ ಅದರ ಸಂಕೇತವನ್ನು ಭಂಗಗೊಳಿಸುವುದು. ಬ್ರಾಹ್ಮಣ ಅಂದಿನ ಜಾತಿ ವ್ಯವಸ್ಥೆಯ ಸಂಕೇತವಾಗಿದ್ದ. ಅಂತಹ ಭಂಗಕ್ಕೆ ಅನುಸರಿಸಿದ ತಂತ್ರಗಳು ಹೀಗಿವೆ.

### ೧. ವರ್ಣಗಳಿಗೆಲ್ಲಾ ಬ್ರಾಹ್ಮಣನೇ ಗುರು ಎಂಬ ಪ್ರಸಿದ್ಧೋಕ್ತಿಯ ನಿರಾಕರಣೆ

ಬಸವಣ್ಣನ ಪ್ರಕಾರ ವರ್ಣಗಳಿಗೆ ಗುರು ಶಿವಭಕ್ತರೇ ಹೊರತು ಬ್ರಾಹ್ಮಣರಲ್ಲ; ಬ್ರಾಹ್ಮಣನೇ ಗುರು ಎಂಬುದು ಸುಳ್ಳು.[೧೪] ಸೊಡ್ಡಳ ಬಾಚರಸನ ಪ್ರಕಾರ ವರ್ಣಗಳಿಗೆ ಬ್ರಾಹ್ಮಣನೇ ಗುರು ಎಂಬ ಮಾತು ನಿಜ. ಬ್ರಾಹ್ಮಣ ಎಂದರೆ ಶಿವ. ಬ್ರಹ್ಮ, ವಿಷ್ಣು, ಮಹೇಶ್ವರ, ಇಂದ್ರ ಇವರು ನಾಲ್ಕು ಜಾತಿಗಳಿಗೆ ಸಲ್ಲುತ್ತಾರೆ. ಇವರಿಗೆಲ್ಲ ಶಿವನೇ ಅಧಿಕ ಎಂಬುದು ನಿಜ.[೧೫] ಬ್ರಾಹ್ಮಣ ಎಂದರೆ ಬ್ರಾಹ್ಮಣಜಾತಿಯಲ್ಲವಾದ್ದರಿಂದ, ಎಲ್ಲರಿಗಿಂತ ಬ್ರಾಹ್ಮಣಜಾತಿಯವನೇ ಮಿಗಿಲು ಎಂಬುದು ಸುಳ್ಳು. ವೇದಶಾಸ್ತ್ರಪುರಾಣ ಆಗಮಗಳನ್ನು ಕರಗತಮಾಡಿಕೊಂಡಿರುವ ಬ್ರಾಹ್ಮಣರು ಶ್ರೇಷ್ಠರೆಂಬ ಮಾತನ್ನು ಆಡಬೇಡಿ ಎನ್ನುತ್ತಾನೆ ಉರಿಲಿಂಗ ಪೆದ್ದಿ. ಅಸ್ಪೃಶ್ಯನಾದ

---

ವಿಭೂತಿಯಲ್ಲದೆ ಮತ್ತೇನೂ ಮಾಡಲಾಗದು, 'ಭರ್ಗೋದೇವ' ಎಂಬ ಮಂತ್ರವಲ್ಲದೆ ಮತ್ತೇನೂ ಮಾಡಲಾಗದು'' – ಬಸವಣ್ಣನವರ ಷಟ್ಸ್ಥಲದ ವಚನಗಳು, ವಚನ ೬೧೨.

೧೪. ''ವರ್ಣಾನಾಂ ಬ್ರಾಹ್ಮಣೋ ಗುರುಃ ಎಂಬುದು ಹುಸಿ, ವರ್ಣಾನಾಂ ಗುರು ನಮ್ಮ ಕೂಡಲ ಸಂಗನ ಶರಣರು'' – ಬಸವಣ್ಣನವರ ಷಟ್‌ಸ್ಥಲದ ವಚನಗಳು, ವಚನ ೫೯೯.

೧೫. ಸಕಲಪುರಾತನರ ವಚನಗಳು, ೨, ಪು. ೬೯೦ – ''ಬ್ರಾಹ್ಮಣನೆ ಅಧಿಕವೆಂದೆಂಬಿರಿ ಭೋ. ಆ ಮಾತದು ಮಿಥ್ಯ, ಬ್ರಾಹ್ಮಣನಾರೆಂದರಿಯಿರಿ. ಬ್ರಾಹ್ಮಣನೆ ಶಿವನು. ವರ್ಣಾನಾಂ ಬ್ರಾಹ್ಮಣೋದೈವವೆಂಬುದು ನಿಶ್ಚಯ. ಆ ವರ್ಣಭಾವವೆಂದಡೆ ಬ್ರಹ್ಮ ವಿಷ್ಣು ಮಹೇಶ್ವರ ಇಂದ್ರ ಈ ನಾಲ್ವರು ಜಾತಿವರ್ಗಕ್ಕೆ ಸಲುವರು. ಇಂತೀ ವರ್ಣಂಗಳೆಲ್ಲಕ್ಕೆ ಶಿವನೇ ಗುರು...ಆತ್ಮಂಗೆ ಆವ ಕುಲವುಂಟು ಹೇಳಿರೋ...''

ದೊಂಬ ಗಳೆಯಾಟ, ಮಿಣೆಯಾಟ ಇತ್ಯಾದಿ ವಿದ್ಯೆಗಳನ್ನು ಉದರಪೋಷಣೆಗಾಗಿ ಕಲಿತಂತೆ ಬ್ರಾಹ್ಮಣರೂ ಕಲಿತಿದ್ದಾರೆ. ಗುಣ, ಜ್ಞಾನ, ಧರ್ಮ, ಆಚಾರ, ಶೀಲಗಳನ್ನು ಸಾಧಿಸಿದವನೇ ಎಲ್ಲರಿಗಿಂತ ಶ್ರೇಷ್ಠ, ಹುಟ್ಟಿನಿಂದ ಬ್ರಾಹ್ಮಣನಾಗಿರುವಾತ ಅಲ್ಲ.[೧೬] ಶಿವನ ಮುಖದಿಂದ ಬ್ರಾಹ್ಮಣ ಹುಟ್ಟಿದನೆಂಬ ಮಾತನ್ನು ಉರಿಲಿಂಗ ಪೆದ್ದಿ ಒಪ್ಪಿದರೂ, ಅವನು ಕ್ಷತ್ರಿಯನನ್ನು ಆಶ್ರಯಿಸುವುದಾಗಲಿ, ಹಸು ಕೊಂದು ತಿನ್ನುವುದಾಗಲಿ ಅವನಿಗೆ ತಕ್ಕುದಲ್ಲವೆನ್ನುತ್ತಾನೆ. ಅವರ ಸಂಗ ಕೂಡದು. (''ಆಗದು ಅವದಿರ ಸಂಗ'' ವಚನ, ೨೦೭)

## ೨. ಬ್ರಾಹ್ಮಣನೂ ಅಸ್ಪೃಶ್ಯನೂ ಒಂದೇ

ಜೇಡರ ದಾಸಿಮಯ್ಯನ ಪ್ರಕಾರ ಜನಿವಾರ ಧರಿಸಿದ ಬ್ರಾಹ್ಮಣನೂ ಸಂಬಳಿಗೋಲು ಹಿಡಿದ ಅಸ್ಪೃಶ್ಯನೂ ಒಂದೇ, ಆತ್ಮದ ದೃಷ್ಟಿಯಿಂದ. ಜನಿವಾರವಾಗಲಿ ಸಂಬಳಿಗೋಲಾಗಲಿ ಆಯಾ ಜಾತಿಯ ಚಿಹ್ನೆಯಾಗಿ ಸಮಾಜ ಕಲ್ಪಿಸಿದ್ದು. ಒಂದು ವೇಳೆ ಅದು ದೈವ ನಿರ್ಮಾಣವೆಂದು ಭಾವಿಸಿದರೂ, ಅದು ಮನುಷ್ಯರಾದ ನಾವು ಬಿಡಿಸಿಕೊಳ್ಳಲೆಂದು ದೈವ ಇಟ್ಟ 'ತೊಡಕು', ಆ ತೊಡಕನ್ನು ಜಾಣರು ಬಿಡಿಸಿಕೊಳ್ಳುತ್ತಾರೆ.[೧೭] ಉರಿಲಿಂಗ ಪೆದ್ದಿಯ ಪ್ರಕಾರ ಬ್ರಾಹ್ಮಣರೂ ಹೊಲೆಯರೂ ಮಲಸೋದರರು, ಜಮದಗ್ನಿ ಋಷಿಗೆ ರೇಣುಕ ಮತ್ತು ಮಾತಂಗಿಯಲ್ಲಿ ಹುಟ್ಟಿದವರು. ಅವರು ಉತ್ತಮರೆಂದು ಅವರಲ್ಲಿ ಉಪದೇಶ ಪಡೆಯುವವನೇ 'ಅಜ್ಞಾನಿ ಹೊಲೆಯ',[೧೮] ಜಾತಿ ಹೊಲೆಯನು ಹೊಲೆಯರ ಜಾತಿಯಲ್ಲಿ ಹುಟ್ಟಿದವನು. 'ಅಜ್ಞಾನಿ ಹೊಲೆಯ' ಯಾವ ಜಾತಿಯಲ್ಲಾದರೂ ಹುಟ್ಟಬಹುದು. ಬಸವನ ಪ್ರಕಾರ ಬ್ರಾಹ್ಮಣರೂ ಮಾತಂಗಿಯ ಮಕ್ಕಳೇ, ಅವರು ಹೊಲೆಯರ ಬಸುರಲ್ಲಿ ಹುಟ್ಟಿ ಗೋಮಾಂಸ ತಿನ್ನುತ್ತಾರೆ ಎಂದು ಒಂದು ಕಡೆ ಹೇಳಿದರೆ, ಇನ್ನೊಂದು ಕಡೆ ಸ್ಪಷ್ಟವಾಗಿ ಅವರು ಮಾತಂಗಿಯ ಮಕ್ಕಳೆನ್ನುತ್ತಾರೆ. ಎಲ್ಲರಂತೆ 'ಹೊಲೆ'ಯಲ್ಲಿ ಹುಟ್ಟಿದ ಬ್ರಾಹ್ಮಣ, ಸತ್ತದ್ದನ್ನು ಎಳೆದುಹಾಕುವ ಹೊಲೆಯನನ್ನು ಹೊಲೆಯನೆಂದು ಕಡೆಗಣಿಸುವುದು ಬಸವಣ್ಣನಿಗೆ ಹಾಸ್ಯಾಸ್ಪದವಾಗಿ ಕಾಣಿಸಿದೆ. ವಿಪ್ರರು ಬದುಕಿದ ದನವನ್ನು ತಾವೇ ಕೊಲ್ಲುತ್ತಾರೆ. ಅವರು ತಾವು ಕಲಿತಂತೆ ನಡೆಯರು, ಶಾಸ್ತ್ರವೇದಗಳೊಂದೂ ಅವರಿಗೆ ಅರ್ಥವಾಗಿಲ್ಲ.[೧೯] ಹಾವಿನ

---

೧೬. ''ವೇದ ಶಾಸ್ತ್ರ ಪುರಾಣಾಗಮ ಗ್ರಂಥಗಳ ನೋಡಿದವರೆಲ್ಲರೇನು ಹಿರಿಯರೆಂಬೆನೆ? ಅಲ್ಲಲ್ಲಿ ನಿಲ್ಲು ಮಾಣು. ಅವರೇ ಹಿರಿಯರಾದಡೆ ನಟ್ಟುವ ಗಳೆಯಾಟ ಮಿಣೆಯಾಟ ಅದೃಶ್ಯಕರಣ ಅಗ್ನಿಸ್ತಂಭ ಆಕರ್ಷಣ ಜೌಷಷ್ಟಿ ಕಲಾವಿದ್ಯೆಯ ಸಾಧಿಸಿದ ಡೊಂಬನೇನು ಕಿಱಿಯನೆ? ಇದು ಹಿರಿದು ಕಿಱಿದಿನ ಪರಿಯಲ್ಲ. ಹಿರಿದು ಕಿಱಿದಿನ ಪರಿ ಬೇಱೆ ಕಾಣಿರಣ್ಣಾ. ಇವು ಉದರ ಪೋಷವಿದ್ಯೆ ಎನಿಸುವವು. ಅವರನೆಂತು ಸರಿ ಎಂಬೆನಯ್ಯ ಲಿಂಗವಂತರಿಗೆ. ಇದು ಕಾರಣ ಗುಣ ಜ್ಞಾನ ಧರ್ಮ ಆಚಾರ ಶೀಲ ಸಾಧಿಸಿದಾತನೆ ಹಿರಿಯ ಕಾಣಾ ಉರಲಿಂಗ ಪೆದ್ದಿ ಪ್ರಿಯ ವಿಶ್ವೇಶ್ವರಾ'' – ಉರಲಿಂಗ ಪೆದ್ದಿಗಳ ವಚನಗಳು, ವಚನ ೨೮೭.

೧೭. ಜೇಡರ ದಾಸಿಮಯ್ಯನ ವಚನಗಳು, ವಚನ ೩, – ''ಮಡದಿಯ ಪ್ರಾಣಕ್ಕೆ ಮೊಲೆ ಮುಡಿಯಿದ್ದಿತ್ತೆ, ಒಡೆಯನ ಪ್ರಾಣಕ್ಕೆ ಇದ್ದಿತ್ತೆ ಯಜ್ಞೋಪವೀತ, ಕಡೆಯಲಿದ್ದ ಅಂತ್ಯಜನು ಹಿಡಿದಿದ್ದನೆ ಹಿಡಿಗೋಲ. ನೀ ತೊಡಕಿಕ್ಕಿದ ತೊಡಕನೀ ಲೋಕದ ಜಡರೆತ್ತ ಬಲ್ಲರೈ ರಾಮನಾಥ.''

೧೮. ಉರಿಲಿಂಗ ಪೆದ್ದಿಗಳ ವಚನಗಳು, ವಚನ ೨೪೦.

೧೯. ''ಏನಯ್ಯಾ ವಿಪ್ರರು ನುಡಿದಂತೆ ನಡೆಯರು, ಇದೆಂತಯ್ಯಾ! ತಮಗೊಂದು ಬಟ್ಟೆ, ಶಾಸ್ತ್ರಕ್ಕೊಂದು ಬಟ್ಟೆ, ಕೂಡಲಸಂಗಮದೇವಾ, ಹೊಲೆಯರ ಬಸುಱಲ್ಲಿ ವಿಪ್ರರು ಹುಟ್ಟಿ ಗೋಮಾಂಸವ

ಹಾಳ ಕಲ್ಲಯ್ಯನ ಪ್ರಕಾರ, ಬ್ರಾಹ್ಮಣ ಮೊದಲಾಗಿ ಶ್ವಪಚ ಕೊನೆಯಾಗಿ ಎಲ್ಲರೂ ಒಂದೇ ಬಗೆಯಾಗಿ ಹುಟ್ಟಿದವರು (ಕಿವಿಯಲ್ಲಿ ಹುಟ್ಟಿದವರು ಯಾರೂ ಇಲ್ಲ ಎಂಬ ಬಸವಣ್ಣನ ಮಾತು ಜ್ಞಾಪಿಸಿಕೊಳ್ಳಬಹುದು). ಅವರಿಗೆಲ್ಲ ಆಹಾರ, ನಿದ್ರೆ, ಭಯ, ಮೈಥುನ, ಪುಣ್ಯ ಪಾಪ, ಸ್ವರ್ಗ ನರಕ ಒಂದೇ. ಜ್ಞಾನವೇ ಸತ್ಕುಲ, ಅಜ್ಞಾನವೇ ದುಃಕುಲ.[೨೦] ಅದೇ ವಚನಕಾರನ ಪ್ರಕಾರ ಗೋಮಾಂಸವನ್ನು ಬ್ರಾಹ್ಮಣನಿಂದ ಉಳಿದವರು ತಿನಕಲಿತರು.[೨೧] ಬೊಂತಾದೇವಿ ಎಂಬಾಕೆ ಹೇಳುವಂತೆ ಊರ ಒಳಗಣ ಬಯಲು, ಊರ ಹೊರಗಣ ಬಯಲು ಎಂದಾಗಲಿ, ಬ್ರಾಹ್ಮಣ ಬಯಲು ಹೊಲೆಯ ಬಯಲೆಂದಾಗಲಿ ಇಲ್ಲ, ಇರುವ ಬಯಲು ಒಂದೇ.[೨೨] ಬ್ರಾಹ್ಮಣ, ಹೊಲೆಯ ಎಂಬ ಕೇರಿಗಳು ನಾವು ಮಾಡಿಕೊಂಡಿರುವ 'ಭಿತ್ತಿ', ಕೃತಕ ಏರ್ಪಾಟು. ಹಾವಿನ ಹಾಳ ಕಲ್ಲಯ್ಯನ ಪ್ರಶ್ನೆ ಇದು – ಹೊಲ ದೊಡ್ಡದೋ ಬೀಜ ದೊಡ್ಡದೋ? ಬೀಜ ಮುಖ್ಯವೆಂದಾದರೆ ಬ್ರಾಹ್ಮಣನ ಜಾರೆಯಾಗಿ ಶ್ವಪಚನಿಂದ ಮಗುವನ್ನು ಪಡೆದರೆ ಆ ಮಗು ಉಪನಯನ, ಬ್ರಹ್ಮಚರ್ಯ, ವೇದಾಧ್ಯಯನ, ಅಗ್ನಿಹೋತ್ರ, ಯಜನ, ಯಾಜನಕ್ಕೆ ಅರ್ಹನಾಗುತ್ತಾನೆ. ಆದರೆ ವಾಸ್ತವವಾಗಿ ಅರ್ಹನಾಗಬಾರದು. ಕ್ಷೇತ್ರ ಮುಖ್ಯವೆಂದಾದರೆ ಒಬ್ಬ ಬ್ರಾಹ್ಮಣ ಚಂಡಾಲ ಸತಿಯನ್ನು ಕೂಡಿ ಅವಳಲ್ಲಿ ಮಗು ಹುಟ್ಟಿದರೆ ಆ ಮಗುವಿಗೆ ಬ್ರಾಹ್ಮಣ್ಯದ ಮೇಲಿನ ಎಲ್ಲ ಸಂಸ್ಕಾರಗಳು ದೊರಕುವುದಿಲ್ಲ; ನ್ಯಾಯವಾಗಿ ದೊರಕಬೇಕು. ಈ ಎಲ್ಲ ತೊಡಕುಗಳು ಜಾತಿಯಿಂದ ಉದ್ಭವವಾಗಿವೆ. ನಿಜವಾದ ಶಿವಭಕ್ತನಿಗೆ ಇಂತಹ ಜಾತಿ ತೊಡಕಿಲ್ಲ. ಎಲ್ಲ ಜಾತಿಯ ಜನರೂ ಗುರುಕರುಣವನ್ನು ಹೊಂದಿ ಶುದ್ಧರಾಗುತ್ತಾರೆ, ಅವರು ಮಾತ್ರ ಎಲ್ಲ ಬಗೆಯ ಸಂಸ್ಕಾರಗಳಿಗೆ ಅರ್ಹರು.[೨೩]

## ೩. ಭಕ್ತನಾದ ಹೊಲೆಯ ಬ್ರಾಹ್ಮಣನಿಗಿಂತ ಶ್ರೇಷ್ಠ

ಸಂಗಮೇಶ್ವರ ಅಪ್ಪಣ್ಣನ ಅಭಿಪ್ರಾಯದಲ್ಲಿ ಬ್ರಾಹ್ಮಣರು ವೇದಗಳನ್ನು ಬಲ್ಲವರಾದರೂ ಭಕ್ತಿಪಥ ಅವರಿಗೆ ತಿಳಿಯದು. ಹಾಲಿನೊಳಗಣ ಸೌಟಿನಂತೆ; ಸೌಟಿಗೆ ಹಾಲಿನ ರುಚಿ ಗೊತ್ತಾಗದು. ಅವರು ಓದಿದ ವೇದಗಳ ಸಾರವನ್ನು (ವೇದಗಳನ್ನು ಓದದ) ಮಾದಾರ ಚನ್ನಯ್ಯ, ಮಾಡಿವಾಳ ಮಾಚಯ್ಯ, ಡೋಹರ ಕಕ್ಕಯ್ಯಗಳು ಬಲ್ಲರು. ''ಶ್ವಪಚನಾದಡೇನು ಶಿವಭಕ್ತನೆ ಕುಲಜನೆಂಬುದು''.[೨೪] ಸಕಲೇಶಮಾದರಸ (ವಚನ. ೧೧೬) ಶಿವಭಕ್ತರು ತಮ್ಮ

---

ತಿಂಬುವರೆಂಬುದಕ್ಕೆ ಇದೆ ದೃಷ್ಟ'' (ಬಸವಣ್ಣನವರ ಷಟ್ಸ್ಥಲದ ವಚನಗಳು, ವಚನ ೫೭೪); ''ಹೊಲೆಯೊಳಗೆ ಹುಟ್ಟಿ ಕುಲವನಱಿವಸವ ಎಲವೋ ಮಾತಂಗಿಯ ಮಗ ನೀನು. ಸತ್ತುದನೆಳೆವನೆತ್ತಣ ಹೊಲೆಯ? ಹೊತ್ತು ತಂದು ನೀವು ಕೊಲುವಿರಿ. ಶಾಸ್ತ್ರವೆಂಬುದು ಹೋತಿಂಗೆ ಮಾರಿ, ವೇದವೆಂಬುದು ನಿಮಗೆ ತಿಳಿಯದು...'' (ಅದೇ ವಚನ ೫೭೫)

೨೦ ಸಕಲ ಪುರಾತನರ ವಚನಗಳು, ೨, ಪು. ೭೨೪, ''ಬ್ರಾಹ್ಮಣ ಮೊದಲಾಗಿ ಶ್ವಪಚ ಕಡೆಯಾಗಿ ಎಲ್ಲರಿಗೂ ಜನನವೊಂದೆ, ಆಹಾರ ನಿದ್ರೆ ಭಯ ಮೈಥುನ ಒಂದೆ. ಪುಣ್ಯಪಾಪವೊಂದೆ ಸ್ವರ್ಗ ನರಕ ಒಂದೆ. ಬೇಱೆಂಬ ಭಂಗಿತರು ನೀವು ಕೇಳಿರೆ. ಅಱುವೇ ಸತ್ಕುಲ, ಮಱವೇ ದುಃಕುಲ...''

೨೧ ದೇ, ಪು. ೭೫೧.

೨೨ ಶಿವಶರಣೆಯರ ವಚನಗಳು, ಪು. ೩೩೭ – ''ಊರ ಒಳಗಣ ಬಯಲು ಊರ ಹೊರಗಣ ಬಯಲುಂಟೆ? ಎಲ್ಲಿ ನೋಡಿದಡೆ ಬಯಲೊಂದೆ. ಭಕ್ತಿಯಿಂದ ಒಳ ಹೊಱಗೆಂಬ ನಾಮ ವೈಸೆ. ಎಲ್ಲಿ ನೋಡಿದಡೆ ಕರೆದಡೆ ಓ ಎಂಬಾತನೆ ಬಿಡಾಡಿ''

೨೩. ಸಕಲಪುರಾತನರ ವಚನಗಳು ೨, ಪು. ೭೨೫

೨೪. ಸಕಲಪುರಾತನರ ವಚನಗಳು ೩, ಪು. ೨೨೯, ೩೦೦

ಏಕಾಂತದ ಪೂಜಾ ಸಮಯದಲ್ಲಿ ತೆರೆಯನ್ನು ಕಟ್ಟಬೇಕೆಂದೂ ಪಾಪಿ, ಕೋಪಿ, ಶಿವಾಚಾರ ಭ್ರಷ್ಟ, ಅಧಿಕಾರ ನಡಸುವಾತ ('ಆಳಿಗೊಂಬವನು), ವೈದಿಕವಿಪ್ರ, ಕೆಟ್ಟ ದೃಷ್ಟಿಯವನು, ಅನಾಚಾರಿ, ಮೂರ್ಖ, ಗುರುನಿಂದಕ ಇವರ ಕಣ್ಣಿಗೆ ಅವನ ಪೂಜೆ ಬೀಳಬಾರದೆಂದು ಹೇಳುವಲ್ಲಿ, ಬ್ರಾಹ್ಮಣನನ್ನು ಯಾವ ಮಟ್ಟದಲ್ಲಿ ಇಡುತ್ತಾನೆಂಬುದನ್ನು ಗಮನಿಸಬೇಕು. ಆ ದೂರವಿಡಬೇಕಾದ ಜನರ ಪಟ್ಟಿಯಲ್ಲಿ ಅಸ್ಪೃಶ್ಯರ ಹೆಸರಿಲ್ಲದಿರುವುದನ್ನು ಗುರುತಿಸಬೇಕು.

ಅಸ್ಪೃಶ್ಯ ಜಾತಿಯ ಕಾಳವ್ವೆ ಪ್ರಕಾರ, ಹಾಲು ಕೊಡುವ ಹಸುವನ್ನು ತಿನ್ನುವ ಬ್ರಾಹ್ಮಣನಿಗಿಂತ (ಸತ್ತ ಹಸು) ತಿನ್ನುವ ಹೊಲೆಯ ಮಾದಿಗರು ಹೇಗೆ ಕೀಳಾಗುತ್ತಾರೆ? ಬ್ರಾಹ್ಮಣ ತಿಂದುದು ನಾಯಿ ನೆಕ್ಕಿ ನೋಯಿತು, ಹುಲ್ಲಿಗೆ ಗೊಬ್ಬರವಾಯ್ತು. ಮಾದಿಗರು ಉಂಡುದು ಹುಲ್ಲಿಗೂ ಶೋಭಿತವಾಯಿತು, ಬ್ರಾಹ್ಮಣನಿಗೂ ಶೋಭಿತವಾಯಿತು, ಏಕೆಂದರೆ ಬ್ರಾಹ್ಮಣರು ಅವರು ಮಾಡಿದ ಸಗ್ಗಳೆಯಲ್ಲಿನ (=ಚರ್ಮದ ಚೀಲ) ನೀರು ತುಪ್ಪ ಶುದ್ಧವೆಂದು ಕುಡಿಯುತ್ತಾರೆ.[೨೫] ಬೇರೆ ಬೇರೆ ಯುಗಗಳಲ್ಲಿ ಉದ್ದಕ್ಕೂ ಮಾಂಸ ತಿನ್ನುತ್ತ ಬಂದಿರುವ ಒಂಟ ಬ್ರಾಹ್ಮಣನನ್ನು ಕಂಡು ಶರಣಾರ್ಥಿ ಎಂದರೆ ಮುಂದೆ ಚಿರಕಾಲ ಹಂದಿಯ ಹೊಟ್ಟೆಯಲ್ಲಿ ಹುಟ್ಟುತ್ತಿರಬೇಕಾಗುತ್ತದೆ ಎನ್ನುತ್ತಾಳೆ ಆಕೆ.[೨೬] ವೀರಶಂಕರ ದಾಸಯ್ಯ ಎಂಬಾತ ಏಳೂವರೆ ಪುಟಗಳ ಸುದೀರ್ಘ ವಚನದಲ್ಲಿ[೨೭] ಅದೇ ಭಾವವನ್ನು ವ್ಯಕ್ತಪಡಿಸಿದ್ದಾನೆ. ಬ್ರಾಹ್ಮಣರ ಪ್ರಕಾರ ಹುಟ್ಟಿದ ಯಾವುದೇ ಮಗು ಹೊಲೆಯ, ತಾಯಿ ಹೊಲತಿ; ಹನ್ನೆರಡು ದಿನ ತಾಯಿಮಗುವಿಗೆ ಶುದ್ಧಿಮಾಡುತ್ತಾರೆ. ಮುಂಜಿ ಮಾಡುವ ಮುನ್ನ ಎಲ್ಲರೂ ಕೀಳು, ಬಳಿಕ ಮೇಲು ಎನ್ನುತ್ತಾರೆ. ''ಅಪವಿತ್ರ ಕಾಯಕ್ಕೆ ಕುಲವಿಲ್ಲ''. ದೇಹಕ್ಕೆ ಕುಲವಿದ್ದರೆ ಕೀಳುಜಾತಿಯ ದೇಹದಲ್ಲಿ ರಕ್ತ, ಮೇಲುಜಾತಿಯ ದೇಹದಲ್ಲಿ ಹಾಲು ಇರಬೇಕು.[೨೮] ಆದರೆ ಎಲ್ಲರ ದೇಹವೂ ಒಂದೇ. ಮಟ್ಟೆಯನ್ನು ಧರಿಸಿ ವಿಷ್ಣುವನ್ನು ಪೂಜಿಸಿ ಮುಡುಹನ್ನು ಸುಡಿಸಿಕೊಳ್ಳುವುದರಿಂದ ಬ್ರಾಹ್ಮಣರೇ ಡೋಹರ ಮುಂತಾದ ಹೀನಜಾತಿಗಳು, ಅವರಿಗಿಂತ ''ಏಳು ಬೆಲೆ ಹೊರಗಾದ ಹೊಲೆಯನೆ ಉತ್ತಮ ಕುಲಜ.''[೨೯] ''ಶಿವಭಕ್ತರೆ ಕುಲಜರು''.

## ೪. ಭಗವಂತನೇ ಹೊಲೆಯರ ಶ್ರೇಷ್ಠತೆಯನ್ನು ತೋರಿದ್ದಾನೆ

ಶಿವನೇ ಮಾದಾರ ಚನ್ನಯ್ಯನ ಮನೆಯಲ್ಲಿ ಉಣ್ಣುವ ಮೂಲಕ ಹೊಲೆಯರ ಶ್ರೇಷ್ಠತೆಯನ್ನು ತೋರಿದ್ದಾನೆ. ಹಾವಿನಹಾಳ ಕಲ್ಲಯ್ಯ[೩೦]ನ ಪ್ರಕಾರ ''ಬಲ್ಲಿದ ನಡೆದುದೇ ಬಟ್ಟೆ'', ಶ್ರೇಷ್ಠರು ನಡೆದುದೇ ದಾರಿ, ವೇದ ಅಲ್ಲ. ಮಾದಾರ ಚನ್ನಯ್ಯನ ಭಕ್ತಿಮಾರ್ಗವೇ ಮಾರ್ಗ.

---

೨೫. ಶಿವಶರಣೆಯರ ವಚನಗಳು, ಪು. ೩೯೧.

೨೬. ಅದೇ.

೨೭. ಸಕಲಪುರಾತನರ ವಚನಗಳು. ೩, ಪು. ೨೭೨.

೨೮. ಬಸವಣ್ಣ ಹೊಲೆಯ ಶಿವನಾಗಿಮಯ್ಯನ ದೇಹದಲ್ಲಿ ಹಾಲು, ಬ್ರಾಹ್ಮಣನ ದೇಹದಲ್ಲಿ ರಕ್ತ. ಕೀವು ಇದೆಯೆಂದು ತೋರಿಸುವುದರ ಮೂಲಕ ಶಿವನಾಗಿಮಯ್ಯನ ಶ್ರೇಷ್ಠತೆಯನ್ನು ಸ್ಥಾಪಿಸಿದನೆಂಬ ಪವಾಡವನ್ನು ಹರಿಹರ ನಿರ್ಮಿಸಿದ್ದಾನೆ. ಹರಿಹರನದು ಕಲ್ಪಿತ ಪವಾಡ: ಆದರೆ ವೀರ ಶಂಕರದಾಸಿಮಯ್ಯನದು ವಾಸ್ತವ ದೃಷ್ಟಿ.

೨೯. ಸಮಯಪರೀಕ್ಷೆಯ (೧೧-೧೦೩) ಮಾತನ್ನು ನೋಡಿದರೆ, ಇದರ ಪಾಠ ''ಏಳು ಬೇಲಿ ಹೊರಗಾದ ಹೊಲೆಯನೆ'' ಎಂದಿರಬೇಕು. ಈ ಬಗ್ಗೆ ಹಿಂದೆ ಆಗಲೆ ಪ್ರಸ್ತಾಪ ಬಂದಿದೆ.

## ೫. 'ಬ್ರಾಹ್ಮಣ' ಮಾತಿಗೆ ಬೇರೊಂದು ಅರ್ಥ

ಉರಿಲಿಂಗ ಪೆದ್ದಿಯ ವ್ಯಾಖ್ಯಾನದ ಪ್ರಕಾರ, ಬ್ರಾಹ್ಮಣ ಶಬ್ದ ಜಾತಿವಾಚಕವಲ್ಲ, ಅವನ ವಾದವನ್ನು ಹೀಗೆ ಸಂಗ್ರಹಿಸಬಹುದು:[೩೧]

ಬ್ರಾಹ್ಮಣನ ಮಗ ಬ್ರಾಹ್ಮಣ, ಕ್ಷತ್ರಿಯನ ಮಗ ಕ್ಷತ್ರಿಯ, ವೈಶ್ಯನ ಮಗ ವೈಶ್ಯ. ಶೂದ್ರನ ಮಗ ಶೂದ್ರ.

ಶ್ರುತಿಯು ''ಮಹಾಬ್ರಾಹ್ಮಣಂ ಈಶಾನಂ'', ''ವಿರೂಪಾಕ್ಷಂ ದ್ವಿಜೋತ್ತಮಂ'' ಇಂತಹ ಮಾತುಗಳ ಮೂಲಕ ಶಿವನೇ ಮಹಾಬ್ರಾಹ್ಮಣ ಎನ್ನುತ್ತದೆ.

ಶಿವರಹಸ್ಯ ''ಗುರುದೇವೋ ಮಹಾದೇವೋ'' ಎನ್ನುತ್ತದೆ. ಎಂದರೆ ಗುರುವೇ ಶಿವ.

ಗುರುವಿನ ಕರಕಮಲದಲ್ಲಿ ಹುಟ್ಟಿದ ಶಿಷ್ಯ ಅವನಿಗೆ ಮಗನಾಗಬೇಕು. ಆದ್ದರಿಂದ, ಆ ಶಿಷ್ಯ ಯಾವ ಜಾತಿಯವನಾದರೂ ಬ್ರಾಹ್ಮಣನೇ.

ಮೇಲಿನ ತರ್ಕವನ್ನು ಹೀಗೆ ವಿವರಿಸಬಹುದು. ಶಿಷ್ಯನು ಗುರುವಿನ ಕರಸಂಜಾತನಾದ್ದರಿಂದ ಅವನಿಗೆ ಮಗನಾಗಬೇಕು. ಆ ಕಾರಣ ಗುರುವಿನ ಜಾತಿಯೇ ಶಿಷ್ಯನ ಜಾತಿ. ಗುರುವು ಶಿವನೇ ಸರಿ. ಶಿವನ ಜಾತಿಯೇ ಗುರುವಿನ ಜಾತಿ. ಶಿವನನ್ನು ಮಹಾಬ್ರಾಹ್ಮಣ ಎಂದು ವೇದ ಕರೆದಿದೆ, ಆ ಕಾರಣ ಶಿವನು ಬ್ರಾಹ್ಮಣ, ಎಂದರೆ ಶಿಷ್ಯನೂ ಬ್ರಾಹ್ಮಣನೇ. ಲಿಂಗವಂತ ಶಿವಭಕ್ತರೆಲ್ಲರೂ, ಅವರು ಯಾವ ಜಾತಿಗೆ ಸೇರಿದ್ದರೂ, ಬ್ರಾಹ್ಮಣರೆನ್ನಿಸಿಕೊಳ್ಳುತ್ತಾರೆ. ಅವರೆಲ್ಲ ಎಲ್ಲ ದೃಷ್ಟಿಯಿಂದಲೂ ಸಮಾನರು. ಹಾವಿನಹಾಳ ಕಲ್ಲಯ್ಯನ ಪ್ರಕಾರ, ಶ್ವಪಚ, ಮಚ್ಚಿಗ, ಬೋಯ, ಅಗಸ, ಕಮ್ಮಾರ, ನಾವಿದರೂ ಲಿಂಗಭಕ್ತರಾದ ಕಾರಣ ಅವರು 'ದ್ವಿಜರು' ಮತ್ತು ಕುಲಜರು.[೩೨]

## ೬. ಭಕ್ತ ಹೊಲೆಯರು ಉಳಿದವರಿಗೆ ಸಮಾನ ಅಥವಾ ಇನ್ನೂ ಶ್ರೇಷ್ಠ

ಬಸವಣ್ಣನ ವಾದ ಹೀಗಿದೆ:[೩೩] ಚಕ್ರವರ್ತಿ ಒಂದು ಹೊಲಗೇರಿಯಲ್ಲಿ ಬಂದು ಬೀಡು ಬಿಟ್ಟರೆ ಅದು ಹೊಲಗೇರಿ ಎಂದು ಅನ್ನಿಸಿಕೊಳ್ಳುವುದಿಲ್ಲ. (ಅದು ಶುದ್ಧವಾಗುತ್ತದೆ, ಆ ಕ್ಷಣಕ್ಕೆ ರಾಜಧಾನಿಯೆನ್ನಿಸಿಕೊಳ್ಳುತ್ತದೆ.) ಅಂತೆಯೇ ಲಿಂಗವನ್ನು ಧರಿಸಿದ ಯಾವನೇ ಆಗಲಿ ಅವನು ಪವಿತ್ರನಾಗುತ್ತಾನೆ, ಅವನ ಮನೆ 'ವಾರಣಾಸಿ' ಆಗುತ್ತದೆ. ಜಾಬಾಲ ಶ್ರುತಿಯೇ

---

೩೦. ''ಹಾ ಹಾ ವೇದವ ತತ್ವವಾದಡೆ ಮಾದಾರನ ಮನೆಯಲುಂಡವನೊಬ್ಬ...ಅಕ್ಕುಲವೆಂದೊಡೆ ಹೊಕ್ಕ ಕಕ್ಕಯ್ಯಗಳ ಮನೆಯ. ಅಕ್ಕಟಾ ನಿಮ್ಮ ತರ್ಕ ಮುಕ್ಕಾಯಿತ್ತು. ಲೋಕವಜಿಯಲಿ, ಕಲ್ಲಲಿಟ್ಟು ಕಾಲಲೊದೆದರೆ ಅಲ್ಲಿ ಮೂರುತಿ ನುಡಿಯಿತ್ತಲ್ಲಯ್ಯ, ಬಲ್ಲಡಿದನು ದ್ವಿಜರು ನೀವೆಲ್ಲರು ಹೇಳಿರೆ, ಸಲ್ಲದು ನಿಮ್ಮ ನಿಮ್ಮ ವಾದ. ನಿಲಲಿ, ಬಲ್ಲಿದ ನಡೆದುದೆ ಬಟ್ಟೆ. ಮಹಾಲಿಂಗ ಕಲ್ಲೇಶ್ವರಾ ಲಿಂಗಾಚಾರಿಗಳು ನಿಸ್ಸೀಮರಯ್ಯಾ''

(ಸಕಲ ಪುರಾತನರ ವಚನಗಳು ೨, ಪು. ೭೩೧)

೩೧. ಉರಿಲಿಂಗಪೆದ್ದಿಗಳ ವಚನಗಳು, ವಚನ ೨೪೯.

೩೨. ಸಕಲ ಪುರಾತನರ ವಚನಗಳು ೨, ಪು. ೭೩೨.

೩೩. ''ಬಂದು ಬಲ್ಲಹ ಬಿಡಲು ಹೊಲಗೇರಿ ಎಂಬ ಹೆಸರೊಳವೆ?
ಅಯ್ಯಾ ಲಿಂಗವಿದ್ದವರ ಮನೆ ಕೈಲಾಸವೆಂದು ನಂಬಬೇಕು...''

— ಬಸವಣ್ಣನವರ ಷಟ್ಸ್ಥಲದ ವಚನಗಳು, ವಚನ ೬೦೭.

ಹೇಳುತ್ತದೆ-ಶಿವನನ್ನು ಒಮ್ಮೆ ನೆನೆದರೆ ಸಾಕು, ಹೊಲೆಯ ಹೊಲೆಯನಾಗಿರುವುದಿಲ್ಲ. ಅಂತಹ ವ್ಯಕ್ತಿಯೊಡನೆ ಇರುವುದು, ಜೊತೆ ಉಣ್ಣುವುದು ಶ್ರೇಯಸ್ಕರ.[೩೪] ವೇದಗಳನ್ನು ಓದಲು ಶೂದ್ರನು ಅನರ್ಹನಾದರೆ, ಭಸ್ಮವನ್ನು ಧರಿಸದ ವಿಪ್ರನು ಶಿವಪೂಜೆಗೆ ಅನರ್ಹ.[೩೫] ಶಿವಭಕ್ತಿಯ ಆಚಾರವನ್ನು ನಡೆಸುವ ವ್ಯಕ್ತಿ 'ಆವ ಜಾತಿಯಲ್ಲಾದರೂ' ಇರಲಿ, ಅಂತಹ ವ್ಯಕ್ತಿ ಬಿಟ್ಟ ಬಟ್ಟೆಯನ್ನು ಧರಿಸುವೆ, ಆತನ ಪಾದರಕ್ಷೆಯನ್ನು ತಲೆ ಮೇಲೆ ಹೊತ್ತು ಬದುಕುವೆ, ಆತನ ದಾಸನ ದಾಸನಾಗುತ್ತೇನೆ ಎನ್ನುತ್ತಾನೆ ಅಲ್ಲಮ.[೩೬] 'ಕುಲಸೂತಕ' ಬಿಡದವನು, ಅಲ್ಲಮನ ಪ್ರಕಾರ, ಭಕ್ತನಲ್ಲ.[೩೭] ಭಕ್ತರ ಕುಲವನ್ನು ಹಿಡಿದು ಹಂಗಿಸುವಾತನು ಭಕ್ತನಲ್ಲ, ಕಾಳವ್ವೆ ಪ್ರಕಾರ.[೩೮] ಶಿವಭಕ್ತ ಶ್ವಪಚನು ಮುನಿಶ್ರೇಷ್ಠ; ದ್ವಿಜರಿಂದ ಅಧಿಕ. ಶಿವಭಕ್ತಿಹೀನನಾದ ದ್ವಿಜನು ಶ್ವಪಚಾಧಮನು (''ಶ್ವಪಚೋಽಪಿ ಮುನಿಶ್ರೇಷ್ಠಃ ಶಿವಭಕ್ತ್ಯಾ ದ್ವಿಜಾಧಿಕಃ, ಶಿವಭಕ್ತಿವಿಹೀನಸ್ತು ದ್ವಿಜೋಽಪಿ ಶ್ವಪಚಾಧಮಃ'')[೩೯] ಶಿವಭಕ್ತರಾದ ವಿಪ್ರ, ಅಂತ್ಯಜ ಎಲ್ಲರೂ ಸಮಾನರು ಎನ್ನುತ್ತಾನೆ ಬಸವ.[೪೦] ಶಿವನನ್ನು ನಂಬದವನೇ ಹೊಲೆಯ (''ನಿಮ್ಮ ನಂಬದವ ಹೊಲೆಯ'') ಶಿವನನ್ನು ನಂಬಿ ಹೊಲೆಯನೋ ಮಾದಿಗನೋ ಭಕ್ತನಾದರೆ ಆತನ ಮನೆಯ ನಾಯಿಗೆ ಪಂಚಮಹಾವಾದ್ಯದ ಸನ್ಮಾನವನ್ನು ಮಾಡುತ್ತೇನೆ, 'ಉಘೇ ಚಾಂಗು ಭಲರೆ' ಎಂದು ತಾನೇ ಜಯಘೋಷ ಮಾಡುತ್ತೇನೆ ಎನ್ನುತ್ತಾನೆ,[೪೧] ಬಸವ. ಸಿದ್ಧರಾಮ ಹೇಳುತ್ತಾನೆ: ''ಕುಲದಲ್ಲಿ ಶೂದ್ರನಾದಡೇನು, ಮನದಲ್ಲಿ ಮಹಾದೇವ ನೆಲೆಗೊಂಡವನೆ ವೀರಶೈವ ನೋಡಾ''[೪೨] ಕುಲದ ಬಗ್ಗೆ ಅದೇ ವಚನಕಾರ ಕೆಲವು ಸ್ಪಷ್ಟೋಕ್ತಿಗಳನ್ನು ಹೇಳಿದ್ದಾನೆ. ಕಕ್ಕಯ್ಯ, ಚನ್ನಯ್ಯರ ಕುಲಗಳನ್ನು ನೋಡಬೇಡಿ, ''ಅವರ ನಡೆ ನೋಳ್ಪಡೆ ನಡೆಯುವರು ತ್ರಿಲೋಕದಲ್ಲಿಲ್ಲ.''[೪೩] ಮಧುವಯ್ಯ ಬ್ರಾಹ್ಮಣ, ಹರಳಯ್ಯ ಚಂಡಾಲನಾದರೂ, ಅವರ ಕುಲಗಳು ಅವರ ಸ್ನೇಹಕ್ಕೆ

---

೩೪. ಸಾನಂದ ಚರಿತ್ರೆ, ಪು. ೧೮೩

೩೫. ಅದೇ, ಪು. ೨೦೬

೩೬. ಅಲ್ಲಮನ ವಚನ ಚಂದ್ರಿಕೆ, ಸಂ.ಎಲ್. ಬಸವರಾಜು, ಮೈಸೂರು. ೧೯೬೦, ಪು. ೧೬೭

೩೭. ''ಕುಲಸೂತಕ ಉಳ್ಳನ್ನಕ್ಕ ಭಕ್ತನಲ್ಲ'' ಅದೇ, ಪು. ೧೪೩.

೩೮. ಶಿವಶರಣೆಯರ ವಚನಗಳು, ಪು. ೩೮೮ – ''ತೂಬರದ ಕೊಳ್ಳಿಯಂತೆ ಉರಿವಾತ ಭಕ್ತನೆ, ಹುಸಿದು ತಂದು ಮಾಡುವಾತ ಭಕ್ತನೆ, ಭಕ್ತರ ಕುಲವನೆತ್ತಿ ನಿಂದಿಸುವಾತ ಭಕ್ತನೆ.''

೩೯. ಸಾನಂದ ಚರಿತ್ರೆ, ಪು. ೧೪೮

೪೦. ''ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರಾದವರನೆಲ್ಲರನೊಂದೇ ಎಂಬೆ, ಹಾರುವ ಮೊದಲು ಶ್ವಪಚ ಕಡೆಯಾಗಿ ಭವಿಯಾದವರನೊಂದೇ ಎಂಬೆ'' – ಬಸವಣ್ಣನವರ ಷಟ್‌ಸ್ಥಲದ ವಚನಗಳು, ವಚನ ೭೧೦.

೪೧. ಅದೇ, ವಚನ ೫೯೪ –''ಹೊಲೆಯ ಮಾದಿಗ ಭಕ್ತನಾದರೆ ಆತನ ಮನೆಯ ಸೊಣಗಂಗೆ ಪಂಚಮಹಾವಾದ್ಯದಲ್ಲಿ ಸನ್ಮಾನವೆಯ ಮಾಡನೆ? ನೆಲವನುಗ್ಗಡಿಪೆ ಉಘೇ ಚಾಂಗು ಭಲರೆ ಎಂದು, ಕುಲದಲಧಿಕ ಹಾರುವಂಗೆ ಸಿಡಿಲ್ಬೀಳ್ವಸಲೆ. ನಿಮ್ಮ ಶರಣರ ಮಹಿಮೆ ಘನಕ್ಕೆ ಘನ ಎಲೆ ಕೂಡಲಸಂಗಮದೇವಾ, ನಿಮ್ಮ ನಂಬದವ ಹೊಲೆಯ.'' ತಮಿಳುನಾಡಿನ ಶಿವಭಕ್ತ ಚೇರಮದೊರೆ ಒಮ್ಮೆ ಸೌಳು ಮಣ್ಣು ಹೊತ್ತು ಮೈ ಬೆಳ್ಳಗಾದ ಅಗಸ ತಾನು ಅಗಸನೆಂದೇ ಹೇಳಿಕೊಂಡರೂ, ವಿಭೂತಿ ಧರಿಸಿದ ಶಿವಭಕ್ತನೆಂದು ಅವನಿಗೆ ನಮಸ್ಕರಿಸಿದನೆಂದು ಕತೆಯಿದೆ. (ಎಸ್. ವಿದ್ಯಾಶಂಕರ: ಚೇರಮನ ಕಥೆಯ ತೌಲನಿಕ ಅಧ್ಯಯನ: ಬೆಂಗಳೂರು, ೧೯೮೭, ಪು. ೯)

೪೨. ಶ್ರೀ ಸಿದ್ಧರಾಮೇಶ್ವರ ವಚನಗಳು, ವಚನ ೪೧೭

೪೩. ಅದೇ. ವಚನ ೪೧೮

ಅಡ್ಡಿಬರಲಿಲ್ಲವೆಂದು ಸಿದ್ಧರಾಮ ಸೂಚಿಸಿದ್ದಾನೆ. ದುರ್ವಾಸ ಮಚ್ಚಿಗ, ಊರ್ವಶಿ ದೇವಾಂಗನೆ, ಪರಾಶರ ಚಂಡಾಲ, ಕುಸುಮಗಂಧಿ (ಮತ್ಸ್ಯಗಂಧಿ,) ಕಬ್ಬಿಲಗಿತ್ತಿ-ಆದರೂ ಅವರು ವಂದ್ಯರು.[೪೪] ಬೇಡನಾದ ವಾಲ್ಮೀಕಿಯ "ಶ್ಲೇಷಪ್ರಸಾದವೆಲ್ಲ ಸಂಸ್ಕೃತಮಯವಾಯಿತು ಮರ್ತ್ಯಕ್ಕೆ."[೪೫] ಕುಲದ ಬಗ್ಗೆ ಹೋರಾಡುವುದು ಹಾಸ್ಯಾಸ್ಪದ.

## ೭. ದುಷ್ಟನೇ ಹೊಲೆಯ, ಅಕುಲಜ; ಶಿಷ್ಟನೇ ಸತ್ಕುಲ ಪ್ರಸೂತ

ಬಸವನ ಪ್ರಕಾರ, ಕೊಲ್ಲುವವನೇ ಮಾದಿಗ, ಹೊಲಸು ತಿನ್ನುವವನೇ ಹೊಲೆಯ. ಅವನು ಯಾವ ಜಾತಿಯವನೇ ಆಗಿರಲಿ, "ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ಕೂಡಲ ಸಂಗನ ಶರಣರೇ ಕುಲಜರು."[೪೬] ಸಿದ್ಧರಾಮನ ಪ್ರಕಾರ ಮದ್ಯಪಾನ, ಮಾಂಸಭಕ್ಷಣ, ಪರಸ್ತ್ರೀಸಂಗ, ಪರಧನಾಪಹರಣ ಮಾಡುವವನೇ ಭವಿ, ಬರಿಯ ಇಷ್ಟ-ಲಿಂಗವಿಲ್ಲದವನಲ್ಲ. ವ್ಯಕ್ತಿ ಒಮ್ಮೊಮ್ಮೆ ಬಹಿರಂಗದಲ್ಲಿ ಇಷ್ಟಲಿಂಗವಿಲ್ಲದವನಿರಬಹುದು, ಅಂತರಂಗದಲ್ಲಿ ಲಿಂಗಲೋಲುಪ್ತನಾಗಿರಬಹುದು. ನಿಜವಾದ ಮಾನವೀಯತೆ ಮತ್ತು ಭಕ್ತಿಗಳೇ ವ್ಯಕ್ತಿಯನ್ನು ಯೋಗ್ಯನನ್ನಾಗಿ ಮಾಡುವುದು.[೪೭] ಮಾದಾರ ಚನ್ನಯ್ಯ ಹೇಳುತ್ತಾನೆ-ಇರುವ ಕುಲಗಳು ಎರಡೇ: ನೀಚಕುಲ, ಶ್ರೇಷ್ಠಕುಲ. ಉತ್ತಮ ಗುಣದವರು ಶ್ರೇಷ್ಠಕುಲದವರು, ಅಧಮಗುಣದವರು ನೀಚಕುಲದವರು. ಬ್ರಹ್ಮವನ್ನರಿತವನು ಬ್ರಾಹ್ಮಣ, ಸರ್ವ ಜೀವಿಗಳನ್ನು ಕೊಲ್ಲುವವನು ಸಮಗಾರ.[೪೮] ಅದೇ ವಚನಕಾರ[೪೯] ಹೇಳುವ "ಆಚಾರವೆ ಕುಲ, ಅನಾಚಾರವೆ ಹೊಲೆ" ಎಂಬ ಮಾತೂ ಇಲ್ಲಿ ಉಲ್ಲೇಖಾರ್ಹ.

## ೮. ಮನುಷ್ಯರೆಲ್ಲ ಒಂದೇ, ಭೇದಕ್ಕೆ ಅವಕಾಶವಿಲ್ಲ

ಹೊಲೆಗೇರಿ, ಶಿವಾಲಯಗಳೆರಡೂ ಇರುವುದು ನೆಲದ ಮೇಲೆಯೇ. ಮಲ ತೊಳೆಯಲಿಕ್ಕೂ ಪೂಜೆಗೂ ಬಳಸುವುದು ಒಂದೇ ನೀರನ್ನು. ಹೀಗಿರುವಾಗ ತನ್ನನ್ನು ತಾನು ತಿಳಿದವನಿಗೆ ಹಲವು ಕುಲಗಳಿಲ್ಲ, ಇರುವುದು ಒಂದೇ ಕುಲ ಎನ್ನುತ್ತಾನೆ ಬಸವಣ್ಣ[೫೦] ("ಕುಲವೊಂದೇ ತನ್ನ ತಾನಱಿದವಂಗೆ...ನಿಲವೊಂದೇ ಕೂಡಲಸಂಗಮದೇವಾ ನಿಮ್ಮನಱಿದವಂಗೆ") ಹುಟ್ಟುವ ಎಲ್ಲ ಶಿಶುಗಳು ಹೊಲೆಯನ್ನು ಕಾಣಲೇಬೇಕು. ಎಲ್ಲರಿಗೂ ಆಶೆ ರೋಷ ವಿಷಯ ಇತ್ಯಾದಿಗಳು ಸಮಾನ. ಲೋಹವನ್ನು ಕಾಸಿ ಕಮ್ಮಾರನಾದ,

---

೪೪. ಅದೇ. ವಚನ ೫೧೯

೪೫. ಅದೇ. ವಚನ ೫೨೧

೪೬. ಬಸವಣ್ಣನವರ ಷಟ್ಸ್ಥಲದ ವಚನಗಳು, ವಚನ ೫೯೦. "ಕೊಲುವನೇ ಮಾದಿಗ, ಹೊಲಸು ತಿಂಬುವನೇ ಹೊಲೆಯ, ಕುಲವೇನೋ, ಅವಂದಿರ ಕುಲವೇನೋ, ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ನಮ್ಮ ಕೂಡಲ ಸಂಗನ ಶರಣರೇ ಕುಲಜರು."

೪೭. ಶ್ರೀ ಸಿದ್ಧರಾಮೇಶ್ವರ ವಚನಗಳು, ವಚನ ೮೨.

೪೮. "ಇಂತೀ ಜಾತಿ ಗೋತ್ರದೊಳಗಾದ ನೀಚ ಶ್ರೇಷ್ಠವೆಂಬ ಎರಡು ಕುಲವಲ್ಲದೆ ಹೊಲೆ ಹದಿನೆಂಟು ಜಾತಿಯೆಂಬ ಕುಲವಿಲ್ಲ. ಬ್ರಹ್ಮವನಱಿದಲ್ಲಿ ಬ್ರಾಹ್ಮಣ, ಸರ್ವಜೀವಹತ ಕರ್ಮಕ್ಕೊಳಗಾಗಿದ್ದಲ್ಲಿ ಸಮಗಾಱ" (ಸಕಲಪುರಾತನರ ವಚನಗಳು ೩, ಪು. ೭೪೪)

೪೯. ಅದೇ.

೫೦. ಬಸವಣ್ಣನವರ ಷಟ್ಸ್ಥಲದ ವಚನಗಳು, ವಚನ ೮೭೮.

ಅಂತೆಯೇ ವೇದವನ್ನೋದಿ ಬ್ರಾಹ್ಮಣನಾದ. ಕಿವಿಯಲ್ಲಿ ಜನಿಸಿದವರು ಯಾರೂ ಇಲ್ಲ.[೫೧] ಹೀಗಿರುವಾಗ ಮನುಷ್ಯರೆಲ್ಲಾ ಒಂದು ಎಂದು ಭಾವಿಸುವುದೇ ಸರಿಯೆನ್ನುತ್ತಾನೆ ಬಸವಣ್ಣ. ಅವರಲ್ಲಿ ತನ್ನನ್ನು, ಎಂದರೆ ತನ್ನ ಮತ್ತು ಸಮಾಜದ ಸಂಬಂಧಗಳನ್ನು, ತನ್ನ ಮತ್ತು ದೈವದ ಸಂಬಂಧಗಳನ್ನು ಅರಿತು ಉನ್ನತ ಗುರಿಯತ್ತ ಶ್ರಮಿಸುವವನು ಶ್ರೇಷ್ಠ. ಕುಲದಿಂದ ಕನಿಷ್ಠ ಶ್ರೇಷ್ಠರೆಂದು ಅಳೆಯುವುದು ಮೂರ್ಖತನ.

ಬ್ರಾಹ್ಮಣನ ಶ್ರೇಷ್ಠತ್ವ, ಅಸ್ಪೃಶ್ಯನ ಕನಿಷ್ಠತ್ವಗಳೆರಡನ್ನೂ ಉದ್ದಕ್ಕೂ ನಿರಾಕರಿಸುತ್ತ ಬಂದಿರುವುದರ ಉದ್ದೇಶಗಳು ಸ್ಪಷ್ಟವಾಗಿವೆ.

## ಮತಾಂತರ

ಹಿಂದೂ ಧರ್ಮದ ಕಕ್ಷೆಯಲ್ಲಿ ಮತಾಂತರಕ್ಕೆ ಅವಕಾಶಗಳು ಕಡಿಮೆಯಾದರೂ ಹನ್ನೆರಡನೆಯ ಶತಮಾನದ ಲಿಂಗಾಯತ ಚಳುವಳಿ ಅದಕ್ಕೆ ಅಪವಾದವಾಗಿ ತೋರುತ್ತದೆ. ಈ ಅಧ್ಯಾಯದಲ್ಲಿ, ಬೇರೆ ಬೇರೆ ಜಾತಿಗಳವರು ವಿಭೂತಿ ಧರಿಸಿ ಲಿಂಗಧಾರಣೆ ಮಾಡಿಕೊಂಡು ವೀರಶೈವ ಮತಕ್ಕೆ ಸೇರಿಕೊಂಡದ್ದನ್ನು ಉಲ್ಲೇಖಿಸಿದರೂ ಅಸ್ಪೃಶ್ಯರು ಲಿಂಗವಂತರಾದುದು, ಅದರಿಂದ ಉಂಟಾದ ಸಾಮಾಜಿಕ ಪರಿಣಾಮಗಳನ್ನು ಮುಖ್ಯವಾಗಿ ಚರ್ಚಿಸಲಾಗಿದೆ.

''ಭಕ್ತರ ಮಾಡು'', ''ಶಿವದೀಕ್ಷೆಯ ಕೊಡು'' ''ಅನುಗ್ರಹವ ಮಾಡು'', ಇವು ಮತಾಂತರಗೊಳಿಸುವುದನ್ನೂ, ''ಪುನರ್ಜಾತನಾಗು'', ''ಶಿವಲಾಂಛನವ ತಾಳು'', ''ಲಿಂಗ ಭಕ್ತನಾಗು'', ''ಅಂಗದ ಮೇಲೆ ಲಿಂಗ ಸಾಹಿತ್ಯವಾಗು'' ''ಭಕ್ತನಾಗು'' ಇವು ಮತಾಂತರ ವಾಗುವುದನ್ನೂ ಹೇಳಲು ಬಳಕೆಯಾಗಿರುವ ಪದಗಳು.

ಎಲ್ಲ ಜಾತಿಯ ಜನರೂ ಶಿವಭಕ್ತರಾದುದನ್ನು ಮಾಚಿದೇವ ಸೂಚಿಸುತ್ತಾನೆ. ಶಿವಭಕ್ತರಾದವರು ಗುರುವಿಗೆ ಕಾಣಿಕೆಯನ್ನು ಒಪ್ಪಿಸುತ್ತಿದ್ದುದನ್ನೂ ಮತಾಂತರಗೊಳಿಸುವುದನ್ನು ಲಾಭಕರ ಉದ್ಯಮವಾಗಿ ಕೆಲವಾದರೂ ಗುರುಗಳು ಪರಿಗಣಿಸಿದುದನ್ನೂ ಒಂದು ವಚನದಲ್ಲಿ ಹೇಳಿದ್ದಾನೆ.[೫೨] ಬಸವಣ್ಣನಿಂದಾಗಿ ಎಲ್ಲ ಜಾತಿಗೆ ಸೇರಿದ ಬಹು ಸಂಖ್ಯೆಯ ಜನ ಭಕ್ತರಾದ ಸಂಗತಿಯನ್ನು ಸಿದ್ಧರಾಮ ಹೇಳಿದ್ದಾನೆ.[೫೩] ಅವರಲ್ಲಿ ಅಸ್ಪೃಶ್ಯರೂ ಸೇರಿದ್ದರು. ಬಸವಣ್ಣ (''ಶ್ವಪಚೋಪಿಯಾದರೇನು ಶಿವಭಕ್ತನೇ ಕುಲಜನು''[೫೪] ''ಹೊಲೆಯ ಮಾದಿಗ

---

೫೧. ''ಹೊಲೆಗಂಡಲ್ಲದೆ ಪಿಂಡದ ನೆಲೆಗಾಶ್ರಯವಿಲ್ಲ.....ಆಶೆಯಾಮಿಷ ರೋಷ ಹರುಷ ವಿಷಯಾದಿಗಳೆಲ್ಲಾ ಒಂದೆ...ಕಾಸಿ ಕಮ್ಮಾರನಾದ, ಬೀಸಿ ಮಡಿವಾಳನಾದ, ಹಾಸನಿಕ್ಕಿ ಸಾಲಿಗನಾದ, ವೇದವನೋದಿ ಹಾರುವನಾದ. ಕರ್ಣದಲ್ಲಿ ಜನಿಸಿದವರುಂಟೆ ಜಗದೊಳಗೆ? ಇದು ಕಾರಣ ಕೂಡಲಸಂಗಮದೇವಾ ಅಂಗಸ್ಥಲವನಱಿದವನೆ ಕುಲಜನು''

ಅದೇ, ವಚನ ೫೮೯.

೫೨. ''ಹಣವಿನಾಶೆಗೆ ಹದಿನೆಂಟು ಜಾತಿಯ ತಂದು ಭಕ್ತರ ಮಾಡುವಿರಯ್ಯ'' – ಮಡಿವಾಳಯ್ಯನ ವಚನಗಳು, ವಚನ ೭.

೫೩. ಶ್ರೀ ಸಿದ್ಧರಾಮೇಶ್ವರ ವಚನಗಳು, ವಚನ ೧೨೨೧ ''ಭವಿಯ ಭಕ್ತನ ಮಾಳ್ಪುದು ಯೋಗ್ಯವೊ ಅಯೋಗ್ಯವೊ? ...ಇಲ್ಲಿ ಪರಮಗುರು ಸಂಗನಬಸವಯ್ಯ ಸರ್ವ ಜಾತಿಯ ಲಿಂಗದ ರಾಶಿ ಮಾಡಿದ ಸಿದ್ಧಾಂತ''

೫೪. ಬಸವಣ್ಣನವರ ಷಟ್ಸ್ಥಲದ ವಚನಗಳು, ವಚನ ೫೮೮

ಭಕ್ತನಾದರೆ...''[೫೫] ಚನ್ನಬಸವಣ್ಣ (''ಶ್ವಪಚನಾದಡೆಯೂ ಲಿಂಗಭಕ್ತನೆ ಕುಲಜನೆಂಬುದು'')[೫೬] ಇವರ ಮಾತುಗಳು ಅದಕ್ಕೆ ಸ್ಪಷ್ಟ ಸಾಕ್ಷಿಗಳು. ಡೋಹರ ಕಕ್ಕಯ್ಯ ಪ್ರಭುದೇವರಿಂದ ತನಗೆ ಇಷ್ಟಲಿಂಗ ದೊರೆತುದನ್ನು ಸ್ಮರಿಸಿದ್ದಾನೆ – ''ಕೊಟ್ಟನಯ್ಯ ಎನ್ನ ಕರಸ್ಥಲಕ್ಕೆ ಲಿಂಗವ''[೫೭] ಹೆಂಡದ ಮಾರಯ್ಯ ತನ್ನ ಕೊರಳಲ್ಲಿ ಲಿಂಗವಿದ್ದುದನ್ನು ತನ್ನ ವಚನವೊಂದರಲ್ಲಿ ಸೂಚಿಸಿದ್ದಾನೆ. ಮತಾಂತರದ ರಿಚುಯಲ್ಲು ಅಸ್ಪೃಶ್ಯರಿಗೇ ಬೇರೆಯಾದುದು ಇರಲಾರದು. ಹಾಗೆ ಇರಲು ಸಾಧ್ಯವೂ ಇಲ್ಲ. ಲಿಂಗವಂತರಾದ ಬಳಿಕ ಅವರು ಅಸ್ಪೃಶ್ಯರಾಗಿ ಉಳಿಯುತ್ತಿರಲಿಲ್ಲ. ಏಕೆಂದರೆ ಅಂತಹ ಅಸ್ಪೃಶ್ಯ ಶಿವಭಕ್ತರನ್ನು -ಹಿಂದೆ ಅಸ್ಪೃಶ್ಯರಾಗಿದ್ದ ಶಿವಭಕ್ತರನ್ನು-ಮೇಲ್ಜಾತಿಯ ಶಿವಭಕ್ತರು ಮನೆಗೆ ಕರೆದೊಯ್ದು ಸತ್ಕರಿಸಿದ ಕತೆಗಳಿವೆ, ಮತ್ತು ವಚನಾಧಾರಗಳೂ ಇವೆ (ಮುಂದೆ ನೋಡಿ) 'ಅಂತ್ಯಜನ ವರವೇಷ'ದಲ್ಲಿ ಬಂದ ಶಿವನನ್ನು ವರ್ಣಿಸುವಾಗ 'ಆರಾಧ್ಯ ಚಾರಿತ್ರ'ದ ಕರ್ತೃ ನೀಲಕಂಠಾಚಾರ್ಯನು ಉಳಿದಂತೆ ಎಲ್ಲ ಅಸ್ಪೃಶ್ಯರನ್ನು ವರ್ಣಿಸುವಂತೆ ವರ್ಣಿಸಿ, ಜೊತೆಗೆ ಹಣೆಯಲ್ಲಿ ವಿಭೂತಿ, ಕೊರಳಲ್ಲಿ ರುದ್ರಾಕ್ಷಿಮಾಲೆ ಮತ್ತು ಲಿಂಗ ಇದ್ದುದನ್ನು ಹೇಳುತ್ತಾನೆ.[೫೮] ಎಲ್ಲ ಹೊಲೆಯರಂತೆ ಅವನೂ ಮಿಣಿಯನ್ನು ಹಿಡಿದು ''ಸಂಬೋಳಿ'' ಎಂದು ಕೂಗುತ್ತಿದ್ದರೂ ಭಕ್ತರು ಬಂದಾಗ ಮಾತ್ರ ''ಸಜಿನಾತಿ, ಸಜಿನಾತಿ, ಸಜಿನಾತಿ'' (-ಶರಣಾರ್ಥಿ, ಶರಣಾರ್ಥಿ, ಶರಣಾರ್ಥಿ) ಎನ್ನುತ್ತಿದ್ದ. ಅವನ ಕೈಲಿ ಕೈವುಳಿ ಕತ್ತಿ ಇದ್ದುವು, ಹಳೆಯ ಚಪ್ಪಲಿಗಳನ್ನು ಹೊಲಿದು ಕೊಡುತ್ತಿದ್ದ. ಸೂರಮಾಂಬೆ ಅವನ- ಅವನು ಶಿವ ಎಂಬುದು ಅವಳಿಗೆ ತಿಳಿಯದು-ಪಾದಗಳನ್ನು ತೊಳೆದು ತೀರ್ಥವನ್ನು ಕುಡಿದಳು. ಬ್ರಾಹ್ಮಣರು ಅದನ್ನು ಕಂಡು ಹೊಲೆಯರು ಈಶ್ವರ ಭಕ್ತರ ಮನೆಯೊಳಕ್ಕೆ ಬರಬಾರದು, ಕೊನೆಗೆ ಹತ್ತಿರ ಸುಳಿಯಲೂ ಬಾರದು ಎಂದು ಆಕ್ಷೇಪಿಸುತ್ತಾರೆ. ಚೆನ್ನಯ್ಯನ ಕೆಂಭಾವಿ ಭೋಗಣ್ಣನ ಸಾಂಗತ್ಯದಲ್ಲೂ[೫೯] ಇಂತಹುದೇ ಚಿತ್ರ ಉಂಟು. ಚಂದಿಮರಸ ದೊರೆ ಹೊಲೆಯನನ್ನು ಒಳಗೆ ಸೇರಿಸಿದ ಭೋಗಣ್ಣನಿಗೆ ''ನಾಡೊಳು ಲಿಂಗವಂತರೆಲ್ಲ ಶ್ವಪಚರ ಕೂಡಿಕೊಂಬರೆ ತಮ್ಮ ಮನೆಯ'' ಎಂದು ಪ್ರಶ್ನಿಸಿದ್ದಕ್ಕೆ, ಹೌದು ಲಿಂಗವುಳ್ಳ ಶ್ವಪಚರು ಮನೆಯೊಳಕ್ಕೆ ಬರಬಹುದು ಎಂದು ಭೋಗಣ್ಣ ಉತ್ತರಿಸುತ್ತಾನೆ. ಮುಂದೆ ನಾವು ನೋಡುವಂತೆ ಬಸವಣ್ಣ ಸಂಬೋಳಿ ನಾಗಿದೇವನ ಮನೆಗೆ ಹೋಗಿ ಪ್ರಸಾದ ತೀರ್ಥವನ್ನು ಸ್ವೀಕರಿಸುತ್ತಿದ್ದ. ಲಿಂಗವಂತ ಶಿವಭಕ್ತರಲ್ಲಿ ಸ್ಪೃಶ್ಯ ಅಸ್ಪೃಶ್ಯ ಭೇದ ತಾತ್ವಿಕವಾಗಿ ಇರಲಿಲ್ಲ.

**ಅರ್ಹತೆ**

ವ್ಯಕ್ತಿ ಆಚಾರ, ವಿಚಾರ, ಉಭಯದ ವಿಚಾರ (ತಂದೆ ತಾಯಿ ವಂಶಗಳು?)

---

೫೫. ಅದೇ, ವಚನ ೫೯೫. ಇವನ್ನೂ ನೋಡಿ – ''ಮಾದರ ಶಿವಭಕ್ತನಾದರೆ' (ವಚನ ೧೩೬)'. ಹೊಲೆಯ ಹೊಲಬಿಗನಾದರೆ....' (ವಚನ ೧೩೫).

೫೬. ಚನ್ನಬಸವಣ್ಣನವರ ವಚನಗಳು, ವಚನ ೧೪೯, ಇದನ್ನೂ ನೋಡಿ – ''ಗುರುಕಾರುಣ್ಯಕಟಾಕ್ಷದಲ್ಲಿ ಉತ್ಪತ್ತ್ಯವಾದ ಅಜಾತಂಗೆ ಜಾತಿಸೂಚಕ ಜನನಸೂತಕ ಪ್ರೇತಸೂತಕ ರಜಸ್ಸೂತಕ ಉಚ್ಚಿಷ್ಟಸೂತಕವಿಲ್ಲ'' – ಅದೇ, ವಚನ ೧೨೩.

೫೭. ಎಂ. ಚಿದಾನಂದಮೂರ್ತಿ: ವಚನಸಾಹಿತ್ಯ, ಬೆಂಗಳೂರು, ೧೯೭೫, ಪು. ೧೦

೫೮. ಆರಾಧ್ಯ ಚಾರಿತ್ರ, ಸಂ. ಎಸ್. ಬಸವಾರಾಧ್ಯ, ಮೈಸೂರು, ೧೯೮೦, ೭.೭-೮

೫೯. ಕೆಂಭಾವಿ ಭೋಗಣ್ಣನ ಸಾಂಗತ್ಯ ಸಂ.: ಎಸ್. ವಿದ್ಯಾಶಂಕರ ಮತ್ತು ಎಸ್. ಶಿವಣ್ಣ ಬೆಂಗಳೂರು, ೧೯೭೮, ೨.೫-೬

ಇವುಗಳನ್ನು ಪರಿಶೀಲಿಸದೆ ಅವನಿಗೆ ಶಿವದೀಕ್ಷೆ ಕೊಡಲಾಗದು ಎನ್ನುತ್ತಾನೆ ಚನ್ನಬಸವಣ್ಣ.[೬೦] ವೇಶ್ಯೆ, ದಾಸಿ, ಸುಂಕಿಗ (-ಸುಂಕದ ಅಧಿಕಾರಿ), ಮಣಿಹಗಾರ (-ಮಣೀಗಾರ? ದೇವಾಲಯದ ಅಧಿಕಾರಿ), ವಿದ್ಯಾವಂತ ಇವರಿಗೆ ಲಿಂಗವನ್ನು ಕಟ್ಟಿದರೆ ಅದು ಗುಡಿಯ ಗಂಟೆಯಂತೆ, ಅಷ್ಟೇ ಅಲ್ಲ, ಅದು 'ಎಮ್ಮೆಯ ಕೊರಳ ಗಂಟೆ' ಎನ್ನುತ್ತಾನೆ.[೬೧] ಲಿಂಗದೀಕ್ಷೆಗೆ ಅನರ್ಹರಾದವರ ಪಟ್ಟಿಗೆ ಮದ್ಯಪಾನಿ, ಮಾಂಸಾಹಾರಿ, ಜೂಜುಗಾರ, ಅಂಗಹೀನರೂ ಸೇರುತ್ತಾರೆ.[೬೨] ಆದರೆ ಅಸ್ಪೃಶ್ಯರಿಗೆ ಲಿಂಗದೀಕ್ಷೆಯನ್ನು ನಿಷೇಧಿಸಿಲ್ಲವೆಂಬುದು ಸ್ಪಷ್ಟ. ಅಸ್ಪೃಶ್ಯನಾಗಿದ್ದರೂ ಶುದ್ಧ ಮನಸ್ಕನಾಗಿದ್ದರೆ, ಮೇಲೆ ಹೇಳಿದವರಂತೆ ವಂಚನೆಯ ಬದುಕನ್ನು ನಡಸದವನಾಗಿದ್ದರೆ ಅವನಿಗೆ ಗುರು ಲಿಂಗವನ್ನು ಕರುಣಿಸಬೇಕೆಂದೂ, ಸ್ಪರ್ಶಮಣಿಯಿಂದ ಸಾಮಾನ್ಯ ಲೋಹ ಚಿನ್ನವಾಗುವಂತೆ ಲಿಂಗದಿಂದ ಪರಿಶುದ್ಧನಾದ ಅವನನ್ನು 'ಹೊಲೆಗಂಡ' ಎಂದು ಅವನಿಂದ ಅವನ ಹೆಂಡತಿ ದೂರವಿರಬೇಕಾಗಿಲ್ಲವೆಂದೂ, ಆದರೆ ಅವಳು ಅವನಂತೆ ಲಿಂಗವನ್ನು ಪಡೆದುಕೊಳ್ಳದೆ ಲಿಂಗವನ್ನು ಪೂಜಿಸಕೂಡದೆಂದು ಸಂಗಮೇಶ್ವರ ಅಪ್ಪಣ್ಣ ವಿಧಿಸುತ್ತಾನೆ. ''ಲಿಂಗಾರ್ಚನೆಯಲ್ಲಿ ನಿರತಳಾದ ನಾರಿಯು ಪ್ರಸೂತೆಯಾಗಿರಲಿ ರಜಸ್ವಲೆಯಾಗಿರಲಿ ಸೂರ್ಯ ಬೆಂಕಿ ಗಾಳಿಗಳಂತೆ ಶುದ್ಧಳು'' ಎಂಬ ಸಂಸ್ಕೃತೋಕ್ತಿಯಂತೆ ಹೊಲತಿಯೂ ಲಿಂಗದೀಕ್ಷೆಯಿಂದ ಶುದ್ಧಳಾಗುತ್ತಾಳೆ. ಆದರೆ ''ಹೊಲೆಮನ ಬಿಡದವಂಗೆ ಗುರುಲಿಂಗವಿಲ್ಲೆಂದ ಕೂಡಲ ಚೆನ್ನಸಂಗಮದೇವ.''[೬೩] ವ್ಯಕ್ತಿ ಶುದ್ಧ ಮನಸ್ಸಿನವನಾಗದೆ ಅವನಿಗೆ ಲಿಂಗದೀಕ್ಷೆ ಕೊಡಕೂಡದೆಂಬುದು ಸಂಗಮೇಶ್ವರ ಅಪ್ಪಣ್ಣನ ತೀರ್ಮಾನ.

*ಮಧ್ಯಕಾಲೀನ ಕನ್ನಡ ಸಾಹಿತ್ಯದಲ್ಲಿ ಅಸ್ಪೃಶ್ಯತೆಯ ಪರಿಕಲ್ಪನೆ, ೧೯೮೫, ಪು.೬೯-೮೪*

---

೬೦. ಚನ್ನಬಸವಣ್ಣನವರ ವಚನಗಳು, ವಚನ ೧೦೫. ಬ್ರಾಹ್ಮಣನಿಗೆ ಮೂರು ವರ್ಷ, ಕ್ಷತ್ರಿಯನಿಗೆ ಆರು ವರ್ಷ, ವೈಶ್ಯನಿಗೆ ಒಂಬತ್ತು ವರ್ಷ. ಶೂದ್ರನಿಗೆ ಹನ್ನೆರಡು ವರ್ಷ ಕಾದು ಲಿಂಗದೀಕ್ಷೆಯನ್ನು ಕೊಡಬೇಕೆನ್ನುತ್ತಾನೆ ಚನ್ನಬಸವಣ್ಣ (ಅದೇ ವಚನ ೬೩೨.), ಅಸ್ಪೃಶ್ಯನಿಗೆ ಎಷ್ಟು ವರ್ಷವೆಂದು ಹೇಳಿಲ್ಲ.

೬೧. ಅದೇ ವಚನ ೨೦೮

೬೨. ಅದೇ ವಚನ ೪೯೫, ದೇವಾಲಯವನ್ನು ನಿರಾಕರಿಸಿದ ವಚನಕಾರರು ದೇವಾಲಯದ ಅಧಿಕಾರಗಳಿಗೆ ಲಿಂಗದೀಕ್ಷೆ ಕೊಡಬಾರದೆಂದು ಹೇಳುವುದು ಸ್ವಾಭಾವಿಕವಾಗಿದೆ. ಲಿಂಗದೀಕ್ಷೆಗೆ ಅನರ್ಹರಾದ ವಿದ್ಯಾವಂತ ಯಾರು ಎಂಬುದು ಸ್ಪಷ್ಟವಾಗುವುದಿಲ್ಲ. 'ವಿದ್ಯೆ' ಎಂದರೆ ಮಾಟ ಮಂತ್ರ ಎಂಬರ್ಥವೂ ಇರುವುದರಿಂದ 'ವಿದ್ಯಾವಂತ'ವು ಮಾಟ ಮಂತ್ರ ಬಲ್ಲ ಜನರನ್ನು ಸೂಚಿಸುವಂತೆ ತೋರುತ್ತದೆ.

೬೩. ಸಕಲ ಪುರಾತನರ ವಚನಗಳು ೩, ೩೦೪-೫

# ೬೬. ಅಕ್ಕಮಹಾದೇವಿಯ ವಚನಗಳಲ್ಲಿ ಸಮಾಜದ ಸ್ವರೂಪ: 'ಕುಟುಂಬ ವ್ಯವಸ್ಥೆಯ ಸಂಪ್ರದಾಯಸ್ಥ ನಿಲುವುಗಳ ವಿರೋಧ'

• ಬಸವರಾಜ ಕಲ್ಗುಡಿ

೧.೧ ಪ್ರಾಚೀನ ಹಾಗೂ ಮಧ್ಯಕಾಲೀನ ಭಾರತದ ಕೌಟುಂಬಿಕ ರಚನೆ ಹಾಗೂ ವೈಯಕ್ತಿಕ ಸಂಬಂಧಗಳ ಸ್ವರೂಪ.

೧.೨ ಕುಟುಂಬದ ರಚನೆಯ ಪರಂಪರಾಗತ ಸ್ವರೂಪಕ್ಕೆ ಕಾರಣವಾದ ವ್ಯಕ್ತಿ ಸಂಬಂಧಗಳ ನಿರಾಕರಣೆ.

೧.೩ ವ್ಯಕ್ತಿಗಳ ಪ್ರೇಮ ಸಂಬಂಧದಲ್ಲಿ ಹೇರಲಾದ ಒತ್ತಾಯಗಳ ನಿರಾಕರಣೆ.

೧.೪ ಹೊಸ ಪ್ರೇಮ ಸಂಬಂಧದ ಸಾಫಲ್ಯಕ್ಕಾಗಿ ಹುಡುಕಾಟಗಳು.

ಅಕ್ಕಮಹಾದೇವಿಯ ವಚನಗಳಲ್ಲಿ ಸಮಾಜವನ್ನು ಕುರಿತ ಆಲೋಚನೆಗಳನ್ನು ಸಂಸಾರದ ಸಂಬಂಧವೊಂದರಲ್ಲಿಯೇ ಮುಖ್ಯವಾಗಿ ಗಮನಿಸಬೇಕಾಗುತ್ತದೆ. ಏಕೆಂದರೆ ಅವಳ ಎಲ್ಲ ವಚನಗಳು ಮುಖ್ಯವಾಗಿ ಸಂಸಾರದ ಸ್ವರೂಪವನ್ನು ಗಮನದಲ್ಲಿಟ್ಟುಕೊಂಡಂಥವುಗಳು. ಸಂಸಾರದ ರಚನೆಯನ್ನು ರೂಪಿಸಿರಬಹುದಾದ ಅನೇಕ ರೀತಿಯ ವ್ಯಕ್ತಿಗಳ ಸಂಬಂಧಗಳು, ಮತ್ತು ಈ ಸಂಬಂಧಗಳಲ್ಲಿ ಹೊರಹೊಮ್ಮುವ ಕ್ರಿಯೆಯ ಸ್ವರೂಪಗಳು-ಇವೆಲ್ಲವುಗಳನ್ನು ಕುರಿತ ಆಲೋಚನೆ ಹಾಗೂ ಪ್ರತಿಕ್ರಿಯೆಗಳಲ್ಲಿ ಅಕ್ಕಮಹಾದೇವಿಯ ವಚನಗಳ ಲಕ್ಷಣಗಳು ಬೆಳೆಯುತ್ತವೆ.

ಅಕ್ಕಮಹಾದೇವಿಯ ಮನುಷ್ಯನ ಅಸ್ತಿತ್ವವನ್ನು ಕುರಿತ ಆಲೋಚನೆಯನ್ನು ಹಿಂದಿನ ವಿಭಾಗದಲ್ಲಿ ಈಗಾಗಲೇ ಗಮನಿಸಿದ್ದೇವೆ. ಆ ಅಧ್ಯಾಯದಲ್ಲಿ ಅಕ್ಕಮಹಾದೇವಿ ಆಶಿಸುವ ಹೊಸ ಅಸ್ತಿತ್ವವು ಮಲ್ಲಿಕಾರ್ಜುನನೊಡನೆ ಹಾರೈಸಿದ ಪ್ರೇಮದ ಹಂಬಲವೇ ಆಗಿತ್ತು ಎನ್ನುವುದನ್ನು ಗಮನಿಸಲಾಗಿದೆ. ಈ ಪ್ರೇಮದ ಆಶಯ ಹಂಬಲವೇ ಆಗಿತ್ತು ಎನ್ನುವುದನ್ನು ಗಮನಿಸಲಾಗಿದೆ. ಈ ಪ್ರೇಮದ ಆಶಯ ಅಕ್ಕಮಹಾದೇವಿಯ ಅನುಭಾವದ ಹಂಬಲವೂ ಹೌದು. ಅಂದರೆ ಲೌಕಿಕದಲ್ಲಿ ತಾನು ಇಚ್ಛಿಸಿದ ಯಾವ ಪ್ರೇಮಸಂಬಂಧವೂ ಸಾಧ್ಯವಿಲ್ಲವೆಂಬ ನಿಶ್ಚಯವು ಇವಳ ವಚನಗಳಲ್ಲಿ ಸ್ಪಷ್ಟವಾಗಿಯೇ ಕಂಡುಬರುತ್ತದೆ. ಆ ಅಧ್ಯಾಯದಲ್ಲಿ ಗುರುತಿಸಲಾದ ಇನ್ನೊಂದು ಮುಖ್ಯ ಅಂಶವೆಂದರೆ, ಅಕ್ಕಮಹಾದೇವಿಯು ಲೌಕಿಕದ ತನ್ನ ಬದುಕಿನ ಸಂಬಂಧಗಳನ್ನು ವಿವರಿಸುವಾಗಲೆಲ್ಲ ಕಾಯದ ಬಗ್ಗೆ ತೀವ್ರ ನಿರಾಸಕ್ತಿಯನ್ನು ತೋರ್ಪಡಿಸುತ್ತಾಳೆ. ಆದರೆ ಲೌಕಿಕವನ್ನು ಮೀರಿದ ಮಲ್ಲಿಕಾರ್ಜುನನ ಸಂಬಂಧದಲ್ಲಿ ಮಾತ್ರ ಕಾಯ ಮತ್ತು ಮನಸ್ಸುಗಳ ಗಾಢ ಬೆಸುಗೆಯನ್ನು ಅಪೇಕ್ಷಿಸುತ್ತಾಳೆ.

ಅನುಭಾವದ ಒಂದು ಬಗೆಯ ಸ್ವರೂಪಗಳು ಲೌಕಿಕದ ಎಲ್ಲ ಮಿತಿಗಳನ್ನು ಮೀರಬೇಕೆನ್ನುವ ಆಶಯವನ್ನು ವ್ಯಕ್ತಪಡಿಸುತ್ತವೆ. ಲೌಕಿಕದ ವಾತಾವರಣವನ್ನು ಹೋಲುವ ಯಾವುದೇ ರೀತಿಯ ಕ್ರಿಯೆ ಹಾಗೂ ಭಾವನಾಮಯ ಪ್ರಪಂಚವು ಇಲ್ಲಿ ಸಲ್ಲದು ಎನ್ನುವುದು ಈ ಸ್ವರೂಪಗಳ ಮುಖ್ಯ ವಾದ. ಏಕೆಂದರೆ ಲೌಕಿಕವು ಸೃಷ್ಟಿಸಿದ ಸಕಲ ಮಿತಿಗಳು ಹಾಗೂ ದುರಂತಗಳಿಗೆ ಇವುಗಳೇ ಕಾರಣವೆಂದು ಇವು ಅಭಿಪ್ರಾಯಪಡುತ್ತವೆ. ಇವುಗಳ ಪ್ರಕಾರ

ಲೌಕಿಕವನ್ನು, ಸಮಾಜವನ್ನು ಮೀರುವುದು ಅಂದರೆ ಹೊಸ ಬಗೆಯ ಅರಿವು, ಹುಡುಕಾಟಕ್ಕೆ ಸಿದ್ಧಗೊಂಡಂತೆ. ಇದನ್ನು ವ್ಯಕ್ತಿಯು ತನ್ನ ಏಕೈಕ ಸಾಧನೆಯಿಂದ ಸಾಧಿಸಬೇಕಾಗುತ್ತದೆ. ನಾವು ನೋಡುವಂತೆ ಅಲ್ಲಮಪ್ರಭು ಈ ಬಗೆಯ ಆಶಯುಗಳಿಂದ ಕೂಡಿದವನು. ಅಕ್ಕಮಹಾದೇವಿಯ ಅನುಭಾವದ ಸ್ವರೂಪಗಳು ಒಂದು ಅರ್ಥದಲ್ಲಿ ಲೌಕಿಕಕ್ಕೆ ಸಮಾನಾಂತರವಾದಂಥ ವಾತಾವರಣವನ್ನು ರೂಪಿಸಲು ಆಶಿಸಿದವುಗಳೇ ಆಗಿವೆ. ಪ್ರೇಮದ ಬಯಕೆ, ಪ್ರಿಯಕರನ ಸಂಗಡ ಒಡನಾಟ – ಹೀಗೆ ಇವಳು ಆಶಿಸುವ ಸಂಬಂಧಗಳು – ಲೌಕಿಕದ ಸ್ವರೂಪವನ್ನೇ ಒಳಗೊಂಡಿದ್ದರೂ, ಇದನ್ನು ಸಾಧಿಸಬೇಕೆನ್ನಿವ ವಾತಾವರಣ ಹಾಗೂ ಸಂಬಂಧಗಳು ಮಾತ್ರ ಗುಣಾತ್ಮಕವಾಗಿ ಬೇರೆ ಬೇರೆಯೇ ಆಗಿವೆ.

ಹೀಗೆ ನೋಡುವುದಾದರೆ – ಅಕ್ಕಮಹಾದೇವಿಯ ಮುಂದೆ ಎರಡು ಲೋಕಗಳಿವೆ ಎಂದು ಹೇಳಬಹುದು. ಒಂದನೆಯ ಲೋಕ ಅಥವಾ ಸಮಾಜ –ಯಾವುದನ್ನು ಇವಳು ಸ್ಪಷ್ಟವಾಗಿ ತಿರಸ್ಕರಿಸಿದಳೋ ಅದು. ಈ ತಿರಸ್ಕಾರಕ್ಕೆ ಮುಖ್ಯ ಕಾರಣವು ಆ ಸಮಾಜದಲ್ಲಿ ತಾನು ಆಶಿಸಿದ ಮಾನವೀಯ ಸಂಬಂಧಗಳು ರೂಪುಗೊಳ್ಳಲಿಲ್ಲ ಎನ್ನುವುದೂ ಆಗಿದೆ. ಈ ಲೋಕದ ಸ್ವರೂಪವನ್ನು ಅಕ್ಕಮಹಾದೇವಿಯು ಕಾಣುವುದು ಕುಟುಂಬದ ರಚನೆಯ ಸ್ವರೂಪದ ಹಿನ್ನೆಲೆಯಲ್ಲಿಯೇ ಎನ್ನುವುದನ್ನು ಗಮನಿಸಬೇಕು. ಇನ್ನೊಂದು ಲೋಕ – ಅಕ್ಕಮಹಾದೇವಿಯು ಆಶಿಸಿದ, ಹಂಬಲಿಸಿದ ಲೋಕ. ಲೌಕಿಕದ ವಾತಾವರಣದಲ್ಲಿ ಯಾವುದು ಅಸಾಧ್ಯವಾದ ಬಯಕೆಯಾಗಿತ್ತೋ ಅದು ಇಲ್ಲಿ ಕೈಗೂಡಬೇಕೆನ್ನುವ ಹಂಬಲವು ಇಲ್ಲಿ ತೀವ್ರವಾಗಿದೆ. ಆದ್ದರಿಂದಲೇ ಅಕ್ಕಮಹಾದೇವಿಯು ಒಂದು ಲೋಕದಲ್ಲಿ ಮಹಾವಿರಾಗಿಯಂತೆ ಕಂಡರೆ, ಇನ್ನೊಂದು ಲೋಕದ ಸಂಬಂಧವೊಂದರಲ್ಲಿ ಉನ್ಮತ್ತ ಪ್ರಣಯಿನಿಯಂತೆ ಕಾಣುತ್ತಾಳೆ.

## ೧.೧ ಪ್ರಾಚೀನ ಹಾಗೂ ಮಧ್ಯಕಾಲೀನ ಭಾರತದ ಕೌಟುಂಬಿಕ ರಚನೆ ಹಾಗೂ ವೈಯಕ್ತಿಕ ಸಂಬಂಧಗಳ ಸ್ವರೂಪ

ಪ್ರಾಚೀನ ಭಾರತದ ಕೌಟುಂಬಿಕ ರಚನೆಯ ಲಕ್ಷಣಗಳು ಹಾಗೂ ಅಲ್ಲಿ ಗಂಡು ಹೆಣ್ಣಿನ ನಡುವೆ ಏರ್ಪಡುವ ಪ್ರೇಮ ಹಾಗೂ ಲೈಂಗಿಕ ಸಂಬಂಧಗಳ ಸ್ವರೂಪವನ್ನು ಕುರಿತು, ವಿದ್ವಾಂಸರು ಚರ್ಚೆ ಮಾಡಿದ್ದಾರೆ. ಈ ವಿದ್ವಾಂಸರ ಅಭಿಪ್ರಾಯದಲ್ಲಿ ಭಾರತದ ಕುಟುಂಬಗಳ ರಚನೆಯ ಸ್ವರೂಪವೊಂದು ಎಷ್ಟು ಪ್ರಭಾವಶಾಲಿಯಾಗಿತ್ತೆಂದರೆ, ಕೌಟುಂಬಿಕ ಚೌಕಟ್ಟಿನೊಳಗೇ ವ್ಯಕ್ತಿಯ ಎಲ್ಲಾ ವ್ಯವಹಾರಗಳು ನಡೆಯಬೇಕು. ಕುಟುಂಬವು ಹಾಕುವ ಎಲ್ಲ ನಿಯಮ, ಸಂಪ್ರದಾಯಗಳ ನೆಲೆಗಳನ್ನು ವ್ಯಕ್ತಿಯು ಮೀರುವಂತಿಲ್ಲ. ಒಂದರ್ಥದಲ್ಲಿ ಕುಟುಂಬಕ್ಕೆ ಸೇರಿದ ವ್ಯಕ್ತಿಯು ಆ ರಚನೆಯ ಸಂವರ್ಧನೆಗೆ ದುಡಿಯಬೇಕೇ ಹೊರತು ಅದನ್ನು ಮೀರಿ ಯಾವ ಕ್ರಿಯೆಯನ್ನು ಮಾಡುವಂತಿಲ್ಲ. ಈ ಗುಣವನ್ನು ವಿವರಿಸುತ್ತ ಲೆನಾಯ್ ಹೀಗೆ ಹೇಳುತ್ತಾನೆ:

"Responsibility is shared in common rather than exercised with personal authority. The tasks of all family and caste members are precisely determined; a child first begins to reserve these by watching the highly stylized etiquette of family assembled. Duties are so arranged as to reduce the element of Individual competition (as distinct from

group competition); the ideal of the self sufficent village economy with its exchange of specialized services between the inhabittants (and a minimum exchange of cash) ensures that every man performs his alloted task, but does not excel above others.''[೧]

ವ್ಯಕ್ತಿಯ ಅಧೀನತೆಯು ಇಲ್ಲಿ ಒಪ್ಪಿಕೊಂಡಂಥ ಲಕ್ಷಣವೇ ಆಗಿಬಿಟ್ಟಿರುವುದನ್ನು ಲೆನಾಯ್ ಗುರುತಿಸುತ್ತಾನೆ. ಹೀಗೆ ಪ್ರವರ್ತಿಸುವ ಕೌಟುಂಬಿಕ ಕ್ರಿಯೆಯೊಂದರಲ್ಲಿ ಮನುಷ್ಯನ ಎಲ್ಲ ಆಲೋಚನೆ ಹಾಗೂ ಕ್ರಿಯೆಗಳು, ವ್ಯಕ್ತಿತ್ವದ ಬೆಳವಣಿಗೆ ಹಾಗೂ ಸ್ವಾತಂತ್ರ್ಯಕ್ಕಿಂತ ಅದನ್ನು ಅದುಮಿಡುವುದರ ಕಡೆಗೆ ಹೆಚ್ಚು ಒಲವನ್ನು ತೋರುತ್ತವೆ. ಕುಟುಂಬ – ಇದಕ್ಕಂಟಿದ ಜಾತಿವ್ಯವಸ್ಥೆ, ಧಾರ್ಮಿಕ ನಂಬಿಕೆ ಇವುಗಳು ವ್ಯಕ್ತಿಯ ಅಸಹಾಯಕತೆಯನ್ನು ತೋರಿಸುತ್ತವಲ್ಲದೆ, ಇಂಥ ರಚನೆಯೊಂದರ ಸಾಮರ್ಥ್ಯವನ್ನೂ ಹೇಳುತ್ತವೆ. ಹೀಗಾಗಿ ವ್ಯಕ್ತಿಯು ತನ್ನ ಕಾರ್ಯದ ಜಯವನ್ನಾಗಲೀ ಸಾಧನೆಯನ್ನಾಗಲೀ ವಿವರಿಸಿಕೊಳ್ಳುವುದು ಅವನಿಗೆ ಕುಟುಂಬದ ವ್ಯವಸ್ಥೆಯಲ್ಲಿ ನಿರ್ವಹಿಸಿದ ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸಿದಾಗಲೇ ಹೊರತು ಬೇರೊಂದು ಸಂದರ್ಭದಲ್ಲಿ ಅಲ್ಲ. ಕುಟುಂಬದ ಸಾಂಪ್ರದಾಯಕ ನಡವಳಿಕೆ, ನಂಬಿಕೆಗಳನ್ನು ಪೂರೈಸಿದಾಗಲೇ ವ್ಯಕ್ತಿಗೆ ಒಂದು ರೀತಿಯ ಅರ್ಹತೆಯು ದೊರಕಲು ಸಾಧ್ಯ. ಇಲ್ಲದಿದ್ದರೆ ಇಂಥ ವ್ಯಕ್ತಿಯನ್ನು ಅನೈತಿಕ ನಡವಳಿಕೆಯವನೆಂದೂ, ದಾರಿಗೆಟ್ಟವನೆಂದೂ ಹೇಳಲಾಗುತ್ತದೆ.

ಈ ವಾತಾವರಣವು ವ್ಯಕ್ತಿಗಳ ಪರಸ್ಪರ ವೈಯಕ್ತಿಕ ಸಂಬಂಧಗಳ ಮೇಲೆ ಮಾಡಬಹುದಾದ ಪರಿಣಾಮಗಳೆಂಥವು? ರಿಚರ್ಡ್ ಲೆನಾಯ್ ಹೇಳುವ ಪ್ರಕಾರ ಇಂಥ ವಾತಾವರಣದಲ್ಲಿ ವೈಯಕ್ತಿಕವಾಗಿ ಗಾಢ ಸಂಬಂಧಗಳು ರೂಪುಗೊಳ್ಳಲು ಸಾಧ್ಯವಿಲ್ಲ. ಅಥವಾ ಇದು ಗಾಢ ನಂಬಿಕೆಯಿಂದ ಕೂಡಿರದ, ಚಂಚಲ ಸ್ವರೂಪದ ನಡವಳಿಕೆಯಾಗಿರುತ್ತದೆ. ಲೆನಾಯ್‌ನ ಅಭಿಪ್ರಾಯವು ಹೀಗಿದೆ:

''....But it the relationship has no connection with the net work of social obligation and is based solely on mutual regard and affection, he may feel uncertain and distrustful. This hesitancy in personal relations is probably the result of the ambivalent relations of love he experienced in the bosom of his own family.''[೨]

ಲೆನಾಯ್ ವಿಶ್ಲೇಷಿಸುವ ಪ್ರಕಾರ ಕುಟುಂಬದ ಈ ಸಾಂಪ್ರದಾಯಕ ರಚನೆಯು ವ್ಯಕ್ತಿಯ ವೈಯಕ್ತಿಕ ಬೆಳವಣಿಗೆ, ಪ್ರೇಮದ ನೈಜ ಸಂಬಂಧವನ್ನು ಸಾಧ್ಯವಾಗಿಸುವ ಬದಲು ಅವನಲ್ಲಿ ಕೃತಕವಾದ ಗಾಂಭೀರ್ಯವನ್ನೂ, ನಿಷ್ಠುರ ನಡವಳಿಕೆಯನ್ನೂ ರೂಪಿಸಿತು. ಈ ಸ್ವರೂಪವು ಪಾಶ್ಚಿಮಾತ್ಯ ಸಂಸ್ಕೃತಿಯ ಬದಲಾಗುತ್ತಿರುವ ಪಟ್ಟಣದ ಕೆಲವು ಕುಟುಂಬಗಳನ್ನು ಬಿಟ್ಟರೆ ಈಗಲೂ ಬಹುಸಂಖ್ಯೆಯ ಕುಟುಂಬ ರಚನಾ ವಿನ್ಯಾಸದಲ್ಲಿ ಕಂಡುಬರುವ ರಚನೆಯೇ ಆಗಿದೆ. ಪರಂಪರೆಯ ಅನೇಕ ಆಚರಣೆ ನಂಬಿಕೆಗಳು ಸಾಂಪ್ರದಾಯಕ ಕುಟುಂಬದ ರಚನೆಯನ್ನು ಭದ್ರವಾಗಿಯೇ ಇರಿಸಿವೆ.

---

೧. Richard Lannoy,*Speaking Tree*, (Oxford. 1975), p.111.

೨. Richard Lannoy, *Speaking Tree*, (Oxford. 1975), p.112.

ಇಂಥ ರಚನೆಯನ್ನು ಹೊಂದಿರುವ ಕುಟುಂಬದಲ್ಲಿ ಗಂಡು-ಹೆಣ್ಣಿನ ಪ್ರೇಮ ಹಾಗೂ ಲೈಂಗಿಕ ಸಂಬಂಧವೂ ಕೂಡ ಅನೇಕ ಕ್ರಮಗಳಿಗೆ ಒಳಗೊಂಡಿರುವಂಥದ್ದೇ ಆಗಿರುತ್ತದೆ. ಏಕೆಂದರೆ ಈ ಭಾವನೆಗಳು ಮತ್ತು ಕ್ರಿಯೆಗಳು ಮೂಲತಃ ವೈಯಕ್ತಿಕ ನೆಲೆಯಲ್ಲಿಯೇ ಸಾಫಲ್ಯವನ್ನು ಕಾಣುವಂಥವುಗಳು. ಆದರೆ ಈ ವೈಯಕ್ತಿಕ ಸಾಫಲ್ಯಕ್ಕೆ ಅವಕಾಶವನ್ನು ಕೊಡದಂಥ ಕೌಟುಂಬಿಕ ರಚನಾವಿನ್ಯಾಸದಲ್ಲಿ ಗಂಡು-ಹೆಣ್ಣಿನ ಸಂಬಂಧವು ಕೆಲವು ನಿಯಮಗಳ ಮೇಲೆಯೇ ನಿಂತಿರಲು ಸಾಧ್ಯ.

ವರ್ಣಗಳ ಚೌಕಟ್ಟು, ಜಾತಿಪದ್ಧತಿಯು ರೂಪುಗೊಳಿಸಿದ ಕಟ್ಟುನಿಟ್ಟಾದ ವಿಭಾಗಗಳ ನ್ನೊಳಗೊಂಡ ಸಾಮಾಜಿಕ ರಚನೆಯು ಸಡಿಲಗೊಳ್ಳುವ ಸ್ವರೂಪಗಳು ಕಂಡುಬಂದಾಗಲೆಲ್ಲ ಹೆಣ್ಣಿನ ಸ್ಥಾನವನ್ನು ಅಧೀನತೆಗೆ, ಅತ್ಯಂತ ಅವಮಾನಗಳಿಗೆ ಗುರಿಪಡಿಸಲಾಗಿದೆಯೆಂಬುದು ನಮಗೆಲ್ಲ ಗೊತ್ತಿರುವ ಸಂಗತಿಯೇ ಆಗಿದೆ. ಬಹುಶಃ ನಮಗೆ ಸ್ಪಷ್ಟವಾಗಿ ಗೊತ್ತಾಗುವ ಹಾಗೆ ಹಿಂದೂಗಳ ಧರ್ಮಶಾಸ್ತ್ರವೆಂದು ಕರೆಯಲಾಗುವ ಮನುಧರ್ಮಶಾಸ್ತ್ರವು ಹೆಣ್ಣಿನ ಬಗ್ಗೆ ಕಟ್ಟುನಿಟ್ಟಾದ ನಿಯಮಗಳನ್ನು ಹೇರಿರುವುದು ಕಂಡುಬರುತ್ತದೆ. ಗಂಡಿಗೆ ಹೆಣ್ಣು ಯಾವಾಗಲೂ ಅಧೀನಳೆಂಬ ಮಾತುಗಳನ್ನು ಇವನು ಹೇಳುತ್ತಾನೆ.

ಭಾರತದ ರಾಜಕೀಯ, ಹಾಗೂ ಧಾರ್ಮಿಕ ವಲಯಗಳಲ್ಲಿ ಹೆಣ್ಣಿನ ಬಗ್ಗೆ ಇದ್ದಂಥ ನಂಬಿಕೆಗಳು ಒಂದೇ ಆಗಿದ್ದವು ಎನ್ನುವುದನ್ನು ಗಮನಿಸಬೇಕು. ಹೆಣ್ಣು ಚಂಚಲೆಯೂ ಕುಟಿಲ ಪ್ರವೃತ್ತಿಯವಳೂ ತನ್ನ ಶರೀರ ಸೌಂದರ್ಯದಿಂದ ಮನುಷ್ಯರನ್ನು ದುರ್ಬಲಗೊಳಿಸಿ ಹಾಳು ಮಾಡುವವಳೆಂದು ಇಲ್ಲಿನ ಸಾಮಾನ್ಯ ನಂಬಿಕೆಯಾಗಿದೆ. ರಾಜ್ಯಶಾಹೀ ವ್ಯವಸ್ಥೆಯಲ್ಲಿ ಹೆಣ್ಣನ್ನು ಭೋಗಸಾಮಗ್ರಿಯಾಗಿ ಬಳಸಿಕೊಂಡೂ ಅವಳ ಬಗ್ಗೆ ತಿರಸ್ಕಾರದ ಸಿಟ್ಟು ವ್ಯಾಪಕವಾಗಿ ಹರಡಿರುವುದನ್ನು ನಾವು ಗಮನಿಸಬಹುದು. ಎಲ್ಲ ಸಾಂಪ್ರದಾಯಕ ಧರ್ಮಗಳು ಹೆಣ್ಣನ್ನು ಗಂಡಿನ ಸಾತ್ವಿಕ ಶಕ್ತಿಯ ಮುನ್ನಡೆಗೆ ಒಂದು ಬಾಧಕವೆಂದೇ ಭಾವಿಸಿದ್ದವು.

ಈ ಸಾಂಪ್ರದಾಯಕ ಕುಟುಂಬದ ರಚನಾವಿನ್ಯಾಸವು ಅತ್ಯಂತ ಪ್ರಭುತ್ವವನ್ನು ಹೊಂದಿದ್ದಂಥ ಸ್ವರೂಪವನ್ನು ಪಡೆದಿತ್ತೆನ್ನುವುದನ್ನು ತಿಳಿಯಲು ಅಷ್ಟೇನೂ ಕಷ್ಟಪಡಬೇಕಾಗಿಲ್ಲ. ಈಗಲೂ ಈ ಸ್ವರೂಪವನ್ನು ತಿಳಿಯಲು ಸಾಂಪ್ರದಾಯಕ ಕುಟುಂಬದ ಲಕ್ಷಣಗಳನ್ನೂ, ಜಾನಪದ ಗೀತೆಗಳನ್ನು ವಿಶ್ಲೇಷಿಸಿ ನೋಡಬಹುದು.

ಸಾಂಪ್ರಧಾಯಿಕ ಕುಟುಂಬದ ಲಕ್ಷಣವನ್ನು ಇಷ್ಟು ವಿವರವಾಗಿ ನೋಡಲು ಮುಖ್ಯ ಕಾರಣವೆಂದರೆ-ಅಕ್ಕಮಹಾದೇವಿಯು ಇಂಥ ಕುಟುಂಬದ ಪ್ರಚಲಿತವಿದ್ದ ಎಲ್ಲ ನಂಬಿಕೆ ಹಾಗೂ ಆಚರಣೆಗಳನ್ನು ನಿರಾಕರಿಸಿದಳು ಮತ್ತು ಇದಕ್ಕೆ ಪ್ರತಿಯಾದಂಥ ಹೊಸ ಕುಟುಂಬದ ಸ್ವರೂಪವನ್ನು ತನ್ನ ಅನುಭಾವದ ಆಶಯಗಳಲ್ಲಿ ಕಂಡುಕೊಂಡಳು.

ಅಕ್ಕಮಹಾದೇವಿಯ ಸಾಂಪ್ರದಾಯಕ ಕುಟುಂಬದ ನಿರಾಕರಣೆಯು ಮುಖ್ಯವಾಗಿ ಎರಡು ಹಂತಗಳಲ್ಲಿ ನಡೆಯುತ್ತದೆ:

ಒಂದನೆಯದು – ಅಕ್ಕಮಹಾದೇವಿಯು ಕುಟುಂಬದ ರಚನೆಯ ಪರಂಪರಾಗತ ಸ್ವರೂಪಕ್ಕೆ ಕಾರಣವಾದಂಥ ಎಲ್ಲ ವ್ಯಕ್ತಿಗತ ಸಂಬಂಧಗಳನ್ನು ನಿರಾಕರಿಸುತ್ತಾಳೆ.

ಎರಡನೆಯದು – ಕುಟುಂಬ ವ್ಯವಸ್ಥೆಯು ಪರಂಪರಾಗತವಾಗಿ ಪ್ರೇಮ ಹಾಗೂ ಲೈಂಗಿಕ ಸಂಬಂಧಗಳ ಬಗ್ಗೆ ಕಟ್ಟಿಕೊಂಡಿದ್ದ ನಂಬಿಕೆ ಹಾಗೂ ನಿಯಮಗಳ ತೀವ್ರವಾದ

ವಿರೋಧ ಹಾಗೂ ತಿರಸ್ಕಾರವನ್ನು ತೋರಿಸುತ್ತಾಳೆ. ಈ ಎರಡೂ ಸ್ವರೂಪಗಳ ವಿವರವಾದ ಅಧ್ಯಯನವನ್ನು ಈಗ ಮಾಡಬಹುದಾಗಿದೆ.

### ೧.೨ ಕುಟುಂಬದ ರಚನೆಯ ಪರಂಪರಾಗತ ಸ್ವರೂಪಕ್ಕೆ ಕಾರಣವಾದ ವ್ಯಕ್ತಿ ಸಂಬಂಧಗಳ ನಿರಾಕರಣೆ

ಅಕ್ಕನ ವಚನಗಳಲ್ಲಿ ಸಂಸಾರವನ್ನು ನಿರಾಕರಿಸುವ ಕೆಲವು ವಚನಗಳು ಮುಖ್ಯವಾಗಿ ಸಂಸಾರದ ಅನಿತ್ಯತೆ ಹಾಗೂ ಅದು ಹುಟ್ಟಿಸುವ ಅನೇಕ ರೀತಿಯ ಕುರೂಪಗೊಂಡ ನೆಲೆಗಳನ್ನು ವಿವರಿಸುತ್ತವೆ. ಈ ಕೆಲವು ವಚನಗಳನ್ನು ಕುಟುಂಬದ ಹಿನ್ನೆಲೆಯಲ್ಲಿಯೂ, ಲೌಕಿಕ ಅಥವಾ ಸಮಾಜವೆಂಬ ಅರ್ಥದಲ್ಲಿಯೂ ಪರಿಭಾವಿಸಬಹುದಾಗಿದೆ. ವ್ಯಕ್ತಿಯ ಬದುಕಿನ ಚೈತನ್ಯವನ್ನು ವಿಷಮವನ್ನಾಗಿ ಮಾಡಿದ ಸಂಸಾರದ ಸ್ವರೂಪವನ್ನು ಅಕ್ಕಮಹಾದೇವಿ ಇಲ್ಲಿ ವಿವರಿಸುತ್ತಾಳೆ. 'ಅಂದಂದಿನ ದಂದುಗಕ್ಕೆ' ಏವುವಂತೆ ಮಾಡುವ 'ಚಂದ ಸಂಸಾರ'ವು 'ಹಗೆ'ಯಾಗಿ ಹೋದದ್ದನ್ನು ವಿವರಿಸುವ ಅವಳ ಒಂದು ವಚನವು ಹೀಗಿದೆ:

> ಸಂಸಾರವೆಂಬ ಹಗೆಯಯ್ಯಾ ಎನ್ನ ತಂದೆ
> ಎನ್ನ ವಂಶ ವಂಶದಪ್ಪದೆ ಅರಸಿಕೊಂಡು ಬರುತ್ತಿದೆಯಯ್ಯಾ
> ಎನ್ನುವನರಸಿಯರಸಿ ಹಿಡಿದು ಕೊಲ್ಲುತ್ತಿದೆಯಯ್ಯಾ
> ನಿನ್ನ ನಾ ಮರೆಹೊಕ್ಕೆ ಕಾಯಯ್ಯಾ
> ಎನ್ನ ಬಿನ್ನಪವವಧರಿಸಾ ಚೆನ್ನಮಲ್ಲಿಕಾರ್ಜುನಾ[3]

ವಚನವು ಸಂಸಾರವು ಹಗೆಯಾಗಿರುವುದನ್ನು ವಿವರಿಸುತ್ತ, ಅದು ವ್ಯಕ್ತಿಯನ್ನು ಕೊಲ್ಲುವ ವಾತಾವರಣವನ್ನು ಹೇಳುತ್ತಿದೆ. ಈ ವಿವರಣೆಯಲ್ಲಿ ವ್ಯಕ್ತಿ ಮತ್ತು ಸಂಸಾರದ ಸಂಬಂಧವು ವಿಷಮವಾಗಿರುವುದನ್ನು ಕುರಿತ ವಿವರವಷ್ಟೇ ಅಲ್ಲ, ಅದು ವ್ಯಕ್ತಿಯ ಚೈತನ್ಯವನ್ನೇ ಕುಗ್ಗಿಸಿ ಬಿಟ್ಟಿರುವ, ಕೊಲ್ಲುತ್ತಿರುವ ಸ್ವರೂಪದ್ದಾಗಿರುವುದನ್ನು ಹೇಳಲಾಗಿದೆ. ಇನ್ನೊಂದು ವಚನದಲ್ಲಿ ಅಕ್ಕಮಹಾದೇವಿಯು ಸಂಸಾರದಲ್ಲಿ ಹುಟ್ಟುವ ಕೆಲವು ಭಾವನೆಗಳನ್ನು ವಿವರಿಸುತ್ತ ಜ್ಞಾನ, ಅಜ್ಞಾನದಿಂದ ಆಶೆ, ಆಶೆಯಿಂದ ಕೋಪ ಇವು ಹುಟ್ಟುತ್ತವೆ, ಇವುಗಳು ವ್ಯಕ್ತಿಯ ದುಃಖಕ್ಕೆ ಕಾರಣವಾಗುತ್ತವೆ, ಎನ್ನುತ್ತಾಳೆ.

ವಿಷಮ ಸಂಸಾರದ ನಿರಾಕರಣೆಯು ಭಕ್ತನ ಪೂರ್ವಸಿದ್ಧತೆಯೆಂದು ಈ ಭಾಗದ ವಚನಗಳನ್ನು ವಿವರಿಸಿಬಿಡಬಹುದು. ಆದರೆ ಅಕ್ಕಮಹಾದೇವಿಯೇ "ಸಂಸಾರ ಸಂಗದಲಿರ್ದೆ ನೋಡಾ ನಾನು, ಸಂಸಾರ ನಿಸ್ಸಾರವೆಂದು ತೋರಿದ ನನಗೆ ಶ್ರೀಗುರು" ಎಂದು ಹೇಳುವಲ್ಲಿ ಸಂಸಾರವು ವಿಷಮವಾದದ್ದರ, ನಿಸ್ಸಾರವಾದದ್ದರ ಸಂದರ್ಭವನ್ನು ಸೂಚಿಸುತ್ತಿದ್ದಾಳೆ. ಆದ್ದರಿಂದ ಈ ಸಂಸಾರ ನಿರಾಕರಣೆಯನ್ನು ಕೇವಲ ಭಕ್ತಳೊಬ್ಬಳ ತಾತ್ವಿಕ ನಿರಾಕರಣೆಯೆಂದು ಭಾವಿಸುವುದು ಕೇವಲ ಸರಳಗೊಳಿಸಿದ ವ್ಯಾಖ್ಯೆಯಾಗುತ್ತದೆಯಷ್ಟೆ. ಬ್ಲೇಕನ ಅನುಭಾವಿ ಕವನಗಳನ್ನು ವಿಶ್ಲೇಷಿಸುತ್ತ ಮಾರ್ಗರೇಟ್ ಎನ್ನುವ ವಿಮರ್ಶಕಿಯು ಈ ಅನುಭಾವಸ್ವರೂಪಿ ಅಭಿವ್ಯಕ್ತಿಗಳ ಒಂದು ಮುಖ್ಯ ತತ್ವವು ಪ್ರಪಂಚದ ಸ್ಥಿತಿಯನ್ನು ಅದು ಇದ್ದ ನೆಲೆಯಲ್ಲಿ ನೋಡುವುದು ಕೂಡ ಆಗಿದೆ ಎನ್ನುತ್ತಾಳೆ.[4]

---

೩. ಶಿವಶರಣೆಯರ ವಚನಗಳು (ಸಂ: ಆರ್. ಸಿ. ಹಿರೇಮಠ) ೧೯೬೮. ವಚನ ಸಂಖ್ಯೆ: ೨೩.

೪. "For the highest dogma of the spiritual is to affirm the material. By plain

ಸ್ಪಷ್ಟವಾಗಿ ಕುಟುಂಬದ ಸಂಬಂಧಗಳನ್ನು ಕುರಿತ ಹಾಗೆ ಅಕ್ಕಮಹಾದೇವಿಯು ತನ್ನ ಕೆಲವು ವಚನಗಳಲ್ಲಿ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸಿದ್ದಾಳೆ. ಅವಳ ಒಂದು ವಚನವು ಲೌಕಿಕದ ಎಲ್ಲ ಮಿತಿಗಳನ್ನು ಒಡ್ಡುವ ಲಕ್ಷಣಗಳನ್ನು ಕುಟುಂಬದ ವ್ಯಕ್ತಿಗಳಿಗೆ ಹೋಲಿಸಿ ಛೇಡಿಸಲಾಗಿದೆ. ಇವುಗಳಿಂದ ದೂರ ಹೋಗುವ ಹಾಗೂ ಹೊಸ ಸಂಬಂಧವನ್ನು ಹುಟ್ಟಿಸಿಕೊಳ್ಳುವ ವಿವರವು ಅಲ್ಲಿ ಕಂಡುಬರುತ್ತದೆ:

ಅತ್ತೆ ಮಾಯೆ, ಮಾವ ಸಂಸಾರಿ
ಮೂವರು ಮೈದುನರು ಹುಲಿಯಂಥವದಿರು,
ನಾಲ್ವರು ನಗೆವೆಣ್ಣು ಕೇಳುಕೆಳದಿ
ಐವರು ಭಾವದಿರನೊಯ್ವ ದೈವವಿಲ್ಲ
ಆರು ಪ್ರಜೆಯತ್ತಿಗೆಯರ ಮೀರಲಾರೆನು
ತಾಯೆ, ಹೇಳುವಡೆ ಏಳು ಪ್ರಜೆ ತೊತ್ತಿರ ಕಾಹು
ಕರ್ಮವೆಂಬ ಗಂಡನ ಬಾಯ ಟೊಣೆದು
ಹಾದರವಾಡುವೆನು ಹರನ ಕೂಡೆ
ಮನವೆಂಬ ಸಖಿಯ ಪ್ರಸಾದದಿಂದ ಅನುಭಾವವ ಕಲಿತೆನು ಶಿವನೊಡನೆ;
ಕರಚೆಲುವ ಶ್ರೀಶೈಲ ಮಲ್ಲಿಕಾರ್ಜುನನ
ಸಜ್ಜನದ ಗಂಡನ ಮಾಡಿಕೊಂಬೆ॥[೫]

ಗಂಡನ ಮನೆಯ ಪ್ರತಿಯೊಂದು ವ್ಯಕ್ತಿಯನ್ನೂ ಇಲ್ಲಿ ಸಂಸಾರದ ಗುಣಗಳಿಗೆ ಹೋಲಿಸಲಾಗಿದೆ. ಕುಟುಂಬದ ಈ ರಚನೆಗೂ, ಲೌಕಿಕದ ಬಂಧನಕ್ಕೂ, ಹೋಲಿಕೆಯ ಮೂಲಕ, ಐತಿಹಾಸಿಕ ವಾಸ್ತವವನ್ನು ಹೇಳಲಾಗುತ್ತಿದೆ. ವ್ಯಕ್ತಿಯ ಸ್ವಾತಂತ್ರ್ಯಕ್ಕೆ ಅವಕಾಶವಿಲ್ಲದ ಹಾಗೆ ಕುಟುಂಬದ ಎಚ್ಚರಿಕೆಯ ಬೇಹುಗಾರಿಕೆಯಿದೆ. ಲೌಕಿಕದ ಈ ಎಲ್ಲ ಲಕ್ಷಣಗಳಿಗೂ ಗಾಢ ಸಂಬಂಧವಿರುವುದನ್ನು ವ್ಯಕ್ತಿಗಳ ಸಂಬಂಧಗಳ ಮೂಲಕ ಅಕ್ಕಮಹಾದೇವಿ ಹೇಳುತ್ತಾಳೆ. ಈ ವಚನವು ಸಾಮಾಜಿಕ ನೆಲೆಗೂ ಅನ್ವಯವಾಗುವ ರೀತಿಯನ್ನು ರಾಮಾನುಜಂ ಚೆನ್ನಾಗಿ ವಿಶ್ಲೇಷಿಸಿದ್ದಾರೆ. ಅವರ ಪ್ರಕಾರ ಇಲ್ಲಿ ವಿವರಿಸಲಾದಂಥ ಎಲ್ಲ ಸಂಬಂಧಗಳು ಮದುವೆಯಿಂದಾಗಿ ಏರ್ಪಟ್ಟಂಥವು. ಇಲ್ಲಿ ಒಬ್ಬ ವ್ಯಕ್ತಿಯೂ ಸಹ ಹೆಣ್ಣಿನೊಡನೆ ಹುಟ್ಟಿನಿಂದ ಸಂಬಂಧ ಪಡೆದವನಲ್ಲ. ಅಂದರೆ ಸಾಮಾಜಿಕ ಸಂಬಂಧಗಳಿಂದ ಇಲ್ಲಿ ನಂಟಸ್ತಿಕೆಯನ್ನೂ ಸಹ ಇಲ್ಲಿ ಸಾಧಿಸಲಾಗಿದೆ. ಇಂಥ ಸಾಮಾಜಿಕ ಸ್ವರೂಪದ ಅಮಾನವೀಯ ನೆಲೆಗಳನ್ನು ಇಲ್ಲಿ ನಿರಾಕರಿಸಲಾಗಿದೆ. ರಾಮಾನುಜಂ ಅವರ ವಿಶ್ಲೇಷಣೆಯ ಒಂದು ಭಾಗವು ಹೀಗಿದೆ:

"A net of marriage rules and given relations binds her. These are what you make and enter into not what you ar born with. This elaborate build-up of social bonds is shattered by the cuckolding climax of the poem, with the Lord as the adulterous Lover."[೬]

---

outline and positive colour these poius artists strove chiefly to assent that a cat was truly in the eye of God a cat...."
(Margaret Rudd, *Divided Image*, 1953), p.19.

೫. ಶಿವಶರಣೆಯರ ವಚನಗಳು (ಸಂ: ಆರ್. ಸಿ. ಹಿರೇಮಠ) ವಚನ ಸಂಖ್ಯೆ: ೨೮೩.

೬. Ramanujam A.K., *Speaking of Shiva*, (1973), p.51.

ಅಕ್ಕಮಹಾದೇವಿಯು ವ್ಯಂಗ್ಯದ ಸಫಲ ಉದ್ದೇಶಕ್ಕಾಗಿ ಕುಟುಂಬದ ಈ ರಚನೆಯ ಸ್ವರೂಪವನ್ನು ಆಯ್ಕೆ ಮಾಡಿಕೊಂಡಿರುವುದು ಆಕಸ್ಮಿಕವೇನಲ್ಲ. ರಾಮಾನುಜಂ ಗುರುತಿಸಿದಂತೆ ಸಾಮಾಜಿಕ ಕಟ್ಟುಗಳಿಂದ ಮುಕ್ತಳಾಗುವ ತೀವ್ರತೆಯ ಆಶಯವು ಅದರ ನಿಯಮಗಳನ್ನು ಮುರಿಯುವುದರಲ್ಲಿಯೇ ಇದೆ. ಆದ್ದರಿಂದಲೇ ಇಂಥ ಕುಟುಂಬದ ನಡವಳಿಕೆ, ನಿಯಮಗಳಿಗೆ ಬೆರಗು ಹುಟ್ಟಿಸುವ 'ಹಾದರ'ವೆನ್ನುವ ಪದವನ್ನು ಅಕ್ಕಮಹಾದೇವಿಯು ಉದ್ದೇಶಪೂರ್ವಕವಾಗಿ ಬಳಸಿದ್ದಾಳೆ.

ಅಕ್ಕಮಹಾದೇವಿಯು ಹಾಡಿದಳೆನ್ನಲಾದ ಕೆಲವು ಪದಗಳು ಸಂಸಾರದ ದುಃಖಮಯವಾದಂಥ ಸ್ಥಿತಿಯನ್ನೇ ಹೇಳುತ್ತವೆ. ಅಕ್ಕಮಹಾದೇವಿಯು ಇವುಗಳನ್ನು ಹೇಳಲಿ, ಅಥವಾ ಹೇಳದೆ ಇರಲಿ – ಇವುಗಳು ಒಟ್ಟಾರೆ ಅತ್ಯಂತ ಶೋಚನೀಯ ಸ್ಥಿತಿಗೆ ಒಳಗಾದಂಥ ಹೆಣ್ಣಿನ ಜೀವನವನ್ನು ಕುರಿತದ್ದೇ ಆಗಿದೆ ಎನ್ನುವುದನ್ನು ಗಮನಿಸಬೇಕು. ಅತ್ತೆ, ಮಾವ ಹಾಗೂ ಗಂಡ – ಈ ತ್ರಿಕೂಟದ ಕೇಂದ್ರವಾದಂಥ ಕುಟುಂಬವೆನ್ನುವ ಸಂಸ್ಥೆಯು ಒಬ್ಬ ಹೆಣ್ಣುಮಗಳ ಮೇಲೆ ನಡೆಸುವಂಥ ಪ್ರಭುತ್ವವನ್ನು ಇಲ್ಲಿ ವಿವರಿಸಲಾಗಿದೆ. ಒಂದು ಪದವನ್ನು ಉದಾಹರಣೆಗೆಂದು ಗಮನಿಸಬಹುದು:

ಒಲ್ಲೆ ಗಂಡನ ಕೂಟ ಒಗತನವ
ಅಕ್ಕಟ ಗಂಡನ ಮನೆ ಬಿರಿಸಯ್ಯಯ್ಯೋ!
ಒಡಕು ಗಂಗಳದಲ್ಲಿ ನೀರಂಬಲಿಯ ನೀಡಿ
ಹೊಡೆದಳು ನಮ್ಮತ್ತೆ ಮೊರದಲ್ಲಿ
ಕಡುದುಃಖದಿಂದ ನಾ ಒಲೆಯ ಮುಂದೆ ಕುಳಿತಿರೆ
ಕೊಡಿತನದಿ ಬಂದು ಒದ್ದಳಯ್ಯಯ್ಯೋ! ॥ [೭]

ಹೀಗೆ ಈ ಕುಟುಂಬದ ಪ್ರತಿಯೊಬ್ಬರೂ ಮಾಡುವ ಕ್ರೂರ ಹಿಂಸೆಯನ್ನು ಈ ಪದಗಳಲ್ಲಿ ಹೇಳುತ್ತ ಹೋಗಲಾಗಿದೆ. ಅಕ್ಕಮಹಾದೇವಿಯ ಈ ವಚನಗಳು – ಹೆಣ್ಣಿನ ಮೇಲೆ ಲೌಕಿಕ ಕುಟುಂಬದ ರಚನಾ ವಿನ್ಯಾಸದ ನಿಯಮಗಳು, ನಡಾವಳಿಗಳು ಮಾಡುವಂಥ ದಬ್ಬಾಳಿಕೆಯನ್ನು ಸ್ಪಷ್ಟವಾಗಿಯೇ ಹೇಳುತ್ತವೆ. ಆದ್ದರಿಂದಲೇ ಲೌಕಿಕದ ನೆಲೆಗಳನ್ನು ಮೀರಿದ ಹೊಸ ಸಂಬಂಧದ ರಚನೆಯ ಲಕ್ಷಣಗಳನ್ನು ಅಕ್ಕಮಹಾದೇವಿ ತನ್ನ ವಚನವೊಂದರಲ್ಲಿ ಹೇಳುತ್ತಾಳೆ:

ಗುರುವೆ ತೆತ್ತಿಗನಾದ !
ಲಿಂಗವೆ ಮದವಳಿಗೆಯಾದ !
ನಾನು ಮದವಳಿಗೆಯಾದೆನು !
ಈ ಭುವನವೆಲ್ಲರಿಯಲು

---

೭. ಶಿವದಾಸ ಗೀತಾಂಜಲಿ (ಸಂ: ಎಲ್. ಬಸವರಾಜು) ೧೯೬೩.
ಈ ಪದಗಳ ಮೂಲದ ಬಗ್ಗೆ ಚರ್ಚೆಯೊಂದು ನಡೆದಿದೆ. ಹಳಕಟ್ಟಿ ಹಾಗೂ ಮುಗಳಿಯವರು ವಚನಗಳನ್ನು ನಂತರ ಹೀಗೆ ಹಾಡಾಗಿ ಪರಿವರ್ತಿಸಿರಬೇಕು ಎನ್ನುತ್ತಾರೆ. ಆದರೆ ತೀ.ನಂ.ಶ್ರೀ.ಯವರ ವಿಚಾರಗಳ ಹಿನ್ನೆಲೆಯಲ್ಲಿ ಬಸವರಾಜು ಅವರು ವಚನಕಾರರೇ ಇವುಗಳನ್ನು ಬರೆದಿದ್ದಾರೆ ಎನ್ನುವ ತೀರ್ಮಾನಕ್ಕೆ ಬರುತ್ತಾರೆ. ನೋಡಿ: (ಶಿವದಾಸ ಗೀತಾಂಜಲಿ) ಮುನ್ನುಡಿ, ಪುಟ ೯೨-೯೩.

ಅಸಂಖ್ಯಾತರೆನಗೆ ತಂದೆತಾಯಿಗಳು !
ಕೊಟ್ಟರು ಸಾದೃಶ್ಯವಪ್ಪ ವರನ ನೋಡಿ !
ಇದು ಕಾರಣ ಚನ್ನಮಲ್ಲಿಕಾರ್ಜುನ ಗಂಡನಾದ ಬಳಿಕ
ಮಿಕ್ಕಿನ ಲೋಕದ ಗಂಡರೆನಗೆ ಸಂಬಂಧವಿಲ್ಲವ್ವಾ ॥[೫]

ಅನುಭಾವದ ಹಂತದ ಸಂಬಂಧವನ್ನು ಅಪೇಕ್ಷಿಸುವ ಈ ವಚನದಲ್ಲಿ ಹೊಸ ಸ್ವರೂಪದ ಕುಟುಂಬದ ನೆಲೆಗಳನ್ನು ವಿವರಿಸಲಾಗಿದೆ. ಗಮನಿಸಬೇಕಾದ ಅಂಶವೆಂದರೆ – ಈ ವಚನದಲ್ಲಿ ಎಲ್ಲಿಯೂ ಗಂಡನಾದ ಚನ್ನಮಲ್ಲಿಕಾರ್ಜುನನನ್ನು ಬಿಟ್ಟರೆ ತೆಗೆದುಕೊಂಡ ಮನೆಯ ಯಾವ ಸಂಬಂಧವನ್ನೂ ಇಲ್ಲಿ ಹೆಸರಿಸಲಾಗಿಲ್ಲ. ತೆತ್ತಿಗನಾದ ಗುರುವೂ ಕೂಡ ಮದುವಣಿಗ ಹಾಗೂ ಮದುವಣಗಿತಿಯ ವ್ಯಕ್ತಿತ್ವದ ಸಂಬಂಧಗಳನ್ನೂ ಸಂಪೂರ್ಣವಾಗಿ ಹಾರೈಸುವವನೇ ಆಗಿದ್ದಾನೆ.

ಅತ್ಯಂತ ಸೂಕ್ಷ್ಮವಾಗಿ ಗಮನಿಸಿದರೆ, ಅಕ್ಕನ ವಚನಗಳಲ್ಲಿ ಈ ಸಮಾಜವು ರೂಪಿಸಿದ ಕೌಟುಂಬಿಕ ರಚನೆ ಹಾಗೂ ಅದು ಹೇರುವ ನಿಯಮಗಳ ವಿರುದ್ಧ ವಿರೋಧವೊಂದು ಕಂಡುಬರುತ್ತದೆ. ತಾಯಿ- ತಂದೆಯರೂ ಈ ಕೌಟುಂಬಿಕ ರಚನೆಯು ರೂಪಿಸಿದ ವ್ಯವಸ್ಥೆಯ ಅಂಗವಾಗಿರುವುದನ್ನೂ ಅಕ್ಕನ ವಚನಗಳು ಅಲ್ಲಲ್ಲಿ ಸೂಚಿಸುತ್ತವೆ. ಮೇಲೆ ಉದ್ಧರಿಸಿದ ವಚನದಲ್ಲೇ "ಈ ಭುವನವೆಲ್ಲವರಿಯಲು ಅಸಂಖ್ಯಾತರೆನಗೆ ತಾಯಿ-ತಂದೆಗಳು" ಎನ್ನುವ ಮಾತಿನಲ್ಲೇ ಸಾಂಪ್ರದಾಯಿಕ ವಿನ್ಯಾಸದ ಸ್ವರೂಪವೊಂದನ್ನು ಮೀರುತ್ತಿದ್ದಾಳೆ ಎನ್ನುವುದನ್ನು ಗಮನಿಸಬಹುದು.

ಆತಂಕಭರಿತ ಮನಃಸ್ಥಿತಿಯನ್ನು ಅಕ್ಕಮಹಾದೇವಿಯು ಆಪ್ತವಾಗಿ ಹೇಳಿಕೊಳ್ಳುವುದಾದರೂ, ತನ್ನ ಕೆಳದಿಗೆ, ಸಖಿಗೆ ಮಾತ್ರ. ಏಕೆಂದರೆ ಇವಳೊಬ್ಬಳೇ ಸಾಮಾಜಿಕ ನಿಯಮಗಳನ್ನು ಮೀರಿ ನೊಂದ ಮನಸ್ಸನ್ನು ಅರಿಯುವಂಥವಳು, ಹಾಗೂ ಸಹಾಯ ಮಾಡುವಂಥವಳು. "ಕಳವಳದ ಮನವು ತಲೆಕೆಳಗಾದುದವ್ವ....ಬೆಳುದಿಂಗಳು ಬಿಸಿಲಾಯಿತ್ತು ಕೆಳದಿ..." ಎಂದು ಹೇಳುವ ಆತಂಕದಿಂದ ತುಂಬಿದ ಮನಸ್ಸು ಈ ಕೆಳದಿಗೆ "ತಿಳುಹೌ ಬುದ್ಧಿಯ; ಹೇಳಿ ಕರೆತಾರೆಲಗವ್ವ" ಎನ್ನುವ ಸಹಾಯವನ್ನೂ ಯಾಚಿಸುತ್ತದೆ. ಇಂಥ ಸಂದರ್ಭವೊಂದರಲ್ಲಿ ತಾಯಂದಿರ ಅಸಹಾಯಕತೆಯನ್ನೂ ಅಕ್ಕಮಹಾದೇವಿಯ ಒಂದು ವಚನವು ವಿವರಿಸುತ್ತದೆ:

ಬಂಜೆ ತಾಯಿಯ ಬೇನೆಯನರಿವಳೆ?
ಬಲದಾಯಿ ಮುದ್ದ ಬಲ್ಲಳೇ?
ನೊಂದವರ ನೋವ ನೋಯದವರೆತ್ತ ಬಲ್ಲರೋ?
ಚನ್ನಮಲ್ಲಿಕಾರ್ಜುನಯ್ಯನಿರಿದಲಗು
ಒಡಲಲ್ಲಿ ಮುರಿದು ಹೊರಳುವೆನ್ನಳಲನು
ನೀವೆತ್ತ ಬಲ್ಲಿರೆ, ಎಲೆ ತಾಯಿಗಳಿರಾ?[೬]

೫. ಈ ವಚನದ ಎರಡು ಪಾಠಾಂತರಗಳು ಎಲ್. ಬಸವರಾಜು ಹಾಗೂ ಆರ್. ಸಿ. ಹಿರೇಮಠ ಇವರ ಸಂಪಾದನೆಯ ಗ್ರಂಥಗಳಲ್ಲಿ ಸ್ವೀಕಾರವಾಗಿವೆ. ನಮ್ಮ ವಿಶ್ಲೇಷಣೆಗೆ ಹಿರೇಮಠರು ಆಯ್ಕೆ ಮಾಡಿದ ಪಾಠವೇ ಹೆಚ್ಚು ಒಪ್ಪುತ್ತದೆ. ಇಲ್ಲಿ ಸ್ವಲ್ಪ ವ್ಯತ್ಯಾಸದೊಡನೆ ಅದನ್ನೇ ಸ್ವೀಕರಿಸಲಾಗಿದೆ. (ವಚನಗಳಿಗೆ ನೋಡಿ: ಎಲ್. ಬಸವರಾಜು (ಸಂ:) ಅಕ್ಕನ ವಚನಗಳು, ವಚನ ೨೫೮; ಹಿರೇಮಠ ಆರ್. ಸಿ (ಸಂ:) ಶಿವಶರಣೆಯರ ವಚನಗಳು: ವಚನ ೫೦).

೬. ಶಿವಶರಣೆಯರ ವಚನಗಳು (ಸಂ: ಆರ್. ಸಿ. ಹಿರೇಮಠ) ಮಹಾದೇವಿಯಕ್ಕನ ವಚನಗಳು. ಸಂಖ್ಯೆ: ೨೯೧.

ಬಂಜೆ, ಬಲದಾಯಿಯಿಂದ ಕೊನೆಗೆ ತಾಯಿ ಎನ್ನುವ ಸಾಮಾನ್ಯ ಪದಕ್ಕೆ ವಚನವು ಬಂದು ನಿಲ್ಲುತ್ತದೆ. ಸಾಂಪ್ರದಾಯಿಕ ಸಾಮಾಜಿಕ ಚೌಕಟ್ಟಿನಲ್ಲಿ ಹೆಣ್ಣಿನ ಪ್ರೇಮದ ಸ್ವತಂತ್ರ ಅಭಿವ್ಯಕ್ತಿಯು ಸಾಧ್ಯವಿಲ್ಲ. ಅಂಥ ಚೌಕಟ್ಟಿನಿಂದ ಆಚೆ ನಿಂತ ಉತ್ಕಟ ಪ್ರೇಮದ ಭಾವಗಳನ್ನು ವ್ಯಕ್ತಪಡಿಸುವ ಅಕ್ಕಮಹಾದೇವಿ, ಆ ಚೌಕಟ್ಟಿನಲ್ಲಿಯೇ ಹೆಂಡತಿಯಾಗಿ, ನಂತರ ತಾಯಿಯಾದಂಥ ವ್ಯಕ್ತಿಗಳನ್ನು ಕುರಿತು ಕೇಳಿದ ಪ್ರಶ್ನೆ ಇದು.

ಭಾರತದ ಕೌಟುಂಬಿಕ ರಚನಾವ್ಯವಸ್ಥೆಯಲ್ಲಿ ಹೆಣ್ಣಿನ ದ್ವಿಮುಖ ಸ್ಥಾನವನ್ನು ಕುರಿತು ಲೆನಾಯ್ ಕೆಲವು ಮುಖ್ಯ ವಿಚಾರಗಳನ್ನು ಗುರುತಿಸುತ್ತಾರೆ. ಕುಟುಂಬ ರಚನೆಯ ವ್ಯವಸ್ಥೆಯಲ್ಲಿ ಹೆಣ್ಣು ಹೆಂಡತಿಯಾಗಿ, ಹಾಗೂ ತಾಯಿಯಾಗಿ ಎರಡು ರೀತಿಯಲ್ಲಿ ಕಾಣಲ್ಪಡುತ್ತಾಳೆ. ಮನುವು ಹೆಣ್ಣನ್ನು ತಾಯಿಯಾಗಿ, ಹಾಗೂ ಸಂಗಾತಿಯಾಗಿ ಹೀಗೆ ಎರಡು ಭಿನ್ನ ನೆಲೆಯಲ್ಲಿ ನೋಡುತ್ತಾನೆ. ಸಾಮಾಜಿಕ ಸ್ಥಾನಮಾನಗಳಲ್ಲಿ ತಾಯಿಗೆ ಪ್ರಮುಖ ಸ್ಥಾನವಿರುವುದನ್ನು ಇವನು ಹೇಳುತ್ತಾನೆ.[೧೦]

ವಾಸ್ತವವಾಗಿ ತಾಯಿಗೆ ಕುಟುಂಬವೊಂದರಲ್ಲಿ ಸಿಗುವ ಗೌರವಯುತ ಸ್ಥಾನಕ್ಕೆ ಮುಖ್ಯವಾದ ಕಾರಣವೆಂದರೆ ಅವಳು ಕುಟುಂಬದ ಎಲ್ಲ ರೀತಿಯ ಅಂತಸ್ತನ್ನು ಉಳಿಸಿ, ಕಾಪಾಡಿಕೊಂಡು ಬರುತ್ತಾಳೆ ಎನ್ನುವುದು; ಅತ್ಯಂತ ಆಳದಲ್ಲಿ ವೈಯಕ್ತಿಕ ವಾಂಛೆಗಳನ್ನು ಹತ್ತಿಕ್ಕಿರುವ ಇವಳು ಕುಟುಂಬವು ರೂಪಿಸುವ ಸಾಮಾಜಿಕ ನಿಯಮಗಳ ಪ್ರತಿನಿಧಿಯಾಗುತ್ತಾಳೆ. ಅಕ್ಕಮಹಾದೇವಿಯು ತಾಯಿಯ ಇಂಥ ಸ್ವರೂಪವನ್ನು ಕುರಿತಾಗಿಯೂ ಪರೋಕ್ಷವಾಗಿ ತನ್ನ ವಚನಗಳಲ್ಲಿ ಸೂಚಿಸುತ್ತಾಳೆ. ಅಂತೆಯೇ ಈ ವ್ಯಕ್ತಿಗಳ ಎಲ್ಲ ಸಂಬಂಧವೂ ಇವಳಿಗೆ ಅನಗತ್ಯವಷ್ಟೇ ಅಲ್ಲ, ನಿರಾಕರಣೆಗೆ ಗುರಿಯಾಗುವಂಥದ್ದೂ ಆಗಿದೆ.

### ೧.೩ ವ್ಯಕ್ತಿಗಳ ಪ್ರೇಮ ಸಂಬಂಧದಲ್ಲಿ ಹೇರಲಾದ ಒತ್ತಾಯಗಳ ನಿರಾಕರಣೆ

ಅಕ್ಕಮಹಾದೇವಿಯನ್ನು ಕುರಿತ ಹಿಂದಿನ ಅಧ್ಯಾಯದಲ್ಲಿ ಲೌಕಿಕದಲ್ಲಿ–ಹೆಣ್ಣನ್ನು ಭೋಗಸಾಮಗ್ರಿಯನ್ನಾಗಿ, ಕೇವಲ ಕಾಮುಕ ದೃಷ್ಟಿಯಿಂದ ನೋಡಿದ ರೀತಿಯನ್ನು ಅಕ್ಕಮಹಾದೇವಿಯು ವಿರೋಧಿಸಿದ್ದನ್ನು ವಿವರಿಸಲಾಗಿದೆ. ಇದು ಹೆಣ್ಣನ್ನು ಸಮಾಜ ನೋಡಿದ ಒಂದು ದೃಷ್ಟಿಯಾದರೆ ಅವಳು ತನ್ನ ವೈಯಕ್ತಿಕ ಆಶಯಗಳನ್ನು, ಪ್ರೇಮದ ಹಂಬಲಗಳನ್ನು ವ್ಯಕ್ತಪಡಿಸಿದ, ಕೇವಲ ಗಂಡಿನ ಅಧೀನವಾಗಿರುವ ಕ್ರಿಯೆಯನ್ನು ಕುಟುಂಬದ ಚೌಕಟ್ಟಿನಲ್ಲಿ ಅಪೇಕ್ಷಿಸಲಾಯಿತು.

ಚೆನ್ನಮಲ್ಲಿಕಾರ್ಜುನನ ಸಂಬಂಧದಲ್ಲಿ ಅಕ್ಕಮಹಾದೇವಿಯು ಈ ಎಲ್ಲ ಹೇರಲಾದ ನಿಬಂಧನೆಗಳು, ನಡವಳಿಕೆಗಳನ್ನು ತಿರಸ್ಕರಿಸಿದಳು. ಅವಳ ಈ ತಿರಸ್ಕಾರವು ಕಾಮಪ್ರೇಮಗಳ ಸಂಬಂಧದಲ್ಲಿ ಎಲ್ಲ ಸಾಂಪ್ರದಾಯಿಕ ಅಡೆತಡೆಯನ್ನು ನಿರಾಕರಿಸುವವರೆಗೂ ಹರಡಿಕೊಂಡಿತು. ತನ್ನ ಗಂಡನ ಸ್ವರೂಪ, ಅವನೊಡನೆ ತನ್ನ ಪ್ರೇಮದ ಸಂಬಂಧ, ಮದುವೆಯ ರೀತಿ – ಈ ಎಲ್ಲ ವಲಯಗಳಲ್ಲಿಯೂ ಅಕ್ಕಮಹಾದೇವಿ ಲೌಕಿಕದ ಸಂಪ್ರದಾಯಸ್ಥ ಕಟ್ಟುಪಾಡುಗಳನ್ನು ಮುರಿದಿರುವುದನ್ನು ಅಭಿವ್ಯಕ್ತಿಸುತ್ತಾಳೆ.

ತನ್ನ ಗಂಡನ ಸ್ವರೂಪದ ವರ್ಣನೆಯನ್ನು ಮಾಡುತ್ತ ಅವನು 'ಸುಲಿಪಲ್ಲ

---

೧೦. ನೋಡಿ: Richard Lannoy, *Speaking Tree*, 1975, p. 203.

ಗೊರವ'ನಾದರೂ ಮಿಕ್ಕು ಮೀರಿ ಹೋಗುವನೆಂದು ಹೇಳುತ್ತಾಳೆ. ಅವನ ವರ್ಣನೆಯನ್ನು ಒಂದು ವಚನದಲ್ಲಿ ಅವಳು ಹೀಗೆ ಮಾಡುತ್ತಾಳೆ:

> ಎಲ್ಲರ ಗಂಡರ ಶೃಂಗಾರದ ಪರಿಯಲ್ಲ
> ಎನ್ನ ನಲ್ಲನ ಶೃಂಗಾರದ ಪರಿ ಬೇರೆ !
> ಶಿರದಲ್ಲಿ ಕಂಕಣ ಉರದ ಮೇಲಂದುಗೆ ಕಿವಿಯಲ್ಲಿ ಹಾವುಗೆ
> ಉಭಯ ಸಿರಿವಂತನ ಮಳಕಾಲಲ್ಲಿ ಜಳವಟ್ಟಿಗೆ
> ಉಂಗುಟದಲ್ಲಿ ಮೂಕುತಿ – ಇದು ಜಾಣರಿಗೆ ಜಗುಳಿಕೆ
> ಚನ್ನಮಲ್ಲಿಕಾರ್ಜುನಯ್ಯನ ಶೃಂಗಾರದ ಪರಿ ಬೇರೆ ॥ [೧೧]

ಲೌಕಿಕದ ಗಂಡನ ಶೃಂಗಾರದ ರೀತಿಯು ಎಷ್ಟು ಕ್ರಮಬದ್ಧವಾಗಿರುತ್ತದೆಯೋ ಅಷ್ಟೇ ಅಕ್ರಮವಾಗಿದೆ ಇಲ್ಲಿ ಚನ್ನಮಲ್ಲಿಕಾರ್ಜುನಯ್ಯನ ಶೃಂಗಾರದ ರೀತಿ. ಈ ಗಂಡನನ್ನು ಅವಳು ನಲ್ಲನೆಂದು ಕರೆಯುವುದಷ್ಟೇ ಅಲ್ಲ, ಇವನೊಡನೆ ಹಾದರವೂ ಕೂಡ ಇಲ್ಲಿ ಒಪ್ಪಿತವಾದ ನಡವಳಿಕೆಯೇ ಆಗಿದೆ. 'ಗಂಡ'ನೆನ್ನುವ ತತ್ವವೇ ಇಲ್ಲಿ ಸಂಪೂರ್ಣವಾಗಿ ಭಿನ್ನವಾದ ಅರ್ಥ ವಲಯಗಳಲ್ಲಿ ಪ್ರಯೋಗಗೊಳ್ಳುತ್ತಿದೆ ಎನ್ನುವುದನ್ನು ಗಮನಿಸಬೇಕು. ಇಂಥ ಅಭಿವ್ಯಕ್ತಿಗಳಲ್ಲಿ ಸ್ವತಂತ್ರ ಮನಸ್ಸಿನ ಹೆಣ್ಣಿನ ಉಲ್ಲಾಸಮಯ ವ್ಯಕ್ತಿತ್ವವು ಒಳನಾಡಿನಲ್ಲಿ ಹರಿಯುವುದನ್ನು ಗಮನಿಸಬಹುದು. ಈ ಗಂಡಿನೊಡನೆ ತನ್ನ ಮೈಮನಸ್ಸಿನ ಅಭಿವ್ಯಕ್ತಿಗಳನ್ನು ವ್ಯಕ್ತಪಡಿಸುವುದಕ್ಕೆ ಕಾರಣಗಳು ಲೌಕಿಕದ ಗಂಡಂದಿರ ಅಮಾನವೀಯ, ಕಠೋರ ನಡತೆಯೇ ಎನ್ನುವುದನ್ನು ವಚನವೊಂದು ವಿವರಿಸುತ್ತದೆ: ಒಂದು ರೀತಿಯ ಸಂದೇಹ, ಅಸ್ಪಷ್ಟತೆ ಈ ಸಂಬಂಧದ ಲಕ್ಷಣವೆನ್ನುವುದನ್ನು ವಚನದ ಧಾಟಿಯು ಹೇಳುತ್ತದೆ:

> ಎರದ ಮುಳ್ಳಿನಂತೆ ಪರಗಂಡರೆನಗವ್ವಾ
> ಸೋಂಕಲಮ್ಮೆ ಸುಳಿಯಲಮ್ಮೆ;
> ನಂಬಿ ನಚ್ಚಿ ಮಾತಾಡಲಮ್ಮೆನವ್ವಾ
> ಮಲ್ಲಿಕಾರ್ಜುನನಲ್ಲದ ಗಂಡರಿಗೆ
> ಉರದಲ್ಲಿ ಮುಳ್ಳುಂಟೆಂದು ನಾನಪ್ಪಲಮ್ಮೆನವ್ವಾ ॥ [೧೨]

ದೈಹಿಕವಾಗಿ, ಮಾನಸಿಕವಾಗಿ – ಎರಡೂ ರೀತಿಯಲ್ಲಿಯೂ ಲೌಕಿಕವು ರೂಪಿಸಿದ ಗಂಡರನ್ನು ಸಂಗ ಮಾಡಲಾಗದ ಸ್ಥಿತಿಯು ವಚನದಲ್ಲಿ ಅಭಿವ್ಯಕ್ತಗೊಂಡಿದೆ. ಪ್ರೇಮದ ಅಭಿವ್ಯಕ್ತಿಯ ಬದಲು ಕ್ರೌರ್ಯದ ಮುಳ್ಳು ಇವರ ತೊಡೆಯಲ್ಲಿ ಇರುವುದನ್ನು ರೂಪಕದ ಮೂಲಕ ಇಲ್ಲಿ ಪರಿಣಾಮಕಾರಿಯಾಗಿ ಹೇಳಲಾಗಿದೆ. ಗಂಡನ ಕ್ರೌರ್ಯಕ್ಕೂ ಅವನಲ್ಲಿ ತನ್ನದೇ ಆದಂಥ ವ್ಯಕ್ತಿತ್ವ, ಅಭಿವ್ಯಕ್ತಿ ಇಲ್ಲದೇ ಇರುವುದಕ್ಕೂ ಮೂಲಭೂತವಾಗಿ ಕುಟುಂಬದ ರಚನಾವಿನ್ಯಾಸದಲ್ಲಿಯೇ ಕಾರಣಗಳು ಇರುತ್ತವೆಂದು ಈ ಮೊದಲೇ ಗಮನಿಸಲಾಗಿದೆ.

ಚನ್ನಮಲ್ಲಿಕಾರ್ಜುನನ ಜೊತೆಗೆ ಕೂಡುವ ಸಂಬಂಧವನ್ನು ಹೇಳುವ

---

೧೧. ಶಿವಶರಣೆಯರ ವಚನಗಳು (ಸಂ: ಆರ್.ಸಿ. ಹಿರೇಮಠ) ಮಹಾದೇವಿಯಕ್ಕನ ವಚನಗಳು, ಸಂಖ್ಯೆ: ೨೮೦.

೧೨. ಶಿವಶರಣೆಯರ ವಚನಗಳು(ಸಂ: ಆರ್. ಸಿ. ಹಿರೇಮಠ) ಮಹಾದೇವಿಯಕ್ಕನ ವಚನಗಳು. ಸಂಖ್ಯೆ: ೨೯೫.

ಅಕ್ಕಮಹಾದೇವಿಯ ವಚನಗಳು ಸಂಪ್ರದಾಯದ ಎಲ್ಲ ಮುಜುಗರಗಳನ್ನು ಮೀರಿಬಿಡುತ್ತವೆ. ಮೂಲಭೂತವಾಗಿ ಕಾಮ-ಪ್ರೇಮಗಳ ಬಗ್ಗೆ ಸಮಾಜವು ಹಾಕಿದ ಎಲ್ಲ ಮಿತಿ ಹಾಗೂ ಪ್ರತಿಬಂಧಕಗಳನ್ನು ಇವಳ ಅಭಿವ್ಯಕ್ತಿಯ ಸ್ವರೂಪವೇ ತೊಡೆದುಹಾಕುತ್ತದೆ. ಅತ್ಯಂತ ಪರಿಣಾಮಕಾರಿಯಾಗಿ ಈ ಕ್ರಿಯೆಯ ಉತ್ಕಟ ಅನುಭವವನ್ನು ಹೇಳುವ ಒಂದು ವಚನವು ಹೀಗಿದೆ:

ಮಚ್ಚು ಅಚ್ಚುಗವಾಗಿ ಒಪ್ಪಿದ ಪರಿಯ ನೋಡಾ
ಎಚ್ಚಡೆ ಗರಿದೋರದಂತಿರಬೇಕು
ಅಪ್ಪಿದಡೆ ಅಸ್ತಿಗಳು ನುಗ್ಗುನುಸಿಯಾಗಬೇಕು
ಬೆಚ್ಚಡೆ ಬೆಸುಗೆಯನರಿಯದಂತಿರಬೇಕು
ಮಚ್ಚು ಒಪ್ಪಿತ್ತು ಚನ್ನಮಲ್ಲಿಕಾರ್ಜುನನ ಸ್ನೇಹ ತಾಯೆ ॥ [೧೩]

ದೈಹಿಕ ಸಂಬಂಧದ ಗಾಢ ತನ್ಮಯತೆಯನ್ನು ವಿವರಿಸುವ ವಚನವು, ಕಾಮಕ್ಕೆ ಸಂಬಂಧಿಸಿದ ಎಲ್ಲ ಸಂಕೋಚವನ್ನು ಅತ್ಯಂತ ಸಹಜವೆನ್ನುವಂತೆ ನಿರಾಕರಿಸುತ್ತದೆ. ಸಾಮಾಜಿಕ ಚೌಕಟ್ಟುಗಳ ನಿಯಮಗಳಲ್ಲಿ ಇಂಥ ವೈಯಕ್ತಿಕ ಆಕಾಂಕ್ಷೆ ಅಭೀಪ್ಸೆಗಳಿಗೆ ಅವಕಾಶವೇ ಇಲ್ಲ. ಆದ್ದರಿಂದಲೇ ಅಕ್ಕಮಹಾದೇವಿಯ ಅಭಿವ್ಯಕ್ತಿಯು ಸಾಮಾಜಿಕ ಚೌಕಟ್ಟುಗಳ ನಿಯಮವನ್ನು ಅತ್ಯಂತ ವೈಯಕ್ತಿಕವಾದ ಈ ವಾತಾವರಣದಲ್ಲಿ ಸಂಪೂರ್ಣವಾಗಿ ಉಲ್ಲಂಘಿಸುತ್ತದೆ.

ಚೆನ್ನಮಲ್ಲಿಕಾರ್ಜುನ ಕೂಡ ತನ್ನ ಒಡನಾಟವನ್ನು ವಿವರಿಸುವ ಇವಳ ಅನೇಕ ವಚನಗಳ ಮುಖ್ಯವಾತಾವರಣವು ಕನಸುಗಳದ್ದೇ ಆಗಿದೆ. ಈ ಕನಸು ಕಾಣುವ, ನಿರೀಕ್ಷೆಯ ಎಲ್ಲ ನೆಲೆಗಳೂ ತೀವ್ರವಾದ ಆಪ್ತತೆಯ ಹಾಗೂ ಮಧುರ ಭಾವಗಳನ್ನು ಹುಟ್ಟಿಸುವಂಥವುಗಳೇ ಆಗಿವೆ. ಕನಸು – ಎಚ್ಚರಗಳ ನಡುವೆ ಇಲ್ಲಿಯ ಪ್ರೇಮ ಸಂಬಂಧವು ರೂಪುಗೊಳ್ಳುವುದನ್ನು ವಚನಗಳು ವಿವರಿಸುತ್ತವೆ. ''ಕಾಣುತ್ತ ಕಾಣುತ್ತ ಕಂಗಳ ಮುಚ್ಚಿದೆ. ಕೇಳುತ್ತ ಕೇಳುತ್ತ ಮೈಮರೆದೂರಗಿದೆ ನೋಡವ್ವಾ; ಹಾಸಿದ ಹಾಸಿಗೆಯ ಹಂಗಿಲ್ಲದೆ ಹೋಯಿತು ಕೇಳವ್ವಾ'' ಎನ್ನುವ ''ಅಕ್ಕ ಕೇಳಾ, ಅಕ್ಕಯ್ಯಾ ನಾನೊಂದು ಕನಸ ಕಂಡೆ: ಅಕ್ಕಿ ಅಡಕೆ ಓಲೆ ತೆಂಗಿನಕಾಯಿ ಕಂಡೆ...'' ಎನ್ನುವ ವಚನ ಹಾಗೂ ''ಕೇಳವ್ವಾ ಕೆಳದಿ ನಾನೊಂದು ಕನಸುವ ಕಂಡೆ, ಗಿರಿಯ ಮೇಲೊಬ್ಬ ಗೊರವ ಕುಳ್ಳಿರ್ದುದ ಕಂಡೆ'' ಎನ್ನುವ ವಚನ – ಹೀಗೆ ಹಲವಾರು ವಚನಗಳಲ್ಲಿ ಚೆನ್ನಮಲ್ಲಿಕಾರ್ಜುನನ ಪ್ರೇಮ ಸಂಬಂಧವು ಕನಸು ಕಾಣುವ ಸ್ವರೂಪದಲ್ಲಿ ವ್ಯಕ್ತವಾಗುತ್ತದೆ.

ಕನಸುಗಾರಿಕೆಯ ಮೂರು ಲಕ್ಷಣಗಳನ್ನು ಫ್ರೈ ಒಂದು ಕಡೆಗೆ ವಿವರಿಸುತ್ತಾನೆ. ಅವನ ಪ್ರಕಾರ ಅವುಗಳು ವಿವರಿಸುವ ವಲಯ ವಾಸ್ತವವಲ್ಲದಿದ್ದರೂ, ಗ್ರಹಿಸುವ ಆಶಯವಾಗಿಯೇ ಬರುತ್ತವೆ. ದುಃಖ, ಆತಂಕಗಳಿಂದ ಸಂಪೂರ್ಣ ಮುಕ್ತವಾಗಿ ಇಚ್ಛೆಗಳ ಪೂರೈಕೆಯ ವಲಯಗಳಾಗಿ ಇವು ಮೂಡುತ್ತವೆ, ಮತ್ತು ಈ ಕನಸಿನ ಜಗತ್ತು ಕನಸು ಕಾಣುವವನ ಮನಸ್ಸಿನ ಆವರಣಕ್ಕೆ ಮಾತ್ರ ಸೀಮಿತವಾಗಿರುತ್ತದೆ.[೧೪]

ಕನಸುಗಾರಿಕೆಯು ವ್ಯಕ್ತಿಯ ಅಭೀಪ್ಸೆಯ ಹಾಗೂ ಅದೇ ಕಾರಣದಿಂದಾಗಿ, ಅವನ

೧೩. ಶಿವಶರಣೆಯರ ವಚನಗಳು (ಸಂ: ಆರ್. ಸಿ. ಹಿರೇಮಠ) ಮಹಾದೇವಿಯಕ್ಕನ ವಚನಗಳು. ಸಂಖ್ಯೆ: ೨೬೭.

೧೪. ''When we look at the dream as a whole, we notice, three things above it. First, its limits are not the real, but conceivable. Second, the limit of the conceivable is the world of fulfilled desire emancipated from all

ಒಂಟಿತನದ ಪ್ರತೀಕವಾಗಿ ರೂಪುಗೊಳ್ಳುತ್ತದೆ. ಫ್ರೈ ಹೇಳುವ ಮೂರು ಲಕ್ಷಣಗಳು – ವ್ಯಕ್ತಿಯ ವೈಯಕ್ತಿಕತೆ (Individuality) ಯನ್ನೇ ಎತ್ತಿಹೇಳುವುದನ್ನು ಗಮನಿಸಬಹುದು. ಒಂದು ರೀತಿಯಲ್ಲಿ ಇದು ಸಮಾಜವು ರೂಪಿಸುವ ನಿಯಮಗಳನ್ನು ದಾಟಿರುವ ಬಗೆಯೂ ಆಗಿದೆಯೆನ್ನಬಹುದು. ಅಕ್ಕಮಹಾದೇವಿಯ ವಚನಗಳಲ್ಲಿನ ಕನಸುಗಾರಿಕೆಯು ಈ ಎಲ್ಲ ಸ್ವರೂಪವನ್ನು ನಿಚ್ಚಳವಾಗಿ ಅಭಿವ್ಯಕ್ತಿಸುತ್ತದೆ. ಈ ಸ್ವರೂಪವೇ ಮುಖ್ಯವಾಗಿ ವಾಸ್ತವ ಬದುಕಿನ ಕಠೋರತೆಯನ್ನೂ ಮತ್ತು ಅದರಿಂದ ಭಿನ್ನವಾದಂಥ ವ್ಯಕ್ತಿಯ ಆಶಯವನ್ನೂ ತನ್ನ ಪ್ರಕಟಗೊಂಡ ವಿನ್ಯಾಸದಲ್ಲಿ ಹಿಡಿದು ಇಟ್ಟಿದೆ.

ಅಕ್ಕಮಹಾದೇವಿಯ ಪ್ರಕಾರ ಪ್ರೇಮ ಹಾಗೂ ಕಾಮದ ಸಂಬಂಧಗಳು ಈ ಸಮಾಜದ ವಾತಾವರಣದಲ್ಲಿ ಆರೋಗ್ಯಪೂರ್ಣ ಬೆಳವಣಿಗೆಗೆ ಅವಕಾಶವನ್ನು ಮಾಡಿಕೊಡುವುದಿಲ್ಲ ವೆನ್ನುವುದೇ ಆಗಿದೆ. ಆದ್ದರಿಂದಲೇ ಇವಳ ಆಶಯವು ಏಕೈಕನಾದಂಥ ಚೆನ್ನಮಲ್ಲಿಕಾರ್ಜುನ ನಲ್ಲಿಯೇ ಒಳಗಾಗಬೇಕಾದುದನ್ನು ಅನಿವಾರ್ಯವಾಗಿಸುತ್ತದೆ. ಅವಳ ಅಭೀಪ್ಸೆಯು ತನ್ನ ಪ್ರೇಮಸಂಬಂಧಕ್ಕೆ ತಕ್ಕ ವಾತಾವರಣವನ್ನು ರೂಪಿಸಿಕೊಳ್ಳುವುದೇ ಆಗಿದೆ. ಆದ್ದರಿಂದಲೇ ಅಕ್ಕಮಹಾದೇವಿಯ ವಚನಗಳಲ್ಲಿ ಹುಡುಕಾಟಗಳು, ಕಾಯುವಿಕೆ, ಆತಂಕದ ಮನಃಸ್ಥಿತಿ ಇವುಗಳು ಪ್ರಧಾನವಾದ ಧೋರಣೆಗಳಾಗಿರುವುದನ್ನು ಗಮನಿಸಬಹುದು.

### ೧.೪ ಹೊಸ ಪ್ರೇಮ ಸಂಬಂಧದ ಸಾಫಲ್ಯಕ್ಕಾಗಿ ಹುಡುಕಾಟಗಳು

ಅಕ್ಕಮಹಾದೇವಿಯ ವಚನಗಳಲ್ಲಿ ಈ ಭಾಗವು ಅತ್ಯಂತ ಮಹತ್ವಪೂರ್ಣವಾದದ್ದಾಗಿದೆ ಎನ್ನಬಹುದು. ಲೌಕಿಕದ ಕುಟುಂಬ ರಚನೆಯ ಸ್ವರೂಪಗಳು, ವ್ಯಕ್ತಿಯ ಮೇಲೆ ತರುವ ಒತ್ತಾಯಗಳಿಂದಾಗಿ, ಹೊಸ ವಾತಾವರಣವೊಂದರಲ್ಲಿ ಈ ಆಶಯಗಳ ಸಾಫಲ್ಯಕ್ಕಾಗಿ ಅಕ್ಕಮಹಾದೇವಿಯು ನಡೆಸಿದ ಹುಡುಕಾಟಗಳು ಅವಳ ವಚನಗಳಲ್ಲಿ ಎರಡು ರೀತಿಯಲ್ಲಿ ರೂಪುಗೊಂಡಿವೆ. ಒಂದನೆಯ ವಲಯದಲ್ಲಿ–ಅವಳು ಶರಣರ ಸಂಬಂಧದಲ್ಲಿ ಈ ತನ್ನ ಆಶಯದ ಗಳಿಕೆಯಾಗಿ ಅರಸುತ್ತಾಳೆ. ಎರಡನೆಯ ವಲಯ–ಇವಳು ಪ್ರಕೃತಿಯಲ್ಲಿ ತನ್ನ ಪ್ರೇಮಸ್ವರೂಪದ ಆಶಯವನ್ನು ಹುಡುಕಲು ಯತ್ನಿಸುತ್ತಾಳೆ.

ಶರಣರ ಸಂಬಂಧದಲ್ಲಿ, ಅವರ ಸಾನ್ನಿಧ್ಯದಲ್ಲಿ ತನ್ನ ಆಶಯಗಳು ಫಲ ಕೊಟ್ಟವು ಎನ್ನುವ ಆಶಯವನ್ನು ವಿವರಿಸುವ ಅನೇಕ ವಚನಗಳು ಅಕ್ಕಮಹಾದೇವಿಯಲ್ಲಿ ಸಿಗುತ್ತವೆ. ಬಸವಣ್ಣ, ಪ್ರಭು, ಚನ್ನಬಸವಣ್ಣ, ಮಡಿವಾಳ, ಸಿದ್ಧರಾಮ, ಮುಂತಾದ ಅನೇಕ ಶರಣರ ಹೆಸರುಗಳು ಅವಳ ಈ ಸಂದರ್ಭದ ವಚನಗಳಲ್ಲಿ ಬಂದು ಹೋಗುತ್ತವೆ. ಅದರಲ್ಲಿಯೂ ಬಸವಣ್ಣನನ್ನು ಅವಳು ಅತ್ಯಂತ ಆತ್ಮೀಯತೆ, ಗೌರವಗಳಿಂದ ನೆನೆದುಕೊಂಡಿರುವುದು ಅವಳ ವಚನಗಳಲ್ಲಿ ಒಂದು ವೈಶಿಷ್ಟ್ಯವಾಗಿದೆ.

> ಚನ್ನಮಲ್ಲಿಕಾರ್ಜುನಯ್ಯನ ನೆನಹಾದಲ್ಲಿಯೆ
> ನಿಮ್ಮ ಕರುಣದ ಶಿಶುವಾನು ಕಾಣಾ ಸಂಗನಬಸವಣ್ಣ ॥ [೧೫]

---

anxieties and frustrations. Third, the universe of the dream is entirely within the mind of the dreamer."

ನೋಡಿ: Northrop Fry, *Anatomy of Criticism*, 1973, p. 119.

೧೫. ಶಿವಶರಣೆಯರ ವಚನಗಳು (ಸಂ: ಆರ್. ಸಿ. ಹಿರೇಮಠ) ಮಹಾದೇವಿಯಕ್ಕನ ವಚನಗಳು. ಸಂಖ್ಯೆ: ೨೧೭.

ಎನ್ನುವ ಮಾತುಗಳಲ್ಲಿ ಅವಳ ಭಾವವು ಪ್ರಕಟವಾದ ನೆಲೆಗಳನ್ನು ಗುರುತಿಸಬಹುದು. ರಕ್ಷಣೆ ಆರೈಕೆಯ ವಾತಾವರಣವು ವ್ಯಕ್ತಗೊಂಡಿರುವ ಬಗೆಯನ್ನು ಈ ಮಾತುಗಳಲ್ಲಿ ಕಾಣಬಹುದಾಗಿದೆ. ''ಕಾಮವಿಕಾರ ಕತ್ತಲೆಯಳಿದು'' ''ಲಿಂಗವಿಕಾರ ಸಂಗವ ಮರೆದು'' ಇರುವಂಥ ಶರಣರನ್ನು ಹಾರೈಸುವ ವಚನವೂ ಇವಳಲ್ಲಿ ಸಿಗುತ್ತದೆ.

ಆದರೆ ಅಕ್ಕಮಹಾದೇವಿಯದು ನಿರಂತರ ಹುಡುಕಾಟವೇ ಆಗಿರುವುದು ಇಲ್ಲಿ ಗಮನಿಸಬೇಕಾದ ಒಂದು ಅಂಶ. ವ್ಯಕ್ತಿ ಹಾಗೂ ಅವನ ಬದುಕಿನಲ್ಲಿ ಕೈಗೂಡಬೇಕಾದ ಆಶಯ, ಅಭೀಪ್ಸೆಗಳನ್ನು ಅಕ್ಕಮಹಾದೇವಿಯು ಅನುಭಾವದ ಬಯಕೆಯಲ್ಲಿ ಅರಸಲು ಪ್ರಯತ್ನಿಸಿದ್ದಾಳೆ. ಹಿಂದೆ ವಿವರಿಸಿದ ಹಾಗೆ ಇವಳ ಹುಡುಕಾಟವು ಪ್ರಕೃತಿ (Nature)ಯಲ್ಲಿ, ಶರಣರಲ್ಲಿ–ಹೀಗೆ ಈ ದ್ವಂದ್ವಗಳಲ್ಲಿ ರೂಪುಗೊಳ್ಳುವುದು ಗಮನಾರ್ಹವಾಗಿದೆ. ಈ ಸಂಬಂಧದ ಅವಳ ವಚನವೊಂದು ಹೀಗಿದೆ:

ಗಿರಿಯೊಳು, ವನದೊಳು ಗಿಡಗಿಡದತ್ತ
ದೇವ, ಎನ್ನ ದೇವ, ಬಾರಯ್ಯಾ ತೋರಯ್ಯಾ ನಿಮ್ಮ ಕರುಣವನೆಂದು
ನಾನು ಅರಸುತ್ತ ಅಳಲುತ್ತ ಕಾಣದೆ ಸುಯಿದು ಬಂದು ಕಂಡೆ
ಶರಣರ ಸಂಗದಿಂದ ಅರಸಿ ಹಿಡಿದಿಹನೆಂದು;
ನೀನಡಗುವ ಠಾವ ಹೇಳಾ, ಚನ್ನಮಲ್ಲಿಕಾರ್ಜುನ ॥ [೧೬]

ಈ ವಚನವು ಅಕ್ಕಮಹಾದೇವಿಯ ದ್ವಂದ್ವವನ್ನು ಸೂಚಿಸುತ್ತಿದೆ. ಪ್ರಕೃತಿಯ ನೆಲೆಗಳಲ್ಲಿ ಹುಡುಕಾಟ ಹಾಗೂ ಶರಣರ ಸಂಗದಲ್ಲಿ ಹುಡುಕಾಟ–ಇವೆರಡೂ ಅರಸುವ ತಾಣಗಳಾಗಿರುವಂತೆಯೇ, ಕೊನೆಯಲ್ಲಿ ಇವಳಿಗೆ ಒಂದು ಪ್ರಶ್ನೆಯು ಕಾಡುತ್ತಲೇ ಇದೆ: ''ನೀನಡಗುವ ಠಾವ ಹೇಳಾ.''

ಪ್ರಕೃತಿಯಲ್ಲಿ ಮಲ್ಲಿಕಾರ್ಜುನನನ್ನು ಹುಡುಕುವುದನ್ನು ವಿವರಿಸುವ ಇವಳ ಮೂರೂ ವಚನಗಳು– ('ಅಳಿಸಂಕುಲವೇ ಮಾಮರವೇ, ಬೆಳುದಿಂಗಳೇ.......'; 'ಚಿಲಿಮಿಲಿ ಎಂದು ಓದುವ ಗಿಳಿಗಳಿರಾ, ನೀವು ಕಾಣಿರೆ, ನೀವು ಕಾಣಿರೆ........' ಹಾಗೂ 'ವನವೆಲ್ಲಾ ನೀನೆ, ವನದೊಳಗಣ ದೇವತರುವೆಲ್ಲಾ ನೀನೆ.......') ಪ್ರಶ್ನೆಯಲ್ಲಿಯೇ ಉಳಿದುಬಿಡುವುದು ಇಲ್ಲಿ ಗಮನಿಸಬೇಕಾದ ಸಂಗತಿಯಾಗಿದೆ.

ಮನುಷ್ಯನ ಪ್ರವೃತ್ತಿಗಳ ಬಂಧನಮುಕ್ತ ನೆಲೆಯು ಇಲ್ಲಿ ಆಶಯವಾಗಿ, ನಿರೀಕ್ಷೆಯಾಗಿ ಉಳಿಯುತ್ತದೆ. ಸಮಾಜದ ವ್ಯವಸ್ಥೆಗೂ, ವ್ಯಕ್ತಿಯ ಪ್ರವೃತ್ತಿಗೂ ಕಂದರಗಳಿದ್ದಾಗ ಈ ಸ್ಥಿತಿಯು ಅನಿವಾರ್ಯವಾಗಿಯೇ ಉಳಿಯುತ್ತದೆ ಎನ್ನಬಹುದು.

ಒಂದು ಸಾಮಾಜಿಕ ವ್ಯವಸ್ಥೆಗೆ ಹುಚ್ಚುತನವಾಗಿ, ಮಾರಕವಾಗಿ ಕಾಣುವಂಥ ಇಂಥ ಪ್ರವೃತ್ತಿಗಳನ್ನು ವ್ಯವಸ್ಥೆಯು ಎರಡು ರೀತಿಯಲ್ಲಿ ಪರಿಗಣಿಸುತ್ತದೆ ಎಂದು ಮಾರ್ಕ್ಯೂಸ್ ಹೇಳುತ್ತಾನೆ. ಈ ಪ್ರವೃತ್ತಿಗಳು– ಅನುಭಾವದ (Sublimated) ನೆಲೆಯ ಕ್ರಿಯೆಗಳನ್ನುವುದಾದರೆ ಅವುಗಳನ್ನು ಒಪ್ಪಿಕೊಳ್ಳುತ್ತಲೂ, ಅವುಗಳು ವಾಸ್ತವದ (Realistic) ಹಂತದ್ದನ್ನುವು

೧೬. ಶಿವಶರಣೆಯರ ವಚನಗಳು (ಸಂ: ಆರ್. ಸಿ. ಹಿರೇಮಠ) ಮಹಾದೇವಿಯಕ್ಕನ ವಚನಗಳು. ಸಂಖ್ಯೆ: ೨೩೦.

ದಾದರೆ ಅವುಗಳನ್ನು ಹುಚ್ಚುತನ, ಹಾಗೂ ಸಾವಿನ ಸ್ವರೂಪವೆಂತಲೂ ಪರಿಗಣಿಸುತ್ತವೆ ಎಂದು ಇವನು ಹೇಳುತ್ತಾನೆ.[೧೭]

ಸಮಾಜದ ರಚನೆಯಲ್ಲೇ ಮೂಲಭೂತ ಬದಲಾವಣೆ ಆಗುವ ಹೊತ್ತಿನಲ್ಲಿ ಮನುಷ್ಯನ ಪ್ರವೃತ್ತಿಗಳು ಹಳೆಯ ಸಾಮಾಜಿಕ ರಚನೆಯ ಎಲ್ಲ ವಿನ್ಯಾಸವನ್ನು ಒಡೆಯುವ ಶಕ್ತಿಗಳಾಗುತ್ತವೆ ಎಂದು ಎರಿಕ್ ಫ್ರೊಂ ಅಭಿಪ್ರಾಯಪಡುತ್ತಾನೆ.[೧೮]

ಮನುಷ್ಯನ ಮೂಲ ಪ್ರವೃತ್ತಿಗಳಲ್ಲಿ ಒಂದಾದ ಪ್ರೇಮ ಸಂಬಂಧವನ್ನು ಕುರಿತು ಫ್ರಾಯ್ಡನಿಗಿಂತ ಭಿನ್ನವಾಗಿ ನೋಡಿದ ಫ್ರೊಂ ಒಂದೆಡೆಗೆ ಹೀಗೆ ಹೇಳುತ್ತಾನೆ:

''Genuine love is rooted in productiveness and may properly be called therefore 'Productive Love'. Its essence is the same whether it is the mother's love for the child, our love of man, or the erotic love between two individuals.....certain basic elements may be said to be characteristic of all forms of productive love. These are care, responsibility, respect, and knowledge.''[೧೯]

ಫ್ರೊಂ ಪ್ರಕಾರ ಪ್ರೀತಿ ಎನ್ನುವುದು ಸ್ಥಾವರವಾಗಿರುವುದು ಅಲ್ಲ. ಅದು ಮನುಷ್ಯ-ಮನುಷ್ಯ ಸಂಬಂಧಗಳ ನಡುವೆ ಆತ್ಮೀಯತೆ, ಗೌರವ, ಜ್ಞಾನವನ್ನು ಬೆಳೆಸುವಂಥದ್ದು. ಇಂಥ ಸ್ವರೂಪಗಳು ಬೆಳೆದಾಗಲೆಲ್ಲ ಮನುಷ್ಯನಿಗೂ, ಅವನು ಆಶಿಸಿದ ಸಮಾಜದ ವಾತಾವರಣಕ್ಕೂ ಸಾಮರಸ್ಯವು ಕಂಡುಬರುತ್ತದೆ.

ಅಕ್ಕಮಹಾದೇವಿಯು ತನ್ನ ಪ್ರೇಮಸಂಬಂಧದ ಹಾರ್ದಿಕೆಯ ಅನುಭಾವದ ನೆಲೆಗಳಲ್ಲಿ ಮನುಷ್ಯ ಸಂಬಂಧದ ನೆಲೆಗಳು ಹೆಚ್ಚು ಜೀವ ಚೈತನ್ಯವನ್ನು ಹೊಂದಬೇಕೆಂದು ಹಂಬಲಿಸಿದ್ದುದರ ಅಭಿವ್ಯಕ್ತಿಯಾಗಿಯೇ ಅವಳ ವಚನಗಳ ಪ್ರಮುಖ ಧೋರಣೆಗಳು ಕಂಡುಬರುತ್ತವೆ. ಅವಳು ಬಾಳಿದ ಲೌಕಿಕ (=ಸಮಾಜ)ದಲ್ಲಾದರೋ ಇವುಗಳು ಸಾಧ್ಯವಾಗದಂಥ ಸ್ಥಿತಿಯೊಂದು ರೂಪುಗೊಂಡಿದ್ದು, ಅಂಥ ಸಮಾಜದ ವಿರೋಧವು ಇಲ್ಲಿ ಅನಿವಾರ್ಯವಾಗಿದೆ. ಅಲ್ಲದೆ ತನ್ನ ಅನುಭಾವದ ಹಂಬಲದಲ್ಲಿ ಹೊಸ ಸಂಬಂಧಗಳ ಲೋಕವನ್ನು ಅಕ್ಕಮಹಾದೇವಿಯು ಕಾಣಲು ಪ್ರಯತ್ನಪಡುತ್ತಾಳೆ.

ಒಂದು ಚಿಕ್ಕ ಸಮಸ್ಯೆಯ ವಿವರದೊಂದಿಗೆ, ಈ ವಿಭಾಗದ ಚರ್ಚೆಯನ್ನು ಮುಕ್ತಾಯಗೊಳಿಸಬಹುದೆಂದು ತೋರುತ್ತದೆ. ಚಾರಿತ್ರಿಕವಾಗಿ ವಚನಕಾರರು, ಸಂಸಾರದ ಬಗ್ಗೆ ಕಟ್ಟಿಕೊಂಡ ನಿಲುವುಗಳು ಈ ದೇಶದ ಧಾರ್ಮಿಕ ಚರಿತ್ರೆಯಲ್ಲೇ ಹೊಸ ಆಶಯುಗಳನ್ನು

---

೧೭. ''Civilization has acknowledged and sanctioned this supreme danger: It admires the convergence of death instinct and Eros in the highly sublimated and (Monogamic) creations of the Liebestod, while out-lawing the less complete but more realistic expressions of Eros as an end in itself.''

ನೋಡಿ: Herbert Marcuse, *Eros and Civilization*, 1969, p. 242.

೧೮. ನೋಡಿ: Herbert Marcuse, *Eros and Civilization*, 1969, p. 242.

೧೯. Erich Fromm, *Man for himself* (1975), p. 98.

ಹೊಂದಿದಂಥವುಗಳು. ವಚನಕಾರರ ಪ್ರಕಾರ, ಸಂಸಾರದ ಕಲ್ಪನೆಯು ವಾಸ್ತವವಾಗಿ ಶಿವಯೋಗ ಸಮನ್ವಯದ ಜೊತೆಗೆ ಸಂಬಂಧಪಟ್ಟಿರುವಂಥದ್ದು. ಕುಟುಂಬ ವ್ಯವಸ್ಥೆಯ ಮುಖ್ಯ ಘಟಕವಾದ ಗಂಡ-ಹೆಂಡತಿಯ ಸಂಬಂಧವು ಇಲ್ಲಿ ಆತಂಕಕಾರಿಯೆಂದು ತೋರಿಲ್ಲ. ಲೌಕಿಕದಲ್ಲೇ ಗಂಡ-ಹೆಂಡತಿಯು ಸಾಧಿಸಬೇಕಾದ ಹಂತಗಳನ್ನು, ಗುರಿಯನ್ನು ಇವರ ಆಲೋಚನೆಗಳು ಹೇಳುತ್ತವೆ. ಆದರೆ ಅಕ್ಕಮಹಾದೇವಿಯ ಕುಟುಂಬದ ಬಗೆಗಿನ ಸಮಸ್ಯೆಯು ಬಹಳ ಮೂಲಭೂತವಾದದ್ದು. ಇಲ್ಲಿ ಲೌಕಿಕದ ಗಂಡನೇ ತನ್ನ ಪ್ರಭುತ್ವ, ಒತ್ತಾಯಗಳ ಮೂಲಕ ಹೆಣ್ಣಿನೊಡನೆ ಸಹಭಾಗಿತ್ವವನ್ನು ಮಾಡಲು ಅಸಹಾಯಕನಾಗಿದ್ದಾನೆ.

ಮೇಲ್ನೋಟಕ್ಕೆ ಅತ್ಯಂತ ವೈಯಕ್ತಿಕವೆನಿಸುವ ಅಕ್ಕನ ಈ ಅನುಭವವು ಭಾರತದ ಸಾಮಾಜಿಕ ಚರಿತ್ರೆಯಲ್ಲಿ ನಾವು ಕಾಣುವ ಗಂಡು-ಹೆಣ್ಣಿನ ಮೇಲೆ ಮಾಡುತ್ತ ಬಂದಿರುವಂಥ ದಬ್ಬಾಳಿಕೆಯ ವಿರೋಧವನ್ನೇ ಸಂಕೇತಿಸುತ್ತದೆನ್ನಬಹುದು. ಆದ್ದರಿಂದಲೇ ಇದು ವಚನಕಾರರ ಸಂಸಾರ-ಶಿವಯೋಗ ಸಮನ್ವಯದ ಸ್ವರೂಪಕ್ಕಿಂತ ಭಿನ್ನವಾಗಿದೆ ಮತ್ತು ಅನುಭಾವಿಯ ಅನುಭಾವದ ಒಂದು ಮುಖ್ಯ ಲಕ್ಷಣವಾದ ಸತಿ-ಪತಿ (ಪ್ರಿಯತಮ-ಪ್ರಿಯತಮೆ) ಭಾವವನ್ನು, (ವಚನಕಾರರ ಸಂದರ್ಭದಲ್ಲಿ ಹೇಳುವುದಾದರೆ ಶರಣಸತಿ-ಲಿಂಗಪತಿ ಭಾವವನ್ನು) ತನ್ನ ಅನುಭಾವದ ಮುಖ್ಯ ಧಾತುವನ್ನಾಗಿ ಮಾಡಿಕೊಂಡಿದೆ.

*ಮಧ್ಯಕಾಲೀನ ಭಕ್ತಿ ಮತ್ತು ಅನುಭಾವ ಸಾಹಿತ್ಯ ಹಾಗೂ ಚಾರಿತ್ರಿಕ ಪ್ರಜ್ಞೆ, ೧೯೮೮*
*ಅನುಭಾವ : ಸಾಂಸ್ಕೃತಿಕ ಸಮಸ್ಯೆ ಮತ್ತು ಹುಡುಕಾಟ, ೧೯೯೭, ಪು.೨೩೬-೫೦*

# ೬೭. ಹರಳಯ್ಯ ಕಾಲ್ಪನಿಕ ವ್ಯಕ್ತಿಯೇ?

● ಅರವಿಂದ ಮಾಲಗತ್ತಿ

**ಕೋಟಿಗೊಬ್ಬ ಶರಣ ಹರಳಯ್ಯ**

೧೧೬೦ರಲ್ಲಿ ಬದುಕಿದ್ದನೆನ್ನಲಾಗುವ ಹರಳಯ್ಯನ ಕುರಿತು ವ್ಯಕ್ತಿನಿಷ್ಠವಾದ ಪ್ರತ್ಯೇಕ ಲೇಖನಗಳು ಪ್ರಕಟವಾಗಿಲ್ಲ ಎಂದರೆ ತಪ್ಪಾಗಲಾರದು. ಆದರೆ ಜನಪ್ರಿಯವೆನಿಸಿದ ಕಥಾಭಾಗಗಳಿಂದ, ಹರಳಯ್ಯನವರನ್ನು ಪರಿಚಯಿಸುವ ಕೆಲ ಲೇಖನಗಳು ಪ್ರಕಟವಾಗಿವೆ. ಹೀಗಾಗಲು ಕಾರಣಗಳು ಹಲವಾರಿದ್ದರೂ, ಅತಿ ಮುಖ್ಯವಾದ ಕಾರಣ, ಹರಳಯ್ಯನವರ ವಚನಗಳು ಇಲ್ಲವೆನ್ನುವುದಾಗಿದೆ.

ಹರಳಯ್ಯನ ಕಥಾನಕದಲ್ಲಿ ವ್ಯಕ್ತವಾದ ಮತ್ತೊಂದು ಪಾತ್ರ ಮದುವಯ್ಯನದು. ಈತನ ಕುರಿತು ವ್ಯಕ್ತಿಗತವಾದ ಅಧಿಕೃತ ವಿವರಗಳು ಹೆಚ್ಚು ಲಭ್ಯವಿಲ್ಲದಿದ್ದರೂ ಈತನ ವಚನಗಳನ್ನಾಧರಿಸಿ ಲೇಖನಗಳು ಪ್ರಕಟವಾಗಿವೆ. ಮದುವಯ್ಯನವರ ಕುರಿತು ಬರೆಯುವಾಗ ಜನಪ್ರಿಯ ಕಥೆಗಳಲ್ಲಿ ಬರುವಂತೆಯೇ ಹರಳಯ್ಯನವರ ವ್ಯಕ್ತಿತ್ವವನ್ನು ಚಿತ್ರಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಅಧ್ಯಯನ ಸಂಸ್ಥೆಯ ಸಾಹಿತ್ಯ ಚರಿತ್ರೆಯ ಲೇಖನ ಗಮನಾರ್ಹವಾದುದು.[1] ಹಾಗೆಯೇ ಡಾ. ಎಂ. ಚಿದಾನಂದಮೂರ್ತಿಯವರು ಪ್ರಾಸಂಗಿಕವಾಗಿ ಚರ್ಚಿಸಿದ ವಿಚಾರಗಳೂ ಅಷ್ಟೇ ಮಹತ್ವದ್ದಾಗಿವೆ.[2]

ಹರಳಯ್ಯನವರನ್ನು ಆರಂಭದಿಂದಲೇ ಹರಳಯ್ಯನೆಂದು ಗುರುತಿಸುವುದು ಕಂಡುಬರುವುದಿಲ್ಲ. ಬದಲಾಗಿ ಅಲ್ಲಯ್ಯ, ಅಳ್ಳಯ್ಯ, ಹಳ್ಳಯ್ಯ, ಹರಳ ಎಂದು ಶಿಷ್ಟ ಕಾವ್ಯಗಳಲ್ಲಿ ಗುರುತಿಸಿರುವುದು ಕಂಡುಬರುತ್ತದೆ. ಈತನ ಮಡದಿ ಕಲ್ಯಾಣಮ್ಮ, ಇವರಿಗೆ ಒಬ್ಬ ಮಗನಿದ್ದ. (ಜನಪದ ಗೀತೆಗಳಲ್ಲಿ ಮಗಳಿದ್ದಳೆಂದು ಹೇಳಲಾಗಿದೆ) ಈತನನ್ನು ವಿಭಿನ್ನ ಹೆಸರುಗಳಿಂದ ಗುರುತಿಸಿರುವುದು ಕಂಡುಬರುತ್ತದೆ. ಶೀಲವಂತ[3], ಹೊನ್ನ[4], ಹೊನ್ನಯ್ಯ[5] ಎಂದು ದಾಖಲಾದರೂ ಈ ಹೆಸರುಗಳೆಲ್ಲ ತೀರ ಇತ್ತೀಚಿನ ಸೇರ್ಪಡೆಯಾಗಿವೆ.

ಹರಳಯ್ಯನವರು ಕೀಳು ಕುಲದವರು ಎನ್ನುವ ಮಾತು ಎಲ್ಲೆಡೆ ಬಂದರೂ, ಈತನ ಜಾತಿಯ ಕುರಿತು ಒಮ್ಮತವಿರುವುದು ಕಂಡುಬರುವುದಿಲ್ಲ. ಜನಪದರಲ್ಲಿ ಸಮಗಾರ ಮತ್ತು ಮಾದಿಗ್ಗರ ಜಾತಿಗೆ ಸಂಬಂಧಿಸಿದವನೆಂದು ಹೇಳಿದರೆ, ಪುರಾಣ ಕಾವ್ಯಗಳಲ್ಲಿ ಈತ

---

೧. ಸಂ. ಹಾ. ಮಾ. ನಾಯಕ, ಕನ್ನಡ ಸಾಹಿತ್ಯ ಚರಿತ್ರೆ – ಸಂ. ೪, ೬೯೪ರಿಂದ ೬೯೭

೨. ಡಾ. ಎಂ. ಚಿದಾನಂದಮೂರ್ತಿ, ಮಧ್ಯಕಾಲೀನ ಕನ್ನಡ ಸಾಹಿತ್ಯದಲ್ಲಿ ಅಸ್ಪೃಶ್ಯತೆಯ ಪರಿಕಲ್ಪನೆ

೩. ಸಿದ್ಧಯ್ಯ ಪುರಾಣಿಕ, ಶಿಕ್ಷಣ ಚರಿತಾಮೃತ, ೨೯೭ರಿಂದ ೩೦೭.

೪. ಡಾ. ಬಿ. ಎಸ್. ಗದ್ದಗಿಮಠ, ಕನ್ನಡ ಜಾನಪದ ಗೀತೆಗಳು, ॥ ೧೫೬ ॥

೫. ಸಂ. ಶಿವಬಸವಸ್ವಾಮಿಗಳು, ಚನ್ನಪ್ಪ ಕವಿಯ ಶರಣಲೀಲಾಮೃತ, ೪೨೫

ಚಂಡಾಲ,[೬] ಅಂತ್ಯಜ, ಹೊಲೆಯ[೭], ಮಾದಿಗ[೮], ಸಮಗಾರ[೯], ಚಮ್ಮಾರ[೧೦] ಸ್ವಪಚ[೧೧], ಜಾತಿಗೆ ಸಂಬಂಧಿಸಿದವನೆಂದು ಹೇಳಲಾಗಿದೆ. ಈತ ಚಪ್ಪಲಿಯನ್ನು ಮಾಡುವ ಕಾಯಕಕ್ಕೆ ಸಂಬಂಧಿಸಿದವನೆಂದು ಹೆಚ್ಚಿನ ಕೃತಿಗಳು ದಾಖಲಿಸುತ್ತವೆ. ಚಂಡಾಲಿ, ಹೊಲೆಯ, ಸ್ವಪಚ ಈ ಜಾತಿಯವರು ಚಪ್ಪಲಿ ಹೊಲೆಯುವ ಕಾಯಕಕ್ಕೆ ಸಂಬಂಧಿಸಿದವರಲ್ಲ. ಹರಳಯ್ಯ ಮಂಗಳವಾಡ (ಕಲ್ಯಾಣ)ದಲ್ಲಿದ್ದನೆಂದು ಇತ್ತೀಚಿನ ಕಾವ್ಯಗಳು ದಾಖಲಿಸುತ್ತವೆ. ಬ್ರಾಹ್ಮಣನಾದ ಮದುವಯ್ಯ ತನ್ನ ಮಗಳನ್ನು ಹರಳಯ್ಯನ ಮಗನಿಗೆ ಕೊಟ್ಟು ಮದುವೆಮಾಡಿದ ಎಂಬ ಕಥಾನಕದ ವಸ್ತು ಹೊಸಗನ್ನಡದ ಸಂದರ್ಭದಲ್ಲಿ ಹೆಚ್ಚು ಚರ್ಚೆಗೊಳಗಾಗಿದೆ.

## ಹರಳಯ್ಯನವರ ಕಥಾನಕದಲ್ಲಿಯ ಘಟಕಗಳು

ಹರಳಯ್ಯನವರ ಕುರಿತು ಈವರೆಗೆ ಹೊರಬಂದಿರುವ ಕಥೆಗಳನ್ನು ಗಮನಿಸಿದರೆ ಏಕರೂಪವಿರುವುದು ಕಂಡುಬರುವುದಿಲ್ಲ. ಆದರೆ ಹನ್ನೆರಡನೆಯ ಶತಮಾನದಿಂದ ಈವರೆಗೆ ವ್ಯಕ್ತವಾದ ಕಥಾವಸ್ತುವಿನ ಘಟಕಗಳನ್ನು ಕೆಳಕಂಡಂತೆ ವರ್ಗೀಕರಿಸಿ ಅಧ್ಯಯನಕ್ಕೆ ಮುಂದಾಗಬಹುದೆನಿಸುತ್ತದೆ. ಒಂದೊಂದು ಕಥಾಘಟಕಗಳು ಸ್ವತಂತ್ರ ಕಥೆಯಾಗಿ ನಿರೂಪಿತವಾಗಿರುವುದನ್ನೂ ಕಾಣುತ್ತೇವೆ.

೧. ಹರಳಯ್ಯ ಬಸವಣ್ಣನವರನ್ನು ಕಾಣಲು ಹೋಗಿದ್ದರು. ಬಸವಣ್ಣನವರಿಂದ ಒಂದು ಶರಣು ಹೆಚ್ಚಾಗಿ ಹೇಳಿಸಿಕೊಂಡಿದ್ದರ ತಪ್ಪಿಗಾಗಿ, ಕಲ್ಯಾಣಮ್ಮ ಮತ್ತು ಹರಳಯ್ಯ ಸೇರಿ ತಮ್ಮ ತೊಡೆಯ ಚರ್ಮವನ್ನು ತೆಗೆದು ಚಮ್ಮಾವುಗೆಗಳನ್ನು ಮಾಡಿ ಬಸವಣ್ಣನವರಿಗೆ ಕೊಟ್ಟರು. ಬಸವಣ್ಣ ಅವುಗಳನ್ನು ತೆಗೆದುಕೊಳ್ಳದೆ ಮರಳಿ ಕೊಟ್ಟ.

೨. ಚಮ್ಮಾವುಗೆಗಳನ್ನು ತೆಗೆದುಕೊಂಡು ಹೋಗುವಾಗ ಭವಿ ಬ್ರಾಹ್ಮಣನಾದ ಮದುವಯ್ಯ ಚಮ್ಮಾವುಗೆಗಳನ್ನು ಮೆಟ್ಟಿದ. ಅದರಿಂದಾಗಿ ಮೈವುರಿಯ ರೋಗ ಬಂತು. ಹರಳಯ್ಯನ ಬಚ್ಚಲ ನೀರಿಂದ ಸ್ನಾನಮಾಡಿದಾಗ ರೋಗದಿಂದ ಮುಕ್ತನಾದ.

೩. ರೋಗದಿಂದ ಮುಕ್ತನಾದ ಮದುವಯ್ಯ ತನ್ನ ಋಣವನ್ನು ತೀರಿಸಲು ತನ್ನ ಮಗಳನ್ನು ಕೊಟ್ಟು ಮದುವೆ ಮಾಡಲು ಮುಂದಾದ. ಮದುವೆ ಮಾಡಿದ. ಇದನ್ನರಿತ ಬಿಜ್ಜಳ, ಮದುವಯ್ಯ ಹರಳಯ್ಯರನ್ನು ಕರೆಯಿಸಿ ಹೋರಿಗಳಿಗೆ ಕಟ್ಟಿ/ಆನೆಗಳಿಗೆ ಕಟ್ಟಿ ಎಳೆಸಿದ/ ಶೂಲಕ್ಕೇರಿಸಿದ.

೪. ಬಿಜ್ಜಳ ಶಿವದ್ರೋಹವೆಸಗಿದನೆಂದು, ಬಿಜ್ಜಳನನ್ನು ಕೊಲೆ ಮಾಡಲಾಯಿತು. ಇದನ್ನೆಲ್ಲ ಮುನ್ನವೇ ಕಾಲಜ್ಞಾನದಿಂದ ಅರಿತ ಬಸವಣ್ಣನವರು ಕಪ್ಪಡಿಯ ಸಂಗಮೇಶನಲ್ಲಿಗೆ ಹೋದರು.



---

೬. ಸಂ. ಆರ್. ಸಿ. ಹಿರೇಮಠ, ಶ್ರೀ ಸಿದ್ಧರಾಮೇಶ್ವರನ ವಚನಗಳು, ೫೧೯.
೭. ಸಂ. ಶಿವಬಸವಸ್ವಾಮಿಗಳ, ಚೆನ್ನಪ್ಪಕವಿಯ ಶರಣಲೀಲಾಮೃತ, ೪೩೨.
೮. ಮೈಲಹಳ್ಳಿ ರೇವಣ್ಣ, ಮಾದಾರ ಜನಪದ ಸಾಹಿತ್ಯ, ೨೦೩.
೯. ದೇವೇಂದ್ರಕುಮಾರ ಹಕಾರಿ: ಸಮಗಾರ ಹರಳಯ್ಯ.
೧೦. ಪಿ. ಕೆ. ರಾಜಶೇಖರ, ಜನಪದ ಬಸವಪುರಾಣ, ೫೨.
೧೧. ಶಾಂತಲಿಂಗದೇಶಿಕ, ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರರತ್ನಾಕರ – ಭಾ. ೨, ೩೧೫

## ಹರಳಯ್ಯನವರ ಕಥಾನಕದ ನಡಿಗೆಯ ಗತಿ-ಸ್ಥಿತಿ

ಪುರಾಣ-ಕಾವ್ಯಗಳಲ್ಲಿ ಮೇಲಿನ ನಾಲ್ಕು ಘಟನೆಗಳನ್ನೊಳಗೊಂಡ ಪ್ರಬುದ್ಧ ಕತೆ ದೊರಕುವುದು ೧೭೫೦ರಲ್ಲಿ ಹೊರಬಂದ ಚನ್ನಪ್ಪಕವಿಯ ಶರಣಲೀಲಾಮೃತದಲ್ಲಿ. ಹದಿನಾರನೆಯ ಶತಮಾನದ ಉತ್ತರಾರ್ಧದಲ್ಲಿ ಈ ಮೇಲಿನ ನಾಲ್ಕು ಘಟನೆಗಳು ಬಳಕೆಯಲ್ಲಿದ್ದು, ಪರಸ್ಪರ ಸಂಯೋಜನೆಯಲ್ಲಿ ಏಕಸೂತ್ರತೆ ಇರುವುದು ಕಂಡುಬರುವುದಿಲ್ಲ. ಜೊತೆಗೆ ಬಿಡಿಬಿಡಿಯಾದ ಘಟನೆಗಳು ಪ್ರತ್ಯೇಕ ಕಥೆಗಳಂತೆ ಕಾಣಿಸಿಕೊಂಡಿವೆ. ಎಂದರೆ ಒಂದೇ ಕೃತಿಯಲ್ಲಿ ಏಕಕಾಲಕ್ಕೆ ನಾಲ್ಕೂ ಘಟನೆಗಳು ವ್ಯಕ್ತವಾಗದೆ ಎರಡು/ಮೂರು/ಒಂದು ಹೀಗೆ ಬಿಡಿಬಿಡಿಯಾಗಿ ಒಂದಿನ್ನೊಂದಕ್ಕೆ ಸಂಬಂಧವಿಲ್ಲಂತೆ ಕಾಣಿಸಿಕೊಳ್ಳುತ್ತವೆ. ಹನ್ನೆರಡನೆಯ ಶತಮಾನದಿಂದ ಹದಿನೈದನೆಯ ಶತಮಾನದ ಪೂರ್ವಾರ್ಧದವರೆಗೂ ಬಿಡಿ ಕಥೆಗಳಿಗಾಗಲಿ, ಘಟನೆಗಳಿಗಾಗಲಿ ಅಧಿಕೃತವಾಗಿ ಜೀವವೇ ಇಲ್ಲದಿರುವುದು ಆಶ್ಚರ್ಯದ ಸಂಗತಿ!

ಹರಳಯ್ಯನವರ ಕಥಾನಕದ ಬೆಳವಣಿಗೆಯ ಕ್ರಮವನ್ನು ನೋಡಿದರೆ, ಬಚ್ಚಿಟ್ಟ ಯಾವುದೋ ಒಂದು ಕಥೆಯನ್ನು ಅಥವಾ ಹೇಳಲಾಗದ 'ಯಾವುದೋ ಒಂದು ಕಥೆಯನ್ನು ಹೇಳಲು ಹೊರಟು ನೂಲಿಗೆ ನೂಲು ಸೇರಿಸಿ ಹರಳಯ್ಯನ ಕಥಾನಕ (ಹಲವು ಕಥೆಗಳ ಒಂದು ಸಂಯೋಜನೆ) ರೂಪಗೊಂಡಂತಿದೆ. ಈ ಕಥೆ ಅನಿರೀಕ್ಷಿತವಾಗಿ ಅಥವಾ ಸುಪ್ತಪ್ರಜ್ಞೆಯಿಂದ ರೂಪ ಪಡೆದುಕೊಂಡಿದೆಯೇನೋ ಎನ್ನುವಂತೆ ಪುರಾಣ-ಕಾವ್ಯಗಳನ್ನು ಸಮೀಕ್ಷಿಸಿದಾಗ ಗೋಚರವಾಗುತ್ತದೆ. ಮೇಲೆ ಗುರುತಿಸಲಾದ ನಾಲ್ಕು ಘಟನೆಗಳು ನಾಲ್ಕು ಸ್ವತಂತ್ರ ಕಥೆಗಳಾಗಿ, ಅನಂತರ ಒಂದಕ್ಕೊಂದು ಬೆಸುಗೆಬಿದ್ದ ವಿಚಾರವನ್ನು ಸ್ಪಷ್ಟಪಡಿಸುತ್ತವೆ.

ಬಸವಣ್ಣನವರ ಕಾಲಕ್ಕೆ ತೀರ ಹತ್ತಿರವಾದವ ಹರಿಹರ. ಈತ ತನ್ನ ಕೃತಿಯಲ್ಲಿ ಎಲ್ಲಿಯೂ ಹರಳಯ್ಯನ ಕುರಿತು ಅಥವಾ ಜಾತಿ ಸಂಕರದ ವಿವಾಹದ ಕುರಿತು ಪ್ರಸ್ತಾವವೇ ಮಾಡುವುದಿಲ್ಲ. ಮಾದಾರ ಚನ್ನಯ್ಯನ ಕುರಿತು ಶ್ವಪಚಯ್ಯನ ಕುರಿತು ಆದಯ್ಯನ ಕುರಿತು ರಗಳೆಗಳನ್ನು ಹೆಣೆದು ಹಿಗ್ಗುವ ಹರಿಹರ, ಹರಳಯ್ಯನ ಸುತ್ತ ಹಮ್ಮಿದ ಅಂತರ್ಜಾತೀಯ ವಿವಾಹದ ಕುರಿತು ಯಾಕೆ ಬರೆಯಲಿಲ್ಲ? ಎನ್ನುವ ಪ್ರಶ್ನೆ ಕಾಡದಿರದು.[೧೨]

ಹರಿಹರನ ರಗಳೆಯ ಸಾಲುಗಳು ಹೌದೋ ಅಲ್ಲವೋ ಎಂದು ಹೇಳುತ್ತ ಬೇರೊಂದು ಹಸ್ತಪ್ರತಿಯಲ್ಲಿರುವ ಭಾಗವನ್ನು ದಾಖಲಿಸಿದ್ದು, ಅದರಲ್ಲಿ ''ಶಿವದ್ರೋಹವಂ ಗೈದ ಬಿಜ್ಜಳನ ಕೊಲಿಸುತಂ''[೧೩] ಎಂದು ಬರುತ್ತದೆ. ಆದರೆ ಬಿಜ್ಜಳ ಮಾಡಿದ ಶಿವದ್ರೋಹ ಯಾವುದು? ಎನ್ನುವ ವಿವರಗಳಿಲ್ಲ.

ಭೀಮಕವಿಯ ಬಸವಪುರಾಣದಲ್ಲಿ ''ಸೊಗಸದವದಿರ ಮಾತಿಗ್ಹಳ್ಳಯ್ಯಗಳ ಮಧುವಯ್ಯಗಳನಾಗಳೆ ಜಗತಿಪಂ ತಪ್ಪೇನುವಿಲ್ಲದೆ ನೀತಿಯಲ್ಲೆಂದು ಬಗೆಯದವರಂ ಕರೆಸಿ

---

೧೨. ಹರಿಹರನ ಬಸವರಾಜ ದೇವರ ರಗಳೆ ಅಪೂರ್ಣವಾದುದು ಎನ್ನುವ ವಾದವಿದೆ. ಬಹುಶಃ ಈ ರಗಳೆಯ ಮುಂದಿನ ಭಾಗಗಳಲ್ಲಿ ಹರಳಯ್ಯನ ಕಥೆ ಬಂದಿರಬಹುದೇನೋ ಎನ್ನುವ ಸಂದೇಹ ಬಾರದಿರದು. ಆದರೆ ರಗಳೆಯ ನಡಿಗೆಯ ಬಗೆಯನ್ನು ಗಮನಿಸಿದರೆ ಅದು ಮುಕ್ತಾಯದ ಹಂತದಲ್ಲಿದ್ದು ಎರಡು ಅಥವಾ ಮೂರು ತಾಳೆಗರಿಗಳನ್ನು ತೆಗೆದುಹಾಕಿರಬೇಕೆನಿಸುತ್ತದೆ!

೧೩. ಸಂ. ಎಂ. ಎಸ್. ಸುಂಕಾಪುರ, ಹರಿಹರನ ನೂತನ ಪುರಾತನರ ರಗಳೆಗಳು, ೯೪.

ಕಣ್ಣಂ ತೆಗೆಸಿದನು'' ಅನಂತರ ಬಿಜ್ಜಳನ ಕೊಲೆಯಾಯಿತೆಂದು ಬರುತ್ತದೆ.[೧೪]

ಭೀಮಕವಿಯ ಬಸವಪುರಾಣ (ಪಾಲ್ಕುರಿಕೆಯ ಸೋಮನಾಥ) ತೆಲಗು ಬಸವಪುರಾಣದ ಮೂಲದಿಂದ ಬಂದದ್ದು. ಹರಳಯ್ಯನ ಕುರಿತು ತೆಲಗು ಬಸವಪುರಾಣದಲ್ಲಿ ಇದ್ದ ವಿಷಯವನ್ನೇ ಭೀಮಕವಿ ಯಥಾಸ್ಥಿತಿಯಲ್ಲಿ ಬಳಸಿಕೊಂಡಿದ್ದಾನೆ. ಆದರೆ ಹೆಸರಿನಲ್ಲಿ ವ್ಯತ್ಯಾಸಮಾಡಿಕೊಂಡಿದ್ದಾನೆ. ಪಾಲ್ಕುರಿಕೆಯ ಸೋಮನಾಥ ಅಲ್ಲಯ್ಯ ಮಧುಪಯ್ಯರ ಹೆಸರುಗಳನ್ನು ಹೇಳಿದರೆ, ಭೀಮಕವಿ ಅಲ್ಲಯ್ಯ ಮಧುವಯ್ಯಗಳ ಹೆಸರುಗಳನ್ನು ಹೇಳುವುದರೊಂದಿಗೆ ಬೇರೆ ಸಂದರ್ಭದಲ್ಲಿ ಅಲ್ಲಯ್ಯನೆಂದು ಹೇಳದೆ, ಅಳ್ಳಯ್ಯ, ಹಳ್ಳಯ್ಯ ಎಂದು ಹೇಳಿದ್ದಾನೆ. ಈತ ಹೀಗೆ ವಿಭಿನ್ನ ಹೆಸರುಗಳನ್ನು ಯಾಕೆ ಬಳಸಿದ ಎನ್ನುವುದು ಸ್ಪಷ್ಟವಿಲ್ಲ.

ಷಡಕ್ಷರದೇವನ ಬಸವರಾಜ ವಿಜಯಂ ದಲ್ಲಿಯೂ ಅಲ್ಲಯ್ಯನೆಂದೇ ದಾಖಲಿಸಲಾಗಿದೆ. ಆದರೆ ನಂಜುಂಡನ ಭೈರವೇಶ್ವರ ಕಾವ್ಯದಲ್ಲಿ, ವಿರೂಪಾಕ್ಷಪಂಡಿತನ ಚನ್ನಬಸವ ಪುರಾಣದಲ್ಲಿ, ಶಾಂತಲಿಂಗದೇಶಿಕನ ಭೈರವೇಶ್ವರಕಾವ್ಯದ ಕಥಾಮಣಿಸೂತ್ರರತ್ನಾಕರದಲ್ಲಿ, ಚನ್ನಬಸವಾಂಕನ ಮಹಾದೇವಿಯಕ್ಕನ ಪುರಾಣದಲ್ಲಿ, ಗೂಳೂರು ಸಿದ್ಧವೀರಣ್ಣೊಡೆಯರ ಪ್ರಭುದೇವರ ಶೂನ್ಯಸಂಪಾದನೆಯಲ್ಲಾಗಲಿ ಇಲ್ಲೆಲ್ಲ 'ಹಳ್ಳಯ್ಯ'ನೆಂದೇ ದಾಖಲಿಸಲಾಗಿದೆ. ಈ ಎಲ್ಲ ಕೃತಿಕಾರರು ಭೀಮಕವಿಯ ಕೃತಿಯನ್ನೇ ಆಧಾರವಾಗಿಟ್ಟುಕೊಂಡಿದ್ದಾರೆ ಎನ್ನುವುದನ್ನು ವಿದ್ವಾಂಸರು ಈಗಾಗಲೇ ಗುರುತಿಸಿದ್ದಾರೆ.

ಮೇಲೆ ಗುರುತಿಸಲಾದ ಕೃತಿಕಾರರ ಸಮಕಾಲೀನರಾಗಿಯೇ ಬರುವ ತುಂಬ ಗಮನಾರ್ಹವಾದ ಕೃತಿಕಾರರ ಕೃತಿಗಳಲ್ಲಿ ಅಲ್ಲಯ್ಯ, ಅಳ್ಳಯ್ಯ, ಹಳ್ಳಯ್ಯ, ಹರಳಯ್ಯ ಎಂಬ ಯಾವ ಹೆಸರಿನ ಪ್ರಸ್ತಾಪವೂ ಬರುವುದಿಲ್ಲ. ಉದಾ: ಚಾಮರಸನ ಪ್ರಭುಲಿಂಗಲೀಲೆಯಲ್ಲಾಗಲಿ, ಲಕ್ಕಣ್ಣ ದಂಡೇಶನ ಶಿವತತ್ವ ಚಿಂತಾಮಣಿಯಲ್ಲಾಗಲಿ, ಸಿಂಗಿರಾಜನ ಬಸವರಾಜ ಚಾರಿತ್ರದಲ್ಲಾಗಲಿ, ವಿರೂಪಾಕ್ಷನ ಚನ್ನಬಸವ ಪುರಾಣದಲ್ಲಾಗಲಿ, ಮೊತ್ತಮೊದಲ ಶೂನ್ಯಸಂಪಾದಕನೆಂದು ಕರೆಯಿಸಿಕೊಳ್ಳುವ ಶಿವಗಣಪ್ರಸಾದಿ ಮಹಾದೇವಯ್ಯನವರ ಕೃತಿಯಲ್ಲಾಗಲಿ ಈ ಹೆಸರು ಕಾಣಸಿಗುವುದಿಲ್ಲ! ಮತ್ತು ಜಾತಿ ಸಂಕರಗೊಂಡ ವಿವಾಹದ ಪ್ರಸ್ತಾವವೂ ಬರುವುದಿಲ್ಲ! ಇತ್ತೀಚಿನ ಸಂಶೋಧಕರು ಗುರುತಿಸುವಂತೆ, ಜಾತಿ ಸಂಕರ ವಿವಾಹದ ಘಟನೆಯಿಂದಾಗಿಯೇ ಚಳುವಳಿ ನಾಶವಾಯಿತು ಎಂದು ಗುರುತಿಸುತ್ತಾರೆ. ಇಂಥ ಒಂದು ಮಹತ್ವದ ಘಟನೆಯ ಬಗ್ಗೆ ಅಥವಾ ಘಟನೆಗೆ ಕೇಂದ್ರವಾದ ವ್ಯಕ್ತಿಯ ಬಗ್ಗೆ ಇವರೇಕೆ ಮೌನ ತಾಳಿದರು? ಎನ್ನುವ ನಿಗೂಢ ಪ್ರಶ್ನೆ ಕಾಡದಿರದು.

## ಯಾರು ಈ ಅಲ್ಲಯ್ಯ?

ಪುರಾಣ-ಕಾವ್ಯಗಳ ಒಟ್ಟು ನಡಿಗೆಯಲ್ಲಿ ಅಲ್ಲಯ್ಯ-ಅಳ್ಳಯ್ಯನಾಗಿ, ಅನಂತರ ಹಳ್ಳಯ್ಯನಾಗಿ, ಹರಳಯ್ಯನಾಗಿ ಕಾಣಿಸಿಕೊಳ್ಳುತ್ತಾನೆ. ವಿದ್ವಾಂಸರು ಅಲ್ಲಯ್ಯ ಹರಳಯ್ಯ ಇಬ್ಬರೂ ಒಂದೇ ಎಂದು ಹೇಳುತ್ತಾರೆ. ಆದರೆ 'ಅಲ್ಲಯ್ಯ' ಎಂಬ ಬೇರೆಯೇ ಶರಣನಿದ್ದಾನೆ ಎನ್ನುವುದು ಗಮನಾರ್ಹ.

> 'ಅಲ್ಲಯ್ಯನೆಂಬ ಶರಣನು ಲಿಂಗಕ್ಕೆ ರಾಗವಂ ಕೇಳಿಸುತ್ತಿರಲಾಗಂ ಭಕ್ತರು ಮೆಚ್ಚಿ
> ಕಾಯಕವಂ ಕೊಡಲು, ಆದರಿಂದ ಶಿವದಾಸೋಹವ ನಡೆಸುತಿರಲು ಭಕ್ತರ

---

೧೪. ಸಂ. ಆರ್. ಸಿ. ಹಿರೇಮಠ, ಭೀಮಕವಿಯ ಬಸವಪುರಾಣ, ೩೦೪.

ಒಸಗೆಯುಲಿ, ಹಬ್ಬ-ಪರ್ವ ಮದುವೆಗಳಲ್ಲಿಯು ಗಾನವಂ ಮಾಡಿ ಯಾಚಕತ್ವದ
ಕಾಯಕದಿಂದ ಜಂಗಮಕ್ಕೆ ನೀಡಲು ಶಿವನೊಲಿದು ಅಲ್ಲಯ್ಯನ ಭಕ್ತಿಗೆ ಮೆಚ್ಚಿ
ಕೈಲಾಸಕೆ ಕರೆದೊಯ್ದರು.'[೧೫]

ಈ ಮೇಲಿನ ವಿಚಾರದೊಂದಿಗೆ ಅಲ್ಲಯ್ಯ-ಹರಳಯ್ಯ ಹೇಗಾದ ಎನ್ನುವ ಪ್ರಶ್ನೆಯೊಂದಿಗೆ ಸೋಮನಾಥ ಮತ್ತು ಭೀಮಕವಿ ಗುರುತಿಸಿರುವ ಅಲ್ಲಯ್ಯ ಹಾಗೂ ಶಾಂತಲಿಂಗ ದೇಶಿಕ ಗುರುತಿಸುವ ಅಲ್ಲಯ್ಯ ಇಬ್ಬರೂ ಒಂದೆಯೆ? ಅಥವಾ ಬೇರೆ ಬೇರೆಯೇ? ಎನ್ನುವ ಪ್ರಶ್ನೆಯೂ ಎದ್ದು ನಿಲ್ಲುತ್ತದೆ.

ಭೀಮಕವಿಯ ಕೃತಿಯಲ್ಲಿ ಅಲ್ಲಯ್ಯ-ಹಳ್ಳಯ್ಯನಾಗಿ ದಾಖಲಾದರೂ ಈ ಹಳ್ಳಯ್ಯ ಜಾತಿಯನ್ನು ಮೀರಿ ಹೋಗಿದ್ದರ ಕುರಿತಾಗಿಯಾಗಲಿ, ಅಥವಾ ಮದುವೆ ಮಾಡಿದ್ದರ/ ಆಗಿದ್ದರ ಕುರಿತಾಗಿಯಾಗಲಿ, ಶೂಲಕ್ಕೇರಿಸಿದ/ಆನೆ ಕಾಲಿಗೆ ಕಟ್ಟಿ ತುಳಿಸಿದ ಬಗ್ಗೆಯಾಗಲಿ ಯಾವ ವಿಷಯಗಳನ್ನೂ ಈ ಕೃತಿಯಲ್ಲಿ ಹೇಳಿಲ್ಲ.

ವಿರೂಪಾಕ್ಷ ಪಂಡಿತನ (೧೫೮೫) ಚನ್ನಬಸವ ಪುರಾಣದಿಂದ ಹಳ್ಳಯ್ಯ ಮದುವಯ್ಯರ ವಿಷಯಕ್ಕೆ ಮತ್ತೊಂದು ಕಾರಣ ಸೇರ್ಪಡೆಯಾಗುತ್ತದೆ. ಎಂದರೆ ಹಳ್ಳಯ್ಯ ಮದುವಯ್ಯ 'ಅಸಮ ಕುಲದವರೆಂದು' ಹೇಳಿ ಕಥೆಗೆ ಹೊಸ ತಿರುವು ಕೊಡುತ್ತದೆ.

ಹರಿಹರ (ಸು.೧೨೦೦) ಭೀಮಕವಿ (ಸು.೧೨೦೦) ವಿರೂಪಾಕ್ಷಪಂಡಿತ (ಸು.೧೫೮೫) ಇವರು ಕೊಡುವ ಅಲ್ಲಯ್ಯ/ಹರಳಯ್ಯ ಕಥಾನಕದಿಂದ ಹೊರತಾದ ಮತ್ತು ಯಾವುದೋ ಒಂದು ವಿಷಯಕ್ಕೆ ಸಂಬಂಧಿಸಿದ 'ಒಂದು ಮಾತು' ಹೇಳಿ ಮುಂದೆ ಸಾಗುವುದನ್ನು ನೋಡಿದರೆ, ಹೇಳಲಾಗದ ಯಾವುದೋ ಘಟನೆಯನ್ನು ಹೇಳಲೋ ಬೇಡವೋ ಎನ್ನುವ ಮನೋಭಾವದೊಂದಿಗೆ ಕೂಡಿದ್ದು ಕಂಡುಬರುತ್ತದೆ.

ಚನ್ನಬಸವಾಂಕನ (ಸು.೧೫೫೦) ಮಹಾದೇವಿಯಕ್ಕ ಪುರಾಣದಲ್ಲಿ ಅಸ್ಪೃಶ್ಯ ಶರಣರ ಹೆಸರುಗಳನ್ನು ದಾಖಲಿಸುತ್ತ ಹಳ್ಳಯ್ಯನ ಹೆಸರೂ ದಾಖಲಿಸುತ್ತಾನೆ. ಮತ್ತು ಹಳ್ಳಯ್ಯನು ಮಿಂದ ನೀರಿನಿಂದ ಬ್ರಾಹ್ಮಣನೊಬ್ಬನ ಕುಷ್ಠರೋಗ ಪರಿಹಾರವಾಯಿತೆಂದು ಗುರುತಿಸುವ ಕಥಾ ಘಟಕವಿರುವುದು ಕಂಡುಬರುತ್ತದೆ.

ಶಾಂತಲಿಂಗದೇಶಿಕನ (೧೬೭೨) ಭೈರವೇಶ್ವರಕಾವ್ಯದ ಕಥಾಮಣಿಸೂತ್ರ ರತ್ನಾಕರದಲ್ಲಿ ಹಳ್ಳಯ್ಯನ ಕಥೆಯನ್ನು ಒಂದೆಡೆ ದಾಖಲಿಸದೆ ಎರಡು ಕಡೆಗಳಲ್ಲಿ ದಾಖಲಿಸುತ್ತಾನೆ. ಒಂದೆಡೆ, ನಿಕೃಷ್ಟ ಕುಲದ ಹಳ್ಳಯ್ಯ ವಿಪ್ರಕುಲದ ಮದುವಯ್ಯಗಳು ಬೀಗತನ ಮಾಡಿದರೆಂದೂ, ಬಿಜ್ಜಳ ಅವರನ್ನು ಕರೆಯಿಸಿ ಕಣ್ಣು ಕೀಳಿಸಿದ, ಅನಂತರ ಬಿಜ್ಜಳನ ಕೊಲೆಯಾಯಿತು ಎಂದು ಹೇಳಲಾಗಿದೆ. ಇನ್ನೊಂದೆಡೆಯಲ್ಲಿ ಮಾದಾರ ಕುಲದ ಹಳ್ಳಯ್ಯ ಬಸವಣ್ಣನಿಗೆ ಮಾಡಿದ ಚಮ್ಮಾವುಗೆಯನ್ನು ಮದುವರಸ ಮೆಟ್ಟಿ ರೋಗ ತಂದುಕೊಳ್ಳುವುದು, ಹಳ್ಳಯ್ಯನ ಬಚ್ಚಲ ನೀರಿನ ಸ್ನಾನದಿಂದಲೇ ರೋಗವನ್ನು ಕಳೆದುಕೊಳ್ಳುವುದು, ಅನಂತರ ಅವರಿಬ್ಬರಲ್ಲಿ ನಂಟುತನ ಏರ್ಪಡುವುದು, ಬಿಜ್ಜಳ ಅವರನ್ನು ಕರೆಯಿಸಿ ಕಣ್ಣು ಕೀಳಿಸುವುದು ಈ ಕಾರಣದಿಂದಾಗಿ ಬಿಜ್ಜಳನ ಕೊಲೆಯಾಗುವುದೆಂದು ಬರುತ್ತದೆ.

---

೧೫. ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರರತ್ನಾಕರ, ಭಾಗ-೨, ೨೭೧.

ಈ ಮೇಲೆ ದಾಖಲಿಸಲಾದ ಪ್ರಧಾನ ಕೃತಿಗಳಲ್ಲಿ ಬಿಡಿಬಿಡಿ ಮಾತಿನಿಂದ ಆರಂಭವಾಗಿ ಬಿಡಿಬಿಡಿ ಕಥಾ ಘಟಕಗಳು ಕಾಣಿಸಿಕೊಂಡು ಆ ಬಿಡಿಬಿಡಿ ಕಥಾ ಘಟಕಗಳನ್ನೇ ಸಂಯೋಜಿಸಿ ಒಂದು ಸಮಗ್ರ ಕಥೆ ರೂಪಗೊಂಡಿರುವುದು ಸ್ಪಷ್ಟವಾಗುತ್ತದೆ. ಚಮ್ಮಾವುಗೆಯ ಕಥೆ ಮತ್ತು ಬಚ್ಚಲುದಕದ ಕಥೆ, ಬಿಡಿಬಿಡಿಯಾಗಿದ್ದು ಅನಂತರದಲ್ಲಿ ಇವೆರಡೂ ಕಥೆಗಳಿಗೆ ಬೆಸುಗೆ ಬಿದ್ದಿದೆ. ಜಾತಿಸಂಕರದ ಮದುವೆಯ ಕಥೆ ಮತ್ತು ಶಿಕ್ಷೆಗೆ ಸಂಬಂಧಿಸಿದ ಕಥೆ (ಕಣ್ಣು ಕೀಳಿಸಿದ್ದು/ಹೋರಿಯ ನೊಗಕ್ಕೆ ಕಟ್ಟಿ ಎಳೆಸಿದ್ದು/ಆನೆಯ ಕಾಲಿಗೆ ಕಟ್ಟಿ ಎಳೆಸಿದ್ದು/ ಗಿಡಕ್ಕೆ ಕಟ್ಟಿಸಿದ್ದು ಮುಂತಾದ ಭಿನ್ನಪಾಠದ ಕಥೆಗಳು) ಈ ಎರಡೂ ಕಥೆಗಳು ಸೇರಿಕೊಂಡು ಬೆಳೆದದ್ದು ಇನ್ನೊಂದು ಮಾರ್ಗವಾಗಿದೆ. ಈ ಎರಡೂ ಕಥೆಗಳು (೧. ಚಮ್ಮಾವುಗೆಯ ಕಥೆ ಮತ್ತು ಬಚ್ಚಲುದಕದ ಕಥೆ. ೨. ವಿವಾಹದ ಕಥೆ ಮತ್ತು ಶಿಕ್ಷೆಯ ಕಥೆ) ಸೇರಿ ಅನಂತರದಲ್ಲಿ ಒಂದು ಸಮಗ್ರ ಕಥೆಯಾಗಿ ಮೂಡಿಬಂದಿದೆ. ಈ ಸ್ವರೂಪದ ಪರಿಪೂರ್ಣ ಕಥೆಯ ಪ್ರಬುದ್ಧತೆ ಚೆನ್ನಪ್ಪ ಕವಿಯ (೧೭೫೦) ಶರಣಲೀಲಾಮೃತದಲ್ಲಿ ನಮಗೆ ದೊರೆಯುತ್ತದೆ.

ಇಲ್ಲಿ ಏಳುವ ಮುಖ್ಯ ಪ್ರಶ್ನೆಗಳೆಂದರೆ, ೧೨ನೇ ಶತಮಾನದಲ್ಲಿ ನಡೆದ ಅಂತರ್ಜಾತೀಯ ವಿವಾಹದ ಕುರಿತು, ವಚನಗಳಲ್ಲಿ ಏಕೆ ದಾಖಲಾಗಲಿಲ್ಲ? ಅಥವಾ ಅನಂತರ ಬರೆದವರ ವಚನಗಳಲ್ಲಾದರೂ ಈ ಮಹತ್ವದ ವಿಷಯದ ಕುರಿತು ಯಾಕೆ ಪ್ರಸ್ತಾಪ ಬರಲಿಲ್ಲ? ಕಲ್ಯಾಣ ಕೆಟ್ಟನಂತರ ಶರಣರೆಲ್ಲ ಚದುರಿಹೋಗಿ ದಾಖಲಿಸಲಾಗಲಿಲ್ಲವೆಂದು ಒಂದು ಕ್ಷಣ ಕಲ್ಪಿಸಿಕೊಂಡರೂ ಮುಂದೆ ಬರುವ ಹರಿಹರ ಯಾಕೆ ಅಂತರ್ಜಾತೀಯ ವಿವಾಹದ ಕುರಿತು, ಹರಳಯ್ಯನ ಕುರಿತು ಯಾಕೆ ಬರೆಯಲಿಲ್ಲ? ಈತನ ನಂತರ ಬರೆದವರೂ ಇಂಥ ಮಹತ್ವದ ಘಟನೆಯನ್ನು ಯಾಕೆ ದಾಖಲಿಸಲಿಲ್ಲ? ಇಂಥ ಮಹತ್ವದ ಘಟನೆಯನ್ನು ದಾಖಲಿಸಲು ೧೭ನೇ ಶತಮಾನದವರೆಗೂ ಯಾಕೆ ಕಾಯಬೇಕಾಗಿ ಬಂತು? ಇಂಥ ಮುಖ್ಯ ಪ್ರಶ್ನೆಗಳ ಜೊತೆಗೆ ಹಲವಾರು ಉಪಪ್ರಶ್ನೆಗಳು ಎದ್ದು ನಿಲ್ಲುತ್ತವೆ.

ಅಲ್ಲಯ್ಯ-ಹರಳಯ್ಯನಾದುದು ಹೇಗೆ ಎನ್ನುವ ಪ್ರಶ್ನೆ, ಮತ್ತು ಹನಿಹನಿ ಸೇರಿ ಹಳ್ಳವಾದಂತೆ ಹರಳಯ್ಯನ ಕಥೆ ಬೆಳೆದು ನಿಂತ ರೀತಿಯನ್ನು ಗಮನಿಸಿದರೆ, ಹರಳಯ್ಯ ಎಂಬ ವ್ಯಕ್ತಿ ನಿಜಜೀವನದಲ್ಲಿ ಬದುಕಿದ್ದನೆ? ಎನ್ನುವ ಸಂದೇಹಕ್ಕೆ ಆಸ್ಪದ ಮಾಡಿಕೊಡುತ್ತದೆ. ಹರಳಯ್ಯನ ವಚನಗಳು ಇಲ್ಲದಿರುವುದು ಮತ್ತು ಈತ ಬಸವಣ್ಣನವರ ಕಾಲದಲ್ಲಿಯೇ ಬದುಕಿದ ವ್ಯಕ್ತಿಯಾಗಿದ್ದರೆ, ಅಸ್ಪೃಶ್ಯ ವಚನಕಾರರ ಹೆಸರುಗಳನ್ನು ಪದೇ ಪದೇಯಾಗಿ ಹೇಳುವ ಬಸವಣ್ಣನವರು ಹರಳಯ್ಯನ ಅಥವಾ ಅಲ್ಲಯ್ಯ/ಅಳ್ಳಯ್ಯ/ಹಳ್ಳಯ್ಯನ ಹೆಸರನ್ನು ಎಲ್ಲಿಯೂ ಸ್ಮರಿಸುವುದಿಲ್ಲ ಯಾಕೆ? ಎನ್ನುವ ಪ್ರಶ್ನೆಗಳು ಮೇಲಿನ ಸಂದೇಹಕ್ಕೆ ಮತ್ತಷ್ಟು ನೀರೆರೆಯುತ್ತವೆ.

**ಧೂಳಯ್ಯನೇ ಹರಳಯ್ಯನಿರಬೇಕೆ?**

ಶರಣ ಸಾಹಿತ್ಯ ಪರಂಪರೆಯಲ್ಲಿ ಪದೇಪದೇಯಾಗಿ ಗೋಚರವಾಗುವ ಒಂದು ವಿಶಿಷ್ಟ ಲಕ್ಷಣವೆಂದರೆ, ವಚನಗಳನ್ನೇ ಆಧಾರವಾಗಿಟ್ಟುಕೊಂಡು ಕಥೆಗಳಿಗೆ ರೂಪಕೊಡುವುದು. ಅಂತೆಯೇ ಕಥೆಗಳನ್ನು ಗಮನದಲ್ಲಿಟ್ಟುಕೊಂಡು ವಚನಗಳಿಗೆ ರೂಪಕೊಟ್ಟಿರುವುದೂ ಕಂಡುಬರುತ್ತದೆ. ಸೃಷ್ಟಿ ಮತ್ತು ಪುನರ್ ಸೃಷ್ಟಿಯ ಕ್ರಿಯೆಗೆ ವಚನ ಮತ್ತು ಕಥೆಗಳು ಪ್ರೇರಕ ಶಕ್ತಿಯಾಗಿ ಕೆಲಸಮಾಡಿರುವುದು ಕಂಡುಬರುತ್ತದೆ. ಇದೇ ರೀತಿ ಜನಪದ ಐತಿಹ್ಯ ವಚನ ಕಾವ್ಯ ಪುರಾಣಗಳೊಂದಿಗೆ ಕೊಡುಕೊಳ್ಳುವ ಕ್ರಿಯೆ ನಿರಂತರವಾಗಿ ನಡೆದುಕೊಂಡು ಬಂದಿರುವುದು ಕಂಡುಬರುತ್ತದೆ.

ಬಸವಣ್ಣನವರ ವಚನಗಳಲ್ಲಿ ಚನ್ನಯ್ಯ, ಶ್ವಪಚರ ಕಥೆಗಳ ಸಾರ ವ್ಯಕ್ತವಾದರೆ, ಹರಿಹರನ ರಗಳೆಗಳಿಗೆ ಇಂಥ ವಚನಗಳು ಬಂಡವಾಳವಾಗಿರಲು ಸಾಕು. ಹೀಗೆಯೇ ಹರಳಯ್ಯನ ಕಥಾನಕಗಳಿಗೆ ಮೂಲ ಬಂಡವಾಳ ಎಲ್ಲಿಯದು ಎಂದು ಅರಸುತ್ತ ಹೋದರೆ, ಧೂಳಯ್ಯನವರ ವಚನಗಳಲ್ಲಿ, ಹರಳಯ್ಯನ ಕಥಾನಕದಲ್ಲಿ ವ್ಯಕ್ತವಾಗುವ ಘಟಕಗಳ ಪ್ರಸಂಗಗಳು ಗೋಚರವಾಗುತ್ತವೆ! ಹರಳಯ್ಯನ ವಚನಗಳು ದೊರೆತಿಲ್ಲ. ಹೀಗಿದ್ದಾಗ ಹರಳಯ್ಯನ ವಚನಗಳಲ್ಲಿ ಇಂಥ ಪ್ರಸಂಗಗಳನ್ನು ಹುಡುಕುವ ಪ್ರಮೇಯವೇ ಇಲ್ಲ.

ಕಟ್ಟಿದೆ ಘಟದಟ್ಟೆಯ ಹೊಲಿದು
ಇಕ್ಕಿದೆ ಚತುರ್ವಿಧದ ನಾಲ್ಕು ಗುಂಟವ ಬಲಿದು
ಗುಂಡದ ದ್ವಾರದಲ್ಲಿ ಉಭಯ ಸಂಚದ ಭಾರ ತೆಗೆದು
ತೊಡಕು ಬಂಧನವಿಕ್ಕಿ
ಅಡಿಯ ಜಿಡದಂತೆ ಹಿಂದಣ ಮಡ
ಮುಂದಣ ಉಂಗುಷ್ಟಕ್ಕೆ ಒಂದನೊಂದು ಜಾರದಂತೆ ಬಂಧಿಸಿ
ಸಕಲೇಂದ್ರಿಯವೆಂಬ ಉಭಯವ ಸಂಧಿಸಿ ಕುಣಿಕೆಯನಿಕ್ಕಿ
ಕಾಮದ ಒಡಲ ಮಾದಿಗ ಬಂದೆ ಘಟ
ತೋಕುಳು ತೊಗಲು ಹದಬಂದಿತು
ಹೊತ್ತುಹೋದಿತಣ್ಣಾ ಮೆಟ್ಟಡಿಯ ಕೊಂಡು ರೊಕ್ಕವ ಕೊಡಿ
ಒಪ್ಪಿದರಿರಲಿ ಒಪ್ಪದಿದ್ದಡೆ ಮೂರು ಮುಖದಪ್ಪಗೆ ಕೊಟ್ಟೆಹೆ
ತಪ್ಪಡಿಯ ಮೆಟ್ಟಿ ಹೋಗುತ್ತಿದ್ದೇನೆ
ಚನ್ನಯ್ಯ ಪ್ರಿಯ ಧೂಳಿನ ಧೂಳಿಗೊಳಗಾಗಿ. [೧೬]

ಅರಿದು ಚುಚ್ಚುವರೆಲ್ಲರೂ ದನದಟ್ಟೆ
ಮರೆದು ಚುಚ್ಚುವರೆಲ್ಲರೂ ದನದಟ್ಟೆ
ನಾ ಚುಚ್ಚುವುದೆಲ್ಲವು ಸತ್ತಜೀವ ದನದಟ್ಟೆ
ಅಟ್ಟೆಯ ಕೊಯ್ದು ಮೆಟ್ಟಿಸಿದೆ ಸತ್ತರಿಗೆಲ್ಲಕ್ಕೂ
ಎನಗೆ ಬಟ್ಟಬಯಲ ತೋರಬೇಕೆಂದು
ನಿಮ್ಮ ಬಟ್ಟೆಯಲಿ ನೀವೆ ಹೋಗಿ
ಎನ್ನ ಬಟ್ಟೆ ಕಾಮ ಧೂಮ ಧೂಳೇಶ್ವರನ ಬಟ್ಟೆಯೇ ಸಾಕು ॥ [೧೭]

ಚಪ್ಪಲಿ ಹೊಲೆಯುವ ಕಾಯಕದ ಈ ಶರಣ* ತನ್ನ ಅನುಭವ ಹಾಗೂ ವೃತ್ತಿ ಪರಿಭಾಷಾ ಪ್ರತಿಮೆಗಳ ಮೂಲಕ ವಚನಗಳಿಗೆ ರೂಪವನ್ನು ಕೊಡುತ್ತ ಅಧ್ಯಾತ್ಮದೆಡೆಗೆ ಕರೆದೊಯ್ಯುವ ಪ್ರಬುದ್ಧವಾದ ವಚನಗಳಾಗಿವೆ. ಮೇಲಿನ ಈ ಎರಡೂ ವಚನಗಳನ್ನು ಸೂಕ್ಷ್ಮವಾಗಿ

೧೬. ಸಂ. ಆರ್. ಸಿ. ಹಿರೇಮಠ, ಸಕಲ ಪುರಾತನರ ವಚನಗಳು, ಸಂ-೧, ವ. ೧೭೧೧
೧೭. ಅದೇ, ಸಂ-೧, ವ. ೧೭೧೦
* ಮಹಲಿಂಗಸ್ವಾಮಿಯ ಬಾಲರಾಮನ ಸಾಂಗತ್ಯದಲ್ಲಿ (ಕ್ರಿ.ಶ. ಸು.೧೧೫೦) 'ಹರಳರ ಕುಲದೊಳು ಜನಿಸಿದಳು' (ಸಂ.೧೮, ಪ.೫೪) ಎಂದು ಬರುತ್ತದೆ. ಇದರ ಮೇಲಿಂದ 'ಹರಳ' ಎನ್ನುವುದು ಒಂದು ಕುಲದ ಹೆಸರಾಗಿತ್ತು ಎನ್ನುವುದು ಸ್ಪಷ್ಟವಾಗುತ್ತದೆ. ಈ ಕುಲದ ಹೆಸರಿಂದ ವ್ಯಕ್ತಿಯನ್ನು ಗುರುತಿಸಿರಬೇಕೆ? ಅಥವಾ ಕುಲಸೂಚಕ ವ್ಯಕ್ತಿಯಾಗಿ ಹುಟ್ಟುಹಾಕಿರಬೇಕೆ? ಎನ್ನುವ ಸಂದೇಹಕ್ಕೆ ಆಸ್ಪದವಿದೆ. ಆದರೆ ಇಂದು ಈ ಕುಲದ ಹೆಸರು ಲಭ್ಯವಾಗುವುದಿಲ್ಲ.

ಅವಲೋಕನ ಮಾಡಿದರೆ, ಹರಳಯ್ಯ ಬಸವಣ್ಣನವರಿಗೆ ಹೊಲೆದು ಕೊಟ್ಟ ಪಾದುಕೆಗಳ ನೆನಪು ತಟ್ಟನೆ ಬರುತ್ತದೆ. 'ಕಟ್ಟಿದೆ ಘಟದಟ್ಟೆಯ ಹೊಲೆದು' ಎನ್ನುವಲ್ಲಿಯೇ ದ್ವಂದ್ವಾರ್ಥವಿದೆ. ಒಂದು ಚಮ್ಮಾವುಗೆಯ ಪರಿಕಲ್ಪನೆಯನ್ನು ತಂದು ಕೊಟ್ಟರೆ, ಇನ್ನೊಂದು ನೆಲೆಯಲ್ಲಿ ಡಾ. ಎಂ. ಚಿದಾನಂದಮೂರ್ತಿಯವರು ಅರ್ಥೈಸುವಂತೆ 'ತನ್ನ ದೇಹವನ್ನು ಚಪ್ಪಲಿಗೆ ಹೋಲಿಸಿಕೊಂಡು ಅದನ್ನೇ ಒಪ್ಪಮಾಡಿದ್ದರ ಬಗ್ಗೆ ಹೇಳಿದಂತಿದೆ. ಮತ್ತು ಆ ಚಪ್ಪಲಿಗಳನ್ನು ಹೇಗೆ ಸಿದ್ಧಗೊಳಿಸಿದೆ ಎನ್ನುವುದನ್ನು ಕಾಯಕದ ಪರಿಭಾಷೆಯಲ್ಲಿಯೇ ಪರಿಪರಿಯಾಗಿ ವಿವರಿಸಿದ್ದಾನೆ. ಹೀಗೆ ಮಾಡಿದ ಚಪ್ಪಲಿಗಳನ್ನು ತಂದಿದ್ದೇನೆ (ಈ ಅಡಿಗಳನ್ನು ಕೊಂಡು ಹಣ ಕೊಡಿ ಇಲ್ಲವಾದಲ್ಲಿ ಶಿವನಿಗೆ ಕೊಡುವೆ) ಇವು ಮೆಟ್ಟಿ ಎನಗೆ 'ಬಟ್ಟ ಬಯಲ' ತೋರಬೇಕು ಎಂದು ಬೇಡಿಕೊಳ್ಳುತ್ತಾನೆ.

ಈ ವಚನಾಂತರಂಗದ ವಸ್ತುವೇ, ಹರಳಯ್ಯನ ಚಮ್ಮಾವುಗೆಯ ಕಥಾ ಘಟಕಕ್ಕೆ ಪ್ರೇರಕವಾಗಿರಬೇಕು. ಇನ್ನು ಈ ಧೂಳಯ್ಯನ ಕಥಾನಕದಲ್ಲಿ ಹರಳಯ್ಯನ ಕಥಾ ಘಟಕಕ್ಕೆ ಹೋಲುವ ಮತ್ತೊಂದು ಘಟನೆಯೂ ಇದೆ. ಅದು ಬಸವಪುರಾಣದಲ್ಲಿ ವ್ಯಕ್ತವಾಗಿದೆ.

ಒಬ್ಬ ಬ್ರಾಹ್ಮಣ ರಾತ್ರಿಯಲ್ಲಿ ಹೋಗುವಾಗ ಅರಿಯದೆ ಧೂಳಯ್ಯನ ಮನೆಯ ಬಚ್ಚಲ ಕೆಸರಲಿ ಜಾರಿದ. ಹೇಸಿಕೆಪಡುತ್ತ ಮನೆಗೆ ಬಂದು ಕಾಲು ತೊಳೆದರೆ ಆ ಕಾಲು ದಿವ್ಯಾಂಗವಾಗಿತ್ತು. ಇದನರಿತ ಆತ ದೇಹವನ್ನೆಲ್ಲ ಬಚ್ಚಲ ನೀರಿನಲ್ಲದ್ದಿ ದೇಹವನ್ನೇ ದಿವ್ಯಾಂಗವನ್ನಾಗಿ ಮಾಡಿಕೊಂಡನೆಂದು ಬರುತ್ತದೆ. ಇದನ್ನರಿತ ವಿಷ್ಣುಭಕ್ತನೊಬ್ಬ ಬಚ್ಚಲ ಕೆಸರಲಿ ಹೊರಳಾಡಿ ತನ್ನ ಕುಷ್ಠರೋಗವನ್ನು ಕಳೆದುಕೊಂಡನೆಂದು ಬರುತ್ತದೆ. ಹರಳಯ್ಯನ ಕಥಾ ಘಟಕದಲ್ಲಿ ಬರುವ ಬ್ರಾಹ್ಮಣ ಮಧುವಯ್ಯ ತನ್ನ ಕುಷ್ಠರೋಗವನ್ನೂ ಮೈವುರಿರೋಗವನ್ನೂ ಕಳೆದುಕೊಳ್ಳುವ ಘಟನೆಯನ್ನು ನೆನಪಿಗೆ ತರುತ್ತದೆ. ರಾತ್ರಿಯಲಿ ಅರಿಯದೆ ಬಚ್ಚಲ ನೀರು ತರುವ ಬಗ್ಗೆಯೂ ಕೆಲ ಕಾವ್ಯಗಳಲ್ಲಿ ಬಂದಿದೆ. ಇಂಥವೆಲ್ಲ ನೋಡಿದಾಗ ಹರಳಯ್ಯನ ಕಥಾನಕದ ಘಟಕಗಳು ಧೂಳಯ್ಯನ ಕಥಾನಕದ ಘಟಕಗಳು ಕೆಲವು ಒಂದೇ ಆಗಿದ್ದು ಮೇಲುನೋಟಕ್ಕೆ ಸ್ಪಷ್ಟವಾಗುತ್ತದೆ.

ಈ ಮೇಲಿನ ವಿಚಾರಗಳಿಂದ ಏಳುವ ಪ್ರಶ್ನೆಗಳೆಂದರೆ; ಧೂಳಯ್ಯನ ವಚನಗಳ ಮೇಲಿಂದ ಮತ್ತು ಆತನೊಂದಿಗೆ ಇರುವ ಕಥಾ ಘಟಕಗಳು ಹರಳಯ್ಯನ ಹೆಸರಿಗೆ ವಲಸಿ ಬಂದಿವೆಯೆ? ಹರಳಯ್ಯನಂತೆ ಧೂಳಯ್ಯನೂ ಚಪ್ಪಲಿಯ ಕಾಯಕದವ. ಹೀಗಾಗಿ ಧೂಳಯ್ಯನೇ ಹರಳಯ್ಯನಾಗಿರಬೇಕೆ? ಎನ್ನುವ ಪ್ರಶ್ನೆಗಳು ಎದುರಾಗುತ್ತವೆ. ಅಂತರ್‌ಜಾತೀಯ ವಿವಾಹಕ್ಕೆ ಸಂಬಂಧಿಸಿದಂತೆ ಯಾವ ಸಂದರ್ಭ ಸನ್ನಿವೇಶ, ಮಾತುಗಳಾಗಲಿ ಧೂಳಯ್ಯನೊಂದಿಗೆ ವ್ಯಕ್ತವಾಗಿರುವುದು ಕಂಡುಬರುವುದಿಲ್ಲ. ಈತನ ವಚನಗಳಲ್ಲಿಯೂ ಇಂಥ ಯಾವ ವಿಷಯದ ಪ್ರಸ್ತಾವವಿರುವುದು ಕಂಡುಬರುವುದಿಲ್ಲ.

ಬಸವಣ್ಣನವರು ತಮ್ಮ ವಚನವೊಂದರಲ್ಲಿ ಧೂಳಯ್ಯನನ್ನು ಸ್ಮರಿಸುತ್ತಾರೆ ಆದರೆ ನೆನೆಸುವ ಸಂದರ್ಭ ಮಾತ್ರ ಕುತೂಹಲವನ್ನು ಕೆರಳಿಸುತ್ತದೆ. ಜನಸಾಮಾನ್ಯರಲ್ಲಿ ಬೇರುಬಿಟ್ಟ ಮಾರಯ್ಯ-ಬೀರಯ್ಯರನ್ನು 'ಅಂತರ-ಬೆಂತರ' (ಭೂತ-ಪಿಶಾಚಿ) ಗಳೆಂದು ಹೆಸರಿಸುತ್ತ 'ಧೂಳಯ್ಯ'ನವರನ್ನೂ ಈ ಪಟ್ಟಿಯಲ್ಲಿ ಸೇರಿಸಿಬಿಡುತ್ತಾರೆ.[೧೮] ಹೀಗೆ ಸಾಮಾನ್ಯರ ದೇವತೆಗಳ

೧೮. ಈ ವಚನವನ್ನು ಮೂರು ಜನ ಸಂಪಾದಕರು ಮೂರು ರೀತಿಯಲ್ಲಿ ಸಂಪಾದಿಸಿಕೊಟ್ಟಿದ್ದಾರೆ!

ಜೊತೆಗೆ ಧೂಳಯ್ಯ ಮತ್ತು ಇತರ ಶರಣರನಿಟ್ಟು ಓಗಳೆಯಲು ಮುಖ್ಯ ಕಾರಣವೇನು? ಎನ್ನುವ ಪ್ರಶ್ನೆಯೊಂದಿಗೆ ಮತ್ತೆ ನಮಗೆ ಪುರಾಣ ಕಾವ್ಯಗಳ ಆರಂಭದ ನಡಿಗೆಯತ್ತ ಗಮನ ಸೆಳೆಯುವಂತೆ ಮಾಡುತ್ತದೆ. ಎಂದರೆ, ಹೇಳಲಾಗದ ಅಥವಾ ಬಿಚ್ಚಿ ಮಾತನಾಡಲಾಗದ ಘಟನೆಗೇನಾದರೂ ಈತ ಸಂಬಂಧ ಹೊಂದಿದ್ದಾನೆಯೆ? ಎನ್ನುವ ಹೊಸ ಪ್ರಶ್ನೆ ಎದುರಾಗುತ್ತದೆ.

## ವಚನ ಸಾಹಿತ್ಯ ಮತ್ತು ಹರಳಯ್ಯ

ಮಧುವಯ್ಯನ ಹೆಸರಿಂದ ನೂರೊಂದು ವಚನಗಳು ಲಭ್ಯವಾಗಿವೆ. ಈ ವಚನಗಳನ್ನು ಬರೆದ ಮಧುವಯ್ಯನೇ ಹರಳಯ್ಯನ ಕಥಾನಕದಲ್ಲಿ ಬರುವ ಮದುವಯ್ಯನಾಗಿದ್ದಾನೆ ಎನ್ನಲು ಯಾವುದೇ ಆಧಾರಗಳು ಸಾಲವು. ಈತ ಹರಳಯ್ಯನನ್ನು ಸ್ಮರಿಸುವುದಿಲ್ಲ ಎನ್ನುವ ಮಾತಿರಲಿ, ಹರಳಯ್ಯ ಚಮ್ಮಾವುಗೆಯ ಘಟನೆಯಿಂದ ಬಸವಣ್ಣನವರೊಂದಿಗೆ ಸಂಪರ್ಕ ಸಾಧಿಸಿದ ನೆಂದು ಹೇಳುವಾಗ, ಬಸವಣ್ಣನವರೂ ಮೊದಲು ಮಾಡಿ, ಯಾರೂ ಹರಳಯ್ಯನನ್ನು ಸ್ಮರಿಸುವುದು ಕಂಡುಬರುವುದಿಲ್ಲ! ಇಂಥ ಘನ ಶರಣನ ಹೆಸರನ್ನು ಯಾಕೆ ವಚನಕಾರರು ಸ್ಮರಿಸುವುದಿಲ್ಲ? ಎನ್ನುವ ಪ್ರಶ್ನೆ ಹೆಜ್ಜೆ ಹೆಜ್ಜೆಗೂ ಕಾಡುತ್ತದೆ. ಯಾರ ವಚನಗಳಲ್ಲಿಯೂ ಕಾಣಸಿಗದ ಹರಳಯ್ಯ ಅಪವಾದಾತ್ಮಕವಾಗಿ ಸಿದ್ಧರಾಮ ವಚನವೊಂದರಲ್ಲಿ ದಾಖಲಾದುದು ಕುತೂಹಲಕ್ಕೆಡೆಮಾಡಿಕೊಡುತ್ತದೆ. ಆ ವಚನ ಹೀಗಿದೆ:

> ಕುಲದಿಂದಧಿಕವೆಂದು ಹೋರಾಡುವ ಅಣ್ಣಗಳಿರಾ ಕೇಳಿರಯ್ಯ
> ಬ್ರಾಹ್ಮಣವ ಮಧುವಯ್ಯ, ಚಂಡಾಲನವ ಹರಳಯ್ಯ
> ದುರ್ವಾಸನವ ಮಚ್ಚಿಗ, ಊರ್ವಸಿಯಾಕೆ ದೇವಾಂಗನೆ
> ಚಂಡಾಲನವ ಪರಾಶರ, ಕುಸುಮಗಂಧಿಯಾಕೆ ಕಬ್ಬಲಗಿತ್ತಿ
> ಜಪತಸ್ತಪತೋ ಗುಣತಃ ಕಪಿಲಸಿದ್ಧ ಮಲ್ಲಿಕಾರ್ಜುನಾ ಕೇಳಾ, ಕೇದಾರಯ್ಯ

ಈ ವಚನ ಡಾ. ಆರ್. ಸಿ. ಹಿರೇಮಠ ಅವರು ಸಂಗ್ರಹಿಸಿದ (೧೯೬೮) ಕೃತಿಯಲ್ಲಿ ದಾಖಲಾಗಿದೆ. ಈ ಕೃತಿಯಲ್ಲಿಯೇ ದಾಖಲಿಸುವಂತೆ ಈ ವಚನ ಮೂಲತಃ ಮುದ್ರಿತ ಕಾಗದ ಪ್ರತಿಯಿಂದ ಆಯ್ದುಕೊಂಡದ್ದು. ಈ ವಚನವನ್ನು ಸಂದೇಹದಿಂದಲೇ ನೋಡಬೇಕಾಗುತ್ತದೆ. ಇಲ್ಲಿ ತಿದ್ದಿರುವ ಸಾಧ್ಯತೆಗಳೇ ಹೆಚ್ಚು ಎನಿಸುತ್ತದೆ. ಡಾ॥ ಆರ್. ಸಿ. ಹಿರೇಮಠ ಅವರ ಕಾಲದಲ್ಲಿ ವಚನಗಳ ಸಂಪಾದನೆಯ ಕೆಲಸ ತುಂಬ ವೈಜ್ಞಾನಿಕವಾಗಿ ನಡೆದಿದೆ. ಆದರೆ ಶ್ರೀಯುತ, ಫ.ಗು. ಹಳಕಟ್ಟಿಯವರ ಕಾಲದಲ್ಲಿ ನಡೆದ ಸಂಗ್ರಹಕ್ಕೆ ಈ ಮಾತು ಹೇಳಲಾಗದು. ಏಕೆಂದರೆ ಪಾಠಾಂತರದ ಮತ್ತು ರೂಪಾಂತರದ ಹಲವಾರು ವಚನಗಳಲ್ಲಿ ಪ್ರಮಾದಗಳು ಘಟಿಸಿವೆ. ಹಾಗೆ ಘಟಿಸಿದಾಗಲೂ ಡಾ॥ ಆರ್. ಸಿ. ಹಿರೇಮಠ ಅವರು ಕೊಡುವ ವೈಜ್ಞಾನಿಕ

---

ಬಸವನಾಳ ಶಿವಲಿಂಗಪ್ಪನವರು ಮತ್ತು ಡಾ. ಆರ್. ಸಿ.ಹಿರೇಮಠ ಅವರು ಸಂಪಾದಿಸಿದ ಕೃತಿಗಳಲ್ಲಿ ದಾಖಲಾದ ವಚನದಲ್ಲಿ ಹೆಸರುಗಳ ಸ್ಥಾನಪಲ್ಲಟವಾಗಿರುವುದು ಕಂಡುಬಂದರೆ ಡಾ. ಎಂ. ಎಂ. ಕಲಬುರ್ಗಿ ಅವರು ಸಂಪಾದಿಸಿದ ಕೃತಿಯಲ್ಲಿ ಘನಶರಣ ಧೂಳಯ್ಯನ ಹೆಸರನ್ನೇ ಕೈಬಿಡಲಾಗಿದೆ! ಪರಸ್ಪರ ಹೋಲಿಸಿ ಕಾರಣ ಗುರುತಿಸಿಕೊಳ್ಳಿರಿ.

ಅ.ಸಂ. ಶ್ರೀ ಬಸವನಾಳ ಶಿವಲಿಂಗಪ್ಪ, ಬಸವಣ್ಣನವರ ವಚನಗಳು, ವ. ೫೫೭

ಬ.ಸಂ. ಡಾ. ಆರ್. ಸಿ. ಹಿರೇಮಠ, ಬಸವಣ್ಣನವರ ವಚನಗಳು, ವ. ೫೫೫

ಕ.ಸಂ. ಡಾ. ಎಂ. ಎಂ. ಕಲಬುರ್ಗಿ, ಬಸವಣ್ಣನವರ ವಚನಗಳು, ವ. ೫೫೬

ವಿವರಗಳಂತೆ, ಇವರು ನೀಡುವುದು ಕಂಡುಬರುವುದಿಲ್ಲ[೧೯] ಹೀಗಾಗಿ ಫ.ಗು. ಹಳಕಟ್ಟಿಯವರಿಂದ ಮೊದಲು ಸಂಪಾದಿಸಲ್ಪಟ್ಟ ಈ ವಚನವನ್ನು ಯಥಾವತ್ತಾಗಿ ಸ್ವೀಕರಿಸಲು ಸಾಧ್ಯವಾಗದು.

## ಹರಳಯ್ಯ ಉದ್ಭವ ಶರಣ?

ಈ ಮೇಲಿನ ಎಲ್ಲ ಅಧ್ಯಯನದ ಮೂಲಕ ಪ್ರಧಾನವಾಗಿ ಎದ್ದು ಕಾಣುವ ಪ್ರಶ್ನೆಗಳು ಎರಡು. ೧. ಹರಳಯ್ಯ ಕಾಲ್ಪನಿಕ ವ್ಯಕ್ತಿಯೇ? ೨. ಧೂಳಯ್ಯನೇ ಹರಳಯ್ಯನಾಗಿರಬಹುದೆ? ಎನ್ನುವಂಥವು. ಈತ ಕಾಲ್ಪನಿಕ ವ್ಯಕ್ತಿಯಾಗಿರಬೇಕೆ? ಎನ್ನುವ ಸಂದೇಹದ ಚರ್ಚೆಯ ಸಂದರ್ಭದಲ್ಲಿ ವ್ಯಕ್ತವಾದ ವಿಚಾರಗಳನ್ನು ಸಂಕ್ಷಿಪ್ತವಾಗಿ ಹೀಗೆ ಸಂಗ್ರಹಿಸಬಹುದು.

೧. ಆರಂಭದಲ್ಲಿ ಅಲ್ಲಯ್ಯ, ಅಳ್ಳಯ್ಯ ಎಂದು ಕಾಣಿಸಿಕೊಳ್ಳುವ ವ್ಯಕ್ತಿ ೧೭ನೇ ಶತಮಾನದಲ್ಲಿ 'ಹರಳಯ್ಯ'ನೆಂದು ಕಾಣಿಸಿಕೊಳ್ಳುವುದು.

೨. ಅಲ್ಲಯ್ಯ (ಅಳ್ಳಯ್ಯ) ಮಧುಪಯ್ಯರ ಹೆಸರು ೧೩ನೇ ಶತಮಾನದಿಂದ ಕಂಡರೂ ಇವರ ಕುರಿತು ೧೭ನೇ ಶತಮಾನದವರೆಗೂ ಮನಸ್ಸು ಬಿಚ್ಚಿ ಮಾತನಾಡದಿರುವುದು.

೩. ೧೩ನೇ ಶತಮಾನದಲ್ಲಿ ಕಾಣಸಿಗದ ಹರಳಯ್ಯನ ಕಥೆ, ೧೭ನೇ ಶತಮಾನದ ಅನಂತರದಲ್ಲಿ ಕಥೆ-ಕಾವ್ಯಗಳಲ್ಲಿ ಸಮಗ್ರವಾಗಿ ಸಂಯೋಜನೆ ಹೊಂದಿ ದಾಖಲಾಗಿರುವುದು ಮತ್ತು ೧೨, ೧೩, ೧೪, ೧೫ನೇ ಶತಮಾನಗಳಲ್ಲಿ ಹರಳಯ್ಯನ ಕಥೆ ಸಿಕ್ಕದಿರುವುದು. ಅನಂತರ ಬಿಡಿಬಿಡಿಯಾದ ಕಥಾ ಘಟಕಗಳನ್ನು ಕಸಿಕಟ್ಟಿ ಹೇಳುವುದು.

೪. ಹರಳಯ್ಯನ ಕಥಾ ಘಟಕಗಳು ಬೇರೆಯವರ ಕಥೆಗಳಲ್ಲಿ ಕಾಣಸಿಗುವುದು.

೫. ಹರಳಯ್ಯನಿಗೆ ಮಗನಿದ್ದ ಎಂದು ಶಿಷ್ಟಕಾವ್ಯಗಳು ಹೇಳಿದರೆ, ಜನಪದ ಕಾವ್ಯಗಳು ಮಗಳಿದ್ದಳೆಂದು ಹೇಳುತ್ತವೆ. ಶಿಷ್ಟಕಾವ್ಯಗಳು ಹರಳಯ್ಯ ಅಂತರ್‌ಜಾತೀಯ ವಿವಾಹ ಮಾಡಿದನೆಂದು ಹೇಳಿದರೆ, ಜನಪದ ಕಾವ್ಯಗಳು ಮದುವೆ ಆಯಿತು ಎಂದು ಹೇಳುವುದಿಲ್ಲ.

೬. ಹರಳಯ್ಯನ ಮಡದಿ-ಮಕ್ಕಳ ಹೆಸರುಗಳು ಒಬ್ಬೊಬ್ಬರಲ್ಲಿ ಒಂದೊಂದು ರೀತಿ ವ್ಯಕ್ತವಾಗಿವೆ. ಹೆಸರುಗಳಲ್ಲಿ ಏಕರೂಪತೆ ಕಂಡುಬರುವುದಿಲ್ಲ.

೭. ಶಿಷ್ಟಕಾವ್ಯಗಳು ಹರಳಯ್ಯನಿಗಾದ ಶಿಕ್ಷೆಯ ಕುರಿತು ದಾಖಲಿಸಿದರೂ ಶಿಕ್ಷೆಯ ಸ್ವರೂಪದಲ್ಲಿ ಏಕರೂಪತೆ ಎನ್ನುವುದು ಇಲ್ಲವೇ ಇಲ್ಲ. ವಿಭಿನ್ನವಾದ ಎಂಟು ರೀತಿಯ ಶಿಕ್ಷೆಗಳನ್ನು ದಾಖಲಿಸಲಾಗಿದೆ.

---

೧೯. ಫ.ಗು. ಹಳಕಟ್ಟಿಯವರ ಕಾಲದಲ್ಲಿ ಸಂಪಾದನೆಯ ಕಾರ್ಯ ವೈಜ್ಞಾನಿಕವಾಗಿರಲಿಲ್ಲ ಎನ್ನುವುದು ಬೇರೆ ಮಾತು. ಆದರೆ ಈ ಸಂದರ್ಭದಲ್ಲಿ ಹೊರಬಂದ ಕೃತಿಗಳನ್ನು ಸಮೀಕ್ಷಿಸಿದರೆ ಮತಾಭಿಮಾನ ತುಂಬಿ ತುಳುಕುವುದು ಕಂಡುಬರುತ್ತದೆ. ಹರಳಯ್ಯನ ಕುರಿತು ಮೊದಲ ಬಾರಿಗೆ ಹೆಚ್ಚಿನ ವಿವರಗಳನ್ನು ಹೊರಹಾಕಿದವರು ಶ್ರೀಯುತ ಹಳಕಟ್ಟಿಯವರು. ಇವರ ಮತಾಭಿಮಾನ ಯಾವ ಸ್ವರೂಪದ್ದು ಎನ್ನುವುದು ಇವರ ಸಾಹಿತ್ಯವನ್ನು ಸಮೀಕ್ಷಿಸಿದವರಿಗೆ ಮತ್ತೊಮ್ಮೆ ಮನನ ಮಾಡುವ ಅಗತ್ಯವಿಲ್ಲವೆಂದುಕೊಳ್ಳುವೆ. ಇವರು 'ಹರಳಯ್ಯನ ತ್ರಿಪದಿ' ಎಂಬ ಕೃತಿಯನ್ನು ಸಂಪಾದಿಸಿದ್ದಾರೆ.

೮. ಅಂತರ್‌ಜಾತೀಯ ವಿವಾಹದಿಂದಾಗಿಯೇ ಬಿಜ್ಜಳನ ಕೊಲೆಯಾಯಿತೆಂದು ಎಲ್ಲ ಕಾವ್ಯಗಳು ದಾಖಲಿಸುವುದಿಲ್ಲ. ಬೆರಳೆಣಿಕೆಯ ಹಾಗೂ ಹೆಚ್ಚಾಗಿ ಅಪ್ರಧಾನ ಕಾವ್ಯಗಳು ಈ ಕೆಲಸವನ್ನು ಮಾಡಿವೆ.

೯. ಹರಿಹರ, ಹರಳಯ್ಯನ ಕುರಿತು ಏನನ್ನೂ ಹೇಳಿಲ್ಲ. ಅಂತರ್ಜಾತೀಯ ವಿವಾಹದ ಬಗ್ಗೆ ಚರ್ಚಿಸುವುದೂ ಇಲ್ಲ. ಈತ ಕ್ರಾಂತಿಯ ವಿಘಟನೆಗೆ ಸೂಚಿಸುವ ಕಾರಣಗಳು ಬೇರೆಯಾಗಿವೆ.

೧೦. ವಿಶೇಷ ವ್ಯಕ್ತಿತ್ವವುಳ್ಳ ಶರಣನೆನಿಸಿದ ಹರಳಯ್ಯನನ್ನು ಸಮಕಾಲೀನರಾರೂ ಈತನನ್ನು ತಮ್ಮ ವಚನಗಳಲ್ಲಿ ಸ್ಮರಿಸುವುದಿಲ್ಲ. (ಸಿದ್ಧರಾಮನ ವಚನವೊಂದರಲ್ಲಿ ದಾಖಲೆ ಇದೆ ಎನಿಸಿದರೂ ಅದು ಸಂಪೂರ್ಣವಾಗಿ ನಂಬಲರ್ಹವಲ್ಲ).

೧೧. ಈ ಮಹಾನ್ ಶರಣನ ವಚನಗಳು ಈ ವರೆಗೆ ಲಭ್ಯವಾಗದಿರುವುದು.

೧೨. ಮನುಷ್ಯರ ತೊಗಲು ಹದಮಾಡಿ ಚರ್ಮ ತಯಾರಿಸಿ ಚಪ್ಪಲಿ ಮಾಡಲಾಗದು. (ಇದೊಂದು ಅದ್ಭುತ ಕಲ್ಪನೆ!)

ಇಂಥವೆಲ್ಲ ಕಾರಣಗಳಿಂದಾಗಿ ಹರಳಯ್ಯ ಕಾಲ್ಪನಿಕ ವ್ಯಕ್ತಿಯಾಗಿರಬೇಕೆ? ಎನ್ನುವುದಕ್ಕೆ ಹೆಚ್ಚಿನ ಒತ್ತನ್ನು ಕೊಡುತ್ತವೆ. ವೀರಶೈವರಲ್ಲಿರುವ 'ಪ್ರವಚನ' ಪರಂಪರೆಯಿಂದ ಹರಳಯ್ಯನ ಕಥಾನಕ ಹೆಚ್ಚು ಜನಪ್ರಿಯವಾಗಲು ಕಾರಣವಾಗಿರಬೇಕೆ? ಇಪ್ಪತ್ತನೆಯ ಶತಮಾನದ ಸಂದರ್ಭದಲ್ಲಿ ವೀರಶೈವ ಚಿಂತನೆ ಮರುಕಳಿಸಿದಂತೆ, ೧೬-೧೭ನೇ ಶತಮಾನದಲ್ಲಿ ಮರುಕಳಿಸಿ ಹರಳಯ್ಯನಿಗೆ ಸಮಗ್ರ ರೂಪ ಕೊಟ್ಟದೆ ಎನ್ನುವುದರಲ್ಲಿ ಸಂದೇಹವಿಲ್ಲ. ಧೂಳಯ್ಯನೊಂದಿಗೆ ಇರುವ ಕಥಾ ಘಟಕಗಳ ಹೋಲಿಕೆಯ ಮೇಲಿಂದ ಧೂಳಯ್ಯನೇ ಹರಳಯ್ಯನೆಂದು ಹೇಳಲು ಆಧಾರಗಳು ಸಾಲವು.

ಇಲ್ಲಿಯೇ ಸಾಂದರ್ಭಿಕವಾಗಿ ಗಮನಿಸಬಹುದಾದ ಒಂದು ವಿಚಾರವೆಂದರೆ, ಧೂಳಯ್ಯನಿಗೆ ದೊಡ್ಡಯ್ಯನೆಂದೂ ಕರೆಯಲಾಗುತ್ತದೆ.[೨೧] ಈತ ಕಕ್ಕಯ್ಯನ ಮಗನೆನ್ನುವ ವಿಚಾರವೂ ಇದೆ. ಹರಳಯ್ಯನೂ ಸೇರಿದಂತೆ ಈ ಮೂರೂ ಜನ ಚರ್ಮದ ಕಾಯಕಕ್ಕೆ ಸಂಬಂಧಿಸಿದವರು. ಮೂಲತಃ ಬ್ರಾಹ್ಮಣ ವರ್ಣಕ್ಕೆ ಸಂಬಂಧಿಸಿದ ಬಸವಣ್ಣನವರ ತಂದೆಯ ಹೆಸರು ಮಾದರಸ[೨೨] ಬಸವಣ್ಣನವರ ಸಹೋದರಿ ನಾಗಲಾಂಬಿಕೆ. ಕಕ್ಕಯ್ಯನವರ ಪ್ರಸಾದದಿಂದ ನಾಗಲಾಂಬಿಕೆಯಲ್ಲಿ ಚನ್ನಬಸವಣ್ಣನವರು ಜನಿಸಿದರು ಎನ್ನುವ ವಿಚಾರವಿದೆ.[೨೩] ಚನ್ನಬಸವಣ್ಣನವರ ಹುಟ್ಟಿನ ಈ ನೆಲೆಯನ್ನು ತಾರ್ಕಿಕವಾಗಿ ಒಪ್ಪಿಕೊಳ್ಳಲು ಸಾಧ್ಯವಾಗದು. ಆದರೆ ಧೂಳಯ್ಯ, ಕಕ್ಕಯ್ಯನವರಂತೆ ಇಲ್ಲಿಯೂ ಭಾವನಾತ್ಮಕ ಸಂಬಂಧಗಳ ಸಾಧ್ಯತೆಗಳೇ ಅಧಿಕ. ಆದರೆ ಈ ಎಲ್ಲ ವ್ಯಕ್ತಿಗಳ ನಡುವೆ ಎಲ್ಲೋ ಜಾತಿಮೀರಿದ ಸಂಬಂಧದ ಎಳೆಯ

---

೨೦. ಸಂ. ಹಾ. ಮಾ. ನಾಯಕ, ಕನ್ನಡ ಸಾಹಿತ್ಯ ಚರಿತ್ರೆ, ಸಂ. ೪, ೭೧೭

೨೧. ಕಕ್ಕಯ್ಯ ಡೋಹಾರ ಜಾತಿಗೆ ಸಂಬಂಧಿಸಿದವ. ಧೂಳಯ್ಯ ಮಾದರ ಜಾತಿಗೆ ಸಂಬಂಧಿಸಿದವನೆಂದು ಹೇಳಲಾಗುತ್ತದೆ ಹೀಗಾಗಿ ಇದೂ ಭಾವನಾತ್ಮಕ ಸಂಬಂಧ ಇರಬೇಕು.

೨೨. ಮಧುವಯ್ಯನಿಗೆ ಮಧುವರಸನೆಂದೂ ಕರೆಯಲಾಗುತ್ತದೆ. ಶ್ರೀಯುತ ಹಳಕಟ್ಟಿ ಹಾಗೂ ಇತರರ ಕೃತಿಗಳನ್ನು ಅವಲೋಕಿಸಿರಿ.

೨೩. ಸಂ. ಪಿ. ಕೆ. ರಾಜಶೇಖರ, ಜನಪದ ಬಸವಪುರಾಣ, ೧೮೦ರಿಂದ ೩೦೮

ಕುರುಹು ಇದೆ ಎನಿಸುತ್ತದೆ. 'ಬೆಂಕಿ ಇರದೆ ಹೊಗೆಯಾಡದು' ಎನ್ನುವ ತತ್ವದ ಹಿನ್ನೆಲೆಯಲ್ಲಿ ಈ ವಿಷಯವನ್ನು ಗ್ರಹಿಸುವ ಅಗತ್ಯವಿದೆ ಮತ್ತು ಈ ವಿಷಯದ ಕುರಿತು ಇನ್ನೂ ಹೆಚ್ಚಿನ ಸಂಶೋಧನೆಯನ್ನು ನಡೆಸುವ ಅಗತ್ಯವಿದೆ.[೨೪]

*ಶರಣ ಜಗತ್ತು, ೧೯೯೮*
*ದಲಿತಯುಗ ಮತ್ತು ಕನ್ನಡ ಸಾಹಿತ್ಯ, ೧೯೯೯, ಪು.೯೧-೧೦೩*

---

೨೪. ಈ ಲೇಖನಕ್ಕೆ ಸಂಬಂಧಿಸಿದಂತೆ ಮುಂದುವರೆದ ಇನ್ನೊಂದು ಭಾಗವಿದೆ. ಅದು 'ಜನಪದರಲ್ಲಿ ಹರಳಯ್ಯ' ಎನ್ನುವುದು.

# ೭೮. ಮಧ್ಯಕಾಲೀನ ಕಾವ್ಯದಲ್ಲಿ ಪ್ರಭುತ್ವ ಮತ್ತು ಮೀರುವ ಪ್ರಕ್ರಿಯೆ

● ಎ. ಚಂದ್ರಶೇಖರ ನಂಗಲಿ

ವಿಷಯ ಪ್ರವೇಶಕ್ಕೆ ಮುಂಚೆ ಪ್ರಭುತ್ವವೆಂದರೇನು? ಇದರ ಸ್ವರೂಪ ಯಾವುದು? ಎಂಬುದನ್ನು ಸ್ಪಷ್ಟಪಡಿಸಿಕೊಳ್ಳಬೇಕಾದ ಅನಿವಾರ್ಯತೆ ನಮ್ಮ ಎದುರಿಗಿದೆ. ಡಾ|| ಜಿ. ಎಸ್. ಶಿವರುದ್ರಪ್ಪನವರು ಪ್ರಭುತ್ವಕ್ಕೆ ಸಂವಾದಿಯಾಗಿ establishment ಎಂಬ ಆಂಗ್ಲ ಪದವನ್ನು ಬಳಸಿದ್ದಾರೆ.[1] ಡಾ|| ಎ. ಲಕ್ಷ್ಮೀನಾರಾಯಣರು ಅಂಬೇಡ್ಕರ್ ಅವರ ರಾಜಕೀಯ ವಿಚಾರ ಧಾರೆಯನ್ನು ವಿವರಿಸುತ್ತಾ ಪ್ರಭುತ್ವಕ್ಕೆ ಸಂವಾದಿಯಾಗಿ state ಎಂಬ ಆಂಗ್ಲ ಪದವನ್ನು ಬಳಸಿದ್ದಾರೆ. ಅದೇ ಲೇಖನದಲ್ಲಿ ಶ್ರೀ ಲಕ್ಷ್ಮೀನಾರಾಯಣರು ಪಾಶ್ಚಾತ್ಯ ಚಿಂತಕರಾದ ಹಾಬ್ಸ್, ಹೆಗಲ್, ಜೋಸ್ವಾನ್ ಕೋಟ್‌ರವರ ''ಪ್ರಭುತ್ವ ಸಾಪೇಕ್ಷರಹಿತ (Absolute) ಎಂಬ ವಾದವು'' ಅಂಬೇಡ್ಕರ್ ಅವರಿಗೆ ಪೂರ್ವಪಕ್ಷವಾಗಿತ್ತೆಂಬುದನ್ನು ಪ್ರಸ್ತಾಪಿಸಿದ್ದಾರೆ.[2] ಶ್ರೀ ಎಸ್. ಮನುಚಕ್ರವರ್ತಿಯವರು ಪ್ರಭುತ್ವ ಹಾಗೂ ಸರ್ಕಾರಗಳ ನಡುವೆ ವ್ಯತ್ಯಾಸವನ್ನು ಗುರುತಿಸಬೇಕಾಗಿದೆಯೆಂದು ಹೇಳುತ್ತಾ....''ತಾತ್ವಿಕ ಅರ್ಥದಲ್ಲಿ ಪ್ರಭುತ್ವ ಎನ್ನುವುದು ಕೆಲವೇ ಜಾತಿ, ವರ್ಗಗಳಿಗೆ ಮಾತ್ರ ಮೀಸಲಾಗದೆ ಎಲ್ಲರ ಹಿತಗಳನ್ನೂ ಕಾಯಬೇಕಾದ ಒಂದು ಆದರ್ಶವ್ಯವಸ್ಥೆ. ಪ್ರಭುತ್ವವನ್ನು ಕುರಿತು ಮಾತಾಡುವಾಗಲೆಲ್ಲ ನಾವು ಅದು ಸಮಗ್ರತೆಯನ್ನು ಕಾಪಾಡುವ ಒಂದು ಅಂಗವೆಂದೇ ತಿಳಿಯುತ್ತೇವೆ''....ಎಂದಿದ್ದಾರೆ.[3] ಮನುಚಕ್ರವರ್ತಿಯವರ ಪ್ರಕಾರ ''ಪ್ರಭುತ್ವ ಮತ್ತು ಸರ್ಕಾರಗಳ ನಡುವಿನ ಈ ವ್ಯತ್ಯಾಸ ಕೇವಲ ತಾತ್ವಿಕ ವಾದದ್ದಲ್ಲ; ಇದೊಂದು ರಾಜಕೀಯ ವಾಸ್ತವ. ತಮ್ಮಲ್ಲ ಸೋಲುಗಳ ನಡುವೆಯೂ ಸೋಷಲಿಸ್ಟ್ ಹಾಗೂ ಕಮ್ಯುನಿಸ್ಟ್ ಸರ್ಕಾರಗಳು ಕಡೆಯ ಪಕ್ಷ ತಮ್ಮದೇ ಆದ ರೀತಿಯಲ್ಲಿ ಪ್ರಭುತ್ವದ ತಾತ್ವಿಕ ಅನುಭವವಾದರೂ ದಕ್ಕುವಂತೆ ಮಾಡಿವೆ. ಆದರೆ, ಪ್ರಜಾಪ್ರಭುತ್ವ ರಾಷ್ಟ್ರಗಳಲ್ಲಿ ಸರ್ಕಾರಗಳು ಸದಾ ನಿರ್ದಿಷ್ಟ ವರ್ಗಗಳ, ಜಾತಿಗಳ ಹಿತಾಸಕ್ತಿಯನ್ನು ಮಾತ್ರ ಕಾಯ್ದುಕೊಂಡು ಬಂದಿವೆ.'' ಮನುಚಕ್ರವರ್ತಿಯವರ ವಿವರಣೆಯಲ್ಲಿ ಪ್ರಭುತ್ವವು ನಿರಪೇಕ್ಷ (Absolute); ಸರ್ಕಾರವು ಸಾಪೇಕ್ಷವೆಂಬ ಸ್ಪಷ್ಟ ವಿಂಗಡಣೆಯಿದೆ. ಹೀಗೆ ಪ್ರಭುತ್ವವನ್ನು ಕುರಿತ ವ್ಯಾಖ್ಯಾನ ವಿವರಣೆಗಳು ಕನ್ನಡದಲ್ಲಿಯೂ ತಕ್ಕಮಟ್ಟಿಗೆ ಲಭಿಸುತ್ತವೆ. ಆದರೆ, ತಾತ್ವಿಕ ದೃಷ್ಟಿಯಿಂದ ಪ್ರಭುತ್ವವನ್ನು ಕುರಿತು ನಡೆಸುವ ಪ್ರಗಲ್ಭ ಚಿಂತನೆಗಳು ಪ್ರಸ್ತುತ ಪ್ರಬಂಧಕ್ಕೆ ಹೆಚ್ಚಿನ ಹೊರೆಯಾಗುವುದರಿಂದ ಇದನ್ನು ಬೆಳೆಸಲಿಚ್ಛಿಸುವುದಿಲ್ಲ.

---

೧. ಕನ್ನಡ ಕವಿಗಳ ಕಾವ್ಯಕಲ್ಪನೆ: ಜಿ. ಎಸ್. ಶಿವರುದ್ರಪ್ಪ, ಮೈಸೂರು ವಿಶ್ವವಿದ್ಯಾಲಯದ ಪ್ರಕಟಣೆ, ಪು. ೫೦, ೧೯೮೯.

೨. ಡಾ|| ಅಂಬೇಡ್ಕರ್ ವಿಚಾರಧಾರೆ: ಸಂ|| ಅರವಿಂದ ಮಾಲಗತ್ತಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಪ್ರಕಟಣೆ, ಪು. ೩೦, ೧೯೯೧.

೩. ಆಧುನಿಕ ಪ್ರಭುತ್ವದ ಸಂದರ್ಭದಲ್ಲಿ ಹಿಂಸೆ ಮತ್ತು ಅಹಿಂಸೆ: ಮನುಚಕ್ರವರ್ತಿಯವರ ಲೇಖನ, ಶೂದ್ರ, ಪು. ೩೨, ಸಂ. ೧೭. ೮-೯, ೧೯೯೧.

## ೨

ಮಧ್ಯಕಾಲೀನ ಕಾವ್ಯಕ್ಕೆ ಸಂಬಂಧಪಟ್ಟಂತೆ ಪ್ರಭುತ್ವದ ಸ್ವರೂಪವನ್ನು ಹೀಗೆ ವಿವರಿಸಬಹುದು. 'ಪ್ರಭುತ್ವ' ಎಂದರೆ ರಾಜಪ್ರಭುತ್ವ ಎಂದು ತಿಳಿಯುವುದು ವಾಡಿಕೆಯಾಗಿಬಿಟ್ಟದೆ. ಈ ರಾಜಮಾರ್ಗದ ಗ್ರಹಿಕೆಯಲ್ಲಿ ಆಲೋಚಿಸುತ್ತಾ ಸಾಗಿದರೆ ನಮ್ಮ ಕವಿಗಳು ಎಲ್ಲೆಲ್ಲಿ ರಾಜರ ವಿರುದ್ಧ ಕಿಡಿ ನುಡಿದಿದ್ದಾರೆ? ಯಾರ್ಯಾರು ರಾಜಾಶ್ರಯದಿಂದ ದೂರ ಸಿಡಿದಿದ್ದಾರೆ? ಎಂಬ ರಾಜವಿರೋಧಿ ಚರ್ಚೆಗಳ ಚರ್ವಿತ ಚರ್ವಣದ ಸಮೀಕ್ಷೆ ಮಾಡಿ ತೃಪ್ತಿ ಪಟ್ಟುಕೊಳ್ಳಬೇಕಾಗುತ್ತದೆ. ಕರ್ನಾಟಕ ಸಾಹಿತ್ಯ ಅಕಾಡೆಮಿ ಕಲ್ಪಿಸಿರುವ ಕನ್ನಡ ಸಾಹಿತ್ಯದ ಪುನರ್ ಮೌಲ್ಯೀಕರಣ ವಿಶೇಷ ಯೋಜನೆಯ ಸಂದರ್ಭದಲ್ಲಾದರೂ 'ಪ್ರಭುತ್ವ'ವನ್ನು ಕುರಿತ ರಾಜ ಮಾರ್ಗ ದೃಷ್ಟಿಯನ್ನು ಬದಲಿಸಿಕೊಳ್ಳಬೇಕಾಗಿದೆ. ಪ್ರಸ್ತುತ ಲೇಖನದಲ್ಲಿ 'ಪ್ರಭುತ್ವ' ಮತ್ತು 'ರಾಜತ್ವ'ಗಳ ನಡುವೆ ಸ್ಪಷ್ಟಭೇದವನ್ನು ಪಾಲಿಸಲಾಗಿದೆ. ಪ್ರಭುತ್ವದ ವ್ಯಾಪ್ತಿಯಲ್ಲಿ ತೋಳ್ಬಲಕ್ಕೆ ಹೆಸರಾದ ಕ್ಷಾತ್ರ ಸಮುದಾಯ ಮತ್ತು ಬುದ್ಧಿಬಲಕ್ಕೆ ಹೆಸರಾದ ವಿಪ್ರಸಮುದಾಯಗಳೆರಡೂ ಸೇರಿಕೊಳ್ಳುತ್ತವೆ. ಚರಿತ್ರೆಯ ಗತಿಯಲ್ಲಿ ಇವೆರಡು ಸಮುದಾಯಗಳು ಒಂದನ್ನೊಂದು ಪೋಷಿಸುತ್ತಾ ಒಂದರೊಳಗೊಂದು ಹೆಣೆದುಕೊಂಡಿರುವುದನ್ನು ಗಮನಿಸಿದಾಗ, 'ಪ್ರಭುತ್ವ'ವೆಂದರೆ ಇವೆರಡೂ ಪ್ರತಿಷ್ಠಿತ ಶಕ್ತಿಗಳ ಮೇಳನವೆಂಬುದು ಮನದಟ್ಟಾಗುತ್ತದೆ. ''ಕ್ಷಾತ್ರತೇಜವ ಹೊರೆವುದೇ ಬ್ರಾಹ್ಮಣ್ಯ ಶಕ್ತಿ''...ಎಂಬ ನಂಬಿಕೆಯನ್ನು ನಮ್ಮಲ್ಲಿ ಬಹು ಹಿಂದಿನಿಂದಲೂ ವ್ಯವಸ್ಥಿತವಾಗಿ ಪ್ರಚಾರ ಮಾಡಿಕೊಂಡು ಬರಲಾಗಿದೆಯೆಂಬುದನ್ನು ಈ ಕೆಳಗಿನ ಉಲ್ಲೇಖನದಿಂದ ತಿಳಿಯಬಹುದು:

ನೂರು ಯಜ್ಞವ ಹೊಯ್ದರಿಗೆ ಹರಿ
ದೇರಿದನು ಸುರಪತಿಯ ಪೀಠವ
ಸೋರು ಗುಡಿಸಿತು ಪದವಿಯದು ವಿಪ್ರಾವಮಾನದಲಿ
ಮೂರು ಮಾತೇನೈ ಮಹೀಸುರ
ರೇರಿಸಿದರೇರುವುದು ಮುನಿದರೆ
ಹಾರಿಸುವರೈ ನೂರು ಯಜ್ಞವನೆಂದನಾ ನಹುಷ ॥ (ಅರಣ್ಯಪರ್ವ, ೧೩-೬೨)

ಇದೊಂದು ಪದ್ಯ ಅಷ್ಟೆ. ಮಹೀಪತಿಗಳಿಗೂ ಮಹೀಸುರರಿಗೂ ಇರುವ, ಇರಬೇಕಾದ ಅನ್ಯೋನ್ಯ ಮೈತ್ರಿಯನ್ನು ಸಾರುವ ಇಂಥ ಹಲವು ಪದ್ಯಗಳನ್ನು ಕುವೆಂಪು ಒಂದು ಲೇಖನದಲ್ಲಿ ವಿವರವಾಗಿಯೇ ಪ್ರಸ್ತಾಪಿಸಿದ್ದಾರೆ.[೪] ಇದರಿಂದ ಸ್ಪಷ್ಟಗೊಳ್ಳುವ ಸಂಗತಿಯೆಂದರೆ ಮೂರ್ತರೂಪದ ತೋಳ್ಬಲವು (=ಕ್ಷಾತ್ರ ಸಮುದಾಯ) ಅಮೂರ್ತರೂಪದ ಬುದ್ಧಿಬಲವನ್ನು (=ವಿಪ್ರಸಮುದಾಯ) ಆಶ್ರಯಿಸಿ ಬಹುಸಂಖ್ಯಾತ ಜನಸಮುದಾಯಗಳನ್ನು ತನ್ನ ಅಂಕೆಯಲ್ಲಿ, ಹಿಡಿತದಲ್ಲಿ ಇರಿಸಿಕೊಳ್ಳಲು ನಡೆಸಿದ ಕುಯುಕ್ತಿಯನ್ನೆ ಚರಿತ್ರೆಯುದ್ದಕ್ಕೂ ಕಾಣಬಹುದು. ಹೀಗೆ ಮೂರ್ತ ಮತ್ತು ಅಮೂರ್ತಗಳ ಮೈತ್ರಿಯಿಂದ ಹುಟ್ಟಿ ಬೆಳೆಯುವ, ವಿಸ್ತರಿಸುವ ಪ್ರಭುತ್ವದ ನೆಲೆಯನ್ನು ಮೊದಲಿಗೆ ಗ್ರಹಿಸಬೇಕು. ಪ್ರಭುತ್ವದ ವ್ಯಾಪ್ತಿಯಲ್ಲಿ ರಾಜತ್ವವನ್ನು ಮಾತ್ರ ಗಮನಿಸಿ ಪುರೋಹಿತಶಾಹಿಯನ್ನು ಗಮನಿಸದಿದ್ದರೆ ಬೇರುಗಳನ್ನು ನಿರ್ಲಕ್ಷಿಸಿ ಬೊಡ್ಡೆಯನ್ನು ಮಾತ್ರ ವ್ಯಾಖ್ಯಾನ ಮಾಡಿದಂತಾಗುತ್ತದೆ, ಅಷ್ಟೆ.

---

೪. ವಿಚಾರಸಾಹಿತ್ಯ – ಭಾಗ ೨: (ಜನತಾಪ್ರಜ್ಞೆ ಮತ್ತು ವೈಚಾರಿಕ ಜಾಗ್ರತಿ ಎಂಬ ಲೇಖನ) ಬೆಂ. ವಿ.ವಿ.ದ ಪ್ರಕಟಣೆ, ಪು. ೧೬-೩೧, ದ್ವಿ. ಮು. ೧೯೮೬.

ನಮ್ಮ ದೇಶದಲ್ಲಿ ಮೇಲೆ ವಿವರಿಸಿದಂತಹ ಪ್ರಭುತ್ವದ ನಿಯಂತ್ರಣಕ್ಕೊಳಪಟ್ಟು ಊಳಿಗಮಾನ್ಯ ಪದ್ಧತಿ ಹಾಗೂ ಸಾಮಾಜಿಕ ಶ್ರೇಣೀಕರಣಗಳು ನೆಲೆಯೂರಿ ನಿಂತಿವೆ. ಊಳಿಗಮಾನ್ಯ ಪದ್ಧತಿಯು ಭೂ ಸ್ವಾಮ್ಯವನ್ನು ಅಥವಾ ಖಾಸಗಿ ಆಸ್ತಿಯ ಕಲ್ಪನೆಯನ್ನು ಎತ್ತಿ ಹಿಡಿದರೆ ಸಾಮಾಜಿಕ ಶ್ರೇಣೀಕರಣವು ಜಾತಿಪದ್ಧತಿ ಮತ್ತು ಅಸ್ಪೃಶ್ಯತೆಗಳನ್ನು ಹುಟ್ಟು ಹಾಕಿದೆ. ಆದ್ದರಿಂದ ಪ್ರಭುತ್ವದ ಅರ್ಥ ವಿವರಣೆಯಲ್ಲಿ ರಾಜತ್ವ ಮತ್ತು ಪುರೋಹಿತಶಾಹಿಗಳ ಅನ್ಯೋನ್ಯ ಮೈತ್ರಿ ಮಾತ್ರವಲ್ಲ! ತತ್ಫಲಿತಗಳಾದ ಊಳಿಗಮಾನ್ಯ ಪದ್ಧತಿ ಮತ್ತು ಸಾಮಾಜಿಕ ಶ್ರೇಣೀಕರಣಗಳು ಕೂಡ ಸಮಾವೇಶಗೊಳ್ಳುತ್ತವೆ. ಪ್ರಭುತ್ವವು ಒಳಗೊಳ್ಳುವ ಇಂಥ ಸಮಾವೇಶಕ ನೆಲೆಯನ್ನು ಮನಗಾಣದ್ದರಿಂದಲೋ ಏನೋ ಹಳಗನ್ನಡದ ಸಾಹಿತ್ಯ ವಿಮರ್ಶೆಯಲ್ಲಿ ರಾಜವಿರೋಧಿ ಮತ್ತು ವೈದಿಕವಿರೋಧಿ ಧೋರಣೆಗಳನ್ನು ಪ್ರತ್ಯೇಕ ದೃಷ್ಟಿಯಿಂದ ಬೇರೆ ಬೇರೆ ಎಂದು ಗುರುತಿಸಲಾಗಿದೆ.

### ವೈದಿಕವಿರೋಧಿ ಧೋರಣೆಯ ಗ್ರಹಿಕೆಗಳು

೧. ''ಕನ್ನಡ ಸಾಹಿತ್ಯ ಚರಿತ್ರೆಯನ್ನು ಸಾದ್ಯಂತವಾಗಿ ನಾವು ಅವಲೋಕಿಸಿದರೆ ವೈದಿಕ ಧರ್ಮವಿರೋಧಿ ಪ್ರಜ್ಞೆಯೊಂದು ಅಂತರ್ಯಾಮಿ ಸ್ಫೂರ್ತಿಯಾಗಿ ಒಳಗೇ ಕೆಲಸ ಮಾಡಿರುವುದು ನಮಗೆ ಗೋಚರವಾಗುತ್ತದೆ.'' ಕೆ. ಪಿ. ಪೂರ್ಣಚಂದ್ರ ತೇಜಸ್ವಿ: ಕರ್ನಾಟಕ ಸಂಸ್ಕೃತಿಯ ವಿಶ್ಲೇಷಣೆ, ಸಂಕ್ರಮಣ-೬೦, ಪು. ೯೭, ೧೯೭೪.

೨. ''ಕನ್ನಡ ಸಾಹಿತ್ಯದ ಪ್ರಾರಂಭವೆ, ವೈದಿಕ ವಿರೋಧಿ ಧೋರಣೆಯಿಂದ ಹುಟ್ಟಿಕೊಂಡ ಜೈನಧರ್ಮದ ಕವಿಗಳಿಂದ ಮತ್ತು ಅದು ಮುಂದುವರಿದದ್ದು ಅದೇ ಧೋರಣೆಯ ವೀರಶೈವ ಕವಿಗಳಿಂದ ಎಂಬುದನ್ನು ನೆನಪಿಗೆ ತಂದುಕೊಂಡರೆ, ಈ ಕವಿಗಳ ವಸ್ತು ನಿರ್ವಹಣೆ, ವೈದಿಕ ಪರಂಪರೆಯ ಕಾವ್ಯಗಳಿಗಿಂತ ಏಕೆ ಭಿನ್ನವಾಗಿದೆ ಎಂಬುದನ್ನು ಊಹಿಸಲು ಕಷ್ಟಪಡಬೇಕಾಗಿಲ್ಲ.......ಆಧುನಿಕ ಕಾಲದ ಸಾಹಿತ್ಯದ ನೆಲೆಯಿಂದ ಹಿಂದಕ್ಕೆ ನೋಡುವುದಾದರೆ, ಕನ್ನಡದಲ್ಲಿ ಮೊದಲಿನಿಂದಲೂ ವೈದಿಕ ವಿರೋಧಿ ಧೋರಣೆಯೊಂದು ಉದ್ದಕ್ಕೂ ಕ್ರಿಯಾಶೀಲವಾಗಿದೆ ಎಂದು ಹೇಳಬಹುದು.'' ಜಿ. ಎಸ್. ಶಿವರುದ್ರಪ್ಪ: ಕನ್ನಡ ಕವಿಗಳ ಕಾವ್ಯಕಲ್ಪನೆ, ಪು. ೩೭ ಮತ್ತು ೩೯, ಮೈ.ವಿ.ವಿ.ದ ಪ್ರಕಟಣೆ, ೧೯೮೯.

### ರಾಜ ವಿರೋಧಿ ಧೋರಣೆಯ ಗ್ರಹಿಕೆಗಳು

ಪಂಪ, ವಚನಕಾರರು, ನೇಮಿಚಂದ್ರ, ನಾಗಚಂದ್ರ, ಆಂಡಯ್ಯ, ಹರಿಹರ, ರಾಘವಾಂಕ, ನಂಜುಂಡ, ಗೋವಿಂದ ವೈದ್ಯರ ಉಲ್ಲೇಖಗಳನ್ನು ನೀಡಿರುವ ಜಿ. ಎಸ್. ಶಿವರುದ್ರಪ್ಪನವರು ಹೀಗೆ ಹೇಳಿದ್ದಾರೆ: ''ಈ ಎಲ್ಲ ಪ್ರತಿಕ್ರಿಯೆಗಳನ್ನು ಗಮನಿಸಿದರೆ ರಾಜರುಗಳ ಪರವಾದ ಕೃತಿರಚನೆಯ ತೊಡಕು, ಇಕ್ಕಟ್ಟು ಹಾಗೂ ಸಮಜಾಯಿಷಿಗಳನ್ನು ಗಮನಿಸಿದರೆ ಕವಿಯ ಕಾವ್ಯ ನಿರ್ಮಿತಿಯನ್ನು ನಿಯಂತ್ರಿಸುವ, ಧಾರ್ಮಿಕವಲ್ಲದ ಇನ್ನಿತರ ಪ್ರಭುತ್ವ (establishment)ಗಳನ್ನು ಪ್ರತಿಭಟಿಸುವ ಹಾಗೂ ನಿರಾಕರಿಸುವ ಪ್ರವೃತ್ತಿಯೊಂದು ಉದ್ದಕ್ಕೂ ಕನ್ನಡಸಾಹಿತ್ಯ ಪರಂಪರೆಯಲ್ಲಿ ಜೀವಂತವಾಗಿದೆ.'' ಜಿ. ಎಸ್. ಶಿವರುದ್ರಪ್ಪ: ಅದೇ, ಪು. ೩೦.

'ಪ್ರಭುತ್ವ'ಕ್ಕೆ ಹಿಂದೆ ಸೂಚಿಸಿರುವ ವಿವರಣೆಯನ್ನು ಒಪ್ಪಿಕೊಳ್ಳುವುದಾದರೆ

ರಾಜವಿರೋಧಿ, ವೈದಿಕ ವಿರೋಧಿ, ಜಾತಿ ವಿರೋಧಿ ಎಂಬಂಥ ವಿಂಗಡಣಾತ್ಮಕ ಪರಿಶೀಲನೆಗಳಲ್ಲಿ ಬಲವಾಗಿ ಹೊಸೆದ, ಮುಪ್ಪುರಿಗೊಂಡ ಹಗ್ಗವೊಂದನ್ನು ಬಿಡಿಬಿಡಿಯಾದ ಹುರಿಗಳನ್ನಾಗಿ ಪ್ರತ್ಯೇಕಿಸುವ ದೃಷ್ಟಿಯಿದೆ. ಇದರಿಂದ ವಾಸ್ತವದ ಬಲೀಯತೆಯನ್ನು ಗ್ರಹಿಸಿದಂತೆ ಆಗುವುದಿಲ್ಲ. ರಾಜತ್ವ ಮತ್ತು ಪುರೋಹಿತಶಾಹಿಗಳ ಅನ್ಯೋನ್ಯ ಮೈತ್ರಿಯಿಂದ ತಲೆ ಎತ್ತುವ ಪ್ರಭುತ್ವವನ್ನು 'Holding hood' ಎಂದು ಗುರುತಿಸಬೇಕಾಗಿದೆ. ರಾಜತ್ವ (Royalhood) ಮತ್ತು ಪುರೋಹಿತಶಾಹಿಗಳ (Priesthood) ಮೇಳನವೇ ನಮ್ಮ ದೇಶದಲ್ಲಿ ಪ್ರಭುತ್ವದ ಚಾಲಕಶಕ್ತಿಯಾಗಿದೆ. ಈ ದೃಷ್ಟಿಯಿಂದ ಪುರೋಹಿತಶಾಹಿಗೆ ಕೊಡುವ ಪೆಟ್ಟು ರಾಜತ್ವಕ್ಕೆ ಕೊಟ್ಟ ಪೆಟ್ಟೂ ಆಗುತ್ತದೆ. ಇದನ್ನು ಡಾ|| ಬಸವರಾಜ ಕಲ್ಗುಡಿಯವರು ಭಕ್ತಿಪಂಥದ ಬೆಳವಣಿಗೆಯನ್ನು ಕುರಿತು ಚರ್ಚಿಸುವಾಗ ಹೀಗೆ ಗುರುತಿಸಿದ್ದಾರೆ :

> ''ವರ್ಣ ವ್ಯವಸ್ಥೆಯನ್ನು ಪ್ರಶ್ನಿಸಲಾದ ಇಲ್ಲಿ ಬ್ರಾಹ್ಮಣ ವರ್ಗದ ಸ್ಥಾನವನ್ನು ಕುರಿತ ಶ್ರೇಷ್ಠತೆಯನ್ನು ನಿರಾಕರಿಸಲಾಯಿತು. ಇದು ಆ ವರ್ಗವನ್ನು ಧಾರ್ಮಿಕ ಕಾರಣಗಳಿಗಾಗಿ ನಂಬಿದ್ದ ರಾಜನಿಗೂ ಪರೋಕ್ಷವಾದ ಹೊಡೆತವನ್ನೇ ಕೊಟ್ಟ ಹಾಗೆ''[೫]

ಆದ್ದರಿಂದ, ಸಾಮಾಜಿಕ ಶ್ರೇಣೀಕರಣಗಳಾದ ಜಾತಿ ಪದ್ಧತಿ ಮತ್ತು ಅಸ್ಪೃಶ್ಯತೆ, ಊಳಿಗಮಾನ್ಯ ಪದ್ಧತಿಯ ಭೂಸ್ವಾಮ್ಯ ನೀತಿ, ಪುರೋಹಿತಶಾಹಿಯ ಧರ್ಮಾಧಿಕಾರ, ರಾಜತ್ವದ ಶಕ್ತಿ ಕೇಂದ್ರಿಕರಣ-ಇವೆಲ್ಲವೂ ಪ್ರಭುತ್ವದ ವ್ಯಾಪ್ತಿಗೊಳಪಡುವ ಅಂತರ್ ಸಂಬಂಧಿಯಾದ ನೆಲೆಗಳಾಗಿವೆ. ಈ ಎಲ್ಲ ನೆಲೆಗಳನ್ನು ಮೊದಲಬಾರಿಗೆ ವ್ಯಾಪಕವಾಗಿ ವಿರೋಧಿಸುವ, ಖಂಡಿಸುವ, ಪ್ರತಿಭಟಿಸುವ ಸಮುದಾಯ ಧ್ವನಿ ವಚನ ಸಾಹಿತ್ಯದಲ್ಲಿದೆ. ವಚನ ಚಳುವಳಿಯನ್ನು ಕೇವಲ 'ಧಾರ್ಮಿಕ ಪರಿಷ್ಕರಣ ಚಳುವಳಿ' ಎಂದು ಭಾವಿಸುವವರು ಮೇಲೆ ಹೇಳಿದ ಅಂತರ್‌ಸಂಬಂಧಿ ನೆಲೆಗಳನ್ನೊಳಗೊಂಡ ಪ್ರಭುತ್ವ ವಿರೋಧಿ ಧೋರಣೆ ಮತ್ತು ಮೀರುವ ಪ್ರಕ್ರಿಯೆಗಳನ್ನು ಗ್ರಹಿಸಲಾರರು. ನಮ್ಮ ದೇಶದಲ್ಲಿ 'ಪ್ರಭುತ್ವ'ವೆಂಬುದು ರಾಜಕೀಯ ವ್ಯವಸ್ಥೆ, ಧಾರ್ಮಿಕ ವ್ಯವಸ್ಥೆ, ಆರ್ಥಿಕ ವ್ಯವಸ್ಥೆ, ಸಾಮಾಜಿಕ ವ್ಯವಸ್ಥೆಗಳೆಂಬ ಚತುಷ್ಟಯಗಳ ಮೂಲಕ ನೆಲೆಯೂರಿದ 'ಹಿಡುವಳಿತನ'ವೇ (Holdinghood) ಆಗಿದೆ. ಇಂಥ ಎಲ್ಲ ಬಗೆಯ ಹಿಡುವಳಿಗಳಿಂದ ಬಿಡುಗಡೆಯ ಕಡೆಗೆ ಚಲಿಸುವ ಪ್ರಕ್ರಿಯೆಯು ವಚನ ಚಳುವಳಿಯ ಮುಖ್ಯ ಸ್ಫೂರ್ತಿಯಾಗಿರುವುದರಿಂದಲೇ ಪ್ರಭುತ್ವದ ಆಕ್ರಮಣಕಾರಿ ನೆಲೆಗೆ ಪ್ರತಿಯಾಗಿ ಅತಿಕ್ರಮಣವನ್ನೂ, ಪ್ರತಿಷ್ಠಿತ ಶಕ್ತಿಗಳ ವಿರುದ್ಧ ಪ್ರತಿಭಟನೆಯನ್ನೂ, ಪಟ್ಟಭದ್ರ ಹಿತಾಸಕ್ತಿಗಳ ನಿರಾಕರಣೆಯನ್ನೂ ವಚನ ಸಾಹಿತ್ಯದಲ್ಲಿ ಸ್ಪಷ್ಟವಾಗಿ ಮನಗಾಣಬಹುದು.

## ೩

ವಚನಕಾರರು ರಾಜತ್ವದ ಶಕ್ತಿಕೇಂದ್ರೀಕರಣವನ್ನು ಛಿದ್ರಿಸಿರುವ ಬಗೆಯು ಕನ್ನಡ ವಿಮರ್ಶೆಯಲ್ಲಿ ಚರ್ವಿತಚರ್ವಣವೆಂಬಂತೆ ಮತ್ತೆ ಮತ್ತೆ ಪ್ರಸ್ತಾಪಿತವಾಗಿದೆ. ಬಿಜ್ಜಳ ಮತ್ತು ಬಸವಣ್ಣರ ಸಂಘರ್ಷ, ಕೌಶಿಕ ಮತ್ತು ಅಕ್ಕಮಹಾದೇವಿಯ ಸಂಘರ್ಷ ಈ ನಿಟ್ಟಿನಿಂದ

---

೫. ಮಧ್ಯಕಾಲೀನ ಭಕ್ತಿ ಮತ್ತು ಅನುಭಾವ ಸಾಹಿತ್ಯ ಹಾಗೂ ಚಾರಿತ್ರಿಕ ಪ್ರಜ್ಞೆ; ಬಸವರಾಜ ಕಲ್ಗುಡಿ, ಕ. ಸಾ. ಪ. ಪ್ರಕಟಣೆ, ಪು. ೨೩೮, ೧೯೮೮.

ನೋಡಬಹುದಾದ ಜ್ವಲಂತ ನಿದರ್ಶನಗಳಾಗಿವೆ. ದಂತಕಥೆ ಮತ್ತು ಪುರಾಣಗಳ ನೆಲೆಯಿಂದ ಮಾತ್ರವಲ್ಲದೆ ಸ್ವತಃ ಬಸವಣ್ಣನ ಮತ್ತು ಅಕ್ಕಮಹಾದೇವಿಯ ವಚನಗಳಿಂದಲೇ ರಾಜತ್ವದ ವಿರುದ್ಧ ಧ್ವನಿ, ಸಂಘರ್ಷಗಳನ್ನು ಗ್ರಹಿಸಬಹುದಾಗಿದೆ. ಇಂತಹ ಎಲ್ಲ ವಚನಗಳನ್ನು ಇಲ್ಲಿ ಆಯ್ದು ಉಲ್ಲೇಖಿಸುವ ಅಗತ್ಯವಿಲ್ಲವಾದರೂ ರಾಜತ್ವವನ್ನು ಮೀರಿ ನಿಲ್ಲುವ ಪ್ರಕ್ರಿಯೆ ಸ್ವರೂಪವನ್ನು ಪರಿಶೀಲಿಸಬಹುದು. ಮಧ್ಯಕಾಲೀನ ರಾಜತ್ವದ ಸ್ವರೂಪವನ್ನು ಡಾ|| ಬಸವರಾಜ ಕಲ್ಗುಡಿ ಹೀಗೆ ವಿವರಿಸಿದ್ದಾರೆ.

> ''ಭಾರತದ ರಾಜಕೀಯ ಇತಿಹಾಸದಲ್ಲೇ ಈ ಮಧ್ಯಕಾಲೀನ ಬೆಳವಣಿಗೆಯ ಮಹತ್ವಪೂರ್ಣ ತಿರುವನ್ನು ಪಡೆಯಿತು. ಅಖಂಡವಾಗಿದ್ದ ವಿಶಾಲ ಸಾಮ್ರಾಜ್ಯಗಳು, ರಾಜ ವ್ಯವಸ್ಥೆಗಳು ಈ ಕಾಲದಲ್ಲೇ ಹಲವು ಚೂರುಗಳಾಗಿ ಒಡೆದವು. ಒಂದು ರೀತಿಯಲ್ಲಿ ಪ್ರಾದೇಶಿಕ ಸಂಸ್ಕೃತಿಯೊಡನೆ ಸಮ್ಮಿಳನವಾದಂಥ ಸ್ವರೂಪವನ್ನು ಈಗಿನ ರಾಜಕೀಯವು ಪಡೆಯಿತು. ರಾಜರು ಒಂದು ಪ್ರದೇಶ, ಭಾಷೆ, ಸಂಸ್ಕೃತಿಯೊಡನೆ ತಮ್ಮನ್ನು ಗುರುತಿಸಿಕೊಳ್ಳ ಹತ್ತಿದರು. ಅಲ್ಲದೆ ಸಾಮಂತರೂ, ಮಂಡಳೇಶ್ವರರೂ, ಮಹಾಮಂಡಳೇಶ್ವರರೂ ಆಗಿದ್ದ, ಈ ಪ್ರಾದೇಶಿಕ ಲಕ್ಷಣವನ್ನು ಪಡೆದಿದ್ದ ಈ ರಾಜರು ತಾವೇ ಸ್ವತಂತ್ರರಾಗಲು ಬಯಸಿದ್ದರಲ್ಲಿ ಆಶ್ಚರ್ಯವಿಲ್ಲ. ದೊಡ್ಡ ದೊಡ್ಡ ರಾಜಮನೆತನಗಳ ಹಿಡಿತ ತಪ್ಪಿಹೋಗುತ್ತಿದ್ದ ಈ ಕಾಲದಲ್ಲಿ ಸ್ವಲ್ಪ ಬಲಶಾಲಿಯಾದವನು ಹಠಾತ್ತನೆ ಆಕ್ರಮಣ ಮಾಡಲು ಹಿಂಜರಿಯುತ್ತಿರಲಿಲ್ಲವೆಂದು ತೋರುತ್ತದೆ. ಆದ್ದರಿಂದಲೇ ಈ ಕಾಲದಲ್ಲಿ ಸೇವಾವೃತ್ತಿಗಳು ಅಧಿಕ ಸಂಖ್ಯೆಯಲ್ಲಿ ಹೆಚ್ಚಿದುವು. ಅಧಿಕ ಸಂಖ್ಯೆಯ ವೀರಕಲ್ಲುಗಳು, ಮಾಸ್ತಿ ಕಲ್ಲುಗಳು ನಮಗೆ ಸಿಗುವುದು ಈ ಕಾಲದಲ್ಲೇ.''[೬]

ಹೀಗೆ ರಾಜತ್ವದ ಉಳಿವಿಗಾಗಿ ದುಡಿಯುವ ಕಾಯಕನಿಷ್ಠೆ ವಚನಕಾರರಲ್ಲಿ ಸ್ಥಿತ್ಯಂತರವನ್ನು ಪಡೆದಿದೆ. ಕಾಯಕವನ್ನು ಇಷ್ಟದೈವತಕ್ಕೆ ಮೀಸಲುಗೊಳಿಸುವುದರ ಮೂಲಕ ರಾಜತ್ವವನ್ನು ಪದಚ್ಯುತಗೊಳಿಸಲಾಗಿದೆ. ಬಸವಣ್ಣನ ಪ್ರಸಿದ್ಧ ವಚನ, ''ಊರ ಮುಂದೆ ಹಾಲ ಹಳ್ಳ ಹರಿಯುತ್ತಿರಲು ಓರೆಯಾವಿನ ಬೆನ್ನ ಹರಿಯಲದೇಕಯ್ಯ'' – ಎಂಬ ದೃಷ್ಟಾಂತವನ್ನು ಈ ಹಿನ್ನಲೆಯಿಂದಲೇ ನೋಡಬೇಕು. ರಾಜತ್ವದ ನೆಲೆಯಲ್ಲಿ ಪ್ರಕಟಗೊಳ್ಳುವ ಸ್ವಾಮಿ-ಸೇವಕ ಸಂಬಂಧಕ್ಕೆ ಜೋಳದ ಪಾಳಿಯ ಸಮರ್ಥನೆಯಿರುವುದು ಪ್ರಾಚೀನ ಸಾಹಿತ್ಯದಲ್ಲಿ ಕಂಡುಬರುತ್ತದೆ. ವಚನ ಸಾಹಿತ್ಯವು ಭೌತಿಕ ಸವಲತ್ತುಗಳಿಗಾಗಿ ರಾಜತ್ವವನ್ನು ಓಲೈಸುವುದಿಲ್ಲವಾದ್ದರಿಂದ ಜೋಳದ ಪಾಳಿಯನ್ನು ಕೂಡ ನಿರಾಕರಿಸಿದೆ. ರಾಜತ್ವಕ್ಕೆ ಬದ್ಧವಾದ ಕಾಯಕನಿಷ್ಠೆಯು ಸ್ಥಿತ್ಯಂತರವನ್ನು ಪಡೆದಂತೆ ಸ್ವಾಮಿ-ಸೇವಕ ಸಂಬಂಧವೂ ಮಾರ್ಪಾಟಿಗೆ ಒಳಗಾಗಿದೆ. ಇದನ್ನು ಕಲ್ಗುಡಿಯವರು ಹೀಗೆ ಗುರುತಿಸಿದ್ದಾರೆ:

---

೬. ಅದೇ, ಪು. ೨೩೭.

> ''ಎಲ್ಲ ಭಕ್ತಿ ಪಂಥೀಯ ಚಳುವಳಿ ಹಾಗೂ ಆಲೋಚನೆಗಳು ರಾಜನ ಅಸ್ತಿತ್ವವನ್ನು ನಿರಾಕರಿಸುವ ಮತ್ತು ವಿರೋಧಿಸುವ ನೆಲೆಯಿಂದಲೇ ಹೊರಟವುಗಳು. ರಾಜ; ಮನುಷ್ಯನ ಬದುಕನ್ನು, ಅವನ ಅಸ್ತಿತ್ವವನ್ನು ಸುಗಮಗೊಳಿಸಲಿಲ್ಲವೆನ್ನುವ ಮುಖ್ಯ ಕಾರಣ ಈ ನಿರಾಕರಣೆಯ ಮುಖ್ಯ ಅಂಶವಾಗಿದೆ. ಆದ್ದರಿಂದಲೇ ತಾನು ನಂಬಿಕೊಂಡ ದೇವರ ಸ್ವರೂಪಗಳ ಈ ಆಳು-ಒಡೆಯನ ಪ್ರತಿಮೆ, ರಾಜ-ಗುಲಾಮನ ಸಂಬಂಧದ ಸಮಾನಾಂತರ ಸ್ವರೂಪವನ್ನು ಪಡೆಯಿತು. ಈ ಬದಲಾವಣೆಯಲ್ಲಿ ಗುಣಾತ್ಮಕ ಮೌಲ್ಯವು ಬಹುಮುಖ್ಯವಾದ ಅಂಶವಾಗಿದೆ. ಇಲ್ಲಿ ಒಡೆಯ ನಿಜವಾದ ರಕ್ಷಕ; ಅತ್ಯಂತ ಮಾನವಿಯ ಗುಣಗಳ ಆಗರ, ಕರೆದ ಕೂಡಲೇ ಬಂದು ಕಾಯುವವ''.[೭]

ಮೇಲಿನ ವಿಶ್ಲೇಷಣೆಯಲ್ಲಿ ಸ್ವಾಮಿ-ಸೇವಕ ಸಂಬಂಧದ ಗುಣಾತ್ಮಕ ಬದಲಾವಣೆಯನ್ನು ಎತ್ತಿ ಹಿಡಿಯಲಾಗಿದೆ. ಇದು ಸರಿಯಾಗಿದೆಯಾದರೂ ಮತ್ತೊಂದು ಸೂಕ್ಷ್ಮಾಂಶವನ್ನಿಲ್ಲಿ ಸೇರಿಸಬೇಕಾಗಿದೆ. ಸ್ವಾಮಿ-ಸೇವಕ ಸಂಬಂಧದಲ್ಲಿ ರಾಜಕೃಪೆಯ ನಿರೀಕ್ಷೆ ಮತ್ತು ಹಾರೈಕೆಗಳಿರುತ್ತವೆ. ಇದು ಸ್ಥಿತ್ಯಂತರಗೊಂಡಾಗ ಭಗವತ್ ಕೃಪೆಯ ನಿರೀಕ್ಷೆ ಮತ್ತು ಹಾರೈಕೆಗಳಾಗಿ ಮಾರ್ಪಾಟಾಗುತ್ತದೆ. ಆದರೆ ವಚನಕಾರರು ರಾಜಕೃಪೆಯನ್ನಾಗಲಿ, ಭಗವತ್ ಕೃಪೆಯನ್ನಾಗಲಿ ಒಪ್ಪುವವರಲ್ಲ. – ''ಆನು ನಿಮ್ಮ ಹಾರೆನು, ಮಾನವರ ಬೇಡೆನು'' - ಎಂಬ ಬಸವಣ್ಣನ ದಿಟ್ಟದನಿಯಲ್ಲಿ ರಾಜಕೃಪೆ ಮತ್ತು ಭಗವತ್ ಕೃಪೆಗಳ ನಿರಾಕರಣೆ (Negation of Royal Grace and Devine Grace) ಸ್ಪಷ್ಟವಾಗಿ ಕಂಡುಬರುತ್ತದೆ. ಈ ದೃಷ್ಟಿಯಿಂದ ಬಸವಣ್ಣನ ವಚನವೊಂದನ್ನು ಪರಿಶೀಲಿಸಬಹುದು:

> ಕರ್ಮವೆಂಬ ಅಂಕದೊಡನೆ ತೊಡರಿದೆ
> ಜಿಸ್ನಪವ ಅವಧಾರು - ನಿಮ್ಮಾಳಿನ ಭಾಷೆಯ:
> ಕಡೆಗಳಕ್ಕೆ ನೂಂಕುವೆ, ಕೆಡಹುವೆನಂಕವ,
> ಕರೆದಡೊಸರಿಸಿದರೆ ನಿಮ್ಮಾಳಲ್ಲ!
> ಶಿವ ಶರಣೆಂಬ ದಂಡೆಯ ಹೂಡಿ
> ಗಣ ಮೇಳಾಪವೆಂಬಲಗಿನಿಂದಿರಿವೆ
> ಕೂಡಲ ಸಂಗಮದೇವ ॥[೮]

ಈ ವಚನವು ''ಗೊಹೇಶ್ವರನೆಂಬ ಹಗೆಯ ಗೆಲುವರೆ ಅರಿವೆಂಬ ಅಲಗ ಅವಧಾನ ತಪ್ಪದೆ ಹಿಡಿಯಬೇಕು ನೋಡಾ ಬಸವಣ್ಣ'' – ಎಂಬ ಅಲ್ಲಮನ ವಚನವನ್ನು ನೆನಪಿಗೆ ತರುತ್ತದೆ. ಇಲ್ಲಿ ಬಸವಣ್ಣ ತನ್ನ ಆಧ್ಯಾತ್ಮಿಕ ಹೋರಾಟವನ್ನು ಯುದ್ಧಚಿತ್ರಗಳ ಮೂಲಕವೇ ನೀಡಿದ್ದಾನೆ. ಸದಾ

---

೭. ಅದೇ, ಪು. ೯೫.

೮. ಅಂಕ = ಯುದ್ಧ, ಕಡೆಗಳ = ಯುದ್ಧಭೂಮಿಯ ಹೊರವಲಯ, ದಂಡೆ = ಒದು ಯುದ್ಧಭಂಗಿ; ದಂಡೆತ್ತಿ ಬರುವುದು, ಆಳು = ಸೈನಿಕ, ಆಳಿನ ಭಾಷೆ = ವೀರವಚನ, ಕರೆದಡೆ = ಸಹಾಯಕ್ಕಾಗಿ ಕರೆಯುವುದು; ಯುದ್ಧದಿಂದ ವೈಗರೆಯುವುದು, ಒಸರಿಸಿದರೆ = ಹಿಂಜರಿಯುವುದು. ಅಲಗಿನಿಂದಿರಿವೆ = ಖಡ್ಗದಿಂದ ಇರಿಯುವುದು.

ಒಳಜಗಳಗಳಿಂದ ತುಂಬಿಹೋಗಿದ್ದ ಮಧ್ಯಕಾಲೀನ ಇತಿಹಾಸದ ಹಿಂಸಾತ್ಮಕ ಯುದ್ಧಚಿತ್ರಗಳಿಗೆ ಇಲ್ಲಿ ಉಂಟಾಗಿರುವ ಸ್ಥಿತ್ಯಂತರ ಗುಣಾತ್ಮಕವಾಗಿದೆ. ಭೌತಿಕ ಸವಲತ್ತುಗಳಿಗಾಗಿ ರಾಜನನ್ನಾಗಲಿ, ಧರ್ಮವನ್ನಾಗಲಿ ಆಶ್ರಯಿಸದ ವಚನಕಾರರು ಆಧ್ಯಾತ್ಮಿಕ ಅನ್ವೇಷಣೆಯನ್ನು ವೀರ ಸಂಗ್ರಾಮವನ್ನಾಗಿ ಸ್ವೀಕರಿಸಿದ್ದಾರೆ. ಆದ್ದರಿಂದಲೇ ರಾಜಕೃಪೆ ಮತ್ತು ಭಗವತ್‌ಕೃಪೆಗಳೆರಡನ್ನೂ ಒಟ್ಟಿಗೆ ನಿರಾಕರಿಸಿದ್ದಾರೆ. ಇದು ಏಕಕಾಲದಲ್ಲಿ ಆತ್ಮಗೌರವ ಮತ್ತು ಆತ್ಮೋನ್ನತಿಗಳನ್ನು ಕಂಡುಕೊಳ್ಳುವ ದೃಷ್ಟಿಪಥವೂ ಆಗಿದೆ.

ಪುರೋಹಿತಶಾಹಿಯ ಧರ್ಮಾಧಿಕಾರವನ್ನು ಪ್ರಶ್ನಿಸುವ, ಪ್ರತಿಭಟಿಸುವ ನೆಲೆ ವಚನ ಚಳುವಳಿಯ ಮುಖ್ಯ ಧಾರೆಯೂ ಆಗಿದೆ. ವಚನಗಳಲ್ಲಿ ಕಂಡುಬರುವ ಸ್ಥಾವರ-ಜಂಗಮ, ಬಯಲು-ಲಯಗಳ ಸಂಘರ್ಷದಲ್ಲಿ ಪುರೋಹಿತಶಾಹಿಯ ನಿರಾಕರಣೆಯಿದೆ. ವಚನಕಾರರು ಪುರೋಹಿತಶಾಹಿಯನ್ನು; ಭಕ್ತ ಮತ್ತು ಭಗವಂತನ ಮಧ್ಯೆ ಏರ್ಪಟ್ಟ ಅಡ್ಡಗೋಡೆ ಎಂದು ತಿಳಿದಿದ್ದಾರೆ:

ಸತಿಯ ಸಂಗವನು, ಅತಿಶಯದ ಗ್ರಾಸವನು,
ಪೃಥುವಿಗೀಶ್ವರನ ಪೂಜೆಯನು, ಅರಿವುಳ್ಳೊಡೆ
ಪರರ ಕೈಯಿಂದ ಮಾಡಿಸುವರೆ ರಾಮನಾಥ

ಧರ್ಮಾಧಿಕಾರಿಗಳು ತಾವೆಂಬ ಭ್ರಮೆಯಲ್ಲಿ ಮುಳುಗಿರುವ ಪುರೋಹಿತಶಾಹಿಯನ್ನು ಜೇಡರ ದಾಸಿಮಯ್ಯ 'ಪರರು' ಎಂದು ಪರಿಗಣಿಸಿದ್ದಾನೆ. ಇದೇ ಧ್ವನಿ ಮುಂದೆ ಬಸವಣ್ಣ ಮುಂತಾದವರಲ್ಲಿ ಕಂಡುಬರುತ್ತದೆ. ಬುದ್ಧಿಬಲಕ್ಕೆ ಹೆಸರಾದ ಪುರೋಹಿತಶಾಹಿಗೆ ಕೊಡುತ್ತಿರುವ ಪೆಟ್ಟು ಈ ವರ್ಗವನ್ನಾಶ್ರಯಿಸಿರುವ, ತೋಳ್ಬಲಕ್ಕೆ ಹೆಸರಾದ ರಾಜತ್ವಕ್ಕೆ ಕೊಟ್ಟ ಪೆಟ್ಟೂ ಆಗುತ್ತದೆ ಎಂಬುದನ್ನು ಆರಂಭದಲ್ಲೇ ಪ್ರಭುತ್ವದ ಅರ್ಥವ್ಯಾಪ್ತಿಯ ಚರ್ಚೆಯಲ್ಲಿ ಪ್ರಸ್ತಾಪಿಸಲಾಗಿದೆ. ಇನ್ನು ಸಾಮಾಜಿಕ ಶ್ರೇಣೀಕರಣಗಳಾದ ಜಾತಿಪದ್ಧತಿ ಮತ್ತು ಅಸ್ಪೃಶ್ಯತೆಗಳ ಬಗ್ಗೆ ವಚನಕಾರರು ತಳೆಯುವ ನಿಲುವು ಸ್ಪಷ್ಟವಾಗಿ ಪುರೋಹಿತಶಾಹಿ ನಿಯಮಗಳ ಸೀಮೋಲ್ಲಂಘನವಾಗಿದೆ. ಬಸವಣ್ಣನ ವಚನಗಳಲ್ಲಿ ಕಂಡುಬರುವ ಕುಲದ ನೆಲೆಯ ಚರ್ಚೆ ಮತ್ತು ಅಪವರ್ಗೀಕರಣಗಳು (Declassification) ಪ್ರಭುತ್ವವನ್ನು ಮೀರುವ ಪ್ರಕ್ರಿಯೆಯ ಅಭಿವ್ಯಕ್ತಿಯೇ ಆಗಿದೆ.

ಮಧ್ಯಕಾಲೀನ ಇತಿಹಾಸದಲ್ಲಿ ಆರ್ಥಿಕ ವ್ಯವಸ್ಥೆಯ ಒಂದು ಮುಖ್ಯವಾದ ಅಂಗವಾಗಿ ಊಳಿಗಮಾನ್ಯಪದ್ಧತಿಯು ಬೇರೂರಿದ್ದನ್ನು ಗುರುತಿಸಬಹುದು. ಭೂಸ್ವಾಮ್ಯ ನೀತಿಯನ್ನು ಎತ್ತಿ ಹಿಡಿಯುವ ಈ ಪದ್ಧತಿಯೇ ಕ್ರಮೇಣ ಜೀತಪದ್ಧತಿಯಂತಹ ಕರಾಳ ಆಚರಣೆಗಳನ್ನು ಹುಟ್ಟು ಹಾಕಿದೆ. ಭೂಮಿಯ ಒಡೆತನಕ್ಕಾಗಿ ನಡೆದ ಪೈಪೋಟಿ ಮತ್ತು ಹೋರಾಟಗಳನ್ನು ಮಧ್ಯಕಾಲೀನ ಇತಿಹಾಸದ ಚಕ್ರಚಲನೆಯಲ್ಲಿ ಸ್ಪಷ್ಟವಾಗಿ ಮನಗಾಣಬಹುದು:

ಆಸೆಗೆ ಸತ್ತುದು ಕೋಟಿ !
ಆಮಿಷಕ್ಕೆ ಸತ್ತುದು ಕೋಟಿ !
ಹೊನ್ನು ಹೆಣ್ಣು ಮಣ್ಣಿಂಗೆ ಸತ್ತುದು ಕೋಟಿ !
ಗುಹೇಶ್ವರ,
ನಿಮಗಾಗಿ ಸತ್ತವರನಾರನೂ ಕಾಣೆ !!

– ಎಂಬ ಅಲ್ಲಮನ ವಚನ ಹೊನ್ನು-ಹೆಣ್ಣು-ಮಣ್ಣುಗಳ ಸ್ವಾಮ್ಯಕ್ಕಾಗಿ ಇಡೀ ಬದುಕನ್ನೆ ಸಮರ್ಪಿತಗೊಳಿಸಿ, ಅದಕ್ಕಾಗಿಯೆ ಹೋರಾಡಿ ಮಡಿದ ಕೋಟ್ಯಾನುಕೋಟ ಜನವರ್ಗವನ್ನು ಕುರಿತ ಅಭಿವ್ಯಕ್ತಿಯಾಗಿದೆ. ನಮ್ಮ ದೇಶದಲ್ಲಿ ಭೂಮಿಯನ್ನು ಕಾಂತೆಗೂ, ಸಿರಿಯನ್ನು ಲಕ್ಷ್ಮಿಗೂ ಹೋಲಿಸಲಾಗಿದೆ. ಹೆಣ್ಣಿನ ಮೇಲಿನ ಒಡೆತನ, ಆಳ್ವಿಕೆ, ವೈಭೋಗದ ಪ್ರತೀಕವೋ ಎಂಬಂತೆ ಭೂ ಸ್ವಾಮ್ಯ ಮತ್ತು ಸಿರಿಲೋಲುಪತೆಗಳು ಪ್ರಕಟವಾಗಿವೆ. ಈ ಹಿನ್ನೆಲೆಯಲ್ಲಿ ಕೆಳಗಿನ ವಚನಗಳನ್ನು ಪರಿಶೀಲಿಸಬಹುದು.

ಇಳೆ ನಿಮ್ಮ ದಾನ, ಬೆಳೆ ನಿಮ್ಮ ದಾನ,
ಸುಳಿದು ಸೂಸುವ ವಾಯು ನಿಮ್ಮ ದಾನ,
ನಿಮ್ಮ ದಾನವನುಂಡು ಅನ್ಯರ ಹೊಗಳುವ
ಕುನ್ನಿಗಳ ಏನೆಂಬೆ ಹೇಳ ರಾಮನಾಥ

ಭೂಮಿ ನಿನ್ನದಲ್ಲ ! ಹೇಮ ನಿನ್ನದಲ್ಲ !
ಕಾಮಿನಿ ನಿನ್ನವಳಲ್ಲ !!
ಅವು ಜಗಕಿಕ್ಕಿದ ವಿಧಿ !
ನಿನ್ನೊಡವೆಯೆಂಬುದು –
ಗುರು-ಲಿಂಗ-ಜಂಗಮಕ್ಕೆ ದಾಸೋಹವ ಮಾಡುವ ಜ್ಞಾನರತ್ನ !
ಅಂತಪ್ಪ ದಿವ್ಯರತ್ನವ ಕೆಡಗುಡದೆ ನೀನಲಂಕರಿಸಿದೆಯಾದಡೆ
ನಮ್ಮ ಗುಹೇಶ್ವರ ಲಿಂಗದಲ್ಲಿ
ನಿನ್ನಿಂದ ಬಿಟ್ಟು ಸಿರಿವಂತರಾರು ಇಲ್ಲ ಕಾಣಾ ಎಲೆ ಮನವೇ !

ಮೇಲಿನ ವಚನಗಳು ಊಳಿಗಮಾನ್ಯ ಪದ್ಧತಿಯು ಹುಟ್ಟುಹಾಕಿದ ಭೂ ಸ್ವಾಮ್ಯ ನೀತಿಗೊಡ್ಡಿದ ಪ್ರತಿಭಟನೆಯಾಗಿರುವಂತೆಯೇ ಭೂಮಿಯ ಒಡೆತನಕ್ಕಾಗಿ ಪರಿತಪಿಸುವ, ಹೋರಾಡುವ ರಾಜತ್ವಕ್ಕೆ ಮುಟ್ಟಿಸಿದ ಬಿಸಿಯೂ ಆಗಿದೆ. ಭೂಸ್ವಾಮ್ಯವನ್ನು ಪ್ರಶ್ನಿಸುವ, ಪ್ರತಿಭಟಿಸುವ ಇಂಥ ವಚನಗಳಲ್ಲಿ ಖಾಸಗಿ ಆಸ್ತಿಯ ಕಲ್ಪನೆಯನ್ನು ನಿರಾಕರಿಸುವ ಬೀಜಗಳು ಹುದುಗಿಕೊಂಡಿವೆ.

ಪ್ರಭುತ್ವವನ್ನು ಅದರ ಎಲ್ಲ ಅಂತರ್‌ಸಂಬಂಧಿ ನೆಲೆಗಳ ಸಹಿತ ಮೀರುವ, ಮೀರಬೇಕಾದ ಅಗತ್ಯವನ್ನು ಜನತೆಗೆ ಮನಗಾಣಿಸಿ ಅತ್ಯಂತ ಪ್ರಗತಿಶೀಲವಾದ ಹೋರಾಟವನ್ನು ಹುಟ್ಟುಹಾಕಿದ ವಚನ ಚಳುವಳಿಯು ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಮುಂದೆ ಕಾಣಿಸಿಕೊಂಡ 'ದೇಸಿಯ ದಿಗ್ವಿಜಯ'ದ ಅಂತಃಸ್ಫೂರ್ತಿಯಾಗಿ ಪರಿಣಮಿಸಿದೆ.

೪

ವಚನ ಸಾಹಿತ್ಯದಿಂದಾಗಿ ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಮೊದಲಬಾರಿಗೆ ಕಳಚಿಹೋಗಿದ್ದ ಕಥನಕ್ರಮದ ಕೊಂಡಿಯನ್ನು ಬೆಸೆಯುತ್ತಾ, ಅಪ್ರತಿಷ್ಠಿತ ಸ್ತರದಿಂದ ಕಾವ್ಯವಸ್ತು ಮತ್ತು ಕಾವ್ಯರೂಪಗಳನ್ನು ಆರಂಭಿಸಿದ ಶ್ರೇಯಸ್ಸು ಹರಿಹರನಿಗೆ ಸಲ್ಲುತ್ತದೆ. ವಚನ ಚಳುವಳಿಯಲ್ಲಿ ಭಾಗವಹಿಸಿದ್ದ ಕೆಳವರ್ಗದ ವಚನಕಾರರು ತನ್ಮೂಲಕ ವಚನ ಚಳುವಳಿಗೆ ಸಾಮುದಾಯಿಕ ಧ್ವನಿಯನ್ನು ನೀಡಿದಂತೆಯೇ ಹರಿಹರನು ಪುರಾತನ ಮತ್ತು ನೂತನ ರಗಳೆಗಳಲ್ಲಿ ಬಹುಮಟ್ಟಿಗೆ ಅಪ್ರತಿಷ್ಠಿತ ಸ್ತರಕ್ಕೆ ಸೇರಿದ ಕೆಳವರ್ಗದ ಜನತೆಯನ್ನೆ ತನ್ನ ಕಥಾನಾಯಕರನ್ನಾಗಿ ಮಾಡಿಕೊಂಡು ತನ್ಮೂಲಕ ಸಾಮುದಾಯಿಕ ಧ್ವನಿಯ ಹರಿಕಾರ ನಾಗಿದ್ದಾನೆ. ಹರಿಹರನ ರಗಳೆಗಳಲ್ಲಿ ರಾಜತ್ವ ಮತ್ತು ಪುರೋಹಿತಶಾಹಿಯ ಅನ್ಯೋನ್ಯ

ವ್ಯವಸ್ಥೆ; ತತ್ಫಲಿತಗಳಾದ ಊಳಿಗಮಾನ್ಯಪದ್ಧತಿಯ ಭೂಸ್ವಾಮ್ಯನೀತಿ, ಸಾಮಾಜಿಕ ಶ್ರೇಣೀಕರಣಗಳಾದ ಜಾತಿಪದ್ಧತಿ ಮತ್ತು ಅಸ್ಪೃಶ್ಯತೆಯ ಎಲ್ಲ ನೆಲೆಗಳು ಛಿದ್ರ ಛಿದ್ರವಾಗಿಬಿಟ್ಟಿವೆ. ಸೇದಿರಾಜ ಮತ್ತು ಕರಿಕಾಲ ಚೋಳರು ರಾಜತ್ವದ 'ಪ್ರತ್ಯಕ್ಷ ವಾಸ್ತವ'ಕ್ಕೆ (Visible Reality) ಬದಲಾಗಿ ಕಲ್ಪಿಸಿದ 'ಸಂಭಾವ್ಯ ವಾಸ್ತವ'ದ (Possible Reality) ರೂಪಕ ಚಿತ್ರಗಳಾಗಿದ್ದಾರೆ. ಸಾಹಿತ್ಯ ಮತ್ತು ರಾಜಾಶ್ರಯಕ್ಕೆ ಸಂಬಂಧಪಟ್ಟಂತೆ ಪ್ರಾಚೀನ ಸಾಹಿತ್ಯದಲ್ಲಿ ಕಂಡುಬರುವ ಸಂಘರ್ಷಾತ್ಮಕ ನೆಲೆಗಳು ಹರಿಹರನಲ್ಲಿ ಸ್ವತಂತ್ರ ದೃಷ್ಟಿಯ ಸ್ಥಿತ್ಯಂತರವನ್ನು ಪಡೆದಿದೆ. ಆದ್ದರಿಂದಲೇ ಕನ್ನಡ ಸಾಹಿತ್ಯ ಪರಂಪರೆಯಲ್ಲಿ ರಾಜಾಶ್ರಯವನ್ನು ಧಿಕ್ಕರಿಸಿದ ಮೊದಲ ಕವಿಯೆಂಬ ಮನ್ನಣೆ ಹರಿಹರನಿಗಿದೆ. ಕಣ್ಣಪ್ಪನ ಮುಗ್ಧಭಕ್ತಿಯ ಸಾದೃಶ್ಯದ ಮೂಲಕ ಪುರೋಹಿತಶಾಹಿಯನ್ನು ವಿಡಂಬಿಸುವ ಕಣ್ಣಪ್ಪದೇವರ ರಗಳೆ ಗಮನಾರ್ಹವಾಗಿದೆ. ಇದೊಂದು ಮಾತ್ರವಲ್ಲ! ಹರಿಹರನ ಎಲ್ಲ ರಗಳೆಗಳು ಪುರೋಹಿತಶಾಹಿಯ; ಜಾಡಿಗೆ ಬಿದ್ದ ವಿಧಿ-ವಿಧಾನಗಳ ವಿಡಂಬನೆಯೆಂದೇ ತಿಳಿಯಬೇಕಾಗಿದೆ. ಎಷ್ಟೆಷ್ಟು ಭೂಮಿ ಕಿರಿದಾಗುತ್ತಿತ್ತೋ ಅಷ್ಟಷ್ಟು ಮನಸ್ಸು ಹಿರಿದಾಗುತ್ತಿದ್ದ ಇಳೆಯಾಂಡ ಗುಡಿಮಾರನ ದಾನಾತಿಶಯವು 'ಭೂಸ್ವಾಮ್ಯ' ದಾಹದ ಭಂಜನೆಯೇ ಆಗಿದೆ. ಅಗಸ, ಕುಂಬಾರ, ಬೇಡ, ಮಾದಿಗ ಮುಂತಾದ ತೀರ ಕೆಳವರ್ಗದ ಜನತೆಯನ್ನು ಹಾಗೂ ಕನ್ನಡ ನಾಡಿನಲ್ಲಿ ಬಾಳಿ ಬದುಕಿದವರನ್ನು ಕಥಾನಾಯಕರನ್ನಾಗಿ ಮಾಡಿಕೊಂಡ ಹರಿಹರನ ರಗಳೆಗಳು ಕನ್ನಡ ಸಾಹಿತ್ಯ ಪರಂಪರೆಗೆ ಕಲ್ಪಿಸಿದ, 'ಸಾಹಿತ್ಯ ಮಟ್ಟದ ಅಪವರ್ಗೀಕರಣ'ವಾಗಿದ್ದು (Declassification of Literrary Standard) ತನ್ಮೂಲಕ ಸಾಮಾಜಿಕ ಶ್ರೇಣೀಕರಣವನ್ನು ಬಗ್ಗುಬಡಿಯುವ ಅಭಿವ್ಯಕ್ತಿಯಾಗಿದೆ. ಒಟ್ಟಿನಲ್ಲಿ ಹರಿಹರನ ರಗಳೆಗಳು ವಚನ ಚಳುವಳಿಯು ಪ್ರತಿಪಾದಿಸಿದ ಪ್ರಗತಿಪರ ಮೌಲ್ಯಗಳನ್ನು ಬಿಂಬಿಸುವ ವ್ಯಕ್ತಿಚಿತ್ರಗಳಾಗಿದ್ದು (profiles) ಪ್ರಭುತ್ವವನ್ನು ಅದರ ಎಲ್ಲ ಅಂತರ್‌ಸಂಬಂಧಿ ನೆಲೆಗಳ ಸಹಿತ ಮೀರುವ ಪ್ರಕ್ರಿಯೆಯ ಪ್ರಮುಖ ಕೊಂಡಿಗಳೂ ಆಗಿವೆ. ಮುಂದೆ ಬಂದ ಈತನ ಶಿಷ್ಯ ಹಾಗೂ ಸೋದರಳಿಯ ಕವಿ ರಾಘವಾಂಕನು ಹರಿಶ್ಚಂದ್ರ ಕಾವ್ಯದ ಮೂಲಕ ಮಧ್ಯಕಾಲೀನ ಇತಿಹಾಸದಲ್ಲಿ ಪ್ರಕಟಗೊಂಡ ರಾಜತ್ವದ ಅಧಿಕಾರಲಾಲಸೆ ಮತ್ತು ಮಹತ್ವಾಕಾಂಕ್ಷೆಗಳಿಗಿಂತ ಭಿನ್ನವೂ ಉದಾತ್ತವೂ ಆದ ವಿಶಿಷ್ಟ ಮಾದರಿಯೊಂದನ್ನು ಅನಾವರಣಗೊಳಿಸಿದ್ದಾನೆ. ಹೆಣ್ಣು-ಹೊನ್ನು-ಮಣ್ಣುಗಳನ್ನು ಮೀರುತ್ತಾ ಕ್ರಮ-ಕ್ರಮವಾಗಿ ಮಮತ್ವದಿಂದ ನಿರ್ಮಮತ್ವದ ಕಡೆಗೆ ಚಲಿಸುವ ಹರಿಶ್ಚಂದ್ರನ ಪಾತ್ರ ಚಿತ್ರಣದಲ್ಲಿ ಮೌಲ್ಯನಿಷ್ಠೆಯ ಸಂಘರ್ಷವಿರುವಂತೆಯೇ – ಮಧ್ಯಕಾಲೀನ ರಾಜತ್ವದ ನೆಲೆಯಿಂದ ನೋಡಿದರೆ – ಉದಾತ್ತವಾದ ಜೀವನ ದರ್ಶನದ ಕಾಣ್ಕೆಯೂ ಪ್ರಕಟಗೊಂಡಿದೆ. ಇದು ಸ್ಪಷ್ಟವಾಗಿ ರಾಜತ್ವದ ಪ್ರತ್ಯಕ್ಷ ವಾಸ್ತವಕ್ಕೆ (Visible Reality) ಬದಲಾಗಿ ಕಲ್ಪಿಸಿರುವ ಸಂಭಾವ್ಯ ವಾಸ್ತವದ (Possible Reality) ಅಭಿವ್ಯಕ್ತಿಯಾಗಿದೆ.

೫

ಪ್ರಭುತ್ವವನ್ನು (ರಾಜತ್ವದಿಂದ ಬೇರ್ಪಡಿಸಿ) ಅದರ ಎಲ್ಲ ಅಂತರ್ ಸಂಬಂಧಿ ನೆಲೆಗಳ ಸಹಿತ ಗ್ರಹಿಸಲು ನನಗೆ ಪ್ರೇರಣೆಯನ್ನು ನೀಡಿದ ಕೃತಿಯೇ ಕುಮಾರವ್ಯಾಸನ 'ಕರ್ಣಾಟ ಭಾರತ ಕಥಾಮಂಜರಿ'. ಆದ್ದರಿಂದಲೇ ಪ್ರಭುತ್ವವನ್ನು ಕುರಿತ ಅರ್ಥವ್ಯಾಪ್ತಿಯ ವಿವರಣೆಯಲ್ಲಿ ಕುಮಾರವ್ಯಾಸನಿಂದ ಆಯ್ದ ಪದ್ಯಭಾಗಗಳ ಉಲ್ಲೇಖವನ್ನು ಆರಂಭದಲ್ಲೆ

ಕೊಟ್ಟಿದ್ದೇನೆ.[೯] ೧೯೯೩ ಮಾರ್ಚ್ ತಿಂಗಳ ಅವಧಿಯಲ್ಲಿ ಕನ್ನಡ ವಿಶ್ವವಿದ್ಯಾಲಯದ ಆಹ್ವಾನದ ಮೇರೆಗೆ ನಾನು, ಕಿ. ರಂ. ನಾಗರಾಜ ಅವರು ನಡೆಸಿಕೊಟ್ಟ ಉಪನ್ಯಾಸ-ಕಾವ್ಯ ಸಂವಾದ ಗೋಷ್ಠಿಯಲ್ಲಿ ಭಾಗವಹಿಸಿದ್ದನ್ನು ಈ ಸಂದರ್ಭದಲ್ಲಿ ಸ್ಮರಿಸಿಕೊಳ್ಳಲೇಬೇಕಾಗಿದೆ. ಕನ್ನಡ ಸಾಹಿತ್ಯ ಪರಂಪರೆಯ ಪ್ರಮುಖ ಕವಿಗಳನ್ನು ಕೇಂದ್ರವಾಗಿಟ್ಟುಕೊಂಡು ನಡೆದ ಈ ವೈಶಿಷ್ಟ್ಯಪೂರ್ಣ ಕಾರ್ಯಕ್ರಮದಲ್ಲಿ ಕಾವ್ಯಾಸಕ್ತರಾದ ಹತ್ತು ಹನ್ನೆರಡು ಮಂದಿ ಗೆಳೆಯರು ಮಾತ್ರ ಪಾಲ್ಗೊಂಡಿದ್ದು ಕುಮಾರವ್ಯಾಸನನ್ನು ಕುರಿತ ಸಂವಾದ ಹಲವಾರು ಒಳನೋಟಗಳ ಕಾಣ್ಕೆಗೆ ಸಹಕಾರಿಯಾಗಿತ್ತು. ಕುಮಾರವ್ಯಾಸಭಾರತ ಯಾಕೆ ತನಗೆ ಪ್ರಿಯವಾಗಿದೆ ಯೆಂಬುದನ್ನು ಬಣ್ಣಿಸಿದ ಕಿ. ರಂ. ನಾಗರಾಜ ಅವರು ಕೃತಿಯ ಹಲವಾರು ಪದ್ಯಭಾಗಗಳನ್ನು ಆಯ್ಕೆಮಾಡಿಕೊಂಡು ಭಾವಪೂರ್ಣವಾಗಿ ಓದುತ್ತಾ ''ನನ್ನ ದೃಷ್ಟಿಯಲ್ಲಿ ಇದೊಂದು ರಾಜಕೀಯ ಮಹಾಕಾವ್ಯ'' – ಎಂದು ಸಮರ್ಥಿಸಿಕೊಂಡು ಮಾತನಾಡಿದರು. ಆಗ ಕಿ. ರಂ. ಆಯ್ಕೆಮಾಡಿಕೊಂಡು ಓದಿದ ಪದ್ಯಭಾಗಗಳಲ್ಲಿ ಉದ್ಯೋಗಪರ್ವದಲ್ಲಿ ಬರುವ ದುರ್ಯೋಧನ ಒಡ್ಡೋಲಗದ ರಚನೆಯೂ ಒಂದು. 'ಪಠ್ಯಪುಸ್ತಕ'ದ ಸಂಗ್ರಹಕಾರರು ಇಂಥ ಭಾಗಗಳನ್ನು ನೀರಸ ವಿವರಗಳೆಂದೋ, ಲಂಬಿತಲಹರಿಗಳೆಂದೋ ತಿಳಿದು ತೆಗೆದು ಕೊಂಡಿದ್ದಾರೆ. ದುರ್ಯೋಧನನು ಪ್ರಭುತ್ವ ಶಕ್ತಿಯ ಪರಮಾಧಿಕಾರ ಮತ್ತು ಕೇಂದ್ರೀಕರಣ ಗಳ ಪ್ರತೀಕ. ಪ್ರಭುತ್ವವನ್ನು ಅದರ ಎಲ್ಲ ಅಂತರ್‌ಸಂಬಂಧಿ ವಿವರಗಳ ಸಹಿತ ಪರಿಚಯಿಸುವ, ಆಡಳಿತ ಯಂತ್ರದ ಹುನ್ನಾರಗಳನ್ನು ಮನಗಾಣಿಸುವ ಮುನ್ನೋಟಗಳು ಈ ಪದ್ಯಭಾಗದಲ್ಲಿದೆಯೆಂಬ ಅಭಿಪ್ರಾಯವನ್ನು ಕಿ. ರಂ. ವ್ಯಕ್ತಪಡಿಸಿದರು. (ನೋಡಿ: ಗದುಗಿನ ಭಾರತ: ಉದ್ಯೋಗ ಪರ್ವ, ಎಂಟನೆ ಸಂಧಿ, ಪದ್ಯಗಳ ಸಂಖ್ಯೆ ೨೮-೪೫) ಕೃಷ್ಣಾಗಮನ ವಾದೊಡನೆ ಭಕ್ತಿಯಿಂದ ಹಾಡುತ್ತಾ ತನ್ಮಯನಾಗಿಬಿಡುವ ಕವಿ ಕುಮಾರವ್ಯಾಸನು ಕೃಷ್ಣಾಗಮನಕ್ಕೆ ಹಿನ್ನೆಲೆಯಾಗಿರುವ ಮೇಲಿನ ಪದ್ಯಭಾಗದಲ್ಲಿ ಆಸ್ಥಾನ ರಚನೆಯ ಪ್ರತಿಯೊಂದು ವಿವರಗಳನ್ನು ವಸ್ತುನಿಷ್ಠವಾಗಿ ಮತ್ತು ನಿರ್ಲಿಪ್ತವಾಗಿ ಕಟ್ಟಿಕೊಟ್ಟಿರುವ ಬಗೆ ಅಸದೃಶವಾಗಿದೆ: ಮಣಿಖಚಿತ ಕಿರೀಟಕಾಂತಿಯ ಗರ್ವಿಷ್ಠರು, ಗಾಢ ಪ್ರತಾಪಿಗಳು, ಯುದ್ಧ ವಿಜಯಿಗಳಾದ ಸಿದ್ಧರು, ಬಲದ ಗದ್ದುಗೆಗಳಲ್ಲಿ ವಿರಾಜಮಾನರಾಗಿರುವ ಕರ್ಣ-ಭೀಮ-ದುಶ್ಶಾಸನ-ಕೃಪ-ದ್ರೋಣಾದಿ ನಾಯಕರು, ಬಲಭಾಗದಲ್ಲಿ ಸತಿಸಹಿತ ಕನಕ ಪೀಠದಲ್ಲಿ ಕುಳಿತಿರುವ ಧೃತರಾಷ್ಟ್ರ ಭೂಪತಿ, ತರ್ಕ ಶ್ರುತಿ ಸಮಸ್ತ ಕಲೆಗಳಲ್ಲಿ ಪರಿಣತರಾದ – ಅಪರಬ್ರಹ್ಮರುಗಳೇ ಆದ ವಿಪ್ರಸಮುದಾಯ, ಮದೋನ್ಮತ್ತರೂ ಅತಿಬಲಶಾಲಿಗಳೂ ಆದ ಶಕುನಿ-ಸೈಂಧವರು, ಪರಾಕ್ರಮಿಯಾದ ಕಾಂಭೋಜ, ರಥಸಂಪದರಾದ ಭೂರಿಶ್ರವ ಸುಲೋಚನರು, ವೀರ ವೃಷಸೇನನೇ ಮುಂತಾದ ಯುದ್ಧ ಪ್ರಳಯಾಗ್ನಿಗಳು, ಮಿರುಗುವ ಸುರಗಿಯನ್ನು ಕೈಯ್ಯಲ್ಲಿ ಹಿಡಿದು ನಿಂತ ನೂರು ಮಂದಿ ಸೋದರರು, ಚಂದ್ರನನ್ನು ಕಿತ್ತು ನಭದಲಿ ಬಿಸುಟು ಬೇರುಗಳನ್ನು ಹಿಡಿದಂತೆ ತೋರುವ; ಸೀಗುರಿಯಿಕ್ಕುವ ಶಶಿವದನೆಯರು, ಕಲಹವಿಲ್ಲದೆ ನೂಲಿನೆಳೆಯಲ್ಲಿ ತಲೆಗಳನ್ನು ಕತ್ತರಿಸಿಹಾಕುವ ಮಂತ್ರಿ ಸಮುದಾಯ, ನಿಗಮ ತರ್ಕಪುರಾಣ ಕಾವ್ಯಾದಿಗಳ ಸ್ವೇಚ್ಛಾಚಾರದಿಂದ ಹೊಟ್ಟೆ ಬೆಳೆಸಿಕೊಂಡವರು, ಮನಸ್ವೇಚ್ಛೆಯ ಉಪನ್ಯಾಸದ ರೆಂಬೆಕೊಂಬೆಗಳಿಂದ ಹೂರಟ ಬೀಳಲುಗಳಂತೆ ಗಡ್ಡ ಬೆಳೆಸಿಕೊಂಡ ವಿಕಟ

---

೯. ಇಂಥ ಪದ್ಯಗಳನ್ನು 'ಪಠ್ಯಪುಸ್ತಕ'ದಿಂದ ತೆಗೆದುಹಾಕಬೇಕೆಂದು ಕುವೆಂಪು ಅಭಿಪ್ರಾಯಪಟ್ಟಿದ್ದಾರೆ.

ಬುದ್ಧಿಯ ಮಹೋಪಾಧ್ಯಾಯರು, ಸಮಸ್ಯಾಪೂರಣವೇ ಮುಂತಾದ ಪದ್ಯಗಳನ್ನು ತಟಕ್ಕನೆ ಅನ್ವಯ ಮಾಡಿ ಹೇಳಿಬಿಡುವ ಸುಲಲಿತ ಗುಣಾಲಂಕಾರ ಪರಿಣತ ಕವಿಗಳು, ಅರ್ಥವಾಗದ ಮರೆಗನ್ನಡದಲ್ಲಿ ನುಡಿದು ತಲೆದೂಗಿಸಿ ಮೆಚ್ಚನ್ನು ಪಡೆಯುವ ವಾಗ್ಮಿಗಳು, ಪ್ರಭುವಿನಿಚ್ಛೆಯಂತೆ ಓದಿ ಹೊಗಳಿಸಿಕೊಳ್ಳುವ ಗಮಕಿಗಳು, ಬ್ರಹ್ಮಾದಿ ದೇವತೆಗಳಿಗೂ ಬಿಡಿಸಲಾಗದಂತೆ ಪದ್ಯ ಹೊಸೆಯುವ ತಾರ್ಕಿಕ ಜನರು, ಆಳುವವನ ಬಿರುದಾವಳಿಗಳನ್ನು ಬಗೆಬಗೆಯಾಗಿ ಬಿತ್ತರಿಸಿ ಬಣ್ಣಿಸುವ ಹೊಗಳುಭಟ್ಟರು, ರಾಜ್ಯ ಲಲಾಟಲೇಖನ ನೌಕೆಯ ಕರ್ಣಧಾರರಾಗಿರುವ ಅಧಿಕಾರಿ ವರ್ಗದವರು, ಲಂಚಾವತಾರದಿಂದ ಲೋಲುಪ ಜೀವನ ನಡೆಸುವ ಖಜಾನೆಯ ಕರಣಿಕರು, ನಳನಹುಷರ ಅಶ್ವವಿದ್ಯಾ ಪರಿಣತಿಯನ್ನು ಕೆಳಗಾಣಿಸುವಂತಹ ಬಲವಾದ ಲಗಾಮುಗಳನ್ನು ಹಿಡಿದ ರಾವುತರು, ಐರಾವತ-ದಿಗ್ಗಜಗಳನ್ನು ಕಿವಿ ಹಿಡಿದೆಳೆದು ಅಂಕುಶದ ಮೊನೆಯಿಂದ ಕೆಲಬಲಕ್ಕೆ ಬಿಡುವ ಮಾವುತರು, ಶತ್ರುರಾಜರನ್ನು ಸದೆಬಡಿದು ಕಪ್ಪಕಾಣಿಕೆ ತರುವ, ಮೇಲೆ ಬಿದ್ದರೆ ಯಮನ ದಾಡೆಗಳಿಗೆ ಕೈಯಿಕ್ಕುವ ವೀರರು, ಪವನ ವೇಗದ ರಾಯಭಾರಿಗಳು, ಶಶಿಯ ಬಿಂಬವನ್ನು ನಾಚಿಸುವಂತಹ ಶಶಿವದನೆಯರು, ಕಳಶಕುಚ ಕೋಮಲಾಂಗಿಯರು, ಅರಸನ ದೃಷ್ಟಿ ತಾಕಿದರೆ ತಲೆ ತಗ್ಗಿಸಿಬಿಡುವ ಅಖಿಲರಾಯರು, – ಇಂಥವರಿಂದ ಕೂಡಿದ ಒಡ್ಡೋಲಗವನ್ನು ರಚಿಸಿದ ದುರ್ಯೋಧನನು ಸಿಂಹಪೀಠದಲ್ಲಿ ಮೆರೆದನು ಎಂಬ ಭಾವ ಮೇಲಿನ ಪದ್ಯಭಾಗದಲ್ಲಿದೆ. ಈ ಭಾಗವನ್ನು ತುರ್ತು ಪರಿಸ್ಥಿತಿಯ ಸಂದರ್ಭದಲ್ಲೂ ಹಲವರ ಸಮ್ಮುಖದಲ್ಲಿ ಓದಿ ಅರ್ಥೈಸಿದ್ದೇನೆಂದು ಹೇಳಿದ ಕಿ. ರಂ. ಇಲ್ಲಿ ಅಭಿವ್ಯಕ್ತಗೊಂಡಿರುವ ಅಪರಿಮಿತವಾದ ರಾಜ್ಯಾಧಿಕಾರ ಮತ್ತು ಸರ್ವಾಧಿಕಾರಿಯೊಬ್ಬನ ದುರಹಂಕಾರಗಳನ್ನು ವಿವರಿಸಿದರು. ಕಿ. ರಂ. ಹೇಳಿದಂತೆ ಈ ಪದ್ಯಭಾಗದಲ್ಲಿ ಪ್ರಜೆಗಳನ್ನು ದುರ್ಬಲಗೊಳಿಸುವ, ಜನತೆಯ ಹೋರಾಟಗಳ ಹುಟ್ಟಡಗಿಸುವ ಪ್ರಭುತ್ವದ ಸಾಧನ-ಸಲಕರಣೆಗಳ ಅಭಿವ್ಯಕ್ತಿಯಿದೆ. ಇದನ್ನು ಉಪನ್ಯಾಸ-ಸಂವಾದ ಗೋಷ್ಠಿಯಲ್ಲಿ ಕಿ.ರಂ. ವಿವರಿಸುತ್ತಿದ್ದಾಗ ಅಲ್ಲೆ ಎದುರಿಗೆ ಕುಳಿತಿದ್ದ ಓ.ಎಲ್. ನಾಗಭೂಷಣ ಸ್ವಾಮಿಯವರು ಕಿ. ರಂ. ವಿವರಣೆಗೆ ಪೂರಕವಾಗಿ ಗದುಗಿನ ಭಾರತದ ಕೊನೆಯ ಪುಟದಲ್ಲಿ ಬರುವ ಒಂದೆರಡು ಪದ್ಯಗಳನ್ನು ಓದಿ ಹೇಳಿದರು. ಈ ಹಂತದಲ್ಲಿ ಕುರುಕ್ಷೇತ್ರದ ವಿನಾಶಕ ಯುದ್ಧ ಮುಗಿದುಹೋಗಿದೆ; ಶಕ್ತಿ ಮದೋನ್ಮತ್ತರಾದ ಕೌರವ ಸಂಕುಲ ನಿರ್ನಾಮವಾಗಿದೆ.

ಯುದ್ಧ ವಿಜಯಿಗಳಾದ ಪಾಂಡವರು ಹಸ್ತಿನಾವತಿಗೆ ಮರಳಿ ಅಧಿಕಾರ ಗ್ರಹಣ ಮಾಡುತ್ತಿದ್ದಾರೆ. ಕಿ.ರಂ. ವಿವರಿಸಿದ ಮಂತ್ರಿ ಸಮುದಾಯ, ಅಧಿಕಾರಶಾಹಿ ವಿವರಗಳ ಹಿನ್ನೆಲೆಯಲ್ಲಿ ಈ ಪ್ರಸಂಗವನ್ನು ಪರಿಶೀಲಿಸಿದರೆ ವೈಶಿಷ್ಟ್ಯಪೂರ್ಣವಾದ ಒಳನೋಟಗಳು ಕೆಳಗಿನ ಪದ್ಯದಲ್ಲಿದೆಯೆಂದು ಓ.ಎಲ್.ಎನ್. ಅಭಿಪ್ರಾಯಪಟ್ಟರು:

ಆ ಸುಯೋಧನನರಮನೆಯನವ
ನೀಶ ಹೊಕ್ಕನು ಪವನಸುತ ದು
ಶ್ಯಾಸನನ ಸದನವನು ಪಾರ್ಥಗೆ ಕರ್ಣಭವನದಲಿ
ವಾಸವಾದುದು ಯಮಳರಿಗೆ ದು
ಶ್ಯಾಸನಾನುಜರರಮನೆಗಳುಳಿ
ದೈಸುಮನೆ ಭಂಡಾರವಾದುದು ಭೂಪ ಕೇಳೆಂದ ॥

ಮನ್ನಣೆಯಲಿ ಯುಯುತ್ಸುಹೊಕ್ಕನು
ತನ್ನ ಮನೆಯನು ಭೀಷ್ಮ ಗುರುಕೃಪ
ರುನ್ನತಾಲಯವಾಯ್ತು ನೃಪನಪಸಾಯ್ತ ಸಂತತಿಗೆ
ಮುನ್ನಿನವರೇ ಮಂತ್ರಿ ಸಚಿವರು
ಮುನ್ನದಾವಂಗಾವ ಪರುಠವ
ಭಿನ್ನವಿಲ್ಲದೆ ಪೌರಜನವೆಸೆದಿರ್ದುದಿಭಪುರಿಯ

ಇಲ್ಲಿ ವ್ಯಕ್ತಿಗಳು ಬದಲಾಗುತ್ತಿದ್ದಾರೆ; ಆದರೆ ವ್ಯವಸ್ಥೆ ಹಾಗೇ ಉಳಿದಿದೆ. ಅಧಿಕಾರ ಗ್ರಹಣ ಮಾಡಿಕೊಳ್ಳುತ್ತಿರುವ ಪಾಂಡವರ ಪ್ರಭುತ್ವದಲ್ಲಿ ''ಮುನ್ನಿನವರೇ ಮಂತ್ರಿ ಸಚಿವರು ಮುನ್ನದಾವಂಗಾವ ಪರುಠವ ಭಿನ್ನವಿಲ್ಲದೆ ಪೌರಜನ''ರೆಲ್ಲರೂ ಮೆರೆಯುತ್ತಿದ್ದಾರೆ. ಕೌರವಕುಲದಿಂದ ಹಸ್ತಾಂತರಗೊಂಡ ಪ್ರಭುತ್ವವು ಪಾಂಡವಕುಲಕ್ಕೆ ಒದಗಿ ಬಂದಿದ್ದರೂ ಆದೇ ಮಂತ್ರಿಸಚಿವರು, ಆದೇ ಅಧಿಕಾರಿ ವರ್ಗದವರು (=ಬ್ಯೂರೋಕ್ರಸಿ) ಕೊನೆಯಲ್ಲಿ ಉಳಿದುಬಿಟ್ಟಿರುವ ದುರಂತ ವ್ಯಂಗ್ಯ ಸಹೃದಯರಿಗೆ ಪ್ರತೀತವಾಗುತ್ತದೆ (ಓ.ಎಲ್. ನಾಗಭೂಷಣ ಸ್ವಾಮಿ). ಈ ಅಂಶವು ಬೆಳಕಿನಂತೆ ಮೂಡಿಬರುವ ಹೊಸ ಪ್ರಭುತ್ವದ ಕತ್ತಲು ಮುಖದ ಅಭಿವ್ಯಕ್ತಿಯೂ ಆಗುತ್ತದೆ. ಒಂದು ಪಕ್ಷದಿಂದ ಮತ್ತೊಂದು ಪಕ್ಷಕ್ಕೆ (=ಕೌರವದಿಂದ ಪಾಂಡವರಿಗೆ) ಅಧಿಕಾರ ಹಸ್ತಾಂತರವಾದರೆ ಸಾಲದು. ಪ್ರಭುತ್ವದ ಸಮಗ್ರ ರಚನೆಯೇ ಬದಲಾಗಬೇಕು ಎಂಬ ಧ್ವನಿ ಇಲ್ಲಿದೆ. ಸಮಗ್ರ ರಚನೆಯಲ್ಲಿ ಬದಲಾವಣೆಯನ್ನು ಬಯಸದ ಪ್ರಭುತ್ವವು ಕತ್ತಲೆಯಿದ್ದಂತೆ. ಅಡಿಗರ ಮಾತಿನಲ್ಲಿ ಹೇಳುವುದಾದರೆ:

..................ಕತ್ತಲಿಗೆ
ಹತ್ತೆ ತಲೆ? ನೂರಾರೆ? ಅದು ಅಸಂಖ್ಯ.
ಕತ್ತರಿಸಿದರೆ ಬೆಳೆವ, ಬೆಳೆದು ಕತ್ತಿಗೆ ಬರುವ
ಅನಾದಿ; ಕೋದಂಡ ದಂಡವೂ ಹೀಗೆ ದಂಡ

(ಶ್ರೀ ರಾಮನವಮಿಯ ದಿವಸ)

ಎಲ್ಲ ಕಾಲ-ದೇಶಗಳಲ್ಲಿ ವಿಭಿನ್ನ ನೆಲೆಗಳಿಂದ ಪ್ರಭುತ್ವವನ್ನು ಮೀರುವ ಪ್ರಕ್ರಿಯೆ ಕಂಡುಬರುತ್ತದೆ. ಇಂತಹ ಪ್ರಕ್ರಿಯೆಯಲ್ಲಿ ಆಗಿಹೋದ ''ಪುರುಷೋತ್ತಮ''ರುಗಳ ಎತ್ತರ ಎಷ್ಟೇ ದೊಡ್ಡದಾದರೂ ಕತ್ತಲೆಯ ಬೆಳವಣಿಗೆ ಮಾತ್ರ ಸರ್ವವ್ಯಾಪಿಯಾಗಿರುತ್ತದೆ. ಈ ಕತ್ತಲೆಗೆ ಅಂಜದೆ – ಪ್ರಭುತ್ವಕ್ಕೆ ತಲೆಬಾಗದೆ – ಸದಾ ಮೀರುವ ಪ್ರಕ್ರಿಯೆಯೊಂದು ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಉದ್ದಕ್ಕೂ ಕಂಡುಬರುವ ಚಲನಶೀಲ ಧಾರೆಯಾಗಿದೆ.

*ಕನ್ನಡ ಸಾಹಿತ್ಯ ಮತ್ತು ಪ್ರಭುತ್ವ, ೧೯೯೩*
*ನಾ ನಿಲ್ಲುವಳಲ್ಲ, ೧೯೯೮, ಪು.೧೫೪-೬೬*

# ೬೯. ಕನಕದಾಸರ ಕೃತಿಗಳಲ್ಲಿ ಬಂಡಾಯ ಪ್ರಜ್ಞೆ

● ಕಮಲಾ ಹಂಪನಾ

ಕನ್ನಡ ಸಾಹಿತ್ಯ ಅನಾವರಣಗೊಳ್ಳುವುದೇ ಬಂಡುಕೋರರಿಂದ. ವೈದಿಕಕ್ಕೆ ಪ್ರತಿಭಟನೆಯಾಗಿ ಅರಳಿದ ಜೈನ ಕವಿಗಳು ಸಂಸ್ಕೃತ ಬಿಟ್ಟು ಜನಭಾಷೆಯಾದ ಕನ್ನಡವನ್ನು ಎತ್ತಿಕೊಂಡಿದ್ದು ಧಿಕ್ಕಾರದಿಂದಲೇ. ಇದು ಮೊದಲ ಘಟ್ಟ. ಮುಂದೆ ಅರಸೊತ್ತಿಗೆಯ ಪರಾಕಿಗೆ ಪ್ರತಿಭಟನೆಯಾಗಿ ವಚನ ಸಾಹಿತ್ಯ ಹುಟ್ಟಿತು. ಇದು ಎರಡನೆಯ ಹಂತ. ಮೂರನೆಯ ಮಜಲು ಎಂದರೆ ಕೀರ್ತನಕಾರರಲ್ಲಿ ಕ್ವಚಿತ್ತಾಗಿ ಕಾಣುವ ಜನಮುಖಿ ನಿಲುವು: ಈ ಸ್ಥಿತ್ಯಂತರದಲ್ಲಿ ಕಾಣಿಸಿಕೊಂಡ ಪ್ರಮುಖ ಪ್ರತಿಭಟನಾಕಾರರು ಕನಕದಾಸರು.

ಇಂದಿನ ಸಾಹಿತ್ಯದ ವಿದ್ಯಾರ್ಥಿಗೆ ಕನಕದಾಸರು ಏಕೆ ಒಬ್ಬ ಮಹತ್ವದ ಪ್ರಸ್ತುತನಾದ ಕವಿಯಾಗಿ ಕಾಣುತ್ತಾನೆಂಬ ನೆಲೆಯಲ್ಲಿ ನನ್ನ ಪ್ರಬಂಧ ಕ್ರಿಯಾಶೀಲವಾಗಿ ಚಲಿಸುತ್ತದೆಂಬುದನ್ನು ಪ್ರಾರಂಭದಲ್ಲಿಯೇ ಸ್ಪಷ್ಟಪಡಿಸುತ್ತೇನೆ. ಇಡೀ ಪ್ರಬಂಧದ ಕೇಂದ್ರ ಪ್ರಜ್ಞೆ ಕನಕದಾಸಕವಿಯಲ್ಲಿ ಕಂಡುಬರುವ ಬಂಡಾಯದ ಧ್ವನಿಗಳನ್ನು ಗುರುತಿಸುವುದಲ್ಲದೆ, ಕನಕದಾಸರ ಕಾವ್ಯ ಪ್ರತಿಭೆಯ ಹೊಸತನ ಮತ್ತು ಅನನ್ಯತೆ ಕನೆ ಕಟ್ಟಿರುವ ಸಂದರ್ಭವೊಂದರ ಸ್ವರೂಪವನ್ನು ಮನಗಾಣಿಸುವುದು ಪ್ರಧಾನ ಉದ್ದೇಶ. ಕನ್ನಡ ಸಾಹಿತ್ಯ ಬರೀ ಭಜನೆ ಸಾಹಿತ್ಯವಲ್ಲ; ಅದಕ್ಕೆ ಜನಪರವಾದ ಇನ್ನೊಂದು ಮುಖವೂ ಇದೆ ಎಂದು ಸ್ಥಾಪಿಸುವುದು ಈ ಪ್ರಬಂಧದ ಉದ್ದೇಶ.

ಪ್ರಜೆಗಳು ಪ್ರಭುಗಳ ವಿರುದ್ಧ, ಕೆಳವರ್ಗದವರು ಮೇಲುವರ್ಗದವರ ವಿರುದ್ಧ, ಗುಲಾಮರು ಯಜಮಾನರ ವಿರುದ್ಧ, ಭಕ್ತರು ಮಠಗಳ ವಿರುದ್ಧ, ಒಟ್ಟಾರೆ ಶೋಷಿತರು ಶೋಷಕರ ವಿರುದ್ಧ ಬಂಡಾಯವೇಳುವುದು ಚರಿತ್ರೆಯುದ್ದಕ್ಕೂ ದಾಖಲಾಗಿದೆ. ಬಂಡಾಯಕ್ಕೆ ಊಳಿಗಮಾನ್ಯ ಸಮಾಜ ಪದ್ಧತಿ ಅಥವಾ ಪ್ರಭುಸತ್ತೆಯ ಕಾಲವೇ ಆಗಿರಬೇಕಾಗಿಲ್ಲ. ಮನುಷ್ಯನಿಗೆ ಎಲ್ಲೆಲ್ಲಿ ತನ್ನ ಸ್ವಾತಂತ್ರ್ಯವನ್ನು ಹತ್ತಿಕ್ಕಲಾಗಿದೆಯೆನಿಸಿದೆಯೊ ಅಲ್ಲೆಲ್ಲ ಅವಕಾಶ ದೊರೆತಾಗ ಪ್ರತಿಭಟನೆ ಪ್ರಕಟವಾಗಿದೆ. ಯಾವುದೇ ಒಂದು ಮಾನವ ಸಮಾಜದ ಸೃಜನಾತ್ಮಕ ಉತ್ಪನ್ನಗಳಲ್ಲೊಂದಾದ ಸಾಹಿತ್ಯದಲ್ಲೂ ಇಂಥ ಬಂಡಾಯದ ಕಾಳುಗಳಿರುತ್ತವೆ. ಅಭಿವ್ಯಕ್ತಿಯ ಪ್ರಮಾಣ ಮತ್ತು ವಿಧಾನಗಳಲ್ಲಿ ವ್ಯತ್ಯಾಸಗಳಿರಬಹುದಾದರೂ, ಎಲ್ಲ ಕಾಲದ ಎಲ್ಲ ಭಾಷೆಗಳ ಸಾಹಿತ್ಯದಲ್ಲೂ ಪ್ರತಿಭಟನೆಯ ದನಿಯಿರುತ್ತದೆ. ಕವಿಯೂ ನಮ್ಮೆಲ್ಲರಂತೆ ಮೂಲಭೂತವಾಗಿ ಒಬ್ಬ ಸಮಾಜಜೀವಿ. ಅವನ ಎಲ್ಲ ಸಂವೇದನೆಗಳೂ ಭಾಷೆಯ ಮಾಧ್ಯಮದಲ್ಲಿ ಹೊರ ಬರಬೇಕೆ ಹೊರತು ಶೂನ್ಯದಲ್ಲಿ ವ್ಯವಹಾರವಾಗುವುದಿಲ್ಲ. ತನ್ನ ಸಮಾಜದ ಸಂಬಂಧದಲ್ಲಿ ಗ್ರಹಿಸಿದ್ದನ್ನು ಕವಿಪ್ರಜ್ಞೆ ಅಭಿವ್ಯಕ್ತಿಸಿರುತ್ತದೆ.

ನಮ್ಮ ಕಾಲದವರೆಗಿನ ಕನ್ನಡಸಾಹಿತ್ಯದಲ್ಲಿ, ಸಮಾಜದ ವ್ಯವಸ್ಥೆಯೊಂದಿಗೆ ಸಂಘರ್ಷಕ್ಕಿಳಿಯದೆ ಬೆರೆತು ರಾಜಿಯಾದ ಲೇಖಕರೇ ಹೆಚ್ಚು. ತಮಗೂ ಸಮಾಜದ ಸ್ಥಿತಿಗೂ ನಡುವೆ ಕಂದಕವಿದೆಯೆಂದು ಬಹುಪಾಲು ಕವಿಗಳಿಗೆ ಅನಿಸಲಿಲ್ಲ. ಜೀವನಮಾರ್ಗ ಇಕ್ಕಟ್ಟಿನಲ್ಲಿ ಸಾಗುತ್ತಿರುವಂತೆ ಅಥವಾ ತಮ್ಮ ಸುತ್ತ ಮನುಷ್ಯನನ್ನು ನಿಷ್ಕಾರಣವಾಗಿ ಹಿಂಸಿಸಿ ಸುಲಿಯುತ್ತಿರುವಂತೆ ಅವರ ಅನುಭವ ಕಕ್ಷೆಗೆ, ಪ್ರಜ್ಞೆಗೆ ಬರದೆ ಹೋಗಿರಬಹುದು. ಹಳಗನ್ನಡ, ನಡುಗನ್ನಡ ಸಾಹಿತ್ಯದಲ್ಲಿ ಹೋರಾಟದ, ಧಿಕ್ಕಾರದ ಬರವಣಿಗೆ ದಟ್ಟವಾಗಿ ಸ್ಪಷ್ಟವಾಗಿ

ಕಾಣುವುದಿಲ್ಲವೆಂಬುದು ನಿಜ. ಹೀಗಿದ್ದೂ ತನ್ನ ಸಮಾಜಕ್ಕೆ ಮುಖಾಮುಖಿಯಾಗಿ ಒಂದು ಬದ್ಧತೆಯಿಂದ, ಪ್ರಾತಿನಿಧಿಕವೆಂಬಂಥ ನೆಲೆಯಲ್ಲಿ ನಿಂತು ಸಂವಾದಿಸುತ್ತಿರುವಂತೆ ತೋರುವ ಕಿಟಕಿ-ಕಿಂಡಿಗಳು, ಅಲ್ಲಲ್ಲಿ ಕೀಲಿಸಿದ ನಕ್ಷತ್ರಗಳಂತೆ ಮಿನುಗುತ್ತಿವೆಯೆಂಬುದನ್ನೂ ಒಪ್ಪಿಕೊಳ್ಳಬೇಕು.

ಈ ಹಿನ್ನೆಲೆಯ ಗ್ರಹಿಕೆಯಿಂದ ಪರಿಭಾವಿಸಿ ಪರಿಶೀಲಿಸುವಾಗ, ಕನಕದಾಸ ಕವಿ ಹಿಂಡನಗಲಿದ ಒಂಟಿ ಸಲಗನಂತೆ ಕಂಡರೆ, ಆಶ್ಚರ್ಯವಿಲ್ಲ. ಅವರು ತಮ್ಮ ಕಾಲದ ಬದುಕಿನ ವಾಸ್ತವವನ್ನು ಅರ್ಥಮಾಡಿಕೊಂಡು ಸ್ಪಂದಿಸಿರುವ, ಪ್ರತಿಕ್ರಿಯಿಸಿರುವ ಭಾಗಗಳನ್ನು ಪ್ರಸ್ತಾಪಿಸಿ ಪರಾಮರ್ಶಿಸಲಿಚ್ಛಿಸಿದ್ದೇನೆ. ಈ ಬಗೆಯ ಅಧ್ಯಯನಕ್ಕಿರುವ ದೊಡ್ಡ ಅಡ್ಡಿಯೆಂದರೆ, ಉಳಿದ ಕವಿಗಳ ಹಾಗೆ ಕನಕದಾಸರೂ ವಸ್ತುನಿಷ್ಠ ಹಾಗೂ ಭಕ್ತಿನಿರ್ಭರ ಕಾವ್ಯ ರಚಿಸಿರುವುದು. ಆದರೆ, ಅದೇ ಕವಿ, ಅಪವಾದವೆಂಬಂತೆ, ಸ್ವತಂತ್ರವೆನ್ನಬಹುದಾದ ಒಂದು ರೂಪಕ ಕಾವ್ಯವನ್ನೂ ರಚಿಸಿರುವುದು ಪ್ರಸ್ತುತ ಪ್ರಬಂಧದ ವಿವೇಚನೆಗೆ ಅನುಕೂಲಕರವೂ ಮತ್ತು ಪ್ರಮುಖ ಆಕರವೂ ಆಗಿ ಪರಿಣಮಿಸಿದೆ.

೨೦ನೆಯ ಶತಮಾನಕ್ಕೆ ಬರುವವರೆಗೆ ಕನ್ನಡ ಸಾಹಿತ್ಯ ಚರಿತ್ರೆಯ ಉದ್ದಕ್ಕೂ ನಾವು ಕಾಣುವುದು ಸಮಾಜದ ಮೇಲು ವರ್ಗದವರಷ್ಟೇ ಸಾಹಿತ್ಯ ರಚನೆಯಲ್ಲಿ ತೊಡಗಿರುವುದನ್ನು. ವಚನ ಸಾಹಿತ್ಯದ ಕಾಲದಲ್ಲಿ ಮಾತ್ರ ಕೆಳವರ್ಗದವರ, ಶೂದ್ರದಲಿತರ ಧ್ವನಿಗಳನ್ನೂ ಕೇಳುತ್ತೇವೆ. ಆದರೆ ಅವು ಕ್ಷೀಣಿಸಲು, ದುರ್ಬಲವಾಗಲು ಕಾರಣ ಅವರು ಯಾರೂ ಸಾಹಿತ್ಯ ಕೃತಿ ರಚನೆಯನ್ನು ಒಂದು ಗಂಭೀರ ಸೃಜನಕ್ರಿಯೆಯಾಗಿ ಸ್ವೀಕರಿಸಿದವರಲ್ಲ. ಅಂಬಿಗರ ಚೌಡಯ್ಯ, ಜೇಡರ ದಾಸಿಮಯ್ಯ, ಡೋಹರ ಕಕ್ಕಯ್ಯ, ಮಾದಾರ ಚನ್ನಯ್ಯ ಇತ್ಯಾದಿ ವಿವಿಧ ವೃತ್ತಿನಿರತರು ಸಾರಸ್ವತಕ್ಕೆ ಪೂರ್ಣವಾಗಿ ಲಗ್ಗೆ ಹಾಕಲಿಲ್ಲ. ಅಲ್ಲದೆ ಅವರು ಲಿಂಗ ಕಟ್ಟಿ ಶರಣರಾದ್ದರಿಂದ ದಾಖಲಾದವರೆ ಹೊರತು, ಅವರವರ ಜಾತಿಯಲ್ಲೇ ನಿಂತಿದ್ದರೆ ಹೇಳ ಹೆಸರಿಲ್ಲದಂತೆ, ಉಳಿದವರು ಹೋದ ದಾರಿಯಲ್ಲಿ ಕರಗಿ ಹೋಗುತ್ತಿದ್ದರು. ಒಂದು ವೇಳೆ ಈ ಪ್ರತಿಭೆಗಳು ಅವರವರ ಜಾತಿ ಮತಗಳ ಪರಿಧಿಯೊಳಗೇ ಉಳಿದು, ತಮ್ಮ ಸಮಾಜದ ಸಂವೇದನಗಳ ಅಭಿವ್ಯಕ್ತಿಗೆ ಪ್ರಯತ್ನಿಸಿದ್ದರೆ ಚರಿತ್ರೆಯಲ್ಲಿ ನಿಲ್ಲುವ ಸ್ವಾರಸ್ಯವಾದ ಮಾಹಿತಿಗಳನ್ನು ಬಸಿರಲ್ಲಿಟ್ಟುಕೊಂಡ ಕೃತಿಗಳು ಬರುತ್ತಿದ್ದವು. ಮೇಲು ವರ್ಗದವರ ಮತಗಳನ್ನೂ ಮುಖ್ಯರನ್ನೂ, ಮಾತುಗಳನ್ನೂ ನೆತ್ತಿಯಲ್ಲಿ ಹೊತ್ತು ಗೌರವಿಸಿದ ಕೆಳವರ್ಗದವರಿಗೂ ಒಮ್ಮೊಮ್ಮೆ, ಮೂಲ ಸಂದುಗಳಲ್ಲಿ ಅಂಗೈಯಗಲ ಜಾಗ ಸಿಗುತ್ತಿತ್ತು. ಅಷ್ಟು ಸಿಕ್ಕಿದ್ದೇ ದೊಡ್ಡ ಭಾಗ್ಯ, ಅದೆಷ್ಟೋ ಜನ್ಮಗಳ ಸುಕೃತ ಎಂದು ಶೂದ್ರಾದಿಗಳು ಧನ್ಯರಾಗಬೇಕಾಗುತ್ತಿತ್ತು.

ಕನಕದಾಸರ ಕಥೆಯೂ ಇದಕ್ಕಿಂತ ತುಂಬ ಬೇರೆಯೆನಿಸುವುದಿಲ್ಲ. ಶ್ರೇಣಿಕೃತ ಸಮಾಜ-ಜಾತಿ ವ್ಯವಸ್ಥೆಯಲ್ಲಿ ಕೆಳಗಿನ ಸ್ತರವೆಂದು (ಮೇಲಿನವರೆಂದು ತಮ್ಮನ್ನು ತಾವೇ ಕರೆದುಕೊಂಡವರು) ಹೇಳುವ ಒಂದು ಜಾತಿಯಿಂದ ಬಂದ ಒಬ್ಬರು ೫೦೦ ವರ್ಷಗಳ ಹಿಂದೆ ಕನ್ನಡದಲ್ಲಿ ಕಾವ್ಯ ಬರೆದರೆಂಬುದೇ ದೊಡ್ಡ ಪವಾಡ. ಅಕ್ಷರವನ್ನು ಶೂದ್ರಾದಿಗಳಿಗೆ ಬಿಟ್ಟುಕೊಡಬೇಕಾದ ಅನಿವಾರ್ಯ ಬಂದದ್ದೇ ನೂರಿನ್ನೂರು ವರ್ಷಗಳಿಂದೀಚೆಗೆಂದ ಮೇಲೆ ಕನಕದಾಸರು ವಿದ್ಯೆಗಾಗಿ ಅದೆಷ್ಟು ಕಷ್ಟ ಅನುಭವಿಸಿದರೆಂಬುದನ್ನೂ ಊಹಿಸಿಕೊಳ್ಳಬಹುದು.

ಕನಕದಾಸರ ಬದುಕು ಐತಿಹ್ಯಗಳು (ಲೆಜೆಂಡ್ಸ್) ಕೆಸರಲ್ಲಿದೆ. ತಂದೆ ತಾಯಿ ಹೆಂಡತಿಯರನ್ನೂ ಢಣಾಯಕತನವನ್ನೂ ಕಳೆದುಕೊಂಡು ಕಡೆಗೆ ಸಂತ ಶ್ರೇಷ್ಠರಾದರೆಂದು ಪ್ರತೀತಿಯಿದೆ. ಬಾಳಿನ ಏಳು ಬೀಳುಗಳ ಏಟುಗಳನ್ನು ಅನುಭವಿಸಿ ನೋವುಂಡು ಮಾಗಿದ ಮನಸ್ಸೊಂದು ಮಾತಾಡುತ್ತಿರುವ ಅನುಭವ ಅವರ ಕಾವ್ಯದಿಂದ ಆಗುತ್ತದೆ.

ಕನಕದಾಸರು ತಮ್ಮ ಜಾತಿಯ ವಿಚಾರದಲ್ಲಿ ಎರಡು ಮೂರು ಕಡೆ ಬಾಯಿಬಿಟ್ಟು ಕುರುಬರೆಂದು ಹೇಳಿದ್ದಾರೆ. ಇದರ ಬಗ್ಗೆ ಇಲ್ಲಿ ವಿಶೇಷವಾಗಿ ಪ್ರಸ್ತಾಪಿಸಬೇಕಾದ ವಿಷಯವಿದೆ. ಇಡೀ ಇಂಡಿಯಾದ ಈ ಎರಡು ಸಾವಿರ ವರ್ಷಗಳ ಸಾಹಿತ್ಯ ಇತಿಹಾಸ ದಿಗಂತದಲ್ಲಿ ಇಬ್ಬರು ಕುರುಬರು ಸೂರ್ಯ ಚಂದ್ರರಂತೆ ಬೆಳಗುತ್ತಿದ್ದಾರೆ. ಒಬ್ಬ ಉತ್ತರದ ಸೂರ್ಯ, ಕವಿಕುಲಗುರು ಕಾಲಿದಾಸ. ಇನ್ನೊಬ್ಬರು ದಕ್ಷಿಣದ ಚಂದ್ರ ಮಹಾಪ್ರಾಜ್ಞ ಕನಕದಾಸರು. ಇಬ್ಬರದೂ ವರ್ಣರಂಜಿತ ವ್ಯಕ್ತಿತ್ವ. ಸಂಸ್ಕೃತ ಸಾಹಿತ್ಯ ದಿಗಂತದಲ್ಲಿ ಕಾಲಿದಾಸನ ಬೆಳಕಿನ ಮುಂದೆ ಉಳಿದ ಕವಿಗಳೆಲ್ಲ ನಕ್ಷತ್ರಗಳು. ಕನ್ನಡ ದಾಸ ಸಾಹಿತ್ಯ ಕ್ಷಿತಿಜದಲ್ಲಿ ಕನಕದಾಸರ ಕಾಂತಿಯ ಎದುರು ಉಳಿದವರು ಮಿಣುಕು ಹಣತೆಗಳು, ಕಾಲಿದಾಸನ ಕಾಲ ಖಚಿತವಾಗಿ ತಿಳಿಯದಾದರೂ ಅವನ ಸುತ್ತ ಗೂಡು ಕಟ್ಟಿದ ಎಷ್ಟೋ ದಂತಕಥೆಗಳಲ್ಲಿ ಮೂಡಿ ನಿಲ್ಲುವ ಆತ, ಕಾಲಾತೀತ ಮಹಾಕವಿಯಾಗಿದ್ದಾನೆ. ಕನಕದಾಸರ ಕಾಲ, ಕೃತಿ, ಕುಲ ತಕ್ಕಮಟ್ಟಿಗೆ ತಿಳಿದಿದೆಯಾದರೂ ಅವರ ಇತಿವೃತ್ತವೆಂದು ಭ್ರಮಿಸುವಂತೆ ಸೃಷ್ಟಿಯಾದ ಹಲವು ಕಲ್ಪನೆಗಳ ಪ್ರಭಾವಳಿಯಲ್ಲಿ ಹೊಳೆಯುವ ವ್ಯಕ್ತಿತ್ವವನ್ನು ಮಾತ್ರ ಕಾಣಬಹುದಾಗಿದೆ. ಕನಕರಿಗಿಂತ ಕಾಲಿದಾಸ ದೊಡ್ಡವನೂ ಹೌದು, ಅದೃಷ್ಟಶಾಲಿಯೂ ಹೌದು. ಆತ ಕನಕರಂತೆ ಅನಾದರಣೆಗೆ ಸಿಕ್ಕಿ ನರಳಲಿಲ್ಲ. ಕನಕದಾಸರು ಆಸ್ತಿಪಾಸ್ತಿಯಿಂದ ಹಿಡಿದು ಪ್ರತಿಭಾ ಸಂಪತ್ತಿನವರೆಗೆ ತಮ್ಮದೆಂಬುದನ್ನೆಲ್ಲ ಧಾರಾಳವಾಗಿ ಧಾರೆಯೆರೆದರೂ, ಅವರ ಕೊಡುಗೆಯನ್ನೆಲ್ಲ ಬಾಚಿ ತಬ್ಬಿಕೊಂಡರೆ ಹೊರತು ಅವನನ್ನು ಮಾತ್ರ ಮುಟ್ಟದೆ, ದೇಗುಲದೊಳಕ್ಕೂ ಬಿಡದೆ ಮಾರುದೂರ ನಿಲ್ಲಿಸಿ ದುರುಗುಟ್ಟಿದರು ಮಡುವಂತರಾದ ಹಿಡಿಮಂದಿ.

ಕನ್ನಡದ ಆದಿಕವಿಯಾದ ಪಂಪ, ಕರ್ಣನ ಪಾತ್ರದ ಮೂಲಕ ಕುಲಸಂಬಂಧವಾದ ಪರಿಕಲ್ಪನೆಯನ್ನು ವೈಚಾರಿಕವಾಗಿ ವಿವೇಚಿಸಿದ್ದಾನೆ. ಸಾಟಿಯಿರದಂಥ ಲೋಕವೀರರಾದ ಕರ್ಣ, ಏಕಲವ್ಯರನ್ನು ಕಾಡಿದ ಜಾತಿಕುಲದ ರೋಗ ಮಹಾತ್ಮ ಕನಕರನ್ನೂ ಕಾಡಿತು. ಕರ್ಣನಂತೆ ಕನಕರೂ ಜಾತಿವಾದಿಗಳ ಜುಟ್ಟು ಜನಿವಾರ ಹಿಡಿದು ಗೊಡ್ಡು ಸಂಪ್ರದಾಯವಾದಿಗಳು ಉತ್ತರಿಸಲಾಗದಂಥ ಮೂಲಭೂತ ನೇರ ಪ್ರಶ್ನೆಗಳನ್ನು ಹೇಳಿದ್ದಾರೆ; ಅವರ ಬಂಡಾಯ ಧೋರಣೆ ಪ್ರಕಟವಾಗಿರುವ ಸಾಲುಗಳು ಹೀಗಿವೆ :

ಕುಲ ಕುಲ ಕುಲವೆನ್ನುತಿಹರು
ಕುಲವ್ಯಾವುದು ಸತ್ಯ ಸುಖವುಳ್ಳ ಜನರಿಗೆ ॥

ಕೆಸರೊಳು ತಾವರೆ ಪುಟ್ಟಲು ಅದ ತಂದು
ಬಿಸಜನಾಭನಿಗರ್ಪಿಸಲಿಲ್ಲವೆ
ಹಸುವಿನ ಮಾಂಸದೊಳುತ್ಪತ್ತಿ ಕ್ಷೀರವು
ವಸುಧೆಯೊಳಗೆ ಭೂಸುರರುಣ್ಣಲಿಲ್ಲವೆ ॥

ಮೃಗಗಳ ಮೈಯಲ್ಲಿ ಪುಟ್ಟಿದ ಕಸ್ತೂರಿ
ತೆಗೆದು ಪೂಸುವರು ಭೂಸುರರೆಲ್ಲರು
ಬಗೆಯಿಂದ ನಾರಾಯಣನ್ಯಾವ ಕುಲದವ
ಅಗಜವಲ್ಲಭನ್ಯಾತರ ಕುಲದವನು ॥

ಆತ್ಮ ಯಾವ ಕುಲ ಜೀವ ಯಾವ ಕುಲ
ತತ್ವೇಂದ್ರಿಯಗಳ ಕುಲ ಪೇಳಿರಯ್ಯ
ಆತ್ಮಾಂತರಾತ್ಮ ನೆಲೆಯಾದಿ ಕೇಶವ
ಆತನೊಲಿದ ಮೇಲೆ ಯಾತರ ಕುಲವಯ್ಯಾ ॥

ಕುಲ ಅನ್ನುವುದು ಈ ಇಂಡಿಯಾದಲ್ಲಿ ಕಟು ವಾಸ್ತವ. ಆ ಸೀಗೆ ಮೆಳೆಯಿಂದ ಬಿಡಿಸಿಕೊಳ್ಳುವುದು ಯಮನಿಗೂ ಕಷ್ಟ. ದೇವರೆ ಪ್ರತ್ಯಕ್ಷ ಬಂದರೂ 'ನೀನೂ ಯಾವ ಜಾತಿ ದೇವರೂ' ಎಂದು ಕೇಳುವ ಜನ ಇಲ್ಲಿದ್ದಾರೆ. ದೇವರುಗಳಿಗೇ ಜಾತಿ ಕುಲಗಳ ಸೂತಕ ತಟ್ಟಿದ ಮೇಲೆ ಸಾಮಾನ್ಯ ಜನರ ಪಾಡು ನಾಯಿ ಪಾಡೇ. ಕನಕರಂಥ ಮಹಾತ್ಮನನ್ನೂ ಇದು ಬಿಡದೆ ಕಾಡಿದೆ. ಎಷ್ಟರಮಟ್ಟಿಗೆ ಈ ಮತಪೋಹಿತರು ಅವರಿಗೆ ಉಪಟಳ ತಗಾದೆ ಕೊಟ್ಟು, ಕೆಣಕಿದರೆಂದರೆ ಆ ಮಹಾಸಂಯಮಿಯೂ ಕಡೆಗೆ ಇದರಿಂದ ರೋಸಿಹೋಗಿ ತೀಕ್ಷ್ಣವಾಗಿ, ಖಾರವಾಗಿ ಉತ್ತರ ಕೊಡಬೇಕಾಯಿತು. ಕನಕದಾಸರ ಈ ಉತ್ತರಗಳಿಗೆ ಯಾವ ನೆಲೆಯಲ್ಲಿ ನಿಂತು ವಿಮರ್ಶಕರು ವಿವರಣೆ ಕೊಟ್ಟರೂ ಸಾಕಾಗುವುದಿಲ್ಲ. ಕನಕರದು ಬಹುಮುಖಿ ಪ್ರತಿಭೆ, ಅವರ ಸಮಕಾಲೀನರಲ್ಲಿ ಯಾರಿಗೂ ಕಡಿಮೆಯಿಲ್ಲದ ಉನ್ನತಿಕೆಯಿದ್ದವರು. ಆದರೂ ತಮ್ಮನ್ನು ಅಂತಃಕರಣಪೂರ್ವಕವಾಗಿ ಸ್ವೀಕರಿಸದೆ ಉದ್ದಕ್ಕೂ ಗುಮಾನಿಯಿಂದ ನೋಡಿದರಲ್ಲಾ ಎಂಬ ಒಳವೇದನೆಯು ನಾಲ್ಕೈದು ಕೀರ್ತನೆಗಳಲ್ಲಿ ಮಿಡುಕಾಡಿದೆ. ಜನವಿರೋಧಿ ಧೋರಣೆಯನ್ನು ಧಿಕ್ಕರಿಸಿದ ನೆಲೆಯಲ್ಲಿ ಬಂಡಾಯದ ಈ ಕೀರ್ತನೆ ಮೂಡಿ ಬಂದಿದೆ:

ಕುಲ ಕುಲವೆಂದು ಹೊಡೆದಾಡದಿರಿ ನಿಮ್ಮ
ಕುಲದ ನೆಲೆಯನೇನಾದರೂ ಬಲ್ಲಿರ ॥

ಅಟ್ಟು ಉಣ್ಣದ ವಸ್ತುಗಳಲ್ಲ
ಹುಟ್ಟಿದ ಯೋನಿಗಳಿಲ್ಲ ಮೆಟ್ಟದ ಭೂಮಿಗಳಿಲ್ಲ
ಗುಟ್ಟು ಕಾಣಿಸಿ ಬಂತು ಹಿರಿದೇನು ಕಿರಿದೇನು
ನೆಟ್ಟನೆ ಸರ್ವಜ್ಞ ನೆನಕಂಡ್ಯ ಮನುಜ ॥

ಜಲವೆ ಸಕಲ ಕುಲಕ್ಕೆ ತಾಯಲ್ಲವೆ
ಜಲದ ಕುಲವನೇನಾದರು ಬಲ್ಲಿರಾ
ಜಲದ ಬೊಬ್ಬುಳಿಯಂತೆ ಸ್ಥಿರವಲ್ಲವೀ ದೇಹ
ನೆಲೆಯನರಿತು ನೀ ನೆನೆಕಂಡ್ಯಾ ಮನುಜ ॥

ಹರಿಯೆ ಸರ್ವೋತ್ತಮ ಹರಿಯೆ ಸರ್ವೇಶ್ವರ
ಹರಿಮಯವೆಲ್ಲವೆನುತ ತಿಳಿದು
ಸಿರಿ ಕಾಗಿನೆಲೆಯಾದಿ ಕೇಶವರಾಯನ
ಚರಣ ಕಮಲವ ಕೀರ್ತಿಸುವನೆ ಕುಲಜ ॥

ಭಕ್ತಿರಸದಲ್ಲಿ ಅದ್ದಿ ತೆಗೆದ ಈ ಅಮೃತ ಪುತ್ಥಳಿಗೆ ಜಾತಿ ಜಾಡ್ಯ ಎಲ್ಲಿಯದು? ಆದರೂ ಅವರನ್ನು ಪದೇ ಪದೇ ಮಡಿಕೋಲಿಂದ ತಿವಿದು ಚುಚ್ಚಿ ನೋಯಿಸುತ್ತಿದ್ದರು. 'ಕನಕನ ಕಿಂಡಿ' ಸಂಬಂಧವಾಗಿ ಸೂಕ್ಷ್ಮವಾದ ಮನೋವಿಜ್ಞಾನ ವಿಶ್ಲೇಷಣೆ ಮಾಡಿ ಅದರ ಸಂಕೀರ್ಣ ಪಾತಳಿಗಳ ಪದರಗಳನ್ನು ಬಿಚ್ಚಿ ಒಣಗಹಾಕಬಹುದು. ಎಂಥ ಘೋರ ಅಪಚಾರ ಒಬ್ಬ ಮೇಧಾವಿಗೆ ಸಂದಿದೆಯೆಂಬ ಊಹೆಯೇ ನಮ್ಮನ್ನು ತಲ್ಲಣಗೊಳಿಸುತ್ತದೆ. ಅದು ಮನುಷ್ಯತ್ವಕ್ಕೆ ಮಾಡಿದ ಅಪಮಾನ. ಐನೂರು ವರ್ಷಗಳ ಈಚೆಯ ದಡದಲ್ಲಿ ನಿಂತಿರುವ ನಾವೂ ಕೂಡ ನಾಚಿ ತಲೆತಗ್ಗಿಸುವಂತಹ ಅನ್ಯಾಯವದು. ಕೆಲವರು ಇದರ ಪ್ರಸ್ತಾಪ ಬಂದಾಗ ತಮ್ಮ ಲೇಖಣಿಗೆ ಎಣ್ಣೆ ಸವರಿ 'ಇದು ವಾಸ್ತವವಾಗಿ ನಡೆದಿರಲಾರದು' ಎಂದು ನುಣುಚಿಕೊಳ್ಳುತ್ತಾರೆ. ಇದು ಕಾಲ್ಪನಿಕವಿರಬಹುದೇನೊ ಎಂದು ಹಾರಿಕೆ ಉತ್ತರವಿತ್ತು ಜಾರಿಕೊಳ್ಳುತ್ತಾರೆ. ಒಂದು ವೇಳೆ ಈ ಘಟನೆ ಕಾಲ್ಪನಿಕವೆಂದೇ ಇಟ್ಟುಕೊಂಡು ಚರ್ಚಿಸೋಣ. ಇದು ಕಟ್ಟು ಕಥೆಯಾಗಿ ಹುಟ್ಟಬೇಕಾದರೆ ಪ್ರಬಲವಾದ ಸಾಮಾಜಿಕ ಕಾರಣವಿರಬೇಕಾಗುತ್ತದೆ. ಕನಕದಾಸರ ಕಾಲದ ಸಮಾಜದಲ್ಲಿದ್ದ ಅರ್ಥಹೀನ ಕ್ರೂರ ಅಮಾನವೀಯ ವ್ಯವಸ್ಥೆಯ ತುಣುಕು ಇದು. ದಲಿತ ಶೂದ್ರರು ಎಷ್ಟೇ ಅಗಾಧ ಮಹಿಮೋನ್ನತ ಪ್ರತಿಭಾವಂತರಾದರೂ ಅವರ ಸ್ಥಾನ ಊರ ಹೊರಗೆ, ದೇಗುಲಗಳ ಪ್ರಾಕಾರ ಪೌಳಿಯ ಹೊರಗೆ. ಅಂತೂ ಘಟನೆ ರಾಜಸ್ತಾನದಲ್ಲಿ ಮೊನ್ನೆ ಮೊನ್ನೆ ನಡೆದ ನಾಥದ್ವಾರ ಪ್ರವೇಶ ಘಟನೆಯನ್ನು ನೆನಪಿಸುವಂತಹುದಾಗಿದೆ. ಕುಲಸಂಬಂಧವಾದ ಜಿಜ್ಞಾಸೆಗೆ. ಹಾಗಾದರೆ ಕನಕನ ಪ್ರತಿಕ್ರಿಯೆಯಾದರೂ ಏನಿರಬಹುದೆಂಬ ಕುತೂಹಲ ಮೂಡುವುದು ಸಹಜ. ಈಗಾಗಲೇ ಉದಾಹರಿಸಿದ ಎರಡು ಕೀರ್ತನೆಗಳಲ್ಲಿ ವ್ಯಕ್ತಪಟ್ಟಿರುವ ಅಭಿಪ್ರಾಯದ ಜೊತೆಗೆ ಮುಂದೆ ಉದಾಹರಿಸಿದ ಹಾಡನ್ನೂ ಕೂಡಿಸಿಕೊಂಡರೆ ಕನಕರ ಪ್ರತಿಕ್ರಿಯೆ ಹರಳುಗೊಳ್ಳಬಹುದೆನಿಸುತ್ತದೆ :

ಎಲ್ಲಾರು ಮಾಡುವುದು ಹೊಟ್ಟೆಗಾಗಿ
ಗೇಣು ಬಟ್ಟೆಗಾಗಿ

ನೆಲ್ಲುಗಳ ಕುಟ್ಟಿಕೊಂಡು ಬಿದುರುಗಳ ಹೊತ್ತುಕೊಂಡು
ಕೂಲಿಗಳ ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ

ನಾಲಕು ವೇದ ಪುರಾಣ ಶಾಸ್ತ್ರ ಪಂಚಾಂಗ ಹೇಳಿಕೊಂಡು
ಕಾಲ ಕಳೆಯುವುದೆಲ್ಲ....

ಬಡಿದು ಬಡಿದು ಕಬ್ಬಿಣವು ಕಾಸಿ ತುಬಾಕಿ ಮಾಡಿ
ಹೊಡೆವ ಗುಂಡ ಮಾಡುವುದು.....

ಚಂಡ ಭಟರೆಲ್ಲ ಮುಂದೆ ಕತ್ತಿ ಹರಿಗೆಯ ಪಿಡಿದು
ಖಂಡ ತುಂಡ ಮಾಡುವುದು......

ದೊಡ್ಡ ದೊಡ್ಡ ಕುದರೆಯನೇರಿ ನೇಜಿ ಹೊತ್ತು ರಾಹುತನಾಗಿ
ಹೊಡೆದಾಡಿ ಸಾಯುವುದು...

ಕುಂಟೆ ಕೂರಿಗೆಯಿಂದ ಹೆಂಟೆ ಮಣ್ಣ ಹದ ಮಾಡಿ
ರಂಟೆ ಹೊಡೆದು ಬೆಳಸುವುದು.....

ಕೆಟ್ಟ ತನದಿಂದ ಕಳ್ಳತನವನ್ನು ಮಾಡಿ
ಕಟ್ಟಿ ಹೊಡೆಸಿಕೊಂಬುವುದು.......

ಸನ್ಯಾಸಿ ಜಂಗಮ ಜೋಗಿ ಜಟ್ಟಿ ಮೊಂಡ ಬೈರಾಗಿ
ನಾನಾ ವೇಷ ಕೊಂಬುವುದು..........

ಉನ್ನತ ಕಾಗಿನೆಲೆಯಾದಿ ಕೇಶವನ
ಅನುದಿನ ನೆನೆವುದು ಭಕ್ತಿಗಾಗಿ ಪರಮ ಮುಕ್ತಿಗಾಗಿ

ಲಕ್ಷಾಂತರ ವರ್ಷಗಳಲ್ಲಿ ಮನುಷ್ಯ ಮಾಡುತ್ತಾ ಬಂದಿರುವ ಪ್ರಯತ್ನಗಳ ಹಿಂದೆ ಪ್ರವರ್ತನಗೊಂಡ ಮುಖ್ಯ ಪ್ರೇರಣೆಯೇ ಇದು ಎಂಬುದು ವಾಸ್ತವ ಸತ್ಯ. ಮೇಲುಜಾತಿ ವರ್ಗಗಳವರದೂ ಇದೇ ಕಥೆ. ಅವರೇನೂ ಕೆಳವರ್ಗದವರಿಗಿಂತ ಬೇರೆಯಲ್ಲ ಎಂಬ ಮಾತಿನೊಂದಿಗೆ ಸಾಧಾರಣೀಕರಿಸಿ ಕವಿ ಹೇಳುತ್ತಿರುವ ಸಾರಾಂಶವೆಂದರೆ ಇಡೀ ಮನುಷ್ಯ ಸಮಾಜ ಒಂದೇ ಎಂಬ ಮೂಲ ಮಂತ್ರದ ಮಹಿಮೆಯನ್ನು, ಇದನ್ನು ಮನಗಾಣದ ಜನ ಜಗಳವಾಡುತ್ತಾರೆ. ತಾರತಮ್ಯ ತೋರುತ್ತಾರೆ. ಇದು ನಿನ್ನೆ ಇವತ್ತಿನ ರೋಗವಲ್ಲ, ಬಹು ಹಳೆಯ ಕಾಹಿಲೆ, ವಾಸಿಯಾಗದ ವ್ರಣ; ಪ್ಲಾಸ್ಟಿಕ್ ಸರ್ಜರಿಗೂ ದಕ್ಕದ ಅರ್ಬುದ. ತಾತಾಚಾರ್ಯರಾಗಲಿ ವ್ಯಾಸರಾಯರಾಗಲಿ ಕನಕದಾಸರ ಬೆನ್ನುತಟ್ಟಿದರೂ ಅವರ ಶಿಷ್ಯ ಮಂಡಲಿ ಎಷ್ಟು ಪ್ರಬಲವಾಗಿತ್ತೆಂದರೆ ದೇವರು ವರ ಕೊಟ್ಟರೂ ಪೂಜಾರಿ ಕೊಡ ಎಂಬಷ್ಟು. ಅತ್ತ ದ್ವೈತಿಗಳೂ ಇತ್ತ ಶ್ರೀವೈಷ್ಣವರೂ ಮನಃಪೂರ್ವಕವಾಗಿ ಸೇರಿಸಿಕೊಳ್ಳದೆ ಉಭಯತ್ರರೂ ಗುಮಾನಿಯಿಂದ ಕನಕದಾಸರನ್ನು 'ಹೊರಗೇ ಇಟ್ಟರು' ಎಂಬುದರ ಬದಲು 'ಹೊರಗೇ ಅಟ್ಟಿದರು' ಎಂದು ಬಳಸಬಾರದು. ಕನಕದಾಸರನ್ನು ಜಾತಿಸೂತಕದಿಂದ ಅನತಿ ದೂರದಲ್ಲಿ ಕೆಲವರು ನಿಲ್ಲಿಸಿರಬಹುದೇ ಹೊರತು ಆ ಮಹಾಪುರುಷನನ್ನು 'ಅಟ್ಟುವ' ಧೈರ್ಯ ಅಂದಿನ ಮಡಿವಂತರಿಗೂ ಸಾಧ್ಯವಿರಲಿಲ್ಲ. ಏಕೆಂದರೆ ಜನತೆ ಕನಕರ ಪರವಾಗಿ ಹೆಜ್ಜೆ ಹಾಕುತ್ತಿತ್ತು. ಎಲ್ಲೋ ಹಿಡಿಮಂದಿಯಷ್ಟೇ ಮಡಿಮಡಿಯೆಂದು ಅಡಿಗಡಿಗೆ ಹಾರುತ್ತಿತ್ತು. ಕನಕದಾಸರೂ ಅಂಥವರಿಗೆ ಅರ್ಥವಾಗುವಂತೆ, ಅಂದಂದೇ ಚುರುಕು ಮುಟ್ಟಿಸಿ ಪಾಠ ಕಲಿಸುತ್ತಿದ್ದರೆಂದು ತೋರುತ್ತದೆ. ಏಕೆಂದರೆ ಕೀರ್ತನೆಗಳಲ್ಲದೆ ಭಕ್ತಿ ನೀತಿ ವೈರಾಗ್ಯ ಭಾವ ತುಂಬಿದ ಹರಿಭಕ್ತಿ ಸಾರದಲ್ಲೂ ಇಂಥ ಬಿಸಿ ಮುಟ್ಟಿಸುವ ಬಂಡಾಯದ ಧ್ವನಿಯಿದೆ.

ಎಂಜಲೆಂಜಲು ಎಂಬರಾನುಡಿ
ಎಂಜಲಲ್ಲವೆ ವಾರಿ ಜಲಚರ
ದೆಂಜಲಲ್ಲವೆ ಹಾಲು ಕರುವಿನ ಎಂಜಲೆನ್ನಿಸದೆ
ಎಂಜಲೆಲ್ಲಿಯದಲ್ಲಿಯುಂ ಪರ
ಲೆಂಜಲಲ್ಲದೆ ಬೇರೆ ಭಾವಿಸ
ಲೆಂಜಲುಂಟೇ ದೇವ ರಕ್ಷಿಸು ನಮ್ಮನವರತ ॥

ಶ್ರೇಣೀಕೃತ ಜಾತಿ ತಾರತಮ್ಯ ವ್ಯವಸ್ಥೆಯೊಂದಿಗೆ ಎಷ್ಟೇ ರಾಜಿ ಮಾಡಿಕೊಂಡರೂ ಕನಕ ಕವಿಗೆ ನೆಮ್ಮದಿಯ ಉಸಿರಾಟ ಕಷ್ಟವಾಗಿತ್ತೆಂಬುದಕ್ಕೆ ಹಿಂದೆ ಉದಾಹರಿಸಿದ ಕೀರ್ತನೆಗಳ ಪಕ್ಕದಲ್ಲಿಟ್ಟು ಹೇಳಬಹುದಾದ ಸಾಲುಗಳಿವು. ವರ್ಗ ವ್ಯವಸ್ಥೆಯ ಬೂರ್ಜ್ವಾಗಳ ಬಿಗಿ ಹಿಡಿತದಲ್ಲಿ ಸಿಕ್ಕಿ ನರಳುವ ಜೀವವೊಂದರ ನೊಂದು ಆಡಿದ ಪ್ರತಿಭಟನೆಯ ಮಾತುಗಳಾಗಿ

ಇವು ಕೇಳಿಸುತ್ತವೆ. ಆದ್ದರಿಂದ ಕನಕದಾಸರು ದ್ವೈತಿಯೊ ವಿಶಿಷ್ಟಾದ್ವೈತಿಯೊ ಭಾಗವತನೊ ಎಂಬ ಬರಿ ಚರ್ಚೆ ಅಪ್ರಸ್ತುತ. ಅವರು ಅಪ್ಪಟ ಮಾನವತಾವಾದಿಯಾದ ಕವಿ ಎಂಬುದೇ ಸರಿಯಾದ ವ್ಯಾಖ್ಯಾನ. ಈ ನೆಲೆಯಲ್ಲಿಯೇ ನಾವು ಕನಕದಾಸ ಕವಿಗೆ ಭಾಮಿನಿ ಷಟ್ಪದಿಯ 'ನಳ ಚರಿತ್ರ' ಕಾವ್ಯ ಬರೆಯುವ ತುರ್ತು ಏನಿದ್ದಿರಬಹುದೆಂದು ಅರ್ಥಮಾಡಿಕೊಳ್ಳುವುದು ಸಾಧ್ಯವಾಗುತ್ತದೆ. ಅದು ಅವರು ತಮಗೆ ತಾವು ಹೇಳಿಕೊಂಡು ಸಂತೈಸಿಕೊಂಡ ಕಾವ್ಯ. ರಾಜ್ಯಕೋಶ ಸೋತು ಕಾಡಿನಲ್ಲಿ ಕಷ್ಟದಲ್ಲಿದ್ದ ಯುಧಿಷ್ಠಿರನಿಗೆ ಹೇಳಿದ ನಳದಮಯಂತಿಯರ ಕಥೆಯಿಂದ ಕವಿ ತನ್ನ ಪಾಡಿಗಾಗಿ ಪಶ್ಚಾತ್ತಾಪ ಪಡಬೇಕಾಗಿಲ್ಲವೆಂಬ ಸಮಾಧಾನದ ಸಾಂತ್ವನದ ಧ್ವನಿಯಿದೆ.

ಕನಕದಾಸರ ಸಾಮಾಜಿಕ ಪ್ರಜ್ಞೆ ಮತ್ತು ವಿಮರ್ಶನ ಶಕ್ತಿ ಅತ್ಯಂತ ಕ್ರಿಯಾಶೀಲವಾಗಿರುವ ಧ್ವನಿಕಾವ್ಯವಾದ ರಾಮಧಾನ್ಯ ಚರಿತೆ ಕನ್ನಡ ಸಾಹಿತ್ಯದಲ್ಲಿ ಪ್ರಥಮ ಬಂಡಾಯ ಕಾವ್ಯ ವೆಂಬುದು ನನ್ನ ಖಚಿತ ಅಭಿಪ್ರಾಯ. ವರ್ಗ ಹೋರಾಟ ಮತ್ತು ಶೂದ್ರ ದಲಿತರ ಪರವಾದ ಕೂಗು ಇಷ್ಟು ದಟ್ಟವಾಗಿ ತುಂಬಿಕೊಂಡುದು ಕನ್ನಡ ಸಾಹಿತ್ಯದಲ್ಲಿ ಇದೆ ಮೊದಲು. ಅನನ್ಯ ವೆನಿಸುವಂಥ ಅಪ್ರತಿಹತವಾದ, ಅಕ್ಷತವಾದ ಕನಕರ ವ್ಯಕ್ತಿತ್ವ ಕಾಣಬೇಕಾದರೆ ರಾಮಧಾನ್ಯ ಚರಿತೆಗೆ ಬರಬೇಕು.

ಅದು ತನ್ನ ಬಸಿರಲ್ಲಿ ತುಂಬಿಕೊಂಡಿರುವುದು ಧ್ವನ್ಯಾರ್ಥದ ಭಂಡಾರವನ್ನು ಪಂಚ ತಂತ್ರದಂತೆ ವಿಡಂಬನೆಯನ್ನು ತುಳುಕಿಸುವ ಸೊಗಸಾದ ರೂಪಕ ಕಥೆ: (ಅಲಿಗರಿ) allegory ರಾಮಧಾನ್ಯಚರಿತೆ.

ಇಡೀ ಕನ್ನಡ ಸಾಹಿತ್ಯದಲ್ಲಿ ಸ್ವತಂತ್ರ ವಸ್ತುವನ್ನುಳ್ಳ ಕಾವ್ಯಗಳು ಅತಿ ವಿರಳವಾಗಿವೆ. ಸಂಸ್ಕೃತ, ಪ್ರಾಕೃತ ಮೂಲಗಳಿಂದ ಕನ್ನಡಕ್ಕೆ ಬಂದ ಕಾವ್ಯಗಳೇ ತುಂಬಿ ತುಳುಕಿವೆ. ಆಂಡಯ್ಯನ ಕಬ್ಬಿಗರ ಕಾವ್ಯ, ಬ್ರಹ್ಮಶಿವನ ಸಮಯ ಪರೀಕ್ಷೆ ಕಾವ್ಯಗಳಂತೆ ರಾಮಧಾನ್ಯಚರಿತೆಯೂ ಸ್ವತಂತ್ರ ವಾದ ಸ್ವೋಪಜ್ಞತೆಯಿರುವ ಕಾವ್ಯ. ೧೫೮ ಭಾಮಿನಿಷಟ್ಪದಿ ಪದ್ಯಗಳ ಈ ಪುಟ್ಟ ಕಾವ್ಯ ಗಾತ್ರದಲ್ಲಿ ಚಿಕ್ಕದೇ. ಮೇಲುನೋಟಕ್ಕೆ ಹಾಗೂ ಮೊದಲ ಓದಿಗೆ ರಾಮಾಯಣ ಕಥೆಯಂತೆ ಕಾಣುತ್ತದೆ. ಆದರೆ ಅದರ ಸಾಂಸ್ಕೃತಿಕ ವಿಶ್ಲೇಷಣೆಗೆ ತೊಡಗಿದಾಗ ಕಾವ್ಯ ಬಿಟ್ಟುಕೊಡುವ ಅರ್ಥ ಸುರಳಿಗಳೇ ಬೇರೆ. ಆ ಬಗೆಯ ವಿಚಿಕಿತ್ಸಕ ಕ್ಷ-ಕಿರಣ ಹಾಯಿಸಿದಾಗ ತಟ್ಟನೆ ಗೋಲ ಗುಂಬಜಿನಂತೆ ಈ ಕಾವ್ಯದಲ್ಲಿರುವ ಬಂಡಾಯ ಧ್ವನಿಗಳು ಅನುರಣಿತವಾಗುತ್ತವೆ. ಕಾವ್ಯದಲ್ಲಿ ಹಾಸುಹೊಕ್ಕಾಗಿರುವ ಧ್ವನಿ ಸುರುಳಿಯನ್ನು ಬಿಚ್ಚುವ ಮೊದಲು ಕಥಾಸಾರವನ್ನು ಪರಿಚಯಿಸಿಕೊಳ್ಳಬಹುದು.

ರಾವಣನ ಸಂಹಾರವಾದ ಮೇಲೆ ರಾಮಸೀತೆಯರು ಅಯೋಧ್ಯೆಗೆ ಮರಳುವಾಗ ಗೌತಮನ ಆಶ್ರಮದಲ್ಲಿ ಆತಿಥ್ಯ ಪಡೆಯುತ್ತಾರೆ. ನಾನಾ ಧಾನ್ಯಗಳ ಭಕ್ಷ್ಯಗಳ ರುಚಿ ವ್ಯತ್ಯಾಸ ವಾಗಿ ಸಂವಾದ ನಡೆಯುತ್ತದೆ. ಗೌತಮನು ರಾಗಿಯನ್ನು ಮೆಚ್ಚಿ ಮಾತಾಡಿದ್ದರಿಂದಬತ್ತಕ್ಕೆ ಕೋಪ ನೆತ್ತಿಗೇರುತ್ತದೆ. ಪಿತ್ತ ಕೆರಳಿದವರಂತೆ ನೆಲ್ಲು ರಾಗಿಯನ್ನು ಬಾಯಿಗೆ ಬಂದಂತೆ ಬೈದು ಅಪಮಾನಿಸಿ ತನ್ನ ಬಡಾಯಿಕೊಚ್ಚಿಕೊಳ್ಳುತ್ತದೆ. ಕೇಳುವವರಿಗೂ ಕೇಳಿ, ಕಡೆಗೆ ತಡೆಯದೆ ರಾಗಿಯೂ ತಿರುಗಿಬಿದ್ದು ತಕ್ಕ ಪ್ರತ್ಯುತ್ತರದಿಂದ ಬತ್ತವನ್ನು ಹೀಯಾಳಿಸುತ್ತದೆ. ವಾದ ವಿವಾದ ಕೇಳಿದ ರಾಮನು ಅವೆರಡನ್ನೂ ಆರು ತಿಂಗಳು ಸೆರೆಯಲ್ಲಿಡುತ್ತಾನೆ. ಅವಧಿ ಮುಗಿದ ಮೇಲೆ ನೋಡಿದರೆ, ರಾಗಿ ಚೆನ್ನಾಗಿರುತ್ತದೆ, ಬತ್ತ ಕೆಟ್ಟಿರುತ್ತದೆ. ಇಂದ್ರನೂ ರಾಮನೂ ರಾಗಿಯ

ಮಹಿಮೆಯನ್ನು ಮೆಚ್ಚಿ 'ರಾಘವ' ಎಂಬ ಹೊಸ ಹೆಸರಿನಿಂದ ಪುರಸ್ಕರಿಸುತ್ತಾರೆ. ಇದಿಷ್ಟೂ ಮೇಲುನೋಟಕ್ಕೆ ಸರಳವಾಗಿ ಕಾಣುವ ವಾಚ್ಯಾರ್ಥದ ನೆಲೆಯಲ್ಲಿನ ಕಥೆ. ಆದರೆ, ಕೃತಿಯಲ್ಲಿ ಅಂತರ್ಗತವಾಗಿರುವ ವಿಚಾರಗಳ ಎಳೆಗಳನ್ನು ಹಿಡಿಯಬೇಕು. ಹಿಂಡಿದಷ್ಟೂ ಬಿಡುವ ಸೂಕ್ಷ್ಮಗಳು ಇಲ್ಲಿ ದಾಖಲಾಗಿವೆ. ಸಮಾಜವಾದಿ ವಾಸ್ತವತೆಯ ಬೆಳಕಿಗೆ ಹಿಡಿದು ನೋಡಿದರ ಈ ಕಾವ್ಯದ ನಿಜ ನೆಲೆಗಳು ನಿಚ್ಚಳವಾಗಿ ತೆರೆದುಕೊಳ್ಳುತ್ತವೆ.

ನಮ್ಮ ಸಾಹಿತ್ಯಪರಂಪರೆಯಲ್ಲಿ ಪೃಥಕ್ಕಾಗಿ ನಿಲ್ಲುವ ಈ ಕಿರುಕಾವ್ಯದ ಮಡಿಲಲ್ಲಿರುವ ಸತ್ಯ, ಅದರ ವಿಸ್ತಾರ ಹಾಗೂ ಅದಕ್ಕಿರುವ ಸಾಮಾಜಿಕ ಅರ್ಥವಂತಿಕೆಯನ್ನು ವಿಶ್ಲೇಷಿಸಬಹುದು. ಚರಿತ್ರೆಯ ಚಲನಶೀಲತೆಯನ್ನು ತನ್ನ ಕಾಲಕ್ಕೇ ಕನಕದಾಸರ ಪ್ರತಿಭೆ ಕಂಡಿತ್ತು. ಕವಿ ಭವಿಷ್ಯದರ್ಶಿ ಎಂಬ ಮಾತಿಗೆ ಕನಕದಾಸರ ಈ ಕಾವ್ಯ ದ್ರಷ್ಟಾರಹೇಳಿಕೆಗೆ ಸಂವಾದಿಯಾಗಿದೆ. ಇಂದಿನ ಬಂಡಾಯ ಸಾಹಿತ್ಯ ಪರಂಪರೆಗೆ ಕನಕರೇ ಆಚಾರ್ಯಪುರುಷ ಎಂಬುದನ್ನು ದೃಷ್ಟಾಂತ ಗಳೊಂದಿಗೆ ಮನಗಾಣಬಹುದು. ರಾಮಧಾನ್ಯಚರಿತೆಯ ಕಥೆ ಪುರಾಣವೇ (ಮಿಥ್) ಇರಬಹುದು, ಆದರೆ ಅದರಲ್ಲಿರುವುದು ವಾಸ್ತವ ಸಮಾಜ ಚಿತ್ರ, ಅದರಲ್ಲಿ ತುಂಬಿ ತುಳುಕು ವುದು ಅರ್ಥಾಂತರೋಕ್ತಿ. ಕಾವ್ಯದ ಕೇಂದ್ರ ಪ್ರಜ್ಞೆಯಾಗಿ ನಿಲ್ಲುವ ಭಾಗವಷ್ಟೂ ಅಂದಿನ ಸಮಕಾಲೀನ ಸಮಾಜಕ್ಕೆ ಹಿಡಿದ ರನ್ನಗನ್ನಡಿಯಾಗಿದ್ದು ಕನಕನ ಸ್ವತಂತ್ರ ಪ್ರತಿಭೆ ಮತ್ತು ಸೃಜನ ಸಾಮರ್ಥ್ಯ ಕ್ರಿಯಾಶೀಲವಾಗಿದೆ.

ಬತ್ತವನ್ನು ಬಿಟ್ಟು ರಾಗಿಯನ್ನು 'ಶ್ರೇಷ್ಠ' ಎಂದು ಅಂದೊಡನೆ ಬತ್ತಕ್ಕೆ ಅಡಿಯಿಂದ ಮುಡಿಯವರೆಗೆ ಬೆಂಕಿ ಹಚ್ಚಿದ ಅನುಭವ ಆಗುತ್ತದೆ. ದೊಡ್ಡವರು ಬಡಾಯಿಕೊಚ್ಚಿಕೊಳ್ಳುವ ಧಾಟಿಯನ್ನು ಅನುಕರಿಸಿ ತುಂಬಿದ ವ್ಯಂಗ್ಯದೊಂದಿಗೆ ಕವಿ ಲೇವಡಿ ಮಾಡುವುದನ್ನು ಬತ್ತದ ಮಾತಿನಲ್ಲಿ ಕಾಣುತ್ತೇವೆ. ಅದಕ್ಕಾಗಿಯೇ ಕವಿ ಮೇಲುವರ್ಗದವರ ಭಾಷೆಯಾದ ಸಂಸ್ಕೃತದ ಶಬ್ದ ಬಳಸಿ ಬತ್ತವನ್ನು 'ವ್ರೀಹಿ' ಎನ್ನುತ್ತಾರೆ. ವ್ರೀಹಿಯು ನರದಲೆಗನಾದ ರಾಗಿಯನ್ನು ಗದರಿಸಿ ಝುಂಕಿಸಿ ನುಡಿಯಿತು 'ಕುಲಹೀನ ನೀನು, ಮತಿಹೀನ ನೀನು' ಎಂದೆನುತ ಖತಿಯಲಿ ಬೈದು ಭಂಗಿಸಿತು.

ಲೋಕದ ಅಧಿಕ ಭೋಜನವಿದೆ
ದಾಕವಾಳರು ಬುಧರು ಜರೆದು ನಿ
ರಾಕರಿಸಿ ಬಿಡಲಂತು ನೀ ಶೂದ್ರಾನ್ನವಾದೆಯಲ
ನಾಕನಿಳೆಯರು ಸಾಕ್ಷಿ ನಿನ್ನ ವಿ
ವೇಕಿಗಳು ಮೆಚ್ಚುವರೆ ಬಾಹಿರ
ಸಾಕು ನಡೆ ನೀನಾವ ಮಾನ್ಯನು ಕಡೆಗೆ ತೊಲಗೆಂದ ॥

ಕ್ಷಿತಿಯಮರರುಪನಯನದಲ್ಲಿ ಸು
ಪ್ರಿತಿ ಸುಭೋಜನಗಳಲ್ಲಿ ಮಂತ್ರಾ
ಕ್ಷತೆಗಳ ಶುಭ ಶೋಭನದಲಾರತಿಯ ಬೆಳಗುವಲಿ
ಕ್ರತುಗಳೆಡೆಯೊಳಗರಮನೆಯಲಿ
ಪ್ರತಿ ದಿನವು ರಂಜಿಸುತ ದೇವರಿ
ಗತಿಶಯದ ನೈವೇದ್ಯ ತಾನೆಹನೆಂದನಾ ವ್ರಿಹಗಗೆ ॥

ಜನಪಂಗೆ ಶಿಶುಗಳಿಗೆ ಬಾಂಧವ
ಜನರಿಡಗೆ ಬ್ರಹ್ಮರ ಸಮಾರಾ
ಧನಗೆ ವಿದ್ಯಾರಂಭ ಕಲಿಸುವ ಸಕಲ ಭೂಸುರರಾ
ಮನೆಗಳಲಿ ಹರಿದಿವಸ ಪೆಪಾ
ಸನಗಳು ತಾ ಯೋಗ್ಯನಹುದಂ
ದೆನಿಸಿಕೊಂಬನು ನೀನಯೋಗ್ಯನು ಭ್ರಷ್ಟ ತೊಲಗೆಂದ ॥

ಕೀರ್ತನೆಗಳಲ್ಲಿ ಸಂಚಾರಿಯಾಗಿ ತೇಲಾಡಿದ ಭಾವಗಳು ಸ್ಥಾಯಿಯಾಗಿ ಗಟ್ಟಿಗೊಂಡು ರಾಮಧಾನ್ಯ ಚರಿತೆಯಲ್ಲಿ ಸಶರೀರಿಯಾಗಿ ನಿಂತಿವೆ. ಇಲ್ಲಿರುವುದು ವಾಸ್ತವ ಜಗತ್ತಿನ ಸಂಘರ್ಷಗಳಿಂದ ಕುದಿಯುವ ಶೀತಲ ಸಮರ. ವ್ರೀಹಿಗೆ ಮೈ ಪರಚಿಕೊಳ್ಳುವಂತಾಗಿದೆ; ರಾಗಿಗೆ ತನ್ನೆದುರಿನಲ್ಲೇ ಗೌರವ ತೋರಿದ್ದು ಗೌತಮ ಮುನಿ ಎಂಬುದು ದೊಡ್ಡ ತೇಜೋವಧೆಯಾಗಿದೆ. ತನ್ನ ಇದುವರೆಗಿನ ಲೋಕ ಮರ್ಯಾದೆ ಎಷ್ಟೆಂಬುದನ್ನೊಮ್ಮೆ ಪಟ್ಟಿಮಾಡಿ ಹೇಳಿಕೊಳ್ಳುತ್ತದೆ. ''ಪರಾಕ್ರಮಿಗಳೂ ಬುಧರೂ ನನ್ನನ್ನು ಒಪ್ಪಿ ನಿನ್ನನ್ನು ನಿರಾಕರಿಸಿದ್ದಾರೆ, ದೇವತೆಗಳೂ ಸಾಕ್ಷಿಯಾಗಿದ್ದಾರೆ. ವಿವೇಕಿಗಳು ರಾಗಿಯನ್ನು ಮೆಚ್ಚಿಲ್ಲ. ಬ್ರಾಹ್ಮಣರು ಉಪನಯನದಲ್ಲಿ, ವ್ರತಾದಿಗಳಲ್ಲಿ ಆರತಿ ಬೆಳಗುವಾಗ, ಯಾಗ ಮಾಡುವಾಗ, ಅರಮನೆಯೊಳಗೆ ಪ್ರತಿದಿನ ರಂಜನೆಗೊಳ್ಳುತ್ತ ದೇವರಿಗೆ ನೇವೇದ್ಯ ಮಾಡುವಾಗ ಹೀಗೆ ಎಲ್ಲೆಲ್ಲೂ ನಾನೇ ಇದ್ದೇನೆ. ರಾಜರಿಗೆ ಮಕ್ಕಳಿಗೆ ನೆಂಟರಿಗೆ ಬ್ರಾಹ್ಮಣರ ಸಮಾರಾಧನೆಗೆ ವಿದ್ಯೆ ಕಲಿಸುವ ಸಮಸ್ತ ಬ್ರಾಹ್ಮಣರ ಮನೆಗಳಲ್ಲಿ ಹರಿದಿನಗಳಲ್ಲಿ ಪೂಜಾದಿಗಳಲ್ಲಿ ನಾನೇ ಯೋಗ್ಯತೆಗೆ ಪಾತ್ರನು. ಎಲೈ ರಾಗಿಯೇ ನೀನು ಬ್ರಾಹ್ಮಣರಿಗೂ, ಪೂಜಾದಿಗಳಿಗೂ ರಾಜರಿಗೂ ದೇವರಿಗೂ ಬೇಡವಾದ, ಯಕಃಶ್ಚಿತ್ತಾದ ಶೂದ್ರಾನ್ನವಾದ, ಅದರಿಂದ ನೀನು ಅಯೋಗ್ಯ ಭ್ರಷ್ಟತೊಲಗು'' ಹೀಗೆ ವಾಚಾಮಗೋಚರವಾಗಿ ಬತ್ತ ಆರ್ಭಟಿಸುತ್ತದೆ. ರಾಗಿ ಕಿಮಕ್ಕೆನ್ನದೆ ತುಟಿ ಹೊಲಿದು ಕೂತಿರುತ್ತದೆ. ಅದರಿಂದ ಇನ್ನೂ ಉದ್ರೇಕಗೊಂಡು ವ್ರೀಹಿ ತನ್ನ ದಾಳಿಯನ್ನು ಬಾಯಿಮಾತಿನ ಡೌಲನ್ನು ಮುಂದುವರಿಸುತ್ತದೆ:

ಹೊಸ ಮನೆಯ ಪುಣ್ಯಾರ್ಚನೆಗೆ
ಪಸುಮಕ್ಕಳ ಸೇವೆಗೆ
ವಸುಮತೀಶರ ಗರುಡಿಯಲಿ ಶಸ್ತ್ರಾಸ್ತ್ರದರ್ಚನೆಗೆ
ಎಸೆವ ವಿಪ್ರರ ಫಾಲದಲಿ ರಂ
ಜಿಸುವ ಗಂಧಾಕ್ಷತೆಯಹೆನು ಭಾ
ವಿಸಲು ಲೋಕದೊಳೆನಗಾರು ಸರಿಯಿಂತೆಂದನಾ ವ್ರಿಹಗ ॥

ಧರಣಿಯಮರರರು ಮಂತ್ರಕಂತ್ರೊಂ
ಚ್ಚರಣೆಯಲಿ ಹಸ್ತಾಂಬುಜದಿ ಮಿಗೆ
ಹರಿಸಿಕೊಡಲಕ್ಷತೆಯ ಮಂಡೆಯೊಳಾಂತ ಮಹಿಮರಿಗೆ
ದುರಿತ ದುಃಖ ವಿನಾಶ ಪುಂಗಳ
ಕರವದು ನಾನೀವ ಸಂತತ
ಸಿರಿಯು ಸಂಪತ್ತಾಯುವನು ಕೇಳೆಂದನಾ ವ್ರಿಹಗ ॥

ಪರಿಮಳದ ಚಂದನದ ತರುಪಿಗೆ
ಸರಿಯೆ ಒಣಗಿದ ಕಾಷ್ಠ ಗೋವುಗಳು
ಕರೆದ ಹಾಲಿಗೆ ಕುರಿಯ ಹಾಲಂತರವೇ ಭಾಪಿಸಲು
ಪರಮ ಸಾಹಸಿ ಪೀರ ಹನುಮಗೆ
ಮರದ ಮೇಲಿಹ ಕಪಿಯು ತಾನಂ
ತರವೇ ಪಡ ನೀನೆನಗೆ ಸರಿಯೆ ತೊಲಗು ಭ್ರಷ್ಟ ನೀನೆಂದ ॥

''ಗೃಹಪ್ರವೇಶೋತ್ಸವದಲ್ಲಿ, ಆಯುಧಪೂಜೆಯಲ್ಲಿ ಬ್ರಾಹ್ಮಣರ ಹಣೆಯಲ್ಲಿ ರಂಜಿಸುವ ಗಂಧಾಕ್ಷತೆಯಾಗಿರುವ ನನಗೆ ಯಾರು ಸರಿಯಾದಾರು. ಬ್ರಾಹ್ಮಣರ ಮಂತ್ರ ತಂತ್ರ ಹೇಳಿ ತಮ್ಮ ಕರಕಮಲಗಳಲ್ಲಿಟ್ಟುಕೊಟ್ಟರೆ ಸಾಕು ಅದನ್ನು ದೊಡ್ಡವರೂ ಅಕ್ಷತೆಯ ಕಾಳೆಂದು ತಲೆಯಲ್ಲಿಟ್ಟುಕೊಳ್ಳುತ್ತಾರೆ. ಸೌರಭದ ಶ್ರೀಗಂಧಕ್ಕೂ ಒಣಗಿದ ಕಟ್ಟಿಗೆಗೂ, ಹಸು ಕರೆದ ಹಾಲಿಗೂ, ಕುರಿಯ ಹಾಲಿಗೂ ಎಲ್ಲಿಂದೆಲ್ಲಿಗೆ? ಮಹಾ ಸಾಹಸಿ ಹನುಮನಿಗೂ ಮರದ ಕೋತಿಗೂ ಸಮವೇ? ಅದರಂತೆ ನನಗೂ ನಿನಗೂ ಸರಿಯೇ? ಭ್ರಷ್ಟರಾಗಿಯೇ ತೊಲಗಿ ಹೋಗು''. ಉತ್ತಮ ಕುಲಕ್ಕೆ ಸೇರಿದವರೆಂಬ ಅಹಮ್ಮಿನಿಂದ ಠೇಂಕಾರೋಕ್ತಿಗಳನ್ನು ಪ್ರೀಹಿ ನುಡಿದು ಪುನಃ ಪುನಃ ನೋಯಿಸಿದಾಗ ರಾಗಿ ಸಿಡಿದು ನಿಲ್ಲುತ್ತದೆ. ಭಕ್ತ ಎಸೆದ ಸವಾಲಿಗೆ ಜವಾಬು ಕೊಡುವ ಪಾಳಿ ಈಗ ತನ್ನದೆಂದು ತೀರ್ಮಾನಿಸುತ್ತದೆ. ಸಭ್ಯತೆಯನ್ನುಲ್ಲಂಘಿಸಿದ ಬತ್ತಕ್ಕೆ ರಾಗಿಯೂ ಕಟುವಾಗಿಯೇ ಸೇರಿಗೆ ಸವ್ವಾಸೇರೆಂಬಂತೆ ಉತ್ತರಿಸುತ್ತದೆ.

ಸತ್ವಹೀನನು ಬಡವರನು ಕ
ಣ್ಣೆತ್ತಿ ನೋಡೆ ಘನಾಢ್ಯರನು ಬೆಂ
ಬತ್ತಿ ನಡೆವ ವುಪೇಕ್ಷೆ ನಿನ್ನದು ಪೇಳಲೇನದನು
ಹೆತ್ತ ಬಾಣಂತಿಯರಿಗೆ ರೋಗಿಗೆ
ಪಥ್ಯ ಪಾನದಿ ಹಣದ ಬಾಯಿಗೆ
ತುತ್ತು ನೀನಹ ನಿನ್ನ ಜನ್ಮ ನಿರರ್ಥಕರವೆಂದ ॥

ಸತ್ತ ದಿನದಾರಭ್ಯ ಮನುಜರು
ಮತ್ತೆ ಕಮಟ ಹೊತ್ತು ಪಿಂಡವ
ನಿತ್ತು ವಾಯಸ ಕುಲವ ಕರಕರದು
ತುತ್ತ ನೀಡುವರು ಎಳ್ಳು ದರ್ಭೆಗೆ
ತೆತ್ತಿಗನನು ನೀನಾದೆ ಕೀರ್ತಿಯ
ಹೊತ್ತುಕೊಂಡೆ ದುರಾತ್ಮ ನಿನ್ನೊಳು ಮಾತದೇಕೆಂದ ॥

ಮಳೆದೆಗೆದು ಬೆಳೆಯಡಗಿ ಕ್ಷಾಮದ
ಪಿಲಯ ಕಾಲದೊಳನ್ನಪಿಲ್ಲದೆ
ಅಳಿವ ಪ್ರಾಣಿಗಳಾದರಿಸಿ ಸಲಹುವೆನು ಜಗವರಿಯೇ
ಎಲವೋ ನೀನೆಲ್ಲಿಹೆಯೋ ನಿನ್ನಯ
ಬಳಗವದು ತಾನೆಲ್ಲಿಹುದು ಈ
ಹಲವು ಹುಲುಧಾನ್ಯ ಸರಿಯೆನಗೆ ಕೇಳೆಂದ ॥

ಬಲ್ಲಿದರು ನೆಲೆ ಬಡವರು ನಿ
ನ್ನಲ್ಲಿಯುಂಟುಪೇಕ್ಷೆ ನಮ್ಮಲಿ
ಸಲ್ಲದೀ ಪರಪಕ್ಷಪಾತವಿಲ್ಲ ಭಾಪಿಸಲೂ
ಬಲ್ಲಿದರು ಬಡವರುಗಳೆನ್ನದೆ
ಎಲ್ಲರನು ರಕ್ಷಿಸುವೆ ನಿರ್ದಯ
ನಲ್ಲಿ ನಾ ನಿನ್ನಂತೆ ಎಲಕುವಿಲಾತ್ಮ ಹೊರಗೆಂದ ॥

''ನೀನು ಸತ್ವಹೀನ, ಬಡವರನ್ನು ಕಣ್ಣೆತ್ತಿ ನೋಡೆ, ಹಣವಂತರ ಬೆನ್ನು ಹಿಡಿಯುವೆ, ಹೆಣದಬಾಯಿಗೆ ನೀನೆ ತುತ್ತು; ಸತ್ತವರಿಗೆ ಪಿಂಡ ಹಾಕಲೂ ನೀನೆ ಸರಿ, ಎಳ್ಳು ದರ್ಭೆಗೆ ನೀನು ಜೋಡಿ; ಮಳೆ ತಪ್ಪಿ ಬೆಳೆ ನಿಂತು ಕ್ಷಾಮ ಬಂದಾಗ ಜೀವಗಳನ್ನು ಉಳಿಸುವವನು ನೀನಲ್ಲ ನಾನು; ಬರಗಾಲ ಬಂದಾಗ ಎಲವೋ ವ್ರೀಹಿ ನೀನೂ ನಿನ್ನ ಬಳಗದವರೂ ಎಲ್ಲಿರುತ್ತೀರಿ? ಬಡವ-ಬಲ್ಲಿದ ಎಂಬ ಪಕ್ಷಪಾತ ನಿನ್ನಲ್ಲಿದೆ. ನನ್ನಲ್ಲಿ ತಾರತಮ್ಯವಿಲ್ಲ. ನೀನು ದಯಾಹೀನ, ಕುಟಿಲಾತ್ಮ, ದುರಾತ್ಮ, ಇಂಥ ನಿನ್ನ ಜನ್ಮ ನಿರರ್ಥಕ'' ಎಂದು ಸಿಡಿಲ ಘರ್ಜನೆಯಂತೆ ಸಭೆಯಲಿ ಜರೆದನಾ ವ್ರೀಹಿಯ.

ಬತ್ತದ ಆಟೋಪದ ಸೊಲ್ಲು ಅಡಗಿಸುವಂತೆ ರಾಗಿ ಬಂಡಾಯದಿಂದ ಗುಡುಗುತ್ತದೆ. ತನ್ನ ಕೀಳರಿಮೆಯನ್ನು(Inferiority complex) ಕೊಡವಿ ನೆಟ್ಟಗೆ ಎದೆ ಚಾಚಿ ನಿಂತ ರಾಗಿಯ ನುಡಿ ಬಿರುಸಾಗಿ, ಒರಟಾಗಿ ರಭಸದಿಂದ ಮೊಳಗಿರುವುದು ನಿಜ. ಅದು ಹಾಗೆ ತನ್ನನ್ನು ತಾನು ದೃಢವಾಗಿ ಆತ್ಮ ಪ್ರತಿಷ್ಠಾಪಿಸಿಕೊಳ್ಳುವುದು, ತನ್ನ ಪಕ್ಷವನ್ನು ಸಮರ್ಥಿಸಿಕೊಳ್ಳುವುದು ಅನಿವಾರ್ಯ ವಾಗಿತ್ತು. ಸಂಭಾಷಣೆ ರೂಪದಲ್ಲಿ ಮುಂದುವರಿದ ಈ ವಾದವಿವಾದಗಳಿಗೆ ಹಿರಿಯರು ತೆರೆಯೆಳೆದು ನಿಲ್ಲಿಸುತ್ತಾರೆ. ಆರು ತಿಂಗಳ ಗಡುವು ಆದಮೇಲೆ ಬಂದೀಖಾನೆಯಿಂದ ಬಿಡುಗಡೆಯಾದಾಗ ರಾಗಿಗೇ ಪಟ್ಟ ಕಟ್ಟಿ ನಾರದ, ಕಪಿಲ, ರಾಮ, ದೇವತೆಗಳು ಎಲ್ಲ ಮುಕ್ತಕಂಠದಿಂದ ಪ್ರಶಂಸಿಸುವಾಗ ತಲೆ ಕೆಳಗೆ ಹಾಕಿ ನೀರಲ್ಲಿ ನಿಂತ ಬತ್ತವನ್ನು ''ಮನದಲಿ ಕರಗಿ ಚಿಂತಿಸಲೇಕೆ'' ಎಂದೂ ''ನೀ ಸುರಧೇನುವಿಗೆ ಸಮ'' ಎಂದೂ ಮೃದಡವಿ ಸುಮ್ಮನಿರಿ ಸುವರು.

ಧಾನ್ಯ ಘರ್ಷಣೆಯ ಒಳಾರ್ಥಗಳು ವಿಶ್ಲೇಷಣೆಯ ನಿಕಷದಲ್ಲಿ ಬೆಳಗುತ್ತಿವೆ. ರಾಗಿ ಬತ್ತಗಳ ಜಗಳದ ನೆಪದಲ್ಲಿ ಕೀಳು ಮೇಲೆಂಬ ಜಾತಿ ಮತಗಳ ಜಗಳವನ್ನೂ ಮನುಷ್ಯ ಸ್ವಭಾವವನ್ನೂ ಸ್ವಾರಸ್ಯಪೂರ್ಣವಾಗಿ, ಪರಿಣಾಮಕಾರಿಯಾಗಿ ಧ್ವನಿಸುವುದರಲ್ಲಿ ಕನಕದಾಸರ ಪ್ರತಿಭೆಯ ಸ್ವಂತಿಕೆ ಜಿನುಗಿದೆ. ರಾಮಧಾನ್ಯ ಚರಿತ್ರೆಯ ಅರ್ಥವಂತಿಕೆಯೆಲ್ಲ ಇರುವುದು ಕಾವ್ಯೇತರವಾದ ಸಾಂಸ್ಕೃತಿಕ ಕಾರಣಗಳಿಗಾಗಿ. ಇಲ್ಲಿರುವುದು ಪಟ್ಟಭದ್ರರ, ಸ್ಥಾಪಿತ ಹಿತಾಸಕ್ತಿಗಳ ಮತ್ತು ಶೋಷಿತ ಬಡಬಗ್ಗರ ನಡುವಣ ವರ್ಗ ಕಲಹ. ವ್ರೀಹಿ (ಬತ್ತ, ನೆಲ್ಲು) ಮೇಲು ವರ್ಗದವರ, ಕುಳಿತು ಉಣ್ಣುವವರ ಪ್ರತಿನಿಧಿ; ರಾಗಿ (ನರೆದಲೆಗ, ರಾಘವ, ರಾಮಧಾನ್ಯ) ಕೆಳವರ್ಗದವರ ದುಡಿಯುವ ಶ್ರಮಿಕರ ಪ್ರತಿನಿಧಿ. ಈ ವರ್ಗ ಸಮರದಲ್ಲಿ ಕವಿ ಯಾರ ಪಕ್ಷ ಎಂಬುದು ಸ್ವಯಂವೇದ್ಯ. ತಮ್ಮಲ್ಲಿರುವ ಹುಳುಕುಗಳನ್ನು ಬಚ್ಚಿಟ್ಟು ಬೇರೆಯವರ ಅರೆಕೊರೆಗಳನ್ನು ಎತ್ತಿ ಹಂಗಿಸುವ ಗುಲಗಂಜಿ ಬುದ್ಧಿಯನ್ನು ಧೂರ್ತತನವನ್ನು ಲೇವಡಿಸಲಾಗಿದೆ. ಹುಟ್ಟುಗುಣ ಸುಟ್ಟರೂ ಹೋಗದೆಂಬಂತೆ ಇತಿಹಾಸದಿಂದ ಯಾವ ಪಾಠವನ್ನೂ ಕಲಿಯದ ಮರೆಯುವ ಜಾತಿಮದಕ್ಕೆ ಕವಿ ಕೊಟ್ಟ ಕೊಡಲಿ ಪೆಟ್ಟು ಇಂದಿಗೂ

ಮುಟ್ಟಿ ನೋಡಿಕೊಳ್ಳುವಂತಿದೆ. ಅಧಿಕಾರ, ಅಕ್ಷರ, ಜಾತಿ, ಹಣ– ಈ ನಾಲ್ಕನ್ನೂ ಗುತ್ತಿಗೆ ಹಿಡಿದ ಪ್ರತಿಗಾಮಿ ಶಕ್ತಿಗಳ ಸಂಕುಚಿತತೆಯನ್ನು ಬಯಲಿಗೆಳೆದ ದೊಡ್ಡ ಕವಿ ಕನಕದಾಸರು. ಜಾತಿಗಳನ್ನೂ ಜನರನ್ನೂ ಹೆಸರಿಸದೆಯೇ ಮಾಡಿರುವ ಈ ಕಲ್ಪನೆ ಮತ್ತು ರೂಪಕದ ಹರಿತ ಇಂದಿಗೂ ಮೊಂಡಾಗಿಲ್ಲದಿರುವುದಕ್ಕೆ ಕಾರಣ ಅದರಲ್ಲಿರುವ ಬಂಡಾಯದ ಸತ್ವ.

ಭಿನ್ನವರ್ಗಗಳ ಹೋರಾಟ ಹೆಪ್ಪುಗಟ್ಟಿ ವರ್ತಮಾನದ ಓದಿಗೂ ಪ್ರಸ್ತುತತೆಯನ್ನು ಸ್ಥಾಪಿಸಿಕೊಂಡಿರುವ ಈ ಕಾವ್ಯದಲ್ಲಿ ವಸ್ತು ಪಾತ್ರ ಕಥೆ ಇವೆಲ್ಲ ಗೌಣ. ಅಲೌಕಿಕತೆಯ ಆವರಣಕ್ಕೆ ಒಗ್ಗಿದ ಕನಕದಾಸರು ಸಾಮಾಜಿಕ ಸಮಸ್ಯೆಗಳಿಂದ ಪಲಾಯನವಾದಕ್ಕೆ (escapism) ಶರಣಾಗದೆ ಮುಖಾಮುಖಿಯಾಗಿ ನಿಂತಿದ್ದು ಗಮನಾರ್ಹ. ಸಮಾಜವಾದಿ ವಾಸ್ತವದೃಷ್ಟಿಯಿಂದಲೂ ಇದನ್ನು ಪರಾಮರ್ಶಿಸಬೇಕು. ಆರ್ಥಿಕ ಶೋಷಣೆಗೊಳಗಾಗಿ ನೊಂದ ಶ್ರಮಜೀವನ ಪರವಾದ ನಿಲುವಿನಿಂದ, ಅಂದರೆ ವಿಶಿಷ್ಟವಾದೊಂದು ಮನಃಸ್ಥಿತಿಯಲ್ಲಿ ರಚಿತವಾದ ಕಾವ್ಯವಾಗಿರುವುದರಿಂದ, ಕವಿ ವರ್ಗ ಸ್ವಭಾವಗಳನ್ನು ಹಿಡಿದು ಕೊಡುವಲ್ಲಿ ಯಶಸ್ವಿಯಾಗಿದ್ದಾರೆ. ಅದರೊಂದಿಗೇನೇ ಈ ಕವಿ, ಸಾಮಾನ್ಯ ಜನರ ಬದುಕಿನ ಜೀವನಾಡಿಯನ್ನೂ ಹಿಡಿದು, ತಾನು ಶೋಷಿತರ ಕಡೆ ನಿಂತಿರುವುದನ್ನು ಘೋಷಿಸಿ ಖಚಿತಪಡಿಸಿದ್ದಾರೆ. ನಮ್ಮ ಕಾಲದ ಕವಿಗಳಿಗೂ ಹೋರಾಟದ ಬಂಡಾಯ ಧ್ವನಿಗಳನ್ನೆತ್ತಲು ಬೇಕಾದ ಬಿತ್ತನೆ ಕೃಷಿಯನ್ನೂ ಮಾಡಿದ್ದಾರೆ. ಅಲ್ಲೊಮ್ಮೆ ಇಲ್ಲೊಮ್ಮೆ ಎಂಬಂತೆ ಮೇಲುವರ್ಗದವರ ಮದೋದ್ಧತ ನಡೆನುಡಿಗಳಿಗೆ ದಿಟ್ಟ ಉತ್ತರಗಳಿಂದ ತಡೆಹಾಕುವ ಪ್ರಸಂಗಗಳಲ್ಲಿ ಮೋಡದ ಸುತ್ತ ಒಮ್ಮೊಮ್ಮೆ ಕಾಣುವ ಬೆಳ್ಳಿಗೆರೆಯ ಅಂಚಿನಂತೆ ಇರಬಹುದು. ಪಂಪಭಾರತದಲ್ಲಿ ದಲಿತರ ಪರವಾಗಿ ಕರ್ಣ ಮಾತಾಡಿದ್ದು ನೆನಪಾಗಬಹುದು. ಶ್ರಮಿಕರ ಪರವಾಗಿ ವಾದಿಸುವ ಕನಕದಾಸ ಕವಿ ಇಂದಿನ ಎಡಕಮ್ಯುನಿಸ್ಟ್ ಪಕ್ಷದ ಅಧ್ಯಕ್ಷರ ಹಾಗೆ ತೋರಬಹುದು. ಮಾರ್ಕ್ಸ್ ಏನಾದರೂ ರಾಮಧಾನ್ಯಚರಿತಕಾವ್ಯ ಓದಿದ್ದರೆ ಕನಕದಾಸರ ಭಕ್ತರಾಗಿ ಶಿಷ್ಯತ್ವ ಸ್ವೀಕರಿಸುತ್ತಿದ್ದರು. ಕನ್ನಡದಲ್ಲಿ ಸಿಗುವ ಏಕೈಕ ಪ್ರಬುದ್ಧ ಪ್ರತಿಭಟನೆಯ ಜನಪರ ಕಾವ್ಯವಾದ ರಾಮಧಾನ್ಯಚರಿತೆ ಇನ್ನೂ ಹೆಚ್ಚಿನ ಸಾಹಿತ್ಯಕ ಸಂವಾದಗಳಿಗೆ ತೆಗೆದುಕೊಳ್ಳಬೇಕಾದ ಸ್ವಾರಸ್ಯಗಳನ್ನು, ಬಂಡಾಯದ ಕೆಂಡಗಳನ್ನು ತುಂಬಿಕೊಂಡಿವೆ.

*ಬಿತ್ತರ, ೧೯೯೮, ಪು. ೬೩-೭೩*

# ೭೦. ವಚನಗಳಲ್ಲಿ ಮಹಿಳಾ ದೃಷ್ಟಿಕೋನ

● ಬಿ. ಎನ್. ಸುಮಿತ್ರಾಬಾಯಿ

೧

ಹನ್ನೆರಡನೆಯ ಶತಮಾನದ ಶಿವಶರಣ ಚಳವಳಿಯು ಅನೇಕ ಸ್ತರಗಳಿಂದ ಸಂಕೀರ್ಣವಾದದ್ದು. ಆಧುನಿಕ ದೃಷ್ಟಿಯಿಂದ ಆ ಚಳುವಳಿಯ ಸಂದರ್ಭವನ್ನು ಅರ್ಥೈಸುವ ಯತ್ನಗಳಲ್ಲಿ ಆ ಯುಗದ ಸಮಾನತೆಯ ಪರಿಕಲ್ಪನೆ, ಜಾತಿ ಮತ್ತು ಲಿಂಗಭೇದಗಳನ್ನು ತೊಡೆಯಲು ಆಗ ನಡೆದ ಯತ್ನ ಮುಂತಾದುವು ಅಧ್ಯಯನಕ್ಕೆ ಅರ್ಹವೆಂದು ಭಾವಿಸಲಾಗುತ್ತದೆ. ವಚನಗಳ ಬಹುಮುಖ್ಯ ಗುರಿ ಭಕ್ತಿ ಮತ್ತು ಶಿವಪಾರಮ್ಯ. ಆ ಗುರಿಯು ಅಂದಿನ ಧಾರ್ಮಿಕ ಮತ್ತು ಆಧ್ಯಾತ್ಮಿಕ ಅವಶ್ಯಕತೆಗಳಿಂದ ಹುಟ್ಟಿದ್ದಂಥಾಗಿದೆ. ಅಂಥ ಆವಶ್ಯಕತೆಯು ಸ್ಫೋಟಿಸಿದ್ದು ಸಮಾಜದ ಆಳುವ ವರ್ಗ, ಪುರೋಹಿತ ವರ್ಗಗಳಲ್ಲಿ ಅಲ್ಲ. ಅವುಗಳಿಗಿಂತ ತೀರ ಭಿನ್ನರಾದ, ಆ ಎರಡೂ ವರ್ಗಗಳು ರೂಢಿಸಿದ್ದ ಬದುಕಿನ ಕ್ರಮದಲ್ಲಿ ಹತ್ತಿಕ್ಕಲ್ಪಟ್ಟಿದ್ದ ವಿವಿಧ ಕೆಳ ಜಾತಿ, ವರ್ಗಗಳ ಜನರಲ್ಲಿ ಇಂಥ ಅವಶ್ಯಕತೆಯ ಸ್ಫೋಟವಾಯಿತು ಎನ್ನುವುದು ಬಹುಮುಖ್ಯ ಸಂಗತಿ. ಯಾವ ಜನರಿಗೆ ದುಡಿಮೆಯು ಸ್ತ್ರೀ-ಪುರುಷರೆಂಬ ಭೇದವಿಲ್ಲದೆ, ಬದುಕಿನ ಅನಿವಾರ್ಯ ಕ್ರಿಯೆಯಾಗಿತ್ತೋ ಅಂಥ ಜನರು ಒಟ್ಟಾಗಿ ನಡೆಸಿದ ಧಾರ್ಮಿಕ ಸಾಮಾಜಿಕ ಆಧ್ಯಾತ್ಮಿಕ ಹೋರಾಟ ಅದಾಗಿತ್ತು. ಆ ಚಳುವಳಿಯ ನೇತೃತ್ವವನ್ನು ಬಸವಣ್ಣನಂಥ ಉಚ್ಚ ಕುಲದ ರಾಜಸೇವಾಸಕ್ತ ವ್ಯಕ್ತಿಯೇ ವಹಿಸಿರಬಹುದು. ಆದರೆ ಅಂದಿನ ಇಡೀ ಸಾಂಸ್ಕೃತಿಕ ಪರಿಸರವು ಆತನನ್ನು ನಾಯಕನನ್ನಾಗಿ ರೂಪಿಸಿ, ಸ್ವೀಕರಿಸುವಂಥ ಶಕ್ತಿ ಹಾಗೂ ಒತ್ತಡಗಳನ್ನು ಹೊಂದಿತ್ತು.

ಆ ರೀತಿಯ ಚಳುವಳಿಯನ್ನು ಕಟ್ಟುವಲ್ಲಿ ಶೂದ್ರರು ಮತ್ತು ಸ್ತ್ರೀಯರು ಮುಖ್ಯ ಪಾತ್ರ ವಹಿಸಿದ್ದರಿಂದಾಗಿ ಅವರನ್ನು ನಿಕೃಷ್ಟವಾಗಿ ಕಾಣುತ್ತಿದ್ದ ಪರಂಪರಾಗತ ವ್ಯವಸ್ಥೆಗೆ ವಿರುದ್ಧವಾಗಿ ಅವರನ್ನು ಸಮಾನರೆಂದು ಎತ್ತಿಹಿಡಿಯುವುದು ಶಿವಶರಣರಿಗೆ ಅನಿವಾರ್ಯವಾಗಿರಬೇಕು. ಆದ್ದರಿಂದ ಸ್ತ್ರೀ-ಶೂದ್ರರನ್ನೂ ಸರಿಸಮಾನರೆಂದು ನೋಡುವಂಥ, ಕಾಯಕತತ್ವಕ್ಕೆ ಆದ್ಯತೆ ನೀಡಿದಂಥ ಬದುಕಿನ ಕ್ರಮವೊಂದು ಆಗ ಹುಟ್ಟಿ ಬಂದಿದ್ದರೆ, ಅದರ ಮೂಲ ಆಗಿನ ಜನ ಸಮುದಾಯದಲ್ಲೇ ಇದೆ. ಆದ್ದರಿಂದಲೇ ಕನ್ನಡ ಸಾಹಿತ್ಯ ಪರಂಪರೆಯಲ್ಲೇ ಮೊಟ್ಟಮೊದಲ ಬಾರಿಗೆ ಮಹಿಳೆಯರ ನಿಟ್ಟಿನಿಂದ, ಅವರ ಹಿತವನ್ನು ಕೋರುವಂಥ ವಿಚಾರಗಳು ಗಮನಾರ್ಹ ಪ್ರಮಾಣದಲ್ಲಿ ಕಂಡುಬಂದಿರುವುದು ವಚನ ಯುಗದಲ್ಲಿಯೇ ಎಂಬುದು ಅಚ್ಚರಿಯ ವಿಷಯವಾಗಬೇಕಿಲ್ಲ. ಅಂದಿನ ಭಕ್ತಿಪ್ರಧಾನ ಆಂದೋಲನದಲ್ಲಿ ಸ್ತ್ರೀಯರ ವ್ಯಕ್ತಿತ್ವಗಳ ಬಿಡುಗಡೆಗೆ ನೆರವಾದಂಥ ವಿಚಾರಗಳು ಹುಟ್ಟಿರುವುದಕ್ಕೂ, ದುಡಿಯುವ ವರ್ಗದ ಮಹಿಳೆಯರು ಆ ಚಳುವಳಿಯಲ್ಲಿ ಪಾಲ್ಗೊಂಡಿರುವುದಕ್ಕೂ ನಿಕಟವಾದ ಸಂಬಂಧವಿದೆ. ಈ ರೀತಿಯ ಪಾಲ್ಗೊಳ್ಳುವಿಕೆ ಮತ್ತು ಸ್ತ್ರೀಯರು ಸಾಮಾಜಿಕವಾಗಿ ನಿರ್ಣಾಯಕ ಪಾತ್ರ ವಹಿಸುವುದು ಆ ಚಳುವಳಿಯ ಜೊತೆಗೇ ಮಾಯವಾಯಿತು ಎಂಬುದೂ ಗಮನಾರ್ಹ.

ಸಾಮಾನ್ಯವಾಗಿ ನಾವು ವಚನಗಳಲ್ಲಿ ಕಾಣಸಿಗುವ ಸ್ತ್ರೀ ಪ್ರಗತಿಗೆ ಸೂಚಕವೆನ್ನಬಹುದಾದ

ಎಲ್ಲಾ ವಿಚಾರ, ಧೋರಣೆ; ಮುಂತಾದುವನ್ನು ಶಿವಶರಣರು ತಮ್ಮ ನಾಯಕತ್ವದ ನೆಲೆಯಿಂದ ಕೆಳಗಿನ ನೆಲೆಯಲ್ಲಿದ್ದ ಸ್ತ್ರೀಯರತ್ತ ಹರಿಸಿದ ಅನುಗ್ರಹದ ಹಾಗೆ ಕಾಣುತ್ತ ಬಂದಿದ್ದೇವೆ. ಮಹಿಳೆಯರು ಈ ಅನುಗ್ರಹವನ್ನು ಪಡೆಯುವ, ಉದ್ಧಾರಗೊಳ್ಳುವ ನೆಲೆಗಳಲ್ಲೇ ಇದ್ದರೆಂದೂ ನಂಬುತ್ತಾ ಬಂದಿದ್ದೇವೆ. ಕೊಡುವ ಮತ್ತು ಪಡೆದುಕೊಳ್ಳುವವರ ಈ ಪಾತ್ರಗಳನ್ನು ಕೊಂಚ ಅದಲು ಬದಲು ಮಾಡಿ ನೋಡಿದಲ್ಲಿ ಶಿವಶರಣ ಚಳವಳಿಯ ಸ್ವರೂಪ ಹೇಗೆ ತೋರ ಬಹುದು? ಸ್ತ್ರೀಯರ ಪ್ರವೇಶ, ಅವರ ಇರುವಿಕೆಗಳಿಂದಾಗಿ ಅವರ ಬಗೆಗಿನ ಚಿಂತನೆ, ಧೋರಣೆಗಳನ್ನು ಶರಣಚಿಂತಕರೂ ಮತ್ತೆ ಭಿನ್ನರೂಪದಲ್ಲಿ ಕಟ್ಟಿ ಕೊಡಬೇಕಾಗಿ ಬಂದಿರ ಲಾರದೆ? ಸ್ತ್ರೀಯರಿಗೂ ಶೂದ್ರರಿಗೂ ಆಧ್ಯಾತ್ಮಿಕ ನೆಲೆಯಿಂದ ಮೋಕ್ಷದ ಸಮಾನ ಅವಕಾಶ ವನ್ನು ತೆರೆದಿಡಲಾಯಿತು ಎಂಬುದರ ಹಿಂದೆ ಹಾಗೆ ತೆರೆದಿಡುವುದು ಆ ಚಳವಳಿಗೆ ಅವಶ್ಯಕವೂ ಆಗಿತ್ತು ಎಂಬುದೂ ಇರಲಾರದೆ?

ಸಂಖ್ಯಾ ಪ್ರಮಾಣ ಶಿವಶರಣರದೇ ಹೆಚ್ಚು. ಅವರಿದ್ದದ್ದು ಪುರುಷಪ್ರಧಾನ ವ್ಯವಸ್ಥೆಯಲ್ಲಿ. ಆದ್ದರಿಂದ ಹೊಸದಾದ ಮಹಿಳಾಪರ ವಿಚಾರಗಳನ್ನು ಸ್ಪಷ್ಟವಾಗಿ, ಪ್ರಬಲವಾಗಿ ಎತ್ತಿ ಹೇಳಿರುವುದು ಶರಣರ ವಚನಗಳಲ್ಲೇ ಹೆಚ್ಚಾಗಿ ದಾಖಲಾಗಿದೆ. ಮಹಿಳೆಯರು ಅಲ್ಪ ಪ್ರಮಾಣದಲ್ಲಾದರೂ ಆ ಯುಗದ ವಿಚಾರಗಳಿಗೆ ತಮ್ಮ ಅನುಭವದ ನೆಲೆಯಿಂದ ಕಾಣಿಕೆ ನೀಡಿದ್ದಾರೆಂಬುದನ್ನು ಮರೆಯುವಂತಿಲ್ಲ. ಆದ್ದರಿಂದ ಶಿವಶರಣ ಚಳುವಳಿಯ ಚಾರಿತ್ರಿಕ ಘಟ್ಟದ ಸಾಂಸ್ಕೃತಿಕ ಪರಿಸರದಲ್ಲಿ ಸ್ತ್ರೀಯರ ಹಿತವನ್ನು ಒಳಗೊಳ್ಳುವಂಥ ದೃಷ್ಟಿಕೋನವೊಂದು ಹುಟ್ಟಿದರೆ, ಅದಕ್ಕೆ ಅಂದಿನ ಇತರ ಒತ್ತಡಗಳ ಜೊತೆಯಲ್ಲಿ ಸ್ತ್ರೀಯರ ಇರುವು, ಸಾಧನೆ ಚಿಂತನೆಗಳೂ ಕಾರಣವಾಗಿರಬೇಕು. ಜಗತ್ತಿನ ಯಾವ ಸಾಂಸ್ಕೃತಿಕ ಬೆಳವಣಿಗೆಯೂ, ಯಾವ ಚರಿತ್ರೆಯೂ ಸ್ತ್ರೀಯರ ಕಾಣಿಕೆಗಳಿಂದ ದೂರ ಉಳಿದಿರುವುದು ಅಸಾಧ್ಯ. ಅದರಲ್ಲೂ ಅಚ್ಚಗನ್ನಡ ಸಂಸ್ಕೃತಿಯ ಪ್ರತೀಕವೆಂದು ಭಾವಿಸಲಾಗುವ ವಚನ ಸಾಹಿತ್ಯದೊಳಗೆ 'ಮಹಿಳಾ ದೃಷ್ಟಿಕೋನ' ಎನ್ನುವಂಥ ಪಾಶ್ಚಿಮಾತ್ಯ ಸ್ತ್ರೀವಾದಿ ತತ್ವವೊಂದನ್ನು ನಾವು ಹುಡುಕಲು ಹೊರಡು ವುದಾದರೆ, ಆ ದೃಷ್ಟಿಕೋನದ ಮೂಲದಲ್ಲಿ ಧರ್ಮಾಪೇಕ್ಷಿತವಾದ, ಪಾರಲೌಕಿಕವಾದ ಗುರಿಯುಳ್ಳ ಸ್ತ್ರೀ ಸಮುದಾಯವಿತ್ತೆಂಬುದನ್ನು ನೆನೆದುಕೊಂಡೇ ಮುಂದೆ ಸಾಗಬೇಕು. ಹೀಗಾಗಿ ವಚನ ಸಾಹಿತ್ಯದಲ್ಲಿ ನಾವು ಕಾಣುವಂಥ ಮಹಿಳಾ ದೃಷ್ಟಿಕೋನ ಎನ್ನುವುದು ಮಹಿಳೆಯರ ನಿಟ್ಟಿನಿಂದ ಅಂದಿನ ಮಹಿಳೆಯರೂ ಪುರುಷರೂ ನಡೆಸಿದ ಚಿಂತನೆಯ ಒಟ್ಟು ಸ್ವರೂಪವನ್ನು ಹೇಳುತ್ತಿರುತ್ತದೆ.

೨

ಶಿವಭಕ್ತರೆಲ್ಲ ಸಮಾನರು ಎಂದು ನೋಡುವ, ಹೊಸಬಗೆಯ ಆಚಾರ, ನೀತಿಗಳನ್ನು ರೂಢಿಸಿಕೊಂಡ ಸಮಾಜವೊಂದನ್ನು ಶಿವಶರಣ-ಶರಣೆಯರು ಕಟ್ಟಲು ಯತ್ನಿಸಿದ್ದರು. ಆದರೆ ಅದುವರೆಗಿನ ಸಾಮಾಜಿಕ ವ್ಯವಸ್ಥೆಯಲ್ಲಿದ್ದ ರಾಜಸತ್ತೆ ಮತ್ತು ವರ್ಣವ್ಯವಸ್ಥೆ ಹಾಗೆಯೇ ಲಿಂಗತಾರತಮ್ಯ ಕೂಡ ಈ ಹೊಸ ಸಮಾಜದ ನಿರ್ಮಾಣಕ್ಕೆ ಅಡ್ಡಿಯಾಗಿದ್ದವು. ಇದನ್ನು ಅಂದಿನ ಶರಣರು ಗುರುತಿಸಿದ್ದರು. ಭಕ್ತ ಸಮುದಾಯದ ವಿಸ್ತರಣೆ ಇಂಥ ತೊಡಕುಗಳ ನಿವಾರಣೆಯಿಂದ ಮಾತ್ರ ಸಾಧ್ಯವಿತ್ತು. ಆದ್ದರಿಂದ ತಮ್ಮ ಧಾರ್ಮಿಕ, ಆಧ್ಯಾತ್ಮಿಕ ಅಗತ್ಯಕ್ಕೆ ಹೊಂದಿಕೊಳ್ಳುವಷ್ಟರ ಮಟ್ಟಿಗಿನ ಸಾಮಾಜಿಕ ರೀತಿ ರಿವಾಜುಗಳನ್ನೂ ನಂಬಿಕೆಗಳನ್ನೂ ತಿದ್ದಲು

ಅವರು ಪ್ರಯತ್ನಿಸಿದ್ದರು. ಅನಿಷ್ಟಕರವಾದ ಅವಹೇಳನಕರವಾದ ಎಷ್ಟೋ ಸಂಗತಿಗಳನ್ನು ತೊಡೆದುಹಾಕಲು ಕ್ರಿಯಾತ್ಮಕವಾಗಿ ಶಿವಶರಣರು ಮುಂದಾಗಿದ್ದರಿಂದಲೇ ಅವರ ಪಾರಮಾರ್ಥಿಕ ಸಮಾನತೆಯ ಪರಿಕಲ್ಪನೆ ಅರ್ಥಪಡೆಯಲು ಸಾಧ್ಯವಾಯಿತು. ಶಿವಭಕ್ತರ ಸಮಾಜವನ್ನು ಕಟ್ಟುವ, ಶಿವಪಾರಮ್ಯವನ್ನು ಎತ್ತಿ ಹಿಡಿಯುವ ಅಗತ್ಯದ ಆಚೆಗೆ, ಅದಕ್ಕೆ ಹೊಂದಲಾರದಂಥ ಎಷ್ಟೋ ಬಗೆಯ ಸಾಮಾಜಿಕ ಸಮಸ್ಯೆಗಳು ಸ್ತ್ರೀಯರನ್ನೂ ಶೂದ್ರರನ್ನೂ ಆವರಿಸಿರಬಹುದು. ಆದರೆ ಅಂಥ ಪರಿಧಿಯಾಚೆಗಿನ ಪರಿಸ್ಥಿತಿಗಳತ್ತ ಆ ಯುಗದ ಚಿಂತನೆ ನಡೆದದ್ದು ಕಾಣದು.

ಈ ಮಿತಿಯನ್ನು ದೃಷ್ಟಿಯಲ್ಲಿಟ್ಟುಕೊಂಡು ಮಹಿಳೆಯರಿಗೆ ಸಂಬಂಧಪಟ್ಟಂತೆ ವಚನಗಳಲ್ಲಿ ವ್ಯಕ್ತವಾಗಿರುವ ಕೆಲವು ಮುಖ್ಯ ತಾತ್ವಿಕ ಧೋರಣೆಗಳನ್ನು ಗಮನಿಸಬಹುದು. ಈ ಧೋರಣೆಗಳನ್ನು ಮುಖ್ಯವಾಗಿ ಮೂರು ವಿಭಾಗಗಳಡಿಯಲ್ಲಿ ಗುರುತಿಸಲು ಯತ್ನಿಸಬಹುದು.

೧. ಆಧ್ಯಾತ್ಮಿಕ ನೆಲೆಯಿಂದ ಸ್ತ್ರೀ-ಪುರುಷರ ನಡುವಿನ ಭೇದವನ್ನು ನಿರಾಕರಿಸುವ ದೃಷ್ಟಿ.

೨. ಧಾರ್ಮಿಕ ಬದುಕಿನ ಅಗತ್ಯಕ್ಕಾಗಿ ಪತಿ-ಪತ್ನಿಯರಿಗೆ ಸಮಾನ ಧರ್ಮ ಅಗತ್ಯವೆಂದು ಸಾರುವ ದೃಷ್ಟಿ.

೩. ವಿರಕ್ತ ಧರ್ಮದ ಪರಿತ್ಯಾಗದೃಷ್ಟಿಯನ್ನು ಪರಿಷ್ಕರಿಸಿ, ಲೌಕಿಕ ಬದುಕನ್ನು ಮಾನ್ಯ ಮಾಡುವ ವಿಚಾರಗಳು.

೧. ಸ್ತ್ರೀ-ಪುರುಷರನ್ನು ಆತ್ಮದ ನೆಲೆಯಿಂದ ಸಮಾನರೆಂದು ನೋಡುವ ವಿಚಾರಗಳನ್ನು ಕೆಲವು ವಚನಕಾರರು ಪ್ರತಿಪಾದಿಸಿದ್ದಾರೆ. ಜೇಡರ ದಾಸಿಮಯ್ಯ, ಆದಯ್ಯ, ಗೊಗ್ಗವ್ವೆ, ಸತ್ಯಕ್ಕ, ಆಯ್ದಕ್ಕಿ ಲಕ್ಕಮ್ಮ, ಮುಂತಾದವರು ಹೆಣ್ಣು-ಗಂಡನ್ನು ಕುರಿತಂತೆ ಒಂದು ಸೂತ್ರಪ್ರಾಯವಾದ ತತ್ವವನ್ನು ಪ್ರಕಟಿಸಿದ್ದಾರೆ. ಇವರ ನಡುವೆ ಅಲ್ಪಸ್ವಲ್ಪ ವ್ಯತ್ಯಾಸಗಳು, ಕೆಲವು ವಿವರಣೆಗಳು, ವಿಸ್ತರಣೆಗಳು ಇದ್ದರೂ, ಇವರೆಲ್ಲರ ವಿಚಾರಗಳನ್ನು ಜೇಡರ ದಾಸಿಮಯ್ಯನ ಈ ವಚನವು ಪ್ರತಿನಿಧಿಸುತ್ತದೆ ಎನ್ನಬಹುದು.

ಮೊಲೆ ಮುಡಿ ಬಂದರೆ ಹೆಣ್ಣೆಂಬರು
ಗಡ್ಡ ಮೀಸೆ ಬಂದರೆ ಗಂಡೆಂಬರು
ಒಳಗೆ ಸುಳಿವಾತ್ಮನು ಗಂಡೂ ಅಲ್ಲ
ಹೆಣ್ಣೂ ಅಲ್ಲ ಕಾಣಾ ರಾಮನಾಥಾ ॥ (ವ. ಸಾ. ಸಂಗ್ರಹ, ಪು. ೩೪೬)

ಬಹುವಾಗಿ ಚರ್ಚೆ, ವಿಮರ್ಶೆಗೆ ಸಂದಿರುವ ವಚನವಿದು. ಇಲ್ಲಿ ಹೊಸದಾಗಿ ಗಮನಿಸಬಹುದಾದ ಅಂಶವೆಂದರೆ ಕೊನೆಗೆ ಬರುವ 'ಕಾಣಾ' ಎಂಬ ಪದ. ಒಳಗೆ ಸುಳಿವಾತ್ಮನು ಹೆಣ್ಣೂ ಅಲ್ಲ, ಗಂಡೂ ಅಲ್ಲ ಎನ್ನುವುದು ಒಂದು ನಿರ್ದಿಷ್ಟ ರೀತಿಯ 'ಕಾಣು'ವಿಕೆಗೆ ಒಗ್ಗುವ ಅರಿವಾಗಿದೆ. ಅಂಥ 'ಕಾಣ್ಕೆ'ಯ ನೆಲೆಯಲ್ಲಿ ನಿಂತು ನೋಡಿದರಷ್ಟೇ ಮೊಲೆ, ಮುಡಿ, ಗಡ್ಡ, ಮೀಸೆ ಮುಂತಾದ ಶರೀರಜನ್ಯವಾದ, ರೂಢಿಯಿಂದ ಬಂದಿರುವ ವ್ಯತ್ಯಾಸಗಳು ಅರ್ಥಹೀನವಾಗಬಲ್ಲವು.

ಗಂಡು ಹೆಣ್ಣಿನ ನಡುವಿನ ಈ ವ್ಯತ್ಯಾಸವನ್ನು ಕೇವಲ ಹೊರಗಿನದೆಂದು ಶಿವಶರಣರು ತಿರಸ್ಕರಿಸುತ್ತಾರೆ. ಶಿವಶರಣೆಯರು ದಾಸಿಮಯ್ಯನ ಪದಗಳನ್ನೇ ಅನುಸರಿಸಿದರೂ ಅದರ

ಅರ್ಥವನ್ನು ವಿವರಿಸಲು ಯತ್ನಿಸುವಂತೆ ತೋರುತ್ತದೆ. ''ಈ ಉಭಯದ ಜ್ಞಾನ ಹೆಣ್ಣೋ ಗಂಡೋ?'' ಎಂದು ಗೊಗ್ಗವ್ವೆ ಪ್ರಶ್ನಿಸುತ್ತಾಳೆ. (ಶಿ.ಶ. ವ. ಪು. ೮೯). ಸತ್ಯಕ್ಕ ಈ ಹೊರಚಿಹ್ನೆಗಳು ಒಳಗಿನ ಸತ್ಯಕ್ಕೆ ಪ್ರಮಾಣವಲ್ಲವೆಂದೂ, ಈ ಬಾಹ್ಯ ವ್ಯತ್ಯಾಸಗಳೆಲ್ಲ ಕೇವಲ 'ಜಗದ ಹಾಹೆ; ಬಲ್ಲವರ ನೀತಿಯಲ್ಲ'ವೆಂದೂ ವಿವರಿಸುತ್ತಾಳೆ. ಒಳಗಿನ ಸತ್ವವು ಇಂಥ ಹೊರ ವ್ಯತ್ಯಾಸಗಳಿಗೆ ಮೀರಿದ್ದೆಂದು ''ಏತರ ಹಣ್ಣಾದಡೂ ಮಧುರವೆ ಕಾರಣ'' ಎನ್ನುತ್ತಾಳೆ. (ಶಿ.ಶ. ವ. ಪು. ೭೪) ''ಮಡದಿಯ ಪ್ರಾಣಕ್ಕೆ ಮೊಲೆ ಮುಡಿ ಬಂದಿತ್ತೆ?'' ಎಂಬ ವಚನದಲ್ಲಿ (ವ.ಸಾ. ಸಂ. ಪು. ೩೪೬) ದಾಸಿಮಯ್ಯನು ಮೊಲೆ ಮುಡಿಯಂಥ ವ್ಯತ್ಯಾಸಗಳನ್ನು ಒಡೆಯರ ಯಜ್ಞೋಪವೀತ, ಅಂತ್ಯಜನ ಕೈಯ ಕೋಲುಗಳಷ್ಟು ಬಾಹ್ಯವೆಂದು ಸೂಚಿಸಿ, ಜಾತಿಗಳ ಮೇಲು-ಕೀಳುಗಳನ್ನೂ ಹೆಣ್ಣು-ಗಂಡೆಂಬ ಭೇದದಂತೆಯೇ ಅರ್ಥಹೀನವೆಂದು ಸೂಚಿಸುತ್ತಾನೆ. ಪ್ರಾಣವು ಎಲ್ಲರಿಗೂ ಸಮಾನವೆನ್ನುತ್ತಾನೆ. ದಾಸಿಮಯ್ಯ, ಆದಯ್ಯರಲ್ಲಿ ಕಾಣಿಸುವ ಇಂಥ ಸೂತ್ರಪ್ರಾಯವಾದ ಚಿಂತನೆಯನ್ನು ಎಲ್ಲಾ ವಚನಕಾರರೂ ಸ್ಪಷ್ಟವಾಗಿ ಹೇಳಿಲ್ಲ. ಆದರೆ ಶಿವಶರಣೆಯರು ಈ ವಿಚಾರವನ್ನು ಹೆಚ್ಚಾಗಿ ತಮ್ಮದನ್ನಾಗಿಸಿಕೊಂಡಿದ್ದಾರೆ. ಅಕ್ಕಮಹಾದೇವಿ, ನೀಲಲೋಚನೆ, ಆಯ್ದಕ್ಕಿ ಲಕ್ಕಮ್ಮ ಮೊದಲಾಗಿ ಹೆಣ್ಣು-ಗಂಡು ಎಂಬ ಉಭಯದ ಅರಿವನ್ನು ಮೀರಿದ ನೆಲೆ ತಮ್ಮದೆಂದು ಮತ್ತೆ ಮತ್ತೆ ಹೇಳುವುದನ್ನು ಕಾಣುತ್ತೇವೆ :

ಹೆಣ್ಣು ಹೆಣ್ಣಾದೊಡೆ ಗಂಡಿನ ಸೂತಕ
ಗಂಡು ಗಂಡಾದೊಡೆ ಹೆಣ್ಣಿನ ಸೂತಕ
ಮನದ ಸೂತಕ ಹಿಂಗಿದೊಡೆ
ತನುವಿನ ಸೂತಕಕ್ಕೆ ತೆರಹುಂಟೆ ಅಯ್ಯ
ಮೊದಲಿಲ್ಲದ ಸೂತಕಕ್ಕೆ ಮರುಳಾಯಿತ್ತು ಜಗವೆಲ್ಲ
ಎನ್ನ ದೇವ ಚೆನ್ನಮಲ್ಲಿಕಾರ್ಜುನಯ್ಯನೆಂಬ
ಗುರುವಂಗೆ ಜಗವೆಲ್ಲಾ ಹೆಣ್ಣು ನೋಡಾ ॥ (ಅಕ್ಕನ ವಚನಗಳು, ಪು. ೧೪೩)

ಹೆಣ್ಣು ಗಂಡುಗಳ ನಡುವಿನ ಸಮಾನ ಶಕ್ತಿಯೊಂದನ್ನು ಆತ್ಮ, ಪ್ರಾಣ, ಜ್ಞಾನ, ಅರಿವುಗಳೆಂಬ ಪದಗಳಿಂದ ಸೂಚಿಸುವ ಶಿವಶರಣ ಶರಣೆಯರ, ಅಂಥದೊಂದು ನಿರ್ಲಿಂಗೀಯ ನೆಲೆಯಿಂದ ಶರೀರಜನ್ಯ ವ್ಯತ್ಯಾಸಗಳನ್ನು ಅರ್ಥಹೀನವೆಂದು ನಿರಾಕರಿಸುತ್ತಾರೆ. ಆದರೆ ಅಕ್ಕಮಹಾದೇವಿಯ ಈ ವಚನದಲ್ಲಿ ತಾವು ಹೆಣ್ಣು ಅಥವಾ ಗಂಡು ಎಂಬ ಅರಿವು ಇರುವುದೇ ಸೂತಕ, ತನುವಿನ ಬಗ್ಗೆ ಮನದಲ್ಲಿ ತುಂಬಿಟ್ಟುಕೊಂಡ ಹೊಲೆ ಅದು.

ಆದ್ದರಿಂದ ಮೊದಲು ಈ ಮನದ ಭಾವನೆಯನ್ನು ಮೀರಲು ಸಾಧ್ಯವಾಗಬೇಕು. ಈ ರೀತಿ ತನ್ನನ್ನು ಮೀರಲು ವಿಶೇಷ ಅರಿವು ಅಗತ್ಯ. ಆ ಅರಿವು 'ಚೆನ್ನಮಲ್ಲಿಕಾರ್ಜುನನ ಎದುರಲ್ಲಿ ಜಗವೆಲ್ಲಾ ಹೆಣ್ಣು' ಎಂಬುದೇ ಆಗಿದೆ.

ಸೃಷ್ಟಿ ಮತ್ತು ಸೃಷ್ಟಿಕರ್ತನ ಬಗ್ಗೆ ಶಿವಶರಣರು ಹೊಂದಿದ್ದ ಗಾಢವಾದ ತಾತ್ವಿಕ ನಂಬಿಕೆಯು ಶಿವನೊಬ್ಬನೇ ಕರ್ತೃ, ಒಬ್ಬನೇ ಪುರುಷ, ಅವನ (ಕ್ರಿಯೆಯಾದ) ಸೃಷ್ಟಿಯೆಲ್ಲವೂ ಹೆಣ್ಣಿನ ರೂಪದ್ದೆಂದು ಭಾವಿಸುತ್ತದೆ. ಈ ನಂಬಿಕೆಯ ಪ್ರಕಾರ ಸೃಷ್ಟಿಯಲ್ಲಿರುವ ಪುರುಷನೂ ದೇವನ ದೃಷ್ಟಿಯಿಂದ ಹೆಣ್ಣೇ. ಆದ್ದರಿಂದ ಹೆಣ್ಣು-ಗಂಡು ಎಂಬ ಲೌಕಿಕ ಪರಿಕಲ್ಪನೆಗಳು ಸಹಜವಾಗಿ ಅರ್ಥ ಕಳೆದುಕೊಳ್ಳುತ್ತವೆ. ಇದೇ ನಿರ್ಲಿಂಗೀಯ ನೆಲೆಯಿಂದ ಅಕ್ಕಮಹಾದೇವಿ ಲೋಕದ ಗಂಡರ ಸಂಬಂಧವನ್ನು ನಿರಾಕರಿಸುತ್ತಾಳೆ. ತನ್ನನ್ನು ಹೆಣ್ಣೆಂದು

ಕಾಮಭಾವನೆಯಿಂದ ನೋಡುವ, ಕಾಡುವ ಜನರಿಗೆ ತಿಳಿಹೇಳುತ್ತಾಳೆ:

ಬಟ್ಟಿಹ ಮೊಲೆಯ, ಭರದ ಜವ್ವನದ, ಚೆಲುವ ಕಂಡು ಬಂದಿರಣ್ಣಾ
ಅಣ್ಣಾ, ನಾನು ಹೆಂಗೂಸಲ್ಲ! ಅಣ್ಣಾ, ನಾನು ಸೂಳೆಯಲ್ಲ!
ಅಣ್ಣಾ, ಮತ್ತೆ ನನ್ನ ಕಂಡು ಕಂಡು ಆರೆಂದು ಬಂದಿರಣ್ಣಾ?
ಚೆನ್ನಮಲ್ಲಿಕಾರ್ಜುನನಲ್ಲದ ಮಿಕ್ಕಿನ ಪುರುಷನು
ನಮಗಾಗದ ಮೋರೆ ನೋಡಣ್ಣಾ ॥ (ಅ. ವ., ಪು. ೧೭೬)

ಶಿವನಿಗೆ ಒಲಿದವಳಾದ್ದರಿಂದ ಬೇರೆ ಪುರುಷರ ಮೋರೆಯನ್ನೂ ನೋಡಬಯಸದ ಸಾಧ್ವಿ ತಾನು. ಆದ್ದರಿಂದ 'ಸೂಳೆ'ಯಲ್ಲ ಎಂದು ಹೇಳುವಲ್ಲಿ ಪಾತಿವ್ರತ್ಯದ ದೈವೀಕೃತ ಅರ್ಥವು ಸೂಚಿತವಾಗುತ್ತದೆ. ಅದೇ ಸಾಮಾನ್ಯ ಲೌಕಿಕಸ್ತರದಲ್ಲಿ ತಾನು ಹೆಂಗೂಸಲ್ಲ, ಹೆಣ್ಣೆಂಬ ಅರಿವನ್ನು ಮೀರಿದವಳು. ಆದ್ದರಿಂದ ತನ್ನನ್ನು ಹಾಗೆ ಕಾಣುವುದು ವ್ಯರ್ಥ ಎಂದು ಆಕೆ ಆಗ್ರಹದಿಂದ ಹೇಳುತ್ತಿದ್ದಾಳೆ. ಇಷ್ಟೆಲ್ಲ ಜಿಜ್ಞಾಸೆಯ ಒಳನೆಲೆಯಲ್ಲಿ, ಹೆಣ್ಣನ್ನೂ ಕೇವಲ ಶರೀರದ ನೆಲೆಯಿಂದ ಭೋಗವಸ್ತುವೆಂದು ನೋಡುವುದರ ವಿರುದ್ಧವಾದ ತಾತ್ವಿಕ ಪ್ರತಿಭಟನೆಯೂ ಸೇರಿದೆ, ಇಲ್ಲಿ ವ್ಯಕ್ತವಾಗಿರುವ ಚಿಂತನೆಯ ಸೂಕ್ಷ್ಮತೆ, ವಿಸ್ತಾರ ಹಾಗೂ ಸಂಕೀರ್ಣತೆ, ವೈಯಕ್ತಿಕ ನೋವಿನ ಅನುಭವದ ನೆಲೆಯಿಂದ ಅದಕ್ಕೆ ದೊರೆತಿರುವ ತೀವ್ರತೆಗಳು ಗಮನಾರ್ಹ.

ಹೆಣ್ತನದ ಅರಿವನ್ನು, ದೇಹದ ಅಭಿಮಾನದ ಗೊಡವೆಯನ್ನು ಮೀರಿ ನಿಲ್ಲಬಲ್ಲ ಸಾಮರ್ಥ್ಯ ಅಷ್ಟು ಸುಲಭವಾಗಿ ಬರುವಂಥದೂ ಅಲ್ಲ. ನಿಷ್ಠೂರವಾದ ಸನ್ಯಾಸದ ದಾರಿಯನ್ನು ಹಿಡಿದವರೂ ಅದರಿಂದ ಪಾರಾಗುವುದು ಕಷ್ಟ. ಸಾಮಾನ್ಯ ಗೃಹಸ್ಥಜೀವನಕ್ಕೆ ಹೊಂದಿಕೊಂಡ ಶಿವಶರಣೆಯರ ಪಾಡೇನು? ಅವರಲ್ಲಿನ ತಳಮಳದ ವಿವಿಧ ಸ್ತರಗಳನ್ನು ನೀಲಲೋಚನೆಯ ಒಂದು ವಚನದಲ್ಲಿ ಗುರುತಿಸಬಹುದು:

ಏಕೆನ್ನ ಪುಟ್ಟಿಸಿದೆಯಯ್ಯಾ ಹೆಣ್ಣು ಜನ್ಮದಲ್ಲಿ, ಪುಣ್ಯವಿಲ್ಲದ ಪಾಪಿಯ?
ಆನು ಇಹಪರಕ್ಕೆ ದೂರಳಯ್ಯ.
ಎನ್ನ ನಾಮ ಹೆಣ್ಣುನಾಮವಲ್ಲಯ್ಯಾ
ನಾನು ಸಿರಿಯಿದ್ದ ವಸ್ತುವಿನ ವಧುವಾದ ಬಳಿಕ
ಸಂಗಯ್ಯನಲ್ಲಿ ಬಸವನ ವಧುವಾದ ಕಾರಣ
ಎನಗೆ ಹೆಣ್ಣುನಾಮವಿಲ್ಲವಯ್ಯಾ ॥ (ಶಿವಶರಣೆಯರ ವಚನ, ಸಂಪುಟ; ಪು. ೨೬೦)

ಹೆಣ್ಣಿನ ಜನ್ಮವೇ ಪಾಪಿಯದೆಂದು ನಂಬುವ ಸಾಂಪ್ರದಾಯಿಕ ನಂಬಿಕೆಯನ್ನು ತನ್ನ ವಚನಕ್ಕೆ ವಾಚ್ಯವಾಗಿ ಬಳಸಿಕೊಳ್ಳುತ್ತ ನೀಲಲೋಚನೆ ಅಂತಿಮವಾಗಿ ಅಂಥ ನಂಬಿಕೆಯೇ ಅರ್ಥಹೀನವಾಗಿರುವುದನ್ನು ಸೂಚಿಸಿದ್ದಾಳೆ. ಹೆಣ್ಣನ್ನೂ ಅವಹೇಳನದ ದೃಷ್ಟಿಯಿಂದ ನೋಡುವಂಥ ಸಮಾಜದಲ್ಲಿ ಆಕೆ ಇಹಕ್ಕೆ ಪರಕ್ಕೆ ದೂರಳಾದವಳು. ಮೋಕ್ಷಕ್ಕೆ ಅನರ್ಹಳು. ಅವಳಿಗೆ ತನ್ನದೇ ಆದ ಅಸ್ತಿತ್ವವಿಲ್ಲ. ಕೈ ಹಿಡಿದವನ ಯೋಗ್ಯತೆಯ ಮೇಲೆ ಅವಳ ಬದುಕಿಗೆ, ವ್ಯಕ್ತಿತ್ವಕ್ಕೆ ಅರ್ಥ ಬರುತ್ತದೆಂದು ಅಂಥ ಸಮಾಜ ಭಾವಿಸುತ್ತದೆ. ಈ ಸಾಂಪ್ರದಾಯಿಕ ವಿಚಾರವನ್ನೇ ಬಳಸಿಕೊಳ್ಳುತ್ತ ನೀಲಲೋಚನೆ, ಹೆಣ್ತನಕ್ಕೆ ಅಂಟಿದ ಈ ನೆಲೆಯು ಮೋಕ್ಷಸಾಧನೆಗೆ ಒದಗುವಂಥದ್ದಲ್ಲವೆಂದೂ, ದೇವನಲ್ಲಿ ಬೆರೆಯಬಲ್ಲ ನೆಲೆಗೇರಲು ಈ 'ಹೆಣ್ಣು' ನಾಮವನ್ನು ಮೊದಲು ತೂರಯಬೇಕಿದೆಯೆಂದೂ, ಹಾಗೆ ತೂರೆದನಂತರ,

ಹೆಣ್ಣು ಎಂಬ ಹೆಸರಿಗೆ ಅರ್ಥವಿಲ್ಲವೆಂಬುದನ್ನು ಸ್ವಾನುಭವದ ನೆಲೆಯಿಂದ ದೃಢವಾಗಿ ಪ್ರತಿಪಾದಿಸುತ್ತಿದ್ದಾಳೆ.

ಭೌತಿಕ ವ್ಯತ್ಯಾಸಗಳನ್ನು ಆಧ್ಯಾತ್ಮಿಕವಾಗಿ ಹೀಗೆ ನಿರಾಕರಿಸುವುದು ವೈರಾಗ್ಯ ಸಾಧನೆಗೆ ಅನಿವಾರ್ಯವೂ ಆಗಿರಬೇಕು. ಏಕೆಂದರೆ ವಿರಕ್ತಿಯ ಉನ್ನತ ಸ್ಥಿತಿಯಲ್ಲಿ ಸಿದ್ಧರಾಮನು ''ಶರಣನಾದಡೆ ಸತಿಗೂಡಾಟವೇಕಯ್ಯ? ಇಂದ್ರಿಯಂಗಳು ಹರಿಯಲೇಕೆ ತಾನೆ ಸತಿ, ಲಿಂಗವೆ ಪತಿಯಾದ ಬಳಿಕ?'' (ಸಿದ್ಧರಾಮನ ವಚನಗಳು: ಪು. ೩೩೪) ಎಂದು ಪ್ರಶ್ನಿಸಿ, ಸ್ತ್ರೀ-ಪುರುಷರ ನಡುವಿನ ಸಹಜ ಆಕರ್ಷಣೆ ಕೂಡ ಅನಗತ್ಯವೆನ್ನುತ್ತಾನೆ. ಅದೇ ಬಗೆಯ ವಿರಕ್ತಿಯ ಪರಾಕಾಷ್ಠೆಯಿಂದ ನುಡಿಯುವ ಅಕ್ಕಮಹಾದೇವಿ ಕೂಡ ''ಶರಣ ಸತಿ, ಲಿಂಗ ಪತಿಯಾದ ಬಳಿಕ ಶರಣಂಗೆ ಸತಿಸಂಗವತಿಘೋರ ನರಕ'' ಎನ್ನುತ್ತಾಳೆ (ಅ. ವ., ಪು. ೯೩).

ಆದರೆ ಕೌಟುಂಬಿಕ ಬದುಕನ್ನು ಒಪ್ಪಿ ನಡೆವ ಶಿವಶರಣ ಶರಣೆಯರು ಈ ರೀತಿಯ ನಿಷ್ಠುರ ವಿರಕ್ತಿಯನ್ನು ಹೇಳುವುದು ಸಾಧ್ಯವಿಲ್ಲ. ಗಂಡು-ಹೆಣ್ಣು ಎಂಬ ಭೇದ ಮಾನವ ಜೀವನದ ಪ್ರಕ್ರಿಯೆಗೆ ಅನಿವಾರ್ಯ. ಆದರೆ ಆಧ್ಯಾತ್ಮಿಕ ನೆಲೆಯಲ್ಲಿ ಅಂಥ ಭೇದ ಅಗತ್ಯವಿಲ್ಲ ಎಂಬ ಸಮನ್ವಯದ ನೆಲೆಯನ್ನು ಆಯ್ದಕ್ಕಿ ಲಕ್ಕಮ್ಮನು ಪ್ರಕಟಿಸುತ್ತಾಳೆ– ''ಕೂಟಕ್ಕೆ ಸತಿ ಪತಿಯೆಂಬ ನಾಮವಲ್ಲದೆ ಅರಿವಿಂಗೆ ಬೇರೊಂದೊಡಲುಂಟೆ?'' (ಶಿ. ಶ. ವ., ಪು. ೪೪) ಎಂಬ ಆಕೆಯ ಪ್ರಶ್ನೆಯಲ್ಲಿ ಲೌಕಿಕ ಕೂಟದ ಅರ್ಥವೂ ನಿರಾಕೃತವಾಗುವುದಿಲ್ಲ.

೨. ಧಾರ್ಮಿಕ ಜೀವನ ಮತ್ತು ಆಧ್ಯಾತ್ಮಿಕ ಸಾಧನೆಗಳಿಗೆ ಗೃಹಸ್ಥ ಜೀವನವೂ ಅನುಕೂಲಕರವೆಂದು ಒಪ್ಪಿದ್ದು ಶಿವಶರಣ ಚಳವಳಿಯ ಪ್ರಮುಖವಾದ ಮತ್ತೊಂದು ನಿಲುವು. ವಿರಕ್ತಿಯೊಂದೇ ಮೋಕ್ಷಕ್ಕೆ ದಾರಿ ಎಂಬುದಕ್ಕೆ ವಿರುದ್ಧವಾಗಿ ಈ ಸಮನ್ವಯದ ಹಾದಿಯೊಂದನ್ನು ಶಿವಶರಣರು ರೂಢಿಸಿದ್ದರಿಂದ ಸ್ತ್ರೀಯರನ್ನು ಕೀಳಾಗಿ ಕಾಣಲು ಕಾರಣವಾಗಿದ್ದ ಅನೇಕ ತಪ್ಪುಕಲ್ಪನೆಗಳು ಮತ್ತು ನಂಬಿಕೆಗಳನ್ನು ನಿವಾರಿಸುವುದು ಅವರ ಧಾರ್ಮಿಕ ಬದುಕಿಗೆ ಆವಶ್ಯಕವೂ ಆಗಿರಬೇಕು. ''ಸತಿಭಕ್ತೆಯಾದಡೆ ಹೊಲೆಗಂಜಲಾಗದು'' (ವ. ಸಾ. ಸಂ. ಪು. ೬೧೨) ಎಂದು ಅಲ್ಲಮನು ಸಾರಿದರೆ, ''ಗುರುಕಾರುಣ್ಯದಲ್ಲಿ ಉತ್ಪತ್ಯವಾದ ಅಜಾಂತಗೆ ಜಾತಿಸೂತಕ ಜನನಸೂತಕ ಪ್ರೇತಸೂತಕ ರಜಸೂತಕ'' ಗಳಿಲ್ಲ ಎಂದು ಚೆನ್ನಬಸವಣ್ಣ ಸಾರುತ್ತಾನೆ (ಚೆನ್ನ. ಬ. ಪು. ೫೬). ಹೆಣ್ಣು ಬಹಿಷ್ಠೆಯಾದಾಗ, ಹಡೆದಾಗ ಅಪವಿತ್ರಳಾಗುತ್ತಾಳೆಂಬ ಹಳೆಯ ನಂಬಿಕೆಯನ್ನು ಶಿವಭಕ್ತೆಯರಿಗೆ ಸಲ್ಲದಂತೆ ಮಾಡಿದ್ದರಿಂದ ಸ್ತ್ರೀಯರು ಎಲ್ಲ ಕಾಲದಲ್ಲೂ ಭಕ್ತಿಸಾಧನೆಗೆ ಅರ್ಹರೆನಿಸುವುದು ಸಾಧ್ಯವಾಯಿತು. ಲಿಂಗದೀಕ್ಷೆ, ವಿಭೂತಿಧಾರಣೆ, ಮಂತ್ರಪಠಣಗಳಂಥ ಧಾರ್ಮಿಕ ವಿಧಿಗಳಲ್ಲಿ ಸ್ತ್ರೀಯರಿಗೂ ಅಧಿಕಾರ ನೀಡಿದ್ದರಿಂದ ಈ ಹೊಲೆಯ ಕಲ್ಪನೆಯನ್ನು ಕಾರ್ಯತಃ ಕೂಡ ನಿವಾರಿಸುವುದು ಸಾಧ್ಯವಾಯಿತು.

ಸಾಧನೆಯ ಅವಕಾಶ ಮುಕ್ತವಾಗಿ ದೊರೆತಾಗ ಸಮಾಜದ ಎಲ್ಲ ಜಾತಿ, ವರ್ಗ ವ್ಯಕ್ತಿಗಳಿಂದ ಬಂದ ಸ್ತ್ರೀಯರು ಲಿಂಗದೀಕ್ಷೆ ಪಡೆದು, ಹೊಸಬಗೆಯ ಬದುಕನ್ನು ಆರಂಭಿಸಿದರು. ಸಾಂಸ್ಕೃತಿಕವಾಗಿ ಕೆಳಸ್ತರದಲ್ಲಿದ್ದ ಮಹಿಳೆಯರೂ ಭಕ್ತಿ ಮತ್ತು ಅಧ್ಯಾತ್ಮ ಸಾಧನೆಯ ಅನುಭವ ಪಡೆದು ವಿಶೇಷ ರೀತಿಯ ಆತ್ಮವಿಶ್ವಾಸವನ್ನು, ಸ್ವತಂತ್ರ ಚಿಂತನಾ ಸಾಮರ್ಥ್ಯವನ್ನು ಗಳಿಸಿಕೊಂಡದ್ದನ್ನು ಅವರ ವಚನಗಳಲ್ಲಿ ಕಾಣಬಹುದು. ಈ ಮತಾಂತರ

ಪ್ರಕ್ರಿಯೆಯಿಂದ ಶಿವಶರಣರ ಜೀವನ ವ್ಯವಸ್ಥೆಯಲ್ಲೂ ಏರುಪೇರಾಗಿರುವುದು ಸಹಜ. ಸತಿ ಪತಿಯರಿಬ್ಬರೂ ಒಂದೇ ಧಾರ್ಮಿಕ ಆಚರಣೆಗೆ ಬದ್ಧರಾಗಿದ್ದಲ್ಲಿ ತಮ್ಮ ಭಕ್ತಿ ಸಾಧನೆಯ ದಾರಿ ಹೆಚ್ಚು ಸುಗಮವಾಗಿರಬಲ್ಲದು ಎಂಬುದನ್ನು ಅವರು ಕಂಡುಕೊಂಡರು. ಹೀಗಾಗಿ ಸತಿಪತಿಯರು ಒಂದೇ ಮನಸ್ಸಿನಿಂದ ಭಕ್ತಿನಿರತರಾಗುವುದು ಅಗತ್ಯವೆಂಬುದು ಶಿವಶರಣರ ಒಂದು ಮುಖ್ಯ ತಾತ್ವಿಕ ಧೋರಣೆಯೂ ಆಗಿ ಬೆಳೆಯಿತು. ''ಸತಿ ಪುರುಷರಿಬ್ಬರೂ ಪ್ರತಿದೃಷ್ಟಿಯಾಗಿ ಮಾಡಬಲ್ಲಡೆ ಅದೆ ಮಾಟ, ಕೂಡಲಸಂಗಮದೇವರ ಕೂಡುವ ಕೂಟ'' (ಬ. ವ., ಪು. ೪೯೭) ''ಉಭಯದೃಷ್ಟಿ ಏಕದೃಷ್ಟಿಯಲ್ಲಿ ಕಾಂಬಂತೆ ದಂಪತಿ ಏಕಭಾವವಾಗಿ ನಿಂದಲ್ಲಿ ಗುಹೇಶ್ವರಲಿಂಗಕ್ಕೆ ಅರ್ಪಿತವಾಯಿತು'' (ಅಲ್ಲಮನ ವಚನ ಪು. ೨೭೦) ''ಸತಿಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ'' (ವ. ಸಾ. ಸಂ., ಪು. ೬೧೨) ಮುಂತಾದ ವಚನಗಳು ಸ್ತ್ರೀ-ಪುರುಷರು ಒಂದೇ ಧಾರ್ಮಿಕ ಚೌಕಟ್ಟಿನೊಳಗೆ ಬಂದು ವಿವಾಹಿತ ರಾಗಿದ್ದಾಗಿನ ಧಾರ್ಮಿಕ ಅನುಕೂಲಗಳನ್ನು ಸೂಚಿಸುತ್ತವೆ. ಇದೇ ರೀತಿ ಗಂಡ-ಹೆಂಡಿರು ಭಿನ್ನ ಧಾರ್ಮಿಕ ಹಿನ್ನೆಲೆಗಳಿಗೆ ಸೇರಿದ್ದಾಗ ಎದುರಾಗುವ ತೊಂದರೆಗಳನ್ನೂ ಶಿವಶರಣರು ಚಿಂತಿಸಿದ್ದಾರೆ. ಬಸವಣ್ಣನ ಒಂದು ವಚನವನ್ನು ಉದಾಹರಣೆಗಾಗಿ ನೋಡಬಹುದು :

> ಗಂಡ ಶಿವಲಿಂಗದೇವರ ಭಕ್ತ,
> ಹೆಂಡತಿ ಮಾರಿ ಮಸಣಿಯ ಭಕ್ತೆ.
> ಗಂಡ ಕೊಂಬುದು ಪಾದೋದಕ ಪ್ರಸಾದ
> ಹೆಂಡತಿ ಕೊಂಬುದು ಸುರೆ ಮಾಂಸ
> ಭಾಂಡ-ಭಾಜನ ಶುದ್ಧವಿಲ್ಲದವರ ಭಕ್ತಿ
> ಹೆಂಡದ ಮಡಿಕೆಯ ಹೊರಗೆ ತೊಳೆದಂತೆ ಕೂಡಲಸಂಗಮದೇವಾ ॥
>
> (ವ.ಸಾ.ಸಂ., ಪು. ೬೧೨)

ಶಿವಲಿಂಗದೇವರ ಭಕ್ತನಾದ ಗಂಡನ ನೆಲೆ ಇಲ್ಲಿ ಒಪ್ಪಿತವಾದ ಆಚಾರಗಳ ಉತ್ತಮಿಕೆ, ಶುದ್ಧಿಗಳನ್ನು ಒಳಗೊಂಡಿದೆ. ಕೆಳಸಾಂಸ್ಕೃತಿಕ ನೆಲೆಯಿಂದ ಬಂದ ಹೆಂಡತಿಯ ಆಚಾರ, ವಿಚಾರಗಳು ಶುದ್ಧೀಕರಣಕ್ಕೆ ಅರ್ಹವಾಗಿವೆ. ಏಕೆಂದರೆ ಭಾಂಡ-ಭಾಜನ ಒಂದೇ ಎಂಬುದೇ ಇಲ್ಲಿ ಮುಖ್ಯಗ್ರಹಿಕೆ. ''ಗಂಡ ಭಕ್ತನಾಗಿ ಹೆಂಡತಿ ಭವಿಯಾದಡೆ'' ಒದಗುವ ಸ್ಥಿತಿಯನ್ನು ಕುರಿತು ಜೇಡರ ದಾಸಿಮಯ್ಯ ''ಸತ್ತನಾಯ ತಂದು ಅಟ್ಟದ ಮೇಲೆ ಇಳುಹಿ, ಒಬ್ಬರೊಪ್ಪಚ್ಚಿ ಹಂಚಿಕೊಂಡು-ತಿಂದಂತೆ'' ಎಂದು ವಿವರಿಸುತ್ತಾನೆ. (ಜೇದಾ ವ. ಪು. ೨೩). ಚೆನ್ನಬಸವಣ್ಣನು ''ಅನ್ಯದೈವವ ಪೂಜಿಸುವ ಸತಿಯು ಮನೆಯೊಳಗಿದ್ದಂತೆ ಶ್ವಾನನಿಂ ಕಷ್ಟವಲ್ಲವೆ?'' ಎಂದು ಪ್ರಶ್ನಿಸುತ್ತಾನೆ. (ಚನ್ನಬ. ವ. ಪು: ೧೭೩). ಈ ಶಿವಶರಣರ ಚಿಂತನೆಗಳೆಲ್ಲ ಭಕ್ತರಾದ ಪುರುಷರ ನೆಲೆಯಿಂದ ಹೊರಟದ್ದು. ಭವಿಯಾದ ಹೆಂಡತಿಯ ಮೂಲಕ ಭಕ್ತಿ ಸಾಧನೆಗೆ ಎದುರಾಗುವ ಅಸಾಮರಸ್ಯವನ್ನೇ ಹೆಚ್ಚಾಗಿ ಚಿಂತಿಸಿದ್ದು, ಆ ಪರಕೀಯ ಆಚಾರ ವಿಚಾರಗಳ ಬಗ್ಗೆ ನಿಷ್ಠಾವಂತರು ತೋರುವ ಅವಹೇಳನ, ತಿರಸ್ಕಾರಗಳು ಇವರ ನುಡಿಗಳಲ್ಲಿ ಸ್ಪಷ್ಟವಾಗಿವೆ.

ಸ್ವತಃ ಕೆಳಸಾಂಸ್ಕೃತಿಕ ನೆಲೆಯವರಿರಬಹುದಾದ ಒಬ್ಬಿಬ್ಬ ವಚನಕಾರರು ಮಾತ್ರ ಕೊಂಚ ಭಿನ್ನವಾಗಿ ಚಿಂತಿಸಿದಂತೆ ಕಂಡುಬರುತ್ತದೆ. ಏಲೇಶ್ವರ ಕೇತಯ್ಯನ ವಚನವೊಂದು ಕುಟುಂಬದೊಳಗೆ ಭಿನ್ನ ಭಿನ ಧಾರ್ಮಿಕ ಆಚರಣೆಯಿರುವ ಸ್ಥಿತಿಯ ಬಗ್ಗೆ ತಿರಸ್ಕಾರವಿಲ್ಲದೆ

ಚಿತ್ರಿಸುವಂತೆ ತೋರುತ್ತದೆ. ''ಸತಿಸುತ ಪುರುಷರೆಲ್ಲರಿಗೂ ಬೇರೊಂದು ಒಡಲುಳ್ಳನ್ನಕ್ಕ ವ್ರತಕ್ರೀಭಾವ ಬೇರಾದಲ್ಲಿ ಬೇರೆ ಒಬ್ಬ ಒಡೆಯರ ಅಪ್ಪಣೆಬೇಕು'' (ಸಕಲಪು. ವ. ೧. ಪು. ೪೨೯). ಢಕ್ಕೆಯ ಬೊಮ್ಮಯ್ಯ ವ್ರತ, ಆಚಾರಾದಿಗಳ ಶುದ್ಧಿ ಸತಿಯೊಬ್ಬಳಿಗೇ ಮುಖ್ಯವಲ್ಲ, ಪತಿಗೂ ಅದು ಮುಖ್ಯವೆಂದು ಸಾರುತ್ತಾನೆ:

ಸತಿಯ ಗುಣವ ನೋಡಬೇಕಲ್ಲದೆ
ಪತಿಯ ಗುಣವ ನೋಡಬಹುದೆ ಎಂಬರು
ಸತಿಯಿಂದ ಬಂದ ಸೋಂಕು ಪತಿಗೆ ಕೇಡಲ್ಲವೆ?
ಪತಿಯಿಂದ ಬಂದ ಸೋಂಕು ಸತಿಗೆ ಕೇಡಲ್ಲವೆ?
ಒಂದಂಗದ ಕಣ್ಣು ಉಭಯದಲಿ ಬಂದು ಹಿಂಗಲಿಕ್ಕೆ
ಭಂಗವಾರಿಗೆಂಬುದ ತಿಳಿದಲ್ಲಿಯೆ
ಕಾಲಾಂತಕ ಭೀಮೇಶ್ವರ ಲಿಂಗಕ್ಕೆ ಸಲೆ ಸಂದಿತ್ತು ॥ (ಸಕಲಪು. ವ. ೧., ಪು. ೨೨೯)

ಇಷ್ಟಾದರೂ ಭಿನ್ನಧರ್ಮದವರಾದ ದಂಪತಿಗಳ ಬದುಕಿನ ಸಾಮರಸ್ಯ ಕೂಡ ಸಾಧ್ಯ ಎಂಬತ್ತ ಶಿವಶರಣರ ಗಮನ ಹರಿದಂತಿಲ್ಲ. ಅದೇ ರೀತಿ, ಪತ್ನಿಯರು ಶಿವಭಕ್ತೆಯರಾಗಿ, ಪತಿಗಳು ಭವಿಗಳಾಗಿದ್ದ ಸ್ಥಿತಿಯನ್ನು ಅವರು ಹೇಗೆ ಕಂಡಿರಬಹುದು ಎಂಬುದರ ದಾಖಲೆ ವಚನಗಳಲ್ಲಿ ಇಲ್ಲ. ಶಿವಭಕ್ತೆಯರ ಬಗ್ಗೆ ಪರಂಪರೆಯಲ್ಲಿ ಪ್ರಚಲಿತವಿರುವ ವಿವರಗಳಿಂದ ಅದನ್ನು ಗ್ರಹಿಸಬೇಕಷ್ಟೆ. ಬಸವಪೂರ್ವಯುಗಕ್ಕೆ ಸೇರಿದ ರಾಣಿಯರಾದ ಸುಗ್ಗಲೆ ಮತ್ತು ಲಕುಮಾದೇವಿಯರು ತಾವು ಶಿವಭಕ್ತಿಯನ್ನುಳಿಸಿಕೊಂಡು, ಗಂಡಂದಿರನ್ನೂ ಶೈವಧರ್ಮದತ್ತ ಒಲಿಸಲು ಯತ್ನಿಸಿದ್ದು ಕಂಡುಬರುತ್ತದೆ. (ಬಸವಮಾರ್ಗ ೨, ಪು. ೩೯-೪೯). ಆದರೆ ಬಸವಾದಿ ಶಿವಶರಣರ ಸಮಕಾಲದವಳಾದ ಅಕ್ಕಮಹಾದೇವಿ, ರಾಣಿಯಾಗುವ ಅವಕಾಶವನ್ನು ಧಿಕ್ಕರಿಸಿ, ಭವಿಯಾದ ಕೌಶಿಕನನ್ನು ಕೈ ಹಿಡಿಯಲು ನಿರಾಕರಿಸಿದಳು ಅಥವಾ ಕೈ ಹಿಡಿದರೂ ಆತ ಶಿವಭಕ್ತಿಗೆ ಅಡ್ಡಬಂದದ್ದರಿಂದ ಅವನನ್ನೇ ಪರಿತ್ಯಜಿಸಿ, ತನ್ನ ಶಿವನಿಷ್ಠೆಯನ್ನು ರಕ್ಷಿಸಿಕೊಂಡಳೆಂದು ಪರಂಪರೆ ಸಾರುತ್ತದೆ. ಮುಖ್ಯರಾದ ಶಿವಶರಣರ ಪತ್ನಿಯರು ಸ್ವತಃ ಶಿವಧರ್ಮ ಪರಾಯಣೆಯರೂ, ಪತಿಧರ್ಮ ಪರಾಯಣೆಯರೂ ಆಗಿದ್ದು, ಈ ಪ್ರಶ್ನೆ ಅವರಿಗೆ ಸಮಸ್ಯೆಯಾಗುವುದಿಲ್ಲ. ಆದರೆ ಸಾಂಸ್ಕೃತಿಕವಾಗಿ ಕೆಳನೆಲೆಗಳಿಂದ ಬಂದು, ಶಿವಶರಣರ ಕೈಹಿಡಿದು ಭಕ್ತೆಯರಾದ ಸ್ತ್ರೀಯರು ಸಂಸ್ಕೃತೀಕರಣಕ್ಕೆ ಅನಿವಾರ್ಯವಾಗಿ ಒಳಗಾಗಬೇಕಾಗಿಬಂದಂತೆ ತೋರುತ್ತದೆ. ಆದರೆ ಕೆಳಸಂಸ್ಕೃತಿಯ ನಿರಾಕರಣೆಯನ್ನು, ಮೇಲುಸಂಸ್ಕೃತಿಯ ಸ್ವೀಕೃತಿಯನ್ನು ತುಂಬ ನಿಷ್ಠೆಯಿಂದ ಪ್ರತಿಪಾದಿಸುವ ಈ ನವದೀಕ್ಷಿತ ಮಹಿಳೆಯರು ಹೊಸದಾಗಿ ಮತಾಂತರಗೊಂಡವರು ತಮ್ಮ ಹೊಸ ಮತದ ಬಗ್ಗೆ ಅತಿನಿಷ್ಠೆ, ಅತ್ಯುತ್ಸಾಹಗಳನ್ನು ತೋರುತ್ತಾರೆ. ಇತರ ವ್ರತಹೀನರ ಬಗ್ಗೆ ಅಥವಾ ವ್ರತಭ್ರಷ್ಟರ ಬಗ್ಗೆ ಇವರು ತೋರುವ ನಿಷ್ಠುರ ವಿಮರ್ಶೆಯ ದೃಷ್ಟಿ ಕುತೂಹಲ ಹುಟ್ಟಿಸುವಂಥದ್ದು. ಇಂಥ ಶಿವಶರಣೆಯರಲ್ಲಿ ಅತ್ಯಂತ ಕೆಳಗಿನ ನೆಲೆಯಿಂದ ಬಂದವಳು ಉರಿಲಿಂಗಪೆದ್ದಿಯ ಪುಣ್ಯಸ್ತ್ರೀ ಕಾಳವ್ವೆ. ತನ್ನ ಸ್ವೀಕೃತ ಮತಾಚಾರಗಳ ನೆಲೆಯಿಂದ ಹೊಸ ವಿಶ್ವಾಸ ಗಳಿಸಿರುವುದಕ್ಕೆ ಆಕೆ ತನ್ನಂಥವರನ್ನು ಕೀಳಾಗಿ ನೋಡುವ ಒಡೆಯರನ್ನು, ಬ್ರಾಹ್ಮಣರ ಆಚಾರ, ನಡತೆಗಳನ್ನು ತೀಕ್ಷ್ಣವಾಗಿ ವಿಮರ್ಶಿಸುವುದೇ ನಿದರ್ಶನ. ಅದೇ ಹೊತ್ತಿನಲ್ಲಿ ತೀವ್ರವಾದ ವ್ರತನಿಷ್ಠೆ, ವ್ರತಹೀನರ ಬಗ್ಗೆ ತಿರಸ್ಕಾರಗಳನ್ನು ಆಕೆ ಪ್ರಕಟಿಸುತ್ತಾಳೆ. ಸಾಮಾಜಿಕವಾದ ಜಾತಿ, ಲಿಂಗ

ಭೇದಗಳನ್ನು ಧಾರ್ಮಿಕ ನೆಲೆಯಿಂದ ನಿವಾರಿಸಲು ಶಿವಶರಣರು ನಡೆಸಿದ ಮಹಾನ್ ಯತ್ನಕ್ಕೆ ನಿಜವಾಗಿ ಸಾಧನವಾಗಿ ಒದಗಿಬಂದವರು ಈ ಕಾಳವ್ವೆಯಂಥವರು.

ತಮ್ಮ ಸುತ್ತಲಿನ ಶರಣ ಸಮುದಾಯದಲ್ಲೂ ಕಂಡುಬರುತ್ತಿದ್ದ ಅನಾಚಾರ, ಆಡಂಬರ, ಒಳ-ಹೊರ ತೋರಿಕೆಯ ಹುಸಿತನಗಳನ್ನು ಈ ಕೆಳಸ್ತರದಿಂದ ಬಂದ ಸ್ತ್ರೀಯರು ನಿರ್ಭೀತಿಯಿಂದ ವಿಮರ್ಶಿಸುತ್ತಾರಲ್ಲದೆ ಮಾದರಿಯಾಗಿದ್ದ ಶಿವಶರಣರ ತಾತ್ವಿಕ ನಂಬಿಕೆಗಳನ್ನು ಒರೆ ಹಚ್ಚಬಲ್ಲ ಚಿಂತನಾ ಸಾಮರ್ಥ್ಯವನ್ನೂ ಪ್ರಕಟಿಸಿರುವುದುಂಟು. ವಾಸ್ತವದಲ್ಲಿ ಅಂಥ ವಿಚಾರಕ್ಕೆ ಅಗತ್ಯವಾದ ಬೌದ್ಧಿಕ ಸ್ವಾತಂತ್ರ್ಯ ಅವರಿಗೆ ದೊರಕಿಸಿಕೊಟ್ಟದ್ದು ಶಿವಶರಣರ ಧರ್ಮ ಎನ್ನುವುದು ಮುಖ್ಯ ಸಂಗತಿ.

೩. ವಿರಕ್ತಧರ್ಮದ ಪರಿತ್ಯಾಗದ ತತ್ವವು ವೀರಶೈವ ಚಿಂತನೆಯಲ್ಲಿ ಸೇರಿಯೇ ಇತ್ತು. ಆದರೆ ವೈರಾಗ್ಯದ ನಿಜವಾದ ಸಾಧನೆಯ ಸಾಮರ್ಥ್ಯವಿದ್ದವರನ್ನು ಶಿವಶರಣರು ಗೌರವಿಸುತ್ತಾರೆ. ಅಂಥ ಸ್ಥಿತಿ ಸಾಧ್ಯವಿಲ್ಲದವರು ಬಲವಂತವಾಗಿ ಇಂದ್ರಿಯ ನಿಗ್ರಹಕ್ಕೆ ಹೊರಡುವುದರಲ್ಲಿ ಇರುವ ಅಸಹಜತೆಯ ಅಪಾಯಗಳನ್ನೂ ಗುರುತಿಸಿ, ಅಂಥವರಿಗಾಗಿ, ನೀತಿಯುತವಾದ ಬದುಕುವ ಕ್ರಮವನ್ನು ಬೋಧಿಸಿದರು. ಈ ರೀತಿ ಸಾಂಸಾರಿಕ ಬದುಕನ್ನು ಮಾನ್ಯವಾಗಿಸುವ ನೆಲೆಯಲ್ಲಿ, ವಿರಕ್ತಧರ್ಮದಲ್ಲಿ ಪ್ರಚಲಿತವಿದ್ದ ''ಮಾಯೆ''ಯ ಪರಿಕಲ್ಪನೆಯನ್ನು ಪರಿಷ್ಕರಿಸಲು ಶಿವಶರಣರು ಯತ್ನಿಸಿದಂತೆ ತೋರುತ್ತದೆ. ಮಾನವನ ಎಲ್ಲ ಭೋಗಸಾಧ್ಯತೆಗಳನ್ನೂ 'ಹೊನ್ನು, ಹೆಣ್ಣು, ಮಣ್ಣು' ಎಂಬ ನುಡಿಕಟ್ಟು ಪ್ರತಿನಿಧಿಸುತ್ತದೆ. ಹೆಣ್ಣು, ಹೊನ್ನು, ಮಣ್ಣುಗಳನ್ನು ಮಾಯೆಯೆಂದು, ಸಾಧಕಪುರುಷನ ದಾರಿಗೆ ಅಡ್ಡಿಗಳೆಂದೂ ವಿರಕ್ತಧರ್ಮವು ಸಾರಿದ್ದು, ವಚನಯುಗದಲ್ಲೂ ಈ ವಿಚಾರಪೂರ್ಣ ನಿರಾಕೃತವಾಗುವುದಿಲ್ಲ. ಆದರೆ ಶಿವಶರಣರು ಸ್ತ್ರೀಯರನ್ನು ಪುರುಷಸಮಾನ ಸಾಧನೆಗೆ ಅರ್ಹರೆಂದು ಸ್ವೀಕರಿಸುವುದರ ನೆಲೆಯಿಂದ ''ಹೆಣ್ಣು ಮಾಯೆ'' ಎಂಬುದು ಪ್ರಶ್ನಾರ್ಹವೇ ಆಗುತ್ತದೆ. ಆದ್ದರಿಂದ ಶಿವಶರಣರಲ್ಲಿ ಉನ್ನತಸ್ಥಾನವಿದ್ದ ಅಲ್ಲಮಪ್ರಭುವು 'ಮಾಯೆ'ಯನ್ನು ಕುರಿತು ನೀಡಿದ ವಿವರಣೆ ವಿಶಿಷ್ಟವೆನಿಸುತ್ತದೆ. ಹೊನ್ನು, ಮಣ್ಣುಗಳಾಗಲೀ ಹೆಣ್ಣಾಗಲೀ ಸ್ವತಃ ಕೇಡಿನ ಮೂಲಗಳಲ್ಲ. ನಿಜವಾದ ಆಪತ್ತಿರುವುದು ಮನಸಿನಲ್ಲಿ ಎಂಬುದನ್ನು ಆತನ ಪ್ರಸಿದ್ಧ ವಚನ ಸೂಚಿಸುತ್ತದೆ. ''ಹೆಣ್ಣು ಮಾಯೆಯೆಂಬರು. ಹೆಣ್ಣು ಮಾಯೆಯಲ್ಲ.........ಮನದ ಮುಂದಣ ಆಸೆಯೇ ಮಾಯೆ ಕಾಣಾ ಗುಹೇಶ್ವರಾ'' (ವ. ಸಾ. ಸಂ., ಪು. ೫೬).

ಅಲ್ಲಮನು ನೀಡಿದ ಈ ವಿವರಣೆಯಿಂದ ಮಾಯೆಯ ನೆಲೆ ಮೋಹಗೊಳಿಸುವ ವಸ್ತುವಿನ ನೆಲೆಯಿಂದ ನೋಡುವ ವ್ಯಕ್ತಿಯ ಮನಸ್ಸಿನ ನೆಲೆಗೆ ರವಾನೆಯಾಗುತ್ತದೆ. ಅಕ್ಕಮಹಾದೇವಿಯು ಇನ್ನೂ ವಿಶೇಷ ರೀತಿಯಿಂದ ವಿವರಿಸುವುದನ್ನು ಕಾಣುತ್ತೇವೆ. ''ಪುರುಷನ ಮುಂದೆ ಮಾಯೆ ಸ್ತ್ರೀಯೆಂಬ ಅಭಿಮಾನವಾಗಿ ಕಾಡುವುದು, ಸ್ತ್ರೀಯ ಮುಂದೆ ಮಾಯೆ ಪುರುಷನೆಂಬ ಅಭಿಮಾನವಾಗಿ ಕಾಡುವುದು'' (ಅಕ್ಕ.ವ: ಪು. ೧೦೫) ಸ್ತ್ರೀ ಪುರುಷರಿಬ್ಬರಿಗೂ ಪರಸ್ಪರರನ್ನು ಕುರಿತ ಅಭಿಮಾನವಾಗಿ ಮಾಯೆ ಕಾಡುತ್ತದೆಂದು, ಈ ಸೆಳೆತದಿಂದ ಪಾರಾಗುವುದು ವಿರಕ್ತರಿಗೂ ಸುಲಭವಲ್ಲವೆಂದು ಆಕೆ ಸೂಚಿಸುತ್ತಾಳೆ. ಯೋಗಿಗೆ ಯೋಗಿಣಿಯಾಗಿ, ಸವಣಂಗೆ ಸವಣಿಯಾಗಿ, ಯತಿಗೆ ಪರಾಕಿಯಾಗಿ ಕಾಡಬಹುದಾದ ಈ ಮಾಯೆ ಬಿಟ್ಟೆನೆಂದ ಮಾತ್ರಕ್ಕೆ ಬಿಟ್ಟು ಹೋಗುವಂಥದಲ್ಲವೆಂದು, ಈ ಮಾಯೆಯಿಂದ ಪಾರಾಗಲು ಧೀರವಾದ ವಿರಕ್ತಿಯೊಂದೇ ದಾರಿಯೆಂದು ಅಕ್ಕನ ಮತ, (ಅಕ್ಕನ ವ., ಪು. ೬೪).

ಆದರೆ ಅಕ್ಕ ಅಥವಾ ಅಲ್ಲಮರ ಈ ವಿಚಾರಗಳು ಶಿವಶರಣರೆಲ್ಲರ ವಿಚಾರಗಳೂ ಆಗಿದ್ದವೆಂದೇನಲ್ಲ. ''ಹೆಣ್ಣು ಮಾಯೆಯೆಂಬರು, ಹೆಣ್ಣು ಮಾಯೆಯಲ್ಲ'' ಎಂದು ಅಲ್ಲಮನು ನುಡಿಯುತ್ತಿದ್ದ ಅವಧಿಯಲ್ಲೇ ''ಸತಿ ಸುತ ಪಿತರೆಲ್ಲರು ಮಾಯೆ! ಹೆತ್ತ ತಾಯಿ ಮಾಯೆ, ಮಗಳು ಮಾಯೆ'' ಎನ್ನುವವರೂ ಇದ್ದರು (ಆದಯ್ಯ, ಪು. ೬)

ವಿರಕ್ತಿಯ ಪರಿಪಾಲನೆಯಲ್ಲಿ ತಮ್ಮ ಸಾಧನೆಯನ್ನು ವಿಮರ್ಶಿಸುತ್ತ ''ಎನ್ನ ಮನಸ್ಸು ಹೊನ್ನು ಹೆಣ್ಣು ಮಣ್ಣು ಧ್ಯಾನಿಸಿ ನಿಮ್ಮ ಮರೆದೆನಯ್ಯ. .....ಹೊನ್ನು ಹೆಣ್ಣು ಮಣ್ಣೆಂಬ ಆಶೆ ಎನ್ನ ಘಾಸಿ ಮಾಡುತ್ತಿವೆಯಯ್ಯ'' (ವ. ಸಾ. ಸಂ. ೬೫) ಎಂದು ಶಿವಶರಣರು ಪರಿತಪಿಸುತ್ತಾರೆ. ಇದು ಸಾಂಪ್ರದಾಯಿಕ ವಿಚಾರವೊಂದು ಪ್ರಜ್ಞೆಯಲ್ಲಿ ಬೇರೂರಿರುವ ಪರಿ. ಮೂಲತಃ ಪುರುಷನ ನೆಲೆಯಿಂದ ಹುಟ್ಟಿದ ಈ ಚಿಂತನೆ ಹೊನ್ನು, ಮಣ್ಣುಗಳಂತೆಯೇ ಹೆಣ್ಣನ್ನೂ ಆತನ ಒಡೆತನಕ್ಕೆ ಸೇರಿದ, ಅವನ ಭೋಗಕ್ಕೆ ಒದಗುವ ವಸ್ತುವಿನಂತೆ ಕಂಡಿದೆ. ಹೆಣ್ಣನ್ನು ಸಮಾನ ನೆಲೆಯಲ್ಲಿ ಸಾಧನೆಗೆ ಅರ್ಹಳಾದ ಚೈತನ್ಯವುಳ್ಳ ವ್ಯಕ್ತಿಯೆಂದು ಗ್ರಹಿಸುವ ಸ್ತರವೇ ಬೇರೆ. ಸಂಸಾರ ವಿರಕ್ತಿಯ ನೆಲೆಯಿಂದ ಹುಟ್ಟುವ ಈ ಸಾಂಪ್ರದಾಯಿಕ ನಂಬಿಕೆಯೇ ಬೇರೆ. ಇವೆರಡರಲ್ಲೂ ಒಳವಿರೋಧವನ್ನೇನು ಶರಣರು ಕಾಣುವುದಿಲ್ಲ. ಆದರೆ ಅನೇಕ ಶಿವಶರಣೆಯರೂ ಈ ಪುರುಷಪ್ರಧಾನ ಚಿಂತನೆಯನ್ನು ಸರಳವಾಗಿ ಸ್ವೀಕರಿಸಿ, ತಮ್ಮದಾಗಿಸಿಕೊಂಡು ಅದೇ ರೀತಿ ಪುನರುಚ್ಚರಿಸುತ್ತಾರೆ. ಆ ಮಾದರಿಗೆ ಮೋಳಿಗೆ ಮಹಾದೇವಮ್ಮನ ಈ ನುಡಿಯನ್ನು ಉದಾಹರಿಸಬಹುದು. ''ನಿನ್ನರಿವುದಕ್ಕೆ ಹೆಣ್ಣು ಹೊನ್ನು ಮಣ್ಣೆಂಬ ಸನ್ನಿಯ ತೊರೆಯ ಹಾಯಬೇಕು'' (ಶಿ. ಶ. ವ. ಪು. ೨೩).

ಇಡೀ ವ್ಯವಸ್ಥೆಯ ರಚನೆ ಪರಂಪರಾಗತ ಪಿತೃಪ್ರಧಾನ ನೆಲೆಗಳನ್ನು ಒಳಗೊಂಡಿದ್ದಾಗ, ಶಿವಶರಣರು ಅದರ ಕೆಲವೇ ಇಟ್ಟಿಗೆಗಳನ್ನು ಅತ್ತಿತ್ತ ಬದಲಾಯಿಸಿದರಷ್ಟೆ. ಅದೂ ಅವರ ಧಾರ್ಮಿಕ ಆವಶ್ಯಕತೆ ಹಾಗಿದ್ದುದರಿಂದ. ಅದು ಸಮಗ್ರ ಬದಲಾವಣೆಯಲ್ಲ. ಆದ್ದರಿಂದಲೇ ಪರಸ್ಪರ ವಿರುದ್ಧವೆನ್ನುವಂಥ ಅನೇಕ ಒಳಸ್ತರಗಳು ಶಿವಶರಣ ಚಳವಳಿಯಲ್ಲಿವೆ. ಹಾಗಾಗಿ ಅನೇಕ ಮಹಿಳೆಯರು ಆ ಚಳವಳಿಯಲ್ಲಿ ಪ್ರವೇಶ ಪಡೆದರೂ, ಅವರ ಚಿಂತನೆಗಳು ಶಿವಶರಣರ ವಿಚಾರಗಳ ನೇರ ಸ್ವೀಕಾರದಿಂದ ಹುಟ್ಟಿದ್ದರೆ ಅದು ಸಹಜ. ಆದರೆ ಸೂಕ್ಷ್ಮ ಸಂವೇದನೆಯುಳ್ಳ ಶಿವಶರಣೆಯರು ತಮ್ಮದೇ ಅನುಭವದ ನೆಲೆಯಿಂದ ಅಂದಿನ ಪ್ರಚಲಿತ ವಿಚಾರಗಳನ್ನು ವಿಮರ್ಶೆಗೆ ಒಳಗುಮಾಡುವುದನ್ನೂ ಕಾಣುತ್ತೇವೆ. ಗಜೇಶ ಮಸಣಯ್ಯಗಳ ಪುಣ್ಯಸ್ತ್ರೀ ಎನಿಸಿದ, ಹೆಸರೂ ಗೊತ್ತಿಲ್ಲದ ವಚನಕಾರ್ತಿ, ಹೆಣ್ಣು ಹೊನ್ನು ಮಣ್ಣುಗಳನ್ನು ಕುರಿತಂತೆ ಮಾಡುವ ವಿಚಾರ ಗಮನಾರ್ಹ. ''ಹೊನ್ನ ಬಿಟ್ಟು ಲಿಂಗವನೊಲಿಸಬೇಕೆಂಬರು, ಹೊನ್ನಿಂಗೆಯೂ ಲಿಂಗಕ್ಕೆಯೂ ವಿರೋಧವೆ?, ಹೆಣ್ಣ ಬಿಟ್ಟು ಲಿಂಗವನೊಲಿಸಬೇಕೆಂಬರು, ಹೆಣ್ಣಿಂಗೆಯೂ ಲಿಂಗಕ್ಕೆಯೂ ವಿರೋಧವೆ?'' (ಶಿ. ಶ. ವ., ಪು. ೯೩) ಎಂಬ ಆಕೆಯ ಪ್ರಶ್ನೆಯಲ್ಲಿ ಲೌಕಿಕ ಅನುಭವಕ್ಕೂ ಆಧ್ಯಾತ್ಮಿಕ ಅನುಭವಕ್ಕೂ ವಿರೋಧವಿಲ್ಲ ಎಂಬ ವಿಚಾರವಿದೆ. ಈಕೆಯಂತೆಯೇ ಗೊಗ್ಗವ್ವೆ ಮೋಹಿಸುವ ಅಧಿಕಾರವನ್ನು ಕುರಿತು ಹೆಣ್ಣಿನ ನೆಲೆಯಿಂದ ವಿಚಾರ ಮಾಡುತ್ತಾಳೆ:

> ಗಂಡು ಮೋಹಿಸಿ ಹೆಣ್ಣ ಹಿಡಿದಡೆ, ಅದು ಒಬ್ಬರ ಒಡವೆಯೆಂದರಿಯಬೇಕು.
> ಹೆಣ್ಣು ಮೋಹಿಸಿ ಗಂಡ ಹಿಡಿದಡೆ ಉತ್ತರವಾವುದೆಂದರಿಬೇಕು ॥ (ಶಿ. ಶ. ವ., ಪು. ೮೯)

ಈ ಬಗೆಯ ವಚನಗಳಲ್ಲಿ ಕಾಣುವ ಅನುಭವ, ನಾನು ಹೆಂಗೂಸಲ್ಲ, ಎನ್ನ ನಾಮ ಹೆಣ್ಣು

ನಾಮವಲ್ಲ ಎಂಬ ನೆಲೆಗಿಂತ ಭಿನ್ನವಾಗಿದೆ. ಇಹದಲ್ಲಿನ ತನ್ನ ಇರವನ್ನು ಒಪ್ಪಿದ, ಅನುಭವವನ್ನು ನಿರಾಕರಿಸದ ಸಹಜ ಮಾನವೀಯ ನೆಲೆ ಇಲ್ಲಿದೆ ಎಂಬುದು ಮುಖ್ಯ.

ಧಾರ್ಮಿಕವಲ್ಲದ ಇತರ ಸ್ತ್ರೀ ಸಂಕಷ್ಟಗಳನ್ನು ಕುರಿತಂತೆ ಶಿವಶರಣರ ಚಿಂತನೆ ನಡೆದಿಲ್ಲವೆಂಬುದು ನಿಜ. ಆದರೆ ಧಾರ್ಮಿಕ ಆವಶ್ಯಕತೆಯಿಂದಾಗಿಯೇ ಹಿಂದಿನ ಎಷ್ಟೋ ಪಿತೃಪ್ರಧಾನ ವ್ಯವಸ್ಥೆಯ ಸ್ತ್ರೀಮೌಲ್ಯಗಳನ್ನು ಆ ಯುಗವೂ ಒಪ್ಪಿ, ಪ್ರತಿಪಾದಿಸಿದೆ. ಅಂಥ ಒಂದು ಪ್ರಮುಖ ಸ್ತ್ರೀ ಮೌಲ್ಯ-ಪಾತಿವ್ರತ್ಯ. ಶಿವಶರಣರು ತಮ್ಮ ಪತ್ನಿಯರಿಂದ ನಿರೀಕ್ಷಿಸಿದ್ದ ಧರ್ಮಪಾಲನೆ ಎನ್ನುವುದು ವೈದಿಕಧರ್ಮದ ಸ್ಮೃತಿಕಾರರ ಪತ್ನಿ ಧರ್ಮದ ಕಲ್ಪನೆಯೇ ಆಗಿತ್ತು. ಅದರ ಸುಸ್ಪಷ್ಟ ನಿದರ್ಶನ ವಚನಯುಗದ ಮನು ಎನ್ನಬಹುದಾದ ಚೆನ್ನಬಸವಣ್ಣನ ಈ ವಚನದಲ್ಲಿದೆ:

ಜಂಗಮಭಕ್ತಿ ಗಂಡನುಳ್ಳ ಸಜ್ಜನ ಸತಿಯಂತಿರಬೇಕು
ಹೊಯ್ದಡೆ ಬಯ್ದಡೆ ಜರೆದಡೆ ಕೋಪಿಸಿದಡೆ
ನಿಂದಿಸಿದಡೆ ಆಳಲಿಸಿದಡೆ ಬಳಲಿಸಿದಡೆ ಪುರುಡಿಸಿದಡೆ
ಇಂತಿವು ಮೊದಲಾಗಿ ಏಸೊಂದು ಮಾಡಿದಡೆಯೂ
ಮನದಲ್ಲಿ ಮರುಗಿದಡೆ ಇದಿರುತ್ತರುವ ಕೊಟ್ಟಡೆ
ಆ ಸಜ್ಜನ ಸತಿಯ ಗುಣಕ್ಕೆ ಕೊರತೆಯಹುದು.
ಆ ಪುರುಷನೆ ದೈವವೆಂದರಿದು ಆತನ ಗುಣವ ನೋಡದೆ
ತನ್ನ ಗುಣವ ಬಿಡದೆ ಇರ್ದಡೆ ಪತಿವ್ರತೆಯೆನಿಸುವಳು ॥ (ಚೆನ್ನ ಬ. ವ., ಪು ೧೨೧).

ಇದೇ ಸಾಧ್ವಿಧರ್ಮ ಅಥವಾ ಸೇವಾಧರ್ಮ ಶಿವಶರಣರ ಸತಿಯರಿಗೆಲ್ಲ ಬದುಕಿನ ದಾರಿ. ಆಯ್ದಕ್ಕಿ ಲಕ್ಕಮ್ಮ, ಮೋಳಿಗೆ ಮಹಾದೇವಮ್ಮ, ನೀಲಲೋಚನೆ ಮುಂತಾದ ಪ್ರಸಿದ್ಧ ಶರಣನಾಯಕರ ಪತ್ನಿಯರಷ್ಟೇ ಅಲ್ಲದೆ, ಶಿವಶರಣರ ಕೈ ಹಿಡಿದು ಉದ್ಧಾರಗೊಂಡು ಅವರ ಪುಣ್ಯಸ್ತ್ರೀಯರೆನಿಸಿದ ಅನೇಕರು ಶಿವಶರಣರ ಧರ್ಮಭಕ್ತಿಗಳ ಸಾಧನೆಗೆ ಅನುಕೂಲ ಸತಿಯರಾಗಿ, ಅಂದಿನ ಧಾರ್ಮಿಕ ಚಳವಳಿಗೆ ತಮ್ಮ ಸೇವಾಶಕ್ತಿಯನ್ನು ಒದಗಿಸಿದ್ದವರು.

'ಪಾತಿವ್ರತ್ಯ' ಕೇವಲ ಈ ಸತಿಯರಿಗಷ್ಟೇ ಮುಖ್ಯ ಧೋರಣೆಯಾಗಿದ್ದುವಲ್ಲ. ಒಟ್ಟಾರೆ ಶಿವಶರಣರ ತಾತ್ವಿಕ ಚಿಂತನೆಯಲ್ಲಿ ಅದು ಆಧ್ಯಾತ್ಮಿಕ ನೆಲೆಯಲ್ಲೂ ಪ್ರಭಾವ ಬೀರಿದ್ದಂಥದು. ಭಕ್ತ ಅಥವಾ ಭಕ್ತೆ ತನ್ನ ಮತ್ತು ದೇವನ ಸಂಬಂಧವನ್ನು ಸತಿ-ಪತಿ ಸಂಬಂಧವಾಗಿ ಭಾವಿಸುವುದರಿಂದಾಗಿ, ಆದರ್ಶ ಪತಿಭಕ್ತಿಯ ಗುಣಗಳೆಲ್ಲವನ್ನೂ ದೈವಭಕ್ತಿಗೆ ಆರೋಪಿಸಿ, ಅವೆರಡನ್ನೂ ಸಮೀಕರಿಸಿರುವುದನ್ನು ಕಾಣಬಹುದು. ''ಜಗವೆಲ್ಲ ಅರಿಯಲು ಎನಗೊಬ್ಬ ಗಂಡನುಂಟು, ಆನು ಮುತ್ತೈದೆ, ಆನು ನಿಟ್ಟೈದೆ'' (ಬ.ವ.ಪ್ರ) ''ಇಹಕ್ಕೊಬ್ಬ ಗಂಡನೆ, ಪರಕ್ಕೊಬ್ಬ ಗಂಡನೆ?'' (ಅಕ್ಕ.ವ. ಪು. ೮೭) ''ಎರದ ಮುಳ್ಳಿನಂತೆ ಪರಗಂಡರೆನಗವ್ವಾ'' (ಅಕ್ಕ. ವ. ಪು. ೮೮). ಎಂಬಂಥ ನುಡಿಗಳಲ್ಲಿ ಶಿವನಿಷ್ಠೆಯೂ ಏಕಪತಿನಿಷ್ಠೆಯೂ ಸಮೀಕರಣಗೊಳ್ಳುತ್ತವೆ. ಸತಿಯೊಬ್ಬಳ ಉತ್ಕಟ ಪತಿಭಕ್ತಿಯ ಮಾದರಿಯಲ್ಲಿ ಭಕ್ತನ ಭಕ್ತಿಯ ಶ್ರೇಷ್ಠತೆಯೂ ಗೃಹೀತವಾಗುತ್ತದೆ. ಶಿವಶರಣರು ರಚಿಸಿರುವ ಸತಿ-ಪತಿ ಭಾವದ ವಚನಗಳಿಗಿಂತ ಹೆಚ್ಚಾಗಿ, ಹೆಚ್ಚಿನ ತೀವ್ರತೆಯಿಂದ ಈ ಪತಿವ್ರತಾಭಾವವನ್ನು ಅಕ್ಕಮಹಾದೇವಿ ತನ್ನ ವಚನಗಳಲ್ಲಿ ಪ್ರಕಟಿಸಿರುವುದನ್ನು ಗಮನಿಸಬೇಕು.

ಇಹದ ಗಂಡರ ಸಂಬಂಧದ ನಿರಾಕರಣೆಗೆ, ಪರದ ಗಂಡನೊಂದಿಗಿನ ತನ್ನ ಒಲು

ಮೆಯ ಪ್ರತಿಪಾದನೆಗೆ ಎರಡಕ್ಕೂ ಅಕ್ಕ ಈ ಪತಿವ್ರತಾ ತತ್ವವನ್ನು ಆಶ್ರಯಿಸುತ್ತಾಳೆನ್ನುವುದು ಕುತೂಹಲಕರ.

ವೈಯಕ್ತಿಕವಾಗಿ ಭಗವಂತನಲ್ಲಿ ಮೊರೆಯಿಡುವಾಗ "ನೀನೆ ಗಂಡನೆಂದಿದ್ದಲ್ಲಿ ಪರಪುರುಷರ ಮಾತನಾಡಿಸಿದೆಯಲ್ಲಯ್ಯಾ" (ಅಕ್ಕ. ವ. ಪು. ೧೫) "ಎನ್ನ ಮುಟ್ಟಿ ಪಾವನವ ಮಾಡಿ ಕಷ್ಟ ಸಂಸಾರಿಗೊಪ್ಪಿಸುವಂತೆ ಮಾಡಿದೆಯಯ್ಯ" (ಅದೇ. ಪ್ರ. ೧೪) "ನಿಮಗೆತ್ತಿದ ಕೈಯ ಅನ್ಯರು ಹಿಡಿದರೆ, ಕಿಚ್ಚಿಲ್ಲದ ಬೇಗೆಯಲ್ಲಿ ಬೆಂದೆ ಕಾಣಯ್ಯ" (ಅದೇ, ಪು. ೨೧) "ಗಂಡನೆ ನಿನಗೋತು ಕೈವಿಡಿದವಳನು ಮತ್ತೊಬ್ಬರು ಕೈವಿಡಿದರೆ, ನಿನ್ನಭಿಮಾನವ ಪರರಳೆದೂಯಿದಂತೆ ಕಾಣಾ, ಚೆನ್ನಮಲ್ಲಿಕಾರ್ಜುನಾ" (ಅದೇ, ಪು. ೨೦), "ಕಂಡ ಕಂಡವರೆಲ್ಲ ಬಲುಹಿಂದ ಕೈ ಹಿಡಿದರೆ ಗಂಡಾ, ನಿನಗೆ ಸೈರಣೆಯೆಂತಾಯಿತ್ತು ಹೇಳಾ" (ಅದೇ, ಪು. ೨೦) ಎಂದಾಕೆ ಪರಿತಪಿಸುತ್ತಾಳೆ. ಬಯಸದ ಪುರುಷನ ಸಂಪರ್ಕದಿಂದ, ಕೊನೆಗೆ ಪ್ರಸ್ತಾಪದಿಂದಲೂ ನಲುಗುವ, ಕಸಲುವ ಶುದ್ಧ ಸತೀತ್ವದ ನೆಲೆ ಆಕೆಯ ಈ ನುಡಿಗಳಲ್ಲಿ ಗಾಢವಾಗುತ್ತದೆ. ಇದಕ್ಕೆ ಭಿನ್ನವಾಗಿ ಜನಕ್ಕೆ ಅಭಿಮುಖವಾಗಿ ತನ್ನ ಬದುಕಿನ ಆಯ್ಕೆಯನ್ನು ಸಮರ್ಥಿಸಿಕೊಳ್ಳುವ ಸಂದರ್ಭದಲ್ಲೂ "ಪತಿಯೊಬ್ಬನೇ ಪರಮ ಪತಿವ್ರತೆಗೆ" ಎಂಬ ಚೌಕಟ್ಟನ್ನೇ ಅಕ್ಕ ಆಶ್ರಯಿಸುತ್ತಾಳೆ. "ಚೆನ್ನಮಲ್ಲಿಕಾರ್ಜುನ ಗಂಡನೆನಗೆ, ಮಿಕ್ಕಿನ ಲೋಕದ ಗಂಡರೆನಗೆ ಸಂಬಂಧವಿಲ್ಲವಯ್ಯ" (ಅಕ್ಕ.ವ. ಪು. ೧೮೯) ಎನ್ನುವ ಅಕ್ಕನಂತೆ ಸತ್ಯಕ್ಕನೂ "ಅತಃಪರ ಗಂಡರ ನಾನು ಬಲ್ಲಡೆ, ಕರ್ತು ನಿಮ್ಮಾಣೆ ಶಂಭುಜಕ್ಕೇಶ್ವರಾ" ಎನ್ನುತ್ತಾಳೆ. (ಶಿ. ಶ. ವ. ಪು. ೭೨).

ಲೌಕಿಕ ಬದುಕಿನಲ್ಲಿ ಸ್ವತಃ ಪಾತಿವ್ರತ್ಯದ ಪಾಲನೆಯಲ್ಲಿ ನಿರತರಾದ ಶಿವಶರಣೆಯರಿಗೆ ಇಹ-ಪರಗಳ ನೆಲೆಗಳಲ್ಲಿ ಇಂಥದೊಂದು ಸಂಕೀರ್ಣ ಸ್ಥಿತಿ ಉದ್ಭವಿಸಿರಲಾರದು. ಅವರ ವಚನಗಳೂ ಸತಿ-ಪತಿ ಭಾವದಿಂದ ಭಗವಂತನ ಆರಾಧನೆಗೆ ಯತ್ನಿಸುವುದಿಲ್ಲ. ವಚನಗಳಲ್ಲಿ ಕಾಣಿಸುವ ಅಂಕಿತಗಳಲ್ಲೂ ತಮ್ಮ ಪತಿಯಂದಿರ ಅಥವಾ ಪ್ರಭಾವಶಾಲಿ ಶಿವಶರಣ ಬಂಧುಗಳ ಇರವನ್ನು ಭಕ್ತಿ, ವಿನಯಗಳಿಂದ ಅವರು ಸ್ಮರಿಸುತ್ತಾರೆ.

ಪಾತಿವ್ರತ್ಯದ ಮೌಲ್ಯವೊಂದು ಹೀಗೇ ಭಕ್ತಿಯ ಪರಿಶುದ್ಧತೆಯನ್ನು, ಅನನ್ಯ ದೈವ ನಿಷ್ಠೆಯನ್ನು ಸಾರುವ ರೀತಿಯಲ್ಲಿ ಉದಾತ್ತೀಕರಣಗೊಂಡಾಗ, ಧಾರ್ಮಿಕವಾಗಿಯಷ್ಟೇ ಅಲ್ಲದೆ ಆಧ್ಯಾತ್ಮಿಕ ನೆಲೆಯಲ್ಲಿಯೂ ಅದು ಬೇರೂರಿದ್ದು ಸಹಜ. ಹೀಗೆ ಮೌಲ್ಯವೊಂದು ಧ್ರುವೀಕೃತ ವಾದಾಗ ಸಹಜವಾಗಿಯೇ ಅದರ ಹೊರಗಿನ ನೆಲೆಗಳು ಶಿಥಿಲತೆಯ, ಕೆಡುಕಿನ, ಅಪವಿತ್ರತೆಯ ಚಿಹ್ನೆಯಿಂದ ಗುರುತಿಸಲ್ಪಡುತ್ತವೆ. ಹೀಗೆ ಪರಮ ಪತಿವ್ರತೆಯ ನೆಲೆ ಆರಾಧನೆಗೆ ಒಳಗಾಗಿರುವುದರ ಮಗುಲಲ್ಲಿ, ಅದರ ವಿರುದ್ಧ ಧ್ರುವವೆಂಬಂತೆ ಸೂಳೆತನವು ಹೆಚ್ಚಿನ ನಿಂದೆ, ತಿರಸ್ಕಾರಗಳಿಗೆ ಬಲಿಯಾಗಿದೆ. ಪರಸ್ತ್ರೀಯರನ್ನು ಗೌರಿಯಂತೆ, ಪಾರ್ವತಿ ಯಂತೆ ಕಾಣಬೇಕೆಂದು ಶರಣರು ಸಾರಿದರು. "ಹೆಣ್ಣು ಹೆಣ್ಣಲ್ಲ, ಹೆಣ್ಣು ರಾಕ್ಷಸಿಯಲ್ಲ, ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧ ಮಲ್ಲಿಕಾರ್ಜುನಾ" ಎಂದು ಹೆಣ್ಣಿನಲ್ಲಿ ದೇವತ್ವವನ್ನು ಕಾಣುವಂತೆ ಉಪದೇಶಿಸಿದರು. ವಿಧವೆಯರನ್ನೂ ಗೌರವದಿಂದ ಕಾಣಬೇಕೆಂದು ಸಾರಿ ಹೇಳಿದರು. "ಶಿವಭಕ್ತರು ತಮ್ಮ ನಿಜ ಕೈಲಾಸಕ್ಕೆ ಹೋದರೆ ಅವರರಸಿಯ ಪಾರ್ವತಿಯ ಪರಿಯೆಂದು ಕಾಣಬೇಕು" (ಜೇ. ದಾ. ಪು. ೩೧) ಎಂದು ಜೇಡರ ದಾಸಿಮಯ್ಯ ಹೇಳುತ್ತಾನೆ. ಇಷ್ಟಿದ್ದರೂ

ಹೆಣ್ಣು ಮತ್ತೊಬ್ಬನಲ್ಲಿ ಆಸಕ್ತಳಾಗಬಹುದು ಎಂಬುದು ಅಸಹನೀಯವಾದ ವಿಷಯವೇ. ಗಂಡ ಸತ್ತರೆ ಹೆಂಡತಿ ಮತ್ತೊಬ್ಬನನ್ನು ಸೇರುತ್ತಾಳೆಂಬ ಮಾತು ಬಸವಣ್ಣನಲ್ಲಿ ಕಂಡುಬರುತ್ತದೆ. ಇಂಥ ಪರಿಸರದಲ್ಲಿ ಸೂಳೆಯರ ಬದುಕು ಅವಹೇಳನಕ್ಕೆ ಗುರಿಯಾಗುವುದು ಅಚ್ಚರಿಯ ವಿಷಯವಲ್ಲ.

ಲಂಪಟ ಪುರುಷರ ಸ್ವಾರ್ಥ, ದುರಾಚಾರಗಳಿಗೆ ಬದಲಾಗಿ ಎಲ್ಲ ಬಗೆಯ ಟೀಕೆ, ನಿಂದೆ, ತಿರಸ್ಕಾರಗಳಿಗೆ ಬಲಿಯಾಗುವಾಕೆ ಸೂಳೆಯಾದ ಹೆಣ್ಣು. ''ಸೂಳೆ ತನು ಮುಟ್ಟಿ ಅಪ್ಪುವಳಾಗಿ ಮನ ಮುಟ್ಟಿ ಅಪ್ಪಳೆಂಬ'' (ಅದೇ, ಪು. ೩೮೭) ಭಾವನೆ, ''ಹುಸಿ ಹಣ್ಣಾಯಿತ್ತು ಸೂಳೆಯಲ್ಲಿ'' (ಅದೇ, ಪು. ೯೮) ಎನ್ನುವ ಅವಹೇಳನ, ''ಸೂಳೆಗೆ ಲಿಂಗಸಾಹಿತ್ಯವ ಮಾಡಿದಾತ ಏಳೇಳು ಜನ್ಮದಲ್ಲಿ ಶ್ವಾನದ ಗರ್ಭದಲ್ಲಿ ಬರುತಿಪ್ಪ'' (ಅದೇ, ಪು. ೧೭೮) ಎಂಬ ನಿಷೇಧ ಮುಂತಾದುವು ಆ ಕುರಿತಂತೆ ಜನರಲ್ಲಿದ್ದ ಅವಹೇಳನೆಯ ಭಾವನೆಯನ್ನೇ ಸೂಚಿಸುತ್ತವೆ. ವಚನಕಾರ್ತಿಯರಲ್ಲಿ ಒಂದೇ ಒಂದು ವಚನ ಸೂಳೆ ಸಂಕವ್ವೆಯದೆಂದು ಸುರಕ್ಷಿತವಾಗಿ ಉಳಿದು ಬಂದಿದೆ. ಈಕೆ ವೃತ್ತಿನಿರತ ಸೂಳೆಯೆಂದೂ ದೀಕ್ಷೆಯಿಂದ ಶಿವಭಕ್ತಳಾದವಳೆಂದೂ ಭಾವಿಸಲಾಗುತ್ತದೆ. ಆಕೆಯ ವಚನ ಸ್ಪಷ್ಟವಾಗಿ ತನ್ನ ಆಚಾರಕ್ರಮವನ್ನು ಬದಲಾಯಿಸಿಕೊಂಡದ್ದನ್ನು ಹೇಳುತ್ತದೆ :

> ಒತ್ತೆಯ ಹಿಡಿದು ಮತ್ತೊತ್ತೆಯ ಹಿಡಿಯೆ.
> ಹಿಡಿದಡೆ ಬತ್ತಲೆ ನಿಲ್ಲಿಸಿ ಕೊಲುವರಯ್ಯಾ.
> ವ್ರತಹೀನನನರಿದು ಬೆರೆದಡೆ
> ಕಾದ ಕತ್ತಿಯಲ್ಲಿ ಕಿವಿ ಮೂಗ ಕೊಯ್ವರಯ್ಯಾ
> ಒಲ್ಲೆನೊಲ್ಲೆ ಬಲ್ಲೆನಾಗಿ ನಿಮ್ಮಾಣೆ ನಿರ್ಲಜ್ಜೇಶ್ವರಾ ॥ (ಶಿ.ಶ.ವ., ಪು. ೧೧೬)

ಬತ್ತಲೆ ನಿಲ್ಲಿಸಿ ಕೊಲ್ಲುವ ಶಿಕ್ಷೆ ಅಥವಾ ಕಾದ ಕತ್ತಿಯಲ್ಲಿ ಕಿವಿ ಮೂಗ ಕೊಯ್ಯುವರೆಂಬುದು ಅನಾಚಾರಿಗೆ ಪ್ರಾಪ್ತವಾಗುವ ನರಕದ ಶಿಕ್ಷೆಯ ಭೀತಿಯಾಗಿದೆ. ಆದ್ದರಿಂದ ಈ ಹೊಸ ಆಚಾರಸಂಹಿತೆ ತನಗೆ ನೀಡಿದ ಸರಿ-ತಪ್ಪಿನ ಅರಿವಿನಿಂದ ಆಕೆ ಒತ್ತೆಯ ಹಿಡಿದು ಮತ್ತೊತ್ತೆಯ ಹಿಡಿಯದಿರುವ ಮತ್ತು ವ್ರತಹೀನನನ್ನು ಬೆರೆಯದಿರುವ ನಿಯಮ ಪಾಲನೆಯ ಬಗ್ಗೆ ಹೇಳುತ್ತಾಳೆ. ಸೂಳೆ ಸಂಕವ್ವೆಯಂಥವರು ಶಿವಶರಣರ ದೀಕ್ಷೆಯಿಂದ ಉದ್ಧಾರಗೊಂಡದ್ದು ಆ ಯುಗದ ಒಂದು ಮುಖ್ಯ ಬೆಳವಣಿಗೆಯಾಗಿದೆ. ಆದರೆ ಅವರು ಭಕ್ತೆಯರಾಗಿರದ ಸಂದರ್ಭದಲ್ಲಿ ಆ ವ್ಯಕ್ತಿಗಳ ಬಗ್ಗೆ ವ್ಯಕ್ತವಾಗುವುದು ತಿರಸ್ಕಾರವೆ. ಬಸವಣ್ಣನ ಒಂದು ವಚನದಲ್ಲಿ ಸೂಳೆಯು ಧನದಾಸೆಗಾಗಿ ಏನು ಮಾಡಲೂ ಸಿದ್ಧಳೆಂದು ಹೇಳುವ ಯತ್ನವಿದೆ :

> ಕೂಸುಳ್ಳ ಸೂಳೆ ಧನದಾಸೆಗೆ ಒತ್ತೆಯ ಕೊಂಡಡೆ
> ಕೂಸಿಂಗಲ್ಲ, ಜೊಜ್ಜಂಗಲ್ಲ!
> ಕೂಸನೊಮ್ಮೆ ಸಂತೈಸುವಳು, ಜೊಜ್ಜನನೊಮ್ಮೆ ನೆನೆವಳು
> ಧನದಾಸೆ ಬಿಡದು ಕೂಡಲಸಂಗಮದೇವಾ ॥ (ಬಸವ. ಪು. ೪೮)

ವಾಸ್ತವದಲ್ಲಿ ಎಳೆಗೂಸಿನ ತಾಯಿಯಾದ ಸೂಳೆಯ ಇಬ್ಬಂದಿತನ, ಕೂಸನ್ನೂ ವಿಟನನ್ನೂ ಒಟ್ಟೊಟ್ಟಿಗೇ ನಿಭಾಯಿಸಬೇಕಾದ ಸ್ಥಿತಿ, ಆಕೆಯ ಆರ್ಥಿಕ ದುರವಸ್ಥೆಯ ಮೂಲದ್ದು. ಅದು ಅವಳ ಬದುಕಿನ ದುರಂತವಾಗಿದೆ. ಆದರೆ ಅದನ್ನು ಚಿತ್ರಿಸುವಲ್ಲಿ ಬಸವಣ್ಣ

ಗುರುತಿಸುವುದು ಆಕೆಯ ''ಧನದಾಸೆ'' ಮಾತ್ರ. ಧನದಾಸೆ ಮನುಷ್ಯನನ್ನು ಹೇಗೆ ತೊಳಲಾಡಿಸುತ್ತದೆಂಬುದಕ್ಕೆ ಆಕೆಯ ಸ್ಥಿತಿ ಒಂದು ಉಪಮಾನವಷ್ಟೇ ಆಗಿ ಇಲ್ಲಿ ಕಂಡಿದೆ. ಈ ರೀತಿಯಲ್ಲಿ ವಚನಗಳಲ್ಲಿ ಭಕ್ತೆಯಾದ ಮಹಿಳೆಯ ಬಗ್ಗೆ ತೋರುವ ದೃಷ್ಟಿಗೂ, ವೀರಶೈವ ಧಾರ್ಮಿಕ ಪರಿಧಿಯ ಆಚೆಯಲ್ಲಿ ಅಸ್ತಿತ್ವದಲ್ಲಿರಬಹುದಾದ ಸ್ತ್ರೀಸಂಕಷ್ಟಗಳನ್ನು ಕುರಿತು ವ್ಯಕ್ತವಾಗುವ ದೃಷ್ಟಿಗೂ ವ್ಯತ್ಯಾಸಗಳನ್ನು ಕಾಣಬಹುದಾಗಿದೆ.

ಸ್ತ್ರೀಯ ಹಿತವೆಂಬುದು ವಚನಕಾರರಿಗೆ ಹೇಗೆ ಕಂಡಿದೆಯೆಂಬುದನ್ನು ಈವರೆಗಿನ ಚರ್ಚೆಯಿಂದ ಗ್ರಹಿಸಬಹುದು. ಕೆಲವು ಆಧ್ಯಾತ್ಮಿಕ ಅಮೂರ್ತನೆಲೆಗಳಲ್ಲಿ ಹಾಗೂ ಹಲವು ಸಾಮಾಜಿಕ, ಧಾರ್ಮಿಕ ನೆಲೆಗಳಲ್ಲಿ ಸ್ತ್ರೀಯರ ಬದುಕನ್ನು ನಿಗ್ರಹಿಸಿದ್ದ ನಂಬಿಕೆಗಳನ್ನು ಶಿವಶರಣ ಚಳವಳಿಯು ಪಲ್ಲಟಗೊಳಿಸಲು ಯತ್ನಿಸಿತು. ಆದರಿಂದ ವ್ಯಾಪಕವಾಗಿ ಉಂಟಾದ ಮಹತ್ವದ ಪರಿಣಾಮವೆಂದರೆ ಸ್ತ್ರೀಯರಲ್ಲಿ ಉಂಟಾದ ಗಮನಾರ್ಹ ವೈಚಾರಿಕ ಜಾಗೃತಿ. ಅಕ್ಕಮಹಾದೇವಿ, ಮುಕ್ತಾಯಕ್ಕ, ನೀಲಲೋಚನೆಯರಂಥ ಉಚ್ಚಕುಲದಿಂದ ಬಂದ, ಸುಶಿಕ್ಷಿತ ಶಿವಶರಣೆಯರ ಪ್ರತಿಭೆಯಿರಲಿ, ಅತ್ಯಂತ ಕೆಳಗಿನ ಜಾತಿ, ವೃತ್ತಿಗಳಿಗೆ ಸೇರಿದ ಸಾವಿರಾರು ಮಹಿಳೆಯರು ತಮ್ಮ ನೆಲೆಗಳಿಂದ ಬೆಳಕಿಗೆ ಬಂದರು. ಆಧ್ಯಾತ್ಮಿಕ ಸಾಧನೆಗೆ ದೊರೆತ ಹೊಸ ಅವಕಾಶದಲ್ಲಿ ಅಕ್ಷರಸ್ತರಾಗಿ, ತಮ್ಮ ಅನುಭವಕ್ಕೆ ವಚನಗಳ ರೂಪದಲ್ಲಿ ಅಭಿವ್ಯಕ್ತಿ ನೀಡಿದರು. ಈ ಪ್ರಕ್ರಿಯೆಯಲ್ಲಿ ಅವರ ವಿಚಾರಗಳು ಅರಳಿದ ಬಗೆ, ಅವನ್ನು ಅವರು ನಿರ್ಭಿಡೆಯಿಂದ, ದಿಟ್ಟವಾಗಿ ವ್ಯಕ್ತಪಡಿಸಿದ ಬಗೆಗಳು ಇಂದಿಗೂ ಕನ್ನಡದಲ್ಲಿ ಕಾಣಬೇಕಾದ ಸ್ಥಿತಿಯಾಗಿದೆ. ಅಂದಿನ ಪಾರಮಾರ್ಥಿಕ ಚಿಂತನೆಗಳಿಗೆ ತಮ್ಮ ವೈಯಕ್ತಿಕ ಅನುಭವ, ದುಡಿಮೆಯ ಅನುಭವಗಳ ಮೂಲಕ ಕದಿರೆ ರೆಮ್ಮವ್ವೆ, ಮಸಣಮ್ಮ, ಕಾಲಕಣ್ಣಿಯ ಕಾಮಮ್ಮ, ರೇಚವ್ವೆ, ವೀರಮ್ಮ, ಕಾಳವ್ವೆ ಮುಂತಾದವರು ತಮ್ಮ ವಿಚಾರಗಳನ್ನು ಜೋಡಿಸಿದರು ಎಂಬುದು ಮುಖ್ಯ.

ಈ ವಚನಯುಗದಲ್ಲಿ ಮಹಿಳೆಯರು ಸಾಧಿಸಿದ ವೈಚಾರಿಕ ಜಾಗೃತಿಯ ಎರಡು ತುದಿಗಳಲ್ಲಿ ಅಕ್ಕಮಹಾದೇವಿ ಮತ್ತು ಉರಿಲಿಂಗಪೆದ್ದಿಯ ಪುಣ್ಯಸ್ತ್ರೀ ಕಾಳವ್ವೆಯರನ್ನು ಇಟ್ಟು ನೋಡುವುದಾದರೆ, ಅಕ್ಕಮಹಾದೇವಿಯ ಒಟ್ಟು ಚಿಂತನೆಯು ಮನೆಯ ಯಜಮಾನಿಕೆ, ಕುಟುಂಬ ವ್ಯವಸ್ಥೆಯ ವಿರುದ್ಧವಾದ ಆಧ್ಯಾತ್ಮಿಕನೆಲೆಯ ಹೋರಾಟವಾಗಿದ್ದರೆ, ಕಾಳವ್ವೆಯ ಚಿಂತನೆ ಅಂತ್ಯಜ ನೆಲೆಯಿಂದ ಹುಟ್ಟಿದ ಜಾತಿ ವ್ಯವಸ್ಥೆ, ಬ್ರಾಹ್ಮಣಧರ್ಮ, ಒಡೆಯ ವರ್ಗದ ವಿರುದ್ಧ ವ್ರತನಿಷ್ಠೆಯ ಮೂಲಕ ಹೂಡಿದ ಬಂಡಾಯವಾಗಿದೆ. ಶರಣಯುಗದ ಕಾಯಕ ವ್ಯವಸ್ಥೆಯಲ್ಲಿ ಈ ಇಬ್ಬರು ಶಿವಶರಣೆಯರು ಸಲ್ಲಿಸಿರಬಹುದಾದ ದುಡಿಮೆಗಳು ಒಂದೇ ಎನ್ನುವುದು ಅಸಾಧ್ಯ. ಆದರೆ ಕಲ್ಯಾಣದ ಶಿವಶರಣ ಚಳವಳಿಯತ್ತ ಆಕರ್ಷಿತಳಾಗಿ ಆಕಸ್ಮಿಕವಾಗಿ ಸಂಪರ್ಕ ಪಡೆದು ಮುಂದೆಯೂ ತನ್ನದೇ ಆದ ಮೋಕ್ಷದ ಸಾಧನೆಗೆ ಹೊರಟು ಹೋದ ಮಹಾದೇವಿಯಕ್ಕನು ಆ ಯುಗಕ್ಕೆ ಸಲ್ಲಿಸಬಹುದಾದದ್ದು, ಅಂತರ್ಮುಖಿವಾದ, ತಾತ್ವಿಕವಾದ ಚಿಂತನೆಯನ್ನು ಮಾತ್ರ. ಕಲ್ಯಾಣದ ಚಳವಳಿಯ ನಡುವಿಂದಲೇ ಹೊಮ್ಮಿ ಬಂದು ತಮ್ಮ ಶ್ರಮ ಮತ್ತು ಚಿಂತನೆಗಳೆರಡರಿಂದಲೂ ಅದಕ್ಕೆ ಚಾಲನೆ ನೀಡಿದ ಮಹಿಳೆಯರ ಕಾಣಿಕೆ ಬೇರೆ ಬಗೆಯದು ಇದ್ದೀತು. ಆದರೆ ಒಂದು ಅಂಶ ಸಮಾನವಾಗಿ ಕಾಣುತ್ತದೆ. ''ಗಂಡ ಮನೆಗೆ ಒಡೆಯನಲ್ಲ, ಹೆಂಡತಿ ಮನೆಗೆ ಒಡತಿಯೆ, ಒಡತಿಯಲ್ಲ'' ಎಂದು ಸಾರಿದ ಅಕ್ಕ ಕೊನೆಗೆ ತಲುಪುವುದು ''ಚೆನ್ನಮಲ್ಲಿಕಾರ್ಜುನನೇ ನೀ ಮನೆಯೊಡೆಯನೆಂದು ನಾ ದುಡಿವೆ ತೊತ್ತುಗೆಲಸವನು'' (ಅಕ್ಕಗಳ ವ. ಪು. ೨೫) ಎಂಬ ದೈವಿಕ ಯಜಮಾನಿಕೆಗೆ ತನ್ನನ್ನು

ಸಮರ್ಪಿಸಿಕೊಳ್ಳುವ ಶರಣತ್ವದ ಗುರಿಯನ್ನು. ಅದೇ ರೀತಿ ಕಾಳವ್ವೆ–

''ಶಿವಗೆ ಪಂಚಾಮೃತವ ಕರೆವ ಪಶುವ ತಿಂಬ ಮಾದಿಗ ಕೀಳುಜಾತಿಯೆಂಬರು ಅವರೆಂತು ಕೀಳುಜಾತಿಯಾದರು?'' ಎಂದು ಪ್ರಶ್ನಿಸುವ ನೆಲೆಯಿಂದ ಹೊರಟು :

ಶಿವಭಕ್ತಸ್ಯ ನಿಂದಕಃ ಕೋಟಿ ಜನ್ಮನಿ ಸೂಕರಃ
ಜನ್ಮಾಂತರೇ ಭವೇತ್ ಕುಷ್ಠೀ ದಾಸೀಗರ್ಭೇಷು ಜಾಯತೇ ॥

ಎಂಬ ಶಿಷ್ಯ ಅರಿವನ್ನು ಗಳಿಸಿ, ''ತನ್ನ ಪ್ರಾಣದ ಮೇಲೆ ಬಂದಡೆ ನಿಷ್ಠೆಯ ಬಿಡಬಾರದು'' ಎಂಬ ನೆಲೆಯನ್ನು ಸೇರುತ್ತಾಳೆ. (ಶಿ. ಶ. ವ., ಪು. ೧೦೦) ಹೀಗೆ ಶಿವಶರಣೆಯರ ಪಯಣದ ದಾರಿ, ಆಧ್ಯಾತ್ಮಿಕ ವಿಕಾಸಕ್ಕೆ ಮುಖ್ಯವಾಗಿ ಸೇರಿತ್ತು. ಅವರ ವಾಸ್ತವ ಬದುಕುಗಳ ಸಮಸ್ಯೆಗಳಿಗೆ ಅವರು ಕಂಡುಕೊಂಡದ್ದು ಆಧ್ಯಾತ್ಮಿಕ ಪರಿಹಾರವನ್ನು, ಒಂದು ಸಮುದಾಯ ಪಡೆ ಒಟ್ಟಾಗಿ ನಿಂತು ಒಂದು ಗುರಿಯತ್ತ ಶ್ರಮಿಸಿದ್ದಂಥ ಪರಿಸರದಲ್ಲಿ ಈ ಮಹಿಳೆಯರ ಪ್ರತಿಭೆ, ಕ್ರಿಯಾಶಕ್ತಿ ಪ್ರಖರವಾಗಿ ಬೆಳಕಿಗೆ ಬಂತು. ಶಿವಶರಣ ಆಂದೋಲನದ ಕಾವು ತಗ್ಗಿ, ರಾಜಕೀಯಕ್ಕೆ ಆಧ್ಯಾತ್ಮಿಕ ಕಳಕಳಿ ಬಲಿಯಾಗತೊಡಗಿದಾಗ, ಸಮಾಜದ ಗುಪ್ತ, ಸುಪ್ತವಲಯಗಳಿಂದ ಮೈಗೂಡಿದ್ದ ಜನಶಕ್ತಿ ಕರಗಿ ಹೋದಂತೆ, ಮಠ ಮಾನ್ಯತೆಗಳು ತಲೆಯೆತ್ತಿ ಶರಣ ಧರ್ಮವು ವೀರಶೈವ ಮತವಾದಾಗ, ಹಳೆಯ ಪಿತೃಪ್ರಧಾನ ಮೌಲ್ಯಗಳೂ ತಮ್ಮ ಹಿಡಿತ ಸಾಧಿಸಿದವು. ಅದರೊಂದಿಗೆ ಸ್ತ್ರೀಯರು ಸಾಧಿಸಿದ್ದ ಪ್ರಗತಿಯ ಪ್ರಭೆಯೂ ಮಾಯವಾಗಿರಬೇಕು.

*ಪ್ರಸಾದ, ಜುಲೈ-ಆಗಸ್ಟ್, ೧೯೯೭, ಪು. ೨-೧೬*

# ೮. ಹೊಸಗನ್ನಡ
# ಸಾಹಿತ್ಯೋದಯ ಶೋಧ

# ೭೧. ಹೊಸ ಸಾಹಿತ್ಯದ ಉದಯ, ಮೊದಲ ಹಂತ

● ರಂ. ಶ್ರೀ. ಮುಗಳಿ

ಈಗ ಅರ್ವಾಚೀನ ಕಾಲದಲ್ಲಿ ಕನ್ನಡ ಸಾಹಿತ್ಯ ಹೇಗೆ ಮೊದಲಾಯಿತು, ಹೇಗೆ ಬೆಳೆಯಿತು ಎಂಬುದನ್ನು ವಿವೇಚಿಸಲಾಗುವುದು. ಮೊದಲಿನ ಎರಡು ಕಾಲಗಳಾದ ಪ್ರಾಚೀನ ಕಾಲ ಮತ್ತು ಮಧ್ಯಕಾಲಗಳ ಹಾಗೆ ಈ ಕಾಲವೂ ಎಂದು ಮೊದಲಾಯಿತು ಎಂಬುದನ್ನು ಬೆರಳಿಟ್ಟು ಹೇಳುವುದು ಕಠಿಣ. ರಾತ್ರಿಯ ಕೊನೆಗೆ ಕತ್ತಲೆಯ ಮುಸುಕಿನೊಡನೆ ಬೆಳಕು ಹರಿಯುತ್ತದೆ. ಬೆಳಕು ಹರಿದ ಹೊತ್ತು ಸರಿಯಾಗಿ ಯಾವುದು ಎಂಬುದನ್ನು ಗುರುತಿಸುವುದು ಕಷ್ಟ. ಆದರಂತೆ ಹಳೆಯ ಸಾಹಿತ್ಯದ ಲಕ್ಷಣಗಳೊಡನೆ ಬೆರೆತು ಹೊಸ ಸಾಹಿತ್ಯ ಮೆಲ್ಲನೆ ತಲೆದೋರುತ್ತದೆ. ಅದು ಇಂಥ ಸಮಯಕ್ಕೆ ತಾನೆ ತಾನಾಗಿ ಮೊದಲಾಯಿತೆಂದು ಹೇಳಲು ಬಾರದು. ಸ್ಥೂಲವಾಗಿ ೧೯ನೆಯ ಶತಮಾನದ ಮೂರನೆಯ ದಶಕದಲ್ಲಿ ನಸುಕಾಗಿ ಮಧ್ಯದಷ್ಟರ ಹೊತ್ತಿಗೆ ಬೆಳಕಾಗಿ ಹೊಸಗನ್ನಡ ಸಾಹಿತ್ಯವು ಉದಯವಾಯಿತೆಂದು ಹೇಳಬಹುದು. ಆದರೆ ಬೆಳ್ಳಂಬೆಳಕಾದದ್ದು ಇಪ್ಪತ್ತನೆಯ ಶತಮಾನದಲ್ಲಿಯೇ ಎನ್ನಬೇಕು. ಅದರಲ್ಲಿಯೂ ನವನಿರ್ಮಿತಿಯ ಸೂರ್ಯನು ತಲೆಯೆತ್ತಿದ್ದು ಇಪ್ಪತ್ತನೆಯ ಶತಮಾನದ ಇಪ್ಪತ್ತರಿಂದ ಮುಂದೆ ಮಾತ್ರ. ಭೂಮಿಯ ಕೆಲವೊಂದು ಭಾಗದಲ್ಲಿ ಮುಂಬೆಳಗು ಬಹುಕಾಲ ಇರುವಂತೆ ಕನ್ನಡದಲ್ಲಿ ಹೊಸ ಸಾಹಿತ್ಯದ ಸಂಧಿಕಾಲವು ಸುದೀರ್ಘವಾಗಿ ಇದ್ದಿತೆಂದು ತೋರುತ್ತದೆ. ನಿಜವಾಗಿ ೧೯೨೦ರ ವರೆಗೆ ಹೊಸಗನ್ನಡದ ಸ್ವತಂತ್ರ ಪ್ರತಿಭೆ ರಂಗುರಂಗಾಗಿ ಹೊರಹೊಮ್ಮಲಿಲ್ಲ ಎಂದರೆ ತಪ್ಪಿಲ್ಲ.

ನಮ್ಮ ದೇಶದ ಉಳಿದ ಭಾಷೆಗಳಂತೆ ಕನ್ನಡದಲ್ಲಿಯೂ ಹೊಸ ಸಾಹಿತ್ಯವು ಇಂಗ್ಲಿಷ್ ವಿದ್ಯಾಭ್ಯಾಸ-ವಿಚಾರಸರಣಿ ಇವುಗಳ ತೀವ್ರ ಪ್ರಭಾವದಿಂದ ತಲೆಯೆತ್ತಿತ್ತು. ಕಳೆದ ೪೦-೫೦ ವರ್ಷಗಳಲ್ಲಿ ಸಾಹಿತ್ಯದ ವಿಷಯ, ಆಶಯ, ರೂಪ, ಶೈಲಿಗಳಲ್ಲಿ ಈ ಪ್ರಭಾವವು ಸುಸ್ಪಷ್ಟವಾಗಿದೆ. ಜೊತೆಗೆ ಹೊಸ ಅಭಿವ್ಯಕ್ತಿಗಾಗಿ ಹಾತೊರೆಯುವ ಅಂತಃಪ್ರೇರಣೆ ಅದರಲ್ಲಿ ಇದ್ದಿತೆಂಬುದನ್ನು ನೆನೆಯಬೇಕು. ಅಲ್ಲದೆ ಹಳೆಯದರಲ್ಲಿ ಹೊಸದನ್ನು ಹೊಂದುಗೂಡಿಸಿಕೊಂಡು ಹಿತಮಿತವಾದ ಹೊಸತನವನ್ನು ಸಾಧಿಸಬೇಕು ಎಂಬ ಸಮನ್ವಯದೃಷ್ಟಿಯೂ ಇದ್ದಿತು. ಕನ್ನಡ ಸಂಸ್ಕೃತಿಯ ಉತ್ತಮಾಂಶದಲ್ಲಿ ಸಾವಿರಾರು ವರ್ಷಗಳಿಂದ ಈ ದೃಷ್ಟಿ ಬೆಳೆದು ಬಂದಿತ್ತು. ಹೊಸತನದ ಅತಿರೇಕಗಳಿಗೆ ಇದು ಬಹುಮಟ್ಟಿಗೆ ಕಡಿವಾಣ ಹಾಕಿತು. ಹೀಗೆ ಹೊರಗಿನ ಪ್ರಭಾವಗಳಿಗೆ ಒಳಗಿನ ಪ್ರೇರಣೆ ಮತ್ತು ಪರಂಪರೆಯಿಂದ ಬಂದ ಸಮನ್ವಯದೃಷ್ಟಿ ಇವು ಕೂಡಿಕೊಂಡು ಹೊಸಗನ್ನಡ ಸಾಹಿತ್ಯದ ಜನನಕ್ಕೆ ಕಾರಣವಾದುವು. ಬರೀ ಹೊರಗಿನ ಪ್ರಭಾವಗಳಿಂದಲೇ ಹೊಸ ಸಾಹಿತ್ಯವು ಹುಟ್ಟಿತೆನ್ನುವುದು ಪೂರ್ಣ ಸತ್ಯವಲ್ಲ.

ಪಾಶ್ಚಿಮಾತ್ಯರು ವ್ಯಾಪಾರಿಗಳಾಗಿ ಸಾಹಸಿಕರಾಗಿ ಬಹು ಪ್ರಾಚೀನ ಕಾಲದಿಂದ ಭಾರತಕ್ಕೆ ಬರುತ್ತಿದ್ದರು. ಪಶ್ಚಿಮ ಸಮುದ್ರದ ಮಾರ್ಗವಾಗಿ ಅವರು ಕರ್ನಾಟಕದಲ್ಲಿ ಕಾಲಿಟ್ಟು ಸಂಚಾರಮಾಡಿ ಹೋಗುತ್ತಿದ್ದರು. ಆದರೆ ಬ್ರಿಟಿಷರ ಕಾಲದಲ್ಲಿ ಆದಷ್ಟು ಅವರ ಜೀವನ ಮತ್ತು ವಾಙ್ಮಯಗಳ ಪರಿಣಾಮವು ಹಿಂದೆ ಯಾವ ಕಾಲದಲ್ಲಿಯೂ ಆಗಲಿಲ್ಲ. ಅವರು ಮೂಲತಃ ವ್ಯಾಪಾರಕ್ಕಾಗಿ ಬಂದು ಭಾರತೀಯ ಜನತೆಯ ದೋಷದೌರ್ಬಲ್ಯಗಳನ್ನರಿತು

ಭೇದನೀತಿಯಿಂದ ಮತ್ತು ಶಸ್ತ್ರಬಲದಿಂದ ಕ್ರಮೇಣ ಇಡೀ ದೇಶವನ್ನು ತಮ್ಮ ವಶದಲ್ಲಿ ತೆಗೆದುಕೊಂಡರು. ತಾವು ಆಳುತ್ತಿರುವ ಜನಕ್ಕೂ ತಮಗೂ ಸಂಪರ್ಕವಿರಲೆಂದು ಕೆಲವರಿಗೆ ಅವರು ಇಂಗ್ಲೀಷ್ ವಿದ್ಯೆಯನ್ನು ಕಲಿಸಿದರು. ಅದೇ ಅವರಿಗೆ ಮುಳುವಾಯಿತು. ಇಲ್ಲಿ ನಿಯತಿಯ ಅಗಾಧವಾದ ಕೈವಾಡವು ಕಾಣುತ್ತದೆ. ಯಾವ ಶಿಕ್ಷಣದ ಬಲದಿಂದ ಭಾರತೀಯರನ್ನು ಬ್ರಿಟಿಷ್ ಸಾಮ್ರಾಜ್ಯದ ಅಂಧಭಕ್ತರನ್ನಾಗಿ ಮಾಡಿ ಚಿರದಾಸ್ಯದಲ್ಲಿಡ ಬೇಕೆಂದು ಆಳರಸರು ಯೋಚಿಸಿದ್ದರೋ ಅದೇ ಶಿಕ್ಷಣದ ಮೂಲಕ ಭಾರತೀಯರಲ್ಲಿ ಸ್ವಾತಂತ್ರ್ಯಪ್ರೇಮ, ದೇಶಭಕ್ತಿಗಳು ಸಿಡಿದೆದ್ದುವು. ಹುಚ್ಚನ ಕನಸಿನಂತೆ ತೋರಿದ ಸ್ವತಂತ್ರ ಭಾರತವು ಸತ್ಯಸೃಷ್ಟಿಗೆ ಇಳಿಯಿತು. ಕರ್ನಾಟಕವೆಂಬ ಹೇಳ ಹೆಸರೇ ಇಲ್ಲದಂತೆ ಬ್ರಿಟಿಷರು ಅದನ್ನು ಹತ್ತಾರು ಚೂರು ಮಾಡಿ ಅವರಿವರ ಉಡಿಯಲ್ಲಿ ತೂರಿದರು. ಸಾಹಿತ್ಯ ಸಂಸ್ಕೃತಿಗಳ ಮಾತಂತಿರಲಿ, ಕನ್ನಡ ಭಾಷೆ ಉಳಿಯುವುದು ಕೂಡ ಕಷ್ಟಸಾಧ್ಯವಾಯಿತು. ಬೇರೆ ಬೇರೆ ಭಾಷೆಗಳ ಆಘಾತಕ್ಕೆ ಸಿಲುಕಿ ಅದು ವಿಕಾರವಾಯಿತು. ಕನ್ನಡಿಗರು ಕನ್ನಡತನವನ್ನು ಮರೆತರು, ತಮಗಾದ ವಿಕಾರವನ್ನೇ ಸಹಜ ಸ್ಥಿತಿಯೆಂದು ತಿಳಿದರು. ಇಂಥ ಪರಿಸ್ಥಿತಿಯಲ್ಲಿ ಇಂಗ್ಲಿಷ್ ವಿದ್ಯಾಭ್ಯಾಸವು ಈ ಜನವನ್ನು ಇಬ್ಬಗೆಯ ಪರಾಧೀನತೆಯಲ್ಲಿ ಮುಳುಗಿಸಿತ್ತು. ಆದರೆ ಸುದೈವದಿಂದ ಭಾರತೀಯ ಸ್ವಾತಂತ್ರ್ಯಪ್ರೇಮದೊಡನೆ ವಿದ್ಯಾವಂತರಾದ ಕನ್ನಡಿಗರಲ್ಲಿ ಕರ್ನಾಟಕದ ಅಭಿಮಾನವೂ ತಲೆದೋರಿತು. ಕನ್ನಡಭಾಷೆ, ಸಾಹಿತ್ಯ, ಸಂಸ್ಕೃತಿಗಳ ಪುನರುಜ್ಜೀವನವನ್ನು ಅವರು ತಮ್ಮ ಗುರಿಯೆಂದು ಇಟ್ಟುಕೊಂಡರು. ಮೊದಮೊದಲು ತಲೆತಿರುಕರೆಂದು ಬಿರುದು ಪಡೆದ ಕೆಲವರಲ್ಲಿ ಕಂಡುಬಂದ ಕನ್ನಡ ಪ್ರೇಮವು ಬರಬರುತ್ತ ನಾಡಿನ ಮೂಲೆಮೂಲೆಯಲ್ಲಿ ಹಬ್ಬಿತು. 'ಸ್ವತಂತ್ರ ಭಾರತ, ಏಕತಂತ್ರ ಕರ್ನಾಟಕ' ಇದು ಎಚ್ಚತ್ತ ಕರ್ನಾಟಕದ ಮಂತ್ರವಾಯಿತು. ಈ ಅದ್ಭುತ ಜಾಗೃತಿಗೆ ಇಂಗ್ಲಿಷ್ ವಿದ್ಯೆಯ ಮೂಲಕ ದೊರೆತ ಅರಿವೇ ಪ್ರಮುಖಕಾರಣವೆಂದ ಮೇಲೆ ಇದಕ್ಕಿಂತ ವಿಧಿವೈಚಿತ್ರ್ಯವೇನಿರಬಹುದು ?

ಹಲವಾರು ಆಡಳಿತಗಳಲ್ಲಿ ಹರಿದು ಹಂಚಿಹೋದ ಅಂದಿನ ಕರ್ನಾಟಕವು ಹಲವಾರು ರೀತಿಯಲ್ಲಿ ಬೇರೆ ಬೇರೆ ಕಾಲದಲ್ಲಿ ಪಾಶ್ಚಿಮಾತ್ಯ ಪ್ರಭಾವಕ್ಕೆ ಒಳಗಾಯಿತು. ಮೊಟ್ಟಮೊದಲು ಮದ್ರಾಸ್ ಆಧಿಪತ್ಯಕ್ಕೆ ಸೇರಿದ ದಕ್ಷಿಣ ಕನ್ನಡದಲ್ಲಿ ಇಂಗ್ಲಿಷ್ ವಿದ್ಯೆಯ ಪ್ರಸಾರದಿಂದ ಹೊಸ ದೃಷ್ಟಿ ಮೊಳೆದೋರಿತು. ನೂರು ವರ್ಷಗಳ ಹಿಂದೆ ಸ್ಥಾಪಿತವಾದ ಕಲಕತ್ತೆ, ಮುಂಬಯಿ ನಗರಗಳಲ್ಲಿಯ ವಿಶ್ವವಿದ್ಯಾಲಯಗಳಂತೆ ಅಷ್ಟೇ ಹಳೆಯದಾದ ಮದ್ರಾಸ್ ವಿಶ್ವವಿದ್ಯಾಲಯವು ಹೊಸ ವಿದ್ಯೆಯ ವಿಸರಣಕೇಂದ್ರವಾಯಿತು. ಅಲ್ಲಿ ಶಿಕ್ಷಣ ಪಡೆದು ಬಂದ ದಕ್ಷಿಣ ಕನ್ನಡದ ವಿದ್ಯಾವಂತರು ಜೀವನ ಮತ್ತು ಸಾಹಿತ್ಯದ ಬಗ್ಗೆ ನವೀನ ದೃಷ್ಟಿಯನ್ನು ತಳೆದರು. ವಿಶೇಷವಾಗಿ ಧರ್ಮಪ್ರಸಾರಕ್ಕೆಂದು ಧಾವಿಸಿ ಬಂದ ಕ್ರಿಶ್ಚನ್ ಮಿಶನರಿ ಜನರು ಕನ್ನಡ ನುಡಿಗೆ ಎಂದೂ ಮರೆಯಲಾರದ ಸೇವೆಯನ್ನು ಸಲ್ಲಿಸಿದರು. ಈಗೆ ಪ್ರಚಾರದಲ್ಲಿರುವ ಕನ್ನಡ ಲಿಪಿಯನ್ನು ಅವರೇ ಅಂದು ಪ್ರಚಲಿತ ಲಿಪಿಯ ಆಧಾರದ ಮೇಲೆ ರಚಿಸಿಕೊಂಡರು ; ಕನ್ನಡದ ಮೊದಲ ನೆಯ ಅಚ್ಚುಮನೆಯನ್ನು ಆರಂಭಿಸಿದರು, ಇಷ್ಟೇ ಅಲ್ಲ, ಪ್ರೌಢವಾದ, ಕನ್ನಡ ವ್ಯಾಸಂಗಕ್ಕೆ ಆವಶ್ಯಕವಾದ ವ್ಯಾಕರಣ, ಛಂದಸ್ಸು, ನಿಘಂಟು ಇವಕ್ಕೆ ಸಂಬಂಧಿಸಿದ ಉದ್ಗ್ರಂಥಗಳನ್ನು ಅವರು ಕನ್ನಡ ಪಂಡಿತರ ಸಹಾಯದಿಂದ ಬರೆದು ಪ್ರಕಟಿಸಿದರು. ಕೆರಿ, ಮ್ಯಾಕೆರಲ್, ರೀವ್, ಕಿಟೆಲ್, ಕಾಲ್ಡವೆಲ್ ಮುಂತಾದವರ ಹೆಸರುಗಳನ್ನು ಇಲ್ಲಿ ಗೌರವಪೂರ್ವಕವಾಗಿ ನೆನೆಯ ಬೇಕು. ಮೈಸೂರು ಸಂಸ್ಥಾನದಲ್ಲಿಯೂ ರಾಜಾಶ್ರಯದ ಮೂಲಕ ಸಾಹಿತ್ಯ ಸಂಶೋಧನೆ

ಮತ್ತು ಪ್ರಕಟನೆ ಮೊದಲಾದುವು. ಶಿಲಾಶಾಸನಗಳ ಸಂಗ್ರಹ ಮತ್ತು ಸಂಪಾದನೆ ಬಹು ದೊಡ್ಡ ಪ್ರಮಾಣದಲ್ಲಿ ನಡೆಯಿತು. ಈ ಸಂದರ್ಭದಲ್ಲಿ 'ಎಪಿಗ್ರಾಫಿಯಾ ಕರ್ನಾಟಿಕ'ದ ಅನೇಕ ಸಂಪುಟಗಳನ್ನು ವಿದ್ವತ್‌ಪ್ರಪಂಚಕ್ಕೆ ಒದಗಿಸಿಕೊಟ್ಟ ಲ್ಯೂಯಿ ರೈಸ್ ಅವರ ಹೆಸರನ್ನು ಎತ್ತಿ ಹೇಳಬೇಕು. ಈ ಸಂಪುಟಗಳಲ್ಲಿ ಬೆಳಕಿಗೆ ಬಂದ ಕರ್ನಾಟಕದ ಶಿಲಾಶಾಸನಗಳು ಕನ್ನಡಿಗರ ಪ್ರಾಚೀನ ಇತಿಹಾಸ ಮತ್ತು ಸಂಸ್ಕೃತಿಗಳ ಅರಿವನ್ನು ಉಂಟುಮಾಡಿಕೊಟ್ಟುವು. ನಾಡುನುಡಿಗಳ ಅಭಿಮಾನಕ್ಕೆ ವಿಪುಲಸಾಮಗ್ರಿ ದೊರೆಯಿತು. ಶಾಸನಗಳಲ್ಲದೆ ಹಳೆಯ ಕಾವ್ಯ ಮತ್ತು ಶಾಸ್ತ್ರಗ್ರಂಥಗಳು ಪ್ರಕಟವಾಗತೊಡಗಿದುವು. ಭೂಮಿಯಲ್ಲಿ ಅಡಗಿಹೋದ ಭವ್ಯ ದೇವಾಲಯವೊಂದು ಮೇಲೆದ್ದು ನಿಂತಹಾಗೆ ಕನ್ನಡ ಸಂಸ್ಕೃತಿಯ ಭವ್ಯ ಚಿತ್ರವು ತಲೆಯೆತ್ತಿ ನಿಂತಿತು. ಇದರಿಂದ ಹೊಸ ಸಾಹಿತ್ಯದಲ್ಲಿ ಪ್ರಮುಖವಾಗಿ ಕಂಡುಬರುವ ಭಾವನಾತ್ಮಕ ಆವಿಷ್ಕಾರಕ್ಕೆ ಉದ್ದೀಪನೆ ದೊರೆಯಿತು. ಹಳೆಯ ಸಾಹಿತ್ಯದಲ್ಲಿ ಅಪರೂಪವಾದ ರಾಷ್ಟ್ರೀಯ ಕಾವ್ಯವು ಹೆಚ್ಚಿನ ಪ್ರಮಾಣದಲ್ಲಿ ನಿರ್ಮಾಣವಾಯಿತು. ಉತ್ತರ ಕರ್ನಾಟಕದಲ್ಲಿ ಕವಿದ ಕತ್ತಲೆ ಸರಿಯಲು ಕಾಲ ಹಿಡಿಯಿತು. ಅಲ್ಲಿ ಇಂಗ್ಲಿಷ್ ವಿದ್ಯೆಯ ಪ್ರಸಾರವು ತೀರ ಮಂದಗತಿಯಿಂದ ಸಾಗಿತು. ಮಾತ್ರವಲ್ಲದೆ ವಿದ್ಯಾವಂತರ ಮನಸ್ಸನ್ನು ಅಂಕಿತದಲ್ಲಿಟ್ಟುಕೊಂಡ ಅನ್ಯಭಾಷೆಗಳ ವರ್ಚಸ್ಸು ಬೇಗ ಅಳಿಯಲಿಲ್ಲ. ಇಂದಿಗೂ ಅದರ ಅಚ್ಚು ಪೂರ್ತಿಯಾಗಿ ಅಳಿಯದೆ ಇದೆ ಎಂದಮೇಲೆ ಹಿಂದೆ ಹೇಗಿತ್ತು ಎಂಬುದನ್ನು ಊಹಿಸಿ ತಿಳಿಯಬಹುದು. ಅಲ್ಲಿ ೧೯ನೆಯ ಶತಮಾನದ ಉತ್ತರಾರ್ಧದಲ್ಲಿ ಸ್ಥಾಪಿತವಾದ ಶಾಲೆಗಳಲ್ಲಿ ಕನ್ನಡ ಜನಕ್ಕೆ ಮರಾಠಿಯನ್ನು ಕಲಿಸುತ್ತಿದ್ದರು. ಎಂಟು ಹತ್ತು ವರ್ಷಗಳು ಹೀಗೆ ಗತಿಸಿದ ಮೇಲೆ ಈ ಭಾಗದ ಜನಭಾಷೆ ಕನ್ನಡವೆಂದು ಅಂದಿನ ವಿದ್ಯಾಖಾತೆಗೆ ಜ್ಞಾನೋದಯವಾಯಿತು! ಅದೂ ವಿದ್ಯಾಧಿಕಾರಿಗಳಾಗಿ ಬಂದ ರಸೆಲ್ ಎಂಬ ವಿದೇಶೀಯರ ವರದಿಯ ಮೂಲಕ! ಕನ್ನಡದಲ್ಲಿಯೇ ಶಿಕ್ಷಣ ಕೊಡಬೇಕೆಂದು ಅವರು ತೀರ್ಮಾನಿಸಿದರು. ಆದರೆ ಪಠ್ಯ ಪುಸ್ತಕಗಳಾವೂ ಇರಲಿಲ್ಲ. ಮೊದಲನೆಯ ಪಠ್ಯ ಪುಸ್ತಕಗಳು ಹರಕುಮುರಕ ಕನ್ನಡದಲ್ಲಿದ್ದುವು. ''ಹೊಸದಾಗಿ ಕನ್ನಡದಲ್ಲಿ ಪುಸ್ತಕಗಳು ಭಾಷಾಂತರವಾಗಬೇಕೆಂದು ಒಬ್ಬ ಕನ್ನಡ ತಿಳಿಯದ ಮನುಷ್ಯನನ್ನೇ ನಿಯಮಿಸಲಾಗಿತ್ತು! ಆದರೆ ರಸೆಲ್ಲರ ಪ್ರಯತ್ನದಿಂದ ಕನ್ನಡ ಜನರೂ ಸಿಕ್ಕರು.''[೧] ಈ ಮುಂದೆ ಕನ್ನಡದಲ್ಲಿ ಹಲವು ಪತ್ರಿಕೆಗಳೂ ಪಠ್ಯ ಪುಸ್ತಕಗಳೂ ಪ್ರಕಟವಾಗತೊಡಗಿದುವು. ಈ ಕಾರ್ಯದಲ್ಲಿ ಅನೇಕ ಕನ್ನಡ ವಿದ್ವಾಂಸರೂ ಶಿಕ್ಷಣಾಧಿಕಾರಿಗಳೂ ಮನಮುಟ್ಟಿ ದುಡಿದು ವಿದ್ಯಾಪ್ರಸಾರಕ್ಕೆ ತಳಹದಿಯನ್ನು ಹಾಕಿಕೊಟ್ಟರು. ಈ ಸಂದರ್ಭದಲ್ಲಿ ಡೆಪ್ಯೂಟಿ ಚೆನ್ನಬಸಪ್ಪ ಮತ್ತು ವೆಂಕಟ ರಂಗೋಕಟ್ಟಿ ಇವರನ್ನು ಉತ್ತರ ಕರ್ನಾಟಕದಲ್ಲಿಯ ಕನ್ನಡ ವಿದ್ಯಾಭ್ಯಾಸಕ್ಕೆ ಅಡಿಗಲ್ಲನ್ನು ಹಾಕಿದ ಆದ್ಯರೆಂದು ಕೃತಜ್ಞತೆಯಿಂದ ನೆನೆಯಬೇಕು. ವಿದೇಶೀಯರ ಅನ್ಯಾಯಬುದ್ಧಿಯಿಂದ ಒಡೆದುಹೋದ ಕನ್ನಡ ನಾಡಿನಲ್ಲಿ, ಅವರಲ್ಲಿ ಸುಜ್ಞರಾದ ಕೆಲವರ ನ್ಯಾಯದೃಷ್ಟಿಯಿಂದ ಸರಿಯಾದ ವಿದ್ಯಾಭ್ಯಾಸ ಕ್ರಮವು ಮೊದಲಾಯಿತು, ಕನ್ನಡ ಅಭಿಮಾನವನ್ನು ಕೆರಳಿಸಿತು. ಆದರೂ ಹಳೆಯ ಸಂಸ್ಕಾರಗಳು ಸರಸರನೆ ಅಳಿಯಲಿಲ್ಲ. ಇಂಗ್ಲಿಷ್ ಪದ್ಧತಿಯ ವಿದ್ಯಾಭ್ಯಾಸ, ಅದರಿಂದ ಇಂಗ್ಲಿಷ್ ಸಾಹಿತ್ಯದಲ್ಲಿಯ ಉತ್ತಮೋತ್ತಮ ಗ್ರಂಥಗಳ ವಾಚನ, ಪಾಶ್ಚಿಮಾತ್ಯ ವಿಚಾರಗಳ ಮನನ ಇವೆಲ್ಲ ಕ್ರಮೇಣ ಆಗತೊಡಗಿದುವು. ಇಪ್ಪತ್ತನೆಯ ಶತಮಾನದ ಉದಯವಾಗುವಷ್ಟರ

೧ ದ. ರಾ. ಬೇಂದ್ರೆ: ಸಾಹಿತ್ಯ ಸಂಶೋಧನೆ (ಇಂದಿನ ಕನ್ನಡ ವಾಙ್ಮಯದ ಹಾದಿ) ಪು. ೧೮೨

ಹೊತ್ತಿಗೆ ಜೀವನ ಮತ್ತು ಸಾಹಿತ್ಯದ ಬಗ್ಗೆ ಹೊಸ ದೃಷ್ಟಿಯೂ ಸುಸ್ಪಷ್ಟವಾಗಿ ಉದಯವಾಯಿತು. ಸಣ್ಣಕತೆ, ಭಾವಗೀತೆ, ಕಾದಂಬರಿ ಇತ್ಯಾದಿ ಸಾಹಿತ್ಯರೂಪಗಳಲ್ಲಿ ಕೈಯಾಡಿಸಬೇಕೆಂದೂ ಕನ್ನಡ ಸಾಹಿತ್ಯಕ್ಕೆ ತಮ್ಮ ಹೊಸ ಕಾಣಿಕೆಗಳನ್ನು ಸಲ್ಲಿಸಬೇಕೆಂದೂ ಲೇಖಕರು ಮುಂದೆ ಬಂದರು. ಕಾವ್ಯ ಪ್ರಪಂಚದಲ್ಲಿಯಂತೂ ವರ್ಡ್ಸ್‌ವರ್ಥ್, ಕೀಟ್ಸ್, ಶೆಲೆ ಇತ್ಯಾದಿ ಇಂಗ್ಲಿಷ್ ಕವಿಗಳ ಸ್ಫೂರ್ತಿಯಿಂದ ಹೊಸ ಶಕ್ತಿ ಸಂಚಾರವಾಯಿತು. ಸಾವಿರ ವರ್ಷಗಳ ಹಿಂದಿನ ಇತಿಹಾಸದಲ್ಲಿ ವಿರಳವಾಗಿ ಕಂಡುಬಂದ ವ್ಯಕ್ತಿತ್ವದ ವೈವಿಧ್ಯವು ಕಾವ್ಯರೂಪದಲ್ಲಿ ಈಗ ಹೊರಹೊಮ್ಮಿತು.

## ಹೊಸ ಸಾಹಿತ್ಯದ ಮೊದಲ ಹಂತ

(ಕ್ರಿ.ಶ. ೧೮೨೦-೧೯೨೦)

ಸ್ಥೂಲವಾಗಿ ೧೯ನೆಯ ಶತಕದ ಮೂರನೆಯ ದಶಕದಲ್ಲಿ ಹೊಸ ಸಾಹಿತ್ಯವು ನಸುಕು ಕಂಡಿತೆಂದು ಹಿಂದೆ ಹೇಳಿದೆ. ಇದಕ್ಕೆ ಮುಖ್ಯ ಕಾರಣವೆಂದರೆ ಕ್ರಿ.ಶ. ೧೮೨೩ರಲ್ಲಿ ಬರೆದು ಮುಗಿಸಲಾದ ಕೆಂಪುನಾರಾಯಣನ 'ಮುದ್ರಾಮಂಜೂಷ' ಎಂಬ ಗದ್ಯಗ್ರಂಥದಲ್ಲಿ ಹಳೆಯದರೊಡನೆ ಸೇರಿ ಬಂದಿರುವ ಹೊಸಗನ್ನಡದ ನುಡಿಕಟ್ಟು. ಈ ಗ್ರಂಥದ ವಿಷಯವನ್ನು ಈ ಮೊದಲು ಪ್ರಸ್ತಾಪಿಸಲಾಗಿದೆ. ಎದ್ದು ಕಾಣುವಂತೆ ಇದರಲ್ಲಿ ಹೊಸದರ ನಿದರ್ಶನವನ್ನು ಕಾಣುತ್ತಿದ್ದರೂ ಹೊಸ ಸಾಹಿತ್ಯಕ್ಕೆ ಪೂರ್ವ ಪೀಠಿಕೆ ಇದಕ್ಕೆ ತುಸು ಮುಂಚಿತವಾಗಿಯೇ ಸಿದ್ಧವಾಗುತ್ತಿತ್ತು. ಕೆಂಪುನಾರಾಯಣನಿಗೆ ಆಶ್ರಯವನ್ನೂ ಸ್ಫೂರ್ತಿಯನ್ನೂ ಕೊಟ್ಟ ಮುಮ್ಮಡಿ ಕೃಷ್ಣರಾಜನು ೧೭೯೪ರಿಂದ ೧೮೬೮ರ ವರೆಗೆ ಆಳಿದ ಮೈಸೂರು ದೊರೆ. ಕನ್ನಡ-ಸಂಸ್ಕೃತ ಎರಡರಲ್ಲಿಯೂ ಪಂಡಿತನಾಗಿ ಐವತ್ತರವರೆಗೆ ಅವನು ಗ್ರಂಥಗಳನ್ನು ಬರೆದನೆಂದು ಹೇಳುತ್ತಾರೆ. ಇದರಲ್ಲಿ ಕೆಲವನ್ನು ಅವನ ಆಸ್ಥಾನ ಕವಿಗಳು ಅವನ ಹೆಸರಿನಲ್ಲಿ ಬರೆದಿರ ಬಹುದು. ಎರಡು ಮೂರನ್ನು ಬಿಟ್ಟರೆ ಇವೆಲ್ಲ ಗದ್ಯರೂಪವಾಗಿರುತ್ತವೆ. ಇದರಿಂದ ಹೊಸ ಗನ್ನಡ ಒಂದು ವೈಶಿಷ್ಟ್ಯವಾದ ಗದ್ಯ ಪ್ರಾಧಾನ್ಯದ ಗಾಳಿ ಆಗಲೆ ಬೀಸತೊಡಗಿತ್ತೆಂದು ತಿಳಿಯ ಬಹುದು. ಮೈಸೂರು ಅರಸುಮನೆತನಕ್ಕೆ ಸೇರಿದ ಅಳಿಯ ಲಿಂಗರಾಜನು (೧೮೨೩-೧೮೭೪) ಸುಮಾರು ಇದೇ ಕಾಲದಲ್ಲಿದ್ದು ಚಂಪು, ಸಾಂಗತ್ಯ ಈ ಮುಂತಾದ ಹಲವು ರೂಪಗಳಲ್ಲಿ ೪೭ ಗ್ರಂಥಗಳನ್ನು ರಚಿಸಿದನು. ಹೀಗೆ ಇಬ್ಬರು ದೊರೆಗಳು ಹಿಂದೆ ಯಾರೂ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಬರೆಯದಷ್ಟು ಹೇರಳವಾಗಿ ಗ್ರಂಥರಚನೆಯನ್ನು ಈ ಕಾಲದಲ್ಲಿ ಮಾಡಿದರೆಂದು ಹೆಮ್ಮೆ ಪಡಬಹುದಾದರೂ ಅದರ ಬಹುಭಾಗವು ರಚನೆ ಮಾತ್ರ, ಕೃತಿಯಲ್ಲ ಎನ್ನಬಹುದು. ೧೯ನೆಯ ಶತಮಾನದ ಹಣೆಬರಹವೇ ಹೀಗೆಂದು ತೋರುತ್ತದೆ. ರಾಜಾಶ್ರಯದಿಂದ ದೊರೆತ ಸ್ವಾಸ್ಥ್ಯದಲ್ಲಾಗಲಿ ಯಾವ ಆಶ್ರಯವೂ ಇಲ್ಲದೆ ಇರುವ ಅಸ್ವಾಸ್ಥ್ಯದಿಂದಾಗಲಿ ವಿಪುಲವಾದ ಗ್ರಂಥಗಳು ಹುಟ್ಟಿ ಹೊಸಗನ್ನಡದ ಪೀಠಿಕೆಯನ್ನು ಹಾಕಿದ್ದರೂ ಅವುಗಳಲ್ಲಿ ನೈಜ ಪ್ರತಿಭೆಯ ಹೊಳಪು ಅಪರೂಪವಾಗಿ ಕಾಣುತ್ತದೆ. ಬರವಣಿಗೆ ಹಳೆಯ ರೀತಿಯಲ್ಲಿ ಯಾದರೂ ಇದೆ, ಹೊಸ ರೀತಿಯಲ್ಲಿ ಇದ್ದುದಾದರೂ ಅನುವಾದರೂಪವಾಗಿ ಇದೆ. ಇವುಗಳ ಅಂತರಂಗದಲ್ಲಿ ಮುಂಬರುವ ನಿರ್ಮಾಣಶೀಲ ಪ್ರತಿಭೆ ಹೊಂಚುಹಾಕುತ್ತಿರಬೇಕು. ಕನ್ನಡಿಗನಾದ ಕೆಂಪುನಾರಾಯಣನಿಂದ 'ಮುದ್ರಾಮಂಜೂಷ'ವು ೧೮೨೩ರಲ್ಲಿ ಒಂದು ಬಗೆಯ ಸಂಮಿಶ್ರ ಶೈಲಿಯಲ್ಲಿ ರಚಿತವಾದರೆ ಮಿಶನರಿಗಳಲ್ಲಿ ಒಬ್ಬನಾದ ರೆವರೆಂಡ್ ವಿಲಿಯಂ ಕೇರಿಯಿಂದ ೧೮೦೯ರಲ್ಲಿಯೇ ಬಾಯ್‌ಬಲ್ ಗ್ರಂಥವು ಹೊಸ ಕನ್ನಡದಲ್ಲಿ

ಅನುವಾದಿಸಲಾಗಿತ್ತು. ಮುದ್ರಣಾಲಯದಲ್ಲಿ ಅದರ ಹಸ್ತಪ್ರತಿ ಸುಟ್ಟುಹೋದ ಕಾರಣ ಮತ್ತೊಮ್ಮೆ ಪ್ರತಿಯಾಗಿ ೧೮೨೩ರಲ್ಲಿ ಅದು ಪ್ರಕಟವಾಯಿತು. ಆದ್ದರಿಂದ ೧೮೨೦ರಲ್ಲಿಯೇ ಅನುವಾದವಾಗಿ ಆಗಲೆ ಪ್ರಕಟವಾಗಬೇಕಾಗಿದ್ದ ಕೇರಿಯ ಬಾಯ್‌ಬಲ್ಲೇ ಹೊಸಗನ್ನಡದಲ್ಲಿ ಮೊದಲನೆಯ ಗದ್ಯಗ್ರಂಥವೆಂದು ಹೇಳಬೇಕಾಗುತ್ತದೆ.

ಈ ಕಾಲದಲ್ಲಿಯ ಒಂದು ವಿಶೇಷವೆಂದರೆ ಕನ್ನಡದಲ್ಲಿ ನಾಟಕ ಸೃಷ್ಟಿ. ಸಾವಿರಾರು ವರ್ಷಗಳ ಕರ್ನಾಟಕದ ಇತಿಹಾಸದಲ್ಲಿ ನೃತ್ಯನಾಟಕಪ್ರಧಾನವಾದ ರಂಗಭೂಮಿಯಿತ್ತೆಂದು ತಿಳಿಯಲು ಆಧಾರಗಳಿರುತ್ತವೆ. ಆದರೆ ೧೭ನೆಯ ಶ.ದಲ್ಲಿ ಸಿಂಗರಾರ್ಯನು ಬರೆದ 'ಮಿತ್ರವಿಂದಾಗೋವಿಂದಾ' ನಾಟಕದವರೆಗೆ, ಬರೆದ ನಾಟಕವು ಯಾವುದೂ ಇರಲಿಲ್ಲ. ೧೯ನೆಯ ಶ.ದಲ್ಲಿ ಮೊದಲಿಗೆ ಹಲವು ನಾಟಕ ಗ್ರಂಥಗಳು ಕಣ್ಣಿಗೆ ಬೀಳುತ್ತವೆ. ಅವುಗಳಲ್ಲಿ ಯಕ್ಷಗಾನರೂಪದಲ್ಲಿದ್ದುವು ಸಾಕಷ್ಟಿರುತ್ತವೆ. ಯಕ್ಷಗಾನ ಎಂಬುದು ಪರಂಪರೆಯಿಂದ ನಡೆದು ಬಂದ ಜಾನಪದ ನೃತ್ಯಗೀತ ನಾಟಕವೆಂದೂ ಕರ್ನಾಟಕದ ವೈಶಿಷ್ಟ್ಯವನ್ನು ಸಾರುವ ಪ್ರಾಚೀನ ಕಲೆಯೆಂದೂ ಹೇಳಬಹುದು. ಅದು ಹೆಚ್ಚಾಗಿ ಪದ್ಯ-ಪದಗಳುಳ್ಳ ಗಾನರೂಪವಾಗಿರುತ್ತದೆ. ಗದ್ಯಭಾಗವು ಸಮಯಸ್ಫೂರ್ತಿವಾಗಿ ನಟರ ಮುಖದಿಂದ ಬರುವುದೇ ಹೆಚ್ಚು. ಅದನ್ನು ಹಿಂದಿನ ಕಾಲದಲ್ಲಿ ಬರೆದಿಡುವ ಅಗತ್ಯ ಕಂಡಿರಲಿಲ್ಲ. ಈ ಕಾಲದಲ್ಲಿ ಮಾತ್ರ ಪರಂಪರೆ ವಿಚ್ಛೇದಹೊಂದಬಹುದೆಂಬ ಭೀತಿಯಿಂದಲೋ ಏನೋ ಬರೆದಿಡುವ ಪರಂಪರೆ ಪ್ರಾರಂಭವಾಯಿತು. ಯಕ್ಷಗಾನಕಾರರಲ್ಲಿ ಸುಬ್ಬ, ಗೇರಸೊಪ್ಪೆ ಶಾಂತಯ್ಯ ಈ ಮೊದಲಾದವರನ್ನು ವಿಶೇಷವಾಗಿ ನೆನೆಯಬೇಕು. ಸುಬ್ಬನಂತೂ ಈ ಕಲಾಪ್ರಪಂಚದಲ್ಲಿ ಸೀಮಾಪುರುಷನೆಂದು ತಿಳಿಯುತ್ತಾರೆ. ದಕ್ಷಿಣ ಮತ್ತು ಉತ್ತರ ಕನ್ನಡ ಜಿಲ್ಲೆಗಳಲ್ಲಿ ಯಕ್ಷಗಾನ ಅಥವಾ ಭಾಗವತರಾಟದ ಪ್ರಚಾರವು ಹೆಚ್ಚು. ಉತ್ತರ ಕರ್ನಾಟಕದಲ್ಲಿ ಅದು ಬಯಲಾಟ ಎಂಬ ಸ್ವರೂಪದಲ್ಲಿರುತ್ತದೆ. ಅಪರಾಳ ತಮ್ಮಣ್ಣನ 'ಕೃಷ್ಣ-ಪಾರಿಜಾತ' ನಾಟಕವು ಈ ಭಾಗದಲ್ಲಿ ಅತ್ಯಂತ ಲೋಕಪ್ರಿಯವಾಗಿದೆ. ಇದಲ್ಲದೆ ಇತರ ಪ್ರಕಾರಗಳೂ ಇರುತ್ತವೆ. ಕಂಪನಿ ನಾಟಕಗಳ ಸಂಪ್ರದಾಯವೂ ಈ ಕಾಲದ ಉತ್ತರ ಭಾಗದಲ್ಲಿ ಮೊದಲಾಯಿತು. ಅದಕ್ಕೆ ಭಾರತದ ಇತರ ಭಾಗಗಳ ಪ್ರಭಾವವು ಪ್ರೇರಕವಾಗಿರಬೇಕು. ಮೈಸೂರು ದೊರೆಗಳ ಆಶ್ರಯದಲ್ಲಿ ಈ ಬಗೆಯ ನಾಗರಿಕ ರಂಗಸ್ಥಲಕ್ಕಾಗಿ ನಾಟಕಗಳನ್ನು ಬರೆಯುವುದು ಪ್ರಾರಂಭವಾಯಿತು. ಅವು ಬಹುಶಃ ಸಂಸ್ಕೃತ ನಾಟಕಗಳ ಅನುವಾದರೂಪವಾಗಿದ್ದವು. ಅಭಿನವಕಾಲಿದಾಸನೆಂದು ಬಿರುದು ಪಡೆದ ಬಸವಪ್ಪಶಾಸ್ತ್ರಿಯೇ ಈ ದಾರಿಯಲ್ಲಿ ಮೊದಲಿಗನು. ಅವನು ಅನುವಾದಿಸಿದ ಶಾಕುಂತಳ, ಚಂಡಕೌಶಿಕ, ಉತ್ತರರಾಮ ಚರಿತೆ ಇವು ರಸಿಕರ ಮನ್ನಣೆಯನ್ನು ಪಡೆದುವು. ಇಂಗ್ಲಿಷ್ ಸಾಹಿತ್ಯದ ಮೊಟ್ಟಮೊದಲನೆಯ ಪ್ರಭಾವವೆಂಬಂತೆ ತನಗೆ ಸ್ವತಃ ಇಂಗ್ಲಿಷ್ ಬಾರದಿದ್ದರೂ ಬಲ್ಲವರಿಂದ ಅರಿತುಕೊಂಡು ಅವನು ಶೇಕ್ಸಪಿಯರನ ಆಥೆಲೊ ನಾಟಕದ ಅನುವಾದವನ್ನು 'ಶೂರಸೇನ ಚರಿತ್ರೆ' ಎಂಬ ಹೆಸರಿನಲ್ಲಿ ಬರೆದನು. ಈ ಮೊದಲು ಬಾಯ್‌ಬಲ್ ಮುಂತಾದ ಕ್ರೈಸ್ತ ಗ್ರಂಥಗಳ ಅನುವಾದವು ಕನ್ನಡದಲ್ಲಿ ಆಗಿತ್ತು. 'ಶೂರಸೇನ ಚರಿತ್ರೆ'ಯಿಂದ ಇಂಗ್ಲಿಷ್ ಸಾಹಿತ್ಯದಲ್ಲಿಯ ಕಲಾಕೃತಿಗಳ ಭಾಷಾಂತರವು ಬಹುಶಃ ಮೊದಲಾಯಿತು. 'ಶೂರಸೇನ ಚರಿತ್ರೆ'ಯ ಮೊದಲನೆಯ ಮುದ್ರಣ ೧೮೯೫ರಲ್ಲಿ ಆಯಿತು. ಅದೇ ಆಥೆಲೊ ನಾಟಕದ ಇನ್ನೊಂದು ಅನುವಾದವನ್ನು ಗುಂಡೋ ಕೃಷ್ಣಚುರಮರಿಯವರು 'ರಾಘವೇಂದ್ರ ರಾವ್' ಎಂಬ

ಹೆಸರಿನಲ್ಲಿ ೧೮೮೫ರಲ್ಲಿ ಧಾರವಾಡದತ್ತ ಬರೆದು ಪ್ರಕಟಿಸಿರುವುದನ್ನು ತಿಳಿದಿರಬೇಕು. ಮೂಲನಾಟಕದ ಹೆಸರುಗಳನ್ನು ಭಾರತೀಯ ಐತಿಹಾಸಿಕ ನಾಟಕದ ಹೆಸರುಗಳೆನ್ನುವಂತೆ ಮಾರ್ಪಡಿಸಲಾಗಿದೆ. ಆದರೆ ಕಥೆ ಸಂವಾದಗಳೆಲ್ಲ ಒಟ್ಟನಲ್ಲಿ ಮೂಲಾನುಸಾರಿಯೆನ್ನಬಹುದು. ಮೂಲದಲ್ಲಿಯ ಆಶಯವನ್ನು ಕನ್ನಡಿಸುವ ಪ್ರಥಮ ಪ್ರಯತ್ನವೆಂದು ಅದನ್ನು ಮೆಚ್ಚಬಹುದಾದರೂ ಮೂಲದ ಆವೇಶ-ಆರ್ಭಟೆಗಳು ಅನುವಾದದಲ್ಲಿ ಪೂರ್ತಿಯಾಗಿ ಬಂದಿಲ್ಲವೆನ್ನಬೇಕು. ಬಸವಪ್ಪಶಾಸ್ತ್ರಿ ಸ್ವಂತ ಸ್ಫೂರ್ತಿ ಮತ್ತು ಸ್ವಂತ ಜ್ಞಾನದಿಂದ ಅನುವಾದವನ್ನು ಮಾಡದೆ ಇದ್ದುದೇ ಇದಕ್ಕೆ ಕಾರಣವಾಯಿತು. ಅವನು ಮಾಡಿದ ಸಂಸ್ಕೃತ ನಾಟಕಗಳಲ್ಲಿ, ಅದರಲ್ಲಿಯೂ ಶಾಕುಂತಲದಲ್ಲಿ ಅವನ ಹೆಚ್ಚಿನ ಶಕ್ತಿ ಪ್ರಕಟವಾಗಿದೆ. ಶಾಕುಂತಲದ ಪದ್ಯಗಳಲ್ಲಿ ಅವನ ಪರಿವರ್ತನ ಪ್ರತಿಭೆ ಸಾಫಲ್ಯವನ್ನು ಪಡೆದಿದೆ. ಸಂಸ್ಕೃತ ನಾಟಕಗಳ ಇನ್ನೊಬ್ಬ ಅನುವಾದಕನೆಂದರೆ ಧೋಂಡೋ ನರಸಿಂಹ ಮುಳಬಾಗಿಲು ಇವನು. ಉತ್ತರರಾಮಚರಿತ, ಮಾಳವಿಕಾಗ್ನಿ ಮಿತ್ರ, ಮೃಚ್ಛಕಟಿಕ, ವೇಣೀಸಂಹಾರ ಈ ನಾಟಕಗಳನ್ನು ಅವನು ಕನ್ನಡಿಸಿದ್ದಾನೆ. ಇವನ ಗದ್ಯದಲ್ಲಿ ಆಗಾಗ ಭಾಷಾಂತರದ ಕೃತ್ರಿಮತೆ ಹಣೆಯಿಕ್ಕಿದರೂ ದೇಸಿಯ ಸೊಗಸಿದೆ, ನಾಟಕೀಯ ಸ್ವಾರಸ್ಯವಿದೆ. ಪದ್ಯಗಳು ಮಾತ್ರ ಹಳೆಯ ಮತ್ತು ಹೊಸ ಶೈಲಿಗಳ ವಿಚಿತ್ರ ಮಿಶ್ರಣದಿಂದ ಕೆಂಪುನಾರಾಯಣನ ಮುದ್ರಾಮಂಜೂಷವನ್ನು ನೆನಪಿಗೆ ತರುತ್ತವೆ. ಸಾಮಾನ್ಯವಾಗಿ ಅನುವಾದಗಳೇ ಹೆಚ್ಚಾಗಿರುವ ಈ ಕಾಲದಲ್ಲಿ ಸ್ವತಂತ್ರ ನಿರ್ಮಿತಿಯೂ ಸ್ವಲ್ಪ ಪ್ರಮಾಣದಲ್ಲಿ ನಡೆಯಿತು. ನಾಟಕ ಕ್ಷೇತ್ರದಲ್ಲಿ 'ಇಗ್ಗಪ್ಪ ಹೆಗಡೆಯ ವಿವಾಹಪ್ರಹಸನ' ಎಂಬುದು ಇದಕ್ಕೆ ನಿದರ್ಶನವಾಗಿದೆ. ಹವ್ಯಕ ಹಿತೇಚ್ಛುಗಳಾದ ವಿದ್ವಾಂಸರೊಬ್ಬರು ಈ ಸಾಮಾಜಿಕ ನಾಟಕವನ್ನು ಹವ್ಯಕದೇಶಿಯಲ್ಲಿ ಬರೆದು ೧೮೮೭ರಲ್ಲಿ ಮುಂಬೈನಗರದಲ್ಲಿ ಮುದ್ರಿಸಿ ಪ್ರಕಟಿಸಿದರೆಂದು ತಿಳಿದಿದೆ. ಕರ್ಕಿಯ ಸೂರಿ ವೆಂಕಟರಮಣಶಾಸ್ತ್ರಿಗಳೇ ಈ ವಿದ್ವಾಂಸರಿರಬೇಕೆಂದು ಊಹೆಮಾಡಲಾಗಿದೆ. ೧೯ನೆಯ ಶತಮಾನದ ಉತ್ತರ ಭಾಗದಲ್ಲಿ ಸಂಪ್ರದಾಯನಿಷ್ಠರಾದ ವಿದ್ವಾಂಸರೊಬ್ಬರು ಜನದ ಬಳಕೆ ಮಾತಿನಲ್ಲಿ ಕನ್ಯಾವಿಕ್ರಯದಂಥ ಸಾಮಾಜಿಕ ಸಮಸ್ಯೆಗಳನ್ನು ಕುರಿತು ಸ್ವತಂತ್ರ ನಾಟಕವನ್ನು ರಚಿಸಿರುವುದು ಆಶ್ಚರ್ಯದ ಸಂಗತಿಯಾಗಿದೆ. ಇಂದಿನ ಸ್ವತಂತ್ರ ಸಾಮಾಜಿಕ ನಾಟಕದ ತೀರ ಚಿಕ್ಕದಾದ ಪ್ರಾರಂಭವು ಅಂದಿನಿಂದಲೇ ಆಯಿತೆನ್ನಬಹುದು. ಆಯಾ ಪ್ರಹಸನದ ಸಂಭಾಷಣೆಗಳಲ್ಲಿ ವಾಸ್ತವತೆ ತುಂಬಿ ತುಳುಕುತ್ತಿದೆ, ಪಾತ್ರಪ್ರಜ್ಞೆ ಸಮರ್ಪಕವಾಗಿದೆ. ನಾಟಕತಂತ್ರದೃಷ್ಟಿಯಿಂದ ಮಾತ್ರ ಅದು ತೀರ ಸಾಮಾನ್ಯವೆಂದರೆ ತಪ್ಪಿಲ್ಲ. ಅದಕ್ಕಿರುವ ಮಹತ್ವ ಚಾರಿತ್ರಿಕವಾದದ್ದು, ಸಾಹಿತ್ಯಿಕವಲ್ಲ ಎಂಬುದನ್ನು ನೆನೆಯಬೇಕು. ಮುಂದೆ ೧೯೧೯-೨೦ರಲ್ಲಿ ಹುಯಿಲಗೋಳ ನಾರಾಯಣರಾಯರು ಉತ್ತರ ಕರ್ನಾಟಕದ ದೇಸಿಯಲ್ಲಿ ಸಾಮಾಜಿಕ ನಾಟಕಗಳನ್ನು ಬರೆದರು. ಕೆರೂರ ವಾಸುದೇವಾಚಾರ್ಯರು ಸ್ವತಂತ್ರವೆನ್ನುವಷ್ಟು ತಮ್ಮ ಪರಿವರ್ತಿತವಾದ ನಾಟಕಗಳಲ್ಲಿ ಆಡುನುಡಿಯನ್ನು ತಂದರು. ೧೯೨೦ರ ಮುಂದಿನ ಕಾಲದಲ್ಲಿ ಕೈಲಾಸಂ ಶ್ರೀರಂಗ ಮೊದಲಾಗಿ ಇತರ ನಾಟಕಕಾರರು ಈ ಪದ್ಧತಿಗೆ ಪ್ರತಿಷ್ಠೆಯನ್ನು ಒದಗಿಸಿ ಕೊಟ್ಟರೆಂದು ಹೇಳಬಹುದು. ಕಥಾಪ್ರಪಂಚದಲ್ಲಿ ೧೯ನೆಯ ಶ. ದ ಕನ್ನಡ ಸಾಹಿತ್ಯವು ಹಳೆಯ ಕಿತ್ತೆಯನ್ನು ತೀಡುತ್ತಿದ್ದಿತಾದರೂ ಅನುವಾದರೂಪದಲ್ಲಿ ಹೊಸ ಕಥೆಗೆ ಪೀಠಿಕೆ ಅಣಿಯಾಗುತ್ತಿತ್ತು. ಮಾನವಿ ವೀರಪ್ಪನು ೧೮೫೧ರಲ್ಲಿ ೪೦ ಕಥೆಗಳುಳ್ಳ 'ಕಥಾ ಸಾಗರ'ವನ್ನು ಬರೆದನು. ರೆ. ವೀಗಲ್ ಅವರು ಮಾಡಿದ Pilgrim's Progress (John Bunyan)

ಇದರ 'ಯಾತ್ರಿಕನ ಸಂಚಾರ' ಎಂಬ ಭಾಷಾಂತರವು ೧೮೪೭ರಲ್ಲಿ ಪ್ರಥಮ ಮುದ್ರಣವಾಗಿ ಹೊರಬಿದ್ದಿತು. ಸುದೀರ್ಘಕಥೆ ಅಥವಾ ಕಾದಂಬರಿಯಾಗಿ ಕನ್ನಡದಲ್ಲಿ ಇದೇ ಮೊದಲನೆಯದಾಗಿ ಪರಿಣಮಿಸಿತು. ಈ ಸಂಗತಿ ನಡೆದು ಇಂದಿಗೆ ನೂರು ವರ್ಷಗಳಾದುವು. ತರುವಾಯ ಎಸ್. ಜಿ. ನರಸಿಂಹಾಚಾರ್ಯರು ಅಲ್ಲಾವುದ್ದೀನ-ಅದ್ಭುತ-ದೀಪ, ಈಸೋಪನ ನೀತಿಕಥೆಗಳು, ಗಲಿವರನ ದೇಶಸಂಚಾರ ಮುಂತಾದ ಅನುವಾದಗಳನ್ನು ಪ್ರಕಟಿಸಿದರು. ಬಿ. ವೆಂಕಟಾಚಾರ್ಯರು ಬಂಕಿಂಚಂದ್ರರ ಹಲವಾರು ಬಂಗಾಲೀ ಕಥೆ-ಕಾದಂಬರಿಗಳನ್ನು ಕನ್ನಡಿಸಿದರು, 'ಯವನಯಾಮಿನೀ ವಿನೋದ' ಎಂಬ ಹೆಸರಿನಲ್ಲಿ ಅರೇಬಿಯನ್ ನಾಯಿಟ್ಸ್ ಕತೆಗಳನ್ನು ಪರಿವರ್ತಿಸಿದರು. ಗಳಗನಾಥರು ಮರಾಠೀ ಕಾದಂಬರಿಗಳಿಗೆ ಕನ್ನಡ ರೂಪವನ್ನು ಕೊಡತೊಡಗಿದರು. ಸ್ವತಂತ್ರವಾದ ಸಣ್ಣ ಕಥೆಗಳನ್ನು ಪಂಜೆ ಮಂಗೇಶರಾಯರು, ಕೆರೂರ ವಾಸುದೇವಾಚಾರ್ಯರು, ಎಂ. ಎನ್. ಕಾಮತರು ಇಪ್ಪತ್ತನೆಯ ಶತಕದ ಮೊದಲನೆಯ ದಶಕದಲ್ಲಿ ಬರೆಯಲು ಆರಂಭಿಸಿದರು. ಶಿವರುದ್ರಪ್ಪ ಸೋಮಪ್ಪ ಕುಲಕರ್ಣಿಯವರ 'ನಾಡನೆಲೆಗಾರ' ಮುಂತಾದ ಕಥಾಸಂಗ್ರಹಗಳಲ್ಲಿಯೂ ಸ್ವತಂತ್ರ ನಿರ್ಮಿತಿಯ ಝುಳುಕು ಸುಳಿಯಿತು. ಕಾದಂಬರಿಯ ಕ್ಷೇತ್ರದಲ್ಲಿ ಕನ್ನಡದ ಪ್ರಥಮ ಸ್ವತಂತ್ರ ಸಾಮಾಜಿಕ ಕಾದಂಬರಿ ಎಂಬ ಮಾನವು ೧೮೯೯ರಲ್ಲಿ ಗುಲ್ವಾಡಿ ವೆಂಕಟರಾಯರು ಬರೆದ 'ಇಂದಿರಾಬಾಯಿ'ಗೆ ಸಲ್ಲುತ್ತದೆ. ಆಮೇಲೆ ೧೯೦೫ರಲ್ಲಿ ಪ್ರಕಟವಾದ ಬೋಳಾರ ಬಾಬುರಾಯರ 'ವಾಗ್ದೇವಿ', ಗುಲ್ವಾಡಿ ಅಣ್ಣಾಜಿರಾಯರ ರೋಹಿಣಿ ೧೯೦೭ ಮತ್ತು ೧೯೦೮ರಲ್ಲಿ ಪ್ರಕಟವಾದ ಕೆರೂರರ 'ಇಂದಿರಾ' ಈ ಕಾದಂಬರಿಗಳು ಬರುತ್ತವೆ. ೧೯೧೬ರಲ್ಲಿ ಪ್ರಸಿದ್ಧವಾದ ಕೆರೂರರ 'ಯದುಮಹಾರಾಜ' ಇದು ಮೊದಲನೆಯ ಸ್ವತಂತ್ರ ಐತಿಹಾಸಿಕ ಕಾದಂಬರಿಯಾಯಿತು. ತರುವಾಯದ ಕಾಲದಲ್ಲಿ ಎಂ. ಎಸ್. ಪುಟ್ಟಣ್ಣ ಅವರ 'ಮಾಡಿದ್ದುಣ್ಣೋ ಮಹಾರಾಯ, ಮುಸುಕು ತೆಗೆಯೇ ಮಾಯಾಂಗನೆ' ಈ ಸ್ವತಂತ್ರ ಸಾಮಾಜಿಕ ಕಾದಂಬರಿಗಳು ಪ್ರಕಟವಾದುವು. 'ಇಂದಿರಾ' ಕಾದಂಬರಿಯಲ್ಲಿಯ ಕಥೆ-ಸನ್ನಿವೇಶಗಳು ಸ್ವತಂತ್ರವಾಗಿದ್ದರೂ ಪಾತ್ರಸೃಷ್ಟಿಯಲ್ಲಿ ಮತ್ತು ವಿಚಾರಪ್ರಣಾಲಿಯಲ್ಲಿ ಅಂದಿನ ಕರ್ನಾಟಕಕ್ಕಿಂತ ಅಂದಿನ ಮಹಾರಾಷ್ಟ್ರದ ಪ್ರಭಾವವು ಎದ್ದು ಕಾಣುತ್ತದೆ. ಅದೇ ಎಂ. ಎಸ್ ಪುಟ್ಟಣ್ಣರ ಸ್ವತಂತ್ರ ಕೃತಿಗಳಲ್ಲಿ ಆವರಣ, ಪಾತ್ರ, ಸಂಭಾಷಣೆ ಈ ಎಲ್ಲದರಲ್ಲಿ ಅಚ್ಚಕನ್ನಡತನವು ಮೂಡಿರುತ್ತದೆ ಮತ್ತು ಮೊಟ್ಟಮೊದಲನೆಯದಾಗಿ ವಾಸ್ತವದೃಷ್ಟಿ ಫಲಿಸಿರುತ್ತದೆ.

ಈ ಕಾಲದ ಕಾವ್ಯ ಚಂಪುವಿನಿಂದ ಹಾಡಿನವರೆಗೆ ಎಲ್ಲ ಪ್ರಕಾರಗಳಲ್ಲಿ ಕಂಡುಬಂದರೂ ಅದರ ಮುಖದ ಮೇಲೆ ಹಳೆಯ ಕಳೆ ಸುರಿಯುತ್ತದೆ. ಒಟ್ಟಿನ ಮೇಲೆ ಒಳದಿರುಳಿನಲ್ಲಿ ಅದು ಸಪ್ಪೆಯಾಗಿದೆ. ಹಳೆಯ ವ್ಯಾಕರಣರೂಪಗಳೊಡನೆ ಹೊಸರೂಪಗಳು ಮಾತ್ರ ಮೆಲ್ಲನೆ ಹಣೆಯಿಕ್ಕಿವೆ. ಹೊಸ ಕವಿತೆ ಮೊದಲು ಹೊಸ ನಾಟಕ-ಕಥೆ-ಕಾದಂಬರಿಗಳಂತೆ ಅನುವಾದರೂಪದಲ್ಲಿ ತಲೆದೋರಿತು. ತೀರ ಮೊದಲನೆಯ ಉದಾಹರಣೆಯೆಂದರೆ ೧೮೪೭ರಲ್ಲಿ ಪ್ರಕಟವಾದ 'ಯಾತ್ರಿಕನ ಸಂಚಾರ'ದಲ್ಲಿಯ ಅನುವಾದಿತ ಪದ್ಯಗಳು. ಅದರಲ್ಲಿ ಮೂಲದಲ್ಲಿಯ ಇಂಗ್ಲಿಷ್ ಪದ್ಯಗಳನ್ನು ಸರಳವಾದ ಶೈಲಿಯಲ್ಲಿ ಕನ್ನಡಿಸಲಾಗಿದೆ. ಮೊದಲಿನಿಂದ ಬಂದ ಭಾಮಿನೀಷಟ್ಪದಿಯಲ್ಲಿ ಕೆಲವಿದ್ದರೆ, ಕೆಲವು ಹೊಸದಾಗಿ ಮಾಡಿಕೊಂಡ ನಾಲ್ಕು ಮಾತ್ರೆಯ ಚೌಪದಿಯಲ್ಲಿರುತ್ತವೆ. ಉದಾಹರಣೆಗ ಕೆಳಗೆ ಒಂದನ್ನು ಕೊಡುತ್ತೇವೆ:

ಸೇರಲು ಬಹುದೋ ಇದರೊಳು ಕಾವಲ-
ಗಾರನೆ ತೆರದೊಡೆ ನೀನೆನಗೆ
ಮೀರಿದ ಪಾಪಿಗೆ ನಿತ್ಯವು ಸ್ತೋತ್ರವ
ಸಾರುತ ಪಾಡುವೆನುನ್ನತದಿ ॥

ಹಳೆಯ ಕನ್ನಡ ಛಂದಸ್ಸಿನ ಬುಡಕಟ್ಟಿನ ಮೇಲೆ ಕಲ್ಪಿಸಿಕೊಂಡು ಬಳಸಿದ ಮೊದಲನೆಯ ಹೊಸ ಛಂದಸ್ಸೆಂದು ಇದಕ್ಕೆ ವಿಶೇಷ ಮಹತ್ವವಿದೆ. ಇಂಗ್ಲಿಷ್ ಮೂಲಕ್ಕೆ ಸರಿಹೋಗುವಂತೆ ಇದರಲ್ಲಿ ನಾಲ್ಕು ಪಾದಗಳಿರುತ್ತವೆ. ಸುಮಾರು ಇದೇ ಕಾಲಕ್ಕೆ ಪ್ರಸಿದ್ಧವಾದ 'ಗೀತ ಪುಸ್ತಕಗಳು' ಎಂಬ ಮಿಶನರಿ ಕೃತಿಯಲ್ಲಿ ಇಂಗ್ಲಿಷ್, ಜರ್ಮನ್ ಗೀತಗಳ ಕನ್ನಡ ಅನುವಾದಗಳಿದ್ದು ಅವುಗಳ ಸರಣಿ ಹೊಸತಾಗಿದೆ. ಪಾಶ್ಚಿಮಾತ್ಯ ಸಂಗೀತಕ್ಕೆ ಅವನ್ನು ಅಳವಡಿಸಲಾಗಿತ್ತಂತೆ. ಉದಾಹರಣೆಗೆ, 'ಇಲ್ಲಿ ನಮ್ಮ ಸುಖ ಕಷ್ಟ! ಇಲ್ಲಿ ನಮ್ಮ ಲಾಭ ನಷ್ಟ! ನಮ್ಮ ಕ್ಷೇಮ ತಾಪವು! ನಮ್ಮ ನೀತಿ ಪಾಪವು.' ಇದರಲ್ಲಿ ಆದಿ ಅಂತ್ಯ ಎರಡೂ ಪ್ರಾಸಗಳಿದ್ದರೆ ಇನ್ನೊಂದರಲ್ಲಿ ಆದಿಪ್ರಾಸವು ಲೋಪವಾಗಿದೆ. ಅಂತ್ಯಪ್ರಾಸ ಉಳಿದಿದೆ: 'ಅಲ್ಲಿ ಪೀಡೆ, ಸಾವು, ಶಾಪ! ಅಂಧಕಾರ, ಸೂರ್ಯತಾಪ! ಚಿಂತೆ, ದುಃಖ ಕಾಣವು! ಅಲ್ಲಿ ಸೌಖ್ಯ ತಾಣವು!' ಛಂದಸ್ಸಿನ ದೃಷ್ಟಿಯಿಂದ ಮೂರು ಮಾತ್ರೆಯ ಹೊಸ ಚೌಪದಿಯೊಂದು ಇಲ್ಲಿ ಮೈದಾಳಿದೆ. ಇದಾದ ಮೇಲೆ ೧೯ನೆಯ ಶತಕದ ಕೊನೆ ಮತ್ತು ಇಪ್ಪತ್ತರ ಮೊದಲೆರಡು ದಶಕಗಳಲ್ಲಿ ಹೆಚ್ಚಾಗಿ ಅನುವಾದ ರೂಪದಲ್ಲಿ ಹೊಸ ಕವಿತೆ ಮುಂದರಿಯಿತು. ಇಂಗ್ಲಿಷ್ ಕಾವ್ಯದ ಅನುವಾದಕಾರರಲ್ಲಿ ಹ. ನಾರಾಯಣರಾಯರು, ಪಂಜೆ ಮಂಗೇಶರಾಯರು, ಗೋವಿಂದ ಪೈಯವರು, ಎಸ್. ಜಿ. ನರಸಿಂಹಾಚಾರ್ಯರು, ಬಿ. ಎಂ. ಶ್ರೀಕಂಠಯ್ಯನವರು (ಶ್ರೀ) ಇವರು ಪ್ರಮುಖರೆಂದು ಹೇಳಬಹುದು. ತಮ್ಮ ಅನುವಾದಕಾರ್ಯದಿಂದ ಇವರೆಲ್ಲ ಹೊಸಗನ್ನಡ ಭಾವಗೀತೆಯ ಸ್ವತಂತ್ರನಿರ್ಮಿತಿಗೆ ಸ್ಫೂರ್ತಿಕೊಟ್ಟ ಮೊದಲಿಗರಾದರು. ಶ್ರೀಯವರನ್ನುಳಿದು ಇತರರು ಹಳೆಯ ಛಂದಸ್ಸಿನ ರೂಪಗಳನ್ನೂ ನಿಯಮಗಳನ್ನೂ ಬಹುಮಟ್ಟಿಗೆ ಅನುಸರಿಸಿದರು. ಶ್ರೀಯವರು ಹೊಸ ಛಂದಸ್ಸು, ಹೊಸ ಶೈಲಿಗಳ ಪುರಸ್ಕರ್ತರಾದರು. ನಾವು ತೋರಿಸಿದಂತೆ ೧೯ನೆಯ ಶ.ದ ಮಧ್ಯದಿಂದ ಮಿಶನರಿ ಕವಿತೆ ಹಾಗೂ ಗೀತಗಳಲ್ಲಿ ಹೊಸದರ ಪ್ರವೃತ್ತಿ ತಲೆದೋರಿತ್ತು. ಆದರೆ ಅವುಗಳ ಅನುವಾದಶಕ್ತಿ ಪರಿಮಿತವಾದದ್ದು. ಶ್ರೀಯವರು ಮಾತ್ರ ಹಿರಿಯ ಅನುವಾದಕರೂ ಸ್ವತಂತ್ರ ಪ್ರತಿಭೆಯ ಕವಿಗಳೂ ಆಗಿದ್ದು ಹೊಸಕಾವ್ಯದ ಆದ್ಯರಲ್ಲಿ ಒಬ್ಬರೆಂದು ಹೆಸರುವಾಸಿಯಾದರು. ಅವರ 'ಇಂಗ್ಲಿಷ್ ಗೀತಗಳು' ಇದು ಹೊಸಗನ್ನಡ ಕಾವ್ಯದ ಚರಿತ್ರೆಯಲ್ಲಿ ಮೈಲುಗಲ್ಲಾಗಿ ಪರಿಣಮಿಸಿತು. ಸಾಮಾನ್ಯವಾಗಿ ಒಳ್ಳೆಯ ಅನುವಾದಕಾರನು ಸ್ವತಂತ್ರ ಪ್ರತಿಭಾಶಾಲಿಯಾದ ಕವಿಯಾಗಿರುತ್ತಾನೆ ಎಂಬುದಕ್ಕೆ ಶ್ರೀಯವರನ್ನೊಳಗೊಂಡು ಇವರೆಲ್ಲ ನಿದರ್ಶನವಾಗಿರುತ್ತಾರೆ. ಪ್ರತ್ಯಕ್ಷವಾಗಿ ಹ. ನಾರಾಯಣರಾಯರು ಸ್ವತಂತ್ರ ಕವಿತೆಯನ್ನು ಬರೆದ ಹಾಗಿಲ್ಲ. ಎಸ್. ಜಿ. ನರಸಿಂಹಾಚಾರ್ಯರು ಸ್ವಲ್ಪವಾಗಿ ಬರೆದರು. ಪಂಜೆ ಮಂಗೇಶರಾಯರು, ಶ್ರೀಯವರು ಗಣ್ಯವಾದ ಕೆಲವು ಭಾವಗೀತೆಗಳನ್ನು ಕನ್ನಡಕ್ಕೆ ನೀಡಿದರು. ಗೋವಿಂದ ಪೈಯವರೆಂತೂ ಹೊಸ ಕಾವ್ಯಪ್ರಪಂಚದಲ್ಲಿ ಮೇಲಾದ ಕವಿಗಳೆಂದು ಮನ್ನಣೆ ಹೊಂದಿದ್ದಾರೆ. ಬಹುಶಃ ಸ್ವತಂತ್ರ ಕವಿತೆಗಳನ್ನು ರಚಿಸಿದವರಲ್ಲಿ ಪಂಜೆಯವರೇ ಮೊದಲಿಗರೆಂದು ತೋರುತ್ತದೆ. ೨೦ನೆಯ ಶ.ದ ಹೊಸತಿಲಲ್ಲಿಯೇ ಅವರ ಮೊದಲ ಕವಿತೆ ಹುಟ್ಟಿರಬೇಕು. ಅವರ ತರುವಾಯ ಗೋವಿಂದಪೈ,

ಶ್ರೀ ಮತ್ತು ಶಾಂತಕವಿಗಳು ತಂತಮ್ಮ ರೀತಿಯಲ್ಲಿ ಹೊಸ ಕಾವ್ಯದ ತಳಹದಿಯನ್ನು ಹಾಕಿದರು. ಪಂಜೆಯವರು ಕಾಲಕ್ರಮದಿಂದ ಮೊದಲಿಗರೆಂಬುದಿಷ್ಟೇ ಅಲ್ಲ, ಅವರ ಸ್ವಲ್ಪವೇ ಆದ ಕವನಗಳಲ್ಲಿ ಹೊಸ ಕಾವ್ಯದ ಸ್ವಚ್ಛಂದವಿಲಾಸ, ಭಾವಗೀತೆಯ ಪರಿಣತಿ ಆಶ್ಚರ್ಯಕರವಾಗಿ ಕಂಡುಬರುತ್ತವೆ. ಮಕ್ಕಳಿಗಾಗಿ ಅವರು ಬರೆದ ಕವನಗಳು ಪಠ್ಯಪುಸ್ತಕಗಳಲ್ಲಿ ಪ್ರಕಟಗೊಂಡರೂ ಅವು ತಾತ್ಕಾಲಿಕ ಮಹತ್ವದ ಕೃತಿಗಳಾಗಿರಲಿಲ್ಲ. ವಿಶೇಷವಾಗಿ 'ತೆಂಕಣಗಾಳಿಯಾಟ' ಎಂಬ ಅವರ ಕವನವು ಗತಿಸೂಚಕವಾದ ಶೈಲಿ ಮತ್ತು ಲಯಗಳ ಅದ್ಭುತವಾದ ಜೋಡಣೆಯಿಂದ ನಿಸರ್ಗ ವರ್ಣನೆಯುಳ್ಳ ಸುಂದರ ಕವಿತೆಗಳಲ್ಲಿ ಒಂದಾಗಿದೆ. 'ಹುತ್ತರಿಯ ಹಾಡು' ದೇಶಾಭಿಮಾನದ ಕವಿತೆಗಳಲ್ಲಿ ಮೇಲಾದ ನೆಲೆಯನ್ನು ಗಳಿಸಿರುತ್ತದೆ. ಶ್ರೀಯವರ ಮತ್ತು ಶಾಂತಕವಿಗಳ ಸ್ವತಂತ್ರವಾದ ಕವಿತೆಯ ಮೊತ್ತ ಕಡಿಮೆಯಾದರೂ ಅದರಲ್ಲಿ ಅವರು ತಮ್ಮ ಶಕ್ತಿಯ ಎತ್ತರವನ್ನೂ ಪ್ರತಿಭೆಯ ಸಹಜತೆಯನ್ನೂ ಮೆರೆದು ತೋರಿದ್ದಾರೆ. ಹೀಗೆ ಹೊಸ ಸಾಹಿತ್ಯ ಹಳೆಯ ತೊಡರುಗಳಿಂದ ಹೊರಬಂದು ಸ್ವಂತದ ಹೊಗರನ್ನು ಹೊಮ್ಮಿಸಿತು.

*ಕನ್ನಡ ಸಾಹಿತ್ಯದ ಇತಿಹಾಸ, ೧೯೬೩, ೧೯೬೮, ಪು. ೨೦೧-೧೦*

# ೭೨. ಕಥೋಲಿಕ ಸಾಹಿತ್ಯದ ಆರಂಭದ ಕೃತಿಗಳು

ಎಡ್ವರ್ಡ್ ನೊರೋನ

ಕಥೋಲಿಕ ಸಾಹಿತ್ಯದ ಆರಂಭದ ಕೆಲವು ಕೃತಿಗಳ ಮತ್ತು ಲೇಖಕರ ಹೆಸರುಗಳು ನಮಗೆ ಸಿಗುತ್ತವೆಯಾದರೂ ಈ ಕೃತಿಗಳು ಉಪಲಬ್ಧವಿಲ್ಲ. ೧೭ನೇ ಶತಮಾನದ ಪೂರ್ವಾರ್ಧದಲ್ಲಿ ಕನ್ನಡಕ್ಕೆ ಸಂಬಂಧಿಸಿದ ಕೆಲವಾದರೂ ಪುಸ್ತಕಗಳು ಗೋವೆಯಲ್ಲಿ ಅಚ್ಚಾಗಿರುವ ಸಾಧ್ಯತೆಯನ್ನು ಹಾವನೂರರು ಸೂಚಿಸಿದ್ದಾರೆ.[೧] ಆಮದೂರ್ ದ ಸಾಂತಅನ್ನ ಎಂಬ ಫ್ರಾನ್ಸಿಸ್ಕನ್ ಮಿಶನರಿ Flos Sanctorum ಎಂಬ, ಭಕ್ತಿಗೆ ಸಂಬಂಧಪಟ್ಟ ಪ್ರಬಂಧವನ್ನು 'ಕೆನರೀಜ್' ಭಾಷೆಗೆ ಅನುವಾದ ಮಾಡಿದನೆಂದೂ, ರಿಬದನಿಯೆರ ಎಂಬುವನು ರಚಿಸಿದ 'ಸಂತರ ಜೀವನ ಚರಿತ್ರೆಗಳ'ನ್ನು ದಿಯೆಗೊ ರಿಬೆರೊ 'ಕೆನರೀಜ್' ಭಾಷೆಗೆ ಅನುವಾದ ಮಾಡಿದನೆಂದೂ ಡಾಲ್‌ಮನ್ ಹೇಳುತ್ತಾನೆ.[೨] ಇಲ್ಲಿ ಕೆನರೀಜ್ ಎಂದಿರುವುದು ಕನ್ನಡವೇ, ಕೊಂಕಣಿ ಅಲ್ಲ, ಏಕೆಂದರೆ ಕೊಂಕಣಿ ಮತ್ತು ಕೆನರೀಜ್ ಎರಡೂ ಭಾಷೆಗಳ ಮಾತು ಉದ್ಧೃತ ಪುಸ್ತಿಕೆಯ ಅದೇ ಭಾಗದಲ್ಲಿ ಬೇರೆ ಬೇರೆಯಾಗಿ ಬರುತ್ತದೆ. ಆಮದೊರ್ ಫ್ರಾನ್ಸಿಸ್ಕನ್ ಸಂನ್ಯಾಸಿ ಸಂಸ್ಥೆಗೆ ಸೇರಿದವನು ಎಂದು ಸ್ಪಷ್ಟವಾಗಿ ಹೇಳಿದೆ; ರಿಬೆರೊ ಸಂನ್ಯಾಸಿ ಕ್ರಮದ ಗುರುವೆಂದಾಗಲಿ, ಆ ಸಂನ್ಯಾಸಿ ಸಂಸ್ಥೆಯ ಹೆಸರನ್ನಾಗಲಿ ಹೇಳಿಲ್ಲವಾದುದರಿಂದ ಅವನು ಲೌಕಿಕ ಕ್ರಮದ ಗುರು ವಾಗಿರುವುದು ಸಂಭವನೀಯ. ಥಾಮಸ್ ಸ್ಟೀವನ್ಸನ (೧೫೪೯-೧೬೧೯) ಕೊಂಕಣಿ ವ್ಯಾಕರಣವನ್ನು ಲೇಖಕನ ಮರಣಾನಂತರ ರಿಬೊರೊ ಪ್ರಕಟಿಸಿದನು.[೩] ಆದುದರಿಂದ ರಿಬೊರೊನ ಕಾಲ ಸುಮಾರು ೧೭ನೇ ಶತಮಾನದ ಮೊದಲ ದಶಕಗಳು. ಆಮದೊರನ ಕಾಲವೂ ಸುಮಾರು ಅದೇ ಇರಬೇಕು. ಏಕೆಂದರೆ 'Kanarese, Konkani and Marathi-1600' ಎಂಬ ಭಾಗದಲ್ಲಿ ಡಾಲ್‌ಮನ್ ಹೆಚ್ಚಾಗಿ ೧೭ನೇ ಶತಮಾನದ ಕೃತಿಗಳನ್ನು ಕುರಿತೇ ಹೇಳುತ್ತಾನೆ.[೪]

ಲೆಯೊನಾರ್ದೊ ಚಿನ್ನಾಮಿ (೧೬೦೯-೧೬೭೬) ಇಟಲಿ ದೇಶದವನು. ಜೆಜ್ವಿಟ್ ತರಬೇತಿಯಲ್ಲಿ ಕ್ರಮವಾಗಿ ತತ್ತ್ವಶಾಸ್ತ್ರವನ್ನೂ ಧರ್ಮದರ್ಶನವನ್ನೂ ಓದಿದವನು. ೧೬೫೧ರಲ್ಲಿ ಶ್ರೀರಂಗಪಟ್ಟಣವನ್ನು ತಲಪಿದ ಇವನು ಬರೆದ ಗ್ರಂಥಗಳನ್ನು ಫೆರೊಲಿ ಹೀಗೆ ನಿರ್ದೇಶಿಸಿದ್ದಾನೆ:

1. a lengthy catechism of the principal mysteries of our holy Faith,
2. and a compendium of the same...,
3. the Lives of the Saints,
4. and also a Course of Apologetics,

---

೧. ಹೊಸಗನ್ನಡದ ಅರುಣೋದಯ, ಪು. ೮೫.

೨. Dahlmann, p. 22-23.

೩. ಅದೇ, ಪು. ೧೯.

೪. ಅದೇ, ಪು. ೧೯-೨೩.

5. and a Refutation of the main errors and superstitions current in Mysore. (*Jesuits in Mysore*, p. 86-87;

ಕ್ರಮಾಂಕಗಳು ಮೂಲದಲ್ಲಿಲ್ಲ). ಇವುಗಳಲ್ಲಿ ಮೊದಲನೆಯದನ್ನು ಹಾವನೂರರು 'ಕ್ರೈಸ್ತ ಧರ್ಮದ ರಹಸ್ಯ ತತ್ತ್ವಗಳನ್ನು ಕುರಿತ ಸುದೀರ್ಘ ಪ್ರಶ್ನೋತ್ತರ' ಎಂದು ನಿರ್ದೇಶಿಸಿದ್ದಾರೆ (ಹೊಸಗನ್ನಡದ ಅರುಣೋದಯ, ಪು. ೮೮). 'ರಹಸ್ಯತತ್ತ್ವ' ಎಂಬುದು 'mystery' ಅನುವಾದವಾಗಿರುವಂತೆ ತೋರುತ್ತದೆ. ಆದರೆ 'mystery' ಎಂದರೆ ಗಹನವಾದ ಒಂದು ಧಾರ್ಮಿಕ ಸತ್ಯ, 'a great truth' ಎಂದು ಕ್ರೈಸ್ತರಲ್ಲಿ ತಿಳಿವಳಿಕೆಯುಂಟು. ಅದಲ್ಲದೆ ಎಲ್ಲಾ 'mystery'ಗಳನ್ನು ಪ್ರಕಟವಾಗಿಯೇ ಬೋಧಿಸುತ್ತಾರೆ. ಐದನೇ ಗ್ರಂಥವನ್ನು 'ಮೈಸೂರು ಜನರ ಜಾತಿಗಳು, ಮೂಢನಂಬಿಕೆಗಳು, ಇವುಗಳ ಖಂಡನೆ,' ''ಮೈಸೂರು ದೇಶದ ಹಿಂದೂಗಳ ಜಾತಿಭೇದ, ಮೂಢನಂಬಿಕೆಗಳನ್ನು ಖಂಡಿಸುವ ಪುಸ್ತಕ'' ಎಂದಿದೆ (ಅದೇ, ಪು. ೮೭, ೮೮). ಫೆರೊಲಿಯ ಇಂಗ್ಲಿಷನ್ನೂ ಹಾವನೂರರ ಅಡಿಟಿಪ್ಪಣಿಯಲ್ಲಿರುವ ಲ್ಯಾಟಿನ್ ಮೂಲವನ್ನು ('Superstitionum gentilium regni Messurensis') ನೋಡಿದರೆ ಜಾತಿಭೇದದ ಮತ್ತು ಜಾತಿಗಳ ಖಂಡನೆ ಪುಸ್ತಕದ ವಿಷಯವಾಗಿತ್ತೆಂದು ಸ್ಪಷ್ಟವಾಗಿ ಹೇಳಲಿಕ್ಕಾಗದು; ಆದುದರಿಂದ ಇದನ್ನು ಪುಸ್ತಕದ ಶೀರ್ಷಿಕೆಯಲ್ಲಿ ಸೇರಿಸುವುದು ಸಮರ್ಥನೀಯವಲ್ಲ. ಅದಲ್ಲದೆ ಮಿಶನರಿಗಳ ಮೊದಲ ಗ್ರಂಥಗಳಲ್ಲಿ ಅವರು ಜಾತಿಭೇದವನ್ನು ಖಂಡಿಸಲಿಲ್ಲ ಮಾತ್ರವಲ್ಲ, ಅದನ್ನು ಸಮರ್ಥಿಸಿದ್ದರು.[೫] ಆದುದರಿಂದ ಚಿನ್ನಾಮಿಯ ಧಾರ್ಮಿಕ ಕೃತಿಗಳ ವಿಷಯಗಳನ್ನು ಹೀಗೆ ಪಟ್ಟಿಮಾಡಬಹುದು:

೧. ಕ್ರೈಸ್ತಧರ್ಮದ ಮುಖ್ಯ ಧಾರ್ಮಿಕ ತತ್ತ್ವಗಳನ್ನು ಬೋಧಿಸುವ ದೀರ್ಘ ಪ್ರಶ್ನೋತ್ತರಾವಳಿ

೨. ಅದರ ಸಾರ ರೂಪ

೩. ಕ್ರೈಸ್ತ ಸಂತರ ಜೀವನ ಚರಿತ್ರೆಗಳು

೪. ಕ್ರೈಸ್ತಧರ್ಮ ಸಮರ್ಥನೆ

೫. ಮೈಸೂರಿನಲ್ಲಿ ಪ್ರಚಲಿತವಿದ್ದ ತಪ್ಪುಕಲ್ಪನೆಗಳ ಮತ್ತು ಮೌಢ್ಯಗಳ ಖಂಡನೆ. ಕೊನೆಯ ಗ್ರಂಥದಲ್ಲಿ ಮೌಢ್ಯಾದಿಗಳನ್ನು ಖಂಡಿಸಿದುದು ಧಾರ್ಮಿಕ ಕಾರಣಗಳಿಗೋಸ್ಕರವೇ. ಮೌಢ್ಯಗಳನ್ನು ಒಪ್ಪಿದರೆ ಆಯಾ ಮೌಢ್ಯಗಳಿಗೆ ಸಂಬಂಧಿಸಿದ ವಸ್ತು, ಪ್ರಾಣಿ ಇತ್ಯಾದಿಗಳು ಏಕೈಕ ದೇವರಿಗೆ ಮಾತ್ರ ಮೀಸಲಾಗಿದ್ದು ಶಕ್ತಿಯನ್ನು ಪಡೆದಿವೆ ಎಂದು ಒಪ್ಪಿದಂತಾಗುತ್ತದೆ ಎಂದು ಕ್ರೈಸ್ತರ ಭಾವನೆ. ಆದುದರಿಂದ ಇದು ಧಾರ್ಮಿಕ ಗ್ರಂಥವೇ. ಕೃತಿಗಳ ಶೀರ್ಷಿಕೆಗಳಾಗಲಿ, ಖಚಿತವಾದ ಕಾಲವಾಗಲಿ ತಿಳಿದಿಲ್ಲ, ಕೃತಿಗಳು ಅನುಪಲಬ್ಧ.

ಕಥೋಲಿಕ ಸಾಹಿತ್ಯದ ಆರಂಭದ ಮೂರು ಹಸ್ತಪ್ರತಿಗಳು ಉಪಲಬ್ಧವಿವೆ:

೧. ಲಂಡನಿನ ಸ್ಕೂಲ್ ಆಫ್ ಓರಿಯೆಂಟಲ್ ಎಂಡ್ ಆಫ್ರಿಕನ್ ಸ್ಟಡೀಸ್‌ನಲ್ಲಿರುವ ೧೨೯೦೩ ಕ್ರಮಾಂಕದ ಹಸ್ತಪ್ರತಿ. ಇದರ ಫೋಟೋಪ್ರತಿ ಮೈಸೂರು ಕನ್ನಡ ಅಧ್ಯಯನ

---

೫. Firth, p.111, 112, 113, 115, etc. ಆದಿತ್ಯವಾರದ ಅದ್ಭುತಗಳು, I, ಪು. ೪೯೯, ಹದಿಮೂರು ಪ್ರಸಂಗಗಳು, ಪು. ೬೧, ಇತ್ಯಾದಿ.

ಸಂಸ್ಥೆಯಲ್ಲಿದೆ, ಕ್ರಮಾಂಕ ಕೆ. ಎ, ೬೦೬. ೨. ಲಂಡನ್ನಿನ ಅದೇ ಸಂಸ್ಥೆಯಲ್ಲಿರುವ ೭೦೭೮ ಕ್ರಮಾಂಕದ ಹಸ್ತಪ್ರತಿ. ಇದರ ಮೈಕ್ರೊಫಿಲ್ಮ್ ಪ್ರತಿ ಮೈಸೂರು ಕನ್ನಡ ಅಧ್ಯಯನ ಸಂಸ್ಥೆಯಲ್ಲಿದೆ, ಕ್ರಮಾಂಕ ಎನ್. ೧೦೦೪. ಇವೆರಡನ್ನೂ ಹಾವನೂರರು ನಿರ್ದೇಶಿಸಿದಂತೆ[೬] ಇಲ್ಲಿಯೂ ಕ್ರಮವಾಗಿ ಹಸ್ತಪ್ರತಿ-೪೦ ಮತ್ತು ಹಸ್ತಪ್ರತಿ-೩೩೭ ಎಂದು ಕರೆದಿದೆ. ೩. ಮಂಗಳೂರು ಸೈಂಟ್ ಎಲಾಸಿಯಸ್ ಕಾಲೇಜಿನಲ್ಲಿರುವ ಒಂದು ತಾಳೆಗರಿ ಗ್ರಂಥ. ಇದು ದೇವಮಾತೆಯ ಧರ್ಮ ಚರಿತ್ರೆಗಳು ಎಂಬ ಗ್ರಂಥ, ಆರಂಭದ ಮತ್ತು ಕೊನೆಯ ಕೆಲವು ಗರಿಗಳು ನಷ್ಟವಾಗಿವೆ. ಈ ಗ್ರಂಥ ಪೂರ್ಣವಾಗಿ ಹಪ್ರ-೩೩೭ರಲ್ಲಿದೆ.

ಹಪ್ರ-೪೦ ಮತ್ತು ಹಪ್ರ-೩೩೭ಗಳನ್ನು ಪ್ರಪ್ರಥಮತಃ ಬೆಳಕಿಗೆ ತಂದ ಹಾವನೂರರು ಇವು ಕಥೋಲಿಕಕೃತವೆಂದೂ, ಸವೆರಿ ಎಂದು ತನ್ನನ್ನೇ ಕರೆಯುವ ಫಾದರ್ ತಿಮೊತೆಯೊ ಜೇವಿಯರ್ ಕರ್ತೃವೆಂದೂ, ಕಾಲ ೧೭೩೯ ಎಂದೂ ಹೇಳಿದ್ದಾರೆ.[೭] ಇವುಗಳಲ್ಲಿ ''ಅನೇಕ ಪ್ರಕರಣಗಳು ತಮಿಳಿನಲ್ಲಿ ಮೊದಲು ಕಾಣಿಸಿಕೊಂಡು ಆ ಮೇಲೆ ಕನ್ನಡಕ್ಕೆ ಬಂದುವಾಗಿರಬೇಕು... ಕೆಲವು ಹತ್ತೊಂಬತ್ತನೇ ಶತಮಾನದಲ್ಲಿ ಮುದ್ರಣಗೊಂಡಿರಲೂ ಸಾಕು,'' ಎಂದೂ ಅದೇ ಲೇಖನದಲ್ಲಿ ಊಹಿಸಿದ್ದಾರೆ (ಪು.೧೮). 'ಕೆಲವು ಪ್ರಕರಣಗಳಿಗೆ' ಸಂಬಂಧಿಸಿದ ಹಾವನೂರರ ಊಹೆ ಸರಿ. ಆದರೆ ಕರ್ತೃ ಕಾಲಗಳ ಬಗೆಗೆ ಕೃತಿಗಳ ಪರಿಶೀಲನೆಯಿಂದ ಭಿನ್ನಾಂಶಗಳು ಫಲಿಸುವುದನ್ನು ನೋಡಬಹುದು:

೧. ಇವೆರಡೂ ಕೃತಿಗಳು ಕರ್ತೃವಿನ ಸ್ವಹಸಾಕ್ಷರ ಮೂಲಪ್ರತಿಗಳಲ್ಲ. ಪ್ರತಿಕಾರನ ನಕಲುಗಳು. ಎರಡನ್ನೂ ಪ್ರತಿಮಾಡಿದವನು ಮಾತ್ರ ಒಬ್ಬನೇ ಇದ್ದಿರಬಹುದು.

೨. ಇವೆರಡೂ ಕೃತಿಗಳ ಮೂಲಕರ್ತೃ ಒಬ್ಬನೇ ಅಲ್ಲ, ಹಲವರು.

೩. ಇವೆರಡೂ ಕೃತಿಗಳ ಕಾಲ ಒಂದೇ ಅಲ್ಲ.

೪. ಒಂದೊಂದು ಕೃತಿಯ ವಿವಿಧ ಭಾಗಗಳ ಕಾಲವೂ ಒಂದೇ ಅಲ್ಲ.[೮]

ಎರಡೂ ಕೃತಿಗಳ ಹಸಾಕ್ಷರ ಸಾದೃಶ್ಯದಿಂದ ಎರಡನ್ನೂ 'ಲಿಖಿಸಿದಾತ' (ಹಾವನೂರ, ಅದೇ, ಪು.೧೦) ಒಬ್ಬನೇ ಎನ್ನುವುದು ಸರಿಯಾಗುತ್ತದೆಯಾದರೂ, ಅಷ್ಟರಿಂದಲೇ ಎರಡೂ ಕೃತಿಗಳನ್ನು ಬೇರೆಬೇರೆಯಾಗಿ ಅಥವಾ ಒಟ್ಟಾಗಿ 'ರಚಿಸಿ'ದವನೂ (ಅದೇ, ಪು. ೧೨) ಲಿಖಿಸಿದವನೂ ಒಬ್ಬನೇ ಎಂದಾಗಲಿ, ಎರಡೂ ಕೃತಿಗಳನ್ನು ಲಿಖಿಸಿದವನೇ ಕರ್ತೃವೆಂದಾಗಲಿ ಆಗುವುದಿಲ್ಲ. ಹಸಾಕ್ಷರ ಸಾದೃಶ್ಯದಿಂದ ಕರ್ತೃ ಮತ್ತು ಲಿಪಿಕಾರ ಒಬ್ಬನೇ ಎಂದು

---

೬. '೧೮ನೆಯ ಶತಮಾನದ ಕೆಥಲಿಕರ ಅಪೂರ್ವ ಕೃತಿಗಳು', ಪು. ೧೦.

೭. ಅದೇ, ಪು. ೯-೨೮.

೮. ಹಸ್ತಪ್ರತಿ-೪೦ ಮತ್ತು ಹಸ್ತಪ್ರತಿ-೩೩೭—ಇವುಗಳಿಗೆ ಸಂಬಂಧಿಸಿದ ಕೆಳಗಿನ ಸುದೀರ್ಘ ಚರ್ಚೆಯಲ್ಲಿ ಅವುಗಳ ಕರ್ತೃ, ಕಾಲ, ವಿಷಯಗಳನ್ನು ಸಾಧ್ಯವಾದಷ್ಟು ಖಚಿತವಾಗಿ ನಿಗದಿಪಡಿಸಲು ಪ್ರಯತ್ನಿಸಲಾಗಿದೆ. ಈ ಸಂಶೋಧನೆಯನ್ನು ೧೯೮೩ರಲ್ಲಿ ಮೈಸೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ನನ್ನ ಪಿಎಚ್.ಡಿ. ನಿಬಂಧದಲ್ಲಿ ಪ್ರತಿಪಾದಿಸಿದ ರೂಪದಲ್ಲಿಯೇ ಯಥಾವತ್ತಾಗಿ ಇಲ್ಲಿ ಅಚ್ಚುಮಾಡಲಾಗಿದೆ. ಅನಂತರ ಇವೇ ಫಲಿತಗಳನ್ನು ೧೯೮೬ರಲ್ಲೇ ''Date and Authorship of Two Early Catholic Manuscripts Written in the Kannada Language'' ಎಂಬ ಶೀರ್ಷಿಕೆಯ ಲೇಖನದಲ್ಲಿ ಧಾರವಾಡದ Journal of the Karnataka University: Humanities, xxx (1986), 105-125- ಈ ವಿದ್ವತ್ ಪತ್ರಿಕೆಯಲ್ಲಿ ಪ್ರಕಟಿಸಲಾಗಿದೆ.

ಸೂಚಿತವಾಗುವುದಿಲ್ಲ. ಹಪ್ರ-೩೩೭ರ ಅಂತ್ಯದಲ್ಲಿ ''ಬರೆಯಲ್ಪಟ್ಟು ಮುಗಿತು'' ''ಈ ಪೊಸ್ತುಕ ಬರದ ನೆನಪು'' ''ಸವೆರಿ ಬರದ'' (ಪು. ೩೩೮ಎ)[೯] ಎಂದಿದೆ. ಆದರೆ ಇಲ್ಲಿಯ 'ಬರಹ' 'ಬರೆಯಲ್ಪಟ್ಟ'ಗಳಿಗೆ ಪ್ರತಿಮಾಡುವುದು ಎಂಬರ್ಥ ಇರುವುದು ಸಾಧ್ಯ, ಕನ್ನಡ ಹಸ್ತಪ್ರತಿಗಳ ಸಮಾಪ್ತಿ ವಚನಗಳಲ್ಲಿ ಇಂಥ ಪ್ರಯೋಗವಿದೆ.[೧೦]

ಎರಡೂ ಕೃತಿಗಳಲ್ಲಿ ಲಿಪಿಕಾರನ ಸ್ಖಾಲಿತ್ಯಗಳು ಅಪಾರ ಸಂಖ್ಯೆಯಲ್ಲಿ ಸಿಗುತ್ತವೆ: ಹಲವು ಕಡೆಗಳಲ್ಲಿ ಒಂದೊಂದು ಅಕ್ಷರವೇ ಬಿಟ್ಟು ಹೋಗಿರುತ್ತದೆ. ಉದಾಹರಣೆಗೆ, ''ಮೊದಲನೆ ರಹಸ್ಯವನ್ನು ಧ್ಯಾನಿಸಿಕೊಂಡು ನನ್ನ ಪಾಪಕ್ಕಾಗಿ ನನ್ನ ಭಾ[ವ]ನೆಯನ್ನು ತಕ್ಕೊಂಡ ಕರ್ತರಿಗೆ...'' (ಹಪ್ರ-೪೦, ಪು. ೪೦ಎ), ''ಅವರು ನಿನ್ನ ಮೇಲೆ ಪಕ್ಷವಾಗಿ ಇರುವ ನಿಮಿತ್ಯವಾಗಿ ನಿ[ನ]ಗೆ ಶ್ರೇಯಸ್ಸು ಬರುವ ಹಾಗೆ'' (ಹಪ್ರ-೩೩೭, ಪು. ೮೨ಎ-೮೩), ''ನಾನಾ ಬಗೆ ದವಸಧಾನ್ಯ ಬೆಳೆತಂದು ಇರುಸುವಣ ಮಾರುವಣ ತಿರಿಗಿ ಬಿತುವಣ, ವೇಳೆವೇ[ಳೆ]ಗೆ ಹೆ[ಚ್ಚಿ]ಶಿಕೊಂಡು ಅನೇಕ ಅನೇಕ ದ್ರವ್ಯ ಸಂಪಾದಿಸಿಕೊಂಡು ಇರಲಾಗಿ ಒಂದು ಸಾರಿ ದೈವಾಧೀನದಿಂದ ಒಳ್ಳೆ ಸ[ಮ]ಯಕ್ಕೆ ಒಳ್ಳೆ ಮಳೆ ಸುರಿತು...'' (ಅದೇ, ಪು. ೨೧೨ಎ). ಹಲವು ಕಡೆಗಳಲ್ಲಿ ಒಂದೊಂದು ವಾಕ್ಯವೇ ಬಿಟ್ಟುಹೋಗಿರುತ್ತದೆ, ಬಿಟ್ಟು ಹೋದ ಭಾಗಗಳನ್ನು + ಅಥವಾ V ಅಥವಾ ಇಂಥದೇ ಒಂದು ಗುರುತು ಹಾಕಿ ಪಾಠದ ಪಕ್ಕದಲ್ಲಿ ಬರೆದುದನ್ನು ಅನೇಕಾನೇಕ ಕಡೆಗಳಲ್ಲಿ ನೋಡಬಹುದು (ಅದೇ, ಪು. ೩೬ಎ, ೬೪ಎ, ಇತ್ಯಾದಿ; ಹಪ್ರ-೪೦, ಪು ೪ಎ, ೩೫ಎ, ಇತ್ಯಾದಿ). ಹಲವು ಕಡೆಗಳಲ್ಲಿ ತಪ್ಪಾಗಿ ಪ್ರತಿಯಾಗಿದೆ, ಉದಾಹರಣೆಗೆ, ಹಪ್ರ-೩೩೭ರ ಈ ಭಾಗದಲ್ಲಿ, ''ಲೋಕಕ್ಕೆ ಸಂಬಂಧವಾಗಿಯಿರುವ ಅಲ್ಪಕಾರ್ಯಗಳನ್ನು ನಾನು ಅರುತುಕೊಂಬದಕ್ಕೆ ಪ್ರಯಾಸಪಡುವ ಹಾಗೆ ಒಂದು ಕಾಲವೂ ಅರಿಯದ ಪ್ರಯೋಜನ ಕೊಡುವ ಈ ಸತ್ಯವಿಶೇಷಗಳನ್ನು ಅರುತುಕೊಂಬದಕ್ಕೆ ತಿಳಿದವರ ಕೇಳಿ ಸಾಧಿಸಿದರೆ ಅವುಗಳನ್ನು ಅರ್ತುಕೊಂಬನಲ್ಲದೆ ಮತ್ತೊಂದಲ್ಲ'' (ಪು. ೧೭-೧೮) 'ಒಂದು ಕಾಲವೂ ಆರಿಯದ' ಅರ್ಥವಾಗುವುದಿಲ್ಲ. ಆದರೆ ಮುಂದಿನ ಪರಿಚ್ಛೇದದಲ್ಲಿ ಬರುವ ಇಂಥದೇ ವಾಕ್ಯದಲ್ಲಿ 'ಒಂದು ಕಾಲವೂ ಅಳಿಯದ' ಎಂದಿದೆ. ಅರಿಯದ ಬದಲಿಗೆ ಅಳಿಯದ ಓದಿದರೆ ಪಾಠ ಅರ್ಥವಾಗುತ್ತದೆ. ಇದು ಲಿಪಿಕಾರನ ಸ್ಖಾಲಿತ್ಯ.[೧೧] ಲಿಪಿಕಾರ ಕಾಲಹರಣಕ್ಕೋಸ್ಕರ ಅಥವಾ

---

೯. ಹಸ್ತಪ್ರತಿಗಳ ಕಾಗದದ ಒಂದೇ ಮಗ್ಗುಲಿಗೆ ಪುಟಸಂಖ್ಯೆ ಹಾಕಿ ಇನ್ನೊಂದು ಮಗ್ಗುಲಿಗೆ ಪುಟಸಂಖ್ಯೆ ಹಾಕದಿದ್ದಾಗ, ಈ ಎರಡನೇ ಮಗ್ಗುಲನ್ನು 'ಎ' ಎಂದು ನಿರ್ದೇಶಿಸಿದೆ. ಉದಾಹರಣೆಗೆ, ೩೩೮ನೇ ಪುಟದ ಹಿಂಭಾಗದ ಪುಟಸಂಖ್ಯೆ ೩೩೮ಎ.

೧೦. ಮಂಗರಸನ ಸಮ್ಯಕ್ತ್ವಕೌಮುದಿಯನ್ನು ಪಾಯಂಣನು ಪ್ರತಿಮಾಡಿದನು; ''ಚಿಕ್ಕೈಯಾತ್ಮಜ ಪಾಯಂಣನು...ಬರದಂಥಾ ಕೌಮುದಿ ಪುಸ್ತಕ...'' ಎಂದು ಸಮಾಪ್ತಿವಚನವಿದೆ; ''ಮಹಾಂತದೇವರು ಬರದ ತೋಂಟದ ಸಿದ್ಧೇಶ್ವರ ಪುರಾಣ ಸಮಾಪ್ತಿ...''ಯಲ್ಲಿ ಕರ್ತೃ ಶಾಂತೇಶ, ಮಹಾಂತದೇವರಲ್ಲ; ''...ಯಿದ ಬರದಾತ ಯಾರು ಎಂದರೆ ಶೇಷಿ ಬಾಮ್ಮೆದ ತುರುವೇಕೆರೆ''- ಇದರಲ್ಲಿ ಕರ್ತೃ ಸಿದ್ಧಬೋಳೇಶ, ಸೇಷಿಬಾಮ್ಮೆದ ತುರುವೇಕೆರೆ ಅಲ್ಲ, ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ ಒಂಬತ್ತನೆಯ ಸಂಪುಟ, (ಸಂ.) ಬಿ. ಎಸ್. ಸಣ್ಣಯ್ಯ (ಮೈಸೂರು, ಕನ್ನಡ ಅಧ್ಯಯನ ಸಂಸ್ಥೆ, ೧೯೮೧), ಪು. ೬೦-೬೧, ೧೨೪-೨೫, ಇತ್ಯಾದಿ.

೧೧. ಎರಡೂ ಹಸ್ತಪ್ರತಿಗಳ ಅಕ್ಷರಿಕೆಯ ರೀತಿಯಲ್ಲಿ ವೈಶಿಷ್ಟ್ಯಗಳುಂಟು. ಹಾವನೂರರು ಇವುಗಳನ್ನು ಪಟ್ಟಿ ಮಾಡಿದ್ದಾರೆ. '೧೮ನೆಯ ಶತಮಾನದ ಕಥಲಿಕರ ಅಪೂರ್ವ ಕೃತಿಗಳು', ಪು. ೨೧, ಪ್ರಕೃತ ಪ್ರಬಂಧದಲ್ಲಿ ಓದುವಿಕೆ ಸುಲಭವಾಗುವ ಉದ್ದೇಶದಿಂದ ಕನಿಷ್ಠ ಪ್ರಮಾಣದಲ್ಲಿ ಮೂಲ ಪಾಠವನ್ನು

ತನ್ನ ಬೇಸರವನ್ನು ಕಳೆಯುವುದಕ್ಕೋಸ್ಕರ ಬರೆದಿಟ್ಟ ಭಾಗಗಳ ಉದಾಹರಣೆಗಳೂ ಇಲ್ಲಿ ಸಿಗುತ್ತವೆ: ಹಪ್ರ-೪೦ರಲ್ಲಿ ಒಂದರಿಂದ ಇಪ್ಪತ್ತೈದರವರೆಗಿನ, ಅನಂತರ ಮೂವತ್ತರಿಂದ ನೂರರವರೆಗಿನ, ತದನಂತರ ನೂರರಿಂದ ಎರಡು ಸಾವಿರದ ವರೆಗಿನ ಕೆಲವು ಸಂಖ್ಯೆಗಳೂ ಸೋಮವಾರದಿಂದ ಆದಿತ್ಯವಾರದ ವರೆಗಿನ ವಾರಗಳ ಹೆಸರುಗಳೂ ಉಂಟು. ಕೃತಿಭಾಗವನ್ನು ಬರೆದು ಮುಗಿಸಿದಾಗ ಹಾಳೆಯ ಸ್ವಲ್ಪ ಭಾಗ ಉಳಿದಿತ್ತು, ಅಲ್ಲಿ ಮುಂದಿನ ಭಾಗವನ್ನು ಆರಂಭಿಸುವುದು ಪ್ರತಿಕಾರನಿಗೆ ಪ್ರಶಸ್ತವೆನಿಸಲಿಲ್ಲ, ಹೊಸದಾದ ಹಾಳೆಯಲ್ಲಿ ಮುಂದಿನ ಭಾಗವನ್ನು ಆರಂಭಿಸಿ, ಬರಿದಾಗಿ ಉಳಿದ ಭಾಗವನ್ನು ಸ್ವಸಂತೋಷಕೋಸ್ಕರ ಉಪಯೋಗಿಸಿದನು ಎಂದು ಕಾಣುತ್ತದೆ.

ಇವೆರಡು ಹಸ್ತಪ್ರತಿಗಳು ಲಿಪಿಕಾರನ ಪ್ರತಿಗಳು ಎನ್ನುವುದಕ್ಕೆ ಇವುಗಳ ವಿಷಯವೂ ಸಾಕ್ಷಿಯಾಗಿದೆ: ಹಪ್ರ-೪೦ರಲ್ಲಿ ೧೭ ವಿಷಯಗಳಿವೆ, ಹಪ್ರ-೩೩೭ರ ಅಂತ್ಯದ ಅನುಕ್ರಮಣಿಕೆಯಲ್ಲಿ ೪೭ ವಿಷಯಗಳಿವೆ. ಇವುಗಳಲ್ಲಿ ಕೆಲವು ಅಪೂರ್ಣವಾಗಿವೆ: ಕೆಲವು ವಿಷಯಗಳ ಕೊನೆಯ ಭಾಗವಷ್ಟೆ ಉಂಟು. ಹಪ್ರ-೪೦ರಲ್ಲಿ ಜ್ಞಾನೋಪದೇಶದ ಕೊನೆಯ ೧೨ನೇ ಮತ್ತು ೧೩ನೇ ಪ್ರಸಂಗಗಳು ಮಾತ್ರ ಇವೆ(ಪು. ೨೫-೨೭); ಇನ್ನು ಕೆಲವೆಡೆ ಅಂತ್ಯಭಾಗವಿಲ್ಲ, ಉದಾಹರಣೆಗೆ, ಹಪ್ರ-೩೩೭ರಲ್ಲಿ ಜೇಸುನಾಥರು ಮೋಕ್ಷಕ್ಕೆ ಚಿತ್ತೈಸಿ ಶಿಷ್ಯರುಗಳ ಮೇಲೆ ಸ್ಪಿರಿತುಸಾಂತ್ತು ವರಪ್ರಸಾದಗಳ ಕಳುಹಿಸಿದ ವರ್ತಮಾನ (ಪು. ೨೮೬ಎ-೮೭); ಇನ್ನು ಕೆಲವೆಡೆ ನಡುವಿನ ಒಂದು ಭಾಗವಿಲ್ಲ, ಉದಾಹರಣೆಗೆ, ಹಪ್ರ-೪೦ರಲ್ಲಿ ಕಾರ್ಲೊತೊಮೆಯ ಹನ್ನೆರಡನೇ ಕಲ್ಪಣೆ ಇಲ್ಲ (ಪು. ೨೦). ಕೊನೆಯ ಎರಡು ಉದಾಹರಣೆಗಳಲ್ಲಿ ನಷ್ಟವಾದ ಭಾಗದ ಸ್ಥಳದಲ್ಲಿ ಸ್ವಲ್ಪ ಸ್ಥಳ ಖಾಲಿ ಇದ್ದು, ಅನಂತರ ಮುಂದಿನ ಭಾಗ ಅಥವಾ ಕೃತಿಭಾಗ ಆರಂಭವಾಗುತ್ತದೆ.

ಹಸ್ತಪ್ರತಿ-೩೩೭ ಲಿಪಿಕಾರನ ಪ್ರತಿ ಎಂಬುದಕ್ಕೆ ಇನ್ನೊಂದು ಆಧಾರವು ಇದೆ. ಇದರಲ್ಲಿರುವ ದೇವಮಾತೆಯ ಧರ್ಮಚರಿತ್ರಗಳು ಕೃತಿಯ ಪಾಠ, ಅದೇ ಕೃತಿಯ ತಾಳೆಗರಿಯ ಪಾಠಕ್ಕಿಂತ (ಮಂಗಳೂರು, ಸೈಂಟ್ ಎಲಾಸಿಯಸ್ ಕಾಲೇಜಿನಲ್ಲಿರುವ ಪ್ರತಿ) ಶುದ್ಧವಾಗಿದೆ. ತಾಳೆಗರಿ ಪಾಠದಲ್ಲಿ ಬಿಟ್ಟುಹೋದ ಪದಗಳು ಹಪ್ರ-೩೩೭ರಲ್ಲಿದ್ದು, ಈ ಪದಗಳಿಂದಾಗಿ ಪಾಠ ಅರ್ಥವಾಗುತ್ತದೆ. ಉದಾಹರಣೆಗೆ 'Magnificat' ಕೀರ್ತನೆಯ

---

ತಿದ್ದಿ ಉದ್ಧರಣೆಗಳನ್ನು ಕೊಡಲಾಗಿದೆ. ಹೀಗೆ ಮಾಡುವಾಗ ಪಾಠದ ಭಾಷೆಯ ಸ್ವರೂಪವನ್ನು ಯಾವುದೇ ಬಗೆಯಲ್ಲಿ ಬದಲಾಯಿಸಲಿಲ್ಲ. ಈ ಉದ್ಧರಣೆಗಳಲ್ಲಿ ವಿಷಯ ಪ್ರಧಾನವಾಗಿರುವುದರಿಂದ ಮತ್ತು ಅಕ್ಷರಿಕೆಯ ವೈಶಿಷ್ಟ್ಯಗಳನ್ನು ಚರ್ಚಿಸುವುದು ಗೌಣವಾಗಿರುವುದರಿಂದ ಹೀಗೆ ಮಾಡುವುದು ಸಮರ್ಥನೀಯ ಎಂದೆನಿಸಿತು. ಮೂಲ ಪಾಠದ ಅಕ್ಷರಿಕೆಯ ಉದಾಹರಣೆಯಾಗಿ ಇಲ್ಲಿಯ ಮೊದಲ ಎರಡು ಉದ್ಧರಣೆಗಳ ಯಥಾರೂಪಗಳನ್ನು ನೋಡಬಹುದು:

ಮೊದಲನೆ ರಹಸ್ಯವನ್ನು ಧ್ಯಾನಿಸಿಕೊಂಡು ನಂನ್ನ ಪಾಪಕಾಗಿ ನಂನ ಭಾನೆಯಂನ್ನು ತೆಕೊಂಡ ಕರ್ತರಿಗೆ ನಾನು ದರ್ಮಪುಂಣ್ಯದಿಂದಾ ಭಾವನೆಯಾಗಿರುವ ಹಾಗೆ ದೆವರ ತಾಯಾದವಳ ಬೆಡಿಕೊಂಡೆನು. (ಹಪ್ರ-೪೦. ಪು. ೯೦ಎ).

ಅದೇನೆಂದರೆ ಹೆತ ತಂದೆತಾಯಿಗಳಿಗಿಂದ್ದಾ ಅವರು ನಿಂನ್ನ ಮೆಲೆ ಪಕ್ಷವಾಗಿಯಿರುವ ನಿಮಿತ್ಯವಾಗಿ ನಿಗೆ ಶ್ರೇಯಸ್ಸು ಬರುವ ಹಾಗೆ ಮಾಡುವರಲ್ಲದೆ ಮತ್ತೊಂದ್ದಲ್ಲ ಕುರಿಗಳಿಗೆ ವಡೆಯನಾದವನ ಧ್ವನಿಯ ಕೆಳಿಕೊಂಡ್ಡು ಒಡೆಯನ್ನು ಯೆಲ್ಲಿ ಹೊಡಕೊಂಡ್ಡು ಹೊದರೆಯು...(ಹಪ್ರ-೩೩೭, ಪು. ೮೨ಎ).

ಅನುವಾದದಲ್ಲಿ ''ಶಕ್ತಿಯುಳ್ಳವರ ಆಸನದಿಂದ [ತಳ್ಳಿ] ತನ್ನಲ್ಲಿ ದಾಕ್ಷಿಣ್ಯವುಳ್ಳವರ ಹೆಚ್ಚಿಸಿದರು'' (ತಾಳೆಗರಿ, ಪು. ೫೭), ತಾಳೆಗರಿಯಲ್ಲಿ 'ತಳ್ಳಿ' ಇಲ್ಲ, ಪಾಠ ಮೂಲಕ್ಕೆ ಹೊಂದುವುದಿಲ್ಲ. ಏಕೆಂದರೆ ಇದರ ಮೂಲ ಪ್ರಸಿದ್ಧವಾಗಿದ್ದು ಇಂಗ್ಲಿಷಿನಲ್ಲಿ ಹೀಗಿದೆ, ''He has put down the mighty from their thrones and exalted those of low degree''(Luke 1:52). ಈ ವಚನದ ಉತ್ತರಾರ್ಧದ ಅನುವಾದ ಹೇಗಿದ್ದರೂ, ಪೂರ್ವಾರ್ಧದಲ್ಲಿ 'ತಳ್ಳಿ,' 'put down' ಬರಲೇ ಬೇಕು ಎಂಬುದು ಸ್ಪಷ್ಟ. ಈ 'ತಳ್ಳಿ' ಹಪ್ರ-೩೩೭ರಲ್ಲಿದೆ, ತಾಳೆಗರಿಯ ಪಾಠದಲ್ಲಿಲ್ಲ. ಇಂಥ ಹಲವು ನಿದರ್ಶನಗಳಿಂದ ತಾಳೆಗರಿಯ ಪಾಠಕ್ಕಿಂತ ಹಪ್ರ-೩೩೭ರ ಪಾಠ ಶುದ್ಧ ಎಂದು ಹೇಳಬಹುದು.

ಹೀಗಿದ್ದರೂ ಎರಡೂ ಪಾಠಗಳು ಮೂರನೇ ಒಂದು ಪಾಠದ ಪ್ರತಿಯಾಗಿರುವ ಸಾಧ್ಯತೆ ಇದೆ. ಇದಕ್ಕೆ ಕಾರಣವೇನೆಂದರೆ ಎರಡರಲ್ಲೂ ಭಿನ್ನವಾದ ಪಾಠಗಳು ಸಿಗುತ್ತವೆ. ಉದಾಹರಣೆಗೆ, ''ಪರಿಶುದ್ಧತಮ ಕನ್ಯಾಸ್ತ್ರೀಯಾದ ಅರ್ಚಶಿಷ್ಟ ಮರಿಯಮ್ಮನವರೆಂಬ ದೇವಮಾತೆಯಾದವಳು ಯಜಿಪ್ತುಯೆಂಬ ರಾಜ್ಯದಲ್ಲಿ...'' ಎಂದು ತಾಳೆಗರಿಯಲ್ಲಿ (ಪು. ೧೫ಎ) ಇದ್ದದ್ದು ಹಪ್ರ-೩೩೭ರಲ್ಲಿ ''...ಯಜಿಪ್ತುಯೆಂಬ ದೇಶದಲ್ಲಿ'' ಎಂದಾಗಿದೆ. ಇಂಥ ಭಿನ್ನತೆಗಳು ಕಂಡುಬರುವುದರಿಂದ ಒಂದು ಪ್ರತಿ ಇನ್ನೊಂದರ ನಕಲಾಗಿರದೆ ಮೂರನೇ ಒಂದು ಮೂಲದ ನಕಲೋ ಅಥವಾ ಇನ್ನೆರಡು ಬೇರೆ ಬೇರೆ ಮೂಲಗಳ ನಕಲೋ ಆಗಿರುವ ಸಾಧ್ಯತೆ ಇದೆ. ಹೇಗಿದ್ದರೂ ಹಪ್ರ-೩೩೭ ಮೂಲ ಪ್ರತಿಯಲ್ಲ, ನಕಲಾದ ಪ್ರತಿಯೆಂದೇ ಇದು ಸೂಚಿಸುತ್ತದೆ.

ಇವೆಲ್ಲಾ ಕಾರಣಗಳ ಆಧಾರದ ಮೇಲೆ ಇವೆರಡು ಹಸ್ತಪ್ರತಿಗಳು ಮೂಲಕರ್ತೃವಿನ ಸ್ವಹಸ್ತಾಕ್ಷರ ಪ್ರತಿಗಳಲ್ಲವೆಂದೂ ಲಿಪಿಕಾರನು ಮಾಡಿದ ಪ್ರತಿಗಳೆಂದೂ ಹೇಳಬಹುದು.

ಎರಡೂ ಹಸ್ತಪ್ರತಿಗಳ ಮೂಲಕರ್ತೃ ಒಬ್ಬನೇ ಅಲ್ಲ ಎನ್ನುವುದಕ್ಕೆ ವಿಷಯಗಳ ಪರಿಶೀಲನೆ ಆಧಾರ ಒದಗಿಸುತ್ತದೆ. ಹಪ್ರ-೪೦ರಲ್ಲಿ ಪಾಪಸಂಕೀರ್ತನ ಮತ್ತು ಸತ್ಪ್ರಸಾದಗಳ ಆಯಿತಗಳು ಮೊದಲೊಮ್ಮೆ (ಪು. ೧ಎ-೬ಎ) ಮತ್ತು ಕೊನೆಯಲೊಮ್ಮೆ (ಪು. ೩೨ಎ-೩೬ಎ) ಬಂದಿವೆ. ಇವುಗಳಲ್ಲಿ ವಿಷಯ ಪುನರಾವರ್ತನೆಯಾಗಿದೆ; ಆರಂಭದ ಭಾಗದಲ್ಲಿ ಕೆಲವು ಅಂಶಗಳು ತುಸು ವಿಸ್ತಾರವಾಗಿ ಪ್ರತಿಪಾದಿತವಾಗಿವೆ, ಅಷ್ಟೆ, ಉಳಿದ ಅಂಶಗಳು ಮೂಲತಃ ಭಿನ್ನವಲ್ಲ. ಒಂದೇ ವಿಷಯವನ್ನು ಕುರಿತ ಈ ಪುನರಾವರ್ತನೆಗಳಿಂದ ಅಂಥಾ ಹೆಚ್ಚಿನ ಪ್ರಯೋಜನ ಸಾಧಿತವಾಗಲಿಲ್ಲವಾದುದರಿಂದ ಒಬ್ಬನೇ ಕರ್ತೃ ಮಾಡಿದ ಪುನರಾವರ್ತನೆಗಳು ಇವಲ್ಲ, ಭಿನ್ನ ಕರ್ತೃಗಳ ಭಿನ್ನ ಕೃತಿಗಳಿವು. ಹಪ್ರ-೩೩೭ರಲ್ಲಿಯೂ ಸತ್ಪ್ರಸಾದದ ಆಯಿತ ಎರಡು ಸಲ ಬಂದಿದೆ (ಪು. ೨೪೯ಎ-೪೦ ಮತ್ತು ಪು. ೨೯೨-೯೪). ದೇವಮಾತೆಯ ಅಮಲೋದ್ಭವದ ಪ್ರಸಂಗದಿಂದ ಅವಳ ಮೋಕ್ಷಾರೋಹಣದ ವರೆಗಿನ ವೃತ್ತಾಂತದಲ್ಲಿ ಯೇಸುವಿನ ಸಂಪೂರ್ಣ ಜೀವನ ಚರಿತ್ರೆಯೂ ಬರುತ್ತದೆ (ಪು. ೨೭೫-೨೯೦). ಆದರೆ ಯೇಸುವಿನ ಜೀವನದ ಬಹುಮುಖ್ಯ ಭಾಗವಾದ ಪಾಡುಗಳ ಚರಿತ್ರೆ ಇಲ್ಲಿಲ್ಲ. ಪಾಡುಗಳ ಒಂದು ವೃತ್ತಾಂತ, ಸ್ವಾಮಿ ಪಾಡುಪಟ್ಟ ವರ್ತಮಾನ (ಪು. ೨೪೦ಎ-೨೪೮ಎ), ಇದೇ ಹಸ್ತಪ್ರತಿಯಲ್ಲಿ ಉಂಟು. ಇದರ ಶೈಲಿ (ಪು. ೨೭೫-೨೯೦)-ಈ ಭಾಗದ ಶೈಲಿಯಂತೆ ಇದ್ದು ಈ ವರ್ತಮಾನ ಅಲ್ಲಿ ತಪ್ಪಿಹೋದ ಭಾಗವೆಂಬುದು ಸ್ಪಷ್ಟ. ಆದರೆ ಪ್ರತಿಕಾರನು ಅದನ್ನು ಬೇರೆಡೆ ಸೇರಿಸಿ ಬರೆದಿದ್ದಾನೆ. ಹಪ್ರ-೩೩೭ರ ವಿಷಯಗಳ

ವ್ಯವಸ್ಥೆಯಲ್ಲಿಯೂ ಯಾವುದೇ ಕ್ರಮ ಕಾಣುವುದಿಲ್ಲ. ಹೀಗೆ, ಸತ್ಯ ಉಪದೇಶ, ಜ್ಞಾನೋಪದೇಶಗಳು ಒಂದೇ ಕಡೆ ಇಲ್ಲ, ಪರಮತಖಂಡನೆಯ ಕೃತಿಗಳು ಸ್ವಕೀಯರ ಧರ್ಮಬೋಧನೆಯ ಕೃತಿಗಳು, ಸಂಸ್ಕಾರವಿಧಿಗಳ ವಿವರಣೆ–ಒಂದೊಂದು ವಿಷಯದ ಕೃತಿಗಳೂ ಹಲವು ಕಡೆ ಹಂಚಿಹೋಗಿದ್ದು ವ್ಯವಸ್ಥಿತವಾಗಿಲ್ಲ.

ಇವೆಲ್ಲಾ ಕಾರಣಗಳಿಂದ, ತನಗೆ ಸಿಕ್ಕಿದ ಹಲವು ವಿವಿಧ ಕೃತಿಗಳನ್ನು ಸಿಕ್ಕಿದ್ದಾಗ, ಸಿಕ್ಕಿದ್ದ ಕ್ರಮದಲ್ಲಿ ಬರೆದಿರಿಸಿದ ಒಬ್ಬ ಪ್ರತಿಕಾರನ ಸ್ವಂತ ಕೈಪಿಡಿಗಳು ಎಂದು ಇವೆರಡೂ ಹಸ್ತಪ್ರತಿಗಳನ್ನು ನಾವು ನಿರ್ದೇಶಿಸಬಹುದು.

**ಕರ್ತೃ**

೧೮ನೇ ಶತಮಾನದಲ್ಲಿ ಮೈಸೂರು ಮಿಶನಿನಲ್ಲಿದ್ದ ತಿಮೊಥಿಯೊ ಜೇವಿಯರ್ ಎಂಬ ಜೆಜ್ವಿಟ್ ಮಿಶನರಿಯೇ ಇವೆರಡು ಹಸ್ತಪ್ರತಿಗಳ ಕರ್ತೃ ಎಂದು ಹಾವನೂರ್ ಹೇಳಿದ್ದಾರೆ. ಹಪ್ರ-೩೩೭ರ ಸಮಾಪ್ತಿ ವಚನವನ್ನು ಇದಕ್ಕೆ ಆಧಾರವನ್ನಾಗಿ ಕೊಟ್ಟಿದ್ದಾರೆ.[೧೨] ಪ್ರಕೃತ ಅಧ್ಯಯನದಲ್ಲಿ ಕಂಡುಬರುವಂತೆ ಇವನು ಇವೆರಡು ಕೃತಿಗಳ ಕರ್ತೃ ಅಲ್ಲ, ಸವೆರಿ ಎಂಬುದು ಮಿಶನರಿಯ ಹೆಸರೂ ಅಲ್ಲ. ಈ ತೀರ್ಮಾನಗಳಿಗೆ ಕಾರಣಗಳನ್ನು ಹೀಗೆ ಕೊಡಬಹುದು:

೧೮ನೇ ಶತಮಾನದಲ್ಲಿ ಸವೆರಿ (Xavier) ಎಂಬ ಹೆಸರಿನ ಒಬ್ಬನೇ ಮಿಶನರಿ, ತಿಮೊಥಿಯೊ ಜೇವಿಯರ್, ಮೈಸೂರು ಮಿಶನಿನಲ್ಲಿದ್ದನು ಎಂಬುದು ಸರಿಯಲ್ಲ. ಜೆಜ್ವಿಟ್ ಸಂಸ್ಥೆ ಬಹಿಷ್ಕೃತವಾದಾಗ ತಿಮೊಥಿಯೊ ಜೇವಿಯರನ ಜೊತೆಯಲ್ಲಿ ಫ್ರಾನ್ಸಿಸ್ಕೊ ಸವೆರಿಯೊ ಪವೊನೆ ಎಂಬ ಮಿಶನರಿಯೂ ಅದೇ ಸಂಸ್ಥೆಯ ಸದಸ್ಯನಾಗಿದ್ದನು.[೧೩] ೧೭೫೮ರಿಂದೀಚೆಯಿಂದ ೧೭೭೩ರ ಅನಂತರವೂ ಪವೊನೆ ಮೈಸೂರಿನಲ್ಲಿದ್ದನು ಎಂಬುದಕ್ಕೆ ಆಧಾರವಿದೆ.[೧೪]

ಹಪ್ರ-೩೩೭ರ ಸಮಾಪ್ತಿವಚನದ ಪ್ರಸಕ್ತ ಭಾಗ ಹೀಗಿದೆ:

> ಜೇಸುನಾಥರಿಗೂ ದೇವಮಾತೆಗೂ ಸ್ತೋತ್ರವಾಗಿ ಅರ್ಚಶಿಷ್ಟ ಸವೆರಿಯವರ ಬೇಡುದಲೆಯಿಂದಾ ದೇವಬೋದಗನಾದ ರಾಜರುಷಿ ಗುರುಸ್ವಾಮಿಯವರ ಆಶೀರ್ವಾದದಿಂದಾ ಸಿದಾರ್ಥಿ ಸಮತ್ಸರದ ಚೈತ್ರಮಾಸದ ೨೩ನೇ ತಿಥಿಯಲ್ಲಿ ಸವೆರಿ ಬರದ ಈ ಪೊಸ್ತಕವ ಯಾರು ಮುಟ್ಟಿದರು ಯಾರು ಓದಿದರು ಬರದವನಿ[ಗಾ]ಗಿ ದೇವರ ಮಾತೆಯ ನೋಡಿ ಬೇಡಿಕೊಳ್ಳಿ.

'ದೇವಬೋದಗನಾದ ರಾಜರುಷಿ ಗುರುಸ್ವಾಮಿಯವರು' ಎಂದರೆ ಜೆಜ್ವಿಟ್ ಮಿಶನರಿಗಳು. ಇವರು ಉತ್ತಮಕುಲಸಂಜಾತರೆಂದೂ ರಾಜಋಷಿಗಳೆಂದೂ ಕ್ರೈಸ್ತರಲ್ಲಿ ತಿಳಿವಳಿಕೆಯಿತ್ತು. ಹಪ್ರ-೪೦ರಲ್ಲಿ ಮಿಶನರಿಗಳ ವರ್ಣನೆ ಹೀಗಿದೆ, ''ಇವರು ಮೂರು ಸಾವಿರ ಏಳುನೂರು ಗಾವದ ದೂರವಾಗಿ ಉತ್ತರ ದಿಕ್ಕಿನಲ್ಲಿ ರುಮ್ಮಿನಿಂದಾಚೆ ರಾಜ್ಯಗಳಲ್ಲಿ ಉತ್ತಮಜಾತಿಯಲ್ಲಿ ಜನ್ಮಿಸಿ ಮಣ್ಣಾಶೆ, ಹೆಣ್ಣಾಶೆ, ಹೊನ್ನಾಸೆ ಬಿಟ್ಟು ನಮ್ಮನ್ನು ಈಡೇರಿಸುವುದಕ್ಕೆ ತಾತ್ಪರ್ಯವಾಗಿ ಈ ಸತ್ಯೋಪದೇಶವನ್ನು ಈ ರಾಜ್ಯಕ್ಕೆ ತಂದರು'' (ಪು. ೨೭). ರಾಜಋಷಿ ಎಂದರೆ ಜೆಜ್ವಿಟ್ ಮಿಶನರಿಯಾಗಿದ್ದ ರೊಬರ್ಟ್ ಡಿ ನೊಬಿಲಿ (೧೫೭೭-೧೬೫೬)

---

೧೨ ಹಾವನೂರ, '೧೮ನೆಯ ಶತಮಾನದ ಕೆಥಲಿಕರ ಅಪೂರ್ವ ಕೃತಿಗಳು', ಪು. ೧೦-೧೨.

೧೩. Ferroli, p. 194.

೧೪. ಅದೇ ಪು. ೧೩೫

ಆಗಿರುವುದು ಸಾಧ್ಯ. ಏಕೆಂದರೆ ಅವನನ್ನು ರಾಜಸಂನ್ಯಾಸಿ ಎಂದು ಕರೆಯುತ್ತಿದ್ದರು.[೧೫] ಸವೆರಿ ಈ ರಾಜಋಷಿ ಗುರುಸ್ವಾಮಿಯವರ ಆಶೀರ್ವಾದ ಪಡೆದವನು-ಎಂದರೆ ಅವನ ಕೈಕೆಳಗಿನ, ಗುರುದೀಕ್ಷೆ ಇಲ್ಲದ, ಸಾಮಾನ್ಯ ಕ್ರೈಸ್ತನಾಗಿದ್ದನು. ಸವೆರಿ ತಾನು ಸ್ವತಃ ಮಿಶನರಿಯಾಗಿದ್ದಿದ್ದರೆ ಡಿ ನೊಬಿಲಿಯನ್ನು ಅಥವಾ ರಾಜಋಷಿ ಗುರುಸ್ವಾಮಿಯಾಗಿದ್ದ ಮಿಶನರಿಯನ್ನು ಅಷ್ಟು ಪೂಜ್ಯಭಾವದಿಂದ ಸ್ಮರಿಸುವುದಕ್ಕಿಂತಲೂ, ಸಹೋದ್ಯೋಗಿಗಳಿಗೆ ಸಹಜವಾದ ಸಹಭ್ರಾತೃತ್ವದ ಭಾವದಿಂದ ಸ್ಮರಿಸುತ್ತಿದ್ದನು, ಏಕೆಂದರೆ ಇಬ್ಬರೂ ಜೆಜ್ವಿಟರೇ ಮತ್ತು ಇಬ್ಬರೂ ಒಂದೇ ಉದ್ಯೋಗದಲ್ಲಿ-ಮತಪ್ರಚಾರ ಮಾಡುವ ಉದ್ಯೋಗದಲ್ಲಿ ಇದ್ದವರು ಆಗಿರುತ್ತಿದ್ದರು. ಆದರೆ ಇಲ್ಲಿ ಕಾಣುವ ಅತೀವ ಭಕ್ತಿಗೌರವಗಳು ಮಿಶನರಿಯಿಂದ ಬೋಧನೆ, ಆಶೀರ್ವಾದ ಪಡೆದ ಸಾಮಾನ್ಯ ಕ್ರೈಸ್ತನ ಮಾತುಗಳಂತಿವೆ.

ಎರಡನೆಯದಾಗಿ, ಈ ಸವೆರಿ ಸಾಮಾನ್ಯ ಕ್ರೈಸ್ತರಲ್ಲಿ ಹೆಚ್ಚು ಪ್ರಶಸ್ತಿ ಪಡೆದವನಿರಬಹುದು. ಏಕೆಂದರೆ ಇವೆರಡು ಹಸ್ತಪ್ರತಿಗಳಲ್ಲಿ ಕ್ರೈಸ್ತ ಧರ್ಮದ ಜಟಿಲ ತತ್ತ್ವಗಳು (ಉದಾಹರಣೆಗೆ, ಪರಮ ತ್ರಿತ್ವದ ರಹಸ್ಯದ ವಿವರಣೆ), ಗುರುದೀಕ್ಷೆ ಪಡೆದವನಿಗೆ ಮಾತ್ರ ಬೇಕಾಗುವ ಭಾಗಗಳೂ (ಉದಾಹರಣೆಗೆ, ಪೋಪನ ಪತ್ರಗಳು, ಸಂಸ್ಕಾರಗಳನ್ನು ಕೊಡುವಾಗ ಗುರುಗಳು ವಹಿಸಬೇಕಾದ ಎಚ್ಚರಿಕೆಗಳು) ಇವೆ. ಇವುಗಳು ಸಾಮಾನ್ಯ ಕ್ರೈಸ್ತರಿಗೆ ಅನಗತ್ಯ ಮಾತ್ರವಲ್ಲ, ಸಾಮಾನ್ಯರು ಇವುಗಳನ್ನು ಅಪಾರ್ಥಮಾಡಿಕೊಳ್ಳುವ ಸಂಭವವೂ ಇಲ್ಲದಿಲ್ಲ. ಅದಲ್ಲದೆ ಓದುಬರಹಗಳು ಅಷ್ಟಾಗಿ ಪ್ರಚಾರದಲ್ಲಿಲ್ಲದ ಕಾಲದಲ್ಲಿ ಕ್ರೈಸ್ತರಲ್ಲಿ ಕೆಲವರೇ ಓದುಬರಹಗಳನ್ನು ಅಭ್ಯಾಸ ಮಾಡಿದ್ದವರಿದ್ದು ಅವರು ಯಾವುದೋ ಹುದ್ದೆಯಲ್ಲಿ ಇರುವವರು ಅಥವಾ ಹುದ್ದೆಗೆ ಅಭ್ಯರ್ಥಿಗಳಾಗಿದ್ದಿರುವುದು ಸಾಧ್ಯ ಎಂದು ತರ್ಕಿಸಬಹುದು. ಕಥೋಲಿಕ ಮಿಶನರಿಗಳ ಸಂಖ್ಯಾಬಲ ಕಡಿಮೆ ಇದ್ದುದ್ದರಿಂದ ದಕ್ಷರೂ ಸಮರ್ಥರೂ ಆದ ಸಹಾಯಕರ ನೆರವನ್ನು ಅವರು ಪಡೆಯಲೇಬೇಕಿತ್ತು ಎಂದು ಚರಿತ್ರೆಯಿಂದ ತಿಳಿದುಬರುತ್ತದೆ.[೧೬] ಇವರನ್ನು ಕನ್ನಡದಲ್ಲಿ ಉಪದೇಶಿಗಳೆಂದು ಕರೆಯುತ್ತಿದ್ದರು. ಈ ಉಪದೇಶಿ ಈಚೀಚಿನವರೆಗೆ ಕ್ರೈಸ್ತ ಗ್ರಾಮಾಂತರ ಸಮುದಾಯಗಳಲ್ಲಿ ಧಾರ್ಮಿಕ ಮತ್ತು ಸಾಮಾಜಿಕ ನಾಯಕನಾಗಿದ್ದು, ಗುರುಗಳು ಹಾಜರಿಲ್ಲದಿದ್ದಾಗ ತಾನೇ ಜನರ ಧಾರ್ಮಿಕ ಕ್ಷೇಮಪಾಲನೆ ಮಾಡುತ್ತಿದ್ದನು. ಇವನ ಕರ್ತವ್ಯಗಳಲ್ಲಿ ಮೊದಲೇ ನಿಗದಿಪಡಿಸಿದ ಪ್ರಾರ್ಥನೆ, ಆಯಿತಗಳನ್ನು ಕ್ರೈಸ್ತರಿಗೆ ಓದಿಹೇಳುವುದು ಮುಖ್ಯವಾಗಿತ್ತು.[೧೭] ಆದುದರಿಂದ ಹಪ್ರ-೩೩೭ ಮತ್ತು ಹಪ್ರ-೪೦ರಂಥ ಕೃತಿಗಳು ಅವನಿಗೆ ಅಗತ್ಯವಾಗಿದ್ದವು. ಹಳೆಯ ಮಿಶನರಿಗಳು ಬರೆದ ಹಲವು ಗ್ರಂಥಗಳನ್ನು ಈ ಉಪದೇಶಿಗಳು ಇಟ್ಟುಕೊಳ್ಳುತ್ತಿದ್ದರು ಎಂದು ಫಾದರ್ ಪವೊನೆ ಹೇಳುತ್ತಾನೆ.[೧೮] ಪವೊನೆ ಹೇಳಿರುವ ಈ ಗ್ರಂಥಗಳು ಸ್ಥಳೀಯ ರೀತಿನೀತಿಗಳಿಗೆ ಸಂಬಂಧಿಸಿದಂಥವು. ಇವುಗಳ ಜೊತೆಯಲ್ಲಿ ತನ್ನ ಕಾರ್ಯನಿರ್ವಹಣೆಗೆ ಬೇಕಿದ್ದ ಧಾರ್ಮಿಕ ಗ್ರಂಥಗಳನ್ನೂ ಉಪದೇಶಿ ಸಂಪಾದಿಸಿ ತನ್ನ ಬಳಿ ಇಟ್ಟುಕೊಂಡಿರುವುದು ಅತ್ಯಂತ ಸಂಭವನೀಯ.

---

೧೫. V. Cronin, 'Roberto de Nobili', *New Catholic Encyclopoedia* X (1967), 477-79; Firth, p 110.

೧೬. Firth, p. 117.

೧೭. ದೊಡ್ಡ ಜಪದ ಪುಸ್ತಕ (೧೯೩೦), ಪು. ೧೭೮.

೧೮. Ferroli, p.137.

ಮುಖ್ಯರಾದ ಕೆಲವು ತಮಿಳು ಉಪದೇಶಿಗಳ ಹೆಸರುಗಳು ಸಿಗುತ್ತವೆ: ಸವೆರಿ ರಾಯನ್, ಮುತ್ತುದಯನ್, ಧೈರ್ಯಮ್;[೧೯] ಯೇಸು ಆದಿಯನ್, ಯೇಸು ಪಾತೆನ್, ಅರುಳಾನಂದಮ್.[೨೦] ಇವರಲ್ಲಿ ಸವೆರಿರಾಯನ್ ಉತ್ತಮಕುಲದವನೂ ಹಿಂದೂ ಧರ್ಮದ ಬಗೆಗೆ ಹೆಚ್ಚಿನ ತಿಳಿವಳಿಕೆ ಪಡೆದಿದ್ದವನೂ ಜನರ ಗೌರವಕ್ಕೆ ಪಾತ್ರನಾಗಿದ್ದವನೂ ಆಗಿದ್ದನು. ಧೈರ್ಯಮ್‌ನ ವಿಚಾರ ಪ್ರಕೃತ ಚರ್ಚೆಗೆ ಸ್ವಲ್ಪ ಸಹಾಯಕವಾಗಬಹುದೇನೋ. ಇವನು ಡಿ ನೊಬಿಲಿಯ ಕೈಕೆಳಗೆ ಕೆಲಸ ಮಾಡಿ, ಕ್ರಮೇಣ ಫಾದರ್ ಬಾಲ್ತಜಾರ್ ದ ಕೋಸ್ತನ ಹಲವು ಪ್ರಯಾಣಗಳಲ್ಲಿ ಅವನ ಜೊತೆಗಾರನಾಗಿದ್ದನು. ಸತ್ಯಮಂಗಲ ಪ್ರದೇಶದ ಕ್ರೈಸ್ತ ಸಮುದಾಯಗಳು ಇವನಿಗೆ ಅತ್ಯಂತ ಪ್ರಿಯವಾಗಿದ್ದವು.[೨೧] ಬಾಲ್ತಜಾರ್ ದ ಕೋಸ್ತ ಡಿ ನೊಬಿಲಿಯ ಜ್ಞಾನೋಪದೇಶಮ್ ಕೃತಿಯನ್ನು ಪೋರ್ಚುಗೀಸ್ ಭಾಷೆಗೆ ಅನುವಾದ ಮಾಡಿದ್ದನು. ತಮಿಳೇತರ ಭಾಷೆಗಳಲ್ಲಿ ಮತಪ್ರಚಾರ ಮಾಡುವ ಮಿಶನರಿಗಳಿಗೆ ಜ್ಞಾನೋಪದೇಶಮ್‌ನ ಪ್ರಯೋಜನ ಸಿಗಲಿ ಎಂಬ ಉದ್ದೇಶದಿಂದ ತಾನು ಅನುವಾದವನ್ನು ಮಾಡಿದೆ ಎಂದು ಅವನು ಹೇಳುತ್ತಾನೆ.[೨೨] ಜ್ಞಾನೋಪದೇಶಮ್ ಬಗೆಗೆ ದ ಕೋಸ್ತ ಇಟ್ಟಿದ್ದ ಭಾವನೆಯನ್ನು ಅವನ ಉಪದೇಶಿ ಸಹಚರನೂ ಹೊಂದಿರುವುದು ಸಂಭಾವ್ಯ; ಅದಲ್ಲದೆ ಸತ್ಯಮಂಗಲ ಪ್ರದೇಶದಲ್ಲಿ ಕನ್ನಡ ಭಾಷೆಯೂ ಬಳಕೆಯಲ್ಲಿ ಇದ್ದುದ್ದರಿಂದ ಡಿ ನೊಬಿಲಿಯ ಜ್ಞಾನೋಪದೇಶಮ್ ಕೃತಿಯನ್ನು ಆಧರಿಸಿ ಮತ್ತು ಅದೇ ಲೇಖಕನ ಇತರ ತಮಿಳು ಕೃತಿಗಳನ್ನು ಅನುವಾದಿಸಿ ಕನ್ನಡದಲ್ಲಿ ಇವನು ಕೃತಿರಚನೆ ಮಾಡಿರುವ ಸಾಧ್ಯತೆ ಇದೆ. ಎರಡೂ ಹಸ್ತಪ್ರತಿಗಳಲ್ಲಿ ಸಿಗುವ ತಮಿಳು ಭಾಷೆಯ ಪ್ರಭಾವವನ್ನು ಸೂಚಿಸುವ ಹಲವು ರೂಪಗಳು ಈ ಸಾಧ್ಯತೆಯನ್ನು ಬಲಪಡಿಸುತ್ತವೆ.[೨೩] ಈ ಊಹೆ ನಿಜವೇ ಆಗಿದ್ದಲ್ಲಿ ಹಸ್ತಪ್ರತಿಗಳ ಕೃತಿಗಳಲ್ಲಿ ಕೆಲವನ್ನು ಧೈರ್ಯಮ್ ರಚಿಸಿದ್ದಿರಬಹುದು, ಇವುಗಳನ್ನು ಒಬ್ಬ ಕನ್ನಡ ಉಪದೇಶಿ ಪ್ರತಿಮಾಡಿದ್ದಿರಬಹುದು, ಕನ್ನಡ ಪ್ರತಿಕಾರನ ಹೆಸರು ಸವೆರಿ ಆಗಿದ್ದಿರಬೇಕು. ತಮಿಳಿನ ಸವೆರಿರಾಯನ್ ಕನ್ನಡ ಪ್ರದೇಶಗಳ ಸನಿಹಕ್ಕೆ ಬಂದುದರ ಸೂಚನೆ ಸಿಗುವುದಿಲ್ಲ. ಆದುದರಿಂದ ಹಪ್ರ-೩೩೭ರಲ್ಲಿರುವ ಸವೆರಿ, ಮಿಶನರಿಯಲ್ಲದ, ಉಪದೇಶಿಯಾಗಿದ್ದಿರಬಹುದಾದ ಪ್ರತಿಕಾರನ ಹೆಸರು; ಮೂಲಕೃತಿಗಳಲ್ಲಿ ಕೆಲವನ್ನಾದರೂ ಧೈರ್ಯಮ್ ರಚಿಸಿದ್ದಿರುವ ಸಾಧ್ಯತೆ ಇದೆ.

ಎರಡೂ ಹಸ್ತಪ್ರತಿಗಳಲ್ಲಿ ಕರ್ತೃತ್ವದ ಕೆಲವು ಅಸ್ಪಷ್ಟ ಸೂಚನೆಗಳು ಸಿಗುತ್ತವೆ:

೧. ಹಪ್ರ-೪೦ರ ಜ್ಞಾನೋಪದೇಶ-೪ರಲ್ಲಿರುವ, ಈ ಮೊದಲೇ ಉದ್ಧರಿಸಿರುವ ''ನಮ್ಮ ಗುರುಗಳ'' ಹೆಗ್ಗಳಿಕೆಯ ಮಾತಿದೆ :

---

೧೯. Firth, p. 117.

೨೦. Thekkedath, p.261-62.

೨೧. ಅಲ್ಲೇ.

೨೨. ತತುವ ಪ್ರೋತಕರ್, ಜ್ಞಾನ ಉಬದೇಶಮ್ (ಮುದಲ್ ಕಾಣ್ಡಮ್) (ತೂತ್ತುಕ್ಕುಡಿ: ತಮಿೞ್ ಇಲಕ್ಕಿಯಕ್ಕೞಗಮ್, ೧೯೬೬) ಪು. (iv)-(v).

೨೩. ಹಪ-೩೩೭ರಲ್ಲಿ ಸಿಗುವ ಈ ರೂಪಗಳನ್ನು ನೋಡಬಹುದು: ಮುಚ್ಚೆ (=ಮತ್ತ್ರ, ಪು. ೩೨೬೨), ಪಿಚಚಿಗೆ (=ಪಿಸಾಚಿಗೆ, ಪು. ೩೨೨), ಚತ್ರು. (=ಶತ್ರು, ಪು. ೨೬೦ ಇತ್ಯಾದಿ), ಮಾತಾವಿಗೆ (=ಮಾತೆಗೆ, ಪು. ೮೧೨), ಪಿತಾವೇ (=ಪಿತನೇ, ಪು. ೮೬), ಒಳ್ಳಿತು (ಒಳ್ಳೆದು, ಪು. ೨೦೭), ಚಂಚಾರ (=ಸಂಚಾರ, ಪು. ೨೦೬). ಇತ್ಯಾದಿ.

> ಇದೀಗ ಜ್ಞಾನೋಪದೇಶ. ಇದು ನಮ್ಮ ಗುರುಗಳು ಬೋಧಿಸುವ ಉಪದೇಶ. ಇವರು ಈ ಲೋಕದ ಕಾರ್ಯಗುರುಗಳ ಹಾಗೆ ಹಣಕಾಸು ಆಶೆ ಮಾಡುವವರಲ್ಲಾ. ಇವರು ಮೂರು ಸಾವಿರ ಏಳುನೂರು ಗಾವದ ದೂರವಾಗಿ ಉತ್ತರ ದಿಕ್ಕಿನಲ್ಲಿ ರುಮ್ಮಿನಿಂದಾಚೆ ರಾಜ್ಯಗಳಲ್ಲಿ ಉತ್ತಮ ಜಾತಿಯಲ್ಲಿ ಜನ್ಮಿಸಿ ಮಣ್ಣಾಶೆ, ಹೆಣ್ಣಾಶೆ, ಹೊನ್ನಾಸೆ ಬಿಟ್ಟು ನಮ್ಮನ್ನು ಈಡೇರಿಸುವುದಕ್ಕೆ ತಾತ್ಪರ್ಯವಾಗಿ ಈ ಸತ್ಯೋಪದೇಶವನ್ನು ಈ ರಾಜ್ಯಕ್ಕೆ ತಂದರು. (ಪು. ೨೭.)

ಮಿಶನರಿಗಳನ್ನು 'ನಮ್ಮ ಗುರುಗಳು' ಎಂದು ಲೇಖಕ ಅಭಿಮಾನದಿಂದ ಹೆಸರಿಸಿ, ಅವರ ಜಾತಿ, ಊರು, ಗುಣಾದಿ ವಿಶೇಷಗಳನ್ನು ಹೆಮ್ಮೆಯಿಂದ ಹೇಳಿಕೊಂಡಿದ್ದಾನೆ. ಲೇಖಕನು ಸ್ವತಃ ಮಿಶನರಿಯಾಗಿದ್ದಿದ್ದರೆ 'ನಮ್ಮ ಗುರುಗಳು', 'ಇವರು' ಎನ್ನುತ್ತಿರಲಿಲ್ಲ, ನೇರವಾಗಿ ಉತ್ತಮ ಪುರುಷವಾಚಕವನ್ನೇ ಬಳಸುತ್ತಿದ್ದನು. ಈ ಭಾಗವನ್ನೊಳಗೊಂಡ ಕೃತಿ ಪ್ರಶ್ನೋತ್ತರ ರೂಪದಲ್ಲಿದ್ದುದ್ದರಿಂದ ಮಿಶನರಿಯೇ ಶಿಷ್ಯನ ಬಾಯಿಯಿಂದ, ನಿರೂಪಣಾತಂತ್ರಕ್ಕೆ ಅನುಗುಣವಾಗಿ, ಈ ಭಾಗವನ್ನು ಬರೆಸಿರಬಾರದೆ? ಎಂಬ ಪ್ರಶ್ನೆಗೆ ಹೀಗೆ ಉತ್ತರವನ್ನು ಕೊಡಬಹುದು: ಕೃತಿಯ ತಂತ್ರವೇನೋ ಪ್ರಶ್ನೋತ್ತರರೂಪವೇ, ಆದರೆ ಇತರೆಡೆ ಇದ್ದಂತೆ ಸ್ಪಷ್ಟವಾಗಿ ಗುರು ಶಿಷ್ಯರೆಂದು ಪ್ರಶ್ನಿಸುವವನನ್ನೂ ಉತ್ತರಿಸುವವನನ್ನೂ ಹೆಸರಿಸಿಲ್ಲ; ಇಲ್ಲಿಯ ಪ್ರಶ್ನೋತ್ತರಗಳಲ್ಲಿ ಭಾಗವಹಿಸುವವರು ನಿರ್ದಿಷ್ಟ ವ್ಯಕ್ತಿಗಳಲ್ಲ; ಅದಲ್ಲದೆ, ಮಿಶನರಿಗಳು ತಮ್ಮನ್ನೇ ತಾವು ಹೊಗಳಿ ಇಷ್ಟೆಲ್ಲವನ್ನು ಹೇಳುವುದು ಅವರು ನಂಬಿದ ಮನೋಧೈನ್ಯಕ್ಕೆ ವಿರೋಧವಾಗುತ್ತದೆ. ಆದುದರಿಂದ ಮಿಶನರಿ ಇದರ ಕರ್ತೃವಿರಲಾರ. ಹೀಗಿದ್ದರೂ ಕೃತಿರೂಪ ತಕ್ಕಮಟ್ಟಿಗೆ ಪ್ರೌಢವಾಗಿದ್ದುದರಿಂದ ಧಾರ್ಮಿಕ ತತ್ವಗಳಲ್ಲಿ ಪರಿಶ್ರಮವಿಲ್ಲದ ಸಾಮಾನ್ಯ ಕ್ರೈಸ್ತನು ಇದನ್ನು ಬರೆದಿರುವುದು ಅಸಂಭವ. ಉಪದೇಶಿಯೊಬ್ಬನು ಇದನ್ನು ರಚಿಸಿದ್ದಿರಬೇಕು. ಇದೇ ಊಹೆಯನ್ನು ಸಮರ್ಥಿಸುವ ಇನ್ನೊಂದು ಅಂಶವಿದು: ಹದಿಮೂರು ಪ್ರಸಂಗಗಳು ಎಂಬ ಮುದ್ರಿತ ಕೃತಿ ಹಪ್ರ-೪೦ರ ಪ್ರಕೃತ ಕೃತಿಯ (ಜ್ಞಾನೋಪದೇಶ-೪ರ) ಮುದ್ರಿತ ರೂಪ. ಈ ಮುದ್ರಿತ ಕೃತಿಯ ವಿಷಯ ಮತ್ತು ಕ್ರಮಗಳು ಮಿಶನರಿಗಳ ಆದಿಗ್ರಂಥಗಳ ಸಂಪ್ರದಾಯಕ್ಕೆಯೇ ಸೇರಿದಂತಿದ್ದರೂ, ಉದಾಹರಣೆಗಳು ಬೇರೆಯೇ ಇವೆ, ವಿವರಣೆಗಳ ಆಳ ಕಡಿಮೆ. ಕೃತಿಯ ಧಾಟಿ ಸ್ಪಷ್ಟವಾಗಿ ಬೋಧನಾತ್ಮಕವಾದುದರಿಂದ ಕರ್ತೃ ಉಪದೇಶಿಯಾಗಿರುವ ಸಾಧ್ಯತೆ ಹೆಚ್ಚು. ಆದುದರಿಂದ ಮಿಶನರಿ ಕೃತಿಗಳ ಮಾದರಿಯ ಮೇಲೆ ಉಪದೇಶಿಯೊಬ್ಬನು ರಚಿಸಿದ ಕೃತಿ ಇದು. ಕರ್ತೃವಿನ ಹೆಸರು ತಿಳಿಯುವುದಿಲ್ಲ. ಈಗಾಗಲೆ ಪ್ರಸ್ತಾಪಿಸಿದ ಧೈರ್ಯಮ್ ಎಂಬ ಹೆಸರಿನ ಉಪದೇಶಿಯೇ ಇವನಿರಬಹುದಾದಾರೂ, ಖಚಿತವಾಗಿ ಏನನ್ನೂ ಹೇಳಲಿಕ್ಕಾಗುವುದಿಲ್ಲ.

೨. ಹಪ್ರ-೩೩೭ರ ದೇವಮಾತೆಯ ಧರ್ಮಚರಿತ್ರೆಗಳು ಕೃತಿಯ ಆದ್ಯಂತಗಳಲ್ಲಿ ಕರ್ತೃವಿನ ಹೃದಯಸ್ಪರ್ಶಿ ಮಾತುಗಳಿವೆ. ಇವುಗಳಲ್ಲಿ ತನ್ನ ಉದ್ಯೋಗ, ಭಾಷೆಗಳನ್ನು ಕರ್ತೃ ಹೇಳಿಕೊಳ್ಳುತ್ತಾನೆ :

> ಪರಿಶುದ್ಧತಮ ಕನ್ಯಾಸ್ತ್ರೀಯಾಗಿರುವ ಅರ್ಚಶಿಷ್ಟ ಮರಿಯಮ್ಮನವರೆಂಬ ದೇವಮಾತೆಯೇ, ನೀವು ನಿಮ್ಮ ದಾಸನಾಗಿ ಇರುವ ನನಗೆ ಪ್ರಸಾದಿಸಿದ ಎಣಿಸಕೂಡದೆ ಇದಂಥಾ ಉಪಕಾರಗಳ ಎಷ್ಟು ಮಾತ್ರವಾದರೂ ಅರ್ತವರಾಗಿ ಇರಬೇಕೂ ಎಂದು ಕಡೆಗಾಣದ ನಿಮ್ಮ ಧರ್ಮಚರಿತ್ರೆಗಳ ಪ್ರಬಂಧವ ಉಂಟುಮಾಡುವದಕ್ಕೆ ಮಹಾಪ್ರಿಯವಾಗಿ ಇತ್ತು. ಆದರೆ ಇಂಥಾ ಪ್ರಬಂಧಕಿಂದಾ ನಿಮ್ಮ ಕೃಪಾಕಟಾಕ್ಷಕ್ಕೆ ಅಧಿಕ ಅಧಿಕ ಸಂತೋಷವಾಗಿರುವ ಆತ್ಮಗಳ ವ್ಯಾಪಾರದಲ್ಲಿ ಕಾಲವೆಲ್ಲಾ ಅಡಿಯನು ಕಳದು ತಿರುಗಾಡುವದರಿಂದಾ ನಿಮ್ಮ ಧರ್ಮಚರಿತ್ರೆಗಳ ವಿವರಿಸಿ ವರ್ಣಿಸುವದಕ್ಕೆ ನನ್ನ

> ಬಲಹೀನಕ್ಕೆ ಯೆಟ್ಟದೆ ಹೋಯಿತು. ಆದರೆ ನಾನು ಯಾವಾಗಲೂ ಈ ಪ್ರಬಂಧದಲ್ಲಿ ಪ್ರಯಾಸಪಟ್ಟರೆಯೂ ಲೋಕವೆಲ್ಲ ಅಡಗಿಸಕೂಡದ ನಿಮ್ಮ ಧರ್ಮಚರಿತ್ರೆಗಳಿಗೆ ಉಂಟಾದ ಮಹಿಮೆಯನ್ನು ಪ್ರಬಂಧದಲ್ಲಿ ಅಡಗಿಸಲಾಗುವದೋ? ಅಡಗಿಸಕೂಡದು. ಆದರೆ ಈ ರಾಜ್ಯದಲ್ಲಿ ಸಂಚರಿಸುವ ವಿಶ್ವಾಸಿಗಳಾದ ಜನರು ನಿಮ್ಮ ಮೇಲೆ ಭಕ್ತಿಯಾಗಿ ಇರುವದಕ್ಕೆ ಕಡೆಗಾಣದ (ಕಡೆಗಾಣದ) ಸಮುದ್ರಕ್ಕೆ ಸರಿಯಾದ ನಿಮ್ಮ ಧರ್ಮಚರಿತ್ರೆಗಳೊಳಗೆ ಕೆಲವನು ಒಂದು ಪ್ರಕಾರವಾಗಿ ಬ(ರೆಯಬೆ)ರೆಯಿಸಲಾಗುವದೆಂದು ವಿಚಾರಿಸಿ ಈ ಪ್ರಬಂಧವ ಉಂಟುಮಾಡುವದಕ್ಕೆ ನಿಶ್ಚಯಿಸಿದೆನು. ಇದೂ ಅಲ್ಲದೆ ನಿಮ್ಮ ಚಿತ್ತಕ್ಕೆ ತಕ್ಕ ಹಾಗೆ ಅಡಿಯನು ಈ ಲೋಕವನು, ಸೀಮೆ, ರಾಜ್ಯವನು ಬಿಟ್ಟುಹೋಗಬೇಕಾಗಿಯಿರುವದಲ್ಲಾ. ಅದು ನಿಮಿತ್ಯ... (ಪು. ೧೪೨ಎ).

ಇದಲ್ಲದೆ,''...ನಾನು ಅರಿಯದ ಅನ್ಯಭಾಷೆಯಲ್ಲಿ ನಿಮ್ಮ ಧರ್ಮಚರಿತ್ರೆಗಳ ಬರೆಯಿಸಿದ ನಿಮತ್ಯ...'' (ಪು. ೧೪೨ಎ), ''...ಜಲ್ಮಪಾಪವಿಲ್ಲದೆ ಉದ್ಭವಿಸಿದ...ದೇವಮಾತೆಯೇ ನಿಮಗೆ ದಾಸನಾಗಿಯಿರುವ ದೇವಪುತ್ರನು ಮಾಡಿದ ಬಿನ್ನಹ. ಅರ್ಚಶಿಷ್ಟ ದೇವಮಾತೆಯ ಧರ್ಮಚರಿತ್ರೆಗಳ ಪ್ರಬಂಧ ಸಮಾಪ್ತಃ'' (ಪು. ೧೪೩) ಎಂಬ ಮಾತುಗಳೂ ಇವೆ.

ಈ ಅವತರಣಿಕೆಗಳಿಂದ ಸಿದ್ಧವಾಗುವ ವಿಷಯಗಳನ್ನು ಹೀಗೆ ಹೇಳಬಹುದು:

೧. ಊರೂರು ಪ್ರವಾಸಮಾಡಿ ಮತಪ್ರಚಾರ ಮಾಡುವ ಮಿಶನರಿ ಈ ಕೃತಿಯ ಕರ್ತೃ.

೨. ಇವನಿಗೆ ಕನ್ನಡ ತಿಳಿದಿರಲಿಲ್ಲ, ಆದುದರಿಂದ

೩. ಇವನು ಈ ಪುಸ್ತಕವನ್ನು ಬರೆಯಿಸಿದ. ('ಬರೆಯದೆ' ಎಂಬ ಅಕ್ಷರಗಳ ಅನಂತರದ ಅಕ್ಷರಗಳನ್ನು ಹೊಡೆದುಹಾಕಿ ಅದರ ಮೇಲೆ (ರೆಯಿಸಲಾಗುವದೆಂದು' ಎಂದು ಹಸ್ತಪ್ರತಿಯಲ್ಲಿದೆ.)

೪. ಇವನ ಹೆಸರು ದೇವಪುತ್ರ, ಇವನಿಗೆ ಮೇರಿಯ ಮೇಲೆ ಬಹಳ ಭಕ್ತಿ.

ಈ ದೇವಪುತ್ರ ಎಂಬುದು ಕಾವ್ಯನಾಮವಿರುವುದು ಸಂಭಾವ್ಯವಲ್ಲ. ಏಕೆಂದರೆ ಕಾವ್ಯನಾಮಗಳನ್ನಿಟ್ಟುಕೊಳ್ಳುವ ಪರಿಪಾಠವಾಗಲಿ ಅಗತ್ಯವಾಗಲಿ ಅಂದು ಇದ್ದದ್ದು ಗಮನಕ್ಕೆ ಬರುವುದಿಲ್ಲ. ದೇವಪುತ್ರ ಎನ್ನುವುದು ಯಾವುದಾದರೂ ಪಾಶ್ಚಾತ್ಯ ಹೆಸರಿಗೆ ಸಂವಾದಿಯಾಗಿರುವ ಹೆಸರಿರಬಹುದು, ಆದರೆ ಈ ವಿಷಯ ಸ್ಪಷ್ಟವಾಗಿ ತಿಳಿಯುವುದಿಲ್ಲ. ಕೃತಿಯ ಆಂತರಿಕ ಪುರಾವೆಗಳಿಂದ ಇವನು ಜೆಜ್ವಿಟ್ ಎಂದು ತಿಳಿದುಬರುತ್ತದೆ: ಸೈಂಟ್ ಇಗ್ನೇಶಿಯಸನ ಜೀವನಕ್ಕೆ ಸಂಬಂಧಿಸಿದ ಒಂದು ಚಿಕ್ಕ ಘಟನೆ ಈ ಕೃತಿಯಲ್ಲಿದೆ (ಪು. ೮೦ಎ, ತಾಳೆಗರಿ). ಇದನ್ನು ಜೆಜ್ವಿಟನಲ್ಲದವನು ನೆನಪಿಡುವುದು ಅಸಂಭವ. ತಮ್ಮ ಸಂಸ್ಥಾಪಕನಾದ ಇಗ್ನೇಶಿಯಸನ ಜೀವನ ಚರಿತ್ರೆಯ ಇಷ್ಟು ಚಿಕ್ಕ ಘಟನೆಯನ್ನು ಜೆಜ್ವಿಟರು ಮಾತ್ರ, ಸಾಮಾನ್ಯವಾಗಿ, ಸಂಸ್ಥಾಪಕನ ಮೇಲಿನ ಭಕ್ತಿಯಿಂದ ನೆನಪಿಟ್ಟುಕೊಳ್ಳುತ್ತಾರೆ. ಹಾಗೆಯೇ ''ಸದ್ಗುರುಗಳಿಗೆ ತಂದೆಯಾಗಿರುವ ಅರ್ಚಶಿಷ್ಟ ಇನಾಶಿಯು'' (ಅಲ್ಲೇ) ಎಂಬ ಪ್ರಯೋಗವಿದೆ. ಸದ್ಗುರುಗಳು ಎಂದರೆ ಮಿಶನರಿಗಳು. ಆದರೆ ಸೈಂಟ್ ಇಗ್ನೇಶಿಯಸನನ್ನು 'ತಂದೆ' ಎಂದು ಸಂಬೋಧಿಸುವುದು ಜೆಜ್ವಿಟ್ ಮಿಶನರಿಗಳಲ್ಲಿ ಮಾತ್ರ ರೂಢಿ, ಇತರ ಸಂಸ್ಥೆಗಳಿಗೆ ಸೇರಿದ ಮಿಶನರಿಗಳಲ್ಲಿ ಹೀಗಿಲ್ಲ. ಆದುದರಿಂದ ಈ ದೇವಪುತ್ರನು ಜೆಜ್ವಿಟನೇ ಇದ್ದಿರಬೇಕು.

ಕನ್ನಡದಲ್ಲಿ ಬರೆದವನು ಯಾರು ಎಂಬ ಸೂಚನೆ ಸಿಗುವುದಿಲ್ಲ. ಆದರೆ ಅವನು

ಭಾಷೆಯ ವಿಷಯದಲ್ಲಿ ಸಾಕಷ್ಟು ಸಮರ್ಥನೆ ಇದ್ದನು ಎಂಬುದಕ್ಕೆ ಕೃತಿ ಸಾಕ್ಷಿಯಾಗಿದೆ.

೩. ಕೆಲವು ಕೃತಿಗಳಲ್ಲಿ ತಾನು ಬರೆದ ಇತರ ಕೃತಿಗಳನ್ನು ಕರ್ತೃ ಉಲ್ಲೇಖಿಸುತ್ತಾನೆ, ಪುನರ್ಜನ್ಮದಾಕ್ಷೇಪದಲ್ಲಿ ಉಲ್ಲೇಖವಾದ ಕೃತಿ ಆತ್ಮನಿರ್ಣಯ; ಆತ್ಮನಿರ್ಣಯದಲ್ಲಿ ಉಲ್ಲೇಖವಾದ ಕೃತಿ ಜ್ಞಾನೋಪದೇಶ, ಇತ್ಯಾದಿ. ಉಲ್ಲೇಖಿತ ಮತ್ತು ಉಲ್ಲೇಖ ವನ್ನೊಳಗೊಂಡ ಕೃತಿಗಳು ಡಿ ನೊಬಿಲಿಕೃತವೆಂದು ತಿಳಿದಿದೆ. ಆದುದರಿಂದ ಈ ಬಗೆಯ ಉಲ್ಲೇಖಗಳಿಂದ ಕೃತಿಗಳ ಮೂಲ ಕರ್ತೃವಷ್ಟೇ ಸೂಚಿತವಾಗುತ್ತಾನೆ. ಅನುವಾದಕನ ಬಗೆಗೆ ಸೂಚನೆಗಳು ಸಿಗುವುದಿಲ್ಲ.

ಹೀಗೆ ಇವೆರಡು ಹಸ್ತಪ್ರತಿಗಳ ಕೃತಿಗಳಲ್ಲಿ ಮತ್ತು ಕೃತಿಭಾಗಗಳಲ್ಲಿ ಸಿಗುವ ಆಧಾರಗಳ ಮೇಲೆ ಬೇರೆಬೇರೆಯಾದ ಇಬ್ಬರಾದರೂ ಕರ್ತೃಗಳು ಉಂಟೆಂದು ಆಯಿತು: ಜ್ಞಾನೋಪದೇಶ-೪ರ ಮಿಶನರಿಯಲ್ಲದ ಕರ್ತೃ ಮತ್ತು ದೇವಮಾತೆಯ ಧರ್ಮಚರಿತ್ರೆಗಳ ಮಿಶನರಿ ಕರ್ತೃ. ಹಸ್ತಪ್ರತಿಗಳಲ್ಲಿ ಸಿಗುವ ಆಡುಮಾತಿನ ರೂಪಗಳು (ಮಡಗು, ಯೆಟ್ಟು, ಹಸಿಟ್ಟು, ಬಾಡು, ಇತ್ಯಾದಿ) ಮತ್ತು ತಮಿಳು ಪ್ರಭಾವವನ್ನು ಸೂಚಿಸುವ ರೂಪಗಳೂ (ಮಾತಾವೆ (ಮಾತೆಯೇ,) ಚಿತ್ರು (ಶತ್ರು), ಸಂದ(ಚಂದ), ಇತ್ಯಾದಿ) ಲಿಪಿಕಾರನ ವಾಸ್ತವ್ಯ ಮತ್ತು ಭಾಷಾರೂಪವನ್ನು ಸೂಚಿಸಲೂ ಸಾಕು, ಅನುವಾದಕನ ಬಗೆಗಿನ ಮಾಹಿತಿಗಳಾಗಿರಲೂ ಸಾಕು ಅಥವಾ, ಕಡೆಗೆ, ಮೂಲಕರ್ತೃವಿನ ಬಗೆಗಿನ ಸೂಚನೆಗಳೇ ಇರಲಿಕ್ಕೂ ಸಾಕು. ಆದರೆ ಇವು ಈ ವಿಷಯದಲ್ಲಿ ನಿರ್ಣಾಯಕ ಮಾಹಿತಿಗಳಾಗುವುದಿಲ್ಲ.

ಕಥೋಲಿಕ ಸಾಹಿತ್ಯದ ಆರಂಭದ ಕೃತಿಗಳಲ್ಲಿ ಚಿನ್ನಾಮಿಯ ಕೃತಿಗಳು ಮುಖ್ಯವಾದಂಥವು. ಇವುಗಳ ವಿಷಯ ನಮಗೆ ತಿಳಿದಿದ್ದು, ಅದೇ ವಿಷಯಗಳನ್ನು ಕುರಿತ ಕೃತಿಗಳು ಹಪ್ರ-೩೩೭ರಲ್ಲಿಯೂ ಸಿಗುತ್ತವೆ: ಜ್ಞಾನೋಪದೇಶ ಸತ್ಯೋಪದೇಶಗಳು, ಅವುಗಳ ಸಂಗ್ರಹರೂಪ, ಸಂತರ ಜೀವನ ಚರಿತ್ರೆಗಳು. ಕಥೋಲಿಕ ಸಾಹಿತ್ಯದ ಆರಂಭಕೃತಿಗಳಲ್ಲಿ ಉಪಲಬ್ಧವಾದ ಕೃತಿಗಳೆಂದರೆ ಇವೆರಡು ಹಸ್ತಪ್ರತಿಗಳಲ್ಲಿರುವಂಥವೇ. ಆದುದರಿಂದ ಹಸ್ತಪ್ರತಿಗಳಲ್ಲಿರುವ ಕೆಲವಾದರೂ ಕೃತಿಗಳನ್ನು ಚಿನ್ನಾಮಿ ಬರೆದಿರುವ ಸಾಧ್ಯತೆಯನ್ನು ಅಲ್ಲಗಳೆಯುವಂತಿಲ್ಲ.

ದೇವಮಾತೆಯ ಧರ್ಮಚರಿತ್ರೆಗಳ ಕರ್ತೃ ಚಿನ್ನಾಮಿ ಎನಲು ಯಾವ ಸೂಚನೆಯೂ ಇಲ್ಲ. ಆದುದರಿಂದ ಕನಿಷ್ಠ ಪಕ್ಷ ಮೂವರು ಕರ್ತೃಗಳಾದರೂ-ಇಬ್ಬರು ಮಿಶನರಿಗಳು, ಒಬ್ಬ ಉಪದೇಶಿ-ಇವೆರಡು ಹಸ್ತಪ್ರತಿಗಳನ್ನು ಬರೆದರು. ಕರ್ತೃಗಳ ಸಂಖ್ಯೆ ಹೆಚ್ಚು ಇರಬಹುದು, ಆದರೆ ಈ ವಿಷಯದಲ್ಲಿ ಖಚಿತವಾಗಿ ಏನೂ ತಿಳಿಯುವುದಿಲ್ಲ.

## ಕಾಲ

ಇವೆರಡು ಕೃತಿಗಳಲ್ಲಿ ಕಾಲದ ಬಗೆಗೆ ಸಿಗುವ, ಸ್ಪಷ್ಟವೆಂದು ತೋರುವ, ಸೂಚನೆಗಳು ವಿಶ್ವಸನೀಯವಲ್ಲ.

ಹಪ್ರ-೪೦ರಲ್ಲಿ ಎರಡು ಸಮಾಪ್ತಿವಚನಗಳಿವೆ. ಒಂದರಲ್ಲಿ ೧೭೩೪ನೇ ವರ್ಷವೂ (ಪು. ೨೧ಎ) ಇನ್ನೊಂದರಲ್ಲಿ ೧೭೩೯ನೇ ವರ್ಷವೂ (ಪು. ೨೪) ಇದೆ. ಆದರೆ ಈ ಸಮಾಪ್ತಿ ವಚನಗಳನ್ನು ಮೂಲಮಾತೃಕೆಗಳಿಂದ ಪ್ರತಿಮಾಡಿದುದು ಎಂದು ಅದೇ ಹಸ್ತಪ್ರತಿಯ ಆರಂಭದಲ್ಲಿ ಟಿಪ್ಪಣಿ ಇದೆ. ಇವೆರಡೂ ತಾರೀಖುಗಳು ಪೋಪ್ ಗುರುಗಳು ಬರೆದ ಎರಡು

ಪತ್ರಗಳ ಅಂತ್ಯದಲ್ಲಿ ಸಿಗುತ್ತವೆ. ಆಯಾ ವರ್ಷಗಳಲ್ಲಿ ಹನ್ನೆರಡನೇ ಶಾಂತಪ್ಪ ಒಂದೊಂದು ಪತ್ರವನ್ನು ಹೊರಡಿಸಿದ್ದನು ಎಂಬುದೂ ನಿಜ. ಪೋಪ್‌ಗುರುಗಳ ಪತ್ರದ ತಾರೀಖನ್ನು ಪತ್ರದ ಅಂತ್ಯದಲ್ಲಿ, ಇಲ್ಲಿದ್ದಂತೆ, ದಾಖಲು ಮಾಡುವ ಕ್ರಮ ಇಂದಿಗೂ ಉಂಟು. ಆದುದರಿಂದ ಇವೆರಡು ಸಮಾಪ್ತಿವಚನಗಳು ಮೂಲ ಪತ್ರಗಳ ತಾರೀಖಿನ ಸೂಚನೆಗಳಲ್ಲದೆ ಪತ್ರಗಳ ಕನ್ನಡ ಅನುವಾದದ ಕಾಲಸೂಚನೆಗಳಲ್ಲ. ರೋಮ್‌ನಲ್ಲಿ ಕೊಟ್ಟ ಪತ್ರಗಳು ಭಾರತವನ್ನು ತಲುಪಬೇಕಾದರೆ, ಅಂದಿನ ಪ್ರಯಾಣದ ಬಗೆಯಲ್ಲಿ, ಒಂದೆರಡು ವರ್ಷಗಳಾದರೂ ಬೇಕಾಗುತ್ತಿದ್ದವು.[೨೪] ಪತ್ರಗಳನ್ನು ರೋಮ್‌ನಲ್ಲಿಯೇ ಅನುವಾದಿಸಿದುದರ ಸಂಭಾವ್ಯತೆ ಅಲ್ಪ. ಆದುದರಿಂದ ೧೭೩೪ರ ಮತ್ತು ೧೭೩೯ರ ಪತ್ರಗಳು ೧೭೩೫-೩೬ ಮತ್ತು ೧೭೪೦-೪೧ರ ಸುಮಾರಿಗೆ ಭಾರತವನ್ನು ತಲುಪಿ ಅನಂತರ ಅನುವಾದಗೊಂಡಿರಬೇಕು.

ಹಪ್ರ-೩೩೭ರ ಸಮಾಪ್ತಿವಚನ ಹೀಗಿದೆ:

> ಸಿದ್ಧಾರ್ಥಿ ಸಂವತ್ಸರದ ಚೈತ್ರ ಮಾಸದ ೨೩ನೇ ತಿಥಿಯಲ್ಲಿ ಈ ಪುಸ್ತಕದ ೩೩೭ ಕಾಗಜದಲ್ಲು ಸರ್ವೇಶ್ವರನಿಗೂ ದೇವರಮಾತೆಗೂ ಸ್ತೋತ್ರವಾಗಿ ಬರೆಯಲ್ಪಟ್ಟು ಮುಗಿತು. ಈಗ ಹೇಳಿದ ವರುಷಕ್ಕೆ ಕರ್ತೃ ಮನುಷ್ಯಾವತಾರವ ಮಾಡಿ ೧೭೩೯ನೇ ಸಮತ್ಸರಕ್ಕೆ ಈ ಪುಸ್ತಕ ಬರದ ನೆನಪು.
>
> ಜೇಸುನಾಥರಿಗೂ ದೇವಮಾತೆಗೂ ಸ್ತೋತ್ರವಾಗಿ ಅರ್ಚಶಿಷ್ಟ ಸವೆರಿಯವರ ಬೇಡುದಲೆಯಿಂದಾ ದೇವಬೋದಗನಾದ ರಾಜರುಷಿ ಗುರುಸ್ವಾಮಿಯವರ ಆಶೀರ್ವಾದದಿಂದಾ ಸಿದಾರ್ಥಿ ಸಮತ್ಸರದ ಚೈತ್ರಮಾಸದ ೨೩ನೇ ತಿಥಿಯಲ್ಲಿ ಸವೆರಿ ಬರದ ಈ ಪುಸ್ತಕವ ಯಾರು ಮುಟ್ಟಿದರೂ ಯಾರು ಓದಿದರೂ ಬರದವನಿ[ಗಾ]ಗಿ ದೇವರ ಮಾತೆಯ ನೋಡಿ ಬೇಡಿಕೊಳ್ಳಿ. (ಪು. ೩೩೮ಎ)

ಹಪ್ರ-೩೩೭ರಲ್ಲಿ ಸಿಗುವ ಕಾಲದ ಸೂಚನೆ ಇದೊಂದೇ. ಆದರೆ 'ಬರದ ನೆನಪು' ಎಂದಿರುವುದನ್ನು ಪರಿಶೀಲಿಸಬೇಕು. ಸಮಾಪ್ತಿವಚನಕಾರನಿಗೆ ೧೭೩೯ರ ವಿಷಯದಲ್ಲಿ ಇದ್ದ ಸಂದೇಹದ ಸೂಚನೆ ಇದು. ಸಿದ್ಧಾರ್ಥಿ ಸಂವತ್ಸರಕ್ಕೆ ಸಂವಾದಿಯಾಗಿ ೧೭೩೯ನೇ ವರ್ಷ ಬರಬೇಕು ಎಂಬುದರಲ್ಲಿ ಸಂದೇಹವಿತ್ತೋ ೧೭೩೯ರಲ್ಲಿ ಬರವಣಿಗೆ ಆಯಿತು ಎಂಬುದರಲ್ಲಿ ಸಂದೇಹವಿತ್ತೋ ಸ್ಪಷ್ಟವಿಲ್ಲ (ಸಿದ್ಧಾರ್ಥಿ ಸಂವತ್ಸರಗಳು ೧೭೩೯, ೧೭೯೯ ಮತ್ತು ೧೮೫೯ರಲ್ಲಿ ಬರುತ್ತವೆ).

ಸಮಾಪ್ತಿವಚನವನ್ನು ಮತ್ತು ಅದರ ಜೊತೆಯ ವಿಷಯಾನುಕ್ರಮಣಿಕೆಯನ್ನು ಬರೆದವನು ಲಿಪಿಕಾರನಲ್ಲ ಎಂಬ ಸೂಚನೆ ಹಸ್ತಪ್ರತಿಯಲ್ಲಿ ಸಿಗುತ್ತದೆ. ಅನುಕ್ರಮಣಿಕೆಯ ೪೬ನೇ ನಮೂದನ್ನು ಧೈರ್ಯಮ್ಮನ ಚರಿತ್ರೆ ಎಂದಿದೆ. ಅಂಥ ಯಾವ ಧೈರ್ಯಮ್ಮನ ಚರಿತ್ರೆಯೂ ಹಸ್ತಪ್ರತಿಯಲ್ಲಿಲ್ಲ. ವಾಸ್ತವವಾಗಿ ಇರುವುದು ದೇವದಾಸಮ್ಮನ ಚರಿತ್ರೆ. ಧೈರ್ಯಪ್ಪ ಎಂಬ ಒಬ್ಬ ರಾಜನ ಹೆಸರು ಈ ಚರಿತ್ರೆಯ ಅಂತ್ಯದಲ್ಲಿ ಒಂದು ಸಲ ಬರುತ್ತದೆ, ಅಷ್ಟೆ. ದೇವದಾಸಮ್ಮನ ಚರಿತ್ರೆ ಬರುವುದು ಹಸ್ತಪ್ರತಿಯ ಅಂತ್ಯದಲ್ಲಿ. ಇದು ಧೈರ್ಯಮ್ಮನ ಚರಿತ್ರೆಯಲ್ಲ ಎಂದು ಅನುಕ್ರಮಣಿಕೆ ಬರೆದವನಿಗೆ ನೆನಪಾಗದಷ್ಟು ಹಿಂದೆ ಹಸ್ತಪ್ರತಿಯಲ್ಲಿ ಈ ಭಾಗ ಬಂದುದಲ್ಲ. ಆದರೂ ಅನುಕ್ರಮಣಿಕೆಯಲ್ಲಿ ಇದು ತಪ್ಪಾಗಿ ನಮೂದಾಗಿದೆ. ಇದರ ಕಾರಣ ಹೀಗಿರಬೇಕು: ಹಸ್ತಪ್ರತಿಯ ಅಂತ್ಯದ ಅನುಕ್ರಮಣಿಕೆಯನ್ನು ಬರೆದವನು

---

೨೪. Firth, p. 114.

ಹಸ್ತಪ್ರತಿಯನ್ನು ಸ್ವತಃ ಬರೆಯಲಿಲ್ಲ, ಹಾಗಾಗಿ ಅವನಿಗೆ ಅಂತ್ಯದ ಈ ಭಾಗದ ವಿಷಯ ಸರಿಯಾಗಿ ತಿಳಿದಿರಲಿಲ್ಲ. ಒಂದು ವೇಳೆ ಸ್ವತಃ ತಾನೇ ಹಸ್ತಪ್ರತಿಯನ್ನು ಬರೆದು, ಅನುಕ್ರಮಣಿಕೆಯನ್ನು ಇನ್ನೊಬ್ಬನಿಂದ ಹೇಳಿಸಿ ಬರೆದುದಾರೂ, ದೇವದಾಸಮ್ಮನ ಚರಿತ್ರೆಯ ನೆನಪು ಅಷ್ಟು ಸುಲಭವಾಗಿ ಹೋಗಬಾರದಿತ್ತು. ಏಕೆಂದರೆ ಈ ಕಥೆ ದೀರ್ಘವೂ ಪರಿಸ್ಫುಟ ವರ್ಣನೆಗಳನ್ನೊಳಗೊಂಡದ್ದು ಆಗಿದೆ. ಆದುದರಿಂದ ಹಪ್ರ-೩೩೭ರ ಪ್ರತಿಕಾರನೂ ಸಮಾಪ್ತಿವಚನವನ್ನು ಬರೆದವನೂ ಒಬ್ಬನೇ ಅಲ್ಲ. ಪ್ರತಿಕಾರ ಸವೆರಿ, ಸಮಾಪ್ತಿವಚನಕಾರನ ಹೆಸರು ತಿಳಿಯುವುದಿಲ್ಲ. ಪ್ರತಿ ನಕಲಾದುದು ಮತ್ತು ನಕಲುಕಾರನ ಹೆಸರು ಮಾತ್ರ ಸಮಾಪ್ತಿವಚನಕಾರನಿಗೆ ಗೊತ್ತಿದ್ದು, ನಕಲಾದ ಕಾಲ ಸರಿಯಾಗಿ ಗೊತ್ತಿರದೆ, ಸುಮಾರು ೧೭೭೯ ಇದ್ದಿರಬಹುದೆಂದು ನೆನಪು, 'ಬರೆದ ನೆನಪು' ಎಂದು ಅವನು ಹೇಳುತ್ತಾನೆ. 'ನೆನಪು' ಎಂದಿದ್ದರಿಂದ ತನ್ನ ಜೀವಿತಾವಧಿಯಲ್ಲಿಯೇ ಹಸ್ತಪ್ರತಿ ನಕಲಾದುದು ಅವನಿಗೆ ಗೊತ್ತಿದ್ದಿರಬೇಕು. 'ಸವೆರಿ ಬರೆದ ನೆನಪು' ಎಂದು ಪ್ರಥಮಪುರುಷದಲ್ಲಿ ಹೇಳಿದುದು ಸ್ಪಷ್ಟವಾಗಿ ಬರೆದವನು ತಾನಲ್ಲ ಎಂಬುದನ್ನು ಸೂಚಿಸುತ್ತದೆ. ಆದುದರಿಂದ ಹಸ್ತಪ್ರತಿ ನಕಲಾದ ಕಾಲ ಸುಮಾರು ೧೭೭೯; ಕೃತಿರಚನೆಯ ಕಾಲ, ಸಹಜವಾಗಿ, ಇದಕ್ಕಿಂತ ಹಿಂದಿನದಿರಬೇಕು.

ಎರಡೂ ಹಸ್ತಪ್ರತಿಗಳ ಕೆಲವಾದರೂ ಭಾಗಗಳು ಮೈಸೂರು ಮಿಶನಿನ ಆರಂಭ ಕಾಲದಲ್ಲಿಯೇ, ಎಂದರೆ ಜೆಜ್ವಿಟರ ಕಾಲದಲ್ಲಿಯೇ ರಚಿತವಾಗಿರಬೇಕೆಂಬ ಸೂಚನೆಗಳು ಇವೆ. ಹಪ್ರ-೩೩೭ರ ಒಂದು ಪ್ರಾರ್ಥನೆಯಲ್ಲಿ 'ಪಟ್ಣ'ದ ಉಲ್ಲೇಖ ಬರುತ್ತದೆ :

> ಅರ್ಚಶಿಷ್ಟ ಮರಿಯಮ್ಮನವರೇ ಕಷ್ಟದವರಿಗೆ ಗತಿಯು, ಧೈರ್ಯವಿಲ್ಲದವರಿಗೆ ಸಹಾಯವು, ಅಳುವವರಿಗೆ ಸಂತೋಷವು ಆಗಿ ಇರಿ. ಪಟ್ಣದ ಜನರುಗಳಿಗಾಗಿಯೂ, ಪೂಜೆ ಸಭೆಗಾಗಿಯೂ ಭಕ್ತಿ ಉಂಟಾದ ಸ್ತ್ರೀಯರುಗಳಿಗಾಗಿಯೂ ಪ್ರಸನ್ನವಾಗಿ ಬೇಡಿಕೊಳ್ಳಿ. (ಪು. ೨೫೨).

ಇದೇ ಪ್ರಾರ್ಥನೆ ಹಪ್ರ-೪೦ರಲ್ಲಿಯೂ ಇದೆ(ಪು. ३೮ಎ). ಇಲ್ಲಿರುವ 'ಪಟ್ಣ' ಪದ ಶ್ರೀರಂಗಪಟ್ಟಣವನ್ನು ಸೂಚಿಸುವ ಸಾಧ್ಯತೆ ಇದೆ. ಏಕೆಂದರೆ ತರುವಾಯದ ಮುದ್ರಿತ ರೂಪದಲ್ಲಿ ಇದೇ ಪ್ರಾರ್ಥನೆ 'ಪಟ್ಣ' ಪದವನ್ನು ಬಿಟ್ಟು ಹೆಚ್ಚು ವಿಶಾಲಾರ್ಥದ 'ಲೌಕಿಕ' ಪದವನ್ನು ಒಳಗೊಂಡಿದೆ:

> ಅರ್ಚಶಿಷ್ಟ ಮರಿಯಮ್ಮನವರೇ, ಶರಣಾರ್ಥಿಯರಿಗೆ ಆಧಾರವಾಗಿರಿ, ಅಧೈರ್ಯಸ್ಥರನ್ನು ಸಂತೈಸಿರಿ, ಅಳುವವರಿಗೆ ದುಃಖೋಪಶಮನವಾಗಿರಿ, ಲೌಕಿಕರಿಗಾಗಿ ಬೇಡಿಕೊಳ್ಳಿ, ಸಕಲ ಯಾಜಕರಿಗೆ ಆಸ್ಪದವಾಗಿರಿ, ದೇವರ ವಶಕರವಾದ ಸ್ತ್ರೀ ಜನರಿಗಾಗಿ ಪ್ರಾರ್ಥಿಸಿಕೊಳ್ಳಿ...(ದೊಡ್ಡ ಜಪದ ಪುಸ್ತಕ, ಪು. ೪೭).

ಆರಂಭದ ಹಸ್ತಪ್ರತಿಗಳಲ್ಲಿ ಒಂದೊಂದು ಊರಿನ, ಕ್ರೈಸ್ತಸಮುದಾಯದ ಪ್ರತ್ಯೇಕ ಪ್ರಯೋಜನಕ್ಕಾಗಿ ಬರೆದ ಪ್ರಾರ್ಥನೆಗಳು ಇರುತ್ತಿದ್ದವು. ಮುದ್ರಣರೂಪದಲ್ಲಿ ಇವುಗಳ ಪತ್ಯೇಕತೆಯನ್ನು ಬಿಟ್ಟು ವಿಶಾಲಾರ್ಥದ ಸಾರ್ವತ್ರಿಕ ಪದಗಳನ್ನು ಬಳಸಿರುವುದನ್ನು ನಾವು ಹಲವು ಕಡೆಗಳಲ್ಲಿ ಕಾಣುತ್ತೇವೆ. 'ಪಟ್ಣ' ಕೇವಲ ಒಂದು ಊರಿಗೆ ಸೀಮಿತವಾಗಿರುವುದರಿಂದ ಅದನ್ನು ಬಿಡಲಾಗಿದೆ. ದೊಡ್ಡ ಜಪದ ಪುಸ್ತಕ ಒಟ್ಟಾರೆ ಎಲ್ಲಾ ಸ್ಥಳಗಳಲ್ಲಿರುವ ಕ್ರೈಸ್ತರ ಉಪಯೋಗಕ್ಕೆ ಬೇಕಾಗುವ ಪ್ರಾರ್ಥನೆಗಳನ್ನು ಒಳಗೊಂಡಿದೆ. ಆದುದರಿಂದ ಅದರಲ್ಲಿ ವಿಶಾಲಾರ್ಥದ ಮತ್ತು ಸಾರ್ವತ್ರಿಕ ಅರ್ಥದ 'ಲೌಕಿಕ' ಪದವನ್ನು ಬಳಸಲಾಗಿದೆ.

ಹಪ್ರ-೪೦ರಲ್ಲಿ ಬರುವ ಇನ್ನೊಂದು ಪ್ರಾರ್ಥನೆಯಲ್ಲಿಯೂ (ಪು. ೪೦ಎ) ಹೇಳಿರುವ ಸಂತರಲ್ಲಿ ಇಗ್ನಾಸಿ ಮತ್ತು ಸವೆರಿಯವರಿಗೆ ಪ್ರಾಧಾನ್ಯ ಸಿಕ್ಕಿದೆ. ಮೊದಲನೆಯವನು ಜೆಜ್ವಿಟರ ಸ್ಥಾಪಕ, ಇನ್ನೊಬ್ಬ ಸ್ಥಾಪಕ-ಸದಸ್ಯ ಮತ್ತು ಪ್ರಸಿದ್ಧ ಮಿಶನರಿ, ಆದುದರಿಂದ ಇತರ ಪ್ರಸಿದ್ಧ ಸಂತರನ್ನು ಹೆಸರಿಸದೆ ಇವರನ್ನು ಹೆಸರಿಸಿ ಸ್ತುತಿಸುವಷ್ಟು ಭಕ್ತಿ ಜೆಜ್ವಿಟರಿಗಿರುತ್ತದೆ. ''ಜೇಸುನಾಥರ ಸಭೆಯೊಳಗಾಗಿರುವ ನಾ...'' ಎಂಬ ಪ್ರತಿಜ್ಞಾವಾಕ್ಯವೂ ಅದೇ ಹಸ್ತಪ್ರತಿಯಲ್ಲಿ ಬರುತ್ತದೆ (ಪು. ೨೩). ಲ್ಯಾಟಿನ್ ಮೂಲದಲ್ಲಿ ಈ ಪ್ರತಿಜ್ಞೆಯನ್ನು ಜೆಜ್ವಿಟರೂ ಜೆಜ್ವಿಟರಲ್ಲದ ಇತರ ಮಿಶನರಿಗಳೂ ಮಾಡಲು ಅನುಕೂಲವಾಗುವಂತೆ ಆಯಾ ಸಂಸ್ಥೆಗಳ ಮಿಶನರಿಗಳಿಗೆ ಅನ್ವಯಿಸುವ ವಿಕಲ್ಪ ರೂಪಗಳು ವೆ.[೨೫] ಆದರೆ ಅನುವಾದದಲ್ಲಿ ಜೆಜ್ವಿಟರಿಗೆ ಅನ್ವಯಿಸುವ ರೂಪ ಮಾತ್ರ ಉಂಟು. ಆದುದರಿಂದ ಎರಡೂ ಹಸ್ತಪ್ರತಿಗಳ ಭಾಗಗಳು ಶ್ರೀರಂಗಪಟ್ಟಣವನ್ನು ಕೇಂದ್ರವಾಗಿಟ್ಟು ಕೆಲಸಮಾಡುತ್ತಿದ್ದ ಜೆಜ್ವಿಟ್ ಮಿಶನರಿಗಳಿಗೆ ಸಂಬಂಧಿಸಿಸುವಂಥವು. ಶ್ರೀರಂಗಪಟ್ಟಣದಲ್ಲಿ ಜೆಜ್ವಿಟ್ ಚಿನ್ನಾಮಿ ೧೬೫೧ರಲ್ಲಿ ಮಿಶನ್ ಕಾರ್ಯವನ್ನು ಆರಂಭಿಸಿದ. ಮೇಲೆ ಹೇಳಿದ ಎರಡೂ ಪ್ರಾರ್ಥನೆಗಳು ಸಾಮಾನ್ಯ ಪ್ರಾರ್ಥನೆಗಳು. ಆದುದರಿಂದ ಧರ್ಮಸಂಸ್ಥಾಪನೆಯ ಜೊತೆಯಲ್ಲಿಯೇ ಇಂಥ ಪ್ರಾರ್ಥನೆಗಳು ಕನ್ನಡದಲ್ಲಿ ಸಿದ್ಧವಾಗಿದ್ದಿರುವುದು ಯಥಾಕ್ರಮವಲ್ಲದೆ ವಿಶೇಷವಲ್ಲ. ಆದುದರಿಂದ ೧೬೫೧ರ ಅನಂತರದ ಕೆಲವೇ ವರ್ಷಗಳೊಳಗೆ ಈ ಪ್ರಾರ್ಥನೆಗಳು ಸಿದ್ಧವಾಗಿದ್ದಿರಬೇಕು.

ಧರ್ಮನಡತೆ ಕೃತಿಯಲ್ಲಿ (ಹಪ್ರ-೩೩೭) ಸಿಗುವ ಕೆಲವು ಪಾರಿಭಾಷಿಕ ಪದಗಳು ಅದೇ ಹಸ್ತಪ್ರತಿಯ ಇತರ ಭಾಗಗಳಲ್ಲಾಗಲಿ, ಅವುಗಳ ತರುವಾಯದ ಮುದ್ರಿತ ಆವೃತ್ತಿಗಳಲ್ಲಾಗಲಿ ಸಿಗುವುದಿಲ್ಲ. 'ಗೋದುವೆ ಅನ್ನ' (ಪು. ೨೫೩, ಇತ್ಯಾದಿ) ಎಂಬುದು ಇಂಥದೊಂದು ಪ್ರಯೋಗ. 'host' (ಇಂಗ್ಲಿಷ್) 'hostium' (ಲ್ಯಾಟಿನ್) ಎಂದರೆ ಗೋದಿ ರೊಟ್ಟಿ ಎಂಬರ್ಥದ ಪದದ ಸಮಾನಾರ್ಥಕವಿದು. ಇದೊಂದೇ ಕೃತಿಯಲ್ಲಿ ಈ ಪದಕ್ಕೆ 'ಅನ್ನ' ಎಂಬ ಸಮಾನಾರ್ಥಕವಿದೆ, ಇದುವರೆಗೆ ಸಿಕ್ಕಿರುವ ಇಡೀ ಕಥೋಲಿಕ ಸಾಹಿತ್ಯದಲ್ಲಿ 'ಅನ್ನ' ಇಲ್ಲ 'ಅಪ್ಪ' ಅಥವಾ 'ರೊಟ್ಟಿ' ಇದೆ. ಸತ್ಪ್ರಸಾದ, ದೇವಪ್ರಸಾದ ('Eucharist', 'Communion') ಎಂಬ ಹೆಚ್ಚು ಸಾಮಾನ್ಯವಾದ ರೂಪಗಳಿಗೆ 'ಸತ್ಕರುಣ' (ಪು. ೨೫೫ಎ, ಇತ್ಯಾದಿ) ಎಂಬ ಸಮಾನಾರ್ಥಕ ಇದೇ ಕೃತಿಯಲ್ಲಿ ಸಿಗುತ್ತದೆ. ಇದೇ ರೂಪ ಇದೇ ಹಸ್ತಪ್ರತಿಯ ಯೇಸುನಾಥ ಸ್ವಾಮಿಗಳ ಪಾಡು ಕೃತಿಯಲ್ಲಿಯೂ (ಪು. ೧೦೩, ಇತ್ಯಾದಿ) ದೇವಪ್ರಸಾದವನು ತೆಗುವವರಿಗೆ ತಿಳುಹಿಸತಕ್ಕ ವರ್ತಮಾನಗಳು ಕೃತಿಯಲ್ಲಿಯೂ (ಪು. ೨೯೨, ಇತ್ಯಾದಿ) ಮಾತ್ರ ಸಿಗುತ್ತದೆ. ಇತರೆಡೆಯಾಗಲಿ, ಮುದ್ರಿತ ಕೃತಿಗಳಲ್ಲಾಗಲಿ ಸಿಗುವುದಿಲ್ಲ. ಆದುದರಿಂದ ಈ ರೂಪಗಳು ಪುರಾತನ ಸಮಾನಾರ್ಥಕಗಳಿರಬೇಕು, ಎಂದರೆ ೧೬೫೧ರ ಅನಂತರದ ಕೆಲವೇ ವರ್ಷಗಳಲ್ಲಿ ಸಿದ್ಧವಾಗಿದ್ದವು ಇರಬೇಕು. ಅನಂತರ, ಯಾವುದೋ ಕಾರಣಗಳಿಗೋಸ್ಕರ ಇವುಗಳನ್ನು ಕೈಬಿಡಲಾಯಿತು.

ಹಪ್ರ-೩೩೭ರಲ್ಲಿ ಚಾರಿತ್ರಿಕಾಂಶಗಳನ್ನು ಒಳಗೊಂಡ ಒಂದು ಸೂಚನೆ ಇದೆ :

---

೨೫. Benedicti XIV, Bullarium, Tom, I, p. 414.

> ಕೃಷ್ಣನು ರಾಮನು ಚೊಕ್ಕನಾಥನು ಈ ರಾಜ್ಯದ ಅರಸುಗಳು ಅಲ್ಲವೆ. ಪೂರ್ವಕಾಲ ಕೇಳೋದೇನು. ಈ ಕಾಲದಲ್ಲಿ ವೀರಪ್ಪನಾಯಕ, ತಿರುಮಲನಾಯಕನು ಮಧುರೆ ಪಟ್ಟಣದ ಅರಸುಗಳಾಗಿ ಇದ್ದರು. ಈಗಲೆ ಸತ್ತ ಬಳಿಕ ಅವರ ಶರೀರವನ್ನು ಸುಟ್ಟ ಸ್ಥಳದಲ್ಲಿ (ಪು. ೧೭-೧೭ಎ).

ಈ ಅವತರಣಿಕೆಯನ್ನು ಬರೆಯುವ ಕಾಲದಲ್ಲಿ ವೀರಪ್ಪ ಮತ್ತು ತಿರುಮಲನಾಯಕರು ಸತ್ತಿದ್ದರು ಎಂಬುದು ಅವತರಣಿಕೆಯ ಪಾಠಪರಿಶೀಲನೆಯಿಂದ ವ್ಯಕ್ತವಾಗುತ್ತದೆ. ಇವರಿಬ್ಬರ ಕಾಲ ತಿಳಿದಿದೆ. ವೀರಪ್ಪನಾಯಕ: ೧೫೭೨-೯೫, ತಿರುಮಲನಾಯಕ: ೧೬೨೩-೫೯.[೨೬] ಆದುದರಿಂದ ಕೃತಿಯ ಕಾಲ ೧೬೫೯ರ ಅನಂತರ ಎಂದಾಯಿತು. ಇಲ್ಲಿ ಹೇಳಿದವರೆಲ್ಲಾ ಮಧುರೆ ನಾಯಕರು. 'ರಾಮ, ಕೃಷ್ಣ, ಚೊಕ್ಕನಾಥ'ರ ಹೆಸರುಗಳನ್ನು ಒಟ್ಟಿಗೆ ಮಧುರೆ ನಾಯಕರ ಹೆಸರುಗಳು ಎಂದು ಲೇಖಕ ಉಲ್ಲೇಖಿಸಿದ್ದಾನೆ. ಏಕೆಂದರೆ 'ಪೂರ್ವಕಾಲದಲ್ಲಿ' ಈ ಮೂರು ಹೆಸರುಗಳ ರಾಜರು ಮಧುರೆ ನಾಯಕರಲ್ಲಿ ಇರಲಿಲ್ಲ. ಕೃಷ್ಣಪ್ಪನಾಯಕ (೧೫೬೪-೭೨) ಒಬ್ಬನೇ ಇದ್ದನು; ಈಚಿನವರಲ್ಲೂ ಈ ಮೂರು ಹೆಸರುಗಳ ರಾಜರು ಒಟ್ಟಿಗೆ ಇಲ್ಲ. ಇದ್ದ ರಾಜರೆಂದರೆ ಚೊಕ್ಕನಾಥ (೧೬೫೯-೮೨) ರಂಗಕೃಷ್ಣ ಮುತ್ತು ವೀರಪ್ಪನಾಯಕ (೧೬೮೨-೮೯) ಮತ್ತು ವಿಜಯರಂಗ ಚೊಕ್ಕನಾಥ (೧೭೦೬-೩೨).[೨೭] ಆದುದರಿಂದ ರಾಮ, ಕೃಷ್ಣ, ಚೊಕ್ಕನಾಥರನ್ನು ಸ್ಥೂಲವಾಗಿ ಈ ರಾಜ್ಯದ ರಾಜರೆಂದು ಹೇಳಿ, ನಿರ್ದಿಷ್ಟವಾಗಿ ವೀರಪ್ಪ ಮತ್ತು ತಿರುಮಲ ನಾಯಕರನ್ನು ಹೆಸರಿಸಿ, ಅವರ ಮರಣಾನಂತರದ ಘಟನೆಗಳನ್ನು ಪಾಠದಲ್ಲಿ ಪ್ರಸ್ತಾಪಿಸಿದೆ. ಸಾವಿನ ಮಾತೆತ್ತದೆ ಪ್ರಸ್ತಾಪಿಸಲ್ಪಟ್ಟ ರಾಜರ ಜೀವಿತಾವಧಿ ೧೭೩೨ರ ವರೆಗೆ (ಚೊಕ್ಕನಾಥ) ಇರುವುದರಿಂದ, ೧೭೩೨ ಈಚಿನ ಗಡುವು. ಹೀಗೆ ಈ ಕೃತಿ ೧೬೫೯-೧೭೩೨ರ ಅವಧಿಯಲ್ಲಿ ರಚಿತವಾಗಿರಬೇಕು. ಈ ಕೃತಿ ಡಿ ನೊಬಿಲಿಕೃತವಲ್ಲ, ಏಕೆಂದರೆ ಡಿ ನೊಬಿಲಿ ೧೬೫೬ರಲ್ಲಿ ಕಾಲವಾದನು. ಆದರೆ ಮಧುರೆ ನಾಯಕರನ್ನು 'ಈ ರಾಜ್ಯ'ದವರು ಎಂದಿರುವುದರಿಂದ ಇದು ತಮಿಳುನಾಡಿನಲ್ಲಿಯೇ ರಚಿತವಾದ ಕೃತಿ. ಕನ್ನಡಾನುವಾದ ೧೭೩೨ರ ಅನಂತರವೇ ನಡೆದಿರಬೇಕು.

ಡಿ ನೊಬಿಲಿಕೃತ ಎಂದು ಗೊತ್ತಿರುವ ಹಲವು ಕೃತಿಗಳು (ಪುನರ್ಜನ್ಮದಾಕ್ಷೇಪ, ಆತ್ಮನಿರ್ಣಯ, ಇತ್ಯಾದಿ) ಕನ್ನಡಕ್ಕೆ ಅನುವಾದಗೊಂಡಿರುವ ಕಾಲ ಆಯಾ ಕೃತಿಗಳ ಕಾಲದ ತರುವಾಯದ ಕಾಲವಾಗುತ್ತದೆ. ಆತ್ಮನಿರ್ಣಯದ ಕಾಲ ೧೬೦೮ (ಡಾಲ್‌ಮನ್, ಪು. ೮). ಉಳಿದ ಕೃತಿಗಳ ಕಾಲ ನಿಖರವಾಗಿ ತಿಳಿಯುವುದಿಲ್ಲವಾದರೂ ಡಿ ನೊಬಿಲಿಯ ಜೀವಿತಾವಧಿಯ ಒಳಗೆಯೇ ಎಂದರೆ ೧೬೫೬ರ ಒಳಗೆಯೇ ಎಂಬುದು ಸ್ವಯಂವೇದ್ಯ. ಆತ್ಮನಿರ್ಣಯದ ಅನುವಾದ ೧೬೦೮ರ ಅನಂತರ ಯಾವಾಗ ಬೇಕಾದರೂ ಆಗಿದ್ದಿರಬಹುದು. ಉಳಿದವುಗಳ ಅನುವಾದ ೧೬೫೬ರ ಅನಂತರವಂತೂ ಯಾವಾಗ ಬೇಕಾದರೂ ಆಗಿದ್ದಿರಬಹುದು. ಮೈಸೂರಿನ ಕ್ರೈಸ್ತರಿಗೂ ತಮಿಳರಿಗೂ ಸಂಪರ್ಕ ಉಂಟಾದುದು ೧೬೫೧ರ ಅನಂತರ. ಮೈಸೂರು ಮಿಶನ್ ೧೬೫೧ರಲ್ಲಿ ಆರಂಭವಾಗಿ, ಅಲ್ಲಿ

---

೨೬. *Historical Inscriptions of S. India*, (ed) R. Sewell and Krishnaswamy Iyengar (Madras: Madras University, 1932), p. 364.

೨೭. ಅಲ್ಲೇ.

ಕ್ರೈಸ್ತಮತ ತುಸು ಮೈಗೂಡಿಸಿಕೊಳ್ಳಲು ಬೇಕಾದ ಕೆಲವು ವರ್ಷಗಳ ಅವಧಿಯನ್ನು ಬಿಟ್ಟರೆ, ಸುಮಾರು ೧೬೫೬ರ ಅವಧಿ ಸಿಗುತ್ತದೆ, ಡಿ ನೊಬಿಲಿ ಕಾಲವಾದ ವರ್ಷವದು. ಆದುದರಿಂದ ಡಿ ನೊಬಿಲಿಯ ಕೃತಿಗಳ ಅನುವಾದಗಳ ಹಿಂದಿನ ಗಡುವು ೧೬೫೬.

ಡಿ ನೊಬಿಲಿಯ ಕೃತಿಗಳನ್ನು ಆಧರಿಸಿ ರಚಿತವಾದ ಕೃತಿಗಳು ಎರಡೂ ಹಸ್ತಪ್ರತಿಗಳಲ್ಲಿವೆ. ಇವುಗಳಲ್ಲಿ ಕೆಲವು ತೆಲುಗು ಮೂಲಕ ಬಂದಂಥವು. ತೆಲುಗು ಮೂಲಕವಾಗಿ ಯಾವಾಗ ಈ ಕೃತಿಗಳು ಬಂದವು ಎಂದು ತೀರ್ಮಾನಿಸಲು ಆಧಾರಗಳು ಸಿಗುವುದಿಲ್ಲ. ಆದರೆ ೧೬೭೫ರಲ್ಲಿ ಫಾದರ್ ಸೈಮನ್ ಮಾರ್ಟಿನ್ಸ್ ಬರೆದ ಒಂದು ವರದಿಯಲ್ಲಿ ಡಿ ನೊಬಿಲಿಯ ಜ್ಞಾನೋಪದೇಶಮ್‌ನನ್ನು ಪುರಸ್ಕರಿಸುತ್ತಾ ಅವನು ಹೀಗೆ ಹೇಳುತ್ತಾನೆ, ''Both the Madurai and Mysore Missions which have, as it were, developed from this Catechism as their root, bear testimony to its excellence'' (ಜ್ಞಾನ ಉಪದೇಶಮ್ ಮುದಲ್ ಕಾಣ್ಡಮ್, ಪು. ೫೧). ಡಿ ನೊಬಿಲಿಯ ಜ್ಞಾನೋಪದೇಶದ ಪ್ರಭಾವ ಮೈಸೂರು ಮಿಶನಿನ ಮೇಲಾಯಿತು ಎಂಬುದನ್ನು ಈ ಮಾತುಗಳು ಸೂಚಿಸುತ್ತವೆ. ಆದಾಗಲೇ ೧೬೭೫ನೇ ವರ್ಷ. ಎರಡೂ ಹಸ್ತಪ್ರತಿಗಳಲ್ಲಿರು ಜ್ಞಾನೋಪದೇಶ ಸತ್ಯೋಪದೇಶಗಳು ಕ್ರೈಸ್ತಮತಬೋಧನೆಗೆ ಅಗತ್ಯ ಗ್ರಂಥಗಳಾಗಿದ್ದವು. ಫರೂಲಿಯ ಚರಿತ್ರೆಯಲ್ಲಿ ಚಿನ್ನಾಮಿ ಮತ್ತು ಅವನ ಸಹ ಕಾರ್ಯಕರ್ತರು ಇಂಥ ಗ್ರಂಥಗಳನ್ನು ಉಪಯೋಗಿಸಿದ ಉಲ್ಲೇಖ ಸಿಗುವುದಿಲ್ಲವಾದರೂ, ಪ್ರಚಾರಗೊಂಡ ಧರ್ಮ ಸುವ್ಯವಸ್ಥಿತವಾಗಿ ನೆಲೆಗೊಳ್ಳಬೇಕೆಂಬ ತುರ್ತಿನಲ್ಲಿ ಇಂಥ ಗ್ರಂಥಗಳು ಹುಟ್ಟಲು ಬಹಳ ಕಾಲವಂತೂ ಖಂಡಿತ ಹಿಡಿಯಲಿಲ್ಲವೆಂದರೆ ತಪ್ಪಾಗಲಾರದು. ಎಂದರೆ ೧೭ನೇ ಶತಮಾನದ ಕೊನೆಯಲ್ಲಾದರೂ ಈ ಗ್ರಂಥಗಳು ರಚಿತವಾಗಿರುವ ಸಾಧ್ಯತೆ ಪ್ರಬಲವಾಗಿದೆ.

ಇವೆಲ್ಲಾ ಕಾರಣಗಳಿಂದ ಇವೆರಡು ಹಸ್ತಪ್ರತಿಗಳಲ್ಲಿರುವ ವಿವಿಧ ಕೃತಿಗಳ ಕಾಲ ೧೭ನೇ ಶತಮಾನದ ಮಧ್ಯಭಾಗದಿಂದ ೧೮ನೇ ಶತಮಾನದ ನಡುಭಾಗದವರೆಗೆ ಹರಡಿದೆ ಎಂದು ಸ್ಥೂಲವಾಗಿಯೂ ೧೬೫೬ರಿಂದ ೧೭೪೧ರ ವರೆಗೆ ಎಂದು ಖಚಿತವಾಗಿಯೂ ಹೇಳಬಹುದು.

ಇದುವರೆಗೆ ಮಂಡಿಸಿದ ಆಧಾರಗಳ ಮೇಲೆ ಹಪ್ರ-೪೦ ಮತ್ತು ಹಪ್ರ-೩೩೭ರ ಕರ್ತೃಕಾಲಗಳ ಬಗೆಗೆ ಹೇಳಬಹುದಾದ ವಿಷಯಗಳಿಷ್ಟು:

೧. ಎರಡೂ ಹಸ್ತಪ್ರತಿಗಳ ಕರ್ತೃ ಒಬ್ಬನೇ ಅಲ್ಲ. ಒಂದೊಂದು ಹಸ್ತಪ್ರತಿಯ ಕರ್ತೃವೂ ಒಬ್ಬನೇ ಅಲ್ಲ, ಹಲವರು. ಇವರಲ್ಲಿ ಒಬ್ಬನಾದರೂ ಉಪದೇಶಿಯೂ, ಇಬ್ಬರಾದರೂ ಮಿಶನರಿಗಳೂ ಇದ್ದರು. ಮಿಶನರಿಗಳಲ್ಲಿ ಒಬ್ಬನು ಚಿನ್ನಾಮಿಯಾಗಿದ್ದಿರುವುದು ಸಾಧ್ಯ. ಇನ್ನೊಬ್ಬನು ದೇವಪುತ್ರ ಎಂದು ತನ್ನನ್ನು ಕರೆದುಕೊಂಡಿರುವವನು. ಇಬ್ಬರೂ ಮಿಶನರಿಗಳು ಜೆಜ್ವಿಟರೇ. ಉಪದೇಶಿಯ ಹೆಸರು ಧೈರ್ಯಮ್ ಎಂದು ಇದ್ದಿರಬಹುದು.

೨. ಅನುವಾದಕರ ಹೆಸರುಗಳು ಸಿಗುವುದಿಲ್ಲ; ಹಲವೆಡೆ ಕೃತಿಕಾರರು ಕೃತಿಗಳನ್ನು ''ಬರೆಯಿಸಿದರು'' ಎಂದಿದ್ದರೂ, ಹಾಗೆ ಬರೆದವರು ಯಾರೆಂದು ತಿಳಿಯುವುದಿಲ್ಲ.

೩. ಇವುಗಳ ಕಾಲ ೧೬೫೬ರಿಂದ ೧೭೪೧ರ ವರೆಗೆ ವ್ಯಾಪಿಸಿದೆ.

೪. ಇವೆರಡು ಹಸ್ತಪ್ರತಿಗಳು ಕರ್ತೃಗಳ ಸ್ವಹಸ್ತಾಕ್ಷರ ಪ್ರತಿಗಳಲ್ಲ, ಪ್ರತಿಕಾರರ ನಕಲುಗಳು.

ಪ್ರತಿಕಾರನ ಹೆಸರು ಸವೆರಿ. ಇವನು ಒಬ್ಬ ಪ್ರಖ್ಯಾತ ಉಪದೇಶಿಯಾಗಿದ್ದಿರುವುದು ಸಾಧ್ಯ.

ಇವೆರಡು ಹಸ್ತಪ್ರತಿಗಳ ವಿಷಯವನ್ನು ಪರಿಶೀಲಿಸಿದಾಗ, ಇವುಗಳಲ್ಲಿರುವ ಕೃತಿಗಳ ಪರಸ್ಪರ ಸಂಬಂಧಗಳೂ, ತರುವಾಯದ ಅಥವಾ ಪೂರ್ವದ ಕೃತಿಗಳೊಡನೆ ಇವುಗಳಿಗಿರುವ ಸಂಬಂಧಗಳೂ ಗೋಚರವಾಗುತ್ತವೆ. ಒಂದೇ ವಿಷಯವನ್ನೊಳಗೊಂಡ ಕೆಲವು ಕೃತಿಗಳು ಎರಡರಲ್ಲೂ ಇರುವುದರಿಂದ, ಅಂಥವುಗಳನ್ನು ಒಟ್ಟಿಗೆ ಪರಿಶೀಲಿಸಲಾಗಿದೆ.

*ಕನ್ನಡ ಧಾರ್ಮಿಕ ಸಾಹಿತ್ಯಕ್ಕೆ ಕ್ರೈಸ್ತ ಮಿಶನರಿಗಳ ಕೊಡುಗೆ, ೧೯೯೬, ಪು. ೩೭-೫೪*

# ೭೩. ಹೊಸಕವಿತೆಯ ಹುಟ್ಟು : ಮಂಗಳೂರು

● ಎಸ್. ಅನಂತನಾರಾಯಣ

ಮಂಗಳೂರಿನಲ್ಲಿಯೂ ಇದೇ ರೀತಿಯಲ್ಲಿಯೇ ಕೆಲವರು ಮಾತ್ರ ಹೊಸ ಪ್ರಯೋಗಗಳನ್ನು ಮಾಡಿದರು. ಅನಂತರ ಅವರ ಮೇಲ್ಪಂಕ್ತಿಯಲ್ಲಿ ಕೆಲಸ ನಡೆಸುವವರು ಹೆಚ್ಚು ಜನ ಮುಂದೆ ಬರಲಿಲ್ಲ. ಅಲ್ಲಿಯೂ ಬಿಡಿಬಿಡಿಯಾಗಿ ಪ್ರಯೋಗಗಳು ನಡೆದುವು. ಈ ಪ್ರಯೋಗಗಳನ್ನು ನಡೆಸಿದವರಲ್ಲಿ ಪ್ರಮುಖರು ಪಂಜೆ ಮಂಗೇಶರಾಯರು, ಶ್ರೀ ಮಂಜೇಶ್ವರದ ಗೋವಿಂದ ಪೈ ಅವರು ಮತ್ತು ಹಟ್ಟಂಗಡಿ ನಾರಾಯಣರಾಯರು. ಇವರಲ್ಲಿ ಪಂಜೆಯವರು ಹಿರಿಯರು, ಗೋವಿಂದ ಪೈ ಅವರಿಗೆ ಅಧ್ಯಾಪಕರಾಗಿದ್ದರು. ಇವರೇ ಆ ಕಡೆಯಲ್ಲಿ ಹೊಸ ಕವಿತೆಯ ಮೇಲ್ಪಂಕ್ತಿ ಹಾಕಿಕೊಟ್ಟ ಗುರುಗಳು. ಗೋವಿಂದ ಪೈಯವರೂ ಇತರ ಕೆಲವರೂ ಅವರನ್ನು ಅನುಸರಿಸಿ ಹೊಸ ಹಾದಿಯಲ್ಲಿ ನಡೆದರು.

ಪಂಜೆ ಮಂಗೇಶರಾಯರು ಶಾಲೆಯಲ್ಲಿ ಕಲಿಸುತ್ತಿದ್ದುದರಿಂದ, ಮಕ್ಕಳ ಮನಸ್ಸಿಗೆ ಯಾವ ಬಗೆಯ ಕವಿತೆ ಹಿಡಿಸುತ್ತದೆಂಬುದನ್ನು ಚೆನ್ನಾಗಿ ತಿಳಿದಿದ್ದರು. ಇವರು ''ಮಕ್ಕಳಲ್ಲಿ, ಮಕ್ಕಳ ವಿದ್ಯಾಭ್ಯಾಸದಲ್ಲಿ ತಮಗಿದ್ದ ಅತಿಶಯ ಪ್ರೇಮದಿಂದ ತಿಳಿನುಡಿಯ ಲಲಿತಲಯದ ಹಲವು ಕವನಗಳನ್ನು ರಚಿಸಿದರು. ಅವರ 'ಉದಯರಾಗ', 'ಸಂಜೆಯ ಹಾಡು', 'ತೆಂಕಣ ಗಾಳಿಯಾಟ' ಮೊದಲಾದ ಕೃತಿಗಳಲ್ಲಿ ನವ್ಯಲಾಸ್ಯ ಕಂಡುಬರುತ್ತದೆ.''[೧] ಪಂಜೆಯವರೂ ಎಸ್. ಜಿ,. ನ. ಅವರಂತೆಯೇ ಷಟ್ಪದಿ, ಚೌಪದಿ, ಸಾಂಗತ್ಯ, ಗೋವಿನ ಕಥೆಯ ಮಟ್ಟು ಮುಂತಾದ ಹಳೆಯ ಪದ್ಯಧಾಟಿಗಳನ್ನೇ ಉಪಯೋಗಿಸಿಕೊಂಡರು. ಸಾಂಪ್ರದಾಯಿಕವಾಗಿದ್ದ ಆದಿಪ್ರಾಸವನ್ನು ಬಿಡಲು ಕೂಡ ಅವರ ಮನಸ್ಸೊಪ್ಪಲಿಲ್ಲ. ಆ ಬಗ್ಗೆ ಅವರಿಗೂ ಗೋವಿಂದ ಪೈಯವರಿಗೂ ನಡೆದ ಮಾತುಕತೆ ಹಿಂದೆಯೇ ಬಂದಿದೆ.[೨] ಅನಂತರ 'ಇಂಗ್ಲಿಷ್ ಗೀತಗಳು' ಬಂದ ಮೇಲೆ ಪಂಜೆಯವರು ಪ್ರಾಸತ್ಯಾಗಮಾಡಿ ಬರೆಯಲಾರಂಭಿಸಿದ್ದ ಗೋವಿಂದ ಪೈ ಅವರನ್ನು ಕುರಿತು 'ಇನ್ನು ನೀನು ಗೆದ್ದಿ' ಎಂದರು.[೩] ಪ್ರಾಸದ ಬಗ್ಗೆ ಪಂಜೆಯವರು ಎಸ್. ಜಿ. ನ. ಅವರಂತೆಯೇ ಸಂಪ್ರದಾಯನಿಷ್ಠರಾಗಿದ್ದರು. ಎಸ್. ಜಿ. ನ. ಅವರ ಅನಂತರ ಮೆಕ್ಮಿಲನ್ ಕಂಪನಿಯ ದೇಶಭಾಷಾ ಪುಸ್ತಕಗಳನ್ನು ಪಂಜೆಯವರು ಸಂಪಾದಕರಾಗಿ ಸಿದ್ಧಗೊಳಿಸಿದರೆಂಬುದನ್ನು ಇಲ್ಲಿ ನೆನೆಯಬಹುದು.

''ಇಂಗ್ಲಿಷು ಕವನಗಳ ವರ್ಚಸ್ಸು ಕನ್ನಡಕ್ಕೆ ಬರುವಂತೆ ಮಾಡಿದವರಲ್ಲಿ ಅವರು ಮೊದಲಿಗರು''[೪] ಎಂಬ ಮಾತು ಮಂಗಳೂರಿನ ಕಡೆಗಂತೂ ನಿಜ. ಅವರು ಸಾಮಾನ್ಯ ಕವಿಗಳಾಗಿರಲಿಲ್ಲ. ''ಕನ್ನಡ ಕವನ ರಾಜ್ಯದಲ್ಲಿ ಸರಳತೆಗೆ ಒಂದು ಹೊಸ ಹಾದಿ ಹಾಕಿಕೊಟ್ಟರು. ಅವರು ತಮ್ಮ ಬರವಣಿಗೆಗಳಿಂದಲೂ, ಸಾಹಿತ್ಯ ವಿಮರ್ಶೆಯಿಂದಲೂ, ಸಾಹಿತ್ಯವನ್ನು ಜನಜೀವನಕ್ಕೆ ಸಮೀಪವಾಗಿ ತರಲೆತ್ನಿಸಿದ ಸಾಹಸಿಗಳು. ಹಳೆಯದನ್ನು ಬಿಟ್ಟು, ಹೊಸ ಹಾದಿ

---

೧ ''ಶ್ರೀ:'ಇಂಗ್ಲಿಷ್ ಗೀತಗಳು'–ತೀ.ನಂ.ಶ್ರೀ. ಅವರ ಪ್ರಸ್ತಾವನೆ, ಪು. ೨೪.

೨ 'ಮುಂಬೆಳಗು ೧-ಆಗಿನ ಸಮಸ್ಯೆಗಳು' ಅಧ್ಯಾಯದಲ್ಲಿ ನೋಡಿ.

೩ 'ಶ್ರೀ ಪಂಜೆಯವರ ನೆನಪಿಗಾಗಿ' (೧೯೫೭)-ಗೋವಿಂದ ಪೈ: 'ಕನಸಾದ ನನಸು', ಪು. ೧೦೩.

೪ ಅದೇ–ಪಂಜೆ ರಾಮರಾವ್: 'ನಮ್ಮ ತಂದೆ', ಪು. ೭೩.

ತುಳಿದವರು; ಸಂಪ್ರದಾಯ ನಿರ್ಬಂಧಗಳನ್ನು ಹರಿದು ಬಂದು-ಸಾಹಿತ್ಯ ಇಂದಿನ ಬದುಕಿಗೆ, ಜೀವನಕ್ಕೆ ತಕ್ಕ ವಾಹಕವಾಗುವಂತೆ ಶ್ರಮಿಸಿದವರು ಅವರು'' ಎಂದಿದ್ದಾರೆ. ಶ್ರೀ ಎಚ್. ಸುಂದರರಾಯರು.[೫] ಸಂಪ್ರದಾಯವನ್ನು ಸಂಪೂರ್ಣವಾಗಿ ಅತಿಕ್ರಮಿಸದಿದ್ದರೂ, ಪಂಜೆಯವರು ಜನಸಾಮಾನ್ಯರ ಭಾಷೆಗೆ ಹತ್ತಿರವಾಗಿದ್ದಂಥ ಸರಳವಾದ ಮಾತುಗಳಲ್ಲಿ ಕವಿತೆಗಳನ್ನು ರಚಿಸಿದರೆಂಬುದು ನಿರ್ವಿವಾದ. ಪಂಜೆಯವರು ಮಂಗಳೂರಿನ ಕಡೆಯಲ್ಲಿ ಕಾವ್ಯದಲ್ಲಿ ಹೊಸ ಹಾದಿಗೆ ಕಾರಣರಾದರು.

ಪಂಜೆಯವರು ೧೮೯೩ಕ್ಕೂ ಮೊದಲಿಂದ ಕವಿತೆಗಳನ್ನು ಬರೆಯುತ್ತಿದ್ದಿರಬೇಕು. ಅವರ ಹೆಚ್ಚು ಕವಿತೆಗಳು ಯಾವಾಗ ರಚಿತವಾದುವೆಂಬುದು ತಿಳಿಯದಿದ್ದರೂ, ಅವುಗಳು ಮೊದಲು ಪ್ರಕಟವಾದ ವರ್ಷ, ತಿಂಗಳು ಇವು ನಮಗೆ ಗೊತ್ತಿವೆ. ೧೮೯೩ರಲ್ಲಿ ಗೋವಿಂದ ಪೈಯವರು ಕೆಳಸಾಲೆಯಲ್ಲಿ ವಿದ್ಯಾರ್ಥಿಯಾಗಿದ್ದಾಗ ಪಂಜೆಯವರನ್ನು ಬೀದಿಯಲ್ಲಿಯೇ ನಿಲ್ಲಿಸಿಕೊಂಡು ಅವರಿಂದ 'ಮೆಚ್ಚಿದೆನು ಗಾನಲೋಲ' ಎಂಬ ಕವಿತೆಯನ್ನು ಬರೆಸಿಕೊಂಡರಂತೆ. ೧೮೯೬ರಲ್ಲಿ 'ಸತ್ಯದೀಪಿಕೆ' ಪತ್ರಿಕೆಯಲ್ಲಿ 'O Call my brother back to me' ಎಂಬುದರ ಅನುವಾದ 'ಮರಳಿ ತಮ್ಮನ ಕರೆಯಪ್ಪಾ' ಎಂಬ ಹಾಡು ಪ್ರಕಟವಾಯಿತೆಂದು ಗೋವಿಂದ ಪೈಯವರು ಹೇಳಿದಾರೆ.[೬] ಪಂಜೆಯವರ ಕೆಲವು ಕವಿತೆಗಳು ೧೯೦೦ರಿಂದ ೧೯೦೩ರ ವರೆಗೆ ಮಂಗಳೂರಿನಲ್ಲಿ ನಡೆಯುತ್ತಿದ್ದ 'ಸುವಾಸಿನಿ' ಪತ್ರಿಕೆಯಲ್ಲಿ ಪ್ರಕಟವಾದುವು. ಕೆಲವು 'ಸ್ವದೇಶಾಭಿಮಾನಿ'ಯಲ್ಲಿಯೂ ಉಳಿದುವು ಅವರೇ ಸಂಪಾದಿಸಿದ ಪದ್ಯಪುಸ್ತಕಗಳಲ್ಲಿಯೂ ಬಂದುವು. ಈ ಎಲ್ಲ ಕವಿತೆಗಳಲ್ಲಿಯೂ ''ಅದೊಂದು ಬಗೆಯ ದ್ರವಣ (Fluidity)ವಿದೆ, ಮನೆವಳಿಕೆ (Homeliness) ಇದೆ'' ಎಂದಿದಾರೆ ಗೋವಿಂದ ಪೈ ಅವರು.[೭] ಬಹು ಸುಲಭವಾಗಿ ಮಕ್ಕಳ ಮನಸ್ಸಿಗೆ ನಾಟಿ, ಅಲ್ಲಿಯೇ ಉಳಿಯುವ ಗುಣಗಳು ಈ ಕವಿತೆಗಳಲ್ಲಿವೆ. ಇವರ ಭಾವಗೀತಗಳು ಲಾಲಿತ್ಯದಿಂದ ಕೂಡಿ ಚಿಕ್ಕ ಮಕ್ಕಳು ಹಾಡಿ ನಲಿಯಲು ಚೆನ್ನಾಗಿ ಅನುಕೂಲಿಸುವಂತಿದೆ. ಅಂತೆಯೇ ಶಿಶುಸಾಹಿತ್ಯಕ್ಕೆ ಬಹುಮಟ್ಟಿಗೆ ಪಂಜೆಯವರೇ ಮೂಲ ಪುರುಷರು ಜನ್ಮದಾತರು ಎಂದು ಗೋವಿಂದ ಪೈಯವರು ಹೇಳಿದ ಮಾತನ್ನು ಒಪ್ಪಬಹುದು. ಪಂಜೆಯವರ ಸ್ವತಂತ್ರ ಕವನಗಳಲ್ಲಿ ಒಂದೆರಡನ್ನೂ, ಅನುವಾದಗಳಲ್ಲಿ ಕೆಲವನ್ನೂ ನೋಡಬಹುದು. ಪಂಜೆಯವರು ಬರೆದ ಕಥನ ಕವನಗಳ ಚರ್ಚೆ ಬೇರೆ ಕಡೆ ನಡಸಲಾಗಿದೆ.[೮]

ತೂಗುವೆ ತೊಟ್ಟಿಲ ಜೋಗುಳ ಹಾಡಿ,
ಕೂಗದೆ ಮಲಗೆನ್ನ ಮುದ್ದಿನ ಮೋಡಿ, ಜೋ, ಜೋ ! – ಪಲ್ಲವಿ
ತುಂಬಿ ಪವಡಿಸಿತು ಎಸಳ ಹೂಗಳಲಿ;
ಗೊಂಬೆ ನಿನ್ನಯ ಕಣ್ಣೆಸೆವ ಸೆರೆಗೊಳಲಿ.
ರೆಂಬೆ ಚಿಗುರೊಳಡಗಿತು ಪಿಕದುಲಿಯು; ॥೧॥

---

೫ ಅದೇ, ಪು. ೩೧.
೬ ಅದೇ, ಪು. ೭.
೭ ಅದೇ, ಪು. ೯.
೮ 'ಕಥನ ಕವನಗಳು' ಅಧ್ಯಾಯದಲ್ಲಿ.

ಸೊಂಬನಾಗಲಿ ನಿನ್ನ ತುಟಿ ಚಿಲಿಪಿಲಿಯು.
ಜಲದ ಮೇಲ್ ಮಲಗುವ ಮರಿ ಹಂಸದಂತೆ,
ಎಲೆಯೊಳಗಿನ ಮಲ್ಲಿಗೆಯ ಮೊಗ್ಗಿನಂತೆ
ಚೆಲು ತೊಟ್ಟಿಲಲ್ಲಿ ಮಲಗು ಅರಗಿಳಿಯೇ !
ತಲೆಗಿಂಬೀಶನ ಕೈ ನಿನ್ನ ಬಳಿಯೇ ।।೨।।

ಸುಂದರವಾದ ಈ ಕವಿತೆಯಲ್ಲಿರುವ ಮಮತೆ, ತೊಟ್ಟಿಲಲ್ಲಿ ಮಲಗಿರುವ ಮಗುವನ್ನು 'ಮರಿ ಹಂಸ', 'ಮಲ್ಲಿಗೆಯ ಮೊಗ್ಗು', 'ಎಸಳ ಹೂಗಳಲಿ' 'ಮಲಗಿದ ದುಂಬಿ', ಮುಂತಾಗಿ ವರ್ಣಿಸಿರುವುದು ಯಾವ ತಾಯಿಯ ಹೃದಯವನ್ನಾದರೂ ತುಡಿಯಬಲ್ಲವು. ಇಲ್ಲಿ ನಾವು ಮುಖ್ಯವಾಗಿ ಕಾಣುವ ಗುಣ, ಸರಳತೆ. ಇದೇ ಸರಳತೆಯನ್ನು ಪಂಜೆಯವರ ಕವಿತೆಗಳಲ್ಲಿ ಸಾಧಾರಣವಾಗಿ ಕಾಣಬಹುದು. 'ನಾಗರ ಹಾವೆ ಹಾವೊಳು ಹೂವೆ' ಎಂಬುದರ ಕಲ್ಪನೆ ಉತ್ಕೃಷ್ಟವಾದುದು. ಈ ಹಾಡನ್ನು ಹಾಡದ ಚಿಕ್ಕಮಕ್ಕಳಿಲ್ಲ. ಈ ಗೀತದ ಲಹರಿಯಲ್ಲಿ ಗಾರುಡಿಗನ ಪುಂಗಿಯ ನಾದದ ಮೋಡಿಯಿದೆ !

'ತೂಕಡಿಕೆಯನು ಕಳೆಯದೇಕೆ ಕುಳಿತಿಹೆ ಗೆಳೆಯ ?', 'ಹುತ್ತರಿ ಹಾಡು' ಇವೇ ಮೊದಲಾದ ರಾಷ್ಟ್ರೀಯ ಭಾವನೆಯ ಗೀತಗಳನ್ನೂ ಪಂಜೆಯವರು ಬರೆದಿದ್ದಾರೆ. ಕೊಡಗಿನ ನಾಡಗೀತೆಯೆನಿಸಿಕೊಂಡು ಹೆಸರಾಗಿದ, 'ಹುತ್ತರಿಯ ಹಾಡು.'

ನಮ್ಮ ಕೊಡಗಿದು ಜಮ್ಮದು
ಜಮ್ಮ ಕೊಡಗಿದು ನಮ್ಮದು

ಎಂದು ಕೇಳಿದಾಗ ಮೈ ಜುಮ್ಮೆನ್ನುತ್ತದೆ.

ಸವಿದು ಮೆದ್ದರೊ ಯಾರು ಪೂರ್ವದಿ ಹುಲಿಯ ಹಾಲಿನ ಮೇವನು.
ಕವಣೆ ತಿರಿ ಕಲ್ಲಾಟ ಹಗ್ಗಕೆ ಸೆಳೆದರೋ ಹೆಬ್ಬಾವನು,
ಸವರಿ ಆನೆಯ ಸೊಂಡಿಲಲಿ ರಣ ಕೊಂಬನಾರ್ ಭೋರ್ಗರೆದರೊ
ಸವದು ಸವೆಯದ ಸಾಹಸತ್ವದ ಕ್ಷಾತ್ರಬೇಟೆಯ ಮೆರೆದರೊ,
ಅವರೆ ಸೋಲ್ ಸಾವರಿಯರು !
ಅವರೆ ಕಡುಗಲಿ ಗರಿಯರು !
ಅವರೆ ಕೊಡಗಿನ ಹಿರಿಯರು !

ಇದರ ಲಯದಿಂದಲೇ ಮೈರಕ್ತವೂ ಕುಣಿಯುತ್ತದೆ. ಇಲ್ಲಿಯ ಸರಳವಾದ ಅಚ್ಚಗನ್ನಡ ಪ್ರಯೋಗ, ಹಳೆಯ ರೂಪಕ್ಕೆ ಹೊಸ ಲಯಗಳ ಸಂಚಾರದಿಂದ ಬಂದ ಹೊಸತನ ಇವುಗಳು ಈ ಕೃತಿಯನ್ನು ಪಂಜೆಯವರ ಅತಿ ಜನಪ್ರಿಯ ಗೀತವನ್ನಾಗಿಸಿವೆ. ಆದಿಪ್ರಾಸದ ಜತೆಗೆ ಅಂತ್ಯಪ್ರಾಸವನ್ನೂ ಪಂಜೆಯವರು ಇಲ್ಲಿ ಬಳಸಿಕೊಂಡಿದ್ದಾರೆ. ಇದೂ ಈ ಕವಿತೆಯ ಯಶಸ್ಸಿಗೆ ಕಾರಣ.

ತೂಕಡಿಕೆಯನು ಕಳೆಯದೇಕೆ ಕುಳಿತಿಹೆ ಗೆಳೆಯ?
ಸಾಕು, ಸುತ್ತಲು ನೋಡು ಕಣ್ದೆರೆದು ನಿಂದು।
ಲೋಕದಲಿ ವಂದೆಮಾತರಮೆಂಬುದೊಂದೆ ಮಾ
ತೀ ಕಿವಿಯನೊಡೆಯುತಿರೆ ಉಚ್ಚಳಿಸಿ ಬಂದು ॥

೯ ಕನ್ನಡ ಮೊದಲನೆಯ ಪದ್ಯಪುಸ್ತಕ (೧೯೧೨), ಪು. ೭.

ಎಂದು ಆರಂಭವಾಗುವ ರಣಗವಿತೆ ನಮಗೆ ಉಳಿದುದು ಗೋವಿಂದ ಪೈಯವರು ಪಂಜೆಯವರಿಂದ ಅದನ್ನು ಹಾಡಿಸಿ, ಅವರಿಗೆ ತಿಳಿಯದಂತೆ, ಬಚ್ಚಿಟ್ಟುಕೊಂಡ ತಮ್ಮ ಗೆಳೆಯರಿಂದ ಪ್ರತಿಮಾಡಿಕೊಂಡುದರಿಂದ.[೧೦] ಈ ಕವಿತೆ ಪಂಜೆಯವರ ಕೃತಿಗಳಲ್ಲೆಲ್ಲ ಸರ್ವೋತ್ತಮವಾದುದೆಂದು ಪೈಯವರ ಅಭಿಪ್ರಾಯ: ''ಅದನ್ನು ಕೇಳಿ ಮೆಚ್ಚಬೇಕು, ಮೆಚ್ಚಿ ಕೇಳಬೇಕು. ಅದನ್ನು ಕೇಳಿದಾತನ, ಅದನ್ನು ಓದಿದಾತನ ಮನಸ್ಸು ತನಗೆ ತಾನೇ ಒಂದು ಒರೆಯಾಗುತ್ತದೆ. ಅದರಿಂದ ಉಕ್ಕುವ ರಣ ಸ್ಫೂರ್ತಿ, ಮೆಯ್ತುಂಬುವ ಆ ರಣಾವೇಶ, ಅವೇ ಆತನ ಮಸೆಗತ್ತಿಯಾಗುತ್ತವೆ.''[೧೧] ಬದುಕಿಗೇ ಒಂದು ಸ್ಫೂರ್ತಿ ನೀಡಬಲ್ಲುದು ಈ ಕವಿತೆ.

ಪಂಜೆಯವರು ಈ ಸ್ವತಂತ್ರ ಕವಿತೆಗಳಲ್ಲೆಲ್ಲಾ ನಾವು ಹೊಸ ವಸ್ತುವಿನ ಪ್ರವೇಶವನ್ನೂ, ಹೊಸ ಭಾವದ ಆವಿಷ್ಕಾರವನ್ನೂ, ಹೊಸ ಹೊಸ ಉಪಮೆಗಳನ್ನೂ ('ಜೋಗುಳ', 'ಹಾವಿನ ಹಾಡು', 'ಹುತ್ತರಿ ಹಾಡು' ಇವುಗಳಲ್ಲಿ) ಮತ್ತು ಭಾಷೆಯ ಸರಳತೆಯನ್ನೂ ಕಾಣುತ್ತೇವೆ. ರೂಪ ಮಾತ್ರ ಹಳೆಯದಾದರೂ ಆತ್ಮ ಹೊಸದು.

ಪಂಜೆಯವರ ಇಂಗ್ಲಿಷಿನಿಂದ ಅನುವಾದಿಸಿದ ಕವನಗಳೂ, ಇಂಗ್ಲಿಷ್ ಕವಿತೆಗಳಿಂದ ಸ್ಫೂರ್ತಿಗೊಂಡು ಅವುಗಳ ಆಧಾರದ ಮೇಲೆ ಬರೆದ ಕವಿತೆಗಳೂ ರಮ್ಯವಾಗಿವೆ. ಇಂತಹವುಗಳಲ್ಲಿ 'Frolic in the wind' ಕವಿತೆಯ ರೂಪಾಂತರವಾದ 'ತೆಂಕಣ ಗಾಳಿಯಾಟ' ಬಹಳ ಸುಂದರವಾಗಿದೆ.

''ಬರಲಿದೆ ! ಅಹಹಾ ! ದೂರದಿ ಬರಲಿದೆ-
ಬುಸುಗುಟ್ಟುವ ಪಾತಾಳದ ಹಾವೊ ?
ಹಸಿವಿನ ಭೂತವು ಕೂಯುವ ಕೂವೊ ?
ಹೊಸತಿದು ಕಾಲನ ಕೋಣನ-ಓವೊ !
ಉಸಿರಿನ ಸುಯ್ಯೋ?- ಸೂಸೂಕರಿಸುತ,
ಬರುವುದು! ಬರಬರ ಭರದಲಿ ಬರುವುದು-''[೧೨] ॥೧॥

ರಗಳೆಯ ಪ್ರಭೇದದಲ್ಲಿರುವ ಈ ಕವಿತೆಯಲ್ಲಿ ಸರಳತೆ ಚೆನ್ನಾಗಿ ಕಾಣುತ್ತದೆ. ಪಂಜೆಯವರೂ 'Twinkle, twinkle, little star' ಎಂಬುದನ್ನು 'ನಕ್ಷತ್ರ' ಎಂದು ಕನ್ನಡಿಸಿದ್ದಾರೆ. ಎಸ್. ಜಿ. ನ. ಅವರ 'ಮಿರುಮಿರುಗುವೆ, ಹಾ ಕಿರುತಾರಗೆಯೆ' ಎಂದು ಆರಂಭವಾಗುವ ಅನುವಾದದೊಂದಿಗೆ ಇದನ್ನು ಹೋಲಿಸಿದರೆ, ಇವರಿಬ್ಬರ ಕಾರ್ಯದ ಸಾಮ್ಯ ಕಾಣುತ್ತದೆ. ಪಂಜೆಯವರ ಕವಿತೆಯ ಆರಂಭ :

'ಮಿನುಗೆಲೆ ಮಿನುಗೆಲೆ ನಕ್ಷತ್ರ !
ನನಗಿದು ಚೋದ್ಯವು ಬಹುಚಿತ್ರ
ಘನಗಗನದಿ ಬಲು ದೂರದಲಿ
ಮಿನುಗುವೆ ವಜ್ರಾಕಾರದಲಿ'[೧೩] ॥

೧೦ 'ಶ್ರೀ ಪಂಜೆಯವರ ನೆನಪಿಗಾಗಿ', ಪು. ೧೦೨.
೧೧ ಅದೇ, ಪು. ೧೦೩.
೧೨ 'ಕನ್ನಡ ಎರಡನೆಯ ಪದ್ಯ ಪುಸ್ತಕ' (೧೯೧೯), ಪು. ೨೭.
೧೩ 'ಕನ್ನಡ ಮೊದಲನೆಯ ಪದ್ಯ ಪುಸ್ತಕ' (೧೯೧೨), ಪು. ೧೦.

ಪಂಜೆಯವರಿಗಿಂತ ಎಸ್. ಜಿ. ನ. ಅವರಲ್ಲಿ ಹೊಸಗನ್ನಡದ ಪ್ರಯೋಗ ಒಡೆದು ಕಾಣಬಹುದು. ಆದರೆ ಪಂಜೆಯವರ ಕವಿತೆಯಲ್ಲಿ ಮೂಲಕ್ಕೆ ಸಾಮೀಪ್ಯ ಹೆಚ್ಚಾಗಿದೆ. ''ಧರಗಿಳಿಯದೆ ನೀನಿರುತಿಹೆ ದೂರದಿ ನೆರೆಹೊಳೆಯುವ ವಜ್ರದ ತೆರದಿ'' ಎಂಬುದು 'Up above the world so high, like a diamond in the sky' ಎಂಬುದರ ಪದಶಃ ಭಾಷಾಂತರವಲ್ಲ. 'ಘನಗಗನದಿ ಬಲು ದೂರದಲಿ ಮಿನುಗುವೆ ವಜ್ರಾಕಾರದಲಿ' ಎನ್ನುವುದು ಮೂಲಕ್ಕೆ ಹತ್ತಿರವಾಗಿದೆ. ಎಸ್. ಜಿ. ನ. ಅವರಲ್ಲಿಯ ಪದಲಾಲಿತ್ಯ ಮತ್ತು ಸರಳತೆ ಪಂಜೆಯವರಲ್ಲಿಗಿಂತ ಹೆಚ್ಚು ಸಹಜತೆಯನ್ನು ಕವಿತೆಗೆ ತಂದುಕೊಟ್ಟಂತೆ ತೋರುತ್ತದೆ. 'ಅರಿಯೆನು ನಾನೆಲೆ ನೀನಾರೊ' ಎಂಬುದು 'ನನಗಿದು ಚೋದ್ಯವು ಬಹು ಚಿತ್ರ' ಎಂಬುದಕ್ಕಿಂತ ಮಾತಿನ ಭಾಷೆಗೆ ಹತ್ತಿರವಾಗಿ, ಹೆಚ್ಚು ಸಹಜವಾಗಿ ಕಾಣುತ್ತದೆ. ಪಂಜೆಯವರಲ್ಲಿ, ಮಕ್ಕಳು ಕುಣಿಯಲು ಅನುಕೂಲವಾಗಲೆಂದು ಅವರೇ ಕೂಡಿಸಿಕೊಂಡ ಅಂತ್ಯಪ್ರಾಸದ ಹೊಸ ನಿರ್ಬಂಧವೂ ಇದೆ; ಇದರಿಂದ ಹೆಚ್ಚು ಬಿಗುವು ಬಂದಿದೆ. ಎಸ್. ಜಿ. ನ. ಅವರೂ ಪಂಜೆಯವರೂ ಒಂದೇ ಕವಿತೆಯನ್ನಾರಿಸಿಕೊಂಡು, ಒಂದೇ ಉದ್ದೇಶದಿಂದ (ಮಕ್ಕಳಿಗಾಗಿ) ಅನುವಾದಿಸಿದುದು, ಇಬ್ಬರ ಅನುವಾದ ರೀತಿಯೂ ಹೆಚ್ಚುಕಡಿಮೆ ಒಂದೇ ಆಗಿರುವುದು ಇವುಗಳು ಆ ಕಾಲದ ಪ್ರತೀಕವೆನ್ನಬಹುದು.

ಪಂಜೆಯವರ ಅತ್ಯಂತ ಪ್ರಸಿದ್ಧವಾದ ಕವಿತೆ 'ಅಣ್ಣನ ವಿಲಾಪ'. ಇದಕ್ಕೆ ಪ್ರೇರಣೆ ಇಂಗ್ಲಿಷಿನ ಕವಿತೆಯದು. [Mrs. F. Hemans; 'O call my brother back to me'] ಆದರೆ ಪಂಜೆಯವರ ಪ್ರೀತಿಯ ತಮ್ಮ ತೀರಿಹೋದಾಗಿನ ದುರ್ಭರ ವೇದನೆಯೇ ಈ ಕವಿತೆಗೆ ಸ್ಫೂರ್ತಿ. ಈ ಕವನಕ್ಕೆ ಕಾರಣ ತಮ್ಮ ಪ್ರೀತಿಯ ತಮ್ಮನ ಅಗಲಿಕೆಯೆಂಬುದನ್ನು ಪಂಜೆಯವರು ತಮ್ಮ ಸ್ನೇಹಿತರಿಗೆ ತಿಳಿಸಿದರಂತೆ.[೧೪] ಈ ಕವಿತೆಯಲ್ಲಿ ಕಾಣುವ ವಾತ್ಸಲ್ಯ, ಮಮತೆ, ಅನುತಾಪ ಇವುಗಳು ಅವರ ಬಾಳಿನಲ್ಲಿ ತುಂಬಿದ್ದ ದುಃಖದ ಚಿಲುಮೆಯಿಂದಲೇ ಉಕ್ಕಿ ಹರಿದುವೆಂಬುದರಲ್ಲಿ ಸಂದೇಹವೇ ಇಲ್ಲ. ಕವಿ ಪರರ ದುಃಖದ ಬಗ್ಗೆ ಅನುಕಂಪವನ್ನು ತೋರುತ್ತಾನೆ. ಆದರೆ ತನ್ನ ಸ್ವಂತ ದುಃಖವೂ ಅಂತೆಯೇ ಆದರೆ ಇನ್ನೂ ಎಷ್ಟು ಆಳವಾಗಿ ನೋವನ್ನು ಕವಿತೆಯಲ್ಲಿ ಮೂಡಿಸಬಲ್ಲ, ಜನರ ಹೃದಯವನ್ನು ಮುಟ್ಟಬಲ್ಲ ಎಂಬುದಕ್ಕೆ 'ಅಣ್ಣನ ವಿಲಾಪ' ಉತ್ತಮ ಉದಾಹರಣೆ. ಕೇಳುವವರ ಕರುಳು ಕೊಯ್ಯುವಂತಿರುವ ಈ ಪದ್ಯ ತಾಯಿಮಕ್ಕಳ ಸಂವಾದರೂಪದಲ್ಲಿದೆ. ಸೋದರ ಹೃದಯದ ಮಿಡಿತ, ತಾಯಿ ಕರುಳಿನ ತುಡಿತ, ಇವೆರಡೂ ಮರುಕದ ಹೊನಲು ಹರಿಸುವಂತೆ ಇಲ್ಲಿ ಚಿತ್ರಿತವಾಗಿವೆ.

ತೀರಿಕೊಂಡ ತಮ್ಮನು ''ಎಲ್ಲಿ ಹೋದನು, ಅಮ್ಮ ಪುಟ್ಟಣ್ಣನಮ್ಮಾ?'' ಎಂದು ತಾಯಿಯನ್ನು ಅಣ್ಣ ಕೇಳುತ್ತಾನೆ. ತಮ್ಮನು ಸತ್ತಾಗ ಅವನನ್ನು ಹೊತ್ತುಕೊಂಡು ಹೋದುದನ್ನು ತಾನು ಕಂಡುದಾಗಿ ಹೇಳಿ, ಅವನನ್ನು ಬಿಟ್ಟು ತಾನಿರಲಾರೆ, 'ಕೈಪರೆ ಹೊಡೆವುದೆಂತು' ಅವನಿಲ್ಲದ ಮೇಲೆ ಎಂದು ಗೋಳಾಡುತ್ತಾನೆ.

ನರಿಮೊಗರು ಜಾತ್ರೆಯಲಿ ನನ್ನನು ಕಂಡು,
ಅರರೆ ! ತಮ್ಮನನೇಕೆ ನಾನು ಕರಕೊಂಡು
ಬರಲಿಲ್ಲ ? ಎಂದಾ ಗೆಳೆಯರೆನ್ನ ಕೇಳೆ,
ಮರುಮಾತು ನಾನೇನು ಕೊಡಲಮ್ಮ ನಾಳೆ ?

೧೪ 'ಶ್ರೀ ಪಂಜೆಯವರ ನೆನಪಿಗಾಗಿ', ಪು. ೭೩

ಒಬ್ಬನೇ ತಿನಿಸುಣಿಸು ಬೇಡಲಾರೆ
ಇಬ್ಬರಿಲ್ಲದೆ ಈಗ ನಾನಾಡಲಾರೆ

ಎಂದು ತನ್ನ ದುಃಖವನ್ನು ತೋಡಿಕೊಳ್ಳುತ್ತಾನೆ.[೧೫] ಕೊನೆಗೆ ತಾನೇ ತಮ್ಮನ ಬಳಿಗೆ ಹೋಗುತ್ತೇನೆ ಎಂದಾಗ ತಾಯಿಯ ಈ ತನಕದ ಮೌನದ ಕಟ್ಟೆಯೊಡೆದು ದುಃಖ ಹರಿಯುತ್ತದೆ. ಕಣ್ಣೀರುಗರೆಯುತ್ತಾ ಅವನನ್ನು ಮುದ್ದಿಸಿ:

ಚೆಂದು ಕೇಳ್ ದಾರಿಯಲಿ ನಾ ಪೋಪೆ ಮುಂದೆ
ಬಂದಪನು ಬಳಿಕ ನಿನ್ನಯ ಮುದ್ದು ತಂದೆ
ಮಂದಿ ಮಕ್ಕಳು ಪಡೆದು ಬಾ ನೀನು ಹಿಂದೆ
ಎಂದವನ ಬಾಯಿ ಜಿಗಿದಳು ಮುತ್ತಿನಿಂದೆ. ॥

ಈ ಪದ್ಯವು 'ಭಾರತೀಯ ತಾಯಂದಿರ ಹೃಚ್ಛ್ರಯವಾದ ಹೆಬ್ಬಯಕೆಯನ್ನು ಎಷ್ಟು ಯಥಾವತ್ತಾಗಿ ಬಿಂಬಿಸುತ್ತದೆ!' ಎಂದು ಗೋವಿಂದ ಪೈಯವರು ಹೇಳಿದುದು ಸರಿ.[೧೬]

ಪಂಜೆಯವರು ಎಷ್ಟೋ ಅನುವಾದಗಳನ್ನು ಮಾಡಿದರು, ಸ್ವತಂತ್ರ ಕವನಗಳನ್ನೂ ರಚಿಸಿದರು. ಪದ್ಯಪುಸ್ತಕಗಳನ್ನು ಸಂಪಾದಿಸಿದರು. ಎಲ್ಲರಿಗೂ ಹೊಸಗನ್ನಡ ಕವಿತೆಯ ಹಾದಿ ತಿಳಿಯಲೆಂದು ತಾವು ಈ ಕೆಲಸ ಕೈಗೊಂಡುದಾಗಿ ಅವರೇ ಹೇಳಿದಾರೆ. ತಮ್ಮ ಕವಿತೆಗಳಲ್ಲಿ ಅವರು ಸಂಪ್ರದಾಯಗಳನ್ನು ಸಂಪೂರ್ಣವಾಗಿ ಬಿಡಲಿಲ್ಲ. ಹೊಸರೂಪಗಳನ್ನು ಸೃಷ್ಟಿಸಿಕೊಳ್ಳಲಿಲ್ಲ. ಆದಿಪ್ರಾಸವನ್ನು ತೊರೆಯಲಿಲ್ಲ. ಆದರೆ ಹೊಸ ಕವಿತೆಯ ಎಲ್ಲ ರೀತಿಗಳನ್ನೂ ಅವರು 'ಕನ್ನಡ ಮೂರನೆಯ ಪದ್ಯಪುಸ್ತಕ' (೧೯೨೭)ದಲ್ಲಿ ಸೇರಿಸಿದರು. ''ಶ್ರೀ''ಯವರ 'ಇಂಗ್ಲಿಷ್ ಗೀತ'ಗಳಿಂದಲೂ ಪ್ರಾಸವಿಲ್ಲದ ಕೆಲವು ಪದ್ಯಗಳನ್ನು ತೆಗೆದುಕೊಂಡು ಇದರಲ್ಲಿ ಕೂಡಿಸಿದಾರೆ. ಮುಕ್ತಛಂದದ ಹುಚ್ಚೇಶ್ವರ ಮುದ್ಗಲರ ಒಂದು ಕವಿತೆಯೂ, ಸರಳರಗಳೆಯಲ್ಲಿರುವ ಮಾಸ್ತಿಯವರ 'ಮದಲಿಂಗನ ಕಣಿವೆ'ಯೂ ಈ ಪುಸ್ತಕದಲ್ಲಿ ಸೇರಿವೆ. ಶ್ರೀ ಮಂಜೇಶ್ವರದ ಗೋವಿಂದ ಪೈಯವರು ನನಗೆ ಎರವಲು ಕೊಟ್ಟಿರುವ ತಮ್ಮ ಸ್ವಂತ ಪ್ರತಿಯಲ್ಲಿ ಮಾಸ್ತಿಯವರ 'ಮದಲಿಂಗನ ಕಣಿವೆ'ಯ ಪಕ್ಕದಲ್ಲಿ 'Note the metre which resembles the iambic pentametre of blank verse' ಎಂದು ಶಾಯಿಯಲ್ಲಿ ೧೯೨೭ರಲ್ಲಿ ಬರೆದಿದಾರೆ. ಹಾಗೆಯೇ ಶಾಂತಕವಿಗಳ 'ರಕ್ಷಿಸು ಕರ್ಣಾಟಕ ದೇವಿ'ಯ ಪಕ್ಕದಲ್ಲಿ 'No ಪ್ರಾಸ!!!' ಎಂದು ಬರೆದಿದಾರೆ. ಇದರ ಹಿನ್ನೆಲೆ ಪಂಜೆಯವರಿಗೂ ಪೈಯವರಿಗೂ ಪ್ರಾಸದ ಬಗ್ಗೆ ನಡೆದಿದ್ದ ಚರ್ಚೆ. ''ಅನೇಕ ಹೊಸ ಕವಿತೆಗಳ ಮೇಲಿನ ತಿರಸ್ಕಾರವು ಅವುಗಳ ಪ್ರಾಸಭಂಗದಿಂದ ಪ್ರಾರಂಭವಾಯಿತೆಂದು ನನ್ನ ಎಣಿಕೆ'' ಎಂದು ಪಂಜೆಯವರೇ ನುಡಿದಿರುವುದೂ,[೧೭] ಅವರ ಕವಿತೆಗಳಲ್ಲಿ ಸಾಧಾರಣವಾಗಿ ಆದಿಪ್ರಾಸ, ಅಂತ್ಯಪ್ರಾಸ, ಎರಡನ್ನೂ ಬಳಸಿರುವುದು ಇವುಗಳಿಂದಲೇ ಪಂಜೆಯವರು ಸಂಪ್ರದಾಯನಿಷ್ಠರೆಂಬುದು ಸ್ಪಷ್ಟವಾಗುತ್ತದೆ. ಆದರೆ ಇವರು ಹೊಸತನವನ್ನು ತಂದ ಹರಿಕಾರರೆಂದು ಒಪ್ಪಲೇಬೇಕು.

---

೧೫ 'ಅಣ್ಣನ ವಿಲಾಪ' ನುಡಿ ೧೦-೧೧.

೧೬ 'ಶ್ರೀ ಪಂಜೆಯವರ ನೆನಪಿಗಾಗಿ', ಪು. ೧೦೪.

೧೭ ಪಂಜೆ ಮಂಗೇಶರಾಯರು: 'ಕನ್ನಡದಲ್ಲಿ ಸುಧಾರಣೆಗಳು', (ರಾಯಚೂರು ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಭಾಷಣ), ಪು. ೧೫.

ಮಂಜೇಶ್ವರ ಗೋವಿಂದ ಪೈಯವರು ಪಂಜೆಯವರ ಹಿರಿಯ ಶಿಷ್ಯರು. ಇವರ ಪಾಂಡಿತ್ಯವೂ, ಕವನಶಕ್ತಿಯೂ ಅಗಾಧವಾದುವು. ಕನ್ನಡದಲ್ಲಿ ಮೊತ್ತಮೊದಲನೆಯ ಸಾನೆಟ್ಟನ್ನು ಬರೆದವರು ಇವರು. ಹಾಗೆಯೇ ಹೊಸಗನ್ನಡಕ್ಕೆ ಮೊದಮೊದಲಿಗೆ ಮಹಾಕಾವ್ಯ ಖಂಡವನ್ನು [Epic fragment] ಕೊಟ್ಟವರು ಇವರು. ಸರಳ ರಗಳೆಯಲ್ಲಿ ಇವರು ನಡೆಸಿದ ಪ್ರಯೋಗಗಳು ಮುಖ್ಯವಾದುವು. ಈ ಎಲ್ಲ ವಿಷಯಗಳನ್ನೂ ಬೇರೆ ಬೇರೆ ವಿಭಾಗಗಳಲ್ಲಿ ಚರ್ಚಿಸಲಾಗಿದೆ.[೧೮] ಪೈಯವರು ನಡೆಸಿದ ಪ್ರಾಸತ್ಯಾಗದ ಮಹಾಕ್ರಾಂತಿಯನ್ನು ಈಗಾಗಲೇ ನೋಡಿದ್ದೇವೆ.[೧೯] ಇಲ್ಲಿ ಅವರ ಸಾಧನೆಯ ವಿಸ್ತಾರ ಚರ್ಚೆಯ ಅಗತ್ಯವಿಲ್ಲದುದರಿಂದ, ಪ್ರಾಸತ್ಯಾಗದ ಮಹಾಕ್ರಾಂತಿಯೇ ಅವರ ಹಿರಿಯ ಸಾಧನೆಯೆಂದಷ್ಟು ಸೂಚಿಸಬಹುದು. ಪೈಯವರು ಪಂಜೆಯವರಿಗಿಂತಲೂ ಬಹಳ ಮುಂದೆ ನಡೆದರು, ಹೊಸ ರೂಪಗಳನ್ನು ಸೃಷ್ಟಿಸಿಕೊಂಡು ಪರಿಣತಿಯಿಂದ ಬಳಸಿಕೊಂಡರು. ಕನ್ನಡದ ಹಿರಿಯ ತಲೆಯಾಗಿರುವರು.

ಮುಂಬೆಳಗಿನ ಕವಿಗಳಲ್ಲಿ ಮತ್ತೊಬ್ಬ ಹಿರಿಯರು ಹಟ್ಟಂಗಡಿ ನಾರಾಯಣರಾಯರು. ಇವರು ಮಂಗಳೂರಿನ ಹತ್ತಿರದ ಹಟ್ಟಂಗಡಿ ('ಹಟ್ಟಿಯಂಗಡಿ' ಎಂದೂ ಕರೆಯುವ ರೂಢಿ ಅಲ್ಲಲ್ಲಿದೆ)ಯವರು. ಮುಂಬಯಿಯಲ್ಲಿ ವಾಸಮಾಡುತ್ತಿದ್ದ ಇವರು ೧೯೨೧ರ ಮೇ ೨೧ರಂದು ತೀರಿಕೊಂಡರು. ವಾಗ್ಭೂಷಣ, ಶ್ರೀ ಕೃಷ್ಣಸೂಕ್ತಿ, ಪರಿಷತ್ಪತ್ರಿಕೆ ಇವೇ ಮೊದಲಾದ ಪತ್ರಿಕೆಗಳಿಗೆ ಇವರು ಲೇಖನಗಳನ್ನು ಕಳುಹಿಸುತ್ತಿದ್ದರು. ಇವರ 'ಆಂಗ್ಲಕವಿತಾಸಾರ' ಸಂಪೂರ್ಣವಾಗಿ ಇಂಗ್ಲಿಷ್ ಅನುವಾದಕ್ಕೆ ಮೀಸಲಾದ ಮೊತ್ತಮೊದಲನೆಯ ಕನ್ನಡ ಕವಿತಾಸಂಕಲನ. ಇದು ಪ್ರಕಟವಾದ ವರ್ಷ ತಿಳಿಯದು. ಆದರೆ ನಾರಾಯಣರಾಯರು ಅನುವಾದ ಮಾಡುತ್ತಿದ್ದ ವಿಷಯವನ್ನು ಗೋವಿಂದ ಪೈಯವರು ೧೮೯೯ರಲ್ಲಿಯೇ ಪಂಜೆಯವರಿಂದ ಕೇಳಿದ್ದರಂತೆ. ಅಂತೂ ಈ ಕವನಗಳು ಬಹುಕಾಲ ಬೆಳಕಿಗೆ ಬರಲಿಲ್ಲ. ೧೯೧೯ರ ಜನವರಿಯ ಪರಿಷತ್ಪತ್ರಿಕೆಯಲ್ಲಿ ಪ್ರಕಟವಾದ 'ಕವಿತಾವರ್ಧನ' ಎಂಬ ತಮ್ಮ ಲೇಖನದಲ್ಲಿ ನಾರಾಯಣರಾಯರು ಎರಡು ಅನುವಾದಿತ ಪದ್ಯಗಳನ್ನು ಉದಾಹರಿಸಿದಾರೆ. 'ಕರುಣೆ' ಎಂಬ ಪದ್ಯವನ್ನು ಪಂಜೆಯವರು 'ಎರಡನೆಯ ಪದ್ಯಪುಸ್ತಕ'ದಲ್ಲಿ (೧೯೧೯) ಸೇರಿಸಿಕೊಂಡವರು 'ಹ. ನಾರಾಯಣರಾಯರು' ಎಂದು ಲೇಖಕರ ಹೆಸರನ್ನು ಮಾತ್ರ ಸೂಚಿಸಿದಾರೆ. ಆದರೆ 'ಮೂರನೆಯ ಪದ್ಯಪುಸ್ತಕ'ದಲ್ಲಿ (೧೯೨೭) 'ಆಂಗ್ಲ ಕವಿತಾಸಾರ' ದಿಂದ ಎಂದೂ ಸ್ಪಷ್ಟವಾಗಿ ಹೇಳಿದಾರೆ. ಆದ್ದರಿಂದ ಈ ಅನುವಾದಗಳ ಪುಸ್ತಕ ೧೯೧೯ರ ನಂತರ ಪ್ರಕಟವಾಗಿರಬಹುದೆಂದು ಊಹಿಸಬಹುದು.

ಹಟ್ಟಂಗಡಿ ನಾರಾಯಣರಾಯರು ಕನ್ನಡ ಕವಿತೆ ಬೆಳೆಯಬೇಕಾದ ದಾರಿಯನ್ನು ಕುರಿತು ತೀವ್ರವಾಗಿ ಯೋಚಿಸಿದ್ದರು. ಛಂದಸ್ಸಿನಲ್ಲಿ ಹೊಸ ಮಾದರಿ, ವಸ್ತು, ರೂಪ, ಶೈಲಿ, ಭಾಷೆ ಇವುಗಳಲ್ಲಿಯೂ ಹೊಸತನ ಬರುವುದೆಂಬುದನ್ನು ಅವರು ಗುರುತಿಸಿದ್ದರು. ೧೯೧೮ರ ಸಾಹಿತ್ಯ ಸಮ್ಮೇಳನಕ್ಕೆ 'ಕನ್ನಡ ಕವಿತೆಯ ಭವಿತವ್ಯ'ದ ಮೇಲೆ ನಾಲ್ಕು ಮಾತುಗಳನ್ನು ಬರೆದು ಕಳಿಸಿದ್ದರು. ಆ ಭಾಷಣ ನಮಗೆ ದೊರೆಯದಿದ್ದರೂ ಅದರ ಸಾರಾಂಶ ೧೯೧೮ರ ಏಪ್ರಿಲ್ ತಿಂಗಳಿನ ಪರಿಷತ್ಪತ್ರಿಕೆಯಲ್ಲಿ ಅಚ್ಚಾಗಿ ಸಿಗುತ್ತದೆ. ''ಇಂಗ್ಲಿಷ್ ಮಾರ್ಗಗಳ

---

೧೮ 'ಸಾನೆಟ್', 'ಸರಳ ರಗಳೆ', 'ಮಹಾಕಾವ್ಯ ಮತ್ತು ಮಹಾಕಾವ್ಯ ಖಂಡಗಳು' ಮುಂತಾದ ಅಧ್ಯಾಯಗಳಲ್ಲಿ.

೧೯ 'ಮುಂಬೆಳಗು ೧-ಆಗಿನ ಸಮಸ್ಯೆಗಳು' ಅಧ್ಯಾಯದಲ್ಲಿ.

ಅನುಸರಣದಿಂದ....ಕವಿಗಳು ಪಾರಮಾರ್ಥಿಕ ವಿಷಯಗಳಿಗಿಂತ ರಾಷ್ಟ್ರೀಯ, ಸಾಮಾಜಿಕ, ಚಾರಿತ್ರಿಕ ಮುಂತಾದ ಲೌಕಿಕ ಪ್ರಮೇಯಗಳಿಗೆ ಹೆಚ್ಚು ಗಮನ ಕೊಡುವರೆಂದೂ ; ದೀರ್ಘ ಪುರಾಣಗಳ ಬದಲಾಗಿ ಲಘುಕೃತಿಗಳನ್ನು ರಚಿಸುವರೆಂದೂ, ಛಂದಸ್ಸಿನಲ್ಲಿ ಹೊಸ ಮಾದರಿಗಳನ್ನು ಕಲ್ಪಿಸಬಹುದೆಂದೂ; ಅಲಂಕಾರದಲ್ಲಿ ಅಚೇತನ ಪದಾರ್ಥಗಳಿಗೆ ವಾಕ್‌ಶಕ್ತಿಯನ್ನೂ, ಮಾನಸಿಕ ಭಾವಗಳಿಗೆ ಮೂರ್ತಿತ್ತ್ವವನ್ನು ಆರೋಪಿಸುವ ಉತ್ಪ್ರೇಕ್ಷೆಯು ರೂಢಿಯಾಗಬಹುದೆಂದೂ; ಹಳಗನ್ನಡಕ್ಕಿಂತ ನಡುಗನ್ನಡವನ್ನೇ ಹೆಚ್ಚಾಗಿ ಪ್ರಯೋಗಿಸುವರೆಂದೂ'' ಆ ಭಾಷಣದಲ್ಲಿ ಸೂಚಿಸಿದ್ದರು. ಉದಾಹರಣೆಯಾಗಿ ಮಿಲ್ಟನ್ ಮತ್ತು ಷೆಲ್ಲಿ ಇವರಿಂದ ಕೆಲವು ಕಾವ್ಯಭಾಗಗಳನ್ನು ಅನುವಾದಿಸಿದ್ದುದು, ಈ ಭಾಷಣದ ಸಾರಾಂಶದಲ್ಲಿ ಅಚ್ಚಾಗಿವೆ.[೨೦] ಅವರ 'ಆಂಗ್ಲಕವಿತಾಸಾರ'ದ ಅರಿಕೆಯಲ್ಲಿ ಈ ವಾಕ್ಯಗಳಿವೆ: ''ಈ ಪದ್ಯಗಳಲ್ಲಿ ಆಂಗ್ಲರ ಕೆಲವು ಪ್ರಸಿದ್ಧ ಕೃತಿಗಳನ್ನು ಅನುವಾದಿಸಿ ಹಾಕಿದೆ. ಯುಕ್ತವಾಗಿ ಕಂಡಂತೆ ಅಲ್ಲಲ್ಲಿ ಕೆಲವು ಅಂಶಗಳನ್ನು ಲೋಪಿಸಿ ಇನ್ನು ಕೆಲವನ್ನು ಬದಲಿಸಿದೆ. ಕನ್ನಡದ ಛಂದಸ್ಸಿನಲ್ಲಿ ಪೂರ್ವಿಕರು ಆಗಾಗ್ಗೆ ನೂತನ ರೀತಿಗಳನ್ನು ಹುಟ್ಟಿಸಿದರು. ಈಗಲೂ ಹೊಸ ಮಾರ್ಗಗಳನ್ನೇಕೆ ತೆರೆಯಬಾರದೆಂದು ಸರಳಕಾವ್ಯಪ್ರಿಯರು ಕೇಳುತ್ತಾರೆ. ಈ ಪದ್ಯಗಳಲ್ಲಿ ಪ್ರಾಸವನ್ನು ತೊರೆಯದಿದ್ದರೂ, ಪೂರ್ವಕವಿಗಳ ನಿಯಮಗಳನ್ನು ಸೂಕ್ಷ್ಮವಾಗಿ ಅನುಸರಿಸಿಲ್ಲ. ಆದಕಾರಣ ವೃತ್ತಗಳಿಗೆ ಹೆಸರು ಹಾಕಿಲ್ಲ. ಬೇಕಾದರೆ ಶಿಥಿಲ ಕಂದ, ಶಿಥಿಲ ರಗಳೆ ಎಂಬಂತೆ ಹೆಸರುಗಳನ್ನು ನಿರ್ಮಿಸಬಹುದು.'' ಈ ಮಾತುಗಳಿಂದಲೇ ನಾರಾಯಣರಾಯರ ಹೊಸ ದೃಷ್ಟಿಯನ್ನು ನಾವು ಊಹಿಸಿಕೊಳ್ಳಲು ಸಾಧ್ಯ.

'ಆಂಗ್ಲ ಕವಿತಾಸಾರ'ದ ಕೆಲವು ಪದ್ಯಗಳನ್ನು ಈಗ ನೋಡಬಹುದು. ಎಸ್. ಜಿ. ಗೋವಿಂದರಾಜಯ್ಯಂಗಾರ್ಯರು ಅನುವಾದಿಸಿದ ಗ್ರೇ ಕವಿಯ 'ಎಲಿಜಿ'ಯನ್ನು ನಾರಾಯಣರಾಯರೂ ಅನುವಾದಿಸಿದಾರೆ. ಇಲ್ಲಿ ಸರಳತೆ ಸ್ಪಷ್ಟವಾಗಿ ಕಾಣುತ್ತದೆ.

ಅದೊ ಮಿಣಗುಟ್ಟುತ ಭೂಮಿಯ ರೂಪವು ನೋಟಕೆ ಮಸುಳುವುದು
ಆದಿರದೆ ವಾತಾವರಣವು ಗಭೀರ ಶಾಂತತೆ ತಳೆದಿಹುದು
ಇಲ್ಲೆನಲಾ ಝೇಂಕರಿಸುವ ಚೀರಿಕೆ ಸುತ್ತುತ ಹಾರುವುದು
ಎಲ್ಲಿಯೊ ಕುರಿಮಂದಿಗೆ ಕಿಂಕಿಣಿರವ ನಿದ್ದೆಯ ಬರಿಸುವುದು ॥

* * *

ಕೋಳಿಯ ತುತೂರಿ ಬೇಟೆಯ ಕೊಂಬಿನ ಮರುದನಿ ಘೋಷಿಸಲಿ
ಏಳರು ಹಾಸಿಗೆಯಿಂದಾ ಬಡವರು ಬರುವ ದಿವಸಗಳಲಿ ॥

* * *

ಸಂಜೆಯಲಪ್ಪನು ಬರುತಲೆ ಮಕ್ಕಳು ತೊದಲಾಡುವುದಿಲ್ಲ
ಅಂಜದೆ ಕೂಗುತ ಮಂಡಿಯ ಹತ್ತುತ ಮುದ್ದುಗೊಳುವುದಿಲ್ಲ
ಮರಳಿ ಮರಳಿ ಕುಡುಗೋಲಿನ ಕಡಿತಕೆ ಬೆಳೆಯ ಪಡೆದರವರು
ತಿರುಗಿ ತಿರುಗಿ ಜಿರುನೆಲವನು ನೇಗಿಲ ಸಾಲಿನಲೊಡೆದಿಹರು ॥

* * *

೨೦ ಹ. ನಾರಾಯಣರಾಯರು: 'ಕನ್ನಡ ಕವಿತೆಯ ಭವಿತವ್ಯ', 'ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ', ಸಂಪುಟ . ೩(ಏಪ್ರಿಲ್ ೧೯೧೮) ಪು. ೬೫-೬೮.

ಮಾನವದೃಷ್ಟಿಗೆ ಕಾಣದೆ ಕುಸುಮಗಳೆಷ್ಟೋ ಬೆಳೆಯುವುವು
ಕಾನನದಲಿ ರಂಜಿಸಿ ಪರಿಮಳವನು ಬರಿದೇ ಬೀರುವುವು ॥ [೨೧]

* * *

ಹಟ್ಟಂಗಡಿ ನಾರಾಯಣರಾಯರ 'ಆಂಗ್ಲ ಕವಿತಾಸಾರ'ವೂ ಕಾನನದ ಮಲ್ಲಿಗೆಯೇ ಆಗಿದೆ. ಇದರ ಪ್ರತಿಗಳು ಎಲ್ಲಿಯೂ ದೊರೆಯುವುದಿಲ್ಲ. ಅದರ ಒಂದೇ ಒಂದು ಪ್ರತಿ ತಮ್ಮ ಬಳಿಯಿರುವುದನ್ನು ಶ್ರೀ ಗೋವಿಂದ ಪೈ ಅವರು ಕೃಪೆಮಾಡಿ ಎರವಲು ಕೊಟ್ಟಿದ್ದರು. ''ಶ್ರೀ''ಯವರಿಗೆ ಪೂರ್ವದಲ್ಲಿ ಇಂಗ್ಲಿಷ್ ಕವಿತೆಗಳನ್ನು ಬಹು ಯಶಸ್ವಿಯಾಗಿ ಕನ್ನಡಕ್ಕೆ ತಂದ ನಾರಾಯಣರಾಯರ ಅನುವಾದಗಳಲ್ಲಿ ಇನ್ನು ಕೆಲವನ್ನು ಮುಂದೆ ಉದಾಹರಿಸಿದೆ. (ತೀ. ನಂ. ಶ್ರೀ.ಯವರು 'ಇಂಗ್ಲಿಷ್ ಗೀತಗಳ' ಪ್ರಸ್ತಾವನೆಯಲ್ಲಿ ಉದಾಹರಿಸಿರುವ ಕವಿತೆಗಳು ಮತ್ತು ಪರಿಷತ್ಪತ್ರಿಕೆಯಲ್ಲಿ ಬಂದ ಕವಿತೆಗಳು, ಇವುಗಳಲ್ಲದೆ ಬೇರೆಯವು.) ಮೂಲ ಕವಿತೆಯ ಭಾವಕ್ಕೆ ಹೆಚ್ಚು ಕುಂದು ಬಾರದಂತೆ ನಾರಾಯಣರಾಯರು ಅನುವಾದಗಳನ್ನು ಮಾಡಿದಾರೆ. ಆದರೆ ಮೂಲದ ಛಂದಸ್ಸು ಯಾವುದೇ ಇದ್ದರೂ ಇವರು ರಗಳೆ, ಚೌಪದಿ ಮತ್ತು ಆದಿಪ್ರಾಸಗಳ ಕಟ್ಟನ್ನು ಮೀರಿಲ್ಲ.

ಅರಿತವಗೆ ಸಂಕಷ್ಟ ಸುಖಲಾಭದವಕಾಶ
ದೊರೆಯುವುದು ಮಣಿ ಫಣಿಯ ಶಿರಸಿನಲ್ಲಿ
ಮರಗಳಲಿ ಮಾತವನಿಗುಪಲಗಳಲುಪದೇಶ
ಒರತೆಗಳಲೋದು ಶುಭ ನೋಡಿದಲ್ಲಿ ॥ ಪು. ೩ (ಷೇಕ್ಸ್ಪಿಯರ್)

* * *

ಸುರಪತಿ ಸಿಡಿಲಿನಿಂದ ಹೆಮ್ಮರಗಳನು ಸೀಳಿ
ಕಿರಿಯ ಗಿಡಗಳನುಳಿಸಿ ಕರುಣಿಸುವನು
ನರನಲ್ಪ ಪದವಿಯಲಿ ಮಂಡಿಸಲು ಹೆಕ್ಕಳಿಸಿ
ಸುರರೆದುರೆ ಮಂಗಾಟವಾಡುತಿಹನು ॥ ಪು. ೩ (ಷೇಕ್ಸ್ಪಿಯರ್)

* * *

ತೊಲಗು ಚಿಂತೆಯ ವಿಕಟಗುಹೆಯೊಂದು ನಿನಗಿರಲಿ
ಗಲಪಿರದೆ ಬಲಿದ ಕತ್ತಲೆ ಅಲ್ಲಿ ಕವಿದಿರಲಿ
ತೊಂಗಿದರೆ-ಗಲ್ಲುಗಳ ಮರೆಗೆ ಬೇಗನೆ ಹಾರು
ತಿಂಗಳಿಗೆ ಹಿಂಗಿ ಮಬ್ಬಿಗ ಗೂಗೆಗಳ ಸೇರು ॥ ಪು. ೪ (ಮಿಲ್ಟನ್)

* * *

ನೋಡಿ ಹೊಲದಲಿ ಹೊರೆಗಳ ಗೈಯುವರ ಹಾಡು
ಈಡಿಲ್ಲದೀ ಪರಿಯ ಬಿನದಗಳ ಬರಮಾಡು ॥
ನೆರೆಯ ಗುಡಿಲಿನ ಮೇಲೆ ಸುಳಿಯುತಿಹ ಬಿಳಿಯ ಹೊಗೆ
ಹೊರಗೆ ದಿಂಕಿಡುವ ಕಿರಿಹಸುಳೆಗಳ ಸಪಿಯ ನಗೆ ॥ ಪು. ೫ (ಮಿಲ್ಟನ್)

* * *

೨೧ ಹ. ನಾರಾಯಣರಾಯರು: 'ಆಂಗ್ಲಕವಿತಾಸಾರ' (ಸುಮಾರು ೧೯೨೦), ಪು. ೧೧-೧೩.

ಅಪಮಾನವ ಸುಮ್ಮನೆ ತರಪರಿಸುತ ಅಪಹರಿಸಿದುದನು ಬಿಟ್ಟುಕೊಡುವೆಯಾ
ಬೆದರಿಸಿದರೆ ಹೃದಯದಲನುಮತಿಸುತ ತದಕಲು ತಪ್ಪಿಗೆ ತಲೆದೂಗುವೆಯಾ ॥
ಪು. ೧೪ (ಜಾನ್ ಟೈಲರ್)

* * *

ಬೆಂಗದಿರನ ಬಿತ್ತರಿಗೆಗೆ ಮಿಸುನಿಯ
ಇಂಗದಿರಗೆ ಮುತ್ತಿನ ಗುಡಿ ಕಟ್ಟುವೆ
ಮರುತನು ಹಾರಿಸಲೆನ್ನಯ ಪತಾಕೆಯ
ಗಿರಿಗಳನಡಗಿಸಿ ಭಗಣವನಟ್ಟುವೆ ॥ ಪು. ೧೫ (ಷೆಲ್ಲಿ)

* * *

ಬದುಕು ಬರಿ ಕನಸೆಂದು ಮರುಗುವುದು ಸರಿಯಲ್ಲ
ಅದಕೆ ನಿದ್ರೆಯೆ ಮೃತ್ಯು ತೋರುವಂತಿರವಿಲ್ಲ
ಬದುಕು ನಿಜ ಠಕ್ಕಲ್ಲ ಮಸಣ ಮುಗಿಸುವದಲ್ಲ
ಅದು ಜೀತ ಮಣ್ಣ ಸೇರುವುದೆಂಬುದಲ್ಲ ॥ ಪು. ೧೮-೧೯ (ಲಾಂಗ್‌ಫೆಲೊ)''

ವ್ಹಿಟ್ಟಿಯರ್ (Whittier), ಕೀಟ್ಸ್ (Keats), ಕಾಲಿನ್ಸ್ (Collins), ವರ್ಡ್ಸ್‌ವರ್ತ್ (Wordsworth) ಮುಂತಾದ ಕವಿಗಳ ಕವಿತೆಗಳ ಅನುವಾದಗಳೂ 'ಆಂಗ್ಲ ಕವಿತಾಸಾರ''ದಲ್ಲಿವೆ. ಈ ಎಲ್ಲ ಅನುವಾದಗಳೂ ನಾರಾಯಣರಾಯರ ಅನುವಾದ ಸಿದ್ಧಿಯನ್ನು ತೋರುತ್ತವೆ. ಕಾಲನಿಷ್ಠೆಯಂತೆ ಸಂಪ್ರದಾಯಬದ್ಧ ರೂಪಗಳೇ ಕಾಣಬಹುದು. ಅಲ್ಲಲ್ಲಿ ಅಲ್ಪ ಸ್ವಲ್ಪ ಬದಲಾವಣೆಗಳನ್ನು ಮಾಡಿಕೊಂಡಿರುವರೆಂಬುದೂ ನಿಜ. ಅವರ ನುಡಿಗಟ್ಟನಲ್ಲಿ ಲಾಲಿತ್ಯ, ಸರಳತೆ ಇವುಗಳು ತುಂಬಿವೆ. ಹೊಸಗನ್ನಡದ ಮತ್ತು ಇಂಪಾದ ಪುಟ್ಟ ಪುಟ್ಟ ನಡುಗನ್ನಡ ನುಡಿಗಳನ್ನುಪಯೋಗಿಸುವುದೇ ಇವರ ರೀತಿಯಾದರೂ, ಹಳೆಯ ಹೆಜ್ಜೆಯ ಗುರುತುಗಳಲ್ಲಿಯೇ ಅವರು ಹೆಜ್ಜೆಯಿಡಲು ಯತ್ನಿಸಿದ್ದಾರೆಂಬುದನ್ನು ಮರೆಯುವಂತಿಲ್ಲ. ಹೊಸಗನ್ನಡವನ್ನು ಕಾವ್ಯಕ್ಕೆ ಪಳಗಿಸುವ ಮುಂಬೆಳಗಿನ ಕವಿಗಳು, ಪಂಜೆಯವರು, ಗೋವಿಂದ ಪೈ ಅವರು, ಎಸ್.ಜಿ.ನ. ಅವರು, ಹಟ್ಟಂಗಡಿ ನಾರಾಯಣರಾಯರು ಮುಂತಾದವರು ತಮಗೆ ತಾವೇ ಹಾಕಿಕೊಂಡ ಆವರಣದಲ್ಲಿಯೇ ಆ ಕೆಲಸವನ್ನು ಮಾಡಿದರು. ಆಗ ಅವರೆಲ್ಲರೂ ಮಾಡಿದ ಕೆಲಸ ''ಶ್ರೀ''ಯವರ ಸಮಗ್ರ ಹೊಸತನಕ್ಕೆ ಪೋಷಕಶಕ್ತಿಯಾಗಿ ಬಂತು.

ಪಂಜೆಯವರು ತಮ್ಮ ಶಿಷ್ಯವರ್ಗದಲ್ಲಿ ಬಹುಮಂದಿಯನ್ನು ಹೊಸತನಕ್ಕೆ ಮುಡಿಪಾದ ಕವಿಗಳನ್ನಾಗಿಸಲಿಲ್ಲ. ಎಸ್.ಜಿ.ನ. ಅವರಂತೆಯೇ ಇವರ ಕಾರ್ಯವೂ ಇವರಲ್ಲಿಗೇ ಮುಗಿಯಿತೆಂಬ ಮಾತು ಅರ್ಧ ನಿಜ. ಪದ್ಯಪುಸ್ತಕಗಳಲ್ಲಿ ಅವರು ಸೇರಿಸಿರುವ ಕವಿಗಳಲ್ಲಿ ಎಂ.ಎನ್. ಕಾಮತ್, ಉಗ್ರಾಣ ಮಂಗೇಶರಾವ್, ಎಂ. ಅನಂತರಾವ್ ಇವರೇ ಮೊದಲಾದವರಿದಾರೆ. ಇವರ ಕಾರ್ಯದಲ್ಲಿ ಹೆಚ್ಚಾದ ಮುನ್ನಡೆ ಕಾಣುವುದಿಲ್ಲ. 'ಮೂರನೆಯ ಪದ್ಯಪುಸ್ತಕ'ದಲ್ಲಿ, 'ಕನ್ನಡ ಕೋಗಿಲೆ' ಮತ್ತು 'ಸುವಾಸಿನಿ' ಈ ಪತ್ರಿಕೆಗಳಲ್ಲಿ ಒಬ್ಬಿಬ್ಬ ಹೊಸ ಕವಿಯನ್ನು ಗುರುತಿಸಬಹುದು. ಇವರಲ್ಲಿ ಕೆಲವರ ಸಾಧನೆಯೂ ಸಿದ್ಧಿಯೂ ಪಂಜೆಯವರ ಸಾಧನೆಯಷ್ಟು ಇಲ್ಲವೆಂದು ಹೇಳಬಹುದು. ಆದರೆ ಕಡೆಂಗೋಡ್ಲು ಶಂಕರಭಟ್ಟ, ಪಾಂಡೇಶ್ವರ

ಗಣಪತಿರಾವ್ ಮುಂತಾದ ಒಬ್ಬರಿಬ್ಬರು ಮುಂದೆ ಹೆಸರಾದರು. ಪಂಜೆಯವರೂ, ಹಟ್ಟಂಗಡಿ ನಾರಾಯಣರಾಯರೂ ನಡೆಸಿದ ಕಾರ್ಯ ಬಹುಜನರ ಮೇಲೆ ಪ್ರಭಾವಬೀರಿ, ಕವಿಗಳನ್ನು ಸೃಷ್ಟಿಸಲಿಲ್ಲವೆಂಬುದು ನಿಶ್ಚಯ. ಆದರೂ ಇವರ ಕಾರ್ಯ ಮಂಗಳೂರಿನ ಕಡೆಯಲ್ಲಿ ಹೊಸ ಹಾದಿಯನ್ನು ಕಡಿದು ಸಿದ್ಧಮಾಡಿಕೊಟ್ಟಿತ್ತೆಂದು ನಿರ್ವಿವಾದವಾಗಿ ಹೇಳಬಹುದು.

*ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ, ೧೯೬೨, ಪು. ೬೦-೭೧*

# ೭೪. ದಕ್ಷಿಣಕನ್ನಡ ಜಿಲ್ಲೆಯ ೧೯೦೦-೧೯೩೦ರ ಮೂರು ಪತ್ರಿಕೆಗಳು

**● ಹಾ. ತಿ. ಕೃಷ್ಣೇಗೌಡ**

ಕಳೆದ ಶತಮಾನದಲ್ಲಿ ಆರಂಭವಾಗಿ ಈ ಶತಮಾನದ ಮೊದಲ ದಶಕದಲ್ಲಿಯೂ ಪ್ರಕಟಗೊಳ್ಳುತ್ತಿದ್ದ 'ಸತ್ಯದೀಪಿಕೆ'ಯೊಂದನ್ನು ಬಿಟ್ಟರೆ ಸುವಾಸಿನಿ, ಶ್ರೀ ಕೃಷ್ಣಸೂಕ್ತಿ, ಸ್ವದೇಶಾಭಿಮಾನಿ, ಬೋಧಿನಿ, ಆನಂದ, ಕನ್ನಡ ಕೋಗಿಲೆ, ಭಕ್ತಿಸಂದೇಶ, ತಿಲಕ ಸಂದೇಶ, ವಸಂತ, ಶಿಕ್ಷಣ, ಶಕ್ತಿ, ಕರ್ನಾಟಕ ಕೇಸರಿ, ಉದಯಚಂದ್ರ, ವೈದಿಕಮಿತ್ರ, ಜೈನಬಂಧು, ಸತ್ಯಾಗ್ರಹೀ, ಕನ್ನಡ ಸಹಕಾರಿ, ನವಯುಗ, ಉದಯ ಭಾರತ, ರಾಷ್ಟ್ರಬಂಧು, ಹಿತವಾದಿ, ಕ್ರೈಸ್ತ ಹಿತವಾದಿ–ಮುಂತಾದ ಅನೇಕ ಪತ್ರಿಕೆಗಳು ಈ ಕಾಲಾವಧಿಯಲ್ಲಿ ಪ್ರಕಟವಾಗಿವೆ. ಕಳೆದ ಶತಮಾನದಲ್ಲಿ ಪತ್ರಿಕೋದ್ಯಮ ರಂಗಕ್ಕೆ ಭದ್ರವಾದ ತಳಹದಿ ರೂಪಿತವಾಯಿತು. ಆ ತಳಹದಿಯ ಮೇಲೆ ಇಪ್ಪತ್ತನೆಯ ಶತಮಾನದಲ್ಲಿ ಪತ್ರಿಕೋದ್ಯಮದ ಚಟುವಟಿಕೆ ವೈವಿಧ್ಯಮಯವಾಗಿ ನಡೆಯಿತು. ಕಳೆದ ಶತಮಾನದಲ್ಲಿ ಮುಖ್ಯವಾಗಿ ಕ್ರೈಸ್ತ ಮಿಶನರಿಗಳು ಈ ರಂಗದ ಮುಂಚೂಣಿಯಲ್ಲಿದ್ದರೆ ಈ ಕಾಲಾವಧಿಯಲ್ಲಿ ದೇಶೀಯರು ಈ ರಂಗವನ್ನು ಅದಮ್ಯೋತ್ಸಾಹದಿಂದ ಪ್ರವೇಶಿಸಿದರು. ದಕ್ಷಿಣ ಕನ್ನಡ ಜಿಲ್ಲೆಯ ಸ್ವಾತಂತ್ರ್ಯ ಚಳವಳಿ, ಸಹಕಾರ ಚಳವಳಿಗಳು ಇಲ್ಲಿ ಪತ್ರಿಕೋದ್ಯಮ ವೈವಿಧ್ಯದಿಂದ ಬೆಳೆಯಲು ನೆರವಾದ ಇನ್ನೊಂದು ಸಂಗತಿಯಾಗಿದೆ. ನಮ್ಮ ಹೊಸಗನ್ನಡ ಸಾಹಿತ್ಯದ ಚಿಗುರುವಿಕೆ ಈ ಕಾಲಾವಧಿಯಲ್ಲಿ ಆರಂಭವಾಗಿ ಅನಂತರ ಅದು ಹೆಮ್ಮರವಾಗಿ ಸಹಸ್ರಮುಖವಾಗಿ ರೆಂಬೆಕೊಂಬೆಗಳನ್ನು ಚಾಚಿಕೊಂಡದ್ದನ್ನು ನಾವು ಕಾಣುತ್ತೇವೆ. ಸಂಸ್ಕೃತಿ, ವಿಚಾರ, ಸಾಹಿತ್ಯ ಎಂಬ ವಿಷಯಗಳು ಜೀವ ಪಡೆದುಕೊಂಡ ಕಾಲ ಇದೆನ್ನಬಹುದು. ಈ ಜೀವ ಪಡೆಯುವಿಕೆಗೆ ಪತ್ರಿಕೆಗಳು ಹೇಗೆ ನೆರವಾದವು, ಯಾವ ಬಗೆಯಲ್ಲಿ ಅವು ಸೇವೆ ಸಲ್ಲಿಸಿದವು ಎಂಬ ಮುಂತಾದ ವಿಷಯಗಳನ್ನು ಈ ಮುಂದೆ ಸಮೀಕ್ಷಿಸಲಾಗಿದೆ.

**ಸುವಾಸಿನಿ** ಎಂಬ ಮಾಸಪತ್ರಿಕೆ ಮಂಗಳೂರಿನಿಂದ ಪ್ರಕಟವಾಗುತ್ತಿತ್ತು. ಇದು ೧೯೦೦ ಜುಲೈ ೧ರಂದು ಆರಂಭವಾಯಿತು. ಬೋಳಾರ ವಿಠಲರಾವ್ ಎಂಬುವವರು ಈ ಪತ್ರಿಕೆಯ ವ್ಯವಸ್ಥಾಪಕರೂ, ಬೆನಗಲ್ ರಾಮರಾವ್, ಎಂ.ಎ. ಅವರು ಸಂಪಾದಕರೂ ಆಗಿದ್ದರು (ಆಗ ಇವರು ಮದರಾಸಿನ ಕ್ರಿಶ್ಚಿಯನ್ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದರು). ಪತ್ರಿಕೆಯು ಬಾಸೆಲ್ ಮಿಶನ್ ಪ್ರೆಸ್ಸಿನಲ್ಲಿ ಮುದ್ರಣಗೊಳ್ಳುತ್ತಿದ್ದು ವಾರ್ಷಿಕ ಚಂದಾಹಣ ಅಂಚೆ ಹಾಸಲು ಸೇರಿ ಎರಡು ರೂಪಾಯಿಗಳಿತ್ತು. ಬಿಡಿ ಸಂಚಿಕೆಯ ಬೆಲೆ ನಾಲ್ಕು ಆಣೆಗಳು. 'ವಿದ್ಯಾವರ್ಧನ, ತತ್ವಶಾಸ್ತ್ರ ಕಲಾಕೌಶಲ ಈ ವಿಷಯಗಳನ್ನು ವರ್ಣಿಸುವಂಥಾ ಮಾಸಿಕವಹಿ' ಎಂಬ ಘೋಷಣಾವಾಕ್ಯವನ್ನು ತಲೆಬರಹವಾಗಿ ಹೊಂದಿರುತ್ತಿದ್ದ ಈ ಪತ್ರಿಕೆಯು ಕಿರೀಟ ಚೌಪತ್ರ ಆಕಾರದಲ್ಲಿ (ಕ್ರೌನ್ ಕ್ವಾರ್ಟೊಸೈಜ್) ೧೬ ಪುಟಗಳಿಂದ ಕೂಡಿತ್ತು. ಪತ್ರಿಕೆಯ ಉದ್ದೇಶವನ್ನು ಸಂಪಾದಕರು ಮೊದಲ ಸಂಚಿಕೆಯ 'ಸ್ಫುಟವಿಷಯ' ಎಂಬ ಸಂಪಾದಕೀಯದಲ್ಲಿ ಹೀಗೆ ಹೇಳಿಕೊಂಡಿದ್ದಾರೆ: ''ನಿಮ್ಮ ಮನಸ್ಸನ್ನು ಹೇಗೆ ರಂಜಿಸುವೆನೆಂದು ಕೇಳುವಿರೊ? ನನ್ನ ಚತುರೋಕ್ತಿಗಳಿಂದ ಸರ್ವರನ್ನು ನಗಿಸುವೆನು. ಲೇಖನಗಳಿಂದಲೂ ಉಪನ್ಯಾಸಗಳಿಂದಲೂ

ಲೋಕದ ಜ್ಞಾನವನ್ನು ವರ್ಧಿಸುವೆನು; ಕಥೆಗಳಿಂದ ನೀತಿಯನ್ನು ಉಪದೇಶಿಸುವೆನು; ನಿಮಗೆ ಬೇಸರ ಬಾರದಂತೆ ಬೇರೆಬೇರೆ ವಿಚಿತ್ರ ವಿಷಯಗಳನ್ನು ಹೇಳುವೆನು.''[೧]

ಈ ಪತ್ರಿಕೆಯಲ್ಲಿ ಚಿಕ್ಕ ಕಥೆಗಳು, ಕವನಗಳು, ಚಾರಿತ್ರಿಕ ವಿಷಯಗಳು, ಕಾದಂಬರಿಗಳು, ಪ್ರಬಂಧಗಳು ಪ್ರಕಟವಾಗುತ್ತಿದ್ದುದರ ಜೊತೆಗೆ 'ಸ್ಫುಟ ವಿಷಯ' ಎಂಬ ಸಂಪಾದಕೀಯ, ವಿವಿಧ ವಿಷಯ ಸಂಗ್ರಹ, ಸಂಕ್ಷಿಪ್ತ ಸಮಾಚಾರಗಳು, ಹಾಸ್ಯಾರ್ಣವ ಎಂಬ ಸ್ಥಿರಶೀರ್ಷಿಕೆಗಳಿರುತ್ತಿದ್ದವು. ಸ್ತ್ರೀಯರ ಬರಹಗಳಿಗೆ, ಚಿಕ್ಕ ಕಲ್ಪನಾ ಕಥೆಗಳಿಗೆ ಪತ್ರಿಕೆಯಲ್ಲಿ ಆದ್ಯತೆ ನೀಡಲಾಗುತ್ತಿತ್ತು. ''ನೂತನ ರೀತಿಯನ್ನು ಅನುಸರಿಸಿ ಬರೆದ ಚಿಕ್ಕ ಕಲ್ಪನಾ ಕಥೆಗಳಿಗೂ (Novelettes) ಸ್ತ್ರೀಯರು ಬರೆದು ಕಳುಹಿಸಿದ ಲೇಖನಗಳಿಗೂ ಎಲ್ಲವುಗಳಿಗಿಂತ ಮುಂದಾಗಿ ಸ್ಥಳ ಕೊಡುವೆವು.''[೨] ಎಂದು ಸಂಪಾದಕರು ತಾವು ಯಾವ ಬಗೆಯ ಬರವಣಿಗೆಗೆ ಆಸರೆ ನೀಡುತ್ತೇವೆ ಎಂಬುದನ್ನು ಸ್ಪಷ್ಟವಾಗಿ ನಿವೇದಿಸಿಕೊಂಡಿದ್ದಾರೆ. ''ವಿವಿಧ ವಿಷಯ ಸಂಗ್ರಹ''ದಲ್ಲಿ ಜಗತ್ತಿನ ಸಮಕಾಲೀನ ಪ್ರಮುಖ ವಿಷಯಗಳನ್ನು ಸಂಗ್ರಹಿಸಿ ನಿರೂಪಿಸಲಾಗುತ್ತಿತ್ತು. ''ಸಂಕ್ಷಿಪ್ತ ಸಮಾಚಾರಗಳು'' ಎಂಬ ಶೀರ್ಷಿಕೆಯಲ್ಲಿ ಕೌತುಕಮಯ ಸುದ್ದಿಗಳು ಪ್ರಕಟವಾಗುತ್ತಿದ್ದವು (ಉದಾಹರಣೆಗೆ: ಒಂದೇ ಒಂದು ತಿಮಿಂಗಲದ ನಾಲಗೆಯಿಂದ ಒಂದು ಟನ್ ಮೀನೆಣ್ಣೆ ತೆಗೆಯಬಹುದು-ಇತ್ಯಾದಿ). ''ಹಾಸ್ಯಾರ್ಣವ'' ಶೀರ್ಷಿಕೆಯಲ್ಲಿ ಇಂದಿನ ನಗೆಹನಿಗಳನ್ನು ಹೋಲುವ ಜೋಕುಗಳನ್ನು ಕೊಡಲಾಗುತ್ತಿತ್ತು. ಇವುಗಳನ್ನು ಸಂಪಾದಕರೇ ಬರೆಯುತ್ತಿದ್ದು ಅವುಗಳಲ್ಲಿ ಮೇಲ್ಮಟ್ಟದ ಹಾಸ್ಯಪ್ರಜ್ಞೆ ಕಂಡುಬರುತ್ತದೆ (ಉದಾಹರಣೆಗೆ: 'ಸುಲಭೋಪಾಯ' ಎಂಬ ಜೋಕು ಹೀಗಿದೆ-ಊಟದ ಮನೆಯ ಹೆಂಗಸು: ''ದಿನದಿನದ ಊಟದ ಹೊತ್ತಿಗೆ ನಿಮ್ಮ ನಾಯಿ ಇಲ್ಲಿಗೆ ಬಂದು ತೊಂದರೆ ಕೊಡುತ್ತಿದೆ. ಅದರ ಜಾಗ್ರತೆ ಸ್ವಲ್ಪ ನೋಡಬಾರದೆ ?'' ನಾಯಿಯ ಯಜಮಾನ-''ಒಂದೂ ಬೇಡ. ನೀವು ಮಾಡಿದ ಒಂದು ಭಕ್ಕರಿಯ ತುಂಡು ಅದಕ್ಕೆ ಹಾಕಿ ಬಿಡಿ. ಆಮೇಲೆ ಪ್ರಾಣ ವಿದ್ದಷ್ಟು ದಿನವೂ ಬಾರದು.'' 'ಅಗ್ಗದ ವಿಷಯ' ಎಂಬ ಇನ್ನೊಂದು ಜೋಕು ಹೀಗಿದೆ: ಹೊಸ ವೈದ್ಯ-''ನಿಮ್ಮ ಬಲಗೈ ಕತ್ತರಿಸಿದುದಕ್ಕಾಗಿ ಡಾ. ಆನಂದರಾಯರಿಗೆ ಏನು ಕೊಟ್ಟಿರಿ ?''. ರೋಗಿ-''ನೂರು ರೂಪಾಯಿ.''. ಹೊಸ ವೈದ್ಯ-''ಅಯ್ಯೋ! ನೀವು ಮೊದಲೇ ನನ್ನಲ್ಲಿಗೆ ಬಂದಿದ್ದರೆ ಅಷ್ಟೇ ಹಣಕ್ಕೆ ಎರಡೂ ಕೈಗಳನ್ನು ಕತ್ತರಿಸುತ್ತಿದ್ದೆ!''. ಈ ಬಗೆಯ ಅನೇಕ ಜೋಕುಗಳಿದ್ದು ಅವು ಸ್ವಾರಸ್ಯವಾಗಿವೆ).

'ಸುವಾಸಿನಿ' ಮೇಲ್ಮಟ್ಟದ ಸಾಹಿತ್ಯ ಪತ್ರಿಕೆಯಾಗಿದ್ದುದರಿಂದ ಇದರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಬರಹಗಾರರದಲ್ಲದೆ ನಾಡಿನ ನಾನಾ ಭಾಗಗಳಿಂದ ಲೇಖಕರು ಬರೆಯುತ್ತಿದ್ದರು. ಪಂಜೆ ಮಂಗೇಶರಾವ್, ಉಳ್ಳಾಲ ಮಂಗೇಶರಾವ್ , ಆರ್. ಕೆ. ಇನಾಮತಿ, ಚಿ. ತಮ್ಮಯ್ಯ ಶಾಸ್ತ್ರಿ, ಸಿದ್ಧಾಂತಿ ಶಿವಶಂಕರಶಾಸ್ತ್ರಿ, ಎಂ. ಡಿ. ಅಳಸಿಂಗರಾಚಾರ್ಯ, ಜೆ. ಅಪ್ರಮೇಯ ಅಯ್ಯಂಗಾರ್, ಎಚ್. ನಾರಾಯಣರಾವ್ (ಭೂಮಿ ಶಾಸ್ತ್ರ), ಆರ್. ಶ್ರೀನಿವಾಸರಾವ್, ಕೆರೋಡಿ ಸುಬ್ಬರಾವ್, ಎಂ. ಎನ್. ಶ್ರೀನಿವಾಸರಾವ್, ಜಿ. ಅಣ್ಣಾಜಿರಾವ್, ಎಸ್. ಎನ್. ನರಹರಯ್ಯ, ಗೋಪಾಲರಾವ್, ಎನ್. ಸವಣೂರ್, ಕೆ. ವಿನಾಯಕಶಾಸ್ತ್ರಿ, ಎಂ. ಬಿ. ಸುಬ್ಬರಾವ್, ಎಸ್. ರಾಮಚಂದ್ರರಾವ್, ಬಿ. ವೆಂಕಟಾಚಾರ್ಯ, ಎಂ. ವೆಂಕಟಪತಯ್ಯ,

---

೧. ಸುವಾಸಿನಿ, ಜುಲೈ, ೧೯೦೦

೨. ಅದೇ, ಅಕ್ಟೋಬರ್, ೧೯೦೦

ವ್ಯಾಸರಾವ್, ವೆಂಕಟರಾವ್‌ರೊದ್ದ, ಕೆ. ಎಸ್. ಭಟ್, ಕೆ. ಸುಂದರರಾವ್, ಸಿ. ಕೃಷ್ಣರಾವ್, ಎಂ. ಎನ್. ಗೋಪಾಲರಾವ್-ಮೊದಲಾದ ಲೇಖಕರ ಬರಹಗಳು ಈ ಪತ್ರಿಕೆಯಲ್ಲಿ ಪ್ರಕಟವಾಗಿವೆ. ಕನ್ನಡದ 'ಸಣ್ಣಕಥೆ' ಎಂಬ ಸಾಹಿತ್ಯ ಪ್ರಕಾರ ಉಗಮಿಸಿದ್ದು ಈ ಪತ್ರಿಕೆಯಲ್ಲಿ. ಕನ್ನಡ ಸಣ್ಣ ಕಥೆಗಳ ಜನಕರೆಂದು ಹೆಸರಾಗಿರುವ ಪಂಜೆಮಂಗೇಶರಾಯರ (ಪತ್ರಿಕೆಯಲ್ಲಿ ರಾ.ಮ.ಪಂ. ಎಂಬ ಹೆಸರಿನಲ್ಲಿ) ನನ್ನ ಚಿಕ್ಕ ತಾಯಿ, ನನ್ನ ಚಿಕ್ಕ ತಂದೆ, ನನ್ನ ಹೆಂಡತಿ, ನನ್ನ ಚಿಕ್ಕ ತಂದೆಯವರ ಉಯಿಲ್, ಚಂಡಿಕಾ ರಹಸ್ಯ ಸಮಾಜ ಮೊದಲಾದ ಚಿಕ್ಕ ಕಥೆಗಳೂ ಕಬ್ಬಿಣದ ಬುದ್ಧಿವಾದ, ಪರೀಕ್ಷೆಯಲ್ಲಿ ಪರಾಜಿತನಾದ ವಿದ್ಯಾರ್ಥಿಯ ಪ್ರಲಾಪ ಮುಂತಾದ ಸರಸ ಸುಂದರ ಕವಿತೆಗಳೂ ಈ ಪತ್ರಿಕೆಯಲ್ಲಿ ಬೆಳಕು ಕಂಡಿವೆ. ಬೆನಗಲ್ ರಾಮರಾಯರ ರಮಾಮಾಧವ, ಬಿ. ವೆಂಕಟಾಚಾರ್ಯರ ಉನ್ಮಾದಿನಿ ಕಾದಂಬರಿಗಳು ಈ ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟವಾಗಿವೆ. 'R'* ಎಂಬುವವರು ಬರೆದ ಆಶಾವತಿ, ವ್ಯಾಪಾರದ ಗುಟ್ಟು ಎಂಬ ಕಥೆಗಳು 'ಚಿಕ್ಕ ಕಥೆಗಳು' ಎಂಬ ಹೆಸರಿನಲ್ಲಿ ಕಾಣಿಸಿಕೊಂಡಿವೆ. ಹೊಸಗನ್ನಡದ ಆದ್ಯಪ್ರಬಂಧಗಳೆಂದು ಕರೆಯಬಹುದಾದ, ಲಾಲಿತ್ಯದಿಂದ ಕೂಡಿದ ಎಂ. ಎಸ್. ಶ್ರೀನಿವಾಸರಾಯರ 'ಮೋಡ', 'ಮೊಳೆಯುವ ಬಿತ್ತು' ಎಂಬ ಲಲಿತ ಪ್ರಬಂಧಗಳು ಈ ಪತ್ರಿಕೆಯಲ್ಲಿ ಪ್ರಕಟವಾಗಿವೆ. ಇವುಗಳನ್ನು 'ಭಾವನಾ' ಎಂದು ಕರೆಯಲಾಗಿದೆ. ಚರಿತ್ರೆಗೆ ಸಂಬಂಧಪಟ್ಟಂತೆ ಉಳ್ಳಾಲ ಮಂಗೇಶರಾಯರ ಚೀನ ಸಾಮ್ರಾಜ್ಯ ಎಂಬ ಕೃತಿ, ವಿಜ್ಞಾನ ವಿಷಯಕ್ಕೆ ಸಂಬಂಧಪಟ್ಟಂತೆ ಎಚ್. ನಾರಾಯಣರಾವ್ ಅವರ 'ಭೂಮಿಶಾಸ್ತ್ರ' ಎಂಬ ಗ್ರಂಥ–ಇವು ಸಚಿತ್ರವಾಗಿ ಈ ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟವಾಗಿವೆ. ಎಚ್. ನಾರಾಯಣರಾಯರ ''ಭೂಮಿಶಾಸ್ತ್ರ''ವು ಒಂದು ವಿಜ್ಞಾನ ವಿಷಯವನ್ನು ಕುರಿತು ಸಮಗ್ರವಾಗಿ ಪ್ರಕಟವಾದ ಅತ್ಯಂತ ಸುಂದರ ಪುಸ್ತಕವಾಗಿದೆ. ಶಾಸ್ತ್ರೀಯ ವಿಷಯಗಳನ್ನು ಕನ್ನಡದಲ್ಲಿ ಎಷ್ಟೊಂದು ಸರಳವಾಗಿ, ಸ್ಪಷ್ಟವಾಗಿ, ಖಚಿತವಾಗಿ ನಿರೂಪಿಸಬಹುದೆಂಬುದಕ್ಕೆ ಈ ಕೃತಿ ಸಾಕ್ಷಿಯಾಗಿದೆ. ಸುಮಾರು ೮೫ ವರ್ಷಗಳಷ್ಟು ಹಿಂದೆ ಪ್ರಕಟವಾಗಿರುವ ಈ ಕೃತಿ ಇಂದಿಗೂ ಮನನಯೋಗ್ಯವಾದುದು. ಇದರಲ್ಲಿ ಪ್ರಕಟವಾಗಿರುವ ಕನ್ನಡ ಪಾರಿಭಾಷಿಕ ಪದಗಳು ಅತ್ಯಂತ ಸೂಕ್ತವಾಗಿದ್ದು ಬರಹಗಾರರ ವೈಜ್ಞಾನಿಕ ದೃಷ್ಟಿಕೋನಕ್ಕೆ ದೃಷ್ಟಾಂತಗಳಾಗಿವೆ. (ಉದಾಹರಣೆಗೆ: Gravity of the Earth-ಭೂಮ್ಯಾಕರ್ಷಣಶಕ್ತಿ; axle-ಇರುಸು; current-ಪ್ರವಾಹ; tides-ಉಬ್ಬರವಿಳಿತ; density-ಸಾಂದ್ರತೆ ಇತ್ಯಾದಿ).

ಆ ಕಾಲದಲ್ಲಿ ಸಂಪಾದಕರ ಕಡೆಗೆ ಬರುತ್ತಿದ್ದ ಪುಸ್ತಕಗಳನ್ನು 'ಪುಸ್ತಕ ಸ್ವೀಕಾರ' ಎಂಬ ಶೀರ್ಷಿಕೆಯಲ್ಲಿ ತೋರಿಸಿ 'ಗ್ರಂಥ ವಿಮರ್ಶೆ' ಎಂಬ ಶೀರ್ಷಿಕೆಯಲ್ಲಿ ವಿಮರ್ಶಿಸಲಾಗುತ್ತಿತ್ತು. ಹೀಗೆ ವಿಮರ್ಶೆಗೊಂಡಿರುವ ಪುಸ್ತಕಗಳಲ್ಲಿ ಎಸ್. ಜಿ. ನರಸಿಂಹಾಚಾರ್ಯರ 'ಗಲಿವರನ ದೇಶ ಸಂಚಾರ' (ಗಲಿವರ್ಸ್ ಟ್ರಾವಲ್ಸ್‌ನ ಅನುವಾದ), ಎಂ. ಆರ್. ಅಣ್ಣಾಜಿರಾಯರ 'ಮಹೀಮಂಡನ' (ವಿಂಟರ್ ಟೇಲ್ ಎಂಬ ಆಂಗ್ಲ ನಾಟಕದ ಗದ್ಯರೂಪ), ಬಿ. ಸುಬ್ಬರಾವ್ ಅವರ 'ನಿರ್ಭಾಗ್ಯ ಮುರಾದ' (ಮಿಸ್ ಎಡ್ಜ್‌ವರ್ತ್ ಎಂಬುವವಳ ಒಂದು ಕಥೆಯ ಅನುವಾದ), ವ್ಯಾಸರಾವ್ ವೆಂಕಟರಾವ್‌ರೊದ್ದ ಅವರ 'ಚಂದ್ರಮುಖಿಯ ಘಾತವು' (ಚಿಕ್ಕ ಕಲ್ಪನಾ ಪ್ರಬಂಧ)- ಮೊದಲಾದವು ಸೇರಿವೆ. ಪತ್ರಿಕೆಗೆ ಪ್ರಕಟಣೆಗಾಗಿ ಬರುತ್ತಿದ್ದ ಲೇಖನಗಳನ್ನು 'ಪತ್ರಕರ್ತರ ಸ್ವಹಸ್ತದಲ್ಲಿ'; 'ಅಂಗೀಕರಿಸಿದ ಹೊಸ

* ಇವರು ಬೆನಗಲ್ ರಾಮರಾಯರಿರಬಹುದೆ?

ಲೇಖನಗಳು'-ಎಂಬ ಶೀರ್ಷಿಕೆಗಳಲ್ಲಿ ಬರೆದವರ ಹೆಸರಿನೊಡನೆ ಮುದ್ರಿಸಲಾಗುತ್ತಿತ್ತು. ಹೀಗೆ ಮುದ್ರಿತವಾದವುಗಳಲ್ಲಿ ಮುದ್ದಣನ 'ಗೋದಾವರಿ' ಕಾದಂಬರಿಯೂ ಒಂದು. ಆದರೆ ಅದು ಪತ್ರಿಕೆಯಲ್ಲಿ ಬೆಳಕು ಕಂಡಿಲ್ಲ. ಕೆಲವೊಮ್ಮೆ ಸಾಹಿತ್ಯ ಚಟುವಟಿಕೆಗಳಿಗೆ ಸಂಬಂಧಿಸಿದ ಸುದ್ದಿಗಳನ್ನು ಕೂಡ ಈ ಪತ್ರಿಕೆಯಲ್ಲಿ ಕೊಡಲಾಗುತ್ತಿತ್ತು. ಬಿ. ವೆಂಕಟಾಚಾರ್ಯರು ಸುವಾಸಿನಿಗಾಗಿ 'ಉನ್ಮಾದಿನಿ' ಎಂಬ ಕಾದಂಬರಿ ಬರೆಯುತ್ತಿರುವುದನ್ನೂ ಎಸ್. ಜಿ. ನರಸಿಂಹಾಚಾರ್ಯರು ಬಸವಪ್ಪಶಾಸ್ತ್ರಿಗಳ ಜೀವನ ಚರಿತ್ರೆಯನ್ನು ಬರೆಯುತ್ತಿರುವುದನ್ನೂ ಪತ್ರಿಕೆ ದಾಖಲಿಸಿದೆ.[೩] 'ಉನ್ಮಾದಿನಿ' ಇದೇ ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟವಾಗಿದೆ. ಆದರೆ 'ಬಸವಪ್ಪಶಾಸ್ತ್ರಿಗಳ ಜೀವನ ಚರಿತ್ರೆ'ಯ ವಿಷಯ ತಿಳಿಯದು; ಪತ್ರಿಕೆಯಲ್ಲಿ ಅದು ಪ್ರಕಟವಾಗಿಲ್ಲ.

'ಸುವಾಸಿನಿ' ಸುಮಾರು ಹನ್ನೊಂದು ತಿಂಗಳುಗಳ ಕಾಲ ನಡೆದು ಹನ್ನೊಂದು ಸಂಚಿಕೆಗಳನ್ನು ಪ್ರಕಟಿಸಿ, ಕಾರಣಾಂತರಗಳಿಂದ (ಪ್ರಧಾನವಾಗಿ ಆರ್ಥಿಕ ಅಡಚಣೆ) ೧೯೦೧ರ ಮೇ ತಿಂಗಳಿನಲ್ಲಿ ನಿಂತುಹೋಯಿತು; ಪುನಃ ಇದು ೧೦-೧೧ ತಿಂಗಳು ಕಳೆದ ಅನಂತರ ೧೯೦೨ರ ಜೂನ್ ತಿಂಗಳಿನಲ್ಲಿ ಆರಂಭವಾಯಿತು. ಆ ವರ್ಷದಲ್ಲಿ 'ಕೊರೆ'ಯಾಗಿ ಉಳಿದಿದ್ದ ಇನ್ನೊಂದು ಸಂಚಿಕೆಯನ್ನು (ಹನ್ನೆರಡನೆಯ) ಪ್ರಕಟಿಸಿ ವರ್ಷವನ್ನು ಪೂರ್ಣಗೊಳಿಸಿತು. ಆದರೆ ವಾಸ್ತವವಾಗಿ ಸಂಚಿಕೆ ಓದುಗರ ಕೈಗೆ ದೊರೆತದ್ದು ಜುಲೈ ತಿಂಗಳಿನಲ್ಲಿ.[೪] ಈ ಸಂಚಿಕೆಯ 'ಕ್ಷಮಾಪಣೆ' ಎಂಬ ಸಂಪಾದಕೀಯದಲ್ಲಿ ಸಂಪಾದಕರು ಪತ್ರಿಕೆಯನ್ನು ನಿಲ್ಲಿಸಬೇಕಾದುದಕ್ಕೆ ಕಾರಣವನ್ನು ಹೀಗೆ ಹೇಳಿಕೊಂಡಿದ್ದಾರೆ: ''ನಮ್ಮ ದುರದೃಷ್ಟದಿಂದ ಸುವಾಸಿನಿಯ ೧೧ನೆಯ ಸಂಚಿಕೆಯು ಹೊರಟು ೧೦-೧೧ ತಿಂಗಳು ಕಳೆದ ಮೇಲೆ ಈ ಹನ್ನೆರಡನೆಯ ಸಂಚಿಕೆಯನ್ನು ಕಳುಹಿಸಬೇಕಾಯಿತು. ಇದರ ಕಾರಣಗಳನ್ನು ಇಲ್ಲಿ ಕೊಟ್ಟು ನಮಗಾಗಲೀ ನಮ್ಮ ವಾಚಕರಿಗಾಗಲೀ ಏನೊಂದೂ ಪ್ರಯೋಜನವಾಗಲಾರದು. ಆದರೂ ಇತರ ಕಾರಣಗಳೊಡನೆ ಧನಾಭಾವವೂ ಒಂದಾಗಿತ್ತೆಂಬುದನ್ನು ನಮ್ಮ ಸೂಜ್ಞ ಪಾಠಕರು ತಿಳಿಯದೆ ಹೋಗಲಾರರು...ಸ್ತ್ರೀ ವಿದ್ಯಾಭ್ಯಾಸವನ್ನು ಪ್ರೋತ್ಸಾಹಗೊಳಿಸಿ ಅದರೊಂದಿಗೆ ದೇಶಭಾಷೆಯನ್ನೂ ಅಭಿವೃದ್ಧಿಗೆ ತರತಕ್ಕ ಪತ್ರಿಕೆಯು ಕನ್ನಡದಲ್ಲಿ ಇದೊಂದೇ ಆಗಿರುವುದರಿಂದ, ಇದನ್ನು ಬಿಡದೆ ನಡೆಯಿಸಬೇಕೆಂದೂ, ತಮ್ಮಿಂದಾದಮಟ್ಟಿಗೆ ಸಹಾಯವನ್ನು ಮಾಡದೆ ಇರಲಾರೆವೆಂದೂ, ನಮ್ಮ ಮಿತ್ರರನೇಕರು ನಮಗೆ ಆಗಾಗ್ಗ ಬರೆಯುತ್ತಲೇ ಇರುವುದರಿಂದ ಈ ಪತ್ರಿಕೆಯನ್ನು ಕಡಿಮೆಯ ಪಕ್ಷಕ್ಕೆ ಇನ್ನೊಂದು ವರ್ಷದವರೆಗಾದರೂ

---

೩. ಅದೇ, ಸೆಪ್ಟೆಂಬರ್, ೧೯೦೦

೪. ಮೈಸೂರಿನ 'ನಡೆಗನ್ನಡಿ' ಪತ್ರಿಕೆಯು (೧೫ ಜುಲೈ ೧೯೦೨) 'ಸುವಾಸಿನಿ'ಯ ಆರಂಭವನ್ನು ಕುರಿತು ಈ ರೀತಿ ಹೇಳಿದೆ: ''ಸುವಾಸಿನಿ ಎಂಬ ಮಾಸಿಕವಹಿಯು ಕೆಲವು ಕಾಲ ನಿಂತುಹೋಗಿತ್ತು. ಮೊದಲನೆಯ ಸಂಪುಟದಲ್ಲಿ ೧೧ ಸಂಚಿಕೆಗಳು ಪ್ರಕಟವಾಗಿದ್ದವು. ಹನ್ನೆರಡನೆಯ ಸಂಚಿಕೆಯು ಒಂದು ವರ್ಷವಾದ ತರುವಾಯ ನಿನ್ನೆ ಜೂನ್ ಮಾಹೆಯಲ್ಲಿ ಮುದ್ರಿಸಲ್ಪಟ್ಟು ಜುಲೈ ೧೫ಕ್ಕೆ ಪ್ರಕಟವಾಗಿರುವುದು. ಇಂಥಾ ಮಾಸಿಕ ವಹಿಗಳಿಂದ ಬಹಳ ಪ್ರಯೋಜನವುಂಟು. ಆದರೆ ಇವುಗಳ ಏಳಿಗೆಯು ಉಪಪನ್ನವಾದವರ ಕೈಯಲ್ಲಿರಬೇಕು. ಕೇವಲ ದ್ರವ್ಯಾರ್ಜನೆಗಾಗಿ ಪಿಲಾಯಿತಿಯಲ್ಲಿ ಜನರು ಇವುಗಳನ್ನು ನಡಯಿಸುವಂತೆ ನಮ್ಮ ದೇಶದಲ್ಲಿ ಸಾಗುವುದಿಲ್ಲ. ಪರಂತು ಪತ್ರಕರ್ತರಾದ ಮ। ರಾ। ಬಿ. ರಾಮರಾಯರಿಗೆ ಈ ವಿಷಯವು ಸ್ಪಷ್ಟವಾಗಿ ತಿಳಿದಿರುವುದರಿಂದ ಇವರ 'ಸುವಾಸಿನಿ'ಯನ್ನು ಸುವಾಸಿನಿಯರಂತೆ ಸತಿಮಂದಿರದಲ್ಲಿಡುವುದಕ್ಕೆ ಏರ್ಪಾಡುಮಾಡುವುದು ಉಚಿತವು.''

ನಡೆಯಿಸಬೇಕೆಂದು ನಾವು ಉದ್ದೇಶಿಸಿರುವೆವು.''[೫] ಮೇಲಿನ ಮಾತುಗಳಿಂದ ಕಡೆಯ ಪಕ್ಷ ಇನ್ನೂ ಒಂದು ವರ್ಷಕಾಲವಾದರೂ ಪತ್ರಿಕೆಯನ್ನು ಮುಂದುವರಿಸುವ ಅಭಿಲಾಷೆ ಸಂಪಾದಕರಿಗಿದ್ದುದು ವ್ಯಕ್ತವಾಗುತ್ತದೆ. ಎರಡನೆಯ ವರ್ಷದಲ್ಲಿ ಸಂಪಾದಕರು ಪತ್ರಿಕೆಯಲ್ಲಿ ಅನೇಕ ಬದಲಾವಣೆಗಳನ್ನು ತರಬೇಕೆಂದು ಮನಸ್ಸು ಮಾಡಿದ್ದರು. ದೊಡ್ಡ ಕಾದಂಬರಿಗಳನ್ನು ಬಿಟ್ಟು ಪುಟ್ಟ ಕಾದಂಬರಿಗಳನ್ನು, ಹೆಚ್ಚಾಗಿ ಚಿಕ್ಕ ಕಥೆಗಳನ್ನು, ಗಹನವಾದ ಶಾಸ್ತ್ರೀಯ ವಿಷಯಗಳನ್ನು ಬಿಟ್ಟು ಸುಲಭವಾದ ಹಾಡುಗಳನ್ನು, ಮಕ್ಕಳ ಕತೆಗಳನ್ನು, ಸ್ತ್ರೀಯರಿಗೆ ಸಂಬಂಧಿಸಿದ ಬರಹಗಳನ್ನು ಪ್ರಕಟಿಸಲು ಯೋಚಿಸಿದ್ದರೆಂದು ತಿಳಿದುಬರುತ್ತದೆ.[೬] ಹಾಗೆಯೇ ನಡೆದುಕೊಂಡಿರುವುದು ಪತ್ರಿಕೆಯ ಪರಿಶೀಲನೆಯಿಂದ ವ್ಯಕ್ತವಾಗುತ್ತದೆ. ಹೊಸ ವರ್ಷದಲ್ಲಿ ಚಂದಾದಾರರಲ್ಲಿ ಎರಡು ವರ್ಗಗಳನ್ನು ಮಾಡಿ ಮೂರು ರೂಪಾಯಿ ಕೊಡುವವರು ಪೋಷಕರೆಂದೂ ಎರಡು ರೂಪಾಯಿ ಕೊಡುವವರು ಸಾಮಾನ್ಯ ಚಂದಾದಾರರೆಂದೂ ಕರೆದರು. ಅದುವರೆಗೆ ಬಾಸೆಲ್ ಮುದ್ರಣಾಲಯದಲ್ಲಿ ಮುದ್ರಣವಾಗುತ್ತಿದ್ದ 'ಸುವಾಸಿನಿ'ಯು ೧೯೦೩ರ ಜುಲೈನಿಂದ ಕೊಡಿಯಾಲ ಬೈಲ್ ಮುದ್ರಣಾಲಯದಲ್ಲಿ ಮುದ್ರಣಗೊಳ್ಳತೊಡಗಿತು[೬*]. ಸಂಪಾದಕರ ವಾಸ್ತವ್ಯವೂ ಮದರಾಸಿನಿಂದ ಮೈಸೂರಿಗೆ ಸ್ಥಳಾಂತರವಾಯಿತು. ಅಲ್ಲಿನ ಲಕ್ಷ್ಮೀವಿಲಾಸ ಅಗ್ರಹಾರದಲ್ಲಿ ಸಂಪಾದಕರ ಕಚೇರಿಯಿತ್ತು (ಈ ಸಮಯದಲ್ಲಿ ಬೆನಗಲ್ ರಾಮರಾಯರು ಮೈಸೂರು ಗವರ್ನಮೆಂಟ್ ನಾರ್ಮಲ್ ಹೈಸ್ಕೂಲಿನಲ್ಲಿ ಅಧ್ಯಾಪಕರಾಗಿದ್ದರು).

ಸಂಪಾದಕರಿಗೆ ಕನ್ನಡದ ಏಳಿಗೆಯ ಬಗ್ಗೆ ಅಪಾರವಾದ ಮಮತೆ, ಪ್ರೀತಿಗಳಿದ್ದುವು. ಕನ್ನಡಕ್ಕೆ ಅನ್ಯಾಯ, ಅಪಚಾರ ಆಗುವ ಸಂದರ್ಭ ಬಂದಾಗಲೆಲ್ಲ ಅವರು ಅಂಥ ನಡವಳಿಕೆಯನ್ನು ಉಗ್ರವಾಗಿ ಪ್ರತಿಭಟಿಸಿದ್ದಾರೆ. 'ಸ್ಫುಟ ವಿಷಯ' ಎಂಬ ಸಂಪಾದಕೀಯಗಳು ಅವರ ಕನ್ನಡತನಕ್ಕೆ, ಅವರ ವೈಚಾರಿಕ ಮನೋಭಾವಕ್ಕೆ ಸಾಮಾಜಿಕ ಅರಿವಿಗೆ ಸಾಕ್ಷಿಯಾಗಿವೆ. ೧೯೦೧ರ ಜನವರಿ ತಿಂಗಳಿನಲ್ಲಿ ಧಾರವಾಡದ ವಿದ್ಯಾವರ್ಧಕ ಸಂಘದಲ್ಲಿ ನಡೆದೊಂದು ವಿದ್ಯಾಪರಿಷತ್ತಿನಲ್ಲಿ, ಆ ಸಂಘದ ಸ್ಥಾಪಕರಲ್ಲಿ ಒಬ್ಬರಾದ ವೆಂಕಟರಂಗೋಕಟ್ಟಿಯವರು ಕನ್ನಡ ಹುಡುಗರಿಗೆ ಶಾಲೆಯಲ್ಲಿ ಮರಾಠಿ ಕಲಿಸುವ ಅವಶ್ಯಕತೆಯನ್ನು ಕುರಿತು ಓದಿದ ಪ್ರಬಂಧವನ್ನು ಈ ಪತ್ರಿಕೆಯ ಸಂಪಾದಕರು ಗಂಭೀರವಾಗಿ ಟೀಕಿಸಿದ್ದಾರೆ. ಧಾರವಾಡದಲ್ಲಿ ಕೂಡ (ಅದೇ ಸಭೆಯಲ್ಲಿಯೂ) ಕಟ್ಟಿಯವರ ಪ್ರಬಂಧದ ಅಭಿಪ್ರಾಯ ಕುರಿತು ಉಗ್ರವಾದ ಪ್ರತಿಭಟನೆ, ವಿಚಾರ ವಿಮರ್ಶೆ ನಡೆಯಿತೆಂದು ತಿಳಿದುಬರುತ್ತದೆ. ಕನ್ನಡಿಗರು ಮರಾಠಿಗರೊಂದಿಗೆ ವ್ಯವಹರಿಸಲು ಮರಾಠಿ ಕಲಿಯುವುದಾದರೆ ಅವರು ಕೂಡ ಕನ್ನಡವನ್ನು ಕಲಿಯಬೇಕು ಎಂಬ ಅಭಿಪ್ರಾಯವನ್ನು ಸಂಪಾದಕರು ಈ ರೀತಿಯಲ್ಲಿ ವ್ಯಕ್ತಪಡಿಸಿದ್ದಾರೆ: ''ಕನ್ನಡಿಗರಿಗೆ ತಮ್ಮ ನೆರೆಹೊರೆಯ ಪ್ರಾಂತ್ಯಗಳಲ್ಲಿರುವ ಮರಾಠರೊಡನೆ ಹೇಗೆ ಆಗಿಂದಾಗ ವ್ಯವಹಾರಗಳನ್ನು ನಡೆಯಿಸಬೇಕಾದ ಅವಶ್ಯಕತೆಯಿರುವುದೂ, ಹಾಗೆಯೇ ಮರಾಠಿಗರಿಗೂ ಕನ್ನಡಿಗರಿಗೂ ವ್ಯವಹಾರ ನಡೆಯಿಸುವುದು ಇದ್ದೇ ಇರಬೇಕಾದುದು ಸಹಜವು. ಹೀಗಿರುತ್ತ

೫. ಸುವಾಸಿನಿ, ಜೂನ್ ೧೯೦೨, ಪುಟ ೨೧೭

೬. ಅದೇ, ಪುಟ ೨೧೮

೬* ಇದು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ, ಮಂಗಳೂರಿನಲ್ಲಿ ಸ್ಥಾಪನೆಗೊಂಡ (೧೮೮೨) ಎರಡನೆಯ ಮುದ್ರಣಾಲಯ.

ಕನ್ನಡಿಗರಿಗೆ ಮರಾಟಿಯನ್ನು ಮುಖ್ಯ ವಿಷಯವಾಗಿ ನಿಯಮಿಸುವುದಾದರೆ, ಮರಾಠರಿಗೂ ಕನ್ನಡವನ್ನು ಮುಖ್ಯ ವಿಷಯವಾಗಿ ಕಲಿಸುವುದು ಅತ್ಯಾವಶ್ಯಕವೆಂದು ಸರ್ವರೂ ಒಪ್ಪಬೇಕಾಗುವುದು.''[೭]

'ಕನ್ನಡಿಗರು ಮರಾಠಿಯನ್ನು ಕಲಿಯಬಹುದು; ಆದರೆ ಬಲಾತ್ಕಾರದಿಂದಲ್ಲ; ಅವರು ಸ್ವಇಚ್ಛೆಯಿಂದ ಹಾಗೆ ಮಾಡಬಹುದು. ಅಲ್ಲದೆ, ನಮ್ಮ ಭಾಷೆಯು, ನಮ್ಮ ಜನರ ಮೇಲ್ಮೆಗೆ ಅದು ಸಹಕಾರಿಯಾಗುವುದಾದರೆ ಆಗ ಕೂಡ ಕನ್ನಡ ಜನ ಮರಾಠಿ ಕಲಿಯಬಹುದು' ಎಂಬುದು ಅವರ ಅಭಿಪ್ರಾಯವಾಗಿತ್ತು. ಮುಂದುವರಿದು ಅವರು ಹೀಗೆ ಹೇಳುತ್ತಾರೆ: ''(ಮರಾಠಿ) ಅದು ನಮಗೆ ಸ್ವಭಾಷೆಯಾಗಿರುವುದರಿಂದ ಕನ್ನಡ ಅಕ್ಷರಮಾಲೆಯನ್ನು ಕಲಿಯುವಾಗಲೇ ಅಥವಾ ಸ್ವಲ್ಪ ಮುಂಚೆಯೇ ಬಾಲಬೋಧೆಯನ್ನು ಕಲಿತುಕೊಂಡವು. ಕರ್ಣಾಟಕ ದೇಶದಲ್ಲಿಯೇ ಹುಟ್ಟಿ ಬೆಳೆದುದರಿಂದ ಮರಾಠಿಯಲ್ಲಿ ಪ್ರವೀಣರೆನ್ನಿಸಿಕೊಳ್ಳುವ ಯೋಗ್ಯತೆ ನಮಗೆ ಸಾಧ್ಯವಾಗಲಿಲ್ಲ. ಆದರೂ ಸಾಧಾರಣವಾದ ಎಲ್ಲಾ ಕೆಲಸಗಳಿಗೆ ಬೇಕಾದಷ್ಟು ಮರಾಠಿ ನಮಗೂ ಬರುತ್ತದೆ. ಹೆಚ್ಚೇಕೆ 'ಸುವಾಸಿನಿ'ಯನ್ನು ಹೊರಡಿಸಬೇಕೆಂಬ ಉತ್ಸಾಹವೂ ಅದನ್ನು ಹೇಗೆ ನಡೆಯಿಸಬೇಕೆಂಬ ಆಲೋಚನೆಯೂ ನಮಗೆ ಮರಾಠಿಯಿಂದಲೇ ದೊರೆತುವು. ಆದರೆ ಈ ಒಂದು ಕಾರಣದಿಂದಲೇ ಕನ್ನಡಿಗರೆಲ್ಲರೂ ಮರಾಟಿ ಕಲಿಯಬೇಕೆಂದು ಯಾರೊಬ್ಬರಾದರೂ ಬಲಾತ್ಕಾರ ಮಾಡುವುದು ನ್ಯಾಯವೆಂದು ನಾವು ಸರ್ವಥಾ ಎಣಿಸುವುದಿಲ್ಲ. ಕನ್ನಡಿಗರೂ ಕನ್ನಡದಿಂದಲೇ ಉಚ್ಚದಶೆಗೆ ಬರಬೇಕು; ಬೇರೆ ಯಾವ ಭಾಷೆಯೂ ಅವರ ಉನ್ನತಿಗೆ ಕನ್ನಡದಷ್ಟು ಅನುಕೂಲವಾಗಿ ಪರಿಣಮಿಸಲಾರದು.''[೮] ತಮ್ಮ ಮಾತೃಭಾಷೆ ಮರಾಠಿಯಾಗಿದ್ದುಕೊಂಡೂ ಹೇಳಿದ ಈ ಮೇಲಿನ ಮಾತುಗಳು ಅವರ ಅಪ್ಪಟ ಕನ್ನಡತನಕ್ಕೆ ನಿದರ್ಶನವಾಗಿವೆ. ಆ ಕಾಲಕ್ಕೆ ಕನ್ನಡವೇ ಮಾತೃಭಾಷೆಯಾಗಿದ್ದ ಕನ್ನಡಿಗರಿಗೆ ಕನ್ನಡದ ಬಗ್ಗೆ ಇದ್ದ ಭಾವನೆಯಾದರೂ ಯಾವುದು? ಕೇವಲ ತಾತ್ಸಾರ! ಒಂದು ಕಡೆ ಮರಾಠಿ, ಇನ್ನೊಂದು ಕಡೆ ಇಂಗ್ಲಿಷ್, ಮರಾಠಿಗಿಂತ ಇಂಗ್ಲಿಷ್ ಭಾಷೆಯು ಕನ್ನಡಿಗರ ಜೀವನ ಕ್ರಮವನ್ನೇ ಆಕ್ರಮಿಸಿಕೊಂಡುಬಿಟ್ಟಿತ್ತು. ವಿದ್ಯಾವಂತರೆನಿಸಿಕೊಂಡವರೇ ಕನ್ನಡವನ್ನು ಅಸಡ್ಡೆಯಿಂದ ಕಾಣುತ್ತಿದ್ದರು. ಅಂಥ ದುರಂತದ ಚಿತ್ರವೊಂದನ್ನು ಸಂಪಾದಕರು ಹೀಗೆ ಕೊಟ್ಟಿದ್ದಾರೆ: ''ಕನ್ನಡಿಗರಲ್ಲಿ ಇಂಗ್ಲಿಷು ವಿದ್ಯಾಭ್ಯಾಸ ಮಾಡಿದವನಿಗೆ ಎಷ್ಟೆಷ್ಟು ಹೆಚ್ಚಾಗಿ ತನ್ನ ದೇಶಭಾಷೆ ತಿಳಿಯುವುದಿಲ್ಲವೋ ಆತನು ತನ್ನ ಮಾತೃಭಾಷೆಯನ್ನು ಎಷ್ಟೆಷ್ಟು ಹೆಚ್ಚಾಗಿ ನಿಂದಿಸುವನೋ ಅಷ್ಟಷ್ಟು ಹೆಚ್ಚಾಗಿ ಆತನು ನೂತನ ವಿದ್ಯಾಪ್ರವೀಣನೆಂದು ಭಾವಿಸಿಕೊಳ್ಳುವನು. ಮರಾಠಿಯೇ ಮೊದಲಾದ ಭಾಷೆಗಳಲ್ಲಿ ಯಾವುದಾದರೊಂದು ಗ್ರಂಥ ಅಚ್ಚಾಯಿತೆಂದರೆ ಕೆಲವು ದಿನಗಳೊಳಗೆ ಸಾವಿರಾರು ಪ್ರತಿಗಳು ಮಾರಿಹೋಗುವುವು. ಇಷ್ಟಾಗಿ ಈ ಗ್ರಂಥವನ್ನು ಯೂನಿವರ್ಸಿಟಿಯವರು ಪಠ್ಯಪುಸ್ತಕಗಳನ್ನಾಗಿ ಏರ್ಪಡಿಸುವುದಿಲ್ಲ. ಈ ಭಾಷೆಗಳ ಜೊತೆಯಲ್ಲಿ ಕನ್ನಡದ ಮಾತೆತ್ತುವುದಕ್ಕೂ ನಾಚಿಕೆಪಡಬೇಕಾಗಿದೆ. ಮೈಸೂರು ಸರಕಾರದವರು ಮುಕ್ತಹಸ್ತರಾಗಿ ಕನ್ನಡ ಗ್ರಂಥಗಳಿಗೆ ಸಹಾಯ ಕೊಡದೆ ಹೋಗಿದ್ದರೆ ಮತ್ತು ಮದ್ರಾಸು ಯೂನಿವರ್ಸಿಟಿಯವರು ಕನ್ನಡ ಗ್ರಂಥಗಳನ್ನು ಪಠ್ಯಪುಸ್ತಕಗಳನ್ನಾಗಿ ಅಂಗೀಕರಿಸದಿರುತ್ತಿದ್ದರೆ ಕನ್ನಡವೆಂಬುದು ಈ ಮೊದಲೇ ನಾಮಾವಶೇಷವಾಗಿ

---

೭. ಅದೇ, ಜನವರಿ ೧೯೦೧, ಪುಟ ೯೯

೮. ಅದೇ, ಜನವರಿ ೧೯೦೧, ಪುಟ ೧೦೦

ಉಳಿಯುತ್ತಿತ್ತು. ಇವರುಗಳ ಸಹಾಯದಿಂದಲಾದರೂ ಕನ್ನಡ ಭಾಷೆ ಇಷ್ಟರಮಟ್ಟಿಗೆ ಜೀವಿಸಿಕೊಂಡಿರುವುದನ್ನೇ ನಾವು ದೊಡ್ಡ ಪುಣ್ಯವೆಂದು ತಿಳಿಯಬೇಕು.[೯]'' ಈ ಮೇಲಿನ ಮಾತುಗಳನ್ನು ಗಮನಿಸಿ ಹೇಳುವುದಾದರೆ ಇಂಗ್ಲಿಷ್‌ನ ಸಮಸ್ಯೆ ಇವೊತ್ತಿನದಲ್ಲ. ಅದು ಎಂದಿನಿಂದ ಭಾರತೀಯರ, ಕನ್ನಡಿಗರ ಜೀವನವನ್ನು ಸೇರಿಕೊಂಡಿತೋ ಅಂದಿನಿಂದ ಅದರ ಸಮಸ್ಯೆಯೂ ದಿನೇ ದಿನೇ ಜಟಿಲವಾಗುತ್ತಲೇ ಬಂದಿದೆ.[೯*] ಆ ಕಾಲಕ್ಕೆ ಶಿಕ್ಷಣಮಟ್ಟ ಕೂಡ ಕುಸಿದಿತ್ತು. ''ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕೆಂದಿರುವ ವಿದ್ಯಾರ್ಥಿಗಳ ಮುಖ್ಯ ಉದ್ದೇಶವು ಕಚೇಱಿಗಳಲ್ಲಿ ಸೇರಬೇಕೆಂದಾಗಿರುವುದರಿಂದ ಅವರು ದೇಶಭಾಷೆಯನ್ನು ಮನ್ನಿಸದೆ ಇರುವುದು ವಿಚಿತ್ರವಲ್ಲ''[೧೦] ಎಂಬ ಮಾತುಗಳನ್ನು ಗಮನಿಸಿದರೆ ಗುಮಾಸ್ತರುಗಳನ್ನು ಉತ್ಪಾದಿಸುವ ಕಾರ್ಖಾನೆಯಾದ ನಮ್ಮ ಶಿಕ್ಷಣಕ್ರಮದ ದುರಂತ ಸುಮಾರು ಒಂದು ಶತಮಾನಕ್ಕೂ ಹಿಂದೆಯೇ ಆರಂಭವಾಗಿದೆ.

ಹೀಗೆ ಎರಡು ವರ್ಷಗಳ ಕಾಲ ಕನ್ನಡತನವನ್ನು ಎಚ್ಚರಿಸುತ್ತ ಬದುಕಿದ್ದ ಸುವಾಸಿನಿ ೧೯೦೨ರ ಜುಲೈನಲ್ಲಿ ಅಸ್ತಂಗತವಾಯಿತು. ಮತ್ತೆ ಪುನರುಜ್ಜೀವನಗೊಂಡು ೧೯೨೫ರ ಅಕ್ಟೋಬರ್ ತಿಂಗಳಿನಿಂದ ಪ್ರಕಟವಾಗತೊಡಗಿತು.[೧೧] ಸುವಾಸಿನಿಯನ್ನು ಮೊದಲಿಗೆ ಆರಂಭಿಸಿದ ಬೋಳಾರ ವಿಠಲರಾಯರೇ ಈಗಲೂ ಅದರ ಪ್ರಕಾಶಕರಾಗಿದ್ದರು. ಆದರೆ ಈ ಬಾರಿ ಶ್ರೀಕೃಷ್ಣಸೂಕ್ತಿಯ ಕಡೇಕಾರು ರಾಜಗೋಪಾಲಕೃಷ್ಣರಾಯರ ಮುಂದಾಳತ್ವದಲ್ಲಿ ಈ ಪತ್ರಿಕೆ ಪ್ರಕಟವಾಗತೊಡಗಿ ಸುಮಾರು ಮೂರು ವರ್ಷಗಳ ಕಾಲ ನಡೆಯಿತು. ಪತ್ರಿಕೆಯು ಎಂ. ನಾರಾಯಣಪ್ರಭು ಅವರ ಸರಸ್ವತೀ ಮುದ್ರಣಾಲಯದಲ್ಲಿ (ಕಂಟೋನ್ಮೆಂಟ್ ಸ್ಟ್ರೀಟ್) ಮುದ್ರಣಗೊಳ್ಳುತ್ತಿತ್ತು. ಈ ಸಂದರ್ಭದಲ್ಲಿ ಮುನ್ನೂರು ಶಿವರಾಮಯ್ಯ, ಐರೋಡಿ ಶಿವರಾಮಯ್ಯ, ಎಂ. ಕೇಶವಯ್ಯ, ಪಾನ್ಯಂ ಸುಂದರಶಾಸ್ತ್ರಿ ಎಸ್. ಶ್ರೀಕಂಠಶಾಸ್ತ್ರಿ ಎಂ. ವಿ. ಶಾಸ್ತ್ರಿ ಎಂ. ಎನ್. ಶ್ರೀನಿವಾಸರಾವ್, ಪರಿಮಿ ಪದ್ಮನಾಭಯ್ಯ, ಕೆ. ರಾಮಸ್ವಾಮೈಯ್ಯಂಗಾರ್, ಪಂಡಿತ ತಾರಾನಾಥ (ಪ್ರೇಮ), ಗೋಪಾಲರಾವ್, ಶ್ರೀರಾಮ ಮುಂತಾದ ಲೇಖಕರು ಪತ್ರಿಕೆಯಲ್ಲಿ ಬರೆಯುತ್ತಿದ್ದರು. ಈ ವೇಳೆಗಾಗಲೇ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಹೊಸಗನ್ನಡ ಸಾಹಿತ್ಯದ ಕೃಷಿ ಸಾಕಷ್ಟು ನಡೆದಿದ್ದು ಈ ಪ್ರಕಾರದ ಎಲ್ಲ ಬರಹಗಳೂ ಪತ್ರಿಕೆಯಲ್ಲಿ ಪ್ರಕಟಗೊಂಡವು. ಎಂ. ಎನ್. ಶ್ರೀನಿವಾಸರಾಯರ 'ಕೊಳಲ ಜೋಗಿ' ಈ ಅವಧಿಯಲ್ಲಿ ಪ್ರಕಟವಾದ ಅತ್ಯುತ್ತಮ ಕಥನ ಕವನಗಳಲ್ಲೊಂದು.[೧೨] ಮುದ್ದಣನನ್ನು ಕುರಿತು ಎರಡು ಮೂರು

---

೯. ಅದೇ, ಅಕ್ಟೋಬರ್ ೧೯೦೦, ಪುಟ ೫೦

೯* ಆಗಿನ ಮೈಸೂರು ವಿದ್ಯಾ ಇಲಾಖೆಯ ಸೆಕ್ರೆಟರಿಗಳಾಗಿದ್ದ ಎಚ್. ಜೆ. ಭಾಭಾ ಅವರು ಪ್ರಾಥಮಿಕ ಶಾಲೆಗಳಲ್ಲಿ ಕನ್ನಡವನ್ನೇ ಕಲಿಸಬೇಕೆಂದು, ಮಾತೃಭಾಷೆಯಲ್ಲಿ ಶಿಕ್ಷಣವನ್ನು ಕೊಡಬೇಕೆಂದು ೧೮೯೬ರ ವೇಳೆಗಾಗಲೇ ಪ್ರತಿಪಾದಿಸಿದ್ದರು. ಆದರೆ ಆ ಕಾಲಕ್ಕೆ ಅದಕ್ಕೆ ಮನ್ನಣೆ ದೊರೆಯಲಿಲ್ಲ. ಇಂದಿಗೂ ಆ ಸಮಸ್ಯೆ ಹಾಗೆಯೇ ಜ್ವಲಂತವಾಗಿ ಉಳಿದಿದೆ.

೧೦. ಅದೇ, ಫೆಬ್ರವರಿ ೧೯೦೧, ಪುಟ ೧೨೨

೧೧. ಸತ್ಯಾಗ್ರಹೀ, ಸಂಪುಟ ೩, ಸಂಚಿಕೆ ೨೫ (೨೫-೮-೧೯೨೫): ''ನವರಾತ್ರಿಯಲ್ಲಿ ಮಂಗಳೂರಿನಿಂದ ಅನೇಕ ವರ್ಷಗಳ ಹಿಂದೆ ಪ್ರಕಟವಾಗುತ್ತಿದ್ದ 'ಸುವಾಸಿನಿ' ಮಾಸಪತ್ರಿಕೆಯು ಪುನಃ ಹೊರಡುವುದೆಂದು ತಿಳಿಯುತ್ತೇವೆ. ಉಡುಪಿಯ ಎನ್. ರಾಜಗೋಪಾಲಕೃಷ್ಣರಾಯರು ಸಂಪಾದಕರು. ಪತ್ರಿಕೆಯು ಸರಸ್ವತೀ ಮುದ್ರಣಾಲಯದಲ್ಲಿ ಮುದ್ರಿಸಲ್ಪಡುವುದು.''

೧೨. ಸುವಾಸಿನಿ, ಜನವರಿ ೧೯೨೬

ಮುಖ್ಯ ಲೇಖನಗಳು (ಶ್ರೀ ಲಕ್ಷ್ಮೀನಾರಾಯಣ ಕವಿ, ಮಹಾಕವಿ ನಂದಳಿಕೆ ಲಕ್ಷ್ಮೀನಾರಣಪ್ಪ)-ಇದರಲ್ಲಿ ಪ್ರಕಟವಾಗಿವೆ. ಹಿಂದಣ 'ಸುವಾಸಿನಿ'ಯ ಸಾಧನೆಯನ್ನು ಗಮನಿಸಿ ಹೇಳುವುದಾದರೆ ಈ ಅವಧಿಯ ಸಾಧನೆ ಕಡಿಮೆಯೆಂದೆನಿಸುತ್ತದೆ. ಒಟ್ಟಿನಲ್ಲಿ 'ಸುವಾಸಿನಿ'ಗೆ ಹೊಸಗನ್ನಡ ಸಾಹಿತ್ಯವನ್ನು ಹುಟ್ಟುಹಾಕಿದ, ನವೋದಯವನ್ನು ನಿರ್ಮಿಸುವಲ್ಲಿ ಭದ್ರಬುನಾದಿಹಾಕಿದ ಬಹುಮುಖ್ಯ ಸಾಹಿತ್ಯಿಕ ಪತ್ರಿಕೆ ಎಂಬ ಬಿರುದು ಸಂಪೂರ್ಣವಾಗಿ ಸಲ್ಲುತ್ತದೆ.

ಸುವಾಸಿನಿಯ ಆದರ್ಶಗಳನ್ನೇ ಅನಂತರ ಪೂರೈಸಿದ ಇನ್ನೊಂದು ಪತ್ರಿಕೆಯೆಂದರೆ ಉಡುಪಿಯಿಂದ ಪ್ರಕಟವಾಗುತ್ತಿದ್ದ '**ಶ್ರೀ ಕೃಷ್ಣಸೂಕ್ತಿ**'.[೧೨*] ಇದು ಮಾಸಪತ್ರಿಕೆಯಾಗಿ ೧೯೦೬ರ ಜನವರಿಯಲ್ಲಿ ಜನ್ಮತಾಳಿತು.[೧೩] ಕರೋಡಿ ಸುಬ್ಬರಾಯರು ಈ ಪತ್ರಿಕೆಯ ಸ್ಥಾಪಕ ಸಂಪಾದಕರು. ಡಿಮ್ಮೈ ಆಕಾರದಲ್ಲಿ ೨೪ ಪುಟಗಳನ್ನೊಳಗೊಂಡಿರುತ್ತಿದ್ದ ಈ ಪತ್ರಿಕೆ ಆರಂಭದಲ್ಲಿ ಉಡುಪಿಯ ಹಿಂದೂ ಮುದ್ರಣಾಲಯದಲ್ಲಿ ಮುದ್ರಿತವಾಗುತ್ತಿತ್ತು. ಆಗ ಈ ಪತ್ರಿಕೆಗಿದ್ದ ವಾರ್ಷಿಕ ಚಂದಾಹಣ ಒಂದೂವರೆ ರೂಪಾಯಿಗಳು; ಬಿಡಿ ಸಂಚಿಕೆ ಎರಡು ಆಣೆಗಳು. ಚಂದಾಹಣಕ್ಕೆ ಬದಲಾಗಿ ಸ್ಟಾಂಪ್ ಕಳುಹಿಸುವವರು ಒಂದು ರೂಪಾಯಿ ಒಂಬತ್ತು ಆಣೆಗಳ ಮೌಲ್ಯದ ಸ್ಟಾಂಪ್ ಕಳುಹಿಸಬೇಕಾಗಿತ್ತು! ಪತ್ರಿಕೆಯ ಮುಖಪುಟದ ಮೇಲ್ತುದಿಯಲ್ಲಿ ''ಶ್ರೀಕೃಷ್ಣಸೂಕ್ತಿ'' ಎಂಬ ಇಂಗ್ಲಿಷ್ ಬರಹ, ಅದರ ಕೆಳಗೆ ಕನ್ನಡದಲ್ಲಿ ''ಶ್ರೀಕೃಷ್ಣಸೂಕ್ತಿ'' ಎಂಬ ಬರಹ, ಅದರ ಅಡಿಯಲ್ಲಿ ಮರದ ಕೆಳಗೆ ಹಸುವೊಂದನ್ನು ಒರಗಿ ಕೊಳಲು ನುಡಿಸುತ್ತಿರುವ ಶ್ರೀಕೃಷ್ಣನ ಚಿತ್ರವಿರುತ್ತಿತ್ತು. ಈ ಚಿತ್ರದ ಕೆಳಗೆ 'ಎ ಹೈಕ್ಲಾಸ್ ಮಂಥ್ಲಿ ಜರ್ನಲ್ ಇನ್ ಕೆನರೀಸ್' ಎಂಬ ಇಂಗ್ಲಿಷ್ ಬರಹವನ್ನು ಹಾಕಲಾಗುತ್ತಿತ್ತು. ಪತ್ರಿಕೆಯ ಒಳಪುಟದ ಆರಂಭದ ಮೇಲ್ತುದಿಯಲ್ಲಿ ಶ್ರೀಕೃಷ್ಣಸೂಕ್ತಿಯೆಂಬ ಬರಹ, ಅದರ ಕೆಳಗೆ

ಕಾಲೇ ವರ್ಷತು ಪರ್ಜನ್ಯಃ ಪೃಥಿವೀ ಸಸ್ಯಶಾಲಿನೀ
ದೇಶೋಽಯಂ ಕ್ಷೋಭರಹಿತಃ ಸಜ್ಜನಾಸ್ಸಂತು ನಿರ್ಭಯಾಃ ॥

ಎಂಬ ಸಂಸ್ಕೃತ ಶ್ಲೋಕವಿರುತ್ತಿತ್ತು. ಸಂಪಾದಕರ ಮಾತುಗಳಾದ ಅನಂತರ ಲೇಖನಗಳಿರುತ್ತಿದ್ದವು. ಮೊದಮೊದಲು ಈ ಪತ್ರಿಕೆ ಲೇಖನಗಳಿಗಾಗಿ ಬಹಳ ಪರದಾಡಬೇಕಾಯಿತು. ಆಗ ಸಂಪಾದಕರೇ ಎರಡು ಮೂರು ಸಂಚಿಕೆಗಳನ್ನು ಬರೆದು ತುಂಬಿಸಿ ಪ್ರಕಟಿಸಿದರೆಂದು ತಿಳಿದುಬರುತ್ತದೆ. ಪತ್ರಿಕೆಯ ಧ್ಯೇಯಗಳನ್ನು ಕುರಿತು ಸಂಪಾದಕರು ಹೀಗೆ ಹೇಳಿಕೊಂಡಿದ್ದಾರೆ:

''ನಮ್ಮ ಸ್ವದೇಶ ಧರ್ಮಶಾಸ್ತ್ರಸಮ್ಮತವಾದ ಕಾರಣಸಮೇತವಾಗಿಯೂ ಈಗ ಪ್ರಚಾರಕ್ಕೆ ಬಂದಿರುವ ಪಾಶ್ಚಿಮಾತ್ಯರ ಭೌತಿಕ ಶಾಸ್ತ್ರಾಧಾರಕವಾಗಿಯೂ ಇರುವಂತೆ ಯಥಾವಿಹಿತವಾಗಿ ವರ್ಣಾಶ್ರಮಧರ್ಮ ವಿಚಾರಗಳು, ನಮ್ಮ ದೇಶದ ಪ್ರಕೃತ ಸ್ಥಿತಿಗತಿ ದುರಾಚಾರ ವ್ಯವಹಾರಗಳು, ಕ್ಷಾಮರೋಗಾದಿ ದುಷ್ಕಾಲಸೂಚಕ ಈತಿಬಾಧೆಗಳು, ತತ್ವವಿಚಾರಪ್ರದಾಯಕಗಳಾದ ಶೋಧನೆಗಳು, ಕೃಷಿ ಕೈಗಾರಿಕೆ ಮೊದಲಾದ ಉದ್ಯೋಗ ಕ್ರಮಗಳು ಇವೇ ಮುಂತಾಗಿ ಅನೇಕ ವಿಷಯಗಳನ್ನು ವರ್ಣಿಸುವೆವು. ಆದುದರಿಂದ ಈ ಮಾಸಪತ್ರಿಕೆಯು

---

೧೨* ಇದಕ್ಕೂ ಮುನ್ನ ''ಹಿತವಾದಿ'' ಎಂಬ ಮಾಸಪತ್ರಿಕೆಯು ೧೯೦೫ರಿಂದ ಮಂಗಳೂರಿನಿಂದ ಪ್ರಕಟವಾಗುತ್ತಿತ್ತೆಂದು ತಿಳಿದುಬರುತ್ತದೆ. ಆದರೆ ಹೆಚ್ಚಿನ ವಿವರಗಳು ಅಲಭ್ಯ.

೧೩. ಕಡೇಕಾರು ರಾಜಗೋಪಾಲಕೃಷ್ಣರಾಯರು ಬದುಕು: ಬರಹ, ಪುಟ xxvii

ಇತರ ವರ್ಣದವರಿಗೂ ಪ್ರಯೋಜನವಾಗಿರುವುದು. ಇತರ ವರ್ಣದವರೆಂದಮೇಲೆ ಅನ್ಯದೇಶೀಯರಾಗಿ ಕಾರ್ಯಾಂತರದಿಂದ ನಮ್ಮ ದೇಶದಲ್ಲಿ ನೆಲೆಗೊಂಡಿರುವ ಮಿಷನ್ನು ಮತಸ್ಥರೇ ಮೊದಲಾಗಿ ಈ ಪತ್ರಿಕೆಯನ್ನು ಸ್ವೀಕರಿಸಬಹುದು. ಏವಂಚ ನಾವು ದೋಷೈಕ ದೃಕ್ಕುಗಳಲ್ಲ. ಸರ್ವರಲ್ಲಿಯೂ ಗುಣದೋಷಗಳೆರಡೂ ಇದ್ದರು ಮಧುಕರನಂತೆ ಗುಣವನ್ನೇ ಗ್ರಹಿಸಿ ಸ್ವೀಕರಿಸುವೆವು. ಯಾವೆಡೆಯಲ್ಲಿದ್ದರೂ ಗುಣವನ್ನು ಮಾತ್ರ ಗ್ರಾಹ್ಯಮಾಡಿ ಸಂಪೂರ್ಣಾಭಿವೃದ್ಧಿಯನ್ನು ಪಡೆಯಬೇಕೆಂಬುದೇ ನಮ್ಮ ಬುದ್ಧಿವಾದಗಳ ಸಾರಾಂಶವಾಗಿದೆ.''[೧೫] ಸಂಪಾದಕರಾದ ಕೆರೋಡಿಯವರು ಹೀಗೆ ಉನ್ನತ ಧ್ಯೇಯಗಳನ್ನಿಟ್ಟುಕೊಂಡು ಪತ್ರಿಕೆಯನ್ನು ಆರಂಭಿಸಿದರಾದರೂ ಅದನ್ನು ಸೂಕ್ತವಾಗಿ ನಡೆಸುವಲ್ಲಿ ಬಹು ಪ್ರಯಾಸ ಪಡಬೇಕಾಯಿತು. ಒಂದು ವರ್ಷ ಮುಗಿಯುವುದರೊಳಗಾಗಿ ಪತ್ರಿಕೆಯ ಸ್ಥಿತಿ ದಿನದಿಂದ ದಿನಕ್ಕೆ ನಿರಾಶಾದಾಯಕವಾಗುತ್ತಲೇ ಹೋಯಿತು. ಪತ್ರಿಕೆಯನ್ನು ನಡೆಸುವುದರಿಂದ ಲಾಭವಿರಲಿ, ಸಂಪಾದಕರು ತಮ್ಮ ಕೈಯಿಂದಲೇ ಸಾಕಷ್ಟು ಹಣವನ್ನು ಕಳೆದುಕೊಳ್ಳಬೇಕಾದ ಪರಿಸ್ಥಿತಿಗೂ ತಲುಪಿದರು. ಪತ್ರಿಕೆಯನ್ನು ಏನೇ ಆಗಲಿ ನಡೆಸಿಯೇ ತೀರಬೇಕೆಂದು ಹೋರಾಟದಲ್ಲಿ ಸಹಜವಾಗಿ ಕೈಸುಟ್ಟುಕೊಂಡರು. ಸಂಪಾದಕರ ಅನೇಕ ಬಗೆಯ ಕೋರಿಕೆ ಚಂದಾದಾರರ ಮುಂದೆ ವ್ಯರ್ಥಾಲಾಪವಾಯಿತು. ಕಡೆಗೆ ಪತ್ರಿಕೆಯನ್ನು ನಿಲ್ಲಿಸಿಬಿಡಬೇಕೆಂಬ ತೀರ್ಮಾನಕ್ಕೂ ಅವರು ತಲುಪಿದರು. ತಾವು ಯಾಕಾಗಿ ಪತ್ರಿಕೆಯನ್ನು ನಿಲ್ಲಿಸಬೇಕಾಗಿ ಬಂತು ಎಂಬುದಕ್ಕೆ ಕಾರಣಗಳನ್ನು ನೀಡಿ, ಅದುವರೆಗೆ ಪತ್ರಿಕೆ ನಡೆಸಲು ಸಹಾಯ ಮಾಡಿದ ಮುದ್ರಕರಿಗೆ, ಲೇಖಕರಿಗೆ, ಚಂದಾದಾರರಿಗೆ ಕೃತಜ್ಞತೆಗಳನ್ನು ಸೂಚಿಸಿ ಕಡೆಯಲ್ಲಿ ಹೀಗೆ ಹೇಳಿಕೊಂಡಿದ್ದಾರೆ:

''ಸ್ವದೇಶಿ ಮಾಸಪತ್ರಿಕೆ ಎಂಬುದು ನಾಡಿನ ನಾಗರೀಕತೆಯ ಸೂಚನೆ. ಪತ್ರಿಕೆಗಳಿಲ್ಲದ ಪ್ರದೇಶವು ಮೂಢರ ನಾಡೆಂದೇ ಭಾವನೆ. ಪತ್ರಿಕೆಗಳಿಗೆ ಪ್ರೋತ್ಸಾಹವಿಲ್ಲದಿದ್ದರೆ ನಾಡಿಗರಲ್ಲಿ ದೇಶಾಭಿಮಾನವಿಲ್ಲವೆಂಬುದು ವ್ಯಕ್ತವಾಗುವುದಿಲ್ಲವೆ? ದೇಶಾಭಿಮಾನವಿಲ್ಲದವರನ್ನು ಶುದ್ಧ ಸ್ವಪ್ರಯೋಜಪರರೆಂದು ತಿಳಿಯಬೇಕಲ್ಲವೆ?.....ಈ ಪತ್ರಿಕಾವೃತ್ತಿಯಿಂದ ನಮ್ಮ ಪ್ರಯೋಜನವಂತಿರಲಿ, ತನ್ನನ್ನು ಕೊಂಡು ತಾನು ಹೋಗುವ ಸ್ಥಿತಿಯಲ್ಲಿದ್ದರೆ ನಮ್ಮ ಪುಣ್ಯೋದಯವೆಂದು ಭಾವಿಸುತ್ತಿದ್ದೆವು. ಆ ಮಾತಂತಿರಲಿ, ಹತ್ತೆಂಟು ರೂಪಾಯಿ ಮಾತ್ರ ನಷ್ಟವಾಗುವ ಸಂಗತಿಯಾಗಿದ್ದರೂ ಚಿಂತೆಯಿರಲಿಲ್ಲ. ಶಾಂತಚಿತ್ತರಾಗಿ ತಾಳಿಕೊಂಡು ವಿಷಯಾಂತರಗಳನ್ನು ವರ್ಣಿಸುತ್ತಿದ್ದೆವಲ್ಲದೆ ಸ್ವವಿಷಯವನ್ನು ಇಷ್ಟುಮಟ್ಟಿಗೆ ವಿಸ್ತರಿಸುತ್ತಿರಲಿಲ್ಲ. ಪ್ರಾರಂಭದ ವರ್ಷದಲ್ಲಿಯೇ ನೂರಾರು ರೂಪಾಯಿ ಕೈಬಿಟ್ಟ ಕಾರಣ ಈ ಹನ್ನೆರಡನೆಯ ಸಂಚಿಕೆಯಲ್ಲಿ ನಮ್ಮ ಭಾರತದ ಹತ್ತೊಂಬತ್ತನೆಯ ಪರ್ವವನ್ನು ಪ್ರಕಟಿಸಬೇಕಾಯಿತು.''[೧೬] ಆದರೆ ಅದೃಷ್ಟವಶಾತ್ ಚಂದಾದಾರರ ಆಶ್ರಯ ದೊರೆತು ಪತ್ರಿಕೆ ನಿಲ್ಲಲಿಲ್ಲ; ಮುಂದುವರಿಯಿತು.

ಎರಡನೆಯ ವರ್ಷದಲ್ಲಿ ಪತ್ರಿಕೆಯಲ್ಲಿ ಕೆಲವು ಗಮನಾರ್ಹ ಬದಲಾವಣೆಗಳಾದವು. ಶ್ರೀಕೃಷ್ಣಸೂಕ್ತಿಯ ಮುಖಪುಟಕ್ಕಾಗಿಯೇ ಹೊಸಕೆರೆ ಚಿದಂಬರಯ್ಯನವರು ರಚಿಸಿದ

---

೧೫. ಶ್ರೀ ಕೃಷ್ಣಸೂಕ್ತಿ, ಸಂಪುಟ ೧, ಸಂಚಿಕೆ ೩, ಮಾರ್ಚ್ ೧೯೦೬
೧೬. ಅದೇ, ಡಿಸೆಂಬರ್ ೧೯೦೬

ಶ್ರೀಕೃಷ್ಣಸೂಕ್ತಿನರಸಂ
ಸ್ವೀಕೃತ ಸುಜ್ಞಾನನೆನಿಸಿ ಮೆರೆದಪ್ರೊಲಂದೀ
ಶ್ರೀಕೃಷ್ಣ ಸೂಕ್ತಿನರರಂ
ಸ್ವೀಕೃತ ಸುಜ್ಞಾನರೆನಿಸಿ ಮೆರೆದಪ್ರುದೀಗಳ್ ॥

ಎಂಬ ಪದ್ಯ ಮೂರನೆಯ ಸಂಚಿಕೆಯಲ್ಲಿ ಸೇರ್ಪಡೆಗೊಂಡಿತು. ಇದೇ ವರ್ಷದಲ್ಲಿ ಪ್ರಸಿದ್ಧ ವಿದ್ವಾಂಸರಾದ ಕಡೇಕಾರು ರಾಜಗೋಪಾಲಕೃಷ್ಣರಾಯರು ಸಂಪಾದಕರಲ್ಲೊಬ್ಬರಾಗಿ ಶ್ರೀಕೃಷ್ಣಸೂಕ್ತಿಯನ್ನು ಸೇರಿಕೊಂಡರು(ಏಪ್ರಿಲ್ ೧೯೦೭). ಇವರ ಆಗಮನದಿಂದ ಪತ್ರಿಕೆ ಸಂಪೂರ್ಣವಾಗಿ ಹೊಸದಾಯಿತು. ಪತ್ರಕರ್ತರ ನುಡಿಗನ್ನಡಿ, ವರ್ತಮಾನ ಸಂಗ್ರಹ, ಪತ್ರಾಂತರಾಭಿಪ್ರಾಯ, ವಿವಿಧ ವಿಷಯಾವಳಿ, ಹಾಸ್ಯಲಹರಿ, ಗ್ರಂಥವಿಮರ್ಶೆ-ಈ ಮೊದಲಾದ ಅಂಕಣಗಳು ಸೇರಿಕೊಂಡವು. ಅದುವರೆಗೆ ಉಡುಪಿಯ ಹಿಂದೂ ಮುದ್ರಣಾಲಯದಲ್ಲಿ ಮುದ್ರಣಗೊಳ್ಳುತ್ತಿದ್ದ ಸೂಕ್ತಿ ಆ ಕಾಲಕ್ಕೆ ಚೆಲುವಾದ ಮುದ್ರಣಕ್ಕೆ ಹೆಸರಾಗಿದ್ದ ಮಂಗಳೂರಿನ ಧರ್ಮಪ್ರಕಾಶ ಮುದ್ರಣಾಲಯದಲ್ಲಿ ಅಚ್ಚಾಗತೊಡಗಿತು. ಎರಡು ವರ್ಷಗಳ ಪ್ರಕಟಣೆಯನ್ನು ಮುಗಿಸಿ ಪತ್ರಿಕೆಯು ಮೂರನೆಯ ವರ್ಷಕ್ಕೆ ಕಾಲಿಟ್ಟಾಗ ಇನ್ನೊಂದು ಸುಧಾರಣೆ ಕಂಡುಬಂದಿತು. ಅದೆಂದರೆ ''ವಿನೋದಿನಿ'' (೧೯೦೫) ಎಂಬ ಮಾಸಪತ್ರಿಕೆಯು ಶ್ರೀಕೃಷ್ಣಸೂಕ್ತಿ ಮಾಸಪತ್ರಿಕೆಯನ್ನು ಸೇರಿಕೊಂಡದ್ದು (ವಿನೋದಿನಿಯು ಕಾರವಾರದಿಂದ ಪ್ರಕಟವಾಗುತ್ತಿತ್ತು). ಅಂದಿನಿಂದ ಶ್ರೀಕೃಷ್ಣಸೂಕ್ತಿಯು 'ಸವಿನೋದ'ವಾದ ಶ್ರೀಕೃಷ್ಣಸೂಕ್ತಿಯೆಂಬ ಹೊಸ ಅಭಿದಾನವನ್ನು ತಾಳಿತು.[೧೬] ಅದೇ ವರ್ಷ ಪತ್ರಿಕೆಯ ಪುಟಸಂಖ್ಯೆಯೂ ೨೪ ಪುಟಗಳಿಂದ ೩೨ಕ್ಕೆ ಏರಿತು. ಅಲ್ಲಿಂದ ೧೯೧೦ರ ವರೆಗೆ ಸಾಂಗವಾಗಿ ನಡೆದ ಪತ್ರಿಕೆ ತನ್ನ ಜೀವಿತದ ಐದು ವರ್ಷಗಳನ್ನು ಮುಗಿಸಿತು. ಅಷ್ಟರಲ್ಲಾಗಲೇ ಕರ್ನಾಟಕದಲ್ಲಿ ಮೇಲ್ಮಟ್ಟದ ಮಾಸಪತ್ರಿಕೆಯೆಂದು ಸೂಕ್ತಿ ಹೆಸರು ಗಳಿಸಿತ್ತು. ಈ ಅವಧಿಯಲ್ಲಿ (೧೯೦೬-೧೯೧೦) ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪ್ರಕಟವಾಗುತ್ತಿದ್ದ ಮಾಸಪತ್ರಿಕೆ ಇದೊಂದೇ. ಕಾರಣಾಂತರಗಳಿಂದ ಸೂಕ್ತಿ ತನ್ನ ಪ್ರಕಟಣೆಯನ್ನು ೧೯೧೦ರ ಡಿಸೆಂಬರ್‌ನಲ್ಲಿ ನಿಲ್ಲಿಸಬೇಕಾಗಿ ಬಂತು. ಅಲ್ಲಿಂದ ಹತ್ತಿರ ಹತ್ತಿರ ಸುಮಾರು ಮೂರು ವರ್ಷಕಾಲ ಅಜ್ಞಾತವಾಸವನ್ನನುಭವಿಸಿದ ಸೂಕ್ತಿ ಮತ್ತೆ ೧೯೧೩ರ ಜುಲೈ ತಿಂಗಳಿನಿಂದ ಪ್ರಕಟವಾಗಲಾರಂಭಿಸಿತು. ಈ ಸಂದರ್ಭದಲ್ಲಿ ಪತ್ರಿಕೆಯ ಪುಟ ಸಂಖ್ಯೆಯು ೩೨ರಿಂದ ೪೮ಕ್ಕೆ ಏರಿತು. ಮಂಗಳೂರಿನ ಧರ್ಮಪ್ರಕಾಶ ಮುದ್ರಣಾಲಯದಲ್ಲಿ ಅಚ್ಚಾಗುತ್ತಿದ್ದ ಸೂಕ್ತಿ ಈಗ ಉಡುಪಿಯ ಸದಾನಂದ ಕೋಆಪರೇಟಿವ್ ಪ್ರಿಂಟಿಂಗ್ ವರ್ಕ್ಸ್ ಕಂಪನಿ ಲಿಮಿಟೆಡ್ ಎಂಬಲ್ಲಿ ಮುದ್ರಣಗೊಳ್ಳತೊಡಗಿತು. ಈ ವೇಳೆಗಾಗಲೇ ಒಂದನೆಯ ಮಹಾಯುದ್ಧದ ಮುನ್ಸೂಚನೆಗಳು ಕಾಣಿಸಿಕೊಳ್ಳತೊಡಗಿದ್ದವು. ಅದರ ಕಾವು ಪತ್ರಿಕೋದ್ಯಮ ರಂಗಕ್ಕೂ ತಟ್ಟಿತು. ಸುಮಾರು ಎರಡು ವರ್ಷ ಕಾಲ ಸಾಂಗವಾಗಿ ನಡೆದ ಸೂಕ್ತಿ ತನ್ನ ಜೀವಿತದ ಏಳನೆಯ ವರ್ಷವನ್ನು ಪೂರ್ಣಗೊಳಿಸಿ ಮತ್ತೆ ೧೯೧೫ರ ಜೂನ್ ತಿಂಗಳಿನಲ್ಲಿ ಕಣ್ಮರೆಯಾಯಿತು. ಅಲ್ಲಿಂದ ಸುಮಾರು ಒಂಬತ್ತು ತಿಂಗಳ ಕಾಲ ಕಣ್ಮರೆಯಾಗಿದ್ದು ೧೯೧೬ರ ಏಪ್ರಿಲ್ ತಿಂಗಳಿನಿಂದ ಪುನಃ ಪ್ರಕಟವಾಗತೊಡಗಿತು. ಕಾಗದದ ಅಭಾವ, ಏರಿದ ಮುದ್ರಣ ವೆಚ್ಚ ಇತ್ಯಾದಿ ಕಾರಣಗಳಿಂದಾಗಿ ಸೂಕ್ತಿಯ ಪುಟಸಂಖ್ಯೆ ೪೮ರಿಂದ ೩೨ಕ್ಕೆ ಇಳಿಯಿತು. ಅಲ್ಲಿಂದ ಸುಮಾರು ಏಳು ತಿಂಗಳ ಕಾಲ

೧೬. ಕಡೇಕಾರು ರಾಜಗೋಪಾಲಕೃಷ್ಣರಾಯರು ಬದುಕು: ಬರಹ, ಪುಟ xxx

ಪ್ರಕಟವಾದ ಸೂಕ್ತಿ ಮತ್ತೆ ನಿಂತು (೧೯೧೬ ಅಕ್ಟೋಬರ್), ಪುನಃ ಏಳು ತಿಂಗಳು ಅಜ್ಞಾತವಾಸವನ್ನನುಭವಿಸಿ ೧೯೧೭ರ ಜೂನ್‌ನಿಂದ ಪ್ರಕಟವಾಗತೊಡಗಿತು. ಆದರೆ ಆಗ ಸೂಕ್ತಿ ನಡೆದದ್ದು ಕೇವಲ ಎರಡೇ ಎರಡು ತಿಂಗಳು. ಜುಲೈ ತಿಂಗಳಲ್ಲಿ, ಆ ವರ್ಷದ ಕಂತಿನಲ್ಲಿ ಉಳಿದಿದ್ದ ಮೂರು ಸಂಚಿಕೆಗಳನ್ನು ಒಟ್ಟಿಗೆ ಪ್ರಕಟಿಸಿ, ತನ್ನ ಬದುಕಿನ ಎಂಟು ವರ್ಷಗಳನ್ನು ಪೂರ್ತಿಗೊಳಿಸಿ ನಿಂತುಹೋಯಿತು.

ಮತ್ತೆ ೧೯೪೭ರಲ್ಲಿ, ಹತ್ತಿರ ಹತ್ತಿರ ಮೂವತ್ತು ವರ್ಷಗಳ ಅನಂತರ, ಸೂಕ್ತಿ ಮತ್ತೊಮ್ಮೆ ತನ್ನ ಪ್ರಕಟನೆಯನ್ನು ಆರಂಭಿಸಿತು (ಅಕ್ಟೋಬರ್). ಈ ಸಂದರ್ಭದಲ್ಲಿ ಸೂಕ್ತಿ ಪ್ರಕಟವಾಗತೊಡಗಿದ್ದು ಕಡೇಕಾರು ರಾಜಗೋಪಾಲಕೃಷ್ಣರಾಯರ ಅಧ್ಯಕ್ಷತೆಯಲ್ಲಿ ಉಡುಪಿಯಲ್ಲಿ ಸ್ಥಾಪಿತವಾಗಿದ್ದ ಸಾಹಿತ್ಯ ಪ್ರಕಾಶನ ಸಮಿತಿ ಎಂಬ ಮಂಡಳಿಯ ಆಶ್ರಯದಲ್ಲಿ. ಡಿಮೈ ಆಕಾರದಲ್ಲಿ ೬೦ಕ್ಕೂ ಹೆಚ್ಚು ಪುಟಗಳನ್ನು ಒಳಗೊಂಡಿರುತ್ತಿದ್ದ ಪತ್ರಿಕೆ ಉಡುಪಿಯ ಕಲ್ಯಾಣ ಪ್ರೆಸ್ಸಿನಲ್ಲಿ ಅಚ್ಚಾಗುತ್ತಿತ್ತು. ಆಗ ವಾರ್ಷಿಕ ಚಂದಾಹಣ ಐದೂವರೆ ರೂಪಾಯಿಗಳೂ ಬಿಡಿ ಸಂಚಿಕೆಯ ಬೆಲೆ ನಾಲ್ಕು ಆಣೆಗಳೂ ಇತ್ತು. ಪತ್ರಿಕೆಯಲ್ಲಿ ಮಂಗಳಾಚರಣೆ, ಮಹಿಳಾ ಮಂಗಳ, ಮಕ್ಕಳ ಬೊಕ್ಕಸ, ನಗೆಗಡಲು, ದೇಶವಿದೇಶ, ಪತ್ರಿಕಾ ಪ್ರಪಂಚ, ಸಂಪಾದಕರ ನುಡಿಗನ್ನಡಿ, ಅದೂ ಇದೂ, ಸಾಹಿತ್ಯ ಪ್ರಪಂಚ, ಗ್ರಂಥಪ್ರಕಾಶನ, ದಿನಚರಿ ಮೊದಲಾದ ವಿಭಾಗಗಳು ಇರುತ್ತಿದ್ದವು. ಈ ಸಂದರ್ಭದಲ್ಲಿ ಪತ್ರಿಕೆಯು ವಿಷಯವೈವಿಧ್ಯದಿಂದ ಕೂಡಿದ್ದಿತಾದರೂ ಹೆಚ್ಚು ಕಾಲ ಬಾಳಲಿಲ್ಲ. ಕೇವಲ ಒಂದು ವರ್ಷ ಮಾತ್ರ ನಡೆದು ೧೯೪೮ರ ಆಗಸ್ಟ್‌ನಲ್ಲಿ ವಿಶೇಷಾಂಕವೊಂದನ್ನು ತಂದು (ಶ್ರೀ ಜಯಂತಿ ವಿಶೇಷಾಂಕ) ತನ್ನ ಒಂಬತ್ತನೆಯ ವರ್ಷವನ್ನು ಮುಗಿಸಿ ಶಾಶ್ವತವಾಗಿ ಅಸ್ತಂಗತವಾಯಿತು.

ಪತ್ರಿಕೋದ್ಯಮ ರಂಗದಲ್ಲಿ ತನ್ನದೇ ಆದ ಹೆದ್ದಾರಿಯೊಂದನ್ನು ನಿರ್ಮಿಸಿ, ತನ್ನ ಮುಂದಿನ ತಲೆಮಾರಿಗೆ ಆದರ್ಶಮಾರ್ಗವೊಂದನ್ನು ಹಾಕಿಕೊಟ್ಟ ಕೀರ್ತಿ ಶ್ರೀಕೃಷ್ಣ ಸೂಕ್ತಿಗೆ ಸಲ್ಲುತ್ತದೆ. ಈ ಪತ್ರಿಕೆ ಪ್ರಾರಂಭದಲ್ಲಿ ಹೆಚ್ಚಾಗಿ ಧಾರ್ಮಿಕ ವಿಷಯಗಳಿಗೇ ಆದ್ಯತೆ ಕೊಡುತ್ತಿತ್ತೆಂಬ ಟೀಕೆಗೊಳಗಾಗಿತ್ತಾದರೂ ಅನಂತರ ತನ್ನ ಬೆಳವಣಿಗೆಯ ಹಾದಿಯಲ್ಲಿ ದಿನದಿಂದ ದಿನಕ್ಕೆ ಸಾಹಿತ್ಯ ಪತ್ರಿಕೆಯಾಗಿ ಸುಧಾರಿಸುತ್ತಾ ಹೋಯಿತು. ಆ ಕಾಲದಲ್ಲಿ ಕರ್ನಾಟಕವು ನಾನಾ ಭಾಗಗಳಾಗಿ ಒಡೆದು ಚೂರಾಗಿದ್ದರೂ ಒಂದೊಂದೂ ಒಂದೊಂದು ಆಡಳಿತ ವ್ಯವಸ್ಥೆಗೆ ಒಳಪಟ್ಟಿದ್ದರೂ ಸಾಹಿತ್ಯ ಹಾಗೂ ಸಾಂಸ್ಕೃತಿಕ ವಲಯದಲ್ಲಿ ಅಖಿಲ ಕರ್ನಾಟಕ ಮಟ್ಟದಲ್ಲಿ ಸಂಬಂಧಸೇತುವೊಂದನ್ನು ನಿರ್ಮಿಸುವಲ್ಲಿ ಸೂಕ್ತಿ ಅಪಾರವಾಗಿ ಶ್ರಮಿಸಿತು. ತನ್ನನ್ನು ಅರಸಿ ಬಂದ ಎಲ್ಲ ಲೇಖಕರಿಗೂ ಅದು ಅವಕಾಶ ಕಲ್ಪಿಸಿಕೊಟ್ಟಿತು. ಆ ಕಾಲದ ಪ್ರಸಿದ್ಧ ವಿದ್ವಾಂಸರೆಲ್ಲ ಬಹುಮಟ್ಟಿಗೆ ಸೂಕ್ತಿಗೆ ಬರೆಯುತ್ತಿದ್ದರು. ಅದರಲ್ಲಿಯೂ ಅಗ್ರಪಾಲು ಆ ಕಾಲದ ಶಾಲಾ ಉಪಾಧ್ಯಾಯರುಗಳಿಗೆ ಸಲ್ಲುತ್ತದೆ; ಅವರುಗಳು ಸೂಕ್ತಿಯನ್ನು ಬೆಳಸಿದರೆನ್ನಬಹುದು.

ಸೂಕ್ತಿಯ ಗುಣಮಟ್ಟವನ್ನು ಹೆಚ್ಚಿಸುವಲ್ಲಿ ನೆರವಾದವರೆಂದರೆ ಶ್ರೀ ಎಂ. ಗೋವಿಂದ ಪೈ, ಬೆನಗಲ್ ರಾಮರಾವ್, ಆರ್. ತಾತಾ, ಹೊಸಕೆರೆ ಚಿದಂಬರಯ್ಯ, ಕೆ. ರಾಮಸ್ವಾಮಿ ಯ್ಯಂಗಾರ್, ಬಿ. ವೆಂಕಟಾಚಾರ್, ಆರ್. ಕೆ. ಇನಾಮತಿ, ಡಿ. ಕೆ. ಭಾರದ್ವಾಜ, ಎಂ. ಡಿ. ಅಳಸಿಂಗರಾಚಾರ್ಯ, ಎಸ್. ಜಿ. ಗೋವಿಂದರಾಜ ಅಯ್ಯಂಗಾರ್, ಕೆರೂರ ವಾಸು ದೇವಾಚಾರ್ಯ, ನಂಜನಗೂಡು ಶ್ರೀಕಂಠಶಾಸ್ತ್ರಿ, ಎಸ್. ಎನ್. ನರಹರಯ್ಯ, ಐರೋಡಿ

ಶಿವರಾಮಯ್ಯ, ಯಜ್ಞನಾರಾಯಣ ಅಡಿಗ, ಬಾಲಸರಸ್ವತಿ, ಎಂ. ಎನ್. ಕಾಮತ್, ಆಲೂರ ವೆಂಕಟರಾವ್, ವೈ. ಕೆ. ರಾಮಚಂದ್ರರಾವ್, ಹುರುಳಿ ಭೀಮರಾವ್, ಮಾಸ್ತಿ ವೆಂಕಟೇಶ ಅಯ್ಯಂಗಾರ್, ಮುಳಿಯ ತಿಮ್ಮಪ್ಪಯ್ಯ, ಕೆ. ನರಹರಿಶಾಸ್ತ್ರಿ, ಹನೂಮಾನ್, ಬಿ. ನರಸಿಂಗರಾವ್, ಪಿ. ಪದ್ಮನಾಭಯ್ಯ, ಎಚ್. ವೆಂಕಟರಾವ್, ತುಳಸೀಬಾಯಿ (ಮಲ್ಲಿಗೆ), ಶಿವರಾಮಕಾರಂತ–ಮುಂತಾದವರು.

ಶ್ರೀಕೃಷ್ಣಸೂಕ್ತಿಯಲ್ಲಿ ಹೊಸಗನ್ನಡ ಸಾಹಿತ್ಯಕ್ಕೆ ಸಂಬಂಧಿಸಿದ ಎಲ್ಲ ಸಾಹಿತ್ಯ ಪ್ರಕಾರಗಳೂ, ಸ್ವತಂತ್ರ ಹಾಗೂ ಅನುವಾದಿತ ಬರಹಗಳೂ ಪ್ರಕಟವಾಗಿವೆ. ಕಾದಂಬರಿ, ಕಥೆ, ಕವನ, ಪ್ರಬಂಧ, ನಾಟಕ ಮೊದಲಾದ ಸಾಹಿತ್ಯಪ್ರಕಾರಗಳ ಸವಿಯನ್ನು ಆ ಕಾಲದ ಓದುಗರಿಗೆ ದೊರಕಿಸಿಕೊಡುವಲ್ಲಿ ಸೂಕ್ತಿಯ ಹಿರಿಮೆ ಕಂಡುಬರುತ್ತದೆ. ಕಾದಂಬರಿಗಳು, ನಾಟಕಗಳು ಈ ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟವಾಗಿವೆ. ವೈಚಾರಿಕ ಲೇಖನಗಳಿಗೂ ಸೂಕ್ತಿ ಎಡೆಮಾಡಿಕೊಟ್ಟಿತ್ತು. ಅನುವಾದಗಳಲ್ಲಿ ಬಂಗಾಳಿ ಭಾಷೆಯಿಂದ ವಿಪುಲವಾಗಿ ಕೃತಿಗಳು ಕನ್ನಡಕ್ಕೆ ಬಂದಿವೆ. ಈ ಪತ್ರಿಕೆಯಲ್ಲಿ ಪ್ರಕಟವಾಗುತ್ತಿದ್ದ ಬರಹಗಳು ಬೋಧಪ್ರದವೂ ವಿಚಾರಪರಿಪ್ಲುತವೂ ಬಹುಜನಾಕರ್ಷಕವೂ ಆಗಿರುತ್ತಿದ್ದವು. ಈ ಲೇಖನಗಳು ಕನ್ನಡಿಗರ ಅಭಿರುಚಿಯನ್ನು ತಿದ್ದುವಲ್ಲಿ ಅಪಾರವಾಗಿ ನೆರವಾದುವು. ಸೂಕ್ತಿಯಲ್ಲಿ ಪ್ರಕಟವಾಗಿರುವ ಬರಹಗಳಲ್ಲಿ ಯಜ್ಞನಾರಾಯಣ ಅಡಿಗರ 'ಮೋಹಿನಿ' (ವಿಶಿಷ್ಟ ಪ್ರಬಂಧ ಸಂಕಲನ), ಎಂ. ಡಿ. ಅಳಸಿಂಗರಾಚಾರ್ಯರ 'ದೇಶಭಾಷೆಯ ಈಗಿನ ಸ್ಥಿತಿ', ಆರ್. ತಾತಾ ಅವರ 'ಪ್ರಭುಲಿಂಗಲೀಲೆ ಕಾವ್ಯದ ವಿಮರ್ಶೆ' ಹಾಗೂ 'ಕೊಟ್ಟೂರು ಬಸವ ಪುರಾಣದ ವಿಮರ್ಶೆ', ಆಲೂರ ವೆಂಕಟರಾಯರ 'ಕನ್ನಡಿಗರ ಭವಿತವ್ಯ', ಎಂ. ಎನ್. ಕಾಮತರ 'ಪ್ರಾಚೀನ ಭಾರತದಲ್ಲಿ ಪತ್ರಲೇಖನ', ಎಸ್. ಜಿ. ರಂಗಸ್ವಾಮಯ್ಯಂಗಾರ್ ಅವರ 'ಹಾರಾಡುವ ಮೃಗಗಳು'-ಈ ಮೊದಲಾದ ಲೇಖನಗಳು ಉಲ್ಲೇಖನೀಯವಾದವುಗಳು. ಶ್ಮಶಾನ ಶೋಕ (ಗ್ರೇ ಕವಿಯ 'ಎ ಎಲಿಜಿ ಇನ್ ಕಂಟ್ರಿ ಚರ್ಚ್‌ಯಾರ್ಡ್' ಎಂಬ ಕವನದ ಅನುವಾದ: ಎಸ್. ಜಿ. ಗೋವಿಂದರಾಜ ಅಯ್ಯಂಗಾರ್), ರಂಗಸೆಟ್ಟಿ (ಕಥನಕವನ, ವಿಲಿಯಂ ಕೌಪರ್ ಎಂಬ ಕವಿಯ ಜಾನ್ ಗಿಲ್ಪಿನ್ ಕವನದ ಅನುವಾದ: ಮಲ್ಲಿಗೆ), ಬಡಸೇವಕರ ಸಂಕಷ್ಟ (ಕೆ. ರಾಮಸ್ವಾಮ್ಯೆಂಗಾರ್) ಮೊದಲಾದ ಕವಿತೆಗಳನ್ನು ಹೆಸರಿಸಬಹುದು. ಇವುಗಳ ಜೊತೆಗೆ 'ಸಮೂಲ ಭಾಷಾಂತರಗಳು' ಎಂಬ ಹೆಸರಿನಲ್ಲಿ ಅನೇಕ ಕವಿತೆಗಳು ಈ ಪತ್ರಿಕೆಯಲ್ಲಿ ಪ್ರಕಟವಾಗಿವೆ. ಆ ಬಗೆಯ ಕವಿತೆಗಳನ್ನು ಮೂಲದೊಂದಿಗೆ ಪ್ರಕಟಿಸಿದ ಪತ್ರಿಕೆಗಳಲ್ಲಿ ಶ್ರೀಕೃಷ್ಣಸೂಕ್ತಿಯೇ ಮೊದಲನೆಯದು. ಇವುಗಳ ಜೊತೆಗೆ ವಿಚಾರವಿಮರ್ಶೆಯೊಡನೆ ಪ್ರಕಟವಾಗಿರುವ ಅನೇಕ ಸಂಪಾದಕೀಯ ಬರಹಗಳು ಬಹು ಬೆಲೆಯುಳ್ಳವಾಗಿವೆ.

೧೯೦೫ರಲ್ಲಿ ಬಂಗಾಲದ ವಿಭಜನೆಯಾದ ಅನಂತರ ದೇಶಾದ್ಯಂತ ಸ್ವದೇಶಾಭಿಮಾನ, ಸ್ವಾತಂತ್ರಪ್ರಜ್ಞೆ ಹೊತ್ತಿ ಉರಿಯತೊಡಗಿದವು. ಸ್ವಾತಂತ್ರ್ಯ ಆಂದೋಲನದ ಚಟುವಟಿಕೆಗಳು ತೀವ್ರಗತಿಯಲ್ಲಿ ನಡೆಯತೊಡಗಿದವು. ಈ ಚಟುವಟಿಕೆಗಳ ಸುದ್ದಿಯನ್ನು ದಕ್ಷಿಣ ಕನ್ನಡ ಜಿಲ್ಲೆಯ ಪ್ರಜೆಗಳಿಗೆ ಒದಗಿಸುವ, ಅವರಲ್ಲಿ ದೇಶಾಭಿಮಾನವನ್ನು ಜಾಗ್ರತಗೊಳಿಸುವ ಉದ್ದೇಶದಿಂದ ಸ್ವದೇಶಾಭಿಮಾನಿ ವಾರಪತ್ರಿಕೆ ಮಂಗಳೂರಿನಲ್ಲಿ ಆರಂಭವಾಯಿತು. ೧೯೦೭ರ ಜನವರಿ ೧ರಂದು ಪ್ರಕಟಣೆಯನ್ನಾರಂಭಿಸಿದ ಈ ಪತ್ರಿಕೆಗೆ ವಡೇರಬೆಟ್ಟು

ಶ್ರೀನಿವಾಸ ಕಾಮತರು ಪ್ರಕಾಶಕರೂ ಸಂಪಾದಕರೂ ಆಗಿದ್ದರು. ಇದು ೧೯೦೭ರಲ್ಲಿ ಆರಂಭವಾದರೂ ಇದರ ಪ್ರಕಟಣೆಯ ಇತಿಹಾಸ ಸುಮಾರು ೧೯೦೦ರಷ್ಟು ಹಿಂದಕ್ಕೆ ಹೋಗುತ್ತದೆ. ಆಗ ಮಂಗಳೂರಿನ ಧನಿಕರೂ ಪ್ರಸಿದ್ಧ ವಕೀಲರೂ ಆಗಿದ್ದ ಉಪೇಂದ್ರ ಪೈ ಎಂಬುವವರು ಇಂಥದೊಂದು ಪತ್ರಿಕೆಯನ್ನು ಹೊರಡಿಸಬೇಕೆಂದು ಆಲೋಚಿಸಿದ್ದರು. ಅವರು ಸಮಾಜ ಸುಧಾರಣೆಯ ಕೆಲಸಗಳಲ್ಲಿಯೂ ಮುಂದಿದ್ದವರು ; ಮಂಗಳೂರಿನ ಕೆನರಾ ಹೈಸ್ಕೂಲಿನ ಏಳಿಗೆಗಾಗಿ ದುಡಿದವರಲ್ಲಿ ಅವರೂ ಒಬ್ಬರು. ಸಮಾಜಸೇವಾಕಾರ್ಯಗಳನ್ನು ಕೈಗೊಳ್ಳುವ ಉದ್ದೇಶದಿಂದ ಕೆಲವೇ ಕೆಲವು ಕಾಲೇಜು ವಿದ್ಯಾರ್ಥಿಗಳನ್ನು ಆರಿಸಿ ಕಲೆಹಾಕಿ ಒಂದು ಸಂಘವನ್ನು ೧೯೦೦ರ ಸುಮಾರಿಗೆ ಅವರು ಸ್ಥಾಪಿಸಿದ್ದರು. ಆ ಯುವ ವಿದ್ಯಾರ್ಥಿಗಳಿಗೆ ಸಮಾಜಸೇವೆಗ ಅಗತ್ಯವಾದ ಧರ್ಮಬೋಧೆ ಮೊದಲಾದ ಶಿಕ್ಷಣವನ್ನು ನೀಡಿ ತರಬೇತುಗೊಳಿಸುತ್ತಿದ್ದರು. ಇಂಥ ಕೆಲಸಕಾರ್ಯಗಳನ್ನು ಸುಸೂತ್ರವಾಗಿ ನಡೆಸಲು ಒಂದು ಮುದ್ರಣಾಲಯವಿದ್ದರೆ ಒಳಿತೆಂಬುದು ಅವರ ಆಲೋಚನೆಯಾಗಿತ್ತು. ಅಂಥ ಮುದ್ರಣಾಲಯವೊಂದನ್ನು ಆದಷ್ಟು ಬೇಗ ಸ್ಥಾಪಿಸಬೇಕೆಂದು ಅವರು ಮನಸ್ಸು ಮಾಡಿದ್ದರು. ಇದೇ ವೇಳೆಗೆ ಮಡಿಕೇರಿಯಲ್ಲಿ ಎನ್. ವೆಂಕಟಾಚಲಯ್ಯ ಎಂಬುವವರು ಶಾರದಾ ಮುದ್ರಣಾಲಯವೆಂಬ ಹೆಸರಿನ ಒಂದು ಚಿಕ್ಕ ಮುದ್ರಣಾಲಯವನ್ನು ನಡೆಸುತ್ತಿದ್ದರು. ಅವರ ಬಳಿ ಒಂದು ಕೈ ಛಾಪಾಯಂತ್ರ, ಸ್ವಲ್ಪ ಅಚ್ಚುಮೊಳೆಗಳು ಮಾತ್ರ ಇದ್ದು ಮುದ್ರಣಾಲಯ ಅಂಥ ಲಾಭದಾಯಕ ಸ್ಥಿತಿಯಲ್ಲಿರಲಿಲ್ಲ. ಈ ವಿಷಯ ತಿಳಿದಿ ಉಪೇಂದ್ರ ಪೈಗಳು ೧೯೦೨ರಲ್ಲಿ ಆ ಮುದ್ರಣಾಲಯವನ್ನು ಕ್ರಯಕ್ಕೆ ಕೊಂಡು ಮಂಗಳೂರಿನಲ್ಲಿ ಸ್ಥಾಪಿಸಿದರು.[೧೬*] ಆ ವೇಳೆಗೆ ತಮ್ಮ ವಿದ್ಯಾಭ್ಯಾಸವನ್ನು ನಿಲ್ಲಿಸಿದ್ದ ಮತ್ತು ಪೈಗಳ ಸಮಾಜ ಸುಧಾರಕ ಸಂಘದ ವಿದ್ಯಾರ್ಥಿಗಳಲ್ಲಿ ಒಬ್ಬರಾಗಿದ್ದ ವಡೇರಬೆಟ್ಟು ಶ್ರೀನಿವಾಸ ಕಾಮತ್ ಅವರು ಮುದ್ರಣಾಲಯಲದ ಮೇಲ್ವಿಚಾರಕರಾಗಿ ನಿಯೋಜಿತರಾದರು. ಪತ್ರಿಕೆಯೊಂದನ್ನು ಹೊರತರುವ ಹಂಬಲ ಪೈಯವರಿಗೆ ಇದ್ದಿತಾದರೂ ಅವರು ೧೯೦೨ರ ಡಿಸೆಂಬರ್ ೨೭ರಂದು ಆಕಸ್ಮಿಕ ಮರಣ ಹೊಂದಿದರು. ಅವರ ನಿಧನಾನಂತರ ಅವರು ರೂಪಿಸಿದ್ದ ತರುಣರ ತಂಡ ಸುಮಾರು ೧೯೦೬ರ ವೇಳೆಗೆ ಪತ್ರಿಕೆಯೊಂದನ್ನು ತರುವ ವಿಚಾರವನ್ನು ತೀವ್ರವಾಗಿ ಪರಿಗಣಿಸಿ ಶ್ರೀನಿವಾಸ ಕಾಮತರ ಮುಂದಾಳತ್ವದಲ್ಲಿ ಸ್ವದೇಶಾಭಿಮಾನಿಯನ್ನು ಹುಟ್ಟುಹಾಕಿತು.

ಸ್ವದೇಶಾಭಿಮಾನಿಯು ಆರಂಭದಲ್ಲಿ ಪಕ್ಷ ಪತ್ರಿಕೆಯಾಗಿ ಪ್ರಕಟವಾಗುತ್ತಿತ್ತು.[೧೭] ಕಿರೀಟ

---

೧೬* ಇದು ದಕ್ಷಿಣಕನ್ನಡ ಜಿಲ್ಲೆಯಲ್ಲಿ ಸ್ಥಾಪನೆಯಾದ ನಾಲ್ಕನೆಯ ಮುದ್ರಣಾಲಯ. 'ಶಾರದಾ ಛಾಪಖಾನೆ' ಎಂಬ ಹೆಸರಿನಲ್ಲಿ ಇಂದು ನಾಡಿನ ಪ್ರತಿಷ್ಠಿತ ಮುದ್ರಣಾಲಯಗಳಲ್ಲೊಂದಾಗಿದೆ.

೧೭. (ಅ) ಸ್ವದೇಶಾಭಿಮಾನಿ, ರಜತೋತ್ಸವ ಸಂಚಿಕೆ (೨೩ ಅಕ್ಟೋಬರ್ ೧೯೩೧) ''ಸ್ವದೇಶಾಭಿಮಾನಿಯನ್ನು ಹೊರಡಿಸುವಾಗ ನಮ್ಮ ನಿಶ್ಚಲ ಹಿತೈಷಿಗಳಿಗೂ ಕೂಡ ಆ ಶಿಶುವಿನ ಆಯುಷ್ಯದ ಕುರಿತು ವಿಧವಿಧದ ಸಂಶಯಗಳಿದ್ದುವು. ಆದಕಾರಣ ಪತ್ರವನ್ನು ಪರೀಕ್ಷಾರ್ಥವಾಗಿ ಪಕ್ಷಪತ್ರಿಕೆಯಾಗಿ ಪ್ರಕಟಿಸಲಾಗಿತ್ತು. ಕ್ರಮೇಣ ಆ ಶಿಶುವು ಬೆಳೆಯುತ್ತ ವಾರಪತ್ರಿಕೆಯಾಯಿತು.''

(ಆ) ಶ್ರೀ ಕೃಷ್ಣಸೂಕ್ತಿ, ಜೂನ್ ೧೯೦೯, ಪುಟ ೧೯೧: ''ಮಂಗಳೂರಿನ ಭಗಿನಿಯಾದ ಸ್ವದೇಶಾಭಿಮಾನಿಯೆಂಬ ಪಕ್ಷಪತ್ರಿಕೆಯು ಜುಲೈ ತಿಂಗಳಿಂದಲೂ ವಾರಪತ್ರಿಕೆಯಾಗಿ ಪ್ರಕಟಿಸಲ್ಪಡುವುದೆಂಬ ಪ್ರಿಯ ವಾರ್ತೆಯನ್ನು ಕರ್ಣಾಕರ್ಣಿತವಾಗಿ ನಾವು ಕೇಳಿರುವೆವು. ಭರತಭೂಮಿಯ ಏಳ್ಗೆಯನ್ನು ಶಾಂತಚಿತ್ತದಿಂದ ಸಮಾಲೋಚಿಸಲೆಳೆಸುವ 'ಸ್ವದೇಶಾಭಿಮಾನಿ'ಯು ವಾರವಾರದಲ್ಲಿ ಹೇರಳವಾಗಿ ವೃದ್ಧಿಹೊಂದಲಿ.''

ಆಕಾರದ ಪ್ರತಿ ಸಂಚಿಕೆಯಲ್ಲಿ ೮ ಪುಟಗಳಿರುತ್ತಿದ್ದವು. ವಾರ್ಷಿಕ ಚಂದಾಹಣ ಒಂದು ರೂಪಾಯಿ ಇತ್ತು. ಎರಡು ಮೂರು ತಿಂಗಳು ಕಳೆದ ಅನಂತರ ಪತ್ರಿಕೆಯು ರಾಯಲ್ ಆಕಾರಕ್ಕೆ ಬದಲಾಗಿ ಪುಟಸಂಖ್ಯೆಯು ೧೦ಕ್ಕೆ ಏರಿತು. ಮೊದಲ ವರ್ಷದ ಕೊನೆಯ ಸಂಚಿಕೆಯನ್ನು ಪ್ರಕಟಿಸುವಾಗ ಸಂಪಾದಕರು ಇದನ್ನು ವಾರಪತ್ರಿಕೆಯಾಗಿ ಹೊರಡಿಸಬೇಕೆಂದು ಆಲೋಚಿಸಿದ್ದರೆಂದು ತಿಳಿದುಬರುತ್ತದೆ. ಆದರೆ ಮುದ್ರಣದ ಅಸೌಕರ್ಯ ಇತ್ಯಾದಿ ಕಾರಣಗಳಿಂದಾಗಿ ಹಾಗೆ ಮಾಡಲು ಸಾಧ್ಯವಾಗಲಿಲ್ಲ. ಸ್ವದೇಶಾಭಿಮಾನಿಯು ೧೯೦೯ರ ವೇಳೆಗೆ ವಾರಪತ್ರಿಕೆಯಾಗಿ ಪ್ರಕಟಗೊಳ್ಳತೊಡಗಿತು; ಪ್ರತಿ ಶುಕ್ರವಾರ ಸರಿಯಾಗಿ ಪ್ರಕಟವಾಗುತ್ತಿತ್ತು. ಪತ್ರಿಕೆಯಲ್ಲಿ ವಿದೇಶ ವೃತ್ತಾಂತ, ರಾಷ್ಟ್ರೀಯ ವಿಷಯಗಳು, ಉತ್ತರ ಹಿಂದುಸ್ಥಾನ, ದಕ್ಷಿಣ ಹಿಂದುಸ್ಥಾನ, ದಕ್ಷಿಣ ಕನ್ನಡ -ಹೀಗೆ ಸುದ್ದಿ ವಿಭಾಗಗಳಿರುತ್ತಿದ್ದವು. ಈ ವಿಷಯಗಳ ಜೊತೆಗೆ ಕಥೆ, ಕವನ, ವಿಚಾರಾತ್ಮಕ ಬರಹಗಳೂ ಪ್ರಕಟವಾಗುತ್ತಿದ್ದವು. ಮುಖಪುಟದಲ್ಲಿ ಎರಡು ವರ್ಣರಂಜಿತ ಕಾಂಗ್ರೆಸ್ ಧ್ವಜಗಳ (ಕೇಸರಿ, ಬಿಳಿ, ಹಸುರು ನಡುವೆ ಚರಕ) ನಡುವೆ ಭಾರತಮಾತೆಯ ಚಿತ್ರ, ಅದರ ಕೆಳಗೆ 'ವಂದೇ ಮಾತರಮ್' ಎಂಬ ದೇವನಾಗರಿ ಬರಹ, ಅದರ ಕೆಳಗೆ

> ದೊರೆಯಲನುಪಮರತ್ನಗಳು ಸಾ
> ಗರವ ಮಥಿಸಲು ಸುರರಿಗದರಿಂ
> ಹರುಷವಾಯಿತೆ ! ಮತ್ತೆ ವಿಶ್ವವ ಸುಡುತ ಬರುತಿರುವ
> ಗರಲಕವರಂಜಿದರೆ ! ಸುಧೆಯನು
> ಮರೆತು ಕ್ಷುದ್ರರ ತೆರದಿ ಕುಳಿತರೆ
> ತೆರಳಬಲ್ಲರೆ ! ತೊರೆದು ಧೀರರು ನಿಶ್ಚಿತಾರ್ಥವನು

-ಎಂಬ ಷಟ್ಪದಿ ಪದ್ಯವೊಂದು ಇರುತ್ತಿತ್ತು. ಮುಖಪುಟದ ಉಳಿದ ಭಾಗವೆಲ್ಲ ಬರೇ ಜಾಹಿರಾತುಗಳಿಂದ ತುಂಬಿರುತ್ತಿತ್ತು. ಒಳಪುಟದ ಆರಂಭದಲ್ಲಿ ಸಂಪಾದಕೀಯ ಬರಹ, ಅನಂತರ ಇತರ ವಿಷಯ ವಿಭಾಗಗಳು ಕ್ರಮವಾಗಿರುತ್ತಿದ್ದವು. ''ಸರಕಾರದ ರಾಜತಂತ್ರವನ್ನು ಜನರಿಗೂ ಜನರ ಆಶೆ, ಮನೋಭಾವಗಳನ್ನು ಸರಕಾರಕ್ಕೂ ಯಥಾಸ್ಥಿತಿಯಾಗಿ ತಿಳಿಯ ಹೇಳುವ'' ಉದ್ದೇಶ ಪತ್ರಿಕೆಯದಾಗಿತ್ತು. ರಾಜಕೀಯ ವಿಚಾರಗಳು, ಸುದ್ದಿಗಳು ಮೊದಲ ಆದ್ಯತೆಯಲ್ಲಿ ಪ್ರಕಟವಾಗುತ್ತಿದ್ದವು. ಸಂಪಾದಕರು ಪ್ರಥಮ ಸಂಚಿಕೆಯ ''ಭಾರತೀಯ ಪತ್ರಿಕಾಕರ್ತರ ಉದ್ದಿಷ್ಟ ಕರ್ತವ್ಯವು'' ಎಂಬ ಲೇಖನದಲ್ಲಿ ಪತ್ರಿಕಾಕರ್ತರ ಕರ್ತವ್ಯವನ್ನು ಹೀಗೆ ಹೇಳಿದ್ದಾರೆ: ''ದೇಶೋನ್ನತಿಯ ಈ ಉತ್ತಮ ಮಾರ್ಗವನ್ನು ಸಾಧಿಸಲಿಕ್ಕೆ ದೇಶಭಾಷೆಯಲ್ಲಿ ರಚಿಸುವ ಪತ್ರಗಳೇ ಸಹಕಾರಿಗಳು. ತಾವು ಗಳಿಸಿದ ವಿದ್ಯೆಯನ್ನು ಸಮುದಾಯಕ್ಕೆ ತಿಳಿಯಹೇಳಿ ಅವರನ್ನು ತಿದ್ದಲಿಕ್ಕೆ ಸುಶಿಕ್ಷಿತರಾದ ಮಹನೀಯರಿಗೆ ಇದೇ ದಾರಿ. ಸ್ವಭಾಷಾ ಪತ್ರಿಕೆಗಳ ಉದ್ದಿಷ್ಟ ಕರ್ತವ್ಯವೂ ಇದೇ.''[೧೮] ಈ ಉದ್ದೇಶ ಸಾಧನೆಯಲ್ಲಿ ಸ್ವದೇಶಾಭಿಮಾನಿಯು ಸಾಕಷ್ಟು ಯಶಸ್ವಿಯಾಯಿತೆಂದೇ ಹೇಳಬೇಕು.

ಪತ್ರಿಕೆಯಲ್ಲಿ ಕಾಲಕಾಲಕ್ಕೆ ಅನೇಕ ಬದಲಾವಣೆಗಳು ಆಗಿವೆ. ೧೯೧೭ರಲ್ಲಿ ಪತ್ರಿಕೆ 'ಡಿಮ್ಮಿ' ಆಕಾರ ಪಡೆದುಕೊಂಡಿತು. ಅದುವರವಿಗೂ ಸ್ವದೇಶಾಭಿಮಾನಿಯನ್ನು ಹುಟ್ಟುಹಾಕಿ

---

೧೮. ಸ್ವದೇಶಾಭಿಮಾನಿ, ಸಂಪುಟ ೧, ಸಂಚಿಕೆ ೧, ಜನವರಿ, ೧೯೦೭

ಅದನ್ನು ಸರ್ವತೋಮುಖವಾಗಿ ಬೆಳಸಿದ ವಿ. ಎಸ್. ಕಾಮತ್ ಅವರು ಜಿಲ್ಲೆಯ ಸಹಕಾರ ಚಳವಳಿಯಲ್ಲಿಯೂ, ಸಿ.ಪಿ.ಸಿ. ಕಂಪನಿಯ ಆಡಳಿತದಲ್ಲಿಯೂ ಸಂಪೂರ್ಣವಾಗಿ ನಿರತರಾಗಿ ಇದರ ಸಂಪಾದಕತ್ವದ ಜವಾಬ್ದಾರಿಯಿಂದ ಬಿಡುಗಡೆಹೊಂದಿದರು. ಅನಂತರ ಓಡ್ಲಮನೆ ಆತ್ಮಾರಾಮಶಾಸ್ತ್ರಿ (೧೯೧೯-೧೯೨೩), ವಿ. ಎಸ್. ಕುಡ್ವ(೧೯೨೩-೧೯೪೯) ಎಂಬುವವರು ಕೆಲಕಾಲ ಸಂಪಾದಕರಾಗಿದ್ದರು. ೧೯೨೭ರಲ್ಲಿ ಪತ್ರಿಕೆಯ ಪುಟಸಂಖ್ಯೆ ೧೦ರಿಂದ ೧೪ಕ್ಕೆ ಹೆಚ್ಚಿತು. ಅದೇ ವರ್ಷದಿಂದ ಸ್ವಯಂಚಾಲಿತ ಮುದ್ರಣಯಂತ್ರದಲ್ಲಿ ಪತ್ರಿಕೆ ಮುದ್ರಣಗೊಳ್ಳತೊಡಗಿತು. ೧೯೨೮ರಿಂದ ವರ್ಷಕ್ಕೊಮ್ಮೆ ಸಚಿತ್ರ ವಿಶೇಷ ಸಂಚಿಕೆಗಳನ್ನು ಪ್ರಕಟಿಸತೊಡಗಿತು. ೧೯೪೨ರ ಜನವರಿಯಿಂದ ವಿಶೇಷ ಸಾಹಿತ್ಯ ಸಂಚಿಕೆಗಳನ್ನು ತಿಂಗಳಿಗೊಂದರಂತೆ ಪ್ರಕಟಿಸಲಾರಂಭಿಸಿತು. ತಿಂಗಳಿಗೆ ಎಂಟು ಪುಟದಂತೆ ವರ್ಷಕ್ಕೆ ೯೬ ಪುಟಗಳ ಸಾಹಿತ್ಯ ಸುಗ್ರಾಸವನ್ನು ಅಂದಿನ ಸಾಹಿತ್ಯ ರಸಿಕರಿಗೆ ಉಣಬಡಿಸಿದ್ದು ಈ ಪತ್ರಿಕೆಯ ಒಂದು ಹೆಗ್ಗಳಿಕೆ. ಅನೇಕ ವರ್ಷಗಳ ಕಾಲ ಇಂಥ ಸಾಹಿತ್ಯ ಸಂಚಿಕೆಗಳು ಪ್ರಕಟವಾಗಿವೆ. ಕನ್ನಡ ನವೋದಯ ಸಾಹಿತ್ಯದ ಬೆಳವಣಿಗೆಯನ್ನು ಅರಿಯಬೇಕಾದರೆ ಇಂಥ ಸಂಚಿಕೆಗಳಲ್ಲಿ ಬಿಡಿಬಿಡಿಯಾಗಿ ಪ್ರಕಟವಾಗಿರುವ ಬರಹಗಳನ್ನು ಖಂಡಿತ ನೋಡಬೇಕಾಗುತ್ತದೆ. ಈ ಪತ್ರಿಕೆಯಲ್ಲಿ ಶ್ರೀ ಎಂ. ಗೋವಿಂದ ಪೈ, ಪಂಜೆ ಮಂಗೇಶರಾವ್ (ಕವಿಶಿಷ್ಯ), ಬೋಳಾರ ಬಾಬಾರಾವ್, ಬೆನಗಲ್ ರಾಮರಾವ್, ರಾವ್ ಸಾಹೇಬ್ ಅನಂತರಾವ್, ಉಳ್ಳಾಲ ಮಂಗೇಶರಾವ್, ಉಗ್ರಾಣ ಮಂಗೇಶರಾವ್, ಎಂ. ಎನ್. ಕಾಮತ್, ಕೆರೋಡಿ ಸುಬ್ಬರಾವ್, ಎಂ. ಟಿ. ವಲ್ಲಭೈಯ್ಯಂಗಾರ್, ಕುದ್ಮುಲ್ ರಂಗರಾವ್ (ದಾಸುಭಟ್ಟ), ಮಾಗಡಿ ರಾಮಸ್ವಾಮಿ ಅಯ್ಯಂಗಾರ್, ಬೈಂದೂರು ಆನಂದರಾವ್, ಓಡ್ಲಮನೆ ಆತ್ಮಾರಾಮಶಾಸ್ತ್ರಿ, ಎಂ. ಗಣಪತಿರಾವ್ ಐಗಳ್, ಕೆ. ನರಹರಿಶಾಸ್ತ್ರಿ, ಮುಳಿಯ ಶಂಕರಭಟ್ಟ, ಹಟ್ಟಿಯಂಗಡಿ ನಾರಾಯಣರಾವ್, ರಾ. ಹ. ದೇಶಪಾಂಡೆ, ಹನುಮಂತರಾವ್ ಮುದವೇಡಕರ್, ಜಿ. ಎನ್. ಲಕ್ಷ್ಮಣ ಪೈ, ಕೊರಡ್ಕಲ್ ಶ್ರೀನಿವಾಸರಾವ್, ಪುಂಡೂರು ಲಕ್ಷ್ಮೀನಾರಾಯಣ ಪುಣಿಂಚಿತ್ತಾಯ, ಶ್ರೀನಿವಾಸ ಪುರುಷೋತ್ತಮಭಟ್, ಕಟಪಾಡಿ ಹೊನ್ನಯ್ಯಸೆಟ್ಟಿ, ಎಸ್. ಜಗನ್ನಾಥ, ಕಾವೇರಿಕಾನ ಪಿ. ಕೃಷ್ಣಭಟ್ಟ, ಎಂ. ವಿ. ಶಾಸ್ತ್ರಿ ನೇತ್ರಿಕೆರೆ ವೆಂಕಪ್ಪಯ್ಯ ಹೊಳ್ಳ, ಕೆ. ಶಿವರಾಮ ಕಾರಂತ, ಕಯ್ಯಾರ ಕಿಞ್ಞಣ್ಣರೈ (ದುರ್ಗಾದಾಸ), ಮಂಜುನಾಥ, ವಿಶ್ವಾಮಿತ್ರ, ಪಡುಕೋಣೆ ರಮಾನಂದ-ಮುಂತಾದ ಅನೇಕ ಲೇಖಕರ ಬರಹಗಳು ಪ್ರಕಟವಾಗಿವೆ. ವರದಕ್ಷಿಣೆ ಮತ್ತು ಸ್ತ್ರೀಧನ, ಪಂಚಮರಿಗೆ ನಮ್ಮ ಕರ್ತವ್ಯ, ಸುರಪಾನ ನಿಷೇಧ, ಮದ್ಯಪಾನ ಬಹಿಷ್ಕಾರ ಮುಂತಾದ ವೈಚಾರಿಕ ಬರಹಗಳೂ ಕನ್ನಡ ಭಾಷೆಯನ್ನು ಒಂದುಮಾಡುವ ವಿಚಾರವು, ಕನ್ನಡ ವಾಙ್ಮಯದ ದೀನಸ್ಥಿತಿ, ಇಂಗ್ಲಿಷೂ ದೇಶಿಭಾಷೆಗಳೂ ರಾಷ್ಟ್ರೀಯ ಭಾಷೆಯ ಆವಶ್ಯಕತೆ, ಮದ್ರಾಸು ಆಧಿಪತ್ಯದಲ್ಲಿ ವಾಙ್ಮಯಾಭಿವೃದ್ಧಿ, ವಾಙ್ಮಯ ಕಲಾಶಾಸ್ತ್ರಗಳ ಅಭಿವೃದ್ಧಿಯ ವಿಚಾರ, ಸ್ವದೇಶಿ ಸಾಹಿತ್ಯ ಮಹತ್ವ ಮುಂತಾದ ಭಾಷೆ, ಸಾಹಿತ್ಯ, ಸಂಸ್ಕೃತಿ ಕುರಿತ ಲೇಖನಗಳೂ ಜಪಾನರ ಸ್ತ್ರೀ ಶಿಕ್ಷಣದ ವಿಮರ್ಶೆ, ಜಪಾನರ ಹಬ್ಬಗಳು ಮುಂತಾದ ಅನ್ಯದೇಶಿಕ ಸಂಸ್ಕೃತಿ ಕುರಿತ ವಿಚಾರಗಳೂ ಪ್ರಕಟವಾಗಿವೆ. ಚಲನಚಿತ್ರ ಈ ಶತಮಾನದ ಅತ್ಯಂತ ಪ್ರಭಾವೀ ಕಲೆ. 'ಹಿಂದೂಸ್ಥಾನದ ಸಿನಿಮಾ ಕೈಗಾರಿಕೆ' ಎಂಬ ಲೇಖನದಲ್ಲಿ ಆ ಕಾಲದ ಚಲನಚಿತ್ರ ಕೈಗಾರಿಕೆಯನ್ನು ಸಮೀಕ್ಷಿಸಲಾಗಿದೆ. ಪುಸ್ತಕ ವಿಮರ್ಶೆ ಎಂಬ ಶೀರ್ಷಿಕೆಯಲ್ಲಿ ಅನೇಕ ಗ್ರಂಥಗಳು ವಿಮರ್ಶೆಗೊಂಡಿವೆ. ಹೀಗೆ ವಿಮರ್ಶೆಗೊಂಡ ಮುಖ್ಯ

ಪುಸ್ತಕಗಳಲ್ಲಿ ಹಟ್ಟಿಯಂಗಡಿ ನಾರಾಯಣರಾಯರ ಆಂಗ್ಲಕವಿತಾವಳಿಯೂ ಒಂದು (೧೯೧೯, ಜೂನ್ ೧೫). ಕುವೆಂಪು ಅವರ 'ಯಾವ ಕಾಲದ ಶಾಸ್ತ್ರವೇನು ಹೇಳಿದರೇನು' ಎಂಬ ಕವನವೊಂದು ಸ್ವದೇಶಾಭಿಮಾನಿಯಲ್ಲಿ ಅಚ್ಚಾಗಿದೆ (೧೯೩೫, ಆಗಸ್ಟ್ ೨). 'ಕ್ರಿಕೆಟ್' ಇಂದು ಅತ್ಯಂತ ಜನಪ್ರಿಯ ಕ್ರೀಡೆಯಾಗಿದೆ. ಮಂಗಳೂರಿನಲ್ಲಿ ೧೯೧೨ರಲ್ಲಿ 'ಹಿಂದೂ ಕ್ರಿಕೆಟ್ ಕ್ಲಬ್' ಎಂಬ ಸಂಘವೊಂದು ಸ್ಥಾಪನೆಯಾದ ವಿಷಯ ಈ ಪತ್ರಿಕೆಯಲ್ಲಿ ಪ್ರಸ್ತಾಪಗೊಂಡಿದೆ.[೧೯]

ಸ್ವದೇಶಾಭಿಮಾನಿಯು ಸುಮಾರು ೫೦ಕ್ಕೂ ಹೆಚ್ಚು ವರ್ಷಗಳ ಕಾಲ ಬದುಕಿ ಬಾಳಿತು. ದಕ್ಷಿಣ ಕನ್ನಡ ಜಿಲ್ಲೆಯ ಪತ್ರಿಕೋದ್ಯಮ ಇತಿಹಾಸದಲ್ಲಿ ೫೦ ವರ್ಷಗಳನ್ನು ಪೂರ್ಣಗೊಳಿಸಿದ ಪತ್ರಿಕೆಗಳಲ್ಲಿ ಇದು ಮೊದಲನೆಯದು. ಈ ಪತ್ರಿಕೆಗೆ ೨೫ ವರ್ಷಗಳು ತುಂಬಿದಾಗ ಅದರ ನೆನಪಿಗಾಗಿ ರಜತೋತ್ಸವ ಸಂಚಿಕೆಯೊಂದನ್ನು ಪ್ರಕಟಿಸಿದೆ.

*ಕೆರೋಡಿ ಸುಬ್ಬರಾಯರು: ಜೀವನ ಮತ್ತು ಕೃತಿಗಳು, ೧೯೮೯, ಪು. ೧೫-೩೦*

---

೧೯. ಅದೇ, ೧, ನವೆಂಬರ್ ೧೯೧೨

# ೭೫. ಗಂಗಾಧರ ಮಡಿವಾಳೇಶ್ವರ ತುರಮರಿ

● ಆರ್. ವೈ. ಧಾರವಾಡಕರ

**ಇದು ಅಚ್ಛೋದ ಸರೋವರ :**

> ಈ ಮೇರೆಗೆ ಮನೋಹರವಾದ ಬನದೊಳಗಿಂದ ಮುಂದಕ್ಕೆ ಹೋಗಲು, ತ್ರೈಲೋಕ್ಯಲಕ್ಷ್ಮಿಯು ತನ್ನ ಸೌಂದರ್ಯವನ್ನು ನೋಡಿಕೊಳ್ಳುವುದಕ್ಕೆ ಮಾಡಿಟ್ಟ ಕನ್ನಡಿಯೋ, ಭೂದೇವಿಯು ಕ್ರೀಡಿಸುವುದಕ್ಕೆ ನಿರ್ಮಾಣಮಾಡಿದ ಸ್ಫಟಿಕದ ನೆಲಮನೆಯೋ, ಮಹಾ ಸಾಗರಗಳ ಉಗಮಸ್ಥಾನವೋ, ಉದಕದ ಅವತಾರವನ್ನು ತಾಳಿ ನೆಲಕ್ಕಿಳಿದ ಆಕಾಶವೋ, ಚಳಿ ಕರಗಿ ಮಡುಗಟ್ಟಿದ ಬೆಟ್ಟವೋ, ಬೊಬ್ಬುಳಿಗೂಡಿ ಸರೋವರದ ರೂಪ ತಾಳಿದ ತ್ರಿಭುವನದ ಪುಣ್ಯರಾಶಿಯೋ, ರಸರೂಪವನ್ನು ಹೊಂದಿದ ಬೆಳದಿಂಗಳೋ, ಜಲರೂಪವನ್ನಾಂತ ಪರಮೇಶ್ವರನ ಅಟ್ಟಹಾಸವೋ, ಉದಕರೂಪವನ್ನು ತಾಳ್ದು ಪಸರಿಸಿ ನಿಂತ ವೈಡೂರ್ಯ ಪರ್ವತವೊ, ಅಥವಾ ನೀರಿನ ರೂಪವನ್ನು ಧರಿಸಿ ಒಂದು ಕಡಿಗೆ ನಿಂತ ಶರತ್ಕಾಲದ ಮೋಡಗಳ ಸಮೂಹವೋ ಏನೋ ಅನ್ನುವ ಹಾಗೆ ತುಂಬಿ ತುಳುಕುವಂಥ ವಿಸ್ತೀರ್ಣ ವಾದದ್ದೊಂದು ನೆಲೆಯಿಲ್ಲದ ತಂಗೊಳವು ಅತಿ ರಮಣೀಯವಾಗಿ ಕಂಗೊಳಿಸಿತು. ಮತ್ತು ಆ ಸರೋವರವು ಮುನಿಜನರ ಮನದಿಂದ ಅಥವಾ ಹರಿಣಗಳ ನಯನಪ್ರಭೆಯಿಂದ ಅಥವಾ ಮೌಕ್ತಿಕ ಕಿರಣಗಳಿಂದ ನಿರ್ಮಿಸಲ್ಪಟ್ಟಂತೆ ಭ್ರಾಂತಿಯನ್ನುಂಟು ಮಾಡುತ್ತಿತ್ತು. ಆ ಸರೋವರದ ನೀರು ಅತಿ ಸ್ವಚ್ಛವಿದ್ದದ್ದರಿಂದ ತಳದೊಳಗಿನ ವಸ್ತುಗಳೆಲ್ಲ ಸ್ಪಷ್ಟವಾಗಿ ಕಾಣಿಸುತ್ತಿರುವವು. ಇದೇ ಕಾರಣದಿಂದ ಆದಕ್ಕೆ ಅಚ್ಛೋದ ಸರೋವರವೆಂದು ಹೆಸರು ಪ್ರಾಪ್ತವಾಗಿತ್ತು.

ಈ ವರ್ಣನೆ ಅಚ್ಛೋದ ಸರೋವರದ ತಂಪಿನಷ್ಟೇ ಹಿತಾವಹವಾಗಿದೆ. ಈ ಭಾಗಗಳನ್ನು ಓದಿದಂತೆಲ್ಲ ಗಂಗಾಧರ ಮಡಿವಾಳೇಶ್ವರ ತುರಮರಿಯವರ ನೆನಹು ಕಣ್ಣೆದುರಿಗೆ ಕಟ್ಟುತ್ತದೆ. ಈಗ ಸುಮಾರು ೫೦ ವರುಷಗಳ ಹಿಂದೆ ವಿದ್ಯಾರ್ಥಿಗಳಾಗಿದ್ದವರನ್ನು ಈ ಪಠ್ಯ ಭಾಗಗಳು ಯಾವುದೋ ಒಂದು ದೂರ ಸುದೂರ ಗಂಧರ್ವಲೋಕಕ್ಕೆ ಕರೆದೊಯ್ಯುತ್ತಿದ್ದವು. ಅಲ್ಲಿ ವಿಸ್ತಾರವಾದ ಸರೋವರ, ಸರೋವರದ ತುಂಬೆಲ್ಲ ಅರಳಿದ, ಅರಳುತ್ತಿರುವ ಕಮಲಗಳು, ಅದರಲ್ಲಿ ಎಲ್ಲ ಕಮಲಗಳನ್ನು ಮಾತನಾಡಿಸಿ ಬರುತ್ತಿರುವ ಸುಗಂಧವಾದ ಮಂದಾನಿಲ, ಸುತ್ತಲೂ ಮುಗಿಲುಮುಟ್ಟುವವರೆಗೆ ಬೆಳೆದು ನಿಂತ ಪರ್ವತಶ್ರೇಣಿಗಳು, ಅಲ್ಲಿಯೇ ಮಗ್ಗುಲಿನಲ್ಲಿದ್ದ ಶಿವಾಲಯ, ಅಲ್ಲಿ ಹಾಲಿನ ಕೆನೆಯನ್ನೇ ಕೂಡಿಸಿ ಮಾಡಿದ್ದರೋ, ಬಿಳಿ ಶಂಖಗಳನ್ನು ಕಟೆದು ನಿರ್ಮಿಸಿದರೋ, ಮೃದುಮೃಣಾಲಗಳನ್ನು ಸಂಚಯಿಸಿ ರಚಿಸಿದರೋ ಎನ್ನುವ ಹಾಗೆ ಕಾಣುವ ಗಂಧರ್ವ ಕನ್ಯೆ. ಈ ಜಗತ್ತು ಈ ಭೌತಿಕ ಜಗತ್ತಲ್ಲ, ಗಂಧರ್ವಲೋಕ ಅನ್ನುವ ಹಾಗೆ ಶೈಲಿಯನ್ನು ಮಿಡಿದರು ಗಂಗಾಧರಯ್ಯನವರು. ಬಾಣ ಕಾದಂಬರಿ ಕನ್ನಡಿಗರಿಗೆ ಪ್ರಿಯವಾದುದು ಮೂಲ ಸಂಸ್ಕೃತದಿಂದಲ್ಲ, ಗಂಗಾಧರಯ್ಯನವರ ಕನ್ನಡ ಅನುವಾದದಿಂದ ಎಂದು ಹೇಳಿದರೆ ಅತಿಶಯೋಕ್ತಿಯೇನಲ್ಲ! ಗಂಗಾಧರಯ್ಯನವರ ಶೈಲಿಯಲ್ಲಿ ವೈಶಂಪಾಯನ ವೃತ್ತಾಂತದ ಭಾವುಕತೆ ಇದೆ ; ಮಹಾಶ್ವೇತೆಯ ನೈರ್ಮಲ್ಯವಿದೆ ; ಅಚ್ಛೋದ ಸರೋವರದ ತಂಪಿದೆ. ಇಂಥ ಗಂಗಾಧರಯ್ಯನವರು ಇನ್ನೂ ಹೆಚ್ಚು ಕೃತಿಗಳನ್ನು ಕನ್ನಡದಲ್ಲಿ ರಚಿಸಿದ್ದರೆ ಎಷ್ಟು ಚೆನ್ನಾಗಿ ಆಗುತ್ತಿತ್ತು ಎಂಬ ಭಾವನೆ ಬಾರದಿರದು. ಗಂಗಾಧರ ಮಡಿವಾಳೇಶ್ವರ ತುರಮರಿ ಎಂಬುದು ಈ ಲೋಕದ ಹೆಸರಲ್ಲ, ಗಂಧರ್ವಲೋಕದ ಹೆಸರು!

ಗಂಗಾಧರರ ಮೂಲ ಊರು ಬೆಳಗಾಂವ ಜಿಲ್ಲೆಯ ಬೈಲಹೊಂಗಲ ತಾಲೂಕದ ತುರಮರಿ ಎಂಬುದು.[೧] ಇವರ ತಂದೆಯ ಹೆಸರು ಚೆನ್ನಬಸಪ್ಪ ಎಂದು. ಇವರು ವೀರಶೈವ ಮತದ ಪಂಚಮಸಾಲಿ ಒಳಪಂಗಡಕ್ಕೆ ಸೇರಿದವರು. ಚೆನ್ನಬಸಪ್ಪನವರಿಗೆ ಗಂಗಪ್ಪ, ವೀರಪ್ಪ ಮತ್ತು ಸಿದ್ಧಲಿಂಗಪ್ಪ ಎಂಬ ಮೂವರು ಗಂಡುಮಕ್ಕಳೂ ಚೆನ್ನಬಸವ್ವ ಎಂಬ ಒಬ್ಬ ಹೆಣ್ಣುಮಗಳೂ ಇದ್ದರು. ಚೆನ್ನಬಸಪ್ಪನವರ ಮನೆತನದ ಮೂಲ ಗುರುಗಳು ಅಥಣಿಯ ಹಿರೇಮಠದ ಮಡಿವಾಳಸ್ವಾಮಿಗಳು. ಮಡಿವಾಳಸ್ವಾಮಿಗಳು ತಮ್ಮ ಅಣ್ಣ-ತಮ್ಮಂದಿರಲ್ಲಾದ ಮನೆತನದ ತಂಟೆಯ ಮೂಲಕ ಅಥಣಿಯನ್ನು ಬಿಟ್ಟು ಬಂದು ತಮ್ಮ ಶಿಷ್ಯರಾದ ಚೆನ್ನಬಸಪ್ಪನವರ ಮನೆಯಲ್ಲಿಯೇ ಬಹಳ ದಿವಸಗಳವರೆಗೆ ಇದ್ದರು. ಇಲ್ಲಿದ್ದಾಗ, ಸ್ವಾಭಾವಿಕ ವಾಗಿಯೇ ಚೆನ್ನಬಸಪ್ಪನವರ ಮಕ್ಕಳ ವಿದ್ಯಾಭ್ಯಾಸದಲ್ಲಿ ಆಸಕ್ತಿವಹಿಸಿ, ಅವರಿಗೆ ವಿದ್ಯೆಯನ್ನು ಹೇಳಿಕೊಡುತ್ತಿದ್ದರು.

ಆಗಿನ ಪರಿಸ್ಥಿತಿಯ ಮೇರೆಗೆ, ಚಿಕ್ಕ ಮಕ್ಕಳಿಗೆ ಮರಾಠಿ, ಮೋಡಿ ಮತ್ತು ಅಲ್ಪಸ್ವಲ್ಪ ಕನ್ನಡವನ್ನು ಅಯ್ಯನವರ ಶಾಲೆಗಳಲ್ಲಿ ಕಲಿಸಲಾಗುತ್ತಿತ್ತು. ಸ್ವಲ್ಪ ಅನುಕೂಲತೆಯಿದ್ದ ಚುರುಕು ವಿದ್ಯಾರ್ಥಿಗಳಿಗೆ ಮಾತ್ರ ಸಂಸ್ಕೃತ ಮತ್ತು ಹಳಗನ್ನಡಗಳನ್ನು ಕಲಿಸಲಾಗುತ್ತಿತ್ತು. ಬಾಲಕ ಗಂಗಾಧರನ ಚುರುಕು ಬುದ್ಧಿಯನ್ನು ಕಂಡ ಮಡಿವಾಳ ಸ್ವಾಮಿಗಳು ಬಾಲಕನಿಗೆ ಕನ್ನಡ, ಮೋಡಿ, ಗಣಿತಗಳನ್ನು ಮಾತ್ರವಲ್ಲದೆ, ಸಂಸ್ಕೃತ ಮತ್ತು ಹಳಗನ್ನಡಗಳ ಅಭ್ಯಾಸವನ್ನೂ ಮಾಡಿಸಿದರು. ಕನ್ನಡಿಯಂತಿದ್ದ ಬಾಲಕನ ಗ್ರಹಣಶಕ್ತಿ ಗುರು ಹೇಳುವ ಮೊದಲೇ ಎಲ್ಲವನ್ನೂ ಗ್ರಹಿಸುತ್ತಿತ್ತು. ಇದರಿಂದ ಸುಪ್ರೀತರಾದ ಮಡಿವಾಳ ಸ್ವಾಮಿಗಳಿಗೆ, ಮಗು ಗಂಗಾಧರನಲ್ಲಿ ಆಸ್ಥೆ ಹೆಚ್ಚಿತು. ಗುರು ಶಿಷ್ಯರ ಪ್ರೀತಿ ವೃದ್ಧಿಂಗತವಾಯಿತು.

ಯುವಕ ಗಂಗಾಧರ ಚಿಕ್ಕವನಿದ್ದಾಗಲೇ ಒಂದು ಸಾಲೀಮಠವನ್ನು ತೆಗೆದು ವಿದ್ಯೆ ಹೇಳತೊಡಗಿದ. ಆದರೆ, ಈ ಸಾಲೀಮಠದ ಗಾವಠೀ ಶಾಲೆಗೆ ಚಿಕ್ಕಮಕ್ಕಳಿಗಿಂತ ವಯಸ್ಸಾದವರೇ ಹೆಚ್ಚು ಜನ ಸೇರಲಾರಂಭಿಸಿದರು. ಬರಬರುತ್ತ ಈ ಸಾಲೀಮಠ ವಯಸ್ಸಾದವರಿಗೆ ವೇಳೆ ಕಳೆಯಲು ಒಂದು ಒಳ್ಳೆಯ ವಿರಾಮ ಸ್ಥಾನವಾಯಿತು. ಅಲ್ಲಿ ಅಭ್ಯಾಸಕ್ಕಿಂತ ಹಿರಿಯರ ಹರಟೆಯೇ ಹೆಚ್ಚಾಗತೊಡಗಿತು. ಸಾಧು ಸ್ವಭಾವದ ಗಂಗಾಧರಯ್ಯನವರಿಗೆ ಜನರ ಮನಸ್ಸನ್ನು ಮುರಿಯಲು ಇಚ್ಛೆಯಾಗಲಿಲ್ಲ. ''ತಮ್ಮ ಮಕ್ಕಳ ವಿದ್ಯೆಯಲ್ಲಿ ಆಸಕ್ತರಾಗಿದ್ದ ಊರ ಕೆಲವು ಹಿರಿಯರಿಗೆ ಈ ವಾತಾವರಣವು ಸರಿ ಕಾಣಲಿಲ್ಲ. ಮಕ್ಕಳು ಕೆಟ್ಟುಹೋಗುತ್ತಿದ್ದಾರೆ ಎಂದು ಅವರು ದೂರಿಕೊಳ್ಳಲಾರಂಭಿಸಿದರು. ಗಂಗಾಧರಯ್ಯನವರ ಮಠದಲ್ಲಿ ಕೇವಲ ಹಾಡು, ಕವಿತೆ, ಬರಹಕ್ಕೆ ಪ್ರಾಧಾನ್ಯತೆ ಕೊಡಲಾಗಿದೆ ಎಂದವರು ಹಲವು ಜನ. ವ್ಯವಹಾರ ಜೀವನಕ್ಕೆ ಅವಶ್ಯವಾಗಿದ್ದ ಬಾಯಿಲೆಕ್ಕ, ಜಮಾಖರ್ಚು ಕಲಿಯದೆ, ಸರಕಾರಿ ನೌಕರಿ ದೊರೆಯದ ಕಾರಣ ಅದನ್ನೇ ಮುಖ್ಯವಾಗಿ ಕಲಿಸಬೇಕು ಎಂದು ಮತ್ತೆ ಕೆಲವರು ಹೇಳಹತ್ತಿದರು. ಅಂತೂ ಸಕಾರಣವೊ, ಅಕಾರಣವೋ ಅವರ ಮಠದಲ್ಲಿ ವಿದ್ಯಾರ್ಥಿಗಳ ಸಂಖ್ಯೆ ಕ್ರಮವಾಗಿ ಕಡಿಮೆಯಾಗುತ್ತ ಬಂತು.''[೨]

---

೧ ಈ ವಿವರಗಳನ್ನು ಸಂಗ್ರಹಿಸಿದವರು ಕಿತ್ತೂರಿನ ವೀರಪ್ಪ ವೀರಭದ್ರಪ್ಪ ನಾಗಸೆಟ್ಟಿ ಮಾಸ್ತರರು. ಕೃತಿ ಅಪ್ರಕಟಿತ.

೨ ವೆಂಕಟೇಶ ಸಾಂಗಲಿ, ಕರ್ಮವೀರ, ೧-೧೨-೧೯೬೮, ಪು. ೧೭.

ಆದರೆ, ಮಡಿವಾಳ ಸ್ವಾಮಿಗಳಿಗೆ ಗಂಗಾಧರಯ್ಯನವರಲ್ಲಿ ಆಸ್ಥೆ ಕಡಿಮೆಯಾಗಲಿಲ್ಲ. ಅವರಿಗೆ ತಮ್ಮ ಹೆಸರು ಗಂಗಪ್ಪನ ಮೂಲಕ ಮುಂದುವರೆಯಬೇಕೆಂದು ಆಸ್ಥೆ ಹುಟ್ಟಿದ್ದರಿಂದ ಮಗುವನ್ನು ತಮ್ಮ ಉಡಿಯಲ್ಲಿ ಹಾಕಿಬಿಡಬೇಕೆಂದು ಚೆನ್ನಬಸಪ್ಪನವರಿಗೆ ಕೇಳಿದರು. ಚೆನ್ನಬಸಪ್ಪನವರೂ ತಮ್ಮ ಆಪ್ತೇಷ್ಟರನ್ನು ಕೇಳಿ ಈ ಸೂಚನೆಗೆ ಒಪ್ಪಿಕೊಂಡರು. ಒಂದು ಶುಭಮುಹೂರ್ತದಲ್ಲಿ ವೀರಶೈವ ಭಕ್ತರ ಮತ್ತು ಜಂಗಮರ ಸಮ್ಮುಖದಲ್ಲಿ ಮಗುವಿಗೆ ಶಾಸ್ತ್ರೋಕ್ತವಾಗಿ ಜಂಗಮದೀಕ್ಷೆಯನ್ನು ಕೊಡಿಸಿ ಗುರುವಿನ ಉಡಿಯಲ್ಲಿ ಹಾಕಿದರು. ಅಂದಿನಿಂದ ಮಗು ಗಂಗಪ್ಪ ಗಂಗಾಧರಯ್ಯನಾದನು.

ಜಂಗಮದೀಕ್ಷೆಯಾದ ಕೆಲದಿನಗಳಲ್ಲಿಯೇ ಗುರು ಮಡಿವಾಳಯ್ಯನವರು ಲಿಂಗೈಕ್ಯರಾದರು. ಇದರಿಂದ ಗಂಗಾಧರಯ್ಯನವರು ತಮ್ಮ ಗುರುಸ್ಥಾನವಾದ ಅಥಣಿಗೆ ಹೋಗಬೇಕಿತ್ತು. ಆದರೆ, ಸಹೋದರ ಪ್ರೀತಿಯ ಮೂಲಕ ತಮ್ಮ ತಂದೆಯ ಮನೆಯಲ್ಲಿಯೇ ಉಳಿದರು. ತಮ್ಮ ಉಳಿದ ಮಕ್ಕಳಂತೆಯೇ ತಂದೆ ಚೆನ್ನಬಸಪ್ಪನವರು ಗಂಗಾಧರಯ್ಯನವರಿಗೂ ತಮ್ಮ ಆಸ್ತಿಯಲ್ಲಿ ಪಾಲು ಕೊಟ್ಟರು. ಹೀಗಾಗಿ, ಗಂಗಾಧರಯ್ಯನವರು ತಮ್ಮ ಗುರುವಿನ ನೆನಹಿಗಾಗಿ ಮಡಿವಾಳೇಶ್ವರ ಎಂದೂ ಮನೆತನದ ನೆನಹಿಗಾಗಿ ಮನೆತನದ ಹೆಸರಾದ ತುರಮರಿ ಎಂದೂ ಹೆಸರನ್ನು ಉಳಿಸಿಕೊಂಡರು. ಮಗು ಗಂಗಪ್ಪ ಗಂಗಾಧರಯ್ಯ ಮಡಿವಾಳೇಶ್ವರ ತುರಮರಿಯಾದರು.

ಗಂಗಾಧರಯ್ಯನವರು ನಿತಾಂತ ಅಭ್ಯಾಸಿಗಳು. ಹಳಗನ್ನಡ, ಸಂಸ್ಕೃತಗಳನ್ನು ಆಳವಾಗಿ ಅಭ್ಯಾಸ ಮಾಡಿದವರು. ಪುರಾಣ ಪ್ರವಚನಗಳಲ್ಲಿ ತುಂಬಾ ಚತುರರು. ಬಸವಪುರಾಣ ಮತ್ತು ಪ್ರಭುಲಿಂಗಲೀಲೆಗಳನ್ನು ಗಂಗಾಧರಯ್ಯನವರ ಬಾಯಿಂದಲೇ ಕೇಳಬೇಕೆಂದು ಜನ ಹೇಳುತ್ತಿದ್ದರು. ಆಗತಾನೆ ಕನ್ನಡ ಶಾಲೆಗಳನ್ನು ಪ್ರಾರಂಭಿಸಿದ್ದ ಸರಕಾರದವರು, ಅಲ್ಲಲ್ಲಿಯ ಕನ್ನಡ ವಿದ್ವಾಂಸರನ್ನು ಹುಡುಕಿ ಕನ್ನಡ ಶಾಲೆಗಳಿಗೆ ಶಿಕ್ಷಕರನ್ನಾಗಿ ನಿಯಮಿಸುತ್ತಿದ್ದರು. ಆಮೇರೆಗೆ, ಗಂಗಾಧರಯ್ಯನವರನ್ನೂ ಬೆಳಗಾವಿ ಜಿಲ್ಲೆಗೊಳಪಟ್ಟ ಹುನಗುಂದ ಶಾಲೆಗೆ ಮುಖ್ಯಾಧ್ಯಾಪಕರನ್ನಾಗಿ ನಿಯಮಿಸಿದರು. ಅವರು ಬಂಕಾಪುರದಲ್ಲಿಯೂ ಕೆಲಸ ಮಾಡಿದರು. ಆಗ ಅವರಿಗೆ ತಿಂಗಳಿಗೆ ೨೫ ರೂಪಾಯಿ ಸಂಬಳ. ಆದರೆ, ಒಂದು ವರ್ಷ ಕಳೆದ ನಂತರ ಎಲ್ಲ 'ಪಂತೋಜಿ'ಗಳ ಸಂಬಳವನ್ನು ಅರ್ಧದಷ್ಟು ಕಡಿಮೆ ಮಾಡಲಾಯಿತು. ಆಮೇರೆಗೆ, ಗಂಗಾಧರಯ್ಯನವರ ಸಂಬಳವೂ ತಿಂಗಳಿಗೆ ೧೨ ರೂಪಾಯಿ ಆಯಿತು. ಇದರಿಂದ ಅಸಂತುಷ್ಟರಾದ ಗಂಗಾಧರಯ್ಯನವರು ಬೇರೆ ನೌಕರಿ ಹಿಡಿಯಬೇಕೆಂದು ಯತ್ನಿಸಿದರು. ಅದು ಸಾಧ್ಯವಾಗದ್ದರಿಂದ ಇದ್ದ ನೌಕರಿಯಲ್ಲಿಯೇ ಮುಂದುವರಿಯಬೇಕಾಯಿತು. ಈ ಬಗ್ಗೆ ಗಂಗಾಧರಯ್ಯನವರು ರಾ. ರಾ. ಫಕೀರಪ್ಪಾ ಶಿವಪ್ಪಾ ಕಿತ್ತೂರ, ಮುಕ್ಕಾಂ ಭಾವಣಿ, ಲಿಂಗಸೂಗೂರು ಇವರಿಗೆ ಬರೆದ ಪತ್ರ ಬೋಧಪ್ರದವಾಗಿದೆ.

* * * * *

ಈ ಮನೋಭಾವದಲ್ಲಿ ಗಂಗಾಧರಯ್ಯನವರು ವಿದ್ಯಾಖಾತೆಯನ್ನು ಬಿಟ್ಟು ಸರ್ವೇಖಾತೆಯಲ್ಲಿ ಸೇರಿದ್ದರೆ, ಕನ್ನಡಕ್ಕೆ ಆಗಬಹುದಾಗಿದ್ದ ನಷ್ಟವನ್ನೂ ಊಹಿಸಬಹುದು. ಆದರೂ, ಈ ಭಾವನೆಯಿಂದ, ಅವರ ಕಲಿಸುವಿಕೆಯ ಮಟ್ಟವೇನೂ ಕಡಿಮೆಯಾಗಲಿಲ್ಲ. ಅವರ ಕಲಿಸುವ ಸಾಮರ್ಥ್ಯ ಮತ್ತು ಪಾಂಡಿತ್ಯಗಳನ್ನು ಕಂಡು ಇತರ ಮರಾಠಿ ಶಿಕ್ಷಕರೂ,

ಅಧಿಕಾರಿಗಳೂ ಅಸೂಯೆಪಡುತ್ತಿದ್ದರು. ಗಂಗಾಧರಯ್ಯನವರ ಹೆಸರಿನ ಮೇಲಿಂದ ಅನೇಕ ಪಾಲಕರು ತಮ್ಮ ಮಕ್ಕಳನ್ನು ಅವರು ಕಲಿಸುವ ಶಾಲೆಗೆ ಕಳಿಸುತ್ತಿದ್ದರು.

ಸನ್ ೧೮೫೫ರ ಜನೆವರಿಯಿಂದ ಧಾರವಾಡ ಚೆನಬಸಪ್ಪನವರು ಬೆಳಗಾವಿಯ ಟ್ರೇನಿಂಗ ಶಾಲೆಯ ಪ್ರಿನ್ಸಿಪಾಲರಾಗಿ ಕೆಲಸ ಮಾಡುತ್ತಿದ್ದರಷ್ಟೇ! ಚೆನಬಸಪ್ಪನವರು ಸನ್ ೧೮೬೧ರಲ್ಲಿ ಬೆಳಗಾವಿ ಜಿಲ್ಲಾ ಡೆಪ್ಯೂಟ ಇನಸ್ಪೆಕ್ಟರರೆಂದು ನೇಮಕ ಹೊಂದಿದರು. ಒಂದು ಸಲ ಅವರು ಗಂಗಾಧರಯ್ಯನವರ ಶಾಲೆಗೆ ಪರೀಕ್ಷೆಗೆ ಹೋದಾಗ ಗಂಗಾಧರಯ್ಯನವರ ವಿದ್ವತ್ತು, ಕಲಿಸುವ ಪದ್ಧತಿಗಳನ್ನು ನೋಡಿ ಮೆಚ್ಚಿಕೊಂಡು ಇವರನ್ನು ಬೆಳಗಾವಿ ಟ್ರೇನಿಂಗ್ ಸ್ಕೂಲಿನಲ್ಲಿ ಅಸಿಸ್ಟಂಟ ಮಾಸ್ತರರನ್ನಾಗಿ ನಿಯಮಿಸಬೇಕೆಂದು ಶಿಫಾರಸು ಮಾಡಿದರು. ಆ ಮೇರೆಗೆ, ಇವರು ಬೆಳಗಾವಿಯ ಟ್ರೇನಿಂಗ ಶಾಲೆಯಲ್ಲಿ ಅಸಿಸ್ಟಂಟ ಮಾಸ್ತರರೆಂದು ವರ್ಗ ಹೊಂದಿದರು. ಬೆಳಗಾವಿಯ ಟ್ರೇನಿಂಗ ಶಾಲೆಯಲ್ಲಿಯಂತೂ ಇವರ ಪಾಂಡಿತ್ಯ ಮತ್ತು ಅಧ್ಯಾಪನ ಜಾಣ್ಮೆಗಳು ಮತ್ತಷ್ಟೂ ಪ್ರಖರಗೊಂಡವು. ಅಲ್ಲಿ ಅವರು ಕನ್ನಡ ಅಧ್ಯಾಪನದ ಶ್ರೀಕಾರ ಹಾಕಿದರೆಂದು ಹೇಳಲಿಕ್ಕೂ ಅಡ್ಡಿಯಿಲ್ಲ. ಇವರ ಕಲಿಸುವಿಕೆಯಿಂದ ಟ್ರೇನಿಂಗ್ ಸ್ಕೂಲಿಗೆ ಬಂದ ವಿದ್ಯಾರ್ಥಿಗಳಲ್ಲಿ ಕನ್ನಡ ವಿಷಯದ ಬಗ್ಗೆ ಆಸಕ್ತಿ ಮತ್ತು ಅಭಿರುಚಿಗಳು ಕುದುರಿದವು. ಯಾಕೆಂದರೆ, ಈವರಗೆ ತರಬೇತಿಗಾಗಿ ಬಂದ ಪಂತೋಜಿ ಮತ್ತು ಅಯ್ಯನವರು ಬೇರೆ ಬೇರೆ ಕನ್ನಡ ಶಾಲೆಗಳಿಂದ ಆಯ್ಕೆಯಾದವರು. ಕನ್ನಡ ಭಾಷೆಯ ಸಾಮಾನ್ಯ ಪರಿಜ್ಞಾನವು ಇಲ್ಲದವರು ಕೆಲವರು ; ಮತ್ತೆ ಕೆಲವರು ಗಿಳಿಪಾಠದಿಂದ ಕವಿತೆಗಳನ್ನು ಓದಿದವರು. ಕಠಿಣವಾದ ಪದ್ಯಭಾಗಗಳನ್ನು ಅರ್ಥ ಮಾಡುವ ಪ್ರಯತ್ನ ಯಾರಲ್ಲಿಯೂ ಇರಲಿಲ್ಲ. ಸುದೈವದಿಂದ ಇಂಥವರಿಗೆ ಅಧ್ಯಾಪಕರಾಗಿ ಬಂದ ಗಂಗಾಧರಯ್ಯನವರು ಕಾವ್ಯಜೀವಿ, ವ್ಯಾಕರಣ ಪಂಡಿತರು. ಎಂಥ ಕಠಿಣ ಪದ್ಯಗಳನ್ನೂ ಸರಳಗೊಳಿಸುವ ಅನ್ವಯ ಸಾಮರ್ಥ್ಯವುಳ್ಳವರು. ಭಾಷಾವಿಷಯವು ಉಳಿದೆಲ್ಲ ವಿಷಯಗಳಿಗಿಂತ ಆಕರ್ಷಕವಾದದ್ದು ಎಂಬ ಅನುಭವವನ್ನು ಗಂಗಾಧರಯ್ಯನವರ ವಿದ್ಯಾರ್ಥಿಗಳು ಕೆಲವೇ ದಿನಗಳಲ್ಲಿ ಕಂಡುಕೊಂಡರು....ವಿದ್ವತ್‌ಖನಿ, ಕಾವ್ಯಕೋಶ ಎಂದು ಕರೆಯಲ್ಪಟ್ಟ ಗಂಗಾಧರಯ್ಯನವರು ಮಾಡಿದ ಗ್ರಂಥರಚನೆ ಗಾತ್ರದಲ್ಲಿ ಅಷ್ಟೇನೂ ದೊಡ್ಡದಲ್ಲ; ಆದರೆ ಗುಣದಲ್ಲಿ ಅಪ್ಪಟ ಚಿನ್ನ. ಮುಖ್ಯವಾಗಿ, ಕನ್ನಡ ಕಾವ್ಯಸಿರಿಯನ್ನು ಜೀವಂತವಾಗಿ ಉಳಿಸಿದ ಪುಣ್ಯ ಅವರ ಪಾಲಿಗೆ ಸಲ್ಲುತ್ತದೆ. ಪಾಂಡಿತ್ಯವೆಂದರೆ ವೇದ ವಿದ್ಯೆ; ಪಂಡಿತರೆಂದರೆ ಸಂಸ್ಕೃತ ವಿಶಾರದರು ಮಾತ್ರ– ಎಂಬ ನಂಬಿಗೆಯು ಬೇರೂರಿದ್ದ ಕಾಲದಲ್ಲಿ ಅವರು ಕಷ್ಟನಿಷ್ಠುರಗಳನ್ನುಂಡು, ಕನ್ನಡ ಭಾಷೆಯ ಸತ್ವ ಸೌಂದರ್ಯದ ಕಡೆಗೆ ಸಮಾಜದ ಗಮನವನ್ನು ಸೆಳೆದರು. ನಾರ್ಮಲ್ ಸ್ಕೂಲಿನಲ್ಲಿ ಗಂಗಾಧರಯ್ಯನವರು ಹೊತ್ತಿಸಿದ ಕನ್ನಡದ ಕಿಡಿಯನ್ನು ಅಲ್ಲಿಯ ವಿದ್ಯಾರ್ಥಿಗಳು ಹೋದಲೆಲ್ಲ ಕೊಂಡೊಯ್ದರು. ಕನ್ನಡ ಕಾವ್ಯಸಂಪತ್ತನ್ನು ಜನತೆಗೆ ಪರಿಚಯ ಮಾಡಿಕೊಡುವುದು, ಭಾಷಾಶುದ್ಧಿಯನ್ನು ಬೆಳೆಸಿ, ಮರಾಠಿ ಪ್ರಭಾವದಿಂದ ಕನ್ನಡವನ್ನು ಮುಕ್ತ ಮಾಡುವುದು-ಗಂಗಾಧರಯ್ಯನವರ ಶಿಷ್ಯವೃಂದವು ಮಾಡಿದ ಮಹತ್ವದ ಕೆಲಸವಾಗಿದೆ. ಗಂಗಾಧರಯ್ಯನವರ ಈ ಗರಡಿಯಲ್ಲಿ ಬೆಳೆದು ಕನ್ನಡಕ್ಕಾಗಿ ಪಣತೊಟ್ಟು ನಿಂತ ಪಾರ್ಥರೆಂದರೆ ಅವರ ವಿದ್ಯಾರ್ಥಿಗಳಾಗಿದ್ದ ಶಾಂತವೀರ ರಾಚಿದೇವ ಕಿತ್ತೂರ ಮತ್ತು ಧೋಂಡೋ ನರಸಿಂಹ ಮುಳಬಾಗಲ ಅವರು.

ಗಂಗಾಧರಯ್ಯನವರು ಬೆಳಗಾವಿಯಲ್ಲಿದ್ದಾಗ ಕೆಲಮಟ್ಟಿನ ಇಂಗ್ಲಿಷದ ಅಭ್ಯಾಸವನ್ನೂ

ಮಾಡಿದರು. ತತ್ಪರಿಣಾಮವಾಗಿ, ಇವರು ಜುಲೈ ೧೮೬೬ರಲ್ಲಿ ಕನ್ನಡ ಟ್ರಾನ್ಸಲೇಟರರೆಂದು ನೇಮಕ ಹೊಂದಿದರು. ಈ ಬಗ್ಗೆ ಹೊರಟ ಸನ್ ೧೮೬೬ರ ಸರಕಾರೀ ಪರಿಪತ್ರ ಹೀಗಿದೆ:

> ರಾ. ರಾ. ಗೋಪಿಂದರಾವ ಕಂಠಿ ಕನ್ನಡ ಟ್ರಾನ್ಸಲೇಟರ ಮತ್ತು ರಾ. ರಾ. ಗಂಗಾಧರ ಮಡಿವಾಳೇಶ್ವರ ಥರ್ಡ ಅಶಿಷ್ಟಾಂಟ ಟ್ರೇಸಿಂಗ ಸ್ಕೂಲ ಈ ಉಭಯತರು ಮೆಹರಬಾನ ಇನಸ್ಪೆಕ್ಟರರವರ ಹುಕುಮಿನಿಂದ ತಮ್ಮ ಸ್ಥಳಗಳನ್ನು ಹೋದ ತಿಂಗಳಲ್ಲಿ ಪರಸ್ಪರ ಬದಲು ಮಾಡಿದರು.[1]

ಟ್ರಾನ್ಸಲೇಟರರೆಂದು ನೇಮಕಹೊಂದಿದ ಮೇಲೆಯೂ ಶ್ರೀಯುತರು ಬರೀ ಸರಕಾರೀ ಕೆಲಸವನ್ನು ಮಾತ್ರ ಮಾಡಿ ತೃಪ್ತರಾಗದೆ, ತಮ್ಮ ಅಭ್ಯಾಸ ಮತ್ತು ಲೇಖನ ಕಾರ್ಯಗಳನ್ನು ಮುಂದುವರಿಸಿದರು. ಆಮೇರೆಗೆ, ಹಳಗನ್ನಡ ಕಾವ್ಯಗಳಿಂದ ಸುಂದರವಾದ ಭಾಗಗಳನ್ನು ಆಯ್ದು, 'ಕವಿತಾ ಸಂಗ್ರಹ' ಎಂಬ ಹೆಸರಿನಲ್ಲಿ ಸನ್ ೧೮೬೭ರಲ್ಲಿ ಪ್ರಸಿದ್ಧಿಸಿದರು.

ಗಂಗಾಧರಯ್ಯನವರಿಗೆ ಇಬ್ಬರು ಹೆಂಡಂದಿರು. ಒಬ್ಬರು ಮುರಗೋಡ ಮಠದವರು; ಇನ್ನೊಬ್ಬರು ಬೈಲಹೊಂಗಲದಲ್ಲಿಯ ಮುನವಳ್ಳಿ ಮಠದವರು. ಆದರೆ, ದುರ್ದೈವದಿಂದ ಇವರಿಬ್ಬರ ಹೊಟ್ಟೆಯಿಂದಲೂ ಶ್ರೀಯುತರಿಗೆ ಸಂತಾನ ಬದುಕಿ ಉಳಿಯಲಿಲ್ಲ. ಆಗ, ಕಿರಿಯ ತಮ್ಮನಾದ ಸಿದ್ಧಲಿಂಗಪ್ಪನಿಗೆ ಜಂಗಮ ದೀಕ್ಷೆ ಕೊಡಿಸಿ, ಅವನನ್ನು ದತ್ತು ಪುತ್ರನನ್ನಾಗಿ ಮಾಡಿಕೊಂಡರು. ಆದರೆ, ಅವನ ಮಕ್ಕಳೂ ಯಾರೂ ಉಳಿಯದೆ, ಅವರ ಶಾಖೆಯೂ ನಿಂತುಹೋಯಿತು. ಅನಂತರ ಹೀರೆಮಠ ಪಾಟೀಲ ಎಂಬ ಹೆಸರಿನಿಂದ ಹುಬ್ಬಳ್ಳಿಯಲ್ಲಿ ಸದ್ಯ ವಾಸ ಮಾಡುತ್ತಿದ್ದು, ಉದ್ಯೋಗ ವ್ಯವಹಾರ ಮಾಡುತ್ತಿದ್ದಾರೆ. ಅವರ ಹೇಳಿಕೆಯ ಮೇರೆಗೆ ಸದ್ಯ ಬೈಲಹೊಂಗಲದಲ್ಲಿ ಎಸ್. ಟಿ. ಸ್ಟ್ಯಾಂಡ್ ಇರುತ್ತಿರುವ ಸ್ಥಳವೂ, ಇತರ ಕೆಲವು ಹೊಲಗಳೂ ಗಂಗಾಧರಯ್ಯನವರಿಂದ ತಮಗೆ ಪಿತ್ರಾರ್ಜಿತವಾಗಿ ಬಂದ ಆಸ್ತಿಗಳು.

ಗಂಗಾಧರಯ್ಯನವರು ೧೮೬೭ 'ಕವಿತಾ ಸಂಗ್ರಹ' ಮಾತ್ರವನ್ನಲ್ಲದೆ, ರಾಜಶೇಖರ ವಿಲಾಸದ ಒಂದು ಮತ್ತು ನಾಲ್ಕನೆಯ ಆಶ್ವಾಸಗಳಿಗೆ ಟೀಕೆಯನ್ನು ಬರೆದರು. ಒಂದನೆಯ ಆಶ್ವಾಸದ ಟೀಕೆ ಸನ್ ೧೮೭೧ರಂದು ಪ್ರಕಟವಾಯಿತು. ನಿಜಗುಣ ಶಿವಯೋಗಿಗಳ 'ಕೈವಲ್ಯಪದ್ಧತಿ'ಗೆ ಟೀಕೆಯನ್ನು ಬರೆದು ಸನ್ ೧೮೭೩ರ ಏಪ್ರಿಲ್ ತಿಂಗಳಲ್ಲಿ ಪ್ರಕಟಿಸಿದರು. ರಾಜಶೇಖರದ ನಾಲ್ಕನೆಯ ಆಶ್ವಾಸದ ಟೀಕೆ ಸನ್ ೧೮೭೪ರ ಡಿಸೆಂಬರ ತಿಂಗಳಲ್ಲಿ ಪ್ರಕಟವಾಯಿತು. ವೀರಭದ್ರಯ್ಯ ಮಡಿವಾಳಯ್ಯ ಪಂಡಿತ ಅವರು ಬರೆದಿದ್ದ ಕನ್ನಡ ೧ನೆಯ ಮತ್ತು ೨ನೆಯ ಪುಸ್ತಕಗಳನ್ನು ಪರಿಷ್ಕರಿಸಿ ಸನ್ ೧೮೭೫ರಲ್ಲಿ ಪ್ರಸಿದ್ಧಿಸಿದರು. ಇದೂ ಅಲ್ಲದೆ, ಬುಕ್ ಕಮಿಟಿಯವರ ಆದೇಶದಂತೆ ಕನ್ನಡ ೩ ಮತ್ತು ೪ನೆಯ ಪುಸ್ತಕಗಳನ್ನು ಬರೆದದ್ದಲ್ಲದೆ, ಅವುಗಳಿಗೆ 'ಓದುವ ರೀತಿ' ಎಂಬ ಉಪಯುಕ್ತವಾದ ಭಾಗವನ್ನು ಸೇರಿಸಿದರು. ಸನ್ ೧೮೭೬-೭೭ರಲ್ಲಿ ತಮ್ಮ ಕೀರ್ತಿಸ್ತೂಪವಾದ 'ಬಾಣಕಾದಂಬರಿ'ಯ ಅನುವಾದವನ್ನು ಮಾಡಿದರು. ಇದಲ್ಲದೆ, ಸನ್ ೧೮೭೪ರ ಸೆಪ್ಟೆಂಬರದಿಂದ ಕನ್ನಡ 'ಮಠ ಪತ್ರಿಕೆ'ಯಲ್ಲಿ 'ಭಾಷಾದರ್ಪಣ' ಎಂಬ ಕನ್ನಡ ವ್ಯಾಕರಣವಿಷಯಕ ವ್ಯಾಖ್ಯಾನವನ್ನು ಬರೆದು ಧಾರಾವಾಹಿಯಾಗಿ ಪ್ರಸಿದ್ಧಿಸಿದರು. ಆದರೆ, ಇದು ಅವರ ಅಕಾಲಿಕ ನಿಧನದ ಮೂಲಕ ಅರ್ಧಕ್ಕೆ ನಿಲ್ಲಬೇಕಾಯಿತು. ೧೮೬೬ರಿಂದ 'ಮಠ ಪತ್ರಿಕೆ'ಯಲ್ಲಿ ಸರಲವೂ, ಸುಬೋಧವೂ ಆದ 'ಶಬ್ದಮಣಿದರ್ಪಣ'ವಿಷಯಕವಾದ ವ್ಯಾಖ್ಯಾನವನ್ನು ಪ್ರಕಟಿಸಿದರು.

---

೧ ಮಠಪತ್ರಿಕೆ-ಅಗಸ್ಟ ೧೮೬೬, ಪು. ೧೧೪.

ಗಂಗಾಧರಯ್ಯನವರು ಬಹುಶ್ರುತ ಪಂಡಿತರಾಗಿದ್ದಂತೆ, ಒಳ್ಳೆಯ ಶಿಕ್ಷಕರೂ ಆಗಿದ್ದರು. ಅವರು ಕೆಲಸ ಮಾಡಿದಲ್ಲೆಲ್ಲ ಶಾಲೆಗಳು ಊರ್ಜಿತ ಸ್ಥಿತಿಗೆ ಬಂದವು. ಈ ಬಗ್ಗೆ ಬಂಕಾಪುರದ ಮಹನೀಯರಿಬ್ಬರು ೮-೭-೧೮೭೫ರಂದು ಶಾಲಾಪತ್ರಕದಲ್ಲಿ ಹೀಗೆ ಬರೆದಿದ್ದಾರೆ :

> ಸೇವಕರು ಮಾಡುವಾ ಬಿನ್ನಹವೇನಂದರೆ ಕೆಳಗೆ ಬರೆದ ನಾಲ್ಕು ಪಂಗ್ತಿಗಳನ್ನು ತಮ್ಮ ಮನೋಹರವಾದ ಮಠಪತ್ರಕದಲ್ಲಿ ಮುದ್ರಿಸಿ ಪ್ರಸಿದ್ಧಿಸುವಿರೆಂದು ಮಹತ್ವಾಕಾಂಕ್ಷೆಯನ್ನು ಧರಿಸಿದ್ದೇವೆ. ಈ ಬಂಕಾಪುರ ಸಾಲಿಯು ಸ್ಥಾಪನವು ತಾರೀಖು ೯ನೇ ಜೂನ ೧೮೫೮ನೇ ಇಸವಿ ದಿವಸಾ ಗಂಗಾಧರ ಮಡಿವಾಳೇಶ್ವರ ಎಂಬುವವರಿಂದ ಸ್ಥಾಪಿಸಲ್ಪಟ್ಟಿತು. ಅವರು ಅಜಮಾಸು ೭-೮ ವರ್ಷದ ತನಕ ಈ ಗ್ರಾಮದಲ್ಲಿ ಮಾಸ್ತರ ಕೆಲಸವನ್ನು ಮಾಡಿ ಕೈಲಾದ ಮಟ್ಟಿಗೂ ಪ್ರಯತ್ನ ಮಾಡಿ ಈ ಸಾಲಿಯನ್ನು ಉತ್ತಮ ಸ್ಥಿತಿಗೆ ತಂದು ಬಹು ಜನರನ್ನು ಯೋಗ್ಯ ಮಾರ್ಗಕ್ಕೆ ಹಚ್ಚಿದರು. ಅನಂತರ ಬಂದಂಥಾ ಮಾಸ್ತರರು ಕೆಲಕೆಲವು ದಿವಸಾ ಈ ಗ್ರಾಮದಲ್ಲಿ ವಾಸ ಮಾಡಿ ತಮ್ಮ ಕೈಲಾದ ಮಟ್ಟಿಗೂ ಶ್ರಮಪಟ್ಟು ಮೊದಲಿನ ಸ್ಥಿತಿಯನ್ನು ಕೆಡಿಸಿ ಸಾಲಿಯನ್ನು ಬಂದು ಸುದ್ಧಾ ಮಾಡಿಸಿಬಿಟ್ಟರು.

## ಗಂಗಾಧರಯ್ಯನವರ ಕೃತಿಗಳು

### ಶಬ್ದಮಣಿದರ್ಪಣದ ವ್ಯಾಖ್ಯಾನ (೧೮೬೬)

ಶಬ್ದಮಣಿದರ್ಪಣ ಕನ್ನಡ ವ್ಯಾಕರಣ ಗ್ರಂಥಗಳಲ್ಲಿ ವಿಶಿಷ್ಟವಾದ ಸ್ಥಾನವನ್ನು ಪಡೆದ ಗ್ರಂಥ. ಸಂಬಂಧ, ಅಭಿಧೇಯ, ಶಕ್ಯಾನುಷ್ಠಾನ, ನಿಜೇಷ್ಟಸಿದ್ಧಿಗಳ ಮೂಲಕ ಉಪಾದೇಯ ವಾಗಬೇಕಾದ ಗ್ರಂಥ. ''ಕರ್ನಾಟಕದೊಳ್ ಪರಿಕಿಸೆ ಶಬ್ದಜ್ಞನಾವನೊರ್ವನೆ ಕವಿ ಕುಂಜರ ಭಾಪುಕೇಶವರಾಜ'' ಎಂದು ಕವಿಮಲ್ಲನೆಂಬವನು ಕ್ರಿ.ಶ. ೧೪೦೦ರಲ್ಲಿ ಈ ಗ್ರಂಥದ ಬಗ್ಗೆ ಉದ್ಗಾರ ತೆಗೆದನು. ಇಂಥ ಗ್ರಂಥದ ಪರಿಚಯ ಕನ್ನಡ ಜನತೆಗಿರಬೇಕೆಂಬ ದೃಷ್ಟಿಯಿಂದ 'ಮಠಪತ್ರಿಕೆ'ಯ ಜೂನ್ ೧೮೬೬ರ ಸಂಚಿಕೆಯಿಂದ ಮೊದಲುಗೊಂಡು ತಾವು ಬದುಕಿರುವವರೆಗೂ ಗಂಗಾಧರಯ್ಯನವರು ಧಾರವಾಹಿಯಾಗಿ ಈ ಗ್ರಂಥದ ಸೂತ್ರಗಳನ್ನು ಕೊಟ್ಟು ತಮ್ಮ ವ್ಯಾಖ್ಯಾನವನ್ನು ಬರೆದರು.

* * * * *

### ಶಬ್ದಮಂಜರಿ (೧೮೬೯)

ಕನ್ನಡ ಸಾಹಿತ್ಯದ ಅಭ್ಯಾಸಿಗಳಿಗೆ ಸರಿಯಾದ ಕೋಶ ದೊರೆಯದ್ದರಿಂದ ಕಾವ್ಯಾಭ್ಯಾಸಕ್ಕೆ ತುಂಬಾ ಅನಾನುಕೂಲವಾಗುತ್ತಿತ್ತು. ಇದನ್ನರಿತ ವಿದ್ಯಾಖಾತೆಯ ಅಧಿಕಾರಿಗಳು ಒಂದು ಕೋಶವನ್ನು ರಚಿಸುವಂತೆ ಗಂಗಾಧರಯ್ಯನವರನ್ನು ಕೇಳಿಕೊಂಡರು. ಅದರ ಫಲವೇ ಸನ್ ೧೮೬೯ರಲ್ಲಿ ಪ್ರಕಟವಾದ 'ಶಬ್ದಮಂಜರಿ' ಎಂಬ ಬೃಹತ್ಕೋಶ. ೫೮೬ ಪುಟದ ಈ ಗ್ರಂಥ ಬೆಂಗಳೂರಿನ 'ವಿಚಾರದರ್ಪಣ' ಮುದ್ರಣಾಲಯದಲ್ಲಿ ಎಚ್. ನರಸಿಂಹಯ್ಯ ಎಂಬವರಿಂದ ಮುದ್ರಿತವಾಯಿತು. ಬೆಲೆ ನಾಲ್ಕು ರೂಪಾಯಿ. ಈ ಗ್ರಂಥದ ಪ್ರಕಟಣೆಗಾಗಿ ಅಂದಿನ ಮುಂಬಯಿ ಸರಕಾರದವರು ೪೦೦೦ ರೂಪಾಯಿ ಧನಸಹಾಯ ಮಾಡಿದರು. ಈ ಕೋಶವನ್ನು ರಚಿಸಿದಾಗ ಗಂಗಾಧರಯ್ಯನವರು ಬೆಳಗಾವಿಯಲ್ಲಿ ಟ್ರಾನ್ಸಲೇಶನ್ ಎಗ್ಜಿಬಿಶನರ್ ಆಗಿದ್ದರು. ಲೇಖಕರು ಈ ಕೋಶವನ್ನು ಕನ್ನಡ ವಿದ್ಯಾಪೋಷಕರಾದ ರಸೆಲ್‌ರವರಿಗೆ ಅರ್ಪಿಸಿದ್ದಾರೆ.

ಈ ಕೋಶವನ್ನು ರಚಿಸುವ ಅವಶ್ಯಕತೆಯನ್ನು ಕುರಿತು ಗ್ರಂಥ ಪ್ರಾರಂಭದ ಸೂಚನೆಯಲ್ಲಿ ಲೇಖಕರು ಹೀಗೆ ಹೇಳಿದ್ದಾರೆ:

> ರಾಜಶೇಖರ ವಿಳಾಸ, ವೃಷಭೇಂದ್ರ ವಿಜಯ, ಶಬರ ಶಂಕರ ವಿಳಾಸ, ಜಯಮಿನಿ ಮುಂತಾದ ಪ್ರಾಕ್ಕಾವ್ಯಗಳನ್ನು ಕಲಿಯುವವರಿಗೆ ಸಂಸ್ಕೃತ ಕೋಶಗಳೂ, ಹಳೆಗನ್ನಡ ಕೋಶಗಳೂ ಬಹು ಪ್ರಯೋಜನವಾದವುಗಳು. ಈ ಕೋಶಗಳು ಪದ್ಯಾತ್ಮಕ ರೂಪದಿಂದಿರುತ್ತವೆ. ಕಾವ್ಯಗಳನ್ನು ಕಲಿಯುವವರು ಇವುಗಳನ್ನು ರೂ ಹಾಕಿ ಪಾಠ ಮಾಡುತ್ತಾರೆ. ಅವರು ಬರೇ ಬಾಯಪಾಠವಾಗಿ ಅವುಗಳೊಳಗಿನ ಯಾವತ್ತು ಶಬ್ದಗಳ ಅರ್ಥ ತಿಳಿದು ಸಮಯಕ್ಕೆ ನೆನಪಾಗುವದು ಕಷ್ಟವಾಗುತ್ತದೆ. ಮೊದಲು ಪಾಠ ಮಾಡುವದೇ ಪ್ರಯಾಸ. ಪಾಠವಾದಾಗ್ಯೂ ಅವುಗಳೊಳಗಿನ ಗೂಢಶಬ್ದಗಳ ಅರ್ಥವು ಟೀಕಾ ನೋಡದೆ ಪಂಡಿತರಿಗೆ ಸಹ ತಿಳಿಯುವದು ಅಸಾಧ್ಯ. ಇನ್ನು ಹೊಸದಾಗಿ ಕಲಿಯುವವರಿಗೆ ತಿಳಿಯುವದು ದುರ್ಲಭವೇ ಸರಿ. ಈ ತೊಂದರೆಗಳು ದೂರಾಗುವಂತೆ ಒಳ್ಳೆ ಪ್ರಸಿದ್ಧವಾದ ಕೋಶಗಳೊಳಗಿನ ಉಪಯೋಗವುಳ್ಳ ಹಳೆಗನ್ನಡ ಶಬ್ದಗಳನ್ನೂ ಸಂಸ್ಕೃತ ಶಬ್ದಗಳನ್ನೂ ಅಕ್ಷರಾನುಕ್ರಮವಾಗಿ ಕೂಡಿಸಿ, ಸುಲಭವಾಗಿ ತಿಳಿಯುವ ಹಾಗ ಕನ್ನಡದಿಂದ ಅರ್ಥ ಬರೆದು, ಒಂದು ಕೋಶವನ್ನು ಮಾಡಬೇಕೆಂದು, ವಿದ್ಯಾಖಾತೆಯೊಳಗಿನ ಅಧಿಕಾರಿಗಳು ನನಗೆ ಸೂಚಿಸಿದ್ದರಿಂದ, ಇವರ ಸೂಚನೆಯನ್ನು ನಾನು ಆದರಪೂರ್ವಕವಾಗಿ ಶಿರಸಾಮಾನ್ಯ ಮಾಡಿಕೊಂಡು, ಅಮರಕೋಶ, ಕರ್ನಾಟಕ ಶಬ್ದಮಂಜರಿ, ಕಬ್ಬಿಗರ ಕೈಪಿಡಿ, ಪದ್ಯನಾನಾರ್ಥ ಎಂಬ ಸರ್ವಮಾನ್ಯವಾದ ಪ್ರಾಚೀನ ಕೋಶಗಳೊಳಗಿನ ಉಪಯೋಗವುಳ್ಳ ಶಬ್ದಗಳನ್ನು ತಕ್ಕೊಂಡು, ಈ 'ಶಬ್ದಮಂಜರಿ' ಎಂಬ ಕೋಶವನ್ನು ಮಾಡಿ ವಿದ್ಯಾಖಾತೆಯ ಅಧಿಕಾರಿಗಳಾದ ಮ. ರಸಲ ಸಾಹೇಬ ಬಾಹಾದೂರರವರಿಗೆ ಬಹು ನಮ್ರತೆಯಿಂದ ಕಾಣಿಕೆ ಕೊಟ್ಟಿದ್ದೇನೆ.

ಇದರ ಪ್ರಸ್ತಾವನೆಯಲ್ಲಿ ಶ್ರೀ ಅನಾಡ ಚನವೀರಪ್ಪನವರು ಹೀಗೆ ಹೇಳಿದ್ದಾರೆ:

> ಶ್ರೀಮತ್ಸಮಸ್ತ ಲೋಕದೊಳ್ ಜನರ್ಗತ್ಯಾವಶ್ಯಕವಾದ ನಾನಾವಿಧಮಪ್ಪ ಭಾಷೆಗಳೊಳ್ ಆಯಾಯ ದೇಶದವರಿಂದ ಪ್ರಸಿದ್ಧಮಾದ ಭಾಷೆಗಳಲ್ಲಿ ಆ ದೇಶದ ಸಮರ್ಥ ಕವಿಗಳಿಂದನೇಕ ಗ್ರಂಥಗಳು ರಚಿಸಲ್ಪಟ್ಟಿರುತ್ತವಷ್ಟೆ. ಆದರೆ ನಮ್ಮ ಈ ಕರ್ನಾಟಕಸ್ಥರಿಗೆ ಹಿಂದಕ್ಕೆ ರಚಿಸಿದ ಗ್ರಂಥಗಳ ಅಭ್ಯಾಸಮಂ ಮಾಡಿ ಅದರೊಳಿರ್ಪ ಭಾಷೆಯ ಸ್ವಾರಸ್ಯಮಂ ತಿಳಕೊಳ್ಳಲಿಕ್ಕೆ ಅಂಥ ಗ್ರಂಥವು ಇಲ್ಲದ್ದು ನೋಡಿ ಈ ಕೋಶವನ್ನು ತಯಾರಿಸಿರುತ್ತದೆ...(ಕನ್ನಡ ಗ್ರಂಥಗಳು) ಹಳೆಗನ್ನಡ, ಹೊಸಗನ್ನಡ, ಕೂಡಿರುವದರಿಂದ ಆ ಗ್ರಂಥಗಳಲಿರ್ಪ ಭಾವಂಗಳನರಿಯದೆ ಎಷ್ಟೋ ಜನರು ಕಷ್ಟ ಪಡುವದನ್ನೂ ಮತ್ತು ನಮ್ಮ ದೇಶದ ಸಾಲೆಯ ಮಾಸ್ತರರಿಗೆ ಬೀಳುವ ತೊಂದರೆಯನ್ನೂ ಮನೆಯಲ್ಲಿ ಅಭ್ಯಾಸ ಮಾಡುವ ವಿದ್ಯಾರ್ಥಿಗಳ ಅಡಚಣಿಯನ್ನೂ ಕಂಡು ವೇದಶಾಸ್ತ್ರ ಸಂಪನ್ನರಾಗಿದ್ದ ಕೈ. ವಾ. ಗಂಗಾಧರಯ್ಯನವರು ಬಹು ಶ್ರಮಪಟ್ಟು ಈ ಯಾವತ್ತೂ ತೊಂದರೆಗಳನ್ನು ಮಾರ್ಪಡಿಸುವದಕ್ಕೆ ಯೋಗ್ಯವಾದ ಒಂದು ಶಬ್ದಮಂಜರಿಯನ್ನು ರಚಿಸಿದರು....

ಈ ಕೋಶದಲ್ಲಿ ಶಬ್ದಗಳ ಅರ್ಥಗಳು ಕೇವಲ ''ಸುಲಭವಾಗಿ ತಿಳಿಯುವ ಹಾಗೆ'' ಮಾತ್ರ ಲೇಖಕರು ಮಾಡಿರದೆ, ಅದಕ್ಕೂ ಹೆಚ್ಚಿನ ಬಹು ಮಹತ್ವದ ಮತ್ತು ಶಾಸ್ತ್ರೀಯವಾದ ಕೆಲಸವನ್ನೂ ಮಾಡಿದ್ದಾರೆ. ಅದು ಪರಿಪೂರ್ಣವಾಗಿರದಿದ್ದರೂ, ಆ ದಿಶೆಯ ಪ್ರಯತ್ನವನ್ನು ಇಲ್ಲಿ ಕಾಣುತ್ತೇವೆ. ಅದೆಂದರೆ, ಕನ್ನಡ ಕೋಶದಲ್ಲಿ ಕಂಡುಬರುವ ಶಬ್ದಗಳು ಸಂಸ್ಕೃತದವೇ, ಕನ್ನಡದವೇ, ವ್ಯಾಕರಣದಲ್ಲಿ ಅವು ಯಾವ ವಿಭಾಗದಲ್ಲಿ ಬರುತ್ತವೆ ಎಂಬುದನ್ನೂ ಸೂಚಿಸಿದ್ದಾರೆ. ಈ ರೀತಿ ಶಬ್ದಗಳ ಒಂದು ತೌಲನಿಕ ಅಭ್ಯಾಸದ ಪರಿಚಯವೂ ಇಲ್ಲಿ ಕಂಡುಬರುತ್ತದೆ. ಉದಾಹರಣೆಗೆ :

ಅಜಾಜೀವ, ಸಂ. (ನಾ) ಕುರಿಗಳನ್ನು ಕಾಯುವವ, ಕುರುಬ

ಅಜಿತ, ಸಂ.(ವಿ) ಸೋಲದಂಥ ೨. (ನಾ) ಶಿವ. ೩. ವಿಷ್ಣು

ಅಪೂಪ, ಸಂ. (ನಾ) ಅಕ್ಕಿಯ ಹಿಟ್ಟಿನ ಹೋಳಿಗ, ವಡೀ, ಗಾರಿಗೆ ಮುಂತಾದವು

ಅಪ್ಪಳಿಸು, ಕ. (ಕ್ರಿ) ಹೊಡೆ

ಅಪ್ಪು, ಕ.(ಕ್ರಿ) ಆಲಿಂಗಿಸು, ಅಪ್ಪಿಕೊಳ್ಳು

ಅಪ್ಪುಕೆಯ್, ಹ. (ಕ್ರಿ) ಅಂಗೀಕರಿಸು, ಒಡಂಬಡು

ಆಂಗೊಳಗು, ಹ.(ನಾ) ಆವಿನ ಕೊಳಗು

ಅಲಾಬು, ಸಂ.(ಸಾ) ಕರೇಕುಂಬಳಕಾಯಿ

ಉಚ್ಚವ, ತ.(ನಾ) ಉತ್ಸವ

ಝುಂಝೂ ಸಂ.(ನಾ) ಮಳೆಯಾಗುವಾಗ ಗಾಳಿ ಜೀಸಿದರೆ ಆಗುವ ಸಪ್ಪಳ

-ಇತ್ಯಾದಿ. ಶಬ್ದಮಂಜರಿ ಗಂಗಾಧರಯ್ಯನವರು ಕನ್ನಡ ನಿಘಂಟು ಸಾಹಿತ್ಯಕ್ಕೆ ಕೊಟ್ಟ ಅಪೂರ್ವ ಕಾಣಿಕೆ. ಇದು ಕಿಟೆಲ್ ಕೋಶದ ಪ್ರಕಟಣೆಗಿಂತ ೨೪ ವರುಷ ಮೊದಲೇ ಪ್ರಕಟವಾಯಿತೆಂಬುದನ್ನು ಗಮನಿಸಿದಾಗ ಗಂಗಾಧರಯ್ಯನವರ ಪಾಂಡಿತ್ಯ ಮತ್ತು ಪರಿಶ್ರಮದ ಕಲ್ಪನೆ ಬಾರದಿರದು.

* * * * *

## ರಾಜಶೇಖರ ವಿಳಾಸದ ಮೊದಲನೆಯ ಆಶ್ವಾಸದ ಟೀಕೆ (೧೮೭೧)

ಕನ್ನಡದಲ್ಲಿ ರಾಜಶೇಖರ ವಿಳಾಸದ ಭಿನ್ನ ಭಿನ್ನ ಆಶ್ವಾಸಗಳಿಗೆ ನಾಲ್ವರು ಪಂಡಿತರು ಟೀಕೆಗಳನ್ನು ಬರೆದಿದ್ದಾರೆಂದು ಈ ಮೊದಲೇ ಹೇಳಿತಷ್ಟೇ. ಗಂಗಾಧರ ಮಡಿವಾಳೇಶ್ವರ ತುರಮರಿ, ಶಾಂತವೀರಯ್ಯ ಕಿತ್ತೂರ, ಅನ್ನದಾನೀಶ್ವರ ಅರಳೆಲಮಠ ಮತ್ತು ಧೋಂಡೋ ನರಸಿಂಹ ಮುಳಬಾಗಲರೇ ಆ ನಾಲ್ವರು ವಿದ್ವಾಂಸರು. ಅದರಲ್ಲಿಯೂ ಕೆಲಸವನ್ನು ಮೊದಲು ಪ್ರಾರಂಭಿಸಿದವರೆಂದರೆ ಗಂಗಾಧರಯ್ಯನವರು. ಅವರು ರಾಜಶೇಖರದ ಮೊದಲನೆಯ ಆಶ್ವಾಸಕ್ಕೆ ಟೀಕೆಯನ್ನು ಬರದು ಸನ್ ೧೮೭೧ರ ಮೇ ತಿಂಗಳಲ್ಲಿ ಪ್ರಸಿದ್ಧಿಸಿದರು. ಅನಂತರ ೧೮೭೨ರಲ್ಲಿ ಶಾಂತವೀರಯ್ಯನವರ ಎರಡನೆಯ ಆಶ್ವಾಸದ ಟೀಕೆಯೂ, ಸನ್ ೧೮೭೪ರಲ್ಲಿ ಅನ್ನದಾನೀಶ್ವರರ ಮೂರನೆಯ ಆಶ್ವಾಸದ ಟೀಕೆಗಳೂ ಪ್ರಸಿದ್ಧವಾದವು. ಈ ಮೊದಲನೆಯ ಆಶ್ವಾಸದ ಟೀಕೆಗೆ ವಿದ್ಯಾಖಾತೆಯ ಡಾಯರೆಕ್ಟರರಾದ ಮಿ. ಪೀಲ್ ಅವರು ಗಂಗಾಧರಯ್ಯನವರಿಗೆ ೨೦೦ ರೂಪಾಯಿ ಬಹುಮಾನ ಕೊಟ್ಟದ್ದಲ್ಲದೆ ಅದರ ಮುದ್ರಣ ವೆಚ್ಚಕ್ಕಾಗಿ ೪೩೦ ರೂಪಾಯಿಗಳನ್ನು ಕೊಟ್ಟು, ಅದರ ೮೦೦ ಪ್ರತಿಗಳನ್ನು ಕೊಂಡುಕೊಂಡರು. ನಂತರ ಗಂಗಾಧರಯ್ಯನವರು ಪುನಃ ನಾಲ್ಕನೆಯ ಆಶ್ವಾಸದ ಟೀಕೆಯನ್ನೂ ಸನ್ ೧೮೭೪ರ ಡಿಸಂಬರ ತಿಂಗಳಲ್ಲಿ ಬರದು ಪ್ರಕಟಿಸಿದರು. ೯ನೆಯ ಆಶ್ವಾಸದ ಟೀಕೆಯಲ್ಲಿ ''ಗಂಗಾಧರ ಶಾಂತವೀರ ಶರಣರ್ ಪೇಳ್ದ ಭಾಷ್ಯದ್ವಿತೀಯ ನವಾಶ್ವಾಸ'' ಎಂದು ಹೇಳಿದೆ.

## ಕನ್ನಡ ಐದನೇ ಪುಸ್ತಕ (೧೮೭೨)

ಗಂಗಾಧರಯ್ಯನವರು ಅನೇಕ ಶಾಲೋಪಯೋಗೀ ಪುಸ್ತಕಗಳನ್ನು ಬರೆದರು. ಇವುಗಳಲ್ಲಿ 'ಕನ್ನಡ ಐದನೇ ಪುಸ್ತಕ'ವನ್ನು ನಮೂದಿಸಬಹುದು.

ಕನ್ನಡ ಐದನೇ ಪುಸ್ತಕವು ''(೧೮೭೨) ಮುಂಬಯಿ ಸಂಸ್ಥಾನದೊಳಗಣ ದಕ್ಷಿಣ ತುಕಡಿಯಲ್ಲಿರುವ ಸರಕಾರದ ಕನ್ನಡ ಸಾಲೆಗಳಿಗಾಗಿ, ಗಂಗಾಧರ ಮಡಿವಾಳೇಶ್ವರ, ಕನ್ನಡ ತ್ರಾನ್ಸಲೇಷನ ಎಗ್ಸಿಬಿಶನರ ಇದರಿಂದ ಕನ್ನಡಿಸಲ್ಪಟ್ಟದ್ದು'' ಇರುತ್ತದೆ. ಇದು ಮುಂಬಯಿ ಇಲಾಖೆಯ ಕನ್ನಡ ಸಾಲೆಗಳಿಗಾಗಿ ಬೆಂಗಳೂರಿನ ವೆಸ್ಲಿಯನ್ ಮಿಶನ್ ಪ್ರೆಸ್ಸಿನಲ್ಲಿ ಗ್ರಾಂಟ ದೂರಯಿಂದ ಸನ್ ೧೮೭೭ರಲ್ಲಿ ಛಾಪಿಸಲ್ಪಟ್ಟಿತು. ಈ ಆವೃತ್ತಿ 'ಎರಡನೇ ಛಾಪೆ.'

ಗಂಗಾಧರಯ್ಯನವರ ಕನ್ನಡ ಶೈಲಿಯ ದೃಷ್ಟಾಂತವಾಗಿ ಈ ಕೆಳಗಿನ ಅವತರಣಿಕೆಯನ್ನು ಕೊಡಬಹುದು:

> ಗ್ಯಾಲಿಲಿಯೊನು ಸರ್ವಜನರ ಹಿತಕ್ಕೋಸ್ಕರವಾಗಿ ಮಾಡಿದ ಗ್ರಂಥವನ್ನು ತೆಗೆದುಕೊಂಡು ಸನ್ ೧೬೩೦ನೇ ಇಸವಿಯಲ್ಲಿ ರೋಮುಪಟ್ಟಣಕ್ಕೆ ಹೋದನು. ಆವಾಗ ಅವನು ೬೬ ವರ್ಷದವನಾಗಿದ್ದನು. ಬಳಿಕ ಧರ್ಮಾಧಿಕಾರಿಗಳೂ, ವಿದ್ವಾಂಸರೂ ಕೂಡಿ ಸಭೆಯನ್ನು ಮಾಡಿ, ಈ ಗ್ರಂಥವನ್ನು ಓದುವದರಿಂದ ಜನರು ಕೆಟ್ಟುಹೋದಾರೆಂದು ನಿರ್ಣಯಿಸಿದರು. ಆ ಕಾಲದೊಳಗೆ ರೋಮುಪಟ್ಟಣದೊಳಗೆ ಪಾಖಂಡ ಜನರ ವಿಚಾರ ಸಲುವಾಗಿ ಇನ್‌ಕ್ವಿಜಿಶನ್ ಎಂಬ ಸಭೆ ಇತ್ತು. ಆ ಸಭೆಯವರು ಗ್ಯಾಲಿಲಿಯೊನನ್ನು ಕೆಲವು ದಿವಸಗಳ ತನಕ ಸೆರೆಯೊಳಗಿಟ್ಟು, ಕಡೆಗೆ ಹೇಳಿದ್ದೇನೆಂದರೆ, ನಮ್ಮ ಮುಂದೆ ನೀನು ಕೈಜೋಡಿಸಿ ನಿಂತುಕೊಂಡು, ಇಂದಿನ ತನಕ ನಾನು ಅಜ್ಞಾನದೊಳಗಿದ್ದೆನು, ಈಗ ಅದರೊಳಗಿಂದ ಮುಕ್ತನಾದೆನೆಂದು ಒಡಂಬಡು ; ಯಾಕೆಂದರೆ, ಈ ಅಜ್ಞಾನದಿಂದ ನಿನಗೆ ಬಹಳ ಪಾಪ ತಟ್ಟಿದೆ. ನಿನ್ನ ಯೋಗದಿಂದ ಜನರಿಗಾದರೂ ಕೇಡು ಉಂಟಾದೀತು. ಗ್ಯಾಲಿಲಿಯೊನು ಧಿಟ್ಟನಾದಾಗ್ಯೂ, ಮುಪ್ಪಿನವನಾದದ್ದರಿಂದ ಅವರು ಹೇಳಿದ ಹಾಗೆ ಅಂದನು. ತರುವಾಯ ತತ್ಕಾಲವೆ,.....ಸಿಟ್ಟಿಗೆದ್ದು ಭೂಮಿಯನ್ನು ಒದ್ದು, ನಾನು ಇಲ್ಲಿ ಯೇನು ಅಂದಾಗ್ಯಾದರೂ ಪೃಥ್ವಿಯು ತಿರುಗುವದು ಸತ್ಯವೆಂದನು.[೧]

ಪುಸ್ತಕದ ೮ನೆಯ ಭಾಗದಲ್ಲಿ ಕನ್ನಡ ಗಾದೆಗಳನ್ನು ಕೊಡಲಾಗಿದೆ. ಈಗ ಸುಮಾರು ಒಂದು ನೂರು ವರುಷಗಳ ಹಿಂದೆ, ಅಂದರೆ ಸರಿಯಾಗಿ ಕ್ರಿ.ಶ. ೧೮೭೭ರಲ್ಲಿ, ಜನತೆಯಲ್ಲಿ ರೂಢವಾಗಿದ್ದ ಹಲವು ಗಾದೆಗಳಿವೆ. ಅವುಗಳಲ್ಲಿ ಅನೇಕ ಗಾದೆಗಳು ಇಂದು ಕೇಳಿಬರುತ್ತಿಲ್ಲ.

* * * * *

ಗಂಗಾಧರಯ್ಯನವರ ಕೃತಿರಚನೆಯ ನಿಯಮಿತತನವನ್ನು ಈ ಮೂಲಕ ಕಂಡುಕೊಳ್ಳಬಹುದಾಗಿದೆ:

೧೮೬೬ರಿಂದ ಶಬ್ದಮಣಿದರ್ಪಣ ವ್ಯಾಖ್ಯಾನ- 'ಮಠಪತ್ರಿಕೆ'ಯಲ್ಲಿ

೧೮೬೭- 'ಹಳಗನ್ನಡ ಕವಿತಾ ಸಂಗ್ರಹ'

೧೮೬೯- 'ಶಬ್ದಮಂಜರಿ' ರಚನೆ

೧೮೭೧- ರಾಜಶೇಖರ ವಿಲಾಸದ ಮೊದಲನೆಯ ಆಶ್ವಾಸದ ಟೀಕೆ

---

೧ ಕನ್ನಡ ಪಾಠಗಳ ಐದನೇ ಪುಸ್ತಕವು : ೧೮೭೭, ಪು. ೧೭೬

೧೮೭೩- ನಿಜಗುಣ ಶಿವಯೋಗಿಗಳ 'ಕೈವಲ್ಯ ಪದ್ಧತಿ'ಯ ಟೀಕೆ

೧೮೭೪- ರಾಜಶೇಖರ ವಿಲಾಸದ ನಾಲ್ಕನೆಯ ಆಶ್ವಾಸದ ಟೀಕೆ

೧೮೭೪ ರಿಂದ 'ಭಾಷಾ ದರ್ಪಣ'ದ ಪ್ರಕಟಣೆ- 'ಮಠಪತ್ರಿಕೆ'ಯಲ್ಲಿ

೧೮೭೫-ಕನ್ನಡ ೧ ಮತ್ತು ೨ನೆಯ ಪುಸ್ತಕಗಳ ಪರಿಷ್ಕರಣ

೧೮೭೬-೭೭-ಬಾಣ ಕಾದಂಬರಿ ಅನುವಾದ

೫-೧೦-೧೮೭೭ರಂದು ಪರಲೋಕಯಾತ್ರೆ.

ಅಂದರೆ, ಸನ್ ೧೮೬೬ರಿಂದ ಮೊದಲ್ಗೊಂಡು ೧೮೭೭ ರವರೆಗೆ ಅಖಂಡ ೧೧ ವರ್ಷಗಳವರೆಗೆ ತುಂಬಾ ನಿಯಮಿತವನಾಗಿ ಗಂಗಾಧರಯ್ಯನವರು ಕೃತಿ ರಚನೆ ಮಾಡಿ ಆ ಕಾಲದಲ್ಲಿ ಪ್ರಕಟಿಸಿದ್ದು ಹೆಮ್ಮೆಯ ಸಾಧನೆಯಾಗಿದೆ. ಸಾಧನ ಸಂಪತ್ತಿಗಳಿಲ್ಲದ ಒಬ್ಬ ಸಾಮಾನ್ಯ ವ್ಯಕ್ತಿ (ಆಗ ಅವರ ಪಗಾರ ಸುಮಾರು ೨೫ರಿಂದ ೩೦ ರೂಪಾಯಿ) ಇಷ್ಟು ಕೆಲಸ ಮಾಡಿದ್ದು, ಯಾರಾದರೂ ಹೆಮ್ಮೆ ಪಡುವಂಥದೇ.

ತುರಮರಿಯವರು ಬರಿಯ ಪುಸ್ತಕ ಪಂಡಿತರು ಮಾತ್ರವಾಗಿರಲಿಲ್ಲ. ಅವರು ಸಮಾಜ ಸೇವಾ ದೃಷ್ಟಿಯುಳ್ಳವರೂ ಆಗಿದ್ದರು. ಸಮಾಜ ಮುಂದು ಬರಬೇಕು; ಸಮಾಜದಲ್ಲಿ ವಿದ್ಯೆ ಪ್ರಸಾರ ಹೊಂದಬೇಕೆಂಬುದು ಅವರ ಮನೀಷೆಯಾಗಿತ್ತು. ಚಿತ್ರದುರ್ಗದ ಮಹಾಸ್ವಾಮಿಗಳಾಗಿದ್ದ ಶ್ರೀ ಶ್ರೀ ಮಹಾಲಿಂಗಸ್ವಾಮಿಗಳು ಸನ್ ೧೮೬೮ರ ನವೆಂಬರ ತಿಂಗಳಲ್ಲಿ ವೀರಶೈವ ಬಡ ವಿದ್ಯಾರ್ಥಿಗಳ ವಿದ್ಯಾಸೌಕರ್ಯಕ್ಕಾಗಿ ಬೆಳಗಾವಿಯಲ್ಲಿ ಒಂದು ವಿದ್ಯಾರ್ಥಿನಿಲಯವನ್ನು ಸ್ಥಾಪಿಸಿದ್ದರ ವಿಷಯವನ್ನು ಈ ಮೊದಲಿಗೇ ಹೇಳಿದೆಯಷ್ಟೇ!

* * * * *

ಅಲ್ಲಿ ಹುಡುಗರ ಊಟ ಉಪಚಾರ ಸರಿಯಾಗಿ ಸಾಗುವದಕ್ಕಾಗಿಯೂ ಮತ್ತು ಅವರ ಮೇಲೆ 'ಎಲ್ಲಾ ಪ್ರಕಾರದ ಬಂದೋಬಸ್ತ' ಇರುವದಕ್ಕೂ ನೇಮಕರಾದ 'ಒಬ್ಬ ಸಂಭಾವಿತ ಲಿಂಗಾಯತ'ರೆಂದರೆ ಗಂಗಾಧರಯ್ಯನವರು. ಈ ಬೋರ್ಡಿಂಗಿಗಾಗಿ ಚಿತ್ರದುರ್ಗದ ಸ್ವಾಮಿಗಳು ಪ್ರತಿ ತಿಂಗಳು ೩೦೦ ರೂಪಾಯಿ ಕೊಡುತ್ತಿದ್ದರು. ಈ ಬೋರ್ಡಿಂಗು ಬೆಳಗಾವಿಯ ಕೇಳಕರ ಭಾಗದಲ್ಲಿ ಒಂದು ಬಾಡಿಗೆ ಮನೆಯಲ್ಲಿತ್ತು. ಇದರಲ್ಲಿ ೫೦ ವಿದ್ಯಾರ್ಥಿಗಳಿದ್ದರು. ಬೋರ್ಡಿಂಗು ಸನ್ ೧೮೬೮ರ ನವೆಂಬರ ತಿಂಗಳದಲ್ಲಿ ಪ್ರಾರಂಭವಾಯಿತು. ಈ ಬೋರ್ಡಿಂಗಿನ ಮೇಲ್ವಿಚಾರಣೆಯ ಕೆಲಸವು ಗಂಗಾಧರಯ್ಯನವರಿಗೆ ವಹಿಸಿಕೊಡಲ್ಪಟ್ಟಿತು. ಅವರೂ ಮತ್ತು ಚೆನಬಸಪ್ಪನವರೂ ಮೇಲಿಂದ ಮೇಲೆ ಬೋರ್ಡಿಂಗಿಗೆ ಹೋಗಿ ವಿದ್ಯಾರ್ಥಿಗಳಿಗೆ ಅಭ್ಯಾಸ ಹೇಳಿಕೊಡುತ್ತಿದ್ದರು. ಇಂಥವರ ಈ ನಿಸ್ವಾರ್ಥಸೇವೆಯಿಂದಲೇ ಸಮಾಜ ಮುಂದು ಬರುವಂತಾಯಿತು.

ಈ ರೀತಿ, ಗಂಗಾಧರಯ್ಯನವರು, ಸಾಹಿತ್ಯ ಮತ್ತು ಸಮಾಜಗಳ ಸೇವೆಯನ್ನು ತಮ್ಮ ಕೊನೆಯುಸಿರಿರುವವರೆಗೂ ಮಾಡಿ, ಸನ್ ೧೮೭೭ರ ಅಕ್ಟೋಬರ ೫ನೇಯ ತಾರೀಖಿನಂದು ಶಿವಪದವನ್ನು ಸೇರಿದರು. ಕೇವಲ ಸ್ವಂತಕ್ಕಾಗಿ ಬದುಕದೆ, ಒಂದು ಧ್ಯೇಯಕ್ಕಾಗಿ ಬದುಕಿದ ಇಂಥ ಹಿರಿಯರ ಜೀವನ ಅನ್ಯರಿಗೆ ಮಾರ್ಗದರ್ಶಕ.

*ಹೊಸಗನ್ನಡ ಸಾಹಿತ್ಯದ ಉದಯಕಾಲ, ೧೯೭೫, ಪು. ೧೯೬-೯೮, ೨೦೦-೨೧೦*

## ೭೬. ನಂಜನಗೂಡು ತಿರುಮಲಾಂಬ : ಆಘಾತದ ಒಡಲಲ್ಲೇ ಅರಳಿದ ಜೀವ

● ವಿಜಯಾ ದಬ್ಬೆ

ಇಪ್ಪತ್ತನೆಯ ಶತಮಾನದ ಹಲವು ಮುಂಬೆಳಗುಗಳು ತನ್ನಲ್ಲಿ ಜೀವ ತಳೆಯುತ್ತಿರುವಾಗ ಕಾವೇರಿ ತೀರದಲ್ಲಿ ಹೆಜ್ಜೆ ಹಾಕುತ್ತಿದ್ದ ಹತ್ತೊಂಬತ್ತನೆಯ ಶತಮಾನದ ಸಂಧ್ಯೆಯ ಬೆಳಕಲ್ಲಿ ನಂಜನಗೂಡಿನ ಆ ಮನೆ ತೊಳಗುತ್ತಿತ್ತು. ವಿದ್ವಾಂಸರನ್ನೂ ಕಲಾಕಾರರನ್ನೂ ಕರ್ನಾಟಕಕ್ಕೆ ನೀಡಿದ ನಂಜನಗೂಡಿನ ಮುಖ್ಯಬೀದಿಯಲ್ಲಿದ್ದ ಆ ಮನೆ ಕಂಗಟ್ಟ ಎಷ್ಟೋ ಜೀವಿಗಳಿಗೆ ಆಸರೆ ನೀಡಿ, ಹಲವು ವಿದ್ಯಾರ್ಥಿಗಳಿಗೆ ಆಶ್ರಯಕೊಟ್ಟು, ಅಸಂಖ್ಯ ಅತಿಥಿ ಅಭ್ಯಾಗತರನ್ನು ಸತ್ಕರಿಸಿ 'ಮಾತೃಮಂದಿರ'ವೆಂಬ ತನ್ನ ಹೆಸರನ್ನು ಸಾರ್ಥಕಪಡಿಸಿಕೊಂಡಿತ್ತು. ಮನೆಯ ಒಡೆಯರಾದ ವೆಂಕಟಕೃಷ್ಣ ಅಯ್ಯಂಗಾರರ ಹಾಗೂ ಮನೆಯವರ ತೆರೆದ ಮನಸ್ಸಿನಿಂದಾಗಿ ಅಂದಿಗೆ ಆ ಮನೆ ಹೆಚ್ಚು ಕಡಿಮೆ ನಂಜನಗೂಡಿನ ಒಂದು ಧರ್ಮಛತ್ರವಾಗಿತ್ತು. ಈ ಔದಾರ್ಯ, ವೈಭವವನ್ನು ಕಣ್ಣಾರೆ ಕಂಡವರ ನೆನಪಿನಲ್ಲಿ ಈ ಚಿತ್ರ ಮಾಸದೆ ಉಳಿದಿದೆ. ಅಂಥ ಒಂದೆರಡು ನೆನಪುಗಳು: ಒಮ್ಮೆ ಪರಿಚಿತರೊಬ್ಬರು ಒಬ್ಬ ಬಡವಿದ್ಯಾರ್ಥಿಯನ್ನು ಕರೆದುತಂದು ಒಂದು ವಾರ ಕೂಡುವಂತೆ ವೆಂಕಟಕೃಷ್ಣ ಅಯ್ಯಂಗಾರರನ್ನು ಕೇಳಿದರು. ಅಯ್ಯಂಗಾರರ ಉತ್ತರ ಖಚಿತವೂ ಸ್ಪಷ್ಟವೂ ಆಗಿತ್ತು. ವಾರ ಕೊಡಲು ಸಾಧ್ಯವಿಲ್ಲವೆಂದೂ ಬಿಟ್ಟುಹೋಗುವುದಾದರೆ ಹುಡುಗನನ್ನು ಪೂರ್ತಿಯಾಗಿ ಅಲ್ಲೇ ಬಿಟ್ಟುಹೋಗಬೇಕೆಂದೂ ಹೇಳಿದರು. ಹೀಗೆ ಅಲ್ಲಿ ಆಶ್ರಯ ಪಡೆದವರು ಹಲವರು. ಇನ್ನೊಂದು ಸಾರಿ ಒಬ್ಬ ಉಪಾಧ್ಯಾಯರು ವರ್ಷವೆಲ್ಲ ಮಾತೃಮಂದಿರದಲ್ಲಿ ಊಟ ಮಾಡಿದರು. ಸಂಬಳ ಬಂದಾಗ ಅಯ್ಯಂಗಾರರಿಗೆ ಅದಕ್ಕಾಗಿ ಹಣ ಕೊಡಲು ಹೋದರು. ಅಯ್ಯಂಗಾರರ ಕೋಪ ಸಿಡಿಯಿತು. ದುಡ್ಡು ಕೊಟ್ಟು ಊಟ ಮಾಡಲು ತನ್ನ ಮನೆ ಹೋಟೆಲ್ ಅಲ್ಲ ಎಂದರು. ಹಣ ಕೊಡಬಂದ ತಮ್ಮ ತಪ್ಪಿಗೆ ಉಪಾಧ್ಯಾಯರು ಕ್ಷಮೆ ಕೋರಿದರು. ಆಮೇಲೂ ಎರಡು ವರ್ಷ ಅವರು ಅಲ್ಲಿದ್ದರು. ಹಿಂದಿನದನ್ನು ಮನೆಯ ಯಜಮಾನ ನೆನೆಯಲೂ ಇಲ್ಲ, ಯಾಕಿದ್ದೀಯೆ ಎಂದು ಕೇಳಲೂ ಇಲ್ಲ. ಇಂಥ ಮಾತೃಮಂದಿರದ ನೆನಪನ್ನು ಅನೇಕರು ನನ್ನೊಡನೆ ಹಂಚಿಕೊಂಡರು.

ವೆಂಕಟಕೃಷ್ಣ ಅಯ್ಯಂಗಾರರು ವೃತ್ತಿಯಿಂದ ವಕೀಲರೂ ಪ್ರವೃತ್ತಿಯಿಂದ ವಿದ್ಯಾಪ್ರೇಮಿಗಳೂ ತಮ್ಮದೇ ಆದ ರೀತಿಯಲ್ಲಿ ಆಚಾರನಿಷ್ಠರೂ ಸಮಾಜಕಾರ್ಯಕರ್ತರೂ ಲೇಖಕರೂ ಆಗಿದ್ದವರು. ತೆರೆದ ಮನಸ್ಸು, ಕೊಡುಗೈ, ತುಂಬು ಅಂತಃಕರಣದ ತಮ್ಮ ವ್ಯಕ್ತಿತ್ವದ ನೆನಪನ್ನು ಹಲವರಲ್ಲಿ ಉಳಿಸಿಹೋದವರು. ೧೮೪೬ರ ಆಗಸ್ಟ್‌ನಲ್ಲಿ ಹೆಗ್ಗಡದೇವನ ಕೋಟೆಯ ಮಗ್ಗೆಯಲ್ಲಿ ಹುಟ್ಟಿದ ಅಯ್ಯಂಗಾರರ ವಿದ್ಯಾಭ್ಯಾಸ ೧೮೫೬-೬೨ ಅವಧಿಯಲ್ಲಿ ಮೈಸೂರಿನಲ್ಲಿ ನಡೆಯಿತು. ಸಂಸ್ಕೃತ, ಇಂಗ್ಲಿಷ್, ಕನ್ನಡ, ಅವರ ಅಭ್ಯಾಸದ ವಿಷಯಗಳು. ೧೮೬೮ರ ಹೊತ್ತಿಗೆ ಮೈಸೂರು ಸಂಸ್ಥಾನದ ಕಂಟ್ರೋಲರರೂ ೧೮೮೧ರಲ್ಲಿ ದಿವಾನರೂ ಆಗಿದ್ದ ಸಿ. ರಂಗಾಚಾರ್ಯರ ಪ್ರೋತ್ಸಾಹದಿಂದ ನಡೆಯುತ್ತಿದ್ದ, ಸಾರ್ವಜನಿಕ ಜಾಗೃತಿಯನ್ನು ಉದ್ದೇಶಿಸಿದ ಕಾರ್ಯಗಳಲ್ಲಿ ಅಯ್ಯಂಗಾರರೂ ದುಡಿದರು. ೧೮೬೦ರಲ್ಲಿ ಪುದುಚೇರಿ ತಾತಾ

ಎಂಬುವರು ಸ್ಥಾಪಿಸಿ ನಡೆಸುತ್ತಿದ್ದ ಪುಸ್ತಕ ಭಂಡಾರ, ವಾಚನಶಾಲೆಯು ೧೮೭೫ರಲ್ಲಿ ನಿಂತಿತು. ೧೮೭೬ರಲ್ಲಿ ರಂಗಾಚಾರ್ಯರು ಇದನ್ನು ಜೀರ್ಣೋದ್ಧಾರ ಮಾಡಿ ಒಂದು ಸಾಂಸ್ಕೃತಿಕ ಕೇಂದ್ರವನ್ನಾಗಿ ಮಾಡಿದರು. ವೆಂಕಟಕೃಷ್ಣಯ್ಯಂಗಾರರು ಇದರ ಕಾರ್ಯದರ್ಶಿಗಳಾಗಿದ್ದರು. ಪ್ರಜಾಪ್ರತಿನಿಧಿ ಸಭೆಯ ಕಾರ್ಯಗಳನ್ನು ೧೮೯೧ಕ್ಕೂ ಮುಂಚಿನಿಂದಲೂ ಪರೋಕ್ಷವಾಗಿ ಮಾಡುತ್ತಿದ್ದ ಅವರು ಆ ವರ್ಷ ಅದರ ಅಧಿಕೃತ ಸದಸ್ಯರಾದರು. ಎಕನಾಮಿಕ್ ಕಾನ್‌ಫರೆನ್ಸ್ ಸಭೆ, ಲೆಜಿಸ್ಲೇಟಿವ್ ಕೌನ್ಸಿಲ್ ಮೊದಲಾದವುಗಳ ಸದಸ್ಯರಾಗಿದ್ದರು. ಮೈಸೂರಿನ ಮರಿಮಲ್ಲಪ್ಪ ಪ್ರೌಢಶಾಲೆಯ ಅಧ್ಯಕ್ಷರೂ ಮುಖ್ಯೋಪಾಧ್ಯಾಯರೂ ಆಗಿ ಅದರ ಏಳಿಗೆಗಾಗಿ ದುಡಿದರು. ಹಿತಬೋಧಿನಿ, ವೃತ್ತಾಂತ ಚಿಂತಾಮಣಿ, ಉದಂತ ಚಿಂತಾಮಣಿ, ಮೈಸೂರು ಹೆರಾಲ್ಡ್, ಸಾಧ್ವೀ, ಸಂಪದಭ್ಯುದಯ, ಮೈಸೂರು ಪೇಟ್ರಿಯಟ್ ಮೊದಲಾದ ಪತ್ರಿಕೆಗಳ ಪ್ರೇರಕರೂ ಪ್ರೋತ್ಸಾಹಕರೂ ಆಗಿದ್ದರು.

ವೆಂಕಟಕೃಷ್ಣಯ್ಯಂಗಾರರು ಲೇಖಕರೂ ಆಗಿದ್ದರು. ಅವರ 'ಅರ್ಥಸಾಧನಕ್ರಮ'ಕ್ಕೆ ಮೈಸೂರು ವಿದ್ಯಾಂಗದವರಿಂದ ಬಹುಮಾನ ಬಂದಿತ್ತು. ಈ ಪುಸ್ತಕ ಹಾಗೂ 'ಬುಕರ್ ಟಿ. ವಾಷಿಂಗ್‌ಟನ್‌ರವರ ಚರಿತ್ರೆ'ಯು ಅಪ್ಪರ್ ಸೆಕಂಡರಿ ಪರೀಕ್ಷೆಗೂ ೧೮೧೬-೧೭ನೆಯ ಸಾಲಿನಲ್ಲಿ ಇದೇ ಲೇಖಕರ 'ವಿದ್ಯಾರ್ಥಿ ಕರಭೂಷಣ' ಎಂಬ ಪ್ರಬಂಧವು ಲೋಯರ್ ಸೆಕಂಡರಿ ಪರೀಕ್ಷೆಗೂ ಪಠ್ಯಪುಸ್ತಕವಾಗಿತ್ತು. 'ಹರಿಶ್ಚಂದ್ರಚರಿತ್ರೆ', 'ಚೋರಗ್ರಹಣತಂತ್ರ' ಹಾಗೂ 'ಪರಂತ ವಿಜಯ'ಗಳೆಂಬ ಪತ್ತೇದಾರಿ ಕಾದಂಬರಿಗಳನ್ನು ೧೯೧೭ರ ವೇಳೆಗೆ ಇವರು ರಚಿಸಿದ್ದರು. ಮುಂದೆ 'ಸನ್ಮಾನ ಗ್ರಂಥಾವಳಿ'ಯಲ್ಲೂ ವೆಂಕಟಕೃಷ್ಣಯ್ಯಂಗಾರರ ಕೆಲವು ಬರಹಗಳು ಪ್ರಕಟವಾದವು.

ಜನಪಕ್ಷಪಾತಿಯಾಗಿ ನಿರ್ಭಯವಾಗಿ ದುಡಿಯುತ್ತಿದ್ದ ಅಯ್ಯಂಗಾರರು ಅನೇಕ ಅಧಿಕಾರಿಗಳ ದ್ವೇಷ, ಉಪಟಳಕ್ಕೂ ಒಳಗಾದರು. ''ತಮ್ಮ ಶ್ರಮಕ್ಕೆ ಪ್ರತಿಫಲವನ್ನು ಅಪೇಕ್ಷಿಸುವವರಾಗಿದ್ದರೆ, ಈ ವೇಳೆ ಎಷ್ಟೋ ದ್ರವ್ಯರಾಶಿಯನ್ನು ಸಂಪಾದಿಸಬಹುದಾಗಿತ್ತಲ್ಲದೆ ಎಷ್ಟೆಷ್ಟೋ ಅಟ್ಟಹಾಸದ ಪಟ್ಟಗಳನ್ನು ಪಡೆಯಬಹುದಾಗಿದ್ದಿತು.''[೧] ಆದರೆ ಅವರದು 'ಪ್ರತಿಫಲಾಪೇಕ್ಷೆ'ಯನ್ನು ಆಶಿಸದ 'ನಿಸ್ಪೃಹ' ದುಡಿಮೆ. ''...ದೇಶೀಯರ ಜ್ಞಾನಾಭಿವೃದ್ಧಿ... ದೇಶಾಭಾಷಾಭಿವೃದ್ಧಿ ಕ್ರಿಯೆಯಯಾಗಲೀ ಇವರಷ್ಟು ಅನುಭವಶಾಲಿಗಳಾಗಿರುವವರು ವಿರಳ...''[೨] ಎನ್ನಿಸಿಕೊಂಡಿದ್ದವರು. ಇಂಥದೊಂದು ವ್ಯಕ್ತಿತ್ವ, ಪರಿಸರ ಹೊಸಗನ್ನಡದ ಮೊದಲ ಲೇಖಕಿ, ಪತ್ರಕರ್ತೆ, ಪ್ರಕಾಶಕಿಯನ್ನು ರೂಪಿಸಿದುದು ಸಹಜವೇ ಆಗಿದೆ.

೧೮೮೭ರ ಮಾರ್ಚ್ ಇಪ್ಪತ್ತೆರಡರಂದು-ವ್ಯಯ ಸಂವತ್ಸರದ ಫಾಲ್ಗುಣ ಶುದ್ಧ ದ್ವಾದಶಿಯಂದು ವೆಂಕಟಕೃಷ್ಣ ಅಯ್ಯಂಗಾರ್ ಮತ್ತು ಅಲಮೇಲಮ್ಮನವರ ಮೂರನೆಯ ಮಗುವಾಗಿ ಜನಿಸಿದವರು ತಿರುಮಲಾಂಬ. ಆ ವೇಳೆಗೆ ಎರಡು ಹೆಣ್ಣುಮಕ್ಕಳ ತಾಯಿಯಾಗಿದ್ದ ಅಲಮೇಲಮ್ಮ ತಿರುಮಲಾಂಬ ಅವರಿಗೆ ಜನ್ಮಕೊಟ್ಟನಂತರದ ವರ್ಷಗಳಲ್ಲಿ ಮತ್ತೊಂದು ಹೆಣ್ಣುಮಗುವನ್ನೂ, ಗಂಡುಮಗುವನ್ನೂ ಪಡೆದರು, ಕೊನೆಯ ಮಗು ಇನ್ನೂ ಆರು ತಿಂಗಳ ಕೂಸಾಗಿರುವಾಗಲೇ ಕಣ್ಮುಚ್ಚಿದರು. ಐದು ವರ್ಷದ ಬಾಲೆ ತಿರುಮಲಾಂಬ ತಾಯಿಯನ್ನು

---

೧ ಕರ್ನಾಟಕನಂದಿನಿ, ಸಂ. ೧, ಸಂ ೭, ೧೯೧೭, ಪು. ೫೩.

೨ ಅದೇ.

ಕಳೆದುಕೊಂಡಳು. ತಾಯಿಯ ಜಾಗವನ್ನು ನಂತರ ೧೮೯೩ರಲ್ಲಿ ತುಂಬಿದವರು ಅಯ್ಯಂಗಾರರ ಎರಡನೆಯ ಪತ್ನಿ ಶ್ರೀಲಕ್ಷಮ್ಮ. ''ಅಂದಿನಿಂದ ಗೃಹಿಣೀ ಕರ್ತವ್ಯವನ್ನೂ ಮಾತೃಕರ್ತವ್ಯವನ್ನೂ ಕೈಗೊಂಡು ನಮ್ಮೆಲ್ಲರ ಶಿಕ್ಷಾರಕ್ಷಣಗಳ ವಿಚಾರಗಳಿಗೂ ನಮ್ಮ ತಂದೆಯವರೊಡನೆ ಸಹಭಾಗಿನಿಯಾಗಿ ನಿಂತರು. ಅಂದಿನಿಂದ ಅವರೇ ನಮ್ಮ ತಾಯಿ'' ಎಂದು ೧೯೭೫ರಲ್ಲಿ ಆಕಾಶವಾಣಿಗೆ ನೀಡಿದ ಸಂದರ್ಶನದಲ್ಲಿ ತಿರುಮಲಾಂಬ ತಮ್ಮ ಚಿಕ್ಕಮ್ಮನನ್ನು ನೆನೆದಿದ್ದಾರೆ, ವೆಂಕಟಕೃಷ್ಣ ಅಯ್ಯಂಗಾರ್ ಮತ್ತು ಶ್ರೀ ಲಕ್ಷಮ್ಮನವರಿಗೆ ಮೂವರು ಗಂಡುಮಕ್ಕಳು ಮತ್ತು ಮೂವರು ಹೆಣ್ಣುಮಕ್ಕಳು.

ಎಂಟು ವರ್ಷದ ಹುಡುಗಿ ತಿರುಮಲಾಂಬ ನಂಜನಗೂಡಿನ ಬಾಲಿಕಾ ಪಾಠಶಾಲೆಯ ವಿದ್ಯಾರ್ಥಿನಿಯಾದಳು. ಹನ್ನೆರಡು ವರ್ಷ ತುಂಬುವ ಮೊದಲೇ ಆಕೆಯ ವಿದ್ಯಾರ್ಥಿಜೀವನ ಮುಗಿಯಿತು. ಜೀವನದುದ್ದಕ್ಕೂ ಅಧ್ಯಯನಶೀಲರಾಗಿದ್ದ ತಿರುಮಲಾಂಬ ಅವರ ಶಾಲಾಶಿಕ್ಷಣ ನಾಲ್ಕನೆಯ ತರಗತಿಯವರೆಗೆ ಮಾತ್ರ ಸಾಗಿತು. ಶಾಲೆಯಿಂದ ಓಡಿಬಂದ ಹುಡುಗಿಗೆ ಮದುವೆ ಮಂಟಪ ಕಾಯುತ್ತಿತ್ತು. ಹದಿಮೂರರ ಈ ಮುಗ್ಧ ಹುಡುಗಿ ಪುಟ್ಟ ಮುತ್ತೈದೆಯ ಪಟ್ಟವೇರಿದ ದಿನಗಳು ಹಸಿರಾಗಿರುವಾಗಲೇ ಆ ಓಲಗದ ಸದ್ದಿನ್ನೂ ಕಿವಿಯಲ್ಲಿ ಗುಯ್‌ಗುಡುತ್ತಿರುವಾಗಲೇ ಯಾರೂ ಊಹಿಸಿರದ ಆಘಾತ ಎರಗಿತು. ಅರುಣೋದಯವನ್ನು ಕತ್ತಲೆ ನುಂಗಿತು, ಆ ಪುಟ್ಟ ಹುಡುಗಿಯೊಡನೆ ಹಸೆಯೇರಿದ್ದ ಹುಡುಗ ಎಂದೆಂದಿಗೂ ಆಕೆಯಿಂದ ಅಗಲಿದ, ಮೊದಲ ಸುತ್ತಿನ ಪ್ಲೇಗಿಗೆ ತುತ್ತಾದ. ಹದಿನಾಲ್ಕರ ಹುಡುಗಿ ತಿರುಮಲಾಂಬೆ ವಿಧವೆ! ಹೀಗೆ ಪ್ರಾರಂಭವಾದ ದುರಂತ ಅಲ್ಲಿಗೇ ನಿಲ್ಲಲಿಲ್ಲ. ೧೯೦೦-೧೯೦೭ರ ಅವಧಿಯಲ್ಲಿ ಮತ್ತೆರಡು ಪ್ರಿಯಜೀವಗಳು ಅವರನ್ನು ತೊರೆದವು. ೧೯೦೩ರಲ್ಲಿ ತಮ್ಮನನ್ನು ೧೯೦೭ರಲ್ಲಿ ಒಡಹುಟ್ಟಿದ ತಂಗಿಯನ್ನೂ ಅವರು ಕಳೆದುಕೊಂಡರು.

ಇಂಥ ಆಘಾತಗಳಿಗೆ ಒಳಗಾಗಿ ಕತ್ತಲಲ್ಲೇ ಸದ್ದಿಲ್ಲದೆ ಬಾಳುತಳ್ಳಿ ಕೊನೆಯುಸಿರೆಳೆಯುವ ಜೀವಗಳೆಷ್ಟೊ! ಆದರೆ ಈ ಆಘಾತಗಳ ಅಗ್ನಿಕುಂಡದಲ್ಲಿ ಚಿಗುರುವ ಜೀವಗಳೂ ಇವೆ. ಅಂಥ ಜೀವಗಳು ವಿನಾಶವನ್ನು ಮೆಟ್ಟಿನಿಂತು ಬೆಳೆಯುತ್ತವೆ, ಬದುಕು ನೀಡುವ ವಿಷವೂ ಅವಕ್ಕೆ ಅಮೃತವಾಗುತ್ತದೆ. ಅಂಥ ಜೀವಗಳಲ್ಲಿ ಒಂದು ನಂಜನಗೂಡು ತಿರುಮಲಾಂಬ ಅವರದ್ದು. ಇದ್ದಕ್ಕಿದ್ದಂತೆ ಎದುರಾದ ಆಘಾತ ಅವರನ್ನು ಅಲುಗಿಸಿದರೂ ಧೃತಿಗೆಡದ ಅವರು ತಮ್ಮ ಬದುಕಿನ ದಾರಿಯನ್ನು ಕಂಡುಕೊಂಡರು. ಬದುಕಿನ ಒಂದು ನಿಟ್ಟಿನ ಮೇಲೆ ಶಾಶ್ವತವಾದ ತೆರೆ ಬಿದ್ದಿತು. ಆದರೆ ಆ ಆಘಾತದ ಒಡಲಲ್ಲೇ ಸಂಪಾದಕಿ, ಲೇಖಕಿ, ಪ್ರಕಾಶಕಿ ತಿರುಮಲಾಂಬ ಹುಟ್ಟಿದರು.

ಕೊಳ್ಳೇಗಾಲದ ಸಿರಿವಂತ ಮನೆತನಕ್ಕೆ ಸೊಸೆಯಾಗಿ ಹೋಗಬೇಕಾಗಿದ್ದ ತಿರುಮಲಾಂಬ ಬಾಲವಿಧವೆಯಾಗಿ ತಂದೆಯ ಮನೆಯಲ್ಲಿ ಉಳಿದರು. ತಮ್ಮ ಮೆಚ್ಚಿನ ಮಗಳನ್ನು ವೆಂಕಟಕೃಷ್ಣಅಯ್ಯಂಗಾರರು ವಿಶೇಷ ಆದರದಿಂದ ಕಂಡುಕೊಂಡು ಮಾರ್ಗದರ್ಶನ ನೀಡಿದರು. ತಿರುಮಲಾಂಬ ಅವರು ಪೂರ್ವೋಕ್ತ ಸಂದರ್ಶನದಲ್ಲಿ ನೆನೆಯುವಂತೆ ''ತಂದೆಯವರು ನನ್ನ ದುಸ್ಥಿತಿಗಾಗಿ ನೊಂದು ಅನೇಕ ವಿಧವಾಗಿ ನನಗೆ ಸಮಾಧಾನ ಹೇಳುತ್ತಿದ್ದರಲ್ಲದೆ ಅಡಿಗಡಿಗೆ ಸದ್ಗ್ರಂಥಗಳನ್ನು ಒದಗಿಸಿಕೊಟ್ಟು ಹಿತಬೋಧೆ-ತತ್ವವಿಚಾರಗಳಿಂದ ನನಗೆ ಧೈರ್ಯ ಸ್ಥೈರ್ಯಗಳುಂಟಾಗುವಂತೆ ಮಾಡುತ್ತಿದ್ದರು.'' ಮೂರು ನಾಲ್ಕು ವರ್ಷಗಳ ಕಾಲ ಗ್ರಂಥಗಳ ಸತತಾಭ್ಯಾಸ ಮಾಡಿದರು. ೧೯೦೨-೧೯೦೩ರ ಅವಧಿ ಅವರ

ಬದುಕಿನ ಒಂದು ಮುಖ್ಯ ಘಟ್ಟವನ್ನು ತೆರೆಯಿತು. ಲೇಖಕಿಯೇ ಆಕಾಶವಾಣಿಯ ಸಂದರ್ಶನದಲ್ಲಿ ವಿವರಿಸಿರುವಂತೆ ''ಬಾಲ್ಯದಲ್ಲಿಯೇ ವಿಧಿವಿಕೋಪಕ್ಕೆ ತುತ್ತಾಗಿ ದುಃಖ ಸಂಕಟ ನಿರಾಶೆಗಳಿಂದ ಮುಂದೇನು ಮಾಡಬೇಕೆಂಬ ದೀರ್ಘ ಚಿಂತನೆಯಲ್ಲಿ ಭಗವಂತನನ್ನೇ ಪ್ರಾರ್ಥಿಸುತ್ತಿದ್ದ ನನಗೆ ನನ್ನ ೧೫-೧೬ನೇ ವರ್ಷದಲ್ಲಿ ಒಂದು ದಿನ ಮಧ್ಯಾಹ್ನ ಒಂದು-ಒಂದೂವರೆ ಘಂಟೆ ಸಮಯ ಸೂರ್ಯ ಭಗವಾನರ ಬಿಂಬವನ್ನೇ ನೋಡುತ್ತಿದ್ದಂತೆ ಬಿಂಬದ ಮಧ್ಯೆ ಸೂಕ್ಷ್ಮ ಮೂರ್ತಿಯನ್ನು ಕಂಡು ಪರವಶತೆಯಲ್ಲಿದ್ದಾಗ ನನ್ನ ಬಾಯಿಂದ 'ಸರಸ್ವತೀ (ಭಾರತಿ) ಪೊರೆಯೆನ್ನನು' ಎಂಬ ಮೂರು ನುಡಿಯ ಗೀತೆಯೊಂದು ಹೊರ ಬಂದು ಅದೇ ಗೀತಾರಚನೆಗೆ ಸ್ಫೂರ್ತಿಯುಂಟಾಯ್ತು.'' ಅಂದಿನಿಂದ ಅವರು 'ಭಗವಂತನ ಸ್ತುತಿ' ಸಂಬಂಧಿಯಾದ ರಚನೆಗಳನ್ನು ಮಾಡುತ್ತಿದ್ದರು. 'ಸಾವಿತ್ರೀ ಚರಿತ್ರೆ' ಎಂಬ ಯಕ್ಷಗಾನವನ್ನು ತಾವು ಈ ಮೊದಲ ಹಂತದಲ್ಲಿ ರಚಿಸಿದ್ದಂತೆ ಹೇಳಿದ್ದರೂ ಈಗ ಆ ಕೃತಿ ಲಭ್ಯವಿಲ್ಲ. ಮೇಲಿನ ಸಂದರ್ಶನದಲ್ಲಿ ಹೇಳಿದಂತೆ ಪತ್ರಿಕೆಗಳಲ್ಲಿ ಪ್ರಚುರವಾಗುತ್ತಿದ್ದ ಸಮಾಜ ಶಾಸನದ ವಿಚಾರ ವಿಮರ್ಶೆಗಳೂ ಅಲ್ಲಿಗಲ್ಲಿಗೆ ಕಾಣಬರುತ್ತಿದ್ದ ಅಭಾಗಿನೀ ವಿಧವೆಯರ ಪರಿತಾಪ ಸ್ಥಿತಿಗಳನ್ನು ನೋಡಿ ನೋಡಿ ಮನಸ್ಸಿಗೆ ಉಂಟಾದ ಸಂತಾಪ ಅನುತಾಪಗಳ ಶಮನಾರ್ಥವಾಗಿ ಸ್ವಾನುಭವವೂ ಸೇರಿ ವಿಧವಾತತ್ವ ಎಂಬ ಲೇಖನವೂ ನಭಾ, ವಿದ್ಯುಲ್ಲತಾ ಎಂಬ ಕಾದಂಬರಿಗಳೂ ರಚನೆಯಾದವು.

೧೯೧೩ ತಿರುಮಲಾಂಬ ಅವರ ಜೀವನದಲ್ಲಿ ಒಂದು ಮುಖ್ಯ ವರ್ಷ. ಮೇಲೆ ಗಮನಿಸಿದಂತೆ ಈಗಾಗಲೇ ಆರೇಳು ವರ್ಷಗಳ ಅವಧಿಯಲ್ಲಿ ತೋಚಿದ್ದನ್ನು ಬರೆದುಕೊಳ್ಳುತ್ತಾ ಬಂದಿದ್ದರೂ ಬರಹಗಳು ಹೊರಗೆ ಬಂದಿರಲಿಲ್ಲ. ೧೯೧೩ರಲ್ಲಿ 'ಮಧುರವಾಣಿ' ಪತ್ರಿಕೆಯ ಒಂದು ಲೇಖನ ಸ್ಪರ್ಧೆಗೆ ಬರೆದ 'ಸದಾಚಾರ'ವೆಂಬ ಪ್ರಬಂಧ ಮುಂದಿನ ಪ್ರಕಟಣೆಗಳಿಗೆ ನಾಂದಿ ಹಾಡಿತು. ಮಧುರವಾಣಿಯ ಸಂಪಾದಕರು ಖುದ್ದಾಗಿ ನಂಜನಗೂಡಿಗೆ ಬಂದು ತಾವು ಗುರುತಿಸಿದ ಲೇಖಕಿಯನ್ನು ಅಭಿನಂದಿಸಿದರು. ಮುಂದಿನ ಬರಹಗಳಿಗೆ ಉತ್ತೇಜನ ನೀಡಿದರು. ಅದೇ ವರ್ಷ 'ಸುಶೀಲೆ' ಹೊರಬಂದಳು. ಲೇಖಕಿ ತಿರುಮಲಾಂಬ ಪ್ರಕಾಶಕಿಯೂ ಆದರು. ೧೯೧೬ರಲ್ಲಿ ಪತ್ರಿಕಾ ಸಂಪಾದಕಿಯೂ ಆದರು. 'ಸದಾಚಾರ' ಪ್ರಬಂಧದಿಂದ ಪ್ರಾರಂಭವಾದ ಪ್ರಕಟಣೆಯ ಕೃತಿಮಾಲೆ ಮುಂದೆ ಪ್ರಬಂಧ, ನಾಟಕ, ಕಾದಂಬರಿ, ಗೀತೆಗಳನ್ನು ಒಳಗೊಂಡಿತು. ತಮ್ಮ ಹಾಗೂ ಇತರರ ಕೃತಿ ಪ್ರಕಟಣೆಗಾಗಿ 'ಸತೀಹಿತೈಷಿಣೀ,' 'ಸನ್ಮಾನ ಗ್ರಂಥಾವಳಿ' ಎಂಬ ಪ್ರಕಟಣಮಾಲೆಗಳನ್ನು ಪ್ರಾರಂಭಿಸಿದರು. 'ಕರ್ನಾಟಕ ನಂದಿನಿ,' 'ಸನ್ಮಾರ್ಗದರ್ಶಿ' ಪತ್ರಿಕೆಗಳ ಸಂಪಾದನೆಯೂ ನಡೆಯಿತು. ೧೯೧೦-೧೧ರ ವೇಳೆಗೆ ಸ್ಫುಟವಾಗತೊಡಗಿದ ಬರವಣಿಗೆಯು ಮುಂದಿನ ಸುಮಾರು ಮೂರು ದಶಕಗಳಲ್ಲಿ ಬೆಳೆದು ನಂತರ ಸದ್ದಿಲ್ಲದಾಯಿತು. ಸುಮಾರು ೧೯೧೦ರಿಂದ ೪೦ರ ವರೆಗಿನ ಅವಧಿಯನ್ನು ತಿರುಮಲಾಂಬ ಅವರ ಬರವಣಿಗೆಯ ಅವಧಿ ಅಥವಾ ಬರವಣಿಗೆಯ ಮುಖ್ಯ ಅವಧಿ ಎನ್ನಬಹುದು. ೧೯೪೬ರ ನಂತರವೂ ತಾವು ಬರಹವನ್ನು ಮುಂದುವರಿಸಿದ್ದಾಗಿ ತಿರುಮಲಾಂಬ ಹೇಳಿದ್ದಾರೆ.[೧] ಆದರೆ ಏನನ್ನು ಬರೆದರು? ಆ ಹಸ್ತಪ್ರತಿಗಳು ಏನಾದವು? ತಿಳಿಯುವುದಿಲ್ಲ. ಅವರ ಬರವಣಿಗೆಯ ಅವಧಿಯ ಮೊದಲ ಹಂತ ಹೆಚ್ಚಿನ ಉತ್ಸಾಹ, ನಿರೀಕ್ಷೆಗಳಿಂದಲೇ ಪ್ರಾರಂಭವಾಯಿತು. ಆದರೆ ಕೆಲಕಾಲದ ನಂತರ

೧ ಸತೀ ಹಿತೈಷಿಣಿ ನಂಜನಗೂಡು ತಿರುಮಲಾಂಬ, ಎಸ್. ಮಂಗಳಾ ಸತ್ಯನ್, ಕರ್ಮವೀರ, ೧೫-೨-೭೦.

ತಿರುಮಲಾಂಬ ಅವರ ಎರಡು ಪತ್ರಿಕೆಗಳು ಮತ್ತು ಪ್ರಕಾಶನ ಅವರ ಮೇಲೆ ಹೊರಿಸಿದ ಸಾಲದ ಹೊರೆ ಹೆಚ್ಚಿತು. ಆಗ ತಂದೆ ವೆಂಕಟಕೃಷ್ಣಯ್ಯಂಗಾರರೂ ಆರ್ಥಿಕ ಮುಗ್ಗಟ್ಟಿನಲ್ಲಿದ್ದರು. ಓದುಗಲೋಕದ ಬೆಂಬಲವೂ ಈ ಹೊರೆಯನ್ನು ಇಳಿಸಲು ಸಹಾಯ ಮಾಡಲಿಲ್ಲ. ಈ ಅವಧಿಯಲ್ಲಿ ಮೈಸೂರು ಮಹಾರಾಜರು ೫೦೦೦ ರೂಪಾಯಿಗಳ ಮುಂಗಡ ಹಣ ನೀಡುವುದರ ಮೂಲಕ ಕೊಟ್ಟ ಪ್ರೋತ್ಸಾಹ ತಿರುಮಲಾಂಬ ಅವರ ಪ್ರಕಟಣಕಾರ್ಯಕ್ಕೆ ಸಹಾಯ ಮಾಡಿತು, ಹಾಗೂ ಹಳೆಯ ಸಾಲದ ಸ್ವಲ್ಪ ಭಾಗವನ್ನು ತೀರಿಸುವುದು ಸಾಧ್ಯವಾಯಿತು. ಸರ್ಕಾರದಿಂದ ಪಡೆದ ಸಾಲವನ್ನು ಮರುಪಾವತಿ ಮಾಡಲಾಗದೆ ತಮ್ಮಲ್ಲಿ ಪ್ರಕಟಗೊಂಡ ಪುಸ್ತಕಗಳನ್ನು ಸರ್ಕಾರಿ ಬುಕ್ ಡಿಪೋಗೆ ಒಪ್ಪಿಸಿದರು. ಮದ್ರಾಸಿನ ಪಠ್ಯಪುಸ್ತಕ ಮತ್ತು ಸಾಹಿತ್ಯ ಸಂಘ, ಧಾರವಾಡದ ವಿದ್ಯಾವರ್ಧಕ ಸಂಘ ಹಾಗೂ ಕೃಷ್ಣರಾಜ ಒಡೆಯರಿಂದ ತಿರುಮಲಾಂಬ ಅವರ ಕೃತಿಗಳಿಗೆ ಬಹುಮಾನಗಳು ದೊರೆತವು. ಮೈಸೂರು ಮತ್ತು ಮದ್ರಾಸ್ ವಿಶ್ವವಿದ್ಯಾನಿಲಯಗಳಲ್ಲಿ ಇವರ ಪುಸ್ತಕಗಳು ಪಠ್ಯಪುಸ್ತಕಗಳಾದವು-ಹೀಗೆ ಅಷ್ಟಿಷ್ಟು ಪ್ರೋತ್ಸಾಹ ಆಗಾಗ ದೊರೆಯಿತಾದರೂ ಒಟ್ಟಂದದಲ್ಲಿ ಅಂದಿನ ವಾತಾವರಣ ಅವರ ಉತ್ಸಾಹ, ಭರವಸೆಗಳನ್ನು ಕುಗ್ಗಿಸಿದವು. ಆರ್ಥಿಕ ಹೊಡೆತ ಅವರ ಪ್ರಕಟಣೆ ಮತ್ತು ಬರಹಗಳನ್ನು ಕ್ರಮೇಣ ನುಂಗಿತು, ಪತ್ರಿಕೆಗಳು ನಿಂತವು, ಹಿತೈಷಿಣಿ ಮೌನಿಯಾದಳು.

ತಮ್ಮದೇ ಆದ ಸಂಸಾರದ ಜವಾಬ್ದಾರಿಗಳಿಲ್ಲದ ವಿಧವೆಯರಿಗಾಗಲೀ ಅವಿವಾಹಿತೆಯರಿಗಾಗಲೀ ಅಪಾರ ಬಿಡುವು ದೊರೆಯುತ್ತದೆಂದೂ ಇದರಿಂದಾಗಿ ಅವರು ತಮ್ಮ ಆಸಕ್ತಿಗಳನ್ನು ರೂಢಿಸಿಕೊಳ್ಳಲು ಗೃಹಿಣಿಯರಿಗಿಂತ ಹೆಚ್ಚಿನ ಅವಕಾಶವಿರುತ್ತದೆಂದೂ ಯಾರಾದರೂ ಅಂದುಕೊಳ್ಳಬಹುದಾದ್ದು ಸಹಜ. ಆದರೆ ಆರ್ಥಿಕ ಬಲವಿದ್ದು ಪ್ರತ್ಯೇಕವಾಗಿ ಬದುಕಬಲ್ಲಂಥವರ ಬಗ್ಗೆ ನಮ್ಮ ಈ ಅನಿಸಿಕೆ ಸರಿಹೋಗಬಹುದಾದರೂ ಆರ್ಥಿಕವಾಗಿ ಅವಲಂಬಿಯಾಗಿದ್ದು ಒಟ್ಟು ಕುಟುಂಬಗಳಲ್ಲಿ ಬದುಕುವವರಿಗೆ ಗೃಹಿಣಿಯರಿಗಿಂತಲೂ ಹೆಚ್ಚಿನ ಒತ್ತಡಗಳಿರುತ್ತವೆ. ಒಂದು ದೃಷ್ಟಿಯಿಂದ, ವಿಶೇಷವಾಗಿ ಹಕ್ಕಿನ ದೃಷ್ಟಿಯಿಂದ ಅಂಥವರಿಗೆ ಮನೆ, ಮಕ್ಕಳು ಇಲ್ಲವಾದರೂ ಬಂಧುಗಳೆಲ್ಲರ ಮನೆ, ಮಕ್ಕಳ ಜವಾಬ್ದಾರಿಯೂ ಅವರ ಮೇಲೆ ಬೀಳುವುದು ಸಾಮಾನ್ಯವಾಗಿ ನಡೆಯುವಂಥದು. ತಿರುಮಲಾಂಬ ಅವರ ಬದುಕು ಕೂಡ ಇದಕ್ಕೆ ಅಪವಾದವಾಗಲಿಲ್ಲ. ಅಪವಾದವಾಗುವ ಬಯಕೆ ಅವರಿಗಿದ್ದಂತೆಯೂ ತೋರುವುದಿಲ್ಲ. ಹೀಗಾಗಿ ತಾಯಿಯಿಲ್ಲದ ಮಕ್ಕಳೇ ಇರಲಿ, ಕಾಯಿಲೆ ಬಿದ್ದ ಬಂಧುಗಳೇ ಇರಲಿ, ಬಸುರಿ ಬಾಣಂತಿಯರೇ ಇರಲಿ ತಿರುಮಲಾಂಬ ಅವರ ಆರೈಕೆಯನ್ನು ನಿರೀಕ್ಷಿಸಬಹುದಾಗಿತ್ತು, ಮನೆವಾಳ್ತೆಯನ್ನು ವಹಿಸಬಹುದಾಗಿತ್ತು. ಈ ಎಲ್ಲ ಜವಾಬ್ದಾರಿ, ದುಡಿಮೆಗಳ ಮಧ್ಯವೇ ಅವರ ಬರಹದ ಬದುಕು ಸಾಗಿತ್ತು. ವೆಂಕಟಕೃಷ್ಣಯ್ಯಂಗಾರರ ಇಬ್ಬರು ಪತ್ನಿಯರ ಮಕ್ಕಳು, ಅವರ ತಾಯಿ, ಅಕ್ಕ ಮತ್ತಿತರ ಬಂಧುಗಳಿಂದ ತುಂಬಿದ ಸಂಸಾರ, ಲೆಕ್ಕವಿಲ್ಲದಷ್ಟು ಅತಿಥಿ - ಅಭ್ಯಾಗತರಿಗೆ ಮಾಡಬೇಕಾಗಿದ್ದ ಸತ್ಕಾರ ಹೀಗೆ ಬಿಡುವಿಲ್ಲದ ದುಡಿಮೆ, ಹತ್ತಾರು ಜನರನ್ನು ಅನುಸರಿಸಬೇಕಾಗಿದ್ದ ಅನಿವಾರ್ಯತೆಯ ನಡುವೆ ಅವರ ಸಂಪಾದನೆ, ಪ್ರಕಾಶನ, ಲೇಖನದ ವ್ಯವಸಾಯ. ಆ ದಿನಗಳ ಅವರ ವಾತಾವರಣದ ಬಗ್ಗೆ ಮೇಲ್ಕಂಡ ಸಂದರ್ಶನದಲ್ಲಿ ಅವರೇ ಹೇಳುವ ಮಾತುಗಳು ಹೀಗಿವೆ: ''ತುಂಬಿದ ಸಂಸಾರದಲ್ಲಿ ಕಾರ್ಯಕಲಾಪಗಳೂ ಬಹಳ. ಸರಸ ವಿರಸ, ವಾದ, ವಿವಾದಗಳೂ ಸುಖದುಃಖ ಸಂತೋಷ-ಸಂಭ್ರಮಗಳೂ ಒದಗುತ್ತಲಿದ್ದವು.'' ಅವರ ನಿತ್ಯದ ದುಡಿಮೆ ಮುಗಿಯುವಾಗ

ರಾತ್ರಿ ಹನ್ನೊಂದೋ ಹನ್ನೆರಡೋ ಹೊಡೆದಿರುತ್ತಿತ್ತು. ಆಮೇಲೆ ಬರಹಕ್ಕೆ ಬಿಡುವು. ಅವರ ತಮ್ಮ ಶ್ರೀ ಮುಕುಂದನ್ ನೆನೆದಂತೆ ಮಧ್ಯರಾತ್ರಿಗಳಲ್ಲಿ ಅವರ ಕಾದಂಬರಿಗಳ ಸೂರ್ಯೋದಯದ ವರ್ಣನೆ ರೂಪುಗೊಳ್ಳುತ್ತಿತ್ತು.

ತಿರುಮಲಾಂಬ ಅವರದು ಅವ್ಯಾಜ ಬಂಧುಮಿತ್ರಪ್ರೇಮ. ತಾಯಿಯನ್ನು ಕಳೆದುಕೊಂಡ ತಂಗಿ, ತಮ್ಮಂದಿರ ಲಾಲನೆ ಪಾಲನೆಯಿಂದಲೇ ಪ್ರಾರಂಭವಾದ ಅವರ ಬದುಕಿನಲ್ಲಿ ತಾಯಿಯನ್ನು ಕಳೆದುಕೊಂಡ ಅಕ್ಕ, ತಂಗಿಯರ ಮಕ್ಕಳು ಬಂದು ಸೇರಿದರು. ಕೊನೆಗಾಲದಲ್ಲೂ ಅವರಿಗೆ ತಾವು ಸಾಕಿದ ಈ ಮಕ್ಕಳ ಮೇಲೆ ಇದ್ದ ಮಮತೆ, ಮಕ್ಕಳಿಗೂ ಇವರ ಮೇಲಿದ್ದ ಮಮತೆ ಅಪಾರವಾದ್ದು. ಎಲ್ಲ ಮಕ್ಕಳಿಗೂ 'ಅಮ್ಮಣ್ಣಕ್ಕ' (ಮನೆಯಲ್ಲಿ ತಿರುಮಲಾಂಬ ಅವರನ್ನು ಕರೆಯುತ್ತಿದ್ದುದು ಹಾಗೆ)ನಾಗಿದ್ದರು. ಬಂಧುಗಳೇ ಇರಲಿ ಪರಿಚಿತರೇ ಇರಲಿ ಅವರಿಗೆ ತಮ್ಮ ಸಹಾಯದ ಅಗತ್ಯವಿದೆಯೆಂದು ಕಂಡುಬಂದರೆ ಸಹಾಯ ಮಾಡಲು ಹಿಂದೆಗೆಯುತ್ತಿರಲಿಲ್ಲ. ಅವರದು ಕಾರ್ಯಮುಖೇನ ವ್ಯಕ್ತವಾಗುತ್ತಿದ್ದ ಪ್ರೀತಿ. ಮಕ್ಕಳು ಆಡಬಯಸಿದ ನಾಟಕಕ್ಕೆ ಸಿದ್ಧ ಮಾಡುವುದೇ ಇರಲಿ, ಪ್ಲೇಗ್ ತಗುಲಿದ ನಂಜನಗೂಡಿನ ರೋಗಿಗಳ ಶುಶ್ರೂಷೆಯೇ ಇರಲಿ, ಬಂಧುಮಿತ್ರರಿಗೆ ಬಂದ ಆಪತ್ತೇ ಇರಲಿ ಪ್ರೀತಿ ತುಂಬಿದ ಮನಸ್ಸಿನ ಮತ್ತು ದುಡಿಮೆಗೆ ಹೆದರದ ದೇಹದ ಒಡತಿಯಾದ ತಿರುಮಲಾಂಬ ತಮ್ಮ ಸಹಾಯ ಹಸ್ತ ಚಾಚಲು ಹಿಂದೆಗೆಯುತ್ತಿರಲಿಲ್ಲ.

ತಂದೆಯ ಪ್ರೀತಿ, ಮಾರ್ಗದರ್ಶನಗಳ ರಕ್ಷಾಕವಚ ಆಪತ್ತುಗಳಿಂದಾವೃತವಾದ ತಿರುಮಲಾಂಬರ ಬದುಕಿನಲ್ಲಿ ಮುಖ್ಯವಾಗಿತ್ತು. ಇದರಿಂದಾಗಿಯೇ ಕಲ್ಯಾಣಮ್ಮ ಮೊದಲಾದ ಆ ಕಾಲದ ವಿಧವೆಯರಾದ ಲೇಖಕಿಯರಿಗೂ ಸಮಾಜ ಕಾರ್ಯಕರ್ತೆಯರಿಗೂ ಇದ್ದಷ್ಟು ಅಡಚಣೆಗಳು ತಿರುಮಲಾಂಬ ಅವರಿಗಿರಲಿಲ್ಲ. ಈ ಮಗಳ ಮೇಲೆ ವೆಂಕಟಕೃಷ್ಣಯ್ಯಂಗಾರರಿಗೆ ಇದ್ದ ಅಭಿಮಾನ ಎಣೆಯಿಲ್ಲದ್ದು. ಆ ಕಾಲದಲ್ಲಿ ಪ್ರಕಾಶನ, ಬರಹ, ಪತ್ರಿಕಾ ಸಂಪಾದನೆಗಳಲ್ಲಿ ತಿರುಮಲಾಂಬ ತಮ್ಮನ್ನು ತೊಡಗಿಸಿಕೊಳ್ಳಲು ತಂದೆಯ ಪ್ರೋತ್ಸಾಹವೇ ಮುಖ್ಯ ಪ್ರೇರಣೆ. ಕಿರಿದರಲ್ಲೇ ತಾಯಿಯನ್ನು ಕಳೆದುಕೊಂಡ ಜೀವ ತಂದೆಯನ್ನು ಹಚ್ಚಿಕೊಂಡದ್ದರಲ್ಲಿ ಆಶ್ಚರ್ಯವಿಲ್ಲ. ಆಸ್ತಿಯ ವಿಭಜನೆ ಮಾಡುವಾಗಲೂ ಅಯ್ಯಂಗಾರರು ತಮ್ಮ ಮಗಳನ್ನು ನೆನೆಯದಿರಲಿಲ್ಲ. ಈ ಅಕ್ಕರೆಗೆ ಸರಿದೊರೆಯಾದ ಪಿತೃಪ್ರೇಮ ಮಗಳದು. ಈ ಪ್ರೀತ್ಯಾದರಗಳು ಅವರ ಗ್ರಂಥಾರ್ಪಣೆ, ಮುನ್ನುಡಿ ಮತ್ತು ತಂದೆಯನ್ನು ಕುರಿತ ಲೇಖನಗಳಲ್ಲಿ ಸ್ಪಷ್ಟವಾಗಿ ವ್ಯಕ್ತವಾಗಿವೆ. ಕೊನೆಯುಸಿರೆಳೆಯುವಾಗಲೂ ವೆಂಕಟಕೃಷ್ಣಯ್ಯಂಗಾರರಿಗೆ ಮಗಳ ಚಿಂತೆ, ಮುಂದೆಯೂ ಈಕೆಯನ್ನು ಚೆನ್ನಾಗಿ ನೋಡಿಕೊಳ್ಳಬೇಕೆಂಬುದನ್ನು ಇತರರಿಗೆ ಹೇಳಲು ಮರೆಯಲಿಲ್ಲ.

ತಿರುಮಲಾಂಬ ಅವರದು ಏಕಲವ್ಯನ ಪರಂಪರೆ. ಭಾಷೆ, ಸಾಹಿತ್ಯಗಳ ಅಧ್ಯಯನದಲ್ಲಿ ತಮಗೆ ತಾವೇ ಗುರುವಾದರು. ತಮ್ಮ ಬಂಧುವೊಬ್ಬರಿಂದ 'ರಘುವಂಶ'ದ ಎರಡು ಸರ್ಗಗಳನ್ನು ಕಲಿತರು. ಅಷ್ಟೇ ಅವರ ಸಂಸ್ಕೃತಪಾಠ. ಮುಂದಿನದು ಸ್ವಾಧ್ಯಾಯ, ಇಂಗ್ಲಿಷನ್ನೂ ಅವರೇ ಕಲಿತುಕೊಂಡರು. ವಿಳಾಸ ಬರೆಯಲು, ಬಂದ ಕಾಗದಗಳನ್ನು ಓದಿ ತಿಳಿದುಕೊಳ್ಳಲು ಸಾಧ್ಯವಾಗುವಷ್ಟು ಇಂಗ್ಲಿಷ್ ಬರುತ್ತಿತ್ತು. ಸ್ವಲ್ಪ ಬಂಗಾಳಿಯನ್ನೂ ಕಲಿತಿದ್ದರಂತೆ. ಬಂಗಾಳಿ ಕಥೆಗಳನ್ನು ಓದುತ್ತಿದ್ದರೆಂಬುದು ಅವರ ಬಂಧುಗಳ ನೆನಪು, ಬಂಗಾಳಿ ಮತ್ತು ಕನ್ನಡ ಬಲ್ಲ ಮೈಸೂರು ಸರ್ಕಾರದ ಅಂದಿನ ವಿತ್ತ ಕಾರ್ಯದರ್ಶಿಯಾಗಿದ್ದ ಚಕ್ರವರ್ತಿಗಳ ಪರಿಚಯವಿತ್ತು.

ದೂರದ ಸಂಬಂಧಿಯೂ ಆಗಿದ್ದ ಬಿ. ವೆಂಕಟಾಚಾರ್ಯರ ಪುಸ್ತಕಗಳನ್ನು ಓದುತ್ತಿದ್ದರು. ಮನೆಮಾತಾದ ತಮಿಳಿನ ಲಿಪಿಯನ್ನು ಅವರು ಕಲಿತದ್ದು ತಮ್ಮ ಅರುವತ್ತನೆಯ ವಯಸ್ಸಿನಲ್ಲಿ. ತಮಿಳಿನಲ್ಲಿದ್ದ ಧಾರ್ಮಿಕ ಬರಹಗಳನ್ನು ಓದುವ ಆಸೆಯೇ ಈ ಕಲಿಕೆಗೆ ಮುಖ್ಯ ಪ್ರೇರಣೆಯಾಗಿದ್ದಿರಬೇಕು. ಅಲ್ಲದೆ ಮದ್ರಾಸಿನಲ್ಲಿ ಅನೇಕ ವರ್ಷಗಳಿದ್ದುದರಿಂದ ಅಲ್ಲಿಯ ಪತ್ರಿಕೆ, ಪುಸ್ತಕಗಳನ್ನು ಓದುವುದಕ್ಕೂ ತಮಿಳು ಲಿಪಿಯ ಪರಿಚಯದ ಅಗತ್ಯವಿತ್ತು. ಕರ್ನಾಟಕಕ್ಕೆ ತಿರುಗಿ ಬಂದಮೇಲೂ ತಮಿಳು ಪತ್ರಿಕೆಗಳ, ಗ್ರಂಥಗಳ ಓದನ್ನು ಮುಂದುವರಿಸಿದರು. ಈ ಮೇಲಿನ ಭಾಷೆಗಳ ಪರಿಚಯವನ್ನು ಪಡೆದ ಅವರು ಬರವಣಿಗೆಯನ್ನು ರೂಢಿಸಿಕೊಂಡದ್ದು ಕನ್ನಡದಲ್ಲಿ, ಇದಕ್ಕೆ ಮನೆಯ ವಾತಾವರಣವೂ ಕಾರಣವಾಗಿದ್ದಿರಬೇಕು. ವೆಂಕಟಕೃಷ್ಣಯ್ಯಂಗಾರರು ಕನ್ನಡ ಲೇಖಕರಾಗಿದ್ದಷ್ಟೇ ಅಲ್ಲದೆ ತಮ್ಮ ವೃತ್ತಿಯಲ್ಲೂ ಕನ್ನಡಕ್ಕೆ ಮಾನ್ಯತೆ ಕೊಟ್ಟವರು. ಅವರ ಸಹೋದ್ಯೋಗಿಯಾಗಿದ್ದ ಬಿಎಂಶ್ರೀಯವರ ಸೋದರ ಬಿ. ಎಂ. ಶಿವರಾಮಯ್ಯನವರು ನೆನಪಿಸಿಕೊಂಡಂತೆ ಆ ದಿನಗಳಲ್ಲೇ ಅವರು ನ್ಯಾಯಾಲಯದಲ್ಲಿ ಕನ್ನಡದಲ್ಲಿ ವಾದಿಸುತ್ತಿದ್ದರು. ಈ ಹಿನ್ನೆಲೆಯಲ್ಲಿ ತಿರುಮಲಾಂಬ ಅವರ ಕನ್ನಡ ಬರವಣಿಗೆಗೆ ಪ್ರೋತ್ಸಾಹ ಸಿಕ್ಕಿದ್ದು ಸಹಜ.

ತಿರುಮಲಾಂಬ ಅವರದು ಅಪೂರ್ವ ಜ್ಞಾಪಕಶಕ್ತಿ. ಓದಿದ್ದೇ ಆಗಲಿ, ನೋಡಿದ್ದೇ ಆಗಲಿ ಸುಲಭವಾಗಿ ಅವರ ನೆನಪಿನಲ್ಲಿ ಉಳಿದುಬಿಡುತ್ತಿತ್ತು. ಕುಳಿತಲ್ಲಿಂದಲೇ ಯಾವ ಯಾವ ಪೆಟ್ಟಿಗೆಯಲ್ಲಿ ಏನೇನಿದೆಯೆಂದು ಹೇಳುವ ಅವರ ವೈಖರಿ ಬಂಧುಮಿತ್ರರನ್ನು ಬೆರಗುಗೊಳಿಸುತ್ತಿತ್ತು. ನಂಜನಗೂಡನ್ನು ಬಿಟ್ಟುಬಂದ ಎಷ್ಟೋ ವರ್ಷಗಳ ನಂತರ ೨೨-೨-೭೮ರಂದು ನಂಜನಗೂಡಿನ ತಮ್ಮ ಬಂಧುವೊಬ್ಬರಿಗೆ ಅವರು ಬರೆಯುತ್ತಾರೆ: "ಮಾಡದ ಮೇಲಿನ ರೂಮಿನಲ್ಲಿರಿಸಿದ್ದ ಗಾಜಿನ ಬೀರು-ಅದರ ಕೆಳಗಿನ ಬೀರುಗಳಲ್ಲಿ ಒಟ್ಟಿಗೆ ೩೦೦೦+೩೦೦ ಪ್ರತಿಗಳು (ಮಣಿಮಾಲೆ) ಇದ್ದವು. ಮತ್ತೊಂದು ಉದ್ದದ ಬೀರುವಿನಲ್ಲಿ ವಿರಾಗಿಣಿ, ವಿವೇಕೋದಯ, ನಭಾ ಭಾಗ I, ರಮಾನಂದದ ೩೦೦-೧೫೦-೩೦೦+೧೦೦ ಪ್ರತಿಗಳು ಮತ್ತು ವಿಕ್ರಮ, ರಘುನಾಥಸಿಂಹ, ವಿಮಲಾದೇವಿ ಕೆಲಕೆಲವು ಪ್ರತಿಗಳು, ಭದ್ರಗೀತಾವಲಿ ಪುಸ್ತಕಗಳೂ ಇದ್ದವು." ಟಿಪ್ಪಣಿಗಳ ಸಹಾಯವಿಲ್ಲದೆ ಹೀಗೆ ನೆನಪಿಟ್ಟುಕೊಳ್ಳುವುದು ಅವರಿಗೆ ಸಾಧ್ಯವಿತ್ತು.

ಸಹಾಯ ಮಾಡುವಲ್ಲಿ ಅಚಿಂತ್ಯವಾಗಿ ಚಾಚುತ್ತಿದ್ದ ಅವರ ಕೈ ಸಹಾಯವನ್ನು ಸ್ವೀಕರಿಸುವಲ್ಲಿ ಹಿಂಜರಿಯುತ್ತಿತ್ತು. ಆರ್ಥಿಕವಾಗಿ ಅವರ ಬಂಧುಗಳು ನೆರವಿಗೆ ನಿಂತದ್ದನ್ನು ಅವರು ಒಪ್ಪಲೇಬೇಕಾಗಿತ್ತು. ಆದರೆ ಅವರ ದುಡಿಮೆ ಯಾವುದೋ ರೀತಿಯಲ್ಲಿ ಈ ಮೂಲಗಳಿಗೆ ಸಲ್ಲುತ್ತಿತ್ತು. ಪ್ರಕಾಶಕಿ, ಸಂಪಾದಕಿಯಾಗಿ ಕೆಲಸ ಮಾಡುವಾಗಲೂ ಹೆಚ್ಚಿನ ಕೆಲಸ ಅವರದೇ. ಪತ್ರವ್ಯವಹಾರವೇ ಇರಲಿ, ಕರಡು ಓದುವುದೇ ಇರಲಿ, ತಮ್ಮ, ಊಟ ಉಡಿಗೆಯ ವಿಷಯವೇ ಇರಲಿ ತಮ್ಮ ಕೆಲಸವನ್ನು ತಾವೇ ಮಾಡುತ್ತಿದ್ದರು.

ಮೂವತ್ತನೆಯ ವಯಸ್ಸಿಗೇ ಅಂಟಿದ ವಾತರೋಗ, ಎರಡುಬಾರಿ ಶಸ್ತ್ರಚಿಕಿತ್ಸೆಗೆ ಒಳಗಾದ ಕಣ್ಣು. ಇಳಿಗಾಲದಲ್ಲಿ ಕಾಲಿನ ಮೂಳೆ ಮುರಿತ-ಇಂಥ ದೈಹಿಕ ವಿಪತ್ತುಗಳ, ತಾಯಿ-ತಂದೆಯ, ಪತಿಯ, ಸೋದರ, ಸೋದರಿಯರ ಮರಣ, ತಮ್ಮ ಪ್ರೀತಿಯ ಅಮೂಲ್ಯ ಪುಸ್ತಕ ಸಂಗ್ರಹದ ವಿನಾಶ–ಇಂಥ ಯಾತನೆಗಳ ಅನುಭವದ ಮಧ್ಯೆಯೂ ಬೇರೆಯವರಿಗೆ ತೊಂದರೆ ಕೊಡದಿರಲು ತಿರುಮಲಾಂಬ ಯತ್ನಿಸುತ್ತಿದ್ದರು. ಮಿತ ಅಗತ್ಯಗಳು, ಸಂಯಮದ

ಬದುಕು, ಪರೋಪಕಾರಕ್ಕೆ ಹಿಂದೆಗೆಯದ ಕೈ-ಈ ಎಲ್ಲವೂ ಅವರೆಡೆಗೆ ಬಂಧುಪ್ರೇಮಪೂರವನ್ನು ಹರಿಯಿಸಿದ್ದರಲ್ಲಿ ಆಶ್ಚರ್ಯವೇನಿದೆ?

ದೃಢ ವ್ಯಕ್ತಿತ್ವದ ಶಿಸ್ತುಗಾರ್ತಿ ತಿರುಮಲಾಂಬ. ಒಮ್ಮೆ ಜೋಳದಕಡ್ಡಿ ಕಾಲಿಗೆ ಹೊಡೆದು, ಅದರ ಭಾಗ ಕಾಲಿನ ಒಳಗೆ ಸೇರಿತು. ಶಸ್ತ್ರಚಿಕಿತ್ಸೆ ಮಾಡಿ ಅದನ್ನು ಹೊರ ತೆಗೆಯಬೇಕಾಯಿತು. ತಿರುಮಲಾಂಬ ವೈದ್ಯರಿಗೆ ಕೊಟ್ಟ ಸೂಚನೆ: ''ಕ್ಲೋರೋಫಾರಂ ಕೊಡದೆ ಶಸ್ತ್ರಚಿಕಿತ್ಸೆ ಮಾಡಿ! ಸ್ಥಿರತೆ, ನಂಬಿದ್ದನ್ನು ನಿಷ್ಠೆಯಿಂದ, ಎದೆಗಾರಿಕೆಯಿಂದ ನಡೆಸಿಕೊಂಡು ಹೋಗುವಿಕೆ ತಿರುಮಲಾಂಬ ಅವರ ವ್ಯಕ್ತಿತ್ವದ ಮೂಲಗುಣ ಎನ್ನಬೇಕು. ಅವರ ಸೋದರರಾದ ಶ್ರೀ ಮುಕುಂದನ್ ತಿರುಮಲಾಂಬ ಅವರ ಬಾಲ್ಯಕ್ಕೆ ಸಂಬಂಧಿಸಿದ ಒಂದು ಘಟನೆಯನ್ನು ೧೯೮೬ರಲ್ಲಿ ನೆನಪಿಸಿಕೊಂಡರು: ಆಗ ತಿರುಮಲಾಂಬ ಪ್ರಾಥಮಿಕ ಶಾಲೆಯ ವಿದ್ಯಾರ್ಥಿನಿ. ಮುಖ್ಯೋಪಾಧ್ಯಾಯರ ಮೇಲೆ ಸಹ ಅಧ್ಯಾಪಕರು ಅಕಾರಣವಾಗಿ ದೂರಿದರು. ಇದರ ಫಲವಾಗಿ ಮುಖ್ಯೋಪಾಧ್ಯಾಯರು ಕೆಲಸ ಕಳೆದುಕೊಂಡರು. ಪುಟ್ಟ ತಿರುಮಲಾಂಬೆಗೆ ಇದು ಅನ್ಯಾಯವೆನಿಸಿತು, ಸಿಟ್ಟುಬಂತು. ಮತ್ತೆ ಆ ಶಾಲೆಗೆ ಆಕೆ ಹೋಗಲಿಲ್ಲ.

ತಮ್ಮ ಧೈರ್ಯವನ್ನು ಕುರಿತು ಹೇಳುವಾಗ ತಾವು ರಾಕ್ಷಸಗಣದವರೆಂದು ತಿರುಮಲಾಂಬ ಹೇಳುತ್ತಿದ್ದುದುಂಟು. ಅಶಿಸ್ತನ್ನು ಬೆದರಿಸಿ ಓಡಿಸುವಲ್ಲಿಯಂತೂ ಅವರು ರಾಕ್ಷಸಗಣದವರೇ ಆಗಿದ್ದರು. ಅವರ ಎಲ್ಲ ಕೆಲಸಗಳಲ್ಲಿ ಈ ಶಿಸ್ತು ಕಾಣುತ್ತದೆ. ಅವರ ಪುಸ್ತಕಗಳು ಅಚ್ಚಾಗಿರುವ ರೀತಿ, ದಾಖಲೆಗಳನ್ನು ಅನುಗೊಳಿಸಿರುವ ಕ್ರಮ ದಿನಚರಿಯನ್ನು ಬರೆದಿಟ್ಟ ರೀತಿ ಎಲ್ಲೆಲ್ಲೂ ಈ ಅಚ್ಚುಕಟ್ಟು ಮೆರೆದಾಡಿದೆ. ಆಯಾ ಸೀರೆಗೆ ಆಯಾ ಬಣ್ಣದ ರವಿಕೆ, ಅದರೊಡನೆ ಒಂದು ಜೌಕ–ಇವಿಷ್ಟೂ ಒಂದು ಸಿಲ್ಕಿನ ಚೀಲದಲ್ಲಿರಬೇಕು. ಇದು ಹೆಚ್ಚು-ಕಡಿಮೆ ಆಗುವಂತೆಯೇ ಇರಲಿಲ್ಲ. ತಿರುಮಲಾಂಬ ಅವರ ಇಂಥ ಅನೇಕ ಶಿಸ್ತಿನ ರೀತಿಗಳನ್ನು ಅವರ ಬಂಧುಗಳು ನೆನೆಯುತ್ತಾರೆ. ಶ್ಲೋಕ ಪಠನವೇ ಇರಲಿ, ರಾಮಾಯಣ ವಾಚನವೇ ಇರಲಿ, ಲಕ್ಷ್ಮೀತಂತ್ರದ ಓದೇ ಇರಲಿ, ತಮಗೆ ಬಂದ ಪತ್ರಗಳೇ ಇರಲಿ ಎಲ್ಲದರ ಮೇಲೆ ಅದು ತಲುಪಿದ, ಓದಿದ ತಾರೀಖು ಅಲ್ಲಿರಬೇಕು. ತಿಂಡಿ ಹಂಚುವಾಗಲೂ ಅದೇ ಶಿಸ್ತು, ಔಷಧಿ ಕೊಡುವಾಗಲೂ ಅದೇ ಶಿಸ್ತು. ಈ ಶಿಸ್ತಿನ ಸಿಪಾಯಿಗೆ ಬರುತ್ತಿದ್ದ ಕಡುಕೋಪದ ರುಚಿಯನ್ನೂ ಅವರ ಬಂಧುಗಳು ಕಂಡಿದ್ದಾರೆ.

ಈ ಅಚ್ಚುಕಟ್ಟಿನ ಜೊತೆಗೆ ಸೊಗಸುಗಾರಿಕೆಯ ಆಕಾಂಕ್ಷೆಯೂ ಇತ್ತು, ಅದಕ್ಕೆ ಅವಕಾಶವೂ ಇತ್ತು. ಸಾಲಸೋಲ ಕಷ್ಟನಷ್ಟಗಳಿದ್ದರೂ ತಮ್ಮ ದಿನನಿತ್ಯದ ಜೀವನಕ್ಕಾಗಿ ತಿರುಮಲಾಂಬ ಎಂದೂ ಬವಣೆಪಟ್ಟಂತೆ ತೋರುವುದಿಲ್ಲ. ಆರ್ಥಿಕವಾಗಿ ಸುಸ್ಥಿತಿಯಲ್ಲಿದ್ದ ಅವರ ಬಂಧುಗಳು ಒಬ್ಬರಲ್ಲ ಒಬ್ಬರು ಅವರನ್ನು ನೋಡಿಕೊಂಡಿದ್ದಾರೆ. ಪ್ರಕಟಣೆ, ಪತ್ರಿಕೆಗಳಿಂದ ಆರ್ಥಿಕವಾಗಿ ತುಂಬ ನಷ್ಟದಲ್ಲಿದ್ದರೂ ೧೯೩೯ರಲ್ಲಿ 'ಮಣಿಮಾಲಾ' ಕಾದಂಬರಿಯನ್ನು ಅವರು ಪ್ರಕಟಿಸಿರುವ ರೀತಿ ಅವರ ಸೊಗಸುಗಾರಿಕೆಯ ಅಭಿರುಚಿಯನ್ನು ತೋರುತ್ತದೆ. ಕಡು ಗುಲಾಬಿ ಬಣ್ಣದ ಸಿಲ್ಕಿನ ರಕ್ಷಾಕವಚ, ಸೊಗಸಾದ ರಕ್ಷಾಕವಚದ ಒಳಹೊದಿಕೆಗೆ ಮಣಿಮಾಲೆ ಹೊರಬಂದಿದ್ದಾಳೆ.

ಮೇಲುನೋಟಕ್ಕೆ ತಿರುಮಲಾಂಬ ಗಡುಸು (ಅವರ ಅನೇಕ ಛಾಯಾಚಿತ್ರಗಳನ್ನು ಕಾಣುವಾಗಲೂ ಹಾಗೆ ತೋರುತ್ತದೆ), ಶಿಸ್ತು, ಸ್ಥೈರ್ಯ, ಕಡ್ಡಿತುಂಡಾದ ಮಾತು. ಆದರೆ ಈ ಗಡಸಿನ ರಕ್ಷಾಕವಚದೊಳಗೆ ಬತ್ತದ ಅಂತಃಕರಣದ ಒರತೆ ಇದೆ ಎಂಬುದನ್ನು ಅವರನ್ನು

ಹತ್ತಿರದಿಂದ ಕಂಡವರು ತಿಳಿದಿದ್ದರು. ತಿರುಮಲಾಂಬ ಅವರನ್ನು ಕಂಡವರು ಹೇಳುವುದನ್ನೂ ದಾಖಲೆಗಳನ್ನೂ ಗಮನಿಸಿದರೆ ಅವರ ಕ್ರಿಯಾಶೀಲತೆಗೆ ಅಭಿಮುಖಿಯಾದ ಅವರ ಅಂತಃಕರಣದ ಪರಿಚಯವಾಗುತ್ತದೆ. ತಬ್ಬಲಿಗಳಿಗೆ ತಾಯಾಗಿ, ಆಪತ್ತಿನಲ್ಲಿದ್ದವರಿಗೆ ಆಪದ್ಬಂಧುವಾಗಿದ್ದವರು ತಿರುಮಲಾಂಬ.

ನಾಟಕಸಂಘ, ರಾತ್ರಿಯ ಶಾಲೆಯನ್ನೂ ತಿರುಮಲಾಂಬ ನಡೆಸುತ್ತಿದ್ದುದುಂಟು. ಕೆಲವು ಔಷಧಿಗಳನ್ನೂ ಅವರೇ ತಯಾರಿಸಿ ಚಿಕಿತ್ಸೆ ನಡೆಸುತ್ತಿದ್ದರು. ಆದರೂ ಅವರ ಬದುಕಿನ ಪೂರ್ವಾಹ್ನದ ಗಮನಾರ್ಹವಾದ ಪಾಲು ಸಾರಸ್ವತಲೋಕಕ್ಕೇ ವಿನಿಯೋಗವಾಗುತ್ತಿತ್ತು. ಈ ಕಾರಣಕ್ಕಾಗಿಯೇ ಅವರು ಟೀಕೆಗೆ ಒಳಗಾದದ್ದು ಉಂಟು. 'ಲೇಖನ ವಾಚನ ಪರಿಶ್ರಮ'ದಿಂದ ಏನೂ ಫಲವಿಲ್ಲವೆಂದು ಪ್ರತ್ಯಕ್ಷ ಪರೋಕ್ಷದಲ್ಲಿ ತಮ್ಮನ್ನು ಆಕ್ಷೇಪಿಸಿದ್ದನ್ನು 'ಸೇವಾವಿಚಾರ'ದಲ್ಲಿ ಅವರು ಪ್ರಸ್ತಾಪಿಸಿದ್ದಾರೆ. ಬರಹದ ಮೂಲಕವಾಗಿಯಷ್ಟೇ ಅಲ್ಲದೆ ನೇರವಾಗಿ ಸಾಮಾಜಿಕ ಕಾರ್ಯಗಳನ್ನು ಮಾಡುವ ಆಕಾಂಕ್ಷೆ ತಿರುಮಲಾಂಬ ಅವರಿಗಿದ್ದುದು ಸ್ಪಷ್ಟ. ಕೆಲವು ಸಂದರ್ಭಗಳಲ್ಲಿ ವೈಯಕ್ತಿಕವಾಗಿ ಅವರು ಅಂಥ ಕೆಲಸಗಳನ್ನು ಮಾಡಿದ್ದಾರೆ. ಸಾಮೂಹಿಕವಾಗಿ ಅಂಥ ಕೆಲಸಗಳನ್ನು ಮಾಡುವ ಬಗ್ಗೆ ಅವರಿಗಿದ್ದ ಆಸಕ್ತಿಯು 'ಸೇವಾವಿಚಾರ'ದ ಕೊನೆಯ ಭಾಗದಲ್ಲಿ ಸ್ಪಷ್ಟವಾಗಿದೆ: ''ಅಲ್ಲದೆ ಈ ವರೆಗೆ ಗ್ರಂಥಲೇಖನ ರೂಪದಿಂದ ಸೋದರೀಸೇವೆಯನ್ನು ಮಾಡುತ್ತಿದ್ದುದು ಸಾಲದೆಂದು, 'ಮಹಿಳಾಭ್ಯುದಯ' ವೆಂಬ ಹೆಸರಿನಿಂದ ಒಂದು ಸ್ತ್ರೀಸಮಾಜವನ್ನು ನಿರ್ಮಿಸಬೇಕೆಂದು ಪ್ರಯತ್ನಪಟ್ಟೆನು, ಆದರೆ ಅಕಾಲವೆಂದೋ, ಇಲ್ಲವೆ ನಮ್ಮವರ ಸಹಾನುಭೂತಿಯು ಅಷ್ಟಾಗಿ ದೊರೆಯದಿದ್ದುದರಿಂದಲೋ ಹೇಗೋ ಉದ್ದೇಶವು ಈವರೆಗೂ ಸಿದ್ಧಿಯನ್ನು ಹೊಂದಿಲ್ಲ.''

ನಂಜನಗೂಡಿನಲ್ಲಿ ತಿರುಮಲಾಂಬ ಕಳೆದ ಬಹುತೇಕ ವರ್ಷಗಳು ಬರಹ, ಪ್ರಕಟಣೆ, ಅಭ್ಯಾಸವೇ ಮೊದಲಾದ ಸಾರಸ್ವತಲೋಕದ ಚಟುವಟಿಕೆಗಳಿಂದ ತುಂಬಿದ್ದವು. ಈ ಚಟುವಟಿಕೆಗಳು ಹೆಚ್ಚು ಕಡಿಮೆ ನಿಲುಗಡೆಗೆ ಬಂದ ನಂತರದ ಬದುಕು ಬಂಧು-ಮಿತ್ರರಿಗೆ ನೆರವು ನೀಡುವಲ್ಲಿ, ಅಧ್ಯಯನ, ಧ್ಯಾನ, ಚಿಂತನೆಯಲ್ಲಿ, ಜೀವನದ ಅನೇಕ ಮುಖಗಳನ್ನು ಕಾಣುತ್ತಾ ಕಳೆಯಿತು ಎನ್ನಬಹುದು. ತಿರುಮಲಾಂಬ ಅವರ ಬದುಕಿನ ಅಪರಾಹ್ನದಲ್ಲಿ ಅವರಿಗೆ ಒದಗಿತ್ತೆನ್ನಲಾದ ಅತೀಂದ್ರಿಯ ಶಕ್ತಿಯನ್ನು ಕುರಿತು ಅವರನ್ನು ಬಲ್ಲವರೆಲ್ಲರೂ ಹೇಳುತ್ತಾರೆ. ಈ ವಿಶಿಷ್ಟಶಕ್ತಿ ಅವರ ಬಂಧು ವರ್ಗದಲ್ಲಿ ಅವರನ್ನು ಒಂದು ಅಸಾಮಾನ್ಯ ನೆಲೆಗೆ ಏರಿಸಿತ್ತು, ಸಾವಿರಾರು ಮೈಲಿಗಳಾಚೆ ಅಥವಾ ಎಲ್ಲೋ ನಡೆದ ಅಥವಾ ನಡೆಯುತ್ತಿರುವ ಘಟನೆಗಳನ್ನು ಕಣ್ಣಲ್ಲಿ ಕಂಡಂತೆ ವಿವರಿಸಬಲ್ಲವರೆಂದು ಅನೇಕ ಬಂಧುಮಿತ್ರರು ತಮ್ಮ ಸಮಸ್ಯೆಗಳನ್ನು ತಿರುಮಲಾಂಬ ಅವರಲ್ಲಿಗೆ ತರುತ್ತಿದ್ದರು. ಈ ಸಂಬಂಧಿಯಾದ ಅನೇಕ ಘಟನೆಗಳು ಅವರ ಬಂಧುಗಳ ಮನಸ್ಸಿನಲ್ಲಿ ಇನ್ನೂ ಹಸಿರಾಗಿವೆ. ತಿರುಮಲಾಂಬ ಅವರಲ್ಲಿಗೆ ಬರುತ್ತಿದ್ದ ಸಮಸ್ಯೆಗಳ ಸ್ವರೂಪದ ಹಾಗೂ ಆ ಬದಿಯ ಅವರ ವ್ಯಕ್ತಿತ್ವದ ಪರಿಚಯದ ಸಲುವಾಗಿ ಅವರ ಬಂಧುಗಳು ನೆನಪಿಸಿಕೊಂಡ ಘಟನೆಗಳಲ್ಲಿ ನಾಲ್ಕನ್ನು ನಿದರ್ಶನಕ್ಕಾಗಿ ಇಲ್ಲಿ ಸಂಗ್ರಹಿಸಿದೆ:

(ಅ) ಲೋಕಸಭಾಸದಸ್ಯರಾಗಿದ್ದ ಕೇಶವಯ್ಯಂಗಾರರ ಮಗ ರಮೇಶ ವೈದ್ಯವೃತ್ತಿ ಹಿಡಿದು ಜರ್ಮನಿಯಲ್ಲಿ ನೆಲಸಿದ್ದಾರೆ. ಒಮ್ಮೆ ಅವರು ೩೦೦೦ ಮಾರ್ಕುಗಳನ್ನು ಕಳೆದುಕೊಂಡರು. ಎಂದಿನಂತೆ ಈ ಬಗ್ಗೆ ಅಮ್ಮಣ್ಣಕ್ಕನಿಗೆ ಬರೆದರು. ಯಾರು, ಯಾವಾಗ, ಹೇಗೆ ಈ ಹಣವನ್ನು ತೆಗೆದುಕೊಂಡರೆಂಬುದನ್ನು ತಿರುಮಲಾಂಬ ತಾವೇ ಸ್ವತಃ ಕಂಡಂತೆ ಹೇಳಿದರು. ನಂತರ

ಜರ್ಮನಿಯಲ್ಲಿ ನಡೆದ ತಪಾಸಣೆಯ ಫಲಿತಾಂಶವೂ ತಿರುಮಲಾಂಬರ ಹೇಳಿಕೆಯೂ ಅಭಿನ್ನವಾಗಿತ್ತು. (ಆ) ತಮ್ಮ ಕೆಂಪು ಕಂಠಹಾರವನ್ನು ಕಳೆದುಕೊಂಡ ಬಂಧುವೊಬ್ಬರು ತಿರುಮಲಾಂಬ ಅವರಲ್ಲಿಗೆ ಬಂದು ತಮ್ಮ ಸಮಸ್ಯೆಯನ್ನು ತೋಡಿಕೊಂಡರು. ಈ ಆಭರಣ ಆಗ ಇದ್ದ ಜಾಗವನ್ನು ತಿರುಮಲಾಂಬ ಸೂಚಿಸಿದರು. ಆ ಬಂಧುಗಳು ಆ ಜಾಗದಲ್ಲೇ ಆಭರಣವನ್ನು ತಿರುಗಿ ಪಡೆದರು. (ಇ) ಒಮ್ಮೆ ಅವರ ಬಂಧು ಗರುಡಾಚಾರ್ ಅವರು ರಷ್ಯಾಕ್ಕೆ ಹೋಗಿದ್ದರು. ಇಲ್ಲಿದ್ದ ಅವರ ಪತ್ನಿ ತಮ್ಮ ಪತಿಯಿಂದ ಕ್ಷೇಮ ಸಮಾಚಾರ ತಿಳಿಯದೆ ಕಂಗಾಲಾದರು. ತಿರುಮಲಾಂಬ ಅವರ ಕಣ್ಣು ರಷ್ಯಾದಲ್ಲಿದ್ದ ಆ ಬಂಧುವನ್ನು ಕಂಡಿತು. ಅವರು ತೊಟ್ಟಿದ್ದ ಅಂಗಿಯ ಬಣ್ಣ, ಆಗ ಅವರ ಜತೆಗಿದ್ದ ಜನರ ಸಂಖ್ಯೆ, ಆ ನಿಮಿಷದಲ್ಲಿ ಅವರು ಆ ಸ್ನೇಹಿತರ ಕೈಕುಲುಕುತ್ತಿದ್ದುದು–ಮೊದಲಾದ ಎಲ್ಲ ವಿವರಗಳನ್ನು ಹೇಳಿ 'ಸ್ವಲ್ಪ ನೆಗಡಿಯಿದೆ, ಆತಂಕವಿಲ್ಲ' ಎಂದರು. ತಿರುಮಲಾಂಬ ಕೊಟ್ಟ ಎಲ್ಲ ವಿವರಗಳೂ ನಿಜವಾಗಿದ್ದವೆಂದು ಗರುಡಾಚಾರ್ಯರ ಪತ್ನಿ ಅಹಲ್ಯಾ ನೆನೆದರು. (ಈ) ಮದ್ರಾಸಿನಲ್ಲಿ ನೆಲೆಸಿದ ಚಿತ್ರ ನಿರ್ದೇಶಕರಾಗಿದ್ದ ಬಿ. ಎಸ್. ರಂಗ ಅವರ ನಾಯಿ ಒಮ್ಮೆ ವಿಮಾನ ನಿಲ್ದಾಣದಲ್ಲಿ ಕಾಣೆಯಾಯಿತು. ಎಂದಿನಂತೆ ವಿಷಯ ತಿರುಮಲಾಂಬ ಅವರಲ್ಲಿಗೆ ಬಂದಿತು. ನಾಯಿ ಇದ್ದ ಜಾಗ ಮತ್ತು ಪರಿಸ್ಥಿತಿಯನ್ನು ತಿರುಮಲಾಂಬ ಅವರಿಂದ ತಿಳಿದು ನಾಯಿಯನ್ನು ಹುಡುಕಿ ತಂದರು. ಕಳೆದುಹೋದ ಮಗುವೇ ಇರಲಿ, ಕತ್ತರಿಯೇ ಇರಲಿ ತಿರುಮಲಾಂಬ ಅವರ ಒಳಗಣ್ಣಿಂದ ಆಯಾ ವ್ಯಕ್ತಿ, ವಸ್ತುಗಳಿರುವ ಜಾಗವನ್ನು ಹೇಳುತ್ತಿದ್ದುದನ್ನು ಅವರ ಬಂಧುಗಳು ನೆನೆಯುತ್ತಾರೆ. ಬಹುಶಃ ಈ ಬಗೆಯ ಅಪರಾಹ್ನದ ವ್ಯಕ್ತಿತ್ವದ ಮುಖ ಹಾಗೂ ತಿರುಮಲಾಂಬ ಅವರ ಮರಣೋತ್ತರ ಕಾಲದಲ್ಲಿ ನಾನು ಮಾಹಿತಿಗಳನ್ನು ಸಂಗ್ರಹಿಸಿದುದರಿಂದಲೋ ಏನೋ ತಿರುಮಲಾಂಬರ ಮನುಷ್ಯಸಹಜವಾಗಿದ್ದಿರಬಹುದಾದ ಮಿತಿಗಳು ಅವರ ಬಂಧುಗಳ ನೆನಕೆಯಲ್ಲಿ ಅಷ್ಟಾಗಿ ಬರಲಿಲ್ಲ. ಒಂದು ಬಗೆಯಾದ ಭಕ್ತಿಗೌರವಗಳ ಹಿನ್ನೆಲೆಯೇ ಈ ನೆನಕೆಗಳಿಗಿತ್ತು.

ಪುಸ್ತಕಗಳು ಕೊನೆಯವರೆಗೂ ಅವರ ನಿತ್ಯಸಂಗಾತಿಗಳಾಗಿದ್ದವು. ಚಿಕ್ಕಂದಿನಿಂದ ಬೆಳೆಸಿಕೊಂಡು ಬಂದ ಪುಸ್ತಕಪ್ರಿಯತೆ ಕೊನೆಯವರೆಗೂ ಅವರಲ್ಲಿದ್ದಿತು. ವೆಂಕಟಕೃಷ್ಣಯ್ಯಂಗಾರರು ನೆಟ್ಟ ಓದು, ಬರಹದ ಆಸಕ್ತಿ ತಿರುಮಲಾಂಬ ಅವರ ಶಕ್ತಿ ತೀರ ಉಡುಗುವವರೆಗೂ ಬಾಡಲಿಲ್ಲ. ನಂಜನಗೂಡಿನ ಅವರ ಪುಸ್ತಕ ಸಂಗ್ರಹ ನಾಶವಾದದ್ದನ್ನು ಕೇಳಿ ಇಳಿವಯಸ್ಸಿನಲ್ಲಿ ಅವರು ಪಟ್ಟಿರಬಹುದಾದ ಯಾತನೆಯ ಸೂಚನೆ ಅವರ ಒಂದು ಪತ್ರದಲ್ಲಿದೆ. ತಿರುಮಲಾಂಬ ಅವರಿಗೆ ಬೇಕಾದ ಪತ್ರಿಕೆ, ಪುಸ್ತಕಗಳನ್ನು ಒದಗಿಸುವುದರ ಮೂಲಕ ಅವರ ಬಗ್ಗೆ ತಮಗಿದ್ದ ಪ್ರೀತಿ, ಗೌರವಗಳನ್ನು ಅವರ ಬಂಧುಗಳು ತೋರುತ್ತಿದ್ದುದುಂಟು. ಧಾರ್ಮಿಕ ಗ್ರಂಥಗಳ ಪಠನ ಅವರ ನಿತ್ಯಕರ್ಮದ ಒಂದು ಭಾಗವಾಗಿತ್ತು. ಇನ್ನು ಅಸಾಧ್ಯ ಎನ್ನುವವರೆಗೂ ಈ ರೂಢಿಗೆ ಚ್ಯುತಿ ಬರಲಿಲ್ಲ.

ಕನ್ನಡ ನವೋದಯಕ್ಕೆ ಮೊದಲ ಸ್ತ್ರೀದನಿಯನ್ನು ಸೇರಿಸಿದ ಸಾಹಸ ತಿರುಮಲಾಂಬ ಅವರದು. ಆ ಕಾಲದ ಸಾಮಾಜಿಕ ಹಿನ್ನೆಲೆಯಲ್ಲಿ ಇದು ಅಪೂರ್ವ ಸಾಹಸ. ಆ ಕಾಲದಲ್ಲಿ, ಹೊರ ಒತ್ತಡದಿಂದಾಗಿ ದನಿಗುಂದಿ ತಾವು ಹಿನ್ನೆಲೆಗೆ ಸರಿದರೂ ಆಗಾಗ ಕಣ್ಣಿಗೆ ಬೀಳುತ್ತಿದ್ದ ಬೆಳವಣಿಗೆಯನ್ನು ಕಂಡು ಮೆಚ್ಚದೆ ಇರಲಿಲ್ಲ. ಆ ಮುಂಬೆಳಗನ್ನು ಅನುಸರಿಸಿದ ಅದ್ಭುತಪ್ರಭೆ ಅವರಲ್ಲಿ ಆನಂದದ ತೆರೆಗಳನ್ನು ಎಬ್ಬಿಸದೆ ಇರಲಿಲ್ಲ, ಆದರೂ ಅಚ್ಚುಕಾಣದೆ ಕುಳಿತ ತಮ್ಮ

ಹಸ್ತಪ್ರತಿಗಳನ್ನೂ ಅಕಾಲಮೃತ್ಯುವಿಗೆ ಒಳಗಾದ ತಮ್ಮ ಗ್ರಂಥಮಾಲೆಯನ್ನೂ ಅತ್ಯುತ್ಸಾಹದಿಂದ ಪ್ರಾರಂಭವಾಗಿ ಮೂಲೆಗುಂಪಾದ ತಮ್ಮ ಪತ್ರಿಕೆಗಳನ್ನೂ ಹಿಂದಿರುಗಿ ನೋಡುವಾಗ ಅವರಿಗೆ ನೋವಾಗದೆ ಇರುವುದು ಹೇಗೆ ಸಾಧ್ಯ? ''ಆ ಕೆಲಸಗಳೆಲ್ಲ ಈಗ ನನಗೆ ಕನಸಾಗಿಯೂ ಅಲ್ಲ, ಎಂದೋ ಆಗಿಹೋದ ಕನಸಿನ ನೆನಪಾಗಿ ಉಳಿದಿವೆ''[1] ಎಂದು ಆ ದಿನಗಳನ್ನು ಅವರು ತಮ್ಮ ಬಾಳಸಂಜೆಯಲ್ಲಿ ನೆನೆದಿರುವುದನ್ನು ನೋಡಿದರೆ ತಿರುಮಲಾಂಬ ಅವರ ಬದುಕಿನ ಬೆಳಗು ಬೈಗುಗಳ ಲೋಕಗಳು ಎಷ್ಟು ವಿಭಿನ್ನವಾಗಿದ್ದವು ಎಂಬುದರ ಗ್ರಹಿಕೆ ಸಮಗೆ ಸಿಕ್ಕೀತು.

ತಿರುಮಲಾಂಬ ಅವರ ಕಾರ್ಯವನ್ನು ಕರ್ನಾಟಕ ವಿದ್ಯಾವರ್ಧಕ ಸಂಘ, ಮದ್ರಾಸಿನ ಪಠ್ಯಪುಸ್ತಕ ಮತ್ತು ಸಾಹಿತ್ಯ ಸಂಘ, ಮದ್ರಾಸ್, ಮುಂಬೈ, ಮೈಸೂರು ಶಿಕ್ಷಣ ಇಲಾಖೆಗಳು, ಮಹಾರಾಜರು, ಸರ್ಕಾರ–ಈ ಎಲ್ಲ ವ್ಯಕ್ತಿ, ಸಂಸ್ಥೆಗಳೂ ಗುರುತಿಸಿ ಅಷ್ಟಿಷ್ಟು ಪ್ರೋತ್ಸಾಹ ಕೊಟ್ಟವು. ಆ ಬಗ್ಗೆ ಲೇಖಕಿ ತಮ್ಮ ಕೃತಜ್ಞತೆಯನ್ನು ತೋರಿದ್ದಾರೆ. 'ಸಚಿತ್ರ ಭಾರತದ' ಸಂಪಾದಕರಾಗಿದ್ದ ಬಿಂದೂ ನಾರಾಯಣ ಮುತಾಲಿಕ ದೇಸಾಯಿ, ಶಿಕ್ಷಣ ಇಲಾಖೆಯ ನಿರ್ದೇಶಕರಾಗಿದ್ದ ಎಸ್. ಎಸ್. ಸುಬ್ಬರಾಯರು, ವಿಮರ್ಶಕ ದ. ಬಾ. ಕುಲಕರ್ಣಿ ಮೊದಲಾದವರೆಲ್ಲ ತಮ್ಮ ನೆರವನ್ನು ನೀಡಿದ್ದರು. ಎಲ್ಲಕ್ಕಿಂತ ಹೆಚ್ಚಾಗಿ ತಂದೆ ವೆಂಕಟಕೃಷ್ಣಯ್ಯಂಗಾರರ ಉತ್ತೇಜನ, ನೆರವು ಅವರಿಗೆ ಸಿಕ್ಕಿತು. ಮುಂದಿನ ದಶಕಗಳಲ್ಲಿ ಮೌನ ತಾಳಿದ ತಿರುಮಲಾಂಬ ಅವರ ಬಗ್ಗೆ ವಿಮರ್ಶಕ ಓದುಗ ಲೋಕವೂ ಬಹುತೇಕ ಮೌನ ತಾಳಿತು. ಅವರು ಬದುಕಿರುವ ಬಗ್ಗೆಯೇ ಸಂದೇಹ ತಲೆದೋರಿತು. ಆದರೆ ಈ ಮರೆವಿನ ತೆರೆ ಸರಿವುದನ್ನೂ ಅವರ ಬದುಕಿನ ಅವಧಿಯಲ್ಲೇ ಕಾಣುವ ಅವಕಾಶವೂ ಒದಗಿಬಂತು. ಬೆಂಗಳೂರಿನ ಎಸ್. ಎಂ. ಆರ್. ಕೆ. ವಿ. ಕಾಲೇಜಿನ ಶಾಶ್ವತಿ ಸಂಸ್ಥೆ ೧೯೭೫-೭೬ರಲ್ಲಿ ಅವರನ್ನು ಗೌರವಿಸಿತು. ೧೯೭೯ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತೂ, ೧೯೮೦ರಲ್ಲಿ ಕರ್ನಾಟಕ ಸಾಹಿತ್ಯ ಅಕಾದೆಮಿಯೂ ಅವರನ್ನು ಗೌರವಿಸಿದವು.

ಹದಿಮೂರರ ಮುಗ್ಧ ಮುತ್ತೈದೆಯಾಗಿ, ಹದಿನಾಲ್ಕರ ಬಾಲ ವಿಧವೆಯಾಗಿ, ತಪಸ್ಸಿನಂತೆ ಬರಹ, ಪ್ರಕಾಶನ, ಪತ್ರಿಕಾ ಸಂಪಾದನೆಯನ್ನು ಹಚ್ಚಿಕೊಂಡ ಯುವತಿಯಾಗಿ, ಪ್ರಕಾಶನ, ಸಂಪಾದನೆಯಿಂದ ಎದುರಾದ ಆರ್ಥಿಕ ಮುಗ್ಗಟ್ಟಿನಲ್ಲಿ ಹಾಗೂ ಸಮಾಜ ಮತ್ತು ಸಾಹಿತ್ಯ ಕ್ಷೇತ್ರದ ವಿಮರ್ಶೆ, ಟೀಕೆಗಳ ನಡುವೆ ದೃಢವಾಗಿ ಹೋರಾಡಿದ ಸ್ಥಿರಚಿತ್ತೆಯಾಗಿ, ನಿಷ್ಠಾವಂತೆಯಾಗಿ, ಅನಿಕೇತನ ಸ್ನೇಹಮಯಿಯಾಗಿ ಬದುಕಿನ ಕಹಿಸಿಹಿಗಳನ್ನು ಉಂಡು, ಏರು ತಗ್ಗುಗಳನ್ನು ಕಂಡು ಹಣ್ಣಾದ ತಿರುಮಲಾಂಬರ ಜೀವ ಇಹದ ತೊಟ್ಟಿನಿಂದ ೧-೯-೮೨ರಂದು ಕಳಚಿಬಿದ್ದಿತು. ಬೆಂಗಳೂರಿನ ಗೋಕುಲ ವಿಭಾಗದ ಮನೆಯ ಒಂದು ಕೊಠಡಿಯಲ್ಲಿ ತಮ್ಮೊಡತಿಯನ್ನು ಕಳೆದುಕೊಂಡು ಖಾಲಿಯಾದ ಬೀರು, ಚಿಕ್ಕ ಮೇಜುಗಳು ಒಂದರ ಮುಖವನ್ನೊಂದು ನೋಡಿದವು. ಕೆಲವು ದಶಕಗಳು ಅವಿಶ್ರಾಂತವಾಗಿ ದುಡಿದ ಕನ್ನಡ ಲೇಖಕಿಯೊಬ್ಬರನ್ನು ಹೊತ್ತಿದ್ದ ಮಂಚವಿದ್ದ ಜಾಗ ಭಣಗುಟ್ಟಿತು. ಆ ನೆಲವನ್ನೂ ಕೊಠಡಿಯಾಚೆಗಿನ ಗಿಡವನ್ನೂ ಬೆಳಕನ್ನೂ ಮಾಡನ್ನೂ ದೃಷ್ಟಿಸುತ್ತಾ ಮಲಗಿದ್ದ ಆ ದೇಹ ಕಾಣೆಯಾಯಿತು. ಜೀವನೋನ್ಮುಖತೆಯೊಂದಿಗೆ ಜೀವವಿಮುಖ ದೃಷ್ಟಿಯನ್ನೂ ಬೆಳಸಿಕೊಂಡಿದ್ದ, ನಿಡಿದಾದ ಬದುಕಿನ ಕ್ಲೇಶ, ನಿಷ್ಠುರತೆ, ಕ್ರೌರ್ಯ, ಪ್ರೇಮ, ಕಾರುಣ್ಯ, ವಾತ್ಸಲ್ಯ

---

೧ ಕರ್ಮವೀರ, ಪೂರ್ವೋಕ್ತ, ಪು. ೧೯.

ಮೊದಲಾದವನ್ನು ಕಂಡುಂಡು ಕಳಿತ ಅವರ ದೇಹ, ಮನಸ್ಸು ಈ ನಿಲುಗಡೆ ಅಥವಾ ಬಿಡುಗಡೆಯನ್ನು ಹೇಗೆ ಸ್ವಾಗತಿಸಿತೆಂಬುದು ನಮ್ಮ ಊಹೆಯ ಒಂದು ನಿಟ್ಟಿಗೆ ನಿಲುಕದ್ದು. ಆದರೆ ಕರ್ನಾಟಕ ತನ್ನ ಒಬ್ಬಳು ಲೇಖಕಿ, ಪ್ರಕಾಶಕಿ, ಸಂಪಾದಕಿಯನ್ನೂ ಸ್ಥಗಿತಗೊಂಡ ಸಮಾಜದಲ್ಲಿ ತನ್ನ ವ್ಯಯಕ್ತಿಕ ಸಾಧನೆಗಳಿಂದ ತನ್ನ ಮಿತಿಯೊಳಗೇ ಚಲನೆಯ ಅಲೆಗಳನ್ನೆಬ್ಬಿಸಿ ಮುಂದಿನ ಶತಕಗಳ ಚಾಲನೆಗೆ ತಾನೂ ನಾಂದಿ ಹಾಡಿದ ಮಹಿಳೆಯನ್ನೂ, ಬಂಧುಮಿತ್ರವರ್ಗ ತಮ್ಮ ಪ್ರೀತಿಯ ಅಮ್ಮಣ್ಣಕ್ಕನನ್ನೂ ಕಳೆದುಕೊಂಡಿತು.

ತಿರುಮಲಾಂಬ ಅವರ ಬಾಳಸಂಜೆಯಲ್ಲಿ ಪ್ರಾರಂಭವಾದ ಅವರ ನೆನಕೆ, ಮರುನೆನಕೆಗಳು ಅವರ ಮರಣೋತ್ತರ ಅವಧಿಯಲ್ಲಿ ಮತ್ತಷ್ಟು ಹೆಚ್ಚಿದೆ, ಕ್ರಿಯಾಶೀಲವಾಗಿವೆ. ಚಿ. ನ. ಮಂಗಳ ಅವರು ಶಾಶ್ವತಿ ಸಂಸ್ಥೆಯ ಮೂಲಕ ಮಾಡಿರುವ ಕೆಲಸ ವಿಶೇಷ ನೆನಕೆಗೆ ಯೋಗ್ಯ. ತಿರುಮಲಾಂಬ ಅವರ ಜನ್ಮಶತಾಬ್ದಿಯನ್ನು ಲೇಖಕಿಯ ಹುಟ್ಟೂರಾದ ನಂಜನಗೂಡಿನಿಂದ ಪ್ರಾರಂಭಿಸಿ ಭಾರತದ ಬೇರೆ ಬೇರೆ ಸ್ಥಳಗಳಿಗೆ ಒಯ್ದಿದ್ದಾರೆ. ತಿರುಮಲಾಂಬ ಅವರ ಹೆಸರನ್ನು ಹೊತ್ತ ಸಭಾಂಗಣವೊಂದನ್ನು 'ಶಾಶ್ವತಿ' ಹೊಂದಿದೆ, ತಿರುಮಲಾಂಬ ಅವರ ಹೆಸರಿನಲ್ಲಿ ಅಖಿಲಭಾರತ ಮಟ್ಟದ ಲೇಖಕಿಯರ ಪ್ರಶಸ್ತಿಯನ್ನೂ ಪ್ರಾರಂಭಿಸಿದ್ದಾರೆ. ಇವನ್ನೆಲ್ಲ ಕಂಡು ಸಂತೋಷಿಸಲು ಈಗ ತಿರುಮಲಾಂಬ ನಮ್ಮೊಡನಿಲ್ಲವಾದರೂ ಹೊಸಗನ್ನಡದ ಮೊದಲ ಲೇಖಕಿಯ ಹುಟ್ಟಿಂಬ ಘಟನೆ ನೂರು ಚೈತ್ರಗಳ ನಂತರ ಮತ್ತೆ ನಮ್ಮ ನೆನಪಿನಲ್ಲಿ ಚಿಗುರುತ್ತಿರುವುದು ಸಮಾಧಾನದ ಸಂಗತಿ.

*ಹಿತ್ತೆಪಿಣಿಯ ಹೆಜ್ಜೆಗಳು, ೧೯೯೨, ಪೀಠಿಕೆ, ಪು. ೧-೧೬*

# ೭೭. ಕನ್ನಡದಲ್ಲಿ ಪ್ರಬಂಧದ ಅವತಾರ ಮತ್ತು ಕನ್ನಡದ ಮೊತ್ತಮೊದಲಿನ ಸಣ್ಣಕಥೆ-ಕಾದಂಬರಿಗಳು

● ಎಂ. ಗೋವಿಂದ ಪೈ

## ಕನ್ನಡದಲ್ಲಿ ಪ್ರಬಂಧದ ಅವತಾರ

''ಪ್ರಬಂಧ'' ಎಂಬುದು ಸಂಸ್ಕೃತ ಶಬ್ದ. ಅದನ್ನು ಸಂಸ್ಕೃತಕೋಶಗಳಲ್ಲಿ ''ಕಾವ್ಯಂ ಪ್ರಬಂಧೇ'' ಅಂದರೆ ಪ್ರಬಂಧವೆಂದರೆ ಕಾವ್ಯವೆಂದು ಅರ್ಥವಿಸಿದ್ದಾರೆ. ಕಾಲಿದಾಸನ ಮಾಲವಿಕಾಗ್ನಿಮಿತ್ರ ನಾಟಕದ ಪ್ರಸ್ತಾವನೆಯಲ್ಲಿ ಆತನ ಹಿಂದಣ ಸಂಸ್ಕೃತ ಕವಿಗಳ ನಾಟಕಗಳನ್ನು ಕುರಿತು ''ಭಾಸ-ಸೌಮಿಲ್ಲ-ಕವಿಪುತ್ರಾದೀನಾಂ ಪ್ರಬಂಧಾನ್'' ಅಂದರೆ ಭಾಸನ, ಸೌಮಿಲ್ಲನ, ಕವಿಪುತ್ರನ ಮೊದಲಾದವರ ಪ್ರಬಂಧಗಳು ಎಂದಿರುವಲ್ಲಿ ಪ್ರಬಂಧವೆಂದರೆ ನಾಟಕವೆಂದು ತಿಳಿಯುತ್ತದೆ. ಬಲ್ಲಾಳದೇವನೆಂಬ ಸಂಸ್ಕೃತ ಕವಿ 'ಭೋಜಪ್ರಬಂಧ'ವೆಂಬ ತನ್ನ ಚಂಪೂ ಗ್ರಂಥವನ್ನು ಪ್ರಬಂಧವೆಂದಿದ್ದಾನೆ. ನಮ್ಮ ಕನ್ನಡ ಮಹಾಕವಿ ಪಂಪನೂ ತನ್ನ ಚಂಪೂ ಭಾರತ ಕಾವ್ಯವನ್ನು ಪ್ರಬಂಧವೆಂದು ಕರೆದಿದ್ದಾನೆ. ತಮಿಳುನಾಡಿನಲ್ಲಿ ಆಯಾ ಊರಿನ ದೇವತೆಗಳ ಉತ್ಸವಗಳಲ್ಲಿ ಅವುಗಳ ಹಿಂಗಡೆ ಶ್ರೀವೈಷ್ಣವ ಬ್ರಾಹ್ಮಣರು ಹೇಳುತ್ತ ಹೋಗುವ ತಮಿಳು ಪಾಠಗಳಿಗೂ ಪ್ರಬಂಧವೆನ್ನುತ್ತಾರೆ. ಆದರೆ ಕೆಲವರ್ಷ ಕಾಲದಿಂದ ಈಚೆ ಕನ್ನಡದಲ್ಲಿ ಪ್ರಬಂಧ ಎಂಬ ಶಬ್ದವನ್ನು ಆಂಗ್ಲ ಭಾಷೆಯಲ್ಲಿ Essay ಎನ್ನುವ ಪದಕ್ಕೆ ಸರಿಗೂಡಿಸಿಕೊಂಡಿದೆ. ಮಹಾರಾಷ್ಟ್ರಿಯಲ್ಲಿ ಮತ್ತೂ ಹಿಂದೆ Essay ಯನ್ನು ನಿಬಂಧ ಎಂದಿರುತ್ತಾರೆ.

Essay ಎಂದರೆ 'an attempt to do something.' ಯಾವುದನ್ನಾದರೂ ಮಾಡುವ ಪ್ರಯತ್ನವೆಂದು ಅರ್ಥ. ಆದರೆ Essay ಎಂಬ ಹೆಸರಿಗೂ ಆ Essay ಈಗ ತಾಳಿರುವ ವಿರಾಡ್ರೂಪಕ್ಕೂ ಯಾವ ಬಗೆಯ ಹೋಲುವೆಯೂ ಇಲ್ಲ. ಆದಕಾರಣ ಆ ಕುರಿತು ಸಾಕಷ್ಟಾದರೂ ತಿಳಕೊಳ್ಳಬೇಕಾದರೆ, ಪಾಶ್ಚಾತ್ಯ ಸಾಹಿತ್ಯದಲ್ಲಿ ಹುಡುಕಾಡಬೇಕು: ಅದು ಯಾವಂದು, ಹೇಗೆ, ಎಲ್ಲಿ ಹುಟ್ಟಿತು? ಯಾವೆಲ್ಲ ರೂಪಗಳನ್ನು ತಾಳಿತು? ಆ ಹೆಸರು ಅದಕ್ಕೆ ಹೇಗೆ ಬಂತು? ಇವೆಲ್ಲ ತಥ್ಯಗಳನ್ನು ಗೊತ್ತುಹಚ್ಚಬೇಕು. ನೋಡೋಣ.

ನಾವು ಪ್ರಬಂಧವೆನ್ನುವ ಆಧುನಿಕ Essay ಯ ಮೂಲವನ್ನು ಕಂಡುಹಿಡಿವಲ್ಲಿ ಕ್ರಿ.ಶ. ೧೬ನೆಯ ಶತಮಾನದಲ್ಲಿದ್ದ France ದೇಶದ Michael de Montaigne (೧೫೩೩-೯೨) ಎಂಬಾತನಿಂದ ಅದು ಮೊದಲಾಯಿತೆಂದು ಸಾಮಾನ್ಯವಾಗಿ ಭಾವಿಸುತ್ತಾರಾದರೂ ನನಗೆ ಹಾಗೆನಿಸುವುದಿಲ್ಲ. ಏಕೆಂದರೆ ಆಂಗ್ಲ ಪ್ರಬಂಧಕಾರನಾದ ಬೇಕನನು ಎನ್ನುವಂತೆ (ಆತನ ಕಾಲದಲ್ಲಾದರೂ ಅಥವಾ ಆತನ ಮಟ್ಟಿಗಾದರೂ), 'Though the word essay is late, the thing is ancient, for Seneca's Epistles to Lucilius are but essays, that is dispersed meditations''. ಅಂದರೆ Essay ಎಂಬ ಹೆಸರು ಆಧುನಿಕವಾದರೂ ಅದರ ಸಾಹಿತ್ಯ ಪ್ರಾಚೀನ, ಏಕೆಂದರೆ (ಕ್ರಿ.ಶ. ೬೫ನೆಯ ಇಸವಿಯಲ್ಲಿ ದಿವಂಗತನಾದ) ರೋಮಿಯ ತತ್ತ್ವಜ್ಞ ಸೆನೆಕನು ಲುಸಿಲಿಯಸನಿಗೆ ಬರೆದ ಪತ್ರಗಳು

ವಿಕೀರ್ಣವಾದ ಚಿಂತನಗಳಾಗಿರುವುದರಿಂದ, ಅವು ಪ್ರಬಂಧಗಳೇ ಸರಿ. ಹಾಗಾದರೆ ಇಂದಿಗೆ ೧೯ಶತಮಾನಗಳ ಹಿಂದಿನಿಂದಲೇ ಪ್ರಬಂಧಗಳು ಇದ್ದುವೆಂದಾಯಿತು. ನಾನು ಬಲ್ಲಷ್ಟರ ಮಟ್ಟಿಗೆ ಪ್ರಸಿದ್ಧ ರೋಮಿಯಾ (Roman) ವಾಗ್ಮಿ ಶ್ರೇಷ್ಠವಾದ ಸಿಸೆರೊ (Cicero) ಎಂಬಾತನು ಕ್ರಿ.ಪೂ. ೪೫-೪೪ನೆಯ ವರ್ಷದಲ್ಲಿ, ಅಂದರೆ ಇಂದಿಗೆ ೨೦ ಶತಮಾನಗಳ ಹಿಂದೆ, De Senectute=On Old Age, ಅಂದರೆ ವೃದ್ಧಾಪ್ಯವನ್ನು ಕುರಿತು, ಹಾಗೂ De Amicita=On Friendship, ಅಂದರೆ ಮೈತ್ರಿಯನ್ನು ಕುರಿತು ಲಾತೀನ್ (Latin) ಭಾಷೆಯಲ್ಲಿ ಬರೆದ ಆವೆರಡು ಕೃತಿಗಳು ಪ್ರತ್ಯಕ್ಷ ಪ್ರಬಂಧ, essayಗಳೇ ಎಂದು ನಾನೆಣಿಸುತ್ತೇನೆ. ಇವು ಮೊಂತೈನನ ಹಾಗೂ ಬೇಕನ್ (Bacon), ಕೌಲಿ (Cowley), ಎಡ್ಡಿಸನ್ (Addison) ಮೊದಲಾದ ಆಂಗ್ಲ ಪ್ರಬಂಧಕಾರರ ಹೆಚ್ಚು ಕಡಿಮೆ ಹ್ರಸ್ವವಾದ ಪ್ರಬಂಧಗಳಿಗಿಂತ ಸಾಕಷ್ಟು ಉದ್ದವಾಗಿವೆ ಎಂಬುದು ನೇರ. ಆದರೆ ಬೆಲ್ಜಿಯಮ್ಮಿನ (Belgium) Maeterlinckನ 'Wisdom and Destiny' (ಬುದ್ಧಿ ಮತ್ತು ಭಾಗ್ಯ). 'Treasure of the Humble' (ದೀನರ ಧನ) ಎಂಬ ಪ್ರಬಂಧಗಳು ಸಿಸೆರೋನ ಕೃತಿಗಳಿಗಿಂತ ಉದ್ದವಿಲ್ಲವೇ ? ಅವುಗಳಂತೆ ಸಿಸೆರೋನವೂ ಸಾಹಿತ್ಯದ ಪ್ರಬಂಧವೆಂಬ ವಿಭಾಗಕ್ಕೆ ತಾನೆ ಸೇರತಕ್ಕುವು. ಸಿಸೆರೋನಿಂದ ಈಚೆ ಮೊಂತೈನನವರೆಗೂ ಯುರೋಪಿನಲ್ಲಿ ಪ್ರಸಿದ್ಧವಾದ ಪ್ರಬಂಧಗಳು ಸಾಕಾದಷ್ಟು ಹುಟ್ಟಿರಬೇಕು. ಆದರೆ ನಾನರಿಯೆ. ಏವಂಚ ಅವಕ್ಕೆ Essay ಎಂಬ ಹೆಸರಾದರೆ ಮೊಂತೈನನ ಹಿಂದೆ ಬಂದಿರಲಿಲ್ಲ.

ಇನ್ನು ಆಧುನಿಕ ಪ್ರಬಂಧಗಳನ್ನು ಕುರಿತು ಹೇಳುವಲ್ಲಿ ಮೊದಲ ಹೆಸರು ಮೊಂತೈನನದು. ಅವನನ್ನು Michael Lord of Montaigne ಅಂದರೆ ಮೊಂತೈನನ ಪ್ರಭು ಎನ್ನುವುದರಿಂದ, ಆತನು ವಿದ್ಯಾವಂತನೇ ಅಲ್ಲ, ತುಂಬ ಧನವಂತನೂ ಆಗಿರಬೇಕು. ಹಣವಿದ್ದಲ್ಲಿ ಕೆಲಸ ಕಡಿಮೆ, ಬಿಡುವು ಹೆಚ್ಚು. ಹೀಗಾಗಿ ಹೊತ್ತನ್ನು ಹೇಗೆ ಹೋಗಲಾಡಿಸಬೇಕೆಂದು ಗೊತ್ತಿಲ್ಲ. ಮೊಂತೈನನು ತನ್ನ ಹೊತ್ತನ್ನು ಅನೇಕ ಪುಸ್ತಕಗಳನ್ನು ಓದುವುದರಲ್ಲಿ ಬಳಸಿ, ಅವುಗಳ ಅಂಚಿನಲ್ಲಿ ತಾನು ಗೀರಿದ ತನ್ನ ಟೀಕೆಗಳನ್ನೂ ಅವನ್ನು ಓದುವಾಗ ತನ್ನ ಮನಸ್ಸಿನಲ್ಲಿ ಪ್ರತಿಫಲಿಸಿದ ಭಾವನೆಗಳನ್ನೂ ಕಲೆಹಾಕಿ, ತನ್ನ ಚುರುಕಾದ ಸೋಮಾರಿತನದ (Active Idleness) ಬಾಳ್ವೆಯಲ್ಲಿ ಆ ಅಭಿಪ್ರಾಯಗಳನ್ನೇ ಸಂಚಿಸಿ ಅನೇಕ ಪ್ರಬಂಧಗಳನ್ನು ಬರೆದು ಅವುಗಳಿಗೆ Essays ಎಂದು ಹೆಸರು ಕೊಟ್ಟನು. ಅವುಗಳಲ್ಲಿ ಆತನ ಸಾಧನೆ ಎಂದರೆ ಆತ್ಮಾನ್ವೇಷಣ (Quest of Self); ಆತನ ಧ್ಯೇಯವೆಂದರೆ Know thyself, 'ಆತ್ಮಾನಂ ವಿದ್ಧಿ', ನಿನ್ನನ್ನೇ ನೀನು ತಿಳಕೋ; ಆತನು ಅವುಗಳನ್ನು ಬರೆದನೇಕೆಂದರೆ 'ಸ್ವಾಂತಃ ಸುಖಾಯ' ತನ್ನನ್ನು ಸುಖಪಡಿಸಿಕೊಳ್ಳಲಿಕ್ಕೆ ತಾನೇ; ಅವುಗಳಲ್ಲಿ ಚಿತ್ರಿಸಿದನೆಂದರೆ ತನ್ನನ್ನೇ (It is myself I portray in my Essays) ಹೀಗಾಗಿ ಆತನ ಪ್ರಬಂಧಗಳಲ್ಲಿ ನಮ್ಮ ಮುಂದೆ ಎಷ್ಟೋ ಇತರ ವ್ಯಕ್ತಿಗಳು ಹಾದುಹೋಗುವುದಾದರೂ ನಮಗೆ ಎಷ್ಟೋ ಇತರ ವಿಷಯಗಳು ಕೇಳಿಸುವುವಾದರೂ ನಾವು ಹೆಚ್ಚಾಗಿ ಕಾಣುತ್ತಿರುವುದೂ ಆತನನ್ನೇ, ಹೆಚ್ಚಾಗಿ ಕೇಳುತ್ತಿರುವುದೂ ಆತನ ಮಾತುಗಳನ್ನೇ. ಪಾಶ್ಚಾತ್ಯ ಪ್ರಬಂಧ ಸಾಹಿತ್ಯದಲ್ಲಿ ಇನ್ನು ಆತನ ಪ್ರಬಂಧಗಳೇ ಉಚ್ಚಕೋಟಿಯಲ್ಲಿವೆ. ಆತನು ತನ್ನ ಹೊತ್ತನ್ನು ಬರವಣಿಗೆಯಲ್ಲಿ ಹೋಗಲಾಡಿಸುವುದಕ್ಕೋ ಅಥವಾ ತನ್ನ ಭಾವನೆಗಳನ್ನು ಮಾತುಗಳಲ್ಲಿ ಮೂಡಿಸುವುದಕ್ಕೋ ತಾನು ಮಾಡಿದ್ದ ಪ್ರಯತ್ನ ಎಂಬ ಅರ್ಥದಲ್ಲಿ ಕೃತಿಗಳಿಗೆ ಇತ್ತ Essay ಅಂದರೆ ಪ್ರಯತ್ನ ಎಂಬ ಹೆಸರು ಅಲ್ಲಿಂದ ಮುಂದಣ ಪ್ರಬಂಧಗಳಿಗೆಲ್ಲ ಶಿಲಾಕ್ಷರದಂತೆ ಶಾಶ್ವತವಾಗಿ ನಿಂತಿದೆ. ಈ ರೀತಿಯಲ್ಲಿ ಆಧುನಿಕ ಪ್ರಬಂಧ ಪಾಶ್ಚಾತ್ಯರಲ್ಲಿ

ಜನ್ಮವೆತ್ತಿತು.

ಮೊಂತೈನನ ತರುವಾಯ ಎಷ್ಟೋ ನಾಮಾಂಕಿತರಾದ ಪ್ರಬಂಧಕಾರರು, ಫ್ರೆಂಚ ಭಾಷೆಯವರೇ ಅಲ್ಲ, ಯುರೋಪಿನ ಮಿಕ್ಕ ಭಾಷೆಯವರೂ, ಉದಾ: ಇಟಾಲ್ಯದ (Italy) Leopardii, Mazzini ಇ. ಆಗಿಹೋದರು. ಈಗಲೂ ಇರುತ್ತಾರೆ; ಆದರೂ ಕನ್ನಡ ಭಾಷೆಯಲ್ಲಾದರೋ ಆಂಗ್ಲ ಭಾಷೆಯ ಪ್ರಭಾವವಲ್ಲದೆ, ಫ್ರೆಂಚಾಗಲಿ ಯುರೋಪಿನ ಬೇರಾವ ಭಾಷೆಯದಾಗಲಿ ಪ್ರಭಾವ ಬೀರಿಲ್ಲದ ಕಾರಣ, ಅವುಗಳ ಗೊಡವೆಯನ್ನು ನೀಗಿ ಆಂಗ್ಲ ಪ್ರಬಂಧಕಾರರನ್ನು ಒಮ್ಮೆ ಹಕ್ಕಿಯ ನೋಟದಿಂದ ನೋಡಿಬಿಡೋಣ.

ಮೊಂತೈನನ ಹೆಚ್ಚು ಕಡಿಮೆ ಸಮಕಾಲಿಕನಾದ ಫ್ರಾನ್ಸಿಸ್ ಬೇಕನನನ್ನು (Francis Bacon, 1561-1626) ಆಂಗ್ಲಾಳದ ಪ್ರಥಮ ಪ್ರಬಂಧಕಾರನೆನ್ನಬಹುದು. ಆತನು ಮೊಂತೈನನ ಪ್ರಬಂಧಗಳನ್ನು ಕಂಡಿದ್ದನು. ಪ್ರಾಯಶಃ ಅಲ್ಲಿಂದಲೇ ಆತನಿಗೆ ಪ್ರಬಂಧಗಳನ್ನು ರಚಿಸುವ ಸ್ಫೂರ್ತಿಯೂ ಹುಟ್ಟಿರಬೇಕು. ಆತನ ಪ್ರಬಂಧಗಳು ಬಹುತರವಾಗಿ ಜ್ಞಾನ ಪ್ರಬಂಧಗಳು (Wisdom Essays) ; ೧೯ನೆಯ ಶತಮಾನದ ಅಮೆರಿಕದ ಇಮರ್ಸನ (Emerson)ನವಂತೆ. ಅವು ಒಟ್ಟಿಗೆ ೫೮ ಇವೆ. ಅವನ್ನು ಹೀಗೆ ಮುಪ್ಪಾಲಾಗಿ ವಿಂಗಡಿಸಬಹುದು-(೧) ಮನುಷ್ಯನ ಮಾನಸಿಕ ಸುಖವನ್ನೂ ಶಾರೀರಿಕ ಸುಖವನ್ನೂ ಕುರಿತವು, (೨) ಮನುಷ್ಯಜಾತಿಗೆ ಸಾಮಾನ್ಯವಾಗಿರುವ ಜಾಗತಿಕ ಸಮಸ್ಯೆಗಳನ್ನು ಮತ್ತು, (೩) ಸಾಮಾಜಿಕ ಸಮಸ್ಯೆಗಳನ್ನು ಕುರಿತವು. ಅವುಗಳಲ್ಲಿ ಪ್ರತಿಪಾದಿಸಿರುವ ವಿಷಯ-ಸತ್ಯ, ಮರಣ, ಪ್ರತೀಕಾರ, ದುರವಸ್ಥೆ, ಮತ್ಸರ, ಪ್ರೀತಿ, ಧೈರ್ಯ, ಪ್ರವಾಸ, ನಾಸ್ತಿಕತೆ, ಸಂಶಯ, ಧನ, ಕೋಪ, ಸೌಂದರ್ಯ, ಮಹತ್ವಾಕಾಂಕ್ಷೆ, ಮದುವೆಯಾದವನ ಹಾಗೂ ಆಗದವನ ಬಾಳ್ವೆ, ಇಇ. ಅವೆಲ್ಲವೂ ಗಂಭೀರವೂ, ವಿಶಾಲವೂ, ಸುಂದರವೂ ಆಗಿವೆ. ಅವುಗಳಲ್ಲಿ ಅಲ್ಲಲ್ಲಿ ಸಮಯೋಚಿತವಾಗಿ ಹಳೆಯ ಗ್ರಂಥಗಳಿಂದ ಎತ್ತಿಕೊಂಡ ಉದ್ಧಾರಗಳೂ ಇವೆ, ತುಂಬ ನೀತಿಬೋಧವೂ ಇದೆ.

ಬೇಕನನಿಂದ ಈಚೆಯ ಆಂಗ್ಲ ಪ್ರಬಂಧಕಾರರಲ್ಲಿ ೧೯೦೦ರವರೆಗಣ ಕೆಲವೇ ಹಿರಿಯ ಲೇಖಕರನ್ನು ಹೆಸರಿಸುವುದಾದರೆ, ಅವು ಹೀಗಿವೆ-(೧) ಅಬ್ರಹಾಮ್ ಕೌಲೆ (Abraham Cowley 1618-67): ಇವನ ಪ್ರಬಂಧಗಳು-'ಏಕಾಂತ', 'ಹಿರಿಮೆ'; ಇವನ ಪ್ರಬಂಧಗಳಲ್ಲಿ ಇವನ ಸ್ವಂತ ಕವಿತೆಗಳೂ ಲಾತೀನ ಭಾಷೆಯ ಪೂರ್ವ ಕವಿತೆಗಳ ಅನುವಾದಗಳೂ ಅಡಕವಾಗಿವೆ; (೨) ಜೊನಥನ್ ಸ್ವಿಫ್ಟ್ (Jonathan Swift 1667-1745) ಈತ ಚೇಳಿನಂತೆ ತುಂಬ ಚುಚ್ಚುಗಾರ; ಈತನ ಪ್ರಬಂಧಗಳು ಉದ್ದವೂ ಚಿಕ್ಕವೂ ಹಲವಿವೆ. ಅವಲ್ಲಿ ಚಿಕ್ಕದೊಂದು 'ಭಾಷಾಶೈಲಿ', (೩) ರಿಚರ್ಡ್ ಸ್ಟೀಲ್ (Richard Steele 1672-1729): 'ಬಾಲ್ಯಸ್ಮೃತಿ', (೪) ಜೋಸೆಫ್ ಎಡ್ಡಿಸನ್ (Joseph Addison 1672-1719): 'ಮಿರ್ಜನ ದರ್ಶನ' (Vision of Mirza); (೫)ಅಲೆಕ್ಸಾಂಡರ್ ಪೋಪ್ (Alexander Pope 1688-1744): 'ವೀರಕಾವ್ಯ', (೬) ಸಾಮುವೆಲ್ ಜೋನ್ಸನ್ (Samuel Johnson, 1709-1784): 'ಹಲವು ಆಂಗ್ಲ ಕವಿಗಳನ್ನು ಕುರಿತು', (೭) ಚಾರ್ಲ್ಸ್ ಲೆಂಬ್ (Charles Lamb, 1775-1834): 'ಬಡ ಬಂಧುಗಳು' 'ಸುಟ್ಟ ಹಂದಿಯ ಬಾಡನ್ನು ಕುರಿತು', 'ಹಳೆಯ ಪಿಂಗಾಣಿ', (೮) ವಿಲ್ಲಿಯಮ್ ಹೆಜ್ಲಿಟ್ (William Hazlitt 1778-1830): 'ಹಿಂದುಸ್ಥಾನದ ಡೊಂಬರು', 'ವಿದ್ವಾಂಸರ ಅಜ್ಞಾನವನ್ನು ಕುರಿತು'; (೯) ಲೇ ಹಂಟ್ (Leigh Hunt

1784-1859): 'ನಿದ್ದೆಯನ್ನು ಕುರಿತು', 'ಚಿಕ್ಕ ಕೂಸುಗಳ ಮರಣ'; (೧೦) ಟೊಮಸ್ ಕಾರ್ಲಾಯ್ಲ್ (Thomas Carlyle 1795-1881): 'ಆಂಗ್ಲ ಕವಿ ಬರ್ನ್ಸ್' (Burns), 'ಜರ್ಮನ್ ಕವಿ ಗಥೆ' (Goethe) 'ವೀರರೂ ವೀರರ ಗೌರವವೂ' (Heroes and Hero Wroship); (೧೧) ಮೆಕಾಲೆ (Lord Macaulay, 1800-1859) 'ಮಿಲ್ಟನ್' (Milton), 'ಕ್ಲಾಯ್ವ್' (Clive), 'ವಾರನ್ ಹೇಸ್ಟಿಂಗ್ಸ್' (Warren Hastings), 'ಗೋಲ್ಡ್ ಸ್ಮಿತ್' (Goldsmith); (೧೨) ಮೆಥ್ಯೂ ಆರ್ನಲ್ಡ್ (Matthew Arnold, 1822-1888): 'ಬಾಯ್ರನ್' (Byron), 'ವರ್ಡ್ಸ್‌ವರ್ತ್' (Wordsworth), ಇಇ. ಇವರಲ್ಲದೆ ಎಷ್ಟೋ ಮಂದಿ ಹೆಸರುವಾಸಿಯಾದ ಚಿಕ್ಕ ಪ್ರಬಂಧಕಾರರೂ ಉದ್ದ ಪ್ರಬಂಧಕಾರರೂ ಇದ್ದರು.

ಆಂಗ್ಲ ಪ್ರಬಂಧಗಳನ್ನು ಸ್ಥೂಲಮಾನದಿಂದ ಈ ವಿಧವಾಗಿ ವಿಭಾಗಿಸಬಹುದು-(೧) ಚಿತ್ರಪ್ರಬಂಧ (Portrait essay): ಉದಾ: ಎಡ್ಡಿಸನನು 'ಸ್ಪೆಕ್ಟೇಟರ್' (Spectator) ಪತ್ರಿಕೆಯಲ್ಲಿ ಚಿತ್ರಿಸಿ ಬರೆದ ಹೆಚ್ಚಾಗಿ ವ್ಯಕ್ತಿಪರವಾದ ಪತ್ರಗಳು; (೨) ವಿನೋದ ಪ್ರಬಂಧ (Humorous essay) : ಡಿಕನ್ಸ್ (Dickens), ಥೆಕರೆ (Thackeray), ಹೋಮ್ಸ್ (Holmes) ಇತ್ಯಾದಿಯವರ ಪ್ರಬಂಧಗಳು; (೩) ಜ್ಞಾನ ಪ್ರಬಂಧ (Wisdom essay); ಬೇಕನ್, ಇಮರ್ಸನ್ ಇತ್ಯಾದಿಯವರವು; (೪) ವಿಮರ್ಶನ ಪ್ರಬಂಧ: (Critical essay): ವಾಲ್ಟರ್ ಪೇಟರ್ (Walter Pater) ಮೊದಲಾದವರವು, (೫) ಐತಿಹಾಸಿಕ ಪ್ರಬಂಧ (Historical essay): ಮೆಕಾಲೆ, ಕಾರ್ಲಾಯ್ಲ್ ಮೊದಲಾದವರವು; (೬) ಪ್ರಕೃತಿಪರವಾದ ಪ್ರಬಂಧ (Nature essay): ಅಯ್ಜೆಕ್ ವಾಲ್ಟನ್ (Izaac Walton), ಹೆನ್ರಿ ಥೊರೊ (Henry Thoreau) ಮುಂತಾದವರವು: (೭) ವೈಣಿಕ ಪ್ರಬಂಧ (Lyric essay): ಇವಲ್ಲಿ ರಚಕನು ವಾಚಕನನ್ನು ತನ್ನ ಮಾನಸಿಕ ಪರಿವರ್ತನೆ, ಭ್ರಮೆ, ಚಾಪಲ್ಯ ಮುಂತಾದ ಅವಸ್ಥೆಗಳಲ್ಲಿ ತನ್ನ ಅತ್ಯಂತ ಸಲುಗೆಯ ಒಡನಾಡಿಯಾಗಿಸಿಕೊಳ್ಳುತ್ತಾನೆ. ಉದಾ: ಲೆಂಬ್, ಸ್ಟೀವೆನ್ಸನ್ (Stevenson) ಇಇ. ಇವು ೧೬ನೆಯ ಶತಮಾನದ ಬೇಕನನಿಂದ ಹೆಚ್ಚು ಕಡಿಮೆ ೧೯೦೦-೧೪ರ ವರೆಗೂ ಅಂದರೆ ಪ್ರಥಮ ಜಾಗತಿಕ ಮಹಾಯುದ್ಧದವರೆಗೂ ಆಂಗ್ಲ ಪ್ರಬಂಧಗಳಲ್ಲಿಯ ವಿವಿಧ ಪ್ರಭೇದಗಳು. ಅಲ್ಲಿಂದ ಮುಂದೆ ಪಾಶ್ಚಾತ್ಯ ಸಾಹಿತ್ಯದಲ್ಲಿ ನವನವೀನವಾದ ಮಾರ್ಪಾಟುಗಳು ಉಂಟಾಗಿರುವ ಕಾರಣ ಪ್ರಬಂಧವೂ ಮತ್ತೂ ಹಲ ರೂಪಗೊಂಡಿದೆ.

ಬೇಕನನು ಪ್ರಬಂಧಗಳನ್ನು ವಿಕೀರ್ಣವಾದ ಚಿಂತನೆಗಳು ಎಂದಿರುವನಾದರೂ, ಪಾಶ್ಚಾತ್ಯಪ್ರಬಂಧಕ್ಕೆ ಖಚಿತವಾದ ಒಂದು ಕೇಂದ್ರ ವಿಷಯವಿರಬೇಕು ಎಂಬುದು ನಿಜ. ಆ ವಿಷಯವಾದರೆ ಇಂದ್ರನ ಅಷ್ಟೈಶ್ವರ್ಯದಿಂದ ತಿರುಕನ ಗೋಪಾಲ ಬುಟ್ಟಿಯವರೆಗೆ, ಕುರುಕ್ಷೇತ್ರದ ಯುದ್ಧದಿಂದ ತೊತ್ತುಗಳ ಕಸಬರಿಗೆಯ ಬೀದಿಗಲಹದವರೆಗೆ, ರಾಮಾಯಣ-ಭಾರತಾದಿ ಮಹಾಕಾವ್ಯಗಳಿಂದ ಜೋಗುಳದ ಹಾಡುಗಳವರೆಗೆ, ಪ್ರಲಯತಾಂಡವದಿಂದ ಕೋತಿಯ ಕುಣಿತದವರೆಗೆ, ಅಚಿಂತನೀಯನಾದ ಪರಮಾತ್ಮನಿಂದ ಮುಟ್ಟಲಿಕ್ಕೆ ಅಸಹನೀಯವಾದ ಎರೆಹುಳದವರೆಗೆ ಇತ್ಯಾದಿ ಯಾವುದೂ ಆಗಿರಲೂಬಹುದು. ಹಾಗೂ ರೆಂಬೆಯನ್ನು ಬಳಸಿರುವ ಬಂದಣಿಗೆಯಂತೆ ಆ ಕೇಂದ್ರಕ್ಕೆ ನಂಟಲ್ಲದ ಎಷ್ಟೋ ವಿಷಯಗಳು ಅದನ್ನು ವೇಷ್ಟಿಸಿರಲೂ ಬಹುದು, ಆ ರೆಂಬೆಗಿಲ್ಲದ ಹೂವುಗಳು ಬಂದಣಿಗೆಯಲ್ಲಿ ತಲೆಯೆತ್ತುವಂತೆ ಆ ಕೇಂದ್ರ ವಿಷಯದಲ್ಲಿ ಇಲ್ಲದ ಕಂಪೂ ಸೊಂಪೂ

ಅವಲ್ಲಿರಬಹುದು. ಹಾಗಾಗಿ ಪ್ರಬಂಧಕ್ಕೆ ವಿಷಯವೇ ಪ್ರಧಾನವೂ ಅಲ್ಲ, ಅದರಲ್ಲಿ ಏನು ಇರಬೇಕು? ಏನು ಇರಬಾರದು? ಎಂಬ ಕಟ್ಟುನಿಟ್ಟೂ ಇಲ್ಲ. ಅದರ ರೂಪವೂ ಗದ್ಯವೇ ಆಗಿರಬೇಕೋ? ಪದ್ಯವೂ ಆಗಬಹುದೋ? ಎಂಬ ನಿಯಮವೂ ಇಲ್ಲ. ಉದಾ: ಆಂಗ್ಲಕವಿ ಪೋಪನ 'Essay on Man' (ಮನುಷ್ಯನನ್ನು ಕುರಿತ ಪ್ರಬಂಧ), 'Essay on Criticism' (ವಿಮರ್ಶೆಯನ್ನು ಕುರಿತ ಪ್ರಬಂಧ) ಇವು ಪದ್ಯದಲ್ಲಿವೆ. ಏವಂಚ ಪ್ರಬಂಧವನ್ನು ರಚಿಸುವ ರೀತಿ. ಅದರಲ್ಲಿ ತುಳುಕುವ ಸ್ಫೂರ್ತಿ. ಅದರಿಂದ ತೊಟಕುವ ನೀತಿ, ಅದರ ಬಂಧದ ಐಕ್ಯ, ದೃಷ್ಟಿಯ ವೈಶಾಲ್ಯ, ಅರ್ಥದ ನಾವೀನ್ಯ. ಇವಷ್ಟು ಇದ್ದರೆ ಅಲ್ಲಿಗಾಯ್ತು ಪ್ರಬಂಧ. ಹೀಗೆಂದುದರಿಂದ ಪ್ರಬಂಧಗಳೆಲ್ಲವೂ ಗಂಭೀರವಾಗಿರಬೇಕೆಂದು ಭಾವಿಸಬಾರದು. ಏಕೆಂದರೆ ಹಲವು ಪ್ರಬಂಧಗಳು ಅಚ್ಚ ಹರಟೆಗಳೇ. ಅವು ಎಲ್ಲಿಂದ ತೊಡಗಿ ಎಲ್ಲಿಗೆ ಹೋಗುತ್ತವೆಂದು ಹೇಳಲಾಸ. ಅವಲ್ಲಿ ಲೇಖನಿಯ ಹಿಂದೆ ಮನಸ್ಸು ಓಡುವಂತೆ ಕಾಣುತ್ತದಲ್ಲದೆ ಮನಸ್ಸಿನ ಹಿಂದೆ ಲೇಖನಿಯಲ್ಲ. ಅವಲ್ಲಿಯೂ ಈ ನೇಮಗಳನ್ನು ಅಥವಾ ಇವಲ್ಲಿಯ ಕೆಲವನ್ನಾದರೂ ಬಹುಮಟ್ಟಿಗೆ ಪಾಲಿಸಿದೆ. ಅವೂ ಸಾಹಿತ್ಯಕ್ಕೆ ಬೇಕಾಗಿವೆ.

ಆದರೆ ಪ್ರಬಂಧವೂ ತೀರ ಪಾಶ್ಚಾತ್ಯ ಸಾಹಿತ್ಯವೇ ಎನ್ನಲಾಗುವುದಿಲ್ಲ. ಏಕೆಂದರೆ ಕ್ರಿ.ಪೂ. ೬ನೆಯ ಶತಕದಲ್ಲಿದ್ದ ಕಾಂಪೂಷನಿಗಿಂತ (Confucius) ಮುಂಚಿನಿಂದ ಅಲ್ಲವಾದರೆ ಆತನ ಕಾಲದಿಂದಲಾದರೂ ಚೀನಾ ದೇಶದಲ್ಲಿ ಆ ಕಲೆ ಇದ್ದಿತೆಂದು ತಿಳಿದುಬಂದಿವೆ. ನಮ್ಮ ಭಾರತ ದೇಶದ ಪ್ರಾಚೀನ ಸಂಸ್ಕೃತ ಸಾಹಿತ್ಯದಲ್ಲಿ ಪ್ರಬಂಧಗಳು ಪ್ರಾಯಶಃ ಇದ್ದಿಲ್ಲವೆಂದೇ ನಂಬುವರಾದರೆ, ಉದಾ: ಸಾಯಣಾಚಾರ್ಯನ ಋಗ್ವೇದ ಭಾಷ್ಯದ ಆ ಅಮೂಲ್ಯವಾದ ಭೂಮಿಕೆಯನ್ನು ಓದಿ ಬಲ್ಲವರು, ಅಥವಾ ಅದನ್ನು ಕುರಿತು ಕೇಳಬಲ್ಲವರು ಆ ಆಕ್ಷೇಪಕ್ಕೆ ಒಪ್ಪರು. ಆ ಪ್ರಬಂಧವೇ ಅಲ್ಲ, ಇತರ ಜ್ಞಾನ ಪ್ರಬಂಧಗಳೂ (Wisdom essays) ಭಕ್ತಿ ಪ್ರಬಂಧಗಳೂ ಸಂಸ್ಕೃತದಲ್ಲೇ ಅಲ್ಲ, ಹಿಂದುಸ್ಥಾನದ ಮಿಕ್ಕ ಆಯಾ ಹಳೆಯ ಭಾಷೆಗಳಲ್ಲೂ ಇದ್ದಿರದೆ ಹೋಗವು ಎಂದು ನಾನು ಊಹಿಸುತ್ತೇನೆ. ಆದರೆ ನಮ್ಮ ಕನ್ನಡ ಸಾಹಿತ್ಯದಲ್ಲಿಯ ಆಧುನಿಕ ಪ್ರಬಂಧಗಳು ಆ ಪ್ರಬಂಧಗಳ ಕೂಸುಗಳಲ್ಲ.

ಹೇಗೂ ಈಚೆಗೆ ಹೆಚ್ಚುಕಡಿಮೆ ೧೦೦ ವರ್ಷಗಳಿಂದ ಕನ್ನಡ ಪ್ರಬಂಧ ಸಾಹಿತ್ಯವು ಆಂಗ್ಲ ಪ್ರಬಂಧ ಸಾಹಿತ್ಯದಿಂದ ತಾನೆ ಒಗೆತಂದಿತೆಂಬ ಕಾರಣದಿಂದ, ಆಂಗ್ಲ ಪ್ರಬಂಧ ಸಾಹಿತ್ಯವನ್ನು ಕುರಿತು ಇಷ್ಟರಮಟ್ಟಿಗೆ ಹೇಳಬೇಕಾಯಿತು. ನಮ್ಮ ಕನ್ನಡದಲ್ಲಿ ಪ್ರಬಂಧವು ಯಾವಂದು ಮೊದಲಾಯಿತೆಂದು ವಿಚಾರಿಸಿದರೆ, ನನಗಾದರೋ ಮಂಗಳೂರಿನ 'ಸುವಾಸಿನಿ' ಎಂಬ ಮಾಸಪತ್ರಿಕೆಯ ೧೯೦೦ನೆಯ ಇಸವಿಯ ಪ್ರಥಮ ಸಂಪುಟದ ಯಾವೊಂದು ಸಂಚಿಕೆಯಲ್ಲಿ ಪ್ರಕಟವಾದ ಶ್ರೀ ಶ್ರೀ ನಂದಳಿಕೆ ಲಕ್ಷ್ಮೀನಾರಣಪ್ಪನವರ 'ಜೋಗುಳ' ಎಂಬ ಚಲೋ ಲೇಖದ ನೆನಪಾಗುತ್ತದೆ. ಆಮೇಲೆ ಅದೇ ಪತ್ರಿಕೆಯಲ್ಲಿ ೧೯೦೨ರಲ್ಲೇನೋ ಶ್ರೀ ಶ್ರೀ ಎಮ್. ಎನ್. ಶ್ರೀನಿವಾಸರಾಯರು ಬರೆದ 'ಭ್ರಮರ' ಮತ್ತು 'ಮೋಡ' ಎಂಬ ಬಲು ಸೊಗಸಾದ ಪ್ರಬಂಧಗಳ ಹಾಗೂ ಅದಕ್ಕೆ ೧-೨ ವರ್ಷಗಳ ಈಚೆಗೇನೋ ಮಂಗಳೂರಿನ 'ಸತ್ಯದೀಪಿಕೆ' ಎಂಬ ಸಾಪ್ತಾಹಿಕ ಪತ್ರಿಕೆಯಲ್ಲಿ ಶ್ರೀ ಶ್ರೀ ಪಂಜೆ ಮಂಗೇಶರಾಯರು ಬರೆದ 'ಹಲ್ಲಿ' ಮತ್ತು 'ಬಂದಣಿಗೆ' ಎಂಬ ಅತ್ಯಂತ ಮನೋಹರವಾದ ಪ್ರಬಂಧಗಳ ನೆನಪಾಗುತ್ತದೆ. ಆದರೆ ಮಾಡಲೇನು? ಅವೆರಡೂ ಪತ್ರಿಕೆಗಳ ಪ್ರತಿಗಳು ಈಗ ದೊರೆಯುವುದಾದರೋ ತೀರ ಅಸಾಧ್ಯ. ಆತಏವ ಆ ಪ್ರಬಂಧಗಳನ್ನು ಕಂಡವರ, ಓದಿ

ಮೆಚ್ಚಿದವರ ಮನಸ್ಸಿನಲ್ಲಿ ಅವು ಕ್ಷಣಿಕವಾದ ಮಿಂಚಿನಂತೆ ಹೊಳೆವಷ್ಟರಲ್ಲಿ ಕಳೆದು ಹೋದುವಲ್ಲಾ! ಎಂದೂ ಅವನ್ನು ಕಂಡಿಲ್ಲದವರ ಮನಸ್ಸಿನಲ್ಲಿ ಅವನ್ನು ತಾವು ಓದಿಲ್ಲವಲ್ಲಾ! ಎಂದೂ ವ್ಯಥೆ ಮಾತ್ರ ಉಳಿದಿದೆಯಲ್ಲದೆ, ಅವಾದರೆ ಅಕಟಾ, ಕನ್ನಡ ಸಾಹಿತ್ಯದಿಂದ ಪ್ರಾಯಶಃ ಸದ್ಯೆವ ಲುಪ್ತವಾಗಿ ಹೋದವು. 'ಸರ್ವಂ ಯಸ್ಯ ವಶಾದಗಾತ್ಸ್ಮೃತಿಪಥಂ ಕಾಲಾಯ ತಸ್ಮೈ ನಮಃ'.

ಆದರೆ ಕನ್ನಡ ಪ್ರಬಂಧಗಳ ಬಾಳ್ವೆ ದೈವಾತ್ ಅಲ್ಲಿಗೆ ಮುಗಿಯಲಿಲ್ಲ. ಅಲ್ಲಿಂದ ಮುಂದೆ ಹೊತ್ತು ಹೋಗುವಂತೆ ಕನ್ನಡನಾಡಿನಲ್ಲಿ ಚಲೋದಾದ ಪ್ರಬಂಧಗಳು ಆಗಿವೆ, ಆಗುತ್ತವೆ. ಹೆಸರುವಾಸಿಯಾದ ಪ್ರಬಂಧಕಾರರು ಆಗಿರುತ್ತಾರೆ. ಈಗಲೂ ಇರುತ್ತಾರೆ ಎಂಬುದು ನಮ್ಮ ಹೆಮ್ಮೆ. ನಮ್ಮ ಸಾಹಿತ್ಯದ ಭಾಗ್ಯ. ಇವರಿಂದಲೂ ಇನ್ನು ಮುಂದೆ ಬರಲುಳ್ಳವರಿಂದಲೂ ಬೇರೆ ಯಾವ ಭಾಷೆಯ ಪ್ರಬಂಧ ಸಾಹಿತ್ಯಕ್ಕೂ ಹಿಂದಾಗದೋಪಾದಿಯಲ್ಲಿ ಕನ್ನಡ ಸಾಹಿತ್ಯವು ಯಶಸ್ವಿಯಾಗಿ ಉತ್ತರೋತ್ತರವಾಗಿ ಬೆಳೆಯಲಿ ಎಂದು ಹಾರೈಸುತ್ತೇನೆ.

## ಕನ್ನಡ ಮೊತ್ತಮೊದಲಿನ ಸಣ್ಣಕಥೆ-ಕಾದಂಬರಿಗಳು

೧

ಶ್ರೀ ಶ್ರೀ ಪಂಜೆಯವರ ಮೊತ್ತಮೊದಲಿನ ಸಣ್ಣ ಕಥೆ ೧೯೦೦ರಲ್ಲಿ ಮಂಗಳೂರಿನಲ್ಲಿ ಪ್ರಕಟವಾಗತೊಡಗಿದ 'ಸುವಾಸಿನಿ' ಎಂಬ ಮಾಸಪತ್ರಿಕೆಯ ಮೊತ್ತಮೊದಲಿನ ಸಂಚಿಕೆಯಲ್ಲಿ (೧೯೦೦, ಜುಲೈ ೧ನೆಯ ತಾರೀಕು) ಪ್ರಕಟವಾಯಿತು. ಆ ಪತ್ರಿಕೆ ಜೀವಂತವಾಗಿದ್ದ ೧೯೦೦ರಿಂದ ೧೯೦೩ರ ವರೆಗೂ ಅವರ ಕಥೆಗಳು ಅದರಲ್ಲಿ ಆಗಾಗ್ಗೆ ಬರುತ್ತಲಿದ್ದವು. ಪಂಜೆಯವರು ಹುಟ್ಟಿದುದು ೧೮೭೪ನೆಯ ಫೆಬ್ರವರಿಯಲ್ಲಿ, ಶ್ರೀ ಮಾಸ್ತಿಯವರು ಹುಟ್ಟಿದುದು ೧೮೯೧ನೆಯ ಜೂನ್ ತಿಂಗಳಲ್ಲಿ.

ಶ್ರೀ ಶ್ರೀ ಎಮ್. ಎನ್. ಕಾಮತರ ಪ್ರಾಯಶಃ ಮೊತ್ತಮೊದಲಿನದೇನೋ ಕಥೆಯನ್ನು ಮೈಸೂರಿನ (ಅಥವಾ ಬೆಂಗಳೂರಿನ) 'ಮಧುರವಾಣಿ' ಎಂಬ ಪತ್ರಿಕೆಯಲ್ಲೋ 'ಲೋಕ ಹಿತೈಷಿಣಿ' ಎಂಬ ಪತ್ರಿಕೆಯಲ್ಲೋ ೧೯೧೨ರಲ್ಲೋ, ಅದರ ಅಚೀಚೆಯಲ್ಲೋ ಓದಿದಂತೆ ನನಗೆ ನೆನಪು ತೋರುತ್ತದೆ. ಕಾಮತರು ಹುಟ್ಟಿದುದು ೧೮೮೩ನೆಯ ಜೂನ್ ತಿಂಗಳಲ್ಲಿ. ೧೮೮೦ರ ಕೊಂಚ ಹಿಂದಣಿಂದಲೇ ಏನೋ ಕೋಲಾರ ಜಿಲ್ಲೆಯ ಮುನ್ಸೀಫರಾಗಿದ್ದ ಶ್ರೀ ಶ್ರೀ ಬಿ. ವೆಂಕಟಾಚಾರ್ಯರು ಮೊತ್ತಮೊದಲಲ್ಲಿ ಶ್ರೀ ಶ್ರೀ ಬಂಕಿಂಚಂದ್ರ ಚಟರ್ಜಿಯವರ 'ದುರ್ಗೇಶ ನಂದಿನಿ' ಎಂಬ ಬಂಗಾಳೀ ಕಾದಂಬರಿಯನ್ನು ಕನ್ನಡಿಸತೊಡಗಿ, ಆಮೇಲೆ ಆ ಬಂಗಾಳೀ ಲೇಖಕರ ಹೆಚ್ಚು ಕಡಿಮೆ ಎಲ್ಲವೆಂಬಂತೆ ಕಾದಂಬರಿಗಳನ್ನು ಹಾಗೂ ಶ್ರೀ ಶ್ರೀ ದಾಮೋದರ ಮುಖರ್ಜಿ ಮೊದಲಾದವರ ಕಾದಂಬರಿಗಳನ್ನು ಕನ್ನಡಿಸಿದರು. 'ದುರ್ಗೇಶ ನಂದಿನಿ' ಪ್ರಕಟವಾಗುವ ಮುಂಚೆ ಹೊಸಗನ್ನಡದಲ್ಲಿ ಈಗಣ ಮಾದರಿಯ ಕಾದಂಬರಿ ಇದ್ದಿರಲಿಲ್ಲ ಎನ್ನುತ್ತಾರೆ.

ಆದರೆ ಮೈಸೂರಿನ ಅರಸರಾಗಿದ್ದ (ಕರ್ಣಾಟಕ ಕವಿಚರಿತೆ ೩, ಪುಟ ೧೮೩-೮೪) ಮುಮ್ಮಡಿ ಕೃಷ್ಣರಾಜರ ಆಶ್ರಿತನಾಗಿದ್ದ ಕೆಂಪುನಾರಾಯಣ ಎಂಬವನು ೧೮೨೩ರಲ್ಲಿ 'ಮುದ್ರಾ ಮಂಜೂಷ' ಎಂಬ ಕನ್ನಡ ಗದ್ಯ ಗ್ರಂಥವನ್ನು ಬರೆದಿದ್ದನು. ಇದು ಪ್ರತ್ಯಕ್ಷ ಕಾದಂಬರಿಯೇ

ಸರಿ. ಇದು ಸಂಸ್ಕೃತ 'ಮುದ್ರಾರಾಕ್ಷಸ' ಎಂಬ ನಾಟಕವನ್ನು ಆಧರಿಸಿ ಬರೆದಿದೆಯೇ ಹೊರತು ಸಂಸ್ಕೃತ ಅಥವಾ ಬೇರೆ ಭಾಷೆಯ ಕಾದಂಬರಿಯ ಕನ್ನಡ ಅನುವಾದವಲ್ಲ. ಆ ಮುಂಚೆ ಸುಮಾರು ೧೮೦೦ರಲ್ಲಿ ಮೈಸೂರು ಸೀಮೆಯವನೇನೋ ಯಾದವ ಎಂಬ ಕವಿ 'ಕಲಾವತೀ ಪರಿಣಯ' ಎಂಬ ಕಾದಂಬರಿಯನ್ನು ಹಳಗನ್ನಡ ಸರಣಿಯಲ್ಲಿ ಬರೆದಿದ್ದನು. (ಕರ್ಣಾಟಕ ಕವಿಚರಿತೆ ೩, ಪುಟ ೧೫೭-೧೫೯). ಈಗಿನ ಧೋರಣೆಯ ಸ್ವತಂತ್ರ ಕಾದಂಬರಿಗಳಲ್ಲಿ ಮೊತ್ತಮೊದಲನೆಯದು ಶ್ರೀ ಶ್ರೀ ಗುಲವಾಡಿ ವೆಂಕಟರಾಯರ 'ಇಂದಿರಾಬಾಯಿ' ೧೮೯೯ರಲ್ಲಿ ಮಂಗಳೂರಲ್ಲಿ ಪ್ರಕಟವಾಯಿತು. ಎರಡನೆಯದು ೧೯೦೫ರಲ್ಲಿ ಮಂಗಳೂರಲ್ಲಿ ಪ್ರಕಟವಾದ ಶ್ರೀ ಶ್ರೀ ಬೋಳಾರ ಬಾಬುರಾಯರ 'ವಾಗ್ದೇವಿ' (ಇದು ಮೊನ್ನೆ ತಾನೆ ಮರಳಿ ಪ್ರಕಟವಾಗಿದೆ). ಮೂರನೆಯದು ೧೯೦೬ರಲ್ಲಿ ಪ್ರಕಟವಾದ ಶ್ರೀ ಗುಲವಾಡಿ ಅಣ್ಣಾರಾಯರ 'ರೋಹಿಣಿ'. ಇದು ಕಲ್ಲೀಕೋಟೆ (Calicut ಈಗಣ Kozhikode, Malabar Dist.)ಯಲ್ಲಿ ಪ್ರಕಟವಾಯಿತು. 'ಇಂದಿರಾಬಾಯಿ' ಮತ್ತು 'ರೋಹಿಣಿ'ಯನ್ನು ಪುನರ್ಮುದ್ರಿಸುವ ಪ್ರಯತ್ನ ನಡೆಯುತ್ತಿದೆ. 'ಇಂದಿರಾಬಾಯಿ'ಯ ರಚಕರನ್ನು ಕುರಿತು ಮೊನ್ನೆ ತಾನೆ 'ಪ್ರವಾಸಿ' ಎಂಬ ಮಂಗಳೂರಿನ ಮಾಸಪತ್ರಿಕೆಯ ೧೯೫೩ ದಶಂಬರದ ಸಂಚಿಕೆಯಲ್ಲಿ ಒಂದು ಲೇಖವಿದೆ. (೨೪ ದಶಂಬರ, ೫೩)

೨

ಕನ್ನಡದಲ್ಲಿ ಮೊತ್ತಮೊದಲಿನ ಸ್ವತಂತ್ರ ಕಾದಂಬರಿಯನ್ನು ಬರೆದವರು ಯಾರು? ಅವರ ಹೆಸರೇನು ಎಂದು ತಾವೇನೋ ನನಗೆ ಬರೆದಂತೆ ನೆನಪು ತೋರುತ್ತದೆ. ಅದಕ್ಕೆ ಪ್ರತ್ಯುತ್ತರವಾಗಿ ಕೈ.ವಾ. ಗುಲವಾಡಿ ವೆಂಕಟರಾಯರು 'ಇಂದಿರಾಬಾಯಿ'ಯನ್ನು ೧೮೯೯ನೆಯ ಇಸವಿಯಲ್ಲಿ ಬರೆದುದಕ್ಕಿಂತ ಮುಂಚೆ ಕನ್ನಡದಲ್ಲಿ ಸ್ವತಂತ್ರ ಕಾದಂಬರಿ ಇದ್ದಂತೆ ನನಗೆ ನೆನಪಿಲ್ಲ. ಆದಕಾರಣ ಅದೇ ಮುಂಚಿನ ಕಾದಂಬರಿ, ಅವರೇ ಮೊತ್ತಮೊದಲಿನ ಕಾದಂಬರಿಕಾರರು ಎಂದು ನಾನು ಬರೆದಿರುತ್ತೇನೆ.

ನಿನ್ನೆ ರಾತ್ರಿ ನನಗೆ ಒಮ್ಮಿಂದೊಮ್ಮೆ ನೆನಪಾಯಿತು, ಅದಕ್ಕಿಂತ ಮುಂಚೆ ರಚಿತವಾದ ಮತ್ತೊಂದು ಕಾದಂಬರಿ ಇತ್ತೆಂದು. ಅದರ ಹೆಸರು 'ಕೇಸರಿ ವಿಲಾಸ.' ಅದರ ರಚಕರು ಮದ್ರಾಸಿನಲ್ಲಿ ನೆಲಸಿದ್ದ ಒಬ್ಬ ಆಂಧ್ರ ಬ್ರಾಹ್ಮಣರು. ಅವರ ಹೆಸರು ಶ್ರೀ ಶ್ರೀ (the late) ರೆಂಟ್ಲ ವೆಂಕಟಸುಬ್ಬರಾವ್, ಬಿ.ಎಂ., ಬಿ.ಎಲ್., ಹೈಕೋರ್ಟ್ ವಕೀಲ್, ಮೈಲಾಪುರ, ಮದ್ರಾಸು. ಆ ಪುಸ್ತಕ ಅಚ್ಚಾದುದೂ ಪ್ರಕಟವಾದುದೂ ಮದ್ರಾಸಿನಲ್ಲೇ (ಮೈಲಾಪುರದಲ್ಲಿ). ಅದರ ಕ್ರಯ ಹೆಚ್ಚುಕಡಿಮೆ ರೂಪಾಯಿ ೧-೪-೦. ಅದು ಪ್ರಕಟವಾದುದು ೧೮೯೫ನೆಯ ಇಸವಿಯ ಉತ್ತರಾರ್ಧದಲ್ಲಿ. ಆಗ್ಗೆ ನನಗೆ ೧೨ ವರ್ಷ ಪ್ರಾಯ. ನಾನು ಯಾವುದೊಂದು ವರ್ತಮಾನಪತ್ರಿಕೆಯಲ್ಲಿ ಜಾಹೀರಾತನ್ನು ಕಂಡು ಮೈಲಾಪುರದಲ್ಲಿದ್ದ ಗ್ರಂಥಕರ್ತರಿಗೇ ಬರೆದು ವಿ. ಪಿ. ಪಿ. ದ್ವಾರ ಅದನ್ನು ತರಿಸಿಕೊಂಡಿದ್ದೆ. ಆಗ ಬೇಸಲ್ ಮಿಷನ್ ಬುಕ್ ಡಿಪೋ ಎಂಬ ಜರ್ಮನಿಯ ಕ್ರೈಸ್ತ ಮಿಷನೆರಿಗಳ ಪುಸ್ತಕ ಅಂಗಡಿ ಒಂದೇ ವಿನಾ ಬೇರೆ ಪುಸ್ತಕಾಲಯ ಮಂಗಳೂರಲ್ಲಿ ಇದ್ದಿಲ್ಲ. ಬೇಸಲ್ ಮಿಷನ್ ಬುಕ್ ಡಿಪೋನವರು ಪಠ್ಯಪುಸ್ತಕಗಳಲ್ಲದೇ ಹಿಂದೂಗಳ ಬೇರೆ ಪುಸ್ತಕಗಳನ್ನು ಮಾರಾಟಕ್ಕೆ ತರಿಸಿಕೊಳ್ಳುತ್ತಿರಲಿಲ್ಲ. ಹಾಗಾಗಿ ನಾನೇ ಮದ್ರಾಸಿಗೆ ಬರೆದು 'ಕೇಸರಿ ವಿಲಾಸ'ದ ಪ್ರತಿಯನ್ನು ತರಿಸಿಕೊಂಡ ನೆನಪು ನನಗಿದೆ. ಆ

ಪುಸ್ತಕ ಆವರಿವರಿಗೆ ಎರವಾಗಿ ಕೊಟ್ಟು ಕಳೆದುಹೋಯಿತು. ೧೮೯೯ರಲ್ಲಿ 'ಇಂದಿರಾಬಾಯಿ' ಯನ್ನು ಕಂಡಕೂಡಲೇ 'ಕೇಸರಿ ವಿಲಾಸ'ವನ್ನು ಮರಳಿ ತರಿಸಿ ಇಟ್ಟುಕೊಳ್ಳಬೇಕೆಂದು ಮದ್ರಾಸಿಗೆ ಎರಡು ಮೂರು ಸಾರಿ ಬರೆದೆ. ಪ್ರತ್ಯುತ್ತರವೂ ಇಲ್ಲ. ಪುಸ್ತಕವೂ ಇಲ್ಲ. ಆ ಕುರಿತು ವಿಚಾರಿಸಿದ್ದಲ್ಲಿ ಆದರ ಪ್ರತಿಗಳು ತೀರಾ ಮುಗಿದುಹೋಗಿವೆ. ಆದರ ರಚಕರು 'Kamala's Letters' 'Shakespeare's Othello' ಮುಂತಾದ ಇಂಗ್ಲಿಷು ಪುಸ್ತಕಗಳನ್ನು ಬರೆದು ಪ್ರಕಟಿಸುತ್ತಾರಲ್ಲದೇ 'ಕೇಸರಿ ವಿಲಾಸ'ವನ್ನು ಮರಳಿ ಪ್ರಕಟಿಸುವುದಿಲ್ಲ ಎಂದು ತಿಳಿಯಿತು.*

*ಕನ್ನಡ ನುಡಿ, ೧೯೫೧; ಲೇಖಕ, ೧೯೫೪*

*ಗೋವಿಂದ ಪೈ ಸಂಶೋಧನ ಸಂಪುಟ, ೧೯೯೫, ಪು. ೫೦೯-೧೧, ೫೧೩-೧೪*



---

* ಗೋವಿಂದ ಪೈಗಳು ೮-೫-೧೯೬೦ರಂದು ಆರ್. ಎಸ್. ಮೂರ್ತಿ (ಪುಣೆ) ಅವರಿಗೆ ಬರೆದ ಪತ್ರದಲ್ಲಿ ಯುರೋಪಿನ ಕಾದಂಬರಿಯ ಉಗಮವನ್ನು ಪರಿಚಯಿಸಿದ್ದಾರೆ–''ಕಾದಂಬರಿ ಅಥವಾ NOVEL ಎಂಬ ಸಾಹಿತ್ಯ ವಿಭಾಗದಲ್ಲಿ ಆಂಗ್ಲ ಸಾಹಿತ್ಯದಲ್ಲಿಯ ಮೊತ್ತಮೊದಲಿನ NOVELIST ಎಂದರೆ HENRY FIELDING (ಕ್ರಿ.ಶ. ೧೭೦೭-೧೭೫೪) ಎಂಬವನು. ಆವನ ಮುಖ್ಯ ಕಾದಂಬರಿಗಳು (1) JOSEPH ANDREWS (1742) (2) TOM JONES (1749) (3) AMELIA (1752): ಆದರೆ ಯುರೋಪ್ ಭೂಖಂಡದಲ್ಲಿಯ ಪ್ರಥಮ NOVELIST ಎಂಬವನು ITALY ದೇಶದ GIOVANNI BOCCACCIO (ಕ್ರಿ.ಶ. ೧೩೧೩-೧೩೭೫) ಆವನ ಕೃತಿ DECAMIRON ಎಂದು. ಅದು ಆಂಗ್ಲ ಭಾಷೆಯಲ್ಲಿ ಭಾಷಾಂತರವಾಗಿದೆ. ಆದರೆ ಇವರೆಲ್ಲರಿಗಿಂತ ಎಷ್ಟೋ ಹಿಂದಣ ಕ್ರಿ.ಶ ೬-೭ನೆಯ ಶತಮಾನಗಳಲ್ಲಿ ಆಗಿಹೋದ ಬಾಣಭಟ್ಟನೆಂಬವನು ಸಂಸ್ಕೃತದಲ್ಲಿ ರಚಿಸಿದ 'ಕಾದಂಬರಿ' ಎಂಬ ಹೆಸರಿನದೇ ಕಾದಂಬರಿ ಪ್ರಾಯಶಃ ಸಂಸ್ಕೃತದಲ್ಲಿನ ಮೊತ್ತಮೊದಲಿನ ಕಾದಂಬರಿಯಂತೆ. ಆ ಕಾರಣದಿಂದಲೇ ಆ ಬಳಿಕ ನಮ್ಮ ಭಾರತ ಭೂಮಿಯಲ್ಲಿ ಬರೆಯಲ್ಪಟ್ಟ ಕಾದಂಬರಿಗಳಿಗೆಲ್ಲಾ 'ಕಾದಂಬರಿ' ಎಂದು ಹೆಸರಾಯಿತು.''-ಶ್ರೀನಿವಾಸ ಹಾವನೂರ-'' ಪತ್ರಗಳು ಚಿತ್ರಿಸಿದ ಗೋವಿಂದ ಪೈ'', ವಿನಯ ಪ್ರಕಾಶನ, ಬೆಂಗಳೂರು, ೧೯೮೭.

# ೭೮. ಕನ್ನಡದ ಮೊದಲ ಕಾದಂಬರಿಗಳ ಚಾರಿತ್ರಿಕ ಹಿನ್ನೆಲೆ

● ಶ್ರೀನಿವಾಸ ಹಾವನೂರ

ಕಾದಂಬರಿಗಳಲ್ಲಿ ಹಲವು ವಿಧ: ಸಾಮಾಜಿಕ, ಪತ್ತೇದಾರಿ, ಐತಿಹಾಸಿಕ, ಅದ್ಭುತ ರಮ್ಯ, ಪೌರಾಣಿಕ ಇತ್ಯಾದಿ. ಇನ್ನು ಇವು ಒಂದೊಂದರಲ್ಲಿ ಅನುವಾದಿತ, ಸ್ವತಂತ್ರ ಎಂಬ ಬಗೆಯನ್ನೂ ಗಣಿಸಬೇಕು. ಈ ಪ್ರತಿಯೊಂದು ರಂಗದಲ್ಲಿ ಮೊದಲ ಕೃತಿ ಯಾವುದು, ಅನಂತರದ್ದು ಯಾವುದು ಎಂಬುದರ ವಿವೇಚನೆ ಮಾಡಿ, ಚಾರಿತ್ರಿಕ ಹಿನ್ನೆಲೆಯನ್ನು ಕೊಡುವುದು ಪ್ರಸ್ತುತ ಲೇಖನದ ಉದ್ದೇಶ.

ಹೊಸಗನ್ನಡದ ಕಾದಂಬರಿಗೆ ಇಂಗ್ಲಿಷ್ ಕಾದಂಬರಿ ಪ್ರೇರಣೆಯನ್ನೊದಗಿಸಿತು. ಮತ್ತು ಇಂಗ್ಲಿಷ್‌ನಿಂದಾ ನೇರವಾಗಿ ಬಾರದೇ ಹೋದರೂ, ಸುರುವಿಗೆ ಬಂಗಾಲೀ, ಮರಾಠೀ ಕಾದಂಬರಿಗಳ ಮೂಲಕ ಅದು ತನ್ನ ಪ್ರಭಾವ ಬೀರಿತೆಂಬುದು ಸರ್ವವಿದಿತ. ಆದರೆ ವಿಸ್ತಾರವಾದ ಕಥಾನಕವುಳ್ಳ, ಕಲ್ಪನಾಪ್ರಧಾನವಾದ ಈ ಬಗೆಯ ಸಾಹಿತ್ಯರೂಪ ಭಾರತೀಯರಿಗೆ ಹೊಸತಲ್ಲ. ಸಂಸ್ಕೃತ ಸಾಹಿತ್ಯದಲ್ಲಿ ಅದಕ್ಕೆ ಆಖ್ಯಾಯಿಕೆ ಎಂದು ಹೆಸರು. ಬಾಣನ ಕಾದಂಬರಿಯು ಇಂಥ ಆಖ್ಯಾಯಿಕೆಗಳಲ್ಲಿ ಆದಿಮವಾಗಿ ಪರಿಚಿತವಾದುದು. ಅನಂತರ ಸಂಸ್ಕೃತದಲ್ಲಿ, ಆದರಂತೆ ಹಳಗನ್ನಡದಲ್ಲಿ ಸಹ ಹಲವಾರು ಆಖ್ಯಾಯಿಕೆಗಳು ತಲೆದೋರಿವೆ.

ಹಳಗನ್ನಡದಿಂದ ಹೊಸಗನ್ನಡಕ್ಕೆ ಸಾಗಿ ಬಂದ ನಮ್ಮ ಸಾಹಿತ್ಯ ಚರಿತ್ರೆಯಲ್ಲಿ ಸಂಧಿಕಾಲದ ಅವಧಿಯೊಂದಿದೆ. ಅದುವೆ ೧೯ನೇ ಶತಮಾನದ ಪೂರ್ವಾರ್ಧ ಕಾಲ. ಈ ಅವಧಿಯಲ್ಲಿ ಎಂದರೆ ಇಂಗ್ಲಿಷ್ ಕಾದಂಬರಿಯ ಪ್ರಭಾವ ತಲೆದೋರುವುದಕ್ಕೆ ಮುಂಚೆ, 'ಕಾದಂಬರಿ' ಎಂಬ ಅಭಿಧಾನಕ್ಕೆ ಯೋಗ್ಯವಾದ ಮೂರು ಕೃತಿಗಳು ಮೂಡಿಬಂದವು :

ಯಾದವನ ''ಕಲಾವತೀಪರಿಣಯ'' ೧೮೧೫

ಮುಮ್ಮಡಿಯವರ ''ಸೌಗಂಧಿಕಾ ಪರಿಣಯ'', ೧೮೨೧ ಮತ್ತು

ಕೆಂಪುನಾರಾಯಣನ ''ಮುದ್ರಾಮಂಜೂಷ'', ೧೮೨೩

ಮೊದಲಿನ ಎರಡು ಕೃತಿಗಳು ಅದ್ಭುತರಮ್ಯ ಕಥಾನಕಗಳು. ಅವುಗಳಲ್ಲಿಯ ''ಪರಿಣಯ'' ಪದವು ''ರೋಮಾನ್ಸ್'' ಸೂಚಕವಾದುದಲ್ಲವೆ? ಅವಕ್ಕೆ ಕಾಲ್ಪನಿಕವಾದ ಪೌರಾಣಿಕ ಹಿನ್ನೆಲೆ ಇದ್ದು ದೇವತೆಗಳು ಮಾಯಾವಿಗಳು ಕಾಣಿಸಿಕೊಳ್ಳುತ್ತಾರೆ. ''ಕಲಾವತೀ ಪರಿಣಯ''ವು ದಂಡಕವೃತ್ತದಲ್ಲಿದ್ದು ಪದ್ಯಗಂಧಿ ಗದ್ಯವಾಗಿದೆ. ಸ್ವತಂತ್ರವೂ ನವೀನವೂ ಆದ ಅದರ ಕಥಾವಸ್ತು ಇಷ್ಟೊಂದು ಹೃದ್ಯವಾಗಿದೆಯಲ್ಲ, ಅದನ್ನು ಹೊಸಗನ್ನಡ ಗದ್ಯದಲ್ಲಿ ಬರೆದುದಾದರೆ ಇಂದಿನ ವಾಚಕರನ್ನು ಸಹ ರಂಜಿಸಬಲ್ಲದು. ಎಂತಲೇ ಗೋವಿಂದ ಪೈಗಳು ತಮ್ಮ ಸಮ್ಮೇಳನಾಧ್ಯಕ್ಷಭಾಷಣದಲ್ಲಿ (೧೯೫೦) ಇದನ್ನು ಕನ್ನಡದ ಪ್ರಥಮ ಕಾದಂಬರಿ ಎಂದು ಹೆಸರಿಸಿದರು.

ಯಾದವನು ಮುಮ್ಮಡಿ ಕೃಷ್ಣರಾಜರ ಆಸ್ಥಾನದಲ್ಲಿದ್ದನು. ಅವರ ಪ್ರೀತಿಪಾತ್ರನಾಗಿದ್ದನು. ಒಮ್ಮೆ ರಾಜರು ಆಡಿದ ಲಘುಮಾತಿನಿಂದ ಬೇಸರಗೊಂಡು, ತನ್ನ ಊರಾದ ದೊಡ್ಡಬಳ್ಳಾಪುರಕ್ಕೆ ಹೊರಟುಬಿಟ್ಟನು. ಆ ಕಾಲದಲ್ಲಿ ಬರೆದ ಕೃತಿಯಿದು (ಸು. ೧೮೧೫).

ಕಥಾನಾಯಿಕೆಯಾದ ಕಲಾವತಿಯೂ ತುಂಬಾ ಸ್ವಾಭಿಮಾನಿ. ಸೌರಾಷ್ಟ್ರದೇಶದ ಕುವಲಯಾಪೀಡನ ಮಗಳಾದ ಅವಳನ್ನು ಬೃಹದ್ರಥನೆಂಬ ರಾಜಕುಮಾರನು ಮೋಹಿಸುತ್ತಾನೆ. ಅವಳೂ ಅಷ್ಟೇ. ಆ ದಿನ ಬೆಳುದಿಂಗಳ ಇರುಳಿನಲ್ಲಿ ಅವನು ಕಲಾವತಿಯ ಅಂತಃಪುರವನ್ನು ಪ್ರವೇಶಿಸುತ್ತಾನೆ. ಆಗಲೇ ಅವಳೊಂದಿಗೆ ಬೆರೆಯುವ ಆತುರ, ಅವನಿಗೆ. ''ಮದುವೆಯಾಗುವ ವರೆಗೆ ತಡೆಯೋಣ' ಎಂಬುದು ಕಲಾವತಿಯ ಸಪ್ರೇಮ ಸೂಚನೆ. ಆಗ ಸಿಟ್ಟಿಗೆದ್ದ ರಾಜನು ''ನಿನ್ನನ್ನು ಮದುವೆಯಾಗುವೆ. ಆದರೆ ತೊರೆಯುವೆ'' ಎನ್ನುತ್ತಾನೆ. ಕಲಾವತಿಯು ''ಧರ್ಮವಶಳಾಗಿ ನಾನು ಬೇಡವೆಂದೆ. ಇಷ್ಟಕ್ಕೂ ನೀವು ಮುಳಿದು ನನ್ನನ್ನು ತೊರೆಯುವುದಾದರೆ ಉಪಾಯವಿಲ್ಲ. ಎಂತಾದರೂ ನಿಮ್ಮ ಅಂಗ ಸಂಗ ಮಾಡಿ ನನ್ನ ಹೊಟ್ಟೆಯಲ್ಲಿ ಹುಟ್ಟಿದ ಕುವರನಿಂದ ನಿಮ್ಮ ನಿಗ್ರಹ ಮಾಡಿಸುವೆ'' ಎಂದು ಮರುಪ್ರತಿಜ್ಞೆ ಮಾಡುತ್ತಾಳೆ.

ಇತ್ತ ಕುವಲಯಾಪೀಡನಿಗೆ ಬೃಹದ್ರಥನು ಯುದ್ಧವೊಂದರಲ್ಲಿ ಜಯಗಳಿಸಿ ಕೊಟ್ಟಿದ್ದರಿಂದ ತನ್ನ ಮಗಳನ್ನು ಅವನಿಗೆ ಧಾರೆಯೆರೆದುಕೊಡಲು ಸ್ವಾಭಾವಿಕವಾಗಿಯೇ ಮುಂಬರುತ್ತಾನೆ.

ಅದು ವಿವಾಹದ ಪ್ರಥಮ ರಾತ್ರಿ. ಆದರೇನು? ಬೃಹದ್ರಥನು ತನ್ನ ಪ್ರತಿಜ್ಞೆಯಿಂದಾಗಿ ಸಮಾಗಮವಿಲ್ಲದೆ ತನ್ನ ರಾಜಧಾನಿಗೆ ಹಿಂತಿರುಗುತ್ತಾನೆ. ಪರಿತ್ಯಕ್ತೆಯಾದ ಕಲಾವತಿಯು ಓರ್ವ ದೇವಮಾನಿನಿಯ ಕೃಪೆಯಿಂದ ರೂಪವನ್ನೇ ಬದಲಿಸಿಕೊಂಡು ''ಮದನಮಂಜರಿ''ಯಾಗಿ ಬೃಹದ್ರಥನಲ್ಲಿಗೆ ಬರುತ್ತಾಳೆ. ತನ್ನ ಸಂಗೀತಕಲೆ, ಬುದ್ಧಿಮತ್ತೆಗಳಿಂದ ಅವನನ್ನು ವಶಪಡಿಸಿಕೊಳ್ಳುತ್ತಾಳೆ. ಅವನಿಂದ ಗರ್ಭತಾಳಿದ ಮೇಲೆ ತನ್ನ ಊರಿಗೆ ಮರಳಬಯಸುತ್ತಾಳೆ-ಪ್ರತಿಜ್ಞಾಪೂರ್ತಿಗಾಗಿ! ಆಗ ರಾಜನು ''ನಿನ್ನನ್ನು ಬಿಟ್ಟಿರಲಾರೆ'' ಎಂದು ಶೋಕಿಸುತ್ತಿದ್ದಾಗ, ಕಲಾವತಿಯು ಕೊಡುವ ಉತ್ತರವಿದು: ''ಅಂಥ ಚಿಂತೆಯು ಕೋಮಲೆಯರಿಗಲ್ಲದೆ, ಕಠಿಣ ಹೃದಯದ ಗಂಡಸರಿಗಲ್ಲ. ಬೇಕಿದ್ದರೆ ನಿನ್ನಿಂದ ವಂಚಿತಳಾದ ಕಲಾವತಿಯನ್ನು ಕೇಳು!''

ತವರಿಗೆ ಬಂದ ಕಲಾವತಿಯು ಗಂಡು ಮಗುವನ್ನು ಹಡೆದ ಮೇಲೆ ಕ್ರಮೇಣ ಬೃಹದ್ರಥನಿಗೆ ನಿಜ ಸಂಗತಿ ತಿಳಿಯುತ್ತದೆ. ಆದರೆ ಪ್ರಸಂಗ ಮಿಂಚಿಹೋಗಿದೆ! ಮಗನಾದ ಕುಂಡಲಶ್ರವನು ದೊಡ್ಡವನಾಗಿ, ವೀರಾಗ್ರಣಿಯೆನಿಸಿ ಬೃಹದ್ರಥನನ್ನು ಯುದ್ಧದಲ್ಲಿ ಎದುರಿಸುತ್ತಾನೆ: ವಿಶಿಷ್ಟ ವ್ಯೂಹವೊಂದನ್ನು ರಚಿಸಿ ತಂದೆಯನ್ನು ಪಂಜರದಲ್ಲಿ ಬಂಧಿಸಿ, ತಾಯಿಯ ಪ್ರತಿಜ್ಞೆಯನ್ನು ಪೂರ್ಣಗೊಳಿಸುತ್ತಾನೆ.

ಈ ಕಥಾನಕದಲ್ಲಿರುವ ಕೆಲವು ಘಟನೆಗಳು ಅಲೌಕಿಕವೆನಿಸಿದರೂ ಅವಾಸ್ತವವಲ್ಲ. ವರ್ಣನೆಗಳು ಸಾಕಷ್ಟಿವೆ. ಆದರೆ ಅದರಿಂದ ಕಥಾನಿರೂಪಣೆಯು ಕುಂಠಿತವಾಗಿಲ್ಲ. ಮಹತ್ವದ್ದೆಂದರೆ, ಇಂದಿನ ಕಾದಂಬರಿಗಳ ಒಂದು ಲಕ್ಷಣವಾದ-ಮಾನವ ಸಹಜ ನಡವಳಿಕೆಯನ್ನು ಇಲ್ಲಿನ ಪಾತ್ರಗಳಲ್ಲಿ ಕಾಣುತ್ತೇವೆ. ಉದಾಹರಣೆಗೆ ಕಲಾವತಿ-ಬೃಹದ್ರಥರ ವಿವಾಹಪೂರ್ವದ ಮತ್ತು ಅನಂತರದ ತೊಳಲಾಟದ ಚಿತ್ರಣ.

ಮುಂದೆ ತಡವಾಗಿ ಎಂದರೆ ೧೮೬೦ನೆಯ ದಶಕದಲ್ಲಿ ಈ ಗ್ರಂಥವು ಅಚ್ಚಾಯಿತು. ಅಂದಿನ ಕಾಲಕ್ಕೆ ಜನಪ್ರಿಯವಾಗಿದ್ದಿತಲ್ಲದೆ, ಮದ್ರಾಸ್ ವಿಶ್ವವಿದ್ಯಾನಿಲಯದವರು ಅದನ್ನು

ಪಠ್ಯವಾಗಿ ಗೊತ್ತುಪಡಿಸಿದ್ದರು. ಸ್ವೋಪಜ್ಞತೆಯಿಂದ ಕೂಡಿದ ಮತ್ತು ರಸಸ್ಯಂದಿಯಾದ ಈ ಕೃತಿ ಗಣನೀಯವಾದುದು.

ಕೆಲವೇ ವರ್ಷಗಳ ಅನಂತರ ಮುಮ್ಮಡಿ ಕೃಷ್ಣರಾಜರ ''ಸೌಗಂಧಿಕಾ ಪರಿಣಯ''ವು ರಚಿತವಾಯ್ತು (೧೮೨೧). ರಾಜರ ಮತ್ತು ಅವರ ಹೆಸರಿನ ಎಲ್ಲ ಕೃತಿಗಳು ಧಾರ್ಮಿಕವಾಗಿದ್ದರೆ ಇದು ಮಾತ್ರ ''ಶೃಂಗಾರ ರಸಕ್ಕೆ ಶಿರೋಭೂಷಣ''ವಾದ ನವೀನ ಕೃತಿಯೆನಿಸಿತು. ಕಥೆಯು ದೇವೇಂದ್ರನನ್ನು ಕುರಿತದ್ದು. ಆತ ಮುನಿಶಾಪದಿಂದ ಭೂಲೋಕದಲ್ಲಿ ಕರ್ನಾಟಕದಲ್ಲಿಯೇ ಸುಗಂಧರಾಜನಾಗಿ ಅವತರಿಸುತ್ತಾನೆ. ಅವನ ಶಚಿದೇವಿಯು ಇದೇ ರೀತಿ-ಕಲಿಂಗ ದೇಶದಲ್ಲಿ ಸೌಗಂಧಿಕೆಯಾಗಿ ಹುಟ್ಟಿಬರುತ್ತಾಳೆ. ಅವಳ ಸ್ವಯಂವರಕ್ಕಾಗಿ ಎಂಟು ಪಣಗಳು. ಅವನ್ನು ಗೆಲ್ಲದೆ ಇತರರು ಹತಾಶರಾದಾಗ ನಮ್ಮ ಸುಗಂಧರಾಜನು ಅವನ್ನು ಸಾಹಸದಿಂದ ಪಡೆದು ಸೌಗಂಧಿಕೆಯ ಕೈಹಿಡಿಯುವನು. ಈ ಪಣಗಳನ್ನು ಗೆದ್ದು ತಂದ ಕಥಾನಕವೇ ವಿಸ್ತಾರವಾದುದು. ಜೊತೆಗೆ ಆಗಮ, ಯೋಗಶಾಸ್ತ್ರ ಮುಂತಾದ ನೂರೆಂಟು ವಿಷಯಗಳು ಸೇರಿ, ಕಾದಂಬರಿಯು ೧೦೦೦ ಪುಟಗಳನ್ನು ಮಿಕ್ಕಿದೆ. ಮಹತ್ವದ ಮಾತೆಂದರೆ ಅದರ ಭಾಷೆಯು ಹೊಸಗನ್ನಡಕ್ಕೆ ತೀರ ಸಮೀಪವರ್ತಿಯಾಗಿದೆ. ಕೆಂಪುನಾರಾಯಣನ ''ಮುದ್ರಾ ಮಂಜೂಷ''ವು (೧೮೨೩) ''ಮುದ್ರಾರಾಕ್ಷಸ'' ಸಂಸ್ಕೃತ ನಾಟಕದ ರೂಪಾಂತರ ಎಂಬ ಭಾವನೆಯಿದೆ. ಅದು ಸರಿಯಲ್ಲ. ಆ ನಾಟಕದ ೧/೪ ಭಾಗವನ್ನಷ್ಟೆ ಕೆಂಪುನಾರಾಯಣ ಸ್ವೀಕರಿಸಿದ್ದಾನೆ. ಅದರಲ್ಲಿಯೂ ಸಾಕಷ್ಟು ಬದಲಾವಣೆ ಮಾಡಿಕೊಂಡಿದ್ದಾನೆ. ಅಲ್ಲದೆ ನಾಟಕ ರೂಪವನ್ನು ನೇರವಾದ ಗದ್ಯಕ್ಕೆ ತಿರುಗಿಸಿದ್ದಾನೆ. ಆದಕಾರಣ ಇದನ್ನು ಸ್ವತಂತ್ರ ಐತಿಹಾಸಿಕ ಕಾದಂಬರಿಯೆಂದೇ ತಿಳಿಯತಕ್ಕದ್ದು.

ರಾಜನೀತಿಯ ಚಾತುರ್ಯವುಳ್ಳ ಈ ಕಥಾನಕವು ಎಂದಿಗೂ ವಾಚಕರ ಮನಸ್ಸನ್ನು ಸೆರೆಹಿಡಿಯುವಂಥದು. ಮೇಲಣ ಎರಡು ಕೃತಿಗಳಲ್ಲಿ ಕಂಡುಬರುವ ಅದ್ಭುತ, ಅಲೌಕಿಕ ಸನ್ನಿವೇಶಗಳು ಇದರಲ್ಲಿ ಇಲ್ಲವೆ ಇಲ್ಲ. ಅನವಶ್ಯಕ ವರ್ಣನೆಗಳೂ ದೊರೆಯುವುದಿಲ್ಲ. ಶೃಂಗಾರಕ್ಕಂತೂ ಸಂಪೂರ್ಣ ಸೊನ್ನೆ. ಮಾನವ ಸ್ವಭಾವದ, ವಿಶೇಷತಃ ವ್ಯವಹಾರಕೌಶಲದ ಚಿತ್ರಣದಲ್ಲಿ ಕೆಂಪುನಾರಾಯಣನು ಅತ್ಯಂತ ಪಳಗಿದವನಾಗಿದ್ದಾನೆ. ನಮಗೆ ಪ್ರಸ್ತುತವಾದ ಒಂದು ಅಂಶವೆಂದರೆ ಕಥನಕ್ಕೆ ಸೂಕ್ತವಾದ ನೇರ ನಿರೂಪಣೆ-ಒಟ್ಟಿನಲ್ಲಿ ಇದು ಆಖ್ಯಾಯಿಕೆಯ ಪ್ರಕಾರದಿಂದ ಬಿಡುಗಡೆಹೊಂದಿ ಇಂದಿನ ಕಾದಂಬರಿಯೆಂದು ಕರೆಯಿಸಿಕೊಳ್ಳುವ ಹವಣಿಕೆಯಲ್ಲಿದೆ.

ಇಂಗ್ಲಿಷ್ ಭಾಷೆಯ ಸಂಪರ್ಕದ ಗಂಧವೂ ಇಲ್ಲದಿದ್ದ ಕಾಲದಲ್ಲಿ ಸ್ವತಂತ್ರವಾಗಿ ರಚಿತವಾದ ಸತ್ವಪೂರ್ಣ ಕಥಾನಕಗಳಿವು. ಇವನ್ನು ಕಡೆಗಣಿಸಿದರೆ ಹೊಸಗನ್ನಡ ಸಾಹಿತ್ಯ ಚರಿತ್ರೆ ಅಪೂರ್ಣವಾಗುತ್ತದೆ. ಕಾದಂಬರೀಕ್ಷೇತ್ರದ ಈ ಪ್ರವರ್ತಕರಿಗೆ ಅಪಚಾರವೆಸಗಿದಂತಾಗುತ್ತದೆ.

ಕ್ರಿ.ಶ. ೧೮೩೦ನೆಯ ದಶಕದಿಂದ, ಇಂಗ್ಲಿಷ್ ಶಿಕ್ಷಣ ಕ್ರಮವು ನಾಡಿನಲ್ಲಿ ನೆಲೆಗೊಳ್ಳತೊಡಗಿತು. ಕ್ರಮೇಣ ಇಂಗ್ಲಿಷ್ ಕಾದಂಬರಿಗಳ, ನಾಟಕಾದಿಗಳ ಪ್ರಸಾರವಾಚನಗಳು ಹಬ್ಬಿದವು. ಪರಿಣಾಮವಾಗಿ ವಾಲ್ಟರ್ ಸ್ಕಾಟ್‌ನಂತಹ ಆಗಿನ ಹೆಸರಾಂತ ಕಾದಂಬರಿಕಾರರ ಕೃತಿಗಳು ಅನುವಾದಗೊಳ್ಳಬೇಕಿತ್ತು. ಶೇಕ್ಸ್‌ಪಿಯರನ ನಾಟಕಗಳಿಗೆ ಮಾತ್ರ ಆ ಸದವಕಾಶ ಒದಗಿತು; ಕಾದಂಬರಿಗಳಿಗಲ್ಲ. ಕ್ರಿ.ಶ. ೧೮೯೦ನೆಯ

ದಶಕದವರೆಗೆ ಮೇಲ್ಪಟ್ಟದ ಒಂದಾದರೂ ರಂಜನೀಯ ಕಾದಂಬರಿ ಇಂಗ್ಲಿಷ್‌ನಿಂದ ಕನ್ನಡಕ್ಕೆ ಬರಬಾರದೆಂದರೆ?

ಜಾನ್ ಬನ್ಯನ್ನನ ''ಯಾತ್ರಿಕನ ಸಂಚಾರ'' ೧೮೪೭ರಲ್ಲಿ ತಲೆದೋರಿತೇನೊ ನಿಜ. ಎಷ್ಟೆಂದರೂ ಅದು ಕ್ರೈಸ್ತ ಧಾರ್ಮಿಕ ಕೃತಿ. ಕಾದಂಬರಿ ಎಂಬ ಇಂದಿನ ಅರ್ಥ ಅದಕ್ಕೆ ಹೊಂದುವುದಿಲ್ಲ. ಅದೇ ಡ್ಯಾನಿಯಲ್ ಡೀಫೋನ 'ರಾಬಿನ್‌ಸನ್ ಕ್ರೂಸೊ' ಕಾದಂಬರಿ ಹೌದು. ಆದರೆ ಅದನ್ನು ಅನುವಾದಿಸಿದ ಎಸ್. ಬಿ. ಕೃಷ್ಣಸ್ವಾಮಿ ಅಯ್ಯಂಗಾರರಲ್ಲಿ (೧೮೫೪) ಕಾದಂಬರಿಯ ಮೂಲೋದ್ದೇಶವಾದ ಜನರಂಜನೆಯ ದೃಷ್ಟಿಯಿರದೆ, ಅದನ್ನು ವಿದ್ಯಾರ್ಥಿಗಳಿಗಾಗಿ ಅವರು ಅನುವಾದಿಸಿದ್ದರು. ಹಾಗಿದ್ದರೂ ಇದನ್ನೇ ಹೊಸಗನ್ನಡದ ಪ್ರಥಮ ಅನುವಾದಿತ ಕಾದಂಬರಿಯೆಂದು ತಿಳಿಯೋಣ.

ಇಂಗ್ಲಿಷ್ ಕೃತಿಗಳನ್ನು, ತಡವಾಗಿಯಾದರೂ ಕನ್ನಡದಲ್ಲಿ ಅನುವಾದಿಸಬೇಕೆಂಬ ಕಾರ್ಯದಲ್ಲಿ ಉದ್ಯುಕ್ತರಾದ ಜಿ. ಟಿ. ಎ. ಪ್ರೆಸ್ಸಿನವರ ಎತ್ತುಗಡೆಯನ್ನು ವಿಶೇಷವಾಗಿ ಹೆಸರಿಸಬೇಕು (೧೮೯೦ನೇ ದಶಕ). ಆದರೆ 'English Classics' ಎಂಬ ಹೆಸರಿನಲ್ಲಿ ಪ್ರಕಟವಾದ ಅವೆಲ್ಲವೂ ಮೇಲ್ಮಟ್ಟದವೇನಲ್ಲ. ಬಾಪು ಸುಬ್ಬರಾಯರ ''ನಿರ್ಭಾಗ್ಯ ಮುರಾದ'', ಶ್ರೀಕಂಠೇಶಗೌಡರ ''ಕನ್ಯಾವಿತಂತು''ವಿನ ಮೂಲರೂಪಗಳು ಇಂಗ್ಲಿಷ್ ಸಾಹಿತ್ಯದಲ್ಲಿಯ ಯಃಕಶ್ಚಿತವಾದ ಕೃತಿಗಳು. ಅದೇ, ಎಂ. ಎಸ್. ಪುಟ್ಟಣ್ಣನವರು ''ಸುಮತಿ-ಮದನಕುಮಾರರ ಚರಿತ್ರೆ''ಯನ್ನು ೧೮೯೭ರಲ್ಲಿ ಪ್ರಕಟಿಸುವಲ್ಲಿ (ಮೂಲ: ಥಾಮಸ್ ಡೇನ ಸ್ಯಾಂಡ್‌ಫರ್ಡ್ ಎಂಡ್ ಮಾರ್ಟನ್) ಹೆಚ್ಚಿನ ಸದಭಿರುಚಿಯನ್ನು ತೋರಿದ್ದಾರೆ.

ಇಂಗ್ಲಿಷ್ ಸಾಹಿತ್ಯಾಭ್ಯಾಸವು ಮರಾಠೀ, ಬಂಗಾಲಿ, ತೆಲುಗು ಭಾಷೆಗಳಲ್ಲಿ ಕಾದಂಬರೀ ನಿರ್ಮಾಣಕ್ಕೆ ನಿಮಿತ್ತವಾಗಿದ್ದಿತಷ್ಟೆ. ಈ ಭಾಷೆಗಳದ್ದೇ ಕಾದಂಬರಿಗಳು ಕನ್ನಡದಲ್ಲಿ ಮೈದಾಳಿದ ಬಗೆಯನ್ನು ತುಸು ನೋಡುವ. ಹಾಗೆ ಮೊದಲು ಬಂದ ಕೃತಿ, ಬಾಬಾಪದಮಂಜಿಯ ''ಯಮುನಾ ಪರ್ಯಟನ.'' ಈ ಮರಾಠೀ ಕೃತಿಯಲ್ಲಿ ವಿಧವೆಯರ ಗೋಳಿನ ವರ್ಣನೆಯಿದೆ. ಹಿಂದೂ ಧರ್ಮದ ಲೋಪದೋಷಗಳನ್ನು ತೋರಿಸುವ ಈ ಅತಿರೇಕದ ಚಿತ್ರಣದಲ್ಲಿ ಸಾಮಾಜಿಕ ಕಾದಂಬರಿಯೊಂದು ಕನ್ನಡದಲ್ಲಿ ಬಂದಿತಲ್ಲ ಎಂಬ ಹೆಗ್ಗಳಿಕೆಯನ್ನು ಹಿಡಿಯುವಂತಿಲ್ಲ. ಆದರೂ ಕನ್ನಡದ ಪ್ರಥಮ ಅನುವಾದಿತ ಸಾಮಾಜಿಕ ಕಾದಂಬರಿಯೆಂದು ಇದನ್ನು ಗಣಿಸತಕ್ಕುದು.

ಮೇಲೆ ಉಲ್ಲೇಖಿಸಿದ ಕೃತಿಗಳನ್ನು ಓದಿ ಕಾದಂಬರೀ ವಾಚನದ ಅಭಿರುಚಿಯನ್ನು ಬೆಳೆಸಿಕೊಳ್ಳುವಂತಿರಲಿಲ್ಲ. ಅಥವಾ ಅಂಥವನ್ನು ಬರೆಯಬೇಕೆಂಬ ಹಂಬಲವನ್ನು ಮೂಡಿಸಿಕೊಂಡ ಲೇಖಕರೂ ಬಹುಶಃ ಸಿಕ್ಕಲಾರರು. ಆದರೆ ಕಾದಂಬರಿಯ ವಾಚನ, ಲೇಖನ ಎರಡಕ್ಕೂ ಪ್ರೇರಣೆಯನ್ನು ಮೊದಲಿಗೆ ಒದಗಿಸಿದವರೆಂದರೆ ಗಂಗಾಧರ ಮಡಿವಾಳೇಶ್ವರ ತೂರಮರಿಯವರು. (ಚುರಮರಿ, ಅಲ್ಲ! ಅವರು ಬೇರೆ) ಮುಂಬಯಿಯ ಶಿಕ್ಷಣ ಖಾತೆಯಲ್ಲಿ ಕನ್ನಡ ವಿದ್ವಾಂಸರಾಗಿದ್ದ ತೂರಮರಿಯವರು ಬಾಣನ ಕಾದಂಬರಿಯನ್ನು ೧೮೭೫ರ ಸುಮಾರಿಗೆ ಅನುವಾದಿಸಿದರು.

ಈ ಕನ್ನಡ ಕೃತಿಯ ಹೆಚ್ಚುಗಾರಿಕೆ ಎರಡು ರೀತಿಯದು. ಬಾಣನ ಗದ್ಯವೆಂದರೆ

ಸಾಮಾನ್ಯರಿಗೆ ಉಕ್ಕಿನ ಕಡಲೆ! ಆದರೆ ಕ್ಲಿಷ್ಟತೆಯು ಒಂದಿನಿತೂ ತೋರಿಬರದಂತೆ ತಿಳಿಯಾದ ಗದ್ಯದಲ್ಲಿ ಪ್ರಸಾದಿಕ ಶೈಲಿಯಲ್ಲಿ ಬರೆದುದು, ವರ್ಣನೆಗಳನ್ನು ಮಿತಗೊಳಿಸಿ ಕಥಾನಕದತ್ತ ನೇರವಾದ ದೃಷ್ಟಿಯನ್ನು ಇರಿಸಿಕೊಂಡುದು, ಮತ್ತು ಬಿಚ್ಚು ಮಾತಿನ ಅಚ್ಚಗನ್ನಡದ ಬಳಕೆಯ ಶಬ್ದಗಳುಳ್ಳ, ಈ ಶೈಲಿಯು ಉತ್ತರ ಕರ್ನಾಟಕದಲ್ಲಿ ಮುಂದೆ ಅರ್ಧ ಶತಮಾನದವರೆಗೂ ಉಳಿದುಕೊಂಡು ಬಂದುದು ಅಲ್ಪ ಸಾಧನೆಯೆನ್ನಬಹುದೆ? ಅಖಿಲ ಕರ್ನಾಟಕದ ಮೆಚ್ಚುಗೆಯನ್ನು ಪಡೆದಿದ್ದ ಗಳಗನಾಥರ ಶೈಲಿಯ ಮೂಲ ಬೇರು ತೂರಮರಿಯವರ ಕಾದಂಬರಿಯಲ್ಲಿದೆ. ಹೊಸಗನ್ನಡ ಗದ್ಯಶಿಲ್ಪಿ ಎಂಬ ಮಾತನ್ನೂ ಅನೇಕರಿಗೆ ಅನ್ವಯಿಸಿ ಇಂದು ಧಾರಾಳವಾಗಿ ಉಪಯೋಗಿಸುತ್ತಿದ್ದೇವೆ. ಅಷ್ಟಷ್ಟರ ಮಟ್ಟಿಗೆ ಅವರೆಲ್ಲರಿಗೆ ಅನ್ವಯಿಸುವಂತಹದೇ. ಆದರೆ ಕಾಲಾನುಕ್ರಮದಲ್ಲಿ ಇಂದಿನ ಗದ್ಯದ ಪ್ರಥಮ ರೂವಾರಿಯೆಂದು ಗಂಗಾಧರ ಮಡಿವಾಳೇಶ್ವರ ತೂರಮರಿಯವರನ್ನೇ ಎಣಿಸತಕ್ಕುದು.

ಈ ಕೃತಿಯು ರಚಿತವಾದ ೨೫ ವರ್ಷಗಳ ಅನಂತರ ಧಾರವಾಡದಲ್ಲಿ ಕರ್ನಾಟಕ ವಿದ್ಯಾವರ್ಧಕ ಸಂಘದ ಸ್ಥಾಪನೆಯಾಯಿತು (೧೮೯೦). ಕನ್ನಡ ಗ್ರಂಥಕರ್ತರಿಗೆ ಪ್ರೋತ್ಸಾಹವೀಯಬೇಕೆನ್ನುವುದು ಅದರ ನಿರ್ದಿಷ್ಟ ಧ್ಯೇಯವಾಗಿದ್ದಿತು. ಸಂಘದ ಸದಸ್ಯರು ಅದಕ್ಕಾಗಿ ಪ್ರತ್ಯೇಕವಾಗಿ ದೇಣಿಗೆಯನ್ನು ಕೊಡುತ್ತಿದ್ದರು. ಸಂಘದ ಪ್ರಥಮ ವಾರ್ಷಿಕ ಸಭೆಯಲ್ಲಿ (೨೭-೯-೧೮೯೧) ಮೂವರು ಸದ್ಗೃಹಸ್ಥರು ''ಕನ್ನಡದಲ್ಲಿ ಹೊಸ ಕಾದಂಬರಿಯನ್ನು ಗಂಗಾಧರಯ್ಯನವರ ಕಾದಂಬರಿಯಷ್ಟಾಗಲಿ, ಹೆಚ್ಚಾಗಲಿ-ಯೆಲ್ಲಕ್ಕೂ ಉತ್ತಮವಾಗಿ ಬರೆದವನಿಗೆ'' ಮೂವತ್ತು ರೂಪಾಯಿ ಇನಾಮನ್ನು ಜಾಹೀರು ಮಾಡಿದರು! ಅಷ್ಟರಮಟ್ಟಿಗೆ ತೂರಮರಿಯವರ ಕಾದಂಬರಿಯು ಮಾದರಿಯಾಗಿಬಿಟ್ಟಿತು.

ತೂರಮರಿಯವರು ಯಾವುದೊಂದು ಸನ್ನಿವೇಶವನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಬಲ್ಲವರಾಗಿದ್ದರು. ಮಹಾಶ್ವೇತೆಯ ದಾಸಿಯಾದ ತರಲಿಕೆಯು, ಪುಂಡರೀಕನಿಂದ ಪ್ರೇಮಪತ್ರವನ್ನು ತಂದಾಗಿನ ಈ ಸಂದರ್ಭವನ್ನು ಮಾದರಿಯಾಗಿ ಇಲ್ಲಿ ಗಮನಿಸೋಣ, ಮಹಾಶ್ವೇತೆಯೇ ಅದನ್ನು ಹೇಳುತ್ತಿದ್ದಾಳೆ:

''ನನ್ನ ದಾಸಿಯು ಎರಡನೇ ಸಾರಿ ಆ ಋಷಿಕುಮಾರನ ದರ್ಶನ ತಕ್ಕೊಂಡು ಆತನ ಕೂಡ ಮಾತಾಡಿ ಬಂದದರಿಂದ ಅವಳು ಅತಿ ಭಾಗ್ಯವಂತಳೆಂದು ಎಣಿಸಿದೆನು. ದಾಸಿಯಾದರೂ ಆಕೆಯ ಕೂಡ ಆದರದಿಂದಲೂ ಪ್ರೀತಿಯಿಂದಲೂ ಮಾತನಾಡಿದೆನು. ಆಕೆಯನ್ನು ಜೀವದ ಗೆಳತಿಯ ಮಾಡಿಕೊಂಡು, ಗಲ್ಲವ ಹಿಡಿದು ಮುಂಗುರುಳು ತೀಡಿ, ''ತರಲಿಕೇ, ಆ ಋಷಿಕುಮಾರನು ಏನೇನು ಅಂದನು? ನೀನು ಎಷ್ಟು ಹೊತ್ತು ಅವನ ಬಳಿಯಲ್ಲಿದ್ದಿ?'' ಎಂದು ಮತ್ತೆ ಮತ್ತೆ ಆ ಋಷಿಕುಮಾರನ ಮಾತನ್ನೇ ಆಕೆಯ ಕೂಡ ಮಾತನಾಡುತ್ತ ಸಂಜೆಯ ತನಕ ಹೊತ್ತುಗಳೆದೆನು.''

ಬಾಣನ ಗದ್ಯವನ್ನು ಓದಿದವರಿಗೆ ಅದಕ್ಕೂ ಈ ಕನ್ನಡ ರೂಪಕ್ಕೂ ಎಷ್ಟೊಂದು ಅಂತರವಿದೆಯೆಂಬುದು ತಟ್ಟನೆ ಗೊತ್ತಾದೀತು. ಕ್ರಿ.ಶ. ೧೮೭೫ಕ್ಕೆ ಮುಂಚೆ ಯಾರೂ ಇಂಥ ಲಲಿತ ಕನ್ನಡದಲ್ಲಿ ಬರೆದಿರಲಿಲ್ಲ.

ಹತ್ತು ವರ್ಷಗಳ ಅನಂತರ ಪ್ರಕಟವಾದ ''ದುರ್ಗೇಶ ನಂದಿನಿ''ಯು ೧೮೮೫ ದಿಟ್ಟವಾದ ಹೊಸ ಹೆಜ್ಜೆಯನ್ನಿಟ್ಟ ಕೃತಿ. ಬಿ. ವೆಂಕಟಾಚಾರ್ಯರು ಬಂಗಾಲೀ ''ನಾವೆಲು'' ಗಳನ್ನು ಅನುವಾದಿಸಲು ಎತ್ತಿಕೊಂಡ ಕೃತಿಗಳಲ್ಲಿ ಇದುವೆ ಮೊದಲಿನದು. ತಮ್ಮ ಇಂಗ್ಲಿಷ್

ಪೀಠಿಕೆಯಲ್ಲಿ ಅವರು A novel in the sense it is understood in English is not familiar to the Kanarese speaking Public ಎಂದಿದ್ದಾರೆ. ಕಾದಂಬರಿಯ ಇತಿಹಾಸ ದೃಷ್ಟಿಯಿಂದ ಇದು ಮಹತ್ವದ ಹೇಳಿಕೆಯಾಗಿದೆ. ಈಗಾಗಲೇ ಮೇಲೆ ವಿವೇಚಿಸಿದಂತೆ ಇಂಗ್ಲಿಷ್ ಸಾಹಿತ್ಯದಲ್ಲಿ ನೆಲೆಗೊಂಡಿದ್ದ ಸಾಮಾಜಿಕ, ಐತಿಹಾಸಿಕ ಕಾದಂಬರಿಗಳು ಕನ್ನಡದಲ್ಲಿ ಅದುವರೆಗೆ ಬಂದಿರಲಿಲ್ಲ. ಬಾಬಾ ಪದಮುಂಜಿ, ತೂರಮರಿಯವರು ಮೇಲಿನ ದೃಷ್ಟಿಯನ್ನಿಟ್ಟುಕೊಂಡು ಕಾದಂಬರಿಗೆ ಕೈಹಾಕಿದವರಲ್ಲ. ಇತ್ತ ''ರಾಬಿನ್‌ಸನ್ ಕ್ರೂಸೊ'' ಅನುವಾದವು ವಿದ್ಯಾರ್ಥಿಗಳಿಗಾಗಿ ಇದ್ದಿತೆಂಬುದನ್ನು ನೋಡಿದ್ದೇವೆ.

ಮುಂದುವರಿದು ಬಿ. ವೆಂ. ಈ ನಾವೆಲುಗಳ ಉದ್ದೇಶವೇನೆಂಬುದನ್ನು ಹೀಗೆ ಹೇಳಿದ್ದಾರೆ:

''ಸಮಾಜದ ಹಾಗೂ ಸಮಾಜದ ಅಂಗಭೂತನಾದ ಮನುಷ್ಯನ, ಚರಿತ್ರೆಯ ಪ್ರತಿ ಚಿತ್ರವಾಗಿ ಪ್ರತಿ ಒಬ್ಬ ಪಾಠಕರ ಮನಸ್ಸಿಗೂ ಮುಕುರಸ್ವರೂಪವಾಗಿರಬೇಕು. ನಾವೆಲುಗಳು ಶುದ್ಧವಾದ ಉದ್ದೇಶವುಳ್ಳವುಗಳಾಗಿದ್ದರೆ ಅವು ಸಮಾಜತತ್ವ ಅಥವಾ ಸಮಾಜವಿಜ್ಞಾನವಾಗಿ (Socialogy) ಪರಿಣಮಿಸುವುವು.''

ಪ್ರಾಂತಭೇದದಿಂದಾಗಿ ಬಿ. ವೆಂಕಟಾಚಾರ್ಯರ ನಾವೆಲುಗಳು ಉತ್ತರ ಕರ್ನಾಟಕದಲ್ಲಿ ಸುರುವಿಗೆ ಪ್ರಚುರವಾಗಲಿಲ್ಲವೆಂದೇ ಹೇಳಬೇಕು. ಹೀಗಾಗಿ ಕಾದಂಬರೀ ಲೇಖನ ವಿಚಾರದಲ್ಲಿ ಪ್ರತ್ಯೇಕವಾದ ಪ್ರಯತ್ನಗಳೇ ನಡೆದುವು. ಕ್ರಿ.ಶ. ೧೮೯೦ರಲ್ಲಿ ಸ್ಥಾಪಿತವಾದ ಕರ್ನಾಟಕ ವಿದ್ಯಾವರ್ಧಕ ಸಂಘವು ಪಾರಿತೋಷಕಗಳನ್ನಿರಿಸಿ ಲೇಖಕರಿಗೆ ಪ್ರೋತ್ಸಾಹವೀಯುತ್ತಿದ್ದುದನ್ನು ನೋಡಿದ್ದೇವೆ. ಕಾದಂಬರೀ ಕ್ಷೇತ್ರದಲ್ಲಿ ಅದರ ಪ್ರಯೋಜನ ಪಡೆದವರೊಳಗೆ ಮೊದಲಿಗರೆಂದರೆ ಲಕ್ಷ್ಮಣ ಭೀಮರಾವ ಗದಗಕರರು. ಜೂನ್ ೧೮೯೨ರಲ್ಲಿ ಪ್ರಕಟವಾದ ಅವರ ಕೃತಿಯ ಹೆಸರು 'ಸೂರ್ಯಕಾಂತ'. ಬಿ. ವೆಂ. ಅವರಂತೆ, ಈ ನೂತನ ಸಾಹಿತ್ಯ ರೂಪವನ್ನು ಗಮನದಲ್ಲಿರಿಸಿಕೊಂಡೇ ಗದಗಕರರು ಇದನ್ನು ಸ್ವತಂತ್ರವಾಗಿ ರಚಿಸಿದ್ದಾರೆ. ಇದರ ಕಥಾವಸ್ತು ಪೇಶ್ವೆಯರ ಕಾಲದ ಅಥವಾ ೧೮ನೇ ಶತಮಾನದ ಅವಧಿಗೆ ಸಂಬಂಧಿಸಿದುದು. ಸೂರ್ಯಕಾಂತನು ಹಳ್ಳಿಯೊಂದರ ಬಡಕುಟುಂಬದಲ್ಲಿ ಜನಿಸಿದವನು. ಹೆಚ್ಚಿನ ವಿದ್ಯಾಭ್ಯಾಸಕ್ಕೆಂದು ಮನೆಬಿಟ್ಟು ಹೋಗುವನು. ರಾಜನೊಬ್ಬನ ಆಸ್ಥಾನದಲ್ಲಿ ನೆಲೆನಿಂತು ತನ್ನ ಶೌರ್ಯ ಹಾಗೂ ಬುದ್ಧಿಮತ್ತೆಯಿಂದ ಪ್ರಗತಿ ಹೊಂದಿ ಸರದಾರನಾಗುವನು. ಇತ್ತ ಅವನ ತಂದೆತಾಯಿಗಳಿಗೆ ಇದಾವುದರ ಕಲ್ಪನೆಯೇ ಇಲ್ಲ. ವೈಭವದ ಪರಿವಾರದೊಡಗೂಡಿ ಮಗನು ತಮ್ಮನ್ನು ಕರೆದೊಯ್ಯಬಂದಾಗ ಅವರಿಗಾದ ಹಿಗ್ಗು ಅಷ್ಟಿಷ್ಟಲ್ಲ. ಸದಾಚಾರ ಬೋಧನೆಯೇ ಈ ಕಾದಂಬರಿಯ ಉದ್ದೇಶ. ಕಾದಂಬರಿಯಲ್ಲಿ ಇತಿಹಾಸದ ಆವರಣ ಮಾತ್ರ ಇದೆ. ಒಳಗಿನ ಹೂರಣವೆಲ್ಲ ಸಾಮಾಜಿಕವಾದುದು. ಕಥೆಯಲ್ಲಿ ಆಗಲೀ, ನಿರೂಪಣೆಯಲ್ಲಾಗಲೀ ಹೇಳಿಕೊಳ್ಳುವಂತಹದೇನೂ ಇಲ್ಲ.

ಗದಗಕರ ವಿರಚಿತವಾದ ಈ ಕೃತಿಯ ಇನ್ನೊಂದು ವೈಶಿಷ್ಟ್ಯವೆಂದರೆ ''ಕಾದಂಬರಿ'' ಎಂಬ ಅಭಿಧಾನವನ್ನು ಅದು ಮೊದಲ ಬಾರಿ ಹೊಂದಿದ್ದುದು. ಅವರಿಗೆ ಈ ಹೊಸ ಸಾಹಿತ್ಯರೂಪದ ಸ್ಪಷ್ಟ ಕಲ್ಪನೆ ಇದ್ದಿತು.

''ಜನರಲ್ಲಿ ಓದುವ ಅಭಿರುಚಿ ಹುಟ್ಟದ ಹೊರ್ತು ಯಾವ ಭಾಷೆಯೂ ಉತ್ತಮ ಸ್ಥಿತಿಯಲ್ಲಿ ಬರಲಾರದು. ಇಂಥ ಅಭಿರುಚಿಯನ್ನು ಹುಟ್ಟಿಸಬೇಕಾದರೆ ಕಾದಂಬರಿ, ಇತಿಹಾಸ, ನಾಟಕ ಮುಂತಾದ ಪುಸ್ತಕ ಸಾಮಗ್ರಿಯು, ಅವಶ್ಯವಾಗಿ ಬೇಕಾಗುತ್ತದೆ...ಈ ಕೊರತೆಯನ್ನು ನನ್ನ ಕೈಲಾದ ಮಟ್ಟಿಗೆ ನಿವಾರಿಸಬೇಕೆಂದು ಆಶೆಯುಳ್ಳವನಾಗಿ ಈ ಚಿಕ್ಕ ಕಾದಂಬರಿಯನ್ನು ಬರೆದಿದ್ದೇನೆ''.

''ಪ್ರಜಾವಾಣಿಯ'ಯ ಸಾಪ್ತಾಹಿಕದಲ್ಲಿ ಬಂದ (೨೪-೬-೧೯೭೩), ಕ. ವೆಂ ರಾಜಗೋಪಾಲರ ಲೇಖನದಲ್ಲಿ ''ಕಾದಂಬರಿ'' ಎಂಬ ಹೆಸರು ಹೇಗೆ ಬಂದಿತು ಎಂಬುದರ ಪ್ರಸ್ತಾಪವಿದೆ. ಅದು ಮರಾಠಿಯಿಂದ ಬಂದಿರಲಾರದು ಎಂಬ ಸಂಶಯವನ್ನು ಅವರು ವ್ಯಕ್ತ ಮಾಡಿದ್ದಾರೆ. ರಾಜಗೋಪಾಲರು ಮುಂದುವರಿದು, ೧೮೯೨ರಲ್ಲಿ ಪ್ರಕಟವಾದ, ನಾಗವರ್ಮನ ಹಳಗನ್ನಡ ಕಾವ್ಯವಾದ ''ಕರ್ನಾಟಕ ಕಾದಂಬರಿ''ಯ ಪ್ರಭಾವವು ಅತಿಶಯವಾಗಿದ್ದು, ಕನ್ನಡ ಕಾದಂಬರೀ ಲೇಖನದ ಪರಂಪರೆಗೆ ತಾಯಿಯಾಗಿರಬೇಕು ಎಂದು ಊಹಿಸಿದ್ದಾರೆ.

ಇದು ಸತ್ಯವಿದೂರವಾದುದೆಂಬುದು ಸ್ಪಷ್ಟವಾಗಿದೆ. ಏಕೆಂದರೆ ೧೮೯೨ರಷ್ಟು ತಡವಾಗಿ ಪ್ರಕಟವಾದ ಈ ಹಳಗನ್ನಡ ಕಾವ್ಯವನ್ನು ಓದಿ ಕಾದಂಬರಿಯನ್ನು ಬರೆಯಲು ಯಾರಾದರೂ ಉದ್ಯುಕ್ತರಾಗಬಹುದೆ? ಇದಕ್ಕಿಂತ ಮುಂಚೆಯೇ ಬಿ. ವೆಂಕಟಾಚಾರ್ಯರು, ಇತರ ಕೆಲವರು ಬರೆಯತೊಡಗಿದ್ದರಲ್ಲ? ಅಲ್ಲದೆ, ಈ ಹೊಸ ಸಾಹಿತ್ಯಪ್ರಕಾರಕ್ಕೆ ಬಂಗಾಲೀ, ಮರಾಠೀ ಕೃತಿಗಳ ಮೂಲಕವಾದ ಇಂಗ್ಲಿಷ್ ಕಾದಂಬರಿಗಳ ಪ್ರಭಾವವೇ ಕಾರಣವೆನ್ನುವುದು ನಿಚ್ಚಳವಿದೆ. ಹಾಗೇ ದೇಶೀಯ ಪ್ರಭಾವದ ಮಾತನ್ನು ಗಮನಿಸುವುದೇ ಆದರೆ, ೧೮೭೫ರಷ್ಟು ಹಿಂದೆ ಪ್ರಕಟವಾಗಿ ೧೮೯೨ರೊಳಗಾಗಿ ಎರಡು ಆವೃತ್ತಿಗಳನ್ನು ಕಾಣುವಷ್ಟು ಜನಪ್ರಿಯವಾಗಿದ್ದ ತೂರಮರಿಯವರ ಬಾಣ ಕಾದಂಬರಿಯು ಅಂಥ ಪ್ರಭಾವವನ್ನು ಬೀರಿತು; ಅರ್ಥಾತ್ ಉತ್ತರ ಕರ್ನಾಟಕದ ಮಟ್ಟಿಗೆ!

''ನಾಗವರ್ಮ ಕೃತ ಕರ್ಣಾಟಕ ಕಾದಂಬರಿಯ ಪ್ರಸಿದ್ಧಿ ಕನ್ನಡದಲ್ಲಿಲ್ಲದೆ ಹೋಗಿದ್ದರೆ, ಕೆಲವು ಪಂಡಿತರು ಊಹಿಸುವಂತೆ ಮರಾಠೆಯವರ ನಾವೆಲ್=ಪ್ರಬಂಧ=ಕಾದಂಬರಿ ಎಂಬ ಸೂತ್ರಕ್ಕೆ ಅಧಿಕಾರಿಗಳಾಗುತ್ತಿದ್ದರೆಂದು ಕಾಣುತ್ತದೆ. ಒಟ್ಟಿನಲ್ಲಿ ಕರ್ಣಾಟಕ ಕಾದಂಬರಿಯು ತನ್ನ ಹೆಸರನ್ನು ಕನ್ನಡಕ್ಕೆ ದಾನಮಾಡಲು ಕೆಲವು ಕೃತಿಗಳೂ ಅಲ್ಲದೆ ಆರೆಂಟು ವರ್ಷಗಳೂ ಬೇಕಾದುವೆಂದು ಹೇಳಬಹುದು.''

ಇದು ಕ. ವೆಂ. ರಾಜಗೋಪಾಲರ ನಿಲುಮೆ, ಕಾದಂಬರಿ=ಕಲ್ಪಿತ ಕಥಾ ಎಂಬ ಅರ್ಥವನ್ನು ೧೮೨೭ರಷ್ಟು ಹಿಂದೆಯೇ ಹೊರಬಂದ ''ಮರಾಠೀ ಭಾಷೇಚಾ ಕೋಶ''ದಲ್ಲಿ ಕೊಡಲಾಗಿದೆ. ಮುಂದೆ ೧೮೬೯ರಲ್ಲಿ ಪ್ರಕಟವಾದ ''ವಿಚಿತ್ರಪುರೀ'' ಎಂಬ ಮರಾಠೀ ಕಥಾನಕಕ್ಕೆ ಕಾದಂಬರಿ ಎಂದು ನಾಮಕರಣವಿದೆ. ಆಮೇಲಿನ ಎರಡು ದಶಕಗಳಲ್ಲಿ ಪ್ರಕಟವಾದ ದೀರ್ಘ ಕಥಾನಕಗಳಿಗೆ ''ಕಾದಂಬರಿ'' ಎಂದೇ ಹೆಸರಿಸಲಾಗಿದೆ. ಇದರಿಂದಾಗಿ ಮರಾಠಿಯೊಡನೆ ವಿಶೇಷ ಹೊಕ್ಕು ಬಳಕೆಯಲ್ಲಿದ್ದ ಉತ್ತರ ಕರ್ನಾಟಕಸ್ಥರಿಗೆ ಕಾದಂಬರಿ-ಎಂದರೆ ಇಂದು ನಾವು ತಿಳಿದಿರುವ ಅರ್ಥವೇ ಪರಿಚಿತವಾಗಿದ್ದಿತು. ಮೇಲೆ ಉದ್ಧರಿಸಲಾದ ವಿದ್ಯಾವರ್ಧಕ ಸಂಘದವರ ನಿರ್ಣಯದಲ್ಲಿ ಆ ಅರ್ಥ ಅಡಗಿದೆ.

ಗಳಗನಾಥರ "ಪದ್ಮನಯನಾ" (೧೮೯೮), ಅರಳಿ ಎಂಬುವರ "ಕನ್ನಡ ಶೌರ್ಯಸಾಗರ" (೧೮೯೯), ಇವುಗಳಿಗೆ "ಕಾದಂಬರಿ" ಎಂಬ ನಾಮಧೇಯವೇ ಇದೆ.

ಮೋಜೆಂದರೆ ಮೈಸೂರು ಸಂಸ್ಥಾನದಲ್ಲಿ ಪ್ರಕಟವಾದ ಯಾವ ಕಾದಂಬರಿಗಳಿಗೂ ೧೯೨೦ನೆಯ ದಶಕದ ವರೆಗೆ "ಕಾದಂಬರಿ" ಎಂಬ ನಾಮಕರಣವಿರಲಿಲ್ಲ. ಗಳಗನಾಥರ ಐತಿಹಾಸಿಕ ಕೃತಿಗಳ ಮೂಲಕ ಅದರ ಪರಿಚಯವಾಗಿದ್ದರೂ, ಅದು ಮೈಸೂರಸ್ಥರಿಗೆ ಸ್ವೀಕೃತವಾಗಿರಲಿಲ್ಲ. ಬಿ. ವೆಂಕಟಾಚಾರ್ಯರೂ "ನಾವೆಲು" ಎಂದು ಕೊನೆವರೆಗೆ ಹೇಳುತ್ತ ಹೋದರು. "ಶೃಂಗಾರ ಚಾತುರ್ಯೋಲ್ಲಾಸಿನೀ"ಯ (೧೮೯೬) ಲೇಖಕರೂ ನಾವೆಲು ಎಂದೇ ಕರೆದರು. "ಮಾಡಿದ್ದುಣ್ಣೋ ಮಹಾರಾಯಾ" (೧೯೧೫) ಎಂಬ ಉತ್ತಮ ಸಾಮಾಜಿಕ ಕಾದಂಬರಿಯನ್ನು ಬರೆದ ಎಂ. ಎಸ್. ಪುಟ್ಟಣ್ಣನವರಾದರೂ "ಕಾದಂಬರಿ" ಯೆಂಬ ಹೆಸರಿನ ಗೊಡವೆಗೆ ಹೋಗಲಿಲ್ಲ.

ಕ್ರಿ.ಶ. ೧೯೧೦ ಮತ್ತು ೧೯೨೦ರ ದಶಕಗಳಲ್ಲಿ ಹೆಚ್ಚು ಕಾದಂಬರಿಗಳನ್ನು ಬರೆದ ಮೈಸೂರಸ್ಥರೆಂದರೆ, ಶ್ರೀಮತಿ ತಿರುಮಲಾಂಬಾ ಅವರು. ಸತಿಹಿತೈಷಿಣೀ ಗ್ರಂಥಮಾಲೆಯ ಮೂಲಕ ನಭಾ ಮುಂತಾದ ಸಾಮಾಜಿಕ ಕಾದಂಬರಿಗಳನ್ನು ಬೆಳಕಿಗೆ ತಂದರು. ಆದರೆ ತಮ್ಮ ಪೂರ್ವಾರ್ಧದ ಕೃತಿಗಳಿಗೆ "ಕಾದಂಬರಿ" ಎಂದೆನ್ನಲಿಲ್ಲ. ಅವರ ಕೃತಿಗಳನ್ನು ೧೯೧೮ರ ಸುಮಾರಿಗೆ (ಪ್ರಕಟಣೆ: ೧೯೨೫) ವಿಮರ್ಶೆ ಮಾಡಿದ ಮಾಸ್ತಿಯವರು ತಮ್ಮ ಲೇಖನದಲ್ಲಿ ಒಮ್ಮೆಯೂ "ಕಾದಂಬರಿ" ಶಬ್ದವನ್ನೇ ಬಳಸಿಲ್ಲ!

ಸಾರಾಂಶ, ಈ ನೂತನ ಸಾಹಿತ್ಯಕ್ಕೆ ಕಾದಂಬರಿ ಎಂದು ಮೊದಲಿಗೆ ಕರೆದವರು ಮರಾಠಿಗರು. ಅದನ್ನು ಉತ್ತರ ಕರ್ನಾಟಕದವರು, (ಅದರಂತೆ ಗುಜರಾತಿಗಳು) ಸ್ವೀಕರಿಸಿದರು. ಮೈಸೂರು ವಿಭಾಗದಲ್ಲಿ "ನಾವೆಲು" ಎಂದಿದ್ದಿತು. ಆ ಪ್ರದೇಶದಲ್ಲಿ ಗಳಗನಾಥರ ಕಾದಂಬರಿಗಳ ಪ್ರಸಾರವು ಹೆಚ್ಚಿದಂತೆಲ್ಲ (೧೯೦೮-೧೯೨೮) ಕಾದಂಬರಿ ಎಂಬ ಹೆಸರನ್ನು ಸ್ವೀಕರಿಸಬೇಕಾಗಿ ಬಂದಿತು. ಅ.ನ.ಕೃ., ಮತ್ತು ಕಾರಂತರು ಈ ಸಾಹಿತ್ಯ ರೂಪದಲ್ಲಿ ಪ್ರವೇಶಿಸುವಲ್ಲಿಗೆ (೧೯೩೦ನೆಯ ದಶಕ) ಅದು ಕರ್ನಾಟಕದಲ್ಲಿ ಸಾರ್ವತ್ರಿಕವಾಯಿತು.

"ಶೃಂಗಾರ ಚಾತುರ್ಯೋಲ್ಲಾಸಿನೀ"ಗಿಂತ ಮುಂಚೆ ಪ್ರಕಟವಾದ ಹಾಗೂ ಸ್ವತಂತ್ರವೆನ್ನಬಹುದಾದ ಇನ್ನೂ ಒಂದು ಕೃತಿಯಿದೆ. ಅದುವೆ ರಂಟಾಳ ವೆಂಕಟ ಸುಬ್ಬಾರಾವು ಪಂತರ "ಕೇಸರೀ ವಿಲಾಸ" ಪ್ರಕಟನ ವರ್ಷ ೧೮೯೫.

"ಲೇಖಕ" ಪತ್ರಿಕೆಯ ಫೆಬ್ರುವರಿ ೧೯೫೪ರ ಸಂಚಿಕೆಯಲ್ಲಿ ಅದನ್ನು ಪ್ರಥಮ ಸ್ವತಂತ್ರ ಕಾದಂಬರಿ ಎಂದು ಹೇಳಿದ್ದಿದೆ. ವೆಂಕಟಸುಬ್ಬಾರಾವು ಅವರ ಮಾತೃಭಾಷೆ ತೆಲುಗು. ಮದ್ರಾಸದಲ್ಲಿ ವಕೀಲರಾಗಿದ್ದ ಅವರು ತೆಲುಗು ಭಾಷೆಯಲ್ಲಿ ಇನ್ನೂ ೨-೩ ಕೃತಿಗಳನ್ನು ರಚಿಸಿದ್ದಾರೆ. ಅವರಿಗೆ ಪರಿಜ್ಞಾನವಿದ್ದಿತು. ಆದ್ದರಿಂದ ಅವರೇ ಅದನ್ನು ಕನ್ನಡದಲ್ಲಿಯೂ ರಚಿಸಿ (ಅನುವಾದಿಸಿ?) ಏಕಕಾಲಕ್ಕೆ ಎರಡೂ ಭಾಷೆಗಳಲ್ಲಿ ಪ್ರಕಟಿಸಿದರು! (ಆಧಾರ: ಭಾರತ ಸರಕಾರದ Report on Publications issued & registered-ಇದರ ೧೮೯೫ರ ವರದಿ) "ಒಂದು ವಿಚಿತ್ರ ನೂತನ ಪ್ರಬಂಧ"ವೆಂದು ಹೆಸರಿಸಲಾದ ಈ ಕೃತಿಯಲ್ಲಿ ಧನಕೋಟಿ ಎಂಬ ರಾಜನಿದ್ದಾನೆ. ಜೊತೆಗೆ ಕೇಸರಿ ಎಂಬ ಸ್ತ್ರೀ ಸ್ವಾತಂತ್ರ್ಯವನ್ನು ಬಯಸುವ

ತರುಣಿ ಇದ್ದಾಳೆ. ಆದ್ದರಿಂದ 'ಸೂರ್ಯಕಾಂತ'ದಂತೆ ಇದಾದರೂ ಅರ್ಧ ಐತಿಹಾಸಿಕ, ಅರ್ಧ ಸಾಮಾಜಿಕ ಕೃತಿ ಎನ್ನಬಹುದು. ಒಟ್ಟಿನಲ್ಲಿ ''ಕೇಸರೀವಿಲಾಸ''ವನ್ನು ಕನ್ನಡದ ಪ್ರಥಮ ಸ್ವತಂತ್ರ ಸಾಮಾಜಿಕ ''ಕಾದಂಬರಿ''ಯೆಂದು ಹೇಳಲುಬಾರದು.

ಇನ್ನೀಗ ''ಶೃಂಗಾರ ಚಾತರ್ಯೋಲ್ಲಾಸಿನೀ''. ಅದರ ವಿವರ ಪರಿಚಯವನ್ನು ರಾಜಗೋಪಾಲರು ತಮ್ಮ ಲೇಖದಲ್ಲಿ ಮಾಡಿಕೊಟ್ಟಿದ್ದಾರೆ. 'ಪ್ರಪ್ರಥಮ ಸ್ವತಂತ್ರ' ಕಾದಂಬರಿಯೆಂದು ಹೊಗಳಿದ್ದಾರೆ. ''ಸೂರ್ಯಕಾಂತ''ವು ಹುರುಳಿಲ್ಲದ ಕೃತಿಯಾಗಿದ್ದರೆ, ಇದು ಒಂದು ಅಸಂಬದ್ಧ ಪ್ರಲಾಪ! ಆದರೂ ಕನ್ನಡ ಕಾದಂಬರಿಯ ಇತಿಹಾಸದಲ್ಲಿ ಅದಕ್ಕೆ ಬೇರೊಂದು ರೀತಿಯಲ್ಲಿ ಸ್ಥಾನವಿದೆ. ಲೇಖಕರಾದ ಬಿ. ಮುರಿಗೆಪ್ಪ ಸೋಮಾರಾಧ್ಯನು ಕಾಲೇಜ ವಿದ್ಯಾರ್ಥಿ. ಕೃತಿಯ ಆರಂಭದಲ್ಲಿ ಸರಸ್ವತಿಯ ಸ್ತುತಿ ಮಾಡುತ್ತ ''ಆ ದೇವಿಯೆ ಸುಪ್ರೀತಮಕ್ಕೆ ವಿದ್ಯಾರ್ಥಿಗಳೋಳ್'' ಎಂದು ಶುಭವನ್ನು ಕೋರಿದ್ದಾನೆ. ''ಪ್ರಪ್ರಥಮ ಸ್ವತಂತ್ರ'' ಎಂಬ ಪ್ರಾಶಸ್ತ್ಯ ಇದಕ್ಕೆ ದಕ್ಕದೇ ಹೋದರೂ ವಿದ್ಯಾರ್ಥಿಯೊಬ್ಬನಿಗೆ ಅನ್ವಯಿಸಿ ಹಾಗೆಂದು ವಿಶೇಷಿಸಬಹುದು.

ಮರುವರ್ಷ ಎಂದರೆ ೧೮೯೭ರಲ್ಲಿ ಇನ್ನೊಂದು ವಿಶಿಷ್ಟ ಕೃತಿ ಹೊರಬಂದಿತು. ಅದುವೆ ''ಚೋರಗ್ರಹಣತಂತ್ರ.'' ಪತ್ತೇದಾರಿ ಕಾದಂಬರಿ ಕನ್ನಡದಲ್ಲಿ ಪ್ರಪ್ರಥಮ ಅಲ್ಲದೆ ಸ್ವತಂತ್ರವಾದುದು, ಕಥೆ ಹೀಗಿದೆ:

ಓರ್ವ ಗಣ್ಯ ವ್ಯಕ್ತಿಯ (ದ್ವಿತೀಯ) ಪತ್ನಿಯನ್ನು ಯಾರೊ ಕಳ್ಳರು ಅಪಹರಿಸುತ್ತಾರೆ. ಅವಳ ಪತ್ತೆ ಮಾಡಲು, ಪತ್ತೇದಾರ ಭೀಮ ಮತ್ತು ಅವನ ಹಸ್ತಕಳಾದ ಸುಶೀಲೆ ಉದ್ಯುಕ್ತರಾಗುತ್ತಾರೆ. ಕೊನೆಯಲ್ಲಿ ಅವಳು ಹಾಗೂ ಅವಳ ಮಗು ಇವರೇ ಕಳ್ಳರ ತಂಡದ ಸದಸ್ಯರಾಗಿದ್ದ ಸಂಗತಿ ಹೊರಪಟ್ಟು ಅವರಿಗೆ ಶಿಕ್ಷೆಯಾಗುತ್ತದೆ.

ಅಚ್ಚರಿಯ ಸಂಗತಿಯೆಂದರೆ ಇಂಥ ಕಥೆಯನ್ನು ಬರೆಯಲು ಮನಸ್ಸು ಮಾಡಿದವರು, ಮೈಸೂರಿನ ಶ್ರೇಷ್ಠ ಪತ್ರಿಕಾಕರ್ತರೂ ರಾಜಕೀಯ ಧುರೀಣರೂ ಆಗಿದ್ದ ತಾತಯ್ಯ ಎಂ. ವೆಂಕಟಕೃಷ್ಣಯ್ಯನವರು. ಇದರಲ್ಲಿ ಖೂನಿ-ಮಾರಾಮಾರಿಯ, ರಹಸ್ಯದ ಕತೆಯೊಂದನ್ನು ಹೇಳಬೇಕೆಂದಿರದೆ, ಕಳವು ಕೊಲೆ ಮೋಸಗಳಲ್ಲಿ ನಿರತರಾದ ಭಂಡರಿಗೆ ದಂಡನೆ ತಪ್ಪಿದ್ದಲ್ಲ ಎಂಬುದನ್ನೂ, ಚೋರಗ್ರಹಣ ವಿಚಾರದಲ್ಲಿ ಪೋಲೀಸರ ತಂತ್ರಗಳನ್ನೂ ವಿವರಿಸುವುದು ಅವರ ಉದ್ದೇಶವಾಗಿದ್ದಿತು.

ಆದರ ಮರುವರ್ಷದ ಪ್ರಕಟಣೆಯು ಗಳಗನಾಥರ 'ಪದ್ಮನಯನಾ'. ಇದು 'ಕಲಾವತೀಪರಿಣಯ' ಮಾದರಿಯ ಅದ್ಭುತ ರಮ್ಯ ಕಥಾನಕವಾಗಿದೆ. ಅದನ್ನು ಅವರು ಬರೆಯುವುದಕ್ಕೆ ಕರ್ನಾಟಕ ವಿದ್ಯಾವರ್ಧಕ ಸಂಘ ಹಾಗೂ ಅದರ ಪಾರಿತೋಷಕವೇ ನಿಮಿತ್ತವಾಯಿತು. ಗಳಗನಾಥರು ತಮ್ಮ ಅನುವಾದಗಳಿಂದಲೇ ಪ್ರಸಿದ್ಧರಾಗಿದ್ದರೂ ಅವರ ಮೊತ್ತ ಮೊದಲಿನ ಕಾದಂಬರಿಯು (ಅದರಂತೆ ಕೊನೆಯದು ಸಹ) ಸ್ವತಂತ್ರವಾದುದು.

ಕ್ರಿ.ಶ. ೧೮೯೯ನೆಯ ವರ್ಷವು ಕನ್ನಡದ ಪ್ರಥಮ ಸ್ವತಂತ್ರ ಸಾಮಾಜಿಕ ಕಾದಂಬರಿಯಾದ ಇಂದಿರಾಬಾಯಿ ಪ್ರಕಟವಾದ ಸುಯೋಗದ ವರ್ಷವಾಗಿದೆ. (ಪ್ರಜಾವಾಣಿಯ ಕಾದಂಬರಿಯ ಕುರಿತಾದ ಲೇಖನ ಮಾಲೆಯಲ್ಲಿ ಈಗಾಗಲೇ ಅದರ ಪರಿಚಯ ಬಂದಿದೆ.) ಆಗಿನ ಜಿಲ್ಲಾಧಿಕಾರಿ ಕೌಚ್‌ಮನ್ ಅದನ್ನು ಇಂಗ್ಲಿಷ್‌ಗೆ

## ಕನ್ನಡ ಕಾದಂಬರಿಯ ಮೊದಲ ಹೆಜ್ಜೆಗಳು

| ಹೆಸರು | ಲೇಖಕ/ಅನುವಾದಕ | ವರ್ಷ | ಲಕ್ಷಣಗಳು |
|---|---|---|---|
| | **(೧) ಅದ್ಭುತರಮ್ಯ/ಪೌರಾಣಿಕ** | | |
| ಕಲಾವತೀ ಪರಿಣಯ | ಯಾದವ | ೧೮೧೫(ಸು) | ಆದ್ಯ; ಸ್ವತಂತ್ರ, ಆದರೆ ಹಳಗನ್ನಡ |
| ಸೌಗಂಧಿಕಾ ಪರಿಣಯ | ಮುಮ್ಮಡಿ ಕೃಷ್ಣರಾಜರು | ೧೮೨೧ | ಪ್ರಥಮ ಬೃಹತ್ ಕಾದಂಬರಿ |
| ಬಾಣ ಕಾದಂಬರಿ | ಬಾಣ/ತೂರಮರಿ | ೧೮೭೫(ಸು) | ಹೊಸಗನ್ನಡ ಗದ್ಯಶೈಲಿಗೆ ನಾಂದಿ |
| ಪದ್ಮನಯನಾ | ಗಳಗನಾಥ | ೧೮೯೮ | ಸತ್ವಪೂರ್ಣ, ಸ್ವೋಪಜ್ಞಕೃತಿ |
| ಕನ್ನಡ ಶೌರ್ಯಸಾಗರ | ಆರಳಿ ಗೂಳಿಪ್ಪ | ೧೮೯೯ | — |
| | **(೨) ಐತಿಹಾಸಿಕ** | | |
| ಮುದ್ರಾಮಂಜೂಷ | ಕೆಂಪುನಾರಾಯಣ | ೧೮೨೩ | ಆದ್ಯ ಕೃತಿ, ಬಹುಮಟ್ಟಿಗೆ ಸ್ವತಂತ್ರ |
| ರಾಬಿನ್‌ಸನ್ ಕ್ರೂಸೊ | ಡಿಫೊ/ಕೃಷ್ಣಸ್ವಾಮಿಅಯ್ಯಂಗಾರ್ | ೧೮೫೪ | ಇಂಗ್ಲಿಷ್ ಅನುವಾದದ ಮೊದಲ ಕೃತಿ |
| ದುರ್ಗೇಶನಂದಿನಿ | ಬಂಕಿಮಚಂದ್ರ/ವೆಂಕಟಾಚಾರ್ | ೧೮೮೫ | ಬಂಗಾಲಿಯಿಂದ ಬಂದ ಪ್ರಥಮ ಕಾದಂಬರಿ |
| ಸೂರ್ಯಕಾಂತ | ಲಕ್ಷ್ಮಣರಾವ್ ಗದಗಕರ | ೧೮೯೨ | ಪ್ರಥಮ, ಸ್ವತಂತ್ರ, ಐತಿಹಾಸಿಕ |
| ಕನ್ಯಾವಿತಂತು | ಎಚ್. ಟೇಲರ್/ಶ್ರೀಕಂಠೇಶಗೌಡ | ೧೮೯೫ | ಇಂಗ್ಲಿಷ್‌ನಿಂದ |
| ಸುಮತಿಮದನಕುಮಾರ ಚರಿತ್ರೆ | ಡೆ/ಪುಟ್ಟಣ್ಣ | ೧೮೯೫ | " |
| ವಿವೇಕ ಚಂದ್ರಿಕೆ | ವೀರೇಶಲಿಂಗಂ/ಸೋಮನಾಥಯ್ಯ | ೧೮೯೫ | ತೆಲುಗಿನಿಂದ ಪ್ರಥಮಾನುಮದ |
| ಶೃಂಗಾರಚಾತುರ್ಯೋಲ್ಲಾಸಿನೀ | ಗುಬ್ಬಿ ಮುರಿಗಾರಾಧ್ಯ | ೧೮೯೬ | ದ್ವಿತೀಯ ಸ್ವತಂತ್ರ ಕೃತಿ |
| | **(೩) ಸಾಮಾಜಿಕ** | | |
| ಯಮುನಾ ಪರ್ಯಟನ | ಪದಮಂಜಿ/ಬಾಸೆಲ್ ಮಿಶನ್ | ೧೮೬೯ | ಮರಾಠಿಯಿಂದ ಪ್ರಥಮಾನುವಾದ |
| ಕೇಸರೀವಿಲಾಸ | ರೆಂಟಾಳ ಸುಬ್ಬರಾವು | ೧೮೯೫ | ತೆಲುಗಿನಿಂದ (ಅಥವಾ ಸ್ವತಂತ್ರ) |
| ಚೋರಗ್ರಹಣ ತಂತ್ರ | ಎಂ. ವೆಂಕಟಕೃಷ್ಣಯ್ಯ | ೧೮೯೭ | ಪ್ರಥಮ ಪತ್ತೇದಾರಿ |
| ಇಂದಿರಾಬಾಯಿ | ಗುಳವಾಡಿ ವೆಂಕಟರಾಯ | ೧೮೯೯ | ಪ್ರಪ್ರಥಮ ಸ್ವತಂತ್ರ ಕಾದಂಬರಿ |
| ಸುಕುಮಾರಿ | ಮುಳಿಯಿಲ್/ಬಾಸೆಲ್ ಮಿಶನ್ | ೧೮೯೯ | ಮಲೆಯಾಳಿಯಿಂದ ಪ್ರಥಮಾನುವಾದ |
| ಸೀತೆ | ಜಿ. ರಾಘವೇಂದ್ರರಾಯ | ೧೯೦೨ | ದ್ವಿತೀಯ ಸ್ವತಂತ್ರ, ಸಾಮಾಜಿಕ ಕೃತಿ |

ಅನುವಾದಿಸುವಷ್ಟು ಅದು ಮಹತ್ವವನ್ನು ಪಡೆದಿದ್ದಿತು. (ಉರ್ದು ಭಾಷೆಯಲ್ಲಿಯ ಪ್ರಥಮ ಸ್ವತಂತ್ರ ಸಾಮಾಜಿಕ ಕಾದಂಬರಿಯೂ ಇದೇ ವರ್ಷ ಪ್ರಕಟವಾಗಿದೆ.)

ಅದೇ ವರ್ಷ ಗೂಳೆಪ್ಪ ಕೊಟ್ರಪ್ಪ ಅರಳಿಯವರು ''ಕನ್ನಡ ಶೌರ್ಯಸಾಗರ''ವನ್ನು ಬರೆದಿದ್ದು, ಅದನ್ನು ವಿದ್ಯಾವರ್ಧಕ ಸಂಘವೇ ಪ್ರಕಟಿಸಿತು. ಇಲ್ಲಿ ಕನ್ನಡ ಎಂಬ ಪದಕ್ಕೆ ವಿಶೇಷ ಅರ್ಥವೇನೂ ಇರದೆ, ಕನ್ನಡದಲ್ಲಿ ಬರೆದದ್ದು ಎಂದಷ್ಟೆ ಪರಿಗಣಿಸಬೇಕು. ಕಥೆ ಸ್ವತಂತ್ರವಾದುದು ಮತ್ತು ಪೌರಾಣಿಕ ಹಿನ್ನೆಲೆಯುಳ್ಳದ್ದು. ಆದರೆ ''ಪದ್ಮನಯನಾ''ದಲ್ಲಿಯ ಸಂವಿಧಾನ ಚಾತುರ್ಯ ಪಾತ್ರಪುಷ್ಟಿ-ಇವು 'ಶೌರ್ಯಸಾಗರ'ದಲ್ಲಿ ದೊರೆಯಲಾರವು.

ಗುಳವಾಡಿ ವೆಂಕಟರಾಯರ ಅನಂತರ ಇನ್ನು ಯಾರು ಸ್ವತಂತ್ರ ಸಾಮಾಜಿಕ ಕಾದಂಬರಿ ಬರೆದರು? ಆ ಸ್ಥಾನವು ಮೈಸೂರಿನ ಜಿ. ರಾಘವೇಂದ್ರರಾವ್ ಎಂಬವರಿಗೆ ಸಲ್ಲುತ್ತದೆ. ಕ್ರಿ.ಶ. ೧೯೦೨ರಲ್ಲಿ ಪ್ರಕಟವಾದ ಅವರ ''ಸೀತೆ'' ಒಂದು ಕಲ್ಪಿತ ಕಥೆ ಹಾಗೂ ಕನ್ನಡದಲ್ಲಿ ಒಂದು 'Orginal novel' ಎಂಬುದಾಗಿ ಅಭಿಧಾನವನ್ನು ಹೊತ್ತಿದೆ. ಅದೊಂದು ಕಿರು ಕಾದಂಬರಿ.

ಹೀಗಿದೆ ಕನ್ನಡ ಕಾದಂಬರೀ ರಚನೆಯ ಆರಂಭಕಾಲ. ಯಾವುದೊಂದು ಸಾಹಿತ್ಯ ಪ್ರಕಾರವು ಒಮ್ಮಿಂದೊಮ್ಮೆಲೆ ದೊಡ್ಡ ಪ್ರಮಾಣದಲ್ಲಿ ಮೂರ್ತಸ್ವರೂಪ ತಾಳುವುದಿಲ್ಲ. ಷಟ್ಪದಿ, ಚಂಪೂ ರೂಪಗಳಿಗೂ ಈ ಮಾತು ಅನ್ವಯಿಸುತ್ತದೆ. ವಚನಸಾಹಿತ್ಯವು ಬಸವಣ್ಣನವರಿಗಿಂತ ಮುಂಚೆಯೂ ಇದ್ದಿತು. ಇಂದು ಮಾಸ್ತಿಯವರನ್ನು ಸಣ್ಣ ಕತೆಗಳ ಜನಕರೆಂದು ನಾವು ಕರೆದರೂ ಅವರಿಗಿಂತ ಹಿಂದೆ ಪ್ರಯತ್ನ ಮಾಡಿದವರು ಇರುವರಲ್ಲವೆ. ಕಾದಂಬರಿ ಸಾಹಿತ್ಯಪ್ರಕಾರಕ್ಕೂ ಈ ಮಾತು ಅನ್ವಯಿಸುವುದು. ಈ ಚಾರಿತ್ರಿಕ ಹಿನ್ನೆಲೆಯನ್ನು ತಿಳಿದುಕೊಳ್ಳದೆ, ಕೃತಿಗಳ ಮಹತ್ವವನ್ನು ಮಾತ್ರ ಗುರುತಿಸಿ, ಅವುಗಳ ಮೌಲ್ಯಮಾಪನ ಮಾಡುವುದು ಸಮರ್ಪಕವಾಗುವುದಿಲ್ಲ.

ಇಂತು ಹೊಸಗನ್ನಡದಲ್ಲಿ ಎದ್ದು ಕಾಣುವ ಸಾಹಿತ್ಯಪ್ರಕಾರವೆನಿಸಿದ ಕಾದಂಬರಿಯ ಆರಂಭದ ಚರಿತ್ರೆಯು ೧೮೧೫ರಿಂದ ಮೊದಲಾಗಿ ''ಇಂದಿರಾಬಾಯಿ''ಯವರೆಗೆ ಮುಂದುವರಿಯುತ್ತದೆ. ಈ ಕಾಲದಲ್ಲಿಯ ಹೆಚ್ಚಿನ ಕೃತಿಗಳು ಹಸಿಬಿಸಿಯಾಗಿದ್ದುದು ಸಹಜವೇ ಆಗಿದೆ. ಎಷ್ಟೆಂದರೂ ಅವು ಆರಂಭದ ಕೃತಿಗಳು. ಇನ್ನು ಸತ್ವಪೂರ್ಣ ಕೃತಿಗಳೆಂದು ಯಾದವನ ''ಕಲಾವತೀ ಪರಿಣಯ'', ಕೆಂಪುನಾರಾಯಣನ ''ಮುದ್ರಾಮಂಜೂಷ'', ತೂರಮರಿಯವರ ''ಬಾಣ ಕಾದಂಬರಿ'' ಮತ್ತು ಗುಳವಾಡಿಯವರ ''ಇಂದಿರಾಬಾಯಿ''-ಇವನ್ನು ಗಣಿಸಬೇಕು. ಹಾಗೂ ಕನ್ನಡ ಕಾದಂಬರಿಯ ತೇರನ್ನು ಮುಂದೆಳೆದವರೆಂದು ಬಿ. ವೆಂಕಟಾಚಾರ್ಯರನ್ನೂ ಗಳಗನಾಥರನ್ನೂ ಮನಸಾರೆ ವಂದಿಸಬೇಕು.

*ಕನ್ನಡದಲ್ಲಿ ಕ್ರೈಸ್ತ ಸಾಹಿತ್ಯ, ಹನಿಗತೆ,*
*ಕಂಪ್ಯೂಟರ್ ಇತ್ಯಾದಿ, ೧೯೮೨, ಪು. ೮೭-೯೮*

# ೭೯. ಜೀವನ ಚರಿತ್ರೆಯನ್ನು ಕುರಿತು

ದೇ. ಜವರೇಗೌಡ

ಮಾನವನ ಜೀವನಕ್ಕೆ ಇತಿಹಾಸವೇ ಜೀವನ ಚರಿತ್ರೆ. ಅದು ವ್ಯಕ್ತಿಯೊಬ್ಬನ ಇತಿಹಾಸವಾದರೂ, ಪರಿಸರದಿಂದ ಬೇರ್ಪಡಿಸಲಾಗದು. ಸಮಾಜದಲ್ಲಿ ಭಿನ್ನ ಭಿನ್ನ ವ್ಯಕ್ತಿಗಳು ಕೂಡುತ್ತಾರೆ, ಒಬ್ಬರು ಮತ್ತೊಬ್ಬರನ್ನು ಅನುಕರಿಸುತ್ತಾರೆ, ಅನುಸರಿಸುತ್ತಾರೆ. ಈ ಪ್ರಭಾವ ಪ್ರೋತ್ಸಾಹಗಳು ಪಾರಸ್ಪರಿಕವೂ ಅಹುದು. ಪರಿಸರದ ಸಾಮಾಜಿಕ, ಸಾಂಸ್ಕೃತಿಕ ಹಾಗೂ ಆರ್ಥಿಕ ಶಕ್ತಿಗಳು ವ್ಯಕ್ತಿತ್ವವನ್ನು ರೂಪಿಸುತ್ತವೆ. ಒಬ್ಬ ಯೇಸುವಿನಂತೆ, ಒಬ್ಬ ಬುದ್ಧನಂತೆ, ಒಬ್ಬ ವಿವೇಕಾನಂದರಂತೆ, ಒಬ್ಬ ಗಾಂಧಿಯಂತೆ, ಒಬ್ಬ ಮಾರ್ಕ್ಸ್‌ನಂತೆ, ಒಬ್ಬ ಬಸವೇಶ್ವರನಂತೆ, ಒಬ್ಬ ಅಂಬೇಡ್ಕರ್‌ರಂತೆ, ಪ್ರಬಲವಾದ ವ್ಯಕ್ತಿಗಳು ಸಮಕಾಲೀನ ಮಾತ್ರವಲ್ಲ, ಭವಿಷ್ಯದ ಸಮಾಜವನ್ನು ಸಹ ರೂಪಿಸಬಲ್ಲರು. ಮಹಾರಾಜಕಾರಣಿಗಳು, ವಿಜ್ಞಾನಿಗಳು, ಮಹಾಕವಿಗಳು ಸಹ ಈ ವರ್ಗಕ್ಕೆ ಸೇರುತ್ತಾರೆ. ಹೀಗೆಂದ ಕೂಡಲೇ ನೆಪೋಲಿಯನ್ನನಂಥ ಮಹಾಯೋಧ ಮಾತ್ರ ಗೌರವಾರ್ಹ, ಉಳಿದವರು ತಿರಸ್ಕರಣೀಯರೆನ್ನಲಾಗದು. ನೆಪೋಲಿಯನ್ ಜಗತ್ತಿನ ಗೌರವಕ್ಕೆ ಭಾಜನನಾದರೆ ಇತರರು ತಮ್ಮ ಸುತ್ತಮುತ್ತಣ ಸಮಾಜದ ಗಮನವನ್ನು ಆಕರ್ಷಿಸುತ್ತಾರೆ. ಅದೇನೇ ಇರಲಿ, ವ್ಯಕ್ತಿ ಹಾಗೂ ಪರಿಸರದ ಜೀವನಗಳೆರಡೂ ಪರಸ್ಪರ ಹೊಂದಿಕೊಂಡಿರುತ್ತವೆಂಬುದಂತು ನಿಜ.

ಐತಿಹಾಸಿಕ ಮತ್ತು ಸಾಂಸ್ಕೃತಿಕ ಸನ್ನಿವೇಶಗಳು ಮಹಾವ್ಯಕ್ತಿಯ ಉದಯಕ್ಕೆ ಹಾಗೂ ಅವನ ವ್ಯಕ್ತಿತ್ವದ ವಿಕಾಸಕ್ಕೆ ಅನುವಾಗುತ್ತವೆಂಬುದರಲ್ಲಿ ಸಂದೇಹವಿಲ್ಲ. ಸಮಷ್ಟಿಯೇ ವ್ಯಷ್ಟಿಯನ್ನು ರೂಪಿಸುತ್ತದೆ. ಲೆನಿನ್ ಗಾಂಧಿಯರಾಗಲಿ, ವಾಲ್ಮೀಕಿ ಶೇಕ್ಸ್‌ಪಿಯರ್‌ರಾಗಲಿ ಆಯಾಯ ಕಾಲದ ಸೃಷ್ಟಿಯೆಂಬುದು ನಿಜ. ಜಾರ್ಜ್ ವಾಷಿಂಗ್‌ಟನ್ನನ ಯಶಸ್ಸಿಗೆ ಆಗಿನ ಕಾಲದ ಸ್ಥಿತಿಗತಿಗಳೇ ಕಾರಣವೆಂದು ಸ್ಪಷ್ಟಪಡಿಸಿದ್ದಾರೆ. ಅವನು ಕೆಲವು ವರ್ಷಗಳ ಹಿಂದೆಯೋ, ಅನಂತರವೋ ಹುಟ್ಟಿದ್ದರೆ ಅವನ ವ್ಯಕ್ತಿತ್ವವೇ ವ್ಯತ್ಯಾಸವಾಗುತ್ತಿತ್ತೆಂಬುದೂ ನಿಜ. ಮಹಾವ್ಯಕ್ತಿಯೊಬ್ಬ ಜಗತ್ತಿನ ಅಥವಾ ತನ್ನ ರಾಷ್ಟ್ರದ ಸ್ಥಿತಿಗತಿಗಳನ್ನೇ ಬದಲಾಯಿಸಬಲ್ಲನೆಂಬ ಕಾರ್ಲೈಲನ ಉಕ್ತಿಗೆ ಮಾರ್ಕ್ಸ್ ಮತ್ತು ಗಾಂಧಿಯರ ಜ್ವಲಂತ ನಿದರ್ಶನಗಳಾಗಿದ್ದಾರೆ. ವ್ಯಕ್ತಿಯೊಬ್ಬನ ವ್ಯಕ್ತಿತ್ವ ವಿಕಾಸದಲ್ಲಿ ಅಗೋಚರ ಶಕ್ತಿಯ ಕೈವಾಡವನ್ನು ಕಾಣುವ ವಿದ್ವಾಂಸರೂ ಇಲ್ಲದಿಲ್ಲ. ಪೂರ್ಣದೃಷ್ಟಿಯಿಂದ ಪರಿಶೀಲಿಸಿದಾಗ ಈ ಮೂರು ಸಿದ್ಧಾಂತಗಳು-ಪರಿಸರ ಸಿದ್ಧಾಂತ, ವ್ಯಷ್ಟಿಮಹಿಮೋನ್ನತಿ ಸಿದ್ಧಾಂತ, ವಿಧಿಸಿದ್ಧಾಂತ-ಅಪ್ರತ್ಯೇಕವಲ್ಲ, ಅವು ಏಕಕಾಲದಲ್ಲಿ ವ್ಯಕ್ತಿಸಂಸ್ಕರಣಕ್ಕೆ ನೆರವಾಗುತ್ತವೆಂದು ತಿಳಿಯಬಹುದಾಗಿದೆ.

ಈ ಕಾರಣದಿಂದಾಗಿ ಜೀವನ ಚರಿತ್ರಕಾರ ತನ್ನ ನಾಯಕನನ್ನು ರೂಪಿಸುವ ಘಟನೆ ಸನ್ನಿವೇಶ ಸಾಮಾಜಿಕ ಸಂಪ್ರದಾಯ ಪರಿಸರ ಹಾಗೂ ವ್ಯಕ್ತಿಗಳನ್ನು ವಿವರಿಸಬೇಕಲ್ಲದೆ, ಅವನ ಪ್ರಭಾವಕ್ಕೊಳಗಾದ ಸಮಾಜವನ್ನೂ ವ್ಯಕ್ತಿಗಳನ್ನೂ ಸಂಸ್ಥೆಗಳನ್ನೂ ವರ್ಣಿಸಬೇಕಾಗುತ್ತದೆ. ಇವುಗಳಷ್ಟೇ ಮುಖ್ಯ, ನಾಯಕನ ಗುಣಶೀಲಗಳ, ವ್ಯಕ್ತಿತ್ವದ ಹಾಗೂ ಅವನ ಸಾಧನೆ ಸಿದ್ಧಿಗಳ ವರ್ಣನೆ. ಈ ವರ್ಣನೆಗೆ ಬೇಕಾದ ಸಾಮಗ್ರಿಗಳನ್ನು ಬಹಳ ಎಚ್ಚರಿಕೆಯಿಂದ ಸಂಗ್ರಹಿಸಬೇಕಾಗುತ್ತದೆ ; ಆ ಸಂಗ್ರಹದಿಂದ ಆಯ್ಕೆ ಮಾಡಬೇಕಾಗುತ್ತದೆ. ಹೀಗೆ ಆಯ್ಕೆ

ಮಾಡುವಾಗ ಜೀವನ ಚರಿತ್ರಕಾರ ಜಾಗರೂಕನಾಗಿರಬೇಕಾಗುತ್ತದೆ. ತನಗೆ ಬೇಕಾದ್ದನ್ನು ಗ್ರಹಿಸಿಕೊಂಡು ಉಳಿದದ್ದನ್ನು ತಿರಸ್ಕರಿಸುವುದಾದರೆ ನಾಯಕನ ವ್ಯಕ್ತಿತ್ವಕ್ಕೆ ಸಮಗ್ರತೆಯೊದಗದಿರಬಹುದು. ಆ ವ್ಯಕ್ತಿತ್ವದ ನಾನಾ ಮುಖಗಳ ಅಭಿವ್ಯಕ್ತಿಗೆ ಅವಕಾಶ ದೊರೆಯುವಂತೆ ಸಾಮಗ್ರಿಯನ್ನು ಆಯ್ಕೆ ಮಾಡಬೇಕಾಗುತ್ತದೆ. ಅವನ ದೋಷ ದೌರ್ಬಲ್ಯಗಳನ್ನು ಮರೆಮಾಡುವುದಾಗಲೀ, ಇಲ್ಲದ ಗುಣಗಳನ್ನು ಆರೋಪಿಸುವುದಾಗಲೀ, ಇರುವ ಗುಣಗಳನ್ನು ಅತಿಶಯಗೊಳಿಸುವುದಾಗಲೀ ಉಚಿತವಾಗುವುದಿಲ್ಲ.

ನಾಯಕನ ಗಾಢ ಪರಿಚಯವಿದ್ದಾಗ ಮಾತ್ರ ಅತ್ಯುತ್ತಮ ಜೀವನ ಚರಿತ್ರೆಯ ರಚನೆ ಸಾಧ್ಯವೆಂದು ವಿದ್ವಾಂಸರ ಅಭಿಪ್ರಾಯವಿದೆ. ಜಾನ್ಸನ್‌ನ ನಿಕಟ ಸಂಬಂಧವಿದ್ದದ್ದರಿಂದಲೇ ಬಾಸ್ವೆಲ್ ರಚಿಸಿದ ಜೀವನ ಚರಿತ್ರೆ ಜಗತ್ತಿಗೆ ಮಾದರಿಯಾಯಿತೆಂದು ಹೇಳುವುದುಂಟು. ನಾಯಕನ ಸಮಕಾಲೀನನಾಗದೆ, ಅವನ ಜತೆಯಲ್ಲಿ ಬಾಳು ನಡಸದೆ, ಅವನ ಜೀವನ ಚರಿತ್ರೆ ರಚಿಸುವುದು ಕಾಡುಹರಟೆಯಾದೀತೆಂದು ಅಥವಾ ಕಲ್ಪಿತಕಥೆಯಾದೀತೆಂದು ವಾಲ್ಟೇರ್ ಎಚ್ಚರಿಸುತ್ತಾನೆ. ಜೀವನಚರಿತ್ರಕಾರ ತನ್ನ ನಾಯಕನ ಸಾಧನೆ ಸಿದ್ಧಿಗಳನ್ನು ಹತ್ತಿರದಿಂದ ನೋಡಿದ್ದರೆ, ಭಿನ್ನ ಭಿನ್ನ ಸನ್ನಿವೇಶಗಳಲ್ಲಿ ಅವನ ಅಭಿರುಚಿ ಹಾಗೂ ಮನೋಧರ್ಮಗಳನ್ನು ಅವಲೋಕಿಸಿದ್ದರೆ, ಅವನ ಗತ್ತುಗಾಳಿಗಳನ್ನು ಗಮನಿಸಿದ್ದರೆ ಮಾತ್ರ ಅವನ ವಾಸ್ತವ ಚಿತ್ರಣ ಸಾಧ್ಯವಾಗುತ್ತದೆ. ಇಂಥ ವ್ಯಕ್ತಿ ಚರಿತ್ರೆಗಳನ್ನು ಪ್ರತ್ಯಕ್ಷ ಜೀವನ ಚರಿತ್ರೆಗಳೆಂದು ಹೆಸರಿಸಬಹುದಾಗಿದೆ. ಗಾಂಧಿ ನೆಹ್ರೂ ಬೋಸ್ ಅವರನ್ನು ಕುರಿತು ಅವರ ಸಮಕಾಲೀನರು ರಚಿಸಿದ ಜೀವನ ಚರಿತ್ರೆಗಳು ಈ ವರ್ಗಕ್ಕೆ ಸೇರುತ್ತವೆ.

ಜೀವನ ಚರಿತ್ರಕಾರ ಪ್ರತ್ಯಕ್ಷದರ್ಶಿಯಾದರೂ ನಿಕಟಸಂಬಂಧಿಯಾದರೂ ನಾಯಕನ ವ್ಯಕ್ತಿತ್ವವನ್ನು ಪೂರ್ಣವಾಗಿ ಗ್ರಹಿಸಿದ್ದಾನೆಂದೂ ಹೇಳಲಾಗದು. ಅವನೆಷ್ಟೇ ಸೂಕ್ಷ್ಮಗ್ರಾಹಿಯಾದರೂ ಅವನ ಗಮನಕ್ಕೆ ಬಾರದ ಸಂಗತಿಗಳು ವಿಪುಲವಾಗಿರುತ್ತವೆ. ನಾಯಕನ ಬಾಹ್ಯಕ್ರಿಯೆಗಳನ್ನು ಅವನು ಅರಿಯಬಹುದಾದರೂ, ಅವನ ಅಂತರಂಗ ವ್ಯಾಪಾರವನ್ನು ಸಮಗ್ರವಾಗಿ ಗ್ರಹಿಸುವುದು ಕಷ್ಟವಾಗಬಹುದು. ಗ್ರಹಿಸಿದರೂ ತನಗೆ ಹಿಡಿಸಿದುದನ್ನು ದೊಡ್ಡದು ಮಾಡಿ, ಉಳಿದುದನ್ನು ಮೊಟಕುಗೊಳಿಸಬಹುದು, ಇಲ್ಲವೆ ವಿರೂಪಗೊಳಿಸಬಹುದು. ಅಷ್ಟೇ ಅಲ್ಲ, ನಾಯಕನ ಜೀವನದ ಒಂದು ಮುಖವನ್ನೊ, ಕೆಲವು ಘಟ್ಟಗಳನ್ನೋ ಸಾಕಲ್ಯವಾಗಿ ಚಿತ್ರಿಸಿ, ಉಳಿದುವನ್ನು ಹ್ರಸ್ವಗೊಳಿಸಬಹುದು. ಜಾನ್ಸನ್ನನ ಜೀವನ ಚರಿತ್ರೆಯಲ್ಲಿಯೂ ಇಂಥ ನ್ಯೂನತೆಗಳಿವೆಯೆಂದು ಹೇಳಲಾಗಿದೆ. ಬಾಸ್ವೆಲ್ ಅವನ ಕೊನೆಯ ದಿನಗಳ ಕತೆಯನ್ನು ವಿಸ್ತೃತಗೊಳಿಸಿ, ಮೊದಲ ಭಾಗವನ್ನು ಹ್ರಸ್ವಗೊಳಿಸಿರುವುದರಿಂದ, ಜೀವನ ಚರಿತ್ರೆ ಸಮತೂಕ ಕಳೆದುಕೊಂಡಿದೆಯೆಂದು ವಿಮರ್ಶಕರು ಅಭಿಪ್ರಾಯಪಡುತ್ತಾರೆ.

ಒಬ್ಬ ನಾಯಕನನ್ನು ಕುರಿತ ಜೀವನ ಚರಿತ್ರೆಗಳು ಹಲವಾರಿರುವಾಗ ಒಂದು ಮತ್ತೊಂದರಿಂದ ಭಿನ್ನವಾಗಿರುವ ಸಾಧ್ಯತೆಯುಂಟು. ಈ ಭಿನ್ನತೆಗೆ ಜೀವನ ಚರಿತ್ರಕಾರರ ದೃಷ್ಟಿಧ್ಯೇಯ ಭೇದಗಳೇ ಕಾರಣವಾಗಿರುತ್ತವೆ. ಅಷ್ಟೇ ಅಲ್ಲ, ಅವರು ನಾಯಕನನ್ನು ತಂತಮ್ಮ ನಿಲುವಿನಿಂದ ನೋಡಿದಾಗ, ಅವರ ಮನಸ್ಸಿನಲ್ಲಿ ಮೂಡುವ ಚಿತ್ರಗಳೂ ವಿಭಿನ್ನವಾಗುತ್ತವೆ. ನಾಯಕ ಜಗತ್ತಿನಿಂದ ಕಣ್ಮರೆಯಾದ ನಂತರ ಅವನ ಬಾಳ್ಗತೆಯನ್ನು ನಿರೂಪಿಸುವ ಜೀವನ ಚರಿತ್ರಕಾರ ಪೂರ್ವಗ್ರಹ ಪಕ್ಷಪಾತಗಳಿಂದ ಬಹುದೂರವಿರುವವನಾದ್ದರಿಂದ, ಹಿಂದಿನ

ಜೀವನ ಚರಿತ್ರೆಗಳ ಆಧಾರದ ಮೇಲೆ ನಾಯಕನ ವಾಸ್ತವ ಪ್ರತಿಮೆಯನ್ನು ಕಡೆಯಲನುಕೂಲವಾಗುತ್ತದೆ. ಅಧ್ಯಯನ ಧ್ಯಾನಗಳ ಮೂಲಕ ಅವನು ನಾಯಕನನ್ನು ಭಾವಕೋಶಕ್ಕೆ ಆವಾಹಿಸುತ್ತಾನೆ, ಅವನೊಡನೆ ವಾಸಿಸುತ್ತಾನೆ, ಅವನೊಡನೆ ಮಾತನಾಡುತ್ತಾನೆ, ಅವನೊಡನೆ ಆಟವಾಡುತ್ತಾನೆ, ಅವನ ಸುಖದುಃಖಗಳಲ್ಲಿ ಭಾಗವಹಿಸುತ್ತಾನೆ, ಅವನನ್ನು ಆರಾಧಿಸುತ್ತಾನೆ. ಈ ಎಲ್ಲ ಸಾಧನೆಯ ಫಲವಾಗಿ ಕಲಾತ್ಮಕವಾದ ಜೀವನ ಚರಿತ್ರೆ ಆವಿರ್ಭವಿಸುವುದು ಸಾಧ್ಯ. ಇಂಥ ಕಲಾಕರ್ಮವನ್ನು ಪುನರ್ಸೃಷ್ಟಿಯೆಂದು ತಿಳಿಯುವುದರಲ್ಲಿ ತಪ್ಪಿಲ್ಲ. ಇದನ್ನು ಪರೋಕ್ಷ ಜೀವನ ಚರಿತ್ರೆಯೆಂದು ಕರೆಯಬಹುದು. ಪ್ರತ್ಯಕ್ಷ ಜೀವನ ಚರಿತ್ರೆ ನಾಯಕನ ಗುಣಶೀಲಗಳಿಗೆ ಒತ್ತು ನೀಡುವುದಾದರೆ, ಪರೋಕ್ಷ ಜೀವನಚರಿತ್ರೆ ಅವನ ಕಥಾನಕಕ್ಕೆ ಬೆಲೆ ಕೊಡುತ್ತದೆ. ಈ ಎರಡರ ಸಲ್ಲಕ್ಷಣಗಳನ್ನೊಳಗೊಂಡ ಜೀವನ ಚರಿತ್ರೆ ಶ್ರೇಷ್ಠ ಮಟ್ಟದ್ದಾಗುತ್ತದೆ. ಕುವೆಂಪು ಅವರ ಸ್ವಾಮಿ ವಿವೇಕಾನಂದ ಮತ್ತು ಶ್ರೀ ರಾಮಕೃಷ್ಣ ಪರಮಹಂಸ ಈ ದೃಷ್ಟಿಯಿಂದ ಉತ್ತಮ ಜೀವನ ಚರಿತ್ರೆಗಳಾಗುತ್ತವೆ.

ನಾಯಕ ಸಮಕಾಲೀನ ಹಾಗೂ ಐತಿಹಾಸಿಕ ವ್ಯಕ್ತಿಯಾಗಿರದೆ, ಪೌರಾಣಿಕ ವ್ಯಕ್ತಿಯಾಗಿರಲೂ ಸಾಧ್ಯವುಂಟು. ಅವನ ವ್ಯಕ್ತಿತ್ವ ಕಾಲದೇಶಾಬಾಧಿತವಾದದ್ದು. ಪ್ರತಿಯೊಂದು ಯುಗದ ಮೌಲ್ಯಗಳ ಅಭಿವ್ಯಕ್ತಿಗೆ ಅದು ಮಾಧ್ಯಮವಾಗಬಹುದು. ಎಲ್ಲ ಕಾಲದ ಜನ ಅವನ ಆದರ್ಶವನ್ನೊಪ್ಪಿಕೊಂಡು, ಅವನನ್ನು ಆರಾಧಿಸುತ್ತಾರೆ, ತಂತಮಗೆ ತೋರಿದಂತೆ ಕಲ್ಪಿಸಿಕೊಳ್ಳುತ್ತಾರೆ; ಅಷ್ಟೇ ಅಲ್ಲ, ತಾವು ಕಲ್ಪಿಸಿಕೊಂಡ ಆದರ್ಶವನ್ನವರು ಅವನಲ್ಲಿ ಕಾಣಲು ಪ್ರಯತ್ನಿಸುತ್ತಾರೆ. ಹೀಗಾಗಿ ಅವನು ವ್ಯಷ್ಟಿ ಸೃಷ್ಟಿಯಾಗದೆ, ಸಮಷ್ಟಿ ಸೃಷ್ಟಿಯಾಗಿ ವಿಶ್ವಮಾನವನಾಗುತ್ತಾನೆ. ರಾಮ, ಕೃಷ್ಣ, ಬುದ್ಧ, ಯೇಸು ಮೊದಲಾದವರು ಈ ವರ್ಗಕ್ಕೆ ಸೇರುತ್ತಾರೆ. ಇಂಥವರ ಜೀವನ ಚರಿತ್ರೆಗಳನ್ನು ಕಾಲ್ಪನಿಕ ಅಥವ ಪೌರಾಣಿಕ ಜೀವನ ಚರಿತ್ರೆಗಳೆಂದು ಕರೆಯಬಹುದು.

ವಾಸ್ತವವಾಗಿ ಕಾವ್ಯ, ಕಾದಂಬರಿ, ಕಥೆ, ನಾಟಕಗಳೆಲ್ಲ ಜೀವನ ಚರಿತ್ರೆಗಳೇ. ಒಂದಲ್ಲ ಒಂದು ರೀತಿಯಲ್ಲಿ ಅವು ಪುನರ್ನಿರ್ಮಾಣಗೊಂಡ ಜೀವಂತ ವ್ಯಕ್ತಿಗಳು. ಕವಿಯಾಗಲಿ, ಕಾದಂಬರಿಕಾರನಾಗಲಿ ಅಥವಾ ನಾಟಕಕಾರನಾಗಲಿ ತಾನು ಕಂಡ, ತನ್ನ ಸುತ್ತಮುತ್ತ ಜೀವಿಸುವ ವ್ಯಕ್ತಿಗಳ ಮಾದರಿಗಳನ್ನು ತನ್ನ ಕೃತಿಗಳಲ್ಲಿ ಸೃಷ್ಟಿಸುತ್ತಾನೆ. ಆ ಮಾದರಿಗಳಿಗೆ ಮೂಲಗಳು ಜೀವನದಲ್ಲಿವೆಯೆಂಬುದು ಮಾತ್ರ ಸುಸ್ಪಷ್ಟ.

ಜೀವನ ಚರಿತ್ರೆಯ ರಚನಾವಿಧಾನದ ಬಗ್ಗೆ ಸೂತ್ರನಿಯಮಗಳ ವಿಧಾಯಕ ಸೂಕ್ತವಾಗದು. ಏಕೆಂದರೆ ಅದು ನಾಯಕ, ರಚಕ ಮತ್ತು ಪರಿಸರಗಳ ಸಮ್ಮಿಲನದಿಂದ ಸಂಲಬ್ಧವಾಗುವ ರಸಾಯನ. ನಾಯಕನ ವ್ಯಕ್ತಿತ್ವ, ರಚಕನ ಮನೋಧರ್ಮ, ಹಾಗೂ ಪರಿಸರದ ವೈಶಿಷ್ಟ್ಯ ರಚನಾ ವಿಧಾನವನ್ನು ನಿರ್ಧರಿಸುತ್ತವೆ. ಮಡದಿ ಗಂಡನ, ಮಗ ತಂದೆಯ, ಶಿಷ್ಯ ಗುರುವಿನ ಜೀವನ ಚರಿತ್ರೆಯನ್ನು ಬರೆಯುವುದಕ್ಕೂ ಅದೇ ಜೀವನ ಚರಿತ್ರೆಯನ್ನು ದೂರದವರು ಬರೆಯುವುದಕ್ಕೂ ತುಂಬ ವ್ಯತ್ಯಾಸವಿದೆ. ನಾಯಕನ ಗಾಢಪರಿಚಯ ಅಥವಾ ಸಮೀಪದ ರಕ್ತಬಾಂಧವ್ಯ ವಾಸ್ತವ ನಿರೂಪಣೆಗೆ ತೊಡಕಾಗಬಹುದು. ವಿಧವೆ ತನ್ನ ದಿವಂಗತ ಪತಿಯ ಜೀವನದ ಪೂರ್ವಭಾಗವನ್ನು ಚಿತ್ರಿಸಿ, ಉಳಿದದ್ದನ್ನು ಕೈಬಿಡಬಹುದು, ಇಲ್ಲವೆ ತೇಲಿಸಬಹುದು. ಅವನು ತೀರಿಕೊಂಡ ತರುಣದಲ್ಲಿಯೇ ಅವಳು ಬಾಳ್ಗತೆ ಬರೆಯುವುದಾದರೆ

ಭಾವೋದ್ವೇಗದಿಂದಾಗಿ ತೀವ್ರ ಪಕ್ಷಪಾತಕ್ಕೆಡೆಯಾಗಬಹುದು. ಒಟ್ಟಿನಲ್ಲಿ ಸಂಬಂಧಿಗಳು ಬರೆಯುವ ಜೀವನ ಚರಿತ್ರೆಯಲ್ಲಿ ಘಟನೆಗಳು ವಿರೂಪಗೊಂಡು, ಕುಂದುಕೊರತೆಗಳು ತಲೆಹಾಕುವ ಸಂಭವವುಂಟೆಂಬ ವಾದವಿದ್ದೇ ಇದೆ. ಅಥವಾ ಅದೊಂದು ಪ್ರಶಂಸೆ ಮಾತ್ರವಾಗಿ ಪರ್ಯವಸಾನವಾಗಬಹುದೆಂಬ ಅಭಿಪ್ರಾಯವೂ ಇದೆ.

ಈ ಮಾತು ಸಂಬಂಧಿಗಳಿಗೆ ಮಾತ್ರವಲ್ಲ, ಯಾವ ಜೀವನಚರಿತ್ರಕಾರನಿಗಾದರೂ ಅನ್ವಯವಾಗಬಹುದು. ಅದಿರಲಿ, ನಾಯಕನ ಸಮಕಾಲೀನನಲ್ಲದ, ಕಾಲದೇಶಗಳಿಂದ ದೂರವಾದ ವ್ಯಕ್ತಿ ಬರೆಯುವ ಜೀವನ ಚರಿತ್ರೆ ನಿರ್ದುಷ್ಟವಾಗಿರಬಲ್ಲುದೆ ಎಂಬ ಸಂಶಯಕ್ಕೂ ಎಡೆಯಿಲ್ಲದಿಲ್ಲ. ಮಾರ್ಟಿನ್ ಲೂಥರ್ ಕಿಂಗ್‌ನನ್ನು ಕಂಡಿರದ ಭಾರತೀಯ ಸಾಹಿತಿ ಅವನ ಜೀವನಚರಿತ್ರೆಯನ್ನು, ಇಂದಿನ ಅಮೇರಿಕದ ಸಾಹಿತಿ ಮಹಾತ್ಮಗಾಂಧಿಯ ಜೀವನಚರಿತ್ರೆಯನ್ನು ಬರೆಯಬಹುದೇ? ಅಥವಾ ಕೇವಲ ಕೆಲವು ದಿನಗಳು ಮಾತ್ರ ಗಾಂಧೀಜಿಯೊಡನಿದ್ದ ಲೂಯಿ ಫಿಶರ್ ಅಂಥವನು ಬರೆದ ಬಾಳ್ಗತೆ ವಿಶ್ವಸನೀಯವಾಗುವುದೆ? ಅಂಡ್ರೆ ಮೌರಾಯಿ ಎಂಬ ಫ್ರೆಂಚ್ ಸಾಹಿತಿ ರಚಿಸುವ ಶೆಲ್ಲಿಯ ಜೀವನ ಚರಿತ್ರೆ ಸುಸಂಗತವಾಗಿರುವುದೆ?

ಈ ಸಂದರ್ಭದಲ್ಲಿ ಆಂಡ್ರೆ ಹೇಳುವ ಮಾತುಗಳು ಗಮನಾರ್ಹವಾಗಿವೆ: ''ಮೊಟ್ಟಮೊದಲಿಗೆ ಶೆಲ್ಲಿಯ ಸಂಕ್ಷಿಪ್ತ ಜೀವನ ಚರಿತ್ರೆಯನ್ನೋದಿದಾಗ ನನ್ನ ಧಮನಿಗಳಲ್ಲಿ ಭಾವ ಸಂಚಾರವಾದಂತಾಯಿತು. ಅದೇ ತಾನೆ ನಾನು ಕಾಲೇಜಿಂದ ಹೊರಬಂದಿದ್ದೆ. ನನ್ನ ಮನಸ್ಸನ್ನೆಲ್ಲ ತಾತ್ವಿಕ ಮತ್ತು ರಾಜಕೀಯ ಸಂಗತಿಗಳು ಆಕ್ರಮಿಸಿಕೊಂಡಿದ್ದುವು. ಅವು ಶೆಲ್ಲಿಯ ಭಾವನೆಗಳಿಗೆ ಹತ್ತಿರವಾಗಿದ್ದುವು. ಸನ್ನಿವೇಶದ ಒತ್ತಡದಿಂದಾಗಿ ನಾನು ಕಾರ್ಯೋನ್ಮುಖ ವಾದಾಗ, ನನ್ನ ಭಾವನೆಗಳಿಗೂ ಅನುಭವಕ್ಕೂ ವಿಶೇಷಾಂತರ ತೋರಿತು. ಎಳೆಯ ದಿನಗಳ ನೆನಪು ಕೂಡಲೆ ಕೆರಳಿ, ನಾನವುಗಳಿಗೆ ಶರಣಾದೆ. ಅವುಗಳಿಗೆ ಅಭಿವ್ಯಕ್ತಿ ನೀಡಬೇಕೆಂಬ ಉತ್ಸಾಹ ಚಿಗುರಿತು. ಶೆಲ್ಲಿ ಸಹ ಅಂಥದೇ ಪ್ರತಿಬಂಧಕಗಳನ್ನನುಭವಿಸಿದ್ದ...ಅವನ ಬಾಳ್ಗತೆಯ ರಚನೆಯಿಂದ ನನ್ನ ಭಾವನೆಗಳಿಗೆ-ಅಂದರೆ ನನಗೆ ಬಿಡುಗಡೆ ದೊರೆಯಬಹುದೆಂದು ನಾನು ಭಾವಿಸಿದೆ.''[೧]

ತನ್ನ ವ್ಯಕ್ತಿತ್ವದ ಅಭಿವ್ಯಕ್ತಿ ಮಾಧ್ಯಮವನ್ನಾಗಿ ಮೌರಾಯ್ ಶೆಲ್ಲಿಯ ಜೀವನ ಚರಿತ್ರೆಯನ್ನು ಬಳಸಿಕೊಂಡನೆಂತೆಂಬುದು ತಥ್ಯ ಸಂಗತಿ. ಪ್ಲೂಟಾರ್ಕನದೂ ಇದೇ ಮಾರ್ಗ ಹಾಗೂ ಉದ್ದೇಶ. ತನ್ನ ಭಾವಾಲೋಚನೆಗಳನ್ನು, ಲೋಕಾನುಭವವನ್ನು ಹಾಗೂ ತನ್ನ ಜೀವನ ತತ್ವವನ್ನು ಜೀವನ ಚರಿತ್ರಕಾರ ತನ್ನ ನಾಯಕನ ಜೀವನದಲ್ಲಿ ಸಮಾವೇಶಗೊಳಿಸುತ್ತಾನೆ. ಆದ್ದರಿಂದಲೇ ಅವನು ತನ್ನ ಮನೋಧರ್ಮಕ್ಕೆ ಒಗ್ಗುವ ನಾಯಕನನ್ನೇ ಸಾಮಾನ್ಯವಾಗಿ ಆರಿಸಿಕೊಳ್ಳುತ್ತಾನೆ. ಕೇವಲ ಸಾಕ್ಷೀಪ್ರಜ್ಞೆಯಿಂದ, ನಿರ್ಲಿಪ್ತರಾಗಿ ಜೀವನ ಚರಿತ್ರೆ ರಚಿಸುವ ಸಾಹಿತಿಗಳು ವಿರಳ. ಅದೇನೇ ಇರಲಿ, ನಾಯಕನ ಜೀವನ ನಿರೂಪಣೆಯಲ್ಲಿ ಸಾಹಿತಿ ತನ್ನ ಜೀವನದ ಕುಂದುಕೊರತೆಗಳನ್ನು ತುಂಬಿಕೊಳ್ಳುವ ಸಾಧ್ಯತೆಯೂ ಉಂಟೆಂಬುದನ್ನು ಮರೆಯಲಾಗದು. ಜೀವನ ಚರಿತ್ರಕಾರ ಎಲ್ಲಿಯವನೆ ಆಗಿರಲಿ, ಯಾವ ಕಾಲದವನೆ ಆಗಿರಲಿ ತನ್ನ ನಾಯಕನಲ್ಲಿ ತಾದಾತ್ಮ್ಯ ಹೊಂದಿದ್ದು, ತನ್ನನ್ನು ತಾನು ಮರೆತು ಅವನ ಜೀವನಕ್ಕೆ ಶರಣಾಗಿ,

---

೧ *Aspects of Biography.* Andre Maurois; translated by S.C. Roberts: pp 106-107.

ಅವನಂತಾಗಿ, ಆತ್ಮಕಥೆ ಎನ್ನುವಷ್ಟರಮಟ್ಟಿಗೆ, ಅವನ ಜೀವನ ಚರಿತ್ರೆಯನ್ನು ರಚಿಸುತ್ತಾನೆ. ಅಂದರೆ ನಾಯಕ ಜೀವನ ಚರಿತ್ರಕಾರನ ದೇಹವನ್ನು ಪ್ರವೇಶಿಸುತ್ತಾನೆ, ಅಥವಾ ಅವನಲ್ಲಿ ಪುನರ್ಜನ್ಮವನ್ನು ಪಡೆಯುತ್ತಾನೆಂದು ತಿಳಿಯಬಹುದಾಗಿದೆ. ಪಠ್ಯಪುಸ್ತಕಕ್ಕಾಗಿ, ಹಾಗೂ ಕೂಲಿಗಾಗಿ ಬರೆಯುವ ಜೀವನ ಚರಿತ್ರೆಗೆ ಈ ಮಾತು ಅನ್ವಯಿಸುವುದಿಲ್ಲ.

ತನಗೆ ಪ್ರೀತಿ ಗೌರವವಿರುವ ಅಥವಾ ಸಹಾನುಭೂತಿ ಇರುವ ನಾಯಕನನ್ನೇ ಜೀವನ ಚರಿತ್ರಕಾರ ಸಾಮಾನ್ಯವಾಗಿ ಆರಿಸಿಕೊಳ್ಳಬೇಕಾಗುತ್ತದೆ. ಹಾಗಲ್ಲದ ಜೀವನ ಚರಿತ್ರೆ ಯಶಸ್ವಿಯಾಗಲಾರದು. ಜೀವನ ಚರಿತ್ರಕಾರನಿಗೆ ತನ್ನ ನಾಯಕನಲ್ಲಿ ಅಪಾರ ಗೌರವವಿರುವುದಾದರೂ ಅವನ ದೋಷಗಳನ್ನು ಮುಚ್ಚುವುದಿಲ್ಲ; ಅಹಿತಕರ ಘಟನೆಗಳನ್ನು ಹಾರಿಸುವುದಿಲ್ಲ; ವಿರೋಧಿಗಳ ಅಭಿಪ್ರಾಯಗಳನ್ನು ಗಾಳಿಗೆ ತೂರುವುದಿಲ್ಲ. ಅವನು ಹೇಗಿದ್ದಾನೆಯೋ ಹಾಗೆಯೇ, ಯಾವುದನ್ನೂ ಬಿಡದೆ ಚಿತ್ರಿಸುತ್ತಾನೆ. ಸೂಚ್ಯವಾಗಿಯಾದರೂ ಅವನ ಕಪ್ಪು ಮಚ್ಚೆಗಳನ್ನು ಹೊರಗೆಡಹುತ್ತಾನೆ. ಒಟ್ಟಿನಲ್ಲಿ ನಿಷ್ಪಕ್ಷಪಾತ ದೃಷ್ಟಿ ಬರಹಗಾರನ ಮುಖ್ಯೋದ್ದೇಶವಾಗಿರಬೇಕು.

ಜೀವನ ಚರಿತ್ರಕಾರ ಮತ್ತು ನಾಯಕ ತುಸುಮಟ್ಟಿಗಾದರೂ ಸಮಾನ ಧರ್ಮಿಗಳಾಗಿರಬೇಕೆಂಬುದರಲ್ಲಿ ಸಂದೇಹವಿಲ್ಲ. ನಾಯಕನ ಅರ್ಹತೆ ಅನರ್ಹತೆಗಳ ಪ್ರಶ್ನೆ ಮುಂದಿನದು. ಸಮಾಜದಲ್ಲಿ ವಿಶಿಷ್ಟವಾದ ಸ್ಥಾನಮಾನಗಳನ್ನು ಪಡೆದವನೆ ನಾಯಕನಾಗಬೇಕೆ? ಭೂಮಿಯ ಮೇಲೆ ಹುಟ್ಟಿದ ಪ್ರತಿಯೊಬ್ಬ ವ್ಯಕ್ತಿಗೂ ಸ್ವತಂತ್ರ ವ್ಯಕ್ತಿತ್ವವಿಲ್ಲವೆ? ಒಬ್ಬ ರೈತನ ಅಥವಾ ಬೆಸ್ತನ ಜೀವನ ಚರಿತ್ರೆಗೆ ವಸ್ತುವಾಗಲಾರದೆ? ನಾಯಿಯ ಜೀವನವನ್ನು ಕುರಿತ ಕತೆಗಳಿಲ್ಲವೆ? ಎಂಬಿವೇ ಮೊದಲಾದ ಪ್ರಶ್ನೆಗಳು ವಿಮರ್ಶಕನ ಕೌಶಲ್ಯಕ್ಕಾಗಿ ಸವಾಲಾಗಿ ನಿಲ್ಲುತ್ತವೆ. ವಾಸ್ತವವಾಗಿ ಕಾದಂಬರಿ ಒಬ್ಬ ನಾಯಕನ ಜೀವನ ಚರಿತ್ರೆಯಲ್ಲ; ಅಲ್ಲಿ ಒಬ್ಬಿಬ್ಬರು ವ್ಯಕ್ತಿಗಳಿಗೆ ಪ್ರಾಧಾನ್ಯತೆ ದೊರೆಯುವುದಾದರೂ, ಅನೇಕ ಸಣ್ಣಪುಟ್ಟ ವ್ಯಕ್ತಿಗಳ ಚಿತ್ರಗಳನ್ನೂ ಸಹ ಕಾಣಬಹುದಾಗಿದೆ. ಅನೇಕ ಜೀವನ ಚಿತ್ರಗಳ ಸಮುದಾಯವೇ ಅರ್ಥಾತ್ ಇಡೀ ಸಮಾಜದ ಜೀವನವೇ ಕಾದಂಬರಿಯಾಗುತ್ತದೆ. ಪ್ರಪಂಚದಲ್ಲಿ ಒಂದೊಂದು ವಸ್ತುವಿಗೂ ಅದರದರ ಯೋಗ್ಯತೆಗೆ ತಕ್ಕಂಥ ಸ್ಥಾನವಿರುವಂತೆ ಪ್ರತಿಯೊಬ್ಬ ವ್ಯಕ್ತಿಗೂ ಉಚಿತವಾದ ಸ್ಥಾನವಿದೆ. ಆದ್ದರಿಂದ ಜೀವನ ಚರಿತ್ರೆ ಕೇವಲ ಪ್ರತಿಷ್ಠಿತರಿಗೆ ಮಾತ್ರ ಸೀಮಿತವಾದದ್ದೆಂದು ತಿಳಿಯಬೇಕಾಗಿಲ್ಲ. ಪರಕಾಯಪ್ರವೇಶ ಮಾಡಬಲ್ಲ ಜೀವನ ಚರಿತ್ರಕಾರ ಸಾಮಾನ್ಯ ವ್ಯಕ್ತಿಯ ಚಿತ್ರವನ್ನು ಸಹ ಸುಂದರವಾಗಿ ಕುಂಚಿಸಬಲ್ಲವನಾಗುತ್ತಾನೆ.

ಹೇಗೆ ಜೀವನದ ರೀತಿನೀತಿಗಳು ಧ್ಯೇಯೋದ್ದೇಶಗಳು ವ್ಯಕ್ತಿಯಿಂದ ವ್ಯಕ್ತಿಗೆ ವ್ಯತ್ಯಾಸ ಹೊಂದುತ್ತವೆಯೋ ಹಾಗೆಯೆ ಜೀವನ ಚರಿತ್ರೆಯ ಸ್ವರೂಪ ಗಾತ್ರ ವಿಧಾನಗಳು ಸಹ ವ್ಯಕ್ತಿಯಿಂದ ವ್ಯಕ್ತಿಗೆ ಮಾರ್ಪಾಡಾಗುತ್ತವೆ. ಜೀವನ ಚರಿತ್ರೆಯ ಹಿರಿಮೆಗೆ ಅಥವಾ ಅದರ ಸಾರ್ಥಕತೆಗೆ ಅದರ ಗಾತ್ರ ಮುಖ್ಯವಲ್ಲ, ಅದರ ನಿರೂಪಣೆ, ಹಾಗೂ ಅದು ಓದುಗರ ಮನಸ್ಸಿನ ಮೇಲೆ ಬೀರುವ ಪ್ರಭಾವವೇ ಪ್ರಧಾನವೆಂಬುದನ್ನು ಮರೆಯಲಾಗದು.

ಜೀವನ ಚರಿತ್ರೆಯಲ್ಲಿ ನಾಯಕನಿಗೆ ವಿಶೇಷ ಪ್ರಾಧಾನ್ಯವೆಂಬುದು ನಿಜ. ಅವನ ವ್ಯಕ್ತಿತ್ವ ವಿಕಾಸವೇ ಅದರ ಗುರಿ. ಆ ಗುರಿಯನ್ನು ಘಟನೆಗಳ ವಿನ್ಯಾಸದ ಮೂಲಕವೂ ಸಾಧಿಸಬಹುದು. ಅಂಥ ಸಂದರ್ಭದಲ್ಲಿ ಘಟನೆಗಳಿಗೆ ಪ್ರಾಮುಖ್ಯ ದೊರೆಯುತ್ತದೆ. ನಾಯಕನ ಸಾಧನೆ ಶೋಧನೆಗಳನ್ನು ವ್ಯಾಖ್ಯಾನಿಸುವ ಮೂಲಕ ಅವನ ಜೀವನದ ಸುರುಳಿಯನ್ನು ಬಿಚ್ಚಿ

ತೋರಿಸಬಹುದು. ಇಂಥವನ್ನು ವಿವರಣಾತ್ಮಕ ಜೀವನ ಚರಿತ್ರೆಗಳೆಂದು ಕರೆಯಬಹುದು.

ನಾಯಕನ ಆತ್ಮಕಥೆ ಲಭ್ಯವಾಗಿ ಜೀವನ ಚರಿತ್ರೆ ಅವಶ್ಯಕವೆ ಎಂಬ ಪ್ರಶ್ನೆಗೂ ಅವಕಾಶವುಂಟು. ಆತ್ಮಕಥೆ ಕತೆಗಾರನ ನೆನಪುಗಳ ಸರಮಾಲೆ. ತನಗೆ ಅನಿಸಿದ್ದನ್ನು ಅವನು ನಿರೂಪಿಸುತ್ತಾನೆ; ಬೇಡವಾದ್ದನ್ನು ತ್ಯಜಿಸುತ್ತಾನೆ. ತನಗೆ ಕ್ಷುಲ್ಲಕವೆಂದು ತೋರಿದ ಸಂಗತಿಗಳನ್ನು ಕೈಬಿಡಬಹುದು; ಅಥವಾ ಅವುಗಳನ್ನೆ ಅತಿಶಯಗೊಳಿಸಬಹುದು. ತಾಳೆ ನೋಡಲಾಗದ ಅಗತ್ಯ ಸಂಗತಿಗಳೂ ಆತ್ಮಕಥೆಯಲ್ಲಿ ನುಸುಳಬಹುದು. ತಂತಮ್ಮ ದೋಷಗಳನ್ನು ನಿರ್ಭಯವಾಗಿ ನಿಸ್ಸಂಕೋಚವಾಗಿ ಹೊರಹಾಕುವ ಸತ್ಯನಿಷ್ಠ ಆತ್ಮಕಥೆಗಾರರು ಜಗತ್ತಿನಲ್ಲಿ ವಿರಳ. ಒಬ್ಬ ಗಾಂಧಿ, ಒಬ್ಬ ಟಾಲ್‌ಸ್ಟಾಯ್ ಸಿಗಬಹುದು. ಅವರು ಸಹ ತಮಗೆ ಸರಿಕಂಡದ್ದನ್ನು ಮಾತ್ರ ವಿವರಿಸಬಹುದು. ಕೆಲವು ವೇಳೆ ತಂತಮ್ಮ ದೋಷಗಳು ಸತ್ಯವಂತರಿಗೂ ಗೋಚರಿಸದಿರಬಹುದು. ಮುಖದ ಕಲೆ, ಬೆನ್ನಿನ ಮಚ್ಚೆ ನೋಡಿಕೊಳ್ಳಬೇಕಾದರೆ ಕನ್ನಡಿ ಬೇಕಾಗುತ್ತದೆ. ಜೀವನ ಚರಿತ್ರಕಾರರೇ ಈ ಕನ್ನಡಿಗಳು. ನಾಯಕರಿಗೆ ಗೋಚರವಾಗದ ಅನೇಕ ಸಂಗತಿಗಳು ಜೀವನ ಚರಿತ್ರಕಾರರ ಕಣ್ಣಿಗೆ ಬೀಳುತ್ತವೆ. ಆದ್ದರಿಂದ ಆತ್ಮಕಥೆ ಜೀವನ ಚರಿತ್ರೆಗೆ ಆಕರವಾಗಬಹುದೇ ಹೊರತು, ಅದರ ಜಾಗವನ್ನಾಕ್ರಮಿಸಿಕೊಳ್ಳಲಾರದು.

ಆತ್ಮಕಥೆ, ದಿನಚರಿ, ಪತ್ರಗಳು, ಪ್ರಕಟಿತ ಗ್ರಂಥಗಳು ಮತ್ತು ಇತರ ವೈಯಕ್ತಿಕ ದಾಖಲೆಗಳು ಜೀವನ ಚರಿತ್ರೆಗೆ ಆಕರಗಳಾಗುತ್ತವೆ. ಸಮಾಚಾರ ಪತ್ರಿಕೆಗಳೂ ಸಾಮಗ್ರಿಯನ್ನೊದಗಿಸಬಲ್ಲುವು. ನಾಯಕನ ಪರಿಚಯಸ್ಥರಿಂದ ದೊರಕಬಹುದಾದ ಸಾಕ್ಷ್ಯ ಪುರಾವೆಗಳು ಸಹ ಮಾನ್ಯವಾಗುತ್ತವೆ. ಆದರೆ ಇವುಗಳನ್ನು ಬಳಸಿಕೊಳ್ಳುವಾಗ ಜೀವನ ಚರಿತ್ರಕಾರ ಜಾಗರೂಕನಾಗಿರಬೇಕು. ಮೈಮರಹು ಆಲಸ್ಯನಿರ್ಲಕ್ಷ್ಯಗಳು ಅಂತೆಯೇ ಪಕ್ಷಪಾತ ಮನೋಭಾವ ಅವನನ್ನು ದಿಕ್ಕುಗೆಡಿಸುತ್ತವೆ. ಸತತವಾದ ಸಂಶೋಧನೆಯ ಮೂಲಕ, ನಿರಂತರವಾದ ಸತ್ಯಾನ್ವೇಷಣೆಯ ಮೂಲಕ ನಿಶ್ಚಿತವಾದ ತಾರತಮ್ಯವಿವೇಕದ ಮೂಲಕ ಸಾಮಗ್ರಿಗಳನ್ನು ವಿಶ್ಲೇಷಿಸಿ, ತಾಳೆ ನೋಡಿ, ನಿಖರತೆಯನ್ನು ಸಾಧಿಸಬೇಕಾಗುತ್ತದೆ. ಆತ್ಮಕಥೆಯಲ್ಲಿಯೂ ಪೂರ್ವಗ್ರಹ ಪಕ್ಷಪಾತಗಳಿಗೆಡೆಯುಂಟು. ದಿನಚರಿಯ ಸಂಗತಿಗಳು ಆ ಕ್ಷಣದ ಕರ್ತೃವಿನ ಮನೋಭಾವವನ್ನು ಮಾತ್ರ ಪ್ರತಿಬಿಂಬಿಸುತ್ತವೆ. ಮತ್ತೊಂದು ದಿನದ ದಾಖಲೆಯಲ್ಲಿ ತದ್ವಿರುದ್ಧವಾದ ಭಾವನೆಗಳಿಗೆ ಪುರಸ್ಕಾರ ದೊರೆಯಬಹುದು. ಸ್ಮೃತಿಶಕ್ತಿ ವೀಕ್ಷಣ ಸಾಮರ್ಥ್ಯದಲ್ಲಿಯೂ ದೋಷವಿರಬಹುದಷ್ಟೆ? ಭಿನ್ನ ಭಿನ್ನ ಆಕರಗಳನ್ನು ಮುಂದಿಟ್ಟುಕೊಂಡು ತಾಳೆ ನೋಡಿದಾಗ ಸತ್ಯಸಂಗತಿಗಳು ಅಭಿವ್ಯಕ್ತಗೊಳ್ಳಬಹುದು. ಪತ್ರಗಳು ಸಹ ಆ ಆ ಸಂದರ್ಭದ ಭಾವನಾಲೋಚನೆಗಳನ್ನು ಮತ್ತು ಸಂಗತಿಗಳನ್ನು ಮಾತ್ರ ಬಯಲು ಮಾಡುತ್ತವೆ. ಅವುಗಳ ಗುರು ಬಾಧ್ಯಸ್ಥ ಅಥವಾ ಉತ್ತರವಾದಿಯ ಅಪೇಕ್ಷೆ ನಿರೀಕ್ಷೆಗಳಿಂದ ಸೀಮಿತವಾಗಿರುತ್ತದೆ. ಅಷ್ಟೇ ಅಲ್ಲ, ಒಂದೇ ವಿಷಯವನ್ನು ಕುರಿತು ತಂದೆಗೆ, ಮಡದಿಗೆ, ಗೆಳೆಯನಿಗೆ ಬರೆದ ಪತ್ರಗಳು ಅನೇಕಾಂಶಗಳಲ್ಲಿ ಭಿನ್ನವಾಗಬಹುದು. ನಾಯಕ ಸಾಹಿತಿಯಾಗಿರುವ ಪಕ್ಷಕ್ಕೆ ಅವನ ಕೃತಿಗಳು ಅವನ ಜೀವನದ ಮೇಲೆ ಬೆಳಕು ಚೆಲ್ಲುವ ಸಾಧ್ಯತೆಯುಂಟು.

ಲಿಂಕನ್ ಲೆನಿನ್ ಗಾಂಧಿಯವರಂಥ ಮಹಾವ್ಯಕ್ತಿಗಳನ್ನು ಕುರಿತ ಜೀವನ ಚರಿತ್ರೆಗಳು ಕಾಲದೇಶಗಳ ಗಣನೆಯಿಲ್ಲದೆ ಮೇಲಿಂದ ಮೇಲೆ ಪ್ರಕಟವಾಗುವುದುಂಟಷ್ಟೆ. ಜೀವನ ಚರಿತ್ರಕಾರ ಅವುಗಳನ್ನು ನಿರ್ಲಕ್ಷಿಸಿ, ಮೂಲ ಆಕರಗಳ ಕಡೆಗೆ ಗಮನವೀಯುವುದು ಲೇಸು.

ತನಗೆ ತೋರಿದಂತೆ ಬಾಳ್ಗತೆ ರಚಿಸಿದ ನಂತರ ಹಿಂದಿನವುಗಳ ಮೇಲೆ ಕಣ್ಣಾಡಿಸಬಹುದು. ಮೊದಲೇ ಅವುಗಳನ್ನು ಅಧ್ಯಯನ ಮಾಡಿದ್ದಾದರೆ, ಸ್ವೋಪಜ್ಞತೆಗೆ ಭಂಗ ಬರುತ್ತದೆ, ಸ್ವತಂತ್ರಾಲೋಚನೆ ಕುಂಠಿತವಾಗುತ್ತದೆ, ದೃಷ್ಟಿ ಧ್ಯೇಯಗಳು ಸಹ ವ್ಯತ್ಯಾಸವಾಗುತ್ತವೆ. ಇದು ಒಂದು ಅಭಿಪ್ರಾಯ. ಹಿಂದಿನ ಜೀವನ ಚರಿತ್ರೆಗಳ ಅಧ್ಯಯನದಿಂದ ಜೀವನ ಚರಿತ್ರಕಾರ ತನ್ನ ನಿಲವನ್ನು ಮರೆಯಬೇಕಾಗಿಲ್ಲ; ಅದರಿಂದ ಹೊಸ ರೀತಿ ವಿಧಾನಗಳು ಸ್ಫುರಿಸಬಹುದು, ದೃಷ್ಟಿ ಧ್ಯೇಯಗಳಿಗೆ ಕೂರ್ಪು ಸಮನಿಸಬಹುದು ; ಹೊಸ ಆಲೋಚನೆಗಳಿಗೆ ಪ್ರೇರಣೆಯೊದಗಬಹುದು. ಅಷ್ಟೇ ಅಲ್ಲ, ಅಲ್ಲಿ ಎದ್ದು ಕಾಣುವ ಓರೆ ಕೋರೆಗಳನ್ನು ತಾನು ತಿದ್ದಿಕೊಳ್ಳಬಹುದು. ಇದು ಮತ್ತೊಂದು ಅಭಿಪ್ರಾಯ. ಇವೆರಡೂ ತ್ಯಾಜ್ಯವಲ್ಲ. ಜೀವನ ಚರಿತ್ರಕಾರನಿಗೆ ಬೇಕಾದ್ದು ಅವುಗಳ ಸಮನ್ವಯ.

ಮನುಷ್ಯನ ವ್ಯಕ್ತಿತ್ವ ಸಂಕೀರ್ಣವಾದದ್ದು; ಅವನ ಗುಣಶೀಲ ವರ್ತನೆಗಳು ಕ್ಷಣಕ್ಷಣಕ್ಕೂ ಬದಲಾಯಿಸುತ್ತವೆ. ಅವುಗಳ ಪೂರ್ಣ ಗ್ರಹಣ ಮಡದಿ ಮಕ್ಕಳಿಗೂ ಕಠಿನವಾಗುತ್ತದೆ. ಅಷ್ಟೇ ಅಲ್ಲ, ತನ್ನ ಸಮಗ್ರ ವ್ಯಕ್ತಿತ್ವದ ಕಲ್ಪನೆಯೇ ಅವನಿಗಿರುವುದಿಲ್ಲ. ಚಿಕ್ಕಂದಿನಲ್ಲಿ ಹೇಗಿದ್ದನೆಂಬುದು ಅವನಿಗೆ ಮರೆತುಹೋಗುತ್ತದೆ; ಮರುಕ್ಷಣದಲ್ಲಿ ತಾನು ಹೇಗೆ ವರ್ತಿಸಬಹುದೆಂಬ ವಿಚಾರ ಅವನಿಗರಿವಾಗದು. ಅಂದ ಮೇಲೆ ನಾಲ್ಕಾರು ಜನರ ಸಾಹಕಾರಿಕ ಪ್ರಯತ್ನದಿಂದಾಗಿ ನಾಯಕನ ವ್ಯಕ್ತಿತ್ವವನ್ನು ಅಳೆಯಬೇಕಾಗುತ್ತದೆ. ಈ ಕಾರಣದಿಂದಾಗಿ ಒಬ್ಬ ವ್ಯಕ್ತಿಯನ್ನು ಕುರಿತ ಜೀವನ ಚರಿತ್ರೆಗಳು ಬಹುಸಂಖ್ಯೆಯಲ್ಲಿ ಬೇಕಾಗುತ್ತವೆ.

ಸಾಮಗ್ರಿ ಸಂಚಯದನಂತರ ಪೃಥಕ್ಕರಣ ಸಂಸ್ಕರಣ ವಿಧಿಗಳನ್ನು ಜೀವನಚರಿತ್ರಕಾರ ನಿರ್ವಹಿಸಬೇಕಾಗುತ್ತದೆ. ತರುವಾಯ ಅವನು ರಚನೆಗೆ ತೊಡಗುತ್ತಾನೆ. ರಚನಾವ್ಯಾಪಾರದಲ್ಲಿ ಅವನು ತನ್ನ ಪ್ರತಿಭಾ ಸಾಮರ್ಥ್ಯ, ಬುದ್ಧಿಕೌಶಲ ಮತ್ತು ಮಾನವ ಸ್ವಭಾವ ಪರಿಜ್ಞಾನಗಳ ನೆರವು ಪಡೆಯಬೇಕಾಗುತ್ತದೆ. ತಂದೆ ತಾಯಿಯರು, ಜನ್ಮ, ಶೈಶವ, ಬಾಲ್ಯ, ಪ್ರಾಯ, ಮಧ್ಯವಯಸ್ಸು ಮತ್ತು ವಾರ್ಧಿಕ್ಯ-ಹೀಗೆ ಜೀವನಾವಧಿಯನ್ನು ವಿವಿಧ ಹಂತಗಳಾಗಿ ವಿಂಗಡಿಸಿಕೊಂಡು ಚರಿತ್ರೆಯನ್ನು ರಚಿಸಬಹುದು. ಸಾಮಾಜಿಕ ರಾಜಕೀಯ ಸಂಗತಿಗಳನ್ನು ಭಿತ್ತಿರೂಪವಾಗಿ ವಿವರಿಸಬಹುದು. ಕೊನೆಯಲ್ಲಿ ನಾಯಕನ ಸಾಧನೆ ಸಿದ್ಧಿಗಳನ್ನು ವಿಶದೀಕರಿಸಬಹುದು. ಇದು ಒಂದು ಜೀವನಚರಿತ್ರ ವಿಧಾನ. ಬಾಲ್ಯ, ಸಾಧನೆ, ಸಾಹಸ, ಸಿದ್ಧಿ, ಅವಸಾನ ಈ ಸೋಪಾನ ಪಂಚಕದ ಉಪಯುಕ್ತತೆಯನ್ನು ಕೆಲವು ವಿದ್ವಾಂಸರು ಪ್ರಶಂಸಿಸುತ್ತಾರೆ. ನೇರವಾಗಿ, ಸರಳವಾಗಿ, ನಿರ್ಭಯವಾಗಿ ಹಾಗೂ ಉದಾರವಾಗಿ ಉಕ್ತಗೊಂಡ ಸತ್ಯವೇ ಜೀವನ ಚರಿತ್ರೆಯ ಸಂಮೋಹನ ಗುಣವೆಂದು ಆಲ್‌ಫ್ರೆಡ್, ಆರ್. ಕಾಂಕ್ಲಿಂಗ್ ನುಡಿಯುತ್ತಾನೆ.[೨] ಅವನು ಜೀವನ ಚರಿತ್ರೆಯ ರಚನಾ ವಿಧಾನದ ಬಗ್ಗೆ ಆರು ನಿಯಮಗಳನ್ನು ರೂಪಿಸುತ್ತಾನೆ: ೧. ನಾಯಕನಿಗೆ ಸಂಬಂಧಿಸಿದ ಸಂಗತಿಗಳನ್ನು ಕೂಲಂಕಷವಾಗಿ ಅರಿತುಕೊಳ್ಳಬೇಕು. ೨. ಅವುಗಳನ್ನು ಅಕಾರಾದಿಯಾಗಿ ಅಥವಾ ವಿಷಯವಾರಾಗಿ ಜೋಡಿಸಿಕೊಳ್ಳಬೇಕು. ೩. ಯಾವುದನ್ನು ಹಿಗ್ಗಿಸಬೇಕು, ಯಾವುದನ್ನು ಕುಗ್ಗಿಸಬೇಕು, ಯಾವುದಕ್ಕೆ ಎಷ್ಟು ಜಾಗ ಕೊಡಬೇಕು ಎಂಬುದನ್ನು ಮೊದಲೇ ನಿರ್ಣಯಿಸಿಕೊಳ್ಳಬೇಕು. ೪. ರಚನೆಯ ಕಾರ್ಯ ನಿಧಾನವಾಗಿ ಹಾಗೂ ಸಮರ್ಪಕವಾಗಿ

---

೨ Quoted in *The Nature of Biography*, John A. Garraty, p. 198.

ಸಾಗಬೇಕು. ೫. ಹೊಗಳಿಕೆ ತೆಗಳಿಕೆಗಳನ್ನು ಕೈಬಿಡತಕ್ಕದ್ದು; ಸಂಗತಿಗಳೇ ಗುಣಾವಗುಣಗಳನ್ನು ಹೊಮ್ಮಿಸುವಂತಿರಬೇಕು. ೬. ಓದುಗ ತಿಳಿಯಬೇಕಾದ ಸಂಗತಿಗಳನ್ನು ಮುಚ್ಚಬಾರದು.[೨] ಜೀವನ ಚರಿತ್ರೆಯ ರಚನೆಯಲ್ಲಿ ಕಾಂಕ್ಲಿಂಗ್‌ಗೆ ಜೆಮ್ಸ್ ಪಾರ್ಟನ್ ಗುರು. ನಿರಂತರತೆ, ಅಂದರೆ ಕಾಲಾನುಕ್ರಮ ಜೀವನ ಚರಿತ್ರೆಯ ಮುಖ್ಯಲಕ್ಷಣವೆಂದೂ, ನಾಯಕನ ಪತ್ರ ಮತ್ತು ಉಪನ್ಯಾಸಗಳ ಉದ್ಧರಣೆಯ ಮೂಲಕ ಅವನ ವ್ಯಕ್ತಿತ್ವ ವಿಕಾಸಗೊಳ್ಳುವಂತಿರಬೇಕೆಂದೂ, ಸಾಧ್ಯವಾದಷ್ಟೂ ನಾಯಕನೇ ತನ್ನ ಕತೆಯನ್ನು ಹೇಳಿಕೊಳ್ಳುತ್ತಿರುವಂತೆ ಭಾಸವಾಗಬೇಕೆಂದೂ ಪಾರ್ಟನ್ ಸ್ಪಷ್ಟಪಡಿಸುತ್ತಾನೆ.

ಸಾಧಾರಣ ವ್ಯಕ್ತಿ ಸಹ ಇತರರಿಗೆ ರಹಸ್ಯವಾಗಿಯೇ ಉಳಿಯುತ್ತಾನೆ. ಅಂದರೆ ಆತನನ್ನು ಪೂರ್ಣವಾಗಿ ಅರ್ಥಮಾಡಿಕೊಳ್ಳುವುದು ಕಷ್ಟ. ಸೂಕ್ಷ್ಮ ಗ್ರಹಣ ಸಾಮರ್ಥ್ಯವುಳ್ಳ ಜೀವನ ಚರಿತ್ರಕಾರನಿಗೆ ಮಾತ್ರ ಅವನ ಚಿತ್ತ ಗುಹೆಯಲ್ಲಿ ನಡೆಯುತ್ತಿರುವ ವ್ಯಾಪಾರಗಳು ಮೊಗದೋರುತ್ತವೆ. ಹಾಗೆ ಮೊಗದೋರಿದಾಗ ಮಾತ್ರ ಪಾತ್ರಗಳ ಚಿತ್ರೀಕರಣ ಸಾಧ್ಯವಾಗುತ್ತದೆ. ಲೇಖಕನ ಕುಂಚದಿಂದ ಹೊರಹೊಮ್ಮಿದ ಪಾತ್ರಗಳು ಜೀವಂತವಾಗಿರಬೇಕು. ಹಾಗಿದ್ದರೆ ಮಾತ್ರ ಅದು ಓದುಗರ ಹೃದಯವನ್ನು ಸೆರೆಹಿಡಿಯುತ್ತವೆ. ಲೇಖಕ ತನ್ನ ಪಾತ್ರಗಳ ಗುಣಾವಗುಣಗಳ ಬಗ್ಗೆ ತೀರ್ಪು ನೀಡಬಾರದು; ಖಂಡನೆ ಮಂಡನೆಗಳ ಮೂಲಕ ಅದು ಕೃತಿಯಲ್ಲಿ ಗೋಚರಿಸಬಾರದು. ಅವನು ಯಾವಾಗಲು ಮರೆಯಲ್ಲಿರಬೇಕೆ ಹೊರತು ರಂಗದ ಮೇಲೆ ತೋರಿಸಿಕೊಳ್ಳಬಾರದು. ತನ್ನ ಪಾತ್ರಗಳನ್ನು ಮುಂದೆ ಬಿಟ್ಟುಕೊಂಡು, ಅವರ ಹಿಂದೆ ಅವನು ಓಡಾಡಿಕೊಂಡಿರಬೇಕೇ ಹೊರತು, ಅವರ ಅಗ್ರಭಾಗದಲ್ಲಿ ಕಾಣಿಸಿಕೊಳ್ಳಬಾರದು. ವ್ಯಕ್ತಿಗಳ ವರ್ತನೆ, ಕ್ರಿಯೆ ಹಾಗೂ ಮಾತುಕತೆಗಳ ಮೂಲಕ ಅವನ ಗುಣದೋಷಗಳು ಬಯಲಾಗಬೇಕು.

ಜೀವನ ಚರಿತ್ರೆ ಬರಿಯ ವರದಿಯಾಗಬಾರದು, ಘಟನೆಗಳ ಪಟ್ಟಿಯಾಗಬಾರದು. ಜೀವನವೇ ಒಂದು ಕಲೆಯೆಂಬುದನ್ನು ಮರೆಯಲಾಗದು. ಮಾನವೀಯ ಗುಣಗಳ ಗಾಢ ಸಂಸ್ಪರ್ಶವಿಲ್ಲದ, ಜೀವನ ವ್ಯಾಪಾರಗಳ ರಕ್ತಸಂಚಾರವಿಲ್ಲದ ಘಟನೆಗಳ ಸರಪಳಿ ಚರಿತ್ರೆಯಾಗುತ್ತದೆಯೆ ಹೊರತು ಕಲಾಕೃತಿಯಾಗಲಾರದು. ಅದು ಸತ್ಯದ ಹಿನ್ನೆಲೆಯಲ್ಲಿ ವ್ಯಕ್ತಿತ್ವದ ವಿಕಾಸಕ್ಕೆ ಅನುವು ಮಾಡಿಕೊಡಬೇಕು. ಇದು ಶ್ರಮಸಾಧ್ಯವಾದ ಸಾಧನೆ. ವ್ಯಕ್ತಿತ್ವ ವಿಕಾಸವೇ ಜೀವನ ಚರಿತ್ರೆಯ ಗುರಿ. ನೆಪೋಲಿಯನ್ನನ ಬಾಳ್ಗತೆಯನ್ನು ರಚಿಸುವಾಗ, ಅವನ ಮಾನಸಿಕ ಹಾಗೂ ಆಧ್ಯಾತ್ಮಿಕ ವಿಕಾಸದ ಕಡೆಗೆ ಹೆಚ್ಚು ಗಮನ ಕೊಡಬೇಕಾಗುತ್ತದೆ. ಚಾರಿತ್ರಿಕ ಘಟನೆಗಳ ಹಿನ್ನೆಲೆಯಲ್ಲಿ ನಿಲ್ಲಬೇಕಾಗುತ್ತದೆ. ಕವಿಯ ವ್ಯಕ್ತಿತ್ವ ವಿಕಾಸಕ್ಕೂ ಆತನ ಕಾವ್ಯಸೃಷ್ಟಿಗೂ ನಿಕಟ ಸಂಬಂಧವಿರುವುದರಿಂದ, ಅವನ ಜೀವನ ಚರಿತ್ರೆಯ ರಚನೆಯಲ್ಲಿ ಕಾವ್ಯಗಳು ಮಹತ್ವಪೂರ್ಣವಾದ ಪಾತ್ರ ವಹಿಸಬೇಕಾಗುತ್ತದೆ.

ಒಂದಾನೊಂದು ಕಾಲದಲ್ಲಿ ಜೀವನ ಚರಿತ್ರೆ, ಚರಿತ್ರೆಯ ಒಂದು ಶಾಖೆಯೆಂದು ಗಣನೆಗೊಂಡಿತ್ತೇ ಹೊರತು, ಸಾಹಿತ್ಯದ ಸೀಮೆಯೊಳಗೆ ಅದಕ್ಕೆ ಪ್ರವೇಶವಿರಲಿಲ್ಲ. ಅಂಥ ಕಲ್ಪನೆ ಅಥವಾ ಆಲೋಚನೆ ತರ್ಕಬದ್ಧವಲ್ಲವೆಂಬ ಸಂಗತಿ ಕಾಲಾನಂತರದಲ್ಲಿ ಅಭಿವ್ಯಕ್ತಗೊಂಡಿತು. ಸಂಸ್ಕೃತದಲ್ಲಿ 'ಚರಿತ್ರಂ' ಎಂಬ ಪದಕ್ಕೆ behaviour, practice,

---

೨. Ibid, pp. 198-199.

deeds; history, life, biography, account, adventures; nature, disposition; duty, established or instituted observance ಎಂಬೆಲ್ಲ ಅರ್ಥಗಳಿವೆ. Biography ಎಂಬ ಪ್ರಕಾರ Historyಯ ಶಾಖೆ ಎಂಬ ಕಾರಣಕ್ಕಾಗಿ, ಅದನ್ನು 'ಜೀವನ ಚರಿತ್ರೆ' ಎಂದು ಕರೆದಿರುವಂತೆ ತೋರುತ್ತದೆ. ಅದಿಲ್ಲದಿದ್ದರೆ ಅದನ್ನು 'ಜೀವನ ಕಥೆ' ಎಂದು ಕರೆಯಬಹುದಿತ್ತೋ ಏನೋ.

ಹೆಸರು ಯಾವುದೇ ಇರಲಿ, ಚರಿತ್ರೆ ಮತ್ತು ಜೀವನ ಚರಿತ್ರೆಗಳ ನಡುವೆ ಹೊಕ್ಕುಳಬಳ್ಳಿ ಸಂಬಂಧವಿಲ್ಲವೆಂಬುದಂತು ನಿಜ. ಚರಿತ್ರೆ ಕಾದಂಬರಿಗಳ ನಡುವೆ ಸಂಬಂಧವಿರುವುದಾದರೆ, ಚರಿತ್ರೆ ಜೀವನ ಚರಿತ್ರೆಗಳ ನಡುವೆಯೂ ಸಂಬಂಧವಿದೆ ಎಂದು ಹೇಳಬೇಕಾಗುತ್ತದೆ. ಒಂದರ ನೆರವು ಮತ್ತೊಂದಕ್ಕೆ ಅನಿವಾರ್ಯ ಎಂಬಷ್ಟರ ಮಟ್ಟಿಗೆ ಅವುಗಳ ನಡುವೆ ಸಂಬಂಧವಿರಬಹುದೇ ಹೊರತು, ಅದಕ್ಕಿಂತ ಹೆಚ್ಚಿಲ್ಲ. ಅಮೇರಿಕೆಯಿಂದ ಬಂದ ಗೋಧಿಯನ್ನು ತಿಂದಾಕ್ಷಣಕ್ಕೆ ಭಾರತೀಯರಿಗೂ ಅಮೇರಿಕೀಯರಿಗೂ ರಕ್ತಸಂಬಂಧವಿದೆಯೆಂದು ತಿಳಿಯಬಾರದಷ್ಟೆ. ಚರಿತ್ರೆಗೂ ಜೀವನ ಚರಿತ್ರೆಗೂ ಯಾವ ವಿಧವಾದ ರಕ್ತಸಂಬಂಧವೂ ಇಲ್ಲ. ಚರಿತ್ರೆಯಲ್ಲಿ ಘಟನೆಗಳಿಗೆ ಪ್ರಧಾನ ಪಟ್ಟ; ಜೀವನ ಚರಿತ್ರೆಯಲ್ಲಿ ವ್ಯಕ್ತಿಗೆ ಅಗ್ರಪೂಜೆ. ಚರಿತ್ರೆಯಲ್ಲಿ ವ್ಯಕ್ತಿಗಳು ಘಟನೆಗಳಿಗೆ ಪೋಷಕವಾಗಿ ಬಂದರೆ, ಜೀವನ ಚರಿತ್ರೆಯಲ್ಲಿ ಘಟನೆಗಳು ವ್ಯಕ್ತಿತ್ವದ ವಿಕಾಸಕ್ಕೆ ಉಪಷ್ಟಂಭಕವಾಗಿ ಬರುತ್ತವೆ. ಚರಿತ್ರೆಯಲ್ಲಿ ಬರುವ ಪ್ರತಿಯೊಬ್ಬ ವ್ಯಕ್ತಿಯೂ ಸ್ವತಂತ್ರ; ಜೀವನ ಚರಿತ್ರೆಯಲ್ಲಿ ಎಲ್ಲ ವ್ಯಕ್ತಿಗಳೂ ನಾಯಕನಿಗೆ ಅಧೀನ. ಚರಿತ್ರೆಯಲ್ಲಿ ಪ್ರತಿಯೊಂದು ಘಟನೆಗೂ ನೆಲೆಯುಂಟು; ಜೀವನ ಚರಿತ್ರೆಯಲ್ಲಿ ಆಯ್ದ ಘಟನೆಗಳಿಗೆ ಮಾತ್ರ ಬೆಲೆಯುಂಟು. ಚರಿತ್ರೆಯಲ್ಲಿ ವ್ಯಕ್ತಿ ಜೀವನ ಅಪೂರ್ಣ; ಜೀವನ ಚರಿತ್ರೆಯಲ್ಲಿ ಅದು ಪರಿಪೂರ್ಣ. ಹುಟ್ಟು ಸಾವುಗಳ ನಡುವಣ ಸಂಗತಿಗಳೆಲ್ಲ ಜೀವನ ಚರಿತ್ರೆಯ ತೆಕ್ಕೆಯಲ್ಲಿ ಸೇರ್ಪಡೆಯಾಗುತ್ತವೆ. ಚರಿತ್ರೆಯಲ್ಲಿ ವ್ಯಕ್ತಿಜೀವನದ ಕೆಲವು ತುಣುಕುಗಳು ಮಾತ್ರ ಘಟನೆಗಳ ಆಶ್ರಯದಲ್ಲಿ ಸಮಾಗಮಗೊಳ್ಳುತ್ತವೆ.

ಜೀವನ ಚರಿತ್ರೆಯ ಅತಿ ಮುಖ್ಯ ಅಂಶವೆಂದರೆ, ವ್ಯಕ್ತಿಯ ಆಧ್ಯಾತ್ಮಿಕ ಮತ್ತು ಮಾನಸಿಕ ವಿಕಾಸ. ವ್ಯಕ್ತಿತ್ವದ ವಿಕಾಸಕ್ಕೆ ಅಲ್ಲಿ ಒತ್ತು ಹೆಚ್ಚು. ಚರಿತ್ರೆಗೂ ಜೀವನ ಚರಿತ್ರೆಗೂ ವ್ಯತ್ಯಾಸವಿರುವುದೇ ಇಲ್ಲಿ. ಪರಿಸರದ ವರ್ಣನೆ, ಘಟನೆಗಳ ವಿವರಣೆ, ಸನ್ನಿವೇಶಗಳ ನಿರ್ವಹಣೆ, ಅನ್ಯವ್ಯಕ್ತಿಗಳ ಜೋಡಣೆ-ಇವೆಲ್ಲ ನಾಯಕನ ವ್ಯಕ್ತಿತ್ವದ ವಿಕಾಸಕ್ಕೆ ಪೋಷಕವಾಗಿ ಸಮಾವೇಶಗೊಳ್ಳಬೇಕು. ನಾಯಕ ವ್ಯಕ್ತಿಗೂ ಇತರ ಸಂಗತಿಗಳಿಗೂ ಸಾವಯವ ಸಂಬಂಧವಿರಬೇಕು. ಚರಿತ್ರೆಯಲ್ಲಿ ಅನಾವಶ್ಯಕವೆಂದು ತೋರುವ ಆಖ್ಯಾನೋಪಾಖ್ಯಾನುಗಳು ಜೀವನ ಚರಿತ್ರೆಯಲ್ಲಿ ರಸವಾಹಿನಿಗಳಾಗಿ ಪರಿಣಮಿಸುತ್ತವೆ; ನಾಯಕನ ವ್ಯಕ್ತಿತ್ವಕ್ಕೆ ಮೆರಗು ಕೊಡುತ್ತವೆ. ಹಾಸ್ಯಕ್ಕೆ, ಕಟಕಿಗೆ, ಶೃಂಗಾರಕ್ಕೆ, ಎಲ್ಲ ರಸಗಳಿಗೂ ಇಲ್ಲಿ ಸ್ಥಾನವುಂಟು. ನಾಯಕನ ನಡೆನುಡಿ ಗುಣಶೀಲಗಳ ನಿರೂಪಣೆ ಅತ್ಯಗತ್ಯ. ಮಾನವೀಯ ಮೌಲ್ಯಗಳೇ ಇತರ ಜೀವಂತಿಕೆಗೆ, ಹಾಗೂ ಇದರ ಚಿಂತನೆಗೆ ಆಧಾರವಾಗುತ್ತವೆ. ಕಾದಂಬರಿಯ ಪಾತ್ರರಚನೆ, ನಾಟಕದ ನಾಟಕೀಯತೆ, ಕತೆಯ ನಿರೂಪಣಾ ಕೌಶಲ ಇವು ಜೀವನ ಚರಿತ್ರೆಯಲ್ಲಿ ನಿರೀಕ್ಷಿಸಬಹುದಾದ ಲಕ್ಷಣಗಳು. ಸರಸಸೌಷ್ಠವ ಧ್ವನಿಸುಗಂಧಿತ ಶೈಲಿ ಜೀವನ ಚರಿತ್ರೆಗೆ ಭೂಷಣವಾದರೆ ಚರಿತ್ರೆಗೆ ದೂಷಣವಾಗುತ್ತದೆ. ಈ ಕಾರಣದಿಂದಲೇ ಲಿಟ್ಟನ್

ಸ್ಟ್ರ್ಯಾಚಿ ಹೇಳಿದ್ದು 'ಲೇಖನ ಕಲೆಯ ಶಾಖೆಗಳಲ್ಲೆಲ್ಲ ಇದು ಮಧುರವೂ ವಿಶಿಷ್ಟವೂ ಮತ್ತು ಮಾನವೀಯವೂ ಆದ ಪ್ರಕಾರ' ಎಂದು.[೧]

ಸಾಹಿತ್ಯದ ಪ್ರಕಾರದೊಳಗೆ ಜೀವನ ಚರಿತ್ರೆಗೂ ಗೌರವಯುತವಾದ ಸ್ಥಾನವಿದೆ ಎಂಬುದು ಮೇಲಣ ವಿವರಣೆಯಿಂದ ಸ್ಪಷ್ಟವಾಗುತ್ತದೆ. ಜಾನ್ಸನ್, ವಿಕ್ಟೋರಿಯಾ ಮಹಾರಾಣಿ, ನೆಪೋಲಿಯನ್, ಲೆನಿನ್, ಗಾಂಧಿ, ವಿವೇಕಾನಂದ, ಐನ್‌ಸ್ಟೀನ್ ಮೊದಲಾದ ಕವಿ ಋಷಿ ಚಕ್ರವರ್ತಿ ದಂಡನಾಯಕ ರಾಜಕೀಯ ಮುತ್ಸದ್ದಿಗಳ ಜೀವನ ಚರಿತ್ರೆಗಳನ್ನು ಓದುವಾಗ ಬಾಹ್ಯ ಪ್ರಪಂಚ ಸಂಪೂರ್ಣವಾಗಿ ಮರೆತುಹೋಗುತ್ತದೆ. ಓದುಗರು ನಾಯಕನ ಜೀವನದಲ್ಲಿ ತಾದಾತ್ಮ್ಯ ಹೊಂದುತ್ತಾರೆ. ಇಲ್ಲಿಯ ವ್ಯಕ್ತಿಗಳು ವಾಸ್ತವತೆಯುಲ್ಲದ್ದಿ ತೆಗೆದವರಾದರೂ ವಾಚಕರನ್ನು ಮೋಹಗೊಳಿಸುತ್ತಾರೆ. ಅವರು ವಾಸ್ತವ ವ್ಯಕ್ತಿಗಳಾದ್ದರಿಂದಲೇ ಅವರಲ್ಲಿ ಓದುಗರಿಗೆ ಗೌರವ ಮೂಡುತ್ತದೆ. ಅವರ ಸುಖದುಃಖಗಳಲ್ಲಿ, ನೋವು ನಲುಮೆಗಳಲ್ಲಿ ಓದುಗರು ಪಾಲ್ಗೊಳ್ಳುವಂತಾಗುತ್ತದೆ. ವರ್ಣಶಿಲ್ಪಿಯಂತೆ ಜೀವನ ಚರಿತ್ರಕಾರನೂ ಮುಖ್ಯಾಂಶಗಳನ್ನು ಆಯ್ದುಕೊಳ್ಳುವುದರಿಂದ ಅವನ ಕೃತಿ ಕಲೆಯಾಗುತ್ತದೆ. ಆಯ್ಕೆ ಕಲೆಯ ಪ್ರಮುಖ ಕಾರ್ಯವಷ್ಟೆ ! ರಾಜನಂತೆ ರೈತನೂ ವರ್ಣಶಿಲ್ಪಿಯ ವಿಷಯವಾಗಬಹುದಷ್ಟೆ. ಈ ಮಾತು ಜೀವನ ಚರಿತ್ರಕಾರನಿಗೂ ಅನ್ವಯಿಸುತ್ತದೆ.

ಘಟನಾನುಗುಣವಾಗಿ ನಾಯಕನ ಗುಣಶೀಲಗಳು ಅಭಿವ್ಯಕ್ತಗೊಂಡು ಅವನ ವ್ಯಕ್ತಿತ್ವ ವಿಕಾಸಗೊಳ್ಳುತ್ತಿರಬೇಕು. ಗುಣಗಳಂತೂ ದೌರ್ಬಲ್ಯಗಳೂ ಅಂತೆಯೇ ವ್ಯಕ್ತಿತ್ವ ವಿಕಾಸಕ್ಕೆ ಅನುವಾಗುತ್ತವೆಂಬುದನ್ನು ಮರೆಯಲಾಗದು. ವಸ್ತು ದೃಷ್ಟಿ ಮತ್ತು ನಿರ್ಲಿಪ್ತತೆ ಕಲೆಯ ಸಲ್ಲಕ್ಷಣಗಳಷ್ಟೆ. ಇವುಗಳ ಅಭಾವದಿಂದ ಜೀವನ ಚರಿತ್ರೆ ಯಶಸ್ವಿಯಾಗಲಾರದು. ಜೀವನ ಚರಿತ್ರಕಾರ ನಾಯಕನ ಪರವಹಿಸಿಕೊಂಡು ಮಾತಾಡುವುದಾಗಲಿ, ಅಥವಾ ಅವನ ಸ್ಥಾನದಲ್ಲಿ ನಿಲ್ಲುವುದಾಗಲಿ, ಅಥವಾ ಅವನ ಮೇಲೆ ತನ್ನ ಅಭಿಪ್ರಾಯಗಳನ್ನು ಹೇರುವುದಾಗಲಿ ಸೂಕ್ತವಲ್ಲ. ವೇಷಭೂಷಣಗಳ ಮೂಲಕ ನಿಸರ್ಗನಗ್ನತೆಯನ್ನು ರೂಪಾಂತರಗೊಳಿಸುವುದೇ ಕಲೆಯಾದರೆ ಜೀವನ ಚರಿತ್ರೆಯೂ ಕಲೆಯೆಂದು ಒಪ್ಪಿಕೊಳ್ಳಬೇಕಾಗುತ್ತದೆ.

* * * * *

ನಾಯಕನ ವರ್ಣನೆಯಲ್ಲಿ ಜೀವನ ಚರಿತ್ರಕಾರನ ಇಷ್ಟಾನಿಷ್ಟಗಳು ತಲೆಯೆತ್ತಬಾರದು. ಘಟನೆಗಳನ್ನಾಗಲೀ ಸಂಭಾಷಣೆಗಳನ್ನಾಗಲೀ ಸೃಷ್ಟಿಸಬಾರದು. ಸೃಷ್ಟಿಸುವುದಾದರೆ ದಾಖಲೆಗಳನ್ನು ಆಧರಿಸಬೇಕು. ನಾಯಕನ ವ್ಯಕ್ತಿತ್ವಕ್ಕೆ ಅಥವಾ ಅವನ ಮಾನಸಿಕ ಪ್ರವೃತ್ತಿಗೆ ಸರಿಹೊಂದುವುದಿಲ್ಲವೆಂದು ಕೆಲವು ಸಂಗತಿಗಳನ್ನು ತಿರಸ್ಕರಿಸಬಾರದು.

ಅನನ್ಯ ಶರಣಾಗತಿ ಜೀವನ ಚರಿತ್ರಕಾರನಲ್ಲಿರಬೇಕಾದ ಮುಖ್ಯ ಗುಣಗಳಲ್ಲೊಂದು. ಅವನು ನಾಯಕನಿಗೆ ತನ್ನತನವನ್ನು ಮರೆತು, ಸಂಪೂರ್ಣವಾಗಿ ಸಮರ್ಪಿಸಿಕೊಳ್ಳಬೇಕು. ಸದಾ ನಾಯಕನ ಗುಣಶೀಲಗಳನ್ನು ನೆನೆಯುತ್ತ, ಅವನ ಬಾಳಿನ ಘಟನೆಗಳನ್ನು ಮೆಲುಕು ಹಾಕುತ್ತಾ, ಅವನೊಡನೆ ಒಡಾಡುತ್ತ, ಅವನ ಭಾವನೆ ಆಲೋಚನೆ ಅನುಭವಗಳನ್ನು ಪುನರನುಭವಿಸುತ್ತ, ಚಿತ್ತಕೋಶದಲ್ಲಿ ಅವನ ಚಿತ್ರವನ್ನು ಕುಂಚಿಸಿಕೊಳ್ಳುತ್ತ, ತನ್ನ ಹೃದಯ

---

೧ The most delicate and humane of all branches of the art of writing –Preface to 'Eminent Victorians.'

ದೇಗುಲಕ್ಕೆ ಅವನನ್ನು ಆವಾಹಿಸುತ್ತ, ಅನವರತ ಅವನನ್ನು ಆರಾಧಿಸುತ್ತ, ತಲ್ಲೀನತಾರೂಪದಲ್ಲಿ ಸಾಕ್ಷಾತ್ಕರಿಸಿಕೊಂಡಾಗ ಉತ್ತಮ ಜೀವನ ಚರಿತ್ರೆ ಸೃಷ್ಟಿಯಾಗುತ್ತದೆ. ಪ್ರಾಮಾಣಿಕತೆ ಸತ್ಯನಿಷ್ಠೆಗಳೆ ಮೂರ್ತೀಭವಿಸಿದಂತೆ ಅಂಥ ಸೃಷ್ಟಿಕಾರ್ಯ ನಡೆಯುತ್ತದೆ.

ಬರವಣಿಗೆಗೆ ಅಥವಾ ಶಿಲ್ಪಕ್ರಿಯೆಗೆ ತೊಡಗುವ ಮುನ್ನ ಜೀವನಚರಿತ್ರಕಾರ ತನ್ನ ನಾಯಕನನ್ನು ಪೂರ್ಣವಾಗಿ ಅರ್ಥಮಾಡಿಕೊಂಡಿರಬೇಕು. 'ಪೂರ್ಣವಾಗಿ' ಎನ್ನುವ ಮಾತಿಗೂ ಒಂದು ಮಿತಿಯಿದೆಯಷ್ಟೆ. ಅದರ ಅರ್ಥ ಅದನ್ನು ಬಳಸುವ ವ್ಯಕ್ತಿಯ ಇತಿಮಿತಿಯನ್ನವಲಂಬಿಸುತ್ತದೆ. ಸಾಪೇಕ್ಷವಾದ ವೈಜ್ಞಾನಿಕ ಕ್ಷೇತ್ರಕ್ಕೆ ಮಾತ್ರವಲ್ಲ, ಜೀವನದ ಸಕಲ ಕ್ಷೇತ್ರಗಳಿಗೂ ಅನ್ವಯಿಸುತ್ತದೆ. ಮಾನವನ ವ್ಯಕ್ತಿತ್ವ ಸಂಕೀರ್ಣವಾದದ್ದು. ಪ್ರಾಯಶಃ ಅದರಷ್ಟು ಸಂಕೀರ್ಣತೆಯುಳ್ಳ ಜೀವನ ಅಥವಾ ವಸ್ತು ಮತ್ತೊಂದಿಲ್ಲ. ಆದ್ದರಿಂದಲೇ ಒಬ್ಬ ವ್ಯಕ್ತಿಯನ್ನು ಚಿತ್ರಿಸಲು ಅಥವಾ ಅಳೆಯಲು ಹಲವಾರು ಜೀವನ ಚರಿತ್ರೆಗಳು ಬೇಕಾಗುತ್ತವೆ.

ಆತ್ಮಚರಿತ್ರೆ ಜೀವನ ಚರಿತ್ರೆಗಳೆರಡೂ ಅವಳಿ ಜವಳಿಗಳು. ಆತ್ಮಚರಿತ್ರೆಯೇ ಉತ್ತಮವಾದ ಜೀವನ ಚರಿತ್ರೆ ಎಂದು ಜಾನ್‌ಸನ್ ಹೇಳಿದ್ದುಂಟು. ಆ ಹೇಳಿಕೆಯಲ್ಲಿ ಪಾರ್ಶ್ವಿಕ ಸತ್ಯ ಮಾತ್ರ ಇದೆ. ಮರೆವು ಆತ್ಮಕತೆಗೆ ಊನವಾಗುತ್ತದೆ. ಚಿಕ್ಕಂದಿನ ಘಟನೆಗಳಂತು ನೆನಪಿಗೆ ಬರುವಂತೆಯೇ ಇಲ್ಲ. ದೋಷ ದೌರ್ಬಲ್ಯಗಳನ್ನು ಮುಚ್ಚುವ ಪ್ರವೃತ್ತಿ ಮಾನವ ಸಹಜವಾದದ್ದು. ಸಭ್ಯತೆಯ ಹೆಸರಿನಲ್ಲಿ ಕೆಲವು ಸಂಗತಿಗಳು ಕತ್ತಲೆಯಲ್ಲಡಗಿಕೊಳ್ಳುತ್ತವೆ. ಆದ್ದರಿಂದ ಆತ್ಮಕಥನಕಾರರ ಪ್ರಾಮಾಣಿಕತೆ ಅನುಮಾನಾಸ್ಪದವಾಗುತ್ತದೆ. ಈ ಕಾರಣಗಳಿಂದಾಗಿ ಪ್ರಮಾಣಭೂತವಾದ ಆತ್ಮಕಥೆ ಅಪರೂಪವೆಂದೇ ಹೇಳಬೇಕಾಗುತ್ತದೆ.

ಅಪ್ರಮಾಣಿಕವಾದ ಆತ್ಮಕಥೆಗಳು ಆಗೊಂದು ಈಗೊಂದು ಸಿಗುವುದಾದರೂ[೫] ಅವುಗಳ ಪರಿಪೂರ್ಣತೆಯ ಬಗ್ಗೆ ಶಂಕೆ ಇದ್ದೇ ಇರುತ್ತದೆ. ಮನೋಹರವಾದ ಗದ್ಯಶೈಲಿಯಿಂದ, ಆಕರ್ಷಕವಾದ ನಿರೂಪಣಾಕೌಶಲದಿಂದ ಮಹತ್ತರವಾದ ಭಾವಾಲೋಚನೆಗಳಿಂದ ಇಂಗ್ಲಿಷ್ ಸಾಹಿತ್ಯದ ಇತಿಹಾಸದಲ್ಲಿಯೇ ಅತ್ಯುತ್ತಮವಾದದ್ದೆಂದು ಪ್ರಕೀರ್ತಿತವಾಗಿರುವ ಗಿಬ್ಬನ್‌ನ ಆತ್ಮಕಥೆ ಅವನ ವ್ಯಕ್ತಿತ್ವವನ್ನು ಪೂರ್ಣವಾಗಿ ಪ್ರತಿನಿಧಿಸುವುದಿಲ್ಲವೆಂಬ ಅಭಿಪ್ರಾಯವೂ ಇದೆ. ಗಯಟೆ ತನ್ನ ಆತ್ಮಕತೆಗೆ ಕಾವ್ಯ ಮತ್ತು ಸತ್ಯ (Poetry and Truth) ಎಂಬ ಹೆಸರು ಕೊಡುವಾಗ, ತನ್ನ ಮಿತಿಯನ್ನರಿತಿದ್ದನೆಂದೇ ಹೇಳಬೇಕು.[೬] ಆತ್ಮಕಥನಕಾರ ತನ್ನೆಲ್ಲವನ್ನು ಬಯಲು ಮಾಡಲಾರ, ಆದ್ದರಿಂದ ಎಲ್ಲ ಆತ್ಮಕಥೆಗಳು ಅಪೂರ್ಣವೆಂಬುದೂ ಮೇಲಣ ಮಾತುಗಳ ತಾತ್ಪರ್ಯ.

* * * * *

ಸಾಹಿತ್ಯ ಕ್ಷೇತ್ರದಲ್ಲಿ ಅತ್ಯಂತ ಸರಳವೂ ನೇರವೂ ಪರಿಣಾಮಕಾರಿಯೂ ಆದ ಪ್ರಕಾರವೆಂದರೆ ಜೀವನ ಚರಿತ್ರೆ. ಅದರ ಆಕರ್ಷಕತೆಗೆ ಮುಖ್ಯವಾದ ಕಾರಣ ಅದರ

---

೫ ರೂಸೋವಿನ 'ಕನ್‌ಫೆಷನ್ಸ್' ಸರ್ ಎಡ್ಮಂಡ್ ಗಾಸೆಯ 'ಫಾದರ್ ಅಂಡ್ ಸನ್ಸ್' ಟಾಲ್‌ಸ್ಟಾಯ್ ಗಾಂಧಿಯವರ ಆತ್ಮಕಥೆಗಳನ್ನು ಈ ಸಂದರ್ಭದಲ್ಲಿ ಉದಾಹರಿಸಬಹುದು.

೬ 'ಸತ್ಯಶೋಧನೆ' ಎಂದು ಗಾಂಧಿ, 'ಹುಚ್ಚುಮನಸ್ಸಿನ ಹತ್ತು ಮುಖಗಳು' ಎಂದು ಕಾರಂತರು, 'ಭಾವ' ಎಂದು ಮಾಸ್ತಿ, 'ನೆನಪಿನ ದೋಣಿಯಲ್ಲಿ' ಎಂದು ಕುವೆಂಪು ತಂತಮ್ಮ ಆತ್ಮಕಥೆಗಳನ್ನು ಹೆಸರಿಸುವಲ್ಲಿ ಔಚಿತ್ಯ ವಿವೇಕಗಳನ್ನು ಪ್ರದರ್ಶಿಸಿದ್ದಾರೆಂದೇ ಹೇಳಬೇಕು.

ವಾಸ್ತವತೆ ಮತ್ತು ಅಮೂರ್ತತ್ವದ ಅಭಾವ. ಅದರಲ್ಲಿ ಬರುವ ವ್ಯಕ್ತಿಗಳೆಲ್ಲ ನೆರೆಹೊರೆಯವರಾದ್ದರಿಂದ, ಅವರ ಸುಖದುಃಖಗಳು, ಭಾವಾಲೋಚನಗಳು, ಕಳವಳ ಕಾತರಗಳು, ಸಾಧನೆ ಸಿದ್ಧಿಗಳು, ಕಷ್ಟಕಾರ್ಪಣ್ಯಗಳು, ಆಟಪಾಟಗಳು ಪ್ರತಿಯೊಂದು ಬದುಕಿನಲ್ಲಿಯೂ ಸಂಭವಿಸಬಹುದಾದವಾದ್ದರಿಂದ, ಮನುಕುಲದ ಸಹಾನುಭೂತಿಗೆ ಪಾತ್ರವಾಗುತ್ತವೆ; ಪ್ರತಿಯೊಬ್ಬ ವ್ಯಕ್ತಿಯ ಅಂತರಂಗವನ್ನು ಮುಟ್ಟಿ ತಟ್ಟುತ್ತವೆ. ಅಷ್ಟೇ ಅಲ್ಲ, ಆ ವ್ಯಕ್ತಿಗಳ ಜೀವನ ವ್ಯವಹಾರಗಳಲ್ಲಿ ಓದುಗನೂ ಭಾಗಿಯಾಗುತ್ತಾನೆ, ತನ್ನವನ್ನು ಅವನವೊಂದಿಗೆ ಹೋಲಿಸಿಕೊಂಡು ತನ್ನ ಓರೆಕೋರೆಗಳನ್ನು ತಿದ್ದಿಕೊಳ್ಳುತ್ತಾನೆ. ಆ ಸಂಭಾವ್ಯತೆಯೇ ಮಾನವನ ವಿಚಾರಕ್ಕೆ ಪ್ರೇರಕವಾಗುತ್ತದೆ; ಅವನ ಬಾಳಿನಲ್ಲಿ ಅಗೋಚರವಾಗಿ ಪ್ರವಹಿಸುತ್ತಿರುವ ರಾಗಭಾವಗಳನ್ನು ಬಡಿದೆಬ್ಬಿಸಿ, ಉದಾತ್ತಗೊಳಿಸಿ, ಊರ್ಧ್ವದ ಕಡೆಗೆ ತಿರುಗಿಸುತ್ತದೆ. ಎಲ್ಲಕ್ಕಿಂತ ಮಿಗಿಲಾಗಿ ಲೋಕವೇದಿಕೆಯ ಜೀವನ ನಾಟಕ ಎಂಥವರನ್ನಾದರೂ ರಮಿಸುತ್ತದೆಂಬುದಂತು ಸತ್ಯ.

ಸಮಕಾಲೀನ ಅಥವಾ ಪೂರ್ವಕಾಲೀನ ವ್ಯಕ್ತಿಗಳ ಜೀವನಚರಿತ್ರೆ ಜನಜೀವನದ ಮೇಲೆ ಅಪಾರ ಪ್ರಭಾವ ಬೀರುತ್ತದೆಂಬುದರಲ್ಲಿ ಸಂದೇಹವಿಲ್ಲ. ಅಲೆಕ್ಸಾಂಡರ್, ನೆಪೋಲಿಯನ್, ವಾಷಿಂಗ್‌ಟನ್, ಪುಲಿಕೇಶಿ, ಬಸವೇಶ್ವರ, ಅಂಬೇಡ್ಕರ್ ಮೊದಲಾದವರ ಜೀವನವನ್ನು ಪರಿಚಯಿಸಿಕೊಂಡ ನಂತರ ತಾವೂ ಅವರಂತಾಗಬೇಕೆಂಬ ಮಹತ್ವಾಕಾಂಕ್ಷೆ ಓದುಗರ ಮನಸ್ಸಿನಲ್ಲಿ ಮೂಡುವುದು ಸಹಜವೇ. ಅವರ ತೊಳಲಾಟ ಹೋರಾಟಗಳನ್ನೂ, ಸಿದ್ಧಿ ಪ್ರಸಿದ್ಧಿಗಳನ್ನೂ ಗಮನಿಸಿದಾಗ ಹೇಡಿಯಲ್ಲಿಯೂ ನವಶಕ್ತಿ ಸಂಚಾರವಾಗುವ ಸಂಭವವಿದೆ. ಪ್ಲೂಟಾರ್ಕ್ ಕೃತಿಗಳ ಅಧ್ಯಯನ ನೆಪೋಲಿಯನ್ ಮಾತ್ರವಲ್ಲ, ಫ್ರಾನ್ಸಿನ ಮಹಾಕ್ರಾಂತಿಯ ವೀರರ ಮೇಲೆಲ್ಲ ಪ್ರಭಾವ ಬೀರಿತಂತೆ. ಆ ಮಹಾಕ್ರಾಂತಿಯ ಪ್ರಭಾವ ಜಗತ್ತನ್ನೆಲ್ಲ ವ್ಯಾಪಿಸಿತೆಂಬ ವಿಷಯ ಚಾರಿತ್ರಿಕ ಸಂಗತಿಯಾಗಿದೆ.

ಬುದ್ಧ, ಅಶೋಕ, ಮಹಾವೀರ, ಮಾರ್ಟಿನ್ ಲೂಥರ್, ತಿರುಪ್ಪಾಣಿ, ಚೈತನ್ಯ ಮೊದಲಾದವರ ಜೀವನ ಚರಿತ್ರೆಗಳನ್ನೋದಿದಾಗ ಯಾರಿಗಾದರೂ ಅನಿಸದಿರಲಾರದು, ಅವರನ್ನು ಆ ಸ್ಥಾನಕ್ಕೊಯ್ದ ಶಕ್ತಿ ಸಾಮರ್ಥ್ಯಗಳು ಎಲ್ಲ ಮಾನವರಲ್ಲಿ ಸುಪ್ತಸ್ಥಿತಿಯಲ್ಲಿ ಅಥವಾ ಬೀಜರೂಪದಲ್ಲಿವೆ ಎಂದು. ಓದಿನಿಂದ ಅವು ಎಚ್ಚರಗೊಳ್ಳುತ್ತವೆ, ಇಲ್ಲ ಅಂಕುರಿಸುತ್ತವೆ. ಜೀವನ ಚರಿತ್ರೆಗಳು ಜಡವಸ್ತುಗಳಲ್ಲ, ಜೀವಂತ ಸ್ಫೂರ್ತಿಯ ಸೆಲೆಗಳು. ಅವನ್ನೋದಿದಾಗ ಅಲ್ಲಿಯ ವ್ಯಕ್ತಿಗಳ ಸಂಪರ್ಕದಲ್ಲಿದ್ದಂತೆ, ಅವರಲ್ಲಿ ತಾದಾತ್ಮ್ಯ ಹೊಂದಿದಂತೆ ಅನುಭವ ವಾಗುತ್ತದೆ. ಜೀವಂತ ವ್ಯಕ್ತಿಯ ಸಂಬಂಧದಿಂದ ಲಭಿಸುವ ಪ್ರೇರಣೆ ಪ್ರೋತ್ಸಾಹಗಳು ಅವರ ಜೀವನ ಚರಿತ್ರೆಗಳಿಂದಲೂ ಪ್ರಾಪ್ತವಾಗುತ್ತವೆ. ಓದುಗ ಶಿಲಾಹೃದಯಿಯಲ್ಲವಾದರೆ, ಸ್ವಾಮಿ ವಿವೇಕಾನಂದರ ಜೀವನ ಚರಿತ್ರೆಯನ್ನೋದಿದ ನಂತರ, ಅವನ ವರ್ತನೆ ಮುನ್ನಿನಂತಿರ ಲಾರದು. ಅದೊಂದು ಭಾವಪ್ರತಿಮೆ. ಅದರ ಸಾಕ್ಷಾತ್ಕಾರದಿಂದ ಬದುಕನ್ನು ಉನ್ನತಗೈದು ಕೊಂಡ ಜನ ಅಸಂಖ್ಯ. ಇಪ್ಪತ್ತನೆಯ ಶತಮಾನದ ಶಿಖರವ್ಯಕ್ತಿಗಳೆನಿಸಿಕೊಂಡಿರುವ ಲೆನಿನ್ ಗಾಂಧಿಯರ ಜೀವನಚರಿತ್ರೆಗಳ ಅಧ್ಯಯನದಿಂದ ಜೀವನ ಸಾಫಲ್ಯವನ್ನು ಕಂಡುಕೊಡು ಜನ ಇಲ್ಲದಿಲ್ಲ.

ಇದರಿಂದ ನೀತಿಬೋಧೆ ಜೀವನಚರಿತ್ರೆಗಳ ಗುರಿಯೆಂದು ತಿಳಿಯಲಾಗದು. ಅವುಗಳ ಗುರಿ ಜೀವನವೊಂದೇ ಹೊರತು, ತತ್ತ್ವೋಪದೇಶವಲ್ಲ, ಸಿದ್ಧಾಂತ ಸಂಸ್ಥಾಪನೆಯೂ ಅಲ್ಲ.

ಚಿನ್ನದಲ್ಲಿ ಹಳದಿಯ ಬಣ್ಣ, ಹೂವಿನಲ್ಲಿ ಸುಗಂಧ, ಜೇಂಕಿಯಲ್ಲಿ ಬೆಳಕಿರುವಂತೆ ಜೀವನ ಚರಿತ್ರೆಯಲ್ಲಿ ನೀತಿ ಧರ್ಮಗಳು ಹುದುಗಿರುತ್ತವೆ. ಅವು ಅನುಭವಗ್ರಾಹ್ಯವೇ ಹೊರತು ಶಬ್ದಗ್ರಾಹ್ಯವಲ್ಲ. ಅವು ಶಬ್ದರೂಪ ಪಡೆದ ಕೂಡಲೇ ಅವುಗಳ ಹೊಗರು ಮಸುಳುತ್ತದೆ, ಜೀವನ ಚರಿತ್ರೆ ಕಲಾಕೃತಿಯಾಗದೆ, ತತ್ವಗಳ ಪಟ್ಟಿಯಾಗುತ್ತದೆ.

ಸಮಾಜ, ಸಂಸ್ಕೃತಿ, ಇತಿಹಾಸವೆಂದ ಕೂಡಲೇ ಸಾಧಾರಣ–ಅಸಾಧಾರಣ ವ್ಯಕ್ತಿಗಳ ಚಿತ್ರ ಕಣ್ಮುಂದೆ ನಿಲ್ಲುತ್ತದೆ. ವ್ಯಕ್ತಿಗಳಲ್ಲದೆ ಅವುಗಳಿಗೆ ಅಸ್ತಿತ್ವವೇ ಇಲ್ಲ. ಅವರೇ ಅವುಗಳ ನಿರ್ಮಾತೃಗಳು. ವ್ಯಕ್ತಿಯ ಮಹಿಮೆಗೆ ಪರಿಸರ ನಿಮಿತ್ತವಾಗುವಂತೆ, ಸಂಸ್ಕೃತಿಯ ಪ್ರಗತಿಗೂ ವ್ಯಕ್ತಿ ಕಾರಣನಾಗುತ್ತಾನೆ. ಆದ್ದರಿಂದ ಸಮಾಜ ಸಂಸ್ಕೃತಿ ಇತಿಹಾಸಗಳ ಅರ್ಥವಂತಿಕೆಗೆ ಜೀವನಚರಿತ್ರೆಗಳು ಅತ್ಯಗತ್ಯವಾಗುತ್ತವೆ.

ಈ ಮೊದಲೇ ತಿಳಿಸಿದಂತೆ ಜೀವನಚರಿತ್ರೆಯ ರಚನೆ ಸುಲಭವಲ್ಲ. ಅದರ ಯಶಸ್ಸಿಗೆ ದಾಖಲೆಗಳ ಪರಿಶುದ್ಧಿ, ಕ್ಷೇತ್ರಕಾರ್ಯದ ಪ್ರಾಮಾಣಿಕತೆ, ಸಮಕಾಲೀನ ಸಾಕ್ಷಿದಾರರ ಹಾಗೂ ನಾಯಕನ ಇಚ್ಛಾಪೂರ್ವಕವಾದ ಸಹಕಾರ, ಜತೆಗೆ ಲೇಖಕನ ಪರಿಶ್ರಮ, ಸಹನೆ, ಬುದ್ಧಿಕೌಶಲಗಳು ಕಾರಣವೆಂಬುದನ್ನು ಮರೆಯುವಂತಿಲ್ಲ. ಜೀವನಚರಿತ್ರೆಯ ಆದಿ ಮಧ್ಯ ಅಂತ್ಯಗಳು ಹೀಗೆಯೇ ಇರತಕ್ಕದ್ದೆಂದು ಸೂತ್ರ ನಿಯಮಗಳ ಮೂಲಕ ಶಾಸನ ಮಾಡಲಾಗದು. ವ್ಯಾಕರಣಪಾಂಡಿತ್ಯದಿಂದ ಕವಿತ್ವ ಸಿದ್ಧಿಸದು; ಅಂತೆಯೇ ಸೂತ್ರಗಳ ಬಾಯಿಪಾಠದಿಂದ ಜೀವನ ಚರಿತ್ರೆಯ ಕಲೆ ವಶವಾಗದು. ನಾಯಕನಲ್ಲಿ ಗೌರವವಿಲ್ಲದಾಗ, ಸಮಾನ ಅಥವಾ ಸಮೀಪ ಮನೋಧರ್ಮದಿಂದ ಮಾತ್ರ ಲಭಿಸಬಹುದಾದ ತಾದಾತ್ಮ್ಯವಿಲ್ಲದಾಗ ಉತ್ತಮ ಜೀವನಚರಿತ್ರೆ ಮೂಡಲಾರದು.

*ಜೀವನ ಚರಿತ್ರೆ ಮತ್ತು ಇತರ ಪ್ರಬಂಧಗಳು, ೧೯೯೮,*
*ಪು. ೪೯-೬೫, ೬೮-೭೦, ೭೩-೭೬*

# ೮೦. ಕರ್ನಾಟಕದಲ್ಲಿ ಸಂಶೋಧನೆ

● ಬಿ. ವ್ಹಿ. ಶಿರೂರ

ಕುತೂಹಲದಲ್ಲಿ ಹುಟ್ಟಿ, ಸತ್ಯದಲ್ಲಿ ಪರ್ಯವಸಾನವಾಗುವುದು ಸಂಶೋಧನೆ. ಇಂಥ ಸಂಶೋಧನೆ ಕರ್ನಾಟಕದಲ್ಲಿ ಶಾಸನ, ಹಸ್ತಪ್ರತಿ, ಭಾಷೆಗಳ ಶೋಧ, ಸಂಗ್ರಹ, ವಿಶ್ಲೇಷಣೆ ಮತ್ತು ಪ್ರಕಟನೆಗಳ ರೂಪದಲ್ಲಿ ಪ್ರವಹಿಸಿದೆ, ಅವುಗಳಿಂದ ಕರ್ನಾಟಕದ ಇತಿಹಾಸ, ಸಾಹಿತ್ಯ, ಸಂಸ್ಕೃತಿಗಳ ಸಮಗ್ರ ದರ್ಶನವನ್ನು ಮಾಡುವ ಪ್ರಯತ್ನ ನಡೆದಿದೆ.

## ಶಾಸನಶೋಧ

ನಾಡಿನ ಚರಿತ್ರೆಯನ್ನೂ ಸಂಸ್ಕೃತಿಯನ್ನೂ ಅರಿಯಲು ಇರುವ ಮೂಲಭೂತ ಆಕರಗಳು ಶಾಸನಗಳು[1]. ಈ ಶಾಸನಶೋಧದ ಇತಿಹಾಸ ಪ್ರಾರಂಭವಾಗುವುದು ಮಿಶನರಿಗಳಿಂದಲೇ. ಶ್ರೀ ಉತ್ತಂಗಿ ಅವರು ಹೇಳುವ ಹಾಗೆ 'ಮಿಶನರಿಗಳನ್ನು ಕುರಿತು ಬರೆಯದೆ ಕರ್ನಾಟಕದ ಇತಿಹಾಸ ಪೂರ್ಣವಾಗದು.' ಶಾಸನಗಳನ್ನು ಸಂಕಲಿಸುವ ಕಾರ್ಯ ಮೊಟ್ಟ ಮೊದಲು ಪ್ರಾರಂಭವಾದುದು ಕರ್ನಲ್ ಮೆಕೆಂಜಿ (೧೭೫೩)ಯಿಂದ. ಸಂಶೋಧನೆಯ ಹುಚ್ಚು, ಜ್ಞಾನದ ತೃಷೆಯಿಂದ ಈತ ೩೮ ವರ್ಷ ಪರ್ಯಂತ ಸುಮಾರು ೪೦ ಸಾವಿರ ಮೈಲಿಗೂ ಹೆಚ್ಚು ದಕ್ಷಿಣಭಾರತವನ್ನು ಸಂಚರಿಸಿ ವಿವಿಧ ಭಾಷೆಗಳ ೮೦೭೦ ಶಾಸನ ನಕಲುಗಳನ್ನೂ, ೧೫೬೮ ಹಸ್ತಪ್ರತಿಗಳನ್ನೂ ೨೦೭೦ ಕೈಫಿಯತ್ತುಗಳನ್ನೂ ಸಂಗ್ರಹಿಸಿದನು. ಇವನು ಸಂಗ್ರಹಿಸಿದ ೨೦೦ಕ್ಕೂ ಮಿಕ್ಕಿದ ಕನ್ನಡ ಹಸ್ತಪ್ರತಿಗಳ ವಿವರವನ್ನು ವಿಲ್ಸನ್ ಸಂಪಾದಿತ 'ಮೆಕೆಂಜಿ ಸಂಗ್ರಹ' ಪುಸ್ತಕದಲ್ಲಿ ಕೊಡಲಾಗಿದೆ. ಇವನು ಏಷಿಯಾಟಿಕ್ ರಿಸರ್ಚಸ್‌ದ ೯ನೆಯ ಸಂಪುಟದಲ್ಲಿ ತಾನು ಕಂಡ ಕೆಲವು ಶಾಸನ, ಶಿಲ್ಪಗಳನ್ನು ಹೆಸರಿಸಿದ್ದಾನೆ. ಜೈನಧರ್ಮವನ್ನು ಕುರಿತಾದ ಇವನ ಲೇಖನವೂ ಪಂಡಿತರ ಗಮನವನ್ನು ಸೆಳೆಯಿತು. ಇವೆಲ್ಲವುಗಳಿಂದ ಇವನು ಕನ್ನಡ ಸಂಶೋಧನಲೋಕದ ಆದ್ಯಪುರುಷನೆನ್ನಿಸಿದನು. ಇದೇ ವೇಳೆಗೆ ಬುಕೆನನ್, ಸರ್‌ಜಾನ್ ಮಾಲ್‌ಕಮ್, ವಿಲಿಯಂ ಹೆನ್ರಿ ವರ್ಥ ಮೊದಲಾದವರೂ ಈ ಕ್ಷೇತ್ರದಲ್ಲಿ ಅಲ್ಪಸ್ವಲ್ಪ ಕೆಲಸ ಮಾಡಿದರು.

ಕನ್ನಡ ಶಾಸನಗಳ ಸುವ್ಯವಸ್ಥಿತವಾದ ಅಧ್ಯಯನ ಪ್ರಾರಂಭವಾದುದು ಎಲಿಯಟ್‌ನಿಂದ. ಶಾಸನಗಳಿಂದ ಇತಿಹಾಸದ ಅಂಶಗಳನ್ನು ಆಯ್ದುಕೊಳ್ಳುವ ಮತ್ತು ಅವುಗಳಿಂದ ಸತ್ಯವನ್ನು ಪ್ರತಿಷ್ಠಾಪಿಸುವ ಕಲೆಯನ್ನು ಫ್ಲೀಟ್ ಇವನಿಂದ ಕಲಿತನಂತೆ. ಇವನು ನಿಜಾಮರಾಜ್ಯದ ಪಶ್ಚಿಮ ಭಾಗ ಹಾಗೂ ಸೋಂದಾ ಪ್ರದೇಶದ ಸುಮಾರು ೧೩೦೦ ಶಾಸನ ಸಂಗ್ರಹಿಸಿದನು. ಅವುಗಳಿಂದ ಹೊರಡುವ ಇತಿಹಾಸದ ಒಂದೊಂದೆ ಎಳೆಗಳನ್ನು ಜೋಡಿಸಿ *Hindu Inscriptions* (೧೮೩೭) ಎಂಬ ಪ್ರಬಂಧ ಮಂಡಿಸಿದನು. ಶಾಸನಾಧಾರದ ಮೇಲೆ ಕರ್ನಾಟಕದ ಇತಿಹಾಸ ರಚಿಸಿದುದು ಈತನ ಮಹತ್ವದ ಸಾಧನೆ. ಈತನಿಂದ ದಕ್ಷಿಣ ಭಾರತದ ನಾಣ್ಯಗಳ ಅಧ್ಯಯನವೂ ನಡೆಯಿತು. ಹೀಗೆ ಕನ್ನಡನಾಡಿನ ಸಾಂಸ್ಕೃತಿಕ ಅಂಶಗಳನ್ನೇ ಮೂಲ

---

೧. ಈ ಭಾಗದ ಹೆಚ್ಚಿನ ವಿವರಣೆಗೆ ನೋಡಿ: 'ಹೊಸಗನ್ನಡದ ಅರುಣೋದಯ' (ಡಾ. ಶ್ರೀನಿವಾಸ ಹಾವನೂರ)

ಸಾಮಗ್ರಿಯನ್ನಾಗಿಟ್ಟುಕೊಂಡು ಸಂಶೋಧನ ಕ್ಷೇತ್ರವನ್ನು ಸಮೃದ್ಧಗೊಳಿಸಿದನು. ಇದೇ ಕಾಲದಲ್ಲಿ ಮೇಜರ್ ಡಿಕ್‌ಸನ್, ಡಾ. ಬ್ಯಾಲರ್, ಜೇಮ್ಸ ಫರ್ಗುಸನ್ ಮೊದಲಾದವರೂ ಈ ಕ್ಷೇತ್ರದಲ್ಲಿ ಕಾರ್ಯ ಮಾಡಿದರು.

ಈ ಕ್ಷೇತ್ರದಲ್ಲಿ ಪ್ರಸಿದ್ಧಿ ಪಡೆದ ವ್ಯಕ್ತಿ. ಬಿ. ಲೂಯಿಸ ರೈಸ್ (೧೮೩೭-೧೯೨೭). ಈತ ಸುಮಾರು ೧೦ ವರ್ಷ ಪ್ರಯತ್ನಿಸಿ 'ಮೈಸೂರು ಗೆಜೆಟಿಯರ್' ಹೊರ ತಂದು ಅಖಿಲ ಭಾರತದ ಪ್ರಸಿದ್ಧಿ ಪಡೆದನು. ಈ ಮುನ್ನಿನ ಯಾವುದೇ ಗೆಜೆಟಿಯರ ಇಷ್ಟೊಂದು ನಿರ್ದಿಷ್ಟ, ಸತ್ಯನಿಷ್ಠವಾಗಿರಲಿಲ್ಲ. ತರುವಾಯ ಬೋರಿಂಗನ ಆದೇಶದ ಮೇರೆಗೆ ಮೇಜರ್ ಡಿಕ್ಸನ್ ಸಂಗ್ರಹಿಸಿದ ಶಾಸನಗಳಿಗೆ ಇನ್ನೂ ಹಲವನ್ನು ಸೇರಿಸಿ, ಮೈಸೂರು ಶಾಸನ ಸಂಪುಟವನ್ನು ಸಿದ್ಧಗೊಳಿಸಿದ. ಕನ್ನಡ ಶಾಸನಗಳನ್ನು ಕುರಿತ ಮೊಟ್ಟಮೊದಲ ಪ್ರತ್ಯೇಕ ಗ್ರಂಥ ಇದು. ಶಿಕ್ಷಣ ಇಲಾಖೆ ಜೊತೆ ಪುರಾತತ್ವ ಇಲಾಖೆಯನ್ನೂ ಹೊಂದಿದ್ದ ಇವನು 'ಎಪಿಗ್ರಾಫಿಯಾ ಕರ್ನಾಟಕಾ'ದ ಹೊಳವು ಹಾಕಿ, ಹಳೆಯ ಮೈಸೂರು ಸಂಸ್ಥಾನದ ೮೮೬೮ರಲ್ಲಿ ಶಾಸನಗಳನ್ನು ೧೨ ಸಂಪುಟಗಳಲ್ಲಿ ಪ್ರಕಟಿಸಿದನು. ಬೇರಾವ ಭಾರತೀಯ ಸಂಶೋಧಕನೂ ಈ ವರೆಗೆ ಇವನಷ್ಟು ಶಾಸನಗಳನ್ನು ಕಂಡುಹಿಡಿದಿಲ್ಲ. ೧೮೯೨ ರಲ್ಲಿ Ashoka edicts of Siddapur ಪ್ರಕಟವಾಗಿ ಆ ವರ್ಷದ ಅತ್ಯಮೂಲ್ಯ ಸಂಶೋಧನೆ ಎಂಬ ಪ್ರಶಂಸೆಗೆ ಪಾತ್ರವಾಯಿತು. ಬೇರೆ ಬೇರೆ ಪತ್ರಿಕೆಗಳಲ್ಲಿ ೫೦ಕ್ಕೂ ಮಿಕ್ಕಿ ಲೇಖನಗಳನ್ನು ಬರೆದನು.

ಜಾನ್ ಫೆತಫುಲ್ ಫ್ಲೀಟ್ (೧೮೪೭-೧೯೧೭)ನನ್ನು ಭಾರತೀಯ ಶಾಸನ ಶಾಸ್ತ್ರದ ಪಿತಾಮಹ ಎಂದು ಕರೆಯಲಾಗುತ್ತಿದೆ, ರೈಸ್‌ನ ಸಂಶೋಧನ ಕಾರ್ಯವು 'ಎಪಿಗ್ರಾಫಿಯಾ ಕರ್ನಾಟಕಾ' ಸಂಪುಟಗಳಲ್ಲಿ ಒಟ್ಟುಗೂಡಿದ್ದರೆ, ಫ್ಲೀಟರ ಶಾಸನ ಸಂಶೋಧನೆಯು ಬೇರೆ ಬೇರೆ ಪತ್ರಿಕೆಗಳಲ್ಲಿಯ ೪೫೬ ಬಿಡಿ ಲೇಖನಗಳಲ್ಲಿ ಪಸರಿಸಿದೆ. ಇವರಿಬ್ಬರೂ ಹಾಕಿಕೊಟ್ಟ ಸೂಕ್ತ ಅಸ್ತಿವಾರದ ಮೇಲೆ ನಾಡಿನ ಚರಿತ್ರೆ ರೂಪುಗೊಂಡಿದೆ. ಇವನು ಪ್ರಕಟಿಸಿದ ಅಬ್ಬಲೂರು ಶಾಸನ ಬಸವೇಶ್ವರನ ಚರಿತ್ರೆಗೆ ಐತಿಹಾಸಿಕ ಹಿನ್ನೆಲೆಯನ್ನೊದಗಿಸಿತು. ಆಲಂದಿಯ ಶಾಸನ ಏಕಾಂತದ ರಾಮಯ್ಯನ ಕಾರ್ಯದ ಹಿನ್ನೆಲೆಯನ್ನಿತ್ತಿತು. ಹೀಗೆ ಇವನು ಉತ್ತರ ಕರ್ನಾಟಕ, ಹೈದರಾಬಾದ ಕರ್ನಾಟಕ ಮತ್ತು ದಕ್ಷಿಣ ಮಹಾರಾಷ್ಟ್ರ ಭಾಗದಲ್ಲಿ ದೊರೆತ ಶಾಸನಗಳ ಅಭ್ಯಾಸ ಮಾಡಿ ಬೇರೆ ಬೇರೆ ಪತ್ರಿಕೆಗಳಲ್ಲಿ ಪ್ರಕಟಿಸಿದನು. ಅಲ್ಲದೆ *Some Sanskrit, Pali and Halakannada Inscriptions* ಎಂಬ ಕೃತಿಯನ್ನು ಪ್ರಕಟಿಸಿದನು.

ಕನ್ನಡ ಶಾಸನಗಳ ಅಧ್ಯಯನದಲ್ಲಿ ಆಸಕ್ತಿವಹಿಸಿದ ಕನ್ನಡ ವಿದ್ವಾಂಸರಲ್ಲಿ ಮೆಕೆಂಜಿಗೆ ಸಹಾಯಕನಾಗಿದ್ದ ಕವೆಲ್ಲಿ ವೆಂಕಟ ಬೋರಯ್ಯ ಮೊಟ್ಟಮೊದಲಿಗ. ಈತ ೧೮೦೭ರಲ್ಲಿ ಬೆಳ್ಗೊಳದ ಗೊಮ್ಮಟನ ಮುಂದಿರುವ ಬುಕ್ಕರಾಯನ ಶಾಸನವನ್ನು ಏಷಿಯಾಟಿಕ್ ರಿಸರ್ಚಸ್ ಪತ್ರಿಕೆಯಲ್ಲಿ ಪ್ರಕಟಿಸಿದ. ತರುವಾಯ ಬಾಲಗಂಗಾಧರ ಶಾಸ್ತ್ರಿ ಮೊದಲಾದವರು ಈ ಕ್ಷೇತ್ರದಲ್ಲಿ ಅಲ್ಪ-ಸ್ವಲ್ಪ ಕಾರ್ಯವನ್ನು ಮಾಡಿದರು.

ರೈಸ್, ಫ್ಲೀಟ್‌ರ ತರುವಾಯ ಕನ್ನಡ ಶಾಸನ ಸಂಶೋಧನೆಯಲ್ಲಿ ಎದ್ದು ಕಾಣುವ ಹೆಸರು ಆರ್. ನರಸಿಂಹಾಚಾರ್ (೧೮೬೦-೧೯೩೬) ಅವರದು. ಇವರು ರೈಸ್ ಅವರ ತರುವಾಯ ೧೯೦೬-೧೯೨೨ರ ವರೆಗೆ ಮೈಸೂರು ಪುರಾತತ್ವ ಇಲಾಖೆಯ ನಿರ್ದೇಶಕರಾಗಿ ದುಡಿದರು. ಮೈಸೂರು ಸಂಸ್ಥಾನದಲ್ಲಿ ಹೊಸದಾಗಿ ದೊರೆತ ಸುಮಾರು ೫೦೦೦ ಶಾಸನಗಳನ್ನು

‘ಎಪಿಗ್ರಾಫಿಯಾ ಕರ್ನಾಟಕಾ’ದ ೧೪-೧೮ ಸಂಪುಟಗಳ ಮೂಲಕ ಹೊರತರುವ ಯೋಜನೆ ಮಾಡಿದರು. ಅದರ ಅನ್ವಯ ೧೪-೧೫ನೆಯ ಸಂಪುಟಗಳನ್ನು ಡಾ. ಎಂ. ಎಚ್. ಕೃಷ್ಣ ಅವರೂ, ೧೬ನೆಯ ಸಂಪುಟವನ್ನು ಡಾ. ನೀಲಕಂಠಶಾಸ್ತ್ರಿ ಅವರೂ, ೧೭ನೆಯ ಸಂಪುಟವನ್ನು ಡಾ. ಎಮ್. ಶೇಷಾದ್ರಿ ಅವರೂ ಪ್ರಕಟಿಸಿದರು. ಈ ಮೊದಲು ರೈಸ್ ಅವರು ಸಂಪಾದಿಸಿದ್ದ ಶ್ರವಣಬೆಳ್ಗೊಳದ ೧೪೩ ಶಾಸನಗಳಿಗೆ ೩೫೭ ಶಾಸನ ಸೇರಿಸಿ ‘ಎಪಿಗ್ರಾಫಿಯಾ ಕರ್ನಾಟಕಾ’ದ ಹೊಸ ೨ನೆಯ ಸಂಪುಟ ತಂದರು, ‘ಶಾಸನ ಪದ್ಯಮಂಜರಿ’ ಪ್ರಕಟಿಸಿ ಶಾಸನದ ಪದ್ಯಭಾಗಗಳನ್ನು ಜನರಿಗೆ ಪರಿಚಯಮಾಡಿಕೊಡಲು ಪ್ರಯತ್ನಿಸಿದರು. ತರುವಾಯ ಎಮ್. ಎಚ್. ಕೃಷ್ಣ (ಹಲ್ಮಿಡಿ ಶಾಸನ, ಮಯೂರವರ್ಮನ ಶಾಸನ) ಹೊಸಕೋಟೆ ಕೃಷ್ಣಶಾಸ್ತ್ರೀ (ಅಶೋಕನ ಮಸ್ಕಿ ಶಾಸನ), ಕೆ. ಜಿ. ಕುಂದಣಗಾರ (ಇನ್‌ಸ್ಕ್ರಿಪ್ಷನ್ಸ ಇನ್ ನಾರ್ದರ್ನ್ ಕರ್ನಾಟಕ ಆ್ಯಂಡ್ ಕೊಲ್ಹಾಪುರ ಸ್ಟೇಟ) ಮೊದಲಾದವರು ಈ ಕ್ಷೇತ್ರದಲ್ಲಿ ಕಾರ್ಯ ಮಾಡಿದ್ದಾರೆ.

ಮೈಸೂರು ಪ್ರದೇಶದಲ್ಲಿ ಜಿಲ್ಲಾವಾರು ಶಾಸನಗಳ ವ್ಯವಸ್ಥಿತ ಪ್ರಕಟನ ಕಾರ್ಯ ನಡೆದಂತೆ ಉತ್ತರ ಕರ್ನಾಟಕದಲ್ಲಿ ನಡೆದಿಲ್ಲ. ಶಾಸನಗಳು ದೊರೆತಂತೆ ‘ಸೌಥ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ’ ಸಂಪುಟಗಳಲ್ಲಿ ಪ್ರಕಟಿಸಲಾಗಿದೆ. ಅವರ ಕನ್ನಡ ಶಾಸನಗಳನ್ನೊಳಗೊಂಡ ಏಳನೆಯ ಸಂಪುಟವನ್ನು ಕೆ. ವಿ. ಸುಬ್ರಹ್ಮಣ್ಯ ಅಯ್ಯರ್, ಒಂಬತ್ತನೆಯ ಸಂಪುಟ (೧, ೨) ವನ್ನು ಎನ್. ಲಕ್ಷ್ಮೀನಾರಾಯಣ ರಾಯರ ಸಹಾಯದಿಂದ ಆರ್. ಶಾಮಾಶಾಸ್ತ್ರಿ ೧೧-೧, ೨; ಹಾಗೂ ೧೫ ಮತ್ತು ೨೦ ಸಂಪುಟಗಳನ್ನು ಲಕ್ಷ್ಮೀನಾರಾಯಣರಾವ್, ಆರ್. ಎಸ್. ಪಂಚಮುಖಿ, ಪಿ. ಬಿ. ದೇಸಾಯಿ, ಜಿ. ಎಸ್. ಗಾಯಿ ಅವರು ಸಂಪಾದಿಸಿದ್ದಾರೆ. ಅಲ್ಲದೆ ಕರ್ನಾಟಕ ವಿಶ್ವವಿದ್ಯಾಲಯದ, ಕನ್ನಡ ಸಂಶೋಧನ ಸಂಸ್ಥೆಯು ಉತ್ತರ ಕರ್ನಾಟಕದ ಹಲವಾರು ಶಾಸನಗಳನ್ನು ಪ್ರಕಟಿಸಿದೆ. ಇವುಗಳಲ್ಲಿ ಬಾದಾಮಿ ಚಾಲುಕ್ಯರ ೧ನೆಯ ಪುಲಿಕೇಶಿಯ ಶಾಸನ, ಪೂಗವರ್ಮನ ಮುಧೋಳ ಶಾಸನ ಮೊದಲಾದವು ಮುಖ್ಯವಾದವು. ಹೈದರಾಬಾದ ಆರ್ಕಾಲಾಜಿಕಲ್ ಸೀರೀಜಿನಲ್ಲಿ (ಸಂ. ೮, ೧೨, ೧೮) ಕೆಲವು ಕನ್ನಡ ಶಾಸನಗಳು ಪ್ರಕಟವಾಗಿವೆ.

ಇತ್ತೀಚೆಗೆ ಮೈಸೂರು ವಿಶ್ವವಿದ್ಯಾಲಯ, ಡಾ. ಬಿ. ಆರ್. ಗೋಪಾಲ ಅವರ ಸಂಪಾದಕತ್ವದಲ್ಲಿ ‘ಎಪಿಗ್ರಾಫಿಯಾ ಕರ್ನಾಟಕಾ’ ಸಂಪುಟಗಳನ್ನು ಪರಿಷ್ಕರಿಸುವ ಕಾರ್ಯದಲ್ಲಿ ತೊಡಗಿ ಈಗಾಗಲೆ ಒಂಬತ್ತು ಸಂಪುಟಗಳನ್ನು ಪ್ರಕಟಿಸಿದೆ. ಅಲ್ಲದೆ ಡಾ. ಕೆ. ವಿ. ರಮೇಶ, ಡಾ. ಶ್ರೀನಿವಾಸ ರಿತ್ತಿ, ಡಾ. ಎಂ. ಎಂ. ಕಲಬುರ್ಗಿ ಅವರೂ ಆ ಕ್ಷೇತ್ರದಲ್ಲಿ ತಕ್ಕಮಟ್ಟಿಗೆ ಕೆಲಸ ಮಾಡಿದ್ದಾರೆ.

ಈ ಶಾಸನಗಳನ್ನವಲಂಬಿಸಿ ಕರ್ನಾಟಕದ ಇತಿಹಾಸ, ಸಂಸ್ಕೃತಿಗಳ ಅಭ್ಯಾಸ ವಿಪುಲವಾಗಿ ನಡೆದಿದೆ. ಈ ದಿಸೆಯಲ್ಲಿ ಎ. ಎಸ್. ಅಳ್ತೇಕರ (ರಾಷ್ಟ್ರಕೂಟಾಜ ಆ್ಯಂಡ ದೇರ ಟೈಮ್ಸ), ಜೆ. ಡಿ. ಎಂ. ಡೆರೆಟ್ (ಹೊಯ್ಸಳಾಜ), ಎಂ. ವಿ. ಕೃಷ್ಣರಾವ್ (ದಿ. ಗಂಗಾಜ ಆಫ್ ತಲಕಾಡ), ಜೆ. ಎಂ. ಮೊರೇಸ್ (ದಿ ಕದಂಬಕುಲ) ಷೇಕ ಆಲಿ (ಹಿಸ್ಟರಿ ಆಫ್ ವೆಸ್ಟರ್ನ ಗಂಗಾಜ), ಕೋಯ್ಲೊ ಡಬ್ಲ್ಯು (ದಿ. ಹೊಯ್ಸಳ ವಂಶ), ದೀಕ್ಷಿತ ದುರ್ಗಾಪ್ರಸಾದ (ಪೊಲಿಟಿಕಲ್ ಹಿಸ್ಟರಿ ಆಫ್ ದಿ ಚಾಲುಕ್ಯಾಜ ಆಫ್ ಬದಾಮಿ), ರಮೇಶ ಕೆ. ವಿ.(ಚಾಳುಕ್ಯಾಜ ಆಫ್ ವಾತಾಪಿ.

ಎ. ಹಿಸ್ಟರಿ ಆಫ್ ಸೌಥ ಕೆನರಾ, ಗಂಗರ ಶಾಸನ ಸಂಪುಟ, ತುಳುನಾಡಿನ ಶಾಸನಗಳು), ಜಿ. ಆರ್. ಗೋಪಾಲ್ (ಚಾಲುಕ್ಯಾಜ ಆಫ್ ಕಲ್ಯಾಣಿ ಆ್ಯಂಡ್ ಕಳಚೂರೀಜ, ಡೈನಸ್ಟೀಜ ಆಫ್ ಸೌತ ಇಂಡಿಯಾ), ಪಿ. ಗುರುರಾಜ ಭಟ್ (ಸ್ಟಡೀಜ ಇನ್ ತುಳುವ ಹಿಸ್ಟರಿ ಆ್ಯಂಡ್ ಕಲ್ಚರ್), ದಿನಕರ ದೇಸಾಯಿ (ಮಹಾ ಮಂಡಲೇಶ್ವರಾಜ ಅಂಡರ್ ದಿ ಚಾಲಕ್ಯಾಜ ಆಫ್ ಕಲ್ಯಾಣಿ), ಶ್ರೀನಿವಾಸ ರಿತ್ತಿ (ಇನ್‌ಸ್ಕ್ರಿಪ್ಷನ್ಸ ಫ್ರಾಮ ನಾಂದೇಡ ಡಿಸ್ಟ್ರಿಕ್ಟ, ದಿ ಸೆವುಣಾಜ, ದಿ ಯಾದವಾಜ ಆಫ್ ದೇವಗಿರಿ), ಸೂರ್ಯನಾಥಕಾಮತ್ (ಕರ್ನಾಟಕದ ಸಂಕ್ಷಿಪ್ತ ಇತಿಹಾಸ), ಲಕ್ಷ್ಮೀನಾರಾಯಣರಾವ್ ಮತ್ತು ಆರ್. ಎಸ್. ಪಂಚಮುಖಿ (ಕರ್ನಾಟಕದ ಅರಸು ಮನೆತನಗಳು), ಎಂ. ವಿ. ಕೃಷ್ಣರಾವ್, ಕೇಶವಭಟ್ಟ (ಕರ್ನಾಟಕದ ಇತಿಹಾಸ ದರ್ಶನ) ರಂಗನಾಥ ದಿವಾಕರ (ಸಂ. ಕರ್ನಾಟಕ ಪರಂಪರೆ ೨ ಸಂಪುಟ) ಮೊದಲಾದವರು ಕರ್ನಾಟಕದ ಇತಿಹಾಸವನ್ನು ಕುರಿತು ಕೆಲಸ ಮಾಡಿದ ಪ್ರಮುಖರು.

ಕರ್ನಾಟಕದ ಸಂಸ್ಕೃತಿಯನ್ನು ಕುರಿತು ಪಿ. ಬಿ. ದೇಸಾಯಿ (ಜೈನಿಜಂ ಇನ್ ಸೌಥ ಇಂಡಿಯಾ), ಬಿ. ಎ. ಸಾಲೆತ್ತೂರ (ಸೋಸಿಯಲ್ ಆ್ಯಂಡ್ ಪೊಲಿಟಿಕಲ್ ಲೈಫ್ ಅಂಡರ ವಿಜಯನಗರ ಎಂಪಾಯರ್, ಮಿಡಿವಲ್ ಜೈನಿಜಂ), ಎಸ್. ಬಿ. ಶರ್ಮ (ಜೈನಿಜಂ ಆ್ಯಂಡ್ ಕರ್ನಾಟಕ ಕಲ್ಚರ್), ರಂ. ಶ್ರೀ. ಮುಗಳಿ (ಹರಿಟೇಜ ಆಫ್ ಕರ್ನಾಟಕ), ಎಚ್. ತಿಪ್ಪೇರುದ್ರಸ್ವಾಮಿ (ಕರ್ನಾಟಕ ಸಂಸ್ಕೃತಿ ಸಮೀಕ್ಷೆ), ಷ. ಶೆಟ್ಟರ್ (ಶ್ರವಣಬೆಳ್ಗೊಳ ಮಾನುಮೆಂಟ್ಸ, ಹೊಯ್ಸಳ ಸ್ಕಲ್ಪಚರ್, ಇನ್‌ವೈಟಿಂಗ ಡೆತ್) ಮೊದಲಾದವರು ಹಲವಾರು ಗ್ರಂಥಗಳನ್ನು ಪ್ರಕಟಿಸಿದ್ದಾರೆ. ಒಬ್ಬೊಬ್ಬ ಅರಸ ಅಥವಾ ಒಂದೊಂದು ಅರಸುಮನೆತನ ಕಾಲದ ಕನ್ನಡ ಸಾಹಿತ್ಯದ ಅಭ್ಯಾಸವೂ ಆಗಿದೆ. ಉದಾಹರಣೆಗೆ ಕೆಳದಿ ಅರಸರ ಕಾಲದ ಕನ್ನಡ ಸಾಹಿತ್ಯ. (ಸಾ. ಶಿ. ಮರುಳಯ್ಯ), ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ (ಡಾ. ವಿ. ಶಿವಾನಂದ), ಒಂದೊಂದು ಸ್ಥಳದ ಐತಿಹಾಸಿಕ, ಸಾಹಿತ್ಯಿಕ, ಸಾಂಸ್ಕೃತಿಕ ಮಹತ್ವವನ್ನು ಕುರಿತೂ ಅಧ್ಯಯನ ನಡೆಯಿತು. ಉದಾಹರಣೆಗೆ ಬಿ. ವ್ಹಿ. ಶಿರೂರ ಅವರು ಶ್ರವಣಬೆಳ್ಗೊಳವನ್ನೂ, ಶರಣಮ್ಮ ಅವರು ಪುಲಿಗೆರೆಯನ್ನೂ, ಎಸ್. ಆರ್. ಶೆಟ್ಟಿ ಅವರು ಬನವಸೆಯನ್ನೂ, ಎಚ್. ಆರ್. ರಘುನಾಥಭಟ್ ಅವರು ಬಳ್ಳಿಗಾವೆಯನ್ನೂ ಅಭ್ಯಸಿಸಿದ್ದಾರೆ.

ಶಾಸನಗಳನ್ನೇ ಅವಲಂಬಿಸಿ ಕರ್ನಾಟಕದ ಸಾಂಸ್ಕೃತಿಕ ಅಧ್ಯಯನ ಮಾಡಿದ ಮೊಟ್ಟಮೊದಲ ಕನ್ನಡ ಕೃತಿ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' (ಡಾ. ಎಂ. ಚಿದಾನಂದಮೂರ್ತಿ). ಇದು ಕನ್ನಡದ ವಿದ್ಯಾರ್ಥಿಗಳಿಗೆ ಹೊಸ ಕ್ಷೇತ್ರವನ್ನೇ ತೆರೆದುತೋರಿತು. ಇಲ್ಲಿಂದ ಕನ್ನಡದ ಸಂಶೋಧನೆಯ ದಿಸೆಯೆ ಬದಲಾಯಿಸಿತು. ಪರಿಣಾಮವಾಗಿ 'ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ' (ಚೆನ್ನಕ್ಕ ಎಲಿಗಾರ). ಶಾಸನಗಳಲ್ಲಿ ಕರ್ನಾಟಕದ ವರ್ತಕರು (ಬಿ. ಆರ್. ಹಿರೇಮಠ) ಆರನೆಯ ವಿಕ್ರಮಾದಿತ್ಯನ ಶಾಸನಗಳು (ಜಿ. ಎಂ. ನಾಗಯ್ಯ), ಕರ್ನಾಟಕದಲ್ಲಿ ಸತಿ ಪದ್ಧತಿ (ಬಿ. ಎಸ್. ಸೇತೆ), ಸಿರಸಂಗಿ ಸಂಸ್ಥಾನ (ವಿ. ವಿ. ಬಡಿಗೇರ), ವಿಜಯನಗರ ಕಾಲದ ಶಾಸನಗಳ ಸಾಂಸ್ಕೃತಿಕ ಅಧ್ಯಯನ (ರಮಾನಂದ), ಕರ್ನಾಟಕದ ಶಾಸನಗಳು ಮತ್ತು ಸಂಸ್ಕೃತಿ (ಸಿ. ಯು. ಮಂಜುನಾಥ) ಮೊದಲಾದ ಮಹಾಪ್ರಬಂಧಗಳು ಬಂದವು.

## ಗ್ರಂಥ ಸಂಪಾದನೆ

ಕನ್ನಡದಲ್ಲಿ ಗ್ರಂಥಸಂಪಾದನೆಯ ಇತಿಹಾಸ[೧] ಪ್ರಾರಂಭವಾಗುವುದು ೧೯ನೇ ಶತಮಾನದ ಮಧ್ಯಭಾಗದಿಂದ. ಈ ಕಾರ್ಯಕ್ಕೆ ಮೊಟ್ಟಮೊದಲು ಕೈಹಾಕಿದವ ಜರ್ಮನ್ ದೇಶದ ಹರ್ಮನ್ ಮೊಗ್ಲಿಂಗ್. ಇವನು 'ಬಿಬ್ಲಿಯಾಥಿಕಾ ಕರ್ನಾಟಿಕಾ' ಮಾಲಿಕೆಯ ಮೂಲಕ ೧೮೪೮ರಲ್ಲಿ 'ಜೈಮಿನಿ ಭಾರತ'ದ ಕೆಲವು ಸಂಧಿಗಳನ್ನು ಪ್ರಕಟಿಸಿದನು. ೧೮೪೯ರಲ್ಲಿ 'ತೊರವೆ ರಾಮಾಯಣ'ದ ಅರಣ್ಯಕಾಂಡದ ೬ ಸಂಧಿಗಳನ್ನು ಪ್ರಕಟಿಸಿದನು. ಮುಂದೆ ಕನಕದಾಸರ 'ಹರಿಭಕ್ತಿಸಾರ', ನಾರಣಪ್ಪನ 'ಭಾರತ', ಭೀಮ ಕವಿಯ 'ಬಸವ ಪುರಾಣ', ವಿರೂಪಾಕ್ಷಪಂಡಿತನ 'ಚೆನ್ನಬಸವ ಪುರಾಣ', ನಾಗಚಂದ್ರನ 'ರಾಮಾಯಣ', 'ರಾಜೇಂದ್ರನಾಮೆ', 'ರಾವಣ ದಿಗ್ವಿಜಯ'ಗಳು ಪ್ರಕಟವಾದವು. ಮೊಗ್ಲಿಂಗ್‌ನ ನಂತರ ಈ ಕಾರ್ಯವನ್ನು ಜಿ. ವರ್ಥ ಮುಂದುವರಿಸಿದನು. ಇವನು ಜೈಮಿನಿ ಭಾರತ, ಕುಮಾರವ್ಯಾಸ ಭಾರತ, ಭಾಗವತ, ರಾಜಶೇಖರ ವಿಳಾಸ, ದಾಸರ ಹಾಡು, ಸರ್ವಜ್ಞನ ಸೂಕ್ತಿಗಳು ಇವೆ ಮೊದಲಾದ ಹಳಗನ್ನಡ, ನಡುಗನ್ನಡ ಕೃತಿಗಳಿಂದ ಕೆಲವು ಭಾಗಗಳನ್ನಾಯ್ದು 'ಪ್ರಾಕ್ಕಾವ್ಯ ಮಾಲಿಕೆ' ಎಂಬ ಸಂಕಲಿತ ಕೃತಿಯನ್ನು ಪ್ರಕಟಿಸಿದನು (೧೮೬೮).

ಮುಂದೆ ಮತಪ್ರಚಾರಕನಾಗಿ ಜರ್ಮನ್ ದೇಶದಿಂದ ೧೮೫೩ರಲ್ಲಿ ಮಂಗಳೂರಿಗೆ ಬಂದ ಫರ್ಡಿನೆಂಡ ಕಿಟೆಲ್ ೧೮೭೨ರಲ್ಲಿ ಶಬ್ದಮಣಿದರ್ಪಣವನ್ನು ಸಂಪಾದಿಸಿದನು. ಈ ಹಿಂದೆ (೧೮೬೮) ಗರೆಟ್ 'ದೇಶಿಯ ಪಂಡಿತರ ಮನ್ನಣೆಗೆ ಇಷ್ಟರಮಟ್ಟಿಗೆ ಪಾತ್ರವಾಗಿರುವ ಈ ಗ್ರಂಥ ಇದುವರೆಗೆ ಅಚ್ಚಾಗದೆ ಇರುವುದು ಗಮನಾರ್ಹ ವಿಷಯ' ಎಂಬ ಕಳಕಳಿಯಿಂದ ಇದನ್ನು ಪ್ರಕಟಿಸಿದ್ದನು. ಆದರೆ ಕಿಟೆಲ್ ಅದರ ಒಂಬತ್ತು ಹಸ್ತಪ್ರತಿಗಳನ್ನು ಬಳಸಿಕೊಂಡು ಅದನ್ನು ಶುದ್ಧವಾಗಿ, ಶಾಸ್ತ್ರೀಯವಾಗಿ ಪರಿಷ್ಕರಿಸಿ ಪ್ರಕಟಿಸಿದನು. ೧೮೭೫ರಲ್ಲಿ ಹದಿನಾಲ್ಕು ಹಸ್ತಪ್ರತಿಗಳನ್ನು ಅವಲಂಬಿಸಿ ನಾಗವರ್ಮನ ಛಂದೋಂಬುಧಿಯನ್ನು ಪ್ರಕಟಿಸಿದನು. ಅದರ ಮುನ್ನುಡಿಯಲ್ಲಿ ಕನ್ನಡ ಸಾಹಿತ್ಯವನ್ನು ಕುರಿತು ಸುದೀರ್ಘವಾದ ಲೇಖನವೊಂದನ್ನು ಬರೆದನು. ಅದೇ ಕನ್ನಡದ ಮೊಟ್ಟಮೊದಲ ಸಾಹಿತ್ಯ ಚರಿತ್ರೆ ಎನ್ನಿಸಿತು. ಕಿಟೆಲ್ ಅವರ ಇನ್ನೊಂದು ಮಹತ್ವಪೂರ್ಣ ಕೊಡುಗೆ *A Kannada English Dictionary* (೧೮೯೪). ಕನ್ನಡಕ್ಕೆ ಮೊಟ್ಟಮೊದಲ ಡಿ. ಲಿಟ್‌ನ್ನು ತಂದಿತ್ತ ಕೃತಿ. ೩೬ ಹಳಗನ್ನಡ ಕೃತಿಗಳನ್ನು ಸೋಸಿ, ಶಾಸ್ತ್ರಿಯವಾಗಿ ಸಿದ್ಧಪಡಿಸಿದ ಕೋಶ ಇದು.

೧೮೯೭ರಲ್ಲಿ ಎಂ. ಎ. ರಾಮಾನುಜಯ್ಯಂಗಾರ್ (೧೮೬೨-೧೯೩೭) ಎಸ್. ಜಿ. ನರಸಿಂಹಾಚಾರ್ಯ ಸೇರಿ 'ಕರ್ನಾಟಕ ಕಾವ್ಯಮಂಜರಿ' ಮಾಸಿಕವನ್ನು ಪ್ರಾರಂಭಿಸಿ ಮುಂದೆ ಇದನ್ನು 'ಕರ್ನಾಟಕ ಕಾವ್ಯ ಕಲಾನಿಧಿ' ಎಂದು ಮಾರ್ಪಡಿಸಿದರು. ಇದರ ಅಂಗವಾಗಿ ಇವರು ರತ್ನಾಕರಾಧೀಶ್ವರ ಹಾಗೂ ಅಪರಾಜಿತೇಶ್ವರ ಶತಕ, ಮಲ್ಲಿನಾಥಪುರಾಣ, ಕಬ್ಬಿಗರಕಾವ್ಯಂ, ಚಿಕ್ಕದೇವರಾಜ ವಿಜಯಂ, ಕರ್ನಾಟಕ ಪಂಚತಂತ್ರ, ಲೀಲಾವತಿಪ್ರಬಂಧಂ, ಪಂಪಾಶತಕಂ, ಭಾವಚಿಂತಾರತ್ನ, ಗಿರಿಜಾ ಕಲ್ಯಾಣ, ಅಜಿತತೀರ್ಥಂಕರ ಪುರಾಣತಿಲಕಂ, ಯಶೋಧರ ಚರಿತೆ, ನೇಮಿನಾಥ ಪುರಾಣ, ರಾಮಾಶ್ವಮೇಧ, ಚಿಕದೇವರಾಜ ವಂಶಾವಳಿ, ಅಭಿನವ

---

೧. ಈ ಭಾಗದ ವಿವರಣೆಗೆ ನೋಡಿ: 'ಹಸ್ತಪ್ರತಿಶಾಸ್ತ್ರ'ದಲ್ಲಿಯ ಡಾ. ಎಸ್. ವಿದ್ಯಾಶಂಕರ ಅವರ 'ಕನ್ನಡ ಗ್ರಂಥಸಂಪಾದನೆಗೆ ಹಿರಿಯ ವಿದ್ವಾಂಸರ ಕೊಡುಗೆ' ಲೇಖನ.

ದಶಕುಮಾರ ಚರಿತೆ, ಹದಿಬದೆಯ ಧರ್ಮ, ಮೋಹನ ತರಂಗಿಣಿ, ಆದಿಪುರಾಣ, ಅದ್ಭುತ ರಾಮಾಯಣ ಮೊದಲಾದ ಕೃತಿಗಳನ್ನು ಪ್ರಕಟಿಸಿದರು. ಇವರಿಗೆ ಸಿಕ್ಕ ಕೃತಿಗಳನ್ನು ಪ್ರಕಟಿಸುವ ಕಾರ್ಯ ಮುಖ್ಯವಾಗಿತ್ತೇ ಹೊರತು ಅವುಗಳ ಮಾಹಿತಿ ಮಹತ್ವದಾಗಿದ್ದಿಲ್ಲ. ಇದೇ ವೇಳೆಯಲ್ಲಿ(೧೯೦೩) ಆರ್. ನರಸಿಂಹಾಚಾರ್ ಅವರು ಕಾವ್ಯಾವಲೋಕನಂ, ಕರ್ನಾಟಕ ಭಾಷಾಭೂಷಣಗಳನ್ನು ಶೋಧಿಸಿ ಪ್ರಕಟಿಸಿದರು. ೧೮೯೮ರಲ್ಲಿ ಶ್ರೀ ಪಾಠಕ ಅವರು ಕವಿರಾಜಮಾರ್ಗವನ್ನು ಸಂಪಾದಿಸಿ ಪ್ರಕಟಿಸಿದರು. ಇದೇ ಸುಮಾರಿನಲ್ಲಿ ಶ್ರೀ ಪಿ. ಆರ್. ಕರಿಬಸವ ಶಾಸ್ತ್ರಿಗಳು (೧೮೮೬-೧೯೩೧) ವೀರಶೈವ ಮತ ಪ್ರಕಾಶಕ ಎಂಬ ಪತ್ರಿಕೆಯನ್ನು ಪ್ರಾರಂಭಿಸಿ, ಆ ಮೂಲಕ ಜೈಮಿನಿ ಭಾರತ, ರಾಜಶೇಖರ ವಿಳಾಸ, ಶಬರಶಂಕರ ವಿಳಾಸ ಮೊದಲಾದ ಗ್ರಂಥಗಳನ್ನು ಹೊರತಂದರು. ಅದೇ ರೀತಿ ಶ್ರೀ ಎಸ್. ಆರ್. ಕರಿಬಸವಶಾಸ್ತ್ರಿಗಳು (೧೮೭೭-೧೯೨೩) ಗ್ರಂಥ ಪ್ರಕಾಶಿಕೆ ಎಂಬ ಮಾಸಪತ್ರಿಕೆ ಪ್ರಾರಂಭಿಸಿ ಆ ಮೂಲಕ ಪಂಡಿತಾರಾಧ್ಯ ಚರಿತ್ರೆ, ಸಿದ್ಧಾಂತ ಶಿಖಾಮಣಿ, ಸೌಂದರ ಪುರಾಣ, ರೇವಣ ಸಿದ್ಧೇಶ್ವರ ಪುರಾಣ, ಶಿವಯೋಗ ಪ್ರದೀಪಿಕಾ ಮೊದಲಾದವನ್ನು ಪ್ರಕಟಿಸಿದರು. ಚೆನ್ನಬಸವ ಪುರಾಣವನ್ನು 'ಚೆನ್ನಬಸವ ವಿಜಯಂ' ಎಂಬ ಹೆಸರಿನಿಂದ ಗದ್ಯಾನುವಾದ ಮಾಡಿದರು.

ಇದೇ ಕಾಲಕ್ಕೆ ಉತ್ತರ ಕರ್ನಾಟಕದಲ್ಲಿ ಸುಮಾರು ೧೦೦ಕ್ಕೂ ಹೆಚ್ಚು ಗ್ರಂಥಗಳನ್ನು ಸಂಪಾದಿಸಿ ಪ್ರಕಟಿಸಿದವರು ಫ. ಗು. ಹಳಕಟ್ಟಿ (೧೮೮೦-೧೯೬೪) ಅವರು. ಅವರು ೧೯೨೬ರಲ್ಲಿ 'ಶ್ರೀ ಬಸವೇಶ್ವರರ ವಚನಗಳು' ಕೃತಿಯನ್ನು ಪ್ರಕಟಿಸುವ ಮೂಲಕ ಪ್ರಾರಂಭಿಸಿ, ಮಹಮ್ನಸ್ತೋತ್ರ, ಮಹಾದೇವಿಯಕ್ಕನ ವಚನಗಳು, ಗಣದಾಸಿ ವೀರಣ್ಣನ ವಚನಗಳು, ಸಂಗನಬಸವೇಶ್ವರರ ವಚನಗಳು, ಏಕೋತ್ತರ ಶತಸ್ಥಲ, ದೇವರ ದಾಸಿಮಯ್ಯನ ವಚನಗಳು, ಹಡಪದಪ್ಪಣ್ಣನ ವಚನಗಳು, ಲಿಂಗಮ್ಮನ ವಚನಗಳು, ಮೈಲಾರದ ಬಸಪ್ಪನವರ ಶಿವಾನುಭವದರ್ಪಣ, ಸಕಲೇಶ ಮಾದರಸನ ವಚನಗಳು, ಶೂನ್ಯ ಸಂಪಾದನೆ, ಆದಯ್ಯನ ವಚನಗಳು, ಆದಿಶೆಟ್ಟಿ ಪುರಾಣ, ವಚನಶಾಸ್ತ್ರಸಾರ (ಭಾಗ ೧, ೨, ೩), ಸಿದ್ಧರಾಮೇಶ್ವರ ವಚನಗಳು, ಚೆನ್ನಬಸವೇಶ್ವರ ವಚನಗಳು, ಹರಿಹರನ ರಗಳೆಗಳು, (ಭಾಗ ೧-೬) ಅಂಬಿಗರ ಚೌಡಯ್ಯನ ವಚನಗಳು, ಉರಿಲಿಂಗ ಪೆದ್ದಿಯ ವಚನಗಳು, ಮಡಿವಾಳ ಮಾಚಿದೇವನ ವಚನಗಳು, ಕೃಷಿಜ್ಞಾನಪ್ರದೀಪಿಕೆ ಮೊದಲಾದ ಸು. ೧೨೦೦೦ ಪುಟದ ವೀರಶೈವ ಸಾಹಿತ್ಯ ಸಾಮಗ್ರಿಯನ್ನು ಹೊರತಂದರು. ಇದೇ ಸಮಯದಲ್ಲಿ ದಾವಣಗೆರ ಭಾಗದಲ್ಲಿ ನಿಂತು ಶ್ರೀ ಮಲ್ಲಿಕಾರ್ಜುನರು ವೀರಶೈವ ಸಾಹಿತ್ಯ, ಸಂಸ್ಕೃತಿಗೆ ಸಂಬಂಧಿಸಿ ಅಪಾರ ಕೆಲಸ ಮಾಡಿದರು. ಇವರು ವಚನಸಾಹಿತ್ಯವನ್ನಲ್ಲದೆ ಉದ್ಧರಣೆಯ ವಾರ್ಧಕ, ಕನ್ನಡ ಶತಕತ್ರಯ, ಕರಸ್ಥಲದ ನಾಗಲಿಂಗಯ್ಯನವರ ತ್ರಿವಿಧಿ, ಗುಣಸಹಸ್ರನಾಮಾವಳಿ, ಜಂಗಮಸ್ತೋತ್ರ, ನಿರಂಜನ ವಂಶರತ್ನಾಕರ, ನೀಲಮ್ಮನ ಸ್ತೋತ್ರ. ನುಲಿಯ ಚಂದಯ್ಯನ ಶಾರದ, ಪಂಚಾಚಾರ್ಯರ ಚರಿತ್ರೆ ಮೊದಲಾದ ಕೃತಿಗಳನ್ನು ಪ್ರಕಟಿಸಿದರು.

೧೯೨೪ರಲ್ಲಿ ಶ್ರೀ ರ. ಚೆನ್ನಪ್ಪ ಉತ್ತಂಗಿ ಅವರು ಸರ್ವಜ್ಞನ ಸಮಗ್ರ ವಚನಗಳನ್ನು ಶೋಧಿಸಿ ಶ್ರದ್ಧೆಯಿಂದ ಸಂಪಾದಿಸಿ ಪ್ರಕಟಿಸಿದರು. ಇದರ ೧೧೮ ಪುಟದ ಮುನ್ನುಡಿ ಬಹು ಬೆಲೆಯುಳ್ಳದ್ದಾಗಿದೆ. ಅಲ್ಲದೆ ಅವರು ಮೋಳಿಗೆ ಮಾರಯ್ಯ ಮತ್ತು ರಾಣಿಮಹಾದೇವಿಯರ ವಚನಗಳನ್ನು ಪ್ರೊ.. ಭೂಸನೂರಮಠ ಅವರೊಂದಿಗೆ, ಸ್ವತಂತ್ರವಾಗಿ ಆದಯ್ಯನ ವಚನಗಳನ್ನೂ ಸಂಪಾದಿಸಿದ್ದಾರೆ.

ಪ್ರಾಚೀನ ಗ್ರಂಥಗಳನ್ನು ಪ್ರಕಟಿಸುವಲ್ಲಿ ಮದ್ರಾಸ್ ವಿಶ್ವವಿದ್ಯಾಲಯ ಶ್ಲಾಘನೀಯ ಸೇವೆ ಸಲ್ಲಿಸಿದೆ. ಅದು ಎ. ವೆಂಕಟರಾವ್ ಮತ್ತು ಎಚ್. ಶೇಷ ಅಯ್ಯಂಗಾರ್ ಸಂಪಾದಿಸಿದ ಕರ್ನಾಟಕ ಕವಿರಾಜಮಾರ್ಗಂ, ರಸರತ್ನಾಕರ, ಅಭಿದಾನ ವಸ್ತುಕೋಶ, ಪುಷ್ಪದಂತ ಪುರಾಣ, ಶಬ್ದಮಣಿದರ್ಪಣ, ಖಗೇಂದ್ರಮಣಿದರ್ಪಣಂಗಳನ್ನೂ ಎಚ್. ಶೇಷಯ್ಯಂಗಾರ್ ಸಂಪಾದಿಸಿದ ನೇಮಿನಾಥ ಪುರಾಣವನ್ನೂ ಎಂ. ಮರಿಯಪ್ಪಭಟ್ಟ ಹಾಗೂ ಎಂ. ಗೋವಿಂದರಾವ್ ಸಂಪಾದಿಸಿರುವ ವರ್ಧಮಾನಪುರಾಣಂ, ಪಾರ್ಶ್ವನಾಥ ಪುರಾಣಂ, ಜಾತಕ ತಿಲಕಂ ಮೊದಲಾದವನ್ನೂ ಪ್ರಕಟಿಸಿದೆ. ಎಚ್. ಚೆನ್ನಕೇಶವಯ್ಯಂಗಾರ್ ಅವರು ಶಬ್ದಮಣಿದರ್ಪಣಕ್ಕೆ ಬರೆದ ೧೦೮ ಪುಟದ ಮುನ್ನುಡಿ ಆ ಕೃತಿಯ ಪ್ರವೇಶಕ್ಕೆ ಹೆಬ್ಬಾಗಿಲಿನಂತಿದೆ. ಇದಲ್ಲದೆ ಮದರಾಸು ಸರಕಾರದ ಓರಿಯಂಟಲ್ ಮ್ಯಾನಿಸ್ಕ್ರಿಪ್ಟ್ ಸೀರೀಜಿನಲ್ಲಿ ಲೋಕೋಪಕಾರ, ಮಂಗರಾಜ ನಿಘಂಟು, ಸದ್ಗುರು ರಹಸ್ಯಂ, ಕಾರ್ಕಳದ ಗೊಮ್ಮಟೇಶ್ವರ ಚರಿತೆ, ಮನ್ಮಥ ವಿಜಯ, ತ್ರಿಭುವನತಿಲಕಂ, ಜೀವಸಂಬೋಧನೆ, ಅಟ್ಟಮತ, ವೈದ್ಯಸಾರ ಮೊದಲಾದವು ಪ್ರಕಟವಾಗಿವೆ. ಎ. ವೆಂಕಟರಾವ್ ಮತ್ತು ಎಚ್. ಶೇಷಯ್ಯಂಗಾರ್ ಅವರು ಸಂಪಾದಿಸಿದ ಪೊನ್ನನ ಶಾಂತಿಪುರಾಣವನ್ನೂ ಮದ್ರಾಸಿನ ಪೀಪಲ್ಸ ಪ್ರಿಂಟಿಂಗ್ ಆ್ಯಂಡ್ ಪಬ್ಲಿಷಿಂಗ್ ಹೌಸ್ ಪ್ರಕಟಿಸಿದೆ.

ಅದೇ ರೀತಿ ಮೈಸೂರು ಓರಿಯಂಟಲ್ ರಿಸರ್ಚ ಇನ್‌ಸ್ಟಿಟ್ಯೂಟಿನಿಂದ ಈ ಹಲವು ಕೃತಿಗಳು ಪ್ರಕಟವಾಗಿವೆ: ಆರ್. ಶಾಮಶಾಸ್ತ್ರಿ ಸಂಪಾದಿಸಿರುವ ಉದ್ಭಟಕಾವ್ಯಂ, ಕೆಳದಿನೃಪವಿಜಯಂ, ಜಗನ್ನಾಥವಿಜಯಂ, ಧರ್ಮಾಮೃತ, ಕಂಠೀರವ ನರಸರಾಜ ವಿಜಯಂ, ಡಿ. ಶ್ರೀನಿವಾಸಾಚಾರ್ ಮತ್ತು ಎಂ. ಎಸ್. ಬಸವಲಿಂಗಯ್ಯ ಸಂಪಾದಿಸಿರುವ ವೀರಭದ್ರ ವಿಜಯ, ಡಿ. ಶ್ರೀನಿವಾಸಾಚಾರ್ ಸಂಪಾದಿಸಿರುವ ಅನಂತನಾಥಪುರಾಣ, ಎಸ್. ಬಸವಾರಾಧ್ಯ ಸಂಪಾದಿಸಿರುವ ತೊರವೆ ರಾಮಾಯಣ (ಸಂ. ೧) ಬಿ. ಎಸ್. ಸಣ್ಣಯ್ಯ ಸಂಪಾದಿಸಿರುವ ತೊರವೆ ರಾಮಾಯಣ (ಸಂ. ೨), ಕುಮಾರವ್ಯಾಸ ಭಾರತದ ದಶಪರ್ವಗಳು ಪ್ರಮುಖವಾದವು.

ಮೈಸೂರು ಭಾಗದಲ್ಲಿ ಪ್ರಾಚೀನ ಕನ್ನಡ ಕೃತಿಗಳ ಸಂಪಾದನೆಯನ್ನು ವ್ಯವಸ್ಥಿತ ರೂಪದಲ್ಲಿ ಕೈಗೊಂಡವರು ಟಿ. ಎಸ್. ವೆಂಕಣ್ಣಯ್ಯ, ಎ. ಆರ್. ಕೃಷ್ಣಶಾಸ್ತ್ರಿ, ಡಿ. ಎಲ್. ನರಸಿಂಹಾಚಾರ್ ಮತ್ತು ತೀ. ನಂ. ಶ್ರೀಕಂಠಯ್ಯ ಅವರು. ಟಿ. ಎಸ್. ವೆಂಕಣ್ಣಯ್ಯ ಅವರು ಬಸವರಾಜದೇವರ ರಗಳೆ (೧೯೩೦), ಡಿ. ಎಲ್. ನರಸಿಂಹಾಚಾರ್‌ರೊಂದಿಗೆ ಸಿದ್ಧರಾಮ ಚಾರಿತ್ರ (೧೯೪೧), ಎ. ಆರ್. ಕೃಷ್ಣಶಾಸ್ತ್ರಿ ಅವರೊಂದಿಗೆ ಹರಿಶ್ಚಂದ್ರಕಾವ್ಯ ಸಂಗ್ರಹ (೧೯೩೧) ಗಳನ್ನು ಸಂಪಾದಿಸಿದರು. ಇವು ಶಾಸ್ತ್ರೀಯತೆಯ ದೃಷ್ಟಿಯಿಂದ ಇಂದಿಗೂ ಮೌಲಿಕವಾಗಿವೆ. ಡಿ. ಎಲ್. ನರಸಿಂಹಾಚಾರ್ ಅವರು ಸಂಪಾದಿಸಿದ ವಡ್ಡಾರಾಧನೆ (೧೯೪೯), ತುರುಗಾಹಿ ರಾಮಣ್ಣ ವಚನಗಳು (೧೯೫೦), ಸುಕುಮಾರ ಚರಿತೆ (೧೯೫೪), ಸಿದ್ಧರಾಮ ಚಾರಿತ್ರ ಸಂಗ್ರಹ (೧೯೫೧), ಶಬ್ದಮಣಿದರ್ಪಣ ಮತ್ತು ಗ್ರಂಥಸಂಪಾದನೆಯನ್ನು ಕುರಿತ ಅವರ 'ಗ್ರಂಥಸಂಪಾದನಶಾಸ್ತ್ರ' ಗ್ರಂಥಗಳು ಬಹಳ ಬೆಲೆಯುಳ್ಳ ಕೃತಿಗಳಾಗಿವೆ. ಇವರ 'ಪಂಪಭಾರತ ದೀಪಿಕೆ' ಇವರ ಪಾಂಡಿತ್ಯ ಪ್ರತಿಭೆಗಳಿಗೆ ಒಳ್ಳೆಯ ಕುರುಹಾಗಿದೆ. ತೀ. ನಂ. ಶ್ರೀಕಂಠಯ್ಯ ಅವರು ಗದಾಯುದ್ಧ ಸಂಗ್ರಹ (೧೯೪೬), ನಂಬಿಯಣ್ಣನ ರಗಳೆ (೧೯೪೧)ಗಳು ಒಳ್ಳೆಯ ಮಾದರಿ ಗ್ರಂಥಗಳಾಗಿವೆ. ಇವರ 'ಭಾರತೀಯ

ಕಾವ್ಯಮೀಮಾಂಸೆ' ಕೃತಿಗೆ ಪಂಪ ಪ್ರಶಸ್ತಿ ಲಭಿಸಿದೆ.

ಉತ್ತರ ಕರ್ನಾಟಕದಲ್ಲಿ ಪ್ರಾಚೀನ ಕೃತಿಗಳನ್ನು ಸಂಪಾದನಶಾಸ್ತ್ರ ದೃಷ್ಟಿಯಿಂದ ಸಂಪಾದಿಸಿದವರು ಶಿ. ಶಿ. ಬಸವನಾಳ ಅವರು. ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ವತಿಯಿಂದ ಚೆನ್ನಬಸವಪುರಾಣ (೧೯೩೪), ಪ್ರಭುಲಿಂಗಲೀಲೆ (೧೯೩೮), ಶಬರಶಂಕರ ವಿಳಾಸ (೧೯೩೯), ಪಂಪಾಶತಕ ರಕ್ಷಾಶತಕ (೧೯೪೩), ರೇವಣಸಿದ್ದೇಶ್ವರ ರಗಳೆ, ಶಂಕರದಾಸಿಮಯ್ಯನ ರಗಳೆ, ಪ್ರಭುದೇವರ ರಗಳೆ (೧೯೪೭)ಗಳನ್ನು ಕರ್ನಾಟಕ ವಿದ್ಯಾವರ್ಧಕ ಸಂಘದ ವತಿಯಿಂದ ಕಾವ್ಯಾವಲೋಕನ (೧೯೩೯), ಶಬ್ದಾನುಶಾಸನ (೧೯೪೧)ಗಳನ್ನೂ ಮುರುಘಾಮಠದ ವತಿಯಿಂದ ಕೈವಲ್ಯಕಲ್ಪವಲ್ಲರಿ (೧೯೪೮), ಕೈವಲ್ಯದರ್ಪಣ (೧೯೪೩)ಗಳನ್ನೂ ಪ್ರಕಟಿಸಿದ್ದಾರೆ. ಇವರು ಸಂಪಾದಿಸಿರುವ 'ಬಸವಣ್ಣನವರ ಷಟ್‌ಸ್ಥಲದ ವಚನಗಳು' ವಚನ ಸಂಪಾದನೆಯ ಇತಿಹಾಸದಲ್ಲಿ ಹೊಸ ಹಾದಿ ಮೂಡಿಸಿತು. ಪೀಠಿಕೆಯಲ್ಲಿ ಗ್ರಂಥ ಸಂಪಾದನೆಯ ಬಗೆಗಿನ ಮಾತುಗಳು ಮೌಲಿಕವಾಗಿವೆ. ಡಾ. ನಂದಿಮಠ ಅವರು ಗಿರಿಜಾಕಲ್ಯಾಣವನ್ನು ಸಂಪಾದಿಸಿದುದಲ್ಲದೆ ವೀರಶೈವಕ್ಕೆ ಸಂಬಂಧಿಸಿದ ಹಲವಾರು ಅಮೂಲ್ಯ ಲೇಖನಗಳನ್ನೂ ಬರೆದಿದ್ದಾರೆ.

ಡಾ. ಹಳಕಟ್ಟಿ ಅವರ ನಂತರ ವಚನಸಾಹಿತ್ಯ ಸಂಪಾದನೆಯಲ್ಲಿ ಎದ್ದು ಕಾಣುವ ಹೆಸರು ಡಾ. ಆರ್. ಸಿ. ಹಿರೇಮಠ ಅವರದು. ಕರ್ನಾಟಕ ವಿಶ್ವವಿದ್ಯಾಲಯದಿಂದ ಪ್ರಕಟಗೊಂಡ ಚೆನ್ನಬಸವಣ್ಣನವರ ವಚನಗಳು, ಸಿದ್ಧರಾಮೇಶ್ವರನ ವಚನಗಳು, ಪ್ರಭುದೇವರ ವಚನಗಳು, ಶಿವಶರಣೆಯರ ವಚನಗಳು, ಶೂನ್ಯಸಂಪಾದನೆಗಳು ಮೊದಲಾದವು ಗ್ರಂಥಸಂಪಾದನಶಾಸ್ತ್ರದ ನವೀನ ತಂತ್ರದಿಂದ ಸಂಪಾದಿಸಲ್ಪಟ್ಟಿದೆ. ಅವರೇ ಸಂಪಾದಿಸಿರುವ ರಾಜಶೇಖರ ವಿಳಾಸ, ಬಸವ ಪುರಾಣ, ಸೋಮನಾಥ ಚಾರಿತ್ರ, ತ್ರಿಷಷ್ಟಿ ಪುರಾತನರ ಚಾರಿತ್ರ, ಹರಿಹರನ ರಗಳೆಗಳು, ಇತ್ತೀಚೆಗೆ ವೀರಶೈವಾಮೃತ ಮಹಾಪುರಾಣ, ಶ್ರದ್ಧೆ ಪಾಂಡಿತ್ಯಗಳ ಫಲವಾಗಿ ಮೂಡಿಬಂದಿವೆ. ಹೀಗೆ ಹಿರೇಮಠರು ೨೪ಕ್ಕೂ ಹೆಚ್ಚು ಕೃತಿಗಳನ್ನು ಸ್ವತಂತ್ರವಾಗಿ ಸಂಪಾದಿಸಿರುವರು. ಸುಮಾರು ೭ ಕೃತಿಗಳನ್ನು ಎಂ. ಎಸ್. ಸುಂಕಾಪುರ ಅವರೊಡನೆ ಸೇರಿ ಸಂಪಾದಿಸಿರುವರು. 'ಇಷ್ಟು ದೊಡ್ಡ ಪ್ರಮಾಣದಲ್ಲಿ ಶಾಸ್ತ್ರೀಯವಾಗಿ ಗ್ರಂಥಗಳ ಸಂಪಾದನೆ ಮಾಡಿರುವವರು ಕರ್ನಾಟಕದಲ್ಲಿ ಬಹುಶಃ ಇವರೊಬ್ಬರೆ.'[1] ಅದೇ ರೀತಿ ಮೈಸೂರು ಭಾಗದಲ್ಲಿ ವಚನ ಸಾಹಿತ್ಯದ ಸಂಪಾದನೆ ಮಾಡಿದವರು ಡಾ. ಎಲ್. ಬಸವರಾಜು ಅವರು. ಅವರ ಅಲ್ಲಮನ ವಚನಚಂದ್ರಿಕೆ; ಶಿವದಾಸ ಗೀತಾಂಜಲಿಗಳಿಗೆ ಡಿಲಿಟ್ ಪದವಿ ಬಂದಿದೆ. ಅಲ್ಲದೆ ಅವರು ಶಿವಗಣಪ್ರಸಾದಿ ಮಹಾದೇವಯ್ಯಗಳ ಶೂನ್ಯಸಂಪಾದನೆ, ದೇವರ ದಾಸಿಮಯ್ಯನ ವಚನಗಳನ್ನಲ್ಲದೆ ಆದಿಪುರಾಣ, ಕನ್ನಡ ಛಂದಸ್ಸಂಪುಟ, ಸರ್ವಜ್ಞನ ಪರಮಾರ್ಥ, ಮಹಾಲಿಂಗೇಂದ್ರ ವಿಜಯಗಳನ್ನೂ ಸಂಪಾದಿಸಿದ್ದಾರೆ. ಇದೇ ವೇಳೆಗೆ ಸಂಪಾದನ ಕ್ಷೇತ್ರದಲ್ಲಿ ನೆನಪಿಗೆ ಬರುವ ಇನ್ನೊಂದು ಹೆಸರು ಎಚ್. ದೇವೀರಪ್ಪ ಅವರದು. ಅವರು ಶರಣ ಚರಿತ ಮಾನಸ (೧೯೬೮), ಶಿವಶರಣ ಸಂಪುಟ (೧೯೭೪), ಸಿಂಗಿರಾಜ ಪುರಾಣ (೧೯೮೧), ಮಹಾದೇವಿಯಕ್ಕನ ರಗಳೆ (೧೯೪೦), ಬಸವರಾಜದೇವರ ರಗಳೆ (೧೯೮೧)ಗಳನ್ನೂ ಸಂಪಾದಿಸಿದ್ದಾರೆ. ಇವರು ದೇ. ಜವರೇಗೌಡರ ಜೊತೆ ಅಜಿತಪುರಾಣ

೧. ಡಾ. ವಿದ್ಯಾಶಂಕರ, ಕನ್ನಡ ಸಂಪಾದನೆಗೆ ಹಿರಿಯ ವಿದ್ವಾಂಸರ ಕೊಡುಗೆ (ಹಸ್ತಪ್ರತಿ ಶಾಸ್ತ್ರ ಪು. ೧೯೮)

(೧೯೫೯) ಗಿರಿಜಾ ಕಲ್ಯಾಣ ಮಹಾಪ್ರಬಂಧಂ [ಸಂಗ್ರಹ], ಎಂ. ಸಿ. ಪದ್ಮನಾಭಶರ್ಮರ ಜೊತೆ ಅನಂತನಾಥಪುರಾಣ (೧೯೫೨), ಆರ್. ರಾಚಪ್ಪನವರ ಜೊತೆ ಜೇಡರ ದಾಸಿಮಯ್ಯನ ವಚನಗಳು, ಚೆನ್ನಪ್ಪ ಎರೆಸೀಮೆಯವರ ಜೊತೆ ಷಟಸ್ಥಲ ವಲ್ಲಭ (೧೯೮೦) ಮೊದಲಾದ ಗ್ರಂಥಗಳನ್ನು ಸಂಪಾದಿಸಿದ್ದಾರೆ. ಹರಿಹರನ ರಗಳೆಗಳ ಸಂಖ್ಯಾ ನಿರ್ಣಯದಲ್ಲಿಯೂ ಇವರು ಮಹತ್ವದ ಪಾತ್ರ ವಹಿಸಿದ್ದಾರೆ. ಇದೇ ವೇಳೆಯಲ್ಲಿ ಪ್ರೊ. ಸಂ. ಶಿ. ಭೂಸನೂರಮಠ ಅವರು ಭಕ್ತಿಸುಧಾಸಾರ (೧೯೪೫), ಗುರುರಾಜ ಚಾರಿತ್ರ(೧೯೫೦), ಮೋಳಿಗೆಯ್ಯನ ಪುರಾಣ, ಲಿಂಗಲೀಲಾವಿಲಾಸ ಚಾರಿತ್ರ (೧೯೫೬), ಪ್ರೌಢರಾಯನ ಕಾವ್ಯ (೧೯೫೭), ಶೂನ್ಯಸಂಪಾದನೆ, ಏಕೋತ್ತರ ಶತಸ್ಥಲಗಳನ್ನಲ್ಲದೆ ಉತ್ತಂಗಿಯವರೊಂದಿಗೆ 'ಮೋಳಿಗೆಯ ಮಾರಯ್ಯ ಹಾಗೂ ರಾಣಿ ಮಹಾದೇವಿಯವರ ವಚನಗಳು' ಕೃತಿಯನ್ನು ಸಂಪಾದಿಸಿದ್ದಾರೆ. ಇವರಿಗೆ ಖ್ಯಾತಿಯನ್ನು ತಂದುಕೊಟ್ಟ ಕೃತಿ ಶೂನ್ಯ ಸಂಪಾದನೆಯ ಪರಾಮರ್ಶೆ, ಇದಕ್ಕೆ ೧೯೯೧ನೇ ಸಾಲಿನ ಪಂಪಪ್ರಶಸ್ತಿ ದೊರೆತಿದೆ.

ವಚನವಾಙ್ಮಯದಂತೆ ದಾಸಸಾಹಿತ್ಯದ ಪ್ರಕಟನೆಯೂ ನಡೆದಿದೆ. ಈ ಕಾರ್ಯ ಮೊಟ್ಟಮೊದಲು ಪ್ರಾರಂಭವಾದುದು ಮೊಗ್ಲಿಂಗ್‌ನಿಂದ. ತರುವಾಯ ವರ್ಥನು 'ಪ್ರಾಕ್ಕಾವ್ಯ ಮಾಲಿಕೆ'ಯಲ್ಲಿ ದಾಸರ ಹಲವು ಹಾಡುಗಳನ್ನು ಬಳಸಿಕೊಂಡನು. ಆ ಮೇಲೆ ಈ ಕ್ಷೇತ್ರದಲ್ಲಿ ದುಡಿದವರು ಸುಬೋಧ ರಾಮರಾಯರು. ಅವರು ಶ್ರೀಪಾದರಾಜರು, ವ್ಯಾಸರಾಜರು, ವಾದಿರಾಜರು, ಪುರಂದರದಾಸರು, ವಿಜಯದಾಸರು, ಗೋಪಾಲದಾಸರು, ಜಗನ್ನಾಥದಾಸರು, ಮೋಹನದಾಸರು ಮೊದಲಾದವರ ಮೂಲ ಕೃತಿಗಳ ಜನಪ್ರಿಯ ಆವೃತ್ತಿಗಳನ್ನು ಹೊರತಂದರು. ಇದೇ ವೇಳೆಗೆ ಉಡುಪಿಯ ಪಾವಂಜೆ ಗುರುರಾಯರು ಪುರಂದರದಾಸರ ಕೃತಿ (ಸು. ೧೨೦೦ ಹಾಡು)ಗಳನ್ನು ಐದು ಭಾಗಗಳಲ್ಲಿ ಪ್ರಕಟಿಸಿದರು. ಡಾ. ಕೆ. ಎಂ. ಕೃಷ್ಣರಾಯರು ಹರಿಕಥಾಮೃತಸಾರವನ್ನು ಗ್ರಂಥಸಂಪಾದನತತ್ವಗಳಿಗನುಸಾರವಾಗಿ ಪ್ರಕಟಿಸಿದರು. ಲಿಂಗಸಗೂರಿನ ಗೊರೆಬಾಳ್ ಹನುಮಂತರಾಯರು ಶ್ರೀ ವರದೇಂದ್ರ ಹರಿದಾಸ ಸಾಹಿತ್ಯಮಾಲೆಯ ಅಂಗವಾಗಿ ಪುರಂದರದಾಸರ ಕೀರ್ತನೆಗಳನಲ್ಲದೆ-ಶ್ರೀಪಾದ ರಾಯರಿಂದ ಆದಿಯಾಗಿ ಪ್ರಾಣೇಶದಾಸರ ವರೆಗಿನ ಎಲ್ಲ ದಾಸಸಾಹಿತ್ಯವನ್ನು ಪ್ರಕಟಿಸಿದರು. ಇವರಲ್ಲದೆ ಬೆಟಗೇರಿ ಕೃಷ್ಣಶರ್ಮ, ಬೆಂಗೇರಿ ಹುಚ್ಚರಾವ್, ಬೇಲೂರು ಕೇಶವದಾಸರು, ಜಿ. ವರದರಾಜರಾವ್, ಟಿ. ಎನ್. ನಾಗರತ್ನ ಮೊದಲಾದವರೂ ಈ ಕ್ಷೇತ್ರಕ್ಕೆ ಅಪೂರ್ವ ಕಾಣಿಕೆ ಸಲ್ಲಿಸಿದ್ದಾರೆ. ಆರ್. ಎಸ್. ಪಂಚಮುಖಿ ಮ. ಅ. ದಿವಾಣಜಿ. ಎಸ್. ಎ. ಪುರೋಹಿತ, ಎ. ಟಿ. ಪಾಟೀಲ, ಚೆನ್ನೂಲಾಲ್, ಕೆ. ವಸಂತ ಕುಷ್ಟಗಿ ಮೊದಲಾದವರೂ ಈ ಕ್ಷೇತ್ರದಲ್ಲಿ ವಿಶೇಷ ಶ್ರಮ ವಹಿಸಿದ್ದಾರೆ. ಇತ್ತೀಚೆಗೆ ಮೈಸೂರು ವಿಶ್ವವಿದ್ಯಾಲಯ ಹರಿದಾಸ ಸಾಹಿತ್ಯವನ್ನು ಶಾಸ್ತ್ರೀಯವಾಗಿ ಪ್ರಕಟಿಸುವ ಯೋಜನೆಯನ್ನು ಕೈಗೆತ್ತಿಕೊಂಡಿದೆ.

ಮೊದಮೊದಲು ಕವಿ, ಕಾವ್ಯ, ಕಾಲ, ದೇಶ, ಪರಿಸರಗಳ ಅಧ್ಯಯನ ಆಯಾ ಗ್ರಂಥಗಳ ಪ್ರಸ್ತಾವನೆ ಅಥವಾ ಪತ್ರಿಕೆಗಳಲ್ಲಿಯ ಲೇಖನರೂಪಗಳಿಗೆ ಮಾತ್ರ ಸೀಮಿತವಾಗಿದ್ದು ಬರುಬರುತ್ತ ಮಹಾಪ್ರಬಂಧಗಳ ವಸ್ತುವಾಗಿ, ಆ ಕವಿ ಬಾಳಿದ ಯುಗದ ಸಾಂಸ್ಕೃತಿಕ ಅಧ್ಯಯನವಾಗುತ್ತ ನಡೆದಿದೆ. ಕನ್ನಡದಲ್ಲಿ ಈ ವರೆಗೆ ಬಂದಿರುವ ಒಟ್ಟು ಸುಮಾರು ೬೦೦ ಮಹಾಪ್ರಬಂಧಗಳಲ್ಲಿ ಪ್ರಾಚೀನರಿಂದ ಅರ್ವಾಚೀನರವರಗಿನ ಕವಿ-ಕಾವ್ಯಗಳ ಅಧ್ಯಯನ ಕುರಿತ ಮಹಾಪ್ರಬಂಧಗಳ ಸಂಖ್ಯೆ ಸುಮಾರು ೧೫೦. ಅವುಗಳಲ್ಲಿ ಬಹಳಷ್ಟು

ಸಾಂಪ್ರದಾಯಿಕ ರೂಪದಲ್ಲಿದ್ದು ಕೆಲವು ಮಾತ್ರ ಪಂಡಿತರ ಗಮನ ಸೆಳೆದಿವೆ. ಉದಾಹರಣೆಗೆ ಕುಮಾರರಾಮನ ಸಾಂಗತ್ಯಗಳು-ಒಂದು ಅಧ್ಯಯನ [ಡಾ. ಜಿ. ವರದರಾಜರಾವ್], ನಯಸೇನ ಮತ್ತು ಅವರ ಕೃತಿಗಳು [ಡಾ. ಬಿ. ವಿ. ಮಲ್ಲಾಪುರ] ಕೂಡೇಕಲ್ಲ ಬಸವಣ್ಣ-ಒಂದು ಅಧ್ಯಯನ: [ಡಾ. ಬಸವಲಿಂಗ ಸೊಪ್ಪಿಮಠ]. ಇನ್ನು ಕೆಲವು ತೌಲನಿಕ ಅಧ್ಯಯನಗಳಾಗಿವೆ. ಉದಾಹರಣೆಗೆ-ಕನ್ನಡ ನೇಮಿನಾಥ ಪುರಾಣಗಳ ತೌಲನಿಕ ಅಧ್ಯಯನ [ಡಾ. ಟಿ. ವಿ. ವೆಂಕಟಾಚಲ ಶಾಸ್ತ್ರಿ, ಕನ್ನಡದಲ್ಲಿ ನಂಜಿಯಣ್ಣನ ಸಾಹಿತ್ಯ-ಒಂದು ಅಧ್ಯಯನ [ಡಾ. ಎಸ್. ಎಸ್. ತಾರಾನಾಥ] ಬಸವೇಶ್ವರ ಮತ್ತು ಪುರಂದರದಾಸ-ಒಂದು ಸಾಹಿತ್ತಿಕ ಅಧ್ಯಯನ-(ಡಾ. ಬಸವರಾಜ ಸಬರದ) ಮೊದಲಾದವು. ಆದರೆ ಇಲ್ಲಿ ಇತರ ಭಾಷೆಯ ಕವಿಗಳೊಂದಿಗಿನ ತೌಲನಿಕ ಅಧ್ಯಯನಕ್ಕೆ ವಿಪುಲ ಅವಕಾಶಗಳಿವೆ.

* * * * *

## ಭಾಷಾ ವಿಜ್ಞಾನ

೧೮ನೆಯ ಶತಮಾನದ ಮಧ್ಯಭಾಗದಲ್ಲಿ ಭಾರತಕ್ಕೆ ಬಂದ ಪಾಶ್ಚಾತ್ಯಪಂಡಿತರ ಕಣ್ಣಿಗೆ ಪಾಣಿನೀಯ 'ಅಷ್ಟಾಧ್ಯಾಯಿ' ಮೊದಲಾದ ಸಂಸ್ಕೃತ ವ್ಯಾಕರಣ ಗ್ರಂಥಗಳು ಬಿದ್ದು ಭಾಷಾಶಾಸ್ತ್ರದ ಹೊಸ ದಿಗಂತವನ್ನ ಪರಿಚಯಿಸಿದವು. ಅದನ್ನು ಕುರಿತು Bloomfield ಅವರು The Indian Grammar presented to European eyes for the first time a complete and accurate description to language based not upon theory but upon Observation. Morever the discovery of Sanskrit disclosed a possibility of a comparative study of language' ಎಂದಿದ್ದಾರೆ. ಅಲ್ಲಿಂದಲೇ ಆಧುನಿಕ ಭಾಷಾವಿಜ್ಞಾನದ ನಾಂದಿಯಾಯಿತು.

ಕ್ರಿ.ಶ. ೧೭೮೬ ಫೆಬ್ರುವರಿ ೨ರಂದು ಸರ್ ವಿಲಿಯಮ್ ಜೋನ್ಸ್ ಎಂಬುವನು ಕಲ್ಕತ್ತಾದ ಒಂದು ಸಮಾರಂಭದ ಅಧ್ಯಕ್ಷ ಭಾಷಣ ಮಾಡುತ್ತ 'ಜಗತ್ತಿನ ಭಾಷೆಗಳು ಬಾಹ್ಯದೃಷ್ಟಿಗೆ ಬಿಡಿಬಿಡಿಯಾಗಿ ಕಂಡರೂ ಅವುಗಳ ಅಂತರಂಗದಲ್ಲಿ ಇಡಿ ಇಡಿಯಾಗಿ ಹಿಡಿದಿಡುವ ಶಕ್ತಿಯಿದೆ' ಎಂದು ಸಾರಿದನು. ಇದರಿಂದ ಶಾಸ್ತ್ರೀಯ ಭಾಷಾವಿಜ್ಞಾನದ ಹೊಸ ಪುಟವೆ ತೆರೆದಂತಾಯಿತು; ಜೋನ್ಸನು Father of the modern linguistics' ಎಂಬ ಗೌರವಕ್ಕೆ ಪಾತ್ರನಾದನು. ೧೯ನೆಯ ಶತಮಾನದ ಆರಂಭದಲ್ಲಿ ರಾಸಮಸ್‌ರಾಸ್ಕ (೧೭೮೭-೧೮೩೨) ಎಂಬುವವನು 'ದ್ರಾವಿಡ ಭಾಷೆಗಳು ಸಂಸ್ಕೃತಜನ್ಯ' ಎಂಬ ವಿಚಾರವನ್ನು ಕೈಗೆತ್ತಿಕೊಂಡು, ಪರಿಶೀಲಿಸಿ, ಅವು ಸಂಸ್ಕೃತಜನ್ಯವಲ್ಲ, ಕೆಲವಂಶದಲ್ಲಿ ಸಿಥಿಯನ್ ಗುಂಪನ್ನು ಹೋಲುತ್ತಿವೆ' ಎಂದು ಅಭಿಪ್ರಾಯಪಟ್ಟನು. ಇದೇ ಸುಮಾರಿಗೆ ವೈಗಲ್ ಎಂಬುವವನು ZDMG ಪತ್ರಿಕೆಯಲ್ಲಿ (೧೮೪೬)ಕನ್ನಡ ಭಾಷೆ ಮತ್ತು ಸಾಹಿತ್ಯ ಕುರಿತು ಸವಿವರ ಲೇಖನವೊಂದನ್ನು ಬರೆದು ಅದರಲ್ಲಿ ಅವನು ಕನ್ನಡಭಾಷೆ ಯಾವ ವರ್ಗಕ್ಕೆ ಸೇರಿದುದು ಎಂಬುದನ್ನು ವಿವೇಚನೆ ಮಾಡಿದನು, ಕನ್ನಡ ವ್ಯಾಕರಣ ವಿಷಯವನ್ನು ಸಂಸ್ಕೃತ, ಪ್ರಾಕೃತ ಮತ್ತು ದ್ರಾವಿಡ ಭಾಷೆಗಳೊಡನೆ ಹೋಲಿಸಿ ವಿವರಣೆ ನೀಡಿದನು.

ದ್ರಾವಿಡ ಭಾಷೆಗಳ ಸಮಗ್ರ ಅಧ್ಯಯನ ಮಾಡಿದ ಮೊಟ್ಟಮೊದಲ ವ್ಯಕ್ತಿ ಡಾ. ರಾಬರ್ಟ್ ಕಾಲ್ಡವೆಲ್ (೧೮೧೪-೧೮೯೧). ಇವನು ತನ್ನ *Comparative Grammar*

*of the Dravidian or South Indian languages* ಎಂಬ ಗ್ರಂಥದಲ್ಲಿ ದ್ರಾವಿಡಭಾಷೆಗಳು ಸಂಸ್ಕೃತದಿಂದ ಭಿನ್ನವಾದವು ಎಂಬ ವಿಚಾರವನ್ನು ಸ್ಥಿರಗೊಳಿಸಿದನು, ಆದರೆ ರಾಸಮಸ್ ರಾಸ್ಕನ ಹಾಗೆ ಅವನ್ನು ಸಿಥಿಯನ್ ಗುಂಪಿಗೆ ಸೇರಿಸಿದನು. ಎಂ. ಬಿ. ಎಮಿನೋ ೧೯೩೫ರಲ್ಲಿ ಅಜ್ಞಾತ ದ್ರಾವಿಡಭಾಷೆಗಳ ಅಧ್ಯಯನಕ್ಕಾಗಿ ಭಾರತಕ್ಕೆ ಬಂದು ಮೂರು ವರ್ಷ ಕಾಲ ಇಲ್ಲಿನ ಗುಡ್ಡಗಾಡುಗಳಲ್ಲಿ ಆದಿವಾಸಿಗಳ ಜೊತೆ ಅಲೆದಾಡಿ ಭಾಷಾವಿಜ್ಞಾನಿಗಳ ಕಣ್ಣಿಗೆ ಇನ್ನೂ ಅಗೋಚರವಾಗಿದ್ದ ತೊದ, ಕೊತ, ಕೊಡವ, ಕೋಲಾಮಿ ಮುಂತಾದ ಭಾಷೆಗಳ ಆಡುನುಡಿಗಳನ್ನು ಸಂಗ್ರಹಿಸಿದ. ಇದರ ಫಲವಾಗಿ 'ಕೋತ ಟೆಕ್ಸ್ಟ' (ನಾಲ್ಕು ಸಂಪುಟ), 'ಕೋಲಾಮಿ ಒಂದು ದ್ರಾವಿಡ ಭಾಷೆ' ಎಂಬ ಗ್ರಂಥಗಳನ್ನೂ ಹಲವಾರು ಲೇಖನಗಳನ್ನೂ ಬರೆದನು. ದ್ರಾವಿಡ ಭಾಷಾವಿಜ್ಞಾನಕ್ಕೆ ಈತ ಸಲ್ಲಿಸಿದ ಇನ್ನೊಂದು ಅಮೋಘ ಸೇವೆ ಟಿ. ಬರೋ ಜೊತೆ ಸೇರಿ ೧೯೬೦ರಲ್ಲಿ ಪ್ರಕಟಿಸಿದ 'ದ್ರಾವಿಡಿಯನ್ ಎಟಿಮೊಲಾಜಿಕಲ್ ಡಿಕ್ಷನರಿ'. ೬೦೦ ಪುಟದ ಈ ಹೊತ್ತಿಗೆಯಲ್ಲಿ ದ್ರಾವಿಡ ಭಾಷೆಯಲ್ಲಿನ ನಾಲ್ಕೂವರೆ ಸಾವಿರ ಮೂಲಧಾತುಗಳ ಮತ್ತು ಸುಮಾರು ೨೦ ಸೋದರ ಭಾಷೆಗಳಲ್ಲಿ ಆ ಧಾತುಗಳಲ್ಲಿ ನಡೆದ ಪರಿವರ್ತನೆ-ಗಳ ವಿಸ್ತಾರವಾದ ನಿರೂಪಣೆಯಿದೆ, ಇದಾದ ಒಂದು ವರ್ಷದೊಳಗೆ 'ದ್ರಾವಿಡ ಭಾಷೆಗಳು ಎರವಲು ಪಡೆದ ಆರ್ಯ ಶಬ್ದಗಳು' ಎಂಬ ಗ್ರಂಥವನ್ನು ಟಿ. ಬರೋ ಅವರ ಜೊತೆ ಪ್ರಕಟಿಸಿದನು. ಇದೇ ಸಮಯ [೧೯೪೬]ದಲ್ಲಿ ಯೂಲ್ಸ್ ಬ್ಲಾಕ್ ಅವರು *The Grammatical Structure of Dravidian Languages* ಎಂಬ ಗ್ರಂಥವನ್ನು ಫ್ರೆಂಚ ಭಾಷೆಯಲ್ಲಿ ಪ್ರಕಟಿಸಿದನು. ಇದು ೧೯೫೪ರಲ್ಲಿ ಇಂಗ್ಲೀಷಿಗೆ ಅನುವಾದವಾಯಿತು.

ಭಾರತ ಸರಕಾರದಿಂದ ನೇಮಿಸಲ್ಪಟ್ಟ ಸಮಿತಿಯ ಫಲವಾಗಿ ಸರ್ ಜಾರ್ಜಗ್ರಿಯರ್‌ಸನ್ ಮತ್ತು ಸ್ಟೆನ್‌ಕೊನೋ ಅವರು ಸೇರಿ *Linguistic Survey of India* ಎಂಬ ಗ್ರಂಥವನ್ನು ಹೊರತಂದರು. ಅದು ಭಾರತೀಯ ಭಾಷೆ, ಲಿಪಿ, ಉಪಭಾಷೆ, ಭಾಷಾಪ್ರದೇಶ, ಜನಾಂಗ, ಜನಸಂಖ್ಯೆ ಎಂಬೆಲ್ಲ ವಿಷಯವನ್ನೊಳಗೊಂಡಿದೆ. ಅವರು ನಾಲ್ಕನೆಯ ಸಂಪುಟದಲ್ಲಿ ಕಾಲ್ಡವೆಲ್ ಅವರು ಹೇಳಿದ 'ದ್ರಾವಿಡ ಭಾಷೆಗಳು ಸೀಥಿಯನ್ ಗುಂಪಿಗೆ ಸೇರಿದವು' ಎಂಬ ಅಭಿಪ್ರಾಯವನ್ನು ಅಲ್ಲಗಳೆದು, ಅವು ಸ್ವತಂತ್ರವಾದವು ಎಂಬ ಸಿದ್ಧಾಂತವನ್ನು ಮಂಡಿಸಿದರು. ಭಾರತೀಯ ಭಾಷೆಗಳನ್ನು ಔತ್ತರೇಯ, ದಾಕ್ಷಿಣಾತ್ಯ, ಮಧ್ಯ ಭಾರತೀಯ ಎಂದು ವಿಭಾಗಿಸಿದರು. ಇವಲ್ಲದೆ ವಿಲ್ಯಂ ಬ್ರೈಟ್ ಅವರ *An Outline of Colloquial Kannada* (೧೯೫೮), ಹೇರಾಲ್ಡ ಶಿಪ್‌ಮನ್ ಅವರ *A Reference Grammar of Spoken Kannada*, ಅಂಡ್ರ್ಯೂನೋವ್ ಅವರ ರಷ್ಯನ್ ಭಾಷೆಯ ಜಾರ್ಖಿಕ್ ಕನ್ನಡ [ಕನ್ನಡ ಅನುವಾದ ವಿಲಿಯಂ ಮಾಡ್ರ], ಮ್ಯಾಕೊರ್ಮಿಕ್ ಅವರ *Kannada, Social Dilects in Dharwad* ಮೊದಲಾದವು ಇತ್ತೀಚೆಗೆ ಬಂದ ಪಾಶ್ಚಾತ್ಯ ಪಂಡಿತರ ಕೃತಿಗಳು.

ಕನ್ನಡ ಭಾಷೆಯನ್ನು ಕುರಿತು ಅಧ್ಯಯನ ಮಾಡಿದ ಮೊಟ್ಟಮೊದಲ ಕನ್ನಡಿಗರು ಡಾ. ಎ. ಎನ್. ನರಸಿಂಹಯ್ಯನವರು. ಅವರು *A Grammar of Oldest Kanarese inscriptions* ಎಂಬ ಮಹಾಪ್ರಬಂಧವನ್ನು ಬರೆದು ೧೯೩೩ರಲ್ಲಿ ಲಂಡನ್ ವಿಶ್ವವಿದ್ಯಾಲಯಕ್ಕೆ ಸಮರ್ಪಿಸಿದರು. ಇಲ್ಲಿ ಕ್ರಿ.ಶ. ೬-೭ನೇ ಶತಮಾನದ ಶಾಸನಗಳ

ವ್ಯಾಕರಣವನ್ನು ವಿವೇಚಿಸಲಾಗಿದೆ. ಇದೇ ಸಮಯದಲ್ಲಿ ಆರ್. ವಿ. ಜಾಗಿರದಾರ್ ಅವರು ಇಂಡೋ ಆರ್ಯನ್ ಐತಿಹಾಸಿಕ ಭಾಷಾಭ್ಯಾಸ ಕುರಿತ 'ಶಾರದೆಯ ಸಂಸಾರ'ವನ್ನು ಬರೆದರು, ಅವರ ತರುವಾಯ ಆರ್. ನರಸಿಂಹಾಚಾರ್ ಅವರು ೧೯೩೪ರಲ್ಲಿ *The History of Kannada Language* ಎಂಬ ಗ್ರಂಥ ಬರೆದು ದ್ರಾವಿಡದ ಹುಟ್ಟು, ನಾಗರೀಕತೆ, ಭಾಷೆ, ಅದರ ಮೇಲೆ ಸಂಸ್ಕೃತದ ಪ್ರಭಾವ, ಕನ್ನಡ ಭಾಷೆಯ ಚರಿತ್ರೆ, ವ್ಯಾಕರಣ ವಿಷಯ, ಶಬ್ದಸಂಪತ್ತಿ, ಭಾಷೆಯಲ್ಲಿ ಕಂಡುಬರುವ ಬದಲಾವಣೆ ಮೊದಲಾದವನ್ನು ವಿವೇಚಿಸಿದರು. ೧೯೪೬ರಲ್ಲಿ ಡಾ. ಜಿ. ಎಸ್. ಗಾಯಿ ಅವರು *Historical Grammar of Old Kannada* ಎಂಬ ಮಹಾಪ್ರಬಂಧವನ್ನು ಪುಣೆಯ ಡೆಕ್ಕನ್ ಕಾಲೇಜಿಗೆ ಸಾದರಪಡಿಸಿದರು. ಇಲ್ಲಿ ೮-೯-೧೦ನೆಯ ಶತಮಾನದ ಕನ್ನಡ ಭಾಷೆಯನ್ನು ಅಧ್ಯಯನ ಮಾಡಲಾಗಿದೆ. ೧೯೫೫ರಲ್ಲಿ ಡಾ. ಆರ್. ಸಿ. ಹಿರೇಮಠ ಅವರು *Linguistic investigation of some problems in the relationship of Indo-Aryan and Dravidian Languages* ಎಂಬ ಮಹಾಪ್ರಬಂಧವನ್ನು ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಅರ್ಪಿಸಿದರು. ಡಾ. ಕೆ. ಕುಶಾಲಪ್ಪಗೌಡ ಅವರು ೧೯೬೯ರಲ್ಲಿ *A Grammar of Kannada based on the inscriptions of Coorg, South Kanara and North Kanara Districts* ಎಂಬ ಮಹಾಪ್ರಬಂಧವನ್ನು ಅಣ್ಣಾಮಲೈ ವಿಶ್ವವಿದ್ಯಾಲಯಕ್ಕೆ ಸಮರ್ಪಿಸಿದರು. ಇಲ್ಲಿ ೧೦ ರಿಂದ ೧೪ ನೆಯ ಶತಮಾನದವರೆಗಿನ ಶಾಸನಗಳ ಅಧ್ಯಯನವಿದೆ. ಇವರೇ ೧೯೮೬ರಲ್ಲಿ 'ಕನ್ನಡ ಭಾಷೆ ಮತ್ತು ವ್ಯಾಕರಣಗಳ ಒಂದು ಅಧ್ಯಯನ' ಎಂಬ ಗ್ರಂಥವನ್ನು ಪ್ರಕಟಿಸಿದರು. ೧೯೮೨ರಲ್ಲಿ ಡಾ. ಎಂ. ಬಿ. ನೇಗಿನಹಾಳ ಅವರ ಕ್ರಿ.ಶ. ೪೫೦-೮೫೦ರ ವರೆಗಿನ 'ಪ್ರಾಚೀನ ಕನ್ನಡ ಶಾಸನಗಳ ಭಾಷಿಕ ಅಧ್ಯಯನ' ಎಂಬ ಮಹಾಪ್ರಬಂಧವನ್ನು ಕರ್ನಾಟಕ ವಿಶ್ವವಿದ್ಯಾಲಯ ಪ್ರಕಟಿಸಿದೆ.

ಇವಲ್ಲದೆ ಎಚ್. ಆರ್. ರಂಗನಾಥ ಅವರ *Mysore and Dharwad Kannada*, ಬಿ. ಬಿ. ರಾಜಪುರೋಹಿತ ಅವರ *A Grammar of Vachana Literature*, ಕೆ. ಜಿ. ಶಾಸ್ತ್ರಿ ಅವರ *A Havyaka Dialect of North Kanara*, ಜೆ. ಎಸ್. ಕುಳ್ಳಿ ಅವರ Sabdamanidarpana, ಎಸ್. ಎಂ. ಬಿರಾದಾರ ಅವರ ವೈಯಾಕರಣಿ ನಾಗವರ್ಮ, ಬಿ. ಕೆ. ತಿಮ್ಮಪ್ಪ ಅವರ ಶಬ್ದಮಣಿದರ್ಪಣಂ-ಲೀಲಾ ತಿಲಕಂ, ಎ. ಮುರಿಗೆಪ್ಪ ಅವರ *A Linguistic analysis of Collquial Kannada in Bidar District*, ಎಚ್. ಎಂ. ಮಹೇಶ್ವರಯ್ಯ ಅವರ *Deevara Kannada*, ಸಂಗಮೇಶ ಸವದತ್ತಿಮಠ ಅವರ *Harihara's Ragales: Linguistic Analysis*, ವಿ. ಎಚ್. ಬಾರಿಕೇರಿ ಅವರ *Descriptive Analysis of Lambani Language spoken in Bijapur District*, ಮಲ್ಲಿಕಾರ್ಜುನ್ ಆರ್. ಅವರ ಯರವ : ಒಂದು ವಿವರಣಾತ್ಮಕ ವಿವೇಚನೆ, ಶಾಲಿನಿ ರಘುನಾಥ ಅವರ *A Socio-Linguistic analysis of the Havyaka Dialect of North Kanara* ಮೊದಲಾದ ಮಹಾಪ್ರಬಂಧಗಳನ್ನು ಕರ್ನಾಟಕ ವಿಶ್ವವಿದ್ಯಾಲಯವೂ; ಚಂದ್ರಯ್ಯ ಬಿ. ಎನ್. ಅವರ *A Descriptive Analysis of Harijan Dilect in and around Mysore City*, ಚಂದ್ರಶೇಖರಭಟ್ ಅವರ *Havyaka Kannada of South Kanara*, ಕೆ. ರಘುಪತಿ ಅವರ ತುಳುನಾಡಿನ ಸ್ಥಳನಾಮಾಧ್ಯಯನ, ಪಿ. ರಾಮಭಟ್

ಅವರ ಕರ್ನಾಟಕ ಶಬ್ದಾನುಶಾಸನ-ಶಬ್ದಮಣಿದರ್ಪಣ-ಒಂದು ತೌಲನಿಕ ಅಧ್ಯಯನ, ಸೋಮಶೇಖರ ಗೌಡ ಅವರ *Kannada in Mysore City*, ಸಿ. ಎಸ್. ರಾಮಚಂದ್ರ ಅವರ *A Linguistic Analysis of the Kirtanas of Haridasas in Kannada*, ವಿಶಾಲಾಕ್ಷಿ ಕೆ. ಎ. ಅವರ *Regional Variations in Kannada Script and Language of Inscriptions from earliest times to Vijayanagar period*, ಮಲ್ಲಿಕಾರ್ಜುನಸ್ವಾಮಿ ಅವರ *A Descriptive study of Adi-Karnataka Dialect of Kannada spoken in Mandya District* ಮೊದಲಾದ ಮಹಾಪ್ರಬಂಧಗಳನ್ನು ಮೈಸೂರು ವಿಶ್ವವಿದ್ಯಾಲಯವೂ; ಕೃಷ್ಣಪರಮೇಶ್ವರಭಟ್ಟ ಅವರ ಕೋಲಾರ ಜಿಲ್ಲೆಯ ಕನ್ನಡ ತೆಲಗು ದ್ವಿಭಾಷಿಕ ಪರಿಸರ-ಒಂದು ಅಧ್ಯಯನ, ಎಸ್. ಕಾರ್ಲೋಸ್ ಅವರ *A Structural study of Tamil and Kannada*, ಗೋಪಾಲಕೃಷ್ಣ ವಿ. ಅವರ ಕನ್ನಡ ಸ್ಥಳನಾಮಗಳ ಅಧ್ಯಯನ ಎಂಬ ಮಹಾಪ್ರಬಂಧಗಳನ್ನು ಬೆಂಗಳೂರು ವಿಶ್ವವಿದ್ಯಾಲಯವೂ; ಭಂಡೆ ವೈಜನಾಥ ಅವರ ಬೀದರ್ ಜಿಲ್ಲೆಯ ಸ್ಥಳನಾಮಗಳು ಎಂಬ ಮಹಾಪ್ರಬಂಧವನ್ನು ಗುಲ್ಬರ್ಗಾ ವಿಶ್ವವಿದ್ಯಾಲಯವೂ, ಎ. ಎಸ್. ಕದಿಲಾಯ್ ಅವರ *Foreign Loanwords in Kannada*, ಎಸ್. ಜಿ. ವಿರಕ್ತಮಠ ಅವರ *A Study of Agricultural and Occuptional terms in Kannada of Gulbarga District*, ಆರ್. ಮಧಿವನ್ನನ್ ಅವರ *Tolkappiam and Sabdamanidarpana: A Comparative Study* ಮಹಾಪ್ರಬಂಧಗಳನ್ನು ಮದ್ರಾಸ ವಿಶ್ವವಿದ್ಯಾಲಯವೂ; ವಿ. ಆರ್. ಉಮರ್ಜಿ ಅವರ *The influence of Samskrit directly or through Prakrit on Kannada Language* ಮಹಾಪ್ರಬಂಧವನ್ನು ಮುಂಬಯಿ ವಿಶ್ವವಿದ್ಯಾಲಯವೂ: ಎಸ್. ರಾಜಾರಾಮ ಅವರ *A Contrastive analysis of Tamil and Kannada*, ಸಿ. ರಾಮಸ್ವಾಮಿ ಅವರ *The language of Kannada inscriptions of North Karnataka*, ಎಸ್. ನಟನಸಭಾಪತಿ ಅವರ *A Descriptive study of the Language of Kattunaicka*, ಆರ್. ಸುಬ್ಬಕೃಷ್ಣ ಅವರ *Relative Clause in Kannada*, ವಿ. ಜಿ. ಭಟ್ ಅವರ *The auxilliary verbs in Kannada*, ಆರ್. ವೇಲಮುರುಘನ್ ಅವರ *A Study of Kannada dialects spoken in Madurai District*, ಎಂ. ಶಿವಕುಮಾರ ಅವರ *A Descriptive Study of Poidu Soliga* ಮಹಾಪ್ರಬಂಧಗಳನ್ನು ಅಣ್ಣಾಮಲೈ ವಿಶ್ವವಿದ್ಯಾಲಯವೂ; ಸಿ. ಓಂಕಾರೆಪ್ಪ ಅವರ *Linguistic analysis of Kumaravyasa Bharata*, ಯು. ಪಿ. ಉಪಾಧ್ಯಾಯ ಅವರ *A Comparative Study of Kannada Dialects*, ಕೆ. ಎಸ್. ಜಿ. ಗೌಡ ಅವರ *Descriptive Analysis of Soliga* ಆರ್. ಟಿ. ಶೆಟ್ಟಿ ಅವರ *Koraga Grammar*. ಟಿ. ಹನುಮಂತರಾಯರ *A Semanatic Classification of Kannada Verbs* ಮಹಾಪ್ರಬಂಧಗಳನ್ನು ಪುಣೆಯ ಡೆಕ್ಕನ್ ಕಾಲೇಜೂ; ಬಿ. ರಾಮಚಂದ್ರರಾವ್ ಅವರ *A Descriptive Grammar of Pampa Bharata* ಮಹಾಪ್ರಬಂಧವನ್ನು ಹೈದರಾಬಾದಿನ ಉಸ್ಮಾನಿಯಾ ವಿಶ್ವವಿದ್ಯಾಲಯವೂ; ಹಾ. ಮಾ. ನಾಯಕ ಅವರ *Kannada Literary and Colloquial: A Study of two Dialects* ಮಹಾಪ್ರಬಂಧವನ್ನು ಅಮೆರಿಕೆಯ

ಇಂಡಿಯಾನಾ ವಿಶ್ವವಿದ್ಯಾಲಯವೂ ಸ್ವೀಕರಿಸಿವೆ.

೧೯೫೧ರಲ್ಲಿ ರಾ. ಯ. ಧಾರವಾಡಕರ ಅವರು 'ಕನ್ನಡ ಭಾಷಾಶಾಸ್ತ್ರ' ಎಂಬ ಕೃತಿಯನ್ನು ಪ್ರಕಟಿಸಿದರು. ಪ್ರ. ಗೋ. ಕುಲಕರ್ಣಿ ಅವರು ಐತಿಹಾಸಿಕ, ವರ್ಣನಾತ್ಮಕ, ತೌಲನಿಕ, ಭಾಷಾವಿಜ್ಞಾನದ ಕಲಸುಮೇಲೋಗರವೆನ್ನುವಂತೆ 'ಕನ್ನಡ ಭಾಷೆಯ ಚರಿತ್ರೆ'ಯನ್ನು ಬರೆದರು. ಎಚ್. ಎಸ್. ಬಿಳಿಗಿರಿ ಅವರು 'ವರ್ಣನಾತ್ಮಕ ವ್ಯಾಕರಣ, ಎಂಬ ಕೃತಿ ರಚಿಸಿದ್ದಾರೆ. ಕೆ.ಎಂ. ಕೃಷ್ಣರಾವ್ ಅವರ ಕನ್ನಡ ಭಾಷೆಯ ಸ್ವರೂಪ, ಡಿ. ಎನ್. ಶಂಕರಭಟ್ಟ ಅವರ ಸಂಕ್ಷಿಪ್ತ ಕನ್ನಡ ಭಾಷೆಯ ಚರಿತ್ರೆ, ಕನ್ನಡ ವಾಕ್ಯಗಳು, ಸಂಗಮೇಶ ಸವದತ್ತಿಮಠ ಅವರ ಕನ್ನಡಭಾಷಾವ್ಯಾಸಂಗ ಮೊದಲಾದವು ಆಧುನಿಕ ಭಾಷಾವಿಜ್ಞಾನದ ಹಿನ್ನೆಲೆಯಲ್ಲಿ ಬರೆದ ಕೃತಿಗಳು.

೧೯೬೧ರಲ್ಲಿ ಡಾ. ಆರ್. ಸಿ. ಹಿರೇಮಠ ಅವರ *The Structure of Kannada* ಪ್ರಕಟವಾಯಿತು. ಭಾರತದಲ್ಲಿ ಮೊಟ್ಟಮೊದಲ ಬಾರಿಗೆ ದೇಸಿಯ ವಿದ್ವಾಂಸರಿಂದ ಒಂದು ಪ್ರದೇಶ (ಧಾರವಾಡ ಜಿಲ್ಲೆ)ದ ಆಡು ನುಡಿಯನ್ನು ಆಯ್ದುಕೊಂಡು ವರ್ಣನಾತ್ಮಕವಾಗಿ ರಚಿಸಲ್ಪಟ್ಟ ಕೃತಿ ಎಂಬ ಖ್ಯಾತಿ ಇದಕ್ಕೆ ಉಂಟಾಯಿತು. ಡಾ. ಬಿ. ಜಿ. ರಾಜಪುರೋಹಿತ ಅವರು ಆಧುವಿಕ ಭಾಷಾವಿಜ್ಞಾನದ ಧ್ವನಿಶಾಸ್ತ್ರದ ಆಧಾರದ ಮೇಲೆ ಕನ್ನಡ ಭಾಷೆಯನ್ನು ವೈಜ್ಞಾನಿಕವಾಗಿ ವಿಶ್ಲೇಷಿಸಿ *Acoustic Charactersties of Kannada* ಎಂಬ ಕೃತಿಯನ್ನು ರಚಿಸಿದರು. ಇವಲ್ಲದೆ ಡಾ. ಜೆ. ಎಸ್. ಕುಳ್ಳಿಯವರ ವರ್ಣನಾತ್ಮಕ ಭಾಷಾವಿಜ್ಞಾನ, ಭಾಷಾಸೌಧ ಡಾ. ವಿಲ್ಯಂ ಮಾಡ್ತಾ ಅವರ ಕನ್ನಡ ಭಾಷೆಯ ರೂಪರೇಷೆಗಳು, ಜಾನಪದ ಭಾಷಾವಿಜ್ಞಾನ, ಮೊದಲಾದ ಕೃತಿಗಳು ಕನ್ನಡದಲ್ಲಿ ಬಂದಿವೆ.

ಆದರೆ ತಮಿಳು, ಮಲೆಯಾಳಂ ಮುಂತಾದ ಭಾಷಾಧ್ಯಯನದೊಂದಿಗೆ ಹೋಲಿಸಿದರೆ ಕನ್ನಡದಲ್ಲಿ ನಡೆದಿರುವ ಈ ಕೆಲಸ ಕಡಿಮೆಯದೆಂದೇ ಹೇಳಬೇಕು.

*ಸಂಶೋಧನ ಸ್ವರೂಪ, ೧೯೯೨, ಪು. ೧೭೬-೮೭, ೧೯೪-೨೦೦*

## ಈ ಸಂಪುಟದ ಲೇಖಕರು

೧ **ಎಂ. ಎಚ್. ಕೃಷ್ಣ**

೨ **ಟಿ. ವಿ. ವೆಂಕಟಾಚಲಶಾಸ್ತ್ರೀ**
ಬ್ರಾಹ್ಮೀ, ನಂ. ೬೮/ಬಿ
ಆಶ್ರಮದ ರಸ್ತೆ
ಜಯಲಕ್ಷ್ಮೀಪುರಂ
ಮೈಸೂರು ೫೭೦ ೦೦೨

೩ **ಎಂ. ಬಿ. ನೇಗಿನಹಾಳ**
ಶ್ರೀಮತಿ ನೇಗಿನಹಾಳ
೫/೧, ೪ನೆಯ ಕ್ರಾಸ್
ವಿಜಯನಗರ
ಬೆಳಗಾವಿ ೫೯೧ ೧೦೮

೪ **ಜಿ. ಎಸ್. ಗಾಯಿ**
ಡಾ. ಗಾಯಿ
ಮಾನವಶಾಸ್ತ್ರವಿಭಾಗ
ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ ೫೮೦ ೦೦೩

೫ **ಹಂಪ ನಾಗರಾಜಯ್ಯ**
ನಂ. ೧೦೭೯, ಸ್ವನಿಮಾ
೫ನೆಯ ಬ್ಲಾಕ್
ರಾಜಾಜಿನಗರ
ಬೆಂಗಳೂರು ೫೬೦ ೦೧೦

೬ **ಸೀತಾರಾಮ ಜಾಗೀರ್‌ದಾರ್**
ಕಲ್ಪ, ೪೦೬/ಬಿ.೧
೩ನೆಯ ಮುಖ್ಯರಸ್ತೆ
ಸರಸ್ವತೀಪುರಂ
ಮೈಸೂರು ೫೭೦ ೦೦೯

೭ **ಎಂ. ಎಂ. ಕಲಬುರ್ಗಿ**
ಸೌಜನ್ಯ, ಕಲ್ಯಾಣನಗರ
ಧಾರವಾಡ ೫೮೦ ೦೦೭

೮ **ಎಂ. ಚಿದಾನಂದಮೂರ್ತಿ**
ಮಿಂಚು
೬/ಎ, ೭ನೆಯ ಕ್ರಾಸ್
೧೧ನೆಯ ಮುಖ್ಯರಸ್ತೆ
೨ನೆಯ ಹಂತ, ವಿಜಯನಗರ
ಬೆಂಗಳೂರು ೫೬೦ ೦೪೦

೯ **ಆರ್. ಶೇಷಶಾಸ್ತ್ರಿ**
ರೀಡರ್ ಇನ್ ಕನ್ನಡ
ಡಿಪಾರ್ಟ್‌ಮೆಂಟ್ ಆಫ್ ಆಂಧ್ರಭಾರತಿ
ಶ್ರೀ ಕೃಷ್ಣದೇವರಾಯ ವಿಶ್ವವಿದ್ಯಾಲಯ
ಅನಂತಪುರ ೫೧೫ ೦೦೩
(ಆಂಧ್ರಪ್ರದೇಶ)

೧೦ **ಬಿ. ರಾಜಶೇಖರಪ್ಪ**
ಪ್ರಾಂಶುಪಾಲರು
೨ನೆಯ ಅಡ್ಡರಸ್ತೆ (ಪಶ್ಚಿಮ)
ಜೆ. ಸಿ. ಆರ್. ಬಡಾವಣೆ
ಚಿತ್ರದುರ್ಗ ೫೭೭ ೫೦೧

೧೧ **ಆರ್. ನರಸಿಂಹಾಚಾರ್**

೧೨ **ಶಂ. ಬಾ. ಜೋಶಿ**
ವಿಮಲಾ ಡಿಸ್ಕಲಕರ್
ಅಧ್ಯಕ್ಷರು, ಮಾನವಧರ್ಮ ಪೀಠ
ಸಾಧನಕೇರಿ
ಧಾರವಾಡ ೫೮೦ ೦೦೩

೧೩ **ವಿ. ಶಿವಾನಂದ**

೧೪ **ಹುಲ್ಲೂರು ಶ್ರೀನಿವಾಸ ಜೋಯಿಸ**

೧೫ **ಕಪಟರಾಳ ಕೃಷ್ಣರಾವ್**

೧೬ **ರಹಮತ್ ತರೀಕೆರೆ**
ಕನ್ನಡ ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ
ಹಂಪಿ, ವಿದ್ಯಾರಣ್ಯ ೫೮೩ ೨೭೬
ತಾ. ಹೊಸಪೇಟೆ, ಜಿ. ಬಳ್ಳಾರಿ

೧೭ **ವೀರಣ್ಣ ರಾಜೂರ**
ಪ್ರಾಧ್ಯಾಪಕರು
ಕನ್ನಡ ಅಧ್ಯಯನ ಪೀಠ
ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ ೫೮೦ ೦೦೩

೧೮ **ಕೆ. ಜಿ. ನಾಗರಾಜಪ್ಪ**
ನಂ. ೭೩, ಅಪೂರ್ವ
೫ನೆಯ ಮುಖ್ಯರಸ್ತೆ
ಮಾರುತಿ ಎಚ್.ಬಿ.ಸಿ.ಎಸ್.ಲೇಔಟ್
ಬಿ. ಟಿ. ಎಂ. ಮೊದಲನೆಯ ಹಂತ
(ಗುರಪ್ಪನಪಾಳ್ಯ), ಬೆಂಗಳೂರು ೫೬೦ ೦೨೯

೧೯ **ಎಸ್. ಎಸ್. ಶೆಟ್ಟರ್**
ಮಾನಸೋಲ್ಲಾಸ
ಮಾಳಮಡ್ಡಿ
೭ನೆಯ ಅಡ್ಡರಸ್ತೆ
ಧಾರವಾಡ ೫೮೦ ೦೦೭

೨೦ **ಲಕ್ಷ್ಮಣ ತೆಲಗಾವಿ**
ಪ್ರಾಧ್ಯಾಪಕರು
ಕನ್ನಡ ವಿಶ್ವವಿದ್ಯಾಲಯ
ಹಂಪಿ, ವಿದ್ಯಾರಣ್ಯ ೫೮೩ ೨೭೬
ತಾ. ಹೊಸಪೇಟೆ, ಜಿ. ಬಳ್ಳಾರಿ

೨೧ **ಎ. ಆರ್. ಕೃಷ್ಣಶಾಸ್ತ್ರೀ**
ಶ್ರೀಮತಿ ಕೆ. ಶಾಂತಾ
ನಂ. ೪೬, ಡಾ. ಎ. ಆರ್. ಕೃಷ್ಣಶಾಸ್ತ್ರೀ ರಸ್ತೆ
ಬಸವನಗುಡಿ
ಬೆಂಗಳೂರು ೫೬೦ ೦೦೪

೨೨ **ಡಿ. ಎಲ್. ನರಸಿಂಹಾಚಾರ್**

೨೩ **ಕೆ. ಕುಶಾಲಪ್ಪಗೌಡ**
ಮಾನಸ, ಜಟ್ಟಿಪಳ್ಳ
ಅಂಚೆ. ಸುಳ್ಯ
ದ.ಕ. ೫೭೪ ೨೩೯

೨೪ **ಕೆ. ವಿ. ನಾರಾಯಣ**
ಪ್ರಾಧ್ಯಾಪಕರು
ಕನ್ನಡ ವಿಶ್ವವಿದ್ಯಾಲಯ
ಹಂಪಿ, ವಿದ್ಯಾರಣ್ಯ ೫೮೩ ೨೭೬
ತಾ. ಹೊಸಪೇಟೆ, ಜಿಲ್ಲೆ. ಬಳ್ಳಾರಿ

೨೫ **ಸಂಗಮೇಶ ಸವದತ್ತಿ ಮಠ**
ಚಿನ್ಮಯ, ಸರಸ್ವತಿ ಬಡಾವಣೆ
ಗುಲಬರ್ಗಾ ೫೮೫ ೧೦೬

೨೬ **ಸೇಡಿಯಾಪು ಕೃಷ್ಣಭಟ್ಟ**
ಡಾ. ಹೇರಂಜೆ ಕೃಷ್ಣಭಟ್ಟ
ರಾಷ್ಟ್ರಕವಿ ಗೋವಿಂದ ಪೈ
ಸಂಶೋಧನ ಕೇಂದ್ರ
ಉಡುಪಿ ೫೭೬ ೧೦೨

೨೭ **ಡಿ. ಎನ್. ಶಂಕರಭಟ್ಟ**
೧೩೫, ಡಿ ಬ್ಲಾಕ್
೨೨ನೆಯ ಕ್ರಾಸ್, ೩ಎ ಮೇನ್
ವಿಜಯನಗರ ೩ನೆಯ ಹಂತ
ಮೈಸೂರು ೫೭೦ ೦೧೭

೨೮ **ಪಾ. ವೆಂ. ಆಚಾರ್ಯ**
ಶ್ರೀನಿವಾಸ ಪಾಡಿಗಾರ್
ಪ್ರಾಚೀನ ಭಾರತದ ಇತಿಹಾಸ ಮತ್ತು
ಶಾಸನಶಾಸ್ತ್ರ ವಿಭಾಗ
ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ ೫೮೦ ೦೦೩

೨೯ **ಜಿ. ವೆಂಕಟಸುಬ್ಬಯ್ಯ**
ನಂ. ೫೮, ೩೧ನೆಯ ಕ್ರಾಸ್
೩ನೆಯ ಬ್ಲಾಕ್, ಜಯನಗರ
ಬೆಂಗಳೂರು ೫೬೦ ೦೮೨

೩೦ **ಬಿ. ಎಂ. ಶ್ರೀಕಂಠಯ್ಯ**
ಕೇರಾಫ್. ಬಿ. ಸಿ. ರಾಮಚಂದ್ರಶರ್ಮ
ನಂ. ೨೨೨, ಪರಾಶರ
೩೯ನೆಯ ಸಿ ಕ್ರಾಸ್
ಜಯನಗರ ೫ನೆಯ ಬ್ಲಾಕ್
ಬೆಂಗಳೂರು ೫೬೦ ೦೪೧

೩೧ **ವಿ. ಸೀತಾರಾಮಯ್ಯ**
ಎಸ್. ಸತ್ಯನಾರಾಯಣ
೧೯೦/೩
ಡಾ. ವಿ. ಸೀತಾರಾಮಯ್ಯ ರಸ್ತೆ
೨ನೆಯ ಅಡ್ಡರಸ್ತೆ, ಚಾಮರಾಜಪೇಟೆ
ಬೆಂಗಳೂರು ೫೬೦ ೦೧೮

೩೨ **ಎಂ. ವಿ. ಸೀತಾರಾಮಯ್ಯ**
ಎಂ. ಎಸ್. ಭಾಸ್ಕರ್
ನಂ. ೧೨, ಅರ್ಚನ
೩ನೆಯ ಕ್ರಾಸ್, ೧ನೆಯ ಮುಖ್ಯರಸ್ತೆ
ನ್ಯೂ ಕೆ. ಜಿ. ಎಕ್ಸ್‌ಟೆನ್‌ಷನ್
ಕತ್ತರಿಗುಪ್ಪೆ, ಬನಶಂಕರಿ ೩ನೆಯ ಹಂತ
ಬೆಂಗಳೂರು ೫೬೦ ೦೮೫

೩೩ **ಟಿ. ಕೇಶವಭಟ್ಟ**
೭೫೪, ಶ್ರೀವರ್ಧನ
೧೫ನೆಯ ಮೇನ್
ಬನಶಂಕರಿ ೨ನೆಯ ಹಂತ
ಬೆಂಗಳೂರು ೫೬೦ ೦೭೦

೩೪ **ಎಲ್. ಬಸವರಾಜು**
ನಂ. ೩೭, ನಳಿನಿಶಂಕರ
೫ನೆಯ ಮೇನ್, ೩ನೆಯ ಬ್ಲಾಕ್
ಜಯಲಕ್ಷ್ಮೀಪುರಂ
ಮೈಸೂರು ೫೭೦ ೦೧೨

೩೫ **ಕೆ. ಜಿ. ನಾರಾಯಣ ಪ್ರಸಾದ್**
ಮುಖ್ಯಸ್ಥರು, ಕನ್ನಡ ವಿಭಾಗ
ಉಸ್ಮಾನಿಯಾ ವಿಶ್ವವಿದ್ಯಾಲಯ
ಹೈದರಾಬಾದ್ ೫೦೦ ೦೦೭
ಆಂಧ್ರಪ್ರದೇಶ

೩೬ **ತೀ. ನಂ. ಶ್ರೀಕಂಠಯ್ಯ**
ಟಿ. ಎಸ್. ನಾಗಭೂಷಣ
೫೩/ಇ, ಒಲುಮೆ, ೧ನೆಯ ಕ್ರಾಸ್
೩ನೆಯ ಫೇಸ್, ೪ನೆಯ ಬ್ಲಾಕ್
ಬನಶಂಕರಿ ೩ನೆಯ ಹಂತ
ಬೆಂಗಳೂರು ೫೬೦ ೦೮೫

೩೭ **ಎಂ. ಗೋವಿಂದ ಪೈ**
ಸಿ. ಕೆ. ಕೆ. ಮೂರ್ತಿ
ಕಾವ್ಯಾಲಯ ಪ್ರಕಾಶನ, ಜಯನಗರ
ಮೈಸೂರು ೫೭೦ ೦೧೪

೩೮ **ಬಿ. ಎಸ್. ಸಣ್ಣಯ್ಯ**
೩೩/೧, ೮ನೆಯ ಅಡ್ಡರಸ್ತೆ
ವಿನಾಯಕನಗರ, ಜಯಲಕ್ಷ್ಮೀಪುರಂ
ಮೈಸೂರು ೫೭೦ ೦೧೨

೩೯ **ಎ. ವೆಂಕಟಸುಬ್ಬಯ್ಯ**

೪೦ **ಟಿ. ಎಸ್. ವೆಂಕಣ್ಣಯ್ಯ**
ಟಿ. ಎಸ್. ಛಾಯಾಪತಿ
೯, ತವೆಂ ಸ್ಮಾರಕ ಗ್ರಂಥಮಾಲೆ
ಗೋಕುಲಂ ೩ನೆಯ ಹಂತ
ಮೈಸೂರು ೫೭೦ ೦೦೨

೪೧ **ಎಂ. ಆರ್. ಶ್ರೀನಿವಾಸಮೂರ್ತಿ**

೪೨ **ಜಿ. ಜಿ. ಮಂಜುನಾಥನ್**
೧೪೩/ಡಿ, ೮ನೆಯ ಅಡ್ಡರಸ್ತೆ
೪ನೆಯ ಕ್ರಾಸ್, ಕಾಮಾಕ್ಷಿ ಆಸ್ಪತ್ರೆ ರಸ್ತೆ
ಕುವೆಂಪುನಗರ
ಮೈಸೂರು ೫೭೦ ೦೦೯

೫೬ **ಬರಗೂರು ರಾಮಚಂದ್ರಪ್ಪ**
ಸಂವೇದನೆ, ನಂ. ೨೭೫
೧೧ನೆಯ ಬಿ ಅಡ್ಡರಸ್ತೆ
ಜೆ. ಪಿ. ನಗರ ೨ನೆಯ ಹಂತ
ಬೆಂಗಳೂರು ೫೬೦ ೦೭೮

೫೭ **ಪಿ. ವಿ. ನಾರಾಯಣ**
ತಂಗಾಳಿ, ನಂ.೩೦
ಆರ್. ಬಿ. ಐ ಕಾಲೋನಿ
ಜಯನಗರ ೩ನೆಯ ಬ್ಲಾಕ್
ಬೆಂಗಳೂರು ೫೬೦ ೦೧೧

೫೮ **ಬಸವರಾಜ ಕಲ್ಗುಡಿ**
ನಂ. ೧೮೧೧, ೩ನೆಯ ಹಂತ
ಪ್ರಕಾಶನಗರ, ರಾಜಾಜಿನಗರ
ಬೆಂಗಳೂರು ೫೬೦ ೦೨೧

೫೯ **ಅರವಿಂದ ಮಾಲಗತ್ತಿ**
ಪ್ರಾಧ್ಯಾಪಕರು
ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು ವಿಶ್ವವಿದ್ಯಾಲಯ
ಮೈಸೂರು ೫೭೦ ೦೦೬

೬೦ **ಚಂದ್ರಶೇಖರ ನಂಗಲಿ**
೩೨೮೪, ಪಿ. ಸಿ. ಬಡಾವಣೆ
ಕೋಲಾರ ೫೬೩ ೧೦೧

೬೧ **ಕಮಲಾ ಹಂಪನಾ**
ಸ್ವನಿಮಾ, ನಂ. ೧೦೭೯
೫ನೆಯ ಬ್ಲಾಕ್, ರಾಜಾಜಿನಗರ
ಬೆಂಗಳೂರು ೫೬೦ ೦೧೦

೬೨ **ಬಿ. ಎನ್. ಸುಮಿತ್ರಾಬಾಯಿ**
ನಂ. ೫೦೯, ೧೬ನೆಯ ಮುಖ್ಯರಸ್ತೆ
ಶ್ರೀನಗರ, ಬನಶಂಕರಿ ಮೊದಲ ಹಂತ
ಬೆಂಗಳೂರು ೫೬೦ ೦೫೦

೬೩ **ರಂ. ಶ್ರೀ. ಮುಗಳಿ**
ಡಾ. ಆನಂದ ಮುಗಳಿ
ನಂ. ೯೫ ಬಿ, ಶ್ರೀಕಮಲಾಲಯ
೧ನೆಯ ಆರ್ ಬ್ಲಾಕ್, ರಾಜಾಜಿನಗರ
ಬೆಂಗಳೂರು ೫೬೦ ೦೧೦

೬೪ **ಎಡ್ವರ್ಡ್ ನೊರೋನ**
೧೦೬೩, ೯ನೆಯ ಮುಖ್ಯರಸ್ತೆ
ಗೋಕುಲಂ ೩ನೆಯ ಹಂತ
ಮೈಸೂರು ೫೭೦ ೦೦೨

೬೫ **ಎಸ್. ಅನಂತನಾರಾಯಣ**
ವಸಂತ ಅನಂತನಾರಾಯಣ
ಗಂಗಾತರಂಗ
೫ನೆಯ ಮುಖ್ಯರಸ್ತೆ, ಸರಸ್ವತೀಪುರಂ
ಮೈಸೂರು ೫೭೦ ೦೦೯

೬೬ **ಹಾ. ತಿ. ಕೃಷ್ಣೇಗೌಡ**
ಚೈತ್ರಪಲ್ಲವಿ
ಎಂ. ೨೫, ಸಿಐಟಿಬಿ ೨ನೆಯ ಹಂತ
ಕುವೆಂಪುನಗರ
ಮೈಸೂರು ೫೭೦ ೦೦೯

೬೭ **ರಾ. ಯ. ಧಾರವಾಡಕರ**
ಭಾನುಮತಿ ಧಾರವಾಡಕರ
ಸತ್ಯದೀಪ, ಸಾರಸ್ವತಪುರ
ಧಾರವಾಡ ೫೮೦ ೦೦೨

೬೮ **ವಿಜಯಾ ದಬ್ಬೆ**
೩೫೪, ಹೊಸ ಕಾಳಿದಾಸ ರಸ್ತೆ
೪ನೆಯ ಮೇನ್
ವಿಜಯನಗರ ೧ನೆಯ ಹಂತ
ಮೈಸೂರು ೫೭೦ ೦೧೭

೬೯ **ಶ್ರೀನಿವಾಸ ಹಾವನೂರ**
ಆಶ್ರಯ ಅಪಾರ್ಟ್‌ಮೆಂಟ್ಸ್
೩೬, ವಿನಾಯಕ ಲೇ ಔಟ್
ವಿಜಯನಗರ ಪಶ್ಚಿಮ
ಬೆಂಗಳೂರು ೫೬೦ ೦೪೦

೭೦ **ದೇ. ಜವರೇಗೌಡ**
ವಿಶ್ವಚೇತನ ಕಲಾನಿಲಯ
ಕಾಳಿದಾಸ ರಸ್ತೆ, ಜಯಲಕ್ಷ್ಮೀಪುರಂ
ಮೈಸೂರು ೫೭೦ ೦೧೨

೭೧ **ಬಿ. ವ್ಹಿ. ಶಿರೂರ**
ಪ್ರಾಧ್ಯಾಪಕರು
ಕನ್ನಡ ಅಧ್ಯಯನ ಪೀಠ
ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ ೫೮೦ ೦೦೩

❋ ❋ ❋

ಇಪ್ಪತ್ತನೆಯ ಶತಮಾನ ಅನೇಕ ಮಹತ್ವದ ಪಲ್ಲಟಗಳ ಹಾಗೂ ತಲ್ಲಣಗಳ ಕಾಲ. ವಸಾಹತು ಷಾಹೀ ಸಂಧರ್ಭಕ್ಕೆ, ರಾಷ್ಟ್ರೀಯತೆಯ ತುಡಿತಗಳಿಗೆ, ದೇಶೀಯತೆಯ ಕಾಳಜಿಗಳಿಗೆ, ಕಾಲದಿಂದ ಕಾಲಕ್ಕೆ ಆದ ಸಾಮಾಜಿಕ ಪರಿವರ್ತನೆಗಳಿಗೆ, ಧಾರ್ಮಿಕ ನಿಲುವುಗಳಿಗೆ, ಅನ್ಯದೇಶೀಯವಾದ ಚಿಂತನೆ ಹಾಗೂ ಮಾದರಿಗಳಿಗೆ, ಈ ಶತಮಾನದ ಪ್ರಮುಖ ಸಾಹಿತ್ಯಕ ಹಾಗೂ ಸಾಂಸ್ಕೃತಿಕ ವಾಗ್ವಾದಗಳಿಗೆ, ಔದ್ಯೋಗೀಕರಣ, ನಗರೀಕರಣ ಹಾಗೂ ಆಧುನೀಕರಣದ ಪ್ರಕ್ರಿಯೆಗಳಿಗೆ, ಈ ಶತಮಾನದ ಬದುಕನ್ನು ಪ್ರಭಾವಿಸಿದ ವಿವಿಧ, ವೈಜ್ಞಾನಿಕ, ರಾಜಕೀಯ ಮತ್ತು ಸಾಮಾಜಿಕ ಚಿಂತನೆಗಳಿಗೆ, ಮತ್ತು ವ್ಯಕ್ತಿ ಪ್ರತಿಭೆಗಳಿಗೆ, ತನ್ನ ಪರಂಪರೆಗೆ ಹಾಗೂ ವರ್ತಮಾನಕ್ಕೆ ಕನ್ನಡದ ಸೃಜನ ಶೀಲತೆ ಹಾಗೂ ವೈಚಾರಿಕತೆಗಳು ಹೇಗೆ ಸಂದಿಸಿವೆ ಎಂಬುದನ್ನುಈ ಸಂಕಲನದ ಬರಹಗಳು ಪ್ರತಿನಿಧಿಸುವಂತಿರಬೇಕು ಎನ್ನುವುದು ಇಲ್ಲಿನ ಆಯ್ಕೆಯ ಮೂಲಮಾನವಾಗಿದೆ. ಒಟ್ಟಾರೆಯಾಗಿ ಈ ಶತಮಾನದ ಕನ್ನಡ ಸಾಹಿತ್ಯ ಏನನ್ನು ಗ್ರಹಿಸಿದೆ, ಏನನ್ನು ಹೇಳಿದೆ, ಏನನ್ನು ಸಾಧಿಸಿದೆ ಎನ್ನುವುದನ್ನು ಈ ಸಂಕಲನಗಳು ದಾಖಲಿಸಿವೆ.........

ಈ ದೃಷ್ಟಿಯಿಂದ ಈ ಸಂಪುಟಗಳಿಗೆ ಚಾರಿತ್ರಿಕ ಮಹತ್ವವಿದೆ.

ಜಿ.ಎಸ್. ಶಿವರುದ್ರಪ್ಪ



ಕರ್ನಾಟಕ ಸಾಹಿತ್ಯ ಅಕಾಡೆಮಿ
ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು